॥ ಶ್ರೀಃ ॥

# ಶ್ರೀಕರಭಾಷ್ಯಂ

ವೇದಾಂತಸೂತ್ರಾಣಾಂ ಭೇದಾಭೇದಪ್ರತಿಪಾದಕಂ

ವೀರಶೈವಭಾಷ್ಯಂ

ಶ್ರೀಪತಿಪಂಡಿತಭಗವತ್ಪಾದಾಚಾರ್ಯವಿರಚಿತಂ.

ಕರ್ಣಾಟಕಾನುವಾದಸಹಿತಃ

ಪ್ರಥಮೋ ಭಾಗಃ

ಅನುವಾದಕ

ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ, ವಿದ್ವಾನ್, ಎಂ.ಎ., ಪಿ.ಎಚ್‌ಡಿ.

ಸಂಸ್ಕೃತಾಧ್ಯಾಪಕ

ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,

ಮೈಸೂರು

ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

1962

[ ಬೆಲೆ 10 ರೂ.

॥ ಶ್ರೀಃ ॥

# ಶ್ರೀಕರಭಾಷ್ಯಂ

## ವೇದಾಂತಸೂತ್ರಾಣಾಂ ವೀರಶೈವಭಾಷ್ಯಂ

## ಶ್ರೀಪತಿಪಂಡಿತಭಗವತ್ಪಾದಾಚಾರ್ಯವಿರಚಿತಂ

## ಕರ್ಣಾಟಕಾನುವಾದಸಹಿತಃ

## ಪ್ರಥಮ ಭಾಗಃ

ಅನುವಾದಕ

ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ, ಎಂ.ಎ., ಪಿ.ಎಚ್‌ಡಿ.

ಸಂಸ್ಕೃತಾಧ್ಯಾಪಕ

ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,

ಮೈಸೂರು

ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

1962

[ ಬೆಲೆ 10 ರೂ.

## ಏತದ್ಗ್ರಂಥಪ್ರೋತ್ಸಾಹಕಾಃ



ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರೈಃ
ಶ್ರೀಜಗದ್ಗುರು ವಾಗೀಶಪಂಡಿತಾರಾಧ್ಯಶಿವಾಚಾರ್ಯ
ಭಗವತ್ಪಾದೈರನುಗೃಹೀತೋಽಯಂ ಜನಃ

## ಶ್ರೀಜಗದ್ಗುರುಪಂಡಿತಾರಾಧ್ಯಪರಂಪರಾಗತ ಶ್ರೀಗಿರಿರಾಜಸೂರ್ಯ ಸಿಂಹಾಸನಾಧೀಶ್ವರ ಶ್ರೀಜಗದ್ಗುರು ವಾಗೀಶಪಂಡಿತಾರಾಧ್ಯ ಶಿವಾಚಾರ್ಯಮಹಾಸ್ವಾಮಿಗಳವರ ಶುಭಾಶಂಸನ

ಶ್ರೀಜಗದ್ಗುರು ರೇಣುಕಾದಿ ಪಂಚಾಚಾರ್ಯರಿಂದ ಸ್ಥಾಪಿತವಾದ ವೀರಶೈವ ಸಿದ್ಧಾಂತವು ಅಷ್ಟಾವರಣಪಂಚಾಚಾರಷಟ್‌ಸ್ಥಲಾತ್ಮಕವಾದುದು. ಇವುಗಳ ಆಚರಣೆಯು ಕ್ರಿಯಾ-ಜ್ಞಾನ ವಿಶಿಷ್ಟವಾದುದರಿಂದ ಈ ಸಿದ್ಧಾಂತವು "ಶಕ್ತಿವಿಶಿಷ್ಟಾದ್ವೈತ, ದ್ವೈತಾದ್ವೈತ, ಭೇದಾಭೇದ, ವಿಶೇಷಾದ್ವೈತ"ಗಳೆಂಬ ಪರ್ಯಾಯ ನಾಮಗಳಿಂದ ಕರೆಯಲ್ಪಟ್ಟಿದೆ.

ಭಾರತೀಯ ಅಧ್ಯಾತ್ಮಶಾಸ್ತ್ರವು ವೇದಾಂತವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ವೇದಾಂತವೆಂದರೆ ವೇದದ ಕೊನೆಯ ಭಾಗವೆಂದರ್ಥ. ಇದರ ಸಾರಸಂಗ್ರಹವೇ ಉಪನಿಷತ್ತುಗಳು. ಅವು ತತ್ತ್ವವನ್ನು ವಿವರಿಸುವಾಗ ಅಧಿಕಾರಿಗಳಿಗನುಗುಣವಾಗಿ ಉಪದೇಶಿಸಿರುವುದರಿಂದ ಅಲ್ಲಿ ಮತಭೇದಗಳು ಕಂಡುಬರುತ್ತವೆ. ಅವು ಪರಮಾತ್ಮನನ್ನು ಸಗುಣ–ನಿರ್ಗುಣನೆಂದೂ, ಸಾಕಾರ–ನಿರಾಕಾರನೆಂದೂ, ಸವಿಶೇಷ–ನಿರ್ವಿಶೇಷನೆಂದೂ ವರ್ಣಿಸಿವೆ. ಅಲ್ಲದೆ ಜೀವ–ಪರಮಾತ್ಮರಿಗೆ ಭೇದವನ್ನೂ ಮತ್ತು ಅಭೇದವನ್ನೂ ಹೇಳಿರುವುದರಿಂದ ಅಲ್ಪಜ್ಞಾನಿಗಳ ಸಂಶಯಕ್ಕೆ ಅವಕಾಶವಾಗಿದೆ. ಇಂತಾಗಿ ಉಪನಿಷತ್ತುಗಳ ತಾತ್ಪರ್ಯವನ್ನು ತಿಳಿದುಕೊಳ್ಳುವುದು ಅಷ್ಟು ಸುಲಭವಲ್ಲ.

ಇವುಗಳ ಸಮನ್ವಯಕ್ಕಾಗಿಯೇ ಬಾದರಾಯಣರು ಬ್ರಹ್ಮಸೂತ್ರಗಳನ್ನು ಬರೆಯಬೇಕಾಯಿತು. ಆದರೆ, ಈ ಬ್ರಹ್ಮಸೂತ್ರಗಳಲ್ಲೂ ಮತಭೇದವಿದೆ.

ಬ್ರಹ್ಮಸೂತ್ರಗಳ ರಚನೆಯ ಕಾಲದಲ್ಲಿಯೇ "ಭೇದಾಭೇದಸ್ತಥಾಽಭೇದೋ ಭೇದ ಏತೇ ಮತಾಸ್ತ್ರಯಃ" ಎಂಬ ಪ್ರಾಚೀನಪ್ರಮಾಣದಂತೆ ಭೇದಾಭೇದ, ಅಭೇದ, ಭೇದ ವಾದಗಳು ಪ್ರಸಿದ್ಧಿಯಲ್ಲಿದ್ದವೆಂದು ಗೊತ್ತಾಗುತ್ತದೆ. ಜ್ಞಾನ ಕ್ರಿಯೆಗಳ ಸಮುಚ್ಚಯರೂಪವಾದ ಭೇದಾಭೇದವನ್ನು ಶ್ರೀ ರೇಣುಕರು ಅಗಸ್ತ್ಯರಿಗೆ

"ಜ್ಞಾನೇನಾಚಾರಯುಕ್ತೇನ ಪ್ರಸೀದತಿ ಮಹೇಶ್ವರಃ ।
ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹಪಾತನಂ ॥"

ಎಂದು ಬೋಧಿಸಿದರೆ, ಶ್ರೀ ಕೃಷ್ಣನು ಅರ್ಜುನನಿಗೆ—

"ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।
ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥"

ಎಂದು ಬೋಧಿಸಿ ಸರ್ವಶ್ರುತಿಸಮನ್ವಯಕ್ಕಾಗಿ ಹೆಜ್ಜೆಹೆಜ್ಜೆಗೂ ಪ್ರಯತ್ನಿಸಿರುವುದನ್ನು ರೇಣುಕಗೀತೆ ಮತ್ತು ಭಗವದ್ಗೀತೆಗಳಲ್ಲಿ ನಾವು ಕಾಣಬಹುದು.

ಕರ್ಮ-ಜ್ಞಾನ್ಭ ಸಮುಚ್ಚಯರೂಪವಾದ ಭೇದಾಭೇದದಿಂದ ತುಷ್ಟರಾಗದ ಕರ್ಮಸನ್ಯಾಸಿಗಳು ಅಭೇದವನ್ನು ಆರಿಸಿಕೊಂಡರೆ, "ಅಹಂ ಬ್ರಹ್ಮಾಸ್ಮಿ" ಯ ಅಹಂ ಭಾವದಿಂದ ಜಗನ್ನಿಯಾಮಕನಾದ ಸಾಕಾರದೇವನ ಉಪಾಸನೆಯೇ ಕಡಮೆಯಾಗಿ ಭಕ್ತಿಯು ಖಿಲವಾಗುತ್ತಾಬಂದೀತೆಂದು ಕರ್ಮಯೋಗಿಗಳು ಭೇದವನ್ನು ಆರಿಸಿಕೊಂಡರು. ಅನಂತರ ಎಲ್ಲಾ ಆಚಾರ್ಯರೂ ಅವರವರ ಸಿದ್ಧಾಂತಕ್ಕನುಗುಣವಾಗಿ ಬ್ರಹ್ಮಸೂತ್ರಗಳಿಗೆ ಭಾಷ್ಯಗಳನ್ನು ಬರೆದರು.

ಶ್ರುತಿಯು ಜೀವಾತ್ಮ-ಪರಮಾತ್ಮರಿಗೆ ಆರಂಭದೆಶೆಯಲ್ಲಿ ಭೇದವನ್ನೂ, ಮುಕ್ತಾವಸ್ಥೆಯಲ್ಲಿ ಅಭೇದವನ್ನೂ ಸಾರಿ ಇವೆರಡಕ್ಕೂ ಮಾನ್ಯತೆಯನ್ನಿತ್ತಿರುವಾಗ, ಒಬ್ಬೊಬ್ಬರು ಒಂದೊಂದನ್ನೇ ಹಿಡಿದು ಬಡಿದಾಡುವುದು ಪೂರ್ಣ ವೈದಿಕರ ಲಕ್ಷಣವಲ್ಲವೆಂದೂ, ಈ ಮಾರ್ಗವು ವೇದವಿರುದ್ಧವಾದುದೆಂದೂ ಭಾವಿಸಿ "ಸರ್ವಶ್ರುತಿಸಮನ್ವಯ"ಕ್ಕಾಗಿ ಶ್ರೀ ರೇಣುಕಾದಿ ಪೂರ್ವಾಚಾರ್ಯರ ಹಾಗೂ ಶ್ರೀಕೃಷ್ಣ ಮೊದಲಾದ ತಾತ್ವಿಕಸಾರ್ವಭೌಮರ ನಿರ್ಣಯವನ್ನನುಸರಿಸಿ ಯತ್ನಿಸಿದವರಲ್ಲಿ ಶ್ರೀಪತಿಪಂಡಿತಾರಾಧ್ಯರು ಅಗ್ರಗಣ್ಯರಾಗಿದ್ದಾರೆ. ಇವರು ತಮ್ಮ ಭಾಷ್ಯಕ್ಕೆ "ಶ್ರೀಕರಭಾಷ್ಯ"ವೆಂಬ ಮಂಗಳಕರವಾದ ನಾಮವನ್ನಿಟ್ಟಿದ್ದಾರೆ. ಈ ಭಾಷ್ಯವು ಹೆಸರಿಗೆ ತಕ್ಕಂತೆ ಎಲ್ಲರಿಗೂ "ಶ್ರೀಕರ"ವೇ ಆಗಿದೆ.

ಶ್ರೀಪತಿಪಂಡಿತಾಚಾರ್ಯರು ಕ್ರಿ.ಶ. ೧೧ನೆಯ ಶತಮಾನದಲ್ಲಿ ಜಗತ್ಪ್ರಸಿದ್ಧವಾದ ಶ್ರೀಶೈಲಕ್ಷೇತ್ರವಿರಾಜಮಾನವಾದ ಪಂಡಿತಾರಾಧ್ಯಪೀಠದ ಅಧಿಪತಿಗಳಾಗಿದ್ದರು. ಆ ಪೀಠದ ಪ್ರಾಚೀನಗುರುಗಳ ಪಂಕ್ತಿಯಲ್ಲಿ ಇವರ ಹೆಸರನ್ನು ಕ್ರಿ.ಶ. ೧೬ರಲ್ಲಿದ್ದ ಶಿವಯೋಗಿಚಕ್ರವರ್ತಿಗಳಾದ ಶ್ರೀ ಮರಿತೋಂಟದಾರ್ಯರು ತಮ್ಮ "ವೀರಶೈವಾನಂದಚಂದ್ರಿಕೆ" ಯಲ್ಲಿ ಉಲ್ಲೇಖಿಸಿದ್ದಾರೆ.

ಶ್ರೀಪತಿಪಂಡಿತಾರಾಧ್ಯರು ಶಿವಾಗಮಗಳ ಹಾಗೂ ಪೂರ್ವಾಚಾರ್ಯರ ನಿರ್ಣಯದಂತೆ ವೀರಶೈವಸಿದ್ಧಾಂತ ಒಂದರಲ್ಲಿಯೇ "ಸರ್ವಶ್ರುತಿಸಮನ್ವಯ" ವಾಗುವುದೆಂಬುದನ್ನು ತಮ್ಮ ಭಾಷ್ಯದಲ್ಲಿ ಘಂಟಾಘೋಷವಾಗಿ ಸಾರಿದ್ದಾರೆ. ಅಸ್ತು!

ಶ್ರೀಕರಭಾಷ್ಯವನ್ನು ಶುದ್ಧವಾಗಿ ಮುದ್ರಿಸುವುದೂ, ಅದಕ್ಕೆ ಪ್ರಾಮಾಣಿಕವಾದ ಕನ್ನಡ ಅನುವಾದವನ್ನು ಬರೆಯುವುದೂ ಸಾಮಾನ್ಯವಾದ ಕೆಲಸವಲ್ಲ. ಈ ಕಾರ್ಯವನ್ನು ಈಶ್ವರನ ಆರಾಧನವೆಂದು ಡಾ|| ಟಿ. ಜಿ. ಸಿದ್ದಪ್ಪಾರಾಧ್ಯರು ಸಮನ್ವಯ ದೃಷ್ಟಿಯಿಂದ ಸಮರ್ಪಕವಾಗಿ ಮಾಡಿರುವುದಕ್ಕಾಗಿ ನಾವು ಸಂತೋಷಗೊಂಡಿದ್ದೇವೆ.

ನಿರಾಡಂಬರದಿಂದ ಅಮೋಘ ಸೇವೆಯನ್ನು ಸಲ್ಲಿಸುತ್ತಿರುವ ಇವರಿಗೆ ಮಲ್ಲಿಕಾರ್ಜುನನು ಆಯುರಾರೋಗ್ಯೈಶ್ವರ್ಯಗಳನ್ನು ಅನುಗ್ರಹಿಸಲೆಂದು ಹರಸುವ ಮೂಲಕ ಇವರ ಸಾಹಿತ್ಯಸೇವೆಗೆ ಮುಡುಪಾಗಿ ಒಂದು ಸಾವಿರದ ಎಂಟು ರೂಪಾಯಿಗಳನ್ನು ಆಶೀರ್ವದಿಸಿದ್ದೇವೆ.

ಇತ್ಯಾಶಿಷಃ.

# ಭೂಮಿಕೆ

ಪೂಜ್ಯ ವ್ಯಾಸಮಹರ್ಷಿಯಿಂದ ರಚಿತವಾಗಿರುವ ಬ್ರಹ್ಮಸೂತ್ರಗಳು ಪರಮಾತ್ಮನ ಸ್ವರೂಪದ ನಿರ್ಣಯಕ್ಕೆ ಉತ್ತಮ ಸಾಧನಗಳೆನಿಸಿವೆ. ಅವು ಮಿತವಾದ ಅಕ್ಷರಗಳಿಂದ ಗಹನವಾದ ಅರ್ಥವನ್ನು ಗಂಭೀರವಾದ ರೀತಿಯಲ್ಲಿ ತಿಳಿಸುತ್ತವೆ ಎಂಬ ಅಂಶ ಜಗತ್ಪ್ರಸಿದ್ಧವಾಗಿದೆ. ಪರಮಾತ್ಮಸ್ವರೂಪವನ್ನು ತಿಳಿಸಲು ಪರಮಪ್ರಮಾಣವೆನಿಸಿದ ಶ್ರುತಿಯು ಅವನನ್ನು ನಿರ್ವಿಶೇಷ ಮತ್ತು ಸವಿಶೇಷನೆಂದೂ, ನಿರ್ಗುಣ ಮತ್ತು ಸುಗುಣನೆಂದೂ, ನಿರಾಕಾರ ಮತ್ತು ಸಾಕಾರನೆಂದೂ ತಿಳಿಸಿದೆ. ಶ್ರುತಿವಾಕ್ಯಗಳಲ್ಲಿ ಹೀಗೆ ತೋರುವ ಪರಸ್ಪರ ವಿರೋಧವನ್ನು ಸುವ್ಯವಸ್ಥಿತವಾದ ರೀತಿಯಲ್ಲಿ ಸಮನ್ವಯದೃಷ್ಟಿಯಿಂದ ಪರಿಹರಿಸಿ ಪರಮಾತ್ಮನ ನಿರ್ದಿಷ್ಟಲಕ್ಷಣವನ್ನು ತಿಳಿಸಲಿಕ್ಕಾಗಿಯೇ ಬ್ರಹ್ಮಸೂತ್ರಗಳು ಹೊರಟಿವೆ. ಅವುಗಳಲ್ಲಿ ಪ್ರತಿಪಾದಿತವಾಗಿರುವ ಪರಮಾತ್ಮತತ್ತ್ವವನ್ನು ಕಂಡು ಅನುಭವಿಸಿದವರು ಸಾಮಾನ್ಯಜನರಿಗೂ ಆ ಬಗೆಯ ಅನುಭವವನ್ನು ದೊರಕಿಸಲಿಕ್ಕಾಗಿ ಸಾಧನಮಾರ್ಗಗಳನ್ನು ತೋರಿಸಿಕೊಟ್ಟಿರುವರು. ಅನುಭವಿಗಳೆಲ್ಲರೂ ಕಂಡ ಅನುಭವ ಒಂದೇಯಾದರೂ ಸಾಧನಮಾರ್ಗಗಳು ಬೇರೆ ಬೇರೆಯಾಗಿರುವುದರಿಂದ ಬ್ರಹ್ಮಸೂತ್ರಗಳನ್ನು ನೋಡುವವರ ದೃಷ್ಟಿಕೋಣವೂ ನಾನಾಮುಖವಾಗತೊಡಗಿತು. ಇದರಿಂದಲೇ ಬ್ರಹ್ಮಸೂತ್ರಗಳಿಗೆ ಹಲವಾರು ವ್ಯಾಖ್ಯಾನಗಳ ಆವಶ್ಯಕತೆಯುಂಟಾಯಿತು. ಪರಮಾತ್ಮನು ಏಕಮೇವಾದ್ವಿತೀಯನಾದರೂ ನಿರ್ಗುಣ ಮತ್ತು ನಿರ್ವಿಶೇಷನೆಂದೂ, ಈ ಜಗತ್ತಿನಲ್ಲಿ ದೇಹೇಂದ್ರಿಯಗಳೊಡನೆ ವ್ಯವಹರಿಸುತ್ತಿರುವ ಜೀವನೂ ಪರಮಾತ್ಮನಲ್ಲದೆ ಬೇರೆಯಲ್ಲವೆಂದೂ, ಈ ದೇಹೇಂದ್ರಿಯಾದಿಜಗತ್ತೆಲ್ಲವೂ ಸ್ವಪ್ನೇಂದ್ರಜಾಲಗಳಂತೆ ಬ್ರಹ್ಮದಲ್ಲಿ ಕಲ್ಪಿತವೆಂದೂ ಭಾವಿಸಿ ಅದ್ವೈತವಾದಿಗಳು ಬ್ರಹ್ಮಸೂತ್ರಗಳನ್ನು ಆ ದೃಷ್ಟಿಯಿಂದಲೇ ವಿವರಿಸಿದ್ದಾರೆ. "ಮಾಯಾಮಾತ್ರಂ ತು ಕಾತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್" (೩-೨-೩) ಎಂದು ಮುಂತಾದ ಸೂತ್ರಗಳ ಅವಲಂಬನದಿಂದ ಅವರು ಜಗತ್ತನ್ನು ಕೇವಲ ಕಲ್ಪನೆ ಎಂದೂ, ಜೀವನನ್ನು ಬ್ರಹ್ಮವೆಂದೂ ಭಾವಿಸುತ್ತಾರೆ. ಪರಮಾತ್ಮನು ಸವಿಶೇಷವೆನಿಸಿ ದಿವ್ಯಮಂಗಳವಿಗ್ರಹನಾಗಿ ಸರ್ವಜ್ಞತಾದಿಗುಣಗಳಿಂದ ಶೋಭಿಸುತ್ತ ಸತ್ಯನಾಗಿರುವಂತೆ ಅವನ ಪ್ರತಿಬಿಂಬವೆನಿಸಿದ ಜೀವನೂ ಅವನನ್ನಾಶ್ರಯಿಸಿಕೊಂಡು ಅವನ ಗುಣಗಳಿಗೆ ವಿರುದ್ಧವಾದ ಅಜ್ಞತ್ವಾದಿಗಳಿಂದ ಕೂಡಿ ಸತ್ಯವಾದ ಈ ಜಗತ್ತಿನಲ್ಲಿ ವ್ಯವರಿಸುವಾಗಲೂ, ಮುಂದೆ ಮುಕ್ತಿಯನ್ನು ಪಡೆದಾಗಲೂ ಅವನಿಗಿಂತ ಭಿನ್ನನಾಗಿಯೇ ಇದ್ದುಕೊಂಡು ಅವನ ಸೇವೆಯಲ್ಲಿಯೇ ನಿರತನಾಗಿರುವನೆಂದು ಜೀವಬ್ರಹ್ಮರಿಬ್ಬರ ಸತ್ಯತೆಯನ್ನು ಪ್ರತಿಪಾದಿಸುವ ದ್ವೈತವಾದಿಗಳು ಬ್ರಹ್ಮಸೂತ್ರಗಳನ್ನು ಆ ದೃಷ್ಟಿಯಿಂದಲೇ ನೋಡಿದ್ದಾರೆ. ಅವರು ತಮಗೆ ಅನುಕೂಲವಾದ "ಭೇದವ್ಯಪದೇಶಾಚ್ಚಾನ್ಯಃ" ಇದೇ ಮೊದಲಾದ ಅನೇಕಸೂತ್ರಗಳನ್ನು ಅವಲಂಬಿಸಿ ತಮ್ಮ

ವಾದವನ್ನು ಮಂಡಿಸಿದ್ದಾರೆ. ಎಲ್ಲರಿಗೂ ಪ್ರತ್ಯಕ್ಷಗೋಚರವಾಗಿರುವ ಜೀವ ಜಗತ್ತು ಗಳಿಗೆ ಬ್ರಹ್ಮವಲ್ಲದೆ ಬೇರೆ ಆಧಾರವಿಲ್ಲದ್ದರಿಂದಲೂ, ಎಲ್ಲರಲ್ಲೂ ಬ್ರಹ್ಮವೇ ಅಂತರ್ಯಾಮಕನಾಗಿರುವುದರಿಂದಲೂ, ಜೀವ ಜಗತ್ತುಗಳು ಬ್ರಹ್ಮಕ್ಕೆ ಅಂಗವಾಗಿರುವುವೆಂದೂ, ಆದ್ದರಿಂದಲೇ ಇವು ಸತ್ಯವೆಂದೂ, ಹೀಗೆ ಅಂಗವಿಶಿಷ್ಟನಾಗಿ ಅಂಗಿ ಎನಿಸಿದ ಪರಮಾತ್ಮನು ಸಾಕಾರನೂ, ಸವಿಶೇಷನೂ, ಸಗುಣನೂ, ಆಗಿರಲೇಬೇಕೆಂದೂ, ಇಂತಹ ಚಿದಚಿದ್ವಿಶಿಷ್ಟಪರಮಾತ್ಮನನ್ನು ಕಾರಣರೂಪದಿಂದ ಏಕವೆಂದೂ, ಕಾರ್ಯರೂಪದಿಂದ ಅನೇಕವೆಂದೂ ಪ್ರತಿಪಾದಿಸುವ ವಿಶಿಷ್ಟಾದ್ವೈತಿಗಳು ಬ್ರಹ್ಮ ಸೂತ್ರಗಳನ್ನು ಆ ದೃಷ್ಟಿಯಿಂದಲೇ ಪರಿಶೀಲಿಸಿದ್ದಾರೆ. ಪರಮಾತ್ಮನು ಸತ್ಯನಾಗಿರುವಂತೆಯೇ ಅವನ ಅಂಶನಾದ ಜೀವನೂ ಅವನಿಂದಲೇ ಬಂದು ಔಪಾಧಿಕವಾಗಿ ಭಿನ್ನನಾಗಿದ್ದು ಪರಮಾತ್ಮನ ನಿರಂತರಧ್ಯಾನದಿಂದ ತನ್ನ ಸಹಜವಾದ ಬ್ರಹ್ಮಭಾವನನ್ನು ಹೊಂದುವನೆಂದು ದ್ವೈತಾದ್ವೈತಗಳೆರಡನ್ನೂ ಒಪ್ಪುವ ಭಟ್ಟಭಾಸ್ಕರನು ಬ್ರಹ್ಮ ಸೂತ್ರಗಳನ್ನು ಆ ದೃಷ್ಟಿಯಿಂದಲೇ ನೋಡಿರುವನು. ಹೀಗೆ ಬ್ರಹ್ಮಸೂತ್ರಗಳನ್ನು ಮನನಮಾಡಿದ ಆಚಾರ್ಯರು ಒಂದೇ ತತ್ತ್ವವನ್ನು ಮನಗಂಡಿದ್ದರೂ, ಒಬ್ಬೊಬ್ಬರು ಒಂದೊಂದು ಸಾಧನಮಾರ್ಗವನ್ನು ಹಿಡಿದಿರುವುದರಿಂದ ಮತವೈವಿಧ್ಯಕ್ಕವಕಾಶವುಂಟಾಗಿದೆ. ಆದರೆ ಇವರೆಲ್ಲರಿಗೂ ಶ್ರುತಿಯೇ ಆಧಾರವಾಗಿದೆ.

ಬ್ರಹ್ಮಸೂತ್ರಗಳ ರಚನೆಯಾದಮೇಲೆ ಈ ಬಗೆಯ ಮತವೈವಿಧ್ಯವು ಹುಟ್ಟಿತೆಂದು ಹೇಳಬೇಕಾಗಿಲ್ಲ. ಅವುಗಳ ರಚನೆಯಾಗುವಕಾಲಕ್ಕೂ, ಅದಕ್ಕಿಂತ ಹಿಂದೆಯೂ ಬ್ರಹ್ಮಜೀವರ ಬಗ್ಗೆ ಆಚಾರ್ಯರಲ್ಲಿ ಮತಭೇದಗಳಿದ್ದುದನ್ನು ಬಾದರಾಯಣರೇ ಬ್ರಹ್ಮಸೂತ್ರಗಳಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಆಶ್ಮರಥ್ಯರು ಜೀವ ಬ್ರಹ್ಮರಿಗೆ ಯಾವಾಗಲೂ ಭೇದವೇ ಇರುವುದೆಂದೂ, ಔಡುಲೋಮಿಯು ಜೀವ ಬ್ರಹ್ಮರಿಬ್ಬರೂ ಬೇರೆಯಲ್ಲವೆಂದೂ, ಕಾಶಕೃತ್ಸ್ನಾಚಾರ್ಯರು ಜೀವ ಬ್ರಹ್ಮರಿಬ್ಬರೂ ಕೆಲವಂಶಗಳಲ್ಲಿ ಭಿನ್ನರಾಗಿದ್ದರೂ, ಕೆಲವಂಶಗಳಲ್ಲಿ ಏಕರೂಪರಾಗಿರುವರೆಂದೂ ಅಭಿಪ್ರಾಯಪಟ್ಟಿದ್ದಾರೆ. "ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ"(೧-೪-೨೦) "ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ" (೧-೪-೨೧) ಇವೆರಡು ಸೂತ್ರಗಳನ್ನು ಪೂರ್ವಪಕ್ಷವನ್ನಾಗಿಯೂ, "ಅವಸ್ಥಿತೇರಿತಿ ಕಾಶಕೃತ್ಸ್ನಃ" (೧-೪-೨೨) ಎಂಬುವನ್ನು ಸಿದ್ಧಾಂತವನ್ನಾಗಿಯೂ ಭಾಷ್ಯಕಾರರೆಲ್ಲರೂ ಭಾವಿಸಿದ್ದಾರೆ. ಆದರೆ ಸಿದ್ಧಾಂತ ಸೂತ್ರವನ್ನು ಶಂಕರಾಚಾರ್ಯರು ಅದ್ವೈತಪರವಾಗಿಯೂ, ಭಟ್ಟಭಾಸ್ಕರರು ದ್ವೈತಾದ್ವೈತಪರವಾಗಿಯೂ, ಹಯಗ್ರೀವ ಮತ್ತು ಮಧ್ವಾಚಾರ್ಯರೂ ದ್ವೈತಪರವಾಗಿಯೂ, ರಾಮಾನುಜರು ವಿಶಿಷ್ಟಾದ್ವೈತಪರವಾಗಿಯೂ ವ್ಯಾಖ್ಯಾನಮಾಡಿದ್ದಾರೆ. ಒಂದೇ ಸೂತ್ರ ಒಬ್ಬೊಬ್ಬರ ಕೈಗೆ ಸಿಕ್ಕಿ ನಾನಾಬಗೆಯ ವಿವರಣಗಳನ್ನು ಹೊಂದಿರುವಾಗ್ಗೆ ಸಾಧಕನು ಯಾವ ಮಾರ್ಗವನ್ನು ಹಿಡಿಯಬೇಕೆಂಬುದೇ ದೊಡ್ಡ ಸಮಸ್ಯೆಯಾಗಿದೆ. ಆದಕೆ, ಬಾದರಾಯಣರು ತಮ್ಮ ಕಾಲದಲ್ಲಿ ಆಚಾರ್ಯರಿಗಿದ್ದ

ಮತಭೇದವನ್ನು ತಿಳಿಸುತ್ತಲೇ ತಮ್ಮ ಸ್ವಂತ ಅಭಿಪ್ರಾಯವನ್ನೂ ಸ್ಪಷ್ಟವಾಗಿ ಬೇರೆ ಕಡೆ ತಿಳಿಸಿರುವುದರಿಂದ ಸಾಧಕನ ವಿಷಮಸಮಸ್ಯೆ ಬ್ರಹ್ಮಸೂತ್ರಗಳಿಂದಲೇ ಬಗೆಹರಿಯ ಬಹುದೆಂಬ ಆಶೆಯೂ ಇದೆ. "ಅಭಾವಂ ಬಾದರಿರಾಹ ಹ್ಯೇವಂ" (೪-೪-೧೦) ಎಂಬ ಸೂತ್ರದಲ್ಲಿ ಬಾದರ್ಯಾಚಾರ್ಯನು ಜೀವಬ್ರಹ್ಮರಿಗೆ ಭೇದವಿಲ್ಲವೆಂದೂ, "ಭಾವಂ ಜೈಮಿನಿರ್ವಿಕಲ್ಪಾಮನನಾತ್" (೪-೪-೧೧) ಎಂಬ ಸೂತ್ರದಲ್ಲಿ ಜೈಮಿನ್ಯಾಚಾರ್ಯನು ಜೀವ ಬ್ರಹ್ಮರಿಗೆ ಭೇದವುಂಟೆಂದೂ ಇವರಿಬ್ಬರ ಮತವೈವಿಧ್ಯವನ್ನು ತಿಳಿಸಿ, ಬಾದರಾಯಣರು "ದ್ವಾದಶಾಹವದುಭಯವಿಧಂ ಬಾದರಾಯಣೋsತಃ" (೪-೪-೧೨) ಎಂಬ ಸೂತ್ರದಲ್ಲಿ ತಮ್ಮ ಹೆಸರನ್ನೇ ಸ್ಪಷ್ಟವಾಗಿ ನಿರ್ದೇಶಿಸಿ ದ್ವಾದಶಾಹ ಯಜ್ಞದ ದೃಷ್ಟಾಂತದಿಂದ ಜೀವಬ್ರಹ್ಮರಿಗೆ ಭೇದ ಅಭೇದಗಳೆರಡೂ ಪಾರಮಾರ್ಥಿಕವೆಂದೂ, ಇವುಗಳಲ್ಲಿ ಯಾವುದೂ ಔಪಾಧಿಕ ಅಥವಾ ಕಾಲ್ಪನಿಕವಲ್ಲವೆಂದೂ ಸ್ಪಷ್ಟವಾಗಿ ತಿಳಿಸಿದ್ದಾರೆ. ಇಷ್ಟೇ ಅಲ್ಲದೆ, ಮುಂದೆ "ತನ್ವಭಾವೇ ಸಂಧ್ಯವದುಪಪತ್ತೇಃ" (೪-೪-೧೩) ಎಂಬ ಸೂತ್ರದಲ್ಲಿ ಸಂಧ್ಯಾದೃಷ್ಟಾಂತದಿಂದ ಸತ್ಯನಾದ ಜೀವನಿಗೆ ಸತ್ಯವಾದ ಪ್ರಪಂಚದಲ್ಲಿ ಸತ್ಯನಾದ ಸಾಕಾರಪರಮಾತ್ಮನ ಉಪಾಸನ ಮಾಡುತ್ತಲೇ ನಿರಾಕಾರಪರಮಾತ್ಮನಲ್ಲಿ ಸಮರಸನಾಗಿ ಬೆರೆತು ಬ್ರಹ್ಮಾನಂದವನ್ನು ಈ ದೇಹದಲ್ಲಿಯೇ ಅನುಭವಿಸುತ್ತ, ದೇಹವನ್ನು ತೊರೆದಮೇಲೆಯೂ ಎಂದಿನಂತೆ ಅದೇ ಆನಂದವನ್ನು ಅನುಭವಿಸುತ್ತ ನಿತ್ಯಸುಂದರನಾಗಿರಬಹುದೆಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಹೀಗೆ ಬ್ರಹ್ಮಸೂತ್ರಗಳಲ್ಲಿಯೇ ಬ್ರಹ್ಮ ಜೀವ ಜಗತ್ತುಗಳ ಬಗ್ಗೆ ಮತಭೇದಗಳಿದ್ದರೂ, ಜೀವನಿಗೆ ನಿರ್ದಿಷ್ಟವಾದ ಪರಮಾತ್ಮ ದರ್ಶನವನ್ನು ಬ್ರಹ್ಮಸೂತ್ರಗಳೇ ಒದಗಿಸುತ್ತಿವೆ ಎಂಬ ಅಂಶ ಅಭಿನಂದನೀಯವಾಗಿದೆ.

ಬಾದರಾಯಣರು ಜೀವನಿಗೆ ಸತ್ಯದರ್ಶನದ ಸುವ್ಯವಸ್ಥಿತಮಾರ್ಗವನ್ನು ತಿಳಿಸಿದ್ದರೂ ಸಹ, ಆ ಬ್ರಹ್ಮಸೂತ್ರಗಳಲ್ಲಿಯೇ ಮತವೈವಿಧ್ಯವು ಕಂಡುಬಂದಿರುವುದರಿಂದ ಆ ಕಾಲದ ಆಚಾರ್ಯರಿಗೆ ಹಾಗೆ ಮತಭೇದ ಏಕೆ ಹುಟ್ಟಿರಬೇಕು? ಎಂಬುದನ್ನು ತಿಳಿದರೆ ಆ ಬ್ರಹ್ಮಸೂತ್ರಗಳಿಗೆ ಈಚೆಗೆ ಭಾಷ್ಯ ಬರೆದಿರುವ ಆಚಾರ್ಯರಲ್ಲೂ ಮತಭೇದವಿರುವುದಕ್ಕೆ ನಾವು ಆಶ್ಚರ್ಯಪಡಬೇಕಾಗುವುದಿಲ್ಲ. ಹಿಂದಿನ ಆಚಾರ್ಯರಿಗೆ ಮತಭೇದಕ್ಕೆ ಯಾವ ಕಾರಣವಿತ್ತೋ ಅದೇ ಕಾರಣವೇ ಈಚಿನ ಆಚಾರ್ಯರಿಗೂ ಅನ್ವಯಿಸುವುದಾದರೆ ನಾವು ಈ ಮತಭೇದದಿಂದಲೇ ನಿರಾಶರಾಗಬೇಕಾಗಿಲ್ಲ. "ಕ್ಷುರಸ್ಯ ಧಾರಾ ನಿಹಿತಾ ದುರತ್ಯಯಾ". ಸತ್ಯದ ಮಾರ್ಗ ಯಾರಿಗೂ ಯಾವಾಗಲೂ ಸುಗಮವಲ್ಲ; ಆದರೆ ಬಹಳ ಗಹನವೂ ಕ್ಲೇಶದಾಯಕವೂ ಆಗಿರುವುದೆಂಬ ಅಂಶ ಸಾಧಕರೆಲ್ಲರಿಗೂ ತಿಳಿದದ್ದೇ ಆಗಿದೆ. ಬ್ರಹ್ಮಸೂತ್ರಗಳ ಕಾಲಕ್ಕೆ ಆಚಾರ್ಯರಲ್ಲಿ ಮತಭೇದವಿರಲಿಕ್ಕೆ ಬ್ರಹ್ಮಸೂತ್ರಗಳೇ ಕಾರಣವಲ್ಲ. ಆದರೆ, ಸರ್ವಾಧಾರವಾದ ಬ್ರಹ್ಮದ ಬಗ್ಗೆ ಪರಮಪ್ರಮಾಣವೆನಿಸಿದ ಶ್ರುತಿಯಲ್ಲಿಯೇ ಮಹರ್ಷಿಗಳು ತಮ್ಮ ದಿವ್ಯಾನುಭವವನ್ನು ತಿಳಿಸುವಾಗಲೇ ಭಿನ್ನಾಭಿಪ್ರಾಯಗಳು ಹೊರಟಿವೆ. ಹೀಗೆ ಶ್ರುತಿಯಲ್ಲಿ ಮತ

ವೈವಿಧ್ಯವಿರುವುದರಿಂದಲೇ ಬ್ರಹ್ಮಸೂತ್ರಗಳ ಕಾಲಕ್ಕೆ ಆಚಾರ್ಯರು ವಿಭಿನ್ನಮಾರ್ಗಗಳನ್ನು ಆಶ್ರಯಿಸತೊಡಗಿದುದು ಸಹಜವೇ ಆಗಿದೆ. ಅದನ್ನು ಅನುಸರಿಸಿಯೇ ಈಚಿನ ಭಾಷ್ಯಕಾರರು ಒಂದೊಂದು ಮಾರ್ಗದಲ್ಲಿ ಸೂತ್ರಗಳಿಗೆ ಅರ್ಥಮಾಡಿರುವುದರಲ್ಲಿ ಆಶ್ಚರ್ಯವೇನೂ ಕಾಣುವುದಿಲ್ಲ. ಹೀಗೆ ಮೂಲದಲ್ಲಿಯೇ ಮತವೈವಿಧ್ಯದಿಂದ ಪರಸ್ಪರವಿರೋಧವುಂಟಾಗುವುದಾದರೆ ಇನ್ನು ಸಾಧಕರಿಗೆ ಸಮನ್ವಯದೃಷ್ಟಿ ಬೆಳೆಯುವ ಬಗೆ ಹೇಗೆ? ಸಾಧನೆಯಲ್ಲಿ ಪ್ರವೃತ್ತಿ ಹೇಗೆ ಹುಟ್ಟೀತು? ಹುಟ್ಟಿದರೂ ಸಂಶಯಗಳಿಗೆ ಸಿಲುಕಿ ಸಾಧಕನು ಹೇಗೆ ಮುಂದುವರಿದಾನು? ಈ ಬಗೆಯ ಪ್ರಶ್ನೆಗಳು ಸಮಾಧಾನಕ್ಕಾಗಿ ಶ್ರುತಿಯಕಡೆಗೇ ತಿರುಗುತ್ತವೆ. ಆದರೆ ಶ್ರುತಿಯಲ್ಲಿ ಇವೆಲ್ಲಕ್ಕೂ ಉತ್ತರವಿದ್ದೇ ಇರಬೇಕು. ಆಸ್ತಿಕರಮೂಲಧನವೆನಿಸಿರುವ ಶ್ರುತಿಯು ಸಾಧಕರಿಗೆ ನಿರಾಶೆಯನ್ನುಂಟುಮಾಡಲಾರದು. ಈ ಶ್ರುತಿಯು ಜೀವರೆಲ್ಲರನ್ನೂ ಸಮದೃಷ್ಟಿಯಿಂದ ನೋಡಬೇಕಾದ್ದರಿಂದ ಆಯಾ ಅಧಿಕಾರಿಗಳಿಗೆ ತಕ್ಕಂತೆ ಉಪದೇಶ ಮಾಡಿರುವುದು. ಆದ್ದರಿಂದ ಅಲ್ಲಿ ಹೀಗೆ ಅಭಿಪ್ರಾಯಭೇದಗಳು ಕಂಡುಬರಲಿಕ್ಕೆ ಅವಕಾಶವಾಯಿತು. ಸಾಧಕರೆಲ್ಲರೂ ಒಂದೇಬಗೆಯ ಸ್ವಭಾವದವರಾಗಿರುವುದಿಲ್ಲ. ಪ್ರಕೃತಿಯಿಂದ ಸಹಜವಾಗಿ ಭಿನ್ನರಾದ ಜನರ ಯೋಗ್ಯತೆಗನುಗುಣವಾಗಿ ಶ್ರುತಿ ಸತ್ಯವಾದ್ದನ್ನೇ ಉಪದೇಶಿಸಿದೆ. ಅದರಲ್ಲಿ ಯಾವ ವಿರೋಧವೂ ಇರಲಾರದು. ಮಹರ್ಷಿಗಳು ಕಂಡನುಭವಿಸಿದ ತತ್ತ್ವದಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿಲ್ಲ. ಆದ್ದರಿಂದಲೇ "ಸಾಕ್ಷಾತ್ಕೃತಧರ್ಮಾಣಃ ಗುರವಃ" ಎಂದು ಯಾಸ್ಕಾಚಾರ್ಯರು ಧರ್ಮಸ್ವರೂಪನೂ ಸಚ್ಚಿದಾನಂದನೂ ಆದ ಪರಮಾತ್ಮನ ದಿವ್ಯದರ್ಶನ ಮಾಡಿದ ಮಹರ್ಷಿಗಳನ್ನುಗುರುಗಳೆಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಯಾವನಿಗೆ ಸಂಶಯಭ್ರಾಂತಿಗಳು ತೊಲಗಿ ನಿಶ್ಚಯಜ್ಞಾನದ ಸಾಕ್ಷಾತ್ಕಾರವಾಗಿರುವುದೋ ಅವನೇ ಗುರುವೆನಿಸಿ ದರ್ಶನಮಾತ್ರದಿಂದಲೇ ಇತರರ ಅಜ್ಞಾನವನ್ನು ಪರಿಹರಿಸಿ ದಿವ್ಯದರ್ಶನ ಮಾಡಿಸಬಲ್ಲನು. ವೇದದ ಋಷಿಗಳೆಲ್ಲರೂ ಇಂತಹ ಗುರುಗಳೇ ಆಗಿರುವಾಗ ಅವರು ಪಡೆದ ಸತ್ಯದ ಸಾಕ್ಷಾತ್ಕಾರದಲ್ಲಿ ವಿರೋಧವೆಲ್ಲಿದ್ದೀತು? ಯಾರು ಕಾಣುವುದಾದರೂ ಅವರು ಕಾಣುವ ಸತ್ಯವು ಮಾತ್ರ ಒಂದೇ ಬಗೆಯಾಗಿರುವುದು. ಅದನ್ನು ಕಂಡವರು ಇತರರಿಗೆ ತಿಳಿಸುವಾಗ ಅವರವರ ಸ್ವಭಾವದಂತೆ ತಿಳಿಸಬೇಕಾದ್ದರಿಂದ ಮತಭೇದಗಳು ಹುಟ್ಟುವುದು ಸಹಜ. ಆದ್ದರಿಂದ ಅಪ್ರತ್ಯಕ್ಷವಾದ ಪರಮಾತ್ಮನ ಅನುಭವ ಜೀವನಿಗಾಗಬೇಕಾದರೆ ಮಹಾತ್ಮರ ದಿವ್ಯದರ್ಶನದ ಆವಶ್ಯಕತೆ ಅನಿವಾರ್ಯವೆನಿಸಿದೆ. ಇದರಿಂದಲೇ ಅವರ ಉದಾತ್ತತೆ ಜಗದ್ವಿಖ್ಯಾತವಾಗಿದೆ. ಸತ್ಯದರ್ಶನಮಾಡಿದ ಅನುಭವಿಗಳು ಅದನ್ನು ಬೇರೆಯವರಿಗೂ ತೋರಿಸಲು ಶಕ್ತರಾದ್ದರಿಂದಲೇ ಅವರ ಅನುಭವವಾಣಿ ಇಂದು ನಮಗೆ ಮಾರ್ಗದರ್ಶಕವಾಗಿ ದರ್ಶನವೆನಿಸಿದೆ. ಆದ್ದರಿಂದ ಶ್ರುತಿಯಲ್ಲಿ ಅಧಿಕಾರಿಗಳ ಯೋಗ್ಯತೆಯ ತಾರತಮ್ಯದಿಂದ ಮತಭೇದವಿದ್ದರೂ, ಅದರ ಸಮನ್ವಯಕ್ಕಾಗಿಯೇ ಹೊರಟ ಬ್ರಹ್ಮಸೂತ್ರಗಳಲ್ಲೂ ಬಾದರಾಯಣರು ಆ ಕಾಲದ ವಿಭಿನ್ನಮತಗಳನ್ನು ತಿಳಿಸಿದ್ದರೂ ಆ ಎಲ್ಲಾ ಸಂದರ್ಭ-

ಗಳಲ್ಲೂ ತಮ್ಮ ನಿರ್ದಿಷ್ಟವಾದ ಅಭಿಪ್ರಾಯವನ್ನು ಸಂಶಯಕ್ಕೆಡೆ ಇಲ್ಲದಂತೆ ಸ್ಪಷ್ಟವಾಗಿ ತಿಳಿಸಿರುವುದರಿಂದ ಶ್ರುತಿ ಬ್ರಹ್ಮಸೂತ್ರಗಳನ್ನು ಶ್ರೇಯಃಕಾಮಿಗಳಾದ ಸಾಧಕರೆಲ್ಲರೂ ಉತ್ತಮಸಾಧನಗಳನ್ನಾಗಿ ಉಪಯೋಗಿಸಬಹುದೆಂದು ನಾವು ಹೆಮ್ಮೆಪಡಬಹುದಾಗಿದೆ. ಆದ್ದರಿಂದಲೇ ಬ್ರಹ್ಮಸೂತ್ರಗಳು ಬ್ರಹ್ಮಮೀಮಾಂಸಾಶಾಸ್ತ್ರವೆಂದೂ, ಆಧ್ಯಾತ್ಮದರ್ಶನವೆಂದೂ ಖ್ಯಾತಿಯನ್ನು ಪಡೆದಿವೆ. ಶಾಸ್ತ್ರದಿಂದಲೇ ಜೀವನಿಗೆ ಯುಕ್ತಾಯುಕ್ತವಿವೇಕವೂ, ದರ್ಶನದಿಂದಲೇ ನಿತ್ಯಸುಖದ ಮಾರ್ಗವೂ ದೊರೆಯಬೇಕಾಗಿವೆ. ಈ ವಿವೇಕಮಾರ್ಗವು ಜೀವನಿಗೆ ತನ್ನ ಪರಮೈಶ್ವರ್ಯವೆನಿಸಿದ ಪರಮಾತ್ಮನ ಜ್ಞಾನದಿಂದಲೇ ದೊರಕಬೇಕಾಗಿದೆ. ಈ ರೀತಿಯಾಗಿ ಜೀವನು ಇಲ್ಲಿ ಅಲ್ಲಿ ಎರಡುಕಡೆಯೂ ಸಲ್ಲುವಂತೆ ಬಾಳಬೇಕಾದರೆ ಅವನಿಗೆ ಆಧ್ಯಾತ್ಮದರ್ಶನದ ಪರಿಚಯ ಎಷ್ಟು ಆವಶ್ಯಕ ಎಂಬುದನ್ನು ಮತ್ತೆ ಬೇರೆ ಹೇಳಬೇಕಾಗಿಲ್ಲ. ಹೀಗೆ ವಿಭಿನ್ನ ಮತಗಳನ್ನು ತುಲನಾತ್ಮಕದೃಷ್ಟಿಯಿಂದ ಪರಿಶೀಲಿಸಿ ನಿರ್ದಿಷ್ಟವೂ ಕ್ರಮಬದ್ಧವೂ ಆದ ಸಮನ್ವಯದೃಷ್ಟಿಯನ್ನು ಹೊಂದಿರುವುದರಿಂದಲೇ ಬ್ರಹ್ಮಸೂತ್ರಗಳು ಮಾನವ ಜೀವನದ ಸಹಜಸೌಂದರ್ಯಕ್ಕೆ ಪೋಷಕಗಳಾಗಿವೆ.

ಈ ಆಧ್ಯಾತ್ಮದರ್ಶನದಲ್ಲಿ ಜೀವನಿಗೆ ಅವನ ಸಹಜ ಮತ್ತು ವಾಸ್ತವ ಸ್ವರೂಪಗಳನ್ನು ತಿಳಿಯಪಡಿಸುವ ಭಾಗವು ಸಿದ್ಧಾಂತವೆಂದೂ, ಅದರ ಸಾಕ್ಷಾತ್ಕಾರಕ್ಕೆ ಅವನು ಮಾಡಬೇಕಾದ ಪ್ರಯತ್ನವನ್ನು ತಿಳಿಸುವ ಭಾಗವು ಸಂಪ್ರದಾಯವೆಂದೂ ಪ್ರಸಿದ್ಧವಾಗಿವೆ. ಸಿದ್ಧಾಂತಭಾಗದಲ್ಲಿ ಅನುಭವಿಗಳು ಪರಬ್ರಹ್ಮದ ಬಗ್ಯೆ ತಾವು ಭಾವಿಸಿದ ನಿರ್ಣಯವನ್ನು ತಿಳಿಸಿ, ಸಂಪ್ರದಾಯಭಾಗದಲ್ಲಿ ಜೀವನಿಗೆ ಬ್ರಹ್ಮಪ್ರಾಪ್ತಿಗೆ ಆವಶ್ಯಕವಾದ ಸಾಧನಮಾರ್ಗವನ್ನು ದೊರಕಿಸಿರುವರು. ಹೀಗೆ ಸಿದ್ಧಾಂತ ಸಂಪ್ರದಾಯಗಳೆರಡೂ ಮಹಾತ್ಮರಿಂದ ಲೋಕಹಿತಾರ್ಥವಾಗಿ ಸದುದ್ದೇಶದಿಂದಲೇ ಹೊರಟಿದ್ದರೂ, ಅವುಗಳಲ್ಲಿ ಯಥಾರ್ಥವಾಗಿ ಇರುವ ಸಮನ್ವಯವನ್ನು ಕಾಣದೆ ವಿಷಯಾಂಧನಾದ ಜೀವನು ಭೋಗಾಸಕ್ತನಾಗಿ ಭವರೋಗದಿಂದ ನರಳುತ್ತ ಅದಕ್ಕೆ ಪರಿಹಾರವನ್ನು ಕಾಣದೆ ಅಲೆದಾಡುತ್ತಿರುವನು. ಇಂತಹ ಜೀವರ ಮೇಲೆ ಅವ್ಯಾಜಪ್ರೇಮದಿಂದ ಶ್ರೀಪತಿಪಂಡಿತಾರಾಧ್ಯರು ಶಿವಾನುಗ್ರಹದಿಂದ ಬ್ರಹ್ಮಸೂತ್ರಗಳಿಗೊಂದು ಭಾಷ್ಯವನ್ನು ಬರೆದು ಅದಕ್ಕೆ ಶ್ರೀಕರಭಾಷ್ಯವೆಂದು ಹೆಸರಿಟ್ಟಿರುವರೆಂದು ಭಾಷ್ಯದ ಆರಂಭದಲ್ಲಿ ಬರುವ ಪದ್ಯದಿಂದ ನಮಗೆ ತಿಳಿದುಬರುತ್ತದೆ.

ಶ್ರೀ ವೈಯಾಸಿಕಬ್ರಹ್ಮಸೂತ್ರಪದಮುಖ್ಯಾರ್ಥಂ ಶಿವಾನುಗ್ರಹಾತ್<br>
ಭಾಷ್ಯಂ ಶ್ರೀಕರನಾಮಕಂ ಭವಹರಂ ದುರ್ವಾದಿಗರ್ವಾಪಹಂ ।<br>
ಸರ್ವಾನರ್ಥವಿನಾಶಕಂ ಬುಧನುತಂ ತತ್ತ್ವಾರ್ಥಬೋಧಾಕರಂ<br>
ಶ್ರೀಮಚ್ಛ್ರೀಪತಿಪಂಡಿತೇಂದ್ರಯತಿನಾ ವ್ಯಾತನ್ಯತೇ ಸಾಂಪ್ರತಂ ॥ ೧೧ ॥

ಈ ಪದ್ಯದಲ್ಲಿ ಶ್ರೀಪತಿ ಪಂಡಿತಾರಾಧ್ಯರು ತಮ್ಮ ಭಾಷ್ಯವನ್ನು ಶ್ರೀಕರವೆಂದೂ, ಭವಹರವೆಂದೂ, ಸರ್ವಾನರ್ಥವಿನಾಶಕವೆಂದೂ, ವಿದ್ವನ್ಮಾನ್ಯವೆಂದೂ, ತತ್ತ್ವಾರ್ಥದ

ನಿರ್ಣಯಕ್ಕಾಧಾರವೆಂದೂ, ದುರ್ವಾದಿಗಳ ಗರ್ವವನ್ನು ನಾಶಪಡಿಸತಕ್ಕದ್ದೆಂದೂ, ಬ್ರಹ್ಮಸೂತ್ರಗಳ ಅರ್ಥವನ್ನು ಅಕ್ಷರಶಃ ಮತ್ತು ಪದಶಃ ವಿಶದಪಡಿಸುವುದೆಂದೂ ತಿಳಿಸಿ ಅದರ ಮಹತ್ತ್ವದ ಬಗ್ಗೆ ಪೂರ್ಣವಿಶ್ವಾಸವುಳ್ಳವರಾಗಿದ್ದಾರೆ. ಇದಷ್ಟೇ ಅಲ್ಲದೆ, ಅವರು ಈ ಭಾಷ್ಯವನ್ನು ಶಿವಾನುಗ್ರಹದಿಂದ ರಚಿಸಿರುವುದಾಗಿ ಬಿಚ್ಚಿದೆಯಿಂದ ಹೇಳಿಕೊಂಡಿದ್ದಾರೆ. ಈ ಮಾತು ಅವರ ಹೃದಯದ ಅಂತರಾಳದಿಂದಲೇ ಬಂದಿರುವುದೆಂಬ ಅಂಶ ಅವರ ಬೇರೊಂದು ಪದ್ಯದಿಂದ ಸ್ಪಷ್ಟಪಡುತ್ತದೆ.

ಶಿವ ತ್ವದ್ದಾಸದಾಸೋ ಯಃ ತದ್ದಾಸೋಽಸ್ಮೀತಿ ಯಾ ಸುಧೀಃ ।
ತಾಂ ದತ್ವಾ ಕೃಪಯಾ ಪಾಹಿ ಜನ್ಮಜನ್ಮಾಂತರೇಽಪಿ ಮಾಂ ॥ ೩ ॥

ಇಲ್ಲಿ ಅವರು ತಮ್ಮನ್ನು ಶಿವನು ತನ್ನ ದಾಸರ ದಾಸನೆಂದು ಭಾವಿಸುವುದನ್ನೇ ತಮಗೆ ಅವನಿಂದ ಬರಬಹುದಾದ ಒಂದು ದೊಡ್ಡ ಅನುಗ್ರಹವೆಂದು ತಿಳಿದು ಅವನ ಕೃಪೆಗಾಗಿ ವಿನಯದಿಂದ ಬೇಡಿಕೊಂಡಿದ್ದಾರೆ. ಈ ಕೃಪೆಯೂ ಸಹ ಇದೊಂದು ಜನ್ಮಕ್ಕೆ ದೊರೆತರೆ ಸಾಲದು; ಆದರೆ ಎಲ್ಲಾ ಜನ್ಮಗಳಲ್ಲೂ ದೊರಕಲೆಂಬುದೇ ಅವರ ಹೆಬ್ಬಯಕೆ. "ದಾಸಭಾವದ ಜನ್ಮಗಳಂತೂ ಎಷ್ಟಾದರೂ ಬರಲಿ, ಆದರೆ ಅಹಂಕಾರದಿಂದ ಅಭಿಮಾನಿಸಿ ಮೆರೆಯುವ ವಿಷಗಳಿಗೆಯೊಂದೂ ಬಾರದಿರಲಿ" ಎಂಬ ಗಹನವಾದ ಅರ್ಥವನ್ನು ಸೂಚಿಸುವಂತೆ ಶ್ರೀಪತಿಪಂಡಿತಾರಾಧ್ಯರು ಶಿವನಲ್ಲಿ ಮೊರೆ ಇಟ್ಟಿರುವುದು ನಮಗೆ ದಿವ್ಯದರ್ಶನವೆನಿಸಿದೆ. ಅಹಂಕಾರಾಭಿಮಾನಗಳೇ ನಮಗೆ ಭವರೋಗವಾಗಿ ಕಾಡುತ್ತಿರುವಾಗ ಈ ರೋಗಕ್ಕೆ ಔಷಧವನ್ನು ಶ್ರೀಕರಭಾಷ್ಯವು ಕೊಡುತ್ತದೆಯಾದ್ದರಿಂದ ಯಾರೂ ಹೆದರಬೇಕಾಗಿಲ್ಲವೆಂಬ ಆಶ್ವಾಸನವನ್ನು ಇವರು ಘಂಟಾಘೋಷವಾಗಿ ಇಡೀ ಮಾನವವರ್ಗಕ್ಕೆ ನೀಡುತ್ತಿರುವುದು ನಮ್ಮ ಭಾಗ್ಯೋದಯವಲ್ಲದೆ ಬೇರೆಯಲ್ಲ. ಇಂತಹ ಆಶ್ವಾಸನವನ್ನು ಜನತೆಗೆ ನೀಡಿರುವ ಭವರೋಗಹರವಾದ ಶ್ರೀಕರಭಾಷ್ಯವು ಒಂದು ಮಠದ ಅಧಿಪತಿಗಳಿಂದ ವಿರಚಿತವಾಗಿ ಇಡೀ ವಿಶ್ವದ ಆಗುಹೋಗುಗಳನ್ನು ಸುಸಜ್ಜಿತವಾದ ರೀತಿಯಲ್ಲಿ ವಿಶ್ವಪ್ರೇಮದ ದಿವ್ಯದೃಷ್ಟಿಯಿಂದ ಶ್ರುತಿ ಯುಕ್ತಿ, ಅನುಭವಗಳ ಆಧಾರದಮೇಲೆ ಬಗೆಹರಿಸಿರುವುದು ಮಾನವಸಮಾಜದ ಸೌಭಾಗ್ಯವೆಂದು ಅನುಭವಿಗಳು ಭಾವಿಸಿದ್ದಾರೆ. "ಶ್ರೀಪತಿ ಪಂಡಿತೇಂದ್ರಯತಿಯಿಂದ ಈ ಶ್ರೀಕರಭಾಷ್ಯವು ವಿರಚಿತವಾಗಿದೆ" ಎಂದು ಭಾಷ್ಯದ ಆರಂಭದಲ್ಲಿ ಬಂದಿರುವ ಪದ್ಯದಿಂದ ತಿಳಿದುಬರುತ್ತದೆ. ಭಾಷ್ಯದ ಪ್ರತಿಯೊಂದು ಪಾದದ ಕೊನೆಯಲ್ಲೂ "ಶ್ರೀಪತಿ ಪಂಡಿತ ಭಗವತ್ಪಾದಾಚಾರ್ಯಕೃತ" ವೆಂಬ ಪದವನ್ನು ನಾವು ಕಾಣುತ್ತೇವೆ. ಇದಿಷ್ಟೇ ಅಲ್ಲದೆ, ಭಾಷ್ಯಾಕಾರರ ಬಗ್ಗೆ "ನಿರಾಭಾರ ವೀರಶೈವಯತಿವ್ರಜಪರಿವೃಢ" ಎಂಬ ವಿಶೇಷಣವನ್ನು ತಿಳಿಸಲಾಗಿದೆ. ಇದರಿಂದ ಇವರು ವೀರಶೈವಮೂರ್ತಿಯರೆಂದೂ, ನಿರಾಭಾರಯತಿಗಳೆನಿಸಿದ ಚರಪಟ್ಟದ ಜಂಗಮಮೂರ್ತಿಗಳೊಳಗೆ ಶ್ರೇಷ್ಠರೆಂದೂ ತಿಳಿದುಬರುತ್ತದೆ. ಆದ್ದರಿಂದ ಇವರು ವೀರಶೈವಮತಾಚಾರ್ಯರ ಯಾವುದಾದರೊಂದು ಪೀಠಕ್ಕೆ ಅಧ್ಯಕ್ಷರಾಗಿದ್ದಿರಬೇಕೆಂಬುದು ಸ್ಪಷ್ಟ

ಪಡುತ್ತದೆ. ಕಾಶೀಪೀಠದ ಕೈಬರಹದ ಶ್ರೀಕರಭಾಷ್ಯದ ಕೊನೆಯ ಪುಟದಲ್ಲಿ ಕಾಣಬರುವ, ಪಂಡಿತಾರಾಧ್ಯಮುನಿನಾ ಪರಮಾರ್ಥಪ್ರಕಾಶಕಂ ।
ಕೃತಂ ಲೋಕಹಿತಾರ್ಥಾಯ ಹತಪಾಶಂ ಜಿತವ್ಯಥಂ ॥

ಎಂಬ ಪದ್ಯದಲ್ಲಿ ಶ್ರೀಪತಿಪಂಡಿತರಿಗೆ "ಪಂಡಿತಾರಾಧ್ಯಮುನಿ" ಎಂಬ ಹೆಸರನ್ನು ಉಲ್ಲೇಖಿಸಿರುವುದರಿಂದ ಇವರು ಪಂಡಿತಾರಾಧ್ಯಪೀಠದ ಸ್ವಾಮಿಗಳಾಗಿದ್ದರೆಂದು ತಿಳಿದುಬರುತ್ತದೆ. "ಮುನಿ" ಎಂಬ ಪದದಿಂದ ಇವರು ಬ್ರಹ್ಮಚರ್ಯ ಮುಗಿದೊಡನೆ ಗೃಹಸ್ಥಾಶ್ರಮಕ್ಕೆ ಹೋಗದೆ ಸನ್ಯಾಸಾಶ್ರಮವನ್ನು ಸ್ವೀಕರಿಸಿದ್ದರೆಂದು ಊಹಿಸಬಹುದಾಗಿದೆ. ಅಲ್ಲಿಗೆ ಇವರು "ಶಾಂತೋ ದಾಂತಸ್ತಿತಿಕ್ಷುಸ್ಸಮಾಹಿತೋ ಭೂತ್ವಾತ್ಮನ್ಯಾತ್ಮಾನಂ ಅನುಪಶ್ಯೇತ್" ಎಂಬ ಶ್ರುತಿಯಂತೆ ಶಮದಮ ಸಮಾಧಾನಗಳಿಂದಲೂ, ಬ್ರಹ್ಮನಿಷ್ಠೆಯಿಂದಲೂ ಕೂಡಿ, ವೇದಾವೇದಾಂತಗಳ ಪರಿಶ್ರಮದಿಂದ ಸದಾಚಾರಸಂಪನ್ನರೂ, ಉಜ್ಜ್ವಲತಪಸ್ವಿಗಳೂ ಆಗಿದ್ದ ವೀರಶೈವ ಶ್ರೋತ್ರೀಯರೆಂಬ ಅಂಶ ಸ್ಪಷ್ಟಪಡುತ್ತದೆ. ಇವರು ಭಾಷ್ಯದ ಆರಂಭದಲ್ಲಿ ಅಖಂಡ ಲಿಂಗವಾಗಿ ವಿಶ್ವವನ್ನಾವರಿಸಿರುವ ಓಂಕಾರಸ್ವರೂಪನಾದ ಪರಮಶಿವನನ್ನು ವಂದಿಸಿ, ಅವನ ಸದಾಶಿವಾವಸ್ಥೆಯ ಪಂಚಮುಖಗಳಿಂದ ಉದ್ಭವಿಸಿದ ಪಂಚಸಾದಾಖ್ಯಗಳನ್ನು ಭೂಲೋಕದಲ್ಲಿ ಪ್ರತಿನಿಧಿಸಿದ ಜಗದ್ಗುರು ಪಂಚಾಚಾರ್ಯರನ್ನು ಸ್ತೋತ್ರಮಾಡಿದ್ದಾರೆ. ಪರಮಶಿವನ ಸಂಕಲ್ಪದಂತೆ ರೇಣುಕ, ದಾರುಕ, ಗಜಕರ್ಣ, ವಿಶ್ವಕರ್ಣ, ಘಂಟಾಕರ್ಣ ಎಂಬ ಐದು ಗಣಾಧೀಶ್ವರರು ಭಾರತದಲ್ಲಿ ಸುಪ್ರಸಿದ್ಧವಾದ ಜ್ಯೋತಿರ್ಲಿಂಗಗಳಿಂದ ಅವತರಿಸಿ ರಂಭಾಪುರೀ, ಉಜ್ಜಯನಿ, ಶ್ರೀಶೈಲ, ಕಾಶಿ, ಹಿಮವತ್ಕೇದಾರಗಳಲ್ಲಿ ವೀರ, ಧರ್ಮ, ಸೂರ್ಯ, ಜ್ಞಾನ, ವೈರಾಗ್ಯವೆಂಬ ಐದು ಪೀಠಗಳನ್ನು ಪ್ರಾಚೀನಕಾಲದಲ್ಲಿಯೇ ಸ್ಥಾಪಿಸಿದ್ದರೆಂಬ ಅಂಶವನ್ನು ಸುಪ್ರಭೇದಾಗಮವು

"ಮತ್ಪಂಚವದನೋದ್ಭೂತಾಃ ಸರ್ವಃ ಏವ ಗುರೂತ್ತಮಾಃ
ತಸ್ಮಾತ್ಪಂಚವಿಧಾಚಾರ್ಯಾಃ ಪಂಚಪೀಠಾಧಿದೇವತಾಃ ।
ಪಂಚಸಿಂಹಾಸನಾಧೀಶಾಃ ಜಗದ್ಗುರುವರಾಶ್ಚ ತೇ ॥"

ಎಂಬ ಪದ್ಯದಲ್ಲಿ ಸ್ಪಷ್ಟಪಡಿಸಿದೆ. ಕಲಿಯುಗದಲ್ಲಿ ಈ ಐದು ಪೀಠಗಳನ್ನಲಂಕರಿಸಿದ್ದ ಆಚಾರ್ಯರಿಗೆ ರೇವಣಸಿದ್ಧ, ಮರುಳಸಿದ್ಧ, ಪಂಡಿತಾರಾಧ್ಯ, ವಿಶ್ವಾರಾಧ್ಯ ಏಕೋರಾಮಾರಾರಾಧ್ಯ ಎಂಬ ಹೆಸರುಗಳು ಪ್ರಸಿದ್ಧವಾಗಿವೆ. ಈ ಐವರನ್ನೂ ಶ್ರೀಪತಿಪಂಡಿತರು ಸ್ತುತಿಸಿರುವರೆಂಬ ಅಂಶ ಭಾಷ್ಯದ ಆರಂಭದಲ್ಲಿ ಬಂದಿರುವ ಪದ್ಯಗಳಿಂದ ತಿಳಿದುಬರುತ್ತದೆ. ಇವರು ರೇವಣಸಿದ್ಧಗುರುವನ್ನು ಎರಡು ಪದ್ಯಗಳಲ್ಲೂ, ಮರಳಸಿದ್ಧ, ವಿಶ್ವಾರಾಧ್ಯ, ಏಕೋರಾಮರಾಧ್ಯ ಇವರನ್ನು ಒಂದೊಂದು ಪದ್ಯದಲ್ಲೂ ಅವರವರ ಹೆಸರನ್ನುಹೇಳಿಯೇ ಸ್ತುತಿಸಿ, ತಮ್ಮ ಜನ್ಮಗುರುವಾದ ಪಂಡಿತಾರಾಧ್ಯರನ್ನು ಅವರ ಹೆಸರನ್ನುಹೇಳದೆಯೇ ಒಂದು ಪದ್ಯದಲ್ಲಿ ಸ್ತುತಿಸಿದ್ದಾರೆ. "ತಸ್ಮೈ ಶ್ರೀಗುರುಮೂರ್ತಯೇ ಶಿವಮತಾಚಾರ್ಯಾಯ ತುಭ್ಯಂ ನಮಃ" ಹೀಗೆ ಶ್ರೀಪತಿಪಂಡಿತರು

ತಮ್ಮ ಗುರುವನ್ನು ವಂದಿಸಿ ಅವರ ಮಹತ್ತ್ವವನ್ನು ಸ್ಮರಿಸಿಕೊಂಡಿದ್ದಾರೆ. ಇವರ ದೃಷ್ಟಿಯಲ್ಲಿ ಗುರುವು ಶಿವಾಗಮಗಳನ್ನು ಬೋಧಿಸುವಾಗ ಷಣ್ಮುಖನೆನಿಸಿದ್ದಂತೆಯೇ ಪೂರ್ವೋತ್ತರಮೀಮಾಂಸಾಶಾಸ್ತ್ರಗಳ ತತ್ತ್ವವನ್ನು ಬೋಧಿಸುವಾಗ ಚತುರ್ಮುಖ ಬ್ರಹ್ಮನೆನಿಸಿದ್ದಾನೆ; ಹಾಗೆಯೇ ತರ್ಕವ್ಯಾಕರಣಾದಿಶಾಸ್ತ್ರಗಳನ್ನು ಬೋಧಿಸುವಾಗ ಪಂಚಮುಖಪರಮೇಶ್ವರನೆನಿಸಿದ್ದಾನೆ. ಶ್ರೀಪತಿಪಂಡಿತಾರಾಧ್ಯರಿಗೆ ತಮ್ಮ ಶಾಖೆಯ ಮೂಲಾಚಾರ್ಯರಾದ ಪಂಡಿತಾರಾಧ್ಯರಲ್ಲಿ ಇಷ್ಟೊಂದು ಪೂಜ್ಯಭಾವನೆ ಇದ್ದುದು ನಮ್ಮೆಲ್ಲರಿಗೂ ಆಕರ್ಷಣೀಯವೆನಿಸಿದೆ. ಆದರೆ ಅವರು ಇಲ್ಲಿ ಗುರುವಿನ ಹೆಸರನ್ನು ಹೇಳದಿರುವುದು ಸಂಶಯಾಸ್ಪದವಲ್ಲವೇ? ಎಂಬ ಆಕ್ಷೇಪ ಬರುತ್ತದೆ. ಇವರು ರೇವಣಸಿದ್ಧರ ವಿನಹ ಬೇರೆ ಯಾರಿಗೂ ಗುರುಪದವನ್ನು ಉಪಯೋಗಿಸಿಲ್ಲ. ಆದರೆ ಎಲ್ಲಾ ಆಚಾರ್ಯರಿಗೂ ತಮ್ಮ ಪ್ರಣಾಮಗಳನ್ನು ಭಕ್ತಿಯಿಂದ ಅರ್ಪಿಸಿದ್ದಾರೆ. ರೇವಣಸಿದ್ಧರು ಅಗಸ್ತ್ಯರಿಗೆ ಬೋಧಿಸಿದ್ದ ವೀರಶೈವ ತತ್ತ್ವದ ಆಧಾರದಮೇಲೆ ಅಗಸ್ತ್ಯರು ಹಿಂದೆಯೇ ಬರೆದಿದ್ದ ಬ್ರಹ್ಮಸೂತ್ರವೃತ್ತಿಯ ಅವಲಂಬನದಮೇಲೆ ಶ್ರೀಪತಿಪಂಡಿತರು ತಮ್ಮ ಭಾಷ್ಯವನ್ನು ಬರೆದಿರುವುದರಿಂದಲೂ, ಅಗಸ್ತ್ಯರಿಗೆ ರೇವಣಸಿದ್ಧರು ಮಾಡಿದ್ದ ಉಪದೇಶವು ವಾತುಲಾದಿಕಾಮಿಕಾಂತವಾದ ಇಪ್ಪತ್ತೆಂಟು ಶಿವಾಗಮಗಳ ಸಾರಸಂಗ್ರಹರೂಪದಿಂದ ವೀರಶೈವರ ಸಿದ್ಧಾಂತವೆಂದು ಸುಪ್ರಸಿದ್ಧವಾಗಿದ್ದುದರಿಂದಲೂ, ಈ ಸಿದ್ಧಾಂತಾಗಮವನ್ನು ಶ್ರೀಪತಿಪಂಡಿತರು ತಮ್ಮ ಭಾಷ್ಯದಲ್ಲಿ ಹೆಚ್ಚಾಗಿ ಉಪಯೋಗಿಸಿರುವುದರಿಂದಲೂ, ರೇವಣಸಿದ್ಧರ ಬಗ್ಗೆ ಅವರಿಗೆ ಹೆಚ್ಚು ಪೂಜ್ಯಭಾವನೆ ಇದ್ದುದು ಸಹಜವಾಗಿದೆ. ಆದ್ದರಿಂದ ಅವರರೊಬ್ಬರ ಬಗ್ಗೆ ಗುರುಪದವನ್ನು ಉಪಯೋಗಿಸಿರುವುದು ನ್ಯಾಯವೂ ಯುಕ್ತವೂ ಆಗಿದೆ. ಉಳಿದ ಮೂವರು ಆಚಾರ್ಯರನ್ನು ಭಕ್ತಿಯಿಂದ ವಂದಿಸಿದ್ದರೂ, ಅವರ ಬಗ್ಗೆ ಗುರುಪದವನ್ನು ಉಪಯೋಗಿಸದೆ, ತಮ್ಮ ಪೀಠದ ಮೂಲಾಚಾರ್ಯರನ್ನು ಮಾತ್ರ ಗುರುವೆಂದು ಭಾವಿಸಿ ಅವರ ಹೆಸರನ್ನು ಹೇಳದೆ ಅವರಿಗೆ ನಮಸ್ಕರಿಸಿರುವುದು ಅವರ ವಿನಯ ನಿರಹಂಕಾರತೆ ಮತ್ತು ದಾಸಭಾವಗಳಿಂದ ಕೂಡಿದ ನೈಷ್ಠಿಕ ಹಾಗೂ ಅವ್ಯಭಿಚರಿತವಾದ ಭಕ್ತಿಯನ್ನು ತಿಳಿಯಪಡಿಸುತ್ತದೆ. ಪ್ರತಿಯೊಬ್ಬರಿಗೂ ಅವರವರ ಮತಾಚಾರ್ಯರೇ ಗುರುವೆನಿಸಿ, ಗುರುಶಿಷ್ಯರಿಗೆ ಸತೀಪತಿಭಾವದ ನಿತ್ಯಸಂಬಂಧವಿರುವುದು ಜಗತ್ಪ್ರಸಿದ್ಧವಾಗಿದೆ. ಅದರಲ್ಲೂ, ವೀರಶೈವ ಧರ್ಮದಲ್ಲಿ ಗುರುವಿನ ಬಗ್ಗೆ ಶಿಷ್ಯನ ಭಕ್ತಿಯು ಅವ್ಯಭಿಚರಿತವೂ ನಿಶ್ಚಲವೂ ಆಗಿರಬೇಕು. ಸತಿಯಾದವಳು ಪತಿಯ ಆಪ್ತೇಷ್ಟರೆಲ್ಲರನ್ನೂ ಅವರವರ ಹೆಸರಿನಿಂದಲೇ ವಿನಯವಾಗಿ ಕರೆದು ಆದರಿಸಿ ಉಪಚರಿಸಿದರೂ, ತನ್ನ ಪತಿಯನ್ನು ಮಾತ್ರ ಅವನ ಹೆಸರಿನಿಂದ ಕರೆಯದೆ ಅವನಲ್ಲಿಯೇ ತನ್ನ ಪಂಚಪ್ರಾಣಗಳನ್ನು ಇಟ್ಟುಕೊಂಡು ಅವನ ಸೇವೆಗಾಗಿಯೇ ತಾನು ಬದುಕಿರುವುದಾಗಿ ಭಾವಿಸಿರುತ್ತಾಳೆ. ಶ್ರೀಪತಿಪಂಡಿತಾರಾಧ್ಯರಿಗೆ ತಮ್ಮ ಗುರು ಪಂಡಿತಾರಾಧ್ಯರ ಬಗ್ಗೆ ಈ ಬಗೆಯ ಐಕಾಂತಿಕಭಕ್ತಿ ಇದ್ದುದು ವೀರಶೈವಧರ್ಮದಲ್ಲಿ ಗುರುವಿಗಿರುವ ಉತ್ಕೃಷ್ಟತೆಯನ್ನು ಮೇಲೆತ್ತಿ ತೋರಿಸುತ್ತದೆ.

ಪ್ರತಿಯೊಬ್ಬ ಮತೀಯನೂ ಸತ್ಯಸಾಕ್ಷಾತ್ಕಾರಿಗಳೆಲ್ಲರನ್ನೂ ಆದರದಿಂದ ಗೌರವಿಸುತ್ತಲೇ ತನ್ನ ಗುರುವಿನಲ್ಲಿ ಪ್ರಾಣಭಾವನೆಯಿಂದ ಅಪಾರಭಕ್ತಿಯನ್ನಿಟ್ಟು ಆ ಗುರುದೇವನ ನಿರುಪಾಧಿಕಪ್ರೇಮಾಶೀರ್ವಾದಗಳಿಂದಲೇ ತನ್ನ ಜನ್ಮಸಾರ್ಥಕಪಡಿಸಿಕೊಳ್ಳುವುದು ಭಾರತೀಯ ಸಂಸ್ಕೃತಿಯ ದಿವ್ಯ ಆದರ್ಶವೆನಿಸಿದೆ. ಗುರುಭಕ್ತಿ ಎಂಬುದು ಸಾಧಕನ ಕ್ರಿಯಾಚರಣೆಯಿಂದ ಗುರುವಿನ ಮೆಚ್ಚುಗೆಗೆ ವಿಷಯವಾಗುವಂತಹುದೇ ಹೊರತು ಬಾಯಿಂದ ಹೇಳಿಕೊಳ್ಳುವುದಾಗಲಿ, ವೇದಿಕೆಯಮೇಲೆ ನಿಂತು ಪ್ರಶಂಸೆ ಮಾಡುವುದಾಗಲಿ ಅಲ್ಲ. ಬೇರೆಯವರ ಉಪಕಾರವೇ ಸಭೆಯಲ್ಲಿ ಪ್ರಶಂಸೆಗೆ ಬರತಕ್ಕದ್ದು. ಸಾಧಕನ ಇಡೀ ಜೀವನವೇ ಗುರುವಿನ ದಿವ್ಯ ಪ್ರಸಾದವಾಗಿ, ಮಾಂಸಪಿಂಡವು ಮಂತ್ರಮಯವಾಗಿ ಪರಿಣಾಮಹೊಂದಿರುವುದರಿಂದ ಶಿಷ್ಯನು ಗುರುವಿನ ಬಗ್ಗೆ ಸಲ್ಲಿಸಬೇಕಾದ ಕೃತಜ್ಞತೆ ಬಾಯಿಂದ ಹೇಳಿಕೊಳ್ಳುವಂತಹದಲ್ಲ. ಗುರುವಿನ ನಿತ್ಯ ಸ್ಮರಣೆಯೇ ಅವನಿಗೆ ಶಿಷ್ಯನು ಭಕ್ತಿಯಿಂದ ಅರ್ಪಿಸುವ ಕಾಣಿಕೆ. ಇಂತಹ ಸ್ಥಿತಿಯಲ್ಲಿ ನೈಜವಾದ ಶಿಷ್ಯನು ಗುರುವಿನ ಹೆಸರನ್ನು ಹೇಳಲಿಕ್ಕೆ ಅವಕಾಶವೆಲ್ಲಿದ್ದೀತು? ಶ್ರೀಪತಿಪಂಡಿತಾರಾಧ್ಯರೂ ಸಹ ಸತ್ಸಂಪ್ರದಾಯವನ್ನುಗಮನಿಸಿ ಇತರರಿಗೆ ಮಾರ್ಗದರ್ಶನ ಮಾಡಲಿಕ್ಕಾಗಿ ತಮ್ಮ ಗುರುವಿನ ಹೆಸರನ್ನು ಹೇಳದೆಯೇ ತಮ್ಮ ದಾಸಭಾವದ ಪ್ರಣಾಮವನ್ನು ಭಕ್ತಿಯಿಂದ ಅರ್ಪಿಸಿರುವುದು ಅವರ ಜ್ಞಾನಕ್ರಿಯೆಗಳ ಸಮನ್ವಯ ಮನೋಭಾವವನ್ನು ವ್ಯಕ್ತಪಡಿಸುತ್ತದೆ. ಇದರಿಂದಲೇ ಅವರು ದಾಸಭಾವದ ದಿವ್ಯಾನುಗ್ರಹಕ್ಕಾಗಿ ಶಿವನಲ್ಲಿ ಅನನ್ಯಭಕ್ತಿಯಿಂದ ಮೊರೆ ಇಟ್ಟಿರುವುದು ಇಂದಿಗೂ ಇಡೀ ಮಾನವವರ್ಗಕ್ಕೆ ದಿವ್ಯವಾದ ಆದರ್ಶವಾಗಿ ಕಂಗೊಳಿಸುತ್ತಿರುವುದು. ಹೀಗೆ ಶ್ರೀಪತಿಪಂಡಿತಾರಾಧ್ಯರು ಗಜಕರ್ಣಗೋತ್ರಕ್ಕೆ ಸೇರಿದವರಾಗಿ ಶ್ರೀಶೈಲದ ಸೂರ್ಯಸಿಂಹಾಸನದ ಸ್ವಾಮಿಗಳಾಗಿದ್ದರೆಂದು ತಿಳಿದುಬರುತ್ತದೆ.

ಆದರೆ ಭಾಷ್ಯದ ಕೊನೆಯಲ್ಲಿ ಬಂದಿರುವ "ಶ್ರೀಪತಿ ಪಂಡಿತೇಂದ್ರಯತಿನಾ", "ಪಂಡಿತಾರಾಧ್ಯಮುನಿನಾ" ಎಂಬ ಪದಗಳಿಂದ ಕೆಲವರು ಇವರನ್ನು ಘಂಟಾಕರ್ಣಗೋತ್ರದ ಏಕೋರಾಮಶಾಖೆಗೆ ಸೇರಿದವರೆಂದೂ, ನಿರಂಜನಜಂಗಮ ಮೂರ್ತಿಗಳಾಗಿದ್ದು ಕೇದಾರದ ವೈರಾಗ್ಯಪೀಠವನ್ನಲಂಕರಿಸಿದ್ದರೆಂದೂ ಹೇಳುತ್ತಾರೆ. ಇನ್ನೂ ಕೆಲವರು ಇವರನ್ನು ಉಪನಯನಾದಿಸಂಸ್ಕಾರವಿಶಿಷ್ಟರಾದ ಆರಾಧ್ಯಬ್ರಾಹ್ಮಣರೆಂದೂ, ಸ್ಮಾರ್ತಬ್ರಾಹ್ಮಣರಂತೆ ಯಜ್ಞಯಾಗಾದಿ ಪ್ರಾಕೃತಕರ್ಮಗಳನ್ನಾಚರಿಸುವವರೆಂದೂ ಹೇಳುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಇವರನ್ನು ಷಟ್ಸ್ಥಲಬ್ರಹ್ಮಿಗಳಾದ ವೀರಶೈವರೆಂದೂ, ಅತಿವರ್ಣಾಶ್ರಮಿಗಳೆಂದೂ, ಕೇವಲ ಶಿವನಲ್ಲಿಯೇ ನೈಷ್ಠಿಕಭಕ್ತಿಯುಳ್ಳವರೆಂದೂ ಹೇಗೆ ಭಾವಿಸಬಹುದು? ಎಂಬ ಪ್ರಶ್ನೆ ಬರುತ್ತದೆ. ಆರಾಧ್ಯಬ್ರಾಹ್ಮಣರು ಲಿಂಗಪೂಜಕರಾದರೂ ಆದಿತ್ಯ, ಅಂಬಿಕೆ, ವಿಷ್ಣು, ಗಣನಾಥ, ಮಹೇಶ್ವರರನ್ನು ಆರಾಧಿಸುವ ಸ್ಮಾರ್ತಬ್ರಾಹ್ಮಣರಂತೆ ಮಿಶ್ರಶೈವರೆನಿಸಿದ್ದಾರೆ. ವೀರಶೈವರಾದರೋ ಈ ಐವರನ್ನೂ ಪ್ರತ್ಯೇಕವಾಗಿ ಆರಾಧಿಸದೆ ಮಹೇಶ್ವರನೊಬ್ಬನನ್ನೇ

ಪ್ರಾಣಲಿಂಗಭಾವನೆಯಿಂದ ಉಪಾಸನೆ ಮಾಡುತ್ತ ಅವನ ಅನುಭವವನ್ನು ಹೃದಯದೊಳಗಿನ ದಹರಾಕಾಶದಲ್ಲಿ ಪಡೆಯುತ್ತಿರುವರು. ಆದಿತ್ಯ ಮಹೇಶ್ವರನ ನೇತ್ರವೆನಿಸಿ, ಅಂಬಿಕೆ ಅವನ ಪ್ರಾಣವೆನಿಸಿ, ವಿಷ್ಣು ಅವನ ಪರಮಭಕ್ತನೆನಿಸಿ, ಗಣನಾಥ ಅವನ ಮಗನೆನಿಸಿರುವುದರಿಂದ ಮಹೇಶ್ವರನೊಬ್ಬನೇ ಅಖಂಡಲಿಂಗಸ್ವರೂಪನಾಗಿ ಜಗದ್ವ್ಯಾಪಾರಗಳನ್ನು ಲೀಲೆಯಿಂದ ನಡೆಸುತ್ತಿರುವನಾದ್ದರಿಂದ ಅವನ ಅಂಶನಾದ ಜೀವನು ಅವನೊಬ್ಬನನ್ನೇ ಆರಾಧಿಸುವುದರಿಂದ ಅಂಬಿಕೆ, ವಿಷ್ಣು ಮೊದಲಾದವರೆಲ್ಲರಿಗೂ ತೃಪ್ತಿಯಾಗುವುದೆಂದು ಭಾವಿಸಿ ಶ್ರೀಪತಿಪಂಡಿತಾರಾಧ್ಯರು ಮಹೇಶ್ವರನ ಆರಾಧನ ಒಂದನ್ನೇ ಮುಖ್ಯವೆಂದೆಣಿಸಿದ್ದಾರೆ. ಈ ಮಹೇಶ್ವರನಾದರೋ ವಿಶ್ವವ್ಯಾಪಕನೂ ವಿಶ್ವಕ್ಕಾಶ್ರಯನೂ ವಿಶ್ವಮಯನೂ ವಿಶ್ವಾತೀತನೂ ಆಗಿರುವುದರಿಂದ ಅವನ ಈ ಬಗೆಯ ಮಹಾಲಿಂಗಸ್ವರೂಪವನ್ನು ಸಾಧಕನು ಸುಲಭವಾಗಿ ತಿಳಿಯುವಂತಿಲ್ಲ. ಅವನಿಗೆ ನಿರ್ದಿಷ್ಟವಾದ ಆಕಾರವಿಲ್ಲ. ಆದ್ದರಿಂದಲೇ ಅವನು ಸಾಧಕನ ಮೇಲಿನ ಅವ್ಯಾಜಪ್ರೇಮದಿಂದ ಉಪಾಸನೆಗಾಗಿ ಮಾನವಹೃದಯದೊಳಗೆ ಆದರ ಪ್ರಮಾಣದಲ್ಲಿಯೇ ನೆಲಸಿರುವನು. ಇದನ್ನು ಬಾದರಾಯಣರೇ 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' ಎಂಬ ಸೂತ್ರದಲ್ಲಿ "ಅಂಗುಷ್ಠಮಾತ್ರಃ ಪುರುಷಃ" ಎಂಬ ಕಠೋಪನಿಷತ್ತಿನ ವಾಕ್ಯದಂತೆ ಸ್ಪಷ್ಟವಾಗಿ ತಿಳಿಸಿದ್ದಾರೆ. ಇದನ್ನು ಅನುಸರಿಸಿ ಶ್ರೀಪತಿಪಂಡಿತಾರಾಧ್ಯರು ಸಾಧಕನ ಹೃದಯವನ್ನು ಪ್ರಮಾಣವಾಗಿಟ್ಟುಕೊಂಡು ಅಲ್ಲಿ ಅಂಗುಷ್ಠಪ್ರಮಾಣದಲ್ಲಿ ನೆಲಸಿರುವಪ್ರಾಣರೂಪವಾದ ಪರಂಜ್ಯೋತಿಯನ್ನೇ ಸಾಧಕನು ಗುರುವಿನಿಂದ ಪಡೆದು ಅದನ್ನು ನಿತ್ಯವೂ ಇಷ್ಟಲಿಂಗವೆಂದಾರಾಧಿಸುತ್ತ ದೇಹದ ಹೊರಗಡೆಯೂ ಆದರ ನಿತ್ಯಸಂಪರ್ಕವನ್ನಿಟ್ಟುಕೊಂಡು ಆದಕ್ಕಾಗಿಯೇ ತನ್ನ ಎಲ್ಲಾ ವ್ಯವಹಾರಗಳನ್ನು ನಡೆಸುತ್ತಿರಬೇಕೆಂಬ ದಿವ್ಯವಾದ ಆದರ್ಶವನ್ನು ಭಾಷ್ಯದಲ್ಲಿ ಅವಕಾಶ ಸಿಕ್ಕಿದ ಕಡೆಗಳಲ್ಲೆಲ್ಲಾ ತಿಳಿಯಪಡಿಸಿದ್ದಾರೆ. ಇದರಮೇಲೆ "ನ ಪ್ರಯೋಜನವತ್ತ್ವಾತ್" ಎಂಬ ಸೂತ್ರಕ್ಕೆ ಪ್ರಯೋಜನವೆಂದರೆ ಸಾಧಕನು ಇಷ್ಟಪ್ರಾಣಭಾವಲಿಂಗಗಳ ನಿತ್ಯಸಂಪರ್ಕವನ್ನು ಸ್ಥೂಲಸೂಕ್ಷ್ಮಕಾರಣದೇಹಗಳಲ್ಲಿ ಏರ್ಪಡಿಸಿಕೊಳ್ಳುವುದೆಂದು ಅರ್ಥಮಾಡಿದ್ದಾರೆ. ಇದನ್ನು ನೋಡಿದರೆ ಇವರು ವೀರಶೈವದರ್ಶನದ ಉದ್ಧಾರಮೂರ್ತಿಗಳೆಂಬ ಅಂಶವು ಸ್ಪಷ್ಟಪಡುತ್ತದೆ. ಬ್ರಹ್ಮಸೂತ್ರಗಳ ಆಧಾರದಮೇಲೆಯೇ ಪರಶಿವನನ್ನು ಷಟ್ಸ್ಥಲಾತ್ಮಕನೆಂದು ಪ್ರತಿಪಾದಿಸಿ ಬಾಹ್ಯಲಿಂಗಾಧಿಕರಣದಲ್ಲಿ ಶಿವನು ಇಷ್ಟಪ್ರಾಣಭಾವರೂಪದಿಂದ ಈ ದೇಹದಲ್ಲಿ ನೆಲಸಿ ಭಕ್ತನಿಂದ ತ್ರಿವಿಧೋಪಾಸನವನ್ನು ಸ್ವೀಕರಿಸಿ ರೂಪ ರುಚಿ ತೃಪ್ತಿಗಳೆಂಬ ತ್ರಿವಿಧಪ್ರಸಾದವನ್ನು ಕರುಣಿಸುತ ಭಕ್ತಾನುಗ್ರಹಲೀಲೆಯನ್ನು ನಡೆಸುತ್ತಿರುವನೆಂದು ತಿಳಿಸಿರುವ ಶ್ರೀಪತಿಪಂಡಿತಾರಾಧ್ಯರನ್ನು ವೀರಶೈವರಲ್ಲವೆಂದು ಹೇಳುವವರು ತಮ್ಮಲ್ಲಿ ವೀರಶೈವಧರ್ಮ ಎಷ್ಟರಮಟ್ಟಿಗೆ ಅಂಟಿಕೊಂಡಿರುವುದೆಂಬ ಬಗ್ಗೆ ಹೃದಯವನ್ನು ಮುಟ್ಟಿನೋಡಿಕೊಳ್ಳಬೇಕಾಗಿದೆ. "ಅಂತಸ್ತದ್ಧರ್ಮೋಪದೇಶಾತ್" ಎಂಬ ಸೂತ್ರದಲ್ಲಿ ಪರಮಶಿವನನ್ನು

ಸರ್ವಾಂತರ್ಯಾಮಿಯಾದ್ದರಿಂದ ಮಹಾಲಿಂಗನೆಂದೂ, "ಆಕಾಶಸ್ತಲ್ಲಿಂಗಾತ್" ಎಂಬ ಸೂತ್ರದಲ್ಲಿ ಅವನೇ ಸರ್ವಕ್ಕೂ ಅವಕಾಶನಾಗಿರುವುದರಿಂದ ಪ್ರಸಾದಲಿಂಗನೆಂದೂ, "ಅತ ಏವ ಪ್ರಾಣಃ"ಎಂಬಲ್ಲಿ ಅವನ ಆಶ್ರಯದಿಂದಲೇ ಜೀವನು ಬದುಕಿರುವುದರಿಂದ ಅವನೇ ಪ್ರಾಣಲಿಂಗನೆಂದೂ ಶ್ರೀಪತಿಪಂಡಿತಾರಾಧ್ಯರು ಭಾಷ್ಯದಲ್ಲಿ ಯುಕ್ತಿಯುಕ್ತವಾಗಿ ಪ್ರತಿಪಾದಿಸಿದ್ದಾರೆ. ಅಲ್ಲಿಂದ ಮುಂದೆ "ಜ್ಯೋತಿಶ್ಚರಣಾಭಿಧಾನಾತ್" ಎಂಬ ಸೂತ್ರದಲ್ಲಿ ಶಿವನೇ ವಿಶ್ವವನ್ನು ಬೆಳಗುವ ದಿವ್ಯಜ್ಯೋತಿಯಾಗಿರುವುದರಿಂದ ಅವನನ್ನು ಶಿವಲಿಂಗವೆಂದೂ "ಛಂದೋಽಭಿಧಾನಾತ್" ಎಂಬ ಸೂತ್ರದಲ್ಲಿ ಜ್ಞಾನಸಂವರ್ಧಕವಾದ ಗಾಯತ್ರೀಮಂತ್ರವೂ ಜ್ಞಾನಸ್ವರೂಪನಾದ ಶಿವನನ್ನೇ ಬೋಧಿಸುತ್ತಿರುವುದರಿಂದ ಶಿವನೇ ಈ ದೇಹದಲ್ಲಿ ಗುರುಲಿಂಗನಾಗಿರುವನೆಂದೂ, "ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಂ" ಎಂಬ ಸೂತ್ರದಲ್ಲಿ ಗಾಯತ್ರ್ಯಾತ್ಮಕಪರಶಿವನು ದಹರಾಕಾಶದಲ್ಲಿ ಉಪಾಸನೆಗಾಗಿ ಪಂಚಭೂತಗಳ ಅಧಿದೇವತೆಗಳಾದ ಸದ್ಯೋಜಾತಾದಿ ಪಂಚಬ್ರಹ್ಮರೊಡಗೂಡಿ ಅವರಿಂದಲೇ ತಾನು ಉಪಾಸನವನ್ನು ಸ್ವೀಕರಿಸುತ್ತಿರುವುದರಿಂದ ಆಚಾರಲಿಂಗನಾಗಿರುವನೆಂದೂ ಶ್ರೀಪತಿಪಂಡಿತರು ಪರಶಿವನ ಷಟ್ಸ್ಥಲಾತ್ಮಕ ಲೀಲೆಯನ್ನು ಹೃದಯಂಗಮವಾಗಿ ಚಿತ್ರಿಸಿರುವರು. "ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ" ಎಂಬ ಮಾಂಡೂಕ್ಯಶ್ರುತಿಯ ಆಧಾರದಿಂದ ಶಿವನೊಬ್ಬನೇ ಉಪಾಸ್ಯನೆಂದೂ, ಮುಕ್ತಿದಾಯಕನೆಂದೂ ತಿಳಿಸಿದ್ದಾರೆ. ಶಿವನೇ ಜಗದ್ರೂಪನೂ ಜಗನ್ನಿಯಾಮಕನೂ ಆದ್ದರಿಂದ ಅಭಿನ್ನನಿಮಿತ್ತೋಪಾದಾನಕಾರಣನಾಗಿರುವನೆಂದು "ಯಥೋರ್ಣನಾಭಿಸ್ಸೃಜತೇ ಗೃಹ್ಯತೇ ಚ" ಮೊದಲಾದ ಶ್ರುತಿಯ ಆಧಾರಮೇಲೆ ಒಪ್ಪಿಕೊಂಡಿದ್ದಾರೆ. ಆದ್ದರಿಂದ ಇವರನ್ನು ವೀರಶೈವರಲ್ಲವೆಂದೂ, ಇವರು ಬರೆದಿರುವ ಭಾಷ್ಯವು ವೀರಶೈವರಿಗೆ ಉಪಾದೇಯವಲ್ಲವೆಂದೂ ಹೇಳುವುದು ತೀರ ನಾಚಿಕೆಗೇಡಾಗುವುದು. ವೀರಶೈವವೆಂಬುದು ಶೈವವೃಕ್ಷದ ವಿಕಸಿತಪುಷ್ಪವೆಂಬ ಅಂಶವನ್ನು ಇವರು ಪತ್ಯಧಿಕರಣ ಮತ್ತು ಉತ್ಪತ್ತ್ಯಸಂಭವಾಧಿಕರಣಗಳಲ್ಲಿ ವಿಶದಪಡಿಸಿದ್ದಾರೆ. ವೇದಧರ್ಮಗಳಿಗನುಗುಣವಾದ ಕಾಮಿಕ ಮೊದಲಾದ ೨೮ ಆಗಮಗಳ ಸಾರಸಿದ್ಧಾಂತವೆನಿಸಿದ ವೀರಶೈವಮತವೇ ಮುಮುಕ್ಷುಗಳಿಗೆ ಗ್ರಾಹ್ಯವೆಂದು "ಪತ್ಯುರಸಾಮಂಜಸ್ಯಾತ್" ಎಂಬ ಸೂತ್ರದಲ್ಲೂ, ದ್ವೈತಾದ್ವೈತಪ್ರತಿಪಾದಕವಾದ ವೀರಶೈವಮತವೇ ವೈದಿಕರಿಗೆ ಅಂಗೀಕಾರಯೋಗ್ಯವೆಂದೂ "ಕರಣವಚ್ಚೇನ್ನ ಭೋಗಾದಿಭ್ಯಃ" ಎಂಬ ಸೂತ್ರದಲ್ಲೂ ಸ್ಪಷ್ಟವಾಗಿ ತಿಳಿಸಿದ್ದಾರೆ. ಹಾಗೆಯೇ ತ್ರಿಲೋಚನಶಿವಾಚಾರ್ಯನೆಂಬ ಪಾಶುಪತನು ಹೇಳುವಂತೆ ದೇಹದಮೇಲೆ ಲಿಂಗಮುದ್ರೆಯೊತ್ತುವುದನ್ನು ಅವೈದಿಕವೆಂದು ನಿರಾಕರಿಸಿ ಪ್ರಾಣಲಿಂಗಧಾರಣವಿಶಿಷ್ಟವಾದ ವೀರಶೈವಮತಕ್ಕೆ ಅದು ಸಮನಾಗುವುದಿಲ್ಲವೆಂದು ಘಂಟಾಘೋಷವಾಗಿ ಹೇಳಿದ್ದಾರೆ. ಇದೇ ಸೂತ್ರಕಾರನ ಮುಖ್ಯಾಭಿಪ್ರಾಯವೆಂದು ತಮ್ಮ ದೃಢನಿರ್ಧಾರವನ್ನು ವ್ಯಕ್ತಪಡಿಸಿದ್ದಾರೆ. ಇವರ ಘಂಟಾಘೋಷವನ್ನು ಕೇಳಿದರೆ ಶಿವನು ಪಾರ್ವತಿಗೆ ಹೇಳಿರುವುದಾಗಿ ತಿಳಿಸುವ,

"ನ ವೀರಶೈವಸದೃಶಂ ಮತಮಸ್ತಿ ಜಗತ್ತ್ರಯೇ।"

"ಏಕೇನ ಜನ್ಮನಾ ಮುಕ್ತಿರ್ವೀರಾಣಾಂ ತು ಮಹೇಶ್ವರಿ।"

ಎಂಬ ಆಗಮವಾಕ್ಯಗಳ ನೆನಹು ನಮಗೆ ಸ್ಫುರಿಸುತ್ತದೆ.

ಇದಷ್ಟೇ ಅಲ್ಲದೆ, ತೈತ್ತಿರೀಯದ "ಅಮೃತಸ್ಯ ದೇವಧಾರಣೋ ಭೂಯಾಸಂ" "ಏತತ್ಪ್ರೇಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಎಂಬ ಮಂತ್ರಗಳ ಆಧಾರದಮೇಲೆ ಮುಮುಕ್ಷುಗಳಿಗೆ ಲಿಂಗಧಾರಣ ಅತ್ಯಾವಶ್ಯಕವೆಂಬ ಅಂಶವನ್ನು ಸಿದ್ಧಾಂತಗೊಳಿಸಿದ್ದಾರೆ; ಲಿಂಗಧಾರಣವು ವೈದಿಕವೆಂಬುದನ್ನು ಸಪ್ರಮಾಣವಾಗಿ ಸ್ಥಾಪಿಸಿದ್ದಾರೆ; ದೇವನೆಂದರೆ ಶಿವನಲ್ಲದೆ ಬೇರೆ ಯಾರೂ ಅಲ್ಲವೆಂಬುವನ್ನು ಶ್ರುತಿಸ್ಮೃತಿಪುರಾಣೇತಿಹಾಸಗಳ ಆಧಾರದಮೇಲೆ ನೆಲೆಗೊಳಿಸಿದ್ದಾರೆ; "ಜ್ಞಾತ್ವಾ ದೇವಂ ಮುಚ್ಯತೆ ಸರ್ವಪಾಶೈಃ" ಎಂಬ ಹಲವಾರು ಶ್ರುತಿಗಳಿಂದ ಶಿವನೇ ದೇವನೆಂದೂ, ಬ್ರಹ್ಮವಿಷ್ಣ್ವಾದಿದೇವತೆಗಳೆಲ್ಲರೂ ಪಶುಗಳೆಂದೂ, ಇವರೆಲ್ಲರಿಗೂ ನಿಯಾಮಕನಾದ್ದರಿಂದ ಶಿವನೇ ಪಶುಪತಿ ಎಂದೂ, "ಪತ್ಯಾದಿಶಬ್ದೇಭ್ಯಃ" ಎಂಬ ಸೂತ್ರದಲ್ಲಿ "ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿಃ", "ಹಿರಣ್ಯಬಾಹವೇಽಂಬಿಕಾಪತಯೇ ಉಮಾಪತಯೇ ಪಶುಪತಯೇ ನಮೋ ನಮಃ", "ಪಶೂನಾಂ ಪತಯೇ ವೃಕ್ಷಾಣಾಂ ಪತಯೇ ಜಗತಾಂ ಪತಯೇ" ಎಂಬ ಶ್ರುತಿಗಳ ಆಧಾರದಮೇಲೆ ಪ್ರತಿಪಾದಿಸಿದ್ದಾರೆ; ವೈದಿಕರೆಲ್ಲರಿಗೂ ಎಲ್ಲಾ ಕರ್ಮಗಳ ಆರಂಭದಲ್ಲಿ ಶಿವನ ಸ್ಮರಣವೇ ಯುಕ್ತವೆಂಬುದನ್ನು ಸಾಮವೇದದ ಪ್ರಥಮಮಂತ್ರದಿಂದಲೂ, ಶ್ರುತ್ಯನುಸಾರವಾದ ಶೈವಸ್ಕಾಂದ ಮನ್ವಾದಿಸ್ಮೃತಿಗಳ ವಾಕ್ಯದಿಂದಲೂ ಸಾಧಿಸಿದ್ದಾರೆ; ಶಿವನು ಅಖಂಡಾಕಾರದಿಂದ ವಿಶ್ವವನ್ನಾವರಿಸಿ ವಿಶ್ವದ ಸೃಷ್ಟಿಸ್ಥಿತಿಲಯಗಳಿಗಾಧಾರನೂ, ವಿಶ್ರಾಂತಿಸ್ಥಲನೂ ಆಗಿರುವನೆಂಬ ಅಂಶವನ್ನು "ದ್ಯುಭ್ವಾದ್ಯಾಯತನಂ ಸ್ವಶಬ್ದಾತ್" ಎಂಬ ಸೂತ್ರದ ಭಾಷ್ಯದಲ್ಲಿ ಶ್ರೀಪತಿಪಂಡಿತಾರಾಧ್ಯರು ಸ್ಪಷ್ಟಪಡಿಸಿರುವುದನ್ನು ನೋಡಿದರೆ ವೀರಶೈವದರ್ಶನದಲ್ಲಿ ಪರಮಾತ್ಮನಿಗೆ ಲಿಂಗ-ಸ್ಥಲ ಎಂದು ಕರೆದಿರುವುದು ಅನ್ವರ್ಥವೆನಿಸುತ್ತದೆ. ಇದನ್ನೇ "ತಜ್ಜಲಾನಿತಿ ಶಾಂತ ಉಪಾಸೀತ" "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ" ಎಂಬ ಶ್ರುತಿಗಳ ಆಧಾರದಮೇಲೆ ಅವರು ಪುಷ್ಟೀಕರಿಸಿರುವುದನ್ನು ನೋಡಿದರೆ ವೀರಶೈವದ ವೈಶಿಷ್ಟ್ಯವೆನಿಸಿದ ಷಟ್ಸ್ಥಲಸಿದ್ಧಾಂತವು ಇವರ ಜೀವನದಲ್ಲಿ ಹಾಸುಹೊಕ್ಕಾಗಿ ಹೊಂದಿಕೊಂಡಿತ್ತೆಂಬುದರಲ್ಲಿ ಯಾರಿಗೂ ಸಂಶಯವಿರಲಾರದು. ಹೀಗೆ ಶ್ರೀಪತಿಪಂಡಿತಾರಾಧ್ಯರು ನಿಗಮಾಗಮಗಳ ಆಧಾರದಮೇಲೆ ವೀರಶೈವಸಿದ್ಧಾಂತವನ್ನು ಯುಕ್ತಿಅನುಭವಗಳಿಗೆ ಹೊಂದಿಕೆಯಾಗುವಂತೆ ದಾರ್ಶನಿಕ ರೀತಿಯಲ್ಲಿ ನಿರೂಪಿಸಿದ್ದರೂ, ಇಂತವರನ್ನು ವೀರಶೈವರೇ ಅಲ್ಲವೆಂದೂ, ಲಿಂಗಧಾರಣದ ವೀರವ್ರತವೇ ಇವರಲ್ಲಿರಲಿಲ್ಲವೆಂದೂ ಹೇಳುವುದು ಯಾರಿಗೂ ಶ್ರೇಯಸ್ಕರವಲ್ಲ. ಇದ್ದದ್ದನ್ನು ಇದ್ದಹಾಗೆ ಗ್ರಹಿಸುವುದೇ ವಿವೇಕವೆನಿಸುವುದು. ಇರುವುದಕ್ಕೆ ವಿರುದ್ಧವಾಗಿ ಕಲ್ಪಿಸುವುದು ವಿಹಿತವಲ್ಲ; ಉತ್ತಮಸಂಸ್ಕೃತಿಯೂ ಅಲ್ಲ. ಈ ವಿಷಯ

ವನ್ನು ಶ್ರೀಪತಿಪಂಡಿತಾರಾಧ್ಯರ ವೀರಶೈವಸಿದ್ಧಾಂತನಿರೂಪಣೆಯ ಸಂದರ್ಭದಲ್ಲಿ ವಿಶದಪಡಿಸಲಾಗುವುದು. ಅವರು ಶ್ರೀಶೈಲಪೀಠಕ್ಕೆ ಸೇರಿದ್ದರೇ ಅಥವಾ ಏಕೋರಾಮಪೀಠಕ್ಕೆ ಸೇರಿದ್ದರೇ ಎಂಬೀ ವಿಷಯವು ಈಗ ಸ್ಪಷ್ಟವಾಗಬೇಕಾಗಿದೆ. ಮುನಿ, ಯತಿ ಎಂಬ ಪದಗಳಿಂದ ಅವರು ಪಂಚಪೀಠಗಳಲ್ಲಿ ಯಾವುದಾದರೊಂದು ಪೀಠಕ್ಕೆ ಸ್ವಾಮಿಗಳಾಗಿದ್ದರೆಂಬುದೇನೋ ನಿಶ್ಚಿತವಾಗುತ್ತದೆ. ಆದರೆ, ಸ್ವಾಮಿಗಳು ಹೀಗೆ ಭಾಷ್ಯವನ್ನು ಏಕೆ ಬರೆಯಬೇಕು? ಎಂಬ ಪ್ರಶ್ನೆಯೂ ಬರುತ್ತದೆ. ಸ್ವಾಮಿಗಳು ತಪಸ್ವಿಗಳಾಗಿ ಮುನಿಗಳಾಗಿರಬೇಕಾದ್ದೇನೋ ಸಹಜ. ಆದರೆ, ಪಂಚಾಚಾರ್ಯರಿಗೆ ಆದರ್ಶನಾದ ಪರಮಶಿವನೇ ಏಕಕಾಲದಲ್ಲಿ ಭಕ್ತಾನುಗ್ರಹಲೀಲೆಯನ್ನೂ, ಸ್ವಯಂಭುಸ್ಥಿತಿಯ ಕೈವಲ್ಯಾನಂದವನ್ನೂ ಅನುಭವಿಸುತ್ತಿರುವನೆಂದು "ಲೋಕವತ್ತು ಲೀಲಾಕೈವಲ್ಯಂ" ಎಂಬ ಸೂತ್ರದಲ್ಲಿ ಬಾದರಾಯಣರೇ ತಿಳಿಸಿದ್ದಾರೆ. ಅವನು ಶ್ರುತಿಯಲ್ಲಿ ಹೇಳಿರುವ ಹಾಗೆ ಸತ್ಯಾತ್ಮನೂ ಪ್ರಾಣಾರಾಮನೂ ಮನಆನಂದನೂ ಆಕಾಶಶರೀರನೂ ಆಗಿರುವನು. ಹೀಗೆ ಒಳಗೆ ವಿರಕ್ತಿ ಹೊರಗೆ ಆಸಕ್ತಿಗಳೆರಡೂ ಇರುವುದರಿಂದಲೇ ತನ್ನ ಶಕ್ತಿಯ ಅತ್ಯಲ್ಪಾಂಶದಿಂದಅವನು ಜಗದ್ರೂಪನೂ ಜಗನ್ನಿಯಾಮಕನೂ ಆಗಿ ತನ್ನ ಪೂರ್ಣಾಂಶದಿಂದ ಆತ್ಮಾರಾಮನೂ ಭೂತಯೋನಿಯೂ ತಮಃಪರನೂ ಆಗಿರುವನೆಂದು ಶ್ರುತಿಯಲ್ಲಿ ತಿಳಿದುಬರುತ್ತದೆ. ಹೀಗಿರುವುದರಿಂದಲೇ ಅವನಿಗೆ ಪತಿಶಬ್ದವು ಯಥಾರ್ಥವಾಗಿ ಅನ್ವಯಿಸುತ್ತದೆ. ಅವನು ಭಕ್ತರಿಗೆ ಪ್ರಸಾದವನ್ನು ನೀಡಲಿಕ್ಕಾಗಿ ಎಷ್ಟುರಮಟ್ಟಿಗೆ ಭೋಗಿಯೋ ಅಷ್ಟುರಮಟ್ಟಿಗೆ ಮತ್ತು ಅದಕ್ಕಿಂತಲೂ ಹೆಚ್ಚಾಗಿ ಭೋಗತ್ಯಾಗದಿಂದ ಯೋಗಿಯೂ ಆಗಿದ್ದಾನೆ. "ಕಾಂತಾಸಮ್ಮಿಶ್ರದೇಹೋऽಪ್ಯವಿಷಯಮನಸಾಂ ಯಃ ಪರಸ್ತಾದ್ಯತೀನಾಂ" ಎಂದು ಕಾಳಿದಾಸನು ಪರಮೇಶ್ವರ ತ್ಯಾಗಭೋಗಯೋಗ ಸಮನ್ವಯದರ್ಶನವನ್ನು ಸ್ಪಷ್ಟಪಡಿಸಿದ್ದಾನೆ. ಶಿವನೇ ಹೀಗೆ ಯೋಗಿಯಾಗಿದ್ದು ತನ್ನ ಭಕ್ತರನ್ನು ಉದ್ಧರಿಸಲಿಕ್ಕಾಗಿ ನಿಗಮಾಗಮಗಳನ್ನು ಲೀಲೆಯಿಂದ ಉಪದೇಶಿಸಿರುವಾಗ್ಗೆ, ಶಿವಯೋಗಿಗಳೆನಿಸಿದ ಪಂಚಪೀಠಗಳ ಆಚಾರ್ಯರೂ ಅದೇ ಆದರ್ಶವನ್ನು ಭೂಲೋಕದಲ್ಲಾ ಚರಿಸಿ ಭಕ್ತರನ್ನುದ್ಧರಿಸಿರುವುದರಲ್ಲಿ ಆಶ್ಚರ್ಯವೇನಿದೆ? ಶಿವನು ನಿಗಮಾಗಮಗಳನ್ನು ಕರುಣಿಸಿ ಭಕ್ತರನ್ನು ಅನುಗ್ರಹಿಸಿರುವಂತೆಯೇ ಶಿವಯೋಗಿಗಳಾದ ರೇವಣಸಿದ್ಧ ಮರುಳಸಿದ್ಧ ವಿಶ್ವಾರಾಧ್ಯ ಏಕೋರಾಮಾರಾಧ್ಯ ಇವರೂ ಸಹ ಬ್ರಹ್ಮಸೂತ್ರಗಳಿಗೂ ಉಪನಿಷತ್ತುಗಳಿಗೂ ಭಾಷ್ಯಗಳನ್ನು ಬರೆದು ವೀರಶೈವಸಿದ್ಧಾಂತವನ್ನು ನಿರೂಪಿಸಿರುವರೆಂದು ಶ್ರೀಪತಿಪಂಡಿತರೇ ತಮ್ಮ ಭಾಷ್ಯದಲ್ಲಿ ಅನೇಕವೇಳೆ ಉಲ್ಲೇಖಿಸಿರುತ್ತಾರೆ. ಹೀಗೆ ಪಂಚಾಚಾರ್ಯರು ಯೋಗಸಿದ್ಧರೂ ಮುನಿಗಳೂ ಆಗಿದ್ದರೂ ಸಹಲೋಕಾನುಗ್ರಹಲೀಲೆಯನ್ನು ಅದ್ಭುತವಾಗಿ ಮಾಡಿರುವರೆಂಬ ಅಂಶ ಗಮನಾರ್ಹವಾಗಿದೆ. "ಅಥಾತೋ ಬ್ರಹ್ಮಜಿಜ್ಞಾಸಾ"ಎಂಬಲ್ಲಿ ಜಿಜ್ಞಾಸಾಪದಕ್ಕೆಪ್ರಕೃತಿಪ್ರತ್ಯಯಗಳೆರಡಕ್ಕೂ ಲಕ್ಷಣೆಯನ್ನು ಹೇಳಬೇಕೇ? ಒಂದಕ್ಕೆಮಾತ್ರವೇ ಹೇಳಬೇಕೇ? ಎಂಬ ಬಗ್ಗೆ ವಿವಾದ ಬಂದಾಗ ಏಕೋರಾಮಾರಾಧ್ಯರು ತಮ್ಮ ಭಾಷ್ಯದಲ್ಲಿ ಪ್ರಕೃತಿಪ್ರತ್ಯಯಗಳೆರಡಕ್ಕೂ

ಲಕ್ಷಣೆಹೇಳಬೇಕೆಂದು ನಿರ್ಣಯಿಸಿದ್ದಾರೆಂಬ ಅಂಶವನ್ನು ಶ್ರೀಪತಿಪಂಡಿತಾರಾಧ್ಯರು ತಿಳಿಸಿದ್ದಾರೆ; ಹೀಗೆಯೇ ವಿವಾದಾಂಶಗಳ ನಿರ್ಣಯಕ್ಕೆ ಇತರ ಆಚಾರ್ಯರು ಬರೆದಿರುವ ಭಾಷ್ಯಗಳನ್ನೂ ಅನೇಕವೇಳೆ ಶ್ರೀಕರಭಾಷ್ಯದಲ್ಲಿ ಉದಾಹರಿಸಿದ್ದಾರೆ. ಇದರಿಂದ ಪೀಠಾಚಾರ್ಯರು ಮುನಿಯಾಗಿದ್ದರೂ ಲೋಕಕ್ಕೆ ಜ್ಞಾನಮಾರ್ಗವನ್ನು ಉಪದೇಶಿಸುತ್ತಾ ಶಿವನ ಚಿಂತನೆಯಲ್ಲಿ ತಾವು ಮಾತ್ರವೇ ಅಲ್ಲದೆ ಇತರರನ್ನೂ ಭಾಗಿಗಳನ್ನಾಗಿ ಮಾಡುತ್ತಿದ್ದರೆಂಬ ವಿಷಯವನ್ನು "ಶ್ರೀಪತಿಪಂಡಿತೇಂದ್ರಯತಿ" "ಪಂಡಿತಾರಾಧ್ಯಮುನಿ" ಎಂಬ ಪದಗಳು ನಮಗೆ ಮನವರಿಕೆಮಾಡುತ್ತಲಿವೆ. ಯತಿಯಾದವನೇ ಕಾಮಕ್ರೋಧಗಳ ನಿಯಮನದಿಂದ ಜಗತ್ತಿಗೆ ಮಾರ್ಗದರ್ಶಕ ನಾಗಬಲ್ಲನೆಂಬ ಅಂಶ ಜಗದ್ವಿಖ್ಯಾತವಾಗಿದೆ. ಒಬ್ಬನು ತಾನೇ ಮೊದಲು ಸಿದ್ಧನಾಗ ದಿದ್ದರೆ ಲೋಕದ ಜನರನ್ನು ಹೇಗೆ ಸಿದ್ಧಗೊಳಿಸಬಲ್ಲನು? ಹೀಗೆ ತತ್ತ್ವಜ್ಞಾನಿಗಳೂ ಶಿವಯೋಗನಿಷ್ಠರೂ ಆದ ಐದು ಆಚಾರ್ಯರಿಗೂ ಮುನಿ, ಯತಿ ಎಂಬ ಪದಗಳು ಸಮಾನವಾಗಿ ಅನ್ವಯಿಸುವುದರಿಂದ ಶ್ರೀಪತಿಪಂಡಿತಾರಾಧ್ಯಮುನಿಯು ಪಂಚಪೀಠ ಗಳಲ್ಲೊಂದಕ್ಕೆ ಅಧ್ಯಕ್ಷರಾಗಿದ್ದಿರಬೇಕೆಂಬ ಅಂಶ ಗಮನಾರ್ಹವಾಗಿದೆ.

ಈ ಬಗ್ಗೆ ಕ್ರಿ. ಶ. ೧೫ ರಲ್ಲಿದ್ದ ತೋಂಟದಾರ್ಯರ ಶಿಷ್ಯರಾದ ಮರಿತೋಂಟ ದಾರ್ಯರು "ವೀರಶೈವಾನಂದಚಂದ್ರಿಕೆ" ಎಂಬ ತಮ್ಮ ಗ್ರಂಥದಲ್ಲಿ ಆಚಾರ್ಯರ ಐದು ಪೀಠಗಳ ಸ್ವಾಮಿಗಳನ್ನು ತಿಳಿಸುವಾಗ್ಗೆ ಶ್ರೀಪತಿಪಂಡಿತಾರಾಧ್ಯರನ್ನು ಗಜಕರ್ಣ ಶಾಖೆಯವರೆಂದು ಹೇಳಿ ಶ್ರೀಶೈಲದ ಸೂರ್ಯಸಿಂಹಾಸನದ ಹಿಂದಿನ ಕೆಲವು ಅಧ್ಯಕ್ಷರ ಹೆಸರುಗಳೊಳಗೆ ಶ್ರೀಪತಿಪಂಡಿತಾರಾಧ್ಯರ ಹೆಸರನ್ನು ಉಲ್ಲೇಖಿಸಿದ್ದಾರೆ.

ಗಜಕರ್ಣಸ್ತ್ರಿರಂಗುಷ್ಠೋ ಮಂಚಣಸ್ಸಂಗಮೋಽವ್ಯಯಃ ।
ಕಲ್ಯಾಣಪಂಡಿತಃ ಕೇಶೀ ಮಾಧವಃ ಶ್ರೀಪತಿಃ ಪ್ರಭುಃ ।
ಮಲ್ಲಿಕಾರ್ಜುನ ಇತ್ಯಾದ್ಯಾ ವಾಮದೇವಮುಖೋದ್ಗತಾಃ ॥ (ಪುಟ ೪೫೧)

ಇಲ್ಲಿ ಮೂಲಪಂಡಿತಾರಾಧ್ಯರ ತರುವಾಯ ಶ್ರೀಶೈಲದ ಸೂರ್ಯಸಿಂಹಾಸನವನ್ನೇರಿದ ಕೆಲವರಲ್ಲಿ ಶ್ರೀಪತಿಪಂಡಿತರ ಹೆಸರು ಸೇರಿದೆಯಾದ್ದರಿಂದ ಸಂಶಯಕ್ಕವಕಾಶವಿಲ್ಲ. ಮರಿತೋಂಟದಾರ್ಯರು ವಿರಕ್ತಸಂಪ್ರದಾಯದವರಾದರೂ ಜಗದ್ಗುರು ಪಂಚಾ ಚಾರ್ಯರನ್ನು ಭಕ್ತಿ ಗೌರವಗಳಿಂದ ಸ್ತುತಿಸಿದ್ದಾರೆ. ಅವರು ಜ್ಞಾನಕ್ರಿಯಗಳ ಸಮನ್ವಯದ ದಿವ್ಯತತ್ತ್ವವನ್ನು ಅಳವಡಿಸಿಕೊಂಡಿದ್ದ ಶಿವಯೋಗಿಸಾರ್ವಭೌಮರು. ಇಂತಹ ಶಿವಾನುಭವಿಗಳ ಮಾತು ವಿಶ್ವಾಸಾರ್ಹವೆಂಬುದರಲ್ಲಿ ಯಾರಿಗೂ ಸಂಶಯ ವಿಲ್ಲ. ಹೀಗೆ ಯಥಾರ್ಥವನ್ನು ತಿಳಿಸುವವರೇ ಆಪ್ತರೆನಿಸುವರು. ಇದೂ ಅಲ್ಲದೆ, ಪಾಲ್ಕುರಿಕೆ ಸೋಮನಾಥಕವಿಯು ತೆಲುಗಿನಲ್ಲಿ ರಚಿಸಿರುವ ಮಲ್ಲಿಕಾರ್ಜನಪಂಡಿತಾ ರಾಧ್ಯರ ಚರಿತ್ರೆಯಲ್ಲಿ,ಪಂಡಿತತ್ರಯರೆನಿಸಿದ ಮಂಚನಪಂಡಿತರನ್ನೂ,ಶ್ರೀಪತಿಪಂಡಿತ ರನ್ನೂ, ಮಲ್ಲಿಕಾರ್ಜುನಪಂಡಿತರನ್ನೂ ಅಸಾಧಾರಣಭಕ್ತಿಯಿಂದ ಸ್ತುತಿಸಿರುವನು. ಈ ಮಲ್ಲಿಕಾರ್ಜುನಪಂಡಿತಾರಾಧ್ಯರೆ; ಶರಣರ ಕಾಲದಲ್ಲಿದ್ದ ಶ್ರೀಶೈಲಪೀಠಾಧ್ಯ

ಕ್ಷರು. ಅವರೂ ಸಹ ಶಿವತತ್ತ್ವಸಾರವೆಂಬ ತೆಲಗು ಗ್ರಂಥದಲ್ಲಿ ತಮ್ಮ ಗುರುವಾದ ಶ್ರೀಪತಿಪಂಡಿತಾರಾಧ್ಯರ ಅದ್ಭುತಮಹಿಮೆಯನ್ನು ವಿಶೇಷವಾಗಿ ಕೊಂಡಾಡಿದ್ದಾರೆ. ಶ್ರೀಪತಿಪಂಡಿತರು "ಶಿವನೊಬ್ಬನೇ ಜಗತ್ಪತಿ" ಎಂದು ಸ್ಥಾಪಿಸಲಿಕ್ಕಾಗಿ ವಸ್ತ್ರದಲ್ಲಿ ಬೆಂಕಿಯನ್ನಿಟ್ಟು ಬನ್ನಿಮರಕ್ಕೆ ಕಟ್ಟಿದ್ದರೆಂದು ಮಲ್ಲಿಕಾರ್ಜುನಪಂಡಿತರು ಸ್ಪಷ್ಟವಾಗಿ ಹೇಳಿದ್ದಾರೆ. ಇದರಿಂದ ಮಲ್ಲಿಕಾರ್ಜುನಪಂಡಿತರಿಗಿಂತಲೂ ಶ್ರೀಪತಿಪಂಡಿತರು ಪ್ರಾಚೀನರೆಂದು ಸಿದ್ಧವಾಗುತ್ತದೆ. ಶ್ರೀಪತಿಪಂಡಿತರು ತಮ್ಮ ಗುರುವಾದ ಮಂಚನ ಪಂಡಿತಾರಾಧ್ಯರನ್ನು ಶ್ರೀಕರಭಾಷ್ಯದಲ್ಲಿ ಅನೇಕವೇಳೆ ಉದಾಹರಿಸಿದ್ದಾರೆ. ಅಲ್ಲಿಗೆ ಪಾಲ್ಕುರಿಕೆಸೋಮನಾಥಕವಿಯು ಹೇಳಿದ ಗುರುಪರಂಪರೆ ಶ್ರೀಶೈಲಪೀಠಕ್ಕೇ ಸೇರಿದ್ದೆಂದು ನಿಶ್ಚಿತವಾಯಿತು. ಶ್ರೀಪತಿಪಂಡಿತಾರಾಧ್ಯರು ಉಜ್ವಲತಪಸ್ವಿಗಳಾಗಿ ಶಿವನಲ್ಲಿ ಅತ್ಯುತ್ಕಟವಿಶ್ವಾಸವುಳ್ಳವರಾಗಿದ್ದುದರಿಂದಲೇ ಅಗ್ನಿಬಂಧನದ ಮಹಿಮೆಯನ್ನು ಲೀಲೆಯಿಂದ ನಡೆಸಿದ್ದಾರೆ. ಇಂತಹ ಮಹಾವಿಭೂತಿಗಳು ಶ್ರೀಶೈಲಕ್ಷೇತ್ರದ ಸೂರ್ಯಪೀಠದ ಅಧ್ಯಕ್ಷರಾಗಿದ್ದು ತಮ್ಮ ದಿವ್ಯವೂ ಭವ್ಯವೂ ಆದ ಸಂದೇಶವನ್ನು ಶ್ರೀಕರಭಾಷ್ಯದ ಮೂಲಕ ಇಡೀ ಜಗತ್ತಿಗೇ ಸೂರ್ಯನಂತೆ ಹರಡಿರುವುದು ಅವರ ಉದಾರವರ್ಚಸ್ಸನ್ನೂ, ಜ್ಞಾನಕ್ರಿಯಾಸಮನ್ವಯದೃಷ್ಟಿಯನ್ನೂ ವ್ಯಕ್ತಪಡಿಸುತ್ತದೆ.

ಅವರು ಶ್ರೀಶೈಲಪೀಠಾಧ್ಯಕ್ಷರಾಗಿದ್ದಾರೆಂದಮೇಲೆ ಯಾವಕಾಲದಲ್ಲಿದ್ದರು? ಸ್ವಾಮಿಗಳಾಗುವ ಮೊದಲು ಎಲ್ಲಿದ್ದರು? ಅತಿವರ್ಣಾಶ್ರಮಿಗಳಾಗುವ ಮುನ್ನ ಯಾವವರ್ಣಕ್ಕೆ ಸೇರಿದ್ದರು? ಎಂಬೀವಿಷಯವು ಪರಿಶೀಲನಾರ್ಹವಾಗಿದೆ. ಇದರ ನಿಶ್ಚಯಜ್ಞಾನದಿಂದ ಇವರ ಭಾಷ್ಯದ ಮಹತ್ತ್ವ ಮನವರಿಕೆಯಾಗಬಲ್ಲದು; ಮತ್ತು ಇವರ ಮಾತಿನಲ್ಲಿ ಜನತೆಗೆ ಗೌರವವಿಶ್ವಾಸಗಳು ಹುಟ್ಟಿ ಇವರ ಬಗ್ಗೆ ಇರುವ ಸಂದೇಹಗಳೂ ತೊಲಗಬಲ್ಲವು. ಹಿಂದೆ ಪ್ರಕಟವಾಗಿರುವ ಶ್ರೀಕರಭಾಷ್ಯದ ಅವತರಣಿಕೆಯಲ್ಲಿ ಶ್ರೀಪತಿಪಂಡಿತರನ್ನು ೧೪ನೇ ಶತಮಾನದ ದಾರ್ಶನಿಕರೆಂದು ಪರಿಗಣಿಸಲಾಗಿದೆ. ಆ ಭಾಷ್ಯದಲ್ಲಿ ನಾಲ್ಕುಕಡೆ ಮಧ್ವ ಎಂಬ ಪದವು ಬಂದಿರುವುದರಿಂದ ೧೨ ನೇ ಶತಮಾನದ ಆದಿಯಲ್ಲಿದ್ದ ಮಧ್ವಚಾರ್ಯರಿಗಿಂತ ಶ್ರೀಪತಿಪಂಡಿತರನ್ನು ಈಚಿನವರೆಂದು ಅಲ್ಲಿ ಅಭಿಪ್ರಾಯ ಪಡಲಾಗಿದೆ. ಆದರೆ ನಿಷ್ಕಲ್ಮಷಮನೋಭಾವದಿಂದ ವಿಮರ್ಶೆ ಮಾಡಿದರೆ ಈ ಅಭಿಪ್ರಾಯ ನಿರಾಧಾರವಾದುದೆಂಬುದು ಸ್ಪಷ್ಟಪಡುತ್ತದೆ. ಶ್ರೀಪತಿಪಂಡಿತರು ಮಧ್ವಾಚಾರ್ಯರಿಗಿಂತ ಈಚಿನವರಾಗಿದ್ದರೆ ಮಧ್ವಭಾಷ್ಯದ ಪಂಕ್ತಿಗಳನ್ನು ತೆಗೆದುಕೊಂಡು ಖಂಡಿಸಬೇಕಾಗಿತ್ತು. ಆದರೆ, ಅವರು ಎಲ್ಲಿಯೂ ಹಾಗೆಮಾಡಿಲ್ಲ. ರಾಮಾನುಜರ ಮತ್ತು ಭಟ್ಟಭಾಸ್ಕರರ ಪಂಕ್ತಿಗಳನ್ನು ಉಲ್ಲೇಖಿಸಿ ಖಂಡಿಸಿರುವಂತೆ ಅವರು ಮಧ್ವಾಚಾರ್ಯರ ಪಂಕ್ತಿಗಳನ್ನು ತೆಗೆದುಕೊಂಡಿಲ್ಲ. ಆದ್ದರಿಂದ ಅವರು ಮಧ್ವಾಚಾರ್ಯರಿಗಿಂತಲೂ ಹಿಂದಿನವರೆಂಬಲ್ಲಿ ಸಂಶಯವಿಲ್ಲ. ಇದೂ ಅಲ್ಲದೆ, ಎಲ್ಲೆಲ್ಲಿ ಮಧ್ವಪದವು ಬಂದಿದೆಯೋ ಅಲ್ಲೆಲ್ಲಾ ಅದು ಅನುಚಿತ ಮತ್ತು ಅನಾವಶ್ಯಕವೆಂದು ಸ್ಪಷ್ಟಪಡುತ್ತದೆ. "ಮಧ್ವದ್ವೈತಕ್ಷಪಣಕತಾರ್ಕಿಕಾದಯಃ",

"ಭಾಗವತಪಾಂಚರಾತ್ರಮಧ್ವಾದಿವೈಷ್ಣವಾನಾಂ", "ದ್ವೈತಭಾಗವತಪಾಂಚರಾತ್ರಾದಿ", "ಕಾರ್ತಿಕಮಧ್ವಾದಿಕೇವಲಭೇದವಾದಿನಾಂ" ಈ ನಾಲ್ಕುಕಡೆಗಳಲ್ಲೂ ಮಧ್ವಪದವು ಅನಾವಶ್ಯಕವೆಂಬ ಅಂಶ ಸಹೃದಯರೆಲ್ಲರಿಗೂ ಮನವರಿಕೆಯಾಗುತ್ತದೆ. ಮೊದಲನೆಕಡೆ ಮಧ್ವದ್ವೈತವೆಂದು ಯಾರೂ ಹೇಳುವುದಿಲ್ಲ; ಇದು ತಲೆಶಿರೋಭಾರವೆಂದಂತಾಗಿದೆ. ಎರಡು ಮೂರನೇಕಡೆಗಳಲ್ಲಿ ಪಾಂಚರಾತ್ರಪದವಿದ್ದಮೇಲೆ ಮಧ್ವಪದವು ಅನಾವಶ್ಯಕವೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಕೊನೆಯದರಲ್ಲಿ "ತಾರ್ಕಿಕಾದಿಕೇವಲಭೇದವಾದಿನಾಂ" ಎಂದಿದ್ದರೆ ನಿರ್ದಿಷ್ಟವಾದ ಅರ್ಥವು ತಿಳಿದು ಬರುತ್ತದೆ. ಆದ್ದರಿಂದ ಈ ಪದವನ್ನು ಯಾರೋ ಈಚೆಗೆ ಸೇರಿಸಿರಬೇಕೆಂಬುದು ಸ್ಪಷ್ಟವಾಗುತ್ತದೆ. ಇದರಮೇಲೆ, ಕಾಶಿಯ ಕೈಬರಹದ ಶ್ರೀಕರಭಾಷ್ಯದ ಪ್ರತಿಯಲ್ಲಿ ಎಲ್ಲಿಯೂ ಮಧ್ವಪದ ಕಂಡುಬಂದಿಲ್ಲ. ಇದೂ ಅಲ್ಲದೆ, ಹಿಂದೆ ಪ್ರಕಟವಾಗಿದ್ದ ಗ್ರಂಥದಲ್ಲಿ ೨೪೭ ನೇ ಪುಟದಲ್ಲಿ ಭೇದಾಭೇದವಾದವನ್ನು ಮಂಡಿಸುವಾಗ್ಗೆ "ಶಂಕರಭಟ್ಟಭಾಸ್ಕರಾದಿವೈದಿಕೈರಪಿ ಭೇದಾಭೇದಮತಸ್ಯೈವ ಪಾರಮಾರ್ಥಿಕತ್ವೇನ ವ್ಯವಸ್ಥಾಪನಾತ್" ಎಂಬ ಪಂಕ್ತಿ ಬಂದಿದೆ. ಇದರಲ್ಲಿ ಶಂಕರಪದವು ಶಂಕರಾಚಾರ್ಯರಿಗೆ ಅನ್ವಯಿಸಿರುವುದೆಂದು ಭಾವಿಸಿದರೆ ಇದು ತೀರ ಅನುಚಿತವೆನಿಸುವುದು; ಯಾಕೆಂದರೆ ಅವರು ಭೇದಾಭೇದವಾದವನ್ನು ಪಾರಮಾರ್ಥಿಕವೆಂದು ಭಾವಿಸಿಲ್ಲ. ಆದರೆ, ಅವರು ತಮ್ಮ ಭಾಷ್ಯದಲ್ಲಿ ತಮಗಿಂತ ಹಿಂದಿದ್ದ ಭರ್ತೃಪ್ರಪಂಚನ ಭೇದಾಭೇದವಾದವನ್ನು ಖಂಡಿಸಿ ಬ್ರಹ್ಮಸೂತ್ರಗಳನ್ನು ಅಭೇದಮತಕ್ಕೆ ಅನ್ವಯಿಸಿಕೊಂಡಿದ್ದಾರೆ. ಭಟ್ಟಭಾಸ್ಕರರು ಭೇದಾಭೇದವಾದಿಗಳಾದ್ದರಿಂದ ಈ ಸಂದರ್ಭಕ್ಕೆ ಅವರ ಹೆಸರು ಅನ್ವಯಿಸುವಂತೆ ಶಂಕರಾಚಾರ್ಯರ ಹೆಸರು ಅನ್ವಯಿಸುವುದಿಲ್ಲ. ಆದರೂ ಅನಾವಶ್ಯಕವಾಗಿ ಶಂಕರಪದವು ಇಲ್ಲಿ ಬಂದುಹೋಗಿದೆ. ಇದನ್ನೂ ಯಾರೋ ಈಚೆಗೆ ಸೇರಿಸಿರಬೇಕೆಂಬುದು ಸ್ಪಷ್ಟವಾಗುತ್ತದೆ. ಕಾಶಿಯ ಕೈಬರಹದ ಪ್ರತಿಯಲ್ಲಿ ಶಂಕರಮಧ್ವಪದಗಳು ಇಲ್ಲವಾದ್ದರಿಂದ ಈಗ ಪ್ರಕಟಿಸಿರುವ ಗ್ರಂಥದಲ್ಲಿ ಅವೆರಡನ್ನೂ ಬಿಡಲಾಗಿದೆ. ಈ ಪದಗಳನ್ನು ಭಾಷ್ಯದಲ್ಲಿ ಪ್ರಯೋಗಿಸದಿದ್ದರೂ ಶಂಕರಾಚಾರ್ಯರ ಅದ್ವೈತಮತವೂ, ಮಧ್ವಾಚಾರ್ಯರ ದ್ವೈತಮತವೂ ಪ್ರಾಚೀನಕಾಲದಿಂದಲೂ ರೂಢಿಯಲ್ಲಿದ್ದುದರಿಂದ ಅದ್ವೈತ ಮತ್ತು ದ್ವೈತಮತಗಳನ್ನು ಶ್ರೀಪತಿಪಂಡಿತರು ಭಾಷ್ಯದಲ್ಲಿ ವಿಮರ್ಶಿಸಿರುವರೇಹೊರತು ಶಂಕರ ಮಧ್ವ ಎಂಬ ಹೆಸರಿನ ಆಚಾರ್ಯರ ಮತಗಳನ್ನು ವಿಮರ್ಶೆಗೆ ತೆಗೆದುಕೊಂಡಿರಲಾರರೆಂಬುದು ಸ್ಪಷ್ಟಪಡುತ್ತದೆ. ಇವೆಲ್ಲಾ ಸಿದ್ಧಾಂತಗಳೂ ಬಹು ಪುರಾತನವಾದವು. ಮಧ್ವಾಚಾರ್ಯರೂ ಸಹ ತಮ್ಮ ಭಾಷ್ಯವನ್ನು "ಹಯಗ್ರೀವವಿದ್ಯೆ" ಎಂಬ ಗ್ರಂಥದ ಆಧಾರದಮೇಲೆಯೇ ಬರೆದಿರುವರು. ಹಯಗ್ರೀವವಿದ್ಯೆಯಲ್ಲಿ ಬಂದಿರುವುದೂ ದ್ವೈತವೇದಾಂತವೇ. ಅದನ್ನು ಶ್ರೀಪತಿಪಂಡಿತರು ವಿಮರ್ಶಿಸಿರುವರೇ ಹೊರತು ಮಧ್ವಾಚಾರ್ಯರ ಭಾಷವನ್ನಲ್ಲ.

ಇದರಮೇಲೆ, ಅವರು ಶ್ರೀಕಂಠಭಾಷ್ಯದಲ್ಲಿ ಶ್ರೀಕಂಠಾಚಾರ್ಯರ ಮತವನ್ನು

ಅವರ ಹೆಸರಿನಿಂದಲೇ ಉಲ್ಲೇಖಿಸಿ ನಿರಾಕರಿಸಿದ್ದಾರೆ. ಹಾಗೆಯೇ ಭಟ್ಟಭಾಸ್ಕರರ ಮತವನ್ನೂ ನಿರೂಪಿಸಿ ಅದರಲ್ಲಿರುವ ಲೋಪದೋಷಗಳನ್ನೂ ತಿಳಿಸಿದ್ದಾರೆ. ಹಾಗೆಯೇ ರಾಮಾನುಜರ ಹೆಸರನ್ನೂ ಎರಡು ಮೂರುಕಡೆ ತಿಳಿಸಿ ಅವರ ವಿಶಿಷ್ಟಾದ್ವೈತಮತ ವನ್ನು ಖಂಡಿಸಿ ಜೀವಜಗತ್ತುಗಳಿಗೂ ಪರಮಾತ್ಮನಿಗೂ ಅಂಗಾಂಗಿಭಾವವು ಹೊಂದು ವುದಿಲ್ಲವೆಂದು ಹೇಳಿ ಅಂಗಾಂಗಿಭಾವದಿಂದ ಸಂಭವಿಸಬಹುದಾದ ಲೋಪದೋಷ ಗಳನ್ನು ಉಲ್ಲೇಖಿಸಿದ್ದಾರೆ. ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದವರೆಂದು ಪ್ರಸಿದ್ಧರಾಗಿರುವ ದಾರ್ಶನಿಕರ ಶ್ರೇಣಿಯಲ್ಲಿ ನೀಲಕಂಠಶಿವಾಚಾರ್ಯರು, ಶಂಕರಾ ಚಾರ್ಯರು (೮ನೇ ಶತ.), ಭಟ್ಟಭಾಸ್ಕರರು (೯ನೇ ಶತ.), ರಾಮಾನುಜಾಚಾರ್ಯರು (೧೧ ಆದಿ.), ಶ್ರೀಕಂಠಾಚಾರ್ಯರು (೧೧) ವಿಶ್ರುತರಾಗಿದ್ದಾರೆ. ಇವರಲ್ಲಿ ಮೊದಲನೆ ಯವರಾದ ನೀಲಕಂಠಶಿವಾಚಾರ್ಯರು ಬ್ರಹ್ಮಸೂತ್ರಗಳಿಗೆ ಭೇದಾಭೇದಪ್ರಧಾನವಾದ ಶೈವಮತಪರವಾಗಿ ಭಾಷ್ಯವನ್ನು ಬರೆದಿದ್ದರೆಂದೂ, ಆ ಮತದ ಅನುಯಾಯಿಗಳಿಗೆ ನಿರಾಭಾರಿಜಂಗಮರೆಂಬ ಹೆಸರಿತ್ತೆಂದೂ, ಅವರೊಡನೆ ಶಂಕರಾಚಾರ್ಯರಿಗೆ ತಮ್ಮ ಪ್ರವಾಸಕಾಲದಲ್ಲಿ ವಾದವಿವಾದಗಳು ನಡೆದವೆಂದೂ ಆನಂದಗಿರಿಯ ಶಂಕರದಿಗ್ವಿ ಜಯದಿಂದ ತಿಳಿದುಬರುತ್ತದೆ. ಭೇದಾಭೇದವನ್ನು ಪ್ರತಿಪಾದಿಸುವ ಶೈವಮತಾನು ಯಾಯಿಗಳೊಡನೆ ಶಂಕರಾಚಾರ್ಯರು ವಾದಮಾಡಿದರೆಂದು ಹೇಳಿದಮೇಲೆ ಎಂಟನೇಶತಮಾನಕ್ಕಿಂತ ಹಿಂದೆಯೇ ಬ್ರಹ್ಮಸೂತ್ರಗಳಿಗೆ ಭೇದಾಭೇದಸಿದ್ಧಾಂತ ವನ್ನು ಪ್ರತಿಪಾದಿಸುವ ಶೈವಭಾಷ್ಯ ಒಂದು ಇತ್ತೆಂಬುದು ಸ್ಪಷ್ಟಪಡುತ್ತದೆ. ಶಿವ ಜೀವರಿಗೆ ಭೇದಾಭೇದವನ್ನು ಪ್ರತಿಪಾದಿಸುವ ಶೈವಭಾಷ್ಯವೆಂದರೆ ವೀರಶೈವಭಾಷ್ಯ ವೆಂಬುದರಲ್ಲಿ ಸಂದೇಹವೇ ಇಲ್ಲ; ಯಾಕೆಂದರೆ ಹಿಂದೆ ನೀಲಕಂಠಶಿವಾಚಾರ್ಯರು ಭೇದಾಭೇದಪರವಾಗಿ ಬರೆದಿದ್ದ ಭಾಷ್ಯವನ್ನೇ ಪದ್ಯರೂಪದಲ್ಲಿ ಕ್ರಿಯಾಸಾರವೆಂಬ ಹೆಸರಿನಿಂದ ಬರೆದಿರುವುದಾಗಿ ನೀಲಕಂಠದೇವನು ಹೇಳಿದ್ದಾನೆ. ಇದರಿಂದ ನೀಲ ಕಂಠಭಾಷ್ಯವು ವೀರಶೈವಭಾಷ್ಯವೆಂಬುದು ನಿರ್ವಿವಾದವೆನಿಸಿದೆ. ಇದನ್ನು ಶ್ರೀಪತಿ ಪಂಡಿತರು ಶ್ರೀಕರಭಾಷ್ಯದಲ್ಲಿ ಉಲ್ಲೇಖಿಸಿದ್ದಾರೆ. "ಕಪ್ಯಾಸಂ ಪುಂಡರೀಕಮಿವಾ ಕ್ಷಿಣೀ" ಎಂಬ ಛಾಂದೋಗ್ಯದ ಮಂತ್ರಕ್ಕೆ ವ್ಯಾಖ್ಯಾನಮಾಡುವಾಗ ನೀಲಕಂಠಭಾಷ್ಯ ದಲ್ಲಿ "ಕಪ್ಯಾಸಂ" ಎಂದರೆ "ಕ=ಕಿರಣಗಳಿಂದ ಪ=ಸಮುದ್ರದ ನೀರನ್ನು ಹೀರುವ ಸೂರ್ಯನು, ಅವನಿಂದ ವಿಕಾಸಗೊಳ್ಳುವುದು" ಎಂದು ನೀಲಕಂಠಶಿವಾಚಾರ್ಯರು ಅರ್ಥಮಾಡಿರುವುದಾಗಿ ಹೇಳಿದ್ದಾರೆ. ಅಲ್ಲಿಗೆ ನೀಲಕಂಠಶಿವಾಚಾರ್ಯರು ಶಂಕರಾ ಚಾರ್ಯರಿಗಿಂತ ಹಿಂದೆ ಬ್ರಹ್ಮಸೂತ್ರಗಳಿಗೆ ವೀರಶೈವಮತಪರವಾಗಿ ಭಾಷ್ಯವನ್ನು ಬರೆ ದಿದ್ದರೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಶ್ರೀಪತಿಪಂಡಿತರು ನೀಲಕಂಠ-ಶಂಕರ-ಭಟ್ಟ ಭಾಸ್ಕರ-ರಾಮಾನುಜ-ಶ್ರೀಕಂಠರ ಹೆಸರುಗಳನ್ನು ಹೇಳಿ ಅವರ ಮತಗಳ ಖಂಡನ ಮಂಡನಗಳನ್ನು ಮಾಡಿರುವುದರಿಂದ ಅವರ ತರುವಾಯ ಅಂದರೆ ಕ್ರಿ.ಶ. ೧೧ ನೇ ಶತಮಾನದ ಕೊನೆಯಲ್ಲಿ ಇವರು ಇದ್ದರೆಂದು ನಿಸ್ಸಂದೇಹವಾಗಿ ಹೇಳಬಹುದು.

೧೨ನೇ ಶತಮಾನದಲ್ಲಿದ್ದ ಬಸವಣ್ಣನು ತನಗಿಂತ ಪ್ರಾಚೀನರಾದ ಅನೇಕ ಶಿವಭಕ್ತರ ಮಹಿಮೆಯನ್ನು ಬಿಜ್ಜಳನ ಮುಂದೆ ಹೇಳುವಾಗ ಶ್ರೀಪತಿಪಂಡಿತರೆಂಬ ಆಚಾರ್ಯರು ಅನಂತಪಾಲರಾಜನ ಸಭೆಯಲ್ಲಿ ಶಿವಭಕ್ತರಿಗೆ ಸಮಾನರುಂಟೆಂದು ಯಾರಾದರೂ ವಾದಿಸಿದರೆ ಅವರನ್ನು ಖಂಡಿಸುವುದಾಗಿ ಹೇಳಿ ಅಗ್ನಿಯನ್ನು ಒಂದು ವಸ್ತ್ರದಲ್ಲಿಟ್ಟು, ಬಸ್ನಿಮರಕ್ಕೆ ಕಟ್ಟಿ ಪರವಾದಿಗಳಿಗೆ ಬೆಂಕಿ ದೊರೆಯದಂತೆ ಮಾಡಿದ್ದ ರೆಂಮ ಅವರ ಮಹಿಮೆಯನ್ನು ಹೊಗಳಿರುವನು. ಈರೀತಿಯಾಗಿ ಬಸವಣ್ಣನೇ ಶ್ರೀಪತಿಶಿವಾಚಾರ್ಯರ ಮಹಿಮೆಯನ್ನು ಹೇಳಿರುವುದಾಗಿ ಸಂಸ್ಕೃತ ಬಸವಪುರಾಣದಲ್ಲಿ ಹೇಳಿರುವುದರಿಂದ ಶ್ರೀಪತಿಪಂಡಿತರು ಬಸವಣ್ಣನಿಗಿಂತಲೂ ಪ್ರಾಚೀನರೆಂಬುದು ನಿರ್ವಿವಾದ. ಕ್ರಿ. ಶ. ೧೧೯೫ ರಲ್ಲಿದ್ದ ಪಾಲ್ಕುರಿಕೆ ಸೋಮನಾಥನೂ ಇದೇ ವಿಷಯ ವನ್ನು ಆಂಧ್ರ ಬಸವಪುರಾಣದಲ್ಲಿ ಬರೆದಿದ್ದಾನೆ. ಈ ಅನಂತಪಾಲರಾಜನು ೧೧ನೇ ಶತಮಾನದಲ್ಲಿ ಚಾಳುಕ್ಯಸಾಮಂತರಾಜನಾಗಿದ್ದು ಬನವಾಸಿ ಮೊದಲಾದ ಕನ್ನಡ ಪ್ರಾಂತಗಳನ್ನೂ ಗುಂಟೂರು, ಬೆಜವಾಡ, ಕಡಪ, ಕರ್ನೂಲು ಮೊದಲಾದ ಆಂಧ್ರ ಪ್ರಾಂತಗಳನ್ನೂ ಆಳುತ್ತಿದ್ದನೆಂಬ ವಿಷಯ ಶಿಲಾಶಾಸನಗಳಿಂದ ಗೊತ್ತಾಗುತ್ತದೆ. ಈ ಶಾಸನಗಳಲ್ಲಿ ಅನಂತಪಾಲನು ೧೧ ನೇ ಶತಮಾನದ ಕೊನೆಯಲ್ಲಿದ್ದನೆಂಬುದು ಸ್ಪಷ್ಟಪಡುತ್ತದೆ. ಇವನು ಶ್ರೀಪತಿಪಂಡಿತರ ಪರಮಶಿಷ್ಯನಾಗಿದ್ದನೆಂದೂ, ಶ್ರೀಪತಿ ಪಂಡಿತರು ಬೆಜವಾಡದ ಮಲ್ಲೇಶ್ವರದೇವಾಲಯದಲ್ಲಿ ತಮ್ಮ ಶಿಷ್ಯನ ಸಮ್ಮುಖದಲ್ಲಿ ಅಗ್ನಿಸ್ತಂಭನ ಮಹಿಮೆಯನ್ನು ತೋರಿಸಿದರೆಂದೂ ಶ್ರೀಪತಿಪಂಡಿತಾರಾಧ್ಯರ ಸಾಂಪ್ರ ದಾಯಿಕರಾದ ವೀರಾರಾಧ್ಯರು ಆಂಧ್ರಭಾಷೆಯಲ್ಲಿ ಬರೆದಿರುವ "ಧರ್ಮಗುಪ್ತಾ ಭ್ಯುದಯ" ದಿಂದ ತಿಳಿಯಬರುತ್ತದೆ. ಇದರಿಂದಲೂ ಶ್ರೀಪತಿಪಂಡಿತರು ಬೆಜವಾಡ ದಲ್ಲಿ ಕ್ರಿ.ಶ. ೧೧ನೇ ಶತಮಾನದ ಕೊನೆಯಲ್ಲಿ ಇದ್ದರೆಂಬುದು ಸ್ಪಷ್ಟವಾಗುತ್ತದೆ.

ಇದಿಷ್ಟೇ ಅಲ್ಲದೆ, ಮದ್ರಾಸಿನ ಸುಪ್ರಸಿದ್ಧ ತತ್ತ್ವಶಾಸ್ತ್ರಜ್ಞರೂ ಇತಿಹಾಸಜ್ಞರೂ ಆದ ನಾರಾಯಣಶಾಸ್ತ್ರಿಗಳು "ದಿ ಇಂಡಿಯನ್ ರಿವ್ಯೂ" ಎಂಬ ಮಾಸಪತ್ರಿಕೆಯಲ್ಲಿ ೧೯೧೫ನೇ ಮೇ ತಿಂಗಳಲ್ಲಿ "The five great schools of Vedanta Philosophy" ಎಂಬ ಹೆಸರಿನಿಂದ ಬರೆದಿರುವ ಲೇಖನದಲ್ಲಿ ಬ್ರಹ್ಮಸೂತ್ರಗಳ ಮೇಲೆ ೧೧ ಜನ ಆಚಾರ್ಯರು ಭಾಷ್ಯಗಳನ್ನು ಬರೆದಿರುವರೆಂದೂ, ಅವರಲ್ಲಿ ಶಂಕರ, ಶ್ರೀಕಂಠ, ರಾಮಾನುಜ, ಶ್ರೀಪತಿ, ಮಧ್ವ ಎಂಬ ಐದು ಜನ ಆಚಾರ್ಯರು ರಚಿಸಿರುವ ಭಾಷ್ಯಗಳು ಮುಖ್ಯವೆಂದೂ, ಶಂಕರರು ೮ನೇ ಶತಮಾನದ ಕೊನೆಯಲ್ಲೂ, ರಾಮಾನುಜರು ೧೧ನೇ ಶತಮಾನದ ಆದಿಯಲ್ಲೂ, ಶ್ರೀಪತಿಪಂಡಿತರು ಕ್ರಿ.ಶ. ೧೧ ನೇ ಶತಮಾನದ ಕೊನೆಯಲ್ಲೂ, ಮಧ್ವರು ೧೨ನೇ ಶತಮಾನದಲ್ಲೂ ಇದ್ದರೆಂದು ಸ್ಪಷ್ಟ ವಾಗಿ ಉಲ್ಲೇಖಿಸಿದ್ದಾರೆ. ಇದರಿಂದ ಶ್ರೀಪತಿಪಂಡಿತಾರಾಧ್ಯರು ಕ್ರಿ.ಶ. ೧೧ನೇ ಶತ ಮಾನದಲ್ಲಿದ್ದರೆಂಬುದು ಸ್ಪಷ್ಟ. ಆದ್ದರಿಂದ ಈ ಬಗ್ಗೆ ಸಂಶಯಕ್ಕವಕಾಶವಿಲ್ಲ.

ಇನ್ನು ಶ್ರೀಕರಭಾಷ್ಯವನ್ನು ಶ್ರೀಪತಿಪಂಡಿತಾರಾಧ್ಯರು ಯಾರಿಗಾಗಿ ರಚಿಸಿ

ಪ್ಪಾರೆ. ಅದರಲ್ಲಿ ಪ್ರತಿಪಾದಿತವಾಗಿರುವ ಮುಖ್ಯ ಸಿದ್ಧಾಂತವ್ಯಾವುದು? ಅದರ ಸ್ವರೂಪವೇನು? ಅದರ ವೈಲಕ್ಷಣ್ಯವೆಂತಹದು? ಎಂಬೀ ವಿಷಯಗಳನ್ನು ಈಗ ವಿಮರ್ಶಿಸಬೇಕಾಗಿದೆ. ಇದಕ್ಕಿಂತ ಮುಂಚೆ ಮತ್ತೊಂದು ವಿಷಯ ನಮ್ಮ ಗಮನ ವನ್ನು ಸೆಳೆಯುತ್ತದೆ. ಈ ಭಾಷ್ಯಕ್ಕೆ ಶ್ರೀಕರಭಾಷ್ಯವೆಂಬ ಹೆಸರು ಏಕೆ ಬಂದಿ ತೆಂಬುದೇ ಈ ವಿಷಯ. ಈ ಬಗ್ಗೆ ಶ್ರೀಪತಿ ಪಂಡಿತಾರಾಧ್ಯರು "ಭಾಷ್ಯಂ ಶ್ರೀಕರ ನಾಮಕಂ ಭವಪರಂ" ಎಂದು ಹೇಳಿರುವುದನ್ನು ನಾವು ಗಮನಿಸಬಹುದಾಗಿದೆ. ಇವರ ದೃಷ್ಟಿಯಲ್ಲಿ ಈ ಭಾಷ್ಯವು ಭವರೋಗವನ್ನು ಪರಿಹರಿಸಲು ಸಮರ್ಥವೆನಿಸಿದೆ. ಸಾಧಕರೆಲ್ಲರಿಗೂ ಇರುವ ಭವರೋಗವೆಂದರೆ ಪತ್ನೀಪುತ್ರರಮೇಲಿನ ದುರಭಿಮಾನ; ಪ್ರಪಂಚದ ವ್ಯಾಮೋಹ; ಜಗತ್ತಿನ ಹೊರಗೆ ವ್ಯಾಪಿಸಿರುವ ರೂಪಾದ್ಯಾಕರ್ಷಣೆಗೆ ವಶವಾಗಿ ಒಳಗಿನ ಸತ್ಯವನ್ನು ಕಾಣದಿರುವುದೇ ಇದರ ದುಷ್ಪರಿಣಾಮ. ಇದಕ್ಕಿಂತ ಬೇರೆ ಭವರೋಗವಿಲ್ಲ. ಇದರಿಂದಲೇ ಸಾಧಕನು ಸತ್ಯಧರ್ಮಗಳ ದಿವ್ಯದೃಷ್ಟಿಯನ್ನು ಕಳೆದುಕೊಂಡಿರುವನು. ಜಗತ್ತನ್ನು ಆವರಿಸಿರುವ ಮಾಯೆಯೇ ಸಾಧಕನಿಗೆ ಹೀಗೆ ವ್ಯಾಮೋಹವನ್ನು ಹುಟ್ಟಿಸುತ್ತಲಿರುವುದರಿಂದ ಇದನ್ನು ಸಾಧಕನು ಸ್ವಪ್ರಯತ್ನದಿಂದ ಹಿಮ್ಮೆಟ್ಟಿಸಲಾರನು. ಈ ಮಾಯೆಯಾದರೋ ಪರಮೇಶ್ವರನ ಜಡಶಕ್ತಿ ಎನಿಸಿ ತನ್ನ ಸತ್ತ್ವರಜಸ್ತಮೋಗುಣಗಳಿಂದ ಸಾಧಕನನ್ನು ಬಂಧಿಸಿರುವುದು. ಇದರ ಪರಿಣಾಮವಾಗಿ ಅವನು ಒಮ್ಮೆ ಸಾತ್ತ್ವಿಕನಾಗಿ ಸತ್ಕರ್ಮಗಳನ್ನು ನಡೆಸುತ್ತಲೂ, ರಾಜಸನಾಗಿ ಲೋಕವ್ಯವಹಾರಗಳಲ್ಲಿ ಅಭಿಮಾನಿಸುತ್ತಲೂ, ತಾಮಸನಾಗಿ ನಿದ್ರಾ ಲಸ್ಯಮೋಹಗಳಿಂದ ನರಳುತ್ತಲೂ ಇರುವನು. ಹೀಗೆ ಮಾಯೆಯ ಕೈಚಳಕದಿಂದ ಪಾರುಗಾಣದ ಜೀವನು ರಾಗದ್ವೇಷಗಳ ಸುಳಿಯಲ್ಲಿ ಸಿಲುಕಿರುವುದರಿಂದ ಭವರೋಗವು ಅವನನ್ನು ಕಾಡಿಸುತ್ತಿರುವುದು. ಈ ರೋಗಕ್ಕೆ ವೀರ್ಯವತ್ತರವಾದ ಔಷಧವನ್ನು ಭಾಷ್ಯವು ಕೊಡಲಿರುವುದೆಂಬ ಅಂಶವನ್ನು "ಶ್ರೀಕರ" ಪದವು ನಮಗೆ ಸೂಚಿಸುತ್ತದೆ. ಇದೂ ಅಲ್ಲದೆ, ಶ್ರೀಪತಿ ಪಂಡಿತರು ಮತ್ತೊಂದು ಪದ್ಯದಲ್ಲಿ "ಈ ಭಾಷ್ಯವು ಭಕ್ತರಿಗೆ ಶಿವಜ್ಞಾನವನ್ನು ದೊರಕಿಸುವುದೆಂದೂ, ಸಕಲೋಪನಿಷತ್ತುಗಳ ಸಾರವೆನಿಸಿದ ವಿಶೇಷಾದ್ವೈತಸಿದ್ಧಾಂತವನ್ನು ಪ್ರತಿಪಾದಿಸುವುದೆ" ಎಂದೂ ತಿಳಿಸಿದ್ದಾರೆ. ಇದಿಷ್ಟ ರಿಂದಲೇ ಭಾಷ್ಯದ ಮಹತ್ತ್ವವು ನಮಗೆ ಮನವರಿಕೆಯಾಗುತ್ತದೆ. "ಬ್ರಹ್ಮಸ್ವರೂಪ ವನ್ನು ನಿರೂಪಿಸಲಿಕ್ಕಾಗಿಯೇ ಉಪನಿಷತ್ತುಗಳು ಹೊರಟಿರುವುದರಿಂದ ಅವುಗಳಲ್ಲಿ ಯಾವ ವಿರೋಧಕ್ಕೂ ಅವಕಾಶವಿಲ್ಲದಂತೆ ಅವುಗಳ ಸಾರವನ್ನು ಭಾಷ್ಯರೂಪದಿಂದ ಭಟ್ಟಿ ಇಳಿಸಲಾಗಿದೆ" ಎಂದು ಅವರು ಸ್ಪಷ್ಟವಾಗಿ ತಿಳಿಸಿದ್ದಾರೆ. ಮುಂದೊಂದು ಪದ್ಯದಲ್ಲಿ ಶ್ರೀಪತಿಪಂಡಿತಾರಾಧ್ಯರು ಈ ಭಾಷ್ಯವನ್ನು ಸಾಧಕರಿಗೆ ಕಲ್ಪವೃಕ್ಷದಂತೆ ಸಕಲೇಷ್ಟಾರ್ಥಪ್ರದವೆಂದೂ ಹೇಳಿದ್ದಾರೆ. "ಏತದ್ಭಾಷ್ಯಂ ಹಿ ಕಲ್ಪಕಂ". ಮುಮುಕ್ಷು ಗಳೂ ನಿರ್ಮಲಹೃದಯರೂ, ವೇದಾಗಮಪ್ರೇಮಿಗಳೂ ಆದ ಶೈವರಿಗೆ ಇದು ಕಲ್ಪವೃಕ್ಷ ವೆಂದು ಅವರು ತಿಳಿಸಿದ್ದಾರೆ. ಇಲ್ಲಿ ಶೈವವೆಂಬುದು ಸಾಮಾನ್ಯಶೈವ, ಮಿಶ್ರಶೈವ,

ಶುದ್ಧಶೈವ, ವೀರಶೈವ ಇವೇ ಮುಂತಾದ ಶೈವಮತದ ಪ್ರಭೇದಗಳೆಲ್ಲಕ್ಕೂ ಅನ್ವಯಿಸುತ್ತದೆ. ಇವುಗಳ ಅನುಯಾಯಿಗಳೆಲ್ಲರೂ ಶಿವೋಪಾಸಕರೂ ಶಿವಭಕ್ತಿಸಂಪನ್ನರೂ ಆದ್ದರಿಂದಲೇ ಶೈವರೆನಿಸಿದ್ದರೂ ಇವರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ವಾದಗಳೆಲ್ಲವೂ ಅಡಕವಾಗಿವೆ. ಇವು ವೇದದ ಒಂದೊಂದು ಭಾಗವನ್ನು ಮಾತ್ರವೇ ಅವಲಂಬಿಸಿರುವುದರಿಂದ ಇವಕ್ಕಿಂತಲೂ ವೇದದ ಎಲ್ಲಾ ಭಾಗಗಳನ್ನೂ ಅವಲಂಬಿಸಿಕೊಂಡು ಬೆಳೆದಿರುವ ವೀರಶೈವಮತವು ಶ್ರೇಷ್ಠವೆಂದು ಶ್ರೀಪತಿಪಂಡಿತಾರಾಧ್ಯರು ಅಭಿಪ್ರಾಯಪಡುತ್ತಾರೆ. ಇದನ್ನೇ ಶ್ರೀ ರೇಣುಕಾಚಾರ್ಯರು ಅಗಸ್ತ್ಯಮಹರ್ಷಿಗೆ ಉಪದೇಶಿಸುವಾಗಲೂ ಸ್ಪಷ್ಟವಾಗಿ ತಿಳಿಸಿದ್ದಾರೆ. ಈ ಅಂಶವನ್ನು ಭಾಷ್ಯಕಾರರು ಉತ್ಪತ್ತ್ಯಸಂಭವಾಧಿಕರಣದಲ್ಲಿ ಉಲ್ಲೇಖಿಸಿದ್ದಾರೆ. ಅಲ್ಲಿಗೆ ಈ ಭಾಷ್ಯವು ಶ್ರುತಿಯ ಎಲ್ಲಾ ಅಂಶಗಳನ್ನು ಯಥೋಚಿತವಾಗಿ ಸಮನ್ವಯಮಾಡಿ ಯಾವ ವಿರೋಧಕ್ಕೂ ಅವಕಾಶವಿಲ್ಲದಂತೆ ಸಾಧಕನ ಸಂಶಯಗಳೆಲ್ಲವನ್ನೂ ಬಗೆಹರಿಸಿ ನಿಶ್ಚಯಜ್ಞಾನದಿಂದ ಅವನ ದುರಭಿಮಾನವನ್ನೂ, ಅದರಿಂದುಂಟಾಗಿರುವ ಶಕ್ತಿಸಂಕೋಚವನ್ನೂ ತೊಲಗಿಸಿ ಶಕ್ತಿವಿಕಾಸರೂಪವಾದ ದಿವ್ಯಾಮೃತವನ್ನು ದೊರಕಿಸಬಲ್ಲುದೆಂದು ಶ್ರೀಪತಿಪಂಡಿತಾರಾಧ್ಯರು ಭಾಷ್ಯದ ಆರಂಭದಲ್ಲಿ ನಮಗೆ ಆಶ್ವಾಸನವಿತ್ತಿದ್ದಾರೆ. ಇದನ್ನು ಓದಿ ತಿಳಿದು ಇದರಂತೆ ಆಚರಿಸುವುದರಿಂದ ನಮ್ಮೊಳಗೆ ಗುಪ್ತವಾಗಿ ಅಡಗಿದ ಶಿವತತ್ತ್ವದ ಅರಿವು ನಮಗೆ ಉಂಟಾಗಿ ಆ ಮೂಲಕ ಶಿವಾನುಗ್ರಹವುಂಟಾಗುವುದರಿಂದ ಈ ಭಾಷ್ಯಕ್ಕೆ ಶ್ರೀಕರವೆಂಬ ಹೆಸರು ಅನ್ವರ್ಥವಾಗಿದೆ. ರಾಮಾನುಜಾಚಾರ್ಯರ ಭಾಷ್ಯ ಪಾರಮೇಶ್ವರೀಶಕ್ತಿಯ ಲೀಲಾವೈಭವಗಳನ್ನು ಹೃದಯಂಗಮವಾಗಿ ಚಿತ್ರಿಸುವುದಾದರೆ, ಶ್ರೀಪತಿಪಂಡಿತಾರಾಧ್ಯರ ಶ್ರೀಕರಭಾಷ್ಯವು ಪಾರಮೇಶ್ವರೀ ಶಕ್ತಿಯ ಪೂರ್ಣಪ್ರಸಾದವನ್ನು ಪರಮೇಶ್ವರನ ಸಾಕ್ಷಾದಂಶನಾದ ಜೀವನಿಗೆ ದೊರಕಿಸಿ ಅವನ ಜೀವನವನ್ನು ಸರ್ವತೋಮುಖವಾದ ಶಕ್ತಿಪ್ರಕಾಶಗಳ ವಿಕಾಸದಿಂದ ಪೂರ್ಣಗೊಳಿಸಿ ಅವನನ್ನು ನಿತ್ಯಸುಖಿಯನ್ನಾಗಿಯೂ, ನಿತ್ಯಸುಂದರನನ್ನಾಗಿಯೂ ಮಾಡಲಿರುವುದು. ಭಾಷ್ಯವು ಪ್ರಗತಿಶೀಲನಾದ ಮುಮುಕ್ಷುವನ್ನು ಶಕ್ತಿವೈಭವದಿಂದ ಶ್ರೀಕರಗೊಳಿಸುತ್ತದೆಯಾದ್ದರಿಂದ ಇದಕ್ಕೆ ಶ್ರೀಕರಭಾಷ್ಯವೆಂಬ ಹೆಸರು ಯಥಾರ್ಥವಾಗಿ ಅನ್ವಯಿಸುತ್ತದೆ. ಹೀಗೆ ಸಾಧಕನ ಜೀವನವನ್ನು ಅವಿನಾಶಿಯೂ, ಚಿರಂತನವೂ ಆದ ಆಧ್ಯಾತ್ಮಸೌಂದರ್ಯದಿಂದ ಪಾವನಗೊಳಿಸುವುದಾದ್ದರಿಂದ ಶ್ರೀಕರಭಾಷ್ಯವು ಶೈವರಿಗೆ ಭವಹರವೆನಿಸಿದೆ. ಹಾಲಿನೊಳಗೆ ತುಪ್ಪವಡಗಿರುವಂತೆ, ಬೀಜದೊಳಗೆ ಅಂಕುರವಡಗಿರುವಂತೆ ಜೀವನೊಳಗೆ ಗುಪ್ತವಾಗಿ ನೆಲಸಿರುವ ಶಿವನ ನೆಲೆ ಜೀವನಿಗೆ ತಿಳಿದರೆ, ಆಗ ಅವನು ಈ ದೇಹೇಂದ್ರಿಯಗಳ ಮೂಲಕ ನಿರಭಿಮಾನದಿಂದ ಲೋಕಹಿತಕ್ಕಾಗಿ ನಿತ್ಯವ್ಯವಹಾರಗಳನ್ನು ನಡೆಸುತ್ತ ನಿರ್ಲಿಪ್ತತೆಯಿಂದ ಬಾಳಬಲ್ಲನು. ಇಂತಹ ಅರಿವು ಜೀವನಿಗೆ ದೊರೆತರೆ ಆಗ ಅಹಂಕಾರ ಮಮಕಾರಗಳ ಪ್ರವೃತ್ತಿಗೆ ಅವಕಾಶವೆಲ್ಲಿಂದ ಬಂದೀತು? "ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ"

ಎಂಬಂತೆ ಜೀವರ ಮೋಹವು ಅಜ್ಞಾನವೆಂಬ ಮಲದ ಆವರಣವನ್ನು ಅವಲಂಬಿಸಿದೆ. ಗುರುಕರುಣೆಯಿಂದ ಯಾವ ಜೀವನಿಗೆ ಈ ಅಜ್ಞಾನಾಂಧಕಾರ ತೊಲಗುವುದೋ ಅವನಿಗೆ ಅಂತರಂಗದಲ್ಲಿ ಜ್ಞಾನರೂಪದಿಂದ ನೆಲಸಿರುವ ಶಿವನ ಪರಿಚಯವುಂಟಾಗಿ, ಅದು ಕ್ರಮಕ್ರಮವಾದ ಬೆಳವಣಿಗೆಯಿಂದ ವಿಕಾಸಗೊಂಡು, ಅದರಲ್ಲಿ ಜೀವನು ಸಮರಸವಾಗಿ ಬೆರೆತು ಶಿವಾನಂದವನ್ನು ಅನುಭವಿಸುತ್ತ, ವಿಶ್ವದ ಪ್ರತಿಯೊಂದು ಜೀವದಲ್ಲೂ ಸೂತ್ರದಂತೆ ಸಮನಾಗಿ ನೆಲಸಿರುವ ಆ ಶಿವನನ್ನೇ ಕಾಣತೊಡಗುವನು. ಇದರಿಂದ ಅವನಿಗೆ ಭವರೋಗವಿನ್ನೆಲ್ಲಿದ್ದೀತು? ತನ್ನೊಳಗೆ ಶಿವನನ್ನು ಕಂಡವನು ಎಲ್ಲರಲ್ಲೂ ಅವನನ್ನೇ ಕಾಣಬಲ್ಲನು; ತನ್ನೊಳಗೆ ಕಾಣದವನು ಎಲ್ಲಿಯೂ ಅವನನ್ನು ಕಾಣಲಾರನು. "ಇಹ ಚೇದವೇದೀದಥ ಸತ್ಯಮಸ್ತಿ ನಚೇದಿಹಾವೇದೀನ್ಮಹತೀ ವಿನಷ್ಟಿಃ." ಇಲ್ಲಿ ಈ ದೇಹದಲ್ಲಿಯೇ ಜೀವನು ಸದ್ಗುರುವಿನ ಉಪದೇಶದಿಂದ ನಿರ್ಮಲವಾದ ಮನಸ್ಸಿನಲ್ಲಿ ನಿರಂತರಸಾಧನೆಯಿಂದ ಶಿವಪ್ರಕಾಶವನ್ನು ಅನುಭವಿಸದೆ ಇದ್ದರೆ, ಮತ್ತೆಲ್ಲಿಯೂ ಅವನು ಇದನ್ನು ಕಾಣುವ ಸಂಭವವೇ ಇಲ್ಲ. ಆದ್ದರಿಂದ ಶ್ರೀಕರಭಾಷ್ಯವು ವಿಷಯಲೋಲನಾದ ಜೀವನಿಗೆ ಈಶ್ವರಜ್ಞಾನವೆಂಬ ಸಂಜೀವಿನಿಯನ್ನು ದೊರಕಿಸಿ ಅದರಮೂಲಕ ಅವನ ಭವರೋಗವನ್ನು ಪರಿಹರಿಸಲಿರುವುದು. ಇದಕ್ಕಿಂತ ಬೇರೆ ಶ್ರೀಕರಸಂಜೀವಿನಿಯನ್ನು ಜೀವನು ಎಲ್ಲಿತಾನೆ ಪಡೆದಾನು?

ಇನ್ನು ಶ್ರೀಕರಭಾಷ್ಯದಲ್ಲಿ ಪ್ರತಿಪಾದಿತವಾಗಿರುವ ಸಿದ್ಧಾಂತಸ್ವರೂಪವನ್ನರಿಯಲು ಆ ಕಾಲದ ಸಮಾಜದ ಪರಿಸ್ಥಿತಿಯ ಅರಿವು ಆವಶ್ಯಕವಾದ್ದರಿಂದ ಅದನ್ನು ಇಲ್ಲಿ ನಿರೂಪಿಸಲಾಗಿದೆ. ಕ್ರಿ.ಶ. ೧೧ನೇ ಶತಮಾನದ ಸಮಾಜದಲ್ಲಿ ಶೈವ ವೈಷ್ಣವ ಎಂಬ ಎರಡು ಮುಖ್ಯಪ್ರಭೇದಗಳಂತೆಯೇ ಶಾಕ್ತೇಯ, ಸೌರ, ಗಾಣಾಪತ್ಯ, ಕಾಪಾಲಿಕವೆಂಬ ನಾಲ್ಕು ಮತಗಳೂ ಬೇರೆಬೇರೆಯಾಗಿದ್ದರೂ ಅವೆಲ್ಲವೂ ಶೈವವೆನಿಸಿ ಆ ಶೈವದೊಡನೆ ವೀರಶೈವವೂ, ವೈಷ್ಣವವೂ ಸೇರಿಕೊಂಡಿದ್ದಂತೆ ಕಾಣಬರುತ್ತದೆ. ಶೈವರ ಶಿವಾಗಮಗಳೂ ವೈಷ್ಣವರ ಪಾಂಚರಾತ್ರಾಗಮವೂ ಪ್ರಬಲವಾಗಿ ವ್ಯಾಪಿಸಿದ್ದರೂ, ಜನರು ಶಿವ ವಿಷ್ಣುಗಳಿಗೆ ಭೇದವೆಣಿಸದೆ ಇಬ್ಬರನ್ನೂ ಆರಾಧಿಸುತ್ತಿದ್ದಂತೆ ಕಾಣುತ್ತದೆ. ಸ್ಮಾರ್ತಬ್ರಾಹ್ಮಣರು ನಾರಾಯಣನೊಂದಿಗೆ ಆದಿತ್ಯ, ಅಂಬಿಕೆ, ಗಣಪತಿ, ಶಿವ ಇವರನ್ನು ಅರ್ಚಿಸುತ್ತಿದ್ದಂತೆಯೇ, ಶೈವರೂ ಶಿವನನ್ನು ಪ್ರತಿಷ್ಠಿತಲಿಂಗರೂಪದಿಂದ ಅರ್ಚಿಸುತ್ತಲೇ ನಾರಾಯಣನನ್ನೂ ಅರ್ಚಿಸುತ್ತಿದ್ದಿರಬೇಕು. ಇದಕ್ಕೆ ನಿದರ್ಶನವಾಗಿ ಶೈವದೇವಾಲಯಗಳಲ್ಲಿ ಶಿವಲಿಂಗವಿರುವಂತೆಯೇ ವಿಷ್ಣುಮೂರ್ತಿಯೊಂದಿರುವುದನ್ನೂ, ಇಬ್ಬರಿಗೂ ಎಲ್ಲರೂ ವಂದಿಸುವುದನ್ನೂ ಇಂದಿಗೂ ನಾವು ಕಾಣುತ್ತೇವೆ. ಅದರಂತೆಯೇ ಅರ್ಚನೆಯಲ್ಲಿ ಶೈವಸಂಪ್ರದಾಯ ಮತ್ತು ವೈಷ್ಣವಸಂಪ್ರದಾಯವೆಂದು ಎರಡು ಪ್ರಧಾನವಾದ ಸಾಧನಮಾರ್ಗಗಳಿದ್ದರೂ, ಜನರು ಅವರವರ ಸಂಪ್ರದಾಯಕ್ಕೆ ದೃಢವಾಗಿ ಅಂಟಿಕೊಂಡಿದ್ದಂತೆ ಕಾಣುವುದಿಲ್ಲ. ಇದೂ ಅಲ್ಲದೆ, ಶ್ರೀಕರಭಾಷ್ಯದ ರಚನೆಯ ಕಾಲಕ್ಕೆ ೬೦-೭೦ ವರ್ಷಗಳ ಹಿಂದೆ ರಾಮಾನುಜಾಚಾರ್ಯರು ಅವತರಿಸಿ ಪಾಂಚರಾತ್ರಾ

ಗಮುಕ್ಕೆ ಪ್ರಾಧಾನ್ಯವನ್ನು ಕೊಟ್ಟು ನಾರಾಯಣನನ್ನೇ ಪರಬ್ರಹ್ಮವೆಂದು ಸ್ಥಾಪಿಸಿ, ನಾರಾಯಣನೇ ಜಗತ್ಕಾರಣನೆಂದು ತಿಳಿಸುವ ತಾಂತ್ರಿಕವಾದವನ್ನು ಎತ್ತಿ ಹಿಡಿದಿದ್ದರು. ಅದಕ್ಕೆ ಸರಿಯಾಗಿ "ನಾರಾಯಣಪರಂ ಬ್ರಹ್ಮ" ಮೊದಲಾದ ಶ್ರುತಿವಾಕ್ಯಗಳ ಮತ್ತು "ವಾಸುದೇವಸ್ಸರ್ವಂ" ಎಂಬ ಗೀತೆಯ ಆಧಾರದಮೇಲೆ ನಾರಾಯಣನನ್ನು ಪರಮಪುರುಷನೆಂದು ಅವರು ಸ್ಥಾಪಿಸಿದ್ದರು. "ನಾರಾಯಣನಿಂದ ಬ್ರಹ್ಮರುದ್ರರು ಹುಟ್ಟಿದ್ದಾರೆ" ಎಂದು ತಿಳಿಸುವ ಶ್ರುತಿಯಲ್ಲಿ ನಾರಾಯಣನನ್ನು ಸರ್ವಕಾರಣನೆಂದು ಹೇಳಿರುವುದರಿಂದಲೂ, "ವಿಷ್ಣುವನ್ನು ವರ್ಣಿಸುವ ಆಗಮ ಗಳು ಸಾತ್ತ್ವಿಕ; ರುದ್ರನನ್ನು ವರ್ಣಿಸುವ ಆಗಮುಗಳು ತಾಮಸ" ವೆಂದು ಶಾಂಡಿಲ್ಯ ಸ್ಮೃತಿಯಲ್ಲಿ ಹೇಳಿರುವುದರಿಂದಲೂ,"ರುದ್ರನು ಕ್ರೂರನು"ಎಂದು ಯಜುರ್ವೇದದಲ್ಲಿ ಹೇಳಿರುವಂತೆ ಅವನೂ ಮತ್ತು ಅವನಿಂದ ರಚಿತವಾದ ಅಗಮುಗಳು ತಾಮಸವೆಂಬ ಭಾವನೆ ಜನರಲ್ಲಿ ಹುಟ್ಟಿತ್ತು. ದೇಹೇಂದ್ರಿಯಗಳಿಂದ ಮಾಡುವುದೆಲ್ಲವೂ ವಿಷ್ಣು ವಿನ ಆರಾಧನವೆಂದೂ, ಎಲ್ಲಾ ದೇವರಿಗೆ ಮಾಡುವ ನಮಸ್ಕಾರಗಳೂ ವಿಷ್ಣುವಿಗೇ ಸೇರುವುವೆಂದೂ, ವೈಷ್ಣವಲಾಂಛನಗಳೆನಿಸಿದ ಶಂಖಚಕ್ರಗಳ ಮುದ್ರೆಯನ್ನೇ ದೇಹದಮೇಲೆ ಒತ್ತಿಕೊಳ್ಳಬೇಕೆಂದೂ, ಸಾಲಗ್ರಾಮದ ತೀರ್ಥವಲ್ಲದೆ ಲಿಂಗತೀರ್ಥ ಪ್ರಸಾದಗಳನ್ನು ಸ್ವೀಕರಿಸಬಾರದೆಂದೂ ವೈಷ್ಣವಾಗಮುಗಳು ಬೋಧಿಸುತ್ತಿದ್ದುದನ್ನು ರಾಮಾನುಜರು ಹೆಚ್ಚುಪ್ರಚಾರಕ್ಕೆ ತಂದಿದ್ದಂತೆ ಕಾಣುತ್ತದೆ. ಹೀಗೆ ವಿಷ್ಣುವೇ ಸರ್ವೋತ್ಕೃಷ್ಟನೂ, ಪರಬ್ರಹ್ಮವೂ, ವೈದಿಕದೇವತೆಗಳೆಲ್ಲರಿಗೂ ಪ್ರಧಾನನೆಂಬ ಭಾವನೆ ಜನರ ಮನಸ್ಸಿನಮೇಲೆ ವ್ಯಾಪಿಸಿತ್ತು. ಇದರ ಪರಿಣಾಮವಾಗಿ ಶೈವರಿಗೆ ಶಿವನಲ್ಲಿ ಭಕ್ತಿ ಕಡಿಮೆಯಾಗಿ ತಾಂತ್ರಿಕಾಚರಣೆಯಲ್ಲಿಯೇ ಪ್ರವೃತ್ತಿ ಹೆಚ್ಚಾಗುತ್ತಿತ್ತು. ಆಗಲೇ ತಿರುಪತಿಕ್ಷೇತ್ರದ ಉಪಾಸ್ಯದೇವನ ನಾಮಪರಿವರ್ತನೆಯೂ ಆಗಬೇಕಾಯಿತು. ಐತಿಹಾಸಿಕವಾಗಿ ಶಿವಕ್ಷೇತ್ರವೆನಿಸಿದ್ದ ತಿರುಪತಿಯಲ್ಲಿ ಉಪಾಸ್ಯನಾಗಿದ್ದ ವೀರೇ ಶ್ವರನು ನಾಗಭೂಷಣವೇ ಮೊದಲಾದ ಶಿವಲಾಂಛನಗಳನ್ನು ಹೊಂದಿ ಕೈನಲ್ಲಿ ಲಿಂಗವನ್ನು ಹಿಡಿದಿದ್ದರೂ, ಶಂಖಚಕ್ರಾದಿಲಾಂಛನಗಳಿಂದ ವೆಂಕಟರಮಣನೆಂಬ ಹೆಸರಿನಿಂದ ಅರ್ಚನೆಯನ್ನು ಸ್ವೀಕರಿಸಬೇಕಾಯಿತು. ಹೀಗೆ ಶಿವವಿಷ್ಣುಗಳಿಗೆ ಭೇದ ವ್ಯವಸ್ಥೆ ಇಲ್ಲದೆ ಯಾರು ಯಾರನ್ನಾದರೂ ಯಾವ ಹೆಸರಿನಿಂದಾದರೂ ಅರ್ಚಿಸಬಹು ದೆಂಬ ಭಾವನೆ ಜನರಲ್ಲಿ ಮೂಡಿದ್ದುದರಿಂದಲೇ, ತಿರುಪತಿಯಲ್ಲಿ ಉಪಾಸ್ಯದೇವನ ಹೆಸರಿನ ಮತ್ತು ವೇಷಭೂಷಣಗಳ ಬದಲಾವಣೆಗೆ ಜನರಿಂದ ಯಾವಬಗೆಯ ಆಗ್ರಹ ಮತ್ತು ಅಡಚಣೆಗಳೂ ಬರಲಿಲ್ಲವೆಂದು ತಿಳಿದುಬರುತ್ತದೆ.

ಆದರೆ ಆ ಕಾಲದಲ್ಲಿ ರೂಢಿಯಲ್ಲಿದ್ದ ಮತಗಳೆಲ್ಲವೂ ಆಗಮಮೂಲವಾಗಿಬೆಳೆದು ಶ್ರುತಿಯ ಏಕದೇಶವನ್ನು ಮಾತ್ರವೇ ಅವಲಂಬಿಸಿದ್ದುದರಿಂದ ತಾಂತ್ರಿಕವೆನಿಸಿದ್ದುವು. ಈ ಮತಾನುಯಾಯಿಗಳಲ್ಲಿ ವೈಷ್ಣವರನ್ನು ಸಾಮಾನ್ಯಶೈವ ಮತ್ತು ಮಿಶ್ರಶೈವ ರೆಂದು ಕರೆಯುತ್ತಿದ್ದಹಾಗೆ ವೀರಾಗಮದಿಂದ ತಿಳಿದುಬರುತ್ತದೆ. "ಸಾಮಾನ್ಯ

ಶೈವಂ ದೇವೇಶಿ ವೈಷ್ಣವಂ ಪರಿಕೀರ್ತಿತಂ । ಪಂಚಪೂಜಾವಿಧಾನಂ ತು ಮಿಶ್ರಶೈವ ಮಿತೀರ್ಯತೇ ॥" ಎಂಬ ವೀರಾಗಮದ ವಾಕ್ಯಗಳನ್ನು ಶ್ರೀಪತಿಪಂಡಿತಾರಾಧ್ಯರು "ಕರಣವಚ್ಚೇನ್ನ ಭೋಗಾದಿಭ್ಯಃ"(೨-೨-೪)ಎಂಬ ಸೂತ್ರದ ಭಾಷ್ಯದಲ್ಲಿ ಉದಾಹರಿಸಿದ್ದಾರೆ. "ಮುಕುಂದಪ್ರಿಯನಾದ ಪರಮಶಿವನಿಗೆ ಸೂರ್ಯಚಂದ್ರಾಗ್ನಿಗಳೇ ನೇತ್ರಗಳು" ಎಂಬಂತೆ ಸೂರ್ಯನು ಶಿವನ ನೇತ್ರವಾದ್ದರಿಂದ ಸೂರ್ಯೋಪಾಸನೆಯೂ ಶೈವವೇ ಎನಿಸಿತ್ತು. ಅಂಬಿಕೆ ಶಿವನ ಪತ್ನಿಯೂ, ಗಣಪತಿ ಶಿವನ ಮಗನೂ ಆದ್ದರಿಂದ ಅವರಿಬ್ಬರ ಉಪಾಸನೆಯೂ ಶೈವವೇ ಎನಿಸಿತ್ತು. ವಿಷ್ಣು ಪರಮಶಿವಭಕ್ತನೆನಿಸಿದ್ದರಿಂದ ವಿಷ್ಣುವನ್ನು ಪೂಜಿಸುವ ವೈಷ್ಣವರೂ ಶೈವರೆನಿಸಿದ್ದರು. ವಿಷ್ಣು ಶಿವಭಕ್ತನೆಂಬ ಅಂಶವು ಸ್ಕಾಂದ ಶೈವ ಬ್ರಹ್ಮವೈವರ್ತ ಶಂಕರಸಂಹಿತೆ ಪರಾಶರಪುರಾಣಗಳಲ್ಲೂ, ಋಗ್ವೇದದಲ್ಲೂ ಪ್ರಸಿದ್ಧವಾಗಿದೆ. ಪರಮಶಿವನಿಗೆ "ವಿಷ್ಣುವು ಬಾಣವೂ, ವಾಹನವೂ, ಹೆಂಡತಿಯೂ ಆಗಿದ್ದುದರಿಂದ ಪರಮಭಕ್ತನೆನಿಸಿದ್ದಾನೆ", "ವಿಷ್ಣು ವಕ್ಷಸ್ಥಲದಲ್ಲೂ, ಬ್ರಹ್ಮ ಶಿರಸ್ಸಿನಲ್ಲೂ ಲಿಂಗವನ್ನು ಧರಿಸಿ ಲಿಂಗದೊಳಗಿನ ಶಿವನನ್ನು ಆರಾಧಿಸಿ ಅವರವರ ಸ್ಥಾನಮಾನಗಳನ್ನು ಪಡೆದರು" ಎಂದು ಮುಂತಾದ ಪ್ರಮಾಣಗಳಿಂದ ವಿಷ್ಣು ಶಿವಲಿಂಗದ ಆರಾಧಕನೆಂದು ಸರ್ವತ್ರಪ್ರಸಿದ್ಧ್ಯಧಿಕರಣದಲ್ಲಿ ನಿರ್ಣಯಿಸಲಾಗಿದೆ. ಆದ್ದರಿಂದ ಪಂಚರ ಪೂಜೆಯೂ ಮಿಶ್ರಶೈವವೆನಿಸಿದೆ. ಇದರಂತೆ ಪಾಶುಪತರೆಂಬ ಶೈವರು ಶಿವಲಿಂಗವನ್ನು ಅರ್ಚಿಸುತ್ತ ಲಿಂಗಮುದ್ರೆಯನ್ನು ಮೈಮೇಲೆ ಒತ್ತಿಕೊಳ್ಳುತ್ತಿದ್ದರು. ತ್ರಿಲೋಚನಶಿವಾಚಾರ್ಯರು ಪಶು, ಪತಿ, ಪಾಶ ಎಂಬ ಮೂರು ಪದಾರ್ಥಗಳನ್ನು ಒಪ್ಪಿಕೊಂಡು ಶೈವರೆನಿಸಿ ಶಿವನು ಜಗತ್ತಿಗೆ ಕೇವಲ ನಿಮಿತ್ತನೆಂದು ವಾದಿಸುತ್ತಿದ್ದರು. ಹೀಗೆ ಆ ಕಾಲದಲ್ಲಿ ಶೈವ, ವೈಷ್ಣವ ಎಂಬ ಮುಖ್ಯ ಪ್ರಭೇದವಿದ್ದರೂ ಜನರಿಗೆ ಯಾವುದಾದರೊಂದು ನಿರ್ದಿಷ್ಟವಾದ ಉಪಾಸನವಿದ್ದಂತೆ ಕಾಣುವುದಿಲ್ಲ. ಅದರಂತೆಯೇ ತತ್ತ್ವಾನುಸಂಧಾನದಲ್ಲೂ ವ್ಯವಸ್ಥೆಯಿದ್ದಂತೆ ಕಾಣುವುದಿಲ್ಲ. ವಿಷ್ಣುವೇ ಜಗತ್ಕಾರಣವೆಂದು ಕೆಲವರು, ಶಕ್ತಿಯೇ ಜಗತ್ತಿನ ಉಪಾದಾನವೆಂದೂ ಶಿವನು ಕೇವಲನಿಮಿತ್ತನೆಂದೂ ಕೆಲವರು, ಜಗತ್ತು ಮಿಥ್ಯೆ ಎಂದು ಕೆಲವರು, ಸತ್ಯವೆಂದು ಕೆಲವರು, ಜೀವನೇ ಸಾಕ್ಷಾದ್ಬ್ರಹ್ಮವೆಂದು ಕೆಲವರು, ಅವನು ಚಿದಂಶನೆಂದು ಕೆಲವರು, "ಅಜ್ಞಾನದ ಆವರಣದಿಂದ ಜೀವನು ಬ್ರಹ್ಮಭಾವವನ್ನು ಮರೆತು ಜ್ಞಾನದಿಂದ ತನ್ನ ಸ್ವರೂಪವನ್ನರಿಯುವನು" ಎಂದು ಕೆಲವರು ಹೀಗೆ ನಾನಾ ಬಗೆಯ ವಾದಗಳಿದ್ದುದರಿಂದ ಸಿದ್ಧಾಂತ ಸಂಪ್ರದಾಯಗಳೆರಡರಲ್ಲೂ ಜನರಿಗೆ ವ್ಯವಸ್ಥಿತಕ್ರಮವಿರಲಿಲ್ಲವೆಂದು ಕಂಡುಬರುತ್ತದೆ.

ಇಂತಹ ಪರಿಸ್ಥಿತಿಯಲ್ಲಿ ಶ್ರೀಪತಿಪಂಡಿತಾರಾಧ್ಯರು ಯಥಾರ್ಥವಾದ ಸತ್ಯವನ್ನು ಬೆಳಕಿಗೆ ತಂದು ವೀರಶೈವರಿಗೆ ಸಿದ್ಧಾಂತ ಸಂಪ್ರದಾಯಗಳೆರಡರಲ್ಲೂ ವ್ಯವಸ್ಥಿತಮಾರ್ಗವನ್ನು ತಿಳಿಸುವ ಗುರುತರವಾದ ಹೊರೆಯನ್ನು ನಿರ್ವಹಿಸಬೇಕಾಯಿತು. ಶೈವತಂತ್ರದೊಳಗೆ ಸೇರಿಕೊಂಡಿದ್ದವರನ್ನು ವೇದಸಮ್ಮತವಲ್ಲದ ತಾಂತ್ರಿಕಮಾರ್ಗ

ದಿಂದ ತಪ್ಪಿಸಿ ವೈದಿಕಮಾರ್ಗದೆಡೆಗೆ ಒಯ್ದು ವೇದದ ಎಲ್ಲಾ ಅಂಶಗಳಿಗೂ ಅನು ಗುಣವಾದ ಸಿದ್ಧಾಂತಬಂದನ್ನು ಅವರಿಗೆ ತಿಳಿಸಬೇಕಾಯಿತು. ಆದ್ದರಿಂದಲೇ ಶಿವನನ್ನು ಲಿಂಗರೂಪದಿಂದ ದೇಹದಲ್ಲಿ ಧರಿಸಿ ನಿತ್ಯವೂ ಅರ್ಚಿಸುವ ವಿಧಾನವನ್ನು ವೈದಿಕ ವೆಂದು ತಿಳಿದು ಶ್ರೀಪತಿಪಂಡಿತಾರಾಧ್ಯರು "ಪತ್ಯುರಸಾಮಂಜಸ್ಯಾತ್" ಎಂಬ ಸೂತ್ರಭಾಷ್ಯದಲ್ಲಿ ವೇದದ ಒಂದೊಂದುಭಾಗವನ್ನು ಅವಲಂಭಿಸಿದ ಪಾಂಚರಾತ್ರ ಪಾಶುಪತ ಮತಗಳಿಗಿಂತಲೂ ಸರ್ವವೇದಾನುಸಾರವಾದ ವೀರಶೈವಮತವನ್ನೇ ಶ್ರೇಷ್ಠ ವೆಂದು ಸ್ಪಷ್ಟಪಡಿಸಬೇಕಾಯಿತು. ಈ ಮತವೂ ಶಿವಾಗಮಗಳನ್ನವಲಂಬಿಸಿ ತಾಂತ್ರಿಕ ವೆನಿಸಿದ್ದರೂ, ಈ ಆಗಮಗಳ ಕೊನೆಯಭಾಗದಲ್ಲಿ ವೇದಸಮ್ಮತವಾದ ಸಿದ್ಧಾಂತವೇ ನಿರೂಪಿತವಾಗಿರುವುದರಿಂದ ಅದು ವೇದದ ಎಲ್ಲಾ ಧರ್ಮಗಳಿಗೂ ಅನುಕೂಲ ವಾಗಿದ್ದು ವೈದಿಕವೆನಿಸಿದೆ ಎಂದು ಅವರು ಘಂಟಾಘೋಷವಾಗಿ ಸಾರಬೇಕಾಯಿತು. ಹೀಗೆ ಶೈವವೀರಶೈವಗಳಿಗೆ ಭೇದವಿಲ್ಲದೆ ಶೈವರು ಲಿಂಗದಂತೆ ವಿಷ್ಣುವನ್ನೂ ಆರಾಧಿ ಸುತ್ತ ಲಿಂಗಮುದ್ರೆಯಂತೆ ಚಕ್ರಮುದ್ರೆಯನ್ನೂ ಒತ್ತಿಕೊಳ್ಳುತ್ತಿದ್ದುದರಿಂದ ಲಿಂಗ ಧಾರಿಗಳು ಲಿಂಗದ ಮಹತ್ತ್ವಮತ್ತುವೈಶಿಷ್ಟ್ಯಗಳನ್ನರಿಯದೆ ಇತರ ಶೈವಮತಗಳನ್ನು ಅವ್ಯವಸ್ಥಿತವಾಗಿ ಅನುಸರಿಸುತ್ತಿದ್ದುದರಿಂದ ಶ್ರೀಪತಿಪಂಡಿತಾರಾಧ್ಯರು ವೀರಶೈವ ಸಿದ್ಧಾಂತಸಂಪ್ರದಾಯಗಳನ್ನು ಶ್ರುತ್ಯಾಗಮಗಳ ಸಮನ್ವಯದಮೇಲೆ ಸ್ಥಾಪಿಸಬೇಕಾ ಯಿತು. ಇದನ್ನು ಅವರು "ಸರ್ವವೇದಧರ್ಮಾನುಕೂಲಕಾಮಿಕಾದ್ಯಷ್ಟಾವಿಂಶತ್ಯಾಗಮ ಸಿದ್ಧಸಿದ್ಧಾಂತಾಭಿಧಾನವೀರಶೈವಮೇವ ಮುಮುಕ್ಷುಭಿರುಪಾದೇಯಂ" ಹೀಗೆ ಪತ್ಯ ಧಿಕರಣದಲ್ಲಿ ಸ್ಪಷ್ಟವಾಗಿ ತಿಳಿಸಿ ವೀರಶೈವರಿಗೆ ನಿರ್ದಿಷ್ಟಮಾರ್ಗವನ್ನು ತೋರಿ ಸಿಕೊಟ್ಟಿದ್ದಾರೆ; ಹಾಗೆಯೇ ಶ್ರುತ್ಯಾಗಮಗಳ ಆಧಾರದಮೇಲೆ ಶಿವನೇ ಜಗತ್ತಿಗೆ ನಿಮಿ ತ್ತನೂ ಉಪಾದಾನನೂ ಆಗಿರುವನೆಂದು ಸಾಧಿಸಿದ್ದಾರೆ. ಅದರಂತೆಯೇ ಅವನು ಜಗತ್ಪ ತಿಯೂ, ಪರಮಪುರುಷನೂ, ಸರ್ವೋತ್ಕೃಷ್ಟನೂ ಆಗಿರುವನೆಂದು ಸ್ಥಾಪಿಸಿದ್ದಾರೆ. ಉತ್ಪತ್ತೇರಸಂಭವಾತ್ (೨-೨-೪೨) ಎಂಬ ಸೂತ್ರದ ಭಾಷ್ಯದಲ್ಲಿ ಶಾಸ್ತ್ರಾಧಾರದ ಮೇಲೆ ಅನುಭವಕ್ಕೆ ಹೊಂದುವಂತೆ ಯುಕ್ತಿಯಿಂದ ಶಿವನೇ ಉಭಯಕಾರಣನೆಂಬು ದನ್ನು ಸಮರ್ಥಿಸಿದ್ದಾರೆ. "ವಿಶ್ವಾಧಿಕೋ ರುದ್ರೋ ಮಹರ್ಷಿಃ", "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ" "ರುದ್ರೋ ವೈ ಶಾಶ್ವತಂ ವೈ ಪುರಾಣಂ" ಎಂಬ ಅನೇಕ ಶ್ರುತಿಗಳ ಆಧಾರದಿಂದ ರುದ್ರನನ್ನು ಏಕಮೇವಾದ್ವಿತೀಯನಾದ ಪರಬ್ರಹ್ಮ ನೆಂದು ಸಿದ್ಧಾಂತಿಸಿದ್ದಾರೆ. ಅವನೇ ಸ್ವಶಕ್ತಿಯ ಏಕಾಂಶದಿಂದ ತ್ರಿಮೂರ್ತಿಗಳಾಗಿ ಸೃಷ್ಟಿಸ್ಥಿತಿಲಯಗಳನ್ನು ನಡೆಸುತ್ತಾ ತಾನು ಸ್ವಯಂಭುಸ್ಥಿತಿಯಲ್ಲಿ ತ್ರಿಮೂರ್ತ್ಯತೀತ ನಾಗಿರುವನೆಂದು ಸ್ಥಾಪಿಸಿ ಅವನಿಂದಲೇ ತ್ರಿಮೂರ್ತಿಗಳೂ, ಸಕಲೇಂದ್ರಿಯಗಳೂ, ಪಂಚಭೂತಗಳೂ ಹುಟ್ಟಿರುವುವೆಂದೂ, ಶಿವನು ಎಲ್ಲಕ್ಕೂ ಕಾರಣನಾದರೂ ಅವನಿಗೆ ಯಾವ ಕಾರಣವೂ ಇಲ್ಲವೆಂದೂ, ವಿಶ್ವವೆಲ್ಲಕ್ಕೂ ಪ್ರಭುವಾದ ಶಿವನೇ ಎಲ್ಲರಿಗೂ ಧ್ಯೇಯನೆಂದೂ ಶ್ರೀಪತಿಪಂಡಿತರು ಸಮರ್ಥಿಸಿದ್ದಾರೆ. "ಸರ್ವೈಶ್ವರ್ಯಸಂಪನ್ನನೂ

ಸರ್ವೇಶ್ವರನೂ ಶಿವಶಂಕರನೂ ಆದ ಶಿವನನ್ನು ಸಾಧಕನು ನಿಶ್ಚಲಚಿತ್ತದಿಂದ ದಹರಾಕಾಶದಲ್ಲಿ ಧ್ಯಾನಿಸಬೇಕು" ಎಂಬೀ ಶ್ರುತಿಯಂತೆ ಶಿವನೇ ಸರ್ವರಿಗೂ ಉಪಾಸ್ಯನೆಂದು ತಿಳಿಸಿ, "ನಿಧನಪತಾಂತಿಕಾಯ ನಮಃ" ಎಂಬಲ್ಲಿ ಲಯಾಧಿಕಾರಿಯಾದ ಕಾಲರುದ್ರನಿಗೂ ಸಂಹಾರಕನಾದ್ದರಿಂದ ಶಿವನೇ ಪರಬ್ರಹ್ಮನೆನಿಸಿರುವನೆಂದು ಸಮಂಜಸವಾಗಿ ಪ್ರತಿಪಾದಿಸಿದ್ದಾರೆ. ಅಲ್ಲಿಗೆ ಶಿವ, ಶರ್ವ, ಈಶಾನ, ಪತಿ, ಈಶ್ವರ, ಬ್ರಹ್ಮ, ಮಹಾದೇವ, ಭರ್ಗ ಎಂಬ ಪದಗಳು ಘಟಕುಂಭಕಲಶ ಎಂಬ ಪದಗಳಂತೆ ಸಮಾನಾರ್ಥಕಗಳೆನಿಸಿವೆ ಎಂದು ಹೇಳಿ ಶ್ರೀಪತಿಪಂಡಿತರು ವೀರಶೈವರಿಗೆ ಶಿವನೇ ವೇದಸಮ್ಮತವಾದ ಉಪಾಸ್ಯದೇವನೆಂದು ಸ್ಪಷ್ಟವಾಗಿ ತಿಳಿಸಿದ್ದಾರೆ. "ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ" ಎಂಬ ಮಂತ್ರದಲ್ಲಿ ಶಿವನು ವಿದ್ಯೆಗಳೆಲ್ಲಕ್ಕೆ ಅಧಿಪತಿಯೂ, ವಿಷ್ಣು ಮೊದಲಾದ ಜೀವರೆಲ್ಲರಿಗೂ ನಿಯಾಮಕನೂ ಆಗಿರುವನೆಂದು ತಿಳಿಸಲಾಗಿದೆ. ಆದ್ದರಿಂದಲೇ ಅವನನ್ನು ಅಜಾತನೆಂದು ಶ್ವೇತಾಶ್ವತರಮಂತ್ರವು ಕರೆದಿದೆ. "ಅಜಾತ ಇತ್ಯೇವಂ ಕಶ್ಚಿದ್ಭೀರುಃ ಪ್ರಪದ್ಯತೇ । ರುದ್ರ ಯತ್ತೇ ದಕ್ಷಿಣಂ ಮುಖಂ ತೇನ ಮಾಂ ಪಾಹಿ ನಿತ್ಯಂ" ಎಂಬ ಮಂತ್ರದಲ್ಲಿ ರುದ್ರನನ್ನು ಅಜಾತನೆಂದೂ, ಯೋಗಿಗಳಿಗೆ ಆಶ್ರಯನೆಂದೂ, ಜಗದ್ರಕ್ಷಕನೆಂದೂ ಹೇಳಲಾಗಿದೆ. "ನಾರಾಯಣನಿಂದ ರುದ್ರನು ಹುಟ್ಟಿದನು" ಎಂದು ತಿಳಿಸುವ ಶ್ರುತಿಯು ಲಯಾಧಿಕಾರಿಯಾದ ಕಾಲರುದ್ರನಿಗೆ ಅನ್ವಯಿಸುತ್ತದೆ. "ತ್ರಯಸ್ತೇ ಕಾರಣಾತ್ಮಾನಃ ಜಾತಾಸ್ಸಾಕ್ಷಾನ್ಮಹೇಶ್ವರಾತ್ । ಚರಾಚರಸ್ಯ ವಿಶ್ವಸ್ಯ ಸರ್ಗಸ್ಥಿತ್ಯಂತಹೇತವಃ । ಪಿತ್ರಾ ನಿಯಮಿತಾಃ ಪೂರ್ವಂ" ಎಂದು ಮುಂತಾಗಿ ವಾಯವೀಯಸಂಹಿತೆಯಲ್ಲಿ ತಂದೆಯಾದ ಪರಶಿವನ ಅನುಗ್ರಹದಿಂದ ತ್ರಿಮೂರ್ತಿಗಳು ಅವಾಂತರಸೃಷ್ಟಿಗಳಿಗೆ ಕಾರಣರಾಗುವರೆಂದೂ, ಅವರಿಗೆ ಅನಾದಿಕಾಲದಿಂದಲೂ ಜಗತ್ಸೃಷ್ಟಿಕರ್ತೃತ್ವವಿಲ್ಲವೆಂದೂ ತಿಳಿಸಲಾಗಿದೆ.

ಹೀಗೆ ನಾರಾಯಣನು ಅವಾಂತರಸೃಷ್ಟಿಗೆ ಮಾತ್ರವೇ ಕರ್ತನಾಗುವದಾದರೆ "ನಾರಾಯಣನೇ ಪರಬ್ರಹ್ಮವೆಂದು ಬೋಧಿಸುವ ಶ್ರುತಿಗಳಿಗೇನು ಗತಿ ?" ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಶ್ರೀಪತಿಪಂಡಿತಾರಾಧ್ಯರು "ಅಂತವತ್ತ್ವಮಸರ್ವಜ್ಞತಾ ವಾ" ಎಂಬ ಸೂತ್ರದ ಭಾಷ್ಯದಲ್ಲಿ ಸೂಕ್ತವಾದ ಸಮಾಧಾನವನ್ನು ತಿಳಿಸಿದ್ದಾರೆ. ನಾರಾಯಣನು ಪರಬ್ರಹ್ಮವೆಂದು ತಿಳಿಸುವ ಮಹಾನಾರಾಯಣೋಪನಿಷತ್ತಿನ ತಾತ್ಪರ್ಯವನ್ನು "ಶಬ್ದವಿಶೇಷಾತ್" ಎಂಬ ಸೂತ್ರದಲ್ಲಿ ವಿಶದಪಡಿಸಿದ್ದಾರೆ. "ನಾರಾಯಣಾತ್ಪರೋ ಭಕ್ತಃ ಮಮ ನಾಸ್ತಿ ವರಾನನೇ" ಎಂದು ಸ್ಕಾಂದದಲ್ಲಿ ಶಿವನು ಪಾರ್ವತಿಗೆ ಹೇಳುವ ಮಾತಿನಿಂದಲೂ, "ತಸ್ಮಾದಿಷ್ಟತಮಃ ಕೃಷ್ಣಾದನ್ಯೋ ಮಮ ನ ವಿದ್ಯತೇ" ಎಂದು ಮಹಾಭಾರತದ ದ್ರೋಣಪರ್ವದಲ್ಲಿ ಅಶ್ವತ್ಥಾಮನಿಗೆ ಶಿವನು ಹೇಳುವ ಮಾತಿನಿಂದಲೂ ಶಿವನಾರಾಯಣರಿಗೆ ಉಪಾಸ್ಯೋಪಾಸಕಭಾವವೂ ಗುರುಶಿಷ್ಯಭಾವವೂ ವ್ಯಕ್ತವಾಗುತ್ತವೆ. ಆದ್ದರಿಂದ "ನಾರಾಯಣಪರಂ ಬ್ರಹ್ಮ" ಎಂಬಲ್ಲಿ ಶ್ರೀಪತಿಪಂಡಿತಾರಾಧ್ಯರು "ನಾರಾಯಣಾತ್ ಪರಂ ಬ್ರಹ್ಮ" ಎಂದು ಅರ್ಥಮಾಡುತ್ತಾರೆ.

" ಯಃ ಪರಸ್ಸ ಮಹೇಶ್ವರಃ " ಎಂಬಕಡೆ ಎಲ್ಲಕ್ಕೂ ಹೆಚ್ಚಿನವನೇ ಮಹೇಶ್ವರನೆಂದು ಹೇಳಿರುವಂತೆ, " ಯಸ್ಮಾತ್ಪರನ್ನಾಪರಮಸ್ತಿ ಕಿಂಚಿತ್ ", " ಯಾವನಿಗಿಂತ ಹೆಚ್ಚಿನದು ಬೇರೊಂದು ಇಲ್ಲವೋ " ಎಂಬಲ್ಲಿ ಪರಶಬ್ದವನ್ನು "ಎಲ್ಲಕ್ಕೂ ಹೆಚ್ಚಿನದು" ಎಂಬ ಅರ್ಥದಲ್ಲಿ ಉಪಯೋಗಿಸಿರುವಂತೆ ನಾರಾಯಣನಿಗಿಂತಲೂ ಉತ್ಕೃಷ್ಟನಾದ ಮಹೇಶ್ವರನನ್ನು ನಾರಾಯಣನಿಗೇ ಉಪಾಸ್ಯನನ್ನಾಗಿ ಆ ಶ್ರುತಿಯು ಬೋಧಿಸಿದೆ. ಆದ್ದರಿಂದ ಮಹಾನಾರಾಯಣದಲ್ಲಿ " ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ " ಎಂಬ ಶ್ರುತಿಯಿಂದ ಪರಮಶಿವನ ಅಸಾಧಾರಣಗುಣಗಳನ್ನು ತಿಳಿಸಿ, " ದಹರಂ ವಿಪಾಪ್ಮಂ ಪರವೇಶ್ಮಭೂತಂ " ಎಂಬಲ್ಲಿ ನಾರಾಯಣನ ಹೃದಯಕಮಲವನ್ನು ಪರಮೇಶ್ವರನ ವಾಸಗೃಹವೆಂದು ನಿರೂಪಿಸಿ, "ಸಹಸ್ರಶೀರ್ಷಂ ದೇವಂ"ಎಂಬ ಅನುವಾಕದಲ್ಲಿ ಯತೀಂದ್ರನಾದ ನಾರಾಯಣನನ್ನು ದಹರೋಪಾಸನೆಗೆ ಮುಖ್ಯಾಧಿಕಾರಿ ಎಂದು ತಿಳಿಸಿ, " ನಾರಾಯಣಂ ಮಹಾಜ್ಞೇಯಂ " ಎಂಬಲ್ಲಿ ಅವನನ್ನು ಪ್ರಶಂಸಿಸಿ, " ಪದ್ಮಕೋಶಪ್ರತೀಕಾಶಂ " ಎಂಬಲ್ಲಿ ಅವನ ಹೃದಯಕಮಲವನ್ನೇ ದಹರಾಕಾಶವೆಂದು ತಿಳಿಸಿ, " ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ " ಎಂಬುದರಿಂದ ನಾರಾಯಣನ ಹೃದಯದೊಳಗೆ ಪರಮೇಶ್ವರನು ಜ್ಯೋತಿಯ ರೂಪದಿಂದ ನೆಲಸಿರುವನೆಂದು ಹೇಳಿರುವುದರಿಂದ ನಾರಾಯಣನು ಉಪಾಸಕನೆಂದೂ, ಶಿವನು ಉಪಾಸ್ಯನೆಂದೂ ಸಿದ್ಧವಾಗುತ್ತದೆ. ಹೀಗೆ ಶ್ರುತಿವಾಕ್ಯಗಳನ್ನು ಉಪಕ್ರಮೋಪಸಹಾರಗಳ ಏಕರೂಪತೆಯಿಂದಲೂ, ಮಧ್ಯವಾಕ್ಯಗಳ ಪರಾಮರ್ಶದಿಂದಲೂ ಯುಕ್ತಿಯುಕ್ತವಾಗಿ ಸಮನ್ವಯಮಾಡಿ ಶ್ರೀಪತಿಪಂಡಿತಾರಾಧ್ಯರು ಪರಮಶಿವನೇ ಸರ್ವಾಂತರ್ಯಾಮಿ ಮತ್ತು ಸರ್ವಾತ್ಮಕ ಎಂಬುದನ್ನು ಸಾಧಿಸಿದ್ದಾರೆ. ದೇವತೆಗಳೆಲ್ಲರೂ ಮಹಾಕೈಲಾಸಕ್ಕೆ ಹೋಗಿ ರುದ್ರನನ್ನು " ನೀನು ಯಾರು " ಎಂದು ಕೇಳಿದರು. ಅದಕ್ಕವನು " ನಾನು ಅದ್ವಿತೀಯವಾದ ತೇಜಸ್ಸು. ನಾನು ಹಿಂದೆಯೂ ಇದ್ದೆನು ; ಈಗಲೂ ಇದ್ದೇನೆ, ಮುಂದೆಯೂ ಇರುವೆನು. ನನ್ನ ವಿನಹ ಬೇರೆ ಏನೂ ವಿಶ್ವದಲ್ಲಿಲ್ಲ. ನಾನೇ-ಬ್ರಹ್ಮ, ವಿಷ್ಣು, ಮಹೇಶ್ವರ, ಮತ್ತು ಪ್ರಾಣನಾಗಿದ್ದೇನೆ." ಹೀಗೆ ಪರಮಾತ್ಮನು ತನ್ನ ಸ್ವರೂಪದ ವಿಮೋಚನೆಯನ್ನು ಅಥರ್ವಶಿರಸ್ಸಿನಲ್ಲಿ ತಿಳಿಸಿದ್ದಾನೆ.

ಹೀಗೆ ತ್ರಿಮೂರ್ತಿಗಳಿಗೂ ಕಾರಣನಾದ ಪರಮಶಿವನು ಸದ್ರೂಪದಿಂದ ಎಲ್ಲರೊಳಗೆ ನೆಲಸಿದ್ದರೂ ಪರಿಪೂರ್ಣನೆನಿಸಿ ತನ್ನ ಸ್ವಾತಂತ್ರ್ಯಕ್ಕೂ ಆತ್ಮಾರಾಮಸ್ಥಿತಿಗೂ ಭಂಗ ಬರದಂತೆ ಜಗದ್ವ್ಯಾಪಾರಗಳನ್ನು ಲೀಲೆಯಿಂದ ನಡೆಸುತ್ತಿರುವನಾದ್ದರಿಂದ ಪತಿ ಎನಿಸಿರುವನು. ಜಗತ್ತಿನ ಎಲ್ಲಾ ವಸ್ತುಗಳಲ್ಲೂ ಶಿವನು ಸದ್ರೂಪದಿಂದ ನೆಲಸಿರುವನಷ್ಟೇ ಅಲ್ಲದೆ ಅವನೇ ಆ ವಸ್ತುಗಳಾಗಿಯೂ ಪರಿಣಮಿಸಿರುವುದರಿಂದ ಅವನೇ ಸರ್ವಪದವಾಚ್ಯನಾಗಿರುವನೆಂದು " ಸರ್ವೋ ವೈ ರುದ್ರಃ " ಎಂಬ ಶ್ರುತಿ ತಿಳಿಸಿದೆ. "ಸ ಬ್ರಹ್ಮಾ ಸ ಶಿವಸ್ಸಹರಿಸ್ಸೇಂದ್ರಃ ಸೋಽಕ್ಷರಃ ಪರಮಸ್ಸ್ವರಾಟ್ "ಎಂದು ಕೈವಲ್ಯ ಶ್ರುತಿಯಲ್ಲಿ ಸ್ವತಂತ್ರನೂ, ಅಕ್ಷರನೂ, ಪರಮಾತ್ಮನೂ ಆದ ರುದ್ರನಿಗೆ ಬ್ರಹ್ಮ,

ವಿಷ್ಣು, ಶಿವ, ಇಂದ್ರ ಎಂಬ ಎಲ್ಲಾ ಶಬ್ದಗಳಿಂದಲೂ ವ್ಯವಹಾರವುಂಟೆಂದು ತಿಳಿಸುತ್ತದೆ. ಹೀಗೆ ಅವನು ತನ್ನ ಶಕ್ತಿವೈಭವದಿಂದ ಸರ್ವಮಯನೂ, ಸರ್ವೇಶ್ವರನೂ ಆದ್ದರಿಂದಲೇ ಅವನಿಗೆ ಜಗದ್ವ್ಯಾಪಾರಲೀಲೆ ಮತ್ತು ಕೈವಲ್ಯಗಳೆರಡೂ ಏಕಕಾಲದಲ್ಲಿ ಅನ್ವಯಿಸುತ್ತವೆ ಎಂದು "ಪ್ರಾಣಾರಾಮಂ ಮನಆನಂದಂ" ಎಂಬ ಶ್ರುತಿಯೂ "ಲೋಕವತ್ತು ಲೀಲಾಕೈವಲ್ಯಂ" ಎಂಬ ಬ್ರಹ್ಮಸೂತ್ರವೂ ತಿಳಿಸಿವೆ. ಶ್ವೇತಾಶ್ವತರವು ಪರಮಶಿವನ ಕೈವಲ್ಯಸ್ಥಿತಿಯನ್ನು "ಯದಾ ತಮಃ ತನ್ನ ದಿವಾ ನ ರಾತ್ರಿರ್ನ ಸನ್ನ ಚಾಸಚ್ಛಿವ ಏವ ಕೇವಲಃ" ಅಂದರೆ ಹಗಲು ರಾತ್ರಿಗಳೆಂದಾಗಲೀ, ಸತ್‌ಅಸತ್ ಗಳೆಂದಾಗಲೀ ಯಾವ ವಿಭಾಗವೂ ಇಲ್ಲದ ಪ್ರಳಯದಲ್ಲಿ ಶಿವನು ಕೈವಲ್ಯಾನಂದವನ್ನು ಅನುಭವಿಸುತ್ತ ಸಚ್ಚಿದಾನಂದಸ್ಥಿತಿಯಲ್ಲಿರುವನು ಎಂದು ವರ್ಣಿಸಿದೆ. ಅಲ್ಲಿಗೆ ಶ್ರೀಪತಿಪಂಡಿತಾರಾಧ್ಯರ ದೃಷ್ಟಿಯಲ್ಲಿ ಶಕ್ತಿವಿಶಿಷ್ಟಪರಶಿವಬ್ರಹ್ಮ ಒಂದೇ ಮೂಲಭೂತವಾದ ತತ್ತ್ವವೆನಿಸಿದೆ. ಇದು ಸ್ವಸ್ಥಾವಸೆಯಲ್ಲಿ ಯಾವಬಗೆಯ ಭೇದವ್ಯವಹಾರಕ್ಕೂ ಅವಕಾಶವಿಲ್ಲದೆ ಸಕಲಪ್ರಪಂಚವನ್ನೂ ತನ್ನ ಶಕ್ತಿಯಲ್ಲಿ ಅಡಗಿಸಿಕೊಂಡು ಆ ಶಕ್ತಿಯನ್ನು ತನಗಿಂತ ಬೇರೆಯಾಗಿ ತೋರಿಸಿಕೊಳ್ಳದೆ ತನ್ನಲ್ಲಿಯೇ ತನ್ನ ಪ್ರಾಣರೂಪವಾಗಿ ವಿಲೀನಗೊಳಿಸಿಕೊಂಡು "ಬ್ರಹ್ಮ ಒಂದೇ ಅದ್ವಿತೀಯವಾಗಿತ್ತು", "ಶಿವನೊಬ್ಬನೇ ಕೇವಲನಾಗಿದ್ದನು" ಈ ಬಗೆಯ ಶ್ರುತಿಗಳಿಗೆ ವಿಷಯವಾಗಿರುವುದು. ಇಂತಹ ಪರಶಿವಬ್ರಹ್ಮವು ಲೀಲೆಯಿಂದ ತನ್ನ ವಿನೋದಕ್ಕಾಗಿ ಪ್ರಪಂಚವನ್ನು ಸೃಷ್ಟಿಸಲು ಸಂಕಲ್ಪಿಸಿ ತನ್ನಲ್ಲಿ ಲೀನವಾಗಿದ್ದ ಮಾಯಾಶಕ್ತಿಯನ್ನು ಹೊರಹೊಮ್ಮಿಸಿ ಅದರ ಮೂಲಕ ಷಟ್ತ್ರಿಂಶತ್ತತ್ತ್ವಮಯವಾದ ಜಗದ್ರೂಪದಿಂದ ಪರಿಣಮಿಸಿ ಉಪಾಸನೆಗಾಗಿ ಮಾನವದೇಹದಲ್ಲಿ ಪ್ರಕಾಶರೂಪದಿಂದ ನೆಲೆಸಿರುವುದೆಂದು ಹೇಳಿದಹಾಗಾಯಿತು.

ಮುಮುಕ್ಷುಗಳು ಅಮೃತರೂಪವಾದ ಮೋಕ್ಷಕ್ಕಾಗಿ ಈ ಪ್ರಕಾಶವನ್ನು ಲಿಂಗರೂಪದಿಂದ ದೇಹದಲ್ಲಿ ಧರಿಸಿ ಅದರ ನಿತ್ಯಸಂಪರ್ಕವನ್ನೇರ್ಪಡಿಸಿಕೊಳ್ಳಬೇಕೆಂಬುದನ್ನು ಶ್ರುತಿಯಲ್ಲಿ ಸ್ಪಷ್ಟವಾಗಿ ತಿಳಿಸಿದ್ದರೂ, ಕೆಲವು ಸ್ಮೃತ್ಯಾಗಮಗಳು ಶಿವನನ್ನು ತಾಮಸನೆಂದು ಆರೋಪಿಸಿರುವುದರ ಸತ್ಯಾಸತ್ಯತೆಯನ್ನು ಶ್ರೀಪತಿಪಂಡಿತರು ನಿಷ್ಕಲ್ಮಷ ಮನೋಭಾವದಿಂದ ಪರಿಶೀಲಿಸಿದ್ದಾರೆ. ಶಿವನು ತಾಮಸನೆಂಬುದಕ್ಕೆ ಶ್ರುತಿಯಲ್ಲಿ ಎಲ್ಲೂ ಪ್ರಮಾಣವಿಲ್ಲವೆಂಬುದನ್ನು ಅವರು ಸ್ಪಷ್ಟಪಡಿಸಿದ್ದಾರೆ. "ನೀಲಕಂಠಂ ಪ್ರಶಾಂತಂ—ತಮಸಃ ಪರಸ್ತಾತ್", "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ" ಎಂದು ಶ್ರುತಿಗಳಲ್ಲಿ ಶಿವನನ್ನು ಶಾಂತನೆಂದೂ, ತಮಃಪರನೆಂದೂ, ಜ್ಯೋತಿಸ್ಸ್ವರೂಪನೆಂದೂ ಹೇಳಿರುವುದರಿಂದ ಶಿವನು ತಾಮಸನೆಂಬುದು ಯುಕ್ತವಲ್ಲ. "ರುದ್ರೋ ವಾ ಯದಗ್ನಿಸ್ತಸ್ಯೈತೇ ತನುವೌ ಘೋರಾಘೋರಾ ಚ" ಎಂಬ ಶ್ರುತಿಯು ರುದ್ರನನ್ನು ಅಗ್ನಿ ಎಂದು ಕರೆದು, ಅವನಿಗೆ ಘೋರ ಅಘೋರ ಎಂಬ ಎರಡು ಶರೀರಗಳನ್ನು ಹೇಳಿ, ಅಘೋರಶರೀರದಿಂದ ಅವನು ಜಗತ್ಸೃಷ್ಟಿರಕ್ಷಣ

ಗಳನ್ನೂ, ಘೋರಶರೀರದಿಂದ ಜಗತ್ಸಂಹಾರವನ್ನು ಮಾಡುತ್ತಿರುವನೆಂದು ತಿಳಿಸುತ್ತದೆ. ಜಗತ್ಕರ್ತನು ಜಗದ್ರಕ್ಷಕನಾದಮೇಲೆ ಜಗತ್ಸಂಹಾರಕನೂ ಆಗದಿದ್ದರೆ ಜಗತ್ಪತಿ ಎನಿಸಲಾರನು. ಹೀಗೆ ಇಷ್ಟೆಲ್ಲಾ ಜಗದ್ವ್ಯಾಪಾರವನ್ನು ಆವನು ಅನಾಯಾಸವಾಗಿ ನಡೆಸಬೇಕಾದರೆ ಅವನ ಪ್ರಾಣರೂಪವಾದ ಚಿತ್‌ಶಕ್ತಿಯು ಅವನ ಇಚ್ಛೆಯಂತೆ ಅನುವರ್ತಿಸಿಕೊಂಡಿರುವುದೆಂಬ ಅಂಶವನ್ನು ಶ್ರುತಿಬ್ರಹ್ಮಸೂತ್ರಗಳು ಸ್ಪಷ್ಟಪಡಿಸಿವೆ. "ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ" ಎಂದು ಶ್ವೇತಾಶ್ವತರವೂ, "ಗುಣಾತೀತಾ ಪರಾಶಕ್ತಿಃ ಸಚ್ಚಿದಾನಂದರೂಪಿಣೀ। ಶಿವಾತ್ಮಿಕಾ ಶಿವಾಧೀನಾ ಚಿದಚಿದ್ವಿಶ್ವಕಾಶಿನೀ॥" ಎಂದು ಶಕ್ತಿಪುರಾಣವೂ, "ಸರ್ವೋಪೇತಾ ಚ ತದ್ದರ್ಶನಾತ್"ಎಂಬ ಬ್ರಹ್ಮಸೂತ್ರವೂ ಶಿವನ ಪ್ರಾಣವೆನಿಸಿದ ಶಕ್ತಿಯು ಸಚ್ಚಿದಾನಂದರೂಪದಿಂದಲೇ ಅವನಿಗಧೀನನಾಗಿ ಅವನಲ್ಲಿ ನೆಲಸಿರುವುದೆಂಬ ಅಂಶವನ್ನು ಸ್ಪಷ್ಟಪಡಿಸಿವೆ. "ಸರ್ವೋಪೇತಾ ಚ" ಎಂಬ ಸೂತ್ರದ ಭಾಷ್ಯದಲ್ಲಿ ಶ್ರೀಪತಿಪಂಡಿತರು "ವಾಯ್ವಾಕಾಶಗಳಂತೆ ನಿರವಯವನೂ ಸರ್ವಗತನೂ ಆದ ಪರಶಿವನಲ್ಲಿ ಎರಡುಬಗೆಯ ಶಕ್ತಿಗಳಿವೆ. ಒಂದು ಪ್ರಾಣರೂಪವಾದ ಚಿತ್‌ಶಕ್ತಿ, ಸಚ್ಚಿದಾನಂದೆ, ಅಭಿನ್ನಶಕ್ತಿ; ಮತ್ತೊಂದು ಅಚಿತ್ ಅಂದರೆ ಜಡಮಾಯಾಶಕ್ತಿ, ಸತ್ತ್ವರಜಸ್ತಮೋಗುಣ ಸ್ವರೂಪವಾದದ್ದು, ಭಿನ್ನಶಕ್ತಿ. ಹೀಗೆ ಅವನು ಶಕ್ತಿದ್ವಯವಿಶಿಷ್ಟನಾದ್ದರಿಂದಲೇ ಸ್ವತಂತ್ರನಾಗಿದ್ದು ಅಸಾಧ್ಯಕಾರ್ಯಗಳನ್ನು ಅನಾಯಾಸವಾಗಿ ನಡೆಸುತ್ತಿರುವನು" ಎಂದು ತಿಳಿಸಿದ್ದಾರೆ. ಇದರಂತೆ "ಪಾದೋಽಸ್ಯ ವಿಶ್ವಾ ಭೂತಾನಿ" ಎಂಬ ಶ್ರುತಿಯಲ್ಲಿ ಪರಶಿವನ ಚರಣಗಳನ್ನು ಹೇಳಿರುವುದರಿಂದ "ಜ್ಯೋತಿಶ್ಚರಣಾಭಿಧಾನಾತ್" ಎಂಬ ಸೂತ್ರದಲ್ಲಿ ಜ್ಯೋತಿಶ್ಶಬ್ದವು ಅವನ ನಿತ್ಯೈಶ್ವರ್ಯವಿಭೂತಿಯನ್ನು ತಿಳಿಸುತ್ತದೆಯೆಂದು ಹೇಳಿ, ಈ ವಾಕ್ಯವನ್ನೊಳಗೊಂಡ ಪುರುಷಸೂಕ್ತವು ಆರುಬಗೆಯ ತಾತ್ಪರ್ಯಲಿಂಗಗಳ ಪ್ರಕಾರ ಶಿವನನ್ನೇ ಬೋಧಿಸುವುದೆಂದು ಶ್ರೀಪತಿಪಂಡಿತರು ಪ್ರತಿಪಾದಿಸಿದ್ದಾರೆ. ಇದರಂತೆಯೇ "ಛಂದೋಽಭಿಧಾನಾತ್" ಎಂಬ ಸೂತ್ರದಲ್ಲಿ ಗಾಯತ್ರೀಛಂದಸ್ಸಿನಲ್ಲಿ ಸಾಧಕನ ಚೇತೋಽರ್ಪಣವನ್ನು ಶ್ರುತಿಯು ತಿಳಿಸಿದೆ ಎಂಬುದು ಯುಕ್ತವಲ್ಲವಾದ್ದರಿಂದ ಆ ಛಂದಸ್ಸಿನ ಮಂತ್ರವು ಪರಮಶಿವನಿಗೇ ಅನ್ವಯಿಸುವುದೆಂದು ತಿಳಿಸಿ, ಅಲ್ಲಿ ಬಂದಿರುವ ಭರ್ಗಪದವು ಶಿವನನ್ನೇ ಬೋಧಿಸುವುದೆಂದು ಸಮಂಜಸವಾಗಿ ನಿರೂಪಿಸಿದ್ದಾರೆ. ಅದರಂತೆಯೇ ರಾಮನು ದಂಡಕಾರಣ್ಯದಲ್ಲಿ ಶಿವನ ದಿವ್ಯೋಪದೇಶವನ್ನು ಕೇಳಿ ಸಂತುಷ್ಟನಾಗಿ ಅದೇ ಸಂಸ್ಕಾರದಿಂದ ಮುಂದೆ ಕೃಷ್ಣನಾಗಿ ಹುಟ್ಟಿ ಅರ್ಜುನನಿಗೆ ಶಿವಾತ್ಮದೃಷ್ಟಿಯಿಂದ ಗೀತೆಯನ್ನು ಉಪದೇಶಿಸಿರುವುದರಿಂದಲೂ, ಆ ಗೀತೆಯು ಹೃದಯದೊಳಗಿನ ಈಶ್ವರನಿಗೇ ಜೀವಾತ್ಮನ ಶರಣಾಗತಿಯನ್ನು ಮುಖ್ಯವಾಗಿ ಬೋಧಿಸುತ್ತ ಈಶ್ವರನ ಕಲ್ಯಾಣವಿಭೂತಿಯನ್ನೇ "ಪಶ್ಯ ಮೇ ಯೋಗಮೈಶ್ವರಂ" ಎಂದು ಅನೇಕ ಬಗೆಯಾಗಿ ವರ್ಣಿಸಿರುವುದರಿಂದಲೂ ಗೀತೆಗೆ ಶಿವನ ಶಕ್ತಿವೈಭವದ ವರ್ಣನೆಯಲ್ಲಿಯೇ ತಾತ್ಪರ್ಯವೆಂದು ಶ್ರೀಪತಿಪಂಡಿತರು

ಯುಕ್ತಯುಕ್ತವಾಗಿ ಪ್ರತಿಪಾದಿಸಿದ್ದಾರೆ. ಹೀಗೆ ಅವರು ವೇದಾಂತವಾಕ್ಯಗಳೆಲ್ಲಕ್ಕೂ ಶಿವನಲ್ಲಿಯೇ ತಾತ್ಪರ್ಯವೆಂದು ತಿಳಿಸಿ ವೈದಿಕರೆಲ್ಲರಿಗೂ ಶಿವನೇ ಉಪಾಸ್ಯನೆಂಬುದನ್ನು ಆ ವೇದಾಂತಗಳ ಆಧಾರದಿಂದಲೇ ಸ್ಥಾಪಿಸಿದ್ದಾರೆ. ಶ್ವೇತಾಶ್ವತರದಲ್ಲಿ "ಕಾರಣ ಭೂತವಾದ ಬ್ರಹ್ಮ ಯಾವುದು" ಎಂದಾರಂಭಿಸಿ ಪ್ರಶ್ನೋತ್ತರಗಳು ನಡೆದು ಕೊನೆಗೆ ಶಿವನೇ ಪರಬ್ರಹ್ಮವೆಂದು ಸಾಧಿಸಲಾಗಿದೆ. ಆದ್ದರಿಂದಲೇ ಸರ್ವಕರ್ಮಗಳ ಆರಂಭ ದಲ್ಲೂ ಶಿವನೇ ಸ್ಮರಣೀಯನೆನಿಸಿದ್ದಾನೆ. ಸಾಮವೇದದ ಪ್ರಥಮಮಂತ್ರದಲ್ಲಿ ಶಿವನೇ ಎಲ್ಲಾ ಕರ್ಮಗಳಿಗೂ ಅಧಿಪತಿ ಎಂದು ಹೇಳಿ ವೈದಿಕರಿಗೆ ಅವನ ಸ್ಮರಣ ವನ್ನೇ ವಿಧಿಸಲಾಗಿದೆ. ವೈದಿಕನು "ಎಲ್ಲಾ ಕರ್ಮಗಳನ್ನೂ ಶಿವನ ಉದ್ದೇಶ ದಿಂದಲೇ ಮಾಡಬೇಕು. ಎಲ್ಲಾ ಕಾಲಗಳಲ್ಲೂ ಶಿವನನ್ನು ಸ್ಮರಿಸುವವನು ಅಗ್ನಿ ಯಂತೆ ಸದಾ ಶುದ್ಧನೇ ಆಗಿರುವನು" ಎಂದು ಸ್ಕಾಂದದಲ್ಲಿ ಹೇಳಿದೆ. ಆದಿತ್ಯಮಂಡ ಲದಲ್ಲಿ ರುದ್ರನೇ ಇದ್ದು, ಆದಿತ್ಯನ ತೇಜಸ್ಸು ರುದ್ರನೇ ಆಗಿರುವುದರಿಂದ ಸೂರ್ಯನ ಬೆಳಕಿನಲ್ಲಿ ಮಾಡುವ ಎಲ್ಲಾ ಕೆಲಸಗಳಿಗೂ ರುದ್ರನ ಸ್ಮರಣವೇ ವಿಹಿತವಾಗಿದೆ. ಹೀಗೆ ಶಿವನ ಸರ್ವವ್ಯಾಪ್ತಿಯನ್ನು ತಿಳಿಸಲಿಕ್ಕಾಗಿಯೇ ಯಜುರ್ವೇದವು "ನಿಧನ ಪತಯೇ ನಮಃ" ಎಂದು ಆರಂಭವಾಗುವ ಮಂತ್ರದಲ್ಲಿ ಪ್ರತಿಯೊಂದು ಪದದಲ್ಲೂ ನಮಃ ಎಂಬ ಪದವನ್ನು ಹೇಳಿದೆ. ಇದರಿಂದ ಶಿವನು ವೈದಿಕರೆಲ್ಲರಿಗೂ ನಮಸ್ಕಾರ ಯೋಗ್ಯನೂ, ಜಗತ್ಕಾರಣನಾದ ಪರಬ್ರಹ್ಮವೂ ಆಗಿರುವನೆಂಬುದು ಸಿದ್ಧವಾಗುತ್ತದೆ. "ಒಂದು ದೇಶದಲ್ಲಿ ಪ್ರಜೆಗಳು ಮಂತ್ರಿಗಳಿಗೆ ಅರ್ಪಿಸುವ ಕಾಣಿಕೆ ಎಲ್ಲವೂ ಆ ದೇಶದ ರಾಜನಿಗೆ ಹೇಗೆ ಸಲ್ಲಬೇಕೋ ಹಾಗೆ ವಿಷ್ಣುವಿಗೆ ಅರ್ಪಿಸುವ ನಮಸ್ಕಾರವೂ ಅವನ ಉಪಾಸ್ಯದೇವನಾದ ಶಿವನಿಗೇ ಸಲ್ಲುತ್ತದೆ. ನದಿಗಳೆಲ್ಲವೂ ಹರಿದು ಸಮುದ್ರಕ್ಕೆ ಸೇರುವಂತೆ ಸರ್ವದೇವರಿಗೆ ಮಾಡುವ ನಮಸ್ಕಾರವೂ ದೇವದೇವನಾದ ಮಹದೇವ ನಲ್ಲಿಯೇ ಸೇರುವುದೆಂಬುದು ನಿಶ್ಚಿತ. "ವಿಷ್ಣುವು ಸರ್ವದೇವಾತ್ಮಕನಲ್ಲದ್ದರಿಂದ ಸರ್ವದೇವರಿಗೂ ಸಾಧಕನು ಮಾಡುವ ನಮಸ್ಕಾರಗಳನ್ನು ಸ್ವೀಕರಿಸಲು ಅವನು ಶಕ್ತ ನಲ್ಲ" ವೆಂದು ಸ್ಕಾಂದದಲ್ಲಿ ಹೇಳಿದೆ. ವ್ಯಾಸನ ಭುಜಸ್ತಂಭವಾದಮೇಲೆ ಅವನಿಗೆ ವಿಷ್ಣು "ಯಜ್ಞಕರ್ತಾ ಚ ದೇವೇಂದ್ರೋ ವೇದಕರ್ತಾ ಚ ವಾಕ್ಪತಿಃ | ಅಹಮೇವ ಜಗತ್ಕರ್ತಾ ಮಮ ಕರ್ತಾ ಮಹೇಶ್ವರಃ" || ಎಂದು ಹೇಳಿದುದಾಗಿ ಸ್ಕಾಂದಪುರಾ ಣವು ತಿಳಿಸುತ್ತದೆ. ಹೀಗೆ ಶಿವನೇ ಸರ್ವಾಧಿಕನೂ ಸರ್ವಾತ್ಮಕನೂ ಸರ್ವದೇವರ ನಮಸ್ಕಾರಗಳನ್ನು ಸ್ವೀಕರಿಸಲಿಕ್ಕೆ ಅರ್ಹನೂ ಆದ್ದರಿಂದ ಮಹೇಶ್ವರನೆನಿಸಿದ್ದಾನೆ. ಇಂತಹ ಮಹೇಶ್ವರನ ಪ್ರೀತಿಗಾಗಿಯೇ ಬ್ರಾಹ್ಮಣರು ಶ್ರಾದ್ಧಾದಿಕರ್ಮಗಳನ್ನು ಆಚರಿಸಬೇಕೆಂದು ಹೇಳಲಾಗಿದೆ. "ಈಶಾನಃ ಪಿತೃರೂಪೇಣ ಮಹಾದೇವೋ ಮಹೇಶ್ವರಃ | ಪ್ರಿಯತಾಂ ಭಗವಾನೀಶಃ ಪರಮಾತ್ಮಾ ಸದಾಶಿವಃ" || ಹೀಗೆ ಶಿವನ ಪ್ರೀತಿಗಾಗಿಯೇ ಶಿವನ ಆರಾಧನವೆಂದೇ ಬ್ರಾಹ್ಮಣನು ಶ್ರಾದ್ಧಾದಿಕರ್ಮಗಳನ್ನು ಆಚರಿಸಬೇಕೆಂದೂ, ನಿತ್ಯನೈಮಿತ್ತಿಕಾದಿ ಸಕಲಕರ್ಮಗಳನ್ನೂ ಸದ್ಯೋಜಾತಾದಿ

ಪಂಚಬ್ರಹ್ಮಮಂತ್ರಗಳನ್ನು ಹೇಳುತ್ತಲೇ ಶಿವನ ಸ್ಮರಣದಿಂದಲೇ ನಡೆಸಬೇಕೆಂದೂ ಶ್ರಾದ್ಧಾ ವಿಧಿಯಲ್ಲಿ ಹೇಳಲಾಗಿದೆ. ಆದ್ದರಿಂದ ಸಂಶಯಕ್ಕವಕಾಶವಿಲ್ಲ.

"ಬ್ರಾಹ್ಮಣಾನಾಂ ಶಿವೋ ದೇವಃ ಕ್ಷತ್ರಿಯಾಣಾಂ ತು ಮಾಧವಃ ।

ವೈಶ್ಯನಾಂ ತು ತಥಾ ಬ್ರಹ್ಮಾ ಶೂದ್ರಾಣಾಂ ಸುರನಾಯಕಃ ॥"ಎಂದು ಮನುಸ್ಮೃತಿಯಲ್ಲಿ ಶಿವನನ್ನು ಬ್ರಾಹ್ಮಣರ ದೇವನೆಂದೂ, ವಿಷ್ಣುವನ್ನು ಕ್ಷತ್ರಿಯರ ದೇವನೆಂದೂ ಹೇಳಲಾಗಿದೆ. "ಬ್ರಾಹ್ಮಣೋ ವೈ ಬ್ರಾಹ್ಮಣಮುಪಧಾವತಿ" "ಬ್ರಾಹ್ಮಣಾನಾಂ ಬ್ರಾಹ್ಮಣೈರಾಶ್ರಿತತಯಾ ಮಹಾದೇವ ಏಕ ಏವೋಽಪಾಸ್ಯಃ" ಎಂದು ಯಜುರ್ವೇದದಲ್ಲೂ, "ತ್ವಂ ದೇವಾನಾಂ ಬ್ರಾಹ್ಮಣಾನಾಮಧಿಪತಿಃ, ವಿಷ್ಣುಃ ಕ್ಷತ್ರಿಯಾಣಾಮಧಿಪತಿಃ" ಎಂದು ಸಾಮವೇದದಲ್ಲೂ ಶಿವನನ್ನು ಬ್ರಾಹ್ಮಣನೆಂದೂ, ಬ್ರಾಹ್ಮಣರಿಗೆ ಉಪಾಸ್ಯನೆಂದೂ ಹೇಳಲಾಗಿದೆ. "ಸೋಽವೋಽಸ್ಮಾಕಂ ಬ್ರಾಹ್ಮಣಾನಾಂ ರಾಜಾ" ಎಂದು ಬೇರೆ ಶ್ರುತಿಯಲ್ಲೂ ಉಮಾಶಕ್ತಿವಿಶಿಷ್ಟನಾದ ಶಿವನೇ ಬ್ರಾಹ್ಮಣರಿಗೆ ರಾಜನೆಂದು ಹೇಳಿದೆ. "ರುದ್ರನಲ್ಲಿ ಬ್ರಾಹ್ಮಣ್ಯವು ಸಹಜವಾಗಿರುವುದರಿಂದಲೂ, ಬ್ರಾಹ್ಮಣರೆಲ್ಲರೂ ಬ್ರಾಹ್ಮಣನೊಡನೆಯೇ ಸಂಬಂಧವನ್ನು ಬಯಸುವುದು ಯುಕ್ತವಾದ್ದರಿಂದಲೂ ಬ್ರಾಹ್ಮಣನು ಮಹಾಬ್ರಾಹ್ಮಣನಾದ ಶಿವನನ್ನೇ ಉಪಾಸನ ಮಾಡುವುದು ಯುಕ್ತವೆಂದು ಶ್ರೀಪತಿಪಂಡಿತಾರಾಧ್ಯರು ಶ್ರುತಿ ಯುಕ್ತಿ ಮತ್ತು ಅನುಭವಗಳ ಆಧಾರದಿಂದ ಸ್ಥಾಪಿಸಿದ್ದಾರೆ. "ಎಲ್ಲರಲ್ಲೂ ಆತ್ಮಸ್ವರೂಪನಾಗಿ ನೆಲಸಿರುವ ಶಿವನನ್ನು ಯಾವನು ಕಾಣಲಾರನೋ ಅವನು ಪತಿತನೂ ಸಂಕರನೂ ಆಗುವನು" ಎಂದು ಶಿವಾಗಮವು ತಿಳಿಸುತ್ತದೆ. ಇದೂ ಅಲ್ಲದೆ, ಯಜುರ್ವೇದವು "ಯಾವನು ತನ್ನ ಉಪಾಸ್ಯದೇವನನ್ನು ತೊರೆದು ಅನ್ಯದೇವನನ್ನು ಅರ್ಚಿಸುವನೋ ಅವನು ತನ್ನ ಗುರಿಯನ್ನು ಮುಟ್ಟದೆ ಅವ್ಯವಸ್ಥೆಯಿಂದ ಭವಸಾಗರದಲ್ಲಿ ನೆಲೆಯಿಲ್ಲದೆ ಅಲೆದಾಡುವನು" ಎಂದು ಹೇಳಿದೆ. ಅದೇ ಯಜುರ್ವೇದದ ಬೇರೊಂದು ಮಂತ್ರವು "ರುದ್ರನ ಸ್ಮರಣೆಯಿಲ್ಲದೆ ಆಹಾರವನ್ನು ಸೇವಿಸುವವನು ನಾಲಿಗೆಯಿಂದ ಪುರೀಷವನ್ನು ನೆಕ್ಕಿದಂತಾಗುವುದು" ಎಂದು ತಿಳಿಸಿದೆ. ಇದನ್ನೇ ಪುಷ್ಟಿಕರಿಸಿ ಕೂರ್ಮಪುರಾಣವು "ಬ್ರಾಹ್ಮಣರೆಲ್ಲರೂ ಸಕಲ ಕಾರ್ಯಗಳ ಸಿದ್ಧಿಗಾಗಿ ಶಿವನನ್ನೇ ಪ್ರಧಾನವಾಗಿ ಆಶ್ರಯಿಸಬೇಕು. ಅವನ ಅನುಗ್ರಹವನ್ನು ಪಡೆಯಲಿಕ್ಕಾಗಿಯೇ ಅವನ ಪರಮಭಕ್ತನಾದ ವಿಷ್ಣುವನ್ನು ಅವರು ಪೂಜಿಸಬೇಕು" ಎಂದು ತಿಳಿಸಿದೆ.

"ಪ್ರಧಾನ್ಯೇನ ಮಹಾದೇವಃ ಪೂಜ್ಯೋ ನಾನ್ಯೋಽಸ್ತಿ ಸಿದ್ಧಯೇ ।
ತತ್ಪ್ರಾಪ್ತ್ಯರ್ಥಂ ಮಹಾವಿಷ್ಣುಃ ಸರ್ವೈಃ ಪೂಜ್ಯಸ್ಸನಾತನಃ" ॥

ಎಂಬ ಸ್ಕಾಂದಪುರಾಣದ ಮಾತನ್ನು ಶ್ರೀಪತಿಪಂಡಿತರು ಉದಾಹರಿಸಿ ಬ್ರಾಹ್ಮಣರೆಲ್ಲರಿಗೂ ಶಿವನೇ ಪ್ರಧಾನದೇವನೆಂದೂ,ಅವನ ಪ್ರಾಪ್ತಿಗಾಗಿಯೇ ವಿಷ್ಣುವನ್ನು ಆಶ್ರಯಿಸಬೇಕೆಂದೂ ಮಾರ್ಗದರ್ಶನಮಾಡಿದ್ದಾರೆ. ಆದ್ದರಿಂದಲೇ ಬ್ರಾಹ್ಮಣರು ಶಿವೋಕ್ತವಾದ ನಿಗಮಾಗಮಗಳಲ್ಲಿ ವಿಹಿತವಾದ ಲಿಂಗಭಸ್ಮರುದ್ರಾಕ್ಷಗಳನ್ನು ಧರಿಸಿ, ಪಂಚಾ

ಕ್ಷರೀಮಂತ್ರವನ್ನು ನೆನೆಯುತ್ತ, ಇಷ್ಟಪ್ರಾಣಭಾವರೂಪನಾದ ಲಿಂಗದೇವನ ನಿತ್ಯೋಪಾಸನದಿಂದಲೇ ಕಲ್ಯಾಣಕೈವಲ್ಯವಿಭೂತಿರೂಪವಾದ ಸಾಯುಜ್ಯಮುಕ್ತಿಯನ್ನು ಪಡೆಯಬೇಕೆಂದು ಶ್ರೀಪತಿಪಂಡಿತಾರಾಧ್ಯರು ನಿಶ್ಚಯಿಸಿದ್ದಾರೆ.

ಹೀಗೆ ನಿಶ್ಚಯಿಸಿದ್ದರೂ, ವೈದಿಕಾಚರಣೆಯಲ್ಲಿ ರುದ್ರಾಹುತಿಯ ಅನಂತರ ಆಚಮನಮಾಡಬೇಕೆಂಬ ವಿಧಿ ಇರುವುದರಿಂದ ಶಿವನನ್ನು ತಾಮಸ ಮತ್ತು ಅಮಂಗಳನೆಂದು ಭಾವಿಸಲಿಕ್ಕೆ ಇದೊಂದು ಮುಖ್ಯ ದೃಷ್ಟಾಂತವಲ್ಲವೇ ? ಎಂದು ಆಶಂಕಿಸಿ ಅದಕ್ಕೆ ಸಮಾಧಾನವನ್ನು ಭಾಷ್ಯಕಾರರು ಶಾಸ್ತ್ರೀಯವಾಗಿ ನಿರೂಪಿಸಿದ್ದಾರೆ. ಯಾಗ ಕ್ರಿಯೆಗಳಲ್ಲಿ ರುದ್ರಹೋಮವಾದಮೇಲೆ ಅವನ ಅನುಯಾಯಿಗಳಾದ ವಿಷ್ಣ್ವಾದಿ ದೇವತೆಗಳು ಹವಿಸ್ಸನ್ನು ಸ್ವೀಕರಿಸಲಿಕ್ಕೆ ಹಾಜರಾಗಲೆಂದೂ, ಪ್ರಧಾನದೇವನಾದ ರುದ್ರನ ಎದುರಿಗೆ ಅವರನ್ನು ಮಂತ್ರಗಳಿಂದ ಕರೆದರೂ ಅವರು ಬರಲಿಕ್ಕೆ ಸಂಕೋಚ ಪಡುವುದರಿಂದ ರುದ್ರನು ಮರೆಯಾಗಲೆಂದೂ ಆಚಮನವನ್ನು ಯಜುರ್ವೇದವು ವಿಧಿಸಿದೆ. " ಅಪಃ ಪರಿಷಿಂಚತಿ ರುದ್ರಸ್ಯಾಂತರ್ಹಿತ್ಯೈ " ಎಂಬ ಮಂತ್ರದಲ್ಲಿ ಸರ್ವ ದೇವರಿಗೂ ಪ್ರಭುವಾದ ರುದ್ರನ ಅಂತರ್ಧಾನಕ್ಕಾಗಿ ಆಚಮನವನ್ನು ಹೇಳಿದೆಯೇ ಹೊರತು ರುದ್ರನು ಅಮಂಗಳ ಅಥವಾ ತಾಮಸನೆಂಬ ಭಾವನೆಯಿಂದ ಹೇಳಿಲ್ಲ. ಮನೆಯಲ್ಲಿ ಜನರಿಗೆ ಉಪಚಾರಮಾಡುವಾಗ ಮೊದಲು ಪ್ರಭುವಿಗೆ ಭೋಜನಮಾಡಿಸಿ ಅವನನ್ನು ಸಂತೋಷದಿಂದ ಕಳುಹಿಸಿದಮೇಲೆ ಉಳಿದವರಿಗೆ ಭೋಜನೋಪಚಾರವನ್ನು ನಡೆಸುವಂತೆ, ಸರ್ವಯಜ್ಞಗಳಿಗೂ ಫಲವನ್ನು ಕೊಡುವಂತಹ ಮಹಾದೇವ ರುದ್ರನಿಗೆ ಮೊದಲು ಆಹುತಿಕೊಟ್ಟು ಸಂತೋಷಪಡಿಸಿ ಕಳುಹಿಸಿದಮೇಲೆ ಬೇರೆಯವರನ್ನು ಭಕ್ತಿಯಿಂದ ಕರೆದು ಆದರಿಸುವುದು ಅನುಭವಕ್ಕೂ ಹೊಂದುತ್ತದೆ. ಹೀಗೆ ಆಕಾಶದಂತೆ ನಿತ್ಯನೂ ಸರ್ವಗತನೂ ಆದ ಶಿವನಲ್ಲಿ ಯಾವಬಗೆಯ ದೋಷಕಳಂಕಗಳಿಗೂ ಅವಕಾಶವಿಲ್ಲದ್ದರಿಂದ ಅವನೇ ಎಲ್ಲರಿಗೂ ಉಪಾಸ್ಯನೆನಿಸಿದ್ದಾನೆ. ಅವನೇ ಸಂಸಾರಮೋಕ್ಷಸ್ಥಿತಿಬಂಧಗಳೆಲ್ಲಕ್ಕೂ ಕಾರಣನಾದ್ದರಿಂದ ನಿರಂತರವೂ ಅವನ ಧಾರಣಾರ್ಚನಧ್ಯಾನಗಳು ವೈದಿಕರಿಗೆ ಆವಶ್ಯಕವೆನಿಸಿವೆ.

ಹೀಗೆ ಶಿವನನ್ನು ಬ್ರಾಹ್ಮಣನೆಂದೂ, ಬ್ರಾಹ್ಮಣರಿಗೆ ಅವಶ್ಯವಾಗಿ ಉಪಾಸ್ಯ ದೇವನೆಂದೂ ಶ್ರುತ್ಯಾಗಮಗಳು ತಿಳಿಸಿರುವುದೇನೊ ಸರಿ. ಆ ಶಿವನ ಪ್ರಾಪ್ತಿಗಾಗಿಯೇ ಬ್ರಾಹ್ಮಣರು ವಿಷ್ಣುವಿನ ಉಪಾಸನೆಯನ್ನು ಮಾಡುತ್ತಲೇ ಕೊನೆಗೆ ಶಿವಾನುಗ್ರಹದಿಂದ ಕಾರುಣ್ಯಕಲ್ಯಾಣಕೈವಲ್ಯರೂಪವಾದ ಮುಕ್ತಿಯನ್ನು ಪಡೆಯುವರೆಂದು ಹೇಳಿದ್ದೂ ಸರಿ. ಆದರೆ ಇದರಿಂದ ವೀರಶೈವರಿಗೆ ಶಿವನ ಸಂಬಂಧವೇ ಇಲ್ಲವೆಂದು ಹೇಳಿದ ಹಾಗಾಯಿತಲ್ಲವೇ ? ಇವರಿಗೆ ಉಪಾಸ್ಯದೇವನಾರು ? " ಅಮೃತಸ್ಯ ದೇವಧಾರಣೋ ಭೂಯಾಸಂ " ಎಂಬಲ್ಲಿ ಹಿಂದೆ ವೇದಗಳ ಕಾಲದಲ್ಲಿಯೇ ಋಷಿಗಳು ಉಪಾಸ್ಯದೇವನೆನಿಸಿದ ಶಿವನನ್ನು ಲಿಂಗರೂಪದಿಂದ ದೇಹದಲ್ಲಿ ಧರಿಸಿ ನಿತ್ಯವೂ ಅರ್ಚಿಸುತ್ತಿದ್ದರೆಂದು ತಿಳಿದುಬರುತ್ತದೆ. ಅವರೆಲ್ಲರೂ ಯಾವ ಜಾತಿಯವರು ? ಅವರೂ ಬ್ರಾಹ್ಮಣರಾಗಿ

ದ್ದರೆ? ಮನುಷ್ಯರ ಗುಣಕರ್ಮಗಳಿಗನುಗುಣವಾಗಿ ಏರ್ಪಟ್ಟಿರುವ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣವರ್ಣವೂ ಒಂದಾಗಿದೆ. ಇದರಂತೆ ಕ್ಷತ್ರಿಯ, ವೈಶ್ಯ, ಶೂದ್ರ ಎಂದು ಬೇರೆ ಮೂರುವರ್ಣಗಳೂ ಇವೆ. ಇವುಗಳಲ್ಲಿ ಒಂದೊಂದು ವರ್ಣಕ್ಕೆ ಉಪಾಸ್ಯದೇವನಿಂತವನೆಂದೂ, ಅವನವನು ಆಯಾಯ ದೇವನನ್ನೇ ಶ್ರದ್ಧೆಯಿಂದ ಅರ್ಚಿಸಬೇಕೆಂದೂ ಶ್ರುತಿ ವಿಧಿಸಿದೆ. ಇಂತಹ ಪರಿಸ್ಥಿತಿಯಲ್ಲಿ ವೀರಶೈವನಿಗೆ ಶಿವನೇ ದೇವನೆಂದು ಎಲ್ಲಿಯೂ ವಿಧಿಸಿಲ್ಲವಾದ್ದರಿಂದ ಅವನು ಬ್ರಾಹ್ಮಣದೇವನಾದ ಶಿವನನ್ನು ಹೇಗೆ ಉಪಾಸನಮಾಡಿಯಾನು? ಒಂದು ನಿರ್ದಿಷ್ಟವಾದ ಉಪಾಸನೆಯನ್ನು ಶ್ರುತಿ ಸ್ಮೃತ್ಯಾಗಮಗಳಿಗನುಗುಣವಾಗಿ ಭಾಷ್ಯವು ತಿಳಿಸದೇ ಹೋದರೆ, ಇದನ್ನು ವೀರಶೈವ ಭಾಷ್ಯವೆಂದು ಹೇಗೆ ತಿಳಿಯಬಹುದು? ಇದರಮೇಲೆ ಬ್ರಾಹ್ಮಣನು ಯಜ್ಞಯಾಗಗಳನ್ನೂ, ಇಷ್ಟಾಪೂರ್ತಾದಿಕರ್ಮಗಳನ್ನೂ, ಶ್ರಾದ್ಧ ತರ್ಪಣಗಳನ್ನೂ ಶಿವಪ್ರೀತ್ಯರ್ಥವಾಗಿಯೇ ಮಾಡಬೇಕೆಂದೂ, ಅವೆಲ್ಲ ಕರ್ಮಗಳನ್ನೂ ಶಿವನೇ ಸ್ವೀಕರಿಸಿ, ಆಯಾ ಕರ್ಮಗಳಿಗನುಗುಣವಾದ ಫಲವನ್ನು ಅವನೇ ಕೊಡುವನೆಂದೂ ಶ್ರೀಕರಭಾಷ್ಯವು ತಿಳಿಸುತ್ತದೆ. ವೀರಶೈವರಿಗೆ ಯಜ್ಞಯಾಗಗಳಾಗಲೀ, ಶ್ರಾದ್ಧಾದಿಕರ್ಮಗಳಾಗಲೀ ಯಾವುದೂ ಸಂಬಂಧಪಟ್ಟೇ ಇಲ್ಲ. ವೀರಶೈವನ ನಿತ್ಯಯಜ್ಞವೇ ಬೇರೆ. ಇವನು ಮಾಡುವ ಶ್ರಾದ್ಧವೇ ಬೇರೆ. ಬ್ರಾಹ್ಮಣನು ಪಿತೃದೇವತೆಗಳ ತೃಪ್ತಿಗಾಗಿ ಬ್ರಾಹ್ಮಣರಿಗೆ ಭೋಜನಮಾಡಿಸಿದರೆ, ವೀರಶೈವನು ಶಿವಪ್ರೀತ್ಯರ್ಥವಾಗಿಯೇ ಗುರುಜಂಗಮರನ್ನು ಭೋಜನಾದಿಗಳಿಂದ ತೃಪ್ತಿಪಡಿಸುವ ಸಂಪ್ರದಾಯವು ರೂಢಿಯಲ್ಲಿದೆ. ಈ ಭಾಷ್ಯದಲ್ಲಿ ಇಂತಹ ಸಂಪ್ರದಾಯದ ಸೂಚನೆಯೇ ಇಲ್ಲ. ಬ್ರಾಹ್ಮಣರು ಮಾಡುವ ಯಜ್ಞ, ಶ್ರಾದ್ಧ ಮೊದಲಾದವುಗಳ ಪ್ರಶಂಸೆಯೇ ಭಾಷ್ಯದಲ್ಲಿ ಮೊದಲಿಂದ ಕೊನೆಯವರೆಗೂ ತುಂಬಿಹೋಗಿದೆ. ಶ್ರುತಿಯಲ್ಲೂ ಸಹ "ಲೌಕಿಕ ಕರ್ಮಗಳಲ್ಲಿ ಜುಗುಪ್ಸೆಹೊಂದಿದ ಶ್ರೋತ್ರಿಯಬ್ರಾಹ್ಮಣನು ಸಮಿತ್ಪಾಣಿಯಾಗಿ ಗುರುವಿನ ಬಳಿಗೆ ಹೋಗಬೇಕು" ಎಂದು ಬ್ರಾಹ್ಮಣನೇ ಬ್ರಹ್ಮಜಿಜ್ಞಾಸೆಗೆ ಅಧಿಕಾರಿ ಎಂದೂ, ಬ್ರಹ್ಮಜಿಜ್ಞಾಸೆಯಂತೆಯೇ ಬ್ರಹ್ಮದ ನಿತ್ಯಸಂಪರ್ಕವೂ ಅವನಿಗೇ ಅಮೃತಪ್ರಾಪ್ತಿಗಾಗಿ ಆವಶ್ಯಕವೆಂದೂ ಹೇಳಿರುವುದರಿಂದ ಇದೆಲ್ಲಕ್ಕೂ ವೀರಶೈವನಿಗೆ ಅವಕಾಶವೇ ಇಲ್ಲವಾಯಿತು. ಇನ್ನು ವೀರಶೈವನು ಈ ಭಾಷ್ಯವನ್ನು ಏಕೆ ಓದಬೇಕು? ಅವನಿಗೆ ಇದರ ವ್ಯಾಸಂಗದಿಂದ ಪ್ರಯೋಜನವೇನು? ಎಂಬ ಪ್ರಶ್ನೆ ಬರುತ್ತದೆ. ಇದರಮೇಲೆ ಈ ಭಾಷ್ಯವು ಬ್ರಾಹ್ಮಣರ ಗತಿಮತಿಗಳನ್ನು ಮತ್ತಷ್ಟು ಪರಿಷ್ಕರಿಸಿ ಅವರ ಸೌಕರ್ಯವನ್ನು ಲಲಿತವಾಗಿ ಸಾಧಿಸುತ್ತಿದೆ. "ಬ್ರಾಹ್ಮಣರು ಯಜ್ಞಗಳಲ್ಲಿ ದೇವತೆಗಳನ್ನು ಮಂತ್ರಗಳಿಂದ ಕರೆದು ಅವರಿಗೆ ಹವಿರ್ಭಾಗವನ್ನು ಅರ್ಪಿಸುವಾಗ, ದೇವತೆಗಳಿಗೆ ಪ್ರಾಕೃತಶರೀರವಿಲ್ಲದ್ದರಿಂದ ಅವರು ಯಜ್ಞಶಾಲೆಗೆ ಬಂದು ತಮ್ಮ ಹವಿರ್ಭಾಗವನ್ನು ತೆಗೆದುಕೊಳ್ಳುತ್ತಾರೆಂದು ನಂಬುವುದು ಹೇಗೆ?" ಎಂಬ ಪ್ರಶ್ನೆಯನ್ನು ಶ್ರೀಪತಿಪಂಡಿತಾರಾಧ್ಯರು ಆಶಂಕಿಸಿಕೊಂಡು ಅದಕ್ಕೆ ಸೂಕ್ತವಾದ ಸಮಾಧಾನವನ್ನು ಕೊಟ್ಟಿದ್ದಾರೆ. ಅದು ಪ್ರಗತಿ

ಶೀಲರಾದ ವರ್ಧಿಷ್ಣುಗಳೆಲ್ಲರಿಗೂ ಸ್ಮೃತಿಪಥವಲ್ಲಿ ಇರಬೇಕಾದ ವಿಷಯ. ದೇವತೆ ಗಳು ಪ್ರತ್ಯಕ್ಷನಾಗಿ ನಮಗೆ ಕಾಣಿಸದೆ ಇದ್ದರೂ ನಾವು ಭಕ್ತಿಯಿಂದ ಅರ್ಪಿಸಿದ ಭಾಗವನ್ನು ಅವರು ಅವಶ್ಯವಾಗಿ ಸ್ವೀಕರಿಸುತ್ತಾರೆ ಎಂಬ ವಿಶ್ವಾಸವನ್ನು ಈ ಸಂದರ್ಭ ವಲ್ಲಿ ಭಾಷ್ಯಕಾರರು ನಮ್ಮ ಮನಸ್ಸಿನಮೇಲೆ ಸತ್ಪರಿಣಾಮವಾಗುವಂತೆ ಲೌಕಿಕ ಉದಾಹರಣೆಯೊಡನೆ ತಿಳಿಸಿದ್ದಾರೆ. ಒಂದು ವಿಶೇಷ ಸಮಾರಂಭದಲ್ಲಿ ಅನೇಕ ಮಹನೀಯರು ಸೇರಿದ್ದಾರೆ. ಅವರನ್ನು ಗೌರವಿಸುವ ಸಂದರ್ಭದಲ್ಲಿ ಅವರೆಲ್ಲರಿಗೂ ಪೂಜ್ಯನಾದವನೊಬ್ಬನು ಅಲ್ಲಿಗೆ ಬಂದಿರುವುದಿಲ್ಲ. ಅವನಿಗೆ ಗೌರವವನ್ನು ಸಲ್ಲಿಸದೆ ಇಲ್ಲಿ ಹಾಜರಾಗಿರುವವರನ್ನು ಗೌರವಿಸುವಂತಿಲ್ಲ. ಆದರೆ ಅವನು ಇಲ್ಲಿ ಭೌತಿಕವಾಗಿ ಹಾಜರಿಲ್ಲವೆಂದು ಅವನನ್ನು ತಳ್ಳಿಹಾಕುವುದು ಸಭ್ಯತೆಯಲ್ಲ; ಸುಸಂಸ್ಕೃತಿಯೂ ಅಲ್ಲ. ಅವನು ಬರಲಿಲ್ಲವೆಂದು ತಿಳಿದು ಇಲ್ಲಿ ಬಂದಿರುವವರನ್ನು ಗೌರವಿಸದೆ ಬಿಡುವಂತಿಲ್ಲ. ಇಂತಹ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಇಲ್ಲಿ ಸೇರಿರುವವರಿಗೆ ತಾಂಬೂಲವನ್ನು ಕೊಟ್ಟು ಗೌರವಿಸುವ ಮೊದಲು, ಹಾಜರಾಗದಿರುವ ಪೂಜ್ಯತಮ ವ್ಯಕ್ತಿಯ ಹೆಸರನ್ನು ಹೇಳಿ ಅವನ ಉದ್ದೇಶದಿಂದ ಒಂದು ತಾಂಬೂಲವನ್ನು ಎಲ್ಲರಿಗೂ ಕೊಡುವ ಮೊದಲೇ ತೆಗೆದಿಟ್ಟು ಆಮೇಲೆ ಅಲ್ಲಿ ಸೇರಿರುವವರೆಲ್ಲರಿಗೂ ತಾಂಬೂಲವನ್ನು ಕೊಟ್ಟು ಸನ್ಮಾನಿ ಸುತ್ತೇವೆ. ನಾವು ಮೊದಲು ತೆಗೆದಿಟ್ಟ ತಾಂಬೂಲವು ಆ ಪೂಜ್ಯವ್ಯಕ್ತಿಗೆ ಸಲ್ಲದಿದ್ದರೂ, ಅವನಿಗಾಗಿ ಮೊದಲೇ ತಾಂಬೂಲವನ್ನು ತೆಗೆದಿಟ್ಟು ಗೌರವಿಸಿದರೆಂಬ ವರ್ತಮಾನ ವನ್ನು ಕೇಳಿಯೇ ಅವನು ಸಂತೋಷಗೊಳ್ಳುವನು. ಹೀಗೆ ಆಯಾ ದೇವತೆ ಯಜ್ಞ ಭೂಮಿಗೆ ಬಂದು ಹವಿರ್ಭಾಗವನ್ನು ತೆಗೆದುಕೊಳ್ಳುವುದಾಗಿ ನಮಗೆ ಕಾಣದಿದ್ದರೂ, ನಾವು ಕೊಡಬೇಕಾದ್ದನ್ನು ವಿಶ್ವಾಸದಿಂದ ಕೊಟ್ಟರೆ ಅದು ಆ ಉದ್ದಿಷ್ಟದೇವತೆಗೆ ಅರ್ಪಿ ತವಾಗುತ್ತದೆ. ಆದರೆ ಈ ಅರ್ಪಣಗಳೆಲ್ಲವೂ ಸರ್ವದೇವತಾರೂಪನೂ ಮತ್ತು ಅವರೆಲ್ಲ ರಿಗೂ ಉತ್ಕೃಷ್ಟನೂ ಆದ ಶಿವನಿಗೇ ಸಲ್ಲುವುದು. "ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ" ಎಂಬ ಗೀತೋಕ್ತಿಯಂತೆ ಶಿವನೇ ಸರ್ವಾತ್ಮಕನಾ ದ್ದರಿಂದ ಅತ್ಯಲ್ಪಾಂಶದಿಂದ ಯಜ್ಞರೂಪನೂ, ಯಜ್ಞಕರ್ತನೂ, ಯಜ್ಞದ್ರವ್ಯವೂ ಆಗಿದ್ದು ತನ್ನ ಸ್ವಯಂಭುಸ್ಥಿತಿಯಲ್ಲಿ ಯಜ್ಞಫಲವನ್ನು ಸ್ವೀಕರಿಸಿ ಭೋಗಿಸುತ್ತಲೂ ಇರುವನಾದ್ದರಿಂದ ಬ್ರಾಹ್ಮಣರು ಶಿವನ ಬಗ್ಗೆ ಪೂರ್ಣವಿಶ್ವಾಸವಿಡಬೇಕೆಂದೂ, ಮುಂಜಾನಿಂದ ಸಂಜೆಯವರಿಗೆ ಮಾಡುವುದೆಲ್ಲವೂ ಶಿವಾರ್ಚನೆಯೆಂದೇ ಭಾವಿಸಬೇ ಕೆಂದೂ, ಹೀಗೆ ಶಿವಚಿಂತನೆಯಲ್ಲಿಯೇ ಇದ್ದರೆ ಕಾಮಕ್ರೋಧಗಳು ಹೃದಯದೊ ಳಕ್ಕೆ ಎಂದಿಗೂ ಪ್ರವೇಶಿಸಲಾರವೆಂದೂ, ಇಂತಹ ಶಿವನ ಅನುಗ್ರಹದಿಂದ ಅಮೃತಸ್ಥಿತಿ ಯನ್ನು ಪಡೆಯಲಿಕ್ಕಾಗಿಯೇ ಪರಮಶಿವಭಕ್ತನಾದ ವಿಷ್ಣುವನ್ನು ಆಶ್ರಯಿಸಬಹು ದೆಂದೂ ಶ್ರೀಪತಿಪಂಡಿತಾರಾಧ್ಯರು ಆಗಮಗಳ ಪ್ರಕಾರ ನಿರ್ಣಯಿಸಿದ್ದಾರೆ. ಇದರಿಂದ ವೀರಶೈವರಿಗೆ ವಿಷ್ಣುವಿನ ಪೂಜೆ ಹೇಗೆ ಹೊಂದುತ್ತದೆ? ದಶವಿಧಶೈವರಿಗೂ ವಿಷ್ಣುವಿನ ಪೂಜೆಯನ್ನು ಹೇಳಿರಬಹುದು; ಆದರೆ ವೀರಶೈವವು ಸರ್ವವೇದಾನುಸಾರಿಯಾದ್ದರಿಂದ

ಇತರ ಶೈವಗಳೆಲ್ಲಕ್ಕೂ ಶ್ರೇಷ್ಠವೆಂದು ಸಿದ್ಧಾಂತಶಿಖಾಮಣಿಯು ತಿಳಿಸಿದೆ. ವೀರಶೈವರಿಗೆ ಶಿವನೇ ಪ್ರಧಾನದೇವನೆಂಬುದೇ ಸಿದ್ಧವಾಗದಿರುವಾಗ "ಇವರಿಗೇನು ಗತಿ" ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ಶಂಕರಭಾಷ್ಯವನ್ನು ನೋಡಿದರೆ ಅದು ಪರಬ್ರಹ್ಮವನ್ನು ಶಿವ ವಿಷ್ಣು ಎಂಬ ಹೆಸರಿನಿಂದ ಕರೆಯದೆ ಇದ್ದರೂ, ನಿರಾಕಾರನಿಷ್ಕಲನಿರ್ಗುಣನಿರ್ವಿಶೇಷಚೈತನ್ಯವನ್ನೇ ಪರಮಾರ್ಥವಸ್ತುವೆಂದು ಹೇಳಿ, ಜೀವನನ್ನು ಸಾಕ್ಷಾತ್ ಬ್ರಹ್ಮವೆಂದೇ ಭಾವಿಸಿ, ಅವನಲ್ಲದ ಉಳಿದ ದೇಹಾದಿಪ್ರಪಂಚವೆಲ್ಲವನ್ನೂ ಸುಳ್ಳೆಂದು ತಳ್ಳಿ ಹಾಕಿದೆ. ವೀರಶೈವನಿಗೆ ಇದು ಹೊಂದಿಕೆಯಾಗುವುದಿಲ್ಲ. ಶಿವಾಗಮಗಳು ವೀರಶೈವ ಧರ್ಮದ ವೈಶಿಷ್ಟ್ಯವನ್ನು ಸ್ಪಷ್ಟಪಡಿಸಿವೆ. ಶಂಕರಾಚಾರ್ಯರು ಹೇಳಿರುವ ಅದ್ವೈತವಾದವು ಶಿವಾಗಮಗಳಲ್ಲಿ ಹೇಳಿರುವ ವೀರಶೈವಪ್ರಕ್ರಿಯೆಗೆ ತೀರ ವಿರುದ್ಧವಾಗಿದೆ. ಶಿವಾಗಮಗಳ ಪ್ರಕಾರ ವೀರಶೈವರಿಗೆ ಪರಬ್ರಹ್ಮವೆಂದರೆ ಪರಮಶಿವನೇ. ಅವನು ವಿಶ್ವವೆಲ್ಲಕ್ಕೂ ಆಶ್ರಯಸ್ಥಲವಾದ್ದರಿಂದ ಲಿಂಗವೆನಿಸಿ ಅಖಂಡನಾಗಿ ವಿಶ್ವವನ್ನು ವ್ಯಾಪಿಸಿರುವನು. ಹೀಗೆ ಲಿಂಗರೂಪನಾದ ಶಿವನು ಅದ್ಭುತಸಾಮರ್ಥ್ಯವುಳ್ಳವನಾದ್ದರಿಂದಲೂ, ಚಿತ್‌ಶಕ್ತಿ ಅವನಲ್ಲಿ ಅವಿನಾಭಾವಸಂಬಂಧದಿಂದ ಪ್ರಾಣರೂಪವಾಗಿ ನೆಲಸಿರುವುದರಿಂದಲೂ ಅವನು ಶಕ್ತಿವಿಶಿಷ್ಟನಾಗಿರುವನೆಂದು ಶಿವಾಗಮಗಳು ಸಾರುತ್ತಿವೆ. ಇಂತಹ ಶಕ್ತಿವಿಶಿಷ್ಟಪರಶಿವನೇ ಇರುವೆಯಾದಿಯಾಗಿ ಆನೆಯವರೆಗಿನ ಸಕಲ ಜೀವರೂ, ಪಂಚಭೂತಾತ್ಮಕಪ್ರಪಂಚವೂ ಆಗಿರುವುದರಿಂದ ಜೀವಜಗತ್ತುಗಳು ಸತ್ಯವೆನಿಸಿವೆ. ಇವೆಲ್ಲವೂ ಅವನೇ ಆದ್ದರಿಂದ ಅವನಲ್ಲಿಯೇ ಹಿಂದೆ ಅವ್ಯಕ್ತಸ್ಥಿತಿಯಲ್ಲಿದ್ದು ವ್ಯಕ್ತಸ್ಥಿತಿಯನ್ನು ಹೊಂದಿ ಮತ್ತೆ ಅವ್ಯಕ್ತಸ್ಥಿತಿಯನ್ನು ಹೊಂದುವುದರಿಂದ ಇವು ಪಾರಮಾರ್ಥಿಕವೆಂಬುದನ್ನು ಶಿವಾಗಮಗಳು ಜಗತ್ತಿಗೆ ಸಾರುತ್ತಿವೆ. ಹೀಗೆ ಕೇವಲ ಜ್ಞಾನಮಾರ್ಗವನ್ನು ಬೋಧಿಸುವ ಅದ್ವೈತಪ್ರಸ್ಥಾನವು ಜ್ಞಾನಕ್ರಿಯೆಗಳೆರಡರ ಸಮನ್ವಯವನ್ನು ಬೋಧಿಸುವ ವೀರಶೈವಪ್ರಸ್ಥಾನಕ್ಕೆ ಹೊಂದಿಕೆಯಾಗುವುದಿಲ್ಲವಾದ್ದರಿಂದ ವೀರಶೈವನಿಗೆ ಶಂಕರಭಾಷ್ಯದಿಂದ ಸಮಾಧಾನವಾಗುವುದಿಲ್ಲ.

ಇನ್ನು ರಾಮಾನುಜಭಾಷ್ಯವನ್ನು ವೀರಶೈವರು ಓದಬೇಕೆಂದರೆ, ಅಲ್ಲಿ ಪರಬ್ರಹ್ಮವೆಂದರೆ ನಾರಾಯಣನೆಂದೂ, ಅವನು ಸಾಕಾರ ಮತ್ತು ಸಗುಣನೆಂದೂ, ಅರ್ಚಾವತಾರವೆನಿಸಿದ ಅವನ ದಿವ್ಯಮಂಗಳಮೂರ್ತಿಯನ್ನು ಸಾಧಕನು ಉಪಾಸನೆಮಾಡುತ್ತ ಮೋಕ್ಷದಲ್ಲಿ ಸಾಕಾರಮೂರ್ತಿ ನಾರಾಯಣನೊಂದಿಗೆ ಸೇರಿದಾಗಲೂ ಅವನಿಗೆ ಕೈಂಕರ್ಯವನ್ನು ಸಲ್ಲಿಸುತ್ತಲೇ ಬ್ರಹ್ಮಾನಂದವನ್ನು ಅನುಭವಿಸುತ್ತಿರಬೇಕೆಂದೂ ಹೇಳಲಾಗಿದೆ. ಈ ಬಗೆಯ ಉಪಾಸನೆ ಮತ್ತು ಮುಕ್ತಿ ವೀರಶೈವಾಗಮಗಳಿಗೆ ಹೊಂದುವುದಿಲ್ಲ. ಪರಬ್ರಹ್ಮವನ್ನು ನಾರಾಯಣನೆಂದು ಕರೆದರೂ, ನಾರಾಯಣಪದವನ್ನು ಶಿವಪರವೆಂದು ಅಪ್ಪಯ್ಯದೀಕ್ಷಿತರು ಶಿವಾರ್ಕಮಣಿದೀಪಿಕೆಯಲ್ಲಿ ಯುಕ್ತಿಯುಕ್ತವಾಗಿ ಸ್ಥಾಪಿಸಿರುವಂತೆ ವೀರಶೈವರೂ ಅದನ್ನು ಒಪ್ಪುವುದರಲ್ಲಿ ತಪ್ಪೇನು? ಅಂದರೆ, ವೀರಶೈವಾಗಮಗಳಲ್ಲಿ ಪರಮಾತ್ಮನು ನಿಷ್ಕಲನಿರಾಕಾರನಿರುವಂತೆಯೇ ಸಾಕಾರನೂ ಆಗಿರುವ

ನೆಂದು ಹೇಳಿರುವುದರಿಂದ ಸಾಕಾರಮುಕ್ತಿ ಇಲ್ಲಿಗೆ ಹೊಂದುವುದಿಲ್ಲ. "ಬ್ರಹ್ಮವು ಅಮೂರ್ತವೂ ಮೂರ್ತವೂ ಆಗಿದೆ" ಎಂದು ಬೃಹದಾರಣ್ಯಕಶ್ರುತಿಯು ತಿಳಿಸುತ್ತದೆ. ಕೈವಲ್ಯೋಪನಿಷತ್ತಿನಲ್ಲಿ ಮೂರ್ತರೂಪನಾದ ಚಂದ್ರಶೇಖರನ ಉಪಾಸನೆಯಿಂದ ಸಾಧಕನು ಭೂತಯೋನಿಯೂ, ಸಮಸ್ತಸಾಕ್ಷಿಯೂ, ತಮಃಪರವೂ ಆದ ಅಮೂರ್ತ ಪರಮಶಿವನಲ್ಲಿ ಸಮರಸವಾಗಿ ಬೆರೆಯುವನು" ಎಂದು ಹೇಳಿದೆ. ಮುಕ್ತನು ನಿರ್ಮಲನಾಗುವುದರಿಂದ ಅವನ ಶಕ್ತಿಸಂಕೋಚವೆಲ್ಲವೂ ಪರಿಹಾರವಾಗಿ ಸರ್ವತೋಮುಖವಾದ ಶಕ್ತಿವಿಕಾಸದಿಂದ ಇಲ್ಲಿಯೋ, ಈ ದೇಹದಲ್ಲಿಯೋ ಬ್ರಹ್ಮಾನಂದವನ್ನು ಅನುಭವಿಸುತ್ತಲೇ ದೇಹವನ್ನು ತೊರೆದಮೇಲೂ ಅದೇ ಆನಂದವನ್ನು ನಿತ್ಯವೂ ಅನುಭವಿಸುತ್ತ ಅಮೂರ್ತನಾಗಿಯೇ ಇರುವನೆಂದು ಶಿವಾಗಮಗಳು ತಿಳಿಸುತ್ತವೆ. ಇಲ್ಲಿ ಮುಕ್ತನಿಗೆ ಪೂರ್ಣವಾಗಿ ಪರಮಶಿವನಲ್ಲಿ ಸಾಮರಸ್ಯವನ್ನು ಹೇಳಿರುವುದರಿಂದ ಕೊಂಚ ಭೇದವನ್ನು ಉಳಿಸಿಕೊಂಡಿರುವ ವಿಶಿಷ್ಟಾದ್ವೈತಪ್ರಕ್ರಿಯೆಯೂ, ಅದನ್ನು ತಿಳಿಸುವ ಭಾಷ್ಯವೂ ವೀರಶೈವರಿಗೆ ಹೊಂದಿಕೆಯಾಗುವುದಿಲ್ಲ. ಇದರಮೇಲೆ ವೀರಶೈವದರ್ಶನದಲ್ಲಿ ಪರಮಾತ್ಮನು ಶಕ್ತಿವಿಶಿಷ್ಟನೆಂದರೆ ಶಕ್ತನಿಗೂ ಶಕ್ತಿಗೂ ವಿಶಿಷ್ಟಾದ್ವೈತಮತದಂತೆ ಭೇದಗರ್ಭಿತವಾದ ವೈಶಿಷ್ಟ್ಯವನ್ನು ಒಪ್ಪುವುದಿಲ್ಲ. ಅಲ್ಲಿಯಾದರೋ ನಾರಾಯಣನಿಗೂ ಜೀವಜಗತ್ತುಗಳಿಗೂ ಅಂಗಾಂಗಿಭಾವವನ್ನು ಹೇಳಲಾಗಿದೆ. ಅಂಗಿಯೂ ಅಂಗವೂ ಕೂಡಿಕೊಂಡಿರುವಂತೆ ಶಿವನೂ ಶಕ್ತಿಯೂ ಕೂಡಿಕೊಂಡಿರುವರೆಂದು ಇಲ್ಲಿ ಹೇಳುವಂತಿಲ್ಲ. ಅಲ್ಲಿ ಅಂಗಾಂಗಿಗಳಿಗೆ ಭೇದವು ವಾಸ್ತವವಾಗಿದೆ; ಆದರೆ ಅದು ಕಾಣುವುದಿಲ್ಲ. ಇಲ್ಲಿ ಶಕ್ತಿಯು ಶಿವನ ಚೈತನ್ಯವೆನಿಸಿ ಪ್ರಾಣರೂಪವಾದ್ದರಿಂದ ಶಿವನಿಗೂ ಚಿತ್‌ಶಕ್ತಿಗೂ ಭೇದವೇ ಇಲ್ಲ. ಪುಷ್ಪಗಂಧಗಳಿಗೂ ಚಂದ್ರಚಂದ್ರಿಕೆಯರಿಗೂ ವಿಯೋಗವಿಲ್ಲದಂತೆ ಶಿವಶಕ್ತಿಯರಿಗೆ ವಿಯೋಗವು ಸಂಭವಿಸುವುದಿಲ್ಲವಾದ್ದರಿಂದ ಇಲ್ಲಿಯ ವೈಶಿಷ್ಟ್ಯವು ವಿಶಿಷ್ಟಾದ್ವೈತದಂತೆ ಭೇದಗರ್ಭಿತವಲ್ಲ. ಆದರೆ ಇದು ಅಭೇದದಲ್ಲಿ ಕೊನೆಗಾಣುವ ವೈಶಿಷ್ಟ್ಯವೆನಿಸಿದೆ. ಭೇದ, ಅಭೇದ ಮತ್ತು ಭೇದಾಭೇದವೆಂದು ಮೂರೇ ಮತಗಳನ್ನು ಸೂತಸಂಹಿತೆ ಮಹಿಮ್ನ ಸ್ತವಗಳಲ್ಲೂ, ವ್ಯಾಸಸೂತ್ರಗಳಲ್ಲೂ ಒಪ್ಪಿರುವುದರಿಂದಲೂ, ವಿಶಿಷ್ಟಾದ್ವೈತವನ್ನು ಜೈಮಿನಿ ಮೊದಲಾದವರು ಪೂರ್ವಪಕ್ಷಕ್ಕೂ ಯೋಗ್ಯವಲ್ಲವೆಂದು ಹೇಳಿರುವುದರಿಂದಲೂ, ಭಟ್ಟಭಾಸ್ಕರ ಮೊದಲಾದ ವೈದಿಕರು ಭೇದಾಭೇದಮತವನ್ನು ಪಾರಮಾರ್ಥಿಕವೆಂದು ಒಪ್ಪಿರುವುದರಿಂದಲೂ, ವೇದಸಿದ್ಧವಾದ ಈ ಮೂರು ಮತಗಳಲ್ಲಿ ಸೇರದಿರುವುದರಿಂದಲೂ ವಿಶಿಷ್ಟಾದ್ವೈತಮತವು ತಾಂತ್ರಿಕವೆನಿಸಿದೆ ಎಂದು ಶ್ರೀಪತಿಪಂಡಿತರು ಸ್ಪಷ್ಟವಾಗಿ ತಿಳಿಸಿದ್ದಾರೆ. ವೀರಶೈವಮತದಲ್ಲಿ ಪರಮಶಿವನು ಸ್ವಯಂಭುಸ್ಥಿತಿಯಲ್ಲಿ ದಿವ್ಯನೂ ಪರಂಜ್ಯೋತಿಯೂ ಆಗಿದ್ದುಕೊಂಡು ತನ್ನ ಅಂಶರಾದ ಜೀವರಿಗೆ ಉಪಾಸನೆಯ ಸೌಕರ್ಯಕ್ಕಾಗಿ ತನ್ನ ಚಿತ್‌ಶಕ್ತಿಯ ಅತ್ಯಾಲ್ಪಾಂಶವಾದ ಮಾಯಾಶಕ್ತಿಯ ಸಂಪರ್ಕದಿಂದ ಸಕಲ ವಿಶ್ವವೂ ಆಗಿರುವನಾದ್ದರಿಂದಲೇ ಅವನು ಅಷ್ಟಮೂರ್ತಿ ಎನಿಸಿ

ದ್ದರೂ ಸರ್ವಾಂತರ್ಯಾಮಿಯಾಗಿ ಮನುಷ್ಯನ ಹೃದಯದಷ್ಟೇ ಪರಿಮಾಣವನ್ನು ಹೊಂದಿ ಸರ್ವಜೀವಿಗಳಲ್ಲೂ ನೆಲಸಿರುವನು. ಇದೆಲ್ಲವೂ ಅವನ ಅವ್ಯಾಜಪ್ರೇಮದ ಪರಿಣಾಮ; ಭಕ್ತಾನುಗ್ರಹಲೀಲೆ. ಇದರಿಂದ ಅವನ ದಿವ್ಯಾಮೂರ್ತಸ್ಥಿತಿಗೆ ಯಾವ ಚ್ಯುತಿಯೂ ಇಲ್ಲ. ಅವನು ಮೂರ್ತರೂಪದಿಂದ ಭಕ್ತರ ಕೈಗೆ ಸಿಲುಕಿ ಮುಕ್ತರಿಗೆ ಅಮೂರ್ತಸ್ಥಿತಿಯಲ್ಲಿ ದೊರೆಯುವನು. ಜೀವನು ಪರಶಿವನ ಅಂಶವೇ ಆಗಿ ಪರಶಿವಮಯವಾದ ದೇಹೇಂದ್ರಿಯಗಳನ್ನು ಆ ಪರಶಿವನ ಸಾಕಾರಮೂರ್ತಿ ಗಳೆನಿಸಿದ ಗುರುಚರಮೂರ್ತಿಗಳಿಂದ ಪಾವನಗೊಳಿಸಿಕೊಂಡು ಈ ಪ್ರಸಾದಾಕಾಯ ದಲ್ಲಿ ಶಿವಾರ್ಪಿತವಾದ ಪ್ರಸಾದವನ್ನು ಭೋಗಿಸುತ್ತಲೇ ಶಿವಾನಂದವನ್ನು ಅನುಭವಿ ಸಬೇಕಾಗಿರುವುದರಿಂದ ವೀರಶೈವನ ಉಪಾಸನವು ಅಹಂಗ್ರಹೋಪಾಸನ ಅಥವಾ ಷಟ್ಸ್ಥಲೋಪಾಸನವೆನಿಸಿದೆ. ಹೀಗೆ ದೇಹದಲ್ಲಿ ಶಿವನ ನೆಲೆಯನ್ನು ಕಂಡು ದೇಹೇಂದ್ರಿ ಯಗಳನ್ನು ಶಿವಮಯವಾಗಿ ಮಾಡಿಕೊಂಡು ಶಿವಪ್ರೀತ್ಯರ್ಥವಾಗಿ ವ್ಯವಹರಿಸುತ್ತಲೇ ಶಿವಪ್ರಸಾದಭೋಗದಿಂದ ಶಿವಾನಂದವನ್ನು ಅನುಭವಿಸುವುದು ವಿಶಿಷ್ಟಾದ್ವೈತಸಂಪ್ರ ದಾಯಕ್ಕೆ ಹೊಂದುವುದಿಲ್ಲ. ಅಲ್ಲಿ ಶರಣಸ್ಥಿತಿಯವರೆಗೂ ಸಾಧಕನು ಮುಂದು ವರೆದು ಚೈತನ್ಯದ ವಿಕಾಸದಿಂದ ಬ್ರಹ್ಮಾನಂದವನ್ನು ಅನುಭವಿಸುತ್ತಿದ್ದರೂ ಅವನಿಗೆ ನಾರಾಯಣನಿಂದ ಭೇದವೇ ಇರುವುದರಿಂದ ಸಾಮರಸ್ಯಕ್ಕೆ ಈ ದೇಹದಲ್ಲೂ, ವೈಕುಂಠ ದಲ್ಲೂ ಅವಕಾಶವೇ ಇಲ್ಲ. ಹೀಗೆ ಅಂಗಾಂಗಿಭಾವದ ವಿಶಿಷ್ಟಾದ್ವೈತವನ್ನು ಬೋಧಿ ಸುವ ಶ್ರೀಭಾಷ್ಯವು ವೀರಶೈವಸಿದ್ಧಾಂತಸಂಪ್ರದಾಯಗಳಿಗೆ ಹೊಂದುವುದಿಲ್ಲ.

ಹೀಗೆ ಶಂಕರಭಾಷ್ಯ ಮತ್ತು ಶ್ರೀಭಾಷ್ಯಗಳೇ ಹೊಂದದಮೇಲೆ ಬ್ರಹ್ಮಜೀವರಿಗೆ ಪೂರ್ಣಭೇದವನ್ನು ಬೋಧಿಸುವ ಹಯಗ್ರೀವ ಬ್ರಹ್ಮವಿದ್ಯೆಯೂ, ಅದನ್ನೇ ಅನು ಸರಿಸಿ ಬರೆದಿರುವ ಮಧ್ವಭಾಷ್ಯವೂ ಹೊಂದುವಂತೆಯೇ ಇಲ್ಲ. ಇದಲ್ಲದೆ ದ್ವೈತ ಮತವು ಪರಬ್ರಹ್ಮವನ್ನು ಜಗತ್ತಿಗೆ ಕೇವಲನಿಮಿತ್ತನೆಂದೂ, ಅವನಿಂದ ಅತ್ಯಂತ ಭಿನ್ನವಾದ ಪ್ರಕೃತಿಯನ್ನು ಉಪಾದಾನವೆಂದೂ ಹೇಳಿರುವುದರಿಂದ ಅಭಿನ್ನನಿಮಿ ತ್ತೋಪಾದನವಾದಿಗಳಾದ ವೀರಶೈವರಿಗೆ ಅದು ಸುತರಾಂ ಹೊಂದುವುದಿಲ್ಲ. ಇನ್ನು ಭಟ್ಟಭಾಸ್ಕರರ ಭೇದಾಭೇದಬೋಧಕವಾದ ಭಾಷ್ಯವು ವೀರಶೈವರಿಗೆ ಹೊಂದಿಕೆ ಯಾಗುವುದೇ ಇಲ್ಲವೇ? ಎಂಬ ಅಂಶವನ್ನು ಈಗ ಪರಿಶೀಲಿಸಬೇಕಾಗಿದೆ. ಭಟ್ಟ ಭಾಸ್ಕರನು ಶ್ರುತಿಯಲ್ಲಿ ಹೇಳಿರುವಂತೆ ಜೀವಬ್ರಹ್ಮರಿಗೂ ಜಗದ್ಬ್ರಹ್ಮರಿಗೂ ಭೇದ ಮತ್ತು ಅಭೇದವೆರಡನ್ನೂ ಒಪ್ಪಿದ್ದರೂ, ಜಗದ್ಬ್ರಹ್ಮಗಳಿಗೆ ಭೇದ ಮತ್ತು ಅಭೇದಗಳೆರಡನ್ನೂ ಸ್ವಾಭಾವಿಕವೆಂದು ಹೇಳಿ, ಜೀವಬ್ರಹ್ಮರಿಗೆ ಮುಕ್ತಿಯಲ್ಲಿ ಮಾತ್ರ ಅಭೇದವನ್ನು ಸ್ವಾಭಾವಿಕವೆಂದೂ, ಸಂಸಾರದಶೆಯಲ್ಲಿ ಭೇದವನ್ನು ಔಪಾಧಿಕವೆಂದೂ ಹೇಳಿದ್ದಾನೆ. "ಜೀವನು ಬ್ರಹ್ಮಾಂಶನೇ ಆದರೂ ದೇಹವೆಂಬ ಉಪಾಧಿಯಿಂದ ಬ್ರಹ್ಮ ಭಿನ್ನನಾಗಿದ್ದು ಉಪಾಸನೆಯಿಂದ ಬ್ರಹ್ಮದ ಅನುಗ್ರಹವನ್ನು ಪಡೆದು ಮುಕ್ತಿಯಲ್ಲಿ ಬ್ರಹ್ಮದೊಡನೆ ತನ್ನ ಸಹಜವಾದ ಅಭೇದವನ್ನು ಅನುಭವಿಸುವನು" ಎಂಬುದು

ಭಾಸ್ಕರನ ವಾದ. ಆದರೆ ಭಾಸ್ಕರನ ದೃಷ್ಟಿಯಲ್ಲಿ ದೇಹಾದಿಪ್ರಪಂಚವು ಉಪಾಧಿ ಎನಿಸಿದ್ದರೂ ಶಂಕರಾಚಾರ್ಯರು ಹೇಳುವಂತೆ ಮಿಥ್ಯೆಯಲ್ಲ. ಪಂಚಭೂತಾತ್ಮಕ ಈ ದೇಹಾದಿಪ್ರಪಂಚವು ಬ್ರಹ್ಮದಲ್ಲಿಯೇ ಮೊದಲಿಗೆ ಅವ್ಯಕ್ತವಾಗಿದ್ದು ವ್ಯಕ್ತಸ್ಥಿತಿಗೆ ಬಂದು ಮತ್ತೆ ಅವ್ಯಕ್ತಸ್ಥಿತಿಗೆ ಹೋಗುವುದರಿಂದ ಸತ್ಯವೆನಿಸಿದೆ, "ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ।ಅವ್ಯಕ್ತನಿಧನಾನ್ಯೇವ" ಎಂದು ಗೀತೆಯೂ ಇದೇ ಅರ್ಥವನ್ನು ಬೋಧಿಸುತ್ತದೆ. ಆದರೆ,ಒಟ್ಟಿನಮೇಲೆ ಭಾಸ್ಕರಭಾಷ್ಯವು ಜೀವಬ್ರಹ್ಮರಿಗೆ ಭೇಧವನ್ನು ಔಪಾಧಿಕವೆಂದೂ, ಅಭೇಧವನ್ನು ಸ್ವಾಭಾವಿಕವೆಂದೂ ಹೇಳಿರುವುದರಿಂದ ಇದೂ ಸಹ ಶ್ರುತಿಗೆ ಪೂರ್ಣವಾಗಿ ಸಮನ್ವಯಿಸುವುದಿಲ್ಲ. ಶ್ರುತಿಯು ಜೀವಬ್ರಹ್ಮರಿಗೆ ಭೇದವನ್ನು ಸಹಜವೆಂದೇ ಭಾವಿಸಿದೆ; ಹಾಗೆಯೇ ಸ್ಪಷ್ಟವಾಗಿ ತಿಳಿಸಿಯೂ ಇದೆ. "ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ" "ಜ್ಞಾಜ್ಞೌ ದ್ವಾವಜಾವೀಶಾನೀಶೌ" ಎಂಬಂತೆ ಜೀವಬ್ರಹ್ಮರಿಬ್ಬರು ಒಂದೇ ಜಾತಿಗೆ ಸೇರಿದವರಾಗಿ ದೇಹವೃಕ್ಷದಲ್ಲಿ ನೆಲಸಿದ್ದಾರೆ. ಅವರಿಬ್ಬರಲ್ಲಿ ಒಬ್ಬನು ಕರ್ಮಿ ಮತ್ತು ಭೋಗಿ; ಮತ್ತೊಬ್ಬನು ಸಾಕ್ಷಿ ಮತ್ತು ಉದಾಸೀನ; ಒಬ್ಬನು ಅಜ್ಞ ಮತ್ತು ಅನೀಶ; ಮತ್ತೊಬ್ಬನು ಸರ್ವಜ್ಞ ಮತ್ತು ಈಶ. ಹೀಗೆ ಚಿಜ್ಜಾತಿಗೆ ಸೇರಿದ ಇಬ್ಬರು ಸನಾತನಚೇತನರು ದೇಹದಲ್ಲಿ ನೆಲಸಿದ್ದಾರೆ ಎಂದು ಶ್ರುತಿ ಹೇಳುತ್ತಿದೆ. "ಗುಹಾಂ ಪ್ರವಿಷ್ಟಾವಾತ್ಮಾನೌ" ಹೀಗೆ ಎರಡು ಆತ್ಮಗಳು ಹೃದಯವೆಂಬ ಗವಿಯಲ್ಲಿ ನೆಲಸಿವೆ ಎಂದು ಬಾದರಾಯಣರು ಬ್ರಹ್ಮಸೂತ್ರದಲ್ಲಿ ಜೀವಾತ್ಮಪರಮಾತ್ಮರಿಬ್ಬರನ್ನು ಸಹಜವಾಗಿ ಭಿನ್ನರೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಇಂತಹ ಸ್ಥಿತಿಯಲ್ಲಿ ಜೀವಬ್ರಹ್ಮರ ಭೇದವನ್ನು ಔಪಾಧಿಕವೆಂದು ಭಾಸ್ಕರರು ಹೇಳಿದರೆ, ಅದನ್ನು ಹೇಗೆ ಒಪ್ಪಲಿಕ್ಕೆ ಸಾಧ್ಯವಾದೀತು? ಅಲ್ಲಿಗೆ ಅರ್ಧಜರತೀನ್ಯಾಯದಂತೆ ಶ್ರುತಿಯಲ್ಲಿ ಅರ್ಧವನ್ನು ಒಪ್ಪಿ ಅರ್ಧವನ್ನು ಬಿಟ್ಟಂತಾಗುತ್ತದೆ. ಶಿವಾಗಮಗಳ ಪ್ರಕಾರ ವೀರಶೈವದರ್ಶನವು ಷಟ್ಸ್ಥಲಾತ್ಮಕವಾಗಿರುವುದರಿಂದ ಶಿವಜೀವರಿಗೆ ಭೇಧವು ಸಹಜವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಔಪಾಧಿಕಭೇದವನ್ನು ಹೇಗೆ ಒಪ್ಪಲಾದೀತು? ಆದ್ದರಿಂದ ಭಾಸ್ಕರಭಾಷ್ಯವೂ ವೀರಶೈವರಿಗೆ ಹೊಂದಿಕೆಯಾಗುವುದಿಲ್ಲ.

ಹಾಗಾದರೆ, ಶ್ರೀಕಂಠಾಚಾರ್ಯರ ಭಾಷ್ಯವನ್ನು ವೀರಶೈವರು ಏಕೆ ಉಪಯೋಗಿಸಬಾರದು? ಎಂಬ ಪ್ರಶ್ನೆ ಬರುತ್ತದೆ. ಅದನ್ನು ಪರಿಶೀಲಿಸಿ ನೋಡಿದರೆ, ಅದೂ ಸಹ ವೀರಶೈವಸಿದ್ಧಾಂತಕ್ಕೆ ಹೊಂದುವುದಿಲ್ಲವೆಂಬ ಅಂಶ ಸ್ಪಷ್ಟವಾಗುತ್ತದೆ. ಶ್ರೀಕಂಠಶಿವಾಚಾರ್ಯರು ಪರಬ್ರಹ್ಮವನ್ನು ಶಿವನೆಂಬ ಹೆಸರಿನಿಂದಲೇ ಕರೆದಿದ್ದಾರೆ; ಆದರೂ ಅವರ ಸಿದ್ಧಾಂತ ರಾಮಾನುಜರ ಸಿದ್ಧಾಂತವನ್ನೇ ಪೂರ್ಣವಾಗಿ ಹೋಲುತ್ತದೆ. ರಾಮಾನುಜರ ಅದ್ವೈತ ಚಿದಚಿದ್ವಿಶಿಷ್ಟವಾಗಿದ್ದರೆ, ಶ್ರೀಕಂಠರ ಅದ್ವೈತ ಚಿದಚಿಚ್ಛಕ್ತಿವಿಶಿಷ್ಟವೆನಿಸಿದೆ. ಇಲ್ಲಿ ಶ್ರೀಕಂಠರು ಚಿದಚಿತ್‌ಗಳ ಸ್ಥಾನದಲ್ಲಿ ಶಕ್ತಿಪದವನ್ನೇನೋ ಉಪಯೋಗಿಸಿದ್ದಾರೆ; ಆದರೆ ಚಿದಚಿತ್ಪ್ರಪಂಚಗಳಿಗೂ ನಾರಾಯಣನಿಗೂ

ಅಂಗಾಂಗಿಭಾವದಿಂದ ಭೇದವಿರುವಂತೆ ಶಿವನಿಗೂ ಚಿದಚಿದ್ರೂಪವಾದ ಶಕ್ತಿಗೂ ಭೇದವೇ ಇರುವುದಾಗಿಯೂ ಹೇಳಿದ್ದಾರೆ. ಮತ್ತೆ ಮುಕ್ತಿಯಲ್ಲಿ ಜೀವನು ಶಿವ ಸಾರೂಪ್ಯವನ್ನು ಪಡೆದು ಶಿವಲೋಕದಲ್ಲಿ ಶಿವನ ಸಮೀಪದಲ್ಲಿ ಇರುವುದೇ ಶಿವ ಸಾಯುಜ್ಯವೆಂದು ಶ್ರೀಕಂಠರು ಹೇಳಿದ್ದಾರೆ. ರಾಮಾನುಜಮತದಂತೆಯೇ ಶ್ರೀಕಂಠ ಮತದಲ್ಲಿಯೂ ಸೂರ್ಯ ಮತ್ತು ದೀಪಗಳಂತೆ ಮುಕ್ತರು ಚೈತನ್ಯವಿಕಾಸದಿಂದ ಪ್ರಕಾಶಮಯರೂ ಆನಂದಮಯರೂ ಆದರೂ ಸಹ ಪರಮಾತ್ಮನೊಡನೆ ಬೆರೆಯದಂತೆ ಭಿನ್ನರೇ ಆಗಿರುವರು. ಸೂರ್ಯಪ್ರಕಾಶದೆದುರಿಗೆ ದೀಪದ ಪ್ರಕಾಶವು ಸ್ವತಂತ್ರವಾಗಿ ಶೋಭಿಸುವಂತಿಲ್ಲ. ಎರಡೂ ಪ್ರಕಾಶಮಯವೇ ಆಗಿದ್ದರೂ ಸೂರ್ಯಪ್ರಕಾಶವಿಲ್ಲ ದಿದ್ದರೆ ದೀಪಪ್ರಕಾಶವು ಸ್ವತಂತ್ರವಾಗಿ ಶೋಭಿಸಬಹುದಾಗಿತ್ತು. ಆದರೆ, ಸೂರ್ಯನ ಪ್ರಕಾಶವು ತಪ್ಪುವಂತಿಲ್ಲ; ಅದರೆದುರಿಗೆ ದೀಪದ ಪ್ರಕಾಶವು ಸ್ವತಂತ್ರವಾಗಿ ಬೆಳಗು ವಂತಿಲ್ಲ. ಶ್ರೀಕಂಠಾಚಾರ್ಯರ ದೃಷ್ಟಿಯಲ್ಲಿ ಮುಕ್ತರ ಬಾಳು ಹೀಗಾಗಿದೆ. ಇಂತಹ ಮುಕ್ತಿಯನ್ನೇ ಅವರು ಸಾಯುಜ್ಯಮುಕ್ತಿ ಎಂದು ಕರೆದಿದ್ದಾರೆ. ಇದರಿಂದ ಶಿವನ ಅಖಂಡಾನಂದಾನುಭವರೂಪವಾದ ಸಾಮರಸ್ಯವು ಮುಕ್ತನಿಗೆ ದೊರೆಯುವಂತಿಲ್ಲ. ಪರಬ್ರಹ್ಮವನ್ನು ಶಿವ–ನಾರಾಯಣ ಎಂಬ ಹೆಸರುಗಳಿಂದ ಕರೆದ ಮಾತ್ರದಿಂದಲೇ ಶ್ರೀಕಂಠರಾಮಾನುಜರ ಮತಗಳಿಗೆ ಭೇದವಿದೆ ಎಂದು ಹೇಳುವಂತಿಲ್ಲ. ಅವೆರಡು ಮತಗಳೂ ಒಂದೇ ಗುಂಪಿಗೆ ಸೇರಿದವು. ಆದ್ದರಿಂದ ಚಿದಚಿತ್‌ಗಳ ಸ್ಥಾನದಲ್ಲಿ ಶಕ್ತಿಪದವನ್ನು ಶ್ರೀಕಂಠರು ಉಪಯೋಗಿಸಿದ್ದರೂ, ಈ ಬಗೆಯ ಶಕ್ತಿವೈಶಿಷ್ಟ್ಯ ವೀರ ಶೈವಸಿದ್ಧಾಂತಕ್ಕೆ ವಿರುದ್ಧವಾದ ಪ್ರಯುಕ್ತ ಶ್ರೀಕಂಠಭಾಷ್ಯವು ವೀರಶೈವರಿಗೆ ಗ್ರಾಹ್ಯ ವಾಗುವುದಿಲ್ಲ. ಶ್ರೀಕಂಠರೂ ಪಶು ಪತಿ ಪಾಶ ಎಂಬ ಮೂರು ಪದಾರ್ಥಗಳ ಆಧಾ ರದಮೇಲೆ ಮೀಮಾಂಸೆಮಾಡಿರುವುದರಿಂದ ಆ ಭಾಷ್ಯವು ಪಾಶುಪತರಿಗೂ, ಇತರ ಶೈವರಿಗೂ ಗ್ರಾಹ್ಯವಾಗಬಹುದು; ಆದರೆ ವೀರಶೈವರಿಗೆ ಹೊಂದಿಕೆಯಾಗುವುದಿಲ್ಲ. ಈ ಅಂಶವನ್ನು ವಿಸ್ತಾರವಾಗಿ "ಶಕ್ತಿವಿಶಿಷ್ಟಾದ್ವೈತದರ್ಶನ"ದಲ್ಲಿ ನಿರೂಪಿಸಲಾಗಿದೆ.

ಇನ್ನು ಕಾಶ್ಮೀರಶೈವಸಿದ್ಧಾಂತವನ್ನೇ ವೀರಶೈವಸಿದ್ಧಾಂತವೆಂದು ಏಕೆ ಹೇಳ ಬಾರದು? ಶಿವಸೂತ್ರಗಳಿಗೆ ಕಾಶ್ಮೀರಶೈವರು ಬರೆದಿರುವ ಭಾಷ್ಯಗಳನ್ನೇ ವೀರಶೈವರು ಏಕೆ ಉಪಯೋಗಿಸಬಾರದು? ಎಂಬ ಪ್ರಶ್ನೆ ಬರುತ್ತದೆ. ಅಲ್ಲಿಯೂ ಚಿತ್‌ಶಕ್ತಿಯ ವಿಲಾಸವೈಭವಗಳ ಪ್ರಶಂಸೆಯಿದೆ. ಚಿತ್‌ಶಕ್ತಿಯ ಪರಿಣಾಮವಾದ್ದರಿಂದ ಜಗತ್ತು ಸತ್ಯ ವೆನಿಸಿದೆ. ಚಿತ್‌ಶಕ್ತಿಯ ಅಂಶನಾದ ಜೀವನು ಶಿವಶಕ್ತಿಮಯವಾದ ಈ ಜಗತ್ತಿನಲ್ಲಿ ವ್ಯವಹರಿಸುತ್ತಲೇ ಶಾಂಭವೋಪಾಯದಿಂದ ಇಚ್ಛಾಶಕ್ತಿಯ ವಿಕಾಸವನ್ನು ಪಡೆದು, "ವಿಶ್ವವೆಲ್ಲವೂ ನನ್ನಿಂದಲೇ ಹೊರಟಿದೆ ಮತ್ತು ನನ್ನಲ್ಲಿಯೇ ಪ್ರತಿಫಲಿಸಿದೆಯಾ ದ್ದರಿಂದ ನನ್ನಿಂದ ಬೇರೆಯಲ್ಲ"ವೆಂದು ಭಾವಿಸುವನು. ಅದರಿಂದ ಮುಂದೆ ಜೀವನು ಚಿತ್ತದ ವಿಕಲ್ಪಗಳನ್ನು ಹದಗೊಳಿಸಲಿಕ್ಕಾಗಿ ಧ್ಯಾನಧಾರಣಪ್ರತ್ಯಾಹಾರ ಮೊದಲಾದ ಯೋಗಸಾಧನಗಳನ್ನಾಚರಿಸುವನು. ಇದು ಶಾಕ್ತೋಪಾಯ ಅಥವಾ

ಜ್ಞಾನೋಪಾಯವೆನಿಸುವುದು. ಈ ಉಪಾಯದಿಂದ ಜೀವನಿಗೆ ಶಿವನಿಂದ ತಾನು ಬೇರೆಯಲ್ಲವೆಂಬ ಭಾವನೆಯೂ"ಅವನೇ ನಾನು" ಎಂಬ ಸ್ಮರಣವೂ ಉಂಟಾಗುವುದು. ಹೀಗೆ ಶಾಕ್ತೋಪಾಯದಿಂದ ಜೀವನಿಗೆ ತಾನೇ ವಿಶ್ವಾತ್ಮಕನೂ ವಿಶ್ವಾತೀತನೂ ಆಗಿರುವೆನೆಂಬ ಪೂರ್ಣಹಂತಾಸ್ಥಿತಿಯುಂಟಾಗುತ್ತದೆ. ಇಲ್ಲಿ ಹೀಗೆ ಸ್ಮರಣೆಗೆ ಪ್ರಾಧಾನ್ಯವಿರುವುದರಿಂದಲೇ ಕಾಶ್ಮೀರಶೈವವನ್ನು ಪ್ರತ್ಯಭಿಜ್ಞಾಶಾಸ್ತ್ರವೆಂದು ಕರೆಯಲಾಗಿದೆ. ಪಶುಪತಿಪಾಶವೆಂಬ ಮೂರು ಪದಾರ್ಥಗಳನ್ನು ಪ್ರತಿಪಾದಿಸುವುದರಿಂದ ಇದನ್ನು ತ್ರಿಕಶಾಸ್ತ್ರವೆಂದೂ ಕರೆಯಲಾಗಿದೆ. ಶಿವನ ಚಿತ್‌ಶಕ್ತಿಯ ಚಲನರೂಪವಾದ ಸ್ಪಂದವೇ ಈ ವಿಶ್ವವೆಂದೂ, ವಿಶ್ವದ ವ್ಯವಹಾರಗಳೆಲ್ಲವೂ ಸ್ಪಂದದ ತಾರತಮ್ಯದಿಂದಲೇ ನಡೆಯುತ್ತಿರುವುವೆಂದೂ, ಈ ಸ್ಪಂದದಿಂದಲೇ ಹೊರಟಿರುವ ಸತ್ತ್ವರಜಸ್ತಮೋಗುಣಗಳಿಂದ ವಿಶ್ವದಲ್ಲಿ ವಿಕಾರಗಳು ಕಂಡುಬಂದರೂ, ವಿಶ್ವವು ಶಿವನಿಂದ ಅಭಿನ್ನವಾಗಿದೆ ಎಂದೂ, ಇಲ್ಲಿ ಕಾಣುವ ಭಿನ್ನತೆಯು ಸ್ಪಂದದ ಚಮತ್ಕಾರವೆಂದೂ, ಪರಿಪೂರ್ಣನಾದ ಶಿವನಲ್ಲಿ ಈ ಭಿನ್ನತೆಗಳಿಂದ ಯಾವ ವ್ಯತ್ಯಾಸವೂ ಉಂಟಾಗುವುದಿಲ್ಲವೆಂದೂ ಬೋಧಿಸುವುದರಿಂದ ಕಾಶ್ಮೀರಶೈವಕ್ಕೆ ಸ್ಪಂದಶಾಸ್ತ್ರವೆಂಬ ಹೆಸರೂ ಇದೆ. ಇಂತಹ ಕಾಶ್ಮೀರಶೈವದ ಶಾಂಭವೋಪಾಯ ಮತ್ತು ಶಾಕ್ತೋಪಾಯಗಳಿಂದ ಸಾಧನೆಯನ್ನು ಮುಂದುವರಿಸುತ್ತ ಜೀವನು ಆಣವೋಪಾಯದಿಂದ ಬುದ್ಧಿ ದೇಹ ಪ್ರಾಣ ಮೊದಲಾದ ಕರಣಗಳ ಮೂಲಕ ಸ್ವಪ್ರಕಾಶವಾದ ಪರತತ್ತ್ವವನ್ನು ತನ್ನ ಹೃದಯದಲ್ಲಿ ಧ್ಯಾನಿಸುತ್ತ ವಿಶ್ವವೆಲ್ಲವೂ ಚಿತ್‌ಶಕ್ತಿಗಿಂತ ಬೇರೆಯಲ್ಲವೆಂಬ ದೃಢನಿಶ್ಚಯದಿಂದ ಚಿದಾನಂದವನ್ನು ಅನುಭವಿಸತೊಡಗುವನು. ಈ ಸಿದ್ಧನು ಶರೀರವಿರುವವರೆಗೆ ಶಿವನಿಗೆ ಸಮಾನನಾಗಿದ್ದು ಲೋಕಾನುಗ್ರಹಕ್ಕೋಸ್ಕರ ದುಡಿಯುತ್ತ ಆಗಾಗ ಬರುವ ಸುಖದುಃಖಗಳನ್ನು ಅಹಂಭಾವನೆಯಿಲ್ಲದೆ ಇದಂಭಾವನೆಯಿಂದ ನೋಡುತ್ತ ಶರೀರವು ತಾನಾಗಿಯೇ ತೊಲಗಿದಮೇಲೆ ಶಿವನೇ ಆಗುತ್ತಾನೆ. ಇದು ಕಾಶ್ಮೀರಶೈವದರ್ಶನದ ಶಿವಾದ್ವೈತ ಸಿದ್ಧಾಂತ. ಇದರಲ್ಲಿ ಕೆಲವಂಶಗಳು ವೀರಶೈವಸಿದ್ಧಾಂತಕ್ಕೆ ಹೊಂದುತ್ತವೆಯಾದರೂ ಮೂಲತತ್ತ್ವದಲ್ಲಿ ಇದು ವೀರಶೈವಸಿದ್ಧಾಂತದಿಂದ ಭಿನ್ನವೇ ಆಗಿದೆ. ಒಟ್ಟಿನಲ್ಲಿ ಕಾಶ್ಮೀರಶೈವವು ಜೀವನನ್ನು ಚಿತ್‌ಶಕ್ತಿಯ ಅಂಶನೆಂದು ಹೇಳಿರುವುದೇ ಹೊರತು ವೀರಶೈವದಲ್ಲಿ ಹೇಳಿರುವಂತೆ ಶಿವಾಂಶನೆಂದು ಹೇಳಿಲ್ಲ. ವೀರಶೈವರ ಷಟ್‌ಸ್ಥಲೋಪಾಸಕ್ಕಂತೂ ಅಲ್ಲಿ ಅವಕಾಶವೇ ಇಲ್ಲ. ವೀರಶೈವದಲ್ಲಿ "ಬಹು ಸ್ಯಾಂ ಪ್ರಜಾಯೇಯ" ಎಂಬ ಶ್ರುತಿಯಂತೆ ಜಗತ್ತು ಶಿವನ ಸಾಕ್ಷಾತ್ಪರಿಣಾಮವೆನಿಸಿದೆ. ಕಾಶ್ಮೀರಶೈವದಲ್ಲಿ ಶಿವನ ಚಿತ್‌ಶಕ್ತಿಯ ವಿಲಾಸವೇ ವಿಶ್ವವೆನಿಸಿದೆ. ವಿಶ್ವವೆಲ್ಲವೂ ಚಿತ್‌ಶಕ್ತಿಯ ವಿನೋದದ ರಂಗಭೂಮಿ; ಶಿವನು ಕೇವಲ ನಿಮಿತ್ತಕಾರಣನಾಗಿದ್ದಾನೆ. ಸೂರ್ಯನಲ್ಲಿರುವ ಪ್ರಭೆಯಂತೆ ಚಿತ್‌ಶಕ್ತಿಯು ಶಿವನಿಂದ ಅಭಿನ್ನವಾಗಿದ್ದರೂ, ಅದು ಶಿವನ ಪ್ರಾಣಸ್ವರೂಪವೆಂಬ ಭಾವನೆ ಕಾಶ್ಮೀರಶೈವದಲ್ಲಿಲ್ಲ. ಚಿತ್‌ಶಕ್ತಿ ವಿಶ್ವಕ್ಕೆ ಉಪಾದಾನಕಾರಣವೂ ಶಿವನು ನಿಮಿತ್ತಕಾರಣನೂ ಆದ್ದರಿಂದ ಶಿವಶಕ್ತಿಗಳಿಗೆ ಅಲ್ಲಿ ಸಾಮ

ರಸ್ಯವಿಲ್ಲ. ಆದ್ದರಿಂದ ಚಿತ್‌ಶಕ್ತಿಯನ್ನು ಶಿವನಲ್ಲಿ ಪ್ರಾಣರೂಪವೆಂದು ಭಾವಿಸುವ ವೀರಶೈವದರ್ಶನವು ಅದರಿಂದ ಸಹಜವಾಗಿ ಭಿನ್ನವೆನಿಸಿದೆ. "ಸತ್ಯಾತ್ಮ ಪ್ರಾಣಾರಾಮಂ", "ಗುಣಾತೀತಾ ಪರಾಶಕ್ತಿಸ್ಸಚ್ಚಿದಾನಂದರೂಪಿಣೀ ।ಶಿವಾತ್ಮಿಕಾ ಶಿವಾಧೀನಾ ಚಿದಚಿದ್ವಿಶ್ವಕಾಶಿನೀ ॥" ಮೊದಲಾದ ಶ್ರುತ್ಯಾಗಮಗಳ ಪ್ರಕಾರ ವೀರಶೈವದರ್ಶನದಲ್ಲಿ ಚಿತ್‌ಶಕ್ತಿ ಶಿವನ ಪ್ರಾಣವೆಂಬ ಭಾವನೆ ವ್ಯಾಪಿಸಿದೆ. ಆದ್ದರಿಂದಲೇ ಇಲ್ಲಿ ಜಗತ್ತಿಗೆ ಶಿವನಾಗಲೀ ಶಕ್ತಿಯಾಗಲೀ ಪ್ರತ್ಯೇಕವಾಗಿ ಕಾರಣವೆನಿಸಿಲ್ಲ; ಆದರೆ ಶಕ್ತಿವಿಶಿಷ್ಟ ಶಿವನೇ ಜಗತ್ತಿಗೆ ಅಭಿನ್ನನಿಮಿತ್ತೋಪಾದಾನಕಾರಣನಾಗಿರುವನು. ಕಾಶ್ಮೀರಶೈವದಲ್ಲಿ ಶಕ್ತಿಯೇ ಜಗದುಪಾದಾನವೆನಿಸಿ ಶಿವನಿಗೆ ನಿಮಿತ್ತಮಾತ್ರದ ಸಂಬಂಧವಿರುವುದರಿಂದ "ಯಥೋರ್ಣನಾಭಿಸ್ಸೃಜತೇ ಗೃಹ್ಯತೇ ಚ" ಎಂದು ಶಿವನೇ ಜಗತ್ತಿಗೆ ಅಭಿನ್ನ ನಿಮಿತ್ತೋಪಾದಾನನೆಂದು ಹೇಳುವ ಶ್ರುತಿಗಳೆಲ್ಲವೂ ವಿರುದ್ಧವಾಗುತ್ತವೆ. ಆಸ್ತಿಕರೆಲ್ಲರಿಗೂ ಪ್ರಬಲಪ್ರಮಾಣವೂ ವಿಶ್ವಾಸಾರ್ಹವೂ ಎನಿಸಿದ ಶ್ರುತಿಯಲ್ಲಿ ಹೇಳಿರುವುದನ್ನು ಶಿರಸಾವಹಿಸಿ ನಡೆಸಲೇಬೇಕು. ಅದರ ಉಪದೇಶದಲ್ಲಿ ಅಧಿಕಾರಿಭೇದದಿಂದ ಏನಾದರೂ ಪರಸ್ಪರವಿರೋಧವು ಕಂಡುಬಂದರೂ ಅದನ್ನು ಅವಸ್ಥಾಭೇದಗಳಿಗೆ ಅನ್ವಯಿಸುವಮೂಲಕ ಹೊಂದಿಸಿಕೊಳ್ಳಬೇಕಾದ್ದು ವಿವೇಕಿಯ ಕರ್ತವ್ಯವಾಗಿದೆ. ಆದ್ದರಿಂದಲೇ ಶ್ರುತಿಯ ಏಕದೇಶವನ್ನುಮಾತ್ರವೇ ಅವಲಂಬಿಸಿಕೊಂಡು ಬೆಳೆದಿರುವ ಎಲ್ಲಾ ಮತಗಳಿಗಿಂತಲೂ ಶ್ರುತಿಯನ್ನು ಪೂರ್ಣವಾಗಿ ಸಮನ್ವಯಿಸಿಕೊಂಡು ವೈದಿಕವೆನಿಸಿ ಬೆಳೆದುಬಂದಿರುವ ವೀರಶೈವಮತವನ್ನು ಉತ್ಕೃಷ್ಟವೆಂದು ಶ್ರೀ ರೇವಣಸಿದ್ಧಭಗವತ್ಪಾದರು ಅಗಸ್ತ್ಯರಿಗೆ ಉಪದೇಶಿಸಿರುವುದು ಅಕ್ಷರಶಃ ಸತ್ಯವಾಗಿದೆ. ಇದರಿಂದಲೇ ವೀರಶೈವದರ್ಶನವು ಸಮನ್ವಯದರ್ಶನವೆನಿಸಿ ಜಗತ್ಪ್ರಸಿದ್ಧವಾಗಿದೆ. ಹೀಗೆ ಶಂಕರ, ರಾಮಾನುಜ, ಶ್ರೀಕಂಠ, ಭಟ್ಟಭಾಸ್ಕರ, ಹಯಗ್ರೀವ, ಕಾಶ್ಮೀರಶೈವ, ದಾಕ್ಷಿಣಾತ್ಯ ಶೈವ ಅಥವಾ ಪಾಶುಪತ ಇವೆಲ್ಲಕ್ಕಿಂತಲೂ ವೀರಶೈವದರ್ಶನವು ವಿಲಕ್ಷಣವಾದ್ದರಿಂದಲೇ ಇದಕ್ಕೆ ಆ ಭಾಷ್ಯಗಳು ಯಾವುವೂ ಅನ್ವಯಿಸುವುದಿಲ್ಲ.

ನೀಲಕಂಠಶಿವಾಚಾರ್ಯರು ಬರೆದಿರುವ ನೀಲಕಂಠಭಾಷ್ಯವು ವೀರಶೈವರ ಭೇದಾಭೇದಸಿದ್ಧಾಂತವನ್ನು ಪ್ರತಿಪಾದಿಸುತ್ತದೆ ಎಂದು ಕ್ರಿಯಾಸಾರದಿಂದ ತಿಳಿದುಬಂದರೂ ಆ ಭಾಷ್ಯ ಈಗ ಉಪಲಬ್ಧವಾಗಿಲ್ಲ. ವೀರಶೈವಮತದ ಮೂಲಾಚಾರ್ಯರು ಬರೆದಿರುವ ಭಾಷ್ಯಗಳನ್ನು ಶ್ರೀಪತಿಪಂಡಿತರು ಶ್ರೀಕರಭಾಷ್ಯದಲ್ಲಿ ಅಲ್ಲಲ್ಲಿ ಉದಾಹರಿಸಿದ್ದರೂ, ಅವು ಅಲ್ಲಲ್ಲಿ ಇರುವುದಾಗಿ ವದಂತಿ ಇದ್ದರೂ ಈವರಿವಿಗೂ ಪ್ರಕಟವಾಗಿಲ್ಲ. ಶ್ರೀಪತಿ ಪಂಡಿತಾರಾಧ್ಯರೇನೋ ಶ್ರೀಕರಭಾಷ್ಯವನ್ನು ವೀರಶೈವರಿಗಾಗಿಯೇ ಭೇದಾಭೇದಗಳ ಸಮನ್ವಯಕ್ಕಾಗಿ ಬರೆದಿರುವುದಾಗಿ ಪ್ರತಿಜ್ಞೆಮಾಡಿದ್ದಾರೆ. ಆದರೆ ಭಾಷ್ಯದ ಒಳಗೆ ನೋಡಿದರೆ ಅದು ಬ್ರಾಹ್ಮಣರಿಗಾಗಿಯೇ ಬರೆದದ್ದೆಂದು ಕಾಣುತ್ತದೆಯಾದ್ದರಿಂದ ವೀರಶೈವರಿಗೆ ಗ್ರಾಹ್ಯವಲ್ಲವೆಂದು ಕೆಲವರು ಆಕ್ಷೇಪಿಸುತ್ತಾರೆ. ವೀರಶೈವರು ಶ್ರುತ್ಯಾಗಮಗಳಂತೆಯೇ ಬ್ರಹ್ಮಸೂತ್ರಗಳನ್ನೂ ಕೈಬಿಡುವಂತಿಲ್ಲ. "ಸರ್ವೋಪೇತಾ ಚ

ತದ್ದರ್ಶನಾತ್" ಎಂಬ ಸೂತ್ರವು ಪರಶಿವನನ್ನು ಶಕ್ತಿವಿಶಿಷ್ಟನೆಂದೂ, "ಪರಿಣಾಮಾತ್" ಎಂಬ ಸೂತ್ರವು ಜಗತ್ತನ್ನು ಶಕ್ತಿವಿಶಿಷ್ಟಶಿವನ ಪರಿಣಾಮವೆಂದೂ ಸ್ಪಷ್ಟವಾಗಿ ಬೋಧಿಸುತ್ತಿವೆ. ಇದರಮೇಲೆ "ನ ಪ್ರಯೋಜನವತ್ತ್ವಾತ್" ಎಂಬ ಸೂತ್ರದಲ್ಲಿ ಪರಮಶಿವನು ಭಕ್ತರ ಉಪಾಸನೆಯ ಸೌಕರ್ಯಕ್ಕಾಗಿ ಸ್ಥೂಲಸೂಕ್ಷ್ಮಕಾರಣದೇಹಗಳಲ್ಲಿ ಇಷ್ಟಪ್ರಾಣಭಾವರೂಪದಿಂದ ಸಹಜವಾಗಿ ನೆಲಸಿರುವುದೇ ಅವನ ಜಗದ್ವ್ಯಾಪಾರ ಲೀಲೆಯ ಪ್ರಯೋಜನವೆಂದು ಬಾದರಾಯಣರು ಸ್ಪಷ್ಟವಾಗಿ ತಿಳಿಸಿದ್ದಾರೆ. ಇಷ್ಟೇ ಅಲ್ಲದೆ, ಶಿವನು "ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್" ಎಂಬ ಸೂತ್ರದಲ್ಲಿ ಮನುಷ್ಯನ ಹೃದಯದಷ್ಟೇ ಪ್ರಮಾಣದಲ್ಲಿ ಅಂದರೆ ಅಂಗುಷ್ಠಪರಿಮಿತನಾಗಿ ಸಾಧಕನ ಕೈಗೆ ಸಿಕ್ಕಿದ್ದಾನೆ ಎಂದೂ, "ಜೀವಮುಖ್ಯಪ್ರಾಣಲಿಂಗಾತ್" ಎಂಬ ಸೂತ್ರದಲ್ಲಿ ಸಾಧಕನು ಶಿವೋಽಹಂ ಭಾವನೆಯಿಂದ ಭಾವಲಿಂಗದ ಅನುಸಂಧಾನವನ್ನೂ ಮನಸ್ಸಿನಿಂದ ಪ್ರಾಣಲಿಂಗದ ಧ್ಯಾನವನ್ನೂ ಕೈಬಾಯಿಗಳಿಂದ ಇಷ್ಟಲಿಂಗದ ಅರ್ಚನೆಯನ್ನೂ, ಹೀಗೆ ಉಪಾಸಾತ್ರೈವಿಧ್ಯವನ್ನು ಅವಶ್ಯವಾಗಿ ನಡೆಸುತ್ತಿರಬೇಕೆಂದು ಬಾದರಾಯಣರು ತಿಳಿಸಿದ್ದಾರೆ. ಇದರಿಂದ ಜ್ಞಾನಕರ್ಮಗಳೆರಡರ ಸಮನ್ವಯಾಚರಣೆಯನ್ನು ಒತ್ತಿ ಹೇಳಿದಂತಾಯಿತು. "ಅರಿಯದೆ ಮಾಡುವ ಕ್ರಿಯೆಯೂ ಅರಿತು ಮಾಡದೆ ಇರುವುದೂ ವ್ಯರ್ಥವೆನಿಸುತ್ತವೆ" ಎಂದು ಶಿವಾಗಮಗಳು ಸಾರುತ್ತಿವೆ. ಬಾದರಾಯಣರೂ "ವಿಹಿತತ್ವಾಚ್ಚ ಆಶ್ರಮಕರ್ಮಾಪಿ" "ಸಹಕಾರಿತ್ವೇನ ಚ" ಎಂಬ ಸೂತ್ರಗಳಲ್ಲಿ ಜ್ಞಾನಕರ್ಮಗಳೆರಡರ ಆವಶ್ಯಕತೆಯನ್ನು ಸ್ಪಷ್ಟಪಡಿಸಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಬ್ರಹ್ಮಸೂತ್ರಗಳು ಸಹಜವಾಗಿ ವೀರಶೈವದರ್ಶನಕ್ಕೆ ಹೊಂದುತ್ತಿರುವುದರಿಂದ ಅವನ್ನು ಬಿಡಲಿಕ್ಕಂತೂ ಸಾಧ್ಯವಾಗುವುದಿಲ್ಲ. ಆದರೆ ಅವುಗಳ ಯಥಾರ್ಥವಾದ ಅರ್ಥವನ್ನು ವಿಶದಪಡಿಸುವ ಭಾಷ್ಯದ ಸಹಾಯವಿಲ್ಲದೇ ಹೋದರೆ ಆ ಸೂತ್ರಗಳು ಸುಲಭವಾಗಿ ಅರ್ಥವಾಗುವಂತಿಲ್ಲ. ಇಂತಹ ಸ್ಥಿತಿಯಲ್ಲಿ ವೀರಶೈವರು ಶ್ರೀಕರಭಾಷ್ಯವನ್ನೇ ಆಶ್ರಯಿಸಬೇಕಾಗಿದೆ. ಆದರೆ ಅದು ವೀರಶೈವರ ಇಷ್ಟಾರ್ಥವನ್ನು ಎಷ್ಟರಮಟ್ಟಿಗೆ ನೆರವೇರಿಸಬಲ್ಲುದು? ಎಂಬುದನ್ನು ನಿಷ್ಕಲ್ಮಷವಾಗಿ ಆಲೋಚಿಸಿದರೆ ಅದು ವೀರಶೈವರಿಗೇ ಅಕ್ಷರಶಃ ಅನ್ವಯಿಸುವುದೆಂದು ಸ್ಪಷ್ಟಪಡುತ್ತದೆ. ಶ್ರೀಪತಿಪಂಡಿತಾರಾಧ್ಯರ ದೃಷ್ಟಿಯಲ್ಲಿ ಭಾಷ್ಯವೇನೋ ಬ್ರಾಹ್ಮಣರಿಗೇ ಉದ್ದಿಷ್ಟವಾಗಿದೆ ಎಂಬುದು ನಿಜ. ಆದರೆ ಇಲ್ಲಿ ಬ್ರಾಹ್ಮಣರು ಯಾರು? ಎಂಬ ಪ್ರಶ್ನೆಯನ್ನು ಮೊದಲು ವಿಚಾರಿಸಬೇಕಾಗಿದೆ. ಒಬ್ಬನು ಬ್ರಾಹ್ಮಣನಾಗುವುದು ಜಾತಿಯಿಂದಲೋ ಅಥವಾ ಗುಣದಿಂದಲೋ ಎಂಬ ಪ್ರಶ್ನೆಗೆ ಸ್ಮೃತಿಕಾರರು ಸ್ಪಷ್ಟವಾಗಿ ಉತ್ತರವಿತ್ತಿದ್ದಾರೆ. ಆದರೆ ಒಬ್ಬನು "ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ಜಾಯತೇ ದ್ವಿಜಃ" ಎಂಬ ಪ್ರಮಾಣದಂತೆ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ್ದರೂ ಶುಕ್ಲಶೋಣಿತಸಂಯೋಗದಿಂದಲೇ ದೇಹವನ್ನು ಪಡೆದು ಹೊರಗೆ ಬಂದವನಾದ್ದರಿಂದ ಶೂದ್ರನೇ ಆಗಿರುವನು. ಅವನು ಉಪನಯನಾದಿ ಕರ್ಮಗಳಿಂದ ಮನೋಬುದ್ಧಿಗಳಿಗೆ ಉತ್ತಮಸಂಸ್ಕಾರವನ್ನು ಹೊಂದಿ ಬ್ರಾಹ್ಮಣನೆ

ನಿಸುವನು. ಅವರವರ ಪ್ರಕೃತಿಗನುಗುಣವಾಗಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬ ವಿಭಾಗವನ್ನು ಬಹಳಕಾಲದ ಹಿಂದೆಯೇ ಪರಮೇಶ್ವರನು ಏರ್ಪಡಿಸಿರುವನು. ಆದರೂ ಪ್ರಕೃತಿಸಂಬಂಧದಿಂದ ಕೆಲವುವೇಳೆ ತಮೋಗುಣವು ಪ್ರಬಲವಾಗಿ ಬ್ರಾಹ್ಮಣನೂ ಶೂದ್ರನಂತೆ ವರ್ತಿಸುವನು. ಸತ್ತ್ವಗುಣಪ್ರಾಧಾನ್ಯದಿಂದ ಇತರರೂ ಉತ್ತಮ ಸಂಸ್ಕಾರವನ್ನು ಪಡೆದು ಬ್ರಾಹ್ಮಣರಾಗಬಹುದು. ಹೀಗೆ ಬ್ರಾಹ್ಮಣ್ಯವೆಂಬುದು ಜನ್ಮಕ್ಕೆ ಮಾತ್ರವೇ ಅಂಟಿಕೊಳ್ಳದೆ ಆಯಾ ವ್ಯಕ್ತಿಗಳ ಗುಣಕ್ಕೂ ಯೋಗ್ಯತೆಗೂ ಅನ್ವಯಿಸುತ್ತದೆ. ಬ್ರಹ್ಮಚಿಂತನೆಯಲ್ಲಿಯೇ ಜೀವಿಸುವವನು ಬ್ರಾಹ್ಮಣನೆನಿಸುವನು. ಈ ಚಿಂತನೆಯಿಲ್ಲದೆ ವಿಷಯಚಿಂತನೆಯಲ್ಲಿ ತೊಡಗಿದವನು ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ್ದರೂ ಶೂದ್ರನೆನಿಸುವನು. ಬ್ರಹ್ಮಚಿಂತನೆಯಲ್ಲಿಯೇ ಇರುವ ಶೂದ್ರನೂ ಬ್ರಾಹ್ಮಣನೇ ಆಗುವನು. ಆದರೆ, ಪ್ರಪಂಚದಲ್ಲಿ ವ್ಯವಹಾರನಿರ್ವಹಣೆಯ ಸೌಕರ್ಯಕ್ಕಾಗಿ ನಾಲ್ಕು ವರ್ಣಗಳ ವ್ಯವಸ್ಥೆ ಏರ್ಪಟ್ಟಿದೆ. ಈ ನಾಲ್ಕುವರ್ಣಗಳಲ್ಲಿ ವೀರಶೈವರು ಬ್ರಾಹ್ಮಣರಲ್ಲಿಯೇ ಬರುವರಾದ್ದರಿಂದ ಶ್ರೀಪತಿಪಂಡಿತಾರಾಧ್ಯರು ಬ್ರಾಹ್ಮಣರನ್ನು ದ್ವೇಶಿಸಿ ಭಾಷ್ಯದಲ್ಲಿ ಹೇಳಿರುವುದು ನ್ಯಾಯವೇ ಆಗಿದೆ. ಆದ್ದರಿಂದ ಬ್ರಾಹ್ಮಣಪದವನ್ನು ಒಂದು ಪಂಗಡದ ವ್ಯಕ್ತಿಗಳಿಗೆ ಅನ್ವಯಿಸಿಕೊಂಡು ಆ ಪದದ ಅರ್ಥವನ್ನು ಸಂಕೋಚಗೊಳಿಸಬೇಕಾಗಿಲ್ಲ. ಬ್ರಾಹ್ಮಣನು ತನ್ನ ಶೂದ್ರಜನ್ಮವನ್ನು ಉಪನಯನವೆಂಬ ಅಗ್ನಿಸಂಸ್ಕಾರದಿಂದ ಸುಟ್ಟು ಬೇರೆ ಜನ್ಮವನ್ನು ಪಡೆಯುವನಾದ್ದರಿಂದ ದ್ವಿಜನೆನಿಸುವನು. ಹಾಗೆಯೇ, ವೀರಶೈವನೂ ಸಹ ಬ್ರಹ್ಮಸೃಷ್ಟಿಯಲ್ಲಿ ಪ್ರಕೃತಿಸಂಬಂಧವಾದ ಶರೀರವನ್ನು ಪಡೆದು ಶೂದ್ರನಾಗಿ ಹುಟ್ಟಿದ್ದರೂ ವೀರಶೈವದೀಕ್ಷೆಯೆಂಬ ಅಗ್ನಿಯಲ್ಲಿ ಬೆಂದು ಹಿಂದಿನ ಪ್ರಾಕೃತಜನ್ಮವನ್ನು ಕಳೆದುಕೊಂಡು ಗುರುವಿನ ಕರುಣೆಯಿಂದ ಹಸ್ತಮಸ್ತಕಸಂಯೋಗದ ಸತ್ಪರಿಣಾಮವಾಗಿ ಮತ್ತೆ ಹುಟ್ಟಿ ದ್ವಿಜನೆನಿಸುವನು. ಆದ್ದರಿಂದ ವೀರಶೈವರೆಲ್ಲರೂ ದೀಕ್ಷೆಯ ಅನಂತರ ಬ್ರಾಹ್ಮಣರೇ ಎನಿಸುತ್ತಾರೆ. ಪ್ರತಿಯೊಬ್ಬ ವೀರಶೈವನಿಗೂ ತನ್ನ ಸ್ಥೂಲಸೂಕ್ಷ್ಮಕಾರಣಶರೀರಗಳಲ್ಲಿ ಅಂಟಿಕೊಂಡಿರುವ ಕಾರ್ಮಿಕ, ಮಾಯೀಯ, ಆಣವವೆಂಬ ಮೂರುಮಲಗಳು ದೀಕ್ಷಾಗ್ನಿಯಿಂದ ಬೆಂದು ನಾಶವಾಗುತ್ತವೆ. ಅಲ್ಲಿಂದ ಮುಂದೆಯೇ ಅವನು ಅಪ್ರಾಕೃತನೆನಿಸುವನು. ಹಿಂದಿನ ಬ್ರಹ್ಮಸೃಷ್ಟಿ ಹೋಗಿ ಮುಂದೆ ಶಿವಸೃಷ್ಟಿಯಲ್ಲಿ ಅವನು ಗುರುಕರುಣೆಯಿಂದ ಶಿವಭಕ್ತನೆನಿಸುವನು. ಇಂತಹವನೇ ಲಿಂಗಾಂಗಸಂಯೋಗದ ಬೆಸುಗೆಯನ್ನು ತಿಳಿಯಲು ಶಕ್ತನಾಗಬಲ್ಲನು. ಇವನೇ ತನ್ನ ಪ್ರಾಣಲಿಂಗದ ನಿತ್ಯಾರ್ಚನೆಯಿಂದ ಆದರ ಸೇವೆಗಾಗಿಯೇ ತನ್ನ ದೇಹೇಂದ್ರಿಯಗಳೆಲ್ಲವನ್ನೂ ವಿನಿಯೋಗಿಸುತ್ತ ಲಿಂಗಾಯತ್ತಚಿತ್ತ ಅಂದರೆ ಲಿಂಗಕ್ಕೆ ಪೂರ್ಣ ಅಧೀನನಾಗಿ ಲಿಂಗಾಯತನೆನಿಸುವನು. ಇವನೇ ಸತೀಪತಿಭಾವದ ದೃಢಭಕ್ತಿಯನ್ನಾಚರಿಸುವ ವೀರವ್ರತವನ್ನು ಕೈಗೊಂಡಿರುವುದರಿಂದ ವೀರಶೈವನೆನಿಸುವನು. ಹೀಗೆ ಗುರುವಿನ ವೇಧೆ ಎಂಬ ದೀಕ್ಷಾಗ್ನಿಯಿಂದ ಬೆಂದು ನಿರ್ಮಲನಾಗಿ ಇಷ್ಟಪ್ರಾಣಭಾವಲಿಂಗಗಳ ನಿತ್ಯಸಂಪರ್ಕದಿಂದ ಶಿವನ ಚಿಂತನವನ್ನೇ

ಮಾಡುತ್ತಲಿರುವವನು "ಬ್ರಹ್ಮಣಾ ಅನಿತಿ ಇತಿ ಬ್ರಾಹ್ಮಣಃ" ಅಂದರೆ ಬ್ರಹ್ಮನೊಡನೆ ಬಾಳುವವನು" ಎಂಬ ಅರ್ಥದಲ್ಲಿ ಹೇಗೆ ಬ್ರಾಹ್ಮಣನಾಗಲಾರನು? ವೀರಶೈವರಲ್ಲಿ ಎಲ್ಲರೂ ಹೀಗೆ ಇಷ್ಟಲಿಂಗದ ನಿತ್ಯಸಂಪರ್ಕದಿಂದ ಬ್ರಾಹ್ಮಣರಾಗಲು ಶಕ್ಯವಿದೆ. ಯಜ್ಞಯಾಗಗಳನ್ನು ಮಾಡುವವರೇ ಬ್ರಾಹ್ಮಣರೆಂಬ ಸಂಕೋಚ ಯಾರಿಗೂ ಬೇಕಾಗಿಲ್ಲ. ಯಜ್ಞಶಬ್ದವು "ಯಜ್ ದೇವಪೂಜಾಯಾಂ" ಎಂಬ ಧಾತುವಿನಿಂದ ಹುಟ್ಟಿ ದೇವನೆನಿಸಿದ ಶಿವನ ಅರ್ಚನೆಯನ್ನೇ ಬೋಧಿಸುತ್ತದೆ. ಅಲ್ಲಿಗೆ ವೀರಶೈವನಿಗೆ ಇಷ್ಟಲಿಂಗದ ಅರ್ಚನೆಯೇ ನಿತ್ಯಯಜ್ಞವೆನಿಸಿದೆ. ಆಗಾಗ್ಯೆ ನಡೆಸುವ ಗುರುಜಂಗಮರ ಆರಾಧನೆಯೇ ನೈಮಿತ್ತಿಕಯಜ್ಞವೆನಿಸಿದೆ. ಶ್ರಾದ್ಧವೆಂದರೆ ಜಂಗಮರ ಆರಾಧನೆಯೇ ಆಗಿದೆ. ಶ್ರದ್ಧಾಭಕ್ತಿಗಳಿಂದ ನೀಡಿದ್ದೆಲ್ಲವೂ ಶ್ರಾದ್ಧವೆನಿಸುತ್ತದೆ. "ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" ಎಂಬ ಶ್ರುತಿಯು ಶ್ರದ್ಧೆ, ಭಕ್ತಿ, ಧ್ಯಾನಗಳಿಂದ ಕೂಡಿದ ಶಿವಯೋಗವನ್ನೇ ಸಾಧಕನಿಗೆ ಸಾಧನಮಾರ್ಗವನ್ನಾಗಿ ಉಪದೇಶಿಸಿದೆ. ಇದಷ್ಟೇ ಅಲ್ಲದೆ, "ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ" ಎಂಬ ಶ್ರುತಿಯು ಪ್ರಾಣಲಿಂಗದ ಅಭಿಧ್ಯಾನವನ್ನೂ, ಇಷ್ಟಲಿಂಗದ ಯೋಜನೆ ಅಂದರೆ ಧಾರಣವನ್ನೂ, ಭಾವಲಿಂಗದ ಸಾಮರಸ್ಯವನ್ನೂ ವಿಧಿಸಿದೆ. ಆದರೆ ಇದನ್ನು ಒಮ್ಮೆ ಮಾಡಿದರೆ ಸಾಲದು, ಅದನ್ನು ಭೂಯಃ ಮತ್ತೆಮತ್ತೆ ಸಾಧಿಸುತ್ತ ಧ್ಯಾನ ಅರ್ಚನೆ ಮತ್ತು ಭಾವನೆಗಳ ಮೂಲಕ ಸಾಧಕನಿಗೆ ಮಾಯಾಶಕ್ತಿಯ ಎಲ್ಲಾ ಬಗೆಯ ಮಾಯಾಪಾಶಗಳೂ ತೊಲಗುತ್ತವೆ. ಈ ಬಗೆಯ ಶ್ರುತಿ ಬ್ರಹ್ಮಸೂತ್ರಗಳ ಆಧಾರದ ಮೇಲೆ ಶ್ರೀಪತಿಪಂಡಿತಾರಾಧ್ಯರು ಶಿವನ ನಿತ್ಯಸಂಪರ್ಕ ಮತ್ತು ನಿತ್ಯಾರ್ಚನೆ ಇವುಗಳ ಆವಶ್ಯಕತೆಯನ್ನು ಸಾಧಿಸಿರುವುದರಿಂದ ಇದು ವೀರಶೈವರೆಲ್ಲರಿಗೂ ಗ್ರಾಹ್ಯವೆಂಬ ಅಂಶದಲ್ಲಿ ಯಾರಿಗೂ ವಿಪ್ರತಿಪತ್ತಿ ಇಲ್ಲ. ಭಾಷ್ಯವನ್ನು ಒಳಹೊಕ್ಕು ನೋಡಿದವರೆಲ್ಲರಿಗೂ ಈ ಅಂಶ ಸ್ಪಷ್ಟಪಡುತ್ತದೆ. ಇದರಮೇಲೆ ಈ ವಿಷಯವನ್ನು "ಶೈವಮತವೇ ಸರ್ವಶ್ರುತಿಸಮನ್ವಯವನ್ನು ಬೋಧಿಸುವುದರಿಂದ ಮುಮುಕ್ಷುಗಳಾದ ವೈದಿಕರೆಲ್ಲರಿಗೂ ಗ್ರಾಹ್ಯವೆನಿಸಿದೆ" ಎಂದು ಅನೇಕವೇಳೆ ಸ್ಪಷ್ಟವಾಗಿ ಅವರೇ ಉಲ್ಲೇಖಿಸಿದ್ದಾರೆ; "ವೀರಶೈವವು ಇತರ ಶೈವಗಳಿಗಿಂತಲೂ ಉತ್ಕೃಷ್ಟವಾಗಿದೆ" ಎಂಬುದನ್ನು ಸಿದ್ಧಾಂತಶಿಖಾಮಣಿಯ ಆಧಾರದಮೇಲೆ ತಿಳಿಸಿದ್ದಾರೆ. "ಸಿದ್ಧಾಂತಾಭಿಧಾನವೀರಶೈವಮೇವ ಮುಮುಕ್ಷುಭಿರುಪಾದೇಯಂ," ವೇದವೇದಾಂತಾನುಸರಣವಿವೇಕಿಭಿರ್ಮುಮುಕ್ಷುಭಿರ್ದ್ವೈತಾದ್ವೈತಪ್ರತಿಪಾದಕವೀರಶೈವಮತಮೇವಾಂಗೀಕರ್ತವ್ಯಮಿತಿ ಸೂತ್ರಕಾರಮುಖ್ಯಾಭಿಪ್ರಾಯಃ" ಎಂದು ಪತ್ಯಧಿಕರಣದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಸೂತ್ರಕಾರಮುಖ್ಯಾಭಿಪ್ರಾಯಃ" ಇಷ್ಟೇ ಅಲ್ಲದೆ, ಅದಕ್ಕೆ ಸಿದ್ಧಾಂತಾಗಮದ ವಾಕ್ಯವನ್ನೂ ಪ್ರಮಾಣವಾಗಿ ಕೊಟ್ಟು

"ದ್ವೈತಾದ್ವೈತಮತಂ ವೀರಶೈವಂ ಮೋಕ್ಷೈಕಕಲ್ಪಕಂ ।
ಸರ್ವವೇದಾಂತಸಿದ್ಧಾಂತಸಾರಂ ಸರ್ವಾರ್ಥಸಿದ್ಧಿದಂ ॥"

ಎಂಬಂತೆ ವೀರಶೈವಸಿದ್ಧಾಂತವನ್ನು ವೇದಾಂತಗಳ ಸಾರವೆಂದು ಘಂಟಾ

ಘೋಷವಾಗಿ ಜಗತ್ತಿಗೆ ಸಾರಿದ್ದಾರೆ. ಇದಲ್ಲದೆ, ದೇಹದಲ್ಲಿ ಪರಮಾತ್ಮನನ್ನು ಷಟ್ಸ್ಥಲಾತ್ಮಕನೆಂದು ಭಾವಿಸಿ ಉಪಾಸನೆಮಾಡುವ ಕ್ರಮವನ್ನು ಅನೇಕಕಡೆಗಳಲ್ಲಿ ಸಾಧಿಸಿದ್ದಾರೆ. ಇಷ್ಟಪ್ರಾಣಭಾವಲಿಂಗಗಳ ನಿತ್ಯಸಂಪರ್ಕವೇ ಮುಕ್ತಿಗೆ ಮುಖ್ಯಸಾಧನವೆಂದು ತಮ್ಮ ಭಾಷ್ಯದಲ್ಲಿ ಯುಕ್ತ್ಯಾಯುಕ್ತವಾಗಿ ನಿರೂಪಿಸಿದ್ದಾರೆ. ಆದ್ದರಿಂದ ಶ್ರೀಕರಭಾಷ್ಯವು ವೀರಶೈವಭಾಷ್ಯವೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಆದರೆ, ಇಲ್ಲಿ ಮತ್ತೊಂದು ಸಂಶಯ ಬರುತ್ತದೆ. ಶಿವಾಗಮಗಳು ವೀರಶೈವನನ್ನು ಅಪ್ರಾಕೃತನೆಂದೂ ಅತಿವರ್ಣಾಶ್ರಮಿ ಎಂದೂ ಕರೆದಿವೆ. ವೀರಶೈವರು ಶಿವೋಪಾಸಕರಾಗಿ ಶಿವನು ಬ್ರಾಹ್ಮಣರಿಗೇ ಉಪಾಸ್ಯನಾದ್ದರಿಂದ ವೀರಶೈವರನ್ನು ಬ್ರಾಹ್ಮಣರೆಂದು ಭಾವಿಸಿ ಅವರಿಗಾಗಿಯೇ ಶ್ರೀಕರಭಾಷ್ಯವು ರಚಿತವಾಗಿದೆ ಎಂದು ಹೇಳಿದರೂ ಶಿವಾಗಮಗಳ ಮಾತಿಗೆ ವಿರೋಧ ಬರುವುದಿಲ್ಲವೆ? ಇದನ್ನು ಹೇಗೆ ಸಮನ್ವಯಮಾಡಲಿಕ್ಕಾದೀತು? ಎಂದು ಕೇಳಿದರೆ ಅದಕ್ಕೂ ಸಮನ್ವಯವಿದ್ದೇ ಇದೆ. ವರ್ಣಧರ್ಮಗಳೂ, ಆಶ್ರಮಧರ್ಮಗಳೂ ಎಲ್ಲರಿಗೂ ಸಹಜವಾಗಿ ಅನ್ವಯಿಸುತ್ತವೆ. ಎಲ್ಲರೂ ಹುಟ್ಟುವಾಗ ಪ್ರಕೃತಿಸಂಬಂಧವುಳ್ಳವರೇ ಆದ್ದರಿಂದ ಪ್ರಾಕೃತವರ್ಣಾಶ್ರಮಗಳು ಎಲ್ಲರಿಗೂ ಇದ್ದೇ ಇರುತ್ತವೆ. ಯಾವನು ದೀಕ್ಷಾಸಂಸ್ಕಾರದಿಂದ ಮಲಗಳನ್ನು ತೊಳೆದುಕೊಂಡು ನಿರ್ಮಲನಾಗುವನೋ ಅವನೇ ಪ್ರಾಕೃತವರ್ಣಗಳಿಗೂ ಮೀರಿ ಅತಿವರ್ಣಾಶ್ರಮಿ ಎನಿಸುವನು. ಅವನೇ ಶಿವಾನಂದವನ್ನು ಅನುಭವಿಸುತ್ತ ತನ್ನೊಳಗಿರುವ ಶಿವನನ್ನೇ ಎಲ್ಲಾಜೀವರಲ್ಲೂ ಕಾಣುವನಾದ್ದರಿಂದ ವರ್ಣಾಶ್ರಮಧರ್ಮಗಳೆಲ್ಲಕ್ಕೂ ಅತಿಶಯಿತವಾದ ಪರಮೋತ್ತಮಸ್ಥಿತಿಯನ್ನು ಮುಟ್ಟಿರುವನು. ಆ ಸ್ಥಿತಿಯಲ್ಲಿ ಇರುವವನಿಗೆ ವರ್ಣಧರ್ಮಗಳಾಗಲೀ ಆಶ್ರಮಧರ್ಮಗಳಾಗಲೀ ಅಂಟುವುದಿಲ್ಲ. ಆದ್ದರಿಂದ ಪೂರ್ಣಸಿದ್ಧನಾದವನನ್ನು ಶಿವಾಗಮಗಳು ಅತಿವರ್ಣಾಶ್ರಮಿ ಎಂದು ಕರೆದಿರುವುದು ಅನ್ವರ್ಥವೆನಿಸುತ್ತದೆ. ಆದರೆ ಸಾಧಕನು ಅಪಕ್ವಸ್ಥಿತಿಯಲ್ಲಿರುವುದರಿಂದ ವರ್ಣಾಶ್ರಮಧರ್ಮಗಳನ್ನು ಮೀರಿದರೆ ಪತಿತನಾಗುವನು. ಈ ಧರ್ಮಗಳೂ ಸಹ ಜಗತ್ತಿನಲ್ಲಿ ಶಾಂತಿ ಸಮಾಧಾನಗಳ ಸುವ್ಯವಸ್ಥೆಗಾಗಿ ಶಿವನೇ ಏರ್ಪಡಿಸಿರುವ ನಿಯಮನಿಬಂಧನೆಗಳಾಗಿವೆ. ಇವನ್ನು ಅತಿಕ್ರಮಿಸಿದವನಿಗೆ ಇಹಪರಗಳು ದೊರೆಯಲಾರವು. ಸಿದ್ಧನಾದವನು ತಾನು ಸಿದ್ಧನಾದೆನೆಂದು ಬಾಯಲ್ಲಿ ಹೇಳಿಕೊಳ್ಳುವುದಿಲ್ಲ. ಅವನೂ ಸಹ ಲೋಕಕಲ್ಯಾಣಕ್ಕಾಗಿಯೂ ಇತರರಿಗೆ ಮಾರ್ಗದರ್ಶನಕ್ಕಾಗಿಯೂ ಕರ್ಮವನ್ನಾಚರಿಸುತ್ತಲೇ ಇರಬೇಕು. ಆದ್ದರಿಂದ ವರ್ಣಾಶ್ರಮಧರ್ಮಗಳ ಆಚರಣೆಯ ಮೂಲಕವೇ ಸಾಧಕನು ಅತಿವರ್ಣಾಶ್ರಮಸ್ಥಿತಿಯನ್ನು ಮುಟ್ಟಬೇಕಾಗಿದೆ. ಮೊದಲು ಪ್ರಾಕೃತನಾಗಿದ್ದವನೇ ಉತ್ತಮಸಂಸ್ಕಾರದಿಂದ ಅಪ್ರಾಕೃತನಾಗಬಲ್ಲನು. ಮೂರ್ತೋಪಾಸನೆಯಿಂದಲೇ ಅಮೂರ್ತಸ್ಥಿತಿಯನ್ನು ಸಾಧಕನು ಪಡೆಯಬಲ್ಲನು. ಈ ದೇಹದಲ್ಲಿ ಪ್ರಕೃತಿಯ ಮೂರುಗುಣಗಳೊಳಗೆ ಸಿಲುಕಿರುವವನೇ ವಿವೇಕದಿಂದ ಗುಣಾತೀತನಾಗಬಲ್ಲನು. ಹೀಗೆ ವರ್ಣಾಶ್ರಮನಿಯಮಗಳನ್ನು ತೊರೆಯದೆ ಸಾಧಕನು ತನ್ನ

ನಿತ್ಯಕರ್ಮಗಳನ್ನಾಚರಿಸುತ್ತಬಂದರೆ ಯಾವವರ್ಣದವನಾದರೂ ಅತಿವರ್ಣಾಶ್ರಮಿಯಾಗಬಹುದು. ಅದು ಜೀವನದ ಸಾಧನೆಯ ಕೊನೆಯ ಹಂತ; ಪರಪೂರ್ಣತೆಯ ಪರಮಾವಧಿ; ಸ್ವಾತಂತ್ರ್ಯ ಸಾಮ್ರಾಜ್ಯದ ವಿಕಸಿತಪುಷ್ಪ; ಸಚ್ಚಿದಾನಂದಾನುಭವದ ದಿವ್ಯದೃಷ್ಟಿ. ಹೀಗೆ ಬಾಳಿನಲ್ಲಿ ಸಾಧಿಸಿ ಪಡೆಯುವ ಅಂತಿಮಫಲವನ್ನು ಆರಂಭದ ಸಾಧನೆಯಕಾಲದಲ್ಲಿ ಅನ್ವಯಿಸಿಕೊಂಡರೆ ಇದರಿಂದ ಸಾಧಕನಿಗೆ ಪ್ರಮಾದವೂ ಅನರ್ಥಪರಂಪರೆಯೂ ಸಂಭವಿಸುತ್ತವೆ. ಆದರೆ ವರ್ಣಾಶ್ರಮಧರ್ಮಗಳನ್ನು ಆಚರಿಸಲೇಬೇಕೆಂಬ ನಿಯಮವಿದ್ದರೂ ನಿತ್ಯಯಜ್ಞವೆನಿಸಿದ ಲಿಂಗಪೂಜೆಗೆ ಮಾತ್ರ ಅವನ್ನು ಕೊಂಚ ಸಡಿಲಮಾಡಿಕೊಳ್ಳಲಿಕ್ಕೂ ಶಿವಾಗಮಗಳೇ ಅವಕಾಶವನ್ನು ಕಲ್ಪಿಸಿವೆ. ಜನನಮರಣಗಳ ಪ್ರಯುಕ್ತ ಸಹಜವಾಗಿ ಸಂಭವಿಸುವ ಸೂತಕ ದೋಷವು ಅವರವರ ಇಷ್ಟಲಿಂಗಪೂಜೆಗೆ ಮಾತ್ರ ಅನ್ವಯಿಸುವುದಿಲ್ಲವೆಂದು ವೀರಶೈವಾಗಮಗಳೂ ಆಚಾರ್ಯರೂ ಸ್ಪಷ್ಟವಾಗಿ ಹೇಳಿದ್ದಾರೆ. ಬಹಿಷ್ಠೆಯಾದ ಹೆಂಗಸಿಗೆ ಸೂತಕದೋಷವಿದ್ದರೂ ಆ ಕಾಲದಲ್ಲೂ ಆಕೆ ಮುಂಜಾನೆ ಸ್ನಾನಮಾಡಿ ಲಿಂಗಾರ್ಚನೆಮಾಡಿಯೇ ತೀರಬೇಕು. ಆದರೆ ಆಗ ಅವಳಿಂದ ಅಡಿಗೆಯನ್ನು ಯಾರೂ ಮಾಡಿಸುವುದಿಲ್ಲ. ಅವಳನ್ನು ಮೂರುದಿನಗಳವರೆಗೂ ಯಾರೂ ಮುಟ್ಟುವುದೂ ಇಲ್ಲ. ಆಕೆ ಆಗ ಲಿಂಗಪೂಜೆಯನ್ನೇ ಮಾಡಿದಮೇಲೆ ಅವಳ ಕೈಲಿ ಏಕೆ ಅಡಿಗೆ ಮಾಡಿಸಬಾರದು ? ಎಂದು ಕೇಳುವವರು ನಾಲಿಗೆಯಲ್ಲಿ ವೇದಮಂತ್ರವನ್ನು ಉಚ್ಚರಿಸಿದರೂ ಅದನ್ನು ಕೈಯಿಂದ ಏಕೆ ಮುಟ್ಟಬಾರದು ? ಎಂದು ತಮ್ಮಲ್ಲಿ ತಾವೇ ವಿಚಾರಿಸಿಕೊಳ್ಳುವುದು ಮೇಲು. ವೀರಶೈವರಿಗೆ ಲಿಂಗಪೂಜೆಗೆ ಮಾತ್ರ ಸೂತಕದೋಷವಿಲ್ಲವೆಂಬ ನಿಯಮವನ್ನು ಅನೇಕರು ದುರುಪಯೋಗಪಡಿಸುತ್ತ ಯಾವಾಗಲೂ ವೀರಶೈವರಿಗೆ ಸೂತಕದೋಷವೇ ಇಲ್ಲವೆಂದು ಹೇಳಲಾರಂಭಿಸಿದ್ದಾರೆ. ಹಾಗೆ ಹೇಳುವವರು ಯಾರೂ ಬಹಿಷ್ಠೆಯಾದ ಹೆಂಗಸಿನೊಡನೆ ಆ ಕಾಲದಲ್ಲಿ ಭೋಗಿಸಲಾರರು. ದೇಹದೊಳಗಿನ ಕಲ್ಮಷ ತಿಂಗಳಿಗೊಮ್ಮೆ ಹೊರಬೀಳುವುದು ಪ್ರಕೃತಿಧರ್ಮ. ಅಂತಹ ದೋಷವೇ ತಮಗಿಲ್ಲವೆಂದು ವಾದಿಸುವವರು ಆಕೆಯೊಡನೆ ಭೋಗಿಸಿ ಅದರಿಂದಾಗುವ ಅನರ್ಥಪರಂಪರೆಗಳನ್ನು ಮುಂದಿನ ದೃಷ್ಟಿಯಿಂದಲ್ಲದಿದ್ದರೂ ಐಹಿಕಾರೋಗ್ಯದ ದೃಷ್ಟಿಯಿಂದಲಾದರೂ ಪರೀಕ್ಷಿಸುವುದು ಮೇಲು. ಆದ್ದರಿಂದ ಷಟ್ಸ್ಥಲಸಾಧನೆಯಲ್ಲಿ ಐಕ್ಯಸ್ಥಿತಿಗೆ ಅನ್ವಯಿಸುವ ಅತಿವರ್ಣಾಶ್ರಮಸ್ಥಿತಿಯನ್ನು ಭಕ್ತಸ್ಥಿತಿಗೆ ಅನ್ವಯಿಸುವುದು ಯುಕ್ತವಲ್ಲವೆಂಬುದು ನಿರ್ಮಲಹೃದಯರೆಲ್ಲರಿಗೂ ಸ್ವಯಂವೇದ್ಯವಾಗಿರುವುದು. ಇದರಿಂದ ವೀರಶೈವರೆಲ್ಲರೂ ಜಾತಿಯಲ್ಲಿ ಬ್ರಾಹ್ಮಣರೇ ಆಗಿರುವುದರಿಂದ ಅವರು ಲಿಂಗದ ಸಂಪರ್ಕದಿಂದ ಪವಿತ್ರರೆನಿಸಿ ಅತಿವರ್ಣಾಶ್ರಮಿಗಳಾಗಬೇಕೆಂಬುದೇ ಶಿವಾಗಮಗಳ ಮತ್ತು ಭಾಷ್ಯದ ಅಭಿಪ್ರಾಯವಾಗಿದೆ ಎಂಬುದು ಸ್ಪಷ್ಟಪಡುತ್ತದೆ. ಇಷ್ಟು ದೀರ್ಘವಾದ ಪರಿಶೀಲನೆಯಿಂದ ಶ್ರೀಕರಭಾಷ್ಯವು ವೀರಶೈವರ ಸಿದ್ಧಾಂತಕ್ಕೆ ಸಂಬಂಧಿಸಿದ ಭಾಷ್ಯವೆಂಬುದು ನಿರ್ವಿವಾದವಾಯಿತು.

ಆದರೆ ಇಲ್ಲಿ ಮತ್ತೊಂದು ಸಂಶಯ ಬರುತ್ತದೆ. ಶ್ರೀಪತಿಪಂಡಿತಾರಾಧ್ಯರು ವೀರಶೈವಸಿದ್ಧಾಂತಕ್ಕೆ ದ್ವೈತಾದ್ವೈತವೆಂದು ಕರೆದಿರುವಂತೆಯೇ ವಿಶೇಷಾದ್ವೈತ ವೆಂದೂ ಕರೆದಿದ್ದಾರೆ. ದ್ವೈತಾದ್ವೈತವೆಂಬ ಪದವು ವೀರಶೈವರ ಷಟ್ಸ್ಥಲ ಸಿದ್ಧಾಂತದ ಪ್ರಕಾರ ಭಕ್ತಸ್ಥಲದಲ್ಲಿ ಶಿವಜೀವರಿಗೆ ದ್ವೈತವೂ, ಐಕ್ಯಸ್ಥಲದಲ್ಲಿ ಅದ್ವೈತವೂ ಇರುವುದರಿಂದ ವೀರಶೈವರಿಗೆ ಸಹಜವಾಗಿ ಅನ್ವಯಿಸುತ್ತದೆ. ಆದರೆ ವಿಶೇಷಾದ್ವೈತವೆಂಬ ಪದವು ಕೇವಲ ಅದ್ವೈತವನ್ನೇ ಬೋಧಿಸುವುದರಿಂದ ವೀರ ಶೈವರಿಗೆ ಹೇಗೆ ಹೊಂದುತ್ತದೆ? ಎಂಬ ಪ್ರಶ್ನೆ ಬರುತ್ತದೆ. ಆದರೆ, ಇದರಲ್ಲೂ ಅನೌಚಿತ್ಯವೇನೂ ಕಾಣುವುದಿಲ್ಲ. ಈ ಪದಕ್ಕೆ ಶ್ರೀಪತಿಪಂಡಿತರೇ ವಿವರಣಕೊಡು ವಂತೆ ವಿಶಬ್ದವು ಪರಶಿವನನ್ನೂ, ಶೇಷಶಬ್ದವು ಜೀವವನ್ನೂ, ಅದ್ವೈತಪದವು ಇವ ರಿಬ್ಬರಿಗೂ ಸಾಮರಸ್ಯವನ್ನೂ ಬೋಧಿಸುತ್ತದೆ.

ವಿಶಬ್ದೇನೋಚ್ಯತೇ ಶಂಭುರ್ದ್ವಾಸುಪರ್ಣೇತಿ ಮಂತ್ರತಃ ।
ಶೇಷಶಬ್ದೇನ ಶಾರೀರೋ ಯಥಾಗ್ನೇರಿತಿ ಮಂತ್ರತಃ ।
ಅದ್ವೈತೇನ ಭವೇದ್ಯೋಗೋ ಯಥಾ ನದ್ಯಾದಿಭಿಭಿಸ್ತಥಾ ॥

ಹೀಗೆ ಭಾಷ್ಯದ ಆರಂಭದಲ್ಲಿ ತಿಳಿಸಿ ಮುಂದ "ಸ್ಥಿತ್ಯದನಾಭ್ಯಾಂ" ಎಂಬ ಸೂತ್ರ ಭಾಷ್ಯದಲ್ಲಿ ಈ ಅಂಶವನ್ನು ಅವರೇ ವಿಶದಪಡಿಸಿದ್ದಾರೆ. ವಿಶೇಷರೆನಿಸಿದ ಶಿವಜೀವರ ಅದ್ವೈತವನ್ನು ಬೋಧಿಸಿದರೂ ಈ ಪದವು ಅವರಿಬ್ಬರಿಗೂ ಭೇದವು ಸಹಜವಾಗಿರುವು ದೆಂಬ ಅಂಶವನ್ನೂ ತಿಳಿಸುತ್ತದೆ. "ಶಿವಜೀವರು ಚಿಜ್ಜಾತಿಯಿಂದ ಒಂದೇ ಆಗಿದ್ದರೂ ಜಡಜಾತಿಯ ಕಲ್ಲು ಮಣ್ಣುಗಳಂತೆ ಸಹಜವಾಗಿ ಭಿನ್ನರಾಗಿರುವುದರಿಂದ ಜೀವನು ಅಣು ಮತ್ತು ಕಿಂಚಿದ್‌ಜ್ಞನಾಗಿ ಶಿವನು ವಿಭು ಮತ್ತು ಸರ್ವಜ್ಞನಾಗಿ ಇಬ್ಬರಿಗೂ ಪರಸ್ಪರ ವಿರುದ್ಧಧರ್ಮಗಳೇ ಇರುವುದರಿಂದ ಅವರಿಬ್ಬರಿಗೂ ಭೇದವು ಪಾರಮಾರ್ಥಿಕ ವಾಗಿರುವುದೆಂಬ ಅಂಶವನ್ನು ತಿಳಿಸಲಿಕ್ಕಾಗಿಯೇ ಶಿವಜೀವರಿಬ್ಬರನ್ನೂ ಆಯಾಪದ ಗಳಿಂದಲೇ ನಿರ್ದೇಶಿಸಲಾಗಿದೆ" ಎಂದು ಭಾಷ್ಯಕಾರರು ಸ್ಪಷ್ಟವಾಗಿ ತಿಳಿಸಿದ್ದಾರೆ. ಇದರಿಂದ ಶಿವಜೀವರಿಗೆ ದ್ವೈತವು ಸಹಜವೆಂದು ಸಿದ್ಧವಾಗುತ್ತದೆ. ಹೀಗೆ ವಿರುದ್ಧ ಧರ್ಮಗಳಿರುವುದರಿಂದ ಅವರಿಬ್ಬರಿಗೆ ಭೇದವನ್ನು ಔಪಾಧಿಕವೆಂದು ಹೇಳುವ ಭಟ ಭಾಸ್ಕರರ ವಾದವಾಗಲೀ, ಜೀವನೇ ಬ್ರಹ್ಮನೆಂದು ಹೇಳುವ ಶಾಂಕರವಾದವಾಗಲೀ ಯುಕ್ತವಲ್ಲವೆಂಬುದು ಸ್ಪಷ್ಟವಾಗುತ್ತದೆ. ಹೀಗೆಯೇ ಜೀವಬ್ರಹ್ಮರಿಗೆ ಮುಕ್ತಿ ಯಲ್ಲೂ ಭೇದವನ್ನು ಹೇಳುವ ದ್ವೈತ ವಿಶಿಷ್ಟಾದ್ವೈತವಾದಗಳೂ ಹೊಂದುವುದಿಲ್ಲ. ಜೀವನು ವಾಸ್ತವವಾಗಿ ಶಿವನ ಸಾಕ್ಷಾದಂಶನೇ ಆದ್ದರಿಂದ ಶಕ್ತಿಸಂಕೋಚದಿಂದ ಭಿನ್ನನಾಗಿದ್ದರೂ ಶಕ್ತಿವಿಕಾಸದಿಂದ ತನ್ನ ವಾಸ್ತವಸ್ಥಿತಿಯನ್ನು ಎಂದಾದರೊಂದುದಿನ ಅವಶ್ಯವಾಗಿ ಪಡೆಯಲೇಬೇಕಾದ್ದರಿಂದ ಶ್ರೀಪತಿಪಂಡಿತರ ದೃಷ್ಟಿಯಲ್ಲಿ ಶಿವಜೀವರಿಗೆ ಭೇದ ಸ್ವಾಭಾವಿಕವೆಂದೂ, ಅಭೇದ ವಾಸ್ತವಿಕವೆಂದೂ, ಸಂಸಾರದಶೆಯಲ್ಲಿ ಅಭೇದ ಅವ್ಯಕ್ತವಾಗಿದ್ದು ಮೋಕ್ಷದಶೆಯಲ್ಲಿ ಅಭಿವ್ಯಕ್ತವಾಗುವುದೆಂದೂ ಹೇಳಿದಹಾಗಾ

ಯಿತು. ಹೀಗೆ ಹೇಳುವುದರಿಂದ ಭೇದಶ್ರುತಿ ಮತ್ತು ಅಭೇದಶ್ರುತಿಗಳೆರಡಕ್ಕೂ ಕಾಲಭೇದದಿಂದಲೂ,ಅವಸ್ಥಾಭೇದದಿಂದಲೂ ಪೂರ್ಣಸಮನ್ವಯವಾಗುವುದೆಂದೂ, ಹೀಗೆ ಶಿವಜೀವರಿಗೆ ಭೇದಅಭೇದಗಳೆರಡನ್ನೂ ಹೇಳುವುದರಿಂದ ಯಾವಬಗೆಯ ವಿರೋಧಕ್ಕೂ ಅವಕಾಶವಿಲ್ಲವೆಂದೂ ಅವರು ಅಭಿಪ್ರಾಯಪಡುತ್ತಾರೆ. ಇದನ್ನು "ಅವಸ್ಥಿತೇರಿತಿ ಕಾಶಕೃತ್ಸ್ನಃ" ಎಂಬ ಸೂತ್ರದಲ್ಲಿ ಶ್ರುತಿ ಯುಕ್ತಿ ಅನುಭವಗಳ ಆಧಾರದಮೇಲೆ ಕಾಶಕೃತ್ಸ್ನಾಚಾರ್ಯರಿಗೂ ಬಾದರಾಯಣರಿಗೂ ಸಮ್ಮತವೆಂದೂ, ಇದೇ ವೇದಾಂತಶಾಸ್ತ್ರದ ಮುಖ್ಯಸಿದ್ಧಾಂತವೆಂದೂ ಘಂಟಾಘೋಷಮಾಡಿದ್ದಾರೆ. ಹೀಗೆಯೇ "ಉಭಯವ್ಯಪದೇಶಾತ್ತ್ವಹಿಕುಂಡಲವತ್" ಎಂಬ ಸೂತ್ರದಲ್ಲಿ ಬಾದ ರಾಯಣರೂ ಸಹ ಅಹಿಕುಂಡಲದೃಷ್ಟಾಂತದಿಂದ ಶಿವಜೀವರಿಗೆ ಭೇದಅಭೇದವೆರ ಡನ್ನೂ ಪಾರಮಾರ್ಥಿಕವೆಂದು ಒಪ್ಪಿರುವುದಾಗಿಯೂ ತಿಳಿಸಿದ್ದಾರೆ. "ಅಧಿಕಂ ತು ಭೇದನಿರ್ದೇಶಾತ್" ಎಂಬ ಸೂತ್ರಭಾಷ್ಯದಲ್ಲಿ ಜೀವಬ್ರಹ್ಮರಿಗೆ ಸ್ವಾಭಾವಿಕಭೇದ ವನ್ನು ತಿಳಿಸಿ,"ಆತ್ಮನಿ ಚೈವಂ ವಿಚಿತ್ರಾಶ್ಚ ಹಿ"(೨-೧-೨೮)ಮತ್ತು "ಸರ್ವೋಪೇತಾ ಚ ತದ್ದರ್ಶನಾತ್" (೨-೧-೩೦) ಇವೆರಡು ಸೂತ್ರಗಳಲ್ಲೂ ಜೀವಶಿವರಿಬ್ಬರೂ ಸ್ವಾಭಾವಿಕಶಕ್ತಿವಿಶಿಷ್ಟರೆಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ. ಜೀವರಲ್ಲಿ ಮಾಯಾ ಶಕ್ತಿಯ ಸಂಬಂಧದಿಂದ ಪರಸ್ಪರವಾಗಿಯೂ ಮತ್ತು ಶಿವನಿಂದಲೂ ಸಹಜವಾದ ಭೇದವಿರುವುದಾದರೂ ಶಿವನ ನಿರಂತರಧ್ಯಾನಧಾರಣೋಪಾಸನಗಳಿಂದ ಆ ಭೇದವು ಕ್ರಮವಾಗಿ ತೊಲಗಿ ಜೀವನು ತನ್ನ ವಾಸ್ತವವಾದ ಅಭೇದವನ್ನು ದೀಕ್ಷೆಯಿಂದ ನಿರ್ಮಲವಾದ ಈ ಪ್ರಸಾದಕಾಯದಲ್ಲಿಯೇ ಅನುಭವಿಸಬಲ್ಲನು. ಹೀಗೆ ಜೀವನು ಮಾಯಾಶಕ್ತಿವಿಶಿಷ್ಟನಾಗಿ ಶಿವನು ಚಿತ್‌ಶಕ್ತಿವಿಶಿಷ್ಟನಾಗಿ ಇಬ್ಬರಿಗೂ ಭೇದವು ಸಹಜವಾಗಿರುವುದರಿಂದಲೂ,ಇಂತಹ ಶಕ್ತಿವಿಶಿಷ್ಟಜೀವರಿಗೆ ವಾಸ್ತವವಾದ ಅಭೇದವು ಷಟ್ಸ್ಥಲೋಪಾಸನದಿಂದ ದೊರಕುವುದರಿಂದಲೂ, ಭೇದಅಭೇದವೆರಡರ ಪಾರಮಾ ರ್ಥಿಕತೆಯನ್ನು ತಿಳಿಸಲಿಕ್ಕಾಗಿ ವೀರಶೈವಸಿದ್ಧಾಂತವನ್ನು ಶಕ್ತಿವಿಶಿಷ್ಟಾದ್ವೈತವೆಂದು ಕರೆಯಲಾಗಿದೆ. ಹೀಗೆ ಶಿವನು ಶಕ್ತಿವಿಶಿಷ್ಟನಾಗಿರುವುದರಿಂದಲೇ ತನ್ನ ಶಕ್ತಿವೈಭವ ದಿಂದ ಜಗದ್ವ್ಯಾಪಕಗಳನ್ನು ಲೀಲೆಯಿಂದ ನಡೆಸುತ್ತ ತನ್ನ ಅಂಶನಾದ ಜೀವನಿಗೆ ಉಪಾಸನಸೌಕರ್ಯಕ್ಕಾಗಿ ಇಷ್ಟಪ್ರಾಣಭಾವರೂಪದಿಂದ ಅವನ ಸ್ಥೂಲಸೂಕ್ಷ್ಮ ಕಾರಣದೇಹಗಳಲ್ಲಿ ನೆಲಸಿ ಈ ಬಗೆಯ ಪ್ರಯೋಜನವನ್ನು ಅವನಿಗೆ ಅವ್ಯಾಜಪ್ರೇಮ ದಿಂದ ದೊರಕಿಸುತ್ತಿರುವುದರಿಂದಲೇ ಅವನು ಅದ್ವೈತವೇದಾಂತದಲ್ಲಿ ಹೇಳಿರುವಂತೆ ನಿರ್ವಿಶೇಷನೆನಿಸಲಾರನು ಎಂದು "ನ ಪ್ರಯೋಜನವತ್ತ್ವಾತ್" ಎಂಬ ಸೂತ್ರದಲ್ಲಿ ಶ್ರೀಪತಿಪಂಡಿತಾರಾಧ್ಯರು ಪ್ರತಿಪಾದಿಸಿದ್ದಾರೆ. ಇದು ಮುಮುಕ್ಷುಗಳೆಲ್ಲರಿಗೂ ಸ್ಮರ ಣೀಯವಾದ ಅಂಶ. "ಅತಸ್ಸರ್ವಶಕ್ತಿವಿಶಿಷ್ಟಃ ಸರ್ವೇಶ್ವರಃ ಪರಮಶಿವಃ" ಎಂದು "ವಿಕರಣತ್ವಾನ್ನೇತಿ ಚೇತ್ತದುಕ್ತಂ" (೨-೧-೩೧) ಎಂಬ ಸೂತ್ರದಲ್ಲೂ,"ಶಕ್ತಿದ್ವಯ ವಿಶಿಷ್ಟತಯಾ"ಎಂದು "ಸರ್ವೋಪೇತಾ ಚ" ಎಂಬ ಸೂತ್ರದಲ್ಲೂ, "ಪರಿಚ್ಛಿನ್ನ ಶಕ್ತಿ

ವಿಶಿಷ್ಟೇ ಜೀವಾತ್ಮನಿ"ಎಂದು "ಆತ್ಮನಿ ಚೈವಂ"ಎಂಬ ಸೂತ್ರದಲ್ಲೂ ಹೇಳಿರುವುದರಿಂದ ಶಿವಜೀವರಿಬ್ಬರೂ ಶಕ್ತಿವಿಶಿಷ್ಟರೆಂಬ ಅಂಶ ಸ್ಪಷ್ಟವಾಗಿದೆ. ಇವರಿಗೆ ಶಕ್ತಿಯಲ್ಲಿ ಭೇದ ವಿದ್ದರೂ " ಯಥಾ ನದ್ಯಃ ಸ್ಯಂದಮಾನಾಸ್ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ।ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ॥ " ಎಂಬ ಶ್ರುತಿಯಂತೆ ನದಿಯು ಸಮುದ್ರದಲ್ಲಿ ಸೇರಿ ನಾಮರೂಪಗಳನ್ನು ಕಳೆದುಕೊಳ್ಳು ವಂತೆ ಜೀವನು ಉಪಾಸನೆಯ ಮೂಲಕ ಶಿವಾನುಗ್ರಹಕ್ಕೆ ಪಾತ್ರನಾಗಿ ದೇಹಾಭಿಮಾನ ವನ್ನು ತೊರೆದು ವಿಶ್ವಾತ್ಮಕನಾದ ಶಿವನಲ್ಲಿ ಬೆರೆತು ಶಿವಾನಂದವನ್ನು ಅನುಭವಿಸುವನು. ಸೂರ್ಯನ ಕಿರಣಗಳಿಂದ ಸಮುದ್ರದ ನೀರು ಆಕರ್ಷಿತವಾಗಿ ಮೇಘರೂಪದಿಂದ ಒಂದೆಡೆ ಕಲೆತಿದ್ದು ಗಾಳಿಯ ಹೊಡೆತದಿಂದ ಕೆಳಗೆ ಮಳೆಹನಿಯಾಗಿ ಸುರಿದು ನೆಲದಮೇಲೆ ಒಂದೆಡೆ ಕಲೆತು ನದಿಯಾಗಿ ಹರಿಯುತ್ತಿರುವುದು. ಹೀಗೆ ನದಿಗೆ ಮೂಲ ಸಮು ದ್ರವೇ ಆಗಿರುವುದು. ಆದ್ದರಿಂದಲೇ ಅದರ ಗಮನವೆಲ್ಲವೂ ಸಮುದ್ರದ ಕಡೆಗೇ ಇರುವುದು. ಅದು ಸಮುದ್ರಕ್ಕೆ ಸೇರುವವರೆಗೂ ಅದಕ್ಕೆ ನದಿ ಎಂಬ ಹೆಸರೇ ಸತ್ಯವಾ ಗಿರುತ್ತದೆ. ಅದು ಸಮುದ್ರವನ್ನು ಸೇರಿದಮೇಲೆ ಅದಕ್ಕೆ ಸಮುದ್ರವೆಂಬ ಹೆಸರು ಬರುತ್ತದೆ. ಹೀಗೆ ಜೀವನು ಶಿವನ ಅಂಶನಾಗಿ ಶಿವನಿಂದಲೇ ಬಂದಿರುವುದರಿಂದ ಅವನ ಗಮನವೆಲ್ಲವೂ ಶಿವನ ಕಡೆಗೇ ಇರುತ್ತದೆ. ಆದರೆ ಗಡಿಗೆಯ ನೀರು ನದಿಯ ನೀರಿನಿಂದ ಭಿನ್ನವಾದಂತೆ ಜೀವನು ಮಾಯಾಶಕ್ತಿಯ ಸಂಪರ್ಕದಿಂದ ಸಹಜವಾಗಿ ಭಿನ್ನನಾಗಿದ್ದು ಶ್ರದ್ಧಾಭಕ್ತಿಧ್ಯಾನಯೋಗದಿಂದ ತನ್ನ ಶಿವಭಾವವನ್ನು ಹೊಂದಿ ಶಿವಾನಂದವನ್ನು ಅನುಭವಿಸುವನು. ಈ ಅಂಶ ವೀರಶೈವ ದರ್ಶನದ ಷಟ್ಸ್ಥಲೋ ಪಾಸನಕ್ರಮದಲ್ಲಿ ಸ್ಪಷ್ಟಪಡುವುದು. ಇದನ್ನು ದಾರ್ಶನಿಕವಾಗಿ ದ್ವೈತಾದ್ವೈತ ಮತವೆಂದೂ, ಶಕ್ತಿವಿಶೇಷವಿಶಿಷ್ಟಶಿವಾದ್ವೈತವೆಂದೂ, ವಿಶೇಷಾದ್ವೈತವೆಂದೂ ಶ್ರೀಪತಿಪಂಡಿತರು ಕರೆದಿದ್ದಾರೆ. ಶ್ರೀಕಂಠಶಿವಾಚಾರ್ಯರು ತಮ್ಮ ಸಿದ್ಧಾಂತವನ್ನು ಚಿದಚಿಚ್ಛಕ್ತಿವಿಶಿಷ್ಟಾದ್ವೈತವೆಂದು ಕರೆದಿರುವುದರಿಂದ ಶ್ರೀಪತಿಪಂಡಿತಾರಾಧ್ಯರೂ ತಮ್ಮ ಸಿದ್ಧಾಂತವನ್ನು ಇದೇ ಹೆಸರಿನಿಂದಲೇ ಕರೆದರೆ ಇವೆರಡುಮತಗಳೂ ಶೈವ ಮತಗಳೇ ಆಗಿ ಶಿವನನ್ನೇ ಪರಬ್ರಹ್ಮವೆಂದು ಹೇಳಿರುವುದರಿಂದ ಇವೆರಡೂ ಒಂದೇ ಎಂಬ ಭಾವನೆ ಜನರಿಗುಂಟಾದೀತೆಂದು ಆಶಂಕಿಸಿ ಶ್ರೀಪತಿಪಂಡಿತರು ವಿಶೇಷಾದ್ವೈತ ವೆಂಬ ಪದವನ್ನೂ ಉಪಯೋಗಿಸಿರುವಂತೆ ಕಾಣುತ್ತದೆ. ಶ್ರೀಕಂಠರ ಶಕ್ತಿವಿಶಿಷ್ಟಾ ದ್ವೈತಮತವು ಭೇದಗರ್ಭಿತವಾದ ಅಂಗಾಂಗಿಭಾವವನ್ನು ಆಶ್ರಯಿಸಿದೆ ಎಂದೂ, ಶ್ರೀಪತಿಪಂಡಿತರ ಮತದಲ್ಲಿ ಶಿವಶಕ್ತಿಗಳಿಗೆ ಅಂಗಾಂಗಿಭಾವವಿಲ್ಲವೆಂದೂ, ಪ್ರಾಣಭಾವ ನೆಯಿಂದ ಸಾಮರಸ್ಯವಿರುವುದೆಂದೂ ಹಿಂದೆಯೇ ಹೇಳಿದೆ. ಶಿವನು ತನ್ನ ಅಂಶನಾದ ಜೀವನ ಸೌಕರ್ಯಕ್ಕಾಗಿ ತನ್ನ ಅಚಿದ್ರೂಪವಾದ ಮಾಯಾಶಕ್ತಿಯ ಅತ್ಯಲ್ಪಾಂಶ ದಿಂದ ಅಷ್ಟಮೂರ್ತಿಯೂ, ತದಂತರ್ಯಾಮಿಯೂ ಆಗಿದ್ದರೂ ತಾನು ಸ್ವಯಂಭು ಸ್ಥಿತಿಯಲ್ಲಿ ಆತ್ಮಾರಾಮನೂ ವಿಶ್ವಾತೀತನೂ ಆಗಿರುವುದರಿಂದ ಶಿವಜೀವರಿಗೂ, ಶಿವ

ಜಗತ್ತುಗಳಿಗೂ ಅಂಗಾಂಗಿಭಾವವು ಹೊಂದುವುದಿಲ್ಲವೆಂದು "ಮುಕ್ತೋಪಸೃಪ್ಯ ವ್ಯಪದೇಶಾತ್" ಎಂಬ ಸೂತ್ರಭಾಷ್ಯದಲ್ಲಿ ಶ್ರೀಪತಿಪಂಡಿತಾರಾಧ್ಯರು ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ. "ಏವಂ ವಿಶಿಷ್ಟಾದ್ವೈತಸ್ಯಾಸಂಗತತಯಾ ವಿಶೇಷಾದ್ವೈತಮೇವ ಮುಮುಕ್ಷುಭಿರಾಶ್ರಯಣೀಯಂ" ಎಂದು ಹೇಳಿ ರಾಮಾನುಜರ ಚಿದಚಿದ್ವಿಶಿಷ್ಟಾದ್ವೈತವನ್ನೂ, ಚಿದಚಿತ್ತುಗಳ ಸ್ಥಾನದಲ್ಲಿ ಶಕ್ತಿಯನ್ನು ಉಪಯೋಗಿಸಿರುವ ಶ್ರೀಕಂಠರ ಶಕ್ತಿವಿಶಿಷ್ಟಾದ್ವೈತವನ್ನೂ ಖಂಡಿಸಿ ವಿಶೇಷಾದ್ವೈತಪದವನ್ನು ಉಪಯೋಗಿಸಿದ್ದಾರೆ. ಹೀಗೆ ಹೇಳಿದ್ದರೂ, ಭೇದಾಭೇದಗಳೆರಡೂ ಸತ್ಯವೆಂಬುದನ್ನು ತಿಳಿಸಲಿಕ್ಕಾಗಿಯೇ ವಿಶೇಷವೆಂಬ ಶಿವಜೀವಬೋಧಕಪದವನ್ನು ಉಪಯೋಗಿಸಿರುವುದಾಗಿ "ಸ್ಥಿತ್ಯದನಾಭ್ಯಾಂ" (೧-೩-೭) ಎಂಬ ಸೂತ್ರಭಾಷ್ಯದಲ್ಲಿ ಅವರೇ ಸ್ಪಷ್ಟವಾಗಿ ತಿಳಿಸಿದ್ದಾರೆ. ಹೀಗೆ ಶ್ರೀಪತಿಪಂಡಿತರ ದೃಷ್ಟಿಯಲ್ಲಿ ವೀರಶೈವಮತವು ದಾರ್ಶನಿಕವಾಗಿ ವಿಶೇಷಾದ್ವೈತ ಶಕ್ತಿವಿಶಿಷ್ಟಾದ್ವೈತವೆಂಬ ಹೆಸರುಗಳಿಂದಲೂ, ದ್ವೈತಾದ್ವೈತಸಾಂಪ್ರದಾಯಕವಾಗಿ ಷಟ್ಸ್ಥಲಸಿದ್ಧಾಂತವೆಂಬ ಹೆಸರಿನಿಂದಲೂ ಪ್ರಸಿದ್ಧವೆನಿಸಿದೆ. ಸಾಂಪ್ರದಾಯಿಕ ಶಬ್ದದಲ್ಲಿ ಸಾಧನಮಾರ್ಗವೂ ಸಿದ್ಧಾಂತವೂ ಕ್ರಮವಾಗಿ ಸೇರಿರುವುದರಿಂದ ಸಿದ್ಧಾಂತಕ್ಕೇ ಪ್ರಾಶಸ್ತ್ಯವನ್ನು ಕೊಟ್ಟು ಈ ಮತವನ್ನು ಷಟ್ಸ್ಥಲಸಿದ್ಧಾಂತವೆಂದು ಕರೆಯಲಾಗಿದೆ. ಹೀಗೆ ಸಿದ್ಧಾಂತಸಾಧನಗಳೆರಡನ್ನೂ ಒಳಗೊಂಡ ವೀರಶೈವದರ್ಶನವನ್ನು ಶ್ರುತಿ, ಬ್ರಹ್ಮಸೂತ್ರ ಮತ್ತು ಶಿವಾಗಮಗಳ ಆಧಾರದಮೇಲೆ ಶ್ರೀಪತಿಪಂಡಿತಾರಾಧ್ಯರು ಸಮನ್ವಯದೃಷ್ಟಿಯಿಂದ ನಿರೂಪಿಸಿ ಮಾನವಸಮಾಜಕ್ಕೆ ಮಹೋಪಕಾರಮಾಡಿದ್ದಾರೆ.

ಹೀಗೆ ಭೇದ ಮತ್ತು ಅಭೇದಶ್ರುತಿಗಳನ್ನು ಅವಸ್ಥಾಭೇದದಿಂದಲೂ ಕಾಲಭೇದದಿಂದಲೂ ವಿರೋಧಬರದಂತೆ ಶಿವಜೀವರಿಗೆ ಸಮನ್ವಯಮಾಡಿರುವಂತೆಯೇ ಸಗುಣಶ್ರುತಿಗಳಿಗೂ ನಿರ್ಗುಣಶ್ರುತಿಗಳಿಗೂ, ಸಾಕಾರಬೋಧಕಶ್ರುತಿಗಳಿಗೂ ನಿರಾಕಾರಶ್ರುತಿಗಳಿಗೂ ಶ್ರುತಿ ಬ್ರಹ್ಮಸೂತ್ರ ಮತ್ತು ಆಗಮಗಳ ಆಧಾರದಮೇಲೆ ಶ್ರೀಪತಿಪಂಡಿತಾರಾಧ್ಯರು ಸಮನ್ವಯಮಾಡಿರುವುದು ಯುಕ್ತಿಯುಕ್ತವೂ ಶ್ಲಾಘನೀಯವೂ ಆಗಿದೆ. "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಮೊದಲಾದ ನಿರ್ಗುಣಶ್ರುತಿಗಳು ಪ್ರಳಯಕಾಲದ ಪರಶಿವನ ಸ್ವಯಂಭುಸ್ಥಿತಿಯ ಶಕ್ತಿಸಂಕೋಚಕಾಲಕ್ಕೆ ಅನ್ವಯಿಸುತ್ತವೆಎಂದೂ, "ಸರ್ವಜ್ಞಸ್ಸರ್ವವಿತ್ ಸತ್ಯಕಾಮಃ ಸತ್ಯಸಂಕಲ್ಪಃ" ಮೊದಲಾದ ಸಗುಣಶ್ರುತಿಗಳು ಶಿವನ ಭಕ್ತಾನುಗ್ರಹಲೀಲೆಯ ಶಕ್ತಿವಿಕಾಸಾವಸ್ಥೆಗೆ ಅನ್ವಯಿಸುತ್ತವೆಎಂದೂ ಸ್ಪಷ್ಟವಾಗಿ ತಿಳಿಸಿ ಶ್ರುತಿಗಳಲ್ಲಿ ಪರಸ್ಪರವಿರೋಧಕ್ಕೆ ಅವಕಾಶವೇ ಇಲ್ಲದಂತೆ ಎಲ್ಲಾ ಬಗೆಯ ಸಂಶಯಗಳನ್ನು ಪರಿಹರಿಸಿದ್ದಾರೆ; ಇದರಂತೆ ಪರಮಶಿವನು ಸಾಕಾರನೂ ನಿರಾಕಾರನೂ ಆಗಿದ್ದು ಸಾಕಾರಸ್ಥಿತಿಯಲ್ಲಿ ಭಕ್ತರಿಗೆ ಅನುಗ್ರಹಮಾಡುತ್ತ ನಿರಾಕಾರಸ್ಥಿತಿಯಲ್ಲಿ ಮುಕ್ತರನ್ನು ತನ್ನೊಳಗೆ ಸೇರಿಸಿಕೊಳ್ಳುತ್ತಿರುವನಾದ್ದರಿಂದ ಸಾಕಾರನಿರಾಕಾರಸ್ಥಿತಿಗಳೆರಡೂ ಸತ್ಯವೆಂದು ಸಪ್ರಮಾಣವಾಗಿ ನಿರೂಪಿಸಿದ್ದಾರೆ. "ಉಮಾಸಹಾಯಂ ಪರಮೇಶ್ವರಂ ಪ್ರಭುಂ ನೀಲಕಂಠಂ ಪ್ರಶಾಂತಂ । ಧ್ಯಾತ್ವಾ

ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್ "ಎಂಬ ಕೈವಲ್ಯ ಶ್ರುತಿಯು ಪರಶಿವನ ದಿವ್ಯಮಂಗಳವಿಗ್ರಹ ಮತ್ತು ಅಮೂರ್ತಸ್ಥಿತಿ ಇವೆರಡನ್ನೂ ತಿಳಿಸುತ್ತದೆ. ಅವನಲ್ಲಿ ಏಕಕಾಲದಲ್ಲಿ ಇವೆರಡು ಸ್ಥಿತಿಗಳೂ ಇರುವುದರಿಂದಲೇ ಅವನು ಪತಿ ಎನಿಸಿದ್ದಾನೆ. ಈ ಒಂದೇ ಮಂತ್ರವು ಶಿವನ ಮೂರ್ತಾಮೂರ್ತಸ್ಥಿತಿಯನ್ನು ಹೃದಯಾಂಗಮವಾಗಿ ಚಿತ್ರಿಸುತ್ತಲೇ, ಭಕ್ತನು ಮಾಡುವ ಸಾಕಾರಶಿವನ ಉಪಾಸನೆಯನ್ನೂ, ಆ ಭಕ್ತಿಯ ಫಲವಾಗಿ ಅವನು ಪಡೆಯುವ ನಿರಾಕಾರೈಕ್ಯಸ್ಥಿತಿ ಎಂಬ ಮುಕ್ತಿಯನ್ನೂ ತಿಳಿಸುತ್ತಿದೆ. ನಿತ್ಯಸುಂದರನಾದ ಶಿವನು ಸಾಧಕನ ಉಪಾಸನೆಗೆ ಮೆಚ್ಚಿ ಸ್ವಪ್ನದಲ್ಲಿಯೂ ಪರೋಕ್ಷವಾಗಿಯೂ ಅವನನ್ನು ಅನುಗ್ರಹಿಸುತ್ತ ಅವನು ಪೂರ್ಣ ನಿರ್ಮಲನಾದಮೇಲೆ ಈ ಪವಿತ್ರದೇಹದಲ್ಲಿಯೇ ಅವನಿಗೆ ತನ್ನ ಆನಂದವನ್ನು ದೊರಕಿಸಿ ಪ್ರಾರಬ್ಧಕರ್ಮ ಮುಗಿದೊಡನೆ ಅವನನ್ನು ಮಹಾಕೈಲಾಸದಲ್ಲಿ ತನ್ನ ಪ್ರಾಣರಾಮಸ್ಥಿತಿಯಲ್ಲಿ ಸಮರಸವಾಗಿ ಬೆರೆಸಿಕೊಳ್ಳುತ್ತಾ ತನ್ನ ಕಾರುಣ್ಯಕಲ್ಯಾಣ ಕೈವಲ್ಯವಿಭೂತ್ಯಾತ್ಮಕವಾದ ಲೀಲೆಯನ್ನು ನಡೆಸುತ್ತಿರುವನೆಂದು ಶ್ರೀಕರಭಾಷ್ಯವು ಜಗತ್ತಿನ ಸಾಧಕವೃಂದಕ್ಕೆ ಘಂಟಾಘೋಷವಾಗಿ ಸಾರುತ್ತಿದೆ. ಬ್ರಹ್ಮದಿಂದ ಸಹಜವಾಗಿ ಭಿನ್ನರಾಗಿರುವ ಜೀವರೆಲ್ಲರೂ ಅಷ್ಟಕ್ಕೇ ನಿರಾಶರಾಗಿ ಭಿನ್ನೋಪಾಸನೆಯಲ್ಲಿಯೇ ನಿಲ್ಲದೆ ತಮ್ಮೊಳಗೆ ಗುಪ್ತವಾಗಿರುವ ಶಿವಕಲೆಯನ್ನು ಗುರುಚರಮೂರ್ತಿಗಳಿಂದ ತಿಳಿದು ಅದನ್ನು ಹೊರಗೆ ಪಡೆದು ಸ್ಥೂಲದೇಹಕ್ಕೆ ಆ ಪ್ರಕಾಶದ ನಿತ್ಯಸಂಪರ್ಕವನ್ನೇರ್ಪಡಿಸಿಕೊಂಡು ಆ ಲಿಂಗದೇವನಲ್ಲಿಯೆ, ಪಂಚಪ್ರಾಣಗಳನ್ನೂ ಇಟ್ಟು ಅವನಿಗೆ ತಾನು ಸತಿಯೆಂದು ಭಾವಿಸಿ ಅನುಕೂಲನಾಗಿ ವರ್ತಿಸುತ್ತಾ ಅವನ ಸೇವೆಯಲ್ಲಿಯೇ ತೊಡಗುವ ಮೂಲಕ ಪ್ರತಿಯೊಬ್ಬ ಆಸ್ತಿಕನೂ ತನ್ನ ಶ್ರೇಯಸ್ಸನ್ನು ಸಾಧಿಸಲಿಕ್ಕೆ ಸಾಧ್ಯವಿದೆ ಎಂಬ ಆಶಾಭಾವನೆಯನ್ನು ಶ್ರೀಕರಭಾಷ್ಯವು ಹುಟ್ಟಿಸುತ್ತಿರುವುದರಿಂದ ಭವರೋಗಕ್ಕೆ ಬೇರೆ ಔಷಧವೇಕೆ? ಅಹಂಕಾರಮಮಕಾರಗಳನ್ನು ತೊಲಗಿಸಿ ನಮ್ಮ ದೃಷ್ಟಿಕೋಣವನ್ನು ಹೃದಯದ ಪರಶಿವನಲ್ಲಿ ಕೇಂದ್ರೀಕರಿಸುವುದಕ್ಕಿಂತ ಬೇರೆ ಅಮೃತವುಂಟೇ? ವಿಶ್ವಾತ್ಮನ ವಾಸಸ್ಥಾನವಾದ ಈ ಹೃದಯದಲ್ಲಿ ಅಂಟಿಕೊಳ್ಳುವುದಕ್ಕಿಂತ ಬೇರೆ ಸಂಜೀವಿನಿಯುಂಟೇ? ಇಂತಹ ದಿವ್ಯೌಷಧವನ್ನು ಸಾಧಕವೃಂದಕ್ಕೆ ದೊರಕಿಸಿಕೊಟ್ಟಿರುವ ಶ್ರೀಶೈಲಸೂರ್ಯಸಿಂಹಾಸನಾಧ್ಯಕ್ಷರಾದ ಪೂಜ್ಯ ಶ್ರೀಪತಿಪಂಡಿತಾರಾಧ್ಯರು ಸಾಧಕರೆಲ್ಲರಿಗೂ ವಂದನಾರ್ಹರಾಗಿದ್ದಾರೆ. ಹೀಗೆ ಅವರು ಭಾಷ್ಯದಲ್ಲಿ ಬ್ರಹ್ಮದ ನಿರ್ದಿಷ್ಟಸ್ವರೂಪವನ್ನು ನಿಷ್ಕರ್ಷಿಸಿರುವಂತೆಯೆ, ಬ್ರಹ್ಮಕ್ಕೂ ಜೀವನಿಗೂ, ಹಾಗೆಯೆ, ಬ್ರಹ್ಮಕ್ಕೂ ಜಗತ್ತಿಗಿರುವ ಸಂಬಂಧವನ್ನೂ, ಜೀವನ ವಾಸ್ತವ ಮತ್ತು ಸಹಜ ಸ್ವರೂಪಗಳನ್ನೂ ಅದರಂತೆ ಜಗತ್ತಿನ ನಿಜಸ್ಥಿತಿಯನ್ನೂ ಸ್ಪಷ್ಟವಾಗಿ ತಿಳಿಸಿದ್ದಾರೆ. ಬ್ರಹ್ಮಜೀವಜಗತ್ತುಗಳ ಈ ಬಗೆಯ ಯಥಾರ್ಥವಿವೇಚನೆಯಿಂದಲೇ ಈ ಜಗತ್ತಿನಲ್ಲಿ ಜೀವನೆನಿಸಿರುವ ಮಾನವನು ತನ್ನ ಕಲ್ಯಾಣವನ್ನು ಸಾಧಿಸಬಲ್ಲನು. ಈ ಮೂರು ತತ್ತ್ವಗಳಲ್ಲೊಂದಾದ ಬ್ರಹ್ಮಸ್ವರೂಪವನ್ನು ಶ್ರೀಪತಿಪಂಡಿತಾರಾಧ್ಯರು ಜನ್ಮಾದ್ಯಧಿಕರಣದಲ್ಲಿ ವಿಸ್ತಾರವಾಗಿ ನಿರೂಪಿಸಿ

ಪ್ಪಾರೆ. ಜಗತ್ಕಾರಣವಾದ ಪರಬ್ರಹ್ಮವು ಸೃಷ್ಟಿಕಾಲದಲ್ಲಿ ಶಕ್ತಿವಿಕಾಸದಿಂದ ಸಾಕಾರವೂ ಸಗುಣವೂ ಆಗಿದ್ದು, ಪ್ರಳಯಕಾಲದಲ್ಲಿ ಶಕ್ತಿಸಂಕೋಚದಿಂದ ಜ್ಞಾನಕ್ರಿಯಾದಿ ಶಕ್ತಿಗಳು ವಿಕಾಸಕ್ಕೆ ಅವಕಾಶವಿಲ್ಲದೆ ಬ್ರಹ್ಮದ ಪ್ರಾಣವೆನಿಸಿದ ಚಿತ್‌ಶಕ್ತಿಯಲ್ಲಿ ಅಡಗಿರುತ್ತವೆ. ಆದ್ದರಿಂದ ಆಗಲೂ ಬ್ರಹ್ಮದಲ್ಲಿ ಶಕ್ತಿ ಎಂಬ ಒಂದು ವಿಶೇಷವಿರುವುದರಿಂದ ಬ್ರಹ್ಮ ಸವಿಶೇಷವೇ ಆಗಿರುವುದು. ಹಾಗೆಯೇ ಸೃಷ್ಟ್ಯುನ್ಮುಖವಾದಾಗಲೂ ಜ್ಞಾನ ಕ್ರಿಯಾದಿಶಕ್ತಿಗಳ ವಿಕಾಸದಿಂದ ಪರಶಿವಬ್ರಹ್ಮ ಸವಿಶೇಷವೇ ಆಗಿರುವುದು. ಹೀಗೆ ಸೃಷ್ಟಿಪ್ರಳಯಗಳೆರಡರಲ್ಲೂ ಬ್ರಹ್ಮನಿರ್ವಿಶೇಷವೆನಿಸದೆ ಸವಿಶೇಷವೇ ಆಗಿರುವುದು. ಇಲ್ಲಿ ಶಕ್ತಿ ಬ್ರಹ್ಮದ ಪ್ರಾಣಸ್ವರೂಪವೆನಿಸಿ ಸಚ್ಚಿದಾನಂದೆಯೇ ಆಗಿರುವುದರಿಂದ ವಿಶಿಷ್ಟಾದ್ವೈತದ ಅಂಗಾಂಗಿಭಾವಕ್ಕವಕಾಶವಿಲ್ಲವೆಂದು ಹಿಂದೆಯೂ ಹೇಳಿಯಾಗಿದೆ. ಪರಬ್ರಹ್ಮಸ್ವರೂಪವನ್ನು "ಶಕ್ತಿವಿಶಿಷ್ಟಾದ್ವೈತದರ್ಶನ"ದಲ್ಲಿ ವಿಸ್ತಾರವಾಗಿ ವಿವೇಚನೆಮಾಡಿರುವುದರಿಂದ ವಾಚಕರು ಹೆಚ್ಚಿನ ವಿಷಯವನ್ನು ಅದರಿಂದ ತಿಳಿಯಬಹುದು.

ಹೀಗೆಯೇ ಜೀವ ಜಗತ್ತುಗಳಿಗೂ ಪರಬ್ರಹ್ಮವೆನಿಸಿದ ಪರಶಿವನಿಗೂ ಭೇದಾಭೇದಸಂಬಂಧವನ್ನೇ ಶ್ರೀಪತಿಪಂಡಿತಾರಾಧ್ಯರು ಬ್ರಹ್ಮಸೂತ್ರಗಳ ಆಧಾರದಮೇಲೆ ನಿರೂಪಿಸಿದ್ದಾರೆ. ಜೀವನು ಪರಶಿವನ ಸಾಕ್ಷಾದಂಶನಾದ್ದರಿಂದ ಅವನೂ ಪರಶಿವನೂ ಚಿತ್ಸ್ವರೂಪರೇ ಆಗಿರುವರು. ಇಬ್ಬರಿಗೂ ವಾಸ್ತವವಾದ ಅಭೇದವಿದೆಯಾದರೂ, ಅದು ಬಹಳ ಸೂಕ್ಷ್ಮವೂ ಗಂಭೀರವೂ ಆಗಿರುವುದು. ಆದರೆ ಬ್ರಹ್ಮಚೈತನ್ಯವೇ ಜಡಮಾಯಾಶಕ್ತಿಯಲ್ಲಿ ಪ್ರವೇಶಿಸಿ ಜೀವನಾಗಿರುವುದರಿಂದ ಈ ಜೀವನು ಮಾಯೆಯ ಮೂರು ಗುಣಗಳಿಂದ ಬದ್ಧನಾಗಿ ರಾಜಸ ಮತ್ತು ತಾಮಸಅಹಂಕಾರಗಳಿಂದ ಲೋಕವ್ಯವಹಾರಗಳಲ್ಲೂ ಪತ್ನೀಪುತ್ರಾದಿಗಳಲ್ಲೂ ವಿಶೇಷವಾಗಿ ಅಭಿಮಾನಿಸುತ್ತ, ರಾಗದ್ವೇಷಗಳೊಳಗೆ ಸಿಲುಕಿ ಚೈತನ್ಯಶಕ್ತಿಯ ಸಂಕೋಚದಿಂದ ಭೀಕರಭವಸಾಗರದಲ್ಲಿ ಸುತ್ತುತ್ತಿರುವನು. ಹೀಗೆ ಕಾಮಕ್ರೋಧಗಳೆಂಬ ಬೆಂಕಿಯಲ್ಲಿ ಬೇಯುತ್ತ ವರ್ಣಾಶ್ರಮಗಳ ಹಿಡಿತಕ್ಕೆ ಸಿಲುಕಿ ಉಚ್ಚನೀಚಭಾವದಿಂದ ವೈಯಕ್ತಿಕಸ್ಪರ್ಧೆಯಲ್ಲೂ ಮತ್ತುಸ್ತುತಿನಿಂದೆಗಳಲ್ಲೂ ನಿರತರಾಗಿರುವ ಜೀವರು ಪರಸ್ಪರವಾಗಿ ಭಿನ್ನರಾಗಿರುವರಷ್ಟೇ ಅಲ್ಲದೆ ಅವರಿಗೆ ತಾವು ಶಿವಾಂಶರೆಂಬ ಅರಿವೂ ಸಹ ಇರುವುದಿಲ್ಲ. ಇದು ಲೋಕದಲ್ಲಿ ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಈ ಬಗ್ಗೆ ಯಾರಿಗೂ ಸಂಶಯಕ್ಕವಕಾಶವೇ ಇಲ್ಲ. ಹೀಗೆ ಜೀವ ಶಿವರಿಗೆ ಭೇದವು ಸರ್ವಾನುಭವಸಿದ್ಧವೆನಿಸಿ ಜೀವನಿಗೂ ಶಿವನಿಗೂ ಇಚ್ಛಾಜ್ಞಾನ ಕ್ರಿಯಾಶಕ್ತಿಗಳ ವ್ಯಾಪ್ತಿಯಲ್ಲಿ ಮಹದಂತರವಿದೆ. ಶಿವನು ಸರ್ವಜ್ಞನೂ ಸರ್ವಶಕ್ತನೂ ಸರ್ವಹಿತೈಷಿಯೂ ಆದರೆ, ಜೀವನು ಸ್ವಾರ್ಥಿಯೂ, ಅಜ್ಞನೂ, ಅಶಕ್ತನೂ ಆಗಿರುವನು. "ಅನೀಶಯಾ ಶೋಚತಿ ಮುಹ್ಯಮಾನಃ"ಎಂದು ಶ್ವೇತಾಶ್ವತರ ಶ್ರುತಿಯು ಜೀವನ ಅಶಕ್ತತೆ, ದುಃಖಪರತೆ ಮತ್ತು ಮೋಹಪರವಶತೆಗಳನ್ನು ಹೃದಯಂಗಮವಾಗಿ ಚಿತ್ರಿಸಿದೆ. ಹಾಗೆಯೇ "ಭೇದವ್ಯಪದೇಶಾಚ್ಚಾನ್ಯಃ" ಮೊದಲಾದ ಬ್ರಹ್ಮಸೂತ್ರಗಳೂ ಶಿವಜೀವರಿಗೆ ಸಹಜವಾಗಿರುವ ಭೇದವನ್ನು ಸ್ಪಷ್ಟಪಡಿಸುತ್ತಿವೆ. ಇವುಗಳ

ಆಧಾರದಮೇಲೆ ಶ್ರೀಪತಿಪಂಡಿತಾರಾಧ್ಯರು ಶಿವಜೀವರಿಗೆ ಸಂಸಾರದಶೆಯಲ್ಲಿ ಭೇದವು ಸ್ವಾಭಾವಿಕವೆಂದು ಪ್ರತಿಪಾದಿಸಿದ್ದಾರೆ. ಹೀಗೆ ಭೇದವಿದ್ದರೂ, ಪರಶಿವನ ಚಿತ್ ಶಕ್ತಿಯಪರಿಣಾಮವೆನಿಸಿದ ಭಕ್ತಿಯ ಅವಲಂಬನದಿಂದ ಜೀವನು ಗುರುಕರುಣೆಗೆ ಪಾತ್ರನಾಗಿ ದೀಕ್ಷಾಗ್ನಿಯಲ್ಲಿ ಬೆಂದು ತನ್ನ ದೌರ್ಬಲ್ಯವನ್ನು ನೀಗಿಕೊಳ್ಳುವನು. ಪರಶಿವನ ಇಚ್ಛಾಜ್ಞಾನಕ್ರಿಯಾಶಕ್ತಿಗಳೇ ಸಂಕೋಚಗೊಂಡು ಆಣವ ಮಾಯೀಯ ಕಾರ್ಮಿಕವೆಂದು ಮೂರು ಮಲಗಳಾಗಿ ಜೀವನನ್ನಾವರಿಸಿದ್ದುದರಿಂದ, ಈ ಮಲಗಳ ಬಾಧೆಗೆ ಸಹಜವಾಗಿ ಸಿಕ್ಕಿ ನೊಂದು ಪಶ್ಚಾತ್ತಾಪಗೊಂಡ ಜೀವನಿಗೆ ಸದ್ಗುರುವಿನ ಉಪದೇಶದಿಂದ ನೈಜವಾದ ಪರಿಸ್ಥಿತಿಯ ಅರಿವು ಉಂಟಾಗುವುದು. ಹೀಗೆ ತಾನು ಶಿವಾಂಶನೆಂಬುದನ್ನು ತಿಳಿದಮೇಲೆ ಅವನು ತನ್ನೊಳಗಿನ ಶಿವಕಲೆಯ ಅಭಿವ್ಯಕ್ತಿಮತ್ತು ಅನುಭವಗಳಿಗಾಗಿ ನಿರಂತರವೂ ತ್ರಿವಿಧೋಪಾಸನೆಯಲ್ಲಿ ತೊಡಗುವನು. ಇದಕ್ಕೆ ಅಹಂಗ್ರಹೋಪಾಸನೆ ಎಂದು ಅನುಭವಿಗಳು ಹೇಳುತ್ತಾರೆ. ತಾನು ವಾಸ್ತವವಾಗಿ ರುದ್ರನ ಅಂಶನಿರುವೆನೆಂದು ತಿಳಿದು ತನ್ನಲ್ಲಿ ರುದ್ರನ ಪೂರ್ಣಶಕ್ತಿಯ ವಿಕಾಸಕ್ಕಾಗಿ ಮಾಡುವ ಅರ್ಚನೆ ಅಹಂಗ್ರಹೋಪಾಸನವೆನಿಸುತ್ತದೆ. "ರುದ್ರೋ ಭೂತ್ವಾ ರುದ್ರಂ ಯಜೇತ" ಮೊದಲಾದ ಅಥರ್ವಶ್ರುತಿವಾಕ್ಯಗಳು ಈ ಬಗ್ಗೆ ಪ್ರಮಾಣವಾಗಿವೆ. ತಾನು ಶಿವಾಂಶನೆಂಬುದನ್ನು ತಿಳಿಯದೆ, ತಾನೇ ಬೇರೆ ಶಿವನೇ ಬೇರೆ ಎಂದು ಭಾವಿಸಿ ಮಾಡುವ ಅರ್ಚನೆ ಭಿನ್ನೋಪಾಸನವೆನಿಸುತ್ತದೆ. ಇದರಿಂದ ಐಹಿಕಸುಖ ಮೊದಲಾದ ಭಿನ್ನ ಫಲಗಳೇ ದೊರೆಯುತ್ತವೆ; ಆದರೆ ವಾಸ್ತವಸ್ವರೂಪದ ವಿಕಾಸವೆಂಬ ಮೋಕ್ಷಸುಖವು ದೊರೆಯಲಾರದು. ಉಪಾಸ್ಯನಿಗೂ ಉಪಾಸಕನಿಗೂ ಭೇದವಿರುವುದು ಸಹಜವಾದರೂ, ಭೇದದೃಷ್ಟಿಯಿಂದಲೇ ಉಪಾಸನಮಾಡಿದವನು ಉಪಾಸ್ಯವಸ್ತುವಿನಿಂದ ಕೊನೆಗೂ ಭಿನ್ನನೇ ಆಗಿ ಉಳಿಯುವನು. ಆದ್ದರಿಂದಲೇ ಶ್ರೀಪತಿಪಂಡಿತಾರಾಧ್ಯರು ಜೀವನಿಗೆ ತಾನು ಶಿವಾಂಶನೆಂಬ ಅರಿವು ಗುರುವಿನಿಂದ ಆದಮೇಲೆಯೇ ಅವನು ಶಕ್ತಿವಿಕಾಸದಿಂದ ತನ್ನ ಶಿವಭಾವದ ಅಭಿವ್ಯಕ್ತಿಗಾಗಿ ಉಪಾಸನಮಾಡಬೇಕೆಂದು ನಿರೂಪಿಸಿದ್ದಾರೆ. ನೊಂದ ಜೀವನು ದೀಕ್ಷೆಯಲ್ಲಿ ಗುರುವಿನಿಂದ ಉಪದಿಷ್ಟನಾಗಿ ತಾನು ಶಿವನ ಅಂಶನೆಂಬುದನ್ನು ತಿಳಿದು ತನ್ನೊಳಗಿನ ಶಿವಕಲೆಯನ್ನು ಹೊರಗೆ ಪಡೆದು, ನಿರಂತರವೂ ಅರ್ಚಿಸುತ್ತ, ಆ ಶಿವಲಿಂಗವನ್ನು ತನ್ನ ಪ್ರಾಣವೆಂದೂ, ಪತಿಎಂದೂ, ಆ ಲಿಂಗಕ್ಕೆ ತಾನು ಸತಿಯೆಂದೂ ಭಾವಿಸಿ ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ-ಆನಂದ, ಸಮರಸವೆಂಬ ಆರು ಬಗೆಯ ಭಕ್ತಿಗಳಿಂದ ಲಿಂಗವನ್ನರ್ಚಿಸುತ್ತ ಲಿಂಗದೊಳಗಿನ ಕಲೆಯನ್ನು ತನ್ನಲ್ಲಿ ಅನುಭವಿಸುತ್ತ, ಆ ಅನುಭವದಲ್ಲಿ ಬೆರೆಯುತ್ತಬಂದರೆ, ಆಗ ಪ್ರಾಪಂಚಿಕಾಭಿಮಾನಾಹಂಕಾರಗಳೂ, ರಾಗದ್ವೇಷಗಳೂ, ಕಾಮಕ್ರೋಧಗಳೂ ಸಹಜವಾಗಿ ತೊಲಗುತ್ತವೆ. ಮೈಯಲ್ಲಿ ಗಾಯ ಒಣಗಿದರೆ ಅದರಮೇಲಿನ ಚರ್ಮ ತಾನಾಗಿಯೇ ಉದುರುವಂತೆ ಜೀವನು ಅಂತರಂಗದ ಶಿವಕಲೆಯಲ್ಲಿ ಬೆರೆಯುತ್ತಾಬಂದರೆ, ಹಿಂದೆ ಅವನನ್ನಾಶ್ರಯಿಸಿದ್ದ ಪ್ರಕೃತಿಗುಣಗಳು ತಾವಾಗಿಯೇ ಕಳಚಿಕೊ.

ಳ್ಳುತ್ತವೆ. ಹೀಗೆ ಜೀವನಿಗೆ ಶಿವಭಾವದ ವಿಕಾಸವಾದಂತೆಲ್ಲಾ ಅವನ ಮೂರು ಮಲಗಳೂ ತಮ್ಮ ಸಂಕೋಚಪ್ರಕೃತಿಯನ್ನು ಕಳೆದುಕೊಂಡು ಪೂರ್ಣವಾಗಿ ವಿಕಾಸಗೊಳ್ಳುವುವು. ಆಗ ಆಣವಮಲವೇ ಜೀವನಿಗೆ ವಿಷಯಾಭಿಲಾಷೆಯೆಂಬ ಸಣ್ಣತನವನ್ನು ತೊರೆಸಿ ಶಿವಚಿಂತನೆಯನ್ನು ಹುಟ್ಟಿಸಿ ಇಚ್ಛಾಶಕ್ತಿಯಾಗಿ ಪರಿಣಮಿಸುವುದು. ಇದರಿಂದ ಜೀವನು ಸ್ವಾರ್ಥತೆಯನ್ನು ಕಳೆದುಕೊಂಡು ಲೋಕಹಿತೈಷಿಯಾಗುವನು. ಮಾಯೀಯ ಮಲವು ಜೀವನಿಗೆ ಪತ್ನೀಪುತ್ರರೆಂಬ ವ್ಯಾಮೋಹವನ್ನು ಹುಟ್ಟಿಸುವುದಕ್ಕೆ ಬದಲಾಗಿ ವಿಶ್ವಪ್ರೇಮ ಸರ್ವಾತ್ಮಭಾವಗಳನ್ನು ಹುಟ್ಟಿಸುತ್ತ ಜ್ಞಾನಶಕ್ತಿಯಾಗಿ ಪರಿಣಮಿಸುವುದು. ಕಾರ್ಮಿಕಮಲವು ಜೀವನಿಗೆ ಗೃಹಾರಾಮಾದ್ಯಭಿಮಾನವನ್ನು ಹುಟ್ಟಿಸುವ ಬದಲು ವಿಶ್ವವೇ ತನ್ನ ಕುಟುಂಬವೆಂಬ ವಿಶಾಲಭಾವನೆಯನ್ನು ಹುಟ್ಟಿಸುತ್ತ ಕ್ರಿಯಾಶಕ್ತಿಯಾಗಿ ಪರಿಣಮಿಸುವುದು. ಹೀಗೆ ಜ್ಞಾನಕ್ರಿಯೆಗಳ ಸಮನ್ವಯಾಚರಣೆಯಿಂದ ಜೀವನು ಮಲಗಳ ಬಾಧೆಯಿಂದ ದೂರನಾಗಿ ನಿರ್ಮಲನಾಗುವನು. ಹೀಗೆ ನಿರ್ಮಲನಾಗುವುದೇ ಶಕ್ತಿವಿಕಾಸದ ಹೆಗ್ಗುರುತು ; ಇದೇ ವಾಸ್ತವಶಿವಭಾವದ ಪೂರ್ಣವಿಕಾಸ ; ಇದೇ ಅಖಂಡಾನಂದಸಾಮ್ರಾಜ್ಯದ ದಿವ್ಯಾನುಭವ. ಇದಕ್ಕಾಗಿಯೇ ಮಾನವನು ಲೋಕದಲ್ಲಿ ಹುಟ್ಟಿಬಂದಿದ್ದಾನೆ. ಅವನ ಎಲ್ಲಾ ಆಶೆಪ್ರತ್ಯಾಶೆಗಳೂ, ಕೀರ್ತಿಪ್ರತಿಷ್ಠಾಕಾಂಕ್ಷೆಗಳೂ, ಮಾನ ಅಭಿಮಾನ ಅವಮಾನಗಳ ದೃಷ್ಟಿಯೂ ಎಂದು ತೊಲಗುತ್ತವೆಯೋ, ಲಿಂಗಗುಣಗಳಾದ ಶಾಂತಿ ಸಾಮತೆ ಸಮಾಧಾನಗಳು ಎಂದು ಒಳಗೂ ಹೊರಗೂ ವ್ಯಾಪಿಸಿ ಜೀವನಿಗೆ ತನ್ನಲ್ಲಿ ಶಿವಭಾವದ ಅನುಭವವುಂಟಾಗಿ, ಅವನು ಎಲ್ಲರಲ್ಲೂ ಅದನ್ನೇ ಕಾಣುವನೋ ಅಂದೇ ಅಮೃತನಾಗುವನು. ಇದೇ ವೀರಶೈವ ದರ್ಶನದ ಮುಕ್ತಿ ; ಗೀತೆಯ ಬ್ರಾಹ್ಮೀಸ್ಥಿತಿ ಮತ್ತು ತ್ರಿಗುಣಾತೀತಾವಸ್ಥೆ ; ಇದನ್ನೇ ಬ್ರಹ್ಮಸೂತ್ರಗಳು ಸಾಧನಾಧ್ಯಾಯದಲ್ಲೂ, ಫಲಾಧ್ಯಾಯದಲ್ಲೂ ಸ್ಪಷ್ಟವಾಗಿ ವಿವರಿಸುತ್ತವೆ. ಇದನ್ನು ಶ್ರೀಕರಭಾಷ್ಯದ ದ್ವಿತೀಯಭಾಗದಲ್ಲಿ ವಿಶದಪಡಿಸಲಾಗುವುದು. ಆದರೆ ಸಮನ್ವಯವೆಂಬ ಪ್ರಥಮಾಧ್ಯಾಯದಲ್ಲೂ, ಅವಿರೋಧವೆಂಬ ದ್ವಿತೀಯಾಧ್ಯಾಯದಲ್ಲೂ ಶ್ರೀಪತಿಪಂಡಿತಾರಾಧ್ಯರು ಶಿವಜೀವರಿಗೆ ಕಾಲಭೇದದಿಂದಲೂ ಅವಸ್ಥಾಭೇದದಿಂದಲೂ ಭೇದಾಭೇದಗಳೆರಡೂ ಸಮನ್ವಯಿಸುವುದರಲ್ಲಿ ವಿರೋಧವಿಲ್ಲವೆಂಬ ಅಂಶವನ್ನು ಶ್ರುತಿ ಯುಕ್ತಿ ಅನುಭವಗಳಿಗೆ ಹೊಂದುವಂತೆ ವಿವರಿಸಿರುವರೆಂಬ ಅಂಶವನ್ನು ಮಾತ್ರ ವಾಚಕರು ಇಲ್ಲಿ ಗಮನಿಸಬೇಕೆಂದು ವಿಜ್ಞಾಪಿಸಿದ್ದೇನೆ. ಶಿವಜೀವರು ಭಿನ್ನರಾಗಿದ್ದರೂ ಘಟಪಟಗಳಂತಾಗಲೀ ತಿಲತಂಡುಲಗಳಂತಾಗಲೀ ಭಿನ್ನರಲ್ಲದೆ ಒಂದೇ ಚಿಜ್ಜಾತಿಗೆ ಸೇರಿದವರಾದ್ದರಿಂದ ಜೀವನಿಗೆ ಶಿವನ ಉಪಾಸನದಿಂದ ಚಿದ್ವಿಕಾಸವು ನಿಯತವಾಗಿ ಸಂಭವಿಸಲೇಬೇಕೆಂದು ಶ್ರೀಪತಿಪಂಡಿತಾರಾಧ್ಯರು ಯುಕ್ತಿಯುಕ್ತವಾಗಿ ಉಪಪಾದನಮಾಡಿದ್ದಾರೆ. ಹೀಗೆ ಶಿವಜೀವರಿಗೆ ಭೇದಾಭೇದಗಳೆರಡೂ ಭಿನ್ನಕಾಲದಲ್ಲೂ ಭಿನ್ನಾವಸ್ಥೆಯಲ್ಲೂ ಸಮನ್ವಯಿಸಬಹುದಾದ್ದರಿಂದ ಶಿವಜೀವರಿಗೆ ಭೇದಾಭೇದವೇ ಹೊಂದುವುದೆಂದೂ, ಕೇವಲ ಭೇದವಾಗಲೀ ಕೇವಲ ಅಭೇದವಾಗಲೀ

ಹೊಂದುವುದಿಲ್ಲವೆಂದೂ ಅವರು ಇಲ್ಲಿ ನಿರೂಪಿಸಿರುವುದು ಅಭಿನಂದನೀಯವಾಗಿದೆ. ಇದರಿಂದ ಕೇವಲ ಭೇದವನ್ನೂ ಮತ್ತು ಕೇವಲ ಅಭೇದವನ್ನೂ ತಿಳಿಸುವ ಶ್ರುತಿಗಳಿಗೂ ಸಮನ್ವಯವಾಗುತ್ತದೆ. "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ", "ಬ್ರಹ್ಮವನ್ನು ಉಪಾಸನಮಾಡಿದವನು ಆ ಬ್ರಹ್ಮವನ್ನೇ ಹೊಂದುತ್ತಾನೆ" ಈ ಬಗೆಯ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಭೇದ ಮತ್ತು ಅಭೇದಗಳೆರಡೂ ಸ್ಪಷ್ಟವಾಗಿ ನಿರೂಪಿತವಾಗಿವೆ. ಈ ಅಂಶವನ್ನು "ಅವಸ್ಥಿತೇರಿತಿ ಕಾಶಕೃತ್ಸ್ನಃ" ಎಂಬ ಸೂತ್ರ ಭಾಷ್ಯದಲ್ಲಿ ಶ್ರೀಪತಿಪಂಡಿತಾರಾಧ್ಯರು ಬಹಳ ಸಮಂಜಸವಾಗಿ ನಿರೂಪಿಸಿದ್ದಾರೆ. ಸುಷುಪ್ತಿಯಲ್ಲಿ ಜೀವನು ಪ್ರತಿದಿನವೂ ಶಿವನಲ್ಲಿ ಬೆರೆತು ನಿತ್ಯವೂ ಆನಂದವನ್ನು ಅನುಭವಿಸುತ್ತಿರುವುದರಿಂದ ಭೇದ ಅಭೇದಗಳೆರಡೂ ಸಮನ್ವಯವಾಗುತ್ತವೆ.

ಇದರಂತೆಯೇ ಜಗದ್ಬ್ರಹ್ಮಗಳಿಗೂ ಭೇದಾಭೇದಸಂಬಂಧವನ್ನೇ ಶ್ರೀಕರ ಭಾಷ್ಯವು ಪ್ರತಿಪಾದಿಸಿದೆ. "ತದನನ್ಯತ್ವಂ ಆರಂಭಣಶಬ್ದಾದಿಭ್ಯಃ" ಎಂಬ ಸೂತ್ರದ ಭಾಷ್ಯದಲ್ಲಿ ವಾಚಾರಂಭಣಶ್ರುತಿಯ ಆಧಾರದಮೇಲೆ ಜಗತ್ತಿಗೂ ಪರವು ಶಿವನಿಗೂ ಅಭೇದವನ್ನು ನಿರೂಪಿಸಲಾಗಿದೆ. ಗಡಿಗೆ ಮೊದಲಾದ ವಸ್ತುಗಳು ವಾಗ್ವ್ಯವಹಾರಕ್ಕಾಗಿ ಭಿನ್ನವಾಗಿದ್ದರೂ ಮೃದ್ರೂಪದಿಂದ ಅಭಿನ್ನವೇ ಆಗಿರುತ್ತವೆ. ಆಭರಣಗಳು ವೈಯುಕ್ತಿಕವಾಗಿಯೂ ಸಹಜವಾಗಿಯೂ ಭಿನ್ನವಾಗಿದ್ದರೂ ವಾಸ್ತವವಾಗಿ ಸುವರ್ಣವೇ ಆಗಿರುತ್ತವೆ. ಕಂಠಾಭರಣವು ಹಸ್ತಾಭರಣದಿಂದ ಭಿನ್ನವಾಗಿರುವಂತೆಯೇ ಉಪಯೋಗಕಾಲದಲ್ಲಿ ಆಭರಣವೆಂಬ ವ್ಯವಹಾರವೇ ಸತ್ಯವಾಗಿರುವುದರಿಂದ ಅದು ಸುವರ್ಣದಿಂದಲೂ ಭಿನ್ನವೇ ಆಗಿರುತ್ತದೆ. ಆದರೆ ಆಭರಣಾವಸ್ಥೆ ಅದಕ್ಕೆ ತಪ್ಪುವಕಾಲದಲ್ಲಿ ಅದು ಸುವರ್ಣವೇ ಆಗುತ್ತದೆ. ಹೀಗೆ ಉಪಯೋಗಕಾಲದಲ್ಲಿ ಸುವರ್ಣದ ಆಭರಣವು ಆಭರಣವೇ ಆಗಿದ್ದು, ಉಪಯೋಗ ತಪ್ಪಿದೊಡನೆ ಸುವರ್ಣವೇ ಆಗುತ್ತದೆ. ಇದರಂತೆ ಲೋಕದ ಪ್ರತಿಯೊಂದು ವಸ್ತುವಿನಲ್ಲೂ ಭೇದಅಭೇದಗಳೆರಡೂ ಸಹಜವಾಗಿರುತ್ತವೆ. ಇದೆಲ್ಲವೂ ಬ್ರಹ್ಮದಿಂದಲೇ ಹುಟ್ಟಿ, ಬ್ರಹ್ಮದ ಉಪಯೋಗಕ್ಕಾಗಿಯೇ ಇದ್ದು, ಕೊನೆಗೆ ಬ್ರಹ್ಮದಲ್ಲಿಯೇ ಲಯವಾಗುವುದರಿಂದ ಇದನ್ನು ಬ್ರಹ್ಮವೆಂದೇ ತಿಳಿಯಬೇಕೆಂದು ಶ್ರುತಿ ವಿಧಿಸಿರುವುದು ಸಮಂಜಸವೇ ಆಗಿದೆ. ಹೀಗೆ ಸುವರ್ಣಕಟಕದೃಷ್ಟಾಂತದಿಂದಲೂ, ಅಹಿಕುಂಡಲನ್ಯಾಯದಿಂದಲೂ ಬ್ರಹ್ಮಸೂತ್ರಗಳು ಜಗದ್ಬ್ರಹ್ಮಗಳಿಗೆ ಭೇದಾಭೇದಗಳನ್ನು ಪ್ರತಿಪಾದಿಸಿವೆ. ರೇಣುಕಗೀತೆ ಎಂದು ಪ್ರಸಿದ್ಧವಾಗಿರುವ ಸಿದ್ಧಾಂತಶಿಖಾಮಣಿಯಲ್ಲೂ "ಪತ್ರಶಾಖಾದಿರೂಪೇಣ ಯಥಾತಿಷ್ಠತಿ ಪಾದಪಃ"ಎಂದು ಮುಂತಾಗಿ ಮರಕ್ಕೂ ಕೊಂಬೆಗಳಿಗೂ ಭೇದಾಭೇದವಿರುವಂತೆ ಶಿವನೊಬ್ಬನೇ ವಿಶ್ವವಾಗಿ ಪರಿಣಮಿಸಿರುವುದರಿಂದ ವಿಶ್ವಾತ್ಮಕನೂ ವಿಶ್ವಾತೀತನೂ ಆದ ಶಿವನಿಗೂ ಜಗತ್ತಿಗೂ ಭೇದಾಭೇದವು ಸ್ಪಷ್ಟವಾಗಿ ನಿರೂಪಿತವಾಗಿದೆ. "ಪಟವಚ್ಚ" ಮೊದಲಾದ ಸೂತ್ರಗಳ ಭಾಷ್ಯದಲ್ಲಿ ಶ್ರೀಪತಿಪಂಡಿತರೂ ಇದನ್ನೇ ನಿರೂಪಿಸಿದ್ದಾರೆ. ಆದ್ದರಿಂದ ಅದ್ವೈತವೇದಾಂತದಲ್ಲಿ ಹೇಳುವಂತೆ ಜಗತ್ತನ್ನು ವ್ಯಾವ

ಹಾರಿಕಸತ್ಯವೆಂದಾಗಲೀ, ಮಿಥ್ಯೆ ಎಂದಾಗಲೀ ಹೇಳಲಿಕ್ಕೆ ವೀರಶೈವಮತದಲ್ಲಿ ಅವಕಾಶವಿಲ್ಲ. ಜಗತ್ತಿನ ಸ್ಥೂಲರೂಪವೂ ಪಂಚಭೂತಾತ್ಮಕವಾಗಿ ಆ ಪಂಚಭೂತಗಳೂ ಪರಮಾತ್ಮನಿಂದಲೇ ಬಂದು ಅಲ್ಲಿಯೇ ಸೇರುವುವಾದ್ದರಿಂದ ಅವು ಮಿಥ್ಯೆ ಎನಿಸಲಾರವು. ಅವ್ಯಕ್ತಸ್ಥಿತಿಯಿಂದ ಬಂದು ಮತ್ತೆ ಅವ್ಯಕ್ತಸ್ಥಿತಿಗೇ ಹೋಗುತ್ತವೆಯಾದ್ದರಿಂದ ಅವು ಪರಮಾರ್ಥವಾಗಿ ಸತ್ಯವೆನಿಸಿವೆ. ಆದ್ದರಿಂದಲೇ ಜಗದ್ಬ್ರಹ್ಮರಿಗೆ ಭೇದದಂತೆ ಅಭೇದವೂ ಪಾರಮಾರ್ಥಿಕವೆನಿಸಿದೆ. ಹೀಗೆ ಪಂಚಬ್ರಹ್ಮಮಯವಾದ ಪಂಚಭೂತಗಳ ಸಮೂಹವೆನಿಸಿದ ಪ್ರಪಂಚದಲ್ಲಿ ಯಾವೊಂದು ವಸ್ತುವೂ ಮಿಥ್ಯೆ ಎನಿಸಲಾರದು. ಹಾಗೆಯೇ ಬ್ರಹ್ಮಜ್ಞಾನಿಗೂ ಈ ಪ್ರಪಂಚದಿಂದ ಯಾವ ಬಾಧವೂ ಉಂಟಾಗಲಾರದು. ಆದರೆ ಬ್ರಹ್ಮಜ್ಞಾನಿ ಪ್ರಪಂಚದ ಯಥಾರ್ಥಸ್ವರೂಪವನ್ನರಿತು ಈ ಪ್ರಪಂಚದ ಕಲ್ಯಾಣಕ್ಕಾಗಿಯೇ ನಿರಭಿಮಾನದಿಂದ ಶ್ರಮಿಸುವನು. ಯಥಾರ್ಥವಾಗಿರುವ ಈ ಪ್ರಪಂಚವನ್ನು ವಂಧ್ಯಾಪುತ್ರನಂತೆ ಇಲ್ಲವೆಂದು ಹೇಳುವುದಾದರೆ ಇದಕ್ಕಾಗಿ ಹಿಂದಿನಿಂದ ಯಾರೂ ಶ್ರಮಿಸುತ್ತಲೇ ಇರಲಿಲ್ಲ. ಲೋಕಕಾರುಣ್ಯದಿಂದಲೂ, ಲೋಕಸಂಗ್ರಹಕ್ಕಾಗಿಯೂ ಜ್ಞಾನಿಗಳು ಸೃಷ್ಟ್ಯಾದಿಯಿಂದಲೂ ಕರ್ಮವನ್ನಾಚರಿಸುತ್ತಿರುವಾಗ, ಈ ಲೋಕವನ್ನು ಮಿಥ್ಯೆ ಎಂದೂ, ಕಾಲ್ಪನಿಕವೆಂದೂ, ಸ್ವಾಪ್ನಿಕವೆಂದೂ ಭಾವಿಸುವುದು ಅವಿವೇಕವೇ ಸರಿ. ಜಗತ್ತೇ ಇಲ್ಲವೆನ್ನುವುದಾದರೆ, ಪರಮಾತ್ಮನ ಜಗದ್ವ್ಯಾಪಾರಲೀಲೆಯೂ ನಿರರ್ಥಕವೆನಿಸಬೇಕಾಗುತ್ತದೆ. ಅದ್ವೈತಮತದಲ್ಲಿ ಕಲ್ಪಿತವಾದ ಈಶ್ವರನು ನಿರ್ಮಿಸಿದ್ದರಿಂದ ಜಗತ್ತು ಸುಳ್ಳೆಂಬುದು ಹೊಂದುತ್ತದೆ. ಆದರೆ, ಶಕ್ತಿವಿಶಿಷ್ಟಾದ್ವೈತಮತದಲ್ಲಿ ಶಕ್ತಿವಿಶಿಷ್ಟಪರಶಿವನೇ ಶಕ್ತಿವಿಶಿಷ್ಟವಾದ ಜಗತ್ತನ್ನು ನಿರ್ಮಿಸಿರುವುದರಿಂದ, ಸತ್ಯವಾದ ಈಶ್ವರನಿಂದ ನಿರ್ಮಿತವಾದ ಈ ಜಗತ್ತೂ ಸತ್ಯವೇ ಆಗಿ ಇಲ್ಲಿ ಪ್ರತಿಯೊಂದು ವಸ್ತುವೂ ಶಕ್ತಿವಿಶಿಷ್ಟವೇ ಆಗಿದೆ. ಭೂಮಿಯಲ್ಲಿ ಧಾರಣಶಕ್ತಿ, ನೀರಿನಲ್ಲಿ ಆಪ್ಯಾಯನಶಕ್ತಿ, ತೇಜಸ್ಸಿನಲ್ಲಿ ದಾಹಕಶಕ್ತಿ, ವಾಯುವಿನಲ್ಲಿ ಸ್ಪಂದನಶಕ್ತಿ, ಆಕಾಶದಲ್ಲಿ ವ್ಯಾಪನಶಕ್ತಿ ಹೀಗೆ ಪಂಚಭೂತಗಳಲ್ಲೂ ಒಂದೊಂದು ಒಂದೊಂದು ಶಕ್ತಿ ಸಹಜವಾಗಿರುವುದರಿಂದ ಪ್ರತಿಯೊಂದು ವಸ್ತುವಿನಲ್ಲೂ ಈ ಶಕ್ತಿಗಳ ಸಮಾವೇಶವನ್ನು ಕಾಣಬಹುದು. "ಆತ್ಮನ ಆಕಾಶಃ ಸಂಭೂತಃ" ಎಂದು ಶ್ರುತಿಯಲ್ಲಿ ಸತ್ಯವಾದ ಪರಮಾತ್ಮನಿಂದ ಸತ್ಯವಾದ ಪಂಚಭೂತಗಳ ಉತ್ಪತ್ತಿಯನ್ನು ಹೇಳಿರುವುದರಿಂದ ಇವನ್ನು ಮಿಥ್ಯೆ ಎಂದು ಯಾರೂ ಭಾವಿಸಲಾರರು. ಆದರೂ ಭೇದವ್ಯಪದೇಶದಿಂದ ಜಗತ್ತಿಗೂ ಬ್ರಹ್ಮಕ್ಕೂ ಅಭೇದವಂತೆಯೇ ಭೇದವೂ ಪಾರಮಾರ್ಥಿಕವಾಗಿರುವುದರಿಂದ ಭೇದಾಭೇದವೇ ಯುಕ್ತವಾಗುತ್ತದೆ.

ಈ ಸಂದರ್ಭದಲ್ಲಿ ಅದ್ವೈತವೇದಾಂತವು ಹೇಳುವಂತೆ ಜಗತ್ತನ್ನು ವ್ಯಾವಹಾರಿಕಸತ್ಯವೆಂದು ಏಕೆ ಹೇಳಬಾರದು? ಎಂಬ ಪ್ರಶ್ನೆಯನ್ನು ಶ್ರೀಪತಿಪಂಡಿತಾರಾಧ್ಯರು ಕೂಲಂಕಷವಾಗಿ ವಿಮರ್ಶಿಸಿದ್ದಾರೆ; ಪ್ರತ್ಯಕ್ಷಗೋಚರವಾದ ಜಗತ್ತನ್ನು ಕೇವಲ ವ್ಯಾವಹಾರಿಕವೆಂದು ಭಾವಿಸಿದರೆ ಆಗುವ ಅನರ್ಥಪರಂಪರೆಗಳನ್ನು ವಿಸ್ತಾರ

ವಾಗಿ ನಿರೂಪಿಸಿದ್ದಾರೆ; ಜಾಗ್ರತ್ಪ್ರಪಂಚದಂತೆಯೇ ಸ್ವಪ್ನಪ್ರಪಂಚವೂ ಸತ್ಯವೆಂದೂ, ಅದಕ್ಕೆ ಈಶ್ವರನೇ ಕಾರಣನೆಂದೂ ಸಮಂಜಸವಾಗಿ ತಿಳಿಸಿದ್ದಾರೆ. ಸುಷುಪ್ತಿಯಲ್ಲಂತೂ ಜೀವರಿಗೆ ಆನಂದದ ಅನುಭವವಿರುವುದರಿಂದ ಅದು ಸತ್ಯವೇ ಆಗಿದೆ. ಹೀಗೆ "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಎಂಬಲ್ಲಿ ಪ್ರಪಂಚಕ್ಕೂ ಶಿವನಿಗೂ ಕಾರ್ಯಕಾರಣಭಾವದಿಂದ ಭೇದವೂ, "ಯದ್ಭೂತಂ ಯಚ್ಚ ಭವ್ಯಂ ಬಹುಧಾ ಜಾತಂ ಜಾಯಮಾನಂ ಚ ಯತ್ ಸರ್ವೋ ಹ್ಯೇಷ ರುದ್ರಃ" ಎಂಬ ಶ್ರುತಿಯಂತೆಯೂ, "ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಂ" ಎಂಬ ಗೀತೋಕ್ತಿಯಂತೆಯೂ, "ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚ ವೋ ನಮಃ" ಎಂಬ ಶ್ರುತಿಯಂತೆಯೂ ಪರಮೇಶ್ವರನೇ ಅನಂತರೂಪನಾಗಿರುವುದರಿಂದ ಪ್ರಪಂಚವನ್ನು ಮೊಲದ ಕೋಡಿನಂತೆಯೂ, ಆಕಾಶದ ಪುಷ್ಪದಂತೆಯೂ ಮಿಥ್ಯೆ ಎಂದು ಕರೆಯುವುದು ಯುಕ್ತವೆನಿಸುವುದಿಲ್ಲ. ಹೀಗೆ ಸತ್ಯನಾದ ಜೀವನು ಸತ್ಯವಾದ ಪ್ರಪಂಚದಲ್ಲಿ ಸತ್ಯನಾದ ಈಶ್ವರನನ್ನು ತನ್ನ ಪ್ರಾಣಲಿಂಗವೆಂದು ಭಾವಿಸಿ ನಿರಂತರವೂ ಅರ್ಚಿಸುತ್ತ ಆ ಪ್ರಕಾಶವನ್ನು ತನ್ನ ಹೃದಯದಲ್ಲಿ ಅನುಭವಿಸಿ ತನ್ನ ಸುತ್ತಲೂ ಅದನ್ನೇ ಕಾಣುತ್ತ ಅದಕ್ಕಾಗಿಯೇ ಎಲ್ಲರನ್ನೂ ಪ್ರೀತಿಸುತ್ತ ಆನಂದಮಯನಾಗಿರುವುದನ್ನೇ ಶ್ರೀಕರಭಾಷ್ಯವು ಭವಹರವೆಂದೂ, ಕಲ್ಯಾಣವಿಭೂತಿ ಎಂದೂ ಭಾವಿಸಿದೆ. ಇದೇ ಈ ಸಂಸಾರದಲ್ಲಿ ಮಾನವನು ದುಡಿದು ಪಡೆಯಬೇಕಾದ ಪ್ರಯೋಜನ; ಇದೇ ನಿರಭಿಮಾನದ ನೋಟ. ಇದಕ್ಕಾಗಿಯೇ ಸಂಸಾರವು ಸಾರವತ್ತಾಗಿದೆ; ಇದರಲ್ಲಿ ಅಸಾರವೆಂಬ ತುಚ್ಛಭಾವನೆಗೂ, ನಿಷ್ಪ್ರಯೋಜನವೆಂಬ ಜುಗುಪ್ಸೆಗೂ ಅವಕಾಶವಿಲ್ಲ. ಇಂತಹ ಪ್ರಯೋಜನದಿಂದ ಸಾಧಕರು ತಮ್ಮ ನೈರಾಶ್ಯಜುಗುಪ್ಸೆಗಳನ್ನು ನೀಗಿಗೊಂಡು ಸದಾಶಯರೂ ಸಚ್ಚರಿತರೂ ಆಗಿ ಸರ್ವಾತ್ಮಭಾವದಿಂದ ಲೋಕಹಿತವನ್ನಾಚರಿಸುತ್ತ ಆತ್ಮಕಲ್ಯಾಣವನ್ನು ಸಾಧಿಸಲೆಂದು ಶ್ರೀಕರಭಾಷ್ಯವು ಆಶಿಸುತ್ತದೆ. ಇಂತಹ ಭಾಷ್ಯವು ಸಂಸ್ಕೃತದಲ್ಲಿ ಇದ್ದರೂ ಕನ್ನಡನಾಡಿನ ಜನತೆಗೆ ಹೆಚ್ಚು ಉಪಯೋಗವಾಗುತ್ತಿರಲಿಲ್ಲ. ಆದ್ದರಿಂದ ಅದು ಈಶ್ವರಾನುಗ್ರಹದಿಂದ ಇಂದು ಕನ್ನಡ ಅನುವಾದದೊಡನೆ ಕನ್ನಡ ಅಕ್ಷರದಲ್ಲಿ ಜನತೆಯ ಕೈಗೆ ದೊರೆತಿದೆ. ಮೂಲವನ್ನು ಆದಷ್ಟು ಎಚ್ಚರಿಕೆಯಿಂದ ಶೋಧಿಸಿ ಎಲ್ಲರಿಗೂ ಸುಗಮವಾಗಿ ಅರ್ಥವಾಗುವಂತೆ ಕೊಟ್ಟಿದೆ. ಅದನ್ನು ಅನುವಾದದೊಡನೆ ಓದಿ ಕನ್ನಡಿಗರು ತಮ್ಮೊಳಗಿರುವ ಶಿವನ ಪರಿಚಯವನ್ನು ಪಡೆದು ಸುಖಶಾಂತಿಗಳನ್ನನುಭವಿಸಲೆಂದು ಬಯಸುವ,

**ಟಿ. ಜಿ. ಸಿದ್ದಪ್ಪಾರಾಧ್ಯ,**
ಭಕ್ತಕಿಂಕರ.



# ಅಧಿಕರಣಗಳ ಸಾರಾಂಶ

ಬಾದರಾಯಣರು ಬ್ರಹ್ಮಸೂತ್ರಗಳನ್ನು ಸಮನ್ವಯ-ಅವಿರೋಧ, ಸಾಧನ, ಫಲ ಎಂದು ನಾಲ್ಕು ಅಧ್ಯಾಯಗಳಾಗಿ ವಿಂಗಡಿಸಿದ್ದಾರೆ. ಪ್ರತಿಯೊಂದು ಅಧ್ಯಾಯದಲ್ಲೂ ನಾಲ್ಕುಪಾದಗಳಿವೆ. ಹೀಗೆ ಒಟ್ಟು ೧೬ ಪಾದಗಳಲ್ಲಿ ಮೊದಲನೆಯ ಆರು ಪಾದಗಳನ್ನು ಮಾತ್ರ ಶ್ರೀಕರಭಾಷ್ಯದ ಪ್ರಥಮಭಾಗದಲ್ಲಿ ಪ್ರಕಟಿಸಲಾಗಿದೆ. ಮುಂದಿನ ಹತ್ತು ಪಾದಗಳನ್ನು ದ್ವಿತೀಯ ಭಾಗದಲ್ಲಿ ಪ್ರಕಟಿಸಲಾಗುವುದು. ಈಗ ಪ್ರಕಟವಾಗಿರುವ ಆರು ಪಾದಗಳ ಪೈಕಿ ಪ್ರಥಮಪಾದದಲ್ಲಿ ೧೧ ಅಧಿಕರಣಗಳೂ ೩೨ ಸೂತ್ರಗಳೂ, ದ್ವಿತೀಯಪಾದದಲ್ಲಿ ೭ ಅಧಿಕರಣಗಳೂ ೩೨ ಸೂತ್ರಗಳೂ, ತೃತೀಯ ಪಾದದಲ್ಲಿ ೧೩ ಅಧಿಕರಣಗಳೂ ೪೩ ಸೂತ್ರಗಳೂ, ಚತುರ್ಥಪಾದದಲ್ಲಿ ೮ ಅಧಿಕರಣಗಳೂ ೨೮ ಸೂತ್ರಗಳೂ ಹೀಗೆ ಪ್ರಥಮಾಧ್ಯಾಯದಲ್ಲಿ ೩೯ ಅಧಿಕರಣಗಳೂ ೧೩೫ ಸೂತ್ರಗಳೂ ಇವೆ. ದ್ವಿತೀಯಾಧ್ಯಾಯ ಪ್ರಥಮಪಾದದಲ್ಲಿ ೧೧ ಅಧಿಕರಣಗಳೂ ೩೬ ಸೂತ್ರಗಳೂ, ದ್ವಿತೀಯಪಾದದಲ್ಲಿ ೮ ಅಧಿಕರಣಗಳೂ ೪೫ ಸೂತ್ರಗಳೂ ಇವೆ. ಒಟ್ಟು ಆರುಪಾದಗಳಲ್ಲಿರುವ ೫೮ ಅಧಿಕರಣಗಳ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ.

## ಪ್ರಥಮಾಧ್ಯಾಯ ಪ್ರಥಮಪಾದ

ಪೀಠಿಕೆ, ಮಂಗಳಾಚರಣ ಮತ್ತು ಉದ್ದೇಶನಿರೂಪಣ-ಶಿವನನ್ನೂ, ವಿಷ್ಣ್ವಾದಿ ಶಿವಭಕ್ತರನ್ನೂ, ರೇಣುಕಾದಿಪಂಚಾಚಾರ್ಯರನ್ನೂ ಸ್ತುತಿಸಿದಮೇಲೆ ಶ್ರೀಪತಿಪಂಡಿತಾರಾಧ್ಯರು ಬ್ರಹ್ಮಮೀಮಾಂಸಾಸೂತ್ರಗಳಿಗೆ ಅಗಸ್ತ್ಯವೃತ್ತಿಯನ್ನವಲಂಬಿಸಿ ವೀರಶೈವಸಿದ್ಧಾಂತಾನುಗುಣವಾಗಿ ಶ್ರೀಕರಭಾಷ್ಯವನ್ನು ರಚಿಸಿದ್ದಾರೆ.

೧. ಜಿಜ್ಞಾಸಾಧಿಕರಣ (ಸೂ. ೧.) ಭಾಷ್ಯದ ಲಕ್ಷಣವನ್ನು ತಿಳಿಸಿ ಚಾರ್ವಾಕ ಪೂರ್ವಮೀಮಾಂಸಾ ಮತ್ತು ಅದ್ವೈತಮತಗಳ ಆಕ್ಷೇಪಗಳನ್ನು ಖಂಡಿಸಿ ಜೀವಬ್ರಹ್ಮರ ಸ್ವರೂಪವನ್ನು ನಿರೂಪಿಸಲಾಗಿದೆ. ಅಥಶಬ್ದದ ಅರ್ಥವನ್ನು ವಿವರಿಸುವಾಗ "ಯಶ್ಛಂದಸಾಂ ವೃಷಭಃ" ಎಂಬ ಮಂತ್ರಕ್ಕೆ ಲಿಂಗಧಾರಣಪರವಾಗಿ ವ್ಯಾಖ್ಯಾನಮಾಡಿ ಲಿಂಗಧಾರಣದ ಬಗ್ಗೆ ಒದಗುವ ಆಕ್ಷೇಪಗಳನ್ನು ಪರಿಹರಿಸಿ ಅನೇಕ ಶ್ರುತಿಗಳ ಆಧಾರದಮೇಲೆ ಪ್ರಾಣಲಿಂಗದ ಧಾರಣವನ್ನು ಮುಕ್ತಿಗೆ ಸಾಧನವನ್ನಾಗಿ ಸಿದ್ಧಾಂತಮಾಡಿ, ಪಾಣಿಯಲ್ಲಿಟ್ಟು ಈ ಲಿಂಗವನ್ನು ನಿರಂತರವೂ ಪೂಜಿಸಬೇಕೆಂದೂ, ಇದಕ್ಕೆ ಸೂತಕದೋಷವಿಲ್ಲವೆಂದೂ ತಿಳಿಸಲಾಗಿದೆ. ಬ್ರಹ್ಮಾದಿದೇವತೆಗಳೆಲ್ಲರಿಗೂ ಹೀಗೆ ಲಿಂಗಧಾರಣವಿರುವುದರಿಂದ ಲಿಂಗರೂಪನಾದ ಶಿವನಲ್ಲದೆ ಬೇರೆ ಯಾರಿಂದಲೂ ಮುಕ್ತಿ ದೊರಕಲಾರದೆಂದೂ, ಪರಶಿವನನ್ನು ಸಗುಣ ಮತ್ತು ನಿರ್ಗುಣನೆಂದು ತಿಳಿಸಿ ಭಕ್ತನು ಸಗುಣಶಿವನ ಉಪಾಸನೆಯಿಂದ ನಿರ್ಗುಣಪರಶಿವನೊಡನೆ ಬೆರೆಯಬೇಕೆಂದೂ ತಿಳಿಸಲಾಗಿದೆ. ಈಬಗ್ಗೆ ವೇದದಂತೆ ಶಿವಾಗಮಗಳೂ ಪ್ರಮಾಣವಾಗಿವೆ ಎಂದು ತಿಳಿಸಿ, ಮೂರುವಿಧಿಗಳಿಂದಲೂ ವಿಹಿತವಾದ ಲಿಂಗಧಾರಣವಿದ್ದರೂ, ಬ್ರಹ್ಮಜಿಜ್ಞಾಸೆಯ

ಆವಶ್ಯಕತೆಯನ್ನು ವಿವರಿಸಲಾಗಿದೆ. ಅಥಶಬ್ದಕ್ಕೆ ಲಿಂಗಧಾರಣರೂಪವಾದ ವೀರಶೈವದೀಕ್ಷೆಯ ಅನಂತರವೆಂಬ ಅರ್ಥವನ್ನು ಹೇಳಿ ಅತಃಶಬ್ದದ ಅರ್ಥವನ್ನು ನಿರೂಪಿಸಲಾಗಿದೆ. ನಿರ್ಗುಣಸಗುಣಶ್ರುತಿಗಳಿಗೆ ವೀರಶೈವದರ್ಶನದಂತೆ ಅರ್ಥವನ್ನು ಪೂರ್ವಾಚಾರ್ಯರ ಅಭಿಪ್ರಾಯದೊಡನೆ ನಿರೂಪಿಸಿ ಶಕ್ತಿಗೂ ಶಕ್ತಿಮಾನ್ ಪರಶಿವ ನಿಗೂ ಅಭೇದವನ್ನು ಪ್ರತಿಪಾದಿಸಲಾಗಿದೆ. ವಿಶಿಷ್ಟಾದ್ವೈತ ಮತ್ತು ದ್ವೈತಮತ ಗಳನ್ನು ಖಂಡಿಸಿ ದ್ವೈತಾದ್ವೈತಸಿದ್ಧಾಂತವನ್ನು ಪ್ರತಿಪಾದಿಸಲಾಗಿದೆ. ಪರಶಿವನ ಮೂರ್ತಾಮೂರ್ತಸ್ವರೂಪವನ್ನು ನಿರೂಪಿಸಿ ಭೇದಾಭೇದಗಳಿಗೆ ವಿರೋಧವಿಲ್ಲವೆಂದು ತಿಳಿಸಲಾಗಿದೆ. ಜೀವೇಶ್ವರರು ಕಲ್ಪಿತರೆಂಬುದನ್ನು ನಿರಾಕರಿಸಿ, ನಿರ್ವಿಶೇಷಬ್ರಹ್ಮ ವಿರುವುದರಲ್ಲಿ ಪ್ರಮಾಣವಿಲ್ಲವೆಂದೂ ತಿಳಿಸಲಾಗಿದೆ. ಜಿಜ್ಞಾಸಾಸೂತ್ರದಲ್ಲಿ ಕರ್ತವ್ಯ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕೇ ಬೇಡವೇ ಎಂಬುದನ್ನು ವಿಸ್ತಾರವಾಗಿ ವಿಚಾರಿಸಿ ಜಿಜ್ಞಾಸಾ ಎಂಬಲ್ಲಿ ಪ್ರಕೃತಿಪ್ರತ್ಯಯಗಳೆರಡಕ್ಕೂ ಲಕ್ಷಣೆಯುಂಟೆಂದು ಪರಮಾರಾಧ್ಯರು ಹೇಳಿರುವುದಕ್ಕೆ ಏಕೋರಾಮಾರಾಧ್ಯರು ಸಮ್ಮತಿಸಿರುವರೆಂದು ಸೂಚಿಸಲಾಗಿದೆ. ಕೊನೆಗೆ ಶಿವನೇ ಪರಬ್ರಹ್ಮವೆಂದು ತಿಳಿಸಿ ಅವನ ಅಂಶನಾದ ಜೀವನಿಗೆ ಬಂಧವು ಸತ್ಯವಾಗಿದ್ದರೂ ತೊಲಗುವುದೆಂದು ತಿಳಿಸಲಾಗಿದೆ.

೨. ಜನ್ಮಾದ್ಯಧಿಕರಣಂ (ಸೂ. ೨.) ಜನ್ಮಾದಿಸೂತ್ರದ ಅರ್ಥವನ್ನು ವಿಚಾರ ಮಾಡುತ್ತ ಪರಮಶಿವನು ಜಗತ್ಕಾರಣನಾಗುವುದಿಲ್ಲವೆಂಬ ಆಕ್ಷೇಪವನ್ನು ನಿರಾಕರಿಸಿ, ಅವನೇ ಜಗತ್ಕಾರಣನೆಂದು ಸಿದ್ಧಾಂತಮಾಡಲಾಗಿದೆ. ಈ ಸಂದರ್ಭದಲ್ಲಿ ಮಿಥ್ಯಾತ್ವ ವಾದ, ಪ್ರತಿಬಿಂಬವಾದ, ಅವಚ್ಛಿನ್ನವಾದಗಳನ್ನು ಖಂಡಿಸಿ "ಮಾಯಾಭಾಸೇನ" ಎಂಬ ಶ್ರುತಿಗೆ ಸಿದ್ಧಾಂತಪರವಾದ ಅರ್ಥವನ್ನು ತಿಳಿಸಲಾಗಿದೆ. ಪರಬ್ರಹ್ಮದ ತಟಸ್ಥ ಮತ್ತು ಸ್ವರೂಪಲಕ್ಷಣಗಳನ್ನು ನಿರೂಪಿಸಿ "ವಿಷ್ಣುರಿತ್ಥಾ" ಎಂಬ ಶ್ರುತಿಯಂತೆ ಶಿವನಿಂದ ವಿಷ್ಣುವಿನ ಉತ್ಪತ್ತಿಯನ್ನು ನಿರೂಪಿಸಿ, ಮೂರ್ತಿತ್ರಯಾತೀತನಾದ ಶಿವನೇ ಪರಬ್ರಹ್ಮವೆಂದು ನಿರೂಪಿಸಲಾಗಿದೆ. ಆದ್ದರಿಂದ ನಾರಾಯಣಾದಿಶಬ್ದಗಳೂ ಪರಶಿವನನ್ನೇ ಪ್ರತಿಪಾದಿಸುತ್ತವೆ. ಪರಶಿವಬ್ರಹ್ಮವು ಭವ, ಮೃಡ, ಹರ ಎಂಬ ಲೀಲಾ ವಸ್ಥೆಗಳಲ್ಲಿ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕರ್ತೃವಾಗಿರುವ ಅಂಶವನ್ನು ತಿಳಿಸಿ ಸರ್ವ ಜ್ಞತ್ವ, ತೃಪ್ತಿ, ಅನಾದಿಬೋಧತ್ವ, ಸ್ವಾತಂತ್ರ್ಯ, ಅಲುಪ್ತಶಕ್ತಿಮತ್ತ್ವ, ಅನಂತ ಶಕ್ತಿಮತ್ತ್ವ ಎಂಬ ಪರಶಿವನ ಧರ್ಮಗಳೇ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣ ಲಿಂಗಿ,ಶರಣ, ಐಕ್ಯವೆಂಬ ಆರು ಅಂಗಸ್ಥಲಗಳು ಅಂದರೆ ಜೀವನ ವಿಕಾಸಾವಸ್ಥೆಗಳಾಗಿ ಪರಿಣಮಿಸಿರುವುದರಿಂದ ಶಿವನೇ ಜಗಜ್ಜನ್ಮಾದಿಕಾರಣನೆಂದು ಪ್ರತಿಪಾದಿಸಲಾಗಿದೆ.

೩. ಶಾಸ್ತ್ರಯೋನಿತ್ವಾಧಿಕರಣ (ಸೂ. ೩.) "ಶಾಸ್ತ್ರಯೋನಿತ್ವಾತ್" ಎಂಬ ಸೂತ್ರದ ಅರ್ಥವಿವರಣೆಯಾದಮೇಲೆ ಪರಮಾತ್ಮನು ಶಾಸ್ತ್ರಗಳಿಗೆ ಕಾರಣನಾಗು ವನೋ ಇಲ್ಲವೋ ಎಂಬ ಸಂಶಯವನ್ನು ತಿಳಿಸಿ, ಕಾರಣನಾಗುವುದಿಲ್ಲವೆಂದು ಆಕ್ಷೇಪ ಮಾಡಿ, ಅವನೇ ಶಾಸ್ತ್ರಗಳ ಕಾರಣನೆಂದು ಸಿದ್ಧಾಂತಮಾಡಲಾಗಿದೆ. ವೇದಗಳು

ಜನ್ಯವೆಂದೂ ಅಜನ್ಯವೆಂದೂ ತಿಳಿಸುವ ಶ್ರುತಿವಾಕ್ಯಗಳ ಪರಸ್ಪರವಿರೋಧವನ್ನು ಪರಿಹರಿಸಿ ಶಿವನೇ ವೇದಕರ್ತನೆಂದು ತಿಳಿಸಲಾಗಿದೆ. ಹಿಂದೆ ಹೇಳಿದ ಸರ್ವಜ್ಞತ್ವ ಮೊದಲಾದ ಆರು ಧರ್ಮಗಳು ಶಿವನೊಬ್ಬನಲ್ಲಿಯೇ ಇರುತ್ತವೆಯೆಂದೂ, ಅಂತಹ ಪರಶಿವನ ಇರುವಿಕೆಯಲ್ಲಿ ಶಾಸ್ತ್ರವೊಂದೇ ಪ್ರಮಾಣವೆಂದೂ ಹೇಳಲಾಗಿದೆ. ಈಬಗ್ಗೆ ಬರುವ ಆಕ್ಷೇಪವನ್ನು ನಿರಾಕರಿಸಿ ಸಿದ್ಧಾಂತವನ್ನು ಪ್ರತಿಪಾದಿಸಲಾಗಿದೆ. ಶಿವನನ್ನು ತಿಳಿಸುವ ಶೈವಪುರಾಣಗಳು ತಾಮಸವೆಂಬ ಆಕ್ಷೇಪವನ್ನು ನಿರಾಕರಿಸಿ ಅವನನ್ನು ಸಾತ್ತ್ವಿಕನೆಂದು ಪ್ರತಿಪಾದಿಸಲಾಗಿದೆ. ಶೈವ ವೀರಶೈವ ವೈಷ್ಣವರೆಲ್ಲರೂ ಏಕಾದಶಿ ವ್ರತವನ್ನಾಚರಿಸುವ ಆವಶ್ಯಕತೆಯನ್ನು ತಿಳಿಸಿ, ಶಿವನು ತಾಮಸನೆಂಬುದನ್ನು ಖಂಡಿಸಿ ಅವನೇ ಪರಮಸಾತ್ತ್ವಿಕನೆಂಬುದನ್ನು ನಿರೂಪಿಸಲಾಗಿದೆ.

೪. ಸಮನ್ವಯಾಧಿಕರಣ (ಸೂ.೪.) "ತತ್ತು ಸಮನ್ವಯಾತ್" ಎಂಬ ಸೂತ್ರದ ಅರ್ಥವನ್ನು ತಿಳಿಸಿ ವೇದಾಂತವಾಕ್ಯಗಳು ಇಂದ್ರಾದಿದೇವತೆಗಳಿಗೆ ಅನ್ವಯಿಸುತ್ತವೆಯೇ ಅಥವಾ ಪ್ರಧಾನಕ್ಕೂ ಅನ್ವಯಿಸುತ್ತವೆಯೇ ಎಂಬ ಸಂಶಯವನ್ನು ತಿಳಿಸಿ ಈಬಗ್ಗೆ ಬರುವ ಆಕ್ಷೇಪವನ್ನು ನಿರಾಕರಿಸಿ ವೇದಾಂತವಾಕ್ಯಗಳೆಲ್ಲವೂ ಪರಶಿವನಲ್ಲಿಯೇ ಸಮನ್ವಯಿಸುತ್ತವೆ ಎಂದು ಸಿದ್ಧಾಂತಮಾಡಲಾಗಿದೆ. ಉಪಕ್ರಮೋಪಸಂಹಾರಗಳೇ ಮೊದಲಾದ ಆರುಬಗೆಯ ತಾತ್ಪರ್ಯಲಿಂಗಗಳನ್ನು ತಿಳಿಸಿ, ವೇದಾಂತಗಳು ಶಿವಜ್ಞಾನವನ್ನು ವಿಧಿಸುತ್ತಲೇ ಶಿವನ ಬಗ್ಗೆ ಪ್ರಮಾಣವೂ ಆಗಿರುವುದರಿಂದ ಶಿವೋಪಾಸನವನ್ನು ಮೋಕ್ಷಸಾಧನವೆಂದು ಶ್ರುತಿಯೇ ವಿಧಿಸಿದೆ ಎಂದು ತಿಳಿಸಲಾಗಿದೆ. ಜಗತ್ತು ಮಿಥ್ಯೆ ಎಂಬುದನ್ನು ಖಂಡಿಸಿ ಅದನ್ನು ತ್ರಿಕಾಲಗಳಲ್ಲೂ ಸತ್ಯವೆಂದು ಪ್ರತಿಪಾದಿಸಿ ಅದನ್ನು ಕೇವಲ ವ್ಯಾವಹಾರಿಕವೆಂದು ಭಾವಿಸುವ ಅದ್ವೈತಮತವನ್ನು ವಿಸ್ತಾರವಾಗಿ ಖಂಡಿಸಲಾಗಿದೆ. ತತ್ತ್ವಮಸಿ ಮೊದಲಾದ ವಾಕ್ಯಗಳಲ್ಲಿ ಲಕ್ಷಣೆಯನ್ನು ಅಂಗೀಕರಿಸದೆ ಯಥಾರ್ಥವನ್ನೇ ಗ್ರಹಿಸಬೇಕೆಂದು ತಿಳಿಸಿ ಗುರುದೀಕ್ಷೆಯಿಂದ ಶುದ್ಧನಾದ ಜೀವನಿಗೆ ಪರಶಿವನ ಸಾಕ್ಷಾತ್ಕಾರವು ಲಭಿಸುವುದೆಂದು ನಿರೂಪಿಸಲಾಗಿದೆ.

೫. ಈಕ್ಷತ್ಯಧಿಕರಣ (ಸೂ. ೫-೧೨) "ಸದೇವ ಸೌಮ್ಯೇದಮಗ್ರ" ಎಂಬ ಛಾಂದೋಗ್ಯಶ್ರುತಿಯಲ್ಲಿ ಸಚ್ಛಬ್ದವು ಪರಶಿವಬ್ರಹ್ಮಕ್ಕೆ ಅನ್ವಯಿಸುವುದೇ ಹೊರತು ಸಾಂಖ್ಯರ ಪ್ರಧಾನವನ್ನು ಬೋಧಿಸುವುದಿಲ್ಲವೆಂದು ಸಮರ್ಥಿಸಲಾಗಿದೆ.

೬. ಆನಂದಮಯಾಧಿಕರಣ (ಸೂ. ೧೩-೨೦.) "ಅನ್ಯೋಽನ್ತರ ಆತ್ಮಾನಂದಮಯಃ" ಎಂಬ ತೈತ್ತಿರೀಯಶ್ರುತಿಯು ಪರಶಿವನಿಗೆ ಅನ್ವಯಿಸುವುದೇ ಹೊರತು ಜೀವನಿಗನ್ವಯಿಸುವುದಿಲ್ಲವೆಂದು ಸಾಧಿಸಲಾಗಿದೆ. ಈ ಸಂದರ್ಭದಲ್ಲಿ ಪರಬ್ರಹ್ಮವನ್ನು ನಿರ್ವಿಶೇಷವೆಂದು ತಿಳಿಸುವ ಅದ್ವೈತಮತವನ್ನೂ ಮತ್ತು ವಿಶಿಷ್ಟಾದ್ವೈತಮತವನ್ನೂ ವಿಸ್ತಾರವಾಗಿ ವಿಮರ್ಶಿಸಲಾಗಿದೆ.

೭. ಅಂತರಧಿಕರಣ (ಸೂ. ೨೧-೨೨.) "ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ" ಎಂಬ ಛಾಂದೋಗ್ಯಶ್ರುತಿಯಲ್ಲಿ ಆದಿತ್ಯನೊಳಗೆ ಇರುವ ಪುರು

ಷನು ಜೀವನಲ್ಲ; ನಾರಾಯಣನೂ ಅಲ್ಲ; ಆದರೆ ಪರಮಶಿವನೇ ಎಂದು ಸಾಧಿಸಲಾಗಿದೆ. ಹಾಗೆಯೇ ವಿಶಿಷ್ಟಾದ್ವೈತಮತದಲ್ಲಿ ಹೇಳಿರುವ ಶರೀರದ ಲಕ್ಷಣವನ್ನು ವಿಮರ್ಶಿಸಲಾಗಿದೆ. ಪರಮಶಿವನು ಸರ್ವಾಂತರ್ಯಾಮಿಯಾದ್ದರಿಂದ ಮಹಾಲಿಂಗಸ್ವರೂಪನೆಂದು ತಿಳಿಸಲಾಗಿದೆ.

೮. ಆಕಾಶಾಧಿಕರಣ (ಸೂ. ೨೩-೨೪.) "ಇಮಾನಿ ಭೂತಾನಿ ಆಕಾಶದೇವ ಸಮುತ್ಪದ್ಯಂತೇ" ಎಂಬ ಛಾಂದೋಗ್ಯಶ್ರುತಿಯಲ್ಲಿ ಆಕಾಶಪದವು ಭೂತಾಕಾಶಕ್ಕೆ ಅನ್ವಯಿಸದೆ ಪ್ರಸಾದಲಿಂಗರೂಪನಾದ ಪರಮಶಿವನಿಗೇ ಅನ್ವಯಿಸುವುದೆಂದೂ, ಹಾಗೆಯೇ ಅವನು ಜಂಗಮಲಿಂಗಸ್ವರೂಪನೆಂದೂ ನಿರೂಪಿಸಲಾಗಿದೆ.

೯. ಜ್ಯೋತಿರಧಿಕರಣ (ಸೂ. ೨೫-೨೮.) "ಅಥ ಯದತಃ ಪರಃ ದೇವೋ ಜ್ಯೋತಿರ್ದೀಪ್ಯತೇ" ಎಂಬ ಛಾಂದೋಗ್ಯಶ್ರುತಿಯಲ್ಲಿ ಜ್ಯೋತಿಃಪದವು ಸೂರ್ಯಚಂದ್ರಾದಿಗಳನ್ನು ಬೋಧಿಸದೆ ಪರಮಶಿವನನ್ನೇ ಬೋಧಿಸುತ್ತದೆ. ಮತ್ತು ಅವನೇ ಈ ದೇಶದಲ್ಲಿ ಶಿವಲಿಂಗನೂ, ಗುರುಲಿಂಗನೂ, ಆಚಾರಾಲಿಂಗನೂ ಆಗಿರುವನೆಂದು ತಿಳಿಸಲಾಗಿದೆ. ಈ ಸಂದರ್ಭದಲ್ಲಿ ಗಾಯತ್ರೀಮಂತ್ರವೂ ಪರಮಶಿವನನ್ನೇ ಪ್ರತಿಪಾದಿಸುತ್ತದೆ ಏಂದು ವಿಸ್ತಾರವಾಗಿ ನಿರೂಪಿಸಲಾಗಿದೆ. ಇದರಂತೆ ಪುರುಷಸೂಕ್ತವೂ ಶಿವಪರವಾದ್ದರಿಂದ ಶಿವಸೂಕ್ತವೆಂದೇ ಪ್ರತಿಪಾದಿಸಲಾಗಿದೆ.

೧೦. ಪ್ರಾಣಾಧಿಕರಣ (ಸೂ. ೨೯-೩೧.) "ಪ್ರಾಣೋಽಸ್ಮಿ ಪ್ರಜ್ಞಾತ್ಮಾ" ಎಂಬ ಕೌಷೀತಕೀಶ್ರುತಿಯಲ್ಲಿ ಪ್ರಾಣಪದವು ಪ್ರಾಣವಾಯುವನ್ನು ಬೋಧಿಸದೆ ಪರಮಶಿವನನ್ನೇ ಬೋಧಿಸುವುದೆಂದು ನಿರ್ಣಯಿಸಲಾಗಿದೆ.

೧೧. ಬಾಹ್ಯಪ್ರಾಣಲಿಂಗಾಧಿಕರಣ (೩೨). ಈ ದೇಹದಲ್ಲಿ ಇಷ್ಟಪ್ರಾಣಭಾವಲಿಂಗರೂಪನಾದ ಪರಮಶಿವನ ತ್ರಿವಿಧೋಪಾಸನೆಯನ್ನು ತಿಳಿಸಲಾಗಿದೆ.

**ದ್ವಿತೀಯಪಾದ.** ೧. ಸರ್ವತ್ರಪ್ರಸಿದ್ಧ್ಯಧಿಕರಣ (ಸೂ. ೧-೮). "ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಎಂಬ ತೈತ್ತಿರೀಯಮಂತ್ರವು ಸೋಮಸೂರ್ಯರನ್ನು ಪ್ರತಿಪಾದಿಸಿದೆ, ಉಮಾಶಕ್ತಿವಿಶಿಷ್ಟನೂ ಮಹಾಪ್ರಕಾಶನೂ ಆದ ಪರಮಶಿವನನ್ನು ಬೋಧಿಸುತ್ತದೆ. ಷಟ್ತ್ರಿಂಶತ್ತತ್ವಾತ್ಮಕನೂ, ಷಟ್ಸ್ಥಲಾತ್ಮಕನೂ, ಮೂರ್ತಾಮೂರ್ತಸ್ವರೂಪನೂ ಆದ ಪರಮೇಶ್ವರನನ್ನು ಸಾಧಕನು ಗುರುವಿನಿಂದ ಪಡೆದು ಹಸ್ತಪೀಠದಲ್ಲಿ ನಿರಂತರವೂ ಉಪಾಸನೆಮಾಡಬೇಕೆಂದು ತಿಳಿಸಲಾಗಿದೆ. ಶಿವಲಿಂಗೋಪಾಸನೆಯ ಅಂಗವಾಗಿ ಭಸ್ಮತ್ರಿಪುಂಡ್ರಾದಿಧಾರಣ ಶಿವಪ್ರಸಾದಸ್ವೀಕಾರ ಮತ್ತು ಇವುಗಳ ಮಹತ್ತ್ವವನ್ನೂ ನಿರೂಪಿಸಲಾಗಿದೆ.

೨. ಅತ್ತ್ರಧಿಕರಣ (ಸೂ. ೯-೧೦). "ಯಸ್ಯ ಬ್ರಹ್ಮ ಚ ಕ್ಷತ್ರಂ ಚ" ಎಂಬ ಕಠಶ್ರುತಿಯ ವಾಕ್ಯದಲ್ಲಿ ಪರಮೇಶ್ವರನೇ ಸಂಹಾರಕನೆಂದು ಸಿದ್ಧಾಂತಿಸಲಾಗಿದೆ.

೩. ಗುಹಾಧಿಕರಣ (ಸೂ. ೧೧-೧೨). "ಗುಹಾಂ ಪ್ರವಿಷ್ಟಾವಾತ್ಮಾನೌ"

ಎಂಬ ಕಠಶ್ರುತಿಯ ವಾಕ್ಯದಲ್ಲಿ ಹೃದಯಗುಹೆಯಲ್ಲಿ ಇರುವವರು ಜೀವಪರಮಶಿವನೇ ಹೊರತು ಬುದ್ಧಿಜೀವರಲ್ಲವೆಂದು ನಿರೂಪಿಸಲಾಗಿದೆ.

೪. ಅಂತರಾಧಿಕರಣ (ಸೂ. ೧೩-೧೭). "ಯ ಏಷೋಽಕ್ಷಿಣಿ ಪುರುಷಃ" ಎಂಬ ಛಾಂದೋಗ್ಯಮಂತ್ರದಲ್ಲಿ ಕಣ್ಣಿನೊಳಗೆ ಕಾಣುವ ಪುರುಷನು ಪರಮಶಿವನೇ ಹೊರತು ಜೀವಾದಿಗಳಲ್ಲವೆಂದು ನಿರೂಪಿಸಲಾಗಿದೆ.

೫. ಅಂತರ್ಯಾಮ್ಯಧಿಕರಣ (ಸೂ. ೧೮-೨೦). "ಯಃ ಪೃಥಿವ್ಯಾಂ ತಿಷ್ಠನ್" ಎಂದಾರಂಭಿಸುವ ಅಂತರ್ಯಾಮಿಬ್ರಾಹ್ಮಣದ ವಾಕ್ಯಗಳಲ್ಲಿ ಹೇಳಿರುವ ಸರ್ವಾಂತರ್ಯಾಮಿಯು ಪರಮಶಿವನೇ ಹೊರತು ಜೀವನಲ್ಲವೆಂದೂ, ನಿರ್ಗುಣಬ್ರಹ್ಮವು ಸರ್ವಾಂತರ್ಯಾಮಿಯಾಗಲಾರದೆಂದೂ ನಿರೂಪಿಸಲಾಗಿದೆ.

೬. ಅದೃಶ್ಯತ್ವಾಧಿಕರಣ (ಸೂ. ೨೧-೨೩). "ಯತ್ತದದ್ರೇಶ್ಯಮಗ್ರಾಹ್ಯಂ" ಎಂಬ ಮುಂಡಕಶ್ರುತಿಯು ಪರಮಶಿವನನ್ನು ಪ್ರತಿಪಾದಿಸುವುದೇ ಹೊರತು ಪ್ರಧಾನ ಜೀವರಿಗೆ ಅನ್ವಯಿಸುವುದಿಲ್ಲವೆಂದು ತಿಳಿಸಲಾಗಿದೆ.

೭. ವೈಶ್ವಾನರಾಧಿಕರಣ (ಸೂ. ೨೪-೩೨). "ಆತ್ಮಾನಮೇವೇಮಂ ವೈಶ್ವಾನರಂ" ಎಂಬ ಛಾಂದೋಗ್ಯಶ್ರುತಿಯಲ್ಲಿ ವೈಶ್ವಾನರಪದವು ಭೂತಾಗ್ನಿ ಮೊದಲಾದವನ್ನು ಬೋಧಿಸದೆ ಪರಮಶಿವನಿಗೇ ಅನ್ವಯಿಸುವುದೆಂದು ಸಿದ್ಧಾಂತಮಾಡಲಾಗಿದೆ.

**ತೃತೀಯಪಾದ.** ೧. ದ್ಯುಭ್ವಾದ್ಯಧಿಕರಣ (ಸೂ. ೧-೭). "ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ" ಎಂಬ ಮುಂಡಕಶ್ರುತಿವಾಕ್ಯದಲ್ಲಿ ವಿಶ್ವಕ್ಕಾಧಾರವೆನಿಸಿರುವ ವಸ್ತು ಪರಶಿವನಲ್ಲದೆ ಬೇರೆಯಲ್ಲವಾದ್ದರಿಂದ ಅವನು ವಿಶ್ವಕ್ಕೆ ಸ್ಥಲವೆನಿಸಿದ್ದಾನೆ. ವಿಶಿಷ್ಟಾದ್ವೈತಮತದ ಅಂಗಾಂಗಿಭಾವವನ್ನು ನಿರಾಕರಿಸಿ ಶಿವಜೀವರಿಗೆ ಭೇದಾಭೇದವನ್ನು ಸಮರ್ಥಿಸಿ ಪ್ರಪಂಚದ ಸತ್ಯತೆಯನ್ನು ಸ್ಥಾಪಿಸಲಾಗಿದೆ.

೨. ಭೂಮಾಧಿಕರಣ (ಸೂ. ೮-೯). "ಯತ್ರ ನಾನ್ಯತ್ಪಶ್ಯತಿ" ಛಾಂದೋಗ್ಯಶ್ರುತಿಯು ಪರಮಶಿವನಿಗೆ ಅನ್ವಯಿಸುವುದೇ ಹೊರತು ಪ್ರಾಣಾದಿಗಳಿಗೆ ಅನ್ವಯಿಸುವುದಿಲ್ಲವೆಂದು ತಿಳಿಸಲಾಗಿದೆ.

೩. ಅಕ್ಷರಾಧಿಕರಣ (ಸೂ. ೧೦-೧೨). "ಏತದ್ವೈ ತದಕ್ಷರಂ" ಎಂಬ ಬೃಹದಾರಣ್ಯಕಮಂತ್ರದಲ್ಲಿ ಅಕ್ಷರಪದವು ಪರಮಶಿವನನ್ನು ಬೋಧಿಸುವುದೇ ಹೊರತು ಪ್ರಣವಾದಿಗಳನ್ನು ಬೋಧಿಸುವುದಿಲ್ಲ.

೪. ಈಕ್ಷತಿಕರ್ಮಾಧಿಕರಣ (ಸೂ. ೧೩). "ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ" ಎಂಬ ಮಂತ್ರದಲ್ಲಿ ದರ್ಶನಕ್ಕೆ ವಿಷಯವಾಗುವವನು ಪರಮಶಿವನೇ ಹೊರತು ಚತುರ್ಮುಖಾದಿಗಳಲ್ಲ. ತ್ರಿಮೂರ್ತಿಗಳಿಗಿಂತಲೂ ಶಿವನೇ ಉತ್ಕೃಷ್ಟನು.

೫. ದಹರಾಧಿಕರಣ (ಸೂ. ೧೪-೨೧). "ದಹರೋಽಸ್ಮಿನ್ನಂತರ ಆಕಾಶಃ" ಎಂಬ ಛಾಂದೋಗ್ಯಶ್ರುತಿಯಲ್ಲಿ ದಹರಪದವು ಭೂತಾಕಾಶಾದಿಗಳಿಗೆ ಅನ್ವಯಿಸದೆ

ಪರಮಶಿವನನ್ನೇ ಬೋಧಿಸುತ್ತದೆ. ಇಲ್ಲಿ ಪರಮಶಿವನೇ ದಹರಾಕಾಶನೂ ಆಗಿ ಅದರಲ್ಲಿ ನೆಲಸಿರುವನಾದ್ದರಿಂದ ಮುಮುಕ್ಷುಗಳಿಗೆ ಉಪಾಸ್ಯನೆನಿಸಿದ್ದಾನೆ.

೬. ಅನುಕೃತ್ಯಧಿಕರಣ. (ಸೂ. ೨೨-೨೩). "ತಮೇವ ಭಾಂತಮನುಭಾತಿ ಸರ್ವಂ" ಎಂಬ ಕಠಶ್ರುತಿಯಲ್ಲಿ ಎಲ್ಲಾ ಪ್ರಕಾಶಕ್ಕೂ ಕಾರಣನಾಗಿರುವವನು ಪರಮಶಿವನೇ ಹೊರತು ಮತ್ತೆ ಬೇರೆ ಯಾರೂ ಅಲ್ಲವೆಂದು ತಿಳಿಸಲಾಗಿದೆ.

೭. ಪ್ರಮಿತಾಧಿಕರಣ (ಸೂ. ೨೪-೨೫). "ಅಂಗುಷ್ಠಮಾತ್ರಃ ಪುರುಷಃ" ಎಂಬ ಕಠಶ್ರುತಿಯಲ್ಲಿ ಹೇಳಿರುವಂತೆ ಅಂಗುಷ್ಠಪರಿಮಿತನಾಗಿ ಹೃದಯದಲ್ಲಿ ನೆಲಸಿರುವ ಪ್ರಕಾಶವು ಪರಮೇಶ್ವರನಲ್ಲದೆ ಬೇರೆಯಲ್ಲ.

೮. ದೇವತಾಧಿಕರಣ (೨೬-೩೩). ಬ್ರಹ್ಮವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವಿಲ್ಲವೆಂದಾಕ್ಷೇಪಿಸಿ ಅವರಿಗೆ ಮಧುವಿದ್ಯೆಗೆ ಅಧಿಕಾರವಿರುವುದರಿಂದ ಬ್ರಹ್ಮವಿದ್ಯೆಗೂ ಅಧಿಕಾರವುಂಟೆಂದು ತಿಳಿಸಿ ಬ್ರಹ್ಮವಿದ್ಯೆಯನ್ನು ಪ್ರತಿಪಾದಿಸುವ ವೇದದ ನಿತ್ಯತೆಯನ್ನು ಸ್ಥಾಪಿಸಲಾಗಿದೆ.

೯. ಅಪಶೂದ್ರಾಧಿಕರಣ (೩೪-೩೮). "ಅಹಹಾರೇ ತ್ವಾ ಶೂದ್ರ" ಎಂಬ ಛಾಂದೋಗ್ಯಶ್ರುತಿಯಲ್ಲಿ ಶೂದ್ರಪದವು ಬಂದಿರುವುದರಿಂದ ಶೂದ್ರನಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದು ಆಕ್ಷೇಪಿಸಿ ಅಲ್ಲಿ ಶೂದ್ರಪದವು ಜಾತಿವಾಚಕವಲ್ಲದೆ ದುಃಖಾರ್ತನಾದ ಜಾನಶ್ರುತಿ ಎಂಬ ಕ್ಷತ್ರಿಯನನ್ನೇ ಬೋಧಿಸುವುದರಿಂದ ಶೂದ್ರರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ನಿರ್ಣಯಿಸಲಾಗಿದೆ.

೧೦. ಕಂಪನಾಧಿಕರಣ (ಸೂ. ೩೯). "ಜಗತ್ಸರ್ವಂ ಪ್ರಾಣ ಏಜತಿ ನಿಸ್ಸೃತಂ" ಎಂಬ ಕಠವಾಕ್ಯದಲ್ಲಿ ಸರ್ವಜಗತ್ತನ್ನೂ ನಡಗಿಸುವವನು ಪರಮಶಿವನೇ ಹೊರತು ವಜ್ರಾಯುಧವಲ್ಲವೆಂದು ತಿಳಿಸಲಾಗಿದೆ.

೧೧. ಜ್ಯೋತಿರಧಿಕರಣ (ಸೂ. ೪೦). "ಪರಂ ಜ್ಯೋತಿರುಪಸಂಪದ್ಯ" ಎಂಬ ಛಾಂದೋಗ್ಯಮಂತ್ರದಲ್ಲಿ ಪ್ರತಿಪಾದ್ಯವಾದ ಪರಂಜ್ಯೋತಿಯು ಸೂರ್ಯಾದಿಜ್ಯೋತಿಗಳಲ್ಲದೆ ಪರಶಿವನೇ ಆಗಿರುವುದೆಂದು ನಿರೂಪಿಸಲಾಗಿದೆ.

೧೨. ಅರ್ಥಾಂತರತ್ವಾದಿವಪದೇಶಾಧಿಕರಣ (ಸೂ. ೪೧). "ಆಕಾಶೋ ಹ ವೈ ನಾಮರೂಪಯೋರ್ನಿರ್ವಹಿತಾ" ಎಂಬ ಛಾಂದೋಗ್ಯಶ್ರುತಿಯಲ್ಲಿ ವಿಶ್ವವೆಲ್ಲಕ್ಕೂ ನಾಮರೂಪಗಳನ್ನು ದೊರಕಿಸುವ ಆಕಾಶವು ಭೂತಾಕಾಶ ಮತ್ತು ಜೀವರೆನಿಸದೆ ಪರಮಶಿವನೇ ಆಗಿದೆ ಎಂದು ತಿಳಿಸಲಾಗಿದೆ.

೧೩. ಸುಷುಪ್ತ್ಯಧಿಕರಣ (ಸೂ. ೪೨-೩). "ಯೋಽಯಂ ವಿಜ್ಞಾನಮಯಃ" ಎಂಬ ಬೃಹದಾರಣ್ಯಕಮಂತ್ರದಲ್ಲಿ ವಿಜ್ಞಾನಮಯನೆಂಬುದು ಪರಮಶಿವನಿಗೆ ಅನ್ವಯಿಸುವುದೇ ಹೊರತು ಜೀವನಿಗೆ ಅನ್ವಯಿಸುವುದಿಲ್ಲವೆಂದು ಪ್ರತಿಪಾದಿಸಲಾಗಿದೆ.

**ಚತುರ್ಥಪಾದ.** ೧. ಆನುಮಾನಿಕಾಧಿಕರಣ (ಸೂ. ೧-೭). "ಮಹತಃ ಪರಮವ್ಯಕ್ತಂ" ಎಂಬ ಕಠೋಪನಿಷತ್ತಿನ ಮಂತ್ರದಲ್ಲಿ ಅವ್ಯಕ್ತಪದವು ಪ್ರಧಾನವನ್ನು

ಬೋಧಿಸುವುದೆಂದಾಕ್ಷೇಪಿಸಿ ಶರೀರಕ್ಕೆ ಮಾತ್ರವೇ ಅನ್ವಯಿಸುವುದೆಂದು ಸಿದ್ಧಾಂತಿಸ ಲಾಗಿದೆ.

೨. ಚಮಸಾಧಿಕರಣ (ಸೂ. ೮-೧೦). ವೈದಿಕಪ್ರಯೋಗದಲ್ಲಿ ಚಮಸಪದವು ಪ್ರಸಿದ್ಧವಾದ ಪಾತ್ರವಿಶೇಷವನ್ನು ಬೋಧಿಸದೆ ಶಿರಸ್ಸನ್ನು ಬೋಧಿಸುವಂತೆ "ಅಜಾ ಮೇಕಾಂ ಲೋಹಿತಶುಕ್ಲಕೃಷ್ಣಾಂ" ಎಂಬ ಶ್ವೇತಾಶ್ವತರಮಂತ್ರದಲ್ಲಿ ಅಜಾಪದವು ಸಾಂಖ್ಯಸಮ್ಮತವಾದ ಸ್ವತಂತ್ರಪ್ರಧಾನವನ್ನು ಬೋಧಿಸದೆ ಪರಮಶಿವನಿಗಧೀನ ವಾದ ಶಕ್ತಿರೂಪವಾದ ಪ್ರಧಾನವನ್ನೇ ಬೋಧಿಸುತ್ತದೆ.

೩. ಸಂಖ್ಯೋಪಸಂಗ್ರಹಾಧಿಕರಣ(೧೧-೧೩). "ಯಸ್ಮಿನ್ಪಂಚ ಪಂಚಜನಾಃ" ಎಂಬ ಬೃಹದಾರಣ್ಯಕಮಂತ್ರವು ಇಪ್ಪತ್ತೈದು ತತ್ತ್ವಗಳನ್ನು ಬೋಧಿಸುವ ಸಾಂಖ್ಯ ಮತವನ್ನು ಪ್ರತಿಪಾದಿಸದೆ ವೇದಾಂತಮತದ ಪ್ರಕ್ರಿಯೆಯನ್ನೇ ತಿಳಿಸುತ್ತದೆ.

೪. ಕಾರಣತ್ವಾಧಿಕರಣ (೧೪-೧೫). "ಆತ್ಮನ ಆಕಾಶಸ್ಸಂಭೂತಃ" ಹೀಗೆ ಸೃಷ್ಟಿಯನ್ನು ತಿಳಿಸುವ ಉಪನಿಷದ್ವಾಕ್ಯಗಳಲ್ಲಿ ಜಗತ್ಕಾರಣವಾದ ವಸ್ತುವು ಒಂದೇ ಎಂದು ಹೇಳಲಿಕ್ಕಾಗುವುದಿಲ್ಲವೆಂದಾಕ್ಷೇಪಿಸಿ ಎಲ್ಲಾ ಪ್ರಕರಣಗಳೂ ಪರಮಶಿವನನ್ನೇ ಜಗತ್ಕಾರಣವೆಂದು ತಿಳಿಸುತ್ತವೆ ಎಂದು ಸಾಧಿಸಲಾಗಿದೆ.

೫. ಬಾಲಾಕ್ಯಧಿಕರಣ (೧೬-೧೮). "ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ" ಎಂಬ ಕೌಷೀತಕೀಬ್ರಾಹ್ಮಣದ ವಾಕ್ಯದಲ್ಲಿ ಕರ್ಮಪದವು ಪುಣ್ಯಪಾಪಗಳಲ್ಲಿ ಪ್ರಸಿದ್ಧವಾಗಿರುವುದರಿಂದ ಜೀವನೇ ಜಗತ್ಕಾರಣನೆಂದು ಆಕ್ಷೇಪಿಸಿ ಆ ಪದವು ಸೃಷ್ಟಿ ಎಂಬ ಕರ್ಮವನ್ನು ಹೇಳುವುದೇ ಹೊರತು ಪುಣ್ಯಪಾಪಗಳನ್ನು ಹೇಳುವುದಿಲ್ಲವಾದ್ದರಿಂದ ಪರಮಶಿವನೇ ಸೃಷ್ಟಿಕರ್ತನೆಂದು ಸಿದ್ಧಾಂತಿಸಲಾಗಿದೆ.

೬. ವಾಕ್ಯಾನ್ವಯಾಧಿಕರಣ (೧೯-೨೨). "ಆತ್ಮಾವಾರೇ ದ್ರಷ್ಟವ್ಯಃ" ಎಂಬ ಬೃಹದಾರಣ್ಯಕವಾಕ್ಯದಲ್ಲಿ ಆತ್ಮಪದವು ಜೀವನಿಗೆ ಅನ್ವಯಿಸದೆ ಪರಮಾತ್ಮನಿಗೇ ಅನ್ವಯಿಸುತ್ತದೆ ಎಂದು ಹೇಳಿ ಆ ಪರಮಾತ್ಮನಿಗೂ ಜೀವನಿಗೂ ಕೇವಲ ಭೇದ ಅಥವಾ ಅಭೇದವನ್ನು ನಿರಾಕರಿಸಿ ಭೇದಾಭೇದವನ್ನು ಪರಸ್ಪರವಿರೋಧಪರಿಹಾರ ಪೂರ್ವಕವಾಗಿ ವಿಸ್ತಾರವಾಗಿ ನಿರೂಪಿಸಲಾಗಿದೆ.

೭. ಪ್ರಕೃತ್ಯಧಿಕರಣ (೨೩-೨೭). ಪರಮಾತ್ಮಜ್ಞಾನದಿಂದ ಸಕಲಪ್ರಪಂಚದ ಜ್ಞಾನವೂ ಆಗುವುದೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಜಗತ್ತಿಗೆ ಪರಮಶಿವನು ಉಪಾದಾನವಾಗದಿದ್ದರೆ ಈ ಪ್ರತಿಜ್ಞೆ ಹೊಂದುವುದಿಲ್ಲವಾದ್ದರಿಂದ ಅವನು ಜಗತ್ತಿಗೆ ಕೇವಲ ನಿಮಿತ್ತನಾಗದೆ ಉಪಾದಾನನೂ ಆಗಿರುವನೆಂದು ನಿರೂಪಿಸಲಾಗಿದೆ.

೮. ಸರ್ವವ್ಯಾಖ್ಯಾನಾಧಿಕರಣ (ಸೂ. ೨೮). ಇದು ಈ ಅಧ್ಯಾಯದ ಉಪಸಂ ಹಾರರೂಪವಾಗಿ ಬಂದಿದೆ. ಇದುವರೆಗೆ ಹೇಳಿದ ನ್ಯಾಯಗಳಿಂದಲೇ ಸಕಲ ವೇದಾಂತ ವಾಕ್ಯಗಳೂ ಪರಶಿವನಲ್ಲಿಯೇ ಸಮನ್ವಯವಾಗುವುವೆಂದು ಪ್ರತಿಪಾದಿಸಲಾಗಿದೆ.

## ದ್ವಿತೀಯಾಧ್ಯಾಯ–ಪ್ರಥಮಪಾದ

೧. ಸ್ಮೃತ್ಯನವಕಾಶಾಧಿಕರಣ (ಸೂ. ೧-೨) ಕಪಿಲಾದಿಸ್ಮೃತಿಗಳಿಗನುಗುಣವಾಗಿಯೇ ವೇದಗಳ ಅರ್ಥವನ್ನು ಗ್ರಹಿಸಬೇಕಾದ್ದರಿಂದ ಅದರಲ್ಲಿ ಹೇಳಿರುವಂತೆ ಪ್ರಧಾನವೇ ಜಗತ್ಕಾರಣವೆಂದು ಆಕ್ಷೇಪಿಸಿ ಆ ಸ್ಮೃತಿಗಳು ವೇದವಿರುದ್ಧವಾದ್ದರಿಂದ ಅವನ್ನು ಪ್ರಮಾಣವಲ್ಲವೆಂದು ತಿಳಿಸಿ ವೇದಾನುಗುಣವಾದ ಮನ್ವಾದಿಸ್ಮೃತಿಗಳಿಗನುಗುಣವಾಗಿ ಪರಶಿವನೇ ಜಗತ್ಕಾರಣನೆಂದು ಸಿದ್ಧಾಂತಗೊಳಿಸಲಾಗಿದೆ.

೨. ಯೋಗಪ್ರತ್ಯುಕ್ತ್ಯಧಿಕರಣ- (ಸೂ. ೩). ಸಾಂಖ್ಯಸ್ಮೃತಿಯಂತೆ ಯೋಗಸ್ಮೃತಿಯೂ ಅಪ್ರಮಾಣವಾದ್ದರಿಂದ ಅದರಲ್ಲಿ ಹೇಳಿರುವಂತೆ ಪ್ರಧಾನವೇ ಜಗತ್ತಿಗೆ ಉಪಾದಾನಕಾರಣವೆಂಬುದನ್ನು ನಿರಾಕರಿಸಲಾಗಿದೆ.

೩. ನ ವಿಲಕ್ಷಣತ್ವಾಧಿಕರಣ (ಸೂ. ೪–೧೧). ಶುದ್ಧಚೈತನ್ಯಸ್ವರೂಪನಾದ ಪರಮಶಿವನು ಜಡಪ್ರಪಂಚಕ್ಕೆ ಕಾರಣನಾಗಲಾರನು ಎಂದಾಕ್ಷೇಪಿಸಿ ಊರ್ಣನಾಭಿ ಮೊದಲಾದ ದೃಷ್ಟಾಂತಗಳಿಂದ ಪರಮಶಿವನೇ ಜಗತ್ಕಾರಣನಾಗುವನೆಂದು ನಿರೂಪಿಸಲಾಗಿದೆ. ನಾರಾಯಣಚತುರ್ಮುಖರಿಗೆ ಜಗತ್ಕಾರಣತ್ವ ಮತ್ತು ಪರಬ್ರಹ್ಮತ್ವವಿಲ್ಲವೆಂದೂ, ಹಾಗೆಯೇ ಶಿವಜೀವರಿಗೆ ಕೇವಲ ಅಭೇದವೂ ಇಲ್ಲವೆಂದೂ ತಿಳಿಸಲಾಗಿದೆ.

೪. ಶಿಷ್ಟಾಪರಿಗ್ರಹಾಧಿಕರಣ (ಸೂ. ೧೨). ಸಾಂಖ್ಯಾದಿಮತದಂತೆ ಮಿಥ್ಯಾದ್ವೈತಶೂನ್ಯಾದ್ವೈತಾದಿಮತಗಳೂ ಮುಮುಕ್ಷುಗಳಿಗೆ ಗ್ರಾಹ್ಯಗಳಾಗಲಾರವು.

೫. ಭೋಕ್ತ್ರಾಪತ್ತ್ಯಧಿಕರಣ (ಸೂ. ೧೩). ಪರಮಶಿವನು ಸರ್ವಾಂತರ್ಯಾಮಿಯಾದರೆ ಅವನಿಗೂ ಜೀವರಂತೆ ಸುಖದುಃಖಗಳು ಬರಬೇಕಾದೀತೆಂದಾಕ್ಷೇಪಿಸಿ, ಆಕಾಶಾದಿಗಳು ಎಲ್ಲಾಕಡೆಯೂ ವ್ಯಾಪಿಸಿದ್ದರೂ ಅವಕ್ಕೆ ಯಾವ ದೋಷವೂ ಅಂಟದಿರುವಂತೆ ಪರಮಶಿವನಿಗೂ ಜೀವನ ದೋಷಗಳು ಎಂದಿಗೂ ಅಂಟುವುದಿಲ್ಲವೆಂದು ಸಿದ್ಧಾಂತಮಾಡಲಾಗಿದೆ.

೬. ಆರಂಭಣಾಧಿಕರಣ (೧೪–೨೦). ಶಕ್ತಿಗೂ ಶಕ್ತಿಮಾನ್ ಶಿವನಿಗೂ ಭೇದವುಂಟೆಂಬುದನ್ನು ಆಕ್ಷೇಪಿಸಿ ಅಭೇದವನ್ನು ನಿರೂಪಿಸಲಾಗಿದೆ. ಹಾಗೆಯೇ ಕಾರ್ಯಕಾರಣಗಳಿಗೂ ಅಭೇದವನ್ನು ಸಾಧಿಸಲಾಗಿದೆ.

೭. ಇತರವ್ಯಪದೇಶಾಧಿಕರಣಂ (೨೧–೨೩). ಜೀವಶಿವರಿಗೆ ಅಭೇದವನ್ನು ಒಪ್ಪಿದರೆ ತನಗನಿಷ್ಟವಾದ ಪ್ರಪಂಚವನ್ನು ಪರಶಿವನು ಸೃಷ್ಟಿಸಲಾರನೆಂದು ಆಕ್ಷೇಪಿಸಿ ಅವನಿಗೂ ಅದಕ್ಕೂ ಭೇದವನ್ನು ನಿರೂಪಿಸಿ ಭೇದಾಭೇದಗಳಿಗೆ ಪರಸ್ಪರವಿರೋಧವನ್ನು ಸಯುಕ್ತಿಕವಾಗಿ ಪರಿಹರಿಸಲಾಗಿದೆ.

೮. ಉಪಸಂಹಾರದರ್ಶನಾಧಿಕರಣ (೨೪–೨೫). ಯಾವ ಸಲಕರಣೆಗಳನ್ನೂ ಅಪೇಕ್ಷಿಸದ ಪರಮಶಿವನು ತನ್ನ ಶಕ್ತಿಯಿಂದಲೇ ಜಗತ್ತನ್ನು ಸೃಷ್ಟಿಸಬಲ್ಲನೆಂದು ನಿರೂಪಿಸಲಾಗಿದೆ.

೯. ಕೃತ್ಸ್ನಪ್ರಸಕ್ತ್ಯಧಿಕರಣ (೨೬-೩೩). "ಪರಮಶಿವನಿಗೆ ಜಗತ್ಕಾರಣತ್ವವನ್ನು ಒಪ್ಪಿದರೆ ಅವನಿಗೆ ವಿಕಾರಗಳು ಸಂಭವಿಸುತ್ತವೆ" ಎಂದಾಕ್ಷೇಪಿಸಿ ಶ್ರುತಿಪ್ರಾಮಾಣ್ಯದಿಂದ ಅವನು ಜಗತ್ಕಾರಣನಾದರೂ ನಿರ್ವಿಕಾರನಾಗಿಯೂ ಇರುವನೆಂದು ಹೇಳಿ, ನಿರ್ವಿಶೇಷಬ್ರಹ್ಮಕ್ಕೆ ಜಗತ್ಕಾರಣತ್ವ ಬರುವುದಿಲ್ಲವೆಂದೂ, ಶಕ್ತಿವಿಶಿಷ್ಟಶಿವನೇ ಲೀಲೆಯಿಂದ ಜಗತ್ಸೃಷ್ಟ್ಯಾದಿವ್ಯಾಪಾರಗಳನ್ನು ನಡೆಸುವನೆಂದೂ ಸಾಧಿಸಲಾಗಿದೆ.

೧೦. ವೈಷಮ್ಯನೈರ್ಘೃಣ್ಯಾಧಿಕರಣ (೩೪-೩೬). ಸುಖದುಃಖಮಯವಾದ ಈ ಪ್ರಪಂಚವನ್ನು ಪರಶಿವನು ಸೃಷ್ಟಿಸುವುದಾದರೆ ಅವನಿಗೆ ಪಕ್ಷಪಾತ ಮತ್ತು ನಿರ್ದಯತ್ವವನ್ನು ಆಶಂಕಿಸಿ ಅವರವರ ಪುಣ್ಯಪಾಪಗಳಿಗಾನುಗುಣವಾಗಿಯೇ ಅವನು ಸೃಷ್ಟಿಸುವುದರಿಂದ ಅವನಿಗೆ ಯಾವ ದೋಷವೂ ಅಂಟದೆ ಅವನು ಸಕಲಕಲ್ಯಾಣ ಗುಣಾಕರನಾಗಿಯೇ ಇರುವನೆಂದು ನಿರೂಪಿಸಲಾಗಿದೆ.

**ದ್ವಿತೀಯಪಾದ.** ರಚನಾನುಪಪತ್ತ್ಯಧಿಕರಣದಲ್ಲಿ ಸಾಂಖ್ಯಮತವೂ, ಮಹದ್ದೀರ್ಘಾಧಿಕರಣದಲ್ಲಿ ವೈಶೇಷಿಕಮತವೂ, ಸಮುದಾಯಾಧಿಕರಣದಲ್ಲಿ ವೈಭಾಷಿಕ, ಸೌತ್ರಾಂತಿಕ-ಯೋಗಾಚಾರವೆಂಬ ಬೌದ್ಧಮತಗಳೂ, ನಾಭಾವಾಧಿಕರಣದಲ್ಲಿ ಜಗನ್ಮಿಥ್ಯಾತ್ಮವನ್ನು ಹೇಳುವ ನಿರ್ವಿಶೇಷವಾದವೂ ನಿರಾಕೃತವಾಗಿವೆ. ಸರ್ವಥಾನುಪಪತ್ತ್ಯಧಿಕರಣದಲ್ಲಿ ಶೂನ್ಯವಾದವೆಂಬ ಬೌದ್ಧಮತವೂ, ಏಕಸ್ಮಿನ್ನಸಂಭವಾಧಿಕರಣದಲ್ಲಿ ಜೈನಮತವೂ ನಿರಾಕೃತವಾಗಿವೆ. ಪತ್ಯಧಿಕರಣದಲ್ಲಿ ಈಶ್ವರನು ಜಗತ್ತಿಗೆ ನಿಮಿತ್ತಕಾರಣನೆಂದು ಹೇಳುತ್ತ ಶ್ರುತ್ಯೈಕದೇಶಕ್ಕೆ ಪ್ರಾಮಾಣ್ಯವನ್ನು ಒಪ್ಪುವ ಮಿಶ್ರ ರೌದ್ರ, ಪಾಶುಪತ, ಗಾಣಾಪತ್ಯ, ಸೌರ, ಶಾಕ್ತ ಮೊದಲಾದ ಶೈವಮತಗಳನ್ನು ಖಂಡಿಸಿ ಪರಮಶಿವನೇ ಜಗತ್ತಿಗೆ ಉಭಯಕಾರಣನೆಂದು ಸಿದ್ಧಾಂತಗೊಳಿಸಲಾಗಿದೆ. ಉತ್ಪತ್ತ್ಯಸಂಭವಾಧಿಕರಣದಲ್ಲಿ ನಾರಾಯಣನೇ ಜಗತ್ಕಾರಣನೆಂದು ಹೇಳುವ ಪಾಂಚಾರಾತ್ರಮತವನ್ನು ನಿರಾಕರಿಸಿ ಶಿವನೇ ಸರ್ವೋತ್ಕೃಷ್ಟನೆಂದೂ, ಪರಬ್ರಹ್ಮವೆಂದೂ, ಸರ್ವೋಪಾಸ್ಯನೆಂದೂ ಸಿದ್ಧಾಂತಮಾಡಲಾಗಿದೆ.

ಪ್ರಥಮ ಭಾಗದ ಆರು ಪಾದಗಳಲ್ಲಿ ಒಟ್ಟು ೫೮ ಅಧಿಕರಣಗಳೂ ೨೧೮ ಸೂತ್ರಗಳೂ ಇವೆ. ಇವುಗಳ ಭಾಷ್ಯವನ್ನು ಕನ್ನಡಾನುವಾದದೊಡನೆ ಇಲ್ಲಿ ಪ್ರಕಟಿಸಲಾಗಿದೆ. ಈ ಅನುವಾದದ ಮೂಲಕ ಭಾಷ್ಯದಲ್ಲಿ ಅಡಕವಾಗಿರುವ ಬ್ರಹ್ಮ-ಜೀವ-ಜಗತ್ತುಗಳ ಸಂಬಂಧವು ಕನ್ನಡಿಗರಿಗೆ ಮನವರಿಕೆಯಾಗುವುದೆಂದು ಭಾವಿಸಲಾಗಿದೆ. ಕೆಲವು ವಾಕ್ಯಾರ್ಥಗಳನ್ನು ಬಿಟ್ಟರೆ ಉಳಿದ ಅಂಶಗಳನ್ನು ವಾಚಕರು ಅನುವಾದದಿಂದ ಸುಗಮವಾಗಿ ತಿಳಿಯಬಹುದೆಂದು ನಂಬಲಾಗಿದೆ.



# ಕೃತಜ್ಞತಾಸಮರ್ಪಣಂ

ಶ್ರೀಕರಭಾಷ್ಯವನ್ನು ಕನ್ನಡದಲ್ಲಿ ಅನುವಾದಮಾಡಲಿಕ್ಕೂ ಅದನ್ನು ಮೂಲದೊಡನೆ ಪ್ರಕಟಿಸಲಿಕ್ಕೂ ಕಾರಣರಾದವರನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳುವುದು ಆವಶ್ಯಕ; ಯಾಕೆಂದರೆ ಆ ಮಹನೀಯರ ಅನುಗ್ರಹಾಶೀರ್ವಾದಗಳ ಸತ್ಪರಿಣಾಮವಾಗಿಯೇ ಈ ಕಾರ್ಯವು ಯಶಸ್ವಿಯಾಗಿ ನಡೆದಿರುವುದೆಂದು ನಾನು ತ್ರಿಕರಣಗಳಲ್ಲಿಯೂ ನಂಬಿದ್ದೇನೆ. ಈ ಕಾರ್ಯಕ್ಕೆ ಮುಖ್ಯ ಪ್ರೇರಕರು ನನ್ನ ಪೂಜ್ಯ ಪಿತೃವರ್ಯರು. ಇವರು ಪರಮೇಶ್ವರನಲ್ಲಿ ಅತ್ಯುತ್ಕಟವಾದ ಭಕ್ತಿಯನ್ನಿಟ್ಟು ಜೀವಿತಕಾಲದಲ್ಲಿಯೇ ಅವನೊಡನೆ ಬೆರೆತು ಅವನಂತೆ ನಿರ್ಲಿಪ್ತಜೀವನವನ್ನು ನಡೆಸಿದ ಆದರ್ಶ ಶಿವಯೋಗಿಗಳು. ಇವರಿಗೆ ನನ್ನ ಮೇಲೆ ಅವ್ಯಾಜಪ್ರೇಮವಿದ್ದುದರಿಂದ ಇವರು ನನ್ನನ್ನು ನಿರ್ಮಲನನ್ನಾಗಿಮಾಡಲು ಬಹಳ ಶ್ರಮಿಸಿದರು. ನಾನು ಆಗಾಗ್ಗೆ ವೈಯಕ್ತಿಕಾಭಿಮಾನದಿಂದ ಸಂಕಟಪಡುತ್ತಿದ್ದುದನ್ನು ಕಂಡು "ನೀನು ಜನರನ್ನು ನಿರಭಿಮಾನದಿಂದ ನೋಡಬೇಕು. ಆದರೆ ಇದು ಬಹಳ ಗಹನವಾದ ವಿಷಯ. ಈ ನಿರಭಿಮಾನದ ನೋಟ ನಿನಗೆ ಸಹಜವಾಗಿ ಬರಬೇಕಾದರೆ, ವ್ಯಕ್ತಿಯ ಮುಖವನ್ನು ನೋಡದೆ ಪಾದವನ್ನು ನೋಡಲು ಅಭ್ಯಾಸಮಾಡು. ಇದರಿಂದ ಮುಂದೆ ನಿನಗೆ ಎಲ್ಲಾ ವ್ಯಕ್ತಿಗಳಲ್ಲೂ ನಿರ್ಲಿಪ್ತನಾಗಿ ನೆಲಸಿರುವ ಶಿವನೊಬ್ಬನನ್ನೇ ನೋಡುವಂತಹ ವಿಶಾಲದೃಷ್ಟಿ, ಅವ್ಯಾಜಪ್ರೇಮ ಮತ್ತು ಉದಾತ್ತವರ್ತನೆಗಳು ಲಭಿಸುತ್ತವೆ" ಎಂದು ಆಗಾಗ್ಗೆ ಹೇಳುತ್ತಿದ್ದರು. ಆದರೂ ನಾನು ಅದನ್ನು ಗಮನಿಸದೆ ನನ್ನ ಚಾಪಲ್ಯವನ್ನೇ ಮುಂದುವರಿಸುತ್ತಿದ್ದೆನು. ಆಗ ನಾನು ಸಂಸ್ಕೃತವ್ಯಾಸಂಗದಲ್ಲಿದ್ದುದರಿಂದ "ಅದರ ಪ್ರತಿಯೊಂದು ಪದ್ಯವೂ ನಿನ್ನನ್ನು ನಿರ್ಮಲಗೊಳಿಸುವ ಮಂತ್ರವಾಗಿದೆ. ಇದರಿಂದ ನಿನ್ನ ಮನಸ್ಸು ಮಹಾದೇವನಲ್ಲಿಯೇ ಅಂಟುತ್ತದೆ. ಮುಂದೆ ನೀನು ಶ್ರೀಕರಭಾಷ್ಯವನ್ನು ಓದುವಕಾಲ ಬರುತ್ತದೆ. ಆಗ ನಿನ್ನ ಜೀವನ ಶ್ರೀಕರವಾಗಿ ನಿನಗೆ ಶಿವನ ನೆಲೆ ತಿಳಿದು ಎಲ್ಲರಲ್ಲೂ ನಿನಗೆ ಶಿವನೇ ಕಂಡುಬರುವನು. ಇದೇ ನಿರಭಿಮಾನಸ್ಥಿತಿಗೆ ಸಂಜೀವಿನಿ" ಎಂದು ಹೇಳಿ ಅವರು ಪೂರ್ಣಕೃಪೆಯಿಂದ ನನ್ನನ್ನು ನೋಡುತ್ತಿದ್ದರು. ಆ ಸಮಯದಲ್ಲಿ ನನ್ನ ಮನಸ್ಸಿನಮೇಲೆ ಒಂದು ಬಗೆಯ ಸತ್ಪರಿಣಾಮವುಂಟಾದರೂ ಮತ್ತೆ ಅಭಿಮಾನದ ನೋಟವೇ ನನ್ನಲ್ಲಿ ಬೆಳೆಯುತ್ತಿತ್ತು. ಅವರು 20-11-49 ರಂದು ದೇಹವನ್ನು ತೊರೆಯುವಾಗ ನನ್ನಿಂದ ಮೂರು ಪ್ರತಿಜ್ಞೆಗಳನ್ನು ಕೈಕೊಂಡರು. ಮೊದಲನೆಯದಾಗಿ ಭಗವದ್ಗೀತೆಗೂ ಕ್ರಿಯಾಸಾರಕ್ಕೂ ಭಾಷ್ಯವನ್ನು ಅನುವಾದದೊಡನೆ ಬರೆಯಬೇಕು. ಎರಡನೆಯದಾಗಿ, ಶ್ರೀಕರಭಾಷ್ಯವನ್ನು ಕನ್ನಡಿಸಬೇಕು. ಮೂರನೆಯದಾಗಿ ಗುರ್ವನುಗೃಹೀತವಾದ ನನ್ನ ಪ್ರಾಣಲಿಂಗಕ್ಕೆ ಸೂರ್ಯೋದಯಕ್ಕೆ ಮುಂಚೆಯೇ ಪ್ರತಿದಿನವೂ ಏಕದಾಶವಾರ ರುದ್ರಾಭಿಷೇಕವನ್ನು ನಡೆಸುತ್ತ, ಕರ್ತವ್ಯಗಳೆಲ್ಲವನ್ನು ಶಿವಪೂಜೆಯಂತೆ ಶ್ರದ್ಧೆಯಿಂದ

ನಡೆಸುತ್ತ ಬೇರೆಲ್ಲೂ ಶಿವನಿಗಾಗಿ ಹುಡುಕಿಕೊಂಡು ಹೋಗಬೇಡ" ಹೀಗೆ ಮೂರು ಪ್ರತಿಜ್ಞೆಗಳನ್ನು ತೆಗೆದುಕೊಂಡು ಅವರು ಎಂದಿನಂತೆ ಕೈವಲ್ಯವಿಭೂತಿಯಲ್ಲಿ ಬೆರೆತರು.

ಅವರು ಆಜ್ಞೆಮಾಡಿದಮೇಲೆ ಹನ್ನೆರಡು ವರ್ಷಗಳು ಹನ್ನೆರಡು ದಿನಗಳಂತೆ ಕಳೆದವು. ಈ ಅವಧಿಯಲ್ಲಿ ಶಕ್ತಿವಿಶಿಷ್ಟಾದ್ವೈತದರ್ಶನವನ್ನು ಬರೆಯುವ ಪ್ರಸಂಗ ಒದಗಿದ್ದರಿಂದ ಅದಕ್ಕಾಗಿ ಅವರು ಹೇಳಿದ್ದ ಆ ಮೂರು ಗ್ರಂಥಗಳನ್ನೂ ನೋಡ ಬೇಕಾಗಿಬಂದಿತು. ಅವನ್ನು ನೋಡಿಯೂ ಆಯಿತು. ದರ್ಶನಗ್ರಂಥವು ಪ್ರಕಟವೂ ಆಯಿತು. ಆದರೆ ಪೂಜ್ಯಪಾದರ ಅಪ್ಪಣೆಯನ್ನು ಮಾತ್ರ ನಾನು ನಡೆಸಲಿಲ್ಲ. ೨೦-೧೧-೬೧ ರಲ್ಲಿ ಹನ್ನೆರಡನೆ ವರ್ಷದ ಆರಾಧನೆಯೂ ಮುಗಿಯಿತು. ಹಿಂದೆ ಎಷ್ಟೋವೇಳೆ ನಡೆದಿದ್ದಂತೆಯೇ ಆ ರಾತ್ರಿಯೂ ಅವರು ಸ್ವಪ್ನದಲ್ಲಿ ಕಾಣಿಸಿ ಕೊಂಡು "ನಾನು ಹೇಳಿದ್ದ ಗ್ರಂಥಗಳನ್ನು ಶಕ್ತಿವಿಶಿಷ್ಟಾದ್ವೈತದರ್ಶನಕ್ಕಾಗಿ ಸದುಪ ಯೋಗಪಡಿಸಿಕೊಂಡದ್ದು ಶಿವನಿಗೆ ಪ್ರಿಯವಾಗಿದೆ. ಇನ್ನು ಒಂದೊಂದುವರ್ಷಕ್ಕೆ ಒಂದೊಂದು ಕಾರ್ಯವನ್ನು ನೆರವೇರಿಸಿ ನಿನ್ನ ಹೃದಯದಲ್ಲಿ ಶಿವನ ನೆಲೆಯನ್ನರಿತು ನಿತ್ಯಸುಖಿಯೂ ನಿತ್ಯಸುಂದರನೂ ಆಗು. ಸದ್ಯಕ್ಕೆ ಶ್ರೀಕರಭಾಷ್ಯದ ಅನುವಾದ ವಾಗಬೇಕು. ಇದರಿಂದ ನಿನಗೆ ನಿರಭಿಮಾನದ ನೋಟ ಪರಿಚಿತವಾಗುವುದು. ಆಗ ಎಲ್ಲರ ಹೃದಯದಲ್ಲೂ ನಿರ್ಲಿಪ್ತನಾಗಿ ನೆಲಸಿರುವ ಚಂದ್ರಶೇಖರನನ್ನೇ ನೋಡುವೆ. ಒಂದು ವ್ಯಕ್ತಿಯಮೇಲಿನ ವ್ಯಾಮೋಹದಿಂದ ವಿಶ್ವಾತ್ಮನನ್ನು ಇಂದು ಮರೆತಿರುವೆ. ಶಿವಚಿಂತನೆಯಿಂದ ಆತ್ಮಶಕ್ತಿಯನ್ನು ಬೆಳೆಸಿಕೊಳ್ಳದೆ ಹೀಗೆ ಅಧೋಗತಿಗಿಳಿಯುವುದು ಯುಕ್ತವಲ್ಲ. ವಿಶ್ವವನ್ನು ಶಿವಭಾವದಿಂದ ಪ್ರೀತಿಸುತ್ತ ವಿಶ್ವರೂಪನಾದ ಶಿವನಲ್ಲಿ ಬಯಲಾಗುವ ಚಿಂತೆ ನಿನಗೆ ಸ್ಥಿರವಾಗಬೇಕಾದರೆ, ನನಗೆ ನೀನು ಕೊಟ್ಟಿರುವ ಪ್ರತಿಜ್ಞೆ ಗಳನ್ನು ಪಾಲಿಸಲೇಬೇಕು. ಇದರಿಂದಲೇ ನಿನಗೆ ಆತ್ಮಕಲ್ಯಾಣವಾಗುತ್ತದೆ. ಈಗಿನ ಮೋಹಕ್ಕಾಶ್ರಯವಾಗಿರುವ ಅಲ್ಪಾಶ್ರಯವನ್ನು ತೊರೆದು ವಿಶಾಲಪ್ರಪಂಚದಲ್ಲಿ ಸಮರಸವಾಗಿ ಬೆರೆಯಲನುಕೂಲವಾಗುವಂತೆ ಚಿದಾಕಾಶದಲ್ಲಿ ನಿಲ್ಲು; ಮುಂದೆ ಎಲ್ಲವೂ ಅನುಕೂಲವಾಗುತ್ತದೆ" ಎಂದು ಹೇಳಿದರು. ವೀರಶೈವದರ್ಶನದಲ್ಲಿ ಸ್ವಪ್ನಕ್ಕೂ ಜಾಗ್ರತ್ಪ್ರಪಂಚದಂತೆಯೇ ಪರಮೇಶ್ವರನೇ ಕಾರಣನೆಂದು ಸಿದ್ಧಾಂತ ವಾಗಿದೆ. ಅದೂ ಅಲ್ಲದೆ, ಪೂಜ್ಯರು ಮತ್ತೆಲ್ಲಿಯೂ ಹುಟ್ಟದೆ ಶಿವನೇ ಆಗಿರುವುದಾಗಿ ಅನೇಕವೇಳೆ ಆಶ್ವಾಸನಕೊಟ್ಟಿದ್ದಾರೆ. ದಾರ್ಶನಿಕವಿಚಾರಗಳಲ್ಲಿ ನನಗೆ ಸಂಶಯಬಂದಾ ಗಲೆಲ್ಲಾ ಅವರ ಸ್ಮರಣಮಾಡಿ ಮಲಗಿದರೆ, ಅವರು ಸ್ವಪ್ನದಲ್ಲಿ ಬಂದು ಸಂಶಯವನ್ನು ನಿವಾರಣಮಾಡಿ ನಿಶ್ಚಯಬುದ್ಧಿಯನ್ನು ಹುಟ್ಟಿಸುತ್ತಿದ್ದಾರೆ. ಆದ್ದರಿಂದ ನನಗೆ ಸ್ವಪ್ನದ ಬಗ್ಗೆ ಯಾವ ಸಂಶಯಕ್ಕೂ ಅವಕಾಶವೇ ಇಲ್ಲ. ೨೦-೧೧-೬೧ ನೇ ರಾತ್ರಿ ಹೀಗೆ ಪೂಜ್ಯರ ದಿವ್ಯೋಪದೇಶವಾದಮೇಲೂ ಮನಸ್ಸು ಉಯ್ಯಾಲೆಯಂತೆ ಶಿವಪ್ರೇಮ ಮತ್ತು ಜೀವವ್ಯಾಮೋಹಗಳ ಮಧ್ಯದಲ್ಲಿ ಸಿಲುಕಿ, ಯಾವುದನ್ನು ಹಿಡಿಯಬೇಕು ಯಾವುದನ್ನು ಬಿಡಬೇಕೆಂಬ ವಿವೇಚನೆಯಿಲ್ಲದೆ ಒಂದೆರಡು ತಿಂಗಳನ್ನು ಕಳೆದೆನು.

ಈ ವೇಳೆಗೆ ಪ್ರತಿರಾತ್ರಿಯೂ ಪೂಜ್ಯರು ಸ್ವಪ್ನದಲ್ಲಿ ಕಾಣಿಸಿಕೊಂಡು ಎಚ್ಚರಿಸಲಾರಂಭಿಸಿದರು. ಇದರ ಪರಿಣಾಮವಾಗಿ ೨೧-೧೧-೬೧ ರಿಂದ ೪೫ ದಿವಸಗಳಷ್ಟು ಕಾಲವನ್ನು ಮುಂದಿನ ಕರ್ತವ್ಯನಿರ್ಧಾರಕ್ಕಾಗಿ ಉಪಯೋಗಿಸಿದೆನು. ಶ್ರೀ|| ಗಳಲ್ಲಿ ನಾನು ಒಪ್ಪಿದ್ದಂತೆ ಹನ್ನೆರಡು ವರ್ಷಗಳಿಂದಲೂ ಕ್ರಮವಾಗಿ ನಿತ್ಯವೂ ಹನ್ನೊಂದು ವೇಳೆ ಲಿಂಗಕ್ಕೆ ರುದ್ರಾಭಿಷೇಕವನ್ನೂ ಮತ್ತು ಹನ್ನೊಂದುಸಾವಿರ ಜಪಗಳನ್ನು ನಡೆಸದೆ ಕ್ರಿಯಾಭ್ರಷ್ಟನಾಗಿ ವಿವೇಕವಿಲ್ಲದೆ ರೇಡಿಯೋ ಮೂಲಕ ಇಂಪಾದ ಶಬ್ದವನ್ನಾಲಿಸುತ್ತ, ಪ್ರಸಾದಭಾವನೆ ಇಲ್ಲದೆ ಅನ್ನಾಹಾರಗಳಿಂದ ಹೊಟ್ಟೆಯನ್ನು ತುಂಬಿಸುತ್ತ, ತಾತ್ತ್ವಿಕವಿಚಾರಗಳ ಮೀಮಾಂಸೆಯಿಲ್ಲದೆ ಲೋಕ ವ್ಯವಹಾರಗಳಲ್ಲಿಯೇ ಮಗ್ನನಾಗಿ ಜೀವನವನ್ನು ಕಳೆದಿದ್ದಾಯಿತು. ಉಪನಿಷತ್ತು ಮನುಷ್ಯನಿಗೆ ತೃಪ್ತಿ ಶಾಂತಿಗಳಿಂದ ಶಿವನ ಚಿಂತನದಲ್ಲಿಯೇ ಇರುವಂತೆ ಬೋಧಿಸಿದ್ದರೂ ಮಾಯೆ ನಮಗೆ ಗೃಹಾರಾಮಸಂಗ್ರಹವೆಂಬ ಸುಗಂಧತೈಲವನ್ನು ತಲೆಗೆ ಹಚ್ಚಿ, ಪ್ರಣಯದ ಕಾದಂಬರಿಗಳೆಂಬ ಶುಭ್ರವಸ್ತ್ರಗಳನ್ನು ಮೈತುಂಬ ತೊಡಿಸಿ, ಭೋಜ್ಯವಸ್ತುಗಳೆಂಬ ಪೌಷ್ಟಿಕರಸಾಯನದಿಂದ ದೇಹಾಲಂಕರಣವೆಂಬ ಅಹಂಕಾರವನ್ನು ಹುರಿದುಂಬಿಸುತ್ತಿರುವುದು. ಇಂತಹ ಪರಿಸ್ಥಿತಿಯಲ್ಲಿ ಶಿವನ ಚಿಂತೆ ಯಾರಿಗೆ ಬೇಕು ? ಅದಕ್ಕಾಗಿಯೇ ಹುಟ್ಟಿರುವವರೂ ಸಹ ಕಾದಂಬರಿಗಳನ್ನೇ ಓದುತ್ತ, ಮನಮೋಹಕವಾದ ಶಬ್ದಾದಿವಿಷಯಗಳಲ್ಲಿಯೇ ರಮಿಸುತ್ತ, ಅರ್ಚನೆ ಅರ್ಪಣಗಳ ಮಹತ್ತ್ವವನ್ನೇ ಅರಿಯದೆ, ಸಂಪಾದಿಸಿದ ಹಣವೆಲ್ಲವನ್ನು ದೇಹಾಲಂಕರಣಕ್ಕೇ ವಿನಿಯೋಗಿಸುತ್ತಿರುವಾಗ, ಈ ಸ್ಥಿತಿಯಲ್ಲಿದ್ದ ನನಗೆ ಹೇಗೆ ಶಿವನ ಬಗ್ಗೆ ವಿವೇಚನೆಯುಂಟಾದೀತು ? ನನ್ನ ದುರ್ದೈವದಿಂದ ಇಂತಹ ವಿಷಮಪರಿಸ್ಥಿತಿಗೆ ಸಿಲುಕಿ ಹೆಜ್ಜೆಹೆಜ್ಜೆಗೂ ಶಿವದ್ರೋಹ ಮಾಡುತ್ತಿದ್ದೆನಾದರೂ ಶಿವನ ಕೃಪೆಯಿಂದ ನನ್ನ ದುರ್ವರ್ತನೆಯ ಬಗ್ಗೆ ಪಶ್ಚಾತ್ತಾಪವುಂಟಾಯಿತು. ಆಗ ಪದಾರ್ಥಗಳ ಭೋಗದಿಂದ ಹೇಗೆ ನಾನು ಶಿವಪ್ರಸಾದಕ್ಕೆ ದೂರನಾಗಿದ್ದೆನೆಂಬ ಅರಿವು ಉಂಟಾಯಿತು. ಈ ಅರಿವು ಪ್ರತಿಯೊಬ್ಬ ಸಾಧಕನಿಗೂ ಆವಶ್ಯಕ. ಕುಡಿಯುವ ಪಾನೀಯಗಳಲ್ಲೂ, ಭೋಗಿಸುವ ಆಹಾರದಲ್ಲೂ ಪ್ರಸಾದಭಾವನೆಯು ಅರಿವಿದ್ದರೆ, ನಾವು ಹೆಜ್ಜೆಹೆಜ್ಜೆಗೂ ಶಿವನಿಗೆ ಮಾಡುತ್ತಿರುವ ದ್ರೋಹ ಅದಷ್ಟುಕಡಮೆಯಾಗುತ್ತದೆ. ಪ್ರತಿದಿನವೂ ಊಟಮಾಡುವಾಗ ಲಿಂಗದೇವನಿಗೆ ಅರ್ಪಿಸದೆ ಪಲ್ಯ-ತುಪ್ಪ-ಮಜ್ಜಿಗೆ-ನಿಂಬೆರಸ-ಬಾಳೆಹಣ್ಣು ಮೊದಲಾದ ಪದಾರ್ಥಗಳನ್ನು ಊಟದ ಮಧ್ಯದಲ್ಲೂ ಕೊನೆಯಲ್ಲೂ ಭೋಗಿಸುವುದೊಂದು ಅಭ್ಯಾಸ ಸಾಂಕ್ರಾಮಿಕರೋಗದಂತೆ ನಮ್ಮ ಸಮಾಜದಲ್ಲಿ ಹರಡಿಹೋಗಿದೆ. ಇದೆಲ್ಲವೂ ನಾವು ಶಿವನಿಗೆ ಮಾಡುತ್ತಿರುವ ನಿತ್ಯದ್ರೋಹ. ಭೋಜ್ಯವಸ್ತುಗಳೆಲ್ಲವನ್ನೂ ಶಿವನೇ ತನಗರ್ಪಣಕ್ಕಾಗಿ ತನ್ನ ಹೆಂಡತಿಯಾದ ಜೀವಾತ್ಮನ ವಶದಲ್ಲಿ ಕೊಟ್ಟಿರುವನು. ಇವನ್ನು ಜೀವನು ತನ್ನ ನಾಲಿಗೆಯಲ್ಲಿ ಜೊಲ್ಲುಸುರಿಯುವ ಮುನ್ನ, ಕಣ್ಣಿನಲ್ಲಿ ವ್ಯಾಮೋಹ ಹುಟ್ಟುವ ಮುನ್ನ, ಮನದಲ್ಲಿ ಬಯಕೆಯಾಗುವ ಮುನ್ನ ಲಿಂಗಕ್ಕರ್ಪಿಸಿ ಶೇಷಪ್ರಸಾದವನ್ನು ಭೋಗಿಸಿ ನಿತ್ಯಸುಖಿ

ಯಾಗಬೇಕೆಂದು ವೀರಶೈವಸಿದ್ಧಾಂತವು ಹೇಳುತ್ತಿದೆ. ಆದರೆ ಇದರ ಆಚರಣೆಗೆ ನಮ್ಮಲ್ಲಿ ಭೃತ್ಯಾಚಾರವು ಬೇರೂರಿರಬೇಕು. ಅದಲ್ಲದೆ ಒಬ್ಬನು ಆಡಂಬರಕ್ಕೆ ಪೂಜೆಮಾಡಿದರೂ, ಅಲ್ಲಿ ಶಿವನು ಮೈದೋರಲಾರನು. ಬರಿಯ ಲಾಂಛನವನ್ನು ಧರಿಸಿದ ಮಾತ್ರಕ್ಕೆ ಒಬ್ಬನಿಗೆ ಶಿವನು ಒಳಗೂ ಹೊರಗೂ ಕಾಣಿಸಲಾರನು. ಶಿವನ ಅರ್ಚನೆ ಅರ್ಪಣಗಳಿಗಾಗಿಯೇ ಬಾಳುವವನು ಶಿವನೊಡನೆಯೇ ಸಂಸಾರಮಾಡುವನಾದ್ದರಿಂದ ಅವನ ವಾಸಗೃಹವು ಪರ್ಣಕುಟೀರವಾದರೂ ಪುಣ್ಯಕ್ಷೇತ್ರವೆನಿಸುವುದು. ಇಂತಹ ಸದ್ಭಕ್ತನ ವಾಸಗೃಹವೇ ಶಿವಭಕ್ತರಿಂದೊಡಗೂಡಿ ಮಠವೆನಿಸುವುದು. ಅಲ್ಲಿ ಸತಿಪತಿಗಳಿಬ್ಬರೂ ಅಂತರಂಗದ ಶಿವನಿಗೆ ಭಕ್ತರಾಗಿ ಅವನೇ ಹೊರಗೆ ಗುರುಜಂಗಮರೂಪದಿಂದ ಎಂದು ಹೇಗೆ ಎದುರಿಗೆ ಬರುವನೋ ಎಂಬ ಬಯಕೆಯಿಂದ ಒಳ ಹೊರಬಾಗಿಲುಗಳನ್ನು ತೆರೆದು ಸೇವೆಗಾಗಿ ಕಾದಿರುವರು. ಅವರು ಮನೆಯಲ್ಲಿ ಬಡವರಾದರೂ ಮನದಲ್ಲಿ ಸಂಪನ್ನರಾಗಿರುವರು. ಇಂತಹ ಭೃತ್ಯರ ಸಂಗದಿಂದಲೇ ಒಬ್ಬನ ಕಲ್ಯಾಣ ಸಾಧನೆಯಾಗಲಿರುವುದು. ಭೃತ್ಯಾಚಾರದ ಗೃಹಸ್ಥನ ಮನೆ ಶಿವಾನಂದಕ್ಕಾಶ್ರಯವಾಗಿ ಪ್ರಸಾದಭೂಮಿ ಎನಿಸಿದರೆ, ಜ್ಞಾನಕ್ರಿಯಾಸಮನ್ವಯವಿಲ್ಲದ ಮಠವೂ ದುರಹಂಕಾರಾಭಿನಿವೇಶಗಳಿಗಾಶ್ರಯವಾಗಿ ವಿನೋದಭೂಮಿ ಎನಿಸುವುದು. ಹೀಗೆ ಭೃತ್ಯಾಚಾರವಿಲ್ಲದವನು ಹೊರಗಿನ ಬಾಗಿಲನ್ನು ತೆರೆದಿರುವುದಾಗಿ ಹೇಳಿಕೊಂಡರೂ ಅಲ್ಲಿಗೆ ಯಾರು ತಾನೆ ಹೋದಾರು? ಹೀಗೆ ಶಿವನಲ್ಲಿ ನಿಷ್ಠೆಯಿಲ್ಲದ ದುರಭಿಮಾನಿಗಳ ಜೊತೆಯಲ್ಲಿ ಬಾಳುತ್ತ ಆತ್ಮಗೌರವವನ್ನು ಕಳೆದುಕೊಂಡು ಹಗುರನಾಗಿ ಆತ್ಮಶಕ್ತಿಯ ಬೆಳವಣಿಗೆಗೆ ಅವಕಾಶವಿಲ್ಲದೆ ನರಳುತ್ತಿರುವಾಗ, ೪-೧-೬೨ ರ ರಾತ್ರಿ ೩॥ ಗಳು ಕಾಣಿಸಿಕೊಂಡು ಇಷ್ಟೆಲ್ಲಾ ಅನರ್ಥಕ್ಕೆ ಮೂಲವಾದ ಆ ಸ್ಥಳವನ್ನು ಅಂದೇ ತ್ಯಜಿಸಬೇಕೆಂದು ಅಪ್ಪಣೆಮಾಡಿದರು. ಅದರಂತೆ ಪಿತೃವಾಕ್ಯಪರಿಪಾಲನೆಗಾಗಿ ೫-೧-೬೨ ರ ಬೆಳಗ್ಗೆ ಆ ಸ್ಥಳವನ್ನು ತೊರೆದು ವಿಶ್ವಾತ್ಮನ ಮಡಲಲ್ಲಿ ಬಿದ್ದೆನು. ಅಂದೇ ಶ್ರೀಕರ ಭಾಷ್ಯದ ಅನುವಾದವನ್ನಾರಂಭಿಸಿ ಈಶ್ವರಾನುಗ್ರಹದಿಂದ ೫-೭-೬೨ ರೊಳಗೆ ಮುಗಿಸಿದೆನು. ಅದರ ಪರಿಣಾಮವಾಗಿ ಮೋಹದೃಷ್ಟಿ ತೊಲಗಿದ್ದರಿಂದ ಮನಸ್ಸು ನಿರಭಿಮಾನದಿಂದ ಆತ್ಮನ ಕಡೆಗೆ ತಿರುಗಿತು. ಶ್ರೀಕರಭಾಷ್ಯವು ಪ್ರತಿಯೊಂದು ಪಂಕ್ತಿಯಲ್ಲೂ ಸಾಧಕನ ಮನಸ್ಸನ್ನು ಶಿವನಲ್ಲಿಯೇ ನೆಲೆಗೊಳಿಸುವುದರಿಂದ ನನ್ನ ಚಿತ್ತವೂ ಶಿವನಲ್ಲಿಯೇ ರಮಿಸತೊಡಗಿತು. ಉಪನಿಷತ್ತುಗಳು, ಭಗವದ್ಗೀತೆ, ಇತರ ವೇದಮಂತ್ರಗಳು ಮತ್ತು ಪುರುಷಸೂಕ್ತ ಇವೆಲ್ಲಕ್ಕೂ ಶಿವನಲ್ಲಿಯೇ ತಾತ್ಪರ್ಯವೆಂದು ಶ್ರೀಪತಿಪಂಡಿತಾರಾಧ್ಯರು ಸಮನ್ವಯದೃಷ್ಟಿಯಿಂದ ಬ್ರಹ್ಮಸೂತ್ರಗಳಿಗೆ ವಿವರಣಮಾಡಿರುವುದನ್ನು ಓದಿ ತಿಳಿದು ಅನುಭವಿಸಿ ಆನಂದಪಟ್ಟೆನು. ಹಿಂದೆ ಭಾಷ್ಯವನ್ನು ೪-೫ ವೇಳೆ ಓದಿದ್ದೆನು. ಆದರೆ ಅನುವಾದಮಾಡುವಾಗ್ಗೆ ಪ್ರತಿಯೊಂದು ಪದದ ಸ್ವಾರಸ್ಯವೂ ಮನವರಿಕೆಯಾಯಿತು. ಪರಮಶಿವನೇ ಪರಬ್ರಹ್ಮ. ಅವನಿಗೆ ರುದ್ರ, ಮಹಾದೇವ ಶರ್ವ, ಈಶಾನ, ಭವ, ಭರ್ಗ ಮೊದಲಾದ ಹೆಸರುಗಳು ಅನ್ವರ್ಥವೆನಿಸಿವೆ. ಅವನಿಂದು

ಹುಟ್ಟಿರುವ ತ್ರಿಮೂರ್ತಿಗಳು ಮೂರು ಕಾರ್ಯಗಳನ್ನು ಅವನ ಇಚ್ಛೆಯಂತೆ ನಿರ್ವಹಿಸುತ್ತ ಸ್ವರ್ಗ ವೈಕುಂಠ ಕೈಲಾಸಗಳಲ್ಲಿರುವರು. ತ್ರಿಮೂರ್ತಿಗಳೊಳಗಿನ ರುದ್ರನು ಕಾಲರುದ್ರನೆನಿಸಿ ಮೂವತ್ತಾರುತತ್ತ್ವಗಳೊಳಗೆ ಸೇರಿ ಕಾರ್ಯಬ್ರಹ್ಮವೆನಿಸಿರುವನು. "ಸರ್ವೋ ವೈ ರುದ್ರಃ" "ಈಶಾನಸ್ಸರ್ವವಿದ್ಯಾನಾಂ", "ಪಶುನಾಂ ಪತಯೇ ನಮಃ" ಈ ಬಗೆಯ ಶ್ರುತಿಗಳಲ್ಲಿ ಪತಿ, ಈಶಾನ, ರುದ್ರ ಎಂಬ ಶಬ್ದಗಳಿಂದ ತಿಳಿದು ಬರುವ ಚೈತನ್ಯವೇ ಕಾರಣಬ್ರಹ್ಮ. ಇದನ್ನು ವೀರಶೈವದರ್ಶನದಲ್ಲಿ ಪರಮಶಿವನೆಂದು ಹೇಳುತ್ತಾರೆ. ಇವನಿಗೆ ಚಿದ್ರೂಪವಾದ ಪರಾಶಕ್ತಿಯೇ ಪ್ರಾಣವಾಗಿರುವದು. ಹೀಗೆ ಶಕ್ತಿವಿಶಿಷ್ಟಪರಮಶಿವನು "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬ ಶ್ರುತಿಯಂತೆ ವಿಶ್ವನಾಗಿ ಪರಿಣಮಿಸಿ ಅದೆಲ್ಲದರಲ್ಲೂ ತಾನೇ ಸದ್ರೂಪದಿಂದ ಜಡವಸ್ತುಗಳಲ್ಲೂ, ಸಚ್ಚಿದ್ರೂಪದಿಂದ ಜೀವರಲ್ಲೂ ಸೇರಿ ತಾನು ಸ್ವಯಂಭುವಾಗಿ ಕೈವಲ್ಯಾನಂದವನ್ನು ಅನುಭವಿಸುತ್ತಲಿರುವನು. ಇದನ್ನು ಗೀತೆ ಬಹಳ ಸೊಗಸಾಗಿ ಹೇಳಿದೆ. "ವಿಷ್ಟಭ್ಯಾಹಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್" ಅಂದರೆ ಪರಮಶಿವನು ತನ್ನ ಶಕ್ತಿಯ ಒಂದಂಶದಿಂದ ಈ ವಿಶ್ವವೆಲ್ಲವೂ ಆಗಿರುವನು. ಆದ್ದರಿಂದಲೇ ಈ ವಿಶ್ವವು ಕೇವಲ ತೋರಿಕೆಯಲ್ಲ; ಆದರೆ ಸದ್ವಸ್ತುವೇ ಆಗಿರುವುದು. ಇಂತಹ ಸತ್ಯಜಗತ್ತಿನಲ್ಲಿ ಸತ್ಯವೆನಿಸಿದ ಜೀವನು ಸತ್ಯವಾದ ಶಿವನನ್ನಾರಾಧಿಸಿ ತನ್ನ ವಾಸ್ತವಸ್ಥಿತಿಯನ್ನು ಸಾಧಿಸಬೇಕಾಗಿದೆ ಎಂಬ ಅಂಶವನ್ನು ಶ್ರೀಕರಭಾಷ್ಯವು ತಿಳಿಯಪಡಿಸಿತು.

ಇಂತಹ ಪವಿತ್ರಭಾಷ್ಯವನ್ನು ಅನುವಾದ ಮಾಡಿದ್ದರಿಂದ ಶಿವನಕಡೆ ಮನಸ್ಸು ನೆಲೆಯಾಗಿ ಅಂಟಿಕೊಂಡಿತು. ಪ್ರಪಂಚದಲ್ಲಿ ಹಲವಾರುಮಂದಿ ಅವರವರಿಗೆ ತೋರುವಂತೆ ಅದ್ವೈತವೇ ವೀರಶೈವತತ್ತ್ವವೆಂದೂ, ಕಾಶ್ಮೀರಶೈವದ ಶಿವಾದ್ವೈತವೇ ವೀರಶೈವದ ಪ್ರಕ್ರಿಯೆಯೆಂದೂ ಹೇಳುತ್ತ "ವೀರಶೈವದರ್ಶನವೆಲ್ಲಿದೆ? ಈ ಗ್ರಂಥಗಳಲ್ಲೇನಿದೆ? ಶಿವನಲ್ಲಿ ಶಕ್ತಿ ಎಲ್ಲಿದೆ? ಜ್ಞಾನಕ್ರಿಯೆಗಳ ಸಮಸಮುಚ್ಚಯವನ್ನು ಯಾರು ಹೇಳಿದ್ದಾರೆ? ಅದೆಲ್ಲ ಯಾರಿಗೆ ಬೇಕು? ಹರಗುರುಚರಮೂರ್ತಿಗಳ ಸೇವೆ ಏಕೆ ಬೇಕು?" ಎಂದು ಮುಂತಾಗಿ ವಾದಿಸುವುದನ್ನು ಕೇಳಿ ಮನಸ್ಸಿಗೆ ಬಹಳವಾಗಿ ನೊಂದು "ಈ ವೇದಾಂತಗ್ರಂಥಗಳೆಲ್ಲವೂ ಯಾರಿಗಾಗಿ ಯಾತಕ್ಕಾಗಿ ಮಹಾತ್ಮರಿಂದ ವಿರಚಿತವಾಗಿವೆ? ಇವೆಲ್ಲವೂ ಸಾಧಕರಾದ ನಮಗಾಗಿಯೇ ಇವೆಯೇ? ಹಾಗೆ ಇದ್ದರೆ ಇಂತಹ ಸಾಧನವನ್ನು ಇತರರಿಗೆ ದೊರಕಿಸಿಕೊಡುವಂತವರೇ ಈ ಸಾಧನಗಳಲ್ಲಿ ವಿಶ್ವಾಸವಿಡದೆ ಬಾಯಿಗೆಬಂದಂತೆ ಏಕೆ ಮಾತಾಡುತ್ತಿರುವರು? ಈ ಸಿದ್ಧಾಂತವನ್ನು ಬೋಧಿಸುವವರೇ ಇದರಲ್ಲಿ ವಿಶ್ವಾಸವಿಡದಿದ್ದರೆ ಇದನ್ನು ಕೇಳಿದವರಿಗೆ ಹೇಗೆ ವಿಶ್ವಾಸ ಹುಟ್ಟೀತು?" ಎಂದು ಮುಂತಾದ ಆಲೋಚನೆಗಳು ನನ್ನ ಮನಸ್ಸಿನಲ್ಲಿ ತಲೆದೋರಿದವು. ಆದರೆ ಈ ವಾದವಿವಾದಗಳಿಂದ ನನಗೆ ಶಾಂತಿಸುಖಗಳು ಲಭಿಸಲಾರವೆಂದು ನಿಶ್ಚಯಿಸಿದೆನು. "ಲೋಕದ ಡೊಂಕ ನೀನೇಕೆ ತಿದ್ದುವೆ, ನಿನ್ನ ತನುಮನಗಳನ್ನು ನೀನು ಸಂತೈಸಿಕೋ" ಎಂದು ಮಹಾತ್ಮ ಬಸವಣ್ಣನು ಹೇಳಿರುವಂತೆ ಹೃದಯದ

ಕಡೆಗೆ ಮನಬುದ್ಧಿಗಳನ್ನು ಕೇಂದ್ರೀಕರಿಸಿ ಪ್ರಶಾಂತಚಿತ್ತನಾಗತೊಡಗಿದೆನು; ಯಾಕೆಂದರೆ ಮೂರ್ಖನಿಗೆ ಬ್ರಹ್ಮನೂ ಔಷಧವನ್ನು ಕೊಡಲಾರನೆಂದು ಅನುಭವಿಗಳು ಹೇಳುತ್ತಾರೆ. ಬ್ರಹ್ಮಾನಂದವೆಂಬುದು ವಾದವಿವಾದಗಳ ವಿಷಯವಲ್ಲ; ಕೀರ್ತಿ ಪ್ರತಿಷ್ಠಾಕಾಂಕ್ಷೆಗಳಿಗೆ ದೊರಕುವಂತಹುದಲ್ಲ; ಆದರೆ ದೃಢನಿಶ್ಚಯಸದ್ಭಾವನೆಗಳಿಗೆ ಮಾತ್ರ ಗೋಚರವಾಗತಕ್ಕದ್ದು. ಅದು ಶ್ರದ್ಧಾಭಕ್ತಿಧ್ಯಾನಯೋಗದಿಂದ ದೊರಕುವ ದಿವ್ಯಾಮೃತ. ಇಂತಹ ಅಮೃತಕ್ಕಾಗಿ ವೇದಗಳ ಕಾಲದ ಮಹರ್ಷಿಗಳು ವಿಶ್ವಪತಿಯೂ, ಮಹದೇವನೂ ಎನಿಸಿದ ಪರಶಿವನನ್ನು ಹೃದಯದ ಅಂಗುಷ್ಠಪ್ರಮಾಣದಲ್ಲಿ ಲಿಂಗ ರೂಪದಿಂದ ದೇಹದಲ್ಲಿ ಧರಿಸಲಿಕ್ಕೆ ಹಾತುವರೆಯುತ್ತಿದ್ದರು. ಅವರ ಮೇಲ್ಪಂಕ್ತಿಯನ್ನು ಅನುಸರಿಸಿಕೊಂಡುಬಂದಿರುವ ನಾನು ಒಬ್ಬಿಬ್ಬರ ಅಪಪ್ರಚಾರಕ್ಕಾಗಿ ಹಿಮ್ಮೆಟ್ಟುವುದು ಧರ್ಮವಲ್ಲವೆಂದು ದೃಢನಿರ್ಧಾರವನ್ನು ಕೈಕೊಂಡೆನು. ಆವೇಳೆಗೆ ಶ್ರೀಕರಭಾಷ್ಯದ ಅನುವಾದವಾಗುತ್ತಿದೆ ಎಂಬ ವಾರ್ತೆ ಅನೇಕ ಶಿವಯೋಗಿಗಳಿಗೂ ಸದ್ಭಕ್ತರಿಗೂ ತಿಳಿಯಬಂದಿತ್ತು. ಅವರೆಲ್ಲರೂ ಶ್ರೀಕರಭಾಷ್ಯದ ಅನುವಾದವನ್ನು ಬೇಗನೆ ಪ್ರಕಟಿಸಬೇಕೆಂದು ತಮ್ಮ ಹೃದಯದ ಬಯಕೆಯನ್ನು ತಿಳಿಯಪಡಿಸಿದರು. ಆ ಬಗ್ಗೆ ನೂರಾರು ಪತ್ರಗಳೂ ಬಂದವು. ಆಗ ನನಗೆ ಇದೊಂದು ಮಹಾಯಜ್ಞವೆನ್ನಿಸಿತು. ಇದಕ್ಕೆ ಹಿನ್ನೆಲೆಯಾಗಿ ಇಡೀ ವೀರಶೈವಸಮಾಜವೇ ಇದೆ ಎಂದು ನನಗೆ ಅನ್ನಿಸಿತು. ಆಗ ಶ್ರೀಶಿವಯೋಗಿಗಳ ಮತ್ತು ಉದಾರಿಗಳಾದ ಮಹಾಜನರ ಬಯಕೆಯಂತೆ ಇದನ್ನು ಪ್ರಕಟಿಸುವುದು ಯುಕ್ತವೆಂದು ತೀರ್ಮಾನಿಸಿದೆನು.

ಆದರೆ, ಇದರ ಮುದ್ರಣ ಸುಲಭವಾಗಿ ಆಗುವಂತಹದಲ್ಲ. ಇದಕ್ಕೆ ಒಬ್ಬ ಮಹಾವ್ಯಕ್ತಿಯ ಉದಾರಾಶ್ರಯವು ದೊರೆಯಬೇಕಾಯಿತು. ಅದರಿಂದ ಇತರ ಸಹಕಾರಗಳು ತಾವಾಗಿಯೇ ಒದಗಬಲ್ಲವು. ಇದೇ ಯೋಚನೆಯಲ್ಲಿರುವಾಗ್ಗೆ ತಾ॥ ೧೬-೭-೬೨ನೇ ರಾತ್ರಿ ಸ್ವಪ್ನದಲ್ಲಿ ಶ್ರೀ॥ ಗಳೇ ಬಂದು "ಶ್ರೀಗುರುವೇ ಈ ಕಾರ್ಯವನ್ನಾರಂಭಿಸಲು ದಾರಿತೋರಿಸುತ್ತಾನೆ. ನೀನು ಇದಕ್ಕಾಗಿ ಚಿಂತಿಸಬೇಡ. ಇದು ವಿಶ್ವವೆಲ್ಲಕ್ಕೂ ಮಾನ್ಯವಾಗಿದೆ. ಶಿವನೇ ನಿನ್ನ ಹೃದಯದಲ್ಲಿ ಕುಳಿತು ಇದನ್ನು ಮಾಡಿಸಿದ್ದಾನೆ. ನಿನಗೆ ಮಾನ, ಅಭಿಮಾನ, ಅವಮಾನಗಳೊಂದೂ ಬೇಡ. ಎಲ್ಲವನ್ನೂ ಅವನೇ ವಹಿಸಿಕೊಂಡಿರುವಾಗ ತೊತ್ತುತನದಿಂದ ನಿನ್ನ ಭಾಗದ ಕೆಲಸವನ್ನು ಮಾಡಿ ಅವನಿಗೆ ಒಪ್ಪಿಸಿದೆ. ಇನ್ನು ನೀನು ನಿಶ್ಚಿಂತನಾಗಿರು" ಎಂದು ಹೇಳಿದರು. ಅದಾದ ಮಾರನೆದಿವಸವೇ "ಶ್ರೀಶೈಲಜಗದ್ಗುರು ವಾಗೀಶಪಂಡಿತಾರಾಧ್ಯಮಹಾಸ್ವಾಮಿಗಳು ಶ್ರೀಶೈಲಕ್ಕೆ ಹೋಗುವಾಗ ೨೧-೭-೬೨ರಂದು ಹುಣಸಮಾರನಹಳ್ಳಿಯ ಮಠದಲ್ಲಿ ಇರುತ್ತಾರೆ, ಆ ದಿವಸ ನೀನು ಅಲ್ಲಿಗೆ ಹೋಗಿ ಶ್ರೀಕರಭಾಷ್ಯದ ಮುದ್ರಣದ ಬಗ್ಗೆ ಮಾತನಾಡು" ಎಂದು ನನ್ನ ಆಪ್ತಹಿತೈಷಿಗಳಾದ ಬೆಂಗಳೂರು ಶ್ರೀಶಂಕರದೇವರಮಠಾಧ್ಯಕ್ಷ ಷ॥ ಬ್ರ॥ ಶ್ರೀಮನ್ನಿರಂಜನ ಶಾಂತಕುಮಾರಸ್ವಾಮಿಗಳು ಪತ್ರದ ಮೂಲಕ ತಿಳಿಸಿದರು. ಅದರಂತೆ ಅಲ್ಲಿಗೆ ಆ ದಿವಸವೇ ಹೋಗಿ ಶ್ರೀಜಗದ್ಗುರುಗಳನ್ನು ಭೇಟಿಮಾಡಿ

ದೆನು. ಅವರ ದರ್ಶನ ನನ್ನ ಜೀವನದಲ್ಲಿ ದೊರೆತದ್ದು ಅದೇ ಮೊದಲು. ಅವರು ಪ್ರಶಾಂತಚಿತ್ತರು, ನಿರ್ಮಲಹೃದಯರು ಮತ್ತು ಹಸನ್ಮುಖಿಗಳು. ಅವರ ಉದಾತ್ತ ವರ್ತನೆ ನನ್ನ ಮನಸ್ಸಿನಮೇಲೆ ಪರಿಣಾಮಕಾರಿಯಾಯಿತು. ಅವರನ್ನು ಭೇಟಿ ಮಾಡಿದಾಗ ವೇದಾಂತದೇಶಿಕರ "ನ್ಯಾಂಸವಿಂಶತಿ" ಯ ಪದ್ಯ ಒಂದರ ನೆನಹು ನನಗುಂಟಾಯಿತು. ಶರಣಾಗತರಿಗೆ ರಕ್ಷಣನೀಡುವ ಪ್ರಭುವಿನ ವರ್ತನೆ ಹೇಗಿರಬೇಕೆಂಬುದನ್ನು ಆ ಪದ್ಯವು ತಿಳಿಸುತ್ತದೆ. ಆ ಪದ್ಯ ಹೀಗಿದೆ—

ಸಿದ್ಧಂ ಸತ್ಸಂಪ್ರದಾಯೇ ಸ್ಥಿರಧಿಯಮನಘಂ ಶ್ರೋತ್ರಿಯಂ ಬ್ರಹ್ಮನಿಷ್ಠಂ
ಸತ್ತ್ವಸ್ಥಂ ಸತ್ಯವಾಚಂ ಸಮಯನಿಯತಯಾ ಸಾಧುವೃತ್ತ್ಯಾ ಸಮೇತಂ ।
ಡಂಭಾಸೂಯಾದಿಮುಕ್ತಂ ಜಿತವಿಷಯಗಣಂ ದೀರ್ಘಬಂಧುಂ ದಯಾಲುಂ ।
ಸ್ಖಾಲಿತ್ಯೇ ಶಾಸಿತಾರಂ ಸ್ವಪರಹಿತಪರಂ ದೇಶಿಕಂ ಭೂಷ್ಣುರೀಪ್ಸೇತ್ ॥

ಈ ಪದ್ಯದಲ್ಲಿ ಹೇಳಿರುವಂತೆ ಶ್ರೀ ಜಗದ್ಗುರುಗಳನ್ನು ಯೋಗಸಿದ್ಧರೂ ಸತ್ಸಂಪ್ರದಾಯದಲ್ಲಿ ನಿಶ್ಚಲವಾಗಿ ಅಂಟಿಕೊಂಡು ನಿರ್ಮಲರೂ ಬ್ರಹ್ಮನಿಷ್ಠರೂ ಆದ ಶ್ರೋತ್ರಿಯರೆಂದು ನಾನು ಕಂಡೆನು. ಅವರ ಸಾತ್ತ್ವಿಕವರ್ತನೆ, ಸತ್ಯನಿಷ್ಠೆ ಮತ್ತು ವ್ಯವಸ್ಥಿತವಾದ ಚಿತ್ತವೃತ್ತಿಗಳು ನನ್ನ ಮನಸ್ಸಿನಮೇಲೆ ಸತ್ಪರಿಣಾಮಕಾರಿಯಾದವು. ಅವರ ಹಿತಮಿತವಚನವನ್ನೂ, ನಿರಾಡಂಬರಜೀವನವನ್ನೂ ನೋಡಿ ಅವರ ಹೃದಯದಲ್ಲಿ ಡಂಭಅಸೂಯೆಗಳಿಗಾಗಲೀ, ಕಾಮಕ್ರೋಧಗಳಿಗಾಗಲೀ ಅವಕಾಶವಿಲ್ಲವೆಂಬ ಭಾವನೆ ನನಗೆ ಮನವರಿಕೆಯಾಯಿತು. ಗುರುವಿಗಿಂತ ಬೇರೆ ದಯಾಲುವೂ ಆಪ್ತಹಿತೈಷಿಯೂ ವಿಶ್ವದಲ್ಲಿ ದೊರೆಯುವುದಿಲ್ಲವೆಂದು ತಂದೆಯವರು ಆಗಾಗ್ಗೆ ಹೇಳುತ್ತಿದ್ದ ಅನುಭವದ ವಾಣಿ ಅಂದು ಶ್ರೀಶೈಲಜಗದ್ಗುರುಗಳ ದಿವ್ಯದರ್ಶನದಿಂದ ಸತ್ಯವೆನಿಸಿತು. ನನ್ನ ಎದುರಿಗೆ ಅನೇಕ ಶಿಷ್ಯರು ಗುರುವಿನ ದರ್ಶನವನ್ನು ಪಡೆಯುತ್ತಿರುವಾಗ ಪ್ರತಿಯೊಬ್ಬರ ಲೋಪದೋಷಗಳನ್ನು ಅವರವರ ಮನಸ್ಸಿಗೆ ನೋವಾಗದಂತೆ ತಿಳಿಯಪಡಿಸುತ್ತ ಅವರನ್ನು ಸನ್ಮಾರ್ಗಕ್ಕೆಳೆಯುವ ಕ್ರಮವನ್ನು ನೋಡಿದಾಗ ಗುರುವರ್ಯರ ಹೃದಯದ ಗಾಂಭೀರ್ಯ, ಮನಃಪ್ರಸನ್ನತೆ, ವೀರ್ಯವತ್ತರವಾದ ವಾಣಿ, ಲೋಕಹಿತೈಷಿತೆ ಇವೆಲ್ಲವೂ ಗೋಚರವಾದುವು. ಇಂತಹ ದೇಶಿಕವರ್ಯರನ್ನು ವರ್ಧಿಷ್ಣುವಾದ ನಾನು ಆಶ್ರಯಸಿದ್ದು ಸಾರ್ಥಕವಾಯಿತೆಂದು ಮನದಲ್ಲಿ ಆನಂದಪಡುತ್ತಲಿರುವಾಗ, ಗುರುವು ದೂರದಲ್ಲಿದ್ದ ನನ್ನನ್ನು ಹತ್ತಿರಕ್ಕೆ ಕರೆದು ನಿರುಪಾಧಿಕವಾತ್ಸಲ್ಯದಿಂದ ತಾಯಿಯಂತೆ ಆದರಿಸಿ "ನಮಗೆ ಬಹುದಿವಸಗಳಿಂದಲೂ ನಿನ್ನನ್ನು ನೋಡಬೇಕೆಂಬ ಬಯಕೆ ಬಹಳವಾಗಿತ್ತು. ಇಂದು ಮಲ್ಲಿಕಾರ್ಜುನನ ಅನುಗ್ರಹದಿಂದ ಅದು ನೆರವೇರಿತು. ನೀನು ನಮ್ಮ ಧರ್ಮಕ್ಕಾಗಿ ಶ್ರಮಿಸುತ್ತಿರುವೆ ಎಂಬುದನ್ನು ನಾವು ಬಲ್ಲೆವು. ನಿನ್ನ ಹೃದಯದೊಳಗೆ ಮಲ್ಲಿಕಾರ್ಜುನನಿದ್ದಾನೆ. ಅವನು ಮತ್ತು ಶ್ರೀಗುರುಪಂಡಿತಾರಾಧ್ಯರು ಇಬ್ಬರೂ ನಿನ್ನನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ. ನೀನು ಅವರ ಇಚ್ಛೆಯಂತೆ ನಡೆದುಕೊಳ್ಳುತ್ತ ಅವರು ವಹಿಸಿದ ಕೆಲಸವನ್ನು ಶ್ರದ್ಧೆಯಿಂದ ಮಾಡು

ತ್ತಿರುವೆ. ಈಗ ಅವರು ನಿನ್ನ ಕಡೆಯಿಂದ ಮಾಡಿಸಿರುವ ಶ್ರೀಕರಭಾಷ್ಯಾನುವಾದದ ಮುದ್ರಣಕ್ಕೆ ನಾವು ಸಂತೋಷದಿಂದ ಅನುಗ್ರಹಿಸುತ್ತೇವೆ" ಎಂದು ಪೂರ್ಣಾನುಗ್ರಹ ದಿಂದ ಆಶೀರ್ವದಿಸಿದರು. ಈ ಗ್ರಂಥದ ಪ್ರಕಟಣೆಗಾಗಿ ಪ್ರೋತ್ಸಾಹರೂಪದಲ್ಲಿ ೧೦೦೦ಲ ರೂ. ಗಳನ್ನು ಕರುಣಿಸಿ ಆದಷ್ಟುಬೇಗನೆ ಗ್ರಂಥವು ಹೊರಬೀಳಲೆಂದು ಅಪ್ಪಣೆಮಾಡಿದರು. ಅವರು ಸಂತೋಷದಿಂದ ಅನುಗ್ರಹಿಸಿದ ಉದಾರಾಶ್ರಯವು ಕಾಮಧೇನುವಿನಂತೆ ನನಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದಲ್ಲದೆ ಇತರ ಶಿವ ಯೋಗಿಗಳಿಂದಲೂ ಮತ್ತು ಮಹಾಶಯರಿಂದಲೂ ಸಹಾಯವನ್ನು ದೊರಕಿಸಲಿಕ್ಕೆ ಅನುಕೂಲವಾಯಿತು. ಜಗದ್ಗುರುವರ್ಯರು ಕರುಣೆಯಿಂದ ನನಗೆ ಆಶೀರ್ವದಿಸಿ ಈ ಮಹಾಕಾರ್ಯವನ್ನು ನೆರವೇರಿಸಿಕೊಟ್ಟದಕ್ಕಾಗಿ ಅವರ ಪೂಜ್ಯಪಾದಾರವಿಂದಗಳಲ್ಲಿ ನನ್ನ ವಿನಯಪೂರ್ವಕವಾದ ಶಿರಸ್ಸಾಷ್ಟಾಂಗಪ್ರಣಾಮಗಳನ್ನು ಭಕ್ತಿಪೂರ್ವಕವಾಗಿ ಸಮರ್ಪಿಸುತ್ತೇನೆ. ಅವರ ಸಮನ್ವಯಮನೋಭಾವದ ಮತ್ತು ವಿಶ್ವಪ್ರೇಮದ ಅಂಗವಾಗಿ ಪ್ರಕಟವಾಗಲಿರುವ ಈ ಶ್ರೀಕರಭಾಷ್ಯವು ಆಶ್ರಯದಾತರ ದಿವ್ಯಾಶೀರ್ವಾದ ದಂತೆಯೇ ವಿಶ್ವಪ್ರೇಮದ ಕುರುಹಾಗಿ ಕರ್ಣಾಟಕದ ನನ್ನ ಬಂಧುಗಳೆಲ್ಲರಿಗೂ ಶ್ರೀಕರವಾಗಲೆಂದು ಮಲ್ಲಿಕಾರ್ಜುನನಲ್ಲಿ ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಪೂಜ್ಯಗುರುವರ್ಯರ ದಿವ್ಯಾನುಗ್ರಹವನ್ನು ಪಡೆದು ಬೆಂಗಳೂರು ಬೇಲೀಮಠಾ ಧ್ಯಕ್ಷ ಷ|| ಬ್ರ|| ನಿ|| ಪ್ರ|| ಶ್ರೀ ಚರಮೂರ್ತಿಸಿದ್ಧಲಿಂಗಸ್ವಾಮಿಗಳ ದಿವ್ಯದರ್ಶನವನ್ನು ಪಡೆದೆನು. ಅವರು ಮೊದಲಿಂದಲೂ ನನ್ನ ಆಪ್ತಹಿತೈಷಿಗಳಾಗಿದ್ದು ಧಾರ್ಮಿಕ ಗ್ರಂಥಗಳ ಪ್ರಕಾಶಕ್ಕೆ ಪೂರ್ಣಸಹಕಾರನೀಡುವುದಾಗಿ ಭರವಸೆಯಿತ್ತಿದ್ದರು. ಶ್ರೀಕರ ಭಾಷ್ಯದ ಅನುವಾದವು ಮುದ್ರಣಕ್ಕೆ ಸಿದ್ಧವಾಗಿದೆಯೆಂದು ಅವರಿಗೆ ಹೇಳಿದಾಗ ಅವರು ಆನಂದಪರವಶರಾಗಿ ಆ ಕೂಡಲೇ ನೂರು ರೂಪಾಯಿಗಳನ್ನು ಅನುಗ್ರಹಿಸಿ ಈ ಮಹಾಕಾರ್ಯ ಯಶಸ್ವಿಯಾಗಿ ಬೇಗನೆನಡೆಯಲೆಂದು ಆಶೀರ್ವದಿಸಿದರು. ತೀ||ಗಳು ಅಪ್ಪಣೆಮಾಡಿದ್ದ ಮೂರು ಧರ್ಮಗ್ರಂಥಗಳ ಪೈಕಿ ಮತ್ತೆರಡು ಉಳಿದಿವೆ ಎಂದು ಪೂಜ್ಯಪಾದರಲ್ಲಿ ಅರಿಕೆಮಾಡಿಕೊಂಡೆನು. ಆ ಕೂಡಲೇ ಅವರು ಹೃತ್ಪೂರ್ವಕ ವಾದ ಸಂತೋಷದಿಂದ ಕ್ರಿಯಾಸಾರವನ್ನು ಕನ್ನಡಿಸಲಿಕ್ಕಾಗಿ ಒಂದುಸಾವಿರ ರೂಪಾಯಿಗಳನ್ನು ಅನುಗ್ರಹಿಸುವುದಾಗಿ ಆಶ್ವಾಸನವನ್ನಿತ್ತರು. ಅವರು ಈಗಾಗಲೇ ಕೈ|| ಶ್ರೀಗುರುಶಾಂತಶಾಸ್ತ್ರಿಗಳಿಂದ ಮೂರು ವೀರಶೈವಗ್ರಂಥಗಳನ್ನು ಬರೆಸಿ ಪೂರ್ತಿ ಖರ್ಚಿನಿಂದ ಪ್ರಕಟಿಸಿ, ನೂರಾರಮಂದಿ ವಿದ್ಯಾರ್ಥಿಗಳಿಗೆ ಅಶನವಸತಿಗಳ ಸೌಕರ್ಯ ವನ್ನು ಕಲ್ಪಿಸಿ ವೀರಶೈವಸಮಾಜಕ್ಕೆ ಮಹೋಪಕಾರವನ್ನು ಮಾಡಿದ್ದಾರೆ. ಪೂಜ್ಯ ಪಾದರು ಸಹಜವಾದ ಔದಾರ್ಯದಿಂದ ನನ್ನನ್ನು ಆಶೀರ್ವದಿಸಿ ಪ್ರೋತ್ಸಾಹಿಸಿದ್ದ ಕ್ಕಾಗಿ ಅವರಿಗೆ ಪ್ರಣಾಮಪೂರ್ವಕವಾದ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಅದೇದಿವಸ ಶ್ರೀ ಸಿದ್ಧಗಂಗಾಕ್ಷೇತ್ರಕ್ಕೆ ಹೋಗಿ ಷ|| ಬ್ರ|| ನಿ|| ಪ್ರ|| ಶ್ರೀ ಶಿವ ಕುಮಾರಸ್ವಾಮಿಗಳವರಲ್ಲಿ ಶ್ರೀಕರಭಾಷ್ಯದ ಮುದ್ರಣದ ಬಗ್ಗೆ ವಿಜ್ಞಾಪಿಸಿ

ಕೊಂಡೆನು. ಅವರ ಆಶ್ರಯದಲ್ಲಿ ಅವರ ಪ್ರಸಾದದಿಂದ ನಾನು ಹಿಂದಿನಿಂದಲೂ ಬೆಳೆದವನಾದ್ದರಿಂದ ಅವರಿಗೆ ನನ್ನಮೇಲೆ ಅಂದಿನಿಂದಲೂ ಅವ್ಯಾಜಪ್ರೇಮವಿರುವುದನ್ನು ನಾನು ಚೆನ್ನಾಗಿ ಬಲ್ಲೆನು. ಅವರಿಗೆ ಆ ದಿನ ಬಿಡುವಿಲ್ಲದ ಕಾರ್ಯಕ್ರಮವಿದ್ದರೂ ಸಾವಧಾನಚಿತ್ತರಾಗಿ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಕರಭಾಷ್ಯದ ಶುದ್ಧಪ್ರತಿಯ ಮುದ್ರಣವು ಅನುವಾದದೊಡನೆ ಬೇಗನೆ ಆಗಬೇಕೆಂದು ತಿಳಿಸಿ ಆ ಕಾರ್ಯವನ್ನು ಕೈಕೊಂಡಿದ್ದಕ್ಕಾಗಿ ಸಂತೋಷಪಟ್ಟು ಕಾರ್ಯನಿರ್ವಹಣೆಗಾಗಿ ಇನ್ನೂರೈವತ್ತು ರೂಪಾಯಿಗಳನ್ನು ಅನುಗ್ರಹಿಸಿದರು. ಅದಕ್ಕಾಗಿ ಅವರಿಗೆ ಕೃತಜ್ಞತಾಪೂರ್ವಕವಾದ ಸಾಷ್ಟಾಂಗಪ್ರಣಾಮಗಳನ್ನು ಭಕ್ತಿಯಿಂದ ಅರ್ಪಿಸುತ್ತೇನೆ. ಅವರು ಒಂದು ಹೊತ್ತಿಗೆ ೨೦೦೦ ಮಂದಿ ವಿದ್ಯಾರ್ಥಿಗಳಿಗೆ ಅನ್ನದಾನಮಾಡುತ್ತ ಇಂಗ್ಲಿಷ್ ಕನ್ನಡ ಸಂಸ್ಕೃತ ವಿದ್ಯಾಸಂಸ್ಥೆಗಳನ್ನು ನಡೆಸುತ್ತ ಸಾರ್ವಜನಿಕಕಾರ್ಯಗಳನ್ನು ಶಿವನ ಜಗದ್ವ್ಯಾಪಾರಲೀಲೆಯಂತೆ ಅನಾಯಾಸವಾಗಿ ನಡೆಸುತ್ತ "ಮಾನವನು ಜೀವಭಾವದ ಅಹಂಕಾರಮಮಕಾರಗಳನ್ನು ತೊರೆದು ಶಿವನಿಗೆ ಪೂರ್ಣ ಶರಣಾಗತನಾದರೆ ಅದ್ಭುತರೀತಿಯ ಲೋಕಕಲ್ಯಾಣವನ್ನು ಸಾಧಿಸಬಲ್ಲನು" ಎಂಬ ಉದಾತ್ತತತ್ತ್ವವನ್ನು ತಮ್ಮ ಸ್ವಂತ ಆಚರಣೆಯಮೂಲಕ ಇಡೀ ಮಾನವಸಮಾಜಕ್ಕೆ ತೋರಿಸಿಕೊಡುತ್ತಿರುವರು. ಅವರ ದಿವ್ಯದರ್ಶನದಿಂದ ಭಕ್ತರೆಲ್ಲರ ಮನಸ್ಸು ಪ್ರಶಾಂತವಾಗಿ ಮಹಾದೇವನಲ್ಲಿ ರಮಿಸುವಷ್ಟು ದಿವ್ಯಸ್ಫೂರ್ತಿಯನ್ನು ಪಡೆಯುವುದೆಂಬ ಅಂಶ ಇಡೀಜಗತ್ತಿಗೆ ತಿಳಿದಿದೆ. ವಿಶ್ವಕುಟುಂಬವನ್ನು ಲೀಲೆಯಿಂದ ನಿರ್ವಹಿಸುತ್ತಲೇ ಅವರು ಧಾರ್ಮಿಕ ಹಾಗೂ ಸಾಹಿತ್ಯಚಟುವಟಿಕೆಗಳಿಗೆ ಉದಾರವಾದ ಪ್ರೋತ್ಸಾಹವನ್ನು ನೀಡುತ್ತಿರುವುದು ಸರ್ವರಿಗೂ ಮಾರ್ಗದರ್ಶಕವಾಗಿದೆ. ಅವರ ಆಶೀರ್ವಾದಾನುಗ್ರಹಗಳಿಗಾಗಿ ನಾನು ಚಿರಋಣಿಯಾಗಿದ್ದೇನೆ.

ಅಲ್ಲಿಂದ ಮಲ್ಲೇಶ್ವರದ ಶ್ರೀ ರುದ್ರಪ್ಪಶೆಟ್ಟರಲ್ಲಿ ಹೋಗಿ ಈ ಮಹಾಯಜ್ಞದ ಬಗ್ಗೆ ಅರಿಕೆಮಾಡಿಕೊಂಡೆನು. ಅವರು ನನಗೆ ಪರಿಚಿತರಲ್ಲದಿದ್ದರೂ ನನ್ನೊಡನೆ ಸಾವಧಾನವಾಗಿ ಎರಡು ಘಂಟೆಗಳಕಾಲ ವೀರಶೈವಧರ್ಮದ ವೈಶಾಲ್ಯದ ಬಗ್ಗೆ ಮಾತನಾಡಿ "ಸಂಸ್ಕೃತದಲ್ಲಿರುವ ಧರ್ಮಗ್ರಂಥಗಳನ್ನು ನಿಮ್ಮಂತವರು ಕನ್ನಡಕ್ಕೆ ತಂದು ನಮ್ಮ ಸೋದರಸೋದರಿಯರಿಗೆ ಬೆಳಕನ್ನು ನೀಡಬೇಕು. ಇದರಿಂದ ಜನರಲ್ಲಿ ಪರಸ್ಪರ ಪ್ರೇಮಗೌರವಗಳು ಬೆಳೆಯಲಿಕ್ಕೆ ಅವಕಾಶವಾಗುವುದು" ಎಂದು ಹೇಳಿ ಈ ಕಾರ್ಯಕ್ಕಾಗಿ ಸಂತೋಷದಿಂದ ಅಭಿನಂದಿಸಿ ಐನೂರೊಂದು ರೂಪಾಯಿಗಳನ್ನು ಪ್ರೋತ್ಸಾಹರೂಪವಾಗಿ ಸಂತೋಷದಿಂದ ಕೊಟ್ಟರು. ಅವರ ಈ ಪ್ರೋತ್ಸಾಹಕ್ಕಾಗಿ ನಾನು ಸಂತೋಷಗೊಂಡು ಅವರಿಗೆ ಸದ್ಬುದ್ಧಿ ಸದ್ಭಾವನೆಗಳನ್ನು ಸ್ಥಿರವಾಗಿ ಅನುಗ್ರಹಿಸುವಂತೆ ಪರಮೇಶ್ವರನಲ್ಲಿ ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಅಲ್ಲಿಂದ ಗುರುಸೇವಾಧುರೀಣರಾದ ಶ್ರೀ ಗುರುಸಿದ್ದಪ್ಪಶೆಟ್ಟರನ್ನು ಕಂಡು ಈ ವಿಷಯವನ್ನು ತಿಳಿಸಿದೆನು. ಅವರು ಮೊದಲಿಂದಲೂ ನನಗೆ ತುಂಬ ಪರಿಚಿತರು.

ಅವರಿಗೆ ನನ್ನ ಬಗ್ಗೆ ಹೆಚ್ಚಿನ ಗೌರವವಿಶ್ವಾಸಗಳಿವೆ. ವೀರಶೈವಧರ್ಮದ ಪ್ರಕಾಶಕ್ಕಾಗಿ ರೇಣುಕಭಗವತ್ಪಾದರು ನನ್ನನ್ನು ಪೂರ್ಣಕೃಪೆಯಿಂದ ಉಪಯೋಗಿಸಿಕೊಳ್ಳುತ್ತಿರುವುದಕ್ಕಾಗಿ ಅವರು ಬಹಳ ಸಂತೋಷಪಟ್ಟು ಐನೂರುರುಪಾಯಿಗಳನ್ನು ಪ್ರೋತ್ಸಾಹರೂಪವಾಗಿ ಕೊಟ್ಟು ಮಹಂತಿನಮಠದ ಫಂಡಿನಿಂದಲೂ ಅಷ್ಟನ್ನು ಕೊಡಿಸುವುದಾಗಿ ಆಶ್ವಾಸನವನ್ನು ನೀಡಿದರು. ಅದಕ್ಕಾಗಿ ನಾನು ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಅವರಿಗೆ ಪರಮೇಶ್ವರನು ಆಯುರ್ಭಾಗ್ಯಗಳನ್ನು ಅನುಗ್ರಹಿಸಿ ಧರ್ಮಪ್ರಸಾರಕಾರ್ಯದಲ್ಲಿ ಅವರಿಂದ ಇನ್ನೂ ಹೆಚ್ಚು ಸೇವೆಯನ್ನು ಮಾಡಿಸಿಕೊಳ್ಳಲೆಂದು ಅವನಲ್ಲಿಯೇ ಶ್ರದ್ಧೆಯಿಂದ ಪ್ರಾರ್ಥಿಸುತ್ತೇನೆ.

ಅದೇ ದಿವಸವೇ ಗಣಪತಿವಿಲಾಸದ ಮ|| ರಾ|| ಶ್ರೀ|| ಶ್ರೀಕಂಠಪ್ಪನವರಲ್ಲಿ ಶ್ರೀಕರಭಾಷ್ಯದ ವಿಷಯವನ್ನು ತಿಳಿಸಿದೆನು. ಅವರು ನಿರ್ಮಲಹೃದಯರು ಮತ್ತು ಭಕ್ತಿಮಂತರು. "ಶ್ರೀಕರಭಾಷ್ಯವು ಕನ್ನಡದಲ್ಲಿ ಬಂದು ನಮ್ಮ ಜೀವನವನ್ನು ಎಂದು ಶ್ರೀಕರಗೊಳಿಸುವುದೋ ಎಂದು ನಾನು ಬಹುದಿವಸಗಳಿಂದಲೂ ಅಪೇಕ್ಷಿಸುತ್ತಿದ್ದೆನು. ಇಂದು ಶಿವನು ನಿಮ್ಮ ಕಡೆಯಿಂದ ಈ ಕೆಲಸವನ್ನು ಮಾಡಿಸುತ್ತಿರುವುದಕ್ಕೆ ನನಗೆ ತುಂಬ ಸಂತೋಷವಾಗಿದೆ. ನಿಮ್ಮ ಕಾರ್ಯವನ್ನು ಶಿವನು ಯಶಸ್ವಿಯಾಗಿ ನೆರವೇರಿಸಲಿ" ಎಂದು ಹೇಳಿ ನೂರೊಂದು ರುಪಾಯಿಗಳನ್ನು ಪ್ರೋತ್ಸಾಹರೂಪವಾಗಿ ಪ್ರೇಮದಿಂದ ಕೊಟ್ಟರು. ಅವರ ಈ ಉದಾರವಾದ ಪ್ರೋತ್ಸಾಹಕ್ಕಾಗಿ ಅವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ. ಅವರಿಗೆ ಈಶ್ವರನು ಆರೋಗ್ಯೈಶ್ವರ್ಯ ಸೌಭಾಗ್ಯಗಳನ್ನು ಅನುಗ್ರಹಿಸಲೆಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಅಲ್ಲಿಂದ ಮೈಸೂರಿನ ಸುಪ್ರಸಿದ್ಧವಕೀಲರಾದ ಶ್ರೀ ಎಸ್. ಶಿವಸ್ವಾಮಿ ಅವರಲ್ಲಿ ಈ ವಿಷಯವನ್ನು ತಿಳಿಸಿದೆನು. ಅವರು ತುಂಬ ಸಂತೋಷಪಟ್ಟು "ಶ್ರೀಕರಭಾಷ್ಯದ ಅನುವಾದವು ಬೇಗನೆ ಕನ್ನಡಿಗರ ಕೈಸೇರಲಿ. ಅದರಲ್ಲಿ ಅಡಗಿರುವ ಉದಾತ್ತತತ್ತ್ವಗಳು ಜನತೆಗೆ ತಿಳಿಯಲಿ. ವೀರಶೈವಧರ್ಮದ ವೈಶಾಲ್ಯ ಮತ್ತು ಔದಾರ್ಯಗಳು ಅದರ ಅನುಯಾಯಿಗಳಿಗಷ್ಟೇ ಅಲ್ಲದೆ ಇತರ ಸಾಧಕರೆಲ್ಲರಿಗೂ ಸನ್ಮಾರ್ಗವನ್ನು ತೋರಿಸಲಿ" ಎಂದು ಹೇಳಿ ಈ ಕಾರ್ಯಕ್ಕೆ ಪ್ರೋತ್ಸಾಹರೂಪವಾಗಿ ನೂರು ರುಪಾಯಿಗಳನ್ನು ಸಂತೋಷದಿಂದ ಕೊಟ್ಟರು. ಅವರ ಉದಾರಪ್ರೋತ್ಸಾಹಕ್ಕಾಗಿ ಅವರಿಗೆ ವಿನಯಪೂರ್ವಕವಾದ ಕೃತಜ್ಞತೆಯನ್ನು ಸಲ್ಲಿಸಿ ಅವರಿಗೆ ಪರಮೇಶ್ವರನು ಸದ್ಬುದ್ಧಿಯನ್ನು ಹೀಗೆಯೇ ನಿರಂತರವೂ ಅನುಗ್ರಹಿಸಿ ಮುಂದಿನ ದ್ವಿತೀಯಭಾಗದ ಮುದ್ರಣಕ್ಕೂ ಉದಾರಾಶ್ರಯವನ್ನು ನೀಡುವಂತೆ ಪ್ರೇರಿಸಲೆಂದು ಭಕ್ತಿಯಿಂದ ಅವನಲ್ಲಿ ಬೇಡುತ್ತೇನೆ ಹಾಗೆಯೇ ಮೈಸೂರಿನ ಸುಪ್ರಸಿದ್ಧವ್ಯಾಪಾರಿಗಳಾದ ಶ್ರೀ ಎಂ. ಎಸ್. ನಾಗರಾಜ್ ಅವರು ಶ್ರೀಕರಭಾಷ್ಯದ ಅನುವಾದವನ್ನು ಕೇಳಿ ಸಂತೋಷಗೊಂಡು ಈ ಶುಭಕಾರ್ಯದಿಂದ ಕನ್ನಡನಾಡಿನ ಬಂಧುಗಳ ಜೀವನವು ಶ್ರೀಕರವಾಗಲೆಂದು ಬಯಸಿ ಇನ್ನೂರೈವತ್ತು ರೂಪಾಯಿಗಳನ್ನು ಕೊಟ್ಟು ಪ್ರೋತ್ಸಾಹಿಸಿದರು. ಇದಕ್ಕಾಗಿ

ಅವರಿಗೂ, ಅವರ ಮಾತಾಪಿತೃಗಳಿಗೂ ಹೃತ್ಪೂರ್ವಕವಾದ ಕೃತಜ್ಞತೆಯನ್ನರ್ಪಿಸಿ ಅವರಿಗೆ ಇಂತಹ ಸದ್ಬುದ್ಧಿಯನ್ನೇ ಪರಶಿವನು ಸ್ಥಿರವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ. ಮೈಸೂರು ವಿಶ್ವವಿದ್ಯಾನಿಲಯದ ಹಣಕಾಸಿನ ಶಾಖೆಯ ಸೂಪರಿಂಟೆಂಡೆಂಟರಾದ ಬ್ರ|| ಶ್ರೀ ಬಸವಪ್ಪಶಾಸ್ತ್ರಿಗಳು ನನ್ನ ಅವ್ಯಾಜಬಂಧುವೂ ಅಕಾರಣಮಿತ್ರರೂ ಆಗಿದ್ದಾರೆ. ನಾನು ವಿದ್ಯಾರ್ಥಿಯಾಗಿದ್ದಾಗಲೇ ನನ್ನಿಂದ ಸಮಾಜಕ್ಕೆ ಹೆಚ್ಚಿನ ಸೇವೆ ಸಲ್ಲುವುದೆಂದು ನಿರೀಕ್ಷಿಸುತ್ತಿದ್ದರು. ಇಂದು ನನಗೆ ಈ ಧರ್ಮದಲ್ಲಿ ಬುದ್ಧಿಯನ್ನು ಹುಟ್ಟಿಸಿ ಉಯ್ಯಾಲೆಯಂತಹ ಮನಸ್ಸನ್ನು ಸ್ಥಿರಗೊಳಿಸಿ ಧರ್ಮಗ್ರಂಥಗಳ ಆಳವಾದ ಅಭ್ಯಾಸಕ್ಕೆ ನನ್ನ ಮನಸ್ಸನ್ನು ಪಳಗಿಸಿದ ಬ್ರ|| ಶ್ರೀ ಬಸವಪ್ಪಶಾಸ್ತ್ರಿಗಳಿಗೆ ಕೃತಜ್ಞತೆಯನ್ನು ಸಲ್ಲಿಸಲು ನನಗೆ ಶಬ್ದಗಳು ಸಾಲವು. ಒಂದೇ ಮಾತಿನಲ್ಲಿ ನನ್ನ ಹೃದಯವನ್ನು ಬಿಚ್ಚಿ ತೋರಿಸುವುದೆಂದರೆ ನಾನು ಅವರ ಕರುಣೆಯ ಕೂಸು. ಅವರ ಸಹಜವೂ ನಿಷ್ಕಲ್ಮಷವೂ ಆದ ಪ್ರೇಮದ ಪರಿಣಾಮವಾಗಿ ಈ ಶ್ರೀಕರಭಾಷ್ಯ ಇಂದು ಹೊರಬೀಳುತ್ತಲಿದೆ. ನನಗೆ ಜೀವನದಲ್ಲಿ ಬೇಸರವಾದಾಗ ಎಷ್ಟೋವೇಳೆ ಧೈರ್ಯ ಶಕ್ತಿ ಉತ್ಸಾಹವನ್ನನ್ನೇ ಅಲ್ಲದೆ ನವಚೈತನ್ಯವನ್ನೇ ತುಂಬಿ ಅವರು ಈ ಮಹಾಕಾರ್ಯವನ್ನು ಮಾಡಿಸಿದ್ದಾರೆ. ಅವರಿಗೆ ಸದ್ಬುದ್ಧಿ ಸದ್ಭಾವನೆಗಳನ್ನು ಪರಮೇಶ್ವರನನು ಹೀಗೆಯೇ ನಿರಂತರವೂ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಗುರುಭಕ್ತಿಚಂದ್ರ ಡಾ|| ಎಂ. ಸಿ. ನಂಜಪ್ಪನವರು ಉದಾರಮನೋಭಾವದಿಂದ ನೂರುರೂಪಾಯಿಗಳನ್ನು ದಾವಣಗೆರೆಯಿಂದ ಪ್ರೋತ್ಸಾಹರೂಪವಾಗಿ ಕಳುಹಿಸಿಕೊಟ್ಟಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಸಂತೋಷದಿಂದ ಸಲ್ಲಿಸುತ್ತೇನೆ. ತುಂಕೂರಿನ ಜಯಭಾರತ ಟ್ರಾನ್ಸ್‌ಪೋರ್ಟ್ ಮಾಲೀಕರಾದ ಶ್ರೀ ಟಿ.ಎಸ್. ಚನ್ನಬಸವಣ್ಣನವರು ಈ ಕಾರ್ಯಕ್ಕಾಗಿ ನೂರುರೂಪಾಯಿಗಳನ್ನು ಪ್ರೋತ್ಸಾಹರೂಪವಾಗಿ ಕೊಟ್ಟಿದ್ದಾರೆ. ಅವರನ್ನು ಈಶ್ವರನು ಸುಖವಾಗಿರಿಸಿ ಇಂತಹ ಧರ್ಮಕಾರ್ಯಗಳನ್ನು ಮತ್ತಷ್ಟು ಹೆಚ್ಚಾಗಿ ಅವರಿಂದ ಮಾಡಿಸಲೆಂದು ಪ್ರಾರ್ಥಿಸುತ್ತೇನೆ.

ಶ್ರೀರಂಭಾಪುರೀವೀರಸಿಂಹಾಸನಾಧೀಶ್ವರಪ್ರಸನ್ನರೇಣುಕಜಗದ್ಗುರು ಶ್ರೀವೀರಗಂಗಾಧರಶಿವಾಚಾರ್ಯಮಹಾಸ್ವಾಮಿಗಳು ಶಕ್ತಿವಿಶಿಷ್ಟಾದ್ವೈತದರ್ಶನದ ಮುದ್ರಣಕ್ಕಾಗಿ ಒಂದುಸಾವಿರ ರೂ.ಗಳನ್ನು ಅನುಗ್ರಹಿಸಿದ್ದಂತೆಯೇ ಶ್ರೀಕರಭಾಷ್ಯದ ದ್ವಿತೀಯ ಭಾಗದ ಮುದ್ರಣಕ್ಕೂ ಸಹಾಯವನ್ನು ಅನುಗ್ರಹಿಸುವುದಾಗಿ ಆಶೀರ್ವದಿಸಿ ಪ್ರೋತ್ಸಾಹಿಸಿರುವುದಕ್ಕಾಗಿ ಶ್ರೀಪೂಜ್ಯಪಾದರಿಗೆ ಸಾಷ್ಟಾಂಗಪ್ರಣಾಮಗಳನ್ನು ಭಕ್ತಿಯಿಂದ ಸಮರ್ಪಿಸುತ್ತೇನೆ. ಅವರು ತಮ್ಮ ದಿವ್ಯದರ್ಶನದಿಂದ ನನ್ನ ಜೀವನವನ್ನು ಪಾವನಗೊಳಿಸಿ ಸತ್ಕಾರ್ಯದಲ್ಲಿ ವಿನಿಯೋಗಿಸಿದ್ದಕ್ಕಾಗಿ ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಮೈಸೂರು ಸಂಸ್ಕೃತಬೋರ್ಡು ಸದಸ್ಯರೂ, ರಾಯಚೂರು ಶಿಖರಮಠದ ಅಧ್ಯಕ್ಷರೂ ಆದ ಶ್ರೀ ಗುರುಲಿಂಗಶಿವಾಚಾರ್ಯಮಹಾಸ್ವಾಮಿಗಳು ಶ್ರೀಕರಭಾಷ್ಯದ ಅನುವಾದವನ್ನು ನೋಡಿ ಸಂತೋಷಪಟ್ಟು ನನ್ನ ಸ್ಫೂರ್ತ್ಯುತ್ಸಾಹಗಳನ್ನು ಹೆಚ್ಚಿಸಿದ್ದ

ಕ್ಕಾಗಿ ನಾನು ಅವರಿಗೆ ತುಂಬ ಕೃತಜ್ಞನಾಗಿದ್ದೇನೆ. ಶ್ರೀ ಗುರುವರ್ಯರು ಪೂಜಾನಿಷ್ಠರೂ ಉದಾರಚರಿತರೂ ಆಗಿದ್ದಾರೆ. ಅವರ ಹೃದಯವು ನಿಷ್ಕಲ್ಮಷವಾಗಿರುವಂತೆ ವಾಕ್ಕು ಪರಿಣಾಮಕಾರಿಯೂ, ಕೃತಿ ವೀರ್ಯವತ್ತರವೂ ಆದುದು. ಇಂತಹ ಮಾತೃಪ್ರೇಮದ ಗುರುಹೃದಯದಿಂದ ಅವರು ಶ್ರೀಕರಭಾಷ್ಯದ ಅನುವಾದವನ್ನು ನೋಡಿ ಆಶೀರ್ವದಿಸಿರುವುದಕ್ಕಾಗಿ ನಾನು ಅವರಿಗೆ ಅತ್ಯಂತ ಕೃತಜ್ಞನಿದ್ದೇನೆ.

ನವಿಲುಗುಂದ ಪಟ್ಟದಮಠದ ಷ|| ಬ್ರ|| ಶ್ರೀಗುರುದೇವಶಿವಾಚಾರ್ಯಸ್ವಾಮಿಗಳು ಭವಹರವಾದ ಶ್ರೀಕರಭಾಷ್ಯದ ಅನುವಾದ ಬೇಗನೆ ಬರಲೆಂದು ಆಶೀರ್ವದಿಸಿ ನೂರು ರೂಪಾಯಿಗಳನ್ನು ಅನುಗ್ರಹಿಸಿದ್ದಾರೆ. ಅವರ ಧರ್ಮಾಭಿಮಾನಕ್ಕಾಗಿ ನಾನು ಅವರಿಗೆ ಸಾಷ್ಟಾಂಗಪ್ರಣಾಮಪೂರ್ವಕವಾದ ಕೃತಜ್ಞತೆಯನ್ನು ಭಕ್ತಿಯಿಂದ ಸಲ್ಲಿಸುತ್ತೇನೆ. ರೌಡಕುಂದಿ ಹಿರೇಮಠದ ಷ|| ಬ್ರ|| ಶ್ರೀ ಶಿವಯೋಗಿಶಿವಾಚಾರ್ಯಮಹಾಸ್ವಾಮಿಗಳು ಶ್ರೀಕರಭಾಷ್ಯಾನುವಾದದ ಬಗ್ಗೆ ಕೇಳಿ ಸಂತೋಷಗೊಂಡು ನೂರುರೂಪಾಯಿಗಳನ್ನು ಅನುಗ್ರಹಿಸಿ ಪ್ರೋತ್ಸಾಹಿಸಿದ್ದಾರೆ. ಅವರು ನನ್ನನ್ನು ನೋಡದೆ ಇದ್ದರೂ ನನ್ನ ಬಗ್ಗೆ ಇಷ್ಟೊಂದು ಅವ್ಯಾಜಪ್ರೇಮವನ್ನು ತೋರಿಸಿರುವುದು ಅವರ ಉದಾತ್ತತೆಯನ್ನು ವ್ಯಕ್ತಪಡಿಸುತ್ತದೆ. ಶ್ರೀ ಗುರುವರ್ಯರ ಚರಣಾರವಿಂದಗಳಲ್ಲಿ ಹೃತ್ಪೂರ್ವಕವಾದ ನನ್ನ ಸಾಷ್ಟಾಂಗಪ್ರಣಾಮಗಳನ್ನು ಭಕ್ತಿಯಿಂದ ಅರ್ಪಿಸುತ್ತೇನೆ.

ಚಿತ್ರದುರ್ಗದ ಜಗದ್ಗುರು ಶ್ರೀಜಯವಿಭವಮುರುಘರಾಜೇಂದ್ರಮಹಾಸ್ವಾಮಿಗಳವರು ಶ್ರೀಕರಭಾಷ್ಯದ ಮುದ್ರಣವನ್ನು ಕೇಳಿ ಬಹಳ ಸಂತೋಷಪಟ್ಟು ಇದರ ಪರಿಚಯದಿಂದ ಮಾನವಜೀವನವು ಶ್ರೀಕರವಾಗಲೆಂದು ಆಶೀರ್ವದಿಸಿ ದ್ವಿತೀಯಭಾಗದ ಮುದ್ರಣಕ್ಕೆ ಯಥಾಶಕ್ತಿ ಅನುಗ್ರಹಿಸಲಾಗುವುದೆಂದೂ, ಬೆಂಗಳೂರು ಸರ್ಪಭೂಷಣ ಮಠದ ಫಂಡಿನಿಂದಲೂ ಹಾಗೆಯೇ ಸಹಾಯಮಾಡಿಸುವುದಾಗಿಯೂ, ಅಪ್ಪಣೆ ಮಾಡಿದ್ದಾರೆ. ಪೂಜ್ಯಪಾದರ ಈ ಪ್ರೋತ್ಸಾಹಕ್ಕಾಗಿ ಅತ್ಯಂತಕೃತಜ್ಞತೆಯಿಂದ ಅವರಲ್ಲಿ ನನ್ನ ಭಕ್ತಿಪೂರ್ವಕಪ್ರಣಾಮಗಳನ್ನು ವಿನಯದಿಂದ ಸಮರ್ಪಿಸುತ್ತೇನೆ.

ಧಾರವಾಡದ ಷ||ಬ್ರ||ನಿ||ಪ್ರ|| ಶ್ರೀಮೃತ್ಯುಂಜಯಸ್ವಾಮಿಗಳು ಶ್ರೀಕರಭಾಷ್ಯದ ಅನುವಾದವನ್ನು ಕೇಳಿ ಸಂತೋಷಗೊಂಡು ಕನ್ನಡನಾಡಿನ ಸಾಧಕರ ಜೀವನವು ಇದರಿಂದ ಶ್ರೀಕರವಾಗಲೆಂಬ ಸದಾಶಯದಿಂದ ನೂರುರೂಪಾಯಿಗಳನ್ನು ಅನುಗ್ರಹಿಸಿ ಆಶೀರ್ವದಿಸಿದ್ದಾರೆ. ಅವರು ಅಂತರಂಗದಲ್ಲಿ ಕೈವಲ್ಯಾನಂದವನ್ನು ಅನುಭವಿಸುತ್ತ ನಿರಂಜನರಾಗಿದ್ದು ಬಹಿರಂಗದಲ್ಲಿ ನಿರಭಿಮಾನದಿಂದ ಲೋಕಹಿತಕ್ಕಾಗಿ ಭಕ್ತಾನುಗ್ರಹ ಲೀಲೆಯನ್ನು ಅನೇಕಬಗೆಯಾಗಿ ನಡೆಸುತ್ತ ಜಗತ್ತಿಗೆ ದಿವ್ಯವಾದ ಆದರ್ಶರಾಗಿರುವರು. ಇವರ ಹೃದಯ ಸರಳವೂ ನಿಷ್ಕಲ್ಮಷವೂ ಆದುದು. ಸಾಧಕರ ಮೇಲೆ ಇವರ ಪ್ರೇಮ ಅವ್ಯಾಜವೂ ಸಾತ್ತ್ವಿಕವೂ ಆದುದು. ಇಂತಹ ಶಿವಯೋಗಿಗಳು ಮಾತೃವಾತ್ಸಲ್ಯದಿಂದ ನನ್ನನ್ನು ಪ್ರೋತ್ಸಾಹಿಸಿದ್ದಕ್ಕಾಗಿ ಅವರಿಗೆ ವಿನಯಪೂರ್ವಕವಾದ ಸಾಷ್ಟಾಂಗಪ್ರಣಾಮಗಳನ್ನು ಭಕ್ತಿಯಿಂದ ಅರ್ಪಿಸುತ್ತೇನೆ. ಈ ಶಿವಯೋಗಿಗಳೆಲ್ಲರ

ಮತ್ತು ಸದ್ಭಕ್ತರ ಕರುಣೆಯಂತೆ ಭಗವಾನ್ ಮಲ್ಲಿಕಾರ್ಜುನದೇವನು ಪ್ರಸನ್ನನಾಗಿ ಶ್ರೀಕರಭಾಷ್ಯದ ಪ್ರಥಮಭಾಗವನ್ನು ಲೀಲೆಯಿಂದ ಪ್ರಕಾಶಗೊಳಿಸಿರುವುದಕ್ಕಾಗಿ ಅವನಿಗೆ ಅತ್ಯಂತ ಕೃತಜ್ಞನಾಗಿ ಅವನಲ್ಲಿ ಜೀವಂತವಿಶ್ವಾಸದಿಂದ ನನ್ನ ಭಕ್ತಿ ಪೂರ್ವಕವಾದ ಶಿರಸ್ಸಾಷ್ಟಾಂಗಪ್ರಣಾಮಗಳನ್ನು ಅರ್ಪಿಸುತ್ತೇನೆ.

ಈ ಮಹಾಕಾರ್ಯದ ನಿರ್ವಹಣೆಗೆ ಪರಮೇಶ್ವರನ ಪೂರ್ಣಾನುಗ್ರಹದೊಡನೆ ಜಗದ್ಗುರುಗಳ ಮತ್ತು ಶಿವಯೋಗೀಶ್ವರರ ಅನುಗ್ರಹವೂ, ಮಹಾಜನರ ಪ್ರೋತ್ಸಾಹವೂ ದೊರೆತಂತೆ ಮನೆಯವರಿಂದ ದೊರೆತ ಉದಾರಪ್ರೋತ್ಸಾಹವನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳುವುದರಿಂದ ಶ್ರೀಮಲ್ಲಿಕಾರ್ಜುನನು ಮೆಚ್ಚುವನೆಂದು ಭಾವಿಸುತ್ತೇನೆ. ಈ ಸ್ಮರಣೆಗೆ ಮೊದಲು ಸಲ್ಲುವವರು ನನ್ನ ಪೂಜ್ಯಮಾತೆ. ಇವರು ಮೊದಲಿಂದಲೂ ನನ್ನ ಭಕ್ತಿಶಕ್ತಿಗಳನ್ನು ಕೆರಳಿಸುತ್ತ, ಮನೋಬುದ್ಧಿಗಳನ್ನು ಅರಳಿಸುತ್ತ "ಈಶ್ವರಚಿಂತನೆ, ಧರ್ಮಗ್ರಂಥಗಳ ಪ್ರಕಾಶ ಇವೇ ಜೀವನದ ಮುಖ್ಯೋದ್ದೇಶವಾಗಲಿ. ಯಾವತ್ತೂ ಇವುಗಳ ಕಡೆಯೇ ನಿನ್ನ ಲಕ್ಷ್ಯವಿರಲಿ. ಇದರಿಂದ ನೀನು ಆತ್ಮಕಲ್ಯಾಣವನ್ನು ಸಾಧಿಸುವೆ" ಎಂದು ಹೇಳುತ್ತಿದ್ದರು. ಶ್ರೀಕರಭಾಷ್ಯದ ಪರಿಚಯದಿಂದ ನನ್ನ ಮನಸ್ಸು ಯೋಗಾನಂದದಲ್ಲಿ ರಮಿಸುತ್ತಿರುವುದನ್ನು ಕಂಡು ಅವರು ಸಂತೋಷದಿಂದ ಈ ಗ್ರಂಥದ ಪ್ರಕಟಣೆಗೆ ಆಶೀರ್ವದಿಸಿದುದಕ್ಕಾಗಿ ನಾನು ಪೂಜ್ಯ ಮಾತೆಯ ಅಡಿದಾವರೆಗಳಲ್ಲಿ ನನ್ನ ಭಕ್ತಿಪೂರ್ವಕಪ್ರಣಾಮಗಳನ್ನು ಅರ್ಪಿಸುತ್ತೇನೆ. ಎರಡನೆಯದಾಗಿ ನನ್ನ ಧರ್ಮಪತ್ನಿಯನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಲು ನನಗೆ ತುಂಬ ಸಂತೋಷವಾಗುತ್ತದೆ. ದೇಹಕ್ಕೆ ಏನಾದರೂ ಒಡವೆಮಾಡಿಸಿಕೊಳ್ಳಲೆಂದು ಆಕೆಗೆ ಎರಡುಸಾವಿರರೂಪಾಯಿಗಳನ್ನು ಈ ಶ್ರಾವಣಮಾಸದಲ್ಲಿ ನಾನು ಕೊಡಲನುವಾದೆನು. ಅದಕ್ಕೆ ಆಕೆ ವ್ಯಾಮೋಹಗೊಳ್ಳದೆ ಅದೇ ಹಣವನ್ನು ಶ್ರೀಕರಭಾಷ್ಯದ ಮುದ್ರಣಕ್ಕೆ ಉಪಯೋಗಿಸುವಂತೆ ಸಂತೋಷದಿಂದ ಒಪ್ಪಿ ತನ್ನ ಆದರ್ಶವಾದ ಔದಾರ್ಯವನ್ನು ವ್ಯಕ್ತಪಡಿಸಿ ನನಗೆ ಪ್ರೋತ್ಸಾಹಿಸಿದ್ದಾಳೆ. "ಶ್ರೀಕರಭಾಷ್ಯವೇ ನನ್ನ ಸರ್ವಾಭರಣ. ಅದೇ ನನಗೆ ಸಂಜೀವಿನಿ. ನನ್ನ ಜೀವನ ಶ್ರೀಕರವಾಗುವುದಾದರೆ ಅದಕ್ಕಿಂತ ಬೇರೆ ಅಮೃತ ಬೇಕೆ? ಇದರಿಂದ ಇಡೀ ಕರ್ನಾಟಕದ ಭಗಿನಿಯರ ಜೀವನವೇ ಶ್ರೀಕರವಾಗಲಿರುವಾಗ ನಶ್ವರವಾದ ಆಭರಣದಿಂದ ನನಗೆ ಆಗುವ ಲಾಭವೇನು? ಮಲ್ಲಿಕಾರ್ಜುನನು ನಿಮ್ಮ ಕಾರ್ಯವನ್ನು ಯಶಸ್ವಿಯಾಗಿ ನಡೆಸುವಂತೆ ಪ್ರಾರ್ಥಿಸುತ್ತೇನೆ" ಎಂದು ಹೇಳಿದ ಆಕೆಯ ಪ್ರಾರ್ಥನೆಯನ್ನು ಕೇಳಿ ನಾನು ಮುಗ್ಧನಾದೆನು. ಇದನ್ನು ಕೇಳಿದಾಗ ಇಪ್ಪತ್ತುನಾಲ್ಕುವರ್ಷಗಳ ಹಿಂದೆ ಭೋಗಾಸಕ್ತನಾಗಿ ನಾನು ಆಕೆಯ ಸಂಗವನ್ನು ಹಾತುವರೆಯುತ್ತಿದ್ದಾಗ ಏಕಾಂತದಲ್ಲಿ ಆಕೆ ಹೇಳಿದ ಮಾತು ನನಗೆ ನೆನಪಾಯಿತು. "ಸಂಸ್ಕೃತ ಓದಿದವರು ಯಾವಾಗಲೂ ಈಶ್ವರಚಿಂತನೆಯಲ್ಲಿರುತ್ತ ಕಾಮಕ್ಕೆ ಬಲಿಯಾಗುವುದಿಲ್ಲವೆಂದು ಕೇಳಿದ್ದೆನು. ಹೂವಿನಿಂದ ನಾರು ಸ್ವರ್ಗವನ್ನು ಸೇರುವಂತೆ ನಾನು ನಿಮ್ಮ ಕೈಹಿಡಿದು ಧನ್ಯಳಾಗಬೇಕೆಂದಿ

ದ್ದೆನು. ಆದರೆ ನಿಮ್ಮ ಈ ಕಾಮಾತುರತೆಯಿಂದ ನನಗೆ ದುಃಖವಾಯಿತು. ಪುರೋಹಿತರು ಶಾಸ್ತ್ರೋಕ್ತವಾಗಿ ಗರ್ಭಾಧಾನವಿಧಿಯನ್ನು ನಡೆಸಿ ವೈದಿಕರಿಗೆ ಫಲತಾಂಬೂಲವನ್ನು ಕೊಡಿಸುವ ಕಾಲವಿಳಂಬವನ್ನೂ ಸಹಿಸದಷ್ಟು ಅಂಧರಾದರೆ ನಿಮ್ಮ ಸಂಸ್ಕೃತಿ ಎಲ್ಲಿ ಹೋಯಿತು? ಶಾಸ್ತ್ರಜ್ಞಾನದಿಂದ ನಿಮಗೆ ದೊರೆತಿದ್ದ ವಿವೇಕವೆಲ್ಲಿ ಹೋಯಿತು? ಜೀವನ ಕೇವಲ ಭೋಗಕ್ಕಲ್ಲ; ಆದರೆ ಭೋಗತ್ಯಾಗದಿಂದ ದೊರಕುವ ಯೋಗಾನಂದಕ್ಕಾಗಿ ಎಂಬುದನ್ನು ಸಂಸ್ಕೃತವಿದ್ಯೆ ನಿಮಗೆ ಕಲಿಸಿಲ್ಲವೇ? ಇದು ನನ್ನ ದೌರ್ಭಾಗ್ಯ. ಈ ಯೌವನ ಸ್ಥಿರವಲ್ಲ. ಆದರೆ ಶಿವನ ಅನುಭವದಿಂದ ಬರುವ ಆತ್ಮಸೌಂದರ್ಯ ಸ್ಥಿರವಾದುದು. ಇದನ್ನು ನಿಮ್ಮಿಂದ ನಾನು ಪಡೆಯಬೇಕೆಂದಿದ್ದೆನು. ಇಂದು ನನಗೆ ನಿರಾಶೆಯಾಯಿತು. ಆದರೂ ಚಿಂತೆಯಿಲ್ಲ. ವಂಶಾಭಿವೃದ್ಧಿಗಾಗಿ ವಿವಾಹದಲ್ಲಿ ವಿಶೇಷವಾದ ಹೊರೆಯನ್ನು ಹೊತ್ತಿದ್ದರೂ ಓರ್ವ ಸತ್ಪುತ್ರನು ಹುಟ್ಟುವವರೆಗೆ ಮಿತಭೋಗವನ್ನು ಅನುಭವಿಸುತ್ತ ಮುಂದೆ ಯೋಗದ ಕಡೆಗೆ ನಾವಿಬ್ಬರೂ ಪ್ರಯತ್ನಿಸೋಣ" ಎಂದು ಆಕೆ ನನ್ನಿಂದ ಭಾಷೆಯನ್ನು ತೆಗೆದುಕೊಂಡಿದ್ದಳು ಆದನ್ನು ಸ್ಥಿರಗೊಳಿಸುವಂತೆ ಆಕೆ ತ್ಯಾಗಮೂರ್ತಿಯಾಗಿ ಶ್ರೀಕರಭಾಷ್ಯದಂತಹ ದಿವ್ಯಾಭರಣವನ್ನು ನಿತ್ಯಸೌಂದರ್ಯದ ಕುರುಹಾಗಿ ಬಯಸಿ ಭೋಗದ ಕಿಲುಬನ್ನು ನನಗೆ ತೊಲಗಿಸಿ ಚಿದಾಕಾಶದಲ್ಲಿ ರಮಿಸುವಂತಹ ಉದಾತ್ತವರ್ತನೆ ಮತ್ತು ನಿರಭಿಮಾನದ ಸಹಜದೃಷ್ಟಿಯನ್ನು ದೊರಕಿಸಲು ಸಹಕಾರಿಯಾದದ್ದಕ್ಕಾಗಿ ನನಗೆ ತುಂಬ ಸಂತೋಷವಾಗಿದೆ. ಈಶ್ವರನು ಆಕೆಗೆ ಸೌಮಾಂಗಲ್ಯಸೌಮನಸ್ಸುಗಳನ್ನು ಸ್ಥಿರವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ. "ಇದರಂತೆಯೇ ನನ್ನ ತಾಯಂದಿರಲ್ಲಿ ಧರ್ಮದ ಜಾಗೃತಿ ಉಂಟಾಗಲಿ; ಧರ್ಮದ ಆಶ್ರಯದಲ್ಲಿ ಅವರು ನಿತ್ಯಸುಮಂಗಲಿಯರಾಗಲಿ. ಧರ್ಮಗ್ರಂಥಗಳನ್ನು ಬೆಳಕಿಗೆ ತರಲು ಅವರು ಮುಂದೆ ಬರಲಿ" ಎಂದು ನಿರಭಿಮಾನದಿಂದ ಪ್ರಾರ್ಥಿಸುತ್ತೇನೆ. ಕೊನೆಯದಾಗಿ ನಿರ್ಮಲಹೃದಯರಾದ ನನ್ನ ತಮ್ಮಂದಿರೆಲ್ಲರೂ ಈ ಮಹಾಕಾರ್ಯವನ್ನು ಯಶಸ್ವಿಯಾಗಿ ನಡೆಸಲಿಕ್ಕೆ ಎಲ್ಲಾ ಬಗೆಯ ಸೌಕರ್ಯಗಳನ್ನು ದೊರಕಿಸಿದ್ದಾರೆ. ಅವರೆಲ್ಲರಿಗೂ ಈಶ್ವರನು ಸದ್ಬುದ್ಧಿ ಸದ್ಭಾವನೆಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ. ಅವರಲ್ಲಿ ವಿಶೇಷವಾಗಿ ಧರ್ಮಪ್ರೇಮಿಯೂ, ಕರ್ತವ್ಯಪಾರಾಯಣನೂ ಆದ ಚಿ|| ಟಿ.ಜಿ. ಚಂದ್ರಶೇಖರಾರಾಧ್ಯನು ನನ್ನ ಬೆನ್ನಹಿಂದೆ ಬಂದದ್ದಕ್ಕೆ ಸಾರ್ಥಕವಾಗುವಂತೆ ಈ ಮಹಾಕಾರ್ಯವನ್ನು ಗುರುಜಂಗಮರ ಆರಾಧನೆಯೆಂದು ಭಾವಿಸಿ ಇದಕ್ಕೆ ತನುಮನಧನಗಳನ್ನು ಸಂತೋಷದಿಂದ ಸಮರ್ಪಿಸಿ ಶಿವನು ಮೆಚ್ಚುವಂತೆ ನಡೆದುಕೊಂಡಿದ್ದಾನೆ. ಇವನ ಸಾತ್ತ್ವಿಕವರ್ತನೆ, ಕರ್ತವ್ಯನಿಷ್ಠೆ, ಧರ್ಮದಲ್ಲಿ ಜೀವಂತವಿಶ್ವಾಸ, ಗುರುವಿನಲ್ಲಿ ಉತ್ಕಟವಾದ ಪ್ರೇಮ, ಮಾತಾಪಿತೃಭಕ್ತಿ, ಮೊದಲಾದ ಸದ್ಗುಣಗಳಿಂದ ಪೂಜ್ಯಪಿತೃವರ್ಯರು ಪೂರ್ಣಸಂತೋಷಗೊಂಡಿರುವರೆಂದು ನಂಬಿದ್ದೇನೆ. ಅವರು ಅವನಿಗೆ ಆಯುರಾರೋಗ್ಯ ಭಾಗ್ಯಗಳನ್ನು ಅನುಗ್ರಹಿಸಲೆಂದೂ, ಅವನೊಡನೆ ಸದಾ ಧರ್ಮದಲ್ಲಿ ಆಸಕ್ತಳಾದ

ಅವನ ಧರ್ಮಪತ್ನಿ ಗುರುಜಂಗಮಪ್ರೇಮಿ ಚಿ|| ಸೌ|| ಅನ್ನಪೂರ್ಣೆಗೆ ಪರಮೇಶ್ವರನು ಸೌಮಂಗಲ್ಯವನ್ನು ಅನುಗ್ರಹಿಸಲೆಂದೂ ಅವನಲ್ಲಿ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ರಂಭಾಪುರೀಮಹಾಸನ್ನಿಧಿಯವರ ಸಲಹೆಯಂತೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಆಗ ಉಪಕುಲಪತಿಗಳಾಗಿದ್ದ ಶ್ರೀ ಎಸ್. ಎ. ನಿಕಮ್, ಎಂ.ಎ., ಅವರು ಶ್ರೀಕರಭಾಷ್ಯವನ್ನು ಕನ್ನಡಿಸುವ ಈ ಶಿವಯಜ್ಞದಲ್ಲಿ ಪ್ರೇರಕರಾದುದಕ್ಕಾಗಿ ಅವರಿಗೆ ಸಂತೋಷದಿಂದ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಇದರಂತೆಯೇ ಮೈಸೂರು ವಿಶ್ವವಿದ್ಯಾನಿಲಯದ ಸಂಶೋಧನವಿಭಾಗದಲ್ಲಿ ಸಂಸ್ಕೃತಪ್ರಾಧ್ಯಾಪಕರಾಗಿರುವ ಶ್ರೀ ಎಸ್. ರಾಮಚಂದ್ರರಾವ್, ಎಂ.ಎ. ಅವರು ನನಗೆ ಸಂಶೋಧನಕಾರ್ಯಕ್ಕೆ ಎಲ್ಲಾ ಬಗೆಯ ಸಹಾಯಸೌಕರ್ಯಗಳನ್ನು ಸಹೃದಯತೆಯಿಂದ ದೊರಕಿಸುಕೊಡುತ್ತಿರುವುದಕ್ಕಾಗಿ ಅವರಿಗೆ ನನ್ನ ಪ್ರೇಮಪೂರ್ವಕವಾದ ಕೃತಜ್ಞತೆಯನ್ನು ಸಂತೋಷದಿಂದ ಸಲ್ಲಿಸುತ್ತೇನೆ. ಮೈಸೂರು ವಿಶ್ವವಿದ್ಯಾನಿಲಯವು ಈಗಾಗಲೇ ಪ್ರಸಾರಾಂಗದಲ್ಲಿ ನನ್ನ ನಾಲ್ಕು ಚಿಕ್ಕಪುಸ್ತಕಗಳನ್ನು ಪ್ರಕಟಿಸಿ ಕರ್ಣಾಟಕದಲ್ಲಿ ಆತ್ಮಶೋಧನೆಯ ಹಸಿವನ್ನು ಹುಟ್ಟಿಸಿ ಸಾಕಷ್ಟು ಆಹಾರವನ್ನು ಉತ್ಸಾಹದಿಂದ ಒದಗಿಸಿಕೊಟ್ಟು ಮುಂದೆ ಇನ್ನೂ ಪುಷ್ಕಳವಾದ ಆಹಾರವನ್ನು ನೀಡುವ ಸುಯೋಗವನ್ನು ನನಗೆ ಕಲ್ಪಿಸಿಕೊಡುತ್ತಿರುವುದಕ್ಕಾಗಿ ಸಹೃದಯರಾದ ಪ್ರಸಾರಾಂಗಾಧಿಕಾರಿ ಶ್ರೀ ಪಿ. ಮಲ್ಲಿಕಾರ್ಜುನಪ್ಪ ಎಂ.ಎಸ್‌ಸಿ., ಅವರಿಗೆ ನಾನು ತುಂಬ ಕೃತಜ್ಞನಾಗಿರುವೆನು.

ಶ್ರೀಕರಭಾಷ್ಯವನ್ನು ಅನುವಾದಮಾಡುವಾಗ ಮೂಲದಲ್ಲಿನ ಅಶುದ್ಧಭಾಗಗಳ ಶೋಧನೆಯ ಸಂದರ್ಭದಲ್ಲಿ ಮೈಸೂರು ಸಂಸ್ಕೃತಮಹಾಪಾಠಶಾಲೆಯ ಅನೇಕ ಪಂಡಿತರು ನನಗೆ ನೆರವಾಗಿದ್ದಾರೆ. ಅವರೆಲ್ಲರಿಗೂ ನಾನು ಚಿರಋಣಿಯಾಗಿದ್ದೇನೆ. ಅದರಲ್ಲೂ, ನನ್ನ ಅಧ್ಯಾತ್ಮಸೋದರರೂ, ಆಪ್ತಹಿತೈಷಿಗಳೂ ಆದ ಪಂಡಿತ ಬ್ರ|| ಶ್ರೀ ಕೆ. ಎಸ್. ವರದಾಚಾರ್ಯರು ನನ್ನಬಗ್ಗೆ ಅವ್ಯಾಜಪ್ರೇಮವನ್ನಿಟ್ಟು ಶ್ರೀಕರಭಾಷ್ಯದ ಶೋಧನೆ ಮತ್ತು ಅನುವಾದಗಳ ಕಾಲದಲ್ಲಿ ವಿಶೇಷವಾದ ಬೆಳಕನ್ನು ದೊರಕಿಸಿ ಕೊಟ್ಟುದಕ್ಕಾಗಿ ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಕೊನೆಯದಾಗಿ ಶ್ರೀ ಪಂಚಾಚಾರ್ಯಪ್ರೆಸ್ಸಿನ ಯಜಮಾನರಾದ ಬ್ರ|| ಶ್ರೀ|| ಮಹದೇವಯ್ಯನವರು ಈ ಗ್ರಂಥದ ಮುದ್ರಣವನ್ನು ಉತ್ಸಾಹದಿಂದ ಬೇಗನೆ ಮಾಡಿಸಿಕೊಟ್ಟು ಈ ಕಾರ್ಯನಿರ್ವಾಹಕ್ಕಾಗಿ ನೂರೆಪ್ಪತ್ತೈದುರೂಪಾಯಿಗಳನ್ನು ಆಶೀರ್ವದಿಸಿದ್ದಕ್ಕಾಗಿ ಅವರಿಗೆ ನಾನು ಚಿರಋಣಿಯಾಗಿದ್ದೇನೆ. ಮುಖ್ಯವಾಗಿ ಅಲ್ಲಿಯ ಕೆಲಸಗಾರರು ಈ ಕಾರ್ಯವನ್ನು ಶಿವಪೂಜೆ ಎಂದು ಭಾವಿಸಿ ಭಕ್ತಿಗೌರವಗಳಿಂದ ನಡೆಸಿಕೊಟ್ಟಿದ್ದಾರೆ. ಅವರ ಜೀವನವನ್ನು ಶ್ರೀ ಮಲ್ಲಿಕಾರ್ಜುನನು ಶ್ರೀಕರಗೊಳಿಸಲೆಂದು ಪ್ರಾರ್ಥಿಸುತ್ತೇನೆ. ಶ್ರೀಕರಭಾಷ್ಯದ ನಿತ್ಯಸಂಪರ್ಕದಿಂದ ಸಾಧಕರೆಲ್ಲರ ಜೀವನವು ಶ್ರೀಕರವಾಗಲೆಂದು ಬಯಸುವ,

ಮಾನಸಗಂಗೋತ್ರಿ,
ಮೈಸೂರು, ೨೬–೧೨–೬೨,

**ಟಿ. ಜಿ. ಸಿದ್ಧಪ್ಪಾರಾಧ್ಯ**
ಗುರುಚರಣಾರಾಧಕ.

# ವಿಷಯಾನುಕ್ರಮಣಿಕೆ

# ಶ್ರೀಕರಭಾಷ್ಯ

## ಸಮನ್ವಯೋ ನಾಮ ಪ್ರಥಮಾಧ್ಯಾಯಃ
## ಪ್ರಥಮಃ ಪಾದಃ

**ಓಂ ನಮೋ ಲಿಂಗರೂಪಾಯ ಜಗಜ್ಜನ್ಮಾದಿಹೇತವೇ ।**
**ನಿಗಮಾಗಮವೇದ್ಯಾಯ ಭಕ್ತಸಿದ್ಧಿಪ್ರದಾಯಿನೇ ॥ ೧ ॥**

ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ ಮತ್ತು ಅನುಗ್ರಹಗಳಿಗೆ ಕಾರಣನೂ, ವೇದಾಗಮಗಳ ಮೂಲಕವೇ ತಿಳಿಯಲರ್ಹನೂ, ಭಕ್ತರ ಸಕಲೇಷ್ಟಾರ್ಥಗಳನ್ನು ನೆರವೇರಿಸಲಿಕ್ಕೆ ಶಕ್ತನೂ, ವಿಶ್ವಕ್ಕಾಧಾರನಾದ್ದರಿಂದಲೇ ಲಿಂಗರೂಪನೂ ಪ್ರಣವಾತ್ಮಕನೂ ಆದ ಮಹಾದೇವನಿಗೆ ನಮಸ್ಕರಿಸುತ್ತೇನೆ.

**ಯತ್ಸಂದರ್ಶನಮಾತ್ರಜರ್ಝರಿತಭಕ್ತಾನೀಕಪುರ್ಯಷ್ಟಕಂ**
**ದ್ವೈತಾದ್ವೈತವಿಶಿಷ್ಟಬೌದ್ಧಮತಮತ್ತೇಭೇಂದ್ರಕಂಠೀರವಃ ।**
**ಶೈವಾದ್ವೈತವಿವೇಕಸಾರವಿಲಸತ್ಸಿದ್ಧಾಂತಪಕ್ಷಪ್ರದಂ**
**ಶಂಭೋಸ್ತಚ್ಚರಣಂ ಭವಾಬ್ಧಿತರಣಂ ಮನ್ಯೇ ಜಗತ್ಪೋಷಣಂ ॥ ೨ ॥**

ಶಕ್ತಿವಿಶಿಷ್ಟಪರಶಿವನು ತನ್ನ ವಿನೋದಕ್ಕಾಗಿ ಮೂವತ್ತಾರು ತತ್ತ್ವಗಳಾಗಿ ಪರಿಣಮಿಸಿರುವನು. ಮಾನವದೇಹವೂ ಮತ್ತು ಪ್ರಪಂಚವೂ ಇವುಗಳಿಂದಲೇ ಕೂಡಿರುತ್ತವೆ. ಈ ತತ್ತ್ವಗಳಲ್ಲಿ ಶಿವ-ಶಕ್ತಿ-ಸದಾಶಿವ (ಕಾಲರುದ್ರ), ಈಶ್ವರ (ನಾರಾಯಣ), ಶುದ್ಧವಿದ್ಯೆ (ಬ್ರಹ್ಮ), ಮಾಯೆ ಈ ಆರನ್ನು ಬಿಟ್ಟು ಕಲಾತತ್ತ್ವದಿಂದ ಪೃಥಿವಿಯವರೆಗೆ ಮೂವತ್ತು ತತ್ತ್ವಗಳಿಂದ ಕೂಡಿರುವ ಸೂಕ್ಷ್ಮದೇಹ ಒಂದು ಪ್ರತಿಯೊಬ್ಬ ಜೀವನಿಗೂ ದೇಹಕ್ಕೆ ಬಂದಮೇಲೆ ಮುಕ್ತಿ ಹೊಂದುವವರೆಗೂ ಇರುತ್ತದೆ. ಇದನ್ನು ಪುರ್ಯಷ್ಟಕವೆಂದು ಪಾಶುಪತಮತದಲ್ಲಿ ಹೇಳುತ್ತಾರೆ. ಯಾವನು ಶಿವದೀಕ್ಷೆಯಿಂದ ಮೂರು ದೇಹಗಳಲ್ಲೂ ಲಿಂಗಸಂಬಂಧವನ್ನು ಪಡೆಯುವನೋ ಅವನು ಭಕ್ತನೆನಿಸುವನು. ಇಂತಹ ಭಕ್ತರೆಲ್ಲರಿಗೂ ಇರುವ ಸೂಕ್ಷ್ಮದೇಹವು ಯಾವುದರ ದರ್ಶನಮಾತ್ರದಿಂದಲೇ ನಾಶವಾಗಬಲ್ಲದೋ ಮತ್ತು ದ್ವೈತ-ಅದ್ವೈತ, ವಿಶಿಷ್ಟಾದ್ವೈತ ಮತ್ತು ಬೌದ್ಧಮತಗಳೆಂಬ ಮದಗಜಗಳಿಗೆ ಯಾವುದು ಸಿಂಹಪ್ರಾಯವಾಗಿದೆಯೋ ಮತ್ತು ನಿರ್ವಿಶೇಷಾದ್ವೈತವೆನಿಸದೆ ಸವಿಶೇಷಾದ್ವೈತಭಾವನೆಯಿಂದೊಡಗೂಡಿದ ಶಕ್ತಿವಿಶಿಷ್ಟಾದ್ವೈತಸಿದ್ಧಾಂತದ ಜ್ಞಾನವನ್ನು ಯಾವುದು ದೊರಕಿಸಬಲ್ಲದೋ ಅಂತಹ

ಪರಮೇಶ್ವರನ ದಿವ್ಯಪಾದವು ಜೀವರನ್ನು ಸಂಸಾರಸಾಗರದಿಂದ ದಾಟಿಸಿ ಅವರಿಗೆ ಇಹಪರಸುಖಗಳನ್ನು ಅನುಗ್ರಹಿಸುವುದೆಂದು ನಾನು ಭಾವಿಸುತ್ತೇನೆ.

**ಶಿವ ತ್ವದ್ದಾಸದಾಸೋ ಯಸ್ತದ್ದಾಸೋಽಸ್ಮೀತಿ ಯಾ ಸುಧೀಃ ।**
**ತಾಂ ದತ್ವಾ ಕೃಪಯಾ ಪಾಹಿ ಜನ್ಮಜನ್ಮಾಂತರೇಽಪಿ ಮಾಂ ॥ ೩ ॥**

ಶಿವನೇ ನಿನ್ನದಾಸರ ದಾಸನು ಯಾವನಿರುವನೋ ಅವನಿಗೆ ನಾನು ದಾಸನಾಗಿರುವೆನೆಂಬ ಸದ್ಬುದ್ಧಿಯನ್ನೇ ನನಗೆ ಪ್ರತಿಜನ್ಮದಲ್ಲೂ ದಯೆಯಿಂದ ಅನುಗ್ರಹಿಸು.

**ಶಿವಸ್ಯ ತತ್ತ್ವಂ ಶಿವ ಏವ ವೇತ್ತಿ ನಂದೀ ಚ ವಿಷ್ಣುರ್ನಗಜಾಕುಮಾರಃ ।**
**ಶಿವಪ್ರಸಾದಾಚ್ಛಿವತತ್ತ್ವಮಾಪುಸ್ತೇಭ್ಯೋ ನಮಶ್ಶಂಕರತತ್ತ್ವವಿದ್ಭ್ಯಃ ॥**

ನಿಷ್ಕಲ ಪರಮಶಿವನ ಸ್ವರೂಪವನ್ನು ಸಾಕಾರ ಶಿವನೇ ತಿಳಿದಿದ್ದಾನೆ. ನಂದಿ, ವಿಷ್ಣು, ಷಣ್ಮುಖ ಇವರೂ ಸಹ ಶಿವಪ್ರಸಾದದಿಂದಲೇ ಶಿವನ ಸ್ವರೂಪವನ್ನು ತಿಳಿದಿದ್ದಾರೆ. ಹೀಗೆ ಪರಮಶಿವನ ತತ್ತ್ವವನ್ನು ತಿಳಿದಿರುವ ಮಹಾತ್ಮರೆಲ್ಲರಿಗೂ ನಮಸ್ಕರಿಸುತ್ತೇನೆ.

**ಸದಾಶಿವಂ ಶಕ್ತಿಧರಂ ಸುಕೇಶಂ ಚಂಡೀಶ್ವರಂ ಭೃಂಗಿರಿಟಿಂ ಶಿಲಾದಂ ।**
**ಕುಂಭೋದ್ಭವಂ ಚಿನ್ಮಯವಾಮದೇವಂ ಶ್ರೀರೇವಣಾಸಿದ್ಧಗುರುಂ ಪ್ರಪದ್ಯೇ ॥ ೫ ॥**

ನಿಷ್ಕಲ ಪರಶಿವನ ಸಕಲನಿಷ್ಕಲಸ್ವರೂಪನೆನಿಸಿದ ಸದಾಶಿವನಿಗೂ, ಷಣ್ಮುಖನಿಗೂ, ಸುಕೇಶ, ಚಂಡೀಶ್ವರ, ನಂದಿ ಮೊದಲಾದ ಪ್ರಮಥ ಗಣರಿಗೂ, ಅಗಸ್ತ್ಯ ಮಹರ್ಷಿಗೂ, ಚಿದ್ರೂಪನಾದ ವಾಮದೇವಮಹರ್ಷಿಗೂ ಶ್ರೀ ರೇವಣಸಿದ್ಧಗುರುವಿಗೂ ಶರಣಾಗುತ್ತೇನೆ. (ಇಲ್ಲಿ ಪಂಚಾಚಾರ್ಯರಲ್ಲೊಬ್ಬರನ್ನು ವಂದಿಸಲಾಗಿದೆ)

**ಶ್ರೀಮಚ್ಛಿವಾಚಾರವಿಚಾರದೀಕ್ಷಂ ಸ್ವಶಿಷ್ಯಸತ್ಪ್ರೀಣನಪೂರ್ಣಪಕ್ಷಂ ।**
**ದುರ್ವಾರಕಾಮಾದಿವಿದಾರದಕ್ಷಂ ಭಜಾಮ್ಯಹಂ ರೇವಣಕಲ್ಪವೃಕ್ಷಂ ॥ ೬ ॥**

ಷಡ್ಗುಣೈಶ್ವರ್ಯಸಂಪನ್ನನಾದ ಪರಮಶಿವನನ್ನು ತಿಳಿಸುವ ಷಟ್ಸ್ಥಲ ಮೊದಲಾದ ವೀರಶೈವಸಂಪ್ರದಾಯದಲ್ಲೂ ಮತ್ತು ತತ್ತ್ವವಿಚಾರಗಳಲ್ಲೂ ನುರಿತವನೂ, ಶಿಷ್ಯರಿಗೆ ಸದ್ಬೋಧೆಯಿಂದ ಸಂತೋಷಪಡಿಸಲು ಬದ್ಧಾದರನೂ, ದುರ್ನಿರೋಧಗಳಾದ ಕಾಮಾದಿ ಶತ್ರುಗಳನ್ನು ನಿಗ್ರಹಿಸಲು ಸಮರ್ಥನೂ, ಭಕ್ತರಿಗೆ ಕಲ್ಪವೃಕ್ಷವೂ ಆದ ರೇವಣಸಿದ್ಧಗುರುವನ್ನು ನಾನು ಭಕ್ತಿಯಿಂದ ಭಜಿಸುತ್ತೇನೆ.

**ಶ್ರೀಮತ್ಸರ್ವಕಲಾಸು ಕೋವಿದತನುಃ ಪ್ರಾಲೇಯಶೈಲಾತ್ಮಜಾಜಾನೇಃ**
**ಪೂರ್ಣಕೃಪಾವಿಶೇಷನಿಚಯಪ್ರಚ್ಛನ್ನಧೀರ್ಯೋ ಬಭೌ ।**
**ಶ್ರೀಮದ್ರೇವಣದೇಶಿಕೇಂದ್ರವಿಭವಂ ಲಿಂಗಾವಧಾನೋಜ್ಜ್ವಲಂ ।**
**ಸಿದ್ಧಾರ್ಯಂ ಮರುಳಪ್ರಭುಂ ಬುಧಸುತಂ ತಂ ಮನ್ಮಹೇ ಶ್ರೇಯಸೇ ॥ ೭ ॥**

ಸಮಸ್ತಶಾಸ್ತ್ರಗಳಲ್ಲೂ ಪ್ರವೀಣನಾಗಿ ಪರಮೇಶ್ವರನ ಪೂರ್ಣಾನುಗ್ರಹದಿಂದ ವಿಶೇಷವಾದ ಜ್ಞಾನವನ್ನು ಪಡೆದು ಯೋಗಸಿದ್ಧನೂ ವಿದ್ವನ್ಮಾನ್ಯನೂ ಆಗಿ ಪೂಜ್ಯ ರೇವಣಸಿದ್ಧನಂತೆ ವೈಭವದಿಂದಲೂ ಶಿವಾನುಭವದಿಂದಲೂ ಶೋಭಿಸುತ್ತಿದ್ದ ಮರುಳಸಿದ್ಧಶಿವಾಚಾರ್ಯರನ್ನು ಶ್ರೇಯಸ್ಸಿಗಾಗಿ ನಾವೆಲ್ಲರೂ ಸ್ಮರಿಸೋಣ.

**ವಿಶ್ವಾರಾಧ್ಯಾಖ್ಯಸಿದ್ಧಂ ಪ್ರಥಿತಗುಣಗಣಾಗಣ್ಯಪುಣ್ಯೋದಯಶ್ರೀ**
**ಸಮ್ಯಕ್ಸಂಸೇವ್ಯಮಾನಂ ಬುಧನುತಚರಿತಂ ವೀರಮಾಹೇಶ್ವರಾಗ್ರ್ಯಂ ।**
**ಉದ್ಯದ್ವೇದಾಂತಶಾಸ್ತ್ರೋಭಯಗತವಿಲಸಚ್ಛೈವಸಂಸ್ಥಾಪನಾಢ್ಯಂ**
**ಪೂರ್ವಾಚಾರ್ಯಪ್ರಸಿದ್ಧಂ ಶರಣಮುಹಮಿಮಂ ದೇಶಿಕೇಂದ್ರಂ ಪ್ರಪದ್ಯೇ ॥ ೮ ॥**

ಸುಪ್ರಸಿದ್ಧವಾದ ಶಮ ದಮ ತಿತಿಕ್ಷೆ ಸಮಾಧಾನ ಮೊದಲಾದ ದಿವ್ಯಗುಣಗಳಿಂದ ಶೋಭಿಸುವ ಕೈವಲ್ಯವಿಭೂತಿಗೆ ಪರಮಾಶ್ರಯನೂ, ವಿದ್ವತ್ಪೂಜ್ಯನೂ ವೀರಮಾಹೇಶ್ವರಶ್ರೇಷ್ಠನೂ, ನಿಗಮಾಗಮಗಳಲ್ಲಿ ಪ್ರಸಿದ್ಧವಾದ ವೀರಶೈವತತ್ತ್ವವನ್ನು ಭೂಲೋಕದಲ್ಲಿ ವ್ಯವಸ್ಥಿತಕ್ರಮದಲ್ಲಿ ನೆಲೆಗೊಳಿಸಿ ಪೂರ್ವಾಚಾರ್ಯನೆಂದು ಪ್ರಸಿದ್ಧನೂ ಆದ ವಿಶ್ವಾರಾಧ್ಯಶಿವಾಚಾರ್ಯರಿಗೆ ಶರಣಾಗುತ್ತಾನೆ.

**ಶ್ರೀಮದ್ದಂಡಶಿಖೋಪವೀತವಿಲಸತ್ಕಂಥಾಜಿನಾಲಂಕೃತಃ**
**ಕಾಷಾಯಾಂಬರಕುಂಡಿಕಾಪ್ರಣವಪಾತ್ರಚ್ಛತ್ರಮೌಂಜೀಧರಃ ।**
**ವೇದಾಂತೋಭಯವಾಕ್ಪ್ರಬೋಧಿತಲಸಚ್ಛ್ರೀಭಸ್ಮಘಂಟೀಯುತ**
**ಶ್ಚೈಕೋರಾಮಯತೀಂದ್ರಶೇಖರಶಿವಾಚಾರ್ಯಸ್ಸದಾ ಪಾತು ನಃ ॥ ೯ ॥**

ಯೋಗದಂಡ, ಶಿಖೆ, ಶಿವಲಿಂಗ, ನಾರುಮುಡಿಯ ಗಂಟು ಮತ್ತು ಜಿಂಕೆಯ ಚರ್ಮಗಳಿಂದ ಅಲಂಕೃತನಾಗಿ, ಕಾವಿಬಟ್ಟೆಯನ್ನುಟ್ಟು, ಕೈಯ್ಯಲ್ಲಿ ಕಮಂಡಲು, ಓಂಕಾರಮುದ್ರೆಯ ಪಾತ್ರೆ ಮತ್ತು ಕೊಡೆ ಇವನ್ನು ಹಿಡಿದು, ಸೊಂಟಕ್ಕೆ ದರ್ಭೆಯ ಪಟ್ಟಿಯನ್ನು ಕಟ್ಟಿಕೊಂಡು, ನಿಗಮಾಗಮಪ್ರಸಿದ್ಧವಾದ ಭಸ್ಮದ ಗಂಟಿನೊಡನೆ, ಚಿದಾಕಾಶಸ್ವರೂಪನಾಗಿ ಶೋಭಿಸುತ್ತಿರುವ ಏಕೋರಾಮಶಿವಾಚಾರ್ಯರು ನಮ್ಮನ್ನು ಎಲ್ಲಾ ಕಾಲಗಳಲ್ಲೂ ಸಂರಕ್ಷಿಸಲಿ.

**ವಾತೂಲಾಂತಿಮಕಾಮಿಕಾದಿಶಿವಶಾಸ್ತ್ರಜ್ಞಾನಷಾಣ್ಮಾತುರೋ**
**ಮೀಮಾಂಸಾದ್ವಯತತ್ತ್ವಬೋಧಕವಚಸ್ಸಂರಂಭಣಾಂಭೋಜಜಃ ॥**
**ತರ್ಕವ್ಯಾಕರಣಾದಿಶಾಸ್ತ್ರನಿಚಯೇ ಸಾಕ್ಷಾದ್ಭವಾನೀಪತಿಃ**
**ತಸ್ಮೈ ಶ್ರೀಗುರುಮೂರ್ತಯೇ ಶಿವಮತಾಚಾರ್ಯಾಯ ತುಭ್ಯಂ ನಮಃ ॥ ೧೦ ॥**

ಕಾಮಿಕಾದಿವಾತುಲಾಂತಶಿವಾಗಮಗಳ ಸಾರಸಂಗ್ರಹವನ್ನು ಬೋಧಿಸುವಾಗ ಷಣ್ಮುಖನೆನಿಸಿ, ಪೂರ್ವೋತ್ತರಮೀಮಾಂಸೆಗಳೆರಡರ ತತ್ತ್ವವನ್ನು ಪ್ರತಿಪಾದಿಸ

ವಾಗ ಚತುರ್ಮುಖನೆನಿಸಿ, ತರ್ಕ ವ್ಯಾಕರಣವೇ ಮೊದಲಾದ ಶಾಸ್ತ್ರಗಳನ್ನು ವಿವೇಚಿಸುವಾಗ ಪಂಚಮುಖಸದಾಶಿವನೆನಿಸಿ ಶೋಭಿಸುತ್ತಾ ಶಿವಮತಾಚಾರ್ಯನೆಂದು ಪ್ರಸಿದ್ಧನಾದ ಗುರುಮೂರ್ತಿ ಪಂಡಿತಾರಾಧ್ಯರನ್ನು ನಮಸ್ಕರಿಸುತ್ತೇನೆ.

**ಶ್ರೀವೈಯಾಸಿಕಸೂತ್ರವರ್ಣಪದಮುಖ್ಯಾರ್ಥಂ ಶಿವಾನುಗ್ರಹಾ**
**ದ್ಭಾಷ್ಯಂ ಶ್ರೀಕರನಾಮಕಂ ಭವಹರಂ ದುರ್ವಾದಿಗರ್ವಾಪಹಂ ।**
**ಸರ್ವಾನರ್ಥವಿನಾಶಕಂ ಬುಧನುತಂ ತತ್ತ್ವಾರ್ಥಬೋಧಾಕರಂ**
**ಶ್ರೀಮಚ್ಛ್ರೀಪತಿಪಂಡಿತೇಂದ್ರಯತಿನಾ ವ್ಯಾತನ್ಯತೇ ಸಾಂಪ್ರತಂ ॥೧೧॥**

ವ್ಯಾಸಮಹರ್ಷಿಯು ರಚಿಸಿರುವ ಬ್ರಹ್ಮಸೂತ್ರಗಳ ಅರ್ಥವನ್ನು ಪದಶಃ ಮತ್ತು ಅಕ್ಷರಶಃ ವಿಶದಗೊಳಿಸುತ್ತ, ಭಕ್ತರ ಭವಪಾಶವನ್ನು ಪರಿಹರಿಸುತ್ತ, ದುರ್ವಾದಿಗಳ ಗರ್ವವನ್ನು ಮುರಿಯುತ್ತ, ಸಕಲ ಅನರ್ಥಗಳನ್ನು ನಿವಾರಿಸುತ್ತ, ವಿದ್ವನ್ಮಾನ್ಯವೂ, ತತ್ತ್ವಾರ್ಥವಿಜ್ಞಾನಸಾಗರವೂ ಆಗಿ ಶ್ರೀಕರವೆನಿಸಿರುವ ಭಾಷ್ಯವು ಶ್ರೀಪತಿಪಂಡಿತನೆಂಬ ಚರಮೂರ್ತಿಯಿಂದ ಶಿವಾನುಗ್ರಹದಿಂದ ವಿರಚಿತವಾಗಿದೆ.

**ಅಶೇಷೋಪನಿಷತ್ಸಾರವಿಶೇಷಾದ್ವೈತಮಂಡನಂ ।**
**ಶಿವಜ್ಞಾನಪ್ರದಂ ಸೂತ್ರಭಾಷ್ಯಂ ಜಯತು ಸರ್ವದಾ ॥ ೧೨ ॥**

ಎಲ್ಲಾ ಉಪನಿಷತ್ತುಗಳ ಸಾರಸಂಗ್ರಹವೆನಿಸಿದ ವಿಶೇಷಾದ್ವೈತಸಿದ್ಧಾಂತವನ್ನು ಪ್ರಕಾಶಗೊಳಿಸುತ್ತ, ಶಿವತತ್ತ್ವವನ್ನು ತಿಳಿಯಪಡಿಸುವ ಈ ಸೂತ್ರಭಾಷ್ಯವು ಎಂದೆಂದಿಗೂ ಸರ್ವೋತ್ಕರ್ಷದಿಂದ ಸಾಧಕರನ್ನು ಸಂತೈಸಲಿ.

**ವೇದಾಗಮಾರ್ಥತತ್ತ್ವಜ್ಞಶೈವಾನಾಂ ಮೋಕ್ಷಕಾಂಕ್ಷಿಣಾಂ ।**
**ವೈದಿಕಾನಾಂ ವಿಶುದ್ಧಾನಾಮೇತದ್ಭಾಷ್ಯಂ ಹಿ ಕಲ್ಪಕಂ ॥ ೧೩ ॥**

ನಿಗಮಾಗಮಗಳ ಅರ್ಥವನ್ನು ಸ್ಪಷ್ಟವಾಗಿ ತಿಳಿದು ಶುದ್ಧರೂ, ವೈದಿಕರೂ ಎನಿಸಿ ಮೋಕ್ಷಾರ್ಥಿಗಳಾದ ಶಿವಭಕ್ತರಿಗೆ ಈ ಭಾಷ್ಯವು ಮಾರ್ಗದರ್ಶಕವಾಗುವುದು.

**ಶ್ರುತ್ಯೇಕದೇಶಪ್ರಾಮಾಣ್ಯಂ ದ್ವೈತಾದ್ವೈತಮತಾದಿಷು ।**
**ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತಸಂಜ್ಞಕೇ ॥**
**ವೀರಶೈವೈಕಸಿದ್ಧಾಂತೇ ಸರ್ವಶ್ರುತಿಸಮನ್ವಯಃ ॥ ೧೪ ॥**

ದ್ವೈತ-ಅದ್ವೈತಮತಗಳು ಶ್ರುತಿಯ ಒಂದೊಂದು ಭಾಗವನ್ನು ಮಾತ್ರವೇ ಪ್ರಮಾಣವೆಂದು ಸ್ವೀಕರಿಸಿವೆ. ಆದರೆ ವೀರಶೈವದರ್ಶನದ ಮುಖ್ಯಸಿದ್ಧಾಂತವೆನಿಸಿ, ವಿಶೇಷಾದ್ವೈತವೆಂದು ಪ್ರಸಿದ್ಧವೂ, ಸರ್ವಾಂಗಸುಂದರವೂ ಆದ ದ್ವೈತಾದ್ವೈತಮತದಲ್ಲಿ ಎಲ್ಲಾ ಶ್ರುತಿಗಳೂ ಯಥಾರ್ಥವಾಗಿ ಸಮನ್ವಯವಾಗುತ್ತವೆ.

**ವಿಶಬ್ದೇನೋಚ್ಯತೇ ಶಂಭುರ್ಹಂಸಹಂಸೇತಿ ಮಂತ್ರತಃ ।**
**ಶೇಷಶಬ್ದೇನ ಶಾರೀರೋ ಯಥಾಗ್ನೇರಿತಿ ಮಂತ್ರತಃ ॥**
**ಅದ್ವೈತೇನ ಭವೇದ್ಯೋಗೋ ಯಥಾ ನದ್ಯ ಇತಿ ಶ್ರುತೇಃ ॥ ೧೫ ॥**

ಅಹಂ ಸಃ=ನಾನೇ ಅವನು ಎಂದು ನಿತ್ಯವೂ ಜಪಿಸುವ ಜೀವನು ಹಂಸರೂಪನಾದ ಸದಾಶಿವನೇ ಆಗುವನೆಂದು ತಿಳಿಸುವ ಮಂತ್ರದಿಂದ ವಿಶಬ್ದವು ಪರಮಾತ್ಮನಿಗೆ ಅನ್ವಯಿಸುತ್ತದೆ. ಬೆಂಕಿಯಿಂದ ಕಿಡಿಗಳು ಉದುರುವಂತೆ ಶಿವನಿಂದ ಶಿವಾಂಶರಾದ ಜೀವರು ಹೊರಬಿದ್ದರೆಂದು ತಿಳಿಸುವ ಮಂತ್ರದಿಂದ ಶೇಷಶಬ್ದವು ದೇಹದಲ್ಲಿ ಇಂದ್ರಿಯಗಳೊಡನೆ ಬಾಳುತ್ತಿರುವ ಜೀವನಿಗೆ ಅನ್ವಯಿಸುತ್ತದೆ. ನದಿಗಳು ಹರಿಯುತ್ತ ಸಮುದ್ರವನ್ನು ಸೇರಿ ನಾಮರೂಪಗಳನ್ನು ತೊರೆಯುವಂತೆ ಜೀವರು ಶಿವೋಪಾಸನದಿಂದ ಶಿವನೊಡನೆ ಬೆರೆತು ನಾಮರೂಪಗಳನ್ನು ತೊರೆಯುವರೆಂದು ತಿಳಿಸುವ ಮಂತ್ರದಿಂದ ಶಿವಜೀವರಿಗೆ ಅದ್ವೈತವೆಂದರೆ ಸಾಮರಸ್ಯವು ಸಂಭವಿಸುತ್ತದೆ.

**ಅಗಸ್ತ್ಯಮುನಿಚಂದ್ರೇಣ ಕೃತಾಂ ವೈಯಾಸಿಕೀಂ ಶುಭಾಂ ।**
**ಸೂತ್ರವೃತ್ತಿಂ ಸಮಾಲೋಕ್ಯ ಕೃತಂ ಭಾಷ್ಯಂ ಶಿವಂಕರಂ ॥ ೧೬ ॥**

ಅಗಸ್ತ್ಯಮಹರ್ಷಿಯು ವ್ಯಾಸಸೂತ್ರಗಳಿಗೆ ರಚಿಸಿರುವ ವ್ಯಾಖ್ಯಾನರೂಪವಾದ ಸಮನ್ವಯಾತ್ಮಕವಾದ ವೃತ್ತಿಯನ್ನು ಪರಿಶೀಲಿಸಿ ಅದರ ಆಧಾರದಮೇಲೆ ಮಂಗಳಕರವಾದ ಈ ಭಾಷ್ಯವನ್ನು ಬರೆಯಲಾಗಿದೆ.

## ಜಿಜ್ಞಾಸಾಧಿಕರಣಂ ॥ ೧ ॥

**ಅಥೋಪನಿಷದ್ಬ್ರಹ್ಮಮೀಮಾಂಸಾಂ ದರ್ಶಯಿಷ್ಯಾಮಃ ।**

**ವಿಷಯಸಂಶಯಪೂರ್ವಪಕ್ಷಸಿದ್ಧಾಂತಪ್ರಯೋಜನಸಂಗತಿರೂಪಾಧಿಕರಣವಿಶಿಷ್ಟತ್ವೇ ಸತಿ, ಸೂತ್ರಾನುಕೂಲಶ್ರುತ್ಯಾದಿಸಹಲಿಖಿತಪದಪರಿಷ್ಕೃತಸೂತ್ರಪದಾಧಿಷ್ಠಾನತ್ವೇ ಸತಿ, ಉಪಕ್ರಮೋಪಸಂಹಾರಾದಿಷಡ್ವಿಧತಾತ್ಪರ್ಯಲಿಂಗಪ್ರಕಾಶಕತ್ವಂ ಭಾಷ್ಯತ್ವಂ.**

ಉಪನಿಷತ್ಪ್ರತಿಪಾದಿತವಾದ ಬ್ರಹ್ಮದ ಬಗ್ಗೆ ಇಲ್ಲಿ ವಿಚಾರಮಾಡಲಾಗುವುದು. ಹೇಳಬೇಕಾದ ವಿಷಯ, ಅದರ ಬಗ್ಗೆ ಸಂಭವಿಸಬಹುದಾದ ಸಂಶಯ, ಅದರ ಮೇಲಿನ ಆಕ್ಷೇಪ ಮತ್ತು ಸಮಾಧಾನಗಳು, ಆ ವಿಷಯದಿಂದಾಗುವ ಪ್ರಯೋಜನ ಮತ್ತು ಅದಕ್ಕೆ ಹಿಂದಿನ ಮುಂದಿನ ಹೊಂದಿಕೆ ಇವುಗಳನ್ನು ತಿಳಿಸುವ ಅಧಿಕರಣಗಳಿದ್ದು, ಸೂತ್ರದಲ್ಲಿ ಬಂದಿರುವ ಪದಗಳು ಶ್ರುತಿಯೇ ಮೊದಲಾದ ಪ್ರಮಾಣಗಳಿಗನುಗುಣವಾಗಿರುವುವೆಂಬುದನ್ನು ತೋರಿಸುತ್ತ, ತಾತ್ಪರ್ಯನಿರ್ಣಯಕ್ಕಾವಶ್ಯಕಗಳಾದ ಉಪಕ್ರಮೋಪಸಂಹಾರಗಳ ಐಕ್ಯತೆ, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ, ಉಪಪತ್ತಿ ಎಂಬ ಆರು ಬಗೆಯ ಲಿಂಗಗಳಿಂದ ಸೂತ್ರಾರ್ಥವನ್ನು ವಿಶದಗೊಳಿಸುವುದು ಭಾಷ್ಯವೆನಿಸುತ್ತದೆ.

**ಗರ್ಭಾಷ್ಟಮವರ್ಷಪ್ರಯುಕ್ತೋಪನಯನಸಂಸ್ಕಾರಸಿದ್ಧಶ್ರುತ್ಯರ್ಥೋಪದೇಷ್ಟೃದೇಶಿಕಮುಖೋದಿತನಿಯಮನಿಯತನಿಗಮಾರ್ಥಜ್ಞಾನಾವಚ್ಛಿನ್ನಶ್ರೋತ್ರಿಯಸ್ಯೈವ ಸ್ಥೂಲಾರುಂಧತೀನ್ಯಾಯೇನ ಧರ್ಮಜಿ**

ಜ್ಞಾಸಾದರ್ಶನೇ ಸ್ವಭಾವನಿಯಮನಿಯತಪ್ರಯೋಜಕತಯಾ ಯತ್ಪೂರ್ವಭಾವಿತ್ವಂ ವಿಧೀಯತೇ, ಯತ್ಪುರುಷವ್ಯಾಪಾರತಂತ್ರಾಭ್ಯುದಯಫಲಂ, ಯದಸಂದಿಗ್ಧಮಪ್ರಯೋಜನಂ ಘಟವನ್ನ ತತ್ಪ್ರೇಕ್ಷಾವಿಷಯಃ, ಅಪ್ರಯೋಜಕತ್ವಾತ್, ಕರಟದಂತವತ್. ವಿಷಯಸ್ಸೋಪಾಧಿಕೋ ನಿರುಪಾಧಿಕೋ ವಾ? ಪ್ರಸಿದ್ಧೋಽಪ್ರಸಿದ್ಧೋ ವಾ? ಯುಷ್ಮದಸ್ಮತ್ಪ್ರತ್ಯಯವಿಷಯಾರಾಧ್ಯಾರಾಧಕಯೋಶ್ಶಿವಜೀವಯೋರ್ಭೇದೋ ವಾ? ನ ವಾ? ಭೇದೇ "ಯಥಾ ನದ್ಯಃ" ಇತ್ಯಾದಿಶ್ರುತಿಶತವಿರೋಧಾಪತ್ತಿಃ, ಅಭೇದೇ "ದ್ವಾ ಸುಪರ್ಣಾ" ಇತ್ಯಾದಿಶ್ರುತಿವೈಯರ್ಥ್ಯಪ್ರಸಂಗಃ. ಮುಖ್ಯತ್ವೇನ ಪ್ರಾಮಾಣ್ಯಂ ಯಾವಚ್ಛ್ರುತೀನಾಂ ಯತ್ಕಿಂಚಿಚ್ಛ್ರುತೀನಾಂ ವಾ? ಯನ್ನಿಯಮನಿಯತಪೂರ್ವವೃತ್ತಧರ್ಮವಿಶಿಷ್ಟೋಽಧಿಕಾರೀ? ಯದವಚ್ಛಿನ್ನವಿಶೇಷಾರ್ಥಿತ್ವಾದಯೋ ಧರ್ಮಾಃ? ಯದನಂತರಮೇತದಾರಂಭಃ? ಇತ್ಯಾದ್ಯನೇಕಸಂಶಯವಿಶಿಷ್ಟಮುಮುಕ್ಷುಸ್ವಾಂತಚಿಂತಾಶೂಕವಿಧ್ವಂಸನಾರ್ಥಂ ಪರಮಕಾರುಣಿಕೇನ ಸರ್ವಶಾಸ್ತ್ರವಿಜ್ಞಾನಶಿಖಾಮಣಿನಾ ಮಹಾಪಾಶುಪತದೀಕ್ಷಾವಿಶಿಷ್ಟೇನ ಪಾರಾಶರ್ಯೇಣ ಪುನರಾವೃತ್ತಿರಹಿತಚರಮಶಾಶ್ವತಪುರುಷಾರ್ಥಫಲಪ್ರದರ್ಶಕಮಿದಂ ಸೂತ್ರಂ ನಿರೂಪಿತಂ.

ಅಥಾತೋ ಬ್ರಹ್ಮಜಿಜ್ಞಾಸಾ ॥ ೧ ॥

ಅತ್ರ ಜಿಜ್ಞಾಸಾಪದೇನ ಸಂಶಯಪ್ರಯೋಜನೇ ದರ್ಶಯತಿ. ಸಂಶಯಶ್ಚ ಸೂತ್ರಪ್ರತಿಪಾದಿತಂ ಬ್ರಹ್ಮ ಅಸ್ತಿ ವಾ? ನ ವಾ? ಇತಿ.

"ಬ್ರಹ್ಮ ವಾ ಇದಮಗ್ರ ಆಸೀತ್" (ಬೃ. ೧-೪-೧೦) "ಅಸದ್ವಾ ಇದಮಗ್ರ ಆಸೀತ್" (ತೈ. ಆನಂ. ೭) ಇತ್ಯಾದಿಭಿಸ್ಸತ್ತ್ವಾಸತ್ತ್ವಪ್ರತಿಪಾದನಾತ್. ತತ್ರ ಪೂರ್ವಪಕ್ಷಃ. ಬ್ರಹ್ಮ ನಾಸ್ತಿ ಘಟಾದಿವಚ್ಚಾಕ್ಷುಷಾದಿವಿಷಯತ್ವಾಯೋಗಾತ್, ಜೀವಾನಾಂ ಜನ್ಮಾಂತರಜ್ಞಾನಾದರ್ಶನಾತ್, ಪರಲೋಕಗತಪುರುಷಪುನರಾಗತ್ಯನುಭವಾಭಾವಾತ್, "ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ । ತಸ್ಮಾತ್ಸರ್ವಪ್ರಯತ್ನೇನ ಋಣಂ ಕೃತ್ವಾ ಘೃತಂ ಪಿಬೇತ್ ॥" ಇತಿ ಶಾಸ್ತ್ರದರ್ಶನಾಚ್ಚ. ಸುಧಾಹರಿದ್ರಾಚೂರ್ಣವೈಶಿಷ್ಟ್ಯೇನಾರುಣರೂಪೋತ್ಪತ್ತಿವತ್ ಗೋಮಯಾದಿಷು ಕೀಟೋತ್ಪತ್ತಿವಚ್ಚ ಪೃಥಿವ್ಯಾದಿಭೂತವೈಶಿಷ್ಟ್ಯೇನ ಚೇತನಾಚೇತನೋತ್ಪತ್ತಿಃ, ತದ್ವಿಯೋಗೋ ನಾಶಃ, ನ ತಸ್ಮಾಜ್ಜೀವಶ್ಶರೀರಭಿನ್ನಃ.

ಗರ್ಭಧಾರಣದಿಂದ ಎಂಟನೆಯ ವರ್ಷದಲ್ಲಿ ನಡೆಯುವ ಶಿವದೀಕ್ಷಾಸಂಸ್ಕಾರದಿಂದ ಶುದ್ಧನಾಗಿ, ಶ್ರುತಿಯ ಅರ್ಥವನ್ನು ತಿಳಿಸಲು ಸಮರ್ಥನಾದ ಆಚಾರ್ಯನಿಂದ ವ್ಯವಸ್ಥಿತಕ್ರಮದಲ್ಲಿ ವೇದಾರ್ಥವನ್ನು ತಿಳಿದು, ಸದಾಚಾರನಿರತನಾದವನಿಗೆ ಮಾತ್ರವೇ

ಸ್ಥೂಲಾರುಂಧತೀನ್ಯಾಯದಿಂದ ಬ್ರಹ್ಮಜಿಜ್ಞಾಸೆಯು ಸಹಜವೂ, ಸುವ್ಯವಸ್ಥಿತವೂ ಆದ ಸತ್ಪರಿಣಾಮವನ್ನುಂಟುಮಾಡಬಲ್ಲದು. ಆದ್ದರಿಂದ ಈ ಜಿಜ್ಞಾಸೆಯಲ್ಲಿ ಯಾವುದನ್ನು ಮೊದಲು ಆಚರಿಸಬೇಕೆಂದು ಶಾಸ್ತ್ರದಲ್ಲಿ ತಿಳಿಸಲಾಗಿದೆಯೋ, ಯಾವುದು ಪುರುಷನ ಪ್ರಯತ್ನಕ್ಕೆ ಸಿಲುಕಿ ಅವನಿಗೆ ಶ್ರೇಯೋಽಭ್ಯುದಯಗಳನ್ನು ದೊರಕಿಸಬಲ್ಲದೋ ಅಂತಹ ವಿಷಯವೇ ವಿಚಾರಾರ್ಹವಾಗುತ್ತದೆ. ಯಾವುದರ ಬಗ್ಗೆ ಸಂದೇಹವೇ ತೋರುವುದಿಲ್ಲವೋ, ಯಾವುದಕ್ಕೆ ಯಾವ ಪ್ರಯೋಜನವೂ ಇಲ್ಲವೋ, ಯಾವುದು ಘಟಾದಿಪದಾರ್ಥಗಳಂತೆ ದರ್ಶನಯೋಗ್ಯವಾಗುವುದಿಲ್ಲವೋ, ಅಂತಹ ವಿಷಯದ ಜಿಜ್ಞಾಸೆ ಕಾಗೆಗೆ ಎಷ್ಟು ಹಲ್ಲುಗಳಿವೆ ಎಂಬುದನ್ನು ತಿಳಿಯುವವನ ಕುತೂಹಲದಂತೆ ವ್ಯರ್ಥಾಲಾಪವೆನಿಸುವುದು. ಆದರೆ, ವಿಷಯವು ಸೋಪಾಧಿಕವೇ ನಿರುಪಾಧಿಕವೇ? ಪ್ರಸಿದ್ಧವಾದುದೇ ಅಲ್ಲವೇ? ನೀನು ನಾನು ಎಂಬ ವ್ಯವಹಾರಕ್ಕೆ ಯೋಗ್ಯರೆನಿಸಿ ಪೂಜ್ಯಪೂಜಕರಾಗಿರುವ ಶಿವಜೀವರಿಗೆ ಭೇದ ಉಂಟೇ ಇಲ್ಲವೇ? ಅವರಿಗೆ ಭೇದವೇ ಯಾವಾಗಲೂ ಇರುವುದಾದರೆ, 'ಯಥಾ ನದ್ಯಃ' ಇದೇ ಮೊದಲಾದ ನೂರಾರು ಶ್ರುತಿಗಳ ವಿರೋಧವು ಸಂಭವಿಸುತ್ತದೆ. ಅಭೇದವೇ ಯಾವಾಗಲೂ ಇರುವುದಾದರೆ 'ದ್ವಾ ಸುಪರ್ಣಾ' ಇದೇ ಮೊದಲಾದ ಮಂತ್ರಗಳು ವ್ಯರ್ಥವಾಗುತ್ತವೆ. ಈ ಬಗೆಯ ಎಲ್ಲಾ ಶ್ರುತಿಗಳನ್ನೂ ಮುಖ್ಯಪ್ರಮಾಣವೆಂದು ಭಾವಿಸಬೇಕೆ? ಅಥವಾ ಆ ಪ್ರಕರಣಕ್ಕೆ ಬೇಕಾದಷ್ಟನ್ನು ಮಾತ್ರವೇ ಅಲ್ಲಲ್ಲಿಗೆ ಮುಖ್ಯವೆಂದು ಭಾವಿಸಬೇಕೇ? ಅಧಿಕಾರಿಯು ಬ್ರಹ್ಮಮೀಮಾಂಸೆಗೆ ಮೊದಲು ಸಾಮಾನ್ಯವಾಗಿ ಯಾವ ಬಗೆಯ ಕರ್ಮಗಳನ್ನಾಚರಿಸಬೇಕು? ಅವನು ವಿಶೇಷವಾಗಿ ಆಚರಿಸುವ ಧರ್ಮಗಳ್ಯಾವುವು? ಯಾವುದರ ಅನಂತರ ಯಾವುದನ್ನು ಆರಂಭಿಸಬೇಕು? ಹೀಗೆ ಅನೇಕ ಸಂಶಯಗಳು ಸಂಭವಿಸುವುದರಿಂದ, ಈ ಬಗೆಯ ಮಾನಸಿಕಚಿಂತೆ ಎಂಬ ಮುಳ್ಳನ್ನು ಪರಿಹರಿಸಲಿಕ್ಕಾಗಿ, ದಯಾಳುವೂ, ಸರ್ವಶಾಸ್ತ್ರಜ್ಞಾನಸಂಪನ್ನನೂ, ಶಿವದೀಕ್ಷೆಯಿಂದ ಸುಸಂಸ್ಕೃತನೂ ಆದ ಬಾದರಾಯಣನು ಮುಮುಕ್ಷುವಿಗೆ ಮತ್ತೆ ಹುಟ್ಟದಂತೆ ನಿತ್ಯಾನಂದವೆಂಬ ಮೋಕ್ಷರೂಪವಾದ ಪರಮಪುರುಷಾರ್ಥವನ್ನು ದೊರಕಿಸಲಿಕ್ಕಾಗಿ ನಿರೂಪಿಸುತ್ತಾನೆ.

" ಅಥಾತೋ ಬ್ರಹ್ಮಜಿಜ್ಞಾಸಾ " ॥ ೧ ॥

ಇಲ್ಲಿ ಜಿಜ್ಞಾಸಾಪದದಿಂದ ಸೂತ್ರಕಾರನು ಸಂಶಯ ಮತ್ತು ಪ್ರಯೋಜನಗಳನ್ನು ತೋರಿಸಿದ್ದಾನೆ. ಸಂಶಯವು ಜಿಜ್ಞಾಸೆಯ ಆರಂಭವನ್ನು ತಿಳಿಸುತ್ತದೆ. ಸೂತ್ರದಲ್ಲಿ ತಿಳಿಸಿರುವ ಬ್ರಹ್ಮ ಇದೆಯೇ ಇಲ್ಲವೇ ಎಂಬ ಅಂಶ ಸಂಶಯಕ್ಕೆ ವಿಷಯವಾಗಿದೆ. ಶ್ರುತಿ, ಒಮ್ಮೆ 'ಮೊದಲು ಈ ಬ್ರಹ್ಮ ಸದ್ರೂಪವಾಗಿತ್ತು' ಎಂದೂ, ಮತ್ತೊಮ್ಮೆ 'ಬ್ರಹ್ಮ ಮೊದಲು ಅಸದ್ರೂಪವಾಗಿತ್ತು' ಎಂದೂ ಬ್ರಹ್ಮದ ಸತ್ ಮತ್ತು ಅಸತ್ ಎಂಬ ಎರಡು ಬಗೆಯ ರೂಪಗಳನ್ನೂ ತಿಳಿಸುತ್ತದೆ. ಆದ್ದರಿಂದ ಇಲ್ಲಿ ಆಕ್ಷೇಪಕ್ಕೆ ಅವಕಾಶವಿದೆ. ಘಟಾದಿಪದಾರ್ಥಗಳಂತೆ ಬ್ರಹ್ಮ ಇಂದ್ರಿಯಗೋಚರವಾಗದಿರುವುದರಿಂದ ಆ ವಸ್ತುವೇ ಇರಲಾರದು. ಇದೂ ಅಲ್ಲದೆ, ಜೀವರಿಗೆ ಹಿಂದಿನ ಜನ್ಮಗಳ ಅರಿವೂ

ಇರುವುದಿಲ್ಲ. ಪರಲೋಕಕ್ಕೆ ಹೋದ ಪುರುಷರು ಹಿಂತಿರುಗಿ ಬಂದ ತಮ್ಮ ಅನುಭವಗಳನ್ನು ತಿಳಿಸುವಂತೆಯೂ ಇಲ್ಲ. 'ಒಮ್ಮೆ ಸುಟ್ಟು ಭಸ್ಮವಾದ ದೇಹ ಮತ್ತೆ ಹೇಗೆ ಹಿಂತಿರುಗಿ ಬಂದೀತು? ಆದ್ದರಿಂದ ಆದಷ್ಟು ಪ್ರಯತ್ನಮಾಡಿ ಅಥವಾ ಸಾಲವನ್ನಾದರೂ ಮಾಡಿ ತುಪ್ಪವನ್ನು ಕುಡಿಯಬೇಕು' ಎಂಬ ಶಾಸ್ತ್ರವೂ ಸಹ ನಮಗೆ ದೊರೆಯುತ್ತದೆ. ಹೀಗೆ ಹರಿಶಿನವನ್ನು ಸುಣ್ಣದೊಡನೆ ಬೆರಸಿದರೆ ಕೆಂಪುಬಣ್ಣ ಹುಟ್ಟುವಂತೆಯೂ, ಸಗಣಿಯಲ್ಲಿ ಹುಳುಗಳು ಹುಟ್ಟುವಂತೆಯೂ, ಪೃಥಿವ್ಯಾದಿ ಭೂತಗಳ ಮೇಳನದಿಂದ ಚೇತನಪ್ರಾಣಿಗಳೂ ಅಚೇತನಪದಾರ್ಥಗಳೂ ಹುಟ್ಟಿ, ಆ ಭೂತಗಳ ವಿಯೋಗದಿಂದ ಅವು ನಷ್ಟವಾಗುತ್ತವೆಯಾದ್ದರಿಂದ ಈ ಶರೀರವಲ್ಲದೆ ಬೇರೊಬ್ಬ ಜೀವನಿಲ್ಲವೆಂದು ತಿಳಿದುಬರುತ್ತದೆ.

**ಕಿಂಚ—ಮತಾಂತರವೈದಿಕವಾದೇ ಶರೀರಭಿನ್ನಜೀವಸತ್ತ್ವಪಕ್ಷೇಽಪಿ ತಜ್ಜೀವನಿಯಾಮಕೇಶ್ವರೋ ನಾಸ್ತಿ. ತಥಾಹಿ—**

**ವಿಧಿಮಂತ್ರಾರ್ಥವಾದಭೇದೇನ ಶ್ರುತಿಸ್ತ್ರಿವಿಧಾ. ತತ್ರ—"ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತಿ ವಿಧಿವಾದೋ ಮುಖ್ಯಃ; ಮಂತ್ರವಾದೋ ಹ್ಯನುಷ್ಠೇಯಾರ್ಥಪ್ರಕಾಶನವಿಷಯಃ; ಅರ್ಥವಾದಃ ಸ್ತುತಿವಿಷಯಃ. ಜೀವಾನಾಂ ಸ್ವಕರ್ಮಾನುಸಾರೇಣ ಸುಖದುಃಖಾದಿಕಂ ಅಪೂರ್ವಮೇವ ದಾಸ್ಯತಿ. ತಸ್ಮಾನ್ನ ಬ್ರಹಜಿಜ್ಞಾಸಾ ಸಂಭವತಿ.**

ಇದೂ ಅಲ್ಲದೆ ಬೇರೊಂದು ವೈದಿಕವಾದದಲ್ಲಿ ಹೀಗೆ ಹೇಳಿದೆ. ಶರೀರದಿಂದ ಬೇರೆಯಾಗಿ ಜೀವನಿದ್ದರೂ ಆ ಜೀವನಿಗೆ ನಿಯಾಮಕನಾಗಿ ಈಶ್ವರನಂತೂ ಇರಲಾರನು. ಯಾಕೆಂದರೆ ವಿಧಿ, ಮಂತ್ರ, ಅರ್ಥವಾದವೆಂದು ಶ್ರುತಿ ಮೂರು ಬಗೆಯಾಗಿದೆ. 'ಸ್ವರ್ಗಾಪೇಕ್ಷೆಯು ಜ್ಯೋತಿಷ್ಟೋಮಯಾಗವನ್ನಾಚರಿಸಬೇಕು' ಎಂಬುದು ವಿಧಿವಾದ. ಶ್ರುತಿಯಲ್ಲಿ ಇದೇ ಪ್ರಧಾನವಾದುದು. ಮಂತ್ರವಾದವು ಉಪಾಸನೆಯ ವಿಷಯವನ್ನು ಪ್ರಕಾಶಗೊಳಿಸುತ್ತದೆ. ಅರ್ಥವಾದವು ಸ್ತೋತ್ರರೂಪವಾಗಿರುತ್ತದೆ. ಈ ಮೂರರಲ್ಲಿ ಎಲ್ಲಿಯೂ ಈಶ್ವರನ ಸಂಬಂಧವೇ ಬೇಕಾಗಿಲ್ಲ. ಜೀವರಿಗೆ ಅವರವರ ಕರ್ಮಾನುಗುಣವಾಗಿ ಸುಖದುಃಖಗಳನ್ನು ಅಪೂರ್ವವೇ ಕೊಡುವುದರಿಂದ ಈಶ್ವರನೇ ಬೇಕಾಗಿಲ್ಲ. ಹೀಗೆ ಬ್ರಹ್ಮವೇ ಇಲ್ಲವಾದ್ದರಿಂದ ಅದರ ಜಿಜ್ಞಾಸೆಯೂ ಸಂಭವಿಸುವಂತಿಲ್ಲ.

**ಕಿಂಚ—ಉಪನಿಷಚ್ಛಾಸ್ತ್ರಮನಾರಂಭಣೀಯಂ, ಸಂಶಯಪ್ರಯೋಜನಸದ್ಭಾವಾಭಾವಾತ್. ಸಂದಿಗ್ಧಂ ಹಿ ವಿಚಾರವಿಷಯಃ, "ಸಂದಿಗ್ಧೇ ನ್ಯಾಯಃ ಪ್ರವರ್ತತೇ" ಇತಿ ನ್ಯಾಯಾತ್. ಸಂಶಯಸ್ತು ಪರಶಿವಾತ್ಮನಿ? ಶಾರೀರಾತ್ಮನಿ ವಾ? ನಾದ್ಯಃ—"ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ಆ. ೧) "ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥೇ"**

(ಶ್ವೇ. ೩-೨) "ರುದ್ರ ಏಕತ್ವಮಾಹುಃ" "ರುದ್ರೋ ವೈ ಶಾಶ್ವತಂ ವೈ ಪುರಾಣಂ" (ಅಥರ್ವಶಿರಃ. ೫) ಇತ್ಯಾದಿಶ್ರುತಿಶತೇನ ಪರಶಿವಾತ್ಮಸ್ವರೂಪಸ್ಯ ನಿಶ್ಚಿತತ್ವಾತ್ ಅಹಂಪ್ರತ್ಯಯೇನ ಶಾರೀರಾತ್ಮದ್ಯೋತನಾನ್ನ ದ್ವಿತೀಯಃ.

ಇದೂ ಅಲ್ಲದೆ, ಬ್ರಹ್ಮಮೀಮಾಂಸಾಶಾಸ್ತ್ರವೇ ವಿಷಯಪ್ರಯೋಜನಗಳಿಲ್ಲದ್ದರಿಂದ ಆರಂಭಯೋಗ್ಯವಾಗಿಲ್ಲ. ಸಂದೇಹಕ್ಕಾಸ್ಪದವಾದ ವಿಷಯವೇ ವಿಚಾರಯೋಗ್ಯವಾಗುತ್ತದೆ. "ಸಂದೇಹವಿದ್ದಕಡೆಯೇ ನ್ಯಾಯವೂ ಪ್ರವರ್ತಿಸುತ್ತದೆ" ಎಂಬ ನಿಯಮದಂತೆ ಈಶ್ವರನಲ್ಲಿ ಸಂಶಯವಿಲ್ಲದ್ದರಿಂದ ಯಾರಿಗೂ ಅವನ ವಿಚಾರದಲ್ಲಿ ಪ್ರವೃತ್ತಿಯೇ ಹುಟ್ಟಲಾರದು. ಆದರೆ, ಇಲ್ಲಿ ಸಂಶಯವಾದರೋ ಪರಮಾತ್ಮನ ವಿಚಾರದಲ್ಲೋ ಜೀವನ ವಿಚಾರದಲ್ಲೋ ಬರಬೇಕಾಗುವುದು. "ಸತ್ಯವೂ ಜ್ಞಾನವೂ ಅನಂತವೂ ಆದುದು ಬ್ರಹ್ಮ". "ಒಬ್ಬನೇ ರುದ್ರನು ಎರಡನೆಯವನಿಗವಕಾಶವಿಲ್ಲವಂತೆ ವಿಶ್ವವನ್ನು ವ್ಯಾಪಿಸಿರುವನು". "ರುದ್ರನಲ್ಲಿ ಒಂದೇ ಬಗೆಯನ್ನು ಅನುಭವಿಗಳು ಕಾಣುತ್ತಾರೆ" "ರುದ್ರನೇ ಶಾಶ್ವತನೂ ಸನಾತನನೂ ಆಗಿರುವನು" ಹೀಗೆ ಅನೇಕ ಶ್ರುತಿಗಳಲ್ಲಿ ಪರಶಿವನೇ ವಿಶ್ವಾತ್ಮನೆಂದು ನಿಶ್ಚಿತನಾಗಿದ್ದಾನೆ. ಆದ್ದರಿಂದ ಪರಮಾತ್ಮನ ವಿಷಯದಲ್ಲಿ ಸಂಶಯಕ್ಕವಕಾಶವಿಲ್ಲ. ನಾನು ಎಂಬ ಜ್ಞಾನವು ಶರೀರದಲ್ಲಿರುವ ಜೀವಾತ್ಮನನ್ನೇ ತಿಳಿಸುವುದರಿಂದ ಜೀವನ ಬಗ್ಗೆ ಸಂಶಯಕ್ಕೂ ಅವಕಾಶವಿಲ್ಲ.

ಕಿಂಚ—ತದ್ವಿಚಾರಸ್ಯತದ್ವಿಷಯಜ್ಞಾನಂ ಹಿ ಫಲಂ? ಜ್ಞೇಯಪರಿಚ್ಛೇದೋ ಹಿ ಜ್ಞಾನಂ? ತದಾ, ಅನೇನ ಬ್ರಹ್ಮ ಪರಿಚ್ಛೇದ್ಯಂ? ನ ವಾ? ಪರಿಚ್ಛೇದೇ ಹಿ ಅಪರಿಚ್ಛೇದ್ಯತ್ವವಿಧಾಯಕಶ್ರುತಿಶತವಿರೋಧಃ, ಘಟವದನಿತ್ಯತ್ವಪ್ರಸಂಗಶ್ಚ. ಅಪರಿಚ್ಛೇದೇ ಯಥಾರ್ಥಸಾಕ್ಷಾತ್ಕಾರಾಭಾವೇನಾಪ್ರಸಿದ್ಧಿಪ್ರಸಂಗಃ. ನ ಚ ಪ್ರಯೋಜನಂ "ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಂ ಪ್ರಜಾಂ ಜನಯಂತೀಂ ಸರೂಪಾಂ." (ಶ್ವೇ. ೪-೫) "ಜ್ಞಾಜ್ಞೌ ದ್ವಾವಜಾವೀಶಾನೀಶೌ" (ಶ್ವೇ. ೧-೯) ಇತ್ಯಾದಿಭಿಃ ಸ್ವಾಭಾವಿಕ ಶಾರೀರಪ್ರಕೃತ್ಯೋರವಿನಾಶಿತ್ವಾವಗಮೇನ ಬ್ರಹ್ಮಜ್ಞಾನೇನಾಪಿ ಮುಕ್ತೇರಸಂಭವಾತ್.

ಇದೂ ಅಲ್ಲದೆ, ಒಂದು ವಿಚಾರಕ್ಕೆ ಅದರ ವಿಷಯದ ಅರಿವೇ ಫಲವೆನಿಸುವುದು. ಅರಿವೆಂದರೆ ತಿಳಿಯಬೇಕಾದ ವಸ್ತುವಿನ ಸ್ವರೂಪದ ನಿಷ್ಕರ್ಷವೇ ಆಗಿದೆ. ಹೀಗೆ ನಿರ್ಣಯಮಾಡುವಾಗ ಬ್ರಹ್ಮ ಪರಿಚ್ಛೇದ್ಯವೇ ಅಲ್ಲವೇ? ಎಂಬ ಪ್ರಶ್ನೆ ಏಳುತ್ತದೆ. ಬ್ರಹ್ಮ ಪರಿಚ್ಛೇದ್ಯವಾಗುವುದಾದರೆ, ಅದನ್ನು ಅಪರಿಚ್ಛೇದ್ಯವೆಂದು ಹೇಳುವ ಅನೇಕ ಶ್ರುತಿಗಳ ವಿರೋಧವು ಸಂಭವಿಸುತ್ತದೆ. ಇದರಿಂದ ಘಟಾದಿಪದಾರ್ಥಗಳಂತೆ ಬ್ರಹ್ಮವೂ ನಷ್ಟವಾಗುವ ಪ್ರಸಂಗ ಒದಗುತ್ತದೆ. ಬ್ರಹ್ಮ ಯಾವಾಗಲೂ ಅಪರಿಚ್ಛೇದ್ಯವೇ ಇರುವುದೆಂದು ಹೇಳುವುದಾದರೆ ಆಗ ಅದು ಯಾರಿಗೂ ನಿಷ್ಕರ್ಷಿಸಲಿಕ್ಕೇ ಆಗದಿರು

ವುದರಿಂದ ಅದರ ಸಾಕ್ಷಾತ್ಕಾರಕ್ಕೆ ಅವಕಾಶವೇ ಇಲ್ಲವಾದೀತು? ಇದರಮೇಲೆ, ಬ್ರಹ್ಮಸ್ವರೂಪವನ್ನು ವಿಚಾರಮಾಡುವುದರಿಂದ ಯಾರಿಗೂ ಯಾವ ಪ್ರಯೋಜನವೂ ಇಲ್ಲ. 'ಅಜಾಮೇಕಾಂ' 'ಜ್ಞಾಜ್ಞೌ' ಎಂಬ ಶ್ರುತಿಗಳಲ್ಲಿ ಸ್ವಭಾವಸಿದ್ಧರಾದ ಪ್ರಕೃತಿಜೀವಗಳು ನಾಶವಾಗುವವರಲ್ಲವೆಂದು ಹೇಳಿರುವುದರಿಂದ ಬ್ರಹ್ಮಜ್ಞಾನದಿಂದಲೂ ಜೀವರಿಗೆ ಮುಕ್ತಿ ಸಂಭವಿಸುವಂತಿಲ್ಲ.

ನನು—"ಅಯಮಾತ್ಮಾ ಬ್ರಹ್ಮ" (ಬೃ. ೨-೫-೧೯) "ತತ್ತ್ವಮಸಿ" (ಛಾ. ೬-೮-೭) ಇತ್ಯಾದಿಭಿರ್ಜೀವಬ್ರಹ್ಮಣೋರೇಕತ್ವಪ್ರತಿಪಾದನಾತ್, ಅಹಂ ಪ್ರತ್ಯಯೇನ ಭೇದಪ್ರತಿಪಾದನಾಚ್ಚ ಸಂಶಯಃ ಕಿಂ ನ ಸ್ಯಾತ್? ಇತಿ ಚೇನ್ನ ಅಬಾಧಿತಾಹಂಪ್ರತ್ಯಯವಿರೋಧೇನೈಕ್ಯಶ್ರುತೀನಾಮುಪಚರಿತಾರ್ಥತ್ವಾತ್. ನ ಚ ಪರಮಾತ್ಮವಿಷಯೇಽಪ್ಯಹಂಪ್ರತ್ಯಯಸ್ಯ ದುರ್ಬಲತ್ವಂ, ಸ್ವಯಂಪ್ರಕಾಶೇಽಪಿ ಬ್ರಹ್ಮಣ್ಯನಾದ್ಯವಿದ್ಯಾವಶಾದಹಂಪ್ರತ್ಯಯೇನ "ಮನುಷ್ಯೋಽಹಂ" ಇತ್ಯಾದ್ಯಧ್ಯಾಸಾನುಭವದರ್ಶನಾತ್, "ನ ಹಿ ದೃಷ್ಟೇಽನುಪಪನ್ನಂ ನಾಮ" ಇತಿ ನ್ಯಾಯಾತ್ ಅಧ್ಯಾಸಾನುಪಪತ್ತಾವನಿರ್ಮೋಕ್ಷಪ್ರಸಂಗಃ.

ಕಿಂಚ—ತಮಃಪ್ರಕಾಶವದ್ಭೇದಾಭೇದಯೋಃ ಪರಸ್ಪರವಿರುದ್ಧಸ್ವಭಾವತ್ವಾದೇಕಪಕ್ಷಾವಲಂಬನಂ ಯುಕ್ತಂ. ಅತಃ—"ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" (ತೈ. ಆನಂ. ೯) ಇತ್ಯಾದಿನಾ ಬ್ರಹ್ಮಣೋಽವಿಷಯತ್ವದರ್ಶನಾಚ್ಚ ವೇದಾಂತಶಾಸ್ತ್ರಮನಾರಂಭಣೀಯಂ, ಇತಿ ಪ್ರಾಪ್ತೇ ಬ್ರೂಮಃ.

ಸರ್ವೋಪನಿಷತ್ಸಿದ್ಧದ್ವೈತಾದ್ವೈತವಿಧಾಯಕಬ್ರಹ್ಮಮೀಮಾಂಸಾಶಾಸ್ತ್ರಾರಂಭೋ ಯುಕ್ತಃ। ಬ್ರಹ್ಮಸತ್ತ್ವೇ ಪ್ರತ್ಯಕ್ಷಾನುಮಾನಾಗಮಪ್ರಮಾಣದರ್ಶನಾತ್। ತಥಾಹಿ—"ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥೇ" ಇತ್ಯಾದಿಬಹ್ವಾಗಮದರ್ಶನಾದಾಗಮಃ ಪ್ರಮಾಣಂ.

ಸೂರ್ಯಚಂದ್ರರ್ತುಸಮುದ್ರಕಾಲಾದೀನಾಮೀಶ್ವರಾಪೇಕ್ಷಾವಶಾತ್ ಸ್ವಧರ್ಮಪ್ರವೃತ್ತಿದ್ಯೋತನಾತ್, ಲೋಕೇ ಧನಧಾನ್ಯವಿದ್ಯಾದಿಪೂರ್ಣಸಹಾಯಸಂಪನ್ನಾನಾಮಪಿ ಸ್ವಾಭೀಷ್ಟಸರ್ವಕಾರ್ಯಸಿದ್ಧ್ಯದರ್ಶನಾತ್, ತತ್ಸಹಾಯರಹಿತಾನಾಮಪಿ ಕದಾಚಿತ್ಕಾಲೇ ದುರ್ಘಟಕಾರ್ಯಸಿದ್ಧೇರ್ದೃಷ್ಟತ್ವಾಚ್ಚ ಸರ್ವಜ್ಞೇಶ್ವರಸತ್ತ್ವೇ ಜೀವಾನಾಂ ಜನ್ಮಸತ್ತ್ವೇ ಚೇದಮೇವ ಪ್ರತ್ಯಕ್ಷಂ ಪ್ರಮಾಣಂ.

ಲೋಕೇ ರಥಗೋಪುರಪ್ರಾಸಾದಪ್ರಾಕಾರಾದಿಕಾರ್ಯಜಾತ್ಯಚೇತನ

ಕರ್ತ್ರಪೇಕ್ಷಾದರ್ಶನಾತ್, ತದ್ವದ್ವಿಯದಾದಿಜಡಾಜಡಪ್ರಪಂಚಸ್ಯಾಪಿ ಕರ್ತಾ ಪರಮೇಶ್ವರೋಽಸ್ತೀತಿ ವಿವೇಕಿಭಿರನುಮೀಯತೇ.

“ ಸುಧಾನಿಶಾಚೂರ್ಣಸಂಯೋಗೇ ಲೋಹಿತರೂಪಪ್ರಾಪ್ತಿವತ್ ಪೃಥಿವ್ಯಾದಿಭೂತಚತುಷ್ಟಯಸಂಯೋಗೇನೈವ ಚೇತನಾಚೇತನಸೃಷ್ಟಿಃ ಸ್ವತೋ ಭವಿಷ್ಯತಿ ” ಇತಿ ಯದುಕ್ತಂ ತದಯುಕ್ತಂ. ಕೇವಲಪೃಥಿವ್ಯಾದಿಭೂತಸಂಯೋಗೇನ ಪಶುಪಕ್ಷಿಮೃಗಾದ್ಯುತ್ಪತ್ತ್ಯದರ್ಶನಾತ್, ಏಕಶರೀರಾವಚ್ಛೇದೇನ ಪಶುಮನುಷ್ಯಾದಿಧರ್ಮವಿಶಿಷ್ಟಭೂತೋತ್ಪತ್ತಿಶ್ಚ ಕಿಂ ನ ಸ್ಯಾತ್? ಗೋಮಯಾದಿಷು ಗುಪ್ತಜೀವಸ್ಯ ಈಶ್ವರೇಣ ಸ್ಥಾಪಿತತ್ವಾತ್, ಸರ್ವಸಹಾಯಸಂಪನ್ನಸ್ಯ ಮಹಾರಾಜಸ್ಯಾಪಿ ಅನಪೇಕ್ಷಿತಾಧಿವ್ಯಾಧಿಜರಾಮರಣದರಿದ್ರತ್ವಾದಿಪ್ರಾಪ್ತಿದರ್ಶನಾತ್, ಜೀವಾನಾಂ ಜನ್ಮಾಂತರಕೃತಪುಣ್ಯಾಪುಣ್ಯಕರ್ಮಾನುಸಾರೇಣ ಪ್ರಭುವತ್ ಫಲಪ್ರದಾಯಕೇಶ್ವರೋಽಸ್ತೀತಿ ನಿಶ್ಚೀಯತೇ.

‘ ಈ ಆತ್ಮನು ಬ್ರಹ್ಮನಿರುವನು’ ‘ನೀನು ಅದೇ ಆಗಿದ್ದೀಯೆ’ ಈ ಬಗೆಯ ಶ್ರುತಿಗಳಲ್ಲಿ ಜೀವಬ್ರಹ್ಮರನ್ನು ಒಬ್ಬನೆಂದೇ ಸ್ಪಷ್ಟವಾಗಿ ಹೇಳಲಾಗಿದೆ. ನೀನು-ನಾನು ಎಂಬ ಹೇಳಿಕೆಯಿಂದ ಜೀವಬ್ರಹ್ಮರಿಗೆ ಭೇದವೂ ತೋರುತ್ತದೆಯಾದ್ದರಿಂದ ಇಲ್ಲಿ ಸಂದೇಹಕ್ಕೆ ಅವಕಾಶವಿದೆ ಎಂದು ಹೇಳುವುದಾದರೆ ಅದು ಸರಿಯಲ್ಲ. ಯಾಕೆಂದರೆ, ಜೀವಬ್ರಹ್ಮರು ಒಂದಾಗುವುದಾದರೆ ನಾನು ಎಂಬ ವ್ಯವಹಾರವೇ ಬಾಧಿತವಾಗುವುದರಿಂದ ಅವರಿಬ್ಬರಿಗೂ ಐಕ್ಯವನ್ನು ಹೇಳುವ ಶ್ರುತಿಗಳಿಗೆ ಪ್ರಧಾನಾರ್ಥವನ್ನು ಬಿಟ್ಟು ಗೌಣಾರ್ಥವನ್ನು ಹೇಳಬೇಕಾಗುತ್ತದೆ. ಹೀಗೆ ಸಂಶಯಕ್ಕೆ ಅವಕಾಶವಿಲ್ಲದ್ದರಿಂದ ಜಿಜ್ಞಾಸೆಯೇ ಅನಾವಶ್ಯಕವಾಗುತ್ತದೆ. ಪರಮಾತ್ಮನ ವಿಷಯದಲ್ಲೂ ನಾನು ಎಂಬ ಜ್ಞಾನಕ್ಕೂ ಯಾವ ಅಡಚಣೆಯೂ ಸಂಭವಿಸುವಂತಿಲ್ಲ. ಸ್ವಪ್ರಕಾಶವಾದ ಬ್ರಹ್ಮದಲ್ಲಿ ಅನಾದಿಯಾದ ಅವಿದ್ಯೆಯ ಪ್ರಭಾವದಿಂದ ಅಹಂ ಎಂಬ ಜ್ಞಾನಕ್ಕೆ ಅವಕಾಶವಿರುವುದರಿಂದ“ನಾನು ಮನುಷ್ಯನಿದ್ದೇನೆ”ಎಂಬ ಅಧ್ಯಾಸದ ಅನುಭವವೂ ನಮಗೆ ಕಂಡು ಬರುತ್ತದೆ. ‘ಪ್ರತ್ಯಕ್ಷವಾಗಿ ಕಂಡಮೇಲೆ ಆಕ್ಷೇಪಣೆಗವಕಾಶವೇ ಇರುವುದಿಲ್ಲ’ವೆಂಬ ನ್ಯಾಯದಿಂದ ಲೋಕದಲ್ಲಿ ಅಧ್ಯಾಸವು ಎಲ್ಲರಿಗೂ ಅನುಭವಸಿದ್ಧವೇ ಆಗಿದೆ. ಅಧ್ಯಾಸವನ್ನು ಒಪ್ಪದೇ ಇದ್ದರೆ, ಯಾರಿಗೂ ಮೋಕ್ಷವೇ ಸಂಭವಿಸದಿರುವ ಪ್ರಸಂಗ ಒದಗುತ್ತದೆ. ಆದ್ದರಿಂದ ಅಧ್ಯಾಸವು ಸಿದ್ಧಾಂತವಾಗುವುದೇ ಹೊರತು ಜೀವಬ್ರಹ್ಮರ ಭೇದಾಭೇದವು ಸಿದ್ಧಾಂತವಾಗುವುದಿಲ್ಲ. ಇದೂ ಅಲ್ಲದೆ, ಕತ್ತಲು ಮತ್ತು ಬೆಳಕುಗಳಂತೆ ಭೇದ ಅಭೇದಗಳೆರಡೂ ಪರಸ್ಪರವಿರುದ್ಧವಾದುದರಿಂದ, ಭೇದವೋ ಅಭೇದವೋ ಯಾವುದಾದರೊಂದು ಪಕ್ಷವನ್ನವಲಂಬಿಸುವುದು ಯುಕ್ತವೇ ಹೊರತು ಎರಡನ್ನೂ ಹೇಳುವುದು ಯುಕ್ತವಲ್ಲ. ‘ಯತೋ ವಾಚೋ ನಿವರ್ತಂತೇ’ ಈ ಬಗೆಯ ಶ್ರುತಿಗಳಲ್ಲಿ

ಬ್ರಹ್ಮ ಶಬ್ದಗೋಚರವಾಗುವುದಿಲ್ಲವೆಂದು ಹೇಳಿರುವುದರಿಂದ ವೇದಾಂತಶಾಸ್ತ್ರವನ್ನು ಆರಂಭಿಸುವುದು ಯುಕ್ತವಲ್ಲವೆಂದು ಆಕ್ಷೇಪ ಬರುತ್ತದೆ. ಇದಕ್ಕೆ ಹೀಗೆ ಸಮಾಧಾನ ವನ್ನು ಹೇಳಲಾಗುವುದು. ಎಲ್ಲಾ ಉಪನಿಷತ್ತುಗಳಲ್ಲೂ ಪ್ರಸಿದ್ಧವಾಗಿರುವ ಭೇದಾ ಭೇದವಾದವನ್ನು ಪ್ರತಿಪಾದಿಸುವ ವೇದಾಂತಶಾಸ್ತ್ರದ ಆರಂಭವು ಯುಕ್ತವೇ ಆಗಿದೆ. ಬ್ರಹ್ಮವಿರುವುದರಲ್ಲಿ ಪ್ರತ್ಯಕ್ಷ, ಅನುಮಾನ, ಆಗಮಗಳು ಪ್ರಮಾಣವೆನಿಸಿವೆ ಎಂದು ಶ್ರುತಿ ತಿಳಿಸಿದೆ. "ಒಬ್ಬನೇ ರುದ್ರನು ಎರಡನೆಯವನಿಲ್ಲದೆ ವಿಶ್ವವನ್ನು ವ್ಯಾಪಿಸಿರು ವನು." ಈ ಬಗೆಯ ಅನೇಕ ಶ್ರುತಿವಾಕ್ಯಗಳಿರುವುದರಿಂದ ಆಗಮವು ಪ್ರಮಾಣ ವೆನಿಸಿದೆ. ಸೂರ್ಯ, ಚಂದ್ರ, ಋತು, ಕಾಲ, ಸಮುದ್ರ ಇವೆಲ್ಲವೂ ಈಶ್ವರನನ್ನೇ ಅವಲಂಬಿಸಿಕೊಂಡಿರುವುದರಿಂದಲೂ, ಅವನಿಂದಲೇ ಇವೆಲ್ಲಕ್ಕೂ ಆಯಾ ಕರ್ತವ್ಯ ಗಳಲ್ಲಿ ಪ್ರವೃತ್ತಿಯುಂಟಾಗುವುದರಿಂದಲೂ ಈಶ್ವರನನ್ನು ಒಪ್ಪಲೇಬೇಕೆಂಬುದು ಲೋಕದಲ್ಲಿ ಪ್ರತ್ಯಕ್ಷವಾದ ನಿದರ್ಶನವಾಗಿದೆ. ಧನ-ಧಾನ್ಯ-ವಿದ್ಯೆ ಮೊದಲಾದ ಎಲ್ಲಾ ಬಗೆಯ ಅನುಕೂಲಗಳುಳ್ಳವರಿಗೂ ಲೋಕದಲ್ಲಿ ಕೆಲವುವೇಳೆ ಇಷ್ಟಾರ್ಥಸಿದ್ಧಿ ಯಾಗುವುದಿಲ್ಲ. ಈ ಬಗೆಯ ಸೌಕರ್ಯವಿಲ್ಲದವರಿಗೂ ಕೆಲವುವೇಳೆ ಅಸಾಧ್ಯವಾದ ಕಾರ್ಯವೂ ಲಲಿತವಾಗಿ ನೆರವೇರುವುದು. ಇದನ್ನು ನಾವು ಲೋಕದಲ್ಲಿ ಕಂಡಿ ದ್ದೇವೆ. ಆದ್ದರಿಂದ ಸರ್ವಜ್ಞನೂ, ಸರ್ವಕರ್ತನೂ ಆದ ಈಶ್ವರನಿರುವುದರಲ್ಲೂ, ಜೀವರಿಗೆ ಜನ್ಮಾಂತರಗಳು ಉಂಟೆಂಬುದರಲ್ಲೂ ಇದೇ ಪ್ರತ್ಯಕ್ಷಪ್ರಮಾಣವಾಗಿದೆ. ಲೋಕದಲ್ಲಿ ರಥ, ಗೋಪುರ, ಪ್ರಾಸಾದ, ಪ್ರಾಕಾರ ಇವೇ ಮೊದಲಾದ ಕಾರ್ಯಗಳು ಚೇತನಕರ್ತನೊಬ್ಬನನ್ನು ಅಪೇಕ್ಷಿಸುತ್ತವೆ. ಅದರಂತೆ ಆಕಾಶವೇ ಮೊದಲಾದ ಜಡವಸ್ತುಗಳಿಗೂ, ಚೇತನರಿಗೂ ಕರ್ತನೆನಿಸಿ ಪರಮೇಶ್ವರನೊಬ್ಬನಿರುವನೆಂದು ವಿವೇಕಿಗಳು ಊಹಿಸಬಹುದಾಗಿದೆ. ಇದು ಅನುಮಾನಪ್ರಮಾಣವೆನಿಸುತ್ತದೆ. ಆದ್ದರಿಂದ ಸುಣ್ಣ ಹರಿಶಿನಗಳ ಸಂಯೋಗದಿಂದ ಕೆಂಪುಬಣ್ಣ ಹುಟ್ಟುವಂತೆ ಭೂಮಿ-ನೀರು-ಬೆಂಕಿ-ಗಾಳಿಗಳೆಂಬ ನಾಲ್ಕು ಭೂತಗಳ ಸಂಯೋಗದಿಂದಲೇ ಚೇತನ ಮತ್ತು ಅಚೇತನಗಳ ಸೃಷ್ಟಿ ಸಹಜವಾಗಿ ಸಂಭವಿಸುವುದೆಂದು ಹಿಂದೆ ಹೇಳಿದ ವಾದವು ಯುಕ್ತವೆನಿಸುವುದಿಲ್ಲ. ಕೇವಲ ಭೂತಗಳ ಸಂಯೋಗದಿಂದಲೇ ಪಶು-ಪಕ್ಷಿ-ಮೃಗ ಗಳು ಹುಟ್ಟುವುದನ್ನು ಎಲ್ಲಿಯೂ ಯಾರೂ ಕಂಡಿಲ್ಲ. ಭೂತಗಳ ಸಂಯೋಗ ದಿಂದಲೇ ಚೈತನ್ಯ ಹುಟ್ಟುವುದಾದರೆ, ಎಲ್ಲಾ ಪ್ರಾಣಿಗಳಲ್ಲೂ ಚೈತನ್ಯವು ಒಂದೇರೀತಿ ಇರಬೇಕಾಗುವುದು. ಹಾಗೆ ಇರುವುದಾಗಿ ಲೋಕದಲ್ಲಿ ಎಲ್ಲಿಯೂ ಕಂಡುಬಂದಿಲ್ಲ. ಸಗಣಿಯಲ್ಲಿ ಗುಪ್ತವಾಗಿ ಜೀವವನ್ನು ಈಶ್ವರನೇ ಇರಿಸಿದ್ದಾನೆ. ಆದ್ದರಿಂದ ಅಚೇತನ ದಿಂದ ಚೇತನವು ತಾನಾಗಿಯೇ ಹುಟ್ಟುವುದೆಂಬ ವಾದವು ಸರಿಯಲ್ಲ. ಎಲ್ಲಾ ಬಗೆಯ ಸಹಾಯಸೌಕರ್ಯಗಳುಳ್ಳ ಮಹಾರಾಜನಿಗಾದರೂ ಅವನ ಅಪೇಕ್ಷೆ ಇಲ್ಲ ದೆಯೆ ವ್ಯಥೆ, ರೋಗ, ಮುಪ್ಪು, ದಾರಿದ್ರ್ಯ, ಮರಣಗಳು ಸಂಭವಿಸುವುದನ್ನು ನಾವು ಕಂಡಿದ್ದೇವೆ. ಆದ್ದರಿಂದ ಆಳುಗಳಿಗೆ ಅವರವರ ಕೆಲಸಕ್ಕೆ ತಕ್ಕಷ್ಟು ಕೂಲಿಯನ್ನು

ಕೊಡುವ ಯಜಮಾನನಂತೆ ಜೀವರಿಗೆ ಜನ್ಮಾಂತರದಲ್ಲಿ ಮಾಡಿದ ಪುಣ್ಯಪಾಪ ಕರ್ಮಗಳಿಗನುಗುಣವಾಗಿ ಫಲವನ್ನು ಕೊಡಲಿಕ್ಕಾಗಿ ಈಶ್ವರನೊಬ್ಬನಿರುವನೆಂಬುದು ನಿಶ್ಚಿತವಾಗುತ್ತದೆ.

ಜಡಸ್ಯಾಪೂರ್ವಸ್ಯ ಜೀವಕೃತಪುಣ್ಯಾಪುಣ್ಯಕರ್ಮಾನುಕೂಲಫಲದಾತೃತ್ವಾಯೋಗಾತ್, ಜಾರಚೋರಾದಿಕರ್ಮಣಾಮೇವ ತತ್ತತ್ಕರ್ಮಾನುಸಾರೇಣ ಫಲದಾತೃತ್ವಾದರ್ಶನಾಚ್ಚ ಧರ್ಮಮೀಮಾಂಸಾವಾದೋಽಪ್ಯವಿಚಾರಿತರಮಣೀಯಃ. ಏತೇನ ಕಪಿಲಕಣಾದಾದೀನಾಂ ಜಡಜಗತ್ಕಾರಣವಾದೋಽಪಿ ನಿರಸ್ತಃ.

ಜೀವರು ಮಾಡಿದ ಪುಣ್ಯಪಾಪಕರ್ಮಗಳಿಗೆ ತಕ್ಕ ಫಲವನ್ನು ಕೊಡಲು ಜಡವಾದ ಅಪೂರ್ವಕ್ಕೆ ಸಾಮರ್ಥ್ಯವಿಲ್ಲ. ಜಾರ, ಚೋರ ಮೊದಲಾದವರ ಕೆಲಸಗಳೇ ಅವರವರ ಕರ್ಮಾನುಸಾರವಾಗಿ ಫಲವನ್ನು ಕೊಡುತ್ತಿಲ್ಲವೆಂಬುದನ್ನು ಲೋಕದಲ್ಲಿ ಪ್ರತ್ಯಕ್ಷವಾಗಿಯೇ ಕಂಡಮೇಲೆ "ಅಪೂರ್ವವೇ ಫಲವನ್ನು ಕೊಡುತ್ತದೆ" ಎಂಬ ಪೂರ್ವಮೀಮಾಂಸಾವಾದವು ಹೇಗೆ ಹೊಂದೀತು? ವಿಚಾರಮಾಡಿನೋಡಿದರೆ ಅದರಲ್ಲಿ ಏನೂ ಹುರುಳಿಲ್ಲವೆಂಬುದು ಸ್ಪಷ್ಟಪಡುತ್ತದೆ. ಕಪಿಲ ಮತ್ತು ಕಣಾದರು ಹೇಳುವಂತೆ ಜಡವೇ ಜಗತ್ತಿನ ಕಾರಣವೆಂಬ ವಾದವೂ ಇದರಿಂದಲೇ ತಿರಸ್ಕೃತವಾಯಿತು.

"ಅಸದ್ವಾ ಇದಮಗ್ರ ಆಸೀತ್" (ತೈ. ಆನಂ. ೭) ಇತಿ ಶ್ರುತಾವಸಚ್ಛಬ್ದೇನ ಸೂಕ್ಷ್ಮತ್ವಮುಪದಿಷ್ಟಂ. ನೋ ಚೇತ್, "ತತೋ ವೈ ಸದಜಾಯತ" (ತೈ. ಆನಂ. ೭) ಇತ್ಯುತ್ತರವಾಕ್ಯವಿರೋಧೋ ದುರ್ನಿವಾರಃ. ಅತ್ರಾಸಚ್ಛಬ್ದೇನ ಖಪುಷ್ಪಶಶಶೃಂಗಾದಿವಚ್ಛೂನ್ಯತ್ವಾಂಗೀಕಾರೇ ವಂಧ್ಯಾಯಾಃ ಸತ್ಪುತ್ರೋತ್ಪತ್ತಿಃ ಕಿಂ ನ ಸ್ಯಾತ್? ಅತಃ ಪೂರ್ವೋಕ್ತಮೇವ ಯುಕ್ತಂ. "ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್" (ಬ್ರಹ್ಮಸೂ. ೨-೧-೭) ಇತಿ ಸೂತ್ರೇ ಬಾದರಾಯಣೇನೈವಾಯಮರ್ಥೋ ಬಹುಧಾ ಪ್ರಪಂಚಿತಃ.

ಕಿಂಚ ಸಂಶಯಪ್ರಯೋಜನಸದ್ಭಾವಾದಪಿ ಶಾಸ್ತ್ರಾರಂಭೋ ಯುಕ್ತಃ. ವೇದಾಗಮೋಭಯವೇದಾಂತಪ್ರತಿಪಾದಿತಸ್ವಾಭಾವಿಕಾನಂತಶಕ್ತಿವಿಶಿಷ್ಟಜಗದುಭಯಕಾರಣಪಶುಪಾಶನಿಯಾಮಕಸಕಲನಿಷ್ಕಲಸ್ಥೂಲಸೂಕ್ಷ್ಮಚಿದಚಿತ್ಪ್ರಕಾಶಕಸತ್ಯಜ್ಞಾನಾನಂತಕಲ್ಯಾಣಗುಣವಿಭವಾಶ್ರಯತ್ವಂ ಬ್ರಹ್ಮತ್ವಂ.

ಅನಾದಿಸ್ವಾಭಾವಿಕಮಾಯಾಪಾಶಬದ್ಧಘೋರಾಪಾರನಿಸ್ಸಾರಸಂಸಾರವ್ಯಾಪಾರತಾಪತ್ರಯಾನಲದಂದಹ್ಯಮಾನನಾನಾಶರೀರಪ್ರವೇಶನಿರ್ಗಮನವರ್ಣಾಶ್ರಮಾಭಿಮಾನವಿಶಿಷ್ಟಕಾಮಕ್ರೋಧಾದ್ಯನುಸ್ಯೂತ

**ಸುಖದುಃಖಾಶ್ರಯತ್ವಂ ಜೀವತ್ವಂ. ಪರಸ್ಪರವಿರುದ್ಧಸ್ವಭಾವಯೋರಜನ್ಯಯೋರವಿನಾಶಿಸ್ವಭಾವಯೋರೇತಯೋಃ "ತತ್ತ್ವಮಸಿ" (ಛಾಂ. ೬-೮-೭) "ಅಹಂ ಬ್ರಹ್ಮಾಸ್ಮಿ" (ಬೃ ೧-೪-೧೦) "ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ. ೩-೨-೯) ಇತ್ಯಾದಿಭಿರಭೇದವ್ಯಪದೇಶಾತ್ ಸಂದೇಹಃ.**

"ಅಸದ್ವಾ ಇದಮಗ್ರ ಆಸೀತ್" ಎಂಬ ಶ್ರುತಿಯಲ್ಲಿ ಅಸತ್ಪದವು ಸೂಕ್ಷ್ಮಸ್ಥಿತಿಯನ್ನು ಸೂಚಿಸುತ್ತದೆ. ಮೊದಲು ಅಂದರೆ ಪ್ರಳಯಕಾಲದಲ್ಲಿ ಇದೆಲ್ಲವೂ ಸೂಕ್ಷ್ಮಸ್ಥಿತಿಯಲ್ಲಿತ್ತು ಎಂದು ಆ ಶ್ರುತಿಯ ಅರ್ಥವಾಗುತ್ತದೆ. ಹಾಗೆ ಹೇಳದೆ ಹೋದರೆ, "ತತೋ ವೈ ಸದಜಾಯತ" 'ಅದರಿಂದ ಸದ್ರೂಪ ಹುಟ್ಟಿತು' ಎಂಬ ಮುಂದಿನ ವಾಕ್ಯದಲ್ಲಿ ತೋರುವ ವಿರೋಧಕ್ಕೆ ಪರಿಹಾರವೇ ಇಲ್ಲವಾಗುವುದು. ಅಲ್ಲಿ ಅಸತ್ಪದದಿಂದ ಆಕಾಶದ ಪುಷ್ಪ ಅಥವಾ ಮೊಲದ ಕೋಂಬು ಎಂಬಂತೆ ಶೂನ್ಯ ಸ್ಥಿತಿ ಎಂದು ಭಾವಿಸುವುದಾದರೆ, ಶೂನ್ಯದಿಂದ ಸದ್ರೂಪ ಹೇಗೆ ಹುಟ್ಟೀತು? ಹಾಗಾದರೆ ಬಂಜೆಯಿಂದ ಸತ್ಪುತ್ರನು ಏಕೆ ಹುಟ್ಟಬಾರದು? ಎಂಬ ಪ್ರಶ್ನೆ ಏಳುತ್ತದೆ. ಆದ್ದರಿಂದ ಅಸತ್ಪದದಿಂದ ಸೂಕ್ಷ್ಮಸ್ಥಿತಿ ಎಂಬ ಅರ್ಥವೇ ಯುಕ್ತವಾಗಿ ಕಾಣುತ್ತದೆ. "ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್" ಎಂಬ ಸೂತ್ರದಲ್ಲಿ ಬಾದರಾಯಣರು ಈ ವಿಷಯವನ್ನು ವಿಸ್ತರಿಸಿದ್ದಾರೆ. ಇದೂ ಅಲ್ಲದೆ, ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಂಶಯ ಪ್ರಯೋಜನಗಳೆರಡೂ ಸಂಭವಿಸುವುದರಿಂದ ಇದರ ಆರಂಭವು ಯುಕ್ತವೇ ಆಗಿದೆ. ನಿಗಮ ಮತ್ತು ಆಗಮವೆಂಬ ಎರಡು ಬಗೆಯ ವೇದಾಂತಗಳಲ್ಲೂ ಪ್ರತಿಪಾದಿತವಾಗಿ, ಸ್ವಾಭಾವಿಕವೂ, ಅನಂತವೂ, ಅದ್ಭುತವೂ ಆದ ಶಕ್ತಿಯೊಡಗೂಡಿ, ಜಗತ್ತಿಗೆ ಉಪಾದಾನನೂ, ನಿಮಿತ್ತನೂ ಆಗಿ, ಪಶುಗಳೆನಿಸಿದ ಜೀವರಿಗೂ ಪಾಶವೆನಿಸಿದ ಪ್ರಕೃತಿಗೂ ನಿಯಾಮಕನಾಗಿ, ಸಕಲನೂ ನಿಷ್ಕಲನೂ ಆಗಿ, ಸ್ಥೂಲಸೂಕ್ಷ್ಮವಾದ ಚೇತನರಿಗೂ ಅಚೇತನವಸ್ತುಗಳಿಗೂ ಪ್ರಕಾಶಕನಾಗಿ, ಸತ್ಯ, ಜ್ಞಾನ ಇವೇ ಮೊದಲಾದ ಅನಂತ ಕಲ್ಯಾಣಗುಣಗಳ ವೈಭವಕ್ಕೆ ಆಶ್ರಯನೂ ಆಗಿರುವ ಚೇತನವೇ ಬ್ರಹ್ಮವೆನಿಸಿದೆ. ಅನಾದಿಯೂ, ಸ್ವಾಭಾವಿಕವೂ ಆದ ಮಾಯಾಪಾಶದಿಂದ ಬದ್ಧನಾಗಿ, ಭಯಂಕರವೂ, ಅಪಾರವೂ, ನಿಸ್ಸಾರವೂ ಆದ ಸಂಸಾರದಲ್ಲಿ ವ್ಯವಹರಿಸುತ್ತ, ಆಧ್ಯಾತ್ಮಿಕ್ಯ, ಆಧಿದೈವಿಕ, ಆಧಿಭೌತಿಕವೆಂಬ ಮೂರು ತಾಪಗಳೆಂಬ ಬೆಂಕಿಯಲ್ಲಿ ಬೆಂದು, ಅನೇಕ ಶರೀರಗಳಿಗೆ ಹೋಗುತ್ತಲೂ ಬರುತ್ತಲೂ, ವರ್ಣ ಮತ್ತು ಆಶ್ರಮಗಳ ಅಭಿಮಾನದಿಂದ ಕೂಡಿ, ಕಾಮಕ್ರೋಧಗಳಿಂದಲೂ, ರಾಗದ್ವೇಷಗಳಿಂದಲೂ ಸಂಭವಿಸುವ ಸುಖದುಃಖಗಳನ್ನು ಅನುಭವಿಸುತ್ತಿರುವ ಚೇತನನೇ ಜೀವನೆನಿಸಿರುವನು. ಹೀಗೆ ಪರಸ್ಪರ ವಿರುದ್ಧ ಸ್ವಭಾವದವರೂ, ನಿತ್ಯರೂ, ನಾಶರಹಿತರೂ ಆದ ಜೀವಬ್ರಹ್ಮರಿಗೆ 'ತತ್ತ್ವಮಸಿ'—'ಅಹಂ ಬ್ರಹ್ಮಾಸ್ಮಿ'—"ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ' ಇವೇ ಮೊದಲಾದ ಶ್ರುತಿಗಳಲ್ಲಿ ಅಭೇದವನ್ನು ತಿಳಿಸಿರುವುದರಿಂದ ಸಂದೇಹಕ್ಕೆ ಅವಕಾಶವಿದೆ.

ಬ್ರಹ್ಮಣಸ್ಸವಿಶೇಷತ್ವೇ ಪರಿಚ್ಛೇದ್ಯತ್ವಮಿತಿ ಯದುಕ್ತಂ ತದಯುಕ್ತಂ. ಘಟವತ್ಪರಿಚ್ಛೇದ್ಯತ್ವಾಭಾವೇಽಪಿ "ನೇತಿ ನೇತಿ" (ಬೃ. ೨-೩-೬) "ಅಸ್ಥೂಲಮನಣ್ವಹ್ರಸ್ವಮದೀರ್ಘಂ" (ಬೃ. ೩-೮-೮) ಇತ್ಯಾದಿವ್ಯಾವರ್ತಕಲಕ್ಷಣೇನ ಪರಿಚ್ಛೇದಯೋಗ್ಯತ್ವಾತ್. ಲಕ್ಷ್ಯವಿಷಯತ್ವಾಲ್ಲಕ್ಷಣಪರಿಚ್ಛೇದ್ಯಸ್ಯ ತದಲಕ್ಷಣಸಜಾತೀಯವಿಜಾತೀಯಸ್ಥೂಲಸೂಕ್ಷ್ಮಪ್ರಪಂಚವ್ಯಾವೃತ್ತತಯಾ ಬ್ರಹ್ಮ ವೇದಾಂತವಾಕ್ಯೈರ್ನಿರೂಪ್ಯತೇ. ತಸ್ಮಾತ್ತದ್ವಿಚಾರೋ ಯುಕ್ತಃ.

"ಬ್ರಹ್ಮವಿದಾಪ್ನೋತಿ ಪರಂ" (ತೈ. ಆನ. ೧) "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ" (ಶ್ವೇ. ೪-೧೪) "ಈಶಂ ಜ್ಞಾತ್ವಾ ಅಮೃತಾ ಭವಂತಿ" (ಶ್ವೇ. ೩-೭) "ಜ್ಞಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ" (ಕೈವಲ್ಯ. ೧-೧೧) "ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ" (ಅಥರ್ವಶಿಖಾ. ೩) "ಕ್ಷರಂ ಪ್ರಧಾನಮಮೃತಾಕ್ಷರಂ ಹರಃ ಕ್ಷರಾತ್ಮಾನಾವೀಶತೇ ದೇವ ಏಕಃ। ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ॥" (ಶ್ವೇ. ೧-೧೦) "ತಮಕ್ರತುಂ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮೀಶಂ" (ಮಹಾನಾ. ಅನು. ೧೦) "ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ" (ಶ್ವೇ. ೧-೮) ಇತ್ಯಾದಿಷ್ವದ್ವಿತೀಯಷಟ್ಸ್ಥಲಪರಶಿವಬ್ರಹ್ಮಜ್ಞಾನೇನ ಸ್ವಾಭಾವಿಕಮಲತ್ರಯಾತ್ಮಕಮಾಯಾಪಾಶದುಃಖನಿವೃತ್ತಿಪೂರ್ವಕಪರಮಪುರುಷಾರ್ಥಪರಶಿವತತ್ತ್ವಪ್ರಾಪ್ತಿದರ್ಶನಾತ್ ಪ್ರಯೋಜನಂ.

ಇದೂ ಅಲ್ಲದೆ, ಬ್ರಹ್ಮ ಸವಿಶೇಷವಾದರೆ ಪರಿಚ್ಛೇದ್ಯವಾಗಬೇಕಾದೀತೆಂದು ಹಿಂದೆ ಹೇಳಿದ ವಾದವು ಯುಕ್ತವಲ್ಲ. ಬ್ರಹ್ಮವು ಘಟದಂತೆ ಪರಿಚ್ಛೇದ್ಯವಲ್ಲದಿದ್ದರೂ, "ನೇತಿ ನೇತಿ", "ಇದಲ್ಲ-ಅದಲ್ಲ", "ಸ್ಥೂಲವಲ್ಲ-ಅಣುವಲ್ಲ-ದೀರ್ಘವಲ್ಲ-ಹ್ರಸ್ವವಲ್ಲ" ಹೀಗೆ ವ್ಯಾವರ್ತಕಲಕ್ಷಣದಿಂದ ಅದು ಪರಿಚ್ಛೇದಯೋಗ್ಯವಾಗಿರುವುದರಿಂದಲೂ, ಉದಾಹರಿಸಲು ವಿಷಯವಾಗಿರುವುದರಿಂದಲೂ, ಲಕ್ಷಣದಿಂದ ಪರಿಚ್ಛೇದ್ಯವಾದ ಬ್ರಹ್ಮವನ್ನು ಅದಕ್ಕೆ ಸದೃಶವೂ ಮತ್ತು ವಿರುದ್ಧವೂ ಆದ ಸ್ಥೂಲಸೂಕ್ಷ್ಮ ಪ್ರಪಂಚದಿಂದ ಬೇರ್ಪಡಿಸಬೇಕಾಗಿರುವುದರಿಂದಲೂ, ಬ್ರಹ್ಮವು ವೇದಾಂತವಾಕ್ಯಗಳಿಂದಲೇ ನಿರೂಪಿತವಾಗಲಿರುವುದರಿಂದಲೂ, ಬ್ರಹ್ಮಜಿಜ್ಞಾಸೆಯು ಮುಮುಕ್ಷುಗಳಿಗೆ ಯುಕ್ತವೇ ಆಗುತ್ತದೆ.

ಭ್ರಮರಕೀಟಲೋಹರಸಾದಿಷು ಸ್ವಾಭಾವಿಕಭೇದನಿವೃತ್ತಿದರ್ಶನಾತ್ ತತ್ತ್ವಮಸ್ಯಾದ್ಯಭೇದಶ್ರುತಿಷು ಮುಖ್ಯಾರ್ಥಬಾಧಾಭಾವಾನ್ನ

ಗೌಣಾರ್ಥಲಕ್ಷಣಾರ್ಥಸ್ವೀಕಾರಃ, "ಯಥಾ ನದ್ಯಸ್ಸ್ಯಂದಮಾನಾಸ್ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ। ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥" (ಮುಂ. ೩-೨-೮) ಇತ್ಯಾದಿ ಶ್ರುತಾವಸಂದಿಗ್ಧತಯಾ ಪ್ರಾಪ್ಯಪ್ರಾಪಕತ್ವೋಪದೇಶಾತ್. ನ ಚೈತಚ್ಛ್ರುತೇರುಪಚರಿತಾರ್ಥತ್ವಂ. ಉಪಕ್ರಮಾದಿಷಡ್ವಿಧತಾತ್ಪರ್ಯಲಿಂಗಸಹಕೃತಾನೇಕಶ್ರುತೀನಾಮುಪಚರಿತಾರ್ಥತ್ವಸ್ಯ ವಕ್ತುಮಯುಕ್ತತ್ವಾತ್. ಮುಖ್ಯಾರ್ಥಪರಿತ್ಯಾಗೇ ಈಕ್ಷತ್ಯಧಿಕರಣವಿರೋಧಃ.

"ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ", "ಶಿವನನ್ನು ತಿಳಿದವನು ಪರಮಶಾಂತಿಯನ್ನು ಹೊಂದುತ್ತಾನೆ" "ಈಶನನ್ನು ತಿಳಿದವನು ಅಮೃತನಾಗುತ್ತಾನೆ" "ಧ್ಯಾನದಿಂದಲೂ, ಇಂದ್ರಿಯನಿಗ್ರಹದಿಂದಲೂ ಪಂಡಿತನು ಪಾಶವನ್ನು ಸುಡುತ್ತಾನೆ" "ಬೇರೆ ಎಲ್ಲವನ್ನೂ ಬಿಟ್ಟು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು" "ಕ್ಷರವೆಂದರೆ ನಾಶವಾಗತಕ್ಕ ಪ್ರಕೃತಿ. ಅಮೃತನೂ ಅಕ್ಷರನೂ ಆದವನು ಜೀವನು. ಇವರಿಬ್ಬರಮೇಲೆಯೂ ಅಧಿಕಾರನಡೆಸುವ ದೇವನೊಬ್ಬನಿದ್ದಾನೆ." "ಅವನನ್ನು ಯಾವಾಗಲೂ ಸ್ಮರಿಸುವುದರಿಂದಲೂ, ಶರೀರದಲ್ಲಿ ಧರಿಸುವುದರಿಂದಲೂ, ಅವನಲ್ಲಿ ಸಾಮರಸ್ಯವನ್ನು ಪಡೆಯುವುದರಿಂದಲೂ, ಜೀವನಿಗೆ ಮಾಯೆಯಿಂದ ಪೂರ್ಣವಾಗಿ ಬಿಡುಗಡೆಯಾಗುವುದು" "ಜೀವನು ಸರ್ವೋಪಾಸ್ಯನಾದ ಪರಮಾತ್ಮನ ಅನುಗ್ರಹದಿಂದಲೇ ಅವನನ್ನೂ, ಅವನ ಮಹಿಮೆಯನ್ನೂ ಕಂಡು ದುಃಖರಹಿತನಾಗುತ್ತಾನೆ". "ದೇವನನ್ನು ಕಂಡು ಜೀವನು ಸರ್ವಪಾಶಗಳಿಂದಲೂ ಬಿಡುಗಡೆ ಹೊಂದುತ್ತಾನೆ" ಹೀಗೆ ಅನೇಕ ಶ್ರುತಿಗಳಲ್ಲಿ ಹೇಳಿರುವಂತೆ, ಅದ್ವಿತೀಯನಾದ ಪರಮಶಿವನ ಜ್ಞಾನದಿಂದ ಜೀವನ ಸ್ವಾಭಾವಿಕಮಲತ್ರಯವೆಂಬ ಪಾಶದ ಬಿಡುಗಡೆಯಾಗಿ, ಅವನು ಪರಮಪುರುಷಾರ್ಥನೆನಿಸಿದ ಪರಮಶಿವನಲ್ಲಿ ಸಮರಸವಾಗಿ ಬೆರೆಯುವ ಸುಯೋಗವೇ ಅವನಿಗೆ ಬ್ರಹ್ಮಮೀಮಾಂಸೆಯ ಪರಮಪ್ರಯೋಜನವೆನಿಸಿದೆ.

ಭ್ರಮರಕೀಟಗಳಲ್ಲೂ, ಲೋಹರಸಗಳಲ್ಲೂ ಸ್ವಾಭಾವಿಕವಾದ ಭೇದವು ತೊಲಗುವುದನ್ನು ನಾವು ಪ್ರತ್ಯಕ್ಷವಾಗಿ ಕಂಡಿದ್ದೇವೆ. ರಸಸಂಪರ್ಕದಿಂದ ಲೋಹವು ಚಿನ್ನವಾಗುತ್ತದೆ. ಕೀಟವು ಭ್ರಮರದ ಸಂಪರ್ಕದಿಂದಲೂ, ಅದರ ಚಿಂತನೆಯಿಂದಲೂ ಭ್ರಮರವಾಗುತ್ತದೆ. ಆದ್ದರಿಂದ 'ತತ್ತ್ವಮಸಿ' ಮೊದಲಾದ ಅಭೇದಶ್ರುತಿಗಳಲ್ಲಿ ಮುಖ್ಯಾರ್ಥಕ್ಕೆ ಯಾವಬಾಧೆಯೂ ಇಲ್ಲದ್ದರಿಂದ ಗೌಣಾರ್ಥವನ್ನು ಹೇಳುವ ಅವಶ್ಯಕತೆ ಏನೂ ಕಾಣುವುದಿಲ್ಲ. "ಹೇಗೆ ನದಿಗಳು ಹರಿಯುತ್ತ ಸಮುದ್ರದಲ್ಲಿ ಸೇರಿ ನಾಮರೂಪಗಳನ್ನು ಕಳೆದುಕೊಳ್ಳುತ್ತವೆಯೋ ಹಾಗೆ ಬ್ರಹ್ಮವನ್ನರಿತವನು ನಾಮರೂಪಗಳ ಅಭಿಮಾನವನ್ನು ತೊರೆದು ಎಲ್ಲಕ್ಕೂ ಆಚೆನವನೂ, ಶ್ರೇಷ್ಠನೂ ಎನಿಸಿದ ದಿವ್ಯ

ಪುರುಷನನ್ನು ಸೇರುತ್ತಾನೆ." ಈ ಬಗೆಯ ಶ್ರುತಿಗಳಲ್ಲಿ ಜೀವನು ಪರಮಾತ್ಮನನ್ನು ಸೇರುವನೆಂದು ಸ್ಪಷ್ಟವಾಗಿ ಹೇಳಲಾಗಿದೆ. ಈ ಶ್ರುತಿಗಳಿಗೆ ಮುಖ್ಯಾರ್ಥವನ್ನು ಹೇಳಬೇಕೇ ಹೊರತು ಲಕ್ಷ್ಯಾರ್ಥವನ್ನು ಹೇಳುವುದು ಸಮಂಜಸವೂ ಅಲ್ಲ, ಹಾಗೆ ಹೇಳಲಿಕ್ಕೆ ಪ್ರಸಕ್ತಿಯೂ ಇಲ್ಲ. ಉಪಕ್ರಮೋಪಸಂಹಾರೈಕ್ಯವೇ ಮೊದಲಾದ ಆರು ಬಗೆಯ ತಾತ್ಪರ್ಯಗ್ರಾಹಕಪ್ರಮಾಣಗಳಿಗನುಗುಣವಾದ ಅನೇಕ ಶ್ರುತಿಗಳಿಗೆ ಮುಖ್ಯಾರ್ಥವನ್ನು ತೊರೆದು ಬೇರೆ ಅರ್ಥವನ್ನು ಹೇಳುವುದು ಎಂದಿಗೂ ಯುಕ್ತವಾಗುವುದಿಲ್ಲ. ಆ ಶ್ರುತಿಗಳ ಮುಖ್ಯಾರ್ಥವನ್ನು ತೊರೆಯುವುದಾದರೆ, ಈಕ್ಷತ್ಯಧಿಕರಣದ ವಿರೋಧವು ಸಂಭವಿಸುತ್ತದೆ.

ನ ಚಾಧ್ಯಾಸಾನುಪಪತ್ತಾವನಿರ್ಮೋಕ್ಷಪ್ರಸಂಗಃ, ತದ್ವಿಧಾಯಕಪ್ರಾತ್ಯಕ್ಷಿಕಶ್ರುತ್ಯದರ್ಶನಾತ್. "ಅಹಮಜ್ಞಃ" ಇತ್ಯನುಭವಸ್ಯ ಶರೀರೇಂದ್ರಿಯಾದಿವಿಶಿಷ್ಟಮಾಯಾಪಾಶಬದ್ಧಜೀವಲಕ್ಷಣತ್ವಾತ್. ನಿರ್ವಿಶೇಷಚಿನ್ಮಾತ್ರಬ್ರಹ್ಮಣಸ್ತದ್ಭಿನ್ನಮಾಯೋಪಾಧಿತ್ವಂ ಕಥಮುಪಪದ್ಯತೇ? "ಯಸ್ಸರ್ವಜ್ಞಸ್ಸರ್ವವಿತ್" (ಮುಂ. ೧—೧—೯) "ಪ್ರಜ್ಞಾನಂ ಬ್ರಹ್ಮ" ಇತ್ಯಾದಿಶ್ರುತಿಷು ತಸ್ಯ ಸರ್ವಜ್ಞತ್ವಪ್ರಜ್ಞಾನತ್ವಾದಿಧರ್ಮೋಪದೇಶಾನ್ನ ಜೀವವದಜ್ಞತ್ವಾದಿಧರ್ಮಪ್ರಸಂಗಃ. ತಸ್ಯಾವಿದ್ಯಾಂಗೀಕಾರೇ ಬ್ರಹ್ಮತ್ವಭಂಗಪ್ರಸಂಗಃ. ತಸ್ಯಾವಿದ್ಯಾಸತ್ತ್ವೇ ಅವಿದ್ಯೈವ ಮಾನಮಿತಿ ಚೇತ್ ಅನ್ಯೋನ್ಯಾಶ್ರಯದೋಷಃ.

ಕಿಂಚ — "ಅಪ್ರಾಣೋ ಹ್ಯಮನಾಶ್ಶುಭ್ರಃ" (ಮುಂ. ೨—೧—೨) ಇತಿ ಶ್ರುತೌ ತಸ್ಯ ಮನಃಪ್ರಾಣಸಂಬಂಧಾಭಾವದರ್ಶನಾತ್ತದ್ವಿಹೀನಸ್ಯ ಭ್ರಮಃ ಕಥಮುಪಪದ್ಯತೇ? ಕಿಂಚ ಜೀವವತ್ತಸ್ಯಾಜ್ಞತ್ವಸ್ವೀಕಾರೇ ತದಜ್ಞಾನನಿವರ್ತಕಬ್ರಹ್ಮಾಂತರಮವಶ್ಯಮಂಗೀಕರ್ತವ್ಯಂ. ತಥಾಚೇದನವಸ್ಥಾಪ್ರಸಂಗಃ. ಬ್ರಹ್ಮಣಃ ಸ್ವಸ್ವರೂಪತಿರೋಧಾಯಕಮಜ್ಞಾನಮಸ್ತಿ ಚೇತ್, ತಸ್ಯ ತತೋಽಧಿಕತ್ವೇನ ಮಿಥ್ಯಾತ್ವಂ ನೋಪಪದ್ಯತೇ. "ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್" (ಕೈವಲ್ಯ. ೧—೭) "ತಮೇವ ವಿದಿತ್ವಾಽತಿಮೃತ್ಯುಮೇತಿ" (ಶ್ವೇ. ೩—೮) "ಬ್ರಹ್ಮವಿದಾಪ್ನೋತಿ ಪರಂ" (ತೈ. ಆನಂ. ೧) ಇತ್ಯಾದಿಶ್ರುತಿಷು ತಸ್ಯ ತಮಃಪರತ್ವಂ, ತಜ್ಜ್ಞಾನಸ್ಯ ಜೀವಾನಾಂ ಮುಕ್ತಿಹೇತುತ್ವಂಚೋಪದಿಶ್ಯತ ಇತಿ ನ ತದ್ಯುಕ್ತಂ.

ಅಧ್ಯಾಸವನ್ನು ಒಪ್ಪದಿದ್ದರೆ ಯಾರಿಗೂ ಮೋಕ್ಷವೇ ಸಂಭವಿಸುವುದಿಲ್ಲವೆಂದು ಹೇಳಿದ ವಾದವೂ ಸರಿಯಲ್ಲ. ಯಾಕೆಂದರೆ ಅಧ್ಯಾಸವನ್ನು ವಿಧಿಸುವ ಯಾವೊಂದು ಶ್ರುತಿಯೂ ನಮಗೆ ಪ್ರಮಾಣವಾಗಿ ಸಿಕ್ಕಿಲ್ಲ. 'ನಾನು ಅಜ್ಞ' ಎಂಬ ಅನುಭವ

ಶರೀರೇಂದ್ರಿಯವಿಶಿಷ್ಟನೂ, ಮಾಯಾಪಾಶಬದ್ಧನೂ ಆದ ಜೀವನಿಗೆ ಅನ್ವಯಿಸು ವಂತಹುದಾಗಿದೆ. ನಿರ್ವಿಶೇಷವೂ, ಚಿನ್ಮಾತ್ರವೂ, ಆದ ಬ್ರಹ್ಮಕ್ಕೆ ಅದಕ್ಕಿಂತಲೂ ಭಿನ್ನವಾದ ಮಾಯೆ ಉಪಾಧಿಯಾಗುವುದೆಂಬುವುದು ಹೇಗೆ ಸಂಭವಿಸೀತು? 'ಯಃ ಸರ್ವಜ್ಞಃ' 'ಪ್ರಜ್ಞಾನಂ ಬ್ರಹ್ಮ' ಈ ಬಗೆಯ ಶ್ರುತಿಗಳಲ್ಲಿ ಸರ್ವಜ್ಞತ್ವ, ಪ್ರಜ್ಞಾನತ್ವ ಇವೇ ಮೊದಲಾದ ಧರ್ಮಗಳನ್ನು ಉಪದೇಶಿಸಿರುವುದರಿಂದ, ಪರಬ್ರಹ್ಮಕ್ಕೆ ಜೀವನಂತೆ ಅಜ್ಞತ್ವವೇ ಮೊದಲಾದ ಧರ್ಮಗಳು ಸಂಬಂಧಿಸಲಾರವು. ಅವನಿಗೆ ಅವಿದ್ಯೆಯ ಸಂಪರ್ಕವಾಗುವುದಾದರೆ ಅವನು ಬ್ರಹ್ಮವೇ ಆಗಲಾರನು. ಅವನಲ್ಲಿ ಅವಿದ್ಯೆ ಇದೆ ಎಂದು ಹೇಳಲಿಕ್ಕೆ ಅವಿದ್ಯೆಯೇ ಪ್ರಮಾಣವೆಂದು ಹೇಳುವುದಾದರೆ, ಅನ್ಯೋನ್ಯಾಶ್ರಯದೋಷ ಬರುತ್ತದೆ. "ಪ್ರಾಣವಿಲ್ಲದವನು, ಮನಸ್ಸಿಲ್ಲದವನು, ಶುಭ್ರನು" ಎಂಬ ಶ್ರುತಿಯ ಪ್ರಕಾರ ಅವನಿಗೆ ಮನಪ್ರಾಣಗಳ ಸಂಬಂಧವಿಲ್ಲದ್ದರಿಂದ ಅವಿಲ್ಲದವನಲ್ಲಿ ಅವಿದ್ಯೆ ಹೇಗೆ ಅಂಟೀತು? ಆದರೆ ಜೀವನಂತೆ ಅವನನ್ನು ಅಜ್ಞನೆಂದು ಒಪ್ಪಿದರೆ, ಅವನ ಅಜ್ಞಾನವನ್ನು ತಡೆಯಲು ಬೇರೊಂದು ಬ್ರಹ್ಮವನ್ನು ಅವಶ್ಯವಾಗಿ ಅಂಗೀಕರಿಸಬೇಕಾಗುತ್ತದೆ. ಆಗಲಿ, ಬೇರೊಂದು ಬ್ರಹ್ಮವನ್ನು ಒಪ್ಪೋಣವೆಂದರೆ, ಮತ್ತೆ ಅದರ ಅಜ್ಞಾನವನ್ನು ಪರಿಹರಿಸಲು ಮತ್ತೊಂದು ಬ್ರಹ್ಮವನ್ನು ಒಪ್ಪಬೇಕಾಗು ವುದರಿಂದ ಅನ್ಯವಸ್ಥೆಯುಂಟಾಗುತ್ತದೆ. ಬ್ರಹ್ಮದಲ್ಲಿ ತನ್ನ ಸ್ವರೂಪಜ್ಞಾನವನ್ನು ಮುಚ್ಚುವಂತಹ ಅಜ್ಞಾನ ಒಂದು ಇರುವುದಾದರೆ, ಅದೇ ಬ್ರಹ್ಮಕ್ಕಿಂತಲೂ ಅಧಿಕ ವೆನಿಸುವುದರಿಂದ ಅದನ್ನು ಮಿಥ್ಯೆ ಎಂದು ಹೇಳಲಿಕ್ಕಾಗುವುದಿಲ್ಲ. "ಉಪಾಸಕನು ಪರಮಾತ್ಮನ ಧ್ಯಾನದಿಂದ ಪಂಚಭೂತಗಳ ಮೂಲಕಾರಣನೂ, ತಮಸ್ಸಿಗೆ ಆಚೆ ಸರ್ವಸಾಕ್ಷಿಯೂ ಆಗಿರುವ ಪರಮಾತ್ಮನನ್ನು ಹೊಂದುತ್ತಾನೆ" "ಅವನನ್ನು ತಿಳಿದವನು ಮೃತ್ಯುವನ್ನು ದಾಟುತ್ತಾನೆ" "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ". ಈ ಬಗೆಯ ಶ್ರುತಿಗಳಲ್ಲಿ ಅವನು ತಮಸ್ಸಿನ ಆಚೆಗೆ ಇರುವವನೆಂದೂ, ಅವನನ್ನು ತಿಳಿಯುವುದರಿಂದ ಜೀವರಿಗೆ ಮುಕ್ತಿ ದೊರಕುವುದೆಂದೂ ಹೇಳಿರು ವುದರಿಂದ ಬ್ರಹ್ಮದಲ್ಲಿ ಅವಿದ್ಯೆ ಇರುವುದೆಂಬ ವಾದವು ಯುಕ್ತವಲ್ಲ.

**ಶುಕ್ತಿರಜತವತ್ತಸ್ಯ ಜೀವತ್ವಂ ಭ್ರಾಂತಿಮಾತ್ರಮಿತಿಚೇನ್ನ, ಸರ್ವತ್ರ ಪದಾರ್ಥಚತುಷ್ಟಯಸದ್ಭಾವೇ ಭ್ರಾಂತಿಃ ಸಂಭವತಿ. ಅತ್ರ ಬ್ರಹ್ಮೇತರ ವಸ್ತ್ವಭಾವಾನ್ನಭ್ರಾಂತ್ಯುಪಪತ್ತಿಃ. ವಸ್ತ್ವಂತರಾಂಗೀಕಾರೇ ಹ್ಯದ್ವೈತ ಹಾನಿಃ. ಅನಂಗೀಕಾರೇ ಭ್ರಾಂತ್ಯನುಪಪತ್ತಿಃ. ನ ಸ್ವಪ್ನವತ್ ಪ್ರಪಂಚಸ್ಯ ಮಿಥ್ಯಾತ್ವಂ, ಅರ್ಥಸಿದ್ಧಿಕ್ರಿಯಾಸಿದ್ಧಿದರ್ಶನಾತ್. ವಿಧಿನಿಷೇಧರೂಪ ಶಾಸ್ತ್ರಾರ್ಥಾಚಾರ್ಯೋಪದೇಶಾದೀನಾಂ ಕರ್ತವ್ಯತ್ವಾಯೋಗೇನ ಬುದ್ಧ ಮತಪ್ರವೇಶಾಪತ್ತೇಶ್ಚ.**

**"ನಾಭಾವ ಉಪಲಬ್ಧೇಃ" "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್"**

**ಇತಿ ದ್ವಿತಿಯೇಽಧ್ಯಾಯೇ ಸ್ವಪ್ನೇಂದ್ರಜಾಲವತ್ ಪ್ರಪಂಚಮಿಥ್ಯಾತ್ವ ವಾದೋ ಬಹುಧಾನಿರಸ್ತಃ.**

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ ।**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೇತುಕಂ ॥**
**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥**

**ಇತ್ಯಾದಿನಾ ಕೃಷ್ಣಗೀತಾಯಾಂ ಚೈತನ್ಮತಂ ಬಹುಧಾ ನಿರಸ್ತಂ.**

ಶುಕ್ತಿಯಲ್ಲಿ ರಜತದಂತೆ ಬ್ರಹ್ಮದಲ್ಲಿ ಜೀವಭಾವವು ಭ್ರಾಂತಿಯಿಂದ ಕಲ್ಪಿತ ವಾಗಿರುವುದೆಂಬ ವಾದವೂ ಸಮಂಜಸವಲ್ಲ. ಆಶ್ರಯ, ಆರೋಪಿತವಾದ ವಸ್ತು, ಆರೋಪಿಸುವಿಕೆ, ಅದನ್ನು ಅನುಭವಿಸುವ ಪುರುಷ, ಹೀಗೆ ನಾಲ್ಕು ಪದಾರ್ಥ ಗಳಿದ್ದರೆಯೇ ಭ್ರಾಂತಿ ಸಂಭವಿಸುವುದೆಂದು ನಾವು ಲೋಕದಲ್ಲಿ ಕಂಡಿದ್ದೇವೆ. ಆದರೆ ಅದ್ವೈತವಾದದಲ್ಲಿ ಬ್ರಹ್ಮವಲ್ಲದೆ ಬೇರೆ ಯಾವ ವಸ್ತುವೂ ಇಲ್ಲದ್ದರಿಂದ ಭ್ರಾಂತಿ ಪುಟ್ಟಲು ಅವಕಾಶವೇ ಇಲ್ಲ. ಬೇರೆ ವಸ್ತುವನ್ನು ಅಂಗೀಕರಿಸಿದರೆ ಬ್ರಹ್ಮವು ಏಕಮೇವಾದ್ವಿತೀಯವೆಂಬ ಅದ್ವೈತವಾದವೇ ನಷ್ಟವಾಗುತ್ತದೆ. ಬೇರೊಂದು ವಸ್ತುವಿದೆಯೆಂದು ಒಪ್ಪದೇ ಇದ್ದರೆ, ಬ್ರಹ್ಮದಲ್ಲಿ ಭ್ರಮವೇ ಯುಕ್ತವೆನಿಸುವುದಿಲ್ಲ. ಆದ್ದರಿಂದ ಅರ್ಥಸಿದ್ಧಿಯೂ, ಕಾರ್ಯಸಿದ್ಧಿಯೂ ಇರುವುದರಿಂದ ಪ್ರಪಂಚವು ಸ್ವಪ್ನದಂತೆ ಮಿಥ್ಯೆ ಎನಿಸಲಾರದು. ಇದು ಸುಳ್ಳಾಗುವುದಾದರೆ, ವಿಧಿನಿಷೇಧಗಳನ್ನು ತಿಳಿಸುವ ಶಾಸ್ತ್ರಗಳು, ಆಚಾರ್ಯರ ಉಪದೇಶ, ಅದನ್ನು ಕೇಳಿ ಜೀವರ ಆಚರಣೆ ಇವುಗಳಿಗೆ ಸಂಬಂಧವೇ ತಪ್ಪಿಹೋಗುವುದರಿಂದ, ಎಲ್ಲರೂ ಬುದ್ಧಮತವನ್ನು ಪ್ರವೇಶಿ ಸಬೇಕಾಗುವುದು. 'ನಾಭಾವ ಉಪಲಬ್ಧೇಃ'। 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್।' ಈ ಸೂತ್ರಗಳಲ್ಲಿ ಸ್ವಪ್ನ ಮತ್ತು ಇಂದ್ರಜಾಲಗಳಂತೆ ಪ್ರಪಂಚವನ್ನು ಸುಳ್ಳೆಂದು ಹೇಳುವ ಮತವನ್ನು ಬಾದರಾಯಣನು ವಿಸ್ತಾರವಾಗಿ ಖಂಡಿಸಿದ್ದಾನೆ. "ನಾಸ್ತಿಕರು ಜಗತ್ತನ್ನು ಅಸತ್ಯವೆಂದೂ, ನಿರಾಶ್ರಿತವೆಂದೂ ಕರೆಯುತ್ತಾರೆ. ಕಾಮಾಸಕ್ತರು ಪರಸ್ಪರವಾಗಿ ಕೂಡುವುದರಿಂದ ಆಗುವ ಸೃಷ್ಟಿಯನ್ನು ಬಿಟ್ಟರೆ ಈ ಜಗತ್ತಿನಲ್ಲಿ ಬೇರೆ ಏನಿರುವುದು" ಎಂದು ಗೀತೆಯಲ್ಲೂ ಈ ಮತವನ್ನು ನಿರೂಪಿಸಿ ನಿರಾಕರಿಸಲಾಗಿದೆ.

**ಕಿಂಚ — "ಲಕ್ಷಣಪ್ರಮಾಣಾಧೀನಾ ಹಿ ವಸ್ತುಸಿದ್ಧಿಃ" ಇತಿ ನ್ಯಾಯೇನ ನಿರ್ವಿಶೇಷಬ್ರಹ್ಮಸತ್ತ್ವೇ ಕಿಂ ಮಾನಂ? ಶ್ರುತಿರಸ್ತಿ ಚೇತ್, ತಸ್ಯಾಃ ಜಗದಂತಃಪಾತಿತ್ವೇನ ಮಿಥ್ಯಾತ್ವಾತ್ ತತ್ಪ್ರತಿಪಾದ್ಯಸ್ಯ ಬ್ರಹ್ಮ ಣೋಽಪಿ ಮಿಥ್ಯಾತ್ವಂ ಸ್ಯಾತ್. ವೇದಸತ್ಯತ್ವಾಂಗೀಕಾರೇ ಅದ್ವೈತ ಹಾನಿಃ; ಅಸತ್ಯತ್ವೇ ತು ಬ್ರಹ್ಮಸತ್ತ್ವೇ ಸತ್ಪ್ರಮಾಣಾಂತರಾಭಾವಾತ್ ವಂಧ್ಯಾಪುತ್ರಾದೇರಿವ ಬ್ರಹ್ಮಣೋಽಪಿ ಮಿಥ್ಯಾತ್ವಂ ಸ್ಯಾತ್.**

ಕಿಂಚ ಅಧ್ಯಾಸಾನಂಗೀಕಾರೇ ಮುಕ್ತೇರ್ಬಾಧಕಾಭಾವಃ, ತದಂಗೀಕಾರೇ ಸ್ವಾಭಾವಿಕತ್ವೇನ ಸರ್ವಶ್ರುತೀನಾಂ ಸಮನ್ವಯಾ ಯೋಗಃ. ನಚಾಧ್ಯಾಸೇ ಅವಿದ್ಯೈವ ಮಾನಂ, ಸ್ವಪ್ರಕಾಶತ್ವಭಂಗ ಪ್ರಸಂಗಾತ್. ನಚ ಅವಿದ್ಯಾವಿಶಿಷ್ಟಂ ಚೈತನ್ಯಮಿತಿ ವಾಚ್ಯಂ, ಅನ್ಯೋನ್ಯಾಶ್ರಯಪ್ರಸಂಗಾತ್. "ಜೀವೋಽಹಂ–ಮುಮುಕ್ಷುರ್ಯೋಽಹಂ" ಇತ್ಯಾದಿ ಭ್ರಮಪ್ರತ್ಯಯಸ್ಯಾಪಿ ಪರಮೇಶ್ವರಾಧೀನತ್ವಾತ್, "ಏಷ ಏವ ಸಾಧು ಕರ್ಮ ಕಾರಯತಿ" (ಕೌಷೀ. ೩—೯) ಇತ್ಯಾದಿಷು ಪರಮೇಶ್ವರಸ್ಯೈವ ಸರ್ವಕರ್ಮಕಾರಯಿತೃತ್ವೋಪದೇಶಾತ್.

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥
ಇತಿ ಕೃಷ್ಣಗೀತಾಯಾಂ ತಥೈವೋಪದೇಶಾತ್.

"ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ" (ಛಾ. ೬—೧—೪) ಇತಿ ಶ್ರುತಾವಪವಾದದರ್ಶನಾದಧ್ಯಾಸೋ ಗ್ರಾಹ್ಯ ಇತಿಚೇನ್ನ, ವಾಚಾರಂಭಣಾದಿಶ್ರುತೀನಾಂ ಶಿವೋಪಾದಾನತ್ವಾತ್ ಪ್ರಪಂಚಸ್ಯ ತತ್ತಾದಾತ್ಮ್ಯಬೋಧಕತ್ವಂ ವಿಧೀಯತೇ; ನ ಮಿಥ್ಯಾತ್ವಬೋಧಕತ್ವಂ.

ವಾಚಾರಂಭಣವಾಕ್ಯಾನಿ ತದನನ್ಯತ್ವಬೋಧನಾತ್ ।
ನ ಮಿಥ್ಯಾತ್ವಾಯ ಕಲ್ಪಂತೇ ಜಗತಶ್ಶಿವರೂಪತಃ ॥

ಇತಿ ಸ್ಮೃತೇಶ್ಚ. ಅತ ಏವ ಭಗವತಾ ವ್ಯಾಸೇನ ಜಗನ್ಮಿಥ್ಯಾತ್ವವಾರಣಾಯ "ತದನನ್ಯತ್ವಮಾರಂಭಣಶಬ್ದಾದಿಭ್ಯಃ" (ಬ್ರ. ಸೂ. ೨-೧-೧೪) ಇತಿ ಸೂತ್ರೇ ತಜ್ಜನ್ಯಪ್ರಪಂಚಸ್ಯ ತತ್ಸ್ವರೂಪತ್ವಂ ನಿರ್ದಿಷ್ಟಂ.

ಇದೂ ಅಲ್ಲದೆ ಯಾವುದಾದರೊಂದು ವಸ್ತುವನ್ನು ಸಾಧಿಸಬೇಕಾದರೆ, ಆ ಸಾಧನೆಯು ಲಕ್ಷಣವನ್ನೂ, ಪ್ರಮಾಣವನ್ನೂ ಅವಲಂಬಿಸಿರುತ್ತದೆ ಎಂಬ ನ್ಯಾಯದಿಂದ ನಿರ್ವಿಶೇಷಬ್ರಹ್ಮದ ಬಗ್ಗೆ ಪ್ರಮಾಣವೇನೆಂಬ ಪ್ರಶ್ನೆ ಏಳುತ್ತದೆ. ಅದಕ್ಕೆ ಶ್ರುತಿಯೇ ಪ್ರಮಾಣವೆಂದು ಹೇಳುವುದಾದರೆ, ಆ ಶ್ರುತಿಯೂ ಸಹ ಜಗತ್ತಿನೊಳಗೇ ಸೇರಿರುವುದರಿಂದ ಆ ಶ್ರುತಿಯಲ್ಲಿ ಪ್ರತಿಪಾದಿತವಾದ ಬ್ರಹ್ಮವೂ ಜಗತ್ತಿನಂತೆ ಮಿಥ್ಯೆಯೇ ಆಗಬೇಕಾದೀತು? ವೇದವನ್ನೂ ಸತ್ಯವೆಂದು ಅಂಗೀಕರಿಸಿದರೆ, ನಿಮ್ಮ ಅದ್ವೈತಕ್ಕೆ ಹಾನಿಯುಂಟಾದೀತು? ಅದನ್ನು ಅಸತ್ಯವೆನ್ನುವುದಾದರೆ, ಬ್ರಹ್ಮವಿರುವ ಬಗ್ಗೆ ಬೇರೊಂದು ಪ್ರಮಾಣವಿಲ್ಲದ್ದರಿಂದ, ಬಂಜೆಯ ಮಗನಂತೆ ಬ್ರಹ್ಮವೂ ಮಿಥ್ಯೆಯೇ ಆಗಬೇಕಾದೀತು. ಇದೂ ಅಲ್ಲದೆ ಅಧ್ಯಾಸವನ್ನು ಒಪ್ಪದ

ಮಾತ್ರಕ್ಕೆ ಮುಕ್ತಿಗೆ ಯಾವ ಬಾಧಕವೂ ಸಂಭವಿಸಲಾರದು. ಅಧ್ಯಾಸವನ್ನು ಒಪ್ಪಿದರೆ, ಅದು ಸ್ವಾಭಾವಿಕವಾದ್ದರಿಂದ, ಎಲ್ಲಾ ಬಗೆಯ ಶ್ರುತಿಗಳಿಗೂ ಸಮನ್ವಯ ವಾಗದೇ ಹೋಗುವುದು, ಮತ್ತು ಬ್ರಹ್ಮದ ಪ್ರಕಾಶಕ್ಕೆ ಭಂಗ ಬರುವುದರಿಂದ ಅವಿದ್ಯೆಯೇ ಆಧ್ಯಾಸಕ್ಕೆ ಪ್ರಮಾಣವಾಗಲಾರದು. ಅವಿದ್ಯಾವಿಶಿಷ್ಟಚೈತನ್ಯವೇ ಅಧ್ಯಾಸಕ್ಕೆ ಪ್ರಮಾಣವೆಂದು ಹೇಳುವುದಾದರೆ, ಅನ್ಯೋನ್ಯಾಶ್ರಯ ದೋಷ ಸಂಭವಿಸಿತು. 'ನಾನು ಜೀವ' 'ನಾನು ಮನುಷ್ಯ' ಎಂಬ ಭ್ರಾಂತಿಜ್ಞಾನವೂ ಸಹ ಪರಮೇಶ್ವರನಿಗೆ ಸಂಬಂಧಿಸಿಲ್ಲವೆಂದೇ ಹೇಳಬೇಕಾದೀತು; ಯಾಕೆಂದರೆ 'ಇವನೇ ಒಳ್ಳೆಯ ಕೆಲಸ ಮಾಡಿಸುತ್ತಾನೆ' ಎಂದು ಶ್ರುತಿಯಲ್ಲಿ ಈಶ್ವರನೇ ಎಲ್ಲಾ ಕರ್ಮ ಗಳನ್ನೂ ಮಾಡಿಸುವುದಾಗಿ ಹೇಳಿದೆ. "ಈಶ್ವರನು ಜೀವಿಗಳೆಲ್ಲರ ಹೃದಯದಲ್ಲೂ ನೆಲಸಿದ್ದಾನೆ. ದೇಹಯಂತ್ರದಲ್ಲಿ ಸಿಲುಕಿರುವ ಈ ಜೀವಿಗಳನ್ನು ಅವನು ತನ್ನ ಮಾಯಾಶಕ್ತಿಯಿಂದಲೇ ಲೋಕವ್ಯವಹಾರಗಳ ಕಡೆಗೆ ತಿರುಗಿಸುತ್ತಾನೆ" ಎಂದು ಗೀತೆಯಲ್ಲೂ ಹಾಗೆಯೇ ತಿಳಿಸಿದೆ. "ಮಣ್ಣೆಂಬುದೇ ಸತ್ಯ. ಅದರಿಂದಾಗುವ ನಾಮರೂಪಗಳೆಲ್ಲವೂ ವಾಗ್ವ್ಯವಹಾರದ ನಿರ್ವಹಣೆಗಾಗಿಯೇ ಬಂದಿರುವುವು" ಎಂದು ಶ್ರುತಿಯಲ್ಲಿ ಅಪವಾದವಿರುವುದರಿಂದ ಅಧ್ಯಾಸವನ್ನು ಒಪ್ಪಲೇಬೇಕೆಂದು ಹೇಳುವುದು ಸರಿಯಲ್ಲ. ಶ್ರುತಿಯಲ್ಲೂ ಶಿವನೇ ಎಲ್ಲಕ್ಕೂ ಉಪಾದಾನನೆಂದು ಹೇಳಿರುವುದರಿಂದ ಪ್ರಪಂಚವನ್ನು ಶಿವಸ್ವರೂಪವೆಂದು ಹೇಳಬೇಕಾಗುವುದೇ ಹೊರತು ಮಿಥ್ಯೆ ಎಂದು ಹೇಳಲಾಗುವುದಿಲ್ಲ. ಜಗತ್ತು ಶಿವಸ್ವರೂಪವೇ ಆದ್ದರಿಂದ ಮಿಥ್ಯೆಯಲ್ಲವೆಂದು ತಿಳಿಸುವ ಸ್ಮೃತಿಯೂ ಈ ಬಗ್ಗೆ ಪ್ರಮಾಣವಾಗಿದೆ. ಆದ್ದರಿಂದ ಜಗತ್ತು ಮಿಥ್ಯೆ ಎಂಬ ವಾದವನ್ನು ತಡೆಯಲು ವ್ಯಾಸನು "ತದನನ್ಯತ್ವಂ ಆರಂಭಣಶಬ್ದಾದಿಭ್ಯಃ" ಎಂಬ ಸೂತ್ರದಲ್ಲಿ ಶಿವನಿಂದ ಹೊರಗೆ ಬಂದಿರುವ ಈ ಜಗತ್ತನ್ನು ಶಿವನ ಸ್ವರೂಪ ವೆಂದೇ ತಿಳಿಸಿದ್ದಾನೆ.

**ಅಧ್ಯಾರೋಪಸ್ತು ತಸ್ಯ? ತದನ್ಯಸ್ಯ ವಾ? ನಾದ್ಯಃ—ಬ್ರಹ್ಮಣಶ್ಶರೀರೇಂದ್ರಿಯಾದಿಶೂನ್ಯತ್ವಾತ್. ನ ದ್ವಿತೀಯಃ—"ಸದೇವ ಸೋಮ್ಯೇದಮಗ್ರ ಆಸೀತ್" (ಛಾಂ. ೬—೨—೧) ಇತ್ಯಾದೌ ಸೃಷ್ಟೇಃ ಪ್ರಾಕ್ ದ್ವಿತೀಯವಸ್ತುನಿಷೇಧದರ್ಶನಾತ್; ತದನ್ಯಸ್ವೀಕಾರೇ ಶುದ್ಧಾದ್ವೈತಭಂಗಪ್ರಸಂಗಾಚ್ಚ. ತಮಃಪ್ರಕಾಶವದ್ವಿರೋಧಾಭಾವಾದ್ಭೇದಾಭೇದೋ ಯುಕ್ತಃ. ದ್ವೈತಾದ್ವೈತಾತ್ಮಕಶರೀರಶಾರೀರಪರಮಾತ್ಮನಾಂ ತಾದಾತ್ಮ್ಯಭಾವೇ ವ್ಯವಹಾರಾಯೋಗಾತ್ ಅದ್ವೈತಿನಾಮಧ್ಯಾಸಾಸಂಭವಾತ್ ನಚ ಬ್ರಹ್ಮಜ್ಞಾನಪರ್ಯಂತಮೇವ ಪ್ರಪಂಚಸ್ಯ ಸತ್ಯತ್ವಂ, ತದೂರ್ಧ್ವಮಪಿ ಕ್ಷುತ್ಪಿಪಾಸಾದಿದ್ವೈತಕರ್ಮದ್ಯೋತನಾತ್ ನಚೈಕಪಕ್ಷೋ ಯುಕ್ತಃ ಅಭೇದಸ್ವೀಕಾರೇ "ದ್ವಾ ಸುಪರ್ಣಾ" (ಮು. ೩—೧—೧)**

ಇತ್ಯಾದಿಭೇದಶ್ರುತಿವಿರೋಧಃ; ಭೇದಸ್ವೀಕಾರೇ "ತತ್ತ್ವಮಸಿ" (ಛಾಂದೋಗ್ಯ. ೬—೮—೭) ಇತ್ಯಾದ್ಯಭೇದಶ್ರುತಿವಿರೋಧಃ. ದ್ವೈತಾದ್ವೈತಸ್ಯೈವ ಸ್ವಾಭಾವಿಕತ್ವೇನ ಸರ್ವಶ್ರುತಿಸಮನ್ವಯಾತ್, ಶ್ರುತಿಸಂಕೋಚೇ ಮಾನಾಭಾವಾತ್, ಯತ್ಕಿಂಚಿಚ್ಛ್ರುತಿಪ್ರಾಮಾಣ್ಯಾಂಗೀಕಾರೇ ಬೌದ್ಧಾದಿವದ್ವೇದಬಾಹ್ಯತ್ವಪ್ರಸಂಗಾತ್, "ಯತೋ ವಾ" (ತೈ. ಭೃ. ೧) ಇತ್ಯಾದಿನಾ ದ್ವೈತಾದ್ವೈತಾತ್ಮಕಪ್ರಪಂಚಬ್ರಹ್ಮಣೋಃ ಕಾರ್ಯಕಾರಣತ್ವದರ್ಶನಾತ್, "ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ". (ಬ್ರಹ್ಮಸೂ. ೧—೪—೨೦) ಇತ್ಯಾದಿ ಸೂತ್ರತ್ರಯೇಣ ಭೇದಾದಿಮತತ್ರಯಸ್ಯೈವಾತ್ರ ವಿವಕ್ಷಿತತ್ವಾತ್, "ಉಭಯವ್ಯಪದೇಶಾತ್ತ್ವಹಿಕುಂಡಲವತ್" (ಬ್ರಹ್ಮಸೂ. ೩—೨—೨೭) ಇತಿಸೂತ್ರೇಣ ಭೇದಾಭೇದಸ್ಯೈವಾವಿರೋಧಿತ್ವೇನ ನಿರ್ದಿಷ್ಟತ್ವಾತ್, "ಭೇದಾಭೇದಸ್ತಥಾಭೇದೋ ಭೇದ ಇತೇ ಮತಾಸ್ತ್ರಯಃ" ಇತಿ ಸೂತಸಂಹಿತಾಯಾಂ, "ಧ್ರುವಂ ಕಶ್ಚಿದ್ಭ್ರೂತೇ ಸಕಲಮಪರಸ್ತ್ವಧ್ರುವಮಿದಂ ಪರೋ ಧ್ರೌವ್ಯಾಧ್ರೌವ್ಯೇ" ಇತಿ ಮಹಿಮ್ನಸ್ತವಾದಿಷು ಚ ಭೇದಾದಿಮತತ್ರಯಸ್ಯೈವ ನಿರ್ದೇಶಾಚ್ಚ. "ಯತೋ ವಾಚೋ ನಿವರ್ತಂತೇ" (ತೈ. ಆ. ೯–೧) ಇತ್ಯಾದಿ ಶ್ರುತೀನಾಂ ಗುರುಕಟಾಕ್ಷರಹಿತಪ್ರಾಕೃತಜೀವಪರತ್ವಂ; ನೋ ಚೇತ್— "ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ"(ತೈ. ಆ. ೯-೧) ಇತ್ಯುತ್ತರವಾಕ್ಯವಿರೋಧಃ, ತನ್ಮಾಹಾತ್ಮ್ಯಜ್ಞಾಪನಪರತ್ವಂ ವಾ. ಅನ್ಯಾರ್ಥತ್ವೇ "ಬ್ರಹ್ಮವಿದಾಪ್ನೋತಿ ಪರಂ" (ತೈ. ಆ. ೧) "ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ ೩-೨-೯) ಇತ್ಯಾದಿ ಬ್ರಹ್ಮಾನುಭವವಿಧಾಯಕ ಬಹುಶ್ರುತಿವಿರೋಧಶ್ಚ.

ಕಿಂಚ–"ನಾವೇದವಿನ್ಮನುತೇ ತಂ ಬೃಹಂತಂ" (ತೈ.ಬ್ರಾ. ೩-೧೨-೯-೭) "ನೈಷಾ ತರ್ಕೇಣ ಮತಿರಾಪನೇಯಾ" (ಕಠ. ೧–೨–೯) "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" (ಬೃ. ೩–೯–೨೬)"ಶಾಸ್ತ್ರಯೋನಿತ್ವಾತ್" (ಬ್ರಹ್ಮಸೂ. ೧-೧-೩) ಇತ್ಯಾದಿಶ್ರುತಿಸೂತ್ರೇಷು ಬ್ರಹ್ಮಣೋ ಮಾನಾಂತರನಿಷೇಧದರ್ಶನಾಚ್ಚ ಸರ್ವಶ್ರುತಿಸಮನ್ವಿತಭೇದಾಭೇದಬ್ರಹ್ಮವಿಚಾರಾರಂಭೋ ಯುಕ್ತಃ.

ಪೂರ್ವಪಕ್ಷಿಯು ಕೇಳುತ್ತಾನೆ. ಇಲ್ಲಿ ಆರೋಪಮಾಡುವುದಾದರೂ ಬ್ರಹ್ಮಕ್ಕೋ ಅಥವಾ ಬೇರೊಂದು ವಸ್ತುವಿಗೋ ಎಂಬ ಪ್ರಶ್ನೆ ಏಳುತ್ತದೆ. ಬ್ರಹ್ಮಕ್ಕೆ ಶರೀರೇಂದ್ರಿಯಗಳಿಲ್ಲದ್ದರಿಂದ ಆರೋಪವು ಸಂಭವಿಸುವಂತಿಲ್ಲ. ಹಾಗೆಯೇ ಅವನಿಗಿಂತಲೂ ಬೇರೊಂದು ವಸ್ತುವಿಗೂ ಆರೋಪವು ಹೊಂದುವುದಿಲ್ಲ; ಯಾಕೆಂದರೆ ‹ ಇದೆಲ್ಲವೂ

ಮೊದಲು ಸದ್ರೂಪವೇ ಆಗಿತ್ತು' ಎಂಬ ಶ್ರುತಿಯಲ್ಲಿ ಸೃಷ್ಟಿಗೆ ಮೊದಲು ಎರಡನೆ ವಸ್ತುವೇ ಇರಲಿಲ್ಲವೆಂದು ತಿಳಿದುಬರುತ್ತದೆ. ಅವನಿಗಿಂತಲೂ ಬೇರೊಂದು ವಸ್ತುವನ್ನು ಅಂಗೀಕರಿಸಿದರೆ, ಅದ್ವೈತಕ್ಕೆ ಭಂಗವುಂಟಾದೀತು. ಆದ್ದರಿಂದ ಬ್ರಹ್ಮದಲ್ಲಿ ಜಗತ್ತು ಅಧ್ಯಸ್ತವಾಗಿದೆ ಎಂಬ ವಾದವು ಯುಕ್ತವೆನಿಸುವುದಿಲ್ಲ. ಕತ್ತಲೆ ಬೆಳಕುಗಳಂತೆ ಭೇದಾಭೇದಗಳಿಗೆ ಪರಸ್ಪರ ವಿರೋಧವಿಲ್ಲದ್ದರಿಂದ ಭೇದಾಭೇದ ವಾದವೇ ಯುಕ್ತವೆನಿಸುತ್ತದೆ. ಯಾಕೆಂದರೆ ಭಿನ್ನವಾದ ಶರೀರಗಳಿಗೂ, ಜೀವರಿಗೂ ಇವುಗಳೆಲ್ಲದರಲ್ಲೂ ಅಭಿನ್ನನಾಗಿ ನೆಲಸಿರುವ ಪರಮಾತ್ಮನಿಗೂ ಏಕರೂಪತೆ ಇರುವುದಾದರೆ ವ್ಯವಹಾರವೇ ಸಂಭವಿಸುವಂತಿಲ್ಲ. ಅದ್ವೈತಿಗಳ ಪ್ರಕಾರ ಬ್ರಹ್ಮದಲ್ಲಿ ಅಧ್ಯಾಸವು ಸಂಭವಿಸದೇ ಇರುವುದರಿಂದ, ಬ್ರಹ್ಮಜ್ಞಾನವಾಗುವವರೆಗೆ ಮಾತ್ರವೇ ಜಗತ್ತು ಸತ್ಯವಾಗಿರುವುದೆಂದು ಹೇಳುವುದೂ ಸರಿಯಲ್ಲ. ಯಾಕೆಂದರೆ ಜ್ಞಾನಿಗಳಿಗೆ ಬ್ರಹ್ಮಜ್ಞಾನವಾದ ಮೇಲೆಯೂ ಹಸಿವು, ನೀರಡಿಕೆ ಮೊದಲಾದ ಭಿನ್ನಕರ್ಮಗಳು ಇದ್ದೇಇರುವುದರಿಂದ ಭೇದ ಅಥವಾ ಅಭೇದ ಎಂಬ ಒಂದು ಪಕ್ಷವನ್ನು ಆಶ್ರಯಿಸುವುದು ಸಮಂಜಸವಾಗುವುದಿಲ್ಲ. ಕೇವಲ ಅಭೇದವನ್ನು ಸ್ವೀಕರಿಸಿದರೆ 'ದ್ವಾಸುಪರ್ಣಾ' ಮೊದಲಾದ ಭೇದಶ್ರುತಿಗಳ ವಿರೋಧವೂ, ಕೇವಲ ಭೇದವನ್ನೇ ಒಪ್ಪಿದರೆ 'ತತ್ತ್ವಮಸಿ' ಮೊದಲಾದ ಅಭೇದ ಶ್ರುತಿಗಳ ವಿರೋಧವೂ ಸಂಭವಿಸುತ್ತದೆ. ಆದರೆ ಭೇದಾಭೇದವೇ ಯುಕ್ತಿ ಮತ್ತು ಅನುಭವಗಳಿಗೆ ಸಹಜವಾಗಿ ಅನ್ವಯಿಸುವುದರಿಂದ, ಇದರಿಂದಲೇ ಸರ್ವಶ್ರುತಿಗಳ ಸಮನ್ವಯವೂ ಆಗಲಿರುವುದು. ಆಯಾ ಶ್ರುತಿಗಳ ಅರ್ಥವನ್ನು ಸಂಕೋಚಪಡಿಸಲಿಕ್ಕೆ ಯಾವ ಪ್ರಮಾಣವೂ ಇಲ್ಲ. ಶ್ರುತಿಗಳಲ್ಲಿ ಕೆಲವನ್ನು ಮಾತ್ರವೇ ಪ್ರಮಾಣವೆಂದು ಅಂಗೀಕರಿಸುವುದರಿಂದ, ಬೌದ್ಧಾದಿ ಮತಗಳಂತೆ ಈ ಭೇದಾಭೇದಮತವೂ ಅವೈದಿಕವೆನಿಸಬೇಕಾಗುತ್ತದೆ. 'ಯತೋ ವಾ ಇಮಾನಿ ಭೂತಾನಿ ಜಾಯಂತೆ' ಈ ಬಗೆಯ ಶ್ರುತಿಗಳು ಭೇದರೂಪವಾದ ಪ್ರಪಂಚವೆಂಬ ಕಾರ್ಯಕ್ಕೆ ಅಭೇದರೂಪನಾದ ಪರಮಾತ್ಮನನ್ನು ಕಾರಣನೆಂದು ತಿಳಿಸುತ್ತವೆ. "ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ" ಈ ಬಗೆಯ ಮೂರು ಸೂತ್ರಗಳಲ್ಲಿ ಭೇದ, ಅಭೇದ ಮತ್ತು ಭೇದಾಭೇದ ಎಂಬ ಮೂರು ಮತಗಳನ್ನೂ ಬಾದರಾಯಣನು ತಿಳಿಸಿದ್ದಾನೆ. ಹಾಗೆಯೇ 'ಉಭಯವ್ಯಪದೇಶಾತ್ತ್ವಹಿಕುಂಡಲವತ್' ಎಂಬ ಸೂತ್ರದಲ್ಲಿ ಭೇದಾಭೇದಮತವೇ ಯಾವ ವಿರೋಧಕ್ಕೂ ಅಂಟಲಾರದೆಂದು ತಿಳಿಸಿದ್ದಾನೆ. ಭೇದ, ಅಭೇದ, ಭೇದಾಭೇದ ಎಂದು ಮೂರು ಮತಗಳಿವೆ ಎಂದು ಸೂತಸಂಹಿತೆ ತಿಳಿಸುತ್ತದೆ. "ಕೆಲವರು ಲೋಕದಲ್ಲಿ ಕಾಣುವ ಎಲ್ಲಾ ವಸ್ತುಗಳನ್ನೂ ಈಶ್ವರನಿಂದ ಭಿನ್ನವೆಂದೂ, ಕೆಲವರು ಅವನ್ನು ಅಭಿನ್ನವೆಂದೂ, ಮತ್ತೆ ಕೆಲವರು ಅವನ್ನು ಭಿನ್ನಾಭಿನ್ನವೆಂದೂ ಹೇಳುತ್ತಾರೆ" ಎಂದು ಮಹಿಮ್ನಸ್ತೋತ್ರದಲ್ಲಿ ಮೂರುಮತಗಳು ನಿರ್ದಿಷ್ಟವಾಗಿವೆ. ಬ್ರಹ್ಮವು ಶಬ್ದಗೋಚರವಲ್ಲವೆಂದು ತಿಳಿಸುವ 'ಯತೋ ವಾಚೋ ನಿವರ್ತಂತೆ' ಎಂದು

ಮುಂತಾದ ಶ್ರುತಿಗಳು ಗುರುಕೃಪೆಗೆ ಪಾತ್ರರಾಗದಿರುವ ಅಸಂಸ್ಕೃತಜೀವರಿಗೆ ಅನ್ವಯಿಸುತ್ತವೆ ಎಂದು ಭಾವಿಸಬೇಕು. ಇಲ್ಲವಾದರೆ 'ಬ್ರಹ್ಮಾನಂದವನ್ನು ತಿಳಿದವನು ಯಾವುದರಿಂದಲೂ ಹೆದರಲಾರನು' ಎಂಬ ಮುಂದಿನ ಮಾತಿಗೆ ವಿರೋಧ ಉಂಟಾದೀತು ಅಥವಾ ಈ ಬಗೆಯ ಶ್ರುತಿಗಳು ಪರಮಾತ್ಮನ ಮಹಿಮಾತಿಶಯವನ್ನು ತಿಳಿಸಲಿಕ್ಕಾಗಿಯೇ ಬಂದಿರುವುವೆಂದಾದರೂ ಭಾವಿಸಬಹುದು. ಇದಕ್ಕಿಂತಲೂ ಬೇರೆ ವಿಧವಾಗಿ ಅಂದರೆ ಬ್ರಹ್ಮ ಶಬ್ದಗೋಚರನೇ ಅಲ್ಲವೆಂದು ಹೇಳುವುವಾದರೆ, 'ಬ್ರಹ್ಮನನ್ನು ತಿಳಿದವನು ಬ್ರಹ್ಮನೇ ಆಗುತ್ತಾನೆ' ಎಂದು ತಿಳಿಸುವ ಅನೇಕ ಶ್ರುತಿಗಳ ವಿರೋಧವು ಸಂಭವಿಸುತ್ತದೆ. ಆದ್ದರಿಂದ 'ವೇದವನ್ನರಿಯದವನು ಬ್ರಹ್ಮವನ್ನರಿಯಲಾರನು' 'ಬ್ರಹ್ಮಜ್ಞಾನವು ತರ್ಕದಿಂದ ದೊರಕುವುದಿಲ್ಲ. 'ಉಪನಿಷತ್ಶ್ರುತಿಪಾದ್ಯವಾದ ಬ್ರಹ್ಮದ ಬಗ್ಗೆ ನಿನ್ನಲ್ಲಿ ಕೇಳುತ್ತೇನೆ' ಇತ್ಯಾದಿ ಶ್ರುತಿಗಳಲ್ಲೂ, 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರದಲ್ಲೂ ಬ್ರಹ್ಮಕ್ಕೆ ಬೇರೆ ಯಾವ ಇತರ ಪ್ರಮಾಣವೂ ಇಲ್ಲವೆಂದು ನಿಷೇಧಿಸಿರುವುದರಿಂದ ಎಲ್ಲಾ ಶ್ರುತಿಗಳಿಗೂ ಅನ್ವಯಿಸುವಂತಹ ಭೇದಾಭೇದವನ್ನು ತಿಳಿಸುವ ಬ್ರಹ್ಮಮೀಮಾಂಸೆಯನ್ನಾರಂಭಿಸುವುದು ಯುಕ್ತವೇ ಆಗಿದೆ.

ಅತ್ರಾಥಶಬ್ದೇನಾನಂತರ್ಯಾರ್ಥೋ ವಿವಕ್ಷಿತಃ. "ಅಥ ಶಬ್ದಾನುಶಾಸನಂ" "ಅಥ ಯೋಗಾನುಶಾಸನಂ" "ಅಥೈಷ ಜ್ಯೋತಿರಥೈಷ ವಿಶ್ವಜ್ಯೋತಿಃ" ಇತ್ಯಾದಾವಿವಾಥಶಬ್ದಸ್ಯ ನಾಧಿಕಾರಾರ್ಥತ್ವಂ, ಜಿಜ್ಞಾಸಾಯಾ ಅನಧಿಕಾರ್ಯತ್ವಾತ್. ನನು ಜಿಜ್ಞಾಸಾಪದಸ್ಯ ವಿಚಾರಲಕ್ಷಕತ್ವಾತ್ ವಿಚಾರಸ್ಯ ಚ ಪ್ರತ್ಯಧಿಕರಣಂ ವರ್ತಿಷ್ಯಮಾಣತ್ವೇನ ಅಧಿಕೃತತ್ವಸಂಭವ ಇತಿಚೇನ್ನ-ಆನಂತರ್ಯಾಭಿಧಾನಮುಖೇನ ವಿಧ್ಯಪೇಕ್ಷಿತಾಧಿಕಾರಿವಿಶೇಷಣಸಮರ್ಪಕತ್ವೇನ ಸಾಧಕತ್ವಂ ವಿಧೀಯತೇ, ತದನಪೇಕ್ಷಿತಾಧಿಕಾರಾರ್ಥಕತ್ವಸ್ಯಾಯೋಗಾತ್. "ಅಥ ಶಬ್ದಾನುಶಾಸನಂ" ಇತ್ಯಾದೇರ್ವಿಧಿಮೂಲಕತ್ವಾಭಾವಾನ್ನಾಧಿಕಾರ್ಯಪೇಕ್ಷಿತತ್ವಂ. ಮಂಗಲಸ್ಯ ಜಿಜ್ಞಾಸಾಯಾಮನ್ವಯಾಸಂಭವಾನ್ನ ಮಂಗಲಾರ್ಥಃ; ಪೂರ್ವಾಚಾರ್ಯಾನುಚಾರಸ್ಥಾಪನಾರ್ಥಂ ಶ್ರವಣಧ್ವನಿಮಾತ್ರೇಣ ಮಂಗಲಾರ್ಥಕತ್ವಂ.

ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ ।
ಕಂಠಂ ಭಿತ್ತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ ॥

ಇತಿ ಸ್ಮೃತೇಃ. "ಅಥಾತಶ್ಶೇಷಲಕ್ಷಣಂ" (ಪೂರ್ವಮೀ ೩-೧-೧) ಇತಿವನ್ನ ಪಕ್ಷಾಂತರಃ; ಪೂರ್ವಮೋಕಸ್ಯಾಪ್ರಕೃತತ್ವಾತ್.

ಅದೀಕ್ಷಿತಸ್ಯ ಮಲತ್ರಯವಿಧ್ವಂಸಾಭಾವಾನ್ನ ಸಾಧನಚತುಷ್ಟಯಾನಂತರ್ಯಂ. ನ ಧರ್ಮಜಿಜ್ಞಾಸಾನಂತರ್ಯಂ, ಧರ್ಮಬ್ರಹ್ಮಶಾಸ್ತ್ರಯೋಃ ಕರ್ತೃಕರ್ಮಫಲಭೇದವ್ಯಪದೇಶಾತ್, ಪ್ರಾಕೃತಕ್ರಿಯಾತ್ಮಕಧರ್ಮಪ್ರತಿಪಾದಕಪೂರ್ವತಂತ್ರಸ್ಯ ಸಿದ್ಧಬ್ರಹ್ಮಪ್ರತಿಪಾದಕತ್ವಾಸಂಭವಾಚ್ಚ.

ನಚ ಅನಿಯತಭೋಜನಗಮನಾದಿವತ್ ಯತ್ಕಿಂಚಿತ್ಪೂರ್ವವೃತ್ತತ್ವಂ, ನಿಯಮವಿಧಿದರ್ಶನಾತ್. ಯತ್ಪೂರ್ವಭಾವಿತ್ವಂ ನಿಯಮನಿಯತಪ್ರಯೋಜಕತಯಾ ಮುಮುಕ್ಷೂಣಾಂ ಮಲತ್ರಯವಿಧ್ವಂಸನೇ ವಿಧೀಯತೇ ತತ್ಪೂರ್ವಕತ್ವಂ ಬ್ರಹ್ಮವಿಚಾರಶಾಸ್ತ್ರಸ್ಯೇತಿ ನಿರ್ಣೀಯತೇ. ಅಸ್ಯ ವಿಷಯಃ ಶ್ರೂಯತೇ ತೈತ್ತಿರೀಯಶಾಖಾಯಾಂ-ಬ್ರಹ್ಮಮೇಧಾಕಾಮಸ್ಯ ತತ್ಪ್ರಾಪ್ತಿಸಾಧನಂ ಕಿಮಿತ್ಯಾಕಾಂಕ್ಷಾಯಾಮಾಹ—"ಯಶ್ಛಂದಸಾಮೃಷಭೋ ವಿಶ್ವರೂಪಃ, ಛಂದೋಭ್ಯೋಽಧ್ಯಮೃತಾತ್ ಸಂಬಭೂವ, ಸ ಮೇಂದ್ರೋ ಮೇಧಯಾ ಸ್ಪೃಣೋತು, ಅಮೃತಸ್ಯ ದೇವಧಾರಣೋ ಭೂಯಾಸಂ, ಶರೀರಂ ಮೇ ವಿಷರ್ಚಣಂ, ಜಿಹ್ವಾ ಮೇ ಮಧುಮತ್ತಮಾ, ಕರ್ಣಾಭ್ಯಾಂ ಭೂರಿ ವಿಶ್ರುವಂ, ಬ್ರಹ್ಮಣಃ ಕೋಶೋಽಸಿ ಮೇಧಯಾ ಪಿಹಿತಃ, ಶ್ರುತಂ ಮೇ ಗೋಪಾಯ" ಇತಿ.

ಅಸ್ಯಾರ್ಥಃ — ಯಃ-ಶಿವಃ, ಛಂದಸಾಮೃಷಭಃ-ಸರ್ವವಿದ್ಯಾಪ್ರಭುಃ, "ಈಶಾನಸ್ಸರ್ವವಿದ್ಯಾನಾಂ" (ಮಹಾನಾ. ೪೭—ಅನು.) ಇತಿ ಶ್ರುತೇಃ. ವಿಶ್ವರೂಪಃ-ಪ್ರಪಂಚಮಯಃ, "ಸರ್ವೋ ಹ್ಯೇಷ ರುದ್ರಃ" (ಮಹಾನಾ. ೧೬—ಅನು.) ಇತಿ ಶ್ರುತೇಃ. ಯಃ ಛಂದೋಭ್ಯಃ-ಆಮ್ನಾಯೇಭ್ಯಃ, ಅಮೃತಾತ್ ಅಧಿಸಂಬಭೂವ - ವೇದೋಪನಿಷದಾಗಮಾದೀನಾಂ ಅಮೃತರೂಪತ್ವಾತ್ ತತ್ಪ್ರತಿಪಾದ್ಯಃ, ವಚನವ್ಯತ್ಯಯಶ್ಛಾಂದಸಃ. ಸ ಇಂದ್ರಃ-ಪರಮೈಶ್ವರ್ಯಶಾಲೀ ಶಿವಃ, ಮಾ-ಮಾಂ, ಮೇಧಯಾ-ಪ್ರಜ್ಞಯಾ, ಸ್ಪೃಣೋತು-ಪ್ರೀಣಯತು, ಬಲಯತು ವಾ. ತದ್ವಿಜ್ಞಾನಾರ್ಥಂ ಪ್ರಜ್ಞಾಬಲಂ ಹಿ ಪ್ರಾರ್ಥ್ಯತೇ. ಅಮೃತಸ್ಯ-ಮೋಕ್ಷಸ್ಯ, ದೇವಧಾರಣಃ-ದೇವಸ್ಯ ಲಿಂಗರೂಪಸ್ಯ ಧಾರಣಂ ಯಸ್ಯ ಸೋಽಹಂ ದೇವಧಾರಣಃ, ಭೂಯಾಸಂ-ಭವೇಯಂ, ಚಿಚ್ಛಕ್ತಿಪ್ರಕಟೀಕೃತಪರಶಿವೇಷ್ಟಲಿಂಗಧಾರೀ ಭೂಯಾಸಮಿತ್ಯರ್ಥಃ. ಅತಃ ಮೇ ಶರೀರಂ ವಿಚರ್ಷಣಂ-ಕಿಲ್ಬಿಷರಹಿತಂ ಭೂಯಾದಿತ್ಯರ್ಥಃ. ಮೇ ಜಿಹ್ವಾ. ಮಧುಮತ್ತಮಾ-ಮಧುಮತೀ, ಅತಿಶಯೇನ ಮಧುರಸಂಭಾಷಿಣೀ ಭೂಯಾತ್. ಕರ್ಣಾಭ್ಯಾಂ-ಶ್ರೋತ್ರಾಭ್ಯಾಂ, ಭೂರಿ ವಿಶ್ರುವಂ-ಶಿವಜ್ಞಾನಸಂಯೋಗ್ಯಕಾರ್ಯಕಾರಣಸಂಘಾತರೂಪೋ ಭೂಯಾಸಮಿತ್ಯರ್ಥಃ.

ತನ್ಮೇಧಾ ಚ ತದರ್ಥಮೇವ ಪ್ರಾರ್ಥ್ಯತೇ. ಬ್ರಹ್ಮಣಃ-ಶಿವಸ್ಯ, ಕೋಶೋಽಸಿ-ಅಸೇರಿವೋಪಲಬ್ಧ್ಯಧಿಷ್ಠಾನಮಿತ್ಯರ್ಥಃ. ಮೇಧಯಾ-ಲೌಕಿಕಪ್ರಜ್ಞಯಾ, ಪಿಹಿತಃ-ಆಚ್ಛಾದಿತಃ, ಸಾಮಾನ್ಯಪ್ರಜ್ಞಯಾ ಅವಿದಿತಸತ್ತ್ವ ಇತ್ಯರ್ಥಃ. "ನಾವೇದವಿನ್ಮನುತೇ ತಂ ಬೃಹಂತಂ" (ತೈ.ಬ್ರಾ. ೩-೧೨-೯-೭) "ನೈಷಾ ತರ್ಕೇಣ ಮತಿರಾಪನೇಯಾ (ಕಠ. ೧-೨-೯) ಇತಿ ಶ್ರುತೇಃ. ಶ್ರುತಂ-ಶ್ರವಣಪೂರ್ವಕಂ ಭಕ್ತಿಜ್ಞಾನಾದಿಕಂ, ಮೇ-ಮಮ, ಗೋಪಾಯ-ರಕ್ಷ; ತತ್ಪ್ರಾಪ್ತ್ಯವಿಸ್ಮರಣಾದಿಕಂ ಕುರ್ವಿತಿಭಾವಃ.

'ಅಥಾತೋಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿ ಅಥಶಬ್ದವು ಅನಂತರ ಎಂಬ ಅರ್ಥವನ್ನು ತಿಳಿಸುತ್ತದೆ. "ಅಥ ಶಬ್ದಾನುಶಾಸನಂ" "ಅಥ ಯೋಗಾನುಶಾಸನಂ" ಈ ಬಗೆಯ ವಾಕ್ಯಗಳಲ್ಲಿರುವಂತೆ ಇಲ್ಲಿ ಅಥ ಶಬ್ದಕ್ಕೆ ಅಧಿಕಾರವೆಂಬ ಅರ್ಥ ಹೊಂದುವುದಿಲ್ಲ. ಯಾಕೆಂದರೆ ಜಿಜ್ಞಾಸೆಗೆ ವಿಚಾರವೇ ಅರ್ಥವಾಗುವುದರಿಂದ ಇಲ್ಲಿ ಅಧಿಕಾರದ ಪ್ರಸಕ್ತಿಯೇ ಇಲ್ಲ. ಪ್ರತಿಯೊಂದು ಅಧಿಕರಣದಲ್ಲೂ ವಿಚಾರವನ್ನು ನಡೆಸಬೇಕಾಗಿರುವುದರಿಂದ ಒಂದೊಂದು ವಿಚಾರವೂ ಅಲ್ಲಲ್ಲಿ ಏಕೆ ಅಧಿಕೃತವಾಗಬಾರದು ಎಂದು ಕೇಳಿದರೆ ಇದೂ ಯುಕ್ತವೆನಿಸುವುದಿಲ್ಲ, ಯಾಕೆಂದರೆ ಒಂದನ್ನು ಹೇಳಿದನಂತರವೇ ಬೇರೊಂದನ್ನು ತಿಳಿಸುವುದರ ಮೂಲಕ ಶ್ರುತಿಯ ಅಪೇಕ್ಷೆಯಂತೆ ಅಧಿಕಾರಿವಿಶೇಷವನ್ನು ತಿಳಿಸುತ್ತ ಅಥಶಬ್ದವು ಸಾರ್ಥಕವಾಗಬೇಕೆಂದೇ ಹೇಳಬೇಕಾಗುತ್ತದೆ. ಆ ವಿಷಯಕ್ಕೆ ಅನಾವಶ್ಯಕವಾದ ಅಧಿಕಾರವನ್ನು ತಿಳಿಸುವುದರಲ್ಲಿ ಅರ್ಥವಿಲ್ಲ. ಆದ್ದರಿಂದ ಅಥಶಬ್ದಕ್ಕೆ ಅಧಿಕಾರ ಎಂಬ ಅರ್ಥವು ಹೊಂದುವುದಿಲ್ಲ. 'ಅಥ ಶಬ್ದಾನುಶಾಸನಂ' ಎಂಬ ಹೇಳಿಕೆ ಯಾವ ವಿಧಿಯನ್ನೂ ಅಪೇಕ್ಷಿಸಿ ಹೊರಟಿಲ್ಲವಾದ್ದರಿಂದ ಅಲ್ಲಿ ಅಧಿಕಾರಿಯ ಅಪೇಕ್ಷೆ ತೋರುವುದಿಲ್ಲ.

ಅಥಶಬ್ದಕ್ಕೆ ಮಂಗಳವೆಂಬ ಅರ್ಥವನ್ನು ಹೇಳುವುದಾದರೂ, ಅದಕ್ಕೆ ಜಿಜ್ಞಾಸೆಯಲ್ಲಿ ಅನ್ವಯವಾಗದಿರುವುದರಿಂದ ಆ ಅರ್ಥವೂ ಹೊಂದುವುದಿಲ್ಲ. ಹಿಂದಿನ ಆಚಾರ್ಯರು ಸ್ಥಾಪಿಸಿದ ಸಂಪ್ರದಾಯವನ್ನು ಸ್ಥಿರಪಡಿಸಲಿಕ್ಕಾಗಿ ಅಥ ಎಂಬ ಎರಡು ಅಕ್ಷರಗಳ ಉಚ್ಚಾರಣೆಯ ಮೂಲಕವೇ ಅದು ಮಂಗಳವಾಗುವುದೇ ಹೊರತು ಅದಕ್ಕೆ ಮಂಗಳವೆಂಬ ಅರ್ಥವಿಲ್ಲ. 'ಓಂಕಾರವೂ ಅಥಶಬ್ದವೂ ಮೊದಲಿಗೆ ಬ್ರಹ್ಮದ ಕಂಠದಿಂದ ಹೊರಗೆ ಬಂದವು. ಆದ್ದರಿಂದ ಅವೆರಡೂ ಮಂಗಳ ಬೋಧಕಗಳು' ಎಂಬ ಸ್ಮೃತಿಯೇ ಈ ಬಗ್ಗೆ ಪ್ರಮಾಣವಾಗಿದೆ. ಆದ್ದರಿಂದ ಅಥಶಬ್ದವು ಮಂಗಳವೆಂಬ ಅರ್ಥವನ್ನು ತಿಳಿಸುವುದಿಲ್ಲ. 'ಅಥಾತಶ್ಶೇಷಲಕ್ಷಣಂ' ಎಂಬ ಕಡೆ ಇರುವಂತೆ ಅಥಶಬ್ದವು ಇಲ್ಲಿ ಬೇರೊಂದು ಪಕ್ಷವನ್ನು ಸೂಚಿಸಲಾರದು. ಯಾಕೆಂದರೆ ಈ ಬ್ರಹ್ಮಮೀಮಾಂಸೆಯಲ್ಲಿ ಮೊದಲು ಯಾವೊಂದು ಪಕ್ಷವನ್ನೂ ಹೇಳಿಲ್ಲವಾದ್ದರಿಂದ ಅಥಶಬ್ದವು ಬೇರೊಂದು ಪಕ್ಷವನ್ನು ಸೂಚಿಸುವಂತಿಲ್ಲ.

ದೀಕ್ಷಾಸಂಸ್ಕಾರವಿಲ್ಲದವನಿಗೆ ಮೂರು ಮಲಗಳೂ ನಾಶವಾಗದೇ ಇರುವುದರಿಂದ, ಸಾಧನಚತುಷ್ಟಯವನ್ನು ಪಡೆದ ಅನಂತರವೆಂದು ಅಥಶಬ್ದಕ್ಕೆ ಅರ್ಥವನ್ನು ಹೇಳುವುದೂ ಯುಕ್ತವಲ್ಲ. ಇದೂ ಅಲ್ಲದೆ, ಧರ್ಮಬ್ರಹ್ಮಶಾಸ್ತ್ರಗಳು ಕರ್ತ, ಕರ್ಮ-ಫಲ ಈ ಬಗೆಯ ಭೇದವನ್ನು ಹೇಳಿರುವುದರಿಂದ, ಅಥಶಬ್ದಕ್ಕೆ ಧರ್ಮಜಿಜ್ಞಾಸೆಯ ಅನಂತರವೆಂದು ಅರ್ಥವನ್ನು ಹೇಳಲಾಗುವುದಿಲ್ಲ. ಇದೂ ಅಲ್ಲದೆ ಭೌತಿಕಕ್ರಿಯೆಗಳನ್ನು ತಿಳಿಸುವ ಧರ್ಮಶಾಸ್ತ್ರವು ಸಿದ್ಧವಾದ ಬ್ರಹ್ಮವನ್ನು ಪ್ರತಿಪಾದಿಸುವ ಸಂಭವವೂ ಇಲ್ಲ.

ಅಥ ಶಬ್ದಕ್ಕೆ ಅವ್ಯವಸ್ಥಿತವಾದ ಭೋಜನಾದಿಕ್ರಿಯೆಗಳಂತೆ ಯಾವುದಾದರೊಂದು ಕಾರ್ಯವನ್ನು ಮೊದಲು ಆಚರಿಸಿದ್ದರೆ ಆಯಿತು ಎಂದು ಹೇಳಲೂ ಬರುವುದಿಲ್ಲ. ಯಾಕೆಂದರೆ ಯಾವುದನ್ನು ಮಾಡಲಿಕ್ಕೂ ಒಂದು ನಿಯಮವಿಧಿಯನ್ನು ಅನುಸರಿಸಲೇ ಬೇಕಾಗುತ್ತದೆ. ಮುಮುಕ್ಷುಗಳು ಯಾವುದನ್ನು ಅವಶ್ಯವಾಗಿ ಮಾಡಲೇಬೇಕು ಎಂಬ ನಿಯಮವಿದೆಯೋ, ಯಾವುದು ಮಲತ್ರಯವನ್ನು ಪರಿಹರಿಸಬಲ್ಲದೋ ಅದೇ ಈ ಬ್ರಹ್ಮಮೀಮಾಂಸೆಗೆ ಅವಶ್ಯವಾಗಿ ಮೊದಲು ಆಚರಿಸಬೇಕಾದ ಕ್ರಿಯೆ ಎನಿಸುತ್ತದೆ. ಈ ಅಂಶವನ್ನು ತೈತ್ತಿರೀಯಶಾಖೆಯಿಂದ ನಾವು ತಿಳಿಯಬಹುದು. "ಬ್ರಹ್ಮವನ್ನು ತಿಳಿಯಲಿಚ್ಛಿಸುವವನಿಗೆ ಅದನ್ನು ಹೊಂದಲು ಸಾಧನ ಯಾವುದು" ಎಂಬ ಆಕಾಂಕ್ಷೆಗೆ ಅಲ್ಲಿ ಹೀಗೆ ತಿಳಿಸಲಾಗಿದೆ. "ಯಾವ ಶಿವನು 'ಈಶಾನಃ ಸರ್ವವಿದ್ಯಾನಾಂ' ಎಂಬ ಶ್ರುತಿಯಂತೆ ಸರ್ವ ವಿದ್ಯೆಗಳಿಗೆ ನಿಯಾಮಕನಾಗಿರುವನೋ, 'ಸರ್ವೋ ಹ್ಯೇಷ ರುದ್ರಃ' ಇತ್ಯಾದಿ ಶ್ರುತಿಯಂತೆ ಯಾವನು ವಿಶ್ವಾತ್ಮಕನಾಗಿರುವನೋ, ಯಾವನು ಅಮೃತಮಯವಾದ ವೇದಾಗಮಗಳಲ್ಲಿ ಪ್ರತಿಪಾದ್ಯನಾಗಿರುವನೋ ಅಂತಹ ಪರಮೈಶ್ವರ್ಯಶಾಲಿಯಾದ ಆ ಶಿವನು ನನಗೆ ಸಾಕಷ್ಟು ಪ್ರಜ್ಞಾಬಲವನ್ನು ಅನುಗ್ರಹಿಸಲಿ". "ಮೋಕ್ಷಕ್ಕಾಗಿ ನಾನು ಲಿಂಗರೂಪನಾದ ದೇವನನ್ನು ಧರಿಸುವೆನು" ಅಂದರೆ ಚಿಚ್ಛಕ್ತಿಯ ಸಹಕಾರದಿಂದ ಹೊರಹೊಮ್ಮಿದ ಪರಶಿವನ ಇಷ್ಟಲಿಂಗವನ್ನು ಧರಿಸುವೆನು. ಇದರಿಂದ ನನ್ನ ಶರೀರವು ಪಾಪರಹಿತವಾಗಲಿ. ನನ್ನ ನಾಲಿಗೆ ಮಧುರಾಲಾಪವನ್ನು ನಡೆಸುವ ಸಾಮರ್ಥ್ಯವನ್ನು ಪಡೆಯಲಿ. ಈ ಕಿವಿಗಳು ಶಿವಜ್ಞಾನಕ್ಕೆ ಯೋಗ್ಯವಾದ ಮಾತುಗಳನ್ನು ಕೇಳಲಿ. ಅದಕ್ಕಾಗಿಯೇ ಈ ಪ್ರಜ್ಞಾಶಕ್ತಿಯನ್ನು ಪ್ರಾರ್ಥಿಸುತ್ತೇನೆ. ಇದು ಪರಶಿವನ ಅಧಿಷ್ಠಾನವಾಗಿದೆ. ಬತ್ತಳಿಕೆಯಲ್ಲಿ ಖಡ್ಗವಿರುವಂತೆ, ಇವರಲ್ಲಿ ಶಿವನು ಅಡಗಿರುವನು. ಲೌಕಿಕ ಪ್ರಜ್ಞೆಯು ಶಿವನನ್ನು ಮುಚ್ಚಿದೆ. ಇದರಿಂದ ಅವನ ಸತ್ತ್ವವನ್ನು ತಿಳಿಯಲಾಗುವುದಿಲ್ಲ. 'ವೇದವನ್ನರಿಯದವನು ಬ್ರಹ್ಮನನ್ನು ತಿಳಿಯಲಾರನು' 'ಬ್ರಹ್ಮಜ್ಞಾನವು ತರ್ಕದಿಂದ ದೊರಕಲಾರದು' ಎಂಬ ಶ್ರುತಿಗಳ ಮೂಲಕ ದೊರಕುವ ಭಕ್ತಿಜ್ಞಾನಗಳು ನನ್ನನ್ನು ರಕ್ಷಿಸಲಿ; ಅಂದರೆ ಅವನನ್ನು ಪಡೆಯುವ ಬಗೆಯನ್ನು

ನನ್ನಲ್ಲಿ ಮರೆಯದಂತೆ ಮಾಡಲಿ" ಹೀಗೆ ತೈತ್ತಿರೀಯ ಶಾಖೆಯಲ್ಲಿ ಬ್ರಹ್ಮವಿಮಾಂಸೆಗೆ ಮೊದಲು ಆಚರಿಸಬೇಕಾದ ಕ್ರಿಯೆಯನ್ನು ತಿಳಿಸಲಾಗಿದೆ.

ದೇವಧಾರಣೋ ಭೂಯಾಸಮಿತ್ಯತ್ರ ಬಾಹ್ಯಲಿಂಗಧಾರಣಂ? ಅಂತರ್ಲಿಂಗಧಾರಣಂ? ಪ್ರಣವಧಾರಣಂ ವಾ? ಇತಿ ಸಂದೇಹಃ. "ತಂ ದೈವತಾನಾಂ ಪರಮಂ ಚ ದೈವತಂ" (ಶ್ವೇತಾ. ೬-೭) "ತಸ್ಮಾದ್ದೇವಶ್ಶಿವಃ ಸ್ಮೃತಃ" "ದೇವ್ಯಾಯುತಂ ದೇವತಸಂ ಯುಪಾನಂ" ಇತ್ಯಾದೌ ದೇವಶಬ್ದಸ್ಯ ಪರಶಿವಪರತ್ವೇನ ಬಹುಶಃ ಪ್ರಯೋಗದರ್ಶನಾತ್, ಅನ್ಯದೇವಧಾರಣಕರ್ತವ್ಯತಾವಿಧಾಯಕಶಾಸ್ತ್ರಾದರ್ಶನಾದಾಚಾರಾಭಾವಾಚ್ಚ. ಧಾರಣಶಬ್ದಸ್ಯ ಕರ್ತರಿ ಲ್ಯುಡಂತತ್ವೇನ ದೇವಂ ಧರತೀತ್ಯರ್ಥೇ ಸಿದ್ಧೇ ಸತಿ, ಅಮೃತಸ್ಯ–ಮುಕ್ತ್ಯರ್ಥಂ ದೇವಧಾರಣೋ ಭೂಯಾಸಂ, ತಸ್ಮಾತ್ ಮಾಂ ಮೇಧಯಾ ಸ್ಪೃಣೋತು–ಸಂಯೋಜಯತು ಇತ್ಯಾದಿನಾ ಲಿಂಗಧಾರಣಪ್ರತೀತೇಃ, ಭೂಯಾಸಮಿತ್ಯತ್ರ ಲಿಙ್ಲೋಽಪಿ ಸತ್ತ್ವೇನ ವಿಧ್ಯರ್ಥೋಪಪತ್ತೇಶ್ಚ ಬ್ರಹ್ಮಮೇಧಾಕಾಮಸ್ಯ ಲಿಂಗಧಾರಣಾವಶ್ಯಕತ್ವಂ ಪ್ರತೀಯತೇ.

ಕಿಂಚ—"ಯಶ್ಛಂದಸಾಮೃಷಭೋ ವಿಶ್ವರೂಪಃ" ಇತ್ಯಾದಿನಾ ಪ್ರಣವಪರತ್ವಮಪಿ ಸೂಚಿತಂ. "ಯೋ ವೇದಾದೌ ಸ್ವರಃ ಪ್ರೋಕ್ತಃ" (ಮಹಾನಾ. ಅನು. ೧೦) ಇತ್ಯನೇನ ಛಂದೋವೃಷಭತ್ವಂ, "ಓಂ ತತ್ಸರ್ವಂ" (ಮಹಾನಾ. ಅನು. ೨೮) ಇತ್ಯಾದಿನಾ ವಿಶ್ವರೂಪತ್ವಾದಿಕಂ, "ಬ್ರಹ್ಮಣಃ ಕೋಶೋಽಸಿ" ಇತ್ಯತ್ರ ಪರಬ್ರಹ್ಮಾಧಿಷ್ಠಾನತ್ವಂ ಚ ತಸ್ಯೈವೋಪಪನ್ನಮಿತಿ ಅಂತರ್ಧಾರಣವಿಧಾಯಕತ್ವಪರತ್ವಮಪಿ ಸೂಚಿತಂ, ಯಮಾದ್ಯಷ್ಟಾಂಗಯೋಗೇಷು ವೈದಿಕಾನಾಮಂತರ್ಧಾರಣಸ್ಯ ವಿಧೇಯತ್ವಾಚ್ಚ.

'ದೇವಧಾರಣಃ' ಎಂಬಲ್ಲಿ ಬಾಹ್ಯಲಿಂಗಧಾರಣವೋ ಅಂತರ್ಲಿಂಗಧಾರಣವೋ ಪ್ರಣವಧಾರಣವೋ ಎಂಬ ಸಂದೇಹ ಉಂಟಾಗುತ್ತದೆ; ಯಾಕೆಂದರೆ 'ನೀನು ದೇವರೆಲ್ಲರಲ್ಲೂ ಉತ್ಕೃಷ್ಟನಾಗಿದ್ದೀಯೆ, ಆದ್ದರಿಂದ ದೇವನೆಂದರೆ ಶಿವನೆಂದೇ ತಿಳಿಯಬೇಕು' 'ದೇವಿಯೊಡಗೂಡಿ ಸುಂದರವಿಗ್ರಹನಾದ ಯುವಕನು" ಈ ಶ್ರುತಿಗಳಲ್ಲಿ ದೇವಶಬ್ದವು ಪರಮಶಿವನಿಗೇ ಅನ್ವಯಿಸುತ್ತದೆ. ಶಿವನಲ್ಲದೆ ಬೇರೆ ದೇವನನ್ನು ಧರಿಸಬೇಕೆಂಬ ಶಾಸ್ತ್ರವು ಎಲ್ಲಿಯೂ ಕಂಡುಬಂದಿಲ್ಲ ಮತ್ತು ಆ ಬಗೆಯ ಆಚಾರವೂ ಜನರಲ್ಲಿ ರೂಢಿಯಲ್ಲಿಲ್ಲ. ಇಲ್ಲಿ ಧಾರಣಶಬ್ದವು ಧೃಧಾತುವಿಗೆ ಕರ್ತ್ರರ್ಥದಲ್ಲಿ ಲ್ಯುಟ್ ಪ್ರತ್ಯಯವನ್ನು ಹಚ್ಚಿ ಸಿದ್ಧವಾಗುವುದರಿಂದ ಅದಕ್ಕೆ ದೇವಂ+ಧರತಿ ದೇವನನ್ನು ಧರಿಸುತ್ತಾನೆ ಎಂಬ ಅರ್ಥವು ಸಿದ್ಧವಾಗುತ್ತದೆ. "ಅಮೃತವನ್ನು ಪಡೆಯಲಿಕ್ಕಾಗಿ ದೇವನನ್ನು ಧರಿಸುತ್ತೇನೆ. ಆದ್ದರಿಂದ ಆ ದೇವನು

ನನ್ನಲ್ಲಿ ಪ್ರಜ್ಞೆಯನ್ನು ಹೆಚ್ಚಿಸಲಿ" ಎಂದು ಋಷಿಗಳ ಪ್ರಾರ್ಥನೆಯಿಂದ ಬಾಹ್ಯಲಿಂಗ ಧಾರಣವೇ ಸ್ಪಷ್ಟಪಡುತ್ತದೆ. 'ಭೂಯಾಸಂ' ಎಂಬಲ್ಲಿ ಲಙ್ ಲಕಾರವಿರುವುದರಿಂದಲೂ, ಇಲ್ಲಿ ವಿಧ್ಯರ್ಥವೇ ಯುಕ್ತವಾಗಿರುವುದರಿಂದಲೂ ಬ್ರಹ್ಮನನ್ನು ತಿಳಿಯಲಿಚ್ಛಿಸುವವನಿಗೆ ಬಾಹ್ಯಲಿಂಗಧಾರಣದ ಆವಶ್ಯಕತೆಯೇ ಇಲ್ಲಿ ಸ್ಪಷ್ಟಪಡುತ್ತದೆ. ಇದೂ ಅಲ್ಲದೆ ಯಾವನು ವೇದಗಳಿಗೆ ನಿಯಾಮಕನೋ' ಎಂದು ಹೇಳಿದ್ದರಿಂದ ಈ ಮಂತ್ರ ಪ್ರಣವಕ್ಕೂ ಅನ್ವಯಿಸುವುದೆಂದು ತಿಳಿದುಬರುತ್ತದೆ. 'ವೇದಗಳ ಆದಿಯಲ್ಲಿ ಯಾವುದು ಸ್ವರವೆಂದು ಉಕ್ತವಾಗಿದೆಯೋ' ಎಂದು ಹೇಳಿದ್ದರಿಂದ 'ಛಂದಸಾಂ ವೃಷಭಃ' ಎಂಬುದರ ಅರ್ಥ ಪ್ರಣವಕ್ಕೂ ಅನ್ವಯಿಸುತ್ತದೆ. 'ಓಂ ಎಂಬುದೇ ಎಲ್ಲವೂ ಆಗಿದೆ" ಎಂದೂ, 'ಅದೇ ವಿಶ್ವವೂ ಆಗಿದೆ' ಎಂದೂ, 'ಬ್ರಹ್ಮಕ್ಕೆ ಕೋಶವಾಗಿದ್ದೀಯೆ' ಎಂದೂ ಹೇಳಿದ್ದರಿಂದ ಪ್ರಣವವೇ ಬ್ರಹ್ಮಕ್ಕಾಶ್ರಯವಾಗಿದೆ ಎಂದು ಅರ್ಥವಾಗುವುದರಿಂದ ಈ ಮಂತ್ರ ಅಂತರ್ಧಾರಣವನ್ನು ತಿಳಿಸುವುದೇ ಹೊರತು, ಬಾಹ್ಯಲಿಂಗಧಾರಣವನ್ನು ತಿಳಿಸಲಾರದು. ಯಮವೇ ಮೊದಲಾದ ಅಷ್ಟಾಂಗ ಯೋಗಗಳಲ್ಲಿಯೂ ವೈದಿಕರಿಗೆ ಅಂತರ್ಧಾರಣವನ್ನೇ ವಿಧಿಸಲಾಗಿದೆ. ಆದ್ದರಿಂದ ಈ ಶ್ರುತಿಯಲ್ಲಿ ವಿಹಿತವಾಗಿರುವುದು ಅಂತರ್ಧಾರಣವೇ ಅಥವಾ ಬಾಹ್ಯಧಾರಣವೇ ಎಂಬ ಸಂಶಯ ಬರುತ್ತದೆ.

**ಪೂರ್ವಪಕ್ಷಸ್ತು**—ವಿಶ್ವರೂಪ ಇತಿ ಬ್ರಹ್ಮಲಿಂಗಸ್ಯ ನಿರುಪಪದ ಬ್ರಹ್ಮಪದಸ್ಯ ಚ ಪರಿಚ್ಛಿನ್ನಲಿಂಗಪರತ್ವಾಯೋಗಾತ್, ದೇವಧಾರಣ ಇತ್ಯತ್ರ "ದೇವ" ಇತಿ ಪದಚ್ಛೇದಾಭಾವೇ ಗೋಪಾಯೇತ್ಯನ್ವಯಸ್ಯಾಸಂಭವಾತ್, ಭೂಯಾಸಮಿತ್ಯತ್ರ ಆಶೀರ್ಲಿಙ್ತ್ವೇನ ವಿಧ್ಯರ್ಥಕತ್ವಾಸಂಭವಾತ್, "ಲಿಂಗಿನಂ ಚಕ್ರಿಣಂ ದೃಷ್ಟ್ವಾ" ಇತ್ಯಾದಿನಾ ಬಾಹ್ಯಲಿಂಗ ಧಾರಣಸ್ಯ ನಿಷಿದ್ಧತ್ವಾತ್, "ಲಿಂಗಮಧ್ಯೇ ಜಗತ್ಸರ್ವಂ" "ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ" "ಜ್ಯೋತಿರ್ಲಿಂಗಂ ಭ್ರುವೋರ್ಮಧ್ಯೇ ನಿತ್ಯಂ ಧ್ಯಾಯೇತ್ಸದಾ ಯತಿಃ" "ಲಿಂಗಂ ಬ್ರಹ್ಮೈವ ಕೇವಲಂ" ಇತ್ಯಾದಿಷು ಶಿವಸ್ಯ ಪರಬ್ರಹ್ಮಣಃ ಲಿಂಗರೂಪತ್ವೋಪದೇಶಾತ್, ತೈತ್ತಿರೀಯಕೈವಲ್ಯಾದಿಷು "ದಹರಂ ವಿಪಾಪ್ಮಂ ಪರವೇಶ್ಮಭೂತಂ" (ಮಹಾನಾ. ಅನು. ೧೦) "ಹೃತ್ಪುಂಡರೀಕಂ ವಿರಜಂ ವಿಶುದ್ಧಂ" (ಕೈವ. -೬) ಇತ್ಯಾದಿನಾಽಂತರ್ಲಿಂಗಧಾರಣಸ್ಯೈವ ನಿರ್ದಿಷ್ಟತ್ವಾತ್, ಶಾಖಾಂತರೇಷ್ವಪಿ ಬಾಹ್ಯಲಿಂಗಧಾರಣಾದರ್ಶನಾತ್, ನ ಬಾಹ್ಯಲಿಂಗ ಧಾರಣಸ್ಯ ವೈದಿಕತ್ವಂ ಸಿದ್ಧ್ಯತಿ.

**ನನು**–"ವಿಶ್ವಾಧಿಕೋ ರುದ್ರೋ ಮಹರ್ಷಿಃ"(ಮಹಾನಾ. ೧೦ ಅನು) "ತ್ವಂ ದೇವೇಷು ಬ್ರಾಹ್ಮಣಃ" "ತ್ವಂ ದೇವಾನಾಂ ಬ್ರಾಹ್ಮಣಾನಾಮು

ನನ್ನಲ್ಲಿ ಮರೆಯದಂತೆ ಮಾಡಲಿ" ಹೀಗೆ ತೈತ್ತಿರೀಯ ಶಾಖೆಯಲ್ಲಿ ಬ್ರಹ್ಮವಿಮಾಂಸೆಗೆ ಮೊದಲು ಆಚರಿಸಬೇಕಾದ ಕ್ರಿಯೆಯನ್ನು ತಿಳಿಸಲಾಗಿದೆ.

**ದೇವಧಾರಣೋ ಭೂಯಾಸಮಿತ್ಯತ್ರ ಬಾಹ್ಯಲಿಂಗಧಾರಣಂ? ಅಂತರ್ಲಿಂಗಧಾರಣಂ? ಪ್ರಣವಧಾರಣಂ ವಾ? ಇತಿ ಸಂದೇಹಃ. "ತಂ ದೈವತಾನಾಂ ಪರಮಂ ಚ ದೈವತಂ"** (ಶ್ವೇತಾ. ೬-೭) **"ತಸ್ಮಾದ್ದೇವಶ್ಶಿವಃ ಸ್ಮೃತಃ" "ದೇವ್ಯಾಯುತಂ ದೇವತಮಂ ಯುವಾನಂ" ಇತ್ಯದೌ ದೇವಶಬ್ದಸ್ಯ ಪರಶಿವಪರತ್ವೇನ ಬಹುಶಃ ಪ್ರಯೋಗದರ್ಶನಾತ್, ಅನ್ಯದೇವಧಾರಣಕರ್ತವ್ಯತಾವಿಧಾಯಕಶಾಸ್ತ್ರಾದರ್ಶನಾದಾಚಾರಾಭಾವಾಚ್ಚ. ಧಾರಣಶಬ್ದಸ್ಯ ಕರ್ತರಿ ಲ್ಯುಡಂತತ್ವೇನ ದೇವಂ ಧರತೀತ್ಯರ್ಥೇ ಸಿದ್ಧೇ ಸತಿ, ಅಮೃತಸ್ಯ-ಮುಕ್ತ್ಯರ್ಥಂ ದೇವಧಾರಣೋ ಭೂಯಾಸಂ, ತಸ್ಮಾತ್ ಮಾಂ ಮೇಧಯಾ ಸ್ಪೃಣೋತು-ಸಂಯೋಜಯತು ಇತ್ಯಾದಿನಾ ಲಿಂಗಧಾರಣಪ್ರತೀತೇಃ, ಭೂಯಾಸಮಿತ್ಯತ್ರ ಲಿಙೋಽಪಿ ಸತ್ತ್ವೇನ ವಿಧ್ಯರ್ಥೋಪಪತ್ತೇಶ್ಚ ಬ್ರಹ್ಮಮೇಧಾಕಾಮಸ್ಯ ಲಿಂಗಧಾರಣಾವಶ್ಯಕತ್ವಂ ಪ್ರತೀಯತೇ.**

**ಕಿಂಚ—"ಯಶ್ಛಂದಸಾಮೃಷಭೋ ವಿಶ್ವರೂಪಃ" ಇತ್ಯಾದಿನಾ ಪ್ರಣವಪರತ್ವಮಪಿ ಸೂಚಿತಂ. "ಯೋ ವೇದಾದೌ ಸ್ವರಃ ಪ್ರೋಕ್ತಃ"** (ಮಹಾನಾ. ಅನು. ೧೦) **ಇತ್ಯನೇನ ಛಂದೋವೃಷಭತ್ವಂ, "ಓಂ ತತ್ಸರ್ವಂ"** (ಮಹಾನಾ. ಅನು. ೨೮) **ಇತ್ಯಾದಿನಾ ವಿಶ್ವರೂಪತ್ವಾದಿಕಂ, "ಬ್ರಹ್ಮಣಃ ಕೋಶೋಽಸಿ" ಇತ್ಯತ್ರ ಪರಬ್ರಹ್ಮಾಧಿಷ್ಠಾನತ್ವಂ ಚ ತಸ್ಯೈವೋಪಪನ್ನಮಿತಿ ಅಂತರ್ಧಾರಣವಿಧಾಯಕತ್ವಪರತ್ವಮಪಿ ಸೂಚಿತಂ, ಯಮಾದ್ಯಷ್ಟಾಂಗಯೋಗೇಷು ವೈದಿಕಾನಾಮಂತರ್ಧಾರಣಸ್ಯ ವಿಧೇಯತ್ವಾಚ್ಚ.**

'ದೇವಧಾರಣಃ' ಎಂಬಲ್ಲಿ ಬಾಹ್ಯಲಿಂಗಧಾರಣವೋ ಅಂತರ್ಲಿಂಗಧಾರಣವೋ ಪ್ರಣವಧಾರಣವೋ ಎಂಬ ಸಂದೇಹ ಉಂಟಾಗುತ್ತದೆ; ಯಾಕೆಂದರೆ 'ನೀನು ದೇವರೆಲ್ಲರಲ್ಲೂ ಉತ್ಕೃಷ್ಟನಾಗಿದ್ದೀಯೆ, ಆದ್ದರಿಂದ ದೇವನೆಂದರೆ ಶಿವನೆಂದೇ ತಿಳಿಯಬೇಕು' 'ದೇವಿಯೊಡಗೂಡಿ ಸುಂದರವಿಗ್ರಹನಾದ ಯುವಕನು" ಈ ಶ್ರುತಿಗಳಲ್ಲಿ ದೇವಶಬ್ದವು ಪರಮಶಿವನಿಗೇ ಅನ್ವಯಿಸುತ್ತದೆ. ಶಿವನಲ್ಲದೆ ಬೇರೆ ದೇವನನ್ನು ಧರಿಸಬೇಕೆಂಬ ಶಾಸ್ತ್ರವು ಎಲ್ಲಿಯೂ ಕಂಡುಬಂದಿಲ್ಲ ಮತ್ತು ಆ ಬಗೆಯ ಆಚಾರವೂ ಜನರಲ್ಲಿ ರೂಢಿಯಲ್ಲಿಲ್ಲ. ಇಲ್ಲಿ ಧಾರಣಶಬ್ದವು ಧೃಧಾತುವಿಗೆ ಕರ್ತ್ರರ್ಥದಲ್ಲಿ ಲ್ಯುಟ್ ಪ್ರತ್ಯಯವನ್ನು ಹಚ್ಚಿ ಸಿದ್ಧವಾಗುವುದರಿಂದ ಅದಕ್ಕೆ ದೇವಂ+ಧರತಿ ದೇವನನ್ನು ಧರಿಸುತ್ತಾನೆ ಎಂಬ ಅರ್ಥವು ಸಿದ್ಧವಾಗುತ್ತದೆ. "ಅಮೃತವನ್ನು ಪಡೆಯಲಿಕ್ಕಾಗಿ ದೇವನನ್ನು ಧರಿಸುತ್ತೇನೆ. ಆದ್ದರಿಂದ ಆ ದೇವನು

ನನ್ನಲ್ಲಿ ಪ್ರಜ್ಞೆಯನ್ನು ಹೆಚ್ಚಿಸಲಿ" ಎಂದು ಋಷಿಗಳ ಪ್ರಾರ್ಥನೆಯಿಂದ ಬಾಹ್ಯಲಿಂಗ ಧಾರಣವೇ ಸ್ಪಷ್ಟಪಡುತ್ತದೆ. 'ಭೂಯಾಸಂ' ಎಂಬಲ್ಲಿ ಲಙ್ ಲಕಾರವಿರುವುದ ರಿಂದಲೂ, ಇಲ್ಲಿ ವಿಧ್ಯರ್ಥವೇ ಯುಕ್ತವಾಗಿರುವುದರಿಂದಲೂ ಬ್ರಹ್ಮವನ್ನು ತಿಳಿಯ ಲಿಚ್ಛಿಸುವವನಿಗೆ ಬಾಹ್ಯಲಿಂಗಧಾರಣದ ಆವಶ್ಯಕತೆಯೇ ಇಲ್ಲಿ ಸ್ಪಷ್ಟಪಡುತ್ತದೆ. ಇದೂ ಅಲ್ಲದೆ ಯಾವನು ವೇದಗಳಿಗೆ ನಿಯಾಮಕನೋ' ಎಂದು ಹೇಳಿದ್ದರಿಂದ ಈ ಮಂತ್ರ ಪ್ರಣವಕ್ಕೂ ಅನ್ವಯಿಸುವುದೆಂದು ತಿಳಿದುಬರುತ್ತದೆ. 'ವೇದಗಳ ಆದಿಯಲ್ಲಿ ಯಾವುದು ಸ್ವರವೆಂದು ಉಕ್ತವಾಗಿದೆಯೋ' ಎಂದು ಹೇಳಿದ್ದರಿಂದ 'ಛಂದಸಾಂ ವೃಷಭಃ' ಎಂಬುದರ ಅರ್ಥ ಪ್ರಣವಕ್ಕೂ ಅನ್ವಯಿಸುತ್ತದೆ. 'ಓಂ ಎಂಬುದೇ ಎಲ್ಲವೂ ಆಗಿದೆ" ಎಂದೂ, 'ಅದೇ ವಿಶ್ವವೂ ಆಗಿದೆ' ಎಂದೂ, 'ಬ್ರಹ್ಮಕ್ಕೆ ಕೋಶವಾಗಿದ್ದೀಯೆ' ಎಂದೂ ಹೇಳಿದ್ದರಿಂದ ಪ್ರಣವವೇ ಬ್ರಹ್ಮಕ್ಕಾಶ್ರಯ ವಾಗಿದೆ ಎಂದು ಅರ್ಥವಾಗುವುದರಿಂದ ಈ ಮಂತ್ರ ಅಂತರ್ಧಾರಣವನ್ನು ತಿಳಿಸುವುದೇ ಹೊರತು, ಬಾಹ್ಯಲಿಂಗಧಾರಣವನ್ನು ತಿಳಿಸಲಾರದು. ಯಮವೇ ಮೊದಲಾದ ಅಷ್ಟಾಂಗ ಯೋಗಗಳಲ್ಲಿಯೂ ವೈದಿಕರಿಗೆ ಅಂತರ್ಧಾರಣವನ್ನೇ ವಿಧಿಸಲಾಗಿದೆ. ಆದ್ದರಿಂದ ಈ ಶ್ರುತಿಯಲ್ಲಿ ವಿಹಿತವಾಗಿರುವುದು ಅಂತರ್ಧಾರಣವೇ ಅಥವಾ ಬಾಹ್ಯ ಧಾರಣವೇ ಎಂಬ ಸಂಶಯ ಬರುತ್ತದೆ.

ಪೂರ್ವಪಕ್ಷಸ್ತು—ವಿಶ್ವರೂಪ ಇತಿ ಬ್ರಹ್ಮಲಿಂಗಸ್ಯ ನಿರುಪಪದ ಬ್ರಹ್ಮಪದಸ್ಯ ಚ ಪರಿಚ್ಛಿನ್ನಲಿಂಗಪರತ್ವಾಯೋಗಾತ್, ದೇವಧಾರಣ ಇತ್ಯತ್ರ "ದೇವ" ಇತಿ ಪದಚ್ಛೇದಾಭಾವೇ ಗೋಪಾಯೇತ್ಯನ್ವಯಸ್ಯಾ ಸಂಭವಾತ್, ಭೂಯಾಸಮಿತ್ಯತ್ರ ಆಶೀರ್ಲಿಙತ್ವೇನ ವಿಧ್ಯರ್ಥಕತ್ವಾ ಸಂಭವಾತ್, "ಲಿಂಗಿಸಂ ಚಕ್ರಿಣಂ ದೃಷ್ಟ್ವಾ" ಇತ್ಯಾದಿನಾ ಬಾಹ್ಯಲಿಂಗ ಧಾರಣಸ್ಯ ನಿಷಿದ್ಧತ್ವಾತ್, "ಲಿಂಗಮಧ್ಯೇ ಜಗತ್ಸರ್ವಂ" "ಪ್ರಾಣೇಷ್ವಂತ ರ್ಮನಸೋ ಲಿಂಗಮಾಹುಃ" "ಜ್ಯೋತಿರ್ಲಿಂಗಂ ಭ್ರುವೋರ್ಮಧ್ಯೇ ನಿತ್ಯಂ ಧ್ಯಾಯೇತ್ಸದಾ ಯತಿಃ" "ಲಿಂಗಂ ಬ್ರಹ್ಮೈವ ಕೇವಲಂ" ಇತ್ಯಾದಿಷು ಶಿವಸ್ಯ ಪರಬ್ರಹ್ಮಣಃ ಲಿಂಗರೂಪತ್ವೋಪದೇಶಾತ್, ತೈತ್ತಿರೀಯಕೈವಲ್ಯಾದಿಷು "ದಹರಂ ವಿಪಾಪ್ಮಂ ಪರವೇಶ್ಮಭೂತಂ" (ಮಹಾನಾ. ಅನು. ೧೦) "ಹೃತ್ಪುಂಡರೀಕಂ ವಿರಜಂ ವಿಶುದ್ಧಂ" (ಕೈವ. -೬) ಇತ್ಯಾದಿನಾಂತರ್ಲಿಂಗಧಾರಣಸ್ಯೈವ ನಿರ್ದಿಷ್ಟತ್ವಾತ್, ಶಾಖಾಂತರೇಷ್ವಪಿ ಬಾಹ್ಯಲಿಂಗಧಾರಣಾದರ್ಶನಾತ್, ನ ಬಾಹ್ಯಲಿಂಗ ಧಾರಣಸ್ಯ ವೈದಿಕತ್ವಂ ಸಿದ್ಧ್ಯತಿ.

ನನು—"ವಿಶ್ವಾಧಿಕೋ ರುದ್ರೋ ಮಹರ್ಷಿಃ"(ಮಹಾನಾ. ೧೦ ಅನು) "ತ್ವಂ ದೇವೇಷು ಬ್ರಾಹ್ಮಣಃ" "ತ್ವಂ ದೇವಾನಾಂ ಬ್ರಹ್ಮಣಾನಾಮು

ಧಿಪತಿಃ ಕ್ಷತ್ರಿಯಾಣಾಮಧಿಪತಿರ್ವಿಷ್ಣುಃ'' ಇತ್ಯಾದಿಶ್ರುತಿಷ್ವದ್ವಿತೀಯಸ್ಯ ಶಿವಸ್ಯ ವಿಶ್ವಾಧಿಕತ್ವ-ಬಾಹ್ಮಣತ್ವ-ಬ್ರಾಹ್ಮಣಾಧಿಪತಿತ್ವದರ್ಶನಾತ್, ತತ್ಪ್ರಣೀತ ಕಾಮಿಕಾದಿಪಾಶುಲಾಂತಾಗಮವಿರುದ್ಧಮನ್ವಾದಿಸ್ಮೃತಿಪುರಾಣಾನಾಂ ಮಾನಾಭಾವಾತ್. ನನು ಯಜುರ್ವೇದಸಂಹಿತಾಯಾಂ ತ್ರಿಪುರಸಂಹಾರೇ—"ತೇಷಾಮಸುರಾಣಾಂ ತಿಸ್ರಃ ಪುರ ಆಸನ್'' ಇತ್ಯಾರಭ್ಯ "ಸೋಽಬ್ರವೀದ್ವರಂ ವೃಣಾ ಅಹಮೇವ ಪಶೂನಾಮಧಿಪತಿರಸಾನಿ,'' (ತೈ. ಸಂ. ೬-೨-೩) ಇತ್ಯಾದಿನಾ ಬ್ರಹ್ಮವಿಷ್ಣ್ವಾದಿದೇವೇಷು ಪಶುತ್ವಸ್ಯ ಶಿವೇ ಪಶುಪತಿತ್ವಸ್ಯ ತೇಷು ಶಿವಲಿಂಗಭಸ್ಮರುದ್ರಾಕ್ಷಾದಿಶೈವಲಾಂಛನಧಾರಣಸ್ಯ ಚ ಶ್ರೂಯಮಾಣತ್ವಾತ್, ಲೋಕೇ ಆರಾಧ್ಯಾರಾಧಕಪ್ರಭುಭೃತ್ಯಯೋಸ್ತಥಾ ದರ್ಶನಾತ್, "ಸರ್ವಲಿಂಗಂ ಸ್ಥಾಪಯತಿ'' ಇತ್ಯಾದಿಭಿಶ್ಚ ಬಾಹ್ಯಲಿಂಗಧಾರಣಸ್ಯ ವಿಧೇಯತ್ವದರ್ಶನಾತ್, ರಾಗದ್ವೇಷಾದಿಪಾಶಬದ್ಧಾನಾಂ ಪಶುಭಾವಮಾಪನ್ನಾನಾಂ ಮುಮುಕ್ಷೂಣಾಂ ಭಕ್ತಾನಾಮಸ್ಮಾಕಂ ಪತಿಲಾಂಛನಾತ್ಮಕಪರಶಿವೇಷ್ಟಲಿಂಗಧಾರಣಂ ಕಿಮು ವಕ್ತವ್ಯಂ? ಇತಿ ಚೇನ್ನ.

ಇಲ್ಲಿ ಪೂರ್ವಪಕ್ಷ ಹೀಗೆ ಬರುತ್ತದೆ. ಬ್ರಹ್ಮಕ್ಕೆ ಅನ್ವಯಿಸುವಂತೆ ಯಾವ ವಿಶೇಷಸೂಚನೆಯೂ ಇಲ್ಲದೆ ಇರುವುದರಿಂದ, ಇಲ್ಲಿ ಬಂದಿರುವ "ವಿಶ್ವರೂಪಃ" ಎಂಬ ಪದವು ಖಂಡಲಿಂಗವನ್ನು ತಿಳಿಸುವುದು ಸಾಧ್ಯವಿಲ್ಲ. "ದೇವಧಾರಣ" ಎಂಬಲ್ಲಿ ದೇವ ಎಂದು ಪದಚ್ಛೇದಮಾಡದೇ ಇದ್ದರೆ, "ಗೋಪಾಯ" ಎಂಬ ಪದದೊಡನೆ ಅನ್ವಯವು ಸಂಭವಿಸುವುದಿಲ್ಲ. "ಭೂಯಾಸಂ" ಎಂಬಲ್ಲಿ ಆಶೀರ್ಲಿಙ ಲಕಾರವೇ ಬಂದಿರುವುದರಿಂದ ವಿಧ್ಯರ್ಥವು ಸಂಭವಿಸುವುದಿಲ್ಲ. "ಲಿಂಗಸಹಿತನೂ ಚಕ್ರವುಳ್ಳವನೂ ಆದವನನ್ನು ನೋಡಿ ಸಚೈಲಸ್ನಾನಮಾಡಬೇಕು" ಎಂದು ಬಾಹ್ಯಲಿಂಗಧಾರಣವನ್ನು ನಿಷೇಧಿಸಲಾಗಿದೆ. "ಲಿಂಗಮಧ್ಯದಲ್ಲಿ ಜಗತ್ತೆಲ್ಲವೂ ಅಡಗಿದೆ" "ಪ್ರಾಣಗಳೊಳಗಿನ ಮನಸ್ಸನ್ನು ಲಿಂಗವೆಂದು ಅನುಭವಿಗಳು ಹೇಳುತ್ತಾರೆ." "ಹುಬ್ಬುಗಳ ಮಧ್ಯದಲ್ಲಿರುವ ಜ್ಯೋತಿರ್ಲಿಂಗವನ್ನು ಯತಿಯು ಯಾವಾಗಲೂ ಧ್ಯಾನಿಸುತ್ತಿರಬೇಕು". "ನಿಷ್ಕಲಬ್ರಹ್ಮವೇ ಲಿಂಗವೆನಿಸುವುದು" ಹೀಗೆ ಅಥರ್ವಣ, ಸಾಮ-ರುದ್ರ-ಕಠವೇ ಮೊದಲಾದ ಉಪನಿಷತ್ತುಗಳು ಪರಬ್ರಹ್ಮವನ್ನು ಅಂತರ್ಲಿಂಗರೂಪವೆಂದು ಹೇಳಿರುವುದರಿಂದ, ಬಾಹ್ಯಲಿಂಗಧಾರಣವು ಶಾಸ್ತ್ರದಲ್ಲಿ ವಿಹಿತವಾಗಿಲ್ಲ.

ತೈತ್ತಿರೀಯ ಕೈವಲ್ಯಗಳಲ್ಲಿಯೂ ಸಹ "ಪಾಪರಹಿತವೂ, ಪರಮಾತ್ಮನಿಗೆ ಆವಾಸಸ್ಥಾನವೂ ಆದ ಯಾವ ದಹರಾಕಾಶವುಂಟೋ ಅಂತಹ ಶುದ್ಧವಾದ ಹೃದಯಕಮಲದಲ್ಲಿ ಪರಮಾತ್ಮನು ವಿರಾಜಿಸುತ್ತಿರುವನು" ಎಂದು ಅಂತರ್ಲಿಂಗಧಾರಣವನ್ನೇ ಹೇಳಲಾಗಿದೆ. ಬೇರೆ ಯಾವ ಶಾಖೆಗಳಲ್ಲೂ ಬಾಹ್ಯಲಿಂಗಧಾರಣವನ್ನು ಹೇಳಿಲ್ಲ.

ಇದೂ ಅಲ್ಲದೆ, "ರುದ್ರನು ಮಹಾಜ್ಞಾನಿಯೂ, ವಿಶ್ವದಲ್ಲಿಯೇ ಉತ್ಕೃಷ್ಟನೂ ಆಗಿದ್ದಾನೆ". "ನೀನೇ ದೇವರಲ್ಲಿ ಬ್ರಾಹ್ಮಣನು, ನೀನು ದೇವತೆಗಳಿಗೂ, ಬ್ರಾಹ್ಮಣರಿಗೂ ಅಧಿಪತಿಯೂ, ಕ್ಷತ್ರಿಯರ ಅಧಿಪತಿಯೂ, ಸರ್ವವ್ಯಾಪಕನೂ ಆಗಿದ್ದೀಯೆ". ಈ ಶ್ರುತಿಗಳು ಅದ್ವಿತೀಯನಾದ ಶಿವನೇ ವಿಶ್ವಾಧಾರನೆಂದೂ, ಬ್ರಾಹ್ಮಣನೆಂದೂ, ಬ್ರಾಹ್ಮಣಾಧಿಪತಿಯೆಂದೂ ತಿಳಿಸಿವೆ. ಆದ್ದರಿಂದಲೇ ಅವನಿಂದ ಹೊರಟಿರುವ ಕಾಮಿಕಾದಿವಾತುಲಾಂತ ಆಗಮಗಳಿಗೆ ವಿರುದ್ಧವಾದ ಮನ್ವಾದಿಸ್ಮೃತಿ ಪುರಾಣಗಳನ್ನು ಪ್ರಮಾಣವೆಂದು ಅಂಗೀಕರಿಸಿಲ್ಲ.

ಇದೂ ಅಲ್ಲದೆ ಯಜುರ್ವೇದದ ಆರನೆಯ ಅಷ್ಟಕದಲ್ಲಿ "ಮೂವರು ರಾಕ್ಷಸರು ಹಿಂದೆ ಇದ್ದರು" ಎಂಬ ಮಾತಿನಿಂದ ಮೊದಲಾಗಿ "ಅವನು ಹೇಳಿದನು, ನಾನೇ ಪಶುಗಳೆನಿಸಿದ ಜೀವರಿಗೆ ನಿಯಾಮಕನಾಗಿರುವೆನು. ನಿಮಗೆ ಬೇಕಾದವರನ್ನು ಕೊಡುವೆನು" ಎಂದು ಕೊನೆಯಾಗಿರುವ ತ್ರಿಪುರಸಂಹಾರಪ್ರಕರಣದಲ್ಲಿ ಬ್ರಹ್ಮ ವಿಷ್ಣುವೇ ಮೊದಲಾದ ದೇವತೆಗಳಿಗೆ ಪಶುತ್ವವೂ, ಶಿವನಿಗೆ ಪಶುಪತಿತ್ವವೂ, ಅವರೆಲ್ಲರಿಗೂ ಶಿವಲಿಂಗ, ಭಸ್ಮ, ರುದ್ರಾಕ್ಷವೇ ಮೊದಲಾದ ಶೈವಲಾಂಛನದ ಧಾರಣವೂ ಉಕ್ತವಾಗಿವೆ. ಲೋಕದಲ್ಲಿಯೂ ಪೂಜ್ಯಪೂಜಕರೆನಿಸಿದ ಪ್ರಭುಭೃತ್ಯರಿಗೆ ಈ ಬಗೆಯ ವರ್ತನೆ ಕಂಡುಬಂದಿದೆ. 'ಸರ್ವಲಿಂಗಂ ಸ್ಥಾಪಯತಿ' ಎಂಬ ವಾಕ್ಯದಲ್ಲಿ ಲಿಂಗವನ್ನು ಧಾರಣಮಾಡಬೇಕೆಂಬ ನಿಯಮ ಏರ್ಪಟ್ಟಿದೆ. ಹೀಗಿರುವಾಗ ರಾಗದ್ವೇಷಗಳಿಂದ ಬದ್ಧರಾಗಿ ಪಶುಭಾವವನ್ನು ಹೊಂದಿ ಮೋಕ್ಷವನ್ನು ಬಯಸುವ ಭಕ್ತರಾದ ನಮಗೆ ಪತಿಯ ಗುರುತೆನಿಸಿದ ಪರಶಿವನ ಚಿತ್ಕಲೆ ಎಂಬ ಇಷ್ಟಲಿಂಗವನ್ನು ಧರಿಸುವ ಬಗ್ಗೆ ಬೇರೆ ಹೇಳುವುದೇನಿದೆ ?

**ಶಿವೋಕ್ತಕಾಮಿಕಾದ್ಯಾಗಮಾನಾಂ ಯಾವಜ್ಜೀವಲಿಂಗಧಾರಣ ವಿಧಾಯಕತ್ವಾತ', "ನ ಹಿ ಕರ್ಮಣಿ ಕರ್ಮಾಂತರಾರಂಭಃ" ಇತಿ ನ್ಯಾಯೇನ ನಿತ್ಯೋಪಾಸನಾದಿಪೌಂಡರೀಕಾಂತಶ್ರೌತಸ್ಮಾರ್ತಕರ್ಮಣಾಂ ನಿರವಕಾಶತ್ವಾತ್, ದೀಕ್ಷಿತಸ್ಯ ಸೂತಕಾದಿನಿಷೇಧದರ್ಶನೇನ ಸಾಪಿಂಡ್ಯಾದ್ಯುತ್ತರಕರ್ಮಣಾಂ ವೈಯರ್ಥ್ಯಪ್ರಸಂಗಾತ್, ಶೈವದೀಕ್ಷಾನಂತರಂ ಜೀವತ್ವಪ್ರೇತತ್ವಾಭಾವೇನ ಸ್ವಜಾತ್ಯಾಶ್ರಮಧರ್ಮಾಣಾಂ ಪ್ರಯೋಜನಾಭಾವಾತ್, "ನ ಕುರ್ಯಾನ್ನಿಷ್ಫಲಂ ಕರ್ಮ" ಇತಿ ನ್ಯಾಯೇನ ವಿಧಿನಿಷೇಧನಿರವಕಾಶತ್ವೇನ ವೇದಬಾಹ್ಯಮತಪ್ರವೇಶಾಪಾತಾತ್, ವಸಿಷ್ಠಾದಿ ಬ್ರಹ್ಮನಿಷ್ಠಾನಾಂ ಮುಕ್ತಾತ್ಮನಾಮಪಿ ಜ್ಯೋತಿಷ್ಟೋಮಾದಿಸರ್ವಕರ್ಮಾರಂಭಶ್ರವಣಾತ್, "ಯದ್ವೈ ಕಿಂ ಚ ಮನುರವದತ್ತದ್ಭೇಷಜಂ" (ತೈ. ಸಂ. ೨-೨-೧೦-೨) ಇತ್ಯಾದಿಶ್ರುತೌ ಮನ್ವಾದಿಸ್ಮೃತೀನಾಮೌಷಧವದ್ವಿಧೇಯತ್ವದರ್ಶನಾತ್, ಬ್ರಹ್ಮಾದೀನಾಂ ಲಿಂಗಧಾರಣದೀಕ್ಷಾವಿಧಾಯಕ**

ಶ್ರುತಿಸ್ಮೃತ್ಯಾಗಮಪುರಾಣೋಪಬೃಂಹಣಾಭಾವಾತ್, "ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" (ಕೈವ. ೧-೨) ಇತಿ ಕೈವಲ್ಯೇ ಶ್ರದ್ಧಾಭಕ್ತ್ಯವಚ್ಛಿನ್ನಧ್ಯಾನಯೋಗಸ್ಯೈವ ಮೋಕ್ಷಸಾಧನತ್ವೇನೋಪದೇಶಾತ್, "ತಮೇವ ವಿದಿತ್ವಾಽತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ" (ಶ್ವೇ. ೩-೮) "ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ" (ಕೈವ. ೧-೯) ಇತ್ಯಾದಿಶ್ರುತಿಷು ಮೋಕ್ಷಸ್ಯ ಜ್ಞಾನಹೇತುಕತ್ವೋಪದೇಶಾತ್, "ಐಶ್ವರ್ಯಮಾತ್ಸರಾದಿಚ್ಛೇನ್ಮೋಕ್ಷಮಿಚ್ಛೇಜ್ಜನಾರ್ದನಾತ್" ಇತ್ಯಾದಿನಾ ಜನಾರ್ದನಸ್ಯೈವ ಮೋಕ್ಷಪ್ರದಾತೃತ್ವಶ್ರವಣಾತ್, "ಸರ್ವಲಿಂಗಂ ಸ್ಥಾಪಯತಿ" ಇತ್ಯತ್ರ ಲಡಂತತ್ವೇನ ವಿಧ್ಯಭಾವಾತ್, ಅನೇಕವಿಧಾನೇ ವಾಕ್ಯಭೇದದೋಷಾಚ್ಚ, ಸ್ಥಾಪಯತೀತಿ ಧಾತ್ವರ್ಥೇನ ಸ್ಥಾವರಲಿಂಗಸ್ಥಾಪನಪರತ್ವದ್ಯೋತನಾತ್, 'ತಚ್ಚ ಲಿಂಗಂ ಪಾಣಿನಾ ಅಭಿಮಂತ್ರಿತಂ ಪಾಣಿಮಾತ್ರಂ' ಇತ್ಯರ್ಥಲಾಭಾಚ್ಚ, ನಿರ್ಮಲಾಂತಃಕರಣಸ್ಯ ಬಾಹ್ಯಕರ್ಮಾಚರಣೇ ಪ್ರಯೋಜನಾಭಾವಾತ್, ರಾಜನಿಷ್ಠತ್ವೇನ ಛತ್ರಾದಿಲಾಂಛನಾನಾಂ ಭೃತ್ಯೇಷ್ವದರ್ಶನಾತ್, ಪರಮೇಶ್ವರನಿಷ್ಠಗರಲಭಕ್ಷಣಭುಜಗಭೂಷಣಾದಿಧರ್ಮಾಣಾಂ ಭಯಹೇತುತ್ವೇನ ಧರ್ತುಮಶಕ್ಯತ್ವಾತ್, ಮಂಗಲಾಚರಣವನ್ಮಾನಾಭಾವೇಽಪಿ ನಿಖಿಲವೈದಿಕಶಿಷ್ಟಾಚಾರಾಭಾವಾತ್, ಸಗುಣೋಪಾಸನಸ್ಯ ನಿರ್ಗುಣಸಾಕ್ಷಿಚೈತನ್ಯಪ್ರಾಪಕತ್ವಾಭಾವಾತ್, ಕಾಮಿಕಾದೀನಾಮಾಲಯೋತ್ಸವಪ್ರತಿಷ್ಠಾದ್ಯಂಶೇಷ್ವೇವ ಪ್ರಮಾಣತ್ವಾತ್, ಪ್ರಾತ್ಯಕ್ಷಿಕಶ್ರುತಿಸ್ಮೃತ್ಯಾಚಾರವಿರುದ್ಧಸ್ಯ ಲಿಂಗಧಾರಣಸ್ಯ ಸ್ಮೃತ್ಯನವಕಾಶನ್ಯಾಯೇನ ಸಾಂಖ್ಯಸ್ಮೃತಿವನ್ನವಿಧೇಯತ್ವಂ.

ಶಿವೋಕ್ತವಾದ ಕಾಮಿಕಾದ್ಯಾಗಮಗಳು ಭಕ್ತರಿಗೆ ದೇಹವಿರುವವರೆಗೂ ಲಿಂಗಧಾರಣವನ್ನು ವಿಧಿಸಿವೆ. 'ಒಂದು ಕರ್ಮದಲ್ಲಿ ನಿರತನಾದವನು ಬೇರೆ ಕರ್ಮವನ್ನಾರಂಭಿಸಬಾರದು' ಎಂಬ ನ್ಯಾಯದಿಂದ ಲಿಂಗಧಾರಣಮಾಡಿಕೊಂಡ ಮೇಲೆ ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಪೌಂಡರೀಕವೇ ಮೊದಲಾದ ಕರ್ಮಗಳ ಆಚರಣೆಗೆ ಅವಕಾಶವೆಲ್ಲಿ ಬಂದೀತು? ದೀಕ್ಷೆಯನ್ನು ಹೊಂದಿದವನಿಗೆ ಸೂತಕದೋಷವೂ ಇಲ್ಲವಾದುದರಿಂದ ಪಿಂಡಪ್ರದಾನವೇ ಮೊದಲಾದ ಉತ್ತರಕ್ರಿಯೆಗಳೆಲ್ಲವೂ ವ್ಯರ್ಥವಾಗುವ ಪ್ರಸಂಗ ಒದಗೀತು? ಶೈವದೀಕ್ಷೆಯಾದಮೇಲೆ ಜೀವಭಾವವಾಗಲೀ, ಶೂದ್ರಭಾವವಾಗಲೀ ಇರುವುದಿಲ್ಲವಾದ್ದರಿಂದ ತನ್ನ ಜಾತಿಯ ಆಶ್ರಮಧರ್ಮಗಳು ಅಪ್ರಯೋಜಕವಾಗುವುದರಿಂದ 'ಫಲವಿಲ್ಲದ ಕರ್ಮವನ್ನಾಚರಿಸಬಾರದು' ಎಂಬ ನ್ಯಾಯದಿಂದ ವಿಧಿನಿಷೇಧಗಳೆರಡಕ್ಕೂ ಅವಕಾಶವಿಲ್ಲದ ಪ್ರಯುಕ್ತ ಲಿಂಗಧಾರಣವು ಅವೈದಿಕವೆನಿಸುತ್ತದೆ. ವಸಿಷ್ಠನೇ ಮೊದಲಾದ ಬ್ರಹ್ಮನಿಷ್ಠರು

ಮುಕ್ತರಾದರೂ ಸಹ ಜ್ಯೋತಿಷ್ಟೋಮವೇ ಮೊದಲಾದ ಎಲ್ಲಾ ಕರ್ಮಗಳನ್ನೂ ಆಚರಿಸುತ್ತಿದ್ದರೆಂದು ನಾವು ಕೇಳಿದ್ದೇವೆ. 'ಮನು ಹೇಳಿರುವುದೆಲ್ಲವೂ ಔಷಧದಂತೆ ಗ್ರಾಹ್ಯವಾಗುವುದು' ಎಂದು ಶ್ರುತಿಯಲ್ಲಿ ಮನ್ವಾದಿಸ್ಮೃತಿಗಳನ್ನು ಔಷಧದಂತೆ ಆಚರಿಸಬೇಕೆಂದು ನಿಯಮಿಸಲಾಗಿದೆ. ಆದ್ದರಿಂದ ಅವನ್ನು ನಿಂದಿಸಲಾಗುವುದಿಲ್ಲ. ಇದೂ ಅಲ್ಲದೆ ಬ್ರಹ್ಮಾದಿ ದೇವತೆಗಳಿಗೆ ಲಿಂಗಧಾರಣ ಮತ್ತು ದೀಕ್ಷೆ ಇವನ್ನು ವಿಧಿಸುವ ಶ್ರುತಿ ಸ್ಮೃತಿ ಆಗಮ ಪುರಾಣಗಳ ಪ್ರಾಮಾಣ್ಯವು ಎಲ್ಲಿಯೂ ದೊರೆಯುವುದಿಲ್ಲ. ಶ್ರದ್ಧಾಭಕ್ತಿಗಳುಳ್ಳ ಧ್ಯಾನಯೋಗದಿಂದ ಪರಶಿವನನ್ನು ತಿಳಿ' ಎಂದು ಕೈವಲ್ಯೋಪನಿಷತ್ತಿನಲ್ಲಿ ಶ್ರದ್ಧಾಭಕ್ತಿಗಳಿಂದ ಕೂಡಿದ ಧ್ಯಾನವನ್ನು ಮೋಕ್ಷಸಾಧನವೆಂದು ಹೇಳಿದೆ. ಬೇರೆ ಕಡೆಯಲ್ಲೂ, 'ಶಿವನನ್ನು ತಿಳಿದವನು ಮೃತ್ಯುವನ್ನು ದಾಟುತ್ತಾನೆ' 'ಮೋಕ್ಷಕ್ಕೆ ಇದಕ್ಕಿಂತಲೂ ಬೇರೆ ಮಾರ್ಗವಿಲ್ಲ', 'ಜ್ಞಾನದಿಂದಲೇ ಕೈವಲ್ಯವು ಲಭಿಸುವುದು' ಎಂದು ಹೇಳಿ ಮೋಕ್ಷಕ್ಕೆ ಜ್ಞಾನವೇ ಸಾಧನವೆಂದು ತಿಳಿಸಲಾಗಿದೆ. 'ಈಶ್ವರನಿಂದ ಐಶ್ವರ್ಯವನ್ನೂ, ವಿಷ್ಣುವಿನಿಂದ ಮೋಕ್ಷವನ್ನೂ ಇಚ್ಛಿಸಬೇಕು' ಎಂಬ ಹೇಳಿಕೆಯಿಂದ ವಿಷ್ಣುವೇ ಮೋಕ್ಷದಾಯಕನೆಂದು ತಿಳಿದು ಬರುತ್ತದೆ. 'ಸರ್ವಲಿಂಗಂ ಸ್ಥಾಪಯತಿ' ಎಂಬಲ್ಲಿ ಕ್ರಿಯಾಪದವು ವರ್ತಮಾನ ಕಾಲದಲ್ಲಿದ್ದು ವಿಧ್ಯರ್ಥಕವಲ್ಲದ್ದರಿಂದ, ಹೀಗೆ ಅನೇಕಾರ್ಥಗಳನ್ನು ವಿಧಿಸುವುದರಿಂದ ವಾಕ್ಯಭೇದವೆಂಬ ದೋಷವು ಸಂಭವಿಸುತ್ತದೆ. ಆದ್ದರಿಂದ 'ಸ್ಥಾಪಯತಿ" ಎಂಬಲ್ಲಿ ಧಾತ್ವರ್ಥದಿಂದ ಸ್ಥಾವರ ಲಿಂಗವನ್ನು ನೆಲದಮೇಲೆ ಸ್ಥಾಪಿಸಬೇಕು ಎಂಬ ಅರ್ಥವೇ ತೋರುತ್ತದೆ. ಅಲ್ಲಿಯೂ ಸಹ 'ಲಿಂಗಪಾಣಿಯಿಂದ ಅಭಿಮಂತ್ರಿತವಾದದ್ದು ಪಾಣಿಮಂತ್ರ, ಎಂಬ ಅರ್ಥವೇ ದೊರಕುತ್ತದೆ. ನಿರ್ಮಲಹೃದಯನಿಗೆ ಬಾಹ್ಯಕರ್ಮಗಳ ಆಚರಣೆಯಿಂದ ಯಾವ ಪ್ರಯೋಜನವೂ ಕಾಣುವುದಿಲ್ಲ. ರಾಜನಲ್ಲಿರಬೇಕಾದ ಶ್ವೇತಛತ್ರವೇ ಮೊದಲಾದ ಗುರುತುಗಳನ್ನು ಸೇವಕರು ಧರಿಸುವಂತಿಲ್ಲ. ಆದ್ದರಿಂದಲೇ ಪರಮೇಶ್ವರನಲ್ಲಿರುವ ವಿಷಭಕ್ಷಣ, ಸರ್ಪಭೂಷಣ ಇವೇ ಮೊದಲಾದ ಧರ್ಮಗಳು ಭಯಂಕರವಾದ್ದರಿಂದ, ಅವನ್ನು ಬೇರೆಯವರು ಧರಿಸಲಾಗುವುದಿಲ್ಲ. ಮಂಗಳಾಚರಣೆಯಲ್ಲಿ ಯಾವ ವಿಧಿಯೂ ಇಲ್ಲದಿದ್ದರೂ ಸಮಸ್ತ ವೈದಿಕರೂ, ಶಿಷ್ಟರೂ ಅದನ್ನು ಹೇಗೆ ಆಚರಿಸುತ್ತಿರುವರೋ ಹಾಗೆ ಎಲ್ಲರೂ ಶಿವಲಾಂಛನಗಳನ್ನು ಧರಿಸುತ್ತಿಲ್ಲವಾದ್ದರಿಂದ, ಲಿಂಗಧಾರಣದ ಬಗ್ಗೆ ಶಿಷ್ಟಾಚಾರವೂ ಪ್ರಮಾಣವಾಗಿಲ್ಲ.

ಇದೂ ಅಲ್ಲದೆ ಸಗುಣಮೂರ್ತಿಯ ಉಪಾಸನವು ನಿರ್ಗುಣವೂ, ಸಾಕ್ಷಿಯೂ ಆದ ಬ್ರಹ್ಮವನ್ನು ದೊರಕಿಸಲಾರದು. ಕಾಮಿಕಾದ್ಯಾಗಮಗಳು ದೇವಾಲಯನಿರ್ಮಾಣದಲ್ಲೂ, ಉತ್ಸವ ಪ್ರತಿಷ್ಠಾದಿಕಾರ್ಯಗಳಲ್ಲೂ ಪ್ರಮಾಣವೆನಿಸಿವೆಯೇ ಹೊರತು ಲಿಂಗಧಾರಣದ ಬಗ್ಗೆ ಪ್ರಮಾಣವಾಗಲಾರವು. ಹೀಗೆ ಪ್ರತ್ಯಕ್ಷವೆನಿಸಿರುವ ಶ್ರುತಿಸ್ಮೃತಿ ಶಿಷ್ಟಾಚಾರಗಳಲ್ಲಿ ಕಲ್ಪ ವಿರುದ್ಧವಾದ್ದರಿಂದ ಸ್ಮೃತ್ಯನವಕಾಶನ್ಯಾಯದಂತೆ ಸಾಂಖ್ಯ

ಸ್ಮೃತಿ ಹೇಗೆ ಪ್ರಮಾಣವಲ್ಲವೋ ಹಾಗೆ ಲಿಂಗಧಾರಣವೂ ನಿಯಮಬದ್ಧವಾಗಲಾರದು. ಹೀಗೆ ಪೂರ್ವಪಕ್ಷ ಒದಗುತ್ತದೆ.

**ಇತಿ ಚೇತ್, ಅತ್ರ ಬ್ರೂಮಃ—ಪ್ರಾತ್ಯಕ್ಷಿಕಶ್ರುತಿಸ್ಮೃತ್ಯಾಗಮಪುರಾಣೇತಿಹಾಸವಿಹಿತತ್ವೇನ ಲಿಂಗಧಾರಣಸ್ಯಾಗ್ನಿಹೋತ್ರಾದಿವದ್ವೈದಿಕತ್ವಂ ಸಿದ್ಧಂ. ತಸ್ಮಾದ್ದೀಕ್ಷಾನಂತರಂ ಬ್ರಹ್ಮಜಿಜ್ಞಾಸಾ ವಿಧೀಯತೇ. " ಯಶ್ಛಂದಸಾಮೃಷಭೋ ವಿಶ್ವರೂಪಃ " ಇತ್ಯತ್ರ ಶಿವಸ್ಯ ಭಕ್ತೋಪಾಸನಾರ್ಥಂ ಪರಿಚ್ಛಿನ್ನತ್ವಂ ಯುಕ್ತಂ. ನಾರಾಯಣೀಯೇ—" ನಿಧನಪತಯೇ ನಮಃ "** (ಮಹಾನಾ. ಅನು. ೧೪) **ಇತ್ಯಾದಿನಾ ಲಿಂಗಸ್ಯ ಸರ್ವಾತ್ಮಕತ್ವಮುಕ್ತ್ವಾ " ಸರ್ವಲಿಂಗಂ ಸ್ಥಾಪಯತಿ " ಇತ್ಯನೇನ ತಸ್ಯೈವ ಪರಿಚ್ಛಿನ್ನಲಿಂಗಧಾರಣವಿಧಾಯಕತ್ವದರ್ಶನಾತ್,**

**ಸರ್ವಾನನಶಿರೋಗ್ರೀವಸ್ಸರ್ವಭೂತಗುಹಾಶಯಃ ।**

**ಸರ್ವವ್ಯಾಪೀ ಸ ಭಗವಾಂಸ್ತಸ್ಮಾತ್ಸರ್ವಗತಶ್ಶಿವಃ ॥** (ಶ್ವೇ. ೩-೧೧)

**" ಪ್ರಾಂಚಃ ಪ್ರತ್ಯಂಚೋಽಹಂ "** (ಅಥರ್ವಶಿರಃ. ೧) **ಇತ್ಯಾದಿಶ್ವೇತಾಶ್ವತರಾಥರ್ವಶಿರಃಪ್ರಭೃತಿಷು ಶ್ರವಣಾಚ್ಚ, " ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ " " ಲಿಂಗೇ ಸುಷುಪ್ತಿಃ " " ಲಿಂಗಂ ಬ್ರಹ್ಮ ಸನಾತನಂ " ಇತ್ಯಥರ್ವಶಿರೋಹಂಸೋಪನಿಷಲ್ಲಿಂಗಪುರಾಣಾದಿಷು ನಿರುಪಪದಬ್ರಹ್ಮಪದಸ್ಯ ಹಸ್ತಕರಪಾಣಿಶಬ್ದವಲ್ಲಿಂಗಪರ್ಯಾಯತ್ವೇನ ನಿರ್ದೇಶಾತ್, " ಅಮೃತಸ್ಯ ದೇವಧಾರಣೋ ಭೂಯಾಸಂ..............ಶ್ರುತಂ ಮೇ ಗೋಪಾಯ " ಇತಿ ವಾಕ್ಯೇ ದೇವೇತಿ ಪದವಿಭಾಗೇ ಅಪರಿಮಿತಾಧಿಕರಣನ್ಯಾಯೇನ ಸನ್ನಿಧಿಶ್ರುತಧಾರಣಶಬ್ದಾನ್ವಯಂ ಪರಿತ್ಯಜ್ಯ ವ್ಯವಹಿತೇ ಗೋಪಾಯೇತ್ಯತ್ರ ಅನ್ವಯಾಯೋಗಾತ್, ಬ್ರಹ್ಮಣಃ ಕೋಶೋಽಸೀತಿ ಸನ್ನಿಹಿತಬ್ರಹ್ಮಪದಸ್ಯೈವ ವಿಭಕ್ತಿವಿಪರಿಣಾಮೇನಾನ್ವಯಸಂಭವಾತ್, ಧಾರಣಶಬ್ದಸ್ಯ ಸಂಯೋಗಾರ್ಥಕತ್ವೇನ ಅಮೃತಪದವಾಚ್ಯಸ್ಯ ಮೋಕ್ಷಸ್ಯ ಅನ್ಯಥಾಽಯೋಗಾತ್,**

**ಲಿಂಗಾಂಗಸಂಗಿನೋ ವತ್ಸ ಪುನರ್ಜನ್ಮ ನ ವಿದ್ಯತೇ ।**

**ಯುಗಪದ್ಜ್ಞಾನಸಿದ್ಧಿಸ್ಸ್ಯಾತ್ತತೋ ಮೋಕ್ಷಮವಾಪ್ನುಯಾತ್ ॥**

**ಇತಿಶಂಕರಸಂಹಿತಾವಚನೇನ ತಸ್ಯೈವ ಮೋಕ್ಷೋಪದೇಶಾತ್, " ಶರೀರಂ ಮೇ ವಿಚರ್ಷಣಂ " ಇತ್ಯಾದಿನಾ ಬಾಹ್ಯಪದಾರ್ಥಫಲವಿಶೇಷವಿಧಾನಾತ್, " ಅತ್ಯಾಶ್ರಮಸ್ಥಸ್ಸಕಲೇಂದ್ರಿಯಾಣಿ "** (ಕೈವ. ೫) **" ಅತ್ಯಾಶ್ರಮೀ ಸರ್ವದಾ ಸಕೃದ್ವಾ ಜಪೇತ್ "** (ಕೈವ. ೨೪) **" ವ್ರತಮೇತತ್ಪಾಶುಪತಂ ಪಶುಪಾಶವಿಮೋಕ್ಷಾಯ "** (ಅಥರ್ವಶಿರಃ ೫) **"ವ್ರತಮೇತ**

**ಚ್ಛಾಂಭವಂ ಸರ್ವೇಷು ವೇದೇಷು ವೇದವಾದಿಭಿರುಕ್ತಂ ಭವತಿ ತಸ್ಮಾತ್ ತತ್ಸಮಾಚರೇನ್ಮುಮುಕ್ಷುರ್ನ ಪುನರ್ಭವಾಯ" (ಕಾಲಾಗ್ನಿರುದ್ರ ೧) "ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ" (ಮುಂ. ೩—೨—೧೦) "ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ" (ಶ್ವೇ. ೬-೨೩) ಇತಿ ಕೈವಲ್ಯಾಥರ್ವಶಿರಃಕಾಲಾಗ್ನಿರುದ್ರಮುಂಡಕಶ್ವೇತಾಶ್ವತರಾದಿಷು ಪಾಶುಪತವ್ರತಸ್ಥಸ್ಯೈವ ಬ್ರಹ್ಮವಿದ್ಯಾಧಿಕಾರಿತ್ವೋಪದೇಶಾಚ್ಚ ಲಿಂಗಧಾರಣದೀಕ್ಷಿತಸ್ಯೈವ ಬ್ರಹ್ಮವಿದ್ಯಾಧಿಕಾರಿತ್ವಂ ಸಿದ್ಧಂ.**

ಈ ಬಗೆಯ ಪೂರ್ವಪಕ್ಷಕ್ಕೆ ಸಮಾಧಾನವನ್ನು ಹೀಗೆ ಹೇಳಲಾಗಿದೆ. ಶ್ರುತಿ ಸ್ಮೃತಿ ಆಗಮ ಪುರಾಣಗಳಲ್ಲೂ, ಇತಿಹಾಸದಲ್ಲೂ ಸ್ಪಷ್ಟವಾಗಿ ವಿಹಿತವಾಗಿರುವುದರಿಂದ, ಲಿಂಗಧಾರಣವು ಅಗ್ನಿಹೋತ್ರದಂತೆ ವೈದಿಕವೆಂದು ಸಿದ್ಧವೆನಿಸಿದೆ. ಆದ್ದರಿಂದ ದೀಕ್ಷೆಯ ಅನಂತರದಲ್ಲಿ ಬ್ರಹ್ಮಜಿಜ್ಞಾಸೆಮಾಡಬೇಕೆಂದು ವೇದಾಂತಶಾಸ್ತ್ರದಲ್ಲಿ ವಿಧಿಸಲಾಗಿದೆ. 'ಯಶ್ಛಂದಸಾಂ ವೃಷಭಃ' ಎಂಬ ಮಂತ್ರದ ಪ್ರಕಾರ ಶಿವನು ಭಕ್ತರ ಉಪಾಸನೆಗಾಗಿ ಪರಿಚ್ಛಿನ್ನನೆನಿಸುವುದು ಯುಕ್ತವೇ ಆಗಿದೆ. ತೈತ್ತಿರೀಯದಲ್ಲಿ 'ನಿಧನಪತಯೇ ನಮಃ'ಎಂಬ ಮಂತ್ರದಲ್ಲಿ ಲಿಂಗವನ್ನು ಸರ್ವಾತ್ಮಕವೆಂದು ಹೇಳಿ, 'ಸರ್ವಲಿಂಗಂ ಸ್ಥಾಪಯತಿ' ಎಂಬುದರಿಂದ ಅವನ ಖಂಡರೂಪವೆನಿಸಿದ ಲಿಂಗವನ್ನು ಧರಿಸಬೇಕೆಂದು ವಿಧಿಸಲಾಗಿದೆ. "ಎಲ್ಲರ ಮುಖ, ಶಿರಸ್ಸು, ಕುತ್ತಿಗೆಗಳಲ್ಲೂ ಇರುತ್ತ, ಎಲ್ಲಾ ಪ್ರಾಣಿಗಳ ಎದೆಗುಹೆಯಲ್ಲೂ ನೆಲಸಿರುತ್ತ, ಎಲ್ಲೆಲ್ಲಿಯೂ ವ್ಯಾಪಿಸಿರುವ ಪೂಜ್ಯನಾದ ಶಿವನು ಎಲ್ಲಾ ಕಡೆಯೂ ತುಂಬಿರುವನು" "ನಾನು ಪೂರ್ವದಲ್ಲಿಯೂ ಇರುವೆನು, ಪಶ್ಚಿಮದಲ್ಲೂ ಇರುವೆನು" ಎಂದು ಶ್ವೇತಾಶ್ವತರ, ಅಥರ್ವಶಿರಸ್ಸು ಮೊದಲಾದ ಶ್ರುತಿಗಳಲ್ಲೂ ಹಾಗೆಯೇ ನಾವು ಕೇಳಿದ್ದೇವೆ. "ಪ್ರಾಣಿಗಳೊಳಗಿನ ಮನಸ್ಸನ್ನು ಲಿಂಗವೆಂದು ಹೇಳುತ್ತಾರೆ" "ಲಿಂಗದಲ್ಲಿ ಸುಷುಪ್ತಿಯು" "ಲಿಂಗವೆಂದರೆ ಸನಾತನ ಬ್ರಹ್ಮವೆನಿಸಿದೆ" ಹೀಗೆ ಕಠ ಮತ್ತು ಹಂಸೋಪನಿಷತ್ತುಗಳಲ್ಲೂ, ಲಿಂಗಪುರಾಣದಲ್ಲೂ ವಿಶೇಷಣವಿಲ್ಲದೆ ಪ್ರಯೋಗಿಸಿದ ಬ್ರಹ್ಮಪದವು ಹಸ್ತ-ಕರ-ಪಾಣಿ ಎಂಬ ಪರ್ಯಾಯ ಶಬ್ದಗಳಂತೆ ಲಿಂಗವೆಂಬ ಸಮಾನಾರ್ಥವನ್ನು ಸೂಚಿಸುತ್ತದೆ.

'ದೇವಧಾರಣ'ಎಂಬಲ್ಲಿ ದೇವಪದವನ್ನು ಬೇರೆಮಾಡಿದರೆ, ಅಪರಿಮಿತಾಧಿಕರಣನ್ಯಾಯದಿಂದ ಪಕ್ಕದಲ್ಲಿರುವ ಧಾರಣಪದದೊಡನೆ ಅನ್ವಯವನ್ನು ಬಿಟ್ಟು ದೂರದಲ್ಲಿರುವ 'ಗೋಪಾಯ' ಎಂಬ ಪದದೊಡನೆ ಅನ್ವಯವು ಸಂಭವಿಸುವಂತಿಲ್ಲ. 'ಬ್ರಹ್ಮಣಃ ಕೋಶೋಽಸಿ' ಎಂದು ಹತ್ತಿರದಲ್ಲಿಯೇ ಇರುವ ಬ್ರಹ್ಮಪದಕ್ಕೇನೇ ಷಷ್ಠೀವಿಭಕ್ತಿಯನ್ನು ಸಂಬೋಧನವಾಗಿ ಬದಲಾಯಿಸಿ ಅನ್ವಯಿಸಬಹುದು. ಧಾರಣಶಬ್ದಕ್ಕೆ 'ಕೊಡುವಿಕೆ' ಎಂಬ ಅರ್ಥ ಇರುವುದರಿಂದಲೂ, 'ಅನ್ಯತ್ರ' ಪದದಿಂದ ತಿಳಿದು ಬರುವ ಮೋಕ್ಷಕ್ಕೆ ಬೇರೆರೀತಿಯಲ್ಲಿ ಅನ್ವಯವು ಸಂಘಟಿಸದಿರುವುದರಿಂದಲೂ, 'ಲಿಂಗ

ವನ್ನು ಅಂಗದಲ್ಲಿ ಧರಿಸಿದವನು ಮತ್ತೆ ಹುಟ್ಟಲಾರನು' 'ಒಂದೇ ಸೇವೆಯುದಲ್ಲಿ ಜ್ಞಾನವು ಸಿದ್ಧಿಸಿರುವುದರಿಂದ, ಅವನು ಮೋಕ್ಷವನ್ನು ಹೊಂದುತ್ತಾನೆ' ಎಂಬ ಶಂಕರ ಸಂಹಿತೆಯ ಮಾತಿನಂತೆಯೂ ಲಿಂಗಧಾರಿಗೇ ಮೋಕ್ಷವನ್ನು ಹೇಳಲಾಗಿದೆ. 'ನನ್ನ ಶರೀರ ಬಲಿಷ್ಠವಾಗಲಿ' ಎಂಬುದರಿಂದ ಹೊರಗೆ ವಿಶೇಷ ಫಲವನ್ನು ದೊರಕಿಸಲಿಕ್ಕಾಗಿ ಬಾಹ್ಯಲಿಂಗಧಾರಣವೇ ವಿಹಿತವಾಗಿದೆ. "ಆಶ್ರಮಧರ್ಮಗಳನ್ನತಿಕ್ರಮಿಸಿದವನು ಯಾವಾಗಲಾದರೂ ಅಥವಾ ಒಮ್ಮೆಗಾದರೂ ಜಪಿಸಬಹುದು". "ಈ ಪಾಶುಪತ ವ್ರತವು ಪಶುಪಾಶಗಳ ಬಿಡುಗಡೆಗೆ ನಿರ್ದಿಷ್ಟವಾಗಿದೆ". "ಇದು ಶಾಂಭವ ವ್ರತ". "ಮುಮುಕ್ಷು ಮತ್ತೆ ಹುಟ್ಟದಂತೆ ಈ ವ್ರತವನ್ನಾಚರಿಸಬೇಕು". "ಅಂತವರಿಗೇ ಈ ಬ್ರಹ್ಮವಿದ್ಯೆಯನ್ನು ಹೇಳಬಹುದು". "ಮಹಾತ್ಮರು ಹೇಳಿರುವ ಈ ಅರ್ಥಗಳು ಅಂತವನಿಗೇ ಸ್ಪಷ್ಟವಾಗಿ ತಿಳಿಯಬರುತ್ತವೆ". ಹೀಗೆ ಕೈವಲ್ಯ-ಅಥರ್ವಶಿರಸ್ಸು-ಕಾಲಾಗ್ನಿ ರುದ್ರ, ಮುಂಡಕ ಇವೇ ಮೊದಲಾದ ಶ್ರುತಿಗಳಲ್ಲಿ ಬ್ರಹ್ಮವಿದ್ಯೆಗೆ ಪಾಶುಪತವ್ರತ ವನ್ನಾಚರಿಸುವವನೇ ಅಧಿಕಾರಿ ಎಂದು ಹೇಳಿರುವುದರಿಂದ ದೀಕ್ಷೆಯಿಂದ ಲಿಂಗವನ್ನು ಪಡೆದವನಿಗೇ ಬ್ರಹ್ಮವಿದ್ಯೆಯಲ್ಲಿ ಅವಕಾಶ ಉಂಟೆಂದು ಸಿದ್ಧವಾಗುವುದು.

**ನನು—"ಕೈವಲ್ಯಶ್ವೇತಾಶ್ವತರಾದ್ಯುಪನಿಷತ್ಸು ಲಿಂಗಧಾರಣವಿಧಾಯಕವಾಕ್ಯಾದರ್ಶನಾತ್ ಪಾಶುಪತವ್ರತಸ್ಯ ಭಸ್ಮಧಾರಣಪರತ್ವಮೇವ" ಇತಿಚೇನ್ನ. ಪಾಶುಪತದೀಕ್ಷಿತಸ್ಯೈವ ಲಿಂಗಿನಸ್ತದಂಗತ್ವೇನ ಭಸ್ಮಧಾರಣವಿಧಾಯಕತ್ವೋಪದೇಶಾತ್,**

**ಲಿಂಗಾಂಗಸಂಗಿನಾಂ ಚೈವ ಪುನರ್ಜನ್ಮ ನ ವಿದ್ಯತೇ .**
**ಏಷ ಪಾಶುಪತೋ ಯೋಗಃ ಪಶುಪಾಶನಿವೃತ್ತಯೇ ॥**
**ಸರ್ವವೇದಾಂತಸಾರೋಽಯಮತ್ಯಾಶ್ರಮ ಇತಿ ಶ್ರುತಿಃ ॥**
**ಪರಬ್ರಹ್ಮಾಭಿಧಂ ಲಿಂಗಂ ಪಶುಪಾಶವಿಮೋಚಕಂ ।**
**ಯೋ ಧಾರಯತಿ ಸದ್ಭಕ್ತ್ಯಾ ಸ ಪಾಶುಪತ ಉಚ್ಯತೇ ॥**
**ಶರೀರತ್ರಿತಯೇ ಭಕ್ತ್ಯಾ ಲಿಂಗಂ ಪರಶಿವಾತ್ಮಕಂ ।**
**ಯೋ ಧೃತ್ವಾ ವಿಚರೇದ್ಭೂಮೌ ಸ ಪಾಶುಪತ ಉಚ್ಯತೇ ॥**
**ಲಿಂಗಂ ಶಿವೋ ಭವೇತ್ ಕ್ಷೇತ್ರಮಂಗಂ ಸಂಯೋಗ ಆಶ್ರಯಃ ।**
**ತಸ್ಮಾಲ್ಲಿಂಗಾಂಗಸಂಯುಕ್ತೋ ಯಸ್ತು ಸೋಽತ್ಯಾಶ್ರಮೀ ಭವೇತ್ ॥**
**ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ ।**
**ಯಸ್ತು ಲಿಂಗಾಂಗಸಂಯುಕ್ತಃ ಸ ಏವಾತ್ಯಾಶ್ರಮೀ ಭವೇತ್ ॥**

**ಇತ್ಯಾದಿತ್ಯಲೈಂಗಸ್ಕಾಂದಕೂರ್ಮಪುರಾಣೇಷು ಪಾಶುಪತಾತ್ಯಾಶ್ರಮಿ ಶಬ್ದಯೋರ್ಲಿಂಗಧಾರಿಪರ್ಯಾಯತ್ವೇನ ನಿರ್ದೇಶಾತ್ ತತ್ಪರತ್ವಮೇವೇತಿ ಸಿದ್ಧಂ. ಕಿಂಚ ಸಾಮಚ್ಛಂದೋಗಶಾಖಾಯಾಂ ಸದಾನಂದೋಪನಿಷದಿ**

ಅಂತರ್ಧಾರಣಶಕ್ತೋ ವಾ ಹ್ಯಶಕ್ತೋ ವಾ ದ್ವಿಜೋತ್ತಮಃ ।
ಸಂಸ್ಕೃತ್ಯ ಗುರುಣಾ ದತ್ತಂ ಶೈವಂ ಲಿಂಗಮುರಸ್ಸ್ಥಲೇ ॥
ಧಾರ್ಯಂ ವಿಪ್ರೇಣ ಮುಕ್ತ್ಯರ್ಥಮೇವಂ ವೇದವಿದೋ ವಿದುಃ ॥

ಆಥರ್ವಣೇ ಐಶ್ವರ್ಯಶಾಖಾಯಾಂ—

ಯೋ ಪಾಮಹಸ್ತಾರ್ಚಿತಲಿಂಗಮೇಕಂ ಪರಾತ್ಪರಂ ಧಾರಯತೇ ಸತತಂ ವಿಪ್ರಃ ಕ್ಷತ್ರಿಯೋ ವಾ । ತಸ್ಯೈವ ಲಭ್ಯಃ ಪರಮೇಶ್ವರೋಽಸೌ ನಿರಂಜನಃ ಪರಮಂ ಸಾಮ್ಯಮುಪೈತಿ ದಿವ್ಯಂ ॥

ಇತ್ಯಾದಿಮಂತ್ರೇಷು ಪರಮೇಶ್ವರಧ್ಯಾನಧಾರಣಮೇವ ಮುಮುಕ್ಷೂಣಾಂ ವಿಧೇಯಮಿತಿ ಶ್ರೂಯತೇ. ರುದ್ರಾಧ್ಯಾಯೇ—"ಅಧ್ಯವೋಚದಧಿವಕ್ತಾ ಪ್ರಥಮೋದೈವ್ಯೋ ಭಿಷಕ್" ಇತ್ಯನೇನ ಪರಶಿವಸ್ಯೈವ ಜನನಮರಣಪ್ರವಾಹರೂಪಸಂಸಾರರೋಗನಿವಾರಕತ್ವಂ ಸೂಚಿತಂ. ಅತ ಏವ ವೇದಪುರುಷೇಣಾಪಿ ಲಿಂಗಧಾರಕಸ್ಯೈವ ಪಶುಪಾಶವಿಮೋಚಕತ್ವಂ ಋಗ್ಯಜುಸ್ಸಾಮಾದಿಷೂಪದಿಶ್ಯತೇ.

ಕೈವಲ್ಯ-ಶ್ವೇತಾಶ್ವತರ ಇವೇ ಮೊದಲಾದ ಶ್ರುತಿಗಳಲ್ಲಿ ಲಿಂಗಧಾರಣವನ್ನು ವಿಧಿಸುವ ವಾಕ್ಯವೇ ಇಲ್ಲದ್ದರಿಂದ ಪಾಶುಪತವ್ರತವು ಭಸ್ಮಧಾರಣೆಗೆ ಮಾತ್ರವೇ ಅನ್ವಯಿಸುವುದೆಂದು ಹೇಳುವುದು ಸಮಂಜಸವಲ್ಲ; ಯಾಕೆಂದರೆ ಪಾಶುಪತಮತದ ಪ್ರಕಾರ ದೀಕ್ಷೆಹೊಂದಿ ಲಿಂಗಧಾರಿಯಾದವನಿಗೇ ಅದರ ಅಂಗವಾಗಿ ಭಸ್ಮಧಾರಣವನ್ನು ವಿಧಿಸಲಾಗಿದೆ. "ಲಿಂಗವನ್ನು ಅಂಗದಲ್ಲಿ ಧರಿಸಿದವನಿಗೆ ಮತ್ತೆ ಜನ್ಮವಿಲ್ಲ" 'ಪಶುಪಾಶ ವಿಮೋಚನೆಗೆ ಇದೇ ಪಾಶುಪತಮತಸಮ್ಮತವಾದ ಯೋಗವೆನಿಸಿದೆ' "ಈ ಮತವು ಎಲ್ಲಾ ವೇದಾಂತಗಳ ಸಾರವೆನಿಸಿ ಆಶ್ರಮ ಧರ್ಮಗಳನ್ನು ಮೀರಿದೆ" ಎಂದು ಶ್ರುತಿಯಲ್ಲಿಯೇ ತಿಳಿಸಲಾಗಿದೆ. "ಪರಶಿವನೆನಿಸಿದ ಲಿಂಗವನ್ನು ಪಶುಪಾಶ ವಿಮೋಚಕವೆಂದು ನಂಬಿ ಯಾವನು ಭಕ್ತಿಯಿಂದ ಧರಿಸುವನೋ ಅವನು ಪಾಶುಪತನೆನಿಸುವನು". "ಮೂರು ಶರೀರಗಳಲ್ಲೂ ಪರಶಿವಮಯವಾದ ಲಿಂಗವನ್ನು ಯಾವನು ಭಕ್ತಿಯಿಂದ ಧರಿಸಿ ಅರ್ಚಿಸುತ್ತ ಲೋಕದಲ್ಲಿ ವ್ಯವಹರಿಸುವನೋ ಅವನು ಪಾಶುಪತನೆನಿಸುವನು". "ಲಿಂಗವೇ ಶಿವನೆನಿಸಿರುವುದು, ಅಂಗವೇ ಕ್ಷೇತ್ರವೆನಿಸಿರುವುದು. ಇವೆರಡರ ಸಂಯೋಗವೇ ಆಶ್ರಮವೆನಿಸುವುದು. ಆದ್ದರಿಂದ ಲಿಂಗವನ್ನು ಅಂಗದಲ್ಲಿ ಧರಿಸಿದವನು ಯಾವನಿರುವನೋ ಅವನು ಅತ್ಯಾಶ್ರಮಿ ಎನಿಸುವನು." "ಬ್ರಹ್ಮಚಾರಿಯಾಗಲೀ, ಗೃಹಸ್ಥನಾಗಲೀ, ವಾನಪ್ರಸ್ಥನಾಗಲೀ, ಯತಿಯಾಗಲೀ ಯಾವನು ಅಂಗದಲ್ಲಿ ಲಿಂಗವನ್ನು ಧರಿಸಿರುವನೋ, ಅವನು ಅತ್ಯಾಶ್ರಮಿ ಎನಿಸುವನು". ಹೀಗೆ ಲಿಂಗ, ಸ್ಕಾಂದ, ಕೂರ್ಮಪುರಾಣಗಳಲ್ಲಿ ಹೇಳಿದೆ. ಈ ರೀತಿಯಾಗಿ ಪಾಶುಪತ ಮತ್ತು ಅತ್ಯಾಶ್ರಮಿ ಎಂಬ ಶಬ್ದಗಳಿಗೂ ಲಿಂಗಧಾರಿ ಎಂಬ ಅರ್ಥವೇ

ಹೊಂದಿಕೆಯಾಗುವುದೆಂದು ಸೂಚನೆ ಇರುವುದರಿಂದ, ಆ ಪದಗಳು ಇದೇ ಅರ್ಥದಲ್ಲಿ ಪ್ರಸಿದ್ಧವಾಗಿವೆ. ಸಾಮವೇದದ ಸದಾನಂದೋಪನಿಷತ್ತಿನಲ್ಲಿ "ಒಳಗೆ ಧರಿಸಲು ಶಕ್ತನಾಗಿರಲಿ ಅಥವಾ ಇಲ್ಲದೇ ಇರಲಿ ಬ್ರಾಹ್ಮಣೋತ್ತಮನು ಗುರುವಿನಿಂದ ಸಂಸ್ಕಾರ ಪೂರ್ವಕವಾಗಿ ಅನುಗೃಹೀತವಾದ ಶಿವಲಿಂಗವನ್ನು ವಕ್ಷಸ್ಥಳದಲ್ಲಿ ಮುಕ್ತಿಗಾಗಿ ಧರಿಸಬೇಕು'ಎಂದು ಹೇಳಲಾಗಿದೆ. ಆಥರ್ವಣದ ಐಶ್ವರ್ಯಶಾಖೆಯಲ್ಲಿ "ಬ್ರಾಹ್ಮಣ ನಾಗಲೀ, ಕ್ಷತ್ರಿಯನಾಗಲಿ ಯಾವನು ಎಡಗೈನಲ್ಲಿ ಪರವಸ್ತುವೆನಿಸಿದ ಲಿಂಗವನ್ನಿಟ್ಟು ಅರ್ಚಿಸುತ್ತ ಶರೀರದಲ್ಲಿ ನಿರಂತರವೂ ಧರಿಸುವನೋ ಅವನಿಗೇ ಪರಮೇಶ್ವರನು ದೊರಕುವನು". "ಅವನೇ ನಿರಂಜನನೂ, ಪರಮೋತ್ತಮನೂ, ದಿವ್ಯಪ್ರಕಾಶನೂ ಆದ ಪರಮೇಶ್ವರನೊಡನೆ ಸಾಮ್ಯವನ್ನು ಹೊಂದುತ್ತಾನೆ". ಇತ್ಯಾದಿ ಶ್ರುತಿಗಳಲ್ಲಿ ಪರಮೇಶ್ವರನ ಧ್ಯಾನಧಾರಣವನ್ನು ಮುಮುಕ್ಷುಗಳು ಅವಶ್ಯವಾಗಿ ನಡೆಸಬೇಕೆಂದು ಹೇಳಲಾಗಿದೆ. ರುದ್ರಾಧ್ಯಾಯದಲ್ಲಿ "ರುದ್ರನೇ ತತ್ತ್ವವನ್ನು ಮೊದಲು ತಿಳಿಯಪಡಿಸಿದನು. ಅವನೇ ಅದನ್ನು ವಿಶದವಾಗಿ ಹೇಳುವವನು ಮತ್ತು ಮೊದಲನೆಯ ಭವ ರೋಗ ವೈದ್ಯನೂ ಆಗಿದ್ದಾನೆ" ಎಂದು ಹೇಳಿದೆ. ಇದರಿಂದ ಪರಮಶಿವನೇ ಜನನ ಮರಣ ಪ್ರವಾಹವೆಂಬ ಭವರೋಗವನ್ನು ನಿವಾರಿಸಲು ಶಕ್ತನೆಂಬ ಅರ್ಥವು ಸ್ಪಷ್ಟ ಪಡುತ್ತದೆ. ಆದ್ದರಿಂದಲೇ ವೇದದ ಋಷಿಗಳು ಲಿಂಗಧಾರಣದಿಂದಲೇ ಪಾಶದ ವಿಮೋಚನೆಯಾಗುವುದೆಂದು ಋಗ್ಯಜುಸ್ಸಾಮವೇದಗಳಲ್ಲಿ ತಿಳಿಸಿದ್ದಾರೆ.

**"ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ. ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ. ಅಯಂ ಮಾತಾಽಯಂ ಪಿತಾಽಯಂ ಜೀವಾತುರಾಗಮತ್. ಇದಂ ತವ ಪ್ರಸರ್ಪಣಂ ಸುಬಂಧವೇಹಿ ನಿರೀಹಿ ||"** (ಋ. ೮-೧-೨೫) **ಇತ್ಯನೇನ ವೇದ ಪುರುಷಸ್ಯ ಪಾಣಿಲಿಂಗಧಾರಣಂ ನಿರ್ದಿಷ್ಟಂ. "ಶಿವಾಭಿಮರ್ಶನಃ" ಇತ್ಯತ್ರ ಸ್ಥಾವರಲಿಂಗಸ್ಪರ್ಶೋ ವಿವಕ್ಷಿತ ಇತಿ ಚೇತ್ – ಶಿವಮಭಿತಸ್ಸರ್ವದಾ ಸ್ಪೃಶತೀತ್ಯರ್ಥಲಾಭಾತ್ ಸಾರ್ವಕಾಲಿಕಸ್ಪರ್ಶಾನ್ಯಥಾನುಪಪತ್ತ್ಯಾ ನಾನ್ಯಾರ್ಥೋ ಯುಕ್ತಃ. ಏತದೇವ ವಾತೂಲೇ ಶ್ರೂಯತೇ—**

**ಧಾರಯೇದ್ಯಸ್ತು ಹಸ್ತೇನ ಲಿಂಗಾಕಾರಂ ಶಿವಂ ಸದಾ ।**
**ತಸ್ಯ ಹಸ್ತಸ್ಥಿತಂ ವಿದ್ಧಿ ಮತ್ಪದಂ ಸಂಪದಾಂ ಪದಂ ||** ಇತಿ.

**ಅಗ್ನ್ಯವಚ್ಛಿನ್ನಾಯಃಪಿಂಡಸ್ಯ ತನ್ನಿಷ್ಠದಾಹಕತ್ವಪ್ರಕಾಶಕತ್ವೋಪದೇಶವತ್ ಲಿಂಗಧಾರಣೇನೈವ ತತ್ಕರಸ್ಯ ಭಗವತ್ತರತ್ವ–ವಿಶ್ವಭೇಷಜತ್ವಾದಿಪರಮೇಶ್ವರಧರ್ಮಾಃ ಪ್ರತಿಪಾದ್ಯಂತೇ. ತಥಾ ಕಾಮಿಕೇ—**

**ಅಯಂ ಮೇ ಹಸ್ತೋ ಭಗವಾನಿತಿಮಂತ್ರೇಣ ಸರ್ವದಾ ।**

ಪಾಣಿಲಿಂಗಧೃತಿರ್ವೇದಪುರುಷಸ್ಯ ಸಮೀರಿತಾ ॥ ಇತಿ.
ಯಜುರ್ವೇದೇ—(ತೈ. ಸಂ. ೪-೫-೧-೧, ೧-೮-೬-೧೧)

ಯಾ ತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ ।
ತಯಾ ನಸ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ ॥
ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಽಮೃತಾತ್॥

ಸೋಮಾರುದ್ರಾ ಯುವಮೇತಾನ್ಯಸ್ಮೇ ವಿಶ್ವಾ ತನೂಷು ಭೇಷಜಾನಿ ಧತ್ತಂ । ಅವಸ್ಯತಂ ಮುಂಚತಂ ಯನ್ನೋ ಅಸ್ತಿ ತನೂಷು ಬದ್ಧಂ ಕೃತಮೇನೋ ಅಸ್ಮತ್ ॥ (ತೈ. ಸಂ. ೧-೮-೨೨-೪೨)

ಇತ್ಯಾದಿಮಂತ್ರಾಣಾಮುಪಬೃಹ್ಮಣಂ ಶ್ರೂಯತೇ ಲೈಂಗೇ—

ಯಾ ತೇ ಶಿವಾ ತನೂ ರುದ್ರ ಲಿಂಗಂ ಮಂಗಲದಾಯಕಂ ।
ಲಿಂಗಂ ಶಿವಾ ತನೂಃ ಪ್ರೋಕ್ತಾ ಮೂರ್ತಿರ್ಘೋರಾ ತನುಃಸ್ಮೃತಾ ॥
ಅಪಾಪೇಷು ಚ ಭಕ್ತೇಷು ತಯೋರ್ಮಧ್ಯೇ ಶಿವಾ ತನೂಃ ।
ಕಾಶತೇ ಪರಮೇಶಸ್ಯ ಶಿಷ್ಟಾಸ್ತೇ ಲಿಂಗಧಾರಿಣಃ ॥

ತಯಾ ಶಂತಮಯಾ ಸೌಖ್ಯಕಾರಿಣ್ಯಾ ಲಿಂಗರೂಪಯಾ ।
ಅಭಿಚಾಕಶೀಹಿ ತನ್ಪ್ವಾ ಗಿರಿಶಂತಾಭಿರಕ್ಷ ಮಾಂ ॥

ತ್ರಿಯಂಬಕಂ ವಿರೂಪಾಕ್ಷಂ ಲಿಂಗಂ ಬ್ರಹ್ಮ ಸನಾತನಂ ।
ಯಜಾಮಹೇ ಧಾರಯಾಮಃ ಸುಗಂಧಿಂ ಪುಷ್ಟಿವರ್ಧನಂ ॥

ಉರ್ವಾರುಕಂ ಯಥಾ ಬಂಧಾನ್ಮೃತ್ಯೋರ್ಮುಕ್ಷೀಯ ಮಾಽಮೃತಾತ್ ॥
ಪ್ರಥಮಾಷ್ಟೇ ಯಜುರ್ವೇದೇ ಪ್ರಶ್ನೇ ಚರಮಸಂಜ್ಞಕೇ ।
ಲಿಂಗಧಾರಣಮಾಖ್ಯಾತಂ ವೇದಪುಂಸಾಂ ಮಹಾತ್ಮನಾಂ ॥

ಸೋಮಾರುದ್ರಾ ಯುವಾಮೇತಾನ್ಯಸ್ಮೇ ಅಸ್ಮಭ್ಯಮೇವ ಹಿ ।
ವಿಶ್ವಾನಿ ಭೇಷಜಾನೀಷ್ಟಪ್ರಾಣಭಾವಾತ್ಮಕಾನಿ ಚ ॥
ತನೂಷು ದೇಹತ್ರಿತಯೇ ಬದ್ಧಂ ಮಾಯಾಮಲಾತ್ಮಕಂ ।
ಕೃತಂ ಯದೇನೋ ದುರಿತಂ ಮನೋವಾಕ್ಕಾಯಕರ್ಮಜಂ ॥
ತದಸ್ಮದಸ್ಮತ್ತಸ್ತೂರ್ಣಂ ಮುಖ್ಯತೋಽವಸ್ಯತಂ ಯುವಾಂ ।
ಮುಂಚತಂ ಕೃಪಯಾ ಸಮ್ಯಕ್ ಪ್ರಮೋಚಯತಮೀಶ್ವರೌ ॥ ಇತಿ.

ಸೋಮಾರುದ್ರಾ-ಸೋಮಾರುದ್ರೌ, “ದೇವತಾ ದ್ವಂದ್ವೇ ಚ” (ಪಾಣಿನಿ ಸೂ. ೬-೩-೨೬) ಇತಿ ಪೂರ್ವಪದಸ್ಯ ದೀರ್ಘಃ, “ಸುಪಾಂ

ಸುಲುಕ್ "(ಪಾಣಿನಿ ಸೂ. ೭-೧-೩೯) ಇತ್ಯಾದಿನಾ ಆಜಪ್ರತ್ಯಯಃ. ತತ್ರೈವ ಪರಮೇಶ್ವರಸ್ಯ ಮೂರ್ತಿದ್ವಯಂ ಶ್ರೂಯತೇ. "ರುದ್ರೋ ವಾ ಏಷ ಯದಗ್ನಿಸ್ತಸ್ಯೈತೇ ತನುವೌ ಘೋರಾಽನ್ಯಾ ಶಿವಾಽನ್ಯಾ" ಇತಿ. ತಸ್ಮಾತ್ಸೋಮರುದ್ರಶಬ್ದಾಭ್ಯಾಂ ಘೋರಾಘೋರಮೂರ್ತಿದ್ವಯಮುಕ್ತಂ. ಯುವಂ-ಯುವಾಮಿತ್ಯರ್ಥಃ. ವಿಶ್ವಾ-ವಿಶ್ವೇತಿ ಟಾಬಂತಮೇತತ್, ವಿಶ್ವಾನೀತ್ಯರ್ಥಃ. ಏತಾನಿ ಭೇಷಜಾನಿ-ಭವರೋಗಹರಾಣಿ ಇಷ್ಟಪ್ರಾಣಭಾವಸಂಜ್ಞಕಾನಿ, ಅಸ್ಮೇ-ಅಸ್ಮಭ್ಯಂ, "ಸುಪಾಂ ಸುಲುಕ್" ಇತ್ಯಾದಿನಾ ಶೇ ಇತ್ಯಾದೇಶಃ. ತನೂಷು-ಶರೀರತ್ರಿತಯೇ, ಧತ್ತಂ-ಧಾರಯತಂ, ನಃ ತನೂಷು ಬದ್ಧಂ-ಅನಾದ್ಯವಿದ್ಯಾವಾಸಿತಂ, ಅತಏವ ಕೃತಂ ಏನಃ-ದುರಿತಂ, ಯದಸ್ತಿ, ತತ್ ಅಸ್ಮತ್-ಅಸ್ಮತ್ತಃ, ಯುವಾಂ ಅವಸ್ಯತಂ ಮುಖ್ಯತಃ, ಮುಂಚತಂ-ಮೋಚಯತಂ. "ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ" (ಕೈ. ೧-೭) ಇತ್ಯಾದಿಷ್ವದ್ವಿತೀಯಸ್ಯ ಶಿವಸ್ಯ ಪರಬ್ರಹ್ಮಣೋ ಮೂರ್ತಿದ್ವಯಪ್ರತಿಪಾದನಾದತ್ರ "ಸೋಮಾರುದ್ರಾ" ಇತಿ ಮಂತ್ರೇ ತದ್ವದುಭಯಂ ನಿರೂಪಿತಂ. ಉಮಯಾ ಸಹಿತಃ ಸೋಮಃ-ಪಂಚೋಪನಿಷನ್ಮಯದಿವ್ಯಮಂಗಲವಿಗ್ರಹಃ, ರುದಂ-ಭಕ್ತಸಂಸಾರದುಃಖಂ ದ್ರಾವಯತೀತಿ ರುದ್ರಃ, ಯುವಾಮೇತಾವುಭೌ ಅಸ್ಮಚ್ಛರೀರೇಷು ಇಷ್ಟಾದಿಲಿಂಗಸ್ವರೂಪಾಣಿ ಧಾರಯಿತ್ವಾ ಅಸ್ಮಚ್ಛರೀರಾವಚ್ಛಿನ್ನಮಲತ್ರಯಾತ್ಮಕಕಿಲ್ಬಿಷಂ ನಾಶಯತಮಿತ್ಯರ್ಥಃ.

"ವಿಶ್ವೇ ದೇವಂ ವಿದುಷಾ ವೇದಿತವ್ಯಂ ಶೈವಂ ಲಿಂಗಂ ಪ್ರಧೃತಂ ಸರ್ವದೇವೈಃ। ತದಾತ್ಮಸಿದ್ಧೇರ್ಮುನಿಭಿರ್ಮುಕ್ತಿಕಾಮೈಃ ಕಂಠೇ ಹಸ್ತೇ ಮಸ್ತಕೇ ವಾ ಭವತು ಧಾರ್ಯಂ॥" ಇತಿ ಸಾಮವೇದೇಽಪಿ. ಅತ ಏವ ಭವಭೇಷಜಾತ್ಮಕಶಿವಲಿಂಗಧಾರಣಾದಿಕಂ ಮುಮುಕ್ಷೂಣಾಮಾವಶ್ಯಕಂ

ಋಗ್ವೇದದಲ್ಲಿ "ಈ ಹಸ್ತದಲ್ಲಿರುವ ಲಿಂಗದೇವನೇ ಪೂಜ್ಯನಾದ ರುದ್ರನಾಗಿದ್ದಾನೆ. ಇವನೇ ಎಲ್ಲಾ ದೇವತೆಗಳಿಗೂ ಉತ್ಕೃಷ್ಟನು. ಇವನೇ ವಿಶ್ವಕ್ಕೂ ವೈದ್ಯನು. ಇವನೇ ನನಗೆ ಶಿವನ ಸಂಪರ್ಕವನ್ನೇರ್ಪಡಿಸುವನು. ಇವನೇ ನನಗೆ ತಾಯಿ, ತಂದೆ ಮತ್ತು ಜೀವನೌಷಧವೂ ಆಗಿ ನನ್ನ ಕೈಗೆ ಸಿಕ್ಕಿದ್ದಾನೆ. ಇದೇ ನಿನ್ನಲ್ಲಿ ನನ್ನ ಪ್ರಾರ್ಥನೆ. ನನ್ನ ಪ್ರಿಯಬಂಧುವೇ, ನೀನು ನನ್ನಲ್ಲಿ ಅಡಗು". ಎಂದು ಹೇಳಿದೆ. ಹೇಗೆ ವೇದದ ಋಷಿಗಳು ಹಸ್ತದಲ್ಲಿ ಲಿಂಗವನ್ನು ಧರಿಸಿ ಅರ್ಚಿಸುವುದನ್ನು ತಿಳಿಸಿದ್ದಾರೆ. 'ಶಿವಾಭಿಮರ್ಶನಃ' ಎಂಬಲ್ಲಿ ಸ್ಥಾವರಲಿಂಗದ ಸ್ಪರ್ಶವೆಂದು ಹೇಳುವುದಾದರೆ, 'ಶಿವನನ್ನು ಎಲ್ಲಾ ಕಡೆಯಲ್ಲೂ ಯಾವಾಗಲೂ ಮುಟ್ಟುತ್ತಾನೆ'

ಎಂಬ ಈ ಪದದ ಅರ್ಥವು ಸ್ಥಾವರಲಿಂಗಕ್ಕೆ ಅನ್ವಯಿಸದಿರುವುದರಿಂದ, ಇಲ್ಲಿಯು ಶಿವಾಭಿಮರ್ಶನವು ಬಾಹ್ಯಲಿಂಗಧಾರಣೆಗೇ ಯಥೋಚಿತವಾಗಿ ಅನ್ವಯಿಸುತ್ತದೆ.

ವಾತುಲದಲ್ಲೂ ಇದೇ ವಿಷಯವು ಹೀಗೆ ಬಂದಿದೆ. "ಯಾವನು ಲಿಂಗಾಕಾರನಾದ ಶಿವನನ್ನು ಹಸ್ತದಲ್ಲಿ ಧರಿಸಿ ಅರ್ಚಿಸುವನೋ ಅವನ ಕೈಲಿ ಸರ್ವಸಂಪತ್ತುಗಳಿಗಾಕರನಾದ ಶಿವನೇ ನೆಲಸಿರುವನೆಂದು ತಿಳಿಯಬೇಕು. ಬೆಂಕಿಯೊಳಗೆ ಸಿಕ್ಕಿದ ಕಬ್ಬಿಣದ ಚೂರಿಗೆ ಬೆಂಕಿಯಲ್ಲಿರುವ ದಾಹಕತ್ವ, ಪ್ರಕಾಶಕತ್ವ ಇವೇ ಮೊದಲಾದ ಗುಣಗಳು ಹೇಗೆ ಸಹಜವಾಗಿ ಸಂಭವಿಸುತ್ತವೆಯೋ ಹಾಗೆ ಲಿಂಗಧಾರಣದಿಂದ ಈ ದೇಹಕ್ಕೆ ದೇವಭಾವವೇ ಮೊದಲಾದ ಪರಮೇಶ್ವರನ ಧರ್ಮಗಳೂ ಸಂಭವಿಸುತ್ತವೆ". ಹಾಗೆಯೇ ಕಾರ್ಮಿಕದಲ್ಲಿ 'ಅಯಂ ಮೇ ಹಸ್ತಃ' ಎಂಬ ಮಂತ್ರದಿಂದ ಪಾಣಿಯಲ್ಲಿ ಲಿಂಗಧಾರಣವು ವೇದದ ಋಷಿಗಳಿಗೆ ಸಮ್ಮತವಾಗಿದೆ. "ಘೋರನೂ, ಅಘೋರನೂ ಆದ ಪರಮಶಿವನು ಇಷ್ಟಪ್ರಾಣಭಾವವೆಂಬ ಲಿಂಗಗಳಾಗಿ ಸ್ಥೂಲಸೂಕ್ಷ್ಮಕಾರಣದೇಹಗಳಲ್ಲಿ ನೆಲಸಿ ಮನೋವಾಕ್ಕಾಯಕರ್ಮಗಳಿಂದ ಸಂಭವಿಸಬಹುದಾದ ಮಾಯಾಮಲವೆಂಬ ಪಾಪಗಳಿಂದ ನಮ್ಮನ್ನು ಬಿಡಿಸಲಿ" ಎಂದು ಹೇಳಿದೆ ಯಜುರ್ವೇದದಲ್ಲಿ 'ಗಿರಿಯಲ್ಲಿ ಮಲಗುವ ರುದ್ರನೇ, ಯಾವ ನಿನ್ನ ಸುಂದರವಾದ ಶರೀರವು ಪಾವನವೂ ಪಾಪನಾಶಕವೂ ಆಗಿದೆಯೋ ಆ ಶಾಂತವಾದ ಶರೀರದಿಂದ ನಮ್ಮನ್ನು ಪ್ರಕಾಶಗೊಳಿಸು". "ಸೂರ್ಯ ಚಂದ್ರ ಅಗ್ನಿ ಎಂಬ ಮೂರು ಕಣ್ಣುಗಳಿಂದ ಕೂಡಿ, ಸುಗಂಧಯುಕ್ತನಾಗಿ ಭಕ್ತರಿಗೆ ಪುಷ್ಟಿಯನ್ನು ಕೊಡುವ ಶಿವನನ್ನು ನಾವು ಅರ್ಚಿಸುತ್ತೇವೆ. ಮೆನಕೆಹಣ್ಣನ್ನು ತೊಟ್ಟಿನಿಂದ ಕಳಚುವಂತೆ ನನ್ನನ್ನು ಮೃತ್ಯುವಿನಿಂದ ಬಿಡಿಸು. ಆದರೆ ಅಮೃತದಿಂದ ಬಿಡಿಸಬೇಡ" ಹೀಗೆ ಹೇಳಿದೆ. ಯಜುರ್ವೇದದ ಮೊದಲನೆ ಅಷ್ಟಕದ ನಾಲ್ಕನೆಯ ಪ್ರಶ್ನೆಯಲ್ಲಿ 'ಸೋಮರುದ್ರಾ' ಎಂಬ ಮಂತ್ರವು ಋಷಿಗಳಿಗೆ ಲಿಂಗದ ನಿತ್ಯಸಂಪರ್ಕವನ್ನು ತಿಳಿಸುತ್ತದೆ. ಈ ಮಂತ್ರಗಳ ಅರ್ಥವನ್ನು ವಿವರಿಸುವ ಕೆಲವು ವಾಕ್ಯಗಳು ಲಿಂಗಪುರಾಣದಲ್ಲಿ ಹೀಗೆ ಬಂದಿವೆ. "ಯಾತೇ ರುದ್ರ ಎಂಬ ಮಂತ್ರದಲ್ಲಿ ಲಿಂಗವೆಂದರೆ ನಮ್ಮ ಶ್ರೇಯಸ್ಸನ್ನು ಸಾಧಿಸುವ ಪರಶಿವಬ್ರಹ್ಮವೆಂದರ್ಥ. ಅವನ ಶರೀರ ಮಂಗಳಕರವೂ, ಭಯಂಕರವೂ ಆಗಿ ಎರಡು ಬಗೆಯಾಗಿರುವುದು. ಅವೆರಡರಲ್ಲಿ ಮಂಗಳಕರವಾದ ಶರೀರವು ಪಾಪರಹಿತರಾದ ಭಕ್ತರಿಗೆ ಕಾಣಿಸುವುದು. ಯಾರು ಲಿಂಗಧಾರಿಗಳೋ ಅವರು ಪರಮೇಶ್ವರನ ಪ್ರಕಾಶವನ್ನು ಹೊಂದಿರುವರು. ಹೀಗೆ ಎಲ್ಲಾ ಬಗೆಯ ಸೌಖ್ಯವನ್ನು ದೊರಕಿಸುವ ಶಾಂತರೂಪವಾದ ಶರೀರವನ್ನು ಅವನು ಭಕ್ತರಿಗೆ ತೋರಿಸಲಿ. ತ್ರಿಯಂಬಕನೂ ವಿರೂಪಾಕ್ಷನೂ ಆದ ಪರಶಿವಬ್ರಹ್ಮವೇ ಸನಾತನನಾಗಿ ಲಿಂಗವೆನಿಸಿದ್ದಾನೆ. ಅವನು ನಮಗೆ ಸುಗಂಧವನ್ನೂ ಪುಷ್ಟಿಯನ್ನೂ ಅನುಗ್ರಹಿಸುವನು. ಅವನನ್ನು ಶರೀರದಲ್ಲಿ ಧರಿಸಿ ಅರ್ಚಿಸುತ್ತೇವೆ. ಉರ್ವಾರುಕದಂತೆ ಅವನು ನಮ್ಮನ್ನು ಬಂಧನದಿಂದ ಪಾರುಮಾಡಲಿ; ಆದರೆ ಅಮೃತದಿಂದ ನಮ್ಮನ್ನು ದೂರಮಾಡದಿರಲಿ". ಹಾಗೆಯೇ

ತೈತ್ತಿರೀಯದ ಮೊದಲನೆಯ ಅಷ್ಟಕದ ಕೊನೆಯ ಪ್ರಶ್ನೆಯಲ್ಲೂ ವೇದದ ಋಷಿಗಳಿಗೂ ಲಿಂಗಧಾರಣವು ವಿಹಿತವಾಗಿದೆ. ಸೋಮಾರುದ್ರೌ ಎಂಬಲ್ಲಿ 'ದೇವತಾ ದ್ವಂದ್ವೇ ಚ' ಎಂಬ ಸೂತ್ರದಿಂದ ಪೂರ್ವಪದಕ್ಕೆ ದೀರ್ಘಬಂದಿದೆ. "ಸುಪಾಂ ಸುಲುಕ್' ಎಂಬುದರಿಂದ ಆನಜಪ್ರತ್ಯಯ ಬಂದಿದೆ. ಈ ಪದಗಳಿಂದ ಪರಮೇಶ್ವರನ ಎರಡು ಆಕಾರಗಳು ಸೂಚಿತವಾಗಿವೆ. ಅಗ್ನಿಸ್ವರೂಪನಾದ ರುದ್ರನ ಒಂದು ಶರೀರವು ಭೀಕರವೂ, ಮತ್ತೊಂದು ಪಾವನವೂ ಆಗಿದೆ. ಆದ್ದರಿಂದ ಸೋಮರುದ್ರ ಎಂಬ ಪದಗಳು ಘೋರಮೂರ್ತಿ ಮತ್ತು ಅಘೋರಮೂರ್ತಿಯನ್ನು ಸೂಚಿಸುತ್ತವೆ. "ಇಷ್ಟಪ್ರಾಣ ಭಾವಲಿಂಗಗಳನ್ನೂ ಭಸ್ಮರುದ್ರಾಕ್ಷಗಳನ್ನೂ ನಮ್ಮ ಮೂರು ಶರೀರ ಗಳಲ್ಲಿಯೂ ಧರಿಸುವೆವು. ನಮ್ಮ ಶರೀರದಲ್ಲಿ ಅನಾದ್ಯವಿದ್ಯೆಯಿಂದ ಸಂಭವಿಸಿದ ಪಾಪವು ಯಾವುದಿದೆಯೋ ಅದನ್ನು ಸೋಮರುದ್ರರು ನಮ್ಮಿಂದ ಹೋಗಲಾಡಿಸಲಿ" "ಉಮಾಶಕ್ತಿಯೊಡಗೂಡಿದ ಪ್ರಭುವೂ, ತ್ರಿಲೋಚನನೂ, ನೀಲಕಂಠನೂ ಎನಿಸಿ ಪ್ರಶಾಂತನಾದ ಪರಮೇಶ್ವರನನ್ನು ಅರ್ಚಿಸೋಣ" ಇತ್ಯಾದಿ ಶ್ರುತಿಗಳಲ್ಲಿ ಅದ್ವಿತೀಯ ನಾದ ಪರಶಿವನಿಗೆ ಎರಡು ಆಕಾರಗಳನ್ನು ತಿಳಿಸಿರುವುದರಿಂದ (ಸೋಮಾರುದ್ರ) ಎಂಬ ಮಂತ್ರವು ಈ ಎರಡು ಬಗೆಯ ರೂಪಗಳನ್ನೂ ನಿರೂಪಿಸುವುದು. ಪರಶಿವನು ಉಮೆ ಯೊಡಗೂಡಿ ಸೋಮನೆನಿಸಿ ದಿವ್ಯಮಂಗಳವಿಗ್ರಹನಾಗಿದ್ದಾನೆ. ಭಕ್ತರ ಸಂಸಾರ ದುಃಖವನ್ನು ಪರಿಹರಿಸುವುದರಿಂದ, ಅವನಿಗೇ ರುದ್ರನೆಂಬ ಹೆಸರು ಅನ್ವರ್ಥವಾಗಿದೆ. ಇಂತಹ ಸೋಮರುದ್ರರು ಇಷ್ಟಪ್ರಾಣಭಾವರೂಪಗಳಿಂದ ನಮ್ಮ ಶರೀರದಲ್ಲಿ ನೆಲಸಿ, ಮಲತ್ರಯವೆಂಬ ಪಾಪವನ್ನು ಪರಿಹರಿಸಲಿ" ಎಂದು ವೇದದಲ್ಲಿ ಋಷಿಗಳು ಪ್ರಾರ್ಥಿ ಸುತ್ತಾರೆ. ಸಾಮವೇದದಲ್ಲಿ—'ವಿಶ್ವವನ್ನು ಬೆಳಗುತ್ತ, ಜ್ಞಾನಿಗಳಿಗೆ ಜ್ಞೇಯ ನೆನಿಸಿ, ಎಲ್ಲಾ ವೇದಗಳಿಂದಲೂ ಪ್ರತಿಪಾದ್ಯನಾಗಿರುವ ಶಿವಲಿಂಗವನ್ನು ಮುಮು ಕ್ಷುಗಳು ಅದರೊಡನೆ ಸಮರಸವಾಗಿ ಬೆರೆಯಲಿಕ್ಕಾಗಿ ಕಂಠ ಹಸ್ತ ಮತ್ತು ತಲೆಗಳಲ್ಲಿ ಎಲ್ಲಾದರೊಂದು ಕಡೆ ಧರಿಸಬೇಕು" ಎಂದು ಹೇಳಿದೆ. ಆದ್ದರಿಂದ ಭವರೋಗದ .ನಿವಾರಣೆಗೆ ಸಂಜೀವಿನಿ ಎನಿಸಿದ ಶಿವಲಿಂಗದ ಧಾರಣವು ಮುಮುಕ್ಷುಗಳಿಗೆ ಆವಶ್ಯ ಕವೂ ಅನಿವಾರ್ಯವೂ ಆಗಿದೆ.

"ಪವಿತ್ರಂ ತೇ" (ಋ. ೭-೩-೮) ಇತಿ ಋಗ್ವೇದಮಂತ್ರಸ್ಯ---

ಋಗಿತ್ಯಾಹ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ।
ತಸ್ಮಾತ್ ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಂ ॥
ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಹ್ಮಣಸ್ಪತಿರೀಶ್ವರಃ ।
ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂಪರ್ಕಾತ್ತನುಃ ಶುಚಿಃ ॥
ಅತಪ್ತತನುರಜ್ಞೋ ವೈ ಹ್ಯಾಮಸ್ಸಂಸ್ಕಾರವರ್ಜಿತಃ ।
ದೀಕ್ಷಯಾ ರಹಿತಸ್ಸಾಕಸ್ಸಿನ್ನಾಪ್ನುಯಾಲ್ಲಿಂಗಮುತ್ತಮಂ ॥

ಇತಿ ಸಿದ್ಧಾಂತಶಿಖಾಮಣೌ (ಪರಿ. ೬) ಶ್ರೀರೇಣುಕಾಚಾರ್ಯೇಣ ಲಿಂಗಧಾರಣಪರತ್ವೇನ ನಿರ್ದೇಶಾತ್,

ಭಕ್ತಸ್ಯಾಬಿಭ್ರತೋ ಲಿಂಗಂ ಯಾವತ್ಪ್ರಾಣವಿಧಾರಣಂ ।
ಶ್ವಮಾಂಸಭಕ್ಷಣಂ ತಾವದನ್ನೇನ ರಚಿತಂ ಭವೇತ್ ॥
ಲಿಂಗಸ್ಯ ಧಾರಣಂ ಯಸ್ಯ ಸ್ಥೂಲದೇಹೇ ನ ವಿದ್ಯತೇ ।
ತದ್ದೇಹಂ ನಿಷ್ಫಲಂ ಜ್ಞೇಯಂ ಜೀವತ್ಯಕ್ತಶರೀರವತ್ ॥
ತಸ್ಮಾತ್ತದ್ಧಾರಣಂ ಪ್ರೋಕ್ತಂ ಯಾವಜ್ಜೀವಾಗ್ನಿಹೋತ್ರವತ್ ।
ಯಥಾ ಸ್ಮಶಾನಗಂ ಕಾಷ್ಠಮನರ್ಹಂ ಸರ್ವಕರ್ಮಸು ।
ತಥಾ ಲಿಂಗವಿಹೀನಸ್ತು ಸರ್ವಕರ್ಮಬಹಿಷ್ಕೃತಃ ॥

ಇತಿ ವಾತುಲಸ್ಕಾಂದಲೈಂಗಾದಿಷು ಸಂಧ್ಯಾವಂದನಾದಿವದಕರಣೇ ಪ್ರತ್ಯವಾಯದರ್ಶನಾಚ್ಚ ಲಿಂಗಧಾರಣಸ್ಯ ನಿತ್ಯತ್ವಂ ಸಿದ್ಧಂ.

"ಪವಿತ್ರಂತೇ" ಎಂಬ ಋಗ್ವೇದ ಮಂತ್ರಕ್ಕೆ ಸಿದ್ಧಾಂತಶಿಖಾಮಣಿಯಲ್ಲಿ ರೇಣುಕಾಚಾರ್ಯರು ಲಿಂಗಧಾರಣಪರವಾಗಿ ಅರ್ಥಮಾಡಿದ್ದಾರೆ. "ಬ್ರಹ್ಮವೆಂದರೆ ಲಿಂಗವೆಂದು ತಿಳಿಯುವುದು. ಅದರ ಸಂಪರ್ಕದಿಂದಲೇ ಈ ದೇಹವು ಶುಚಿಯಾಗುವುದರಿಂದ ಲಿಂಗವು ಪವಿತ್ರವೆನಿಸಿದೆ. ಇದು ದೇಹವನ್ನು ಶುಚ್ಯಶುಚಿಕಾಲಗಳೆರಡರಲ್ಲೂ ಪಾವನಗೊಳಿಸಬಲ್ಲುದು. ಆದರೆ ಈ ದೇಹವನ್ನು ದೀಕ್ಷಾಗ್ನಿಯಿಂದ ಸುಡದವನು ಲಿಂಗವನ್ನು ಪಡೆಯಲಾರನು. ದೀಕ್ಷಾಸಂಸ್ಕಾರಹೀನನಾದವನು 'ಆಮ' ಎನಿಸುವನು. ಇವನು ಸದ್ಗತಿಯನ್ನು ಹೊಂದಲಾರನು". ಹೀಗೆ ಋಗ್ವೇದ ಮಂತ್ರವು ಲಿಂಗಧಾರಣವನ್ನು ದೀಕ್ಷಾಸಂಸ್ಕಾರಿಗೆ ವಿಧಿಸಿದೆ.

ಬ್ರಾಹ್ಮಣನು ಸಂಧ್ಯಾವಂದನವನ್ನು ಮಾಡದೇ ಇದ್ದರೆ ದೋಷಬರುವಂತೆ, ಲಿಂಗಧಾರಣವ್ರತವನ್ನು ನಿರಂತರವೂ ನಡೆಸಿಕೊಂಡು ಹೋಗದಿದ್ದರೆ ವೀರಶೈವನಿಗೆ ಪಾಪವು ಸಂಭವಿಸುತ್ತದೆ. "ಪ್ರಾಣವಿರುವವರೆಗೂ ಯಾವನು ಲಿಂಗವನ್ನು ಧರಿಸುವುದಿಲ್ಲವೋ ಅವನು ಅನ್ನದೊಡನೆ ನಾಯಿಯ ಮಾಂಸವನ್ನು ತಿಂದಂತಾಗುತ್ತದೆ. ಯಾವನಿಗೆ ಸ್ಥೂಲದೇಹದಲ್ಲಿ ಲಿಂಗವಿರುವುದಿಲ್ಲವೋ, ಅವನ ದೇಹವನ್ನು ಮೃತಶರೀರದಂತೆ ನಿಷ್ಫಲವೆಂದು ತಿಳಿಯಬೇಕು. ಅಗ್ನಿಹೋತ್ರದಂತೆ ಲಿಂಗಧಾರಣವನ್ನು ಪ್ರಾಣವಿರುವವರೆಗೂ ನಡೆಸಿಕೊಂಡು ಹೋಗಬೇಕು. ಸ್ಮಶಾನದಲ್ಲಿರುವ ಕಟ್ಟಿಗೆ ಎಲ್ಲಾ ಕೆಲಸಗಳಿಗೂ ಹೇಗೆ ಅನರ್ಹವಾಗುವುದೋ, ಹಾಗೆ ಲಿಂಗವಿಲ್ಲದವನು ಎಲ್ಲಾ ಕರ್ಮಗಳಲ್ಲಿಯೂ ತಿರಸ್ಕೃತನಾಗುವನು." ಹೀಗೆ ವಾತುಲ, ಸ್ಕಾಂದ, ಲಿಂಗಪುರಾಣಗಳಲ್ಲಿ ಲಿಂಗಧಾರಣಮಾಡಿಕೊಳ್ಳದಿದ್ದರೆ ದೋಷವನ್ನು ಹೇಳಲಾಗಿದೆ.

ಕಿಂಚ—ಭೂಯಾಸಮಿತ್ಯತ್ರಾಪಿ "ಮೇಧಾವೀ ಭೂಯಾಸಂ" "ಬ್ರಹ್ಮವರ್ಚಸ್ವೀ ಭೂಯಾಸಂ" "ಅಯೋಗೀಃ ಪ್ರಥಮವಾಸಂ"

ಇತ್ಯಾದಿಷ್ವಿವ ವಿಧ್ಯರ್ಥೋಪಪತ್ತೇಃ, ದೇವತಾಂತರಧಾರಣವಿಧಾಯಕ ಪ್ರಮಾಣಾಚಾರಾದರ್ಶನಾತ್, ದೀಕ್ಷಾಕರಣೇ ಶರೀರತ್ರಯಗತಾಣವಾದಿಮಲತ್ರಯಧ್ವಂಸಾಭಾವಾತ್,

ವೈದಿಕತ್ವಂ ಯಥಾ ವಹ್ನೇಃ ಸರ್ವವೇದಪ್ರಮಾಣತಃ ।
ತಥಾ ವೇದೈಕಸಿದ್ಧತ್ವಾದ್ವೈದಿಕಂ ಲಿಂಗಧಾರಣಂ ॥
ವೇದವೇದಾಂತಶಾಸ್ತ್ರೇಷು ಪುರಾಣೇಷ್ವಾಗಮೇಷು ಚ ।
ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣಮುತ್ತಮಂ ॥ ಇತ್ಯಾರಭ್ಯ,
ವೇದೋತ್ತಮೇ ಯಜುರ್ವೇದೇ ತೈತ್ತಿರೀಯೇ ವಿಶೇಷತಃ ।
ಮೋಕ್ಷಾರ್ಥಿನಾಂ ಮುಕ್ತಿಹೇತುರ್ಲಿಂಗಧಾರಣಮಿರ್ಯತೇ ॥
ಛಂದೋಭ್ಯಸ್ಸರ್ವವೇದೇಭ್ಯೋ ಹ್ಯಮೃತಾತ್ಸಂಬಭೂವ ಹಿ ।
ಇಂದ್ರಸ್ತು ಪರಮೈಶ್ವರ್ಯಶಾಲೀ ಸಾಂಬಸ್ತ್ರಿಲೋಚನಃ ॥
ಮಾಂ ಮೇಧಯಾ ಪ್ರಜ್ಞಯಾ ಚ ಸ್ಪೃಣೋತು ಪ್ರೀಣಯತ್ವಥ ।
ಅಮೃತಸ್ಯ ಮೋಕ್ಷಲಾಭಾಯ ಸರ್ವದೇಹೇಷು ಸರ್ವದಾ ॥
ದೇವಸ್ಯ ಲಿಂಗರೂಪಸ್ಯ ಶಿವಸ್ಯ ಪರಮಾತ್ಮನಃ ।
ಧಾರಣಂ ತದ್ಧೃತಿರ್ಯಸ್ಯ ದೇವಧಾರಣ ಇಷ್ಯತೇ ॥
ತಸ್ಮಾಚ್ಛರೀರಂ ಮೇ ಲೋಕೇ ವಿಚರ್ಷಣಮಕಿಲ್ಬಿಷಂ ।
ಜಿಹ್ವಾ ಮೇ ರಸನಾ ಭೂಯಾನ್ಮಧುರಾಲಾಪಭಾಷಿಣೀ ॥
ಕರ್ಣಾಭ್ಯಾಂ ಶ್ರೋತ್ರಯುಗ್ಮೇನ ಭೂರಿ ವ್ಯಶ್ರುವಮಸ್ಮ್ಯಹಂ ।
ಬ್ರಹ್ಮಣಃ ಪಾರ್ವತೀಶಸ್ಯ ಕೋಶೋಽಧಿಷ್ಠಾನಮೇವ ಹಿ ॥
ಅಸೇರಿವ ಯಥಾ ಲೋಕೇ ಪ್ರಜ್ಞಯಾ ಮೇಧಯಾ ವೃತಃ ।
ಶ್ರುತಂ ತಚ್ಛ್ರವಣಾದೀನಿ ಮೇ ಗೋಪಾಯ ಪ್ರಯತ್ನತಃ ॥

ಇತ್ಯಾದಿನಾ ಲೈಂಗೇ ಏತದುಪಬೃಹ್ಮಣಶ್ರವಣಾತ್,

ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರೇದಿತಿ ।
ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಹ್ಮಯೇತ್ ॥
ವೇದಾರ್ಥೋ ಯಃ ಸ್ವಯಂ ಜ್ಞಾತಸ್ತತ್ರಾಜ್ಞಾನಂ ಭವೇದಪಿ ।
ಋಷಿಭಿರ್ನಿಶ್ಚಿತೇ ತಸ್ಮಿನ್ ಕಾ ಶಂಕಾ ಸ್ಯಾನ್ಮಹಾತ್ಮನಾಂ ॥

ಇತ್ಯಾದಿಸ್ಮೃತೌ ಸ್ವತಂತ್ರತಯಾ ವೇದಾರ್ಥನಿರೂಪಣನಿಷೇಧ ದರ್ಶನಾಚ್ಚ ನಾನ್ಯಾರ್ಥೋ ಯುಕ್ತಃ.

'ನಾನು ಬುದ್ಧಿಶಾಲಿಯಾಗುವೆನು' 'ನಾನು ಬ್ರಹ್ಮವರ್ಚಸ್ಸುಳ್ಳವನಾಗುವೆನು' 'ನಾನೊಬ್ಬನೇ ಮೊದಲಿಗೆ ಇದ್ದವನು' ಇಂತಹ ಕಡೆಗಳಲ್ಲಿರುವಂತೆ, 'ಭೂಯಾಸಂ' ಎಂಬಲ್ಲಿ ವಿಧ್ಯರ್ಥವು ಸಮಂಜಸವಾಗುತ್ತದೆ. ಬೇರೆ ದೇವತೆಗಳನ್ನು ದೇಹದಲ್ಲಿ ಧರಿಸ

ಬೇಕೆಂದು ವಿಧಿಸುವ ಪ್ರಮಾಣವಾಗಲೀ, ಆಚರಣೆಯಾಗಲೀ ಎಲ್ಲಿಯೂ ಕಂಡು ಬಂದಿಲ್ಲ. ದೀಕ್ಷೆಯಲ್ಲಿ ಲಿಂಗವನ್ನು ಪಡೆಯದಿದ್ದರೆ ಮೂರು ಶರೀರಗಳಲ್ಲಿರುವ ಅನಾದಿಯಾದ ಮೂರು ಮಲಗಳು ನಾಶವಾಗುವುದಿಲ್ಲ. "ಆದ್ದರಿಂದ ವೇದಗಳ ಆಧಾರದಿಂದ ವೈದಿಕವೆನಿಸಿದ ಲಿಂಗಧಾರಣವನ್ನು ತಿಳಿಸುವೆನು". ಹೀಗೆ ವೇದವೇದಾಂತಶಾಸ್ತ್ರಗಳಲ್ಲೂ, ಪುರಾಣಗಳಲ್ಲೂ ವೀರಶೈವನಿಗೆ ಲಿಂಗಧಾರಣವನ್ನು ಹೇಳಲಾಗಿದೆ. ಇದೂ ಅಲ್ಲದೆ ವೇದಗಳಲ್ಲಿ ಶ್ರೇಷ್ಠವೆನಿಸಿದ ಯಜುರ್ವೇದದಲ್ಲೂ, ವಿಶೇಷವಾಗಿ ತೈತ್ತಿರೀಯದಲ್ಲೂ ಮುಮುಕ್ಷುಗಳಿಗೆ ಮುಕ್ತಿಗೆ ಸಾಧಕವೆಂದು ಲಿಂಗಧಾರಣವನ್ನೇ ವಿಧಿಸಲಾಗಿದೆ. "ಅಮೃತರೂಪನೂ, ಎಲ್ಲಾ ವೇದಗಳ ಸಾರನೂ ಆದ ಪರಮೇಶ್ವರನು ಸಕಲೈಶ್ವರ್ಯ ಸಂಪನ್ನನಾಗಿದ್ದಾನೆ. ಅವನು ನನ್ನಲ್ಲಿ ಪ್ರಜ್ಞೆಯನ್ನು ಹೆಚ್ಚಿಸಲಿ. ಮೋಕ್ಷಪ್ರಾಪ್ತಿಗಾಗಿ ಎಲ್ಲಾ ದೇಹಗಳಲ್ಲಿಯೂ ಯಾವಾಗಲೂ ಲಿಂಗರೂಪನಾದ ಪರಶಿವನನ್ನು ಧರಿಸುವುದೇ ದೇವಧಾರಣವೆನಿಸುತ್ತದೆ. ಆದ್ದರಿಂದಲೇ ಈ ಶರೀರವು ಪಾಪರಹಿತವಾಗಲಿ, ಈ ನಾಲಿಗೆ ಮಧುರಾಲಾಪಭಾಷಿಣಿಯಾಗಲಿ. ಎರಡು ಕಿವಿಗಳೂ ಬ್ರಹ್ಮವಾರ್ತೆಯನ್ನೇ ಕೇಳಲಿ. ಈ ಲಿಂಗವನ್ನು ಉಮಾಪತಿಯಾದ ಪರಶಿವನ ಕೋಶವೆಂದು ತಿಳಿಯಿರಿ. ಕೋಶದೊಳಗೆ ಖಡ್ಗವಿರುವಂತೆ, ಈ ದೇಹದೊಳಗಿನ ಪ್ರಜ್ಞೆಯಲ್ಲಿ ಶಿವನು ಅಡಗಿರುವನು. ಅವನು ನನ್ನ ಇಂದ್ರಿಯಗಳನ್ನು ರಕ್ಷಣೆಮಾಡಲಿ" ಹೀಗೆ ಲಿಂಗಪುರಾಣದಲ್ಲಿ ಯಜುರ್ವೇದದ ಮಂತ್ರಗಳ ಅರ್ಥವನ್ನು ವಿವರಿಸಲಾಗಿದೆ. "ಕೊಂಚವೇ ಓದಿರುವವನನ್ನು ಕಂಡರೆ ಇವನು ನನ್ನನ್ನು ವಂಚಿಸುವನೆಂದು ವೇದವು ಹೆದರುತ್ತದೆ" "ಇತಿಹಾಸ ಪುರಾಣಗಳಿಂದ ವೇದಾರ್ಥವನ್ನು ಪುಷ್ಟೀಕರಿಸಬೇಕು. ವೇದಾರ್ಥವನ್ನು ತಾನಾಗಿಯೇ ತಿಳಿಯಲು ಹೊರಟರೆ, ಅದರಿಂದ ಅಜ್ಞಾನ ಸಂಭವಿಸಬಹುದು. ಆದರೆ ಋಷಿಗಳಿಂದ ಅರ್ಥವು ನಿಶ್ಚಿತವಾಗಿರುವಾಗ, ವಿವೇಕಿಗಳಿಗೆ ಶಂಕೆಗೆ ಬೇರೆ ಎಲ್ಲಿ ಅವಕಾಶವಿದ್ದೀತು?" ಹೀಗೆ ಸ್ಮೃತಿಯಲ್ಲಿ ಸ್ವತಂತ್ರವಾಗಿ ವೇದಾರ್ಥವನ್ನು ನಿರೂಪಿಸುವ ಕ್ರಮವನ್ನು ನಿಷೇಧಿಸಿರುವುದರಿಂದ, ಬೇರೆ ವಿಧವಾದ ಅರ್ಥವು ಇಲ್ಲಿ ಯುಕ್ತವಾಗಿ ತೋರುವುದಿಲ್ಲ.

**"ಲಿಂಗಿನಂ ಚಕ್ರಿಣಂ ದೃಷ್ಟ್ವಾ" ಇತ್ಯಾದಿನಿಷೇಧಕಸ್ಮೃತೀನಾಂ ಪ್ರಾತ್ಯಕ್ಷಿಕವೇದಮೂಲಕತ್ವಾಭಾವಾತ್ ಸಾಂಖ್ಯಸ್ಮೃತಿವನ್ನಿಷ್ಫಲತ್ವಂ; ಶ್ರೌತವಿಧೇರ್ಬಲೀಯಸ್ತ್ವಾತ್. "ಉದಿತೇ ಜುಹೋತಿ-ಅನುದಿತೇ ಜುಹೋತಿ" ಇತಿ ವಚನದ್ವಯವಿರೋಧೇ ಶಾಖಾಂತರ ವಿಷಯವನ್ಮೂಲಾನುಟ್ಟಂಕಿತಧೂರ್ತಸ್ಮಾರ್ತಮಾಯಾವಾದಿಕಲ್ಪಿತನಿಷೇಧವಾಕ್ಯಾನಾಂ ಗಗನಾರವಿಂದವತ್ ಪ್ರಾಮಾಣ್ಯಾಂಗೀಕಾರೇ ಅವೈದಿಕತಪ್ತಲಿಂಗಧಾರಿವಿಷಯತ್ವಂ ಗ್ರಾಹ್ಯಂ; ಚಕ್ರಿಪದಸಾಮಾನಾಧಿಕರಣ್ಯದರ್ಶನಾತ್. ಶ್ರೌತಲಿಂಗವಿಷಯತ್ವೇ ಲಿಂಗಧಾರ್ಯುತ್ತಮಾಧಿ**

ಕಾರಿವ್ಯವಸ್ಥಾಪಕಶ್ರುತಿಸ್ಮೃತಿಪುರಾಣಾಗಮಾದೀನಾಂ ದತ್ತಜಲಾಂಜಲಿತ್ವಪ್ರಸಕ್ತ್ಯಾ ವೇದಬಾಹ್ಯಮತಪ್ರವೇಶಃ ಸ್ಯಾತ್.

ಶ್ರೌತಾಶ್ರೌತವಿಭೇದೇನ ದ್ವಿಧಾ ಲಿಂಗಸ್ಯ ಧಾರಣಂ ॥
ಷಡಧ್ವಶುದ್ಧಲಿಂಗಂ ತು ಶ್ರೌತಮಿತ್ಯಭಿಧೀಯತೇ ।
ಅಶ್ರೌತಂ ತಪ್ತಲಿಂಗಾದಿಧಾರಣಂ ಪ್ರೋಚ್ಯತೇ ಶಿವೇ ॥
ಶ್ರೌತಾನಾಂ ವೀರಶೈವಾನಾಂ ವೇದಮಾರ್ಗೈಕವರ್ತಿನಾಂ ।
ತಪ್ತಲಿಂಗಪರಿಗ್ರಾಹೇ ಪ್ರತ್ಯವಾಯೋ ಮಹಾನ್ ಭವೇತ್ ॥

ಇತಿ ಸಿದ್ಧಾಂತಾಗಮೇ ದರ್ಶನಾತ್. ಯಾವಜ್ಜೀವಾಗ್ನಿಹೋತ್ರದೀಕ್ಷಿತಸ್ಯ ತದಿತರಶ್ರೌತಯಾಗದೀಕ್ಷಾವಿರೋಧಾಭಾವವಲ್ಲಿಂಗಧಾರಣದೀಕ್ಷಾಯಾ ಅಪಿ ನಿತ್ಯವಿಧಿಪ್ರಾಪ್ತತ್ವೇನ "ನಹಿ ಕರ್ಮಣಿ ಕರ್ಮಾಂತರಾರಂಭಃ" ಇತಿ ನಿಯಮಸ್ಯ ಸಾವಕಾಶದೀಕ್ಷಾವಿಷಯತ್ವಂ. ಶೈವದೀಕ್ಷಾಯಾ ಅಗ್ನಿಷ್ಟೋಮಾದಿದೀಕ್ಷಾವತ್ ಪ್ರತಿಪ್ರಯೋಗಾಪವರ್ಗಿತ್ವಾಭಾವಾತ್ ತಯಾ ಸಹ ವಿರೋಧಾಭಾವಾತ್ಸಮುಚ್ಚಯೋಪಪತ್ತೇಃ ಶೈವಾನಾಂ ಕೃತ್ಸ್ನಸುಷ್ಠಾನಮಾವಶ್ಯಕಮೇವ, ಉಭಯೋಃ ಶ್ರೌತತ್ವಾತ್. ನಿಷೇಧಸ್ಯ ಪ್ರತಿಪ್ರಯೋಗಾಪವರ್ಗಿಯಾವಜ್ಜೀವನಿಷಿದ್ಧದೀಕ್ಷಾಂತರನಿಷೇಧಪರತ್ವಾತ್ ಅವೈದಿಕಪಾಂಚರಾತ್ರಾದಿದೀಕ್ಷಾನಿಷೇಧಪರತ್ವೇನೋಪಪತ್ತಿಃ.

'ಲಿಂಗಿನಂ ಚಕ್ರಿಣಂ ದೃಷ್ಟ್ವಾ' ಎಂಬ ನಿಷೇಧಬೋಧಕವಾದ ಸ್ಮೃತಿಗಳು ಪ್ರತ್ಯಕ್ಷಪ್ರಮಾಣವೆನಿಸಿದ ವೇದದ ಆಧಾರವಿಲ್ಲದ್ದರಿಂದ ಸಾಂಖ್ಯಸ್ಮೃತಿಯಂತೆ ಅಪ್ರಮಾಣವೆನಿಸುತ್ತವೆ. ಸ್ಮೃತಿಗಿಂತಲೂ ಶ್ರುತಿಯಲ್ಲಿ ಹೇಳಿದ ವಿಧಿಯೇ ಬಲಿಷ್ಠವೆನಿಸುತ್ತದೆ. "ಸೂರ್ಯನು ಉದಯಿಸಿದಮೇಲೆ ಹೋಮಮಾಡಬೇಕು, ಉದಯವಾಗುವ ಮೊದಲೇ ಹೋಮಮಾಡಬೇಕು"ಎಂದು ಶ್ರುತಿಯಲ್ಲಿ ಹೇಳಿರುವುದರಿಂದ, ವಿರೋಧವುಂಟಾದರೆ, ಇವೆರಡು ಮತಗಳನ್ನು ಬೇರೆ ಬೇರೆ ಶಾಖೆಯವರಿಗೆ ಅನ್ವಯಿಸಿಕೊಳ್ಳಬೇಕು. ಹಾಗೆ ಶ್ರುತಿಯಲ್ಲಿ ಹೇಳದೆ ಇದ್ದು ಧೂರ್ತರ ಸ್ಮೃತಿಯಲ್ಲಿ ಮಾತ್ರವೇ ಹೇಳಿರುವ ಮಾಯಾವಾದವನ್ನು ಪ್ರತಿಪಾದಿಸುವವರು ಕಲ್ಪಿಸಿದ ನಿಷೇಧವಾಕ್ಯಗಳನ್ನು ಆಕಾಶಪುಷ್ಪದಂತೆ ಪ್ರಮಾಣವಾಗಿ ಅಂಗೀಕರಿಸಿದರೆ, ಅವೈದಿಕಮತದಲ್ಲಿ ಹೇಳಿದಂತೆ ಲಿಂಗಮುದ್ರೆಯನ್ನು ಮೈಮೇಲೆ ಒತ್ತಿಕೊಳ್ಳುವುದಕ್ಕೇ ಲಿಂಗಧಾರಣವೆಂದು ಭಾವಿಸಬೇಕಾಗುತ್ತದೆ. ಯಾಕೆಂದರೆ ಈ ಸ್ಮೃತಿವಾಕ್ಯದಲ್ಲಿ ಲಿಂಗಪದದೊಡನೆ ಚಕ್ರಪದವೂ ಸೇರಿ ಪ್ರಯೋಗವಾಗಿದೆ. ಇದರಿಂದ ಚಕ್ರಮುದ್ರೆಯಂತೆ ಲಿಂಗಮುದ್ರೆಯನ್ನು ಮೈಮೇಲೆ ಒತ್ತಿಕೊಳ್ಳುವುದೇ ಇದರ ಅರ್ಥವಾಗುತ್ತದೆ. "ಹಾಗಲ್ಲ, ಈ ಸ್ಮೃತಿ ವೈದಿಕವಾದ ಲಿಂಗಧಾರಣವನ್ನೇ ಹೇಳುತ್ತದೆ"ಎಂದು ಹೇಳುವುದಾದರೆ, ಲಿಂಗಧಾರಿ

ಯನ್ನು ಉತ್ತಮಾಧಿಕಾರಿ ಎಂದು ಹೇಳುವ ಶ್ರುತಿ ಸ್ಮೃತಿ ಪುರಾಣಾಗಮಗಳೆಲ್ಲಕ್ಕೂ ತಿಲಾಂಜಲಿಯನ್ನು ಎರೆದು ಅವೈದಿಕಮತವನ್ನು ಪ್ರವೇಶಿಸಿದಂತಾಗುವುದು. "ಲಿಂಗ ಧಾರಣವು ವೈದಿಕ, ಅವೈದಿಕವೆಂದು ಎರಡು ಬಗೆಯಾಗಿದೆ. ಷಡಧ್ವಗಳನ್ನು ಶೋಧಿಸಿದ ಲಿಂಗವು ಶ್ರೌತವೆನಿಸುತ್ತದೆ. ಲಿಂಗಮುದ್ರೆಯನ್ನು ಮೈಮೇಲೆ ಒತ್ತಿ ಕೊಳ್ಳುವುದು ಅವೈದಿಕವೆನಿಸುತ್ತದೆ. ವೇದಮಾರ್ಗವನ್ನೇ ಪ್ರಧಾನವಾಗಿ ಅವಲಂಬಿ ಸಿರುವ ವೀರಶೈವರು ಲಿಂಗಮುದ್ರೆಯನ್ನು ಒತ್ತಿಕೊಂಡರೆ ಮಹಾಪಾಪವು ಸಂಭವಿಗುವುದು" ಎಂದು ಸಿದ್ಧಾಂತಾಗಮದಲ್ಲಿ ಹೇಳಿದೆ. ಪ್ರಾಣವಿರುವ ತನಕ ಅಗ್ನಿ ಹೋತ್ರದ ಆಚರಣೆಗಾಗಿ ದೀಕ್ಷೆಪಡೆದವನು ಅದರ ಜೊತೆಗೆ ವೈದಿಕ ಯಜ್ಞದಲ್ಲಿಯೂ ದೀಕ್ಷೆಯನ್ನು ತೆಗೆದುಕೊಳ್ಳುವುದರಲ್ಲಿ ಯಾವ ವಿರೋಧವೂ ಹೇಗೆ ಇರಲಾರದೋ ಹಾಗೆಯೇ ವೈದಿಕರೆಲ್ಲಗೂ ಲಿಂಗವನ್ನು ದೇಹದಲ್ಲಿ ಧರಿಸುವ ದೀಕ್ಷೆಯನ್ನು ನಿತ್ಯವಿಧಿ ಯೆಂದು ಭಾವಿಸುವುದರಲ್ಲಿ ದೋಷವೇನೂ ಇರಲಾರದು. ಒಂದು ಕರ್ಮದಲ್ಲಿ ತೊಡಗಿದವನು ಬೇರೆ ಕರ್ಮವನ್ನಾರಂಭಿಸಬಾರದೆಂಬ ನಿಯಮವು ಬೇರೆ ದೀಕ್ಷೆಗಳಿಗೆ ಸಂಬಂಧಿಸಿದುದಾಗಿದೆ. ಶೈವದೀಕ್ಷೆಯನ್ನು ಅಗ್ನಿಷ್ಟೋಮವೇ ಮೊದಲಾದ ಯಾಗ ಗಳಲ್ಲಿ ಆಚರಿಸುವ ದೀಕ್ಷೆಯಂತೆ ಬೇರೆಯದರ ಜೊತೆಯಲ್ಲಿ ಆಚರಿಸಲು ಯಾವ ಅಡಚಣೆಯೂ ಇಲ್ಲ ಮತ್ತು ವಿರೋಧವೂ ಇಲ್ಲ. ಯಾಕೆಂದರೆ ಶೈವರಿಗೆ ಜ್ಯೋತಿಷ್ಟೋಮವೇ ಮೊದಲಾದ ಯಾಗಗಳ ಆಚರಣೆ ಆವಶ್ಯಕವೇ ಆಗಿದೆ. ಅದರಂತೆ ಲಿಂಗಧಾರಣವೂ ವೈದಿಕವೇ ಆಗಿದೆ. ನಿಷೇಧವೆಲ್ಲಾದರೂ ಕಂಡರೂ, ಅದಕ್ಕೆ ಆ ಕಾಲಕ್ಕೆ ಒದಗಿಬಂದದ್ದನ್ನು ನಿಷೇಧಿಸುವುದರಲ್ಲಿಯೇ ತಾತ್ಪರ್ಯವಾದ್ದರಿಂದ ಪ್ರಾಣವಿರುವತನಕ ನಿಷಿದ್ಧವೆನಿಸಿದ ಅವೈದಿಕವಾದ ಪಾಂಚರಾತ್ರಾಗಮದ ದೀಕ್ಷೆ ಯನ್ನೇ ಅಂತಹ ನಿಷೇಧವಿಧಿಯು ನಿಷೇಧಿಸುವುದಾಗಿ ತಿಳಿಯಬೇಕು.

**ಜಾತಾಶೌಚಮೃತಾಶೌಚಾದೌ ಸ್ವಕರ್ತೃಕಯಾವಜ್ಜೀವಾಗ್ನಿಹೋತ್ರದೀಕ್ಷಿತಸ್ಯ ಸ್ವನಿತ್ಯೋಪಾಸನಾಧಿಕಾರವತ್ ಶೈವದೀಕ್ಷಿತಸ್ಯ ಜಾತಾಶೌಚಾದಾವಪಿ ಲಿಂಗಪೂಜಾಮಾತ್ರಾಧಿಕಾರವತ್ತ್ವಂ. ಅತಏವ "ಸರ್ವ ಲಿಂಗಂ ಸ್ಥಾಪಯತಿ" ಇತ್ಯತ್ರ ಪವಿತ್ರ ಶಬ್ದೇನ ಧೃತಲಿಂಗಸ್ಯ ಸರ್ವಕಾಲ ಧಾರಣಪೂಜಾಧಿಕಾರಯೋಗ್ಯತ್ವಂ ಸೂಚಿತಂ.**

**ಶೈವಂ ದೇವಾರ್ಚನಂ ಯಸ್ಯ ಯಸ್ಯ ಚಾಗ್ನಿಪರಿಗ್ರಹಃ ।**
**ಬ್ರಹ್ಮಚಾರಿಯತೀನಾಂ ಚ ಶರೀರೇ ನಾಸ್ತಿ ಸೂತಕಂ ॥**

**ಲಿಂಗಾರ್ಚನರತಾ ನಾರೀ ಸೂತಿಕಾ ವಾ ರಜಸ್ವಲಾ ।**
**ರವಿರಗ್ನಿರ್ಯಥಾ ವಾಯುಸ್ತಥಾ ಕೋಟಿಗುಣೋಜ್ವಲಾ ।**
**ಜಾತಕೇ ಮೃತಕೇ ವಾಽಪಿ ನ ತ್ಯಾಜ್ಯಂ ಶಿವಪೂಜನಂ ॥**

ಇತ್ಯಾದಿಪಾರಾಶರಸ್ಮೃತಿಸಿದ್ಧಾಂತಶಿಖಾಮಣ್ಯಾದೌ ಲಿಂಗಾಂಗಿದೇಹಸ್ಯ ಪವಿತ್ರತ್ವವ್ಯಪದೇಶಾಲ್ಲಿಂಗಧಾರಣಪೂಜಾದೇರ್ನ ವಿರೋಧಃ.

ನನು—ಪ್ರಮಾಣಾಚಾರಸತ್ತ್ವೇಽಪಿ ಪ್ರತ್ಯಕ್ಷವಿರುದ್ಧತ್ವಾತ್ ರಜಸ್ಸೂತಕಾದಿಕಾಲಕೃತಪೂಜಾಧಾರಣಾದಿಕಮನುಪಪನ್ನಂ ಇತಿ ಚೇನ್ನ-ಜ್ಯೋತಿಷ್ಟೋಮಾತಿರಾತ್ರಪೌಂಡರೀಕಾದಿಯಾಗೀಯಪಶುವಿಶಸನಮಾಂಸಭಕ್ಷಣಸುರಾಪಾನಬ್ರಹ್ಮಚಾರಿಕೃತದಿವಾದಾಸೀಸಂಗಮಾದಿಪ್ರತ್ಯಕ್ಷಲೋಕವಿರುದ್ಧಶ್ರೌತಾಚಾರಭಂಗಪ್ರಸಂಗಾತ್.

ನನು—ಶೈವಾನಾಂ ಪಂಚಸೂತಕಾಭಾವೇ ವರ್ಣಚತುಷ್ಟಯಾತೀತತ್ವಪ್ರಸಂಗಾತ್. ತತ್ಕೃತಪಾಪಾದಿಪರಿಗ್ರಹಪ್ರಸಕ್ತೇಶ್ಚ ವೈದಿಕಾನಾಂ ಲಿಂಗಧಾರಣಮನರ್ಹಮಿತಿ ಚೇನ್ನ.

ಸ್ವೇಷ್ಟಲಿಂಗೈಕಪೂಜಾಯಾಂ ನೈವಾಶೌಚಂ ವಿಧೀಯತೇ ।
ಪೌಂಡರೀಕೇ ರಜಸ್ಸ್ತ್ರೀಣಾಂಸ್ತ್ವಗ್ನಿಹೋತ್ರೇ ಯಥಾ ತಥಾ ॥
ಅಕರಸ್ಪರ್ಶಯೋಗ್ಯಾಽಪಿ ಯಥಾ ಜಿಹ್ವಾ ಮಹೇಶ್ವರಿ ।
ಮಂತ್ರೋಚ್ಚಾರಣಮಾತ್ರಸ್ಯ ಪೂತಾ ಭವತಿ ಭೂತಲೇ ॥
ತಥಾ ಸೂತಕಿನಃ ಶೈವಾಃ ಪೂಜಾಮಾತ್ರಸುನಿರ್ಮಲಾಃ ।
ನಾನ್ಯಸ್ಪರ್ಶಾನುಕೂಲಾಃ ಸ್ಯುರಿತಿ ವೇದಾನುಶಾಸನಂ ॥

ಇತಿ ಸಿದ್ಧಾಂತಾಗಮಾದಿಷು ಶಿವಪೂಜಾಮಾತ್ರಯೋಗ್ಯತಾಶ್ರವಣಾತ್, ಶೈವದೀಕ್ಷಾನಂತರಂ ಪ್ರೇತತ್ವಜೀವತ್ವಾಭಾವೇಽಪಿ ಶಿವಾಗಮೇಷು ಶೈವಾನಾಂ ಸ್ವವರ್ಣಾಶ್ರಮೋಚಿತಪೂರ್ವಾಪರಕರ್ಮಕರ್ತವ್ಯತಾಯಾ ವಿಧೇಯತ್ವಾದಕರಣೇ ಪ್ರತ್ಯವಾಯದರ್ಶನಾಚ್ಚ ವಿಧಿವಿಹಿತಯಾವತ್ಕರ್ಮಾನುಷ್ಠಾನಮಾವಶ್ಯಕಮೇವ.

ಸ್ವಜಾತಿವಿಹಿತಂ ಧರ್ಮಂ ಕುರ್ವಂತಃ ಪೂಜಯಂತಿ ಯೇ ।
ಭಕ್ತ್ಯಾ ಶ್ರೀಕಂಠಮನಿಶಂ ತೇ ವೈ ಮಾಹೇಶ್ವರಾಃ ಸ್ಮೃತಾಃ ॥
ಕರ್ಮ ವಿಧ್ಯುಕ್ತಮುತ್ಸೃಜ್ಯ ಸ್ವಜಾತಿವಿಹಿತಂ ನರಾಃ ।
ಯೇಽರ್ಚಯಂತಿ ಶಿವಂ ತೇಷಾಂ ಪೂಜಾಂ ಗೃಹ್ಣಾತಿ ನೇಶ್ವರಃ ॥
ವರ್ಣಾಶ್ರಮಸದಾಚಾರಾಃ ಶಿವೇನ ಕಥಿತಾಃ ಪುರಾ ।
ಯೇ ತಾನುಲ್ಲಂಘ್ಯ ವರ್ತಂತೇ ಶಿವಸ್ಯಾಜ್ಞಾಪಲಾಪಿನಃ ॥
ರಾಜಾಜ್ಞಾಭಂಗಕೃನ್ನೄಣಾಂ ಯಥಾ ದಂಡೋ ಭವಿಷ್ಯತಿ ।
ಶಿವಾಜ್ಞಾಭಂಗಕೃನ್ನೄಣಾಂ ದಂಡೋ ಹಿ ನರಕಸ್ತಥಾ ॥
ಸಾಂಬೇನ ಶಂಭುನಾಽಽಜ್ಞಪ್ತಂ ಧರ್ಮಂ ತ್ಯಕ್ತ್ವಾರ್ಚಯೇಚ್ಛಿವಂ ।
ಯಸ್ತಸ್ಮೈ ಕುಪ್ಯತಿ ಸ್ಥಾಣುಃ ಸ್ವಾಜ್ಞಾಭಂಗವಿಧಾಯಿನೇ ॥

ಚೋದನಾಲಕ್ಷಣಂ ಧರ್ಮಂ ಶಿವೇನಾಜ್ಞಪ್ತಮುತ್ಯಜನ್ ।
ಶಂಕರಂ ಪೂಜಯೇದ್ಯಸ್ತು ತಸ್ಮೈ ಸಾಂಬಃ ಪ್ರಸೀದತಿ ॥

(ಶಂಕರಸಂ. ಅ. ೮೬)

ಅಂಧಪಂಗುವದನ್ಯೋಽನ್ಯಸಾಪೇಕ್ಷೇ ಜ್ಞಾನಕರ್ಮಣೀ ।
ಫಲೋತ್ಪತ್ತೌ ವಿರಕ್ತಸ್ತು ತಸ್ಮಾತ್ತದ್ದ್ವಯಮಾಚರೇತ್ ॥
ಜ್ಞಾನೇ ಸಿದ್ಧೇಽಪಿ ವಿದುಷಾಂ ಕರ್ಮಾಪಿ ವಿನಿಯುಜ್ಯತೇ ।
ಫಲಾಭಿಸಂಧಿರಹಿತಂ ತಸ್ಮಾತ್ ಕರ್ಮ ನ ಸಂತ್ಯಜೇತ್ ॥
ಆಚಾರ ಏವ ಸರ್ವೇಷಾಮಲಂಕಾರಾಯ ಕಲ್ಪತೇ ।
ಆಚಾರಹೀನಃ ಪುರುಷೋ ಲೋಕೇ ಭವತಿ ನಿಂದಿತಃ ॥
ಜ್ಞಾನೇನಾಚಾರಯುಕ್ತೇನ ಪ್ರಸೀದತಿ ಮಹೇಶ್ವರಃ ।
ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹಪಾತನಂ ॥

(ಸಿ. ಶಿ. ಪರಿ. ೧೬)

ಇತಿ ಶಂಕರಸಂಹಿತಾಸಿದ್ಧಾಂತಶಿಖಾಮಣ್ಯಾದೌ ಕರ್ಮಕರ್ತವ್ಯತಾದರ್ಶನಾತ್, ಸ್ವಪ್ರಯೋಜನಾಭಾವೇಽಪಿ ಭೃತ್ಯಾನಾಂ ರಾಜಾಜ್ಞಾಭಂಗಭಯಾತ್ ತದುದೀರಿತಕರ್ಮಾಚರಣವತ್ ಶೈವದೀಕ್ಷಿತಾನಾಂ ಕರ್ಮಕರಣೇ ಪ್ರಯೋಜನಾಭಾವೇಽಪಿ ಶಿವಾಜ್ಞಾಪಾಲನಾರ್ಥಮವಶ್ಯಂ ತತ್ಕರ್ತವ್ಯಮೇವ. “ಭೀಷಾಽಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ” (ತೈತ್ತಿ. ಆನಂ. ೮) ಇತ್ಯಾದಿಶ್ರುತೌ ಪವನಪ್ರಭಾಕರಾದಿದೇವಾನಾಂ ಶಿವಜ್ಞಾನಾಧಿಕಾನಾಮಪಿ ಪರಮೇಶ್ವರಾಜ್ಞಾಭಂಗಭಯೇನ ಸಕಲಜಗದನುಕೂಲಸ್ವೋಚಿತಕರ್ಮಾನುಷ್ಠಾನಶ್ರವಣಾತ್ ಕಿಂ ವಕ್ತವ್ಯಮಲ್ಪಜ್ಞಾನಿನಾಂ ಮನುಷ್ಯಾಣಾಂ?

ಕಿಂಚ ಲೈಂಗೇ—

ವಯಂ ಬ್ರಹ್ಮಾದಯಸ್ಸರ್ವೇ ಪಶವಃ ಪರಿಕೀರ್ತಿತಾಃ ।
ತ್ವಮಸ್ಮಾಕಂ ಪತಿರ್ಯಸ್ಮಾತ್ತಸ್ಮಾತ್ಪಶುಪತಿಃ ಶಿವಃ ॥
ಇತ್ಯುಕ್ತ್ವಾ ದೇವತಾಃ ಸರ್ವಾಃ ಶಿವಲಿಂಗಾದಿಧಾರಣಂ ।
ಕೃತ್ವಾ ಪಾಶುಪತಾಃ ಸರ್ವೇ ತಸ್ಮಾತ್ಪಶುಪತಿಃ ಶಿವಃ ॥
ಅತೋ ಬ್ರಹ್ಮಾದಿದೇವಾನಾಮುಪಾಸ್ಯಃ ಶಿವ ಏವ ಹಿ ॥
ತಥಾ ವಿಭೂತಿರುದ್ರಾಕ್ಷಲಿಂಗಧಾರಣದೇಹಿನಃ ।
ಶುದ್ಧಸ್ಫಟಿಕಮಾಲಾಭಿರ್ಬದ್ಧಹಸ್ತಾಂಬುಜಾನಪಿ ॥
ಬ್ರಹ್ಮವಿಷ್ಣ್ವಾದಿದೇವಾಂಶ್ಚ ದೃಷ್ಟ್ವಾ ಸಾಂಬಸ್ತ್ರಿಲೋಚನಃ ।
ತ್ರಿಪುರಾಸುರಸಂಹಾರಮಕರೋದ್ಭಕ್ತವತ್ಸಲಃ ॥

ಬ್ರಹ್ಮವಿಷ್ಣ್ವಾದಿದೇವಾಶ್ಚ ಮುನಯೋ ಗೌತಮಾದಯಃ ।
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥

ಕಿಂಚ ಸ್ಕಾಂದೇ ಶಂಕರಸಂಹಿತಾಯಾಂ—

ಉರಸ್ಸ್ಥಲೇ ಹರಿರ್ಲಿಂಗಂ ಧೃತ್ವಾ ಮೂರ್ಧ್ನಿ ಪಿತಾಮಹಃ ।
ಲಿಂಗಸ್ಥಂ ಮಾಂ ಸಮಾರಾಧ್ಯ ಸ್ವಂ ಸ್ವಂ ಪದಮುಪಾಪತುಃ ॥

ಇತ್ಯಾದ್ಯುಪಬೃಹ್ಮಣವಾಕ್ಯೇ ಬ್ರಹ್ಮಾದೀನಾಂ ಶಿವಲಿಂಗಾದಿಧಾರಣ ದರ್ಶನಾತ್, ಲೋಕೇ ಅನಂತಪದ್ಮನಾಭವಿಠಲೇಶ್ವರಾದಿಕ್ಷೇತ್ರೇಷು ನಾರಾಯಣಸ್ಯಾಪಿ ಪಾಣಿಶಿರೋದೇಶೇಷು ಪ್ರತ್ಯಕ್ಷಶಿವಲಿಂಗಧಾರಣ ದರ್ಶನಾಚ್ಚ ನ ಸಂದೇಹಕಲಂಕಪ್ರಸಂಗಃ.

ಜನನಸೂತಕದಲ್ಲೂ ಮರಣಸೂತಕದಲ್ಲೂ ತಾನು ಜೀವವಿರುವವರೆಗೂ ಅಗ್ನಿ ಹೋತ್ರವನ್ನಾಚರಿಸುವುದಾಗಿ ದೀಕ್ಷೆಯನ್ನು ಕೈಕೊಂಡ ಶ್ರೈವಸಿಗೆ ಅದು ತನ್ನ ನಿತ್ಯಕರ್ಮ ವೆನಿಸುವಂತೆ, ವೀರಶೈವದೀಕ್ಷೆಯನ್ನು ಪಡೆದವನಿಗೆ ಅಶುಚಿಯುಂಟಾದ ಕಾಲದಲ್ಲೂ ಇಷ್ಟಲಿಂಗಪೂಜೆಗೆ ಮಾತ್ರ ಅವಕಾಶವಿದ್ದೇ ಇರುತ್ತದೆ. ಆದ್ದರಿಂದ 'ಸರ್ವಲಿಂಗಂ ಸ್ಥಾಪಯತಿ' ಎಂಬ ಶ್ರುತಿಯಲ್ಲಿ ಧಾರಣಮಾಡಿದ ಇಷ್ಟಲಿಂಗಕ್ಕೆ ಮಾತ್ರವೇ ಶುಚಿ ಮತ್ತು ಅಶುಚಿಗಳೆರಡುಕಾಲದಲ್ಲಿಯೂ ಧರಿಸಿ ಅರ್ಚಿಸಲಿಕ್ಕೆ ಅವಕಾಶವಿದೆ ಎಂದು ಪವಿತ್ರ ಶಬ್ದವು ತಿಳಿಸುತ್ತದೆ. 'ಯಾವನು ಶಿವಲಿಂಗದ ಅರ್ಚನವನ್ನಾಗಲೀ ಅಗ್ನಿ ಪೂಜೆಯನ್ನಾಗಲೀ ಮಾಡುತ್ತಿರುವನೋ ಅವನು ಬ್ರಹ್ಮಚಾರಿಯಾಗಲೀ, ಸನ್ಯಾಸಿ ಯಾಗಲೀ ಅವನಿಗೆ ಶರೀರದ ಸೂತಕ ಅಂಟುವುದಿಲ್ಲ. ಲಿಂಗಾರ್ಚನೆಯಲ್ಲಿ ನಿರತ ಳಾದವಳು ಸೂತಕಿಯಾಗಲಿ ಬಹಿಷ್ಠೆಯಾಗಲಿ, ರವಿ, ಅಗ್ನಿ ಅಥವಾ ವಾಯುವಿನಂತೆ ಸದಾ ಶುದ್ಧಳಾಗಿರುವಳು. ಹಾಗೆಯೇ ಜನನ ಸೂತಕಕಾಲದಲ್ಲಿಯೂ ಲಿಂಗ ಪೂಜೆಯನ್ನು ಬಿಡಕೂಡದು. ಹೀಗೆ ಪರಾಶರಸ್ಮೃತಿ, ಸಿದ್ಧಾಂತಶಿಖಾಮಣಿಗಳಲ್ಲಿ ಲಿಂಗಸಂಬಂಧದಿಂದ ದೇಹವನ್ನು ಪವಿತ್ರವೆಂದು ಕರೆದಿರುವುದರಿಂದ ಲಿಂಗಧಾರಣಕ್ಕೂ ಅದರ ಅರ್ಚನೆಗೂ ಯಾವ ವಿರೋಧವೂ ಇರಲಾರದು.

ಲಿಂಗಧಾರಣಕ್ಕೂ ಮತ್ತು ಅದರ ಅರ್ಚನೆಗೂ ಪ್ರಮಾಣ ಮತ್ತು ಸಂಪ್ರದಾಯ ಗಳಿದ್ದರೂ, ಪ್ರತ್ಯಕ್ಷವಿರುದ್ಧವಾದುದರಿಂದ ಸೂತಕಕಾಲದಲ್ಲಿ ಮಾಡಿದ ಪೂಜೆ ಮತ್ತು ಧಾರಣ ಇವು ಹೇಗೆ ಹೊಂದಿಕೆಯಾಗಬಲ್ಲವು? ಎಂದು ಕೇಳುವುದು ಯುಕ್ತವಲ್ಲ. ಯಾಕೆಂದರೆ ಜ್ಯೋತಿಷ್ಟೋಮ, ಅತಿರಾತ್ರ ಮತ್ತು ಪೌಂಡರೀಕ ಯಾಗಗಳಲ್ಲಿ ನಡೆಸುತ್ತಿರುವ ಪಶುವಧ, ಮಾಂಸಭಕ್ಷಣ, ಸುರಾಪಾನ, ಬ್ರಹ್ಮಚಾರಿ ಯಿಂದ ಹಗಲಿನಲ್ಲಿ ದಾಸಿಯೊಡನೆ ಸಂಭೋಗ ಇವೇ ಮೊದಲಾದ ಪ್ರತ್ಯಕ್ಷ ವಿರುದ್ಧವಾದ ವೈದಿಕಾಚಾರಗಳನ್ನೂ ತೊರೆಯಬೇಕಾದೀತು? ಹೀಗೆ ಶೈವರಿಗೆ ಇದು ಸೂತಕಗಳೂ ಇಲ್ಲದಿದ್ದರೆ, ಅವರನ್ನು ನಾಲ್ಕು ವರ್ಣಗಳಿಗಿಂತಲೂ ಆಚಿನ

ವರೆಂದು ಭಾವಿಸಬೇಕಾಗುತ್ತದೆ. ಅವರು ಮಾಡಿದ ಅಡಿಗೆ ಮತ್ತು ಅವರ ಸಂಪರ್ಕ ಇವುಗಳನ್ನು ತೊರೆಯಬೇಕಾಗುತ್ತದೆ. ಅವರ ಸಂಪರ್ಕವಿಟ್ಟುಕೊಂಡರೆ ಶೈವಶಾಸ್ತ್ರ ದಲ್ಲಿ ಹೇಳಿರುವ ಪೂಜೆ ಮತ್ತು ಧಾರಣಗಳನ್ನು ಸೂತಕಕಾಲದಲ್ಲಿ ಆಚರಿಸ ಬಾರದೆಂಬ ಶಾಸ್ತ್ರದ ವಿರೋಧ ಸಂಭವಿಸುವುದರಿಂದ ವೈದಿಕರಿಗೆ ಲಿಂಗಧಾರಣವೇ ಯೋಗ್ಯವಲ್ಲವೆಂದು ಹೇಳಬೇಕಾಗುತ್ತದೆ. ಆದರೆ ಹೀಗೆ ಹೇಳುವುದು ಯುಕ್ತವಲ್ಲ. ತನ್ನ ಇಷ್ಟಲಿಂಗ ಒಂದನ್ನು ಪೂಜಿಸುವಾಗ ಅಶುಚಿಯನ್ನು ಗಮನಿಸಬೇಕಾಗಿಲ್ಲ. ಪೌಂಡರೀಕದಲ್ಲೂ ಅಗ್ನಿಹೋತ್ರದಲ್ಲೂ ಭಾಗವಹಿಸಲು ಬಹಿಷ್ಠೆಯಾದ ಹೆಂಗಸಿಗೆ ಹೇಗೆ ದೋಷವಿಲ್ಲವೋ, ನಾಲಿಗೆ ಕೈಯಲ್ಲಿ ಮುಟ್ಟಲಿಕ್ಕೆ ಯೋಗ್ಯವಲ್ಲದಿದ್ದರೂ ಮಂತ್ರೋಚ್ಚಾರಣಕಾಲದಲ್ಲಿ ಹೇಗೆ ಪವಿತ್ರವೆನಿಸುವುದೋ ಹಾಗೆ ಸೂತಕದೋಷ ವುಳ್ಳವರು ಪೂಜೆಗೆ ಮಾತ್ರ ಯೋಗ್ಯರಾಗಿ ಬೇರೆಯವರನ್ನು ಮುಟ್ಟಲು ಯೋಗ್ಯ ರಾಗಲಾರರು. ಇದು ವೇದಾಜ್ಞೆ" ಎಂದು ಸಿದ್ಧಾಂತಾಗಮದಲ್ಲಿ ಸೂತಕಿಗಳಿಗೆ ಇಷ್ಟಲಿಂಗಪೂಜೆಗೆ ಮಾತ್ರ ಅವಕಾಶವಿರುವುದಾಗಿ ಹೇಳಿದೆ. ಶೈವದೀಕ್ಷೆಯನ್ನು ಪಡೆದ ಮೇಲೆ ಪ್ರೇತಭಾವವೂ, ಜೀವಭಾವವೂ ತೊಲಗಿದ್ದರೂ ಶಿವಾಗಮಗಳು ಶೈವರಿಗೂ ಅವರವರ ವರ್ಣಾಶ್ರಮಗಳಿಗೆ ಸಂಬಂಧಿಸಿದ ಪೂರ್ವಾಪರಕರ್ಮಗಳನ್ನು ಆಚರಿಸುವಂತೆ ವಿಧಿಸಿರುತ್ತವೆ. ಅವನ್ನು ಮಾಡದೇ ಇದ್ದರೆ ಪಾಪ ಸಂಭವಿಸುವುದರಿಂದ ಶಾಸ್ತ್ರೋಕ್ತ ವಾದ ಎಲ್ಲಾ ಕರ್ಮಗಳನ್ನೂ ಅವರು ಆಚರಿಸಲೇಬೇಕು. "ಯಾರು ತನ್ನ ಜಾತಿಗೆ ವಿಹಿತವಾದ ಕರ್ಮವನ್ನಾಚರಿಸುತ್ತ ಭಕ್ತಿಯಿಂದ ಶಿವಲಿಂಗವನ್ನರ್ಚಿಸುವರೋ, ಅವರು ಮಾಹೇಶ್ವರರೆನಿಸುತ್ತಾರೆ. ತನ್ನ ಜಾತಿಗೆ ವಿಹಿತವಾದ ಕರ್ಮವನ್ನು ತೊರೆದು ಯಾರು ಶಿವಲಿಂಗವನ್ನರ್ಚಿಸುವರೋ, ಅವರ ಪೂಜೆಯನ್ನು ಈಶ್ವರನು ಸ್ವೀಕರಿಸು ವುದಿಲ್ಲ. ವರ್ಣಾಶ್ರಮಗಳ ಸದಾಚಾರಗಳನ್ನು ಶಿವನೇ ತಿಳಿಸಿದ್ದಾನೆ. ಶಿವನ ಆಜ್ಞೆ ಯನ್ನು ಮೀರಿ ಯಾರು ಆಚಾರಗಳನ್ನು ಅತಿಕ್ರಮಿಸುವರೋ, ಅಂತವರಿಗೆ ರಾಜಾಜ್ಞೆ ಯನ್ನು ಅತಿಕ್ರಮಿಸುವವರಿಗೆ ರಾಜದಂಡದಂತೆ ನರಕವಾಸವೇ ಶಿಕ್ಷೆಯಾಗುವುದು. ಪರಮೇಶ್ವರನು ಆಜ್ಞಾಪಿಸಿದ ಧರ್ಮವನ್ನು ತೊರೆದು ಯಾರು ಶಿವನನ್ನು ಅರ್ಚಿ ಸುವರೋ, ಅಂತವರಿಗೆ ಶಿವನು ತನ್ನ ಆಜ್ಞೆಯನ್ನು ಉಲ್ಲಂಘಿಸಿದ ದೋಷಕ್ಕಾಗಿ ಕೋಪಗೊಳ್ಳುತ್ತಾನೆ. ಪ್ರೇರಣರೂಪವಾದ ಧರ್ಮವು ಶಿವನಿಂದಲೇ ವಿಹಿತವಾಗಿದೆ. ಅದನ್ನು ತೊರೆಯದೆ ಯಾವನು ಶಂಕರನನ್ನು ಪೂಜಿಸುವನೋ ಅವನಿಗೇ ಈಶ್ವರನು ಪ್ರಸನ್ನನಾಗುತ್ತಾನೆ. ಕುರುಡ ಮತ್ತು ಹೆಳವರಂತೆ ಜ್ಞಾನಕರ್ಮಗಳು ಒಂದನ್ನೊಂದು ಅವಲಂಬಿಸಿಕೊಂಡಿವೆ. ಫಲದಲ್ಲಿ ಆಶೆಯಿಲ್ಲದಂತೆ ಅವೆರಡನ್ನೂ ಆಚರಿಸಲೇಬೇಕು. ಸದಾಚಾರದಿಂದ ಕೂಡಿದ ಜ್ಞಾನದಿಂದ ಈಶ್ವರನು ಪ್ರಸನ್ನನಾಗುತ್ತಾನೆ. ಆದ್ದರಿಂದ ಜ್ಞಾನಿಯು ದೇಹಬಿಡುವವರೆಗೂ ಆಚಾರವಂತನೇ ಆಗಿರಬೇಕು. ಜ್ಞಾನವು ಸಿದ್ಧಿಸಿದಮೇಲೆಯೂ ಜ್ಞಾನಿಯು ಕರ್ಮವನ್ನಾಚರಿಸಬೇಕು. ಆದರೆ ಅದು ಫಲಾ ಪೇಕ್ಷಾರಹಿತವಾಗಿರಬೇಕು. ಆದ್ದರಿಂದ ಕರ್ಮವನ್ನು ಬಿಡಲಿಕ್ಕಾಗುವುದೇ ಇಲ್ಲ.

ಎಲ್ಲರಿಗೂ ಸದಾಚಾರವೇ ಭೂಷಣವೆನಿಸಿದೆ. ಆಚಾರಹೀನನು ಲೋಕದಲ್ಲಿ ನಿಂದಿತನಾಗುತ್ತಾನೆ. ಶಿವಾಜ್ಞೆಯನ್ನು ನಡೆಸಲಿಕ್ಕಾಗಿ ಶಿವಭಕ್ತನು ಶಿವವ್ರತವನ್ನು ಕೈಕೊಂಡು ಶಿವಾರ್ಪಣಬುದ್ಧಿಯಿಂದ ವೇದೋಕ್ತವಾದ ಕರ್ಮಗಳನ್ನಾಚರಿಸಲೇ ಬೇಕು". ಹೀಗೆ ಶಂಕರಸಂಹಿತೆ, ಸಿದ್ಧಾಂತಶಿಖಾಮಣಿಗಳಲ್ಲಿ ಕರ್ಮವನ್ನಾಚರಿಸಲೇ ಬೇಕೆಂದು ಹೇಳಿದೆ.

ತಮಗೆ ಯಾವ ಫಲವಿಲ್ಲದಿದ್ದರೂ ಸೇವಕರು ರಾಜಾಜ್ಞೆಗೆ ಭಂಗಬಂದೀತೆಂಬ ಭಯದಿಂದ ರಾಜನು ಹೇಳಿದ ಎಲ್ಲಾ ಕೆಲಸಗಳನ್ನೂ ಮಾಡುತ್ತಾರೆ. ಹಾಗೆಯೇ ಶಿವದೀಕ್ಷೆಯನ್ನು ಕೈಕೊಂಡವರು ಕರ್ಮಮಾಡಿದ್ದಕ್ಕೆ ಯಾವ ಫಲವನ್ನೂ ಬಯಸದೆ ಶಿವಾಜ್ಞೆಯನ್ನು ನಡೆಸಲಿಕ್ಕಾಗಿ ಎಲ್ಲಾ ಕರ್ಮಗಳನ್ನೂ ಮಾಡಬೇಕು. "ಯಾವನ ಭಯದಿಂದ ಗಾಳಿ ಬೀಸುತ್ತದೆಯೋ" ಎಂಬ ಶ್ರುತಿಯಲ್ಲಿ ಗಾಳಿ, ಸೂರ್ಯ ಮೊದಲಾದ ದೇವತೆಗಳೂ ಸಹ ಶಿವಜ್ಞಾನವನ್ನು ಪಡೆದಿದ್ದರೂ, ಪರಮೇಶ್ವರನ ಆಜ್ಞೆಗೆ ಭಂಗವುಂಟಾದೀತೆಂಬ ಭಯದಿಂದ ಜಗತ್ತಿಗೆ ಹಿತವಾಗುವಂತೆ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿರುವಾಗ್ಯೆ ಅಜ್ಞಾನಿಗಳಾದ ಮನುಷ್ಯರ ಬಗ್ಯೆ ಹೇಳುವುದೇನಿದೆ? ಲಿಂಗಪುರಾಣದಲ್ಲಿ "ಬ್ರಹ್ಮಾದಿಯಾಗಿ ನಾವೆಲ್ಲರೂ ಪಶುಗಳೆನ್ನಿಸಿಕೊಂಡಿದ್ದೇವೆ. ನೀನು ನಮ್ಮೆಲ್ಲರಿಗೂ ಪತಿಯಾದ್ದರಿಂದ ಪಶುಪತಿ ಎನ್ನಿಸಿಕೊಂಡಿರುವೆ. ಹೀಗೆ ಎಲ್ಲಾ ದೇವತೆಗಳೂ ಲಿಂಗಧಾರಣದಿಂದ ಪಾಶುಪತರೆನಿಸಿಕೊಂಡಿರುವರು. ಆದ್ದರಿಂದ ಬ್ರಹ್ಮಾದಿ ದೇವತೆಗಳೆಲ್ಲರಿಗೂ ಶಿವನೇ ಉಪಾಸ್ಯನಾಗಿದ್ದಾನೆ. ಅವನಿಗೆ ಸಂಬಂಧಿಸಿದ ಭಸ್ಮ ರುದ್ರಾಕ್ಷಗಳನ್ನೂ ಮತ್ತು ಲಿಂಗವನ್ನೂ ಅವರು ದೇಹದಲ್ಲಿ ಧರಿಸಿದ್ದಾರೆ. ಹಸ್ತಕಮಲಗಳಲ್ಲಿ ಶುದ್ಧಸ್ಫಟಿಕಮಾಲೆಯನ್ನು ಹಿಡಿದಿದ್ದ ಬ್ರಹ್ಮವಿಷ್ಣುವೇ ಮೊದಲಾದ ದೇವತೆಗಳನ್ನು ತ್ರಿಲೋಚನನಾದ ಸಾಂಬಮೂರ್ತಿಯು ಕಂಡು ಭಕ್ತವಾತ್ಸಲ್ಯದಿಂದ ತ್ರಿಪುರಾಸುರರನ್ನು ವಧಿಸಿದನು" ಈ ಬಗೆಯ ಉಪಬೃಂಹಣವಾಕ್ಯಗಳಿಂದ ಬ್ರಹ್ಮಾದಿ ದೇವತೆಗಳು ಲಿಂಗವನ್ನು ಧರಿಸಿದ್ದರೆಂಬ ಅಂಶ ಸ್ಪಷ್ಟಪಡುತ್ತದೆ. ಸ್ಕಾಂದದಲ್ಲೂ, ಶಂಕರಸಂಹಿತೆಯಲ್ಲೂ "ಬ್ರಹ್ಮ ವಿಷ್ಣುವೇ ಮೊದಲಾದ ದೇವತೆಗಳೂ, ಗೌತಮಾದಿ ಮುನಿಗಳೂ ದೇಹದಲ್ಲಿ ವಿಶೇಷವಾಗಿ ಶಿರಸ್ಸಿನಲ್ಲೂ ಲಿಂಗವನ್ನು ಯಾವಾಗಲೂ ಧರಿಸಿರುವರು. ಹರಿಯು ವಕ್ಷಸ್ಥಳದಲ್ಲೂ, ಬ್ರಹ್ಮನು ಶಿರಸ್ಸಿನಲ್ಲೂ ಲಿಂಗವನ್ನು ಧರಿಸಿ ಆ ಲಿಂಗದಲ್ಲಿರುವ ಶಿವನನ್ನಾರಾಧಿಸಿ ತಮ್ಮತಮ್ಮ ಸ್ಥಾನಮಾನಗಳನ್ನು ಪಡೆದಿದ್ದಾರೆ" ಎಂದು ಹೇಳಿದೆ. ಈ ಲೋಕದಲ್ಲಿ ಅನಂತಪದ್ಮನಾಭ ಮತ್ತು ವಿಠಲೇಶ್ವರ ಇವರ ಕ್ಷೇತ್ರಗಳಲ್ಲಿ ನಾರಾಯಣಮೂರ್ತಿಯು ಹಸ್ತದಲ್ಲೂ, ಶಿರಸ್ಸಿನಲ್ಲೂ ಶಿವಲಿಂಗವನ್ನು ಧರಿಸಿರುವುದನ್ನು ಪ್ರತ್ಯಕ್ಷವಾಗಿ ನಾವು ಕಾಣಬಹುದು. ಆದ್ದರಿಂದ ಈ ಬಗ್ಯೆ ಯಾವ ಸಂದೇಹಕ್ಕೂ ಅವಕಾಶವಿಲ್ಲ.

**"ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" (ಕೈವ. ೧-೨) ಇತ್ಯಾದಿಷು ಧ್ಯಾನಜ್ಞಾನಯೋರೇವ ಮೋಕ್ಷಹೇತುತ್ವವ್ಯಪದೇಶಾದ್ಬಾಹ್ಯಲಿಂಗಧಾ**

ರಣಾದಿನಾ ನ ಕಿಂಚಿತ್ಪ್ರಯೋಜನಮಿತಿ ಚೇನ್ನ — "ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ"(ಶ್ವೇ.೧-೧೦) ಇತಿ ಶ್ರುತೌ ತಸ್ಯ-ಹರಸ್ಯ, ಅಭಿಧ್ಯಾನಾತ್-ಅಂತರನುಸಂಧಾನಾತ್, ಯೋಜನಾತ್-ಸಂಯೋಗಾತ್ ಬಾಹ್ಯಧಾರಣಾತ್, ತತ್ತ್ವಭಾವಾತ್-ತತ್ತ್ವಸಾಕ್ಷಾತ್ಕಾರಾತ್, ಸಕಲಮಾಯಾನಿವೃತ್ತಿರ್ಭವತೀತಿ ಶ್ರವಣಾತ್, ಶ್ರುತಿಸಂಕೋಚೇ ಮಾನಾಭಾವಾತ್, "ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್" (ಬ್ರ. ಸೂ. ೧-೧-೩೨) ಇತ್ಯಾದೌ ಭಗವತಾ ವ್ಯಾಸೇನಾಪಿ ತ್ರಿವಿಧೋಪಾಸನಾವ್ಯಪದೇಶಾತ್, ತಥಾ ಸ್ಕಾಂದೇ —

ಮಾನಸೋಪಾಸನಂ ಕುರ್ಯಾದ್ಧೃದಯೇ ದಹರೇಽಪಿ ವಾ ।
ಪಂಚಾಕ್ಷರ್ಯಾ ಚ ಗಾಯತ್ರ್ಯಾ ರುದ್ರಸೂಕ್ತಾದಿಭಿಸ್ತಥಾ ।
ವಾಚಕೋಪಾಸನಂ ಪ್ರೋಕ್ತಂ ಧೃತಲಿಂಗೇ ಶಿವಾತ್ಮಕೇ ॥
ಪಾಣಿಪೀಠೇ ತಥಾ ವಹ್ನೌ ಸ್ಥಂಡಿಲೇ ವಾ ವಿಧಾನತಃ ।
ಕಾಯಕೋಪಾಸನಂ ಕುರ್ಯಾತ್ ಶ್ರದ್ಧಾಭಕ್ತಿಸಮನ್ವಿತಃ॥
ಏವಂ ತ್ರಿಕರಣೈರ್ನಿತ್ಯಮೀಶ್ವರೋಪಾಸನಂ ದ್ವಿಜಃ ।
ಕುರ್ವನ್ಮುಕ್ತಿಮವಾಪ್ನೋತಿ ವೈದಿಕೋ ನಾನ್ಯಹೇತುನಾ ॥

ಇತ್ಯಾದಿನಾ, "ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ" ಇತಿ ನ್ಯಾಯೇನ ಚ ಮಾನಸಯಜ್ಞಸಂನ್ಯಾಸಾದೀನಾಂ ಪ್ರವರ್ತಕತ್ವದರ್ಶನಾತ್' ಅಂತರ್ಧಾರಣಮಾತ್ರತ್ವೇ ಬಾಹ್ಯಾಂಗಸ್ಯ ನಿಷ್ಫಲತ್ವಾತ್, ತದ್ಗತಕಾರ್ಮಿಕಮಲಧ್ವಂಸಾಭಾವಪ್ರಸಂಗಾಚ್ಚ,

ಕಿಂಚ—ಪ್ರಾಗುಪನಯನದೀಕ್ಷಿತಸ್ಯೈವ "ಸ್ವಾಧ್ಯಾಯೋಽಧ್ಯೇತವ್ಯಃ" "ಅಹರಹಸ್ಸಂಧ್ಯಾಮುಪಾಸೀತ" ಇತ್ಯಾದಿವಾಕ್ಯವಿಹಿತಸ್ವಾಧ್ಯಾಯಾದಿಕರ್ಮಾಧಿಕಾರವತ್ ಲಿಂಗಧಾರಣದೀಕ್ಷಿತಸ್ಯೈವ ಶಿವಧ್ಯಾನಶಿವಜ್ಞಾನಾಧಿಕಾರಿತ್ವಮವಿರುದ್ಧಂ. ಅಂತರ್ಧ್ಯಾನಧಾರಣಯೋರಾವಶ್ಯಕತ್ವೇಽಪಿ ಪಾಕಸ್ಯ ವಹ್ನಿವತ್ ಮೋಕ್ಷಸ್ಯ ಲಿಂಗದೀಕ್ಷಯಾ ಮುಖ್ಯಸಾಧನತ್ವಾತ್, ತದಸ್ವೀಕಾರೇ ಪೂರ್ವೋದಾಹೃತಶ್ರುತಿಸ್ಮೃತ್ಯಾಗಮಪುರಾಣವೈರುಧ್ಯೇನ ವೇದಬಾಹ್ಯತ್ವಪ್ರಸಂಗಾತ್,

ಶಿವಧ್ಯಾನಪರೋ ಭೂತ್ವಾ ಶಿವಲಿಂಗಾಂಗಸಂಯುತಃ ।
ಶಿವೇತರಪರಿತ್ಯಾಗೀ ಧ್ಯಾನಯೋಗೀ ಸ ಉಚ್ಯತೇ ॥
ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾ ಸೂತ್ರಂ ತಥಾ ಭಸ್ಮ ಚೈತದ್ಬ್ರಾಹ್ಮಣಲಕ್ಷಣಂ ॥

**ಇತಿ ಮನುಗೌತಮಾದಿಸ್ಮೃತಿಷು ಶಿವಲಿಂಗಧಾರಣಸ್ಯ ವೇದವಿಹಿತತ್ವೇನ ದೃಷ್ಟತ್ವಾಚ್ಚ ವೈದಿಕಾನಾಮವಿರೋಧಃ.**

ಆದರೆ 'ಶ್ರದ್ಧಾಭಕ್ತಿಗಳಿಂದ ಕೂಡಿದ ಧ್ಯಾನಯೋಗದಿಂದ ತಿಳಿಯುವುದು' ಎಂಬ ಶ್ರುತಿಯಲ್ಲಿ ಧ್ಯಾನಜ್ಞಾನಗಳನ್ನು ಮೋಕ್ಷಸಾಧನವೆಂದು ಹೇಳಿರುವುದರಿಂದ ಬಾಹ್ಯಲಿಂಗಧಾರಣದಿಂದೇನುಫಲ ? ಎಂದು ಕೇಳುವುದೂ ಯುಕ್ತವಲ್ಲ, ಯಾಕೆಂದರೆ, "ಆ ಶಿವನನ್ನು ತನ್ನೊಳಗೆ ಅನುಸಂಧಾನಮಾಡುವುದರಿಂದಲೂ, ದೇಹದಲ್ಲಿ ಹೊರಗೆ ಧಾರಣಮಾಡುವುದರಿಂದಲೂ ಜೀವರಿಗೆ ಎಲ್ಲಾ ಬಗೆಯ ವ್ಯಾಮೋಹವೂ ತೊಲಗುತ್ತದೆ" ಎಂಬ ಶ್ರುತಿಯ ಅರ್ಥವನ್ನು ಸಂಕೋಚಗೊಳಿಸುವುದರಲ್ಲಿ ಯಾವ ಪ್ರಮಾಣವೂ ಇಲ್ಲದ್ದರಿಂದ ಶ್ರುತಿಯ ಹೇಳಿಕೆಯಂತೆ ಲಿಂಗಧಾರಣವೇ ಮುಕ್ತಿಗೆ ಆವಶ್ಯಕವೆನಿಸಿದೆ. "ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನ ಉಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್" ಎಂಬ ಸೂತ್ರದಲ್ಲಿ ಪೂಜ್ಯವ್ಯಾಸನೂ ಸಹ ಮೂರು ಬಗೆಯ ಉಪಾಸನೆಯನ್ನು ಹೇಳಿದ್ದಾನೆ. ಹಾಗೆಯೇ ಸ್ಕಾಂದದಲ್ಲೂ "ಮಾನಸೋಪಾಸನವನ್ನು ಹೃದಯದಲ್ಲೋ ಅಥವಾ ದಹರಾಕಾಶದಲ್ಲೋ ನಡೆಸಬೇಕು. ಪಂಚಾಕ್ಷರಿಯಿಂದಾಗಲೀ, ಗಾಯತ್ರಿಯಿಂದಾಗಲೀ, ರುದ್ರಸೂಕ್ತಗಳಿಂದಾಗಲೀ ವಾಚಕೋಪಾಸನವನ್ನು ಬಾಯಿಂದ ನಡೆಸಬೇಕು. ದೇಹದಲ್ಲಿ ಧರಿಸಿದ ಶಿವಲಿಂಗವನ್ನು ಹಸ್ತಪೀಠದಲ್ಲಿರಿಸಿ ಶ್ರದ್ಧಾಭಕ್ತಿಗಳಿಂದ ಕೂಡಿ ಅರ್ಚಿಸುವುದು ಕಾಯಕೋಪಾಸನವೆನಿಸುತ್ತದೆ. ಹೀಗೆ ತ್ರಿಕರಣಗಳಿಂದಲೂ ನಿತ್ಯವೂ ವೀರಶೈವನು ಶಿವೋಪಾಸನವನ್ನು ಮಾಡುತ್ತಿರಬೇಕು. ಹೀಗೆ ನಿರಂತರವೂ ಶಿವನನ್ನು ಅರ್ಚಿಸುತ್ತ ಅವನು ಮುಕ್ತಿಯನ್ನು ಹೊಂದುವನೇ ಹೊರತು ಬೇರೆ ರೀತಿಯಲ್ಲಿ ಹೊಂದಲಾರನು. ಮಹಾತ್ಮರಿಗೆ ಮಾತಿನಲ್ಲೂ, ಮನದಲ್ಲೂ, ಕ್ರಿಯೆಯಲ್ಲೂ ಒಂದೇ ಬಗೆಯ ವರ್ತನೆ ಇರಬೇಕಾಗಿರುವುದರಿಂದ ಅಂತರ್ಲಿಂಗದ ಧ್ಯಾನದಂತೆ ಬಾಹ್ಯಲಿಂಗದ ಧಾರಣಾರ್ಚನೆಗಳೂ ಇರಲೇಬೇಕು, ಇಲ್ಲವಾದರೆ ಮಾನಸಿಕ ಧ್ಯಾನ, ಕರ್ಮಫಲತ್ಯಾಗ ಇವು ಅಂತರ್ಲಿಂಗದ ಧ್ಯಾನದಲ್ಲಿಯೇ ಮನುಷ್ಯನನ್ನು ಪ್ರವರ್ತಿಸುತ್ತವೆಯಾದ್ದರಿಂದ ಬಾಹ್ಯಶರೀರವು ವ್ಯರ್ಥವೆನಿಸಿ, ಅದಕ್ಕೆ ಅಂಟಿಕೊಂಡಿರುವ ಆಣವಮಲವೂ ನಾಶವಾಗದೆ, ಹಾಗೆಯೇ ಉಳಿಯಬೇಕಾಗುತ್ತದೆ.

"ಮೊದಲು ಶಿವದೀಕ್ಷೆಯನ್ನು ಪಡೆದವನೇ ತನ್ನ ಶಾಖೆಯ ವೇದವನ್ನು ಓದಬಹುದು", "ಪ್ರತಿದಿನವೂ ಸಂಧ್ಯೆಯನ್ನು ವಂದಿಸಬಹುದು" ಈ ಬಗೆಯ ವಾಕ್ಯಗಳಲ್ಲಿ ಹೇಳಿದಂತೆ ತನ್ನ ವಿಹಿತಕರ್ಮಗಳಲ್ಲಿ ಅಧಿಕಾರ ಪಡೆಯುವಂತೆಯೇ ಲಿಂಗಧಾರಣಕ್ಕೆ ಸಂಬಂಧಿಸಿದ ವೀರಶೈವ ದೀಕ್ಷೆಯನ್ನು ಪಡೆದವನಿಗೇ ಶಿವಧ್ಯಾನದಲ್ಲೂ ಶಿವಜ್ಞಾನದಲ್ಲೂ ಅವಕಾಶವಿರುವುದರಲ್ಲಿ ಯಾವ ವಿರೋಧವೂ ಇಲ್ಲ. ಅಂತರ್ಧ್ಯಾನ ಮತ್ತು ಅಂತರ್ಧಾರಣ ಇವೆರಡೂ ಅವಶ್ಯಕವಾದರೂ, ಅಡಿಗೆಗೆ ಬೆಂಕಿಯಂತೆ ಮೋಕ್ಷಕ್ಕೆ ಲಿಂಗದೀಕ್ಷೆಯೇ ಮುಖ್ಯಸಾಧನವೆನಿಸಿದೆ. ಇದನ್ನು ಪಡೆಯದೇ ಇದ್ದರೆ,

ಹಿಂದೆ ಹೇಳಿದ ಶ್ರುತಿ ಸ್ಮೃತಿ ಆಗಮ ಪುರಾಣಗಳ ವಿರೋಧವು ಸಂಭವಿಸುವುದರಿಂದ ವೀರಶೈವಮತವು ವೇದದಿಂದ ಹೊರಗಾಗಬೇಕಾದೀತು ? ಶಿವಧ್ಯಾನದಲ್ಲಿ ಆಸಕ್ತನಾಗಿ ಶಿವಲಿಂಗವನ್ನು ದೇಹದಲ್ಲಿ ಧರಿಸಿ ಶಿವನಿಗಿಂತ ಬೇರೆ ದೈವವನ್ನು ತೊರೆದವನು ಧ್ಯಾನ ಯೋಗಿ ಎನಿಸುತ್ತಾನೆ. "ಬಾಯಲ್ಲಿ ಮಂತ್ರವೂ, ಹೃದಯದಲ್ಲಿ ಧ್ಯಾನವೂ, ತಲೆಯಲ್ಲಿ ಲಿಂಗಧಾರಣವೂ, ಶಿಖಾರುದ್ರಾಕ್ಷಭಸ್ಮಗಳೂ ಇರುವುದೇ ಬ್ರಾಹ್ಮಣನ ಲಕ್ಷಣವೆನಿಸಿದೆ" ಎಂದು ಮನುಗೌತಮ ಸ್ಮೃತಿಗಳಲ್ಲಿ ಲಿಂಗಧಾರಣವನ್ನು ವೈದಿಕವೆಂದು ವಿಧಿಸಿರುವುದರಿಂದ ವೈದಿಕರಿಗೆ ಲಿಂಗಧಾರಣದಿಂದ ಯಾವ ವಿರೋಧವೂ ಸಂಭವಿಸಲಾರದು.

"ಮೋಕ್ಷಮಿಚ್ಛೇಜ್ಜನಾರ್ದನಾತ್" ಇತಿ ನಾರಾಯಣಸ್ಯೈವ ಮೋಕ್ಷಪ್ರದಾತೃತ್ವೋಪದೇಶಾತ್ತಸ್ಯೋಪಾಸನಮೇವ ಮುಮುಕ್ಷೂಣಾಮಾವಶ್ಯಕಮಿತಿಚೇನ್ನ—ತಥಾವಿಧಶ್ರುತ್ಯಭಾವಾತ್, "ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ" (ಅಥರ್ವಶಿಖಾ ೩) "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ" (ಶ್ವೇ. ೪-೧೪) "ಈಶಂ ತಂ ಜ್ಞಾತ್ವಾ ಅಮೃತಾ ಭವಂತಿ" (ಶ್ವೇ. ೩-೭) "ಕ್ಷರಂ ಪ್ರಧಾನಮಮೃತಾಕ್ಷರಂ ಹರಃ ಕ್ಷರಾತ್ಮಾನಾವೀಶತೇ ದೇವ ಏಕಃ। ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ" (ಶ್ವೇ. ೧-೧೦) "ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುಃ" (ಶ್ವೇ. ೩-೨) "ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ ಮಹರ್ಷಿಃ" (ಮಹಾನಾ. ಅನು. ೧೦) "ತಮಕ್ರತುಂ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮೀಶಂ" (ಮಹಾನಾ. ಅನು. ೧೦) ಇತ್ಯಾದಿಶ್ರೌತವಿಧೇರ್ಬಲೀಯಸ್ತ್ವಾನ್ನಾರಾಯಣಸ್ಯ ಬ್ರಾಹ್ಮಣದೇವತಾತ್ವಾಭಾವಾತ್, ಶ್ರುತಿವಿರುದ್ಧಸ್ಮೃತೇಃ ಪ್ರಾಮಾಣ್ಯಾಭಾವಾತ್, ತಾದೃಶಸ್ಮೃತೀನಾಂ ಸಮುಕ್ಷಜಲನ್ಯಾಯೇನ ಪರಂಪರಯಾ ಶಿವೋಪಾಸನದ್ವಾರಾ ಮೋಕ್ಷಹೇತುತಾಪರತ್ವಸ್ಯ ಸಿದ್ಧತ್ವಾತ್,

ಸಾಂಖ್ಯಯೋಗಸಹಸ್ರೇಣ ಜನ್ಮನಾ ದ್ವೈತಗೋ ಭವೇತ್ ।
ತನ್ಮತಸ್ಯ ಸಹಸ್ರೇಣ ಸೌರಂ ಮತಮುಪಾಶ್ನುತೇ ॥
ತತ್ಸಹಸ್ರಸಮಭ್ಯಾಸಾದ್ಗಾಣಾಪತ್ಯಮತೀ ಭವೇತ್ ।
ತತ್ಸಹಸ್ರೇಣ ಭೂಲೋಕೇ ವೈಷ್ಣವಂ ಮತಮಾರ್ಯತೇ ॥
ತದ್ವೈಷ್ಣವಸಹಸ್ರೇಣ ಶಾಕ್ತೋ ಭವತಿ ಸರ್ವದಾ ।
ತತ್ಸಹಸ್ರಾನ್ಮಹಾಭಾಗ ಶೈವಸಾಮಾನ್ಯ ಉಚ್ಯತೇ ॥
ತತ್ಸಹಸ್ರೇಣ ವಿಪ್ರೇಂದ್ರಾ ವೀರಶೈವಮತೀ ಭವೇತ್ ।
ತೇನೈವ ಮುಕ್ತಿಮಾಪ್ನೋತಿ ನಾನ್ಯಥಾ ಬಹುಯತ್ನತಃ ॥

**ಇತಿ ಸ್ಕಾಂದೇ ದರ್ಶನಾಚ್ಚ, ವಿಷ್ಣುಲೋಕಂ ಪ್ರಾಪ್ತಾನಾಂ ವಿಷ್ಣುಸಾರೂಪ್ಯಮಾಪನ್ನಾನಾಂ ಶಿವಶರ್ಮಾದೀನಾಂ ಶಿವೋಪಾಸನದ್ವಾರಾ ಮೋಕ್ಷಪ್ರಾಪ್ತಿಃ ಕಾಶೀಖಂಡೇ ಶ್ರೂಯತೇ. ವ್ಯಾಸೋಽಪಿ ಸ್ವಭುಜಸ್ತಂಭನಾನಂತರಂ ಶಿಷ್ಯೈಸ್ಸಹ ಶಾಂಭವದೀಕ್ಷಾಂ ಲಬ್ಧ್ವಾ ಮೋಕ್ಷಾಧಿಕಾರ್ಯಭೂದಿತಿ ತತ್ರೈವ ಶ್ರೂಯತೇ. ಮಹಿಮ್ನಸ್ತವೇಽಪಿ-" ತ್ರಯೀ ಸಾಂಖ್ಯಂ " ಇತ್ಯಾರಭ್ಯ " ತ್ವಮಸಿ ಪಯಸಾಮರ್ಣವ ಇವ " ಇತ್ಯಂತೇನ ಋಜುಕುಟಿಲತ್ವೇನ ಸ್ವಮತಮನ್ಯಮತಾನಿ ಚ ನಿರೂಪ್ಯ, ಶಿವ ಏವ ಸರ್ವೇಷಾಂ ಪ್ರಾಪ್ಯಸ್ಥಾನಮಿತ್ಯುಪದಿಷ್ಟಂ.**

" ನಾರಾಯಣನಿಂದ ಮೋಕ್ಷವನ್ನು ಪಡೆಯಬೇಕು" ಎಂಬುದರಿಂದ ನಾರಾಯಣನೇ ಮೋಕ್ಷದಾಯಕನೆಂದು ತಿಳಿಯಬರುತ್ತದೆಯಾಗಿ ಅವನ ಉಪಾಸನೆಯೇ ಮುಮುಕ್ಷುಗಳಿಗೆ ಆವಶ್ಯಕವೆಂದು ಹೇಳುವುದೂ ಯುಕ್ತವಲ್ಲ, ಯಾಕೆಂದರೆ ಹಾಗೆ ಹೇಳುವ ಶ್ರುತಿಯೇ ದೊರೆಯುವುದಿಲ್ಲ. " ಬೇರೆ ಎಲ್ಲವನ್ನೂ ತೊರೆದು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು". "ಈಶ್ವರನನ್ನು ತಿಳಿದು ಅಮೃತವನ್ನು ಪಡೆಯುತ್ತಾನೆ". "ಶಿವನನ್ನು ತಿಳಿದು ಪೂರ್ಣಶಾಂತಿಯನ್ನು ಹೊಂದುತ್ತಾನೆ". " ಈಶನನ್ನು ತಿಳಿದು ಅಮೃತರಾಗುತ್ತಾರೆ." " ಪಂಡಿತನು ಧ್ಯಾನದ ಅಭ್ಯಾಸದಿಂದ ಪಾಶವನ್ನು ಸುಡುತ್ತಾನೆ". "ಪ್ರಧಾನವು ನಾಶವಾಗತಕ್ಕದ್ದು. ಜೀವನು ಅಮೃತನೂ ಅಕ್ಷರನೂ ಇರುವನು. ಇವರಿಬ್ಬರಿಗೂ ದೇವನೊಬ್ಬನೇ ನಿಯಾಮಕನಾಗಿರುವನು." " ಮತ್ತೆ ಮತ್ತೆ ಅವನ ಧ್ಯಾನದಿಂದಲೂ, ಧಾರಣದಿಂದಲೂ ಅವನ ಸ್ವರೂಪಪ್ರಾಪ್ತಿಯಿಂದಲೂ ಜೀವನಿಗೆ ಮಾಯೆಯಿಂದಾಗುವ ಎಲ್ಲಾ ಬಗೆಯ ವ್ಯಾಮೋಹದಿಂದಲೂ ಬಿಡುಗಡೆಯಾಗುತ್ತದೆ". " ಒಬ್ಬ ರುದ್ರನೇ ಅದ್ವಿತೀಯನಾಗಿದ್ದಾನೆ". " ರುದ್ರನು ಮಹಾಜ್ಞಾನಿಯೂ, ವಿಶ್ವಾಧಿಕನೂ ಆಗಿದ್ದಾನೆ". ' ಯಾವನು ದೇವರೆಲ್ಲರಿಗೂ ಮೊದಲು ಇದ್ದನೋ ' " ವಿಶ್ವಕರ್ತನಾದ ಪರಶಿವನ ಪ್ರಸಾದದಿಂದ ಆವನ ಮಹಿಮೆಯನ್ನು ಅರಿತು ಸಾಧಕನು ಸರ್ವೋಪಾಸ್ಯನಾದ ಅವನನ್ನು ಕಂಡು ದುಃಖರಹಿತನಾಗುತ್ತಾನೆ" ಇತ್ಯಾದಿ ಶ್ರುತಿಗಳ ಪ್ರಮಾಣವೇ ಪ್ರಬಲವಾದ್ದರಿಂದ ನಾರಾಯಣನು ವೀರಶೈವರಿಗೆ ಉಪಾಸ್ಯನಾಗಲಾರನು. ಶ್ರುತಿವಿರುದ್ಧವಾದ ಸ್ಮೃತಿಗೆ ಪ್ರಾಮಾಣ್ಯವಿಲ್ಲ, ಆದರೆ ಅಂತಹ ಸ್ಮೃತಿಗಳು ಪರಂಪರೆಯಿಂದ ಶಿವೋಪಾಸನೆಯ ಮೂಲಕ ಮೋಕ್ಷಕ್ಕೆ ಸಾಧನವಾಗುತ್ತವೆ. " ಒಬ್ಬನು ಸಾಂಖ್ಯಯೋಗಶಾಸ್ತ್ರಗಳ ಜ್ಞಾನದಿಂದ ಸಾವಿರ ಜನ್ಮಗಳನಂತರ ವೈದಿಕನಾಗುವನು. ಅವನು ಸಾವಿರ ಜನ್ಮಗಳನಂತರ ಸೌರಮತದಲ್ಲಿ ಹುಟ್ಟುವನು. ಆ ಮತವನ್ನು ಸಾವಿರ ಜನ್ಮಗಳಲ್ಲಿ ಆಚರಿಸಿದವನು ಗಾಣಪತನಾಗುತ್ತಾನೆ. ಗಣಪತಿಯನ್ನು ಸಾವಿರ ಜನ್ಮಗಳಲ್ಲಿ ಉಪಾಸನಮಾಡಿದವನು ವೈಷ್ಣವನಾಗುತ್ತಾನೆ. ವೈಷ್ಣವನು ಸಾವಿರಜನ್ಮಗಳ ಅನಂತರ ಶಾಕ್ತಮತದಲ್ಲಿ ಹುಟ್ಟುವನು. ಅದರಲ್ಲಿ ಸಾವಿರ ಜನ್ಮಗಳನ್ನು ಕಳೆದವನು ಸಾಮಾನ್ಯ ಶೈವ

ನಾಗುತ್ತಾನೆ. ಅದರಲ್ಲಿ ಸಾವಿರಸಾರಿ ಜನ್ಮವೆತ್ತಿದವನು ವೀರಶೈವನಾಗುತ್ತಾನೆ. ಹೀಗೆ ಸಾಧಕನು ಮುಕ್ತಿಯನ್ನು ಪಡೆಯುವನಲ್ಲದೆ ಬೇರೆ ಎಷ್ಟು ಯತ್ನ ಮಾಡಿದರೂ ಆಗುವುದಿಲ್ಲ.'' ಹೀಗೆ ಸ್ಕಾಂದದಲ್ಲಿ ಹೇಳಿದೆ.

ವಿಷ್ಣುಸಾರೂಪ್ಯವನ್ನು ಹೊಂದಿ ವೈಕುಂಠಕ್ಕೆ ಹೋಗಿದ್ದ ಶಿವಶರ್ಮನೇ ಮೊದಲಾದವರಿಗೆ ಶಿವೋಪಾಸನದ ಮೂಲಕವೇ ಮೋಕ್ಷ ದೊರಕಿತೆಂದು ಕಾಶೀ ಖಂಡದಲ್ಲಿ ಹೇಳಿದೆ. ಮಹಿಮ್ನಸ್ತವದಲ್ಲಿ "ನೀರುಗಳೆಲ್ಲಕ್ಕೂ ಸಮುದ್ರದಂತೆ ಎಲ್ಲಾ ಮತಗಳಿಗೂ ನೀನೇ ಆಶ್ರಯನಾಗಿದ್ದೀಯೆ'' ಎಂದು ಹೇಳಿದೆ. ಹೀಗೆ ಸ್ವಮತವನ್ನು ಋಜುವೆಂದೂ, ಅನ್ಯಮತಗಳನ್ನು ಕುಟಿಲಗಳೆಂದೂ ನಿರೂಪಿಸಿ ಶಿವನೊಬ್ಬನೇ ಎಲ್ಲರಿಗೂ ಗಮ್ಯಸ್ಥಾನನಾಗಿರುವುದಾಗಿ ಅಲ್ಲಿ ಹೇಳಿದೆ. ವ್ಯಾಸನೂ ಸಹ ವಿಷ್ಣುವೇ ಸರ್ವೋತ್ತಮನೆಂದು ಹೇಳಿ ಮೇಲೆತ್ತಿದ್ದ ತೋಳು ಕೆಳಗೆ ಬಗ್ಗದೆ ನಿಂತದ್ದರಿಂದ ಶಿಷ್ಯರೊಡನೆ ಶಾಂಭವದೀಕ್ಷೆಯನ್ನು ಪಡೆದು ಮೋಕ್ಷಾಧಿಕಾರಿಯಾದನೆಂದು ಕಾಶೀ ಖಂಡದಲ್ಲಿ ಹೇಳಿದೆ.

"ಸರ್ವಲಿಂಗಂ ಸ್ಥಾಪಯತಿ" ಇತ್ಯತ್ರ ಲಡಂತತ್ವೇಽಪಿ "ವ್ರೀಹೀನ್ ಪ್ರೋಕ್ಷತಿ, ವ್ರೀಹೀನವಹಂತಿ" ಇತ್ಯಾದಿವದ್ವಿಧ್ಯರ್ಥತ್ವೋಪಪತ್ತಿಃ. ನಚಾನೇಕವಿಧಾನೇ ವಾಕ್ಯಭೇದದೋಷಃ. "ಯಥಾಗ್ನೇಯೋಽಷ್ಟಾಕಪಾಲಃ" ಇತಿವತ್ ಸರ್ವೇಷಾಮಪ್ರಾಪ್ತತ್ವೇನ ವಿಧೇಯತ್ವಾತ್, "ಅಪ್ರಾಪ್ತೇ ತು ವಿಧೀಯಂತೇ ಬಹವೋಽಪ್ಯೇಕಯತ್ನತಃ" ಇತಿ ಸ್ಮೃತಿದರ್ಶನಾತ್, ಸ್ಥಾಪಯತೀತ್ಯತ್ರ ಭೂಮಾವೇವೇತಿ ವಿನಿಗಮಕಾಭಾವಾತ್, ಶ್ರುತೇಃ ಸಂಕೋಚಾಸಹಿಷ್ಣುತ್ವಾದುಭಯಥಾ ಪ್ರಮಾಣಾಚಾರದರ್ಶನಾಚ್ಚ.

ನಚ ಪಾಣಿನಾ ಮನಸಾತತ್ಪೂಜನಾತ್ತಾತ್ರಾಯತ ಇತ್ಯರ್ಥಸಂಭವೇನ ಲಿಂಗಧಾರಣಾಸಿದ್ಧಿರಿತಿ ವಾಚ್ಯಂ. ಮಾನಸಾದೀನಾಂ ಪೂಜಾಕರಣತ್ವದರ್ಶನೇನ ಪಾಣಿಶಬ್ದಸ್ಯ ವೈಯರ್ಥ್ಯಪ್ರಸಂಗಾತ್, ಪಾಣಿನಾ ಅಭಿಮಂತ್ರಿತಂ ಪಾಣಿಮಂತ್ರಮಿತ್ಯಪ್ಯಸಂಗತಂ. ಮಂತ್ರಶಬ್ದಸ್ಯ ಗೌಣಾರ್ಥಸ್ವೀಕಾರೇ ಈಕ್ಷತ್ಯಧಿಕರಣವಿರೋಧಪ್ರಸಂಗಃ. ಏತನ್ಮಂತ್ರಾರ್ಥಸ್ತು ಲೈಂಗೋತ್ತರಭಾಗೇ ಏಕವಿಂಶಾಧ್ಯಾಯೇ ಭಗವತಾ ವೇದವ್ಯಾಸೇನ ಸ್ಪಷ್ಟಮುಕ್ತಃ.

ಯಜುರಪ್ಯಾಹ ಸರ್ವಂ ವೈ ಲಿಂಗಂ ಸ್ಥಾಪಯತೀತಿ ಚ ।
ತಸ್ಮಾದ್ಧಾರ್ಯಂ ಮಹಾಲಿಂಗಂ ಪಾಣಿಮಂತ್ರೇತಿ ಮಂತ್ರತಃ ॥
ಪಾಣೌ ಲಿಂಗಂ ವಿನಿಕ್ಷಿಪ್ಯ ದೀಕ್ಷಾಕಾಲೇ ಗುರುಃ ಶಿವಂ ।
ಯೇನ ಸ್ಮರತಿ ತನ್ಮಂತ್ರಂ ಪಾಣಿಮಂತ್ರಂ ವದಂತಿ ಹಿ ।

ಪವಿತ್ರತ್ವಾನ್ಮಹೇಶಸ್ಯ ಶಿವಸ್ಯ ಪ್ರತಿಪಾದನಾತ್ ।
ಪವಿತ್ರೀಕರಣಾತ್ ಪುಂಸಾಂ ಪವಿತ್ರಮಿತಿ ಕಥ್ಯತೇ ॥
ಅತಸ್ಸರ್ವೇಷು ಕಾಲೇಷು ಧಾರಯೇಲ್ಲಿಂಗಮುತ್ತಮಂ ।
ಗಚ್ಛಂಸ್ತಿಷ್ಠನ್ ಸ್ವಪನ್ ಜಾಗ್ರದುನ್ಮಿಷನ್ನಿಮಿಷನ್ನಪಿ ॥
ಶುಚಿರ್ವಾಪ್ಯಶುಚಿರ್ವಾಪಿ ಲಿಂಗಂ ಸರ್ವತ್ರ ಧಾರಯೇತ್ ॥
ಲಿಂಗಧಾರೀ ಸದಾ ಶುದ್ಧೋ ನಿಜಲಿಂಗಂ ಮನೋಹರಂ ।
ಅರ್ಚಯೇದ್ಗಂಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥
ನಿತ್ಯಾನಿ ಕರ್ಮವೃಂದಾನಿ ತಥಾ ನೈಮಿತ್ತಿಕಾನಿ ಚ ।
ಶಿವಾರ್ಪಣಧಿಯಾ ಕುರ್ಯಾತ್ಸಮ್ಯಗ್ಜ್ಞಾನಾಭಿವೃದ್ಧಯೇ ॥ ಇತಿ.
(ಲಿಂ. ಪು. ಉ. ಭಾ. ಅ. ೨೧)

'ಸರ್ವಲಿಂಗಂ ಸ್ಥಾಪಯತಿ' ಇಲ್ಲಿ ಕ್ರಿಯಾಪದವು ವರ್ತಮಾನಕಾಲದಲ್ಲಿದ್ದರೂ, "ವ್ರೀಹೀನ್ ಪ್ರೋಕ್ಷತಿ, ವ್ರೀಹೀನ್ ಅವಹಂತಿ" ಎಂಬಲ್ಲಿ ವಿಧ್ಯರ್ಥದಲ್ಲಿ ವರ್ತಮಾನಕಾಲದ ಕ್ರಿಯಾಪದವಿರುವಂತೆ, ವಿಧ್ಯರ್ಥಕವೆಂದೇ ಭಾವಿಸಬೇಕು. ಹಾಗಾದರೆ ಒಂದನ್ನು ವಿಧಿಸುವ ಬದಲು ಅನೇಕವನ್ನು ವಿಧಿಸುವುದರಿಂದ ವಾಕ್ಯಭೇದ ದೋಷವು ಬರುವುದಿಲ್ಲವೇ? ಎಂದರೆ, ಹಾಗಲ್ಲ—'ಅಗ್ನಿ ಪೂಜಕನು ಅಮಾವಾಸ್ಯೆಯಲ್ಲಿ ಎಂಟು ಕಪಾಲಗಳಲ್ಲಿ ಚರುವನ್ನು ಹಾಕುತ್ತಾನೆ' ಎಂಬ ಕಡೆಯಲ್ಲಿ ಅನೇಕವನ್ನು ವಿಧಿಸಿರುವಂತೆ ಇಲ್ಲಿಯೂ ಒಂದಕ್ಕೆ ಬದಲು ಬೇರೊಂದನ್ನು ವಿಧಿಸಿರುವುದರಲ್ಲಿ ದೋಷವಿಲ್ಲ. 'ಬೇರೆ ಯಾವ ವಿಧಿಯೂ ಸಂಭವಿಸದೇ ಇದ್ದರೆ ಒಂದೇ ಕಡೆಯಲ್ಲಿ ಎಲ್ಲವೂ ವಿಹಿತವಾಗುತ್ತವೆ' ಎಂಬ ಸ್ಮೃತಿಯಂತೆ ಇಲ್ಲಿಯೂ ಅನೇಕಾರ್ಥಗಳನ್ನು ವಿಧಿಸುವುದರಲ್ಲಿ ದೋಷವಿಲ್ಲ. 'ಸ್ಥಾಪಯತಿ' ಎಂಬಲ್ಲಿ ನೆಲದ ಮೇಲೆ ಸ್ಥಾಪಿಸಬೇಕೆಂಬುದಕ್ಕೆ ಆಧಾರವಿಲ್ಲದ್ದರಿಂದಲೂ, ಶ್ರುತಿಯ ಅರ್ಥವನ್ನು ಸಂಕೋಚಪಡಿಸಲು ಪ್ರಮಾಣವಿಲ್ಲದ್ದರಿಂದಲೂ, ಎರಡು ಬಗೆಯಲ್ಲೂ ಪ್ರಮಾಣವೂ, ಆಚಾರವೂ ಕಂಡುಬರುವುದರಿಂದಲೂ ಲಿಂಗಧಾರಣವೇ ಇಲ್ಲಿ ಉದ್ದಿಷ್ಟವಾಗಿದೆ.

'ಕೈನಲ್ಲಿ ಪೂಜಿಸುವುದರಿಂದ ಲಿಂಗವು ನಮ್ಮನ್ನು ರಕ್ಷಿಸುತ್ತದೆ' ಎಂಬ ಅರ್ಥವನ್ನು ಇಟ್ಟುಕೊಂಡು ಲಿಂಗಧಾರಣವು ಇಲ್ಲಿ ಸಿದ್ಧಿಸುವುದಿಲ್ಲವೆಂದು ಹೇಳುವುದೂ ಯುಕ್ತವಲ್ಲ. ಯಾಕೆಂದರೆ ಪೂಜೆಗೆ ಕರಣವಾದ ಮನಸ್ಸನ್ನು ಇಲ್ಲಿ ಹೇಳುವುದಾದರೆ ಪಾಣಿಶಬ್ದವನ್ನು ಹೇಳಿರುವುದು ವ್ಯರ್ಥವಾಗಬೇಕಾಗುತ್ತದೆ. ಪಾಣಿಯಿಂದ ಅಭಿಮಂತ್ರಿತವಾದ್ದು ಪ್ರಾಣಿಮಂತ್ರವೆಂದು ಹೇಳುವುದೂ ಅಸಂಗತವೇ. ಯಾಕೆಂದರೆ ಮಂತ್ರಶಬ್ದಕ್ಕೆ ಮನನಾತ್ ತ್ರಾಯತೆ ಎಂಬ ಪ್ರಧಾನಾರ್ಥವನ್ನು ಬಿಟ್ಟು ಅಭಿಮಂತ್ರಿತವೆಂಬ ಗೌಣಾರ್ಥವನ್ನು ಸ್ವೀಕರಿಸಿದರೆ ಈಕ್ಷತ್ಯಧಿಕರಣದ ವಿರೋಧವು ಸಂಭವಿಸೀತು? ಈ ಮಂತ್ರದ ಅರ್ಥವನ್ನು ಲಿಂಗಪುರಾಣದ ಉತ್ತರಭಾಗದ ೨೧ನೇ ಅಧ್ಯಾಯದಲ್ಲಿ

ವ್ಯಾಸನೇ ಸ್ಪಷ್ಟವಾಗಿ ಹೇಳಿದ್ದಾನೆ. "ಯಜುಸ್ಸೂ ಸಹ ದೇಹದ ಎಲ್ಲಾ ಕಡೆಯೂ ಸಂಬಂಧಿಸುವಂತೆ ಲಿಂಗದ ಸಂಪರ್ಕವನ್ನು ಬೋಧಿಸುತ್ತದೆ. ಆದ್ದರಿಂದ 'ಪಾಣಿ ಮಂತ್ರಂ' ಎಂಬ ಪದದಿಂದ ಮಹಾಲಿಂಗವನ್ನು ದೇಹದಲ್ಲಿ ಧರಿಸಬೇಕೆಂಬುದು ಸ್ಪಷ್ಟ ವಾಗುತ್ತದೆ. ದೀಕ್ಷಾಕಾಲದಲ್ಲಿ ಗುರು ಶಿವಲಿಂಗವನ್ನು ಶಿಷ್ಯನ ಕೈನಲ್ಲಿ ಇಟ್ಟು ಯಾವ ಶಿವನ ಸ್ಮರಣಮಾಡಿಸುತ್ತಾನೋ ಅದರಿಂದಲೇ ಈ ಲಿಂಗಕ್ಕೆ ಪಾಣಿಮಂತ್ರವೆಂದು ಅನುಭವಿಗಳು ಹೇಳುತ್ತಾರೆ. ಇದು ಸರ್ವೇಶ್ವರನಾದ ಶಿವನನ್ನು ಒಳಗೊಂಡು ದೇಹೇಂದ್ರಿಯಗಳನ್ನು ಪಾವನಗೊಳಿಸುವುದರಿಂದ ಪವಿತ್ರವೆನಿಸಿದೆ. ಆದ್ದರಿಂದ ಎಲ್ಲಾ ಕಾಲದಲ್ಲೂ ತಿರುಗಾಡುವಾಗ, ನಿಂತಾಗ, ಮಲಗಿದಾಗ, ಕುಂತಾಗ ಇನ್ನೂ ಬೇರೆ ಕಾಲದಲ್ಲೂ ಲಿಂಗವನ್ನು ಧರಿಸಬೇಕು. ಶುದ್ಧನಾಗಲೀ, ಅಶುದ್ಧನಾಗಲೀ ಭಕ್ತನು ಯಾವಾಗಲೂ ಲಿಂಗವನ್ನು ಧರಿಸಬೇಕು. ಲಿಂಗಧಾರಿ ಯಾವಾಗಲೂ ಶುದ್ಧನಿರು ವನು. ಮನೋಹರವಾದ ಶಿವಲಿಂಗವನ್ನು ಹಸ್ತಪೀಠದಲ್ಲಿರಿಸಿ ಗಂಧಪುಷ್ಪಗಳಿಂದ ಅರ್ಚಿಸಬೇಕು. ಹಾಗೆಯೇ ನಿತ್ಯನೈಮಿತ್ತಿಕಾದಿ ಕರ್ಮಗಳೆಲ್ಲವನ್ನೂ ಸಹ ಶಿವಾರ್ಪಣ ಬುದ್ಧಿಯಿಂದಲೇ ಜ್ಞಾನಾಭಿವೃದ್ಧಿಗಾಗಿಯೇ ಸಾಧಕನು ಆಚರಿಸಬೇಕು."

ನನು ವೃಶ್ಚಿಕಾದಿವಿಷಮಾತ್ರೇಣ ಮ್ರಿಯಮಾಣಸ್ಯ ಕಾಲಕೂಟ ಭಕ್ಷಣೇ ಶಕ್ತ್ಯಭಾವಾತ್, ರಜ್ಜುದರ್ಶನೇನ ಸರ್ಪಭ್ರಾಂತ್ಯಾ ಪಲಾಯ ಮಾನಸ್ಯ ಭುಜಗಧಾರಣೇ ಶಕ್ತ್ಯಭಾವಾತ್, ಯುಕ್ತಿಂಚಿಲ್ಲಾಂಛನಧಾ ರಣೇ ಪ್ರಮಾಣಾಭಾವಾಚ್ಚ ಶಿವಲಿಂಗಭಸ್ಮರುದ್ರಾಕ್ಷಧಾರಣಂ ಮುಮು ಕ್ಷೂಣಾಂ ರಾಜಭೃತ್ಯವನ್ನಾಂಗೀಕರ್ತವ್ಯಮಿತಿ ಚೇದುಚ್ಯತೇ—

ಭಕ್ತಾನಾಂ ಸ್ವಸಾಯುಜ್ಯಸಿದ್ಧ್ಯರ್ಥಂ ಸ್ವನಿಷ್ಠಭಸ್ಮರುದ್ರಾಕ್ಷಶಿವ ಲಿಂಗಚಿಹ್ನಾನಾಮುಕರಣೇ ಪ್ರತ್ಯವಾಯಜನಕನಿತ್ಯವಿಧಿವಿಷಯತ್ವೇನ ಪರಮೇಶ್ವರೋಪದಿಷ್ಟತ್ವಾತ್, ಲೋಕೇ ರಾಜಾಜ್ಞಾವಿಹಿತರಾಜಚಿಹ್ನಾ ನಾಮೇವ ಭೃತ್ಯೈಃ ಸ್ವೀಕಾರದರ್ಶನಾತ್, ಪೂರ್ವೋಕ್ತವೇದಶಾಸ್ತ್ರ ಪುರಾಣಾಗಮಾದಿಷು ಶಿವಲಿಂಗಭಸ್ಮರುದ್ರಾಕ್ಷಧಾರಣವಿಧಾಯಕವಿಧ್ಯು ಪದೇಶಾತ್, ಭುಜಗಧಾರಣವಿಷಭಕ್ಷಣವಿಧ್ಯದರ್ಶನಾತ್, ಬ್ರಹ್ಮ ವಿಷ್ಣ್ವಾದೀನಾಂ ಸರ್ವೇಷಾಂ ಶಿವಭಕ್ತಾನಾಂ ಶಿವಲಿಂಗಭಸ್ಮರುದ್ರಾಕ್ಷ ಧಾರಣಸ್ಯೈವ ದರ್ಶನಾತ್,

ಶಿವಾಜ್ಞಾಪಾಲನಾರ್ಥಾಯ ಶಿವಭಕ್ತಃ ಶಿವಪ್ರತೀ ।
ಲಿಂಗರುದ್ರಾಕ್ಷಭಸ್ಮಾನಿ ಶಿವಚಿಹ್ನಾನಿ ಧಾರಯೇತ್ ॥
ರಾಜಾಜ್ಞೋಲ್ಲಂಘನಾಲ್ಲೋಕೇ ಯಥಾ ದಂಡೋ ವಿಧೀಯತೇ ।
ಶಿವಾಜ್ಞೋಲ್ಲಂಘನಾದ್ದಂಡೋ ರೌರವಂ ನರಕಂ ತಥಾ ॥



ಇತಿ ಲೈಂಗೇ ದರ್ಶನಾಚ್ಚ.

ಸಗುಣಸ್ಯ ಮಿಥ್ಯಾಭೂತತ್ವಾತ್ ಕಥಂ ತದುಪಾಸನಸ್ಯ ನಿರ್ಗುಣ ಚೈತನ್ಯಪ್ರಾಪಕತ್ವಮಿತಿ ಚೇನ್ನ—"ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ। ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್" (ಕೈವ. ೧-೭) ಇತಿ ಕೈವಲ್ಯಶ್ವೇತಾಶ್ವತರಾದ್ಯುಪನಿಷತ್ಸು ಸಗುಣೋಪಾಸನಸ್ಯೈವ ಹೇಯಗುಣರಹಿತಸರ್ವಸಾಕ್ಷಿಚೈತನ್ಯಪ್ರಾಪಕತ್ವೋಪದೇಶಾತ್, "ಸ್ಥಿರೇಭಿರಂಗೈಃ ಪುರುರೂಪ ಉಗ್ರಃ" (ಋ. ೨-೭-೧೭) ಇತಿ ರುದ್ರಸೂಕ್ತಾದಿಷು ಪರಮೇಶ್ವರಶರೀರಸ್ಯ ನಿತ್ಯತ್ವೋಪದೇಶಾಚ್ಚ.

ನಚಾಗಮಾನಾಮಾಲಯೋತ್ಸವಪ್ರತಿಷ್ಠಾಂಶ ಏವ ಪ್ರಾಮಾಣ್ಯಮಿತಿವಾಚ್ಯಂ, ಗಾಯತ್ರ್ಯಾದಿಸರ್ವಮಂತ್ರಾಂಗನ್ಯಾಸಕರನ್ಯಾಸಧ್ಯಾನಮುದ್ರಾಕುಂಡಮಂಟಪಾದೀನಾಮಾಗಮಪ್ರಮಾಣವಿಧೇಯತ್ವಾತ್, ತದಸ್ವೀಕಾರೇ ಸರ್ವಯಾಗಮಂತ್ರಫಲಸಾಧನತ್ವಾಯೋಗಾಚ್ಚ ಬ್ರಹ್ಮವಿದ್ಯಾಯಾಂ ಶಾಂಭವದೀಕ್ಷಿತಸ್ಯೈವಾಧಿಕಾರಿತ್ವಮಿತಿ ನಿರ್ಣೀಯತೇ.

ಜೇಳಿನ ವಿಷದಿಂದಲೇ ಸಾಯುವವನಿಗೆ ಕಾಲಕೂಟವಿಷವನ್ನು ನುಂಗುವುದರಲ್ಲಿ ಶಕ್ತಿ ಇರಲಾರದು. ಹಗ್ಗವನ್ನು ನೋಡಿ ಸರ್ಪದ ಭ್ರಾಂತಿಯಿಂದ ಓಡುವವನಿಗೆ ಸರ್ಪವನ್ನು ಧರಿಸಲು ಶಕ್ತಿ ಇರಲಾರದು. ಆದರೆ ಈಶ್ವರನ ಈ ಲಾಂಛನಗಳನ್ನು ಬಿಟ್ಟ ಲಿಂಗ ಒಂದನ್ನು ಧರಿಸಲಿಕ್ಕೆ ಪ್ರಮಾಣವೆಲ್ಲಿದೆ? ಆದ್ದರಿಂದ ಮುಮುಕ್ಷುಗಳಿಗೆ ಶಿವಲಿಂಗದ ಮತ್ತು ಭಸ್ಮರುದ್ರಾಕ್ಷಗಳ ಧಾರಣವು ಯುಕ್ತವೆನಿಸಲಾರದು? ಹೀಗೆ ಆಕ್ಷೇಪಣೆ ಬಂದರೂ ಅದು ನಿಲ್ಲಲಾರದು. ಭಕ್ತರಿಗೆ ಶಿವಸಾಯುಜ್ಯಸಿದ್ಧಿಗಾಗಿ ಭಕ್ತನು ಭಸ್ಮರುದ್ರಾಕ್ಷಚಿಲ್ಲಿಂಗಗಳೆಂಬ ಶಿವನ ಚಿಹ್ನೆಗಳನ್ನು ಮಾತ್ರವೇ ಧರಿಸಬೇಕೆಂದೂ, ಹಾಗೆ ಧರಿಸದೇ ಇದ್ದರೆ ದೋಷಬರುವುದೆಂದೂ ನಿತ್ಯವಿಧಿಯನ್ನು ಶಿವನೇ ಉಪದೇಶಿಸಿದ್ದಾನೆ. ಲೋಕದಲ್ಲಿಯೂ ರಾಜನು ಆಜ್ಞಾಪಿಸಿದಷ್ಟು ಚಿಹ್ನೆಗಳನ್ನು ಮಾತ್ರವೇ ಭೃತ್ಯರು ಸ್ವೀಕರಿಸುವುದನ್ನು ನಾವು ಕಂಡಿದ್ದೇವೆ. ಹಿಂದೆ ತಿಳಿಸಿದ ವೇದಶಾಸ್ತ್ರಪುರಾಣಾಗಮಗಳಲ್ಲಿ ಶಿವಲಿಂಗಭಸ್ಮರುದ್ರಾಕ್ಷವಷ್ಟನ್ನೇ ಧರಿಸಬೇಕೆಂದು ವಿಧಿಸಲಾಗಿದೆ. ಸರ್ಪಧಾರಣ, ವಿಷಭಕ್ಷಣಗಳ ಬಗ್ಗೆ ಯಾವ ವಿಧಿಯೂ ಉಕ್ತವಾಗಿಲ್ಲ. ಬ್ರಹ್ಮ ವಿಷ್ಣುವೇ ಮೊದಲಾದ ದೇವತೆಗಳೂ ಶಿವಲಿಂಗವನ್ನು ಧರಿಸಿರುವರೆಂದು ಕಂಡುಬಂದಿದೆ. "ಶಿವಾಜ್ಞೆಯನ್ನು ನೆರವೇರಿಸಲಿಕ್ಕಾಗಿ ಶಿವಭಕ್ತನು ಶಿವವ್ರತವನ್ನು ಕೈಕೊಂಡು ಶಿವಚಿಹ್ನೆಗಳಾದ ಲಿಂಗ, ರುದ್ರಾಕ್ಷ, ಭಸ್ಮಗಳನ್ನು ಧರಿಸಬೇಕು. ರಾಜಾಜ್ಞೆಯನ್ನು ಅತಿಕ್ರಮಿಸಿದರೆ ಲೋಕದಲ್ಲಿ ಹೇಗೆ ಶಿಕ್ಷೆಯಾಗುತ್ತದೆಯೋ ಹಾಗೆ ಶಿವಾಜ್ಞೆಯನ್ನು ಮೀರಿದವನಿಗೆ ರೌರವನರಕವುಂಟಾಗುತ್ತದೆ" ಎಂದು ಲಿಂಗಪುರಾಣದಲ್ಲಿ ಹೇಳಲಾಗಿದೆ,

ಸಗುಣಮೂರ್ತಿಯು ಸತ್ಯವಲ್ಲದ್ದರಿಂದ ಅದರ ಉಪಾಸನವು ಹೇಗೆ ನಿರ್ಗುಣ ಚೈತನ್ಯವನ್ನು ದೊರಕಿಸಬಲ್ಲದು? ಎಂದು ಕೇಳಿದರೆ "ಉಮೆಯೊಡಗೂಡಿ ಸರ್ವ ನಿಯಾಮಕನೂ, ನೀಲಕಂಠನೂ, ತ್ರಿಲೋಚನನೂ, ಶಾಂತಮೂರ್ತಿಯೂ ಆದ ಪರಮೇಶ್ವರನನ್ನು ಧ್ಯಾನಿಸಿ ಸಾಧಕನು ಸರ್ವಭೂತಗಳಿಗೂ ಮೂಲಕಾರಣವೂ, ಸರ್ವಸಾಕ್ಷಿಯೂ, ಕತ್ತಲೆಯಿಂದಾಚೆಗೂ ನೆಲಸಿರುವ ನಿಷ್ಕಲಪರಶಿವನನ್ನು ಹೊಂದುತ್ತಾನೆ" ಎಂದು ಕೈವಲ್ಯ ಶ್ವೇತಾಶ್ವೇತರ ಈ ಉಪನಿಷತ್ತುಗಳಲ್ಲಿ ಸಗುಣೋಪಾಸನವೇ ನಿರ್ಗುಣಸಾಕ್ಷಿ ಚೈತನ್ಯವನ್ನು ದೊರಕಿಸುವುದೆಂದು ಉಪದೇಶಿಸಲಾಗಿದೆ. ಸ್ಥಿರವಾದ ಅವಯವಗಳಿಂದ ಪುರುರೂಪನೂ, ಉಗ್ರನೂ ಆಗಿರುವನೆಂದು ಹೇಳುವ ರುದ್ರ ಸೂಕ್ತದಲ್ಲಿ ಪರಮೇಶ್ವರನ ಶರೀರ ನಿತ್ಯವಾದುದೆಂದು ಹೇಳಲಾಗಿದೆ. ಆಗಮಗಳು ದೇವಾಲಯ ನಿರ್ಮಾಣ, ಉತ್ಸವ, ದೇವಪ್ರತಿಷ್ಠೆ ಇವುಗಳಲ್ಲಿ ಮಾತ್ರವೇ ಪ್ರಮಾಣವಾಗಿವೆ ಎಂದು ಹೇಳಿದ್ದೂ ಸರಿಯಲ್ಲ. ಯಾಕೆಂದರೆ ಗಾಯತ್ರಿಯೇ ಮೊದಲಾದ ಎಲ್ಲಾ ಮಂತ್ರಗಳಿಗೂ ಅಂಗನ್ಯಾಸ, ಕರನ್ಯಾಸ, ಧ್ಯಾನಮುದ್ರೆ ಇವುಗಳ ರಚನೆಯ ಬಗ್ಗೆ ಆಗಮವೇ ಪ್ರಮಾಣವೆಂದು ಹೇಳಲಾಗಿದೆ. ಇದನ್ನು ಒಪ್ಪದೇಹೋದರೆ ಸಮಸ್ತ ಯಾಗಗಳಲ್ಲೂ ಬರುವ ಮಂತ್ರಗಳು ಫಲವನ್ನು ಕೊಡುತ್ತವೆ ಎಂದು ಹೇಳುವುದೇ ಅಸಮಂಜಸವಾಗುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ಶಾಂಭವದೀಕ್ಷೆ ಹೊಂದಿದವನಿಗೇ ಅವಕಾಶ ಉಂಟೆಂದು ನಿರ್ಣಯಿಸಲಾಗಿದೆ.

**ನನು—"ಯಸ್ಯೈತೇ ಚತ್ವಾರಿಂಶತ್ಸಂಸ್ಕಾರಾ ನ ಚಾಷ್ಟಾವಾತ್ಮಗುಣಾ ನ ಸ ಬ್ರಹ್ಮಣಸ್ಸಾಯುಜ್ಯಂ ಸಾಲೋಕ್ಯಂ ಚ ಗಚ್ಛತಿ"** (ಗೌತಮ ಧರ್ಮಸೂತ್ರ. ೮-೨೨) **ಇತ್ಯಾದಿನಾ ಗರ್ಭಾಧಾನಾದಿಸಕಲಕರ್ಮಣಾಂ ದುರಿತಕ್ಷಯದ್ವಾರಾ ಪರಮೇಶ್ವರಪ್ರಾಪಕತ್ವೋಪದೇಶಾತ್, "ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ"** (ಈಶಾ. ೧೧) **"ತೇನೈತಿ ಬ್ರಹ್ಮವಿತ್ಪುಣ್ಯಕೃತ್ತೈಜಸಶ್ಚ"** (ಬೃ. ೪-೪-೮) **"ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಗ್‌ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ** (ಮುಂಡಕ. ೩-೧-೫) **ಇತ್ಯಾದಿಜ್ಞಾನಕರ್ಮಸಮುಚ್ಚಯಶ್ರುತಿದರ್ಶನಾಚ್ಚ ಧರ್ಮಜಿಜ್ಞಾಸಾನಂತರ್ಯಂ ಯುಕ್ತಂ.**

**ಕಿಂಚ—"ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತ ಏವಮೇವಾಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ"** (ಛಾಂದೋಗ್ಯ. ೮.೧-೬) **ಇತ್ಯಾದಿನಾ ಕರ್ಮಫಲಾನಾಮನಿತ್ಯತ್ವಂ, "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ** (ಮುಂಡಕ. ೧-೨-೧೨) **ಇತ್ಯಾದಿನಾ ಕರ್ಮಫಲೇಷು ವೈರಾಗ್ಯಂ, "ಶಾಂತೋ ದಾಂತಃ" ಇತ್ಯಾದಿನಾ ಶಾಂತ್ಯಾದಿಕಂ, "ನ ಚ ಪುನರಾವರ್ತತೇ"** (ಛಾಂದೋಗ್ಯ. ೮-೧೫-೧) **ಇತ್ಯಾದಿನಾ ಮೋಕ್ಷಸ್ಯ ನಿತ್ಯತ್ವಂ ಚಾವಗಮ್ಯತೇ.**

ಅತಸ್ತತ್ರೇಚ್ಛಾಸಂಭವಾನ್ಮುಮುಕ್ಷುತ್ವಂ ಸೂಚಿತಂ. ತಸ್ಮಾದೇತತ್ಸಾಧನಚತುಷ್ಟಯಾನಂತರಂ ವಾ ಬ್ರಹ್ಮಜಿಜ್ಞಾಸಾ ಕರ್ತವ್ಯಾ. ಲಿಂಗಧಾರಣಸ್ಯಾಪಿ ಕರ್ಮತ್ವೇನ ಮೋಕ್ಷೋಪಯೋಗಿತ್ವಾಭಾವ ಇತಿ ಚೇನ್ನ.

“ನಾಸ್ತ್ಯಕೃತಃ ಕೃತೇನ” (ಮುಂ. ೧-೨-೧೨) ಇತಿ ವಾಕ್ಯೇನ ಪ್ರಾಕೃತಸ್ಯೈವ ಕರ್ಮಣೋ ನಿಷಿದ್ಧತ್ವಾತ್, “ಅಮೃತಸ್ಯ ದೇವಧಾರಣೋ ಭೂಯಾಸಂ” (ತೈ. ಶಿಕ್ಷಾ. ೪) “ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ” (ಶ್ವೇ. ೧-೧೦) “ವ್ರತಮೇತಚ್ಛಾಂಭವಂ ಸರ್ವೇಷು ವೇದೇಷು ವೇದವಾದಿಭಿರುಕ್ತಂ ಭವತಿ, ತಸ್ಮಾತ್ ತತ್ಸಮಾಚರೇನ್ಮುಮುಕ್ಷುರ್ನ ಪುನರ್ಭವಾಯ” (ಕಾಲಾಗ್ನಿರುದ್ರ. ೧) “ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ” (ಮಹಾನಾ. ಅನು. ೧೪) ಇತಿ ತೈತ್ತಿರೀಯಶ್ವೇತಾಶ್ವತರ ಕಾಲಾಗ್ನಿರುದ್ರಾದಿಷು ಶಿವಲಿಂಗಧ್ಯಾನಧಾರಣಾದೀನಾಮಪ್ರಾಕೃತಕರ್ಮಣಾಂ ಮೋಕ್ಷಹೇತುತ್ವೋಪದೇಶಾತ್ ಗರ್ಭಾಧಾನಾದಿಪ್ರಾಕೃತಕರ್ಮಣಾಂ ಮೋಕ್ಷಸಾಧನತ್ವವಿಧಾಯಕಶ್ರುತಿಸ್ಮೃತಿನಾಂ ಸಾಧನಚತುಷ್ಟಯಾನಂತರ್ಯಬ್ರಹ್ಮವಿದ್ಯಾಧಿಕಾರಿತ್ವೋಪದೇಶಕವಾಕ್ಯಾನಾಂ ಚ “ಅನ್ನಂ ಬ್ರಹ್ಮ” (ತೈ. ಭೃ. ೨) ಇತ್ಯಾದಿವಾಕ್ಯಾನಾಮಿವ ಸ್ಥೂಲಾರುಂಧತೀನ್ಯಾಯೇನ ಸಮುಕ್ಷಜಲನ್ಯಾಯೇನ ಚ ಪರಂಪರಯಾ ಸಾಧನತ್ವಂ ಯುಕ್ತಂ.

“ಸಂದಿಗ್ಧೇಷು ವಾಕ್ಯಶೇಷಾತ್” (ಪೂರ್ವಮೀ ೧-೪-೨೯) ಇತಿ ನ್ಯಾಯೇನ “ಅಮೃತಸ್ಯ ದೇವಧಾರಣೋ ಭೂಯಾಸಂ” (ತೈ. ಶಿಕ್ಷಾ. ೪) ಇತಿ ವಾಕ್ಯೇ ಅಸಂದಿಗ್ಧತ್ವೇನ ಬ್ರಹ್ಮವಿದ್ಯಾಧಿಕಾರಿತ್ವನಿರೂಪಣಾತ್ ಪೂರ್ವೋದಾಹೃತಜ್ಞಾನಕರ್ಮಸಮುಚ್ಚಯಸಾಧನಚತುಷ್ಟಯಪ್ರತಿಪಾದಕಶ್ರುತೀನಾಂ ಸಂದಿಗ್ಧತ್ವಂ ಸಿದ್ಧಂ. ಶಂಕರಸಂಹಿತಾಯಾಂ ಭಗವತಾ ವ್ಯಾಸೇನ—

“ನಿತ್ಯಾನಿತ್ಯವಿಚಾರವಾನಿಹ ಪರತ್ರಾಪೇಕ್ಷಿತಾರ್ಥಾರತಿಃ” ಇತ್ಯಾರಭ್ಯ,
ನ ತ್ಯಜ ಪ್ರಾಣಲಿಂಗಂ ತ್ವಂ ಯಾವಜ್ಜೀವಂ ಪ್ರತಿಜ್ಞಯಾ ।
ಪುನರ್ಭವೋ ನ ತೇ ವತ್ಸ ವಿದ್ಯತೇ ಮಾತೃಯೋನಿಷು ॥

ಇತ್ಯಂತೇನ ಸಾಧನಚತುಷ್ಟಯಸಂಪದ್ವಿಶಿಷ್ಟಸ್ಯ ಲಿಂಗಧಾರಣಮುಕ್ತ್ವಾ ತತೋ ಬ್ರಹ್ಮಜ್ಞಾನೋಪದೇಶವಿಧಿರ್ನಿರ್ದಿಷ್ಟಃ. ರೇಣುಕಭಗವತ್ಪಾದಾಚಾರ್ಯೇಣಾಪಿ “ಪಿಂಡತಾ ಪಿಂಡವಿಜ್ಞಾನಂ” ಇತ್ಯಾರಭ್ಯ “ಏತಾನಿ ಶಿವಭಕ್ತಸ್ಯ ಕರ್ತವ್ಯಾನಿ ಪ್ರಯತ್ನತಃ” ಇತ್ಯಂತೇನ ಸಿದ್ಧಾಂತಶಿಖಾಮಣೌ ತಥೈವೋಪದಿಷ್ಟಂ.

ನ ಚ ಲಿಂಗಧಾರಣಮಾತ್ರೇಣ ಮುಕ್ತಿಸಂಭವೇ ತದೇವಾಲಂ, ಕಿಮೌಪನಿಷದಶಾಸ್ತ್ರವಿಚಾರಪ್ರಯಾಸೇನ? ಇತಿ ವಾಚ್ಯಂ—"ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯಃ" (ಬೃಹ. ೨-೪-೫) "ವೇದಾಂತಶ್ರವಣಂ ಕುರ್ಯಾತ್" ಇತ್ಯಾದಿನಾ ಮಾಯಾಪಾಶವಿಮುಕ್ತಾನಾಮಪಿ ಪ್ರಾರಬ್ಧಪ್ರತಿಭಾಸನಾಶಪರ್ಯಂತಂ ಪರಮೇಶ್ವರಾಜ್ಞಾಪಾಲನಸ್ಯ ಕರ್ತವ್ಯತ್ವಶ್ರವಣಾತ್, ತದಭಾವೇ ಲಿಂಗಾಂಗಜ್ಞಾನದೃಢಪ್ರತ್ಯಯಾಭಾವಾತ್, ಪುನಃ ಕಾಮಕ್ರೋಧಾದೀನಾಮಂತಃಕರಣಪ್ರವೇಶಾವಕಾಶಹೇತುತ್ವಾತ್,

ಆಸುಪ್ತೇರಾಮೃತೇಃ ಕಾಲಂ ನಯೇದ್ವೇದಾಂತಚಿಂತಯಾ ।
ಕಾಮಾದಿಪರಿಹಾರಾಯ ಶಿವಜ್ಞಾನಾಭಿವೃದ್ಧಯೇ ॥

ಇತಿ ಸ್ಮೃತೇಶ್ಚ. ಕರಣತಯಾ ಸ್ವತಂತ್ರವಿಧ್ಯಂತರರಹಿತಸೌತ್ರಾಮಣೀಬೃಹಸ್ಪತಿಸವಾದೇರಗ್ನಿಚಯನವಾಜಪೇಯಾದ್ಯಂಗತ್ವೇನ ಉಭಯವಿಧಿಬಲಾದುಭಯಸಿದ್ಧಿವತ್ ಲಿಂಗಧಾರಣಬ್ರಹ್ಮಜಿಜ್ಞಾಸಯೋರ್ನ ವಿರೋಧಃ.

"ಯಾವನು ೪೮ ಸಂಸ್ಕಾರಗಳನ್ನು ಆಚರಿಸುವನೋ ಅವನು ಬ್ರಹ್ಮದ ಸಮಾನಗುಣಗಳನ್ನು ಪಡೆದು ಸಾಲೋಕ್ಯಮುಕ್ತಿಯನ್ನು ಹೊಂದುತ್ತಾನೆ" ಎಂಬಲ್ಲಿ ಗರ್ಭಾಧಾನವೇ ಮೊದಲಾದ ಸಕಲ ಕರ್ಮಗಳೂ ಪಾಪವನ್ನು ಪರಿಹರಿಸುವ ಮೂಲಕ ಪರಮೇಶ್ವರನನ್ನು ದೊರಕಿಸುತ್ತವೆ ಎಂದು ಹೇಳಲಾಗಿದೆ. "ಯಾವನು ವಿದ್ಯೆ ಅವಿದ್ಯೆ ಎರಡನ್ನೂ ತಿಳಿದಿರುವನೋ ಅವನು ಬ್ರಹ್ಮವನ್ನು ತಿಳಿದವನು ಮತ್ತು ಪುಣ್ಯಕರ್ಮನೆನಿಸಿ ತೇಜೋಲೋಕವನ್ನು ಹೊಂದುತ್ತಾನೆ". "ಬ್ರಹ್ಮವು ಸತ್ಯದಿಂದಲೂ, ತಪಸ್ಸಿನಿಂದಲೂ, ಸಮ್ಯಗ್‌ಜ್ಞಾನದಿಂದಲೂ, ಬ್ರಹ್ಮಚರ್ಯದಿಂದಲೂ ಜೀವನಿಗೆ ದೊರಕುವುದು" ಎಂದು ಶ್ರುತಿಯಲ್ಲಿ ಜ್ಞಾನಕರ್ಮಗಳೆರಡನ್ನೂ ಮುಕ್ತಿಗೆ ಸಾಧನವೆಂದು ಹೇಳಿರುವುದರಿಂದ, ಧರ್ಮಸ್ವರೂಪವನ್ನು ತಿಳಿದಮೇಲೆ ಬ್ರಹ್ಮಮೀಮಾಂಸೆ ಏಕೆ ಸಂಭವಿಸಬಾರದು? "ಹೇಗೆ ಇಲ್ಲಿ ಕರ್ಮದಿಂದ ಗಳಿಸಿದ ಲೋಕವು ನಾಶವಾಗುತ್ತದೆಯೋ ಹಾಗೆ ಅಲ್ಲಿ ಪುಣ್ಯದಿಂದ ಗಳಿಸಿದ ಲೋಕವೂ ನಾಶವಾಗುತ್ತದೆ" ಎಂಬ ಶ್ರುತಿಯಿಂದ ಕರ್ಮಫಲಗಳು ಅನಿತ್ಯವೆಂದು ತಿಳಿದು ಬರುತ್ತವೆ. "ಕರ್ಮಗಳಿಂದ ಗಳಿಸಿದ ಲೋಕಗಳನ್ನು ಪರೀಕ್ಷಿಸಿ ಸಾಧಕನು ವೈರಾಗ್ಯವನ್ನು ಪಡೆಯಬೇಕು. ಕರ್ಮದಿಂದ ಶಾಶ್ವತಫಲವು ದೊರಕುವುದಿಲ್ಲ". ಇದರಿಂದ ಕರ್ಮಫಲದಲ್ಲಿ ಅನಾಸಕ್ತಿಯನ್ನು ಬೋಧಿಸಲಾಗಿದೆ. "ಶಾಂತೋ ದಾಂತಃ" ಎಂಬ ಮಂತ್ರದಲ್ಲಿ ಶಾಂತ್ಯಾದಿಗುಣಗಳನ್ನು ಹೇಳಲಾಗಿದೆ. "ನಚ ಪುನರಾವರ್ತತೇ" ಎಂಬ ಶ್ರುತಿಯಲ್ಲಿ [illegible] ಸಹಜವಾಗಿ

ಹುಟ್ಟುತ್ತದೆ ಎಂದು ಹೇಳಿರುವುದರಿಂದ ಮುಮುಕ್ಷುತ್ವವನ್ನು ತಿಳಿಸಿದಂತಾಯಿತು. ಆದ್ದರಿಂದ ಈ ನಾಲ್ಕು ಸಾಧನಗಳನ್ನು ಪಡೆದಮೇಲೆಯೇ ಬ್ರಹ್ಮಜಿಜ್ಞಾಸೆ ಮಾಡಬೇಕೆಂದು ಅರ್ಥವಾಗುತ್ತದೆ.

ಕರ್ಮದಿಂದ ಶಾಶ್ವತಫಲ ದೊರಕುವುದಿಲ್ಲವೆಂದಮೇಲೆ ಲಿಂಗಧಾರಣವೂ ಒಂದು ಕರ್ಮವಾದ್ದರಿಂದ ಇದೂ ಮೋಕ್ಷಕ್ಕೆ ಉಪಯೋಗವಾಗಲಾರದು ಎಂದು ಹೇಳುವುದು ಯುಕ್ತವಲ್ಲ. ಯಾಕೆಂದರೆ ಕರ್ಮದಿಂದ ಮುಕ್ತಿ ದೊರಕುವುದಿಲ್ಲ ಎಂಬ ಮಾತಿನಿಂದ ಪ್ರಾಕೃತಕರ್ಮವನ್ನು ನಿಷೇಧಿಸಲಾಗಿದೆಯೇ ಹೊರತು ಶ್ರೌತವಾದ ಲಿಂಗಧಾರಣವನ್ನು ವಿರೋಧಿಸಿಲ್ಲ. "ಅಮೃತಕ್ಕಾಗಿ ದೇವನನ್ನು ಧರಿಸುತ್ತೇನೆ." "ಅವನನ್ನು ಮತ್ತೆ ಮತ್ತೆ ಹೃದಯದಲ್ಲಿ ಧ್ಯಾನಿಸುವುದರಿಂದಲೂ, ದೇಹದ ಹೊರಗಡೆ ಧರಿಸುವುದರಿಂದಲೂ, ಅವನ ಸ್ವರೂಪವನ್ನು ಪಡೆಯುವುದರಿಂದಲೂ ಕೊನೆಗೆ ಮಾಯೆಯ ಎಲ್ಲಾ ಬಗೆಯ ವ್ಯಾಮೋಹದಿಂದಲೂ ಬಿಡುಗಡೆಯಾಗುವುದು." "ಮುಮುಕ್ಷುವು ಮತ್ತೆ ಹುಟ್ಟದಂತಾಗಲು ಈ ಶಾಂಭವವ್ರತವನ್ನಾಚರಿಸಬೇಕು" "ಹಸ್ತದಲ್ಲಿ ಪೂಜಿಸಲು ಯೋಗ್ಯವೂ, ಪವಿತ್ರವೂ ಆದ ಲಿಂಗವನ್ನು ದೇಹದ ಎಲ್ಲಾ ಅವಯವಗಳಲ್ಲಿಯೂ ನೆಲೆಗೊಳಿಸಬೇಕು" ಎಂದು ತೈತ್ತಿರೀಯ ಶ್ವೇತಾಶ್ವತರಗಳಲ್ಲಿ ಶಿವಲಿಂಗದ ಧ್ಯಾನಧಾರಣವೇ ಮೊದಲಾದ ಅಪ್ರಾಕೃತ ಕರ್ಮಗಳನ್ನು ಮುಕ್ತಿಹೇತುವನ್ನಾಗಿ ಹೇಳಿರುವುದರಿಂದ ಗರ್ಭಾಧಾನವೇ ಮೊದಲಾದ ಪ್ರಕೃತಿಸಂಬಂಧವಾದ ಕರ್ಮಗಳು ಮೋಕ್ಷವನ್ನು ದೊರಕಿಸುತ್ತವೆ ಎಂದು ಹೇಳಿರುವ ಶ್ರುತಿ ಸ್ಮೃತಿಗಳಿಗೂ, ಮತ್ತು ಸಾಧನಚತುಷ್ಟಯದ ಅನಂತರ ಬ್ರಹ್ಮವಿದ್ಯೆಗೆ ಅವಕಾಶವನ್ನು ಕಲ್ಪಿಸುವ ವಾಕ್ಯಗಳಿಗೂ, ಅನ್ನವೇ ಬ್ರಹ್ಮವೆಂಬ ವಾಕ್ಯಗಳಂತೆ ಸ್ಥೂಲಾರುಂಧತೀನ್ಯಾಯದಿಂದಲೂ, ಸಮುಕ್ಷಜಲನ್ಯಾಯದಿಂದಲೂ ಪರಂಪರೆಯಾಗಿ ಮುಕ್ತಿಸಾಧನವೆಂದು ಹೇಳಬೇಕಾಗುತ್ತದೆ.

"ಸಂದೇಹಬಂದಾಗ ಬೇರೆ ವಾಕ್ಯದಿಂದ ಅರ್ಥವನ್ನು ನಿರ್ಣಯಿಸಬೇಕು" ಎಂಬ ನ್ಯಾಯದಂತೆ "ಅಮೃತಸ್ಯ ದೇವಧಾರಣೋ ಭೂಯಾಸಂ' ಎಂಬಲ್ಲಿ ಸಂದೇಹಕ್ಕೆಡೆಯಿಲ್ಲದಂತೆ ಬ್ರಹ್ಮವಿದ್ಯೆಗೆ ಅಧಿಕಾರಿಯಾರೆಂದು ತಿಳಿಸಲಾಗಿದೆ. ಆದರೆ ಹಿಂದೆ ಹೇಳಿದ ಜ್ಞಾನಕರ್ಮಗಳ ಸಮುಚ್ಚಯ ಮತ್ತು ಸಾಧನಚತುಷ್ಟಯವನ್ನು ತಿಳಿಸುವ ಶ್ರುತಿಗಳಿಗೆ ಸಂದಿಗ್ಧಪರಿಸ್ಥಿತಿ ಸ್ಪಷ್ಟವಾಗಿದೆ. ಶಂಕರಸಂಹಿತೆಯಲ್ಲಿ "ನಿತ್ಯಾನಿತ್ಯವಸ್ತುಗಳ ವಿವೇಕವುಳ್ಳವನು ಮತ್ತೆ ಮುಂದೆ ಹೊಂದಬೇಕಾದ ಫಲದಲ್ಲಿ ಆಶೆಯಿಲ್ಲದವನು" ಎಂದು ಆರಂಭಿಸಿ, 'ನೀನು ಬದುಕಿರುವವರೆಗೂ ಪ್ರಾಣಸಮವಾದ ಈ ಲಿಂಗವನ್ನು ತೊರೆಯಬೇಡ" ಎಂಬ ಈ ಬಗೆಯ ಪ್ರತಿಜ್ಞೆಯಿಂದ "ನಿನಗೆ ಮತ್ತೆ ತಾಯಿಯ ಗರ್ಭದಲ್ಲಿ ಜನಿಸುವ ಅವಕಾಶ ತಪ್ಪುತ್ತದೆ" ಎಂದು ಹೇಳಿರುವುದರಿಂದ ಸಾಧನಚತುಷ್ಟಯಸಂಪತ್ತಿನಿಂದ ಕೂಡಿದವನಿಗೆ ಲಿಂಗಧಾರಣವನ್ನೂ ಹೇಳಿ ಆಮೇಲೆ ಬ್ರಹ್ಮಜ್ಞಾನವನ್ನು ಉಪದೇಶಿಸಬೇಕೆಂದು ವಿಧಿಸಲಾಗಿದೆ. ರೇಣುಕಭಗವತ್ಪಾದ

ಚಾರ್ಯರೂ ಸಹ 'ಪಿಂಡತಾ ಪಿಂಡವಿಜ್ಞಾನಂ' ಎಂದು ಆರಂಭಿಸಿ "ಇವು ಶಿವಭಕ್ತನಿಗೆ ಅತ್ಯಾವಶ್ಯಕವಾದ ಕರ್ತವ್ಯಗಳು" ಎಂದು ಹೇಳಿರುವುದರಿಂದ ಸಿದ್ಧಾಂತಶಿಖಾಮಣಿ ಯಲ್ಲೂ ಇದೇ ಉಪದೇಶವೇ ಕಂಡುಬಂದಿದೆ.

ಲಿಂಗಧಾರಣ ಒಂದರಿಂದಲೇ ಮುಕ್ತಿ ಸಂಭವಿಸುವುದಾದರೆ ಅಷ್ಟೇ ಸಾಕು, ಅದರಮೇಲೆ ಬ್ರಹ್ಮಮೀಮಾಂಸೆಯ ಪ್ರಯಾಸದಿಂದ ಫಲವೇನು? ಎಂದು ಕೇಳು ವುದು ಯುಕ್ತವಲ್ಲ. "ಆತ್ಮವಸ್ತುವನ್ನು ಕೇಳಿ ತಿಳಿದು ಧ್ಯಾನಿಸಿ ಸಾಕ್ಷಾತ್ಕರಿಸ ಬೇಕು. ವೇದಾಂತವನ್ನು ತಿಳಿದು ಯೋಗವನ್ನಾರಂಭಿಸಬೇಕು" ಈ ವಾಕ್ಯಗಳಲ್ಲಿ ಮಾಯಾಪಾಶದಿಂದ ಬಿಡುಗಡೆಯಾಗುವವರೆಗೂ ಅಂದರೆ ಪ್ರಾರಬ್ಧ ನಾಶವಾಗುವ ವರೆಗೂ ಪರಮೇಶ್ವರನ ಆಜ್ಞೆಯನ್ನು ಅವಶ್ಯವಾಗಿ ನಡೆಸಲೇಬೇಕೆಂಬ ನಿಯಮವಿದೆ, ಅದಿಲ್ಲದೇ ಹೋದರೆ ಲಿಂಗಅಂಗಗಳ ಜ್ಞಾನದಲ್ಲಿ ಖಚಿತವಾದ ವಿಶ್ವಾಸ ಹುಟ್ಟದೇ ಇರುವುದರಿಂದ ಮತ್ತೆ ಕಾಮಕ್ರೋಧಗಳು ಅಂತಃಕರಣವನ್ನು ಪ್ರವೇಶಿಸಲು ಅವಕಾಶ ವುಂಟಾಗುತ್ತದೆ. "ಎದ್ದಮೇಲೆ ಮಲಗುವವರೆಗೂ ಇರುವ ಎಲ್ಲಾ ಕಾಲವನ್ನೂ ವೇದಾಂತಚಿಂತೆಯಲ್ಲಿಯೇ ಕಳೆಯಬೇಕು. ಕಾಮಾದಿಗಳಿಗೆ ಒಳಗೆ ಪ್ರವೇಶಿಸಲು ಕೊಂಚವಾದರೂ ಅವಕಾಶವನ್ನು ಕೊಡಬಾರದು" ಎಂದು ಅನುಭವಿಗಳು ಹೇಳು ತ್ತಾರೆ. ಪ್ರತ್ಯೇಕ ವಿಧಿ ಇಲ್ಲದಿದ್ದರೂ ಸೌತ್ರಾಮಣಿ ಮತ್ತು ಬೃಹಸ್ಪತಿಸವನವೆಂಬ ಯಜ್ಞಗಳು ಅಗ್ನಿಚಯನ ಮತ್ತು ವಾಜಪೇಯಕ್ಕೆ ಅಂಗವಾಗಿರುವಂತೆ, 'ಎರಡೂ ವಿಹಿತವಾಗಿದ್ದರೆ ಎರಡನ್ನೂ ಒಪ್ಪಬಹುದು' ಎಂಬ ನ್ಯಾಯದಿಂದ ಲಿಂಗಧಾರಣ ಮತ್ತು ಬ್ರಹ್ಮವಿಚಾರಗಳೆರಡೂ ಒಬ್ಬನಲ್ಲಿ ಸಂಭವಿಸಲು ವಿರೋಧವಿಲ್ಲ.

**ನಚ ಜ್ಯೋತಿಷ್ಟೋಮಾದಿವಲ್ಲಿಂಗಧಾರಣಸ್ಯಾಪಿ ಕರ್ಮತ್ವೇನ ಪರಂಪರಯಾ ಮುಕ್ತಿಹೇತುತ್ವಮಿತಿ ವಾಚ್ಯಂ—ಪೂರ್ವೋದಾಹೃತ ಪ್ರಾತ್ಯಕ್ಷಿಕಶ್ರುತಿವಿರೋಧಾತ್. ಶ್ರವಣಾದೀನಾಮಪಿ ಕರ್ಮತ್ವೇನ ತೇಷಾಮಪಿ ಮುಕ್ತಿಹೇತುತ್ವಂ ನ ಸ್ಯಾತ್. ತತ್ಸ್ವೀಕಾರೇ ಮಾಯಾ ಪಾಶನಿವೃತ್ತೌ ಮುಖ್ಯಕಾರಣಾಭಾವಾತ್ ಬ್ರಹ್ಮಜಿಜ್ಞಾಸಾಶಾಸ್ತ್ರಸ್ಯ ಪ್ರಸಕ್ತ್ಯಸಂಭವಪ್ರಸಂಗಃ. ತಥಾಚೇನ್ಮೂಲಚ್ಛೇದೀ ತವ ಪಾಂಡಿತ್ಯ ಪ್ರಕರ್ಷಃ. ವ್ರೀಹಿಪ್ರೋಕ್ಷಣಾದಿಕಂ ದರ್ಶಪೂರ್ಣಮಾಸೋತ್ಪತ್ತ್ಯ ಪೂರ್ವಹೇತುತಯಾ ಸ್ವರ್ಗೇ ಯಥಾ ಸಮುಚ್ಚೀಯತೇ, ತಥಾ ಪರಮೇಶ್ವರಾರ್ಪಿತಪುರಾಕೃತಜ್ಯೋತಿಷ್ಟೋಮಾದಿಸರ್ವಕರ್ಮಾಣಿ ಸಾಧನಚತುಷ್ಟಯಾದಿಕಂ ಚ ಶಿವಜ್ಞಾನಶಿವಲಿಂಗಧಾರಣಪ್ರಯೋಜ ಕತಯಾ ಮೋಕ್ಷೇ ಸಮುಚ್ಚೀಯಂತೇ.**

**ನನು — ಲಿಂಗಧಾರಣಬ್ರಹ್ಮವಿಚಾರಶಾಸ್ತ್ರಯೋಃ ಕರ್ತ್ರೈಕ್ಯಾ ಭಾವಾತ್ ಕಥಂ ಪ್ರಾಮಾಣಿಕಯಾ? ಕರ್ತ್ರೈಕ್ಯಮಪಿ ಆಚಾರದರ್ಶ**

ಪೂರ್ಣಮಾಸವದಂಗಾಂಗಿತ್ವೇನ ವಾ? ಪಂಚಪ್ರಯಾಜವದೇಕಾಂಗಿ ಪ್ರಯುಕ್ತಾನೇಕಾಂಗತ್ವೇನ ವಾ? ಗೋದೋಹನಾದಿವದಧಿಕಾರಾಂತರ ಪ್ರಯುಕ್ತೋಪಜೀವಿತ್ವೇನ ವಾ? ಷಡ್ಯಾಗವದೌಷಧ್ಯಾದಿವಚ್ಚ ಫಲೈ ಕ್ಯೇನ ವಾ ಭವತಿ? ಇತಿ ಚೇದುಚ್ಯತೇ—ಪೂರ್ವೋಕ್ತತ್ರೈತ್ರಿರೀಯಶ್ವೇ ತಾಶ್ವತರಕೈವಲ್ಯಜಾಬಾಲಕಳವಲ್ಲ್ಯಾದಿಶ್ರುತಿಸ್ಮೃತಿಪುರಾಣಾಗಮಪ್ರ ಮಾಣೈಃ ಕರ್ತೈಕ್ಯದರ್ಶನಾತ್ ಕರ್ತೈಕ್ಯವಿಕಲ್ಪವಿಚಾರೋ ನ ವಿಧೇಯಃ.

ನನು—ಲಿಂಗಧಾರಣಸ್ಯ ನಿತ್ಯತ್ವಮಸ್ತು! ಜೈಮಿನಿಸೂತ್ರವಿಹಿತ ವಿಧಿತ್ರಯೇ ಕೋ ವಿಧಿರಾಶ್ರೀಯತೇ? ಅಪೂರ್ವವಿಧಿಃ? ನಿಯಮ ವಿಧಿಃ? ಪರಿಸಂಖ್ಯಾವಿಧಿರ್ವಾ? "ವ್ರೀಹೀನ್ ಪ್ರೋಕ್ಷತಿ" ಇತಿವನ್ನಾ ಪೂರ್ವವಿಧಿಃ; ಲಿಂಗಧಾರಣಸ್ಯ "ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ" (ಋಗ್ವೇದ. ೭-೩-೮) ಇತ್ಯಾದಿ ಬಹುಶ್ರುತಿವಿಹಿತತ್ವಾತ್. "ವ್ರೀಹೀನ್ ಅವಹಂತಿ" ಇತಿವನ್ನ ನಿಯಮವಿಧಿಃ; ಶಿವಲಿಂಗೇತರಶಿಖಾಯಜ್ಞೋಪ ವೀತಭಸ್ಮರುದ್ರಾಕ್ಷಧಾರಣಸ್ಯ ಸತ್ತ್ವಾತ್. "ಪಂಚ ಪಂಚನಖಾ ಭಕ್ಷ್ಯಾಃ" ಇತಿವನ್ನ ಪರಿಸಂಖ್ಯಾವಿಧಿಃ; ಲಿಂಗಧಾರಣಾದಿಕರ್ತವ್ಯ ತ್ವಾಕರ್ತವ್ಯತ್ವಯೋರೇಕದಾ ಸಮುಚ್ಚಯಪ್ರಸಕ್ತ್ಯಸಂಭವಾತ್. ಅತೋ ಲಿಂಗಧಾರಣಸ್ಯ ನ ವೈದಿಕತ್ವಮಿತಿಚೇನ್ನ-ವಿಧಿತ್ರಯೇಣಾಪಿ ಸಿದ್ಧತ್ವಾತ್.

"ಅಮೃತಸ್ಯ ದೇವಧಾರಣೋ ಭೂಯಾಸಂ" ಇತ್ಯತ್ರಾಪೂರ್ವ ವಿಧಿಃ. ಲಿಂಗಧಾರಣಸ್ಯ "ಸರ್ವಲಿಂಗಂ ಸ್ಥಾಪಯತಿ" ಇತ್ಯಾದಿಬಹು ಶ್ರುತಿವಿಹಿತತ್ವೇನ ನಾಪೂರ್ವವಿಧಿರಿತಿಚೇತ್-ಉಪಜೀವ್ಯೋಪಜೀವಕ ಭಾವನ್ಯಾಯೇನ "ಸರ್ವಲಿಂಗಂ ಸ್ಥಾಪಯತಿ" ಇತ್ಯಾದಿವಾಕ್ಯಾನಾಂ ಫಲಧಾರಣಶಬ್ದಾಯೋಗೇನ ಉಪಜೀವಿತ್ವಂ; "ಅಮೃತಸ್ಯ ದೇವ ಧಾರಣೋ ಭೂಯಾಸಂ" ಇತ್ಯತ್ರ ಮೋಕ್ಷಫಲಧಾರಣವಿಧಾಯಕತ್ವ ಶ್ರವಣಾದುಪಜೀವ್ಯತ್ವಂ; ಅತೋ ನ ದೋಷಃ.

ನಿಯಮವಿಧಿಶ್ಚ–ತಾಂತ್ರಿಕತಪ್ತಲಿಂಗಶೂಲಡಮರುಶಂಖಚಕ್ರಾಂ ಕನನಿಷೇಧಪೂರ್ವಕಶ್ರೌತಭಸ್ಮರುದ್ರಾಕ್ಷಲಿಂಗಧಾರಣಾದಿವಿಧಾನಶ್ರವ ಣಾತ್. ಪರಿಸಂಖ್ಯಾವಿಧಿರಪಿ–ತಾಂತ್ರಿಕತಪ್ತಲಿಂಗಶೂಲಡಮರುಶಂಖಚ ಕ್ರಾಂಕನನಿಷೇಧಪೂರ್ವಕಶ್ರೌತಶಿಖಾಸೂತ್ರಭಸ್ಮರುದ್ರಾಕ್ಷಲಿಂಗಧಾರಣ ಸ್ವೀಕಾರಾತ್. "ಹರಿಕೇಶಾಯೋಪವೀತಿನೇ" (ತೈ. ಸಂ. ೪-೫-೨) "ರುದ್ರಶ್ಶಿಖಾ" ಇತ್ಯಾದೌ ಭಸ್ಮರುದ್ರಾಕ್ಷಾದಿವಚ್ಛಿವಸ್ಯೈವ ಶಿಖಾ ಸೂತ್ರಧಾರಣಶ್ರವಣಾಚ್ಛಿವಲಾಂಛನಮಿತಿ ಸಿದ್ಧಂ. "ಯಚ್ಛಂದಸಾಂ"

ಇತ್ಯಾದಿಲಿಂಗಧಾರಣವಿಧಾಯಕಶ್ರುತೀನಾಂ ಪರಮೇಶ್ವರಾನುಗ್ರಹಲಬ್ಧಸರ್ವವೇದಾರ್ಥವೇದಿಭಿಃ ಸರ್ವಜ್ಞವ್ಯಾಸದುರ್ವಾಸೋರೇಣುಕಶ್ವೇತೋಪಮನ್ಯುದಧೀಚಿಕುಂಭಸಂಭವಾದಿಪೂರ್ವಾಚಾರ್ಯೈರ್ಲಿಂಗಧಾರಣಪರತ್ವೇನ ವ್ಯಾಖ್ಯಾನಾತ್ತದೇವ ಗೌರವಂ. ವಯಂ ಶ್ರುತಿಯುಕ್ತ್ಯನುಭೂತಿವಾದಿನಃ, ಬೌದ್ಧಾದಿವನ್ನ ಯುಕ್ತಿಮಾತ್ರಾವಲಂಬಿನಃ.

ನಿಗಮಾಗಮೋಭಯವೇದಾಂತಪ್ರತಿಪಾದಿತಭಕ್ತಿಕ್ರಿಯಾಜ್ಞಾನಕಾಂಡತ್ರಯವಿಹಿತಸ್ಥೂಲಸೂಕ್ಷ್ಮಚಿದಚಿತ್ಪಂಚಪ್ರಕಾಶಕಷಟ್ಸ್ಥಲಪರಶಿವಸಾಕ್ಷಾತ್ಕಾರಕಾರಣಬಹುಜನ್ಮಕೃತಶಿವಾರ್ಪಿತಯಜನಯಾಜನತಪೋಧ್ಯಾನಾದ್ಯನೇಕಪುಣ್ಯಾಪೂರ್ವಫಲಕಶರೀರತ್ರಯಗತಮಲತ್ರಯಧ್ವಂಸಕಕಾರುಣ್ಯಕಲ್ಯಾಣಕೈವಲ್ಯವಿಭೂತಿತ್ರಯಪ್ರದಾಯಕಾಷ್ಟಾವರಣಪಂಚಾಚಾರಸದ್ಗುರುಕರುಣಾಕಟಾಕ್ಷಲಬ್ಧಶಕ್ತಿಪಾತಾದ್ಯವಚ್ಛಿನ್ನಪರಶಿವೇಷ್ಟಲಿಂಗಧಾರಣಾತ್ಮಕಪಾಶುಪತದೀಕ್ಷಾಽನಂತರ್ಯಮಿತ್ಯಥಶಬ್ದಾರ್ಥೋ ನಿರ್ಣೀಯತೇ.

ಜ್ಯೋತಿಷ್ಟೋಮದಂತೆ ಲಿಂಗಧಾರಣವೂ ಒಂದು ಕ್ರಿಯೆಯಾದ್ದರಿಂದ ಪರಂಪರೆಯಿಂದ ಮುಕ್ತಿಗೆ ಸಾಧನವಾಗಲಿ ಎಂದು ಹೇಳುವುದೂ ಸರಿಯಲ್ಲ, ಹೀಗೆ ಹೇಳಿದರೆ ಪ್ರತ್ಯಕ್ಷ ಶ್ರುತಿಗಳ ವಿರೋಧ ಸಂಭವಿಸುವುದಲ್ಲದೆ, ಶ್ರವಣಾದಿಗಳೂ ಕ್ರಿಯೆಯಾದ್ದರಿಂದ ಮುಕ್ತಿಗೆ ಹೇತುಗಳಾಗದೆ ಹೋಗಬೇಕಾಗುತ್ತವೆ. ಹಾಗಾದರೆ ಮಾಯಾಪಾಶದ ಬಿಡುಗಡೆಗೆ ಮುಖ್ಯ ಕಾರಣವೇ ಇಲ್ಲದ್ದರಿಂದ ಬ್ರಹ್ಮಜಿಜ್ಞಾಸೆಗೆ ಪ್ರಸಕ್ತಿಯೇ ಇಲ್ಲದೆ ಹೋಗುತ್ತದೆ. ಹಾಗಾದರೆ ನಿನ್ನ ಪಾಂಡಿತ್ಯದ ಉತ್ಕರ್ಷವು ನಿನ್ನ ಪಕ್ಷವನ್ನೇ ಮೂಲದಲ್ಲಿಯೇ ನಾಶಪಡಿಸಿದಂತಾಗುವುದು. 'ವ್ರೀಹಿಪ್ರೋಕ್ಷಣ'ವೆಂಬ ಕ್ರಿಯೆ ದರ್ಶಪೂರ್ಣಮಾಸವೆಂಬ ಯಾಗದಿಂದ ಹುಟ್ಟುವ ಅಪೂರ್ವಕ್ಕೆ ಕಾರಣವಾದ್ದರಿಂದ, ಅದಕ್ಕೂ ಸ್ವರ್ಗದಲ್ಲಿ ಹೇಗೆ ಪುರಸ್ಕಾರವು ದೊರಕುತ್ತದೆಯೋ ಹಾಗೆ ಪರಮೇಶ್ವರನಿಗರ್ಪಿಸಿದ ಜ್ಯೋತಿಷ್ಟೋಮಾದಿಸರ್ವಕರ್ಮಗಳೂ, ಸಾಧನಚತುಷ್ಟಯವೂ ಶಿವಜ್ಞಾನಕ್ಕೂ, ಶಿವಲಿಂಗಧಾರಣಕ್ಕೂ ಪ್ರಯೋಜಕವಾದ್ದರಿಂದ ಮೋಕ್ಷದಲ್ಲಿ ಪುರಸ್ಕೃತವಾಗುತ್ತವೆ.

ಲಿಂಗಧಾರಣ, ಬ್ರಹ್ಮಮೀಮಾಂಸೆ ಇವೆರಡಕ್ಕೂ ಒಬ್ಬನೇ ಕರ್ತನಲ್ಲದ್ದರಿಂದ ಹೇಗೆ ಕ್ರಮನಿಯಮವುಂಟಾದೀತು? ಇವೆರಡಕ್ಕೂ ಏಕಕರ್ತೃತ್ವವು ಬರುವುದಾದರೂ ಆಘಾರದರ್ಶಪೂರ್ಣಮಾಸದಂತೆ ಅಂಗಾಂಗಿಭಾವದಿಂದಲೋ? ಪಂಚಪ್ರಯಾಜದಂತೆ ಒಂದೇ ಅಂಗಿಗೆ ಅನ್ವಯಿಸುವ ಅನೇಕ ಅಂಗಗಳಾಗಿರುವುದರಿಂದಲೋ ? ಮುಂದಿನ ಕರ್ಮದಲ್ಲಿ ಅಧಿಕಾರವನ್ನು ದೊರಕಿಸುವ ಗೋದೋಹನದಂತೆಯೋ? ಅಥವಾ ಒಂದೇ ಫಲವನ್ನು ಕೊಡುವ ಆರು ಯಾಗಗಳು ಮತ್ತು ಔಷಧ್ಯಾದಿಗಳಂತೆಯೋ ?

ಕ್ರಮನಿಯಮು ಹೇಗೆ ಸಂಭವಿಸುತ್ತದೆ ? ಎಂದು ಕೇಳಿದರೆ, ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಹಿಂದೆ ಹೇಳಿದ ಶ್ರುತ್ಯಾದಿಪ್ರಮಾಣಗಳಿಂದ ಲಿಂಗಧಾರಣ ಮತ್ತು ಬ್ರಹ್ಮವಿಚಾರಗಳೆರಡೂ ಒಬ್ಬನಿಗೇ ಅನ್ವಯಿಸುತ್ತವೆಯೆಂದು ತಿಳಿದುಬರುವುದರಿಂದ ಈ ವಿಕಲ್ಪಗಳಿಗೆ ಅವಕಾಶವಿಲ್ಲ.

ಲಿಂಗಧಾರಣವೇನೋ ನಿತ್ಯವಿಧಿಯೋ ಆಗಲಿ. ಆದರೆ ಜೈಮಿನಿಸೂತ್ರದಲ್ಲಿಯೇ ಹೇಳಿರುವ ಮೂರು ವಿಧಿಗಳಲ್ಲಿ ಯಾವ ವಿಧಿಯನ್ನು ಲಿಂಗಧಾರಣದ ಬಗ್ಗೆ ಹೇಳಬಹುದು. ಅಪೂರ್ವವಿಧಿ, ನಿಯಮವಿಧಿ, ಪರಿಸಂಖ್ಯಾವಿಧಿ ಎಂದು ವಿಧಿಗಳು ಮೂರು ಬಗೆಯಾಗಿವೆ. 'ವ್ರೀಹೀನ್ ಪ್ರೋಕ್ಷತಿ' ಎಂಬಂತೆ ಲಿಂಗಧಾರಣದಲ್ಲಿ ಅಪೂರ್ವವಿಧಿ ಸಂಭವಿಸುವುದಿಲ್ಲ. ಯಾಕೆಂದರೆ ಲಿಂಗಧಾರಣವು 'ಪವಿತ್ರಂತೇ ವಿತತಂ' ಎಂಬ ಅನೇಕ ಶ್ರುತಿಗಳಲ್ಲಿ ವಿಹಿತವಾಗಿರುವುದರಿಂದ ಇದು ಅಪೂರ್ವವಿಧಿ ಯಾಗುವಂತಿಲ್ಲ. 'ವ್ರೀಹೀನ್ ಅವಹಂತಿ' ಎಂಬಂತೆ ಇಲ್ಲಿ ನಿಯಮವಿಧಿಯನ್ನೂ ಹೇಳಲಾಗುವುದಿಲ್ಲ. ಯಾಕೆಂದರೆ ಶಿವಲಿಂಗ ಒಂದೇ ಅಲ್ಲದೆ ಶಿಖೆ, ಅಕ್ಷಮಾಲೆ, ಭಸ್ಮಧಾರಣ ಇವುಗಳನ್ನೂ ಹೇಳಲಾಗಿದೆಯಾದ್ದರಿಂದ ಲಿಂಗಧಾರಣಕ್ಕೆ ನಿಯಮವಿಧಿ ಹೊಂದುವುದಿಲ್ಲ. 'ಪಂಚ ಪಂಚನಖಾ ಭಕ್ಷ್ಯಾಃ' ಎಂಬಂತೆ ಇಲ್ಲಿ ಪರಿಸಂಖ್ಯಾ ವಿಧಿಯೂ ಹೊಂದುವುದಿಲ್ಲ. ಯಾಕೆಂದರೆ ಲಿಂಗಧಾರಣವನ್ನು ಮಾಡಬೇಕೇ ಬೇಡವೇ ಎಂಬ ಎರಡು ಪಕ್ಷಗಳು ಒಟ್ಟಿಗೆ ಸಂಭವಿಸಿದರೆ ಮಾತ್ರವೇ ಪರಿಸಂಖ್ಯಾವಿಧಿ ಒದಗುತ್ತದೆ. ಇಲ್ಲಿ ಎರಡುಪಕ್ಷಗಳು ಒಟ್ಟಿಗೇ ಪ್ರಾಪ್ತವಾಗದಿರುವುದರಿಂದ ಪರಿಸಂಖ್ಯಾ ವಿಧಿಗೆ ಅವಕಾಶವೇ ಇಲ್ಲ. ಆದ್ದರಿಂದ ಲಿಂಗಧಾರಣವು ವೈದಿಕವಾಗಲಾರದು ಎಂದು ಆಕ್ಷೇಪ ಬಂದರೆ ಇದು ಯುಕ್ತವಲ್ಲ. ಯಾಕೆಂದರೆ ಈ ಮೂರು ವಿಧಿಗಳ ರೀತಿಯಲ್ಲಿಯೂ ಲಿಂಗಧಾರಣವು ವೈದಿಕವೇ ಆಗುತ್ತದೆ. 'ಅಮೃತಸ್ಯ ದೇವಧಾರಣೋ ಭೂಯಾಸಂ' ಎಂಬಲ್ಲಿ ಅಪೂರ್ವವಿಧಿ ಬಂದಿದೆ. ಅನೇಕ ಶ್ರುತಿಗಳಲ್ಲಿ ಲಿಂಗಧಾರಣವನ್ನು ಹೇಳಿರುವುದರಿಂದ, ಇದು ಹೇಗೆ ಅಪೂರ್ವವಿಧಿಯಾಗುತ್ತದೆ ಎಂದು ಕೇಳಿದರೆ ಉಪಜೀವ್ಯಪಜೀವಕಭಾವದಿಂದ 'ಸರ್ವಲಿಂಗಂ ಸ್ಥಾಪಯತಿ' ಎಂಬ ವಿಧಿಯು ಉಪಜೀವಿಯಾಗಿಯೂ, 'ಅಮೃತಸ್ಯ ದೇವಧಾರಣೋ ಭೂಯಾಸಂ' ಎಂಬ ವಿಧಿ ಉಪಜೀವಕವೂ ಆಗಿರುವುದರಿಂದ, ಇದು ಅಪೂರ್ವವಿಧಿಯಾಗುವುದರಲ್ಲಿ ದೋಷವಿಲ್ಲ. ಅಮೃತವೆಂಬ ಮೋಕ್ಷಫಲಕ್ಕಾಗಿ ಲಿಂಗವನ್ನು ಧರಿಸಬೇಕೆಂದು ವಿಧಿಸಲಾಗಿದೆ ಎಂದು ಹೇಳಿದ್ದರಿಂದ ಉಪಜೀವಕತ್ವವಿರುವುದರಿಂದ ಯಾವ ದೋಷವೂ ಇಲ್ಲ.

ಇದರಂತೆಯೇ ಲಿಂಗಧಾರಣಕ್ಕೆ ನಿಯಮವಿಧಿಯೂ ಸಂಭವಿಸುತ್ತದೆ. ತಂತ್ರಗಳಲ್ಲಿ ಹೇಳಿರುವ ಲಿಂಗ, ಶೂಲ, ಡಮರುಗ, ಶಂಖ, ಚಕ್ರ ಇವುಗಳ ಮುದ್ರೆ ಒತ್ತುವುದನ್ನು ನಿಷೇಧಿಸಿ, ವೇದೋಕ್ತವಾದ ಭಸ್ಮರುದ್ರಾಕ್ಷ ಮತ್ತು ಲಿಂಗಧಾರಣವನ್ನು ಸ್ವೀಕರಿಸುವುದರಿಂದ ಲಿಂಗಧಾರಣವು ನಿಯಮವಿಧಿಯಾಗುತ್ತದೆ. ಲಿಂಗಧಾರಣವನ್ನು ವಿಧಿಸುವ 'ಯಶ್ಛಂದಸಾಂ' ಎಂಬುವ ಶ್ರುತಿಗಳಿಗೆ ಈಶ್ವರಾನುಗ್ರಹದಿಂದ ವೇದಾರ್ಥ

ವನ್ನು ತಿಳಿದು ಸರ್ವಜ್ಞರೆನಿಸಿದ ವ್ಯಾಸ, ದೂರ್ವಾಸ, ರೇಣುಕ, ಉಪಮನ್ಯು, ದಧೀಚಿ, ಅಗಸ್ತ್ಯ ಇವರೇ ಮೊದಲಾದ ಪೂರ್ವಾಚಾರ್ಯರು ಲಿಂಗಧಾರಣಪರವಾಗಿ ವ್ಯಾಖ್ಯಾನಮಾಡಿರುವುದರಿಂದ ಲಿಂಗಧಾರಣವು ವೈದಿಕವೆನಿಸಿದೆ. ಇದರ ಮೇಲೆ ನಾವು ಶ್ರುತಿ ಯುಕ್ತಿ ಅನುಭವಗಳಿಗೆ ಸಮಪ್ರಾಮಾಣ್ಯವನ್ನು ಒಪ್ಪುತ್ತೇವೆ ; ಬೌದ್ಧ ರಂತೆ ಕೇವಲ ಯುಕ್ತಿಯೊಂದನ್ನೇ ನಂಬಿ ವ್ಯವಹರಿಸುವುದಿಲ್ಲ. ಆದ್ದರಿಂದ ಅಥ ಶಬ್ದಕ್ಕೆ ಅರ್ಥವನ್ನು ನಾವು ಹೀಗೆ ನಿರ್ಣಯಿಸುತ್ತೇವೆ. ನಿಗಮಾಗಮಪ್ರತಿಪಾದಿತ ವಾದ ಭಕ್ತಿಕ್ರಿಯಾಜ್ಞಾನಗಳಿಗೆ ಗೋಚರವಾಗುವ ಸ್ಥೂಲಸೂಕ್ಷ್ಮಚಿದಚಿತ್ಪ್ರಪಂಚ ಗಳನ್ನು ಪ್ರಕಾಶಗೊಳಿಸುವ ಷಟ್ಸ್ಥಲಾತ್ಮಕಪರಮಶಿವನ ಸಾಕ್ಷಾತ್ಕಾರಕ್ಕೆ ಕಾರಣ ವೆಂದು ಅನೇಕ ಜನ್ಮಗಳಲ್ಲಿ ಮಾಡಿ ಶಿವನಿಗರ್ಪಿಸಿದ ಯಜನ, ಯಾಜನ, ತಪಸ್ಸು, ಧ್ಯಾನ ಇವೇ ಮೊದಲಾದ ಅನೇಕ ಪುಣ್ಯಕರ್ಮಗಳಿಂದ ದೊರೆತ ಅಪೂರ್ವದ ಫಲ ವೆನಿಸಿದ, ಸ್ಥೂಲ ಸೂಕ್ಷ್ಮಕಾರಣ ಶರೀರಗಳಿಗಂಟಿರುವ ಮೂರು ಮಲಗಳನ್ನು ನಾಶ ಪಡಿಸಲಿಕ್ಕೂ, ಕಾರುಣ್ಯ, ಕಲ್ಯಾಣ, ಕೈವಲ್ಯಗಳೆಂಬ ಮುಕ್ತಿಗಳನ್ನು ಅಧಿಕಾರಿಗಳ ಯೋಗ್ಯತಾನುಸಾರವಾಗಿ ಅನುಗ್ರಹಿಸಲಿಕ್ಕೂ ಶಕ್ತನಾಗಿ, ಅಷ್ಟಾವರಣ, ಪಂಚಾಚಾರ ಗಳಿಂದೊಡಗೂಡಿದ ಸದ್ಗುರುವಿನ ಕೃಪೆಯಿಂದ ದೊರಕುವ ಶಕ್ತಿಪಾತವೆಂಬ ಶಿವಾನು ಗ್ರಹದಿಂದ ಪರಶಿವನ ಚಿತ್ಕಲಾಮಯವಾದ ಇಷ್ಟಲಿಂಗಧಾರಣವೆಂಬ ಪಾಶುಪತ ದೀಕ್ಷೆಯ ಅನಂತರವೆಂದು ಅಥಶಬ್ದದ ಅರ್ಥವನ್ನು ನಿರ್ಣಯಿಸಲಾಗಿದೆ.

**ಅತ್ರಾನಂತರ್ಯಾಭಿಧಾನಮುಖೇನಾಥಶಬ್ದೇನೈವ ಹೇತುತ್ವಸಿದ್ಧೇಃ ಕುತೋಽತಃಶಬ್ದಃ? ಇತಿಚೇನ್ನ ; "ಅಪಾಮ ಸೋಮಮಮೃತಾ ಅಭೂಮ"**(ಋಗ್ವೇದ. ೬-೪-೧೧) **ಇತ್ಯಾದೌ ಪ್ರಾಕೃತಕರ್ಮಫಲಸ್ಯಾಪಿ ನಿತ್ಯ ತ್ವಶ್ರವಣಾತ್, "ಓಮಿತ್ಯೇಕಾಕ್ಷರಂ ಬ್ರಹ್ಮ"** (ಗೀತಾ. ೮-೧೩) **"ಅಸಾವಾ ದಿತ್ಯೋ ಬ್ರಹ್ಮ"** (ತೈ. ಆರ. ೨-೨) **"ನಾರಾಯಣಪರಂ ಬ್ರಹ್ಮ"** (ಮಹಾನಾ. ೧೧ ಅನು.) **"ಅನ್ನಂ ಬ್ರಹ್ಮೇತಿವ್ಯಜಾನಾತ್"** (ತೈ. ಭೃ. ೨) **ಇತ್ಯಾದೌ ನಾನಾವಿಧೋಪಾಸನದರ್ಶನಾತ್ ಕಥಂ ಪರಶಿವೇಷ್ಟಲಿಂಗ ಧಾರಣಾನ್ಮುಕ್ತಿಸ್ಸಂಭವತೀತಿ ಶಂಕಾನಿರಾಸಾಯ ಹೇತುತ್ವದೃಢೀಕರಣಾ ರ್ಥಮತಶ್ಯಬ್ದೋ ನಿರ್ದಿಷ್ಟಃ. ಪ್ರಾಕೃತಕರ್ಮಫಲಸ್ಯಾನಿತ್ಯತ್ವೇ "ಪುಣ್ಯ ಚಿತೋ ಲೋಕಃ ಕ್ಷೀಯತೇ"**(ಛಾಂ. ೮-೧-೬) **ಇತ್ಯಾದಿಬಹುಶ್ರುತೀನಾಂ ವಿದ್ಯಮಾನತ್ವಾತ್, ಕರ್ಮಪ್ರಕರಣಪಠಿತಶ್ರುತ್ಯಪೇಕ್ಷಯಾ ಬ್ರಹ್ಮಪ್ರಕ ರಣಪಠಿತಾಯಾಃ "ಅಮೃತಸ್ಯ ದೇವಧಾರಣೋ ಭೂಯಾಸಂ"**(ತೈ. ಶಿ ೪) **ಇತ್ಯಾದಿಶ್ರುತೇರ್ಬಲವತ್ತ್ವಾತ್, "ಶಿವ ಏಕೋ ಧ್ಯೇಯಶ್ಶಿವಂಕರಸ್ಸ ರ್ವಮನ್ಯತ್ಪರಿತ್ಯಜ್ಯ"** (ಅಥರ್ವಶಿಖಾ. ೩) **"ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುಃ"** (ಶ್ವೇ. ೩-೨) **"ಅಸಂಖ್ಯಾತಸ್ಸಹಸ್ರಾಣಿ ಸ್ಮರ್ಯತ್ಯೇ ನ ಚ ದೃಶ್ಯತೇ"** (ತೈ. ಆರ. ೧೨) **"ತ್ವಂ ದೇವಾನಾಂ ಬ್ರಾಹ್ಮ**

ಣಾನಾಮಧಿಪತಿರ್ವಿಷ್ಣುಃ ಕ್ಷತ್ರಿಯಾಣಾಮಧಿಪತಿರ್ಬ್ರಾಹ್ಮಣಾನಾಂ ಬ್ರಾಹ್ಮಣೈರಾಶ್ರಯತ” ಇತ್ಯಾದಿಶ್ರುತಿಷು ಬ್ರಾಹ್ಮಣಾನಾಂ ಶಿವೋಪಾಸನಸ್ಯೈವ ವಿಧೇಯತ್ವಾತ್, “ಯೋ ವೈ ಸ್ವಾಂ ದೇವತಾಮತಿಯಜತೇ ಪ್ರಸ್ವಾಯೈ ದೇವತಾಯೈ ಚ್ಯವತೇ ನ ಪರಾಂ ಪ್ರಾಪ್ನೋತಿ ಪಾಪೀಯಾನ್ ಭವತಿ” (ತೈ. ಸಂ. ೨-೫-೪) ಇತಿ ಶ್ರುತೌ ಸ್ವೇದೇವತಾಪರಿತ್ಯಾಗೇ ಪ್ರತ್ಯವಾಯಶ್ರವಣಾತ್,

ಬ್ರಾಹ್ಮಣಾನಾಂ ಶಿವೋ ದೇವಃ ಕ್ಷತ್ರಿಯಾಣಾಂ ತು ಮಾಧವಃ ।
ವೈಶ್ಯಾನಾಂ ತು ತಥಾ ಬ್ರಹ್ಮಾ ಶೂದ್ರಾಣಾಂ ಸುರನಾಯಕಃ ॥
ಬ್ರಾಹ್ಮಣೋ ಭಗವಾನ್ ರುದ್ರಃ ಕ್ಷತ್ರಿಯಃ ಪರಮೋ ಹರಿಃ ।
ಪಿತಾಮಹಸ್ತಥಾ ವೈಶ್ಯೋ ವೃಷಲಸ್ತು ಪುರಂದರಃ ॥

ಇತ್ಯಾದಿಪಾರಾಶರ್ಯಪುರಾಣಾದಿಷು ವೈದಿಕಬ್ರಾಹ್ಮಣಾನಾಂ ಶಿವದೇವತ್ವಶ್ರವಣಾತ್, ಅಪಾಮೇತ್ಯಾದಿಶ್ರುತೇಃ “ಆಭೂತಸಂಪ್ಲವಂ ಸ್ಥಾನಮಮೃತತ್ವಂ ಹಿ ಭಾಷ್ಯತೇ” ಇತ್ಯಾದಿಸ್ಮೃತ್ಯಾ ಭೂತಪ್ರಳಯಾವಧ್ಯಪೇಕ್ಷಿತಾಮೃತತ್ವಪ್ರತಿಪಾದನತಾತ್ಪರ್ಯಾವಧಾರಣಾಚ್ಚ.

ಯತೋಽಸಾಧಾರಣಕಾರಣತ್ವೇನ ಅಮೃತಸ್ಯ ದೇವಧಾರಣಂ ವಿಧೀಯತೇ, ಅತಃ ಪಶುಪತಿಸ್ವರೂಪಬ್ರಹ್ಮಜ್ಞಾನಾಯ ವೇದಾಂತವಾಕ್ಯವಿಚಾರಃ ಕರ್ತವ್ಯಃ. “ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ” (ಛಾಂ. ೮-೧-೫) “ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ” (ಬೃ. ೨-೪-೫) ಇತ್ಯಾದಿಷು ಬ್ರಹ್ಮಜಿಜ್ಞಾಸಾವಿಧಿಃ ಶ್ರೂಯತೇ. “ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ” (ಮಾಂಡೂಕ್ಯ. ೧-೭) ಇತ್ಯಾದಿಶ್ರುತಿಷ್ವಾತ್ಮನ್‌ಶಬ್ದಸ್ಯ ಪರಶಿವಪ್ರತಿಪಾದಕತ್ವದರ್ಶನಾನ್ನಾನ್ಯಾರ್ಥಕತ್ವಂ.

‘ಅಥ’ ಶಬ್ದದಿಂದಲೇ ಕಾರಣವೆಂಬ ಅರ್ಥವನ್ನು ಪಡೆಯಬಹುದಾದ್ದರಿಂದ ‘ಅತಃ’ ಎಂಬ ಶಬ್ದವನ್ನು ಪ್ರತ್ಯೇಕವಾಗಿ ಯಾತಕ್ಕೆ ಹೇಳಬೇಕು? ಎಂದು ಕೇಳಿದರೆ ಅದಕ್ಕೆ ಸಮಾಧಾನ ಹೀಗಿದೆ. “ಸೋಮವನ್ನು ಕುಡಿಯೋಣ, ಅಮೃತರಾಗೋಣ” ಎಂಬ ಶ್ರುತಿಯಲ್ಲಿ ಪ್ರಾಕೃತಕರ್ಮವೆನಿಸಿದ ಸೋಮಪಾನದ ಫಲವು ಅಮೃತವೆಂದು ತಿಳಿಸಿರುವುದರಿಂದಲೂ, “ಓಂ ಎಂಬುದೇ ಏಕಾಕ್ಷರ ಬ್ರಹ್ಮ” “ಆದಿತ್ಯವೇ ಬ್ರಹ್ಮ” “ನಾರಾಯಣನೇ ಬ್ರಹ್ಮ” “ಅನ್ನವೇ ಬ್ರಹ್ಮ” ಎಂದು ಅನೇಕಬಗೆಯ ಉಪಾಸನವನ್ನು ಹೇಳಿರುವುದರಿಂದಲೂ, ಪರಶಿವನ ಚಿಕ್ಕಲೆ ಎನಿಸಿದ ಇಷ್ಟಲಿಂಗದ ಧಾರಣದಿಂದಲೇ ಹೇಗೆ ಮುಕ್ತಿಯುಂಟಾದೀತು? ಎಂಬ ಶಂಕೆ ಬಂದರೆ

ಅದನ್ನು ಪರಿಹರಿಸುವ ಬಗೆಯನ್ನು ದೃಢಪಡಿಸಲಿಕ್ಕಾಗಿ 'ಅತಃ' ಎಂಬ ಶಬ್ದವನ್ನು ಸೂತ್ರದಲ್ಲಿ ಪ್ರಯೋಗಿಸಲಾಗಿದೆ. ಪ್ರಾಕೃತಕರ್ಮಗಳು ಅನಿತ್ಯವೆಂದೂ, ಪುಣ್ಯದಿಂದ ಗಳಿಸಿದ ಲೋಕವೂ ನಾಶವಾಗುತ್ತದೆ ಎಂದೂ ಅನೇಕ ಶ್ರುತಿಗಳಲ್ಲಿ ಹೇಳಲಾಗಿದೆ. ಆದರೆ ಕರ್ಮಪ್ರಕರಣದಲ್ಲಿ ಬರುವ ಶ್ರುತಿಗಿಂತಲೂ ಬ್ರಹ್ಮಪ್ರಕರಣದಲ್ಲಿ ಬರುವ 'ಅಮೃತಸ್ಯ ದೇವಧಾರಣೋ ಭೂಯಾಸಂ' ಎಂಬ ಶ್ರುತಿಗೆ ಪ್ರಾಮುಖ್ಯತೆ ಕೊಡಲಾಗಿದೆ. "ಎಲ್ಲವನ್ನು ಬಿಟ್ಟು ಶಿವಶಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು" "ಒಬ್ಬನೇ ರುದ್ರನು ಅದ್ವಿತೀಯನಾಗಿದ್ದಾನೆ" "ಲೆಕ್ಕವಿಲ್ಲದಷ್ಟು ಶಾಸ್ತ್ರಗಳಿವೆ, ಅವೆಲ್ಲದರಿಂದಲೂ ಪರಮಾತ್ಮನನ್ನು ಸ್ಮರಿಸಬಹುದು. ಆದರೆ ನೋಡಲಾಗುವುದಿಲ್ಲ" "ನೀನು ದೇವತೆಗಳಿಗೂ ಬ್ರಾಹ್ಮಣರಿಗೂ ನಿಯಾಮಕನಾಗಿದ್ದೀಯೆ" ಈ ಬಗೆಯ ಶ್ರುತಿಗಳು ವೀರಶೈವರಿಗೆ ಶಿವೋಪಾಸನವನ್ನೇ ವಿಧಿಸಿವೆ. "ಯಾವನು ತನ್ನ ದೇವನನ್ನತಿಕ್ರಮಿಸಿ ಬೇರೆಕಡೆ ಓಡಾಡುತ್ತಾನೆಯೋ ಅವನು ಪರಶಿವನನ್ನು ಹೊಂದಲಾರನು ಮತ್ತು ಪಾಪಿಯಾಗುವನು" ಹೀಗೆ ಶ್ರುತಿಯಲ್ಲಿ ತನ್ನ ದೇವನನ್ನು ತೊರೆದರೆ ದೋಷವನ್ನು ಹೇಳಲಾಗಿದೆ. "ಬ್ರಾಹ್ಮಣರಿಗೆ ಶಿವನೇ ದೇವನು, ಕ್ಷತ್ರಿಯರಿಗೆ ವಿಷ್ಣುವೇ ದೇವನು, ವೈಶ್ಯರಿಗೆ ಬ್ರಹ್ಮನೇ ದೇವನು, ಶೂದ್ರರಿಗೆ ಇಂದ್ರನು ದೇವನು" "ಪೂಜ್ಯನಾದ ರುದ್ರನು ಬ್ರಾಹ್ಮಣನು, ಪುರುಷೋತ್ತಮನಾದ ಹರಿ ಕ್ಷತ್ರಿಯನು, ಬ್ರಹ್ಮನು ವೈಶ್ಯನು, ಇಂದ್ರನು ಶೂದ್ರನು" ಹೀಗೆ ಮನುಪರಾಶರಸ್ಮೃತಿಗಳಲ್ಲಿ ವೈದಿಕರೆನಿಸಿದ ಶಿವಭಕ್ತರಿಗೆ ಶಿವನೇ ದೇವನೆಂದು ಹೇಳಲಾಗಿದೆ.

"'ಅಪಾಮ ಸೋಮಂ' ಎಂಬ ಶ್ರುತಿಯಲ್ಲಿ ಹುಟ್ಟುಸಾವುಗಳಿಲ್ಲದ ಸ್ಥಾನವೇ ಅಮೃತವೆಂದು ಭಾವಿಸಲಾಗಿದೆ" ಎಂಬ ಸ್ಮೃತಿಗೆನುಗುಣವಾಗಿ ಪ್ರಳಯದವರಿವಿಗೆ ಅಮೃತಸ್ಥಿತಿಯನ್ನು ಹೇಳುವುದೇ ಆ ಶ್ರುತಿಯ ಅರ್ಥವೇ ಹೊರತು ಶಾಶ್ವತವಾದ ಅಮೃತಸ್ಥಿತಿಯನ್ನು ತಿಳಿಸುವುದು ಅದರ ತಾತ್ಪರ್ಯವಲ್ಲವೆಂದು ನಿಶ್ಚಯಿಸಲಾಗಿದೆ. ಯಾಕೆಂದರೆ ಶಾಶ್ವತವಾದ ಅಮೃತಕ್ಕೆ ಲಿಂಗಧಾರಣವೇ ಮುಖ್ಯಕಾರಣವೆಂದು ವಿಧಿಸಲಾಗಿದೆ. ಯಾವ ಅಸಾಧಾರಣವಾದ ಅಮೃತಕ್ಕಾಗಿ ಲಿಂಗರೂಪನಾದ ದೇವನ ಧಾರಣವು ವಿಹಿತವಾಗಿದೆಯೋ, ಅಂತಹ ದೇವನ ಸ್ವರೂಪವನ್ನು ತಿಳಿಯಲಿಕ್ಕಾಗಿ ಬ್ರಹ್ಮವಿಮರ್ಶೆಯನ್ನು ನಡೆಸಬೇಕು. "ಸತ್ಯಕಾಮನೂ, ಸತ್ಯಸಂಕಲ್ಪನೂ ಆದ ಪರಮಶಿವನನ್ನು ಹುಡುಕಬೇಕು ಮತ್ತು ತಿಳಿಯಬೇಕು" "ಆತ್ಮನನ್ನು ಕೇಳಿ ತಿಳಿದು ಧ್ಯಾನಿಸಿ ನೋಡಬೇಕು" ಎಂದು ಶ್ರುತಿಯಲ್ಲಿ ಬ್ರಹ್ಮವಿಚಾರದ ಆವಶ್ಯಕತೆ ಕಂಡು ಬರುತ್ತದೆ. "ಪ್ರಪಂಚದ ವಿಶ್ರಾಂತಿಸ್ಥಲನೂ, ಶಾಂತನೂ, ಅದ್ವೈತನೂ ಆದ ಪರಮಶಿವನನ್ನು ತ್ರಿಮೂರ್ತ್ಯತೀತನೆಂದು ಜ್ಞಾನಿಗಳು ತಿಳಿಯುತ್ತಾರೆ," "ಅವನನ್ನು ಆತ್ಮನೆಂದು ತಿಳಿಯಬೇಕು" ಎಂದು ಶ್ರುತಿಯಲ್ಲಿ ಆತ್ಮನ್ ಶಬ್ದಕ್ಕೆ ಪರಶಿವನೆಂಬ ಅರ್ಥವನ್ನು ಹೇಳಿರುವುದರಿಂದ ಇಲ್ಲಿ ಬೇರೆ ಯಾವ ಅರ್ಥವನ್ನು ಹೇಳಿದರೂ ಹೊಂದಿಕೆಯಾಗುವುದಿಲ್ಲ.

ಅತ್ರ—ಬ್ರಹ್ಮಣೋ ಜಿಜ್ಞಾಸಾ ಬ್ರಹ್ಮಜಿಜ್ಞಾಸೇತಿ ಕರ್ಮಣಿ ಷಷ್ಠೀ, ನ ಶೇಷಷಷ್ಠೀ. ಜಿಜ್ಞಾಸಾಯಾ ಜಿಜ್ಞಾಸ್ಯಾಪೇಕ್ಷತ್ವಾತ್. ಶೇಷಷಷ್ಠೀ-ಪರಿಗ್ರಹಣೇಽಪಿ ಬ್ರಹ್ಮಣೋ ಜಿಜ್ಞಾಸಾಕರ್ಮತ್ವಮುಪದಿಶ್ಯತೇ, ಸಂಬಂಧಸಾಮಾನ್ಯಸ್ಯ ವಿಶೇಷನಿಷ್ಠತ್ವಾತ್. ಏವಮಪಿ ಬ್ರಹ್ಮಣಃ ಪ್ರತ್ಯಕ್ಷಂ ಕರ್ಮತ್ವಮುತ್ಸೃಜ್ಯ ಸಾಮಾನ್ಯದ್ವಾರೇಣ ಪರೋಕ್ಷಂ ಕರ್ಮತ್ವಂ ಕಲ್ಪಯತೋ ವ್ಯರ್ಥಃ ಪ್ರಯಾಸಃ ಸ್ಯಾತ್. ಪ್ರಧಾನಪರಿಗ್ರಹೇ ತದಪೇಕ್ಷಿತಾನಾಮಪ್ಯರ್ಥಾತ್ ಸಿದ್ಧತ್ವಾತ್.

ಅತ್ರ ಸೂತ್ರೇ ಕರ್ತವ್ಯೇತಿ ಪದಾಧ್ಯಾಹಾರೋ ನಾಂಗೀಕರ್ತವ್ಯಃ. ವಿಷಯಪ್ರಯೋಜನಜ್ಞಾನಾದೇವ ಪುರುಷವ್ಯಾಪಾರಸಂಭವಾತ್, ಸಿದ್ಧಾಂತೇ ಕಾರ್ಯಾನ್ವಿತೇ ಪದಶಕ್ತ್ಯನಂಗೀಕಾರಾಚ್ಚ. ನಹ್ಯನುವಾದ ದೋಷಃ, ಅಪ್ರಾಪ್ತಾನುವಾದೇ ದೋಷಾಭಾವಾತ್ ಕರ್ತವ್ಯಪದಾಧ್ಯಾಹಾರಮಾತ್ರೇಣ ಕಥಮನುವಾದದೋಷಪರಿಹಾರಃ? "ವಿಷ್ಣುರುಪಾಂಶು ಯಷ್ಟವ್ಯೋಽಜಾಮಿತ್ವಾಯ" ಇತ್ಯಾದೌ ತವ್ಯಪ್ರತ್ಯಯೇಽಪ್ಯನುವಾದದರ್ಶನಾತ್. ಅಪ್ರಾಪ್ತಸ್ಯಾನುವಾದಸ್ಯ ಕರ್ತವ್ಯಪದಾಧ್ಯಾಹಾರಂ ವಿನಾಪಿ "ತತ್ತ್ವಮಸಿ" (ಛಾಂ. ೬-೮-೭) "ಅಯಮಾತ್ಮಾ ಬ್ರಹ್ಮ" (ಬೃ. ೨-೫-೧೯) ಇತ್ಯಾದಿವದನುವಾದತ್ವಸಂಭವಾನ್ನಾನುವಾದ ಪರಿಹಾರಾಯಾಧ್ಯಾಹಾರಃ.

ನ ಚ ಶ್ರವಣವಿಧ್ಯಪೇಕ್ಷಿತನ್ಯಾಯವಿಚಾರಾರ್ಥತ್ವಾದಸ್ಯ ಸೂತ್ರಸ್ಯ ಶ್ರುತಿಸೂತ್ರಯೋರೈಕರೂಪ್ಯಾರ್ಥಮಧ್ಯಾಹಾರಃ, ಶ್ರವಣವಿಧೇರನಂಗೀಕಾರಾತ್. ವಿಧಿತ್ವಪ್ರಯೋಜಕರೂಪಸಂಪತ್ತ್ಯಭಾವೇನ ನ ತಾವದಪೂರ್ವವಿಧಿಃ, ವಿಚಾರಸ್ಯ ನಿರ್ಣಯಹೇತುತ್ವಸ್ಯ ತಾತ್ಪರ್ಯಗ್ರಾಹಕಸ್ಯ ಲೋಕಸಿದ್ಧತ್ವಾತ್. ನ ಚ ಬ್ರಹ್ಮಸಾಕ್ಷಾತ್ಕಾರಹೇತುತ್ವಂ ನ ಪ್ರಾಪ್ತಮಿತಿ ವಾಚ್ಯಂ. ವಿಚಾರಮಾತ್ರಸ್ಯ ವಿಚಾರ್ಯನಿರ್ಣಯಹೇತುತ್ವಸ್ಯ ಬ್ರಹ್ಮಪ್ರಮಾಣಸ್ಯ ತತ್ಸಾಕ್ಷಾತ್ಕಾರಹೇತುತ್ವಸ್ಯ ಚ ಪ್ರಾಪ್ತೌ ವಿಚಾರಿತವೇದಾಂತ ಜ್ಞಾನರೂಪಶ್ರವಣಸ್ಯ ತದ್ಧೇತುತ್ವಪ್ರಾಪ್ತೇಃ.

ನಾಪಿ ನಿಯಮವಿಧಿಃ, ವ್ಯಾವರ್ತ್ಯಾಭಾವಾತ್. ನ ಚ ಗುರುವಿರಹಿತವಿಚಾರೋ ವ್ಯಾವರ್ತ್ಯಃ. "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ" (ಮುಂಡಕ. ೧-೨-೧೨) ಇತಿ ವಿಜ್ಞಾನಾರ್ಥಂ ವಿಧೀಯಮಾನಗುರೂಪಸದನದೃಷ್ಟದ್ವಾರಸಂಭವೇ ಅದೃಷ್ಟಕಲ್ಪನಾಯೋಗಾತ್, ವೇದಾಂ

ತವಿಚಾರೇಣೈವ ವಿಜ್ಞಾನಾರ್ಥಃ ಪರ್ಯವಸ್ಯತೀತಿ ಸ್ವತಂತ್ರವಿಚಾರವ್ಯಾವೃತ್ತೇರುಪಗಮವಿಧಿನೈವ ಸಿದ್ಧತ್ವಾತ್.

ನ ಪರಿಸಂಖ್ಯಾವಿಧಿಃ, ಸಾಧನಾಂತರಸ್ಯ ಸಮುಚ್ಚಿತ್ಯ ಪ್ರಾಪ್ತ್ಯಭಾವಾತ್. ನ ಚ ವ್ಯಾಪಾರಾಂತರಸ್ಯ ನಿವೃತ್ತ್ಯರ್ಥಂ ಯಾವಜ್ಜೀವಂ ವೇದಾಂತವಿಚಾರಃ ಕರ್ತವ್ಯಃ, ನ ಚ ವ್ಯಾಪಾರಾಂತನಿವೃತ್ತಿಸ್ಸಂಭವತಿ ಇತಿ ವಾಚ್ಯಂ, ತತ್ರೈವ ದೋಷಾಪಾತಾತ್. ಕಿಂಚ—ಸಂನ್ಯಾಸಿನೋಽಸಂನ್ಯಾಸಿನೋ ವಾ ವ್ಯಾಪಾರಾಂತರನಿವೃತ್ತಿಃ? ನಾಂತ್ಯಃ–ಅಶಕ್ಯತ್ವಾತ್. ನಾದ್ಯಃ–ಸನ್ಯಾಸವಿಧಾಯಕವಾಕ್ಯೇನೈವ ಸಿದ್ಧತ್ವಾತ್. "ಬ್ರಹ್ಮಸಂಸ್ಥೋಽಮೃತತ್ವಮೇತಿ" ಇತಿ ಛಾಂದೋಗ್ಯೇಽಪ್ಯನನ್ಯವ್ಯಾಪಾರಸ್ಯೈವ ಮುಕ್ತಿಸಾಧಕತ್ವಶ್ರವಣಾತ್, ಸಂಪೂರ್ವಕತಿಷ್ಠತೇಸ್ಸಮಾಪ್ತಿವಾಚಕತ್ವಸ್ಯ "ಅಗ್ನಿಷ್ಟೋಮಸಂಸ್ಥಾ" ಇತ್ಯಾದೌ ದರ್ಶನಾತ್, ಬ್ರಹ್ಮಸಂಸ್ಥಶಬ್ದಿತಾಯಾ ಬ್ರಹ್ಮಣಿ ಸಮಾಪ್ತೇರನನ್ಯವ್ಯಾಪಾರರೂಪತ್ವಾತ್, "ತಮೇವೈಕಂ ಜಾನಥಾತ್ಮಾನಮನ್ಯಾ ವಾಚೋ ವಿಮುಂಚಥ" ಇತ್ಯಾಥರ್ವಣಿಕೇ ಕಂಠತ ಏವ ವ್ಯಾಪಾರಾಂತರನಿಷೇಧಾಚ್ಚ, "ಆಸುಪ್ತೇರಾಮೃತೇಃ ಕಾಲಂ ನಯೇದ್ವೇದಾಂತಚಿಂತಯಾ" ಇತಿಸ್ಮೃತೇಶ್ಚ. ತಸ್ಮಾದ್ವಿಧ್ಯಂತರಸಿದ್ಧಸ್ಯವ್ಯಾಪಾರಾಂತರನಿಷೇಧಸ್ಯ ನಾತ್ರ ತ್ರೈದೋಷ್ಯಮಂಗೀಕೃತ್ಯ ವಿಧಾನಮಂಗೀಕರ್ತವ್ಯಂ. ಅತ ಏವ "ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್" (ಬ್ರಹ್ಮಸೂ. ೩-೪-೪೭) ಇತ್ಯಧಿಕರಣೇ ಕೈವಲ್ಯಚಂದ್ರೋದಯೇ ಪರಮಾರಾಧ್ಯಾಃ—

ನಚಾಪೂರ್ವವಿಧಿಃ ಪ್ರಾಪ್ತೇರನನ್ಯೋಪಾಯತೋ ನ ಚ ।
ನಿಯಮಃ ಪರಿಸಂಖ್ಯಾ ವಾ ಶ್ರವಣಾದಿಷು ಸಂಭವೇತ್ ॥

ಇತ್ಯಾಹುಃ. ತಸ್ಮಾಚ್ಛ್ರವಣವಿಧ್ಯಭಾವಾನ್ನ ತದೈಕರೂಪ್ಯಾಯ ಲಕ್ಷಣಾಧ್ಯಾಹಾರೌ.

ಇಲ್ಲಿ ಬ್ರಹ್ಮಜಿಜ್ಞಾಸೆ ಎಂಬ ಕಡೆ ಕರ್ಮಾರ್ಥದಲ್ಲಿ ಷಷ್ಠೀವಿಭಕ್ತಿ ಬಂದಿದೆಯೇ ಹೊರತು ಶೇಷಾರ್ಥದಲ್ಲಿ ಬಂದಿಲ್ಲ. ಜಿಜ್ಞಾಸೆ ಎಂದರೆ ಅದಕ್ಕೆ ವಿಷಯವ್ಯಾವುದು ಎಂಬ ಆಕ್ಷೇಪ ಬರುವುದರಿಂದ, ವಿಷಯವನ್ನು ತಿಳಿಸುವ ಕರ್ಮಣಿ ಷಷ್ಠಿಯನ್ನೇ ಇಲ್ಲಿ ಹೇಳಬೇಕು. ಶೇಷಷಷ್ಠಿಯನ್ನು ಸ್ವೀಕರಿಸಿದರೂ, ಜಿಜ್ಞಾಸೆಗೆ ಬ್ರಹ್ಮವನ್ನೇ ಕರ್ಮವೆಂದು ಹೇಳಬೇಕಾಗುತ್ತದೆ ; ಯಾಕೆಂದರೆ ಸಂಬಂಧಸಾಮಾನ್ಯವನ್ನೇ ಷಷ್ಠೀವಿಭಕ್ತಿ ತಿಳಿಸುತ್ತದೆ. ಇಲ್ಲಿ ಬ್ರಹ್ಮವೇ ಕರ್ಮವೆಂದು ಹೇಳದೆ ಸಾಮಾನ್ಯದೃಷ್ಟಿಯಿಂದ ಕೇವಲ ಸಂಬಂಧವನ್ನು ಮಾತ್ರವೇ ಹೇಳಿದರೂ, ಹಾಗೆ ಹೇಳುವ ಪ್ರಯಾಸವೆಲ್ಲವೂ ವ್ಯರ್ಥವಾಗುತ್ತದೆ. ಆದರೆ ಮುಖ್ಯವಾದ ಅಂಶವನ್ನು ಒಪ್ಪಿಕೊಂಡರೆ ಅದಕ್ಕನ್ನ

ಯಿಸುವ ಅ ಂಗಗಳೆಲ್ಲವೂ ತಾವಾಗಿಯೇ ಸಿದ್ಧಿಸುತ್ತವೆ. ಸೂತ್ರದಲ್ಲಿ "ಜಿಜ್ಞಾಸಾ ಕರ್ತವ್ಯಾ" ಎಂದು ಕರ್ತವ್ಯಪದವನ್ನು ಸೇರಿಸಿಕೊಳ್ಳಬೇಕೆಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ವಿಷಯ ಮತ್ತು ಪ್ರಯೋಜನಗಳನ್ನು ತಿಳಿದಮೇಲೆ ಪುರುಷನ ಪ್ರಯತ್ನವು ತಾನಾಗಿಯೇ ಸಂಭವಿಸುತ್ತದೆ. ಸಿದ್ಧಾಂತದಲ್ಲಿ ಪದಗಳಿಗೆ ಕಾರ್ಯಾನ್ವಿತವಾದ ಅರ್ಥದಲ್ಲಿ ಶಕ್ತಿಯನ್ನು ಅಂಗೀಕರಿಸಿಲ್ಲವಾದ್ದರಿಂದ ಕರ್ತವ್ಯ ಪದವನ್ನು ಸೇರಿಸದಿದ್ದರೂ ಶಾಬ್ದಬೋಧ ಬರಬಹುದು. ಆದರೆ ಯಾವ ಪ್ರಯೋಜನ ವಿಲ್ಲದಿದ್ದರೂ ಒಂದು ಪದವನ್ನು ಸೇರಿಸಿಕೊಂಡರೆ ದೋಷವಿಲ್ಲವಾದ್ದರಿಂದ ಅನುವಾದ ದೋಷಕ್ಕೂ ಇಲ್ಲಿ ಪ್ರಸಕ್ತಿ ಇಲ್ಲ. ಅಪ್ರಾಪ್ತವಾದ ವಿಷಯವನ್ನು ತಿಳಿಸುವ ಕಡೆಯಲ್ಲಿ ಅನುವಾದ ದೋಷವೂ ಸಂಭವಿಸುವುದಿಲ್ಲ. ಹಾಗೆ ಇಲ್ಲದಿದ್ದರೆ ಕರ್ತವ್ಯಪದವನ್ನು ಅಧ್ಯಾಹಾರಮಾಡುವುದರಿಂದಲೇ ಅನುವಾದದೋಷ ಹೇಗೆ ಪರಿಹಾರವಾದೀತು? ಕರ್ತವ್ಯಪದದಲ್ಲಿ ತವ್ಯಪ್ರತ್ಯಯವಿದ್ದರೂ ಅನುವಾದಮಾಡಿರುವುದಾಗಿ ಕಂಡುಬರುವು ದರಿಂದ 'ತತ್ತ್ವಮಸಿ' ಮೊದಲಾದ ವಾಕ್ಯಗಳಲ್ಲಿರುವಂತೆ ಇಲ್ಲಿಯೂ ಅನುವಾದವು ಸಂಭವಿಸಬಹುದಾದ್ದರಿಂದ ಅನುವಾದವನ್ನು ಪರಿಹರಿಸಲಿಕ್ಕಾಗಿ ಕರ್ತವ್ಯಪದವನ್ನು ಅಧ್ಯಾಹಾರಮಾಡಬೇಕಾಗಿಲ್ಲ. 'ಶ್ರೋತವ್ಯಃ' ಎಂಬ ಶ್ರುತಿಗೂ ಈ ಸೂತ್ರಕ್ಕೂ ಏಕರೂಪತೆಯನ್ನು ಸಾಧಿಸಲಿಕ್ಕಾಗಿ 'ಕರ್ತವ್ಯ' ಎಂಬ ಪದವನ್ನು ಸೇರಿಸಿಕೊಳ್ಳ ಬೇಕೆಂದು ಹೇಳುವುದೂ ಯುಕ್ತವಲ್ಲ; ಯಾಕೆಂದರೆ ಇಲ್ಲಿ ಜಿಜ್ಞಾಸೆಮಾಡುವಾಗ ಶ್ರವಣವಿಧಿಯನ್ನು ಅಂಗೀಕರಿಸಿಲ್ಲ. ಶ್ರುತಿಯಲ್ಲಿ ಶ್ರೋತವ್ಯಃ ಎಂಬಲ್ಲಿ ತವ್ಯವೆಂಬ ಪ್ರತ್ಯಯ ಬಂದಿದೆ. ಆ ಶ್ರುತಿಯ ಅರ್ಥವನ್ನು ಸೂಚಿಸುವುದಕ್ಕಾಗಿಯೇ ಈ ಸೂತ್ರ ಬಂದಿದೆಯಾದ್ದರಿಂದ 'ಕರ್ತವ್ಯ' ಎಂಬ ಪದವನ್ನು ಸೇರಿಸಿಕೊಳ್ಳಬೇಕಲ್ಲವೆ? ಎಂದು ಹೇಳುವುದೂ ಸರಿಯಲ್ಲ; ಯಾಕೆಂದರೆ ಸಿದ್ಧಾಂತದಲ್ಲಿ 'ಶ್ರೋತವ್ಯಃ' ಎಂಬ ಕಡೆ ಯಾವ ವಿಧಿಯನ್ನೂ ಒಪ್ಪಿಲ್ಲ. ಅಲ್ಲಿ ಅಪೂರ್ವವಿಧಿ ಬರುವಂತಿಲ್ಲ. ಯಾಕೆಂದರೆ ವಿಚಾರವು ನಿರ್ಣಯಕ್ಕೆ ಕಾರಣವಾಗಿರುವುದೆಂದು ಲೋಕದಿಂದಲೇ ತಿಳಿದುಬರುತ್ತದೆ. ಹಾಗೆ ತಿಳಿದರೂ ವಿಚಾರವು ಬ್ರಹ್ಮಸಾಕ್ಷಾತ್ಕಾರದ ಹೇತುವೆಂಬ ಅಂಶ ಲೋಕದಿಂದ ತಿಳಿದುಬರುವುದಿಲ್ಲವಾದ್ದರಿಂದ ಅದಕ್ಕೆ ಅಪೂರ್ವವಿಧಿಯನ್ನು ಹೇಳಬಹುದಲ್ಲವೇ ಎಂದು ಕೇಳುವುದೂ ಸರಿಯಾಗುವುದಿಲ್ಲ; ಯಾಕೆಂದರೆ ನಿರ್ಣಯಕ್ಕಾಗಿ ವಿಚಾರ ಮಾಡುವುದೆಂದಾದಮೇಲೆ ನಿರ್ಣಯವು ಸಾಕ್ಷಾತ್ಕಾರದವರೆಗೂ ಸಾಧಕವನ್ನು ಕರೆ ದೊಯ್ಯುವುದರಿಂದ ವಿಚಾರವು ಸಾಕ್ಷಾತ್ಕಾರದ ಸಾಧನವೆನಿಸುತ್ತದೆಯಾಗಿ ಇಲ್ಲಿ ಅಪೂರ್ವವಿಧಿ ಸಂಭವಿಸುವುದಿಲ್ಲ. ಅದರಂತೆ ನಿಯಮವಿಧಿಯೂ ಬರುವಂತಿಲ್ಲ; ಯಾಕೆಂದರೆ ಅದರಿಂದ ನಿವಾರಣೆಯಾಗಬೇಕಾದ ಅಂಶ ಯಾವುದೂ ಇಲ್ಲ. ಗುರು ಮುಖದಿಂದಲ್ಲದೆ ಸ್ವತಂತ್ರವಾಗಿ ಮಾಡುವ ವಿಚಾರವನ್ನು ತಡೆಯಲಿಕ್ಕಾಗಿ ನಿಯಮ ವಿಧಿಯನ್ನು ಒಪ್ಪಬಹುದಲ್ಲವೆ? ಎಂದರೆ ಅದೂ ಸರಿಯಲ್ಲ; ಯಾಕೆಂದರೆ, "ಪರೀಕ್ಷ್ಯ ಲೋಕಾನ್" ಎಂಬ ಶ್ರುತಿಯು ಜ್ಞಾನಕ್ಕಾಗಿ ಗುರುವಿನ ಆಶ್ರಯವನ್ನು ವಿಧಿಸುತ್ತದೆ.

ಇದರಿಂದ ಸಾಧಕನಿಗೆ ಸ್ವತಂತ್ರವಾಗಿ ವಿಚಾರಮಾಡುವ ಅವಕಾಶ ತಪ್ಪಿಹೋಗುವುದರಿಂದ ವಿಚಾರಕ್ಕಾಗಿ ನಿಯಮವಿಧಿಯನ್ನು ಒಪ್ಪಬೇಕಾಗಿಲ್ಲ. ಹಾಗೆಯೇ ಪರಿಸಂಖ್ಯಾವಿಧಿಯೂ ಇಲ್ಲಿ ಹೊಂದುವುದಿಲ್ಲ; ಯಾಕೆಂದರೆ ಬ್ರಹ್ಮಜ್ಞಾನಕ್ಕೆ ಬೇರೆ ಸಾಧನಗಳು ಒಟ್ಟಿಗೆ ಒದಗಿದರೆಯೇ ಪರಿಸಂಖ್ಯಾವಿಧಿ ಸಂಭವಿಸಬಲ್ಲದು. ಆ ರೀತಿಯಲ್ಲಿ ಬೇರೆ ಸಾಧನಗಳು ಒಟ್ಟಿಗೆ ಸಂಭವಿಸದೇ ಇರುವುದರಿಂದ ಪರಿಸಂಖ್ಯಾವಿಧಿಗೆ ಇಲ್ಲಿ ಅವಕಾಶವಿಲ್ಲ. ಶ್ರವಣವ್ಯಾಪಾರವನ್ನು ಬಿಟ್ಟು ಉಳಿದ ವ್ಯಾಪಾರವನ್ನು ತಡೆಯುಲಿಕ್ಕಾಗಿ ಪರಿಸಂಖ್ಯಾವಿಧಿಯನ್ನು ಏಕೆ ಹೇಳಬಾರದು? ಎಂದರೆ ಆ ಬಗೆಯ ಬೇರೆ ವ್ಯಾಪಾರಗಳ ತಡೆಯನ್ನು ಯಾರಿಗೆ ಹೇಳಬೇಕು? ಸನ್ಯಾಸಿಗೆ ಹೇಳಬೇಕೇ ಅಥವಾ ಗೃಹಸ್ಥನಿಗೆ ಹೇಳಬೇಕೇ? ಗೃಹಸ್ಥನಿಗೆ ಎಲ್ಲಾ ವ್ಯಾಪಾರಗಳನ್ನು ಸಂಪೂರ್ಣವಾಗಿ ತೊರೆಯುವುದು ಅಸಾಧ್ಯವಾದ್ದರಿಂದ ಅವನಿಗೆ ಇತರ ವ್ಯಾಪಾರಗಳನ್ನು ತಡೆಯುವಂತೆ ವಿಧಿಸಲಾಗುವುದಿಲ್ಲ. ಸನ್ಯಾಸಿಗಂತೂ ಸನ್ಯಾಸವಿಧಿಯಿಂದಲೇ ಇತರ ವ್ಯಾಪಾರಗಳ ನಿವೃತ್ತಿ ತಾನಾಗಿಯೇ ಸಂಭವಿಸುತ್ತದೆ. ಅದಕ್ಕಾಗಿ ಪ್ರತ್ಯೇಕವಾದ ಪರಿಸಂಖ್ಯಾವಿಧಿ ಬೇಕಾಗಿಲ್ಲ. "ಬ್ರಹ್ಮನಿಷ್ಠನೇ ಅಮೃತವನ್ನು ಹೊಂದುತ್ತಾನೆ" ಎಂದು ಛಾಂದೋಗ್ಯದಲ್ಲಿ ಬೇರೆ ಎಲ್ಲಾ ಕರ್ಮಗಳನ್ನು ತೊರೆಯುವುದೇ ಮುಕ್ತಿಗೆ ಸಾಧನವೆಂದು ಹೇಳಲಾಗಿದೆ. ಸಂಪೂರ್ಣಕವಾದ ಸ್ಥಾಧಾತುವು ಸಮಾಪ್ತಿಯನ್ನು ತಿಳಿಸುವುದೆಂದು "ಅಗ್ನಿಷ್ಟೋಮ ಸಂಸ್ಥಾ" ಎಂಬಲ್ಲಿ ಕಂಡುಬಂದಿದೆ. ಅದರಂತೆ ಬ್ರಹ್ಮಸಂಸ್ಥಾಶಬ್ದದ ಅರ್ಥವು ಬ್ರಹ್ಮದಲ್ಲಿಯೇ ಕೊನೆಗಾಣುವುದರಿಂದ ಆ ಶಬ್ದವು ಬೇರೆ ಯಾವ ವ್ಯಾಪಾರವೂ ಇಲ್ಲದ ಸ್ಥಿತಿಯನ್ನು ತಿಳಿಸುತ್ತದೆ. "ಬೇರೆ ಎಲ್ಲಾ ಮಾತುಗಳನ್ನೂ ತೊರೆದು ಆತ್ಮನೊಬ್ಬನನ್ನೇ ತಿಳಿಯಿರಿ" ಎಂದು ಆಥರ್ವಣಿಕ ಶ್ರುತಿಯಲ್ಲಿ ಸ್ಪಷ್ಟವಾಗಿಯೇ ಎಲ್ಲಾ ವ್ಯಾಪಾರಗಳನ್ನೂ ನಿಷೇಧಿಸಲಾಗಿದೆ. "ಎದ್ದಾಗಿನಿಂದ ಮಲಗುವವರೆಗೂ ಎಲ್ಲಾ ಕಾಲವನ್ನೂ ವೇದಾಂತವಿಚಾರದಲ್ಲಿಯೇ ಕಳೆ" ಎಂದೂ ಹೇಳಲಾಗಿದೆ. ಬೇರೆ ವಿಧಿಯಿಂದ ಸಿದ್ಧವಾದ ವ್ಯಾಪಾರಾಂತರದ ನಿಷೇಧವನ್ನು ಮೂರುಬಗೆಯ ದೋಷಗಳ ಅಂಗೀಕಾರದ ಮೂಲಕವಾದರೂ "ಶ್ರೋತವ್ಯಃ" ಎಂಬಲ್ಲಿ ಒಪ್ಪುವುದು ಯುಕ್ತವಲ್ಲವಾದ್ದರಿಂದ ಕೈವಲ್ಯಚಂದ್ರೋದಯದಲ್ಲಿ ಪರಮಾರಾಧ್ಯರು ಇಲ್ಲಿ ಯಾವ ವಿಧಿಯೂ ಹೊಂದುವುದಿಲ್ಲವೆಂದು ಹೇಳಿರುವರು. ಹೀಗೆ 'ಶ್ರೋತವ್ಯಃ' ಎಂಬಲ್ಲಿ ಯಾವ ವಿಧಿಯೂ ಅನ್ವಯಿಸದಿರುವುದರಿಂದ ಶ್ರುತಿಯ ಐಕರೂಪ್ಯವನ್ನು ಸೂತ್ರದಲ್ಲಿ ವಿಧಿಸಲಿಕ್ಕಾಗಿ 'ಕರ್ತವ್ಯಾ' ಎಂಬ ಪದವನ್ನು ಸೇರಿಸಿಕೊಳ್ಳಬೇಕೆಂದು ಹೇಳುವುದೂ ಯುಕ್ತವಾಗುವುದಿಲ್ಲ.

**ಅಸ್ತು ವಾ ಶ್ರವಣವಿಧಿಃ. ತಥಾಪಿ ನ ಲಕ್ಷಣಾಧ್ಯಾಹಾರೌ. ಸರ್ವತ್ರ ಶ್ರುತಿಸೂತ್ರಯೋರೈಕರೂಪ್ಯಸ್ಯಾನುಪಪಾನಿಕತ್ವಾತ್. ತಸ್ಮಾದ್ವಿಷಯಪ್ರಯೋಜನಪ್ರತಿಪಾದನಾರ್ಥಮಿದಂ ಸೂತ್ರಂ, ಬ್ರಹ್ಮಜ್ಞಾನಸ್ಯ ಇಷ್ಯಮಾಣತಯಾ ಪ್ರಯೋಜನತ್ವಂ, ಬ್ರಹ್ಮಣಶ್ಚ ವಿಷಯತ್ವಂ**

ಶ್ರೌತಂ. ಇಷ್ಯಮಾಣಂ ಬ್ರಹ್ಮಜ್ಞಾನಂ ನ ವಿಚಾರಮಂತರೇಣೇತಿ ವಿಚಾರಃ ಕರ್ತವ್ಯ ಇತ್ಯುಪದಿಶ್ಯತೇ.

ಸದಾ ಬ್ರಹ್ಮಣೋ ನ ನಿರ್ವಿಶೇಷತ್ವಂ—"ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ" (ಶ್ವೇ. ೬-೮) ಇತಿ ಶ್ರುತಿದರ್ಶನಾತ್. ಜಿಜ್ಞಾಸ್ಯಬ್ರಹ್ಮಣಃ ಸದಾ ಮೂರ್ತಾಮೂರ್ತತ್ವಂ. "ದ್ವೇ ವಾವ ಬ್ರಹ್ಮಣೋ ರೂಪೇ" (ಬೃಹ. ೨-೩-೧) "ತಮಾದಿಮಧ್ಯಾಂತವಿಹೀನಮೇಕಂ ವಿಭುಂ ಚಿದಾನಂದಮರೂಪಮದ್ಭುತಂ," "ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ। ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್।" ಇತ್ಯಾದಿಷೂಭಯವ್ಯಪದೇಶಾತ್; ಶ್ರುತಿಸಂಕೋಚೇ ಮಾನಾಭಾವಾತ್.

ನನು—"ನಿರ್ವಿಶೇಷಬ್ರಹ್ಮಜ್ಞಾನಸ್ಯೈವ ತತ್ತ್ವಜ್ಞಾನತ್ವಾತ್ ತದೇವ ಪಶುಪಾಶಮೋಚಕಂ, ನತು ಸಗುಣಜ್ಞಾನಂ. ಧರ್ಮಾಣಾಂ ಬಾಧ್ಯತ್ವಾತ್" "ಅಥಾತ ಆದೇಶೋ ನೇತಿ ನೇತೀತಿ" (ಬೃ. ೨-೩-೬) "ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಮನಣ್ವಹ್ರಸ್ವಂ" (ಬೃ. ೩-೮-೮) ಇತ್ಯಾದಿನಾ ಸರ್ವಧರ್ಮನಿಷೇಧಶ್ರವಣಾತ್, "ಏಕಮೇವಾದ್ವಿತೀಯಂ" "ನೇಹ ನಾನಾಸ್ತಿ ಕಿಂಚನ" ಇತ್ಯಾದಿನಾಽದ್ವಿತೀಯತ್ವಬೋಧನಾತ್, "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಇತಿ ಶ್ರುತೌ ಗುಣನಿಷೇಧಾಚ್ಚ ಇತಿ ಚೇನ್ನ—ನೇತಿ ನೇತೀತಿ ವಾಕ್ಯಸ್ಯ ಪೂರ್ವವಾಕ್ಯಪ್ರಾಪ್ತಮೂರ್ತಾ ಮೂರ್ತೋಭಯಪ್ರಪಂಚನಿಷೇಧಪರತ್ವಾತ್, ಬ್ರಹ್ಮಧರ್ಮಾಣಾಮನಿಷಿದ್ಧತ್ವಾಚ್ಚ. ತಥಾ ಚ ಸೂತ್ರಂ—"ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ" ಇತಿ. ಅನ್ಯಥಾ ಆನಂದಾದೀನಾಮಪಿ ನಿಷೇಧಃ ಸ್ಯಾತ್. ಅದ್ವಿತೀಯಾದಿವಾಕ್ಯಾನಾಂ ಚ "ಸದೇವ ಸೋಮ್ಯೇದಮಗ್ರ ಆಸೀತ್" ಇತಿ ಪೂರ್ವವಾಕ್ಯೈಕವಾಕ್ಯತಯಾ ಸೃಷ್ಟೇಃ ಪೂರ್ವಕಾಲೇ ಅದ್ವಿತೀಯತ್ವಪರತ್ವಪ್ರತೀತೇಃ, ನಿರ್ಗುಣಶ್ರುತೇರಪಿ ಸತ್ತ್ವಾದಿಗುಣತ್ರಯಾಭಾವಪರತ್ವಾತ್, ಅನ್ಯಥಾ "ಯಸ್ಸರ್ವಜ್ಞಸ್ಸರ್ವವಿತ್" ಇತ್ಯಾದಿವಾಕ್ಯವಿರೋಧಾಚ್ಚ, ರೇಣುಕದಾರುಕಶಂಖಕರ್ಣಗೋಕರ್ಣಾದಿಪೂರ್ವಾಚಾರ್ಯಾಣಾಂವೈದಿಕಾನಾಂ ಸೃಷ್ಟೇಃ ಪೂರ್ವಕಾಲೇ ವ್ಯಕ್ತಾವ್ಯಕ್ತೋಭಯಪ್ರಪಂಚೋತ್ಪತ್ತೇರಭಾವಾದದ್ವೈತಬ್ರಹ್ಮವಾಕ್ಯಾನಿ ತದ್ವಿಷಯಾಣೀತಿ ತಾತ್ಪರ್ಯಂ. ತಥಾ

ಚ ಶ್ವೇತಾಶ್ವತರೇ –" ಯದಾ ತಮಸ್ತನ್ನ ದಿವಾ ನ ರಾತ್ರಿರ್ನ ಸನ್ನ ಚಾಸಚ್ಛಿವ ಏವ ಕೇವಲಃ," (ಶ್ವೇ. ೪-೧೮) ಅಥರ್ವಶಿರಸಿ ಚ—" ಅಹ ಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ನಾನ್ಯಃ ಕಶ್ಚಿ ನ್ಮತ್ತೋ ವ್ಯತಿರಿಕ್ತಃ," ಐತರೇಯಕೇ –" ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್ " ಇತಿ ಸರ್ವವೇದಾಂತೇಷು ಗತಿಸಾಮಾನ್ಯನ್ಯಾಯೇನ ಬ್ರಹ್ಮಣಿ ಸೃಷ್ಟಿಪೂರ್ವಕಾಲ ಏವಾದ್ವೈತತ್ವಮ ವಗಂತವ್ಯಂ, ಸೃಷ್ಟ್ಯುನ್ಮುಖಸ್ಯ ಬ್ರಹ್ಮಣಃ ಕಾಮನಯಾ ಬಹುಭಾವಶ್ರ ವಣಾತ್. ತಥಾ ಚ ಶ್ರುತಿಃ " ಸೋಽಕಾಮಯತ ಬಹು ಸ್ಯಾಂ ಪ್ರಜಾ ಯೇಯೇತಿ " ಇತಿ. ನಿರ್ಭೇದವಾಕ್ಯಾನ್ಯಪಿ ಸೃಷ್ಟೇಃ ಪೂರ್ವಕಾಲೇ ಪ್ರತಿಯೋಗಿಸಾಪೇಕ್ಷಭೇದಸ್ಯಾಭಾವಾತ್ತದ್ವಿಷಯಾಣ್ಯೇವ. ಅಭೇದವಾ ಕ್ಯಾನ್ಯಪಿ " ಐತದಾತ್ಮ್ಯಮಿದಂ ಸರ್ವಂ " " ಸರ್ವೋ ಹ್ಯೇಷ ರುದ್ರಃ " " ಆತ್ಮೈವೇದಂ ಸರ್ವಂ " ಇತ್ಯಾದೀನಿ ಸ್ವೇಚ್ಛಯಾ ಬಹುಭಾವಮಾಪ ನ್ನಸ್ಯ ಬ್ರಹ್ಮಣೋ ವಿಶ್ವಾಭೇದಪರಾಣಿ. ಕಾರ್ಯಕಾರಣಯೋರಭೇದಶ್ಚ ಮೃದಾದಿದೃಷ್ಟಾಂತೇನ, ಏಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಯಾ ಚ. " ಯೋ ಮಾಂ ವೇದ ಸ ಸರ್ವಾನ್ ದೇವಾನ್ ವೇದ " ಇತ್ಯ ಥರ್ವಶಿರಸಿ ಶಿವತತ್ತ್ವಜ್ಞಾನೇನ ಸರ್ವವಿಜ್ಞಾನಸಿದ್ಧಿರಿತಿ ಸಿದ್ಧಂ.

ಸೃಷ್ಟೇಃ ಪೂರ್ವಕಾಲೇ ಜಗದುಪಾದಾನಕಾರಣಪ್ರಕೃತೇಸ್ಸ ತ್ತ್ವಾತ್ ಕಥಮದ್ವೈತಮಿತಿ ಚೇನ್ನ, ತಸ್ಯಾ ಈಶ್ವರಶಕ್ತಿತ್ವೇನ ತದಭಿನ್ನ ತ್ವಾತ್. ಅಯಸ್ಕಾಂತಸ್ಯ ಲೋಹಾಕರ್ಷಣಶಕ್ತಿವತ್ ವಹ್ನೇರ್ದಾಹ ಶಕ್ತಿವಚ್ಚ ಪ್ರಕೃತಿಸ್ತತೋಽಭಿನ್ನಾ ದೃಶ್ಯತೇ. ತಥಾ ಚ ಶ್ರುತಿಃ—" ದೇವಾ ತ್ಮಶಕ್ತಿಂ ಸ್ವಗುಣೈರ್ನಿಗೂಢಾಂ" (ಶ್ವೇ. ೧-೩) ಇತಿ, " ಪರಾಽಸ್ಯ ಶಕ್ತಿ ರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ " ಇತಿ ಚ. ಪರಾಶಕ್ತಿಶ್ಚ ಶಿವಸ್ಯೈವಾಸಾಧಾರಣೀತಿ ಶ್ರುತ್ಯಾಗಮಪುರಾಣಾದಿಷು ಪ್ರಸಿದ್ಧಿಃ. ಅತೋ ಮುಮುಕ್ಷುಭಿರವೈದಿಕಜಗನ್ಮಿಥ್ಯಾತ್ವಾದ್ವೈತ ವಾದೋ ನಾಂಗೀಕರ್ತವ್ಯಃ.

ಶ್ರವಣವಿಧಿಯನ್ನು ಒಪ್ಪಿದರೂ 'ಕರ್ತವ್ಯ' ಎಂಬ ಪದವನ್ನು ಅಧ್ಯಾಹಾರಮಾಡಿ ಕೊಳ್ಳಬೇಕಾಗಿಲ್ಲ. ಎಲ್ಲಾ ಕಡೆಯಲ್ಲೂ ಶ್ರುತಿಸೂತ್ರಗಳಿಗೆ ಏಕರೂಪತೆಯನ್ನು ಊಹಿಸ ಬಹುದಾದ್ದರಿಂದ ತಾನಾಗಿಯೇ ಆ ಅರ್ಥ ಸೂತ್ರಕ್ಕೆ ಸಂಭವಿಸುತ್ತದೆ. ಆದ್ದರಿಂದ ವಿಷಯಪ್ರಯೋಜನಗಳನ್ನು ಪ್ರತಿಪಾದಿಸಲಿಕ್ಕಾಗಿ ಈ ಸೂತ್ರ ಬಂದಿದಿದ್ದೋ ಹೊರತು ಯಾವುದನ್ನೂ ವಿಧಿಸಲಿಕ್ಕಾಗಿ ಬಂದಿಲ್ಲ. ಬ್ರಹ್ಮಜ್ಞಾನವು ಎಲ್ಲರಿಗೂ ಇಷ್ಟವಾದ್ದರಿಂದ ಅದೇ ಪ್ರಯೋಜನವಾಗುತ್ತದೆ. ಬ್ರಹ್ಮವೇ ವಿಚಾರಕ್ಕೆ ವಿಷಯವಾಗುತ್ತದೆ.

ಜಿಜ್ಞಾಸ್ಯವಾದ ಬ್ರಹ್ಮದ ಜ್ಞಾನವು ವಿಚಾರವಿಲ್ಲದೆ ಸಾಧ್ಯವಾಗದಿರುವುದರಿಂದ ವಿಚಾರಮಾಡಲೇಬೇಕೆಂಬ ಅರ್ಥ ತಾನಾಗಿಯೇ ದೊರಕುತ್ತದೆಯಾದ್ದರಿಂದ 'ಕರ್ತವ್ಯಾ' ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕಾಗಿಲ್ಲ.

ಬ್ರಹ್ಮ ಎಂದೆಂದಿಗೂ ನಿರ್ವಿಶೇಷನಾಗಿರುವುದಿಲ್ಲ. "ಅವನಲ್ಲಿ ಶಕ್ತಿ ಸ್ವಾಭಾವಿಕವಾಗಿ ಜ್ಞಾನಕ್ರಿಯಾರೂಪದಿಂದ ವಿವಿಧವಾಗಿ ನೆಲಸಿರುವುದು" ಎಂದು ಶ್ವೇತಾಶ್ವತರಶ್ರುತಿಯಲ್ಲಿ ಹೇಳಿದೆ. ಜಿಜ್ಞಾಸ್ಯವಾದ ಬ್ರಹ್ಮ ಯಾವಾಗಲೂ ಮೂರ್ತ ಅಮೂರ್ತವೆಂದು ಎರಡು ಬಗೆಯಾಗಿದೆ. "ಆದಿ, ಮಧ್ಯ, ಅಂತ್ಯಗಳಲ್ಲದೆ ಚಿದಾನಂದನೆನಿಸಿ, ರೂಪವಿಲ್ಲದೆ ವಿಚಿತ್ರನೂ ಆದ ಪರಮಾತ್ಮನು" ಈ ಬಗೆಯ ಶ್ರುತಿಗಳಲ್ಲಿ ಅವನಿಗೆ ಎರಡು ರೂಪಗಳನ್ನು ಹೇಳಲಾಗಿದೆ. ಇಂತಹ ಶ್ರುತಿಗಳ ಅರ್ಥವನ್ನು ಸಂಕೋಚಪಡಿಸಲಿಕ್ಕೆ ಯಾವ ಪ್ರಮಾಣವೂ ಇಲ್ಲ. "ನಿರ್ವಿಶೇಷಬ್ರಹ್ಮದ ಜ್ಞಾನವೇ ತತ್ತ್ವಜ್ಞಾನವೆನಿಸುವುದರಿಂದ ಅದೇ ಪಶುಪಾಶವಿಮೋಚಕವಾಗಬಲ್ಲುದು. ಆದರೆ ಸಗುಣಬ್ರಹ್ಮದ ಜ್ಞಾನವು ಹಾಗೆ ಆಗಲಾರದು; ಯಾಕೆಂದರೆ, ಬ್ರಹ್ಮದ ಧರ್ಮಗಳೆಲ್ಲವೂ ಶ್ರುತಿಗಳಲ್ಲಿ ಬಾಧಿತವಾಗಿವೆ. ಬ್ರಹ್ಮವು "ಈರೀತಿಯಲ್ಲಿಲ್ಲ, ಆರೀತಿಯಲ್ಲಿಲ್ಲ" ವೆಂದೂ, "ಸ್ಥೂಲವಲ್ಲ, ಅಣುವಲ್ಲ, ಹ್ರಸ್ವವಲ್ಲ" ಎಂದು ಸ್ಥೂಲಾದಿ ಧರ್ಮಗಳಿಲ್ಲದ್ದೆಂದೂ ಶ್ರುತಿಯಲ್ಲಿ ಎಲ್ಲಾ ಧರ್ಮಗಳನ್ನೂ ನಿಷೇಧಿಸಲಾಗಿದೆ. "ಒಬ್ಬನೇ ಬ್ರಹ್ಮ ಅದ್ವಿತೀಯನಾಗಿದ್ದಾನೆ", "ಬ್ರಹ್ಮದಲ್ಲಿ ಬೇರೆ ಯಾವ ಬಗೆಯೂ ಇಲ್ಲ", "ಅವನಿಗೆ ಎರಡನೆಯ ವಸ್ತುವೇ ಇಲ್ಲ", ಎಂದೂ ಶ್ರುತಿಯಲ್ಲಿ ಹೇಳಲಾಗಿದೆ. "ಬ್ರಹ್ಮವು ನಿರ್ಗುಣವೂ, ಸಾಕ್ಷಿಯೂ, ಕೇವಲವೂ ಆದ ಚೇತನ" ಎಂಬ ಶ್ರುತಿ ಬ್ರಹ್ಮದಲ್ಲಿ ಎಲ್ಲಾ ಗುಣಗಳನ್ನೂ ನಿಷೇಧಿಸಿದೆ". ಹೀಗೆ ಆಕ್ಷೇಪ ಬಂದರೆ ಅದು ಯುಕ್ತವೆನಿಸುವುದಿಲ್ಲ; ಯಾಕೆಂದರೆ, "ನೇತಿನೇತಿ" ಎಂಬ ವಾಕ್ಯಗಳಿಗೆ ಪೂರ್ವವಾಕ್ಯಗಳಲ್ಲಿ ತಿಳಿದುಬಂದ ಮೂರ್ತ ಅಮೂರ್ತವೆಂಬ ಎರಡು ಬಗೆಗಳನ್ನು ನಿಷೇಧಿಸುವುದರಲ್ಲಿ ತಾತ್ಪರ್ಯವೇ ಹೊರತು ಬ್ರಹ್ಮದ ಎಲ್ಲಾ ಧರ್ಮಗಳನ್ನೂ ನಿಷೇಧಿಸುವುದರಲ್ಲಿ ತಾತ್ಪರ್ಯವಿಲ್ಲ. ಈ ಅರ್ಥವು "ಪ್ರಕೃತೈತಾವತ್ತ್ವಂ ಹಿ" ಎಂಬ ಸೂತ್ರದಲ್ಲಿ ಮುಂದೆ ಸ್ಪಷ್ಟಪಡುತ್ತದೆ. ಬ್ರಹ್ಮದಲ್ಲಿ ಯಾವ ಧರ್ಮವನ್ನೂ ಒಪ್ಪದಿದ್ದರೆ, ಆನಂದವೇ ಮೊದಲಾದ ಗುಣಗಳಿಗೂ ನಿಷೇಧವು ಸಂಭವಿಸೀತು. ಅದ್ವಿತೀಯ ವಾಕ್ಯಗಳಿಗಾದರೋ "ಇದೆಲ್ಲವೂ ಮೊದಲು ಸದ್ರೂಪವಾಗಿತ್ತು" ಎಂಬ ಹಿಂದಿನ ವಾಕ್ಯದೊಡನೇ ಒಂದೇ ವಾಕ್ಯವಾಗುವುದರಿಂದ "ಸೃಷ್ಟಿಗೆ ಮೊದಲು ಬ್ರಹ್ಮ ಅದ್ವಿತೀಯವಾಗಿತ್ತು" ಎಂಬ ಅರ್ಥವೇ ಸ್ಪಷ್ಟವಾಗುತ್ತದೆ. ನಿರ್ಗುಣಶ್ರುತಿಯೂ ಸರ್ವಜ್ಞತೆಯೇ ಮೊದಲಾದವುಗಳಲ್ಲಿ ಗುಣಶಬ್ದದ ಪ್ರಯೋಗವಿಲ್ಲದ್ದರಿಂದ ಸತ್ತ್ವವೇ ಮೊದಲಾದ ಪ್ರಕೃತಿಗುಣಗಳನ್ನು ನಿಷೇಧಿಸುತ್ತ, "ಅವು ಮೂರು ಗುಣಗಳೂ ಇಲ್ಲದ್ದು" ಎಂಬ ಅರ್ಥವನ್ನು ತಿಳಿಸುತ್ತದೆ. ಇಲ್ಲವಾದರೆ "ಯಃ ಸರ್ವಜ್ಞಃ" ಎಂಬ ವಾಕ್ಯದೊಡನೆ ನಿರ್ಗುಣಶ್ರುತಿಗೆ ವಿರೋಧವುಂಟಾಗುತ್ತದೆ. ರೇವಣಸಿದ್ಧ,

ಮರುಳಸಿದ್ಧ ಇವರೇ ಮೊದಲಾದ ಪೂರ್ವಾಚಾರ್ಯರು ಸೃಷ್ಟಿಗೆ ಮೊದಲು ವ್ಯಕ್ತ ಅವ್ಯಕ್ತವೆಂಬ ಎರಡು ಬಗಯ ಪ್ರಪಂಚವು ಹುಟ್ಟಿರಲಿಲ್ಲವಾದ್ದರಿಂದ ಅದ್ವೈತ ಬ್ರಹ್ಮವನ್ನು ತಿಳಿಸುವ ವಾಕ್ಯಗಳು ಆಕಾಲಕ್ಕೆ ಅನ್ವಯಿಸುವುದಾಗಿ ಹೇಳಿದ್ದಾರೆ. ಶ್ವೇತಾಶ್ವತರದಲ್ಲಿ "ಪ್ರಳಯದಲ್ಲಿ ಹಗಲು ರಾತ್ರಿ, ಸತ್ ಅಸತ್ ಎಂಬ ವೈವಿಧ್ಯ ಯಾವುದೂ ಇರಲಿಲ್ಲ. ಶಿವನೊಬ್ಬನೇ ಕೇವಲನಾಗಿದ್ದನು" ಎಂದೂ, ಅಥರ್ವ ಶಿರಸ್ಸಿನಲ್ಲಿ "ನಾನೊಬ್ಬನೇ ಮೊದಲೂ ಇದ್ದೆನು, ಈಗಲೂ ಇದ್ದೇನೆ, ಮುಂದೆಯೂ ಇರುವೆನು. ನನಗಿಂತ ಬೇರೆ ಯಾವ ವಸ್ತುವೂ ಇಲ್ಲ" ಎಂದೂ, "ಹಾಗೆಯೇ ಬೇರೆ ಯಾವುದೊಂದೂ ಇಲ್ಲ" ವೆಂದು ಇತರ ಎಲ್ಲಾ ವೇದಾಂತಗಳಲ್ಲೂ ಹೇಳಿರುವುದರಿಂದ "ಸೃಷ್ಟಿಗೆ ಮೊದಲು ಬ್ರಹ್ಮ ಅದ್ವೈತವಾಗಿತ್ತು" ಎಂಬುದು ಸ್ಪಷ್ಟವಾಗುತ್ತದೆ.

"ಸೃಷ್ಟಿಗೆ ಅಭಿಮುಖವಾದ ಬ್ರಹ್ಮವು ತನ್ನ ಇಚ್ಛೆಯಿಂದಲೇ ಅನೇಕ ಬಗೆ ಯಾಯಿತು" ಎಂದು ಶ್ರುತಿ ತಿಳಿಸಿದೆ. "ಅವನು ತಾನು ವಿಸ್ತಾರವಾಗುವೆನೆಂದು ಇಚ್ಛಿಸಿದನು". ಹೀಗೆ ಅಭೇದವಾಕ್ಯಗಳೂ ಸಹ ಸೃಷ್ಟಿಗೆ ಮೊದಲು ಬ್ರಹ್ಮಕ್ಕೆ ವಿರುದ್ಧವಾದ ಬೇರೊಂದು ವಸ್ತುವಿನ ಅಪೇಕ್ಷೆ ಇಲ್ಲದ್ದರಿಂದ ನೇರವಾಗಿ ಬ್ರಹ್ಮಕ್ಕೆ ಅನ್ವಯಿಸುತ್ತವೆ. "ಇದೆಲ್ಲವೂ ಒಂದೇ ಬಗೆಯಾಗಿದೆ", "ಎಲ್ಲವೂ ರುದ್ರನೇ", "ಇದೆಲ್ಲವೂ ಆತ್ಮನೇ", ಈ ಬಗೆಯ ಶ್ರುತಿವಾಕ್ಯಗಳು ಸ್ವೇಚ್ಛೆಯಿಂದ ವಿಸ್ತಾರವನ್ನು ಹೊಂದಿರುವ ಬ್ರಹ್ಮಕ್ಕೆ ವಿಶ್ವದೊಡನೆ ಅಭೇದವನ್ನು ತಿಳಿಸುತ್ತವೆ. ಮೃದ್ಘಟ ದೃಷ್ಟಾಂತದಿಂದ ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ, "ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದು" ಎಂಬ ಪ್ರತಿಜ್ಞೆಯಿಂದಲೂ "ನನ್ನನ್ನು ಯಾವನು ತಿಳಿ ಯುವನೋ, ಅವನು ಎಲ್ಲವನ್ನೂ ತಿಳಿಯುವನು" ಎಂಬ ಅಥರ್ವಶಿರಸ್ಸಿನ ವಾಕ್ಯದಿಂದಲೂ, 'ಶಿವತತ್ವವನ್ನು ತಿಳಿಯುವುದರಿಂದ ಸರ್ವವೂ ತಿಳಿಯುವುದು' ಎಂಬ ಅಂಶ ಸ್ಪಷ್ಟವಾಗುತ್ತದೆ. ಸೃಷ್ಟಿಗೆ ಮೊದಲು ಜಗತ್ತಿನ ಉಪಾದಾನವಾದ ಪ್ರಕೃತಿ ಇದ್ದುದರಿಂದ ಬ್ರಹ್ಮ ಹೇಗೆ ಅದ್ವೈತವಾಗಿತ್ತು? ಎಂದರೆ ಹಾಗಲ್ಲ, ಆ ಪ್ರಕೃತಿಯು ಈಶ್ವರನ ಶಕ್ತಿಯ ರೂಪದಿಂದ ಅವನಿಂದ ಅಭಿನ್ನವಾಗಿತ್ತು. ಅಯಸ್ಕಾಂತದಲ್ಲಿ ಲೋಹವನ್ನಾಕರ್ಷಿಸುವ ಶಕ್ತಿಯಂತೆ, ಬೆಂಕಿಯಲ್ಲಿ ದಾಹಕಶಕ್ತಿಯಂತೆ, ಅದು ಅವನಲ್ಲಿ ಅಭಿನ್ನವಾಗಿತ್ತು. "ಪರಬ್ರಹ್ಮದಲ್ಲಿ ಅವನ ರೂಪದಿಂದಲೇ ಶಕ್ತಿ ಇತ್ತು. ಅದು ತನ್ನ ಗುಣಗಳಿಂದ ಗುಪ್ತವಾಗಿತ್ತು" ಎಂದು ಶ್ರುತಿಯಲ್ಲಿಯೇ ಹೇಳಲಾಗಿದೆ. ಹೀಗೆ ಪರಾಶಕ್ತಿಯು ಪರಶಿವಬ್ರಹ್ಮನಲ್ಲಿ ಅಸಾಧಾರಣಧರ್ಮವೆಂದು ಶ್ರುತ್ಯಾಗಮ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಆದ್ದರಿಂದ ಮುಮುಕ್ಷುಗಳು ಅವೈದಿಕವೆನಿಸಿದ ಜಗನ್ಮಿಥ್ಯಾತ್ವವಾದವನ್ನು ಅಂಗೀಕರಿಸಬಾರದು.

**"ನೇತಿ ನೇತಿ" ಇತ್ಯಾದಿಶ್ರುತೀನಾಂ ನ ಕೇವಲಂ ನಿಷೇಧಮುಖೇನ ನಿರವಯವಬ್ರಹ್ಮಪರತ್ವಂ ಪ್ರನಿತ್ಯತ್ವಬೋಧಕತ್ವಂ. "ಸ್ಥಿರೈರಂಗೈಃ ಪುರು**

ರೂಪ ಉಗ್ರಃ" ಇತ್ಯಾದಿಶ್ರುತಿಷ್ವಪ್ರಾಕೃತಪರಮಶಿವಲೀಲಾದಿವ್ಯಮಂಗಳವಿಗ್ರಹಾಣಾಮಪಿ ನಿತ್ಯತ್ವಶ್ರವಣಾತ್, ಸದಾ ಶೇಷಶೇಷಿತ್ವವ್ಯವಸ್ಥಾಪಕಸಂಯುಕ್ತಾದ್ವೈತಪಾಂಚರಾತ್ರಾದಿವತ್ ನ ಚಾಂಗಾಂಗಿತ್ವೇನ ವಯಂ ಸಾವಯವತ್ವವಾದಿನಃ, ಜೀವವತ್ಸುಖದುಃಭೋಕ್ತೃತ್ವಪ್ರಸಂಗಾತ್, "ಆಕಾಶವತ್ಸರ್ವಗತಶ್ಚ ಪೂರ್ಣಃ" ಇತ್ಯಾದಿಶ್ರುತಿಶತಭಂಗಪ್ರಸಂಗಾಚ್ಚ. ಸದಾ ಘಟಪಟವನ್ನಾತ್ಯಂತಭೇದವಾದಿನಃ, "ಯೇನಾಶ್ರುತಂ ಶ್ರುತಂ ಭವತಿ" ಇತ್ಯಾದಿಪ್ರತಿಜ್ಞಾದೃಷ್ಟಾಂತಶ್ರುತಿಭಂಗಪ್ರಸಂಗಾತ್. ನ ಚ ರಜ್ಜುಸರ್ಪವದೇಕತರಮಿಥ್ಯಾತ್ವವಾದಿನಃ, "ಸತ್ಯಕಾಮಃ ಸತ್ಯಸಂಕಲ್ಪಃ" ಇತಿ ಶ್ರುತಿಸಿದ್ಧಸ್ವಾಭಾವಿಕಾನಂತಕಲ್ಯಾಣಗುಣಭಂಗಪ್ರಸಂಗಾತ್, "ಯತೋ ವಾ ಇಮಾನಿ ಭೂತಾನಿ ಜಾಯಂತೇ" (ತೈ. ಭೃಗು. ೧) ಇತ್ಯಾದಿ ಶ್ರುತಿವಿಹಿತಜಗಜ್ಜನ್ಮಾದಿಕಾರಣತ್ವಭಂಗಪ್ರಸಂಗಾತ್, ಏಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾವಿಧಾಯಕಶ್ರುತಿವಿರೋಧಾತ್, ಮೂರ್ತಾಮೂರ್ತೋಭಯಬ್ರಹ್ಮೋಪಾಸನಾವೈಫಲ್ಯಪ್ರಸಂಗಾಚ್ಚ. ತಸ್ಮಾದ್ವಯಂ ಸ್ವಾಭಾವಿಕಸರ್ವಶ್ರುತಿಸಮನ್ವಯಸಿದ್ಧಭೇದಾಭೇದವಾದಿನ ಇತಿ ರಾದ್ಧಾಂತಃ.

"ಜ್ಞಾಜ್ಞೌದ್ವಾವಜಾವೀಶಾನೀಶೌ" "ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ" ಇತ್ಯಾದಿಶ್ರುತಿಷ್ವದ್ವಿತೀಯಸ್ಯ ಶಿವಸ್ಯ ಪರಬ್ರಹ್ಮಣಃ ಸರ್ವಜ್ಞತ್ವಾದ್ಯಸಾಧಾರಣಧರ್ಮೋಪದೇಶಾಚ್ಛುದ್ಧಚಿದ್ರೂಪತ್ವಂ. ಸ್ವಾಭಾವಿಕಾವಿದ್ಯಾಪಾಶಬದ್ಧತ್ವಾಜ್ಜೀವಸ್ಯ ಕಿಂಚಿಜ್ಜ್ಞತ್ವಂ ಸರ್ವಾನುಭವಸಿದ್ಧಂ. ಮಹದಾದಿಜಗದುಪಾದಾನಕಾರಣತ್ವಾದ್ಗುಣತ್ರಯಾತ್ಮಕಪ್ರಕೃತೇರಚಿದ್ರೂಪತ್ವಂ. ಸರ್ವಾಧಿಷ್ಠಾನಸ್ಯ ಸರ್ವವ್ಯಾಪಕಸ್ಯ ಪರಮಶಿವಸ್ಯ ಕಥಂ ಮೂರ್ತಾಮೂರ್ತತ್ವಮಿತಿ ಚೇನ್ನ. ಮೂರ್ತತ್ವೇನ ಪವನಸ್ಯದಿಗೇಕದೇಶವರ್ತಿತ್ವಂ, ಅಮೂರ್ತತ್ವೇನ ನಿಖಿಲಲೋಕವ್ಯಾಪಕತ್ವಂ, ಪ್ರಧಾನಸ್ಯ ಮಹದಹಂಕಾರಕಾಲಾಕಾಶವಾಯುರೂಪೇಣಾಮೂರ್ತತ್ವಂ, ತೇಜಸ್ಸಲಿಲಪೃಥಿವೀರೂಪೇಣ ಮೂರ್ತತ್ವಂ ಚ ದೃಶ್ಯತ ಇತಿ, ಅನಂತಶಕ್ತಿವಿಶಿಷ್ಟಸ್ಯ ಅಘಟಿತಘಟನಾಸಮರ್ಥಸ್ಯ ಪರಮಶಿವಸ್ಯ ಕಿಮು ವಕ್ತವ್ಯಂ? "ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚ ವೋ ನಮೋ ನಮಃ" ಇತ್ಯಾದಿಬಹುಶ್ರುತಿವಾಕ್ಯದರ್ಶನಾತ್.

ಶಕ್ತೇಃ ಸಂಕೋಚಭಾವೇನ ಸೃಷ್ಟೇಃ ಪೂರ್ವಂ ಮಹೇಶ್ವರಃ ।
ನಿರಂಶೋ ನಿರ್ಗುಣಶ್ಚೇತಿ ವೇದಾಂತೇಷು ಪ್ರಗೀಯತೇ ॥
ಶಕ್ತೇರ್ವಿಕಾಸಭಾವೇನ ಹ್ಯನಂತಗುಣವಾನಿತಿ ।
ಪ್ರೋಚ್ಯತೇ ಭಗವಾನ್ ರುದ್ರಃ ಪಶುಪಾಶವಿಮೋಚಕಃ ॥

ಮೂರ್ತಾಮೂರ್ತಸ್ವರೂಪೇಣ ಯಥಾ ವಾಯುರ್ವಿರಾಜತೇ ।
ಸದಾ ಶಿವಸ್ತಥಾ ಭಾತಿ ಸರ್ವಾನುಗ್ರಹಕಾರಕಃ ॥
ಮೂರ್ತಾಮೂರ್ತಜಗದ್ರೂಪಾ ಯಥಾ ಮಾಯಾ ತಥಾ ಶಿವಃ ।
ಮೂರ್ತಾಮೂರ್ತಸ್ವರೂಪಂ ಸ್ಯಾದಿತಿ ವೇದಾಂತಡಿಂಡಿಮಃ ॥
ಏತದ್ವೇದಾಂತಹೃದಯಮಜ್ಞಾತ್ವಾ ಮೋಹಿತಾಃ ಪರೇ ।
ಶ್ರುತೇರಪಾರ್ಥಂ ಕುರ್ವಂತಿ ಲೋಕೇ ಪಂಡಿತಮಾನಿನಃ ॥

ಇತ್ಯಾದಿನಾ ಶೈವಾಗಮೇಷು ವೇದೈಕದೇಶಮತನಿಂದಾಶ್ರವಣಾನ್ನ ತದ್ವಿಷ್ಟತ್ವಪರಿಗ್ರಾಹ್ಯಂ.

'ನೇತಿ ನೇತಿ' ಎಂಬುವ ಶ್ರುತಿಗಳು ಕೇವಲ ನಿಷೇಧರೂಪವಾಗಿಯೇ ನಿರವಯವ ಬ್ರಹ್ಮವೊಂದನ್ನೇ ನಿತ್ಯವೆಂದು ಬೋಧಿಸಲಾರವು-ಯಾಕೆಂದರೆ, "ಸ್ಥಿರೇಭಿರಂಗೈಃ" ಎಂಬ ಶ್ರುತಿಯಲ್ಲಿ ಪರಮಶಿವನ ದಿವ್ಯಮಂಗಳವಿಗ್ರಹದ ಅವಯವಗಳನ್ನು ನಿತ್ಯವೆಂದು ತಿಳಿಸಲಾಗಿದೆ. ಆದ್ದರಿಂದ ಶೇಷಶೇಷಿಭಾವವನ್ನು ಹೇಳುವ ವಿಶಿಷ್ಟಾದ್ವೈತ ಮತ್ತು ಪಾಂಚರತ್ರಾಗಮಗಳಂತೆ ಅಂಗಾಂಗಿಭಾವದಿಂದ ಬ್ರಹ್ಮದ ಸಾವಯತ್ವವನ್ನು ಶ್ರುತಿಗಳು ಬೋಧಿಸುವುದಿಲ್ಲ; ಆದರೆ ನೇರವಾಗಿಯೇ ಬೋಧಿಸುತ್ತವೆ. ಹಾಗೆ ಅಂಗಾಂಗಿಭಾವದಿಂದ ಬ್ರಹ್ಮವನ್ನು ಸಾವಯವವೆಂದು ಶ್ರುತಿಗಳು ಬೋಧಿಸಿದರೆ, ಜೀವನಂತೆ ಬ್ರಹ್ಮವೂ ಸುಖದುಃಖಗಳನ್ನು ಅನುಭವಿಸಬೇಕಾಗುತ್ತದೆ. ಇದೂ ಅಲ್ಲದೆ 'ಆಕಾಶದಂತೆ ಸರ್ವಗತನೂ, ಪೂರ್ಣನೂ' ಇತ್ಯಾದಿ ಅನೇಕ ಶ್ರುತಿಗಳಿಗೆ ಭಂಗವುಂಟಾಗುತ್ತದೆ.

ಅದರಂತೆಯೇ ಬ್ರಹ್ಮಜಗತ್ತುಗಳಿಗೆ ಘಟಪಟಗಳಂತೆ ಅತ್ಯಂತಭೇದವನ್ನು ಹೇಳುವ ದ್ವೈತವಾದವೂ ಸಮಂಜಸವಲ್ಲ, ಯಾಕೆಂದರೆ 'ಯಾವುದನ್ನು ಕೇಳಿದರೆ ಕೇಳದಿದ್ದುದೂ ಕೇಳಿದಂತಾಗುತ್ತದೆಯೋ' ಎಂಬ ಪ್ರತಿಜ್ಞೆ ಮತ್ತು ದೃಷ್ಟಾಂತಗಳನ್ನು ತಿಳಿಸುವ ಶ್ರುತಿಗೆ ಭಂಗವುಂಟಾದೀತು. ಹಾಗೆಯೇ ರಜ್ಜುಸರ್ಪದಂತೆ ಜಗತ್ತಿನ ಯಾವೊಂದು ವಸ್ತುವನ್ನು ಸುಳ್ಳೆಂದು ಹೇಳುವ ಮತವೂ ಯುಕ್ತವಲ್ಲ. ಹಾಗೆ ಹೇಳಿದರೆ,'ಸತ್ಯಕಾಮಃ' ಇತ್ಯಾದಿ ಶ್ರುತಿಗಳಲ್ಲಿ ಪ್ರತಿಪಾದಿತವಾಗಿರುವ ಸ್ವಾಭಾವಿಕವಾದ ಅನಂತಕಲ್ಯಾಣಗುಣಗಳಿಗೆ ಭಂಗವುಂಟಾದೀತು. ಹಾಗೆಯೇ 'ಯತೋ ವಾ ಇಮಾನಿ ಭೂತಾನಿ ಜಾಯಂತೆ' ಎಂಬ ಶ್ರುತಿಯಲ್ಲಿ ಹೇಳಿರುವ ಜಗಜ್ಜನ್ಮಾದಿ ಕಾರಣತ್ವಕ್ಕೂ ಭಂಗವುಂಟಾದೀತು. ಏಕವಿಜ್ಞಾನದಿಂದ ಸರ್ವವಿಜ್ಞಾನವೂ ಆಗುವುದೆಂಬ ಶ್ರುತಿಗೂ ವಿರೋಧವುಂಟಾಗುವುದು. ಇದೂ ಅಲ್ಲದೆ ಮೂರ್ತ ಅಮೂರ್ತವೆಂಬ ಎರಡುಬಗೆಯ ಬ್ರಹ್ಮದ ಉಪಾಸನವೂ ವ್ಯರ್ಥವಾಗಬೇಕಾದೀತು. ಆದ್ದರಿಂದ ನಾವು ಸ್ವಾಭಾವಿಕವಾಗಿ ಸರ್ವಶ್ರುತಿಗಳಿಗೂ ಸಮನ್ವಯವನ್ನು ತಿಳಿಸುವ ಭೇದಾಭೇದವಾದವನ್ನು ಆಶ್ರಯಿಸಿದ್ದೇವೆ-ಎಂಬುದೇ ಸಿದ್ಧಾಂತಿಯ ನಿಸದ. "ಜ್ಞಾಜ್ಞೌ" ಇತ್ಯಾದಿ

ಶ್ರುತಿಗಳಲ್ಲಿ ಅದ್ವಿತೀಯ ಶಿವನಿಗೆ ಸರ್ವಜ್ಞತ್ವವೇ ಮೊದಲಾದ ಅಸಾಧಾರಣ ಧರ್ಮಗಳನ್ನು ಹೇಳಿರುವುದರಿಂದ ಅವನು ಶುದ್ಧಚಿದ್ರೂಪನಿರುವನು. ಅವಿದ್ಯೆ ಯೆಂಬ ಪಾಶದಿಂದ ಸಹಜವಾಗಿ ಬದ್ಧನಾಗಿರುವುದರಿಂದ ಜೀವನು ಜಡನೂ, ಚೇತನನೂ ಆಗಿರುವುದು ಸರ್ವಾನುಭವಸಿದ್ಧವಾಗಿದೆ.

ಬುದ್ಧಿಯೇ ಮೊದಲಾದ ಜಗತ್ತಿಗೆ ಉಪಾದಾನವಾದ್ದರಿಂದ ಗುಣಮಯವಾದ ಪ್ರಕೃತಿಯಂತೂ ಜಡವೇ ಆಗಿರುವುದು. ಆದರೆ ವಿಶ್ವಕ್ಕಾಧಾರನೂ ವಿಶ್ವವ್ಯಾಪಕನೂ ಆದ ಪರಮಶಿವನು ಹೇಗೆ ಮೂರ್ತನೂ, ಅಮೂರ್ತನೂ ಆದಾನು? ಎಂಬ ಪ್ರಶ್ನೆಗೆ ಈ ರೀತಿಯಲ್ಲಿ ಸಮಾಧಾನವನ್ನು ಹೇಳಬಹುದು. ಗಾಳಿ ಮೂರ್ತರೂಪವಾಗಿ ದಿಕ್ಕಿನ ಒಂದು ಕಡೆ ಮಾತ್ರವೇ ಇದ್ದರೂ ಅಮೂರ್ತವಾಗಿ ಸಮಸ್ತಲೋಕದಲ್ಲಿಯೂ ವ್ಯಾಪಿಸಿರುವುದನ್ನು ನಾವು ಕಂಡಿದ್ದೇವೆ. ಪ್ರಕೃತಿಯು ಬುದ್ಧಿ, ಅಹಂಕಾರ, ಕಾಲ, ವಾಯು ಈ ಬಗೆಯಾಗಿ ಪರಿಣಾಮಹೊಂದಿದ್ದರೂ ಅಮೂರ್ತವೂ ಆಗಿರುತ್ತದೆ. ನೀರು, ಭೂಮಿ, ತೇಜಸ್ಸು ಈ ರೂಪದಲ್ಲಿ ಪರಿಣಮಿಸಿ ಪ್ರಕೃತಿಯು ಮೂರ್ತವೂ ಆಗಿರುತ್ತದೆ. ಆದ್ದರಿಂದ ಅನಂತಶಕ್ತಿವಿಶಿಷ್ಟನೂ, ಅಘಟಿತಘಟನಾಸಮರ್ಥನೂ ಆದ ಪರಶಿವನ ಬಗ್ಗೆ ಬೇರೆ ಹೇಳುವುದೇನಿದೆ? "ವಿರೂಪರೂ, ವಿಶ್ವರೂಪರೂ ಆಗಿರುವ ಪರಮಶಿವನಿಗೆ ನಮಸ್ಕಾರ" ಎಂದು ಶ್ರುತಿಯಲ್ಲಿ ಪರಮಶಿವನ ಅನೇಕ ರೂಪಗಳನ್ನು ತಿಳಿಸಲಾಗಿದೆ. "ಪಶುಪಾಶವಿಮೋಚಕನೂ, ಭಕ್ತರ ದುಃಖನಿವಾರಕನೂ ಆಗಿ ರುದ್ರನೆನಿಸಿದ ಪರಶಿವನು ಸೃಷ್ಟಿಗೆ ಮೊದಲು ಶಕ್ತಿಸಂಕೋಚದಿಂದ ನಿರಂಶನೂ, ನಿರ್ಗುಣನೂ ಆಗಿರುವನೆಂದು ವೇದಾಂತದಲ್ಲಿ ನಿಶ್ಚಯಿಸಲಾಗಿದೆ. ಅದೇ ಶಕ್ತಿಯ ವಿಕಾಸದಿಂದ ಅವನೇ ಅನಂತಕಲ್ಯಾಣಗಳಿಂದ ಶೋಭಿಸುವನೆಂದೂ ಅಲ್ಲಿಯೇ ಹೇಳಲಾಗಿದೆ. ಗಾಳಿ ಹೇಗೆ ಮೂರ್ತವೂ, ಅಮೂರ್ತವೂ ಆಗಿ ಶೋಭಿಸುತ್ತದೆಯೋ ಹಾಗೆಯೇ ಸರ್ವಾನುಗ್ರಾಹಕನಾದ ಪರಮಶಿವನು ಮೂರ್ತನೂ, ಅಮೂರ್ತನೂ ಆಗಿರುತ್ತಾನೆ. ಪ್ರಕೃತಿ ಹೇಗೆ ಮೂರ್ತವೂ, ಅಮೂರ್ತವೂ ಆಗಿ ಜಗದ್ರೂಪದಿಂದ ಪರಿಣಮಿಸಿದೆಯೋ ಹಾಗೆಯೇ ಪರಮಶಿವನು ಮೂರ್ತನೂ, ಅಮೂರ್ತನೂ ಆಗಿರುವನು. ಇದು ವೇದಾಂತದ ಘೋಷಣೆ. ಇದೇ ವೇದಾಂತದ ಹೃದಯ. ಇದನ್ನು ತಿಳಿಯದೆ ಲೋಕದಲ್ಲಿ ಪಂಡಿತರೆಂಬ ಅಭಿಮಾನದಿಂದ ಮೋಹಗೊಂಡವರು ಶ್ರುತಿಗೆ ಅಪಾರ್ಥವನ್ನು ಕಲ್ಪಿಸುತ್ತಾರೆ" ಹೀಗೆ ಶೈವಾಗಮಗಳು ವೇದದ ಒಂದುಭಾಗವನ್ನು ಮಾತ್ರವೇ ಆಶ್ರಯಿಸಿಕೊಂಡು ಹೊರಟಿರುವ ಮತಗಳನ್ನು ನಿಂದಿಸಿವೆ. ಇಂತಹ ಮತಗಳು ವಿದ್ವಾಂಸರಿಗೆ ಗ್ರಾಹ್ಯವಾಗಲಾರವು.

**ನಚ ತಮಃಪ್ರಕಾಶವದ್ಭೇದಾಭೇದೋ ವಿರುದ್ಧಃ—ಕಿಂ ತದೇಕ ಕಾಲೇನ ವಾ? ದಿವಾರಾತ್ರವತ್ಕಾಲಭೇದೇನ ವಾ? ನಾದ್ಯಃ, ರೂಪ ಜಾತಿ–ಶಬ್ದಾರ್ಥ–ಗುಣಗುಣಿ–ಮಣಿಪ್ರಕಾಶಾದಿಷ್ವವಿರೋಧಿತ್ವೇನೈಕ**

ಕಾಲೇ ದರ್ಶನಾತ್, ದ್ವೈತಪ್ರಪಂಚೇ “ಘಟಸ್ಸನ್, ಘಟೋ ಭಾತಿ, ಘಟಃ ಪ್ರಿಯಃ” ಇತ್ಯತ್ರ ಸಾಮರೂಪಾಸ್ತಿಭಾತಿಪ್ರಿಯಾಣಾಮೇಕತ್ರ ದ್ಯೋತನಾತ್, ಚಿದಾನಂದಾದ್ಯಾತ್ಮಕಾದ್ವೈತಬ್ರಹ್ಮಣ್ಯನೃತಜಡದುಃಖ ಸ್ವಭಾವಪ್ರಕೃತೇಃ ಕಾರ್ಯಕಾರಣತ್ವೇನ ದರ್ಶನಾತ್, ತದಸ್ವೀಕಾರೇ “ನಹಿ ದೃಷ್ಟೇಽನುಪಪನ್ನಂ ನಾಮ” ಇತಿ ನ್ಯಾಯವಿರೋಧಾತ್, ಮರುಮರೀಚಿಕಾದಿವದ್ಭ್ರಾಂತಿಮಾತ್ರತ್ವೇ ಹ್ಯರ್ಥಸಿದ್ಧಿಕ್ರಿಯಾಸಿದ್ಧಿ ವಿರೋಧಾಚ್ಚ. ನ ದ್ವಿತೀಯಃ, “ದ್ವಾಸುಪರ್ಣಾ” ಇತ್ಯಾದಿ ಶ್ರುತ್ಯನು ಭವದರ್ಶನಾತ್. ಸಂಸಾರದಶಾಯಾಂ ಜೀವಬ್ರಹ್ಮಣೋರ್ಭೇದಃ; “ತತ್ತ್ವಮಸಿ” (ಛಾಂ. ೬-೮-೭) ಇತ್ಯಾದ್ಯನೇಕಶ್ರುತ್ಯನುಭವದರ್ಶನಾ ನ್ಮೋಕ್ಷದಶಾಯಾಮಭೇದಶ್ಚ ಯುಕ್ತ ಏವ. “ಸತ್ಯಕಾಮಃ” ಇತಿ ಶ್ರುತೌ ಶಿವಸ್ಯ ಪರಬ್ರಹ್ಮಣಃ ಸೃಷ್ಟಿಸ್ಥಿತಿಪ್ರಲಯತಿರೋಧಾನಾನುಗ್ರಹ ರೂಪಕಾಮಸ್ಯ ಸತ್ಯತ್ವೇನ ವ್ಯವಸ್ಥಾಪನಾತ್, ಐಂದ್ರಜಾಲಶುಕ್ತಿರಜತ ವತ್ಪ್ರಪಂಚಸ್ಯ ನ ವ್ಯವಹಾರಮಾತ್ರಸತ್ಯತ್ವಂ.

ನಚಾಧ್ಯಾಸೋಪಪತ್ತಿಃ, ಕಾರಣಸತ್ಯತ್ವೇನ ಕಾರ್ಯಸತ್ವತ್ವಮಿತಿ ನಿಯಮಾತ್. ನಿರ್ವಿಶೇಷಸ್ಯ ನಿಷ್ಕ್ರಿಯಸ್ಯ ಬ್ರಹ್ಮಣೋ ಜಿಜ್ಞಾಸ್ಯತ್ವಾ ಯೋಗಾತ್, ತತ್ರಾರೋಪಿತಪ್ರಧಾನಸತ್ತ್ವಗುಣಪ್ರತಿಬಿಂಬಿತಮಿಥ್ಯಾ ಭೂತೇಶ್ವರಶಬಳಬ್ರಹ್ಮಣೋ ಜಿಜ್ಞಾಸ್ಯತ್ವಂ ಯುಕ್ತಮಿತಿ ಚೇನ್ನ— “ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಂ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ” (ಕೇನ. ೧-೫) ಇತ್ಯಾದಿಶ್ರುತೇಃ ಪೂರ್ವವಾಕ್ಯೋಪಾತ್ತವಾಗಿಂದ್ರಿಯಾದ್ಯಗ್ರಾಹ್ಯತ್ವಪ್ರತಿಪಾದನದ್ವಾರಾ ಪ್ರಧಾನವಾಕ್ಯೈಕವಾಕ್ಯತಯಾ ಸರ್ವೇಂದ್ರಿಯಸಾಕ್ಷಿಭೂತಬ್ರಹ್ಮಸ್ತುತಿ ಪರತ್ವಾತ್, ಸಗುಣೋಪಾಸನಸ್ಯಾಪ್ಯುಪಕ್ರಮಾದಿಸಿದ್ಧತ್ವಾತ್, ಅನ್ಯಥಾ ಗಾರುಡಮಾಂತ್ರಿಕಯೋರಪ್ಯಸಂಭವಪ್ರಸಂಗಾಚ್ಚ.

ಸಗುಣಬ್ರಹ್ಮಣೀಶ್ವರತ್ವಾದಿಕಂ ಕಲ್ಪಿತಮಿತಿ ಚೇತ್–ತದ್ವಿಧಾಯಕ ಪ್ರಾತ್ಯಕ್ಷಿಕವೇದವೇದಾಂತೇತಿಹಾಸಪುರಾಣಾಗಮಾದೀನಾಂ ಭಕ್ತಿಕ್ರಿ ಯಾಜ್ಞಾನಶಾಸ್ತ್ರಾಣಾಂ ದತ್ತಜಲಾಂಜಲಿತ್ವಪ್ರಸಕ್ತಿಃ ಸ್ಯಾತ್. ಅಸತಿ ಕಲ್ಪಿತೇ ಆವಿದ್ಯಕೇಶ್ವರೇ ಕೃತ್ರಿಮಸಾಲಗ್ರಾಮ ಇವ ಭಕ್ತಿಶ್ರದ್ಧಾವಿ ಶ್ವಾಸಾಃ ಕಸ್ಯ ವಾ ಭವೇಯುಃ? ಕಥಂ ಕಲ್ಪಿತೇಶ್ವರೋ ನಾನಾವಿಧಕ ರ್ಮಾರಾಧಿತಸ್ಸನ್ ವಿಚಿತ್ರಫಲದಾತಾ ಭವೇತ್? “ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯದೇವೋ ಭವ” ಇತ್ಯಾದಿವಿಧಯೋಽಪಿ ಪರಿತ್ಯಕ್ತಾ ಇತ್ಯಸಂಭಾವ್ಯತ್ವಮಾಯಾತಂ. ಏವಂ ಚೈತನ್ಯೇ ಅಧ್ಯ

**ಸ್ತೇಶ್ವರತ್ವವಿಶಿಷ್ಟೇಶ್ವರಾದ್ರಜ್ಜುಸರ್ಪಾದಿವದ್ಭಯಮಪಿ ನ ಸ್ಯಾತ್. ಶ್ರೂಯತೇ ಚಾಪರೋಕ್ಷವಿದ್ಯಾವತಾಮಪಿ ಸೂರ್ಯಾದೀನಾಂ ಭಯಂ "ಭೀಷಾಽಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ" ಇತ್ಯಾದೌ. "ಜ್ಞಾಜ್ಞೌ ದ್ವಾವಜಾವೀಶಾನೀಶೌ" "ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ"** (ಮಹಾನಾ. ೧೦ ಅನು.) **ಇತ್ಯಾದಿಶ್ರುತಿಷು ಜೀವಬ್ರಹ್ಮಣೋರಜನ್ಯತ್ವದರ್ಶನೇನ ಕಲ್ಪಿತತ್ವವಾದೋ ಹ್ಯವೈದಿಕಃ.**

ಕತ್ತಲೆ ಬೆಳಕುಗಳಂತೆ ಭೇದಾಭೇದಗಳೆರಡಕ್ಕೂ ಯಾವ ವಿರೋಧವೂ ಸಂಭವಿಸುವುದಿಲ್ಲ. ಆದರೆ ಎರಡೂ ಒಂದೇಕಾಲದಲ್ಲಿ ಇರಬಲ್ಲವೋ ಅಥವಾ ಹಗಲು ರಾತ್ರಿಗಳಂತೆ ಬೇರೆಬೇರೆ ಕಾಲಗಳಲ್ಲಿ ಇರುತ್ತವೆಯೋ ಎಂಬ ಪ್ರಶ್ನೆ ಏಳುತ್ತದೆ. ಅವೆರಡೂ ಒಂದೇಕಾಲದಲ್ಲಿ ಇರಲಾರವು ಎಂಬುದು ಸರಿಯಲ್ಲ; ಯಾಕೆಂದರ ಗುಣಗುಣಿಗಳಲ್ಲೂ, ಶಬ್ದ ಅರ್ಥಗಳಲ್ಲೂ, ಜಾತಿ ವ್ಯಕ್ತಿಗಳಲ್ಲೂ ಭೇದಾಭೇದಗಳು ಏಕಕಾಲದಲ್ಲಿಯೇ ಇರುವುದಾಗಿ ಕಂಡುಬಂದಿದೆ. ಹೀಗೆಯೇ ಮಣಿ ಮತ್ತು ಅದರ ಪ್ರಕಾಶಗಳಲ್ಲಿ ಭೇದ ಅಭೇದಗಳೆರಡೂ ಪರಸ್ಪರವಿರೋಧವಿಲ್ಲದೆ ಒಂದೇಕಾಲದಲ್ಲಿ ಇರುವುದನ್ನು ನಾವು ಕಂಡಿದ್ದೇವೆ. ದ್ವೈತಪ್ರಪಂಚದಲ್ಲಿ 'ಘಟವಿದೆ, ಶೋಭಿಸುತ್ತದೆ, ಪ್ರಿಯವಾಗಿದೆ' ಎಂದು ನಾಮ, ರೂಪ, ಅಸ್ತಿ, ಭಾತಿ, ಪ್ರಿಯ ಇವೆಲ್ಲವೂ ಒಂದೇಕಡೆ ಒಂದೇಕಾಲದಲ್ಲಿ ಇರುವುದಾಗಿ ಸ್ಪಷ್ಟವಾಗಿ ಕಾಣಬರುತ್ತದೆ. ಚಿದಾನಂದಸ್ವರೂಪನೂ, ಅದ್ವೈತನೂ ಆದ ಬ್ರಹ್ಮಕ್ಕೂ, ಅನಿತ್ಯವೂ, ಜಡವೂ, ದುಃಖರೂಪವೂ ಆದ ಪ್ರಕೃತಿಗೂ ಕಾರ್ಯಕಾರಣಭಾವವೂ ಸ್ಪಷ್ಟವೇ ಆಗಿದೆ. ಅದನ್ನು ಒಪ್ಪದಿದ್ದರೆ, "ಕಣ್ಣಿಂದಲೇ ಸ್ಪಷ್ಟವಾಗಿ ಕಾಣುವಾಗ ಅನುಪಪತ್ತಿಗೆ ಅವಕಾಶವೇ ಇರಲಾರದು" ಎಂಬ ನ್ಯಾಯಕ್ಕೆ ವಿರೋಧವುಂಟಾಗುವುದು. ಮರುಮರೀಚಿಕೆಯಂತೆ ಭ್ರಾಂತಿಗವಕಾಶವಿಲ್ಲದಂತೆ ಜಗತ್ತಿನಿಂದ ಅರ್ಥಕ್ರಿಯಾಸಿದ್ಧಿಗಳಾಗುತ್ತಿರುವುದರಿಂದ ಇದಕ್ಕೆ ಭಂಗ ಉಂಟಾಗಬೇಕಾದೀತು. ಆದ್ದರಿಂದ ಒಂದೇ ಕಾಲದಲ್ಲಿ ಭೇದವೂ, ಅಭೇದವೂ ತೋರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಹಾಗೆಯೇ ಬೇರೆಕಾಲದಲ್ಲೂ ಭೇದಾಭೇದಗಳೆರಡೂ ತೋರಬಹುದು. ಯಾಕೆಂದರೆ 'ದ್ವಾ ಸುಪರ್ಣಾ' ಎಂಬ ಶ್ರುತಿಯಲ್ಲಿ ಜೀವೇಶ್ವರರು ಪ್ರತ್ಯೇಕವಾಗಿರುವರೆಂಬ ಅನುಭವವು ತೋರುವುದರಿಂದ ಸಂಸಾರದಶೆಯಲ್ಲಿ ಅವರಿಗೆ ಭೇದವು ಸ್ಪಷ್ಟವಾಗಿದೆ. 'ತತ್ತ್ವಮಸಿ' ಇತ್ಯಾದಿ ಅನೇಕ ಶ್ರುತಿಗಳಲ್ಲಿ ಅಭೇದದ ಅನುಭವ ಸ್ಪಷ್ಟವಾಗಿ ಕಾಣುವುದರಿಂದ, ಮೋಕ್ಷದಶೆಯಲ್ಲಿ ಅವರಿಬ್ಬರಿಗೂ ಅಭೇದವು ಯುಕ್ತವೇ ಆಗಿದೆ. 'ಸತ್ಯಕಾಮಃ' ಎಂಬ ಶ್ರುತಿಯಲ್ಲಿ ಸೃಷ್ಟಿ, ಸ್ಥಿತಿ, ಲಯ, ತಿರೋಧಾನ, ಅನುಗ್ರಹಗಳಲ್ಲಿ ನಿರತನಾದ ಪರಮಶಿವನು ಸತ್ಯನಾಗಿರುವನೆಂದು ವ್ಯವಸ್ಥೆಯಾಗಿರುವುದರಿಂದ, ಇಂದ್ರಜಾಲದಲ್ಲಿ ತೋರುವ ಶುಕ್ತಿ

ರಜತದಂತೆ ಪ್ರಪಂಚವು ವ್ಯವಹಾರಕಾಲದಲ್ಲಿ ಮಾತ್ರವೇ ಇರತಕ್ಕದ್ದೆಂದು ಹೇಳು ವುದು ಯುಕ್ತವಾಗುವುದಿಲ್ಲ.

ಬ್ರಹ್ಮದಲ್ಲಿ ಅಧ್ಯಾಸವೂ ಯುಕ್ತವೆನಿಸುವುದಿಲ್ಲ. ಯಾಕೆಂದರೆ ಕಾರಣ ಸತ್ಯವಾದಮೇಲೆ ಕಾರ್ಯವೂ ಸತ್ಯವಾಗಲೇಬೇಕೆಂಬ ನಿಯಮವಿದೆ. ನಿರ್ವಿಶೇಷವೂ, ನಿಷ್ಕ್ರಿಯವೂ ಆದ ಬ್ರಹ್ಮ ಜಿಜ್ಞಾಸ್ಯವಾಗಲಾರದಾದ್ದರಿಂದ ಆ ಬ್ರಹ್ಮದಲ್ಲಿ ಆರೋಪಿತ ವಾಗಿ ಪ್ರಧಾನದ ಸತ್ತ್ವಗುಣದಲ್ಲಿ ಪ್ರತಿಬಿಂಬಿಸಿದ ಈಶ್ವರನೇ ಜಿಜ್ಞಾಸ್ಯವಾಗಲಿ ಎಂದು ಹೇಳುವುದೂ ಸಮಂಜಸವಲ್ಲ. "ಯಾವುದನ್ನು ಮನಸ್ಸು ತಿಳಿಯಲಾ ರದೋ ಮನಸ್ಸನ್ನು ಯಾವುದು ತಿಳಿಯಬಲ್ಲುದೋ ಅದೇ ಬ್ರಹ್ಮವೆಂದು ತಿಳಿ. ನೀನು ಉಪಾಸನೆ ಮಾಡುವುದು ಯಾವುದಿದೆಯೋ ಅದು ಬ್ರಹ್ಮವಲ್ಲ" ಎಂಬ ಶ್ರುತಿಯೂ ಇರುವುದರಿಂದ, ಇಂದ್ರಿಯಗಳಿಗೆ ಗೋಚರವಾದರೂ ಪ್ರಧಾನವಾಕ್ಯ ದೊಡನೆ ಏಕರೂಪದಿಂದ ಹೊಂದಿಕೊಂಡು ಎಲ್ಲಾ ಇಂದ್ರಿಯಗಳಿಗೂ ಸಾಕ್ಷಿಯಾದ ಬ್ರಹ್ಮವನ್ನು ಸ್ತೋತ್ರಮಾಡುವುದೇ ಈ ಶ್ರುತಿಗೆ ತಾತ್ಪರ್ಯವಾದ್ದರಿಂದ, ಸಗುಣೋ ಪಾಸನೆಯೂ ಉಪಕ್ರಮಾದಿಗಳಿಂದ ಸಿದ್ಧವೇ ಆಗುತ್ತದೆ. ಹಾಗಿಲ್ಲದಿದ್ದರೆ ಗರುಡ ನಿಗೂ ಮಾಂತ್ರಿಕನಿಗೂ ಸಂಬಂಧವೇ ಇಲ್ಲದಂತಾಗುತ್ತದೆ. ಸಗುಣಬ್ರಹ್ಮನಾದ ಈಶ್ವರನನ್ನು ಕಲ್ಪಿತನೆಂದು ಹೇಳುವುದಾದರೆ, ಅವನ ವಿಧಿಸುವ ವೇದವೇದಾಂತ ಇತಿಹಾಸ ಪುರಾಣ ಆಗಮಗಳೆಲ್ಲಕ್ಕೂ, ಭಕ್ತಿ-ಜ್ಞಾನ-ಕ್ರಿಯೆಗಳನ್ನು ಬೋಧಿಸುವ ಶಾಸ್ತ್ರಗಳಿಗೂ ತಿಲಾಂಜಲಿ ಎರೆಯಬೇಕಾದೀತು. ಕಲ್ಪಿತನಾದ ಅವಿದ್ಯೇಶ್ವರನಲ್ಲಿ ಕೃತ್ರಿಮಸಾಲಗ್ರಾಮದಂತೆ ಯಾರಿಗೆ ತಾನೆ ಭಕ್ತಿವಿಶ್ವಾಸಗಳು ಹುಟ್ಟಿಯಾವು? ಆ ಕಲ್ಪಿತೇಶ್ವರನಾದರೋ ಅನೇಕ ಬಗೆಯ ಕರ್ಮಗಳಿಂದ ಪೂಜಿತನಾದರೂ ಹೇಗೆ ತಾನೆ ವಿಚಿತ್ರವಾದ ಫಲಗಳನ್ನು ಅನುಗ್ರಹಿಸಿಯಾನು? ಇದೂ ಅಲ್ಲದೆ "ಮಾತೃದೇವೋ ಭವ, ಪಿತೃದೇವೋ ಭವ" ಇವೇ ಮೊದಲಾದ ವಿಧಿಗಳನ್ನೂ ಸಹ ತೊರೆಯ ಬೇಕಾದೀತು? ಹೀಗಾಗಿ ಎಲ್ಲಾ ವ್ಯವಹಾರಗಳೂ ನಿಂತುಹೋಗಬೇಕಾದೀತು? ಹೀಗೆ ಚೈತನ್ಯದಲ್ಲಿ ಅಧ್ಯಸ್ತನಾದ ಈಶ್ವರನಿಂದ ರಜ್ಜು ಸರ್ಪದಂತೆ ಯಾರಿಗೂ ಭಯವೂ ಉಂಟಾಗದೇ ಹೋದೀತು. "ಯಾವನ ಭಯದಿಂದ ಗಾಳಿ ಬೀಸುತ್ತದೆಯೋ" ಎಂಬ ಶ್ರುತಿಗಳಲ್ಲಿ ಅಪರೋಕ್ಷಜ್ಞಾನಿಗಳೆನಿಸಿದ ಸೂರ್ಯನೇ ಮೊದಲಾದ ದೇವತೆಗಳೂ ಭಯಪಡುವುದನ್ನು ನಾವು ಕೇಳಿದ್ದೇವೆ. "ಸರ್ವಜ್ಞನೂ ಅಜ್ಞನೂ, ಈಶನೂ ಅನೀಶನೂ ಆದ ಇಬ್ಬರು ಅಜರಿದ್ದಾರೆ", "ಅಜನಾದ ಒಬ್ಬನು ಈ ಪ್ರಕೃತಿಯನ್ನು ಭೋಗಿಸುತ್ತಾನೆ, ಮತ್ತೊಬ್ಬ ಅಜನಂತೂ ಇದರ ಭೋಗವನ್ನರಿತು ಇದನ್ನು ಬಿಡುತ್ತಾನೆ" ಈ ಬಗೆಯ ಶ್ರುತಿಗಳಲ್ಲಿ ಜೀವಬ್ರಹ್ಮರಿಬ್ಬರನ್ನೂ ಅಜರೆಂದು ಹೇಳಿರು ವುದರಿಂದ ಅವರು ಕಲ್ಪಿತರೆಂಬ ವಾದವು ಅವೈದಿಕವೆನಿಸುತ್ತದೆ.

**ಕಿಂಚ – ನಿರ್ವಿಶೇಷಬ್ರಹ್ಮಣಿ ಕಿಂ ಪ್ರಮಾಣಂ ಪ್ರವರ್ತತೇ? ನ ತಾವಚ್ಛಬ್ದಃ, ಶಬ್ದಸ್ಯ ಶಕ್ಯತಾವಚ್ಛೇದಕಲಕ್ಷ್ಯತಾವಚ್ಛೇದಕಪುರಸ್ಸರಂ**

ಶಕ್ತಿಲಕ್ಷಣಯೋಃ ಪ್ರವೃತ್ತೇಃ. ನಾಪ್ಯನುಮಾನಂ, ಅನುಮಾನಸ್ಯ ಪಕ್ಷತಾವಚ್ಛೇದಕವ್ಯಾಪಕತಾವಚ್ಛೇದಕಾದಿಪುರಸ್ಸರಂ ಪ್ರವೃತ್ತೇಃ. ತದನುಕೂಲತರ್ಕಾಣಾಂ ಚ ವ್ಯಾಪ್ತಿಮೂಲತ್ವೇನ ವ್ಯಾಪ್ಯತಾವಚ್ಛೇದಕಾದಿಪುರಸ್ಸರಂ ಪ್ರವೃತ್ತೇಃ. ನಿರ್ವಿಶೇಷಜ್ಞಾನಸ್ಯ ಸಂಶಯವಿಪರ್ಯಯಾದಿನಿವರ್ತಕತ್ವಾಭಾವಾತ್. ಸಮಾನಪ್ರಕಾರಕಸಮಾನವಿಷಯಕನಿಶ್ಚಯಸ್ಯೈವ ವಿಪರ್ಯಯಾದಿನಿವರ್ತಕತ್ವಾತ್. ಅನ್ಯಥಾ ದ್ರವ್ಯತ್ವೇನ ಘಟನಿಶ್ಚಯೇ "ಗೇಹೇ ಘಟೋಽಸ್ತಿ ನ ವಾ" ಇತಿ ಸಂಶಯೋ ನ ಸ್ಯಾತ್.

"ಈಶ್ವರಃ ಸ್ವನಿಷ್ಠಬಾಧ್ಯಧರ್ಮಾತಿರಿಕ್ತಧರ್ಮಾಶ್ರಯಃ? ಸ್ವಜ್ಞಾನಾಬಾಧ್ಯಧರ್ಮಾಶ್ರಯೋ ವಾ? ಧರ್ಮಿತ್ವಾತ್-ಘಟವತ್, ಆತ್ಮತ್ವಾತ್-ದೇವದತ್ತವತ್" "ಸತ್ಯಕಾಮತ್ವಾದಯಃ ನ ಬ್ರಹ್ಮಸಾಕ್ಷಾತ್ಕಾರಬಾಧ್ಯಾಃ, ಈಶ್ವರೇತರಾವೃತ್ತಿತ್ವಾತ್-ಈಶ್ವರತ್ವವತ್" ನ ಚಾಪ್ರಯೋಜಕತ್ವಂ, ನಿರ್ಧರ್ಮಕೇ ವಸ್ತುನಿ ಸಾಧಕಪ್ರಮಾಣಸತ್ತ್ವಾಸತ್ತ್ವಾಭ್ಯಾಂ "ಮಮ ಮಾತಾ ವಂಧ್ಯಾ" ಇತಿವದ್ವಚನವ್ಯಾಘಾತೇನ ಸರ್ವವ್ಯವಹಾರೋಚ್ಛೇದಪ್ರಸಂಗಸ್ಯೈವ ವಿಪಕ್ಷಬಾಧಕತ್ವಾತ್.

"ಆತ್ಮಾ ವಾ ಅರೇ ದ್ರಷ್ಟವ್ಯಃ" ಇತಿ ಶ್ರುತೌ ಪರಮಾತ್ಮಸಾಕ್ಷಾತ್ಕಾರಫಲಮನೂದ್ಯ ತತ್ಸಾಧನತ್ವೇನ ಶ್ರವಣಂ ವಿಧೀಯತ ಇತ್ಯನುಪಪನ್ನಂ. "ಶ್ರು-ಶ್ರವಣೇ-" ಇತಿ ಧಾತೋಶ್ಶಬ್ದಕರ್ಮತಯಾ ಶ್ರಾವಣಜ್ಞಾನಾರ್ಥಕತ್ವಾತ್ತಸ್ಯ ಚಾವಿಧೇಯತ್ವಾದಧ್ಯಯನವಿಧ್ಯವಚ್ಛಿನ್ನವೇದಾಧ್ಯಯನಾದೇವ ಶ್ರಾವಣಜ್ಞಾನಸ್ಯ ವೃತ್ತತ್ವಾತ್. ನಚ-"ವೇದಾರ್ಥಂ ಶೃಣೋತಿ" ಇತ್ಯಾದಿಪ್ರಯೋಗದರ್ಶನಾತ್ ಅರ್ಥಜ್ಞಾನೇಽಪಿ ಧಾತೋಶ್ಶಕ್ತಿರಿತಿ ವಾಚ್ಯಂ. ತತ್ರ ಲಕ್ಷಣಯೈವೋಪಪತ್ತೌ ಶಕ್ತಿದ್ವಯಾಕಲ್ಪನಾತ್. "ವೀಣಾನಾದಂ ಶೃಣೋತಿ" ಇತ್ಯಾದಾವರ್ಥಜ್ಞಾನಾಭಾವೇನ ವೈಪರೀತ್ಯಶಂಕಾನವಕಾಶಾತ್.

ಅಸ್ತು ವಾ ಅರ್ಥಜ್ಞಾನೇಽಪಿ ಶಕ್ತಿಃ—ತಥಾಪಿ ತದಪಿಚ ನ ವಿಧೇಯಂ-ಅಧೀತಸಾಂಗಾಧ್ಯಯನಸ್ಯ ವಿದಿತಪದಪದಾರ್ಥಸಂಗತೇಃ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತ್ಯಾದಿವಾಕ್ಯೇನೈವ ಜ್ಞಾತತ್ವಾತ್.

ನನು—"ಆಪಾತಪ್ರತಿಪತ್ತಿಸ್ಸಾ, ಅವಧಾರಣಾತ್ಮಕಂ ತು ಜ್ಞಾನಮಧ್ಯಯನಮಾತ್ರಾನ್ನ ಪ್ರಾಪ್ಯತೇ" ಇತಿ ಚೇನ್ನ—ತಸ್ಯಾಪಿ ಭ್ರಮರಕೀಟವತ್ ಸ್ವಾಭಾವಿಕಾವಿದ್ಯಾನಿವೃತ್ತಿಪೂರ್ವಕಗುರುಕರುಣಾಕಟಾಕ್ಷಪ್ರಾಪ್ತತ್ವೇನ ವಿಧ್ಯನರ್ಹತ್ವಾತ್. ನಚ ಅತ ಏವ ವಿಚಾರಃ ಶ್ರವಣಶಬ್ದೇನ ವಿವಕ್ಷಿತ ಇತಿ ವಾಚ್ಯಂ—ವಿಧೌ ಲಕ್ಷಣಾಪತ್ತೇಃ.

ಅತ್ರಾಹುಃ—" ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ " ಇತ್ಯಾರಭ್ಯ "ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ " ಇತ್ಯಂತೇನ ಆತ್ಮನ ಏವ ನಿರತಿಶಯಸುಖಸ್ವರೂಪತ್ವೇನ ಪರಮಪುರುಷಾರ್ಥತ್ವಮುಕ್ತ್ವಾ " ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತ ಇದಂ ಸರ್ವಂ ವಿದಿತಂ " " ಏತಾವದರೇ ಖಲ್ವಮೃತತ್ವಂ " ಇತ್ಯುಪಸಂಹಾರಾದಾತ್ಮಜ್ಞಾನಮೇವ ತತ್ಪ್ರಾಪ್ತ್ಯುಪಾಯ ಇತಿ ನಿಶ್ಚೀಯತೇ. ತಥಾಚ ತಾದೃಶಮಾತ್ಮಜ್ಞಾನಂ " ದ್ರಷ್ಟವ್ಯಃ " ಇತ್ಯನೂದ್ಯ ತತ್ಸಾಧನಾಕಾಂಕ್ಷಾಯಾಂ " ಶ್ರೋತವ್ಯಃ " ಇತ್ಯಾದಿನಾ ಸಾಧನವಿಧಿರಿತಿ ನಿಶ್ಚೀಯತೇ. ಶಾಬ್ದಜ್ಞಾನೇ ಹ್ಯಸಾಧಾರಣಕಾರಣತಯಾ ವಿಚಾರ ಏವ ಲಕ್ಷಣಯಾ ವಿಧೇಯೋ ಹ್ಯವಗಮ್ಯತೇ. " ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ " " ನಾವೇದವಿನ್ಮನುತೇ ತಂ ಬೃಹನ್ತಂ " " ನೈಷಾ ತರ್ಕೇಣ ಮತಿರಾಪನೇಯಾ" ಇತ್ಯಾದಿನಾ ಶ್ರುತಿಮಾತ್ರವೇದ್ಯತ್ವೇನ ಪ್ರತಿಪಾದಿತೇ ಬ್ರಹ್ಮಣಿ ಮಾನಾಂತರಾಭಾವಾತ್, ' ದ್ರಷ್ಟವ್ಯ ' ಇತ್ಯತ್ರ ದರ್ಶನಸಾಧನಾಕಾಂಕ್ಷಾಯಾಂ ವೇದಾಂತವಾಕ್ಯಮೇವ ತತ್ಸಾಧನಂ. ತಚ್ಚಾವಿಚಾರಿತಂ ನ ನಿಶ್ಚಯಾಧಾಯಕಂ. ಮನನನಿದಿಧ್ಯಾಸನಸಹಕೃತಂ ವಿಚಾರಿತವೇದಾಂತವಾಕ್ಯಮಾತ್ಮಸಾಕ್ಷಾತ್ಕಾರಹೇತುರಿತ್ಯಯಮರ್ಥಃ ಸಂಪದ್ಯತೇ.

ಇದೂ ಅಲ್ಲದೆ ನಿರ್ವಿಶೇಷಬ್ರಹ್ಮವಿರುವುದರಲ್ಲಿ ಪ್ರಮಾಣವೇನು ? ಒಂದು ಶಬ್ದಕ್ಕೆ ಶಕ್ಯತಾವಚ್ಛೇದಕ ಧರ್ಮವನ್ನು ಅನುಸರಿಸಿ ಶಕ್ತಿಯೂ, ಲಕ್ಷ್ಯತಾವಚ್ಛೇದಕ ಧರ್ಮವನ್ನನುಸರಿಸಿ ಲಕ್ಷಣವೂ ಪ್ರವರ್ತಿಸುತ್ತವೆ. ಆದ್ದರಿಂದ ನಿರ್ವಿಶೇಷಬ್ರಹ್ಮದ ಬಗ್ಗೆ ಶಬ್ದಪ್ರಮಾಣ ಹೊಂದುವುದಿಲ್ಲ. ಅನುಮಾನವೂ ವ್ಯಾಪ್ತಿಯನ್ನು ಮುಂದಿಟ್ಟುಕೊಂಡೇ ಪ್ರವರ್ತಿಸುವುದರಿಂದ ಅದೂ ನಿರ್ವಿಶೇಷಬ್ರಹ್ಮದ ಬಗ್ಗೆ ಪ್ರಮಾಣವಾಗಲಾರದು. ಇದೂ ಅಲ್ಲದೆ ನಿರ್ವಿಶೇಷವಸ್ತುವಿನ ಜ್ಞಾನವು ಭ್ರಾಂತಿಸಂಶಯಗಳನ್ನು ತಡೆಯಲಾರದು. ಸಮಾನವಾದ ಪ್ರಕಾರ ಮತ್ತು ವಿಷಯಗಳಿರುವ ನಿಶ್ಚಯವೇ ಭ್ರಾಂತಿಸಂಶಯಗಳನ್ನು ತಡೆಯಬಲ್ಲದು ; ಇಲ್ಲವಾದರೆ ಘಟವನ್ನು ದ್ರವ್ಯವೆಂದು ನಿಶ್ಚಯಿಸಿದಾಗ ಮನೆಯಲ್ಲಿ ಘಟ ಇದೆಯೋ ಇಲ್ಲವೇ ಎಂಬ ಸಂಶಯ ಬರದೇಹೋಗಬೇಕಾದೀತು. ಘಟವನ್ನು ಘಟವೆಂದು ನಿಶ್ಚಯಿಸಿದಾಗಲೇ ಘಟದ ಬಗ್ಗೆ ಸಂಶಯವುಂಟಾಗುವುದಿಲ್ಲ. ಆದರೆ ಅದನ್ನು ಒಂದು ದ್ರವ್ಯವೆಂದು ನಿಶ್ಚಯಿಸಿದಾಗ, ಅದರ ಬಗ್ಗೆ ಬರಬೇಕಾದ ಸಂಶಯ ಬರದೇಹೋಗಬೇಕಾದೀತು. ಈಶ್ವರನು ಘಟದಂತೆ ಧರ್ಮವಾದ್ದರಿಂದಲೂ, ದೇವದತ್ತನಂತೆ ಧರ್ಮಿಯಾದ್ದರಿಂದಲೂ, ತನ್ನಲ್ಲಿರುವ ಬಾಹ್ಯಧರ್ಮಕ್ಕಿಂತ ಬೇರೆ ಧರ್ಮಕ್ಕೆ ಆಶ್ರಯನಾಗಿ, ತನ್ನ ಜ್ಞಾನದಿಂದ ಬಾಧಿತವಾಗುವ ಧರ್ಮಕ್ಕೆ ಆಶ್ರಯನಾಗುತ್ತಾನೆ. ಈಶ್ವರನಲ್ಲಿ ಮಾತ್ರವೇ

ಈಶ್ವರತ್ವವು ಹೇಗೆ ಇರುವುದೋ ಹಾಗೆ ಸತ್ಯಕಾಮವೇ ಮೊದಲಾದ ಧರ್ಮಗಳು ಅವನಲ್ಲದೆ ಬೇರೆ ಕಡೆ ಇರುವುದಿಲ್ಲ. ಧರ್ಮವಿಲ್ಲದ ವಸ್ತುವನ್ನು ಸಾಧಿಸಲು ಪ್ರಮಾಣವಿದ್ದರೂ ಅಥವಾ ಇಲ್ಲದಿದ್ದರೂ ಈ ಎರಡು ರೀತಿಯಿಂದಲೂ ನಿರ್ಧರ್ಮಕವಾದ ವಸ್ತುವಿದೆಯೆಂದು ಹೇಳುವ ಮಾತು 'ನನ್ನ ತಾಯಿ ಬಂಜೆ' ಎಂಬ ಮಾತಿನಂತೆ ವಿರುದ್ಧವೇ ಆಗುವುದರಿಂದ ಎಲ್ಲಾ ವ್ಯವಹಾರಗಳೂ ನಿಂತೇಹೋಗಬೇಕಾದೀತು. ಆದ್ದರಿಂದ ವಸ್ತುವೆಂದಿಗೂ ನಿರ್ಧರ್ಮಕವಾಗಲಾರದು; ಅದು ಧರ್ಮವಿಶಿಷ್ಟವೇ ಆಗಿರುತ್ತದೆ.

'ಆತ್ಮಾವಾರೇ ದ್ರಷ್ಟವ್ಯಃ' ಎಂಬ ಶ್ರುತಿಯಲ್ಲಿ ಪರಮಾತ್ಮಸಾಕ್ಷಾತ್ಕಾರ ರೂಪವಾದ ಫಲವನ್ನು ಅನುಸರಿಸಿ ಅದಕ್ಕೆ ಸಾಧನವಾಗಿ ಶ್ರವಣವನ್ನು ಹೇಳಲಾಗಿದೆ ಎಂಬುದು ಸಮಂಜಸವಲ್ಲ. ಶ್ರುಧಾತುವಿಗೆ ಶಬ್ದವೇ ಕರ್ಮವಾದುದರಿಂದ ಅದಕ್ಕೆ ಶ್ರವಣಜ್ಞಾನವೇ ಅರ್ಥವೆನಿಸಿ ಅದೇ ವಿಧೇಯವೂ ಆಗಿದೆ. ಅಧ್ಯಯನವಿಧಿಯಿಂದ ಸಂಭವಿಸುವ ವೇದಾಧ್ಯಯನದಿಂದಲೇ ಶ್ರವಣವೂ ಸಂಭವಿಸುವುದರಿಂದ ಈ ಶ್ರುತಿಯಲ್ಲಿ ಅದಕ್ಕೆ ವಿಧಿಯನ್ನು ಹೇಳಲಾಗುವುದಿಲ್ಲ. "ವೇದಾರ್ಥವನ್ನು ಕೇಳುತ್ತೇನೆ" ಎಂದು ಪ್ರಯೋಗವಿರುವುದರಿಂದ ಅರ್ಥಜ್ಞಾನದಲ್ಲಿಯೆ ಧಾತುವಿಗೆ ಶಕ್ತಿ ಇದೆಯೆಂದು ಹೇಳುವುದೂ ಯುಕ್ತವಲ್ಲ; ಯಾಕೆಂದರೆ ಅಲ್ಲಿ ಲಕ್ಷಣೆಯಿಂದಲೇ ಹೊಂದಿಕೆಯಾಗುವುದಾದರೆ, ಅರ್ಥಜ್ಞಾನ ಮತ್ತು ಶ್ರವಣ ಇವೆರಡರಲ್ಲೂ ಶಕ್ತಿಯನ್ನು ಕಲ್ಪಿಸುವುದು ಯುಕ್ತವಾಗುವುದಿಲ್ಲ. "ವೀಣಾನಾದವನ್ನು ಕೇಳುತ್ತೇನೆ" ಎಂಬಲ್ಲಿ ಅರ್ಥಕ್ಕೆ ಪ್ರಸಕ್ತಿ ಇಲ್ಲವಾದ್ದರಿಂದ ಯಾವ ವಿರೋಧಕ್ಕೂ ಅವಕಾಶವಿಲ್ಲ. ಅರ್ಥಜ್ಞಾನದಲ್ಲಿ ಶಕ್ತಿಯನ್ನು ಒಪ್ಪಿದರೂ, ಅದಕ್ಕೆ ವಿಧಿ ಬರುವಂತಿಲ್ಲ. ವೇದವನ್ನು ಸಾಂಗವಾಗಿ ಓದಿದವನಿಗೆ ಪದಪದಾರ್ಥಗಳ ಜ್ಞಾನವುಂಟಾಗುವುದರಿಂದ 'ಸತ್ಯಂ ಜ್ಞಾನಂ' ಮೊದಲಾದ ಶ್ರುತಿವಾಕ್ಯಗಳಿಂದಲೇ ಅರ್ಥವು ಸ್ವತಃ ತಿಳಿದುಬರುವುದು. ಆದ್ದರಿಂದ ಅದಕ್ಕೆ ವಿಧಿ ಬೇಕಾಗಿಲ್ಲ. ಅರ್ಥಜ್ಞಾನ ಉಂಟಾದರೂ ಅದು ನಿಷ್ಕೃಷ್ಟವಾದ ರೀತಿಯಲ್ಲಿ ಬರುವುದು ಸಾಧ್ಯವಿಲ್ಲವಾದ್ದರಿಂದ ಅದಕ್ಕೆ ವಿಧಿಯನ್ನು ಹೇಳಬಹುದಲ್ಲವೆ? ಎಂದರೆ ಅದೂ ಸಮಂಜಸವಲ್ಲ. ಯಾಕೆಂದರೆ ಭ್ರಮರಕೀಟದಂತೆ ಸ್ವಾಭಾವಿಕವಾದ ಅವಿದ್ಯೆಯನ್ನು ಹೋಗಲಾಡಿಸುವ ಮೂಲಕ ಗುರುಕರುಣೆಯಿಂದಲೇ ನಿಷ್ಕೃಷ್ಟಜ್ಞಾನವು ಬರಬೇಕಾಗಿರುವುದರಿಂದ ಅದನ್ನು ವಿಧಿಸಲು ಸಾಧ್ಯವಿಲ್ಲ. ಆದ್ದರಿಂದ "ಶ್ರೋತವ್ಯಃ" ಎಂಬಲ್ಲಿ ಶ್ರವಣಶಬ್ದದಿಂದ ವಿಚಾರವೇ ವಿವಕ್ಷಿತವಾಗಿದೆ ಎಂದು ಹೇಳಲಾಗುವುದಿಲ್ಲ. ಇದರಿಂದ ವಿಧಿವಾಕ್ಯದಲ್ಲಿಯೂ ಲಕ್ಷಣೆಯನ್ನು ಹೇಳಬೇಕಾಗುತ್ತದೆ. ವಿಧಿವಾಕ್ಯದಲ್ಲಿ ಲಕ್ಷಣೆಯನ್ನು ಯಾರೂ ಹೇಳುವುದಿಲ್ಲವೆಂಬುದು ಯುಕ್ತವಲ್ಲ. "ಪತಿಯ ಸಂತೋಷಕ್ಕಾಗಿ ಪತಿ ಪ್ರಿಯನಾಗುವುದಿಲ್ಲ. ಆತ್ಮನ ಸಂತೋಷಕ್ಕಾಗಿ ಸರ್ವವೂ ಪ್ರಿಯವಾಗುತ್ತದೆ" ಎಂಬ ಶ್ರುತಿಯಲ್ಲಿ ಆತ್ಮನನ್ನು ನಿರತಿಶಯಸುಖಸ್ವರೂಪನಾದ್ದರಿಂದ ಪರಮಪುರುಷಾರ್ಥವೆಂದು ಹೇಳಿ,

"ಆತ್ಮನನ್ನು ತಿಳಿದರೆ ಇದೆಲ್ಲವೂ ತಿಳಿಯುವುದು, ಇದೇ ಅಮೃತವೆನಿಸುವುದು" ಹೀಗೆ ಕೊನೆಯಾಗಿರುವುದರಿಂದ ಆತ್ಮಜ್ಞಾನವೇ ನಿರತಿಶಯಸುಖವನ್ನು ಪಡೆಯುವ ಉಪಾಯವೆಂದು ನಿಶ್ಚಯಿಸಲಾಗಿದೆ. ಆದ್ದರಿಂದ 'ಅಂತಹ ಆತ್ಮನನ್ನು ಕಾಣಬೇಕು' ಎಂದು ತಿಳಿಸಿ, ಅದನ್ನು ಸಾಧಿಸುವುದು ಹೇಗೆ ಎಂಬ ಆಕಾಂಕ್ಷೆಯುಂಟಾದರೆ, 'ಶ್ರೋತವ್ಯಃ' ಎಂಬುದರಿಂದ ಸಾಧನವಿಧಿಯನ್ನು ತಿಳಿಸಲಾಗಿದೆ. ಶಾಬ್ದಬೋಧದಲ್ಲಾದರೋ ವಿಚಾರವನ್ನೇ ಅಸಾಧಾರಣಕಾರಣವೆಂದು ಲಕ್ಷಣೆಯಿಂದ ತಿಳಿಯಬೇಕು. 'ಉಪನಿಷತ್ತಿನಲ್ಲಿ ಪ್ರತಿಪಾದಿತವಾದ ಪರಮಾತ್ಮನ ಬಗ್ಗೆ ಕೇಳುತ್ತೇನೆ' 'ಆತ್ಮಜ್ಞಾನವು ತರ್ಕದಿಂದ ಬರಲಾರದು' 'ವೇದವನ್ನು ತಿಳಿಯದವನು ಬ್ರಹ್ಮವನ್ನು ತಿಳಿಯಲಾರನು' ಈ ಬಗೆಯ ಶ್ರುತಿಗಳಂತೆ ಬ್ರಹ್ಮದಲ್ಲಿ ಬೇರೆ ಯಾವುದೂ ಪ್ರಮಾಣವಾಗಲಾರದು. 'ದ್ರಷ್ಟವ್ಯಃ' ಎಂಬಲ್ಲಿ ಆತ್ಮದರ್ಶನಕ್ಕೆ ಯಾವುದು ಸಾಧನವೆಂಬುದರ ಆಕಾಂಕ್ಷೆಯುಂಟಾದಾಗ, ವೇದಾಂತವಾಕ್ಯವೇ ಅದರ ಸಾಧನವೆನಿಸುತ್ತದೆ. ಇದೂ ಸಹ ಮನನ-ನಿದಿಧ್ಯಾಸನಗಳೊಡನೆ ಬೆರೆಯದೆ ವಿಚಾರಶೂನ್ಯವಾಗಿದ್ದರೆ ನಿಶ್ಚಯಜ್ಞಾನವನ್ನು ಕೊಡಲಾರದು. ಇದರಿಂದ ವಿಚಾರಮಾಡಿದ ವೇದಾಂತವಾಕ್ಯವೇ ಆತ್ಮಸಾಕ್ಷಾತ್ಕಾರಕ್ಕೆ ಕಾರಣವಾಗುವುದೆಂಬ ಅರ್ಥ ಸ್ಪಷ್ಟವಾಗುತ್ತದೆ.

ನ ಚ ವಿಧೌ ಲಕ್ಷಣಾ ಕ್ವಾಪ್ಯದೃಷ್ಟಚರೀ—"ಅರ್ಧಮಂತರ್ವೇದಿ ಮಿನೋತ್ಯರ್ಧಂ ಬಹಿರ್ವೇದಿ" ಇತ್ಯತ್ರ ದೇಶವಿಶೇಷಲಕ್ಷಣಾಯಾಃ, "ಜಾತಪುತ್ರಃ ಕೃಷ್ಣಕೇಶೋಽಗ್ನಿನಾಧದೀತ" ಇತ್ಯತ್ರ ವಯೋವಿಶೇಷ ಲಕ್ಷಣಾಯಾಃ, "ಉಚ್ಚೈಃ ಋಚಾ ಕ್ರಿಯತೇ" ಇತ್ಯಾದೌ ಋಗಾದಿಪದೇನ ವೇದಲಕ್ಷಣಾಯಾಃ, "ಯಾವತೋಽಶ್ವಾನ್ ಪ್ರತಿಗೃಹ್ಣೀಯಾತ್" ಇತ್ಯತ್ರ ಇಜರ್ಥಲಕ್ಷಣಾಯಾಃ, "ನೇಕ್ಷೇತೋದ್ಯಂತಮಾದಿತ್ಯಂ" "ನಾರ್ಷೇಯಂ ವೃಣೀತೇ" ಇತ್ಯಾದೌ ಪರ್ಯುದಾಸಲಕ್ಷಣಾಯಾಃ, "ನ ಕಲಂಜಂ ಭಕ್ಷಯೇತ್" ಇತ್ಯಾದಿಪುರುಷಾರ್ಥನಿಷೇಧೇಷು ಬಲವದನಿಷ್ಟಸಾಧನತಾಲಕ್ಷಣಾಯಾಶ್ಚ ಬಹುಶ ಉಪಲಬ್ಧೇಃ. ತಸ್ಮಾಲ್ಲಕ್ಷಣಯಾ ವಿಚಾರವಿಧಿರ್ಯುಕ್ತಃ.

ನನು—ವಿಚಾರೋಽಪಿ ವಿಚಾರ್ಯನಿರ್ಣಯಹೇತುತ್ವೇನ ಲೋಕಸಿದ್ಧತ್ವಾತ್ಕಥಂ ವಿಧೇಯ ಇತಿ ಚೇನ್ನ, ಅಪೂರ್ವವಿಧ್ಯಸಂಭವೇಽಪಿ ನಿಯಮವಿಧೇರವಕಾಶಾತ್. ತಥಾಹಿ–ವಿಧಿಸ್ತ್ರಿವಿಧಃ–ಅಪೂರ್ವವಿಧಿಃ, ನಿಯಮವಿಧಿಃ, ಪರಿಸಂಖ್ಯಾವಿಧಿಶ್ಚೇತಿ. ತತ್ರ ಕಾಲತ್ರಯೇಽಪಿ ಮಾನಾಂತರಾಪ್ರಾಪ್ತಸ್ಯ ಪ್ರಾಪ್ತಿಫಲೋ ವಿಧಿರಾದ್ಯಃ, ಯಥಾ–"ವ್ರೀಹೀನ್ ಪ್ರೋಕ್ಷತಿ" ಇತ್ಯತ್ರ ವಿಧ್ಯಭಾವೇನ ಪ್ರೋಕ್ಷಣಂ ನ ಪ್ರಾಪ್ತಂ. ಪಕ್ಷಪ್ರಾ

ಪ್ತಸ್ಯ ಅಪ್ರಾಪ್ತಾಂಶಪರಿಪೂರಣಫಲೋ ವಿಧಿರ್ದ್ವಿತೀಯಃ, ಯಥಾ "ವ್ರೀಹೀನವಹಂತಿ" ಇತ್ಯತ್ರ ವಿಧ್ಯಭಾವೇಽಪಿ ಪುರೋಡಾಶಪ್ರಕೃತಿದ್ರವ್ಯಾಣಾಂ ವ್ರೀಹೀಣಾಂ ತಂಡುಲಹೋಽಷ್ಯಾಕ್ಷೇಪಾದೇವಾವಹನಸಂಪ್ರಾಪ್ಯತ ಇತಿ ನಾಪೂರ್ವವಿಧಿಃ-ಕಿಂತ್ವಾಕ್ಷೇಪಾನ್ನಖವಿದಳನಮಪಿ ಪ್ರಾಪ್ನುಯಾದಿತಿ ತದಾನೀಮಪ್ಯವಹನನಸಪ್ರಾಪ್ತ್ಯರ್ಥಃ. ದ್ವಯೋರೇಕತ್ರ ನಿತ್ಯಪ್ರಾಪ್ತಾವಿತರನಿವೃತ್ತಿಫಲಕವಿಧಿಸ್ತೃತೀಯಃ. ಯಥಾ— "ಇಮಾಮಗೃಭ್ಣನ್ ರಶನಾಮೃತಸ್ಯೇತ್ಯಶ್ವಾಭಿಧಾನೀಮಾದತ್ತೇ" (ತೈ. ಸಂ. ೫-೧-೨) ಇತ್ಯತ್ರ ಲಿಂಗಾದೇವ ಮಂತ್ರೋ ರಶನಾಗ್ರಹಣೇ ನಿತ್ಯಂ ಪ್ರಾಪ್ನೋತೀತಿ ನಾಪೂರ್ವನಿಯಮವಿಧೀ; ಕಿಂತು ಲಿಂಗಾವಿಶೇಷಾದಶ್ವಾಭಿಧಾನ್ಯಾಮಿವ ಗರ್ದಭಾಭಿಧಾನ್ಯಾಮಪಿ ಮಂತ್ರಃ ಪ್ರಾಪ್ನುಯಾದಿತಿ ತನ್ನಿವೃತ್ತ್ಯರ್ಥಃ. ಏವಂ ಚ "ವ್ರೀಹೀನವಹಂತಿ" ಇತಿವತ್ "ಶ್ರೋತವ್ಯಃ" ಇತಿ ನಿಯಮವಿಧಿಃ. ನ ಚ ವ್ಯಾವರ್ತ್ಯಾಭಾವಃ, ಶಾರೀರಾತ್ಮವಿಚಾರಸ್ಯ ವ್ಯಾವರ್ತ್ಯತ್ವಾತ್. ನ ಚ ತಸ್ಯ ಮೋಕ್ಷಸಾಧನಜ್ಞಾನೇ ಪ್ರಾಪ್ತ್ಯಭಾವಃ—"ದ್ವಾ ಸುಪರ್ಣಾ" "ದ್ವೇ ಬ್ರಹ್ಮಣೀ" ಇತ್ಯಾದಿವಾಕ್ಯಾದಾಪಾತಪ್ರತಿಪತ್ತಿದಶಾಯಾಂ ತಸ್ಯಾಪಿ ಪ್ರಾಪ್ತಿಸಂಭವಾತ್. ನ ಚ ವಸ್ತುತಸ್ಸಾಧನಾಂತರಪ್ರಾಪ್ತಾವೇವ ನಿಯಮವಿಧಿಃ-ಅಪೂರ್ವೀಯವ್ರೀಹಿಷು ನಖವಿದಳನಸ್ಯಾಪ್ರಾಪ್ತೇರ್ನಿಯಮೋ ನ ಸ್ಯಾತ್. ಕಥಂಚಿತ್ತಂಡುಲೀಭಾವಮಾತ್ರೇ ತತ್ಪ್ರಾಪ್ತ್ಯಾ ನಿಯಮೇಽತ್ರಾಪ್ಯಾತ್ಮಜ್ಞಾನತ್ವೇನ ಜೀವಾತ್ಮವಿಚಾರಪ್ರಾಪ್ತ್ಯಾ ಪರಮಾತ್ಮವಿಚಾರೇ ನಿಯಮವಿಧಿರಸ್ತು.

ಇಹಾತ್ಮನ್‌ಶಬ್ದಸ್ಯ "ಇದಂ ಸರ್ವಂ ಯದಯಮಾತ್ಮಾ" (ಬೃ. ೪-೫-೭) "ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತ ಇದಂ ಸರ್ವಂ ವಿದಿತಂ" ಇತ್ಯಾದಿಪ್ರಕರಣಪರ್ಯಾಲೋಚನಯಾ ಪರಮಾತ್ಮಪರತ್ವಾವಗಮಾತ್, ಸಮನ್ವಯಸೂತ್ರೇ ಏಕೋರಾಮಸಿದ್ಧಭಗವತ್ಪಾದಾಚಾರ್ಯೈಃ "ಶ್ರೋತವ್ಯಃ" ಇತ್ಯತ್ರಾತ್ಮಜ್ಞಾನವಿಧಿರ್ನಿರಾಕೃತಃ. ನ ತು ಜ್ಞಾನೋದ್ದೇಶೇನ ವಿಚಾರವಿಧಿರಿತಿ ತದವಿರೋಧ ಇತಿ ನಿರ್ಣೀಯತೇ. ತಸ್ಮಾದ್ವಿಚಾರವಿಧೌ ನ ಕಿಂಚಿದ್ಬಾಧಕಮಿತ್ಯೇವಂ ಸ್ಥಿತೇ ಶ್ರವಣವಿಧೇರಪೇಕ್ಷಿತಾಧಿಕಾರಿವಿಷಯಫಲತ್ರಯಪರಮಿತ್ಯಾಗಮಿಕನ್ಯಾಯೇನ ನಿರ್ಣೀತಮಿದಂ ಸೂತ್ರಂ "ಅಥಾತೋ ಬ್ರಹ್ಮಜಿಜ್ಞಾಸಾ" ಇತಿ.

ವಿಧಿಯಲ್ಲಿ ಲಕ್ಷಣೆ ಇಲ್ಲವೆಂದು ಹೇಳುವುದು ಸರಿಯಲ್ಲ. "ಅರ್ಥಮಂತ್ರರ್ವೇದಿಮಿನೋತಿ ಅರ್ಧಂಬಹಿರ್ವೇದಿ" ಎಂಬುವ ಕಡೆ ದೇಶವಿಶೇಷದಲ್ಲೂ, 'ಜಾತಪುತ್ರಃ

ಕೃಷ್ಣಕೇಶಃ ಅಗ್ನೀನಾದಧೀತ” ಎಂಬುವ ಕಡೆ ವಯೋವಿಶೇಷದಲ್ಲೂ “ಉಚ್ಚೈಃ ಋಚಾ ಕ್ರಿಯತೇ” ಎಂಬ ಕಡೆ ಋಕ್ ಪದಕ್ಕೆ ವೇದದಲ್ಲೂ, “ಯಾವತೋಽಶ್ವಾನ್ ಪ್ರತಿಗೃಹ್ಣೀಯಾತ್” ಎಂಬುವ ಕಡೆ ಣಿಚ್‌ಪ್ರತ್ಯಯದ ಅರ್ಥದಲ್ಲೂ, “ನೇಕ್ಷೇತೋದ್ಯಂತಮಾದಿತ್ಯಂ,” “ನಾರ್ಷೇಯಂ ವೃಣೀತೆ” ಎಂಬುವ ಕಡೆ ಪರ್ಯುದಾಸದಲ್ಲೂ, “ನ ಕಳಂಜಂ ಭಕ್ಷಯೇತ್” ಎಂಬುವ ಕಡೆ ಬಲವದನಿಷ್ಟಸಾಧನವೆಂಬ ಅರ್ಥದಲ್ಲಿಯೂ ಲಕ್ಷಣೆಯನ್ನು ವಿಧಿವಾಕ್ಯಗಳಲ್ಲಿಯೂ ಒಪ್ಪಲಾಗಿದೆ. ಆದ್ದರಿಂದ ‘ಶ್ರೋತವ್ಯಃ’ ಎಂಬ ವಿಧಿವಾಕ್ಯದಲ್ಲಿಯೂ ವಿಚಾರದಲ್ಲಿ ಲಕ್ಷಣೆಯನ್ನು ಹೇಳುವುದರಿಂದ ದೋಷವಿಲ್ಲ. ವಿಚಾರವೆನ್ನುವುದು ಒಂದು ಅರ್ಥವನ್ನು ನಿರ್ಣಯಿಸಲು ಕಾರಣವೆಂಬ ಅಂಶ ಲೋಕಪ್ರಸಿದ್ಧವಾಗಿರುವದರಿಂದ ಅದರಲ್ಲಿ ವಿಧಿಯನ್ನು ಹೇಳುವದು ಶಾಸ್ತ್ರಸಮ್ಮತವಲ್ಲವೆಂದು ಹೇಳಿದರೆ ಅದು ಸರಿಯಲ್ಲ. ಅಪೂರ್ವವಿಧಿ ಸಂಭವಿಸದೇ ಹೋದರೂ ನಿಯಮವಿಧಿಯನ್ನು ಹೇಳಬಹುದು. ಅಪೂರ್ವ, ನಿಯಮ, ಪರಿಸಂಖ್ಯೆ ಎಂದು ವಿಧಿ ಮೂರು ಬಗೆಯಾಗಿದೆ. ಮೂರು ಕಾಲಗಳಲ್ಲಿಯೂ ಬೇರೆ ಯಾವ ಪ್ರಮಾಣದಿಂದಲೂ ಬಾರದೇ ಇರುವುದನ್ನು ದೊರಕಿಸುವ ವಿಧಿ ಅಪೂರ್ವವಿಧಿ ಎನಿಸುತ್ತದೆ. ‘ವ್ರೀಹೀನ್ ಪ್ರೋಕ್ಷತಿ’ ಇಲ್ಲಿ ಬೇರೆ ಯಾವ ವಿಧಿಯಿಂದಲೂ ವ್ರೀಹಿಪ್ರೋಕ್ಷಣವು ಸಂಭವಿಸಿಲ್ಲವಾದ್ದರಿಂದ ಇಲ್ಲಿ ಹೇಳಿರುವುದು ಅಪೂರ್ವವಿಧಿಯಾಗುತ್ತದೆ. ಬೇರೊಂದು ಪಕ್ಷದಿಂದ ಪ್ರಾಪ್ತವಾದುದಕ್ಕೆ ಬೇರೆ ರೀತಿಯಲ್ಲಿ ಪ್ರಾಪ್ತಿಯನ್ನು ನಿಯಮಗೊಳಿಸುವುದೇ ನಿಯಮವಿಧಿ ಎನಿಸುತ್ತದೆ. ‘ವ್ರೀಹೀನ್ ಅವಹಂತಿ’ ಎಂಬಲ್ಲಿ ಹವಿಸ್ಸಿಗೆ ಬೇಕಾಗಿರುವ ಅಕ್ಕಿಯನ್ನು ಪಡೆಯಲು ಭತ್ತವನ್ನು ಕುಟ್ಟುವುದು ಲೋಕಪ್ರಸಿದ್ಧವಾದ್ದರಿಂದ ಅಪೂರ್ವವಿಧಿಯನ್ನು ಹೇಳಲಾಗುವುದಿಲ್ಲ. ಉಗುರಿನಿಂದ ಬಿಡಿಸಿ ಅಕ್ಕಿಯನ್ನು ಬೇರ್ಪಡಿಸಬಾರದೆಂದು ಹೇಳಲಿಕ್ಕಾಗಿ ಅದನ್ನು ಕುಟ್ಟಲೇಬೇಕು ಎಂಬ ನಿಯಮವನ್ನು ‘ವ್ರೀಹೀನ್ ಅವಹಂತಿ’ ಎಂಬುದು ತಿಳಿಸುತ್ತದೆ. ಆದ್ದರಿಂದ ಇದು ನಿಯಮವಿಧಿ ಎನಿಸುತ್ತದೆ. ಒಂದೆಡೆಗೆ ಎರಡು ಮಾರ್ಗಗಳು ಸಮವಾಗಿ ಸಂಭವಿಸಿದಾಗ ಒಂದನ್ನು ತಡೆಯುವುದಕ್ಕೆ ಪರಿಸಂಖ್ಯಾವಿಧಿ ಎಂದು ಹೆಸರು. ‘ಇಮಾಮಗೃಭ್ಣನ್’ ಎಂಬ ಮಂತ್ರದಲ್ಲಿ ಕುದುರೆ ಮತ್ತೆ ಕತ್ತೆ ಇವೆರಡರ ಹಗ್ಗಗಳನ್ನು ಹಿಡಿಯುವ ಪ್ರಸಕ್ತಿಯುಂಟಾದಾಗ ಕುದುರೆಯ ಹಗ್ಗವನ್ನೇ ಹಿಡಿಯಬೇಕೆಂದು ಹೇಳಿ ಕತ್ತೆಯ ಹಗ್ಗವನ್ನು ಹಿಡಿಯಬಾರದು ಎಂದು ಅದನ್ನು ತಡೆಯುವುದರಿಂದ ಇದು ಪರಿಸಂಖ್ಯಾವಿಧಿ ಎನಿಸುವುದು. ಕುದುರೆಯ ಹಗ್ಗವನ್ನು ಹಿಡಿಯುವಂತೆ ಕತ್ತೆಯ ಹಗ್ಗವನ್ನು ಹಿಡಿಯಲಿಕ್ಕೂ ಲೋಕವ್ಯವಹಾರದಿಂದಲೇ ಪ್ರಸಕ್ತಿ ಬರುವುದರಿಂದ ಇದು ಅಪೂರ್ವವಿಧಿಯೂ ಅಲ್ಲ, ನಿಯಮವಿಧಿಯೂ ಅಲ್ಲ; ಆದರೆ ಪರಿಸಂಖ್ಯಾವಿಧಿ ಎನಿಸುತ್ತದೆ. ‘ವ್ರೀಹೀನ್ ಅವಹಂತಿ’ ಎಂಬಂತೆ ‘ಶ್ರೋತವ್ಯಃ’ ಎಂಬಲ್ಲಿ ನಿಯಮವಿಧಿ ಸಂಭವಿಸುತ್ತದೆ. “ವ್ರೀಹೀನ್ ಅವಹಂತಿ” ಎಂಬುದರಿಂದ ಭತ್ತವನ್ನು ಉಗುರಿನಿಂದ ಬಿಡಿಸುವ ಪ್ರಸಂಗವನ್ನು ತಪ್ಪಿಸುವಂತೆ ‘ಶ್ರೋತವ್ಯಃ’ ಎಂಬುದು ಯಾವುದನ್ನು

ತಪ್ಪಿಸಬೇಕು ಎಂದು ಕೇಳಿದರೆ ಜೀವ ತ್ಮವಿಚಾರವನ್ನು ತಪ್ಪಿಸಿ ಪರಮಾತ್ಮನ ವಿಚಾರವನ್ನು ವಿಧಿಸಲಾಗಿದೆ ಎಂದು ಹೇಳಬೇಕು. ಜೀವಾತ್ಮನ ವಿಚಾರಕ್ಕೆ ಮೋಕ್ಷಸಾಧನದಲ್ಲಿ ಪ್ರಸಕ್ತಿ ಎಲ್ಲಿದೆ? ಎಂದರೆ "ದ್ವಾ ಸುಪರ್ಣಾ" ಮೊದಲಾದ ಶ್ರುತಿಗಳಲ್ಲಿ ಜೀವಾತ್ಮನ ವಿಚಾರವೂ ಪ್ರಾಪ್ತವಾಗಿದೆ. ವಾಸ್ತವವಾಗಿ ಬೇರೆ ಸಾಧನ ದೊರೆತರೆಯೇ ನಿಯಮವಿಧಿ ಸಂಭವಿಸುತ್ತದೆ ಎಂಬುದು ಸರಿಯಲ್ಲ. ಭತ್ತವನ್ನು ಉಗುರಿನಿಂದ ಬಿಡಿಸುವುದು ವಾಸ್ತವಿಕ ಸಾಧನವಲ್ಲವಾದ್ದರಿಂದ ಅಲ್ಲಿಯೂ ಈ ದೋಷ ಸಮಾನವೇ ಆಗುವುದು. ಯಾವುದೋ ಒಂದು ಪ್ರಕಾರದಲ್ಲಿ ಉಗುರಿನಿಂದ ಬಿಡಿಸುವುದೂ ಸಂಭವಿಸುವಂತೆ ಇಲ್ಲಿಯೂ ಆತ್ಮಜ್ಞಾನರೂಪದಿಂದ ಸಾಮಾನ್ಯರೀತಿಯಲ್ಲಿ ಜೀವಾತ್ಮನ ವಿಚಾರವು ಸಂಭವಿಸುವುದರಲ್ಲಿ ತಪ್ಪೇನಿಲ್ಲ. ಆ ವಿಚಾರವನ್ನು ತೊರೆದು ಪರಮಾತ್ಮನ ವಿಚಾರವನ್ನೇ ಮಾಡಬೇಕೆಂದು ನಿಯಮವಿಧಿಯನ್ನು ಹೇಳಬಹುದು. "ಇದೆಲ್ಲವೂ ಯಾವುದಿದೆಯೋ ಅದು ಆತ್ಮವೇ ಆಗಿತ್ತು", "ಆತ್ಮವನ್ನು ತಿಳಿದರೆ ಎಲ್ಲವೂ ತಿಳಿಯುವುದು" ಈ ಬಗೆಯ ಪ್ರಕರಣವನ್ನು ಪರ್ಯಾಲೋಚಿಸಿದರೆ ಇಲ್ಲಿ ಆತ್ಮನ್‌ಶಬ್ದವು ಪರಮಾತ್ಮನೆಂಬ ಅರ್ಥವನ್ನೇ ತಿಳಿಸುವುದಾಗಿ ಸ್ಪಷ್ಟವಾಗುತ್ತದೆ. ಸಮನ್ವಯಸೂತ್ರದಲ್ಲಿ ಏಕೋರಾಮಾರಾಧ್ಯರು 'ಶ್ರೋತವ್ಯಃ' ಎಂಬಲ್ಲಿ ಆತ್ಮಜ್ಞಾನ ವಿಧಿಯು ನಿರಾಕೃತವಾಗಿದೆಯೇ ಹೊರತು ಜ್ಞಾನೋದ್ದೇಶದಿಂದ ವಿಚಾರವಿಧಿ ನಿರಾಕೃತವಾಗಿಲ್ಲವೆಂದು ನಿರ್ಣಯಿಸಿದ್ದಾರೆ. ಆದ್ದರಿಂದ ವಿಚಾರವನ್ನು ವಿಧಿಸುವುದರಲ್ಲಿ ಯಾವ ಬಾಧಕವೂ ಇಲ್ಲವೆಂಬ ಪರಿಸ್ಥಿತಿಯಿಂದ ಶ್ರವಣವಿಧಿಗೆ ಬೇಕಾದ ಅಧಿಕಾರಿ, ವಿಷಯ, ಫಲ ಈ ಮೂರನ್ನು ಬೋಧಿಸಲಿಕ್ಕಾಗಿಯೇ ಈ ಸೂತ್ರ ಬಂದಿದೆ.

**ಅತ್ರಾನುವಾದಪರಿಹಾರಾಯ ಶಾಸ್ತ್ರೇಷು ಪುರುಷಪ್ರವೃತ್ತಿಸಿದ್ಧಯೇ ಚ ಕರ್ತವ್ಯೇತಿ ಪದಮುಧ್ಯಾಹರ್ತವ್ಯಂ. ಜಿಜ್ಞಾಸಾಪದೇನ ವಿಚಾರೋ ಲಕ್ಷಣೀಯಃ. ನನು ಜಿಜ್ಞಾಸಾಪದೇ ನ ಲಕ್ಷಣಾ ಯುಕ್ತಾ, ಪ್ರಕೃತಿಪ್ರತ್ಯಯಸಮುದಾಯಸ್ಯಾಶಕ್ತತಯಾ ಸಮುದಾಯಲಕ್ಷಣಾನುಪತ್ತೇಃ; ಇತಿ ಚೇನ್ನ. ಸನ್‌ಪ್ರತ್ಯಯೇನ ಜಹಲಕ್ಷಣಯಾ ವಿಚಾರೋ ಬೋಧ್ಯತೇ, ಪ್ರಕೃತ್ಯಾ ಚ ಸಾಧ್ಯಜ್ಞಾನಮಜಹಲ್ಲಕ್ಷಣಯೋಚ್ಯತೇ.**

**ಕೈಶ್ಚಿತ್ ಪ್ರಕೃತೇಸ್ಸಿದ್ಧಜ್ಞಾನಮಾತ್ರಪರತ್ವಮಂಗೀಕೃತ್ಯ ಸಾಧ್ಯಜ್ಞಾನೇಽಪಿ ಜಹಲ್ಲಕ್ಷಣೈವೇತ್ಯುಕ್ತಂ. ಸಿದ್ಧತಯೋಪಸ್ಥಿತೌ ಸಾಧನಾನ್ವಯಾಯೋಗೇನ ಸಾಧ್ಯತಯೋಪಸ್ಥಿತೇರಾವಶ್ಯಕತ್ವಾತ್ ಪ್ರಕೃತಿಲಕ್ಷಣಾಽವಶ್ಯಕೇತಿ ಲಕ್ಷಣದ್ವಯಮೇವ ಶಂಭವಾನಂದಶಿವಾಚಾರ್ಯಾಭಿಪ್ರೇತಂ.**

**ಅತ್ರ ಕೇಚಿತ್—ಪ್ರಕೃತಿಪ್ರತ್ಯಯಸಮುದಾಯೇ ಏಕೈವ ಲಕ್ಷಣಾ—ನ ಚ ವಾಕ್ಯೇ ಲಕ್ಷಣಾ ನ ದೃಷ್ಟಚರೀ. "ಅರ್ಥಮಂತರ್ವೇದಿ" ಇತ್ಯತ್ರ—"ವಿಷಂ ಭುಂಕ್ಷ್ವ" ಇತ್ಯಾದೌ ಚ ದೃಷ್ಟತ್ವಾತ್.**

ನ ಚ ಶಕ್ಯಸಂಬಂಧಾಭಾವಃ. ಸಮುದಾಯಶಕ್ತ್ಯಭಾವೇಽಪಿ ಸಮುದಾಯಿಶಕ್ಯಸಂಬಂಧಾದೇವ ತದುಪಪತ್ತೇಃ. ಸಾ ಚಾಜಹತೀತಿ. ನ ಚ ಏಕರೂಪೇಣೈಕಕ್ರಿಯಾನ್ವಯಾಭಾವಾನ್ನಚೈಕಸ್ಯ ಲಕ್ಷಣೇತಿ ವಾಚ್ಯಂ—ತಸ್ಯಾ ಅಪ್ರಾಮಾಣಿಕತ್ವಾತ್. "ಛತ್ರಿಣೋ ಗಚ್ಛಂತಿ" ಇತ್ಯತ್ರಾಪಿ ಛತ್ರಿತ್ವೇನಾಚ್ಛತ್ರಿತ್ವೇನ ಚೈಕಾನ್ವಯಿತ್ವಂ. ನ ಗಮನಕರ್ತೃತ್ವೇನ, "ಗಂತಾರೋ ಗಚ್ಛಂತಿ" ಇತಿ ಪ್ರಸಂಗಾತ್. ಶಾಬ್ದಧಿಯೋಽವಚ್ಛೇದಕಪ್ರಕಾರನಿಯಮಾತ್. ಗಂತೃತ್ವಸ್ಯಾವಚ್ಛೇದಕತ್ವೇ ಮುಖ್ಯಾರ್ಥಸಂಬಂಧಾಭಾವಾದೇತದತಿರೇಕೇಣ ಮುಖ್ಯಾರ್ಥಕಲ್ಪನಾಪ್ರಸಂಗಾತ್. ಅತೋ ನೈಕರೂಪೇಣೈಕಕ್ರಿಯಾನ್ವಯಿತ್ವಂ, ಕಿಂತು ಛತ್ರಿತ್ವೇನಾಚ್ಛತ್ರಿತ್ವೇನ ಚ ನಾನಾರೂಪೇಣೈವ. ಅತ ಏವ "ಕಾಕೇಭ್ಯೋ ದಧಿ ರಕ್ಷ್ಯತಾಂ" ಇತ್ಯತ್ರಾಪಿ ಕಾಕತ್ವಾದ್ಯಾಕಾರೇಣೈವ ಕ್ರಿಯಾನ್ವಯಃ, ನ ದಧ್ಯುಪಘಾತಕತ್ವಾದ್ಯಾಕಾರೇಣ. ನ ಚ ಏಕವೃತ್ತ್ಯುಪಸ್ಥಾಪಿತಾನಾಂ ಪರಸ್ಪರಮನನ್ವಯಾತ್ ವಿಚಾರಜ್ಞಾನಯೋರನನ್ವಯಃ ಸ್ಯಾದಿತಿ ವಾಚ್ಯಂ, ತಯೋರ್ಭಿನ್ನವೃತ್ತ್ಯುಪಸ್ಥಾಪ್ಯತ್ವಾತ್. ಮುಖ್ಯಾರ್ಥಸ್ಯ ಲಕ್ಷ್ಯತ್ವಾಭಾವೇನಾಜಹಲ್ಲಕ್ಷಣಾಸ್ಥಲೇ ಸರ್ವತ್ರ ವೃತ್ತಿದ್ವಯಾಂಗೀಕಾರಾತ್. ನ ಚ ಸಕೃದುಚ್ಚರಿತಸ್ಯ ವೃತ್ತಿದ್ವಯಮವ್ಯುತ್ಪನ್ನಂ, "ಗಂಗಾಯಾಂ ಘೋಷಮತ್ಸ್ಯೌ" ಇತ್ಯತ್ರ ದೃಷ್ಟತ್ವಾತ್.

ನಚ ತೀರಸ್ಯ ಬೋಧನೇ ಗಂಗಾಪದಸ್ಯ ನ ವ್ಯಾಪಾರಃ—ತಾತ್ಪರ್ಯಪರ್ಯವಸಾನಾತ್. ತಾತ್ಪರ್ಯಪರ್ಯವಸಾನಸ್ಯೈವ ಬೋಧಕತಾ. ತಸ್ಮಾತ್ಸಮುದಾಯೇ ಅಜಹಲ್ಲಕ್ಷಣಾಯಾಂ ನ ಕಿಂಚಿದ್ಬಾಧಕಂ. ವಸ್ತುತಸ್ತು-ಜಿಜ್ಞಾಸಾಪದಂ ತಂತ್ರೇಣೋಪಾತ್ತಂ, ತತ್ರೈಕೇನ ಜಹಲ್ಲಕ್ಷಣಯಾ ವಿಚಾರೋ ಬೋಧ್ಯತೇ. ಇತರೇಣ ಇಷ್ಯಮಾಣಂ ಜ್ಞಾನಮಭಿಧಯಾ ಬೋಧ್ಯತ ಇತಿ ನ ಕಿಂಚಿದನುಪಪನ್ನಂ. ಏವಮೇಕಲಕ್ಷಣಯೈವೋಪಪತ್ತೌ ನ ಲಕ್ಷಣಾದ್ವಯಂ, ಗೌರವಾತ್. ಪ್ರತ್ಯಯಲಕ್ಷಣಾಯಾಃ ಕ್ವಾಪ್ಯದೃಷ್ಟಚರತ್ವಾಚ್ಚ.

ಈ ಸೂತ್ರದಲ್ಲಿ ಅನುವಾದವನ್ನು ಪರಿಹರಿಸಲಿಕ್ಕಾಗಿಯೂ, ಶಾಸ್ತ್ರಗಳಲ್ಲಿ ಜೀವನಿಗೆ ಪ್ರವೃತ್ತಿಯನ್ನು ಹುಟ್ಟಿಸಲಿಕ್ಕಾಗಿಯೂ 'ಕರ್ತವ್ಯಾ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಜಿಜ್ಞಾಸಾಪದವು ವಿಚಾರವನ್ನು ಲಕ್ಷಣೆಯಿಂದ ಬೋಧಿಸುತ್ತದೆ. ಪ್ರಕೃತಿಪ್ರತ್ಯಯಸಮುದಾಯದಲ್ಲಿ ಶಕ್ತಿ ಇಲ್ಲದ್ದರಿಂದ ಅಲ್ಲಿ ಲಕ್ಷಣೆಯನ್ನು ಹೇಳುವುದು ಯುಕ್ತವಲ್ಲವಾದ್ದರಿಂದ ಜಿಜ್ಞಾಸಾಪದಕ್ಕೆ ಲಕ್ಷಣೆಯು ಹೊಂದುವುದಿಲ್ಲವೆಂದು ಹೇಳುವುದೂ ಸರಿಯಲ್ಲ; ಯಾಕೆಂದರೆ ಜಿಜ್ಞಾಸಾ ಎಂಬಲ್ಲಿ ಸನ್ ಪ್ರತ್ಯಯವು ಜಹಲ್ಲಕ್ಷಣೆ

ಯಿಂದ ಸಾಧ್ಯಜ್ಞಾನವನ್ನು ತಿಳಿಸುತ್ತದೆ. ಕೆಲವರು ಪ್ರಕೃತಿಗೆ ಸಿದ್ಧಜ್ಞಾನವನ್ನು ಮಾತ್ರವೇ ಅಂಗೀಕರಿಸಿ ಸಾಧ್ಯಜ್ಞಾನದಲ್ಲಿಯೂ ಜಹಲ್ಲಕ್ಷಣೆಯನ್ನೇ ಹೇಳಿದ್ದಾರೆ. ಸಿದ್ಧವಾದ ರೀತಿಯಲ್ಲಿ ತೋರಿರುವ ವಸ್ತುವಿನಲ್ಲಿ ಮತ್ತೆ ಸಾಧಕನ ಅಪೇಕ್ಷೆ ಇಲ್ಲದಿರುವುದರಿಂದ ಸಾಧ್ಯವಾಗುವ ರೀತಿಯಲ್ಲಿ ಜ್ಞಾನವು ತೋರಬೇಕೇ ಹೊರತು ಸಿದ್ಧವಾದ ಜ್ಞಾನ ಪ್ರಕೃತಿಗೆ ಅರ್ಥವೆಂದು ಹೇಳುವುದು ಸರಿಯಲ್ಲ. ಆದ್ದರಿಂದ ಪ್ರಕೃತಿಗೂ ಸಾಧ್ಯ ಜ್ಞಾನದಲ್ಲಿಯೇ ಲಕ್ಷಣೆಯನ್ನು ಹೇಳಿ ಪ್ರಕೃತಿಪ್ರತ್ಯಯವೆರಡರಲ್ಲೂ ಲಕ್ಷಣೆಯನ್ನು ಹೇಳುವುದೇ ಶಾಂಭವಾನಂದ ಶಿವಾನಂದ ಇವರಿಗೆ ಸಮ್ಮತವೆನಿಸಿದೆ. ಇಲ್ಲಿ ಕೆಲವರು ಹೀಗೆ ಹೇಳುತ್ತಾರೆ. ಪ್ರಕೃತಿಪ್ರತ್ಯಯಗಳೆರಡನ್ನೂ ಸೇರಿಸಿ ಒಟ್ಟಿಗೆ ಒಂದೇ ಲಕ್ಷಣೆ ಇರುವುದರಿಂದ, ವಾಕ್ಯದಲ್ಲಿ ಲಕ್ಷಣೆ ಇಲ್ಲವೆಂದು ಹೇಳುವಹಾಗಿಲ್ಲ. 'ವಿಷಂ ಭುಂಕ್ಷ್ವ' ಎಂಬಲ್ಲಿ ಒಟ್ಟು ವಾಕ್ಯದಲ್ಲಿ ಲಕ್ಷಣೆ ಹೇಳುವುದೇ ರೂಢಿಯಲ್ಲಿದೆ. ವಾಕ್ಯದಲ್ಲಿ ಶಕ್ತಿ ಇಲ್ಲದ ಕಾರಣ ಶಕ್ಯಸಂಬಂಧರೂಪವಾದ ಲಕ್ಷಣೆಯನ್ನು ವಾಕ್ಯದಲ್ಲಿ ಹೇಗೆ ಹೇಳುವುದೆಂದರೆ, ಒಟ್ಟು ವಾಕ್ಯದಲ್ಲಿ ಶಕ್ತಿ ಇಲ್ಲದಿದ್ದರೂ ಅದರಲ್ಲಿ ಸೇರಿರುವ ಪದಗಳಿಗೆ ಶಕ್ತಿ ಇರುವುದರಿಂದ ಅದನ್ನು ಇಟ್ಟುಕೊಂಡು ಶಕ್ಯಸಂಬಂಧವನ್ನು ಹೇಳಬಹುದು.

ಅಜಹಲ್ಲಕ್ಷಣೆಯ ಸ್ಥಳದಲ್ಲಿ ಒಂದು ವಾಕ್ಯದಲ್ಲಿ ಒಂದೇ ರೂಪದಿಂದ ಒಂದೇ ಕ್ರಿಯೆ ಇರುವುದಿಲ್ಲವಾದ್ದರಿಂದ ಒಟ್ಟಿಗೆ ಆ ಒಂದು ಕ್ರಿಯೆಯಲ್ಲಿ ಹೇಗೆ ಲಕ್ಷಣೆ ಹೇಳಲಾಗುತ್ತೆ ಎಂದರೆ ಅಂತಹ ಲಕ್ಷಣೆಯು ಅಪ್ರಾಮಾಣಿಕವೇ ಆಗುತ್ತದೆ. 'ಛತ್ರಿಣೋ ಗಚ್ಛಂತಿ' ಎಂಬುವಕಡೆ ಛತ್ರಧಾರಿಗಳನ್ನೂ, ಛತ್ರವಿಲ್ಲದವರನ್ನೂ ಒಟ್ಟಿಗೆ ಸೇರಿಸಿ 'ಗಚ್ಛಂತಿ' ಎಂಬ ಒಂದೇ ಕ್ರಿಯೆಯಲ್ಲಿ ಅನ್ವಯವನ್ನು ಹೇಳುವಂತಿಲ್ಲ. ಗಮನ ಕರ್ತೃತ್ವರೂಪದಿಂದ ಎರಡು ಬಗೆಯ ಕರ್ತೃಗಳನ್ನು ಒಟ್ಟಿಗೆ ಸೇರಿಸಿ ಒಂದೇ ಕ್ರಿಯೆಯಲ್ಲಿ ಅನ್ವಯವನ್ನು ಹೇಳಬಹುದಲ್ಲವೇ? ಅಂದರೆ ಅದು ಸರಿಯಾಗುವುದಿಲ್ಲ ಯಾಕೆಂದರೆ, ಆವಾಗ 'ಗಮನಕರ್ತರು ಹೋಗುತ್ತಾರೆ' ಎಂದು ವ್ಯವಹರಿಸಬೇಕಾಗುತ್ತದೆ. ಶಾಬ್ದಬೋಧಸ್ಥಳದಲ್ಲಿ ವಿಶೇಷ್ಯವಿಶೇಷಣಗಳಿಗೆ ಅವಚ್ಛೇದಕ ಧರ್ಮಗಳು ಭಿನ್ನವಾಗಿರಬೇಕು. 'ಗಂತಾರೋ ಗಚ್ಛಂತಿ' ಎಂಬುವಕಡೆ ಗಂತೃತ್ವವು ಅವಚ್ಛೇದಕ ಧರ್ಮವಾದರೆ, ಅದು ಮುಖ್ಯಾರ್ಥವಾದುದರಿಂದ ಅದೂ ಲಕ್ಷಣೆಗೆ ಕಾರಣವೆಂದು ಹೇಳಬೇಕಾಗುತ್ತದೆ. ಹಾಗೆ ಹೇಳಿದರೆ ತಪ್ಪೇನಿಲ್ಲವೆಂದು ಹೇಳುವುದು ಸರಿಯಲ್ಲ. ಯಾಕೆಂದರೆ ಆ ಮುಖ್ಯಾರ್ಥಕ್ಕೂ ಲಕ್ಷ್ಯಾರ್ಥಕ್ಕೂ ಸಂಬಂಧವನ್ನು ಹೇಳುವುದು ಸಾಧ್ಯವಾಗುವುದಿಲ್ಲ, ಇದನ್ನು ಬಿಟ್ಟು ಬೇರೆ ರೀತಿಯಲ್ಲಿ ಮುಖ್ಯಾರ್ಥವನ್ನು ಹೇಳುವುದಾದರೆ, ಹೊಸದೊಂದು ಅರ್ಥವನ್ನೇ ಕಲ್ಪಿಸಬೇಕಾಗುತ್ತದೆ. ಆದ್ದರಿಂದ ಒಂದೇ ರೂಪದಿಂದ ಒಂದೇ ಕ್ರಿಯೆಯಲ್ಲಿ ಅನ್ವಯಬರುವುದು ಸಾಧ್ಯವಿಲ್ಲ; ಆದರೆ 'ಕೊಡೆ ಹಿಡಿದಿರುವಿಕೆ' ಎಂಬ ಧರ್ಮವನ್ನು 'ಕೊಡೆ ಹಿಡಿಯದಿರುವಿಕೆ' ಎಂಬ ಧರ್ಮವನ್ನು ಪ್ರತ್ಯೇಕವಾಗಿ ಹೇಳಿ ಆ ಮೂಲಕ ಅವೆರಡಕ್ಕೂ ಗಚ್ಛಂತಿ ಎಂಬ ಕ್ರಿಯೆಯಲ್ಲಿ ಅನ್ವಯವನ್ನು ಹೇಳಬೇಕು. ಹೀಗೆಯೇ 'ಕಾಗೆಗಳಿಂದ ಮೊಸರನ್ನು

ರಕ್ಷಿಸಿ' ಎಂಬ ಕಥೆಯಲ್ಲಿ ಕಾಕತ್ವಾದಿಧರ್ಮಗಳನ್ನು ಪ್ರತ್ಯೇಕವಾಗಿ ಹೇಳಿ ಅವುಗಳಿಗೆ ಕ್ರಿಯೆಯೊಡನೆ ಅನ್ವಯವನ್ನು ಹೇಳಬೇಕೇ ಹೊರತು 'ಮೊಸರಿಗೆ ಹಾನಿಯನ್ನುಂಟುಮಾಡುವಿಕೆ' ಎಂಬ ಧರ್ಮದ ಮೂಲಕ ಕ್ರಿಯೆಯೊಡನೆ ಅನ್ವಯವನ್ನು ಹೇಳುವುದು ಸರಿಯಲ್ಲ. ಒಂದೇ ವೃತ್ತಿಯಿಂದ ತೋರುವ ಎರಡು ಪದಾರ್ಥಗಳಿಗೆ ಪರಸ್ಪರವಾಗಿ ಅನ್ವಯ ಬರುವುದಿಲ್ಲವಾದ್ದರಿಂದ ವಿಚಾರಕ್ಕೂ ಜ್ಞಾನಕ್ಕೂ ಪರಸ್ಪರವಾಗಿ ಅನ್ವಯವು ಹೇಗೆ ಬರುವುದು ಅಂದರೆ ಅವೆರಡೂ ಒಂದೇ ವೃತ್ತಿಯಿಂದ ತೋರದೆ ಬೇರೆಬೇರೆ ವೃತ್ತಿಗಳಿಂದಲೇ ತೋರುತ್ತವೆಯಾದ್ದರಿಂದ ಪರಸ್ಪರಾನ್ವಯ ಬರಬಹುದು. ಅಜಹಲ್ಲಕ್ಷಣೆಯನ್ನು ಹೇಳುವ ಕಡೆಗಳಲ್ಲೆಲ್ಲಾ ಮುಖ್ಯಾರ್ಥದಲ್ಲಿ ಲಕ್ಷಣೆಯನ್ನು ಹೇಳದೆ ಉಳಿದ ಅರ್ಥಗಳಲ್ಲಿ ಮಾತ್ರವೇ ಲಕ್ಷಣೆ ಹೇಳಬೇಕು. ಮುಖ್ಯಾರ್ಥದಲ್ಲಿ ಶಕ್ತಿಯೇ ಇರುವುದಾದ್ದರಿಂದ ಒಂದೇ ವೃತ್ತಿಯಿಂದ ಎರಡು ಅರ್ಥಗಳ ಉಪಸ್ಥಿತಿ ಬರುವುದಿಲ್ಲ. ಆದ್ದರಿಂದ ಪರಸ್ಪರಾನ್ವಯ ತೋರುವುದರಲ್ಲಿ ಅಡ್ಡಿ ಏನಿಲ್ಲ. ಒಂದುಸಾರಿ ಹೇಳಿದ ಶಬ್ದಕ್ಕೆ ಎರಡು ಬಗೆಯ ವೃತ್ತಿಗಳನ್ನು ಹೇಳುವುದು ಹೇಗೆ ಸಾಧ್ಯವೆಂದರೆ "ಗಂಗಾಯಾಂ ಘೋಷಮತ್ಸ್ಯೌ" ಎಂಬಲ್ಲಿ ಗಂಗಾಪದಕ್ಕೆ ನದಿ ಮತ್ತು ನದೀತೀರವೆಂದು ಎರಡೂ ಅರ್ಥಗಳನ್ನು ಹೇಳುವುದು ಅನುಭವಸಿದ್ಧವಾಗಿದೆ. ಆದ್ದರಿಂದ ಪ್ರಕೃತಿ ಪ್ರತ್ಯಯಗಳೆರಡಕ್ಕೂ ಒಟ್ಟಿಗೆ ಸೇರಿ ಜಹಲ್ಲಕ್ಷಣೆಯನ್ನು ಹೇಳುವುದರಲ್ಲಿ ಬಾಧಕವೇನಿಲ್ಲ. ವಾಸ್ತವವಾಗಿ ಹೇಳುವುದಾದರೆ ಜಿಜ್ಞಾಸಾಪದದಲ್ಲಿ ಎರಡು ಶಬ್ದಗಳ ಸ್ಥಾನದಲ್ಲಿ ಒಂದೇ ಶಬ್ದವನ್ನು ಪ್ರಯೋಗಿಸಲಾಗಿದೆ. ಒಂದು ಶಬ್ದಕ್ಕೆ ಜಹಲ್ಲಕ್ಷಣೆಯಿಂದ ವಿಚಾರವೆಂದು ಅರ್ಥವಾಗುತ್ತದೆ. ಮತ್ತೊಂದು ಶಬ್ದಕ್ಕೆ ಇಚ್ಛಾವಿಷಯಕವಾದ ಜ್ಞಾನವು ಶಕ್ತಿಯಿಂದಲೇ ಬೋಧಿತವಾಗುತ್ತದೆ. ಆದ್ದರಿಂದ ಯಾವ ಆಕ್ಷೇಪಣೆಗೂ ಅವಕಾಶವಿಲ್ಲ. ಹೀಗೆ ಒಂದೇ ಲಕ್ಷಣೆಯನ್ನು ಹೇಳುವುದರಿಂದ ಎರಡು ಲಕ್ಷಣೆಗಳನ್ನು ಹೇಳುವ ಗೌರವದೋಷ ಸಂಭವಿಸುವುದಿಲ್ಲ. ಪ್ರತ್ಯಯದಲ್ಲಿ ಲಕ್ಷಣೆಹೇಳುವುದು ಎಲ್ಲಿಯೂ ಕಂಡುಬಂದಿಲ್ಲವೆಂಬ ದೋಷಕ್ಕೂ ಅವಕಾಶವಿಲ್ಲ.

**ಕಿಂಚ—ಇಷ್ಯಮಾಣಜ್ಞಾನತ್ಯಾಗೇನ ತಸ್ಯೈವ ಪುನಸ್ಸ್ವೀಕಾರಾತ್ ವಾಂತಭೋಜನನ್ಯಾಯಪ್ರಸಂಗಃ. ಜ್ಞಾನಸ್ಯ ಫಲವತ್ತ್ವಾಚ್ಚ. ಅನುಪಪತ್ತೌ ಹಿ ಸಾಧ್ಯತ್ವಂ ಲಕ್ಷ್ಯಂ, ತತ್ರ ಮೋಕ್ಷಸಾಧನಸ್ಯೈವ ಸಫಲತ್ವಮಿತಿ ತದಂಶೋಽಪಿ ಲಕ್ಷ್ಯತೇ. ನ ಚೇಷ್ಟಾಪತ್ತಿಃ–ತಸ್ಯಾರ್ಥಿಕತ್ವಕಥನವಿರೋಧಾತ್. ಪ್ರತ್ಯಯಾನಾಂ ಪ್ರಕೃತ್ಯರ್ಥಾನ್ವಿತಸ್ವಾರ್ಥಾಭಿಧಾಯಕತ್ವನಿಶ್ಚಯಾಚ್ಚ. ಜಿಜ್ಞಾಸಾಪದೇನೇತಿ ಗ್ರಂಥವಿರೋಧಾಚ್ಚಾಹುಃ. ವಾಕ್ಯೇ ತಾವನ್ನೈಕಲಕ್ಷಣಾ ಸಂಭವತಿ, ಶಕ್ಯಸಂಬಂಧಸ್ಯ ಲಕ್ಷಣಾತ್ವಾತ್. ಶಕ್ಯಾನ್ವಯಬಾಧೇ ಶಬ್ದೋಪಸ್ಥಿತಸ್ಯೈವ ವಿಷಯತ್ವಪ್ರಸಕ್ತ್ಯಾ ಸರ್ವಶಕ್ತಿಕಲ್ಪನೇ ಗೌರವಾತ್. ಅನನ್ಯಲಭ್ಯಸ್ಯ ಶಬ್ದಾರ್ಥತ್ವಾತ್.**

ಶಕ್ಯಸಂಬಂಧೇನೋಪಸ್ಥಿತಸ್ಯಾಪಿ ತಾತ್ಪರ್ಯವಶಾದ್ವಿಷಯತ್ವಮಂಗೀಕ್ರಿಯತ ಇತಿ ಶಕ್ಯಭೇಧೇ ತತ್ಸಂಬಂಧಾನಾಮಪಿ ಭೇದಾನ್ನಲಕ್ಷಣಾಯಾ ಏಕತ್ವಂ. ಏವಂ ಚಾರ್ಥವಾದಾದಿಸ್ಥಲೇಽಪಿ ಪದಾನಾಮೇವ ವಾಕ್ಯಾರ್ಥದ್ವಾರಾ ಪ್ರಾಶಸ್ತ್ಯಾದಿಲಕ್ಷಕತ್ವಂ ಪ್ರತ್ಯೇಕಮೇವ. ನತು ವಾಕ್ಯೇ ಕದಾಚಿದ್ವ್ಯಾಸಜ್ಯವೃತ್ತಿಲಕ್ಷಣಾ. ಪದಾನಾಂ ತದರ್ಥಾನಾಂ ತತ್ಸಂಬಂಧಾನಾಂ ಚ ನಾನಾತ್ವೇ ಲಕ್ಷಣಾಯಾ ಏಕತ್ವಾಸಂಭವಾತ್.

ಏವಂಚ– ವಾಕ್ಯಾರ್ಥಸಂಬಂಧೇನ ಯತ್ರ ವಸ್ತ್ವಂತರಂ ಪದೈರ್ಲಕ್ಷ್ಯತೇ ತತ್ರ ವಾಕ್ಯಲಕ್ಷಣಾ. ಯಥಾ—"ಅರ್ಥಮಂತರ್ವೇದಿ" ಇತ್ಯಾದೌ. ತದ್ಭಿನ್ನಾ ಪದಲಕ್ಷಣೇತಿ ಶಾಸ್ತ್ರೇ ವ್ಯವಹಾರಃ. ಏವಂ ಸ್ಥಿತೇ ಪ್ರಕೃತೇಽಪಿ ಸಮುದಾಯೇ ನೈಕಲಕ್ಷಣಾ. ಸಮುದಾಯಿಶಕ್ಯಸಂಬಂಧಾದೇವ ತದುಪಪತ್ತಿರಿತಿ ಪದತಾಂ ಚ ಕಥಮೇಕತ್ವಂ? ಸಮುದಾಯಿನಾಂ ಭೇದೇನ ತತ್ಸಂಬಂಧಸ್ಯಾಪಿ ಭೇದಾತ್. ಸಚ–ಏಕಪ್ರತೀತಿಜನಕತ್ವೇನ ಲಕ್ಷಣಾನಾಮೇಕತ್ವಂ, ಇಷ್ಟಾಪತ್ತೇಃ. ತಥಾ ಸತ್ಯನ್ಯತರಲಕ್ಷಣಯೈವ ವಿಚಾರೋಪಸ್ಥಿತೌ ಲಕ್ಷಣಾದ್ವಯೇನಾಪಿ ತದುಪಸ್ಥಿತ್ಯಂಗೀಕಾರೇ ವೈಯರ್ಥ್ಯಾತ್.

ಯತ್ತು—"ಛತ್ರಿಣೋ ಗಚ್ಛಂತಿ" ಇತ್ಯತ್ರ ಛತ್ರಿತ್ವಾದಿನೈವಾನ್ವಯಬೋಧ ಇತಿ, ತಚ್ಚಿಂತ್ಯಂ—"ಪ್ರಾಣಭೃತ ಉಪದಧಾತಿ" "ಸೃಷ್ಟೀರುಪದಧಾತಿ" ಇತ್ಯತ್ರೇವ ಸಮುದಾಯಸ್ಯ ಲಕ್ಷ್ಯತ್ವಾತ್. "ಛತ್ರಿಣೋ ಗಚ್ಛಂತಿ" ಇತಿ ಚ ಛತ್ರ್ಯಚ್ಛತ್ರಿಸಮುದಾಯೋ ಗಚ್ಛತೀತ್ಯರ್ಥಃ. ನಚ ಬಹುವಚನಾನುಪಪತ್ತಿಃ "ಗಂಗಾಯಾಂ ಘೋಷಮತ್ಸ್ಯೌ" ಇತ್ಯತ್ರ ವೃತ್ತಿದ್ವಯವಚನಾನಾಮೇಕವಚನಸ್ಯೈವ ಸಾಧುತ್ವೋಪಪತ್ತೇಃ. "ಅದಿತಿಃ ಪಾಶಾನ್" ಇತ್ಯತ್ರೇವಾವಯವಬಹುತ್ವೇನ ವಾ ಸಾಧುತ್ವಾತ್.

ನ ಚ ಶಕ್ಯಸಂಬಂಧಾಭಾವಃ –ಸಮುದಾಯಸಮುದಾಯಿನೋರಭೇದಸಂಬಂಧಾತ್—ತಯೋರಭೇದೇಪಿ ಪ್ರತ್ಯಯಯೋರ್ವೈಚಿತ್ರ್ಯಸ್ಯ ಸರ್ವಸಂಪ್ರತಿಪತ್ತೇಃ. ಶಕ್ಯತಾವಚ್ಛೇದಕಭಿನ್ನಧರ್ಮೇಣೋಪಸ್ಥಿತೇರೇವ ಲಕ್ಷ್ಯತ್ವಪ್ರಯೋಜಕತ್ವಾತ್. ನ ಚ ಜಹಲ್ಲಕ್ಷಣಾತೋ ಭೇದಪ್ರಸಂಗಃ-ರೂಪಾಂತರೇಣೋಪಸ್ಥಿತಸ್ಯಾಪಿ ಸ್ವಾರ್ಥಸ್ಯ ಕ್ರಿಯಾನ್ವಯಾತ್. "ಕಾಕೇಭ್ಯೋ ದಧಿ ರಕ್ಷ್ಯತಾಂ" ಇತ್ಯತ್ರ ದಧ್ಯುಪಘಾತಕತ್ವಪ್ರಕಾರಕಬೋಧಸ್ಯಾನುಭವಿಕಸ್ಯ ಅನ್ಯಥೋಪಪಾದಯಿತುಮಶಕ್ಯತ್ವಾಚ್ಚ.

ಇಚ್ಛಾವಿಷಯವಾದ ಜ್ಞಾನವನ್ನು ಮೊದಲು ತೊರೆದು ಅನಂತರ ಆ ಅರ್ಥವನ್ನೇ ಲಕ್ಷಣೆಯಿಂದ ಸ್ವೀಕರಿಸುವುದಾದರೆ, ತಾನೇ ವಾಂತಿಮಾಡಿದ್ದನ್ನು

ತಾನೇ ತಿಂದಹಾಗೆ ಆಗುವುದಿಲ್ಲವೇ? ಇಚ್ಛಾವಿಷಯವಾದ ಜ್ಞಾನವೇ ಫಲವಾದ್ದರಿಂದ, ಮೋಕ್ಷದ ಬದಲು ಜ್ಞಾನ ಹೇಗೆ ಫಲವಾಗಬಲ್ಲದು ಎಂಬ ಆಕ್ಷೇಪ ಬಂದರೆ ಅದು ಮೋಕ್ಷಕ್ಕೆ ಸಾಧನವಾದರೂ ಫಲವೂ ಆಗಬಹುದಾದ್ದರಿಂದ ಫಲತ್ವಾಂಶದಲ್ಲಿ ಲಕ್ಷಣೆ ಹೇಳಬೇಕಾಗುತ್ತದೆ. ಹಾಗೆ ಹೇಳಿದರೆ ದೋಷವೇನು ಎಂದರೆ ಫಲತ್ವಾಂಶವು ತನಗೆ ತಾನೆ ಸಿದ್ಧವಾಗುತ್ತದೆ ಎಂಬ ಮಾತಿಗೆ ವಿರೋಧ ಬರುವುದು. ಪ್ರತ್ಯಯಗಳೆಲ್ಲವೂ ಪ್ರಕೃತ್ಯರ್ಥದೊಂದಿಗೆ ಸೇರಿಯೇ ಅರ್ಥವನ್ನು ಕೊಡುವುವೆಂಬ ನಿಯಮಕ್ಕೂ ವಿರೋಧ ಉಂಟಾಗುವುದು.

ಜಿಜ್ಞಾಸಾಪದದಲ್ಲಿ ಏಕವಚನದಿಂದ ಒಂದೇಪದವಿರಬಹುದೇ ಹೊರತು ಎರಡು ಪದಗಳು ಇರಲಿಕ್ಕೆ ಅವಕಾಶವಿಲ್ಲವೆಂದು ಕೆಲವರು ಹೇಳುತ್ತಾರೆ. ಈ ಪಕ್ಷ ಸರಿಯಲ್ಲ. ಯಾಕೆಂದರೆ ಪ್ರಕೃತಿಪ್ರತ್ಯಯಗಳೆರಡೂ ಸೇರಿದ ವಾಕ್ಯಸಮುದಾಯದಲ್ಲಿ ಒಂದೇ ಲಕ್ಷಣೆಯನ್ನು ಹೇಳಲು ಸಾಧ್ಯವಿಲ್ಲ. ವಾಕ್ಯದಲ್ಲಿ ಶಕ್ತಿ ಇರುವುದಿಲ್ಲವಾದ್ದರಿಂದ ಶಕ್ಯಸಂಬಂಧರೂಪವಾದ ಲಕ್ಷಣೆಯು ವಾಕ್ಯಕ್ಕೆ ಬರುವಂತಿಲ್ಲ. ಶಕ್ಯಾರ್ಥದಲ್ಲಿ ಅನ್ವಯಕ್ಕೆ ಬಾಧ ಬಂದರೆ ಶಬ್ದಬೋಧದಲ್ಲಿ ಶಬ್ದದಿಂದ ತಿಳಿಯುವ ಅರ್ಥವೇ ವಿಷಯವಾಗುವುದರಿಂದ ಲಕ್ಷ್ಯಾರ್ಥದಲ್ಲಿಯೂ ಶಕ್ತಿಯನ್ನು ಹೇಳಿದರೆ ಗೌರವ ದೋಷವುಂಟಾಗುವುದು. ಬೇರೆ ಯಾವರೀತಿಯಿಂದಲೂ ದೊರಕದಿರುವ ಅರ್ಥದಲ್ಲಿಯೇ ಶಕ್ತಿಯನ್ನು ಹೇಳಬೇಕೇ ಹೊರತು ಲಕ್ಷಣೆಯಿಂದ ದೊರಕುವ ಅರ್ಥದಲ್ಲಿ ಶಕ್ತಿಯನ್ನು ಹೇಳಲಾಗುವುದಿಲ್ಲ. ಶಕ್ಯಸಂಬಂಧರೂಪವಾದ ಲಕ್ಷಣೆಯಿಂದ ತೋರುವ ಅರ್ಥವು ತಾತ್ಪರ್ಯಬಲದಿಂದ ಶಾಬ್ದಬೋಧಕ್ಕೆ ವಿಷಯವಾಗುವುದೆಂದು ಅಂಗೀಕರಿಸಿದಮೇಲೆ ಶಕ್ಯಾರ್ಥಗಳು ಬೇರೆಬೇರೆಯಾದರೆ ಶಕ್ಯಸಂಬಂಧವೂ ಬೇರೆಬೇರೆಯಾಗುವುದರಿಂದ ಒಂದೇ ಲಕ್ಷಣೆಯನ್ನು ಹೇಳಲು ಸಾಧ್ಯವೇ ಇಲ್ಲ. ಹೀಗೆಯೇ ಅರ್ಥವಾದ ಸ್ಥಳದಲ್ಲೂ ಪದಗಳಿಗೆ ಪ್ರಾಶಸ್ತ್ಯದಲ್ಲಿ ಲಕ್ಷಣೆಯನ್ನು ಹೇಳಬೇಕೇ ಹೊರತು ವಾಕ್ಯದಲ್ಲಿ ಲಕ್ಷಣೆಯನ್ನು ಹೇಳಲಾಗುವುದಿಲ್ಲ. ಒಟ್ಟುವಾಕ್ಯದಲ್ಲಿ ಒಂದು ಲಕ್ಷಣೆಇರಲಾರದು, ಪದಗಳು-ಅರ್ಥಗಳು, ಅವುಗಳ ಸಂಬಂಧಗಳು ಇವೆಲ್ಲವೂ ಬೇರೆಯಾದಮೇಲೆ ಒಂದೇ ಲಕ್ಷಣೆಯನ್ನು ಹೇಳಲು ಹೇಗೆ ಸಾಧ್ಯವಾದೀತು? ಆದ್ದರಿಂದ ವಾಕ್ಯಾರ್ಥಸಂಬಂಧದಿಂದ ಎಲ್ಲಿ ಬೇರೆ ಅರ್ಥವು ಪದಗಳಿಂದಲೇ ಬೋಧಿತವಾಗುವುದೋ ಅಲ್ಲಿ ವಾಕ್ಯಲಕ್ಷಣೆಯನ್ನು ಹೇಳಬೇಕು. 'ಅರ್ಥಮಂತರ್ವೇದಿ' ಎಂದು ಮುಂತಾದ ವಾಕ್ಯಗಳಲ್ಲಿ ಇದು ಕಂಡುಬರುತ್ತದೆ. ಇದನ್ನು ಬಿಟ್ಟು ಬೇರೆ ಕಡೆಗಳಲ್ಲಿ ಲಕ್ಷಣೆ ಹೇಳುವುದಕ್ಕೆ ಪದಲಕ್ಷಣೆ ಎಂದು ಶಾಸ್ತ್ರದಲ್ಲಿ ಹೇಳಲಾಗಿದೆ. ಹೀಗಾದಮೇಲೆ ಇಲ್ಲಿಯೂ ಪ್ರಕೃತಿಪ್ರತ್ಯಯಸಮುದಾಯದಲ್ಲಿ ಒಂದೇ ಲಕ್ಷಣೆಯನ್ನು ಹೇಳುವುದು ಯುಕ್ತವಲ್ಲ. ಸಮುದಾಯದಲ್ಲಿ ಸೇರಿರುವ ಪದಗಳು ಬೇರೆಬೇರೆಯಾದ್ದರಿಂದ ಅವುಗಳ ಶಕ್ಯಸಂಬಂಧವೂ ಬೇರೆಯಾಗುವುದು. ಆದರಿಂದ ಒಂದೇ ಲಕ್ಷಣೆ ಹೇಳಲು ಸಾಧ್ಯವೇ ಇಲ್ಲ. ಲಕ್ಷಣೆ ಬೇರೆಯಾದರೂ ಒಂದೇ ಜ್ಞಾನವನ್ನು ಹುಟ್ಟಿಸುವುದರಿಂದ ಒಂದೇ

ಲಕ್ಷಣೆ ಎಂದು ವ್ಯವಹರಿಸುವುದಾದರೆ, ನಮಗೂ ಅದು ಇಷ್ಟವೇ ಆಗುತ್ತದೆ, ಆದರೆ ಪ್ರಕೃತಿಪ್ರತ್ಯಯಗಳಲ್ಲಿ ಯಾವುದಾದರೊಂದು ಕಡೆ ಮಾತ್ರ ಲಕ್ಷಣೆಯನ್ನು ಹೇಳುವುದರಿಂದಲೇ ನಿರ್ವಾಹವಾಗುವುದರಿಂದ ಎರಡು ಕಡೆಗಳಲ್ಲಿ ಲಕ್ಷಣೆ ಹೇಳುವುದು ವ್ಯರ್ಥ.

'ಛತ್ರಿಗಳು ಹೋಗುತ್ತಾರೆ' ಎಂಬುವ ಕಡೆ, ಛತ್ರವುಳ್ಳವರು ಎಂಬ ಪ್ರತ್ಯೇಕವಾದ ಆಕಾರದಿಂದಲೇ ಅನ್ವಯ ಬರುವುದೆಂದು ಹೇಳಿದ್ದನ್ನು ಒಪ್ಪಲಾಗುವುದಿಲ್ಲ. 'ಛತ್ರವುಳ್ಳವರು-ಛತ್ರವಿಲ್ಲದವರು' ಹೀಗೆ ಒಟ್ಟು ಸಮುದಾಯರೀತಿಯಲ್ಲಿಯೇ ಅನ್ವಯವಾಗುವುದು ಅನುಭವಸಿದ್ಧವಾಗಿದೆ. ಸಮುದಾಯವು ಒಂದೇ ಆಗುವುದರಿಂದ 'ಗಚ್ಛಂತಿ' ಎಂಬಲ್ಲಿ ಏಕವಚನವೇ ಬರಬೇಕಾಗುವುದಿಲ್ಲವೇ? ಆದರೆ ಇಲ್ಲಿ ಹೇಗೆ ಬಹುವಚನ ಬಂದಿದೆ? ಎಂದು ಕೇಳುವುದೂ ಯುಕ್ತವಲ್ಲ. 'ಗಂಗೆಯಲ್ಲಿ ಘೋಷ ಮತ್ಸ್ಯ"ಗಳು ಎಂಬಲ್ಲಿ ಶಕ್ತಿ ಮತ್ತು ಲಕ್ಷಣೆಗಳೆರಡೂ ಪ್ರತ್ಯೇಕವಾಗಿ ಸಂಭವಿಸುವುದರಿಂದ ಗಂಗೆಯಲ್ಲಿ ಹಳ್ಳಿಯೂ ಮತ್ಸ್ಯವೂ ಇರುವುದೆಂದು ಏಕವಚನ ಬರಬಹುದೇ ಹೊರತು ಒಂದೇ ವೃತ್ತಿಯಿಂದ ಬೋಧೆ ಬರುವ "ಛತ್ರಿಣೋ ಗಚ್ಛಂತಿ" ಎಂಬುವ ಕಡೆ ಏಕವಚನ ಬರುವಂತಿಲ್ಲ. ಅಥವಾ 'ಅದಿತಿಃ ಪಾಶಾನ್' ಎಂಬುವ ಕಡೆ ಅವಯವಗಳಲ್ಲಿರುವ ಬಹುತ್ವವನ್ನು ಗಮನಿಸಿ ಬಹುವಚನ ಬಂದಿರುವಂತೆ, ಸಮುದಾಯದಲ್ಲಿ ಸೇರಿರುವ ಮನುಷ್ಯರು ಅನೇಕರಿರುವುದರಿಂದ 'ಗಚ್ಛಂತಿ' ಎಂದು ಬಹುವಚನ ಬಂದಿದೆ ಎಂದಾದರೂ ಹೇಳಬಹುದು. ಒಟ್ಟು ಸಮುದಾಯದಲ್ಲಿ ಶಕ್ಯ ಸಂಬಂಧ ಹೇಗೆ ಬರುವುದೆಂದು ಕೇಳಿದರೆ ಸಮುದಾಯಕ್ಕೂ ಅದರಲ್ಲಿ ಸೇರಿರುವ ವಸ್ತುಗಳಿಗೂ ಅಭೇಧವೇ ಇರುವುದರಿಂದ ವಸ್ತುಗಳಲ್ಲಿ ಶಕ್ಯಸಂಬಂಧವಿದ್ದರೆ ಅವುಗಳ ಸಮುದಾಯದಲ್ಲೂ ಶಕ್ಯಸಂಬಂಧವಿರುವುದರಲ್ಲಿ ಅಡ್ಡಿ ಏನಿಲ್ಲ ಎರಡೂ ಅಭಿನ್ನವಾದರೂ ಪ್ರತೀತಿಯಲ್ಲಿ ವೈಲಕ್ಷಣ್ಯವಿದೆ ಎಂಬುದು ಸರ್ವಾನುಭವಸಿದ್ಧವೆಂದು ಒಪ್ಪಲೇಬೇಕು. ಶಕ್ಯತಾವಚ್ಛೇದಕಕ್ಕಿಂತಲೂ ಬೇರೆ ಧರ್ಮವು ತೋರಿದರೇನೇ ಅದು ಶಕ್ಯಕ್ಕಿಂತಲೂ ಭಿನ್ನವಾಗಬಲ್ಲುದು. ಬೇರೆ ಧರ್ಮ ತೋರುವುದಾದರೆ ಜಹಲ್ಲಕ್ಷಣೆಗೂ ಇದಕ್ಕೂ ಏನು ವ್ಯತ್ಯಾಸವೆಂದು ಕೇಳಿದರೆ, ಬೇರೆ ಧರ್ಮದ ಪುರಸ್ಕಾರದಿಂದ ಪದಾರ್ಥಗಳು ತೋರಿದರೂ ಎಲ್ಲಿ ಶಕ್ಯಾರ್ಥಕ್ಕೂ ಕ್ರಿಯಾನ್ವಯ ಬರುವುದೋ ಅಲ್ಲಿಯೇ ಅಜಹಲ್ಲಷಣೆಯನ್ನು ಹೇಳಬೇಕು. 'ಕಾಗೆಗಳಿಂದ ಮೊಸರನ್ನು ಕಾಪಾಡಬೇಕು' ಎಂದು ಹೇಳುವಾಗ 'ಮೊಸರಿಗೆ ಹಾನಿಯನ್ನುಂಟುಮಾಡುವಿಕೆ' ಎಂಬ ಧರ್ಮದಿಂದ ಬೆಕ್ಕು ಮೊದಲಾದ ಇತರ ಪ್ರಾಣಿಗಳಿಗೆ ಬೋಧವುಂಟಾದರೂ ಶಕಾರ್ಥವಾದ ಕಾಗೆಗೂ ಕ್ರಿಯಾನ್ವಯವಿದ್ದೇ ಇರುತ್ತದೆ. ಜಹಲ್ಲಕ್ಷಣೆಯಲ್ಲಿ ಹೀಗೆ ಸಂಭವಿಸುವುದಿಲ್ಲ. ಅಲ್ಲಿ ಶಕ್ಯಾರ್ಥವನ್ನು ಬಿಡಲೇಬೇಕಾಗುತ್ತದೆ.

**ವಸ್ತುತಸ್ತು—ಯತ್ರ ಛತ್ರ್ಯಚ್ಛತ್ರಿಸಮುದಾಯತ್ವೇನ ರೂಪೇಣ ಗಮನಾನ್ವಯಪ್ರತಿಪತ್ತ್ಯರ್ಥಂ "ಛತ್ರಿಣೋ ಗಚ್ಛಂತಿ" ಇತಿ ವಾಕ್ಯ**

ಪ್ರಯೋಗಃ, ತತ್ರಾಜಹಲ್ಲಕ್ಷಣಯಾ ಶಕ್ಯಾಶಕ್ಯೋಪಸ್ಥಿತಿರ್ದುರ್ವಾರಾ. ಅತ ಏವ ಗುಹಾಧಿಕರಣೇ ಮಂಚನಪಂಡಿತೀಯೇ–"ಋತಂ ಪಿಬಂತೌ" ಇತ್ಯತ್ರ ಪಿಬದಪಿಬತ್ಸಮುದಾಯಲಕ್ಷಣಾಯಾ ಅಜಹಲ್ಲಕ್ಷಣತಾ ಪ್ರತಿಪಾದಿತಾ. ಏವಂಚ ಲಿಂಗಸಮವಾಯಾಧಿಕರಣೇ ಉಪಧಾನಯೋಗಿತಯಾ ಗಣೇ ಸ್ವಾರ್ಥೋಽಪ್ಯಂತರ್ಭೂತ ಇತಿ ನ ವೃತ್ತಿದ್ವಯವಿರೋಧ ಇತ್ಯುಕ್ತಂ. ಕೈವಲ್ಯಪ್ರಕಾಶೇ ವ್ಯಾಖ್ಯಾತಂ ಚ ಪರಮಶಿವಾರಾಧ್ಯಭಟ್ಟಾಚಾರ್ಯೇಣ "ಉಪಧಾನಯೋಗಿತಯಾ ಗಣಸ್ಯ ಲಕ್ಷ್ಯತಾ" ಇತಿ.

ಯದಿ ಚ ವೃತ್ತಿದ್ವಯಮಪಿ ತಾತ್ಪರ್ಯವಶಾತ್ಸಕೃದುಚ್ಚರಿತಸ್ಯಾಪ್ಯಂಗೀಕೃತ್ಯ ಛತ್ರಿತ್ವಾಚ್ಛತ್ರಿತ್ವಪ್ರಕಾರಕಬೋಧೇಚ್ಛಯಾ "ಛತ್ರಿಣೋ ಗಚ್ಛಂತಿ" ಇತಿ ವಾಕ್ಯಮಂಗೀಕೃತ್ಯ "ಗಂಗಾಯಾಂ ಘೋಷಮತ್ಸ್ಯೌ" ಇತ್ಯತ್ರೇವ ವೃತ್ತಿದ್ವಯವ್ಯಾಪಾರೋಽಪ್ಯಂಗೀಕ್ರಿಯತೇ, ಅಂಗೀಕ್ರಿಯತಾಂ. ನಚೈತಾವತಾ ಉಕ್ತಸ್ಥಲೇ ಲಕ್ಷಣಯಾ ಶಕ್ಯಾಶಕ್ಯೋಪಸ್ಥಿತಿರ್ವಾರಯಿತುಂ ಶಕ್ಯೇತ್ಯವಶ್ಯಾಭ್ಯುಪೇಯತ್ವಾತ್, ಅಜಹಲ್ಲಕ್ಷಣಾನಿರಾಸಾಯಾಸವೈಫಲ್ಯಮಿತಿ ದಿಕ್.

ಏವಂ ಸ್ಥಿತೇ ಪ್ರಕೃತೇಽಜಹಲ್ಲಕ್ಷಣಾಂಗೀಕಾರೇ ಏಕವೃತ್ತ್ಯೋಪಸ್ಥಿತಯೋರ್ವಿಚಾರಜ್ಞಾನಯೋಃ "ವಷಟ್ಕರ್ತುಃ ಪ್ರಥಮಭಕ್ಷಃ" ಇತ್ಯತ್ರೇವ ಉದ್ದೇಶ್ಯವಿಧೇಯಭಾವೇನಾನ್ವಯೋ ನ ಸ್ಯಾತ್. ದರ್ಶಿತಶ್ಚ ತಾದೃಶಾನ್ವಯಃ "ಜ್ಞಾನಾಯ ವಿಚಾರಃ ಕರ್ತವ್ಯ" ಇತಿ ಪರಮಶಿವಾನಂದಾರಾಧ್ಯಸ್ವಾಮಿನಾ ಶಿವಜ್ಞಾನಚಂದ್ರೋದಯೇ. ನ ಚ ಪ್ರಕೃತೇ ವೃತ್ತಿದ್ವಯಮೇವಾಂಗೀಕ್ರಿಯತೇ ನಾಜಹಲ್ಲಕ್ಷಣೇತಿ ವಾಚ್ಯಂ. ತಥಾ ಸತ್ಯಜಹಲ್ಲಕ್ಷಣೋಕ್ತಿವಿರೋಧಾತ್. "ಗಂಗಾಯಾಂ ಘೋಷಮತ್ಸ್ಯೌ" ಇತ್ಯಾದೌ ವೃತ್ತಿದ್ವಯಸ್ಥಲೇ ಅಜಹಲ್ಲಕ್ಷಣಾವ್ಯವಹಾರಾಭಾವಾತ್.

ಆಸ್ತಾಂ ತಾವಜ್ಜಹತ್ತ್ವಾಜಹತ್ತ್ವವಿಚಾರಃ, ವೃತ್ತಿದ್ವಯಾಂಗೀಕಾರೇಽಪಿ ಪ್ರಕೃತೇ ನೈಕಲಕ್ಷಣಯಾ ನಿರ್ವಾಹಃ-ತಥಾಹಿ-ಜ್ಞಾನಸ್ಯ ಸಾಧ್ಯತ್ವೋಪಸ್ಥಿತಿವ್ಯತಿರೇಕೇಣ ತಾವನ್ನ ಸಾಧ್ಯತಯಾಽನ್ವಯಃ. ನ ಚೇಚ್ಛಾವಿಷಯತ್ವಮಾತ್ರಂ ಸಾಧ್ಯತ್ವಂ, ಅನಿಚ್ಛಾವಿಷಯಸ್ಯಾಪಿ ದುಃಖಸ್ಯ ಸಾಧ್ಯತ್ವಾತ್. ಅಸಾಧ್ಯಸ್ಯಾಪಿ ಇಚ್ಛಾವಿಷಯತ್ವಾತ್, ವಿಧುರಸ್ಯಾತೀತಭಾರ್ಯಾಯಾಮಿಚ್ಛೋತ್ಪತ್ತಿದರ್ಶನಾತ್, ಇಷ್ಟಸಾಧ್ಯಶಬ್ದಯೋರಪರ್ಯಾಯತ್ವಾಚ್ಚ. ಅತ ಏವೇಷ್ಟತ್ವೇನ ಸಾಧ್ಯತ್ವಾನುಮಾನಂ ನಿರಸ್ತಂ, ವ್ಯಭಿಚಾರಸ್ಯೋಕ್ತತ್ವಾತ್. ಅಸ್ತು ವಾ ಸಾಧ್ಯತ್ವಾನುಮಾನಂ, ತಥಾಪಿ ಪ್ರಕೃತೇ ನಾಪ್ಯುಪಯೋಗಃ.—ವೃತ್ತ್ಯೋಪಸ್ಥಿತಸ್ಯೈವ ಶಾಬ್ದಾನ್ವಯಬೋಧವಿಷಯತ್ವನಿಯಮಾತ್; ಅನ್ಯಥಾ ವಿಚಾರೇಽಪಿ ಲಕ್ಷಣಾ ನ

**ಸ್ಯಾತ್. ಇಷ್ಯಮಾಣಜ್ಞಾನಸಾಧ್ಯತ್ವೇನ ಅನುಮಾನಾದಿನೋಪಸ್ಥಿತಸ್ಯ ಅನ್ವಯಾದ್ಧೀವಿಷಯತ್ವಸಂಭವಾತ್.**

ವಾಸ್ತವವಾಗಿ ಹೇಳುವುದಾದರೆ, ಎಲ್ಲಿ ಛತ್ರಿ ಅಛತ್ರಿಗಳ ಸಮುದಾಯವನ್ನು ಮುಂದಿಟ್ಟುಕೊಂಡು ಕ್ರಿಯಾನ್ವಯವನ್ನು ತಿಳಿಸುವ ಉದ್ದೇಶದಿಂದ 'ಛತ್ರಿಣೋ ಗಚ್ಛಂತಿ' ಎಂಬ ಪ್ರಯೋಗ ಬರುವುದೋ ಅಲ್ಲಿ ಶಕ್ಯಾರ್ಥ ಲಕ್ಷ್ಯಾರ್ಥವೆರಡೂ ಒಟ್ಟು ಅಜಹಲ್ಲಕ್ಷಣೆಯಿಂದಲೇ ತೋರುತ್ತವೆ. ಆದ್ದರಿಂದಲೇ ಪಂಚನಪಂಡಿತರು ಬರೆದ ಗ್ರಂಥದಲ್ಲಿ ಗುಹಾಧಿಕರಣದಲ್ಲಿ 'ಋತಂ ಪಿಬಂತೌ' ಎಂಬಲ್ಲಿ ಕುಡಿಯುವವನು, ಕುಡಿಯದಿರುವವನು ಇವರ ಸಮುದಾಯದಲ್ಲಿಯೇ ಲಕ್ಷಣೆಯನ್ನು ಹೇಳಿದ್ದಾರೆ. ಹೀಗೆಯೇ ಛತ್ರಿ ಅಛತ್ರಿಗಳ ಸಮುದಾಯದಲ್ಲಿ ಲಕ್ಷಣೆ ಹೇಳುವಾಗ ಶಕ್ಯಾರ್ಥವೂ ಅದರಲ್ಲಿಯೇ ಸೇರುವುದರಿಂದ ವೃತ್ತಿಗಳೆರಡಕ್ಕೂ ವಿರೋಧವುಂಟಾಗುವ ಸಂಭವವಿಲ್ಲ ವೆಂದೂ ಅವರು ಹೇಳಿದ್ದಾರೆ. ಕೈವಲ್ಯಪ್ರಕಾಶದಲ್ಲಿ ಪರಮಶಿವಾರಾಧ್ಯರು ಉಪಧಾನ ಯೋಗ್ಯವಾಗಿರುವುದರಿಂದ ಛತ್ರಿ ಅಛತ್ರಿ ಇವರ ಸಮುದಾಯದಲ್ಲಿ ಲಕ್ಷಣೆಯನ್ನು ಹೇಳಿರುವರು. ಒಂದೇಸಾರಿ ಹೇಳಿದ ಶಬ್ದಕ್ಕೂ ತಾತ್ಪರ್ಯಬಲದಿಂದ ಎರಡು ವೃತ್ತಿಗಳನ್ನು ಅಂಗೀಕರಿಸಿ ಛತ್ರಿ-ಅಛತ್ರಿ ಎಂಬ ಎರಡು ಧರ್ಮಗಳನ್ನು ಮುಂದಿಟ್ಟು ಕೊಂಡು ಶಾಬ್ದಬೋಧವನ್ನು ತಿಳಿಸುವ ಇಚ್ಛೆಯಿಂದ 'ಛತ್ರಿಣೋ ಗಚ್ಛಂತಿ' ಎಂಬ ವಾಕ್ಯ ಬಂದಿದೆ ಎಂದು ಅಂಗೀಕರಿಸಿ ಗಂಗೆಯಲ್ಲಿ ಘೋಷವೂ ಮತ್ಸ್ಯವೂ ಎಂಬಂತೆ ಇಲ್ಲಿಯೂ ಶಕ್ತಿ ಮತ್ತು ಲಕ್ಷಣೆ ಈ ಎರಡು ವೃತ್ತಿಗಳನ್ನು ಅಂಗೀಕರಿಸುವುದಾದರೆ ಹಾಗೆಯೇ ಮಾಡಬಹುದು. ಆದರೂ ಇಷ್ಟರಿಂದಲೇ 'ಶ್ರೋತವ್ಯಃ' ಎಂಬಲ್ಲಿ ಲಕ್ಷಣೆ ಯಿಂದಲೇ ಶಕ್ಯಾರ್ಥ ಲಕ್ಷ್ಯಾರ್ಥವೆರಡನ್ನೂ ಸೇರಿಸಿ ಒಟ್ಟಿಗೆ ಬೋಧಬರುವುದು ಸಾಧ್ಯ ವಾಗುವುದಿಲ್ಲ. ಹೀಗೆ ಹೇಳಿ ಅಜಹಲ್ಲಕ್ಷಣೆಯನ್ನು ನಿರಾಕರಿಸುವ ಶ್ರಮಕ್ಕೆ ತಕ್ಕ ಫಲವೂ ದೊರಕದೇಹೋಗುತ್ತದೆ. ಹಾಗಾದರೆ ಅಜಹಲ್ಲಕ್ಷಣೆಯಿಂದ 'ಶ್ರೋತವ್ಯಃ' ಎಂಬಲ್ಲಿ ವಿಚಾರ ಮತ್ತು ಜ್ಞಾನ ಎಂಬ ಎರಡು ಅರ್ಥಗಳ ಬೋಧವನ್ನು ಒಪ್ಪುವು ದಾದರೆ, ಯಜ್ಞದಲ್ಲಿ "ವಷಟ್ಕರ್ತನಿಗೆ ಮೊದಲು ಭಕ್ಷ್ಯ ಸಲ್ಲಬೇಕು" ಎಂಬ ಕಡೆ ಇರುವಂತೆ ಒಂದೇ ವೃತ್ತಿಯಿಂದ ತೋರುವ ಎರಡು ಪದಾರ್ಥಗಳಿಗೆ ಉದ್ದೇಶ್ಯ ವಿಧೇಯಭಾವದಿಂದ ಪರಸ್ಪರಾನ್ವಯವಾಗದೇ ಹೋದೀತು. ಆದ್ದರಿಂದಲೇ ಪರಮ ಶಿವಾನಂದಾರಾಧ್ಯರು ಶಿವಜ್ಞಾನಚಂದ್ರೋದಯದಲ್ಲಿ ಉದ್ದೇಶ್ಯವಿಧೇಯಭಾವದಿಂದ ವಿಚಾರಜ್ಞಾನಗಳೆರಡಕ್ಕೂ ಅನ್ವಯವನ್ನು ಹೇಳಿರುವರು. ಆದರೆ ಇಲ್ಲಿ ಎರಡು ವೃತ್ತಿ ಗಳನ್ನೇ ಒಪ್ಪೋಣ, ಅಜಹಲ್ಲಕ್ಷಣೆ ಬೇಕಾಗಿಲ್ಲವೆಂದು ಹೇಳುವುದೂ ಯುಕ್ತವಲ್ಲ. ಇದುವರಿಗೂ ಅಜಹಲ್ಲಕ್ಷಣೆಯನ್ನು ಹೇಳಿ ಈಗ ಬೇಡವೆಂದರೆ, ತನ್ನ ಮಾತಿಗೆ ತನ್ನಿಂದಲೇ ವಿರೋಧವುಂಟಾಗುವುದು–'ಗಂಗಾಯಾಂ ಘೋಷಮತ್ಸ್ಯೌ' ಎಂದು ಎರಡು ವೃತ್ತಿಗಳನ್ನೂ ಒಪ್ಪುವ ಕಡೆಗಳಲ್ಲಿ ಅಜಹಲ್ಲಕ್ಷಣೆಯವ್ಯವಹಾರವೇ ಇಲ್ಲ.

ಜಹಲ್ಲಕ್ಷಣೆ ಅಥವಾ ಅಜಹಲ್ಲಕ್ಷಣೆ ಎಂಬ ವಿಚಾರ ಹಾಗಿರಲಿ. ಎರಡು ವೃತ್ತಿಗಳನ್ನು ಒಪ್ಪುವ ಪಕ್ಷದಲ್ಲೂ ಪ್ರಕೃತಿಯೊಂದಕ್ಕೆ ಲಕ್ಷಣೆಯನ್ನು ಹೇಳುವುದರಿಂದಲೇ ನಿರ್ವಾಹವಾಗುವುದಿಲ್ಲ. ಪ್ರಕೃತ್ಯರ್ಥವಾದ ಜ್ಞಾನದಲ್ಲಿ ಸಾಧ್ಯವೆಂಬ ಅಂಶವು ತೋರದಿದ್ದರೆ, ಅದಕ್ಕೆ ಸಾಧ್ಯಾಂಶದಿಂದ ಅನ್ವಯ ಬರುವುದಿಲ್ಲ. ಇಚ್ಛೆಯಲ್ಲಿ ವಿಷಯವಾಗುವ ಮಾತ್ರಕ್ಕೆ ಅದು ಸಾಧ್ಯವಾಗುವುದಿಲ್ಲ. ಇಚ್ಛೆಗೆ ವಿಷಯವಲ್ಲದಿದ್ದರೂ ದುಃಖದಿಂದ ಸಾಧ್ಯವಾಗುತ್ತದೆ. ಇಚ್ಛೆಗೆ ವಿಷಯವಾದರೂ 'ಹೆಂಡತಿಯಿಲ್ಲದವನು ಹೆಂಡತಿಯನ್ನು ಇಚ್ಛಿಸುವಂತೆ ಅಸಾಧ್ಯವೇ ಆಗುತ್ತದೆ. ಇಷ್ಟ ಮತ್ತು ಸಾಧ್ಯವೆಂಬ ಪದಗಳು ಒಂದೇ ಅರ್ಥವನ್ನು ಕೊಡುವುದಿಲ್ಲ. ಆದ್ದರಿಂದಲೇ ಇಷ್ಟವಾದರೆ ಅದು ಸಾಧ್ಯವಾಗಲೇಬೇಕು ಎಂದು ಅನುಮಾನಿಸುವುದು ಯುಕ್ತವಲ್ಲ. ಹೆಂಡತಿಯಿಲ್ಲದವನಿಗೆ ಹೆಂಡತಿಯಮೇಲಿನ ಇಚ್ಛೆ ಸಾಧ್ಯವಾಗದಿರುವುದರಿಂದ ಆ ಅನುಮಾನಕ್ಕೆ ಅತಿವ್ಯಾಪ್ತಿದೋಷ ಸಂಭವಿಸುತ್ತದೆ. ಒಂದುವೇಳೆ ಆ ಅನುಮಾನ ಸರಿಯಾದರೂ ಅದರಿಂದ ಇಲ್ಲಿ ಯಾವ ಪ್ರಯೋಜನವೂ ಇಲ್ಲ. ಶಬ್ದದಿಂದ ಸ್ಪಷ್ಟವಾಗಿ ತಿಳಿಯಬರುವುದೇ ಶಾಬ್ದಬೋಧಕ್ಕೆ ವಿಷಯವಾಗುವುದೇ ಹೊರತು ಅನುಮಾನದಿಂದ ತೋರುವ ಅರ್ಥವು ಶಾಬ್ದಬೋಧದಲ್ಲಿ ಅನ್ವಯಿಸಲಾರದು. ಹೀಗೆ ಒಪ್ಪದೇ ಇದ್ದರೆ ವಿಚಾರದಲ್ಲಿ ಲಕ್ಷಣೆ ಅನಾವಶ್ಯಕವಾಗುವುದು. ಇಚ್ಛೆಗೆ ವಿಷಯವಾದ ಜ್ಞಾನಕ್ಕೆ ವಿಚಾರವೇ ಫಲವಾದ್ದರಿಂದಲೂ, ಅನುಮಾನದಿಂದಲೇ ವಿಚಾರವೆಂಬ ಅರ್ಥವು ದೊರಕುವುದರಿಂದಲೂ ವಿಚಾರದಲ್ಲಿಯೂ ಲಕ್ಷಣೆಯನ್ನು ಹೇಳುವ ಆವಶ್ಯಕತೆ ಇಲ್ಲ.

**ಕಿಂಚ—ಪ್ರತ್ಯಯಾರ್ಥವಿಶೇಷಣತ್ವೇನೋಪಸ್ಥಿತಸ್ಯ ಜ್ಞಾನಸ್ಯ ಸ್ವಾತಂತ್ರ್ಯೇಣೈವ ತದುಪಸ್ಥಿತಿರ್ನಾಸ್ತಿ. "ಗೌರ್ನಿತ್ಯಾ" ಇತ್ಯಾದೌ ಗೋತ್ವಸ್ಯ ಸ್ವತಂತ್ರೋಪಸ್ಥಿತಯೇ ಲಕ್ಷಣಾಯಾ ಅಂಗೀಕಾರಾತ್. ತಸ್ಮಾತ್ ಪ್ರಕೃತ್ಯಾ ಸಾಧ್ಯಾವಸ್ಥಂ ಜ್ಞಾನಂ ಲಕ್ಷಣೀಯಮೇವೇತಿ ಲಕ್ಷಣಾದ್ವಯಸ್ಯಾವಶ್ಯಕತ್ವಾತ್ ಪ್ರತ್ಯಯ ಏವ ವಿಚಾರಲಕ್ಷಣಾ ಯುಕ್ತಾ, ನತು ಸಮುದಾಯೇ, ಏತೇನ ತತ್ಕಲ್ಪನಾಽಪಿ ನಿರಸ್ತಾ. ಏಕೇನ ವಿಚಾರಲಕ್ಷಣಾಯಾ ಇತರೇಣಾಪಿ ಸಾಧ್ಯಾವಸ್ಥಜ್ಞಾನಲಕ್ಷಣಾಯಾ ಅಪ್ಯುಕ್ತಕ್ರಮೇಣಾವಶ್ಯಕತ್ವೇನ ಪದದ್ವಯಂ ಕಲ್ಪಯಿತ್ವಾ ಪದದ್ವಯೇಽಪಿ ಲಕ್ಷಣಾಂಗೀಕಾರಾಪೇಕ್ಷಯಾ ಏಕಸ್ಮಿನ್ ಶ್ರುತಪದೇ ಪ್ರಕೃತಿಪ್ರತ್ಯಯಲಕ್ಷಣಾದ್ವಯಕಲ್ಪನಾತ್ ದ್ವಯೋರೇವ ಲಘುತರತ್ವಾತ್. ವಿಚಾರಲಕ್ಷಣಾಪಿ ನ ಸಮುದಾಯೇ ಯುಕ್ತಾ. ಉಕ್ತಯುಕ್ತೇಃ, ಪ್ರಕೃತೇಃ ಪ್ರತ್ಯಯಸ್ಯ ವಾ ತಲ್ಲಕ್ಷಕತ್ವಾದನ್ಯತರವೈಯರ್ಥ್ಯಾದಿತಿ. ಯತ್ತು ಸನ್‌ಪ್ರತ್ಯಯಸ್ಯಲಕ್ಷಕತ್ವಂ ನ ದೃಷ್ಟಮಿತಿ ತನ್ನ. "ಸಕ್ತೂನ್ ಜುಹೋತಿ" ಇತ್ಯತ್ರ ದ್ವಿತೀಯಾಯಾಃ ಕರಣತ್ವಲಕ್ಷಕತ್ವಸ್ಯ, "ಪ್ರಯಾಜಶೇಷೇಣ ಹವೀಂಷ್ಯಭಿಘಾರಯತಿ" ಇತ್ಯತ್ರ ತೃತೀಯಾದ್ವಿ**

ತೀಯಯೋಃ ಕರ್ಮತ್ವಾಧಾರತ್ವಲಕ್ಷಕತ್ವಸ್ಯ, ಆಖ್ಯಾತಸ್ಯ ಕೃತ್ಯರ್ಥಕತ್ವವಾದಿನಾಂ "ರಥೋ ಗಚ್ಛತಿ" ಇತ್ಯತ್ರ ವ್ಯಾಪಾರಲಕ್ಷಕತ್ವಸ್ಯ, ಫಲಾನುಕೂಲವ್ಯಾಪಾರಾರ್ಥಕತ್ವವಾದಿನಾಮಪಿ "ಜಾನಾತಿ-ಇಚ್ಛತಿ-ದ್ವೇಷ್ಟಿ-ಯತತೇ" ಇತ್ಯಾದೌ ಕ್ರಿಯಾನುಕೂಲಕೃತಿವ್ಯಾಪಾರಯೋರಪ್ರತೀತೇಃ ಜ್ಞಾನಾದ್ಯಾಶ್ರಯತ್ವಪ್ರತೀತೇಃ, "ನಶ್ಯತಿ" ಇತ್ಯಾದೌ ಚ ನಾಶಪ್ರತಿಯೋಗಿತ್ವಪ್ರತೀತೇರಾಶ್ರಯತ್ವಪ್ರತಿಯೋಗಿತ್ವಲಕ್ಷಕತ್ವಸ್ಯ ಚ ಬಹುಳಮುಪಲಬ್ಧೇಃ. ಗುಹಾಧಿಕರಣಪೂರ್ವಪಕ್ಷೇ "ಋತಂ ಪಿಬಂತೌ" ಇತ್ಯತ್ರ ಬುದ್ಧಿಕ್ಷೇತ್ರಜ್ಞಸಾಧಾರಣಾರ್ಥಶತೃಪ್ರತ್ಯಯಸ್ಯ ಕರ್ತೃತ್ವಶಕ್ತಸ್ಯ ಕಾರಕತ್ವಮಾತ್ರಲಕ್ಷಣಾಯಾ ದೂರ್ವಾಸೀಯೋ ಪ್ರತಿಪಾದನಾಚ್ಚ. ನ ಚ ಪ್ರತ್ಯಯಾಂತರಸ್ಯ ಲಕ್ಷಕತ್ವೇಽಪಿ ಸನ್‌ಪ್ರತ್ಯಯೇ ಕ್ವಾಪಿ ಲಕ್ಷಣಾ ನ ದೃಷ್ಟೇತಿ ವಾಚ್ಯಂ. "ಶ್ವಾ ಮುಮೂರ್ಷತಿ" "ಕೂಲಂ ಪಿಪತಿಷತಿ" ಇತ್ಯಾದೌ ವ್ಯಾಪಾರಮಾತ್ರೇ ಲಕ್ಷಣಾಯಾ ದೃಷ್ಟತ್ವಾತ್.

ಅತಏವ "ಧಾತೋಃ ಕರ್ಮಣಸ್ಸಮಾನಕರ್ತೃಕಾದಿಚ್ಛಾಯಾಂ ವಾ" (ಅಷ್ಟಾ. ೩-೧-೭) ಇತಿಸೂತ್ರೇ "ಆಶಂಕಾಯಾಮುಚೇತನೇಷೂಪಸಂಖ್ಯಾನಂ" ಇತ್ಯುಪಸಂಖ್ಯಾನಂ ಚೋದಯಿತ್ವಾ "ನ ವಾ ತುಲ್ಯಕಾರಣತ್ವಾದಿಚ್ಛಯಾ ವಾ ಪ್ರವೃತ್ತಿತ ಉಪಲಬ್ಧೇಃ" ಇತಿ ವಾರ್ತಿಕೇನ ಇಚ್ಛಾಕಾರೇ ವ್ಯಾಪಾರೇ ಲಕ್ಷಣಯಾ ಪ್ರಯೋಗ ಇತ್ಯುಕ್ತೇರಚೇತನೇ ಇಚ್ಛಾವತ್ತದಿಚ್ಛಾಕಾರ್ಯಸ್ಯಾಪ್ಯಭಾವಾತ್. ತತ್ರ "ಋಚಾ-ಉಪಮಾನಾದ್ವಾ" ಇತಿ ವಾರ್ತಿಕೇನ ಇಚ್ಛಾಸದೃಶೇ ವ್ಯಾಪಾರೇ ಗೌಣಃ ಪ್ರಯೋಗ ಇತಿ ಪತಂಜಲಿಭಾಷ್ಯೇ ಪ್ರಪಂಚಿತಂ. ಕೈಯಟಶ್ಚ-'ತಥಾಸತಿ "ಗೌಣಮುಖ್ಯಯೋರ್ಮುಖ್ಯೇ ಕಾರ್ಯಸಂಪ್ರತ್ಯಯಃ" ಇತಿ ನ್ಯಾಯೇನ ಇಚ್ಛಾಸದೃಶೇ ಪ್ರಯೋಗೋ ನ ಸ್ಯಾದಿತ್ಯಾಶಂಕ್ಯ ಗೌಣಮುಖ್ಯನ್ಯಾಯಶ್ಚ ಕ್ವಚಿಲ್ಲಕ್ಷ್ಯಾನುರೋಧೇನಾಪ್ಯಂಗೀಕ್ರಿಯತ' ಇತಿ ಸಮಾದಧೆ. ಈಕ್ಷತ್ಯಧಿಕರಣೇ "ಕೂಲಂ ಪಿಪತಿಷತಿ" ಇತ್ಯತ್ರ ದೂರ್ವಾಸಭಗವತ್ಪಾದಾಚಾರ್ಯೈರ್ಲಕ್ಷಣಾಯಾ ಅಂಗೀಕಾರಾಚ್ಚ. ತಸ್ಮಾತ್ ಸನ್‌ಪ್ರತ್ಯಯೇ ಲಕ್ಷಣಾ ನಾಸ್ತೀತಿ ವಚೋ ರಿಕ್ತಂ.

ಇದೂ ಅಲ್ಲದೆ ಪ್ರತ್ಯಯಾರ್ಥದಲ್ಲಿ ವಿಶೇಷಣವಾಗಿ ತೋರುವ ಜ್ಞಾನ ಸ್ವತಂತ್ರವಾಗಿ ಸಂಭವಿಸುವುದಿಲ್ಲ. "ಗೌಃ ನಿತ್ಯಾ" ಎಂಬಲ್ಲಿ ಗೋತ್ವವು ಸ್ವತಂತ್ರವಾಗಿ ತೋರುವುದಿಲ್ಲವಾದ್ದರಿಂದಲೇ ಅದರಲ್ಲಿ ಲಕ್ಷಣೆಯನ್ನು ಅಂಗೀಕರಿಸಲಾಗಿದೆ. ಪ್ರಕೃತಿಯು ಸಾಧ್ಯಜ್ಞಾನವನ್ನು ಲಕ್ಷಣೆಯಿಂದಲೇ ತಿಳಿಸುವುದಾದ್ದರಿಂದ, ಪ್ರಕೃತಿಪ್ರತ್ಯಯಗಳೆರಡರಲ್ಲೂ ಪ್ರತ್ಯೇಕವಾದ ಲಕ್ಷಣೆಯೇ ಆವಶ್ಯಕವೆನಿಸಿದೆ. ಸಮುದಾಯದಲ್ಲಿ ಲಕ್ಷಣೆಯನ್ನು ಹೇಳುವಂತಿಲ್ಲ. ಒಂದು ಪದಕ್ಕೆ ವಿಚಾರದಲ್ಲಿಯೂ,

ಮತ್ತೊಂದು ಪದಕ್ಕೆ ಸಾಧ್ಯಜ್ಞಾನದಲ್ಲಿಯೂ ಲಕ್ಷಣೆಯನ್ನು ಹೇಳಬೇಕಾಗಿರುವುದರಿಂದ ಪ್ರತ್ಯೇಕವಾಗಿ ಎರಡು ಪದಗಳನ್ನು ಕಲ್ಪಿಸಿ ಎರಡಕ್ಕೂ ಬೇರೆ ಬೇರೆ ಲಕ್ಷಣೆಯನ್ನು ಹೇಳುವುದಕ್ಕಿಂತಲೂ, ಇರುವ ಒಂದೇ ಪದದಲ್ಲಿ ಪ್ರಕೃತಿ ಪ್ರತ್ಯಯಗಳಿಗೆ ಲಕ್ಷಣೆಯನ್ನು ಹೇಳಿ ನಿರ್ವಹಿಸುವುದೇ ಯುಕ್ತವೆನಿಸುತ್ತದೆ. ವಿಚಾರದಲ್ಲಿ ಲಕ್ಷಣೆಯನ್ನು ಹೇಳಿದರೂ ಸಹ ಸಮುದಾಯದಲ್ಲಿ ಲಕ್ಷಣೆಯನ್ನು ಹೇಳುವುದು ಯುಕ್ತವಲ್ಲ. ಸಮುದಾಯದಲ್ಲಿ ಲಕ್ಷಣೆಯನ್ನು ಹೇಳುವುದಾದರೆ, ಪ್ರಕೃತಿ ಪ್ರತ್ಯಯಗಳಲ್ಲೊಂದಕ್ಕೆ ಸಮುದಾಯದಲ್ಲಿ ಲಕ್ಷಣೆಯನ್ನು ಹೇಳಬಹುದಾದ್ದರಿಂದ ಇವೆರಡರಲ್ಲಿ ಒಂದು ವ್ಯರ್ಥವೆನಿಸುವುದು. ಪ್ರತ್ಯಯದಲ್ಲಿ ಲಕ್ಷಣೆ ಇಲ್ಲವೆಂದು ಹೇಳುವುದು ಸರಿಯಲ್ಲ. "ಸಕ್ತೂನ್" ಎಂಬಲ್ಲಿ ದ್ವಿತೀಯಾವಿಭಕ್ತಿಗೆ ಕರಣಾರ್ಥದಲ್ಲೂ, 'ಪ್ರಯಾಜ' ಎಂಬ ಮಂತ್ರದಲ್ಲಿ ತೃತೀಯಾವಿಭಕ್ತಿಗೆ ಕರ್ಮಾರ್ಥದಲ್ಲೂ, ದ್ವಿತೀಯಾವಿಭಕ್ತಿಗೆ ಆಧಾರವೆಂಬ ಅರ್ಥದಲ್ಲೂ 'ರಥೋ ಗಚ್ಛತಿ' ಎಂಬಲ್ಲಿ ಆಖ್ಯಾತಕ್ಕೆ ವ್ಯಾಪಾರದಲ್ಲೂ 'ಜಾನಾತಿ' 'ಇಚ್ಛತಿ'-'ದ್ವೇಷ್ಟಿ'-'ಯತತೆ' ಎಂಬಲ್ಲಿ ಆಖ್ಯಾತಕ್ಕೆ ಆಶ್ರಯದಲ್ಲೂ 'ನಶ್ಯತಿ' ಎಂಬಲ್ಲಿ ಆಖ್ಯಾತಕ್ಕೆ ನಾಶಪ್ರತಿಯೋಗಿ ಎಂಬ ಅರ್ಥದಲ್ಲೂ ಲಕ್ಷಣೆಯನ್ನು ಎಲ್ಲರೂ ಒಪ್ಪಿರುವುದರಿಂದ ಪ್ರತ್ಯಯದಲ್ಲಿ ಲಕ್ಷಣೆಯನ್ನು ಹೇಳುವುದರಲ್ಲಿ ತಪ್ಪೇನಿದೆ?

ಗುಹಾಧಿಕರಣದ ಪೂರ್ವಪಕ್ಷದಲ್ಲಿ 'ಋತಂ ಪಿಬಂತೌ' ಎಂಬ ಕಡೆ ಕರ್ತೃಬೋಧಕವಾದ ಶತೃಪ್ರತ್ಯಯಕ್ಕೆ ಸಾಮಾನ್ಯಕಾರಕವೆಂಬುದರಲ್ಲಿ ಲಕ್ಷಣೆಯನ್ನು ದೂರ್ವಾಸರ ಗ್ರಂಥದಲ್ಲಿ ಪ್ರತಿಪಾದಿಸಲಾಗಿದೆ. ಬೇರೆ ಪ್ರತ್ಯಯಗಳಿಗೆ ಲಕ್ಷಣೆ ಹೇಳುವುದಾದರೂ, ಸನ್ ಪ್ರತ್ಯಯಕ್ಕೆ ಲಕ್ಷಣೆಯು ಎಲ್ಲಿಯೂ ಕಂಡುಬಂದಿಲ್ಲವೆಂದು ಹೇಳುವುದು ಸರಿಯಲ್ಲ. 'ಶ್ವಾ ಮುಮೂರ್ಷತಿ' 'ಕೂಲಂ ಪಿಪತಿಷಶಿ' ಎಂಬ ಕಡೆಗಳಲ್ಲಿ ಸನ್ ಪ್ರತ್ಯಯಕ್ಕೆ ವ್ಯಾಪಾರಸಾಮಾನ್ಯದಲ್ಲಿ ಲಕ್ಷಣೆ ಹೇಳುವುದು ಎಲ್ಲರಿಗೂ ತಿಳಿದಿದೆ.

ಆದ್ದರಿಂದಲೇ 'ಧಾತೋಃಕರ್ಮಣಃ' ಎಂಬ ಸೂತ್ರದಲ್ಲಿ 'ನವಾ ತುಲ್ಯಕಾರಣತ್ವಾತ್' ಎಂಬ ವಾರ್ತಿಕದಿಂದ ಇಚ್ಛೆಗೆ ಕಾರ್ಯವಾದ ವ್ಯಾಪಾರದಲ್ಲಿ ಪ್ರತ್ಯಯಕ್ಕೆ ಲಕ್ಷಣೆಯನ್ನು ಹೇಳಿ ಅಚೇತನಕ್ಕೆ ಇಚ್ಛೆ ಇಲ್ಲದಮೇಲೆ ಇಚ್ಛೆಯ ಕಾರ್ಯವಾದ ವ್ಯಾಪಾರವೂ ಬರುವುದಿಲ್ಲವಾದ್ದರಿಂದ ವ್ಯಾಪಾರದಲ್ಲಿ ಲಕ್ಷಣೆ ಹೇಳಲು ಸಾಧ್ಯವಿಲ್ಲವೆಂದು ಆಶಂಕಿಸಿಕೊಂಡು, 'ಉಪಮಾನಾದ್ವಾ' ಎಂಬ ವಾರ್ತಿಕದಿಂದ ಅಂತಹ ವ್ಯಾಪಾರಸದೃಶವಾದ ವ್ಯಾಪಾರದಲ್ಲಿ ಗೌಣವಾಗಿ ಪ್ರಯೋಗಿಸಬಹುದೆಂದು ಪಾತಂಜಲಭಾಷ್ಯದಲ್ಲಿ ವಿಸ್ತರಿಸಲಾಗಿದೆ. ಕೈಯಟರೂ ಸಹ "ಗೌಣಮುಖ್ಯಗಳಲ್ಲಿ ಮುಖ್ಯವೇ ಗ್ರಾಹ್ಯವಾಗತಕ್ಕದ್ದು" ಎಂಬ ನ್ಯಾಯದಿಂದ ಗೌಣಾರ್ಥವನ್ನು ಹೇಳುವುದು ಉಚಿತವಲ್ಲವೆಂದು ಆಶಂಕಿಸಿ ಈ ನ್ಯಾಯವನ್ನು ಅದರ ಪ್ರಕರಣಕ್ಕನುಗುಣವಾಗಿಯೇ ಅಂಗೀಕರಿಸಬೇಕು ಎಂದು ಸಮಾಧಾನ ಹೇಳಿರುವರು. ಈಕ್ಷತ್ಯಧಿಕರಣದಲ್ಲಿ 'ಕೂಲಂ ಪಿಪತಿಷತಿ' ಎಂಬ ಕಡೆ ದೂರ್ವಾಸಭಗವತ್ಪಾದರು ಲಕ್ಷಣೆಯನ್ನೇ ಅಂಗೀಕರಿಸಿರುವರು. ಆದರಿಂದ ಸನ್‌ಪ್ರತ್ಯಯಕ್ಕೆ ಲಕ್ಷಣೆ ಇಲ್ಲವೆಂಬ ಮಾತು ಅರ್ಥವಿಲ್ಲದ್ದಾಗುತ್ತದೆ.

ಯದಪಿ ವಾಂತಭೋಜನನ್ಯಾಯ ಇತಿ, ತನ್ನ. ಪ್ರತ್ಯಯಸ್ಯ ವಿಚಾರಲಕ್ಷಕತ್ವೇನ ನ ಬೋಧ್ಯತೇ ಸಾಧ್ಯತಾ, ಕಿಂತು ಲಕ್ಷಣಯಾ ಪ್ರಕೃತ್ಯೈವೇತಿ ಬೋಧಕಭೇದಸ್ವೀಕಾರಮಾತ್ರೇಣ ವಾಂತಭೋಜನ ನ್ಯಾಯಸಂಭವಾತ್. ಸಾಧ್ಯತ್ವಸ್ಯಾತ್ಯಾಗೇನ ತ್ಯಕ್ತಪುನಸ್ಸ್ವೀಕಾರಾಭಾವಾತ್. ಯದತ್ರಾರ್ಥಿಕತ್ವಕಥನಂ ವಿರುದ್ಧಮಿತಿ ತದಪಿ ನ. ಜ್ಞಾನಾಯ ವಿಚಾರಃ ಕರ್ತವ್ಯ ಇತಿ ಜ್ಞಾನಂ ಸಾಧ್ಯತ್ವೇನೋದ್ದಿಶ್ಯ ಸಾಧನಂ ವಿಚಾರೋ ವಿಧೀಯತೇ. ತತ್ರ ಸಿದ್ಧತ್ವೇನೋಪಸ್ಥಿತೌ ಸಾಧನಾಕಾಂಕ್ಷಾ ನೇತಿ ಸಾಧ್ಯತಾಮಾತ್ರಂ ಲಕ್ಷ್ಯತೇ. ಯಾವತಾ ವಿನಾ ಶಬ್ದಾನ್ವಯಾಪರ್ಯವಸಾನಂ ತಾವನ್ಮಾತ್ರಂ ಲಕ್ಷಣೀಯಂ. ತಸ್ಮಿನ್ ಪರ್ಯವಸಿತೇ ವಿಧೇಃ ಪುರುಷಪ್ರವೃತ್ತಿಪರ್ಯವಸಿತತ್ವಾತ್ತಸ್ಯಾಶ್ಚ ನಿಷ್ಫಲಾಯಾ ಅಸಂಭವಾತ್ ಫಲವತ್ತ್ವಸಿದ್ಧಯೇ ಮೋಕ್ಷಸಾಧನತ್ವಂ ಜ್ಞಾನಸ್ಯ ಕಲ್ಪ್ಯತ ಇತ್ಯಾರ್ಥಿಕತ್ವಂ. ತತ್ರ ಭವತಾಮೇವ ತು ತದ್ದೃಷ್ಟ್ಯಾ ದುರುತ್ತರಂ. ಜ್ಞಾನಸ್ಯ ಪ್ರತ್ಯಯಾರ್ಥೇಚ್ಛಾಯಾಂ ವಿಷಯತ್ವೇನಾನ್ವಯೇ ಜ್ಞಾನಮಾತ್ರಸ್ಯ ನಿಷ್ಪ್ರಮಾಣತ್ವೇನ ವಿಷಯತ್ವಾಸಂಭವಾನ್ಮೋಕ್ಷಸಾಧನಬ್ರಹ್ಮಜ್ಞಾನಸ್ಯೈವೇಷ್ಯಮಾಣತ್ವೇನ ಶ್ರೌತತ್ವಪ್ರಸಂಗಾತ್. ಏವಂಚ – ಇದಮುಪ್ಯಪರಂ ಪ್ರತ್ಯಯೇ ವಿಚಾರಲಕ್ಷಣಾಯಾಂ ಬೀಜಂ, ಯದಾಚಾರ್ಯಾಣಾಂ ಮೋಕ್ಷಸಾಧನತ್ವಸ್ಯಾರ್ಥಿಕತ್ವಕಥನಂ; ಅನ್ಯಥಾ ಉಕ್ತರೀತ್ಯಾ ಶ್ರೌತತ್ವಪ್ರಸಂಗಾತ್. ಯದಪಿ – ಪ್ರತ್ಯಯಾನಾಮಿತ್ಯಾದಿ, ತದಪಿ ನ, ಅಪೇಕ್ಷಿತವಿಚಾರಸ್ಯ ಪ್ರಕೃತ್ಯರ್ಥಜ್ಞಾನಂ ಪ್ರತಿ ಸಾಧನತ್ವೇನಾನ್ವಯಾತ್. ಇಚ್ಛಾಯಾ ವಿಷಯವಿಷಯಿಭಾವೇನಾನ್ವಯಃ, ವಿಚಾರಸ್ಯ ತು ಸಾಧ್ಯಸಾಧನಭಾವೇನೇತಿ ಪ್ರಕೃತ್ಯರ್ಥಾನ್ವಿತಸ್ವಾರ್ಥಾಭಿಧಾನೇ ನ ಕಶ್ಚಿದ್ವಿಶೇಷಃ. ಯದಪಿ ಜಿಜ್ಞಾಸಾಪದೇನ ವಿರೋಧ ಇತಿ, ತನ್ನ. ಪ್ರಕೃತಿಪ್ರತ್ಯಯಯೋರ್ದ್ವಯೋರಪಿ ಲಕ್ಷಕತ್ವೇ ಪದಸ್ಯ ಸಕಲಸ್ಯ ಲಕ್ಷಕತ್ವಾತ್ತದಭಿಧಾನೋಪಪತ್ತೇಃ. ಜ್ಞಾನಸ್ಯ ಪ್ರಕೃತ್ಯರ್ಥಸ್ಯ ಸಾಧ್ಯತ್ವಲಕ್ಷಣಾಯಾ ವಿಚಾರಲಕ್ಷಣಾಕಥನೇನೈವ ಕಥಿತಪ್ರಾಯತ್ವಾತ್ ತಾಮನಭಿಧಾಯ ವಿಚಾರಮನಪೇಕ್ಷ್ಯೇತಿ ವಿಚಾರಲಕ್ಷಣಾಭಿಧಾನೋಪಪತ್ತೇಶ್ಚ. ತಸ್ಮಾಲ್ಲಕ್ಷಣಾದ್ವಯಮೇವ ಪರಮಾನಂದಾರಾಧ್ಯೇನ ನಿರ್ಣೀತಂ. ಏಕೋರಾಮಸಿದ್ಧಾರಾಧ್ಯಭಗವತ್ಪಾದಾಚಾರ್ಯಾದಿಭಿಃ ಸ್ವೀಕೃತತ್ವಾದೇತದೇವ ಸಮ್ಯಗುಪಾದೇಯಂ.

ವಾಂತಭೋಜನನ್ಯಾಯಕ್ಕೂ ಇಲ್ಲಿ ಪ್ರಸಕ್ತಿ ಇಲ್ಲ. ಪ್ರತ್ಯಯಕ್ಕೆ ವಿಚಾರದಲ್ಲಿ ಲಕ್ಷಣೆಯನ್ನು ಹೇಳುವುದರಿಂದ, ಅದು ಸಾಧ್ಯವೆಂಬ ಅಂಶ ಬೋಧಿತವಾಗುವುದಿಲ್ಲ.

ಪ್ರಕೃತಿಗೆ ಲಕ್ಷಣೆಯನ್ನು ಹೇಳುವುದರಿಂದಲೇ ಆ ಅರ್ಥ ದೊರಕುವುದಾದ್ದರಿಂದ ಹಿಂದೆ ಹೇಳಿದ ರೀತಿಯಲ್ಲಿ ಸಾಧ್ಯತ್ವಾಂಶವನ್ನು ಮೊದಲು ಬಿಟ್ಟು ಅನಂತರ ಸ್ವೀಕರಿಸುವುದಿಲ್ಲವಾದ್ದರಿಂದ ವಾಂತಭೋಜನನ್ಯಾಯಕ್ಕೆ ಅವಕಾಶವಿಲ್ಲ. ಜ್ಞಾನವೇ ಮೋಕ್ಷಸಾಧನವೆಂಬುದು ಅರ್ಥಸಿದ್ಧವೆಂಬ ಪಕ್ಷದಲ್ಲಿ ಹೇಳಿದ ದೋಷವೂ ಸರಿಯಲ್ಲ. ಜ್ಞಾನಕ್ಕಾಗಿ ವಿಚಾರಮಾಡಬೇಕೆಂಬಲ್ಲಿ ಜ್ಞಾನವು ಸಾಧ್ಯವೆಂದೂ, ವಿಚಾರವು ಅದಕ್ಕೆ ಸಾಧನವೆಂದೂ ವಿಹಿತವಾಗುತ್ತವೆ. ವಸ್ತು ಸಿದ್ಧವಾದಮೇಲೆ ಅದರ ಸಾಧನದ ಆಕಾಂಕ್ಷೆಯೇ ಬರುವುದಿಲ್ಲವಾದ್ದರಿಂದ ಸಾಧ್ಯತೆ ಮಾತ್ರವೇ ಲಕ್ಷಣೆಯಿಂದ ತಿಳಿಯ ಬರುತ್ತದೆ. ಎಲ್ಲಿ ಎಷ್ಟು ಅಂಶಕ್ಕೆ ಲಕ್ಷಣೆ ಇಲ್ಲದೆ ನಿರ್ವಾಹವಾಗುವುದೇ ಇಲ್ಲವೋ ಅಲ್ಲಿ ಅಷ್ಟು ಅಂಶಕ್ಕೆ ಮಾತ್ರವೇ ಲಕ್ಷಣೆಯನ್ನು ಹೇಳಲೇಬೇಕು. ಹೀಗೆ ಜ್ಞಾನಕ್ಕೆ ಪ್ರಸಕ್ತಿ ಬಂದಮೇಲೆ ಜ್ಞಾನವೆನ್ನುವುದು ಪುರುಷನನ್ನು ಪ್ರವರ್ತಿಸಲಿಕ್ಕಾಗಿಯೇ ಇರುವುದರಿಂದ, ಫಲವಿಲ್ಲದಿದ್ದರೆ ಪುರುಷನಿಗೆ ಪ್ರವೃತ್ತಿ ಬರುವುದಿಲ್ಲವಾದ್ದರಿಂದ, ಆ ಜ್ಞಾನವು ಮೋಕ್ಷಕ್ಕೆ ಸಾಧನವೆಂಬುದು ತಾನಾಗಿಯೇ ಸಿದ್ಧವಾಗುತ್ತದೆ. ಅಲ್ಲಿ ನಿಮ್ಮ ಬುದ್ಧಿಗನುಗುಣವಾಗಿಯೇ ದೋಷವು ತೋರುತ್ತದೆ. ಸನ್ಪ್ರತ್ಯಯಾರ್ಥವಾದ ಇಚ್ಛೆಯಲ್ಲಿ ಜ್ಞಾನವು ವಿಷಯವಾದಮೇಲೆ, ಎಲ್ಲಾ ಜ್ಞಾನವೂ ಪ್ರಾಮಾಣಿಕವಾಗಿರಲು ಸಾಧ್ಯವಿಲ್ಲವಾದ್ದರಿಂದ ಎಲ್ಲವೂ ವಿಷಯವಾಗುವಂತಿಲ್ಲ. ಆದ್ದರಿಂದ ಮೋಕ್ಷಕ್ಕೆ ಸಾಧನವಾದ ಬ್ರಹ್ಮಜ್ಞಾನವೇ ಇಚ್ಛೆಯಲ್ಲಿ ವಿಷಯವಾಗುತ್ತದೆಯಾದ್ದರಿಂದ ಜ್ಞಾನವು ಮೋಕ್ಷಸಾಧನವೆಂಬ ಅಂಶ ಸಿದ್ಧವೇ ಆಗುತ್ತವೆ. ಸನ್ಪ್ರತ್ಯಯಕ್ಕೆ ವಿಚಾರದಲ್ಲಿ ಲಕ್ಷಣೆ ಹೇಳಲು ಇದೂ ಒಂದು ಕಾರಣವಾಗಿದೆ. ಇಲ್ಲದಿದ್ದರೆ ಈ ಅರ್ಥವು ಶಬ್ದದಿಂದಲೇ ದೊರಕಬೇಕಾಗುತ್ತದೆ. ಪ್ರತ್ಯಯಗಳು ಪ್ರಕೃತ್ಯರ್ಥದೊಂದಿಗೆ ಸೇರಿಯೇ ಶಾಬ್ದಬೋಧವನ್ನುಂಟುಮಾಡುತ್ತವೆ ಎಂಬ ನಿಯಮಕ್ಕೂ ವಿರೋಧವು ಸಂಭವಿಸುವುದಿಲ್ಲ. ಅಪೇಕ್ಷಿತವಾದ ವಿಚಾರವು ಪ್ರಕೃತ್ಯರ್ಥವಾದ ಜ್ಞಾನದಲ್ಲಿ ಸಾಧನವಾಗಿ ಅನ್ವಯಿಸುವುದಾದ್ದರಿಂದ ಆ ನಿಯಮಕ್ಕೆ ಭಂಗವಿಲ್ಲ. ಇಚ್ಛೆಗೂ ಜ್ಞಾನಕ್ಕೂ ವಿಷಯವಿಷಯಿಭಾವಸಂಬಂಧವಿದೆ. ವಿಚಾರಕ್ಕೂ ಜ್ಞಾನಕ್ಕೂ ಸಾಧ್ಯಸಾಧನಭಾವಸಂಬಂಧವಿದೆ. ಆದ್ದರಿಂದ ಆ ನಿಯಮಕ್ಕೆ ಭಂಗವುಂಟಾಗುವುದಿಲ್ಲ. ಜಿಜ್ಞಾಸಾಪದದಲ್ಲಿ ಪ್ರಕೃತಿ ಪ್ರತ್ಯಯಗಳೆರಡರಲ್ಲೂ ಲಕ್ಷಣೆ ಇರುವುದರಿಂದ ಎರಡನ್ನೂ ಪ್ರತ್ಯೇಕವಾಗಿ ಜಿಜ್ಞಾಸಾಪದದಿಂದ ಗ್ರಹಿಸಬಹುದಾದ್ದರಿಂದ ಏಕವಚನದ ವಿರೋಧವೇನೂ ಸಂಭವಿಸುವುದಿಲ್ಲ. ಸನ್ಪ್ರತ್ಯಯಕ್ಕೆ ವಿಚಾರದಲ್ಲಿ ಲಕ್ಷಣೆಯನ್ನು ಹೇಳುವುದರಿಂದಲೇ ಪ್ರಕೃತ್ಯರ್ಥವಾದ ಜ್ಞಾನಕ್ಕೆ ಸಾಧ್ಯಾಂಶದಲ್ಲಿ ಲಕ್ಷಣೆಯು ಅರ್ಥಸಿದ್ಧವಾಗುವುದರಿಂದ ಅದನ್ನು ಹೇಳದೆ ವಿಚಾರದಲ್ಲಿ ಮಾತ್ರವೇ ಲಕ್ಷಣೆಯನ್ನು ಹೇಳಿದ್ದು ಯುಕ್ತವೇ ಆಗಿದೆ. ಆದ್ದರಿಂದ ಪ್ರಕೃತಿಪ್ರತ್ಯಯಗಳೆರಡಕ್ಕೂ ಬೇರೆ ಬೇರೆ ಲಕ್ಷಣೆಯನ್ನು ಹೇಳಬೇಕೆಂದು ಪರಮಾರಾಧ್ಯರು ನಿಶ್ಚಯಿಸಿದ್ದಾರೆ. ಏಕೋರಾಮಭಗವತ್ಪಾದರೂ ಇದನ್ನೇ ಸ್ವೀಕರಿಸಿರುವುದರಿಂದ ಇದೇ ಯುಕ್ತವಾಗಿದೆ.

## ॥ ಶಿವಸ್ಯ ಪರಬ್ರಹ್ಮತ್ವಕಥನಂ ॥

ನನು—" ಅಸದ್ವಾ ಇದಮುಗ್ರ ಆಸೀತ್, ತತೋ ವೈ ಸದಜಾಯತ " (ತೈ. ಆನಂ. ೭) " ಅಮೂಲಮುನಾಧಾರಮಿಮಾಃ ಪ್ರಜಾಃ ಪ್ರಜಾಯಂತೇ " " ನ ಕದಾಚಿದನೀದೃಶಂ ಜಗತ್ " ಇತ್ಯಾದಿನಾ ಜಗತಃ ಅಸತ್ಕರಣತ್ವಾನಾದಿತ್ವೇ ಪ್ರತಿಪಾದಿತೇ, ತಸ್ಮಾತ್ತಸ್ಯ ನ ಕರ್ತ್ರಪೇಕ್ಷಿತಾ ಸಮುಚಿತಾ. " ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ " ಇತ್ಯಾದೌ ಯಾಗಾದಿಕರ್ಮಣಾಂ ಜೀವಕರ್ತೃಕತ್ವಫಲದಾತೃತ್ವದರ್ಶನಾತ್, ಚೇತನಶಾರೀರವ್ಯತಿರಿಕ್ತೇಶ್ವರಸದ್ಭಾವೇ ಮಾನಾಭಾವಾತ್, ತೇನ ಪ್ರಯೋಜನಾದರ್ಶನಾತ್, ಅದೃಷ್ಟದ್ವಾರಾ ಜೀವಾನಾಮೇವ ಕರ್ತೃತ್ವಾಂಗೀಕಾರಾತ್, ಲೋಕೇ ಸುಖದುಃಖಭೋಕ್ತೃತ್ವದರ್ಶನಾತ್, ಪರಮೇಶ್ವರಕರ್ತೃಕತ್ವೇ ವೈಷಮ್ಯನೈರ್ಘೃಣ್ಯಾಪತ್ತ್ಯಾ ಈಶ್ವರತ್ವಭಂಗಪ್ರಸಂಗಾಚ್ಚ ಈಶ್ವರೇಣ ನ ಕಿಂಚಪ್ರಯೋಜನಂ ಸಿದ್ಧ್ಯತಿ.

ಕಿಂಚ—ಜಡಕರ್ಮಣಾಂ ಜೀವಾನಾಂ ಚ ಫಲದಾತೃತ್ವಾಸಂಭವಾತ್ ಸರ್ವಜ್ಞೇಶ್ವರಸದ್ಭಾವೇ " ಕ್ಷಿತ್ಯಂಕುರಾದಿಕಂ ಸಕರ್ತೃಕಂ, ಕಾರ್ಯತ್ವಾತ್ ಘಟವತ್ " ಇತ್ಯನುಮಾನೇನ ಈಶ್ವರಸ್ಯಾಂಗೀಕಾರೇ " ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ " " ಬ್ರಹ್ಮ ವಾ ಇದಮುಗ್ರ ಆಸೀತ್ " " ಹಿರಣ್ಯಗರ್ಭಸ್ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ " " ಓಮಿತ್ಯೇಕಾಕ್ಷರಂ ಬ್ರಹ್ಮ " " ಅಸಾವಾದಿತ್ಯೋ ಬ್ರಹ್ಮ " " ನಮಸ್ತೇ ವಾಯೋ, ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ" " ಗಣಾನಾಂ ತ್ವಾ ಗಣಪತಿಂ ಹವಾಮಹೇ " " ವಿಶ್ವಸ್ಮಾದಿಂದ್ರ ಉತ್ತರಃ " (ಋಗ್ವೇದ ೮-೪-೧) " ಏಕೋ ಹ ವೈ ನಾರಾಯಣ ಆಸೀತ್ ನ ಬ್ರಹ್ಮಾ ನೇಶಾನೋ ನಾಪೋ ನಾಗ್ನಿಷೋಮೌ ನೇಮೇ ದ್ಯಾವಾಪೃಥಿವೀ " (ಮಹೋ. ೧-೧) " ಅಥ ಪುರುಷೋ ಹ ವೈ ನಾರಾಯಣೋಽಕಾಮಯತ ಪ್ರಜಾಸ್ಸೃಜೇಯೇತಿ, ನಾರಯಣಾದ್ಬ್ರಹ್ಮಾ ಜಾಯತೇ ನಾರಾಯಣಾದ್ರುದ್ರೋ ಜಾಯತೇ " (ನಾರಾ. ೧-೧) " ಸದೇವ ಸೋಮ್ಯೇದಮುಗ್ರ ಆಸೀದೇಕಮೇವಾದ್ವಿತೀಯಂ " " ಮನೋ ವೈ ಬ್ರಹ್ಮೇತಿ, ಚಕ್ಷುರ್ವೈ ಬ್ರಹ್ಮೇತಿ, ಶ್ರೋತ್ರಂ ವೈ ಬ್ರಹ್ಮೇತಿ " " ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ " (ಛಾಂ. ೪-೧೦-೪) " ಅನ್ನಂ ಬ್ರಹ್ಮ " ಇತ್ಯಾದಿನಾ ಬಹುವಿಪ್ರತಿಪತ್ತಿದರ್ಶನಾತ್, ಶಿವಸ್ಯೈಕಸ್ಯೈವ ಕಥಂ ಬ್ರಹ್ಮತ್ವಂ? ಇತಿಚೇನ್ನ.

# ಶಿವನೇ ಪರಬ್ರಹ್ಮವೆಂದು ಸಾಧಿಸುವಿಕೆ

"ಮೊದಲು ಇದೆಲ್ಲವೂ ಅಸದ್ರೂಪವಾಗಿತ್ತು. ಅದರಿಂದಲೇ ಸದ್ರೂಪವು ಹುಟ್ಟಿತು", "ಬುಡವಿಲ್ಲದೆಯೂ ಆಧಾರವಿಲ್ಲದೆಯೂ ಈ ವಸ್ತುಗಳು ಹುಟ್ಟುತ್ತವೆ. "ಯಾವಾಗಲೂ ಇಂತಹ ಜಗತ್ತು ಇರಲಿಲ್ಲ" ಈ ಶ್ರುತಿಗಳಲ್ಲಿ ಜಗತ್ತು ಕಾರಣವಿಲ್ಲದೆ ಅನಾದಿಯಾಗಿರುವುದೆಂದು ಹೇಳಲಾಗಿದೆ. ಇಲ್ಲಿ ಜಗತ್ತಿಗೆ ಕರ್ತೃವಿನ ಅಪೇಕ್ಷೆಯೇ ಸೂಚಿತವಾಗಿಲ್ಲ. "ಸ್ವರ್ಗಕಾಮನು ಜ್ಯೋತಿಷ್ಟೋಮಯಾಗವನ್ನಾಚರಿಸಬೇಕು" ಎಂಬ ಶ್ರುತಿಯಲ್ಲಿ ಜೀವನೇ ಯಾಗಾದಿ ಕರ್ಮಗಳಿಗೆ ಕರ್ತನೆಂದೂ, ಅವುಗಳೇ ಫಲ ಕೊಡಬಲ್ಲವೆಂದೂ ಹೇಳಿರುವುದರಿಂದ ಚೇತನ ಜೀವನಿಗಿಂತ ಬೇರೆ ಈಶ್ವರನಿರುವುದರಲ್ಲಿ ಪ್ರಮಾಣವಿಲ್ಲ ಮತ್ತು ಅವನಿಂದ ಯಾವ ಪ್ರಯೋಜನವೂ ಕಂಡುಬರುವುದಿಲ್ಲ. ಆದ್ದರಿಂದ ಅದೃಷ್ಟದ ಮೂಲಕ ಜೀವವನ್ನೇ ಕರ್ತೃವೆಂದು ಅಂಗೀಕರಿಸಬಹುದು. ಲೋಕದಲ್ಲೂ ಜೀವರೇ ಸುಖದುಃಖಗಳ ಭೋಕ್ತೃವೆಂದು ಕಂಡುಬಂದಿದೆ. ಪರಮೇಶ್ವರನೇ ಕರ್ತನಾಗುವುದಾದರೆ ಅವನಲ್ಲಿ ವೈಷಮ್ಯ ನಿಷ್ಕರುಣೆಗಳು ಸಂಭವಿಸುವುದರಿಂದ ಅವನು ಪ್ರಭುವೇ ಆಗದೇಹೋಗಬೇಕಾದೀತು. ಇದೂ ಅಲ್ಲದೆ ಜಡವಾದ ಕರ್ಮಗಳಿಗೂ ಜೀವರಿಗೆ ಫಲವನ್ನು ಕೊಡುವ ಶಕ್ತಿ ಸಂಭವಿಸುವುದಿಲ್ಲವಾದ್ದರಿಂದ ಸರ್ವಜ್ಞನಾದ ಈಶ್ವರನಿರುವನೆಂಬುದಕ್ಕೆ "ಘಟವು ಕಾರ್ಯವಾದ್ದರಿಂದ ಹೇಗೆ ಸಕರ್ತೃಕವಾಗಿರುವುದೋ ಜಗತ್ತು ಹಾಗೆ ಕಾರ್ಯವಾದ್ದರಿಂದ ಅದಕ್ಕೆ ಒಬ್ಬ ಕರ್ತನಿರಲೇಬೇಕು" ಎಂಬ ಅನುಮಾನದಿಂದ ಈಶ್ವರನನ್ನು ಅಂಗೀಕರಿಸಿದರೂ, "ಆತ್ಮವೇ ಮೊದಲು ಇತ್ತು" "ಬ್ರಹ್ಮವೇ ಮೊದಲು ಇತ್ತು", "ಹಿರಣ್ಯಗರ್ಭನೇ ಮೊದಲು ಇದ್ದನು", ಪ್ರಪಂಚಕ್ಕೆ ಪತಿಯೊಬ್ಬನಿದ್ದನು", 'ಓಂ ಎಂಬುದು ಏಕಾಕ್ಷರವಾದ ಬ್ರಹ್ಮ' 'ಈ ಆದಿತ್ಯನೇ ಬ್ರಹ್ಮ' 'ವಾಯುವೇ ನಿನಗೆ ನಮಸಾರ, ನೀನೇ ಪ್ರತ್ಯಕ್ಷವಾದ ಬ್ರಹ್ಮವಾಗಿದ್ದೀಯೆ.' 'ಗಣಗಳಿಗೆಲ್ಲಾ ಅಧಿಪತಿಯಾದ ನಿನ್ನನ್ನು ಪೂಜಿಸುತ್ತೇವೆ' 'ಎಲ್ಲಕ್ಕೂ ಇಂದ್ರನು ಶ್ರೇಷ್ಠನು', "ಒಬ್ಬನೇ ನಾರಾಯಣನಿದ್ದಾನೆ, ಬ್ರಹ್ಮನಿರಲಿಲ್ಲ, ಈಶನಿರಲಿಲ್ಲ, ಅಗ್ನಿಷ್ಟೋಮವಿಲ್ಲ, ಈ ಭೂಮಿ ಆಕಾಶಗಳಿರಲಿಲ್ಲ". "ಪುರುಷೋತ್ತಮನಾದ ನಾರಾಯಣನು ಜೀವರನ್ನು ಸೃಜಿಸುವೆನೆಂದು ಇಚ್ಛಿಸಿದನು". "ನಾರಾಯಣನಿಂದ ಬ್ರಹ್ಮ ಹುಟ್ಟಿದನು, ನಾರಾಯಣನಿಂದ ರುದ್ರ ಹುಟ್ಟಿದನು" "ಸೌಮ್ಯನೇ ಇದೆಲ್ಲವೂ ಸದ್ರೂಪವಾಗಿತ್ತು. ಬ್ರಹ್ಮ ಒಂದೇ ಅದ್ವಿತೀಯವಾಗಿತ್ತು". "ಮನಸ್ಸೇ ಬ್ರಹ್ಮ" "ಚಕ್ಷುವೇ ಬ್ರಹ್ಮ" "ಶ್ರೋತ್ರವೇ ಬ್ರಹ್ಮ" "ಪ್ರಾಣವೇ ಬ್ರಹ್ಮ ಆಕಾಶವೇ ಬ್ರಹ್ಮ ಸುಖವೇ ಬ್ರಹ್ಮ" "ಅನ್ನವೇ ಬ್ರಹ್ಮ"—ಹೀಗೆ ಅನೇಕ ವಿಧವಾದ ವಾಕ್ಯಗಳು ಕಂಡುಬರುವುದರಿಂದ ಶಿವನೊಬ್ಬನೇ ಹೇಗೆ ಬ್ರಹ್ಮನಾದನು? ಎಂದು ಕೇಳಿದರೆ ಅದಕ್ಕೆ ಸಮಾಧಾನ ಹೀಗಿದೆ,

" ಅಗ್ನೀಷೋಮೀಯಂ ಪಶುಮಾಲಭೇತ " ಇತ್ಯತ್ರ " ...
ಶ್ಚತುಷ್ಪದಾಶ್ಚ ಪಶವಃ " ಇತಿ ಶ್ರುತ್ಯಾ ದ್ವಿಪದಾಂ ಚತುಷ್ಪದ...
ಪಶುಶಬ್ದವಾಚ್ಯತ್ವೇನ ನಿರ್ದೇಶಾತ್, ಸಂದೇಹೇ " ಛಾಗಸ್ಯ ವ...
ಮೇದಸಃ " ಇತಿ ಶ್ರುತ್ಯಂತರೇಣ ಛಾಗಪಶುತ್ವನಿರ್ಣಯವತ್...
ಬ್ರಹ್ಮತ್ವಂ ಗ್ರಾಹ್ಯಂ. ಅತಃ—" ಯತೋ ವಾ ಇಮಾನಿ ಭ...
ಜಾಯಂತೇ " (ತೈ. ಭೃ. ೧) ಇತ್ಯಾದಿಷು ಜಗಜ್ಜನ್ಮಾದಿಕಾರಣತ್ವ...
ಲಕ್ಷಣಮುಕ್ತಂ ಪರಮೇಶ್ವರಸ್ಯ. ತ್ರಿಗುಣಾತ್ಮಕಶಕ್ತ್ಯವಚ್ಛಿನ್ನ...
ಗರ್ಭನಾರಾಯಣಕಾಲರುದ್ರಾದೀನಾಂ ನೇಶ್ವರತ್ವಂ, ತೇಷಾಮ...
ಕರ್ತೃತ್ವೇನ ಜಗಜ್ಜನ್ಮಾದಿಕರ್ತೃತ್ವಾಭಾವಾತ್. ಅತಏವ ಸೂತ್ರಕ...
" ಜನ್ಮಾದ್ಯಸ್ಯ ಯತಃ " ಇತಿ ನಿರ್ದಿಷ್ಟಂ. ಬ್ರಹ್ಮೋತ್ತರಖಂಡೇ...

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿ...
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ||

ಇತಿ ಜಗದುತ್ಪತ್ತ್ಯಾದೀನಾಂ ಪ್ರಯೋಜಕಕರ್ತುಃ ಶಿವಸ್ಯೈ...
ರತ್ವಂ ನಿರ್ದಿಷ್ಟಂ. ಕಿಂಚ—" ಮಾಯಾಂ ತು ಪ್ರಕೃತಿಂ ವಿಂ...
ಯಿನಂ ತು ಮಹೇಶ್ವರಂ । ತಸ್ಯಾವಯವಭೂತೈಸ್ತು ವ್ಯಾಪ್ತಂ...
ಮಿದಂ ಜಗತ್ || " ಇತಿ. ಮಾಯಾಂ-ಪ್ರಕೃತಿಂ, ಕಾರಣಂ ವಿಂ...
ಮಾಯಿನಂ ತು ಮಹೇಶ್ವರಂ ವಿಂದ್ಯಾತ್, ಇತ್ಯನೇನ ಮಾಯಾ...
ಪರಮೇಶ್ವರಾಧೀನತ್ವಮುಕ್ತಂ. ಅತ ಏವ ವಶೀಕೃತಮಾಯ...
ಸ್ವತಂತ್ರ ಇತಿ, ತಸ್ಯಾಂಶಭೂತೈಃ ಬ್ರಹ್ಮವಿಷ್ಣುಕಾಲರುದ್ರಾದಿ...
ದ್ವ್ಯಾಪ್ತಂ ಸರ್ವಮಿದಂ ಜಗದಿತ್ಯುಕ್ತಂ.

ತಥಾ ಅಥರ್ವಶಿರಸಿ—" ದೇವಾ ಹ ವೈ ಸ್ವರ್ಗಂ ಲೋ...
ಮನ್ ತೇ ದೇವಾ ರುದ್ರಮಪೃಚ್ಛನ್ ಕೋ ಭವಾನಿತಿ, ಸೋಽ...
ಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ...
ಕಶ್ಚನ ಮತ್ತೋ ವ್ಯತಿರಿಕ್ತಃ " (ಅಥರ್ವಶಿರಃ ೧) ಇತ್ಯಾದಿನಾ ಶಿ...
ತ್ರೈಕಾಲಿಕಾಬಾಧ್ಯತ್ವಂ ಸರ್ವಾಂತರ್ಯಾಮಿತ್ವಂ ಸರ್ವಕಾರಣತ್ವ...
ಶಬ್ದವಾಚ್ಯತ್ವಂ ಸರ್ವೇಶ್ವರತ್ವಂ ಸರ್ವಾತ್ಮಕತ್ವಂ ಬ್ರಹ್ಮತ್ವಂ ಚ...
ದಿತಂ. ಕಾಣ್ವಶಾಖಾಯಾಂ—" ಯಃ ಪೃಥಿವ್ಯಾಂ ತಿಷ್ಠನ್ "...
ದಿನಾ ಪೃಥಿವ್ಯಾದ್ಯಷ್ಟಮೂರ್ತಿಸ್ವರೂಪಸ್ಯೈವ ಬ್ರಹ್ಮತ್ವಕಥನಾ...
ಸ್ಯಾಶ್ಯಂಖಚಕ್ರವಿಶಿಷ್ಟದೇವತಾಯಾ ಭೂತಭೌತಿಕಸೃಷ್ಟಿಕರ್ತೃ...
ಶ್ವರತ್ವಂ. ನ ಚಾವಯವವ್ಯುತ್ಪತ್ತ್ಯಾ ವಿಷ್ಣೋರಪಿ ಪೃಥಿವ್ಯಾ...
ತ್ವಮಂತರ್ಯಾಮಿತ್ವಂ ಚ ... ಷ್ಟಮೂರ್ತಿ...

ಶಿವಸ್ಯೈವ ಪ್ರಸಿದ್ಧತ್ವಾತ್, ವಿಷ್ಣೋರಂತರ್ಯಾಮಿತ್ವಾಪ್ರಸಿದ್ಧೇಃ. ನ ಚೋಭಯೋಃ ಶಿವಕೇಶವಯೋರಂತರ್ಯಾಮಿತ್ವಮಷ್ಟಮೂರ್ತಿತ್ವಂ ಚ ವಕ್ತುಂ ಯುಕ್ತಂ, ಉಭಯೋರೇಕಶರೀರಾಭಾವಾತ್. ಸ್ವತಂತ್ರಯೋರುಭಯೋರಪಿ ನಿಯಂತೃತ್ವೇ ಜಗತಾಮುತ್ಪತ್ತಿಸ್ಥಿತಿಸಂಹಾರಾಣಾಂ ಯುಗಪತ್ಸಂಭವೇ ವಿಶ್ವವಿಲಯಾಪತ್ತೇಃ. "ಸೋಽಂತರಾದಂತರಂ ಪ್ರಾವಿಶತ್, ದಿಶಶ್ಚಾಂತರಂ ಪ್ರಾವಿಶತ್" "ಯೋ ರುದ್ರೋ ಅಗ್ನೌ ಯೋ ಅಪ್ಸು ಯ ಓಷಧೀಷು ಯೋ ರುದ್ರೋ ವಿಶ್ವಾ ಭುವನಾಽಽವಿವೇಶ ತಸ್ಮೈ ರುದ್ರಾಯ ನಮೋ ಅಸ್ತು" ಇತ್ಯಾದಿಶ್ರುತಿಶತೇಷು ಶಿವಸ್ಯೈವ ಸರ್ವಾತ್ಮಕತ್ವಸರ್ವಾಂತರ್ಯಾಮಿತ್ವದರ್ಶನಾತ್. "ಯೋ ವೇದಾದೌ ಸ್ವರಃ ಪ್ರೋಕ್ತಃ" ಇತ್ಯಾರಭ್ಯ "ಯಃ ಪರಸ್ಸ ಮಹೇಶ್ವರಃ" ಇತ್ಯಂತೇನ ಅಕಾರೋಕಾರಮಕಾರವಾಚ್ಯಬ್ರಹ್ಮವಿಷ್ಣುರುದ್ರಾಣಾಂ ಮಹೇಶ್ವರೇ ವಿಲಯಃ ಪ್ರತಿಪಾದಿತಃ; ತಸ್ಮಾನ್ನೇತರೇಷಾಂ ಬ್ರಹ್ಮತ್ವಂ. ಕಿಂಚ—"ಈಶಾನಸ್ಸರ್ವವಿದ್ಯಾನಾಂ" ಇತ್ಯಾರಭ್ಯ "ಸದಾಶಿವೋಂ" ಇತ್ಯಂತೇನ ತಸ್ಯೈವ ಬ್ರಹ್ಮತ್ವಂ ಪ್ರಣವಪ್ರತಿಪಾದ್ಯತ್ವಂ ಚೋಕ್ತಂ "ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಂ। ಪತಿಂ ಪತೀನಾಂ ಪ್ರಥಮಂ ಪರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಂ" (ಶ್ವೇ. ೬-೭) ಇತಿ ಶ್ವೇತಾಶ್ವತರೇ ಬ್ರಹ್ಮವಿಷ್ಣುರುದ್ರಾದಿದೇವಾನಾಂ ನಿಯಂತೃತ್ವೇನೇಶ್ವರಂ ವಿದಾಮೋ ಜಾನೀಮಃ, ನಾನ್ಯಥೇಶ್ವರಂ ಜಾನೀಮ ಇತಿ ನಿರ್ಣೀಯತೇ. "ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ। ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ" (ಋಗ್ವೇದ. ೭-೪-೬) ಇತಿ ಋಗ್ವೇದೇ ಬುದ್ಧ್ಯಾದಿವಿಷ್ಣ್ವಂತಜಗತ್ಕಾರಣತ್ವಂ ತಸ್ಯೈವೋಪಪಾದಿತಂ. ಸೋಮಪ್ರಕರಣಪಠಿತತ್ವಾನ್ನ ಸೋಮಲತಾಪರತ್ವಂ; ಅಚೇತನಸೋಮಲತಾಯಾಸ್ಸರ್ವಕಾರಣತ್ವಾಸಂಭವಾತ್.

ಅಥರ್ವಶಿಖಾಯಾಂ ಚ—"ಧ್ಯಾಯೀತೇಶಾನಂ ಪ್ರಧ್ಯಾಯಿತವ್ಯಂ, ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ ಸರ್ವಾಣಿ ಚೇಂದ್ರಿಯಾಣಿ ಸಹ ಭೂತೈರ್ನ ಕಾರಣಂ ಕಾರಣಾನಾಂ ಧ್ಯಾತಾ ಕಾರಣಂ ತು ಧ್ಯೇಯಸ್ಸರ್ವೈಶ್ವರ್ಯಸಂಪನ್ನಸ್ಸರ್ವೇಶ್ವರಶ್ಶಂಭುರಾಕಾಶಮಧ್ಯೇ ಧ್ರುವಂ ಸರ್ವಾಧಿಕಂ" ಇತ್ಯುಪಕ್ರಮ್ಯ "ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ" ಇತ್ಯಂತೇನ ಮುಮುಕ್ಷೂಣಾಂ ಇತರನಿಷೇಧಪೂರ್ವಕಂ ಶಿವೋಪಾಸನಮೇವ ವಿಹಿತಂ. "ಉತಾಮೃತತ್ವಸ್ಯೇಶಾನಃ" "ಸರ್ವಮಿದಂ ಶಿವ ಏವ ವಿಜಾನೀಮಃ" "ಶುದ್ಧೋ

**ನಿರಂಜನೋ ವಿಭುರದ್ವಯಂ ಶಿವಮೇಕಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ", "ಶಿವೋಽದ್ವೈತಃ" "ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುಃ" "ನ ಸನ್ನ ಚಾಸಚ್ಛಿವ ಏವ ಕೇವಲಃ" "ವಿಶ್ವಾಧಿಕೋ ರುದ್ರೋ ಮಹರ್ಷಿಃ" ಇತ್ಯಾದಿಶ್ರುತಿಭಿಶ್ಶಿವಸ್ಯಾದ್ವಿತೀಯತ್ವಪ್ರತಿಪಾದನಾಚ್ಛಿವ ಏವ ಪರ ಇತಿ ನಿಶ್ಚೀಯತೇ.**

'ಅಗ್ನೀಷೋಮೀಯಂ ಪಶುಮಾಲಭೇತ' ಎಂಬಲ್ಲಿ ಪಶುವೆಂದರೆ ಯಾವುದು, ಎರಡು ಕಾಲುಗಳುಳ್ಳದ್ದೋ, ನಾಲ್ಕು ಕಾಲುಗಳುಳ್ಳದ್ದೋ, ಎಲ್ಲವೂ ಪಶುಗಳೇ ಆದ್ದರಿಂದ ಯಾವುದನ್ನು ಒಪ್ಪಿಸಬೇಕು ಎಂಬ ಸಂದೇಹ ಬಂದರೆ, 'ಛಾಗದ ವಪೆಯ ಮೇದಸ್ಸಿನಿಂದಲೇ ಹೋಮವನ್ನರ್ಪಿಸುತ್ತೇನೆ' ಎಂಬ ಬೇರೆ ಶ್ರುತಿಯಿಂದ ಛಾಗವನ್ನೇ ಪಶುವೆಂದು ನಿರ್ಣಯಿಸುವಂತೆ, ಶಿವನನ್ನೇ ಪರಬ್ರಹ್ಮವೆಂದು ನಿರ್ಣಯಿಸಬೇಕು. ಆದ್ದರಿಂದಲೇ 'ಯತೋ ವಾ ಇಮಾನಿ ಭೂತಾನಿ ಜಾಯಂತೆ' ಎಂಬುವ ಕಡೆ ಜಗದುತ್ಪತ್ತಿಗೆ ಕಾರಣವೆಂದು ಹೇಳಿರುವ ಬ್ರಹ್ಮಲಕ್ಷಣವು ಪರಮೇಶ್ವರನಿಗೆ ಅನ್ವಯಿಸುತ್ತದೆ. ಗುಣಮಯವಾದ ಶಕ್ತಿಯಿಂದ ಕೂಡಿದ ಹಿರಣ್ಯಗರ್ಭ-ನಾರಾಯಣ-ಕಾಲರುದ್ರ ಇವರ್ಯಾರಿಗೂ ಈಶ್ವರತ್ವವು ಅನ್ವಯಿಸುವುದಿಲ್ಲ. ಇವರೆಲ್ಲರೂ ಒಂದೊಂದು ಕಾರ್ಯಕ್ಕೆ ಕರ್ತರಾದ್ದರಿಂದ ಜಗಜ್ಜನ್ಮಾದಿಕರ್ತೃತ್ವವು ಅವರಿಗೆ ಅನ್ವಯಿಸುವುದಿಲ್ಲವೆಂದು ಬಾದರಾಯಣರು "ಜನ್ಮಾದ್ಯಸ್ಯ ಯತಃ" ಎಂಬ ಸೂತ್ರದಲ್ಲಿ ತಿಳಿಸಿದ್ದಾರೆ. ಬ್ರಹ್ಮೋತ್ತರಕಾಂಡದಲ್ಲಿ "ಯಾವನ ಆಜ್ಞೆಯಿಂದ ಬ್ರಹ್ಮನು ಜಗತ್ತನ್ನು ನಿರ್ಮಿಸಿದನೋ, ಹರಿಯು ಪಾಲಿಸುವನೋ, ಕಾಲರುದ್ರನು ಸಂಹರಿಸುವನೋ ಅಂತಹ ಶಿವನಿಗೆ ನಮಸ್ಕಾರ" ಹೀಗೆ ಜಗತ್ತಿನ ಉತ್ಪತ್ತಿ ರಕ್ಷಣೆ ಪ್ರಳಯಗಳಿಗೆ ಶಿವನೇ ಪ್ರಯೋಜಕಕರ್ತನೆಂದು ನಿರ್ದೇಶಿಸಲಾಗಿದೆ. "ಮಾಯೆಯನ್ನು ಪ್ರಕೃತಿಯೆಂದೂ, ಮಾಹೇಶ್ವರನನ್ನು ಮಾಯಾಪತಿ ಎಂದೂ ತಿಳಿ. ಅವನ ಅವಯವಗಳಾದ ತ್ರಿಮೂರ್ತಿಗಳಿಂದ ಹುಟ್ಟಿದ ಈ ಜಗತ್ತು ಅವನಿಂದಲೇ ವ್ಯಾಪ್ತವಾಗಿದೆ" ಇಲ್ಲಿ ಮಾಯೆಯನ್ನು ಪ್ರಕೃತಿ ಎಂದೂ, ಈಶ್ವರನನ್ನು ಮಾಯೆಗಧಿಪತಿ ಎಂದೂ ಹೇಳಿದ್ದರಿಂದ ಮಾಯೆ ಪರಮೇಶ್ವರನಿಗಧೀನವೆಂದು ಹೇಳಿದ ಹಾಗಾಯಿತು. ಹೀಗೆ ಮಾಯೆಯನ್ನು ವಶಪಡಿಸಿಕೊಂಡಿದ್ದರಿಂದ ಅವನು ಸ್ವತಂತ್ರನಾಗಿರುವನು. ಅವನ ಅಂಶರೆನಿಸಿದ ಬ್ರಹ್ಮ ವಿಷ್ಣು ಕಾಲರುದ್ರರಿಂದ ವ್ಯಾಪ್ತವಾದ ಚೈತನ್ಯವೇ ಈ ಸಕಲ ಜಗತ್ತು ಆಗಿದೆ ಎಂದು ಹೇಳಿದಂತಾಯಿತು. ಅಥರ್ವ ಶಿರಸ್ಸಿನಲ್ಲಿ—"ದೇವತೆಗಳು ಸ್ವರ್ಗಕ್ಕೆ ಹೋದರು. ಅಲ್ಲಿ ಅವರು ರುದ್ರನನ್ನು ನೀನು ಯಾರೆಂದು ಕೇಳಿದರು. 'ನಾನೊಬ್ಬನೇ ಮೊದಲೂ ಇದ್ದೆನು, ಈಗಲೂ ಇದ್ದೇನೆ, ಮುಂದೆಯೂ ಇರುವೆನು. ನನಗಿಂತ ಬೇರೆ ಯಾರೂ ಇಲ್ಲ" ಎಂದು ಅವನು ಹೇಳಿದನು. ಇದರಿಂದ ಶಿವನೊಬ್ಬನೇ ತ್ರಿಕಾಲಗಳಲ್ಲಿಯೂ ಯಾವ ಬಾಧೆಯೂ ಇಲ್ಲದಂತೆ ಸರ್ವಾಂತರ್ಯಾಮಿಯಾಗಿಯೂ, ಸರ್ವಕರ್ತನಾಗಿಯೂ, ಸರ್ವಶಬ್ದವಾಚ್ಯನಾಗಿಯೂ, ಸರ್ವೇಶ್ವರನೂ ಸರ್ವಾತ್ಮಕನೂ ಆದ

ಪರಬ್ರಹ್ಮನಾಗಿರುವನೆಂದು ಸ್ಪಷ್ಟವಾಗುತ್ತದೆ. ಕಾಣ್ವಶಾಖೆಯಲ್ಲಿ 'ಯಾವನು ಪೃಥಿವಿಯಲ್ಲಿರುವನೋ ಎಂಬ ವಾಕ್ಯಗಳಲ್ಲಿ ಪೃಥಿವಿಯೇ ಮೊದಲಾದ ಎಂಟು ಆಕಾರಗಳುಳ್ಳವನೇ ಬ್ರಹ್ಮನೆಂದು ಹೇಳಿರುವುದರಿಂದ, ಶಂಖಚಕ್ರಗಳಿಂದ ಕೂಡಿದ ಬೇರೊಬ್ಬ ದೇವನಿಗೆ ಹಿಂದಿನದು ಮುಂದಿನದು ಎಲ್ಲವನ್ನೂ ಸೃಷ್ಟಿಸುವ ಸಾಮರ್ಥ್ಯವಿರಲಾರದು. ವಿಷ್ಣುವೆಂದರೆ ವ್ಯಾಪಕನೆಂಬ ಅವಯವಾರ್ಥದಿಂದ ವಿಷ್ಣುವಿಗೂ ಪೃಥಿವ್ಯಾದಿಗಳು ಶರೀರವೆಂದೂ, ಅವನೇ ಅವುಗಳಲ್ಲಿ ಅಂತರ್ಯಾಮಿಯಾಗಿ ನೆಲಸಿರುವನೆಂದೂ ಹೇಳುವುದು ಸಮಂಜಸವಲ್ಲ. ಅಷ್ಟಮೂರ್ತಿ ಎಂಬ ಹೆಸರು ಶಿವನಲ್ಲಿಯೇ ಪ್ರಸಿದ್ಧವಾಗಿ ವಿಷ್ಣುವಿನಲ್ಲಿ ಪ್ರಸಿದ್ಧವಾಗಿಲ್ಲದ್ದರಿಂದ ಅಂತರ್ಯಾಮಿ ಎಂಬುದು ಶಿವನಿಗೇ ಅನ್ವಯಿಸುತ್ತದೆ. ಶಿವಕೇಶವರಿಬ್ಬರೂ ಅಂತರ್ಯಾಮಿ ಮತ್ತು ಅಷ್ಟಮೂರ್ತಿಗಳಾಗಲೆಂದು ಹೇಳುವುದೂ ಯುಕ್ತವಲ್ಲ. ಯಾಕೆಂದರೆ ಇಬ್ಬರಿಗೂ ಒಂದೇ ಶರೀರವಿರಲಾರದು. ಸ್ವತಂತ್ರರಾದ ಇಬ್ಬರೂ ನಿಯಾಮಕರಾದರೆ ಜಗತ್ತಿನ ಉತ್ಪತ್ತಿಸ್ಥಿತಿಸಂಹಾರಗಳೆಲ್ಲವೂ ಏಕಕಾಲದಲ್ಲಿ ಸಂಭವಿಸುವುದರಿಂದ ವಿಶ್ವವೆಲ್ಲವೂ ಒಂದೇ ಸಮಯದಲ್ಲಿ ಲಯವಾಗಬೇಕಾದೀತು. "ಅವನು ಒಳಗಿಂದ ಒಳಗೇ ಪ್ರವೇಶಿಸಿದನು, ದಿಕ್ಕುಗಳ ಅಂತರವನ್ನು ಪ್ರವೇಶಿಸಿದನು. ಬೆಂಕಿಯಲ್ಲಿ, ನೀರಿನಲ್ಲಿ, ಲತೆಗಳಲ್ಲಿ ಯಾವ ರುದ್ರನಿರುವನೋ ಅವನೇ ವಿಶ್ವದ ಸಕಲ ಪ್ರಪಂಚಗಳಲ್ಲೂ ತುಂಬಿಕೊಂಡಿರುವನು. ಅಂತಹ ರುದ್ರನಿಗೆ ನಮಸ್ಕಾರ" ಈ ಬಗೆಯ ಶ್ರುತಿಗಳಲ್ಲಿ ಶಿವನೇ ಸರ್ವಾತ್ಮಕನೆಂದೂ, ಸರ್ವಾಂತರ್ಯಾಮಿ ಎಂದೂ ಹೇಳಿದೆ. "ವೇದದ ಆದಿಯಲ್ಲಿ ಯಾವ ಪ್ರಣವವನ್ನು ಹೇಳಲಾಗಿದೆಯೋ ಅದೇ ಪರಮಾತ್ಮನೂ ಮಹೇಶ್ವರನೂ ಆಗಿದೆ" ಇಲ್ಲಿ ಅಕಾರ, ಉಕಾರ ಮಕಾರಗಳು ಬ್ರಹ್ಮ ವಿಷ್ಣು ರುದ್ರರನ್ನು ಬೋಧಿಸುತ್ತವೆ ಮತ್ತು ಈ ಮೂವರೂ ಮಹೇಶ್ವರನಲ್ಲಿ ಕೊನೆಗೆ ವಿಲೀನರಾಗುತ್ತಾರೆಂದು ತಿಳಿದುಬರುತ್ತದೆ. ಆದ್ದರಿಂದ ಬೇರೆ ಯಾರೂ ಪರಬ್ರಹ್ಮವಾಗಲಾರರು. "ಎಲ್ಲಾ ವಿದ್ಯೆಗಳಿಗೂ ನಿಯಾಮಕನು" ಎಂದು ಆರಂಭಿಸಿ 'ಆ ಓಂಕಾರವೇ ಸದಾಶಿವನಾಗಿದೆ' ಎಂದು ಕೊನೆಯಾಗಿರುವ ಮಂತ್ರದಲ್ಲಿ ಅವನೇ ಬ್ರಹ್ಮವೆಂದೂ, ಪ್ರಣವದಿಂದ ಪ್ರತಿಪಾದ್ಯನೆಂದೂ ಹೇಳಲಾಗಿದೆ. "ಸೃಷ್ಟಿ ಸ್ಥಿತಿ ಸಂಹಾರಗಳ ಮೇಲ್ವಿಚಾರಣೆ ನಡೆಸುವ ತ್ರಿಮೂರ್ತಿಗಳಿಗೂ ಅಧಿಪತಿಯೂ, ಇತರ ಎಲ್ಲಾ ದೇವತೆಗಳಿಗೂ ಪರಮೋತ್ತಮನೂ, ಪತಿಗಳೆಲ್ಲರಿಗೂ ಮೊದಲನೆಯ ಪತಿಯೂ ಎನಿಸಿ ಎಲ್ಲರಿಗೂ ವಂದ್ಯನಾದ ಪರಮೇಶ್ವರನನ್ನು ತಿಳಿಯೋಣ" ಎಂದು ಶ್ವೇತಾಶ್ವತರದಲ್ಲಿ ಬ್ರಹ್ಮ ವಿಷ್ಣು ರುದ್ರ ಮೊದಲಾದ ಎಲ್ಲಾ ದೇವತೆಗಳಿಗೂ ಪರಮೇಶ್ವರನೇ ನಿಯಾಮಕನೆಂದು ತಿಳಿಸಿದೆ. ಹೀಗಲ್ಲದೆ ಬೇರೇ ರೀತಿಯಲ್ಲಿ ಈಶ್ವರನನ್ನು ತಿಳಿಯಲಾಗುವುದಿಲ್ಲವೆಂಬುದು ಇದರಿಂದ ಸ್ಪಷ್ಟಪಡುತ್ತದೆ. ಋಗ್ವೇದದಲ್ಲಿ "ಶಕ್ತಿವಿಶಿಷ್ಟಪರಮಶಿವನು ಗಾಳಿ, ಬೆಂಕಿ, ಭೂಮಿ, ಸ್ವರ್ಗ, ಸೂರ್ಯ, ಇಂದ್ರ, ವಿಷ್ಣು, ಬುದ್ಧಿ ಇವೆಲ್ಲಕ್ಕೂ ಜನಕನಾಗಿದ್ದಾನೆ" ಎಂದು ಬುದ್ಧಿ ಮೊದಲಾಗಿ ವಿಷ್ಣುವೇ ಕೊನೆಯದಾದ ಈ ಜಗತ್ತಿಗೆ

ಅವನೇ ಕಾರಣನೆಂದು ಉಕ್ತವಾಗಿದೆ. ಈ ಮಂತ್ರವು ಸೋಮಪ್ರಕರಣದಲ್ಲಿ ಬಂದಿರುವುದರಿಂದ ಸೋಮಲತೆಯ ಪರವಾಗಿದೆ ಎಂದು ಹೇಳಲಾಗುವುದಿಲ್ಲ. ಯಾಕೆಂದರೆ ಜಡವಾದ ಸೋಮಲತೆ ಎಲ್ಲಕ್ಕೂ ಕಾರಣವಾಗಲಾರದು. ಅಥರ್ವಣ ಶಿಖೆಯಲ್ಲಿ—“ಧ್ಯಾನಾರ್ಹನಾದ ಈಶ್ವರನನ್ನು ಧ್ಯಾನಿಸಿರಿ. ಇದೆಲ್ಲವೂ ಅವನೇ ಆಗಿದೆ. ಬ್ರಹ್ಮ, ವಿಷ್ಣು, ಕಾಲರುದ್ರ, ಇಂದ್ರ ಇವರೆಲ್ಲರೂ ಅವನಿಂದಲೇ ಹುಟ್ಟಿದ್ದಾರೆ. ಸಮಸ್ತ ಇಂದ್ರಿಯಗಳೂ ಪಂಚಭೂತಗಳೂ ಅವನಿಂದಲೇ ಬಂದಿವೆ. ಇವು ಯಾವೂ ಅವನಿಗೆ ಕಾರಣವಾಗಿಲ್ಲ. ಅವನೇ ಎಲ್ಲಕ್ಕೂ ಕಾರಣವಾಗಿದ್ದಾನೆ. ಆದ್ದರಿಂದ ಅವನೇ ಎಲ್ಲರಿಗೂ ಧ್ಯೇಯನು. ಸರ್ವೈಶ್ವರ್ಯಸಂಪನ್ನನೂ ಸರ್ವೇಶ್ವರನೂ ಆದ ಶಂಭುವು ಆಕಾಶ ಮಧ್ಯದಲ್ಲಿ ಎಲ್ಲರಿಗೂ ಉತ್ಕೃಷ್ಟನಾಗಿ ಸ್ಥಿರವಾಗಿ ನೆಲಸಿರುವನು” ಎಂದು ಆರಂಭಿಸಿ ‘ಉಳಿದದ್ದೆಲ್ಲವನ್ನು ಬಿಟ್ಟು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು” ಎಂದು ಕೊನೆಯಾಗಿರುವ ಮಂತ್ರದಲ್ಲಿ ಮುಮುಕ್ಷುಗಳಿಗೆ ಬೇರೆ ಎಲ್ಲರನ್ನೂ ನಿಷೇಧಿಸಿ ಶಿವನೊಬ್ಬನನ್ನೇ ಉಪಾಸ್ಯನೆಂದು ಉಪದೇಶಿಸಲಾಗಿದೆ. “ಮೋಕ್ಷಕ್ಕೆ ಶಿವನೇ ಅಧಿಪತಿಯಾಗಿದ್ದಾನೆ. ಇದೆಲ್ಲವನ್ನೂ ಶಿವನೆಂದೇ ತಿಳಿ’ “ಶುದ್ಧನೂ, ನಿರಂಜನನೂ, ಸರ್ವವ್ಯಾಪಕನೂ ಆದ ಶಿವನೊಬ್ಬನೇ ಅದ್ವೈತನಾಗಿದ್ದಾನೆ”. “ಅದ್ವೈತನಾದ ಶಿವನನ್ನು ತ್ರಿಮೂರ್ತ್ಯತೀತನೆಂದು ಜ್ಞಾನಿಗಳು ತಿಳಿಯುತ್ತಾರೆ”. “ಅವನೇ ಆತ್ಮನೆಂದು ತಿಳಿಯಬೇಕು”. “ಶಿವನೇ ಅದ್ವೈತನು” “ಒಬ್ಬ ರುದ್ರನೇ ಎರಡನೆಯವನಿಲ್ಲದೇ ಇದ್ದನು”. “ವಿಶ್ವಾಧಿಕನೂ ಮಹರ್ಷಿಯೂ ಆದ ರುದ್ರನು”–ಈ ಬಗೆಯ ಶ್ರುತಿಗಳಲ್ಲಿ ಶಿವನೇ ಅದ್ವಿತೀಯನೆಂದು ಹೇಳಿರುವುದರಿಂದ ಅವನೇ ಪರಬ್ರಹ್ಮನೆಂದು ನಿಶ್ಚಯಿಸಲಾಗಿದೆ.

**ಕಿಂಚ—**

**ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ ।**
**ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮಃ ॥**

**ಇತ್ಯಾದಿನಾ ನೀಲಲೋಹಿತಸ್ಯ ಶಿವಸ್ಯ ಪರಬ್ರಹ್ಮತ್ವಮುಕ್ತಂ. “ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ” “ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ। ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್॥”, “ಸ ಬ್ರಹ್ಮಾ ಸ ಶಿವಸ್ಸಹರಿಸ್ಸೇಂದ್ರಸ್ಸೋಽಕ್ಷರಃ ಪರಮಃ ಸ್ವರಾಟ್” ಇತ್ಯಾದಿನಾ ಶಿವಸ್ಯ ಮೂರ್ತಿತ್ರಯಾತೀತಪರಬ್ರಹ್ಮತ್ವಪ್ರತಿಪಾದನಾತ್, ತದನ್ಯೇಷಾಂ ಕಾರಣತ್ವಾಭಾವಾನ್ನಾನ್ಯೇಷಾಂ ಬ್ರಹ್ಮತ್ವಂ ಯುಕ್ತಂ. “ಅನ್ನಂಬ್ರಹ್ಮ” ಇತ್ಯಾದಿ ತು ಸ್ತುತಿಮಾತ್ರಮೇವ.**

ಕಿಂಚ—“ ಸರ್ವೋ ವೈ ರುದ್ರಃ ” “ ಸರ್ವಂ ಖಲ್ವಿದಂ ಬ್ರಹ್ಮ ” “ ತ್ರಿಷು ಧಾಮಸು ಯದ್ಭೋಜ್ಯಂ ಭೋಕ್ತಾ ಭೋಗಶ್ಚ ಯದ್ಭವೇತ್ । ತೇಭ್ಯೋ ವಿಲಕ್ಷಣಸ್ಸಾಕ್ಷೀ ಚಿನ್ಮಾತ್ರೋಽಹಂ ಸದಾಶಿವಃ ॥ ಮಯ್ಯೇವ ಸಕಲಂ ಜಾತಂ ಮಯಿ ಸರ್ವಂ ಪ್ರತಿಷ್ಠಿತಂ । ಮಯಿ ಸರ್ವಂ ಲಯಂ ಯಾತಿ ತದ್ಬ್ರಹ್ಮಾದ್ವಯಮಸ್ಮ್ಯಹಂ ॥” ಇತ್ಯಾದಿನಾ ಹಸ್ತಕರಪಾಣಿಶಬ್ದವತ್ ಬ್ರಹ್ಮಾತ್ಮಶಿವಶಬ್ದಾನಾಂ ಪರ್ಯಾಯತ್ವಶ್ರವಣಾತ್, ಮಾಂಡೂಕ್ಯೋಪನಿಷದಿ ಉಪಕ್ರಮೇ—“ ಸರ್ವಂ ಹ್ಯೇತದ್ಬ್ರಹ್ಮ ಅಯಮಾತ್ಮಾ ಬ್ರಹ್ಮ ಸೋಽಯಮಾತ್ಮಾ ” ಇತ್ಯುಕ್ತ್ವಾ ಅಂತೇ “ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ ” ಇತ್ಯುಕ್ತ್ವಾ ಅದ್ವಿತೀಯಬ್ರಹ್ಮಪ್ರಕರಣೇ ಉಪಕ್ರಮೋಪಸಂಹಾರಯೋರೇಕಾರ್ಥಪ್ರತಿಪಾದಕತ್ವಾದುಪಕ್ರಾಂತಸ್ಯ ಬ್ರಹ್ಮಣ ಉಪಸಂಹಾರಗತಾದ್ವೈತಶಿವಸ್ಯ ಚಾಭಿನ್ನತ್ವೋಪದೇಶಾಚ್ಚ ಜಗಜ್ಜನ್ಮಾದಿಕಾರಣತ್ವೇನ ಪರಬ್ರಹ್ಮತ್ವಂ ತಸ್ಯೈವ ಸಿದ್ಧಂ. ಅನ್ಯಥಾ ಶಿವಬ್ರಹ್ಮಾತ್ಮಾದೀನಾಂ ಶ್ರುತ್ಯಾ ಜಗತ್ಕಾರಣತ್ವಪ್ರತಿಪಾದನಾತ್ತೇಷಾಂ ಪ್ರತ್ಯೇಕಮೀಶ್ವರತ್ವಾಂಗೀಕಾರೇ ಈಶ್ವರನಾನಾತ್ವಪ್ರಸಕ್ತ್ಯಾ ಸಕಲಮತವಿರೋಧಃ ಸಕಲಶ್ರುತಿವಿರೋಧಶ್ಚ ಸ್ಯಾತ್. ಏವಂ ಸರ್ವವೇದಾಂತಾರ್ಥಜ್ಞೈರ್ಜೈಮಿನ್ಯಾಚಾರ್ಯೈಃ ಸ್ವಕೃತವೇದಪಾದಸ್ತವೇ ಸಕಲವೇದವಾಕ್ಯಾನಾಂ ಶಿವಪರತ್ವಮುಕ್ತಂ. ತಥಾ ಚ ಚತುರ್ವೇದಪಾರಂಗತೈಃ ಜ್ಯೋತಿರ್ನಾಥಘಂಟಾನಾಥಭೀಮನಾಥಭಟ್ಟಭಾಸ್ಕರಾದಿಭಿರ್ವೈದಿಕೈರ್ವೇದಮಾರ್ಗಪ್ರತಿಷ್ಠಾಪನಾಚಾರ್ಯೈರಪಿ ಪಾಷಂಡಪಾಂಚರಾತ್ರಬೌದ್ಧಾದ್ವೈತಾದಿದುರ್ಮತನಿರಾಕರಣಾನಂತರಂ—

ಮಹಾದೇವೋ ದೇವಃ ಸಕಲಜಗದಾರಾಧ್ಯಚರಣ
ಸ್ತ್ರಯೀಮಾರ್ಗೋ ಮಾರ್ಗಃ ಕುಮತಿಮತವೃತ್ತಿಪ್ರಮಥನಃ ।
ತಯೋರ್ಯೋ ವಾ ಬ್ರೂತೇ ವೃಜಿನಮನಯೋಸ್ತಸ್ಯ ನಿಧನೇ
ಶಿರಸ್ಯಂಘ್ರಿಂ ವಾದಿಪ್ರಳಯದಹನೋಽಹಂ ನೃಪಸಭೇ ॥

ಇತ್ಯಾದಿನಾ ಶಿವಸ್ಯೈವ ಪರಬ್ರಹ್ಮತ್ವಂ ವ್ಯವಸ್ಥಾಪಿತಂ. ತಸ್ಮಾಚ್ಛಾಸ್ತ್ರೇ ಬ್ರಹ್ಮಜಿಜ್ಞಾಸೇತ್ಯತ್ರ ಶಿವಸ್ಯೈವ ಸ್ವರೂಪಜಿಜ್ಞಾಸೇತಿ ನಿರ್ದಿಷ್ಟಂ.

‘ ಋತಂ ಸತ್ಯಂ ’ ‘ ಪ್ರಪಂಚೋಪಶಮಂ ’ ಎಂಬ ಮಂತ್ರಗಳಿಂದಲೂ, ‘ ಉಮಾಸಹಾಯಂ ’ ಎಂದಾರಂಭಿಸಿ “ ಅವನೇ ಬ್ರಹ್ಮ, ಅವನೇ ಶಿವ, ಅವನೇ ಹರಿ, ಅವನೇ ಇಂದ್ರ, ಅವನೇ ಅಕ್ಷರ, ಅವನೇ ಪರಮನೂ ಸ್ವತಂತ್ರನೂ ಆಗಿದ್ದಾನೆ ” ಎಂದು ಕೊನೆಯಾಗಿರುವಲೂ ಮಂತ್ರದಿಂದ ಶಿವನೇ ಕಾರ್ಯವೂ ಕಾರಣನೂ ಆಗಿರುವನೆಂದು ಹೇಳಿದ್ದರಿಂದ ಬೇರೆಯವರನ್ನು ಪರಬ್ರಹ್ಮವೆಂದು ಹೇಳುವುದು ಯುಕ್ತವಲ್ಲ.

'ಅನ್ನಂ ಬ್ರಹ್ಮ' ಎಂದು ಹೇಳುವಂತೆ ಅದೆಲ್ಲವೂ ಅರ್ಥವಾದ (ಪ್ರಶಂಸೆ) ವೆಂದು ತಿಳಿಯಬೇಕು. "ಇದೆಲ್ಲವೂ ರುದ್ರನೇ ಆಗಿದೆ". "ಇದೆಲ್ಲವೂ ಬ್ರಹ್ಮವೇ ಆಗಿದೆ" "ಮೂರು ಸ್ಥಾನಗಳಲ್ಲಿ ಯಾವುದು ಭೋಜ್ಯವೂ, ಭೋಕ್ತನೂ ಮತ್ತು ಭೋಗ ವೆಂಬುದುಂಟೋ ಇದೆಲ್ಲಕ್ಕೂ ವಿಲಕ್ಷಣನೂ, ಸಾಕ್ಷಿಯೂ ಆದ ಚಿತ್ಸ್ವರೂಪನಾದ ನಾನೇ ಸದಾಶಿವ(ಕಾಲರುದ್ರ) ನಾಗಿರುವೆನು. "ನನ್ನಲ್ಲಿಯೇ ಎಲ್ಲವೂ ಹುಟ್ಟಿದೆ. ನನ್ನಲ್ಲಿಯೇ ಎಲ್ಲವೂ ಸುಪ್ರತಿಷ್ಠಿತವಾಗಿದೆ. ನನ್ನಲ್ಲಿಯೇ ಎಲ್ಲವೂ ಲಯವಾಗುತ್ತದೆ. ಎರಡನೆಯವನಿಲ್ಲದ ಆ ಬ್ರಹ್ಮವೇ ನಾನಾಗಿದ್ದೇನೆ". ಹೀಗೆ ಹಸ್ತಕರಪಾಣಿ ಎಂಬ ಒಂದೇ ಅರ್ಥಕೊಡುವ ಬೇರೆಬೇರೆ ಶಬ್ದಗಳಂತೆ ಬ್ರಹ್ಮ ಆತ್ಮ ಶಿವ ರುದ್ರ ಈ ಶಬ್ದಗಳು ಪರ್ಯಾಯನಾಮಗಳೆಂದು ತಿಳಿದುಬರುತ್ತದೆ. ಮಾಂಡೂಕ್ಯದಲ್ಲಿ "ಇದೆಲ್ಲವೂ ಬ್ರಹ್ಮ, ಈ ಆತ್ಮವೂ ಬ್ರಹ್ಮ. ಆ ಇದೂ ಬ್ರಹ್ಮವೇ" ಎಂದು ಹೇಳಿ "ಅದ್ವೈತನಾದ ಶಿವನನ್ನು ತ್ರಿಮೂರ್ತ್ಯತೀತನೆಂದು ಜ್ಞಾನಿಗಳು ತಿಳಿಯುತ್ತಾರೆ" ಎಂದು ಕೊನೆಯಾಗಿರುವ ಅದ್ವಿತೀಯ ಬ್ರಹ್ಮಪ್ರಕರಣದಲ್ಲಿ ಉಪಕ್ರಮೋಪಸಂಹಾರಗಳ ಐಕ್ಯತೆ ಇರುವುದರಿಂದ ಆರಂಭಿಸಿದ ಬ್ರಹ್ಮಕ್ಕೆ ಉಪಸಂಹಾರದಲ್ಲಿ ಅದ್ವಿತೀಯ ಶಿವನೆಂದು ಹೆಸರನ್ನು ಹೇಳಿರುವುದರಿಂದ ಜಗಜ್ಜನ್ಮಾದಿಕಾರಣತ್ವವು ಅವನಿಗೇ ಮೀಸಲಾಗಿದೆ. ಇಲ್ಲವಾದರೆ ಶಿವ ಬ್ರಹ್ಮ ಆತ್ಮಗಳಿಗೆ ಶ್ರುತಿಯಲ್ಲಿ ಜಗತ್ಕಾರಣತ್ವ ವನ್ನು ಹೇಳಿರುವುದರಿಂದ ಅವರೊಬ್ಬೊಬ್ಬರನ್ನು ಪ್ರತ್ಯೇಕವಾಗಿಯೇ ಈಶ್ವರನೆಂದು ಅಂಗೀಕರಿಸಿದರೆ, ಈಶ್ವರರು ಅನೇಕರಾಗುವುದರಿಂದ ಸಕಲಮತಗಳ ವಿರೋಧವೂ ಸಕಲಶ್ರುತಿಗಳ ವಿರೋಧವೂ ಸಂಭವಿಸುತ್ತದೆ. ಹೀಗೆ ಎಲ್ಲಾ ವೇದಾಂತಗಳ ಅರ್ಥವನ್ನು ತಿಳಿದ ಜೈಮಿನ್ಯಾಚಾರ್ಯರು ತಮ್ಮ ವೇದಪಾದಸ್ತವದಲ್ಲಿ ಎಲ್ಲಾ ವೇದ ವಾಕ್ಯಗಳನ್ನೂ ಶಿವಪರವೆಂದು ತಿಳಿಸಿದ್ದಾರೆ. ನಾಲ್ಕು ವೇದಗಳಲ್ಲೂ ಪಾರಂಗತರಾದ ಜ್ಯೋತಿರ್ನಾಥ, ಘಂಟಾನಾಥ, ಭೀಮನಾಥ, ಭಟ್ಟಭಾಸ್ಕರ ಮೊದಲಾದ ವೇದ ಮಾರ್ಗಪ್ರತಿಷ್ಠಾಪಕರಾದ ವೈದಿಕಾಚಾರ್ಯರೂ ಸಹ ಪಾಷಂಡ, ಪಾಂಚರಾತ್ರ, ಬೌದ್ಧ, ಅದ್ವೈತ ಮೊದಲಾದ ದುರ್ಮತಗಳಿನ್ನು ನಿರಾಕರಿಸಿದಮೇಲೆ "ಮಹಾದೇವ ನಾದ ಶಿವನೇ ಎಲ್ಲಾ ಜಗತ್ತಿಗೂ ಪೂಜ್ಯನಾಗಿರುವನು. ವೇದಮಾರ್ಗವೇ ಕುಮತ ಗಳನ್ನು ನಾಶಗೊಳಿಸುವ ಸನ್ಮಾರ್ಗವೆನಿಸಿದೆ. ಶಿವನಿಗೂ ವೇದಕ್ಕೂ ಯಾವನು ಕಳಂಕವನ್ನು ತರುವನೋ ಅವನಿಗೆ ಶಿವನು ಪ್ರಳಯಾಗ್ನಿಯಾಗುವನು" ಎಂದು ಹೇಳಿರುವರಾದ್ದರಿಂದ ಶಾಸ್ತ್ರದಲ್ಲಿ ಬ್ರಹ್ಮಜಿಜ್ಞಾಸೆ ಎಂಬ ಕಡೆ ಪರಶಿವನ ಜಿಜ್ಞಾಸೆ ಎಂದು ನಿರ್ಧರಿಸಲಾಗಿದೆ. ಬ್ರಹ್ಮವೇ ಜಗತ್ಕಾರಣವೆಂಬಲ್ಲಿ ಪರಶಿವನೇ ಜಗತ್ಕಾರಣ ನೆಂದು ಹೇಳಿದ ಹಾಗಾಯಿತು.

**ಏವಂ ಬ್ರಹ್ಮಣೋ ಯಜ್ಜಗತ್ಕಾರಣತ್ವಂ ತಚ್ಛಿವಸ್ಯೈವೇತಿ ಸೂತ್ರ ಸಂದರ್ಭರೂಪೇ ಶಾಸ್ತ್ರೇ ಬ್ರಹ್ಮೇತಿ ವ್ಯವಹಾರಃ. "ಬ್ರಹ್ಮವಿದಾಪ್ನೋತಿ ಪರಂ" "ಬ್ರಹ್ಮ ವೇದ ಬ್ರಹ್ಮೈವ ಭವತಿ" "ಶಿವ ಏಕೋ ಧ್ಯೇಯ**

ಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ” ಇತ್ಯತ್ರ ಶಿವಂಕರೋತೀತಿ ಶಿವಂಕರಃ- ಭಾವಪ್ರಧಾನೋ ನಿರ್ದೇಶಃ- ತಸ್ಮಾದಾತ್ಯಂತಿಕಪಾಶನಿವೃತ್ತಿಪೂರ್ವಕ ಶಿವತ್ವಪ್ರಾಪ್ತಿರೇವ ಮುಕ್ತಿರಿತ್ಯುಪದಿಶ್ಯತೇ. ನಚ ಆಗುಂತಕತ್ವೇನಾನಿತ್ಯ ತ್ವಾತ್ ಕಥಂ ಶಿವತ್ವಪ್ರಾಪ್ತಿರೇವ ಮುಕ್ತಿರಿತಿ ವಾಚ್ಯಂ, ಭ್ರಮರಕೀಟ ನ್ಯಾಯೇನ ಸತ್ಯಕ್ರಿಮೇಃ ಸತ್ಯಭ್ರಮರತ್ವಪ್ರಾಪ್ತಿದರ್ಶನಾತ್. ಸತ್ಯಾತ್ಮ ಕಸ್ಯ ಜಲಸ್ಯ ಸ್ವಭಾವನಿವೃತ್ತಿಪೂರ್ವಕಸತ್ಯಮೌಕ್ತಿಕತ್ವಪ್ರಾಪ್ತಿದರ್ಶ ನಾತ್ ಕಿಮರ್ಥಂ ಬಂಧಮಿಥ್ಯಾತ್ವಕಲ್ಪನಮಿತಿ ವಿವೇಕಿಭಿರ್ಬೋದ್ಧವ್ಯಂ. ನನು—ಮರುಮರೀಚಿಕಾಯಾಂ ಭಾಸಮಾನಸ್ಯಾಸತ್ಯಸ್ಯ ತೋಯಜ್ಞಾ ನಸ್ಯ ಸತ್ಯಂ ಮರೀಚಿಕಾಜ್ಞಾನಂ ನಿವರ್ತಕಮಿತಿ ವ್ಯಾಪ್ತಿಬಲಾತ್ ಜ್ಞಾನೇನ ಸತ್ಯಸ್ಯ ಕಥಂ ನಿವೃತ್ತಿಃ? ಇತಿ ಚೇನ್ನ. ಸತ್ಯಸ್ಯ ಪೂರ್ವಜ್ಞಾ ನಸ್ಯೋತ್ತರಜ್ಞಾನೇನ, ಸ್ಮೃತ್ಯಾ ಸಂಸ್ಕಾರಸ್ಯ, ಶಿವಸ್ಮರಣೇನ ಪಾಪಸ್ಯ, ಪ್ರಿಯಸ್ಮರಣೇನ ದುಃಖಸ್ಯ, ಪ್ರತ್ಯಧಿಕರಣಂ ಸಂಶಯಸ್ಯ ಪೂರ್ವಪಕ್ಷ ನಿರ್ಣಯೇನ, ಪೂರ್ವಪಕ್ಷಸ್ಯ ಚ ಸಿದ್ಧಾಂತೇನ ನಿವೃತ್ತಿದರ್ಶನಾತ್. ನನು—“ಅಜಾಮೇಕಂ ಲೋಹಿತಶುಕ್ಲಕೃಷ್ಣಾಂ” (ಮಹಾನಾ.೧೦ ಅನು.) ಇತ್ಯಾದೌ ಪ್ರಧಾನಸ್ಯ ಜಗತ್ಕಾರಣತ್ವನಿರ್ದೇಶಾತ್, ಬ್ರಹ್ಮಣೋ ಜಗ ತ್ಕಾರಣತ್ವೇ ವಿಕಾರಿತ್ವಪ್ರಸಂಗಾಚ್ಚ, “ಅಥ-ಅತಃ-ಅಬ್ರಹ್ಮಜಿಜ್ಞಾಸಾ” ಇತಿ ಅಬ್ರಹ್ಮಣಃ ಪ್ರಧಾನಸ್ಯ ಜಿಜ್ಞಾಸಾ ಕರ್ತವ್ಯೇತಿ ಚೇನ್ನ-ತಜ್ಜಿಜ್ಞಾ ಸಾವಿಧಾಯಕಶ್ರುತ್ಯದರ್ಶನಾತ್, “ನೋಪಾಸ್ಯೌ ಪ್ರಕೃತಿಜೀವೌ” ಇತಿ ಶ್ರುತೌ ತದುಪಾಸನಾನಿರಾಕರಣದರ್ಶನಾತ್, ಪ್ರಧಾನವನ್ನಿರಧಿ ಷ್ಠಾನಶಕ್ತೇರಭಾವಾಚ್ಚ. ಪ್ರಧಾನಸ್ಯ ಜಗತ್ಕಾರಣತ್ವಪ್ರತಿಪಾದಕಶ್ರು ತೀನಾಂ “ಶಸ್ತ್ರಂ ಛಿನತ್ತಿ, ಶ್ರೋತ್ರಂ ಶೃಣೋತಿ” ಇತಿ ವಾಕ್ಯಾನಾಮಿವ ತದನ್ಯಕರ್ತೃತ್ವಂ ಸೂಚಿತಂ. ಜಡಸ್ಯ ಜಗತ್ಕಾರಣತ್ವಾಸಂಭವಾತ್. “ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ” (ಶ್ವೇ.೪-೧೦) ಇತ್ಯಾದೌ ಮಾಯಾಯಾಶ್ಶಿವಾಧೀನತ್ವದರ್ಶನಾತ್.

‘ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನು ಹೊಂದುತ್ತಾನೆ’ “ಎಲ್ಲವನ್ನೂ ತೊರೆದು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು” ಈ ಶ್ರುತಿಯಲ್ಲಿ ‘ಶಿವಂ ಕರೋತೀತಿ ಶಿವಂಕರಃ’ ಎಂದು ಹೇಳಿದೆಯಾದ್ದರಿಂದ ಪೂರ್ಣವಾಗಿ ಪಾಶವನ್ನು ಪರಿಹರಿಸಿಕೊಂಡು ಶಿವನನ್ನು ಸೇರುವುದೇ ಮುಕ್ತಿ ಎಂದು ತೋರುತ್ತದೆ. ಹೀಗೆ ಮುಕ್ತನಿಗೆ ಶಿವಭಾವವು ಆಗುಂತಕವೂ ಅನಿತ್ಯವೂ ಆದ್ದರಿಂದ ಅದು ಹೇಗೆ ಮುಕ್ತಿ ಎನಿಸೀತು ಎಂದು ಕೇಳಿದರೆ ಅದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದು. ಭ್ರಮರಕೀಟನ್ಯಾಯದಂತೆ ಸತ್ಯವಾದ ಕೀಟವು ಸತ್ಯವಾಗಿಯೇ ಭ್ರಮರವಾಗುವು

ದನ್ನು ನಾವು ಕಂಡಿದ್ದೇವೆ. ಸತ್ಯವೆನಿಸಿದ ನೀರು ಸ್ವಾತಿನಕ್ಷತ್ರದಲ್ಲಿ ಕಪ್ಪೆಚಿಪ್ಪಿನಲ್ಲಿ ಬಿದ್ದು ತನ್ನ ಸ್ವರೂಪವನ್ನು ಕಳೆದುಕೊಂಡು ಸತ್ಯವಾದ ಮುತ್ತಿನಮಣಿಯಾಗಿ ಪರಿಣಮಿಸುವುದನ್ನು ನಾವು ಕಂಡಿದ್ದೇವೆ. ಇಂತಹ ಸ್ಥಿತಿಯಲ್ಲಿ ಜೀವನಿಗೆ ಸಹಜವಾಗಿ ಬಂದಿರುವ ಬಂಧನವನ್ನು ಸುಳ್ಳೆಂದು ಕಲ್ಪಿಸುವುದಾದರೂ ಯಾತಕ್ಕೆ ಎಂಬುದನ್ನು ವಿವೇಕಿಗಳೇ ಊಹಿಸಬೇಕು. ಮರುಮರೀಚಿಕಾನ್ಯಾಯದಿಂದ ನೀರಿನಜ್ಞಾನವು ಬಿಸಿಲ್ಗೊರೆಯ ಬಗ್ಗೆ ಇದ್ದ ಅಜ್ಞಾನವನ್ನು ಪರಿಹರಿಸುತ್ತದೆ ಎಂಬ ವ್ಯಾಪ್ತಿಯ ಬಲದಿಂದ ಸತ್ಯವಾದದ್ದು ಜ್ಞಾನದಿಂದ ತೊಲಗುವುದಿಲ್ಲವೆಂದು ಹೇಳುವುದು ಸಮಂಜಸವಲ್ಲ. ಯಾಕೆಂದರೆ ಹಿಂದಿನ ಜ್ಞಾನವು ಮುಂದಿನ ಜ್ಞಾನದಿಂದಲೂ, ಸಂಸ್ಕಾರವು ಸ್ಮರಣದಿಂದಲೂ, ಶಿವಸ್ಮರಣದಿಂದ ಪಾಪವೂ, ಪ್ರಿಯಸ್ಮರಣದಿಂದ ದುಃಖವೂ, ನಿರ್ಣಯದಿಂದ ಪೂರ್ವಪಕ್ಷವೂ, ಸಿದ್ಧಾಂತದಿಂದ ಸಂಶಯವೂ ತೊಲಗುತ್ತವೆಯೆಂಬುದನ್ನು ನಾವೂ ಅನುಭವದಿಂದ ಕಂಡಿದ್ದೇವೆ. ಆದ್ದರಿಂದ ಶಿವಾಂಶನಾದ ಜೀವನು ತನ್ನಲ್ಲಿ ಸೂಕ್ಷ್ಮವಾಗಿದ್ದ ಶಿವಭಾವವನ್ನು ಉಪಾಸನೆಯಿಂದ ವಿಕಾಸಗೊಳಿಸಿಕೊಂಡು ಮುಕ್ತನಾಗುವುದರಿಂದ ಶಿವಭಾವವು ಆಗಂತುಕವೆನಿಸಲಾರದು.

'ಅಜಾಮೇಕಾಂ' ಎಂಬಲ್ಲಿ ಪ್ರಧಾನವನ್ನು ಜಗತ್ತಿನ ಕಾರಣವೆಂದು ನಿರ್ದೇಶಿಸಲಾಗಿದೆ. ಬ್ರಹ್ಮವು ಜಗತ್ತಿನ ಕಾರಣವಾಗುವುದಾದರೆ ಅದೂ ವಿಕಾರಹೊಂದಬೇಕಾಗುವುದು. ಆದ್ದರಿಂದ ಅಥ+ಅತಃ+ ಅಬ್ರಹ್ಮಜಿಜ್ಞಾಸಾ ಎಂದು ಸೂತ್ರವನ್ನು ಪದಚ್ಛೇದಮಾಡಬೇಕು—ಅಬ್ರಹ್ಮವೆಂದರೆ ಪ್ರಧಾನವೆಂದು ಭಾವಿಸಿ ಅದರ ಜಿಜ್ಞಾಸೆ ಮಾಡುವುದೇ ಯುಕ್ತವೆನಿಸುವುದಲ್ಲವೆ? ಅಂದರೆ ಹಾಗಲ್ಲ, ಬ್ರಹ್ಮವಲ್ಲದ ಪ್ರಕೃತಿಯ ಜಿಜ್ಞಾಸೆ ನಡೆಯಲೆಂದು ಹೇಳುವುದು ಯುಕ್ತವಲ್ಲ. ಯಾಕೆಂದರೆ ಆ ಬಗೆಯ ಜಿಜ್ಞಾಸೆಯನ್ನು ತಿಳಿಸುವ ಶ್ರುತಿಯು ಎಲ್ಲಿಯೂ ಕಂಡುಬಂದಿಲ್ಲ. 'ಪ್ರಕೃತಿ ಜೀವರು ಉಪಾಸ್ಯರಲ್ಲ' ಎಂದು ಶ್ರುತಿಯಲ್ಲಿ ಪ್ರಕೃತಿಯ ಉಪಾಸನವನ್ನು ನಿರಾಕರಿಸುವುದರಿಂದ ಪ್ರಧಾನದಂತೆಯೇ ನಿರಾಶ್ರಯವಾದ ಶಕ್ತಿ ಇರಲಾರದ್ದರಿಂದ ಪ್ರಧಾನವೇ ಜಗತ್ಕಾರಣವೆನಿಸುವ ಶ್ರುತಿಗಳು 'ಶಸ್ತ್ರವು ಕತ್ತರಿಸುತ್ತದೆ' 'ಕಿವಿ ಕೇಳುತ್ತದೆ' ಎಂಬ ವಾಕ್ಯಗಳಂತೆ ಬೇರೊಂದು ಚೈತನ್ಯವನ್ನೇ ಕರ್ತನೆಂದು ಸೂಚಿಸುತ್ತವೆ. ಯಾಕೆಂದರೆ ಜಡವಾದ ಪ್ರಧಾನವು ಜಗತ್ತಿಗೆ ಕಾರಣವೆಂಬುದು ಸಂಭವಿಸಲಾರದು. "ಮಾಯೆಯನ್ನು ಪ್ರಕೃತಿ ಎಂದೂ, ಮಹೇಶ್ವರನನ್ನು ಮಾಯೆಗಧಿಪತಿ ಎಂದು ತಿಳಿಯಿರಿ" ಎಂಬ ಶ್ರುತಿಯಲ್ಲಿ ಮಾಯೆ ಎನಿಸಿದ ಪ್ರಧಾನವು ಶಿವನಿಗಧೀನವೆಂಬುದು ಸ್ಪಷ್ಟವಾಗಿದೆ. ಆದ್ದರಿಂದ ಪ್ರಕೃತಿಯ ಜಿಜ್ಞಾಸೆ ಉದ್ದಿಷ್ಟವಲ್ಲ.

## ॥ ಜನ್ಮಾದ್ಯಧಿಕರಣಂ ॥೨॥

**" ಲಕ್ಷಣಪ್ರಮಾಣಾಧೀನಾ ಹಿ ವಸ್ತುಸಿದ್ಧಿಃ " ಇತಿ ನ್ಯಾಯೇನ ಪ್ರಥಮಂ ಬ್ರಹ್ಮಣಃ ಸಾಧಾರಣಲಕ್ಷಣಾರ್ಥಮಿದಂ ಸೂತ್ರಂ ಪ್ರದರ್ಶ್ಯ**

ನಿರ್ವಿಶೇಷತ್ವಸವಿಶೇಷತ್ವಸಂಶಯನಿಪರ್ಯಯನಿರಾಕರಣಾರ್ಥಂ ಜಿಜ್ಞಾಸ್ಯಸ್ಯ ಬ್ರಹ್ಮಣೋ ಲಕ್ಷಣಮಾಹ.

## ॥ ಜನ್ಮಾದ್ಯಸ್ಯ ಯತಃ ॥ ೧-೧-೨ ॥

ಇತಿ " ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ, ತದ್ವಿಜಿಜ್ಞಾಸಸ್ವ, ತದ್ಬ್ರಹ್ಮೇತಿ " ಇತಿ ತೈತ್ತಿರೀಯೇ ಶ್ರೂಯತೇಽಸ್ಯ ವಿಷಯಃ. ಪ್ರಯಂತಿ ಮ್ರಿಯಮಾಣಾನಿ ಸಂತಿ ಅಭಿಸಂವಿಶಂತೀತಿ ವಾಕ್ಯಾರ್ಥಃ ಅತ್ರ ಪೂರ್ವಾಧಿಕರಣೇ ಸಂದಿಗ್ಧತ್ವೇನ ಬ್ರಹ್ಮಣೋ ವಿಚಾರ್ಯತ್ವಸಂಭವಾದಾಕ್ಷೇಪಸಂಗತಿಃ. ಸರ್ವತ್ರ ದೃಷ್ಟಾಂತಪ್ರತ್ಯುದಾಹರಣಸಂಗತೀ ಚ ಸಂಭವತಃ. ಯಥಾ ಸಂದಿಗ್ಧತ್ವಹೇತುನಾ ಬ್ರಹ್ಮ ವಿಚಾರ್ಯಂ, ತಥಾ ಜನ್ಮಾದೀನಾಂ ಜಗನ್ನಿಷ್ಠತ್ವೇನ ಹೇತುನಾ ನ ಬ್ರಹ್ಮಣೋ ಲಕ್ಷಣಮಿತಿ ದೃಷ್ಟಾಂತಸಂಗತಿಃ. ಅತ್ರ ತಟಸ್ಥಲಕ್ಷಣತ್ವೇನ ನ ತಥಾ ಸಂಭವತೀತಿ ಪ್ರತ್ಯುದಾಹರಣಸಂಗತಿಃ. ಜನ್ಮ ಆದಿರ್ಯಸ್ಯೇತಿ ತದ್ಗುಣಸಂವಿಜ್ಞಾನಬಹುವ್ರೀಹಿಃ. ಅತ್ರ ಬ್ರಹ್ಮೇತಿ ಪದಮನುವರ್ತತೇ. ತಚ್ಛಬ್ದಸ್ಯಾಧ್ಯಾಹಾರಃ. ಜನ್ಮಾದಿ-ಅಸ್ಯ-ಯತಃ-ಇತಿ ಪದವಿಭಾಗಃ. ಜನ್ಮಾದಿ-ಸೃಷ್ಟಿಸ್ಥಿತಿಲಯತಿರೋಧಾನಾನುಗ್ರಹಾತ್ಮಕಂ ಕೃತ್ಯಪಂಚಕಂ, ಅಸ್ಯ—ಚಿದಚಿತ್ಪ್ರಪಂಚವಿಲಾಸಸ್ಯ, ಯತೋ ಯಸ್ಮಾತ್ ಸ್ವಾಭಾವಿಕಾನಂತಶಕ್ತಿವಿಶಿಷ್ಟಬ್ರಹ್ಮಣಃ, ಸಂಭವತಿ ತದ್ಬ್ರಹ್ಮೇತಿ ಸೂತ್ರಾರ್ಥಃ.

ಅಸ್ಯೇತ್ಯನೇನ ಚಾಕ್ಷುಷಪ್ರತ್ಯಕ್ಷವಿಷಯೀಭೂತಚೇತನಾಚೇತನಪ್ರಪಂಚಸ್ಯ ಕಾರ್ಯತ್ವಂ, ಯತ ಇತ್ಯನೇನ ಬ್ರಹ್ಮಣೋ ಜನ್ಮಾದಿಪಂಚಕೃತ್ಯಕಾರಣತ್ವಂ ಚ ನಿರ್ದಿಷ್ಟಂ. ಪರಶಿವಸ್ಯ ಬ್ರಹ್ಮಣೋ ಜಗಜ್ಜನ್ಮಾದಿಪಂಚಕೃತ್ಯಾನಾಂ ಶ್ರುತಿಸಿದ್ಧತ್ವಾಜ್ಜೀವಾನಾಂ ತದುಪಾಸಕತ್ವಂ ವಿಧೀಯತೇ. ಕಾರಣಸ್ಯ ಬ್ರಹ್ಮಣಃ ಕರ್ತುಮಕರ್ತುಂ ಅನ್ಯಥಾಕರ್ತುಂ ಚ ಶಕ್ಯಮೇವ. ಅತ್ರ—ಯತೋ ವೇತಿ+ಶ್ರುತಾವಭಿಸಂವಿಶಂತೀತ್ಯನೇನ ಆವಿರ್ಭಾವತಿರೋಧಾನೇ ಸೂಚಿತೇ. ವಿಜ್ಞಾತೇ ಬ್ರಹ್ಮಣಿ ತಟಸ್ಥಾದಿಲಕ್ಷಣಾನುಪಪತ್ತಿಃ; ಅವಿಜ್ಞಾತೇ ಪ್ರವೃತ್ತಿರೇವ ನ ಸ್ಯಾತ್. ಅತಸ್ತತ್ರ ಕಥಂ ಲಕ್ಷ್ಯಲಕ್ಷಣಪ್ರವೃತ್ತಿರಿತಿ ನ ಶಂಕನೀಯಂ. ಗುರೂಪದಿಷ್ಟಶಾಂಭವದೀಕ್ಷಿತಸ್ಯಾಪಾತಜ್ಞಾನಸಂಭವಾತ್ ತನ್ನಿಶ್ಚಯಾರ್ಥಂ ಲಕ್ಷ್ಯಲಕ್ಷಣವಿಚಾರಪ್ರವೃತ್ತಿರ್ನ ವಿರುಧ್ಯತೇ.

## ಜನ್ಮಾದ್ಯಧಿಕರಣ

'ಲಕ್ಷಣಪ್ರಮಾಣಗಳನ್ನು ಅನುಸರಿಸಿ ವಸ್ತುವು ಸಿದ್ಧಿಸುತ್ತದೆ' ಎಂಬ ನ್ಯಾಯದಿಂದ ಮೊದಲು ಬ್ರಹ್ಮದ ಪ್ರಧಾನಲಕ್ಷಣವನ್ನು ತಿಳಿಸಲಿಕ್ಕಾಗಿ ಹಿಂದಿನ ಸೂತ್ರವನ್ನು ಹೇಳಿ, ಬ್ರಹ್ಮ ನಿರ್ವಿಶೇಷವೇ ಅಥವಾ ಸವಿಶೇಷವೇ ಎಂಬ ಸಂಶಯಭ್ರಾಂತಿಗಳ ನಿವಾರಣೆಗಾಗಿ ಜಿಜ್ಞಾಸ್ಯವಾದ ಬ್ರಹ್ಮದ ಲಕ್ಷಣವನ್ನು ಮುಂದೆ ತಿಳಿಸುತ್ತಾನೆ.

## ಜನ್ಮಾದ್ಯಸ್ಯ ಯತಃ (೧-೧-೨)

"ಯಾವನಿಂದ ಪ್ರಾಣಿಗಳು ಹುಟ್ಟಿವೆಯೋ, ಹುಟ್ಟಿದಮೇಲೆ ಯಾವನಿಂದ ಬದುಕಿವೆಯೋ, ಕೊನೆಯಲ್ಲಿ ಯಾವನಲ್ಲಿ ಸೇರುತ್ತವೆಯೋ ಅವನನ್ನೇ ಬ್ರಹ್ಮವೆಂದು ತಿಳಿ" ಎಂದು ತೈತ್ತಿರಿಯೋಪನಿಷತ್ತಿನಲ್ಲಿ ಈ ಸೂತ್ರದ ವಿಷಯ ಬಂದಿದೆ. ಇಲ್ಲಿ ಹಿಂದಿನ ಅಧಿಕರಣದಲ್ಲಿ ಸಂದೇಹ ಬಂದದ್ದರಿಂದ ಬ್ರಹ್ಮವು ವಿಚಾರಯೋಗ್ಯವೆಂದು ನಿಶ್ಚಯಿಸಲಾಗಿತ್ತು. ಅದರ ಮೇಲೆಯೂ ಆಕ್ಷೇಪ ಬಂದದ್ದರಿಂದ ಅದನ್ನು ಸಮಾಧಾನಪಡಿಸಲಿಕ್ಕಾಗಿ ಈ ಅಧಿಕರಣ ಹೊರಟಿದೆ. ಹೀಗೆಯೇ ಎಲ್ಲಾ ಕಡೆಯೂ ದೃಷ್ಟಾಂತ ಸಂಗತಿ ಮತ್ತು ಪ್ರತ್ಯುದಾಹರಣಸಂಗತಿ ಸಂಭವಿಸುತ್ತವೆ. ಯಾವಾಗ ಸಂದೇಹಾಸ್ಪದವಾದ್ದರಿಂದ ಬ್ರಹ್ಮ ವಿಚಾರಯೋಗ್ಯವೆಂದು ತೀರ್ಮಾನವಾಯಿತೋ ಆಗ ಜನ್ಮಾದಿಗಳು ಜಗತ್ತಿಗೆ ಸಂಬಂಧಿಸಿದವಾದ್ದರಿಂದ 'ಜನ್ಮಾದಿಗಳ ನಿರ್ವಹಣೆ' ಎಂಬುದು ಬ್ರಹ್ಮಕ್ಕೆ ಲಕ್ಷಣವಾಗಲಾರದೆಂಬುದೇ ದೃಷ್ಟಾಂತಸಂಗತಿಯಾಗುವುದು. ಅದು ಬ್ರಹ್ಮದ ತಟಸ್ಥಲಕ್ಷಣವಾದ್ದರಿಂದ ಹಾಗೆ ಸಂಭವಿಸಲಾರದು ಎಂಬುದೇ ಪ್ರತ್ಯುದಾಹರಣಸಂಗತಿ ಎನಿಸುವುದು.

ಜನ್ಮವೇ ಆದಿಯಾಗುಳ್ಳದ್ದು-ಜನ್ಮಾದಿ ಎಂಬುದು ತದ್ಗುಣಸಂವಿಜ್ಞಾನ ಬಹುವ್ರೀಹಿ ಎನಿಸಿದೆ. ಜನ್ಮ+ಆದಿ ಯಸ್ಯ ತತ್ ಎಂಬಲ್ಲಿ ಜಗತ್ತಿನಲ್ಲಿ ಸೇರಿರುವ ಪದಾರ್ಥಗಳ ಸಮುದಾಯವೇ 'ಯಸ್ಯ' ಎಂಬುದರ ಅರ್ಥವೆಂದು ಹೇಳಿದರೆ, 'ಜನ್ಮಾದಯೋಽಸ್ಯ ಯತಃ' ಎಂದು ಸೂತ್ರವಾಗಬೇಕಾಗುತ್ತದೆ. ಬೇರೆಯಾಗಿ ವಿಭಾಗಿಸಲಾಗದ ಪದಾರ್ಥವನ್ನು 'ಯಸ್ಯ' ಎಂಬುದರ ಅರ್ಥವೆಂದು ಹೇಳಿದರೆ, 'ಜನ್ಮಾದಿರ್ಯಸ್ಯ ಯತಃ' ಎಂದು ಸೂತ್ರವಾಗಬೇಕಾಗುವುದು. ಎರಡು ಪಕ್ಷಗಳಲ್ಲೂ ಸೂತ್ರದಲ್ಲಿ ಹೆಚ್ಚು ಅಕ್ಷರಗಳನ್ನು ಸೇರಿಸಬೇಕಾಗುವುದು. ಅದರಿಂದ ಗೌರವದೋಷ ಸಂಭವಿಸೀತೆಂದು 'ಜನ್ಮಾದಿ' ಎಂದು ನಪುಂಸಕಲಿಂಗದಲ್ಲಿ ನಿರ್ದೇಶಿಸಲಾಗಿದೆ. ಇಲ್ಲಿಯೂ ಬ್ರಹ್ಮವೆಂಬ ಪದವನ್ನು ಸೇರಿಸಿಕೊಳ್ಳಬೇಕು. ತತ್ ಎಂಬ ಪದದಿಂದ ಇದರ ಅರ್ಥ ತಿಳಿದುಬರುತ್ತದೆ. ಅಸ್ಯ-ಈ ಚರಾಚರ ಪ್ರಪಂಚಕ್ಕೆ ಸಂಬಂಧಿಸಿದ, ಜನ್ಮಾದಿ ಸೃಷ್ಟಿ-ಸ್ಥಿತಿ, ಲಯ, ತಿರೋಧಾನ, ಅನುಗ್ರಹವೆಂಬ ಪಂಚವ್ಯಾಪಾರಗಳೂ, ಯತಃ-ಸ್ವಾಭಾವಿಕ ಅನಂತಶಕ್ತಿವಿಶಿಷ್ಟನಾದ ಯಾವ ಚೈತನ್ಯದಿಂದ ನಡೆಯು

ತ್ತವೆಯೋ ಅದೇ ಬ್ರಹ್ಮವೆನಿಸುತ್ತದೆ ಎಂದು ಸೂತ್ರದ ಅರ್ಥ. 'ಅಸ್ಯ' ಎಂಬ ಪದದಿಂದ ಚಕ್ಷುರಾದಿ ಇಂದ್ರಿಯಗಳಿಗೆ ಪ್ರತ್ಯಕ್ಷಗೋಚರವಾಗುವ ಚರಾಚರ ಪ್ರಪಂಚವು ಕಾರ್ಯವೆಂದು ಸ್ಪಷ್ಟಪಡುತ್ತದೆ. 'ಯತಃ' ಎಂಬುದರಿಂದ ಬ್ರಹ್ಮವೇ ಐದುಬಗೆಯ ಜಗದ್ವ್ಯಾಪಾರಗಳಿಗೆ ಕಾರಣವೆಂದು ಸೂಚಿತವಾಯಿತು. ಪರಬ್ರಹ್ಮವು ಜಗಜ್ಜನ್ಮಾದಿಪಂಚಕೃತ್ಯಗಳಿಗೆ ಕಾರಣವೆಂದು ಶ್ರುತಿಯಲ್ಲಿ ಸಿದ್ಧವಾಗಿರುವುದರಿಂದ ಜೀವರೆಲ್ಲರೂ ಬ್ರಹ್ಮದ ಉಪಾಸಕರೆಂಬುದು ಸ್ಪಷ್ಟಪಡುತ್ತದೆ. ಕಾರಣವೆನಿಸಿದ ಬ್ರಹ್ಮವು ಎಲ್ಲವನ್ನು ಮಾಡಲಿಕ್ಕೂ, ಮಾಡದಿರಲಿಕ್ಕೂ, ಬೇರೆ ರೀತಿಯಲ್ಲಿ ಏರ್ಪಡಿಸಲಿಕ್ಕೂ ಸಮರ್ಥವೆನಿಸಿದೆ. 'ಯತೋ ವಾ' ಎಂಬ ಶ್ರುತಿಯಲ್ಲಿ 'ಅಭಿಸಂವಿಶಂತಿ' ಎಂಬುದರಿಂದ ಆವಿರ್ಭಾವತಿರೋಧಾನಗಳು ಸೂಚಿತವಾಗುತ್ತವೆ. ಬ್ರಹ್ಮವನ್ನು ತಿಳಿದಮೇಲೆ ತಟಸ್ಥಾದಿಲಕ್ಷಣವು ಸಮಂಜಸವಾಗುವುದಿಲ್ಲ. ಆದರೆ ಬ್ರಹ್ಮವನ್ನು ತಿಳಿಯದಮೇಲೆ ಅದರಲ್ಲಿ ಯಾರಿಗೂ ಪ್ರವೃತ್ತಿಯೂ ಹುಟ್ಟುವುದೇ ಇಲ್ಲ. ಆದ್ದರಿಂದ ಇಲ್ಲಿ ಹೇಗೆ ಲಕ್ಷ್ಯದಲ್ಲಿ ಲಕ್ಷಣ ಪ್ರವರ್ತಿಸಬಹುದು ಎಂದು ಸಂಶಯಪಡುವ ಆವಶ್ಯಕತೆ ಏನೂ ಇಲ್ಲ. ಗುರುವಿನಿಂದ ಉಪದೇಶ ಪಡೆದು ಶಾಂಭವದೀಕ್ಷೆ ಹೊಂದಿದವನಿಗೆ ಸಾಧಾರಣಜ್ಞಾನವು ಲಭಿಸುವುದರಿಂದ ಅದರ ಬಗ್ಗೆ ನಿಶ್ಚಯವನ್ನು ಪಡೆಯಲಿಕ್ಕಾಗಿ ಅವನು ಲಕ್ಷ್ಯ ಲಕ್ಷಣಗಳನ್ನು ವಿಚಾರಿಸಲು ಪ್ರವರ್ತಿಸುವುದರಲ್ಲಿ ಯಾವ ವಿರೋಧವೂ ಸಂಭವಿಸುವುದಿಲ್ಲ.

**ವಿಶಯಸ್ತು—ಕಾರಣತ್ವಂ ಸರ್ವಾಧಿಷ್ಠಾನಸ್ಯ ಬ್ರಹ್ಮಣಃ? ತತ್ರಾರೋಪಿತಪ್ರಧಾನಸತ್ತ್ವಗುಣಪ್ರತಿಬಿಂಬಿತಕಲ್ಪಿತೇಶ್ವರಸ್ಯ ವಾ? ಸರ್ವಾಧಿಷ್ಠಾನಸ್ಯ ಬ್ರಹ್ಮಣೋ ನಿರ್ಗುಣತ್ವಾಜ್ಜಗತಶ್ಚ ನಿತ್ಯತ್ವಾತ್ತನ್ನ ಸಂಭವತಿ. ಸಾವಯವಸ್ಯ ಕಲ್ಪಿತಸ್ಯ ಮಿಥ್ಯಾಭೂತಸ್ಯ ಸುತರಾಂ ನ ಸಂಭವತಿ. ಕಿಂಚ—"ಜ್ಞಾಜ್ಞೌ ದ್ವಾವಜಾವೀಶಾನೀಶೌ" "ನ ಕದಾಚಿದನೀದೃಶಂ ಜಗತ್" ಇತ್ಯಾದಿನಾ ಜಗಜ್ಜೀವಯೋರಜಾತತ್ವನಿತ್ಯತ್ವವ್ಯಪದೇಶಾತ್ ಕಥಂ ಪರಮೇಶ್ವರಸ್ಯ ಕಾರಣತ್ವಂ? ಕಾರಣತ್ವೇ "ಉತ್ಪತ್ತ್ಯಸಂಭವಾತ್" ಇತಿ ಸೂತ್ರೇ ಭಗವತಾ ಸೂತ್ರಕಾರೇಣ ಶ್ರುತಿಸ್ಮೃತಿವಿರುದ್ಧತ್ವೇನ ಜೀವೋತ್ಪತ್ತಿಪ್ರಧಾನವೈಷ್ಣವಮತಸ್ಯ ನಿರಾಕೃತತ್ವಾತ್ ತನ್ನ ಸಂಭವತಿ. ಅಕಾರಣತ್ವೇ—"ಯತೋ ವಾ ಇಮಾನಿ" ಇತ್ಯಾದಿಶ್ರುತಿವಿರೋಧಃ ಸ್ಯಾತ್. "ಅಸದ್ವಾ ಇದಮಗ್ರ ಆಸೀತ್, ತತೋ ವೈ ಸದಜಾಯತ" "ಸದೇವ ಸೋಮ್ಯೇದಮಗ್ರ ಆಸೀತ್" "ನ ಸನ್ನ ಚಾಸಚ್ಛಿವ ಏವ ಕೇವಲಃ" ಇತ್ಯಾದಿಶ್ರುತಿಷು ಅಸತ್ಕಾರಣತ್ವಸತ್ಕಾರಣತ್ವಸದಸದ್ವ್ಯತಿರಿಕ್ತಪರಶಿವಕಾರಣತ್ವಶ್ರವಣಾತ್ ಬಹುವಿಪ್ರತಿಪತ್ತಿರ್ದೃಶ್ಯತೇ.**

ಇಲ್ಲಿ ಸಂಶಯ ಹೀಗೆ ಬರುತ್ತದೆ. ಜಗತ್ತಿಗಿಂತಲೂ ವಿಲಕ್ಷಣವಾಗಿ ಬ್ರಹ್ಮವು ಜಗತ್ತಿಗೆ ಕಾರಣವಾಗುವುದೋ ಅಥವಾ ಜಗದಂತರ್ಯಾಮಿಯಾಗಿ ಕಾರಣವಾ

ಗುವುದೋ ಮತ್ತು ಜಗತ್ಕಾರಣವಾದುದು ಸಾಕಾರಬ್ರಹ್ಮವೋ, ನಿರಾಕಾರಬ್ರಹ್ಮವೋ ಅಥವಾ ಸರ್ವಾಶ್ರಯವಾದ ಬ್ರಹ್ಮವೋ ಅಥವಾ ಅದರಲ್ಲಿ ಆರೋಪಿತವಾಗಿ ಪ್ರಧಾನದ ಸತ್ತ್ವಗುಣದಲ್ಲಿ ಪ್ರತಿಬಿಂಬಿಸಿದ ಈಶ್ವರನೋ ಎಂಬ ಪ್ರಶ್ನೆ ಏಳುತ್ತದೆ. ಸರ್ವಾಧಿಷ್ಠಾನವಾದ ಬ್ರಹ್ಮ ನಿರ್ಗುಣವೂ ನಿರವಯವವೂ ನಿತ್ಯವೂ ಆದ್ದರಿಂದ ಅದು ಜಗತ್ತಿಗೆ ಕಾರಣವಾಗುವ ಸಂಭವವಿಲ್ಲ. ಸಾವಯವವೂ ಕಲ್ಪಿತವೂ ಮಿಥ್ಯೆಯೂ ಆದ ಬ್ರಹ್ಮಕ್ಕಂತೂ ಕಾರಣವೆಂಬುದು ಸಂಭವಿಸುವುದೇ ಇಲ್ಲ. 'ಜ್ಞಾಜ್ಞೌ' ಎಂಬುವ ಶ್ರುತಿಯಲ್ಲೂ "ಯಾವಾಗಲೂ ಇಂತಹ ಜಗತ್ತಿರಲಿಲ್ಲ" ಎಂಬ ವಾಕ್ಯದಲ್ಲೂ ಜಗತ್ತು ಜೀವಗಳು ಅಜಾತವೆಂದೂ ನಿತ್ಯವೆಂದೂ ತಿಳಿಸುಬರುವುದರಿಂದ ಪರಮೇಶ್ವರನು ಹೇಗೆ ಜಗತ್ಕಾರಣನಾದಾನು? ಅವನು ಕಾರಣವಾಗುವುದಾದರೆ, 'ಉತ್ಪತ್ತ್ಯಸಂಭವಾತ್' ಎಂಬ ಸೂತ್ರದಲ್ಲಿ ಸೂತ್ರಕಾರನು ಜೀವೋತ್ಪತ್ತಿಯನ್ನು ಮುಖ್ಯವೆಂದೆಣಿಸುವ ವಿಶಿಷ್ಟಾದ್ವೈತಮತವನ್ನು ಶ್ರುತಿಸ್ಮೃತಿಗಳಿಗೆ ವಿರುದ್ಧವಾದುದೆಂದು ನಿರಾಕರಿಸಿರುವುದರಿಂದ ಜೀವನಿಗೆ ಪರಮಾತ್ಮನು ಕಾರಣನಾಗುವಂತಿಲ್ಲ. ಹಾಗೆ ಕಾರಣವಾಗದೇ ಇದ್ದರೆ, "ಯತೋ ವಾ ಇಮಾನಿ" ಎಂಬ ಶ್ರುತಿಗೆ ವಿರೋಧವುಂಟಾಗುವುದು. "ಮೊದಲು ಇದೆಲ್ಲವೂ ಅಸತ್ತಾಗಿತ್ತು, ಅದರಿಂದ ಸದ್ರೂಪ ಬಂದಿತು. "ಇದೆಲ್ಲವೂ ಮೊದಲು ಸದ್ರೂಪವಾಗಿತ್ತು" "ಸತ್ ಅಸತ್ ಎರಡು ಇಲ್ಲದೆ ಕೇವಲ ಶಿವನೊಬ್ಬನೇ ಇದ್ದನು". ಈ ಶ್ರುತಿಗಳಲ್ಲಿ ಅಸತ್ಕಾರಣತ್ವ ಮತ್ತು ಸತ್ಕಾರಣತ್ವ, ಇವೆರಡಕ್ಕೂ ಭಿನ್ನವಾದ ಪರಮಶಿವನೇ ಕಾರಣನೆಂದೂ ಹೇಳಿರುವುದರಿಂದ ಪರಸ್ಪರ ವಿರೋಧವುಂಟಾಗಿ ಸಂಶಯಕ್ಕವಕಾಶವಿದೆ.

**ಪೂರ್ವಪಕ್ಷಸ್ತು—ನ ಚ ಪರಮೇಶ್ವರಸ್ಯ ಜಗತ್ಕಾರಣತ್ವಂ, ನಿರ್ಗುಣತ್ವಾತ್. ತಥಾತ್ವೇ ಜಗದ್ವಿಲಕ್ಷಣತ್ವೇನ? ತದಂತರ್ಯಾಮಿತ್ವೇನ ವಾ? ಸಾಕಾರಸ್ಯ? ನಿರಾಕಾರಸ್ಯ ವಾ? ನಾದ್ಯಃ—ಸರ್ವವ್ಯಾಪಕತ್ವಭಂಗಪ್ರಸಂಗಾತ್, ನಿರುಪಾಧಿಕತ್ವೇನ ನಿರಾಕಾರತ್ವೇನ ಚ ಕುಲಾಲಕುವಿಂದಾದಿಭ್ಯೋ ಘಟಪಟಾದ್ಯುತ್ಪತ್ತೇರಸಂಭವಾಚ್ಚ. ನ ದ್ವಿತೀಯಃ—ಘಟಾದಿವತ್ಪರಿಚ್ಛಿನ್ನತ್ವಪ್ರಸಂಗಾತ್, ಆಧೇಯತ್ವಪ್ರಸಕ್ತೇಶ್ಚ. ನ ತೃತೀಯಃ—ಸಾವಯವಸ್ಯ ಬ್ರಹ್ಮಣಃ ನಿರವಯವಾಕಾಶಾದಿಕಲ್ಪನಾಯೋಗಾತ್, ಪೂರ್ವವತ್ಪರಿಚ್ಛಿನ್ನತ್ವಪ್ರಸಂಗಾಚ್ಚ. ನಾಪಿ ಚತುರ್ಥಃ—ನಿರವಯವಸ್ಯ ಸಾವಯವಪ್ರಪಂಚಕಲ್ಪನಾಸಂಭವಾತ್, "ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ" ಇತ್ಯಾದಿಶ್ರುತಿವಿರೋಧಪ್ರಸಂಗಾಚ್ಚ.**

**ಕಿಂಚ—ಸತ್ಯಜ್ಞಾನಾನಂದಾತ್ಮಕಪರಶಿವಜನ್ಯತ್ವಾಂಗೀಕಾರೇ ಜಗತೋಽಪಿ ಸಚ್ಚಿದಾನಂದಾತ್ಮಕತ್ವಂ ಸ್ಯಾತ್, ತದಂಗೀಕಾರೇ ಜಗತೋ ಜನ್ಮಾದಿಕಂ ಅನೃತಜಡದುಃಖಾತ್ಮಕತ್ವಂ ಚ ನ ಸ್ಯಾತ್, ಮೃದಾದಿವ**

ದ್ವಿಕಾರಿತ್ವಪ್ರಸಂಗಶ್ಚ. ಕಿಂಚ ಕಾರಣತ್ವಂ ನಿಮಿತ್ತತ್ವಮುಪಾದಾನತ್ವಂ ವಾ? ತದುಭಯತ್ವಂ ವಾ? ಕಿಂಚ ತದ್ದ್ವಿವಿಧಕಾರಣತ್ವಂ ಬ್ರಹ್ಮಣಃ? ಪ್ರಧಾನಸ್ಯ ವಾ? ನಾದ್ಯಃ—ನಿಮಿತ್ತತ್ವೇ "ಸರ್ವಂ ಖಲ್ವಿದಂ ಬ್ರಹ್ಮ" "ಸರ್ವೋ ವೈ ರುದ್ರಃ" ಇತ್ಯಾದ್ಯದ್ವೈತಶ್ರುತಿಭಂಗಪ್ರಸಂಗಾತ್. ನ ದ್ವಿತೀಯಃ—"ಏಕೋ ಹಿ ರುದ್ರೋ ನ ದ್ವಿತಿಯಾಯ ತಸ್ಥುಃ" "ಏಕಮೇವಾದ್ವಿತೀಯಂ" ಇತ್ಯಾದಿಶ್ರುತಿಸಿದ್ಧಾಧಿಷ್ಠಾತ್ರಂತರನಿರಾಸಾಸಂಭವಾತ್. ನ ತೃತೀಯಃ—ತಮಃಪ್ರಕಾಶವತ್ಪರಸ್ಪರವಿರುದ್ಧಸ್ವಭಾವತ್ವಾತ್. ಪ್ರಧಾನಸ್ಯಾಂಗೀಕಾರೇ ಅಚೇತನತ್ವಾದಸತ್ತ್ವಾಚ್ಚ, ಕುಲಾಲಾದಿವನ್ನಿಮಿತ್ತೋಪಾದಾನತ್ವಾಸಂಭವಃ. ವಿರುದ್ಧತ್ವಾತ್ತದುಭಯತ್ವಾಸಂಭವಃ. ಕಿಂಚ-"ಆನಂದೋ ಬ್ರಹ್ಮೇತಿ ವ್ಯಜಾನಾತ್, ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ" "ಸದೇವ ಸೋಮ್ಯೇದಮಗ್ರ ಆಸೀತ್" "ನ ಸನ್ನ ಚಾಸಚ್ಛಿವ ಏವ ಕೇವಲಃ" ಇತ್ಯಾದಿಶ್ರುತಿಸಿದ್ಧಾನಂದಾದೀನಾಂ ಬ್ರಹ್ಮತ್ವೇ ವಿಕಲ್ಪಸ್ಸಮುಚ್ಚಯೋ ವಾ? ವಿಕಲ್ಪತ್ವೇ ಕೃತಹಾನಾಕೃತಾಭ್ಯಾಗಮಪ್ರಸಂಗೋಽವ್ಯವಸ್ಥಾ ಚ. ವ್ಯವಸ್ಥಾವಿಕಲ್ಪೇ ಅನೇಕಬ್ರಹ್ಮತ್ವಪ್ರಸಂಗಶ್ಚ. ಸಮುಚ್ಚಯೇ ತೇಷಾಮಾನಂದಾದೀನಾಂ ಧರ್ಮರೂಪತ್ವಾತ್, ಜಗಜ್ಜನ್ಮಾದಿಕಾರಣತ್ವಾಸಂಭವಃ. ಕಿಂಚ—ಕ್ಷೀರಾದಿವತ್ಪರಿಣಾಮ್ಯುಪಾದಾನತ್ವಾಂಗೀಕಾರೇ ಬ್ರಹ್ಮನಿಷ್ಠಾನಂದಾದಿಭಂಗಪ್ರಸಂಗಃ. ಸುವರ್ಣಕುಂಡಲಾದಿವದಾರಂಭೋಪಾದಾನತ್ವೇ ಪೂರ್ವವದ್ವಿಕಾರಿತ್ವಪ್ರಸಂಗಃ. ಪ್ರಾಗಸದ್ರೂಪಪ್ರಧಾನಾದಿಪ್ರಪಂಚಸ್ಯ ರಜ್ಜುಸರ್ಪವದ್ವಿವರ್ತತ್ವಾಂಗೀಕಾರೇ ಶಶಶೃಂಗಾದೀನಾಂ ಕಿಂ ನ ಸ್ಯಾತ್?. ಅತಃ ಪ್ರಪಂಚಸ್ಯ ನೋತ್ಪತ್ತಿರ್ವಿಧೀಯತೇ. ತಥಾಪಿ "ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ" ಇತಿ ಪೂರ್ವಾಚಾರ್ಯೋಕ್ತನ್ಯಾಯಮನುಸೃತ್ಯ ಶಿಷ್ಯಬೋಧಾರ್ಥಂ ವೇದಪ್ರಾಮಾಣ್ಯಸಿದ್ಧ್ಯರ್ಥಂ ಚ "ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ" ಇತ್ಯಾದಿಶ್ರುತಾವಚೇತನಮಾಯಾಯಾ ಜಗತ್ಕಾರಣತ್ವೋಪದೇಶಾತ್ತಸ್ಯಾ ಏವೋಪಾದಾನಕಾರಣತ್ವಂ ವಕ್ತುಂ ಶಕ್ಯಂ. ಬ್ರಹ್ಮಾಧ್ಯಸ್ತಪ್ರಕೃತಿಸತ್ತ್ವಗುಣಪ್ರತಿಬಿಂಬಿತಕಲ್ಪಿತೇಶ್ವರಸ್ಯ ವಾ ತತ್ಕಾರಣತ್ವಂ? ಇತಿ ಚೇದ್ಬ್ರೂಮಃ.

ಇಲ್ಲಿ ಪೂರ್ವಪಕ್ಷ ಹೀಗೆ ಸಂಭವಿಸುತ್ತದೆ. ಪರಮೇಶ್ವರನು ನಿರ್ಗುಣನಾದ್ದರಿಂದ ಜಗತ್ಕಾರಣನಾಗಲಾರನು. ಹಾಗೆ ಅವನು ಕಾರಣವಾದರೂ ಜಗತ್ತಿಗೆ ವಿಲಕ್ಷಣನಾಗಿಯೋ ಅಥವಾ ಅದರ ಅಂತರ್ಯಾಮಿಯಾಗಿಯೋ ಅಥವಾ ಸಾಕಾರನಾಗಿಯೋ ಅಥವಾ ನಿರಾಕಾರನಾಗಿಯೋ ಎಂಬ ವಿಕಲ್ಪಗಳು ಸಂಭವಿಸುತ್ತವೆ.

ಜಗದ್ವಿಲಕ್ಷಣನಾಗಿ ಅವನು ಜಗತ್ತಿಗೆ ಕಾರಣವಾಗಲಾರನು. ಇದರಿಂದ ಅವನ ಸರ್ವವ್ಯಾಪಕತ್ವಕ್ಕೆ ಭಂಗವುಂಟಾಗುತ್ತದೆ. ಅವನು ನಿರುಪಾಧಿಕನೂ ನಿರಾಧಾರನೂ ಆದ್ದರಿಂದ ಅವನಿಂದ ಜಗತ್ತು ಹುಟ್ಟಲಾರದು. ಕುಂಬಾರನಿಂದಲೂ ನೇಯ್ಗೆಯವನಿಂದಲೂ ಘಟಪಟಗಳು ಹುಟ್ಟುವುವೆಂಬುದು ಲೋಕದಲ್ಲಿ ಎಲ್ಲಿಯೂ ಕಂಡುಬಂದಿಲ್ಲ. ಹೀಗೆಯೇ ಪರಮಾತ್ಮನು ಜಗದಂತರ್ಯಾಮಿಯಾಗಿಯೂ ಜಗತ್ಕಾರಣವಾಗಲಾರನು. ಇದರಿಂದ ಘಟಪಟಗಳಂತೆ ಅವನೂ ಪರಿಚ್ಛಿನ್ನನಾಗಬೇಕಾದೀತು; ಅವನು ಜಗತ್ತನ್ನು ಆಶ್ರಯಿಸಿಕೊಂಡೇ ಇರಬೇಕಾದೀತು. ಹಾಗೆಯೇ ಅವನು ಸಾವಯವನಾಗಿಯೂ ಜಗತ್ಕಾರಣವಾಗಲಾರನು, ಯಾಕೆಂದರೆ ಸಾವಯವಬ್ರಹ್ಮದಲ್ಲಿ ನಿರವಯವವಾದ ಆಕಾಶಾದಿಗಳ ಕಲ್ಪನೆ ಹೊಂದುವುದಿಲ್ಲ; ಇದೂ ಅಲ್ಲದೆ ಹಿಂದೆ ಹೇಳಿದಂತೆಯೇ ಅವನು ಪರಿಚ್ಛಿನ್ನನಾಗಬೇಕಾಗುವುದು. ಇದರಂತೆ ಅವನು ನಿರವಯವನಾಗಿ ಜಗತ್ಕಾರಣನಾಗುವನೆಂದು ಹೇಳಲೂ ಆಗುವುದಿಲ್ಲ. ನಿರವಯವದಲ್ಲಿ ಸಾವಯವಪ್ರಪಂಚದ ಕಲ್ಪನೆ ಸಂಭವಿಸುವುದಿಲ್ಲ. "ಬ್ರಹ್ಮ ನಿಷ್ಕಲವೂ ನಿಷ್ಕ್ರಿಯವೂ ಶಾಂತವೂ ನಿರ್ದುಷ್ಟವೂ ನಿರಂಜನವೂ ಆದುದು" ಎಂಬ ಶ್ರುತಿಗೆ ವಿರೋಧವೂ ಸಂಭವಿಸುತ್ತದೆ. ಇದೂ ಅಲ್ಲದೆ, ಜಗತ್ತು ಸತ್ಯಜ್ಞಾನಾನಂದಸ್ವರೂಪನಾದ ಚೈತನ್ಯದಿಂದ ಹುಟ್ಟಿತೆಂದು ಒಪ್ಪಿದರೆ ಜಗತ್ತೂ ಸಹ ಸಚ್ಚಿದಾನಂದರೂಪವೇ ಆಗಬೇಕಾದೀತು? ಹಾಗೆ ಒಪ್ಪದೇ ಇದ್ದರೆ ಜಗಜ್ಜನ್ಮಾದಿಗಳು ಅನೃತವೂ ಜಡವೂ ದುಃಖರೂಪವೂ ಆಗದೇ ಹೋಗಬೇಕಾದೀತು? ಮಣ್ಣಿನಂತೆ ಬ್ರಹ್ಮಕ್ಕೆ ವಿಕಾರವನ್ನು ಒಪ್ಪಬೇಕಾದೀತು. ಇದೂ ಅಲ್ಲದೆ ಬ್ರಹ್ಮ ನಿಮಿತ್ತವೋ ಉಪಾದಾನವೋ ಅಥವಾ ಎರಡೂವೋ? ಈ ಮೂರು ಬಗೆಯ ಕಾರಣವೂ ಆಗುವಂತಹದು ಬ್ರಹ್ಮವೋ ಅಥವಾ ಪ್ರಧಾನವೋ ಅಥವಾ ಎರಡೂವೋ? ಎಂಬ ಪ್ರಶ್ನೆ ಸಂಭವಿಸುತ್ತದೆ. ಬ್ರಹ್ಮಕ್ಕೆ ಈ ಪ್ರಶ್ನೆ ಅನ್ವಯಿಸುವುದಿಲ್ಲ. ಅದು ನಿಮಿತ್ತವಾಗುವುದಾದರೆ, "ಇದೆಲ್ಲವೂ ಬ್ರಹ್ಮ" "ಇದೆಲ್ಲವೂ ರುದ್ರ" ಈ ಬಗೆಯ ಅದ್ವೈತ ಶ್ರುತಿಗಳಿಗೆ ಭಂಗವುಂಟಾಗುತ್ತದೆ ಅಥವಾ ಬ್ರಹ್ಮವನ್ನು ಕೇವಲ ಉಪಾದಾನಕಾರಣವೆಂದು ಭಾವಿಸಿದರೆ 'ಒಬ್ಬನೇ ರುದ್ರನು ಎರಡನೆಯವನಿಲ್ಲದಿದ್ದನು' 'ಒಬ್ಬನೇ ಅದ್ವಿತೀಯವಾದ ಬ್ರಹ್ಮ' ಈ ಶ್ರುತಿಗಳಲ್ಲಿ ಹೇಳಿರುವ ಬೇರೊಂದು ಆಶ್ರಯದ ನಿರಾಕರಣವು ಅಸಮಂಜಸವಾದೀತು. ಹೀಗೆಯೇ ಅವನು ಎರಡು ಬಗೆಯ ಕಾರಣನೂ ಆಗಿರುವನೆಂದು ಹೇಳುವುದೂ ಸರಿಯಲ್ಲ; ಯಾಕೆಂದರೆ ಕತ್ತಲೆ ಬೆಳಕುಗಳಂತೆ ಪರಸ್ಪರ ವಿರುದ್ಧಸ್ವಭಾವವಿರುವುದರಿಂದ ಅವನು ಎರಡು ಬಗೆಯ ಕಾರಣನಾಗುವನೆಂಬುದು ಹೊಂದುವುದಿಲ್ಲ. ಪ್ರಧಾನವೇ ಜಗತ್ತಿಗೆ ಅಭಿನ್ನನಿಮಿತ್ತೋಪಾದನಕಾರಣವಾಗುವುದೆಂದು ಅಂಗೀಕರಿಸಿದರೆ ಅದು ಅಚೇತನವೂ ಅಸದ್ರೂಪವೂ ಆದ್ದರಿಂದ ಕುಲಾಲನಂತೆ ನಿಮಿತ್ತವೂ ಉಪಾದಾನವೂ ಆಗುವದೆಂಬುದು ಸಂಭವಿಸುವುದಿಲ್ಲ. "ಆನಂದವೇ ಬ್ರಹ್ಮವೆಂದು ತಿಳಿ. ಆನಂದದಿಂದ ಇದೆಲ್ಲವೂ ಹುಟ್ಟಿದೆ" "ಮೊದಲು ಇದೆಲ್ಲವೂ ಸದ್ರೂಪವಾಗಿತ್ತು" "ಸತ್ ಅಸತ್

ಯಾವುದೂ ಇಲ್ಲದೆ ಶಿವನೊಬ್ಬನೇ ಇದ್ದನು" ಇತ್ಯಾದಿ ಶ್ರುತಿಗಳಲ್ಲಿ ಸಿದ್ಧವಾದ ಆನಂದಾದಿಗಳಿಗೆ ಬ್ರಹ್ಮದಲ್ಲಿ ವಿಕಲ್ಪವೇ ಅಥವಾ ಸಮುಚ್ಚಯವೇ ಎಂಬ ಸಂಶಯ ಬರುತ್ತದೆ. ಇವೆಲ್ಲವೂ ಅವನಲ್ಲಿ ವಿಕಲ್ಪವೆಂದು ಹೇಳಿದರೆ, ಅವ್ಯವಸ್ಥೆಯುಂಟಾಗಿ, 'ಮಾಡಿದ್ದನ್ನು ತೊರೆದು ಮಾಡದಿರುವುದನ್ನು ಒಪ್ಪುವುದು' ಎಂಬ ದೋಷ ಸಂಭವಿಸುತ್ತದೆ. ಅದರಲ್ಲೂ ವ್ಯವಸ್ಥಿತವಿಕಲ್ಪವೆಂಬ ಪಕ್ಷದಲ್ಲಿ ಅನೇಕ ಬ್ರಹ್ಮಗಳನ್ನು ಒಪ್ಪಬೇಕಾಗುವುದು. ಆನಂದಾದಿಗಳು ಅವನಲ್ಲಿ ಒಟ್ಟಿಗೇ ಇರುತ್ತವೆ ಎಂದು ಹೇಳುವುದಾದರೆ ಅವೆಲ್ಲವೂ ಧರ್ಮರೂಪವಾದ್ದರಿಂದ ಅವು ಜಗಜ್ಜನ್ಮಾದಿಕಾರಣವೆನಿಸಲಾರವು. ಕ್ಷೀರದಂತೆ ಪರಮಶಿವನನ್ನು ಆರಂಭದಲ್ಲಿ ಉಪಾದಾನನೆಂದು ಅಂಗೀಕರಿಸಿದರೆ, ಅವನಲ್ಲಿರುವ ಆನಂದಾದಿಗಳಿಗೆ ಭಂಗ ಉಂಟಾಗುತ್ತದೆ. ಸುವರ್ಣಕುಂಡಲದಂತೆ ಅವನನ್ನು ಪರಿಣಾಮ್ಯುಪಾದಾನವೆಂದು ಅಂಗೀಕರಿಸಿದರೆ, ಅವನಿಗೆ ವಿಕಾರವನ್ನು ಒಪ್ಪಬೇಕಾಗುತ್ತದೆ. ರಜ್ಜುವಿನಲ್ಲಿ ಸರ್ಪದಂತೆ ಪ್ರಧಾನದಲ್ಲಿ ಪ್ರಪಂಚದ ಅಧ್ಯಾಸವನ್ನು ಒಪ್ಪಿದರೆ, ಮೊಲದ ಕೊಂಬು ಮೊದಲಾದವುಗಳಿಗೂ ಅಧ್ಯಾಸವೇಕೆ ಸಂಭವಿಸಬಾರದು? ಆದ್ದರಿಂದ ಜಗತ್ತು ಹುಟ್ಟುವುದೆಂಬುದನ್ನು ನಿರೂಪಿಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಬ್ರಹ್ಮವು ಅದಕ್ಕೆ ಕಾರಣವಾಗಲಾರದು. "ಅಧ್ಯಾರೋಪ ಅಪವಾದಗಳಿಂದ ಪ್ರಪಂಚವನ್ನು ಇಲ್ಲವೆಂದು ತಿಳಿಯಬೇಕು" ಎಂಬ ಹಿಂದಿನ ಆಚಾರ್ಯರ ನ್ಯಾಯವನ್ನು ಅನುಸರಿಸಿ ಶಿಷ್ಯರಿಗೆ ಬೋಧಿಸಲಿಕ್ಕಾಗಿಯೂ, ವೇದದ ಪ್ರಾಮಾಣ್ಯವನ್ನು ಸಾಧಿಸಲಿಕ್ಕಾಗಿಯೂ, 'ಅಜಾಮೇಕಾಂ' ಎಂಬ ಶ್ರುತಿಯಲ್ಲಿ ಅಚೇತನವಾದ ಮಾಯೆಯನ್ನು ಜಗತ್ತಿನ ಉಪಾದಾನವೆಂದು ತಿಳಿಸಿರುವುದರಿಂದ ಅದನ್ನೇ ಉಪಾದಾನವೆಂದು ಹೇಳುವುದೇ ಯುಕ್ತವಾಗಿದೆ ಅಥವಾ ಬ್ರಹ್ಮದಲ್ಲಿ ಅಧ್ಯಸ್ತವಾದ ಪ್ರಕೃತಿಯ ಸತ್ತ್ವಗುಣದಲ್ಲಿ ಪ್ರತಿಬಿಂಬಿಸಿದ ಕಲ್ಪಿತೇಶ್ವರನಾದರೂ ಜಗತ್ತಿನ ಉಪಾದಾನವಾಗಬಹುದು. ಹೀಗೆ ಪೂರ್ವಪಕ್ಷ ಸಂಭವಿಸುತ್ತದೆ.

**ಸರ್ವಾಧಿಷ್ಠಾನಸಚ್ಚಿದಾನಂದಷಟ್ಸ್ಥಲಪರಶಿವಬ್ರಹ್ಮಣ ಏವ ಜಗಜ್ಜನ್ಮಾದಿಕಾರಣತ್ವಂ ಯುಕ್ತಂ. "ಅಪಾಣಿಪಾದೋಽಹಮಚಿಂತ್ಯಶಕ್ತಿಃ ಪಶ್ಯಾಮ್ಯಚಕ್ಷುಃ ಸ ಶೃಣೋಮ್ಯಕರ್ಣಃ । ಅಹಂ ವಿಜಾನಾಮಿ ವಿವಿಕ್ತರೂಪೋ ನ ಚಾಸ್ತಿವೇತ್ತಾ ಮಮ ಚಿತ್ಸದಾಽಹಂ ॥" "ಆಕಾಶಶರೀರಂ ಬ್ರಹ್ಮ. ಸತ್ಯಾತ್ಮ ಪ್ರಾಣಾರಾಮಂ ಮನಆನಂದಂ" "ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ. ಆಕಾಶಂ ಪ್ರತ್ಯಸ್ತಂ ಯಂತಿ" "ಆಕಾಶೋ ಹ ವೈ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಂ ಸ ಆತ್ಮಾ" ಇತ್ಯಾದಿಶ್ರುತಿಕದಂಬೇನ ನಿರವಯವಸ್ಯಾಪಿ ಬ್ರಹ್ಮಣೋ ಬಾಹ್ಯಕರಣನಿರಪೇಕ್ಷತಯಾ ಸರ್ವಕರ್ತೃತ್ವಂ ಸೂಚಿತಂ. "ಆಕಾಶಶರೀರಂ ಬ್ರಹ್ಮ" ಇತ್ಯತ್ರ ಆಕಾಶಶಬ್ದೇನ ತತ್ಸ್ವಭಾವಿತಚಿತ್ ... ; ಜಡಸ್ಯ**

ತಸ್ಯ ಕಾರಣತ್ವಾಸಂಭವಾತ್. ಸತ್ಯಾತ್ಮ–ಸತ್ಯಸ್ವರೂಪಃ, “ಋತಂ ಸತ್ಯಂ” ಇತಿಶ್ರುತೇಃ. ಪ್ರಾಣಶಬ್ದೇನ ಸಕಲಜಗದಧಿಷ್ಠಾನಚಿಚ್ಛಕ್ತಿರ್ವ್ಯಪದಿಶ್ಯತೇ. ತಸ್ಯಾಂ ರಮತೇ ಯಃ ಸ ಪ್ರಾಣಾರಾಮಃ. ಮನಶ್ಶಬ್ದೇನ ಪರಾಶಕ್ತಿರುಚ್ಯತೇ, ತಸ್ಯಾಮಾನಂದೋ ಯಸ್ಯ. ಅನೇನ ಬಾಹ್ಯಕರಣನಿರಪೇಕ್ಷತಾ ಸೂಚಿತಾ. ನಿರವಯವಸ್ಯ ವಾಯೋರ್ವೃಕ್ಷಾದಿಕಂಪನಶಕ್ತಿದರ್ಶನಾತ್, ನಿರವಯವಸ್ಯ ಜೀವಸ್ಯ ಸ್ವಾಪ್ನಿಕಪ್ರಪಂಚೋತ್ಪಾದನಶಕ್ತಿದರ್ಶನಾಚ್ಚ. ಅನಂತಶಕ್ತಿವಿಶಿಷ್ಟಸ್ಯಾಘಟಿತಘಟನಾಸಾಮರ್ಥ್ಯಂ ಕಿಮು ವಕ್ತವ್ಯಂ? ಮೂರ್ತಸ್ಯ ಪ್ರಭಾಕರಸ್ಯ ಹ್ಯಮೂರ್ತಕಾಲಕಲ್ಪನದರ್ಶನಾತ್, ಭಕ್ತಾನುಗ್ರಹಾರ್ಥಂ ಧೃತಕಾರಿಸ್ಯವದ್ದಿವ್ಯಮಂಗಳವಿಗ್ರಹಧರಸ್ಯ ಮಹೇಶ್ವರಸ್ಯ ಮೂರ್ತಾಮೂರ್ತಪ್ರಪಂಚಕಲ್ಪನೇಽಪ್ಯದೋಷಃ. “ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ” ಇತಿ ಶ್ರುತೌ ಸಮುದ್ರೋತ್ಪನ್ನಫೇನತರಂಗಾದಿವತ್ ಸರ್ವಜಗದುತ್ಪತ್ತಿಸ್ಥಿತಿಲಯಕರ್ಮತಯಾ ತದಾತ್ಮಕತ್ವಮಿತಿ ಶ್ರೂಯತೇ. ಜಗದುಪಾದಾನಪರಮೇಶ್ವರಶಕ್ತೇಸ್ತು ತದೇಕದೇಶವೃತ್ತಿತ್ವಂ “ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ” ಇತಿ ಶ್ರುತ್ಯಾ ಪ್ರದರ್ಶಿತಂ. ತಸ್ಮಾನ್ಮಹಾಕಾಶಾಂತರ್ಭೂತಪವನಾದೀನಾಮಿವ ಪರಮೇಶ್ವರಾಂತರ್ಭೂತಜಗತಾಂ ಪರಮೇಶ್ವರಕಾರಣತ್ವಂ. “ಲಿಂಗಮಧ್ಯೇ ಜಗತ್ಸರ್ವಂ ಲಿಂಗಬಾಹ್ಯಾತ್ಪರಂ ನಹಿ” ಇತಿ ಶ್ರುತ್ಯಾಪಿ ತಥಾ ಸೂಚಿತಂ. “ಯತೋ ವಾ ಇಮಾನಿ ಭೂತಾನಿ ಜಾಯಂತೇ” (ತೈ. ಭೃಗು. ೧) ಇತ್ಯನೇನ ಶಿವಸ್ಯ ಬ್ರಹ್ಮಣೋ ನಿಮಿತ್ತಕಾರಣತ್ವಂ, “ಯತ್ಪ್ರಯಂತಿ” ಇತ್ಯನೇನೋಪಾದಾನಕಾರಣತ್ವಂ ಚೋಪದಿಶ್ಯತೇ. ತಸ್ಮಾದವಿರುದ್ಧಮಭಿನ್ನನಿಮಿತ್ತೋಪಾದಾನಕಾರಣತ್ವಂ. ನ ತ್ವೇಕಕಾರಣತ್ವಂ, ನಾಧಾರೋಪತ್ವಂ, ನ ಮಿಥ್ಯಾತ್ವಂ ಚ ವಿಧೀಯತೇ.

ನನು—“ಜ್ಞಾಜ್ಞೌ ದ್ವಾವಜಾವೀಶಾನೀಶೌ” ಇತ್ಯಾದಿನಾ ಪರಮೇಶ್ವರವಜ್ಜೀವಸ್ಯಾಪ್ಯಜತ್ವೋಪದೇಶಾತ್, “ಯತೋ ವಾ ಇಮಾನಿ ಭೂತಾನಿ ಜಾಯಂತೇ” (ತೈ. ಭೃಗು. ೧) ಇತ್ಯಾದಿಶ್ರುತ್ಯಾ ಪರಮೇಶ್ವರಸ್ಯ ಪಂಚಮಹಾಭೂತಮಾತ್ರಕಾರಣತ್ವಮಿತಿ ಚೇನ್ನ. ಸೃಷ್ಟೇಃ ಪ್ರಾಕ್ ಸ್ವಾತ್ಮನಿ ಕುಸೂಲಧಾನ್ಯವದ್ವರ್ತಮಾನಜೀವಾನಾಂ ಬಹಿರ್ನಿರ್ಗಮನಾದಿಕರ್ತೃತ್ವದರ್ಶನಾತ್, ಜನ್ಯತ್ವಾಜನ್ಯತ್ವವಿಧಾಯಕಶ್ರುತೀನಾಂ ನ ವಿರೋಧಃ. “ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ । ತಸ್ಯಾವಯವಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ॥” “ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ ।” ಇತ್ಯಾದಿ

ಶ್ರುತಿಸ್ಮೃತಿದರ್ಶನಾತ್. ಶಕ್ತಿಸಂಕೋಚತಯಾ ಸೃಷ್ಟೇಃ ಪ್ರಾಕ್ ಪರಮೇಶ್ವರಸ್ಯ ನಿರ್ಗುಣತ್ವಾತ್ "ನಿಷ್ಕಲಂ ನಿಷ್ಕ್ರಿಯಂ ಶಾನ್ತಂ" ಇತ್ಯಾದಿನಿರ್ಗುಣಶ್ರುತಿನಾಂ ತತ್ಕಾಲಪರತ್ವಂ. "ಸ ಈಕ್ಷಾಂಚಕ್ರೇ" ಇತ್ಯಾದಿಸಗುಣಶ್ರುತಿನಾಂ ಸೃಷ್ಟ್ಯುನ್ಮುಖಪರಮೇಶ್ವರಶಕ್ತಿವಿಕಾಸಕಾಲಪರತ್ವಂ. ಸತ್ಯಜ್ಞಾನಾನಂದಸ್ವರೂಪಸ್ಯ ಶಿವಸ್ಯ ಬ್ರಹ್ಮಣೋ ಜಗತ್ಕಾರಣತ್ವೇ ಮೃದಾದಿವದ್ವಿಕಾರಿತ್ವಂ ಸ್ಯಾದಿತಿ ಚೇತ್—"ಮಾಯಾಂ ತು ಪ್ರಕೃತಿಂ ವಿಂದ್ಯಾತ್" ಇತ್ಯಾದಿಶ್ರುತಿಷು ಮಾಯಾಯಾ ಜಗದುಪಾದಾನತ್ವಂ ಪರಮೇಶ್ವರಸ್ಯ ನಿಮಿತ್ತತ್ವಂ ಚೋಪದಿಶ್ಯತ ಇತಿ ನ ವಿರೋಧಃ.

ಚಿದಾತ್ಮಕಪರಶಿವೇ ಕಥಂ ಜಡಪ್ರಪಂಚಕಲ್ಪನಮಿತಿ ಚೇನ್ನ—"ಯಥೋರ್ಣನಾಭಿಸ್ಸೃಜತೇ ಗೃಹ್ಣತೇ ಚ" ಇತ್ಯಾದಿಶ್ರುತೌ ಚೇತನೋರ್ಣನಾಭೇರಚೇತನತಂತೂತ್ಪತ್ತಿದರ್ಶನಾತ್ ಅಘಟಿತಘಟನಾಶಕ್ತಿವಿಶಿಷ್ಟಪರಮೇಶ್ವರಸ್ಯ ಕಿಮು ವಕ್ತವ್ಯಂ? ತಸ್ಮಾಜ್ಜಡಚೇತನಯೋಃ ಪ್ರಪಂಚಪರಶಿವಯೋಃ ಕಾರ್ಯಕಾರಣಭಾವಸ್ಯ, ಐಕ್ಯಸ್ಯ ಚ ಪೂರ್ವೋದಾಹೃತೈಃ "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ" (ಛಾ. ೩-೧೪-೧) ಇತ್ಯಾದಿಶ್ರುತಿವಚನೈಃ ಪ್ರತಿಪಾದಿತತ್ವಾತ್ ಸ ಏವ ವೈದಿಕಸಿದ್ಧಾಂತ ಇತಿ ಘಂಟಾಘೋಷಃ.

ಇದಕ್ಕೆ ಸಿದ್ಧಾಂತವನ್ನು ಹೀಗೆ ಹೇಳಬಹುದು. ಸರ್ವಾಧಿಷ್ಠಾನವೂ ಸಚ್ಚಿದಾನಂದವೂ ಆದ ಷಟ್ಸ್ಥಲಾತ್ಮಕಪರಶಿವಬ್ರಹ್ಮವೇ ಜಗಜ್ಜನ್ಮಾದಿಕಾರಣವೆಂದು ಹೇಳುವುದೇ ಯುಕ್ತವಾಗಿದೆ. "ಕೈಕಾಲುಗಳಿಲ್ಲದಿದ್ದರೂ ಅಸಾಧ್ಯವಾದ ಶಕ್ತಿಯುಳ್ಳವನು, ಕಣ್ಣಿಲ್ಲದಿದ್ದರೂ ಕಾಣುತ್ತೇನೆ. ಕಿವಿಯಿಲ್ಲದಿದ್ದರೂ ಕೇಳುತ್ತೇನೆ. ನಾನು ರೂಪವಿಲ್ಲದವನಾದರೂ ತಿಳಿಯುತ್ತೇನೆ. ನನ್ನನ್ನು ತಿಳಿಯುವವನು ಯಾವನೂ ಇಲ್ಲ. ನಾನು ಯಾವಾಗಲೂ ಚಿದ್ರೂಪನಾಗಿರುವೆನು" "ಆಕಾಶವೇ ಶರೀರವಾಗುಳ್ಳದ್ದು ಬ್ರಹ್ಮ. ಸತ್ಯಾತ್ಮವೂ ಪ್ರಾಣಾರಾಮವೂ ಮನಆನಂದವೂ ಆದದ್ದು ಬ್ರಹ್ಮ", "ಈ ಎಲ್ಲಾ ಭೂತಗಳೂ ಆಕಾಶರೂಪನಾದ ಆತ್ಮನಿಂದಲೇ ಹುಟ್ಟುತ್ತವೆ ಮತ್ತು ಅವನಲ್ಲಿಯೇ ಲಯವಾಗುತ್ತವೆ" "ಆಕಾಶಸ್ವರೂಪನಾದ ಪರಮಾತ್ಮನೇ ನಾಮರೂಪಗಳನ್ನು ನಿರ್ವಹಿಸುತ್ತಾನೆ" ಈ ಬಗೆಯ ಶ್ರುತಿಗಳಲ್ಲಿ ಆಕಾಶಶಬ್ದವು ಬ್ರಹ್ಮದಲ್ಲಿ ಸಹಜವಾಗಿರುವ ಚಿತ್‌ಶಕ್ತಿಯನ್ನು ತಿಳಿಸುತ್ತದೆಯೇ ಹೊರತು ಭೂತಾಕಾಶವನ್ನು ತಿಳಿಸುವುದಿಲ್ಲ; ಯಾಕೆಂದರೆ ಜಡವಾದ ಆಕಾಶವು ಇದೆಲ್ಲಕ್ಕೂ ಕಾರಣವಾಗಲಾರದು. 'ಸತ್ಯಾತ್ಮ'ವೆಂದರೆ ಸತ್ಯಸ್ವರೂಪವೆಂದರ್ಥ. "ಋತಂ ಸತ್ಯಂ" ಎಂಬ ಶ್ರುತಿಯೇ ಇದಕ್ಕೆ ಪ್ರಮಾಣವಾಗಿದೆ. 'ಪ್ರಾಣಾರಾಮಂ' ಎಂಬಲ್ಲಿ ಪ್ರಾಣಶಬ್ದವು ಪರಶಿವನಲ್ಲಿರುವ ಕ್ರಿಯಾಶಕ್ತಿಯನ್ನು ತಿಳಿ

ಸುತ್ತದೆ. ಅದರಲ್ಲಿ ರಮಿಸುವವನು ಬ್ರಹ್ಮವೆಂಬ ಅರ್ಥವು ಪ್ರಾಣಾರಾಮಶಬ್ದದಿಂದ ತಿಳಿದುಬರುತ್ತದೆ. 'ಮನಆನಂದಂ' ಎಂಬಲ್ಲಿ ಮನಶ್ಶಬ್ದವು ಪರಾಶಕ್ತಿಯನ್ನು ತಿಳಿಸುತ್ತದೆ. ಅದರಲ್ಲಿ ಆನಂದಪಡುವವನು ಬ್ರಹ್ಮವೇ. ಇದರಿಂದ ಅವನ ಆನಂದಕ್ಕೆ ಹೊರಗಿನ ಕರಣಗಳ ಅಪೇಕ್ಷೆ ಇಲ್ಲವೆಂಬುದು ಸ್ಪಷ್ಟಪಡುತ್ತದೆ. ನಿರವಯುವವಾದ ವಾಯುವಿಗೆ ಮರಗಳನ್ನು ಅಲ್ಲಾಡಿಸುವ ಶಕ್ತಿ ಇದೆ. ನಿರವಯವನಾದ ಜೀವನಿಗೆ ಸ್ವಪ್ನಪ್ರಪಂಚವನ್ನು ನಿರ್ಮಿಸಿಕೊಳ್ಳುವ ಶಕ್ತಿ ಇದೆ. ಹೀಗಿರುವಾಗ ಅನಂತ ಶಕ್ತಿವಿಶಿಷ್ಟನಾದ ಬ್ರಹ್ಮದ ಅಘಟಿತಘಟನಾಸಾಮರ್ಥ್ಯದ ಬಗ್ಗೆ ಮತ್ತು ಹೇಳುವುದೇನಿದೆ? ಮೂರ್ತರೂಪನಾದ ಸೂರ್ಯನಿಂದ ಅಮೂರ್ತವಾದ ಕಾಲದ ಕಲ್ಪನೆ ನಮಗೆ ಕಂಡುಬಂದಿದೆ. ಗಟ್ಟಿ ತುಪ್ಪವೇ ತಿಳಿತುಪ್ಪವಾದಂತೆ, ಭಕ್ತರನ್ನು ಅನುಗ್ರಹಿಸಲಿಕ್ಕಾಗಿ ದಿವ್ಯಮಂಗಳವಿಗ್ರಹವನ್ನು ಧರಿಸಿರುವ ನಿರಾಕಾರಪರಶಿವನು ಮೂರ್ತಾಮೂರ್ತಪ್ರಪಂಚವನ್ನು ಸೃಷ್ಟಿಸುವುದರಲ್ಲಿ ದೋಷವೇನೂ ಸಂಭವಿಸಲಾರದು. "ಇದೆಲ್ಲವೂ ಬ್ರಹ್ಮ, ಇದು ಅವನಿಂದಲೇ ಹುಟ್ಟಿ ಅವನೊಡನೆ ಬಾಳುತ್ತ ಅವನಲ್ಲಿಯೇ ಲೀನವಾಗುವುದೆಂದು ಕಂಡು ಶಾಂತನಾಗಿ ಈ ಜಗತ್ತನ್ನು ಬ್ರಹ್ಮವೆಂದು ಭಾವಿಸಬೇಕು" ಈ ಶ್ರುತಿಗಳಲ್ಲಿ ಸಮುದ್ರದಲ್ಲಿ ಹುಟ್ಟಿದ, ನೊರೆ ಮತ್ತು ಅಲೆಗಳನ್ನು ಸಮುದ್ರಮಯವೆಂದು ತಿಳಿಯುವಂತೆ ಸಕಲ ಜಗತ್ತು ಅವನಿಂದಲೇ ಹುಟ್ಟಿ ಅವನಲ್ಲಿಯೇ ಲೀನವಾಗುವುದರಿಂದ ಬ್ರಹ್ಮಸ್ವರೂಪವೆಂದು ಹೇಳಲಾಗಿದೆ. ಜಗತ್ತಿಗೆ ಉಪಾದಾನವಾದ ಪರಮೇಶ್ವರನ ಶಕ್ತಿಯಾದರೋ ಅವನ ಒಂದು ಅಂಶಮಾತ್ರವಾಗಿರುತ್ತದೆ. "ಸಮಸ್ತ ಪ್ರಪಂಚಗಳೂ ಅವನ ಒಂದು ಪಾದವಾಗಿ ಉಳಿದ ಮೂರು ಪಾದಗಳೂ ಅಮೃತಸ್ವರೂಪವೇ ಆಗಿರುವವು" ಎಂದು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ಮಹದಾಕಾಶದಲ್ಲಿ ಇರುವ ಗಾಳಿಯಂತೆ ಲಿಂಗರೂಪನಾದ ಪರಮೇಶ್ವರನೊಳಗೆ ಅಡಗಿರುವ ಜಗತ್ತೆಲ್ಲಕ್ಕೂ ಅವನೇ ಕಾರಣನಾಗಿರುವನು. "ಲಿಂಗದ ಮಧ್ಯದಲ್ಲಿ ಜಗತ್ತೆಲ್ಲವೂ ಅಡಗಿದೆ. ಲಿಂಗದಿಂದ ಹೊರಗೆ ಯಾವುದೂ ಇಲ್ಲ"ಎಂದು ಶ್ರುತಿಯಲ್ಲೂ ಇದೇ ಅಂಶ ಸೂಚಿತವಾಗಿದೆ. "ಯತೋ ವಾ ಇಮಾನಿ ಭೂತಾನಿ" ಎಂಬುದರಿರಿಂದ ಪರಶಿವಬ್ರಹ್ಮವೇ ನಿಮಿತ್ತಕಾರಣವೆಂದು ಹೇಳಿದಹಾಗಾಯಿತು. 'ಯತ್ಪ್ರಯಂತಿ' ಎಂಬುದರಿಂದ ಅವನೇ ಇದೆಲ್ಲಕ್ಕೂ ಉಪಾದಾನಕಾರಣನೆಂದು ನಿಶ್ಚಿತವಾಯಿತು. ಹೀಗೆ ಅವನೇ ಜಗತ್ತಿಗೆ ಅಭಿನ್ನನಿಮಿತ್ತೋಪಾದಾನನಾಗಿದ್ದಾನೆ. ಆದ್ದರಿಂದ ಅವನನ್ನು ಒಂದೇ ಬಗೆಯ ಕಾರಣವೆಂದಾಗಲೀ, ಅವನಲ್ಲಿ ಆರೋಪ ಅಥವಾ ಮಿಥ್ಯಾಕಲ್ಪನೆಯಾಗಲೀ ಶ್ರುತಿಯಲ್ಲಿ ಹೇಳಿಲ್ಲ. "ಜ್ಞಾಜ್ಞೌ" ಎಂಬುದರಿಂದ ಪರಮೇಶ್ವರನಂತೆ ಜೀವನನ್ನೂ ಅಜಾತನೆಂದು ಹೇಳಿದೆ. ಆದರೆ "ಯತೋವಾ ಇಮಾನಿ" ಎಂಬುದರಿಂದ ಪರಮೇಶ್ವರನು ಪಂಚಮಹಾಭೂತಗಳಿಗೆ ಕಾರಣನೆಂದು ಹೇಳಲಾಗಿದೆ. ಆದ್ದರಿಂದ ಪರಮೇಶ್ವರನು ಜೀವನಿಗೆ ಕಾರಣವೆಂಬುದು ಹೇಗೆ ಸಾಧ್ಯವಾದೀತು? ಅಂದರೆ, ಹಾಗಲ್ಲ. ಉಗ್ರಾಣದಲ್ಲಿ ಇಟ್ಟಿದ್ದ ಧಾನ್ಯದಂತೆ ಸೃಷ್ಟಿಗೆ ಮೊದಲು ಪರಮೇಶ್ವರ

ನಲ್ಲಿ ಅಡಗಿದ್ದ ಜೀವರನ್ನು ಹೊರಗೆಡಹಲು ಅವನೇ ಕಾರಣನೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಒಂದು ಕಡೆ ಜೀವರು ಜನ್ಯರೆಂದೂ, ಮತ್ತೊಂದು ಕಡೆ ಅಜನ್ಯರೆಂದೂ ಹೇಳಿರುವ ಶ್ರುತಿಗಳಿಗೆ ಯಾವ ವಿರೋಧವೂ ಸಂಭವಿಸುವುದಿಲ್ಲ. "ಪ್ರಕೃತಿಯನ್ನು ಮಾಯೆಯೆಂದೂ ಈಶ್ವರನನ್ನು ಮಾಯಾಪತಿ ಎಂದೂ ತಿಳಿ. ಅವನ ಅವಯವಗಳಾದ ತ್ರಿಮೂರ್ತಿಗಳಿಂದ ಈ ಜಗತ್ತು ವ್ಯಾಪ್ತವಾಗಿದೆ". "ಈ ಜೀವಲೋಕದಲ್ಲಿ ನನ್ನ ಅಂಶವೇ ಸನಾತನನಾದ ಜೀವನೆನಿಸಿದೆ" ಎಂದು ಶ್ರುತಿ ಸ್ಮೃತಿಗಳಲ್ಲಿ ಜೀವನು ಸನಾತನನೆಂದೇ ಹೇಳಿದೆ. ಶಕ್ತಿಸಂಕೋಚವಾಗಿದ್ದುದರಿಂದ ಸೃಷ್ಟಿಗೆ ಮೊದಲು ಈಶ್ವರನು ನಿರ್ಗುಣನೆನಿಸಿದ್ದನು. 'ನಿಷ್ಕಲಂ' ಇತ್ಯಾದಿ ಶ್ರುತಿಗಳು ಆ ಕಾಲಕ್ಕೆ ಅನ್ವಯಿಸುತ್ತವೆ. 'ಆತನು ನೋಡಿದನು' ಈ ಬಗೆಯ ಶ್ರುತಿಗಳು ಸೃಷ್ಟಿಗೆ ಉನ್ಮುಖನಾದ ಪರಮಶಿವನ ಶಕ್ತಿವಿಕಾಸವನ್ನು ತಿಳಿಸುತ್ತವೆ. ಸತ್ಯ ಜ್ಞಾನ ಆನಂದ ಸ್ವರೂಪನಾದ ಪರಮಶಿವನನ್ನು ಜಗತ್ತಿನ ಕಾರಣನೆಂದು ತಿಳಿದರೆ ಮಣ್ಣಿನಂತೆ ಅವನಲ್ಲಿ ಯಾವ ವಿಕಾರವೂ ಆಗುವುದಿಲ್ಲವೇ? ಅಂದರೆ, 'ಮಾಯಾಂತು ಪ್ರಕೃತಿಂ' ಎಂಬ ಶ್ರುತಿಯಲ್ಲಿ ಮಾಯೆಯನ್ನು ಜಗತ್ತಿನ ಉಪಾದಾನವೆಂದು ಹೇಳಿ ಅದೇ ಶ್ರುತಿಯಲ್ಲಿ ಪರಮೇಶ್ವರನನ್ನು ನಿಮಿತ್ತನೆಂದೂ ಹೇಳಿರುವುದರಿಂದಲೂ, ಮಾಯೆ ಅವನ ಶಕ್ತಿಸ್ವರೂಪವಾದ್ದರಿಂದಲೂ ಯಾವ ವಿರೋಧವೂ ಇಲ್ಲ. ಚಿದ್ರೂಪನಾದ ಪರಮಶಿವನಲ್ಲಿ ಜಡವಾದ ಪ್ರಪಂಚವನ್ನು ಕಲ್ಪಿಸುವುದು ಹೇಗೆ ಎಂದರೆ "ಜೇಡರಹುಳುವು ಹೇಗೆ ತನ್ನೊಳಗಿನ ನೂಲನ್ನು ಹೊರಪಡಿಸುತ್ತದೆಯೋ ಮತ್ತು ಅದನ್ನು ಒಳಕ್ಕೆ ಸಂಗ್ರಹಿಸಿಕೊಳ್ಳುತ್ತದೆಯೋ" ಎಂಬ ಶ್ರುತಿಯಂತೆ ಚೇತನವಾದ ಜೇಡರಹುಳುವು ಜಡವಾದ ದಾರವನ್ನು ಹೊರಗೆಡಹುವಂತೆ ಅಘಟಿತಘಟನಾಸಮರ್ಥನಾದ ಪರಮಶಿವನ ಬಗ್ಗೆ ಹೇಳುವುದೇನಿದೆ? ಜಡವಾದ ಪ್ರಪಂಚಕ್ಕೂ ಚೇತನನಾದ ಪರಮಶಿವನಿಗೂ ಕಾರ್ಯಕಾರಣಭಾವವಿದ್ದರೂ ಜಡವಾದ ಪ್ರಪಂಚವು ಪರಮಶಿವನಲ್ಲಿ ಲೀನವಾಗುವುದೆಂದು ಹಿಂದೆ ಹೇಳಿದ್ದು "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿಯಿಂದ ನಿಶ್ಚಿತವಾಗಿರುವುದರಿಂದ ಇದೇ ವೈದಿಕಸಿದ್ಧಾಂತವೆಂದು ಘಂಟಾಘೋಷವೆನಿಸಿದೆ.

**ಅಧ್ಯಾರೋಪಾಪವಾದಂಗೀಕಾರೇ—"ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ" "ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ" "ಏಕೋಽಹಂ ಬಹು ಸ್ಯಾಂ ಪ್ರಜಾಯೇಯ" "ದ್ಯಾವಾಪೃಥಿವೀ ಜನಯನ್ ದೇವ ಏಕಃ" "ದ್ವಾ ಸುಪರ್ಣಾ ಸಯುಜಾ ಸಖಾಯಾ" "ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ ಸಂಸಾರಮೋಕ್ಷಸ್ಥಿತಿಬಂಧುಹೇತುಃ" "ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ" "ಸರ್ವೋ ವೈ ರುದ್ರಃ" ಇತ್ಯಾದಿಬಹುಶ್ರುತಿವಿರೋಧಾತ್ ಬೌದ್ಧಾದಿವದ್ವೇದಬಾಹ್ಯಮತಪ್ರವೇಶಃ ಸ್ಯಾತ್.**

ಜಡಾಜಡಯೋರೇಕತ್ವಾಸಂಭವಾತ್ಪ್ರಪಂಚಸ್ಯಾಧ್ಯಾಸಿಕತ್ವೇನ ಮಿಥ್ಯಾತ್ವಂ ಸಂಭವತೀತಿ ಯುತ್ ತತ್ತುಚ್ಛಂ. ತಥಾಹಿ—ಅನ್ಯತ್ರಾನ್ಯಧರ್ಮಾರೋಪಃ ಖಲ್ವಧ್ಯಾಸಃ? ತತ್ರ ಆತ್ಮನ್ಯನಾತ್ಮಪ್ರಪಂಚಾರೋಪೋ ವಾ? ಅನಾತ್ಮನ್ಯಾತ್ಮಾರೋಪೋ ವಾ? ನಾದ್ಯಃ—ಪೂರ್ವದೃಷ್ಟಸತ್ಯಸರ್ಪಸಂಸ್ಕಾರೇಣ ರಜ್ಜುಸರ್ಪಭ್ರಾಂತಿರುಪಪದ್ಯತೇ. ತದ್ವದಾತ್ಮವ್ಯತಿರಿಕ್ತಸತ್ಯಪ್ರಪಂಚಾನಂಗೀಕಾರಾತ್, ತದತಿರಿಕ್ತಪ್ರದೇಶಾಭಾವಾಚ್ಚ. ನ ದ್ವಿತೀಯಃ-ಅನಾತ್ಮನ್ಯಾತ್ಮಾರೋಪೇ ಆರೋಪಿತಾತ್ಮಸ್ವರೂಪಸ್ಯ ಬ್ರಹ್ಮಣೋ ಮಿಥ್ಯಾತ್ವಾಪತ್ತೇಃ, ಜಡತ್ವಾದಿಬಹುದೋಷಪ್ರಸಕ್ತೇಶ್ಚ. ನಚ ಪೂರ್ವದೃಷ್ಟತ್ವಮೇವ ನಿಯಾಮಕಮಿತಿ ವಾಚ್ಯಂ. ಬೀಜಾಂಕುರನ್ಯಾಯವತ್ಪೂರ್ವಪೂರ್ವಾಧ್ಯಾಸಸ್ಯೋತ್ತರೋತ್ತರಾಧ್ಯಾಸಹೇತುತ್ವಾತ್ ಅಧ್ಯಾಸಸ್ಸಂಭವತಿ ಇತಿ ಚೇತ್, ತರ್ಹ್ಯನವಸ್ಥಾಪ್ರಸಂಗಃ.

ಕಿಂಚ—"ಯತ್ರ ಯದ್ದೃಷ್ಟಂ ತತ್ರ ಸ ತಸ್ಯಾರೋಪಃ" ಇತಿ ನಿಯಮಾತ್ ತದ್ದೃಷ್ಟಪ್ರಪಂಚಸ್ಯ ತಸ್ಮಿನ್ನಾರೋಪಃ ಕಥಮುಪಪದ್ಯತೇ? ಸರ್ಪೇ ಸರ್ಪತ್ವಾರೋಪಾಸಂಭವಾನುಪಪತ್ತಿರ್ದುರ್ವಾರಾ. ಅಪಿಚ ಬ್ರಹ್ಮಪ್ರಪಂಚಯೋರನಾದಿತ್ವೇ—"ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿಬಹುಶ್ರುತಿವಿರೋಧಾತ್ ಕಾರ್ಯಕಾರಣತ್ವಪ್ರಯುಕ್ತಪೌರ್ವಾಪರ್ಯನಿಯಮಪ್ರತಿಪಾದಕಯುಕ್ತಿಭಂಗಪ್ರಸಂಗಶ್ಚ. ದೃಶ್ಯತ್ವೇನ ಪ್ರಪಂಚಸ್ಯ ಮಿಥ್ಯಾತ್ವಾಂಗೀಕಾರೇ ಬ್ರಹ್ಮಣೋಽಪಿ ಮಿಥ್ಯಾತ್ವಾಪತ್ತಿಃ, ದೃಶ್ಯತ್ವಾನಂಗೀಕಾರಾನ್ನೋಕ್ತದೋಷ ಇತಿಚೇತ್-ಲೋಕೇ ಬ್ರಹ್ಮಾನುಭೂತಿರ್ನ ಸ್ಯಾತ್. ಕಿಂಚ "ಅಸ್ಮತ್ಪ್ರತ್ಯಯವಿಷಯತ್ವಾದಪರೋಕ್ಷತ್ವಾಚ್ಚ ಪ್ರತ್ಯಗಾತ್ಮಪ್ರಸಿದ್ಧೇಃ" ಇತ್ಯುಕ್ತಿವಿರೋಧಾತ್ ನಾಹಂಪ್ರತ್ಯಯವಿಷಯೋ ಬ್ರಹ್ಮ, ಇತಿ ಚೇನ್ನ. ಜೀವಬ್ರಹ್ಮಣೋಃ ಭೇದಾನಂಗೀಕಾರಾತ್. "ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್" "ತರತಿ ಶೋಕಮಾತ್ಮವಿತ್" "ಆತ್ಮಾ ವಾ ಅರೇ ದ್ರಷ್ಟವ್ಯಃ" "ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ" (ಕಠ. ೧-೩-೧೨) "ಪಶ್ಯ ಮೇ ಯೋಗಮೈಶ್ವರಂ" "ಶಿವಾತ್ಮಕಮಿದಂ ಸರ್ವಂ ಸದಾ ಪಶ್ಯಂತಿ ಸೂರಯಃ" ಇತ್ಯಾದಿಶ್ರುತಿಸ್ಮೃತಿಪುರಾಣವಚನೈರ್ಬ್ರಹ್ಮದೃಶ್ಯತ್ವಪ್ರತಿಪಾದನಾಚ್ಚ. ಬ್ರಹ್ಮಣೋ ವ್ಯಾವಹಾರಿಕದೃಶ್ಯತ್ವಾಂಗೀಕಾರೇ ನಿರಧಿಷ್ಠಾನಭ್ರಮಪ್ರಸಂಗಃ. ತಸ್ಮಾನ್ನಾಧ್ಯಾಸೋಽಂಗೀಕರಣೀಯಃ.

ಆರೋಪಾಪವಾದಗಳನ್ನು ಅಂಗೀಕರಿಸಿದರೆ, "ಇದೆಲ್ಲವೂ ಮೊದಲು ಸದ್ರೂಪವಾಗಿತ್ತು. ಅವನು ವಿಸ್ತಾರವಾಗುವೆನೆಂದು ಆಲೋಚಿಸಿದನು. ನಾನೊಬ್ಬನೇ ವಿಸ್ತಾರವಾಗುವೆನು. ಭೂಮಿಆಕಾಶಗಳನ್ನು ಒಬ್ಬ ದೇವನೇ ಸೃಷ್ಟಿಸಿದನು."

"ಒಂದೇ ಬಣ್ಣದ ಸಮನಾಕಾರದ ಪಕ್ಷಿಗಳಿಬ್ಬರು," "ಪ್ರಧಾನಜೀವರಿಗೆ ನಿಯಾಮಕನೂ ಗುಣಗಳಿಗೆ ಪ್ರಭುವೂ ಸಂಸಾರವೆಂಬ ಬಂಧಕ್ಕೂ ಸ್ಥಿತಿಗೂ ಮುಕ್ತಿಗೂ ಕಾರಣನೂ ಆದವನು." "ವಿದ್ವಾಂಸನು ನಾಮರೂಪಗಳನ್ನು ತೊರೆದು ಎಲ್ಲಕ್ಕೂ ಆಚೆಯ ದಿವ್ಯ ಪುರುಷನನ್ನು ಹೊಂದುತ್ತಾನೆ." 'ಎಲ್ಲವೂ ರುದ್ರನೇ' ಇವೇ ಮೊದಲಾದ ಎಲ್ಲಾ ಶ್ರುತಿಗಳೂ ವಿರುದ್ಧವಾಗುವುದರಿಂದ ಬೌದ್ಧಾದಿಗಳಂತೆ ಅವೈದಿಕಮತವನ್ನು ಪ್ರವೇಶಿಸ ಬೇಕಾಗುವುದು. ಜಡಅಜಡಗಳೆರಡನ್ನೂ ಒಂದೇ ಎಂದು ಭಾವಿಸುವುದು ಅಸಂಭವ ವಾದ್ದರಿಂದ ಪ್ರಪಂಚವು ಪರಬ್ರಹ್ಮದಲ್ಲಿ ಅಧ್ಯಸ್ತವಾಗಿ ಮಿಥ್ಯೆ ಎನಿಸುತ್ತದೆ ಎಂದು ಹೇಳುವುದೂ ಯುಕ್ತವಲ್ಲ. ಹಾಗಾದರೆ ಬೇರೊಂದರಲ್ಲಿ ಬೇರೊಂದು ಧರ್ಮವನ್ನು ಆರೋಪಿಸುವುದೇ ಅಧ್ಯಾಸವಲ್ಲವೇ? ಇಲ್ಲಿ ಆತ್ಮನಲ್ಲಿ ಅನಾತ್ಮವನ್ನು ಆರೂಪಿಸ ಬೇಕೋ ಅನಾತ್ಮವಾದ ಜಗತ್ತಿನಲ್ಲಿ ಆತ್ಮನನ್ನು ಆರೋಪಿಸಬೇಕೋ ಎಂಬ ವಿಕಲ್ಪ ಬರುತ್ತದೆ. ಮೊದಲನೆಯ ವಿಕಲ್ಪ ಸಂಭವಿಸುವುದಿಲ್ಲ. ಯಾಕೆಂದರೆ ಸತ್ಯವಾದ ಸರ್ಪವನ್ನು ಮೊದಲೊಂದುಸಾರಿ ನೋಡಿದ್ದರೆ ಅದರ ಸಂಸ್ಕಾರದಿಂದ ಹಗ್ಗದಲ್ಲಿ ಸರ್ಪದ ಭ್ರಾಂತಿ ಬರಬಹುದು. ಅದರಂತೆ ಇಲ್ಲಿ ಆತ್ಮವಲ್ಲದ ಬೇರೊಂದು ಸತ್ಯವಾದ ಪ್ರಪಂಚವನ್ನು ಅಂಗೀಕರಿಸಿಲ್ಲವಾದ್ದರಿಂದಲೂ, ಆತ್ಮನಿಲ್ಲದ ಬೇರೊಂದು ಪ್ರದೇಶವೂ ಇಲ್ಲದ್ದರಿಂದಲೂ ಬ್ರಹ್ಮದಲ್ಲಿ ಪ್ರಪಂಚದ ಆರೋಪ ಹೊಂದುವುದಿಲ್ಲ. ಅದರಂತೆಯೇ ಪ್ರಪಂಚದಲ್ಲಿಯೂ ಬ್ರಹ್ಮದ ಆರೋಪವೂ ಹೊಂದುವುದಿಲ್ಲ; ಯಾಕೆಂದರೆ ಮಿಥ್ಯೆ ಯಾದ ಪ್ರಪಂಚದಲ್ಲಿ ಬ್ರಹ್ಮವನ್ನು ಆರೋಪಿಸಿದರೆ ಇದರಿಂದ ಬ್ರಹ್ಮವೂ ಮಿಥ್ಯೆಯಾ ಗಬೇಕಾಗುತ್ತದೆ ಮತ್ತು ಬ್ರಹ್ಮದಲ್ಲಿ ಜಡತ್ವವೇ ಮೊದಲಾದ ಅನೇಕ ದೋಷಗಳು ಅಂಟುತ್ತವೆ. ಆರೋಪಮಾಡುವಾಗ ಮೊದಲು ಸತ್ಯವಾಗಿ ಕಂಡದ್ದನ್ನೇ ಆರೋಪಿಸ ಬೇಕೆಂಬ ನಿರ್ಬಂಧವೇನೂ ಇಲ್ಲ. ಬೀಜಕ್ಕೆ ಅಂಕುರ ಮೊದಲೋ ಅಂಕುರಕ್ಕೆ ಬೀಜ ಮೊದಲೋ ಎಂಬ ನ್ಯಾಯದಂತೆ ಅನಾದಿಕಾಲದಿಂದ ಬಂದಿರುವ ಅಧ್ಯಾಸಪರಂಪರೆ ಯಿಂದಲೇ ಆರೋಪವನ್ನು ನಿರ್ವಹಿಸಬಹುದಲ್ಲವೇ? ಎಂದು ಕೇಳಿದರೆ ಇದರಿಂದ ಅನವಸ್ಥೆ ಎಂಬ ದೋಷವು ಸಂಭವಿಸುತ್ತದೆಯಾದ್ದರಿಂದ ಹೀಗೆ ನಿರ್ವಹಿಸಲು ಸಾಧ್ಯ ವಾಗುವುದಿಲ್ಲ. ಎಲ್ಲಿ ಯಾವುದು ಕಾಣುತ್ತದೆಯೋ ಅಲ್ಲಿ ಅದಕ್ಕೆ ಆರೋಪವಿಲ್ಲ ವೆಂಬುದೊಂದು ನಿಯಮವಿದೆ. ಇದರ ಪ್ರಕಾರ ಪರಮಶಿವನಲ್ಲಿ ಕಾಣುವ ಪ್ರಪಂಚ ವನ್ನು ಅವನಲ್ಲಿಯೇ ಆರೋಪಿಸುವುದು ಹೇಗೆ ಸಂಭವಿಸೀತು? ಸರ್ಪದಲ್ಲಿ ಸರ್ಪತ್ವ ವನ್ನೇ ಆರೋಪಿಸುವ ಸಂಭವವಿಲ್ಲದ್ದರಿಂದ ಇಲ್ಲಿಯ ಅನುಪಪತ್ತಿಯನ್ನು ಪರಿಹರಿಸ ಲಾಗುವುದೇ ಇಲ್ಲ. ಇದೂ ಅಲ್ಲದೆ ಬ್ರಹ್ಮಪ್ರಪಂಚಗಳೆರಡನ್ನೂ ಅನಾದಿ ಎಂದು ಭಾವಿಸಿದರೆ 'ಯತೋ ವಾ ಇಮಾನಿ' ಎಂಬ ಅನೇಕ ಶ್ರುತಿಗಳ ವಿರೋಧದಿಂದ ಕಾರ್ಯಕಾರಣಪ್ರಯುಕ್ತವಾಗಿ 'ಬ್ರಹ್ಮ ಮೊದಲು, ಆಮೇಲೆ ಜಗತ್ತು' ಎಂಬ ಪೌರ್ವಾ ಪರ್ಯನಿಯಮವನ್ನು ತಿಳಿಸುವ ಯುಕ್ತಿಗೆ ಭಂಗವುಂಟಾಗುತ್ತದೆ. ದೃಶ್ಯವಾದ್ದರಿಂದ ಪ್ರಪಂಚವನ್ನು ಮಿಥ್ಯೆ ಎಂದು ಅಂಗೀಕರಿಸಿದರೆ, ಬ್ರಹ್ಮವೂ ಮಿಥ್ಯೆಯಾಗಬೇಕಾಗುತ್ತದೆ.

ಇವೆರಡಕ್ಕೂ ದೃಶ್ಯತ್ವವೆಂಬುದು ಸಾಮಾನ್ಯವಾಗಿರುವುದರಿಂದ ಬ್ರಹ್ಮವೂ ಮಿಥ್ಯೆಯೇ ಆಗಬೇಕಾದೀತು. ಆದರೆ ದೃಶ್ಯತ್ವವನ್ನು ಒಪ್ಪದೇ ಇದ್ದರೆ ಈ ದೋಷಕ್ಕೆ ಪ್ರಸಕ್ತಿ ಇಲ್ಲವೆಂದು ಹೇಳುವುದಾದರೆ ಲೋಕದಲ್ಲಿ ಯಾರಿಗೂ ಬ್ರಹ್ಮದ ಅನುಭವವೇ ಆಗದೆ ಹೋಗಬೇಕಾದೀತು. ಇದೂ ಅಲ್ಲದೆ ಅಹಂ ಪ್ರತ್ಯಯಕ್ಕೆ ವಿಷಯವಾಗಿ ಅಪರೋಕ್ಷವಾದ ಪ್ರತ್ಯಗಾತ್ಮವೆಂಬುದೊಂದು ಸಿದ್ಧವಾಗಿದೆ ಎಂಬ ಮಾತು ವಿರುದ್ಧವಾಗುತ್ತದೆ. ಬ್ರಹ್ಮವು ಅಹಂ ಪ್ರತ್ಯಯಕ್ಕೆ ವಿಷಯವೇ ಆಗುವುದಿಲ್ಲವೆಂದು ಹೇಳುವುದು ಜೀವಬ್ರಹ್ಮರಿಗೆ ಭೇದವನ್ನು ಒಪ್ಪದೇ ಇರುವುದರಿಂದ ನಿಮ್ಮ ಸಿದ್ಧಾಂತಕ್ಕೇ ವಿರುದ್ಧವಾಗುತ್ತದೆ. "ಒಬ್ಬಾನೊಬ್ಬ ಧೀರನು ಪ್ರತ್ಯಗಾತ್ಮನನ್ನು ಕಂಡನು", "ಆತ್ಮನನ್ನು ತಿಳಿದವನು ದುಃಖವನ್ನು ದಾಟುತ್ತಾನೆ", "ಆತ್ಮನನ್ನು ಕಾಣಬೇಕು", "ಆತ್ಮನು ತೀಕ್ಷ್ಣಬುದ್ಧಿಗೆ ಗೋಚರನಾಗುವನು", "ನನ್ನಲ್ಲಿರುವ ಈಶ್ವರಸಂಬಂಧವಾದ ಯೋಗವನ್ನು ನೋಡು", "ಇದೆಲ್ಲವೂ ಶಿವಾತ್ಮಕವೆಂದು ಪಂಡಿತರು ಯಾವಾಗಲೂ ಕಾಣುತ್ತಾರೆ" ಈ ಬಗೆಯ ಶ್ರುತಿಗಳಿಂದ ಬ್ರಹ್ಮವೂ ದೃಶ್ಯವೆಂದು ತಿಳಿದುಬರುತ್ತದೆ. ಬ್ರಹ್ಮ ವ್ಯವಹಾರಕಾಲದಲ್ಲಿ ದೃಶ್ಯವಾಗುವುದೆಂದು ಅಂಗೀಕರಿಸಿದರೆ ಅದಕ್ಕೆ ಯಾವ ಆಶ್ರಯವೂ ಇಲ್ಲದಿರುವುದರಿಂದ ಆಶ್ರಯವಿಲ್ಲದೆಯೇ ಭ್ರಮವನ್ನು ಹೇಳಬೇಕಾದೀತು. ಆದ್ದರಿಂದ ಅಧ್ಯಾಸವನ್ನು ಅಂಗೀಕರಿಸಲಾಗುವುದಿಲ್ಲ.

**ನನು—"ಮಾಯಾಭಾಸೇನ ಜೀವೇಶೌ ಕರೋತಿ" ಇತಿ ಕಲ್ಪಿತಶ್ರುತ್ಯಾ ಜಗತೋ ಮಿಥ್ಯಾತ್ವಮಂಗೀಕ್ರಿಯತೇ ಇತಿ ಚೇನ್ನ. "ಜ್ಞಾಜ್ಞೌ ದ್ವಾವಜಾವೀಶಾನೀಶೌ" "ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ" ಇತ್ಯಾದಿಶ್ರುತಿಸ್ಮೃತಿವಿರೋಧಪ್ರಸಂಗಾತ್, ಅಚೇತನಸ್ಯ ಪ್ರಧಾನಸ್ಯ ಚೇತನಜೀವೇಶ್ವರಕರ್ತೃತ್ವಾಸಂಭವಾಚ್ಚ "ಅಂತವತ್ತ್ವಮಸರ್ವಜ್ಞತಾ ವಾ" ಇತಿ ಸೂತ್ರವಿರೋಧಃ, ಕೃತನಾಶಾಕೃತಾಭ್ಯಾಗಮಪ್ರಸಂಗಶ್ಚ. ಪರಮೇಶ್ವರಸತ್ತಾವಶಾತ್ಪ್ರಧಾನಸ್ಯ ಜಗತ್ಕಾರಣತ್ವಂ ಇತಿ ಚೇನ್ನ–ಈಕ್ಷತ್ಯಧಿಕರಣೇ "ತದೈಕ್ಷತ" ಇತ್ಯಾದಿಶ್ರುತಿಪ್ರಾಮಾಣ್ಯಮಂಗೀಕೃತ್ಯ ವೇದಬಾಹ್ಯತ್ವೇನ ಪ್ರಧಾನಜಗತ್ಕಾರಣತ್ವಮತಸ್ಯ ನಿರಾಕೃತತ್ವಾತ್.**

**ಕಿಂಚ—ಮಿಥ್ಯಾತ್ವಂ ನಾಮ-ಅಸತ್ತ್ವಂ? ಅನಿರ್ವಚನೀಯತ್ವಂ? ಬಾಧ್ಯತ್ವಂ ವಾ? ನಾದ್ಯಃ—ವೇದಾಪ್ರಾಮಾಣ್ಯಪ್ರಸಂಗಾತ್. ನ ದ್ವಿತೀಯಃ—ಮೌನಿತ್ವಾಪತ್ತೇಃ. ನ ತೃತೀಯಃ –ಕಿಮಿದಂ ಬಾಧ್ಯತ್ವಂ? ತ್ರೈಕಾಲಿಕನಿಷೇಧಪ್ರತಿಯೋಗಿತ್ವಂ? ಜ್ಞಾನನಿವರ್ತ್ಯತ್ವಂ ವಾ? ನಾದ್ಯಃ—ಪ್ರಪಂಚಸ್ಯ ವಿದ್ಯಮಾನತ್ವಾತ್, ಅರ್ಥಸಿದ್ಧಿಕ್ರಿಯಾಸಿದ್ಧಿಸತ್ವಾಚ್ಚ. ಅನಾದಿತ್ವಾನ್ನ ಪ್ರಾಪ್ತಕಾಲನಿಷೇಧಃ, ಅನುಭುಜ್ಯಮಾನ**

ತ್ವಾನ್ನ ವರ್ತಮಾನಕಾಲನಿಷೇಧಃ, ಸಂಕೋಚರೂಪೇಣ ವೇದರಾಶೇಃ ಪ್ರಳಯೇಽಪಿ ಪರಮೇಶ್ವರೇ ಸತ್ತ್ವಾನ್ನ ಭವಿಷ್ಯತ್ಕಾಲನಿಷೇಧಃ. ನ ದ್ವಿತೀಯಃ—ಜ್ಞಾನಿನಾಂ ಪೂರ್ವವತ್ಪ್ರಪಂಚಸ್ಯ ಭಾಸಮಾನತ್ವಾತ್, ತೇಷಾಂ ಕ್ಷುತ್ಪಿಪಾಸಾದಿಕಸ್ಯ ದೃಷ್ಟತ್ವಾಚ್ಚ.

ನಚ—ದಗ್ಧಪಟನ್ಯಾಯೇನ ಜೀವನ್ಮುಕ್ತಸ್ಯ ದೇಹೇಂದ್ರಿಯಾದಿ ಭೇದಜ್ಞಾನಸಂಬಂಧ ಇತಿ ವಾಚ್ಯಂ. ಮರುಮರೀಚಿಕಾದೌ ಭ್ರಾಂತಿನಾಶೇಽಪಿ ಜಲತ್ವೇನ ಪ್ರತೀಯಮಾನತ್ವಮಿವ ಪ್ರಕೃತೇ ನ ವಕ್ತುಂ ಶಕ್ಯಂ. ಯಥಾ ದಗ್ಧಪಟೋಽಪಿ ಪಟವದ್ಭಾಸತೇ ಶೀತನಿವಾರಕತ್ವಾದಿಕ್ರಿಯಾಸಿದ್ಧ್ಯಭಾವಾತ್ ಲೋಕೇ ಮರುಮರೀಚಿಕಾಜಲವದ್ಭಾಸತೇ ಪಿಪಾಸಾಶಾಂತ್ಯಾದಿಧರ್ಮಾಣಾಮಯೋಗ್ಯತ್ವಾತ್, ತದ್ವಜ್ಜೀವನ್ಮುಕ್ತಾನಾಂ ಭೇದಜ್ಞಾನಸತ್ತ್ವೇಽಪಿ ಶರೀರಕಂಪನಕ್ಷುತ್ಪಿಪಾಸಾದಿಕಂ ನ ಸಂಬಧ್ಯೇತ. ಲೋಕೇ ದಂಡನಾಶೇಽಪಿ ತಜ್ಜನ್ಯಭ್ರಮಣವದವಿದ್ಯಾನಾಶೇಽಪಿ ತತ್ಕಾರ್ಯಪ್ರಾರಬ್ಧಶರೀರಾದೇರ್ಭೋಗೈಕನಾಶ್ಯತ್ವಮಿತಿ ಚೇನ್ನ. ತಂತುಪಟಾದಿವದವಿದ್ಯಾಯಾ ಉಪಾದಾನಕಾರಣತ್ವಾತ್, ತಸ್ಮಾತ್ತಥಾ ನ ಯುಕ್ತಂ. ತಥಾ ದೂರ್ವಾಸೀಯೇ—

ಅನಾದ್ಯವಿದ್ಯಯಾ ಬದ್ಧಂ ಬ್ರಹ್ಮ ತತ್ಕಾಲಕಾರಣಂ ।
ಸ್ವಾವಿದ್ಯಯಾ ಸಂಸರತಿ ಮುಕ್ತಿಃ ಕಲ್ಪಿತವಾಕ್ಯತಃ ॥
ಏವಂ ಪ್ರತಾರಣಂ ಶಾಸ್ತ್ರಂ ಸರ್ವಮಾಹಾತ್ಮ್ಯನಾಶಕಂ ।
ಉಪೇಕ್ಷ್ಯಂ ಶಿವಭಕ್ತೈಸ್ತು ಶ್ರುತಿಸ್ಮೃತಿವಿರೋಧತಃ ॥
ಫಲನಾಶಾದಿದಂ ತಸ್ಯ ಫಲಂ ನೈ ಮುಖ್ಯತಸ್ತಮಃ ।
ಜ್ಞಾನನಾಶ್ಯತ್ವಸಿದ್ಧ್ಯರ್ಥಂ ತದೇವ ಹಿ ನಿರೂಪಿತಂ ॥
ತದನ್ಯಥೈವ ಸಂಸಿದ್ಧಂ ವಿದ್ಯಾಽವಿದ್ಯಾನಿರೂಪಣೈಃ ॥
ತನ್ಮಾಯಿಕತ್ವಕಥನಂ ಪುರಾಣೇಷು ಪ್ರದೃಶ್ಯತೇ ।
ತಥೇಂದ್ರಜಾಲಪಕ್ಷೇಽಪಿ ಮತಾಂತರಮಿದಂ ಧ್ರುವಂ ॥
ನಾಸ್ತಿ ಶ್ರುತಿಷು ತದ್ವಾರ್ತಾ ದೃಶ್ಯಮಾನಾಸು ಕುತ್ರಚಿತ್ ॥
ವಾಚಾರಂಭಣವಾಕ್ಯಾನಿ ತದನನ್ಯತ್ವಬೋಧನಾತ್ ।
ನ ಮಿಥ್ಯಾತ್ವಾಯ ಕಲ್ಪಂತೇ ಶಿವೋಪಾದಾನಕಾರಣಾತ್ ॥
ಜ್ಞಾನಾರ್ಥಮರ್ಥವಾದಶ್ಚೇಜ್ಜಗತ್ಸೃಷ್ಟ್ಯಾದಿಕಾರಿಣಿ ।
ಶಕ್ತೇರನಂಗೀಕರಣಾದ್ವಿಧಿಮಾಹಾತ್ಮ್ಯಯೋರ್ನ ತತ್ ॥
ಅಪವಾದಾರ್ಥಮೇವೈತದಾರೋಪೋಽಪಿ ಪ್ರಯುಜ್ಯತೇ ನಹಿ ।
ದೃಢಪ್ರತೀತಿಸಿದ್ಧ್ಯರ್ಥಮಿತಿ ಚೇತ್ತನ್ನ ಯುಜ್ಯತೇ ॥

ಮುಖ್ಯಾರ್ಥಬಾಧಕಂ ನಾಸ್ತಿ ಕಾರ್ಯದರ್ಶನತಶ್ಶ್ರುತೇಃ ।
ಐಂದ್ರಜಾಲಿಕಪಕ್ಷೇಽಪಿ ತತ್ಕರ್ತೃತ್ವಂ ತದೀರಿತಂ ॥
ಮಾಯಾದೀನಾಂ ಚ ಕರ್ತೃತ್ವಂ ಶ್ರುತಿಸೂತ್ರೈರ್ನಬೋಧ್ಯತೇ ।
ಅಕರ್ತೃತ್ವಂ ಚ ಯತ್ತಸ್ಯ ಮಾಹಾತ್ಮ್ಯಜ್ಞಾಪನಾಯ ವೈ ॥
ವಿರುದ್ಧಮಧ್ಯಾರೋಪಾದಿ ನ ಯುಕ್ತಿಸ್ತಸ್ಯ ಕಾರಣಂ ।
ಮಾಯಿಕತ್ವಂ ಪುರಾಣೇಷು ಮೋಹಾರ್ಥಮುಪಪದ್ಯತೇ ॥
ತಸ್ಮಾದವಿದ್ಯಾಮಾಯಾತ್ವಕಥನಂ ಮೋಹನಾಯ ವೈ ॥
ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ ।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೇತುಕಂ ॥
ಸೇಶ್ವರಾದ್ವೈತಭಾವೇ ತು ಸರ್ವಂ ಶಿವಮಯಂ ಜಗತ್ ।
ಜ್ಞಾನಾದ್ವಿಕಲ್ಪಬುದ್ಧಿಸ್ತು ಲೀಯತೇ ನ ಸ್ವರೂಪತಃ ॥
ಭಿನ್ನತ್ವಂ ನೈವ ಯುಂಜೀತ ಶಿವೋಪಾದಾನತಃ ಕ್ವಚಿತ್ ।
ಏವಂ ವೈದಿಕಸಿದ್ಧಾಂತಸ್ಸೇವ್ಯೋ ನಾನ್ಯ ಇತಿ ಶ್ರುತಿಃ ॥ ಇತಿ

"ಮಾಯೆಯ ತೋರಿಕೆಯಿಂದ ಭ್ರಾಂತನು ಜೀವೇಶ್ವರರನ್ನು ಕಲ್ಪಿಸುತ್ತಾನೆ" ಎಂಬ ಕಲ್ಪಿತಶ್ರುತಿಯಿಂದ ಜಗತ್ತನ್ನು ಮಿಥ್ಯೆ ಎಂದು ಅಂಗೀಕರಿಸಿದರೆ ಇದು ಯುಕ್ತವಲ್ಲ. ಯಾಕೆಂದರೆ "ಜ್ಞಾಜ್ಞಾ" "ಮಮೈವಾಂಶಃ" ಇತ್ಯಾದಿ ಶ್ರುತಿ ಸ್ಮೃತಿಗಳ ವಿರೋಧ ಸಂಭವಿಸುತ್ತದೆ. ಜಡವಾದ ಪ್ರಧಾನವು ಚೇತನಜೀವನಿಗೂ ಈಶ್ವರನಿಗೂ ಕರ್ತೃವೆನಿಸುವುದು ಅಸಂಭವ. ಇದೂ ಅಲ್ಲದೆ "ಅಂಶವತ್ತ್ವಂ ಅಸರ್ವಜ್ಞತಾ ವಾ" ಎಂಬ ಸೂತ್ರದ ವಿರೋಧವು ಸಂಭವಿಸುತ್ತದೆ. "ಮಾಡಿದ್ದೆಲ್ಲವನ್ನು ತೊರೆದು ಮಾಡದೇ ಇರುವುದನ್ನು ಅಂಗೀಕರಿಸಿದರೆಂಬ" ದೋಷವೂ ಸಂಭವಿಸುತ್ತದೆ. ಪರಮೇಶ್ವರನ ಸಾನ್ನಿಧ್ಯದಿಂದ ಪ್ರಧಾನವು ಜಗತ್ತಿಗೆ ಏಕೆ ಕಾರಣವಾಗಬಾರದು? ಎಂದರೆ ಈಕ್ಷತ್ಯಧಿಕರಣದಲ್ಲಿ 'ಅವನು ಕಂಡನು' ಎಂಬ ಶ್ರುತಿ ಪ್ರಮಾಣವನ್ನು ಅಂಗೀಕರಿಸಿ ಪ್ರಧಾನವೇ ಜಗತ್ಕಾರಣವೆಂಬ ವಾದವನ್ನು ಅವೈದಿಕವೆಂದು ದೂಷಿಸಲಾಗಿದೆ.

ಮಿಥ್ಯೆ ಎಂದರೆ ಇಲ್ಲದಿರುವಿಕೆಯೋ ? ಮಾತಿನಿಂದ ಹೇಳಲಾಗದಿರುವಿಕೆಯೋ ? ಅಥವಾ ಬಾಧಿತವಾಗುವಿಕೆಯೋ ? ಎಂದು ವಿಕಲ್ಪಗಳು ಬರುತ್ತವೆ. ಇವುಗಳಲ್ಲಿ ಮೊದಲನೆಯದನ್ನು ಒಪ್ಪಿದರೆ, ವೇದವು ಪ್ರಮಾಣವಾಗದೇಹೋಗಬೇಕಾಗುತ್ತದೆ. ಎರಡನೆಯನ್ನು ಒಪ್ಪಿದರೆ, ವ್ಯವಹಾರವೆಲ್ಲವೂ ಮೌನದಲ್ಲಿ ಕೊನೆಗಾಣಬೇಕಾಗುತ್ತದೆ. ಮೂರನೆಯದನ್ನು ಒಪ್ಪಿದರೆ, ಇಲ್ಲಿ ಬಾಧಿತವೆಂದರೇನು ಎಂಬ ಪ್ರಶ್ನೆ ಏಳುತ್ತದೆ. ಮೂರುಕಾಲಗಳಲ್ಲಿಯೂ ನಿಷೇಧಿಸಲರ್ಹವಾದುದೆಂದು ಅರ್ಥವೇ ಅಥವಾ ಜ್ಞಾನದಿಂದ ನಾಶವಾಗತಕ್ಕದ್ದು ಎಂದು ಅರ್ಥವೇ ಎಂದು ಎರಡು ವಿಕಲ್ಪಗಳು ಒದಗುತ್ತವೆ.

ಮೊದಲನೆಯ ವಿಕಲ್ಪ ಯುಕ್ತವಲ್ಲ. ಯಾಕೆಂದರೆ, ಪ್ರಪಂಚ ಇರುವುದರಿಂದಲೂ, ಅದರಿಂದ ಅರ್ಥಕ್ರಿಯಾಸಿದ್ಧಿಗಳು ಕಾಣಬರುವುದರಿಂದಲೂ ತ್ರಿಕಾಲದಲ್ಲಿಯೂ ಅಬಾಧಿತವೆಂಬುದು ಜಗತ್ತಿಗೆ ಹೊಂದುವುದಿಲ್ಲ. ಅನಾದಿಯಾದ್ದರಿಂದ ಹಿಂದಿನ ಕಾಲದಲ್ಲಿ ಅದನ್ನು ನಿಷೇಧಿಸಲಾಗುವುದಿಲ್ಲ. ಈಗ ಜಗತ್ತನ್ನು ಎಲ್ಲರೂ ಅನುಭವಿಸುತ್ತಿರುವುದರಿಂದ ಈ ಕಾಲವಲ್ಲೂ ಅದನ್ನು ನಿಷೇಧಿಸಲಾಗುವುದಿಲ್ಲ. ಸಂಕೋಚರೂಪದಿಂದ ಮುಂದೆ ಪ್ರಳಯದಲ್ಲೂ ಪರಮೇಶ್ವರನಲ್ಲಿ ಇರುವುದರಿಂದ ಜಗತ್ತನ್ನು ಭವಿಷ್ಯತ್ಕಾಲದಲ್ಲೂ ನಿಷೇಧಿಸಲಾಗುವುದಿಲ್ಲ. ಇನ್ನು ಎರಡನೆಯ ವಿಕಲ್ಪವೂ ಹೊಂದುವುದಿಲ್ಲ. ಜ್ಞಾನಿಗಳಿಗೂ ಮೊದಲಿನಂತೆಯೂ ಅನುಭವವುಂಟಾದ ಅನಂತರವೂ ಪ್ರಪಂಚವು ತೋರುವುದರಿಂದಲೂ, ಅವರಿಗೂ ಹಸಿವು ಬಾಯಾರಿಕೆ ಮೊದಲಾದುವು ಇರುವುದರಿಂದಲೂ ಜಗತ್ತು ಜ್ಞಾನದಿಂದಲೂ ನಾಶವಾಗುವುದಿಲ್ಲ.

ದಗ್ಧಪಟದಂತೆ ಜೀವನ್ಮುಕ್ತನಿಗೆ ದೇಹೇಂದ್ರಿಯಗಳ ಭೇದಜ್ಞಾನದ ಸಂಬಂಧವಿರುತ್ತದೆ ಎಂದೂ ಹೇಳಲಾಗುವುದಿಲ್ಲ. ಬಿಸಿಲ್ಗೊದರೆಯಲ್ಲಿ ನೀರಿನ ಭ್ರಾಂತಿ ತೊಲಗಿದರೂ ಅದು ನೀರಿನಂತೆಯೇ ಹೇಗೆ ತೋರುವುದೋ ಹಾಗೆಯೇ ದಗ್ಧಪಟವು ಪಟದಂತೆಯೇ ತೋರುತ್ತದೆ. ಆದರೆ ಶೀತನಿವಾರಣೆಯೇ ಮೊದಲಾದ ಅರ್ಥಕ್ರಿಯಾಸಿದ್ಧಿಗಳು ಮಾತ್ರ ಅದರಿಂದ ಆಗುವಂತಿಲ್ಲ. ಲೋಕದಲ್ಲಿ ಬಿಸಿಲ್ಗೊದರೆ ನೀರಿನಂತೆ ತೋರಿದರೂ ಅದರಲ್ಲಿ ನೀರಡಿಕೆಯನ್ನು ಹೋಗಲಾಡಿಸುವ ಧರ್ಮವಿರುವುದಿಲ್ಲ. ಆದ್ದರಿಂದ ಜೀವನ್ಮುಕ್ತರಿಗೆ ಶರೀರ ಆತ್ಮಗಳ ಭೇದ ಜ್ಞಾನವಿದ್ದರೂ ಶರೀರದ ನಡುಗುವಿಕೆ ಹಸಿವು, ನೀರಡಿಕೆ ಮೊದಲಾದವು ಕಂಡುಬಂದರೂ, ಅವು ಅವರಿಗೆ ಅಂಟುವುದಿಲ್ಲ.

ಲೋಕದಲ್ಲಿ ಕುಂಬಾರನು ಚಕ್ರವನ್ನು ತಿರುಗಿಸಿ ದಂಡವನ್ನು ಬಿಸಾಡಿದರೂ ಆ ದಂಡದಿಂದ ಹುಟ್ಟಿದ ಚಕ್ರದ ತಿರುಗುವಿಕೆ ಮಾತ್ರ ಇದ್ದೇಇರುತ್ತದೆ. ಹಾಗೆ ಅವಿದ್ಯೆ ತೊಲಗಿದರೂ ಅದರ ಕಾರ್ಯವಾದ ಪ್ರಾರಬ್ಧಶರೀರವಿದ್ದೇ ಇರುತ್ತದೆ. ಭೋಗ ಒಂದರಿಂದಲೇ ಅದರ ನಾಶ ಸಂಭವಿಸಲಿರುವುದು. ಆದರೆ ಹೀಗೆ ಹೇಳುವುದೂ ಸರಿಯಲ್ಲ. ಪಟಕ್ಕೆ ತಂತುವಿನಂತೆ ಶರೀರಕ್ಕೆ ಅವಿದ್ಯೆ ಉಪಾದಾನವಾಗಿರುವುದರಿಂದ ಅವಿದ್ಯೆ ಹೋದರೂ ಶರೀರವಿರುವುದೆಂದು ಹೇಳುವುದು ಸರಿಯಲ್ಲ.

ಈ ಬಗ್ಗೆ ದೂರ್ವಾಸರು ಹೀಗೆ ಹೇಳಿದ್ದಾರೆ. ಅನಾದಿ ಅವಿದ್ಯೆಯಿಂದ ಬದ್ಧವಾದ ಬ್ರಹ್ಮವು ತನ್ನ ಅವಿದ್ಯೆಯಿಂದಲೇ ಜೀವನೆನಿಸಿ ಸಂಸಾರದಲ್ಲಿ ಸುತ್ತುತ್ತಿರುವುದು. ಇವನ ಮುಕ್ತಿಯೂ ಕಲ್ಪಿತವಾದ ವೇದವಾಕ್ಯಗಳಿಂದಲೇ ಸಂಭವಿಸುದೆಂಬ ಶಾಸ್ತ್ರವು ಎಲ್ಲಾ ಬಗೆಯ ಶಕ್ತಿಯನ್ನು ನಾಶಗೊಳಿಸುವುದರಿಂದಲೂ, ಶ್ರುತಿ ಸ್ಮೃತಿಗಳಿಗೆ ವಿರುದ್ಧವಾದ್ದರಿಂದಲೂ ಶಿವಭಕ್ತರಿಗೆ ಉಪಾದೇಯವಲ್ಲ. ಪ್ರಪಂಚವು ಜ್ಞಾನದಿಂದ ತೊಲಗುವುದರಿಂದ ಮಿಥ್ಯೆ ಎನಿಸಬಹುದು ಎಂದು ಹೇಳಿದರೆ ನಾವು ವಿದ್ಯೆ ಅವಿದ್ಯೆಗಳ ಸ್ವರೂಪವನ್ನು ಬೇರೆ ರೀತಿಯಲ್ಲಿ ನಿರೂಪಿಸುವುದರಿಂದ ವಿದ್ಯೆಯಿಂದ ತೊಲಗುವ ಪ್ರಪಂಚವನ್ನು ಮಿಥ್ಯೆ ಎಂದು ಹೇಳಲಿಕ್ಕಾಗುವುದಿಲ್ಲ. ಜಗತ್ತನ್ನು ಮಾಯೆಯೆಂದು ಪುರಾಣ

ಗಳಲ್ಲಿ ಹೇಳಿರುವಂತೆಯೇ ಇಂದ್ರಜಾಲದಂತೆ ಈ ಜಗತ್ತು ತೋರಿ ಮರೆಯಾಗುತ್ತದೆ ಎಂದು ವಾದಿಸುವ ಮತವೂ ಯುಕ್ತವಲ್ಲ. ಈಗ ಕಾಣುವ ಶ್ರುತಿಯಲ್ಲಿ ಎಲ್ಲಿಯೂ ಅವಿದ್ಯೆ, ಮಾಯೆ ಇವುಗಳ ಸಮಾಚಾರವೇ ಬಂದಿಲ್ಲ. ನಾಮರೂಪಗಳನ್ನು ವಾಗ್ವಿಕಾರಗಳೆಂದು ತಿಳಿಸುವ ವಾಕ್ಯಗಳೂ ಸಹ ಅವನ್ನು ಶಿವನಿಂದ ಅನ್ಯವಲ್ಲವೆಂಬ ಅರ್ಥವನ್ನು ತಿಳಿಸುತ್ತವೆಯೇ ಹೊರತು ಸುಳ್ಳೆಂದು ತಿಳಿಸುವುದಿಲ್ಲ. ಇವೆಲ್ಲಕ್ಕೂ ಶಿವನೇ ಉಪಾದಾನವಾದ್ದರಿಂದ ಇವನ್ನು ಸುಳ್ಳೆಂದು ಕಲ್ಪಿಸಲಾಗುವುದಿಲ್ಲ. ವಾಚಾರಂಭಣ ಶ್ರುತಿಯನ್ನು ಅರ್ಥವಾದವೆಂದು ಹೇಳುವುದಾದರೆ ಜಗತ್ತಿನ ಸೃಷ್ಟಿಯೇ ಮೊದಲಾದ ಕಾರ್ಯಗಳನ್ನು ನಡೆಸುವ ಶಕ್ತಿಯನ್ನು ಅಂಗೀಕರಿಸದಿರುವುದರಿಂದ ಬ್ರಹ್ಮದ ಮಹಿಮೆಗೇ ಧಕ್ಕೆ ಬರುವುದು. ಅಪವಾದಕ್ಕಾಗಿಯೇ ಆರೋಪಬಂದಿದೆಯೇ ಹೊರತು ವಾಸ್ತವವಾಗಿ ದೃಢವಾದ ಜ್ಞಾನವನ್ನು ದೊರಕಿಸಲಿಕ್ಕಾಗಿಯಲ್ಲವೆಂದು ಹೇಳುವುದೂ ಯುಕ್ತವಲ್ಲ. ಜಗತ್ತಿನ ಕಾರ್ಯಗಳೆಲ್ಲವೂ ಸ್ಪಷ್ಟವಾಗಿ ಕಾಣುತ್ತಿರುವುದರಿಂದ ಶ್ರುತಿಯ ಅರ್ಥವನ್ನು ಸಂಕೋಚಗೊಳಿಸಲಿಕ್ಕಾಗುವುದಿಲ್ಲ. 'ಇದೆಲ್ಲವೂ ಐಂದ್ರಜಾಲಿಕ' ವೆಂಬ ಪಕ್ಷದಲ್ಲೂ ಇದಕ್ಕೆ ಪರಮಶಿವನೇ ಕರ್ತನೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಆ ಪಕ್ಷವೂ ಯುಕ್ತವೆನಿಸುವುದಿಲ್ಲ. ಮಾಯಾವಿದ್ಯೆಗಳು ಜಗತ್ತಿನ ಕರ್ತೃವೆಂದು ಶ್ರುತಿಸೂತ್ರಗಳಲ್ಲಿ ಎಲ್ಲಿಯೂ ಹೇಳಿಲ್ಲ. ಕೆಲವು ಕಡೆ ಬ್ರಹ್ಮ ಕರ್ತೃವಲ್ಲವೆಂದು ಹೇಳಿದ್ದರೂ ಅಂತಹ ಶ್ರುತಿ ಬ್ರಹ್ಮದ ಮಹಿಮೆಯನ್ನು ತಿಳಿಸಲಿಕ್ಕಾಗಿ ಬಂದಿದೆಯೇ ಹೊರತು ಜಗನ್ಮಿಥ್ಯಾತ್ವವನ್ನು ಸ್ಥಾಪಿಸಲಿಕ್ಕಾಗಿ ಬಂದಿಲ್ಲವೆಂದು ತಿಳಿಯಬೇಕು. ಪುರಾಣದಲ್ಲಿ ಜಗತ್ತನ್ನು ಮಾಯಿಕವೆಂದು ಹೇಳಿದ್ದರೂ ಅದು ಜಗತ್ತನ್ನು ವ್ಯಾಮೋಹಕಾರಿ ಎಂದು ತಿಳಿಸಲಿಕ್ಕಾಗಿಯೇ ಹೇಳಿದ್ದಾಗಿದೆ. ಜಗತ್ತನ್ನು ಅನಿತ್ಯವೆಂದೂ ನಿರಾಶ್ರಿತವೆಂದೂ ಅನೀಶ್ವರವೆಂದೂ ನಾಸ್ತಿಕರು ಹೇಳುತ್ತಾರೆ. ಕಾಮೋದ್ರೇಕದ ಫಲವಾಗಿ ಸತಿಪುರುಷರ ಪರಸ್ಪರ ಸಂಪರ್ಕದಿಂದ ಆಗುವುದನ್ನು ಬಿಟ್ಟರೆ ಈ ಜಗತ್ತಿನಲ್ಲಿ ಮತ್ತೆ ಏನಿರುವುದು ಎಂದು ಅವರು ಹೇಳುತ್ತಾರೆ. ಆದರೆ ಶಕ್ತಿವಿಶಿಷ್ಟಾದ್ವೈತಮತದಲ್ಲಿ ಜಗತ್ತು ಶಿವಮಯವೇ ಆಗುರುವುದರಿಂದ ತತ್ತ್ವಜ್ಞಾನದಿಂದ ವಿಕಲ್ಪಬುದ್ಧಿ ತೊಲಗುವುದೇ ಹೊರತು ಘಟಾದಿ ಪದಾರ್ಥಗಳ ಸ್ವರೂಪ ತೊಲಗುವುದಿಲ್ಲ. ಎಲ್ಲಕ್ಕೂ ಶಿವನೇ ಉಪಾದಾನವಾದ್ದರಿಂದ ಇದೆಲ್ಲವೂ ಅವನಿಂದ ಭಿನ್ನನೆಂದು ಹೇಳುವುದು ಯುಕ್ತವಲ್ಲ. ಇದೇ ವೈದಿಕಸಿದ್ಧಾಂತವೆನಿಸಿದೆ. ಇದಲ್ಲದೆ ಬೇರೆ ಮತವನ್ನು ಆಶ್ರಯಿಸಬಾರದೆಂದು ಶ್ರುತಿ ಹೇಳುತ್ತಿದೆ.

**ಏವಮವಿದ್ಯಾಮಾಯಾಪ್ರತಿಬಿಂಬಿತಜೀವೇಶ್ವರವಾದೋಽಪಿ ನ ಯುಕ್ತಃ. ತಥಾಹಿ— ಅಸ್ಮತ್ಪ್ರತ್ಯಯಗೋಚರಶ್ಶಾರೀರಸ್ತು ಅವಿದ್ಯಾಪ್ರತಿಬಿಂಬಿತಃ? ಅಂತಃಕರಣಪ್ರತಿಬಿಂಬಿತೋ ವಾ? ಅವಿದ್ಯಾವಚ್ಛಿನ್ನಚೈತನ್ಯಂ? ಅಂತಃಕರಣಾವಚ್ಛಿನ್ನಚೈತನ್ಯಂ ವಾ? ಈಶ್ವರಸ್ತು ಮಾಯಾಪ್ರತಿಬಿಂಬಿತಃ? ಮಾಯಾವಚ್ಛಿನ್ನೋ ವಾ? ಉಭಯೋಸ್ಸ್ವಭಾವಿ**

ಕತ್ವಂ? ಔಪಾಧಿಕತ್ವಂ ವಾ? ತದುಪಾಧಿಸ್ತು ಮಾಯಾ? ಅವಿದ್ಯಾ? ಅಂತಃಕರಣಂ ವಾ? ನ ತು ಸ್ಥೂಲೋಪಾಧಿಃ, ಪರಲೋಕಗಮನಾನುಪಪತ್ತೇಃ. "ಕಾರ್ಯೋಪಾಧಿರಯಂ ಜೀವಃ ಕಾರಣೋಪಾಧಿರೀಶ್ವರಃ" ಇತ್ಯುಕ್ತೇಃ ತತ್ಪ್ರತಿಬಿಂಬಪಕ್ಷೋಽಪಿ ನ ಯುಕ್ತಃ. ಬ್ರಹ್ಮಣೋ ನೀರೂಪತ್ವೇನ ಮಾಯಾಯಾ ಅಸತ್ಪದಾರ್ಥತ್ವೇನ ತತ್ಪ್ರತಿಬಿಂಬೋ ನ ಸ್ಯಾತ್. ನ ಚ ಜಲಾಕಾಶಪ್ರತಿಬಿಂಬವತ್ ಇತಿ ವಾಚ್ಯಂ. "ದೃಷ್ಟಾನುಸಾರಿಣೀ ಕಲ್ಪನಾ" ಇತಿ ನ್ಯಾಯೇನ ನೀರೂಪಸ್ಯಾಕಾಶಸ್ಯ ಪ್ರತಿಬಿಂಬಾಸಂಭವಾತ್ ತತ್ಪ್ರತಿಬಿಂಬಪ್ರತೀತಿಸ್ತು ಭ್ರಾಂತಿರೇವ. ಜಲಾದೌ ಮೂರ್ತಾತ್ಮಕಸೂರ್ಯಾದಿಪ್ರತಿಬಿಂಬದರ್ಶನಾತ್ ಅನ್ಯಥಾ ವಾಯೋರಪಿ ಪ್ರತಿಬಿಂಬಾಪತ್ತೇಃ. ದರ್ಪಣರೇಖಾವದ್ಯತ್ರ ಯದಸ್ತಿ ತತ್ರ ತತ್ಪ್ರತಿಬಿಂಬೋ ನಾಸ್ತೀತಿ ನಿಯಮಾತ್ಸರ್ವಗತಸ್ಯ ಬ್ರಹ್ಮಣಸ್ಸರ್ವಗತಮಾಯಾಯಾಂ ಪ್ರತಿಬಿಂಬಃ ಕಥಮುಪಪದ್ಯತೇ?.

ನಚ—ವಿಭುಪದಾರ್ಥಯೋಸ್ಸಂಯೋಗಾಸಂಭವಾತ್ಪ್ರತಿಬಿಂಬಾಭಾವೋಽಯುಕ್ತ ಇತಿ ವಾಚ್ಯಂ. ಸಂಯುಕ್ತಸ್ಯಾಪಿ ಪ್ರಭಾಮಂಡಲಸ್ಯ ತಥಾ ತದ್ದರ್ಶನಾತ್. "ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧ್ಯೇ" "ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್" ಇತ್ಯಾದಿಶ್ರುತಿಸೂತ್ರಾಭ್ಯಾಂ ಜೀವೇಶ್ವರಯೋರೇಕತ್ರ ಸ್ಥಿತೇರ್ನಿರ್ಣೀತತ್ವಾತ್, ಬಿಂಬಪ್ರತಿಬಿಂಬಯೋರೇಕತ್ರ ನಿವೇಶಾಸಂಭವಾತ್ತತ್ಪಕ್ಷೋ ನ ಯುಕ್ತಃ.

"ಅವಿದ್ಯೆಯಲ್ಲಿ ಪ್ರತಿಬಿಂಬಿತವಾದ ಚೈತನ್ಯವೇ ಜೀವ, ಮಾಯೆಯಲ್ಲಿ ಪ್ರತಿಬಿಂಬಿತವಾದ ಚೈತನ್ಯವೇ ಈಶ್ವರ" ಎಂಬ ವಾದವೂ ಸರಿಯಲ್ಲ; ಯಾಕಂದರೆ, ನಾನು ಎಂಬ ಭಾವನೆಗೆ ಗೋಚರವಾಗಿರುವ ಜೀವನು ಪ್ರತಿಬಿಂಬಿಸಿರುವುದು ಅವಿದ್ಯೆಯಲ್ಲೋ? ಅಥವಾ ಅಂತಃಕರಣದಲ್ಲೋ? ಅಥವಾ ಅವಿದ್ಯಾವಚ್ಛಿನ್ನಚೈತನ್ಯವೇ ಜೀವನೋ ಅಥವಾ ಅಂತಃಕರಣಾವಚ್ಛಿನ್ನವಾದ ಚೈತನ್ಯವೇ ಜೀವನೋ? ಹೀಗೆಯೇ ಮಾಯೆಯಲ್ಲಿ ಪ್ರತಿಬಿಂಬಿತವಾದ ಚೈತನ್ಯವೇ ಈಶ್ವರನೋ? ಮಾಯಾವಚ್ಛಿನ್ನ ಚೈತನ್ಯವೇ ಈಶ್ವರನೋ? ಇವರಿಬ್ಬರೂ ಸ್ವಾಭಾವಿಕರೋ ಅಥವಾ ಔಪಾಧಿಕರೋ? ಔಪಾಧಿಕರೆಂದರೆ ಅವರ ಉಪಾಧಿ ಮಾಯೆಯೋ? ಅವಿದ್ಯೆಯೋ? ಅಂತಃಕರಣವೋ? ಎಂಬ ವಿಕಲ್ಪಗಳು ಸಂಭವಿಸುತ್ತವೆ. ಆದ್ದರಿಂದ ಈ ವಾದವು ನಿರೂಪಿಸಲು ಅಸಾಧ್ಯವಾದುದು. ಸ್ಥೂಲೋಪಾಧಿಯಂತೂ ಜೀವನಿಗೆ ಸಂಭವಿಸುವಂತಿಲ್ಲ ಯಾಕೆಂದರೆ, ಇದರಿಂದ ಅವನಿಗೆ ಪರಲೋಕಕ್ಕೆ ಹೋಗಲು ಅಡಚಣೆಯುಂಟಾಗುವುದು. ಜೀವನಿಗೆ ಕಾರ್ಯವೇ ಉಪಾಧಿ, ಈಶ್ವರನಿಗೆ ಕಾರಣವೇ ಉಪಾಧಿ ಎಂಬ ಹೇಳಿಕೆಯಲ್ಲಿರುವ ಸ್ಥೂಲೋಪಾಧಿ ಸಂಭವಿಸುವುದಿಲ್ಲ, ಅದರಲ್ಲಿ ಪ್ರತಿಬಿಂಬಿಸಿರುವನೆಂಬ ಪಕ್ಷವೂ

ಯುಕ್ತವಲ್ಲ. ಬ್ರಹ್ಮ ಅರೂಪವೂ ಮಾಯೆ ಅಸದ್ವಸ್ತುವೂ ಆದ್ದರಿಂದ ಅದರಲ್ಲಿ ಅರೂಪವಸ್ತುವಿನ ನೆರಳೂ ಬೀಳುವಂತಿಲ್ಲ. ಜಲದಲ್ಲಿ ಆಕಾಶದ ಪ್ರತಿಬಿಂಬದಂತೆ ಮಾಯೆಯಲ್ಲಿ ಬ್ರಹ್ಮದ ಪ್ರತಿಬಿಂಬ ತೋರುವುದು ಎಂದು ಹೇಳುವುದೂ ಯುಕ್ತವಲ್ಲ. "ಕಂಡದ್ದನ್ನು ಅನುಸರಿಸಿ ಕಲ್ಪಿಸಬೇಕು" ಎಂಬ ನ್ಯಾಯದಿಂದ ರೂಪವಿಲ್ಲದ ಆಕಾಶವು ನೀರಿನಲ್ಲಿ ಪ್ರತಿಬಿಂಬಿಸಲು ಸಾಧ್ಯವಲ್ಲದ್ದರಿಂದ ನೀರಿನಲ್ಲಿ ಆಕಾಶದ ನೆರಳು ಕಾಣುತ್ತದೆ ಎಂದು ಹೇಳುವುದು ಭ್ರಾಂತಿಯೇ ಸರಿ. ಜಲದಲ್ಲಿ ಮೂರ್ತವಾದ ಸೂರ್ಯನ ನೆರಳು ಕಾಣುತ್ತದೆ; ಆದರೆ ಆಕಾಶದ ನೆರಳು ಕಾಣುವುದಿಲ್ಲ. ಅದೂ ಕಾಣುವುದಾದರೆ, ಅರೂಪವಾದ ವಾಯುವಿನ ನೆರಳೂ ನೀರಿನಲ್ಲಿ ಕಾಣಬೇಕಾದೀತು?

ಕನ್ನಡಿಯಲ್ಲಿ ಕಾಣುವ ಗೆರೆಯಂತೆ ಎಲ್ಲಿ ಯಾವುದಿದೆಯೋ ಅಲ್ಲಿ ಅದರ ನೆರಳು ಇರುವುದಿಲ್ಲ ಎಂಬ ನಿಯಮದಿಂದ ಸರ್ವಗತವಾದ ಬ್ರಹ್ಮಕ್ಕೆ ಎಲ್ಲೆಲ್ಲೂ ಇರುವ ಮಾಯೆಯಲ್ಲಿ ನೆರಳು ಹೇಗೆ ಕಾಣಬರುತ್ತದೆ? ಎಂದರೆ ಸೂರ್ಯಮಂಡಲವು ನೀರಿಗಿಂತಲೂ ಹೊರಗೆ ಇರುವುದರಿಂದ ಅದರ ಪ್ರತಿಬಿಂಬ ನೀರಿನಲ್ಲಿ ಕಾಣಬಹುದು. ಆದರೆ ಮಾಯೆ ಮತ್ತು ಚೈತನ್ಯವೆರಡೂ ವಿಭುವಾದ್ದರಿಂದ, ಎರಡೂ ಒಂದೇ ಕಡೆಯಲ್ಲಿ ಇರಬೇಕಾಗಿರುವ ಕಾರಣ ಮಾಯೆಯಲ್ಲಿ ಚೈತನ್ಯದ ಪ್ರತಿಬಿಂಬ ಬೀಳುವಂತಿಲ್ಲ. "ಪರಮಾಕಾಶದಲ್ಲಿ ಹೃದಯವೆಂಬ ಗವಿಯನ್ನು ಪ್ರವೇಶಿಸಿದ್ದಾರೆ." "ಆತ್ಮಗಳು ಗುಹೆಯನ್ನು ಪ್ರವೇಶಿಸಿದ್ದಾರೆ" ಹೀಗೆ ಶ್ರುತಿಸೂತ್ರಗಳಲ್ಲಿ ಜೀವೇಶ್ವರರಿಬ್ಬರೂ ಒಂದೇ ಕಡೆ ನೆಲಸಿರುವರೆಂಬುದು ಸ್ಪಷ್ಟಪಡುತ್ತದೆ. ಬಿಂಬ ಪ್ರತಿಬಿಂಬಗಳೆರಡೂ ಒಂದು ಕಡೆ ಸೇರುವುದು ಅಸಂಭವವಾದ್ದರಿಂದ ಈ ಪಕ್ಷವು ಯುಕ್ತವಲ್ಲ.

**ಕಿಂಚ—ಮಾಯಾಽವಿದ್ಯಯೋರ್ಬ್ರಹ್ಮಪ್ರತಿಬಿಂಬೌ ಜೀವೇಶ್ವರೌ. ಮಾಯಾಽವಿದ್ಯಾನಾಶಸ್ತಯೋರ್ಮೋಕ್ಷಃ ಖಲು? ತದಂಗೀಕಾರೇ ಜೀವೇಶ್ವರನಾಶ ಏವ ಮೋಕ್ಷ ಇತಿ ಸಂಪದ್ಯತೇ. ಅತಃ ಪಾಷಂಡಬೌದ್ಧಮತಪ್ರವೇಶ ಆತ್ಮಹನನಮಪುರುಷಾರ್ಥ ಇತಿ ಮೋಕ್ಷಸ್ಯಾಪುರುಷಾರ್ಥತ್ವಮಾಪದ್ಯೇತ. ಜೀವೇಶ್ವರಯೋರಳೀಕತ್ವಂ ಸ್ಯಾತ್. ತಥಾತ್ವೇ ಪಾರಲೌಕಿಕಪ್ರಯತ್ನಂ ಕೋಽಪಿ ನ ಕುರ್ಯಾತ್. ಮುಮುಕ್ಷುರ್ಹಿ ಮೋಕ್ಷಾರ್ಥಂ ನ ಯತೇತ. ಉಭಯಸ್ವರೂಪಸ್ಯ ಮಿಥ್ಯಾತ್ವಾತ್, ಸರ್ವಸ್ಯ ಹ್ಯೈಹಿಕಪ್ರವೃತ್ತಿರೇವ ಸ್ಯಾತ್. ಸರ್ವಾಪ್ರವೃತ್ತೌ ಪ್ರವೃತ್ತಿಮಾತ್ರೋಚ್ಛೇದಃ ಸ್ಯಾತ್. ಸರ್ವೇಽಪಿ ವಿಧಿನಿಷೇಧಯೋರ್ಮಿಥ್ಯಾತ್ವಾವಿಶೇಷಾತ್ ಕುತ್ರಾಪಿ ನ ಪ್ರವರ್ತೇರನ್. ತಥಾ ಸತಿ ಸನ್ಮಾರ್ಗೋಚ್ಛೇದಶ್ಚ ಸ್ಯಾತ್. ಜೀವಸ್ಯ ಪ್ರತಿಬಿಂಬತ್ವೇನಾಳೀಕತ್ವಾತ್, "ಐತದಾತ್ಮ್ಯಂ" ಇತ್ಯಾರಭ್ಯ "ಸ ಆತ್ಮಾ" ಇತ್ಯಂತೇನ ತತ್ತ್ವಂಪದಾರ್ಥಂ ನಿರೂಪ್ಯ "ನ ತತ್ತ್ವಮಸಿ" ಇತ್ಯೇವ ವದೇತ್. ದರ್ಪಣಪ್ರತಿಫಲಿತವಹ್ನ್ಯಾದಿವದರ್ಥಕ್ರಿಯಾಕಾರಿತ್ವಂ ನ ಸಂಭವತ್ಯೇವ.**

ಕಿಂಚ—" ಯೋ ವಿಜ್ಞಾನೇ ತಿಷ್ಠನ್ " ಇತ್ಯಾದ್ಯಂತರ್ಯಾಮಿಬ್ರಾಹ್ಮಣವಿರೋಧಃ. ನಿಖಿಲೋಪಾಧೌ ಪ್ರತಿಬಿಂಬಸ್ಯೈಕತ್ವೇನ ಜೀವೈಕ್ಯಾದ್ಬಂಧಮೋಕ್ಷಸುಖದುಃಖಾದಿವ್ಯವಸ್ಥಾನುಪಪತ್ತೇಃ. ತಸ್ಮಾತ್ಪ್ರತಿಬಿಂಬಪಕ್ಷೋಽಪ್ಯನುಪಪನ್ನಃ. ಜಡಾಂತಃಕರಣಾವಚ್ಛಿನ್ನಚೈತನ್ಯಸ್ಯ ಜೀವತ್ವಾಂಗೀಕಾರೇ ಘಟಪಟಾವಚ್ಛಿನ್ನಚೈತನ್ಯಸ್ಯಾಪಿ ಜೀವತ್ವಮುಪಪದ್ಯೇತ ; ತಸ್ಮಾದವಚ್ಛೇದಪಕ್ಷೋಽಪಿ ಪೂರ್ವೋಕ್ತದೂಷಣಗ್ರಸ್ತತ್ವಾನ್ನ ಯುಕ್ತಃ. " ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ " ಇತಿ ಶ್ರುತಿರಸಾಧುರೇವ, ಪೂರ್ವೋದಾಹೃತಶ್ರುತೀನಾಂ ಬಲಿಷ್ಠತ್ವಾತ್. " ನಹಿ ದೃಷ್ಟಾಂತೇ ಸರ್ವಸಂಭವಃ " ಇತಿ ನ್ಯಾಯೇನ ಬ್ರಹ್ಮಣಃ ಸರ್ವಗತತ್ವೇ ದೃಷ್ಟಾಂತ ಉಪಲಭ್ಯತೇ.

ಜೀವೇಶ್ವರರು ಮಾಯೆ ಅವಿದ್ಯೆಗಳಲ್ಲಿ ಪ್ರತಿಬಿಂಬಿಸಿದವರಾದ್ದರಿಂದ ಮಾಯೆ ಮತ್ತು ಅವಿದ್ಯೆಗಳ ನಾಶವೇ ಅವರ ಮೋಕ್ಷವೆನಿಸುವುದೆಂದು ಅಂಗೀಕರಿಸಿದರೆ, ಜೀವೇಶ್ವರರ ನಾಶವೇ ಮೋಕ್ಷವೆಂದು ಹೇಳಿದಹಾಗಾಗುತ್ತದೆ. ಹೀಗೆ ಹೇಳುವುದರಿಂದ ಪಾಷಂಡರಾದ ಬೌದ್ಧರ ಮತವನ್ನು ಪ್ರವೇಶಿಸಿದಂತಾಗುವುದು. ಆತ್ಮನಾಶ ಪುರುಷಾರ್ಥವಲ್ಲವಾದ್ದರಿಂದ ಮೋಕ್ಷವನ್ನು ಪುರುಷಾರ್ಥವಲ್ಲವೆಂದು ಭಾವಿಸಬೇಕಾಗುತ್ತದೆ. ಜೀವೇಶ್ವರರಿಬ್ಬರೂ ಸುಳ್ಳೆಂದು ಭಾವಿಸಿ ಯಾರೊಬ್ಬರೂ ಪರಲೋಕದ ಬಗ್ಗೆ ಪ್ರಯತ್ನವನ್ನೇ ಮಾಡಲಾರರು. ಮುಮುಕ್ಷುವೇ ಮೋಕ್ಷಕ್ಕಾಗಿ ಪ್ರಯತ್ನ ಮಾಡಲಾರನು. ಜೀವೇಶ್ವರರ ಸ್ವರೂಪವೇ ಮಿಥ್ಯೆಯಾದ್ದರಿಂದ ಎಲ್ಲರೂ ಐಹಿಕ ಕರ್ಮಗಳಲ್ಲಿಯೇ ಪ್ರವರ್ತಿಸಿ ಯಾರೊಬ್ಬರಿಗೂ ಪ್ರವೃತ್ತಿಯೇ ಹುಟ್ಟದಿದ್ದರೆ ನಿವೃತ್ತಿಮಾರ್ಗವು ನಷ್ಟವೇ ಆದೀತು ವಿಧಿನಿಷೇಧಗಳೆರಡೂ ಸುಳ್ಳಾದ್ದರಿಂದ, ಇವೆರಡರಲ್ಲಿ ಯಾವವಿಶೇಷವೂ ಇಲ್ಲದ್ದರಿಂದ ಯಾರಿಗೂ ಯಾವುದಕ್ಕೂ ಪ್ರವೃತ್ತಿಯೇ ಹುಟ್ಟದೆಹೋದೀತು. ಹಾಗಾದರೆ ಸನ್ಮಾರ್ಗವೇ ನಷ್ಟವಾದೀತು. ಜೀವನೂ ಬ್ರಹ್ಮದ ನೆರಳಾದ್ದರಿಂದ ಸುಳ್ಳೇ ಆಗಬೇಕಾದೀತು. ಆದ್ದರಿಂದ ' ಸ ಆತ್ಮಾ ತತ್ತ್ವಮಸಿ ' ಎಂಬ ಶ್ರುತಿಯಲ್ಲಿ 'ನೀನು ಅದಲ್ಲ'(ಅತತ್ತ್ವಮಸಿ)ಎಂದು ಹೇಳಬೇಕಾದೀತು. ಕನ್ನಡಿಯಲ್ಲಿ ಕಾಣುವ ಬೆಂಕಿಯಂತೆ ಯಾರಿಂದಲೂ ಯಾವ ಕಾರ್ಯವೂ ಆಗದೇ ಹೋಗಬೇಕಾದೀತು. ಇದೂ ಅಲ್ಲದೆ ಅಂತರ್ಯಾಮಿಬ್ರಾಹ್ಮಣದ ವಿರೋಧವೂ ಸಂಭವಿಸೀತು ! ಎಲ್ಲಾ ಉಪಾಧಿಗಳಲ್ಲಿಯೂ ಪ್ರತಿಬಿಂಬಿತವಾದ ಚೈತನ್ಯವು ಒಂದೇ ಆದರೆ, ಎಲ್ಲಾಜೀವರೂ ಒಂದೇಬಗೆಯವರಾಗುವುದರಿಂದ ಬಂಧಮೋಕ್ಷಗಳು, ಸುಖದುಃಖಗಳು ಇವುಗಳ ವ್ಯವಸ್ಥೆಯೇ ತಪ್ಪಿಹೋಗಬೇಕಾದೀತು. ಆದ್ದರಿಂದ ಜೀವನು ಪ್ರತಿಬಿಂಬನೆಂಬ ಪಕ್ಷವು ಯುಕ್ತವಲ್ಲ. ಜಡವಾದ ಅಂತಃಕರಣದಲ್ಲಿ ಅವಚ್ಛಿನ್ನವಾದ ಚೈತನ್ಯವನ್ನು ಜೀವನೆಂದು ಅಂಗೀಕರಿಸಿದರೆ ಘಟದೊಳಗೆ ಇರುವ ಚೈತನ್ಯವೂ ಜೀವವಾಗಬೇಕಾದೀತು. ಆದ್ದರಿಂದ ಅವಚ್ಛಿನ್ನ ಪಕ್ಷವೂ ಸಹ ಪ್ರತಿಬಿಂಬಪಕ್ಷದ

ದೂಷಣಗಳಿಂದ ಕೂಡಿ ಅಯುಕ್ತವು ಎನಿಸುತ್ತದೆ. "ನೀರಿನಲ್ಲಿ ಕಾಣುವ ಚಂದ್ರನಂತೆ ಒಂದು ಬಗೆಯಾಗಿಯೂ ಅನೇಕ ಬಗೆಯಾಗಿಯೂ ಕಾಣಬರುತ್ತದೆ" ಎಂಬ ಶ್ರುತಿ ಸಾಧುವಲ್ಲ; ಯಾಕೆಂದರೆ ಮೊದಲು ಹೇಳಿರುವ ಶ್ರುತಿಗಳೆಲ್ಲವೂ ಇದಕ್ಕಿಂತಲೂ ಪ್ರಬಲವಾಗಿವೆ. "ದೃಷ್ಟಾಂತದಲ್ಲಿ ಎಲ್ಲಾ ಅಂಶಗಳೂ ಸಂಭವಿಸುವುದಿಲ್ಲ" ವೆಂಬ ನ್ಯಾಯದಿಂದ ಬ್ರಹ್ಮವು ಎಲ್ಲೆಲ್ಲಿಯೂ ತುಂಬಿಕೊಂಡಿರುವುದು ಎಂಬ ಬಗ್ಗೆಮಾತ್ರವೇ ಜಲಚಂದ್ರದೃಷ್ಟಾಂತವನ್ನು ಹೊಂದಿಸಿಕೊಳ್ಳಬೇಕು.

"ಮಾಯಾಭಾಸೇನ ಜೀವೇಶೌ ಕರೋತಿ" ಇತಿ ವಾಕ್ಯೇನ ನ ಜೀವೇಶಯೋಃ ಕಲ್ಪಿತತ್ವಮುಪಪದ್ಯತೇ. "ಜ್ಞಾಜ್ಞೌ ದ್ವಾವಜಾವೀಶಾನೀಶೌ" ಇತ್ಯಾದಿಬಹುಶ್ರುತಿಯುಕ್ತ್ಯನುಭವವಿರೋಧಾತ್. ಮಂ-ಶಿವಂ, ಅಯತೀತಿ ಮಾಯಾ, "ಅಯ-ಪಯ-ಗತೌ" ಇತಿ ಧಾತೋಃ ಪ್ರಾಪ್ತ್ಯರ್ಥಕತ್ವಾತ್, "ಮಃ ಶಂಭೌ ಧಾತೃಚಂದ್ರಯೋಃ" ಇತಿ ನಿಘಂಟುಶ್ರವಣಾತ್, ಪ್ರಣವಾರ್ಥವಿವರಣೇ "ಅಕಾರೋ ಬ್ರಹ್ಮಾ, ಉಕಾರೋ ವಿಷ್ಣುಃ, ಮಕಾರೋ ರುದ್ರಃ" ಇತಿ ಶ್ರುತೇಶ್ಚ. ಮಾಯಾ-ಪರಶಿವಶಕ್ತಿಃ, ಆಭಾಸೇನ-ಪರಮೇಶ್ವರಸಮಗ್ರಪ್ರಕಾಶೇನ, ಜೀವೇಶೌ ಕರೋತಿ-ಪ್ರಕಟೀಕರೋತೀತ್ಯರ್ಥಃ; ಅನ್ಯಥಾ ಸರ್ವಶ್ರುತಿಭಂಗಪ್ರಸಂಗಃ. ಪೂರ್ವೋಕ್ತಸತ್ಯಾನಂದಾದೀನಾಂ ಜಗತ್ಕಾರಣತ್ವೇ ನ ದೋಷಃ, ತೇಷಾಂ ಪರಮೇಶ್ವರಸ್ವರೂಪತ್ವಾತ್ತದ್ಧರ್ಮತ್ವಾಚ್ಚ, ಅಗ್ನೇರ್ಲೌಹಿತ್ಯೌಷ್ಣ್ಯಪ್ರಕಾಶವತ್. ತಸ್ಮಾತ್ಪ್ರಪಂಚಸ್ಯ ಕರ್ತೃಜನ್ಯತ್ವಂ ಘಟಾದಿವದ್ವಕ್ತುಂ ಶಕ್ಯಂ.

ಯದ್ಯಪಿ ಜನ್ಮಾದಿಕಂ ಜಗನ್ನಿಷ್ಠಂ ವ್ಯಧಿಕರಣತ್ವಾನ್ನ ತದ್ಬ್ರಹ್ಮಸ್ವರೂಪಲಕ್ಷಣಂ. ತಥಾಪಿ ಜಗತ್ಕಾರಣತ್ವಂ ಪರಮೇಶ್ವರಸ್ಯೋಪದೇಶಾತ್ತಟಸ್ಥಲಕ್ಷಣಂ. ಸ್ವರೂಪಭಿನ್ನತ್ವೇ ಸತಿ ವ್ಯಾವರ್ತಕಂ ತಟಸ್ಥಲಕ್ಷಣಂ. ಯದ್ಯಪ್ಯವ್ಯಭಿಚಾರಾಜ್ಜಗಜ್ಜನ್ಮಾದಿಕಂ ಪ್ರತ್ಯೇಕಂ ಲಕ್ಷಣಂ ಸಂಭವತಿ. ತಥಾಪ್ಯುತ್ಪಾದಕತ್ವಮಾತ್ರಂ ನಿಮಿತ್ತೇ, ಅತ ಉತ್ಪತ್ತಿಸ್ಥಿತಿಗ್ರಹಣಂ, ನ ಲಯಗ್ರಹಣಂ. ಕದಾಚಿದಪಿ ನಿಮಿತ್ತಕಾರಣೇ ನ ಕಾರ್ಯಸ್ಯ ಲಯಸ್ಸಂಭವತಿ. ನ ಚ ತಾವತೈವೋಪಾದಾನತ್ವಲಾಭಾದುತ್ಪತ್ತಿಸ್ಥಿತಿಗ್ರಹಣಂ ವ್ಯರ್ಥಮಿತಿ ವಾಚ್ಯಂ. ನಹ್ಯುಪಾದಾನತ್ವಂ ಸಕಲಧರ್ಮಿತಯೋಚ್ಯತೇ ಕಿಂತು ಪ್ರಕೃತಿವಿಕಾರನ್ಯಾಯೇನಾಭೇದಪ್ರತಿಪತ್ತ್ಯೈ. ಭವತು ಬ್ರಹ್ಮ ಜಗದುಪಾದಾನಂ, ಉತ್ಪತ್ತಿಸ್ಥಿತ್ಯೋರನ್ಯ ಏವಾಧಿಷ್ಠಾತಾ ಸ್ಯಾತ್, ಕುಂಭಕಾರ ಇವ ಕುಂಭೋತ್ಪತ್ತೌ, ರಾಜ್ಯವಚ್ಚ ರಾಜಾವಸ್ಥಾನಮಿತಿ ಪ್ರಾಶಂಸಿಕಮುತ್ಪತ್ತಿಸ್ಥಿತಿಗತಿಗ್ರಹಣಮಿತಿ.

ಸ್ವರೂಪಲಕ್ಷಣಂ ತು "ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತಿ ಶ್ರುತಿಪ್ರತಿಪಾದಿತಂ ಸತ್ಯಾದಿಸ್ವರೂಪತ್ವಂ- ನನು ಸತ್ಯತ್ವಾದೇಃ ಪರಮ ಶಿವಸ್ವರೂಪಾದ್ಭೇದೇ ನ ಪರಮಶಿವಸ್ವರೂಪಲಕ್ಷಣತ್ವಂ; ಅಭೇದೇ ವಾಕ್ಯಾರ್ಥಾಸಿದ್ಧಿಃ; ಗುಣಪ್ರಧಾನಭಾವಾಪನ್ನಪದಾರ್ಥಸಂಸರ್ಗೋ ಹಿ ಸರ್ವತ್ರ ವಾಕ್ಯಾರ್ಥಃ; ನ ಚಾಭೇದೇ ತತ್ಸಂಭವತಿ. ಇತಿ ಚೇನ್ನ. ಯತ್ರ ಪದಾರ್ಥಮಿತಿಃ ತತ್ರ ಸಂಯೋಗೋ ವಾಕ್ಯಾರ್ಥಃ, ಯತ್ರ ಪದಾರ್ಥಪ್ರಮಿತಿಪರಃ ಪದಸಂದರ್ಭಃ ತತ್ರಾಖಂಡಪದಾರ್ಥ ಏವ ವಾಕ್ಯಪ್ರತಿಪಾದ್ಯಃ. ಯಥಾ—"ಅಸ್ಮಿನ್ ಜ್ಯೋತಿರ್ಮಂಡಲೇ ಕಶ್ಚಂದ್ರಃ" ಇತಿ ಪ್ರಶ್ನೇ "ಪ್ರಕೃಷ್ಟಪ್ರಕಾಶಶ್ಚಂದ್ರಃ" ಇತಿ ವಾಕ್ಯಮಖಂಡಚಂದ್ರ ಸ್ವರೂಪಪ್ರತಿಪತ್ತಿಪರಂ. ನ ಚ ಪ್ರಕೃಷ್ಟಪ್ರಕಾಶವೈಶಿಷ್ಟ್ಯಂ ವಾಕ್ಯಪ್ರತಿ ಪಾದ್ಯಂ ಪ್ರಮೇಯಮ್, ಮಾನಾಂತರಸಿದ್ಧತ್ವಾತ್. ನಾಪಿ ಚಂದ್ರತ್ವವೈ ಶಿಷ್ಟ್ಯಂ, ಏಕವ್ಯಕ್ತಿಕತಯಾ ಚಂದ್ರತ್ವಜಾತೇರಭಾವಾತ್. ನ ಚ ಚಂದ್ರ ಶಬ್ದವಾಚ್ಯತ್ವವೈಶಿಷ್ಟ್ಯಂ, ತಸ್ಯಾಪ್ಯದೃಷ್ಟತ್ವಾತ್. ಸ್ವರೂಪಮಾತ್ರಪ್ರಶ್ನೇ ತಸ್ಯಾಭಿಧಾನಾನೌಚಿತ್ಯಾತ್.

"ಮಾಯೆಯ ತೋರಿಕೆಯಿಂದಲೇ ಜೀವೇಶ್ವರರು ಕಲ್ಪಿತರಾಗುತ್ತಾರೆ" ಎಂಬ ವಾದವೂ ಯುಕ್ತವಲ್ಲ; ಯಾಕೆಂದರೆ "ಜ್ಞಾಜ್ಞಾ" ಎಂಬ ಅನೇಕ ಶ್ರುತಿಗಳ ವಿರೋಧವು ಸಂಭವಿಸುತ್ತದೆ ಮತ್ತು ಯುಕ್ತ್ಯನುಭವಿಗಳಿಗೂ ವಿರೋಧವು ಸಂಭವಿಸುವುದು. "ಮಂ ಶಿವಂ ಅಯತೀತಿ ಮಾಯಾ" ಎಂಬಲ್ಲಿ ಅಯ ಗತೌ ಎಂಬ ಧಾತುವಿಗೆ ಪ್ರಾಪ್ತಿ ಎಂಬ ಅರ್ಥವಿದೆ. "ಮಃ ಶಂಭೌ ಧಾತೃ ಚಂದ್ರಯೋಃ" ಎಂಬ ನಿಘಂಟಿನಂತೆ ಮಕಾರವು ಈಶ್ವರನನ್ನು ಬೋಧಿಸುತ್ತದೆ. ಪ್ರಣವಾರ್ಥವಿವರಣೆಯಲ್ಲಿ "ಅಕಾರವು ಬ್ರಹ್ಮ, ಉಕಾರವು ವಿಷ್ಣು, ಮಕಾರವು ರುದ್ರ" ಎಂದು ಹೇಳಿದೆ. ಇದರಿಂದ 'ಮಾಯೆ' ಎಂದರೆ ಪರಮಶಿವನಿಂದ ಬಂದು, ಅವನಲ್ಲಿಯೇ ಸೇರುವ ಅವನ ಶಕ್ತಿ ಎಂದು ಅರ್ಥವಾಗುತ್ತದೆ. ಮಾಯೆಯ ಆಭಾಸದಿಂದ ಅಂದರೆ ಪಾರಮೇಶ್ವರೀ ಶಕ್ತಿಯ ಸಮಗ್ರವಾದ ಪ್ರಕಾಶದಿಂದ ಜೀವೇಶ್ವರರು ಅಂದರೆ ಅಂಗಲಿಂಗರು ಈ ದೇಹ ದಲ್ಲಿ ಪ್ರಕಾಶಗೊಂಡಿರುವರು ಎಂದು ಅರ್ಥವಾಗುತ್ತದೆ. ಪರಮೇಶ್ವರನು ತನ್ನ ಶಕ್ತಿಯ ಸಂಪರ್ಕದಿಂದಲೇ ಜೀವೇಶ್ವರರಾಗಿರುವನು. ಹೀಗೆ ಹೇಳದಿದ್ದರೆ, ಎಲ್ಲಾ ಶ್ರುತಿಗಳಿಗೂ ಭಂಗವುಂಟಾದೀತು. ಹಿಂದೆ ಹೇಳಿದ ಸತ್ಯ ಆನಂದ ಇವು ಜಗತ್ತಿಗೆ ಕಾರಣವೆಂಬಲ್ಲಿ ಅವೆಲ್ಲವೂ ಪರಮೇಶ್ವರನ ಸ್ವರೂಪವೂ ಧರ್ಮವೂ ಆದ್ದರಿಂದ ಯಾವ ದೋಷವೂ ಸಂಭವಿಸುವುದಿಲ್ಲ. ಅಗ್ನಿಯಲ್ಲಿ ಲೌಹಿತ್ಯ ಮತ್ತು ಔಷ್ಣ್ಯಗಳಿರುವಂತೆ ಬ್ರಹ್ಮ ದಲ್ಲಿಯೂ ಇವು ಧರ್ಮವೂ ಸ್ವರೂಪವೂ ಆಗಿರುವುದರಲ್ಲಿ ದೋಷವೇನೂ ಇಲ್ಲ. ಆದ್ದರಿಂದ ಪ್ರಪಂಚವನ್ನು ಘಟದಂತೆ ಒಬ್ಬ ಕರ್ತೃವಿನಿಂದ ಹುಟ್ಟಿದ್ದೆಂದು ಹೇಳಲು ಸಾಧ್ಯವಿದೆ. ಜನ್ಮಾದಿಗಳೆಲ್ಲವೂ ಜಗತ್ತಿಗೆ ಸೇರಿರುವುವಾದ್ದರಿಂದ ಪರಬ್ರಹ್ಮದ

ಸ್ವರೂಪಲಕ್ಷಣಗಳಾಗಲಾರವು. ಆದರೆ ಜಗತ್ಕಾರಣತ್ವವನ್ನು ಪರಮೇಶ್ವರನಿಗೇ ಶ್ರುತಿಯಲ್ಲಿ ಹೇಳಿರುವುದರಿಂದ ಅದು ತಟಸ್ಥಲಕ್ಷಣವಾಗಬಹುದು. ಸ್ವರೂಪದಿಂದ ಭಿನ್ನವಾಗಿದ್ದು ಬೇರೊಂದರಿಂದ ಪ್ರತ್ಯೇಕಿಸುವಂತಹುದು ತಟಸ್ಥಲಕ್ಷಣವೆನಿಸುತ್ತದೆ. ಯಾವ ದೋಷವೂ ಇಲ್ಲದ್ದರಿಂದ ಜಗಜ್ಜನ್ಮಾದಿಕಾರಣತ್ವವು ಬ್ರಹ್ಮಕ್ಕೆ ಪ್ರತ್ಯಕ್ಷವಾದ ಲಕ್ಷಣವೇ ಆಗಬಹುದು. ಆದರೂ ನಿಮಿತ್ತಕಾರಣದಲ್ಲಿ ಉತ್ಪಾದಕತ್ವವೆಂಬು ದೊಂದೇ ಇರುತ್ತದೆ, ಸ್ಥಿತಿಕಾರಣತ್ವವೂ ಲಯಕಾರಣತ್ವವೂ ಅದಕ್ಕೆ ಹೊಂದು ವುದಿಲ್ಲ. ಬ್ರಹ್ಮವು ಜಗತ್ತಿಗೆ ನಿಮಿತ್ತವೂ ಉಪಾದಾನವೂ ಆಗುವುದರಿಂದ ಬ್ರಹ್ಮ ಲಕ್ಷಣದಲ್ಲಿ ಉತ್ಪತ್ತಿ ಸ್ಥಿತಿ ಲಯ ಈ ಮೂರಕ್ಕೂ ಕಾರಣವೆಂದು ಹೇಳಬೇಕಾಯಿತು. ನಿಮಿತ್ತಕಾರಣದಲ್ಲಿ ಕಾರ್ಯಕ್ಕೆ ಲಯವೆಂದಿಗೂ ಬರುವಂತಿಲ್ಲ, ಹಾಗಾದರೆ ಅಷ್ಟೇ ಲಕ್ಷಣ ಸಾಕಾಗಿತ್ತಲ್ಲವೇ ಎಂದು ಕೇಳಿದರೆ, ಆವಾಗ ಬ್ರಹ್ಮ ಲಯಕಾರಣವಾದರೆ, ಉತ್ಪತ್ತಿಸ್ಥಿತಿಗಳಿಗೆ ಕಾರಣವು ಬೇರೆ ಯಾವುದಾದರೊಂದು ಇರಬೇಕೆಂಬ ಸಂಶಯ ಬರುವುದು. ಘಟಕ್ಕೆ ಲಯಕಾರಣವು ಮೃತ್ಪಿಂಡವಾದರೆ ಉತ್ಪತ್ತಿಕಾರಣನು ಕುಂಬಾರ ನಾಗುವಂತೆ ಪ್ರಪಂಚಕ್ಕೆ ಉತ್ಪತ್ತಿಕಾರಣ ಬೇರೆ ಇರುವುದೆಂಬ ಭ್ರಮದ ನಿವಾರಣೆ ಗಾಗಿ ಉತ್ಪತ್ತಿಸ್ಥಿತಿಗಳಿಗೂ ಬ್ರಹ್ಮವೇ ಕಾರಣವೆಂದು ಹೇಳಲೇಬೇಕು.

ಸ್ವರೂಪಲಕ್ಷಣವಾದರೋ ಸತ್ಯವೂ ಜ್ಞಾನವೂ ಅನಂತವೂ ಆದುದೇ ಬ್ರಹ್ಮ ಎಂಬ ಶ್ರುತಿಯಲ್ಲಿ ಹೇಳಿರುವ ಸತ್ಯಾದಿಸ್ವರೂಪವೇ ಬ್ರಹ್ಮದ ಸ್ವರೂಪಲಕ್ಷಣವೆನಿಸಿದೆ. ಸತ್ಯತ್ವಾದಿಧರ್ಮಗಳು ಪರಮಶಿವನ ಸ್ವರೂಪಕ್ಕಿಂತಲೂ ಭಿನ್ನವೇ ಅಭಿನ್ನವೇ ? ಭಿನ್ನವಾದರೆ ಸ್ವರೂಪಕ್ಕಿಂತಲೂ ಭಿನ್ನವಾದ ಸತ್ಯತ್ವಾದಿಗಳು ಸ್ವರೂಪಲಕ್ಷಣವಾಗು ವುದು ಸಾಧ್ಯವಿಲ್ಲ. ಅಭಿನ್ನವೆಂಬ ಪಕ್ಷದಲ್ಲಿ ವಾಕ್ಯದಿಂದ ಅರ್ಥಬೋಧವೇ ಬರುವಂತಿಲ್ಲ. ಧರ್ಮ ಮತ್ತು ಧರ್ಮಿ ಇವುಗಳ ಸಂಬಂಧವನ್ನು ಬೋಧಿಸುವುದೇ ವಾಕ್ಯದ ಮುಖ್ಯಗುರಿ. ಧರ್ಮಧರ್ಮಿಗಳಿಗೆ ಅಭೇದವೇ ಸಂಭವಿಸಿದರೆ ವಾಕ್ಯದಿಂದ ಅರ್ಥಭೇದ ಹೇಗೆ ಸಂಭವಿಸುವುದು ಎಂದು ಕೇಳಿದರೆ, ಎಲ್ಲಿ ಪದಾರ್ಥವೇ ತೋರ ಬೇಕೋ ಅಲ್ಲಿಯೇ ಪರಸ್ಪರ ಪದಾರ್ಥಸಂಬಂಧ ವಾಕ್ಯದ ಗುರಿಯಾಗುವುದು. ಎಲ್ಲಿ ಪದಾರ್ಥದ ಪ್ರತೀತಿಯನ್ನು ತಿಳಿಸುವ ಪದಗಳ ಜೋಡಣೆಯೇ ವಾಕ್ಯದ ಗುರಿಯಾಗು ವುದೋ ಅಲ್ಲಿ ಪದಾರ್ಥದ ಐಕ್ಯವೇ ವಾಕ್ಯದ ಗುರಿಯಾಗುವುದು. ಹೇಗೆಂದರೆ "ಈ ಜ್ಯೋತಿಸ್ಸಮೂಹದಲ್ಲಿ ಯಾವನು ಚಂದ್ರನು" ಎಂದು ಕೇಳಿದಾಗ "ಹೆಚ್ಚು ಪ್ರಕಾಶವುಳ್ಳವನು ಚಂದ್ರನು" ಎಂಬ ವಾಕ್ಯದಿಂದ ಉತ್ತರ ಹೇಳುವಾಗ ಅಲ್ಲಿ ಹೆಚ್ಚಿನ ಪ್ರಕಾಶವೆಂಬ ವಿಶೇಷಣವನ್ನು ಬೋಧಿಸುವುದು ವಾಕ್ಯದ ಮುಖ್ಯಗುರಿಯಲ್ಲ. ಪ್ರಕಾಶ ಪ್ರತ್ಯಕ್ಷಸಿದ್ಧವಾದ್ದರಿಂದ ಅದನ್ನು ಬೋಧಿಸಲು ವಾಕ್ಯದ ಅಪೇಕ್ಷೆ ಇಲ್ಲ. ಚಂದ್ರನಲ್ಲಿರುವ ಚಂದ್ರತ್ವಜಾತಿಯನ್ನು ಬೋಧಿಸುವುದೂ ಸಹ ವಾಕ್ಯದ ಗುರಿಯಲ್ಲ. ಅನೇಕ ಕಡೆಗಳಲ್ಲಿ ಇರುವುದೇ ಜಾತಿಯಾಗುವುದರಿಂದ, ಚಂದ್ರತ್ವವು ಚಂದ್ರನೊಬ್ಬ ನಲ್ಲಿಯೇ ಇರುವುದರಿಂದ ಅದು ಜಾತಿಯಾಗುವುದಿಲ್ಲ. ಚಂದ್ರಶಬ್ದದಿಂದ ಬೋಧಿತ

ವಾಗುವುದೇ ವಾಕ್ಯದ ಮುಖ್ಯ ಗುರಿ ಎನ್ನುವುದೂ ಸರಿಯಲ್ಲ. ಸ್ವರೂಪವನ್ನು ಪ್ರಶ್ನಿಸಿದಾಗ ಶಬ್ದವಾಚ್ಯತ್ವವನ್ನು ಸಮಾಧಾನವಾಗಿ ಹೇಳುವುದೂ ಯುಕ್ತವಲ್ಲ.

ವಸ್ತುತಸ್ತು—ವಾಕ್ಯಾನಾಂ ಸರ್ವತ್ರ ಶ್ರೂಯಮಾಣಪದಾರ್ಥಸಂಸರ್ಗಪರತ್ವನಿಯಮೋತ್ಸಾದನಾಯ ಪದಾರ್ಥಮಾತ್ರನಿಷ್ಠತ್ವಮಪಿ ಕ್ವಚಿದಸ್ತೀತಿ ವ್ಯುತ್ಪಾದ್ಯಂ. ತಚ್ಚ ಲಕ್ಷಣಾವಾಕ್ಯಂ. ತತ್ರ ಲೋಕೇ ಪದಾನಾಂ ವಿಶಿಷ್ಟಶಕ್ತತ್ವೇನ ಪದಾರ್ಥಾಃ ಸರ್ವೇಽಪಿ ಸಖಂಡ ಏವ. ತಥಾಪಿ ನ ದೃಷ್ಟಾಂತಾಸಿದ್ಧಿಃ, ಪದಾರ್ಥಮಾತ್ರನಿಷ್ಠತ್ವೇ ವಾಕ್ಯಸ್ಯ ದೃಷ್ಟಾಂತತ್ವಸಂಭವಾತ್. ಏವಂಚಾಪಿ ಸತ್ಯಾದಿಪದಾನ್ಯೇಕಬ್ರಹ್ಮಪದಾರ್ಥನಿಷ್ಠಾನಿ. ಬ್ರಹ್ಮಪದಾರ್ಥಶ್ಚ ನ ವಿಶಿಷ್ಟಃ ಅಭೇದಶ್ರುತಿಸಹಸ್ರಾತ್.

ನನು ವಿಶಿಷ್ಟವಾಚಕೈಸ್ಸತ್ಯಾದಿಪದೈಃ ಕಥಮಖಂಡಬೋಧಃ? ಇತಿ ಚೇತ್ ತಲ್ಲಕ್ಷಣಯೇತಿ ಗೃಹಾಣ. ಉಕ್ತಂ ಚ ಶಿವಾದ್ವೈತಪ್ರಕಾಶಕೇ—“ಉಪಾಯಸ್ತು ವೈಶಿಷ್ಟ್ಯಂ ಅಖಂಡಚಂದ್ರಪ್ರತಿಪತ್ತೌ, ತಚ್ಚ ವಿರೋಧಾಚ್ಚಂದ್ರೇ ನ ಜ್ಞಾಯತೇ ಸತ್ಯಾದಿವಾಕ್ಯೇ ತ್ವನಂತಾದಿಪದೈರ್ವೈಶಿಷ್ಟ್ಯಂ ಬಾಧ್ಯತೇ” ಇತಿ. ಏತೇನ “ಸೇನಾವನಾದಿಲಕ್ಷಣಸ್ಯ ನಾಖಂಡಾರ್ಥಕತ್ವಂ, ಸೇನಾವನಾದೀನಾಂ ಸಮುದಾಯರೂಪತ್ವೇನಾಖಂಡಾರ್ಥತ್ವಾಭಾವಾದಿತಿ ನ ಲಕ್ಷಣಾಮಾತ್ರಸ್ಯಾಖಂಡಾರ್ಥತ್ವಂ, ಇತಿ ನಿರಸ್ತಂ. ತತ್ರಾಪಿ ಪದಾರ್ಥಮಾತ್ರನಿಷ್ಠತ್ವಸ್ಯಾವಿವಾದಾತ್.

ನನು ಲಕ್ಷಣಯೈಕತ್ವಪರತ್ವೇ ಸತ್ಯಾದಿವಾಕ್ಯಾನಾಮೇಕೇನೈವ ತಾದೃಗರ್ಥಬೋಧಾತ್ಪದಾಂತರವೈಯರ್ಥ್ಯಂ ಪರ್ಯಾಯತ್ವಪ್ರಸಂಗಶ್ಚ ಇತಿ ಚೇನ್ನ. ವಿಶಿಷ್ಟಶಕ್ತಾನಾಂ ಶಕ್ಯಾರ್ಥೇಽಪರ್ಯಾಯಾಣಾಮೇವ ಲಕ್ಷಣಯೈಕಾರ್ಥಪರತ್ವಸ್ಯಾರ್ಥವಾದಾನಾಂ ಪ್ರಾಶಸ್ತ್ಯಪರತ್ವಸ್ಯೇವಾವಿರೋಧಾತ್. ನ ಚ ವೈಯರ್ಥ್ಯಂ–ವ್ಯಾವೃತ್ತಿಭೇದಾತ್. ಸತ್ಯಪದೇನಾಸತ್ಯವ್ಯಾವೃತ್ತಿಃ, ಜ್ಞಾನಪದೇನ ಜಡವ್ಯಾವೃತ್ತಿಃ, ಅನಂತಪದೇನ ಪರಿಚ್ಛಿನ್ನವ್ಯಾವೃತ್ತಿರಿತಿ. ಸರ್ವತ್ರ ವ್ಯಾವೃತ್ತಿಭೇದಾತ್ ನ ಪೌನರುಕ್ತ್ಯಂ.

ವಾಸ್ತವವಾಗಿ ಹೇಳುವುದಾದರೆ, ವಾಕ್ಯಗಳೆಲ್ಲವೂ ಅದರಲ್ಲಿ ಸೇರಿರುವ ಪದಾರ್ಥವನ್ನೇ ಬೋಧಿಸುವುವು ಎಂಬ ನಿಯಮವನ್ನು ಹೋಗಲಾಡಿಸಲಿಕ್ಕಾಗಿ ಪದಾರ್ಥವನ್ನೇ ವಾಕ್ಯವು ತಿಳಿಸುತ್ತದೆ ಎಂದು ಕೆಲವು ಕಡೆಗಳಲ್ಲಿ ಒಪ್ಪಬೇಕು. ಇದೂ ಸಹ ಲಕ್ಷಣವಾಕ್ಯದಲ್ಲಿ ಮಾತ್ರವೇ ಅನ್ವಯಿಸುತ್ತದೆ. ಲೋಕದಲ್ಲಿ ಪದಗಳೆಲ್ಲವೂ ಒಂದು ವಿಶೇಷಣವಿಶಿಷ್ಟವಾದ ಅರ್ಥವನ್ನೇ ಬೋಧಿಸುತ್ತಿರುವುದರಿಂದ ಪದಾರ್ಥವೆಲ್ಲವೂ ಬೇರೆಬೇರೆಯೇ ಆಗಿರುವುದು. ಆದರೂ ಅಖಂಡಪದಾರ್ಥಕ್ಕೆ ದೃಷ್ಟಾಂತವೇ ದೊರೆಯುವುದಿಲ್ಲವೆಂದು ಹೇಳುವಂತಿಲ್ಲ. ಯಾವ ವಾಕ್ಯ ವಸ್ತುವನ್ನೇ ಬೋಧಿಸಲಿಕ್ಕೆ

ಮಾತ್ರವೇ ಹೊರಟಿರುವುದೋ ಅಂತಹ ವಾಕ್ಯವೇ ದೃಷ್ಟಾಂತವಾಗುವುದು. ಪ್ರಕೃತದಲ್ಲಿ ಸತ್ಯಾದಿಪದಗಳು ಅನೇಕವಾದರೂ ಒಬ್ಬ ಬ್ರಹ್ಮನನ್ನೇ ಬೋಧಿಸುತ್ತವೆ, ಬ್ರಹ್ಮವೆಂಬ ವಸ್ತು ಒಂದು ವಿಶೇಷಣವಿಶಿಷ್ಟವಲ್ಲ; ಆದರೆ ಅದು ಅಖಂಡವೇ ಆಗಿರುವುದು ; ಹಾಗೆ ಇಲ್ಲದಿದ್ದರೆ ಅಭೇದಶ್ರುತಿ ವಿರುದ್ಧವಾಗುವುದು. ಸತ್ಯಾದಿಪದಗಳು ಸತ್ಯತ್ವಾದಿವಿಶಿಷ್ಟವಾದ ಅರ್ಥವನ್ನೇ ಬೋಧಿಸುವುದರಿಂದ ಅಖಂಡವಸ್ತುವಿನ ಬೋಧ ಸತ್ಯಾದಿಪದಗಳಿಂದ ಹೇಗೆ ಬರುವುದು ಎಂದು ಕೇಳಿದರೆ ಲಕ್ಷಣೆಯಿಂದಲೇ ಆ ಬೋಧ ಬರುತ್ತದೆ ಎಂದು ತಿಳಿಯಬೇಕು. "ಅಖಂಡಚಂದ್ರನ ಜ್ಞಾನವಾಗಬೇಕಾದರೆ ಪ್ರಕಾಶವೈಶಿಷ್ಟ್ಯವೇ ಉಪಾಯವಾಗುವುದಾದರೂ ಅದು ಶಬ್ದದ ಮುಖ್ಯ ಗುರಿಯಲ್ಲವಾದ್ದರಿಂದ ಅದನ್ನೇ "ಪ್ರಕೃಷ್ಟಪ್ರಕಾಶಶ್ಚಂದ್ರಃ" ಎಂಬ ಶಬ್ದವು ಬೋಧಿಸಿದರೆ ತಾತ್ಪರ್ಯವಿರೋಧ ಉಂಟಾಗುತ್ತದೆ- ಪ್ರಕೃತದಲ್ಲಿ ಸತ್ಯಾದಿಪದಗಳಿಂದ ಬ್ರಹ್ಮವೊಂದೇ ಬೋಧಿತವಾಗಬೇಕೇ ಹೊರತು ಸತ್ಯತ್ವವೇ ಮೊದಲಾದ ವೈಶಿಷ್ಟ್ಯ ತೋರಬೇಕಾಗಿಲ್ಲ. ಇದರಿಂದ "ಸೇನೆ, ವನ ಈ ಬಗೆಯ ಪದಗಳು ಅಖಂಡವಾದ ಒಂದು ವಸ್ತುವನ್ನು ಬೋಧಿಸುವುದಿಲ್ಲ; ಆದರೆ, ಸೈನಿಕರ ಸಮೂಹವೇ ಸೇನೆ, ಮರಗಳ ಸಮೂಹವೇ ವನ. ಹೀಗೆ ಆಗುವುದರಿಂದ ಅಖಂಡವಾದ ಅರ್ಥವನ್ನು ಆ ಪದಗಳು ಬೋಧಿಸುವಂತಿಲ್ಲ. ಆದ್ದರಿಂದ ಯಾವ ಲಕ್ಷಣೆಯೂ ಅಖಂಡಾರ್ಥವನ್ನು ಬೋಧಿಸಲಾರದು" ಎಂಬ ಶಿವಾದ್ವೈತಪ್ರಕಾಶದ ವಾದವು ನಿರಸ್ತವಾಯಿತು. ಇಲ್ಲಿಯೂ ವನ, ಸೇನೆ ಎಂಬ ಪದಾರ್ಥವನ್ನು ಹೋಧಿಸುವುದು ಗುರಿಯೇ ಹೊರತು ಒಂದು ವಿಶೇಷಣದ ವೈಶಿಷ್ಟ್ಯವನ್ನು ಬೋಧಿಸುವುದು ಗುರಿಯಲ್ಲ. ಈ ರೀತಿಯಲ್ಲಿ ಲಕ್ಷಣೆಯಿಂದ ಏಕತ್ವವನ್ನು ಬೋಧಿಸುವುದು ಆ ವಾಕ್ಯದ ಗುರಿಯಾದರೆ ಯಾವುದಾದರೊಂದು ಪದದಿಂದಲೇ ಇದು ಸಾಧ್ಯವಾದ್ದರಿಂದ ಸತ್ಯ, ಜ್ಞಾನ ಅನಂತ ಎಂಬ ಮೂರು ಪದಗಳ ಪ್ರಯೋಗ ವ್ಯರ್ಥವಾಗುವುದಿಲ್ಲವೆ ? ಹಾಗೆಯೇ ಮೂರು ಪದಗಳೂ ಸಮಾನಾರ್ಥಕವೆನಿಸುವುದಿಲ್ಲವೇ ? ಎಂದು ಕೇಳಿದರೆ ಶಬ್ದಾರ್ಥ ತೋರುವಾಗ ಆ ಪದಗಳು ಒಂದು ವಿಶೇಷಣವಿಶಿಷ್ಟವಾದ ಅರ್ಥವನ್ನು ಬೋಧಿಸುವುದರಿಂದ ಅವು ಪರ್ಯಾಯನಾಮಗಳಾಗಲಾರವು ; ಇದೂ ಅಲ್ಲದೆ ಅರ್ಥವಾದದ ವಾಕ್ಯಗಳಿಗೆ ಒಟ್ಟು ಪ್ರಾಶಸ್ತ್ಯದಲ್ಲಿ ಲಕ್ಷಣೆಯನ್ನು ಹೇಳುವಂತೆ ಇಲ್ಲಿಯೂ ಒಟ್ಟು ಪದಗಳಿಗೆ ಒಂದೇ ಲಕ್ಷಣೆಯನ್ನು ಹೇಳಬಹುದಾದ್ದರಿಂದ ಈ ಪದಗಳು ಪರ್ಯಾಯನಾಮಗಳೆನಿಸುವುದಿಲ್ಲ. ಒಂದು ಪದದಿಂದಲೇ ಒಂದು ವಸ್ತುವನ್ನು ತಿಳಿಸಲು ಸಾಧ್ಯವಾದರೂ ಇತರ ವಸ್ತುಗಳಿಂದ ವೈಲಕ್ಷಣ್ಯವನ್ನು ಬೋಧಿಸಲಿಕ್ಕಾಗಿ ಮೂರು ಪದಗಳನ್ನು ಪ್ರಯೋಗಿಸಲಾಗಿದೆ. ಸತ್ಯಪದದಿಂದ ಅಸತ್ಯದ ವೈಲಕ್ಷಣ್ಯವೂ, ಜ್ಞಾನಪದದಿಂದ ಜಡಪದಾರ್ಥಗಳ ವೈಲಕ್ಷಣ್ಯವೂ, ಅನಂತಪದದಿಂದ ಪರಿಚ್ಛಿನ್ನವಸ್ತುಗಳ ವೈಲಕ್ಷಣ್ಯವೂ ಬೋಧಿತವಾಗುವುದರಿಂದ ಯಾವ ಪದವೂ ಇಲ್ಲಿ ವ್ಯರ್ಥವಾಗುವುದಿಲ್ಲ ಮತ್ತು ಪುನರುಕ್ತವೂ ಆಗುವುದಿಲ್ಲ.

ನನು ಕಿಂ ವ್ಯಾವೃತ್ತಯೋಽಪಿ ಬ್ರಹ್ಮಭಿನ್ನಾ ಅಭಿನ್ನಾ ವಾ? ಆದ್ಯೇ ಹ್ಯೈಕ್ಯಶ್ರುತ್ಯನುಪಪತ್ತಿಃ, ದ್ವಿತೀಯೇ ತದೇವ ಪದಾಂತರವೈಯರ್ಥ್ಯಂ ಇತಿ ಚೇನ್ನ. ಏಕಸ್ಮಿನ್ ಪ್ರತಿಯೋಗ್ಯನುಯೋಗಿಕಾರಣವ್ಯಾಪಕಾದಿ ಶಬ್ದವದವೈಯರ್ಥ್ಯೋಪಪತ್ತೇಃ. ನಹಿ ಕಾರಣತಾದಿಕಂ ಧರ್ಮಾಂತರಂ. ಏವಂ ವ್ಯಾವೃತ್ತೀನಾಂ ಬ್ರಹ್ಮಾಭೇದೇಽಪಿ ಪ್ರತಿಯೋಗಿಭೇದಾದವೈಯರ್ಥ್ಯಂ. ಏತದಭಿಪ್ರಾಯೇಣೈವ ಶಿವಾದ್ವೈತಪ್ರಕಾಶಕೇ ಸಂಗ್ರಹಃ—

ಅವಿಶಿಷ್ಟಮಪರ್ಯಾಯಾನೇಕಶಬ್ದಪ್ರಕಾಶಿತಂ ।
ಏಕಂ ವೇದಾಂತನಿಷ್ಣಾತಮಖಂಡಂ ಪ್ರತಿಪೇದಿರೇ ॥ ಇತಿ.

ತಸ್ಮಾತ್ಸತ್ಯತ್ವಾದಿಕಂ ಸ್ವರೂಪಲಕ್ಷಣಮಿತಿ ಸಿದ್ಧಂ.

ನನು "ಆದ್ಯಸ್ಯ ಬ್ರಹ್ಮಣಃ ಚತುರ್ಮುಖಸ್ಯ, ಯತೋ ಜನ್ಮ, ತದ್ಬ್ರಹ್ಮ" ಇತಿ ಚೇನ್ನ. ಶ್ರುತಿಯುಕ್ತ್ಯನುಭವವಿರೋಧಾತ್. ಚತುರ್ಮುಖಸ್ಯಾದ್ಯತ್ವಂ ನಾಮ ಸರ್ವಕಾರ್ಯಾಪೇಕ್ಷಯಾ? ಚೇತನಾಪೇಕ್ಷಯಾ ವಾ? ನಾದ್ಯಃ—"ಆತ್ಮನ ಆಕಾಶಸ್ಸಂಭೂತಃ" ಇತಿ ಭೂತಸೃಷ್ಟೇಃ ಪ್ರಥಮಾಭಿಧಾನಾತ್. ನ ಚ ಹಿರಣ್ಯಗರ್ಭಜನನಾನಂತರಮೇವ ಭೂತಸೃಷ್ಟಿರಿತಿ ವಾಚ್ಯಂ. ಸಮಷ್ಟಿಲಿಂಗಶರೀರಾಭಿಮಾನಿನೋ ಹಿರಣ್ಯಗರ್ಭಸ್ಯ ಭೂತಸೃಷ್ಟ್ಯನಂತರಂ ಜನನಾವಶ್ಯಕತ್ವೇನ ತತಃ ಪೂರ್ವಮುತ್ಪತ್ತೌ ಮಾನಾಭಾವಾತ್. ತಥಾಪಿ ಜನಕತ್ವೇಽಸ್ಯ ಜ್ಞೇಯಬ್ರಹ್ಮಲಕ್ಷಣತ್ವಾಸಿದ್ಧೇಃ ರಾಮಕೃಷ್ಣಾದ್ಯವತಾರಜನಕಸ್ಯ ದಶರಥವಸುದೇವಾದೇರಿವ. ತಥಾತ್ವೇ ಸರ್ವಜ್ಞತ್ವಾಸಿದ್ಧೇಃ ರಾಮಕೃಷ್ಣಾದೇರಿವ ಚತುರ್ಮುಖಸ್ಯೈವ ಜನಕಾಪೇಕ್ಷಯಾ ಉತ್ಕೃಷ್ಟತಾಪತ್ತೇಶ್ಚ. ವಿಷ್ಣೋರೇವ ಹಿರಣ್ಯಗರ್ಭೋತ್ಪತ್ತಿರಿತಿ ವಿನಿಗಮಕಾಭಾವಾತ್.

"ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ ಮಹರ್ಷಿಃ । ಹಿರಣ್ಯಗರ್ಭಂ ಪಶ್ಯತ ಜಾಯಮಾನಂ ಸ ನೋ ದೇವಃ ಶುಭಯಾ ಸ್ಮೃತ್ಯಾ ಸಂಯುನಕ್ತು ॥" ಅಸ್ಯಾರ್ಥಃ—ಮಹರ್ಷಿಃ-ವೇದಕರ್ತಾ ಯಃ-ಸರ್ವಜ್ಞತ್ವಾದಿನಾ, ವಿಶ್ವಸ್ಮಾತ್-ಚಿದಚಿತ್ಪ್ರಪಂಚಾತ್, ಅಧಿಕೋ ರುದ್ರಃ-ಪರಮಶಿವಃ,ಸರ್ವೇಷಾಂ ದೇವಾನಾಮಿಂದ್ರಾದೀನಾಂ ಪ್ರಥಮಂ ಹಿರಣ್ಯಗರ್ಭಂ-ಚತರ್ಮುಖಂ, ಸ್ವಸಂಕಲ್ಪೇನ ಪ್ರಕೃತಿರೂಪಾತ್ಮನಾ ಜಾಯಮಾನಂ, ಸಕಲವೇದೋಪದೇಶಾರ್ಥಮನುಗ್ರಹದೃಷ್ಟ್ಯಾ ಪಶ್ಯನ್, ಸ-ಶಿವಃ-, ನಃ-ಅಸ್ಮಾನಪಿ, ಶುಭಯಾ-ಸಂಸಾರಪಾಶಮೋಚಿಕಯಾ ಪರಮಾನಂದಸ್ವರೂಪಯಾ ವೇದವೇದಾಂತಾಗಮಸಿ

**ದ್ಧಯಾ, ಸ್ಮೃತ್ಯಾ-ದೀಕ್ಷಯಾ, ಸಂಯುನಕ್ತು-ಸಂಯೋಜಯತ್ವಿತಿ ತಾತ್ಪರ್ಯಂ.**

**"ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಕೋ ರುದ್ರೋ ಮಹರ್ಷಿಃ। ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು ॥" ಇತ್ಯಾದಿನಾ ಮಹೇಶ್ವರೋತ್ಪನ್ನತ್ವಂ ಹಿರಣ್ಯಗರ್ಭಸ್ಯಾವಗಮ್ಯತೇ. ತಸ್ಮಾತ್ತದರ್ಥೋ ನ ವಿಧೀಯತೇ.**

ಈ ವೈಲಕ್ಷಣ್ಯವು ಬ್ರಹ್ಮಕ್ಕಿಂತಲೂ ಬೇರೆಯೇ ಅಲ್ಲವೆ? ಬೇರೆಯಾದರೆ ಐಕ್ಯ ಶ್ರುತಿ ವಿರುದ್ಧವಾಗುವುದು, ಅಭಿನ್ನವಾದರೆ ಜ್ಞಾನ, ಅನಂತ ಈ ಪದಗಳು ವ್ಯರ್ಥ ವಾಗುವುವು. ಒಂದೇ ವಸ್ತುವಿನಲ್ಲಿ ಬೇರೆ ವಸ್ತುವಿನ ದೃಷ್ಟಿಯಿಂದ ಪ್ರತಿಯೋಗಿ, ಅನುಯೋಗಿ, ಕರಣ, ವ್ಯಾಪಾರ ಎಂಬ ಶಬ್ದಗಳನ್ನು ಪ್ರಯೋಗಿಸುವಂತೆ, ಇತರ ಪದಾರ್ಥಗಳ ವ್ಯಾವೃತ್ತಿಗಾಗಿ ಇಲ್ಲಿಯೂ ಮೂರು ಪದಗಳನ್ನು ಪ್ರಯೋಗಿಸಿರುವುದು ಯುಕ್ತವೇ ಆಗಿದೆ. ಪ್ರತಿಯೋಗಿ ಅನುಯೋಗಿಗಳೆಲ್ಲವೂ ವಸ್ತುಸ್ವರೂಪವೇ ಆದರೂ ಶಬ್ದದಲ್ಲಿ ಭೇದವಿರುವಂತೆ ಇಲ್ಲಿಯೂ ವ್ಯಾವೃತ್ತಿ ಎಂಬುದು ಬ್ರಹ್ಮಕ್ಕಿಂತ ಭಿನ್ನವಾಗ ದಿದ್ದರೂ ಅದರ ಪ್ರತಿಯೋಗಿ ವಸ್ತುಗಳ ದೃಷ್ಟಿಯಿಂದ ಶಬ್ದಭೇದವಿರಬಹುದು. ಈ ಅಭಿಪ್ರಾಯದಿಂದಲೇ ಶಿವಾದ್ವೈತಪ್ರಕಾಶದಲ್ಲಿ ವಿಶೇಷಣವಿಲ್ಲದಿದ್ದರೂ ಪರ್ಯಾಯ ವಾಗದಿರುವ ಅನೇಕ ಶಬ್ದಗಳಿಂದ ವೇದಾಂತದಲ್ಲಿ ಪ್ರತಿಪಾದ್ಯನಾದ ಒಂದೇ ಅಖಂಡ ವಸ್ತುವನ್ನು ಹೇಳಿರುವುದರಿಂದ ಸತ್ಯತ್ವಾದಿಗಳು ಸ್ವರೂಪಲಕ್ಷಣವೇ ಆಗುವವೆಂದು ತಿಳಿಸಲಾಗಿದೆ.

ಚತುರ್ಮುಖಬ್ರಹ್ಮನ ಉತ್ಪತ್ತಿ ಯಾರಿಂದ ಆಯಿತೋ ಅದೇ ಬ್ರಹ್ಮವೆಂದು ಹೇಳುವುದು ಶ್ರುತಿಯುಕ್ತಿಅನುಭವಗಳಿಗೆ ವಿರುದ್ಧವಾದ್ದರಿಂದ ಹೊಂದುವುದಿಲ್ಲ. ಇಲ್ಲಿ ಚತುರ್ಮುಖನನ್ನು ಆದ್ಯನೆಂದು ಭಾವಿಸಿರುವುದು ಸರ್ವಕಾರ್ಯಗಳ ಅಪೇಕ್ಷೆ ಯಿಂದಲೋ? ಅಥವಾ ಚೇತನದ ಅಪೇಕ್ಷೆಯಿಂದಲೋ? ಎಂಬ ವಿಕಲ್ಪ ಬರುತ್ತದೆ. ಮೊದಲನೆಯ ವಿಕಲ ಸರಿಯಲ್ಲ. ಯಾಕೆಂದರೆ "ಆತ್ಮನಿಂದ ಆಕಾಶ ಹುಟ್ಟಿತು" ಎಂದು ಶ್ರುತಿಯಲ್ಲಿ ಭೂತಸೃಷ್ಟಿಯೇ ಮೊದಲು ಆಯಿತೆಂದು ಹೇಳಲಾಗಿದೆ. ಹಿರಣ್ಯ ಗರ್ಭ ಹುಟ್ಟಿದಮೇಲೆಯೇ ಭೂತಸೃಷ್ಟಿಯಾಯಿತೆಂದು ಹೇಳುವುದೂ ಸರಿಯಲ್ಲ. ಸೂಕ್ಷ್ಮಶರೀರದಲ್ಲಿ ಅಭಿಮಾನಿಸಿದ ಹಿರಣ್ಯಗರ್ಭನು ಭೂತಸೃಷ್ಟಿಯ ನಂತರವೇ ಹುಟ್ಟಿರಬೇಕು. ಅವನು ಮೊದಲೇ ಹುಟ್ಟಿದನೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಆದರೂ ಇವನು ಜನಕನಾದರೆ ರಾಮ ಕೃಷ್ಣ ಇವರ ಅವತಾರಗಳಲ್ಲಿ ದಶರಥ ವಸುದೇವರು ಜನಕರಾದಂತೆ ಇಲ್ಲಿ ಹಿರಣ್ಯಗರ್ಭನ ಸೃಷ್ಟಿಯನ್ನು ಬ್ರಹ್ಮದ ಲಕ್ಷಣ ವೆಂದು ಹೇಳಲು ಸಾಧ್ಯವಾಗುವುದಿಲ್ಲ. ಹಾಗೆ ಹೇಳುವುದಾದರೆ ಅವನಿಗೆ ಸರ್ವಜ್ಞತ್ವವು ಸಿದ್ಧಿಸದೇ ಹೋಗಬೇಕಾಗುತ್ತದೆ. ರಾಮಕೃಷ್ಣರಂತೆ ಚತುರ್ಮುಖನನ್ನು ತಂದೆ ಗಿಂತಲೂ ಉತ್ಕೃಷ್ಟನೆಂದು ಹೇಳಬೇಕಾಗುತ್ತದೆ. ವಿಷ್ಣುವಿನಿಂದಲೇ ಹಿರಣ್ಯಗರ್ಭನು

ಹುಟ್ಟಿದನೆಂಬುದಕ್ಕೆ ಪ್ರಮಾಣವಿಲ್ಲ. "ವಿಶ್ವಾಧಿಕನೂ ಮಹರ್ಷಿಯೂ ಆದ ಯಾವ ರುದ್ರನು ದೇವತೆಗಳೆಲ್ಲರಿಗೂ ಮೊದಲು ಹಿರಣ್ಯಗರ್ಭನನ್ನು ಸೃಷ್ಟಿಸಿದನೋ ಮತ್ತು ಹುಟ್ಟುತ್ತಿರುವಾಗ ಅವನನ್ನು ಯಾವನು ನೋಡಿದನೋ ಆ ದೇವನು ನಮಗೆ ಶುಭವಾದ ಬುದ್ಧಿಯನ್ನು ಅನುಗ್ರಹಿಸಲಿ." ಇಲ್ಲಿ ಮಹರ್ಷಿ ಎನಿಸಿದ ರುದ್ರನು ಸರ್ವಜ್ಞನಾದ್ದರಿಂದ ಸಮಸ್ತ ಪ್ರಪಂಚಕ್ಕೂ ಅಧಿಕನೆಂದು ಹೇಳಿದೆ. ಅಂತಹ ಪರಮಶಿವನು ಎಲ್ಲಾ ದೇವತೆಗಳಿಗೆ ಮೊದಲು ಪ್ರಕೃತಿ ಎನಿಸಿದ ತನ್ನ ಸಂಕಲ್ಪದಿಂದ ಹುಟ್ಟಿದ ಚತುರ್ಮುಖನನ್ನು ಎಲ್ಲಾ ವೇದಗಳ ಉಪದೇಶಕ್ಕಾಗಿ ಅನುಗ್ರಹದೃಷ್ಟಿಯಿಂದ ನೋಡಿದನು. ಅವನು ನಮ್ಮನ್ನು ಸಂಸಾರಪಾಶದಿಂದ ಬಿಡಿಸಲಿಕ್ಕಾಗಿ ಪರಮಾನಂದಸ್ವರೂಪವೆನಿಸಿ ನಿಗಮಾಗಮಗಳಲ್ಲಿ ಪ್ರಸಿದ್ಧವಾದ ದೀಕ್ಷಾಸಂಸ್ಕಾರವನ್ನು ನಮಗೆ ಅನುಗ್ರಹಿಸಲಿ ಎಂದು ಈ ಶ್ರುತಿಯ ಅರ್ಥವಾಗುತ್ತದೆ. "ಯಾರು ದೇವರೆಲ್ಲರಿಗೂ ಮೊದಲು ಇದ್ದನೋ ಅಂತಹ ವಿಶ್ವಾಧಿಕನೂ ಮಹರ್ಷಿಯೂ ಆದ ರುದ್ರನು ಹಿರಣ್ಯಗರ್ಭನನ್ನು ಹುಟ್ಟಿಸಿದನು". ಇದರಿಂದ ಹಿರಣ್ಯಗರ್ಭನು ಮಹೇಶ್ವರನಿಂದ ಹುಟ್ಟಿದನೆಂದು ತಿಳಿಯಬರುತ್ತದೆ. ಆದ್ದರಿಂದ ಅವನು ವಿಷ್ಣುವಿನಿಂದ ಹುಟ್ಟಿದನೆಂಬ ಅರ್ಥವು ವಿಹಿತವಾಗುವುದಿಲ್ಲ.

**ನನು "ಏಕೋ ಹ ವೈ ನಾರಾಯಣ ಆಸೀತ್, ನ ಬ್ರಹ್ಮಾ ನೇಶಾನೋ ನಾಪೋ ನಾಗ್ನೀಷೋಮೌ ನೇಮೇ ದ್ಯಾವಾಪೃಥಿವೀ" ಇತಿ ಮಹೋಪನಿಷದಿ ನಾರಾಯಣಸ್ಯೈವ ಸರ್ವಾತಿಶಾಯಿತ್ವಸ್ಯ ಸೃಷ್ಟೇಃ ಪ್ರಾಕ್ ಸತ್ತಾಯಾಶ್ಚ ದರ್ಶನಾತ್, "ನಾರಾಯಣಾದ್ಬ್ರಹ್ಮಾ ಜಾಯತೇ ನಾರಾಯಣಾದ್ರುದ್ರೋ ಜಾಯತೇ" ಇತ್ಯಾದಿನಾ ಸರ್ವಕಾರಣತ್ವದರ್ಶನಾತ್, "ಅಥ ಕಸ್ಮಾದುಚ್ಯತೇ ಬ್ರಹ್ಮ ಬೃಹಂತೋ ಹ್ಯಸ್ಮಿನ್ ಗುಣಾಃ" ಇತ್ಯಾದಿನಾ ತಸ್ಯೈವ ಪೂರ್ಣಗುಣತ್ವಾವಗಮಾತ್, "ತದೇವ ಬ್ರಹ್ಮ ಪರಮಂ ಕವೀನಾಂ" "ಅಂತಸ್ಸಮುದ್ರೇ ಮನಸಾ ಚರಂತಂ" ಇತ್ಯಾದಿನಾ ಸಮುದ್ರಶಾಯಿತ್ವಾದಿಧರ್ಮಾಣಾಂ ವಿದ್ವದ್ರೂಢ್ಯಾ ತಸ್ಯೈವ ಮುಖ್ಯತ್ವಾತ್, "ನ ಸನ್ನಚಾಸಚ್ಛಿವ ಏವ ಕೇವಲಃ" "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ" "ಸದೇವ ಸೋಮ್ಯೇದಮಗ್ರ ಆಸೀತ್" ಇತ್ಯಾದಿವಾಕ್ಯಾನಾಂ ಛಾಗಪಶುನ್ಯಾಯೇನ ಸಾಮಾನ್ಯವಿಶೇಷಯೋರೇಕತ್ವಸಿದ್ಧಿವತ್ತತ್ಪರತ್ವಸ್ಯೈವ ಯುಕ್ತತ್ವಾತ್, "ಗಚ್ಛತೀತಿ ಗೌಃ" ಇತಿ ವ್ಯುತ್ಪತ್ತ್ಯಾ ನಾನಾರ್ಥಬೋಧಕತ್ವೇಽಪಿ ಗವಿ ರೂಢಿವತ್ ಬ್ರಹ್ಮಶಬ್ದಸ್ಯಾಪಿ ಚತುರ್ಮುಖಬ್ರಹ್ಮಪ್ರಣವಬ್ರಾಹ್ಮಣಾದಿಷು ಪ್ರವೃತ್ತತ್ವೇಽಪಿ ಅನಂತಕಲ್ಯಾಣಗುಣವಿಶಿಷ್ಟೇ ನಾರಾಯಣ ಏವ ಯೋಗರೂಢತ್ವಾಚ್ಚ ಜಗಜ್ಜನ್ಮಾದಿಕಾರಣತ್ವಂ ತಸ್ಯೈವ ಸಮುಚಿತಮಿತಿ ಚೇದ್ಬ್ರೂಮಃ.**

ವಿಷ್ಣೋರ್ಜಗತ್ಕಾರಣತ್ವೇಽಪಿ ನ ತದ್ಬ್ರಹ್ಮಲಕ್ಷಣಂ, ಸೂಕ್ಷ್ಮ ಸೃಷ್ಟ್ಯನಂತರಭಾವಿದೇವಾದಿಸೃಷ್ಟೇಃ ಪೂರ್ವಂ ತಜ್ಜನ್ಮಶ್ರವಣಾತ್. ವಿಷ್ಣೋರುತ್ಪತ್ತಿಃ ಋಗ್ವೇದೇ ಶ್ರೂಯತೇ "ವಿಷ್ಣುರಿತ್ಥಾ ಪರಮಮಸ್ಯ ವಿದ್ವಾನ್ ಜಾತೋ ಬೃಹನ್ನಭಿಪಾತಿ ತೃತೀಯಂ" (ಋಗ್ವೇದ. ೭-೫-೨೯) ಇತಿ. ಅಸ್ಯಾರ್ಥಃ-ಅಸ್ಯಃ-ಮಹೇಶ್ವರಸ್ಯ, ಇತ್ಥಾ-ಇತ್ಥಂಭಾವೇನ, ವಿದ್ವಾನ್-ವೇತ್ತಾ, ಬೃಹನ್ ವಿಷ್ಣುಃ-ಆದಿವಿಷ್ಣುಃ, ಜಾತಸ್ಸನ್ ತೃತೀಯಂ-ಕೈಲಾಸಂ, ಅಭಿಪಾತಿ-ರಕ್ಷತಿ. ಬೃಹಚ್ಛಬ್ದೇನ ಆದಿವಿಷ್ಣುರೇವ ವ್ಯಪದಿಶ್ಯತೇ. "ನಮೋ ವಿಷ್ಣವೇ ಬೃಹತೇ ಕರೋಮಿ" (ತೈ.ಆರ.೧-೧೨) "ಬೃಹತ್ತೇ ವಿಷ್ಣೋ ಸುಮತಿಂ ಭಜಾಮಹೇ" (ತೈ. ಬ್ರಾ. ೨-೪-೩) ಇತ್ಯಾದಿಷು ದರ್ಶನಾತ್, ಅಜಾತಪರಮೇಶ್ವರಮೇವಮುಪಸ್ಥಿತಂ ಪರಿತ್ಯಜ್ಯ ಅನುಪಸ್ಥಿತಕಲ್ಪನೇ ಮಾನಾಭಾವಾತ್, "ಅಜಾತ ಇತ್ಯೇವಂ ಕಶ್ಚಿದ್ಭೀರುಃ ಪ್ರತಿಪದ್ಯತೇ। ರುದ್ರ ಯತ್ತೇ ದಕ್ಷಿಣಂ ಮುಖಂ ತೇನ ಮಾಂ ಪಾಹಿ ನಿತ್ಯಂ॥" (ಶ್ವೇ. ೪-೨೧) ಇತಿ ಶ್ವೇತಾಶ್ವತರೋಪನಿಷದಿ ಮಹೇಶ್ವರಸ್ಯೈವಾಜಾತತ್ವಶ್ರವಣಾಚ್ಚ. ಶಂಭೋರಾದಿವಿಷ್ಣುಜನಕತ್ವಂ ಯುಕ್ತಮೇವ, "ಸೋಮಃ ಪವತೇ ಜನಿತಾ ಮತೀನಾಂ" ಜನಿತಾ ದಿವೋ ಜನಿತಾ ಪೃಥಿವ್ಯಾಃ। ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ॥" ಇತಿ ಋಗ್ವೇದೇ ಶ್ರವಣಾತ್. "ಧ್ಯಾಯೀತೇಶಾನಂ ಪ್ರಧ್ಯಾಯಿತವ್ಯಂ" ಇತ್ಯಾದಿಷು ಶಿವಸ್ಯೈವ ಸರ್ವಕಾರಣತ್ವಂ ಶ್ರೂಯತೇ. "ಶಿವ ಏವ ಕೇವಲಃ" ಇತಿ ವಾಕ್ಯಸ್ಯ ಸತಾತನಸೃಷ್ಟಿಪರತ್ವಂ, "ನಾರಾಯಣಾದ್ಬ್ರಹ್ಮಾ ಜಾಯತೇ" ಇತಿ ವಾಕ್ಯಸ್ಯಾವಾಂತರಸೃಷ್ಟಿಪರತ್ವಮಿತಿ. ತದುಕ್ತಂ ವಾಯವೀಯಸಂಹಿತಾಯಾಂ.

ತ್ರಯಸ್ತೇ ಕಾರಣಾತ್ಮಾನೋ ಜಾತಾಸ್ಸಾಕ್ಷಾನ್ಮಹೇಶ್ವರಾತ್ ।
ಚರಾಚರಸ್ಯ ವಿಶ್ವಸ್ಯ ಸರ್ಗಸ್ಥಿತ್ಯಂತಹೇತವಃ ॥
ಪಿತ್ರಾ ನಿಯಮಿತಾಃ ಪೂರ್ವಂ ತ್ರಯೋಽಪಿ ತ್ರಿಷು ಕರ್ಮಸು ।
ಬ್ರಹ್ಮಾ ಸರ್ಗೇ ಹರಿಸ್ತ್ರಾಣೇ ರುದ್ರಸ್ಸಂಹರಣೇ ಪುನಃ ॥
ತಥಾಪ್ಯನ್ಯೋನ್ಯಮಾತ್ಸರ್ಯಾದನ್ಯೋನ್ಯಾತಿಶಯಾರ್ಥಿನಃ ।
ತಪಸಾ ತೋಷಯಿತ್ವಾ ಸ್ವಂ ಪಿತರಂ ಚಂದ್ರಶೇಖರಂ ॥
ಲಬ್ಧ್ವಾ ಸರ್ವಾತ್ಮತಾ ತಸ್ಯ ಪ್ರಸಾದಾತ್ಪರಮೇಷ್ಠಿನಃ ।
ಬ್ರಹ್ಮನಾರಾಯಣೌ ಪೂರ್ವಂ ರುದ್ರಃ ಕಲ್ಪಾಂತರೇಽಸೃಜತ್ ।
ಕಲ್ಪಾಂತರೇ ಪುನರ್ಬ್ರಹ್ಮಾ ರುದ್ರವಿಷ್ಣೂ ಜಗನ್ಮಯಃ ॥
ವಿಷ್ಣುಶ್ಚ ಭಗವಾನ್ ರುದ್ರಂ ಬ್ರಹ್ಮಾಣಮಸೃಜತ್ಪುನಃ ।
ನಾರಾಯಣಂ ಪುನರ್ಬ್ರಹ್ಮಾ ಬ್ರಹ್ಮಾಣಂ ಚ ಪ್ರಜಾಪತಿಃ ॥ ಇತಿ.

"ಸ ಬ್ರಹ್ಮಾ ಸ ಶಿವಸ್ಸೇಂದ್ರಸ್ಸೋಽಕ್ಷರಃ ಪರಮಃ ಸ್ವರಾಟ್" ಇತ್ಯಾದಿಶ್ರುತಿಶತೇನ ಮೂರ್ತಿತ್ರಯವ್ಯತಿರಿಕ್ತಸ್ಯೈವ ಬ್ರಹ್ಮತ್ವೋಪದೇಶಾತ್, ನಾರಾಯಣಾದ್ಯುಪನಿಷತ್ಸು ಮೂರ್ತಿತ್ರಯಾತೀತತ್ವೇನ ನಾರಾಯಣಸ್ಯ ವ್ಯಪದೇಶಾಭಾವಾತ್, "ಶಿವಮದ್ವೈತಂ ಚತುರ್ಥಂ ಮನ್ಯಂತೇ" "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ" ಇತ್ಯಾದಿಷು ಶಿವಸ್ಯೈವ ತ್ರಿಮೂರ್ತ್ಯತೀತತ್ವೇನ ವ್ಯವಸ್ಥಾಪನಾಚ್ಚ ತಸ್ಯೈವ ಬ್ರಹ್ಮತ್ವಂ. ಆನುಶಾಸನಿಕೇಽಪಿ–"ಸೋಽಸೃಜದ್ದಕ್ಷಿಣಾದಂಗಾದ್ಬ್ರಹ್ಮಾಣಂ ಲೋಕಸಂಭವಂ। ವಾಮಪಾರ್ಶ್ವಾತ್ತಥಾ ವಿಷ್ಣುಂ ಲೋಕರಕ್ಷಾರ್ಥಮೀಶ್ವರಃ ॥ ಹೃದಯಾತ್ಕಾಲರುದ್ರಾಖ್ಯಂ।" ಇತ್ಯುಪದೇಶಾತ್ ರುದ್ರೋತ್ಪತ್ತೇಃ ಕಾಲರುದ್ರೋತ್ಪತ್ತಿಪರತ್ವಂ. ಅನ್ಯಥಾ "ಅಜಾತ ಇತ್ಯೇವಂ" ಇತಿ ಶ್ರುತಿವಿರೋಧಾತ್. ನ ಚ ವಿಷ್ಣೋರುತ್ಪತ್ತಿರವತಾರಪರಾ, "ವಿಷ್ಣುರಿತ್ಥಾ" ಇತಿ ಪೂರ್ವೋಕ್ತಶ್ರುತಿವಿರೋಧಾತ್.

"ನಾರಾಯಣನೊಬ್ಬನೇ ಇದ್ದನು. ಬ್ರಹ್ಮನಿಲ್ಲ, ಈಶ್ವರನಿಲ್ಲ, ಅಗ್ನಿಸೂರ್ಯರಿರಲಿಲ್ಲ, ಭೂಮ್ಯಾಕಾಶಗಳಿರಲಿಲ್ಲ" ಎಂದು ಮಹೋಪನಿಷತ್ತಿನಲ್ಲಿ ನಾರಾಯಣನೇ ಸರ್ವೋತ್ಕೃಷ್ಟನೆಂದೂ, ಸೃಷ್ಟಿಗೆ ಮೊದಲು ಇದ್ದನೆಂದೂ ಹೇಳಿದೆ. "ನಾರಾಯಣನಿಂದ ಬ್ರಹ್ಮ ಹುಟ್ಟುತ್ತಾನೆ. ನಾರಾಯಣನಿಂದ ರುದ್ರ ಹುಟ್ಟುತ್ತಾನೆ". ಈ ಶ್ರುತಿಯಿಂದ ಅವನೇ ಸರ್ವಕ್ಕೂ ಕಾರಣನೆಂದು ತಿಳಿಯುತ್ತದೆ. "ಬ್ರಹ್ಮದಲ್ಲಿ ವಿಶೇಷವಾದ ಗುಣಗಳಿರುವುದರಿಂದ ಅದಕ್ಕೆ ಬ್ರಹ್ಮವೆಂಬ ಹೆಸರಿದೆ" ಎಂಬ ಮಾತಿನಿಂದ ಅವನಲ್ಲಿ ಪೂರ್ಣತ್ವಾದಿಗುಣಗಳಿರುವುವೆಂದು ತಿಳಿದುಬರುತ್ತದೆ. "ನಾರಾಯಣನ ನಾಭಿಯಲ್ಲಿ ಬ್ರಹ್ಮ ಹುಟ್ಟಿದನು." ಇತ್ಯಾದಿವಾಕ್ಯಗಳಿಂದ ಸಮುದ್ರಶಾಯಿತ್ವವೇ ಮೊದಲಾದ ಗುಣಗಳು ಸರ್ವಸಮ್ಮತವಾದ್ದರಿಂದ ನಾರಾಯಣನಿಗೇ ಮುಖ್ಯವಾಗಿ ಅನ್ವಯಿಸುತ್ತವೆ. "ಪ್ರಳಯದಲ್ಲಿ ಸತ್ ಅಸತ್, ಹಗಲು ರಾತ್ರಿಗಳು ಯಾವುವೂ ಇಲ್ಲದೆ ಶಿವನೊಬ್ಬನೇ ಇದ್ದನು." "ಬ್ರಹ್ಮ ವಿಷ್ಣು ರುದ್ರ ಇಂದ್ರರೂ ಅವನಿಂದಲೇ ಹುಟ್ಟಿದ್ದಾರೆ" ಈ ವಾಕ್ಯಗಳು ಛಾಗಪಶುನ್ಯಾಯದಂತೆ ಸಾಮಾನ್ಯವಿಶೇಷರೂಪದಿಂದ ಒಂದೇ ಅರ್ಥವನ್ನು ಬೋಧಿಸುವುದರಿಂದ ಇವೆಲ್ಲವೂ ನಾರಾಯಣನಿಗೇ ಅನ್ವಯಿಸುತ್ತವೆ ಎಂದು ಹೇಳುವುದೇ ಯುಕ್ತವಾಗುತ್ತದೆ. 'ಗಚ್ಛತೀತಿ ಗೌಃ', ಎಂಬ ವ್ಯುತ್ಪತ್ತಿಯಿಂದ ಅನೇಕಾರ್ಥಗಳು ತೋರಿದರೂ, ಗೋವಿನಲ್ಲಿಯೇ ಗೋಪದವು ರೂಢವಾಗಿರುವಂತೆ ಬ್ರಹ್ಮನ್‌ಶಬ್ದವು ಚತುರ್ಮುಖ, ಪ್ರಣವ, ಬ್ರಾಹ್ಮಣ ಇವುಗಳಿಗೆ ಸಾಮಾನ್ಯವಾಗಿ ಅನ್ವಯಿಸುವುದಾದರೂ, ಅನಂತಕಲ್ಯಾಣಗುಣವಿಶಿಷ್ಟನಾದ ನಾರಾಯಣನಲ್ಲಿಯೇ ಯೋಗರೂಢವಾದ್ದರಿಂದ ಅವನೇ ಜಗಜ್ಜನ್ಮಾದಿಕಾರಣನೆಂಬುದು ಯುಕ್ತವೇ ಆಗುತ್ತದೆ ಎಂದು ಪೂರ್ವಪಕ್ಷ ಸಂಭವಿಸುತ್ತದೆ.

ಇದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದು. ವಿಷ್ಣು ಜಗದ್ರಕ್ಷಣೆಗೆ ಕಾರಣನಾದರೂ ಅವನು ಆದಿಸೃಷ್ಟಿಗೆ ಕರ್ತನೆನಿಸಲಾರನು. "ಸೂಕ್ಷ್ಮಸೃಷ್ಟಿಯ ಅನಂತರ ಉಂಟಾದ ದೇವಾದಿಸೃಷ್ಟಿಗೂ ಮೊದಲು ವಿಷ್ಣುವಿನ ಉತ್ಪತ್ತಿಯಾಯಿತು" ಎಂದು ಶ್ರುತಿಯಲ್ಲಿ ಹೇಳಿದೆ. ವಿಷ್ಣುವಿನ ಉತ್ಪತ್ತಿಯನ್ನು ಋಗ್ವೇದದಲ್ಲಿ ಹೀಗೆ ಹೇಳಲಾಗಿದೆ. "ಮಹೇಶ್ವರನ ಸ್ವರೂಪವನ್ನು ತಿಳಿದಿರುವ ಬೃಹದಾಕಾರನಾದ ಆದಿವಿಷ್ಣು ಹುಟ್ಟಿ ಮೂರನೆಯ ಕೈಲಾಸವನ್ನು ರಕ್ಷಿಸುತ್ತಾನೆ". ಈ ಮಂತ್ರದಲ್ಲಿ ಬಂದಿರುವ ಬೃಹತ್ಪದವು ಆದಿವಿಷ್ಣುವನ್ನು ಬೋಧಿಸುತ್ತದೆ. "ಬೃಹದಾಕಾರನಾದ ವಿಷ್ಣುವಿಗೆ ನಮಸ್ಕರಿಸುತ್ತೇನೆ. ಬೃಹದಾಕಾರನಾದ ವಿಷ್ಣುವೇ, ಸುಮತಿಯಾದ ನಿನ್ನನ್ನು ಭಜಿಸುತ್ತೇನೆ" ಎಂದು ತೈತ್ತಿರೀಯದಲ್ಲಿ ಹೇಳಿದೆ. ಆದರೆ, ಅಜಾತನಾದ ಪರಮೇಶ್ವರನೇ ಎಲ್ಲರಿಗೂ ಕಾರಣನಾಗಿರುವನೆಂಬುದನ್ನು ಬಿಟ್ಟು ಅನುಪಸ್ಥಿತವಾದ್ದನ್ನು ಕಲ್ಪಿಸುವುದರಲ್ಲಿ ಪ್ರಮಾಣವಿಲ್ಲ. "ಅಜಾತನನ್ನು ಹುಟ್ಟಿದನೆಂದು ಭೀರುವು ತಿಳಿಯುತ್ತಾನೆ. ರುದ್ರನೇ ನಿನ್ನ ಯಾವ ದಕ್ಷಿಣಮುಖವಿದೆಯೋ ಅದರಿಂದ ನನ್ನನ್ನು ನಿತ್ಯವೂ ರಕ್ಷಿಸು" ಎಂದು ಶ್ವೇತಾಶ್ವರದಲ್ಲಿ ಮಹೇಶ್ವರನನ್ನೇ ಅಜಾತನೆಂದು ಹೇಳಿದೆ. ಶಂಭು ಆದಿವಿಷ್ಣುವಿನ ಜನಕನೆಂಬುದು ಯುಕ್ತವೇ ಆಗಿದೆ. ಋಗ್ವೇದದಲ್ಲಿ 'ಉಮಾಸಹಿತನಾದ ಶಿವನು ಇಂದ್ರ ಅಗ್ನಿ ವಿಷ್ಣು ಸೂರ್ಯ ಇವರೆಲ್ಲರಿಗೂ ಜನಕನಾಗಿರುವನು' ಎಂದು ಹೇಳಿದೆ. ಅಥರ್ವಣಶಿರಸ್ಸಿನಲ್ಲೂ, ಶಿವನೇ ಸರ್ವಕಾರಣನೆಂದು ಹೇಳಿದೆ. 'ಶಿವ ಏವ ಕೇವಲಃ' ಎಂಬ ಮಾತು ಸನಾತನಸೃಷ್ಟಿಯನ್ನು ಬೋಧಿಸುತ್ತದೆ. "ನಾರಾಯಣನಿಂದ ಬ್ರಹ್ಮ ಹುಟ್ಟಿದನು" ಎಂಬ ಮಾತು ಅವಾಂತರಸೃಷ್ಟಿಯನ್ನು ತಿಳಿಸುತ್ತದೆ. ವಾಯುವೀಯಸಂಹಿತೆಯಲ್ಲಿ "ಮಹೇಶ್ವರನಿಂದ ಕಾರಣಸ್ವರೂಪರಾದ ಮೂವರು ಹುಟ್ಟಿ ಚರಾಚರಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳನ್ನು ನಿರ್ವಹಿಸುತ್ತಿರುವರು. ತಂದೆಯು ಈ ಮೂವರನ್ನು ಮೂರು ಕಾರ್ಯಗಳಲ್ಲಿ ಮೊದಲು ವಿನಿಯೋಗಿಸಿದನು. ಸೃಷ್ಟಿಗೆ ಬ್ರಹ್ಮ, ಸ್ಥಿತಿಗೆ ವಿಷ್ಣು, ಸಂಹಾರಕ್ಕೆ ಕಾಲರುದ್ರ ಹೀಗೆ ನೇಮಕವಾಗಿರುವರು. ಹಾಗಾದರೂ ಪರಸ್ಪರ ದ್ವೇಷದಿಂದ ಒಬ್ಬರಿಗೊಬ್ಬರು ಜಗಳವಾಡುತ್ತ ತಪಸ್ಸುಮಾಡಿ ಪರಮಶಿವನನ್ನು ಸಂತೋಷಪಡಿಸಿ ಬ್ರಹ್ಮನಾರಾಯಣರನ್ನು ಕಾಲರುದ್ರನು ಕಲ್ಪಾಂತರದಲ್ಲೂ, ಬೇರೊಂದು ಕಲ್ಪದಲ್ಲಿ ಬ್ರಹ್ಮನು ವಿಷ್ಣು ರುದ್ರರನ್ನೂ ಮತ್ತು ಅದೇಕಲ್ಪದಲ್ಲಿ ವಿಷ್ಣುವು ರುದ್ರಬ್ರಹ್ಮರನ್ನೂ ಸೃಷ್ಟಿಸಿದನು. ನಾರಾಯಣನನ್ನು ಬ್ರಹ್ಮನೂ, ಬ್ರಹ್ಮನನ್ನು ರುದ್ರನೂ ಮತ್ತೊಂದು ಕಲ್ಪದಲ್ಲಿ ಸೃಷ್ಟಿಸಿದರು" ಎಂದೂ, "ಅವನೇ ಬ್ರಹ್ಮ, ಅವನೇ ಶಿವ, ಅವನು ಅಕ್ಷರನು, ಅವನೇ ಪರಮಾತ್ಮನೂ, ಸ್ವತಂತ್ರನೂ ಆಗಿದ್ದಾನೆ" ಈ ಬಗೆಯ ಶ್ರುತಿಗಳಲ್ಲೂ ತ್ರಿಮೂರ್ತಿಗಳಿಗತೀತನಾದವನನ್ನು ಪರಬ್ರಹ್ಮವೆಂದು ಹೇಳಲಾಗಿದೆ. ನಾರಾಯಣೋಪನಿಷತ್ತಿನಲ್ಲಿ ವಿಷ್ಣುವನ್ನು ತ್ರಿಮೂರ್ತ್ಯತೀತನೆಂದು ಹೇಳಿಲ್ಲ. "ಪ್ರಪಂಚಗಳೆಲ್ಲಕ್ಕೂ ಆಶ್ರಯಸ್ಥಲನೆನಿಸಿದ ಶಿವನನ್ನು ಅದ್ವೈತನೆಂದೂ, ತ್ರಿಮೂರ್ತ್ಯ

ತೀತನೆಂದೂ ಜ್ಞಾನಿಗಳು ತಿಳಿಯುತ್ತಾರೆ. ಅವನೇ ಆತ್ಮ, ಎಲ್ಲರಿಂದಲೂ ತಿಳಿಯ ಲ್ಪಡತಕ್ಕವನು." "ಶಿವನೇ ಅದ್ವೈತನು" ಈ ಶ್ರುತಿಗಳಲ್ಲಿ ಶಿವನೇ ತ್ರಿಮೂರ್ತ್ಯತೀತ ನೆಂದು ವ್ಯವಸ್ಥೆಯಾಗಿದೆ. ಆದ್ದರಿಂದ ಅವನೇ ಪರಬ್ರಹ್ಮವೆಂದು ತೀರ್ಮಾನಿಸಲಾಗಿದೆ. ಆನುಶಾಸನಿಕದಲ್ಲಿ–'ಪರಮೇಶ್ವರನು ದಕ್ಷಿಣದ ಅಂಗದಿಂದ ಲೋಕಸೃಷ್ಟಿಕರ್ತನಾದ ಬ್ರಹ್ಮನನ್ನೂ, ಲೋಕರಕ್ಷಕನಾದ ವಿಷ್ಣುವನ್ನು ಎಡಭಾಗದಿಂದಲೂ, ಲೋಕಸಂಹಾ ರಕನಾದ ಕಾಲರುದ್ರನನ್ನು ಹೃದಯದಿಂದಲೂ ಸೃಷ್ಟಿಸಿದನು', ಎಂದು ಹೇಳಿದೆ. ರುದ್ರನ ಉತ್ಪತ್ತಿ ಎಂಬುದು ಕಾಲರುದ್ರನಿಗೆ ಅನ್ವಯಿಸುತ್ತದೆ. ಇಲ್ಲವಾದರೆ 'ಅಜಾತ ನನ್ನು ಜಾತನೆಂದು ಭೀರುವು ತಿಳಿಯುತ್ತಾನೆ' ಎಂಬ ಶ್ರುತಿಗೆ ವಿರೋಧವುಂಟಾಗು ತ್ತದೆ. ವಿಷ್ಣುವಿನ ಉತ್ಪತ್ತಿ ಎಂದರೆ ಅವತಾರಗಳಿಗೆ ಅನ್ವಯಿಸುವುದಿಲ್ಲ, ಯಾಕೆಂದರೆ 'ವಿಷ್ಣುರಿತ್ಥಾ' ಎಂಬ ಶ್ರುತಿಯ ವಿರೋಧವುಂಟಾಗುತ್ತದೆ.

ಕಿಂಚ—ಅಥರ್ವಶಿಖಾಯಾಂ "ಅಕಾರಣಂ ಕಾರಣಂ ತು ಧ್ಯೇಯಃ" ಇತಿ ತುಶಬ್ದೇನ ಪೂರ್ವೋಕ್ತವೈಲಕ್ಷಣ್ಯಂ ಪ್ರತಿಪಾದ್ಯ ಶಂಭೋಃ ಪರಮಕಾರಣತ್ವೋಪದೇಶಾತ್, "ನಾರಾಯಣ ಆಸೀತ್" ಇತಿ ಲಙಂತ್ವೇನ ಅನದ್ಯತನಭೂತಭವನಕ್ರಿಯಾವಾಚಿನಾ ಭಗವತೋ ನಾರಾಯಣಸ್ಯ ಪ್ರಥಮೋತ್ಪತ್ತಿಮಾತ್ರಂ ಪ್ರತಿಪಾದ್ಯತೇ. "ಶಕ್ತೇರಾ ಸೀತ್ಪರಾಶರಃ" ಇತ್ಯಾದಿವತ್ ಛಾಗಪಶುನ್ಯಾಯೇನೈವ ಸದಾತ್ಮಾದಿಶ ಬ್ದಾನಾಂ ನಾರಾಯಣಾದಿಶಬ್ದಾನಾಮಪಿ ಶಿವಪರತ್ವಮೇವ. "ಸರ್ವೋ ವೈ ರುದ್ರಃ" ಇತಿ ಶ್ರುತೇಃ, "ಸ ಏವ ವಿಷ್ಣುಸ್ಸ ಪ್ರಾಣಃ ಸ ಕಾಲೋಽಗ್ನಿಃ ಸ ಚಂದ್ರಮಾಃ" ಇತಿ ಕೈವಲ್ಯೋಕ್ತೇಃ, "ಅಹಮೇಕಃ ಪ್ರಥಮ ಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತಃ" ಇತ್ಯಥರ್ವಶಿರೋವಚನಾತ್,

ಯಾನಿ ನಾಮಾನಿ ಗೋವಿಂದ ತವ ಲೋಕೇ ಮಹಾಂತಿ ವೈ ।
ತಾನ್ಯೇವ ಮಮ ನಾಮಾನಿ ನಾತ್ರ ಕಾರ್ಯಾ ವಿಚಾರಣಾ ॥

ಇತಿ ಹರಿವಂಶೇ ಕೃಷ್ಣಂ ಪ್ರತಿ ಶಿವವಚನಾತ್, ಜೈಮಿನಿಭಟ್ಟಭಾ ಸ್ಕರಾಚಾರ್ಯಾದಿಭಿಃ ವೈದಿಕೈಶ್ಚತುರ್ವೇದತಾತ್ಪರ್ಯಾನುಸಾರೇಣ ಶಿವಸ್ಯೈವ ಪರಬ್ರಹ್ಮತ್ವವ್ಯವಸ್ಥಾಪನಾತ್, ಭಗವತಾ ವ್ಯಾಸೇನಾಪಿ ಸೂತಸಂಹಿ ತಾಯಾಂ ಸರ್ವವೇದಾಂತತಾತ್ಪರ್ಯೇಣ ಶಿವೇ ಪರಬ್ರಹ್ಮತ್ವನಿರ್ದೇಶಾತ್, "ಧ್ಯಾಯೀತೇಶಾನಂ ಪ್ರಧ್ಯಾಯಿತವ್ಯಂ ಸರ್ವಮಿದಂ ಬ್ರಹ್ಮವಿಷ್ಣುರು ದ್ರೇಂದ್ರಾಸ್ತೇ ಸಂಪ್ರಸೂಯಂತೇ" "ಸೋಮಃ ಪವತೇ ಜನಿತಾ ಮತೀನಾಂ" "ಕ್ಷರಂ ಪ್ರಧಾನಮಮೃತಾಕ್ಷರಂ ಹರಃ ಕ್ಷರಾತ್ಮಾನಾವೀ ಶತೇ ದೇವ ಏಕಃ" "ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂ

ತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಂ" "ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುಃ ಯ ಇಮಾಲ್ಲೋಕಾನೀಶತ ಈಶನೀಭಿಃ" "ಯೇಷಾಮೀಶೇ ಪಶುಪತಿಃ ಪಶೂನಾಂ ಚತುಷ್ಪದಾಮುತ ಚ ದ್ವಿಪದಾಂ" (ತೈ. ಸಂ. ೩-೧-೪) "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ" "ನಿಧನಪತಯೇ ನಮಃ, ನಿಧನಪತಾಂತಿಕಾಯ ನಮಃ" "ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ" ಇತ್ಯಾದಿಶ್ರುತಿಕದಂಬೇನ ಪರಮಶಿವಸ್ಯೈವ ಜಗಜ್ಜನ್ಮಾದಿಹೇತುತ್ವವ್ಯಪದೇಶಾಚ್ಚ ಬ್ರಹ್ಮಲಕ್ಷಣಂ ಜಗಜ್ಜನ್ಮಾದಿಕಾರಣತ್ವಂ ಶಿವಸ್ಯ ನಿಷ್ಪ್ರತ್ಯೂಹಂ.

ಸ್ವಶಕ್ತ್ಯವಚ್ಛಿನ್ನರಾಜಸಗುಣವಿಶಿಷ್ಟೇನ ಭವಾಭಿಧಾನೇನ ಸರ್ವಜಗನ್ನಿರ್ಮಾಣಂ, ಸಾತ್ವಿಕಗುಣಾಸ್ಪದಮೃಡಾಭಿಧಾನೇನ ಪಾಲನಂ, ತಾಮಸಾವಚ್ಛಿನ್ನಹರಾಭಿಧಾನೇನ ಸರ್ವಸಂಹಾರಂ ಚ ಕುರ್ವನ್ ಶಿವಃ ತ್ರಿಗುಣಾತ್ಮಕಪ್ರಕೃತೇಃ ಸ್ವಚಿಚ್ಛಕ್ತೌ ಲಯಂ ಕೃತ್ವಾ ಸ್ವಯಂ ಸ್ವಭಾವಚಿಚ್ಛಕ್ತ್ಯೈಕ ಏವ ಭಾಸತೇ. ತದುಕ್ತಂ ಮಹಿಮ್ನಃಸ್ತವೇಽಪಿ—"ಬಹುಲರಜಸೇ ವಿಶ್ವೋತ್ಪತ್ತೌ ಭವಾಯ ನಮೋ ನಮಃ" ಇತಿ. ಅತ ಏವ ಶೈವಾಗಮೇ—

ಸರ್ವಜ್ಞತಾ ತೃಪ್ತಿರನಾದಿಬೋಧಃ ಸ್ವತಂತ್ರತಾನಿತ್ಯಮಲುಪ್ತಶಕ್ತಿಃ ।
ಅನಂತಶಕ್ತಿಶ್ಚ ವಿಭೋರ್ವಿಧಿಜ್ಞಾಃ ಷಡಾಹುರಂಗಾನಿ ಮಹೇಶ್ವರಸ್ಯ ॥
ಯದ್ಭಕ್ತಸ್ಥಲಮಿತ್ಯಾಹುಸ್ತತ್ಸರ್ವಜ್ಞತ್ವಮುಚ್ಯತೇ ।
ಯನ್ಮಾಹೇಶ್ವರಕಂ ನಾಮ ಸಾ ತೃಪ್ತಿರ್ಮಮ ಶಾಂಕರಿ ॥
ಯತ್ಪ್ರಸಾದಾಭಿಧಂ ನಾಮಂ ತದ್ಬೋಧೋ ಮೇ ನಿರಂಕುಶಃ ।
ಯತ್ಪ್ರಾಣಲಿಂಗಕಂ ನಾಮ ತತ್ಸ್ವಾತಂತ್ರ್ಯಮುದಾಹೃತಂ ॥
ಯದಸ್ತಿ ಶರಣಂ ನಾಮ ಹ್ಯಲುಪ್ತಾ ಶಕ್ತಿರುಚ್ಯತೇ ।
ಯದೈಕ್ಯಸ್ಥಲಮೂರ್ಧ್ವಸ್ಥಂ ಹ್ಯನಂತಾ ಶಕ್ತಿರುಚ್ಯತೇ ॥
ಏತದಂಗಸ್ಥಲಂ ದೇವಿ ಗುಹ್ಯಾದ್ಗುಹ್ಯತರಂ ಪರಂ ॥ ಇತಿ.

ಏವಂ ಸರ್ವಜ್ಞತ್ವಾದಿಧರ್ಮಾಣಾಂ ಶಿವಸ್ಯೈವ ಸಂಭವಾನ್ನೇತರೇಷಾಂ ಜಗಜ್ಜನ್ಮಾದಿಕಾರಣತ್ವಮಿತಿ ಸಿದ್ಧಂ.

ಅಥರ್ವಶಿರಸ್ಸಿನಲ್ಲಿ 'ಕಾರಣಂ ತು ಧ್ಯೇಯಃ' ಎಂಬಲ್ಲಿ ತು ಶಬ್ದದಿಂದ ಹಿಂದೆ ಹೇಳಿದ ವೈಲಕ್ಷಣ್ಯವನ್ನು ತೋರಿಸಿ ಶಂಭುವೇ ಪರಮಕಾರಣನೆಂದು ಹೇಳಿದೆ. 'ನಾರಾಯಣ ಆಸೀತ್' ಎಂಬಲ್ಲಿ ಲಜಲಕಾರವು ಅನದ್ಯತನಭೂತಕ್ರಿಯೆಯನ್ನು ತಿಳಿಸುವುದರಿಂದ ಪೂಜ್ಯನಾದ ನಾರಾಯಣನೇ ಮೊದಲು ಹುಟ್ಟಿದವನು ಎಂಬ ಅರ್ಥ

ಸ್ಪಷ್ಟಪಡುತ್ತದೆ. 'ಶಕ್ತಿಯಿಂದ ಪರಾರಶನು ಆದನು' ಎಂಬಂತೆ ಭಾಗಪಶುನ್ಯಾಯ ದಿಂದಲೇ ಸತ್-ಆತ್ಮ ಎಂಬ ಶಬ್ದಗಳಿಗೂ ನಾರಾಯಣಾದಿಶಬ್ದಗಳಿಗೂ ಶಿವಪರವಾದ ಅರ್ಥವೇ ಆಗುತ್ತದೆ. "ಎಲ್ಲವೂ ರುದ್ರನೇ–ಅವನೊಬ್ಬನೇ ವಿಷ್ಣುವೂ, ಪ್ರಾಣನೂ, ಕಾಲನೂ, ಅಗ್ನಿಯೂ, ಚಂದ್ರನೂ ಆಗಿದ್ದಾನೆ" ಎಂದು ಕೈವಲ್ಯಶ್ರುತಿ ತಿಳಿಸುತ್ತದೆ. 'ನಾನೊಬ್ಬನೇ ಮೊದಲೂ ಇದ್ದೆನು, ಈಗಲೂ ಇದ್ದೇನೆ, ಮುಂದೆಯೂ ಇರುವೆನು. ನನಗಿಂತ ಬೇರೆ ಯಾರೂ ಇಲ್ಲ' ಎಂದು ಅಥರ್ವಶಿಖೆಯಲ್ಲಿ ಹೇಳಿದೆ. "ಗೋವಿಂದನೇ, ಈ ಲೋಕದಲ್ಲಿ ನಿನ್ನ ಯಾವ ಹೆಸರುಗಳು ಪ್ರಸಿದ್ಧವಾಗಿವೆಯೋ ಅವೆಲ್ಲವೂ ನನ್ನ ಹೆಸರೇ ಆಗಿವೆ. ಈ ಬಗ್ಗೆ ಸಂದೇಹಪಡಬೇಕಾಗಿಲ್ಲ" ಎಂದು ಹರಿವಂಶದಲ್ಲಿ ಕೃಷ್ಣನಿಗೆ ಶಿವನು ಹೇಳುತ್ತಾನೆ. ಜೈಮಿನಿ, ಭಟ್ಟಭಾಸ್ಕರನೇ ಮೊದಲಾದ ವೈದಿಕರು ವೇದಾನು ಸಾರವಾಗಿ ಶಿವನೇ ಪರಬ್ರಹ್ಮವೆಂದು ಸ್ಥಾಪಿಸಿರುವುದರಿಂದ, ಭಗವಾನ್ ವ್ಯಾಸನೂ ಸಹ ಸೂತಸಂಹಿತೆಯಲ್ಲಿ ಶಿವನೇ ಪರಬ್ರಹ್ಮವೆಂಬುದು ಎಲ್ಲಾ ವೇದಾಂತಗಳ ತಾತ್ಪರ್ಯವೆಂದೂ, ಬ್ರಹ್ಮಲಕ್ಷಣವಾದ ಜಗಜಗಜ್ಜನ್ಮಾದಿಕಾರಣತ್ವವೂ ಶಿವನಿಗೇ ಅನ್ವಯಿಸುವುದೆಂದೂ ಸ್ಥಾಪಿಸಿದ್ದಾನೆ. "ಜೀವಪ್ರಧಾನರಿಬ್ಬರನ್ನೂ ನಿಯಮಿಸುವ ದೇವನೊಬ್ಬನಿದ್ದಾನೆ". "ಎಲ್ಲಾ ವಿದ್ಯೆಗಳಿಗೆ ನಿಯಾಮಕನೂ, ಎಲ್ಲಾ ಜೀವರಿಗೂ ಈಶ್ವರನೂ, ಬ್ರಹ್ಮನಿಗೆ ಅಧಿಪತಿಯೂ ಆದ ಯಾವ ಪರಬ್ರಹ್ಮವುಂಟೋ ಅವನೇ ಶಿವನು, ಅವನೇ ಸದಾಶಿವನು". "ಒಬ್ಬನೇ ರುದ್ರನು ಎರಡನೆಯವನಿಲ್ಲದೆ ಇರುವನು" "ಯಾವನು ಈ ಲೋಕಗಳಮೇಲೆ ಅಧಿಕಾರ ನಡೆಸಬಲ್ಲನೋ, ಇವನ್ನು ಸೃಷ್ಟಿಸಬಲ್ಲನೋ, ಯಾವನು ತನ್ನ ಸಮರ್ಥವಾದ ಶಕ್ತಿಯಿಂದ ಇವೆಲ್ಲವನ್ನೂ ಶಾಸನಮಾಡಬಲ್ಲನೋ ಅವನು ಒಬ್ಬನೇ ಆಗಿರುವನು". "ಎರಡು ಕಾಲು ಮತ್ತು ನಾಲ್ಕು ಕಾಲುಗಳಿರುವ ಯಾವ ಎಲ್ಲಾ ಪಶುಗಳಮೇಲೂ ಅಧಿಕಾರ ನಡೆಸುವನೋ ಅವನೇ ಪಶುಪತಿಯು". "ಪ್ರಪಂಚಕ್ಕಾಶ್ರಯನೂ ಶಾಂತನೂ ಆದ ಶಿವನನ್ನು ನಾಲ್ಕ ನೆಯವನೆಂದೂ, ಅದ್ವೈತನೆಂದೂ ಜ್ಞಾನಿಗಳು ಹೇಳುತ್ತಾರೆ". "ಎಲ್ಲಾ ಭೂತಗ ಳನ್ನು ನಾಶಪಡಿಸುವವನಿಗೂ ಮನಸ್ಸನ್ನು ಉನ್ಮನಗೊಳಿಸುವವನಿಗೂ ನಮಸ್ಕಾರ". ಈ ಶ್ರುತಿಗಳಲ್ಲಿ ಪರಮಶಿವನಿಗೇ ಜಗಜ್ಜನ್ಮಾದಿಕಾರಣತ್ವವನ್ನು ಹೇಳಲಾಗಿದೆ. ತನ್ನ ಶಕ್ತಿ ಯಲ್ಲಿರುವ ರಾಜಸಗುಣವಿಶಿಷ್ಟವಾದ ಭವನೆಂಬ ಹೆಸರಿನಿಂದ ಸರ್ವಜಗತ್ತಿನ ನಿರ್ಮಾ ಣವನ್ನು, ಸಾತ್ತ್ವಿಕಗುಣದಿಂದ ಕೂಡಿದ ಮೃಡನೆಂಬ ಹೆಸರಿನಿಂದ ಜಗತ್ತಿನ ರಕ್ಷಣೆ ಯನ್ನು, ತಮೋಗುಣದಿಂದ ಕೂಡಿದ ಹರನೆಂಬ ಹೆಸರಿನಿಂದ ಸರ್ವಸಂಹಾರವನ್ನು ನಡೆಸುತ್ತ ಪರಮಶಿವನು ತ್ರಿಗುಣಾತ್ಮಕವಾದ ಪ್ರಕೃತಿಯನ್ನು ಪ್ರಳಯಕಾಲದಲ್ಲಿ ತನ್ನ ಚಿತ್‌ಶಕ್ತಿಯೊಳಗೆ ಲಯಗೊಳಿಸಿ ತಾನೂ ಸಹ ತನ್ನ ಸ್ವಭಾವವೆನಿಸಿದ ಆ ಚಿತ್‌ಶಕ್ತಿ ಯೊಡನೆ ಶೋಭಿಸುತ್ತಿರುವನು. ಮಹಿಮ್ನಸ್ತವದಲ್ಲಿ "ವಿಶ್ವದ ಉತ್ಪತ್ತಿಗಾಗಿ ಭವನೆನಿಸಿದ ನಿನಗೆ ನಮಸ್ಕಾರ" ಎಂದು ಹೇಳಿದೆ. ಶೈವಾಗಮದಲ್ಲಿ "ಸರ್ವಜ್ಞತೆ ತೃಪ್ತಿ-ಅನಾದಿಬೋಧ-ಸ್ವಾತಂತ್ರ್ಯ-ಅಲುಪ್ತಶಕ್ತಿಮತ್ತ್ವ-ಅನಂತಶಕ್ತಿಮತ್ತ್ವ ಈ

ಧರ್ಮಗಳು ಮಹೇಶ್ವರನ ಆರು ಅಂಗಗಳು" ಎಂದು ಹೇಳಿದೆ. ಪರಮಶಿವನ ಸರ್ವಜ್ಞತೆಯೇ ಸಂಕೋಚಗೊಂಡು ಭಕ್ತಸ್ಥಲವೆನಿಸಿದೆ. ತೃಪ್ತಿಯೇ ಮಾಹೇಶ್ವರ ಸ್ಥಲವೆನಿಸಿದೆ. ಅವನ ನಿರಂಕುಶವಾದ ಬೋಧವೇ ಪ್ರಸಾದಿಸ್ಥಲವೆನಿಸಿದೆ. ಸ್ವಾತಂತ್ರ್ಯವೇ ಪ್ರಾಣಲಿಂಗಿಸ್ಥಲವಾಗಿದೆ. ಅಲುಪ್ತಶಕ್ತತೆಯೇ ಶರಣಸ್ಥಲವೆನಿಸಿದೆ. ಅನಂತಶಕ್ತತೆಯೇ ಐಕ್ಯಸ್ಥಲವೆನಿಸಿದೆ. ಇದೇ ಪರಮಗುಹ್ಯವಾದ ಅಂಗಸ್ಥಲದ ರಹಸ್ಯ. ಪರಮಶಿವನ ಸರ್ವಜ್ಞತ್ವಾದಿ ಧರ್ಮಗಳೇ ಅವನ ವಿನೋದಕ್ಕಾಗಿ ಜೀವನ ಆರು ಅವಸ್ಥಾ ವಿಶೇಷಗಳಾಗಿರುವುದರಿಂದ ಈ ಜೀವರಿಂದ ಕೂಡಿದ ಜಗತ್ತಿನ ಜನ್ಮಾದಿ ಕಾರಣತ್ವವು ಪರಮಶಿವನಲ್ಲದೆ ಬೇರೆ ಯಾರಿಗೂ ಸಂಭವಿಸುವುದಿಲ್ಲ.

## ॥ ಶಾಸ್ತ್ರಯೋನಿತ್ವಾಧಿಕರಣಂ ॥ ೩ ॥

ಜಿಜ್ಞಾಸ್ಯಬ್ರಹ್ಮಣೋ ಲಕ್ಷಣಂ ಪ್ರಸಾಧ್ಯ ಪ್ರಮಾಣಮಾಹ—

### ॥ ಶಾಸ್ತ್ರಯೋನಿತ್ವಾತ್ ॥ (೧-೧-೩)

"ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಸ್ಸಾಮವೇದಃ" (ಬೃ. ೨-೪-೧೦) ಇತ್ಯಾದಿವಾಕ್ಯಮಸ್ಯ ಸೂತ್ರಸ್ಯ ವಿಷಯಃ. ಶಾಸ್ತ್ರಂ ಋಗ್ವೇದಾದಿ, ತಸ್ಯ ಯೋನಿಃ ಕಾರಣಂ ಶಿವಃ. "ಶಿವೋ ಮಾಮೇವ ಪಿತರಃ?" ಇತಿ ಶ್ರುತೇಃ. ಅತ ಏವ ನಿಗಮಾಗಮಾನಾಂ ಪ್ರಾಮಾಣ್ಯಂ. ಅತೋ ಜಗಜ್ಜನ್ಮಾದಿಹೇತುಶ್ಶಿವ ಏವ. ಅತ್ರ ಶ್ರೌತಪ್ರತಿಜ್ಞಾಸಂಗತಿಃ. "ಶಿವೋ ಮಾಮೇವ ಪಿತರಃ" ಇತ್ಯಾದೌ ವೇದಾನಾಂ ಪರಮೇಶ್ವರಕಾರಣತ್ವಂ, "ವಾಚಾ ವಿರೂಪನಿತ್ಯಯಾ" ಇತ್ಯಾದೌ ನಿತ್ಯತ್ವಂ ಚ ದರ್ಶಿತಂ.

ಪರಮಶಿವಸ್ಯ ಬ್ರಹ್ಮಣಃ ನಿಗಮಾಗಮಕಾರಣತ್ವಂ ಯುಕ್ತಂ ನ ವೇತಿ ಸಂದಿಹ್ಯತೇ—

ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ।
ಆದೌ ವೇದಮಯೀ ದಿವ್ಯಾ ಯತಸ್ಸರ್ವಾಃ ಪ್ರವೃತ್ತಯಃ ॥

ಇತ್ಯಾದಿಸ್ಮೃತೌ ವೇದಸ್ಯ ನಿತ್ಯತ್ವಶ್ರವಣಾತ್, ಪರಮೇಶ್ವರಜನ್ಯತ್ವೇ ಪೌರುಷೇಯತ್ವೇನಾಪ್ರಾಮಾಣ್ಯಾನಿತ್ಯತ್ವಪ್ರಸಂಗಾಚ್ಚ. ತಸ್ಮಾತ್ ಪರಮೇಶ್ವರವದ್ವೇದಾನಾಮಜನ್ಯತ್ವಂ ತ್ರೈಕಾಲಿಕಾಬಾಧ್ಯತ್ವಂ ಚೇತಿ ಪ್ರಾಪ್ತೇ—ಬ್ರೂಮಃ.

ವೇದಾನಾಂ ಸ್ವಯಂಭವತ್ವೇ "ಶಿವೋ ಮಾಮೇವ ಪಿತರಃ" ಇತಿ ಶ್ರುತಿವಿರೋಧಾತ್, ಸಾಮಶಾಖಾಗತಚರಣವ್ಯೂಹೇ ತೇಷಾಂ ಶರೀರ

ಗೋತ್ರವರ್ಣಾದಿನಿರೂಪಣಾತ್, ಪೂರ್ವಪೂರ್ವಸ್ಯೋತ್ತರೋತ್ತರಜ್ಞಾನ ವಿಷಯಹೇತುತ್ವಾತ್, ತೇಷಾಂ ಶಬ್ದಾತ್ಮಕಗುಣತ್ವೇನ ವ್ಯೋಮಕಾರಣ ತ್ವಾತ್, "ಆತ್ಮನ ಆಕಾಶಸ್ಸಂಭೂತಃ" ಇತ್ಯಾದಿನಾ ಆಕಾಶಾದಿಪಂಚ ಭೂತಾನಾಂ ಪರಮೇಶ್ವರಕಾರಣತ್ವನಿರ್ದೇಶಾಚ್ಚ ಕಥಂ ವೇದಾನಾಂ ಸ್ವಯಂಭವತ್ವಂ? ತಥಾಚ ಸ್ಮೃತಿಃ—

ಅಷ್ಟಾದಶಾನಾಮೇತಾಸಾಂ ವಿದ್ಯಾನಾಂ ಬ್ರಹ್ಮವರ್ತ್ಮನಾಂ ।
ಆದಿಕರ್ತಾ ಶಿವಸ್ಸಾಕ್ಷಾಚ್ಛೂಲಪಾಣಿರಿತಿ ಶ್ರುತಿಃ ॥
ಸದ್ಯೋಜಾತೇನ ಋಗ್ವೇದಂ ವಾಮದೇವೇನ ಯಾಜುಷಂ ।
ಅಘೋರೇಣ ತಥಾ ಸಾಮ ಪುರುಷೇಣ ತ್ವಥರ್ವಣಂ ॥
ಈಶಾನೇನ ಮುಖೇನೈವ ಕಾಮಿಕಾದ್ಯಾಗಮಾಂಸ್ತಥಾ ।
ಜನಯಾಮಾಸ ವಿಶ್ವೇಶಃ ಸರ್ವಸಿದ್ಧಿಪ್ರದಾಯಕಃ ॥
ವಿಮರ್ಶರೂಪಿಣೀ ಶಕ್ತಿಃ ಶಿವಸ್ಯ ಪರಮಾತ್ಮನಃ ।
ನಿಗಮಾಗಮರೂಪಾ ಸ್ಯಾತ್ ಸರ್ವತತ್ತ್ವಪ್ರಕಾಶಿನೀ ॥
ತಸ್ಮಾದ್ವೇದಾಗಮಾರ್ಥೇಷು ಯಃ ಕುರ್ಯಾದ್ಭೇದಭಾವನಾಂ ।
ಸ ಸಹಸ್ರಕುಲಂ ಘೋರೇ ನರಕೇ ಪತತಿ ಧ್ರುವಂ ॥

ಇತಿ ಪರಮೇಶ್ವರಸ್ಯ ನಿಗಮಾಗಮಾದಿಸರ್ವವಿದ್ಯಾಕರ್ತೃತ್ವಪ್ರತಿ ಪಾದನಾತ್, ಸೃಷ್ಟೇಃ ಪ್ರಾಕ್ ಸ್ವಾತ್ಮವಿಲೀನಭೂತಸ್ವಶಕ್ತ್ಯಾತ್ಮಕವೇದಾ ಗಮಾದೀನ್ ನಿಶ್ವಸಿತವದಯತ್ನೇನ ಪೂರ್ವಪೂರ್ವಾನುಪೂರ್ವೀವರ್ಣ ರೂಪರಚನಯಾ ಬಹಿರಾವಿಷ್ಕರೋತಿ. ತಸ್ಮಾನ್ನಿಗಮಾಗಮಾದೀನಾ ಮಪೌರುಷೇಯತ್ವಮೀಶ್ವರಕಾರಣಕತ್ವಂ ಚ ಯುಕ್ತಮೇವ. ಜನ್ಯತ್ವಾ ಜನ್ಯತ್ವವಿಧಾಯಕಶ್ರುತೀನಾಮತೋ ನ ವಿರೋಧಃ.

## ಶಾಸ್ತ್ರಯೋನಿತ್ವಾಧಿಕರಣಂ ॥ ೩ ॥

## ಶಾಸ್ತ್ರಯೋನಿತ್ವಾತ್ (೧-೧-೩)

ಜಿಜ್ಞಾಸ್ಯನಾದ ಪರಮಶಿವನ ಲಕ್ಷಣವನ್ನು ಹೇಳಿದಮೇಲೆ ಈಗ ಆ ಬಗ್ಗೆ ಪ್ರಮಾಣವನ್ನು ತಿಳಿಸಲಾಗುವುದು. "ನಾಲ್ಕು ವೇದಗಳು ಈ ಮಹಾಭೂತದ ನಿಶ್ವಾಸ ಗಳಾಗಿವೆ", ಎಂಬ ಶ್ರುತಿಯೇ ಈ ಸೂತ್ರದ ವಿಷಯ. ಋಗ್ವೇದವೇ ಮೊದಲಾದ ಶಾಸ್ತ್ರಗಳಿಗೆ ಯೋನಿ ಎಂದರೆ ಮೂಲಕಾರಣನು ಪರಮಶಿವನೇ ಇರುವನು. ಶಿವಶಕ್ತಿ ಯರೇ ನನ್ನ ತಂದೆತಾಯಿಗಳು" ಎಂದು ಶ್ರುತಿ ಹೇಳುತ್ತದೆಯಾದ್ದರಿಂದಲೇ ನಿಗಮಾ ಗಮಗಳು ಈಬಗ್ಗೆ ಪ್ರಮಾಣವಾಗಿವೆ. ಆದ್ದರಿಂದಲೇ ಜಗಜ್ಜನ್ಮಾದಿಗಳಿಗೆ ಶಿವನು ಕಾರಣನಾಗಿದ್ದಾನೆ. ಈ ವಿಷಯದಲ್ಲಿ ಮೇಲೆ ಹೇಳಿದ ಶ್ರುತಿಯೇ ಪ್ರಮಾಣ

ವೆನಿಸಿದೆ. ಅದರಲ್ಲಿ ವೇದಗಳಿಗೆ ಪರಮೇಶ್ವರನೇ ಕಾರಣನೆಂದು ತಿಳಿಸಲಾಗಿದೆ. ಆದರೆ "ಯಾವ ವಿಕಾರಗಳೂ ಇಲ್ಲದೆ ನಿತ್ಯವಾಗಿರುವ ವಾಣಿ" ಎಂದು ಶ್ರುತಿಯು ತನ್ನ ನಿತ್ಯತೆಯನ್ನೂ ಸೂಚಿಸುತ್ತದೆ ಆದ್ದರಿಂದ ಪರಶಿವನೇ ನಿಗಮಾಗಮ ಗಳಿಗೆ ಕಾರಣನೆಂಬುದು ಯುಕ್ತವೇ ಅಲ್ಲವೇ ಎಂಬ ಸಂದೇಹಕ್ಕವಕಾಶವಿದೆ. "ಆದಿ ಅಂತ್ಯಗಳಿಲ್ಲದೆ ನಿತ್ಯವೆನಿಸಿದ ವೇದವಾಣಿಯು ಸ್ವಯಂಭುವಾದ ಪರಮೇಶ್ವರನಿಂದ ಮೊದಲು ಹೊರಹೊಮ್ಮಿತು" ಎಂದು ಸ್ಮೃತಿಯಲ್ಲಿ ವೇದವನ್ನು ನಿತ್ಯವೆಂದು ಹೇಳಲಾಗಿದೆ. ಪರಮೇಶ್ವರನಿಂದ ವೇದ ಹುಟ್ಟಿದಮೇಲೆ ಅದು ಪೌರುಷೇಯವೇ ಆದ್ದರಿಂದ ಅಪ್ರಮಾಣವೂ ಅನಿತ್ಯವೂ ಆಗಬೇಕಾಗುತ್ತದೆ. ಆದ್ದರಿಂದ ಪರಮೇಶ್ವರ ನಂತೆ ವೇದಗಳೂ ನಿತ್ಯವೆಂದೂ ಮತ್ತೆ ಯಾವ ಕಾಲದಲ್ಲೂ ಯಾವ ಬಾಧೆಗೂ ಸಿಲುಕಲಾರವೆಂಬಲ್ಲಿ ಆಕ್ಷೇಪ ಉಂಟಾಗುತ್ತದೆ. ಈ ಬಗ್ಗೆ ಸಮಾಧಾನವನ್ನು ಹೀಗೆ ಹೇಳ ಬಹುದು. ವೇದಗಳು ನಿತ್ಯವಾಗಿದ್ದರೆ 'ಶಿವಶಕ್ತಿಯರೇ ವೇದದ ತಂದೆತಾಯ್ಗಳು' ಎಂಬ ಶ್ರುತಿಗೆ ವಿರೋಧಬರುತ್ತದೆ. ಸಾಮಶಾಖೆಯ ಚರಣವ್ಯೂಹದಲ್ಲಿ ವೇದಗಳಿಗೆ ಶರೀರ, ಗೋತ್ರ, ವರ್ಣಗಳನ್ನು ನಿರೂಪಿಸಲಾಗಿದೆ. ಹಿಂದಿನ ವಿಷಯ ಮುಂದಿನ ಜ್ಞಾನಕ್ಕೆ ವಿಷಯವೂ ಕಾರಣವೂ ಆಗುತ್ತದೆ. ವೇದಗಳು ಶಬ್ದರೂಪವಾದ್ದರಿಂದ, ಶಬ್ದ ಆಕಾಶದ ಗುಣವಾದ್ದರಿಂದ ಆಕಾಶವೇ ಶಬ್ದಕ್ಕೂ ಕಾರಣವಾಗುತ್ತದೆ. 'ಆತ್ಮ ನಿಂದ ಆಕಾಶ ಹುಟ್ಟಿತು' ಎಂಬ ಶ್ರುತಿಯಲ್ಲಿ ಆಕಾಶಾದಿಪಂಚಭೂತಗಳಿಗೂ ಈಶ್ವರನೇ ಕಾರಣನೆಂದು ಹೇಳಿದ್ದರಿಂದ ವೇದಗಳು ಹೇಗೆ ನಿತ್ಯವಾದಾವು ? ಈ ಬಗ್ಗೆ ಸ್ಮೃತಿ "ಬ್ರಹ್ಮವನ್ನು ಪ್ರತಿಪಾದಿಸುವ ಹದಿನೆಂಟು ವಿದ್ಯೆಗಳಿಗೂ ಪರಮಶಿವನೇ ಆದಿಕರ್ತನೆಂದು ಶ್ರುತಿಯಲ್ಲಿ ಹೇಳಿದೆ. ಸದ್ಯೋಜಾತಮುಖದಿಂದ ಋಗ್ವೇದವನ್ನೂ, ವಾಮದೇವಮುಖದಿಂದ ಯಜುರ್ವೇದವನ್ನೂ, ಅಘೋರಮುಖದಿಂದ ಸಾಮ ವೇದವನ್ನೂ, ತತ್ಪುರುಷಮುಖದಿಂದ ಅಥರ್ವಣವೇದವನ್ನೂ, ಈಶಾನಮುಖದಿಂದ ಕಾಮಿಕಾದ್ಯಾಗಮಗಳನ್ನೂ ಸರ್ವಸಿದ್ಧಿಪ್ರದಾಯಕನಾದ ವಿಶ್ವೇಶ್ವರನು ಹೊರಗೆಡ ಹಿದನು. ಪರಮಶಿವನ ವಿಮರ್ಶಶಕ್ತಿಯೇ ಸರ್ವತತ್ತ್ವಗಳನ್ನು ಪ್ರಕಾಶಗೊಳಿಸುವ ನಿಗಮಾಗಮಗಳಾಗಿ ಪರಿಣಮಿಸಿತು. ಆದ್ದರಿಂದ ವೇದಾಗಮಗಳ ಅರ್ಥದಲ್ಲಿ ಯಾವನು ಭೇದಭಾವನೆಯನ್ನು ಕಲ್ಪಿಸುವನೋ ಅವನು ಸಾವಿರ ಜನ್ಮಗಳ ಕಾಲ ಭೀಕರನರಕ ದಲ್ಲಿ ಬೀಳುತ್ತಾನೆ" ಎಂದು ತಿಳಿಸುತ್ತದೆ. ಹೀಗೆ ನಿಗಮಾಗಮಗಳೆಲ್ಲಕ್ಕೂ ಪರಮೇಶ್ವರನೇ ಕರ್ತನೆಂಬುದು ಸ್ಪಷ್ಟವಾಗಿದೆ. ಸೃಷ್ಟಿಗೆ ಮೊದಲು ತನ್ನಲ್ಲಿಯೇ ವಿಲೀನವಾಗಿದ್ದ ತನ್ನ ಚಿತ್‌ಶಕ್ತಿ ಎನಿಸಿದ ನಿಗಮಾಗಮಗಳನ್ನು ಪರಮೇಶ್ವರನು ನಿಶ್ವಾಸದಂತೆ ಅನಾಯಾಸವಾಗಿ ಕ್ರಮಬದ್ಧವಾದ ರಚನೆಯಿಂದ ಹೊರಗೆಡಹಿದ್ದಾನೆ. ಆದ್ದರಿಂದ ಅವು ಅಪೌರುಷೇಯವೆನಿಸಿ ಈಶ್ವರನಿಂದ ಹೊರಬಿದ್ದಿವೆ ಎಂಬುದು ಯುಕ್ತವೇ ಆಗಿದೆ. ಆದ್ದರಿಂದಲೇ ವೇದಗಳು ಜನ್ಯವೆಂದೂ, ಅಜನ್ಯವೆಂದೂ ಹೇಳುವ ಶ್ರುತಿಗಳಲ್ಲಿ ಪರಸ್ಪರ ವಿರೋಧಕ್ಕೆ ಅವಕಾಶವಿಲ್ಲ.

ನನು—" ನ ಸನ್ನ ಚಾಸಚ್ಛಿವ ಏವ ಕೇವಲಃ " " ನಾನ್ಯತ್ ಕಿಂಚನ ಮಿಷತ್ " " ನೇಹ ನಾನಾಸ್ತಿ ಕಿಂಚನ " " ನ ತು ತದ್ದ್ವಿತೀಯಮಸ್ತಿ " ಇತ್ಯಾದಿಶ್ರುತಿಷು ದ್ವಿತೀಯವಸ್ತುನಿಷೇಧವ್ಯಪದೇಶಾತ್ಕಥಂ ವೇದಾನಾಂ ನಿತ್ಯತ್ವಂ? ಇತಿ ಚೇನ್ನ. " ಸರ್ವಂ ಖಲ್ವಿದಂ ಬ್ರಹ್ಮ " " ಸರ್ವೋ ವೈ ರುದ್ರಃ " ಇತ್ಯಾದಿಶ್ರುತಿಷು ಚರಾಚರಪ್ರಪಂಚಸ್ಯ ಬ್ರಹ್ಮೋಪಾದಾನತ್ವೇನ ಬ್ರಹ್ಮತ್ವವ್ಯಪದೇಶಾತ್ ಪೂರ್ವೋಕ್ತಶ್ರುತಿನಾಂ ನ ಜಗನ್ಮಿಥ್ಯಾತ್ವಪರತ್ವಂ. ಸೃಷ್ಟೇಃ ಪ್ರಾಗಪಿ ಸಂಕುಚಿತರೂಪೇಣ ನಿಗಮಾಗಮಾತ್ಮಕವಿಮರ್ಶರೂಪಪರಾಶಕ್ತೇರ್ಬೀಜಾಂಕುರವತ್ಪರಮೇಶ್ವರೇ ಸ್ಥಿತತ್ವಾತ್, ಶಕ್ತಿಶಕ್ತಿಮತೋರಭೇದಾಚ್ಚ. " ಪರಾಸ್ಯ ಶಕ್ತಿರ್ವಿವಿಧೈವ " ಇತಿ ಶ್ರುತ್ಯಾ ಪರಮೇಶ್ವರಸ್ಯ ಸ್ವಾಭಾವಿಕತ್ವೇನ ಶಕ್ತೇರುಪದೇಶಾತ್, ಜಗನ್ಮಿಥ್ಯಾತ್ವೇ ಶ್ರುತ್ಯಭಾವಾತ್ತದಯುಕ್ತಂ. ನನು–ಶಬ್ದಬುದ್ಧಿಕರ್ಮಣಾಂ ತ್ರಿಕ್ಷಣಾವಸ್ಥಾಯಿತ್ವೇನ ಶಬ್ದಾತ್ಮಕಸ್ಯ ವೇದಸ್ಯ ಕಥಂ ನಿತ್ಯತ್ವಂ ಇತಿ ಚೇನ್ನ. " ಕಾರಣನಿತ್ಯತ್ವೇ ಕಾರ್ಯನಿತ್ಯತ್ವಂ " ಇತಿ ನ್ಯಾಯೇನ ಕಾರಣರೂಪಸರ್ವವೇದಾತ್ಮಕವಿಮರ್ಶಶಕ್ತೇರ್ನಿತ್ಯತ್ವಾತ್ ಕಾರ್ಯರೂಪವೇದಸ್ಯಾಪಿ ನಿತ್ಯತ್ವಂ ನಿಷ್ಪ್ರತ್ಯೂಹಮೇವ. ಕಿಂಚ—ನಿತ್ಯಮುಕ್ತಬುದ್ಧಶುದ್ಧಸ್ವಭಾವಸ್ಯ ಸ್ವತಃಪ್ರಮಾಣಭೂತಸ್ಯ ಪರಮಾಪ್ತಸ್ಯ ಮಹೇಶ್ವರಸ್ಯ ವಚನಂ ಪ್ರಮಾಣಮೇವ. " ಯತ್ ಪೌರುಷೇಯಂ ತದಪ್ರಮಾಣಂ " ಇತಿ ನಿಯಮಸ್ತು ರಾಗದ್ವೇಷಾದಿಪಾಶಬದ್ಧಮಾನುಷವಿಷಯಕ ಏವ. ಕಿಂಚ ವೇದಾ ಅಪಿ ಶಾಂಭವದೀಕ್ಷಾಂ ಲಬ್ಧ್ವಾ ಶಿವಪ್ರಸಾದಮಹಿಮ್ನಾ ಪರಮೇಶ್ವರಾನಂತಕಲ್ಯಾಣಗುಣಸ್ತುತಿಪಾಠಕಕವಯ ಇವ ತನ್ಮಹಿಮಾತಿಶಯಂ ವಿಧಿಲಕ್ಷಣಮುಖೇನ ಸ್ತುವಂತಿ. ಕಿಂಚ ವೇದಾನಾಮಪಿ ಭಸ್ಮಧಾರಣಂ ಶ್ರೂಯತೆ. "ತ್ರಿಯಾಯುಷಂ ಜಮದಗ್ನೇಃ ಕಶ್ಯಪಸ್ಯ ತ್ರಿಯಾಯುಷಂ ಯದ್ದೇವಾನಾಂ ತ್ರಿಯಾಯುಷಂ ತನ್ಮೇ ಅಸ್ತುತ್ರಿಯಾಯುಷಂ " ಅತ್ರ ತ್ರಿಯಾಯುಷಶಬ್ದಸ್ಯ "'ಮಾನಸ್ತೋಕೆ' ಇತಿ ಮಂತ್ರೇಣ ಮಂತ್ರಿತಂ ಭಸ್ಮ ಧಾರಯೇತ್, ಊರ್ಧ್ವಪುಂಡ್ರಂ ಭವೇತ್ಸಾಮ ಮಧ್ಯಪುಂಡ್ರಂ ಯಜೂಂಷಿ ಚ। ಅಧಃಪುಂಡ್ರಮೃಚಸ್ಸಾಕ್ಷಾತ್ ತಸ್ಮಾತ್ಪುಂಡ್ರಂ ತ್ರಿಯಾಯುಷಂ " ಇತಿ ತಿರ್ಯಕ್ತ್ರಿಪುಂಡ್ರಪರತ್ವಂ ಶ್ವೇತಾಶ್ವತರೋಪನಿಷದಿ ಶ್ರೂಯತೆ. " ತಾನಿ ವಾ ಏತಾನಿ ರುದ್ರಾಕ್ಷಾಣಿ ಯತ್ರಯೋ ವೇದಾ ಧಾರಯಂತಿ ತಸ್ಮಾದ್ದೇವಾ ಧಾರಯಂತಿ। ತಸ್ಮಾತ್ತಾನಿ ಧಾರಯನ್ ಗಚ್ಛನ್ ತಿಷ್ಠನ್ ಖಾದನ್ ಸ್ವಪನ್ ಉನ್ಮಿಷನ್ನಿಮಿಷನ್ ಹಸನ್ ಸರ್ವಾಣ್ಯೇನಾಂಸಿ ತರತಿ ರುದ್ರೋ ಭೂತ್ವಾ ರುದ್ರೋ ಭವತಿ " ಇತಿ ಬೋಧಾಯನಶಾಖಾಯಾಂ ರುದ್ರಾಕ್ಷಧಾರಣಂ ದೃಶ್ಯತೆ. " ಅಯಂ

**ಮೋ ಹಸ್ತೋ ಭಗವಾನ್ ಇತ್ಯಾದಿನಾ ಋಗ್ವೇದೇ, "ಯಾ ತೇ ರುದ್ರ ಶಿವಾ ತನೂಃ" ಇತಿ ಯಜುರ್ವೇದೇ ಚ ವೇದಪುರುಷಾಣಾಂ ಶಿವಲಿಂಗಧಾರಣಂ ದರ್ಶಿತಂ. ಕಿಂಚ "ಜಗತಾಂ ಪತಯೇ ನಮಃ" "ನಮೋ ಹಿರಣ್ಯಬಾಹವೇ" ಇತ್ಯಾದಿನಾ ಸ್ತುತಿಂ ಚ ಕುರ್ವಂತಿ. ತಸ್ಮಾತ್ಪರಮೇಶ್ವರವಿಮರ್ಶಾತ್ಮಕಶಕ್ತಿತಯಾ ವೇದಾಗಮಾನಾಂ ಪರಶಿವಪ್ರಾಮಾಣ್ಯೇ ಮುಖ್ಯತ್ವಮುಪಪದ್ಯತೇ.**

"ಸತ್ ಅಸತ್ ಏನೊಂದೂ ಇಲ್ಲದೆ ಶಿವನೊಬ್ಬನೇ ಇದ್ದನು" "ಬೇರೆ ಏನೊಂದೂ ಇರಲಿಲ್ಲ" "ಇಲ್ಲಿ ಬೇರೆ ಯಾವ ವೈವಿಧ್ಯವೂ ಇಲ್ಲ" "ಅವನಿಗೆ ಎರಡನೆಯ ವಸ್ತುವೇ ಇಲ್ಲ" ಈ ಬಗೆಯ ಶ್ರುತಿಗಳಲ್ಲಿ ದ್ವಿತೀಯ ವಸ್ತುವನ್ನು ನಿಷೇಧಿಸಿರುವುದರಿಂದ ವೇದಗಳು ಹೇಗೆ ನಿತ್ಯಗಳೆನಿಸಬಲ್ಲವು ಎಂದು ಕೇಳುವುದು ಯುಕ್ತವಲ್ಲ. "ಎಲ್ಲವೂ ಬ್ರಹ್ಮ" "ಎಲ್ಲವೂ ರುದ್ರ" ಈ ಶ್ರುತಿಗಳಲ್ಲಿ ಚರಾಚರಜಗತ್ತಿಗೆ ಬ್ರಹ್ಮವೇ ಉಪಾದಾನವಾಗಿರುವುದರಿಂದ ಇದೆಲ್ಲವನ್ನೂ ಬ್ರಹ್ಮವೆಂದೇ ವೇದದಲ್ಲಿ ಹೇಳಿದೆ. ಆದ್ದರಿಂದ ಜಗತ್ತು ಮಿಥ್ಯೆ ಎಂಬುದಕ್ಕೆ ಶ್ರುತಿಗಳಲ್ಲಿ ಆಧಾರವು ಸಿಕ್ಕುವುದಿಲ್ಲ. ಇದೂ ಅಲ್ಲದೆ ಸೃಷ್ಟಿಗೆ ಮೊದಲು ಇದೆಲ್ಲವೂ ಸಂಕುಚಿತವಾಗಿ ಪರಮೇಶ್ವರನಲ್ಲಿ ವಿಮರ್ಶಶಕ್ತಿಯ ರೂಪದಿಂದ ಇದ್ದೇ ಇತ್ತು. ಇದೂ ಅಲ್ಲದೆ, ಶಕ್ತಿಶಕ್ತಿಮಾನ್ ಇಬ್ಬರಿಗೂ ಅಭೇದವಿರುತ್ತದೆ. "ಪರಮಾತ್ಮನಲ್ಲಿ ಪರಾಶಕ್ತಿಯು ಜ್ಞಾನಕ್ರಿಯಾರೂಪದಿಂದ ಸಹಜವಾಗಿ ನೆಲಸಿದೆ" ಎಂದು ಶ್ರುತಿಯಲ್ಲಿ ಶಕ್ತಿಯನ್ನು ಪರಮೇಶ್ವರನ ಸ್ವಭಾವವೆಂದು ಹೇಳಲಾಗಿದೆ. ಆದ್ದರಿಂದ ಶಿವಮಯವಾದ ಈ ಜಗತ್ತನ್ನು ಮಿಥ್ಯೆ ಎಂದು ಹೇಳಲು ಯಾವ ಶ್ರುತಿಯೂ ಇಲ್ಲದ್ದರಿಂದ ಜಗನ್ಮಿಥ್ಯಾತ್ವವಾದವು ಯುಕ್ತವಲ್ಲ.

ಶಬ್ದಬುದ್ಧಿಕರ್ಮಗಳು ಮೂರುಕ್ಷಣಕಾಲವಷ್ಟೇ ಇರುವವಾದ್ದರಿಂದ ಶಬ್ದರೂಪವಾದ ವೇದ ಹೇಗೆ ನಿತ್ಯವಾದೀತು? ಎಂದು ಕೇಳಿದರೆ, 'ಕಾರಣ ಸತ್ಯವಾದ್ದರಿಂದ ಕಾರ್ಯವೂ ಸತ್ಯವೇ' ಎಂಬ ನ್ಯಾಯದಿಂದ ಕಾರಣವೆನಿಸಿದ ಸರ್ವವೇದರೂಪವಾದ ವಿಮರ್ಶಶಕ್ತಿಯು ನಿತ್ಯವಾದ್ದರಿಂದ ಕಾರ್ಯವೆನಿಸಿದ ವೇದವೂ ನಿತ್ಯವೆಂಬಲ್ಲಿ ಯಾವ ಸಂಶಯವೂ ಇಲ್ಲ. ಇದೂ ಅಲ್ಲದೆ ನಿತ್ಯಮುಕ್ತನೂ, ಬುದ್ಧನೂ, ಶುದ್ಧಸ್ವಭಾವದವನೂ, ಸ್ವತಃಪ್ರಮಾಣನೂ, ಪರಮಾಪ್ತನೂ ಆಗಿರುವ ಪರಮೇಶ್ವರನ ಮಾತು ಪ್ರಮಾಣವೇ ಆಗಿದೆ. "ಯಾವುದು ಪುರುಷರಿಂದ ಬಂದಿದೆಯೋ ಅದು ಪ್ರಮಾಣವಾಗಲಾರದು" ಎಂಬ ಈ ನಿಯಮವು ರಾಗದ್ವೇಷಗಳೊಳಗೆ ಸಿಲುಕಿದ ಮಾನವರಿಗೆ ಅನ್ವಯಿಸುವಂತಹುದು. ವೇದಗಳೂ ಸಹ ಶಾಂಭವದೀಕ್ಷೆಯನ್ನು ಪಡೆದು ಶಿವಪ್ರಸಾದದ ಮಹಿಮೆಯಿಂದ ಶಿವನ ಅನಂತಕಲ್ಯಾಣಗುಣಗಳನ್ನು ಸ್ತುತಿಸುವ ಕವಿಗಳಂತೆ ಅವನ ಮಹಿಮಾತಿಶಯವನ್ನು ವಿಧಿಲಕ್ಷಣಗಳ ಮೂಲಕ ಪ್ರಶಂಸಿಸುತ್ತಿವೆ. ಇದೂ ಅಲ್ಲದೆ ವೇದಗಳಿಗೂ ಭಸ್ಮಧಾರಣವನ್ನು ವೇದದಲ್ಲಿಯೇ ಹೇಳ

ಲಾಗಿದೆ. "ಜಮದಗ್ನಿಯ ತ್ರಿಯಾಯುಷವೂ, ಕಶ್ಯಪನ ತ್ರಿಯಾಯುಷವೂ, ದೇವತೆಗಳ ತ್ರಿಯಾಯುಷವೂ ಯಾವುದುಂಟೋ ಅದೇ ತ್ರಿಯಾಯುಷವು ನನಗೆ ಲಭಿಸಲಿ" ಎಂಬ ಶ್ವೇತಾಶ್ವತರ ಮಂತ್ರದಲ್ಲಿ "ಮಾನಸ್ತೋಕೇ" ಎಂಬ ಮಂತ್ರ ದಿಂದ ಶುದ್ಧೀಕರಿಸಿದ ಭಸ್ಮವನ್ನೇ ಧರಿಸಬೇಕು." "ಊರ್ಧ್ವಪುಂಡ್ರವೇ ಸಾಮ ವೇದವೂ, ಮಧ್ಯಪುಂಡ್ರವೇ ಯಜುರ್ವೇದವೂ, ಅಧಃಪುಂಡ್ರವೇ ಋಗ್ವೇದವೂ ಆಗಿರುವುದರಿಂದ ತ್ರಿಯಾಯುಷವೆಂಬುದು ತ್ರಿಪುಂಡವೆನಿಸುತ್ತದೆ" ಎಂದು ತ್ರಿಯಾ ಯುಷಪದಕ್ಕೆ ತ್ರಿಪುಂಡ್ರಪರವಾಗಿ ಅರ್ಥವನ್ನು ಹೇಳಲಾಗಿದೆ. ಅದರಂತೆಯೇ ಬೋಧಾಯನಶಾಖೆಯಲ್ಲಿ "ಈ ರುದ್ರಾಕ್ಷಗಳನ್ನು ಮೂರು ವೇದಗಳು ಧರಿಸಿವೆ ಯಾದ್ದರಿಂದಲೇ ದೇವತೆಗಳೂ ಧರಿಸಿದ್ದಾರೆ. ಅದರಂತೆ ಯಾವನು ತಿರುಗಾಡು ವಾಗಲೂ, ನಿಂತಾಗಲೂ, ಊಟಮಾಡುವಾಗಲೂ, ಮಲಗುವಾಗಲೂ, ಉಸಿರಾಡು ವಾಗಲೂ, ನಗುವಾಗಲೂ ರುದ್ರಾಕ್ಷಗಳನ್ನು ಧರಿಸುತ್ತಾನೋ, ಅವನು ಎಲ್ಲಾ ಪಾಪ ಗಳನ್ನೂ ಕಳೆದುಕೊಂಡು ರುದ್ರನಾಗುತ್ತಾನೆ" ಎಂದು ವೇದಗಳಿಗೂ ರುದ್ರಾಕ್ಷಧಾರಣ ವನ್ನು ತಿಳಿಸಲಾಗಿದೆ. 'ಅಯಂ ಮೇ ಹಸ್ತೋ' ಎಂದು ಋಗ್ವೇದದಲ್ಲೂ, 'ಯಾ ತೇ ರುದ್ರಶಿವಾತನೂಃ' ಎಂದು ಯಜುರ್ವೇದದಲ್ಲೂ ವೇದಪುರುಷರಿಗೆ ಶಿವಲಿಂಗ ಧಾರಣವು ಕಂಡುಬಂದಿದೆ. ಇದೂ ಅಲ್ಲದೆ, ವೇದಗಳು "ಜಗತ್ಪತಿಯಾದ ಶಿವನಿಗೆ ನಮಸ್ಕಾರ, ಹಿರಣ್ಯಬಾಹುವಿಗೆ ನಮಸ್ಕಾರ" ಎಂದು ಪರಮಶಿವನನ್ನು ಸ್ತುತಿಸುತ್ತ ಲಿವೆ. ಆದ್ದರಿಂದ ನಿಗಮಾಗಮಗಳು ಪರಮಶಿವನ ವಿಮರ್ಶಶಕ್ತಿಯೇ ಆಗಿ ಅವನ ಬಗ್ಗೆ ಪ್ರಮಾಣ್ಯವನ್ನು ಸ್ಥಿರಪಡಿಸಲು ಮುಖ್ಯವೆನಿಸಿವೆ.

**ನನು—"ಷಡ್ಢೋತಾ ವೈ ಭೂತ್ವಾ ಪ್ರಜಾಪತಿರಿದಂ ಸರ್ವಮಸೃಜತ ಋಚೋ ಯಜೂಂಷಿ ಸಾಮಾನಿ" ಇತ್ಯಾದಿನಾ ಚತುರ್ಮುಖಾದೇರಪಿ ವೇದಕರ್ತೃತ್ವಾವಗಮಾತ್ಕಥಂ ಮಹೇಶ್ವರಸ್ಯೈವ ತತ್ಕರ್ತೃತ್ವಂ? ಇತಿ ಚೇನ್ನ. "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ" ಇತ್ಯಾದಿಶ್ರುತೌ ಹಿರಣ್ಯಗರ್ಭೋತ್ಪತ್ತೇಃ ಪ್ರಾಗೇವ ವೇದಸದ್ಭಾವಾವಗಮಾತ್, ಹಿರಣ್ಯಗರ್ಭಾಯ ಸರ್ವವೇದೋಪದೇಶಕತ್ವಂ ಪರಮೇಶ್ವರಸ್ಯೈವೇತಿ ದರ್ಶನಾಚ್ಚ ಸ ಏವ ಸರ್ವಾಧಿಕ ಇತ್ಯುಚ್ಯತೇ. "ಹಿರಣ್ಯಗರ್ಭಂ ಪಶ್ಯತ ಜಾಯಮಾನಂ" ಇತ್ಯಾದಿನಾ ಚಿದಚಿತ್ಪ್ರಪಂಚಾಧಿಕತ್ವಂ ಹಿರಣ್ಯಗರ್ಭೋತ್ಪಾದಕತ್ವಂ ಚ ಪರಮೇಶ್ವರಸ್ಯೈವ ನಿರ್ದಿಶ್ಯತೇ. ನನು—ಸರ್ವವೇದವೇದಾಂತೋಕ್ತ ಸಕಲಪದಾರ್ಥಾಭಿಜ್ಞತ್ವರೂಪಂ ಹಿ ಸರ್ವಜ್ಞತ್ವಂ? ಉಪಮನ್ಯುದಧೀಚಿ ಗೌತಮದೂರ್ವಾಸರೇಣುಕದಾರುಕಶಂಖಕರ್ಣಗೋಕರ್ಣಾದೀನಾಮಪಿ ತದ್ದರ್ಶನಾತ್ ಕಥಂ ಪರಮೇಶ್ವರಸ್ಯೈಕಸ್ಯೈವ? ಇತಿ ಚೇನ್ನ-ಪರಮೇಶ್ವರೋಪಾಸನಾವಶಾತ್ ತತ್ಪ್ರಸಾದಲಬ್ಧ ಯತ್ಕಿಂಚಿತ್ಸರ್ವಜ್ಞತ್ವಸ್ಯ ತೇಷಾಂ**

**ಸತ್ತ್ವಾನ್ನ ವಿರೋಧಃ. ಖದ್ಯೋತಪ್ರಭಾಕರಯೋಸ್ತೇಜಸ್ತ್ವೇನೈಕತ್ವೇಽಪಿ ಪ್ರಕಾಶವೈಲಕ್ಷಣ್ಯವತ್ ಸರ್ವವಸ್ತ್ವವಭಾಸಕಶ್ರುತೀನಾಂ ಪರಮೇಶ್ವರ ಕರ್ತೃಕತಯಾ ತಸ್ಯೈವ ಸರ್ವಾಧಿಕಜ್ಞಾನಮುಪಪದ್ಯತೇ. ಶಾಸ್ತ್ರಪ್ರವರ್ತಕಾಪೇಕ್ಷಯಾ ಶಾಸ್ತ್ರಪ್ರಣೇತೃಣಾಂ ವಿಶೇಷಜ್ಞಾನದರ್ಶನಾತ್. ಕಿಂಚ—ಸಕಲಜಗದ್ವ್ಯಾಪಕತ್ವೇನ ಸರ್ವಾಂತರ್ಯಾಮಿತ್ವೇನ ಸರ್ವಜ್ಞತ್ವಂ ನಾನ್ಯೇಷಾಂ ಸಂಭವತಿ, ಸರ್ವಜ್ಞತ್ವಾದಿಷಡ್ವಿಧಧರ್ಮಾಣಾಮನನ್ಯಸಾಧಾರಣತ್ವಾತ್.**

"ಪ್ರಜಾಪತಿಯು ಆರುಬಗೆಯ ಹೋತೃಗಳಾಗಿ ತಾನೇ ಪರಿಣಮಿಸಿ ಋಗ್ಯಜುಸ್ಸಾಮಗಳನ್ನು ಸೃಜಿಸಿದನು" ಎಂಬ ಶ್ರುತಿಯಿಂದ ಚತುರ್ಮುಖನೇ ವೇದಗಳನ್ನು ರಚಿಸಿದೆನೆಂದು ತಿಳಿದುಬಂದಿರುವುದರಿಂದ ಈಶ್ವರನೇ ಅವುಗಳ ಕರ್ತನೆಂದು ಹೇಳುವುದು ಹೇಗೆ? ಎಂದರೆ ಇದು ಯುಕ್ತವಲ್ಲ. "ಯಾವನು ಮೊದಲು ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ವೇದಗಳನ್ನು ಉಪದೇಶಿಸಿದನೋ" ಎಂಬ ಶ್ರುತಿಯಲ್ಲಿ ಹಿರಣ್ಯಗರ್ಭನು ಹುಟ್ಟುವಮೊದಲೇ ವೇದವಿತ್ತು ಮತ್ತು ಅವನಿಗೆ ಎಲ್ಲಾ ವೇದಗಳನ್ನು ಉಪದೇಶಿಸಿದವನು ಪರಮಶಿವನೇ ಎಂದು ಕಂಡುಬಂದಿರುವುದರಿಂದ ಅವನೇ ಎಲ್ಲರಿಗಿಂತಲೂ ಶ್ರೇಷ್ಠನೆಂಬುದು ಸ್ಪಷ್ಟಪಡುತ್ತದೆ. ಇಲ್ಲಿ ಶ್ರುತಿ "ವಿಶ್ವಾಧಿಕನೂ ಮಹರ್ಷಿಯೂ ಆದ ಯಾವ ರುದ್ರನು ದೇವತೆಗಳಿಗಿಂತ ಮೊದಲು ಬ್ರಹ್ಮನನ್ನು ಸೃಷ್ಟಿಸಿದನೋ, ಆಗ ಹುಟ್ಟುತ್ತಿದ್ದ ಬ್ರಹ್ಮನನ್ನು ಯಾವನು ಪ್ರೇಮದಿಂದ ನೋಡಿದನೋ ಆ ದೇವನು ನಮಗೆ ಶುಭವಾದ ಸ್ಮೃತಿಯನ್ನು ಅನುಗ್ರಹಿಸಲಿ" ಹೀಗೆ ಪರಮೇಶ್ವರನನ್ನೇ ಚರಾಚರಪ್ರಪಂಚಕ್ಕಧಿಪತಿಯೆಂದೂ, ಅವನಿಂದಲೇ ಬ್ರಹ್ಮದ ಉತ್ಪತ್ತಿಯಾಯಿತೆಂದೂ ತಿಳಿಸಲಾಗಿದೆ. ಎಲ್ಲಾ ವೇದವೇದಾಂತಗಳಲ್ಲೂ ಹೇಳಿರುವ ಸಮಸ್ತ ಪದಾರ್ಥಗಳನ್ನೂ ತಿಳಿಯುವ ಸರ್ವಜ್ಞತೆಯು ಉಪಮನ್ಯು, ದಧೀಚಿ, ಗೌತಮ, ದೂರ್ವಾಸ, ರೇಣುಕ, ದಾರುಕ, ಶಂಖಕರ್ಣ, ಗೋಕರ್ಣ ಮೊದಲಾದ ಶಿವಯೋಗಿಗಳಿಗೂ ಇತ್ತೆಂದು ತಿಳಿದುಬಂದಿದೆ. ಆದ್ದರಿಂದ ಸರ್ವಜ್ಞತೆ ಎಂಬುದು ಪರಮೇಶ್ವರನೊಬ್ಬನಿಗೇ ಮೀಸಲಾಗಿದೆ ಎಂದು ಹೇಗೆ ಹೇಳುವುದು? ಎಂದರೆ ಅದಕ್ಕೆ ಸಮಾಧಾನ ಹೀಗಿದೆ. ಪರಮೇಶ್ವರನನ್ನು ನಿರಂತರವೂ ಉಪಾಸನೆಮಾಡಿ ಅವನ ಕೃಪೆಯಿಂದ ಈ ಶಿವಯೋಗಿಗಳೂ ಕೊಂಚ ಸರ್ವಜ್ಞತೆಯನ್ನು ಪಡೆದಿದ್ದುದರಿಂದ ಅವರಲ್ಲಿಯೂ ಅದು ಇರುವುದರಲ್ಲಿ ವಿರೋಧವೇನೂ ಇಲ್ಲ. ಮಿಂಚುಹುಳ, ಸೂರ್ಯ ಇವರು ಪ್ರಕಾಶರೂಪದಿಂದ ಒಂದೇಬಗೆಯಾಗಿದ್ದರೂ, ಆ ಪ್ರಕಾಶದಲ್ಲಿ ತುಂಬಾ ವ್ಯತ್ಯಾಸವಿರುವಂತೆ ಎಲ್ಲಾವಸ್ತುಗಳನ್ನೂ ಪ್ರಕಾಶಿಸುವ ಶ್ರುತಿಗಳಿಗೆ ಪರಮೇಶ್ವರನೇ ಕರ್ತನಾದ್ದರಿಂದ ಅವನೊಬ್ಬನಲ್ಲಿಯೇ ಸರ್ವಾಧಿಕಜ್ಞಾನವು ಯುಕ್ತವೆನಿಸುತ್ತದೆ. ಶಾಸ್ತ್ರಪ್ರವರ್ತಕರಾದ ಋಷಿಗಳಿಗಿಂತಲೂ ಶಾಸ್ತ್ರವನ್ನು ರಚಿಸಿದ ಶಿವನಿಗೆ ವಿಶೇಷ ಜ್ಞಾನವಿರುವುದರಲ್ಲಿ [illegible] ಇಲ್ಲದೆ ಇದೂ,

ಎಲ್ಲಾ ಜಗತ್ತಿಗೂ ವ್ಯಾಪಕನೂ, ಸರ್ವಾಂತರ್ಯಾಮಿಯೂ ಆದ್ದರಿಂದ ಪರಮೇಶ್ವರನೊಬ್ಬನಿಗೇ ಸರ್ವಜ್ಞತೆಯು ಸಂಭವಿಸುವುದೇ ಹೊರತು ಬೇರೆ ಯಾರಿಗೂ ಸಂಭವಿಸಲಾರದು. ಸರ್ವಜ್ಞತೆಯೇ ಮೊದಲಾದ ಆರು ಧರ್ಮಗಳು ಬೇರೆ ಯಾರಲ್ಲೂ ಇಲ್ಲದೆ ಅವನೊಬ್ಬನಲ್ಲಿಯೇ ವಿಶೇಷವೆನಿಸಿವೆ.

ನನು—ಪೂರ್ವಸೂತ್ರೇಣೈವ ಜಗಜ್ಜನ್ಮಾದಿಕಾರಣತ್ವೇನ ಶಾಸ್ತ್ರಕಾರಣತ್ವಸರ್ವಜ್ಞತ್ವಾದೀನಾಮಪಿ ಸಿದ್ಧತ್ವಾತ್ ಕಿಮಸ್ಯ ಸೂತ್ರಸ್ಯ ಪ್ರಯೋಜನಂ? ಇತಿ ಚೇನ್ನ. ಪೂರ್ವಸೂತ್ರೇಣ "ಅಂಕುರಾದಿಕಂ ಸಕರ್ತೃಕಂ, ಕಾರ್ಯತ್ವಾದ್ಘಟವತ್" ಇತ್ಯನುಮಾನೇನ ಬ್ರಹ್ಮಪ್ರಾಮಾಣ್ಯದ್ಯೋತನಾತ್, ತಚ್ಛಂಕಾನಿರಾಸಾರ್ಥಮೇತತ್ಸೂತ್ರಪ್ರವೃತ್ತೇಸ್ಸಂಭವಾತ್ ಭಗವತಾ ವ್ಯಾಸೇನ "ಶಾಸ್ತ್ರಯೋನಿತ್ವಾತ್" ಇತಿ ಸೂತ್ರಂ ನಿರ್ದಿಷ್ಟಂ. ಶಾಸ್ತ್ರಂ ನಿಗಮಾಗಮಾತ್ಮಕಂ, ಯೋನಿಃ-ಪ್ರಮಾಣಂ, ಯಸ್ಯ ತಥಾತ್ವಾತ್. ನ ಚ ಪುನರಧಿಕರಣಾಂತರನಿರೂಪಣೇ ವಾಕ್ಯಭೇದಾದಿದೋಷ ಇತಿ ವಾಚ್ಯಂ. ಸೂತ್ರಸ್ಯ ಸೂಚನಾತ್ಮಕತ್ವೇನ ಶ್ಲೇಷಕಾವ್ಯವತ್ ವಾಕ್ಯಭೇದಾದಿದೋಷಾಭಾವಾತ್ ಪುನರಧಿಕರಣಾಂತರಂ ಯುಕ್ತಂ. "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" "ನಾವೇದವಿನ್ಮನುತೇ ತಂ ಬೃಹಂತಂ" "ನೈಷಾ ತರ್ಕೇಣ ಮತಿರಾಪನೇಯಾ" "ಋತಂ ಸತ್ಯಂ ಪರಂ ಬ್ರಹ್ಮ" "ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ" "ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತ್ಯಾದಿವಾಕ್ಯಾನ್ಯಸ್ಯ ವಿಷಯಃ. "ನ ಚಕ್ಷುಷಾ ಗೃಹ್ಯತೇ" "ತಂ ತ್ವೌಪನಿಷದಂ" "ಯತೋ ವಾಚೋ ನಿವರ್ತಂತೇ" ಇತಿ ವಿಷಯತ್ವಾವಿಷಯತ್ವವಿಧಾಯಕಶ್ರುತಿದರ್ಶನಾದ್ಬ್ರಹ್ಮಣೋ ವೇದಾಂತವೇದ್ಯತ್ವಂ ಯುಕ್ತಂ ನ ವೇತಿ ಸಂಶಯಃ.

ಪೂರ್ವಪಕ್ಷಸ್ತು—ನ ಬ್ರಹ್ಮಣೋ ವೇದಾಂತವೇದತ್ವಂ, "ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ" "ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಂ" "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ ॥" ಇತ್ಯಾದಿಶ್ರುತಿದರ್ಶನಾತ್. ಪ್ರಪಂಚಃ ಸಕರ್ತೃಕಃ ಕಾರ್ಯತ್ವಾದ್ಘಟವದಿತ್ಯನುಮಾನೇನ ಸರ್ವಜ್ಞತ್ವಾದಿಷಡ್ವಿಧಧರ್ಮಾವಚ್ಛಿನ್ನಃ ಪರಮೇಶ್ವರಸ್ಸಾಧ್ಯತೇ ತಸ್ಯ ಪ್ರಮಾಣಾಂತರವಿಷಯತ್ವದರ್ಶನಾನ್ನವೇದಾಂತಶಾಸ್ತ್ರೈಕವೇದ್ಯಂ ಪರಂ ಬ್ರಹ್ಮ—ಇತಿ ಪ್ರಾಪ್ತೇ ಬ್ರೂಮಃ.

ಜಗಜ್ಜನ್ಮಾದಿಕಾರಣನಾದ್ದರಿಂದ ಪರಮಶಿವನೇ ಶಾಸ್ತ್ರಕಾರಣನೆಂದೂ, ಸರ್ವಜ್ಞನೆಂದೂ ಹಿಂದಿನ ಸೂತ್ರದಲ್ಲಿಯೇ ಸಿದ್ಧವಾದಮೇಲೆ ಈ ಸೂತ್ರದ ಆವಶ್ಯಕತೆ

ಏನಿದೆ ? ಎಂದು ಕೇಳುವುದು ಯುಕ್ತವಲ್ಲ. ಹಿಂದಿನ ಸೂತ್ರದಲ್ಲಿ "ಕ್ಷಿತ್ಯಂಕುರಾದಿಗಳು ಕಾರ್ಯವಾದ್ದರಿಂದ ಘಟದಂತೆ ಸಕರ್ತೃಕವಾಗಿವೆ" ಎಂಬ ಅನುಮಾನದಿಂದ ಬ್ರಹ್ಮದ ಪ್ರಾಮಾಣ್ಯವನ್ನು ತೋರಿಸಿಕೊಡಲಾಗಿದೆ. ಆಬಗ್ಯೆ ಸಂಭವಿಸಿದ ಆಕ್ಷೇಪವನ್ನು ಪರಿಹರಿಸಲಿಕ್ಕಾಗಿ ಈ ಸೂತ್ರವು ಹೊರಟಿದ್ದು ನ್ಯಾಯವೇ ಆಗಿದೆ. ಆದ್ದರಿಂದಲೇ ಬಾದರಾಯಣನು 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರವನ್ನು ರಚಿಸಿದ್ದಾನೆ. ಶಾಸ್ತ್ರವೆಂದರೆ ನಿಗಮಾಗಮಗಳು. ಇವು ಯಾವನ ಇರುವಿಕೆಗೆ ಪ್ರಮಾಣವಾಗಿವೆಯೋ ಅವನು 'ಶಾಸ್ತ್ರಯೋನಿ'ಯಾಗಿದ್ದಾನೆ. ಹೀಗೆ ಬೇರೊಂದು ರೀತಿಯಲ್ಲಿ ಈ ಸೂತ್ರದ ಅರ್ಥವನ್ನು ಹೇಳಿದರೂ ವಾಕ್ಯಭೇದವೇ ಮೊದಲಾದ ದೋಷ ಯಾವುದೂ ಸಂಭವಿಸುವುದಿಲ್ಲ; ಏಕೆಂದರೆ ಸೂತ್ರವೇನಿದ್ದರೂ ಸೂಚನೆಮಾಡುವುದಾದ್ದರಿಂದ ಶ್ಲೇಷಕಾವ್ಯದಲ್ಲಿ ವಾಕ್ಯಭೇದವೇ ಮೊದಲಾದ ದೋಷಗಳಿಗೆ ಅವಕಾಶವಿಲ್ಲದಿರುವಂತೆ ಸೂತ್ರವನ್ನು ಬೇರೊಂದು ರೀತಿಯಲ್ಲಿ ಅರ್ಥಮಾಡುವುದರಲ್ಲಿ ತಪ್ಪೇನಿಲ್ಲ. "ಉಪನಿಷತ್ಪ್ರತಿಪಾದ್ಯನಾದ ಆ ಪುರುಷನ ಸ್ವರೂಪವನ್ನು ಕೇಳುತ್ತೇನೆ" "ವೇದವನ್ನರಿಯದವನು ಬ್ರಹ್ಮವನ್ನು ತಿಳಿಯಲಾರನು" "ಆತ್ಮಜ್ಞಾನವು ತರ್ಕದಿಂದ ದೊರಕಲಾರದು" "ಪರಮಾತ್ಮನು ಋತವೂ ಸತ್ಯವೂ, ಆಗಿದ್ದಾನೆ" "ಇಂತಹ ವಿಶ್ವರೂಪನಿಗೆ ನಮಸ್ಕಾರ" "ಪ್ರಧಾನ ಮತ್ತು ಜೀವರಿಗೆ ನಿಯಾಮಕನೂ, ತ್ರಿಗುಣಗಳ ವ್ಯವಸ್ಥಾಪಕನೂ, ಸಂಸಾರಬಂಧಗಳಿಗೂ ರಕ್ಷಣೆಮೋಕ್ಷಗಳಿಗೂ ಕಾರಣನು" "ಸತ್ಯವೂ ಜ್ಞಾನವೂ ಅನಂತವೂ ಆದದ್ದು ಬ್ರಹ್ಮ" ಈ ಬಗೆಯ ವಾಕ್ಯಗಳೇ ಈ ಅಧಿಕರಣಕ್ಕೆ ವಿಷಯವಾಗಿವೆ" "ಬ್ರಹ್ಮವನ್ನು ಕಣ್ಣಿನಿಂದಲೂ, ಮಾತಿನಿಂದಲೂ ಗ್ರಹಿಸಲಾಗುವುದಿಲ್ಲ" ಹೀಗೆ ಬ್ರಹ್ಮವು ಶಾಸ್ತ್ರಕ್ಕೆಮಾತ್ರವೇ ವಿಷಯವಾಗುತ್ತದೆ. ಆದರೆ ಬ್ರಹ್ಮ ಶಾಸ್ತ್ರಗಮ್ಯವಲ್ಲವೆಂದು ಹೇಳುವ ಅನೇಕ ಶ್ರುತಿಗಳೂ ಇರುವುದರಿಂದ ಬ್ರಹ್ಮವನ್ನು ಶಾಸ್ತ್ರದಿಂದ ತಿಳಿಯಬಹುದೇ ಇಲ್ಲವೇ ಎಂಬ ಸಂಶಯ ಬರುತ್ತದೆ.

ಇಲ್ಲಿ ಪೂರ್ವಪಕ್ಷ ಹೀಗೆ ಬರುತ್ತದೆ 'ಬ್ರಹ್ಮವನ್ನು ಶಾಸ್ತ್ರದಿಂದ ತಿಳಿಯಲಾಗುವುದಿಲ್ಲ, ಕಣ್ಣಿನಿಂದಲೂ ನೋಡಲಾಗುವುದಿಲ್ಲ, ಮಾತಿನಿಂದಲೂ ತಿಳಿಯಲಾಗುವುದಿಲ್ಲ' "ಯಾವನನ್ನು ಮನಸ್ಸು ತಿಳಿಯಲಾರದೋ, ಯಾವನು ಮನಸ್ಸನ್ನು ತಿಳಿಯಬಲ್ಲನೋ, ಯಾವನನ್ನು ಹೊಂದಲಾಗದೆ ಮಾತುಗಳು ಮನಸ್ಸಿನೊಡನೆ ಹಿಂತಿರುಗುತ್ತವೆಯೋ". "ಬ್ರಹ್ಮದ ಆನಂದವನ್ನು ತಿಳಿದವನು ಯಾವುದಕ್ಕೂ ಹೆದರುವುದಿಲ್ಲ" ಈ ಬಗೆಯ ಶ್ರುತಿಗಳೂ ಇವೆ. "ಜಗತ್ತು ಘಟದಂತೆ ಕಾರ್ಯವಾದ್ದರಿಂದ ಸಕರ್ತೃಕವಾಗಿದೆ" ಎಂಬ ಅನುಮಾನದಿಂದ ಸರ್ವಜ್ಞತೆಯೇ ಮೊದಲಾದ ಆರು ಧರ್ಮಗಳಿಂದ ಕೂಡಿದ ಪರಮೇಶ್ವರನನ್ನು ಸಾಧಿಸಲಾಗಿದೆ. ಹೀಗೆ ಅವನು ಬೇರೆಪ್ರಮಾಣದಿಂದಲೂ ಗೋಚರನಾಗುವನೆಂದು ಕಂಡುಬಂದಿರುವುದರಿಂದ ವೇದಾಂತ ಒಂದರಿಂದಲೇ ಅವನು [illegible] ಬರುತ್ತದೆ.

ಸಿದ್ಧಾಂತಸ್ತು—ಜಗಜ್ಜನ್ಮಾದಿಕಾರಣಂ ಬ್ರಹ್ಮ ಉಪನಿಷಚ್ಛಾಸ್ತ್ರ ಪ್ರತಿಪಾದ್ಯಮೇವ. "ನಾವೇದವಿನ್ಮನುತೇ ತಂ ಬೃಹಂತಂ" "ನೈಷಾ ತರ್ಕೇಣ ಮತಿರಾಪನೇಯಾ" ಇತ್ಯಾದಿನಾ ಬ್ರಹ್ಮಣೋ ಮಾನಾಂತರ ನಿಷೇಧದರ್ಶನಾತ್, "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" ಇತಿ ಶ್ರುತ್ಯಾ ಉಪನಿಷನ್ಮಾತ್ರವೇದ್ಯತ್ವಶಾಸನಾಚ್ಚ ವೇದಾಂತಶಾಸ್ತ್ರಾನುಕೂಲತ್ವೇನ ಅನುಮಾನಸ್ಯ ಪ್ರಾಮಾಣ್ಯಂ ನ ತು ಸ್ವಾತಂತ್ರ್ಯೇಣ. ರಥಮಂಟಪಗೋಪುರಪ್ರಾಸಾದಾದಿನಿರ್ಮಾಣೇ ನಾನಾಕರ್ತೃಕತ್ವದರ್ಶನಾತ್ ನ ಚಾನುಮಾನೇನ ಕರ್ತ್ರೇಕತ್ವಸಿದ್ಧಿಃ. ಬ್ರಹ್ಮನಿಷ್ಠಸತ್ಯಸಂಕಲ್ಪಸತ್ಯಜ್ಞಾನಾನಂದಾದಿಸ್ವರೂಪಧರ್ಮಜ್ಞಾನಾಸಂಭವಪ್ರಸಂಗಾತ್, ಜಗದುಭಯಕಾರಣತ್ವಾಸಂಭವಾಚ್ಚ ಬ್ರಹ್ಮಣೋ ವೇದಾಂತವೇದ್ಯತ್ವಂ ನಿಷ್ಪ್ರತ್ಯೂಹಂ. "ಯತೋ ವಾಚೋ ನಿವರ್ತಂತೇ" ಇತ್ಯಾದಿವಾಕ್ಯಾನಾಂ ತನ್ಮಾಹಾತ್ಮ್ಯಜ್ಞಾಪನಾರ್ಥತ್ವಂ ವಿವಕ್ಷಿತಂ. ಅನ್ಯಥಾ-"ಬ್ರಹ್ಮವಿದಾಪ್ನೋತಿ ಪರಂ" ಇತ್ಯಾದಿವಾಕ್ಯಾನಾಂ ವೈಯರ್ಥ್ಯಪ್ರಸಂಗಃ.

ನನು—ಅಗ್ನೇಶ್ಶಿವಸ್ಯ ಮಾಹಾತ್ಮ್ಯಂ ತಾಮಸೇಷು ಪ್ರಕಲ್ಪ್ಯತೇ। ರಾಜಸೇಷು ಚ ಮಹಾತ್ಮ್ಯಮಧಿಕಂ ಬ್ರಹ್ಮಣೋ ವಿದುಃ ॥ ಸಾತ್ವಿಕೇಷು ಚ ಕಲ್ಪೇಷು ಮಹಾತ್ಮ್ಯಮಧಿಕಂ ಹರೇಃ । ತೇಷ್ವೇವ ಯೋಗಸಂಸಿದ್ಧಾ ಗಮಿಷ್ಯಂತಿ ಪರಾಗತಿಂ॥ ಇತಿ ಮಾತ್ಸ್ಯೇ ಶಿವಪುರಾಣಾನಾಂ ತಾಮಸತ್ವಪ್ರತಿಪಾದನಾತ್, "ಸತ್ತ್ವಾತ್ಸಂಜಾಯತೇ ಜ್ಞಾನಂ" ಇತ್ಯಾರಭ್ಯ "ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ" ಇತ್ಯಂತೇನ ಸಾತ್ತ್ವಿಕಬುದ್ಧೇರೇವ ಮುಕ್ತಿಹೇತುತ್ವದರ್ಶನಾತ್.

ಅಗ್ನೇಶ್ಶಿವಸ್ಯ ಮಾಹಾತ್ಮ್ಯಂ ತಾಮಸಂ ಮೋಹಕಾರಕಂ। ತಯೋರುಪಾಸನಾದೇವ ಪ್ರತ್ಯವಾಯೋ ಭವೇದ್ಧ್ರುವಂ॥

ಇತಿ ಪಾಂಚರಾತ್ರಾಗಮವಚನದರ್ಶನಾಚ್ಚ ಶಿವತತ್ವಪ್ರತಿಪಾದಕ ಪುರಾಣಾನಾಂ ತಾಮಸತ್ವಂ ಸಿದ್ಧಂ. ಅತಸ್ತತ್ಪುರಾಣಾನಾಮಪ್ರಾಮಾಣ್ಯಾತ್ ತತ್ಪ್ರತಿಪಾದಿತಸ್ಯಪರಮೇಶ್ವರಸ್ಯ ವೇದಾಂತವೇದ್ಯತ್ವಂ ಕಥಮುಪಪದ್ಯತೆ? ಇತಿ ಚೇನ್ನ. ಶಿವಪುರಾಣಾನಾಂ ತಾಮಸತ್ವೇ ಪ್ರಾತ್ಯಕ್ಷಿಕಶ್ರುತ್ಯಭಾವಾತ್, ಕಲ್ಪಿತಪ್ರಚ್ಛನ್ನಬೌದ್ಧವಾಕ್ಯಾನಾಂ ಪ್ರಾಮಾಣ್ಯಾಭಾವಾಚ್ಚ. ಕಿಂಚ—ತಮೋಗುಣವಿಶಿಷ್ಟದೇವತಾವಿಷಯಕತ್ವೇನ, ತಮೋಗುಣವಿಶಿಷ್ಟವ್ಯಾಸಕರ್ತೃಕತ್ವೇನ, ತಮೋಗುಣಾವಸರಜನ್ಯತ್ವೇನ ವಾ ಶಿವಪುರಾಣಾನಾಂ ತಾಮಸತ್ವಂ? ನಾದ್ಯಃ—ಋಗಾದಿಸರ್ವವೇದವೇದಾಂತಾನಾಮಪಿ ರುದ್ರಾಗ್ನಿಪ್ರತಿಪಾದಕತ್ವೇನ ತೇಷಾಮಪಿ ತಾಮಸತ್ವಾಪತ್ತ್ಯಾ ಅಪ್ರಾಮಾಣ್ಯಪ್ರಸಕ್ತಿಸಂಭವಾತ್ ಬೌದ್ಧಾಗಮತ್ವಪ್ರಸಂಗಸ್ಸ್ಯಾತ್. ನ

ದ್ವಿತೀಯಃ—ವ್ಯಾಸಪ್ರೋಕ್ತವಿಷ್ಣುಪುರಾಣಾದೀನಾಮಪಿ ತಾಮಸತ್ವಂ ಸ್ಯಾತ್. ನ ತೃತೀಯಃ—ಸಾತ್ತ್ವಿಕೇನ ವಿಷ್ಣುಪುರಾಣಕಲ್ಪನೇ ತಾಮಸೇನ ಶಿವಪುರಾಣಕಲ್ಪನೇ ಚ ಮಾನಾಭಾವಾತ್, ಸರ್ವವೇದವೇದಾಂತಸಾರಸ್ಯೈವ ಪುರಾಣರೂಪೇಣ ವ್ಯಾಸೇನ ಪ್ರಪಂಚಿತತ್ವಾಚ್ಚ. ನನು ಮಾತ್ಸ್ಯೇ-ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ। ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಬೋಧ ಮೇ ॥ ಅಗ್ನೇಶ್ಶಿವಸ್ಯ ಮಾಹಾತ್ಮ್ಯಂ ತಾಮಸಂ ಮೋಹಕಾರಕಂ ॥ ಇತಿ. ಯತ್ರ ಯತ್ರ ಜಗನ್ನಾಥಂ ಮುಕುಂದಂ ವಿಷ್ಣುಮವ್ಯಯಂ । ವದಂತಿ ತಾನಿ ಶಾಸ್ತ್ರಾಣಿ ಸಾತ್ತ್ವಿಕಾನಿ ಮತಾನಿ ವೈ ॥ ಯತ್ರ ಯತ್ರ ಹ್ಯುಮಾನಾಥಂ ಶಂಕರಂ ಭೈರವಂ ಯಮಂ । ದುರ್ಗಾಂ ಗಣಪತಿಂ ಕಾಲಂ ವದಂತಿ ಯಾನಿ ತಾನಿ ಚ । ತಾಮಸಾನಿ ಮುನಿಶ್ರೇಷ್ಠ ವಿವಿಧಾನಿ ಫಲಾನಿ ವೈ ॥ ಪಂಚ ಪೂಜಾಶ್ಚ ದೇವಾಂಶ್ಚ ತಥಾ ದೇವೀಂ ಸರಸ್ವತೀಂ । ವದಂತಿ ಯಾನಿ ಶಾಸ್ತ್ರಾಣಿ ರಾಜಸಾನಿ ಮತಾನಿ ವೈ ॥

ಇತ್ಯಾದಿಮಾತ್ಸ್ಯಹಾರೀತಪಾಂಚರಾತ್ರಾದ್ಯಾಗಮಾದಿವಚನೇಷು ಶಿವಪುರಾಣಾನಾಂ ತಾಮಸತ್ವವ್ಯಪದೇಶಾತ್ ಕಥಂ ತತ್ಪ್ರತಿಪಾದ್ಯಸ್ಯ ಪರಮೇಶ್ವರಸ್ಯ ಪರಬ್ರಹ್ಮತ್ವಂ? ಸಂಹಾರಸ್ಯ ರುದ್ರಧರ್ಮತ್ವೇನ ತಾಮಸತ್ವಂ ತಸ್ಯ ನಿಷ್ಪ್ರತ್ಯೂಹಂ ಇತಿ ಚೇನ್ನ. "ಅಗ್ನೇಶ್ಶಿವಸ್ಯ ಮಾಹಾತ್ಮ್ಯಂ ತಾಮಸಂ ಮೋಹಕಾರಕಂ" ಇತ್ಯಾದಿವಚನಾನಾಂ ಮತ್ಸ್ಯಪುರೋಣೋಕ್ತತ್ವೇನ, ಮತ್ಸ್ಯಪುರಾಣಸ್ಯ ತಾಮಸಪುರಾಣಪ್ರಕರಣಪಠಿತತ್ವೇನ ತದ್ವಾಕ್ಯಾನಾಮಪ್ರಮಾಣ್ಯಾತ್. "ಬ್ರಹ್ಮೇಂದ್ರಸೂರ್ಯಚಂದ್ರಾಗ್ನಿಪರಾ ರಾಜಸಸಂಭವಾಃ" ಇತ್ಯಾದಿನಾ ಪಾಂಚರಾತ್ರಾಗಮೇ ಅಗ್ನೇಃ ರಾಜಸತ್ವನಿರೂಪಣಾತ್, ಮಾತ್ಸ್ಯಪಾಂಚರಾತ್ರಾಗಮವಚನಾನಾಂ ಪರಸ್ಪರವಿರೋಧದರ್ಶನಾಚ್ಚ ದ್ವಯೋರಪ್ಯಪ್ರಾಮಾಣ್ಯಂ ಸಿದ್ಧಂ.

ಇದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದು. ಜಗಜ್ಜನ್ಮಾದಿಕಾರಣವಾದ ಬ್ರಹ್ಮವು ವೇದಾಂತದಲ್ಲಿಯೇ ಪ್ರತಿಪಾದಿತವಾಗಿದೆ. 'ವೇದವನ್ನರಿಯದವನು ಬ್ರಹ್ಮವನ್ನು ತಿಳಿಯಲಾರನು' ಈ ಬಗೆಯ ಶ್ರುತಿಗಳಿಂದ ಬ್ರಹ್ಮವನ್ನು ಬೇರೆ ಪ್ರಮಾಣದಿಂದ ತಿಳಿಯಲು ಸಾಧ್ಯವಿಲ್ಲವೆಂಬುದು ಸ್ಪಷ್ಟಪಡುತ್ತದೆ. 'ಉಪನಿಷತ್ತಿನಲ್ಲಿ ಪ್ರತಿಪಾದ್ಯನಾದ ಪುರುಷನ ಬಗ್ಗೆ ಕೇಳುತ್ತೇನೆ' ಎಂಬ ಶ್ರುತಿಯಲ್ಲಿ ಉಪನಿಷತ್ತಿನಿಂದಲೇ ಬ್ರಹ್ಮವನ್ನು ತಿಳಿಯಬೇಕೆಂದು ಹೇಳಿರುವುದರಿಂದ ಬ್ರಹ್ಮವಿರುವುದರಲ್ಲಿ ತರ್ಕ ಮತ್ತು ಅನುಮಾನಗಳು ವೇದಾಂತಶಾಸ್ತ್ರಕ್ಕೆ ಅನುಕೂಲವಾಗಿದ್ದರೆ ಮಾತ್ರವೇ ಪ್ರಮಾಣವಾಗಬಲ್ಲವೇ ಹೊರತು ಸ್ವತಂತ್ರವಾಗಿ ಪ್ರಮಾಣವಾಗಲಾರವು ಎಂಬ ಅಂಶ ಸ್ಪಷ್ಟಪಡುತ್ತದೆ. ರಥ, ಮಂಟಪ, ಗೋಪುರ, ಪ್ರಸಾದ ಇವುಗಳ

ನಿರ್ಮಾಣದಿಂದ ಅನೇಕಬಗೆಯ ಕರ್ತರನ್ನು ನಾವು ಕಾಣುತ್ತೇವೆ, ಈ ಎಲ್ಲಾ ವಿಧವಾದ ಕರ್ತರೂ ಒಂದೇಬಗೆಯವರೆಂದು ಅನುಮಾನದಿಂದ ಸಾಧಿಸಲಾಗುವುದಿಲ್ಲ. ಇದೂ ಅಲ್ಲದೆ ಬ್ರಹ್ಮದಲ್ಲಿರುವ ಸತ್ಸಂಕಲ್ಪ, ಸತ್ಯ, ಜ್ಞಾನ, ಅನಂತವೇ ಮೊದಲಾದ ಧರ್ಮಗಳ ಜ್ಞಾನವೂ ಅನುಮಾನದಿಂದ ಆಗದೇಹೋಗುತ್ತದೆ. ಬ್ರಹ್ಮವು ಜಗತ್ತಿಗೆ ಅಭಿನ್ನನಿಮಿತ್ತೋಪಾದಾನಕಾರಣವೆಂಬುದೂ ಅನುಮಾನದಿಂದ ಸಂಭವಿಸದೇ ಇರುವುದರಿಂದ ಬ್ರಹ್ಮವನ್ನು ವೇದಾಂತದಿಂದಲೇ ತಿಳಿಯಬೇಕೆನ್ನುವುದು ನಿರ್ವಿವಾದವೆನಿಸಿದೆ. 'ಯಾವನನ್ನು ಶಬ್ದವು ತಿಳಿಸಲಾರದೋ' ಎಂಬ ವಾಕ್ಯವೂ ಸಹ ಅವನ ಮಹಿಮೆಯುನ್ನು ತಿಳಿಸಲಿಕ್ಕಾಗಿಯೇ ಬಂದಿದೆ. ಇಲ್ಲದಿದ್ದರೆ 'ಬ್ರಹ್ಮವನ್ನರಿತವನು ಎಲ್ಲಕ್ಕೂ ಉತ್ಕೃಷ್ಟವಾದ ಆ ಬ್ರಹ್ಮವನ್ನೇ ಹೊಂದುತ್ತಾನೆ' ಎಂಬ ಮಾತು ವಿರುದ್ಧವಾಗಬೇಕಾದೀತು ?

"ಅಗ್ನಿಯ ಮತ್ತು ಶಿವನ ಮಹಿಮೆಯನ್ನು ತಾಮಸಪುರಾಣಗಳಲ್ಲಿ ಹೇಳಿದೆ. ರಾಜಸಪುರಾಣಗಳು ಬ್ರಹ್ಮನ ಮಹಿಮೆಯನ್ನು ಕೊಂಡಾಡುತ್ತವೆ. ಸಾತ್ತ್ವಿಕಪುರಾಣಗಳು ಹರಿಯ ಮಹಿಮೆಯನ್ನು ತಿಳಿಸುತ್ತವೆ. ಯೋಗಿಗಳು ಪರಮಾತ್ಮನಲ್ಲಿಯೇ ಆಸಕ್ತರಾಗಿದ್ದು ಉತ್ತಮಗತಿಯನ್ನು ಹೊಂದುತ್ತಾರೆ" ಎಂದು ಮತ್ಸ್ಯಪುರಾಣದಲ್ಲಿ ಶಿವಪುರಾಣಗಳನ್ನು ತಾಮಸವೆಂದು ಹೇಳಿದೆ. "ಸತ್ತ್ವಗುಣದಿಂದ ಜ್ಞಾನ ಹುಟ್ಟುತ್ತದೆ" ಎಂದು ಆರಂಭಿಸಿ "ಬಂಧಮೋಕ್ಷಗಳನ್ನು ಯಾವುದು ತಿಳಿಸುತ್ತದೆಯೋ ಅದೇ ಸಾತ್ತ್ವಿಕಬುದ್ಧಿ ಎನಿಸಿದೆ" ಎಂದು ಕೊನೆಯಾಗಿರುವ ಪ್ರಕರಣದಲ್ಲಿ ಸಾತ್ತ್ವಿಕಬುದ್ಧಿಯೇ ಮುಕ್ತಿಗೆ ಕಾರಣವೆಂದು ಹೇಳಲಾಗಿದೆ. "ಅಗ್ನಿಯ ಮತ್ತು ಶಿವನ ಮಹಿಮೆ ತಾಮಸವೂ ಮೋಹಕಾರಕವೂ ಆದುದು. ಅವರಿಬ್ಬರ ಉಪಾಸನದಿಂದ ತೊಂದರೆ ಸಂಭವಿಸುವುದು ನಿಶ್ಚಿತ" ಎಂಬ ಪಾಂಚರಾತ್ರಾಗಮದ ಪ್ರಕಾರ ಶಿವನ ಬಗ್ಗೆ ತಿಳಿಸುವ ಪುರಾಣಗಳು ತಾಮಸವೆನಿಸಿವೆ. ಹೀಗೆ ಶಿವಪುರಾಣಗಳು ಪ್ರಮಾಣವಲ್ಲದ್ದರಿಂದ ಅಲ್ಲಿ ಪ್ರತಿಪಾದಿತನಾದ ಪರಮೇಶ್ವರನು ಹೇಗೆ ವೇದಾಂತವೇದ್ಯನಾದಾನು ? ಎಂದು ಕೇಳುವುದು ಯುಕ್ತವಲ್ಲ; ಯಾಕೆಂದರೆ ಶಿವಪುರಾಣಗಳು ತಾಮಸವೆಂಬುದಕ್ಕೆ ಪ್ರತ್ಯಕ್ಷವಾದ ಶ್ರುತಿಯೇ ಇಲ್ಲ. ಕಲ್ಪಿತವಾದ ಪ್ರಚ್ಛನ್ನಬೌದ್ಧರ ಮಾತುಗಳು ಪ್ರಮಾಣವೆನಿಸಲಾರವು. ಇದೂ ಅಲ್ಲದೆ, ಶಿವಪುರಾಣಗಳು ತಮೋಗುಣವುಳ್ಳ ದೇವನನ್ನು ತಿಳಿಸುವುದರಿಂದ ತಾಮಸವೇ ? ತಮೋಗುಣವುಳ್ಳ ವ್ಯಾಸನಿಂದ ರಚಿತವಾದ್ದರಿಂದ ತಾಮಸವೆ ? ತಮೋಗುಣಕಾಲದಲ್ಲಿ ಹುಟ್ಟಿದ್ದರಿಂದ ತಾಮಸವೆ ? ಎಂದು ವಿಕಲ್ಪಗಳು ಸಂಭವಿಸುತ್ತವೆ. ಮೊದಲನೆಯ ವಿಕಲ್ಪದಲ್ಲಿ ಋಗ್ವೇದವೇ ಮೊದಲಾದ ಎಲ್ಲಾ ವೇದವೇದಾಂತಗಳೂ ರುದ್ರನನ್ನೂ ಅಗ್ನಿಯನ್ನೂ ಪ್ರತಿಪಾದಿಸುವುದರಿಂದ ಅವೆಲ್ಲವೂ ತಾಮಸವೇ ಆಗಬೇಕಾದೀತು ? ಇದರಿಂದ ಅವೆಲ್ಲವೂ ಪ್ರಮಾಣವಾಗದೇ ಹೋಗಬೇಕಾಗುತ್ತದೆ. ಹಾಗೆ ಪ್ರಮಾಣವಾಗದೇ ಇರುವುದರಿಂದ ಅವೆಲ್ಲವನ್ನೂ ಬೌದ್ಧಾಗಮದಲ್ಲಿ ಸೇರಿಸಬೇಕಾಗುತ್ತದೆ. ಎರಡನೆಯ

ವಿಕಲ್ಪದಲ್ಲಿ ತಮೋಗುಣವಿಶಿಷ್ಟನಾದ ವ್ಯಾಸನಿಂದ ರಚಿತವಾದ ವಿಷ್ಣುಪುರಾಣವೂ ಸಹ ತಾಮಸವೇ ಆಗಬೇಕಾದೀತು. ಮೂರನೆಯ ವಿಕಲ್ಪದಲ್ಲಿ ತಮೋಗುಣದ ಕಾಲದಲ್ಲಿ ಹುಟ್ಟಿದ್ದರಿಂದ ಶಿವಪುರಾಣಗಳನ್ನು ತಾಮಸವೆಂದು ಹೇಳುವುದೂ ಯುಕ್ತವಲ್ಲ. ಸಾತ್ತ್ವಿಕಕಾಲದಲ್ಲಿ ವಿಷ್ಣುಪುರಾಣ ಹುಟ್ಟಿತೆಂದೂ, ತಮೋಗುಣ ಕಾಲದಲ್ಲಿ ಶಿವಪುರಾಣ ಹುಟ್ಟಿತೆಂದೂ ಹೇಳುವುದಕ್ಕೆ ಯಾವ ಪ್ರಮಾಣವೂ ಆಧಾರ ವಾಗಿಲ್ಲ. ಎಲ್ಲಾ ವೇದವೇದಾಂತಗಳ ಅರ್ಥದ ಸಾರವನ್ನೇ ವ್ಯಾಸನು ಪುರಾಣ ರೂಪದಲ್ಲಿ ವಿಸ್ತರಿಸಿದ್ದಾನೆ. ಮತ್ಸ್ಯಪುರಾಣದಲ್ಲಿ 'ಮತ್ಸ್ಯ, ಕೂರ್ಮ, ಲೈಂಗ, ಶೈವ, ಸ್ಕಾಂದ, ಅಗ್ನಿ ಇವು ಆರು ಪುರಾಣಗಳನ್ನು ತಾಮಸ'ವೆಂದು ಹೇಳಿದೆ. ಅಲ್ಲಿಯೇ 'ಅಗ್ನಿಯ ಮತ್ತು ಶಿವನ ಮಹಿಮೆ ತಾಮಸವೂ ಮೋಹಕಾರಕವೂ ಆಗಿದೆ. ಎಲ್ಲೆಲ್ಲಿ ವಿಷ್ಣುವನ್ನು ಸರ್ವವ್ಯಾಪಕನೆಂದೂ, ಅಚ್ಯುತನೆಂದೂ ತಿಳಿಸಲಾಗಿದೆಯೋ ಅವೆಲ್ಲವೂ ಸಾತ್ತ್ವಿಕಪುರಾಣಗಳು. ಎಲ್ಲಿ ಉಮಾಪತಿಯಾದ ಶಂಕರ, ಭೈರವ, ಯಮ, ದುರ್ಗಿ, ಗಣಪತಿ ಕಾಲರುದ್ರ ಇವರನ್ನು ತಿಳಿಸಿದೆಯೋ ಅವೆಲ್ಲವೂ ತಾಮಸ ಪುರಾಣಗಳು. ಎಲ್ಲಿ ಸರಸ್ವತಿ ಮತ್ತು ಇತರ ದೇವತೆಗಳನ್ನು ವರ್ಣಿಸಲಾಗಿದೆಯೋ ಅವೆಲ್ಲವೂ ರಾಜಸಪುರಾಣಗಳೆನಿಸಿವೆ" ಹೀಗೆ ತಿಳಿಸಿರುವುದರಿಂದಲೂ, ಪಾಂಚರಾತ್ರಾ ಗಮದಲ್ಲಿ ಶಿವಪುರಾಣಗಳನ್ನು ತಾಮಸವೆಂದು ಹೇಳಿರುವುದರಿಂದಲೂ ಅಲ್ಲಿ ವರ್ಣಿತ ವಾದ ಶಿವನನ್ನು ಪರಬ್ರಹ್ಮವೆಂದು ಹೇಗೆ ಕರೆಯಬಹುದು? ಸಂಹಾರವು ರುದ್ರನ ಧರ್ಮವಾದ್ದರಿಂದ ಅವನು ತಾಮಸನೆಂಬುದು ನಿರ್ವಿವಾದವೆನಿಸಿದೆ. ಹೀಗೆ ಆಕ್ಷೇಪ ಬಂದರೆ ಅದು ಸಮಂಜಸವೆನಿಸುವುದಿಲ್ಲ; ಯಾಕೆಂದರೆ, ಅಗ್ನಿ, ಶಿವ ಇವರ ಮಹಿಮೆ ಯನ್ನು ತಿಳಿಸುವುದು ತಾಮಸವೆನಿಸಿದೆ' ಎಂಬ ಮಾತು ಮತ್ಸ್ಯಪುರಾಣದಲ್ಲಿ ಬಂದಿ ರುವುದರಿಂದಲೂ ಮತ್ಸ್ಯಪುರಾಣವು ತಾಮಸಪುರಾಣದ ಪ್ರಕರಣದಲ್ಲಿ ಪಠಿತವಾಗಿರು ವುದರಿಂದಲೂ ಆ ವಾಕ್ಯಗಳು ಪ್ರಮಾಣವಾಗಲಾರವು. "ಬ್ರಹ್ಮ ಇಂದ್ರ ಸೂರ್ಯ ಚಂದ್ರ ಅಗ್ನಿ ಇವರು ರಜೋಗುಣದಿಂದ ಕೂಡಿದವರು" ಎಂದು ಪಾಂಚರಾತ್ರಾ ಗಮದಲ್ಲಿ ಅಗ್ನಿಯನ್ನು ರಾಜಸನೆಂದು ತಿಳಿಸಲಾಗಿದೆ. ಹೀಗೆ ಮತ್ಸ್ಯಪುರಾಣಕ್ಕೂ ಪಾಂಚರಾತ್ರಾಗಮಕ್ಕೂ ಪರಸ್ಪರ ವಿರೋಧ ಕಂಡುಬಂದದ್ದರಿಂದ ಎರಡನ್ನೂ ಅಪ್ರ ಮಾಣವೆಂದು ಭಾವಿಸಬೇಕಾಗುತ್ತದೆ.

**ಕಿಂಚ—ಬ್ರಾಹ್ಮಣಾನಾಂ "ಅಗ್ನಿರಗ್ರೇ ಪ್ರಥಮೋ ದೇವತಾನಾಂ" "ಯಾವಜ್ಜೀವಮಗ್ನಿಹೋತ್ರಂ ಜುಹೋತಿ" "ಅರ್ಚತ ಪ್ರಾರ್ಚತ" "ತ್ರಿಯಂಬಕಂ ಯಜಾಮಹೇ" "ಅಂತರಿಚ್ಛಂತಿ ತಂ ಜನೇ" "ರುದ್ರಂ ಪರೋ ಮನೀಷಯಾ ಗೃಭ್ಣಂತಿ ಜಿಹ್ವಯಾ" "ಯೋ ವೆ, ಸ್ವಾಂ ದೇವತಾಮತಿಯಜತೇ" ಇತ್ಯಾದಿನಾ ರುದ್ರವೆ,ಶ್ವಾನರೋಪಾಸನಮೇವ ಕರ್ತವ್ಯಮಿತಿ ಚೋದನಾದರ್ಶನಾತ್, ಅಕರಣೇ ಪ್ರತ್ಯವಾಯದರ್ಶ ನಾತ್, "ಶ್ವಂ ದೇವಾನಾಂ ಬ್ರಾಹ್ಮಣಾನಾಮಧಿಪತಿರ್ವಿಷ್ಣುಃ ಕ್ಷತ್ರಿಯಾ**

ಣಾಮಧಿಪತಿಃ" ಇತ್ಯಾದಿನಾ ಸ್ವದೇವತೋಪಾಸನಾತಿಕ್ರಮಣೇ ನರಕ ಪ್ರಾಪ್ತ್ಯುಪದೇಶಾತ್, ರುದ್ರವೈಶ್ವಾನರೋಪಾಸನಾಪರಿತ್ಯಾಗೇ ವರ್ಣ ಚತುಷ್ಟಯಾತೀತತ್ವಪ್ರಸಂಗಾಚ್ಚ ಏತತ್ಕಲ್ಪಿತವಾಕ್ಯಾನಾಂ ವೇದ ವಿರುದ್ಧತ್ವೇನ ವೇದವಾದಿಭಿಸ್ತಾನಿ ನಾಂಗೀಕರಣೀಯಾನಿ. "ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ" "ಅತ್ತಾ ಚರಾಚರಗ್ರಹ ಣಾತ್" ಇತ್ಯಾದಿಶ್ರುತಿಸೂತ್ರೇಷು ಸಂಹಾರಸ್ಯ ಪರಬ್ರಹ್ಮಧರ್ಮತ್ವೇನ ನಿರ್ದೇಶಾತ್, ತದನಂಗೀಕಾರೇ ವಿಷ್ಣೋರಬ್ರಹ್ಮತ್ವಪ್ರಸಂಗಾಚ್ಚ. "ರುದ್ರೋ ವಾ ಏಷ ಯದಗ್ನಿಃ ತಸ್ಯೈತೇ ತನುವೌ ಘೋರಾಽನ್ಯಾ ಶಿವಾನ್ಯಾ" "ಅಘೋರೇಭ್ಯೋಽಥ ಘೋರೇಭ್ಯಃ" ಇತ್ಯಾದಿನಾ ತಸ್ಯೈ ವಾಘೋರಮುಖೇನ ಸೃಷ್ಟಿಸ್ಥಿತಿಕರ್ತೃತ್ವಸ್ಯ, ಘೋರಮುಖೇನ ಸಂಹಾರ ಕರ್ತೃತ್ವಸ್ಯ ಚೋಪದೇಶಾತ್ ತಸ್ಯೈವ ಜಗಜ್ಜನ್ಮಾದಿಕಾರಣತ್ವೇನ ಪರ ಬ್ರಹ್ಮತ್ವಂ ಸಿದ್ಧಂ.

ಕಿಂಚ—"ಯಾ ತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ" ಇತ್ಯಾದಿನಾ ಪರಮೇಶ್ವರಸ್ಯ ಶುದ್ಧಸಾತ್ತ್ವಿಕಶಿವಶರೀರಪ್ರಾರ್ಥನಾದರ್ಶ ನಾತ್, "ಪ್ರಪಂಚೋಪಶಮಂ ಶಾಂತಂ" "ನೀಲಕಂಠಂ ಪ್ರಶಾಂತಂ" ಇತ್ಯಾದಿನಾ ಶಿವಸ್ಯೈವ ಪರಮಶಾಂತತ್ವೋಪದೇಶಾಚ್ಚ ಕೇವಲತಾಮ ಸತ್ವಪ್ರತಿಪಾದಕವಾಕ್ಯಾನಾಂ ಕಾಲರುದ್ರಪರತ್ವಮೇವ. ಕಾಲರುದ್ರ ಸ್ಯಾಪಿ ಶಿವಾಂಶತ್ವೇನ ವಿಷ್ಣೋರಧಿಕತ್ವಂ ವೇದಶಾಸ್ತ್ರೇಷು ಪ್ರಸಿದ್ಧಂ. ತಥಾ ಚ ಶ್ರುತಿಃ—ಪರಾತ್ಪರತರೋ ಬ್ರಹ್ಮಾ ಯತ್ಪರಾತ್ಪರತೋ ಹರಿಃ। ತತ್ಪರಾತ್ಪರತೋಽಧೀಶಸ್ತನ್ಮೇ ಮನಶ್ಶಿವಸಂಕಲ್ಪಮಸ್ತು॥ ಇತಿ. "ಅಜಾ ಮೇಕಾಂ" ಇತ್ಯಾದಿಶ್ರುತೌ ಪರಮೇಶ್ವರಪ್ರಾಕೃತಶಕ್ತೇರ್ಗುಣತ್ರಯಾತ್ಮ ಕತ್ವಂ ನಿರ್ದಿಷ್ಟಂ। ಅತಸ್ಸತ್ತ್ವಗುಣಾವಲಂಬನೇನ ನಾರಾಯಣಸ್ಯ ಬ್ರಹ್ಮತ್ವೇ ಅಯುಕ್ತತ್ವಪ್ರಸಂಗಾತ್ ಅಪ್ರಾಕೃತಬ್ರಹ್ಮತ್ವವಿಧಾಯಕಸರ್ವ ವೈದಿಕಶಾಸ್ತ್ರಭಂಗಪ್ರಸಂಗಃ ಸ್ಯಾತ್. "ಶುಕ್ಲಧ್ಯಾನಪರಾಯಣಃ" ಇತಿ ಜಾಬಾಲೋಪನಿಷದಿ ಶುಕ್ಲಶರೀರರುದ್ರಧ್ಯಾನಸ್ಯೈವ ಮುಮುಕ್ಷೂಣಾಂ ವಿಧೇಯತ್ವೇನ ದರ್ಶನಾತ್। ಸೂತಸಂಹಿತಾಯಾಂ ಸೂತಗೀತಾಸು—

ಅಸ್ತಿ ರುದ್ರಸ್ಯ ವಿಪ್ರೇಂದ್ರಾ ಅಂತಸ್ಸತ್ತ್ವಂ ಬಹಿಸ್ತಮಃ। ವಿಷ್ಣೋರಂತಸ್ತಮ ಸ್ಸತ್ತ್ವಂ ಬಹಿರಸ್ತಿ ರಜೋಗುಣಃ॥ ಅಂತರ್ಬಹಿಶ್ಚ ವಿಪ್ರೇಂದ್ರಾ ಅಸ್ತಿ ತಸ್ಯ ಪ್ರಜಾಪತೇಃ। ರಜಸಾ ತಮಸಾಽಽಕ್ರಾಂತೌ ಬ್ರಹ್ಮನಾರಾಯಣೌ ಖಲು॥ ಇತಿ. ಶಿವಧರ್ಮಶಾಸ್ತ್ರೇ—ಅಂತಸ್ಸತ್ತ್ವಗುಣೋಪೇತೋ ಬಹಿಸ್ತಾಮಸಸಂಯುತಃ। ಶುದ್ಧಸಾತ್ವಿಕ ಇತ್ಯುಕ್ತಃ ಶಂಕರೋ ಲೋಕಶಂಕರಃ॥ ಅಂತಸ್ತಾಮಸಸಂಯುಕ್ತೋ ಬಹಿಸ್ಸತ್ತ್ವಗುಣಾನ್ವಿತಃ। ಶುದ್ಧತಾಮಸ ಇತ್ಯುಕ್ತೋ ವಿಷ್ಣುಸ್ಸೃಷ್ಟಿಪ್ರಿಯಃ

ಪತಿಃ || ಇತಿ ನಿರ್ದೇಶಾತ್ತಸ್ಯೈವ ಬ್ರಹ್ಮವಿಷ್ಣ್ವಾದೇರಪ್ಯಧಿಕತ್ವಂ.

ಶಂಕರಸಂಹಿತಾಯಾಂ ಶಿವರಹಸ್ಯಖಂಡೇ–ದಶ ಶೈವಪುರಾಣಾನಿ ಸಾತ್ತ್ವಿಕಾನಿ ವಿದುರ್ಬುಧಾಃ । ಶ್ರದ್ಧೇಯಾನಿ ದ್ವಿಜವರ್ಯೈಸ್ತೇಷಾಂ ಧರ್ಮಾಸ್ತು ತತ್ರ ಯತ್ || ಸತ್ತ್ವಂ ಶುದ್ಧಂ ಸಮಾದಿಷ್ಟಂ ಸುಖಜ್ಞಾನಾಸ್ಪದಂ ತು ಯತ್। ವಿದ್ಯೋಪದೇಷ್ಟಾ ಯೋಗಿಭ್ಯಃ ಶುದ್ಧ ಸ್ಫಟಿಕಸನ್ನಿಭಃ|| ನ ನಿದ್ರಾತಿ ಶಿವಃ ಕ್ವಾಪಿ ಬ್ರಾಹ್ಮಣಾಧಿಪತಿಶ್ಶಿವಃ । ಬ್ರುವಂತ್ಯೇವಂ ಪುರಾಣಾನಿ ಬ್ರಾಹ್ಮಣಾನಾಂ ಕಥಾಃ ಶುಭಾಃ || ದಶ ಶೈವಪುರಾಣಾನಿ ಹಿಂಸಾದೋಷಪರಾಣಿ ಚ । ವೈಷ್ಣವಾನಿ ಚ ಚತ್ವಾರಿ ತಾಮಸಾನಿ ಮುನೀಶ್ವರಾಃ || ಕ್ಷತ್ರಿಯಾಣಾಂ ಶ್ರುತಾ ಧರ್ಮಾಸ್ತೇಷು ತದ್ದೇವತಾ ಹರಿಃ । ತಮಃಕೃಷ್ಣ ಉದಾಸೀನಃ ಕೂಟಕರ್ಮವಿಶಾರದಃ || ನಿದ್ರಾಲಸ್ಯಪ್ರಮಾದಾದ್ಯಾಸ್ತದ್ಗುಣಾಃ ಪರಿಕೀರ್ತಿತಾಃ । ಕೃಷ್ಣೋ ವಿಷ್ಣುಃಸ್ಮೃತಶ್ಶೇಷಶಾಯೀ ಭಕ್ತವಿಮೋಹಕಃ || ಬ್ರಾಹ್ಮೇ ತು ರಾಜಸೇ ವೈಶ್ಯಧರ್ಮೈಸ್ಸರ್ವತ್ರ ಸಂಮತೇ । ದುಃಖಾಸ್ಪದಂ ರಕ್ತವರ್ಣಂ ಚಂಚಲಂ ಚ ರಜಃ ಸ್ಮೃತಂ || ಗುಣತ್ರಯಸಮಾಯುಕ್ತಮಾಗ್ನೇಯಂ ಸೌರಮೇವ ಚ । ತಸ್ಮಾಚ್ಛೈವಾನಿ ವಿಪ್ರಾಣಾಂ ಪುರಾಣಾನಿ ಹಿತಾನಿ ವೈ || **ಇತಿ ಶಿವಪುರಾಣಾನಾಮೇವ ಸಾತ್ತ್ವಿಕತ್ವೋಕ್ತೇಃ ।**

**ಕಿಂಚ–ಶಿವಪುರಾಣಾನಾಂ ಕಲ್ಪಾಂತರಪ್ರಸಕ್ತಿರಿತಿ ಚೇತ್ ತದಸಂಗತಮೇವ । ಮಾತ್ಸ್ಯೇ–ಪುರಾಣಂ ಸರ್ವಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಕೃತಂ । ಅನಂತರಂ ತು ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿರ್ಗತಾಃ || ಪುರಾಣಮೇಕಮೇವಾಸೀಚ್ಛತಕೋಟಿಪ್ರವಿಸ್ತರಂ || ಇತ್ಯಾದಿನಾ ಬ್ರಹ್ಮಕೃತ ಬ್ರಾಹ್ಮಪುರಾಣಮೇವ ದ್ವಾಪರಾಂತೇ ವೇದವ್ಯಾಸೇನ ಸಂಕೋಚ್ಯ ಚತುರ್ಲಕ್ಷಾತ್ಮನಾ ಸಾಂಕ್ಷೇಪಿತಮಿತಿ ಪ್ರತಿಪಾದನಾತ್, ಧರ್ಮಸಂಹಿತಾಯಾಂ, "ಬ್ರಾಹ್ಮಮೇವ ಕೃತೇ ಚಾದ್ಯೇ ಪುರಾಣಂ ಶ್ರುತಿಸಂಮತಂ । ಅಷ್ಟಾದಶ ವಿಧಂ ತಸ್ಯ ಕೃತಂ ಕೋಟಿಪ್ರಭೇದತಃ ||" ಇತಿ ದರ್ಶನಾಚ್ಚ. ಅತ ಏವ ಶೈವಪುರಾಣಾನಾಂ ಕಲ್ಪಾಂತರವಿಷಯತ್ವಮಿತ್ಯಸಂಗತಂ ।**

"ಬ್ರಾಹ್ಮಣರಿಗೆ ಅಗ್ನಿ ಎಲ್ಲಾ ದೇವತೆಗಳಿಗಿಂತಲೂ ಪೂಜ್ಯನು" "ಜೀವವಿರುವವರಿಗೂ ಅಗ್ನಿಹೋತ್ರವನ್ನಾಚರಿಸಬೇಕು" "ಅರ್ಚಿಸಿರಿ, ವಿಶೇಷವಾಗಿ ಅರ್ಚಿಸಿರಿ. ಆ ತ್ರಿಯಂಬಕನನ್ನು ನಾವು ಅರ್ಚಿಸುತ್ತೇವೆ" "ಜನರು ಅವನನ್ನು ತಮ್ಮೊಳಗೆ ಇಟ್ಟುಕೊಳ್ಳಲು ಇಚ್ಛಿಸುತ್ತಾರೆ". ಯಾವನು ತನ್ನ ದೇವತೆಯನ್ನು ತೊರೆಯುತ್ತಾನೆಯೋ" ಇಲ್ಲಿ ರುದ್ರ ಅಗ್ನಿ ಇವರ ಉಪಾಸನವನ್ನೇ ಮಾಡಬೇಕೆಂಬ ನಿಯಮ ಕಂಡುಬಂದಿದೆ; ಮಾಡದೇಹೋದರೆ ದೋಷಬರುತ್ತದೆ. ತನ್ನ ದೇವತೋಪಾಸನವನ್ನು ತೊರೆದರೆ ನರಕವುಂಟಾಗುವುದರಿಂದ ರುದ್ರ ಅಗ್ನಿ ಇವರ ಉಪಾಸನವನ್ನು ತೊರೆದವನು ನಾಲ್ಕು ವರ್ಣಗಳಿಂದಲೂ ದೂರವಾಗಬೇಕಾದೀತು.

ಈ ಬಗೆಯ ಕಲ್ಪಿತವಾಕ್ಯಗಳು ವೇದವಿರುದ್ಧವಾದುದರಿಂದ ಇವನ್ನು ವೇದವಾದಿಗಳು ಅಂಗೀಕರಿಸಬಾರದು. "ಅತ್ತಾ ಚರಾಚರ ಗ್ರಹಣಾತ್", "ಯಾವನಿಗೆ ಬ್ರಹ್ಮ ಕ್ಷತ್ರ ಇವರಿಬ್ಬರೂ ಅನ್ನವಾಗುತ್ತಾರೋ" ಹೀಗೆ ಶ್ರುತಿ ಸೂತ್ರಗಳಲ್ಲಿ ಸಂಹಾರವನ್ನು ಪರಬ್ರಹ್ಮದ ಧರ್ಮವೆಂದು ಹೇಳಲಾಗಿದೆ. ಅದನ್ನು ಒಪ್ಪದೇ ಹೋದರೆ ವಿಷ್ಣು ವನ್ನೇ ಪರಬ್ರಹ್ಮವೆಂದು ಹೇಳಬೇಕಾದೀತು. "ಈ ರುದ್ರನೇ ಅಗ್ನಿಯಾಗಿದ್ದಾನೆ, ಅವನಿಗೆ ಎರಡು ಶರೀರಗಳಿವೆ. ಒಂದು ಘೋರವೂ, ಮತ್ತೊಂದು ಶಾಂತವೂ ಆಗಿದೆ". "ಅಘೋರರೂಪರೂ ಘೋರರೂಪರೂ ಆದ ರುದ್ರರಿಗೆ ನಮಸ್ಕಾರ". ಈ ಶ್ರುತಿಗಳಲ್ಲಿ ಅವನನ್ನು ಅಘೋರಮುಖದಿಂದ ಸೃಷ್ಟಿಸ್ಥಿತಿಗಳಿಗೆ ಕರ್ತನೆಂದೂ, ಘೋರಮುಖದಿಂದ ಸಂಹಾರಕನೆಂದೂ ಹೇಳಲಾಗಿದೆ. ಹೀಗೆ ಅವನೇ ಜಗಜ್ಜ ನ್ಮಾದಿಗಳಿಗೆ ಕಾರಣನಾದ್ದರಿಂದ ಪರಬ್ರಹ್ಮವೂ ಆಗಿರುವನೆಂಬುದು ನಿಶ್ಚಿತವಾಗಿದೆ. "ಯಾವ ನಿನ್ನ ಶರೀರವು ಮಂಗಳಕರವೂ ಪಾಪರಹಿತವೂ ಆಗಿದೆಯೋ" ಎಂಬ ಮಂತ್ರದಲ್ಲಿ ಪರಮೇಶ್ವರನ ಶುದ್ಧವೂ ಸಾತ್ತ್ವಿಕವೂ ಮಂಗಳಕರವೂ ಆದ ಶರೀರದ ಪ್ರಾರ್ಥನೆಯನ್ನು ನಾವು ಕಾಣಬಹುದು. "ಪ್ರಪಂಚಕ್ಕಾಧಾರನೂ ಶಾಂತನೂ ಆದ ಶಿವನನ್ನು ತ್ರಿಮೂರ್ತ್ಯತೀತನೆಂದು ಜ್ಞಾನಿಗಳು ಹೇಳುತ್ತಾರೆ" "ಉಮಾಸಹಾಯ ನಾದ ಪರಮೇಶ್ವರನು ಸರ್ವಲೋಕದ ಪ್ರಭುವೂ ನೀಲಕಂಠನೂ ಪ್ರಶಾಂತನೂ ಆಗಿದ್ದಾನೆ". ಇಲ್ಲಿ ಶಿವನನ್ನು ಪ್ರಶಾಂತನೆಂದು ಹೇಳಿರುವುದರಿಂದ ಅವನನ್ನು ಕೇವಲ ತಾಮಸನೆಂದು ತಿಳಿಸುವ ವಾಕ್ಯಗಳು ಕಾಲರುದ್ರನಿಗೆ ಅನ್ವಯಿಸುತ್ತವೆ. ಕಾಲ ರುದ್ರನೂ ಶಿವನ ಅಂಶನೇ ಆದ್ದರಿಂದ ವಿಷ್ಣುವಿಗೂ ಅಧಿಕನೆಂದು ನಿಗಮಾಗಮಗಳಲ್ಲಿ ಪ್ರಸಿದ್ಧವಾಗಿದೆ. "ಲೋಕದಲ್ಲಿ ಉತ್ಕೃಷ್ಟವಾದದ್ದೆಲ್ಲಕ್ಕೂ ಉತ್ಕೃಷ್ಟನಾದವನು ಬ್ರಹ್ಮನು. ಅವನಿಗೂ ಉತ್ಕೃಷ್ಟನಾದವನು ಹರಿ. ಇವರೆಲ್ಲರಿಗೂ ಹೆಚ್ಚಿನದು ಯಾವದಿದೆಯೋ ಅದೆಲ್ಲಕ್ಕೂ ನಿಯಾಮಕನಾದ ಆ ಶಿವನ ಸಂಕಲ್ಪದಂತೆ ನನ್ನ ಮನವು ಪ್ರವರ್ತಿಸಲಿ" ಎಂದು ವೇದದ ಮಹರ್ಷಿಗಳ ಪ್ರಾರ್ಥನೆಯಾಗಿದೆ. 'ಅಜಾಮೇಕಾಂ' ಎಂಬ ಶ್ರುತಿಯಲ್ಲಿ ಜಡಶಕ್ತಿಯನ್ನು ಗುಣಮಯಿಯೆಂದು ಹೇಳ ಲಾಗಿದೆ. ಆದ್ದರಿಂದ ಸತ್ತ್ವಗುಣದ ಅವಲಂಬನದಿಂದ ಆಗಿರುವ ನಾರಾಯಣನೇ ಪರಬ್ರಹ್ಮವೆಂದು ಹೇಳುವುದು ಯುಕ್ತಿಗೆ ಹೊಂದದೇ ಇರುವುದರಿಂದ ನಿಷ್ಕಲಬ್ರಹ್ಮ ವನ್ನು ವಿಧಿಸುವ ಎಲ್ಲಾ ವೈದಿಕಶಾಸ್ತ್ರಕ್ಕೂ ಭಂಗವುಂಟಾಗುವ ಪ್ರಸಂಗ ಒದಗೀತು.

'ಶುಕ್ಲಧ್ಯಾನಪರಾಯಣಃ' ಎಂಬ ಜಾಬಾಲೋಪನಿಷತ್ತಿನಲ್ಲಿ ಶುಕ್ಲಶರೀರವುಳ್ಳ ರುದ್ರನ ಧ್ಯಾನವೇ ಮುಮುಕ್ಷುಗಳಿಗೆ ಯೋಗ್ಯವೆಂದು ಹೇಳಲಾಗಿದೆ. ಸೂತಸಂಹಿತೆ ಯಲ್ಲಿ ಬರುವ ಸೂತಗೀತೆಯಲ್ಲಿ "ರುದ್ರನಿಗೆ ಒಳಗೆ ಸತ್ತ್ವ ಹೊರಗೆ ತಮಸ್ಸು, ವಿಷ್ಣುವಿಗೆ ಒಳಗೆ ತಮಸ್ಸು ಹೊರಗೆ ರಜಸ್ಸು, ಬ್ರಹ್ಮನಿಗೆ ಒಳಗೂ ಹೊರಗೂ ರಜಸ್ಸು ಇರುವುವು. ಬ್ರಹ್ಮನಾರಾಯಣರು ರಜೋಗುಣದಿಂದ ಕೂಡಿರುವರು" ಎಂದು ಹೇಳಿದೆ. ಶಿವಧರ್ಮಶಾಸ್ತ್ರದಲ್ಲಿ "ಒಳಗೆ ಸತ್ತ್ವಗುಣದಿಂದಲೂ ಹೊರಗೆ ತಮೋ

ಗುಣದಿಂದಲೂ ಕೂಡಿರುವ ಶಂಕರನು ಲೋಕಶಂಕರನಾಗಿ ಶುದ್ಧ ಸಾತ್ತ್ವಿಕನೆನಿಸಿದ್ದಾನೆ. ಲಕ್ಷ್ಮೀಪತಿಯಾದ ವಿಷ್ಣುವು ಒಳಗೆ ತಮೋಗುಣದಿಂದಲೂ ಹೊರಗೆ ಸತ್ತ್ವಗುಣದಿಂದಲೂ ಕೂಡಿ ಶುದ್ಧ ತಾಮಸನೆನಿಸಿದ್ದಾನೆ" ಎಂದು ಹೇಳಿರುವುದರಿಂದ ಶಿವನೇ ವಿಷ್ಣು ಬ್ರಹ್ಮರಿಗಿಂತಲೂ ಅಧಿಕನೆನಿಸಿರುವನು.

ಶಂಕರಸಂಹಿತೆಯ ಶಿವರಹಸ್ಯಖಂಡದಲ್ಲಿ "ಪತ್ತು ಶೈವಪುರಾಣಗಳು ಸಾತ್ತ್ವಿಕವೆನಿಸಿವೆ. ಅವು ಬ್ರಾಹ್ಮಣರಿಗೆ ಮಾನ್ಯವಾಗಿವೆ. ಅಲ್ಲಿ ಇವುಗಳ ಧರ್ಮ ಹೀಗೆ ಉಕ್ತವಾಗಿದೆ. ಶುದ್ಧವಾದ ಯಾವ ಸತ್ತ್ವಗುಣವಿದೆಯೋ ಅದು ಸುಖ ಜ್ಞಾನಗಳಿಗಾಶ್ರಯವಾಗಿರುವುದು. ಬ್ರಾಹ್ಮಣರ ಅಧಿಪತಿಯಾದ ಶಿವನು ಯೋಗಿಗಳಿಗೆ ವಿದ್ಯೆಯನ್ನು ಉಪದೇಶಿಸುತ್ತ ಶುದ್ಧಸ್ಫಟಿಕಸದೃಶನಾಗಿ ಯಾವಾಗಲೂ ಜಾಗೃತನಾಗಿರುತ್ತಾನೆ" ಹೀಗೆ ಹತ್ತು ಶೈವಪುರಾಣಗಳು ಬ್ರಾಹ್ಮಣರೆನಿಸಿದ ವೀರಶೈವರಿಗೆ ಶುಭವಾದ ಕಥೆಗಳನ್ನು ಹೇಳುತ್ತವೆ. ಹಿಂಸಾದಿಗಳನ್ನು ತಿಳಿಸುವ ನಾಲ್ಕು ವೈಷ್ಣವ ಪುರಾಣಗಳು ಕ್ಷತ್ರಿಯ ಧರ್ಮವನ್ನು ತಿಳಿಸುವುದರಿಂದ ತಾಮಸವೆನಿಸಿವೆ. ಅವುಗಳಲ್ಲಿ ಪ್ರತಿಪಾದಿತವಾದ ದೇವತೆ ವಿಷ್ಣು. ತಮಸ್ಸು, ಕಪ್ಪುಬಣ್ಣ, ಉದಾಸೀನತೆ, ಕೃತ್ರಿಮಾಚರಣೆ, ನಿದ್ರೆ, ಆಲಸ್ಯ, ಪ್ರಮಾದ ಇವೇ ಆ ಪುರಾಣಗಳ ಧರ್ಮಗಳೆನಿಸಿವೆ. ಶೇಷಶಾಯಿಯೂ, ಭಕ್ತರನ್ನು ಮೋಹಗೊಳಿಸುವವನೂ ಆದ ವಿಷ್ಣುವೇ ಅವುಗಳಲ್ಲಿ ಪ್ರತಿಪಾದಿತವಾಗಿದ್ದಾನೆ. ಅವುಗಳಲ್ಲಿ ಕ್ಷತ್ರಿಯಧರ್ಮವನ್ನು ತಿಳಿಸಲಾಗಿದೆ. ಬ್ರಹ್ಮನಿಗೆ ಸಂಬಂಧಿಸಿದ ರಾಜಸಪುರಾಣಗಳಲ್ಲಿ ವೈಶ್ಯಧರ್ಮವನ್ನು ಹೇಳಲಾಗಿದೆ. ದುಃಖಕ್ಕೆ ಅವಕಾಶವನ್ನು ಕಲ್ಪಿಸುವಿಕೆ. ಕೆಂಪುಬಣ್ಣ, ಚಾಂಚಲ್ಯ ಇವು ರಜೋಗುಣದ ಧರ್ಮಗಳೆನಿಸಿವೆ. ಆಗ್ನೇಯ ಮತ್ತು ಸೌರಪುರಾಣಗಳು ತ್ರಿಗುಣಮಯವಾಗಿವೆ. ಆದ್ದರಿಂದ ವೀರಶೈವರಿಗೆ ಶೈವಪುರಾಣಗಳೇ ಹಿತವೆನಿಸಿವೆ. ಇದೂ ಅಲ್ಲದೆ ಶಿವಪುರಾಣಗಳಿಗೆ ಕಲ್ಪಾಂತರದಲ್ಲಿಯೇ ಪ್ರಸಕ್ತಿ ಇರುವುದರಿಂದ ಈಗಿನ ಕಲ್ಪಕ್ಕೆ ಸಂಬಂಧಿಸಿಲ್ಲವೆಂದು ಹೇಳುವುದು ಅಸಂಗತವಾಗುತ್ತದೆ. ಮತ್ಸ್ಯಪುರಾಣದಲ್ಲಿ "ಎಲ್ಲಾ ಶಾಸ್ತ್ರಗಳಿಗಿಂತಲೂ ಮೊದಲು ಪುರಾಣವನ್ನು ಪರಬ್ರಹ್ಮನು ರಚಿಸಿದನು. ಆಮೇಲೆ ಅವನು ತನ್ನ ಬೇರೆ ಮುಖಗಳಿಂದ ವೇದಗಳನ್ನು ಉಪದೇಶಿಸಿದನು. ಪುರಾಣವೆಲ್ಲವೂ ಒಂದೇ ಬಗೆಯಾಗಿ ವಿಸ್ತಾರವಾಗಿತ್ತು. ಪರಬ್ರಹ್ಮನಿಂದ ಉಪದಿಷ್ಟವಾದ ಬ್ರಾಹ್ಮಪುರಾಣವನ್ನು ದ್ವಾಪರದ ಕೊನೆಯಲ್ಲಿ ವೇದವ್ಯಾಸನು ಸಂಕೋಚಪಡಿಸಿ ನಾಲ್ಕುಲಕ್ಷಗಳಷ್ಟಾಗಿ ಸಂಗ್ರಹಿಸಿದನು" ಎಂದು ಹೇಳಿದೆ. ಧರ್ಮಸಂಹಿತೆಯಲ್ಲಿ "ಕೃತಯುಗದಲ್ಲಿ ಬ್ರಾಹ್ಮಪುರಾಣವು ಶ್ರುತಿಗೆ ಸಮ್ಮತವಾಗಿತ್ತು. ಅದನ್ನು ಅನೇಕ ಪ್ರಭೇದಗಳಿಂದ ಹದಿನೆಂಟು ಬಗೆಯಾಗಿ ವಿಂಗಡಿಸಲಾಯಿತು" ಎಂದು ಹೇಳಿದೆ. ಆದ್ದರಿಂದ ಶೈವಪುರಾಣಗಳು ಕಲ್ಪಾಂತರಕ್ಕೆ ಸಂಬಂಧಿಸಿದವೆಂಬುದು ಸಂಗತವಲ್ಲ.

**ನನು—ನಾರಾಯಣಸ್ಯೈವ ಮತ್ಸ್ಯಕೂರ್ಮವರಾಹಾದಿರೂಪೇಣ ಸಕಲಭೂಭಾರನಿವರ್ತಕತ್ವದರ್ಶನಾತ್ತದ್ರಮುಸ್ತುತಿ ಕೃತಂ ತಸ್ಯೈ ವೋಪ**

ಪನ್ನಮಿತಿ ಚೇನ್ನ । ಕೌರ್ಮೇ—ಏಕಾದಶ್ಯಾಂ ತು ಮಧ್ಯಾಹ್ನೇ ಮಾಘ ಮಾಸೇ ಮಹಾನಟಃ । ಸರ್ವಲೋಕಹಿತಾರ್ಥಾಯ ವಿಷಂ ಭುಕ್ತ್ವಾ ತತಃ ಶಿವಃ ॥ ಶಿವಯೋಗೇನ ತದ್ರಾತ್ರೌ ಸ್ಥಿತ್ವಾ ಚಂದ್ರಕಲಾಧರಃ । ಪರಿ ವೇಷ್ಟಿತವಿಷ್ಣ್ವಾದೀನ್ ದೃಷ್ಟ್ವಾ ತತ್ಪಾದಸೇವಕಾನ್ ॥ ಉಪೋಷಿತ ಮಹಾಭಕ್ತಾನ್ ದ್ವಾದಶ್ಯಾಂ ನೀಲಲೋಹಿತಃ । ಸಮುದ್ರಮಥನೋ ದ್ಭೂತಸುಧಾಪಾನಾರ್ಥಮಾದರಾತ್ ॥ ಆಜ್ಞಾಂ ಚಕ್ರೇ ಮಹಾದೇವ ಸ್ಸರ್ವಲೋಕಭಯಾವಹಃ ॥

ಇತ್ಯಾದಿನಾ ಪರಮೇಶ್ವರಸ್ಯ ಅನನ್ಯಸಾಧಾರಣಕಾಲಕೂಟಭಕ್ಷ ಣಾಂಧಕಾಸುರಜಲಂಧರಾಸುರತ್ರಿಪುರಾಸುರವ್ಯಾಘ್ರಾಸುರಗಜಾಸುರಶೂ ರಪದ್ಮಾಸುರಾದಿಮಹಾದಾನವಸಂಹಾರಪೂರ್ವಕಭೂಭಾರನಿವರ್ತ್ತತ್ವದರ್ಶ ನಾತ್, ಅತ ಏವ ಪುರಾಣಾಗಮೇಷು ಶೈವವೈಷ್ಣವಾನಾಮೇಕಾದಶೀ ವ್ರತಾವಶ್ಯಕತ್ವಂ ದೃಶ್ಯತೇ । ತದುಕ್ತಂ ಶಿವಧರ್ಮಶಾಸ್ತ್ರೇ—

ಶೈವವೈಷ್ಣವಯೋರ್ಗ್ರಾಹ್ಯಮೇಕಾದಶ್ಯಾಮುಪೋಷಣಂ । ನಂದೀಶವಿಷ್ಣು ಪ್ರಮುಖಾ ಯತೋ ವ್ರತಮಥಾಚರನ್ ॥ ಶೇಷಂ ಪ್ರಧಾನಂ ಸ್ಮಾರ್ತಾನಾಮೇಕಾ ದಶ್ಯಾಮುಪೋಷಣಂ । ಸಾಯಂ ಪ್ರಧಾನಂ ಶೈವಾನಾಂ ವೇದಮಾರ್ಗೈಕವರ್ತಿನಾಂ ॥ ಇತಿ. ತಥಾ ಸಿದ್ಧಾಂತಾಗಮೇ—ಪ್ರದೋಷವ್ಯಾಪಿನೀ ಶೈವೀ ಸಮ್ಯಗೇಕಾದಶೀ ಸ್ಮೃತಾ । ನಾನ್ಯಾ ಶೈವೈಃ ಪರಿಗ್ರಾಹ್ಯಾ ಶೈವಶಾಸ್ತ್ರೈಕಶಾಸನಾತ್ ॥ ಇತಿ. ವೀರಾಗಮೇ ಚ—ಸರ್ವೇಷಾಂ ವೀರಶೈವಾನಾಂ ಶ್ರೌತಸ್ಮಾರ್ತಾನುವರ್ತಿ ನಾಂ । ಪ್ರದೋಷವ್ಯಾಪಿನೀ ಗ್ರಾಹ್ಯಾ ಸಮ್ಯಗೇಕಾದಶೀ ಶಿವೇ ॥ ಶೈವವ್ರತಾನಾಂ ಸರ್ವೇಷಾಂ ಸಾಯಂ ಪ್ರಾಧಾನ್ಯಮೇವ ಹಿ । ಅನ್ಯಥಾಚರಣೇ ದೇವಿ ಪ್ರತ್ಯ ವಾಯೋ ಮಹಾನ್ ಭವೇತ್ ॥ ಇತಿ.

ಕಿಂಚ—ಪದ್ಮಪುರಾಣಾದೀನಾಂ ವಿಷ್ಣುಪ್ರಧಾನತ್ವೇಽಪಿ ತತ್ರಾಪಿ ಶಿವಮಹಾತ್ಮ್ಯಕಥನಾತ್ತೇಷಾಮಪಿ ತಾಮಸತ್ವಂ ಕಿಂ ನ ಸ್ಯಾತ್. "ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ" ಇತಿ ಗೀತಾವಾಕ್ಯೇನ ವೇದನಾಮಪಿ ತ್ರಿಗುಣಾತ್ಮಕತ್ವದರ್ಶನಾನ್ಮೂರ್ತಿತ್ರಯ ಪ್ರತಿಪಾದಕಶ್ರುತಿನಾಂ ಗುಣತ್ರಯಾತ್ಮಕತ್ವಮುಪಪನ್ನಮಿತಿ ಚೇನ್ನ. "ವಾಚಾ ವಿರೂಪನಿತ್ಯಯಾ" ಇತಿ ಶ್ರುತಿದರ್ಶನಾನ್ನಿತ್ಯರೂಪಸ್ಯ ವೇದಸ್ಯ ಗುಣತ್ರಯಾತ್ಮಕತ್ವಮಯುಕ್ತಂ ಶ್ರೌತವಿಧೇರ್ಬಲವತ್ತ್ವಾತ್. "ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಂ" ಇತ್ಯಾದಿನಾ ಶಿವಸ್ಯ ವೇದೇಷು ಪರಮಸಾತ್ತ್ವಿಕತ್ವೋಪದೇಶಾತ್. ವೇದಾನಾಂ ಗುಣತ್ರಯಾತ್ಮಕತ್ವ ಕಥನಮಧಿಕಾರಿಭೇದೇನ ... ಸ್ತ್ರಿಗುಣಾತ್ಮಕತ್ವಮೀಶ್ವರೋ

**ಪಾಸನಾಪರತ್ವೇನ ಸಾಂಖ್ಯಯೋಗಶಾಸ್ತ್ರೇಷು ವಿವಕ್ಷಿತತ್ವಾದನ್ಯಾರ್ಥೋ ನ ಯುಕ್ತಃ.**

ನಾರಾಯಣನೇ ಮತ್ಸ್ಯಕೂರ್ಮವರಾಹ ರೂಪದಿಂದ ಅವತರಿಸಿ ಸಮಸ್ತ ಭೂಭಾರವನ್ನು ಇಳಿಸಿದನೆಂದು ಹೇಳಿದ್ದರಿಂದ ಅವನೇ ಪರಮಸಾತ್ತ್ವಿಕನೆಂದು ಒಪ್ಪಬಹುದಲ್ಲವೆ? ಅಂದರೆ ಹಾಗಲ್ಲ. ಕೂರ್ಮಪುರಾಣದಲ್ಲಿ "ಮಾಘಮಾಸದ ಏಕಾದಶಿಯ ಮಧ್ಯಾಹ್ನದಲ್ಲಿ ಸರ್ವಭಯನಿವಾರಕನೂ, ಚಂದ್ರಕಲಾಧರನೂ, ಮಹಾನಟನೂ ಆದ ಶಿವನು ಲೋಕಹಿತಕ್ಕಾಗಿ ವಿಷವನ್ನು ಕುಡಿದು ಶಿವಯೋಗನಿರತನಾಗಿ ರಾತ್ರಿಯೆಲ್ಲಾ ತನ್ನ ಸುತ್ತಲೂ ನೆರೆದಿದ್ದ ವಿಷ್ಣ್ವಾದಿದೇವತೆಗಳನ್ನು ನೋಡಿ, ಆ ದಿನವೆಲ್ಲವೂ ಉಪವಾಸವಿದ್ದು ಅವನ ಪಾದಸೇವೆಯಲ್ಲಿಯೇ ನಿರತರಾಗಿದ್ದ ಆ ದೇವತೆಗಳಿಗೆ ಸಮುದ್ರಮಥನದಿಂದ ದೊರಕಿದ ಅಮೃತವನ್ನು ದ್ವಾದಶಿಯಲ್ಲಿ ಕುಡಿಯಲಿಕ್ಕಾಗಿ ಆಜ್ಞೆಮಾಡಿದನು" ಹೀಗೆ ಹೇಳಿರುವುದರಿಂದ ಪರಮೇಶ್ವರನು ತನ್ನ ಅಸಾಧಾರಣಧರ್ಮಗಳೆನಿಸಿದ ವಿಷಭಕ್ಷಣ, ಅಂಧಕ, ಜಲಂಧರ, ತ್ರಿಪುರ, ವ್ಯಾಘ್ರ, ಗಜ, ಶೂರ, ಪದ್ಮ ಮೊದಲಾದ ರಾಕ್ಷಸರ ಸಂಹಾರ ಇವುಗಳಿಂದ ಭೂಭಾರವನ್ನು ತೊಲಗಿಸದನೆಂಬುದು ಸ್ಪಷ್ಟಸಡುತ್ತದೆ. ಆದ್ದರಿಂದಲೇ ಪುರಾಣಾಗಮಗಳಲ್ಲಿ ಶೈವರಿಗೂ ವೈಷ್ಣವರಿಗೂ ಏಕಾದಶೀವ್ರತದ ಆವಶ್ಯಕತೆ ಸಮಾನವಾಗಿ ಕಂಡು ಬಂದಿದೆ. ಶಿವಧರ್ಮಶಾಸ್ತ್ರದಲ್ಲಿ "ಶೈವ ವೈಷ್ಣವರೆಲ್ಲರೂ ಏಕಾದಶಿಯಲ್ಲಿ ಉಪವಾಸ ವಿರಬೇಕು. ನಂದೀಶ, ವಿಷ್ಣು ಮೊದಲಾದವರೆಲ್ಲರೂ ಆ ವ್ರತವನ್ನಾಚರಿಸಿದರು. ಸ್ಮಾರ್ತರು ಪ್ರಧಾನವಾಗಿ ಏಕಾದಶಿಯಲ್ಲಿ ಉಪವಾಸವಿರುವರು. ವೇದಮಾರ್ಗವನ್ನು ಆಶ್ರಯಿಸಿದ ಶೈವರು ಸಾಯಂಕಾಲದಲ್ಲಿ ಉಪವಾಸವನ್ನಾಚರಿಸಬೇಕು" ಎಂದು ಹೇಳಿದೆ. ಸಿದ್ಧಾಂತಾಗಮದಲ್ಲಿ "ಶೈವರು ಆಚರಿಸುವ ಏಕಾದಶೀ ವ್ರತವು ಪ್ರದೋಷಕಾಲಕ್ಕೆ ಅನ್ವಯಿಸುವುದು. ಶೈವರು ಇದನ್ನು ಬಿಟ್ಟು ಬೇರೆ ವ್ರತವನ್ನು ಆಚರಿಸಬಾರದು. ಇದು ಶೈವಶಾಸ್ತ್ರದ ಮುಖ್ಯ ಶಾಸನವಾಗಿರುವುದು" ಎಂದು ಹೇಳಿದೆ. ವೀರಾಗಮದಲ್ಲಿ "ಶ್ರುತಿ ಸ್ಮೃತಿಗಳಲ್ಲಿ ಹೇಳಿದ ಕರ್ಮಗಳನ್ನು ಆಚರಿಸುವ ಎಲ್ಲಾ ವೀರಶೈವರಿಗೂ ಏಕಾದಶೀವ್ರತವು ಪ್ರದೋಷಕಾಲದಲ್ಲಿ ಆಚರಣೆಗೆ ಯೋಗ್ಯವಾದುದು. ಎಲ್ಲಾ ಬಗೆಯ ಶೈವವ್ರತಗಳಿಗೂ ಸಾಯಂಕಾಲವೇ ಮುಖ್ಯವಾದುದು. ಬೇರೆ ರೀತಿಯಲ್ಲಿ ಆಚರಿಸುವುದರಿಂದ ಬಹಳ ದೋಷ ಸಂಭವಿಸುತ್ತದ" ಎಂದು ಹೇಳಿದೆ. ಪದ್ಮಪುರಾಣಾದಿಗಳು ವಿಷ್ಣುವನ್ನು ಪ್ರಧಾನವೆಂದೆಣಿಸಿದ್ದರೂ ಅಲ್ಲಿಯೂ ಶಿವನ ಮಹಿಮೆಯನ್ನು ಹೇಳಿರುವುದರಿಂದ ಅವೂ ಏಕೆ ತಾಮಸವಾಗಬಾರದು? "ವೇದಗಳು ತ್ರಿಗುಣಾತ್ಮಕವಾಗಿವೆ, ನೀನು ತ್ರಿಗುಣಾತೀತನಾಗು" ಎಂದು ಗೀತೆಯಲ್ಲಿ ವೇದಗಳನ್ನು ತ್ರಿಗುಣಮಯವೆಂದು ಹೇಳಿರುವುದರಿಂದ ತ್ರಿಮೂರ್ತಿಗಳನ್ನು ಪ್ರತಿಪಾದಿಸುವ ಶ್ರುತಿಗಳು ತ್ರಿಗುಣಾತ್ಮಕವೆಂಬುದು ಖಚಿತವಾಗಲಿಲ್ಲವೇ? ಎಂದು ಕೇಳಿದರೆ ಅದಕ್ಕೆ ಹೀಗೆ ಸಮಾಧಾನವಿದೆ. "ವಾಚಾ ವಿರೂಪನಿತ್ಯಯಾ" ಎಂಬ ಶ್ರುತಿಯಲ್ಲಿ

ಹೇಳಿರುವಂತೆ ನಿತ್ಯವೆನಿಸಿದ ವೇದಕ್ಕೆ ತ್ರಿಗುಣಾತ್ಮಕತ್ವವು ಹೊಂದುವುದಿಲ್ಲ; ಯಾಕೆಂದರೆ ಗೀತೆಗಿಂತಲೂ ಶ್ರುತಿಯ ಹೇಳಿಕೆಯೇ ಪ್ರಬಲವಾದುದು. "ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಂ" ಎಂಬಲ್ಲಿ ಶಿವನನ್ನು ಪರಮಸಾತ್ತ್ವಿಕನೆಂದು ತಿಳಿಸಲಾಗಿದೆ. ಆದರೆ ವೇದಗಳನ್ನು ಗುಣಮಯವೆಂದು ಕರೆದಿರುವುದು ಅಧಿಕಾರಿ ಭೇದದಿಂದ ಅವರವರ ಯೋಗ್ಯತೆಗೆ ತಕ್ಕಂತೆ ಸ್ಥೂಲಸೂಕ್ಷ್ಮಕಾರಣವೆಂಬ ಉಪಾಸನ ಭೇದವನ್ನು ತಿಳಿಸುವುದರಲ್ಲಿಯೇ ತಾತ್ಪರ್ಯವೆಂದು ಸಾಂಖ್ಯಯೋಗಶಾಸ್ತ್ರಗಳು ತಿಳಿಸಿವೆ. ಆದ್ದರಿಂದಲೇ ವೇದಗಳು ಗುಣಮಯವೆಂಬ ಮಾತಿಗೆ ಇದಕ್ಕಿಂತ ಬೇರೆ ರೀತಿಯಲ್ಲಿ ಅರ್ಥಮಾಡುವುದು ಸಮಂಜಸವಾಗುವುದಿಲ್ಲ.

ಕಿಂಚ—ಕಿಮಿದಂ ತಾಮಸತ್ವಂ, ತಮೋಗುಣಜನ್ಯತ್ವಂ? ಸ್ವೇತರ ಗುಣಾಸಂಸೃಷ್ಟತಮೋಗುಣಜನ್ಯತ್ವಂ ವಾ? ಇತರಾನಭಿಭೂತತಮೋಗುಣಜನ್ಯತ್ವಂ? ತಮೋಗುಣಜನ್ಯತ್ವವಿಶಿಷ್ಟತ್ವಂ? ತಮೋವಿಶಿಷ್ಟಕರ್ತೃಕತ್ವಂ? ತಮೋಗುಣವಿಶಿಷ್ಟಪ್ರತಿಪಾದ್ಯತ್ವಕತ್ವಂ? ತಮೋಗುಣಪ್ರಧಾನ ಪ್ರತಿಪಾದಕತ್ವಂ? ಅನ್ಯದ್ವಾ? ನಾದ್ಯಃ—ಗುಣತ್ರಯಾತೀತಪರಮೇಶ್ವರನಿಶ್ವಸಿತರೂಪಾಣಾಂ ವೇದಾನಾಂ ಅನಿತ್ಯತ್ವಮೋಹಕತ್ವಪೌರುಷೇಯತ್ವಾದಿಪ್ರಸಂಗಾತ್. ಸರ್ವಚಿದಚಿತ್ಪ್ರಪಂಚಸ್ಯ ಗುಣತ್ರಯಾತ್ಮಕಪ್ರಧಾನ ಜನ್ಯತ್ವೇನ ವಿಷ್ಣುಪುರಾಣಾದೀನಾಮಪಿ ತಾಮಸತ್ವಪ್ರಸಂಗಾತ್. ನಚ ತಮೋಮಾತ್ರಜನ್ಯತ್ವಂ, ಏಕಸ್ಯ ಅನಾಂರಂಭಕತ್ವೇನಾಸಿದ್ಧೇಃ. ನ ದ್ವಿತೀಯಃ—ಸರ್ವಸ್ಯ ಗುಣಸ್ಯ ಗುಣಾಂತರಯುಕ್ತಸ್ಯೈವ ಜನಕತ್ವೇನ ಇತರಾಸಂಸೃಷ್ಟತಮೋಗುಣಜನ್ಯತ್ವಸ್ಯಾಪ್ರಸಿದ್ಧತ್ವಾತ್. ನ ತೃತೀಯಃ— "ಶಿವ ಏವ ಕೇವಲಃ" ಇತ್ಯಾದಿಶ್ರುತಿಸಿದ್ಧಸ್ಯ ಶಿವಸ್ಯ ನಿತ್ಯಶುದ್ಧತ್ವೇನ ಪ್ರಕೃತೇರಸಿದ್ಧೇಃ. ನ ಚತುರ್ಥಃ—ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ । ಆಖ್ಯಾನೈಶ್ಚಾಪ್ಯುಪಾಖ್ಯಾನೈರ್ಗಾಥಾಭಿಃ ಕಲ್ಪ ಶುದ್ಧಿಭಿಃ ॥ ಪುರಾಣಸಂಹಿತಾಂ ಚಕ್ರೇ ಪುರಾಣಾರ್ಥವಿಶಾರದಃ ॥ ಇತಿ ವಿಷ್ಣುಪುರಾಣವಚನಾದ್ವ್ಯಾಸಕೃತಾನಾಂ ಸರ್ವೇಷಾಂ ಪುರಾಣಾನಾಮಪಿ ತಾಮಸತ್ವಾಭಾವಾತ್, ಅನ್ಯಥಾ ತ್ವದಭಿಮತಾನಾಮಪಿ ತಾಮಸತ್ವಪ್ರಸಂಗಾತ್, ತುಲ್ಯನ್ಯಾಯತ್ವಾಚ್ಚ. ನ ಪಂಚಮಃ—ರುದ್ರಸ್ಯ ಸಂಹಾರಕರ್ತೃತ್ವೇನ ಸಂಹಾರಸ್ಯ ತಮೋಗುಣಕಾರ್ಯತ್ವೇನ ಸರ್ವಶಾಸ್ತ್ರ ಪ್ರಸಿದ್ಧತ್ವಾದಿತಿ ಚೇನ್ನೈವಂ. ವಿಷ್ಣೋಃ ಸಂಹಾರಕತ್ವಾಭಾವೇನಾನೀಶ್ವರತ್ವಪ್ರಸಂಗಾತ್, "ಯಾ ತೇ ರುದ್ರ ಶಿವಾ ತನೂಃ" ಇತಿ ಶ್ರುತ್ಯಾ ಶಿವ ಶರೀರಸ್ಯ ತಾಮಸತ್ವನಿಷೇಧಾಚ್ಚ. "ತ್ರೈಗುಣ್ಯವಿಷಯಾ ವೇದಾಃ" ಇತ್ಯನೇನ ತ್ರಿಗುಣಾತ್ಮಕಪ್ರವೃತ್ತಿಧರ್ಮಪ್ರತಿಪಾದಕತ್ವೇನ ಗುಣವೈಶಿಷ್ಟ್ಯಂ ನಯುಕ್ತಂ. ನನು—ತಮೋಗುಣಪ್ರಚುರೇಷು ಕಲ್ಪೇಷು ತದ್ವಿಶಿಷ್ಟ

ತ್ವೇನ ಬ್ರಹ್ಮಕೃತಪುರಾಣಾನಿ ತಾಮಸಾನಿ, ತತ್ಪ್ರತಿಪಾದ್ಯತ್ವಾಚ್ಛಿವಸ್ಯಾಪಿ ತಾಮಸತ್ವಂ"ಇತಿ ಚೇನ್ನ. ತಾಮಸೇಷು ಕಲ್ಪೇಷು ಚತುರ್ಮುಖಕೃತಾನಾಂ ಪುರಾಣಾನಾಮಸ್ಮಿನ್ ವರ್ತಮಾನೇ ಶ್ವೇತವರಾಹಕಲ್ಪೇ ಅನುವರ್ತಮಾನತ್ವೇ ಪ್ರಮಾಣಾಭಾವಾತ್, ಅಸ್ಮಿನ್ನಪಿ ಕಲ್ಪೇ ಅಷ್ಟಾವಿಂಶತಿತಮೇನ ವ್ಯಾಸೇನ ಇದಾನೀಂ ಪುರಾಣಕರಣಸ್ಯ ಶ್ರೂಯಮಾಣತ್ವಾಚ್ಚ. ತದುಕ್ತಂ ವಿಷ್ಣುಪುರಾಣೇ–ವೈವಸ್ವತಾಂತರೇ ತಸ್ಮಿನ್ ದ್ವಾಪರೇಷು ಪುನಃ ಪುನಃ। ವೇದವ್ಯಾಸೋಽವತೀರ್ಣೋಽಭೂದಷ್ಟಾವಿಂಶತಿಸತ್ತಮಃ॥ ಇತಿ. ವರ್ತಮಾನಸ್ಯ ಪರಾಶರಾತ್ಮಜಸ್ಯ ವ್ಯಾಸಸ್ಯ ಪ್ರವರ್ತಮಾನಸರ್ವಪುರಾಣಕರ್ತೃತ್ವಂಚ ತತ್ರೈವ ಶ್ರುತಂ " ಪುರಾಣಸಂಹಿತಾಂ ಚಕ್ರೇ ಪುರಾಣಾರ್ಥವಿಶಾರದಃ " ಇತಿ.

ತಾನ್ಯಷ್ಟಾದಶಪುರಾಣಾನಿ ತತ್ರೈವ ಗಮಯಿತ್ವಾ ಉತ್ಪತ್ತಿಕ್ರಮಾಪೇಕ್ಷಯಾ ಕ್ರಮ ಉಕ್ತಃ–" ಏತದ್ವೈಷ್ಣವಸಂಜ್ಞಂ ವೈ ಪಾದ್ಮಸ್ಯ ಸಮನಂತರಂ। " ಇತಿ। ಏವಂ ಸಮಸ್ತಾ ಅಪಿ ವರ್ತಮಾನಕಲ್ಪಸ್ಥಾ ರಾಮಕೃಷ್ಣಾದ್ಯವತಾರಾ ರಘುವಂಶಾದಿಸಂಭವತ್ವಾತ್, ದಕ್ಷಾಧ್ವರಧ್ವಂಸಾದೀನಾಮೇತತ್ಕಲ್ಪಮಧ್ಯಸ್ಥತ್ವಾತ್, ಏತತ್ಕಲ್ಪಸ್ಥಶೈವವೈಷ್ಣವಪ್ರತಿಪಾದಕಾನಾಮೇತತ್ಕಲ್ಪಜಾತೇನಾಷ್ಟಾವಿಂಶತಿತಮೇನ ವೇದವ್ಯಾಸೇನ ಕೃತಾನಾಂ ಪುರಾಣಾನಾಂ ಪರಸ್ಪರಂ ಬಲಾಬಲಚಿಂತಾಯಾಂ ಬಹುಕಾಲವ್ಯವಹಿತಾನಾಂ ತಾಮಸಾದಿಬ್ರಹ್ಮಕಲ್ಪನೋಪನ್ಯಾಸೋ ನಿರರ್ಥಕಃ. ನನು–" ಪುರಾಣಕಾರಾಣಾಂ ಪುರಾಣಕರ್ತೃತ್ವಂ ಬ್ರಹ್ಮಣಸ್ಸಕಾಶಾತ್ಪುರುಷಾರ್ಥಾನಧಿಗಮ್ಯೈವ '' ಇತ್ಯುಕ್ತಂ ಸತ್ಯಂ। ತತ್ರಾತೀತಕಲ್ಪಸ್ಥಾಃ ಪುರಾಣಾರ್ಥಾ ಬ್ರಹ್ಮಣಾ ಪುರಾಣಕಾರೈಶ್ಚ ತಥೈವ ಪ್ರತಿಪಾದ್ಯಂತೇ. ಯಥಾ ಪದ್ಮಕಲ್ಪೇ ಮಾರ್ಕಂಡೇಯಸ್ಯ ಪರಮೇಶ್ವರಾನುಗ್ರಹಃ, ಯೇ ತು ವರ್ತಮಾನ ಕಲ್ಪಸ್ಥಾಃ ಪುರಾಣಾರ್ಥಾ ರಾಮಕೃಷ್ಣವರಾಹಾವತಾರಪ್ರಭೃತಯಃ, ತಥಾ ಕಾಲಕೂಟಭಕ್ಷಣದಕ್ಷಾಧ್ವರಧ್ವಂಸಾದಯಃ ತೇಽಪಿ ಏತತ್ಕಲ್ಪಸ್ಥತ್ವೇನೈವ ಬ್ರಹ್ಮಣೋಪದಿಶ್ಯಂತೇ; ಪುರಾಣಕಾರೈರಪಿ ತಥೈವ ಪ್ರತಿಪಾದ್ಯಂತೇ। ತೇಷಾಂ ಪರಸ್ಪರವಿರೋಧೇ ಸ್ವಾಭಿಮತಪುರಾಣಾಧಿಕ್ಯನಿರ್ಣಯಹೇತುತ್ವಂ ನಿರರ್ಥಕಂ। ಬಹುಕಾಲವ್ಯವಹಿತಾನಾಮತೀತಕಲ್ಪಾನಾಂ ಸಾತ್ತ್ವಿಕತಾಮಸತ್ವಾದ್ಯುಪನ್ಯಾಸಃ ಕುತ್ರ ಕೇನ ಸಂಗತ ಇತಿ ನ ಜಾನೀಮಃ.

ಇದೂ ಅಲ್ಲದೆ ತಾಮಸವೆಂದರೇನು? ತಮೋಗುಣದಿಂದ ಹುಟ್ಟಿದ್ದೆ? ಅಥವಾ ತನಗಿಂತ ಬೇರೆ ಗುಣದೊಡನೆ ಕೂಡಿದ ತಮೋಗುಣದಿಂದ ಹುಟ್ಟಿದ್ದೇ? ಬೇರೆ ಗುಣಗಳಿಂದ ಮಿಶ್ರಿತವಾಗದ ತಮೋಗುಣದಿಂದ ಹುಟ್ಟಿದ್ದೆ ? ಅಥವಾ ತಾಮಸ

ಪ್ರಕೃತಿಯವನೇ ಕರ್ತೃವಾಗುಳ್ಳದ್ದೇ? ತಮೋಗುಣವಿಶಿಷ್ಟವಾದ ರುದ್ರನನ್ನು ಪ್ರತಿಪಾದಿಸುವುದೇ ಅಥವಾ ತಮೋಗುಣಪ್ರಧಾನವಾಗಿರುವವನನ್ನು ಪ್ರತಿಪಾದಿಸುವುದೇ? ಅಥವಾ ಬೇರೆ ಏನಾದರೂ ಅರ್ಥವಿರಬಹುದೆ? ಎಂದು ತಾಮಸವೆಂಬ ಪದದ ಬಗ್ಗೆ ಏಳು ವಿಕಲ್ಪಗಳು ಸಂಭವಿಸುತ್ತವೆ. ಇವುಗಳಲ್ಲಿ ಮೊದಲನೆ ವಿಕಲ್ಪ ಸರಿಯಲ್ಲ; ಯಾಕೆಂದರೆ ಹೀಗೆ ಹೇಳಿದರೆ ಗುಣತ್ರಯಗಳಿಗೆ ಅತೀತನಾದ ಪರಮೇಶ್ವರನ ನಿಶ್ವಾಸಗಳೆನಿಸಿದ ವೇದಗಳು ಅನಿತ್ಯವೂ ಮೋಹಕವೂ ಪೌರುಷೇಯವೂ ಆಗಬೇಕಾಗುತ್ತವೆ. ಸಮಸ್ತ ಪ್ರಪಂಚವೂ ತ್ರಿಗುಣಮಯವಾದ ಪ್ರಧಾನದಿಂದ ಹುಟ್ಟಿರುವುದಾಗಿ ತಿಳಿಸುವುದರಿಂದ ವಿಷ್ಣುಪುರಾಣಗಳೂ ತಾಮಸವೇ ಆಗಬೇಕಾದೀತು. ತಮೋಗುಣ ಒಂದರಿಂದಲೇ ಯಾವೊಂದು ಕಾರ್ಯವೂ ಆರಂಭವಾಗುವುದಿಲ್ಲವಾದ್ದರಿಂದ ಅಸಿದ್ಧಿದೋಷವೂ ಸಂಭವಿಸೀತು. ಇತರ ಗುಣದೊಡನೆ ಬೆರೆಯದೆ ತಮೋಗುಣ ಒಂದರಿಂದಲೇ ಹುಟ್ಟಿದ್ದು ತಾಮಸವೆಂದು ಹೇಳುವ ಎರಡನೆ ವಿಕಲ್ಪವೂ ಸಮಂಜಸವಾಗುವುದಿಲ್ಲ; ಯಾಕೆಂದರೆ ಒಂದು ಗುಣವು ಬೇರೊಂದು ಗುಣದೊಡನೆ ಸೇರಿದರೆಯೇ ಒಂದು ಕಾರ್ಯಕ್ಕೆ ಕಾರಣವಾಗಬಲ್ಲದು. ಆದ್ದರಿಂದ ಬೇರೆ ಗುಣದ ಸಂಪರ್ಕವಿಲ್ಲದೆ ತಮೋಗುಣ ಒಂದರಿಂದಲೇ ಯಾವ ಕಾರ್ಯವೂ ಆಗುವಂತಿಲ್ಲ. ಹಾಗೆ ಆಗುವಂತೆ ಎಲ್ಲಿಯೂ ಪ್ರಸಿದ್ಧಿಯೂ ಇಲ್ಲ. ಬೇರೆ ಗುಣಗಳಿಂದ ತಿರಸ್ಕೃತವಾಗದಂತೆ ತಮೋಗುಣದಿಂದ ಹುಟ್ಟಿದ್ದೇ ತಾಮಸವೆಂದು ಹೇಳುವ ಮೂರನಯ ವಿಕಲ್ಪವೂ ಯುಕ್ತವಲ್ಲ. ಯಾಕೆಂದರೆ ಪ್ರಳಯದಲ್ಲಿ "ಸತ್ ಅಸತ್-ಹಗಲು ರಾತ್ರಿ ಯಾವುದೂ ಇಲ್ಲದೆ ಶಿವನೊಬ್ಬನೇ ಕೇವಲನಾಗಿದ್ದನು" ಇತ್ಯಾದಿ ಶ್ರುತಿಗಳಲ್ಲಿ ಪ್ರತಿಪಾದಿತನಾದ ಶಿವನು ನಿತ್ಯಶುದ್ಧನಾದ್ದರಿಂದ ಬೇರೆ ಗುಣಗಳಿಂದ ತಿರಸ್ಕೃತವಾಗದ ತಮೋಗುಣವು ಈಶ್ವರನಲ್ಲಿಲ್ಲವಾದ್ದರಿಂದ ಅಂತಹ ಗುಣದಿಂದ ಹುಟ್ಟಿದ್ದು ತಾಮಸವೆಂಬ ಅಂಶ ಶಿವಪುರಾಣಗಳಿಗೆ ಹೊಂದುವುದಿಲ್ಲ. ತಮೋಗುಣವಿಶಿಷ್ಟನಾದ ವ್ಯಾಸನಿಂದ ಹುಟ್ಟಿದ್ದೇ ತಾಮಸವೆಂಬ ನಾಲ್ಕನೆಯ ವಿಕಲ್ಪವೂ ಹೊಂದುವುದಿಲ್ಲ; ಯಾಕೆಂದರೆ "ಹದಿನೆಂಟು ಪುರಾಣಗಳನ್ನು ಬರೆದವನು ವ್ಯಾಸನೇ ಆಗಿರುವುದರಿಂದ ಆಖ್ಯಾನ, ಉಪಾಖ್ಯಾನ, ಗಾಥೆಗಳು, ಕಲ್ಪಶುದ್ಧಿಗಳು ಇವುಗಳಿಂದ ಕೂಡಿದ ಪುರಾಣಗಳನ್ನೂ ಅವನೇ ಬರೆದಿರುವನು" ಎಂದು ವಿಷ್ಣುಪುರಾಣದ ವಚನವಿದೆ. ಇದರಪ್ರಕಾರ ವ್ಯಾಸನು ರಚಿಸಿದ್ದರಿಂದ ಪುರಾಣಗಳೆಲ್ಲವೂ ತಾಮಸವಲ್ಲವೆಂದು ನಿಶ್ಚಯಿಸಲಾಗಿದೆ. ಇಲ್ಲವಾದರೆ ಅದೇನ್ಯಾಯದಿಂದ ಅವೆಲ್ಲವನ್ನೂ ತಾಮಸವೆಂದೇ ಭಾವಿಸಬೇಕಾಗುತ್ತದೆ. ತಾಮಸಪ್ರಕೃತಿಯವನೇ ಕರ್ತೃವಾಗುಳ್ಳದ್ದು ತಾಮಸವೆಂಬ ಐದನೆಯ ವಿಕಲ್ಪವೂ ಸಮಂಜಸವಲ್ಲ; ಯಾಕೆಂದರೆ ರುದ್ರನು ಸಂಹಾರಕರ್ತನಾದ್ದರಿಂದ ಸಂಹಾರವೆಲ್ಲವೂ ತಮೋಗುಣದ ಕಾರ್ಯವೆಂದು ಎಲ್ಲಾ ಶಾಸ್ತ್ರಗಳಲ್ಲಿಯೂ ಪ್ರಸಿದ್ಧವಾಗಿದೆ ಎಂ[illegible] ವಿಷ್ಣುವಿಗ

ಸಂಹಾರದ ಸಂಬಂಧವೇ ಇಲ್ಲದ್ದರಿಂದ ಅವನು ಈಶ್ವರನೇ ಅಲ್ಲವೆಂದು ಹೇಳಬೇಕಾದೀತು. ವಿಷ್ಣುವೇ ರುದ್ರರೂಪದಿಂದ ಸಂಹಾರವನ್ನು ನಡೆಸುತ್ತಾನೆಂದು ಹೇಳುವುದೂ ಸಮಂಜಸವಲ್ಲ. ವಿಷ್ಣುವೇ ಸಂಹಾರಕರ್ತನೆಂಬುದು ಸಂಭವಿಸಿದರೂ ಇಬ್ಬರು ಸಂಹಾರಕರಾದ್ದರಿಂದ ಇವರಲ್ಲಿ ತಾರತಮ್ಯಕಲ್ಪನೆಗೆ ಯಾವ ಪ್ರಮಾಣವೂ ಇಲ್ಲದ್ದರಿಂದ ವಿಷ್ಣುವೂ ತಾಮಸನೇ ಆಗುವ ಪ್ರಸಂಗ ಬಂದೀತು. "ಯಾ ತೇ ರುದ್ರ ಶಿವಾ ತನೂಃ" ಎಂಬ ಮಂತ್ರದಲ್ಲಿ ಶಿವನ ಶರೀರವನ್ನು ತಾಮಸವಲ್ಲವೆಂದು ತಿಳಿಸಲಾಗಿದೆ. "ತ್ರೈಗುಣ್ಯವಿಷಯಾ ವೇದಾಃ" ಎಂಬ ಗೀತಾ ವಾಕ್ಯವು ತ್ರಿಗುಣಾತ್ಮಕ ಪ್ರವೃತ್ತಿಧರ್ಮವನ್ನು ತಿಳಿಸಿದ್ದರಿಂದಲೇ ವೇದಕ್ಕೆ ತ್ರಿಗುಣವೈಶಿಷ್ಟ್ಯವನ್ನು ಹೇಳುವುದು ಯುಕ್ತವಲ್ಲ. "ತಮೋಗುಣ ಹೆಚ್ಚು ವ್ಯಾಪಿಸುವ ಕಲ್ಪದಲ್ಲಿ ತಮೋಗುಣವಿಶಿಷ್ಟನಾದ ಬ್ರಹ್ಮನಿಂದ ರಚಿತವಾದವು ತಾಮಸಪುರಾಣಗಳು, ಅವುಗಳಲ್ಲಿ ಪ್ರತಿಪಾದಿತನಾದ ಈಶ್ವರನು ತಾಮಸನೇ ಇರುವನು" ಎಂದು ಹೇಳುವುದೂ ಯುಕ್ತವಲ್ಲ, ಯಾಕೆಂದರೆ ತಾಮಸಕಲ್ಪಗಳಲ್ಲಿ ಚತುರ್ಮುಖಬ್ರಹ್ಮನು ರಚಿಸಿದ ಪುರಾಣಗಳೇ ಈಗಿನ ಶ್ವೇತವರಾಹಕಲ್ಪದಲ್ಲೂ ಅನುವರ್ತಿಸಿಕೊಂಡು ಬಂದಿರುವುವು ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಈ ಕಲ್ಪದಲ್ಲೂ ಇಪ್ಪತ್ತೆಂಟನೆಯವನಾದ ವ್ಯಾಸನು ಈಗಲೂ ಪುರಾಣಗಳನ್ನು ಬರೆಯುವನೆಂಡು ನಾವು ಕೇಳಿದ್ದೇವೆ- ವೈವಸ್ವತಮನ್ವಂತರದಲ್ಲಿ ದ್ವಾಪರಯುಗದಲ್ಲಿ ಇಪ್ಪತ್ತೆಂಟನೆಯ ವ್ಯಾಸನು ಅವತರಿಸಿದ್ದಾನೆಂದು ವಿಷ್ಣುಪುರಾಣದಲ್ಲಿ ಹೇಳಲಾಗಿದೆ. ಪರಾಶರನ ಮಗನಾದ ವ್ಯಾಸನೇ ಈಗಿನ ಎಲ್ಲಾ ಪುರಾಣಗಳನ್ನೂ ರಚಿಸಿದನೆಂದು ಅಲ್ಲಿಯೇ ಹೇಳಿದೆ. "ಪುರಾಣಗಳ ಅರ್ಥವನ್ನು ಚೆನ್ನಾಗಿ ತಿಳಿದು ವ್ಯಾಸನು ಅವನ್ನು ರಚಿಸಿದನು. ಹದಿನೆಂಟು ಪುರಾಣಗಳನ್ನು ವಿಷ್ಣುಪುರಾಣದಲ್ಲಿ ಸೇರಿಸಿ ಅವುಗಳ ಉತ್ಪತ್ತಿಕ್ರಮವನ್ನು "ಇದು ವಿಷ್ಣುಪುರಾಣ, ಇದಾದ ಮೇಲೆ ಪದ್ಮಪುರಾಣ" ಎಂಬ ಕ್ರಮದಲ್ಲಿ ತಿಳಿಸಲಾಗಿದೆ. ಹೀಗೆ ಹೇಳಿರುವುದರಿಂದ ರಾಮಕೃಷ್ಣಾದ್ಯವತಾರಗಳೆಲ್ಲವೂ ಈ ಕಲ್ಪದಲ್ಲಿಯೇ ಸಂಭವಿಸಿದ್ದರಿಂದಲೂ, ದಕ್ಷಯಜ್ಞಧ್ವಂಸವೇ ಮೊದಲಾದ ಘಟನೆಗಳು ಈ ಕಲ್ಪದಲ್ಲಿಯೇ ನಡೆದವಾದ್ದರಿಂದಲೂ ಈ ಕಲ್ಪದಲ್ಲಿ ಹುಟ್ಟಿದ ಇಪ್ಪತ್ತೆಂಟನೆ ವ್ಯಾಸನಿಂದ ರಚಿತವಾದ ಈ ಕಲ್ಪದ ಪುರಾಣಗಳಿಗೆ ಪರಸ್ಪರ ಬಲಾಬಲವಿಚಾರವು ಸಂಭವಿಸಿದರೆ, ಬಹುಕಾಲದ ಹಿಂದೆ ಹುಟ್ಟಿದ ತಾಮಸಬ್ರಹ್ಮನ ರಚನೆಯನ್ನು ಇಲ್ಲಿ ಪ್ರಸ್ತಾಪಿಸುವುದು ನಿರರ್ಥಕವಾಗುತ್ತದೆ. ಪುರಾಣಕಾರರೆಲ್ಲರೂ ಬ್ರಹ್ಮನಿಂದ ತತ್ತ್ವವನ್ನು ತಿಳಿದೇ ಪುರಾಣಗಳನ್ನು ರಚಿಸಿರುತ್ತಾರೆ. ಆದ್ದರಿಂದ ಎಲ್ಲಾ ಪುರಾಣಗಳಿಗೂ ಮೂಲವು ಬ್ರಹ್ಮನೇ ಆದ್ದರಿಂದ ಅವನ ತಾಮಸಾದಿ ಗುಣಗಳ ಭೇದದಿಂದ ಪುರಾಣಗಳಲ್ಲಿ ಭೇದವಿರುವುದು ಸಹಜವೇ ಆಗಿದೆ. ಎಲ್ಲಾ ಪುರಾಣಗಳಿಗೂ ಚತುರ್ಮುಖನೇ ಮೂಲನೆಂಬ ಅಂಶ ವಾಸ್ತವವೇ ಆದರೂ ಯಾವಯಾವ ಕಲ್ಪದಲ್ಲಿ ಯಾವಯಾವ ಘಟನೆ ನಡೆದಿತ್ತೋ ಅದನ್ನು ಆಯಾ ಕಲ್ಪದಲ್ಲಿಯೇ ನಡೆದದ್ದಾಗಿ ಅವನು ತಿಳಿಸಿರುವನೇ ಹೊರತು

ಎಲ್ಲವನ್ನೂ ಈ ಕಲ್ಪದಲ್ಲಿಯೇ ನಡೆದಿರುವುದಾಗಿ ಅವನು ತಿಳಿಸಿರುವನೆಂಬುದು ವಿರುದ್ಧವಾಗುವುದು. ಪದ್ಮಕಲ್ಪದಲ್ಲಿ ಮಾರ್ಕಂಡೇಯನಿಗೆ ಪರಮೇಶ್ವರನ ಅನುಗ್ರಹವು ದೊರಕಿತೆಂದು ತಿಳಿಸುವಾಗ ಆ ಕಲ್ಪದಲ್ಲಿಯೇ ಅದು ನಡೆದಿದ್ದುದಾಗಿ ತಿಳಿಸಿರುವನೇ ಹೊರತು ಈ ಕಲ್ಪದಲ್ಲಿ ಅದು ನಡೆಯಿತೆಂದು ತಿಳಿಸಿಲ್ಲ. ಹಾಗೆಯೇ ಈ ಕಲ್ಪದಲ್ಲಿ ನಡೆದ ರಾಮಕೃಷ್ಣಾದ್ಯವತಾರಗಳನ್ನೂ, ಕಾಲಕೂಟಭಕ್ಷಣ, ದಕ್ಷ ಯಜ್ಞಧ್ವಂಸ ಇಂತಹ ಘಟನೆಗಳನ್ನು ಈ ಕಲ್ಪದಲ್ಲಿ ನಡೆದಿರುವಂತೆಯೇ ಪುರಾಣ ಕಾರರು ತಿಳಿಸಿರುವರು. ಇವೆಲ್ಲವನ್ನೂ ಒಂದೇ ಕಲ್ಪಕ್ಕೆ ಸೇರಿಸಿ ತನ್ನ ಇಚ್ಛೆಬಂದಂತೆ ಪುರಾಣಗಳನ್ನು ರಾಜಸ ತಾಮಸವೆಂದು ವಿಭಾಗಿಸುವುದು ನಿರರ್ಥಕವೆನಿಸುವುದು. ಬಹಳ ಹಿಂದಿನ ಕಲ್ಪದಲ್ಲಿ ಸಾತ್ತ್ವಿಕ ತಾಮಸವೆಂಬ ವಿಭಾಗವನ್ನು ಯಾರು ಎಲ್ಲಿ ಹೇಳಿರುವರು ಎಂಬುದು ನಮಗೆ ಎಲ್ಲಿಯೂ ಕಂಡುಬಂದಿಲ್ಲ.

ನಾಪಿ ಷಷ್ಠಃ—ರುದ್ರಸಂಬಂಧಿನೋ ಘೋರಶರೀರಸ್ಯ ಸಂಹಾರ ಕತ್ವೇನ ತಮೋವಿಶಿಷ್ಟತ್ವೇಽಪಿ ತಚ್ಛರೀರಿಣಃ ಪರಮೇಶ್ವರಸ್ಯ ತಮೋಽ ತೀತತ್ವಾತ್ । ತಥಾಚ ಕೈವಲ್ಯೇ " ಸಮಸ್ತ ಸಾಕ್ಷಿಂ ತಮಸಃ ಪರಸ್ತಾತ್ ॥" ಇತಿ । ಯದ್ಯಪಿ ದೇವದತ್ತಾದೌ ತಮೋಗುಣಪ್ರಧಾನಶರೀರಾದಿವಿಶಿಷ್ಟೇ ತಾಮಸತ್ವವ್ಯವಹಾರೋ ದೃಷ್ಟಃ. ತಥಾಪಿ ತತ್ರ ತನ್ಮಾತ್ರವಿಶಿಷ್ಟತ್ವೇನ ತಥಾ ವ್ಯವಹಾರಃ. ಪ್ರಕೃತೇ ತು ಪರಮೇಶ್ವರಸಂಬಂಧಿನಾಂ ತಮೋಽ ತೀತಾನಾಮಲೌಕಿಕಪ್ರಕಾಶಸ್ವರೂಪಾಣಾಮನೇಕೇಷಾಂ ವಿಗ್ರಹಾಣಾಂ ಪ್ರಮಾಣಸಿದ್ಧತ್ವಾನ್ನ ತಥಾ. " ಸ್ಥಿರೇಭಿರಂಗೈಃ ಪುರುರೂಪ ಉಗ್ರೋ ಬಭ್ರುಃ ಶುಕ್ರೇಭಿಃ ಪಿಪಿಶೇ ಹಿರಣ್ಯೈಃ " ಇತ್ಯತ್ರ ಶುಕ್ರೇಭಿರಿತಿ ಶುಕ್ಲ ಶಬ್ದೇನ ಸತ್ತ್ವಮಯತ್ವಮುಚ್ಯತೇ. " ಲೋಹಿತಶುಕ್ಲಕೃಷ್ಣಾಂ " ಇತ್ಯಾದಿವತ್. ಅನ್ಯಥಾ ವಿಷ್ಣ್ವಾಧಿಕ್ಯವಾದಿನಾಂ ಮತೇ ತಮೋವಿಶಿಷ್ಟ ವಿಷ್ಣುಪ್ರತಿಪಾದಕತ್ವೇನ ವೈಷ್ಣವಾದಿಪುರಾಣಾನಾಮಪಿ ತಾಮಸತ್ವ ಪ್ರಸಂಗಃ. ಕಥಮನ್ಯಥಾ ವಿಷ್ಣೋರ್ಭೂಭಾರಹರಣಾಯ ಯಾದವಕೌರ ವದೈತ್ಯಾದಿಸಂಹಾರಕತ್ವಂ ? ಕಥಂ ವಾ ದೈತ್ಯವ್ಯಾಮೋಹನಾಯ ಮಹಾ ಮೋಹಾಖ್ಯಪುರುಷರೂಪೇಣ ದೈತ್ಯವ್ಯಾಮೋಹಕಬುದ್ಧಜಿನಾದಿಶಾಸ್ತ್ರ ಪ್ರಣೇತೃತ್ವಂ ? ತದುಕ್ತಂ ವಿಷ್ಣುಪುರಾಣೇ—ಇತ್ಯುಕ್ತ್ವಾ ಭಗವಾಂ ಸ್ತೇಭ್ಯೋ ಮಹಾಮೋಹಶರೀರತಃ । ಸಮುತ್ಪಾದ್ಯ ದದೌ ವಿಷ್ಣುಃ ಪ್ರಾಹ ಚೇದಂ ಸುರೋತ್ತಮಾಃ ॥ ಮಾಯಾಮೋಹೋಽಯಮಖಿ ಲಾನ್ ದೈತ್ಯಾಂಸ್ತಾನ್ ಮೋಹಯಿಷ್ಯತಿ । ತತೋ ವಧ್ಯಾ ಭವಿಷ್ಯಂತಿ ವೇದಮಾರ್ಗಬಹಿಷ್ಕೃತಾಃ ॥ ಇತಿ. ನಹಿ ಸ್ವಸ್ಯ ತಾಮಸತ್ವಾಭಾವೇ ಮೋಹಾಮೋಹಾಖ್ಯಂ ಪ್ರತಿ ಉಪಾದಾನತ್ವಮುಪಪದ್ಯತೇ; ಸ್ವಸ್ಯ ಮೋಹಿನೀಶರೀರಸ್ಯ ತಾಮಸತ್ವಾತ್ ನಚ ವಿಷ್ಣೋಃ ಕಾರ್ಯಾರ್ಥಂ

ತಮೋಗುಣಸಾಹಿತ್ಯೇಽಪಿ ತಸ್ಯ ಸತ್ತ್ವೇನಾಭಿಭೂತತ್ವಾನ್ನ ಪ್ರಾಧಾನ್ಯಂ, ರುದ್ರಸ್ಯ ತು ತಮಸಾಭಿಭೂತತ್ವಾತ್ತದ್ವಿಶಿಷ್ಟತಯಾ ಸಂಹಾರಕರ್ತೃತ್ವೇನ ಪ್ರತಿಪಾದ್ಯತ್ವಮಿತಿ ಸಪ್ತಮಃ ಪಕ್ಷಃ ಕಕ್ಷೀಕ್ರಿಯತಾಂ–ಇತಿ ಚೇನ್ಮೈವಂ. ಶತ್ರುಸಂಹಾರಮಾತ್ರಪ್ರಯೋಜನಪ್ರವೃತ್ತೇಷು ನೃಸಿಂಹಾದ್ಯವತಾರೇಷು ತತ್ಪ್ರಾಧಾನ್ಯೇನ ತಾಮಸತ್ವಪ್ರಸಂಗಾತ್, ಶಿವಸ್ಯ ನಿರಸ್ತತಮಸ್ಕತ್ವಾದ್ದ್ವಿಪಕ್ಷೇ ಬಾಧಕಸತ್ತ್ವಾಚ್ಚ. ನಾಂತ್ಯಃ—ಯಸ್ಸಂಹಾರಕರ್ತಾ ಸ ತಾಮಸಃ—ತಸ್ಯಾಪಿ ಕಶ್ಚಿತ್ಸಂಹಾರಕೋಽಸ್ತಿ ನ ವಾ? ಅಸ್ತಿ ಚೇತ್ತಾಮಸತ್ವೇಽಪಿ ಸ ಏವ ಸರ್ವಾಧಿಕಃ ಸರ್ವಸಂಹಾರಸ್ವತಂತ್ರತ್ವಾತ್. ನಾಸ್ತಿ ಚೇದಯಮೇವ ತಾಮಸಸ್ಸರ್ವಾಧಿಕ ಇತಿ ತಾಮಸತ್ವಂ ಸರ್ವಸಂಹಾರಕರ್ತೃತ್ವಂ ಸರ್ವಾಧಿಕತ್ವೇನ ವ್ಯಾಪ್ತಮಿತಿ ವಿರುದ್ಧೋ ಹೇತುಃ. ತಸ್ಮಾದ್ರುದ್ರಸ್ಸರ್ವಾಧಿಕಃ ಸರ್ವಸಂಹರ್ತೃತ್ವಾತ್, ವ್ಯತಿರೇಕೇಣ ಜೀವವತ್ ನ ಚಾಪ್ರಯೋಜಕೋ ಹೇತುಃ—ಪ್ರಬಲದುರ್ಬಲಭಾವಂ ವಿನಾ ಬಾಧ್ಯಬಾಧಕಭಾವಸ್ಯೈವಾಸಂಭವಾತ್. ಸಾತ್ತ್ವಿಕಸ್ಯ ಬಾಧ್ಯತ್ವೇ ಪ್ರಾಪ್ತೇ ಸಂಹಾರಂ ಪ್ರತಿ ವಿರುದ್ಧತ್ವಾತ್. " ಮೃದು ಸರ್ವತ್ರ ಬಾಧ್ಯತೇ " ಇತಿ ನ್ಯಾಯೇನ ನ ಚ ಸಾಧ್ಯಾಪ್ರಸಿದ್ಧಿಃ—" ವಿಶ್ವಾಧಿಕೋ ರುದ್ರಃ " ಇತಿ ಪಕ್ಷೇ ಪ್ರಸಿದ್ಧೇಃ. ತದನುಗ್ರಾಹಕತ್ವಾದನುಮಾನಸ್ಯ ನ ಸಿದ್ಧಸಾಧನತ್ವಂ. ಏವಂ ಸ್ವಾತ್ತ್ವಿಕತ್ವಮುಕ್ತಪ್ರಕಾರೇಣ ವಿಕಲ್ಪ್ಯ ದೂಷಣೀಯಂ. ಕಿಂಚ—ವಿಷ್ಣ್ವಾಧಿಕ್ಯಪ್ರತಿಪಾದಕಾನಾಂ ಮಾರ್ಕಂಡೇಯಾದಿಪುರಾಣಾನಾಂ ಸಾತ್ತ್ವಿಕತ್ವಪ್ರಸಂಗಃ ಸ್ಯಾತ್, ರುದ್ರಾಧಿಕ್ಯಪ್ರತಿಪಾದಕಾನಾಂ ಪಾದ್ಮಪುರಾಣಾದೀನಾಂ ತಾಮಸತ್ವಪ್ರಸಂಗಃ ಸ್ಯಾತ್. ಪದ್ಮಪುರಾಣೇ ಪೂರ್ವೋತ್ತರಖಂಡಾಭ್ಯಾಂ ಹರಿಹರಯೋರಾಧಿಕ್ಯವರ್ಣನಾತ್, ತದಂಶೇ ತಾಮಸತ್ವಮಿಷ್ಟಮಿತಿ ಚೇತ್–ರಾಮಾಯಣಭಾಗವತಾದಾವಪಿ ತದಂಶೇ ತಾಮಸತ್ವಪ್ರಸಂಗಾತ್. ರಾಮಾಯಣಬಾಲಕಾಂಡೇ—" ತ್ವಾಂ ವೈ ಧಾರಯಿತು ವೀರ ನಾನ್ಯಂ ಪಶ್ಯಾಮಿ ಶೂಲಿನಃ " ಇತಿ. " ಉಮಾಪತಿಃ ಪಶುಪತಿಸ್ಸರ್ವಲೋಕನಮಸ್ಕೃತಃ " ಇತಿ ಯುದ್ಧಕಾಂಡೇ. " ಏತದಸ್ತ್ರಬಲಂ ಘೋರಂ ಮಮ ವಾ ತ್ರ್ಯಂಬಕಸ್ಯ ವಾ " ಇತಿ ಉತ್ತರಖಂಡೇ ಚ. ಕೈಲಾಸಯಾತ್ರಾರಾವಣನಿಗ್ರಹೇಂದ್ರಜಿದನುಗ್ರಹಾದಿವರ್ಣನಸ್ಯ ಬಹುತರತ್ವಾತ್ ರಾವಣವಿನಾಶಾರ್ಥಸ್ಯ ರುದ್ರಾಗ್ನಿನಿಮಿತ್ತತ್ವವರ್ಣನಾತ್ತಸ್ಯಾಪಿ ತಾಮಸತ್ವಪ್ರತೀತೇಃ. ತಸ್ಮಾಚ್ಛಿವಪುರಾಣಾನಾಂ ತಾಮಸತ್ವಕಲ್ಪನೇ ವೇದಬಾಹ್ಯಬೌದ್ಧಪ್ರಸಂಗಃ ಸ್ಯಾದಿತ್ಯಲಮತಿವಿಸ್ತರೇಣ.

ತಮೋಗುಣವಿಶಿಷ್ಟನಾದ ರುದ್ರನನ್ನು ಪ್ರತಿಪಾದಿಸುವುದರಿಂದ ಪುರಾಣವು ತಾಮಸವೆನಿಸುವುದು ಎಂಬ ಆರನೆಯ ವಿಕಲ್ಪವೂ ಹೊಂದುವುದಿಲ್ಲ. ರುದ್ರನ

ಸಂಬಂಧವಾದ ಘೋರರೂಪವು ಸಂಹಾರಮೂರ್ತಿಯಾದ್ದರಿಂದ ತಮೋಗುಣವಿಶಿಷ್ಟವಾದರೂ, ಅದರೊಳಗಿನ ಪರಮೇಶ್ವರನು ತಮೋಗುಣದಿಂದ ದೂರನಾಗಿರುವನು. ಆದ್ದರಿಂದ ತಮೋಗುಣವಿಶಿಷ್ಟನಾದ ರುದ್ರನನ್ನು ಪ್ರತಿಪಾದಿಸುವುದರಿಂದ ಪುರಾಣವನ್ನು ತಾಮಸವೆಂದು ಭಾವಿಸುವುದು ಯುಕ್ತವಲ್ಲ. ಕೈವಲ್ಯಶ್ರುತಿಯಲ್ಲಿ "ಉಮಾಸಹಾಯಂ—ತಮಸಃ ಪರಸ್ತಾತ್" ಎಂದು ರುದ್ರನನ್ನು ತಮೋಽತೀತನೆಂದು ಸ್ಪಷ್ಟವಾಗಿ ಹೇಳಿದೆ. ಲೋಕದಲ್ಲಿ ತಮೋಗುಣಪ್ರಧಾನವಾದ ಶರೀರದೊಂದಿಗೆ ಕೂಡಿರುವ ಮನುಷ್ಯರನ್ನು ತಾಮಸರೆಂದು ವ್ಯವಹರಿಸುವೆವಾದರೂ ಪ್ರಕೃತದಲ್ಲಿ ಶಿವನನ್ನು ಆರೀತಿ ವ್ಯವಹರಿಸುವುದು ಯುಕ್ತವಲ್ಲ. ತಮೋಽತೀತವೂ ಚಿನ್ಮಯವೂ ಆದ ಅನೇಕ ಮೂರ್ತಿಗಳು ಶಿವನಿಗೆ ಪ್ರಮಾಣಸಿದ್ಧವಾಗಿರುವುದರಿಂದ ಸಂಹಾರಮೂರ್ತಿಯಾದ ಕಾಲರುದ್ರನನ್ನು ಗಮನಿಸಿ ಶಿವನನ್ನು ತಾಮಸನೆಂದು ವ್ಯವಹರಿಸುವುದು ಸರಿಯಲ್ಲ. "ಸ್ಥಿರೇಭಿರಂಗೈಃ" "ಬಭ್ರುಃ ಶುಕ್ಲೇಭಿಃ" ಎಂದು ಋಗ್ವೇದದಲ್ಲಿ ಈಶ್ವರನನ್ನು ಸತ್ತ್ವಮಯನೆಂದು ಹೇಳಿದೆ. ಇಲ್ಲಿ ಶುಕ್ಲಪದವು ಸತ್ತ್ವಗುಣವನ್ನು ಸೂಚಿಸುತ್ತದೆ ಎಂದು "ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ" ಎಂಬ ಶ್ರುತಿಯಲ್ಲಿ ಪ್ರಸಿದ್ಧವಾಗಿದೆ. ಹೀಗೆ ಹೇಳದೆಹೋದರೆ, ವಿಷ್ಣುವೂ ಸಹ ಭೂಭಾರವನ್ನು ಇಳಿಸುವುದಕ್ಕಾಗಿ ಯಾದವರನ್ನೂ ಕೌರವರನ್ನೂ ದೈತ್ಯರನ್ನೂ ಸಂಹರಿಸಿದ್ದರಿಂದಲೂ, ದೈತ್ಯರನ್ನು ಮೋಹಗೊಳಿಸಲಿಕ್ಕಾಗಿ ಬೌದ್ಧಾದಿಶಾಸ್ತ್ರಗಳನ್ನು ಉಪದೇಶಿಸಿದ್ದರಿಂದಲೂ, ಅವನೂ ತಾಮಸನೇ ಆಗಬೇಕಾದೀತು. ಅವನನ್ನು ಪ್ರತಿಪಾದಿಸುವ ವೈಷ್ಣವ ಪುರಾಣಗಳೂ ತಾಮಸವೇ ಆಗಬೇಕಾಗುವುದು. ವಿಷ್ಣುಪುರಾಣದಲ್ಲಿ "ಎಲ್ಲರನ್ನೂ ಮೋಹಿಸುವಂತಹ ವಿಷ್ಣುವು ಮೋಹಕಾರಿಯಾದ ಶಾಸ್ತ್ರಗಳನ್ನು ರಚಿಸಿ ದೈತ್ಯರಿಗೆ ಉಪದೇಶಿಸಿ ಅವರನ್ನು ವೇದಬಾಹ್ಯರನ್ನಾಗಿ ಮಾಡಿ ವಧಿಸಿದನು" ಎಂಬ ಅಂಶ ಪ್ರತಿಪಾದಿತವಾಗಿದೆ. ತಾನು ತಾಮಸನಲ್ಲದಿದ್ದರೆ ಇತರರನ್ನು ಹೇಗೆ ಮೋಹಗೊಳಿಸಬಲ್ಲನು? ಆದ್ದರಿಂದ ವಿಷ್ಣುವೂ ಸಹ ತಾಮಸನೇ ಆಗುತ್ತಾನೆ. ಅವನು ಸ್ವತಃ ಸಾತ್ತ್ವಿಕನಾಗಿದ್ದರೂ, ಒಂದು ಕಾರ್ಯವಿಶೇಷಕ್ಕಾಗಿ ತಾಮಸನಾಗಿರುವನಾದ್ದರಿಂದ ಅವನು ವಾಸ್ತವವಾಗಿ ತಾಮಸನಲ್ಲ. ಕಾಲರುದ್ರನಂತೂ ಸಂಹಾರಮೂರ್ತಿಯೇ ಆಗಿರುವುದರಿಂದ ತಾಮಸನೇ ಆಗಿರುವನು ಎಂದು ಹೇಳಿದರೆ ಅದೂ ಹೊಂದುವುದಿಲ್ಲ. ಯಾಕೆಂದರೆ ಇದರಿಂದ ಶತ್ರುಸಂಹಾರಕ್ಕಾಗಿಯೇ ಬಂದಿರುವ ವಿಷ್ಣುವಿನ ನರಸಿಂಹಾದ್ಯವತಾರಗಳು ಕೇವಲ ತಾಮಸವೇ ಆಗಬೇಕಾದೀತು. ಶಿವನು ತಮೋಽತೀತನೆಂಬ ವಿಷಯವನ್ನು ಹಿಂದೆ ಹೇಳಿಯಾಗಿದೆ. ಆದ್ದರಿಂದ ಆರನೆ ವಿಕಲ್ಪವೂ ಸಾಧುವಲ್ಲ.

ತಮೋಗುಣವೇ ಪ್ರಧಾನವಾಗಿರುವ ರುದ್ರನನ್ನು ಪ್ರತಿಪಾದಿಸುವುದರಿಂದ ಶಿವಪುರಾಣವು ತಾಮಸವೆಂದು ಹೇಳುವ ಏಳನೆಯ ವಿಕಲ್ಪವೂ ಹೊಂದುವುದಿಲ್ಲ. ಈಶ್ವರನು ಸಂಹಾರಕನಾದ್ದರಿಂದಲೇ ತಮೋಗುಣಪ್ರಧಾನನಾಗಿರುವನು. ಈ ಸ್ಥಿತಿಯಲ್ಲಿ ಅವನಿಗೆ ಸಾತ್ತ್ವಿಕ [illegible] ಬರುತ್ತದೆ.

ಬೇರೊಬ್ಬ ಸಂಹಾರಕನಿರುವನೆಂದರೆ ಆ ಸಂಹಾರಕನೇ ಎಲ್ಲರಿಗೂ ಶ್ರೇಷ್ಠನೆನಿಸುತ್ತಾನೆ. ಬೇರೊಬ್ಬ ಸಂಹಾರಕನಿಲ್ಲವೆಂದರೆ ಮೊದಲನೆಯ ಸಂಹಾರಕನೇ ಎಲ್ಲರಿಗಿಂತಲೂ ಶ್ರೇಷ್ಠನೆನಿಸುತ್ತಾನೆ. ಆದ್ದರಿಂದ ಸರ್ವಸಂಹಾರಕತ್ವವೆಂಬುದು ಸರ್ವೋತ್ಕೃಷ್ಟತೆಯನ್ನು ಸಾಧಿಸುವುದೇ ಹೊರತು ಅದರಿಂದ ಅವನಿಗೆ ಯಾವ ನ್ಯೂನತೆಯೂ ಸಂಭವಿಸಲಾರದು. "ರುದ್ರನು ಸರ್ವಸಂಹಾರಕನಾದ್ದರಿಂದ ಸರ್ವಶ್ರೇಷ್ಠನು, ಯಾರು ಸರ್ವಸಂಹಾರಕನಲ್ಲವೋ ಅವನು ನಮ್ಮಂತೆ ಸರ್ವಶ್ರೇಷ್ಠನೆನಿಸುವುದಿಲ್ಲ" ಎಂಬ ಅನುಮಾನವೇ ಇದಕ್ಕೆ ಪ್ರಮಾಣವಾಗುತ್ತದೆ. ಈ ಅನುಮಾನದಲ್ಲಿ ಬಾಧಕವ್ಯಾವುದೂ ಇರುವುದಿಲ್ಲವಾದ್ದರಿಂದ ಇಲ್ಲಿನ ಹೇತು ದುರ್ಬಲವಾಗುವುದಿಲ್ಲ. ಈಶ್ವರನು ಸಾತ್ತ್ವಿಕನೆಂದು ಹೇಳಿದ್ದರಿಂದ ಆ ಸಾತ್ತ್ವಿಕತೆಯು ಅವನ ಸಂಹಾರಕತ್ವಕ್ಕೆ ಬಾಧಕವಾಗುವುದಿಲ್ಲವೆ? ಅಂದರೆ "ಮೃದುವಾದವನು ಎಲ್ಲರಿಂದಲೂ ಹಿಂಸೆಗೊಳಗಾಗುವನು" ಎಂಬ ನ್ಯಾಯದಂತೆ ಸಾತ್ತ್ವಿಕತನವು ಹಿಂಸೆಗೆ ಅನ್ವಯಿಸುವುದೇ ಹೊರತು ಸಂಹಾರಕತ್ವಕ್ಕೆ ಅನ್ವಯಿಸುವುದಿಲ್ಲ. ಈ ಅನುಮಾನದಲ್ಲಿ ಸಾಧ್ಯವೆನಿಸಿದ ಸರ್ವಾಧಿಕತ್ವವೇ ಅಪ್ರಸಿದ್ಧವೆಂದು ಹೇಳುವುದು ಸರಿಯಲ್ಲ; ಯಾಕೆಂದರೆ "ವಿಶ್ವಾಧಿಕೋ ರುದ್ರೋ ಮಹರ್ಷಿಃ" ಎಂಬ ಶ್ರುತಿಯಲ್ಲಿ ರುದ್ರನೇ ಸರ್ವಾಧಿಕನೆಂಬುದು ಸ್ಪಷ್ಟವಾಗಿದೆ. ಶ್ರುತಿಸಿದ್ಧವಾದ ಅರ್ಥವನ್ನು ದೃಢಪಡಿಸುವುದಕ್ಕಾಗಿ ಅನುಮಾನವು ಬಂದದ್ದರಿಂದ ಈ ಅನುಮಾನಕ್ಕೆ ಸಿದ್ಧಸಾಧನವೆಂಬ ದೋಷ ಅಂಟುವುದಿಲ್ಲ. ಹೀಗೆಯೇ ಪುರಾಣಗಳು ಕೇವಲ ಸಾತ್ತ್ವಿಕ ಅಥವಾ ಕೇವಲ ರಾಜಸ ಎಂಬ ಪಕ್ಷದಲ್ಲೂ ಹಿಂದೆ ಹೇಳಿದ ಏಳು ವಿಕಲ್ಪಗಳನ್ನು ಭಾವಿಸಿ ದೂಷಿಸಬೇಕು. ವಿಷ್ಣುವಿನ ಆಧಿಕ್ಯವನ್ನು ತಿಳಿಸುವ ಮಾರ್ಕಂಡೇಯಾದಿಪುರಾಣಗಳನ್ನು ಸಾತ್ತ್ವಿಕವೆಂದೂ, ರುದ್ರನ ಮಹತ್ತ್ವವನ್ನು ತಿಳಿಸುವ ಪದ್ಮಪುರಾಣಾದಿಗಳನ್ನೂ ತಾಮಸವೆಂದೂ ಭಾವಿಸಿ ಪದ್ಮಪುರಾಣದಲ್ಲಿ ವಿಷ್ಣು ರುದ್ರ ಇವರಿಬ್ಬರ ಆಧಿಕ್ಯವನ್ನು ಹೇಳಿರುವುದರಿಂದ ರುದ್ರಾಧಿಕ್ಯವನ್ನು ಹೇಳುವ ಅಂಶದಲ್ಲಿ ಅದನ್ನು ತಾಮಸವೆಂದು ಒಪ್ಪಿದರೆ, ರಾಮಾಯಣ ಭಾಗವತಗಳಲ್ಲಿಯೂ ಹಾಗೆಯೇ ರುದ್ರಾಧಿಕ್ಯವನ್ನು ಹೇಳುವ ಅಂಶದಲ್ಲಿ ಅವೂ ತಾಮಸವೇ ಆಗಬೇಕಾದೀತು. ರಾಮಾಯಣದ ಬಾಲಕಾಂಡದಲ್ಲಿ "ನಿನ್ನನ್ನು ಧರಿಸಲು ರುದ್ರನ ವಿನಹ ಬೇರೆ ಯಾರೂ ಶಕ್ತರಲ್ಲ. ಪಶುಪತಿಯೂ ಉಮಾಪತಿಯೂ ಆದ ರುದ್ರನು ಎಲ್ಲರಿಗೂ ನಮಸ್ಕಾರಯೋಗ್ಯನಾಗಿದ್ದಾನೆ," "ಘೋರವಾದ ಈ ಅಸ್ತ್ರದ ಬಲವು ನನಗೂ ರುದ್ರನಿಗೂ ಇದೆ," ಹೀಗೆ ರುದ್ರನ ಉತ್ಕೃಷ್ಟತೆಯನ್ನು ತಿಳಿಸಲಾಗಿದೆ. ಕೈಲಾಸಯಾತ್ರೆ, ರಾವಣನಿಗ್ರಹ, ಇಂದ್ರಜಿದನುಗ್ರಹ ಇತ್ಯಾದಿಗಳನ್ನು ವರ್ಣಿಸಿರುವುದರಿಂದಲೂ, ಅಗ್ನಿಸ್ವರೂಪನಾದ ರುದ್ರನಿಂದಲೇ ರಾವಣನ ವಧೆಯಾಯಿತೆಂದು ತಿಳಿಸಿರುವುದರಿಂದಲೂ ರಾಮಾಯಣವನ್ನೂ ತಾಮಸವೆಂದೇ ಭಾವಿಸಬೇಕಾದೀತು. ಆದ್ದರಿಂದ ಶಿವಪುರಾಣಗಳನ್ನು ತಾಮಸವೆಂದು ಹೇಳುವವರು ವೇದಬಾಹ್ಯರೆನಿಸಿ ಬೌದ್ಧಮತವನ್ನು ಪ್ರವೇಶಿಸಬೇಕಾಗುವುದು.

## ॥ ಸಮನ್ವಯಾಧಿಕರಣಂ ॥೪॥

ಅತ್ರ ಪ್ರಥಮಾಧಿಕರಣೇ ಶೈವದೀಕ್ಷಿತಾನಾಂ ಪರಮೈಕಾಂತಿನಾಂ ಭಕ್ತಾನಾಂ ಜಿಜ್ಞಾಸೇತಿಪದೇನ ಜೀವಬ್ರಹ್ಮಣೋರ್ಭೇದಾಭೇದೋ ನಿರೂಪಿತಃ. "ಬ್ರಹ್ಮ ವೇದ ಬ್ರಹ್ಮೈವ ಭವತಿ" "ಈಶಂ ಜ್ಞಾತ್ವಾ ತತ್ರೈಕೀಭವಂತಿ" ಇತ್ಯಾದಿಶ್ರುತಾವುಪಾಸ್ಯೋಪಾಸಕಯೋರಭೇದಸಿದ್ಧಿ ವ್ಯಪದೇಶಾತ್, ದ್ವಿತೀಯಾಧಿಕರಣೇ—ಬ್ರಹ್ಮಣಸ್ಸವಿಶೇಷತ್ವಂ, ಜಗದ್ಬ್ರಹ್ಮಣೋಃ ಸೃಷ್ಟಿಸ್ಥಿತ್ಯವಸರೇ ಭಿನ್ನತ್ವಂ, ಲಯಾವಸರೇ ನದೀಸಮುದ್ರವದಭಿನ್ನತ್ವಂ ಚ ನಿರೂಪಿತಂ. ತೃತೀಯಾಧಿಕರಣೇ— ಪರಮೇಶ್ವರಾವಿರ್ಭೂತಭೇದಾಭೇದಬೋಧಕವೇದವೇದಾಂತಾಗಮಶಾಸ್ತ್ರಮೇವ ಬ್ರಹ್ಮಸತ್ತ್ವೇ ಪ್ರಮಾಣಮಿತಿ ದರ್ಶಿತಂ. ಷಟ್ಸ್ಥಲಪರಶಿವಬ್ರಹ್ಮಾವಿರ್ಭೂತವೇದವೇದಾಂತಾನಾಮಿಂದ್ರೋಪೇಂದ್ರಚಂದ್ರಾದಿನಾನಾದೇವತಾಪ್ರತಿಪಾದಕತ್ವೇನ ಸರ್ವದಾ ನ ಪರಶಿವೈಕಪರತ್ವಮಿತಿ ಶಂಕಾಯಾಂ ತದತಿವ್ಯಾಪ್ತಿನಿವಾರಣಾಯ ಸರ್ವಸ್ಯ ತತ್ರೈವ ಸಿಂಧುಪ್ರವಾಹನ್ಯಾಯೇನ ಸಮನ್ವಯಾದವ್ಯಭಿಚಾರ ಇತಿ ಚತುರ್ಥಾಧಿಕರಣಮಾರಭ್ಯತೇ.

ಶಿವದೀಕ್ಷೆಯನ್ನು ಪಡೆದು ಏಕಾಂತಭಕ್ತಿಯುಳ್ಳ ಸಂಸ್ಕಾರಿಗಳಿಗೆ ಜಿಜ್ಞಾಸಾ ಪದದಿಂದ ಜೀವಬ್ರಹ್ಮರಿಗೆ ಭೇದಾಭೇದವನ್ನು ಮೊದಲನೆಯ ಅಧಿಕರಣದಲ್ಲಿ ತಿಳಿಸಲಾಗಿದೆ. "ಬ್ರಹ್ಮವನ್ನರಿತವನು ಬ್ರಹ್ಮವೇ ಆಗುತ್ತಾನೆ", "ಈಶನನ್ನು ತಿಳಿದು ಅವನಲ್ಲಿ ಏಕವಾಗುತ್ತಾನೆ" ಈ ಬಗೆಯ ಶ್ರುತಿಗಳಲ್ಲಿ ಉಪಾಸ್ಯ-ಉಪಾಸಕ ಇವರಿಬ್ಬರಿಗೂ ಅಭೇದವು ಸಿದ್ಧಿಸುವುದಾಗಿ ಹೇಳಿದೆಯಾದ್ದರಿಂದ ಭಕ್ತಿಮಂತರಾದ ಸಾಧಕರು ಪಾರಮಾರ್ಥಿಕವಾದ ಭೇದವನ್ನು ಉಪಾಸನದಿಂದ ಕಳೆದುಕೊಂಡು ಅಭೇದಾನಂದವನ್ನು ಅನುಭವಿಸುವರೆಂಬುದು ಅಲ್ಲಿ ಸ್ಪಷ್ಟಪಡುತ್ತದೆ. ಎರಡನೆ ಅಧಿಕರಣದಲ್ಲಿ ಬ್ರಹ್ಮ ಸವಿಶೇಷವೆಂದೂ, ಜಗದ್ಬ್ರಹ್ಮಗಳಿಗೆ ಸೃಷ್ಟಿಸ್ಥಿತಿಕಾಲಗಳಲ್ಲಿ ಭೇದವೂ, ಪ್ರಳಯಕಾಲದಲ್ಲಿ ನದೀಸಮುದ್ರಗಳಂತೆ ಅಭೇದವೂ ನಿರೂಪಿತವಾಗಿವೆ. ಮೂರನೆ ಅಧಿಕರಣದಲ್ಲಿ ಪರಮೇಶ್ವರನಿಂದಲೇ ಹೊರಟು, ಭೇದಾಭೇದತತ್ತ್ವವನ್ನು ತಿಳಿಸುವ ವೇದಾಂತಶಾಸ್ತ್ರವೇ ಬ್ರಹ್ಮವಿರುವುದರಲ್ಲಿ ಪ್ರಮಾಣವೆಂದು ತೋರಿಸಲಾಯಿತು. ಈಗ ನಾಲ್ಕನೆ ಅಧಿಕರಣದಲ್ಲಿ ಷಟ್ಸ್ಥಲಾತ್ಮಕಪರಶಿವನಿಂದ ಹೊರಟ ವೇದಾಗಮಗಳು ಇಂದ್ರ ಚಂದ್ರ ಉಪೇಂದ್ರ ಮೊದಲಾದ ಅನೇಕ ದೇವತೆಗಳನ್ನು ಪ್ರತಿಪಾದಿಸುತ್ತಾ ಯಾವಾಗಲೂ ಪರಶಿವನನ್ನೇ ನಿಯತವಾಗಿ ಬೋಧಿಸುತ್ತಿಲ್ಲವೆಂಬ ಆಕ್ಷೇಪ ಬರುವುದರಿಂದ ಅದರ ಪರಿಹಾರಕ್ಕಾಗಿ ಎಲ್ಲಾ ವೇದಾಂತಗಳನ್ನೂ ಸಿಂಧುಪ್ರವಾಹನ್ಯಾಯದಿಂದ ಪರಶಿವನಲ್ಲಿಯೇ ಸಮನ್ವಯಿಸುವುದರಲ್ಲಿ ಯಾವ ದೋಷವೂ ಸಂಭವಿಸುವುದಿಲ್ಲವೆಂದು ತಿಳಿಸಲಾಗುವುದು. ಆದ್ದರಿಂದ ಇದಕ್ಕೆ ಸಮನ್ವಯಾಧಿಕರಣವೆಂಬ ಹೆಸರು ಸಾರ್ಥಕವೆನಿಸಿದೆ.

## ॥ ತತ್ತು ಸಮನ್ವಯಾತ್ ॥ ೧-೧-೪ ॥

ತಚ್ಛಬ್ದೇನ—ಸರ್ವಾಧಿಷ್ಠಾನಂ ಸರ್ವಕಾರಣಂ ವೇದಾಂತವೇದ್ಯಂ ಪೂರ್ವನಿರ್ದಿಷ್ಟಂ ಷಟ್ಸ್ಥಲಪರಶಿವಬ್ರಹ್ಮೈವ ವ್ಯಪದಿಶ್ಯತೇ. ತುಶಬ್ದೇನ ಪ್ರತ್ಯಕ್ಷಾದಿಪ್ರಮಾಣಾಂತರಂ ನಿರಸ್ಯತೇ. ಸಮನ್ವಯಶಬ್ದೇನ ತದಂತರ್ಭೂತಚಂದ್ರೋಪೇಂದ್ರದಿನೇಂದ್ರಾದಿಪ್ರತಿಪಾದಕವಾಕ್ಯಾನಾಂ ಸ್ಥೂಲಾರುಂಧತೀನ್ಯಾಯೇನ ಉಪಕ್ರಮೋಪಸಂಹಾರಾದಿಷಡ್ವಿಧತಾತ್ಪರ್ಯಲಿಂಗೈಃ ತತ್ರೈವ ತಾತ್ಪರ್ಯಮುಪದಿಶ್ಯತೇ. ತದ್ಬ್ರಹ್ಮ ಪ್ರತ್ಯಕ್ಷಾದಿಪ್ರಮಾಣಾಂತರನಿರಾಕರಣಪೂರ್ವಕಂ ಸರ್ವವೇದಾಂತೈಃ ಷಡ್ವಿಧತಾತ್ಪರ್ಯಲಿಂಗೋಪೇತೈಃ ಪ್ರತಿಪಾದ್ಯತ ಇತಿ ಸೂತ್ರಾರ್ಥಃ. ಅತ್ರ ಸರ್ವವೇದವೇದಾಂತಾಗಮವಾಕ್ಯಾನ್ಯಸ್ಯ ವಿಷಯಃ—"ಸದೇವ ಸೋಮ್ಯ" "ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುಃ" "ಅಸಂಖ್ಯಾತಾಸ್ಸಹಸ್ರಾಣಿ, ಸ್ಮರ್ಯತೇ ನ ಚ ದೃಶ್ಯತೇ" "ಅಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತಃ" "ಸೋಂತರಾದಂತರಂ ಪ್ರಾವಿಶತ್" "ಋತಂ ಸತ್ಯಂ ಪರಂ ಬ್ರಹ್ಮ" "ಸರ್ವೇ ವೇದಾ ಯತ್ಪದಮಾಮನಂತಿ" ಇತಿ, ಭೇದಾಭೇದವಿಧಾಯಕಸರ್ವವೇದಾಂತವಾಕ್ಯಾನಾಂ ಸರ್ವಜಗದುಭಯಕಾರಣಷಟ್ಸ್ಥಲಪರಶಿವಬ್ರಹ್ಮಪರತ್ವಂ, ಕರ್ಮಶೇಷಭೂತೇಂದ್ರೋಪೇಂದ್ರಾದಿನಾನಾದೇವತೋಪಾಸನಪರತ್ವಂ ವಾ? ತದುಪಾದಾನಭೂತಪ್ರಧಾನಾದಿಪ್ರತಿಪಾದಕತ್ವಂ ವಾ? ಇತಿ ಬಹುಧಾ ಸಂದಿಹ್ಯತೇ.

## ॥ ತತ್ತುಸಮನ್ವಯಾತ್ ॥ (೧-೧-೪)

'ತತ್' ಶಬ್ದದಿಂದ ವಿಶ್ವಕ್ಕಾಶ್ರಯವೂ, ವಿಶ್ವಕಾರಣವೂ, ವೇದಾಂತವೇದ್ಯವೂ ಆದ ಷಟ್ಸ್ಥಲಾತ್ಮಕಪರಮಶಿವನು ಬೋಧಿತನಾಗುವನು. 'ತತ್' ಶಬ್ದವು ಪ್ರತ್ಯಕ್ಷಾದಿಪ್ರಮಾಣಗಳನ್ನು ನಿಷೇಧಿಸುತ್ತದೆ. ಸಮನ್ವಯಶಬ್ದವು ಪರಮಶಿವನ ಅಂಶರಾದ ಇಂದ್ರ, ಚಂದ್ರ, ಉಪೇಂದ್ರ, ದಿನೇಂದ್ರ ಮೊದಲಾದ ದೇವತೆಗಳನ್ನು ತಿಳಿಸುವ ವಾಕ್ಯಗಳೆಲ್ಲಕ್ಕೂ ಸ್ಥೂಲಾರುಂಧತೀನ್ಯಾಯದಿಂದ ಉಪಕ್ರಮೋಪಸಂಹಾರೈಕ್ಯವೇ ಮೊದಲಾದ ಆರು ತಾತ್ಪರ್ಯಲಿಂಗಗಳ ಪ್ರಕಾರ ಪರಮಶಿವನಲ್ಲಿಯೇ ತಾತ್ಪರ್ಯವೆಂದು ತಿಳಿಸುತ್ತದೆ. ವೇದಾಂತದ ಎಲ್ಲಾ ವಾಕ್ಯಗಳೂ ಅವನೊಬ್ಬನಲ್ಲಿಯೇ ಸಮನ್ವಯಿಸುತ್ತವೆ ಎಂಬುದೇ ಸೂತ್ರದ ಅರ್ಥ. ಪರಮಶಿವನು ಪ್ರತ್ಯಕ್ಷಾದಿಪ್ರಮಾಣಗಳಿಗೆ ಗೋಚರವಾಗದಿರುವುದರಿಂದ ವೇದಾಂತವಾಕ್ಯಗಳಿಂದಲೇ ಪ್ರತಿಪಾದಿತನಾಗುವನು. ಈ ಸೂತ್ರಕ್ಕೆ ನಿಗಮಾಗಮಗಳ ವಾಕ್ಯಗಳೆಲ್ಲವೂ ವಿಷಯವಾಗಿವೆ. "ಇದೆಲ್ಲವೂ ಮೊದಲು ಸದ್ರೂಪವೇ ಆಗಿತ್ತು" "ಒಂದೇ ಬ್ರಹ್ಮ

ಅದ್ವಿತೀಯವಾಗಿತ್ತು", "ಒಬ್ಬ ರುದ್ರನೇ ಎರಡನೆಯವನಿಲ್ಲದಿದ್ದನು", "ಅವನೇ ಲೆಖ್ಖವಿಲ್ಲದಷ್ಟು ಸಾವಿರಗಳಾಗಿರುವನೆಂದು ತಿಳಿಯಬೇಕು, ಆದರೆ ಅವನು ಕಾಣು ವುದಿಲ್ಲ", "ನಾನೊಬ್ಬನೇ ಮೊದಲೂ ಇದ್ದೆನು, ಈಗಲೂ ಇದ್ದೇನೆ, ಮುಂದೆಯೂ ಇರುವೆನು, ನನಗಿಂತ ಬೇರೆ ಯಾರೂ ಇಲ್ಲ" "ಅವನು ಒಳಗಿಂದ ಒಳಗೆಯೇ ಪ್ರವೇಶಿಸಿದನು" "ಋತವೂ ಸತ್ಯವೂ ಆದದ್ದು ಪರಬ್ರಹ್ಮ". "ಪುರುಷರೂಪನೂ ಕಪ್ಪು ಹಳದಿ ಬಣ್ಣದವನೂ, ಊರ್ಧ್ವರೇತನೂ, ವಿರೂಪಾಕ್ಷನೂ ಆದ ದೇವನಿಗೆ ನಮಸ್ಕಾರ" "ಎಲ್ಲಾ ವೇದಗಳೂ ಯಾವ ಪದವನ್ನು ತಿಳಿಸುತ್ತವೆಯೋ" ಹೀಗೆ ಭೇದಾಭೇದವನ್ನು ತಿಳಿಸುವ ಎಲ್ಲಾ ವೇದಾಂತವಾಕ್ಯಗಳಿಗೂ ಜಗದುಭಯ ಕಾರಣನಾದ ಷಟ್ಸ್ಥಲಾತ್ಮಕಪರಶಿವಬ್ರಹ್ಮದಲ್ಲಿಯೇ ತಾತ್ಪರ್ಯವೇ? ಯಜ್ಞಾದಿ ಕರ್ಮಗಳಲ್ಲಿ ಆರಾಧ್ಯರೆನಿಸಿದ ಇಂದ್ರಾದಿ ದೇವತೆಗಳ ಉಪಾಸನದಲ್ಲಿ ತಾತ್ಪರ್ಯವೇ? ಅಥವಾ ಜಗತ್ತಿಗೆ ಉಪಾದಾನಕಾರಣವೆನಿಸಿದ ಪ್ರಧಾನವನ್ನು ಪ್ರತಿಪಾದಿಸುವುದರಲ್ಲಿ ತಾತ್ಪರ್ಯವೇ? ಹೀಗೆ ಬಹಳವಾಗಿ ಸಂದೇಹಗಳು ಬರುತ್ತವೆ.

ಪೂರ್ವಪಕ್ಷಸ್ತು—ನ ಸರ್ವಥಾ ಬ್ರಹ್ಮಣಃ ಪರಶಿವಸ್ಯ ಸರ್ವವೇದಾಂತಪ್ರತಿಪಾದ್ಯತ್ವಂ ಸಂಭವತಿ, ತೇಷಾಂ ವಿಧಿಪರತ್ವಾತ್. ಉಭಯಪರತ್ವೇ ವಾಕ್ಯಭೇದಾಪತ್ತಿಃ. ಜಗದ್ಬ್ರಹ್ಮಣೋಃ ಕಾರ್ಯಕಾರಣತ್ವದರ್ಶನಾದನುಮಾನೇನ ಬ್ರಹ್ಮಸಿದ್ಧಿರುಪಪದ್ಯತೇ. ತಸ್ಮಾನ್ನ ವೇದಾಂತೈಕಪ್ರತಿಪಾದ್ಯತ್ವಂ. ಕಿಂಚ—ನಾನಾದೇವತೋಪಾಸನಪರತ್ವಮಪಿ ಯುಕ್ತಂ. "ಅಗ್ನಿರಗ್ರೇ ಪ್ರಥಮೋ ದೇವತಾನಾಂ" "ಅಸಾವಾದಿತ್ಯೋ ಬ್ರಹ್ಮ" "ನಾರಾಯಣಪರಂ ಬ್ರಹ್ಮ" ಇತ್ಯಾದಿಶ್ರುತಿದರ್ಶನಾತ್. ಅಪಿಚ— "ಸೈಷಾ ವಿಚಿತ್ರಾ ಸುದೃಢಾ ಬಹ್ವಂಕುರಾ ಸ್ವಯಂ ಗುಣಭಿನ್ನಾ ಅಂಕುರೇಷ್ವಪಿ ಗುಣಭಿನ್ನಾ ಸರ್ವತ್ರ ಬ್ರಹ್ಮವಿಷ್ಣುಶಿವರೂಪಿಣೀ", "ಅಜಾಮೇಕಾಂ" ಇತ್ಯಾದಿನಾ ಸರ್ವದೇವತಾಮಯತ್ವಸ್ಯ ಸರ್ವಕಾರಣತ್ವಸ್ಯ ಚ ಪ್ರಧಾನಸ್ಯೈವ ನಿರ್ದೇಶಾತ್ತತ್ಪರತ್ವಮಪಿ ಯುಕ್ತಂ. ಕಿಂಚ— "ಅಯಂ ಘಟಃ, ಅಯಂ ಪಟಃ" ಇತ್ಯಾದಿಲೋಕವ್ಯವಹಾರಸ್ಯ ಪರಂಪರಾವೃದ್ಧವ್ಯವಹಾರಜ್ಞಾನಸಾಪೇಕ್ಷತ್ವಾತ್ ನಿರಸ್ತಸಮಸ್ತೋಪದ್ರವಸರ್ವಮಂಗಲಾಧಾರಸಿದ್ಧಬ್ರಹ್ಮಪರತ್ವೇ ನಿಷ್ಪ್ರಯೋಜನತ್ವಸಾಪೇಕ್ಷತ್ವಯೋಃ ಪ್ರಸಂಗಾತ್ತದುಭಯದೋಷವಾರಣಾಯ ವೇದಾಂತಾನಾಂ ವಿಧ್ಯುಪಾಸನಪರತ್ವಂ ವಿಧೀಯತೇ. ಅಥವಾ ಕರ್ತೃದೇವತಾಪ್ರತಿಪಾದನದ್ವಾರಾ ಕರ್ಮಪರತ್ವಂ ಸಿದ್ಧಂ. ಇತಿ ಪ್ರಾಪ್ತೇ ಬ್ರೂಮಃ. ರಾದ್ಧಾಂತಸ್ತು ವೇದಾಂತಾನಾಂ ಬ್ರಹ್ಮಪರತ್ವಂ ಬ್ರಹ್ಮಧ್ಯಾನವಿಧಿಪರತ್ವಂ ಚೋಪಪದ್ಯತೇ. ಅತೋ ನ ವಾಕ್ಯಭೇದದೋಷಪ್ರಸಂಗಃ, ತದುಭಯವಿಧೇರ್ದರ್ಶನಾತ್. ತಥಾಹಿ—ಉಪಕ್ರಮಾದಿಷಡ್ವಿಧತಾತ್ಪರ್ಯಲಿಂಗೇನ

ಬ್ರಹ್ಮಪರತ್ವಂ. "ಆತ್ಮಾ ವಾ ಅರೇ ದ್ರಷ್ಟವ್ಯಃ" ಇತ್ಯಾದಿಷು ತದ್ಧ್ಯಾನ ವಿಧಿಪರತ್ವಂ ಚ ದೃಶ್ಯತೇ. "ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ । ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥" ಇತಿ ಸ್ಮೃತಾವುಪಕ್ರಮೋಪಸಂಹಾರಾದಿಭಿರ್ವೇದಾಂತತಾತ್ಪರ್ಯನಿರ್ಣಯಃ ಶ್ರವಣಮಿತ್ಯಭಿಧೀಯತೇ. "ಅಜ್ಞಾನಪ್ರಭವಂ ದುಃಖಂ ಜ್ಞಾನಂ ತಸ್ಯ ನಿವರ್ತಕಂ । ಸರ್ವವೇದಾಂತವಾಕ್ಯಾನಾಂ ಶ್ರವಣಂ ತತ್ಪ್ರವರ್ತಕಂ ॥ ಶ್ರವಣಂ ನಾಮ ವಾಕ್ಯಾನಾಂ ವೈದಿಕಾನಾಂ ಪರಾತ್ಪರೇ । ಉಪಕ್ರಮಾದಿಭಿರ್ಲಿಂಗೈಃ ಕೃತಸ್ತಾತ್ಪರ್ಯನಿರ್ಣಯಃ ॥" ಇತ್ಯುಪಕ್ರಮೋಪಸಂಹಾರಾವೇಕಂ ಲಿಂಗಂ. "ಸದೇವ ಸೋಮ್ಯೇದಮಗ್ರ ಆಸೀತ್" ಇತ್ಯುಪಕ್ರಮಃ. "ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ" ಇತ್ಯುಪಸಂಹಾರಃ. ಪುನಃ "ತತ್ತ್ವಮಸಿ" ಇತ್ಯಭ್ಯಾಸಃ. "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" ಇತಿ ಮಾನಾಂತರಾಗಮ್ಯತ್ವೇನಾಪೂರ್ವತ್ವಂ. "ಯೇನಾಶ್ರುತಂ ಶ್ರುತಂ ಭವತಿ" ಇತ್ಯಾದಿನಾ ಏಕವಿಜ್ಞಾನೇನ ಸರ್ವವಿಜ್ಞಾನಂ ಫಲಂ. "ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ" ಇತ್ಯಾದಿಸೃಷ್ಟಿಸ್ಥಿತಿಸಂಹಾರತಿರೋಧಾನಾನುಗ್ರಹಾದಿಪಂಚಕೃತ್ಯಾನ್ಯರ್ಥವಾದಾಃ. "ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್" ಇತಿ ಮೃದಾದಿದೃಷ್ಟಾಂತಾ ಉಪಪತ್ತಯಃ. ಏವಮನ್ಯತ್ರಾಪಿ. ನಾರಾಯಣೀಯೇ—"ಅಣೋರಣೀಯಾನ್ ಮಹತೋ ಮಹೀಯಾನ್" ಇತ್ಯುಪಕ್ರಮಃ. "ಸರ್ವೋಹ್ಯೇಷ ರುದ್ರಃ" ಇತ್ಯುಪಸಂಹಾರಃ. "ಯಃ ಪರಸ್ಸ ಮಹೇಶ್ವರಃ" "ಅಂಬಿಕಾಪತಯ ಉಮಾಪತಯೇ ಪಶುಪತಯೇ ನಮೋ ನಮಃ" ಇತ್ಯಾದ್ಯಭ್ಯಾಸಃ. "ವಿಶ್ವಾಧಿಕೋ ರುದ್ರೋ ಮಹರ್ಷಿಃ" ಇತ್ಯಾದೌ ವಿಶ್ವಾಧಿಕತ್ವಾದೇರ್ಮಾನಾಂತರಾಪ್ರಾಪ್ತತ್ವಾದಪೂರ್ವತಾ. "ಪರಾಮೃತಾತ್ಪರಿಮುಚ್ಯಂತಿ ಸರ್ವೇ" ಇತಿ ಫಲಂ. "ಸಹಸ್ರಶೀರ್ಷಂ" ಇತ್ಯರ್ಥವಾದಃ. "ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್" ಇತ್ಯುಪಪತ್ತಿಃ. ಏವಂ ಸರ್ವವೇದಾಂತೇಷು ದ್ರಷ್ಟವ್ಯಂ.

ಇಲ್ಲಿ ಪೂರ್ವಪಕ್ಷ ಹೀಗೆ ಒದಗುತ್ತದೆ. ಪರಶಿವನನ್ನೇ ಎಲ್ಲಾ ವೇದಾಂತ ವಾಕ್ಯಗಳೂ ಪ್ರತಿಪಾದಿಸುತ್ತವೆ ಎಂಬುದು ಸಂಭವಿಸಲಾರದು. ಯಾಕೆಂದರೆ ಆ ವಾಕ್ಯಗಳು ಯಜ್ಞಾದಿವಿಧಿಗಳನ್ನು ಬೋಧಿಸಲಿಕ್ಕಾಗಿ ಬಂದಿವೆಯೇ ಹೊರತು ಬ್ರಹ್ಮವನ್ನು ಬೋಧಿಸಲಿಕ್ಕಾಗಿ ಬಂದಿಲ್ಲ. ಅವು ವಿಧಿ ಮತ್ತು ಬ್ರಹ್ಮ ಇವೆರಡನ್ನೂ

ಬೋಧಿಸುವುದಾದರೆ ವಾಕ್ಯಭೇದವೆಂಬ ದೋಷ ಸಂಭವಿಸುತ್ತದೆ. ಇದೂ ಅಲ್ಲದೆ, ಜಗತ್ತಿಗೂ ಬ್ರಹ್ಮಕ್ಕೂ ಕಾರ್ಯಕಾರಣಭಾವವು ಕಂಡುಬಂದಿರುವುದರಿಂದ ಅನುಮಾನದಿಂದಲೂ ಬ್ರಹ್ಮವನ್ನು ತಿಳಿಯಲು ಸಾಧ್ಯವಿದೆ. ಆದ್ದರಿಂದ ವೇದಾಂತವಾಕ್ಯಗಳಿಂದಲೇ ಬ್ರಹ್ಮವು ಪ್ರತಿಪಾದ್ಯವಾಗುವುದೆಂಬ ಮಾತು ಯುಕ್ತಿಯುಕ್ತವಾಗಲಾರದು ಮತ್ತು ಅನೇಕ ದೇವತೆಗಳ ಉಪಾಸನೆಯನ್ನು ವೇದಾಂತವು ತಿಳಿಸಿರುವುದೂ ಯುಕ್ತವೇ ಆಗಿದೆ. "ದೇವತೆಗಳೆಲ್ಲರಿಗೂ ಅಗ್ನಿಯೇ ಶ್ರೇಷ್ಠನು". "ಆದಿತ್ಯನೇ ಬ್ರಹ್ಮ". "ಅದೇ ವಿಷ್ಣುವಿನ ಉತ್ತಮಸ್ಥಾನ". "ನಾರಾಯಣನೇ ಪರಬ್ರಹ್ಮ" ಹೀಗೆ ವೇದಾಂತವಾಕ್ಯಗಳು ಬಂದಿವೆ. ಇದೂ ಅಲ್ಲದೆ, "ಇದು ವಿಚಿತ್ರವೂ ಸುದೃಢವೂ ಆದ ಬಹಳ ಮೊಳಕೆಗಳಿಂದೊಡಗೂಡಿ, ತಾನೂ ಬೇರೆ ಬೇರೆ ಗುಣಗಳಿಂದ ಕೂಡಿ ತನ್ನ ಅಂತರಂಗವೆನಿಸಿದ ಕಾರ್ಯಗಳನ್ನು ಅವನಲ್ಲಿಯೇ ಅರ್ಪಿಸುತ್ತ ಎಲ್ಲೆಲ್ಲಿಯೂ ಬ್ರಹ್ಮವಿಷ್ಣುರುದ್ರರೂಪಿಯಾಗಿದೆ". "ಸನಾತನವೂ, ಒಂದೇ ವಿಧವೂ, ಸತ್ತ್ವರಜಸ್ತಮೋಗುಣಾತ್ಮಕವೂ ಆಗಿ ಸಮಾನಾಕಾರದ ಅನೇಕ ಸಂತತಿಗಳನ್ನು ಹೊರಪಡಿಸುತ್ತಿರುವ ಪ್ರಕೃತಿಯನ್ನು ನಮಸ್ಕರಿಸುತ್ತೇನೆ". ಎಂಬಲ್ಲಿ ಪ್ರಧಾನವನ್ನು ಸರ್ವದೇವಮಯವೆಂದೂ, ಸರ್ವಕಾರಣವೆಂದೂ ತಿಳಿಸಲಾಗಿದೆ. ಆದ್ದರಿಂದ ವೇದಾಂತವಾಕ್ಯಗಳಿಗೆ ಪ್ರಧಾನವನ್ನು ಪ್ರತಿವಾದಿಸುವುದರಲ್ಲಿಯೂ ತಾತ್ಪರ್ಯವಿದೆ ಎಂಬುದು ಯುಕ್ತವೇ ಆಗಿದೆ. "ಇದು ಘಟ, ಇದು ಪಟ" ಈ ಬಗೆಯ ಲೋಕವ್ಯವಹಾರದ ಪರಂಪರೆಯು ವೃದ್ಧವ್ಯವಹಾರಜ್ಞಾನವನ್ನು ಅಪೇಕ್ಷಿಸುವುದರಿಂದ ಸರ್ವಮಂಗಳಗಳಿಗಾಧಾರವೂ, ಸುಪ್ರಸಿದ್ಧವೂ ಆದ ಪರಶಿವಬ್ರಹ್ಮವನ್ನೇ ವೇದಾಂತವಾಕ್ಯಗಳು ನಿರಾತಂಕವಾಗಿ ತಿಳಿಸುವುದಾದರೆ ಆ ಬ್ರಹ್ಮ ನಿಷ್ಪ್ರಯೋಜನವೆನಿಸಬೇಕಾಗುತ್ತದೆ ಅಥವಾ ಆ ಪ್ರಸಿದ್ಧವಾದ ಬ್ರಹ್ಮಕ್ಕೆ ಬೇರೊಂದು ಕಾರ್ಯದಲ್ಲಿ ಸಮನ್ವಯವನ್ನು ಹೇಳಬೇಕಾಗುತ್ತದೆ. ಈ ಎರಡು ದೋಷಗಳ ನಿವಾರಣೆಗಾಗಿ ವೇದಾಂತವಾಕ್ಯಗಳಿಗೆ ಉಪಾಸನಗಳನ್ನು ವಿಧಿಸುವುದರಲ್ಲಿಯೇ ತಾತ್ಪರ್ಯವೆಂದು ಹೇಳಬೇಕು ಅಥವಾ ಕರ್ತೃದೇವತೆಗಳನ್ನು ಪ್ರತಿಪಾದಿಸುವ ಮೂಲಕ ಈ ವೇದಾಂತಗಳು ಯಜ್ಞಾದಿಕರ್ಮವನ್ನು ಬೋಧಿಸುತ್ತವೆ ಎಂದಾದರೂ ಹೇಳಬೇಕಾಗುತ್ತದೆ. ಹೀಗೆ ಪೂರ್ವಪಕ್ಷ ಒದಗಿದರೆ ಈ ಬಗ್ಗೆ ಸಿದ್ಧಾಂತವನ್ನು ಈರೀತಿಯಾಗಿ ಹೇಳಬಹುದು. ವೇದಾಂತವಾಕ್ಯಗಳು ಬ್ರಹ್ಮವನ್ನೂ, ಬ್ರಹ್ಮಧ್ಯಾನದ ವಿಧಿಯನ್ನೂ ತಿಳಿಸುತ್ತವೆ ಎಂಬುದೇ ಯುಕ್ತವಾಗಿದೆ. ಪ್ರತ್ಯೇಕವಾಗಿ ಎರಡುಬಗೆಯ ವಿಧಿಯೂ ಇರುವುದರಿಂದ ವಾಕ್ಯದೋಷದ ಪ್ರಸಕ್ತಿ ಇಲ್ಲ. ಉಪಕ್ರಮೋಪಸಂಹಾರಗಳ ಐಕ್ಯ, ಅಭ್ಯಾಸ, ಅಪೂರ್ವತೆ-ಅರ್ಥವಾದ, ಉಪಪತ್ತಿ ಎಂಬ ಆರುಬಗೆಯ ತಾತ್ಪರ್ಯ ಲಿಂಗಗಳ ಮೂಲಕ ವೇದಾಂತಗಳು ಬ್ರಹ್ಮವನ್ನೇ ಪ್ರತಿಪಾದಿಸುತ್ತವೆ. ಶ್ರುತಿಯು "ಆತ್ಮನನ್ನು ನೋಡಬೇಕು" ಎಂದು ಆತ್ಮನ ಧ್ಯಾನವನ್ನೇ ವಿಧಿಸುತ್ತದೆ. ಆದರೆ ತಾತ್ಪರ್ಯಲಿಂಗಗಳು ಶ್ರುತಿವಾಕ್ಯಗಳ ತಾತ್ಪರ್ಯವನ್ನು ನಿರ್ಣಯಿಸುವ ಹೇತುವೆನಿಸಿವೆ. "ಆತ್ಮಾ ವಾರೇ ದ್ರಷ್ಟವ್ಯಃ."

ಎಂಬಲ್ಲಿ ಉಪಕ್ರಮೋಪಸಂಹಾರೈಕ್ಯದಿಂದ ವೇದಾಂತವಾಕ್ಯಗಳ ತಾತ್ಪರ್ಯವನ್ನು ನಿರ್ಣಯಿಸುವುದೇ ಶ್ರವಣವೆಂದು ಹೇಳಲಾಗಿದೆ. "ಅಜ್ಞಾನದಿಂದ ದುಃಖಬರುತ್ತದೆ. ಆದರೆ ಜ್ಞಾನವು ಅದನ್ನು ಪರಿಹರಿಸುತ್ತದೆ. ಎಲ್ಲಾ ವೇದಾಂತಗಳ ಶ್ರವಣವೇ ಈ ಜ್ಞಾನವನ್ನು ದೊರಕಿಸುತ್ತದೆ. ಶ್ರವಣವೆಂದರೆ ವೇದಾಂತವಾಕ್ಯಗಳಿಗೆ ತಾತ್ಪರ್ಯ ಲಿಂಗಗಳಿಂದ ಪರಬ್ರಹ್ಮದಲ್ಲಿಯೇ ತಾತ್ಪರ್ಯವನ್ನು ನಿಶ್ಚಯಿಸುವುದೇ ಆಗಿದೆ". ಇಲ್ಲಿ ತಾತ್ಪರ್ಯಲಿಂಗಗಳ ವಿವೇಚನೆ ಹೀಗಿದೆ. "ಇದೆಲ್ಲವೂ ಮೊದಲು ಸದ್ರೂಪವಾಗಿತ್ತು' ಎಂಬುದು ಉಪಕ್ರಮ. "ಇದು ಅಣುವೆನಿಸಿದೆ". "ಇದೆಲ್ಲವೂ ಅದರ ಸ್ವರೂಪದಿಂದಲೇ ಇರುವುದು". "ಅದೇ ಆತ್ಮ, ನೀನೂ ಅದೇ ಆಗಿದ್ದೀಯೆ" ಎಂಬುದು ಉಪಸಂಹಾರ. ಇವೆರಡೂ ಸೇರಿ ಒಂದು ಲಿಂಗವೆನಿಸಿವೆ. 'ತತ್ತ್ವಮಸಿ' ಎಂಬುದು ಅಭ್ಯಾಸ. "ಉಪನಿಷತ್ಪ್ರತಿಪಾದ್ಯನಾದ ಬ್ರಹ್ಮದ ಬಗ್ಗೆ ಕೇಳುತ್ತೇನೆ" ಎಂಬ ಶ್ರುತಿಯಲ್ಲಿ ಬೇರೆ ಯಾವ ಪ್ರಮಾಣದಿಂದಲೂ ಅವನನ್ನು ತಿಳಿಯಲಾಗುವುದಿಲ್ಲ ಎಂಬ ಅಪೂರ್ವತೆ ತೋರುತ್ತದೆ. "ಹಿಂದೆ ಕೇಳದೇ ಇದ್ದುದೂ ಯಾವುದರಿಂದ ಕೇಳಿದಂತಾಗುವುದೋ" ಎಂಬ ವಾಕ್ಯದಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವೂ ಆಗುವುದೆಂಬ ಫಲ ತೋರುತ್ತದೆ. "ಪರಬ್ರಹ್ಮವು ತಾನೇ ಈ ತ್ರಿಮೂರ್ತಿಗಳಾಗಿದ್ದೇನೆಂದೂ "ಈ ಜೀವನಲ್ಲಿ ತಾನೇ ಪ್ರವೇಶಿಸಿ ನಾಮರೂಪಗಳನ್ನು ವಿಸ್ತರಿಸುತ್ತೇನೆಂದೂ ನೋಡಿತು." ಹೀಗೆ ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗ್ರಹಗಳೆಂಬ ಪಂಚಕೃತ್ಯಗಳನ್ನು ಹೇಳಿರುವುದೇ ಅರ್ಥವಾದವೆನಿಸುತ್ತದೆ. "ಒಂದು ಮಣ್ಣುಮುದ್ದೆಯಿಂದ ಮಣ್ಣಿನ ಎಲ್ಲಾ ಕಾರ್ಯಗಳನ್ನೂ ತಿಳಿಯಬಹುದು" ಎಂಬ ಮೃದಾದಿ ದೃಷ್ಟಾಂತಗಳೇ ಉಪಪತ್ತಿಗಳು. ಹೀಗೆಯೇ ವೇದಾಂತವಾಕ್ಯಗಳಲ್ಲಿ ಎಲ್ಲಾ ಕಡೆಗಳಲ್ಲೂ ತಾತ್ಪರ್ಯಲಿಂಗಗಳನ್ನು ಗಮನಿಸಬೇಕು. ಮಹಾನಾರಾಯಣೋಪನಿಷತ್ತಿನಲ್ಲಿ "ಸಣ್ಣದಕ್ಕಿಂತಲೂ ಸಣ್ಣದು, ದೊಡ್ಡದಕ್ಕಿಂತಲೂ ದೊಡ್ಡದು" ಎಂಬುವುದೇ ಉಪಕ್ರಮ. "ಎಲ್ಲವೂ ರುದ್ರನೇ" ಎಂಬುದು ಉಪಸಂಹಾರ. "ಯಾವನು ಎಲ್ಲಕ್ಕೂ ಆಚಿನವನೋ ಅವನು ಮಹೇಶ್ವರನು" "ಅಂಬಿಕಾಪತಿಯೂ, ಉಮಾಪತಿಯೂ, ಪಶುಪತಿಯೂ ಆದ ನಿನಗೆ ನಮಸ್ಕಾರ" ಈ ವಾಕ್ಯಗಳೇ ಅಭ್ಯಾಸವೆನಿಸಿವೆ. "ವಿಶ್ವಾಧಿಕನೂ, ಮಹರ್ಷಿಯೂ ಆದ ರುದ್ರನು" ಎಂಬ ವಾಕ್ಯದಲ್ಲಿ ಬ್ರಹ್ಮವು ವಿಶ್ವಾಧಿಕನಾದ್ದರಿಂದ ಬೇರೆ ಯಾವ ಪ್ರಮಾಣಕ್ಕೂ ಸಿಲುಕುವವನಲ್ಲವೆಂಬುದೇ ಅಪೂರ್ವತೆ ಎನಿಸಿದೆ. "ಬ್ರಹ್ಮವನ್ನರಿತವನಿಗೆ ಮೃತ್ಯುವಿನಿಂದ ಬಿಡುಗಡೆಯಾಗುತ್ತದೆ" ಎಂಬ ವಾಕ್ಯದಲ್ಲಿ ಫಲವನ್ನು ಹೇಳಿದೆ. "ಸಹಸ್ರಶೀರ್ಷಂ ದೇವಂ" ಎಂಬುದು ಅರ್ಥವಾದವೆನಿಸಿದೆ. "ಯಾವನಿಗಿಂತಲೂ ಬೇರೆಯಾದದ್ದು ಯಾವದೂ ಇಲ್ಲವೋ" ಎಂಬುದರಿಂದ ಉಪಪತ್ತಿ ತೋರುತ್ತದೆ. ಹೀಗೆ ಎಲ್ಲಾ ವಾಕ್ಯಗಳಲ್ಲೂ ತಿಳಿಯಬೇಕು.

**ತಸ್ಮಾತ್ ಸ್ವರೂಪವ್ಯಾವರ್ತಕತಟಸ್ಥಲಕ್ಷಣತ್ರಯೇಣ ಸರ್ವವೇ**

ದಾಂತಾನಾಂ ಬ್ರಹ್ಮಪ್ರತಿಪಾದಕತ್ವಂ ಯುಕ್ತಂ. ರೂಪಪ್ರತ್ಯಕ್ಷಕಾರಣಸ್ಯ ನೇತ್ರಸ್ಯ ದ್ರವ್ಯಸಿದ್ಧಿವತ್, ವಿಧಿಪರತ್ವೇನ ವೇದಾಂತಾನಾಂ ಸರ್ವಾಧಿಷ್ಠಾನಪರಶಿವಬ್ರಹ್ಮಸಿದ್ಧಿಃ. ತಸ್ಮಾನ್ನೋಭಯಪರತ್ವವಿರೋಧಃ. "ನೈಷಾ ತರ್ಕೇಣ ಮತಿರಾಪನೇಯಾ" ಇತಿ ಶ್ರುತ್ಯಾಽನುಮಾನಪ್ರಮಾಣಸ್ಯ ನಿರಸ್ತತ್ವಾತ್, ಅನುಮಾನೇನ ಕರ್ತ್ರೇಕತ್ವಸಿದ್ಧ್ಯಭಾವಾಚ್ಚ ಬ್ರಹ್ಮಪ್ರಾಮಾಣ್ಯೇ ನಾನುಮಾನಂ ವಿಧೀಯತೇ. "ವಿಶ್ವ ಭೂತಂ ಭುವನಂ ಚಿತ್ರಂ ಬಹುಧಾ ಜಾತಂ ಜಾಯಮಾನಂ ಚ ಯತ್ । ಸರ್ವೋ ಹ್ಯೇಷ ರುದ್ರಸ್ತಸ್ಮೈ ರುದ್ರಾಯ ನಮೋ ಅಸ್ತು॥" ಇತ್ಯಾದಿನಾ ಸರ್ವಜಗದುಪಾದಾನಕಾರಣತ್ವಾಜ್ಜಗನ್ಮಯತ್ವಂ. "ಉಮಾಸಹಾಯಂ" ಇತ್ಯಾರಭ್ಯ "ಸ ಏವ ವಿಷ್ಣುಸ್ಸ ಪ್ರಾಣಸ್ಸ ಕಾಲೋಽಗ್ನಿಸ್ಸ ಚಂದ್ರಮಾಃ। ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ ಸನಾತನಂ। ಜ್ಞಾತ್ವಾ ತ್ವಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ॥" ಇತ್ಯಂತೇನ ಪರಶಿವಸ್ಯ ಬ್ರಹ್ಮಣಃ ಸರ್ವದೇವತಾಮಯತ್ವಮುಕ್ತ್ವಾ ತದುಪಾಸನಸ್ಯೈವ ಮೋಕ್ಷಹೇತುತ್ವೋಪದೇಶದರ್ಶನಾತ್, "ಯೋ ರುದ್ರೋ ಅಗ್ನೌ" ಇತ್ಯಾದಿನಾ ಶಿವಸ್ಯೈವ ಸರ್ವಾಂತರ್ಯಾಮಿತ್ವೋಪದೇಶಾಚ್ಚ ಸರ್ವದೇವತಾಮಯತ್ವಾದಿಕಂ ತಸ್ಯೈವ ಸಿದ್ಧಂ. ಉತ್ತಮಮಧ್ಯಮಾಧಮಾಧಿಕಾರಿಭೇದೇನ ನಾನಾದೇವತೋಪಾಸನಂ ನ ವಿರುದ್ಧಂ. "ಭೇದಾಭೇದಾತ್ಮಿಕಾ ಶಕ್ತಿರ್ಬ್ರಹ್ಮನಿಷ್ಠಾ ಸನಾತನೀ" ಇತಿ ಸ್ಮೃತೌ ಶಕ್ತೇರ್ವಹ್ನಿಶಕ್ತೇರಿವ ಬ್ರಹ್ಮಾಧಿಷ್ಠಾನತ್ವೋಪದೇಶಾತ್, ನಿರಧಿಷ್ಠಾನಶಕ್ತೇರಭಾವಾತ್, ಶಕ್ತಿಶಕ್ತಿಮತೋರಭೇದಾಚ್ಚ ತತ್ಕರ್ತೃತ್ವಂ ತದಾತ್ಮಕತ್ವಂ ಚ ತಸ್ಯೈವೋಪಪನ್ನಮಿತಿ ನ ಪ್ರಧಾನಸ್ಯ ಸರ್ವಕರ್ತೃತ್ವಂ. ಪುತ್ರಾದಿಕುಶಲವಾರ್ತಾಶ್ರವಣವತ್ ಸಿದ್ಧಜ್ಞಾನಸ್ಯಾಪಿ ಪ್ರವೃತ್ತಿಹೇತುತ್ವದರ್ಶನಾತ್ ನ ವೃದ್ಧವಾಕ್ಯಪಾರಸ್ಯೈವ ಪ್ರವೃತ್ತಿಹೇತುತ್ವಂ. ಬಾಲಾನಾಂ ಮಾತಾಪಿತ್ರಾದಿಭಿಃ "ಅಯಂ ಘಟಃ, ಅಯಂ ಪಟಃ" ಇತಿ ನಿರ್ದೇಶೇನ ಸಿದ್ಧಾರ್ಥಜ್ಞಾನೋತ್ಪತ್ತೇಸ್ಸಂಭವಾತ್, ಕಾವ್ಯಾಲಂಕಾರಜ್ಞೈಸ್ತಚ್ಛಿಷ್ಯಾಣಾಂ ತದುಪದೇಶೇನ ಸರ್ವಾರ್ಥಜ್ಞಾನದರ್ಶನಾತ್, ತಸ್ಮಾದ್ವೇದಾಂತವಾಕ್ಯಾನಾಂ ಬ್ರಹ್ಮಣಿ ಪ್ರಾಮಾಣ್ಯಮಿತಿ ಸಿದ್ಧಂ.

ಸ್ವರೂಪ, ವ್ಯಾವರ್ತಕ, ತಟಸ್ಥವೆಂಬ ಮೂರು ಲಕ್ಷಣಗಳಿಂದ ಎಲ್ಲಾ ವೇದಾಂತ ವಾಕ್ಯಗಳಿಗೂ ಬ್ರಹ್ಮದಲ್ಲಿಯೇ ತಾತ್ಪರ್ಯವೆಂಬುದು ಯುಕ್ತವೇ ಆಗಿದೆ. ರೂಪದ ಪ್ರತ್ಯಕ್ಷಕ್ಕೆ ಕಾರಣವಾದ ಕಣ್ಣಿನಿಂದ ಪದಾರ್ಥವು ಸಿದ್ಧಿಸುವಂತೆ ವಿಧಿಯನ್ನು ಬೋಧಿಸುವ ವೇದಾಂತವಾಕ್ಯಗಳಿಂದ ಸರ್ವಾಧಿಷ್ಠಾನವಾದ ಪರಶಿವಬ್ರಹ್ಮವು ಸಿದ್ಧಿಸುತ್ತದೆ. ಹೀಗೆ ವೇದಾಂತವು ಬ್ರಹ್ಮ ಮತ್ತು ಅದರ ಉಪಾಸನವೆರಡನ್ನೂ ಬೋಧಿ

ಸುವುದರಲ್ಲಿ ವಿರೋಧವೇನೂ ಇಲ್ಲ. "ಆತ್ಮಜ್ಞಾನವು ತರ್ಕದಿಂದ ದೊರಕುವುದಿಲ್ಲ" ಎಂಬ ಶ್ರುತಿಯಿಂದ ಅನುಮಾನವು ತಿರಸ್ಕೃತವಾಯಿತು. ಇದೂ ಅಲ್ಲದೆ, ವಿಶ್ವಕ್ಕೆಲ್ಲಾ ಒಬ್ಬನೇ ಕರ್ತನೆಂಬುದು ಅನುಮಾನದಿಂದ ಸಿದ್ಧಿಸಲಾಗದು. ಆದ್ದರಿಂದ ಬ್ರಹ್ಮದ ಬಗ್ಗೆ ಅನುಮಾನವು ಪ್ರಮಾಣವಾಗಲಾರದು. "ವಿಶ್ವದಲ್ಲಿ ಹಿಂದೆ ಹುಟ್ಟಿದ್ದು, ಮುಂದೆ ಹುಟ್ಟುವುದು, ಎಲ್ಲವೂ ವಿಚಿತ್ರವೂ, ವಿಸ್ತಾರವೂ ಆಗಿದೆ." "ಇದೆಲ್ಲವೂ ರುದ್ರನೇ"–"ಅವನಿಗೆ ನಮಸ್ಕಾರ" ಈ ವಾಕ್ಯಗಳಿಂದ ಬ್ರಹ್ಮವೇ ಜಗದುಪಾದಾನವೆಂದು ತಿಳಿಯುವುದರಿಂದ ಬ್ರಹ್ಮವು ಜಗನ್ಮಯವೂ ಆಗಿದೆ ಎಂಬುದು ಸ್ಪಷ್ಟಪಡುತ್ತದೆ. 'ಉಮಾಸಹಾಯಂ' ಎಂದು ಆರಂಭಿಸಿ "ಅವನೇ ವಿಷ್ಣು, ಅವನೇ ಪ್ರಾಣ, ಅವನೇ ಕಾಲರುದ್ರ, ಅವನೇ ಅಗ್ನಿ, ಚಂದ್ರ, ಹಿಂದಿನದು ಮುಂದಿನದು ಎಲ್ಲವೂ ಅವನೇ. ಅವನನ್ನು ಧ್ಯಾನಿಸಿ ಮೃತ್ಯುವನ್ನು ದಾಟುತ್ತಾನೆ. ಮುಕ್ತಿಗೆ ಇದಲ್ಲದೆ ಬೇರೆ ದಾರಿಯಿಲ್ಲ" ಎಂದು ಕೊನೆಯಾಗಿರುವ ಮಂತ್ರದಿಂದ ಪರಶಿವನೇ ಸರ್ವದೇವಸ್ವರೂಪನೆಂದೂ, ಅವನ ಉಪಾಸನವೇ ಮುಕ್ತಿಗೆ ಹೇತುವೆಂದೂ ತಿಳಿದುಬಂದಿದೆ. "ಯಾವ ರುದ್ರನೇ ಅಗ್ನಿಯಾಗಿರುವನೋ" ಎಂಬ ಮಂತ್ರದಿಂದ ಶಿವನೇ ಸರ್ವಾಂತರ್ಯಾಮಿ ಎಂದು ಹೇಳಿದ್ದರಿಂದ ಸರ್ವದೇವತಾಮಯನೂ ಅವನೇ ಆಗಿರುವನೆಂಬುದು ಸಿದ್ಧಿಸುತ್ತದೆ. ಹೀಗೆ ಉತ್ತಮ ಮಧ್ಯಮ ಅಧಮರೆನಿಸಿದ ಬೇರೆ ಬೇರೆ ಅಧಿಕಾರಿಗಳ ದೃಷ್ಟಿಯಿಂದ ಅನೇಕ ದೇವತೆಗಳ ಉಪಾಸನವನ್ನು ಹೇಳಿರುವುದರಲ್ಲೂ ಏನೂ ವಿರೋಧವಿಲ್ಲ. ಪರಬ್ರಹ್ಮದಲ್ಲಿ ಅವಿನಾಭಾವದಿಂದ ಇರುವ ಪರಾಶಕ್ತಿಯೂ ಭೇದಾಭೇದರೂಪವಾಗಿರುವುದೆಂದು ಸ್ಮೃತಿ ತಿಳಿಸುತ್ತದೆ. ಆ ಸ್ಮೃತಿಯಲ್ಲಿ ಪರಾಶಕ್ತಿಗೆ ವಹ್ನಿಯ ದಾಹಕಶಕ್ತಿಯಂತೆ ಬ್ರಹ್ಮವೇ ಆಶ್ರಯವೆಂದು ಹೇಳಲಾಗಿದೆ. ನಿರಾಶ್ರಿತವಾದ ಶಕ್ತಿಯು ಎಲ್ಲಿಯೂ ಇರಲಾರದಾದ್ದರಿಂದಲೂ, ಶಕ್ತಿ ಶಕ್ತಿಮಾನ್ ಇಬ್ಬರಿಗೂ ಅಭೇದವಿರುವುದರಿಂದಲೂ ಅವನೇ ಶಕ್ತಿಗೆ ಕರ್ತನೂ ಮತ್ತು ಶಕ್ತಿಸ್ವರೂಪನೂ ಆಗಿರುವನೆಂಬುದು ಯುಕ್ತವೇ ಆಗಿದೆ. ಆದ್ದರಿಂದ ಪ್ರಧಾನವು ಜಗತ್ತಿಗೆ ಕರ್ತೃವಾಗಲಾರದು. ಇದೂ ಅಲ್ಲದೆ ಪುತ್ರನ ಕುಶಲವಾರ್ತೆಯನ್ನು ಉತ್ಸಾಹದಿಂದ ಕೇಳುವಂತೆ ಸಿದ್ಧವಸ್ತುವಿನ ಜ್ಞಾನದಿಂದಲೂ ಪ್ರವೃತ್ತಿಬರಬಹುದಾದ್ದರಿಂದ ವೃದ್ಧವ್ಯವಹಾರದಿಂದಲೇ ಪ್ರವೃತ್ತಿ ಬರಬೇಕೆಂಬ ನಿರ್ಬಂಧವೇನೂ ಇಲ್ಲ. ಮಕ್ಕಳಿಗೆ ತಾಯ್ತಂದೆಗಳು 'ಇದು ಘಟ, ಇದು ಪಟ' ಎಂಬ ಸೂಚನೆಯಿಂದ ಸಿದ್ಧವಸ್ತುವಿನಲ್ಲಿಯೇ ಜ್ಞಾನವನ್ನು ಹುಟ್ಟಿಸುತ್ತಾರೆ. ಕಾವ್ಯಾಲಂಕಾರಗಳನ್ನು ತಿಳಿದವರು ತಮ್ಮ ಶಿಷ್ಯರಿಗೆ ಸಿದ್ಧವಾದ ವಸ್ತುವನ್ನೇ ಉದ್ದೇಶಿಸಿ ಎಲ್ಲಾ ಬಗೆಯ ಅರ್ಥವನ್ನೂ ತಿಳಿಸುತ್ತಾರೆ. ಆದ್ದರಿಂದ ಪ್ರಸಿದ್ಧವಾದ ಅರ್ಥವನ್ನು ಬೋಧಿಸುವ ವಾಕ್ಯಗಳಿಗೆ ಬ್ರಹ್ಮದಲ್ಲಿಯೇ ಪ್ರಾಮಾಣ್ಯವು ಸಿದ್ಧಿಸುತ್ತದೆ.

**ನನು—"ಸಿದ್ಧಬ್ರಹ್ಮವಿಷಯೇ ಶಾಸ್ತ್ರಾಣಾಂ ಪ್ರಯೋಜನಾದರ್ಶನಾದ್ವೇದಾಂತಾನಾಂ ಕರ್ಮವಿಧಿಶೇಷತ್ವಂ ಯುಕ್ತಂ, ನ ಚ ಪಾತನಿವೃತ್ತಿಃ**

ಫಲಂ. ಸ ಚ ಪಾಶಃ ತದ್ಭಿನ್ನೋ ವಾ ತದಭಿನ್ನೋ ವಾ? ಪುನಸ್ಸ ಸತ್ಯೋ ವಾ ಮಿಥ್ಯಾ ವಾ? ನಾದ್ಯಃ—ಶಕ್ತಿವಿಶಿಷ್ಟಶಿವಾದ್ವೈತಹಾನೇಃ. ನ ದ್ವಿತೀಯಃ—ಮಾಯಾಪಾಶಸ್ಯ ಸತ್ಯತ್ವಾತ್ಸರ್ವದಾ ಸಂಸಾರಾಪತ್ತ್ಯಾ ಮುಕ್ತೇರಸಂಭವಾತ್, ಮಾಯಾನಿವೃತ್ತೌ ನ ಕೋಽಪಿ ಯತ್ನಂ ಕುರ್ಯಾತ್. ಅತ ಏವ ನ ತೃತೀಯಃ. ನಾಂತ್ಯಃ ಪರಮೇಶ್ವರಸ್ಯ ನಿತ್ಯಸಿದ್ಧತ್ವೇನ ಮುಮುಕ್ಷುಪ್ರವೃತ್ತ್ಯಸಂಭವಾತ್, ಬಂಧಮೋಕ್ಷದಶಾಯಾಂ ವೈಷಮ್ಯಾಭಾವಾಚ್ಚ. ಸರ್ವಥಾ ವೇದಾಂತಶಾಸ್ತ್ರಪ್ರವೃತ್ತಿರ್ನಸಂಭವತಿ ಇತಿ ಚೇನ್ನ. ಗುಣತ್ರಯಾತ್ಮಕಪಾಶಸ್ತು ಪರಮೇಶ್ವರಾದ್ಭಿನ್ನ ಏವ. ತಸ್ಮಾತ್ತನ್ನಿವೃತ್ತೌ ಸ್ವಾಭಾವಿಕಚಿಚ್ಛಕ್ತ್ಯವಚ್ಛಿನ್ನಶಿವಾದ್ವೈತಹಾನಿರ್ನ ಸಂಭವತಿ. ಮಾಯಾಪಾಶಸ್ಯ ಸತ್ಯತ್ವೇಽಪಿ ನಾನಿರ್ಮೋಕ್ಷಪ್ರಸಂಗಃ. ದ್ವೈತಾದ್ವೈತಮತಾಂಗೀಕಾರಾತ್. ನ ಚ ತತ್ರ ಮಾನಾಭಾವಃ-" ಬ್ರಹ್ಮ ವೇದ ಬ್ರಹ್ಮೈವ ಭವತಿ " " ಬ್ರಹ್ಮಭವನಕಾಮೋ ಬ್ರಹ್ಮವೇದನಂ ಕುರ್ಯಾತ್ " ಇತ್ಯಾದಿಶ್ರುತಿಪ್ರಮಾಣಸದ್ಭಾವಾತ್, ಅವಿದ್ಯಾಯಾ ಮೋಹಾಕಾರತ್ವೇನ ಚಿಚ್ಛಕ್ತೇರ್ಭಿನ್ನತ್ವಾತ್ತನ್ನಿವೃತ್ತಿಶ್ಶಿವೋಪಾಸನೇನೈವ ಸಂಭವತ್ಯೇವ. ನಿವೃತ್ತಿರ್ನಾಮ ತತ್ಕಾರಣೀಭೂತಚಿಚ್ಛಕ್ತೌ ಲಯಃ. " ನಾಶಃ ಕಾರಣಲಯಃ " ಇತಿ ನ್ಯಾಯಾತ್. ಚರಾಚರಪ್ರಪಂಚಸ್ಯೋಪಾದಾನಕಾರಣತ್ವಾದವಿದ್ಯಾಯಾಸ್ತನ್ನಿವೃತ್ತಿಃ ಕದಾಪಿ ನ ಸಂಭವತಿ, ಅತಃ ಬ್ರಹ್ಮವಿದಾಮಪಿ ಸಂಸಾರಪ್ರವೃತ್ತಿಸ್ಸಂಭವತಿ—ಇತಿ ಚೇನ್ನೈವಂ. " ಅನೀಶಯಾ ಶೋಚತಿ ಮುಹ್ಯಮಾನಃ " " ಬ್ರಹ್ಮ ವೇದ ಬ್ರಹ್ಮೈವ ಭವತಿ " " ನ ಚ ಪುನರಾವರ್ತತೇ ನ ಚ ಪುನರಾವರ್ತತೇ " ಇತ್ಯಾದಿಶ್ರುತಿಶತೇಷು ಬ್ರಹ್ಮವಿದಾಂ ತದಾತ್ಮಕತ್ವಸ್ಯ ಪುನರಾವೃತ್ತಿರಹಿತತ್ವಸ್ಯ ಚೋಪದೇಶಾತ್. ನ ಚ ಬ್ರಹ್ಮವಾಚಕಪದೇನ ತದ್ಜ್ಞಾನಸಂಭವಾನ್ನ ವಿಧೇಃ ಪ್ರಯೋಜನಮಿತಿ ವಾಚ್ಯಂ. ಮಂತ್ರಾಧ್ಯಯನಮಾತ್ರೇಣ ಹೋತವ್ಯದ್ರವ್ಯದೇವತಾಜ್ಞಾನೇ ಸಿದ್ಧೇಽಪಿ ತದ್ಧೋಮಾವಸರೇ " ಮಂತ್ರೈರನುಸ್ಮರ್ತವ್ಯಂ " ಇತಿ ಪ್ರಯೋಗವಿಧಿದರ್ಶನಾತ್, ತಥಾತ್ರ ವೇದಾಂತವಾಕ್ಯವಿಧೇರ್ನ ವಿರೋಧಃ. ನನ್ವತ್ರ ಉತ್ಪತ್ತಿವಿನಿಯೋಗಾಧಿಕಾರವಿಧೀನಾಮದರ್ಶನಾತ್ಕಥಂ ಪ್ರಯೋಗವಿಧಿಸ್ಸಂಭವತಿ? ಇತಿ ಚೇನ್ನ. " ಅಮೃತಸ್ಯ ದೇವಧಾರಣೋ ಭೂಯಾಸಂ " ಇತ್ಯಾದೌ ಪ್ರಕರಣಾದಪರಿಹಾರೇಣೋತ್ಪತ್ತಿವಿಧೇಸ್ಸಿದ್ಧತ್ವಾತ್ಪರಶಿವಲಿಂಗಧಾರಣದೀಕ್ಷಾಂ ಲಬ್ಧ್ವಾ ಪರಮಾತ್ಮಾನಂ ಪಶ್ಯೇದಿತಿ ವಿನಿಯೋಗವಿಧಿರುಪಪದ್ಯತೇ. " ತಸ್ಯಾಭಿಧ್ಯಾನಾತ್ ", " ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ " ಇತ್ಯಾದೌ ಪರಶಿವಧ್ಯಾನಧಾರಣಯುಕ್ತೋ ಮೋಕ್ಷಾಧಿಕಾರೀ

**ವಿಧೀಯತೇ. ತಸ್ಮಾನ್ಮೋಕ್ಷಕಾಮೋ ಭಸ್ಮರುದ್ರಾಕ್ಷಶಿವಲಿಂಗಧಾರಣಾತ್ಮಕಶಾಂಭವದೀಕ್ಷಾಂ ಲಬ್ಧ್ವಾ ಷಟ್ಸ್ಥಲಪರಶಿವಬ್ರಹ್ಮಜ್ಞಾನಂ ಸಂಪಾದಯೇದಿತಿ ರಾತ್ರಿಸತ್ರನ್ಯಾಯೇನ ಪ್ರಯೋಗವಿಧಿರುಪಪದ್ಯತೇ.**

ಹೀಗೆ ಸಿದ್ಧವಾದ ಬ್ರಹ್ಮವನ್ನು ತಿಳಿಸುವುದರಿಂದ ಶಾಸ್ತ್ರಗಳಿಗೆ ಯಾವ ಪ್ರಯೋಜನವೂ ಇಲ್ಲದ್ದರಿಂದ ವೇದಾಂತವಾಕ್ಯಗಳು ಕರ್ಮಕಾಂಡದ ವಿಷಯವನ್ನು ತಿಳಿಸುತ್ತವೆಯೇ ಹೊರತು ಬ್ರಹ್ಮವನ್ನು ತಿಳಿಸುವುದಿಲ್ಲ. ಬ್ರಹ್ಮಜ್ಞಾನದಿಂದ ಪಾಶವು ತೊಲಗುವುದರಿಂದ ಅದೂ ಒಂದು ಪ್ರಯೋಜನವಾಗುವುದಿಲ್ಲವೆ? ಅಂದರೆ ಇಲ್ಲಿ ಪಾಶವೆಂಬುದು ಬ್ರಹ್ಮಕ್ಕಿಂತಲೂ ಭಿನ್ನವೇ ಅಭಿನ್ನವೇ? ಸತ್ಯವೇ ಅಸತ್ಯವೇ? ಎಂಬ ವಿಕಲ್ಪಗಳು ಬರುತ್ತವೆ. ಅದನ್ನು ಬ್ರಹ್ಮಕ್ಕಿಂತಲೂ ಭಿನ್ನವೆಂದು ಹೇಳುವುದಾದರೆ ಶಕ್ತಿವಿಶಿಷ್ಟಾದ್ವೈತಕ್ಕೆ ಭಂಗ ಉಂಟಾಗುತ್ತದೆ. ಹಾಗೆಯೇ ಅದು ಬ್ರಹ್ಮಕ್ಕಿಂತಲೂ ಅಭಿನ್ನವೆಂದು ಹೇಳುವುದಾದರೆ ಅದು ಬ್ರಹ್ಮದಂತೆ ಸತ್ಯವಾಗುವುದರಿಂದ ಎಂದಿಗೂ ತೊಲಗುವಂತೆಯೇ ಇಲ್ಲ. ಯಾವಾಗಲೂ ಪಾಶವೇ ಸ್ಥಿರವಾಗಿರುವುದರಿಂದ ಮುಕ್ತಿಯೇ ಸಂಭವಿಸದೇಹೋದೀತು. ಇದರಿಂದ ಪಾಶನಿವೃತ್ತಿಗೆ ಯಾರೊಬ್ಬರೂ ಯತ್ನವನ್ನೇ ಮಾಡಲಾರರು. ಪಾಶವು ಸತ್ಯವೆಂದು ಹೇಳುವುದಾದರೂ ಈ ಬಗೆಯ ದೋಷವೇ ಸಂಭವಿಸುತ್ತದೆ. ಅದನ್ನು ಮಿಥ್ಯೆಯೆಂದು ಹೇಳುವುದಾದರೆ ಪರಮೇಶ್ವರನು ನಿತ್ಯಸಿದ್ಧನಾದ್ದರಿಂದ ಮುಮುಕ್ಷುವಿಗೆ ಪ್ರವೃತ್ತಿಯೇ ಹುಟ್ಟದೇಹೋದೀತು; ಬಂಧಮೋಕ್ಷಸ್ಥಿತಿಗಳಲ್ಲಿ ವೈವಿಧ್ಯವೇ ಇಲ್ಲದೇಹೋದೀತು. ಹೀಗಾಗಿ ಎಲ್ಲಾ ಬಗೆಯಿಂದಲೂ ವೇದಾಂತಶಾಸ್ತ್ರದಲ್ಲಿ ಯಾರಿಗೂ ಪ್ರವೃತ್ತಿಯೇ ಉಂಟಾಗಲಾರದು. ಹೀಗೆ ಹೇಳುವುದಾದರೆ ಅದೂ ಸರಿಯಲ್ಲ; ಯಾಕೆಂದರೆ ಗುಣತ್ರಯವೆನಿಸಿದ ಪಾಶವು ಪರಮೇಶ್ವರನಿಗಿಂತಲೂ ಭಿನ್ನವೇ ಆಗಿದೆ. ಆದ್ದರಿಂದ ಅದರ ನಿವೃತ್ತಿಯಿಂದ ಸ್ವಾಭಾವಿಕಚಿಚ್ಛಕ್ತಿವಿಶಿಷ್ಟ ಶಿವನ ಅದ್ವೈತಕ್ಕೆ ಭಂಗಬರುವಂತಿಲ್ಲ. ಪಾಶವು ಸತ್ಯವಾಗಿದ್ದರೂ ಜೀವನಿಗೆ ಮೋಕ್ಷವಾಗದಿರುವ ಪ್ರಸಂಗ ಒದಗುವುದಿಲ್ಲ; ಯಾಕೆಂದರೆ ದ್ವೈತಾದ್ವೈತಮತವನ್ನು ಇಲ್ಲಿ ಅಂಗೀಕರಿಸಲಾಗಿದೆ. ಇದನ್ನು ಒಪ್ಪುವುದರಲ್ಲಿ ಏನು ಪ್ರಮಾಣವೆಂದರೆ, 'ಬ್ರಹ್ಮವನ್ನರಿತವನು ಬ್ರಹ್ಮವೇ ಆಗುತ್ತಾನೆ' 'ಬ್ರಹ್ಮವಾಗಲಿಚ್ಛಿಸುವವನು ಬ್ರಹ್ಮವನ್ನು ತಿಳಿಯಬೇಕು' ಈ ಬಗೆಯ ಅನೇಕ ಶ್ರುತಿಗಳೇ ಪ್ರಮಾಣವಾಗಿವೆ. ಪಾಶವು ಮೋಹಕಾರಣವಾದ್ದರಿಂದಲೂ, ಚಿತ್‌ಶಕ್ತಿಯಿಂದ ಭಿನ್ನವಾದ್ದರಿಂದಲೂ ಅದರ ಬಿಡುಗಡೆ ಶಿವೋಪಾಸನದಿಂದಲೇ ಆಗಿಯೇ ಆಗುತ್ತದೆ. ಬಿಡುಗಡೆಯೆಂದರೆ ಕಾರ್ಯವು ಕಾರಣದಲ್ಲಿ ಲಯವಾಗುವುದು ಎಂದರ್ಥ. ಅಲ್ಲಿಗೆ ಪಾಶನಿವೃತ್ತಿ ಎಂದರೆ ಅದರ ಕಾರಣವಾದ ಚಿತ್‌ಶಕ್ತಿಯಲ್ಲಿ ಲೀನವಾಗುವಿಕೆ ಎಂದು ಸ್ಪಷ್ಟವಾಗುತ್ತದೆ. ಚರಾಚರಜಗತ್ತಿಗೆ ಉಪಾದಾನ ಕಾರಣವಾದ್ದರಿಂದ ಅವಿದ್ಯೆ ಎನಿಸಿದ ಪಾಶದ ನಾಶ ಎಂದಿಗೂ ಸಂಭವಿಸುವುದಿಲ್ಲ. ಆದ್ದರಿಂದಲೇ ಜ್ಞಾನಿಗಳಿಗೂ ಸಹ ಸಂಸಾರದಲ್ಲಿ ಪ್ರವೃತ್ತಿ ಇದ್ದೇ ಇರುತ್ತದೆ ಎಂದು

ಹೇಳುವುದು ನ್ಯಾಯವೇ ಆಗಿದೆ. "ಅಶಕ್ತತೆಯಿಂದ ಮೋಹಗೊಂಡು ಅಳುತ್ತಾನೆ" "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" "ಅವನು ಹಿಂತಿರುಗುವುದಿಲ್ಲ" ಈ ಶ್ರುತಿಗಳಲ್ಲಿ ಬ್ರಹ್ಮಜ್ಞಾನಿಗಳಿಗೆ ಬ್ರಹ್ಮಾತ್ಮೈಕತ್ವವನ್ನೂ, ಮತ್ತೆ ಸಂಸಾರಕ್ಕೆ ಹಿಂತಿರುಗದಿರುವಿಕೆಯನ್ನೂ ಹೇಳಲಾಗಿದೆ. ಬ್ರಹ್ಮವಾಚಕವಾದ ಪದದಿಂದ ಬ್ರಹ್ಮದ ಬೋಧವುಂಟಾಗುವುದರಿಂದ ಬ್ರಹ್ಮವನ್ನು ತಿಳಿಯಬೇಕೆಂಬ ವಿಧಿಗೆ ಫಲವಿಲ್ಲವೆಂದು ಹೇಳಬಾರದು. ಮಂತ್ರವನ್ನು ಓದಿದ ಮಾತ್ರಕ್ಕೆ ಹೋಮದ್ರವ್ಯ, ದೇವತೆ ಇವುಗಳ ಜ್ಞಾನವು ಸಿದ್ಧಿಸಿದರೂ, ಹೋಮಮಾಡುವ ಕಾಲದಲ್ಲಿ ಆಯಾ ಮಂತ್ರಗಳಿಂದ ಅವನ್ನು ಸ್ಮರಿಸಿಕೊಳ್ಳಲೇಬೇಕು ಎಂಬ ವಿಧಿ ಇರುವಂತೆ ವೇದಾಂತವಾಕ್ಯಗಳಿಂದಲೇ ಬ್ರಹ್ಮವನ್ನು ತಿಳಿಯಬೇಕೆಂಬ ವಿಧಿ ಇರುವುದರಲ್ಲಿ ವಿರೋಧವೇನೂ ಸಂಭವಿಸಲಾರದು. ಹಾಗಾದರೆ ಇಲ್ಲಿ ಯಾವ ವಿಧಿ ಸಂಭವಿಸಬಲ್ಲದು, ಉತ್ಪತ್ತಿವಿಧಿಯೇ? ವಿನಿಯೋಗವಿಧಿಯೇ? ಅಧಿಕಾರಿವಿಧಿಯೇ? ಎಂದು ಕೇಳಿದರೆ ಮೂರು ವಿಧಿಗಳೂ ಸಂಭವಿಸಬಹುದೆಂಬುದು ಸ್ಪಷ್ಟವಾಗುತ್ತದೆ. "ಅಮೃತಸ್ಯ ದೇವಧಾರಣಃ" ಎಂಬಲ್ಲಿ ಪ್ರಕರಣದಿಂದ ಅನಿವಾರ್ಯವಾಗಿ ಉತ್ಪತ್ತಿವಿಧಿ ಸಿದ್ಧಿಸುತ್ತದೆ. "ಲಿಂಗಧಾರಣಪೂರ್ವಕವಾಗಿ ದೀಕ್ಷೆಯನ್ನು ಹೊಂದಿ ಪರಮಾತ್ಮನನ್ನು ಕಾಣಬೇಕು" ಎಂದು ವಿನಿಯೋಗವಿಧಿಯೂ ಸಂಭವಿಸುತ್ತದೆ. "ಅವನನ್ನು ಮತ್ತೆ ಮತ್ತೆ ಹೃದಯದಲ್ಲಿ ನೆನೆಯುವುದರಿಂದಲೂ, ದೇಹದಲ್ಲಿ ಧರಿಸುವುದರಿಂದಲೂ, ಅವನ ಸ್ವಭಾವವನ್ನು ಹೊಂದುವುದರಿಂದಲೂ ಎಲ್ಲಾ ಬಗೆಯ ಪಾಶವೂ ತೊಲಗುವುದು" "ದೇವನನ್ನು ತಿಳಿದು ಎಲ್ಲಾ ಪಾಪಗಳಿಂದಲೂ ಮುಕ್ತನಾಗುತ್ತಾನೆ" ಈ ಶ್ರುತಿಗಳಲ್ಲಿ ಪರಶಿವನ ಧ್ಯಾನಧಾರಣಗಳುಳ್ಳವನೇ ಮೋಕ್ಷಕ್ಕಧಿಕಾರಿ ಎಂದು ಅಧಿಕಾರಿವಿಧಿಯನ್ನು ಹೇಳಲಾಗಿದೆ. ಆದ್ದರಿಂದ ಮುಕ್ತಿಕಾಮನು ಭಸ್ಮರುದ್ರಾಕ್ಷಲಿಂಗಧಾರಣರೂಪವಾದ ಶಿವದೀಕ್ಷೆಯನ್ನು ಹೊಂದಿ ಷಟ್ಸ್ಥಲಾತ್ಮಕಪರಶಿವನ ಜ್ಞಾನವನ್ನು ಸಂಪಾದಿಸಬೇಕು ಎಂದು ಪ್ರಯೋಗವಿಧಿಯು ರಾತ್ರಿಸತ್ರನ್ಯಾಯದಿಂದ ಯುಕ್ತವಾಗುತ್ತದೆ.

**ನನು—"ಆತ್ಮಾ ವಾ ಅರೇ ದ್ರಷ್ಟವ್ಯಃ" ಇತ್ಯಾದೌ ಬ್ರಹ್ಮಜ್ಞಾನಸ್ಯ ವಿಧಿರ್ನ ಸಂಭವತಿ, ನಿರ್ವಿಕಾರಸ್ಯ ಬ್ರಹ್ಮಣಃ ಕರ್ಮಕಾರಕತ್ವಪ್ರಸಂಗಾತ್. ವಿಧಿಸಂಭವೇಽಪಿ ಉತ್ಪತ್ತಿಪ್ರಾಪ್ತಿವಿಕೃತಿಸಂಸಾರಭಾವೋ ನ ಯುಜ್ಯತೇ. ಕಿಂಚ ಸಕ್ತುನ್ಯಾಯೇನ ಸ್ವತಂತ್ರಫಲಾಯ "ಸಕ್ತುಭಿರ್ಜುಹೋತಿ" ಇತಿವತ್—"ಆತ್ಮನಾ ಪಶ್ಯೇತ್" ಇತಿ ಕರಣತ್ವವಿಪರಿಣಾಮೇನ ವಕ್ತುಮಯುಕ್ತಂ. ನಿರ್ವಿಕಾರಸ್ಯ ಬ್ರಹ್ಮಣೋಽವೈಷಮ್ಯಾನ್ನ ಬ್ರಹ್ಮಜ್ಞಾನವಿಧಿರುಪಪನ್ನಃ—ಇತಿ ಚೇನ್ನ. ಸರ್ವಾಧಿಷ್ಠಾನಸ್ಯ ಪರಮಾತ್ಮನಃ ಉತ್ಪತ್ತಿವಿನಿಯೋಗಾಧಿಕಾರವಿಧಿತ್ರಯಾಸಂಭವೇಽಪಿ ಮುಮುಕ್ಷೋರ್ಮೋಕ್ಷಫಲಾಯ ವಿಧಿರ್ನ ವಿರುಧ್ಯತೇ. ಅತ್ರ ಕೋ ವಿಧಿರಾಶ್ರೀಯತ ಇತಿ ಚೇತ್—ವಿಧಿತ್ರಯಮಪ್ಯಾಶ್ರೀಯತಂ. ನನು—ಚಕ್ಷುಷಾ ಘಟಸಿದ್ಧಿ**

ವತ್ ವೇದಾಂತಾನಾಂ ನ ತಥಾ ಬ್ರಹ್ಮಸಿದ್ಧಿಃ. ನಿರಪೇಕ್ಷತಯಾ ಚಕ್ಷುಸ್ಸಂಯೋಗೇನ "ಅಯಂ ಘಟಃ" ಇತಿ ವಸ್ತುಜ್ಞಾನಮುಪಪದ್ಯತೇ. ಶಬ್ದಾನಾಂ ತಾತ್ಪರ್ಯಪರ್ಯವಸಾನೇನ ಪ್ರಾಮಾಣ್ಯಂ. ಅತೋ ವೇದಾಂತವಾಕ್ಯಾನಾಂ ಬ್ರಹ್ಮಜ್ಞಾನವಿಧಾಯಕತ್ವಂ ಬ್ರಹ್ಮಪ್ರಮಾಪಕತ್ವಂ ಚಾಯುಕ್ತಮಿತಿ ಚೇನ್ಮೈವಂ. "ಸಮಿಧೋ ಯಜತಿ" ಇತ್ಯಾದಿವಾಕ್ಯಾನಾಂ ಪಂಚಪ್ರಯಾಜವಿಧಾಯಕತ್ವತದನುಷ್ಠಾನವಿಧಾಯಕತ್ವಯೋರುಭಯೋರಪಿ ವಿಧಿಬಲಾತ್ಸಿದ್ಧಿವದ್ವೇದಾಂತಾನಾಮಪಿ ಬ್ರಹ್ಮಪ್ರಮಾಪಕತ್ವಂ ಮೋಕ್ಷೋಪಕಾರಬ್ರಹ್ಮಜ್ಞಾನಂ ಪ್ರತಿವಿಧಾಯಕತ್ವಂ ಚ ಸಂಭವತ್ಯೇವ. ನನು—ವೇದಾಂತವಾಕ್ಯಾದೇವ ಬ್ರಹ್ಮಜ್ಞಾನಸಿದ್ಧಿದರ್ಶನಾತ್ತದ್ವಿಧಿನಾ ನ ಕಿಂಚಿತ್ಪ್ರಯೋಜನಂ ತದ್ಜ್ಞಾನಾದೇವ ವಿಧಿಪ್ರಯೋಜನಸಂಭವಾದಿತಿ ಚೇನ್ನ—ವೇದಾಂತವಾಕ್ಯೈಃ ಪರೋಕ್ಷತ್ವೇನ ತದ್ಜ್ಞಾನೇ ಸಿದ್ಧೇಽಪಿ ತದಪರೋಕ್ಷಜ್ಞಾನಾಯ ತದ್ವಿಧ್ಯುಪಪತ್ತೇಃ. ವೇದಾಂತಶಬ್ದಜನ್ಯಜ್ಞಾನಾದೇವ ನ ಬ್ರಹ್ಮಸಾಕ್ಷಾತ್ಕಾರೋ ವಿಧೀಯತೇ. ಸದ್ಗುರುಕರುಣಾಕಟಾಕ್ಷಲಬ್ಧತದುಪಾಸನಾತ್ಮಕಜ್ಞಾನಾದೇವ ತತ್ಸಾಕ್ಷಾತ್ಕಾರಸಿದ್ಧಿಃ. ಅಯಮೇವ ಶ್ರೌತಮಾರ್ಗಃ. "ಸಮಸ್ತಸಾಕ್ಷಿಂ ತಮಸಃ ಪರಸ್ತಾತ್" "ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ" "ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" "ಬ್ರಹ್ಮ ವೇದ ಬ್ರಹ್ಮೈವ ಭವತಿ" "ಜ್ಞಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ" "ಈಶಂ ತಂ ಜ್ಞಾತ್ವಾ ಅಮೃತಾ ಭವಂತಿ" "ಶಂಭುರಾಕಾಶಮಧ್ಯೇ ಧ್ಯೇಯಃ" "ತಜ್ಜಲಾನಿತಿ ಶಾಂತ ಉಪಾಸೀತ" "ಇತಿ ಪ್ರಾಚೀನಯೋಗ್ಯೋಪಾಸ್ವ" ಇತ್ಯಾದಿಷು ಮೋಕ್ಷಫಲಾಯ ಪರಮೇಶ್ವರೋಪಾಸನಾತ್ಮಕಂ ಜ್ಞಾನಂ ಮುಖ್ಯಕಾರಣತ್ವೇನ ವಿಧೀಯತೇ. ತಥಾ ಚ ಸ್ಮೃತಿಃ-"ಶ್ರೋತವ್ಯಶ್ಶ್ರುತಿವಾಕ್ಯೇಭ್ಯೋ ಮಂತವ್ಯಶ್ಚೋಪಪತ್ತಿಭಿಃ । ಧ್ಯಾತ್ವಾ ಚ ಸತತಂ ಧ್ಯೇಯಮೇತದ್ದರ್ಶನಹೇತುತಃ ॥ ಜ್ಞಾನಂ ವಸ್ತುಪರಿಚ್ಛಿತ್ತಿರ್ಧ್ಯಾನಂ ತದ್ಭಾವಕಾರಣಂ । ತಸ್ಮಾಜ್ಜೀವೋ ಭವೇಚ್ಛಂಭುಃ ಕ್ರಿಮಿವತ್ಕೀಟಚಿಂತನಾತ್॥" ಇತ್ಯಾದಿನಾ ಶ್ರವಣಮನನವಿಶಿಷ್ಟಧ್ಯಾನಾನುಗತನಿದಿಧ್ಯಾಸನಂ ಷಟ್ಸ್ಥಲಪರಶಿವಸಾಕ್ಷಾತ್ಕಾರೇ ತತ್ತಾದಾತ್ಮ್ಯೇ ಚ ಪರಮಕಾರಣಮಿತಿ ನಿರ್ದಿಶ್ಯತೇ. ತಸ್ಮಾತ್ಸರ್ವಕಾಮ್ಯಕರ್ಮನಿಷೇಧಪೂರ್ವಕಶಿವಮುಖೋದ್ಗತನಿಗಮಾಗಮೋಭಯವೇದಾಂತಚೋದಿತವರ್ಣಾಶ್ರಮೋಚಿತಶಿವಾರ್ಪಿತಸಕಲಕರ್ಮಾನುಷ್ಠಾನಸಂಪನ್ನಚಿತ್ತಶುದ್ಧಿಲಬ್ಧಾವ್ಯಭಿಚಾರಪರಮಶಿವಭಕ್ತಿಪರವಶಶಾಂಭವದೀಕ್ಷಿತಮುಮುಕ್ಷೂಣಾಂ ಸರ್ವೋಪನಿಷತ್ಸ್ಮೃತಿಪ್ರಾದ್ಯಸಕಲಜಗದುಭಯಕಾರಣ

ಷಟ್ಸ್ಥಲಪರಶಿವೋಪಾಸನಸ್ಯ ವಿಧೇಯತ್ವಾತ್, “ತದುಪಾಸ್ವ” ಇತ್ಯಾದಿ ಶ್ರುತಿಭಿರ್ಜ್ಞಾನೋಪಾಸನಾವಿಧಿಸ್ತೇಷಾಮೇವೋಪಪದ್ಯತೇ. “ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ” ಇತ್ಯಥರ್ವಶಿಖಾಯಾಂ ಮುಮುಕ್ಷೂಣಾಂ ಶಿವಾತಿರಿಕ್ತೋಪಾಸನಂ ನಿರಸ್ತಂ. ತಸ್ಮಾನ್ನಾನ್ಯಥಾ ಸಂಸಾರಮಾಯಾಪಾಶನಿವೃತ್ತಿಸ್ಸಂಭವತಿ. “ತಸ್ಯಾಭಿಧ್ಯಾನಾತ್-ವಿಶ್ವಮಾಯಾನಿವೃತ್ತಿಃ,” “ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ । ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥” ಇತ್ಯಾದಿಶ್ರುತಿಷು ಶಿವಧ್ಯಾನಧಾರಣಜ್ಞಾನಾದೇವ ಮೋಕ್ಷರೂಪಫಲಂ ವಿಧೀಯತೇ. ತಸ್ಮಾಚ್ಛಿವ ಏವ ಪರಬ್ರಹ್ಮ ಮೋಕ್ಷಕಾಮೈರ್ಧಾರಣೀಯೋ ಜ್ಞಾತವ್ಯೋ ಧ್ಯಾತವ್ಯಃ ಶ್ರೋತವ್ಯೋ ಮಂತವ್ಯೋಽರ್ಚನೀಯ ಇತಿ ಷಡ್ವಿಧಲಿಂಗತಾತ್ಪರ್ಯೇಣ ಬ್ರಹ್ಮಪರಾ ವೇದಾಂತಾಸ್ತದುಪಾಸನಪರಾಶ್ಚೇತಿ ನಿರ್ಣಯಃ.

‘ಆತ್ಮಾವಾರೇ ದ್ರಷ್ಟವ್ಯಃ’ ಎಂಬಲ್ಲಿ ಬ್ರಹ್ಮಜ್ಞಾನಕ್ಕೆ ವಿಧಿ ಸಂಭವಿಸುವುದಿಲ್ಲ. ಯಾಕೆಂದರೆ ಇದರಿಂದ ನಿರ್ವಿಕಾರವಾದ ಬ್ರಹ್ಮವು ಕರ್ಮಕ್ಕೆ ಕಾರಕವಾಗಬೇಕಾಗುತ್ತದೆ. ಹಾಗೆ ವಿಧಿಸಂಭವಿಸಿದರೂ, ಉತ್ಪತ್ತಿ-ಪ್ರಾಪ್ತಿ-ವಿಕೃತಿ-ಸಂಸ್ಕಾರ ಎಂಬ ನಾಲ್ಕು ಬಗೆಯ ಕರ್ಮಗಳ ಸಂಬಂಧವೂ ಬ್ರಹ್ಮನಿಗೆ ಬರುವಂತಿಲ್ಲ. ಆದ್ದರಿಂದ ‘ಸಕ್ತೂನ್ ಜುಹೋತಿ’ ಎಂಬ ಕಡೆ ‘ಸಕ್ತುಭಿಃ’ ಎಂದು ಕರಣತ್ವವನ್ನು ಹೇಳುವಂತೆ, ‘ಆತ್ಮಾ ದ್ರಷ್ಟವ್ಯ’ ಎಂಬ ಕಡೆ ‘ಆತ್ಮನಾ ದ್ರಷ್ಟವ್ಯಃ’ ಎಂದು ಅರ್ಥಮಾಡಿ, ಆತ್ಮನಿಗೆ ಕರ್ಮ ಸಂಬಂಧವಿಲ್ಲವೆಂದೂ ಕರಣಸಂಬಂಧವೇ ಇರುವುದೆಂದೂ ಹೇಳಬೇಕು. ಇದರಿಂದ ಬ್ರಹ್ಮವಿಷಯಕವಾದ ಜ್ಞಾನವನ್ನು ವೇದಾಂತವು ವಿಧಿಸುವುದೆಂದು ಹೇಳುವುದು ಯುಕ್ತವಾಗುವುದಿಲ್ಲ. ಉತ್ಪತ್ತ್ಯಾದಿ ವಿಧಿಗಳು ಸರ್ವಾಧಿಕವಾದ ಬ್ರಹ್ಮಕ್ಕೆ ಅನ್ವಯಿಸದಿದ್ದರೂ ಮುಮುಕ್ಷುವಿಗೆ ಮೋಕ್ಷವನ್ನು ವೇದಾಂತವು ವಿಧಿಸುವುದರಿಂದ ಮೋಕ್ಷಫಲಕ್ಕಾಗಿ ಬ್ರಹ್ಮಜ್ಞಾನವನ್ನು ವಿಧಿಸುವುದರಲ್ಲಿ ವಿರೋಧವೇನೂ ಇಲ್ಲ. ಆದರೆ ಇಲ್ಲಿ ಯಾವ ವಿಧಿಯನ್ನು ಆಶ್ರಯಿಸಬೇಕೆಂದರೆ ಮೂರು ವಿಧಿಗಳನ್ನೂ ಆಶ್ರಯಿಸಬಹುದೆಂಬುದು ಸ್ಪಷ್ಟಪಡುತ್ತದೆ. ಕಣ್ಣಿಂದ ನೋಡಿದರೆ ಗಡಿಗೆ ಕಾಣುವಂತೆ ವೇದಾಂತಗಳನ್ನು ಕೇಳುವುದರಿಂದ ಬ್ರಹ್ಮವು ಸಿದ್ಧಿಸುವುದಿಲ್ಲ. ಇತರ ಸಹಾಯವಿಲ್ಲದೆ ಚಕ್ಷುರಿಂದ್ರಿಯದ ಸಂಯೋಗವು ವಸ್ತುವಿಗೆ ಬಂದರೆ ‘ಇದು ಗಡಿಗೆ’ ಎಂದು ವಸ್ತುವಿನ ಜ್ಞಾನವು ಸಂಭವಿಸುತ್ತದೆ. ಶಬ್ದಗಳಾದರೋ ತಾತ್ಪರ್ಯವನ್ನು ತಿಳಿಸುವ ಮೂಲಕ ಪ್ರಮಾಣವೆನಿಸುತ್ತವೆ. ಆದ್ದರಿಂದಲೇ ವೇದಾಂತ ವಾಕ್ಯಗಳಿಗೆ ಬ್ರಹ್ಮಜ್ಞಾನವನ್ನು ವಿಧಿಸುವುದರಲ್ಲೂ, ಬ್ರಹ್ಮದ ಪ್ರಾಮಾಣ್ಯವಿಚಾರದಲ್ಲೂ ಯಾವ ಉಪಯೋಗವೂ ಇಲ್ಲವೆನ್ನುವಂತಿಲ್ಲ. “ಸಮಿತ್ತುಗಳಿಂದ ಹೋಮಮಾಡುತ್ತಾನೆ” ಎಂಬಲ್ಲಿ ಒಂದೇ ವಿಧಿಯು ಪ್ರಯಾಜಾದಿಗಳನ್ನು ವಿಧಿಸುತ್ತ ಅದರ ಅನುಷ್ಠಾನವನ್ನೂ ವಿಧಿಸುವಂತೆ

ವಿಧಿವಾಕ್ಯದ ಬಲದಿಂದ ವೇದಾಂತವಾಕ್ಯಗಳೂ ಸಹ ಬ್ರಹ್ಮದಲ್ಲಿ ಪ್ರಮಾಣವಾಗುತ್ತ ಮೋಕ್ಷಹೇತುವಾದ ಬ್ರಹ್ಮಜ್ಞಾನವನ್ನು ವಿಧಿಸುತ್ತವೆ ಎಂಬುದು ಸಮಂಜಸವೇ ಆಗುತ್ತದೆ. ವೇದಾಂತವಾಕ್ಯದಿಂದಲೇ ತಾನಾಗಿಯೇ ಬ್ರಹ್ಮಜ್ಞಾನವು ಸಿದ್ಧಿಸುವುದರಿಂದ ಅದನ್ನು ವಿಧಿಸುವುದರಲ್ಲಿ ಏನೂ ಫಲವಿಲ್ಲವೆಂದು ಹೇಳಿದರೆ, ವಾಕ್ಯಗಳಿಂದ ಪರೋಕ್ಷ ಜ್ಞಾನ ದೊರಕುವುದೇ ಹೊರತು ಅನುಭವಜ್ಞಾನವು ಬರುವುದಿಲ್ಲವಾದ್ದರಿಂದ ಅದನ್ನು ವಿಧಿಸಲಿಕ್ಕಾಗಿ ವೇದಾಂತ ವಾಕ್ಯಗಳು ಬಂದಿರುವುವು. ವೇದಾಂತವಾಕ್ಯಗಳನ್ನು ಕೇಳಿದರೆ ಬರುವ ಜ್ಞಾನದಿಂದಲೇ ಬ್ರಹ್ಮಸಾಕ್ಷಾತ್ಕಾರವು ಬರುವಂತಿಲ್ಲ. ಆದರೆ ಗುರುಕರುಣೆಯಿಂದ ಪಡೆದ ಬ್ರಹ್ಮದ ಉಪಾಸನಜ್ಞಾನದಿಂದಲೇ ಬ್ರಹ್ಮಸಾಕ್ಷಾತ್ಕಾರವು ಲಭಿಸುತ್ತದೆ. ಇದೇ ವೇದಸಮ್ಮತವಾದ ಮಾರ್ಗ. "ಸಾಧಕನು ಧ್ಯಾನದಫಲವಾಗಿ ತಮಸ್ಸಿನ ಆಚೆಗೆ ಸರ್ವಸಾಕ್ಷಿಯೂ ಸರ್ವಾಶ್ರಯನೂ ಆಗಿರುವ ಪರಮಾತ್ಮನನ್ನು ಹೊಂದುತ್ತಾನೆ" "ಶ್ರದ್ಧಾಭಕ್ತಿಗಳಿಂದೊಡಗೂಡಿದ ಧ್ಯಾನಯೋಗದಿಂದ ತಿಳಿ", "ತನ್ನಲ್ಲಿಯೇ ತನ್ನನ್ನು ತಿಳಿಯಬೇಕು," "ಆಕಾಶಮಧ್ಯದಲ್ಲಿ ಶಂಭುವನ್ನು ಧ್ಯಾನಿಸಬೇಕು," "ಇದೆಲ್ಲವೂ ಅವನಲ್ಲಿಯೇ ಹುಟ್ಟಿ ಬೆಳೆದು ಅವನಲ್ಲಿಯೇ ಲೀನವಾಗುವುದರಿಂದ ಇದನ್ನು ಶಿವಾತ್ಮಕವೆಂದು ತಿಳಿದು ಶಾಂತನಾಗಿ ಉಪಾಸನಮಾಡು","ಎಲೈ ಪ್ರಾಚೀನ ಯೋಗ್ಯನೇ ಉಪಾಸನಮಾಡು" ಈ ಶ್ರುತಿಗಳಲ್ಲಿ ಪರಮೇಶ್ವರನ ಉಪಾಸನವೆಂಬ ಜ್ಞಾನವೇ ಮೋಕ್ಷದ ಮುಖ್ಯ ಕಾರಣವೆಂದು ವಿಧಿಸಲಾಗಿದೆ. "ಶ್ರುತಿವಾಕ್ಯಗಳಿಂದ ಕೇಳಬೇಕು, ಯುಕ್ತಿಗಳಿಂದ ತಿಳಿಯಬೇಕು" "ಧ್ಯಾನಯೋಗ್ಯನಾದ ಪರಮಾತ್ಮನನ್ನು ಧ್ಯಾನಿಸಬೇಕು" "ಅವನನ್ನು ಕಾಣಲು ಇವು ಹೇತುಗಳು". "ಜ್ಞಾನವೆಂಬುದು ವಸ್ತುವಿನ ನಿಶ್ಚಯವೆನಿಸಿದೆ. ಧ್ಯಾನವೆಂಬುದು ಧ್ಯಾತೃವನ್ನು ಉಪಾಸ್ಯವಸ್ತುವನ್ನಾಗಿ ಮಾರ್ಪಡಿಸಲು ಕಾರಣವೆನಿಸಿದ". ಕ್ರಿಮಿಯು ಭ್ರಮರದ ಸ್ಮರಣದಿಂದ ಭ್ರಮರವೇ ಆಗುವಂತೆ ಜೀವನು ಶಂಭುವಿನ ನಿತ್ಯಸ್ಮರಣದಿಂದ ಶಂಭುವೇ ಆಗುತ್ತಾನೆ" ಈ ಬಗೆಯ ಸ್ಮೃತಿವಾಕ್ಯಗಳಲ್ಲಿ ಶ್ರವಣಮನನ ವಿಶಿಷ್ಟವಾದ ಜ್ಞಾನದಿಂದೊಡಗೂಡಿದ ನಿಧಿದ್ಯಾಸನವು ಷಟ್ಸ್ಥಲಬ್ರಹ್ಮದ ಸಾಕ್ಷಾತ್ಕಾರಕ್ಕೂ, ಅವನ ತಾದಾತ್ಮ್ಯವನ್ನು ಹೊಂದಲಿಕ್ಕೂ ಮುಖ್ಯಕಾರಣವೆಂದು ತಿಳಿದುಬರುತ್ತದೆ. ಆದ್ದರಿಂದ ಎಲ್ಲಾ ಬಗೆಯ ಕಾಮ್ಯಕರ್ಮಗಳನ್ನು ತೊರೆದು,ಶಿವಮುಖದಿಂದ ಬಂದಿರುವ ನಿಗಮಾಗಮಗಳಲ್ಲಿ ಪ್ರಸಿದ್ಧವೂ ವರ್ಣಾಶ್ರಮತೀತವೂ ಆದ ಕರ್ಮಗಳನ್ನು ಶಿವಾರ್ಪಣಬುದ್ಧಿಯಿಂದ ಮಾಡುತ್ತ ಆ ಮೂಲಕ ಚಿತ್ತಬುದ್ಧಿಯನ್ನು ಪಡೆದು ಅದರ ಪರಿಣಾಮವಾಗಿ ಬಂದ ಶುದ್ಧಸಾತ್ತ್ವಿಕಭಕ್ತಿಯಲ್ಲಿ ನಿರತರಾಗಿ, ಶಾಂಭವದೀಕ್ಷೆಯನ್ನು ಹೊಂದಿದ ಮುಮುಕ್ಷುಗಳಿಗೆ ಸರ್ವವೇದಾಂತಪ್ರತಿಪಾದ್ಯನೂ, ಜಗದುಭಯಕಾರಣನೂ ಆದ ಷಟ್ಸ್ಥಲಾತ್ಮಕ ಪರಶಿವನ ಉಪಾಸನವನ್ನೇ ವಿಧೇಯವೆಂದು 'ತದುಪಾಸ್ವ' ಎಂಬ ಶ್ರುತಿಗಳು ಬೋಧಿಸುತ್ತವೆ. ಆದ್ದರಿಂದಲೇ ಜ್ಞಾನರೂಪವಾದ ಉಪಾಸನವಿಧಿಯೂ ಅವುಗಳಿಗೆ ಯಥಾರ್ಥವಾಗಿ ಹೊಂದುತ್ತದೆ. "ಬೇರೆ ಎಲ್ಲವನ್ನೂ ತೊರೆದು ಶಿವಂಕರ

ನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು" ಎಂದು ಅಥರ್ವಣಶಿಖೆಯಲ್ಲಿ ಮುಮುಕ್ಷು ವಿಗೆ ಶಿವನಲ್ಲದೆ ಬೇರೆ ದೇವತೆಯ ಉಪಾಸನವನ್ನು ನಿರಾಕರಿಸಲಾಗಿದೆ. "ಇದಲ್ಲದೆ ಬೇರೆ ಯಾವ ಮಾರ್ಗದಿಂದಲೂ ಮಾಯಾಪಾಶವು ತೊಲಗುವುದಿಲ್ಲ" "ಯಾವಾಗ ಮಾನವರು ಚರ್ಮದಂತೆ ಆಕಾಶವನ್ನು ಸುತ್ತಿಕೊಳ್ಳುವರೋ ಆಗ ಶಿವನನ್ನು ತಿಳಿಯದಿದ್ದರೂ ಅವರ ದುಃಖವು ಕೊನೆಯಾಗುತ್ತದೆ" ಈ ಬಗೆಯ ಶ್ರುತಿಗಳಲ್ಲಿ ಶಿವಧ್ಯಾನಧಾರಣಜ್ಞಾನದಿಂದಲೇ ಮೋಕ್ಷವೆಂಬ ಫಲವನ್ನು ವಿಧಿಸಲಾಗಿದೆ. ಹೀಗೆ ಪರಶಿವಬ್ರಹ್ಮವು ಮುಮುಕ್ಷುಗಳಿಗೆ ಧರಿಸಲಿಕ್ಕೂ, ತಿಳಿಯಲಿಕ್ಕೂ, ಧ್ಯಾನಿಸಲಿಕ್ಕೂ, ಶ್ರವಣಮಾಡಲಿಕ್ಕೂ, ವಿಚಾರಮಾಡಲಿಕ್ಕೂ, ಅರ್ಚಿಸಲಿಕ್ಕೂ ಅರ್ಹನಾಗಿರುವುದರಿಂದ ತಾತ್ಪರ್ಯಲಿಂಗಗಳ ಮೂಲಕ ಪರಶಿವಬ್ರಹ್ಮವನ್ನು ವೇದಾಂತದಿಂದಲೇ ತಿಳಿಯಬೇಕು ಎಂಬುದು ನಿರ್ಣಯವಾಗಿದೆ.

ನನು—"ಬ್ರಹ್ಮ ಸತ್ಯಂ ಜಗನ್ಮಿಥ್ಯಾ" ಇತಿ ನ್ಯಾಯೇನ ಸರ್ವವೇದಾಂತವಿಚಾರಲಬ್ಧಜಗನ್ಮಿಥ್ಯಾತ್ವಜ್ಞಾನಪೂರ್ವಕಸ್ವಸ್ವರೂಪಜ್ಞಾನಮೇವ ಮುಕ್ತಿರಿತಿ ಚೇನ್ನ— ಸರ್ವವೇದವೇದಾಂತಬಾಹ್ಯತ್ವಪ್ರಸಂಗಾತ್. ಕಿಂ ನಾಮ ಜಗನ್ಮಿಥ್ಯಾತ್ವಂ? ಬ್ರಹ್ಮಜ್ಞಾನಬಾಧ್ಯತ್ವಂ? ತ್ರೈಕಾಲಿಕನಿಷೇಧೋ ವಾ? ನಾದ್ಯಃ—ಬಾಧ್ಯಬಾಧಕಭಾವಸ್ಯೈವ ತಯೋರಸಂಭವಾತ್, ನ ಬ್ರಹ್ಮಜ್ಞಾನೇನ ಪ್ರಪಂಚನಿಷೇಧೊ ವಿಧೀಯತೇ. "ಸರ್ವೋ ವೈ ರುದ್ರಃ" "ಸರ್ವಂ ಖಲ್ವಿದಂ ಬ್ರಹ್ಮ" ಇತ್ಯಾದಿನಾ ಸರ್ವಪ್ರಪಂಚಸ್ಯ ಶಿವಾತ್ಮಕತ್ವೋಪದೇಶಾತ್. ಕಿಂಚ—"ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ" ಇತ್ಯಾದಿಶ್ರುತ್ಯಾ ಮುಕ್ತಾತ್ಮನಾಂ ಇದಂತಾರೂಪಘಟಪಟಾತ್ಮಕಪ್ರಪಂಚತ್ವೇನ ವ್ಯವಹೃತಮಾಯಾಪಾಶ ಏವ ಸರ್ವಶಿವಾತ್ಮಕತಾಜ್ಞಾನೇನ ತಿರೋಧೀಯತೇ. "ಶಿವೋ ದಾತಾ ಶಿವೋ ಭೋಕ್ತಾ ಶಿವಸ್ಸರ್ವಮಿದಂ ಜಗತ್" ಇತ್ಯಾದಿ ಶಾಸ್ತ್ರೋಕ್ತಸರ್ವಶಿವಾತ್ಮಕತಾಸಂಪೂರ್ಣಜ್ಞಾನೇನ ಘಟಪಟಾದೌ ಘಟತ್ವಾದಿಬುದ್ಧಿರ್ನಿವರ್ತತೇ, ನ ತು ಘಟಾದಿಃ, ತಸ್ಯ ಶಿವಾತ್ಮಕತ್ವಾತ್. ತಸ್ಮಾನ್ನ ಬ್ರಹ್ಮಜ್ಞಾನನಿವರ್ತ್ಯತ್ವಂ ಪ್ರಪಂಚಸ್ಯ. ಅತೋ ಮಿಥ್ಯಾತ್ವಮಯುಕ್ತಂ. ತತ್ಸ್ವೀಕಾರೇ ಏಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾಶ್ರುತೇರ್ದತ್ತಜಲಾಂಜಲಿತ್ವಪ್ರಸಂಗಃ. ಬ್ರಹ್ಮೋಪಾದಾನಕಾರಣಕತ್ವಾತ್ಪ್ರಪಂಚಸ್ಯೈಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾ ಶ್ರೂಯತೇ. ಅತ ಏವ—"ಸರ್ವಂ ಖಲ್ವಿದಂ ಬ್ರಹ್ಮ" "ಐತದಾತ್ಮ್ಯಮಿದಂ ಸರ್ವಂ" "ಸರ್ವೋ ವೈ ರುದ್ರಃ" ಇತ್ಯಾದಿಶ್ರುತಿಃ ಸರ್ವಸ್ಯ ಶಿವಾತ್ಮಕತ್ವಮುಪದಿಶತಿ. ತಸ್ಮಾನ್ನ ಬ್ರಹ್ಮಜ್ಞಾನೇನ ಪ್ರಪಂಚಬಾಧಃ. ಜನಕಾದಿಬ್ರಹ್ಮವಿದಾಮಪಿ ಪೂರ್ವವದೇವ ವ್ಯವಹಾರೋ ದೃಶ್ಯತೇ. ತೇಷಾಂ ನ ಪ್ರಪಂಚಬಾಧಃ. ಜೀವನ್ಮುಕ್ತಾನಾಂ ಶರೀರ

ಧಾರಣಾದಿವ್ಯವಹಾರಾನುಪಪತ್ತಿಶ್ಚ. ಕಿಂಚ ದೂರ್ವಾಸಿೀಯೇ—ಅಖಂಡಾದ್ವೈತಭಾವೇ ತು ಸರ್ವಂ ಬ್ರಹ್ಮೈವ ನಾನ್ಯಥಾ । ಜ್ಞಾನಾದ್ವಿಕಲ್ಪಬುದ್ಧಿಸ್ತು ಲೀಯತೇ ನ ಸ್ವರೂಪತಃ ॥ ಭಿನ್ನತ್ವಂ ನೈವ ಯುಂಜೀತ ಬ್ರಹ್ಮೋಪಾದಾನತಃ ಕ್ವಚಿತ್ । ವಾಚಾರಂಭಣಮಾತ್ರತ್ವಾದ್ಭೇದಃ ಕೇನೋಪಜಾಯತೇ । ತಸ್ಮಾದವಿದ್ಯಾಮಾತ್ರತ್ವಕಥನಂ ಮೋಹನಾಯ ಹಿ ॥ ಇತಿ ಜಗನ್ಮಿಥ್ಯಾತ್ವವಾದಿನಾಂ ನಿಂದಾ ಶ್ರೂಯತೇ. "ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ" ಇತಿ ಗೀತಾಯಾಂ ಚ ಶ್ರೂಯತೇ. ನ ದ್ವಿತೀಯಃ—"ಅಮೂಲಮನಾಧಾರಮಿಮಾಃ ಪ್ರಜಾಃ ಪ್ರಜಾಯಂತೇ" "ನ ಕದಾಚಿದನೀದೃಶಂ ಜಗತ್" ಇತ್ಯಾದಿನಾ ಜಗತೋ ನಿತ್ಯತ್ವಪ್ರತಿಪಾದನಾತ್. ನನು—"ಅಸದ್ವಾ ಇದಮಗ್ರ ಆಸೀತ್, ತತೋ ವೈ ಸದಜಾಯತ" "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ" ಇತ್ಯಾದಿಶ್ರುತಿಶತೇನ ಸೃಷ್ಟೇಃ ಪೂರ್ವಂ ಪ್ರಪಂಚಸ್ಯಾಸತ್ತ್ವೋಪದೇಶಾತ್ ಕಥಂ ತಸ್ಯ ತ್ರೈಕಾಲಿಕಸತ್ಯತ್ವಂ? ಇತಿ ಚೇನ್ನ—"ಅಸದ್ವಾ ಇದಮಗ್ರಆಸೀತ್" ಇತ್ಯತ್ರ ಸೃಷ್ಟೇಃ ಪೂರ್ವಂ ಪ್ರಪಂಚಸ್ಯ ನಾಮರೂಪವಿಭಾಗಾನರ್ಹತ್ವೇನ ಬ್ರಹ್ಮಣಿ ಸೂಕ್ಷ್ಮರೂಪೇಣ ಸ್ಥಿತತ್ವಾದಸತ್ತ್ವಂ, "ತತೋ ವೈ ಸದಜಾಯತ" ಇತ್ಯನೇನ ನಾಮರೂಪವಿಭಾಗಾರ್ಹತ್ವೇನ ಪ್ರಪಂಚಸ್ಯ ಜನ್ಯತ್ವಂ ಚೋಪದಿಶ್ಯತೇ. ಕಿಂಚ—ಅಸತ್ಪದೇನ ಗಗನಾರವಿಂದವದಭಾವತ್ವಾಂಗೀಕಾರೇ ವಂಧ್ಯಾಪುತ್ರಾದೀನಾಮಪಿ ಜಗತ್ಕಾರಣತ್ವಂ ಕಿಂ ನ ಸ್ಯಾತ್? ಸದೇವೇತ್ಯವಧಾರಣೇನ ನ ಸವಿಶೇಷತ್ವನಿಷೇಧಃ, ಕಿಂತು ಅಸತೋ ಭ್ರಾಂತಿಪ್ರಸಕ್ತತ್ವಾತ್ತತ್ಕಾರಣತ್ವನಿಷೇಧಃ. ಕಿಂಚ-"ಸದೇವ ಸೋಮ್ಯೇದಮಗ್ರ ಆಸೀತ್"ಇತಿ ಶ್ರುತೌ ಕಥಂ ಸವಿಶೇಷತ್ವನಿಷೇಧಃ? "ಅಗ್ರೇ"ಇತಿ ಕಾಲವಿಶೇಷಃ, "ಆಸೀತ್" ಇತಿ ಕ್ರಿಯಾವಿಶೇಷಶ್ಚ ದೃಶ್ಯತೇ. ಏಕಮೇವೇತ್ಯವಧಾರಣೇನಾಧಿಷ್ಠಾತ್ರಂತರನಿಷೇಧಃ. ಅದ್ವಿತೀಯಪದೇನ ಬ್ರಹ್ಮಣೋ ಜಗದುಭಯಕಾರಣತ್ವಂ ವಿಧೀಯತೇ. "ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುಃ" ಇತ್ಯಾದಾವಪ್ಯೇವಂ ಬೋದ್ಧವ್ಯಂ. ಅತ ಏವ "ವಿಶ್ವಾಧಿಕೋ ರುದ್ರೋ ಮಹರ್ಷಿಃ" ಇತಿ ಶ್ರೂಯತೇ. ತಸ್ಮಾನ್ನ ತ್ರೈಕಾಲಿಕನಿಷೇಧ ಇತಿ ರಹಸ್ಯಂ.

"ಬ್ರಹ್ಮ ಸತ್ಯ ಜಗತ್ತು ಮಿಥ್ಯೆ", ಎಂಬ ನ್ಯಾಯದಂತೆ ಎಲ್ಲಾ ವೇತಾಂತವಾಕ್ಯಗಳ ವಿಚಾರದಿಂದಲೂ ಜಗತ್ತನ್ನು ಮಿಥ್ಯೆ ಎಂದು ತಿಳಿದು ತನ್ನ ಸ್ವರೂಪದ ಜ್ಞಾನವನ್ನು ಪಡೆಯುವುದೇ ಮುಕ್ತಿ ಎಂದು ಏಕೆ ಹೇಳಬಾರದು? ಅಂದರೆ ಇದು ಸರಿಯಲ್ಲ. ಹಾಗೆ ಹೇಳಿದರೆ ಎಲ್ಲಾ ವೇದವೇದಾಂತಗಳಿಂದಲೂ ಹೊರಗೆ ನಿಲ್ಲಬೇಕಾಗುವುದು. ಜಗತ್ತು ಮಿಥ್ಯೆ ಎಂದರೇನು? ಅದು ಬ್ರಹ್ಮಜ್ಞಾನದಿಂದ ಬಾಧಿತವಾಗುವುದೆಂದು

ಅರ್ಥವೋ ಅಥವಾ ಎಲ್ಲಾ ಕಾಲದಲ್ಲಿಯೂ ಜಗತ್ತು ನಿಷಿದ್ಧವಾಗಿರುವುದೆಂದು ಅರ್ಥವೋ ? ಬ್ರಹ್ಮಜಗತ್ತುಗಳಿಗೆ ಬಾಧ್ಯಬಾಧಕಭಾವವು ಸಂಭವಿಸುವುದಿಲ್ಲವಾದ್ದರಿಂದ ಜಗತ್ತು ಜ್ಞಾನದಿಂದ ಬಾಧಿತವಾಗುವುದಿಲ್ಲ. ಬ್ರಹ್ಮಜ್ಞಾನದಿಂದ ಜಗತ್ತನ್ನು ನಿಷೇಧಿಸಬೇಕೆಂದು ಎಲ್ಲಿಯೂ ಕೇಳಿಲ್ಲ. "ಎಲ್ಲವೂ ರುದ್ರನೇ" "ಎಲ್ಲವೂ ಬ್ರಹ್ಮವೇ" ಈ ಶ್ರುತಿಗಳಲ್ಲಿ ಜಗತ್ತೆಲ್ಲವೂ ಶಿವಮಯವೆಂದೇ ಹೇಳಲಾಗಿದೆ. "ಬೇರೆ ಏನನ್ನೂ ಕಾಣುವುದಿಲ್ಲ, ಏನನ್ನೂ ಕೇಳುವುದಿಲ್ಲ" ಎಂಬ ಶ್ರುತಿಯಲ್ಲಿ ಮುಕ್ತರಿಗೆ ಇದೆಲ್ಲವೂ ಶಿವನೇ ಆಗಿರುವುದೆಂಬ ಜ್ಞಾನದಿಂದ ಜಗದ್ವಿಷಯಕವಾದ ಮಾಯಾಪಾಶವು ಮರೆಯಾಗುತ್ತದೆ. "ಶಿವನೇ ದಾತನೂ, ಭೋಕ್ತನೂ ಆಗಿದ್ದಾನೆ. ಶಿವನೇ ಇದೆಲ್ಲವೂ ಜಗತ್ತು" ಹೀಗೆ ಇದೆಲ್ಲವೂ ಶಿವನೆಂಬ ಸಂಪೂರ್ಣಜ್ಞಾನದಿಂದ ಘಟದಲ್ಲಿ ಘಟತ್ವವೆಂಬ ಬುದ್ಧಿ ತೊಲಗುವುದೇ ಹೊರತು ಘಟವೆಂಬ ಜ್ಞಾನ ತೊಲಗುವುದಿಲ್ಲ. ಹೀಗೆ ಬ್ರಹ್ಮಜ್ಞಾನದಿಂದಲೂ ಜಗತ್ತು ಮರೆಯಾಗುವುದಿಲ್ಲ. ಆದ್ದರಿಂದ ಜಗತ್ತನ್ನು ಮಿಥ್ಯೆ ಎಂದು ಹೇಳುವ ವಾದವು ಯುಕ್ತವಲ್ಲ. ಇದೂ ಅಲ್ಲದೆ, ಈ ವಾದವನ್ನು ಒಪ್ಪಿದರೆ ಏಕವಿಜ್ಞಾನದಿಂದ ಸರ್ವವಿಜ್ಞಾನವೂ ಆಗುವುದೆಂಬ ಶ್ರುತಿಗೆ ತಿಲಾಂಜಲಿ ಎರೆಯಬೇಕಾದೀತು. ಜಗತ್ತಿಗೆ ಬ್ರಹ್ಮವೇ ಉಪಾದಾನಕಾರಣವಾದ್ದರಿಂದಲೇ ಏಕವಿಜ್ಞಾನದಿಂದ ಸರ್ವವಿಜ್ಞಾನವೂ ಆಗುವುದೆಂಬ ಶ್ರುತಿ ಯುಕ್ತವೆನಿಸಿದೆ. ಆದ್ದರಿಂದಲೇ 'ಇದೆಲ್ಲವೂ ಬ್ರಹ್ಮ' ಈ ಬಗೆಯ ಶ್ರುತಿಗಳು ಎಲ್ಲವನ್ನೂ ಶಿವಾತ್ಮಕವೆಂದು ತಿಳಿಸಿವೆ. ಇದರಿಂದ ಜಗತ್ತು ಬ್ರಹ್ಮಜ್ಞಾನದಿಂದ ಬಾಧಿತವಾಗುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಜನಕನೇ ಮೊದಲಾದ ಬ್ರಹ್ಮಜ್ಞಾನಿಗಳೂ ಸಹ ಮೊದಲಿನಂತೆಯೇ ವ್ಯವಹರಿಸುತ್ತಿದ್ದರೆಂದು ತಿಳಿದುಬಂದಿದೆ. ಅವರಿಗೆ ತತ್ತ್ವಜ್ಞಾನದಂತೆಯೇ ಪ್ರಪಂಚಜ್ಞಾನವೂ ಸಹ ಇತ್ತು; ಇವೆರಡಕ್ಕೂ ಬಾಧ್ಯಬಾಧಕಭಾವವಿರಲಿಲ್ಲ. ಜಗತ್ತನ್ನು ಮಿಥ್ಯೆಯೆಂದು ಹೇಳಿದರೆ ಜೀವನ್ಮುಕ್ತನಿಗೆ ಶರೀರಧಾರಣೆಯೇ ಮೊದಲಾದ ವ್ಯವಹಾರಗಳು ಯುಕ್ತವಾಗದೇ ಹೋಗಬೇಕಾದೀತು. ಇದೂ ಅಲ್ಲದೆ, ಅಖಂಡಾದ್ವೈತಜ್ಞಾನವಾದರೆ ಎಲ್ಲವೂ ಬ್ರಹ್ಮವಲ್ಲದೆ ಬೇರೆ ರೀತಿಯಲ್ಲಿ ಕಾಣುವಂತೆಯೇ ಇಲ್ಲ. ಇದರಿಂದ ಎಲ್ಲಾ ವಸ್ತುಗಳಲ್ಲಿಯೂ ಭೇದಭಾವನೆ ತೊಲಗುವುದೇ ಹೊರತು ವಸ್ತುಗಳ ಸ್ವರೂಪವು ತೊಲಗುವುದಿಲ್ಲ. "ಬ್ರಹ್ಮವೇ ಜಗತ್ತಿನ ಉಪಾದಾನಕಾರಣವಾಗಿರುವುದರಿಂದಲೂ, ಭೇದವು ಕೇವಲ ವಾಗ್ವ್ಯವಹಾರಕ್ಕಾಗಿಯೇ ಇರುವುದರಿಂದಲೂ ಜಗತ್ತಿನ ಬಗ್ಗೆ ಅತ್ಯಂತಭೇದವೆಂಬುದು ಹೇಗೆ ಸಂಭವಿಸುತ್ತದೆ? ಆದ್ದರಿಂದ ಎಲ್ಲವೂ ಅವಿದ್ಯಾಕಲ್ಪಿತವೇ ಸರಿ ಎಂದು ಹೇಳುವುದು ಕೇವಲ ವಂಚನೆಯೇ ಆಗುವುದು" ಎಂದು ದೂರ್ವಾಸೀಯದಲ್ಲಿ ಜಗನ್ಮಿಥ್ಯಾವಾದದ ಬಗ್ಗೆ ಆಕ್ಷೇಪಣೆ ಬಂದಿದೆ. "ಜಗತ್ತನ್ನು ಅಸತ್ಯವೆಂದೂ ನಿರಾಶ್ರಿತವೆಂದೂ ಅನೀಶ್ವರವೆಂದೂ ಅಜ್ಞಾನಿಗಳು ಹೇಳುತ್ತಾರೆ" ಎಂದು ಗೀತೆಯಲ್ಲಿಯೂ ಈ ಬಗೆಯ ಆಕ್ಷೇಪಣೆಯನ್ನು ನಿರ್ದೇಶಿಸಿ ನಿರಾಕರಿಸಲಾಗಿದೆ. ಇನ್ನು ಜಗತ್ತು ತ್ರಿಕಾಲದಲ್ಲಿಯೂ

ನಿಷಿದ್ಧವಾಗುವುದೆಂಬುದೇ ಮಿಥ್ಯೆ ಎಂಬ ಪದದ ಅರ್ಥವೆಂದು ಹೇಳುವುದೂ ಸರಿಯಲ್ಲ. "ಅನಾದಿಕಾಲದಿಂದಲೂ ನಿರಾಧಾರವಾಗಿ ಜೀವರು ಹುಟ್ಟುತ್ತಲಿದ್ದಾರೆ" "ಯಾವಾಗಲೂ ಜಗತ್ತು ಹೀಗಿರಲಿಲ್ಲ" ಈ ಶ್ರುತಿಗಳು ಜಗತ್ತನ್ನು ಅನಾದಿ ಎಂದು ಹೇಳಿವೆ. "ಇದೆಲ್ಲವೂ ಮೊದಲು ಅಸತ್ತಾಗಿತ್ತು, ಅದರಿಂದ ಸತ್ಯವಸ್ತು ಹುಟ್ಟಿತು" "ಇದೆಲ್ಲವೂ ಸದ್ರೂಪವಾಗಿತ್ತು." "ಬ್ರಹ್ಮವೊಂದೇ ಅದ್ವಿತೀಯವಾಗಿತ್ತು." ಈ ಶ್ರುತಿಗಳು ಸೃಷ್ಟಿಗೆ ಮೊದಲು ಪ್ರಪಂಚವಿರಲಿಲ್ಲವೆಂದು ಹೇಳಿವೆಯಾದ್ದರಿಂದ ಪ್ರಪಂಚವನ್ನು ತ್ರಿಕಾಲಗಳಲ್ಲಿಯೂ ಸತ್ಯವೆಂದು ಹೇಗೆ ಹೇಳಬಹುದು? ಅಂದರೆ ಇದು ಸರಿಯಲ್ಲ. "ಇದೆಲ್ಲವೂ ಮೊದಲು ಅಸತ್ತಾಗಿತ್ತು" ಅಂದರೆ ನಾಮರೂಪಗಳ ವಿಭಾಗವಿಲ್ಲದ ಸ್ಥಿತಿಯಲ್ಲಿ ಸೂಕ್ಷ್ಮರೂಪದಿಂದ ಬ್ರಹ್ಮದಲ್ಲಿ ಅವ್ಯಕ್ತವಾಗಿದ್ದುದರಿಂದ ಇದನ್ನು ಅಸತ್ ಎಂದು ಕರೆಯಲಾಗಿದೆ. "ತತೋ ವೈ ಸದಜಾಯತ" ಎಂಬುದರಿಂದ ನಾಮರೂಪಗಳ ವಿಭಾಗಕ್ಕೆ ಅರ್ಹವಾಗುವಂತೆ ವ್ಯಕ್ತಸ್ಥಿತಿಯಲ್ಲಿ ಜಗತ್ತು ಬ್ರಹ್ಮದಿಂದ ಹೊರಹೊಮ್ಮಿತೆಂದು ಹೇಳುವುದೇ ಸಮಂಜಸವಾಗುತ್ತದೆ. ಅಸತ್ಪದದಿಂದ ಆಕಾಶಪುಷ್ಪದಂತೆ ಅಭಾವವನ್ನೇ ಭಾವಿಸುವುದರಿಂದ ಬಂಜೆಯ ಮಕ್ಕಳೂ ಸಹ ಏಕೆ ಜಗತ್ತಿಗೆ ಕಾರಣವಾಗಬಾರದು? 'ಸದೇವ' ಎಂಬ ಅವಧಾರಣವು ಇದೆಲ್ಲವೂ ಸವಿಶೇಷವೆಂಬುದನ್ನು ನಿಷೇಧಿಸುವುದಿಲ್ಲ. ಆದರೆ ಭ್ರಾಂತಿಯಿಂದ ಬಂದ ಅಸದ್ವಸ್ತುವು ಜಗತ್ತಿಗೆ ಕಾರಣವಾಗಲಾರದೆಂದು ತಿಳಿಸಲಿಕ್ಕಾಗಿ "ಸದೇವ" ಎಂಬ ವಾಕ್ಯ ಬಂದಿರುವುದೇ ಹೊರತು ಬ್ರಹ್ಮ ಸವಿಶೇಷವೆಂಬುದನ್ನು ನಿಷೇಧಿಸಲಿಕ್ಕಾಗಿ ಬಂದಿಲ್ಲ. 'ಸದೇವ ಸೋಮ್ಯ' ಎಂಬ ಶ್ರುತಿಯು ಜಗತ್ತು ಸವಿಶೇಷವೆಂಬುದನ್ನು ಹೇಗೆ ನಿಷೇಧಿಸಬಲ್ಲದು? 'ಅಗ್ರೇ' ಎಂಬುದರಿಂದ ಕಾಲವಿಶೇಷವೂ, 'ಆಸೀತ್' ಎಂಬುದರಿಂದ ಕ್ರಿಯಾವಿಶೇಷವೂ ತೋರುತ್ತದೆ 'ಏಕಮೇವ' ಎಂಬಲ್ಲಿ ಅವಧಾರಣದಿಂದ ಬೇರೆ ಆಶ್ರಯದ ನಿಷೇಧವು ತೋರುತ್ತದೆ. 'ಅದ್ವಿತೀಯಂ' ಎಂಬ ಪದದಿಂದ ಬ್ರಹ್ಮವೇ ಜಗತ್ತಿನ ಉಭಯಕಾರಣವೆಂದು ವಿಧಿಸಲಾಗಿದೆ. 'ಏಕ ಏವ ರುದ್ರೋ ನ ದ್ವಿತೀಯಾಯ' ಎಂಬಲ್ಲಿಯೂ ಹೀಗೆಯೇ ಹೇಳಬೇಕು. 'ಹೀಗೆಯೇ 'ವಿಶ್ವಾಧಿಕೋ ರುದ್ರೋ ಮಹರ್ಷಿಃ' ಎಂಬ ಶ್ರುತಿಯಲ್ಲಿಯೂ ಹೇಳಿರುವುದರಿಂದ ಶಿವಮಯವಾದ ಜಗತ್ತಿಗೆ ತ್ರೈಕಾಲಿಕನಿಷೇಧವಿಲ್ಲ.

## ॥ ಜಗದ್ವ್ಯಾವಹಾರಿಕತ್ವಖಂಡನಂ ॥

**ನನು— ಪ್ರಪಂಚಸ್ಯ ವ್ಯಾವಹಾರಿಕಮಾತ್ರಸತ್ಯತ್ವಂ ನತು ಪಾರಮಾರ್ಥಿಕತ್ವಮಿತಿ ಚೇನ್ನ. ಕಿಮಿದಂ ವ್ಯವಹಾರಸತ್ಯತ್ವಂ ವ್ಯವಹಾರಮಾತ್ರಗಮ್ಯತ್ವಂ? ಬಾಧಿತವ್ಯವಹಾರಗಮ್ಯತ್ವಂ? ತ್ರಿಚತುರಕಕ್ಷ್ಯಾಸ್ವಬಾಧ್ಯತ್ವಂ ವಾ? ತತ್ತ್ವಾವೇದಕಪ್ರಮಾಣವಿರುದ್ಧತ್ವಂ? ಅರ್ಥಕ್ರಿಯಾಶೂನ್ಯಪ್ರತೀತಿಗೋಚರತ್ವಂ? ಕರಣದೋಷೋಪಹಿತಜ್ಞಾನವಿಷಯ**

ತ್ವಂ ವಾ ? ನಾದ್ಯಃ–ಬ್ರಹ್ಮಣೋಽಪಿ ವ್ಯವಹಾರಗಮ್ಯತ್ವೇನಾತಿವ್ಯಾಪ್ತೇಃ. ಅನ್ಯಥಾ ಗುರುಶಿಷ್ಯಯೋರ್ವಾರ್ತಾನಮೌಢ್ಯಾಪತ್ತೇಃ. " ಅಥಾತೋ ಬ್ರಹ್ಮ ಜಿಜ್ಞಾಸಾ " "ಸದೇವ ಸೋಮ್ಯ" " ಸತ್ಯಂ ಜ್ಞಾನಂ " ಇತ್ಯಾದಿರೂಪೇಣ ಪ್ರವೃತ್ತಾಯಾಃ ಶ್ರುತಿಸೂತ್ರಫಕ್ಕಿಕಾಯಾ ಅಭಿತ್ತಿಚಿತ್ರಕರ್ಮತಾಪಾತಾಚ್ಚ. " ಸರ್ವಾಪೀಯಂ ಫಕ್ಕಿಕಾ ಸವಿಶೇಷವಿಷಯಾ ; ನಿರ್ವಿಶೇಷಂ ನ ಕಸ್ಯಾಪಿ ವ್ಯವಹಾರಸ್ಯ ಗೋಚರಂ " ಇತಿ ಚೇತ್ ವ್ಯಾಹತಮೇತತ್, " ನ ಗೋಚರಃ " ಇತಿ ವ್ಯವಹಾರಂ ಪ್ರತ್ಯೇವ ಗೋಚರತ್ವಾತ್, ವೇದಾಂತಾನಾಂ ನಿರ್ವಿಶೇಷವಿಷಯತ್ವಾಭಾವಸಮರ್ಥನೇನ ಅಸ್ಮದನುಕೂಲಂ ಚ, ತೇಷಾಮಪಿ ವ್ಯವಹಾರರೂಪತ್ವಾತ್. ನಾಪಿ ಬಾಧಿತವ್ಯವಹಾರಗಮ್ಯತ್ವಮಿತಿ ದ್ವಿತೀಯಃ–ಬ್ರಹ್ಮಣ್ಯತಿವ್ಯಾಪ್ತೇರ್ದುರ್ವಾರತ್ವಾತ್. ಸರ್ವೋಽಪಿ ವ್ಯವಹಾರೋ ಬಾಧಿತ ಏವ, ಪ್ರಪಂಚಾಂತರ್ಗತತ್ವಾತ್. ನ ಚ ಬಾಧಿತತ್ವಂ ವ್ಯವಹಾರಗಮ್ಯತ್ವಸ್ಯ ವಿಶೇಷಣಮಿತಿ ಶಂಕ್ಯಂ. ತರ್ಹಿ ಬಾಧಿತತ್ವಸ್ಯೈವ ಲಕ್ಷಣತ್ವೇ ಶೇಷವೈಯರ್ಥ್ಯಾತ್. ನ ಚೇಷ್ಟಾಪತ್ತಿಃ. ಪ್ರಾತಿಭಾಸಿಕೇಽತಿವ್ಯಾಪ್ತೇಃ. ನ ಚ ಬ್ರಹ್ಮಾತಿರಿಕ್ತವಿಷಯಕಜ್ಞಾನಾಬಾಧಿತತ್ವೇ ಸತಿ ಬಾಧಿತತ್ವಮಿತಿ ಪರಿಷ್ಕಾರಸ್ಸಾಧುಃ. ಜ್ಞಾನಾಬಾಧಿತತ್ವಸ್ಯ ಜ್ಞಾನಜನ್ಯಧ್ವಂಸಾಪ್ರತಿಯೋಗಿತ್ವರೂಪತ್ವೇ ಉತ್ತರಜ್ಞಾನಜನ್ಯಧ್ವಂಸಪ್ರತಿಯೋಗಿಷು ಪೂರ್ವಜ್ಞಾನೇಷು ಲಕ್ಷಣಾವ್ಯಾಪ್ತೇಃ. ಜ್ಞಾನಾನಪಹೃತಧೀವಿಷಯತ್ವರೂಪತ್ವೇ ತು "ಘಟೋ ನಾಸ್ತಿ" ಪಟೋ ನಾಸ್ತಿ" ಇತಿ ಜ್ಞಾನಾಪಹೃತಧೀವಿಷಯೇಷು ಘಟಾದಿಷ್ವವ್ಯಾಪ್ತಿಃ, ತೇಷಾಂ ಜ್ಞಾನಾನಾಂ ಬ್ರಹ್ಮಾತಿರಿಕ್ತವಿಷಯಕತ್ವಾತ್. ವಿಸ್ತರಣೇ ಚೋಪರಿಷ್ಟಾನ್ನಿರಾಕರಿಷ್ಯಾಮಃ. ಕಿಂಚ–ನೀಲಪೃಷ್ಠತ್ವಾದಿಸತ್ತಾಯಾ ಅಪಿ ಬ್ರಹ್ಮರೂಪತಯಾ ತದ್ವಿಷಯಕಜ್ಞಾನಬಾಧ್ಯೇಷು ರಜತಾದಿಷ್ವತಿವ್ಯಾಪ್ತಿರ್ದುರ್ವಾರೈವ. ತೇಷಾಮಪಿ ಜ್ಞಾನಾನಾಂ ಬ್ರಹ್ಮಾತಿರಿಕ್ತವಿಷಯತ್ವಾಭಾವಾತ್. ನ ಚ ನೀಲಪೃಷ್ಠತ್ವಾದೀನಾಮಬ್ರಹ್ಮರೂಪಾಣಾಂ ತದ್‌ಜ್ಞಾನವಿಷಯತ್ವಾನ್ನಾತಿಪ್ರಸಂಗ ಇತಿ ವಾಚ್ಯಂ. ತರ್ಹಿ ನಿರ್ವಿಶೇಷತ್ವಪ್ರಪಂಚಮಿಥ್ಯಾತ್ವಾದಿಬ್ರಹ್ಮಾತಿರಿಕ್ತವಿಷಯಕಜ್ಞಾನಸ್ಯೈವ ಪ್ರಪಂಚನಿವರ್ತಕತಯಾ ವ್ಯಾವಹಾರಿಕಮಾತ್ರೇ ಲಕ್ಷಣಾಸಂಭವಪ್ರಸಂಗಾತ್. ನಿರ್ವಿಶೇಷತ್ವಾದೀನಾಂ ಸಪ್ರತಿಯೋಗಿಕಾನಾಂ ನಿಷ್ಪ್ರತಿಯೋಗಿಕಬ್ರಹ್ಮಸ್ವರೂಪಮಾತ್ರತ್ವಂ ದುಸ್ಸಾಧ್ಯಂ. ಸ್ವರೂಪಮಾತ್ರಜ್ಞಾನಸ್ಯಾಧ್ಯಾಸಸಹಸ್ವಪ್ರಕಾಶಾನತಿರಿಕ್ತವಿಷಯತಯಾ ನಿವರ್ತಕತ್ವಾಸಂಭವೇನಾಸಂಭವಾಪಾದಕಂ ಚ. ಅನತಿರಿಕ್ತವಿಷಯವಿಜ್ಞಾನೇ ವೃತ್ತಿತ್ವಂ ನಿವರ್ತಕತಾವಚ್ಛೇದಕಮಿತ್ಯಭ್ಯುಪಗಮೇ ಜಡಾಯಾ ವೃತ್ತೇರ್ನಿವರ್ತಕತ್ವೇ ಜ್ಞಾನಬಾಧ್ಯತ್ವಸಿದ್ಧಾಂತವ್ಯಾಹತಿಃ.

**ಕಥಂಚಿತ್ ಜ್ಞಾನತ್ವಾಂಗೀಕಾರೇಽಪಿ ಸ್ವಸ್ವರೂಪಜ್ಞಾನಸಾಧಾರಣಸ್ಯ ಜ್ಞಾನನಿವರ್ತಕತಾನವಚ್ಛೇದಕತ್ವಾದಪಸಿದ್ಧಾಂತಶ್ಚೇತ್ಯಾಸ್ತಾಂ ವಿಸ್ತರಃ.**

## ಜಗದ್ವ್ಯಾವಹಾರಿಕತ್ವಖಂಡನ

"ಜಗತ್ತು ವ್ಯವಹಾರಕಾಲದಲ್ಲಿ ಮಾತ್ರವೇ ಸತ್ಯವಾಗಿರುತ್ತದೆ. ಆದರೆ ಪಾರಮಾರ್ಥಿಕವಾಗಿ ಸತ್ಯವಾಗಿಲ್ಲ" ಎಂದು ಹೇಳುವುದೂ ಯುಕ್ತವಲ್ಲ. ಹಾಗಾದರೆ, ವ್ಯಾವಹಾರಿಕಸತ್ಯವೆಂದರೇನು? ಇದೇನು ವ್ಯವಹಾರಕ್ಕೆ ಮಾತ್ರವೇ ಸಿಲುಕವಂತಹದೋ? ಅಥವಾ ಬಾಧಿತವ್ಯವಹಾರಕ್ಕೆ ಸಿಲುಕುವಂತಹದೋ? ಅಥವಾ ಮೂರು ನಾಲ್ಕು ಅವಸ್ಥೆಗಳಲ್ಲಿ ಮಾತ್ರ ಬಾಧಿತವಾಗದೇ ಇರುವುದೋ? ಅಥವಾ ತತ್ತ್ವವನ್ನು ತಿಳಿಸುವ ಪ್ರಮಾಣಗಳಿಗೆ ವಿರುದ್ಧವಾದುದೋ? ಅಥವಾ ಅರ್ಥಕ್ರಿಯೆಗಳಿಗೆ ಹೊಂದದಿರುವ ಜ್ಞಾನಕ್ಕೆ ವಿಷಯವಾದುದೋ? ಅಥವಾ ಕಾರಣದೋಷದಿಂದ ಕೂಡಿದ ಜ್ಞಾನಕ್ಕೆ ವಿಷಯವಾದುದೋ? ಹೀಗೆ ಈ ಬಗ್ಗೆ ಆರು ವಿಕಲ್ಪಗಳು ಸಂಭವಿಸುತ್ತವೆ. ಇವುಗಳಲ್ಲಿ ಒಂದೊಂದನ್ನೂ ಪರಿಶೀಲಿಸೋಣ. ವ್ಯವಹಾರಕ್ಕೆ ಮಾತ್ರವೇ ಸಿಲುಕುವ ಸ್ಥಿತಿಯೇ ವ್ಯಾವಹಾರಿಕಸತ್ಯವೆಂದು ಹೇಳುವ ಮೊದಲನೆಯ ವಿಕಲ್ಪವು ಯುಕ್ತವಲ್ಲ; ಯಾಕೆಂದರೆ ಇದರಿಂದ ಬ್ರಹ್ಮವೂ ವ್ಯವಹಾರಕ್ಕೆ ಸಿಲುಕುವುದರಿಂದ ಮಿಥ್ಯೆ ಎನಿಸಬೇಕಾಗುವುದು. ಇಲ್ಲವಾದರೆ ಗುರುಶಿಷ್ಯರಿಗೆ ಮೌನವೂ ಮೌಢ್ಯವೂ ಸಂಭವಿಸಬೇಕಾದೀತು. 'ಅಥಾತೋ ಬ್ರಹ್ಮಜಿಜ್ಞಾಸಾ', 'ಸದೇವ ಸೋಮ್ಯ' 'ಸತ್ಯಂ ಜ್ಞಾನಂ' ಹೀಗೆ ಪ್ರವರ್ತಿಸಿರುವ ಶ್ರುತಿಸೂತ್ರಗಳೆಲ್ಲವೂ ಗೋಡೆ ಇಲ್ಲದೆ ಬರೆದ ಚಿತ್ರದಂತೆ ವ್ಯರ್ಥವೆನಿಸಬೇಕಾಗುತ್ತವೆ. ಇವೆಲ್ಲವೂ ಸವಿಶೇಷವಸ್ತುವನ್ನು ತಿಳಿಸತಕ್ಕವೇ ಆಗಿವೆ; ಯಾಕೆಂದರೆ ನಿರ್ವಿಶೇಷ ವಸ್ತುವು ಯಾವ ವ್ಯವಹಾರಕ್ಕೂ ಬರುವಂತೆಯೇ ಇಲ್ಲ; ಎಂದು ಹೇಳಿದ ಮಾತೂ ವಿರುದ್ಧವಾಗುತ್ತದೆ. ನಿರ್ವಿಶೇಷ ವಸ್ತು ವ್ಯವಹಾರಗೋಚರವಲ್ಲವೆಂದು ಹೇಳುವ ಶಬ್ದದಿಂದಲೇ ಅದು ವ್ಯವಹಾರಗೋಚರವೇ ಆಗುವುದರಿಂದ ನಿರ್ವಿಶೇಷವಸ್ತು ವ್ಯವಹಾರಗೋಚರವಲ್ಲವೆಂಬುದು ಬಾಧಿತವಾಗುವುದು. ವೇದಾಂತವಾಕ್ಯಗಳು ನಿರ್ವಿಶೇಷ ಬ್ರಹ್ಮವನ್ನು ತಿಳಿಸುವುದಿಲ್ಲವೆಂದು ಸಮರ್ಥಿಸುವುದು ನಮಗೆ ಅನುಕೂಲವೇ ಆಗಿದೆ; ಯಾಕೆಂದರೆ ನೀನು ಸಮರ್ಥಿಸುವುದೆಲ್ಲವೂ ವ್ಯವಹಾರರೂಪವೇ ಆಗುವುದರಿಂದ ನಿರ್ವಿಶೇಷವಸ್ತುವೂ ವ್ಯವಹಾರಗೋಚರವೇ ಆಗುವುದು. ಬಾಧಿತ ವ್ಯವಹಾರಕ್ಕೆ ಗೋಚರವಾಗುವುದೇ ವ್ಯಾವಹಾರಿಕಸತ್ಯವೆಂದು ಹೇಳುವ ಎರಡನೆಯ ವಿಕಲ್ಪವೂ ಸಾಧುವಲ್ಲ; ಯಾಕೆಂದರೆ ಎಲ್ಲಾ ವ್ಯವಹಾರವೂ ಬ್ರಹ್ಮಕ್ಕಿಂತಲೂ ಬೇರೆಯಾದುದರಿಂದ ಅದ್ವೈತಮತದ ಪ್ರಕಾರ ಬಾಧಿತವೇ ಆಗುತ್ತದೆ. ಆದ್ದರಿಂದ ಬ್ರಹ್ಮವನ್ನೂ ಸಹ ವ್ಯಾವಹಾರಿಕಸತ್ಯವೆಂದೇ ಹೇಳಬೇಕಾದೀತು. ಬಾಧಿತವೆಂಬ ಪದವನ್ನು ವ್ಯವಹಾರದಲ್ಲಿ ಅನ್ವಯಿಸದೆ ವ್ಯವಹಾರಗೋಚರವೆಂಬ ಅರ್ಥದಲ್ಲಿ ಅನ್ವಯಿಸಿ, ವ್ಯವಹಾರಗೋಚರ

ವಾದುದು ಯಾವುದಕ್ಕೆ ಬಾಧಿತವಾಗುತ್ತದೆಯೋ ಅದು ವ್ಯಾವಹಾರಿಕಸತ್ಯವೆಂದು ಹೇಳುವುದಾದರೆ, ಆಗ ' ಯಾವುದು ಬಾಧಿತವೋ ಅದೇ ವ್ಯಾವಹಾರಿಕಸತ್ಯ' ವೆಂದು ಹೇಳುವುದರಿಂದಲೇ ನಿರ್ವಾಹವಾಗುವುದರಿಂದ ಉಳಿದ ಪದಗಳು ವ್ಯರ್ಥವಾಗುವುವು. ಅಷ್ಟೇ ಅರ್ಥವೆಂದು ಒಪ್ಪಿದರೂ ಪ್ರಾತಿಭಾಸಿಕವಸ್ತುವಿನಲ್ಲಿ ಅತಿವ್ಯಾಪ್ತಿಬರುತ್ತದೆ ; ಯಾಕೆಂದರೆ ಪ್ರತಿಭಾಸಿಕವೂ ಬಾಧಿತವೇ ಆಗುತ್ತದೆ, ಆದರೆ ಅದು ವ್ಯಾವಹಾರಿಕ ಸತ್ಯವಾಗುವುದಿಲ್ಲ. ಆದರೂ ಅದು ಬಾಧಿತವಾಗುವುದೆಂದಷ್ಟನ್ನು ಮಾತ್ರವೇ ಹೇಳುವುದು ಸಮಂಜಸವಲ್ಲ. ಬ್ರಹ್ಮವನ್ನು ಬಿಟ್ಟು ಉಳಿದ ವಸ್ತುವಿನ ಜ್ಞಾನದಿಂದ ಬಾಧೆಗೊಳಗಾಗದಿರುವುದು ಮತ್ತು ಬಾಧ್ಯವಾಗದಿರುವುದು ಯಾವುದಿದೆಯೋ ಅದೇ ವ್ಯಾವಹಾರಿಕಸತ್ಯವೆಂದು ಅರ್ಥ ಹೇಳುವುದೂ ಯುಕ್ತವಲ್ಲ. ' ಜ್ಞಾನದಿಂದ ಬಾಧ್ಯವಾಗದಿರುವುದು' ಎಂಬುದಕ್ಕೆ ಜ್ಞಾನದಿಂದ ನಾಶವಾಗುವಂತಹದಲ್ಲ ಎಂದು ಅರ್ಥಮಾಡುವುದಾದರೆ, ಮೊದಲು ಹುಟ್ಟಿದ ಜ್ಞಾನ ಅನಂತರ ಹುಟ್ಟಿದ ಜ್ಞಾನದಿಂದ ನಾಶವಾಗುವುದು ಸರ್ವಸಮ್ಮತವಾಗಿರುವುದರಿಂದ ಆ ಜ್ಞಾನದಿಂದ ಬಾಧ್ಯವಾಗದಿರುವುದೆಂಬುದು ವಿರುದ್ಧವೇ ಆಗುವುದು. ಮೊದಲು ಹುಟ್ಟಿದ ಜ್ಞಾನದಲ್ಲಿ ತೋರುವ ವಿಷಯಕ್ಕೆ ಎರಡನೆಯ ಜ್ಞಾನದಿಂದ ಯಾವ ಬಾಧೆಯೂ ಇಲ್ಲವೆಂದು ಹೇಳುವುದಾದರೆ, ಘಟವಿಲ್ಲವೆಂಬ ಜ್ಞಾನದಿಂದ, ಮೊದಲು ಹುಟ್ಟಿದ್ದ ' ಘಟವಿದೆ' ಎಂಬ ಜ್ಞಾನದಲ್ಲಿ ವಿಷಯವಾಗುವ ಘಟವು ಬಾಧಿತವಾಗುವುದರಿಂದ ಇಲ್ಲಿ ' ಜ್ಞಾನದಿಂದ ಬಾಧ್ಯವಾಗದಿರುವಿಕೆ' ಎಂಬುದು ಸಂಭವಿಸುವುದೇ ಇಲ್ಲ. ಇದನ್ನು ಮುಂದೆ ಹೆಚ್ಚು ವಿಸ್ತರಿಸಲಾಗುವುದು. ಶುಕ್ತಿಯನ್ನು ನೋಡಿ ಬೆಳ್ಳಿಯೆಂದು ಭ್ರಮಿಸುವಾಗ ಅದರ ಹಿಂಭಾಗವನ್ನು ನೋಡಿದರೆ ಆ ಕೂಡಲೇ ಭ್ರಾಂತಿ ತೊಲಗುವುದು ಅನುಭವಸಿದ್ಧವಾಗಿದೆ. ಅದರ ಹಿಂಭಾಗದಲ್ಲಿರುವ ಕಪ್ಪುಬಣ್ಣವೂ ಬ್ರಹ್ಮಾತ್ಮಕವೇ ಆಗಿರುವುದರಿಂದ ಬ್ರಹ್ಮವಲ್ಲದೆ ಇರುವ ಬೇರೆ ವಿಷಯದ ಜ್ಞಾನದಿಂದ ಬಾಧ್ಯವಾಗದಿರುವುದೇ ವ್ಯಾವಹಾರಿಕಸತ್ಯವೆಂದು ಅರ್ಥ ಹೇಳಿದರೆ, ಆಗ ವ್ಯಾವಹಾರಿಕ ಮಿಥ್ಯೆಯೂ ಸತ್ಯವೇ ಆಗಬೇಕಾದೀತು ? ಶುಕ್ತಿಯ ಹಿಂಭಾಗದ ಬಣ್ಣ ಬ್ರಹ್ಮಾತ್ಮಕವಲ್ಲವೆಂದು ಹೇಳುವುದಾದರೆ ನಿರ್ವಿಶೇಷತ್ವವೂ ಪ್ರಪಂಚದ ಮಿಥ್ಯಾತ್ವವೂ ಬ್ರಹ್ಮಕ್ಕಿಂತಲೂ ಬೇರೆಯಾಗಬೇಕಾದ್ದರಿಂದ ಆ ಜ್ಞಾನದಿಂದ ಪ್ರಪಂಚದ ಭ್ರಮ ತೊಲಗುವುದೆಂದರೆ ಪ್ರಪಂಚಸಾಮಾನ್ಯವೂ ವ್ಯಾವಹಾರಿಕಸತ್ಯವಲ್ಲದೆ ಹೋಗಬೇಕಾದೀತು. ನಿರ್ವಿಶೇಷತ್ವವು ಅಭಾವರೂಪವಾದುದರಿಂದ ಅದು ಬ್ರಹ್ಮಾತ್ಮಕವಾಗುವಂತಿಲ್ಲ. ಕೇವಲ ಸ್ವರೂಪಮಾತ್ರದ ಜ್ಞಾನವು ಯಾವಾಗಲೂ ಇರುವುದರಿಂದ ಆ ಜ್ಞಾನದಿಂದ ಭ್ರಮದ ನಿವೃತ್ತಿ ಎಲ್ಲಿಯೂ ಎಂದಿಗೂ ಆಗುವಂತಿಲ್ಲ. ವೃತ್ತಿರೂಪವಾದ ಜ್ಞಾನವೇ ಭ್ರಾಂತಿಯನ್ನು ತೊಲಗಿಸಬಲ್ಲುದೇ ಹೊರತು ಸ್ವರೂಪಜ್ಞಾನವು ಅದನ್ನು ತೊಲಗಿಸಲಾರದು ಎಂದು ಹೇಳಿದರೂ, ವೃತ್ತಿ ಎನ್ನುವುದು ಜಡವಾದ್ದರಿಂದ ಅದರಿಂದ ಭ್ರಾಂತಿಯ ನಿವೃತ್ತಿಯನ್ನು ಒಪ್ಪಿದರೆ, ಜ್ಞಾನದಿಂದ ಬಾಧ್ಯವಾಗುವುದೇ ' ಮಿಥ್ಯೆ'

ಎಂಬ ಸಿದ್ಧಾಂತಕ್ಕೆ ವಿರೋಧವುಂಟಾಗುತ್ತದೆ. ವೃತ್ತಿಯನ್ನು ಗೌಣವಾದ ಜ್ಞಾನವೆಂದು ಒಪ್ಪಿವರೂ, ಜ್ಞಾನವೆನ್ನುವುದು ಸ್ವರೂಪಕ್ಕೂ ವೃತ್ತಿಗೂ ಸಾಧಾರಣವಾದ್ದರಿಂದ ಅಂತಹ ಜ್ಞಾನವು ಭ್ರಾಂತಿಯನ್ನು ತೊಲಗಿಸುವುದೆಂಬುದು ಹಿಂದೆ ಹೇಳಿದ ರೀತಿಯಲ್ಲಿಯೇ ಸಂಭವಿಸುವಂತಿಲ್ಲ. ಸ್ವರೂಪಜ್ಞಾನವು ಭ್ರಾಂತಿಯನ್ನು ತೊಲಗಿಸಬಲ್ಲದೆಂದು ಒಪ್ಪಿದರೆ ಸಿದ್ಧಾಂತಕ್ಕೆ ವಿರೋಧವುಂಟಾಗುತ್ತದೆ.

ನಾಪಿ ತ್ರಿಚತುರಕಕ್ಷ್ಯಾಸ್ವಬಾಧ್ಯತ್ವಮಿತಿ ತೃತೀಯಃ, ಬ್ರಹ್ಮಣ್ಯೇವಾತಿವ್ಯಾಪ್ತೇಃ. ಅಬಾಧ್ಯಂ ಹಿ ಬ್ರಹ್ಮ ತ್ರಿಚತುರಕಕ್ಷ್ಯಾಃಬಾಧ್ಯಮೇವ. ನಚ ತ್ರಿಚತುರಕಕ್ಷ್ಯಾಸ್ವಬಾಧ್ಯತ್ವಂ, ತಥಾ ಸತಿ ಪ್ರಾತಿಭಾಸಿಕವಿಶೇಷೇಽತಿವ್ಯಾಪ್ತೇಃ. ಸಂಭವಂತಿ ಹಿ ದೀರ್ಘಕಾಲಾನುವೃತ್ತಭ್ರಮವಿಷಯಾಣಿ ಪ್ರಾತಿಭಾಸಿಕಾನಿ ವಸ್ತೂನ್ಯಲಾತಚಕ್ರಗಂಧರ್ವನಗರಾದೀನಿ. ಕಿಂಚ— ಕಕ್ಷ್ಯಾಶಬ್ದೋಽಯಂ ಯುಕ್ತಿಪರಃ? ಕಾಲಪರಃ? ವಿಪರೀತಪ್ರಮಾಪರೋ ವಾ? ನಾದ್ಯಃ—"ಪ್ರಪಂಚೋ ಮಿಥ್ಯಾ ದೃಶ್ಯತ್ವಾತ್" ಇತ್ಯೇಕಯೈವ ಕಕ್ಷ್ಯಯಾ ಪ್ರಪಂಚಸ್ಯ ಬಾಧೇನಾಸಂಭವಾತ್. "ತತ್ಪರತ್ವಾಪರತ್ವಾಚ್ಚ ನಿರ್ದೋಷತ್ವಾಚ್ಚ ವೈದಿಕಂ। ಪೂರ್ವಸ್ಯ ಬಾಧಕಂ" ಇತ್ಯೇಕಯುಕ್ತ್ಯನುಸಂಧಾನೇನಾಪಿ ಬಾಧೇನ ತದಾಪತ್ತೇಶ್ಚ. ನ ದ್ವಿತೀಯಃ— ದೀರ್ಘಕಾಲಭ್ರಮವಿಷಯೇ ಪ್ರಾತಿಭಾಸಿಕೇಽತಿವ್ಯಾಪ್ತೇಃ. ನ ತೃತೀಯಃ—ವಿಪರೀತಪ್ರಮಾವಿಷಯಶ್ಚ ಭವತ್ಯಬಾಧಿತಶ್ಚೇತಿ ವ್ಯಾಘಾತಾತ್. ನ ಚ ಬಾಧಃ ಪದಾರ್ಥನಿವೃತ್ತಿರಿತಿ ಯುಕ್ತಂ. ಮುದ್ಗರಾದಿನಿವರ್ತ್ಯೇಷು ಘಟಾದಿಷು ತ್ರಿಚತುರವಿಪರೀತಜ್ಞಾನಾನಿವರ್ತ್ಯತ್ವೇ ಸತಿ ವಿಪರೀತಜ್ಞಾನನಿವರ್ತ್ಯತ್ವಸ್ವಭಾವೇನಾವ್ಯಾಪ್ತೇಃ. ಅಪಿಚ—ತ್ರಿಚತುರಯುಕ್ತ್ಯಬಾಧ್ಯತ್ವೇ ಸತಿ ಬಾಧ್ಯತ್ವಮಿತಿ ಪ್ರಥಮಕಲ್ಪೇ ಬ್ರಹ್ಮಣ್ಯತಿವ್ಯಾಪ್ತಿಃ, ತಸ್ಯಾಪಿ ಯುಕ್ತಿಬಾಧಿತತ್ವಾತ್. ಜ್ಞಾನಾಜ್ಞಾನಯೋರೇಕವಿಷಯತ್ವೇನ ಯದ್ವಿಷಯಕಮಜ್ಞಾನಂ ತದ್ವಿಷಯಕಮೇವ ಜ್ಞಾನಂ ತಾದೃಶಾಜ್ಞಾನನಿವರ್ತಕಂ. ಪ್ರಕೃತೇ ಬ್ರಹ್ಮವಿಷಯಕಾಜ್ಞಾನಸ್ಯ ಬ್ರಹ್ಮವಿಷಯಕಜ್ಞಾನೇನೈವ ನಿವೃತ್ತಿಃ. ತಥಾಹಿ—ಬ್ರಹ್ಮ ದೃಶ್ಯಮದೃಶ್ಯಂ ವಾ? ದೃಶ್ಯತ್ವೇ ಮಿಥ್ಯಾತ್ವಮವರ್ಜನೀಯಂ. ಅದೃಶ್ಯತ್ವೇ ಬ್ರಹ್ಮವ್ಯವಹಾರಮಾತ್ರೋಚ್ಛೇದಃ, ತಸ್ಯ ದೃಗೇಕಸಾಧ್ಯತ್ವಾತ್. ಅವಿದ್ಯಾನಿವೃತ್ತಿಶ್ಚ ನ ಸ್ಯಾತ್, ಸಮಾನವಿಷಯಕದೃಗಭಾವಾತ್. ನ ಚ ವೃತ್ತಿಜ್ಞಾನೇನ ವ್ಯವಹಾರಾದಿಸರ್ವಸಮರ್ಥನಂ ಸಂಭವತಿ, ವೃತ್ತೇರಜ್ಞಾನಪರಿಣಾಮಭೂತಾಯಾ ಅಜ್ಞಾನತ್ವಾತ್. ನ ಚ ಜ್ಞಾನತ್ವಾರೋಪಮಾತ್ರೇಣ ವೃತ್ತಿಃ ಜ್ಞಾನಕಾರ್ಯಾಣಿ ಕರ್ತುಮರ್ಹತಿ. ಗುಂಜಾಧಿಷ್ಠಾನವಹ್ನೇರಪಿ ದಾಹಕತ್ವಪ್ರಸಂಗಾತ್. ನ ಚ ಜ್ಞಾನಾವಚ್ಛೇದಕತಯಾ ಮುಖ್ಯಮೇವ ಜ್ಞಾನತ್ವಮಿತಿ

**ಶಂಕ್ಯಂ. ಅವಚ್ಛೇದ್ಯಾವಚ್ಛೇದಕಭಾವೇನ ಜ್ಞಾನಭೇದಸ್ಯೈವ ಸಮರ್ಥನೇನ ವ್ಯಾಘಾತಾತ್, ಘಟೇಽಪ್ಯವಚ್ಛೇದಕತಾಪತ್ತೇಶ್ಚ. "ಘಟವದ್ಜ್ಞಾನಂ" ಇತ್ಯತ್ರ ಘಟೋಽಪ್ಯವಚ್ಛೇದಕಃ.**

ಮೂರು ನಾಲ್ಕು ಅವಸ್ಥೆಗಳಲ್ಲಿ ಮಾತ್ರವೇ ಬಾಧಿತವಾಗಿದಿರುವುದೇ ವ್ಯಾವಹಾರಿಕಸತ್ಯವೆಂದು ಹೇಳುವ ಮೂರನೆಯ ವಿಕಲ್ಪವೂ ಯುಕ್ತವಲ್ಲ. ಬ್ರಹ್ಮವು ಎಂದಿಗೂ ಅಬಾಧಿತವೇ ಆಗಿರುವುದರಿಂದ ಮೂರು ನಾಲ್ಕು ಅವಸ್ಥೆಗಳಲ್ಲೂ ಅಬಾಧಿತವೇ ಆಗುವುದರಿಂದ ಅದೂ ವ್ಯಾವಹಾರಿಕಸತ್ಯವೇ ಆಗಬೇಕಾಗುತ್ತದೆ. ಕೆಲವು ಕಡೆಗಳಲ್ಲಿ ಭ್ರಮವೂ ಬಹುಕಾಲ ಇರಬಹುದಾದ್ದರಿಂದ ಆ ಭ್ರಮಕ್ಕೆ ವಿಷಯವಾದ ವಸ್ತುಗಳೂ ವ್ಯಾವಹಾರಿಕಸತ್ಯವೇ ಆಗಬೇಕಾಗುತ್ತವೆ. ಉರಿಯುವ ಕೊಳ್ಳಿಯನ್ನು ಸುತ್ತಲೂ ತಿರುಗಿಸುವಾಗ ಅದು ಬಹುಕಾಲ ಗುಂಡಾಗಿ ಕಾಣಿಸುವುದು ಎಲ್ಲರಿಗೂ ಅನುಭವಸಿದ್ಧವಾಗಿದೆ. ಆಕಾಶದಲ್ಲಿ ಕಾಣುವ ಮೋಡಗಳು ಕೊಂಚಕಾಲ ಪ್ರಾಣಿಗಳಂತೆಯೂ, ಮನುಷ್ಯರಂತೆಯೂ ತೋರುತ್ತ ಗಂಧರ್ವನಗರವೆಂಬ ಭ್ರಾಂತಿಯನ್ನು ಹುಟ್ಟಿಸುವುದು ಸಹಜವಾಗಿದೆ. ಇದೂ ಅಲ್ಲದೆ ಇಲ್ಲಿ ಅವಸ್ಥೆಯೆಂದರೆ ಅರ್ಥವೇನು? ಯುಕ್ತಿಯೇ? ಕಾಲವೇ? ಅಥವಾ ಪ್ರಮಾತೃಕಜ್ಞಾನವೇ? ಮೊದಲನೆಯ ಪಕ್ಷದಲ್ಲಿ, 'ಪ್ರಪಂಚ ದೃಶ್ಯವಾದ್ದರಿಂದ ಮಿಥ್ಯೆಯಾಗುತ್ತದೆ' ಎಂಬ ಅನುಮಾನದಿಂದ ಮೊದಲನೆಯ ಯುಕ್ತಿಯ ಮಟ್ಟದಲ್ಲಿಯೇ ಪ್ರಪಂಚ ಮಿಥ್ಯೆ ಎಂಬುದು ಸಿದ್ಧಿಸದೇ ಹೋಗಬೇಕಾಗುತ್ತದೆ. ಕೊನೆಯದೂ, ನಿರ್ದುಷ್ಟವೂ ಆದ ಶಬ್ದಪ್ರಮಾಣವೆನಿಸಿದ ವೇದವಾಕ್ಯದಿಂದ ಪೂರ್ವವಾಕ್ಯಕ್ಕೆ ಬಾಧೆಯನ್ನು ಹೇಳುವಾಗ ಒಂದೇ ಯುಕ್ತಿಯಿಂದಲೇ ಬಾಧೆಯು ಸಿದ್ಧಿಸದೇ ಹೋಗುತ್ತದೆ. ಎರಡನೆಯ ಪಕ್ಷದಲ್ಲಿ ಬಹಳ ಕಾಲ ತೋರುವ ಕೆಳಗೆ ಹೇಳಿದ ಭ್ರಾಂತಿಗಳಲ್ಲಿ ಮೂರು ನಾಲ್ಕು ಕ್ಷಣಗಳವರೆಗೂ ಯಾವ ಬಾಧೆಯೂ ಇಲ್ಲದಿರುವುದರಿಂದ ಆ ಬಗೆಯ ಭ್ರಾಂತಿಗಳೂ ವ್ಯಾವಹಾರಿಕ ಸತ್ಯವೇ ಆಗಬೇಕಾಗುತ್ತವೆ. ಮೂರನೆಯ ಪಕ್ಷದಲ್ಲಿ, ವಿಪರೀತವಾದ ಭ್ರಮೆ ಬಂದಮೇಲೆ ಅದಕ್ಕೆ ಬಾಧವುಂಟಾಗಲೇ ಬೇಕಾದ್ದರಿಂದ ಮೂರು ನಾಲ್ಕು ಅವಸ್ಥೆಗಳವರೆಗೂ 'ಬಾಧ್ಯವಾಗದಿರುವಿಕೆ' ಎಂಬುದೇ ವಿರುದ್ಧವಾಗುತ್ತದೆ. ದೊಣ್ಣೆಯಿಂದ ಘಟನಾಶವಾಗುವಾಗ ಒಂದೇ ಜ್ಞಾನದಿಂದಲೇ ಘಟಕ್ಕೆ ಬಾಧೆ ಬರುವುದರಿಂದ ಮೂರು ನಾಲ್ಕು ಜ್ಞಾನಗಳಿಂದ ಬಾಧೆಗೆ ಪ್ರಸಕ್ತಿ ಇಲ್ಲದ್ದರಿಂದ ಆ ಘಟವು ವ್ಯಾವಹಾರಿಕಸತ್ಯವಾಗದೇ ಹೋಗಬೇಕಾದೀತು. ಇದಲ್ಲದೆ ಮೊದಲನೆಯ ಪಕ್ಷದಲ್ಲಿ ಬ್ರಹ್ಮಕ್ಕೂ ಯುಕ್ತಿಯಿಂದ ಬಾಧೆಯನ್ನು ಹೇಳಬಹುದಾದ್ದರಿಂದ ಬ್ರಹ್ಮವೂ ವ್ಯಾವಹಾರಿಕಸತ್ಯವೇ ಆಗಬೇಕಾದೀತು. ಯಾವ ವಸ್ತುವಿನ ಬಗ್ಗೆ ಅಜ್ಞಾನ ಬಂದಿದೆಯೋ ಆ ವಸ್ತುವಿನ ಜ್ಞಾನದಿಂದ ಆ ಅಜ್ಞಾನ ತೊಲಗುವುದೆಂದು ಹೇಳುವುದು ವಾಡಿಕೆಯಾಗಿದೆ. ಈಗ ಬ್ರಹ್ಮವಿಷಯಕವಾದ ಅಜ್ಞಾನವು ತೊಲಗಬೇಕಾದರೆ ಬ್ರಹ್ಮವಿಷಯಕವಾದ ಜ್ಞಾನ ಬರಬೇಕು. ಹಾಗಾದರೆ ಬ್ರಹ್ಮ ಜ್ಞಾನಗೋಚರ

ವಾಗುವುದೇ ಅಥವಾ ಇಲ್ಲವೇ ಎಂಬ ಪ್ರಶ್ನೆ ಏಳುತ್ತದೆ. ಬ್ರಹ್ಮ ಜ್ಞಾನಗೋಚರವಾದರೆ ಪ್ರಪಂಚದಂತೆ ಬ್ರಹ್ಮವೂ ಮಿಥ್ಯೆಯಾಗಬೇಕಾಗುತ್ತದೆ. ಬ್ರಹ್ಮವಿಷಯಕವಾದ ಅಜ್ಞಾನವೂ ತೊಲಗದೆ ಇರಬೇಕಾಗುತ್ತದೆ. ಅಂತಃಕರಣದ ವೃತ್ತಿ ಎನಿಸಿದ ಜ್ಞಾನದಿಂದ ಅಜ್ಞಾನವು ತೊಲಗುವುದೆಂದು ಹೇಳುವುದೂ ಯುಕ್ತವಲ್ಲ; ಯಾಕೆಂದರೆ ವೃತ್ತಿಯೂ ಸಹ ಅಜ್ಞಾನದ ಪರಿಣಾಮವೇ ಆಗಿರುವುದರಿಂದ ಅದು ಜ್ಞಾನರೂಪವಾಗುವಂತಿಲ್ಲ. ಗೌಣವಾಗಿ ಅದನ್ನು ಜ್ಞಾನವೆಂದು ಒಪ್ಪಿದರೂ ಅದು ಜ್ಞಾನದ ಕಾರ್ಯವನ್ನು ನೆರವೇರಿಸುವಂತಿಲ್ಲ. ಗುಲಗಂಜಿಯನ್ನು ಬೆಂಕಿ ಎಂದು ನಾವು ತಿಳಿದದ್ದರಿಂದಲೇ ಅದು ನಮ್ಮನ್ನು ಸುಡುವುದಿಲ್ಲ. ಅಂತಃಕರಣದ ವೃತ್ತಿಯು ಜ್ಞಾನಕ್ಕೆ ಅವಚ್ಛೇದಕವಾಗುವುದರಿಂದ ಅದನ್ನು ಜ್ಞಾನವೆಂದು ಕರೆದರೂ, ಜ್ಞಾನಕ್ಕೂ ವೃತ್ತಿಗೂ ಅವಚ್ಛೇದ್ಯಾವಚ್ಛೇದಕಭಾವದಿಂದ ಭೇದವನ್ನು ಹೇಳಿದಂತಾಗುವುದೇ ಹೊರತು ವೃತ್ತಿಯೇ ಜ್ಞಾನವಾಗುವುದಿಲ್ಲ; ಇಲ್ಲವಾದರೆ ಘಟಾದಿ ವಸ್ತುಗಳು ಜ್ಞಾನಕ್ಕೆ ಅವಚ್ಛೇದಕವಾಗುವುದರಿಂದ ಅವನ್ನೂ ಸಹ ಜ್ಞಾನವೆಂದೇ ಹೇಳಬೇಕಾಗುತ್ತದೆ.

ಕಿಂಚ—ವೃತ್ತೇರ್ಜ್ಞಾನಪದಮುಖ್ಯಾರ್ಥತ್ವೇ ಬ್ರಹ್ಮಣೋ ಜ್ಞಾನಭಿನ್ನತ್ವೈವ ಸ್ಯಾತ್. ನ ಚ ಬ್ರಹ್ಮವೃತ್ತ್ಯೋರನುಗತಂ ಕಿಂಚಿತ್ಪ್ರವೃತ್ತಿನಿಮಿತ್ತಮಸ್ತಿ, ಯೇನೋಭಯತ್ರ ಮುಖ್ಯಂ ಸ್ಯಾತ್. ನ ಚ ಜ್ಞಾನತ್ವಂ ಅಸಿದ್ಧೇರಿತ್ಯುಕ್ತೇಃ. ನ ಹಿ ಜ್ಞಾನಾಜ್ಞಾನಸಪರಿಣಾಮಾನುಗತಂ ಜ್ಞಾನತ್ವಂ ಪ್ರಾಮಾಣಿಕಂ. ಸ್ವವ್ಯಾಪಕಸ್ವಪ್ರಕಾಶತ್ವನಿವೃತ್ತ್ಯಾ ಜ್ಞಾನತ್ವನಿವೃತ್ತೇಶ್ಚ. ನಿರ್ವಿಶೇಷೇ ಚಿನ್ಮಾತ್ರೇ ತದಭಾವೇ ಅಜ್ಞಾನತ್ವಪ್ರಸಂಗಾಚ್ಚ. ನಾಪ್ಯವಿದ್ಯಾನಿವರ್ತಕತ್ವಂ, ಜ್ಞಾನತ್ವಸ್ಯ ಸ್ವವ್ಯಾಪಕಸ್ಯ ನಿವೃತ್ತ್ಯಾ ಸ್ವಸ್ಯಾಪಿ ನಿವೃತ್ತೇಃ. ಅಧ್ಯಾಸಸಹೇ ಚಿನ್ಮಾತ್ರೇ ತದಭಾವೇನಾವ್ಯಾಪ್ತೇಶ್ಚ. ನಾಪಿ ಪ್ರವೃತ್ತಿನಿವೃತ್ತಿದ್ವಯೇನೋಭಯಮುಖ್ಯತ್ವಂ, ಅನೇಕಾರ್ಥತ್ವಕಲ್ಪನಾಪ್ರಸಂಗಾತ್. ವೃತ್ತ್ಯವಚ್ಛಿನ್ನಚೈತನ್ಯಸ್ಯ ಜಗದಾಭಾಸಕಲ್ಪನಾವೈಯರ್ಥ್ಯಾತ್. ಬ್ರಹ್ಮಣೋ ದೃಶ್ಯತ್ವೇನ ಮಿಥ್ಯಾತ್ವಾಪಾದನಸ್ಯ ವಜ್ರಲೇಪತ್ವಾಪಾತಾಚ್ಚ. ಜ್ಞಾನಾಜ್ಞಾನಯೋರ್ಜ್ಞಾನಪದಮುಖ್ಯಾರ್ಥತ್ವಸಮರ್ಥನಾಯ ಪ್ರವೃತ್ತಿನಿವೃತ್ತಿದ್ವಯಕಲ್ಪನೇ ಘಟಪಟಯೋರ್ಘಟಪದಮುಖ್ಯಾರ್ಥತ್ವಾಪತ್ತೇಶ್ಚ. ಏವಂ ಚ ವೃತ್ತೇರ್ಜ್ಞಾನತ್ವಾಭಾವೇನ ಬ್ರಹ್ಮಣೋ ನಿರ್ವಿಷಯತ್ವಸ್ವರೂಪಪ್ರಕಾಶಸ್ಯಾಪಿ ಸ್ವಾವಿಷಯತ್ವಾದ್ಬ್ರಹ್ಮಣಸ್ತುಚ್ಛತ್ವಂ ಸರ್ವೇಷಾಂ ಚೈತನ್ಯಾನಾಂ ಸ್ವಾವಿಷಯಬ್ರಹ್ಮಾಭಿನ್ನತಯಾ ಮಿಥೋ ವ್ಯವಹಾರಾನುಪಪತ್ತೇಶ್ಚ. ವೃತ್ತೇರ್ಮುಖ್ಯಜ್ಞಾನತ್ವೇ ಸ್ವಪ್ರಕಾಶಸ್ವವಿಷಯತ್ವೇ ವಾ ಬ್ರಹ್ಮಣೋ ಮಿಥ್ಯಾತ್ವಮವರ್ಜನೀಯಂ. ಕಲ್ಪಿತಭೇದಮಾದಾಯ ದೇವದತ್ತಾದೀನಾಂ ಮಿಥೋ ವ್ಯವಹಾರೇ

ಚೈತನ್ಯಸ್ಯ ಚೈತನ್ಯವಿಷಯತಯಾ ಮಿಥ್ಯಾತ್ವಮವರ್ಜನೀಯಂ. ನ ಚ— "ಮಿಥ್ಯಾಭೂತಭೇದವಚ್ಚೈತನ್ಯವಿಷಯತ್ವಂ ನ ಮಿಥ್ಯಾತ್ವಪ್ರಯೋಜಕಂ, ಪ್ರಪಂಚೇಽಪಿ ತದಸಿದ್ಧೇಃ. ಜೀವಸ್ಯ ವಿಶಿಷ್ಟರೂಪೇಣ ಮಿಥ್ಯಾತ್ವಮಿಷ್ಟಂ—ನಿಷ್ಕೃಷ್ಟರೂಪಂ ತು ನ ಚಿದ್ವಿಷಯಂ" ಇತಿ ವಾಚ್ಯಂ. ತರ್ಹಿ ವೃತ್ತಿವಿಶಿಷ್ಟಮಪಿ ಜ್ಞಾನಂ ಮಿಥ್ಯಾತ್ವಾನ್ನ ಮುಖ್ಯಾ ದೃಗಿತಿ ನ ಪ್ರಪಂಚೇಽಪಿ ದೃಶ್ಯತ್ವಮಿತಿ ಜಿತಮಸ್ಮಾಭಿಃ. ವಿಶಿಷ್ಟಾನ್ಯತ್ವೇ ತಸ್ಯಾಪಿ ವೃತ್ತಿವಿಷಯತ್ವಾನ್ಮಿಥ್ಯಾತ್ವಂ, ಅನನ್ಯತ್ವೇ ವಿಶಿಷ್ಟಸ್ಯ ಮಿಥ್ಯಾತ್ವಾತ್ತಸ್ಯ ಶುದ್ಧಾಭಿನ್ನತ್ವಾತ್ಪ್ರಪಂಚಸ್ಯ ಸತ್ಯತ್ವಂ ಬ್ರಹ್ಮಣೋ ಮಿಥ್ಯಾತ್ವಮಿತಿ ವಿಪರೀತವೃತ್ತಿಃ. ತಸ್ಮಾದ್ವಿಶಿಷ್ಟಾನನ್ಯತ್ವಾಭ್ಯಾಂ ಪ್ರಪಂಚಬ್ರಹ್ಮಣೋಃ ಸತ್ಯತ್ವಮಿಥ್ಯಾತ್ವವಿಪರೀತವೃತ್ತಿರ್ದುರ್ವಾರೈವ.

ಇದೂ ಅಲ್ಲದೆ ವೃತ್ತಿಯನ್ನೇ ಜ್ಞಾನವೆಂದು ಹೇಳುವುದಾದರೆ, ಬ್ರಹ್ಮವನ್ನು ಜ್ಞಾನದಿಂದ ಭಿನ್ನವೆಂದು ಹೇಳಬೇಕಾಗುತ್ತದೆ. ಬ್ರಹ್ಮ ಮತ್ತು ವೃತ್ತಿ ಎರಡಕ್ಕೂ ಅನ್ವಯಿಸುವಂತೆ ಒಂದು ಜ್ಞಾನಪದವನ್ನು ಹೇಳಲಾಗುವುದಿಲ್ಲ; ಯಾಕೆಂದರೆ ಜ್ಞಾನ ಮತ್ತು ಅಜ್ಞಾನಗಳೆರಡನ್ನೂ ಒಟ್ಟುಗೂಡಿಸಿ ಒಂದೇ ಪದದಿಂದ ನಿರ್ದೇಶಿಸಲು ಎಂದಿಗೂ ಸಾಧ್ಯವಾಗುವುದಿಲ್ಲ. ವೃತ್ತಿ ಪ್ರಕಾಶರೂಪವಾಗುವುದಿಲ್ಲವಾದ್ದರಿಂದ ಅದು ಜ್ಞಾನರೂಪವೂ ಆಗುವುದಿಲ್ಲ. ನಿರ್ವಿಶೇಷಬ್ರಹ್ಮವನ್ನು ಜ್ಞಾನರೂಪವೆಂದು ಹೇಳದೆ ಹೋದರೆ ಬ್ರಹ್ಮವೂ ಅಜ್ಞಾನರೂಪವೇ ಆಗಬೇಕಾದೀತು. ಅವಿದ್ಯೆಯನ್ನು ತೊಲಗಿಸುವುದೇ ಎರಡಕ್ಕೂ ಸಮಾನವಾಗಿ ಅನ್ವಯಿಸುವ ಪದವೆಂದು ಹೇಳುವುದೂ ಸರಿಯಲ್ಲ. ವೃತ್ತಿಯು ಜ್ಞಾನವಲ್ಲದ್ದರಿಂದ ಅವಿದ್ಯೆಯನ್ನು ತೊಲಗಿಸಲಾರದು. ಬ್ರಹ್ಮವಂತೂ ತನ್ನಲ್ಲಿ ಪ್ರಪಂಚಭ್ರಮವನ್ನು ಹುಟ್ಟಿಸಿಕೊಂಡಿರುವುದರಿಂದ ಅದರ ಸ್ವರೂಪಜ್ಞಾನವು ಅವಿದ್ಯೆಯನ್ನು ತೊಲಗಿಸುವಂತಿಲ್ಲ. ಒಂದೇ ಜ್ಞಾನಪದಕ್ಕೆ ಎರಡರಲ್ಲೂ ಪ್ರತ್ಯೇಕವಾಗಿ ಎರಡು ಶಕ್ತಿಗಳನ್ನು ಒಪ್ಪಿದರೆ, ಜ್ಞಾನಪದವೂ ಅನೇಕಾರ್ಥಕವಾಗಬೇಕಾಗುತ್ತದೆ, ಅಂದರೆ ಜ್ಞಾನಪದವೇ ವೃತ್ತಿಯನ್ನೂ, ಬ್ರಹ್ಮಜ್ಞಾನವನ್ನೂ ಬೋಧಿಸಬೇಕಾಗುತ್ತದೆ. ಬ್ರಹ್ಮದ ಜ್ಞಾನದಿಂದಲೇ ಜಗತ್ತಿನ ತೋರುವಿಕೆಯನ್ನು ನಿರ್ವಹಿಸಬೇಕಾಗಿರುವುದರಿಂದ ವೃತ್ತಿಯೊಳಗಿನ ಚೈತನ್ಯದಿಂದ ಪ್ರಪಂಚದ ತೋರುವಿಕೆಯನ್ನು ನಿರ್ವಹಿಸುವುದು ವ್ಯರ್ಥವೇ ಆಗುತ್ತದೆ. ಬ್ರಹ್ಮವೂ ಆ ವೃತ್ತಿಗೆ ವಿಷಯವಾಗುವುದರಿಂದ ಅದೂ ಪ್ರಪಂಚದಂತೆ ಮಿಥ್ಯೆಯಾಗುವುದೆಂಬ ದೋಷ ಸ್ಥಿರವಾಗುತ್ತದೆ. ಆದ್ದರಿಂದ ವೃತ್ತಿ ಎಂದಿಗೂ ಜ್ಞಾನವಾಗಲಾರದು. ಬ್ರಹ್ಮವಂತೂ ಜ್ಞಾನವಿಷಯವಾಗದಿದ್ದರೆ ಅದನ್ನು ತುಚ್ಛವೆಂದೆಣಿಸಬೇಕಾಗುತ್ತದೆ. ಇದೂ ಅಲ್ಲದೆ, ಎಲ್ಲಾ ಚೈತನ್ಯವೂ ಒಂದೇ ಆಗುವುದರಿಂದ ವ್ಯವಸ್ಥಿತವಾದ ವ್ಯವಹಾರಗಳನ್ನು ನಡೆಸಲು ಸಾಧ್ಯವಾಗುವುದಿಲ್ಲ. ವೃತ್ತಿಯೇ ಮುಖ್ಯಜ್ಞಾನವೆಂದರೆ, ಬ್ರಹ್ಮವೂ ಮಿಥ್ಯೆಯಾಗಬೇಕಾಗುತ್ತದೆ. ಬ್ರಹ್ಮಚೈತನ್ಯ ಒಂದೇ ಆದರೂ ಕಲ್ಪಿತ

ಭೇದವನ್ನವಲಂಬಿಸಿ ಲೋಕವ್ಯವಹಾರವನ್ನು ನಿರ್ವಹಿಸುವುದಾದರೆ, ಬ್ರಹ್ಮಚೈತನ್ಯವು ಜ್ಞಾನವಿಷಯವಾದ್ದರಿಂದ ಮಿಥ್ಯೆಯೇ ಆಗಬೇಕಾಗುತ್ತದೆ. ಮಿಥ್ಯೆಯಾದ ಭೇದವಿರುವ ಚೈತನ್ಯದಲ್ಲಿ ವಿಷಯವಾದ್ದರಿಂದಲೇ ಬ್ರಹ್ಮವು ಮಿಥ್ಯೆಯಾಗುವುದಿಲ್ಲವೆಂದರೆ ಆವಾಗ ಪ್ರಪಂಚಕ್ಕೂ ಮಿಥ್ಯೆ ಎಂಬುದು ಸಿದ್ಧಿಸುವುದಿಲ್ಲ. ಜೀವನನ್ನೂ ಸಹ ಮಿಥ್ಯೆ ಎಂದು ಹೇಳಬೇಕಾಗುವುದು. ಅಂತಃಕರಣವೆಂಬ ಉಪಾಧಿಯೊಡಗೂಡಿದ್ದರಿಂದ ಜೀವನು ಮಿಥ್ಯೆಯೇ ಆದರೂ ನಿಷ್ಕೃಷ್ಟವಾದ ಚೈತನ್ಯವು ಜ್ಞಾನವಿಷಯವಾಗುವುದಿಲ್ಲವಾದ್ದರಿಂದ ಸತ್ಯವೇ ಆಗುವುದು; ಅಂದರೆ ವೃತ್ತಿರೂಪವಾದ ಉಪಾಧಿಯೊಡಗೂಡಿದ ಚೈತನ್ಯವು ಮಿಥ್ಯೆಯೊಗುವುದರಿಂದ ಆ ವೃತ್ತಿಗೆ ವಿಷಯವಾದ ಪ್ರಪಂಚವು ಜ್ಞಾನಗೋಚರವಾಗಲಾರದು. ಇದರಿಂದ ಪ್ರಪಂಚವು ಮಿಥ್ಯೆ ಎನಿಸಲಾರದು. ಅಂತಹ ವೃತ್ತಿಗೆ ವಿಷಯವಾದ್ದರಿಂದಲೇ ಪ್ರಪಂಚವನ್ನು ಮಿಥ್ಯೆ ಎಂದು ಹೇಳುವುದಾದರೆ, ಬ್ರಹ್ಮವನ್ನೂ ಮಿಥ್ಯೆ ಎಂದು ಹೇಳಬೇಕಾಗುತ್ತದೆ. ಅಥವಾ ಬ್ರಹ್ಮದಂತೆ ಪ್ರಸಂಚವೂ ಸತ್ಯವಾಗಬೇಕಾಗುತ್ತದೆ. ಆದ್ದರಿಂದ ಪ್ರಪಂಚ ಬ್ರಹ್ಮವೆರಡನ್ನೂ ಮಿಥ್ಯೆ ಸತ್ಯಗಳೆಂದು ಸಾಧಿಸಲು ಕ್ಲೇಶವಾಗುತ್ತದೆ.

ಕಿಂಚ—ನಿರ್ವಿಶೇಷಂ ಬ್ರಹ್ಮ ಕಿಮಸ್ತಿ? ಉತ ನಾಸ್ತಿ? ದ್ವಿತೀಯೇ ಮಾಧ್ಯಮಿಕಮತಪ್ರವೇಶಃ. ಪ್ರಥಮೇ ಬ್ರಹ್ಮಾಸ್ತೀತಿ ಪ್ರತಿಜ್ಞಾಯಾಂ ಪ್ರವೃತ್ತಿನಿಮಿತ್ತಭೇದೇ ನಿರ್ವಿಶೇಷತ್ವವ್ಯಾಹತಿಃ. ನ ಚ ಪ್ರತಿಜ್ಞಾಪ್ರವೃತ್ತಿನಿಮಿತ್ತಯೋಃ ಕಲ್ಪಿತತ್ವೇನ ಪರಿಹಾರಃ, ನಿರ್ವಿಶೇಷಂ ಬ್ರಹ್ಮಾಸ್ತೀತಿ ಪ್ರತಿಜ್ಞಾಯಾಸ್ಸವಿಶೇಷವಿಷಯಕತ್ವಾಕಥನಸ್ಯ ಉನ್ಮತ್ತಪ್ರಲಾಪತ್ವಾತ್, ಅಸ್ತಿಶಬ್ದಪ್ರವೃತ್ತಿನಿಮಿತ್ತಭೂತಾಯಾಸ್ಸತ್ತಾಯಾಸ್ತ್ವನ್ಮತೇ ಮಿಥ್ಯಾತ್ವಾಯೋಗಾಚ್ಚ, ಬ್ರಹ್ಮತ್ವಸ್ಯ ಕಲ್ಪಿತತ್ವೇ ನಿರ್ವಿಶೇಷಸ್ಯಾಬ್ರಹ್ಮತಾಪಾತಾಚ್ಚ. ಯತ್ರ ಬ್ರಹ್ಮತ್ವಂ ಪ್ರಕಲ್ಪಿತಂ ತದೇವ ಬ್ರಹ್ಮೇತ್ಯುಕ್ತೇ ರ್ವ್ಯಾಹತತ್ವಾಚ್ಚ, ನಿರ್ವಿಶೇಷಸ್ಯ ಕಲ್ಪಿತಸಂಬಂಧಾಯೋಗಾಚ್ಚ, ಪ್ರವೃತ್ತಿನಿಮಿತ್ತಾಭೇದೇ ತು ಸಾಮಾನಾಧಿಕರಣ್ಯಾಯೋಗಃ. "ಭಿನ್ನಪ್ರವೃತ್ತಿನಿಮಿತ್ತಾನಾಂ ಶಬ್ದಾನಾಮೇಕಸ್ಮಿನ್ನರ್ಥೇ ವೃತ್ತಿಸ್ಸಾಮಾನಾಧಿಕರಣ್ಯಂ"ಇತಿ ವೃದ್ಧಾಃ. ಅಭಾವರೂಪಧರ್ಮಪ್ರವೃತ್ತಿನಿಮಿತ್ತಕತಾಯಾಮಪ್ಯಯಮೇವ ದೋಷಃ. ಅಭಾವಾನಾಂ ಸ್ವರೂಪಾನತಿರೇಕೇ ಸಾಮಾನಾಧಿಕರಣ್ಯಹಾನೇಃ, ಅತಿರೇಕೇ ಸಿದ್ಧಾಂತಹಾನೇಃ. ಏತೇನ ನಿರ್ವಿಶೇಷಃ ಪ್ರತಿಜ್ಞಾದೀನಾಮವಿಷಯೋಽಪಿ ಸ್ವತಸ್ಸಿದ್ಧ್ಯತೀತಿ ನಿರಸ್ತಂ. ದುಸ್ಸಾಧ್ಯೇಷು ಸರ್ವೇಷ್ವರ್ಥೇಷು ಸ್ವತಸ್ಸಿದ್ಧೇರ್ದುರ್ವಾರತ್ವಾಪಾತಾತ್. ಏತೇನ ಶ್ರುತ್ಯಾ ನಿರ್ವಿಶೇಷಸಿದ್ಧಿರಪಾಸ್ತಾ. ಪ್ರಕೃತಿಪ್ರತ್ಯಯಭೇದಭಿನ್ನಾಯಾಃ ಶ್ರುತೇಸ್ತತ್ರ ಪ್ರಾಮಾಣ್ಯಾಸಂಭವಾತ್, ಪೂರ್ವೋಕ್ತದೃಶ್ಯತ್ವಾನುಮಾನಗ್ರಾಸಾಚ್ಚ. ಅಪಿಚ—ಮಿಥ್ಯಾರ್ಥಬ್ರಹ್ಮಣೋ

ರ್ಭೇದಃ ಪರಮಾರ್ಥಃ? ಉತಾಪರಮಾರ್ಥಃ? ಪ್ರಥಮವಿಕಲ್ಪೇ ಭೇದ ಸತ್ಯತ್ವಾಂಗೀಕಾರಾತ್ಸಿದ್ಧಾಂತಹಾನಿಃ. ದ್ವಿತೀಯೇ ಸತ್ಯಸ್ಯ ಬ್ರಹ್ಮಣೋಽಪಿ ಮಿಥ್ಯಾತ್ವಂ ದುರ್ವಾರಂ. ಯಯೋರ್ಭೇದೋ ಮಿಥ್ಯಾ ತಯೋರೈಕ್ಯ ಮಿತಿ ವ್ಯಾಪ್ತೇಃ. ಘಟಸ್ಯ ಸ್ವಸ್ಮಾದ್ಭೇದೇ ಮಿಥ್ಯಾಭೂತೇ ಹ್ಯಭೇದಃ ಪರಮಾರ್ಥಃ. ನ ಚ ಭೇದಾಭೇದಯೋರ್ಮಿಥ್ಯಾತ್ವಾನ್ನ ದೋಷ ಇತ್ಯಪಿ ಸಾಧು, ಪರಸ್ಪರವಿರೋಧೇ ಪ್ರಕಾರಾಂತರಾನವಸ್ಥಿತೇಃ. ಯದ್ಯೇವಂ ಸ್ಯಾತ್ತರ್ಹಿ ಭೇದಾಭೇದಯೋರಪಕ್ಷಪಾತಿನಾ ಭವತಾ ಜೀವಬ್ರಹ್ಮಣೋಸ್ತದುಭಯಮಿಥ್ಯಾತ್ವಂ ಕಿಂ ನ ಸ್ವೀಕ್ರಿಯೇತ? ನಚಾಭೇದಶ್ರುತಿಪ್ರಾಬಲ್ಯಾತ್ತದಸಂಭವಃ. "ಸರ್ವಂ ಖಲ್ವಿದಂ ಬ್ರಹ್ಮ" ಇತ್ಯಾದೀನಾಮೇವ ಪ್ರಪಂಚಬ್ರಹ್ಮಾಭೇದಶ್ರುತೀನಾಮುತ್ರಾಪಿ ಸತ್ತ್ವಾತ್.

ಇದೂ ಅಲ್ಲದೆ ನಿರ್ವಿಶೇಷಬ್ರಹ್ಮ ಇದೆಯೇ ಇಲ್ಲವೇ ಎಂಬ ಪ್ರಶ್ನೆಯೊಂದು ಸಂಭವಿಸುತ್ತದೆ. ಇಲ್ಲವೆಂದರೆ ಶೂನ್ಯವಾದವೇ ಸಂಭವಿಸುತ್ತದೆ. ಇದೆ ಎಂದರೆ ಬ್ರಹ್ಮದಲ್ಲಿ ಇರುವಿಕೆ ಎಂಬ ವಿಶೇಷವನ್ನು ಒಪ್ಪಿದ್ದರಿಂದ ಬ್ರಹ್ಮ ಸವಿಶೇಷವೇ ಆಗುತ್ತದೆ. ಆ ಇರುವಿಕೆಯನ್ನು ಕಲ್ಪಿತವೆಂದು ಹೇಳುವುದಾದರೆ, ನಿರ್ವಿಶೇಷ ಬ್ರಹ್ಮವಿದೆ ಎಂಬ ವಾಕ್ಯ ನಿರ್ವಿಶೇಷಬ್ರಹ್ಮವನ್ನು ಗುರ್ತಿಸುವುದಿಲ್ಲ; ಆದರೆ ಸವಿಶೇಷಬ್ರಹ್ಮವನ್ನೇ ಗುರ್ತಿಸುವುದೆಂದು ಒಪ್ಪಬೇಕಾಗುತ್ತದೆ. ನಿರ್ವಿಶೇಷ ಪದದಿಂದ ಸವಿಶೇಷವನ್ನು ನಿರ್ದೇಶಿಸುವುದಾದರೆ, ಅದು ಹುಚ್ಚುತನವೆನಿಸುತ್ತದೆ. ಅಸ್ತಿ ಎಂಬ ಧಾತುವಿನ ಅರ್ಥವಾದ ಇರುವಿಕೆಯು ಮಿಥ್ಯೆಯಾಗುವಂತೆಯೂ ಇಲ್ಲ. ನಿರ್ವಿಶೇಷಬ್ರಹ್ಮದಲ್ಲಿ ಬ್ರಹ್ಮಭಾವವೂ ಕಲ್ಪಿತವೆಂದು ಹೇಳಿದರೆ ಅದು ಬ್ರಹ್ಮವೇ ಆಗದೆ ಹೋಗಬೇಕಾದೀತು. ಎಲ್ಲಿ ಬ್ರಹ್ಮಭಾವವು ಕಲ್ಪಿತವಾಗಿದೆಯೋ ಅದು ಬ್ರಹ್ಮವಾಗುವುದು ಹೇಗೆ ಸಾಧ್ಯವಾದೀತು? ಬ್ರಹ್ಮಪದಕ್ಕೂ ನಿರ್ವಿಶೇಷಪದಕ್ಕೂ ಪ್ರವೃತ್ತಿನಿಮಿತ್ತವು ಬೇರೆಯಾಗದಿದ್ದರೆ ಎರಡಕ್ಕೂ ವಿಶೇಷಣವಿಶೇಷ್ಯಭಾವವು ಬರುವಂತಿಲ್ಲ. ಬೇರೆ ಪ್ರವೃತ್ತಿನಿಮಿತ್ತಗಳಿರುವ ಎರಡು ಶಬ್ದಗಳು ಒಂದರ್ಥವನ್ನು ಬೋಧಿಸುವುದೇ ಸಾಮಾನಾಧಿಕರಣ್ಯವೆಂದು ಅನುಭವಿಗಳು ಹೇಳುವರು. ಅಭಾವ ರೂಪವಾದ ಪ್ರವೃತ್ತಿನಿಮಿತ್ತವನ್ನು ಒಪ್ಪುವುದಾದರೂ ಆ ಅಭಾವ ಬ್ರಹ್ಮದ ಸ್ವರೂಪವೆನಿಸಿದರೆ, ಪ್ರವೃತ್ತಿನಿಮಿತ್ತದ ಭೇದ ಸಿದ್ಧಿಸದೇ ಹೋಗುವುದು. ಪ್ರವೃತ್ತಿನಿಮಿತ್ತ ಬೇರೆಯಾದರೆ ಸಿದ್ಧಾಂತವಿರೋಧವುಂಟಾಗುವುದು. ನಿರ್ವಿಶೇಷವಸ್ತು ಸ್ವತಃ ಸಿದ್ಧಿಸುವುದೆಂದು ಹೇಳುವುದೂ ಸರಿಯಲ್ಲ. ಸಾಧಿಸಲಾಗದಿರುವ ಎಲ್ಲಾ ಪದಾರ್ಥಗಳೂ ಸ್ವತಃ ಸಿದ್ಧಿಸುತ್ತವೆ ಎಂದು ಒಬ್ಬನು ಹೇಳುವುದಾದರೆ ಅದಕ್ಕೆ ಉತ್ತರವನ್ನೇ ಹೇಳಲಿಕ್ಕಾಗುವುದಿಲ್ಲ. ಪ್ರಕೃತಿಪ್ರತ್ಯಯಗಳ ಭೇದದಿಂದ ಶಬ್ದಗಳು ಸವಿಶೇಷವಸ್ತುವನ್ನೇ ಬೋಧಿಸುತ್ತವೆಯಾದ್ದರಿಂದ, ಶ್ರುತಿಯಿಂದ ನಿರ್ವಿಶೇಷವಸ್ತುವಿನ ಸಿದ್ಧಿಯೂ ಆಗುವಂತಿಲ್ಲ. ಬ್ರಹ್ಮ ಶಬ್ದ [illegible] ಪ್ರ[illegible]ತು. ಇದೂ

ಅಲ್ಲದೆ, ಮಿಥ್ಯೆ ಎಂಬ ಪದದ ಅರ್ಥಕ್ಕೂ ಬ್ರಹ್ಮಕ್ಕೂ ಭೇದವು ಸತ್ಯವೋ ಅಥವಾ ಮಿಥ್ಯೆಯೋ ಎಂಬ ಸಂಶಯ ಬರುತ್ತದೆ. ಭೇದವು ಸತ್ಯವೆಂದು ಹೇಳುವುದಾದರೆ, ಅದ್ವೈತಸಿದ್ಧಾಂತಕ್ಕೆ ಭಂಗ ಬರುತ್ತದೆ. ಭೇದವನ್ನು ಮಿಥ್ಯೆ ಎಂದು ಹೇಳಿದರೆ, ಬ್ರಹ್ಮವೂ ಮಿಥ್ಯೆಯಾಗಬೇಕಾಗುವುದು. ಯಾವ ಎರಡರ ಭೇದ ಮಿಥ್ಯೆಯಾಗುವುದೋ ಅವೆರಡೂ ಒಂದೇ ಬಗೆಯಾಗುವುವೆಂಬುದು ಸಹಜ. ಭೇದ ಅಭೇದವೆರಡೂ ಮಿಥ್ಯೆಯಾದ್ದರಿಂದ ಈ ದೋಷಕ್ಕೆ ಪ್ರಸಕ್ತಿ ಇಲ್ಲವೆಂದು ಹೇಳುವುದೂ ಸರಿಯಲ್ಲ. ವಿರುದ್ಧವಾದ ಎರಡು ಪಕ್ಷಗಳಲ್ಲಿ ಯಾವುದಾದರೊಂದು ದೃಢವಾಗಿ ನಿಲ್ಲಬೇಕು. ಇಷ್ಟಲ್ಲದೆ ಜೀವಬ್ರಹ್ಮರಿಬ್ಬರಿಗೂ ಭೇದಾಭೇದವೆರಡನ್ನೂ ಮಿಥ್ಯೆ ಎಂದು ಒಪ್ಪದೆ ಭೇದ ಒಂದನ್ನೇ ಮಿಥ್ಯೆ ಎಂದು ಹೇಗೆ ಹೇಳಬಹುದು? ಅಭೇದಶ್ರುತಿಗಳು ಪ್ರಬಲವಾಗಿರುವುದರಿಂದ ಭೇದ ಮಿಥ್ಯೆಯಾಗಬೇಕಾಗುತ್ತದೆ ಎಂದರೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯು ಪ್ರಪಂಚಕ್ಕೂ ಬ್ರಹ್ಮಕ್ಕೂ ಅಭೇದವನ್ನು ಹೇಳಿರುವುದರಿಂದ ಅದನ್ನು ಒಪ್ಪಲೇಬೇಕಾಗುವುದು.

ಕಿಂಚ—ನಿರ್ವಿಶೇಷಂ ಬ್ರಹ್ಮ ಜ್ಞಾನಮಜ್ಞಾನಂ ವಾ? ದ್ವಿತೀಯೇ ಅಪಸಿದ್ಧಾಂತಃ. ಪ್ರಥಮೇ ತು ಸವಿಷಯಂ ನಿರ್ವಿಷಯಂ ವಾ? ನಿರ್ವಿಷಯತ್ವೇ ತ್ವದಭಿಮತಜ್ಞಾನತ್ವವ್ಯಾಘಾತಃ. ಸವಿಷಯತ್ವೇ ವಿಷಯನಿತ್ಯತಾಪ್ರಸಂಗಃ. ನಿತ್ಯಜ್ಞಾನಸ್ಯ ನಿತ್ಯವಿಷಯಾವಶ್ಯಂಭಾವಾತ್. ತಥಾಚ ಮುಕ್ತಾವಪಿ ಸಪ್ರಪಂಚತಾಪ್ರಸಂಗಃ. ತದಾ ವಿಷಯಾಣಾಂ ನಿವೃತ್ತತ್ವಾನ್ನಿರ್ವಿಷಯಮಿತಿ ಚೇತ್ ತರ್ಹಿ ಜ್ಞಾನತ್ವಮೇವ ನ ಸ್ಯಾತ್, ನಿರಾಲಂಬನತ್ವಜ್ಞಾನತ್ವಯೋರ್ವ್ಯಾಘಾತಾತ್. ನಚ—ಅತೀತಾದಿವಿಷಯಜ್ಞಾನವದ್ವಿಷಯನಿತ್ಯತ್ವಪರಿಹಾರಃ, ತದ್ವದತೀತತ್ವಾದಿಕಿಂಚಿತ್ಪ್ರಕಾರಕತ್ವೇನ ಕಿಂಚದಾಲಂಬನತ್ವೇನ ವಾ ನಿರ್ವಿಶೇಷತ್ವವ್ಯಾಘಾತಾತ್, ವಿಷಯಸಂಬಂಧನಿತ್ಯತಾಯಾ ಏವಾಪಾದ್ಯತ್ವೇನ ದೋಷಪಾತಾಚ್ಚ. ನಿರ್ವಿಷಯಾ ನಿರಾಶ್ರಯಾ ಚ ಸಂವಿದನುಭವಸಿದ್ಧೇತಿ ತುಚ್ಛಂ. "ಘಟಮಹಂ ಜಾನಾಮಿ" "ಅಯಂ ಘಟಃ" ಇತಿ ಸಾನುಬಂಧತ್ವೇನೈವೋಪಲಂಭಾತ್. ಅನ್ಯಾ ತು ಸಂವಿತ್ ತ್ವದಭಿಮತಾ ಗಗನಕುಸುಮಾದಿಸಿದ್ಧಿಕಾಲಂ ವಿನಾ ನ ಸಿಧ್ಯತೀತಿ ದಿಕ್. ಅಪಿಚ—ದ್ರವ್ಯಮದ್ರವ್ಯಂ ವಾ? ದ್ರವ್ಯಂ ಚೇದ್ಗುಣಾಶ್ರಯತ್ವಪ್ರಸಂಗಃ. ಉತ್ಪತ್ತಿಕಾಲಾವಚ್ಛಿನ್ನಘಟವದುಪಪತ್ತಿರಿತಿ ಫಲ್ಗು. ಆದ್ಯಕ್ಷಣಸಂಯೋಗಸ್ಯ ತತ್ರಾಪಿ ಸತ್ತ್ವಾತ್. ತದ್ವತ್ಕದಾಚಿದ್ಗುಣಾಶ್ರಯತ್ವೇಽಪಿ ಅಗುಣಾಶ್ರಯತ್ವವ್ಯಾಹತೇಃ. ಗುಣಾನಾಂ ಕಲ್ಪಿತತ್ವೇಽಪಿ ನಿರ್ವಿಶೇಷತ್ವವ್ಯಾಹತಿಃ. ಅವಿದ್ಯೋಪಾದಾನಂ ವಿನಾ ಬುದ್ಧೇಸ್ತದಸಿದ್ಧೇಃ. ಅದ್ರವ್ಯಂ ಚೇದ್ದ್ರವ್ಯಾಶ್ರಿತತ್ವಪ್ರಸಂಗಃ. ತಥಾಚ—"ಸ್ವೇ ಮಹಿಮ್ನಿ" ಇತ್ಯಾದಿ ಶ್ರುತಿವಿರೋಧಃ. ಆಶ್ರಯಸಂಬಂಧಾನ್ನಿರ್ವಿಶೇಷ

**ತ್ವಭಂಗಾಚ್ಚ. ತಸ್ಮಾದೇವಂವಿಧಾಭಿಃ ಖಂಡನಯುಕ್ತಿಭಿಃ ಪ್ರಥಮದ್ವಿತೀಯಕಕ್ಷ್ಯಾಂತರಾಳ ಏವಾಬಾಧಿತಸ್ಯ ಬ್ರಹ್ಮಣೋಽಪಿ ತದುಪರಿತನಕಕ್ಷ್ಯಾಸು ಬಾಧ್ಯತ್ವಸಂಭವಾತ್ತದತಿವ್ಯಾಪ್ತಿರ್ದುರ್ವಾರೈವೇತಿ ದಿಕ್.**

ಇದೂ ಅಲ್ಲದೆ ನಿರ್ವಿಶೇಷಬ್ರಹ್ಮ ಜ್ಞಾನರೂಪವೇ? ಅಜ್ಞಾನರೂಪವೇ? ಎಂಬ ಸಂದೇಹ ಬರುತ್ತದೆ. ಅಜ್ಞಾನರೂಪವೆಂದು ಹೇಳುವುದಾದರೆ ಸಿದ್ಧಾಂತಕ್ಕೆ ವಿರೋಧ ಬರುತ್ತದೆ. ಜ್ಞಾನರೂಪವೆಂದರೆ ಅದು ಸವಿಷಯವೇ? ನಿರ್ವಿಷಯವೇ? ಎಂಬ ಪ್ರಶ್ನೆ ಏಳುತ್ತದೆ. ಜ್ಞಾನಸಾಮಾನ್ಯವೂ ಸವಿಷಯವೇ ಆಗುವುದರಿಂದ ಅದು ನಿರ್ವಿಷಯವಾಗುವಂತಿಲ್ಲ. ಸವಿಷಯವಾದರೆ ಆ ವಿಷಯ ನಿತ್ಯವಾಗಬೇಕಾಗುತ್ತದೆ. ನಿತ್ಯವಾದ ಜ್ಞಾನದಲ್ಲಿ ವಿಷಯವಾದ ವಸ್ತುವೂ ನಿತ್ಯವೇ ಆಗುವುದಾದ್ದರಿಂದ ಮುಕ್ತಿಯಲ್ಲೂ ಸಹ ಪ್ರಪಂಚದ ತೋರಿಕೆ ಅನಿವಾರ್ಯವಾಗುವುದು. ಆಗ ವಿಷಯವಾಸನೆ ನಾಶವಾಗಿರುತ್ತದೆ ಎಂದು ಹೇಳಿದರೆ ನಿರ್ವಿಷಯವಾದ ಜ್ಞಾನವಿರುವುದೇ ಅಸಾಧ್ಯವಾದ್ದರಿಂದ ಜ್ಞಾನವೂ ನಾಶವಾಗಬೇಕಾಗುತ್ತದೆ. ಹಿಂದೆ ಕಳೆದಕಾಲಕ್ಕೆ ಸಂಬಂಧಿಸಿದ ವಸ್ತುವಿನ ಬಗ್ಗೆ ಜ್ಞಾನ ಬರುವಾಗ ವಸ್ತುವಿಲ್ಲದಿದ್ದರೂ ಅದರ ಜ್ಞಾನ ಬರುವುದರಿಂದ ನಿರ್ವಿಷಯಕವಾದ ಜ್ಞಾನ ಬರುವುದರಲ್ಲಿ ತಪ್ಪೇನು? ಎಂದರೆ ಆಗಲೂ ಕೊನೆಗೆ ಆ ಜ್ಞಾನ ಸವಿಶೇಷವೇ ಆಗಬೇಕಾಗುತ್ತದೆ. ವಿಷಯವಿಲ್ಲದಿದ್ದರೂ ಅದರ ಸಂಬಂಧ ನಿತ್ಯವಾಗಿರುವುದರಿಂದ ಆ ಜ್ಞಾನ ಸವಿಶೇಷವೇ ಆಗಬೇಕಾಗುತ್ತದೆ. ಯಾವ ಆಶ್ರಯವೂ ಮತ್ತು ವಿಷಯವೂ ಇಲ್ಲದೆಯೇ ಒಂದು ಜ್ಞಾನ ಬರುವುದು ಅಸಂಭವ. 'ನಾನು ಘಟವನ್ನು ತಿಳಿಯುತ್ತೇನೆ' 'ಇದು ಘಟ' ಎಂಬ ಕಡೆ ಇದು ಅನುಭವಸಿದ್ಧವಾಗಿದೆ. ಆಶ್ರಯ ಮತ್ತು ವಿಷಯ ಇವೆರಡೂ ಇಲ್ಲದ ಜ್ಞಾನ ಆಕಾಶಪುಷ್ಪಕ್ಕೆ ಸದೃಶವಾಗುತ್ತದೆ. ಇದೂ ಅಲ್ಲದೆ ನಿರ್ವಿಶೇಷ ಬ್ರಹ್ಮ ದ್ರವ್ಯವೇ ಅದ್ರವ್ಯವೇ? ಎಂಬ ವಿಕಲ್ಪವುಂಟಾಗುತ್ತದೆ. ಅದನ್ನು ದ್ರವ್ಯವೆಂದು ಹೇಳುವುದಾದರೆ, ಅದಕ್ಕೊಂದು ಗುಣವನ್ನು ಒಪ್ಪಲೇಬೇಕಾಗುತ್ತದೆ. ಹುಟ್ಟಿದಮೇಲೆ ಕ್ಷಣಕಾಲ ದ್ರವ್ಯದಲ್ಲಿ ಗುಣವಿರುವುದಿಲ್ಲವಾದ್ದರಿಂದ ಬ್ರಹ್ಮವನ್ನು ಆಗ ನಿರ್ಗುಣವೆಂದು ಹೇಳಬೇಕಾಗುತ್ತದೆ. ಆದರೆ ಹೀಗೆ ಹೇಳುವುದು ಯುಕ್ತವಲ್ಲ; ಯಾಕೆಂದರೆ ಆಗತಾನೆ ಹುಟ್ಟಿದ ದ್ರವ್ಯದಲ್ಲೂ ಮೊದಲನೆಯ ಕ್ಷಣದ ಸಂಬಂಧವಿದ್ದೇಇರುವುದರಿಂದ ಗುಣದ ಸಂಬಂಧಕ್ಕೆ ಚ್ಯುತಿಬರಲಾರದು. ಬ್ರಹ್ಮದಲ್ಲಿ ಹೀಗೆ ಕಲ್ಪಿತವಾದ ಗುಣಗಳನ್ನು ಒಪ್ಪಿದರೂ ಅದನ್ನು ನಿರ್ವಿಶೇಷವೆಂದು ಹೇಳಲಾಗುವುದಿಲ್ಲ. ಅವಿದ್ಯೆ ಎಂಬ ವಿಶೇಷವನ್ನಾದರೂ ಒಪ್ಪದಿದ್ದರೆ ಗುಣಗಳ ಕಲ್ಪನೆ ಬರುವುದಿಲ್ಲವಾದ್ದರಿಂದ ಬ್ರಹ್ಮ ಸವಿಶೇಷವೆಂಬುದೇ ದೃಢಪಡುತ್ತದೆ. ಬ್ರಹ್ಮವನ್ನು ದ್ರವ್ಯವಲ್ಲವೆಂದು ಹೇಳುವುದಾದರೆ ಅದಕ್ಕಾಶ್ರಯವಾಗಿ ಮತ್ತೊಂದು ದ್ರವ್ಯವನ್ನು ಒಪ್ಪಬೇಕಾಗುತ್ತದೆ. ಬ್ರಹ್ಮವು ತನ್ನನ್ನೇ ಆಶ್ರಯಿಸಿಕೊಂಡಿರುವುದೆಂಬ ಶ್ರುತಿಗೂ ವಿರೋಧವುಂಟಾಗುತ್ತದೆ. ಅದು ನಿರ್ವಿಶೇಷವೆಂಬುದಕ್ಕೂ ಭಂಗವುಂಟಾಗುತ್ತದೆ. ಅದ್ದರಿಂದ ಮೂರು ನಾಲ್ಕು

ಅವಸ್ಥೆಗಳಲ್ಲಿ ಬಾಧ್ಯವಾಗದಿರುವುದೇ ವ್ಯಾವಹಾರಿಕಸತ್ಯವೆಂದು ಹೇಳುವುದರಿಂದ ಬ್ರಹ್ಮವೂ ಸತ್ಯವಾಗಿ ಉಳಿಯುವಂತಿಲ್ಲ. ಅಂದರೆ ಅದೂ ಸಹ ವ್ಯಾವಹಾರಿಕಸತ್ಯವೇ ಆಗಬೇಕಾದೀತು.

ನಾಪಿ ತತ್ತ್ವಾವೇದಕಪ್ರಮಾಣವಿರುದ್ಧತ್ವಮಿತಿ ತುರೀಯಃ— ತಾಲ್ವಾದಿಷು ಶ್ರೋತ್ರಾದಿಷು ಚ ತತ್ತ್ವಾವೇದಕಪ್ರಮಾಣವ್ಯಂಜಿತೇಷು ತತ್ಸ್ವರೂಪವಿರೋಧಾದರ್ಶನಾತ್. ಅಥ ತತ್ಪ್ರಮೇಯವಿರುದ್ಧತ್ವಮಿತ್ಯಪಿ ನ—ವೇದತ್ವೇನೈವ ತತ್ತ್ವಾವೇದಕತ್ವೇ "ನೇಹ ನಾನಾಸ್ತಿ" ಇತ್ಯಾದೀನಾಮಪಿ "ಯಸ್ಮಿನ್ ದ್ಯೌಃ" ಇತ್ಯಾದಿತತ್ತ್ವಾವೇದಕಪ್ರಮಾಣವಿರುದ್ಧಾರ್ಥಕತಯಾ ತದರ್ಥಪ್ರಪಂಚಾಭಾವೇಽಪಿ ವ್ಯಾವಹಾರಿಕತ್ವಪ್ರಸಂಗಾತ್. ಪ್ರಪಂಚಾಭಾವಸ್ಯಾತಿರಿಕ್ತಸ್ಯ ಸತ್ಯತ್ವೇ ದ್ವೈತಪ್ರಸಂಗೇನ, ಮಿಥ್ಯಾತ್ವೇ ತದ್ಬೋಧಕಪ್ರಮಾಣಸ್ಯ ತತ್ತ್ವಾವೇದಕತ್ವವ್ಯಾಘಾತೇನ ಚ ಬ್ರಹ್ಮಭೇದಸ್ಯಾಂಗೀಕಾರ್ಯತಯಾ ಬ್ರಹ್ಮಣ್ಯತಿವ್ಯಾಪ್ತೇಶ್ಚ। ಕಿಂಚ—ಅತ್ರ ತತ್ತ್ವಾವೇದಕತದನ್ಯಯೋರ್ಭೇದಸ್ಸಿದ್ಧೋ ವಾಽಸಿದ್ಧೋ ವಾ? ಅಸಿದ್ಧೌ ಸ್ವೋಕ್ತಿವ್ಯಾಘಾತಃ, ಸಿದ್ಧೌ ತು ಅಪ್ರಮಾಣೇನ ವಿಷಯಾಸಿದ್ಧೌ ಪ್ರಮಾಣಗೋಚರಸ್ಯ ಭೇದಸ್ಯ ಸತ್ಯತ್ವಪ್ರಸಂಗೇನ ಪ್ರಪಂಚವ್ಯಾವಹಾರಿಕತ್ವಭಂಗಃ. ತದಸತ್ತ್ವೇ ತು ಸ ಏವ ತತ್ತ್ವಾವೇದಕಾಭೇದಾದುಕ್ತಿವ್ಯಾಘಾತಃ. ಯದ್ಭೇದಸ್ಯ ಮಿಥ್ಯಾತ್ವಂ ತದಭೇದಸ್ಸತ್ಯ ಇತಿಹ್ಯುಕ್ತಂ ಪ್ರಾಕ್. ನಾಪಿ—ಅರ್ಥಕ್ರಿಯಾಶೂನ್ಯಪ್ರತೀತಿವಿಷಯತ್ವಮಿತಿ ಪಂಚಮಃ—ತಥಾ ಸತಿ ತ್ವದೀಯಾಯಾಃ ಪ್ರವೃತ್ತೇರ್ಲೋಕವೇದಗೋಚರಾಯಾಃ ಸರ್ವಸ್ಯಾ ಅಪಿ ಗಗನಕುಸುಮಾಯಮಾನತ್ವಪ್ರಸಂಗೇನ ಸ್ವಕ್ರಿಯಾಸ್ವವಚನವ್ಯಾಘಾತದಂಡ ಏವ ದುಷ್ಟಫಣಿನಮಿವ ತ್ವಾಂ ನರ್ತನಾನ್ನಿವರ್ತಯಿಷ್ಯತಿ. ಅಥಾಯಮಭಿಪ್ರಾಯಃ—ನಞಃ ಪ್ರಶ್ಲೇಷೇಣ ಅರ್ಥಕ್ರಿಯಾಶೂನ್ಯತ್ವಂ ಅರ್ಥಕ್ರಿಯಾಶೂನ್ಯತ್ವಾಭಾವಃ ಇತಿ. ತಥಾ ಸತಿ ಸರ್ವಾರ್ಥಮೂಲಕಂದೇ ಬ್ರಹ್ಮಣ್ಯತಿವ್ಯಾಪ್ತಿಃ. ನಚ ಅವಿದ್ಯಾವಚ್ಛಿನ್ನಸ್ಯ ಬ್ರಹ್ಮಣೋಽರ್ಥಕ್ರಿಯಾಕಾರಿತ್ವಂ ನ ಶುದ್ಧಸ್ಯೇತಿ ಅವಚ್ಛಿನ್ನಸ್ಯ ಚ ವ್ಯಾವಹಾರಿಕತ್ವಮಿಷ್ಟಮಿತಿ ವಾಚ್ಯಂ. ವಿಶಿಷ್ಟಸ್ಯ ಜ್ಞಾನೇನ ನಿವರ್ತ್ಯತ್ವಂ ತರ್ಹಿ ಪ್ರಸಜ್ಯೇತೇತಿ ವಿಶೇಷಸ್ಯಾಪಿ ನಿವೃತ್ತೌ ಶೂನ್ಯವಾದಸಾಮ್ರಾಜ್ಯಪ್ರಸಂಗಃ. ನಹಿ ವಿಶಿಷ್ಟಂ ವಿಶೇಷಣವಿಶೇಷ್ಯಸಂಬಂಧೇಭ್ಯೋಽತಿರಿಚ್ಯತೇ. ಅಪಿಚ ವಿದ್ಯಾನಿವೃತ್ತಿರೂಪಾರ್ಥಕ್ರಿಯಾಹೇತೌ ಚರಮಾಂತಃಕರಣವೃತ್ತಿವಿಷಯೇ ಶುದ್ಧಬ್ರಹ್ಮಣ್ಯತಿವ್ಯಾಪ್ತೇಃ. ಪ್ರಕಾಶತ್ವೇ ನಾವಿದ್ಯಾನಿವೃತ್ತಿತ್ವೇನ ಕಾರ್ಯಕಾರಣಭಾವಃ. ಅನಾತ್ಮವಿಷಯಪ್ರಕಾಶತ್ವೇನ ಅನಾತ್ಮವಿಷಯಾವಿದ್ಯಾನಿವೃತ್ತಿತ್ವೇನ ಚಾಪರಃ. ತಥಾಚ ಸತಿ

**ಸ್ವವಿಷಯತಾಂ ವಿನಾಪಿ ಬ್ರಹ್ಮಣಃ ಸ್ವರೂಪಪ್ರಕಾಶಃ ಅವಿದ್ಯಾಂ ನಿವರ್ತಯತೀತಿ ತ್ವತ್ಸಿದ್ಧಾಂತಃ.**

ತತ್ತ್ವವನ್ನು ಬೋಧಿಸುವ ಪ್ರಮಾಣಕ್ಕೆ ವಿರುದ್ಧವಾಗಿರುವುದೇ ವ್ಯಾವಹಾರಿಕಸತ್ಯವೆಂಬ ನಾಲ್ಕನೆಯ ವಿಕಲ್ಪವೂ ಯುಕ್ತವಲ್ಲ. ಶಬ್ದ ಹುಟ್ಟುವ ಸ್ಥಾನಗಳಲ್ಲಾಗಲೀ ಕೇಳುವ ಸ್ಥಾನಗಳಲ್ಲಾಗಲೀ ಯಾವ ವಿರೋಧವೂ ಇರುವುದಿಲ್ಲವಾದ್ದರಿಂದ ತತ್ತ್ವವನ್ನು ಬೋಧಿಸುವ ಪ್ರಮಾಣದಲ್ಲಿ ಯಾವ ವಿರೋಧವೂ ಬರುವಂತಿಲ್ಲ. ಅದರ ವಿಷಯಾಂಶದಲ್ಲಿ ವಿರೋಧವಿದೆ ಎನ್ನುವುದೂ ಸರಿಯಲ್ಲ. 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು 'ಯಸ್ಮಿನ್ ದ್ಯೌಃ' ಎಂಬ ತತ್ತ್ವಬೋಧಕವಾದ ಪ್ರಮಾಣಕ್ಕೆ ವಿರುದ್ಧವಾದ ಅರ್ಥವನ್ನು ತಿಳಿಸುವುದರಿಂದ 'ನೇಹ ನಾನಾಸ್ತಿ' ಎಂಬ ಶ್ರುತಿಯಿಂದ ಬೋಧಿತವಾದ ಪ್ರಪಂಚದ ಅಭಾವವೂ ವ್ಯಾವಹಾರಿಕಸತ್ಯವೇ ಆಗಬೇಕಾದೀತು. ಅದೂ ಪಾರಮಾರ್ಥಿಕಸತ್ಯವೇ ಆದರೆ ಅದ್ವೈತಕ್ಕೆ ಭಂಗಬರುತ್ತದೆ. ಮಿಥ್ಯೆಯಾದರೆ, ಅದನ್ನು ಬೋಧಿಸುವ ಶ್ರುತಿಯು ತತ್ತ್ವವನ್ನು ತಿಳಿಸದೇಹೋಗುವುದು. ಇದಲ್ಲದೆ ತತ್ತ್ವವನ್ನು ತಿಳಿಸುವ ಪ್ರಮಾಣಕ್ಕೂ ಇತರ ಪ್ರಮಾಣಕ್ಕೂ ಭೇದ ಸಿದ್ಧವಾಗಿದೆಯೇ ಇಲ್ಲವೇ ಎಂಬ ಸಂದೇಹ ಬರುತ್ತದೆ. ಅವೆರಡಕ್ಕೂ ಭೇದ ಸಿದ್ಧವಾಗಿಲ್ಲವೆಂದರೆ, ನಿನ್ನ ಮಾತೇ ವಿರುದ್ಧವಾಗುತ್ತದೆ. ಭೇದ ಪ್ರಸಿದ್ಧವಾಗಿದೆ ಎಂದರೆ ಆ ಪ್ರಮಾಣದಿಂದ ವಿಷಯವು ಸಿದ್ಧಿಸದಿದ್ದರೂ, ಪ್ರಮಾಣದಲ್ಲಿ ವಿಷಯವಾಗುವ ಭೇದ ಸತ್ಯವೇ ಆದುದರಿಂದ ಅದು ವ್ಯಾವಹಾರಿಕಸತ್ಯವೂ ಆಗಲಾರದು. ಅದು ವ್ಯಾವಹಾರಿಕಸತ್ಯವಾಗದಿದ್ದರೆ ತತ್ತ್ವವನ್ನು ತಿಳಿಸುವ ಪ್ರಾಮಾಣ್ಯಕ್ಕೆ ವಿರುದ್ಧವಾದುದೇ ವ್ಯಾವಹಾರಿಕಸತ್ಯವೆಂದು ಹೇಳುವ ನಿನ್ನ ಮಾತೇ ವಿರುದ್ಧವಾಗುತ್ತದೆ. ಯಾವುದಕ್ಕೆ ಭೇದ ಮಿಥ್ಯೆಯಾಗುವುದೋ ಅದರ ಅಭೇದ ಸತ್ಯವಾಗುವುದೆಂದು ಹಿಂದೆಯೇ ಹೇಳಿಯಾಗಿದೆ. ಅರ್ಥಕ್ರಿಯೆಗಳಿಗೆ ಹೊಂದಿಕೆಯಾಗದಿರುವ ಜ್ಞಾನಕ್ಕೆ ವಿಷಯವಾದುದೇ ವ್ಯಾವಹಾರಿಕಸತ್ಯವೆಂದು ಹೇಳುವ ಐದನೆಯ ವಿಕಲ್ಪವೂ ಯುಕ್ತವಲ್ಲ. ಹಾಗಾದರೆ ಎಲ್ಲಾ ಪ್ರವೃತ್ತಿಗಳೂ ಅರ್ಥಕ್ರಿಯಾಶೂನ್ಯವೇ ಆಗಬೇಕಾಗುವುದರಿಂದ ಆಕಾಶಪುಷ್ಪಸದೃಶವೇ ಆಗಬೇಕಾದ ಪ್ರಯುಕ್ತ ನಿನ್ನ ಕ್ರಿಯಾವಚನಗಳೆಲ್ಲವೂ ವ್ಯಾಹತವೂ ವ್ಯರ್ಥವೂ ಆಗುತ್ತವೆ. ನಿಷೇಧಾರ್ಥವನ್ನು ಅದರ ಜೊತೆಯಲ್ಲಿ ಸೇರಿಸುವುದರಿಂದ ಅರ್ಥಕ್ರಿಯಾಶೂನ್ಯತೆಯ ಅಭಾವವೇ ಅದರ ಅರ್ಥವೆಂದು ಹೇಳುವುದಾದರೆ, ಆಗ ಬ್ರಹ್ಮವೂ ವ್ಯಾವಹಾರಿಕಸತ್ಯವೇ ಆಗಬೇಕಾಗುವುದು. ಅವಿದ್ಯೆಯಿಂದ ಕೂಡಿದ ಬ್ರಹ್ಮವೇ ಅರ್ಥಕ್ರಿಯಾಕಾರಿಯಾಗುವುದು. ಶುದ್ಧವಾದ ಬ್ರಹ್ಮ ಅರ್ಥಕ್ರಿಯೆಗಳಿಗೆ ಹೊಂದದೇಇರಬಲ್ಲದು ಎಂದು ಹೇಳಿದರೆ ಆಗ ವಿಶಿಷ್ಟವಸ್ತುವಿಗೆ ಜ್ಞಾನದಿಂದ ನಿವೃತ್ತಿ ಬರುವುದರಿಂದ ವಿಶಿಷ್ಟವಾದ ಬ್ರಹ್ಮಕ್ಕೂ ನಿವೃತ್ತಿವುಂಟಾಗುವ ಪ್ರಯುಕ್ತ ಶೂನ್ಯವಾದಕ್ಕೆ ಶರಣಾಗಬೇಕಾಗುವುದು. ಅದ್ವೈತಿಗೆ ವಿಶೇಷಣ, ವಿಶೇಷ್ಯ, ಅದರ ಸಂಬಂಧ ಈ ಮೂರಕ್ಕಿಂತಲೂ ವಿಶಿಷ್ಟವೆಂಬುದು ಬೇರೆ ವಸ್ತುವಲ್ಲ. ಇದೂ ಅಲ್ಲದೆ ಕೊನೆಯ

ಅಂತಃಕರಣವೃತ್ತಿಯಲ್ಲಿ ವಿಷಯವಾಗುವ ಶುದ್ಧಬ್ರಹ್ಮವು ಅವಿದ್ಯೆಯನ್ನು ತೊಲಗಿಸುವುದರಿಂದ ಬ್ರಹ್ಮ ವ್ಯಾವಹಾರಿಕಸತ್ಯವೇ ಆಗಬೇಕಾಗುವುದು. ಬ್ರಹ್ಮ ಪ್ರಕಾಶ ಸ್ವರೂಪವಾಗಿರುವುದರಿಂದ ಅವಿದ್ಯೆಯನ್ನು ತೊಲಗಿಸುತ್ತದೆ. ಬ್ರಹ್ಮಸ್ವರೂಪವೇ ಪ್ರಕಾಶವಾಗಿರುವುದರಿಂದ ಆ ಸ್ವರೂಪಕ್ಕಿಂತಲೂ ಬೇರೆಯಾದ ಪ್ರಪಂಚದ ಅವಿದ್ಯೆಯನ್ನು ಬ್ರಹ್ಮ ತೊಲಗಿಸುತ್ತದೆ ಎಂದು ನೀವೇ ಒಪ್ಪಿರುವಿರಿ.

ಕಿಂಚ—ಪ್ರಾತಿಭಾಸಿಕೇ ರಜ್ಜ್ವಧಿಷ್ಠಾನಸರ್ಪಾದೌ ಭಯಕಂಪಾದ್ಯರ್ಥಕ್ರಿಯಾಕಾರಿಣ್ಯತಿವ್ಯಾಪ್ತಿಃ. ಉತ್ಪನ್ನಪ್ರಧ್ವಸ್ತೇಷು ಘಟಾದಿಷು ಚಾವ್ಯಾಪ್ತಿಃ, ಪ್ರಚಯಾವ್ಯವಹಿತಪೂರ್ವಕ್ಷಣೋತ್ಪನ್ನೇಷು ತೇಷು ಚ ಕ್ಷಣೇಷ್ವವ್ಯಾಪ್ತಿಃ. ಅರ್ಥಕ್ರಿಯಾಯಾಸ್ತೇಷ್ವದರ್ಶನಾತ್. ಸ್ವಪ್ನೇಷು ಚ ಶುಭಾಶುಭಸೂಚಕೇಷು ತತ್ಕಾಲೀನಾರ್ಥಕ್ರಿಯಾಹೇತುಷ್ವತಿವ್ಯಾಪ್ತಿಃ. ವ್ಯಾವಹಾರಿಕಾರ್ಥಕ್ರಿಯಾವಿವಕ್ಷಾಯಾಂ ತ್ವಾತ್ಮಾಶ್ರಯದೋಷ ಏವ. ನಚ ಕಟಕಮುಕುಟಾದಿಪರಿಣಾಮೋಽರ್ಥಕ್ರಿಯಾದಿಪದಾರ್ಥ ಇತ್ಯುಕ್ತಾವಪಿ ದೋಷಪರಿಹಾರಃ. ಸ್ವಪ್ನೇಷ್ವತಿವ್ಯಾಪ್ತೇರುತ್ಪನ್ನಧ್ವಸ್ತೇಷು ಚಾವ್ಯಾಪ್ತೇರ್ದುಷ್ಪರಿಹರತ್ವಾತ್. ಅಥ—ಕಾರಣತಾವಚ್ಛೇದಕಜಾತೀಯತ್ವೇನಾತಿವ್ಯಾಪ್ತಿಪರಿಹಾರಃ? ತಥಾ ಸತಿ ಪ್ರಾತಿಭಾಸಿಕೇಽತಿವ್ಯಾಪ್ತೇಃ. ನ ಚ ತತ್ರ ತಾದೃಶಜಾತ್ಯಭಾವಃ. ತಥಾ ಸತಿ ತತ್ರ ತ್ವದೀಯರಜತಾದಿವ್ಯವಹಾರಸ್ಯಾಕಸ್ಮಿಕತ್ವಪ್ರಸಂಗಾತ್. ಸ್ವಪ್ನೇಷ್ವರ್ಥಕ್ರಿಯಾಯಾ ಅಭಾವಪ್ರಸಂಗಾಚ್ಚೇತ್ಯನ್ಯತ್ರ ವಿಸ್ತರಃ.

ಇದೂ ಅಲ್ಲದೆ ಪ್ರಾತಿಭಾಸಿಕವಾದ ರಜ್ಜ್ವಸರ್ಪದಲ್ಲಿಯೂ ಭಯ, ನಡುಗುವಿಕೆ ಮುಂತಾದ ಕಾರ್ಯಗಳು ಅನುಭವಸಿದ್ಧವಾಗಿರುವುದರಿಂದ ಅದೂ ವ್ಯಾವಹಾರಿಕ ಸತ್ಯವೇ ಆಗಬೇಕಾಗುವುದು. ಉತ್ಪನ್ನವಾಗಿ ನಷ್ಟವಾದ ಘಟವು ಅರ್ಥಕ್ರಿಯಾಕಾರಿಯಾಗದಿರುವುದರಿಂದ ಅದು ವ್ಯಾವಹಾರಿಕಸತ್ಯವಾಗದೇ ಹೋಗಬೇಕಾದೀತು. ಸ್ವಪ್ನವಸ್ತುಗಳು ಆ ಕಾಲದಲ್ಲಿ ಸಾರ್ಥಕವಾಗಿರುವುದರಿಂದ ಅವೂ ವ್ಯಾವಹಾರಿಕ ಸತ್ಯವೇ ಆಗಬೇಕಾಗುವುದು. 'ಅರ್ಥಕ್ರಿಯಾಕಾರಿ' ಎಂಬುದೂ ವ್ಯಾವಹಾರಿಕವೆಂದು ನಮಗೆ ವಿವಕ್ಷಿತವೆಂದು ಹೇಳುವುದಾದರೆ ಆತ್ಮಾಶ್ರಯದೋಷ ಬರುತ್ತದೆ. ಈ ವಸ್ತು ಯಾವ ಪ್ರಯೋಜನಕ್ಕೂ ಬರುವುದಿಲ್ಲವೆಂದು ವ್ಯವಹರಿಸುವುದರೊಳಗೇ ವ್ಯವಹಾರವೆಂಬ ಪದವು ಸೇರುವುದರಿಂದ ಆತ್ಮಾಶ್ರಯದೋಷ ಸಂಭವಿಸುತ್ತದೆ. ಅರ್ಥಕ್ರಿಯಾಕಾರಿ ಎಂಬ ಪದವು ಸುವರ್ಣದಂತೆ ಕಟಕವೇ ಮೊದಲಾದ ಒಡವೆಗಳಾಗಿ ಪರಿಣಮಿಸುವುದೆಂಬ ಅರ್ಥವನ್ನು ತಿಳಿಸುವುದೇ ನಮ್ಮ ಇಷ್ಟವೆಂದು ಹೇಳುವುದಾದರೆ, ಸ್ವಪ್ನದ ವಸ್ತುಗಳಲ್ಲೂ ಇಂತಹ ಪರಿಣಾಮವಿರಬಹುದಾದ್ದರಿಂದ ಅವೂ ವ್ಯಾವಹಾರಿಕಸತ್ಯವೇ ಆಗಬೇಕಾದೀತು. ಉತ್ಪನ್ನವಿನಷ್ಟಘಟವೂ ವ್ಯಾವಹಾರಿಕ ಸತ್ಯವಾಗದೇಹೋಗಬೇಕಾದೀತು. 'ಕಾರ್ಯಕಾರಣಗಳೆರಡೂ ಸಜಾತೀಯವಾಗಿರ

ಬೇಕು’ ಎಂದು ಹೇಳಿದರೆ ಪ್ರಾತಿಭಾಸಿಕವಸ್ತುವೂ ವ್ಯಾವಹಾರಿಕಸತ್ಯವೇ ಆಗಬೇಕಾದೀತು. ಶುಕ್ತಿಯಲ್ಲಿಯೂ ಬೆಳ್ಳಿಯೆಂಬ ವ್ಯವಹಾರವು ಅರ್ಥಕ್ರಿಯಾಕಾರಿಯಾಗಿದ್ದೇ ಇರುವುದು. ಸ್ವಾಪ್ನಿಕವಸ್ತುಗಳಲ್ಲಿಯೂ ಅರ್ಥಕ್ರಿಯಾಕಾರಿತ್ವವು ಇಲ್ಲದೇಹೋಗಬೇಕಾಗುವುದು. ಇದನ್ನು ಬೇರೆಕಡೆ ಹೆಚ್ಚು ವಿವರಿಸಲಾಗುವುದು.

ನಾಪಿ ಕರಣದೋಷೋಪಹಿತಜ್ಞಾನವಿಷಯತ್ವಮಿತಿ ಷಷ್ಠಃ-ಶುಕ್ತಿರಜತಾದಿಷ್ವತಿವ್ಯಾಪ್ತೇಃ. ಅಬಾಧಿತಸರ್ವಜನಪ್ರತೀತಿವಿಷಯೇಷ್ವದುಷ್ಟೇಂದ್ರಿಯಗೋಚರೇಷು ಘಟಾದಿಷ್ವಸಂಭವಾತ್. “ಯತೋ ವಾ ಇಮಾನಿ ಭೂತಾನಿ ಜಾಯಂತೇ” “ಆತ್ಮನ ಆಕಾಶಸ್ಸಂಭೂತಃ” “ಯಸ್ಮಿನ್ ದ್ಯೌಃ ಪೃಥಿವೀ” ಇತ್ಯಾದ್ಯದುಷ್ಟಶ್ರುತಿಜನ್ಯಜ್ಞಾನವಿಷಯತ್ವಾಚ್ಚ ಪ್ರಪಂಚೇ ಲಕ್ಷಣಾಸಂಭವಃ. ಅಥ-ಅವಿದ್ಯಾದೋಷಮೂಲಾ ಶ್ರುತಿರಪಿ, ತಸ್ಮಾನ್ನಾಸಂಭವಃ ಇತಿ ಮನುಷೇ? ತರ್ಹಿ ಬ್ರಹ್ಮಣ್ಯತಿವ್ಯಾಪ್ತಿಃ, ತಾದೃಶಶ್ರುತಿಜನ್ಯಜ್ಞಾನವಿಷಯತ್ವಾತ್ತಸ್ಯ. ನ ಚ ಬ್ರಹ್ಮಣಃ ಪ್ರಮಾಣಾಂತರೈರಬಾಧಾನ್ನ ತದ್ವಿಷಯಶ್ರುತಿಜನ್ಯಜ್ಞಾನಂ ಕರಣದೋಷೋಪಹಿತಮಿತಿ ವಾಚ್ಯಂ. “ಅಥಾತ ಆದೇಶೋ ನೇತಿ ನೇತಿ” “ನಾಸದಾಸೀನ್ನೋ ಸದಾಸೀತ್ತದಾನೀಂ” “ನ ಸನ್ನಾಸನ್ನ ಸದಸತ್” ಇತ್ಯಾದಿಶ್ರುತಿಭಿಃ ಪೂರ್ವಪ್ರಪಂಚಿತಕರ್ತ್ರನುಗೃಹೀತಾಭಿರ್ಬ್ರಹ್ಮಣೋಪಿ ಬಾಧಾತ್. ಶ್ರುತೀನಾಂ ಬ್ರಹ್ಮನಿಷೇಧಂ ವಿನಾಽರ್ಥಾಂತರವರ್ಣನಂ ಪ್ರಪಂಚನಿಷೇಧಂ ವಿನಾಽರ್ಥಾಂತರಸ್ಯ ತತ್ರಾಪಿ ವರ್ಣನಾದಕಿಂಚಿತ್ಕರಂ. ಕಿಂಚ-ಅಧಿಷ್ಠಾನಸತ್ತಾರೂಪೇ ಸರ್ವಪ್ರತ್ಯಯವೇದ್ಯೇ ಬ್ರಹ್ಮಣ್ಯತಿವ್ಯಾಪ್ತಿಃ. ನಚ ಜ್ಞಾನಸಪ್ರಕಾರತ್ವಮಿತಿ ವಿವಕ್ಷಿತುಂ ಶಕ್ಯಂ, ಘಟಾದಿಷ್ವವ್ಯಾಪ್ತೇಃ, ತೇಷಾಂ ಜ್ಞಾನವಿಶೇಷ್ಯತ್ವಾತ್. ಸದ್ರೂಪಸ್ಯಾಪಿ ಬ್ರಹ್ಮಣಃ “ಘಟಸ್ಸನ್” ಇತ್ಯಾದಿ ಪ್ರತೀತೌ ಪ್ರಕಾರಿತ್ವಾತ್. “ಬ್ರಹ್ಮಣಿ ಪ್ರಪಂಚಃ” ಇತಿ ಜ್ಞಾನೇ ಪ್ರಕಾರತ್ವಾಚ್ಚ. ನಚಾಧ್ಯಸ್ತತ್ವಂ ವಿಷಯವಿಶೇಷಣಮಿತಿ ಯುಕ್ತಂ. ತಾವನ್ಮಾತ್ರಸ್ಯೈವ ಸಮ್ಯಕ್ತ್ವೇ ಶೇಷವೈಯರ್ಥ್ಯಾತ್. ಪ್ರಾತಿಭಾಸಿಕೇ ಅತಿವ್ಯಾಪ್ತ್ಯವಾರಣಾಚ್ಚ. ತಸ್ಮಾದ್ವ್ಯಾವಹಾರಿಕಮೇವ ವಿಶ್ವಸ್ಯ ಸತ್ಯತ್ವಮಿತಿ ಯತ್-ತಸ್ಯ ಶ್ರುತಿಯುಕ್ತ್ಯನುಭವವಿರುದ್ಧತ್ವಾತ್ ಪ್ರಚ್ಛನ್ನಬೌದ್ಧವಾದ ಏವಾಯಂ ಮಾಯಾವಾದ ಇತಿ ಶ್ರೌತಶ್ಚೈವ ಘಂಟಾಘೋಷಃ. ಕಿಂಚ-ತತ್ತ್ವಮಸ್ಯಾದಿಮಹಾವಾಕ್ಯೇಷು ಚ ನ ನಿರ್ವಿಶೇಷಬ್ರಹ್ಮೈಕ್ಯಮುಪದಿಶ್ಯತೇ. ತ್ವಂತತ್ಪದಯೋಸ್ಸವಿಶೇಷಜೀವಬ್ರಹ್ಮಪರತ್ವವ್ಯಪದೇಶಾತ್. “ತದೈಕ್ಷತ ಬಹು ಸ್ಯಾಂ” ಇತ್ಯಾದಿಷು ತಚ್ಛಬ್ದವಾಚ್ಯಸ್ಯ ಜಗತ್ಕಾರಣಸ್ಯ ಪರಮೇಶ್ವರಸ್ಯ ಬ್ರಹ್ಮಣಃ ಸವಿಶೇಷತ್ವೋಪದೇಶಾಚ್ಚ. ನನು- [illegible] ರ್ವಜ್ಞತ್ವಕಿಂಚಿ

ಅಂತಃಕರಣವೃತ್ತಿಯಲ್ಲಿ ವಿಷಯವಾಗುವ ಶುದ್ಧಬ್ರಹ್ಮವು ಅವಿದ್ಯೆಯನ್ನು ತೊಲಗಿಸುವುದರಿಂದ ಬ್ರಹ್ಮ ವ್ಯಾವಹಾರಿಕಸತ್ಯವೇ ಆಗಬೇಕಾಗುವುದು. ಬ್ರಹ್ಮ ಪ್ರಕಾಶಸ್ವರೂಪವಾಗಿರುವುದರಿಂದ ಅವಿದ್ಯೆಯನ್ನು ತೊಲಗಿಸುತ್ತದೆ. ಬ್ರಹ್ಮಸ್ವರೂಪವೇ ಪ್ರಕಾಶವಾಗಿರುವುದರಿಂದ ಆ ಸ್ವರೂಪಕ್ಕಿಂತಲೂ ಬೇರೆಯಾದ ಪ್ರಪಂಚದ ಅವಿದ್ಯೆಯನ್ನು ಬ್ರಹ್ಮ ತೊಲಗಿಸುತ್ತದೆ ಎಂದು ನೀವೇ ಒಪ್ಪಿರುವಿರಿ.

**ಕಿಂಚ—ಪ್ರಾತಿಭಾಸಿಕೇ ರಜ್ಜ್ವಧಿಷ್ಠಾನಸರ್ಪಾದೌ ಭಯಕಂಪಾದ್ಯರ್ಥಕ್ರಿಯಾಕಾರಿಣ್ಯತಿವ್ಯಾಪ್ತಿಃ. ಉತ್ಪನ್ನಪ್ರಧ್ವಸ್ತೇಷು ಘಟಾದಿಷು ಚಾವ್ಯಾಪ್ತಿಃ, ಪ್ರಚಯಾವ್ಯವಹಿತಪೂರ್ವಕ್ಷಣೋತ್ಪನ್ನೇಷು ತೇಷು ಚ ಕ್ಷಣೇಷ್ವವ್ಯಾಪ್ತಿಃ. ಅರ್ಥಕ್ರಿಯಾಯಾಸ್ತೇಷ್ವದರ್ಶನಾತ್. ಸ್ವಪ್ನೇಷು ಚ ಶುಭಾಶುಭಸೂಚಕೇಷು ತತ್ಕಾಲೀನಾರ್ಥಕ್ರಿಯಾಹೇತುಷ್ವತಿವ್ಯಾಪ್ತಿಃ. ವ್ಯಾವಹಾರಿಕಾರ್ಥಕ್ರಿಯಾವಿವಕ್ಷಾಯಾಂ ತ್ವಾತ್ಮಾಶ್ರಯದೋಷ ಏವ. ನಚ ಕಟಕಮುಕುಟಾದಿಪರಿಣಾಮೋಽರ್ಥಕ್ರಿಯಾದಿಪದಾರ್ಥ ಇತ್ಯುಕ್ತಾವಪಿ ದೋಷಪರಿಹಾರಃ. ಸ್ವಾಪ್ನೇಷ್ವತಿವ್ಯಾಪ್ತೇರುತ್ಪನ್ನಧ್ವಸ್ತೇಷು ಚಾವ್ಯಾಪ್ತೇರ್ದುಷ್ಪರಿಹರತ್ವಾತ್. ಅಥ—ಕಾರಣತಾವಚ್ಛೇದಕಜಾತೀಯತ್ವೇನಾತಿವ್ಯಾಪ್ತಿಪರಿಹಾರಃ? ತಥಾ ಸತಿ ಪ್ರಾತಿಭಾಸಿಕೇಽತಿವ್ಯಾಪ್ತೇಃ. ನ ಚ ತತ್ರ ತಾದೃಶಜಾತ್ಯಭಾವಃ. ತಥಾ ಸತಿ ತತ್ರ ತ್ವದೀಯರಜತಾದಿವ್ಯವಹಾರಸ್ಯಾಕಸ್ಮಿಕತ್ವಪ್ರಸಂಗಾತ್. ಸ್ವಪ್ನೇಷ್ವರ್ಥಕ್ರಿಯಾಯಾ ಅಭಾವಪ್ರಸಂಗಾಚ್ಚೇತ್ಯನ್ಯತ್ರ ವಿಸ್ತರಃ.**

ಇದೂ ಅಲ್ಲದೆ ಪ್ರಾತಿಭಾಸಿಕವಾದ ರಜ್ಜುಸರ್ಪದಲ್ಲಿಯೂ ಭಯ, ನಡುಗುವಿಕೆ ಮುಂತಾದ ಕಾರ್ಯಗಳು ಅನುಭವಸಿದ್ಧವಾಗಿರುವುದರಿಂದ ಅದೂ ವ್ಯಾವಹಾರಿಕ ಸತ್ಯವೇ ಆಗಬೇಕಾಗುವುದು. ಉತ್ಪನ್ನವಾಗಿ ನಷ್ಟವಾದ ಘಟವು ಅರ್ಥಕ್ರಿಯಾಕಾರಿಯಾಗದಿರುವುದರಿಂದ ಅದು ವ್ಯಾವಹಾರಿಕಸತ್ಯವಾಗದೇ ಹೋಗಬೇಕಾದೀತು. ಸ್ವಪ್ನವಸ್ತುಗಳು ಆ ಕಾಲದಲ್ಲಿ ಸಾರ್ಥಕವಾಗಿರುವುದರಿಂದ ಅವೂ ವ್ಯಾವಹಾರಿಕ ಸತ್ಯವೇ ಆಗಬೇಕಾಗುವುದು. 'ಅರ್ಥಕ್ರಿಯಾಕಾರಿ' ಎಂಬುದೂ ವ್ಯಾವಹಾರಿಕವೆಂದು ನಮಗೆ ವಿವಕ್ಷಿತವೆಂದು ಹೇಳುವುದಾದರೆ ಆತ್ಮಾಶ್ರಯದೋಷ ಬರುತ್ತದೆ. ಈ ವಸ್ತು ಯಾವ ಪ್ರಯೋಜನಕ್ಕೂ ಬರುವುದಿಲ್ಲವೆಂದು ವ್ಯವಹರಿಸುವುದರೊಳಗೇ ವ್ಯವಹಾರವೆಂಬ ಪದವು ಸೇರುವುದರಿಂದ ಆತ್ಮಾಶ್ರಯದೋಷ ಸಂಭವಿಸುತ್ತದೆ. ಅರ್ಥಕ್ರಿಯಾಕಾರಿ ಎಂಬ ಪದವು ಸುವರ್ಣದಂತೆ ಕಟಕವೇ ಮೊದಲಾದ ಒಡವೆಗಳಾಗಿ ಪರಿಣಮಿಸುವುದೆಂಬ ಅರ್ಥವನ್ನು ತಿಳಿಸುವುದೇ ನಮ್ಮ ಇಷ್ಟವೆಂದು ಹೇಳುವುದಾದರೆ, ಸ್ವಪ್ನದ ವಸ್ತುಗಳಲ್ಲೂ ಇಂತಹ ಪರಿಣಾಮವಿರಬಹುದಾದ್ದರಿಂದ ಅವೂ ವ್ಯಾವಹಾರಿಕಸತ್ಯವೇ ಆಗಬೇಕಾದೀತು. ಉತ್ಪನ್ನವಿನಷ್ಟಘಟವೂ ವ್ಯಾವಹಾರಿಕ ಸತ್ಯವಾಗದೇಹೋಗಬೇಕಾದೀತು. 'ಕಾರ್ಯಕಾರಣಗಳೆರಡೂ ಸಜಾತೀಯವಾಗಿರ

ಬೇಕು' ಎಂದು ಹೇಳಿದರೆ ಪ್ರಾತಿಭಾಸಿಕವಸ್ತುವೂ ವ್ಯಾವಹಾರಿಕಸತ್ಯವೇ ಆಗಬೇಕಾ ಗಿತು. ಶುಕ್ತಿಯಲ್ಲಿಯೂ ಬೆಳ್ಳಿಯೆಂಬ ವ್ಯವಹಾರವು ಅರ್ಥಕ್ರಿಯಾಕಾರಿಯಾಗಿದ್ದೇ ಇರುವುದು. ಸ್ವಾಪ್ನಿಕವಸ್ತುಗಳಲ್ಲಿಯೂ ಅರ್ಥಕ್ರಿಯಾಕಾರಿತ್ವವು ಇಲ್ಲದೇಹೋಗ ಬೇಕಾಗುವುದು. ಇದನ್ನು ಬೇರೆಕಡೆ ಹೆಚ್ಚು ವಿವರಿಸಲಾಗುವುದು.

ನಾಪಿ ಕರಣದೋಷೋಪಹಿತಜ್ಞಾನವಿಷಯತ್ವಮಿತಿ ಷಷ್ಠಃ-ಶುಕ್ತಿ ರಜತಾದಿಷ್ವತಿವ್ಯಾಪ್ತೇಃ. ಅಬಾಧಿತಸರ್ವಜನಪ್ರತೀತಿವಿಷಯೇಷ್ವದು ಷ್ಟೇಂದ್ರಿಯಗೋಚರೇಷು ಘಟಾದಿಷ್ವಸಂಭವಾತ್. "ಯತೋ ವಾ ಇಮಾನಿ ಭೂತಾನಿ ಜಾಯಂತೇ" "ಆತ್ಮನ ಆಕಾಶಸ್ಸಂಭೂತಃ" "ಯಸ್ಮಿನ್ ದ್ಯೌಃ ಪೃಥಿವೀ" ಇತ್ಯಾದ್ಯದುಷ್ಟಶ್ರುತಿಜನ್ಯಜ್ಞಾನವಿಷ ಯತ್ವಾಚ್ಚ ಪ್ರಪಂಚೇ ಲಕ್ಷಣಾಸಂಭವಃ. ಅಥ-ಅವಿದ್ಯಾದೋಷಮೂಲಾ ಶ್ರುತಿರಪಿ, ತಸ್ಮಾನ್ನಾಸಂಭವಃ ಇತಿ ಮನುಷೇ? ತರ್ಹಿ ಬ್ರಹ್ಮಣ್ಯತಿ ವ್ಯಾಪ್ತಿಃ, ತಾದೃಶಶ್ರುತಿಜನ್ಯಜ್ಞಾನವಿಷಯತ್ವಾತ್ತಸ್ಯ. ನ ಚ ಬ್ರಹ್ಮಣಃ ಪ್ರಮಾಣಾಂತರೈರಬಾಧಾನ್ನ ತದ್ವಿಷಯಶ್ರುತಿಜನ್ಯಜ್ಞಾನಂ ಕರಣ ದೋಷೋಪಹಿತಮಿತಿ ವಾಚ್ಯಂ. "ಅಥಾತ ಆದೇಶೋ ನೇತಿ ನೇತಿ" "ನಾಸದಾಸೀನ್ನೋ ಸದಾಸೀತ್ತದಾನೀಂ" "ನ ಸನ್ನಾಸನ್ನ ಸದಸತ್" ಇತ್ಯಾದಿಶ್ರುತಿಭಿಃ ಪೂರ್ವಪ್ರಪಂಚಿತಕತರ್ಕಾನುಗೃಹೀತಾಭಿರ್ಬ್ರಹ್ಮಣೋಪಿ ಬಾಧಾತ್. ಶ್ರುತೀನಾಂ ಬ್ರಹ್ಮನಿಷೇಧಂ ವಿನಾಽರ್ಥಾಂತರವರ್ಣನಂ ಪ್ರಪಂಚನಿಷೇಧಂ ವಿನಾಽರ್ಥಾಂತರಸ್ಯ ತತ್ರಾಪಿ ವರ್ಣನಾದಕಿಂಚಿತ್ಕರಂ. ಕಿಂಚ-ಅಧಿಷ್ಠಾನಸತ್ತಾರೂಪೇ ಸರ್ವಪ್ರತ್ಯಯವೇದ್ಯೇ ಬ್ರಹ್ಮಣ್ಯತಿ ವ್ಯಾಪ್ತಿಃ. ನಚ ಜ್ಞಾನಪ್ರಕಾರತ್ವಮಿತಿ ವಿವಕ್ಷಿತುಂ ಶಕ್ಯಂ, ಘಟಾದಿಷ್ವ ವ್ಯಾಪ್ತೇಃ, ತೇಷಾಂ ಜ್ಞಾನವಿಶೇಷ್ಯತ್ವಾತ್. ಸದ್ರೂಪಸ್ಯಾಪಿ ಬ್ರಹ್ಮಣಃ "ಘಟಸ್ಸನ್" ಇತ್ಯಾದಿ ಪ್ರತೀತೌ ಪ್ರಕಾರಿತ್ವಾತ್. "ಬ್ರಹ್ಮಣಿ ಪ್ರಪಂಚಃ" ಇತಿ ಜ್ಞಾನೇ ಪ್ರಕಾರತ್ವಾಚ್ಚ. ನಚಾಧ್ಯಸ್ತತ್ವಂ ವಿಷಯವಿಶೇಷಣಮಿತಿ ಯುಕ್ತಂ. ತಾವನ್ಮಾತ್ರಸ್ಯೈವ ಸಮ್ಯಕ್ತ್ವೇ ಶೇಷವೈಯರ್ಥ್ಯಾತ್. ಪ್ರಾತಿಭಾಸಿಕೇ ಅತಿವ್ಯಾಪ್ತ್ಯವಾರಣಾಚ್ಚ. ತಸ್ಮಾದ್ವ್ಯಾವಹಾರಿಕಮೇವ ವಿಶ್ವಸ್ಯ ಸತ್ಯತ್ವಮಿತಿ ಯತ್-ತಸ್ಯ ಶ್ರುತಿಯುಕ್ತ್ಯನುಭವವಿರುದ್ಧತ್ವಾತ್ ಪ್ರಚ್ಛನ್ನಬೌದ್ಧವಾದ ಏವಾಯಂ ಮಾಯಾವಾದ ಇತಿ ಶ್ರೌತಶೈವ ಘಂಟಾಘೋಷಃ. ಕಿಂಚ-ತತ್ತ್ವಮಸ್ಯಾದಿಮಹಾವಾಕ್ಯೇಷು ಚ ನ ನಿರ್ವಿಶೇಷಬ್ರಹ್ಮೈಕ್ಯಮುಪದಿಶ್ಯತೇ. ತ್ವಂತತ್ಪದಯೋಸ್ಸವಿಶೇಷಜೀವ ಬ್ರಹ್ಮಪರತ್ವವ್ಯಪದೇಶಾತ್. "ತದೈಕ್ಷತ ಬಹು ಸ್ಯಾಂ" ಇತ್ಯಾದಿಷು ತಚ್ಛಬ್ದವಾಚ್ಯಸ್ಯ ಜಗತ್ಕಾರಣಸ್ಯ ಪರಮೇಶ್ವರಸ್ಯ ಬ್ರಹ್ಮಣಃ ಸವಿಶೇಷ ತ್ವೋಪದೇಶಾಚ್ಚ ತಸ್ಯ [illegible] ಸರ್ವಜ್ಞತ್ವಕಿಂಚಿ

ದ್‌ಜ್ಞತ್ವಧರ್ಮಾನುಗತೇಶ್ವರಜೀವಯೋರ್ಗೋಃಶುನೋರಿವೈಕತ್ವಾಸಂಭವಾಜ್ಜಹದಜಹಲ್ಲಕ್ಷಣೋಕ್ತತ್ಯಾಗಾತ್ಯಾಗವಿಧಾಯಕಸೋಽಯಂ ದೇವದತ್ತವನ್ಮಾಯಾಽವಿದ್ಯೋಪಾಧಿನಿರಾಕರಣಪೂರ್ವಕಾಧಿಷ್ಠಾನೈಕ್ಯೇ ಬಾಧಕಾಭಾವಾಲ್ಲಕ್ಷಣಾಽಂಗೀಕ್ರಿಯತೇ ಇತಿ ಚೇನ್ನ. "ಬ್ರಹ್ಮವೇದ ಬ್ರಹ್ಮೈವ ಭವತಿ" "ಬ್ರಹ್ಮಕಾಮೋ ಬ್ರಹ್ಮವೇದನಂ ಕುರ್ಯಾತ್" "ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" "ಶಿವ ಏಕೋ ಧ್ಯೇಯಃ" "ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" ಇತ್ಯಾದೌ ಭ್ರಮರಕೀಟವತ್ಪರಮೇಶ್ವರೋಪಾಸನಾತ್ಮಕಧ್ಯಾನಜ್ಞಾನವಶಾತ್ ಜೀವಸ್ಯ ಶಿವತ್ವಪ್ರಾಪ್ತ್ಯುಪದೇಶಾತ್. "ಏಷ ಏವ ಸಾಧು ಕರ್ಮ ಕಾರಯತಿ" ಇತ್ಯಾದಿಶ್ರುತಿಷು ಸರ್ವಕರ್ಮಕಾರಯಿತೃತ್ವಸಾಲೋಕ್ಯಾದಿಚತುರ್ವಿಧಮುಕ್ತಿಪ್ರದಾಯಕತ್ವಯೋಃ ಪರಮೇಶ್ವರಸ್ಯೈವಾಭಿಧಾನಾತ್. "ತದೈಕ್ಷತ ಬಹು ಸ್ಯಾಂ ಪ್ರಜಾಯೇಯ" ಇತ್ಯುಪಕ್ರಮವಾಕ್ಯವಿರೋಧಾತ್, ಏಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾಭಂಗಪ್ರಸಂಗಾಚ್ಚ.

ಕರಣದೋಷದೊಡಗೂಡಿದ ಜ್ಞಾನಕ್ಕೆ ವಿಷಯವಾದುದೇ ವ್ಯಾವಹಾರಿಕ ಸತ್ಯವೆಂದು ಹೇಳುವ ವಿಕಲ್ಪವೂ ಯುಕ್ತವಲ್ಲ; ಯಾಕೆಂದರೆ ಶುಕ್ತಿಯಲ್ಲಿ ರಜತವೆಂಬ ಜ್ಞಾನವೂ ಇಂದ್ರಿಯಾದಿಕರಣದೋಷಗಳಿಂದಲೇ ಬರುವುದರಿಂದ ಆ ಜ್ಞಾನದಲ್ಲಿ ಗೋಚರವಾಗುವ ಶುಕ್ತಿರಜತವೂ ವ್ಯಾವಹಾರಿಕಸತ್ಯವೇ ಆಗಬೇಕಾದೀತು. ಲೋಕದಲ್ಲಿ ಸತ್ಯವಾದ ಘಟವನ್ನು ದೋಷಗ್ರಸ್ತವಾದ ಇಂದ್ರಿಯದಿಂದಲೇ ಎಲ್ಲರೂ ಗ್ರಹಿಸುವರಾದ್ದರಿಂದ ಆ ಘಟವು ವ್ಯಾವಹಾರಿಕಸತ್ಯವಾಗದೇ ಹೋಗುತ್ತದೆ. 'ಬ್ರಹ್ಮದಿಂದಲೇ ಈ ಜಗತ್ತೆಲ್ಲವೂ ಹುಟ್ಟಿದೆ' ಈ ಬಗೆಯ ಶ್ರುತಿಗಳು ಪ್ರಪಂಚದ ಬಗ್ಗೆ ತಿಳಿಸುತ್ತಿರುವುದರಿಂದ ಪ್ರಪಂಚವು ಸತ್ಯವೇ ಆಗಬೇಕಾದೀತು. ಆ ಶ್ರುತಿಯು ಅವಿದ್ಯೆ ಎಂಬ ದೋಷದಿಂದ ಕೂಡಿದೆಯಾದ್ದರಿಂದ, ಅದರಿಂದ ಬೋಧಿತವಾದ ಪ್ರಪಂಚವೂ ಸತ್ಯವಲ್ಲವೆಂದರೆ, ಆ ಶ್ರುತಿಯೇ ಬ್ರಹ್ಮವನ್ನೂ ಬೋಧಿಸುತ್ತಿರುವುದರಿಂದ ಬ್ರಹ್ಮವೂ ಸತ್ಯವಾಗದೇಹೋಗುತ್ತದೆ. ಬ್ರಹ್ಮಕ್ಕೆ ಬೇರೆ ಪ್ರಮಾಣಗಳಿಂದ ಬಾಧೆಇಲ್ಲದ್ದರಿಂದ ಅದು ಮಾತ್ರ ಸತ್ಯವೆಂದು ಹೇಳುವುದು ಯುಕ್ತವಲ್ಲ. "ಬ್ರಹ್ಮ ಇಲ್ಲ ಇಲ್ಲ" "ಅಗ ಸತ್ ಅಸತ್ ಯಾವುದೂ ಇರಲಿಲ್ಲ" ಈ ಶ್ರುತಿಗಳಲ್ಲಿ ಬ್ರಹ್ಮಕ್ಕೂ ಬಾಧೆಯನ್ನು ಹೇಳಿದೆ. ಈ ಶ್ರುತಿಗಳಿಗೆ ಬೇರೆ ಅರ್ಥವನ್ನು ಹೇಳುವುದಾದರೆ, ಪ್ರಪಂಚವನ್ನು ನಿಷೇಧಿಸುವ ಶ್ರುತಿಗಳಿಗೂ ಬೇರೆ ಅರ್ಥವನ್ನು ಹೇಳಬಹುದು. ಇದೂ ಅಲ್ಲದೆ, ಎಲ್ಲಾ ಜ್ಞಾನಗಳಲ್ಲಿಯೂ ಅಧಿಷ್ಠಾನರೂಪವಾಗಿ ತೋರುವ ಬ್ರಹ್ಮವು ವ್ಯಾವಹಾರಿಕ ಸತ್ಯವೇ ಆಗಬೇಕಾಗುತ್ತದೆ. ಜ್ಞಾನದಲ್ಲಿ ಪ್ರಕಾರವಾಗಿ ಯಾವುದು ತೋರುವುದೋ ಅದೇ ವ್ಯಾವಹಾರಿಕಸತ್ಯವೆಂದರೆ ಘಟಾದಿಗಳೂ ಸಹ ಜ್ಞಾನದಲ್ಲಿ ವಿಶೇಷ್ಯವಾಗಿಯೇ ತೋರುವುದರಿಂದ ಅವೂ ವ್ಯಾವಹಾರಿಕಸತ್ಯವಾಗುವಂತಿಲ್ಲ. ಸದ್ರೂಪ

ವಾದ ಬ್ರಹ್ಮವೂ ಸಹ 'ಘಟಸ್ಸನ್, ಪಟಸ್ಸನ್' 'ಘಟವಿದೆ ಪಟವಿದೆ' ಎಂಬ ಜ್ಞಾನ ದಲ್ಲಿಯೂ ವಿಶೇಷ್ಯವಾಗಿ ತೋರುವುದರಿಂದ, ಬ್ರಹ್ಮದಲ್ಲಿ ಪ್ರಪಂಚವಿದೆ ಎಂದು ತೋರುವ ಜ್ಞಾನದಲ್ಲಿ ಬ್ರಹ್ಮವೇ ಪ್ರಕಾರವಾಗಿ ತೋರುವುದರಿಂದ ಬ್ರಹ್ಮ ವ್ಯಾವಹಾರಿ ಕವೇ ಆಗಬೇಕಾದೀತು. ಅಧ್ಯಸ್ತವಾದ ರೀತಿಯಲ್ಲಿ ಯಾವುದು ವಿಷಯವಾಗುವುದೋ ಅದೇ ವ್ಯಾವಹಾರಿಕವೆಂದು ಹೇಳಿದರೆ, ಅರ್ಥಕ್ರಿಯಾಶೂನ್ಯತ್ವವೇ ಮೊದಲಾದ ವಿಶೇಷಣಗಳು ವ್ಯರ್ಥವಾಗುತ್ತವೆ. ಪ್ರಾತಿಭಾಸಿಕವೂ ಅಧ್ಯಸ್ತವೇ ಆಗುವುದರಿಂದ ಅದೂ ವ್ಯಾವಹಾರಿಕವೇ ಆಗಬೇಕಾದೀತು. ಹೀಗೆ ಪ್ರಪಂಚವು ವ್ಯಾವಹಾರಿಕಸತ್ಯ ವೆಂಬ ವಾದವು ಶ್ರುತಿ ಯುಕ್ತಿ ಅನುಭವಗಳಿಗೆ ವಿರುದ್ಧವಾದ್ದರಿಂದ ಇದು ಪ್ರಚ್ಛನ್ನ ಬೌದ್ಧರ ಮಾಯಾವಾದವೆಂದು ಶ್ರೌತಶೈವರೆನಿಸಿದ ವೀರಶೈವರ ಘಂಟಾಘೋಷ ವೆನಿಸಿದೆ. ಇದೂ ಅಲ್ಲದೆ, 'ತತ್ತ್ವಮಸಿ' ಎಂದು ಮುಂತಾದ ಮಹಾವಾಕ್ಯಗಳು ನಿರ್ವಿಶೇಷಬ್ರಹ್ಮದಲ್ಲಿ ಜೀವನ ಐಕ್ಯವನ್ನು ಹೇಳಿಲ್ಲ. ತತ್ ತ್ವಂ ಪದಗಳಿಗೆ ಸವಿಶೇಷ ರಾದ ಜೀವಬ್ರಹ್ಮರ ಪರವಾಗಿಯೇ ಅಲ್ಲಿ ತಿಳಿಸಲಾಗಿದೆ. 'ತದೈಕ್ಷತ ಬಹು ಸ್ಯಾಂ' 'ನಾನು ವಿಸ್ತಾರವಾಗುವೆನೆಂದು ಅದು ನೋಡಿತು.' ಇಲ್ಲಿ ತಚ್ಛಬ್ದದಿಂದ ಬೋಧಿತ ವಾಗುವ ಜಗತ್ಕಾರಣನಾದ ಪರಮೇಶ್ವರನು ಸವಿಶೇಷನೆಂದೇ ಹೇಳಲಾಗಿದೆ. ಮಾಯೆ ಅವಿದ್ಯೆಗಳಲ್ಲಿ ಪ್ರತಿಬಿಂಬಿಸಿ, ಸರ್ವಜ್ಞತ್ವ ಕಿಂಚಿದ್ಜ್ಞತ್ವವೇ ಮೊದಲಾದ ವಿರುದ್ಧ ಧರ್ಮಗಳಿಂದೊಡಗೂಡಿದ ಜೀವೇಶ್ವರರಿಗೆ ಗೋಶ್ವಾನಗಳಂತೆ ಏಕತ್ವವು ಸಂಭವಿಸದೇ ಇರುವುದರಿಂದ ಜಹದಜಹಲ್ಲಕ್ಷಣದಲ್ಲಿ ಹೇಳಿದಂತೆ 'ಕೆಲವಂಶವನ್ನು ಬಿಡುವುದು ಕೆಲವನ್ನು ಬಿಡದಿರುವುದು' ಎಂಬ ನಿಯಮದ ಪ್ರಕಾರ 'ಸೋಽಯಂ ದೇವದತ್ತಃ' ಎಂಬ ವಾಕ್ಯದಂತೆ ಮಾಯೆ-ಅವಿದ್ಯೆ ಎಂಬ ಉಪಾಧಿಗಳನ್ನು ತೆಗೆದುಹಾಕಿ ಅಧಿಷ್ಠಾನ ಗಳೆರಡರ ಐಕ್ಯದಲ್ಲಿ ಯಾವ ಬಾಧವೂ ಇಲ್ಲದ್ದರಿಂದ ಲಕ್ಷಣೆಯನ್ನು ಅಂಗೀಕರಿಸ ಬಹುದಲ್ಲವೇ? ಎಂದು ಹೇಳಿದರೆ ಅದೂ ಹೊಂದುವುದಿಲ್ಲ. 'ಬ್ರಹ್ಮವನ್ನರಿತವನು ಬ್ರಹ್ಮವೇ ಆಗುತ್ತಾನೆ.' 'ಬ್ರಹ್ಮವನ್ನಿಚ್ಛಿಸುವವನು ಬ್ರಹ್ಮವನ್ನು ತಿಳಿಯಬೇಕು.' 'ಶ್ರದ್ಧಾಭಕ್ತಿಧ್ಯಾನಗಳಿಂದ ತಿಳಿ.' ಇತ್ಯಾದಿ ಶ್ರುತಿಗಳಲ್ಲಿ ಭ್ರಮರಕೀಟನ್ಯಾಯದಿಂದ ಪರಮೇಶ್ವರನ ಉಪಾಸನರೂಪವಾದ ಧ್ಯಾನಜ್ಞಾನಗಳಿಂದ ಜೀವನು ಶಿವಭಾವವನ್ನು ಹೊಂದುವನು ಎಂದು ತಿಳಿಸಲಾಗಿದೆ. "ಇವನೇ ಒಳ್ಳೆಯ ಕರ್ಮವನ್ನು ಮಾಡಿ ಸುತ್ತಾನೆ". ಈ ಬಗೆಯ ಶ್ರುತಿಗಳಲ್ಲಿ ಪರಮೇಶ್ವರನೇ ಎಲ್ಲಾ ಕರ್ಮಗಳನ್ನು ಮಾಡಿಸಲಿಕ್ಕೂ, ಸಾಲೋಕ್ಯವೇ ಮೊದಲಾದ ನಾಲ್ಕುಬಗೆಯ ಮುಕ್ತಿಗಳನ್ನು ಅನ ಗ್ರಹಿಸಲಿಕ್ಕೂ ಶಕ್ತನೆಂಬುದು ಸ್ಪಷ್ಟವಾಗಿದೆ. 'ತದೈಕ್ಷತ' ಎಂಬ ಉಪಕ್ರಮ ವಾಕ್ಯದ ವಿರೋಧದಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವೂ ಆಗುವುದೆಂಬ ಶ್ರುತಿಗೂ ಭಂಗವುಂಟಾದೀತು.

**ನನು—ಉಪಾಸನಾವಿಧಿನಾ ಪರಮೇಶ್ವರಸಾಕ್ಷಾತ್ಕಾರೋ ನೋಪ ಪದ್ಯತೇ. "ಯದ ಲ್ಪಂ ತನ್ಮರ್ತ್ಯಂ" ಇತಿ ನ್ಯಾಯೇನ ಘಟವನ್ನಾಶ**

ಪ್ರಸಂಗಾತ್. ತದಭಾವೇ ಧ್ಯಾನಸ್ಯ ನಿಷ್ಪ್ರಯೋಜನತ್ವಾತ್. ಕಿಂಚ-ಸರ್ವಜ್ಞತ್ವಾದಿಷಡ್ವಿಧಧರ್ಮಾವಚ್ಛಿನ್ನಸ್ಯ ಪರಶಿವಸ್ಯ ಬ್ರಹ್ಮಣಃ ಶಿವಶರ್ವಶಂಕರಾನಂದಜ್ಞಾನಾನಂತಾದಿಶಬ್ದಾನಾಂ ಹಸ್ತಕರಪಾಣ್ಯಾದಿಶಬ್ದವತ್ಪರ್ಯಾಯತ್ವಾತ್ ಅಖಂಡಜ್ಞಾನಸ್ವರೂಪಪರಮಶಿವಾವಲೋಕೀ ಶುದ್ಧಜೀವಸ್ತು ತದ್ಭಿನ್ನಸ್ತದಭಿನ್ನೋ ವಾ? ನಾದ್ಯಃ, ಪ್ರಭಾಕರಪ್ರಭಾಭಾಸಮಾನಸ್ಯ ಘಟಪಟಾದಿಪ್ರಪಂಚಸ್ಯ ಸ್ವಭಾಸಕಪ್ರಭಾಕರಪ್ರಕಾಶಕತ್ವಾಸಂಭವವತ್ ಪರಮಶಿವಪ್ರೇರಿತಸ್ಯ ತದ್ವೇತ್ತೃತ್ವಾಸಂಭವಾತ್. ನ ದ್ವಿತೀಯಃ — ಚಕ್ಷುರಿಂದ್ರಿಯವತ್ ಸ್ವಸಾಕ್ಷಾತ್ಕಾರಾಸಂಭವಾತ್. ಜೀವಸ್ಯ ತದ್ಭಿನ್ನಜ್ಞಾನಸ್ವರೂಪತ್ವೇನ ತತ್ಸಾಕ್ಷಾತ್ಕಾರಸಿದ್ಧಿರಿತಿ ಚೇನ್ನ. ಜೀವಸ್ಯ ತತ್ಸಾಕ್ಷಾತ್ಕಾರಕರ್ತೃತ್ವಂ ತದುತ್ಕೃಷ್ಟಜ್ಞಾನಾತ್ಮಕತ್ವೇನ? ತತ್ಸಮಾನಜ್ಞಾನಾತ್ಮಕತ್ವೇನ? ತದಪಕೃಷ್ಟಜ್ಞಾನಾತ್ಮಕತ್ವೇನ ವಾ? ನಾದ್ಯಃ, ಶ್ರುತಿಯುಕ್ತ್ಯನುಭವವಿರೋಧಾತ್. ನದ್ವಿತೀಯಃ, ತದುಪಾಸನಾಽಸಂಭವಾತ್, ಪೂರ್ವೋಕ್ತದೋಷಾಪತ್ತೇಶ್ಚ. ನ ತೃತೀಯಃ— "ಜ್ಞಾಽಜ್ಞೌ" "ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ" "ಈಶಾನಸ್ಸರ್ವವಿದ್ಯಾನಾಂ" ಇತ್ಯಾದಿಶ್ರುತಿಯುಕ್ತ್ಯನುಭವಸಿದ್ಧತ್ವೇನ ತದಪಕೃಷ್ಟತ್ವಂ ಸಂಭವತಿ. ತಥಾಪಿ ಪ್ರಭಾಕರಪ್ರಭಾಮಧ್ಯಸ್ಥದೀಪವತ್ ತತ್ಸಾಕ್ಷಾತ್ಕಾರಾಸಂಭವಾತ್. ತಸ್ಮಾದುಪಾಸನಾಜ್ಞಾನೇನ ನ ಬ್ರಹ್ಮಸಾಕ್ಷಾತ್ಕಾರಸಿದ್ಧಿರಿತಿ ಚೇನ್ನ. ಪ್ರಭಾಕರಾಂಶಚಕ್ಷುರ್ಮಾತ್ರೇಣೈವ ಪ್ರಭಾಕರಸಾಕ್ಷಾತ್ಕಾರಸಿದ್ಧಿವತ್ ಗುರುದೀಕ್ಷಾಶುದ್ಧಸ್ಯ ಜೀವಸ್ಯೈವ ಪರಮೇಶ್ವರಾನುಗ್ರಹಾತ್ತತ್ಸಾಕ್ಷಾತ್ಕಾರಸಿದ್ಧೇರವಿರೋಧಾತ್. ನೋ ಚೇತ್—"ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ" "ಬ್ರಹ್ಮ ವೇದ ಬ್ರಹ್ಮೈವ ಭವತಿ" "ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ" ಇತ್ಯಾದಿಶ್ರುತಿಶತಭಂಗಪ್ರಸಂಗಃ. ಲೋಕೇ ಗುರುಶಿಷ್ಯಬೋಧಪ್ರಚಾರೋಽಪಿ ನ ಸ್ಯಾತ್. ತಸ್ಮಾತ್ಪೂರ್ವೋಕ್ತಾರ್ಥ ಏವ ಸರ್ವವೇದಾಂತತಾತ್ಪರ್ಯಮಿತಿ ಸಿದ್ಧಾಂತಃ.

ಉಪಾಸನವಿಧಿಯಿಂದ ಪರಮೇಶ್ವರನ ಸಾಕ್ಷಾತ್ಕಾರವೇ ಆಗುವಂತಿಲ್ಲ. 'ಕಾಣುವುದೆಲ್ಲವೂ ನಷ್ಟವಾಗುತ್ತದೆ' ಎಂಬ ನ್ಯಾಯದಂತೆ ಬ್ರಹ್ಮವೂ ಘಟದಂತೆ ನಷ್ಟವಾಗಬೇಕಾದೀತು. ಅಲ್ಲಿಗೆ ಧ್ಯಾನವು ನಿಷ್ಪ್ರಯೋಜನವೇ ಆಗಬೇಕಾದೀತು ಇದೂ ಅಲ್ಲದೆ, ಸರ್ವಜ್ಞತೆಯೇ ಮೊದಲಾದ ಆರು ಧರ್ಮಗಳಿರುವ ಪರಬ್ರಹ್ಮಕ್ಕೆ ಶಿವ, ಶರ್ವ, ಶಂಕರ, ರುದ್ರ, ಆನಂದ, ಜ್ಞಾನ, ಅನಂತ ಎಂಬ ಶಬ್ದಗಳು ಹಸ್ತ-ಕರ-ಪಾಣಿ ಎಂಬ ಶಬ್ದಗಳಂತೆ ಪರ್ಯಾಯನಾಮಗಳಾಗಿವೆ. ಹೀಗಿರುವಾಗ, ಅಖಂಡಜ್ಞಾನಸ್ವರೂಪನಾದ ಪರಬ್ರಹ್ಮವನ್ನು ಕಾಣುವ ಶುದ್ಧಜೀವನು ಅವನಿಂದ ಭಿನ್ನನೋ ಅಭಿನ್ನನೋ ಎಂಬ ಸಂದೇಹ ಉಂಟಾಗುತ್ತದೆ. ಭಿನ್ನನೆಂದರೆ ಸೂರ್ಯನ ಪ್ರಭೆ

ಯಿಂದ ಬೆಳಗುವ ಘಟಾದಿ ಪದಾರ್ಥಗಳು ಸೂರ್ಯನನ್ನು ಪ್ರಕಾಶಗೊಳಿಸಲು ಹೇಗೆ ಸಾಧ್ಯವಿಲ್ಲವೋ ಹಾಗೆ ಪರಶಿವನಿಂದ ಪ್ರೇರಿತನಾದ ಜೀವನು ಆ ಪರಶಿವನನ್ನು ತಿಳಿಯಲು ಅಶಕ್ತನಾಗುವನು. ಅಭಿನ್ನನೆಂದರೆ ಕಣ್ಣು ತನ್ನನ್ನು ತಾನು ಹೇಗೆ ನೋಡಿಕೊಳ್ಳಲಾರದೋ ಹಾಗೆ ಜೀವನಿಗೆ ಶಿವನಿಂದ ಅಭಿನ್ನನೆಂಬ ಜ್ಞಾನವೇ ಇರುವುದರಿಂದ ಅವನಿಗೆ ಶಿವನ ಸಾಕ್ಷಾತ್ಕಾರವೇ ಬರುವಂತಿಲ್ಲ. ಜೀವನು ಶಿವನನ್ನು ಸಾಕ್ಷಾತ್ಕಾರಮಾಡುವುದಾದರೂ ಅವನು ತನಗಿಂತ ಉತ್ಕೃಷ್ಟನಾಗಿರುವುದರಿಂದಲೋ? ತನಗೆ ಸಮನಾಗಿರುವುದರಿಂದಲೋ? ಅಥವಾ ತನಗಿಂತ ಅಪಕೃಷ್ಟನಾಗಿರುವುದ ರಿಂದಲೋ? ಎಂಬ ವಿಕಲ್ಪಗಳು ಸಂಭವಿಸುತ್ತವೆ. ಜೀವನು ಶಿವನಿಗಿಂತಲೂ ಉತ್ಕೃಷ್ಟನೆಂಬ ಜ್ಞಾನವು ಶ್ರುತಿ ಯುಕ್ತಿ ಅನುಭವಗಳಿಗೆ ವಿರುದ್ಧವಾದುದು. ಜೀವನು ಶಿವನಿಗೆ ಸಮಾನನೆಂಬಲ್ಲೂ ಜೀವನಿಗೆ ಶಿವನ ಉಪಾಸನವೇ ಸಂಭವಿಸದಿರುವುದರಿಂದ ಹಿಂದಿನ ದೋಷಗಳೇ ಒದಗುತ್ತವೆ. ಜೀವನು ಶಿವನಿಗಿಂತಲೂ ಅಪಕೃಷ್ಟನೆಂಬ ವಿಕಲ್ಪವೂ ಯುಕ್ತವಲ್ಲ. ಯಾಕೆಂದರೆ 'ಜ್ಞಾಜ್ಞೌ,' 'ಪ್ರಧಾನಕ್ಷೇತ್ರಜ್ಞಪತಿಃ' 'ಈಶಾನಃ ಸರ್ವವಿದ್ಯಾನಾಂ' ಈ ಬಗೆಯ ಶ್ರುತಿಗಳಿಂದಲೂ, ಯುಕ್ತಿಯಿಂದಲೂ, ಅನುಭವದಿಂದಲೂ ಜೀವನು ಶಿವನಿಗಿಂತ ಅಪಕೃಷ್ಟನೆಂಬ ಜ್ಞಾನವೇ ಸಂಭವಿಸುತ್ತದೆ ಯಾದರೂ ಇದರಿಂದ ಜೀವನಿಗೆ ಸೂರ್ಯನ ಮಧ್ಯದಲ್ಲಿರುವ ದೀಪದಂತೆ ಶಿವನ ಸಾಕ್ಷಾತ್ಕಾರವೇ ಸಂಭವಿಸುವಂತಿಲ್ಲ. ಆದ್ದರಿಂದ ಉಪಾಸನದಿಂದ ಶಿವನ ಸಾಕ್ಷಾತ್ಕಾರವು ಸಿದ್ಧಿಸುವುದಿಲ್ಲ ಎಂದು ಆಕ್ಷೇಪ ಬರುತ್ತದೆ. ಆದರೆ ಈ ಆಕ್ಷೇಪ ಯುಕ್ತವಲ್ಲ; ಯಾಕೆಂದರೆ ಸೂರ್ಯನ ಅಂಶವಾದ ಕಣ್ಣಿನಿಂದಲೇ ಸೂರ್ಯನ ಸಾಕ್ಷಾತ್ಕಾರವು ಸಿದ್ಧಿಸುತ್ತದೆ. ಹೀಗಿರುವಾಗ ಗುರುದೀಕ್ಷೆಯಿಂದ ಶುದ್ಧನಾದ ಜೀವನಿಗೆ ಪರಮೇಶ್ವರನ ಅನುಗ್ರಹ ದೊರೆತು ಅವನ ಸಾಕ್ಷಾತ್ಕಾರವು ಲಭಿಸು ವುದರಲ್ಲಿ ಯಾವ ವಿರೋಧವೂ ಇರಲಾರದು. ಹಾಗಿಲ್ಲದೆಹೋದರೆ 'ದೇವನನ್ನು ತಿಳಿದು ಪರಮ ಶಾಂತಿಯನ್ನು ಹೊಂದುತ್ತಾನೆ'. 'ಬ್ರಹ್ಮವನ್ನರಿತವನು ಬ್ರಹ್ಮವೇ ಆಗುತ್ತಾನೆ' 'ಈ ಅಣುವಾದ ಆತ್ಮವನ್ನು ಮನದಿಂದ ತಿಳಿಯಬೇಕು' ಈ ಬಗೆಯ ನೂರಾರು ಶ್ರುತಿಗಳು ವ್ಯರ್ಥವಾಗಬೇಕಾದೀತು. ಲೋಕದಲ್ಲಿ ಗುರುಶಿಷ್ಯರ ಬೋಧ ಪ್ರಚಾರವೂ ನಿಂತುಹೋಗಬೇಕಾದೀತು. ಆದ್ದರಿಂದ ಹಿಂದೆ ಹೇಳಿದಂತೆ ಜಗತ್ತನ್ನು ಪಾರಮಾರ್ಥಿಕವಾಗಿ ಸತ್ಯವೆಂದು ಹೇಳುವ ಮತವೇ ಎಲ್ಲಾ ವೇದಾಂತವಾಕ್ಯಗಳಿಗೂ ತಾತ್ಪರ್ಯವೆನಿಸಿದೆ. ಹೀಗೆ ನಾಲ್ಕು ಅಧ್ಯಾಯಗಳ ತಾತ್ಪರ್ಯವನ್ನು ನಾಲ್ಕು ಸೂತ್ರಗಳಲ್ಲಿಯೇ ಹೇಳಿರುವುದರಿಂದ ಉಳಿದ ಸೂತ್ರಗಳೆಲ್ಲಕ್ಕೂ ಪ್ರಯೋಜನವೇ ನೆಂದು ಕೇಳಿದರೆ, ಹಿಂದೆ ಹೇಳಿದ ಪರಶಿವಬ್ರಹ್ಮದ ಲಕ್ಷಣಕ್ಕೆ ಪ್ರಧಾನದಲ್ಲಿ ಅತಿ ವ್ಯಾಪ್ತಿಯನ್ನು ಅಶಂಕಿಸಿ ನಿವಾರಣೆಮಾಡುವುದೇ ಮುಂದಿನ ಸೂತ್ರಗಳ ಪ್ರಯೋ ಜನವೆಂದು ಸೂತ್ರಕಾರನು ತಿಳಿಸುತ್ತಾನೆ.

## ಈಕ್ಷತ್ಯಧಿಕರಣಂ ||೫||

ನಿರ್ವಿಕಾರಸ್ಯ ಬ್ರಹ್ಮಣಃ ಜಗಜ್ಜನ್ಮಾದಿಕಾರಣತ್ವಾಸಂಭವಾತ್ ಅಯಸ್ಕಾಂತಸೂಚೀನ್ಯಾಯೇನ ಬ್ರಹ್ಮಸತ್ತಾವಶಾತ್ ಪ್ರಧಾನಸ್ಯ ಜಗತ್ಕಾರಣತ್ವಂ ಸಮುಚಿತಂ? ಉತ ಸ್ವಾತಂತ್ರ್ಯೇಣ ವಾ ? ಇತಿ ಸಾಂಖ್ಯಾದ್ವೈತಮತಪೂರ್ವಪಕ್ಷಮಾಶಂಕ್ಯ ತನ್ಮತಂ ನಿರಾಕರೋತಿ.

## ಈಕ್ಷತೇರ್ನಾಶಬ್ದಂ ||೫||

ಅಶಬ್ದಂ ಸಾಂಖ್ಯಾದ್ವೈತಕಲ್ಪಿತಂ ಜಡಪ್ರಧಾನಂ ಜಗತ್ಕಾರಣಂ ನ ಭವತಿ, ಕುತಃ ಈಕ್ಷತೇಃ, ಈಕ್ಷಿತೃತ್ವಪೂರ್ವಕಜಗಜ್ಜನ್ಮಾದಿಕಾರಣತ್ವಸ್ಯ ಸಚ್ಛಬ್ದವಾಚ್ಯೇ ಪರಮೇಶ್ವರೇ ದರ್ಶನಾತ್ ಇತಿ ಸೂತ್ರಾರ್ಥಃ. ಛಾಂದೋಗ್ಯೇ ಶ್ರೂಯತೇಽಸ್ಯ ವಿಷಯಃ, 'ಸದೇವ ಸೌಮ್ಯ' "ತದೈಕ್ಷತ ಬಹು ಸ್ಯಾಂ" ಇತ್ಯಾದಿ. ಅನ್ಯತ್ರ "ಆತ್ಮಾ ವಾ ಇದಮಗ್ರಆಸೀತ್, ಸ ಐಕ್ಷತ ಲೋಕಾನ್ನು ಸೃಜ ಇತಿ. ಸ ಇಮಾನ್ ಲೋಕಾನಸೃಜತ" ಇತಿ. ತಥಾ ಷೋಡಶಕಲಂ ಪುರುಷಂ ಪ್ರಕೃತ್ಯ ಕ್ವಚಿತ್ "ಸ ಈಕ್ಷಾಂಚಕ್ರೇ. ಸ ಪ್ರಾಣಮಸೃಜತ" ಇತ್ಯಾದಿ ಶ್ರುತಿಕದಂಬೇನ ಪರಮೇಶ್ವರಸ್ಯ ವೀಕ್ಷಣಪೂರ್ವಕಜಗಜ್ಜನಾದಿಕಾರಣತ್ವದರ್ಶನಾತ್ ಅತ್ರ ಜಗತ್ಕಾರಣತ್ವಂ ಸಚ್ಛಬ್ದವಾಚ್ಯತ್ವಂ ಚ ಪ್ರಧಾನಸ್ಯ ವಾ ಬ್ರಹ್ಮಣೋ ವೇತಿ ಸಂಶಯಃ.

## ಈಕ್ಷತ್ಯಧಿಕರಣ ||೫||

ನಿರ್ವಿಕಾರವಾದ ಬ್ರಹ್ಮವು ಜಗತ್ತಿಗೆ ಕಾರಣವಾಗಲು ಸಾಧ್ಯವಿಲ್ಲವಾದ್ದರಿಂದ ಅಯಸ್ಕಾಂತಸೂಚೀನ್ಯಾಯದಿಂದ ಪ್ರಧಾನವು ಬ್ರಹ್ಮದ ಸಾನ್ನಿಧ್ಯದಿಂದ ಜಗತ್ಕಾರಣವಾಗುವುದೋ ಅಥವಾ ಸ್ವತಂತ್ರವಾಗಿಯೇ ಕಾರಣವಾಗಬಲ್ಲದೋ ಎಂದು ಸಾಂಖ್ಯ ಮತ್ತು ಅದ್ವೈತಮತಗಳ ರೀತಿಯಾಗಿ ಪೂರ್ವಪಕ್ಷವನ್ನಾಶಂಕಿಸಿ ಈ ಅಧಿಕರಣದಲ್ಲಿ ನಿರಾಕರಿಸಲಾಗುವುದು.

## ಈಕ್ಷತೇರ್ನಾಶಬ್ದಂ ||೫||

ಇಲ್ಲಿ ಅಶಬ್ದವೆಂದರೆ ಶಬ್ದಪ್ರಮಾಣವಾದ ವೇದದಲ್ಲಿ ಪ್ರತಿಪಾದಿತವಾಗದೆ ಸಾಂಖ್ಯರಿಂದಲೂ ಅದ್ವೈತಿಗಳಿಂದಲೂ ಕಲ್ಪಿತವಾಗಿರುವ ಜಡವಾದ ಪ್ರಧಾನವೆಂದರ್ಥ. ಇದು ಜಗತ್ತಿನ ಸೃಷ್ಟ್ಯಾದಿವ್ಯಾಪಾರಗಳಿಗೆ ಕಾರಣವಾಗಲಾರದು; ಯಾಕೆಂದರೆ,ಉಪನಿಷತ್ತಿನಲ್ಲಿ ಸತ್ಪದದಿಂದ ಬೋಧಿತವಾಗುವ ಪರಮೇಶ್ವರನೊಬ್ಬನೇ ಜಗತ್ಕಾರಣನೆಂಬುದು ಸ್ಪಷ್ಟವಾಗಿದೆ. ಅವನಿಗೇ ಈಕ್ಷಣರೂಪವಾದ ಸಂಕಲ್ಪವನ್ನು

ಶ್ರುತಿಯಲ್ಲಿ ಹೇಳಿದೆ. ಜಡಪ್ರಧಾನಕ್ಕೆ ಈ ಬಗೆಯ ಈಕ್ಷಣ ಅನ್ವಯಿಸುವುದಿಲ್ಲ. ಛಾಂದೋಗ್ಯದಲ್ಲಿ ಈ ಸೂತ್ರದ ವಿಷಯ ಬಂದಿದೆ. 'ಮೊದಲು ಇದೆಲ್ಲವೂ ಸದ್ರೂಪವಾಗಿತ್ತು'. 'ಬ್ರಹ್ಮವೊಂದೇ ಅದ್ವಿತೀಯವಾಗಿದೆ. ಅದು ವಿಸ್ತಾರವಾಗುವೆನೆಂದು ಎಲ್ಲಾ ಕಡೆಯೂ ನೋಡಿತು' ಎಂದು ಛಾಂದೋಗ್ಯದಲ್ಲೂ, "ಮೊದಲು ಈ ಆತ್ಮ ಒಂದೇ ಇತ್ತು, ಬೇರೆ ಏನೊಂದೂ ಇರಲಿಲ್ಲ. ಅದು ಲೋಕಗಳನ್ನು ಸೃಷ್ಟಿಸುವುದಾಗಿ ನೋಡಿತು" ಎಂದು ಬೇರೆ ಶ್ರುತಿಯಲ್ಲೂ ಹೇಳಿದೆ. ಈ ಶ್ರುತಿಗಳಲ್ಲಿ ಪರಮೇಶ್ವರನೇ ವೀಕ್ಷಣಪೂರ್ವಕವಾಗಿ ಜಗತ್ತಿನ ಸೃಷ್ಟಿ ಸ್ಥಿತಿ ಪ್ರಳಯಗಳಿಗೆ ಕಾರಣನೆಂದು ಹೇಳಲಾಗಿದೆ. ಇಲ್ಲಿ ಸತ್‌ಶಬ್ದದಿಂದ ಬೋಧಿತವಾಗಿ ಜಗತ್ತಿಗೆ ಕಾರಣವಾಗಿರುವುದು ಬ್ರಹ್ಮವೋ ಪ್ರಧಾನವೋ ಎಂಬ ಸಂಶಯ ಬರುತ್ತದೆ.

ಪೂರ್ವಪಕ್ಷಸ್ತು, 'ನಿರವದ್ಯಂ ನಿರಂಜನಂ' ಇತ್ಯಾದಿಷು ಪರಮೇಶ್ವರಸ್ಯ ನಿರ್ವಿಕಾರತ್ವೋಪದೇಶಾತ್, ಜಗಜ್ಜನ್ಮಾದಿಕಸ್ಯ ಈಕ್ಷಿತೃತ್ವಸ್ಯ ಚ ವಿಕಾರಧರ್ಮತ್ವಾತ್, "ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಂ ಪ್ರಜಾಂ ಜನಯಂತೀಂ ಸರೂಪಾಂ । ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ" "ಸೈಷಾ ವಿಚಿತ್ರಾ ಸುದೃಢಾ ಬಹ್ವಂಕುರಾ ಸ್ವಯಂ ಗುಣಭಿನ್ನಾ ಸರ್ವತ್ರ ಬ್ರಹ್ಮವಿಷ್ಣುಶಿವರೂಪಿಣೀ" ಇತ್ಯಾದಿ ಶ್ರುತಿಷು ಪ್ರಧಾನಸ್ಯ ಬಹುಪ್ರಜಾಜನಕತ್ವೋಪದೇಶಾತ್ ಸ್ವತ ಏವ ವಾ ತತ್ಸತ್ತಾಪ್ರಾಧಾನ್ಯೇನ ವಾ ಪ್ರಧಾನಸ್ಯ ಜಗತ್ಕಾರಣತ್ವಮುಪಪದ್ಯತೇ, ಸತ್ತ್ವರಜಸ್ತಮೋಗುಣಾತ್ಮಕೇಚ್ಛಾಕ್ರಿಯಾಜ್ಞಾನಶಕ್ತಿಸಂಬಂಧಾವಚ್ಛಿನ್ನಸರ್ವಜ್ಞತ್ವಂ ವಿಧೀಯತೇ. 'ಸತ್ತ್ವಾತ್ಸಂಜಾಯತೇ ಜ್ಞಾನಂ' ಇತಿ ಸ್ಮೃತ್ಯಾ ಜ್ಞಾನಹೇತುತ್ವಂ ತಸ್ಯೈವ ಸಮುಚಿತಂ. ಮೃದಾದಿವತ್ ಪರಿಣಾಮಸ್ಯ ಅಚೇತನಪ್ರಧಾನಧರ್ಮತ್ವಾತ್ ಚೇತನಸ್ಯ ತದಸಂಭವಾಚ್ಚ ಜಗತ್ಪ್ರಧಾನಯೋಃ ಕಾರ್ಯಕಾರಣತ್ವಂ ಯುಜ್ಯತೇ, ತಸ್ಮಾತ್ "ಸದೇವ ಸೌಮ್ಯ" ಇತ್ಯತ್ರ ಸಚ್ಛಬ್ದವಾಚ್ಯತ್ವೇನ ತದೇವ ವ್ಯವಹ್ರಿಯತೇ. ಕಾರ್ಯಕಾರಣಯೋರನನ್ಯತ್ವಂ ಅತ ಏವಂ ಸತ್ಯಂ, ಏಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞೋಪಪತ್ತಿಃ. ಕಿಂಚ, "ಯಥಾ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್ ವಾಚಾರಂಭಣಂ ವಿಕಾರೋ ನಾಮಧೇಯಂ" ಇತ್ಯಾದಿನಾ ಸತ್ಯಮೃತ್ಪಿಂಡಾದಿತತ್ಕಾರ್ಯದೃಷ್ಟಾಂತದಾರ್ಷ್ಟಾಂತಿಕಯೋಃ ಏಕರೂಪತ್ವಂ ಪ್ರತಿಪಾದ್ಯತೇ, ಅತಏವ ಕಪಿಲಾಡುಲೋಮ್ಯಾದಯಃ ಪ್ರಧಾನಸ್ಯ ಪ್ರತಿಜ್ಞಾದೃಷ್ಟಾಂತಶ್ರುತ್ಯುಪಪತ್ತ್ಯಾ ಜಗತ್ಕಾರಣತ್ವಂ ವ್ಯವಸ್ಥಾಪಯಂತಿ. ತಸ್ಮಾತ್ತದ್ಭಿನ್ನಸ್ಯ ಸಚ್ಛಬ್ದವಾಚ್ಯತ್ವಂ ಜಗತ್ಕಾರಣತ್ವಂ ಚ ನೋಪಪದ್ಯತೇ ಇತಿ ಪ್ರಾಪ್ತೇ ಬ್ರೂಮಃ. ಸಿದ್ಧಾಂತಸ್ತು, "ಸದೇವ"

"ತದೈಕ್ಷತ" "ಈಕ್ಷತೇರ್ನಾಶಬ್ದಂ" ಇತಿ ಶ್ರುತಿಸೂತ್ರಾಭ್ಯಾಂ ಸಚ್ಛಬ್ದವಾಚ್ಯಪರಬ್ರಹ್ಮಣಃ ಶಿವಸ್ಯೈವ ಈಕ್ಷತಿಧಾತೋಃ ಶ್ರವಣಾತ್ ಅಚೇತನಸ್ಯ ಪ್ರಧಾನಸ್ಯ ಈಕ್ಷಿತೃತ್ವಾಸಂಭವಾತ್ 'ಋತಂ ಸತ್ಯಂ,' 'ಸತ್ಯಂ ಜ್ಞಾನಂ,' 'ಸತ್ಯಾತ್ಮ ಪ್ರಾಣಾರಾಮಂ' ಇತ್ಯಾದಿ ಶ್ರುತಿಷು ಸರ್ವಜ್ಞೇ ಪರಶಿವಬ್ರಹ್ಮಣಿ ಸಚ್ಛಬ್ದವಾಚ್ಯತ್ವಸ್ಯ ಸಕಲಜಗದುಪಾದಾನನಿಮಿತ್ತಕಾರಣತ್ವಸ್ಯ ಚ ದರ್ಶನಾತ್, ಗುಣತ್ರಯಸಾಮ್ಯಾವಸ್ಥಾತ್ಮಕಪ್ರಧಾನಸ್ಯ ಸತ್ಪದವಾಚ್ಯತ್ವಂ ಜಗತ್ಕಾರಣತ್ವಂ ಚ ನೋಪಪದ್ಯತೇ. 'ಯನ್ಮೋಹಾತ್ಮಕಮಚೇತನಂ ತದೇವ ಪ್ರಧಾನಂ', 'ತದೇವ ಜಡಮೋಹಾತ್ಮಕಂ ಪ್ರಧಾನಂ,' ಇತಿ ತಾಪನೀಯಾದಿಷು ಪ್ರಧಾನಸ್ಯ ಜಡತ್ವಂ ವ್ಯಪದಿಶ್ಯತೇ. "ಪ್ರಧಾನಕ್ಷೇತ್ರಜ್ಞಪತಿಃ" "ಮಾಯಾಂತು ಪ್ರಕೃತಿಂ ವಿಂದ್ಯಾತ್" ಇತ್ಯಾದಿ ಶ್ರುತಿಶತೇನ ಪ್ರಧಾನಪರಮೇಶ್ವರಯೋಃ ನಿಯಾಮ್ಯನಿಯಾಮಕತ್ವಂ ಕಥ್ಯತೇ. ಕಿಂಚೋಪಕ್ರಮೇ 'ತದೈಕ್ಷತ' ಇತ್ಯನೇನ ಉಪಾದಾನಸ್ಯ ಚೇತನತ್ವಂ, 'ಬಹು ಸ್ಯಾಂ' ಇತ್ಯನೇನ ಜಗದುಪಾದಾನತ್ವಂ ಚ ನಿರ್ದಿಶ್ಯತೇ. 'ಪರಾಽಸ್ಯ ಶಕ್ತಿಃ' ಇತಿಶ್ರುತಿದರ್ಶನಾತ್ ಸರ್ವಜ್ಞಸ್ಯ ಪರಮೇಶ್ವರಸ್ಯ ಜ್ಞಾನಕ್ರಿಯಾದಿಸರ್ವಶಕ್ತಿವೈಶಿಷ್ಟ್ಯಂ ಸ್ವಭಾವಸಿದ್ಧಮೇವ. ಅತೋ ಜಗತ್ಕಾರಣವಾಕ್ಯಾನಿ ನ ಪ್ರಧಾನಪರಾಣಿ.

ಇಲ್ಲಿ ಪೂರ್ವಪಕ್ಷ ಹೀಗೆ ಬರುತ್ತದೆ. 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಈ ಬಗೆಯ ಶ್ರುತಿಗಳಲ್ಲಿ ಪರಮೇಶ್ವರನು ನಿರ್ವಿಕಾರನೆಂದು ತಿಳಿಸಲಾಗಿದೆ; ಯಾಕೆಂದರೆ ಜಗಜ್ಜನ್ಮಾದಿಗಳೂ ಈಕ್ಷಣವೂ ವಿಕಾರರೂಪವಾದ ಧರ್ಮಗಳಾಗಿವೆ. "ಸತ್ತ್ವರಜಸ್ತಮೋಗುಣಾತ್ಮಕವೂ ಸನಾತನವೂ ಆದ ಪ್ರಕೃತಿಯು ಸಮಾನಾಕಾರದ ಸಂತತಿಯನ್ನು ಹುಟ್ಟಿಸುತ್ತದೆ. ಅವುಗಳಲ್ಲಿ ಸನಾತನನಾದ ಒಬ್ಬ ಜೀವನು ಈ ಪ್ರಕೃತಿಯನ್ನು ಭೋಗಿಸುತ್ತಾನೆ. ಮತ್ತೊಬ್ಬನು ಇದನ್ನು ಅನುಭವಿಸಿ ತೊರೆಯುತ್ತಾನೆ," "ವಿಚಿತ್ರವೂ ಬಲಿಷ್ಠವೂ ಆಗಿ ಅನೇಕ ಸಂತತಿಗಳಿಂದಲೂ ಗುಣಗಳಿಂದಲೂ ಕೂಡಿದ ಆ ಪ್ರಕೃತಿಯು ಎಲ್ಲಾ ಕಡೆಗಳಲ್ಲೂ ಬ್ರಹ್ಮವಿಷ್ಣುಶಿವರೂಪದಿಂದ ವ್ಯಾಪಿಸಿದೆ" ಈ ಬಗೆಯ ಶ್ರುತಿಗಳಲ್ಲಿ ಪ್ರಧಾನವೇ ಅನೇಕ ಸಂತತಿಗೆ ಕಾರಣವೆಂದು ಹೇಳಲಾಗಿದೆ. ಅದು ತಾನಾಗಿಯೋ ಅಥವಾ ಪರಮೇಶ್ವರನ ಸಾನ್ನಿಧ್ಯದಿಂದಲೋ ಜಗತ್ತಿಗೆ ಕಾರಣವಾಗಿದೆ ಎಂಬುದು ಯುಕ್ತವಾಗಿದೆ. ಸತ್ತ್ವರಜಸ್ತಮೋಗುಣರೂಪವಾದ ಇಚ್ಛಾಜ್ಞಾನಕ್ರಿಯಾಶಕ್ತಿಯೊಡಗೂಡಿರುವುದರಿಂದ ಪ್ರಧಾನವನ್ನು ಸರ್ವಜ್ಞವೆಂದೂ ಹೇಳಲಾಗಿದೆ. ಜ್ಞಾನವು ಸತ್ತ್ವಗುಣದಿಂದ ಹುಟ್ಟುತ್ತದೆಯಾದ್ದರಿಂದ ಪ್ರಧಾನವೇ ಜ್ಞಾನಕ್ಕೆ ಕಾರಣವಾಗಿರುವುದೆಂದು ಸೂಚಿತವಾಯಿತು. ಮಣ್ಣು ಮುಂತಾದ ವಸ್ತುಗಳಂತೆ ಬದಲಾವಣೆಹೊಂದುವುದು ಅಚೇತನದ ಸ್ವಭಾವವಾದ್ದರಿಂದಲೂ, ಚೇತನಬ್ರಹ್ಮವು ಜಗದಾಕಾರವಾಗಿ ಪರಿಣಮಿಸುವುದು ಅಸಂಭವವಾದ್ದರಿಂದಲೂ

ಜಗತ್ತಿಗೂ ಪ್ರಧಾನಕ್ಕು ಕಾರ್ಯಕಾರಣಭಾವವು ಹೊಂದಿಕೆಯಾಗುತ್ತದೆ. ಆದ್ದರಿಂದ 'ಸದೇವ ಸೋಮ್ಯ' ಎಂಬ ಶ್ರುತಿಯಲ್ಲಿ ಸತ್ಪದವು ಪ್ರಧಾನವನ್ನೇ ಬೋಧಿಸುತ್ತದೆ ಎಂದು ಹೇಳುವುದೇ ಯುಕ್ತವಾಗಿದೆ. ಇದರಿಂದ ಕಾರ್ಯಕಾರಣಗಳೆರಡೂ ಒಂದೇ ಬಗೆಯಾಗಿರುವುದರಿಂದ ಪ್ರಾಧಾನವೊಂದನ್ನು ತಿಳಿದರೆ ಅದರ ಕಾರ್ಯವಾದ ಜಗತ್ತೆಲ್ಲವೂ ತಿಳಿಯುವುದೆಂಬ ಪ್ರತಿಜ್ಞೆಯೂ ಸಮನ್ವಯವಾಗುತ್ತದೆ. ಇದೂ ಅಲ್ಲದೆ, "ಒಂದು ಮಣ್ಣು ಮುದ್ದೆಯಿಂದ ಎಲ್ಲಾ ಮಣ್ಣಿನ ವಿಕಾರಗಳೂ ಹೇಗೆ ತಿಳಿಯುತ್ತವೆಯೋ ಹಾಗೆ ನಾಮರೂಪಗಳೆಲ್ಲವೂ ವಾಗ್ವ್ಯವಹಾರಕ್ಕಾಗಿಯೇ ಬಂದಿರುವ ವಿಕಾರಗಳಾಗಿವೆ" ಎಂಬ ಶ್ರುತಿಯಂತೆ ಸತ್ಯವಾದ ಮಣ್ಣುಮುದ್ದೆಗೂ ಅದರಿಂದಾಗುವ ಕಾರ್ಯಗಳಿಗೂ ಏಕರೂಪತೆಯು ಹೊಂದುತ್ತದೆ. ಹೀಗೆ ಶ್ರುತಿಯು ಮೃತ್ಪಿಂಡ ಮತ್ತು ಘಟಗಳ ದೃಷ್ಟಾಂತದಿಂದ ಪರಿಣಾಮವನ್ನು ಸಮರ್ಥಿಸಿರುವುದರಿಂದ ಕಪಿಲ ಜೌಡುಲೋಮಿ ಇವರು ಪ್ರತಿಜ್ಞೆ ಮತ್ತು ದೃಷ್ಟಾಂತಗಳನ್ನು ತಿಳಿಸುವ ಶ್ರುತಿಗಳ ಆಧಾರದಮೇಲೆ ಪ್ರಧಾನವನ್ನೇ ಜಗತ್ಕಾರಣವೆಂದು ಅಂಗೀಕರಿಸಿದ್ದಾರೆ. ಆದ್ದರಿಂದ ಸತ್ಪದದಿಂದ ಬೋಧಿತವೂ ಜಗತ್ಕಾರಣವೂ ಆದದ್ದು ಪ್ರಧಾನವಲ್ಲದೆ ಬೇರೆಯಲ್ಲವೆಂದು ಪೂರ್ವಪಕ್ಷ ಒದಗುತ್ತದೆ. ಈ ಬಗ್ಗೆ ಸಿದ್ಧಾಂತ ಹೀಗಿದೆ. 'ಸದೇವ ಸೋಮ್ಯ' ಎಂಬ ಶ್ರುತಿಯಲ್ಲೂ, 'ಈಕ್ಷತೇರ್ನಾಶಬ್ದಂ' ಎಂಬ ಸೂತ್ರದಲ್ಲೂ ಈಕ್ಷಧಾತುವಿನ ಪ್ರಯೋಗವಿರುವುದರಿಂದ ಅಚೇತನವಾದ ಪ್ರಧಾನಕ್ಕೆ ಈಕ್ಷಣವು ಸಂಭವಿಸದಿರುವುದರಿಂದ ಸತ್ಪದವು ಪರಶಿವಬ್ರಹ್ಮವನ್ನೇ ಬೋಧಿಸುತ್ತದೆ. 'ಋತಂ ಸತ್ಯಂ' 'ಸತ್ಯಂ ಜ್ಞಾನಂ' 'ಸತ್ಯಾತ್ಮ ಪ್ರಾಣಾರಾಮಂ' ಎಂಬ ಶ್ರುತಿಗಳಲ್ಲಿ ಸರ್ವಜ್ಞನಾದ ಪರಶಿವಬ್ರಹ್ಮವೇ ಸತ್ಪದದ ಅರ್ಥವೆಂದೂ, ಜಗತ್ತಿಗೆ ಉಪಾದಾನವೂ ನಿಮಿತ್ತವೂ ಆಗಿರುವನೆಂದು ಹೇಳಲಾಗಿದೆ. ಆದ್ದರಿಂದ ತ್ರಿಗುಣಗಳ ಸಮಾವಸ್ಥೆ ಎನಿಸಿದ ಪ್ರಧಾನವು ಸತ್ಪದದ ಅರ್ಥವೆಂಬುದೂ, ಅದೇ ಜಗತ್ತಿನ ಜನ್ಮಾದಿಗಳಿಗೆ ಕಾರಣವೆಂಬುದೂ ಹೊಂದುವುದಿಲ್ಲ. 'ಯಾವುದು ಮೋಹರೂಪವೋ ಮತ್ತು ಅಚೇತನವೋ ಅದೇ ಪ್ರಕೃತಿ ಎನಿಸಿದೆ', 'ಜಡವೂ ಮೋಹರೂಪವೂ ಆದದ್ದು ಪ್ರಧಾನ' ಎಂದು ತಾಪನೀಯಾದಿ ಗ್ರಂಥಗಳಲ್ಲಿ ಪ್ರಧಾನವನ್ನು ಜಡವೆಂದು ಕರೆಯಲಾಗಿದೆ. "ಪ್ರಧಾನಜೀವರ ಪತಿಯೂ, ಗುಣಗಳ ವ್ಯವಸ್ಥಾಪಕನೂ," "ಮಾಯೆಯನ್ನು ಪ್ರಕೃತಿಯೆಂದೂ, ಈಶ್ವರನನ್ನು ಮಾಯಾಪತಿಯೆಂದೂ ತಿಳಿಯಬೇಕು" ಈ ಬಗೆಯ ನೂರಾರು ಶ್ರುತಿಗಳಲ್ಲಿ ಪ್ರಧಾನವನ್ನು ಪರಮೇಶ್ವರನು ನಿಯಮಿಸುವನೆಂದು ತಿಳಿಸಲಾಗಿದೆ. ಇದೂ ಅಲ್ಲದೆ, ಆರಂಭದಲ್ಲಿ 'ತದೈಕ್ಷತ' ಎಂಬುದರಿಂದ ಉಪಾದಾನಕಾರಣವನ್ನು ಚೇತನವೆಂದೂ, 'ಬಹು ಸ್ಯಾಂ' ಎಂಬುದರಿಂದ ಅದೇ ಜಗತ್ತಿಗೆ ಉಪಾದಾನವೆಂದೂ ತಿಳಿಸಲಾಗಿದೆ. 'ಪರಾಽಸ್ಯಶಕ್ತಿಃ' ಎಂಬ ಮಂತ್ರದಲ್ಲಿ ಸರ್ವಜ್ಞನಾದ ಪರಮೇಶ್ವರನಲ್ಲಿ ಜ್ಞಾನಕ್ರಿಯಾರೂಪವಾದ ಅನೇಕ ಬಗೆಯ ಶಕ್ತ್ಯವೈಶಿಷ್ಟ್ಯವು ಸ್ವಭಾವಸಿದ್ಧವೆಂದು ಹೇಳಲಾಗಿದೆ. ಆದ್ದರಿಂದ ಜಗತ್ಕಾರಣವನ್ನು ತಿಳಿಸುವ ವಾಕ್ಯಗಳು ಪ್ರಧಾನಕ್ಕೆ ಅನ್ವಯಿಸುವುದಿಲ್ಲ.

ಪ್ರತಿಜ್ಞಾತ ದೃಷ್ಟಾಂತಯೋಗಾತ್ ಪ್ರಧಾನಸ್ಯಜಗತ್ಕಾರಣತ್ವಂ ಯದುಕ್ತಂ ತತ್ತುಚ್ಛಂ, ಈಕ್ಷಣಲಕ್ಷಣಸ್ಯ ಚೇತನಧರ್ಮತ್ವಾತ್. 'ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ' ಇತಿ ವಾಕ್ಯೇ ಸರ್ವಂ ಬ್ರಹ್ಮೇತ್ಯುಪದೇಶಾತ್ ನೇತರಸ್ಯ ಕಾರಣತ್ವಂ, ಗುಣತ್ರಯಸಾಮ್ಯಾವಸ್ಥಾಯಾಃಪ್ರಕೃತೇಃ ಸರ್ವಜ್ಞಾನಶಕ್ತಿಮತ್ತ್ವೇನ ಸತ್ತ್ವಧರ್ಮಾವಚ್ಛಿನ್ನ ಸರ್ವಜ್ಞತ್ವಂ ಸಂಭವತೀತಿ ಚೇತ್‌ತದಸಂಗತಂ. ಗುಣತ್ರಯಾತ್ಮಕಪ್ರಧಾನಸ್ಯ ತಮಃಪೃಥಕ್ತ್ವೇನ ರಜಸ್ಸತ್ತ್ವಗುಣಸಂಬಂಧಾಭಾವಾತ್, 'ಗುಣತ್ರಯಸಾಮ್ಯಾವಸ್ಥಾ ಪ್ರಕೃತಿಃ' ಇತ್ಯಂಗೀಕಾರಾಚ್ಚ ಜಗದುಪಾದಾನ ಕಾರಣತ್ವೇನ ಪರಮಶಿವಸ್ಯ ಬ್ರಹ್ಮಣಃ ವಿಕಾರಿತ್ವಮಿತಿ ಯದುಕ್ತಂ ತನ್ನ ರಮಣೀಯಂ. ಪರಮಶಿವಚಿಚ್ಛಕ್ತ್ಯಂಶಭೂತಸ್ಯಮಾಯಾಪಾಶಸ್ಯ ಕಾರ್ಯತ್ವಂ ಚಿಚ್ಛಕ್ತ್ಯವಚ್ಛಿನ್ನಪರಮಶಿವಸ್ಯ ಕಾರಣತ್ವಂ ಇತಿ ನಿರ್ದೇಶಾತ್ ನ ವಿಕಾರಿತ್ವಶಂಕಾಕಳಂಕಃ. ಸೃಷ್ಟಿಕಾಮಸ್ಯ ರಜಸ್ತಮೋವ್ಯಾಪಾಶ್ರಯತ್ವಾತ್ ಕಿಂಚಿದ್ಜ್ಞತ್ವಂ ಪ್ರಸಜ್ಯೇತ ಇತಿ ಚೇತ್, ಯಥಾಗ್ನಿಸಿದ್ಧಸ್ಯ ತದ್ದಾಹಕತ್ವಭಯಾಭಾವಸ್ತಥಾವಶೀಕೃತಮಾಯಾಶಕ್ತೇಃಪರಮಶಿವಸ್ಯ ತತ್ಕೃತದೋಷಾನುಪಪತ್ತಿಃ. ನನು 'ಅಪ್ರಾಣೋ ಹ್ಯಮನಾಶ್ಶುಭ್ರಃ' ಇತ್ಯಾದಿನಾ ಪರಮಶಿವಸ್ಯ ಬ್ರಹ್ಮಣಃ ಶರೀರೇಂದ್ರಿಯಮನಃಪ್ರಾಣ ಸಂಬಂಧಸ್ಯ ನಿರಸ್ತತ್ವಾತ್ ಕಥಂ ಈಕ್ಷಿತೃತ್ವಂ ಸಂಭವತೀತಿ ಚೇನ್ನ, ಸಾಧನಾಂತರನಿರಪೇಕ್ಷತಯಾ ಪ್ರಭಾಕರಸ್ಯ ಸ್ವಯಂಪ್ರಕಾಶತ್ವವತ್ ಶಿವಸ್ಯ ಬ್ರಹ್ಮಣಃ ಶರೀರೇಂದ್ರಿಯಾದಿಸಾಧನಾಂತರನೈರಪೇಕ್ಷ್ಯೇಣ ಸರ್ವೇಕ್ಷಿತೃತ್ವಂ ಸಂಭವತಿ. "ಅಪಾಣಿಪಾದೋ ಜವನೋ ಗೃಹೀತಾ" "ಅಹಂ ವಿಜಾನಾಮಿ ವಿವಿಕ್ತರೂಪೋ ನಚಾಸ್ತಿ ವೇತ್ತಾ ಮಮ ಚಿತ್ಸದಾಹಂ" ಇತಿ ಶ್ವೇತಾಶ್ವತರಕೈವಲ್ಯಾದ್ಯುಪನಿಷತ್ಸು ಶ್ರೂಯತೇ. ನ ಚ 'ನಾನ್ಯೋಽತೋಽಸ್ತಿ ದ್ರಷ್ಟಾ' ಇತ್ಯಾದಿಶ್ರುತಿದರ್ಶನಾತ್ ಪರಮೇಶ್ವರಾತಿರಿಕ್ತಶಾರೀರಸದ್ಭಾವೇ ಪ್ರಮಾಣಾಭಾವ ಇತಿ ವಾಚ್ಯಂ. "ದ್ವಾಸುಪರ್ಣಾ" "ಜ್ಞಾಜ್ಞೌ" ಇತ್ಯಾದಿಶ್ರುತಿಷು ಜೀವಬ್ರಹ್ಮಣೋರ್ಭೇದವ್ಯಪದೇಶಾತ್, "ನಾನ್ಯೋಽತೋಽಸ್ತಿ ಶ್ರೋತಾ" ಇತಿ ಶ್ರುತ್ಯಾ ತದ್ವ್ಯತಿರಿಕ್ತಬ್ರಹ್ಮವಿಷ್ಣ್ವಾದಿಜೀವಾನಾಂ ತತ್ಸಮಾನದ್ರಷ್ಟೃತ್ವಶ್ರೋತೃತ್ವಾದಿನಿಷೇಧಮಾತ್ರಮೇವೋಪದಿಶ್ಯತೆ, ಅನ್ಯಥಾ ಪೂರ್ವೋಕ್ತಶಿವ ಜೀವಭೇದಪ್ರತಿಪಾದಕಶ್ರುತಿಭಂಗಪ್ರಸಂಗಃ ಸ್ಯಾತ್, ಅತಏವ ತದೇವ ರಮಣೀಯಂ.

ಪ್ರತಿಜ್ಞೆ ಮತ್ತು ದೃಷ್ಟಾಂತಗಳನ್ನು ತಿಳಿಸುವ ಶ್ರುತಿಗಳ ಪ್ರಕಾರ ಪ್ರಧಾನವು ಜಗತ್ತಿಗೆ ಕಾರಣವಾಗುವುದೆಂದು ಹೇಳಿದ್ದೂ ಯುಕ್ತವಲ್ಲ. ಯಾಕೆಂದರೆ ಈಕ್ಷಣ

ವೆಂಬ ಧರ್ಮವು ಚೇತನಕ್ಕೆ ಮಾತ್ರವೇ ಅನ್ವಯಿಸುತ್ತದೆಯಾದ್ದರಿಂದ ಜಡಪ್ರಧಾನಕ್ಕೆ ಅನ್ವಯಿಸುವುದಿಲ್ಲ". "ಶಿವನಿಂದಲೇ ಇದೆಲ್ಲವೂ ಹುಟ್ಟಿ ಬೆಳೆದು ಅವನಲ್ಲಿಯೇ ಲಯವಾಗುವುದರಿಂದ ಇದೆಲ್ಲವೂ ಬ್ರಹ್ಮವೆಂದು ತಿಳಿದು ಶಾಂತನಾಗಿ ಬಾಳು" ಎಂಬ ವಾಕ್ಯದಲ್ಲಿ ಎಲ್ಲವೂ ಬ್ರಹ್ಮವೆಂದು ಹೇಳಿರುವುದರಿಂದ ಬೇರೆಯಾವುದೂ ಜಗತ್ತಿಗೆ ಕಾರಣವಾಗುವುದಿಲ್ಲ. ಗುಣತ್ರಯಸಾಮ್ಯಾವಸ್ಥೆಯಲ್ಲಿ ಪ್ರಕೃತಿಗೂ ಎಲ್ಲಾ ಬಗೆಯ ಜ್ಞಾನಶಕ್ತಿ ಇರುವುದರಿಂದ, ಸತ್ತ್ವಗುಣದ ಧರ್ಮವೆನಿಸಿದ ಸರ್ವಜ್ಞತೆಯು ಅದಕ್ಕೂ ಸಂಭವಿಸುತ್ತದೆ ಎಂದು ಹೇಳುವುದಾದರೆ ಅದು ಅಸಂಗತವೇ ಆಗುತ್ತದೆ. ಯಾಕೆಂದರೆ ತ್ರಿಗುಣಮಯವಾದ ಪ್ರಧಾನಕ್ಕೆ ತಮಸ್ಸನ್ನು ಬಿಟ್ಟು ಸತ್ತ್ವರಜೋಗುಣಗಳು ಪ್ರತ್ಯೇಕವಾಗಿ ಸಂಬಂಧಿಸುವುದಿಲ್ಲವಾದ್ದರಿಂದಲೂ, ಮೂರು ಗುಣಗಳ ಸಮಸ್ಥಿತಿಯೇ ಪ್ರಕೃತಿ ಎಂದು ಅಂಗೀಕರಿಸಿರುವುದರಿಂದಲೂ, ಪ್ರಧಾನಕ್ಕೆ ಸರ್ವಜ್ಞತೆಯು ಸಂಭವಿಸುವಂತಿಲ್ಲ. ಜಗತ್ತಿಗೆ ಉಪಾದಾನವಾದ್ದರಿಂದ ಪರಶಿವಬ್ರಹ್ಮನಲ್ಲಿ ವಿಕಾರಗಳು ಸಂಭವಿಸುತ್ತವೆಯೆಂದು ಹೇಳಿದ್ದೂ ಯುಕ್ತವಲ್ಲ. ಯಾಕೆಂದರೆ ಪರಶಿವನ ಚಿಚ್ಛಕ್ತಿಯ ಅಂಶವಾದ ಮಾಯಾಪಾಶವೇ ಜಗದ್ರೂಪವಾದ ಕಾರ್ಯವೆಂದೂ, ಚಿಚ್ಛಕ್ತಿವಿಶಿಷ್ಟನಾದ ಪರಶಿವನೇ ಕಾರಣನೆಂದೂ ಹೇಳುವುದರಿಂದ ಅವನಲ್ಲಿ ವಿಕಾರದೋಷಕ್ಕೆ ಅವಕಾಶವಿಲ್ಲ. ಸೃಷ್ಟಿಕಾಮನಾದ ಪರಮಶಿವನಿಗೆ ರಜಸ್ತಮೋಗುಣಗಳ ಸಂಪರ್ಕವಿಲ್ಲದ್ದರಿಂದ ಅವನು ಅಲ್ಪಜ್ಞನೆನಿಸಬಹುದಲ್ಲವೇ? ಎಂದರೆ, ಬೆಂಕಿಯನ್ನು ಪಳಗಿಸಿಕೊಂಡವನಿಗೆ ಬೆಂಕಿ ಸುಡುವುದೆಂಬ ಭಯವಿಲ್ಲದಿರುವಂತೆ ಮಾಯಾಶಕ್ತಿಯನ್ನು ವಶಪಡಿಸಿಕೊಂಡಿರುವ ಪರಮಶಿವನಿಗೆ ಮಾಯೆಯಿಂದುಂಟಾಗುವ ದೋಷಗಳು ಅಂಟುವುದಿಲ್ಲ. 'ಪ್ರಾಣವಿಲ್ಲದವನೂ, ಮನಸ್ಸಿಲ್ಲದವನೂ, ಶುಭ್ರನೂ' ಎಂಬ ಶ್ರುತಿಯಲ್ಲಿ ಶರೀರೇಂದ್ರಿಯಗಳೂ ಮನಃಪ್ರಾಣಗಳೂ ಇಲ್ಲವೆಂದು ಹೇಳಿರುವುದರಿಂದ ಅವನು ಹೇಗೆ ಎಲ್ಲಾ ಕಡೆಯೂ ನೋಡಬಲ್ಲನು? ಎಂದರೆ ಅದು ಹಾಗಲ್ಲ, ಸೂರ್ಯನು ಯಾವ ಸಾಧನವನ್ನೂ ಅಪೇಕ್ಷಿಸದೆ ಹೇಗೆ ಸ್ವಾಭಾವಿಕವಾಗಿ ಸ್ವಯಂ ಪ್ರಕಾಶನೆನಿಸಿರುವನೋ ಹಾಗೆ ಪರಮಶಿವನು ಇಂದ್ರಿಯಗಳ ಅಪೇಕ್ಷೆ ಇಲ್ಲದೆಯೇ ಎಲ್ಲಾ ಕಡೆಗಳಲ್ಲೂ ನೋಡುವನೆಂಬುದು ಸಹಜವಾಗಿ ಸಂಭವಿಸುತ್ತದೆ. "ಕೈಕಾಲುಗಳಿಲ್ಲದಿದ್ದರೂ ವೇಗವಾಗಿ ಓಡಬಲ್ಲನು, ಪದಾರ್ಥಗಳನ್ನು ಗ್ರಹಿಸಬಲ್ಲನು, ಕಣ್ಣಿಲ್ಲದಿದ್ದರೂ ನೋಡುವನು, ಕಿವಿ ಇಲ್ಲದಿದ್ದರೂ ಕೇಳುವನು, ತಿಳಿಯಬೇಕಾದ್ದನ್ನು ತಿಳಿಯುತ್ತಾನೆ. ಆದರೆ, ಅವನನ್ನು ತಿಳಿಯುವವನು ಬೇರೆ ಯಾರೂ ಇಲ್ಲ. ಅವನನ್ನೇ ಎಲ್ಲರಿಗಿಂತಲೂ ದೊಡ್ಡವನೆಂದು ಹೇಳುತ್ತಾರೆ." "ಕೈಕಾಲುಗಳಿಲ್ಲದಿದ್ದರೂ ನಾನು ಅದ್ಭುತಶಕ್ತಿಯುಳ್ಳವನು. ಕಣ್ಣಿಲ್ಲದಿದ್ದರೂ ನೋಡುವೆನು, ಆಕಾರವಿಲ್ಲದಿದ್ದರೂ ನಾನು ತಿಳಿಯುವೆನು. ನಾನು ಯಾವಾಗಲೂ ಚಿದ್ರೂಪನಾಗಿರುವೆನು" ಎಂದು ಶ್ವೇತಾಶ್ವತರ ಕೈವಲ್ಯಶ್ರುತಿಗಳಲ್ಲಿ ಹೇಳಲಾಗಿದೆ. 'ಇವನಿಗಿಂತ ಬೇರೆ ನೋಡುವವನೂ ಇಲ್ಲ' ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಪರ

ಮೇಶ್ವರನಿಗಿಂತಲೂ ಬೇರೆಯಾಗಿ ಜೀವನೊಬ್ಬನಿರುವುದರಲ್ಲಿ ಪ್ರಮಾಣವಿಲ್ಲವೆಂಬುದು ಯುಕ್ತವಲ್ಲ; ಯಾಕೆಂದರೆ "ದ್ವಾ ಸುಪರ್ಣಾ" "ಜ್ಞಾಜ್ಞೌ" ಮೊದಲಾದ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಭೇದವು ಸ್ಪಷ್ಟವಾಗಿದೆ. ಆದ್ದರಿಂದ 'ಇವನಿಗಿಂತ ಬೇರೆ ದ್ರಷ್ಟೃವಿಲ್ಲ' ಎಂಬ ಶ್ರುತಿಗಳಿಗೆ ಪರಮೇಶ್ವರನಿಗಿಂತಲೂ ಭಿನ್ನರಾದ ಬ್ರಹ್ಮ ವಿಷ್ಣು ಮೊದಲಾದ ಜೀವರು ಯಾರೂ ಅವನಿಗೆ ಸಮವಾಗಲಾರರೆಂದು ತಿಳಿಸುವುದರಲ್ಲಿಯೇ ತಾತ್ಪರ್ಯವೆಂದು ಭಾವಿಸಬೇಕು. ಹಾಗೆ ಹೇಳದಿದ್ದರೆ ಜೀವೇಶ್ವರರ ಭೇದವನ್ನು ತಿಳಿಸುವ ನೂರಾರು ಶ್ರುತಿಗಳ ವಿರೋಧವುಂಟಾಗುತ್ತದೆ.

'ತತ್ತೇಜ ಐಕ್ಷತ' 'ತಾ ಆಪ ಐಕ್ಷಂತ' ಇತ್ಯಾದಿ ಶ್ರುತಿಷು ಅಚೇತನಾಪ್ತೇಜಸೋರೀಕ್ಷಿತೃತ್ವಶ್ರವಣಾತ್ ತದ್ವತ್ಪ್ರಧಾನಸ್ಯಾಪಿ ಗೌಣೇಕ್ಷಿತೃತ್ವಮಂಗೀಕೃತ್ಯ ಜಗಜ್ಜನ್ಮಾದಿಕತ್ವಂ ಯುಕ್ತಮಿತ್ಯಾಶಂಕ್ಯ ನಿರಾಕರೋತಿ.

## ಗೌಣಶ್ಚೇನ್ನಾತ್ಮಶಬ್ದಾತ್ ||೬||

ಪ್ರಧಾನಸ್ಯ ಅಪ್ತೇಜಸೋರಿವ ಈಕ್ಷಣಂ ಗೌಣ ಇತಿ ಚೇನ್ನ, ಕುತಃ ಆತ್ಮಶಬ್ದಾತ್. 'ಸದೇವ' ಇತ್ಯುಪಕ್ರಮ್ಯ 'ತದೈಕ್ಷತ ತತ್ತೇಜೋಽಸೃಜತ' ಇತ್ಯಾದಿನಾ ತೇಜಃಪ್ರಭೃತಿಚೇತನಾಚೇತನಕಾರಣತ್ವಂ ನಿರ್ದಿಶ್ಯ 'ಐತದಾತ್ಮ್ಯಮಿದಂ–ಸ ಆತ್ಮಾ' ಇತಿ ಸಚ್ಛಬ್ದಪ್ರತಿಪಾದಿತಸ್ಯ ಆತ್ಮಶಬ್ದೇನ ವ್ಯಪದೇಶಾತ್, ಕಿಂಚ 'ತತ್ಸತ್ಯಂ ಸ ಆತ್ಮಾ' ಇತಿ ಜಡಾಜಡಪ್ರಪಂಚಾತ್ಮಕಸ್ಯ ಪರಮಶಿವಸ್ಯ ಸ್ವತಃ ಆತ್ಮತ್ವೋಪದೇಶಾತ್ ಜಡಪ್ರಧಾನೇ ತದಸಂಭವಾಚ್ಚ ಗೌಣಾರ್ಥೋಽಪಿ ನ ಸಂಗಚ್ಛತೆ, ಅಪ್ತೇಜಃಪ್ರಭೃತೀನಾಂ ಶಬ್ದಾನಾಂ ಅಷ್ಟಮೂರ್ತ್ಯಾತ್ಮಕಪರಮಶಿವವಾಚಕತ್ವಮೇವೋಪದಿಶ್ಯತೆ. ಅತೋ ನ ವಿರೋಧಃ. ನನ್ವಾತ್ಮಶಬ್ದಸ್ತು ಚೇತನಜೀವೇ ಮುಖ್ಯತ್ವಾತ್ ತಸ್ಯೈವೇಕ್ಷಿತೃತ್ವಪೂರ್ವಕಜಗತ್ಕಾರಣತ್ವಮಿತಿ ಚೇನ್ನ, 'ಸೇಯಂ ದೇವತೈಕ್ಷತ, ಹಂತಾಹಮಿಮಾಸ್ತಿಸ್ರೋ ದೇವತಾಃ । ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" ಇತಿ ಶ್ರುತೌ ಆತ್ಮನಾ ಸಹಾನುಪ್ರವೇಶದರ್ಶನಾತ್ 'ಸ ಆತ್ಮಾ ತತ್ತ್ವಮಸಿ' ಇತ್ಯತ್ರ ಚೇತನಾಚೇತನಪ್ರಪಂಚಾತ್ಮಕಪರಮಶಿವೇ ಜೀವಾನಾಂ ಐಕ್ಯೋಪದೇಶಾಚ್ಚ ನ ಜೀವಸ್ಯ ಜಗತ್ಕಾರಣತ್ವಂ ಸರ್ವೇಕ್ಷಿತೃತ್ವಂ ಚೋಪಪದ್ಯತೆ, ಏಕವಿಜ್ಞಾನೇನ ಸರ್ವವಿಜ್ಞಾನಭಂಗಪ್ರಸಂಗಶ್ಚ. 'ನಾಮರೂಪೇ ವ್ಯಾಕರವಾಣಿ' ಇತ್ಯತ್ರ ಪರಮೇಶ್ವರಕರ್ತೃತ್ವದರ್ಶನಾತ್. ನ ಚ ಚೇತನತ್ವಾಜ್ಜೀವಸ್ಯ ಆತ್ಮಶಬ್ದಪ್ರಯೋಗದರ್ಶನಾತ್ ಯತ್ಕಿಂಚಿನ್ಮುಖ್ಯಕಾರಣತ್ವಮಿತಿ ವಾಚ್ಯಂ, 'ಪ್ರಧಾನಕ್ಷೇತ್ರಜ್ಞಪತಿಃ' ಇತ್ಯಾದಿ ಶ್ರುತೌ, "ಈಶ್ವರಃ ಸರ್ವ

ಭೂತಾನಾಂ' ಇತ್ಯಾದಿಸ್ಮೃತಾವಪಿ ಜೀವಸ್ಯ ಪರಮೇಶ್ವರಮಾಯಾಪಾಶ ಪರಾಧೀನತ್ವವ್ಯಪದೇಶಾತ್. ನನ್ವಚೇತನೇಂದ್ರಿಯಭೂತಶರೀರಾದೌ ಆತ್ಮಶಬ್ದಪ್ರಯೋಗದರ್ಶನಾತ್, 'ಕೂಲಂ ಪಿಪತಿಷತಿ' ಇತ್ಯತ್ರ ಚೇತನ ಧರ್ಮಪತನೇಚ್ಛಾಯಾಃ ಕೂಲೇ ಸಂಭವಾಚ್ಚ ಮುಖ್ಯತ್ವೇನ ಈಕ್ಷಣ ಪೂರ್ವಕ ಜಗತ್ಕರ್ತೃತ್ವಂ ಜಡಪ್ರಧಾನಸ್ಯಾಪಿ ಸಂಭವತಿ ಇತಿ ಚೇನ್ನ, 'ಮಮಾತ್ಮಾಸೋಮಭದ್ರ' ಇತ್ಯಾದೌ ಆತ್ಮಶಬ್ದಪ್ರಯೋಗೇಽಪಿ ಭೃತ್ಯಸ್ಯ ನ ಯಥಾಸರ್ವಸ್ವಾತಂತ್ರ್ಯಂ ತಥಾ ಪ್ರಧಾನಸ್ಯ ಆತ್ಮಶಬ್ದಪ್ರಯೋಗೇಽಪಿ ನ ಸ್ವಾತಂತ್ರ್ಯಂ. 'ಕೂಲಂ ಪಿಪತಿಷತಿ' ಇತ್ಯತ್ರಾಪಿ ಪತನೌನ್ಮುಖ್ಯಮಾ ತ್ರಾತ್ ಪ್ರತೀತಿಮಾತ್ರಮೇವ, ನ ಕೂಲಸ್ಯ ಪತನೇಚ್ಛಾಯಾಃ ಪಾರಮಾ ರ್ಥಿಕತ್ವಂ, ಅತ್ರ ಚೇತನಸ್ಯ ಪರಮಶಿವಸ್ಯ ಮುಖ್ಯತ್ವೇನೇಕ್ಷಣಪೂರ್ವಕ ಜಗತ್ಕಾರಣತ್ವೋಪದೇಶಾತ್ ಗೌಣಾರ್ಥತ್ವಮಪಿ ನ ಸಂಭವತಿ. ಕಿಂಚ 'ಶ್ರೋತ್ರಂ ಶೃಣೋತಿ,' 'ಶಸ್ತ್ರಂ ಭಿನತ್ತಿ' ಇತ್ಯಾದಿಪ್ರಯೋಗಾನಾಂ ಯಥಾ ಚೇತನವಿಷಯತ್ವಂ ತಥಾ ಪ್ರಧಾನಕರ್ತೃತ್ವಪ್ರತಿಪಾದಕಾನಾಂ 'ಅಜಾಮೇಕಾಂ' ಇತ್ಯಾದಿಶ್ರುತೀನಾಂ ಪರಮೇಶ್ವರಕರ್ತೃತ್ವಪರತ್ವ ಮೇವ. ಜ್ಯೋತಿಶ್ಶಬ್ದಸ್ಯ ಕ್ರತುಜ್ವಲನಮುಖ್ಯವಿಷಯತ್ವವತ್ ಆತ್ಮನ್ ಶಬ್ದಸ್ಯ ಚೇತನಾಚೇತನವಿಷಯತ್ವೇಽಪಿ ಪರಮಾತ್ಮನಿ ಮುಖ್ಯಮೇವ.

'ಆ ತೇಜಸ್ಸು ನೋಡಿತು' 'ಆ ನೀರು ನೋಡಿತು' ಈ ಶ್ರುತಿಗಳಲ್ಲಿ ಅಚೇ ತನವಸ್ತುಗಳಿಗೂ ಈಕ್ಷಣವನ್ನು ಹೇಳಿರುವುದರಿಂದ ಪ್ರಧಾನವೂ ಸಹ ಹಾಗೆಯೇ ನೋಡಬಹುದೆಂದು ಅದಕ್ಕೂ ಗೌಣವಾದ ಈಕ್ಷಣವನ್ನು ಅಂಗೀಕರಿಸಿ ಅದು ಜಗ ಜ್ಜನ್ಮಾದಿಗಳಿಗೆ ಕಾರಣವಾಗಲೆಂದು ಆಶಂಕಿಸಿ ನಿರಾಕರಿಸಲಾಗುವುದು.

## ಗೌಣಶ್ಚೇನ್ನಾತ್ಮಶಬ್ದವತ್ ॥೬॥

ನೀರು ಬೆಂಕಿಗಳಂತೆ ಪ್ರಧಾನಕ್ಕೂ ಗೌಣವಾಗಿ ಈಕ್ಷಣವು ಅನ್ವಯಿಸಲಿ, ಎಂದು ಹೇಳಿದರೆ ಅದು ಸರಿಯಲ್ಲ. ಯಾಕೆಂದರೆ ಶ್ರುತಿವಾಕ್ಯಗಲ್ಲಿ ಆತ್ಮಶಬ್ದವಿರುವುದ ರಿಂದ ಪ್ರಧಾನದಲ್ಲಿ ಆತ್ಮಶಬ್ದವು ಅನ್ವಯಿಸುವುದಿಲ್ಲ. 'ಸದೇವ ಸೌಮ್ಯ' ಎಂದು ಆರಂಭಿಸಿ "ತದೈಕ್ಷತ ತತ್ತೇಜೋಽಸೃಜತ-ತತ್ತೇಜಸ್ಸೃಜತಿ" ಎಂಬುದರಿಂದ ತೇಜಸ್ಸೇ ಮೊದಲಾದ ಚೇತನ ಅಚೇತನವಸ್ತುಗಳಿಗೆ ಸದ್ವಸ್ತುವನ್ನು ಕಾರಣವೆಂದು ಹೇಳಿ—'ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ' ಎಂದು 'ಇದೆಲ್ಲವೂ ಅದೇ ಆಗಿದೆ. ಅದೇ ಸತ್ಯವಸ್ತು, ಅದೇ ಆತ್ಮ,' ಎಂದು ಸತ್ಪದದಿಂದ ಬೋಧಿತ ವಾದ ವಸ್ತುವನ್ನು ಆತ್ಮವೆಂದು ಹೇಳಲಾಗಿದೆ. ಇದೂ ಅಲ್ಲದೆ, "ಐತದಾತ್ಮ್ಯಂ ಇದಂ ಸರ್ವಂ" ಎಂಬಲ್ಲಿ ಜಡ ಮತ್ತು ಅಜಡಪ್ರಪಂಚವೆಲ್ಲವೂ ಪರಮಾತ್ಮಸ್ವರೂಪವೇ ಆಗಿರುವುದರಿಂದ ಜಡಪ್ರಪಂಚಕ್ಕೆ ಆತ್ಮಶಬ್ದವು ಗೌಣವಾಗಿ ಅನ್ವಯಿಸಿದರೂ, ಶ್ರುತಿ

ಯಲ್ಲಿ ಆತ್ಮಶಬ್ದವನ್ನು ಮುಖ್ಯವೆಂದು ಪ್ರಯೋಗಿಸಿರುವುದರಿಂದ ಅದು ಜಡವಾದ ಪ್ರಧಾನಕ್ಕೆ ಅನ್ವಯವಾಗುವುದಿಲ್ಲ. ಆದ್ದರಿಂದ ಪ್ರಧಾನದಲ್ಲಿ ಗೌಣವಾದ ಈಕ್ಷಣವೂ ಹೊಂದುವುದಿಲ್ಲ. ಶ್ರುತಿಯಲ್ಲಿ ಬಂದಿರುವ ನೀರು ಬೆಂಕಿಗಳನ್ನು ತಿಳಿಸುವ ಶಬ್ದಗಳು ಅಷ್ಟಮೂರ್ತಿ ಎನಿಸಿದ ಪರಮಶಿವನಿಗೇ ಅನ್ವಯಿಸುವುದರಿಂದ ಅವುಗಳ ಬಗ್ಗೆ ಗೌಣವಾದ ಈಕ್ಷಣವನ್ನು ಹೇಳಿದ್ದರಲ್ಲಿ ಯಾವ ವಿರೋಧವೂ ಇಲ್ಲ. ಹಾಗಾದರೆ, ಆತ್ಮ ಶಬ್ದವು ಚೇತನನಾದ ಜೀವನಿಗೂ ಮುಖ್ಯವಾಗಿ ಅನ್ವಯಿಸುತ್ತದೆಯಾದ್ದರಿಂದ ಅವನೇ ಈಕ್ಷಣಪೂರ್ವಕವಾಗಿ ಜಗತ್ತಿಗೆ ಕಾರಣವಾಗಲೆಂದರೆ ಅದೂ ಸರಿಯಲ್ಲ. "ಆ ಈ ದೇವನು ನೋಡಿದನು, ನಾನೇ ಈ ತ್ರಿಮೂರ್ತಿಗಳಾಗಿದ್ದೇನೆ—ಈ ಜೀವನೊಳಗೆ ಆತ್ಮರೂಪದಿಂದ ಪ್ರವೇಶಿಸಿ ನಾಮರೂಪಗಳನ್ನು ವಿಸ್ತರಿಸುವೆನು" ಎಂಬ ಶ್ರುತಿಯಲ್ಲಿ ಆತ್ಮರೂಪದಿಂದ ಅನುಪ್ರವೇಶವನ್ನು ಹೇಳಲಾಗಿದೆ. 'ಅದೇ ಆತ್ಮ-ನೀನೂ ಅದೇ ಆಗಿದ್ದೀಯೆ, ಶ್ವೇತಕೇತುವೇ" ಎಂಬ ಕಡೆ ಚೇತನವೂ ಅಚೇತನವೂ ಆದ ಪ್ರಪಂಚವಾಗಿ ಪರಿಣಮಿಸಿರುವ ಪರಮಶಿವನಲ್ಲಿ ಜೀವರ ಐಕ್ಯವನ್ನು ಹೇಳಿರುವುದರಿಂದ, ಜೀವನು ಜಗತ್ಕಾರಣನೆಂದೂ, ಎಲ್ಲವನ್ನೂ ನೋಡಬಲ್ಲನೆಂದೂ ಹೇಳಲಾಗುವುದಿಲ್ಲ ನಾಮರೂಪಗಳನ್ನು ಪರಮೇಶ್ವರನೇ ವಿಸ್ತರಿಸಿದವನಾದ್ದರಿಂದ ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದೆಂಬ ಪ್ರತಿಜ್ಞೆಗೂ ಭಂಗಬರುತ್ತದೆ. ಜೀವನು ಚೇತನನಾಗಿರುವುದರಿಂದ ಅವನಲ್ಲಿ ಆತ್ಮಶಬ್ದದ ಪ್ರಯೋಗ ಕಂಡುಬಂದಿದೆಯಾಗಿ, ಅವನೇ ಯಾವುದಾದರೊಂದು ಬಗೆಯಲ್ಲಿ ಜಗತ್ತಿಗೆ ಮುಖ್ಯಕಾರಣನಾಗಬಾರದೇಕೆ? ಎಂದು ಹೇಳುವುದೂ ಸರಿಯಲ್ಲ. 'ಪ್ರಧಾನ ಜೀವರಿಗೆ ನಿಯಾಮಕನು' ಎಂಬ ಶ್ರುತಿಯಲ್ಲೂ 'ಎಲ್ಲಾ ಪ್ರಾಣಿಗಳಲ್ಲೂ ಈಶ್ವರನಿರುವನು' ಎಂಬ ಸ್ಮೃತಿಯಲ್ಲೂ ಜೀವನು ಪರಮೇಶ್ವರನ ಮಾಯಾಪಾಶಕ್ಕಧೀನನೆಂದು ತಿಳಿಸಲಾಗಿದೆ. ಹಾಗಾದರೆ, ಅಚೇತನವಾದ ಶರೀರೇಂದ್ರಿಯಗಳಲ್ಲೂ ಆತ್ಮಶಬ್ದವನ್ನು ಪ್ರಯೋಗಿಸಿರುವುದಾಗಿ ಕಂಡುಬಂದಿರುವುದರಿಂದ, 'ತೀರವು ಬೀಳಲಿಚ್ಛಿಸುತ್ತದೆ' ಎಂಬಲ್ಲಿ ಬೀಳುವ ಇಚ್ಛೆ ಚೇತನದ ಧರ್ಮವಾದರೂ ತೀರದಲ್ಲಿ ಮುಖ್ಯವಾಗಿಯೇ ಸಂಭವಿಸಿರುವಂತೆ ಪ್ರಧಾನದಲ್ಲೂ ಈಕ್ಷಣವು ನೇರವಾಗಿಯೇ ಸಂಭವಿಸಬಹುದಲ್ಲವೆ? ಅಂದರೆ ಇದು ಸಮಂಜಸವಾಗುವುದಿಲ್ಲ. ಸೋಮಭದ್ರನೆಂಬ ಸೇವಕನಲ್ಲಿ 'ನನ್ನ ಆತ್ಮ'ವೆಂದು ಯಜಮಾನನು ಆತ್ಮೀಯತೆಯಿಂದ ಆತ್ಮಶಬ್ದವನ್ನು ಪ್ರಯೋಗಿಸಿದರೂ ಆ ಸೇವಕನಿಗೆ ಹೇಗೆ ಸ್ವಾತಂತ್ರ್ಯವಿರುವುದಿಲ್ಲವೋ ಹಾಗೆ ಪ್ರಧಾನದಲ್ಲಿ ಆತ್ಮಶಬ್ದವನ್ನು ಗೌಣವಾಗಿ ಪ್ರಯೋಗಿಸಿದರೂ ಅದಕ್ಕೆ ಇಚ್ಛೆ, ಸಂಕಲ್ಪ, ಈಕ್ಷಣ ಇವೇ ಮೊದಲಾದ ಸ್ವತಂತ್ರಪ್ರವೃತ್ತಿ ಬರುವುದಿಲ್ಲ. 'ತೀರವು ಬೀಳಲಿಚ್ಛಿಸುತ್ತದೆ' ಎಂಬಲ್ಲಿಯೂ ಸಹ ಬೀಳುವ ಸ್ಥಿತಿಯನ್ನು ಕಂಡವನು ಹಾಗೆ ಹೇಳುವನಷ್ಟೇ ಹೊರತು ಅದಕ್ಕೆ ಬೀಳುವ ಇಚ್ಛೆ ಯಥಾರ್ಥವಾಗಿ ಅನ್ವಯಿಸುವುದಿಲ್ಲ. ಆದರೆ, ಚೇತನಪರಶಿವನಲ್ಲಿ ಈಕ್ಷಣವು ಮುಖ್ಯವಾಗಿಯೇ ಅನ್ವಯಿಸುವುದರಿಂದ ಆ ಈಕ್ಷಣವನ್ನು ಗೌಣವೆಂದು ಹೇಳು

ವಂತಿಲ್ಲ. 'ಕಿವಿ ಕೇಳುತ್ತದೆ'–'ಶಸ್ತ್ರ ಕತ್ತರಿಸುತ್ತದೆ' ಈ ಬಗೆಯ ಪ್ರಯೋಗಗಳು ಕಿವಿಯನ್ನೂ, ಶಸ್ತ್ರವನ್ನೂ ಪಡೆದಿರುವ ಚೇತನಕ್ಕೆ ಹೇಗೆ ಅನ್ವಯಿಸುತ್ತವೆಯೋ ಹಾಗೆ ಪ್ರಧಾನವನ್ನು ಕರ್ತೃವೆಂದು ಬೋಧಿಸುವ ಶ್ರುತಿಗಳಿಗೂ ಪರಮೇಶ್ವರನೇ ಕರ್ತನೆಂಬ ಅರ್ಥವನ್ನೇ ಹೇಳಬೇಕಾಗುತ್ತದೆ. ಜ್ಯೋತಿಶ್ಶಬ್ದವು ಬೇರೆಕಡೆ ಅನ್ವಯಿಸಿದರೂ ಯಜ್ಞದಲ್ಲಿ ಉಪಯೋಗಿಸುವ ಬೆಂಕಿಗೇ ಮುಖ್ಯವಾಗಿ ಅನ್ವಯಿಸುವಂತೆ ಆತ್ಮನ್ ಶಬ್ದವು ಚೇತನ ಅಚೇತನಗಳೆರಡಕ್ಕೂ ಅನ್ವಯಿಸಿದರೂ ಪರಮಶಿವನಲ್ಲಿಯೇ ಮುಖ್ಯವಾಗಿ ಅನ್ವಯಿಸುತ್ತದೆ.

ಪುನರ್ಹೇತ್ವಂತರಮಾಹ—ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ॥೭॥

'ಸ ಯ ಏಷೋಽಣಿಮೈತದಾತ್ಮ್ಯಮಿದಂ' ಇತ್ಯತ್ರ ಸದಣಿಮಾನಮಾದಾಯ 'ತತ್ತ್ವಮಸಿ' ಇತಿ ಚೇತನಶ್ವೇತಕೇತೋರಿವ ಬ್ರಹ್ಮತಾದಾತ್ಮ್ಯಮುಪದಿಶ್ಯ, "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ"ಇತಿ ಶರೀರಪಾತಾನಂತರಂ ಭ್ರಮರಕೀಟನ್ಯಾಯವತ್ 'ಬ್ರಹ್ಮಪ್ರಾಪ್ತಿಲಕ್ಷಣೋ ಮೋಕ್ಷಃ' ಇತ್ಯುಪದೇಶಾತ್ ನ ಪ್ರಧಾನಶರೀರಯೋಃ 'ತತ್ತ್ವಮಸಿ' ಇತಿ ವಾಕ್ಯೇ ತಾದಾತ್ಮ್ಯನಿರ್ದೇಶಃ. ಉತ, "ಯಥಾಕ್ರತುರಸ್ಮಿನ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ" ಇತಿ ಶ್ರುತ್ಯಾ ಜಡಪ್ರಧಾನನಿಷ್ಠಸ್ಯ ತತ್ಸಂಪತ್ತಿರೇವ ಸ್ಯಾತ್, ಬ್ರಹಾತ್ಮೈಕ್ಯೋಪದೇಶಶಾಸ್ತ್ರಸ್ಯ ಸರ್ವಸ್ಯ ವೈರುಧ್ಯಂ ಸ್ಯಾತ್. ನನ್ವಾಗ್ನೀಧ್ರಶಾಲಾನ್ಯಾಯೇನ ಶಾಲಾಸ್ಥಿತಾನಾಂ ಋತ್ವಿಗಾದೀನಾಮಪ್ಯಾಗ್ನೀಧ್ರಶಬ್ದವತ್ ಪ್ರಧಾನೇಽಪ್ಯಾತ್ಮಶಬ್ದಪ್ರಯೋಗದರ್ಶನಾತ್, ಸ್ಥೂಲಾರುಂಧತೀನ್ಯಾಯೇನ ತದ್ಧ್ಯಾನಾನಂತರಮೇವ ಪರಶಿವಧ್ಯಾನಾನ್ಮುಕ್ತಿರಿತಿ ಚೇನ್ನ, "ನೋಪಾಸ್ಯೌ ಪ್ರಕೃತಿಜೀವೌ", "ಜ್ಞಾತ್ವಾ ಶಿವಂ," "ತಸ್ಯಾಭಿಧ್ಯಾನಾತ್–ನಿವೃತ್ತಿಃ", "ಶಿವ ಏಕೋ–ಪರಿತ್ಯಜ್ಯ" ಇತ್ಯಾದಿನಾ ಶಿವೇತರಧ್ಯಾನಸ್ಯ ಮುಮುಕ್ಷೂಣಾಂ ನಿಷಿದ್ಧತ್ವಾತ್ ಶಿವಧ್ಯಾನನಿಷ್ಠಸ್ಯೈವ ಮಾಯಾಪಾಶನಿವೃತ್ತಿಪೂರ್ವಕಮುಕ್ತ್ಯುಪದೇಶಾತ್, ವಿಶ್ವಪ್ರಕಾಶಕ ವಿಭಾಕರಾವಲೋಕನಸ್ಯ ನ ದೀಪಿಕಾಸಾಪೇಕ್ಷವತ್ ಸ್ಥೂಲಾರುಂಧತೀನ್ಯಾಯೇನಾಪಿ ಪರಶಿವಧ್ಯಾನಸಾಕ್ಷಾತ್ಕಾರಸ್ಯ ನ ಪ್ರಧಾನಧ್ಯಾನಸಾಪೇಕ್ಷಾಯುಕ್ತಾ, ಅಥವಾ ಜಡಪ್ರಧಾನಸ್ಯ ಸಚ್ಛಬ್ದವಾಚ್ಯತ್ವೇ 'ತತ್ತ್ವಮಸಿ' ಇತಿ ಚೇತನಶ್ವೇತಕೇತೋಃ ಅಚೇತನತ್ವಸಿದ್ಧಿಃ ಸ್ಯಾತ್. ತಥಾತ್ವೇ ಪಾಶನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪಾ ಮುಕ್ತಿರ್ಹನ್ಯೇತ. ಶಾಸ್ತ್ರಸ್ಯಾನರ್ಥಕ್ಯಂ ಉನ್ಮತ್ತಪ್ರಲಾಪತ್ವಂ ಚಾನಿಷ್ಟಂ ಸ್ಯಾತ್, ತಸ್ಮಾದತ್ರ ಆತ್ಮನ್ ಶಬ್ದಃ ಚೇತನಪರ[illegible]ತ್ತ್ಯಸಂಭ

ವಾತ್ 'ತತ್ತ್ವಮಸಿ' ಇತಿ ವಾಕ್ಯೇ 'ತಸ್ಮಾತ್ತ್ವಮಸಿ,' 'ತತ್ಪ್ರಕಾರಕೋಽಸಿ' ಇತಿ ವಾ ಜ್ಞಾತವ್ಯಂ. ಅಥವಾ ಸ್ಥೂಲಸೂಕ್ಷ್ಮಚಿದಚಿತ್ಪ್ರಪಂಚವಿಶಿಷ್ಟಕಾರ್ಯಕಾರಣಬ್ರಹ್ಮಣೋರಭೇದ ಇತಿ ವಕ್ತವ್ಯಮಿತಿ ಚೇನ್ನ, ಮೋಕ್ಷದಶಾಯಾಮಪಿ ಪಾರತಂತ್ರ್ಯಸದ್ಭಾವಾತ್ ಪಾರತಂತ್ರ್ಯಸ್ಯ ದುಃಖಹೇತುತ್ವಾತ್, 'ಅಭಯಂ ವೈ ಜನಕ ಪ್ರಾಪ್ತೋಽಸಿ', ನ ಬಿಭೇತಿ ಕುತಶ್ಚನ' ಇತ್ಯಾದಿನಾ ಮುಕ್ತಸ್ಯಾಭಯತ್ವೋಪದೇಶಾತ್ ಮುಕ್ತಿಸಂಸಾರಯೋರ್ವೈಲಕ್ಷಣ್ಯಾಭಾವಾಚ್ಚ, 'ಐತದಾತ್ಮ್ಯಮಿದಂ' ಇತ್ಯುಪಕ್ರಮ್ಯ ಜಡಪ್ರಪಂಚಸ್ಯ ಬ್ರಹ್ಮಾತ್ಮಕತ್ವಮುಕ್ತ್ವಾ 'ತತ್ತ್ವಮಸಿ' ಇತಿ ತಚ್ಛಬ್ದೇನ ಪೂರ್ವಪರಾಮೃಷ್ಟಬ್ರಹ್ಮೈವ ತ್ವಮಸೀತಿ ನಿರ್ದೇಶಾತ್ ನಾನ್ಯಾರ್ಥೋ ಗ್ರಾಹ್ಯಃ. 'ತಸ್ಮಾತ್ತ್ವಮಸಿ' ಇತಿ ನಿರ್ದೇಶೇ ಸರ್ವಾತ್ಮಕತ್ವೋಪದೇಶಪೂರ್ವವಾಕ್ಯಾರ್ಥವೈಪರೀತ್ಯಪ್ರಸಂಗಃ ಸ್ಯಾತ್. ಶಾರೀರಸ್ಯ ಶಾರೀರತ್ವೇ ಬ್ರಹ್ಮಣೋ ಬ್ರಹ್ಮತ್ವೇ ನಿಷ್ಫಲಪ್ರಸಂಗೋ ಯುಜ್ಯತೇ. ಕೇಚಿತ್ 'ತತ್ತ್ವಮಸಿ' ಇತ್ಯತ್ರ ಅತತ್ತ್ವಮಸೀತ್ಯೂಚುಃ, ತದಪಿ 'ಐತದಾತ್ಮ್ಯಮಿದಂ' ಇತ್ಯಾದ್ಯುಪಕ್ರಮವಾಕ್ಯವಿರೋಧಾನ್ನ ಮುಮುಕ್ಷುಭಿರ್ಗ್ರಾಹ್ಯಂ. ಕಿಂ ಚ 'ಬ್ರಹ್ಮವಿದ್ ಬ್ರಹ್ಮೈವ ಭವತಿ', 'ತತ್ತ್ವಮಸಿ' 'ತ್ವಂ ತದಸಿ ಆವಯೋರಂತರಂ ನ ವಿದ್ಯತೆ, ತತ್ ತ್ವಮೇವ, ತ್ವಮೇವ ತತ್' ಇತ್ಯಾದಿಶ್ರುತಿಶತಭಂಗಪ್ರಸಂಗೋಽಪಿ ಸ್ಯಾತ್. ಏತೇನ ದಂಡದಂಡಿವತ್ ಅಂಗಾಂಗಿವತ್ ಸಂಸೃಷ್ಟಭೇದವಾದಿಮತಂ, ಘಟಪಟವದಸಂಸೃಷ್ಟಭೇದವಾದಿಮತಂ ಚ ನಿರಸ್ತಂ.

ಪ್ರಧಾನವನ್ನು ನಿರಾಕರಿಸಲು ಬೇರೊಂದು ಹೇತುವನ್ನು ಹೇಳುತ್ತಾನೆ—

ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ॥೭॥

"ಆ ಈ ಅಣುತ್ವವೆಂಬುದು ಯಾವದಿದೆಯೋ ಅದೆಲ್ಲವೂ ಬ್ರಹ್ಮವೇ, ಅದೇ ಆತ್ಮನು, ಅನೇ ನೀನು" ಇಲ್ಲಿ ಸದ್ರೂಪವಾದ ಅಣುತ್ವವನ್ನು ಹೇಳಿ, 'ಅದೇ ನೀನು' ಎಂದು ಚೇತನವ್ಯಕ್ತಿಯಲ್ಲಿ ಬ್ರಹ್ಮತಾದಾತ್ಮ್ಯವನ್ನು ತಿಳಿಸಿ, "ಅವನಿಗೆ ದೇಹವಿಯೋಗ ಎಲ್ಲಿಯವರೆಗೆ ಆಗುವುದಿಲ್ಲವೋ ಅಷ್ಟೇ ವಿಳಂಬ. ಆ ಕೂಡಲೇ ಅವನು ಸದ್ವಸ್ತುವಿನೊಡನೆ ಬೆರೆಯುವನು" ಎಂದು ಶರೀರವನ್ನು ತೊರೆದೊಡನೆ ಭ್ರಮರಕೀಟನ್ಯಾಯದಿಂದ ಬ್ರಹ್ಮಪ್ರಾಪ್ತಿ ಎಂಬ ಮೋಕ್ಷವನ್ನು ಉಪದೇಶಿಸಲಾಗಿದೆ. ಹಾಗೆ ಪ್ರಧಾನಜೀವರಿಗೆ 'ತತ್ತ್ವಮಸಿ' ಎಂಬಲ್ಲಿ ಅಭೇದವನ್ನು ತಿಳಿಸಿಲ್ಲ. "ಈ ಲೋಕದಲ್ಲಿ ಜೀವನು ಹೇಗೆ ಉಪಾಸನಮಾಡುವನೋ ಹಾಗೆಯೇ ಅವನು ದೇಹವನ್ನು ತೊರೆದಮೇಲೂ ಆಗುತ್ತಾನೆ" ಎಂಬ ಶ್ರುತಿಯಂತೆ ಜಡಪ್ರಧಾನವನ್ನು ಉಪಾಸನ ಮಾಡಿದರೆ ಜೀವನೂ ಜಡನೇ ಆಗಬೇಕಾಗುತ್ತದೆ. ಹೀಗಾದರೆ ಬ್ರಹ್ಮಜೀವರಿಗೆ

ಐಕ್ಯವನ್ನು ತಿಳಿಸುವ ಶಾಸ್ತ್ರವೆಲ್ಲವೂ ವಿರುದ್ಧವಾಗಬೇಕಾದೀತು. ಅಗ್ನೀಧ್ರವೆಂಬ ಯಜ್ಞಶಾಲೆಯಲ್ಲಿ ಇರುವ ಋತ್ವಿಕ್ಕುಗಳೆಲ್ಲರನ್ನು ಅಗ್ನೀಧ್ರರೆಂದು ಹೇಳುವ ನ್ಯಾಯದಂತೆ, ಪ್ರಧಾನವನ್ನು ಆತ್ಮಶಬ್ದದಿಂದ ನಿರ್ದೇಶಿಸಬಹುದಾದ್ದರಿಂದ ಸ್ಥೂಲಾರುಂಧತೀ ನ್ಯಾಯದಿಂದ ಮುಮುಕ್ಷುವಿಗೆ ಪ್ರಧಾನವನ್ನು ಧ್ಯಾನಿಸಿದನಂತರವೇ ಪರಶಿವನ ಧ್ಯಾನದಿಂದ ಮುಕ್ತಿಯಾಗುವುದೆಂದು ಏಕೆ ಹೇಳಬಾರದು? ಅಂದರೆ "ಪ್ರಕೃತಿ ಜೀವರು ಉಪಾಸ್ಯರಲ್ಲ." "ಶಿವನನ್ನು ತಿಳಿದು ಪರಮ ಶಾಂತಿಯನ್ನು ಹೊಂದುತ್ತಾನೆ." "ಅವನನ್ನು ನಿರಂತರವೂ ಧ್ಯಾನಿಸುತ್ತಲೂ ದೇಹದಲ್ಲಿ ಧರಿಸುತ್ತಲೂ ಅವನ ರೂಪನ್ನು ಪಡೆಯುವುದರಿಂದ ಎಲ್ಲಾ ಬಗೆಯ ಮಾಯೆಯ ಬಿಡುಗಡೆಯೂ ಆಗುವುದು." 'ಎಲ್ಲವನ್ನೂ ಬಿಟ್ಟು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು'. ಈ ಶ್ರುತಿಗಳಲ್ಲಿ ಶಿವನನ್ನು ಬಿಟ್ಟು ಬೇರೆ ಯಾವುದನ್ನೂ ಉಪಾಸನಮಾಡಬಾರದೆಂದು ಹೇಳಿದೆಯಾದ್ದರಿಂದ ಶಿವಧ್ಯಾನದಲ್ಲಿ ನಿರತನಾದವನಿಗೇ ಮಾಯಾಪಾಶವು ತೊಲಗಿ ಮುಕ್ತಿಯಾಗುವುದೆಂದು ತಿಳಿಯಬರುತ್ತದೆ. ವಿಶ್ವವನ್ನು ಬೆಳಗುವ ಸೂರ್ಯನನ್ನು ನೋಡಲಿಕ್ಕೆ ದೀಪದ ಅವಶ್ಯಕತೆ ಇರುವುದಿಲ್ಲ. ಹಾಗೆ ಸ್ಥೂಲಾರುಂಧತೀನ್ಯಾಯದಿಂದಲೂ ಪರಶಿವನ ಸಾಕ್ಷಾತ್ಕಾರವು ಪ್ರಧಾನದ ಧ್ಯಾನವನ್ನು ಅಪೇಕ್ಷಿಸುತ್ತದೆ ಎಂಬುದು ಯುಕ್ತವಲ್ಲ. ಸತ್‌ಶಬ್ದವು ಜಡವಾದ ಪ್ರಧಾನವನ್ನು ತಿಳಿಸುತ್ತದೆ ಎಂದು ಹೇಳಿದರೂ "ತತ್ತ್ವಮಸಿ ಶ್ವೇತಕೇತೋ" ಎಂಬಲ್ಲಿ ಶ್ವೇತಕೇತುವೂ ಸಹ ಜಡವೇ ಆಗಬೇಕಾಗುವುದು. ಹಾಗಾದರೆ ಪಾಶವೂ ತೊಲಗುವುದಿಲ್ಲ. ಮೋಕ್ಷವೂ ದೊರಕುವುದಿಲ್ಲ. ಶಾಸ್ತ್ರವೆಲ್ಲವೂ ನಿರರ್ಥಕವೂ ಉನ್ಮತ್ತಪ್ರಲಾಪವೂ ಅನಿಷ್ಟವೂ ಆಗಬೇಕಾಗುತ್ತದೆ. ಆದ್ದರಿಂದ ಆತ್ಮನ್ ಶಬ್ದವು ಚೇತನಪರಶಿವನಿಗೇ ಅನ್ವಯಿಸುತ್ತದೆ. ಸ್ವಾಭಾವಿಕವಾದ ಜೀವಭಾವವು ತೊಲಗುವುದಿಲ್ಲವಾದ್ದರಿಂದ, ತತ್ತ್ವಮಸಿ ಎಂಬಕಡೆ 'ತಸ್ಮಾತ್ ತ್ವಮಸಿ' ಅವನಿಂದ ನೀನಾಗಿದ್ದೀಯೆ ಎಂದಾದರೂ ಹೇಳಬೇಕು, ಇಲ್ಲವೇ 'ತತ್ಪ್ರಕಾರಕೋಽಸಿ' ನೀನು ಅವನ ವಿಶೇಷಣವಾಗಿದ್ದೀಯೆ ಎಂದಾದರೂ ಹೇಳಬೇಕು ಅಥವಾ ಸ್ಥೂಲಪ್ರಪಂಚವಿಶಿಷ್ಟಬ್ರಹ್ಮವೇ ಕಾರ್ಯವೆಂದೂ, ಸೂಕ್ಷ್ಮಪ್ರಪಂಚವಿಶಿಷ್ಟಬ್ರಹ್ಮವೇ ಕಾರಣವೆಂದೂ ಅವೆರಡಕ್ಕೂ ಅಭೇದವನ್ನಾದರೂ ಹೇಳಬೇಕು ಎಂದು ಹೇಳುವುದೂ ಹೊಂದುವುದಿಲ್ಲ. ಯಾಕೆಂದರೆ ವಿಶಿಷ್ಟಾದ್ವೈತಮತದಲ್ಲಿ ಮೋಕ್ಷದಲ್ಲಿಯೂ ಮುಕ್ತನಿಗೆ ಪರಾಧೀನತೆಯೇ ಇರುತ್ತದೆ. ಅದೂ ಒಂದು ಬಗೆಯ ದುಃಖಹೇತುವೇ ಆಗುತ್ತದೆಯಾದ್ದರಿಂದ 'ತತ್ತ್ವಮಸಿ' ಎಂಬಲ್ಲಿ ಹೀಗೆ ಹೇಳುವುದು ಯುಕ್ತವಲ್ಲ. 'ಜನಕನೇ ನೀನು ಅಭಯಸ್ಥಿತಿಯನ್ನು ಪಡೆದಿದ್ದಿ' 'ಯಾವ ಕಡೆಯಿಂದಲೂ ಹೆದರುವಂತಿಲ್ಲ' ಈ ಶ್ರುತಿಗಳಲ್ಲಿ ಮುಕ್ತನಿಗೆ ಅಭಯವನ್ನು ಹೇಳಿದೆ. ಹಾಗೆ ಹೇಳದೆಹೋದರೆ ಮುಕ್ತಿ ಸಂಸಾರಗಳೆರಡಕ್ಕೂ ವ್ಯತ್ಯಾಸವೇ ಇಲ್ಲದೇಹೋಗುತ್ತದೆ. 'ಇದೆಲ್ಲವೂ ಅದೇ' ಎಂದು ಆರಂಭಿಸಿ ಜಡಪ್ರಪಂಚವನ್ನು ಶಿವಾತ್ಮಕವೆಂದು ಹೇಳಿ 'ನೀನೂ ಅದೇ ಆಗಿದ್ದೀಯೆ' ಎಂದು ತತ್‌ಶಬ್ದದಿಂದ ಹಿಂದೆ

ಹೇಳಿದ 'ಆ ಪರಶಿವನೇ ನೀನಾಗಿದ್ದೀಯೆ' ಎಂದು ತಿಳಿಸಿರುವುದರಿಂದ ಈ ಶ್ರುತಿಯಲ್ಲಿ ಬೇರೆ ಯಾವ ಅರ್ಥವೂ ಹೊಂದುವುದಿಲ್ಲ. 'ಅವನಿಂದ ನೀನಾಗಿದ್ದೀಯೆ' ಎಂದು ಹೇಳಿದರೆ 'ಎಲ್ಲವೂ ಅವನೇ' ಎಂದು ಹೇಳುವ ವಾಕ್ಯವು ವಿರುದ್ಧವಾಗುತ್ತದೆ. ಜೀವನನ್ನು ಜೀವನೆಂದೂ ಬ್ರಹ್ಮವನ್ನು ಬ್ರಹ್ಮವೆಂದೂ ಹೇಳುವುದರಿಂದ ಯಾವ ಫಲವೂ ಆಗುವಂತಿಲ್ಲ. ಕೆಲವರು "ತತ್ತ್ವಮಸಿ" ಎಂಬಲ್ಲಿ 'ಅತತ್ ತ್ವಮಸಿ' ಎಂದು ಹೇಳುತ್ತಾರೆ. ಆದರೆ ಇದು 'ಐತದಾತ್ಮ್ಯಮಿದಂ ಸರ್ವಂ' ಎಂಬ ಉಪಕ್ರಮವಾಕ್ಯಕ್ಕೆ ವಿರುದ್ಧವಾಗುವುದರಿಂದ ಮುಮುಕ್ಷುಗಳಿಗೆ ಗ್ರಾಹ್ಯವಲ್ಲ. ಇದೂ ಅಲ್ಲದೆ, 'ಬ್ರಹ್ಮಜ್ಞಾನಿಯು ಬ್ರಹ್ಮವೇ ಆಗುತ್ತಾನೆ'. 'ನೀನು ಅದೇ ಆಗಿದ್ದೀಯೆ, ನಮ್ಮಿಬ್ಬರಿಗೂ ಭೇದವಿಲ್ಲ'. 'ಅದೂ ನೀನೇ ನೀನೂ ಅದೇ' ಎಂಬ ನೂರಾರು ಶ್ರುತಿಗಳಿಗೆ ಭಂಗವುಂಟಾಗುತ್ತದೆ. ಇದರಿಂದಲೇ ದಂಡಕ್ಕೂ ದಂಡವಿಶಿಷ್ಟಪುರುಷ ನಿಗೂ ಅಂಗಾಂಗಿಭಾವವಿರುವಂತೆ ಬ್ರಹ್ಮಪ್ರಪಂಚಗಳಿಗೆ ವಿಶೇಷ್ಯವಿಶೇಷಣಭಾವವನ್ನು ಹೇಳುವ ವಿಶಿಷ್ಟಾದ್ವೈತವಾದವೂ, ಘಟಪಟಗಳಂತೆ ಯಾವ ಸಂಪರ್ಕವೂ ಇಲ್ಲವೆಂದು ಹೇಳುವ ಭೇದವಾದವೂ ತಿರಸ್ಕೃತವಾದುವು.

ಪುನರ್ಹೇತ್ವಂತರಮಾಹ— **ಹೇಯತ್ವಾವಚನಾಚ್ಚ ||೮||**

**ಹೇಯತ್ವಸ್ಯ ನಿಷೇಧಸ್ಯ ಅವಚನಾತ್ ಅನುಕ್ತೇಃ ಇತ್ಯರ್ಥಃ. ಜಗದುಭಯಕಾರಣತ್ವೇ ಧ್ಯೇಯತ್ವೇ ಚ ಬ್ರಹ್ಮಣಃ ಹೇಯತ್ವಾವಚನಾತ್, (ನೋಪಾಸ್ಯೌ ಪ್ರಕೃತಿಜೀವೌ) ಇತ್ಯಾದಿನಾ ಪ್ರಧಾನಧ್ಯಾನಸ್ಯ ಹೇಯತ್ವವಚನಾತ್ ನ ಪ್ರಧಾನಸ್ಯೇಕ್ಷಣಪೂರ್ವಕಜಗದುಭಯಕಾರಣತ್ವಂ ಉಪಪದ್ಯತೆ ಇತಿ ಸೂತ್ರಾರ್ಥಃ. 'ಐತದಾತ್ಮ್ಯಮಿದಂ ಸರ್ವಂ' ಇತ್ಯಾದಿವಾಕ್ಯೇ ಸರ್ವಜಗದಾತ್ಮಕ ಪರಮಶಿವತಾದಾತ್ಮ್ಯಂ ಮುಮುಕ್ಷೋ ಶ್ವೇತಕೇತೋರ್ಧ್ಯೇಯತ್ವೇನ ವಿಧೇಯತ್ವಾತ್ ನಾತ್ರಪ್ರಧಾನಂ ಸಚ್ಛಬ್ದ ವಾಚ್ಯಂ, ಯಥಾರುಂಧತೀಂ ದಿದರ್ಶಯಿಷುಃ ತತ್ಸಮೀಪಸ್ಥಸ್ಥೂಲ ತಾರಾಂ ಅರುಂಧತೀಂ ಪ್ರಥಮಂ ಗ್ರಾಹಯಿತ್ವಾ ತಾಂ ನಿಷಿಧ್ಯ ಪಶ್ಚಾದ ರುಂಧತೀಮೇವ ಜ್ಞಾಪಯತಿ, ತಥಾ ಮುಮುಕ್ಷೋಃ ಪ್ರಧಾನೋಪಾ ಸನಂ ವಕ್ತುಂ ಅಯುಕ್ತಂ, ತಥಾವಿಧಪ್ರಮಾಣಾಭಾವಾತ್. "ಶಿವ ಏಕೋ ಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ" ಇತ್ಯಾದೌ ಮೋಕ್ಷಸ್ಯ ಶಾಖಾಚಂದ್ರನ್ಯಾಯಮಾತ್ರೇಣಾಪಿ ಪ್ರಧಾನಧ್ಯಾನಸ್ಯ ಹೇತುತ್ವಾದರ್ಶನಾತ್ ನೇತರಸ್ಯ ಜಗತ್ಕಾರಣತ್ವಂ.**

ಪ್ರಧಾನವನ್ನು ನಿರಾಕರಿಸಲು ಬೇರೊಂದು ಕಾರಣವನ್ನು ತಿಳಿಸಲಾಗಿದೆ—

**ಹೇಯತ್ವಾವಚನಾಚ್ಚ ||೮||**

ಪರಶಿವನು ಧ್ಯಾನಕ್ಕೆ ಯೋಗ್ಯವೆಂಬ ಬಗ್ಗೆ ಮತ್ತು ಜಗತ್ತಿಗೆ ಉಪಾದಾನಕಾರಣನೂ

ನಿಮಿತ್ತನೂ ಆಗಿರುವನೆಂಬ ಬಗ್ಗೆ ಶ್ರುತಿಯಲ್ಲಿ ಯಾವ ದೂಷಣವನ್ನೂ ಹೇಳಿಲ್ಲವಾದ್ದರಿಂದಲೂ, 'ಜೀವಪ್ರಕೃತಿಗಳು ಉಪಾಸ್ಯರಲ್ಲ' ವೆಂದು ಶ್ರುತಿಯಲ್ಲಿ ಪ್ರಧಾನದ ಧ್ಯಾನವನ್ನು ನಿಷೇಧಿಸಿರುವುದರಿಂದಲೂ ಪ್ರಧಾನವು ಈಕ್ಷಣಪೂರ್ವಕವಾಗಿ ಜಗತ್ಕಾರಣವಾಗಲಾರದು. 'ಐತದಾತ್ಮ್ಯಮಿದಂ ಸರ್ವಂ' ಎಂಬ ಶ್ರುತಿಯಲ್ಲಿ ಸರ್ವಕಾರನಾದ ಪರಶಿವನ ತಾದಾತ್ಮ್ಯವನ್ನು ಮುಮುಕ್ಷುವಿಗೆ ಧ್ಯೇಯವೆಂದು ಹೇಳಿರುವುದರಿಂದ ಸತ್ಪದವು ಪ್ರಧಾನವನ್ನು ಬೋಧಿಸಲಾರದು. ವಧೂವರರಿಗೆ ಅರುಂಧತೀ ನಕ್ಷತ್ರವನ್ನು ತೋರಿಸುವವನು ಅದು ಬಹಳ ಚಿಕ್ಕದಾದ್ದರಿಂದ ಅದರ ಸಮೀಪದ ಒಂದು ದೊಡ್ಡ ನಕ್ಷತ್ರವನ್ನು ಮೊದಲು ತೋರಿಸಿ ಆಮೇಲೆ ಅದರ ಪಕ್ಕದಲ್ಲಿರುವ ಅರುಂಧತಿಯನ್ನು ತೋರಿಸುವಂತೆ ಮುಮುಕ್ಷುವಿಗೆ ಮೊದಲು ಪ್ರಧಾನದ ಉಪಾಸನವನ್ನು ತಿಳಿಸಬಹುದಲ್ಲವೇ? ಎಂದು ಹೇಳಲಿಕ್ಕೂ ಯಾವ ಪ್ರಮಾಣವೂ ಇಲ್ಲ. "ಎಲ್ಲವನ್ನೂ ತೊರೆದು ಶಿವನೊಬ್ಬನನ್ನೇ ಧ್ಯಾನಿಸಬೇಕು" ಎಂಬ ಶ್ರುತಿಯಲ್ಲಿ ಶಾಖಾಚಂದ್ರನ್ಯಾಯದಿಂದಲೂ ಸಹ ಪ್ರಧಾನದ ಧ್ಯಾನವು ಮುಕ್ತಿಗೆ ಹೇತುವೆಂಬುದಾಗಿ ಎಲ್ಲಿಯೂ ಕಂಡುಬಂದಿಲ್ಲ. ಚಂದ್ರನ ಪರಿಚಯಕ್ಕಾಗಿ ಮರದಕೊಂಬೆ ಕಾರಣವಾಗುವಂತೆ ಪರಶಿವನ ಪರಿಚಯಕ್ಕೆ ಪ್ರಧಾನದ ಉಪಾಸನ ಕಾರಣವಾಗಬಹುದಲ್ಲವೆ? ಎಂದು ಹೇಳಲಿಕ್ಕೆ ಯಾವ ಆಧಾರವೂ ಇಲ್ಲದ್ದರಿಂದ ಪರಶಿವನಲ್ಲದೆ ಬೇರೆ ಯಾರೂ ಜಗತ್ಕಾರಣವಾಗಲಾರರೆಂಬುದು ಸಿದ್ಧವಾಗುತ್ತದೆ.

**ನನು 'ಅಜಾಮೇಕಾಂ' ಇತ್ಯಾದೌ ಪ್ರಧಾನಸ್ಯ ಜಗತ್ಕಾರಣತ್ವ ಕಥನಾತ್ ತಸ್ಯೈವ ತತ್ಕಾರಣತ್ವಮುಪಪನ್ನಮಿತ್ಯಾಶಂಕ್ಯ ನಿರಾಕರೋತಿ.**

**'ಪ್ರತಿಜ್ಞಾವಿರೋಧಾತ್' ॥೯॥**

**"ಕಾರಣವಿಜ್ಞಾನಾತ್ಸರ್ವಂ ಕಾರ್ಯಂ ವಿಜ್ಞಾತಂ" ಇತಿ ಪ್ರತಿಜ್ಞಾ. "ಉತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಂ ಅವಿಜ್ಞಾತಂ ವಿಜ್ಞಾತಮಿತಿ ಕಥಂ ನು ಭಗವಸ್ಸ ಆದೇಶೋ ಭವತಿ," ಇತಿ ವಾಕ್ಯೇ ಏಕವಿಜ್ಞಾನಾತ್ ಸರ್ವವಿಜ್ಞಾನೋಪಕ್ರಮಃ ಶ್ರೂಯತೇ. ಪ್ರಧಾನಸ್ಯ ಕಾರಣತ್ವೇ ಪ್ರತಿಜ್ಞಾವಿರೋಧಸ್ಸಂಭವತಿ ಜಡಪ್ರಧಾನಸ್ಯ ಚೇತನಕಾರಣತ್ವಾಸಂಭವಾತ್, ಅತಃ ಪ್ರಧಾನಂ ನ ಸಚ್ಛಬ್ದವಾಚ್ಯಂ.**

'ಅಜಾಮೇಕಾಂ' ಎಂಬ ಶ್ರುತಿಯಲ್ಲಿ ಪ್ರಧಾನವೇ ಜಗತ್ತಿನ ಕಾರಣವೆಂದು ಹೇಳಿದೆಯಾದ್ದರಿಂದ ಆ ಬಗ್ಗೆ ಪ್ರಮಾಣವಿದೆ ಎಂದು ಆಶಂಕಿಸಿ ನಿರಾಕರಿಸುತ್ತಾನೆ.

ಪ್ರತಿಜ್ಞಾವಿರೋಧಾತ್ ॥೯॥

"ಕಾರಣವನ್ನು ತಿಳಿಯುವುದರಿಂದ ಕಾರ್ಯವೂ ತಿಳಿಯುವುದೆಂಬುದು ಪ್ರತಿಜ್ಞೆ. "ಯಾವುದರಿಂದ ಕೇಳದಿರುವುದೂ ಕೇಳಿದ್ದೆನಿಸುವುದೋ, ಮನನಮಾಡದಿರುವುದೂ

ಮಾಡಿದ್ದೇ ಆಗುವುದೋ, ತಿಳಿಯದಿರುವುದೂ ತಿಳಿದದ್ದೇ ಆಗುವುದೋ ಅಂತಹ ಆದೇಶವನ್ನು ನೀನು ಕೇಳಿದ್ದೀಯೋ? ಅದು ಎಂತಹ ಆದೇಶ? ಒಂದು ಮಣ್ಣು ಮುದ್ದೆಯಿಂದ ಮಣ್ಣಿನ ಎಲ್ಲಾ ಪದಾರ್ಥಗಳೂ ಹೇಗೆ ತಿಳಿಯುತ್ತವೆಯೋ, ಅದರ ವಿಕಾರಗಳೆಲ್ಲವೂ ವಾಗ್ವ್ಯವಹಾರಕ್ಕಾಗಿ ಬಂದಿದ್ದು ಮಣ್ಣೆಂಬುದೊಂದೇ ಸತ್ಯವಾಗಿ, ಹೇಗೆ ಉಳಿಯುವುದೋ ಹಾಗೆ ಆ ಆದೇಶವೂ ಸತ್ಯವಾಗಿಯೇ ಉಳಿಯುತ್ತದೆ" ಎಂಬ ವಾಕ್ಯದಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನವು ಹೇಗೆ ಸಂಭವಿಸುವುದೆಂಬುದನ್ನು ತಿಳಿಸಲಾಗಿದೆ. ಪ್ರಧಾನವನ್ನು ಜಗತ್ತಿನ ಕಾರಣವೆಂದು ಹೇಳಿದರೆ ಈ ಪ್ರತಿಜ್ಞೆಗೆ ವಿರೋಧವುಂಟಾಗುತ್ತದೆ. ಜಡವಾದ ಪ್ರಧಾನವು ಚೇತನಕ್ಕೆ ಕಾರಣವೆಂಬುದು ಸಂಭವಿಸುವುದಿಲ್ಲ. ಆದ್ದರಿಂದ ಸತ್ಪದವು ಪ್ರಧಾನವನ್ನು ಬೋಧಿಸಲಾರದು.

ಪುನರಪಿ ಹೇತುಂ ದರ್ಶಯತಿ—ಸ್ವಾಪ್ಯಯಾತ್ ||೧೦||

ಸ್ವಸ್ಮಿನ್ ಅಪ್ಯಯಃ ಸ್ವಾಪ್ಯಯಃ–ಅಪ್ಯಯೋ ಲಯ ಇತ್ಯರ್ಥಃ. ಅಪಿಪೂರ್ವಸ್ಯೇಯತೇಃ ಲಯಾರ್ಥತ್ವಾತ್, ಜಡಾಜಡಯೋಃ ಪ್ರಧಾನಜೀವಯೋಃ ಲಯಾಸಂಭವಾತ್, ಪ್ರಧಾನಸ್ಯ ಜೀವಾಕರ್ಷಣ ಸತ್ತ್ವಭಾವಾಚ್ಚ ನಾತ್ರ ಪ್ರಧಾನಂ ಸಚ್ಛಬ್ದವಾಚ್ಯಂ | "ಯತ್ರೈತತ್ಪುರುಷಃ ಸ್ವಪಿತಿ ನಾಮ ಸತಾ ಸೌಮ್ಯ ತದಾ ಸಂಪನ್ನೋ ಭವತಿ|ಸ್ವಮಪೀತೋ ಭವತಿ | ತಸ್ಮಾದೇನಂ ಸ್ವಪಿತೀತ್ಯಾಚಕ್ಷತೇ | ಸ್ವಂ ಹ್ಯಪೀತೋ ಭವತಿ" ಇತಿ ಶ್ರುತಾವಪಿ ಸಚ್ಛಬ್ದವಾಚ್ಯಂ ತದೇವ ಸರ್ವಕಾರಣಂ ಸಾಕ್ಷಾತ್ಪರಶಿವ ಬ್ರಹ್ಮೈವೇತಿ ವ್ಯಾಚಕ್ಷ್ಯತೇ. ತಥಾ ಹಂಸೋಪನಿಷದಿ, "ಏಷೋಽಸೌ ಪರಮಹಂಸೋ ಭಾನುಕೋಟಿಪ್ರತೀಕಾಶೋ ಯೇನೇದಂ ಸರ್ವಂ ವ್ಯಾಪ್ತಂ ತಸ್ಯಾಷ್ಟಧಾ ವೃತ್ತಿರ್ಭವತಿ, ಪೂರ್ವದಲೇ ಪುಣ್ಯಮತಿಃ, ಆಗ್ನೇಯೇ ನಿದ್ರಾಲಸ್ಯಾದಯೋ ಭವಂತಿ, ಯಾಮ್ಯೇ ಕ್ರೌರ್ಯೇ ಮತಿಃ, ನೈಋತೇ ಪಾಪೇ ಮನೀಷಾ, ವಾರುಣ್ಯಾಂ ಕ್ರೀಡಾ, ವಾಯವ್ಯೇ ಗಮನಾದೌ ಬುದ್ಧಿಃ, ಸೌಮ್ಯೇ ರತಿಪ್ರೀತಿಃ, ಈಶಾನ್ಯೇ ದ್ರವ್ಯಾದಾನಂ, ಮಧ್ಯೇ ವೈರಾಗ್ಯಂ, ಕೇಸರೇ ಜಾಗ್ರದವಸ್ಥಾ, ಕರ್ಣಿಕಾಯಾಂ ಸ್ವಪ್ನಃ, ಲಿಂಗೇ ಸುಷುಪ್ತಿಃ, ಪದ್ಮತ್ಯಾಗೇ ತುರೀಯಂ" ಇತಿ. ಹೃದಯಪುಂಡರೀಕಾವಚ್ಛಿನ್ನಪ್ರಾಣಲಿಂಗೇ ಸರ್ವೇಷಾಂ ಜೀವಾನಾಂ ಸುಷುಪ್ತೌ ಲಯ ಇತಿ ಸ್ಪಷ್ಟಮುಕ್ತಂ. 'ಸುಷುಪ್ತೌ ಶಂಕರೇ ಲಯಃ' ಇತಿ ಸ್ಮೃತಿರಪಿ ಶ್ರೂಯತೇ, ಕಿಂಚ, "ಯಥಾ ಸುಷುಪ್ತಃ ಸ್ವಪ್ನಂ ಹಿ ನ ಕಥಂಚನ ಪಶ್ಯತಿ | ಅಥಾಸ್ಮಿನ್ ಪ್ರಾಣ ಏವೈಕಧಾ ಭವತಿ,""ತಸ್ಮಾದ್ವಾ ಆತ್ಮನಃ ಪ್ರಾಣಾ ಯಥಾಯತನಂ ಪ್ರತಿಷ್ಠಂತೆ," ಯಥಾ "ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ-ದಂಶೋ ವಾ-ಯದ್ಯದ್ಭವಂತಿ | ತಥಾತಥಾ ಭವಂತಿ"

ಇತಿ ಚ, "ತದಾ ಸುಷುಪ್ತಂ ಜೀವಂ ಪ್ರಾಜ್ಞೇನಾತ್ಮನಾಂ ಸಂಪರಿಷ್ವಕ್ತಂ" ಇತಿಚ ಸಚ್ಛಬ್ದವಾಚ್ಯತ್ವಂ ಸರ್ವಜೀವಲಯಾಧಿಷ್ಠಾನತ್ವಂ ಚ ತಸ್ಯೈವ ನಿರ್ದಿಷ್ಟಂ. "ಸರ್ವಾತೀತಂ ಪರಾನಂದಂ ಸತ್ತಾಮಾತ್ರಂ ತು ಚಿನ್ಮಯಂ" ಇತ್ಯಾದಿಶ್ರುತ್ಯಂತರೇಷ್ವಪಿ ಚಿನ್ಮಯಸ್ಯ ಪರಶಿವಸ್ಯ ಸ್ವತಃ ಸತ್ತ್ವಂ ಪ್ರತಿಜ್ಞಾತಂ. "ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ" ಇತಿ ಶ್ರುತೌ ಪರಶಿವಬ್ರಹ್ಮಣೋಽಪಿ ಸ್ಥೂಲಸೂಕ್ಷ್ಮಚಿದಚಿತ್ಪ್ರಪಂಚಾವಿರ್ಭಾವತಿರೋಧಾನಯೋರ್ದರ್ಶನಾತ್, 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಂ' ಇತಿ ಶ್ರುತ್ಯಂತರೇ ಚ ಸುಷುಪ್ತಿದಶಾಯಾಂ ಜೀವಾನಾಂ ಸ್ವಾಂತಃಕರಣೇನ ಸಹ ಪರಶಿವಬ್ರಹ್ಮಣಿ ಪ್ರವೇಶದರ್ಶನಾಚ್ಚ ಸಚ್ಛಬ್ದವಾಚ್ಯಃ ಸರ್ವಾತೀತಃ ಸರ್ವಜ್ಞಃ ಸರ್ವನಿಯಂತಾ ಚ ಪರಶಿವ ಇತಿ ಸ್ಥಿತಂ. ತತೋ ರಜ್ಜುಸರ್ಪವತ್ ಜಗಜ್ಜೀವಮಿಥ್ಯಾತ್ವಬೋಧಕಶುದ್ಧಾದ್ವೈತಂ ಜಡಪ್ರಧಾನಸ್ಯ ಜಗತ್ಕಾರಣತ್ವಬೋಧಕಸಾಂಖ್ಯಮಪಿ ಪೂರ್ವೋಕ್ತಶ್ರುತಿಸ್ಮೃತಿವಿರುದ್ಧತ್ವಾತ್ ಮುಮುಕ್ಷುಭಿರ್ನಾಂಗೀಕರಣೀಯಂ.

ಮತ್ತೊಂದು ಕಾರಣವನ್ನು ತಿಳಿಸುತ್ತಾನೆ—**ಸ್ವಾಪ್ಯಯಾತ್ ||೧೦||**

ತನ್ನೊಳಗಿರುವ ಪರಮಾತ್ಮನಲ್ಲಿ ಲಯವಾಗುವುದಕ್ಕೆ ಸ್ವಾಪ್ಯಯವೆಂದು ಹೆಸರು. ಅಪಿ ಎಂಬ ಉಪಸರ್ಗದೊಡಗೂಡಿದ ಇಣ್‌ಧಾತುವಿಗೆ ಲಯವೆಂದು ಅರ್ಥ. ಜಡವಾದ ಪ್ರಧಾನಕ್ಕೂ ಅಜಡವಾದ ಜೀವನಿಗೂ ಲಯವು ಸಂಭವಿಸುವುದಿಲ್ಲವಾದ್ದರಿಂದಲೂ, ಪ್ರಧಾನಕ್ಕೆ ಜೀವನನ್ನಾಕರ್ಷಿಸುವ ಚೈತನ್ಯವಿಲ್ಲದ್ದರಿಂದಲೂ ಶ್ರುತಿಯಲ್ಲಿ ಬಂದಿರುವ ಸತ್ಪದವು ಪ್ರಧಾನವನ್ನು ತಿಳಿಸಲಾರದು. "ಯಾವಾಗ ಜೀವನು ಸದ್ವಸ್ತುವಿನೊಡನೆ ಮಲಗುತ್ತಾನೆಯೋ ಆಗ ಅವನು ಸಂಪನ್ನನಾಗುತ್ತಾನೆ. ತನ್ನೊಳಗಿರುವ ಪರಮಶಿವನೊಡಗೂಡುತ್ತಾನೆ. ಆದ್ದರಿಂದ ಅವನ ಬಗ್ಗೆ 'ಸ್ವಪಿತಿ' ಎಂದು ಜನರು ಹೇಳುತ್ತಾರೆ." ಹೀಗೆ ಶ್ರುತಿಯಲ್ಲಿ ಸತ್ಪದವು ಸರ್ವಕಾರಣನಾದ ಪರಮಶಿವನನ್ನೇ ಬೋಧಿಸುತ್ತದೆ. ಹಂಸೋಪನಿಷತ್ತಿನಲ್ಲಿ "ಇವನೇ ಕೋಟಿ ಸೂರ್ಯಪ್ರಕಾಶನಾದ ಪರಮಹಂಸನು. ಇವನಿಂದಲೇ ಎಲ್ಲವೂ ವ್ಯಾಪಿಸಿದೆ. ಇವನಿಗೆ ಎಂಟು ಬಗೆಯ ವೃತ್ತಿ ಇದೆ. ಹೃದಯಕಮಲದ ಪೂರ್ವದಳದಲ್ಲಿ ನೆಲಸಿದ್ದರೆ ಜೀವನಿಗೆ ಪುಣ್ಯದಲ್ಲಿ ಬುದ್ಧಿಯೂ, ಆಗ್ನೇಯದಳದಲ್ಲಿದ್ದರೆ ನಿದ್ರಾಲಸ್ಯಗಳೂ, ಯಮದಿಕ್ಕಿನ ದಳದಲ್ಲಿದ್ದರೆ ಕ್ರೂರಕರ್ಮಾಚರಣೆಯಲ್ಲಿ ಮನಸ್ಸೂ, ನೈರುತ್ಯದಳದಲ್ಲಿದ್ದರೆ ಪಾಪದಲ್ಲಿ ಬುದ್ಧಿಯೂ, ಪಶ್ಚಿಮದಳದಲ್ಲಿದ್ದರೆ ಕ್ರೀಡಾಸಕ್ತಿಯೂ, ವಾಯವ್ಯದಳದಲ್ಲಿದ್ದರೆ ಪ್ರಯಣದಲ್ಲಿ ಮನಸ್ಸೂ, ಉತ್ತರದಿಕ್ಕಿನ ದಳದಲ್ಲಿ ಇದ್ದರೆ ಸಂಭೋಗಾಸಕ್ತಿಯೂ, ಈಶಾನ್ಯದಳದಲ್ಲಿದ್ದರೆ ದ್ರವ್ಯಲಾಭವೂ, ಮಧ್ಯದಲ್ಲಿದ್ದಾಗ ವೈರಾಗ್ಯವೂ, ಕೇಸರದಲ್ಲಿದ್ದಾಗ ಜಾಗ್ರದವಸ್ಥೆಯೂ, ಕರ್ಣಿಕೆಯಲ್ಲಿದ್ದಾಗ ಸ್ವಪ್ನವೂ, ಪ್ರಾಣಲಿಂಗ

ದಲ್ಲಿದ್ದಾಗ ಸುಷುಪ್ತಿಯೂ, ಕಮಲವನ್ನು ತೊರೆದಾಗ ತುರೀಯಾವಸ್ಥೆಯೂ ಸಂಭವಿಸುತ್ತವೆ". ಹೀಗೆ ಪ್ರಾಣಲಿಂಗದಲ್ಲಿ ಜೀವರೆಲ್ಲರಿಗೂ ಸುಷುಪ್ತಿಯಲ್ಲಿ ಲಯವುಂಟಾಗುವುದೆಂಬುದು ಶ್ರುತಿಯಲ್ಲಿ ಸ್ಪಷ್ಟವಾಗಿದೆ. ಸುಷುಪ್ತಿಯಲ್ಲಿ ಜೀವನು ಶಂಕರನಲ್ಲಿ ಲೀನನಾಗುವನೆಂದು ಸ್ಮೃತಿ ಹೇಳುತ್ತಿದೆ. "ಮಲಗಿದವನು ಯಾವೊಂದು ಸ್ವಪ್ನವನ್ನೂ ಕಾಣದಿದ್ದಾಗ ಅವನಲ್ಲಿ ಪ್ರಾಣವು ಒಂದೇ ಬಗೆಯಾಗಿ ನೆಲಸಿರುತ್ತದೆ." "ಆ ಆತ್ಮನಿಗೆ ಪ್ರಾಣಗಳು ಮಾತ್ರ ಆಧಾರವಾಗಿ ಉಳಿದಿರುತ್ತವೆ. ಅವಾಗ ಹುಲಿ, ಸಿಂಹ, ಹಂದಿ, ಸೊಳ್ಳೆ ಯಾವ್ಯಾವುದು ಕಾಣುತ್ತದೆಯೋ ಅದೆಲ್ಲವೂ ಒಂದೇ ವಿಧವಾಗಿ ತೋರುತ್ತದೆ." "ಆಗ ಸುಷುಪ್ತನಾದ ಜೀವನು ಪ್ರಾಜ್ಞನಾದ ಪರಶಿವನೊಡಗೂಡುವನು" ಇಲ್ಲಿ ಪರಶಿವನೇ ಸತ್ಪದದಿಂದ ಬೋಧಿತನೂ, ಸರ್ವಜೀವರ ಲಯಕ್ಕಾಶ್ರಯನೂ ಆಗಿರುವನೆಂದು ಹೇಳಲಾಗಿದೆ. ಊರ್ಣನಾಭಿ ತನ್ನ ಅವಯವಗಳಿಂದ ನೂಲನ್ನು ಹೊರಪಡಿಸಿ ತಾನೇ ತನ್ನ ಕಾಲಿಗೆ ಅದನ್ನು ಸುತ್ತಿಕೊಳ್ಳುವಂತೆ, ಪರಶಿವನು ಚಿದಚಿತ್ಪ್ರಪಂಚವನ್ನು ತನ್ನಿಂದಲೇ ಹೊರಪಡಿಸಿ ತನ್ನಲ್ಲಿಯೇ ಸೇರಿಸಿಕೊಳ್ಳುವನೆಂದು ಶ್ರುತಿಯಲ್ಲಿ ಹೇಳಿದೆ. "ಪ್ರಾಜ್ಞನಾದ ಪರಶಿವನೊಡಗೂಡಿದ ಜೀವನು ಒಳಗಿನ ಮತ್ತು ಹೊರಗಿನ ಅನುಭವವನ್ನು ಪಡೆಯಲಾರನು' ಎಂಬ ಶ್ರುತಿಯಲ್ಲಿ ಸುಷುಪ್ತಿಯಲ್ಲಿ ಜೀವರು ತಮ್ಮ ಅಂತಃಕರಣದೊಡನೆ ಪರಶಿವನನ್ನು ಪ್ರವೇಶಿಸುವರೆಂದು ಹೇಳಿದೆಯಾದ್ದರಿಂದ ಸತ್ಪದವು ಸರ್ವಜ್ಞನೂ ಸರ್ವಾತ್ಮಕನೂ ಸರ್ವನಿಯಾಮಕನೂ ಆದ ಪರಶಿವನನ್ನೇ ತಿಳಿಸುತ್ತದೆ ಎಂಬುದೇ ಸ್ಪಷ್ಟವಾಗಿದೆ. ಆದ್ದರಿಂದ ರಜ್ಜುಸರ್ಪದಂತೆ ಜಗಜ್ಜೀವರನ್ನು ಮಿಥ್ಯೆ ಎಂದು ಹೇಳುವ ಶುದ್ಧಾದ್ವೈತಮತವೂ, ಜಡಪ್ರಧಾನವೇ ಜಗತ್ಕಾರಣವೆಂದು ಹೇಳುವ ಸಾಂಖ್ಯಮತವೂ ಶ್ರುತಿಸ್ಮೃತಿಗಳಿಗೆ ವಿರುದ್ಧವಾದ್ದರಿಂದ ಮುಮುಕ್ಷುಗಳಿಗೆ ಗ್ರಾಹ್ಯವಲ್ಲ.

**ಪ್ರಧಾನಸ್ಯ ಜಗತ್ಕಾರಣತ್ವಾಭಾವೇ ತದ್ಗುಣತ್ರಯಾವಚ್ಛಿನ್ನಬ್ರಹ್ಮೇಂದ್ರೋಪೇಂದ್ರಾದೀನಾಂ ಜಗತ್ಕಾರಣತ್ವವಿಧಾಯಕಶ್ರುತೀನಾಂ ಕಾ ಗತಿರಿತ್ಯಾಶಂಕಾಯಾಮಾಹ—ಗತಿಸಾಮಾನ್ಯಾತ್ ॥ ೧೧ ॥**

**ಗತಿಃ ಸರ್ವೇಷಾಂ ಬ್ರಹ್ಮೇಂದ್ರೋಪೇಂದ್ರಚಂದ್ರದಿನೇಂದ್ರಾದಿ ಜಗತ್ಕಾರಣತ್ವಪ್ರತಿಪಾದಕವೇದಾಂತಾನಾಂ ಭೇದಾಭೇದಬೋಧಕಾನಾಂ ಮೂರ್ತಿತ್ರಯಾತೀತಸದ್ರೂಪಪರಮಶಿವೇ ಬ್ರಹ್ಮಣಿ ಪರ್ಯವಸಾನಂ. ತಸ್ಯ ಸಾಮಾನ್ಯಾತ್ ಸಮನ್ವಯಾದಿತ್ಯರ್ಥಃ. ತಸ್ಮಾನ್ನಹಿ ಕ್ವಚಿದಪಿ ಪ್ರಧಾನಕಾರಣತ್ವವಿಧಾಯಕಶ್ರುತೀನಾಂ ಬ್ರಹ್ಮಾದಿನಾನಾದೇವತಾಕಾರಣತ್ವಪ್ರತಿಪಾದಕಶ್ರುತೀನಾಂ ವಿರೋಧಃ. "ಯಥಾಗ್ನೇರ್ಜ್ವಲತಃ ಸರ್ವಾ ದಿಶೋ ವಿಸ್ಫುಲಿಂಗಾಃ ಪ್ರವಿಷ್ಠೇರನ್ ಏವಮೇವೈತಸ್ಮಾದಾತ್ಮನಃ ಸರ್ವೇ ಪ್ರಾಣಾ ಯಥಾಯತನಂ ಪ್ರತಿಷ್ಠಂತೇ। ಪ್ರಾಣೇಭ್ಯೋ ದೇವಾ ದೇವೇಭ್ಯೋ ಲೋಕಾಃ।" ಇತಿ. "ಆತ್ಮಾ ವಾ ಇದಮೇಕ ಏವಾಸೀತ್**

ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ," "ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ," "ಪ್ರಜಾಪತಿರ್ವಾ ಇದಮೇಕ ಏವಾಗ್ರ ಆಸೀತ್," "ಏಕ ಏವ ನಾರಾಯಣ ಆಸೀತ್ ನ ಬ್ರಹ್ಮಾ ನೇಶಾನೋ," "ಪುರುಷೋ ಹ ವೈ ನಾರಾಯಣೋಽಕಾಮಯತ । ಪ್ರಜಾಸ್ಸೃಜೇಯೇತಿ" "ಅಮೂಲಮನಾಧಾರಮಿಮಾಃ ಪ್ರಜಾಃ ಪ್ರಜಾಯಂತೇ" ಇತ್ಯಾದಿಶ್ರುತೀನಾಂ ಸರ್ವಭೂತಾಂತರಾತ್ಮಾಪಹತಪಾಪ್ಮಾದಿವ್ಯಪದೇಶಾತ್ ಸಚ್ಛಬ್ದವಾಚ್ಯೇ ಪರಶಿವಬ್ರಹ್ಮಣ್ಯೇವ ಸಮನ್ವಯೋ ಹ್ಯವಿರುದ್ಧಃ। "ವಿಶ್ವಂ ಭೂತಂ ಭುವನಂ ಚಿತ್ರಂ–ಸರ್ವೋ ಹ್ಯೇಷ ರುದ್ರಃ" "ಅಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ," "ಸೋಽಂತರಾದಂತರಂ ಪ್ರಾವಿಶತ್" ಇತ್ಯಾರಭ್ಯ, "ಯೋ ವೈ ರುದ್ರಸ್ಸಭಗವಾನ್ಯಶ್ಚ ಬ್ರಹ್ಮಾ ಯಶ್ಚ ವಿಷ್ಣುಃ" ಇತ್ಯಾದಿನಾಥರ್ವಶಿರಸಿ ಬ್ರಹ್ಮವಿಷ್ಣುರುದ್ರೇಂದ್ರಚಂದ್ರದಿನೇಂದ್ರಾದಿಶಬ್ದಾನಾಂ ಪರಶಿವವಾಚಕತ್ವೇನ ವ್ಯವಸ್ಥಾಪನಾತ್. ಕೈವಲ್ಯೇ 'ಉಮಾಸಹಾಯಂ' ಇತ್ಯಾರಭ್ಯ 'ಸ ಬ್ರಹ್ಮಾ ಸ ಶಿವಃ...... ಯಚ್ಚ ಭವ್ಯಂ ಸನಾತನಂ' ಇತ್ಯಾದಿನಾ ಶಿವಸ್ಯೈವ ಸರ್ವಾತ್ಮಕತ್ವೋಪದೇಶಾಚ್ಚ; "ಶಿವಮದ್ವೈತಂ ಚತುರ್ಥಂ ಮನ್ಯಂತೇ" ಇತ್ಯಾದಿಶ್ರುತಿಷು ಮೂರ್ತಿತ್ರಯಾತೀತತ್ವಂ ಕಾರಣಕಾರಣತ್ವಂ ತಸ್ಯೈವೋಪದೇಶಾನ್ನೇತರಸ್ಯ ವಿಧೀಯತೇ.

ಪ್ರಧಾನವು ಜಗತ್ಕಾರಣವಾಗದಿದ್ದರೂ ಅದರ ಮೂರು ಗುಣಗಳಿಂದ ಕೂಡಿದ ಬ್ರಹ್ಮ ಇಂದ್ರ ವಿಷ್ಣು ಮೊದಲಾದವರನ್ನು ಜಗತ್ಕಾರಣವೆಂದು ತಿಳಿಸುವ ಶ್ರುತಿಗೆ ಏನು ಗತಿ ಎಂದು ಆಶಂಕಿಸುತ್ತಾನೆ—**ಗತಿಸಾಮಾನ್ಯಾತ್ ॥೧೧॥**

ಇಂದ್ರಾದಿಗಳನ್ನು ಜಗತ್ಕಾರಣವೆಂದು ತಿಳಿಸುವ ಎಲ್ಲಾ ವೇದಾಂತವಾಕ್ಯಗಳಿಗೂ ತ್ರಿಮೂರ್ತ್ಯತೀತನೂ ಸದ್ರೂಪನೂ ಆದ ಪರಶಿವನಲ್ಲಿಯೇ ಸಮನ್ವಯವೆಂದು ತಿಳಿಸಲಿಕ್ಕೆ ಗತಿಸಾಮಾನ್ಯವೆಂದು ಹೆಸರಿದೆ. ಆದ್ದರಿಂದ ಪ್ರಧಾನವನ್ನು ಜಗತ್ಕಾರಣವೆಂದು ತಿಳಿಸುವ ವಾಕ್ಯಗಳಿಗೂ, ಇಂದ್ರಾದಿಗಳನ್ನು ಜಗತ್ಕಾರಣವೆಂದು ತಿಳಿಸುವ ವಾಕ್ಯಗಳಿಗೂ ಎಲ್ಲಿಯೂ ಯಾವ ವಿರೋಧವೂ ಬರುವುದಿಲ್ಲ. "ಉರಿಯುವ ಬೆಂಕಿಯಿಂದ ಕಿಡಿಗಳು ಎಲ್ಲಾ ದಿಕ್ಕುಗಳಲ್ಲೂ ಉದುರುವಂತೆ ಆತ್ಮನಿಂದ ಎಲ್ಲಾ ಪ್ರಾಣಗಳೂ ಇಂದ್ರಿಯಗಳೂ ಲೋಕಗಳೂ ಬಂದಿವೆ". "ಈ ಆತ್ಮ ಒಂದೇ ಮೊದಲಿಗೆ ಇತ್ತು. ಬೇರೆ ಏನೂ ಇರಲಿಲ್ಲ. ಲೋಕಗಳನ್ನೂ ಸೃಷ್ಟಿಸುವುದಾಗಿ ಅದು ನೋಡಿತು. ಅದು ಈ ಲೋಕಗಳನ್ನು ಸೃಷ್ಟಿಸಿತು". "ಆ ಈ ಆತ್ಮನಿಂದ ಆಕಾಶ ಹುಟ್ಟಿತು" "ಇದರಿಂದ ಪ್ರಾಣ, ಮನಸ್ಸು, ಇಂದ್ರಿಯಗಳು ಹುಟ್ಟಿವೆ". "ತ್ರಿಗುಣಾತ್ಮಕವಾದ ಪ್ರಕೃತಿಯು ಸಮಾನಾಕಾರದ ಸಂತತಿಯನ್ನು ಪಡೆಯುತ್ತದೆ," "ಮೊದಲು ಪ್ರಜಾಪತಿ ಒಬ್ಬನೇ ಇದ್ದನು." "ನಾರಾಯಣನೊಬ್ಬನೇ ಇದ್ದನು-ಬ್ರಹ್ಮನಿರಲಿಲ್ಲ-ಈಶಾನನಿರ

ಲಿಲ್ಲ. ಅಗ್ನಿ ಸೋಮರಾಗಲೀ, ಭೂಮಿ ಆಕಾಶಗಳಾಗಲೀ ಇರಲಿಲ್ಲ." 'ಪುರುಷನೆಂದರೆ ನಾರಾಯಣನೇ, "ಅವನೇ ಜೀವರನ್ನು ಸೃಷ್ಟಿಸಲು ಇಚ್ಛಿಸಿದನು." "ಬುಡವಿಲ್ಲದೆ ಮತ್ತು ಆಶ್ರಯವಿಲ್ಲದೆ ಈ ಜೀವರು ಹುಟ್ಟುತ್ತಾರೆ" ಈ ಬಗೆಯ ಶ್ರುತಿಗಳೆಲ್ಲಕ್ಕೂ, ಎಲ್ಲಾ ಜೀವರೊಳಗೆ ಇರುವವನು ಮತ್ತು ಪಾಪರಹಿತನು" ಎಂದು ಹೇಳಿದ್ದರಿಂದ ಸದ್ರೂಪನಾದ ಪರಮಶಿವನಲ್ಲಿಯೇ ಸಮನ್ವಯಿಸುವುದರಲ್ಲಿ ಯಾವ ವಿರೋಧವೂ ಇಲ್ಲ. 'ಹಿಂದೆ ಆಗಿದ್ದು' ಮುಂದೆ ಆಗುವುದು, ಹುಟ್ಟಿದ್ದು ಮತ್ತು ಹುಟ್ಟುವುದು ಮೊದಲಾದ ವಿಚಿತ್ರವ್ಯಾವುದುಂಟೋ ಇದೆಲ್ಲವೂ ರುದ್ರನೇ ಆಗಿದೆ" "ನಾನೊಬ್ಬನೇ ಮೊದಲೂ ಇದ್ದೆನು-ಈಗಲೂ ಇದ್ದೇನೆ-ಮುಂದೆಯೂ ಇರುವೆನು-ನನಗಿಂತ ಬೇರೆ ಯಾರೂ ಇಲ್ಲ". "ಅವನು ಒಳಗಿಂದ ಒಳಗೆಯೇ ಪ್ರವೇಶಿಸಿದನು" ಎಂದು ಆರಂಭಿಸಿ "ಯಾವ ರುದ್ರನಿರುವನೋ ಅವನೇ ಬ್ರಹ್ಮ-ಅವನೇ ಕಾಲರುದ್ರ-ಅವನೇ ವಿಷ್ಣು' ಎಂದು ಅಥರ್ವಶಿರಸ್ಸಿನಲ್ಲಿ ಬ್ರಹ್ಮ.ವಿಷ್ಣು-ಇಂದ್ರ ಮೊದಲಾದ ಎಲ್ಲಾ ಶಬ್ದಗಳೂ ಪರಶಿವನನ್ನೇ ಬೋಧಿಸುತ್ತವೆ ಎಂದು ವ್ಯವಸ್ಥೆ ಮಾಡಲಾಗಿದೆ. ಕೈವಲ್ಯೋಪನಿಷತ್ತಿನಲ್ಲಿ 'ಉಮಾಸಹಾಯಂ' ಎಂದು ಆರಂಭಿಸಿ, 'ಅವನೇ ಬ್ರಹ್ಮ-ಅವನೇ ಶಿವ-ಅವನೇ ವಿಷ್ಣು-ಅವನೇ ಇಂದ್ರ-ಅವನೇ ಸ್ವತಂತ್ರನೂ, ಅಕ್ಷರನೂ ಆಗಿದ್ದಾನೆ. ಅವನೇ ಪ್ರಾಣ-ಅವನೇ ಕಾಲ-ರುದ್ರ-ಅವನೇ ಅಗ್ನಿ-ಅವನೇ ಚಂದ್ರ. ಹಿಂದೆ ಆಗಿದ್ದೂ ಆಗುವುದೂ ಈ ಎಲ್ಲಾ ವಿಚಿತ್ರವೂ ಅವನೇ" ಎಂದು ಶಿವನೇ ಸರ್ವಾತ್ಮಕನೆಂದು ಹೇಳಲಾಗಿದೆ. 'ಶಿವನೇ ಅದ್ವೈತನು' 'ಪ್ರಪಂಚಕ್ಕಾಧಾರನೂ ಶಾಂತನೂ ಆದ ಶಿವನನ್ನು ತ್ರಿಮೂರ್ತ್ಯತೀತನೆಂದು ಹೇಳುತ್ತಾರೆ." 'ಧ್ಯಾನಯೋಗ್ಯನಾದ ಈಶ್ವರನನ್ನು ಧ್ಯಾನಿಸಿರಿ. ಬ್ರಹ್ಮ-ವಿಷ್ಣು-ಕಾಲರುದ್ರ-ಇಂದ್ರರೂ ಅವನಿಂದಲೇ ಹುಟ್ಟಿದ್ದಾರೆ" ಇತ್ಯಾದಿ ಶ್ರುತಿಗಳಲ್ಲಿ ಪರಮಶಿವನೇ ಮೂರ್ತಿತ್ರಯಕ್ಕೆ ಅತೀತನೆಂದೂ, ಕಾರಣಗಳೆಲ್ಲಕ್ಕೂ ಪರಮಕಾರಣನೆಂದೂ ತಿಳಿಸಲಾಗಿದೆ.

**ನನು ಕ್ವಚಿದವಾಂತರಪ್ರಳಯೇ ಚತುರ್ಮುಖಾದೀನಾಂ ಜಗತ್ಕಾರಣತ್ವಪ್ರತಿಪಾದಕಪುರಾಣಾನಾಂ ಕಾ ಗತಿರಿತಿ ಚೇನ್ನ, "ಅನೇನ ಜೀವೇನಾತ್ಮನಾ—ವ್ಯಾಕರವಾಣಿ," 'ಈಶ್ವರಸ್ಸರ್ವಭೂತಾನಾಂ' ಇತ್ಯಾದಿಶ್ರುತಿಸ್ಮೃತಿಷು ಸರ್ವಭೂತಾನುಪ್ರವಿಷ್ಟತಯಾ ಸರ್ವನಿಯಾಮಕತ್ವಂ ತಸ್ಯೈವ ದೃಷ್ಟಂ । ಅತಸ್ತತ್ಕರ್ತೃತ್ವಂ ತದಂತರ್ಯಾಮಿತಯಾಽವಸ್ಥಿತಪರಶಿವಪರಮೇವ. ಕಿಂಚ ವಿಶ್ವಾಮಿತ್ರವತ್ ಪರಶಿವೋಪಾಸನಲಬ್ಧತ್ವಾನ್ನ ವಿರೋಧಃ. ತಸ್ಮಾತ್ಸರ್ವದೇವತಾಜಗತ್ಕಾರಣಶ್ರುತೀನಾಂ ಪರಶಿವಬೋಧಕತ್ವಂ ಸಿದ್ಧಂ. ತಥಾಪಿ ಭವಶರ್ವೇಶಾನಪಶುಪತಿರುದ್ರೋಗ್ರಭೀಮಮಹಾದೇವಾಭಿಧಾನಾನಿ ಶಿವಸ್ಯ ಪರಬ್ರಹ್ಮಣಃ ಮುಖ್ಯಾನಿ. ತಥಾಹಿ, 'ಋತಂ ಸತ್ಯಂ" 'ಸತ್ಯಂ ಜ್ಞಾನಂ" 'ಸದೇವ ಸೌಮ್ಯ' ಇತ್ಯಾದಿನಾ'ಭವಶಬ್ದವಾಚ್ಯತ್ವಂ, ಭೂಧಾತೋಃ ಸತ್ತಾರ್ಥಕತ್ವಾತ್,'ಸರ್ವ**

ತ್ರ ಸದಾ ಭವತೀತಿ ಭವಃ. ಪರಶಿವ ಏವ ಸರ್ವೋಪಾದಾನತ್ವಾತ್ 'ಘಟಸ್ಸನ್ ಪಟಸ್ಸನ್' ಇತ್ಯಾದಿಚರಾಚರಪ್ರಪಂಚೇ ಸದಾತ್ಮಕೋ ದೃಶ್ಯತೇ. 'ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ,' 'ಮಹಾಗ್ರಾಸಾಯ ನಮಃ,' 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಂ' ಇತ್ಯಾದಿನಾ ಸರ್ವಸಂಹರ್ತೃತ್ವಂ ತಸ್ಯೈವೋಪದಿಷ್ಟಂ. ಶರ್ವಶಬ್ದಾಭಿಧೇಯತ್ವಂ ಶೃಹಿಂಸಾಯಾಂ ಇತಿಧಾತೋಃ. 'ಇಮಾನ್ಲೋಕಾನ್ ಈಶತ ಈಶನೀಭಿಃ' 'ಈಶಾನಸ್ಸರ್ವವಿದ್ಯಾನಾಂ' ಇತ್ಯಾದಿನಾ ಸರ್ವನಿಯಾಮಕತ್ವಶ್ರವಣಾತ್ ಈಶಾನಶಬ್ದವಾಚ್ಯತ್ವಂ, ಈಶಧಾತೋಃ ಶಿಕ್ಷಾರ್ಥಕತ್ವಾತ್. "ಏಷಾಮೀಶೇ ಪಶುಪತಿಃ" "ಪಶೂನಾಂ ಪತಯೇ ನಮೋ ನಮಃ" "ಉಮಾಪತಯೇ ಪಶಪತಯೇ ನಮೋ ನಮಃ" ಇತ್ಯಾದಿನಾ ಮಾಯಾಪಾಶಬದ್ಧಬ್ರಹ್ಮವಿಷ್ಣ್ವಿಂದ್ರಾದಿಪಶೂನಾಂ ಅಧಿಪತಿತ್ವೇನ ಪಶುಪತಿಶಬ್ದವಾಚ್ಯತ್ವಂ. "ಕ್ಷರಾತ್ಮಾನಾವೀಶತೇ ದೇವ ಏಕಃ," "ತಸ್ಯಾಭಿಧ್ಯಾನಾತ್–ಮಾಯಾನಿವೃತ್ತಿಃ", "ಪ್ರಧಾನಕ್ಷೇತ್ರಜ್ಞಪತಿಃ," "ತಮಕ್ರತುಂ ಪಶ್ಯತಿ ವೀತಶೋಕಃ ಧಾತುಃ ಪ್ರಸಾದಾನ್ಮಹಿಮಾನಮೀಶಂ" ಇತ್ಯಾದಿನಾ ಪರಶಿವೋಪಾಸನಯೈವ ಸರ್ವಮಾಯಾಪಾಶನಿವೃತ್ತಿದರ್ಶನಾತ್ ಬ್ರಹ್ಮವಿಷ್ಣ್ವಿಂದ್ರಾದಿಭಕ್ತಪಶುತ್ವಹೇತುಭೂತಮಾಯಾಪಾಶಾತ್ಮಕಂ ರುದಂ ದ್ರಾವಯತೀತಿ ರುದ್ರಶಬ್ದವಾಚ್ಯತ್ವಂ. "ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಾ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ" "ದೇವೋ ಜ್ಯೋತಿಷಾಂ ಜ್ಯೋತಿಃ" ಇತ್ಯಾದಿನಾ ತದಿತರತೇಜೋಽಭಿಭೂತತ್ವಾದುಗ್ರಶಬ್ದವಾಚ್ಯತ್ವಂ. "ಭೀಷಾಸ್ಮಾದ್ವಾತಃ ಪವತೇ" ಇತ್ಯಾದಿನಾ ಸಕಲಭಯಹೇತುತಯಾ ಭೀಮಶಬ್ದವಾಚ್ಯತ್ವಂ. "ಅಥ ಕಸ್ಮಾದುಚ್ಯತೇ ಮಹಾದೇವಃ ಯಸ್ಸರ್ವಾನ್ಭಾವಾನ್ ಪರಿತ್ಯಜ್ಯ ಆತ್ಮಜ್ಞಾನೇನ ಯೋಗೈಶ್ವರ್ಯೇ ಮಹತಿ ಮಹೀಯತೇ, ತಸ್ಮಾದುಚ್ಯತೇ ಮಹಾದೇವಃ" ಇತ್ಯಥರ್ವಶಿರಸಾ ಜ್ಞಾನೈಶ್ವರ್ಯಮಹಿಮಾತಿಶಯತ್ವೇನ ಮಹಾದೇವಶಬ್ದವಾಚ್ಯತ್ವಂ. ತಸ್ಮಾದಷ್ಟಾಭಿಧಾನಾನಿ ಪರಶಿವಸ್ಯೈವ ಮುಖ್ಯಾನಿ, ಅತಃ ಶಿವ ಏವ ಜಗಜ್ಜನ್ಮಾದಿಕಾರಣಂ.

ಕೆಲವು ವೇಳೆ ಅವಾಂತರಪ್ರಳಯದಲ್ಲಿ ಚತುರ್ಮುಖನೇ ಜಗತ್ತಿನ ಕಾರಣವೆಂದು ತಿಳಿಸುವ ಪುರಾಣಗಳಿಗೆ ಏನು ಗತಿ ಎಂದರೆ ಆಗಲೂ 'ಈ ಜೀವನೊಳಗೆ ಆತ್ಮರೂಪದಿಂದ ಪ್ರವೇಶಿಸಿ ನಾಮರೂಪಗಳ ವಿಭಾಗಮಾಡುತ್ತಾನೆ' ಎಂಬ ಶ್ರುತಿಯಲ್ಲೂ, 'ಈಶ್ವರನು ಎಲ್ಲರ ಹೃದಯದಲ್ಲೂ ನೆಲಸಿ ಮಾಯಾಶಕ್ತಿಯಿಂದ ಅವರನ್ನು ಭ್ರಮೆಗೊಳಿಸುತ್ತಾನೆ' ಎಂಬ ಸ್ಮೃತಿಯಲ್ಲೂ ಪರಮೇಶ್ವರನೇ ಎಲ್ಲರೊಳಗೂ ಪ್ರವೇಶಿಸಿ ಅವರನ್ನು ನಿಯಮನಮಾಡುವನೆಂದು ಹೇಳಿದೆಯಾದ್ದರಿಂದ ಅವನು ಜೀವರಿಗೆ

ಕರ್ತನೆಂದೂ, ಅವರಲ್ಲಿ ಅಂತರ್ಯಾಮಿಯಾಗಿರುವನೆಂದೂ ಸ್ಪಷ್ಟವಾಗುತ್ತದೆ. ಇದೂ ಅಲ್ಲದೆ, ಪರಶಿವನ ಉಪಾಸನಬಲದಿಂದ ವಿಶ್ವಾಮಿತ್ರಾದಿಮಹರ್ಷಿಗಳಂತೆ ಇಂದ್ರಾದಿಗಳೂ ಕೆಲವು ವೇಳೆ ಸೃಷ್ಟ್ಯಾದಿಗಳನ್ನು ಮಾಡಬಹುದು. ಆದ್ದರಿಂದ ಇಂದ್ರಾದಿ ದೇವತೆಗಳನ್ನು ಜಗತ್ಕಾರಣರೆಂದು ತಿಳಿಸುವ ಶ್ರುತಿಗಳೂ ಪರಶಿವನನ್ನೇ ಬೋಧಿಸುತ್ತವೆ ಎಂದು ಸಿದ್ಧವಾಯಿತು. ಆದರೂ ಭವ ಶರ್ವ ಈಶಾನ ಪಶುಪತಿ ರುದ್ರ ಉಗ್ರಭೀಮ ಮಹಾದೇವ ಎಂಬ ಹೆಸರುಗಳು ಪರಶಿವನಿಗೇ ಮುಖ್ಯವಾಗಿ ಅನ್ವಯಿಸುತ್ತವೆ. 'ಋತಂ ಸತ್ಯಂ' 'ಸತ್ಯಂ ಜ್ಞಾನಂ' ಇತ್ಯಾದಿ ಶ್ರುತಿಗಳಲ್ಲಿ ಬರುವ ಭವಶಬ್ದವು ಪರಶಿವನಿಗೇ ಅನ್ವಯಿಸುತ್ತದೆ. ಭವಶಬ್ದವು ಭೂಧಾತುವಿನಿಂದ ಹುಟ್ಟಿ 'ಇರುವಿಕೆ' ಎಂಬ ಅರ್ಥವನ್ನು ಕೊಡುತ್ತದೆ. ಎಲ್ಲಾ ಕಡೆಯೂ ಯಾವಾಗಲೂ ಇರುವನಾದ್ದರಿಂದ ಪರಮಶಿವನು ಎಲ್ಲಕ್ಕೂ ಉಪಾದಾನನೆನಿಸಿ 'ಘಟವಿದೆ ಪಟವಿದೆ' ಎಂಬ ಎಲ್ಲಾ ವ್ಯವಹಾರಗಳಲ್ಲಿಯೂ ಸದ್ರೂಪವಾಗಿ ನೆಲಸಿದ್ದಾನೆ. "ಎಲ್ಲಾ ಪ್ರಾಣಿಗಳನ್ನೂ ನಾಶಪಡಿಸುವವನಿಗೆ ನಮಸ್ಕಾರ". "ಯಾವನಿಗೆ ಬ್ರಹ್ಮವರ್ಚಸ್ಸೂ, ಕ್ಷಾತ್ರಶಕ್ತಿಯೂ ಆಹಾರವಾಗಬಲ್ಲವೋ" ಎಂಬ ಶ್ರುತಿಗಳಲ್ಲಿ ಅವನೇ ಎಲ್ಲಕ್ಕೂ ಸಂಹಾರಕನೆಂದು ಹೇಳಿರುವುದರಿಂದ ಶರ್ವನೆನಿಸಿದ್ದಾನೆ. ಶೃ ಹಿಂಸಾಯಾಂ ಎಂಬ ಧಾತುವಿನಿಂದ ಈ ಶಬ್ದ ಹುಟ್ಟಿದೆ. "ಈ ಲೋಕಗಳನ್ನು ಸ್ವಶಕ್ತಿಗಳಿಂದ ನಿಯಮನ ಮಾಡುತ್ತಾನೆ." "ಎಲ್ಲಾ ವಿದ್ಯೆಗಳಿಗೂ ನಿಯಾಮಕನಾಗಿದ್ದಾನೆ". ಈ ಬಗೆಯ ಶ್ರುತಿಗಳಲ್ಲಿ ಅವನೇ ಎಲ್ಲಕ್ಕೂ ನಿಯಾಮಕನಾಗಿರುವನೆಂದು ಹೇಳಿದ್ದರಿಂದ ಈಶಾನನೆನಿಸಿದ್ದಾನೆ. ಈಶ್ ಧಾತುವು ಶಿಕ್ಷಿಸುವಿಕೆ ಎಂಬ ಅರ್ಥದಲ್ಲಿ ಪ್ರಸಿದ್ಧವಾಗಿದೆ. "ನಾಲ್ಕು ಪಾದಗಳಿರುವ ಪಶುಗಳಿಗೂ ಮತ್ತು ಎರಡು ಪಾದಗಳಿರುವ ಜೀವರಿಗೂ ಶಿವನು ಪತಿಯಾಗಿದ್ದಾನೆ.' "ಉಮಾಪತಿಯೂ ಪಶುಪತಿಯಾದ ನಿನಗೆ ನಮಸ್ಕಾರ." ಈ ಶ್ರುತಿಗಳಲ್ಲಿ ಮಾಯಾಪಾಶದಿಂದ ಬದ್ಧರಾದ ಬ್ರಹ್ಮ ವಿಷ್ಣು ಇಂದ್ರ ಮೊದಲಾದ ಜೀವರಿಗೆ ಅಧಿಪತಿಯಾದ್ದರಿಂದ ಶಿವನು ಪಶುಪತಿ ಎನಿಸಿರುವನೆಂಬುದು ಸ್ಪಷ್ಟವಾಗಿದೆ. ಪ್ರಧಾನಜೀವರಿಗೆ ನಿಯಾಮಕನಾದ ಪರಶಿವನ ಉಪಾಸನದಿಂದಲೇ ಮಾಯಾಪಾಶವು ತೊಲಗುವುದೆಂದು ಶ್ರುತಿಯಲ್ಲಿ ಹೇಳಿದೆಯಾದ್ದರಿಂದ ಬ್ರಹ್ಮವಿಷ್ಣ್ವಾದಿಭಕ್ತರೆಲ್ಲರಿಗೂ ಪಶುತ್ವವನ್ನು ದೊರಕಿಸಿರುವ ಪಾಶವೆಂಬ ದುಃಖವನ್ನು ಪರಿಹರಿಸುವನಾದ್ದರಿಂದ ಪರಶಿವನೇ ರುದ್ರನೆನಿಸಿರುವನು. "ಅಲ್ಲಿ ಸೂರ್ಯನೂ ಶೋಭಿಸುವುದಿಲ್ಲ, ನಕ್ಷತ್ರಗಳಾಗಲೀ ಚಂದ್ರನಾಗಲೀ ಇರುವುದಿಲ್ಲ, ಮಿಂಚುಗಳೂ ಇರುವುದಿಲ್ಲ. ಇನ್ನು ಅಗ್ನಿ ಎಲ್ಲಿಂದ ಬಂದಾನು?" "ಅವನೇ ಪ್ರಕಾಶಗಳೆಲ್ಲಕ್ಕೂ ಪ್ರಕಾಶನು" ಹೀಗೆ ಶ್ರುತಿಯಲ್ಲಿ ಎಲ್ಲಾ ಪ್ರಕಾಶಗಳಿಗೂ ಮೀರಿದವನೆಂದು ಹೇಳಿದ್ದರಿಂದ ಶಿವನು ಉಗ್ರನೆನಿಸಿದ್ದಾನೆ. "ಯಾವನ ಭಯದಿಂದ ಗಾಳಿ ಬೀಸುತ್ತದೆಯೋ" ಎಂಬ ಶ್ರುತಿಯಿಂದ ಎಲ್ಲರಿಗೂ ಭಯಕಾರಣನಾದ್ದರಿಂದ ಅವನೇ ಭೀಮನೆನಿಸಿದ್ದಾನೆ, "ಅವನಿಗೆ ಯಾತಕ್ಕೆ ಮಹಾದೇವನೆಂಬ ಹೆಸರು ಬಂದಿದೆ. ಯಾವನು ಎಲ್ಲಾ ಭಾವಗಳನ್ನೂ ತೊರೆದು ಆತ್ಮ

ಜ್ಞಾನದಿಂದ ಯೋಗರೂಪವಾದ ಮಹದೈಶ್ವರ್ಯದಲ್ಲಿ ನೆಲಸಿದ್ದಾನೆಯೋ ಆದ್ದರಿಂದ ಅವನು ಮಹಾದೇವನೆನಿಸಿದ್ದಾನೆ" ಎಂದು ಅಥರ್ವಶಿರಸ್ಸಿನಲ್ಲಿ ಜ್ಞಾನೈಶ್ವರ್ಯದ ನಿರತಿಶಯವಾದ ಮಹಿಮೆ ಇರುವುದರಿಂದ ಅವನನ್ನು ಮಹಾದೇವನೆಂದು ಹೇಳಿದೆ. ಹೀಗೆ ಈ ಎಂಟು ಹೆಸರುಗಳೂ ಪರಮಶಿವನಲ್ಲಿಯೇ ಮುಖ್ಯವಾಗಿ ಅನ್ವಯಿಸುತ್ತವೆ ಯಾದ್ದರಿಂದ ಅವನೇ ಜಗಜ್ಜನ್ಮಾದಿಕಾರಣನಾಗಿದ್ದಾನೆ.

ಪುನರ್ಹೇತ್ವಂತರಮಾಹ—ಶ್ರುತತ್ವಾಚ್ಚ ॥ ೧೨ ॥

"ಯಚ್ಚಾನ್ಯೇಹಾಸ್ತಿ ಯಚ್ಚನಾಸ್ತಿ ಸರ್ವಂ ತದಸ್ಮಿನ್ಸಮಾಹಿತಂ. ತಸ್ಮಿನ್ ಕಾಮಾಸ್ಸಮಾಹಿತಾಃ । ಏಷ ಆತ್ಮಾಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಸ್ಸತ್ಯಕಾಮಸ್ಸತ್ಯಸಂಕಲ್ಪಸ್ಸೋಽನ್ವೇಷ್ಟವ್ಯಸ್ಸ ವಿಜಿಜ್ಞಾಸಿತವ್ಯಃ". ಶ್ವೇತಾಶ್ವತರೇ–"ನ ತಸ್ಯ ಕಶ್ಚಿತ್ಪತಿರಸ್ತಿ ಲೋಕೇ ನಚೇಶಿತಾ ನೈವ ಚ ತಸ್ಯ ಲಿಂಗಂ । ನ ಕಾರಣಂ ಕಾರಣಾಧಿಪಾಧಿಪಃ । ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ," "ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವಾನಾಂ ಪರಮಂ ಚ ದೈವತಂ ಪತಿಂ ಪಶೂನಾಂ ಪ್ರಥಮಂ ಪುರಸ್ತಾದ್ವಿದಾಮ ದೇವಂ ಪರಮೇಶಮೀಡ್ಯಂ" ಇತ್ಯಾದಿನಾ ಸರ್ವಜ್ಞತ್ವಂ ಸರ್ವನಿಯಾಮಕತ್ವಂ ಸರ್ವಾಧಿಷ್ಠಾನತ್ವಂ ಸರ್ವೋಪಾಸ್ಯತ್ವಂ ಚ ಮಹೇಶ್ವರಸ್ಯ ಪರಬ್ರಹ್ಮಣಃ ಶ್ರೂಯತೇ. 'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾರಭ್ಯ ಜಿಜ್ಞಾಸ್ಯಬ್ರಹ್ಮಣಃ ಸರ್ವಶಕ್ತಿಮತ್ವೇನ ಸರ್ವಕಾರಣತ್ವಾದಿಧರ್ಮಾನ್ನಿರ್ದಿಶ್ಯ, 'ಈಕ್ಷತೇರ್ನಾಶಬ್ದಂ" ಇತ್ಯಾದಿನಾ ಪ್ರಧಾನಸ್ಯ ಜಗತ್ಕಾರಣತ್ವವಾದಿಮತಂ ನಿರಸ್ಯ ಬ್ರಹ್ಮಣಃ ಶಿವಸ್ಯೈವ ಸ್ವಶಕ್ತಿಸಂಕೋಚೇನ ನಿರ್ಗುಣತ್ವಂ ಶಕ್ತಿವಿಕಾಸೇನ ಸಗುಣತ್ವಂ ಪ್ರಸಾಧಿತಂ. ಗತಿಸಾಮಾನ್ಯೋಪನ್ಯಾಸೇನ ಸಕಲನಿಷ್ಕಲಪ್ರತಿಪಾದಕಯಾವದ್ವೇದಾಂತವಾಕ್ಯಾನಿ ಪರಮಕಾರಣಪರಾಣ್ಯೇವೇತಿ ವ್ಯಾಖ್ಯಾತಂ. ತಸ್ಮಾತ್ಪರಿಶೇಷಬ್ರಹ್ಮಮೀಮಾಂಸಾಯಾಃ ಸರ್ವಾಧಿಷ್ಠಾನಸರ್ವಕಾರಣಪರಮಶಿವಸ್ಯ ಸಾವಯತ್ವನಿರವಯತ್ವೋಪಾಸನಂ ಫಲಮಿತಿ ನಿಶ್ಚೀಯತೇ. ನನು ತಮಃಪ್ರಕಾಶವದ್ವಿರುದ್ಧಸ್ವಭಾವ ಸಾವಯವತ್ವನಿರವಯವತ್ವಪ್ರತಿಪಾದನಂ ಕಥಮೇಕಸ್ಯ ಪರಶಿವಸ್ಯ ಸಂಭವತೀತಿ ಚೇನ್ನ. "ಸಚ್ಚ ತ್ಯಚ್ಚಾಭವನ್ನಿರುಕ್ತಂ ಚಾ ನಿರುಕ್ತಂ ಚ" "ಋತಂ ಸತ್ಯಂ ಪರಂಬ್ರಹ್ಮ", "ತಮಾದಿಮಧ್ಯಾಂತವಿಹೀನಮೇಕಂವಿಭುಂ ಚಿದಾನಂದಮರೂಪಮದ್ಭುತಂ" "ದ್ವಾವೇತೌ ಬ್ರಹ್ಮಣೋ ರೂಪೇ ಮೂರ್ತಂ ಚಾ ಮೂರ್ತಮೇವ ಚ" ಇತ್ಯಾದಿನಾ ಪರಬ್ರಹ್ಮಣಃ ಶಿವಸ್ಯ ಪವನವತ್ ಮೂರ್ತಾಮೂರ್ತತ್ವವ್ಯಪದೇಶಾದುಭಯಂ ಯುಕ್ತಮೇವ. ವಯಂ ಶ್ರುತಿಪ್ರಾಮಾಣ್ಯವಾದಿನಃ, ನ ಯುಕ್ತಿಂ ಬಹುಮನ್ಯಾಮಹೆ ಇತಿ

ಪೂರ್ವಾಚಾರ್ಯೋಕ್ತೇಃ । ನಾಮರೂಪವಿಭಾಗಾರ್ಹತ್ವಂ ಸತ್ತ್ವಂ, ನಾಮರೂಪವಿಭಾಗಾನರ್ಹತ್ವೇ ಸತಿ ಸದ್ಗುರುಕರುಣಾಕಟಾಕ್ಷಲಬ್ಧ ಸೂಕ್ಷ್ಮದೃಷ್ಟಿಗೋಚರತ್ವಂ ಅಸತ್ತ್ವಂ" ಇತಿ "ಅಸದ್ವಾ ಇದಮಗ್ರ ಆಸೀತ್, ತತೋ ವೈ ಸದಜಾಯತ" ಇತ್ಯಾದಿಷು ವೇದಿತವ್ಯಂ. ಸಾಮ ವೇದಪ್ರಥಮಮಂತ್ರೇ 'ತಪಶ್ಶತೆ' ಇತ್ಯುಪಕ್ರಮ್ಯ "ಕರ್ಮಾಧಿಪತಯೇ ನಮಃ" ಇತ್ಯಂತಂ ತತ್ರ 'ವಿರೂಪಾಕ್ಷೋಽಸಿ' ಇತಿ ಸ್ತುತ್ವಾ "ತ್ವಾಂ ಪ್ರಪದ್ಯೇ ತ್ವಯಾ ಸೂತಮಿದಂ ಕರಿಷ್ಯಾಮಿ ತಸ್ಯೈ ಸಮೃದ್ಧ್ಯತಾಂ ತಸ್ಮಾ ದುಪಪದ್ಯತಾಂ" ಇತ್ಯಾದಿನಾ ಸರ್ವವೈದಿಕಕರ್ಮಣಾಂ ರುದ್ರಾಜ್ಞಾವಶೇ ನೈವ ಕುರ್ಯಾದಿತ್ಯುಪದೇಶಾತ್ ವೈದಿಕಾನಾಂ ಸರ್ವಕರ್ಮಾರಂಭೇ ತದೃತ್ಕರ್ತವ್ಯಂ. ಅನ್ಯತ್ರ ಚ "ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ । ಕರ್ಮಾಧ್ಯಕ್ಷಃ ಸರ್ವಭೂತಾಧಿ ವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" "ಸ ಪರ್ಯಗಾಚ್ಛುಕ್ಲ ಮಕಾಯಮವ್ರಣಮಸ್ನಾವಿರಂ ಶುದ್ಧಮಪಾಪವಿದ್ಧಂ" ಇತಿ ಮೂರ್ತಾ ಮೂರ್ತತ್ವಂ ಕರ್ಮಾಧ್ಯಕ್ಷತ್ವಂ ಇತ್ಯಾದೀನಿ ಪರಮೇಶ್ವರಧರ್ಮಾಃ ಇತಿ ಶ್ರೂಯಂತೆ. ಕಿಂಚ, "ಸರ್ವಾನನಶಿರೋಗ್ರೀವಃ" ಸರ್ವಭೂತಗುಹಾ ಶಯಃ। ಸರ್ವವ್ಯಾಪೀ ಚ ಭಗವಾನ್ ತಸ್ಮಾತ್ಸರ್ವಗತಃ ಶಿವಃ ।। "ಸಮಸ್ತ ಸಾಕ್ಷಿಂ ತಮಸಃ ಪರಸ್ತಾತ್" ಇತ್ಯಾದಿಶ್ರುತಿಶತೇಷು ತಮಃಪರತ್ವ ಸರ್ವಸಾಕ್ಷಿತ್ವಸರ್ವಗತತ್ವಸರ್ವಾಂತರ್ಯಾಮಿತ್ವಾದಿಲಿಂಗಾನಾಂ ಪರಶಿವಾ ಸಾಧಾರಣಧರ್ಮತ್ವಾನ್ನಾನ್ಯಪರತ್ವಂ । ತಥಾ ಸ್ಮೃತಿರಪಿ, "ತಾಂತ್ರಿಕಸ್ಸ ರ್ವಕರ್ಮಾಣಿ ವಿಷ್ಣುಮುದ್ದಿಶ್ಯ ಕಾರಯೇತ್ । ವೈದಿಕಸ್ಸರ್ವಕರ್ಮಾಣಿ ಶಿವಮುದ್ದಿಶ್ಯ ಕಾರಯೇತ್" ಇತಿ. ತಸ್ಮಾದ್ಭೇದಾಭೇದವಿಧಾಯಕ ಸರ್ವವೇದಾಂತವಾಕ್ಯಾನಾಂ ಆರಾಧ್ಯಾರಾಧಕಲಕ್ಷಣೋ ವ್ಯವಹಾರಃ. ತೇಷು ಸ್ಥೂಲಾರುಂಧತೀನ್ಯಾಯೇನ ಕಾನಿಚಿದ್ವಾಕ್ಯಾನಿ ಸಾಲೋಕ್ಯ ಸಾಮೀಪ್ಯಾದಿಮುಕ್ತಿಪ್ರದರ್ಶಕಾನಿ. ಕಾನಿಚಿತ್ ಶಿವೋಪಾಸನಪರಾಣಿ. ಕಾನಿಚಿತ್ಪರಮಶಿವಸ್ಥೂಲೋಪಾಸನಾತ್ಮಕಜ್ಯೋತಿಷ್ಟೋಮಾದಿಕರ್ಮ ಪರಾಣಿ. ಕಾನಿಚಿತ್ಪರಮೇಶ್ವರಸೂಕ್ಷ್ಮಾರಾಧನಾತ್ಮಕದಹರಶಾಂಡಿಲ್ಯಾದಿ ವಿದ್ಯಾವಿಧಾಯಕಾನಿ. ತೇಷಾಮಧಿಕಾರಿಭೇದೇನ ಫಲವಿಶೇಷೋಪಾಧಿ ಭೇದೇನ ಭೇಧಃ । ಪ್ರವಾಹಸಮುದ್ರನ್ಯಾಯೇನ ಸರ್ವಾಣಿ ವೇದಾಂತವಾ ಕ್ಯಾನಿ ಋಜುಕುಟಿಲಮಾರ್ಗೇಣ ಪರಶಿವಪ್ರತಿಪಾದಕಾನ್ಯೇವ. ತಥಾಪಿ ಶಿವೋಪಾಸಕಾನಾಮೇವ ಸದ್ಯೋಮುಕ್ತಿಃ । ತದಂತರ್ಭೂತೇಂದ್ರೋ ಪೇಂದ್ರಾದ್ಯುಪಾಸಕಾನಾಂ ನಿಷ್ಕಾಮಾನಾಂ ಅನೇಕಜನ್ಮಾರ್ಜಿತಪುಣ್ಯ ಫಲತ್ವೇನ ಶಿವೋಪಾಸನದ್ವಾರಾ ಮುಕ್ತಿಃ. ತಥಾ ಶಿವಗೀತಾಯಾಂ,

"ಕೋಟಿಜನ್ಮಾರ್ಜಿತೈಃ ಪುಣ್ಯೈಃ ಶಿವೇ ಭಕ್ತಿಃ ಪ್ರಜಾಯತೇ । ತೇನೈವ ಮುಕ್ತಿಮಾಪ್ನೋತಿ ನಾನ್ಯಥಾ ಜನ್ಮಕೋಟಿಭಿಃ," ತಥಾ ಮಹಿಮ್ನೇ "ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ। ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ ॥ ರುಚೀನಾಂ ವೈಚಿತ್ರ್ಯಾದೃಜುಕುಟಿಲನಾನಾಪಥಜುಷಾಂ ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ" ಇತಿ. ಸೌರಗಾಣಾಪತ್ಯವೈಷ್ಣವಾದಿನಾನಾದೇವತೋಪಾಸಕಾನಾಂ ತತ್ತದ್ದೇವತಾಂತರ್ಯಾಮಿತ್ವೇನ ತತ್ತತ್ಫಲಾನಿ ಶಿವ ಏವ ದಾಸ್ಯತಿ. ಶೈವಪುರಾಣೇ—"ಅಹಂ ಹಿ ಸರ್ವಹವಿಷಾಂ ಭೋಕ್ತಾ ಸರ್ವಫಲಪ್ರದಃ । ಸರ್ವದೇವತನುರ್ಭೂತ್ವಾ ಸರ್ವಾತ್ಮಾ ಸರ್ವಸಂಸ್ಥಿತಃ" ಇತಿ. ತಸ್ಮಾನ್ನಿರ್ವಿಶೇಷಚಿನ್ಮಾತ್ರಬ್ರಹ್ಮವಾದಿಮತಂ ಶ್ರುತಿಸೂತ್ರವಿರುದ್ಧತ್ವಾನ್ನ ಮುಮುಕ್ಷುಗ್ರಾಹ್ಯಂ. ಜಿಜ್ಞಾಸ್ಯಬ್ರಹ್ಮಣೋ ಪಾರಮಾರ್ಥಿಕಮುಖ್ಯೇಕ್ಷಣಪೂರ್ವಕಜಗತ್ಕಾರಣತ್ವಾದಿಧರ್ಮೋಪದೇಶಾತ್, ತನ್ಮತೇ ಉಪನಿಷತ್ಪ್ರತಿಪಾದ್ಯಸರ್ವಸಾಕ್ಷಿತ್ವಮಪ್ಯಪಾರಮಾರ್ಥಿಕಂ, ತಥಾಪಿ ಚೇತನಮಿತಿ ಯದ್ ವದಂತಿ ತದಪ್ಯವಿಚಾರಿತರಮಣೀಯಂ. ಚೇತನತ್ವಂ ನಾಮ ಚೈತನ್ಯಗುಣವಿಶಿಷ್ಟತ್ವಂ, ತಸ್ಮಾದೀಕ್ಷಣಗುಣರಹಿತತ್ವೇನ ಪ್ರಧಾನವಜ್ಜಡತ್ವಮುಪಪದ್ಯತೇ.

ಈ ಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ—**ಶ್ರುತತ್ವಾಚ್ಚ** ॥೧೨॥

"ಇರುವುದು ಇಲ್ಲದ್ದು ಎಲ್ಲವೂ ಯಾವನಲ್ಲಿ ಕೂಡಿಕೊಂಡಿದೆಯೋ ಅವನಲ್ಲಿ ಎಲ್ಲಾ ಕಾಮಗಳೂ ಸೇರಿವೆ." "ಅವನೇ ಪಾಪರಹಿತನೂ, ಮುಪ್ಪು, ಮರಣ, ದುಃಖ, ಬಾಯಾರಿಕೆ, ನೀರಡಿಕೆಗಳಿಲ್ಲದವನೂ, ಸತ್ಯಕಾಮನೂ, ಸತ್ಯಸಂಕಲ್ಪನೂ ಆಗಿದ್ದಾನೆ. ಅವನನ್ನು ಹುಡುಕಬೇಕು "ಈ ಲೋಕದಲ್ಲಿ ಅವನಿಗೆ ಪತಿಯಾಗಲಿ, ಶಾಸಕನಾಗಲಿ ಇಲ್ಲ; ಯಾವ ಗುರುತೂ ಇಲ್ಲ; ಬೇರೆ ಯಾರೂ ಕಾರಣರಿಲ್ಲ; ಜನಕನಾಗಲೀ, ಅಧಿಪತಿಯಾಗಲೀ ಇಲ್ಲ" 'ಈಶ್ವರರಿಗೆ ಪರಮೇಶ್ವರನೂ, ದೇವತೆಗಳಿಗೆ ಪರಮದೇವನೂ, ಪಶುಗಳಿಗೆ ಪ್ರಥಮಪತಿಯೂ, ಸರ್ವವಂದ್ಯನೂ, ಸರ್ವನಿಯಾಮಕನೂ ಆದ ಆ ದೇವನನ್ನು ಮೊದಲು ತಿಳಿಯೋಣ." ಈ ಶ್ರುತಿಗಳಲ್ಲಿ ಮಹೇಶ್ವರನನ್ನೇ ಸರ್ವಜ್ಞನೆಂದೂ, ಸರ್ವನಿಯಾಮಕನೆಂದೂ, ಸರ್ವಾಧಿಷ್ಠಾನವೆಂದೂ, ಸರ್ವೋಪಾಸ್ಯವೆಂದೂ ತಿಳಿಸಲಾಗಿದೆ. "ಅಥಾತೋ ಬ್ರಹ್ಮಜಿಜ್ಞಾಸಾ" ಎಂದಾರಂಭಿಸಿ ಜಿಜ್ಞಾಸ್ಯಬ್ರಹ್ಮವು ಸರ್ವಶಕ್ತವಾದ್ದರಿಂದ ಅದನ್ನು ಸರ್ವಕಾರಣವೆಂದು ಹೇಳಿ, "ಈಕ್ಷತೇರ್ನಾಶಬ್ದಂ" ಎಂಬುದರಿಂದ, ಪ್ರಧಾನವು ಜಗತ್ಕಾರಣವೆಂಬ ಮತವನ್ನು ನಿರಾಕರಿಸಿರುವುದರಿಂದ, ಪರಶಿವಬ್ರಹ್ಮವೇ ತನ್ನ ಶಕ್ತಿಸಂಕೋಚದಿಂದ ನಿರ್ಗುಣನೆಂದೂ, ಶಕ್ತಿವಿಕಾಸದಿಂದ ಸಗುಣನೆಂದೂ ಹೇಳಿದಂತಾಯಿತು. ಅವನೇ ಸಕಲನೆಂದೂ ನಿಷ್ಕಲನೆಂದೂ ತಿಳಿಸುವ ಎಲ್ಲಾ ವಾಕ್ಯಗಳೂ ಗತಿಸಾಮಾನ್ಯನ್ಯಾಯದಿಂದ

ಪರಮಕಾರಣನಾದ ಪರಶಿವನನ್ನೇ ಬೋಧಿಸುತ್ತವೆ. ಆದ್ದರಿಂದ ಸರ್ವಾಧಿಷ್ಠಾನನೂ ಸರ್ವಕಾರಣನೂ ಆದ ಪರಶಿವನ ಸಾಕಾರ ಮತ್ತು ನಿರಾಕಾರದ ಉಪಾಸನೆಗಳೇ ಬ್ರಹ್ಮಮೀಮಾಂಸಾಶಾಸ್ತ್ರದ ಮುಖ್ಯ ಗುರಿಯೆಂದು ನಿರ್ಣಯಿಸಲಾಗಿದೆ. ಕತ್ತಲೆ ಬೆಳಕುಗಳಂತೆ ಪರಸ್ಪರ ವಿರುದ್ಧವಾದ್ದರಿಂದ ಸಾವಯವತ್ವ-ನಿರವಯವತ್ವ ಇವೆರಡೂ ಪರಶಿವಬ್ರಹ್ಮದಲ್ಲಿ ಹೇಗೆ ಹೊಂದುತ್ತವೆ ಎಂದರೆ 'ಅವನೇ ಅದು ಇದು ಎಲ್ಲವೂ ಆಗಿದ್ದಾನೆ, ಆಧಾರವೂ, ನಿರಾಧಾರವೂ ಅವನೇ ಆಗಿದ್ದಾನೆ. ಸ್ಪಷ್ಟವಾದ್ದೂ ಅಸ್ಪಷ್ಟವಾದ್ದೂ ತಿಳಿದದ್ದೂ ತಿಳಿಯದದ್ದೂ-ಸತ್ಯವೂ ಅನೃತವೂ ಅವನೇ ಆಗಿದ್ದಾನೆ." ಋತಂ ಸತ್ಯಂ," "ಆದಿ ಮಧ್ಯ ಅಂತ್ಯಗಳಿಲ್ಲದೆ ಚಿದಾನಂದನೂ ಸರ್ವವ್ಯಾಪಕನೂ ಅರೂಪನೂ ಅದ್ಭುತನೂ, ಉಮಾಸಹಾಯನೂ ತ್ರಿಲೋಚನನೂ ನೀಲಕಂಠನೂ ಪ್ರಶಾಂತನೂ ಆದ ಪರಮೇಶ್ವರನನ್ನು ಧ್ಯಾನಿಸಬೇಕು" "ಬ್ರಹ್ಮದಲ್ಲಿ ಮೂರ್ತ-ಅಮೂರ್ತವೆಂಬ ಎರಡು ರೂಪಗಳಿವೆ." ಹೀಗೆ ಶ್ರುತಿಗಳಲ್ಲಿ ಪರಶಿವನಿಗೆ ವಾಯುವಿನಂತೆ ಮೂರ್ತ ಅಮೂರ್ತರೂಪಗಳೆರಡನ್ನೂ ಹೇಳಿರುವುದರಿಂದ ಎರಡೂ ಯುಕ್ತವಾಗಿವೆ. ನಾವು ಶ್ರುತಿಗೆ ಪ್ರಾಮುಖ್ಯತೆಯನ್ನು ಕೊಡುವವರಾದ್ದರಿಂದ ಯುಕ್ತಿಯನ್ನು ಹೆಚ್ಚಾಗಿ ಗೌರವಿಸುವುದಿಲ್ಲವೆಂದು ಪೂರ್ವಾಚಾರ್ಯರು ಹೇಳಿದ್ದಾರೆ. ನಾಮರೂಪಗಳ ವಿಭಾಗವುಳ್ಳದ್ದು ಸತ್ ಎನಿಸುತ್ತದೆ, ಹಾಗೆ ವಿಭಾಗವಿಲ್ಲದೆ ಇದ್ದು, ಸದ್ಗುರುವಿನ ಕರುಣಾಕಟಾಕ್ಷದಿಂದ ಪಡೆದ ಸೂಕ್ಷ್ಮದೃಷ್ಟಿಗೇ ಮಾತ್ರವೇ ಗೋಚರವಾಗುವ ಸ್ಥಿತಿ ಅಸತ್ ಎನಿಸುತ್ತದೆ. ಶ್ರುತಿಯಲ್ಲಿ ಬರುವ ಅಸತ್, ಸತ್ ಎಂಬ ಪದಗಳಿಗೆ ಹೀಗೆ ಅರ್ಥ ಮಾಡಬೇಕು. ಸಾಮವೇದದ ಮೊದಲನೆಯ ಮಂತ್ರದಲ್ಲಿ 'ತಪಶ್ಚ ತೇ' ಎಂದು ಆರಂಭಿಸಿ 'ಕರ್ಮಾಧಿಪತಯೇ ನಮಃ' ಎಂದು ಕೊನೆಯಾಗಿರುವುದರಿಂದ ಅಲ್ಲಿ 'ನೀನೇ ವಿರೂಪಾಕ್ಷನು' ಎಂದು ಸ್ತೋತ್ರಮಾಡಿ 'ನಿನಗೆ ಶರಣಾಗುತ್ತೇನೆ. ನಿನ್ನಿಂದ ಹೊರಬಂದು ನಾನು ಇದನ್ನು ಮಾಡುವೆನು. ಇದು ಸಮೃದ್ಧವಾಗಲಿ ಯುಕ್ತವೆನಿಸಲಿ' ಎಂದು ಹೇಳಿದೆ. ಹೀಗೆ ವೈದಿಕಕರ್ಮಗಳೆಲ್ಲವನ್ನೂ ರುದ್ರನ ಆಜ್ಞೆಯಂತೆ ನಡೆಸಬೇಕೆಂದು ಹೇಳಿರುವುದರಿಂದ ವೈದಿಕರೆಲ್ಲರೂ ಹೀಗೆಯೇ ನಡೆಸಬೇಕು. ಬೇರೆಕಡೆಯಲ್ಲೂ 'ಒಬ್ಬ ದೇವನೇ ಎಲ್ಲಾ ಪ್ರಾಣಿಗಳಲ್ಲೂ ಗೂಢನಾಗಿ ವ್ಯಾಪಿಸಿ, ಎಲ್ಲರಲ್ಲೂ ಅಂತರಾತ್ಮನಾಗಿ ಕರ್ಮಗಳಿಗಧ್ಯಕ್ಷನಾಗಿ ಎಲ್ಲರೊಡನೆ ವಾಸ ಮಾಡುತ್ತ ಎಲ್ಲಕ್ಕೂ ಸಾಕ್ಷಿಯೂ ಕೇವಲನೂ ನಿರ್ಗುಣನೂ ಆದ ಚೈತನ್ಯನಾಗಿದ್ದಾನೆ' "ಅವನೇ ಶುಕ್ಲವರ್ಣದವನು, ದೇಹವಿಲ್ಲದವನು-ಗಾಯಗಳಿಲ್ಲದವನು, ಶರೀರವಿಕಾರವಿಲ್ಲದವನು, ಶುದ್ಧನು ಮತ್ತು ಪಾಪದ ಸ್ಪರ್ಶವಿಲ್ಲದವನೂ ಆಗಿ ಎಲ್ಲವನ್ನೂ ಆವರಿಸಿದ್ದಾನೆ" ಹೀಗೆ ಶ್ರುತಿಯೂ ಪರಶಿವನನ್ನು ಮೂರ್ತಾಮೂರ್ತನೆಂದೂ, ಕರ್ಮಾಧ್ಯಕ್ಷನೆಂದೂ ಅವನ ಅಸಾಧಾರಣ ಧರ್ಮಗಳನ್ನು ತಿಳಿಸುತ್ತಿದೆ. ಇದಲ್ಲದೆ, ಅವನು ಎಲ್ಲರ ತಲೆ ಮುಖ ಕುತ್ತಿಗೆ ಹೃದಯಗಳಲ್ಲೂ ಇರುತ್ತ ಸರ್ವವ್ಯಾಪಿಯೂ ಸರ್ವಗತನೂ ಆಗಿದ್ದಾನೆ. "ಎಲ್ಲಕ್ಕೂ ಸಾಕ್ಷಿಯೂ, ಕತ್ತಲೆಯಿಂದಾಚೆಗೂ ಇರುವ

ವನು." ಈ ಬಗೆಯ ಶ್ರುತಿಗಳಲ್ಲಿ ಪರಶಿವನೇ ತಮಸ್ಸಿನಿಂದಾಚೆಗೆ ಇರುವವನು, ಸಾಕ್ಷಿ, ಸರ್ವಗತ, ಸರ್ವಾಂತರ್ಯಾಮಿ ಎಂದು ಹೇಳಿರುವುದರಿಂದ ಇವೆಲ್ಲವೂ ಅವನಲ್ಲಿ ಅಸಾಧಾರಣಧರ್ಮಗಳೆನಿಸಿವೆ. ಇವು ಬೇರೆಯಾರಿಗೂ ಅನ್ವಯಿಸುವುದಿಲ್ಲ. ಸ್ಮೃತಿಯೂ ಸಹ "ತಾಂತ್ರಿಕನು ವಿಷ್ಣುವನ್ನು ಉದ್ದೇಶಿಸಿ ಎಲ್ಲಾ ಕರ್ಮಗಳನ್ನೂ ಮಾಡಬೇಕು. ವೈದಿಕನು ಶಿವನನ್ನು ಉದ್ದೇಶಿಸಿ ಎಲ್ಲವನ್ನೂ ಮಾಡಬೇಕು" ಎಂದು ಹೇಳಿದೆ. ಆದ್ದರಿಂದ ಜೀವಬ್ರಹ್ಮರಿಗೆ ಭೇದಾಭೇದವನ್ನು ತಿಳಿಸುವ ಎಲ್ಲಾ ವಾಕ್ಯಗಳೂ ಪೂಜ್ಯಪೂಜಕಭಾವದಿಂದ ಭೇದವನ್ನು ಹೇಳಿವೆ. ಅವುಗಳಲ್ಲಿ ಕೆಲವು ಸಾಲೋಕ್ಯವೇ ಮೊದಲಾದ ಮುಕ್ತಿಯನ್ನು ತಿಳಿಸುತ್ತವೆ. ಕೆಲವು ಉಪಾಸನಕ್ರಮವನ್ನು ಬೋಧಿಸುತ್ತವೆ. ಕೆಲವು ಪರಶಿವನ ಸ್ಥೂಲೋಪಾಸನರೂಪವಾದ ಅಗ್ನಿಷ್ಟೋಮವೇ ಮೊದಲಾದ ಕರ್ಮಗಳನ್ನು ತಿಳಿಸುತ್ತವೆ. ಕೆಲವು ಪರಶಿವನ ಸೂಕ್ಷ್ಮಾರಾಧನವನ್ನು ತಿಳಿಸುವ ದಹರಾದಿವಿದ್ಯೆಗಳನ್ನು ಬೋಧಿಸುತ್ತವೆ. ಹೀಗೆ ಅಧಿಕಾರಿಭೇದದಿಂದಲೂ ಫಲಭೇದದಿಂದಲೂ ವಾಕ್ಯಗಳು ಭಿನ್ನವಾಗಿವೆ. ಎಲ್ಲಾ ಪ್ರವಾಹಗಳೂ ಸಮುದ್ರವನ್ನು ಸೇರುವಂತೆ ಎಲ್ಲಾ ವೇದಾಂತವಾಕ್ಯಗಳೂ ನೇರವಾದ ಅಥವಾ ಸುತ್ತಿನ ಮಾರ್ಗಗಳಿಂದ ಪರಶಿವನಲ್ಲಿಯೇ ಸಮನ್ವಯವಾಗುತ್ತವೆ. ಆದರೂ ಪರಮಶಿವನನ್ನು ಉಪಾಸನಮಾಡುವವರಿಗೆ ಮುಕ್ತಿ ಬೇಗನೆ ದೊರಕುತ್ತದೆ. ಅವನ ಅಂಶರಾದ ಇಂದ್ರ ವಿಷ್ಣು ಕಾಲರುದ್ರ ಮೊದಲಾದವರನ್ನು ಉಪಾಸನಮಾಡುವ ನಿಷ್ಕಾಮಭಕ್ತರೂ ಅನೇಕಜನ್ಮಗಳಲ್ಲಿ ಗಳಿಸಿದ ಪುಣ್ಯದಿಂದ ಶಿವನ ಉಪಾಸನೆಯ ಮೂಲಕವೇ ಮುಕ್ತಿಯನ್ನು ಪಡೆಯುತ್ತಾರೆ. ಶಿವಗೀತೆಯಲ್ಲಿ "ಕೋಟಿಜನ್ಮಗಳಲ್ಲಿ ಪಡೆದ ಪುಣ್ಯದಿಂದ ಶಿವನಲ್ಲಿ ಭಕ್ತಿ ಹುಟ್ಟುತ್ತದೆ. ಅದರಿಂದಲೇ ಸಾಧಕನು ಮುಕ್ತಿಯನ್ನು ಪಡೆಯುತ್ತಾನೆ. ಬೇರೆ ಮಾರ್ಗದಿಂದ ಕೋಟಿಜನ್ಮಗಳಲ್ಲೂ ಮುಕ್ತಿಯು ದೊರಕಲಾರದು" ಎಂದು ಹೇಳಿದೆ. ಮಹಿಮ್ನಸ್ತವದಲ್ಲಿ "ವೇದ, ಸಾಂಖ್ಯ, ಯೋಗ ಪಾಶುಪತ, ಪಾಂಚರಾತ್ರ ಎಂದು ಅನೇಕ ಪ್ರಸ್ಥಾನಗಳು ಹೊರಟಿವೆ. ಇವುಗಳಲ್ಲಿ ಒಂದಕ್ಕಿಂತ ಒಂದು ಶ್ರೇಷ್ಠವೆಂದೂ, ಹಿತವೆಂದೂ ಅಭಿಪ್ರಾಯಗಳ ವೈವಿಧ್ಯದಿಂದ ನೇರವಾದ ಮತ್ತು ಸುತ್ತುವರಿದ ಅನೇಕ ಮಾರ್ಗಗಳಲ್ಲಿ ಜನರು ಸಂಚರಿಸುತ್ತಿರುವರು. ಇವರೆಲ್ಲರಿಗೂ ಶಿವನೊಬ್ಬನೇ ನೀರಿಗೆ ಸಮುದ್ರದಂತೆ ಗಮ್ಯಸ್ಥಾನವಾಗಿರುವನು" ಎಂದು ಹೇಳಿದೆ. ಸೂರ್ಯ ಗಣಪತಿ ವಿಷ್ಣು ಮೊದಲಾದ ದೇವತೆಗಳನ್ನು ಉಪಾಸನ ಮಾಡುವವರಿಗೆ ಆ ದೇವತೆಗಳಲ್ಲಿ ಅಂತರ್ಯಾಮಿಯಾಗಿ ಶಿವನೇ ಆಯಾ ಫಲಗಳನ್ನು ಕೊಡುತ್ತಾನೆ. ಶೈವಪುರಾಣದಲ್ಲಿ 'ನಾನೇ ಎಲ್ಲಾ ಹವಿಸ್ಸನ್ನು ಭೋಗಿಸಿ ಎಲ್ಲರಿಗೂ ಫಲಗಳನ್ನು ಕೊಡುತ್ತೇನೆ. ಎಲ್ಲ ದೇವತೆಗಳೂ ನನಗೆ ದೇಹವಾಗಿದ್ದಾರೆ, ಅವರೆಲ್ಲರಲ್ಲೂ ನಾನು ಅಂತರ್ಯಾಮಿಯಾಮಿಯಾಗಿ ನೆಲಸಿದ್ದೇನೆ' ಎಂದು ಹೇಳಿದೆ. ಆದ್ದರಿಂದ ನಿರ್ವಿಶೇಷ ಚೈತನ್ಯವೇ ಬ್ರಹ್ಮವೆಂದು ವಾದಿಸುವ ಮತವು ಶ್ರುತಿಸೂತ್ರಗಳಿಗೆ ವಿರುದ್ಧವಾದ್ದರಿಂದ ಮುಮುಕ್ಷುಗಳಿಗೆ ಗ್ರಾಹ್ಯವಲ್ಲ. ಜಿಜ್ಞಾಸ್ಯಬ್ರಹ್ಮವೇ

ಪಾರಮಾರ್ಥಿಕವೆಂದೂ, ಕೇವಲ ಈಕ್ಷಣದಿಂದಲೇ ಜಗತ್ತಿಗೆ ಕಾರಣವಾಗಿರುವುದೆಂದೂ ಶ್ರುತಿಯಲ್ಲಿ ಹೇಳಿರುವುದರಿಂದ, ಪರಬ್ರಹ್ಮವು ಸರ್ವಸಾಕ್ಷಿಯೆಂದು ಶ್ರುತಿಯಲ್ಲಿ ಹೇಳಿದ್ದರೂ ಪಾರಮಾರ್ಥಿಕವಲ್ಲವೆಂದೂ, ಆದರೂ ಅದು ಚೇತನವೆಂದೂ ಅದ್ವೈತಮತದಲ್ಲಿ ಹೇಳಿರುವುದು ಅವಿಚಾರಿತರಮಣೀಯವಾಗಿದೆ. ಚೈತನ್ಯಗುಣವುಳ್ಳದ್ದೇ ಚೇತನವೆನಿಸುತ್ತದೆ. ಚೈತನ್ಯದ ಗುಣವೆಂದರೆ ಈಕ್ಷಣಪೂರ್ವಕವಾದ ಚಟುವಟಿಕೆ. ಇದಿಲ್ಲದಮೇಲೆ ಆ ಚೇತನವನ್ನು ಪ್ರಧಾನದಂತೆ ಜಡವೆಂದೇ ಭಾವಿಸಬೇಕಾಗುತ್ತದೆ.

**ಕಿಂಚ ನಿರ್ವಿಶೇಷಪ್ರಕಾಶಮಾತ್ರಬ್ರಹ್ಮವಾದಕಸ್ಯ ಪ್ರಕಾಶತ್ವಂ ಚ ನ ಸಂಭವತಿ. ಪ್ರಕಾಶಸ್ತು ಸ್ವಪರವ್ಯವಹಾರಾನುಕೂಲತಾಸಂಪಾದಕಪದಾರ್ಥವಿಶೇಷಃ. ನಿರ್ವಿಶೇಷಸ್ಯ ವಸ್ತುನಃ ಸ್ವಪರಪ್ರಕಾಶಕತ್ವಾಸಂಭವಾದ್ಘಟಾದಿವಜ್ಜಡತ್ವಮೇವ. ತದುಭಯತ್ವಾಭಾವೇಽಪಿ ತಸ್ಯ ಪ್ರಕಾಶತ್ವಮಸ್ತೀತಿ ಚೇನ್ನ, ತತ್ಪ್ರಕಾಶತ್ವಂ ಹಿ ತತ್ಸಾಮರ್ಥ್ಯಮೇವ. ಸಾಮರ್ಥ್ಯವತೋಽಪಿ ಸಗುಣತ್ವೇನ ನಿರ್ವಿಶೇಷವಾದಭಂಗಪ್ರಸಂಗಃ. ವೇದಪ್ರಾಮಾಣ್ಯಾದ್ಯಃ ಕಶ್ಚನ ಗುಣೋಽಂಗೀಕ್ರಿಯತ ಇತಿ ಚೇತ್, ತರ್ಹಿ ಸರ್ವಜ್ಞತ್ವಸರ್ವಶಕ್ತಿಮತ್ತ್ವಸರ್ವೇಶ್ವರತ್ವಸತ್ಯಸಂಕಲ್ಪಾದಿಧರ್ಮಾಣಾಮಪಿ ಶ್ರುತಿವಿಹಿತತ್ವೇನ ಸರ್ವೇಽಪ್ಯಂಗೀಕರ್ತವ್ಯಾಃ. ಕಾರಣತ್ವಂ ಹಿ ಕಾರ್ಯವಿಶೇಷಶಕ್ತಿವಿಶಿಷ್ಟತ್ವಂ. ತಚ್ಚ ಕಾರ್ಯೈಕನಿರೂಪಿಣೀಯಂ. ಕಾರ್ಯವಿಶೇಷಸ್ಯ ಪ್ರಪಂಚಸ್ಯ ಮಿಥ್ಯಾತ್ವೇ ಕಾರಣತ್ವಮಪಿ ನಿಷ್ಪ್ರಮಾಣಮೇವ. ಕಿಂಚ ಪ್ರತ್ಯಕ್ಷಾನುಮಾನೋಪಮಾನಶಬ್ದಾನುಭವಾನಾಂ ಸವಿಶೇಷಗೋಚರತ್ವೇನ ನಿರ್ವಿಶೇಷವಸ್ತುವಾದಿನೋ ವಸ್ತುತ್ವಮಪಿ ನಿಷ್ಪ್ರಮಾಣಂ. ತಸ್ಮಾಜ್ಜಗದುಭಯಕಾರಣಮಹೇಶ್ವರ ಏವ ಜಿಜ್ಞಾಸ್ಯಬ್ರಹ್ಮೇತಿ ಸಿದ್ಧಂ ||**

ನಿರ್ವಿಶೇಷವಾದ ಪ್ರಕಾಶವೇ ಬ್ರಹ್ಮವೆಂದು ಹೇಳುವುದಾದರೂ, ಬ್ರಹ್ಮ ಪ್ರಕಾಶರೂಪವೆಂದು ಹೇಳಲಿಕ್ಕೆ ಬರುವಂತಿಲ್ಲ. ಸ್ವಪರ ಎಂಬ ವ್ಯವಹಾರಕ್ಕೆ ಅನುಕೂಲವಾಗುವ ಪದಾರ್ಥವೇ ಪ್ರಕಾಶವೆನಿಸುತ್ತದೆ. ನಿರ್ವಿಶೇಷ ವಸ್ತುವಿನಲ್ಲಿ ಸ್ವಪರವಿಭಾಗವಿಲ್ಲದ್ದರಿಂದ ಬ್ರಹ್ಮ ಪ್ರಕಾಶರೂಪವಾಗದೆ ಜಡವಾಗಿಯೇ ಉಳಿಯಬೇಕಾಗುವುದು. ಸ್ವಪರವಿಭಾಗವಿಲ್ಲದಿದ್ದರೂ, ಬ್ರಹ್ಮ ಪ್ರಕಾಶರೂಪವಾಗುತ್ತದೆ ಎಂದು ಹೇಳುವುದೂ ಸರಿಯಲ್ಲ; ಯಾಕೆಂದರೆ ಈರೀತಿಯಲ್ಲಿರುವುದು ಅದರ ಒಂದು ಸಾಮರ್ಥ್ಯವೇ ಆಗುವುದರಿಂದ ಕೊನೆಗೆ ಬ್ರಹ್ಮದಲ್ಲಿ ಅಂತಹದೊಂದು ಸಾಮರ್ಥ್ಯವಿಶೇಷವನ್ನಾದರೂ ಒಪ್ಪಲೇಬೇಕಾಗುತ್ತದೆ. ವೇದಪ್ರಾಮಾಣ್ಯದಿಂದ ಇದೊಂದು ವಿಶೇಷವನ್ನು ಒಪ್ಪುವುದಾದರೆ, ಇದರಂತೆ ಸರ್ವಜ್ಞತ್ವ, ಸರ್ವಶಕ್ತಿಮತ್ತ್ವ, ಸರ್ವೇಶ್ವರತ್ವ, ಸತ್ಯಸಂಕಲ್ಪ ಇವೇ ಮೊದಲಾದ ಧರ್ಮಗಳೆಲ್ಲವೂ ಶ್ರುತಿಯಲ್ಲಿಯೇ ವಿಹಿತ

ವಾಗಿರುವುದರಿಂದ ಅವೆಲ್ಲವನ್ನೂ ಅಂಗೀಕರಿಸಲೇಬೇಕು. ಕಾರ್ಯವನ್ನು ಹುಟ್ಟಿಸಲು ಅನುಕೂಲವಾದ ಶಕ್ತಿಯನ್ನು ಪಡೆದಿರುವುದೇ ಕಾರಣವೆನಿಸುತ್ತದೆ. ಜಗತ್ತೇ ಇಲ್ಲ ದಿದ್ದರೆ ಜಗತ್ತೆಂಬ ಕಾರ್ಯಕ್ಕೆ ಬ್ರಹ್ಮ ಕಾರಣವಾಗುವುದು ಸಾಧ್ಯವಿಲ್ಲದ್ದರಿಂದ, ಬ್ರಹ್ಮವನ್ನು ಜಗತ್ತಿನ ಕಾರಣವೆಂದು ಹೇಳುವುದು ಪ್ರಮಾಣವಿರುದ್ಧವಾಗುವುದು. ಇದೂ ಅಲ್ಲದೆ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದಪ್ರಮಾಣಗಳೂ, ಅನು ಭವವೂ ಸವಿಶೇಷವಸ್ತುವನ್ನೇ ಅವಲಂಬಿಸಿರುವುವಾದ್ದರಿಂದ, ನಿರ್ವಿಶೇಷವಸ್ತುವಿಗೆ ಪ್ರಮಾಣವೇ ಇಲ್ಲವಾಗುತ್ತದೆ. ಆದ್ದರಿಂದ ಜಗತ್ತಿನ ಉಪಾದಾನವೂ ನಿಮಿತ್ತವೂ ಆಗಿರುವ ಸವಿಶೇಷಬ್ರಹ್ಮವೇ ಜಿಜ್ಞಾಸ್ಯವೆಂದು ಸಿದ್ಧವಾಯಿತು.

## ಆನಂದಮಯಾಧಿಕರಣ || ೬ ||

ಅವಾಂತರಸೃಷ್ಟಿಕರ್ತೃಬ್ರಹ್ಮಾದೀನಾಂ ಜಗಜ್ಜನ್ಮಾದಿಹೇತುತ್ವಂ ಮಾಸ್ತು, ಸಮಷ್ಟಿಸ್ಥೂಲಸೂಕ್ಷ್ಮಕಾರಣಶರೀರಾವಚ್ಛಿನ್ನವಿರಾಡ್ಢಿರಣ್ಯ ಗರ್ಭವ್ಯಾಕೃತಾನಾಂ ಜಗಜ್ಜನ್ಮಾದಿಹೇತುತ್ವಂ ಭವೇದಿತ್ಯಾಶಂಕಾಯಾಂ ಅಧಿಕರಣಾಂತರೇಣ ನಿರಾಕರೋತಿ.

## ಆನಂದಮಯೋಽಭ್ಯಾಸ್ಯಾತ್ || ೧೩ ||

'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ' ಇತ್ಯಾರಭ್ಯ 'ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾದನ್ಯೋಽಂತರ ಆತ್ಮಾನಂದ ಮಯಃ' ಇತಿ ತೈತ್ತಿರೀಯೇ ಶ್ರೂಯತೇಽಸ್ಯ ವಿಷಯಃ. ಅತ್ರ ಆನಂದ ಮಯಶಬ್ದೇನ ಶಾರೀರಃ ಪರಶಿವೋ ವೇತಿ ಸಂದಿಹ್ಯತೆ, ತದುಭಯ ಧರ್ಮಬಾಹುಳ್ಯದ್ಯೋತನಾತ್. 'ಅಧೀಹಿ ಭಗವೋ ಬ್ರಹ್ಮೇತಿ' ಭೃಗೋರೇವಾತ್ರ ಬ್ರಹ್ಮಜ್ಞಾನಾಯ ಪ್ರಶ್ನಪತಿವಚನನಿರೂಪಣಾತ್. 'ಯತೋ ವಾ ಇಮಾನಿ' ಇತ್ಯಾರಭ್ಯ "ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ" ಜಗಜ್ಜನ್ಮಾದಿಕಾರಣತ್ವಂ ಬ್ರಹ್ಮಲಕ್ಷಣತಯಾತ್ರೋಪದಿಷ್ಟತ್ವಾತ್, "ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ । ಸ ವಾ ಏಷ ಪುರುಷೋಽನ್ನರಸಮಯಃ" ಇತ್ಯಾದಿನಾ ಸಾವಯವ ತ್ವೋಪದೇಶಾತ್. ಅನ್ನಮಯಾದಿಪಂಚಕೋಶಾಂತರ್ವರ್ತಿತ್ವೇನ ಪಂಚಕೋಶಮಯತ್ವಂ ಜೀವಸ್ಯೈವ ಸಮುಚಿತತ್ವಾಚ್ಚ. ಪೂರ್ವಪ ಕ್ಷಸ್ತು, ಅತ್ರಾನಂದಮಯಃ ಶಾರೀರ ಏವ. "ಅಸ್ಯೈಷ ಏವ ಶಾರೀರ ಆತ್ಮಾ" ಇತ್ಯಾನಂದಮಯಸ್ಯ ಶಾರೀರತ್ವದ್ಯೋತನಾತ್, ಆನಂದಮ ಯಸ್ಯಾಪ್ಯನ್ನಮಯಾದ್ಯಮುಖ್ಯಾತ್ಮಪ್ರಕರಣಪಠಿತತ್ವಾತ್, ಅನ್ನಮ ಯಪ್ರಾಣಮಯಮನೋಮಯವಿಜ್ಞಾನಮಯಾನಂದಮಯಾ ಮೇ ಶುದ್ಧ್ಯಂತಾಮಿತಿ ಶುದ್ಧಿಪ್ರಾರ್ಥನಾದರ್ಶನಾಚ್ಚ, ಉತ ಮಯಟ್ಪ್ರತ್ಯ

ಯಸ್ಯ ವಿಕಾರಾರ್ಥಕತ್ವಾತ್ತ್ಯಾಗಭೋಗಯೋಗಾಂಗಾವಚ್ಛಿನ್ನಮಾಯಾಪಾಶಬದ್ಧಶರೀರಸ್ಯ ಸಂಸಾರಿಣೋ ನಿರತಿಶಯಾನಾಂದಾಸಂಭವಾತ್, 'ಆನಂದೋ ಬ್ರಹ್ಮ' ಇತಿ ಶ್ರುತೌ ಪರಮೇಶ್ವರಸ್ಯ ಆನಂದಶ್ರವಣಾತ್, ಆನಂದಮಯಃ ತತ್ಕಾರ್ಯಭೂತಶ್ಶಾರೀರ ಏವ ಆನಂದಮಯ ಇತಿ ವ್ಯಾಚಕ್ಷ್ಯತೆ. "ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ" ಇತಿ ಶ್ರುತೌ ಪ್ರಿಯಾಪ್ರಿಯವಿಲಕ್ಷಣತ್ವಂ ಅಶರೀರತ್ವಂ ಚ ಪರಶಿವಬ್ರಹ್ಮಣೋ ವ್ಯಪದೇಶಾತ್ ತಸ್ಯಾನಂದಮಯತ್ವಂ ನ ಸಂಭವತಿ. ನನು ಜಗತ್ಕಾರಣಸ್ಯ ಪರಶಿವಸ್ಯೈವ ಸುಲಭಪ್ರತಿಪತ್ತ್ಯರ್ಥಂ 'ಅನ್ನಂ ಬ್ರಹ್ಮ' ಇತ್ಯುಪಕ್ರಮ್ಯ 'ಆನಂದೋ ಬ್ರಹ್ಮ' ಇತ್ಯಂತೇನ ಆನಂದಮಯತ್ವಂ ವಿಶ್ವಕಾರಣತ್ವಂ ಚೋಪದಿಶ್ಯತೆ. ತಸ್ಮಾನ್ನ ಜೀವಪ್ರಕರಣಮೇತದಿತಿ ಚೇನ್ನ, ಜೀವವ್ಯತಿರಿಕ್ತೇಶ್ವರಸ್ಯಾಪ್ರಾಮಾಣ್ಯಾತ್. 'ಅನೇನ ಜೀವೇನಾತ್ಮನಾನುಪ್ರವಿಶ್ಯ' 'ತತ್ತ್ವಮಸಿ' ಇತ್ಯಾದಿನಾ ಜೀವಬ್ರಹ್ಮಣೋಃ ಸೋಽಯಂದೇವದತ್ತವದಭೇದನಿರ್ದೇಶಾತ್ಸ ಈಕ್ಷತೇತಿ ಶ್ರುತಿನಿರ್ದಿಷ್ಟೇಕ್ಷಣಪೂರ್ವಕಜಗತ್ಕಾರಣತ್ವಂ ಚೇತನಜೀವಸ್ಯ ಸಮುಚಿತಮೇವ. 'ಸತ್ಯಂ ಜ್ಞಾನಂ' ಇತಿ ಅಚಿದ್ವ್ಯತಿರಿಕ್ತಸ್ವರೂಪಲಕ್ಷಣಮುಚ್ಯತೆ. ತಸ್ಮಾತ್ 'ಬ್ರಹ್ಮವಿದಾಪ್ನೋತಿ ಪರಂ' ಇತಿ ಶ್ರುತೌ ಜೀವಸ್ಯ ಸ್ವಸ್ವರೂಪಜ್ಞಾನಮೇವ ಮೋಕ್ಷ ಇತ್ಯುಪಪದ್ಯತೆ. ಉತ ಶಾಖಾಚಂದ್ರನ್ಯಾಯೇನಾತ್ಮಸ್ವರೂಪನಿರ್ದೇಶಾರ್ಥಂ "ಅನ್ನಮಯಃಪುರುಷಃ" ಇತಿ ಸ್ಥೂಲಶರೀರಂ ನಿರ್ದಿಶ್ಯ "ಅನ್ಯೋಽಂತರ ಆತ್ಮಾ.......ವಿಜ್ಞಾನಮಯಃ" ಇತಿ ಸ್ಥೂಲಶರೀರಾಧಾರಪ್ರಾಣಕೋಶಂ ತದಂತರ್ಭೂತತ್ವೇನ ನಿರ್ದಿಶ್ಯ, ತಸ್ಮಾಂತರ್ಭೂತಂ ಮನಸ್ತದಂತರ್ಗತಂ ವಿಜ್ಞಾನಂ ಬುದ್ಧಿಂ ನಿಶ್ರೇಣಿನ್ಯಾಯೇನ ನಿರೂಪ್ಯ, ಸರ್ವಾಂತರ್ಭೂತಜೀವಾತ್ಮಾನಂ 'ಅನ್ಯೋಽಂತರ ಆತ್ಮಾನಂದಮಯಃ' ಇತಿ ತಸ್ಯೈವೋಪಸಂಹಾರದರ್ಶನಾತ್, 'ಬ್ರಹ್ಮವಿದಾಪ್ನೋತಿ ಪರಂ' ಇತ್ಯುಪಕ್ರಾಂತಂ ಬ್ರಹ್ಮ ಜೀವ ಏವ, ತತ್ಸ್ವರೂಪಜ್ಞಾನಮೇವ ಮುಕ್ತಿಸ್ಸ ಏವಾನಂದಮಯ ಇತ್ಯುಪದಿಷ್ಟಃ.

## ಆನಂದಮಯಾಧಿಕರಣ ॥ ೬ ॥

ಅವಾಂತರಸೃಷ್ಟಿಯನ್ನು ನಡೆಸುವ ಚತುರ್ಮುಖಬ್ರಹ್ಮನು ಜಗತ್ಕಾರಣನಾಗದಿದ್ದರೆ ಹೋಗಲಿ; ಆದರೆ ಜೀವಸಮಷ್ಟಿ ಎನಿಸಿ, ಸ್ಥೂಲಸೂಕ್ಷ್ಮಕಾರಣಶರೀರದೊಡಗೂಡಿದ ವಿರಾಡ್ರೂಪನಾದ ಹಿರಣ್ಯಗರ್ಭನು ಜಗಜ್ಜನ್ಮಾದಿಗಳಿಗೆ ಕಾರಣನಾಗಬಹುದಲ್ಲವೆ? ಎಂದಾಶಂಕಿಸಿ ನಿರಾಕರಿಸಲಾಗುವುದು.

## ಆನಂದಮಯೋಽಭ್ಯಾಸಾತ್ ॥ ೧೩ ॥

'ಆ ಈ ಆತ್ಮನಿಂದ ಆಕಾಶ ಹುಟ್ಟಿತು' ಎಂದಾರಂಭಿಸಿ "ಆ ಈ ವಿಜ್ಞಾನಮಯಕ್ಕಿಂತಲೂ ಬೇರೆಯಾಗಿ ಆನಂದಮಯನಾದ ಆತ್ಮನಿದ್ದಾನೆ" ಎಂಬ ತೈತ್ತಿರೀಯ ವಾಕ್ಯವೇ ಈ ಅಧಿಕರಣದ ವಿಷಯವಾಗಿದೆ. ಇಲ್ಲಿ 'ಆನಂದಮಯ' ಎಂಬ ಪದವು ಜೀವನಿಗೆ ಅನ್ವಯಿಸುತ್ತದೆಯೋ ಅಥವಾ ಪರಶಿವನಿಗೋ ಎಂಬ ಸಂಶಯ ಬರುತ್ತದೆ. ಇಬ್ಬರಿಗೂ ಅನ್ವಯಿಸುವ ಧರ್ಮಗಳು ಶ್ರುತಿಯಲ್ಲಿ ಕಂಡುಬರುವುದರಿಂದ ಇಲ್ಲಿ ಸಂಶಯಕ್ಕವಕಾಶವಿದೆ. ಇಲ್ಲಿ ಪೂರ್ವಪಕ್ಷ ಹೀಗೆ ಬರುತ್ತದೆ. ಆನಂದಮಯವೆಂಬ ಪದವು ಜೀವನಿಗೇ ಅನ್ವಯಿಸುತ್ತದೆ. ಶ್ರುತಿಯಲ್ಲಿ 'ಶಾರೀರ ಆತ್ಮಾ' ಎಂದು ಆನಂದಮಯನಿಗೆ ಶರೀರದ ಸಂಬಂಧವನ್ನು ಹೇಳಲಾಗಿದೆ. ಅನ್ನಮಯವೇ ಮೊದಲಾದ ಅಮುಖ್ಯಾತ್ಮರೊಂದಿಗೆ ಆನಂದಮಯನನ್ನು ತಿಳಿಸಿರುವುದರಿಂದಲೂ, 'ನನ್ನ ಅನ್ನಮಯ ಪ್ರಾಣಮಯ ಮನೋಮಯವಿಜ್ಞಾನಮಯಾನಂದಮಯಗಳು ಶುದ್ಧವಾಗಲಿ' ಎಂಬ ಶುದ್ಧಿಪ್ರಾರ್ಥನೆಯಲ್ಲಿ ಆನಂದಮಯವೂ ಸೇರಿರುವುದರಿಂದಲೂ ಆನಂದಮಯನೆಂದರೆ ಜೀವನೇ ಹೊರತು ಪರಮಶಿವನಲ್ಲ. ಇಲ್ಲಿ ಮಯಟ್ ಪ್ರತ್ಯಯವು ವಿಕಾರವನ್ನು ಹೇಳುವುದರಿಂದ ಬ್ರಹ್ಮದ ವಿಕಾರವೆನಿಸಿ ತ್ಯಾಗಾಂಗ, ಭೋಗಾಂಗ, ಯೋಗಾಂಗನಾಗಿ ಸಂಸಾರದಲ್ಲಿ ಸಿಲುಕಿರುವ ಜೀವನಿಗೆ ನಿರತಿಶಯವಾದ ಆನಂದವು ಸಂಭವಿಸದೇ ಇರುವುದರಿಂದಲೂ, ಆನಂದವೇ ಬ್ರಹ್ಮವೆಂಬ ಶ್ರುತಿಯಲ್ಲಿ ಪರಮೇಶ್ವರನೇ ಆನಂದವೆನಿಸಿರುವುದರಿಂದಲೂ, ಆನಂದಮಯವೆಂಬ ಪದವು ಆನಂದರೂಪನಾದ ಪರಶಿವನ ಅಂಶನಾದ ಜೀವನಿಗೇ ಅನ್ವಯಿಸುತ್ತದೆ ಎಂದು ಹೇಳಬೇಕು. "ಶರೀರವಿಲ್ಲದೆ ನೆಲಸಿರುವವನಿಗೆ ಪ್ರಿಯಾಪ್ರಿಯಗಳು ಅಂಟುವುದಿಲ್ಲ" ಎಂಬ ಶ್ರುತಿಯಲ್ಲಿ ಪರಮೇಶ್ವರನು ಪ್ರಿಯಾಪ್ರಿಯಗಳಿಗಿಂತ ವಿಲಕ್ಷಣನೂ, ಅಶರೀರನೂ ಆಗಿರುವನೆಂದು ಹೇಳಿದೆಯಾದ್ದರಿಂದ ಅವನಲ್ಲಿ ಆನಂದವಿಕಾರವು ಸಂಭವಿಸುವುದಿಲ್ಲ. ಇದರಿಂದ ಪರಮೇಶ್ವರನು ಆನಂದಮಯನಲ್ಲವೆಂಬುದು ಸ್ಪಷ್ಟವಾಗುತ್ತದೆ. ಹಾಗಲ್ಲ, ಪರಮೇಶ್ವರನು ಜಗತ್ಕಾರಣನೆಂಬುದನ್ನು ಸುಲಭವಾಗಿ ತಿಳಿಸಲಿಕ್ಕಾಗಿ, 'ಅನ್ನಂ ಬ್ರಹ್ಮ' ಎಂದು ಆರಂಭಿಸಿ 'ಆನಂದವೇ ಬ್ರಹ್ಮವೆಂದು ತಿಳಿಯುವುದು' ಎಂದು ಹೇಳಿರುವುದರಿಂದ ಪರಮಶಿವನೇ ಆನಂದಮಯನೂ, ವಿಶ್ವದ ಉಭಯಕಾರಣನೂ ಆಗಿರುವುದಾಗಿ ಇಲ್ಲಿ ಉಪದೇಶಿಸಿರುವುದರಿಂದ ಈ ಪ್ರಕರಣ ಜೀವನಿಗೆ ಅನ್ವಯಿಸುವುದಿಲ್ಲವಾದ್ದರಿಂದ ಆನಂದಮಯವೆಂದರೆ ಜೀವನು ಹೇಗೆ ಆದಾನು? ಎಂದು ಕೇಳಿದರೆ, ಜೀವನಿಗಿಂತಲೂ ಬೇರೆಯಾಗಿ ಈಶ್ವರನಿರುವುದರಲ್ಲಿ ಪ್ರಮಾಣವಿಲ್ಲದ್ದರಿಂದಲೂ, "ಈ ಜೀವಾತ್ಮನ ರೂಪದಿಂದ ಒಳಗೆ ಪ್ರವೇಶಿಸಿ ನಾಮರೂಪಗಳನ್ನು ವಿಸ್ತರಿಸುತ್ತೇನೆ" "ತತ್ತ್ವಮಸಿ" ಈ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ 'ಸೋಽಯಂ ದೇವದತ್ತಃ' ಎಂಬಂತೆ ಅಭೇದವನ್ನು ಹೇಳಿರುವುದರಿಂದಲೂ, ಈಕ್ಷತೆ ಎಂಬ ಶ್ರುತಿಯಲ್ಲಿ ಹೇಳಿ[illegible]ದು ಚೇತನ

ಜೀವನಿಗೆ ಯೋಗ್ಯವಾಗಿದೆ. ಆದ್ದರಿಂದ ಆನಂದಮಯನೆಂದರೆ ಜೀವನೇ ಆಗುವನು. 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ಶ್ರುತಿಯಲ್ಲಿ ಜಡಪದಾರ್ಥವನ್ನು ಬಿಟ್ಟು ಉಳಿದ ಚೈತನ್ಯದ ಸ್ವರೂಪಲಕ್ಷಣವನ್ನು ಹೇಳಲಾಗಿದೆ. ಆದ್ದರಿಂದ 'ಬ್ರಹ್ಮವನ್ನರಿತವನು ಬ್ರಹ್ಮವನ್ನು ಹೊಂದುತ್ತಾನೆ' ಎಂಬ ಶ್ರುತಿಯಲ್ಲಿ ಜೀವನಿಗೆ ಅವನ ಸ್ವರೂಪಜ್ಞಾನವೇ ಮೋಕ್ಷವೆಂದು ಹೇಳುವುದು ಹೊಂದುತ್ತದೆ. ಮರದ ಕೊಂಬೆಯ ನಡುವೆ ರಂಧ್ರದಲ್ಲಿ ಚಂದ್ರನನ್ನು ತೋರಿಸುವಂತೆ, ಆತ್ಮಸ್ವರೂಪವನ್ನು ತಿಳಿಸಲಿಕ್ಕಾಗಿ 'ಅನ್ನಮಯಃ ಪುರುಷಃ' ಎಂದು ಸ್ಥೂಲಶರೀರವನ್ನು ತಿಳಿಸಿ, 'ಬೇರೊಬ್ಬ ಆತ್ಮನು ಪ್ರಾಣಮಯನು-ಬೇರೊಬ್ಬನು ಮನೋಮಯನು-ಬೇರೊಬ್ಬನು ವಿಜ್ಞಾನಮಯನು" ಹೀಗೆ ಸ್ಥೂಲಶರೀರಕ್ಕಾಧಾರವಾದ ಪ್ರಾಣಕೋಶವನ್ನೂ, ಅದರೊಳಗಿರುವ ಮನಸ್ಸನ್ನೂ, ಅದರೊಳಗಿನ ಬುದ್ಧಿ ಎಂಬ ವಿಜ್ಞಾನವನ್ನೂ ಮೆಟ್ಟಲು ಮೆಟ್ಟಲಾಗಿ ತಿಳಿಸಿ, ಎಲ್ಲರೊಳಗೂ ನೆಲಸಿರುವ ಜೀವಾತ್ಮನನ್ನು "ಅನ್ಯೋಽಂತರ ಆತ್ಮಾನಂದಮಯಃ' ಎಂದು ಆನಂದಮಯನೆಂದು ಹೇಳಿ ಮುಗಿಸಿರುವುದರಿಂದ 'ಬ್ರಹ್ಮವಿದಾಪ್ನೋತಿ ಪರಂ' ಎಂಬಲ್ಲಿ ಬ್ರಹ್ಮವೆಂದರೆ ಜೀವನೇ ಆಗುವುದು. ಅವನ ಸ್ವರೂಪಜ್ಞಾನವೇ ಮುಕ್ತಿ ಎನಿಸುವುದು. ಆದ್ದರಿಂದ ಆನಂದಮಯನೆಂದರೆ ಜೀವನೇ ಆಗಬೇಕು.

ನನು 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಇತ್ಯತ್ರ ತಸ್ಯ ಪುಚ್ಛತ್ವೋಪದೇಶಾತ್, ನಿರವಯವಸ್ಯ ಪುಚ್ಛತ್ವಾಸಂಭವಾತ್ ಆನಂದಮಯವ್ಯತಿರಿಕ್ತಸ್ಯೈವ ಬ್ರಹ್ಮತ್ವಮಿತಿ ಚೇನ್ನ, 'ಬ್ರಹ್ಮವಿದಾಪ್ನೋತಿ' ಇತ್ಯುಪಕ್ರಮ್ಯ 'ಬ್ರಹ್ಮಪುಚ್ಛಂ' ಇತ್ಯುಪಸಂಹೃತತ್ವಾದುಪಕ್ರಮೋಪಸಂಹಾರಯೋರೇಕಲಿಂಗತ್ವಾತ್ ಪುರುಷವಿಧತ್ವಂ ಬ್ರಹ್ಮಣಃ ಸ್ವಭಾವಸಿದ್ಧಂ. ಅತಶ್ಶಿರಃಪಕ್ಷಪುಚ್ಛಾತ್ಮನಾ ವ್ಯಪದೇಶೋ ಯುಕ್ತಃ. ಅನ್ನಮಯಶರೀರಾವಯವಾದ್ಬ್ರಹ್ಮಾಪಿ ಸ್ವಸ್ಮಾದನತಿರಿಕ್ತಪ್ರಿಯಮೋದಪ್ರಮೋದಾವಯವಾನಾಮಖಂಡಾಶ್ರಯತಯಾ ಆನಂದಮಯಂ ಪುಚ್ಛಂ ಪ್ರತಿಷ್ಠೇತಿ ಸ್ಮರ್ಯತೆ. 'ಬ್ರಹ್ಮವಿದಾಪ್ನೋತಿ' ಇತ್ಯುಪಕ್ರಾಂತಂ ಬ್ರಹ್ಮ 'ಸತ್ಯಂ ಜ್ಞಾನಂ' ಇತೀತರವ್ಯಾವರ್ತಕಲಕ್ಷಣದ್ವಾರಾ ಪ್ರಸಾಧ್ಯ 'ತಸ್ಮಾದ್ವಾ ಏತಸ್ಮಾದಾತ್ಮನಃ' ಇತ್ಯಾತ್ಮನ್‌ಶಬ್ದೇನ ವ್ಯಪದಿಶ್ಯ ತಸ್ಯ ಸರ್ವಾಂತರಾತ್ಮತ್ವೇನಾತ್ಮತ್ವಂ ಪ್ರತಿಪಾದ್ಯ 'ಅನ್ಯೋಽಂತರ ಆತ್ಮಾನಂದಮಯಃ' ಇತ್ಯಾತ್ಮಶಬ್ದೇನ ನಿರ್ದಿಶ್ಯಮಾನಮಾನಂದಮಯೇತ್ಯುಪಸಂಹೃತತ್ವಾದಾತ್ಮನ್‌ಶಬ್ದೇನ ಜೀವಾದನತಿರಿಕ್ತಂ ಬ್ರಹ್ಮ ಆನಂದಮಯ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ, ಆನಂದಮಯೋಽಭ್ಯಾಸಾತ್ ಇತಿ. ಅತ್ರಾನಂದಮಯಶ್ಶಿವಏವ. ಕಸ್ಮಾದಭ್ಯಾಸ್ಯಾತ್. ಪುನಃಪುನಶ್ಶ್ರವಣಮಭ್ಯಾಸಃ. ಶಿವಸ್ಯಪರಬ್ರಹ್ಮಣ ಏವ ಬಹುಷೋವೇದಾಂತೇಷ್ವಾನಂದಮಯಶಬ್ದಪ್ರಯೋಗದರ್ಶನಾತ್ ನೇತರೋ ಹ್ಯಾನಂದಮಯ ಇತಿ ಸೂತ್ರಾರ್ಥಃ. ಆನಂದಮಯಂ

ಪ್ರಸ್ತುತ್ಯ ‘ ರಸೋ ವೈ ಸಃ ’ ಇತಿ ರಸತ್ವವ್ಯಪದೇಶಾತ್, “ ರಸಂ ಹ್ಯೇ ವಾಯಂ ಲಬ್ಧ್ವಾನಂದೀ ಭವತಿ । ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾತ್ । ಯದೇಷ ಆನಂದೋ ನ ಸ್ಯಾತ್ । ಏಷ ಹ್ಯೇವಾನಂದಯಾತಿ।”. “ ಸೈಷಾ ನಂದಸ್ಯ ಮೀಮಾಂಸಾ ಭವತಿ । ಏತಮಾನಂದಮಯಮಾತ್ಮಾನಮುಪ ಸಂಕ್ರಾಮತಿ । ” ‘ ಆನಂದಂ ಬ್ರಹ್ಮಣೋ ವಿದ್ವಾನ್ ’ ‘ ಆನಂದಮಯೋ ಹ್ಯಾನಂದಭುಕ್ ಆನಂದಂಬ್ರಹ್ಮ ’ ಇತಿ ಶ್ರುತೌ ಬ್ರಹ್ಮಣಶ್ಶಿವಸ್ಯೈವಾನಂ ದಶಬ್ದೋ ನಿರ್ಣೀತಃ । ಕಿಂಚ, ‘ ಸೈಷಾನಂದಸ್ಯ ಮೀಮಾಂಸಾ ’ ಇತ್ಯು ಪಕ್ರಮ್ಯ ಮಾನುಷಾದಿಪ್ರಜಾಪತಿಪರ್ಯಂತಶತಗುಣಮಾನಂದಾತಿಶ ಯಮುಪದಿಶ್ಯ ‘ ಸ ಏಕೋ ಬ್ರಹ್ಮಣ ಆನಂದಃ ’ ಇತಿ ಪರಮಾನಂದಾತಿ ಶಯಿತ್ವಂ ಬ್ರಹ್ಮಣಶ್ಶಿವಸ್ಯೈವ ವ್ಯವಸ್ಥಾಪನಾತ್, ಮಲತ್ರಯವಿಶಿಷ್ಟತ ನುತ್ರಯಾವಚ್ಛಿನ್ನಶಾರೀರಸ್ಯ ನಿರತಿಶಯಾನಂದಶಿರಸ್ಕತ್ವಾಸಂಭವಾದಾ ನಂದನಿರೂಪಣಂ ಭಕ್ತ್ಯೋಪಾಸನಾರ್ಥಮೇವ. ‘ ಹಂಸ ಹಂಸೇತಿ ಯೋ ಬ್ರೂಯಾದ್ಧಂಸೋ ನಾಮ ಸದಾಶಿವಃ । ಯಾವತ್ಪಶ್ಯೇತ್ಖಗಾಕಾರಂ ತದಾಕಾರಂ ವಿಚಿಂತಯೇತ್ ’ ಇತ್ಯಾದಿಶ್ರುತಿಸ್ಮೃತಿಷು ಪರಬ್ರಹ್ಮಣಶ್ಶಿ ವಸ್ಯ ಹಂಸರೂಪತ್ವವ್ಯಪದೇಶಾಚ್ಚಾವಯವಕಲ್ಪನಮವಿರುದ್ಧಂ. ಶ್ರೋತೃಬುದ್ಧ್ಯನುಸಾರೇಣಾನ್ನಮಯಾದಿಸರ್ವಾಂತರತ್ವಾತ್ ಆನಂದ ಮಯಸ್ಯೋತ್ತರೋತ್ತರಮಾತ್ಮತ್ವೇನ ಆನಂದಮಯಾಂತರಮುಪದೇ ಶಾತ್, ಅನ್ನಮಯಾದ್ಯಮುಖ್ಯಾತ್ಮವಿಜ್ಞಾನಾಭಾವೇ ಆನಂದಮಯ ಮುಖ್ಯಾತ್ಮವಿವೇಕಾಸಂಭವಾಚ್ಚ, ಸ್ಥೂಲಾರುಂಧತೀನ್ಯಾಯೇನ ಸಮುಕ್ಷ ಪ್ರವಾಹನ್ಯಾಯೇನ ಚ ಮುಖ್ಯಾತ್ಮಪ್ರಬೋಧಾರ್ಥಮಮುಖ್ಯಾರ್ಥವಿ ವೇಕೋಽವಿರುದ್ಧಃ. ಜಡತ್ವಾದನ್ನಮಯಪ್ರಾಣಮಯಮನೋಮಯ ಪರ್ಯಂತಮೇವ ಮಯಟ್ಪ್ರತ್ಯಯಸ್ಯ ವಿಕಾರಾರ್ಥಕತ್ವಂ. ಚೇತನತ್ವಾ ದ್ವಿಜ್ಞಾನಮಯೋ ವಿಜ್ಞಾನಪ್ರಚುರೋ ಜೀವಃ, ಆನಂದಮಯ ಆನಂದ ಪ್ರಚುರಃ ಪರಮೇಶ್ವರಃ. “ ಗೋಶ್ವಾನಾಗ್ನಿಬ್ರಾಹ್ಮಣಾನ್ ಸ್ಪೃಷ್ಟ್ವಾ ಆಪಃ ಸ್ಪೃಶೇತ್, ” ಇತ್ಯಾಪಸ್ತಂಬಸೂತ್ರೇ, “ ರಜಸ್ವಲಾಗ್ನಿಗೋವಿಪ್ರಾನ್ ಪತಿವ್ರತಾಸ್ತ್ರಿಯಂ ತಥಾ । ಶವಾಮೇಧ್ಯಬ್ರಹ್ಮಬಂಧೂನ್ ಸ್ಪೃಷ್ಟ್ವಾ ಸ್ನಾನಂ ಸಮಾಚರೇತ್ ॥ ” ಇತಿ ವೃದ್ಧಶಾತಾತಪೇಽಪಿ ಪವಿತ್ರಾಪವಿತ್ರ ಪದಾರ್ಥಾನಾಂ ಸಾಹಚರ್ಯೋಪದೇಶಾನ್ನ ಪ್ರಕರಣೈಕತ್ವದೋಷಃ

‘ಬ್ರಹ್ಮಪುಚ್ಛಂ’ ಎಂದು ಶ್ರುತಿಯಲ್ಲಿ ಆನಂದಮಯಕ್ಕೆ ಪುಚ್ಛ ಒಂದನ್ನು ಹೇಳಿದೆ. ಬ್ರಹ್ಮ ನಿರವಯವವಾದ್ದರಿಂದ ಅದಕ್ಕೆ ಬಾಲವಿರುವುದು ಅಸಂಭವವಾದ್ದರಿಂದ ಆನಂದ ಮಯಕ್ಕಿಂತಲೂ ಬ್ರಹ್ಮ ಬೇರೆ ಎಂದು ಹೇಳಬಹುದಲ್ಲವೇ? ಅಂದರೆ ಅದು ಸರಿಯಲ್ಲ– ‘ಬ್ರಹ್ಮವಿದಾಪ್ನೋತಿ’ ಎಂದು ಉಪಕ್ರಮಿಸಿ ‘ಬ್ರಹ್ಮಪುಚ್ಛಂ’ ಎಂದು ಕೊನೆಗೊಂಡಿರು

ವುದರಿಂದ ಉಪಕ್ರಮೋಪಸಂಹಾರಗಳು ಒಂದೇ ರೀತಿಯಲ್ಲಿರಬೇಕಾದ್ದರಿಂದ ಬ್ರಹ್ಮವು ಒಂದೇ ಬಗೆಯ ಪುರುಷನೆಂಬುದು ಸಹಜವಾಗಿ ಸಿದ್ಧಿಸುತ್ತದೆ. ಆದ್ದರಿಂದ ಬ್ರಹ್ಮಕ್ಕೆ ಶಿರಸ್ಸು ಪುಚ್ಛಗಳನ್ನು ಹೇಳಿದ್ದು ಯುಕ್ತವೇ ಆಗಿದೆ. ಅನ್ನಮಯ ಶರೀರಕ್ಕೆ ಅವಯವಗಳಿರುವಂತೆ ಬ್ರಹ್ಮಕ್ಕೂ ತನಗಿಂತ ಬೇರೆಯಾಗದ ಪ್ರಿಯ, ಮೋದ, ಪ್ರಮೋದ ಮೊದಲಾದ ಅವಯವಗಳಿದ್ದು ಅವಕ್ಕೆಲ್ಲಾ ಅವನೇ ಆಶ್ರಯನಾಗಿರುವುದರಿಂದ 'ಬ್ರಹ್ಮ ಪುಚ್ಛಂ' ಎಂಬಲ್ಲಿ ಆನಂದಮಯದ ಪುಚ್ಛವೆಂದೇ ಹೇಳಬೇಕಾಗುತ್ತದೆ. 'ಬ್ರಹ್ಮವಿದ್ಯಾಪ್ನೋತಿ ಪರಂ' ಎಂಬಲ್ಲಿ ಹೇಳಿರುವ ಬ್ರಹ್ಮವನ್ನು 'ಸತ್ಯಂ ಜ್ಞಾನಂ' ಎಂಬಲ್ಲಿ ಹೇಳಿರುವ ಇತರ ವ್ಯಾವರ್ತಕಲಕ್ಷಣದಿಂದ ಸಾಧಿಸಿ, 'ಆ ಈ ಆತ್ಮನಿಂದ ಆಕಾಶ ಹುಟ್ಟಿತು' ಎಂಬಲ್ಲಿ ಅದನ್ನೇ ಆತ್ಮನ್ ಶಬ್ದದಿಂದ ತಿಳಿಸಿ, ಅದು ಎಲ್ಲದರೊಳಗೂ ವ್ಯಾಪಿಸಿರುವುದರಿಂದ ಅದನ್ನು ಆತ್ಮವೆಂದು ಪ್ರತಿಪಾದಿಸಿ, 'ಬೇರೊಂದು ಒಳಗಿನ ಆನಂದಮಯನಾದ ಆತ್ಮ'ವೆಂದು ಆತ್ಮನ್ ಶಬ್ದದಿಂದ ತಿಳಿಸಿರುವ ಬ್ರಹ್ಮವನ್ನು ಆನಂದಮಯನೆಂದು ಕೊನೆಗಾಣಿಸಿರುವುದರಿಂದ ಇಲ್ಲಿ ಆತ್ಮನೆಂದರೆ ಜೀವನಿಗಿಂತಲೂ ಬೇರೆಯಲ್ಲದ ಬ್ರಹ್ಮವೆಂದೂ, ಅವನೇ ಆನಂದಮಯನೆಂದೂ ಹೇಳುವುದೇ ಯುಕ್ತವಾಗಿದೆ. ಹೀಗೆ ಪೂರ್ವಪಕ್ಷ ಬರುತ್ತದೆ. ಇದಕ್ಕೆ ಸೂತ್ರದಲ್ಲಿ ಹೀಗೆ ಸಮಾಧಾನವನ್ನು ತಿಳಿಸಲಾಗಿದೆ. ಶ್ರುತಿಯಲ್ಲಿ ಪರಶಿವನಿಗೆ ಮತ್ತೆ ಮತ್ತೆ ಆನಂದ ಶಬ್ದವನ್ನು ಪ್ರಯೋಗಿಸಿರುವುದರಿಂದ ಆನಂದಮಯನೆಂದರೆ ಪರಶಿವನೇ ಹೊರತು ಜೀವನಾಗಲಾರನು. 'ಅವನೇ ರಸವಾಗಿದ್ದಾನೆ' ಎಂಬ ಶ್ರುತಿಯಲ್ಲಿ ಪರಶಿವನನ್ನು ರಸವೆಂದು ಹೇಳಿದೆ. 'ರಸವನ್ನು ಪಡೆದು ಜೀವನು ಆನಂದವನ್ನು ಅನುಭವಿಸುತ್ತಾನೆ' "ಈ ಆಕಾಶ ಸ್ವರೂಪನಾದ ಪರಶಿವನು ಆನಂದನಾಗಿಲ್ಲದಿದ್ದರೆ ಯಾರು ತಾನೆ ಬದುಕುತ್ತಿದ್ದರು" 'ಇವನೇ ಎಲ್ಲರನ್ನೂ ಆನಂದಪಡಿಸುತ್ತಾನೆ'. 'ಆ ಇದು ಆನಂದದ ಮೀಮಾಂಸೆ' 'ಈ ಆನಂದಮಯನಾದ ಆತ್ಮನನ್ನು ಹೊಂದುತ್ತಾನೆ', 'ಬ್ರಹ್ಮದ ಆನಂದವನ್ನರಿತವನು', 'ಆನಂದಮಯನೂ, ಆನಂದವನ್ನನುಭವಿಸುವವನೂ ಆದ ಬ್ರಹ್ಮವೇ ಆನಂದವಾಗಿದ್ದಾನೆ' ಎಂದು ಶ್ರುತಿಯಲ್ಲಿ ಪರಶಿವನಿಗೇ ಆನಂದಶಬ್ದವನ್ನು ಮತ್ತೆ ಮತ್ತೆ ಹೇಳಲಾಗಿದೆ. ಇದಲ್ಲದೆ, 'ಇದು ಆನಂದದ ಮೀಮಾಂಸೆ' ಎಂದು ಆರಂಭಿಸಿ 'ಮನುಷ್ಯನಿಂದ ಹಿಡಿದು ಪ್ರಜಾಪತಿಯವರೆಗೂ ನೂರ್ಮಡಿಯಾಗಿ ಹೆಚ್ಚುವ ಆನಂದವನ್ನು ಹೇಳಿ 'ಅದೊಂದೇ ಬ್ರಹ್ಮದ ಆನಂದ' ಎಂಬಲ್ಲಿ ನಿರತಿಶಯವಾದ ಆನಂದವನ್ನು ತಿಳಿಸಿರುವುದರಿಂದ ಇಂತಹ ಆನಂದವು ಪರಶಿವನಿಗೇ ಅನ್ವಯಿಸುವುದಾಗಿ ತೀರ್ಮಾನಿಸಲಾಗಿದೆ. ಮೂರು ಮಲಗಳಿಂದಾವರಿಸಿದ ಶರೀರದಲ್ಲಿ ಜೀವನಿಗೆ ನಿರತಿಶಯವಾದ ಆನಂದವು ಹೊಂದದೇ ಇರುವುದರಿಂದ ಆನಂದಮಯನೆಂದರೆ ಪರಶಿವನೇ ಆಗುವನು. ಆನಂದಮಯನಾದ ಪರಶಿವನಿಗೆ ತಲೆ ಕಾಲು ಮೊದಲಾದ ಅವಯವಗಳನ್ನು ಹೇಳಿರುವುದು ಭಕ್ತರ ಉಪಾಸನಸೌಕರ್ಯಕ್ಕಾಗಿ ಎಂದು ಶ್ರುತಿಯಿಂದಲೇ ತಿಳಿದುಬರುತ್ತದೆ. "ಯಾವನು 'ಅಹಂ ಸಃ,' ನಾನೇ ಅವನು ಎಂದು ನಿರಂತರವೂ

ಜಪಿಸುವನೋ ಅವನು ಹಂಸನೆನಿಸಿ ಸದಾಶಿವನೇ ಆಗುವನು. ಹೀಗೆ ಪಕ್ಷಿಯ ಆಕಾರನಾದ ಶಿವನನ್ನು ಕಾಣುವವರೆಗೂ ಜೀವನು ಜಪಿಸುತ್ತಿರಬೇಕು" ಎಂಬ ಶ್ರುತಿಯಲ್ಲಿ ಪರಶಿವನನ್ನು ಹಂಸವೆಂದು ತಿಳಿಸಲಾಗಿದೆ. ಆದ್ದರಿಂದ ನಿರವಯವ ವಸ್ತುವಿಗೆ ಭಕ್ತೋಪಾಸನಕ್ಕಾಗಿ ಅವಯುವಗಳನ್ನು ಹೇಳಿದ್ದರಲ್ಲಿ ಏನೂ ವಿರೋಧವಿಲ್ಲ ಶ್ರೋತೃಗಳ ಯೋಗ್ಯತೆಗೆ ಅನುಗುಣವಾಗಿ ಅನ್ನಮಯಾದಿಗಳಿಂದ ಉಪದೇಶವನ್ನಾರಂಭಿಸಿ, ಆ ಉಪದೇಶವು ಕೊನೆಗೆ ಎಲ್ಲದಕ್ಕೂ ಹೆಚ್ಚಿನದಾದ ಆನಂದಮಯದಲ್ಲಿ ಮುಗಿಯುವುದರಿಂದಲೂ, ಅನ್ನಮಯವೇ ಮೊದಲಾದ ಅಮುಖ್ಯಾತ್ಮಗಳನ್ನು ತಿಳಿಯದಿದ್ದರೆ ಆನಂದಮಯವೆಂಬ ಮುಖ್ಯಾತ್ಮದ ವಿವೇಚನೆ ಸಂಭವಿಸದಿರುವುದರಿಂದಲೂ, ಸ್ಥೂಲಾರುಂಧತೀನ್ಯಾಯದಿಂದ, ಬ್ರಹ್ಮಕ್ಕಿಂತಲೂ ಬೇರೆಯಾದ ವಸ್ತುಗಳಲ್ಲಿಯೂ ಬ್ರಹ್ಮಭಾವನೆಯನ್ನು ಹೇಳಿದ್ದರಲ್ಲಿ ವಿರೋಧವೇನೂ ಇಲ್ಲ. ಪ್ರಧಾನವಾದ ವಿಷಯುವನ್ನು ತಿಳಿಸಲಿಕ್ಕಾಗಿ ಸಾಮಾನ್ಯವಾದ ವಿಷಯವನ್ನು ಮೊದಲಾರಂಭಿಸಿದ್ದರಲ್ಲಿ ತಪ್ಪೇನಿಲ್ಲ. 'ಅನ್ನ, ಪ್ರಾಣ, ಮನಸ್ಸುಗಳು ಜಡವಾದ್ದರಿಂದ ಆ ಪದಗಳೊಡನೆ ವಿಕಾರವೆಂಬ ಅರ್ಥದಲ್ಲಿ ಮಯಟ್ ಪ್ರತ್ಯಯಹೊಂದುತ್ತದೆ. ಆದರೆ ಜೀವನು ಚೇತನನಾದ್ದರಿಂದ ಅವನಿಗೆ ವಿಕಾರವಿಲ್ಲದ್ದರಿಂದ, ಜೀವನಿಗೆ ಅನ್ವಯಿಸುವ ವಿಜ್ಞಾನಪದದಲ್ಲಿ ಮಯಟ್‌ಪ್ರತ್ಯಯವು ಪ್ರಾಚುರ್ಯವೆಂಬ ಅರ್ಥವನ್ನು ತಿಳಿಸುತ್ತದೆ ಎಂದು ಹೇಳಬೇಕು. ಹಾಗೆಯೇ ಆನಂದಮಯಃ ಎಂಬಲ್ಲೂ ಪ್ರಾಚುರ್ಯಾರ್ಥದಲ್ಲಿಯೇ ಮಯಟ್‌ಪ್ರತ್ಯಯ ಬಂದಿರುವುದರಿಂದ ಆನಂದಮಯನೆಂದರೆ ಆನಂದವೇ ಪ್ರಚುರವಾಗಿರುವ ಪರಮೇಶ್ವರನೆಂದು ಅರ್ಥವಾಗುತ್ತದೆ. "ಗೋ, ಶ್ವಾನ, ಅಗ್ನಿ, ಬ್ರಾಹ್ಮಣರನ್ನು ಮುಟ್ಟಿದರೆ ಸ್ನಾನಮಾಡಬೇಕು" ಎಂದು ಆಪಸ್ತಂಬದಲ್ಲೂ, ರಜಸ್ವಲೆ, ಅಗ್ನಿ, ಗೋವು, ವಿಪ್ರ, ಪತಿವ್ರತೆ, ಶವ, ಅಮೇಧ್ಯ, ಕರ್ಮಭ್ರಷ್ಟನಾದ ಬ್ರಾಹ್ಮಣ ಇವರನ್ನು ಮುಟ್ಟಿದರೆ ಸ್ನಾನಮಾಡಬೇಕು" ಎಂದು ವೃದ್ಧಶಾತಾತಪದಲ್ಲೂ ಪವಿತ್ರವೂ ಅಪವಿತ್ರವೂ ಆದ ಪದಾರ್ಥಗಳನ್ನು ಒಟ್ಟಿಗೆ ಸೇರಿಸಿ ಹೇಳಿರುವಂತೆ, ಪ್ರಾಚುರ್ಯ ಮತ್ತು ವಿಕಾರವೆಂಬ ಎರಡು ಅರ್ಥಗಳಲ್ಲೂ ಒಂದೇ ಪ್ರಕರಣದಲ್ಲಿ ಮಯಟ್ ಪ್ರತ್ಯಯವನ್ನು ಹೇಳಿರುವುದರಲ್ಲಿ ದೋಷವೇನೂ ಇಲ್ಲ.

**"ಸುಷುಪ್ತಿಕಾಲೇ ಸಕಲೇ ವಿಲೀನೇ ತಮೋಽಭಿಭೂತಸ್ಸುಖರೂಪಮೇತಿ" ಇತ್ಯಾದಿಶ್ರುತೌ ಸುಷುಪ್ತಾವಾನಂದಮಯಪರಮೇಶ್ವರೇ ತತ್ಸಾಕ್ಷಾತ್ಕಾರಪ್ರತಿಬಂಧಕತಮೋರೂಪಪಾಶೇನ ಸಹ ಶಾರೀರಸ್ಯ ವಿಲೀನತ್ವಾತ್ತನ್ನಿವೃತ್ತಿರೂಪಪ್ರಾರ್ಥನಾಸಮುಚಿತತ್ವಾನ್ನ ವಿರೋಧಃ. "ಜ್ಞಾಽಜ್ಞೌ" ಇತ್ಯಾದಿಶ್ರುತಿದರ್ಶನಾತ್ 'ಮೃಣ್ಮಯೋ ಘಟಃ' ಇತ್ಯಾದಿವದಾನಂದಮಯ ಆನಂದವಿಕಾರೋ ಜೀವ ಇತಿ ವಾದೋ ನ ಶ್ರೌತಃ, 'ವಿದ್ಯಾವಿದ್ಯೇ ಈಶತೇ ಯಸ್ತು ಸೋಽನ್ಯಃ,' 'ಕ್ಷರಾತ್ಮಾನಾ**

ವೀಶತೆ ದೇವ ಏಕಃ' 'ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ' 'ದ್ವಾ ಸುಪರ್ಣಾಸಯುಜಾ' 'ನಾನ್ಯೋ ಬ್ರಹ್ಮಣೋ ವೇದಿತವ್ಯೋ ಪರಂ ಚಾಪರಂ ಚ' 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ,' 'ಅಂತಃ ಪ್ರವಿಷ್ಟಶ್ಶಾಸ್ತಾ ಜನಾನಾಂ' 'ಅಸ್ಮಾನ್ಮಾಯೀ ಸೃಜತೆ ವಿಶ್ವಮೇತತ್' 'ತಸ್ಮಿಂಶ್ಚಾನ್ಯೋ ಮಾಯಯಾ ಸನ್ನಿರುದ್ಧಃ' 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ' "ಯ ಆತ್ಮನಿ ತಿಷ್ಠನ್, ಯಸ್ಯಾತ್ಮಾ ಶರೀರಂ" ಇತ್ಯಾದಿಶ್ರುತಿಶತೇಷು ಜೀವಬ್ರಹ್ಮಣೋಃ ಪರಸ್ಪರವೈಲಕ್ಷಣ್ಯವ್ಯವಸ್ಥಾಪನಾತ್, ನಾನಾಶರೀರ ಪ್ರವೇಶನಿರ್ಗಮನವ್ಯಾಪಾರಸಾಂಸಾರಿಕಸ್ಯ ಶಾರೀರಸ್ಯೈವ ನ ಬ್ರಹ್ಮತ್ವ ಮುಪಪದ್ಯತೆ. ಕಿಂತು 'ಬ್ರಹ್ಮವಿದ್ಬ್ರಹ್ಮೈವ ಭವತಿ' 'ತತ್ತ್ವಮಸಿ' ಇತ್ಯಾದಿ ಶ್ರುತಿಷು ಸ್ವಭಾವಸಿದ್ಧಜೀವಸ್ಯ ಭ್ರಮರಕೀಟನ್ಯಾಯೇನ ಪರಮೇಶ್ವ ರೋಪಾಸನೇನ ತದಾತ್ಮಕತ್ವಮುಪದಿಶ್ಯತೆ. ನೋ ಚೇತ್ ಶ್ರುತಿಯುಕ್ತ್ಯ ನುಭವವಿರೋಧಪ್ರಸಂಗಃ. ಕಿಂಚ "ನೋಪಾಸ್ಯೌ ಪ್ರಕೃತಿಜೀವೌ" ಇತ್ಯಾದಿ ಶ್ರುತಿಷು ಶಾರೀರೋಪಾಸನಾಯಾಃ ನಿಂದಾಶ್ರವಣಾತ್ ನ ಜೀವಸ್ಯ ಸ್ವಸ್ವರೂಪಜ್ಞಾನೇನ ಮುಕ್ತಿಃ. 'ಜ್ಞಾತ್ವಾ ಶಿವಂ ಶಾಂತಿಮತ್ಯಂತ ಮೇತಿ,' 'ತಮೇವ ವಿದಿತ್ವಾತಿಮೃತ್ಯುಮೇತಿ' ಇತ್ಯಾದಿಶ್ರುತೌ ಜೀವಸ್ಯ ಪರಮೇಶ್ವರೋಪಾಸನಯೈವ ಮುಕ್ತಿವ್ಯಪದೇಶಾತ್ ಪ್ರಧಾನಬ್ರಹ್ಮ ವಾದವತ್ ಜೀವಬ್ರಹ್ಮವಾದೋ ಹ್ಯವೈದಿಕಃ. 'ವಿಜ್ಞಾನಂ ಯಜ್ಞಂ ತನುತೆ' ಇತ್ಯತ್ರ ವಿಜ್ಞಾನಶಬ್ದೇನ ನ ಬುದ್ಧಿರುಪಪದ್ಯತೆ, ಜಡಾತ್ಮಕ ಬುದ್ಧೇಃ ಕರ್ಮಕರ್ತೃತ್ವಾಭಾವಾತ್. ಗವಾದಿಶಬ್ದವತ್ ಧರ್ಮ ಶಬ್ದೋ ಹಿ ಧರ್ಮಿಗ್ರಾಹಕತ್ವಾದ್ವಿಜ್ಞಾನಶಬ್ದಸ್ಯ ಜೀವಾತ್ಮವಾಚಕತ್ವಂ. ಕಿಂಚ 'ವಿಜ್ಞಾನಂ ಚಾವಿಜ್ಞಾನಂ ಚ' ಇತಿ ವಿಜ್ಞಾನಶಬ್ದೇನ ತದ್ಗು ಣಕಂ ಚೇತನಮುಪದಿಶ್ಯತೆ. ತಥಾಂತರ್ಯಾಮಿಬ್ರಾಹ್ಮಣೇ 'ಯೋ ವಿಜ್ಞಾನೇ ತಿಷ್ಠನ್' ಇತಿ ಶ್ರುತೌ ಕಾಣ್ವಪಠಿತಸ್ಯ ಪರ್ಯಾಯಸ್ಯ ಸ್ಥಾನೇ ಮಾಧ್ಯಂದಿನಾಃ 'ಯ ಆತ್ಮನಿ ತಿಷ್ಠನ್' ಇತಿ ಕಾಣ್ವಶಾಖಾ ಪಾಠಗತವಿಜ್ಞಾನಶಬ್ದನಿರ್ದಿಷ್ಟಂ ಜೀವಾತ್ಮೇತಿ ಸ್ಫುಟೀಕುರ್ವಂತಿ. ವಿಜ್ಞಾನಮಿತಿ ನಪುಂಸಲಿಂಗಂ ವಸ್ತುತ್ವಾಭಿಪ್ರಾಯಂ ತದೇವ. ವಿಜ್ಞಾನ ಮಯಾಜ್ಜೀವಾದನ್ಯಸ್ತದಂತರ್ಗತಃ ಪರಮಾತ್ಮಾನಂದಮಯಃ. 'ಕೃತ್ಯ ಲ್ಯುಟೋ ಬಹುಲಂ' ಇತಿ ಕರ್ತರಿ ಲ್ಯುಡಾಶ್ರಿಯತೆ. ಅತ ಏವ ವಿಜ್ಞಾನಂ ಯಜ್ಞಂ ತನುತೆ "ಕರ್ಮಾಣಿ ತನುತೇಽಪಿ ಚ" ಇತಿ ಯಜ್ಞಾ ದಿಕರ್ತೃತ್ವಂ ವಿಜ್ಞಾನಸ್ಯೈವ ಶ್ರೂಯತೆ, ತಸ್ಮಾನ್ನ ಭಾವಲ್ಯುಟೋಽಂಗೀ ಕಾರಃ. ನನು ಜೀವಸ್ಯ ಚೇತನತ್ವಾತ್ 'ತದೈಕ್ಷತ ಬಹು ಸ್ಯಾಂ' ಇತಿ ಶ್ರುತಿ ನಿರ್ದಿಷ್ಟ ಜಗತ್ಕಾರಣತ್ವಸ್ಯೋಪಪತ್ತೇಃ ಕಾರಣಸ್ಯ ಪರಮೇಶ್ವರಸ್ಯ

ಜೀವಾತ್ಮಕರ್ತೃತ್ವಾಸಂಭವೇ 'ಅನೇನ ಜೀವೇನಾತ್ಮನೇತಿ' ಶ್ರುತಿವಿರೋಧ ಇತಿ ಚೇನ್ನ, 'ಸತ್ಯಕಾಮಸ್ಸತ್ಯಸಂಕಲ್ಪಃ' ಇತ್ಯಾದಿಶ್ರುತಿಸಿದ್ಧಸತ್ಯಕಾಮತ್ವಾದಿಧರ್ಮಾಣಾಂ ತಾಪತ್ರಯಬದ್ಧಜೀವಸ್ಯಾಸಂಭವಾನ್ನ ಜಗತ್ಕಾರಣತ್ವಂ. 'ಸದೇವ ಸೋಮ್ಯ' ಇತ್ಯಾದಿನಾ ಸೃಷ್ಟೇಃ ಪೂರ್ವಕಾಲೇ ನಾಮರೂಪವಿಭಾಗಶೂನ್ಯತ್ವಂ, ವಿಶ್ವೋತ್ಪತ್ತೌ ಸಚ್ಛಬ್ದವಾಚ್ಯಸ್ಯ ಪರಮೇಶ್ವರಸ್ಯ 'ಬಹು ಸ್ಯಾಂ' ಇತ್ಯಾದಿನಾ ಜಗದುಭಯಕಾರಣತ್ವಂ ತಸ್ಯೈವ ನಿರ್ದಿಷ್ಟತ್ವಾತ್ ಪ್ರಳಯೇ ಸ್ವಾಂತರ್ಗುಪ್ತಬದ್ಧಜೀವಾನಾಂ ಸ್ವಾಂಶತ್ವಾತ್ಸ್ವಾತ್ಮನಾನುಪ್ರವೇಶೇನ ನಾಮರೂಪವ್ಯಾಕರಣಕರ್ತೃತ್ವಂ ಯುಕ್ತಮೇವ. ನಿರ್ವಿಶೇಷಸ್ಯೋಪಾಸನಾಽಸಂಭವಾತ್, 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಇತ್ಯಾದೌ ಪರಮೇಶ್ವರಸ್ಯೋಪಾಸನಾರ್ಥಮಧಿಕಾರಿಭೇದೇನ ಸಾವಯವತ್ವಮುಪದಿಶ್ಯತೇ. ಸಾವಯವೋಪಾಸನಾಯಾ ಅಪಿ ನಿರವಯವಪ್ರಾಪ್ತಿರೇವ ಫಲಂ. ಕೈವಲ್ಯೇ "ಉಮಾಸಹಾಯಂ............ ತಮಸಃ ಪರಸ್ತಾತ್" ಇತಿ ಸಾವಯವೋಪಾಸನಸ್ಯ ನಿರವಯವೋಪಾಸನಸಿದ್ಧಿರಾಚಕ್ಷ್ಯತೇ. ಅತೋ ನ ವಿರೋಧಃ.

"ಸುಷುಪ್ತಕಾಲದಲ್ಲಿ ಎಲ್ಲವೂ ಲಯವಾಗುವುದರಿಂದ ತಮಸ್ಸಿನಿಂದ ವ್ಯಾಪ್ತನಾಗಿ ಜೀವನು ಸುಖಸ್ವರೂಪವನ್ನು ಹೊಂದುತ್ತಾನೆ" ಎಂದು ಶ್ರುತಿಯಲ್ಲಿ ಸುಷುಪ್ತಿಯಲ್ಲಿ ಬ್ರಹ್ಮಸಾಕ್ಷಾತ್ಕಾರಕ್ಕೆ ಪ್ರತಿಬಂಧಕವಾದ ತಮಸ್ಸೆಂಬ ಪಾಶದೊಡನೆ ಜೀವನು ಆನಂದಮಯನಾದ ಪರಮೇಶ್ವರನಲ್ಲಿ ಲೀನನಾಗುವುದರಿಂದ, ಆ ಪಾಶದ ನಿವೃತ್ತಿಗಾಗಿ ಅವನು ಸುಷುಪ್ತಿಯಿಂದ ಎದ್ದಮೇಲೆ ಪ್ರಾರ್ಥನೆಮಾಡುವುದು ಯುಕ್ತವೇ ಆಗಿದೆ. ಇದರಲ್ಲಿ ಯಾವ ವಿರೋಧವೂ ಇಲ್ಲ. "ಜ್ಞಾಜ್ಞೌ" ಎಂಬ ಶ್ರುತಿಯಲ್ಲಿ ಜೀವನನ್ನು ಸನಾತನನೆಂದು ಹೇಳಿರುವುದರಿಂದ, ಮೃಣ್ಮಯವಾದ ಘಟದಂತೆ ಆನಂದಮಯನೆಂದರೆ ಆನಂದದ ವಿಕಾರನೆಂದು ಹೇಳುವುದು ಯುಕ್ತವಲ್ಲ. 'ದ್ವಾ ಸುಪರ್ಣಾ', 'ಪ್ರಧಾನ ಜೀವರಿಗೆ ನಿಯಾಮಕನು'. "ಎಲ್ಲಾ ಜೀವರಿಗೂ ಈಶ್ವರನು" ಇತ್ಯಾದಿ ನೂರಾರು ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಪರಸ್ಪರವಾಗಿ ಭೇದವಿರುವುದೆಂದು ತಿಳಿಸಲಾಗಿದೆ. ಅನೇಕ ಶರೀರಗಳಿಗೆ ಹೋಗುವುದು ಬರುವುದು ಈ ಬಗೆಯ ವ್ಯವಹಾರದಲ್ಲಿ ಸಿಲುಕಿರುವ ಜೀವನು ಬ್ರಹ್ಮನಲ್ಲವೆಂಬುದು ಯುಕ್ತವಾಗಿದೆ. "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" 'ನೀನು ಅದೇ ಆಗಿದ್ದೀಯೆ' ಈ ಶ್ರುತಿಗಳಲ್ಲಿ ಸ್ವಾಭಾವಿಕವಾದ ಜೀವನು ಭ್ರಮರಕೀಟನ್ಯಾಯದಿಂದ ಪರಮೇಶ್ವರನ ಉಪಾಸನದಿಂದ ಶಿವನೇ ಆಗುವನೆಂದು ತಿಳಿಸಲಾಗಿದೆ. ಹಾಗೆ ಹೇಳದೆಹೋದರೆ ಶ್ರುತಿ ಯುಕ್ತಿ ಮತ್ತು ಅನುಭವಗಳ ವಿರೋಧ ಸಂಭವಿಸುತ್ತದೆ, ಇದೂ ಅಲ್ಲದೆ "ಜೀವಪ್ರಕೃತಿಗಳು ಉಪಾಸನೆಗರ್ಹರಲ್ಲ" ಎಂದು ಶ್ರುತಿಯಲ್ಲಿ ಜೀವನನ್ನು ಉಪಾಸನಮಾಡುವ ಬಗ್ಗೆ ನಿಂದೆ ಕೇಳಬರುತ್ತದೆ. ಆದರಿಂದ ಜೀವನಿಗೆ ಸ್ವರೂಪಜ್ಞಾನದಿಂದ ಮುಕ್ತಿ ದೊರಕ

ಲಾರದು. 'ಶಿವನನ್ನು ತಿಳಿದು ಪರಮಶಾಂತಿಯನ್ನು ಹೊಂದುತ್ತಾನೆ' "ಅವನನ್ನು ತಿಳಿದು ಮೃತ್ಯುವಿನಿಂದ ಪಾರಾಗುತ್ತಾನೆ" ಎಂದು ಶ್ರುತಿಯಲ್ಲಿ ಜೀವನಿಗೆ ಪರಮೇಶ್ವರನ ಉಪಾಸನದಿಂದಲೇ ಮುಕ್ತಿ ದೊರಕುವುದೆಂದು ಹೇಳಲಾಗಿದೆ. ಆದ್ದರಿಂದ ಪ್ರಧಾನವೇ ಬ್ರಹ್ಮವೆಂಬ ವಾದದಂತೆ, ಜೀವನೇ ಬ್ರಹ್ಮನೆಂಬ ವಾದವೂ ಶ್ರುತಿಗೆ ವಿರುದ್ಧವಾಗುವುದು. 'ವಿಜ್ಞಾನನು ಯಜ್ಞವನ್ನಾಚರಿಸುತ್ತಾನೆ' ಎಂಬಲ್ಲಿ ವಿಜ್ಞಾನಪದವು ಬುದ್ಧಿಯನ್ನು ತಿಳಿಸಲಾರದು. ಅದು ಜಡವಾದ್ದರಿಂದ ಒಂದು ಕರ್ಮಕ್ಕೆ ಕರ್ತೃವಾಗಲಾರದು. ಗೋಶಬ್ದವು ಗೋತ್ವವಿಶಿಷ್ಟವಾದ ಗೋವನ್ನು ತಿಳಿಸುವಂತೆ ವಿಜ್ಞಾನಶಬ್ದವು ವಿಜ್ಞಾನವೆಂಬ ಧರ್ಮದೊಡಗೂಡಿದ ಧರ್ಮಿಜೀವನನ್ನು ತಿಳಿಸುತ್ತದೆ. 'ವಿಜ್ಞಾನಂ ಚಾವಿಜ್ಞಾನಂ ಚ' ಎಂಬಲ್ಲಿ ವಿಜ್ಞಾನ ಶಬ್ದವು ವಿಜ್ಞಾನವೇ ಗುಣವಾಗುಳ್ಳ ಚೇತನನನ್ನು ಬೋಧಿಸುತ್ತದೆ. ಅಂತರ್ಯಾಮಿಬ್ರಾಹ್ಮಣದಲ್ಲಿ 'ಯೋ ವಿಜ್ಞಾನೇ ತಿಷ್ಠನ್' ಎಂಬ ಕಾಣ್ವಶಾಖೆಯ ಪಾಠದ ಸ್ಥಾನದಲ್ಲಿ ಮಾಧ್ಯಂದಿನರು 'ಯ ಆತ್ಮನಿ ತಿಷ್ಠನ್' ಎಂದು ಆತ್ಮನ್ ಶಬ್ದವನ್ನುಪ್ರಯೋಗಿಸಿರುವುದರಿಂದ ವಿಜ್ಞಾನವೆಂದರೆ ಜೀವಾತ್ಮನೆಂದು ಸ್ಪಷ್ಟವಾಗುತ್ತದೆ. ವಸ್ತು ಎಂಬ ಅರ್ಥವನ್ನು ತಿಳಿಸಲಿಕ್ಕಾಗಿ ವಿಜ್ಞಾನಪದವನ್ನು ನಪುಂಸಕಲಿಂಗದಲ್ಲಿ ಪ್ರಯೋಗಿಸಲಾಗಿದೆ. ಆದ್ದರಿಂದ ವಿಜ್ಞಾನಮಯನೆಂದರೆ ಜೀವನೆಂದರ್ಥ. ಅವನಿಗಿಂತ ಬೇರೆಯಾಗಿ ಅವನೊಳಗಿರುವ ಪರಮಾತ್ಮನೇ ಆನಂದಮಯನೆನಿಸಿರುವನು. 'ವಿಜ್ಞಾನಂ'ಎಂಬಲ್ಲಿ 'ಕೃತ್ಯಲ್ಯುಟೋ ಬಹುಳಂ' ಎಂಬ ಸೂತ್ರದಿಂದ ಕರ್ತ್ರರ್ಥದಲ್ಲಿ ಲ್ಯುಟ್‌ಪ್ರತ್ಯಯ ಬಂದಿರುವುದರಿಂದ 'ವಿಜ್ಞಾನರೂಪನಾದ ಜೀವನು ಯಜ್ಞಮಾಡುತ್ತಾನೆ' ಎಂದು ಯಜ್ಞಕರ್ತೃತ್ವವನ್ನು ಅವನಿಗೇ ಶ್ರುತಿಯಲ್ಲಿ ತಿಳಿಸಿದೆ. ಆದ್ದರಿಂದ ಇಲ್ಲಿ ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ ಬಂದಿಲ್ಲ. "ಜೀವನು ಚೇತನನಾದ್ದರಿಂದ 'ತದೈಕ್ಷತ' ಎಂಬ ಶ್ರುತಿಯಲ್ಲಿ ಹೇಳಿರುವ ಈಕ್ಷಣಪೂರ್ವಕವಾದ ಜಗತ್ಕರ್ತೃತ್ವವು ಅವನಿಗೇ ಹೊಂದುತ್ತದೆ. ಈಶ್ವರನು ಜೀವನಾಗದೆಹೋದರೆ 'ಈ ಜೀವನೊಳಗೆ ಪ್ರವೇಶಿಸಿ ನಾಮರೂಪಗಳನ್ನು ವಿಸ್ತರಿಸುವೆನು' ಎಂಬ ಶ್ರುತಿಗೆ ವಿರೋಧ ಬರುವುದು" ಎಂದು ಹೇಳುವುದು ಸರಿಯಲ್ಲ. ಯಾಕೆಂದರೆ, ಶ್ರುತಿಯಲ್ಲಿ ಹೇಳಿರುವ ಸತ್ಯಕಾಮವೇ ಮೊದಲಾದ ಧರ್ಮಗಳು ತಾಪತ್ರಯವಿಶಿಷ್ಟನಾದ ಅಲ್ಪಜ್ಞ ಜೀವನಿಗೆ ಸಂಭವಿಸುವುದಿಲ್ಲವಾದ್ದರಿಂದ ಜೀವನು ಜಗತ್ಕಾರಣನಾಗಲಾರನು. 'ಸದೇವ ಸೋಮ್ಯ' ಎಂಬ ಶ್ರುತಿಯಂತೆ ಸೃಷ್ಟಿಗೆ ಮೊದಲು ನಾಮರೂಪಗಳ ವಿಭಾಗವಿಲ್ಲದೇ ಇದ್ದು, ಸೃಷ್ಟಿಕಾಲದಲ್ಲಿ ಸತ್ವದಿಂದ ಬೋಧಿತನಾದ ಪರಮೇಶ್ವರನಿಗೆ 'ಬಹುಸ್ಯಾಂ' ಎಂಬ ಸಂಕಲ್ಪವು ಕಂಡು ಬಂದಿರುವುದರಿಂದ ಅವನೇ ಜಗತ್ತಿಗೆ ಉಭಯಕಾರಣನಾಗಿರುವನು. ಪ್ರಳಯಕಾಲದಲ್ಲಿ ತನ್ನೊಳಗೆ ಲೀನರಾಗಿದ್ದ ಬದ್ಧಜೀವರು ತನ್ನ ಅಂಶರೇ ಆದ್ದರಿಂದ 'ಈ ಜೀವನೊಳಗೆ ಪ್ರವೇಶಿಸಿದನು' ಎಂಬ ನಿರ್ದೇಶವು ಪರಶಿವನಿಗೆ ಯುಕ್ತವಾಗಿ ಹೊಂದು

ತ್ತದೆ. ನಿರ್ವಿಶೇಷ ಬ್ರಹ್ಮವನ್ನು ಉಪಾಸನಮಾಡಲಿಕ್ಕಾಗುವುದಿಲ್ಲ. ಆದ್ದರಿಂದ ಉಪಾಸನೆಗಾಗಿ ಅಧಿಕಾರಿಗಳ ಯೋಗ್ಯತೆಗನುಗುಣವಾಗಿ ಪರಬ್ರಹ್ಮಕ್ಕೆ ತಲೆ ಕಾಲು ಮೊದಲಾದ ಅವಯವಗಳನ್ನು ಹೇಳಲಾಗಿದೆ. ಸಾವಯವ ಬ್ರಹ್ಮದ ಉಪಾಸನೆಗೂ ನಿರವಯವ ಬ್ರಹ್ಮದ ಪ್ರಾಪ್ತಿಯೇ ಫಲವಾಗುವುದು. ಕೈವಲ್ಯದಲ್ಲಿ 'ಉಮಾಸಹಾಯಂ' ಎಂದು ಆರಂಭಿಸಿ 'ತಮಸ್ಸಿಗಿಂತಲೂ ಆಚೆಗಿನ ಸರ್ವಸಾಕ್ಷಿ ಚೈತನ್ಯವನ್ನು ಹೊಂದುತ್ತಾನೆ' ಎಂದು ಹೇಳಿದ್ದರಿಂದ ಸಾವಯವದ ಉಪಾಸನವೂ ನಿರವಯವೋಪಾಸನದ ಫಲವನ್ನು ಕೊಡುವುದೆಂಬುದರಲ್ಲಿ ಏನೂ ವಿರೋಧವಿಲ್ಲ.

**ಅನ್ನಮಯಾದಿಮಯಟ್ಪ್ರತ್ಯಯಪ್ರವಾಹಪ್ರಕರಣಪಠಿತತ್ವಾದಾನಂದಮಯಸ್ಯಾಪಿ 'ಮೃಣ್ಮಯೋ ಘಟಃ' ಇತ್ಯಾದಿವದ್ವಿಕಾರಾರ್ಥತ್ವಮೇವೇತ್ಯಾಶಂಕಾಯಾಮಾಹ—**

**ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ||೧೪||**

**ಮಯಟ್‌ಪ್ರತ್ಯಯಸ್ಯ ವಿಕಾರಾರ್ಥಕತ್ವಾದಾನಂದಮಯ ಇತ್ಯತ್ರಾಪಿ ವಿಕಾರಾರ್ಥಕತ್ವಮೇವೇತಿ ಚೇನ್ನ, ಕುತಃ, ಪ್ರಾಚುರ್ಯಾತ್ ಬ್ರಹ್ಮಣಃ ಆನಂದಪ್ರಾಚುರ್ಯಾತ್. ಅನ್ನಮಯೋ ಯಜ್ಞಃ, ಅಂಶುಮಯಃ ಸೂರ್ಯಃ, ವಿಪ್ರಮಯೋ ಗ್ರಾಮಃ, ವಿಹಂಗಮಯೋ ವೃಕ್ಷಃ ಇತ್ಯಾದೌ ಪ್ರಾಚುರ್ಯಾರ್ಥೇಽಪಿ ಮಯಟ್ಪ್ರತ್ಯಯಸ್ಯ ದರ್ಶನಾತ್ ಅತ್ರಾನಂದಮಯಶಬ್ದೇನಾನಂದಪ್ರಚುರಃ ಪರಮೇಶ್ವರ ಏವೋಚ್ಯತೇ. 'ಸೈಷಾನಂದಸ್ಯ ಮೀಮಾಂಸಾ' ಇತ್ಯುಪಕ್ರಮ್ಯ ಮಾನುಷವಿಶೇಷಾದಿಪ್ರಜಾಪತಿಪರ್ಯಂತಮುತ್ತರೋತ್ತರಾನಂದಸ್ಯ ಶತಗುಣಮತಿಶಯಾನಂದಮಭಿಧಾಯ 'ಸ ಏಕೋ ಬ್ರಹ್ಮಣ ಆನಂದಃ' ಇತಿ ಬ್ರಹ್ಮಾನಂದೋ ನಿರತಿಶಯೇನಾಭ್ಯಸ್ಯತೇ. ತಸಾತ್ಪ್ರಾಚುರ್ಯಾರ್ಥೇ ಮಯಡಿತಿ ಸಿದ್ಧಂ. ನನು ಮಯಟ್ಪ್ರತ್ಯಯಸ್ಯ 'ಅನ್ನಮಯೋ ಯಜ್ಞಃ' ಇತ್ಯಾದಿವತ್ಪ್ರಾಚುರ್ಯಾರ್ಥಕತ್ವೇಽಪಿ ನ ಜೀವಾದನ್ಯತ್ವಮುಪಪದ್ಯತೇ. ಆನಂದಪ್ರಚುರತ್ವೇ ದುಃಖಾಲ್ಪತ್ವಮರ್ಥಾತ್ಸಿದ್ಧಂ, ಜೀವಸ್ಯ ಸುಖದುಃಖಾಶ್ರಯತ್ವಾತ್. ತಸ್ಮಾದ್ವಿಕಾರಾರ್ಥಕತ್ವಮೇವ ಸಮುಚಿತಂ. ಅನ್ನಮಯ ಇತ್ಯುಪಕ್ರಮೇ ವಿಕಾರಾರ್ಥಕತ್ವದರ್ಶನಾತ್, ಲೋಕೇ ಮೃಣ್ಮಯದಾರುಮಯರಜತಮಯತಾಮ್ರಮಯಾದಿಷು, ವೇದೇ 'ಪರ್ಣಮಯೀ ಜುಹೂಃ, ಸಮೀಮಯ್ಯಃ ಸ್ರುಚಃ' 'ದರ್ಭಮಯೀ ರಶನಾ' ಇತ್ಯಾದಿಷ್ವಪಿ ಮಯಟೋ ವಿಕಾರಾರ್ಥದರ್ಶನಾಜ್ಜೀವಸ್ಯೈವಾತ್ರಾನಂದಮಯತ್ವಂ ಉಭಯಥಾ ಸಂಭವತೀತಿ ಚೇನ್ನ, ಆನಂದಪ್ರಚುರತ್ವಂ ಹಿ ಆನಂದಪ್ರಭೂತತ್ವಂ, ತತ್ತು ತ್ರೈಕಾಲಿಕದುಃಖಾತ್ಯಂತಾಭಾವವತ್ತ್ವಂ. ತಾಪ**

**ತ್ರಯವಿಶಿಷ್ಟಸ್ಯಜೀವಸ್ಯ ತದಸಂಭವಾನ್ನ ಚಾನಂದಮಯತ್ವಂ, ಚೇತಸಸ್ಯ ಮೃದಾದಿವತ್ಪರಿಣಾಮಾಂಗೀಕಾರೇ ಶ್ರುತಿಸ್ಮೃತಿವಿರೋಧಪ್ರಸಂಗಸ್ಸ್ಯಾ ದಿತಿ ನ ವಿಕಾರಾರ್ಥೋ ವಿಧೀಯತೇ.**

ಅನ್ನಮಯವೇ ಮೊದಲಾದ ಪದಗಳಲ್ಲಿ ಮಯಟ್ ಪ್ರತ್ಯಯವು ಬಂದಿರು ವಂತೆಯೇ ಒಂದೇ ಪ್ರಕರಣದಲ್ಲಿ ಆನಂದವೆಂಬ ಪದದಲ್ಲಿಯೂ ಬಂದಿರುವುದರಿಂದ ಅಲ್ಲಿಯೂ ಮೃಣ್ಮಯವೆಂಬಂತೆ ಮಯಟ್ ಪ್ರತ್ಯಯಕ್ಕೆ ವಿಕಾರಾರ್ಥವೇ ಆಗಲಿ ಎಂದು ಆಶಂಕಿಸಿ ಸಮಾಧಾನವನ್ನು ಹೇಳುತ್ತಾನೆ.

**ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ||೧೪||**

ಆನಂದಮಯ ಎಂಬ ಪದದಲ್ಲಿ ಮಯಟ್ ಪ್ರತ್ಯಯವು ವಿಕಾರವೆಂಬ ಅರ್ಥ ವನ್ನೇ ಹೇಳುತ್ತದೆ ಎನ್ನುವುದು ಸರಿಯಲ್ಲ. ಯಾಕೆಂದರೆ ಅಲ್ಲಿ ಪ್ರಾಚುರ್ಯವೆಂಬ ಅರ್ಥದಲ್ಲಿ ಮಯಟ್ ಪ್ರತ್ಯಯ ಬಂದಿದೆ. ಬ್ರಹ್ಮವು ಆನಂಪಪೂರ್ಣವಾಗಿರುವು ದರಿಂದ ಆನಂದಮಯವೆನಿಸಿದೆ. 'ಯಜ್ಞವು ಅನ್ನಮಯವು' 'ಸೂರ್ಯನು ರಶ್ಮಿಮಯನು' 'ಗ್ರಾಮವು ವಿಪ್ರಮಯವು' 'ವೃಕ್ಷವು ಪಕ್ಷಿಮಯವು." ಇಲ್ಲ ಪ್ರಾಚು ರ್ಯವೆಂಬ ಅರ್ಥದಲ್ಲಿಯೇ ಮಯಟ್ ಪ್ರತ್ಯಯ ಬಂದಿದೆ. ಆದ್ದರಿಂದ ಆನಂದಮಯ ನೆಂದರೆ ಆನಂದಪ್ರಚುರನಾದ ಪರಮೇಶ್ವರನೆಂದೇ ತಿಳಿಯಬೇಕು. 'ಇದು ಆನಂದದ ಮೀಮಾಂಸೆಯಾಗಿದೆ' ಎಂದು ಆರಂಭಿಸಿ, ಮನುಷ್ಯನಿಂದ ಪ್ರಜಾಪತಿಯ ವರೆಗೆ ಉತ್ತರೋತ್ತರವಾಗಿ ನೂರರಷ್ಟು ಆನಂದದ ಪ್ರಾಚುರ್ಯವನ್ನು ತಿಳಿಸಿ, ಬ್ರಹ್ಮದಲ್ಲಿ ನಿರತಿಶಯವಾದ ಆನಂದವನ್ನು ಹೇಳಿ 'ಅದೊಂದೇ ಬ್ರಹ್ಮದ ಆನಂದ'ವೆಂದು ಬ್ರಹ್ಮಾನಂದವನ್ನು ನಿರತಿಶಯವೆಂದು ತಿಳಿಸಲಾಗಿದೆ. ಆದ್ದ ರಿಂದ ಪ್ರಾಚುರ್ಯವೆಂಬ ಅರ್ಥದಲ್ಲಿ ಮಯಟ್ ಪ್ರತ್ಯಯವು ಪ್ರಸಿದ್ಧವಾಗಿದೆ. ಮಯಟ್ ಪ್ರತ್ಯಯಕ್ಕೆ 'ಅನ್ನಮಯೋ ಯಜ್ಞಃ' ಎಂಬಂತೆ ಪ್ರಾಚುರ್ಯವೆಂಬ ಅರ್ಥವನ್ನು ಹೇಳಿದರೂ, ಆನಂದಮಯನು ಜೀವನಲ್ಲದೆ ಬೇರೆಯವರಿಗೆ ಅನ್ವಯಿಸ ಲಾರದು, ಯಾಕೆಂದರೆ ಆನಂದಪ್ರಚುರನೆಂದು ಹೇಳಿದಮೇಲೆ ಅಲ್ಲಿ ದುಃಖವೂ ಕೊಂಚ ಉಂಟೆಂಬ ಅರ್ಥವಾಗುತ್ತದೆ. ಪರಮಾತ್ಮನಲ್ಲಿ ದುಃಖದ ಪ್ರಸಕ್ತಿಯೇ ಇಲ್ಲವಾದ್ದರಿಂದ ದುಃಖಮಿಶ್ರನಾದ ಜೀವನೇ ಆನಂದಮಯನೆನಿಸುವನು. ಆದ್ದರಿಂದ ಮಯಟ್ ಪ್ರತ್ಯಯಕ್ಕೆ ವಿಕಾರಾರ್ಥವನ್ನು ಹೇಳುವುದೇ ಯುಕ್ತವಾಗುತ್ತದೆ. ಅನ್ನಮಯ ಎಂದು ಆರಂಭದಲ್ಲಿ ವಿಕಾರಾರ್ಥವನ್ನೇ ಹೇಳಿರುವುದಾಗಿ ಕಂಡುಬಂದಿದೆ. ಲೋಕದಲ್ಲಿ ಮೃಣ್ಮಯ, ದಾರುಮಯ, ರಜತಮಯ, ತಾಮ್ರಮಯವೆಂದೂ, ವೇದದಲ್ಲಿ 'ಪರ್ಣಮಯೀ ಜುಹೂಃ-ಶಮೀಮಯೀಸ್ರುಕ್-ದರ್ಭಮಯೀರಶನಾ' ಎಂದೂ ಮಯಟ್ ಪ್ರತ್ಯಯವು ವಿಕಾರಾರ್ಥದಲ್ಲಿಯೇ ಬಂದಿರುವದಾಗಿ ಕಂಡುಬಂದಿ ರುವುದರಿಂದ ಜೀವನೇ ಆನಂದವಿಕಾರನಾದ್ದರಿಂದ ಆನಂದಮಯನೆನಿಸಿದ್ದಾನೆ ಎಂದು

ಹೇಳಬಹುದಲ್ಲವೇ ? ಅಂದರೆ ಇದು ಸರಿಯಲ್ಲ, ಆನಂದಪ್ರಚುರನೆಂದರೆ ಆನಂದದಿಂದ ತುಂಬಿಕೊಂಡಿರುವನು ಎಂದರ್ಥ. ಇದರಿಂದ ಮೂರು ಕಾಲಗಳಲ್ಲೂ ದುಃಖದ ಸಂಪರ್ಕವಿಲ್ಲವೆಂದೇ ಸೂಚಿತವಾಗುತ್ತದೆ. ತಾಪತ್ರಯವೆಂಬ ಬೆಂಕಿಯಲ್ಲಿ ಬೇಯು ತ್ತಿರುವ ಜೀವನಿಗೆ ಆನಂದಪೂರ್ಣತೆ ಸಂಭವಿಸುವುದಿಲ್ಲವಾದ್ದರಿಂದ ಇವನು ಆನಂದ ಮಯನಾಗಲಾರನು. ಚೇತನ ಪರಮಶಿವನಿಗೆ ಮಣ್ಣಿನಂತೆ ಸ್ವರೂಪಪರಿಣಾಮ ವನ್ನು ಹೇಳಿದರೆ ಶ್ರುತಿಸ್ಮೃತಿಗಳ ವಿರೋಧವುಂಟಾಗುವುದರಿಂದ ಮಯಟ್ ಪ್ರತ್ಯಯವು ವಿಕಾರಾರ್ಥವನ್ನು ಬೋಧಿಸಲಾರದು. ಆದ್ದರಿಂದ ಆನಂದಮಯನೆಂದರೆ ಆನಂದಪ್ರಚುರನಾದ ಪರಶಿವನೆಂದು ಸಿದ್ಧವಾಯಿತು.

ಪುನರ್ಹೇತ್ವಂತರಮಾಹ—ತದ್ಧೇತುವ್ಯಪದೇಶಾಚ್ಚ ॥ ೧೫ ॥

'ಕೋ ಹ್ಯೇವಾನ್ಯಾತ್—ಏಷ ಹ್ಯೇವಾನಂದಯಾತಿ' ಇತಿ ಸರ್ವ ಜೀವಾನಂದಹೇತುತ್ವೇನ ಆನಂದಮಯೋ ವ್ಯಾಚಕ್ಷ್ಯತೇ. ಲೋಕೇ ವಿದ್ವಾ ನೇವ ವಿದ್ವಾಂಸಂ ಕರೋತಿ, ಧನವಾನೇವ ಧನವಂತಂ ಕರೋತಿ. ಸ್ವಯಂಪ್ರಕಾಶಸ್ಸೂರ್ಯಾದಿರೇವ ಸ್ವಾನ್ಯಾನ್ ಪ್ರಕಾಶಯತಿ, ತದ್ವದಾ ನಂದಮಯಃ ಪರಮೇಶ್ವರಃ ಸರ್ವಜೀವಾನ್ ಸುಷುಪ್ತೌ ಸ್ವಕೀಯಾ ನಂದಂ ದತ್ವಾ ಆನಂದಯತಿ, ತಸ್ಮಾದಾನಂದಮಯೋ ನೇತರಃ. ತಸ್ಯ ಜೀವಾನಂದಸ್ಯ ಆನಂದಮಯಃ ಪರಮೇಶ್ವರೋ ಹೇತುರಿತಿ ವ್ಯಪದೇ ಶಾಚ್ಚ ಕೀರ್ತನಾತ್ ಜೀವಾನಂದಂ ಪ್ರತಿ ತಸ್ಯ ಪ್ರಕೃತ್ಯಾನಂದಸ್ಯಹೇತುತ್ವಂ ವ್ಯಪದೇಶಾದ್ವಾ, ಯದ್ವಾ, ಸ ಆನಂದಮಯೋ ಹೇತುರ್ಯಜ್ಜೀವಾ ನಂದಸ್ಯ ಸಃ ತದ್ಧೇತುರಿತಿ ಸೂತ್ರಾರ್ಥಃ. ನನು ಬ್ರಹ್ಮಣೋ ನಿರ್ವಿಶೇಷ ತ್ವಾತ್ ಆನಂದಮಯತ್ವಂ ಆನಂದಪ್ರದಾಯಕತ್ವಮನುಪಪನ್ನಂ. 'ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚಿತಂ' ಇತಿ ಪೂರ್ವಾಚಾರ್ಯೋಕ್ತನ್ಯಾಯಮನುಸೃತ್ಯ ಪ್ರಪಂಚಸ್ಯ ವ್ಯವಹಾರ ಮಾತ್ರಸತ್ಯತ್ವಾಂಗೀಕಾರಾದೌಪಚಾರಿಕತ್ವೇನಾನಂದಮಯತ್ವಂ ಬ್ರಹ್ಮ ಣ್ಯಂಗೀಕ್ರಿಯತ ಇತಿ ಚೇನ್ನ, ವ್ಯಾವಹಾರಿಕಸತ್ಯತ್ವಂ ನಾಮ ಕಾಲಾಂತ ರಾನವಸ್ಥಾಯಿವಸ್ತುತ್ವಂ? ಸದಸದ್ವಿಲಕ್ಷಣತ್ವಂ ವಾ? ಸತ್ತ್ವಾಸತ್ತ್ವಾಭ್ಯಾಂ ನಿರ್ವಕ್ತುಮಶಕ್ಯತ್ವಂ ವಾ? ನಾದ್ಯಃ, ಯತ್ಕಿಂಚಿತ್ಕಾಲಾಂತರಾನವಸ್ಥಾ ಯಿವಸ್ತುತ್ವಸ್ಯ ಘಟಪಟಾದೌ ಅಸ್ಮಾಭಿರಂಗೀಕಾರಾದಂಶತಸಿದ್ಧಸಾಧ ನಾತ್. "ಗೌರನಾದ್ಯಂತವತೀ" ಇತ್ಯುಕ್ತಾಯಾಃ ಪ್ರಕೃತೇಸ್ಸರ್ವಕಾ ಲಾಂತರಾವಸ್ಥಾಯಿತಯಾ ಅವ್ಯಾಪ್ತೇಶ್ಚ. ಕಾಲಾಂತರಾವಸ್ಥಾಯಿ ತ್ವಾವಚ್ಛಿನ್ನಸಾಮಾನ್ಯಾಭಾವವಿವಕ್ಷಾಯಾಂ ದ್ವಿತೀಯಕ್ಷಣಸ್ಯಾಪಿ ಕಾಲಾಂತರತಯಾ ತದನವಸ್ಥಾಯಿತ್ವಸಾಧನೇನ ವೈಭಾಷಿಕಾಂಗೀಕೃತಂ ಕ್ಷಣಿಕತ್ವಮೇವ ಸಾಧಿತಂ ಸ್ಯಾತ್. ನನು ಸ್ವದೇಶಕಾಲನಿಷ್ಠಾತ್ಯಂತಾಭಾ

ವಪ್ರತಿಯೋಗಿತ್ವರೂಪಂ ಮಿಥ್ಯಾತ್ವಮಿತಿ ಸ್ವಸಿದ್ಧಾಂತವಿರೋಧಃ, ಪ್ರಾತಿಭಾಸಿಕೇ ಅತಿವ್ಯಾಪ್ತೇಶ್ಚ. ನ ದ್ವಿತೀಯಃ, ಸದಸದಾತ್ಮಕಸ್ಯ ಪ್ರತಿಯೋಗಿನೋಽಪ್ರಸಿದ್ಧ್ಯಾ ತದ್ವಿಲಕ್ಷಣಸ್ಯಾಪ್ರಸಿದ್ಧೇಃ. ನಾಪಿ ಸತ್ತ್ವಾವಚ್ಛಿನ್ನಾಸತ್ತ್ವಾವಚ್ಛಿನ್ನಾಭ್ಯಾಂ ಭಿನ್ನತ್ವಂ, ಸತ್ಯಸತಿ ಚಾತಿವ್ಯಾಪ್ತೇಃ. ನಾಪಿ ಸತ್ತ್ವಾವಚ್ಛಿನ್ನಪ್ರತಿಯೋಗಿತಾಕಭೇದವತ್ತ್ವೇ ಸತೀತ್ಯಾದಿ ವಿವಕ್ಷಾ ಯುಕ್ತಾ. ತಥಾಪಿ ನಿರ್ಧರ್ಮಕೇ ಬ್ರಹ್ಮಣಿ ಅತಿವ್ಯಾಪ್ತೇಃ. ನ ಚ ನಿರ್ಧರ್ಮಕತ್ವಾದೇವ ನಾತಿವ್ಯಾಪ್ತಿರಿತಿ ವಾಚ್ಯಂ, ಹೇತುಸಾಧ್ಯಯೋರಪಕ್ಷಧರ್ಮತ್ವಪ್ರಸಂಗಾತ್. ಅಥ ಸದ್ರೂಪಭಿನ್ನತ್ವಂ? ತದಪಿ ನ, ಸದಂತರಮಾದಾಯ ಸಿದ್ಧಸಾನಾತ್. ಯಾವತ್ಸದ್ರೂಪಾನ್ಯತ್ವವಿವಕ್ಷಾಯಾಮಪ್ಯೇಕೈಕಸ್ಯ ಯಾವತ್ಸದ್ರೂಪಾನ್ಯತ್ವೇನ ಸೈವ ಸಿದ್ಧಸಾಧನತಾ. ಅಥ ಸದ್ರೂಪಾವಚ್ಛಿನ್ನಸಾಮಾನ್ಯಾನ್ಯೋನ್ಯಾಭಾವೋ ವಿವಕ್ಷಿತ ಇತಿ ಮತಂ? ತದಪಿ ಬ್ರಹ್ಮಣ್ಯತಿವ್ಯಾಪ್ತೇರೇವ ದುಷ್ಟಂ. ಅಥ ಯಾವಂತಸ್ಸದ್ರೂಪಾಸ್ತಾವತ್ಪ್ರತಿಯೋಗಿಕತತ್ತದ್ಧರ್ಮಾವಚ್ಛಿನ್ನಾನ್ಯೋನ್ಯಾಭಾವಕೂಟಾಶ್ರಯತ್ವಂ ವಿವಕ್ಷಿತಂ, ಏವಮಸದ್ವಿಲಕ್ಷಣತ್ವಮಪಿ ನಿರ್ವಾಚ್ಯಮಿತಿ ನಿರುಚ್ಯೇತ–ತದನಿವಾರಿತಂ. ಯಾವತಾಂ ಸದ್ರೂಪಾಣಾಂ ಭವನ್ಮತೇಽಪ್ರಸಿದ್ಧ್ಯಾ ತತ್ಪ್ರತಿಯೋಗಿಕಭೇದಕೂಟಾಪ್ರಸಿದ್ಧೇಃ, ಬ್ರಹ್ಮಣಿ ಪ್ರಾತಿಭಾಸಿಕೇ ಚಾತಿವ್ಯಾಪ್ತೇಶ್ಚ. ನಚ ಬ್ರಹ್ಮಾನ್ಯತ್ವೇ ಸತ್ಯಸದ್ವಿಲಕ್ಷಣತ್ವಂ, ಸಿದ್ಧಸಾಧನತಾಯಾಃ ದುರ್ವಾರತ್ವಾತ್. ಕಿಂಚ “ಸನ್ ಘಟಃ” ಇತ್ಯಾದಿಪ್ರತೀತ್ಯಾ ಘಟಾದೀನಾಂ ನ ಸದ್ವಿಲಕ್ಷಣತ್ವಂ ಯುಕ್ತಮಿತ್ಯಸಂಭವೋ ಲಕ್ಷಣಸ್ಯ. ನ ಚ ‘ನೇಹ ನಾನೇತಿ’ ಶ್ರುತ್ಯಾ ಪ್ರತ್ಯಕ್ಷಭಾಧಃ. ‘ಯಜಮಾನಃ ಪ್ರಸ್ತರಃ’, ‘ಆದಿತ್ಯೋ ಯೂಪಃ’, ‘ಸೋಮೇನ ಯಜೇತ’, ‘ಕೃಷ್ಣಲಂ ಸ್ನಪಯೇತ್’, ‘ಯಜಮಾನ ಏಕಕಪಾಲಃ’, ‘ತತ್ತ್ವಮಸಿ’ ಇತ್ಯಾದಿಷು ಶತಶಃ ಪ್ರತ್ಯಕ್ಷವಿರುದ್ಧಾನಾಂ ಶ್ರುತೀನಾಮೇವ ಪ್ರತಿಜ್ಞಾತಾರ್ಥಬಾಧದರ್ಶನಾತ್. ನನು ಸದ್ಘಟಯೋರಭೇದೇ ಘಟೇ ಕಲಶವತ್ಸಾಮಾನಾಧಿಕರಣ್ಯಾಸಂಭವಃ, ಭೇದೇಽಪಿ “ಘಟಃಪಟಃ” ಇತಿವತ್ ಸಾಮಾನಾಧಿಕರಣ್ಯಾಸಂಭವ ಏವ. ತಸ್ಮಾತ್ತಾದಾತ್ಮ್ಯಮೇವ ಸದ್ಘಟಯೋಃ ಪ್ರತೀತಿರಿಯಂ ವಿಷಯೀಕರೋತಿ. ತಚ್ಚ ಭಿನ್ನತ್ವೇ ಸತ್ಯಭಿನ್ನಸತ್ತಾಕತ್ವಂ. ತಸ್ಮಾತ್ಸದ್ಭೇದ ಏವ ಘಟಾದೀನಾಂ ಪ್ರತೀತಿಸಿದ್ಧ ಇತಿ ಚೇದತ್ರ ಬ್ರೂಮಃ. ಯದಭಿನ್ನತ್ವೇ ಸತ್ಯಭಿನ್ನಸತ್ತಾಕತ್ವಂ ತಾದಾತ್ಮ್ಯಂ? ತರ್ಹಿ “ನೇದಂ ರಜತಂ” ಇತಿ ಬಾಧಾನಂತರಂ ಇದಂ ರಜತಮಿತಿ ಪ್ರತೀತ್ಯಾಪ್ರತ್ತಿಃ. ವಿಶೇಷಣಪ್ರತೀತೇಃ ವಿಶಿಷ್ಟಪ್ರತೀತಿಂ ಪ್ರತ್ಯಬಾಧಕತ್ವಾತ್.

ಮತ್ತೊಂದು ಹೇತುವನ್ನು ತಿಳಿಸುತ್ತಾನೆ. **ತದ್ಧೇತುವ್ಯಪದೇಶಾಚ್ಚ ॥ ೧೫ ॥**

'ಆನಂದಸ್ವರೂಪನಾದ ಪರಶಿವನಿಲ್ಲದಿದ್ದರೆ ಯಾರು ತಾನೆ ಬದುಕಬಲ್ಲರು.' ಇವನೇ ಎಲ್ಲರನ್ನೂ ಆನಂದಪಡಿಸುತ್ತಾನೆ' ಎಂಬ ಶ್ರುತಿಯಲ್ಲಿ ಎಲ್ಲಾ ಜೀವರ ಆನಂದಕ್ಕೂ ಈ ಆನಂದಮಯನೇ ಕಾರಣನೆಂದು ಹೇಳಿದೆ. ಲೋಕದಲ್ಲಿಯೂ ಹೀಗೆಯೇ ಪ್ರಯೋಗಗಳೂ ಇವೆ. ವಿದ್ವಾಂಸನೇ ಮತ್ತೊಬ್ಬನನ್ನು ವಿದ್ವಾಂಸನನ್ನಾಗಿ ಮಾಡಬಲ್ಲನು. ಧನವಂತನೇ ಮತ್ತೊಬ್ಬನನ್ನು ಧನವಂತನನ್ನಾಗಿ ಮಾಡಬಲ್ಲನು ಸ್ವಯಂಪ್ರಕಾಶನಾದ ಸೂರ್ಯನೇ ತನಗಿಂತ ಬೇರೆಯವರನ್ನೂ ಬೆಳಗಬಲ್ಲನು. ಹಾಗೆಯೇ ಆನಂದಮಯನಾದ ಪರಮೇಶ್ವರನು ಜೀವರೆಲ್ಲರಿಗೂ ಸುಷುಪ್ತಿಯಲ್ಲಿ ತನ್ನ ಆನಂದವನ್ನು ಕೊಟ್ಟು ಆನಂದಪಡಿಸುತ್ತಾನೆ. ಆದ್ದರಿಂದ ಆನಂದಮಯನು ಬ್ರಹ್ಮವಲ್ಲದೆ ಬೇರೆ ಯಾರೂ ಅಲ್ಲ. ಆನಂದಮಯನನ್ನು ಜೀವಾನಂದಕ್ಕೆ ಕಾರಣನೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಆನಂದಮಯನೆಂದರೆ ಪರಮೇಶ್ವರನೆಂದೇ ತಿಳಿಯಬೇಕು. ಆನಂದಮಯನೇ ಹೇತುವಾಗುಳ್ಳ ಯಾವ ಜೀವಾನಂದವಿದೆಯೋ ಅದನ್ನು ತಿಳಿಸುವುದರಿಂದಲೂ ಆನಂದಮಯಪದವು ಪರಮೇಶ್ವರನಿಗೇ ಅನ್ವಯಿಸುತ್ತದೆ. ಹೀಗೆ ಎರಡು ಬಗೆಯಲ್ಲಿ ಸೂತ್ರದ ಅರ್ಥವನ್ನು ಹೇಳಬಹುದು ಬ್ರಹ್ಮ ನಿರ್ವಿಶೇಷವಾದ್ದರಿಂದ ಆನಂದಮಯವೆಂದರೆ ಆನಂದವನ್ನು ಕೊಡುವವನು ಎಂಬ ಅರ್ಥಹೊಂದುವುದಿಲ್ಲ. ಆರೋಪ ಅಪವಾದಗಳಿಂದ ಪ್ರಪಂಚವಿಲ್ಲವೆಂಬುದು ನಿರೂಪಿತವಾಯಿತೆಂಬ ಪೂರ್ವಾಚಾರ್ಯರ ನ್ಯಾಯದಂತೆ ಪ್ರಪಂಚವು ಕೇವಲ ವ್ಯಾವಹಾರಿಕಸತ್ಯವಾಗುವುದರಿಂದ ಬ್ರಹ್ಮವು ಆನಂದಮಯನೆಂಬುದೂ ಔಪಚಾರಿಕವೇ ಆಗುತ್ತದೆ ಎಂದು ಹೇಳುವುದು ಯುಕ್ತವಲ್ಲ. ವ್ಯಾವಹಾರಿಕಸತ್ಯವೆಂದರೆ ಅರ್ಥವೇನು? ಬೇರೆ ಕಾಲದಲ್ಲಿ ಇಲ್ಲದಿರುವುದೆಂದರ್ಥವೇ? ಸತ್ ಅಸತ್ ಎರಡಕ್ಕೂ ಭಿನ್ನವಾದದ್ದು ಎಂದರ್ಥವೇ? ಸತ್ ಅಸತ್ ಎರಡರಿಂದಲೂ ತಿಳಿಸಲಿಕ್ಕಾಗದ್ದು ಎಂದರ್ಥವೇ? ಇವುಗಳಲ್ಲಿ ಮೊದಲನೆಯ ಅರ್ಥದಂತೆ, ಘಟಪಟಾದಿಗಳು ನಷ್ಟವಾದ ಮೇಲೆ ನಿರ್ದಿಷ್ಟಕಾಲದಲ್ಲಿ ಅವು ಇರುವುದಿಲ್ಲವೆಂಬುದನ್ನು ನಾವೂ ಸಹ ಒಪ್ಪಿರುವೆವಾದ್ದರಿಂದ ಇಂತಹದನ್ನು ಸಾಧಿಸಿದರೆ ಸಿದ್ಧಸಾಧನವೆಂಬ ದೋಷಬರುತ್ತದೆ. 'ಪ್ರಕೃತಿಗೆ ಆದಿ ಅಂತ್ಯಗಳಿಲ್ಲ' ಎಂಬ ಶ್ರುತಿಯಂತೆ ಅದು ಎಲ್ಲಾ ಕಾಲದಲ್ಲೂ ಇರುವುದರಿಂದ ವ್ಯಾವಹಾರಿಕಸತ್ಯವಾಗದೇ ಹೋಗಬೇಕಾಗುತ್ತದೆ. ಒಂದು ಕ್ಷಣಕಾಲವಿದ್ದು ಮತ್ತೊಂದು ಕ್ಷಣ ಇರುವುದಿಲ್ಲವೆಂಬುದೇ ವ್ಯಾವಹಾರಿಕಸತ್ಯವೆಂದು ಹೇಳುವುದಾದರೆ ಎರಡನೇ ಕ್ಷಣದಲ್ಲಿ ಪದಾರ್ಥಗಳಿಗೆ ವಿನಾಶವನ್ನು ವೈಭಾಷಿಕರು ಹೇಳುವುದರಿಂದ ಅವರ ಮತವನ್ನು ನಾವು ಇಲ್ಲಿಯೇ ಸಾಧಿಸಿದಂತಾಗುವುದು. ತಾನಿರಬೇಕಾದ ದೇಶಕಾಲಗಳಲ್ಲಿ ತಾನಿಲ್ಲದಿರುವಿಕೆಯೇ ವ್ಯಾವಹಾರಿಕಸತ್ಯವೆಂದು ಹೇಳುವುದಾದರೆ ತನ್ನ ಸಿದ್ಧಾಂತಕ್ಕೇ ವಿರೋಧ ಉಂಟಾಗುತ್ತದೆ; ಮತ್ತು ಪ್ರಾತಿಭಾಸಿಕವಸ್ತುವಿನಲ್ಲೂ ಅತಿವ್ಯಾಪ್ತಿ ಬರುತ್ತದೆ. ಎರಡನೆಯ ಅರ್ಥವನ್ನು ಹೇಳಿದರೂ ಸತ್ ಅಸತ್

ಎರಡೂ ಆಗಿರುವ ಒಂದು ವಸ್ತುವೇ ಲೋಕದಲ್ಲಿ ಇಲ್ಲದಿರುವುದರಿಂದ ಅದಕ್ಕಿಂತಲೂ ಭಿನ್ನವಾದ ಬೇರೊಂದು ವಸ್ತುವೂ ಅಪ್ರಸಿದ್ಧವೇ ಆಗುತ್ತದೆ. ಸತ್ತ್ವ ಅಸತ್ತ್ವ ಎರಡು ರೂಪಗಳಿಂದಲೂ ಭಿನ್ನವಾಗಿರುವುದೇ ವ್ಯಾವಹಾರಿಕಸತ್ಯವೆಂದು ಹೇಳುವುದಾದರೆ, 'ಒಂದು ಇದ್ದರೂ ಎರಡಲ್ಲ' ಎಂಬ ಪ್ರತೀತಿ ಲೋಕದಲ್ಲಿ ಇರುವುದರಿಂದ ಕೇವಲ ಸದ್ವಸ್ತುವಿನಲ್ಲೂ ಮತ್ತು ಅಂತಹ ಅಸದ್ವಸ್ತುವಿನಲ್ಲೂ ಈಗ ಹೇಳಿದ ಅರ್ಥ ಸಂಭವಿಸಬೇಕಾಗುತ್ತದೆ. ಸತ್ತ್ವವಿಶಿಷ್ಟವಾದ ವಸ್ತು ಮತ್ತು ಅಸತ್ತ್ವವಿಶಿಷ್ಟವಾದ ವಸ್ತು ಇವೆರಡಕ್ಕಿಂತಲೂ ಭಿನ್ನವಾಗಿರುವುದೇ ವ್ಯಾವಹಾರಿಕಸತ್ಯವೆಂದು ಹೇಳಿದರೆ ಸತ್ತ್ವವಿಶಿಷ್ಟವಾದ ಒಂದು ವಸ್ತು ಅದೇರೀತಿಯ ಮತ್ತೊಂದು ವಸ್ತುವಿಗಿಂತಲೂ ಭಿನ್ನವೇ ಆಗಿರುವುದರಿಂದ ಅದರಲ್ಲಿ ಅತಿವ್ಯಾಪ್ತಿ ಬರುವುದು. ಸತ್ತ್ವವಿಶಿಷ್ಟವಾದ ಎಲ್ಲಾ ವಸ್ತುಗಳಿಗಿಂತಲೂ ಭಿನ್ನವಾದದ್ದೇ ವ್ಯಾವಹಾರಿಕಸತ್ಯವೆಂದು ಹೇಳಿದರೆ, ಆಗಲೂ ಬ್ರಹ್ಮ ನಿರ್ಧರ್ಮಕವೇ ಆಗಿರುವುದರಿಂದ ಅದರಲ್ಲಿ ಅತಿವ್ಯಾಪ್ತಿ ಬರುವುದು. ಬ್ರಹ್ಮ ನಿರ್ಧರ್ಮಕವಾದ್ದರಿಂದಲೇ ಅಲ್ಲಿ ಅತಿವ್ಯಾಪ್ತಿ ಬರುವುದಿಲ್ಲವೆನ್ನುವುದು ಸರಿಯಲ್ಲ. ಹಾಗೆ ಹೇಳಿದರೆ ಹೇತು ಸಾಧ್ಯಗಳೆರಡೂ ಸಹ ಪಕ್ಷದಲ್ಲಿ ಇಲ್ಲವೆಂದು ಒಪ್ಪಬೇಕಾಗುತ್ತದೆ. ಸದ್ರೂಪಕ್ಕಿಂತಲೂ ಭಿನ್ನವಾದದ್ದೇ ವ್ಯಾವಹಾರಿಕಸತ್ಯವೆಂದು ಹೇಳಿದರೆ ಸದ್ರೂಪವಾದ ಯಾವೊಂದು ವಸ್ತುವಿಗಿಂತಲೂ ಶುಕ್ತಿರಜತಗಳು ಭಿನ್ನವೇ ಆಗುವುದರಿಂದ ಸಿದ್ಧಸಾಧನವೆಂಬ ದೋಷ ಬರುತ್ತದೆ. ಎಲ್ಲಾ ಸದ್ರೂಪಗಳಿಗಿಂತಲೂ ವಿಲಕ್ಷಣವಾದದ್ದೇ ವ್ಯಾವಹಾರಿಕಸತ್ಯವೆಂದು ಹೇಳಿದರೆ ಪ್ರತಿಯೊಂದು ವಸ್ತುವೂ ತನಗಿಂತ ಭಿನ್ನವಾದ ಎಲ್ಲಾ ವಸ್ತುಗಳಿಗಿಂತಲೂ ವಿಲಕ್ಷಣವೇ ಆಗಿರುವುದರಿಂದ ಇಂತಹದನ್ನು ಸಾಧಿಸಿದರೆ ಸಿದ್ಧಸಾಧನವೇ ದೋಷವಾಗುತ್ತದೆ. ಸದ್ರೂಪಸಾಮಾನ್ಯಭೇದವೇ ವ್ಯಾವಹಾರಿಕಸತ್ಯವೆಂದು ಹೇಳಿದರೆ ಬ್ರಹ್ಮದಲ್ಲಿ ಅತಿವ್ಯಾಪ್ತಿ ಬರುತ್ತದೆ. ಸದ್ರೂಪ ವಸ್ತುಗಳು ಎಷ್ಟಿರುವುವೋ ಅವೆಲ್ಲದರ ಭೇದಗಳ ಸಮೂಹಕ್ಕೆ ಆಶ್ರಯವಾಗಿರುವುದೇ ವ್ಯಾವಹಾರಿಕಸತ್ಯವೆಂದು ಹೇಳಿದರೆ ಅದ್ವೈತಮತದಲ್ಲಿ ಅಂತಹ ಸದ್ರೂಪವಾದ ವಸ್ತುಗಳೇ ಇಲ್ಲದಿರುವುದರಿಂದ ವ್ಯಾವಹಾರಿಕಸತ್ಯವೆಂಬುದೇ ಅಪ್ರಸಿದ್ಧವಾಗುತ್ತದೆ. ಬ್ರಹ್ಮವೂ ಪ್ರಾತಿಭಾಸಿಕವಾದ ರಜ್ಜುಸರ್ಪವೂ ಹಾಗೆಯೇ ವ್ಯಾವಹಾರಿಕಸತ್ಯವೇ ಆಗಬೇಕಾಗುತ್ತದೆ. ಬ್ರಹ್ಮಕ್ಕಿಂತಲೂ ಬೇರೆಯಾಗಿದ್ದು, ಅಸದ್ವಸ್ತುವಿಗಿಂತಲೂ ವಿಲಕ್ಷಣವಾಗಿರುವುದೇ ವ್ಯಾವಹಾರಿಕಸತ್ಯವೆಂದು ಹೇಳಿದರೆ ಸಿದ್ಧಸಾಧನದೋಷ ಬರುತ್ತದೆ. 'ಸನ್ ಘಟಃ' ಎಂಬ ಪ್ರತೀತಿಯಿಂದ ಘಟದಲ್ಲಿ ಸತ್ತ್ವವೇ ತೋರುವುದರಿಂದ ಸದ್ವಿಲಕ್ಷಣವೇ ಆಗದಿರುವ ಪ್ರಯುಕ್ತ ಘಟವು ವ್ಯಾವಹಾರಿಕಸತ್ಯವಾಗದೇ ಹೋಗುತ್ತದೆ. "ಇಲ್ಲಿ ಬೇರೆ ಯಾವುದೂ ಇಲ್ಲ" ಎಂಬ ಶ್ರುತಿಯಿಂದ ಪ್ರತ್ಯಕ್ಷವಾದ ಲೋಕಾನುಭವವನ್ನು ಬಾಧಿಸಲಾಗುವುದಿಲ್ಲ. 'ಯಜಮಾನನೇ ಪ್ರಸ್ತರವು' (ಯಜ್ಞದ್ರವ್ಯ), 'ಆದಿತ್ಯನೇ ಯೂಪವು', 'ಸೋಮಲತೆಯಿಂದ ಯಜ್ಞಮಾಡಬೇಕು', "ಚಿನ್ನದ ಅಕ್ಕಿಯನ್ನು ಬೇಯಿಸಬೇಕು", "ಯಜ

ಮಾನಸು ಏಕಕಪಾಲನು" 'ತತ್ತ್ವಮಸಿ' ಈ ಬಗೆಯ ಪ್ರತ್ಯಕ್ಷವಿರುದ್ಧವಾದ ಶ್ರುತಿಗಳಿಗೆ ಬೇರೆ ಅರ್ಥವನ್ನು ಹೇಳುವುದು ರೂಢಿಯಲ್ಲಿದೆ. ಸತ್ಪದಾರ್ಥ ಮತ್ತು ಘಟ ಪದಾರ್ಥ ಇವೆರಡೂ ಒಂದೇ ಆದರೆ ಘಟಕಲಶಗಳಂತೆ ಎರಡನ್ನೂ ಒಟ್ಟಿಗೆ ಸೇರಿಸಿ ಪ್ರಯೋಗಿಸುವಂತಿಲ್ಲ. ಎರಡೂ ಬೇರೆಯಾದರೆ, ಘಟಪಟಗಳಂತೆ ಸನ್, ಘಟಃ ಎಂಬ ಪದಗಳು ವಿಶೇಷಣವಿಶೇಷ್ಯಭಾವವನ್ನು ಬೋಧಿಸದೇ ಹೋಗಬೇಕಾಗುತ್ತದೆ. ಆದ್ದರಿಂದ 'ಸಘಟಃ' ಇವೆರಡಕ್ಕೂ ತಾದಾತ್ಮ್ಯವನ್ನೇ ಹೇಳಬೇಕು. ಭೇದವಿದ್ದರೂ ಎಲ್ಲಿ ಅಭೇದವಿರುವುದೋ ಅಲ್ಲಿಯೇ ತಾದಾತ್ಮ್ಯ ಬರುತ್ತದೆ. ಹೀಗೆ ಘಟಾದಿಗಳಿಗೆ ಸತ್‌ಗಿಂತಲೂ ಭೇದವೇ ಅನುಭವದಿಂದ ಸಿದ್ಧವಾಗುತ್ತದೆ ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನ ಹೀಗಿದೆ. ಭಿನ್ನವಾದರೂ ಅಭಿನ್ನಸತ್ತೆಯುಳ್ಳದ್ದೇ ತಾದಾತ್ಮ್ಯವೆಂದು ಹೇಳಿದರೆ, 'ಇದು ರಜತವಲ್ಲ' ಎಂಬ ಬಾಧಜ್ಞಾನ ಬಂದಮೇಲೂ 'ಇದು ರಜತ' ವೆಂಬ ಅನುಭವ ಬರಬೇಕಾಗುತ್ತದೆ. ವಿಶೇಷಣ ಜ್ಞಾನವು ವಿಶಿಷ್ಟಜ್ಞಾನವನ್ನು ಬಾಧಿಸುವಂತಿಲ್ಲ.

ನನು "ಇದಂ ರಜತಂ" ಇತ್ಯತ್ರ ಯತ್ತಾದಾತ್ಮ್ಯಂ ಪ್ರತೀತಂ ತಸ್ಯ ನೇತಿ ನಿಷೇಧೇ ಸತಿ ಕಥಂ ಪುನಸ್ತಾದಾತ್ಮ್ಯಪ್ರತೀತಿರಿತಿ ಚೇತ್, ತ್ಯಜ ತರ್ಹಿ ಭೇದಸ್ಯ ತಾದಾತ್ಮ್ಯಶಬ್ದಾರ್ಥೇ ಪ್ರವೇಶಂ. ನಹಿ "ಇದಂ ರಜತಂ" ಇತಿ ಬುದ್ಧೇಃ ಸಂಸ್ಪರ್ಶತಯಾ ತಾದಾತ್ಮ್ಯವಿಷಯತ್ವೇ "ನೇದಂ ರಜತಂ" ಇತ್ಯಸ್ಯ ಪ್ರಕಾರತಯಾ ತಾದಾತ್ಮ್ಯೈಕದೇಶವಿಷಯತ್ವೇಽಪಿ ಬಾಧ್ಯಬಾಧಕಭಾವೋಽಸ್ತಿ, ಪ್ರತ್ಯುತ ಮಾನಾಂತರಸಂವಾದ ರೂಪತಯಾ ಭ್ರಾಂತಿದಾರ್ಢ್ಯಾಪಾದಕತ್ವಮೇವ. ಅನ್ಯಥಾ "ರೂಪವಾನ್—ರೂಪಸಮವಾಯವಾನ್" ಇತ್ಯಾದಿ ಪ್ರತೀತೀನಾಂ ಮಿಥೋ ಬಾಧ್ಯಬಾಧಕಭಾವಪ್ರಸಂಗಾತ್. ತಸ್ಮಾತ್ "ನೇದಂ ರಜತಂ" ಇತಿ ಪ್ರತೀತೇರ್ಬಾಧಕತ್ವಾನುಗುಣ್ಯಾತ್ "ಇದಂ ರಜತಂ" ಇತಿ ಪ್ರತೀತಾವಪಿ ತಾದಾತ್ಮ್ಯಂ ವಕ್ತವ್ಯಂ. ತಚ್ಚ ಅಭೇದಏವಪರ್ಯವಸ್ಯತಿ. ಏತೇನ ಅಭಿನ್ನಸತ್ತಾಕತ್ವಂ ರಜತಶುಕ್ತ್ಯೋರ್ನಿಷಿಧ್ಯತೇ ನೇದಮಿತ್ಯನೇನೇತಿ ನಿರಸ್ತಂ. ತಥಾ ಸತಿ ಪ್ರಾತಿಭಾಸಿಕಸ್ಯಾಧಿಷ್ಠಾನಭಿನ್ನಸತ್ತಾಕತ್ವಪ್ರಸಂಗಾತ್. ನ ಚೇಷ್ಟಾಪತ್ತಿಃ ಅಪಸಿದ್ಧಾಂತಾತ್, ತಾದಾತ್ಮ್ಯವ್ಯಾಘಾತಾಚ್ಚ. ಅಧಿಷ್ಠಾನಭಿನ್ನಸತ್ತಾಕಪ್ರತಿಯೋಗಿಕ ಏವಾಭಾವೋಽಧಿಷ್ಠಾನಾದ್ಭಿದ್ಯತೇ ಅನ್ಯಸ್ತು ನ ಭಿದ್ಯತೇ. ತಸ್ಮಾದ್ರಜತಸ್ಯಾಭಾವೋಽಧಿಷ್ಠಾನಾನ್ನ ಭಿದ್ಯತ ಇತ್ಯುಕ್ತಿರ್ವ್ಯಾಹತಿಶ್ಚ. "ನೇದಂ ರಜತಂ" ಇತಿ ಶಾಬ್ದಬುದ್ಧೌ ಶಬ್ದಾನುಪಸ್ಥಿತಾಭಿನ್ನಸತ್ತಾಕತ್ವನಿಷೇಧಾಭಾವೇನ ಪ್ರತ್ಯಕ್ಷಬುದ್ಧಾವಪಿ ತನ್ನಿಷೇಧಾಯೋಗಾಚ್ಚ. ನಚ ಪದದ್ವಯಸಾಮಾನಾಧಿಕರಣ್ಯಬಲಾತ್ತತ್ರಾಪಿ ತದುಪಸ್ಥಿತಿರಿತಿ ವಾಚ್ಯಂ, ನಿರ್ವಿಶೇಷಂ ಬ್ರಹ್ಮೇತ್ಯತ್ರಾಪಿ ತದಾಪತ್ತೇಃ. ಕಿಂಚಾತ್ಯಂತಾ

ಭಾವಪ್ರತೀತಿರಿಯಂ ನಾನ್ಯೋಽನ್ಯಾಭಾವಪ್ರತೀತಿರಪಿ. " ಇದಂ ರಜತಂ "
ಇತಿ ಪ್ರತೀತೇಃ ಅಭಿನ್ನಸತ್ತಾಕತ್ವನಿಷೇಧರೂಪತ್ವೇ " ರೂಪಂ ಘಟೋ ನ "
ಇತಿ ಬುದ್ಧೇರಪಿ ತಥಾ ಸ್ಯಾತ್. ತದಾ ಚ ತನ್ಮತೇ ತಸ್ಯಾಂ ದಶಾಯಾಂ
" ನೀಲೋ ಘಟಃ " ಇತಿ ಬುದ್ಧಿರ್ನ ಸ್ಯಾತ್. ಕಿಂಚಾಭಿನ್ನಸತ್ತಾಕತ್ವ
ನಿಷೇಧೇಽಪಿ ಪುರೋವರ್ತಿನಿಷ್ಠಾಭೇದಸ್ಯ ಇಷ್ಟತಾವಚ್ಛೇದಕಸಂಸರ್ಗಸ್ಯ
ವಾ ನಿಷೇಧಾಭಾವಾತ್ ಭ್ರಾಂತಿಪ್ರಯುಕ್ತಂ ಕಾರ್ಯಂ ದುರ್ವಾರಂ ಸ್ಯಾತ್.
ನಹೀಷ್ಟತಾವಚ್ಛೇದಕವೈಶಿಷ್ಟ್ಯಾದಿಕಂ ಅಬಾಧಿತತ್ವಾತ್ಪ್ರವೃತ್ತಿಂ
ನಿರೋದ್ಧುಂ ಶಕ್ನೋತಿ. ನಚ ಅಭಿನ್ನಸತ್ತಾಕತ್ವನಿಷೇಧ ಏವಾಭೇದ
ನಿಷೇಧಕಃ. ತರ್ಹ್ಯರ್ಥಭೇದಸತ್ತಾಕತ್ವಮಭೇದ ಏವ ಸ್ಯಾದಿತಿ ಭಿನ್ನತ್ವೇ
ಸತೀತಿ ವಿಶೇಷಣವಿರೋಧಃ. ಅಭಿನ್ನಸತ್ತಾಕತ್ವಮಿತ್ಯತ್ರ ಕಿಮಭಿನ್ನಸತ್ತಾ
ಕತ್ವಂ? ಸತ್ತಾವತ್ಸತ್ತಾಕತ್ವಂ? ಮತ್ವರ್ಥೇ ಬಹುವ್ರೀಹಿವಿಧಾನೇನ
ಮತ್ವರ್ಥಸ್ಯ " ದಂಡವಾನ್ ಪುರುಷಃ, ದಂಡೀ " ಇತ್ಯನುರೋಧೇನ
ಭೇದರೂಪತಯಾ ಸ್ವಭಿನ್ನಸತ್ತಾಕತ್ವಸ್ಯ ತತ್ರಾಬಾಧಾತ್. ನಾಪಿ
ತಾದಾತ್ಮ್ಯಂ ಮತ್ವರ್ಥ ಇತಿ ವಕ್ತುಂ ಯುಕ್ತಂ. ಆತ್ಮಾಶ್ರಯದೋಷೇಣ
ತಲ್ಲಕ್ಷಣೇ ತತ್ಪ್ರವೇಶಾಯೋಗಾತ್. ಸತ್ತಾಂತರಾಧ್ಯಾಸಂ ವಿನಾ ಪ್ರಥಮ
ಸತ್ತಾಯಾಸ್ತತ್ತಾದಾತ್ಮ್ಯಾನುಪಪತ್ತ್ಯಾ ಘಟಾಧಿಷ್ಠಾನಸತ್ತಾಯಾ
ಮಿಥ್ಯಾತ್ವೇ ಅಪಸಿದ್ಧಾಂತಶ್ಚ. ನಹಿ ಪದಾರ್ಥಾಂತರೇಣ ಸಂಬಧ್ಯಮಾ
ನಾಧಿಷ್ಠಾನತಾ ತಾಂ ವ್ಯಭಿಚರತಿ? ನಚ ಸತ್ತಾವತ್ತ್ವಂ ಸತ್ತಯಾ ಸಾಕ
ಮಭೇದಃ, ಮತ್ವರ್ಥಸ್ಯಾಭೇದತ್ವಾಯೋಗಾತ್. ಅನ್ಯಥಾ ದಂಡಪು
ರುಷಯೋರಭೇದಾಪತ್ತೇಃ. ಘಟಾಕಾಶೇ ಪಟಭೇದಸ್ಯ ಸತ್ತಾಸಂಬಂಧ
ರೂಪತ್ವೇ ಜಡಾಜಡಯೋರೈಕ್ಯಪ್ರಸಂಗಾಚ್ಚ. ನಚಾತ ಏವ ಸತ್ತಾಯಾ
ಮಭೇದಸತ್ತಾಸಂಬಂಧೋ ಘಟಭೇದ ಇತಿ ವಾಚ್ಯಂ, ವೈರೂಪ್ಯಪ್ರ
ಸಂಗಾತ್. ತಾದಾತ್ಮ್ಯಸ್ಯ ಘಟೇ ಸತ್ತಾಸಂಬಂಧತ್ವಪರಿತ್ಯಾಗೇನ ಘಟ್ಟ
ಕುಟೀಪ್ರಭಾತನ್ಯಾಯಾಚ್ಚ. ಅಭಿನ್ನಸತ್ತಾಕತ್ವಘಟಕಂ ಸತ್ತಾವತ್ತ್ವಂ
ಕ್ವಚಿದಭೇದೇನ, ಕ್ವಚಿದಧಿಷ್ಠಾನತಯೇತಿ ಪ್ರತಿಪಾದನೇಽಪ್ಯನನುಗ
ಮಾಚ್ಚ. ಅಭೇದಸ್ಯ ಮತ್ವರ್ಥತ್ವಾಯೋಗೇನ ಬಹುವ್ರೀಹ್ಯನುಪಪತ್ತೇರು
ಕ್ತತ್ವಾಚ್ಚ. ತಾದಾತ್ಮ್ಯಾವಗಾಹಿನೋಃ " ನೀಲೋ ಘಟಃ, ಸನ್ಘಟಃ "
ಇತಿ ಪ್ರತೀತ್ಯೋಸ್ತಾದಾತ್ಮ್ಯಾಶ್ರಯ ಏವ ವೈರೂಪ್ಯಕಲ್ಪನಾಯೋ
ಗಾಚ್ಚ. ಅಪಿ ಚೈವಂ " ಘಟಃ ಪಟಃ, ರಸೋ ಘಟಃ " ಇತ್ಯಾದಿಪ್ರ
ಯೋಗಾಸ್ತ್ವನ್ಮತೇ ದುರ್ವಾರಾಸ್ಸ್ಯುಃ. ಅಭಿನ್ನತ್ವೇ ಸತ್ಯಭಿನ್ನಸತ್ತಾಕ
ಯೋಸ್ತಥಾ ಪ್ರತೀತ್ಯಭಾವಾನುಪಪತ್ತೇಃ. ನಹಿ ಯತ್ಸತ್ತ್ವೇಽಪಿ
ಯನ್ನ ಜ್ಞಾಯತೇ ತದೇವ ತಸ್ಯ ನಿಯಾಮಕಮಿತ್ಯಸ್ಮತ್ತೋ ಬ್ರವೀಷಿ?

ನಚ "ಘಟಃ ಪಟಃ" ಇತ್ಯಾದಿಪ್ರತೀತ್ಯಭಾವಾತ್ತಾದಾತ್ಮ್ಯಮೇವ ನೇತಿ ವಾಚ್ಯಂ. ಘಟಪಟಯೋರ್ಭೇದಸ್ಯ ಬ್ರಹ್ಮಸತ್ತಾಽಸತ್ತಾಕತ್ವಸ್ಯ ತ್ವಯಾ ಪಹ್ನೋತುಮಶಕ್ಯತ್ವಾತ್. ಯದ್ಯೇವಮುಪ್ಯಪಹ್ನವಃ ತರ್ಹಿ ಲಾಘವಾದ್ಭಿನ್ನತ್ವಮಾತ್ರಮೇವ ಸಮಾನಾಧಿಕರಣಪ್ರತೀತಿನಿಯಾಮಕಂ, "ಘಟಃ ಪಟಃ" ಇತ್ಯಾದಿಪ್ರತೀತ್ಯಭಾವಸ್ತು ಭೇದಸ್ಯ ಕಥಂಚಿದಪ್ಯಭಾವಾದಿತ್ಯೇವ ಕಿಮಿತಿ ನೋಚ್ಯತೆ? ಯದಿ ತು ಪ್ರತ್ಯಕ್ಷಾದಿಸಿದ್ಧಾಽಪಲಾಪಾಯೋಗೇನ ನ ಭೇದಮಾತ್ರಸ್ಯ ಪ್ರತೀತಿನಿಯಾಮಕತ್ವಂ, ತರ್ಹಿ ಸಿದ್ಧಾಂತಸ್ಯ ತ್ವದೀಯಸ್ಯ ತ್ವಯೈವ ತ್ಯಾಗಾಯೋಗೇನ ತಾದಾತ್ಮ್ಯಸ್ಯ ನಿಹ್ನನಂ ಪರಿತ್ಯಜ್ಯ ತಸ್ಯ ಸಾಮಾನಾಧಿಕರಣ್ಯಪ್ರತೀತಿನಿಯಾಮಕತ್ವಮೇವ ತ್ಯಜ್ಯತಾಂ. ಅಥಾನ್ವಯವ್ಯಭಿಚಾರೋ ನಿಯಾಮ್ಯನಿಯಾಮಕಯೋರಯುತಸಿದ್ಧ್ಯಾದಿನಿಯಾಮಕಾಂತರಕಲ್ಪನೇನೋದ್ಧ್ರಿಯೇತ? ತರ್ಹಿ ತ್ಯಜ್ಯತಾಮಜಾಗಲಸ್ತನಾಯಮಾನಂ ತಾದಾತ್ಮ್ಯರೂಪಂ ನಿಯಾಮಕಂ, ತತ ಏವ ತಾದೃಕ್ಪ್ರತೀತ್ಯುಪಪತ್ತೇಃ.

ಇದು ರಜತ ಎಂಬಲ್ಲಿ ಯಾವ ವಸ್ತುವಿನ ತಾದಾತ್ಮ್ಯ ತೋರಿತ್ತೋ ಅದನ್ನು ಇಲ್ಲವೆಂದು ನಿಷೇಧಿಸಿದಮೇಲೆ ಮತ್ತೆ ಆ ತಾದಾತ್ಮ್ಯ ಹೇಗೆ ಅನುಭವ ಗೋಚರವಾದೀತು? ಹಾಗಿದ್ದ ಪಕ್ಷದಲ್ಲಿ ತಾದಾತ್ಮ್ಯಶಬ್ದಾರ್ಥದೊಳಗೆ ಭೇದವನ್ನು ಸೇರಿಸಬಾರದು. ಇದು ರಜತವೆಂಬ ಬುದ್ಧಿಯಲ್ಲಿ ತಾದಾತ್ಮ್ಯವು ಸಂಸರ್ಗವಾಗಿ ತೋರುವುದರಿಂದ ಅದೇ ತಾದಾತ್ಮ್ಯವು ಪ್ರಕಾರವಾಗಿ ತೋರುವ 'ನೇದಂ ರಜತಂ' ಎಂಬ ಬುದ್ಧಿಯು ಅದಕ್ಕೆ ಬಾಧಕವಾಗುವಂತಿಲ್ಲ. ಇಷ್ಟೇ ಅಲ್ಲದೆ ಬೇರೆ ಪ್ರಮಾಣದಿಂದ ಸಿದ್ಧವಾದದ್ದನ್ನೇ ತಿಳಿಸುವುದರಿಂದ ಇದು ರಜತವೆಂಬ ಭ್ರಾಂತಿಯೇ ದೃಢವಾಗುತ್ತದೆ; ಇಲ್ಲದಿದ್ದರೆ ರೂಪವುಳ್ಳದ್ದೆಂಬ ಪ್ರತೀತಿಗೂ ರೂಪಸಮವಾಯವುಳ್ಳದ್ದೆಂಬ ಪ್ರತೀತಿಗೂ ಪರಸ್ಪರ ವಿರೋಧ ಬರುತ್ತದೆ. ಆದ್ದರಿಂದ 'ನೇದಂ ರಜತಂ' ಎಂಬ ಪ್ರತೀತಿಯನ್ನು ಬಾಧಕವೆಂದು ಹೇಳುವಂತೆಯೇ 'ಇದಂ ರಜತಂ' ಎಂಬ ಪ್ರತೀತಿಯಲ್ಲೂ ತಾದಾತ್ಮ್ಯವನ್ನೇ ಪ್ರಕಾರವಾಗಿ ಒಪ್ಪಬೇಕು. ಅದು ಅಭೇದದಲ್ಲಿಯೇ ಕೊನೆಯಾಗುವುದರಿಂದ 'ನೇದಂ ರಜತಂ' ಎಂಬ ಪ್ರತೀತಿಯಿಂದ ಶುಕ್ತಿರಜತಗಳೆರಡರ ಸತ್ತೆಯು (ಇರುವಿಕೆ) ಒಂದಲ್ಲವೆಂದು ಬೋಧಿತವಾಗುತ್ತದೆ ಎಂಬ ವಾದ ತಿರಸ್ಕೃತವಾಯಿತು. ಇದರಿಂದ ಪ್ರಾತಿಭಾಸಿಕದಲ್ಲಿ ಅಧಿಷ್ಠಾನಕ್ಕಿಂತಲೂ ಭಿನ್ನವಾದ ಸತ್ತೆಯನ್ನೇ ಒಪ್ಪಬೇಕಾಗುವುದು. ಒಪ್ಪಿದರೆ ಸಿದ್ಧಾಂತಕ್ಕೆ ವಿರೋಧ ಬರುತ್ತದೆ, ಅವೆರಡಕ್ಕೂ ತಾದಾತ್ಮ್ಯವು ವಿರುದ್ಧವಾಗುವುದು. ಅಧಿಷ್ಠಾನದಲ್ಲಿ ಯಾವ ಸತ್ತೆ ಇದೆಯೋ ಅದಕ್ಕಿಂತಲೂ ಬೇರೆ ಸತ್ತೆ ಇರುವ ವಸ್ತುವಿನ ಅಭಾವವು ಅಧಿಷ್ಠಾನಕ್ಕಿಂತಲೂ ಬೇರೆಯೇ ಆಗುತ್ತದೆ. ಅಧಿಷ್ಠಾನದ ಸತ್ತೆಯೊಡಗೂಡಿದ ಬೇರೆ ವಸ್ತುವಿನ ಅಭಾವವು ಅಧಿಷ್ಠಾನರೂಪವೇ ಆಗುವುದರಿಂದ ರಜತದ ಅಭಾವ ಶುಕ್ತಿಗಿಂತಲೂ

ಬೇರೆಯಲ್ಲವೆಂಬ ಅದ್ವೈತಿಯ ಮಾತು ವಿರುದ್ಧವಾಗುವುದು. ‘ ಇದು ರಜತವಲ್ಲ’ ವೆಂಬ ಶಬ್ದದಿಂದ ಭೇದ ಬರುವ ಕಡೆ ರಜತ ಮತ್ತು ಶುಕ್ತಿ ಎರಡರಲ್ಲೂ ಸಮಾನ ವಾದ ಸತ್ತೆಯನ್ನು ನಿಷೇಧಿಸಲು ಪ್ರಸಕ್ತಿ ಇಲ್ಲದ್ದರಿಂದ ಪ್ರತ್ಯಕ್ಷದಲ್ಲೂ ಅದೇ ನ್ಯಾಯ ದಿಂದ ಅದನ್ನೇ ಒಪ್ಪಬೇಕಾಗುತ್ತದೆ. ವಿಶೇಷಣವಿಶೇಷ್ಯಭಾವದಿಂದ ಬಂದಿರುವ ಎರಡು ಪದಗಳ ಪ್ರಯೋಗಬಲದಿಂದಲೇ ಅದು ತೋರುತ್ತದೆ ಎಂದು ಹೇಳುವುದೂ ಸರಿಯಲ್ಲ. ಹಾಗಾದರೆ ಬ್ರಹ್ಮ, ನಿರ್ವಿಶೇಷವೆಂಬ ಎರಡು ಪದಗಳಿಂದಲೂ ಅದೇ ಅರ್ಥ ತೋರಬೇಕಾಗುತ್ತದೆ. ಇಷ್ಟೇ ಅಲ್ಲದೆ, ಇಲ್ಲಿ ರಜತವಿಲ್ಲವೆಂದೇ ಪ್ರತೀತಿ ಬರುವುದರಿಂದ ಅತ್ಯಾಂತಾಭಾವವೇ ಇಲ್ಲಿ ತೋರುವುದೇ ಹೊರತು ಅನ್ಯೋನ್ಯಾ ಭಾವ ತೋರುವಂತಿಲ್ಲ. ಈ ಅನ್ಯೋನ್ಯಾಭಾವ ಮತ್ತು ಅತ್ಯಂತಾಭಾವ ಪ್ರತೀತಿ ಗಳಿಗೆ ಭೇದವನ್ನು ಒಪ್ಪದಿದ್ದರೆ, ‘ ರೂಪವು ಘಟವಲ್ಲ’ ಎಂಬ ಪ್ರತೀತಿಯಿಂದ ಘಟ ದಲ್ಲಿ ರೂಪದ ಅತ್ಯಂತಾಭಾವವು ತೋರಬೇಕಾಗುವುದು. ಆಗ ‘ ಘಟ ನೀಲವಾಗಿದೆ’ ಎಂಬ ಪ್ರತೀತಿ ಬರುವಂತಿಲ್ಲ. ಅವೆರಡರ ಸತ್ತೆಯ ಸಮಾನತೆಯ ನಿಷೇಧ ತೋರಿ ದರೂ ಎದುರಿಗಿರುವ ವಸ್ತುವಿನ ಅಭೇದಕ್ಕಾಗಲೀ, ಇಷ್ಟವಸ್ತುವಿನಲ್ಲಿರುವ ಧರ್ಮದ ಸಂಸರ್ಗಕ್ಕಾಗಲೀ ನಿಷೇಧ ತೋರುವುದಿಲ್ಲವಾದ್ದರಿಂದ ‘ ನೇದಂ ರಜತಂ’ ಎಂಬ ಜ್ಞಾನ ಬಂದರೂ ಭ್ರಾಂತಿಪ್ರಯುಕ್ತವಾದ ಕಾರ್ಯಗಳು ನಡೆಯಲೇ ಬೇಕಾಗುತ್ತದೆ. ಇಷ್ಟವಸ್ತುವಿನಲ್ಲಿರುವ ಧರ್ಮವೂ ಅದರ ಸಂಬಂಧವೂ ಬಾಧಿತವಾಗದಿದ್ದರೆ ಪ್ರವೃತ್ತಿ ಹೇಗೆ ಬಾರದೇ ಹೋದೀತು? ಅಭಿನ್ನಸತ್ತೆಯನ್ನು ನಿಷೇಧಿಸುವುದರಿಂದ ಅಭೇದದ ನಿಷೇಧ ಸಿದ್ಧಿಸುವುದಿಲ್ಲ. ಹಾಗಾದರೆ ಅಭಿನ್ನಸತ್ತೆ ಮತ್ತು ಅಭೇದ ಇವೆರಡೂ ಒಂದೇ ಆಗಬೇಕಾಗುವುದು. ಇದರಿಂದ ‘ ಭಿನ್ನತ್ವೇ ಸತಿ” ಎಂಬ ವಿಶೇಷಣವನ್ನು ಹೇಳಿದ್ದು ವ್ಯರ್ಥವಾಗುತ್ತದೆ. ಅಭಿನ್ನಸತ್ತೆ ಎಂದರೆ ಸತ್ತೆಯುಳ್ಳ ಸತ್ತೆಯನ್ನುಪಡೆ ದಿರುವಿಕೆ ಎಂದು ಅರ್ಥವೆ? ಹಾಗಾದರೆ ಮತುಪ್ ಪ್ರತ್ಯಯದ ಅರ್ಥವೂ ಬಹು ವ್ರೀಹಿಯ ಅರ್ಥವೂ ಒಂದೇ ಬಗೆಯಾಗುವುದರಿಂದ ದಂಡವಾನ್, ದಂಡಿ ಎಂಬಂತೆ ಎರಡಕ್ಕೂ ಭೇದ ತೋರುವುದೇ ಹೊರತು ಅಭಿನ್ನಸತ್ತೆ ತೋರುವುದಿಲ್ಲ. ತಾದಾ ತ್ಮ್ಯವೇ ಮತ್ವರ್ಥವೆಂದು ಹೇಳುವುದೂ ಸರಿಯಲ್ಲ. ತಾದಾತ್ಮ್ಯದ ಸ್ವರೂಪವೇ ನಿಶ್ಚಿತವಾಗಿಲ್ಲದ್ದರಿಂದ ಅದನ್ನು ಅದರೊಳಗೆ ಸೇರಿಸುವುದರಿಂದ ಆತ್ಮಾಶ್ರಯದೋಷ ಬರುತ್ತದೆ. ಮೊದಲು ತೋರುವ ಸತ್ತೆಯಲ್ಲಿ ಬೇರೆ ಸತ್ತೆಯ ಅಧ್ಯಾಸವಿಲ್ಲದೆ ಅದರ ತಾದಾತ್ಮ್ಯವನ್ನು ಬೋಧಿಸಲು ಸಾಧ್ಯವಿಲ್ಲದ್ದರಿಂದ ಘಟಕ್ಕಾಶ್ರಯವಾದ ಸತ್ತೆಯು ವ್ಯಾವಹಾರಿಕಸತ್ಯವೆನಿಸಿ ಸಿದ್ಧಾಂತಕ್ಕೆ ವಿರುದ್ಧವಾಗುತ್ತದೆ. ಸತ್ತೆಯುಳ್ಳ ಸತ್ತೆ ಎಂಬಲ್ಲಿ ಸತ್ತೆಯುಳ್ಳದ್ದೂ ಸತ್ತೆಯೂ ಒಂದೇ ಬಗೆಯೆಂದು ಹೇಳಲಾಗುವುದಿಲ್ಲ. ಮತ್ವರ್ಥಕ್ಕೆ ಭೇದವೇ ಅರ್ಥವಾಗುವುದಲ್ಲದೆ ಅಭೇದವು ಅರ್ಥವಾಗುವಂತಿಲ್ಲ. ಇಲ್ಲದಿದ್ದರೆ, ‘ ದಂಡೀ ಪುರುಷಃ’ ಎಂಬಲ್ಲಿ ದಂಡಕ್ಕೂ ಪುರುಷನಿಗೂ ಅಭೇದವೇ ತೋರಬೇಕಾಗುವುದು. ಇದರಿಂದ ಜಡ ಅಜಡವೆರಡೂ ಒಂದೇ ಆಗಬೇಕಾಗುತ್ತದೆ.

ಆದ್ದರಿಂದಲೇ ಸತ್ತೆಯಲ್ಲಿ ಅಭೇದದ ಸತ್ತೆಯ ಸಂಬಂಧವೇ ಘಟದ ಭೇದವೆಂದು ಹೇಳುವಹಾಗಿಲ್ಲ. ಹಾಗಾದರೆ ಘಟ್ಟಕುಟೀಪ್ರಭಾತನ್ಯಾಯದಿಂದ ಘಟದಲ್ಲಿ ತಾದಾತ್ಮ್ಯದ ಸತ್ತೆಯ ಸಂಬಂಧವನ್ನೇ ತೋರೆಯಬೇಕಾಗುತ್ತದೆ. ಅಭಿನ್ನಸತ್ತಾಕತ್ವ ಎಂಬಲ್ಲಿರುವ ಸತ್ತೆಯನ್ನು ಕೆಲವು ಕಡೆ ಅಭೇದರೂಪವಾಗಿಯೂ, ಕೆಲವು ಕಡೆ ಅಧಿಷ್ಠಾನರೂಪವಾಗಿಯೂ ಒಪ್ಪಿದರೆ ಏಕರೂಪತೆ ಬರುವುದಿಲ್ಲ. ಅಭೇದವು ಮತ್ವರ್ಥವಾಗುವುದಿಲ್ಲವಾದ್ದರಿಂದಲೇ ಬಹುವ್ರೀಹಿಯೂ ಬರುವಂತಿಲ್ಲ. ತಾದಾತ್ಮ್ಯವನ್ನು ಅವಲಂಬಿಸಿಕೊಂಡು ಬರುವ 'ನೀಲೋ ಘಟಃ, ಸನ್ ಪಟಃ' ಎಂಬ ಕಡೆಗಳಲ್ಲಿ ವೈರೂಪ್ಯವನ್ನು ಒಪ್ಪಬೇಕಾಗುತ್ತದೆ. ಇಷ್ಟಲ್ಲದೆ, 'ಘಟಃ ಪಟಃ' ಎಂಬ ಪ್ರತೀತಿಯೇ ನಿಮ್ಮ ಮತದಲ್ಲಿ ಬರಬೇಕಾಗುವುದು. ಅಭಿನ್ನವಾಗಿದ್ದು ಅಭಿನ್ನಸತ್ತೆಯುಳ್ಳದ್ದಾಗಿದ್ದರೆ, 'ಘಟಃ ಪಟಃ' ಎಂಬ ಪ್ರತೀತಿ ಬರುವಂತಿಲ್ಲ. ಯಾವದಿದ್ದರೂ ಯಾವುದು ಬರುವುದಿಲ್ಲವೋ ಅದೇ ಅದಕ್ಕೆ ಕಾರಣವೆಂದು ಯಾವ ಹುಚ್ಚನೂ ಹೇಳಲಾರನು. 'ಘಟವೇ ಪಟ' ಎಂಬ ಪ್ರತೀತಿ ಇಲ್ಲವಾದ್ದರಿಂದ ಅವೆರಡಕ್ಕೂ ತಾದಾತ್ಮ್ಯವಿಲ್ಲವೆಂದು ಹೇಳುವುದು ಸರಿಯಲ್ಲ. ಘಟಪಟಗಳ ಭೇದವನ್ನೂ, ಅವುಗಳಲ್ಲಿ ಬ್ರಹ್ಮವು ಸದ್ರೂಪವಾಗಿ ಇರುವುದೆಂಬುದನ್ನು ಯಾರೂ ತಿರಸ್ಕರಿಸಲಾರರು. ಹಾಗೆ ತಿರಸ್ಕರಿಸುವುದಾದರೆ, ಲಾಘವದಿಂದ ವಿಶೇಷಣವಿಶೇಷ್ಯಭಾವಕ್ಕೆ ಭೇದ ಒಂದೇ ಕಾರಣವೆಂದು ಹೇಳಬೇಕಾಗುವುದು. ಘಟವೇ ಪಟವೆಂಬ ಪ್ರತೀತಿ ಇಲ್ಲದಿರುವುದಕ್ಕೆ ಅವುಗಳಲ್ಲಿ ಭೇದವಿಲ್ಲದಿರುವುದೇ ಕಾರಣವೆಂದು ಏಕೆ ಹೇಳಬಾರದು ? ಅನುಭವವಿರೋಧದಿಂದ ಹಾಗೆ ಹೇಳಬಾರದೆಂದು ಹೇಳಿದರೆ ನಿಮ್ಮ ಸಿದ್ಧಾಂತವನ್ನು ನೀವೇ ಬಿಟ್ಟಹಾಗಾಗುವುದರಿಂದ ತಾದಾತ್ಮ್ಯವನ್ನು ನಿರಾಕರಿಸುವ ಬದಲು ಅದು ವಿಶೇಷಣವಿಶೇಷ್ಯಭಾವಕ್ಕೆ ನಿಯಾಮಕವೆಂಬುದನ್ನೇ ನಿರಾಕರಿಸಿದಂತಾಗುವುದು. ನಿಯಾಮ್ಯನಿಯಾಮಕಗಳೆರಡೂ ಒಟ್ಟಿಗೇ ಇರುವುದರಿಂದಲೇ ಅನ್ವಯವ್ಯಭಿಚಾರವನ್ನು ಪರಿಹರಿಸುವುದಾದರೆ ನಿರುಪಯೋಗವಾದ ತಾದಾತ್ಮ್ಯವನ್ನು ಕೈಬಿಡಬಹುದು. ಅದಿಲ್ಲದಿದ್ದರೂ ವಿಶೇಷಣವಿಶೇಷ್ಯಭಾವವು ತೋರಬಹುದು.

**ಅಥಾಧ್ಯಸ್ಯಮಾನಾಭ್ಯಾಂ ಘಟಪಟಾಭ್ಯಾಂ ಅಧಿಷ್ಠಾನಸತ್ತಾ ಭಿದ್ಯೇತ? ತರ್ಹಿ ಭಿದ್ಯೇತ ಗುಣಗುಣಿಭ್ಯಾಮಪಿ. ಕಿಂಚ 'ಸನ್ಪಟಃ' ಇತ್ಯತ್ರ ತಾದಾತ್ಮ್ಯಭಾನೇ 'ಇದಂ ರಜತಂ' ಇತ್ಯತ್ರಾಪಿ ಭಾಸೇತೈವ ತತ್. ತಥಾಚೇಷ್ಟಭೇದಘಟಿತೇ ತಾದಾತ್ಮ್ಯೇ ಜ್ಞಾತೇ ಕಸ್ಯಾಪಿ ರಜತಾರ್ಥಿನಃ ಶುಕ್ತೌ ಪ್ರವೃತ್ತಿರ್ನ ಸ್ಯಾತ್. ಇಷ್ಟಭೇದಜ್ಞಾನಸ್ಯ ಪ್ರವೃತ್ತಿಪ್ರತಿಬಂಧಕತ್ವಾತ್, ನಚಾಭಿನ್ನಸತ್ತಾಕತ್ವಜ್ಞಾನಂ ಪೃಥಗೇವ ಪ್ರವರ್ತಕಮಿತಿ ವಾಚ್ಯಂ, ಪ್ರವೃತ್ತಿನಿವೃತ್ತ್ಯೋರ್ಯೌಗಪದ್ಯಸ್ಯ ವಿರುದ್ಧಕಾರಣಯೌಗಪದ್ಯೇನ ಪರಸ್ಪರಪ್ರತಿಬಂಧೇ ಕಾರ್ಯಮಾತ್ರಾನುಪಪತ್ತೇರ್ದುರ್ವಾರತ್ವಾತ್. ಅಭಿನ್ನಸತ್ತಾಕತ್ವಜ್ಞಾನಸ್ಯ ಪ್ರವರ್ತಕತ್ವೇ ಘಟಪಟಯೋ**

ಸ್ತದ್ದಶಾಯಾಂ ಘಟಾರ್ಥಿನಃ ಪಟಪ್ರವೃತ್ತಿಪ್ರಸಂಗಾಚ್ಚ. ಅಥಾಭಿನ್ನ ಸತ್ತಾಕತ್ವವಿಶೇಷಣಾಂತರದಾನೇ ತತ್ಪರಿಹಾರಸ್ಯಾಪ್ಯಜ್ಞಾತಸ್ಯ ತಸ್ಯ ಪ್ರವರ್ತಕವತ್ವೇಽತಿಪ್ರಸಂಗಾತ್. ಜ್ಞಾನಸ್ಯ ಪ್ರವೃತ್ತಿದಶಾಯಾಮವರ್ಜನೀಯತ್ವಂ ಸ್ಯಾತ್. ಅಪಿ ಚ ಇಷ್ಟಪುರೋವರ್ತಿವಿಶಿಷ್ಟಜ್ಞಾನೇ ಭೇದಾಗ್ರಹಃ ಕಾರಣಮಿತಿ ನಿರ್ವಿವಾದಂ. ಸಾಕ್ಷಿರೂಪಭ್ರಮವಾದಿನಾಮಪಿ "ಇಮಾವಿಷ್ಟಪುರೋವರ್ತಿನೌ ಭಿನ್ನೌ" ಇತಿ ಜ್ಞಾನೇ ಸತಿ ಪ್ರವೃತ್ತಿದರ್ಶನೇನ ಕಶ್ಚಿದುಪಯೋಗೋಽಸ್ಯ ವಕ್ತವ್ಯಃ. ತಥಾಚಾಪೇಕ್ಷಿತಭೇದಾಗ್ರಹವಿರೋಧಿನಾ ಭ್ರಮೇಣ ಕಥಂ ಭವನ್ಮತೇ ಪ್ರವೃತ್ತಿರ್ನಿವೃತ್ತಿರ್ವಾ ಸ್ಯಾತ್. ಅಪಿ ಚೈವಂ "ವಹ್ನಿವ್ಯಾಪ್ಯಧೂಮವಾನ್ ಪರ್ವತಃ, ಪರ್ವತೇ ವಹ್ನಿವ್ಯಾಪ್ಯೋ ಧೂಮಃ" ಇತಿ ಪ್ರತೀತಿರಪಿ ಸಮಾನಾಧಿಕರಣಪ್ರತೀತಿತ್ವೇನ ತಾದಾತ್ಮ್ಯಮವಗಾಹಮಾನಾ ವಹ್ನಿವ್ಯಾಪ್ಯಧೂಮಯೋರ್ಭೇದಂ ವಿಷಯೀಕುರ್ಯಾತ್. ತಥಾಚ ನಾನುಮಿತಿರ್ಜಾಯತೇ, ಕಿಂತು ಪ್ರತಿಬಧ್ಯತ ಏವ. ಅಪಿಚ "ಇದಂ ರಜತತಯಾ ಜಾನಾಮಿ" ಇತ್ಯನುವ್ಯವಸಾಯವತ್ "ಇದಂ ರಜತಭಿನ್ನತಯಾ ಜಾನಾಮಿ," "ಇದಂ ರಜತಭಿನ್ನಸತ್ತಾಕತಯಾ ಜಾನಾಮಿ" ಇತ್ಯಪಿ ಕದಾಚಿದನುವ್ಯವಸಾಯಃ ಸ್ಯಾತ್. ನಹಿ ಜ್ಞಾತಂ ಕದಾಚಿದಪಿ ನಾನುಸಂಧೀಯತೇ. "ಏತಾವಂತಂ ಕಾಲಂ ರಜತಭೇದಜ್ಞಾನಂ ವೃತ್ತಂ, ಇದಾನೀಂ ಬಾಧೇನ ನಿವೃತ್ತಂ" ಇತ್ಯಪಿ ಪ್ರತೀಯೇತ. "ಇದಂ ರಜತಂ" ಇತಿ ವಾಕ್ಯಾತ್ ಶಾಬ್ದಬೋಧೋಽಪಿ ನ ಸ್ಯಾತ್, ಅಯೋಗ್ಯಜ್ಞಾನಾತ್. ತಸ್ಮಾನ್ನಘಟ ಇತಿ ಪ್ರತೀತಿಬಲಾತ್ ಸದಸದ್ವಿಲಕ್ಷಣತ್ವಸಿದ್ಧಿಃ. ನಾಪಿ "ಸಚ್ಚೇನ್ನ ಬಾಧ್ಯೇತ, ಅಸಚ್ಚೇನ್ನ ಪ್ರತೀಯೇತ" ಇತಿ ಖ್ಯಾತಿಬಾಧಾನ್ಯಥಾನುಪಪತ್ತ್ಯಾ ತಸ್ಯಾಃ ವಿಪರೀತಸಾಧಕತ್ವಾತ್. ಬಾಧೋ ಹಿ ನಾಸ್ತೀತಿ ಪ್ರತೀತಿಃ. ಸಾ ತ್ವಸತ್ತಾಮೇವ ಸಾಧಯೇತ್. ಖ್ಯಾತಿರಪ್ಯಸ್ತಿಕಾರಾ, ಸಾಪಿ ಸತ್ತಾಮೇವ ಸಾಧಯೇತ್. ತತಶ್ಚ ಸದಸದಾತ್ಮಕಂ ವಸ್ತು ಸಿದ್ಧ್ಯೇನ್ನ ಸದಸದ್ವಿಲಕ್ಷಣಂ. ನನು ಸದಸದಾತ್ಮಕತ್ವಂ ವಿರೋಧಾತ್ಸಾಧಯಿತುಮಶಕ್ತಾಸಾ ಅರ್ಥಾತ್ಸದಸದ್ವಿಲಕ್ಷಣತ್ವಂ ಸಾಧಯಿಷ್ಯತೀತಿ ಚೇತ್ತರ್ಹೀದಮಪಿ ವಿರೋಧಾದೇವ ನ ಸಾಧಯೇತ್. ಸದಸದಾತ್ಮಕತ್ವಸ್ಯೇವ ಸದಸದ್ವಿಲಕ್ಷಣತ್ವಸ್ಯಾಪಿ ವಿರುದ್ಧತ್ವಾತ್. "ಪರಸ್ಪರವಿರೋಧೇ ಹಿ ನ ಪ್ರಕಾರಾಂತರಸ್ಥಿತಿಃ" ಇತಿ ನೀತಿವಿದಃ. ನಹಿ ಘಟಾಘಟೋಭಯವಿಲಕ್ಷಣಂ ವಸ್ತೂಪಲಭ್ಯತೇ. ಘಟಭಿನ್ನಸ್ಯ ಸರ್ವಸ್ಯ ಅಘಟತ್ವೇನ ಕ್ರೋಡೀಕಾರಾತ್, ಕೋಟಿದ್ವಯವಿನಿರ್ಮುಕ್ತಾನುಪಲಂಭ ಇತಿ ಚೇತ್ಸದ್ಭಿನ್ನಸ್ಯ ಸರ್ವಸ್ಯಾಸತ್ತ್ವೇನ ಕ್ರೋಡೀಕಾರಾತ್

ಕೋಟಿದ್ವಯವಿನಿರ್ಮುಕ್ತಾಸಂಭವಃ ಪ್ರಕೃತೇಽಪಿ ತುಲ್ಯಃ. ಅಥ ಸಚ್ಛಬ್ದಸ್ತದ್ವಿಶೇಷಪರ ಇತಿ ಶಂಕ್ಯೇತ? ತರ್ಹಿ ಕಿಂಚತ್ಸದ್ವಿಲಕ್ಷಣತ್ವೇ ಸತ್ಯಸದ್ವಿಲಕ್ಷಣತ್ವಂ ಸದಂತರೇಽಪ್ಯುಪಪನ್ನಮಿತಿ ಅಸ್ಮದಿಷ್ಟಸಿದ್ಧಿರೇವ. ನನು "ಬಾಧೇನಾಸತ್ಯಂ ಸಿದ್ಧ್ಯತೀತಿ ಭವದ್ಭಿರೇವಾಭ್ಯಧಾಯಿ, ತದೇವ ಸದ್ವಿಲಕ್ಷಣತ್ವಂ, ಸದರ್ಥಾಸಂಸ್ಪರ್ಶತೌಲ್ಯಾತ್. ಖ್ಯಾತಿರಪಿ ಸತ್ತಾಂ ಸಾಧಯಂತೀ ಸತ್ತಾಯಾ ಏವಾಸದ್ವೈಲಕ್ಷಣ್ಯರೂಪತಯಾ ತದ್ವ್ಯಾಪಕತಯಾ ತುಚ್ಛಾದ್ವೈಲಕ್ಷಣ್ಯಂ ಸಾಧಯತಿ. ತಥಾಚ ಪ್ರಮಾಣಸಿದ್ಧೇಽರ್ಥೇ ವಿರೋಧೋಽಪಿ ಕಥಂಚಿತ್ಸಮಾಧೀಯತೆ" ಇತಿಚೇತ್ ಭ್ರಾಂತಿಪ್ರಲಪಿತಮೇತತ್. ಬಾಧೇನಾಧಿಕರಣಾಂತರೇ ಸತ್ತ್ವವಿರಹಿಣೋಽಪಿ ವಸ್ತುನೋಽಧಿಕರಣಾಂತರೇ ಸತ್ತಾಯಾಃ ನಿಷ್ಪ್ರತ್ಯೂಹತ್ವಾತ್. ಸಿದ್ಧರೂಪೇ ಕ್ವಚಿತ್ಕಿಂಚಿತ್ತಾದೃಗೇವ ನಿಷಿಧ್ಯತ ಇತಿ ಸಾರ್ವಜನೀನಂ. ಅತೋ ಬಾಧಸ್ಸತ್ತಾಮೇವ ಸಾಧಯೇತ್. ಪ್ರತೀತಿರಪಿ ಖ್ಯಾತಿಪದಾಭಿಧೇಯತಯಾ ತಾಮೇವ ಪ್ರಥಯತಿ. "ಸಂವಿದೇವ ಹಿ ಭಗವತೀ ವಿಷಯಸತ್ತ್ವೋಪಗಮೇ ಶರಣಂ" ಇತ್ಯುಕ್ತೇಃ. ತಥಾಚ ಸದಸದ್ವಿಲಕ್ಷಣೇ ಪ್ರಮಾಣಾನುಪಲಂಭಾತ್ತದ್ಬಲೇನ ಸದ್ವಿಲಕ್ಷಣತ್ವಾಸದ್ವಿಲಕ್ಷಣತ್ವಯೋರ್ವಿರೋಧಶಾಂತಿಪ್ರಯತ್ನಃ ಅಜಾಗಲಸ್ತನೋಪಾಲಂಭಜನಿತಃ ಕ್ಷೀರಾಭಿಪಾತಸಂಭ್ರಮಃ.

ಅಧ್ಯಾಸಕ್ಕೆ ವಿಷಯವಾಗಿರುವ ಘಟಪಟಗಳಿಂತಲೂ ಅಧಿಷ್ಠಾನದ ಸತ್ತೆಯು ವಿಲಕ್ಷಣವಾಗುವುದಾದರೆ ಗುಣಗುಣಿಗಳಸತ್ತೆಯೂ ಬೇರೆಯಾಗಬೇಕಾಗುವುದು. ಇದೂ ಅಲ್ಲದೆ, 'ಸನ್‌ಪಟಃ' ಎಂಬಲ್ಲಿ ತಾದಾತ್ಮ್ಯವು ತೋರುವುದಾದರೆ, 'ಇದಂ ರಜತಂ' ಎಂಬಲ್ಲಿಯೂ ಅದು ತೋರಲೇಬೇಕಾಗುತ್ತದೆ. ಅದು ತೋರಿದರೆ ಅದರಲ್ಲಿ ಅಭೇದವೂ ಸೇರಿರುವುದರಿಂದ ಅಭೇದ ತಿಳಿದಮೇಲೆ ಭ್ರಮದಿಂದ ಯಾರಿಗೂ ಪ್ರವೃತ್ತಿ ಬರುವಂತಿಲ್ಲ; ಯಾಕೆಂದರೆ ಭೇದಜ್ಞಾನವೇ ಪ್ರವೃತ್ತಿಗೆ ಪ್ರತಿಬಂಧಕವಾಗಿರುವುದು. ಎರಡರ ಸತ್ತೆಯೂ ಒಂದಾಗಿರುವುದೆಂಬ ಜ್ಞಾನವು ಸ್ವತಂತ್ರವಾಗಿಯೇ ಪ್ರವೃತ್ತಿಗೆ ಕಾರಣವಾಗಿರುವುದೆಂದು ಹೇಳುವುದೂ ಸರಿಯಲ್ಲ. ಪ್ರವೃತ್ತಿ ನಿವೃತ್ತಿಗಳೆರಡರ ಕಾರಣವೂ ಒಂದೇ ಕಾಲದಲ್ಲಿ ಸೇರಿದರೆ ಪರಸ್ಪರ ವಿರೋಧದಿಂದ ಯಾವ ಕಾರ್ಯವೂ ನಡೆಯದೇ ಹೋಗಬೇಕಾಗುತ್ತದೆ. ಎರಡರ ಸತ್ತೆಯೂ ಒಂದಾಗಿರುವುದೆಂಬ ಜ್ಞಾನವೇ ಪ್ರವೃತ್ತಿಗೆ ಕಾರಣವಾದರೆ ಘಟಪಟಗಳೆರಡನ್ನೂ ನೋಡಿ ಭ್ರಾಂತಿ ಬಂದಿರುವಾಗ ಘಟವನ್ನು ಬಯಸುವವನು ಪಟಕ್ಕಾಗಿಯೂ ಪ್ರವರ್ತಿಸಬೇಕಾಗುತ್ತದೆ. 'ಒಂದೇ ಸತ್ತೆಯುಳ್ಳದ್ದಾಗಿರಬೇಕು' ಎಂಬ ವಿಶೇಷಣವನ್ನು ಸೇರಿಸಿದರೂ, ಆ ವಿಶೇಷಣವನ್ನು ತಿಳಿಯುವ ಕಾಲದಲ್ಲಿ ಪ್ರವೃತ್ತಿ ಉಂಟಾಗಬೇಕಾಗಿರುವುದರಿಂದ ಅತಿಪ್ರಸಂಗವುಂಟಾಗುತ್ತದೆ. ಇಷ್ಟೇ ಅಲ್ಲದೆ, ಎದುರಿಗಿರುವ ವಸ್ತುವಿನಲ್ಲಿ ನನ್ನ ಇಷ್ಟವಾದ ವಸ್ತುವಿನ ಭೇದವನ್ನು

ತಿಳಿಯದಿರುವುದೇ ಪ್ರವೃತ್ತಿಗೆ ಕಾರಣವೆಂಬುದು ಎಲ್ಲರಿಗೂ ಸಮ್ಮತವಾಗಿದೆ. ಆ ವಸ್ತುವಿಗೆ ಸಾಕ್ಷಿಯಾಗಿರುವುದೇ ಭ್ರಮವೆಂಬ ಮತದಲ್ಲೂ ಎದುರಿಗಿರುವ ವಸ್ತುವೂ ನನ್ನ ಇಷ್ಟವಾದ ವಸ್ತುವೂ ಭಿನ್ನವಾದುವು ಎಂಬ ಜ್ಞಾನವಿದ್ದರೂ ಪ್ರವೃತ್ತಿ ಬರುವುದರಿಂದ ಈ ಜ್ಞಾನಕ್ಕೆ ಬೇರೊಂದು ಉಪಯೋಗವನ್ನು ಹೇಳಬೇಕಾಗುತ್ತದೆ. ಇಷ್ಟವಸ್ತುವಿನ ಭೇದವನ್ನು ತಿಳಿಯಲು ವಿರೋಧಿಯಾಗಿರುವ ಭ್ರಮದಿಂದ ನಿನ್ನ ಮತದಲ್ಲಿ ಪ್ರವೃತ್ತಿಯಾಗಲೀ ನಿವೃತ್ತಿಯಾಗಲೀ ಹೇಗೆ ಬರುವುದು? ಇಷ್ಟೇ ಅಲ್ಲದೆ 'ಪರ್ವತವು ಬೆಂಕಿಯೊಡಗೂಡಿದ ಧೂಮವುಳ್ಳದ್ದು' ಎಂಬ ಪ್ರತೀತಿಯೂ 'ಪರ್ವತದಲ್ಲಿರುವ ಧೂಮವು ಬೆಂಕಿಯೊಡಗೂಡಿರುವುದು' ಎಂಬ ಪ್ರತೀತಿಯೂ ವಿಶೇಷಣವಿಶೇಷ್ಯಭಾವವನ್ನೇ ವಿಷಯೀಕರಿಸಿರುವುದರಿಂದ ಅವೆರಡಕ್ಕೂ ತಾದಾತ್ಮ್ಯವೇ ತೋರಬೇಕಾಗುತ್ತದೆ. ಇದರಿಂದ ವಹ್ನಿವ್ಯಾಪ್ಯವಾದ ಎರಡು ಬಗೆಯ ಧೂಮಗಳಿಗೂ ಭೇದವು ತೋರಬೇಕಾಗುವುದರಿಂದ ಅನುಮಿತಿಗೆ ಪ್ರತಿಬಂಧಕವುಂಟಾಗುತ್ತದೆ. ಇದೂ ಅಲ್ಲದೆ, "ಇದನ್ನು ರಜತವೆಂದು ತಿಳಿಯುತ್ತೇನೆ" ಎಂಬ ಅನುಭವ ಬರುವಂತೆ "ಇದನ್ನು ರಜತವಲ್ಲವೆಂದು ತಿಳಿಯುತ್ತೇನೆ; "ರಜತಸತ್ತೆಗಿಂತಲೂ ಭಿನ್ನವಾದ ಸತ್ತೆಯುಳ್ಳದ್ದೆಂದು ತಿಳಿಯುತ್ತೇನೆ" ಎಂದೂ ಸಹ ಅನುಭವ ಬರಬೇಕಾಗುತ್ತದೆ. ಜ್ಞಾನ ಬಂದಮೇಲೆ ಅದರ ಅನುಸಂಧಾನ ತಪ್ಪುವಂತಿಲ್ಲ. "ಇದುವರೆಗೆ ರಜತಭೇದ ಜ್ಞಾನವೇ ಇತ್ತು, ಈಗ ಅದು ಬಾಧಜ್ಞಾನದಿಂದ ತೊಲಗಿತು" ಎಂದು ಹೇಳಬೇಕಾಗುವುದು. ಹೀಗಾದರೆ, ಯೋಗ್ಯತಾಜ್ಞಾನವಿಲ್ಲದ್ದರಿಂದ 'ಇದು ರಜತ' ವೆಂಬ ವಾಕ್ಯದಿಂದಲೂ ಶಾಬ್ದಬೋಧವು ಬರದೇಹೋದೀತು. ಆದ್ದರಿಂದ 'ಘಟಃ' ಎಂಬ ಪ್ರತೀತಿ ಬಲದಿಂದ ಸದಸದ್ವಿಲಕ್ಷಣತ್ವವು ಸಿದ್ಧಿಸುವಂತಿಲ್ಲ. "ಸತ್ತಾದರೆ ಬಾಧೆ ಬರುವುದಿಲ್ಲ, ಅಸತ್ತಾದರೆ ತೋರುವುದಿಲ್ಲ" ಈ ರೀತಿಯಲ್ಲಿ ತೋರುವಿಕೆ ಮತ್ತು ಬಾಧೆ ಎರಡೂ ಇರುವುದರಿಂದ ಸದಸದ್ವಿಲಕ್ಷಣತ್ವವು ಸಿದ್ಧಿಸುವುದೆಂಬುದೂ ಸರಿಯಲ್ಲ. ಇಲ್ಲವೆಂಬ ಪ್ರತೀತಿಯೇ ಬಾಧವೆನಿಸುತ್ತದೆ. ಅದರಿಂದ ಅಸತ್ತ್ವವೇ ಸಿದ್ಧಿಸುತ್ತದೆ. ತೋರುವಿಕೆಯೇ 'ಇರುವಿಕೆ' ಎನಿಸುತ್ತದೆ. ಸತ್ತ್ವವೆನ್ನುವುದೂ ಅದೇಯೆ. ಆದ್ದರಿಂದ ಯಾವ ವಸ್ತುವೂ ಸದಸದ್ರೂಪವಾಗಿರುವುದೇ ಹೊರತು ಅದಕ್ಕೆ ವಿಲಕ್ಷಣವಾಗಿರುವುದಿಲ್ಲ. ಒಂದು ವಸ್ತುವಿನಲ್ಲಿ ಎರಡು ರೂಪಗಳು ವಿರುದ್ಧವಾಗುವುದರಿಂದ ಅದರ ವಿಲಕ್ಷಣತ್ವವು ತಾನಾಗಿಯೇ ಸಿದ್ಧಿಸುವುದೆಂಬುದೂ ಯುಕ್ತವಲ್ಲ. ಅದರಂತೆಯೇ ಸದಸದ್ವಿಲಕ್ಷಣತ್ವವೂ ಪರಸ್ಪರ ವಿರುದ್ಧವಾದ್ದರಿಂದ ಅದೂ ಒಂದು ಕಡೆಯಲ್ಲಿ ಬರುವಂತಿಲ್ಲ. ಪರಸ್ಪರವಿರುದ್ಧವಾದ ಎರಡು ಧರ್ಮಗಳಲ್ಲಿ ಯಾವುದಾದರೊಂದು ಉಳಿಯಲೇಬೇಕಾಗಿರುವುದರಿಂದ ಎರಡರ ವಿಲಕ್ಷಣತ್ವವೂ ಒಂದೇ ಕಡೆಯಲ್ಲಿ ಬರುವಂತಿಲ್ಲ. ಘಟ ಮತ್ತು ಘಟವಲ್ಲದ ವಸ್ತು (ಅಘಟ) ಈ ಎರಡರ ವೈಲಕ್ಷಣ್ಯ ಎಲ್ಲಿಯೂ ಒಂದೇ ಕಡೆ ಬರುವಂತಿಲ್ಲ. ಎಲ್ಲಾ ವಸ್ತುಗಳೂ ಘಟದಲ್ಲೋ ಅಥವಾ ಅಘಟವರ್ಗದಲ್ಲೋ ಸೇರಲೇಬೇಕು. ಈ ಎರಡು ಪಕ್ಷಗಳನ್ನೂ

ಬಿಟ್ಟು ಮೂರನೆಯ ಪಕ್ಷ ಎಲ್ಲಿಯೂ ಅನುಭವಗೋಚರವಾಗುವುದಿಲ್ಲವೆಂದರೆ ಸತ್ತಲ್ಲದಿರುವುದೆಲ್ಲವೂ ಅಸದ್ವರ್ಗದಲ್ಲಿಯೇ ಸೇರುವುದರಿಂದ ಅಲ್ಲೂ ಈ ಎರಡು ಪಕ್ಷಗಳಿಗಿಂತಲೂ ಬೇರೊಂದು ಪಕ್ಷವು ಅನುಭವಸಿದ್ಧವಾಗಿಲ್ಲ. ಯಾವುದೋ ಒಂದು ಸದ್ವಸ್ತುವಿನ ವೈಲಕ್ಷಣ್ಯವನ್ನು ಮಾತ್ರವೇ ಹೇಳಿದರೆ ಅಂತಹ ವೈಲಕ್ಷಣ್ಯವು ನಮಗೂ ಇಷ್ಟವೇ ಆಗುತ್ತದೆ. ಬಾಧ ಬಂದರೆ ಅಸತ್ತ್ವ ಸಿದ್ಧಿಸುತ್ತದೆ ಎಂಬುದು ನಿಮಗೂ ಸಮ್ಮತವೇ. ಅದೆಯೇ ಸದ್ವಿಲಕ್ಷಣವೆನಿಸುತ್ತದೆ. ಖ್ಯಾತಿಯೂ ಸತ್ತೆಯನ್ನು ಸಾಧಿಸುತ್ತಾ ಸದ್ರೂಪವೇ ಅಸದ್ವಿಲಕ್ಷಣವಾಗುವುದರಿಂದ ತುಚ್ಛವಾದ್ದಕ್ಕಿಂತಲೂ ಸದ್ರೂಪವನ್ನು ವಿಲಕ್ಷಣವೆಂದು ಮಾತ್ರವೇ ಅದು ಸಾಧಿಸುತ್ತದೆ. ಆದ್ದರಿಂದ ಪ್ರಮಾಣಸಿದ್ಧವಾದ ಅರ್ಥದಲ್ಲಿ ವಿರೋಧ ಕಂಡುಬಂದರೆ ಹೇಗಾದರೂ ಸಮನ್ವಯಮಾಡಿಕೊಳ್ಳಬೇಕಾಗುತ್ತದೆ ಎಂಬ ಆಕ್ಷೇಪವು ಭ್ರಾಂತಿಮೂಲಕವೇ ಬಂದದ್ದಾಗಿದೆ. ಒಂದು ಅಧಿಕರಣದಲ್ಲಿ ಬಾಧೆಯಿಂದ ಸತ್ತೆಯನ್ನು ಕಳೆದುಕೊಂಡ ವಸ್ತು ಬೇರೆ ಅಧಿಕರಣದಲ್ಲಿ ಸತ್ತೆಯನ್ನು ಪಡೆಯುವುದರಲ್ಲಿ ವಿರೋಧವೇನೂ ಇರಲಾರದು. ಒಂದು ಕಡೆ ಸಿದ್ಧವಾಗಿರುವುದನ್ನೇ ಬೇರೆಕಡೆ ನಿಷೇಧಿಸಬಹುದೆಂಬ ನ್ಯಾಯ ಸರ್ವಸಮ್ಮತವಾದ್ದರಿಂದ ಒಂದು ಕಡೆ ಬಾಧೆ ಬಂದರೂ ಮತ್ತೊಂದು ಕಡೆ ಸತ್ತೆಯು ಸಿದ್ಧಿಸುತ್ತದೆ. ಒಂದು ವಸ್ತುವಿನ ಪ್ರತೀತಿಯೂ ಸಹ ಸತ್ತೆಯನ್ನು ಸಾಧಿಸುತ್ತದೆ. ಆದ್ದರಿಂದ ಪ್ರತೀತಿ ಮತ್ತು ಬಾಧೆ ಎರಡೂ ಸತ್ತೆಯನ್ನೇ ಸಾಧಿಸುತ್ತವೆ. ಲೋಕಾನುಭವವೇ ಒಂದು ವಸ್ತುವಿನ ಇರುವಿಕೆಗೂ ಮತ್ತು ಇಲ್ಲದಿರುವಿಕೆಗೂ ಪ್ರಮಾಣವೆನಿಸಿದೆ. ಆದ್ದರಿಂದ ಸದಸದ್ವಿಲಕ್ಷಣತೆ ಎಂಬ ಅರ್ಥದಲ್ಲಿ ಪ್ರಮಾಣವಿಲ್ಲದ್ದರಿಂದ ಅದರ ಬಲದಿಂದಲೇ ಎರಡಕ್ಕೂ ವಿರೋಧವಿಲ್ಲವೆಂದು ಸಾಧಿಸುವ ಪ್ರಯತ್ನವು ಆಡಿನ ಕುತ್ತಿಗೆಯಲ್ಲಿ ಜೋತಾಡುವ ಭಾಗವನ್ನು ನೋಡಿ ಅದರ ಹಾಲನ್ನು ಬಯಸುವವನ ಸಂಭ್ರಮದಂತಾಗುವುದು.

**ಯದತ್ರೋಕ್ತಂ–"ಸತ್ತ್ವಾಸತ್ತ್ವೇ ಪದಾರ್ಥಧರ್ಮೌ? ಸ್ವರೂಪಂ ವಾ? ನಾದ್ಯಃ—ಅಸತ್ತ್ವಕಾಲೇ ಪದಾರ್ಥಸದ್ಭಾವಪ್ರಸಂಗಾತ್ ಅನಿತ್ಯಧರ್ಮಸ್ಯಾಶ್ರಯಾದೃತೇಽನವಸ್ಥಾನಾತ್. ನಿತ್ಯಧರ್ಮತ್ವೇ ಸತ್ಯವ್ಯಾಘಾತಾತ್. ನ ದ್ವಿತೀಯಃ, ಏಕಸ್ಯ ಸದಸದಾತ್ಮಕತ್ವವಿರೋಧಾತ್. ನನು ಕಾಲಭೇದಾದವಿರೋಧ ಇತಿ ಚೇನ್ನ, ಧರ್ಮಸ್ಯ ಹೇತುಸಮಾಜಾದ್ವ್ಯತ್ಯಯೋ ನತು ಸ್ವರೂಪಸ್ಯ. ನಚಾಭಾವಃ ಕಾಲಭೇದೇನ ಭಾವೋ ಭವತಿ. ಇತಃ ಪೂರ್ವಮಸದಿತ್ಯಸತೋಽಪ್ಯನುಪಪತ್ತೇಶ್ಚ. ತಸ್ಯ ನಿಸ್ಸ್ವಭಾವಸ್ಯಾವಚ್ಛೇದಕಕಾಲಾಸಂಭವಾತ್. ತಸ್ಮಾತ್,"ಯತ್ಕಿಂಚಿತ್ಕಾಲಮಸತ್ತನ್ಸರ್ವದಾ ಅಸದೇವ, ಯತ್ಸತ್ ತತ್ಸದಾ ಸದೇವ" ಇತಿ ತದಪ್ಯಸತ್, ಪಕ್ಷದ್ವಯೇಽಪಿ ದೋಷಾಭಾವಾತ್. ನಚಾನಿತ್ಯಧರ್ಮಸ್ಯಾಶ್ರಯಾಕ್ಷೇಪಕತ್ವಪ್ರಸಂಗಃ, ತದಾನೀಂ ಸತ್ತಾರೂಪಧರ್ಮಸ್ಯಾಪ್ಯಭಾವೇನ ಆಶ್ರಯಂ ವಿನಾಽನುಪಪತ್ತ್ಯಭಾವಾತ್. ಅನ್ಯಥಾ ಸ್ವಾಶ್ರಯಧ್ವಂಸಶಬ್ದಸ್ಯ ಧ್ವಂಸ**

ಪ್ರತಿಯೋಗಿನಾಂರೂಪಾದೀನಾಂಘಟೇ ಸತ್ತಾಽಽಪಾದಕತಾಪ್ರಸಂಗಾತ್. ತ್ವನ್ಮತೇಽಪಿ ಮುಕ್ತಿಕಾಲೇ ಅವಿದ್ಯಮಾನಾನಾಮಂತಃಕರಣಾದೀನಾಂ ಅವಿದ್ಯಾಕ್ಷೇಪಕತ್ವಪ್ರಸಂಗಾಚ್ಚ. ಅಥಾ ಅವಿದ್ಯಮಾನಾನಾಮಾಶ್ರಯಂ ವಿನಾನುಪಪತ್ತಿರ್ಹೀಯತೆ? ತರ್ಹಿ ಪ್ರಕೃತೇಽಪಿ ದೀಯತಾಂ ದೃಷ್ಟಿಃ. ಏತೇನ ಸತ್ತ್ವಧರ್ಮಿತ್ವೇ ಅಸತ್ತ್ವವ್ಯಾಘಾತೋ ನಿರಸ್ತಪ್ರಾಯಃ. ಸತ್ತ್ವಸ್ಯ ತದಾನೀಮಭಾವೇನ ತದ್ಧರ್ಮತ್ವಾಭಾವಾತ್. ಅನ್ಯಥಾ ಶ್ಯಾಮ ಧರ್ಮಿಣಸ್ತದ್ವಿರುದ್ಧರಕ್ತಧರ್ಮಗುಣಧರ್ಮಿತ್ವಾಭಾವೇನ ಶ್ಯಾಮರಕ್ತ ಯೋರ್ಧರ್ಮಿದ್ವಯಗತತ್ವಪ್ರಸಂಗಾತ್. ಯದಿ ಶ್ಯಾಮನಾಶನಕಾಲ ಘಟಿತಂ ತದ್ಧರ್ಮತ್ವಂ? ತುಲ್ಯಮಿತರತ್ರಾಪಿ, ಸತ್ತ್ವಧರ್ಮಿತ್ವಮನ್ಯಥಾ ನೇತಿ ಸುವಚತ್ವಾತ್. ನನು ಸತ್ತ್ವವದಸತ್ತ್ವಮಪಿ ಧರ್ಮಃ. ಅಸಾವಪ್ಯಾ ಶ್ರಯಂ ವಿನಾ ಕಥಮವತಿಷ್ಠತೆ? ತಥಾಚ ಅಸತ್ತ್ವದಶಾಯಾಮಾಶ್ರ ಯಸತ್ತಾಪ್ರಸಂಗ ಇತಿ ಚೇತ್, ಸ್ಯಾದೇವಂ, ಯದ್ಯಸತ್ತ್ವಂ ಅಭಾವಾತಿ ರಿಕ್ತಂ, ನತು ತತ್ತಥಾ, ತಥಾ ಚಾಭಾವ ಏವ. ಸಚ ಕಾಲದೇಶಾದ್ಯಧಿಕ ರಣ ಏವೇತಿ ಶಾಂತಾಯಾಮಾಶ್ರಯಾಕಾಂಕ್ಷಾಯಾಂ ಕಥಂ ಪ್ರತಿಯೋ ಗಿಸತ್ತಾಂ ತದರ್ಥಮಾಕ್ಷಿಪೇತ್? ಅನ್ಯಥಾ ತ್ವದಭಿಮತಯೋರ್ವಿದ್ಯ ಮಾನತ್ವಾವಿದ್ಯಮಾನತ್ವಯೋಃ ಕಾ ಗತಿಃ? ತಾವಪಿ ಸತ್ತ್ವಸತ್ತ್ವರೂ ಪಾವೇವ, ದ್ವಿವಿಧಸತ್ತಾಯಾಮಿತಿ ಧಾತ್ವರ್ಥಾನುಸ್ಮೃತೇಃ. ಉಕ್ತಂ ಹಿ ತ್ವಯಾ ವ್ಯಾಘಾತಮಜಾನತಾ ಸತ್ತಾಶೂನ್ಯಸ್ಯಾಪಿ ಪ್ರತಿಯೋಗಿನೋ ವಿದ್ಯಮಾನತಾಮಾತ್ರೇಣ ಅಭಾವಸತ್ಯತ್ವೋಪಪತ್ತಿರಿತಿ. ಏತೇನ ಪ್ರತಿ ಯೋಗಿತ್ವಸ್ಯಾಶ್ರಯಂ ವಿನಾ ಕಥಮವಸ್ಥಾನಮಿತ್ಯಪಿ ಶಂಕಾ ಗಲಹ ಸ್ತಿಕಾ. ಅವಿದ್ಯಮಾನತ್ವಪ್ರತಿಯೋಗಿತಾಯಾಮಾಶ್ರಯಂ ವಿನಾನುಪ ಪತ್ತೇಃ. ಪೂರ್ವಕಾಲೇ ವಿದ್ಯಮಾನತಾಮಾತ್ರೇಣ ಚೇತ್ತಸ್ಯಾ ಉಪ ಪತ್ತಿ? ತರ್ಹಿ ಸೈವೋಪಪತ್ತಿರಿತಿ. ವಸ್ತುತಸ್ತು ಅತೀತತ್ವಭವಿಷ್ಯತ್ವಾ ದಿಕಂ ಸ್ವಭಾವಾದವಿದ್ಯಮಾನಪದಾರ್ಥಾಶ್ರಯಮೇವ ನವಿದ್ಯಮಾನಾ ಶ್ರಯಂ, ಅನುಭವಾನುರೋಧಿತ್ವಾತ್ಕಲ್ಪನಾಯಾಃ. ವಿರೋಧಾವಿರೋ ಧಾವಪ್ಯನುಭವಾನುರೋಧೇನೈವ ವ್ಯವಸ್ಥಾಪ್ಯೌ. ತಥಾಚ ಯದಾ ವಿದ್ಯ ಮಾನತ್ವಾದನಾಶ್ರಯತ್ವಂ ಅತೀತಾದೀನಾಂ, ತದಾ ಜ್ಞಾನವಿಷಯತಾ ನ ಸ್ಯಾಚ್ಚ. ಜ್ಞಾನಕರ್ಮತ್ವಂ, ಏವಮುತ್ಪತ್ತ್ಯಾದಿಷು ಕರ್ಮಭೂತಾನಾಂ ಘಟಾದೀನಾಂ ಕಾರಣತಾ ನ ಸ್ಯಾಚ್ಚ. ಅವಿದ್ಯಾನಿವೃತ್ತಿಪ್ರತಿಯೋಗಿತ್ವಂ ಅವಿದ್ಯಾಯಾಃ, ನಿರಾಶ್ರಯಸ್ಯ ಪ್ರತಿಯೋಗಿತ್ವಸ್ಯಾನವಸ್ಥಾನಾತ್. ವಸ್ತುತಸ್ತು ಅಸತ್ತ್ವಪ್ರತಿಯೋಗಿತಾಂ ಪ್ರತ್ಯನಾಶ್ರಯತ್ವೇ, ಜಗತ ಏವ ಸರ್ವದೇಶಸರ್ವಕಾಲನಿಷ್ಠಾತ್ಯಂತಾಭಾವಪ್ರತಿಯೋಗಿನಸ್ಸತ್ತ್ವಾತ್ ಪದಾ

**ರ್ಥಮಾತ್ರೇಣಾಶ್ರಯತ್ವಪ್ರಸಂಗ ಇತ್ಯಲಂ. ಆಸ್ತಾಂ ವಿಸ್ತರೇಣ. ತಸ್ಮಾನ್ನ ಪ್ರಪಂಚಸ್ಯ ವ್ಯಾವಹಾರಿಕಮಾತ್ರಸತ್ಯತ್ವಂ. ಅತಃ ಪರಮೇಶ್ವರಸ್ಯಾನಂದಮಯತ್ವಂ ಸ್ವಾಭಾವಿಕಮೇವ.**

ಸತ್ತ್ವ ಅಸತ್ತ್ವ ಇವೆರಡೂ ಒಂದು ವಸ್ತುವಿನ ಧರ್ಮವೇ? ಅಥವಾ ಅದರ ಸ್ವರೂಪವೇ? ಮೊದಲನೇ ಪಕ್ಷದಲ್ಲಿ ಧರ್ಮವಿಲ್ಲದಿರುವ ಕಾಲದಲ್ಲೂ ಆ ವಸ್ತು ಇರಬೇಕಾಗುತ್ತದೆ. ಧರ್ಮವು ಅನಿತ್ಯವಾದರೆ ಆಶ್ರಯವಿಲ್ಲದೆ ಇರಲಾರದು. ಅದು ನಿತ್ಯವಾದರೆ ಸದಸದ್ರೂಪಗಳೆರಡೂ ಒಂದೇಕಡೆ ಸೇರಲಾರವು. ಎರಡನೇ ಪಕ್ಷದಲ್ಲಿ ಒಂದೇ ವಸ್ತುವಿಗೆ ಎರಡು ಸ್ವರೂಪಗಳಿರುವುದು ವಿರುದ್ಧವಾಗುತ್ತದೆ. ಇವೆರಡಕ್ಕೂ ಕಾಲಭೇದದಿಂದ ವಿರೋಧವನ್ನು ಪರಿಹರಿಸಲಿಕ್ಕೂ ಆಗುವುದಿಲ್ಲ. ಧರ್ಮಗಳಿಗೆ ಕಾಲಭೇದದಿಂದ ವಿರೋಧವನ್ನು ಪರಿಹರಿಸಬಹುದಾದರೂ ಸ್ವರೂಪಗಳ ವಿರೋಧವನ್ನು ಹಾಗೆ ಪರಿಹರಿಸಲಾಗುವುದಿಲ್ಲ. ಇಲ್ಲವಾದರೆ ಅಭಾವವೂ ಒಂದು ಕಾಲದಲ್ಲಿ ಭಾವರೂಪವಾಗಬೇಕಾದೀತು. ಇದಕ್ಕೆ ಮೊದಲು ಇಲ್ಲವೆಂಬ ಪ್ರತೀತಿಯೂ ಇಲ್ಲದೇ ಹೋಗಬೇಕಾಗುವುದು; ಯಾಕೆಂದರೆ ಅದಕ್ಕೆ ಒಂದು ಅವಚ್ಛೇದಕವಾದ ಕಾಲವಿಲ್ಲದಿರುವುದರಿಂದ 'ಯಾವಾಗಲೂ ಇಲ್ಲದಿರುವಿಕೆ' ಅಥವಾ 'ಇರುವಿಕೆ' ಅದರ ಸ್ವರೂಪವಾಗುವುದೇ ಹೊರತು ಎರಡೂ ಒಂದೇ ವಸ್ತುವಿಗೆ ಬರುವಂತಿಲ್ಲ. ಅನಿತ್ಯವಾದ ಧರ್ಮವು ಆಶ್ರಯವಿಲ್ಲದೇ ಇರುವುದಿಲ್ಲವಾದ್ದರಿಂದ ಅಸತ್ತ್ವದ ಕಾಲದಲ್ಲಿ ಅದು ಸದ್ರೂಪವೇ ಆಗುವುದರಿಂದ ವಿರೋಧವಿಲ್ಲವೆಂದು ಹೇಳುವುದು ಸರಿಯಲ್ಲ. ಆವಾಗ ಅಸತ್ತ್ವವೇ ಧರ್ಮವಾಗಿ ಉಳಿಯುವುದೇ ಹೊರತು ಸತ್ತ್ವವು ಧರ್ಮವಾಗಿ ಉಳಿಯುವುದಿಲ್ಲ. ಇದೇ ನ್ಯಾಯದಿಂದ ಸತ್ತೆಗೂ ಒಂದು ಆಶ್ರಯ ಬೇಕಾಗುತ್ತದೆ. ಇಲ್ಲದಿದ್ದರೆ ತನ್ನ ಆಶ್ರಯದ ನಾಶವನ್ನು ಬೋಧಿಸುವ ಶಬ್ದದಿಂದ ಆ ನಾಶಕ್ಕೆ ಪ್ರತಿಯೋಗಿ ಎನಿಸಿದ ರೂಪಾದಿಗಳ ಸತ್ತೆಯೂ ಘಟದಲ್ಲಿ ಬೋಧಿತವಾಗಬೇಕಾಗುವುದು. ನಿಮ್ಮ ಮತದಲ್ಲೂ ಮೋಕ್ಷದಲ್ಲಿ ಇಲ್ಲದಿರುವ ಅಂತಃಕರಣಾದಿಗಳಿಂದಲೇ ಅವಿದ್ಯೆಯು ಸಿದ್ಧಿಸಬೇಕಾಗುವುದು. ಇಲ್ಲದಿರುವುದಕ್ಕೆ ಆಶ್ರಯದ ಅಪೇಕ್ಷೆ ಇಲ್ಲವೆಂದರೆ ಅದು ಅಸತ್ತ್ವಧರ್ಮದ ಆಶ್ರಯದ ಬಗ್ಗೆ ಸಮಾನವೇ ಆಗುವುದು. ಇದರಿಂದ "ಸತ್ತ್ವವು ಧರ್ಮಿಸ್ವರೂಪವಾದರೆ ಅಸತ್ತ್ವವು ವ್ಯಾಹತವಾಗುವುದು" ಎಂಬ ವಾದ ತಿರಸ್ಕೃತವಾಯಿತು. ಅಸತ್ತ್ವಕಾಲದಲ್ಲಿ ಸತ್ತ್ವವಿಲ್ಲದಿರುವುದರಿಂದ ಆ ದೋಷಕ್ಕವಕಾಶವಿಲ್ಲ; ಇಲ್ಲದಿದ್ದರೆ ಕಪ್ಪುಬಣ್ಣದ ವಸ್ತುವಿಗೆ ವಿರುದ್ಧವಾದ ಕೆಂಪುಬಣ್ಣದ ರೂಪ ಬರುವುದಿಲ್ಲವಾದ್ದರಿಂದ ಕಪ್ಪು ಕೆಂಪು ಎಂಬ ಎರಡು ಬಣ್ಣಗಳೂ ಒಂದೇ ಧರ್ಮಿಯಲ್ಲಿ ಬರಬೇಕಾಗುವುದು. ಕಪ್ಪುಬಣ್ಣ ನಾಶವಾಗುವ ಕಾಲದಲ್ಲಿ ಕೆಂಪುಬಣ್ಣ ಅದರ ಧರ್ಮವೇ ಆಗುತ್ತದೆ ಎಂದರೆ ಇಲ್ಲಿಯೂ ಕಾಲಭೇದದಿಂದ ವಿರೋಧಪರಿಹಾರ ಸಮಾನವಾಗುತ್ತದೆ. "ಅಸತ್ತ್ವವು ಆಶ್ರಯವಿಲ್ಲದೇ ಇರುವುದಿಲ್ಲವಾದ್ದರಿಂದ ಆ ಆಶ್ರಯಕ್ಕೂ ಒಂದು ಸತ್ತೆಯನ್ನು ಒಪ್ಪಬೇಕಾಗುವುದಲ್ಲವೇ?" ಎಂದು ಕೇಳಿದರೆ ಆಗಲಿ ಒಪ್ಪೋಣವೆಂದೇ

ಹೇಳಬೇಕಾಗುತ್ತದೆ. ಅಸತ್ತ್ವವೆಂಬುದು ಅಭಾವಕ್ಕಿಂತಲೂ ಬೇರೆಯಲ್ಲ. ಅಭಾವವೂ ಭಾವರೂಪವಾದ ದೇಶಕಾಲಗಳಿಗೆ ಧರ್ಮವಾಗುವುದರಲ್ಲಿ ದೋಷವಿಲ್ಲ. ಇದರಿಂದಲೇ ಆಶ್ರಯವು ಸಿದ್ಧಿಸುವುದರಿಂದ ಪ್ರತಿಯೋಗಿಯು ಭಾವರೂಪವಾಗುವುದಿಲ್ಲ. ಇಲ್ಲದಿದ್ದರೆ ನಿಮಗೆ ಸಮ್ಮತವಾದ 'ಇರುವಿಕೆ ಮತ್ತು ಇಲ್ಲದಿರುವಿಕೆ' ಗಳಲ್ಲೂ ಇದೇ ದೋಷ ಸಂಭವಿಸುತ್ತದೆ. ಎರಡು ಬಗೆಯ ಸತ್ತೆಯಲ್ಲೂ ಸತ್ತ್ವ ಮತ್ತು ಅಸತ್ತ್ವವೆಂಬುವೇ ಧಾತ್ವರ್ಥದಿಂದ ಸಿದ್ಧಿಸುತ್ತವೆ. ನೀವೂ ಸಹ ಪರಸ್ಪರ ವಿರೋಧವಿಲ್ಲದಿರುವಾಗ ಸತ್ತ್ವವಿಲ್ಲದಿದ್ದರೂ ಪ್ರತಿಯೋಗಿಯ ಸ್ಮರಣದಿಂದಲೇ ಅಭಾವಪ್ರತೀತಿ ಬರುವುದೆಂದು ಹೇಳುತ್ತೀರಿ. ಆದ್ದರಿಂದ ಪ್ರತಿಯೋಗಿಯ ಆಶ್ರಯವಿಲ್ಲದೆ ಅಭಾವವಿರುವುದು ಅಸಾಧ್ಯವೆಂಬ ಆಕ್ಷೇಪವು ತೊಲಗಿತು. ಪ್ರತಿಯೋಗಿ ಇಲ್ಲದೆ ಅಭಾವ ತೋರುವಾಗ ಆಶ್ರಯವಿಲ್ಲದೆ ಅದು ತೋರುವಂತಿಲ್ಲ. ಹಿಂದೆ ಪ್ರತಿಯೋಗಿಯು ಇದ್ದದ್ದರಿಂದ ಈಗ ಅದರ ಅಭಾವ ಪ್ರತೀತಿ ಬರಬಹುದು. ಹೀಗೆಯೇ, ಮುಂದೆ ಪದಾರ್ಥ ಹುಟ್ಟುವುದಾದರೂ ಈ ಕಾಲದಲ್ಲಿ ಅದರ ಅಭಾವಜ್ಞಾನ ಬರಬಹುದು. ಅನುಭವಕ್ಕೆ ತಕ್ಕಂತೆ ಆಶ್ರಯವನ್ನು ಕಲ್ಪಿಸಬೇಕಾಗಿರುವುದರಿಂದ ವಿರೋಧ ಅವಿರೋಧ ಎರಡನ್ನೂ ಅನುಭವದಿಂದಲೇ ವ್ಯವಸ್ಥೆಗೊಳಿಸಬೇಕು. ಆದ್ದರಿಂದ ಹಿಂದಿನ ಮತ್ತು ಮುಂದಿನ ಕಾಲದ ವಸ್ತುಗಳು ಈಗ ಇಲ್ಲದ ಮಾತ್ರಕ್ಕೆ ಅವುಗಳ ಆಶ್ರಯವೇ ಇಲ್ಲವೆಂದು ಹೇಳಿದರೆ ಆ ವಸ್ತುಗಳ ಜ್ಞಾನವೇ ಬರದೇ ಹೋಗಬೇಕಾದೀತು. ಹೀಗೆ ಹೇಳದಿದ್ದರೆ, ಜ್ಞಾನದಲ್ಲಿ ವಿಷಯವಾಗಿರುವುದಕ್ಕೂ, ಘಟಾದಿಗಳ ಉತ್ಪತ್ತಿಗೂ ಯಾವುದೂ ಕಾರಣವೇ ಇಲ್ಲದೇ ಹೋಗಬೇಕಾಗುವುದು. ಅವಿದ್ಯೆಗೆ ನಿರಾಶ್ರಯವಾದ ವಸ್ತುವು ಪ್ರತಿಯೋಗಿಯಾಗಲು ಸಾಧ್ಯವಿಲ್ಲದ್ದರಿಂದ ಅವಿದ್ಯಾನಿವೃತ್ತಿಯೇ ಪ್ರತಿಯೋಗಿಯಾಗುಳ್ಳದ್ದು ಅವಿದ್ಯೆ ಎಂಬುದು ಸಿದ್ಧಿಸುವುದಿಲ್ಲ. ವಾಸ್ತವವಾಗಿ ಇಲ್ಲದಿರುವುದರಿಂದ ಪ್ರತಿಯೋಗಿತೆಗೂ ಆಶ್ರಯವಾಗದೇ ಹೋದರೆ, ಜಗತ್ತೇ ಎಲ್ಲ ದೇಶಗಳಲ್ಲೂ ಎಲ್ಲ ಕಾಲದಲ್ಲೂ ಇರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗುವುದರಿಂದ ಅಸದ್ರೂಪವೇ ಆಗಬೇಕಾದೀತು. ಹೀಗೆ ಪದಾರ್ಥಗಳೆಲ್ಲಕ್ಕೂ ಒಂದು ಆಶ್ರಯವಿದ್ದೇ ಇರಬೇಕಾಗಿರುವುದರಿಂದ ಜಗತ್ತು ವ್ಯವಹಾರಕಾಲದಲ್ಲಿ ಮಾತ್ರವೇ ಸತ್ಯವಾಗಿರುವುದೆಂಬುದು ಹೊಂದುವುದಿಲ್ಲ. ಇಂತಹ ಜಗತ್ತಿಗೆ ಉಪಾದಾನನಾದ್ದರಿಂದ ಪರಮೇಶ್ವರನು ಆನಂದಮಯನೆಂಬುದು ಸಹಜವಾಗಿದೆ.

**ತಥಾಪಿ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಇತ್ಯತ್ರ ಬ್ರಹ್ಮಾಧಾರತ್ವೇನ ಶಾರೀರಸ್ಯ ನಿರ್ದೇಶಾತ್ ತದ್ಭಿನ್ನತ್ವೇ ತಸ್ಯಾಸ್ವಾತಂತ್ರ್ಯಾತ್ ಜಗಜ್ಜನ್ಮಾದಿಹೇತುತ್ವವಿರೋಧಃ, ತಸ್ಮಾತ್ ಶಾರೀರ ಏವಾನಂದಮಯ ಇತ್ಯಾಶಂಕ್ಯಾಹ—ಮಂತ್ರವರ್ಣಿಕಮೇವ ಚ ಗೀಯತೇ ॥ ೧೬ ॥**

**ಅತ್ರಾನಂದಮಯಃ ಪರಮೇಶ್ವರ ಏವ. 'ಬ್ರಹ್ಮವಿದಾಪ್ನೋತಿ ಪರಂ' ಇತ್ಯುಪಕ್ರಮ್ಯ 'ಯೋ ವೇದ ನಿಹಿತಂ ಗುಹಾಯಾಂ ಪರಮೇ**

ವ್ಯೋಮನ್ । ಸೋಽಶ್ನುತೆ ಸರ್ವಾನ್ ಕಾಮಾನ್ಸಃ ' ಇತ್ಯಂತೇನ ಬ್ರಹ್ಮ ವಿದಾಮೇವ ಸರ್ವಕಾಮಾವಾಪ್ತಿಂ ಪ್ರದರ್ಶ್ಯ ' ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ' ಇತ್ಯಾದಿನಾ ತಸ್ಯ ಸ್ಥೂಲಸೂಕ್ಷ್ಮಚಿದಚಿತ್ಪ್ರಪಂಚಕಾರಣತ್ವಮಭಿಧಾಯ, ' ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ' ಇತ್ಯಾದಿನಾ ತದಂತರ್ಯಾಮಿತ್ವಮುಪದಿಶ್ಯ, ' ಅನ್ಯೋಽಂತರ ಆತ್ಮಾ ಪ್ರಾಣಮಯಃ ' ಇತ್ಯಾದಿಕೋಶಪಂಚಕಾಂತರತ್ವಂ ವ್ಯವಸ್ಥಾಪ್ಯ, ತತ್ರಾಪ್ಯಾನಂದಮಯಸ್ಯ ಮುಖ್ಯಾತ್ಮತ್ವೋಪದೇಶಾತ್ ಉಪಕ್ರಮೋಪಸಂಹಾರಯೋರೇಕಲಿಂಗತ್ವೇನ ' ಸತ್ಯಂ ಜ್ಞಾನಂ ' ಇತಿ ಮಂತ್ರವರ್ಣೋಪಕ್ರಾಂತಪರಶಿವ ಏವಾನಂದಮಯ ಇತಿ ' ಅನ್ಯೋಽಂತರ ಆತ್ಮಾನಂದಮಯಃ ' ಇತ್ಯತ್ರ ವ್ಯಾಚಕ್ಷ್ಯತೆ. ಮಂತ್ರಬ್ರಾಹ್ಮಣಯೋರುಪಜೀವ್ಯಪಜೀವಕತ್ವಾದೇಕಾರ್ಥತ್ವಂ ಯುಕ್ತಂ. ' ಬ್ರಹ್ಮಪುಚ್ಛಂ ' ಇತ್ಯತ್ರ ಬ್ರಹ್ಮಪದಸ್ಯ ಪ್ರಣವಾರ್ಥಕತ್ವೇನ ತದಾಧಾರತ್ವಂ ತತ್ಪ್ರತಿಪಾದ್ಯತ್ವಂ ತದಾತ್ಮಕತ್ವಂ ಚ ಪರಮೇಶ್ವರಸ್ಯೋಪದಿಶ್ಯತೆ. ನನು ' ಈಶಾನಸ್ಸರ್ವವಿದ್ಯಾನಾಂ, ಇತ್ಯುಪಕ್ರಮ್ಯ, ' ಸದಾಶಿವೋಂ ' ಇತ್ಯಂತೇನ ಪರಮೇಶ್ವರಸ್ಯೈವ ಪ್ರಣವಾತ್ಮಕತ್ವೋಪದೇಶಾತ್. ' ಯೋ ವೇದಾದೌ ಸ್ವರಃ—ಯಃ ಪರಸ್ಸ ಮಹೇಶ್ವರಃ' ಇತಿ ಶ್ರುತೌ ಶಿವಸ್ಯೈವ ಪ್ರಣವಪ್ರತಿಪಾದ್ಯತ್ವಾವಗಮಾತ್. ತಸ್ಮಾತ್ಪರಮೇಶ್ವರಶ್ಚಿಚ್ಛಕ್ತ್ಯಾತ್ಮಕಪರಮಾಕಾಶರೂಪೋ ಹ್ಯಾನಂದಮಯ ಇತಿ ನಿರ್ದಿಶ್ಯತೆ. " ಕೋ ಹ್ಯೇವಾನ್ಯಾತ್...ಆನಂದೋ ನ ಸ್ಯಾತ್ " ಇತ್ಯಾದಿನಾ ಪರಮಾಕಾಶರೂಪತ್ವಮಾನಂದಮಯಸ್ಯಾವಗಮ್ಯತೆ. ತಸ್ಮಾತ್ ' ಸ ಏಕೋ ಬ್ರಹ್ಮಣ ಆನಂದಃ ' ಇತಿ ನಿರತಿಶಯಾನಂದಸ್ಯ ಬ್ರಹ್ಮಾಶ್ರಯತ್ವ ದರ್ಶನಾತ್, ' ಆನಂದೋ ಬ್ರಹ್ಮೇತಿ ವ್ಯಜಾನಾತ್ ' ಇತ್ಯನೇನ ಆನಂದಸ್ಯ ಬ್ರಹ್ಮಾತ್ಮಕತ್ವಜಗದುಭಯಕಾರಣತ್ವೋಪದೇಶಾಚ್ಚ ಆನಂದಬ್ರಹ್ಮಣೋರ್ಭೇದಾಭಾವಾತ್ ' ಆನಂದಮಯೋಽಭ್ಯಾಸಾತ್ ' ಇತಿ ಸೂತ್ರಂ ನಿರ್ದಿಷ್ಟಂ. ನನ್ವಾನಂದಶಬ್ದಸ್ಯ ಬ್ರಹ್ಮಣ್ಯೇವ ಬಹುಶಃ ಪ್ರಯೋಗದರ್ಶನಾದ್ಯುಕ್ತಂ, ಆನಂದಮಯಪದಸ್ಯ ಬ್ರಹ್ಮಣ್ಯಭ್ಯಾಸಾದರ್ಶನಾತ್ಕಥಂ ತತ್ಪರತ್ವಮಿತಿ ಚೇನ್ನ, ' ವಸಂತೇ ವಸಂತೇ ಜ್ಯೋತಿಷಾ ಯಜೇತ ' ಇತ್ಯತ್ರ ಜ್ಯೋತಿಶ್ಶಬ್ದಸ್ಯ ಜ್ಯೋತಿಷ್ಟೋಮಪರತ್ವವತ್ ಆನಂದಪದಸ್ಯಾಪ್ಯಾನಂದಮಯಪರತ್ವಾನ್ನ ದೋಷಃ. ಕಿಂಚ, " ಸೈಷಾ ಭಾರ್ಗವೀ ವಾರುಣೀ ವಿದ್ಯಾ ಪರಮೇ ವ್ಯೋಮನ್ಪ್ರತಿಷ್ಠಿತಾ " ಇತ್ಯುಪಸಂಹಾರೇ ಪರಮಾಕಾಶರೂಪಚಿಚ್ಛಕ್ತ್ಯಪರಪರ್ಯಾಯೇ ಬ್ರಹ್ಮಧರ್ಮಸ್ವರೂಪೇ ವಾರುಣೀವಿದ್ಯಾಸಮಾಪ್ತಿದರ್ಶನಾದಾನಂದಮಯಃ ಪರಮೇಶ್ವರ ಇತಿ ನಿಷ್ಕರ್ಷಾಹಂ. ನನು ' ಅಸ್ಮಾಲ್ಲೋಕಾತ್ಪ್ರೇತ್ಯ ಏತದನ್ನಮ

ಯಮಾತ್ಮಾನಮುಪಸಂಕ್ರಾಮ್ಯ’ ಇತ್ಯಾದೌ ಅನ್ನಮಯಾದೀನಾಂ ಪೃಥಕ್ಚೇತನವಾಚಕಶ್ರುತಿಬಲಾತ್ ದೇಹಾಕ್ರಾಂತಸ್ಯ ತದುಪಾಸಕಸ್ಯ ಕ್ರಮಮುಕ್ತೇರ್ದ್ಯೋತನಾನ್ ಮುಮುಕ್ಷೂಣಾಂ ಸ್ವಾನ್ನಮಯಕೋಶಾದ್ಯುಪಾಸನಮೇವಾತ್ರ ವಿಧೀಯತ ಇತಿ ಚೇನ್ನ, ‘ನೋಪಾಸ್ಯೌ ಪ್ರಕೃತಿಜೀವೌ’ ಇತ್ಯಾದಿಶ್ರುತಿಶತೇಷು ಜೀವಸ್ಯ ಸ್ವೋಪಾಸನನಿಷೇಧಾತ್, ಕಿಂತು ಅನ್ನಮಯಾದಿಕೋಶಪಂಚಕಾಧಿಷ್ಠಾನದೇವತಾತ್ಮಕಬ್ರಹ್ಮವಿಷ್ಣುರುದ್ರೇಶ್ವರಸದಾಶಿವಸಂಜ್ಞಿಕಪರಶಿವಾಂಶಾದ್ಯುಪಾಸನೇನ ಸ್ಥೂಲಶರೀರಾದ್ಯವಸಾನೇ ಪರಮಶಿವಕೈಲಾಸನಿಶ್ರೇಣಿಮಾರ್ಗಾತ್ಮಕಸದ್ಯೋಜಾತಾದಿಪಂಚವ್ಯೂಹಾತೀತಪರಶಿವಾಖ್ಯೇ ನಿಷ್ಕಲಬ್ರಹ್ಮಣಿ ಜೀವಾನಾಂ ಸಾಯುಜ್ಯಮುಕ್ತ್ಯುಪದೇಶಾನ್ನ ವಿರೋಧಃ. ತಸ್ಮಾದನ್ನಮಯಾದ್ಯಾತ್ಮಾಧಾರಸ್ಯ ಸದಾಶಿವಸ್ಯಾನಂದಮಯಸ್ಯಾಪಿ ಕಾರಣಂ ಪರಮಶಿವಾಖ್ಯಂ ಬ್ರಹ್ಮ ತತ್ಪ್ರತಿಷ್ಠೇತ್ಯುಪದಿಶ್ಯತೆ. ಸದಾಶಿವಪರಶಿವಯೋರೇಕತ್ವಾದಾನಂದಮಯಸ್ಯ ಬ್ರಹ್ಮತ್ವವ್ಯಪದೇಶಃ, ಅತಃ ಆನಂದಮಯೋ ನೇತರಃ.

‘ಬ್ರಹ್ಮಪುಚ್ಛಂ ಪ್ರತಿಷ್ಠಾ’ ಎಂಬ ವಾಕ್ಯದಲ್ಲಿ ಆನಂದಮಯನನ್ನು ಬ್ರಹ್ಮಕ್ಕಾಧಾರವೆಂದು ಹೇಳಿರುವುದರಿಂದ, ಪುಚ್ಛವೇ ಮೊದಲಾದ ಅವಯವಗಳಿಗಧೀನವಾದ ಬ್ರಹ್ಮವು ಜಗಜ್ಜನ್ಮಾದಿಗಳಿಗೆ ಕಾರಣವಾಗಲು ಸಾಧ್ಯವಿಲ್ಲದ್ದರಿಂದ ಬ್ರಹ್ಮಕ್ಕಾಧಾರವಾದ ಆನಂದಮಯನೆಂದರೆ ಜೀವನೇ ಆಗಬಹುದೆಂದು ಆಶಂಕಿಸಿ ನಿರಾಕರಿಸುತ್ತಾನೆ.

## ಮಾಂತ್ರವರ್ಣಿಕಮೇವ ಚ ಗೀಯತೆ ‖ ೧೬ ‖

ಶ್ರುತಿಯಲ್ಲಿ ಬಂದಿರುವ ಆನಂದಮಯಪದವು ಪರಮೇಶ್ವರನಿಗೇ ಅನ್ವಯಿಸುತ್ತದೆ. ‘ಬ್ರಹ್ಮವಿದಾಪ್ನೋತಿ’ ಎಂದು ಆರಂಭಿಸಿ ‘ಸತ್ಯಂ ಜ್ಞಾನಂ’ ಎಂದು ಮುಂದುವರಿಸಿ, “ಪರಮಾಕಾಶವಾದ ಹೃದಯದಲ್ಲಿ ಗುಪ್ತವಾಗಿರುವವನನ್ನು ಯಾವನು ತಿಳಿಯುವನೋ ಅವನು ಪೂರ್ಣಕಾಮನಾಗುವನು” ಎಂಬುದರಿಂದ ಬ್ರಹ್ಮಜ್ಞಾನಿಗೆ ಎಲ್ಲಾ ಬಗೆಯ ಫಲಪ್ರಾಪ್ತಿಯನ್ನೂ ತಿಳಿಸಿ ‘ಆ ಈ ಆತ್ಮನಿಂದ ಆಕಾಶ ಹುಟ್ಟಿತು’ ಎಂಬ ಶ್ರುತಿಯಿಂದ ಪರಮೇಶ್ವರನನ್ನು ಎಲ್ಲಾ ಪ್ರಪಂಚಕ್ಕೂ ಕಾರಣನೆಂದು ತಿಳಿಸಿ’, ‘ಅದನ್ನು ಸೃಷ್ಟಿಸಿ ಅದರೊಳಗೇ ಪ್ರವೇಶಿಸಿದನು’ ಎಂಬುದರಿಂದ ಅವನನ್ನೇ ಜಗದಂತರ್ಯಾಮಿ ಎಂದು ತಿಳಿಸಿ, ‘ಬೇರೊಂದು ಪ್ರಾಣಮಯವಾದ ಆತ್ಮನು’ ಎಂದು ಐದು ಕೋಶಗಳಲ್ಲೂ ಅವನೇ ಅಂತರ್ಯಾಮಿಯಾಗಿರುವನೆಂದೂ ಹೇಳಿ ಅವೆಲ್ಲದರೊಳಗೆ ಆನಂದಮಯನೇ ಮುಖ್ಯವಾದ ಆತ್ಮವೆಂದು ಹೇಳಿರುವುದರಿಂದಲೂ, ಉಪಕ್ರಮೋಪಸಂಹಾರಗಳೆರಡೂ ಒಂದೇ ಬಗೆಯಾಗಿರುವುದರಿಂದಲೂ, ‘ಸತ್ಯಂ ಜ್ಞಾನಂ ಅನಂತಂ ಬ್ರಹ್ಮ’ ಎಂಬ ಮಂತ್ರದ ವರ್ಣಗಳಿಂದ ತಿಳಿದುಬರುವ ಪರಮಶಿವನೇ ಆನಂದಮಯನೆಂಬುದಾಗಿ “ಅನ್ಯೋಽನ್ತರ ಆತ್ಮಾನಂದಮಯಃ’

ಎಂಬಲ್ಲಿ ಹೇಳಲಾಗಿದೆ. ಮಂತ್ರದ ಅರ್ಥವನ್ನು ವಿವರಿಸುವುದಕ್ಕಾಗಿಯೇ ಅನಂತರದಲ್ಲಿ ಬ್ರಾಹ್ಮಣವಾಕ್ಯಗಳು ಬಂದಿರುವುದರಿಂದ ಎರಡಕ್ಕೂ ಒಂದೇ ಅರ್ಥವನ್ನು ಹೇಳಬೇಕು. 'ಬ್ರಹ್ಮಪುಚ್ಛಂ' ಎಂಬ ಕಡೆ ಬ್ರಹ್ಮವೆಂದರೆ ಪ್ರಣವವೆಂದು ಅರ್ಥವಾಗುತ್ತದೆ. ಪರಬ್ರಹ್ಮವು ಪ್ರಣವದಿಂದ ಪ್ರತಿಪಾದ್ಯವಾಗುವುದರಿಂದ ಆ ಪ್ರಣವಕ್ಕಾಧಾರನೂ ಪ್ರಣವಸ್ವರೂಪನೂ, ಪ್ರಣವಪ್ರತಿಪಾದ್ಯನೂ ಆದವನು ಪರಬ್ರಹ್ಮವೆಂದು ಶ್ರುತಿಯಲ್ಲಿ ಹೇಳಲಾಗಿದೆ. 'ಓಂ ತದ್ಬ್ರಹ್ಮ' ಎಂಬ ವಾಕ್ಯದಲ್ಲಿ ಪ್ರಣವವನ್ನು ಸರ್ವಾತ್ಮಕವಾದ್ದರಿಂದ ಪರಬ್ರಹ್ಮವೆಂದು ಹೇಳಿರುವುದರಿಂದ ಅವನು ಅದಕ್ಕಾಧಾರನಾಗುವನೆಂದು ಹೇಗೆ ಹೇಳಲು ಸಾಧ್ಯವಾದೀತು? ಎಂದು ಕೇಳಿದರೆ, 'ಈಶಾನಃ ಸರ್ವವಿದ್ಯಾನಾಂ' ಎಂದು ಆರಂಭಿಸಿ 'ಸದಾಶಿವೋಂ' ಎಂದು ಹೇಳಿರುವುದರಿಂದ ಪರಮೇಶ್ವರನೇ ಪ್ರಣವಸ್ವರೂಪನೆಂದು ತಿಳಿದುಬರುತ್ತದೆ. 'ಯೋವೇದಾದೌಸ್ವರಃ– ಯಃ ಪರಃ ಸ ಮಹೇಶ್ವರಃ' ಎಂಬುದರಲ್ಲಿ ಶಿವನೇ ಪ್ರಣವದಿಂದ ಪ್ರತಿಪಾದ್ಯನೆಂದು ತಿಳಿದುಬರುತ್ತದೆ. ಆದ್ದರಿಂದ ಚಿತ್‌ಶಕ್ತಿ ಎಂಬ ಪರಮಾಕಾಶರೂಪನಾದ ಪರಮೇಶ್ವರನೇ ಆನಂದಮಯನೆಂದು ಶ್ರುತಿಯಲ್ಲಿ ತಿಳಿಸಲಾಗಿದೆ. "ಆಕಾಶರೂಪನಾದ ಪರಮಾತ್ಮನು ಆನಂದಮಯನಾಗಿಲ್ಲದಿದ್ದರೆ ಯಾರು ತಾನೆ ಬದುಕುತ್ತಿದ್ದರು" ಎಂಬುದರಿಂದ ಆನಂದಮಯನೇ ಪರಮಾಕಾಶರೂಪನೆಂದು ತಿಳಿದುಬರುತ್ತದೆ. ಆದ್ದರಿಂದ 'ಅದೊಂದೇ ಬ್ರಹ್ಮದ ಆನಂದ' ವೆಂಬಲ್ಲಿ ನಿರತಿಶಯಾನಂದಕ್ಕೆ ಬ್ರಹ್ಮವೇ ಆಶ್ರಯವೆಂದು ತಿಳಿಸಲಾಗಿದೆ. 'ಆನಂದವೇ ಬ್ರಹ್ಮವೆಂದು ತಿಳಿಯುವುದು' ಎಂಬ ಶ್ರುತಿಯಲ್ಲಿ ಆನಂದವನ್ನೇ ಬ್ರಹ್ಮಾತ್ಮಕವೆಂದೂ, ಜಗದುಭಯಕಾರಣವೆಂದೂ ಹೇಳಿರುವುದರಿಂದ ಆನಂದ ಬ್ರಹ್ಮಗಳಿಗೆ ಭೇದವಿಲ್ಲದ್ದರಿಂದ 'ಆನಂದಮಯೋಽಭ್ಯಾಸಾತ್' ಎಂಬ ಸೂತ್ರವನ್ನು ವ್ಯಾಸನು ರಚಿಸಿದ್ದಾನೆ. ಆನಂದಶಬ್ದವನ್ನು ಅನೇಕ ಕಡೆಗಳಲ್ಲಿ ಬ್ರಹ್ಮದಲ್ಲಿಯೇ ಪ್ರಯೋಗಿಸಿರುವುದರಿಂದ ಆನಂದಪದಕ್ಕೆ ಬ್ರಹ್ಮವೆಂದು ಅರ್ಥವಾಗುವುದೇನೋ ಸರಿ. ಆದರೆ ಆನಂದಮಯವೆಂಬ ಪದಕ್ಕೆ ಬ್ರಹ್ಮವೆಂದು ಅರ್ಥಹೇಳಲು ಹೇಗೆ ಸಾಧ್ಯವಾದೀತು? ಎಂದು ಕೇಳಿದರೆ 'ಪ್ರತಿವಸಂತಮಾಸದಲ್ಲಿಯೂ ಜ್ಯೋತಿಯಿಂದ ಯಾಗಮಾಡಬೇಕು' ಎಂಬಲ್ಲಿ ಜ್ಯೋತಿಶ್ಶಬ್ದಕ್ಕೆ ಜ್ಯೋತಿಷ್ಟೋಮವೆಂದು ಅರ್ಥ ಹೇಳುವಂತೆ ಆನಂದಶಬ್ದಕ್ಕೆ ಆನಂದಮಯವೆಂದು ಅರ್ಥ ಹೇಳುವುದರಲ್ಲಿ ಬಾಧಕವೇನೂ ಇಲ್ಲ. ಇದೂ ಅಲ್ಲದೆ, 'ವರುಣನು ಭೃಗುವಿಗೆ ಹೇಳಿದ ವಿದ್ಯೆಯು ಪರಮಾಕಾಶರೂಪನಾದ ಪರಮಾತ್ಮನಲ್ಲಿಯೇ ಪ್ರತಿಷ್ಠಿತವಾಗಿದೆ' ಎಂದು ಕೊನೆಯಲ್ಲಿ ಚಿತ್‌ಶಕ್ತಿರೂಪವಾದ ಪರಮಾಕಾಶವೆನಿಸಿದ ಪರಶಿವನಲ್ಲಿಯೇ ಈ ಆತ್ಮವಿದ್ಯೆಗೆ ತಾತ್ಪರ್ಯವೆಂದು ಗೊತ್ತಾಗುವುದರಿಂದ ಆನಂದಮಯನು ಪರಮೇಶ್ವರನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. "ಈ ಲೋಕದಿಂದ ಹೊರಟು ಅನ್ನಮಯದ ಆತ್ಮನನ್ನು ಸೇರಿ" ಎಂಬ ಶ್ರುತಿಯಲ್ಲಿ ಅನ್ನಮಯದಲ್ಲಿಯೂ ಚೇತನವಾಚಕವಾದ ಆತ್ಮಶಬ್ದವನ್ನು ಪ್ರಯೋಗಿಸಿರುವುದರಿಂದ ಉಪಾಸಕನಿಗೆ ತನ್ನ ಅನ್ನ

ಮಯಕೋಶದ ಉಪಾಸನವು ವಿಹಿತವಾಗುವುದೇ ಹೊರತು ಬ್ರಹ್ಮೋಪಾಸನವು ವಿಹಿತವಾಗುವುದಿಲ್ಲವೆಂದು ಹೇಳುವುದು ಯುಕ್ತವಲ್ಲ. 'ಪ್ರಕೃತಿಜೀವರು ಉಪಾಸ್ಯರಲ್ಲ' ವೆಂದು ಅನೇಕ ಶ್ರುತಿಗಳಲ್ಲಿ ಜೀವನ ಉಪಾಸನವು ನಿಷಿದ್ಧವಾಗಿರುವುದರಿಂದ ಅನ್ನಮಯಕೋಶದೊಳಗಿರುವ ಬ್ರಹ್ಮದ ಉಪಾಸನವೇ ವಿಹಿತವಾಗಿದೆ. ಆದ್ದರಿಂದ ಅನ್ನಮಯಾದಿಕೋಶಗಳಿಗಾಧಾರವಾದ ಬ್ರಹ್ಮ-ವಿಷ್ಣು-ರುದ್ರ-ಈಶ್ವರ-ಸದಾಶಿವ ಎಂಬ ಪರಶಿವನ ಅಂಶಗಳನ್ನು ಉಪಾಸನೆಮಾಡಿದ ಜೀವರು ಸ್ಥೂಲಶರೀರವನ್ನು ತೊರೆದು, ಕೈಲಾಸದ ಮೆಟ್ಟಲುಗಳಂತಿರುವ ಸದ್ಯೋಜಾತ, ವಾಮದೇವ-ಅಘೋರ-ತತ್ಪುರುಷ-ಈಶಾನವೆಂಬ ಪಂಚವ್ಯೂಹಗಳಿಂದಾಚೆಗೆ ನೆಲಸಿರುವ ನಿಷ್ಕಲಪರಶಿವಬ್ರಹ್ಮದಲ್ಲಿ ಸಾಯುಜ್ಯ ಮುಕ್ತಿಯನ್ನು ಹೊಂದುವರೆಂದು ಶ್ರುತಿಯಲ್ಲಿ ತಿಳಿಸಿರುವುದರಿಂದ ಯಾವವಿರೋಧಕ್ಕೂ ಅವಕಾಶವಿಲ್ಲ. ಆದ್ದರಿಂದ ಅನ್ನಮಯಾದ್ಯಾತ್ಮಗಳಿಗಾಧಾರನಾದ ಸದಾಶಿವನನ್ನು ಆನಂದಮಯನೆಂದೂ, ಅವನಿಗೂ ಕಾರಣನಾದ ನಿಷ್ಕಲ ಪರಶಿವನನ್ನು 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂಬಲ್ಲಿ ಅಧಿಷ್ಠಾನವೆಂದೂ ಶ್ರುತಿಯಲ್ಲಿ ಹೇಳಿದೆ. ಸದಾಶಿವಪರಶಿವರಿಬ್ಬರೂ ವಾಸ್ತವವಾಗಿ ಒಬ್ಬನೇ ಆಗಿರುವುದರಿಂದ ಆನಂದಮಯನೆಂದರೆ ಪರಶಿವನೆಂದೇ ಹೇಳುವುದರಲ್ಲಿ ತಪ್ಪೇನಿಲ್ಲ. ಆದ್ದರಿಂದ ಆನಂದಮಯನು ಪರಶಿವನಲ್ಲದೆ ಬೇರೆಯಲ್ಲವೆಂದು ಸಿದ್ಧವಾಯಿತು.

**'ಸಹಸ್ರಶೀರ್ಷಾ ಪುರುಷಃ' ಇತ್ಯಾದಿನಾ ವಿರಾಟ್ಪುರುಷಸ್ಯ ಸರ್ವಸ್ಥೂಲಶರೀರಾತ್ಮಕತ್ವೋಪದೇಶಾತ್ ತಸ್ಯೈವ ಜಗಜ್ಜನ್ಮಾದಿಹೇತುತ್ವಂ ಕಿಂ ನ ಸ್ಯಾದಿತ್ಯಾಶಂಕ್ಯ ನಿರಾಕರೋತಿ— ನೇತರೋಽನುಪಪತ್ತೇಃ ॥೧೭॥**

**ಇತರಃ= ಪರಮಶಿವಾದನ್ಯೋ ವಿರಾಟ್ಪುರುಷಃ ನಾನಂದಮಯಃ, ಕಸ್ಮಾದನುಪಪತ್ತೇಃ. 'ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯೇತಿ ಸ ತಪೋಽತಪ್ಯತ' ಇತ್ಯಾದಿನಾ ಸೃಷ್ಟೇಃ ಪೂರ್ವಂ ಈಕ್ಷಣಸ್ಯ ಷ್ಟ್ರ್ಯತ್ಮಕತ್ವಸೃಷ್ಟಿಹೇತುತ್ವಧರ್ಮಾಣಾಂ ಸ್ಥೂಲಪ್ರಪಂಚಾತ್ಮಕವಿರಾಟ್ಪುರುಷಸ್ಯಾಸಂಭವಾದಿತಿ ಸೂತ್ರಾರ್ಥಃ. ಕಿಂಚ, "ತಸ್ಮಾದ್ವಿರಾಡಜಾಯತ" ಇತ್ಯಾದೌ ವಿರಾಟ್ಪುರುಷಸ್ಯ ಪರಶಿವಾದುತ್ಪನ್ನತ್ವದರ್ಶನಾತ್, ತಸ್ಯ ಶರೀರಸಾಧ್ಯತ್ವಾಚ್ಚ ಸೃಷ್ಟೇಃ ಪ್ರಾಗೀಕ್ಷಣಾನುಪಪತ್ತಿರ್ಬೋಧ್ಯಾ. ಶ್ರುತೌ ತಪಶ್ಶಬ್ದ ಈಕ್ಷಣಪರಃ. ತಸ್ಮಾದಾನಾಂದಮಯಃ ಪರಮಶಿವೋ ನೇತರ ಇತಿ ಸಿದ್ಧಂ.**

'ಸಹಸ್ರಶೀರ್ಷಾ ಪುರುಷಃ' ಎಂಬಲ್ಲಿ ವಿರಾಟ್ಪುರುಷನನ್ನು ಸ್ಥೂಲಪ್ರಪಂಚರೂಪನೆಂದು ಹೇಳಿರುವುದರಿಂದ ಅವನೇ ಜಗತ್ಕಾರಣವಾಗಬಾರದೇಕೆ? ಎಂದು ಆಶಂಕಿಸಿ ನಿರಾಕರಿಸುತ್ತಾನೆ. **ನೇತರೋಽನುಪಪತ್ತೇಃ ॥ ೧೭ ॥**

ಇತರಃಪರಶಿವನಿಗಿಂತಲೂ ಬೇರೆಯಾದ ವಿರಾಟ್ಪುರುಷನು ಆನಂದಮಯನಲ್ಲ. ಯಾಕೆಂದರೆ "ಸೋಽಕಾಮಯತ" ಎಂಬ ಶ್ರುತಿಯಲ್ಲಿ ಸೃಷ್ಟಿಗೆ

ಮೊದಲಿನ ಈಕ್ಷಣವೇ ಮೊದಲಾದ ಸೃಷ್ಟಿಕಾರಣಗಳು ಸ್ಥೂಲಪ್ರಪಂಚರೂಪನಾದ ವಿರಾಟ್ಪುರುಷನಿಗೆ ಸಂಭವಿಸುವುದಿಲ್ಲವಾದ್ದರಿಂದ ವಿರಾಟ್ಪುರುಷನು ಆನಂದಮಯ ನೆಂಬುದು ಹೊಂದುವುದಿಲ್ಲವೆಂದು ಸೂತ್ರದ ಅರ್ಥ. ಇದಲ್ಲದೆ 'ಅವನಿಂದ ವಿರಾಟ್ ಪುರುಷನು ಹುಟ್ಟಿದನು' ಎಂದು ವಿರಾಟ್‌ಪುರುಷನಿಗೆ ಪರಮಶಿವನಿಂದ ಉತ್ಪತ್ತಿ ಯನ್ನು ಹೇಳಿದೆ. ಸೃಷ್ಟಿಗೆ ಪೂರ್ವಕಾಲದ ಈಕ್ಷಣವು ಅನಂತರ ಹುಟ್ಟಿದವನಿಗೆ ಸಂಭವಿಸುವಂತಿಲ್ಲ. ಶ್ರುತಿಯಲ್ಲಿ ಬಂದಿರುವ ತಪಶ್ಶಬ್ದವೂ ಈಕ್ಷಣವೆಂಬ ಅರ್ಥವನ್ನೇ ತಿಳಿಸುತ್ತದೆ. ಈ ಬಗೆಯ ಈಕ್ಷಣವು ವಿರಾಟ್‌ಪುರುಷನಿಗೆ ಅನ್ವಯಿಸದಿರುವುದರಿಂದ ಆನಂದಮಯನು ಪರಶಿವನೆಂದು ಸಿದ್ಧವಾಗುತ್ತದೆ.

"ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಂ।ಯದೋಷಧೀಭಿಃ ಪುರುಷಾನ್ಪಶೂಂಶ್ಚ ವಿವೇಶ ಭೂತಾನಿ ಚರಾಚರಾಣಿ ॥" ಇತಿ ಮಹೋಪನಿಷದ್ವಾಕ್ಯೇ ಜಗತ್ಕಾರಣತ್ವಂ ಹಿರಣ್ಯಗರ್ಭಸ್ಯೈವ ವ್ಯಪದಿಶ್ಯತೇ. ಕಿಂಚ, "ಅಂತಸ್ಸಮುದ್ರೇ ಕವಯೋ ನಿಚಿಖ್ಯುಃ। ಪ್ರಜಾಪತಿಶ್ಚರತಿ ಗರ್ಭೇ ಅಂತಃ"ಇತ್ಯುಪಕ್ರಮೇ ತಸ್ಯೈವ ಸರ್ವಾನುಪ್ರವಿಷ್ಟತ್ವಮವಗಮ್ಯತೇ. ತದುಪಸಂಹಾರೇ "ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್। ದಿವಂ ಚ ಪೃಥಿವೀಂಚ" ಇತ್ಯಾದಿನಾ ತಸ್ಯೈವ ವಿಶ್ವಕಾರಣತ್ವಂ ವ್ಯವಸ್ಥಾಪಿತಂ. ಕಿಂಚ, "ಹಿರಣ್ಯಗರ್ಭಸ್ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್" ಇತ್ಯಾದಿನಾ ಸೃಷ್ಟೇಃ ಪ್ರಾಗವಸ್ಥಾನಿದರ್ಶನಾತ್ತಸ್ಯೈವಾನಂದಮಯತ್ವಮಾಶಂಕ್ಯ ನಿರಾಕರೋತಿ.

ಭೇದವ್ಯಪದೇಶಾಚ್ಚ ॥ ೧೭ ॥

"ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ ಮಹರ್ಷಿಃ", "ಹಿರಣ್ಯಗರ್ಭಂ ಪಶ್ಯತ ಜಾಯಮಾನಗ್‌ಂ ಸ ನೋ ದೇವಶ್ಶುಭಯಾ ಸ್ಮೃತ್ಯಾ ಸಂಯುನಕ್ತು," "ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ" ಇತಿ ಶ್ವೇತಾಶ್ವತರೇ ಹಿರಣ್ಯಗರ್ಭಕಾರಣತ್ವಂ ಶಿವಸ್ಯೈವೋಪದಿಶ್ಯತೇ, "ಅಜಾತಂ ಜಾತ ಇತ್ಯೇವಂ". "ರುದ್ರ ಯತ್ತೇ— ಪಾಹಿ ನಿತ್ಯಂ" 'ಏಕ ಏವ ರುದ್ರೋ' ಇತ್ಯಾದಿನಾ ಶ್ವೇತಾಶ್ವತರೇ ಅಜನ್ಯತ್ವಾದ್ವಿತೀಯತ್ವಾದಿಧರ್ಮಾಣಾಂ ಪರಮೇಶ್ವರಸ್ಯೈವ ಶ್ರವಣಾತ್ ಪೂರ್ವೋಕ್ತಶ್ರುತಿನಿಷ್ಠಪ್ರಜಾಪತಿಶಬ್ದಾದಿಪ್ರತಿಪಾದ್ಯತ್ವಂ ಪರಶಿವಸ್ಯೈವ ಸಮುಚಿತಂ, ತದ್ಧರ್ಮಬಾಹುಳ್ಯಾತ್. ಭೇದೇನ ವ್ಯಪದೇಶಃ ಭೇದವ್ಯಪದೇಶಃ, ಜೀವಸಮಷ್ಟಿರೂಪಹಿರಣ್ಯಗರ್ಭಪರಶಿವಯೋಃ ಜನ್ಯತ್ವಾಜನ್ಯತ್ವಭೇದನಿರ್ದೇಶಾದತ್ರಾನಂದಮಯೋ ನ ಹಿರಣ್ಯಗರ್ಭಃ. ಕಿಂಚ 'ರಸೋ ವೈ ಸಃ। ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ'

**ಇತಿ ಸಕಲಜೀವಸಮಷ್ಟ್ಯಾತ್ಮಕಹಿರಣ್ಯಗರ್ಭಪರಮೇಶ್ವರಯೋರ್ಭೇದಮುಪದಿಶತಿ. ನನು 'ಅನ್ಯೋಽಂತರ ಆತ್ಮಾ ಪ್ರಾಣಮಯಃ' ಇತ್ಯಾದಿವಾಕ್ಯನಿಷ್ಠಾನ್ಯಶಬ್ದಾನಾಂ ಕಥಂ ಹಿರಣ್ಯಗರ್ಭಾದನ್ಯತ್ವಪ್ರತಿಪಾದಕತ್ವಂ, ಆನಂದಮಯಾದನ್ಯಸ್ಯ ಬ್ರಹ್ಮತ್ವಂ ಕಥಂ ನೋಪಪದ್ಯತೇ ಇತಿ ಚೇನ್ನ, ಜೀವಸಮಷ್ಟಿರೂಪಹಿರಣ್ಯಗರ್ಭಾತ್ಮಕವಿಜ್ಞಾನಮಯಾದನ್ಯತ್ವಸ್ಯಾನಂದಮಯಸ್ಯೈವೋಪದೇಶಾತ್, ಭೃಗುವಲ್ಲ್ಯಾನಂದವಲ್ಲ್ಯೋರಾನಂದಮಯಾದನ್ಯಸ್ಯ ಬ್ರಹ್ಮತ್ವವ್ಯವಸ್ಥಾಪನಾದರ್ಶನಾತ್, ತದನ್ಯತ್ವಾಂಗೀಕಾರೇ ಅನವಸ್ಥಾದೋಷಪ್ರಸಂಗಾಚ್ಚ, ಆನಂದಮಯಃ ಸಾಕ್ಷಾತ್ಪರಮಶಿವ ಏವೇತಿ ಸಿದ್ಧಂ.**

"ಯಾವನಿಂದ ಈ ಪ್ರಪಂಚವು ಹುಟ್ಟಿದೆಯೋ ಯಾವನು ಓಷಧಿಗಳೊಂದಿಗೆ ಎಲ್ಲಾ ಚರಚರಗಳನ್ನೂ ಪಶುಗಳನ್ನೂ ಪುರುಷರನ್ನೂ ಪ್ರವೇಶಿಸಿದನೋ" ಎಂಬ ಮಹೋಪನಿಷದ್ವಾಕ್ಯದಲ್ಲಿ ಹಿರಣ್ಯಗರ್ಭನೇ ಜಗತ್ತಿಗೆ ಕಾರಣವೆಂದು ಹೇಳಲಾಗಿದೆ. "ಇದೂ ಅಲ್ಲದೆ ಎಲ್ಲರೊಳಗೆ ಪ್ರಜಾಪತಿಯು ನೆಲಸಿರುವನು' ಎಂದು ಅವನನ್ನೇ ಸರ್ವಾಂತರ್ಯಾಮಿ ಎಂದೂ ಆರಂಭದಲ್ಲಿ ತಿಳಿಸಿ ಕೊನೆಗೆ 'ಹಿರಣ್ಯಗರ್ಭನೇ ಸೂರ್ಯಚಂದ್ರರನ್ನೂ ದ್ಯಾವಾಭೂಮಿಗಳನ್ನೂ ಹಿಂದಿನ ಕ್ರಮವಂತೆ ಸೃಷ್ಟಿಸಿದನು' ಎಂದು ಹೇಳಿರುವುದರಿಂದ ಅವನೇ ವಿಶ್ವಕಾರಣನೆಂದು ಗೊತ್ತಾಗುವುದು. ಇದೂ ಅಲ್ಲದೆ, ಹಿರಣ್ಯಗರ್ಭನೇ ಎಲ್ಲಾ ಪ್ರಾಣಿಗಳಿಗೂ ಮೊದಲು ಹುಟ್ಟಿದನು. ಎಲ್ಲಕ್ಕೂ ಅವನೇ ಪತಿಯಾದನು" ಎಂಬ ವಾಕ್ಯದಿಂದಲೂ ಸೃಷ್ಟಿಗೆ ಮೊದಲು ಹಿರಣ್ಯಗರ್ಭನಿದ್ದನೆಂದೂ ಗೊತ್ತಾಗುವುದು. ಆದ್ದರಿಂದ ಜಗತ್ಕಾರಣನಾದ ಆನಂದಮಯನೆಂದರೆ ಹಿರಣ್ಯಗರ್ಭನೇ ಎಂದು ಆಶಂಕಿಸಿ ನಿರಾಕರಿಸಲಾಗುವುದು.

### ಭೇದವ್ಯಪದೇಶಾಚ್ಚ ॥ ೧೮ ॥

"ದೇವತೆಗಳೆಲ್ಲರಿಗೂ ಮೊದಲನೆಯವನೂ ವಿಶ್ವಾಧಿಕನೂ ಮಹರ್ಷಿಯೂ ಆದ ಯಾವ ರುದ್ರನು ಆಗಲೇ ಹುಟ್ಟುತ್ತಿದ್ದ ಹಿರಣ್ಯಗರ್ಭನನ್ನು ಯಾವ ದೃಷ್ಟಿಯಿಂದ ನೋಡಿದನೋ ಆ ದೇವನು ನಮಗೆ ಶುಭವಾದ ಸ್ಮೃತಿಯನ್ನು ಅನುಗ್ರಹಿಸಲಿ". ಯಾವನಿಗಿಂತಲೂ ಬೇರೆಯಾದ್ದು ಏನೂ ಇಲ್ಲವೋ" ಎಂದು ಶ್ವೇತಾಶ್ವತರದಲ್ಲಿ ಶಿವನೇ ಹಿರಣ್ಯಗರ್ಭನಿಗೆ ಕಾರಣನೆಂದು ತಿಳಿಸಲಾಗಿದೆ. "ಜನನಮರಣಗಳಿಲ್ಲದ ಪರಮಶಿವನನ್ನು ಹುಟ್ಟುವನೆಂದು ಯಾವನು ತಿಳಿಯುವನೋ ಅವನು ಭೀರುವಾಗುವನು." "ಒಬ್ಬನೇ ರುದ್ರನು ಎರಡನೆಯವನಿಲ್ಲದೇ ಇದ್ದಾನೆ" ಎಂದು ಶ್ವೇತಾಶ್ವತರದಲ್ಲಿ ರುದ್ರನೆನಿಸಿದ ಪರಶಿವನನ್ನು ಅಜನ್ಯನೆಂದೂ, ಅದ್ವಿತೀಯನೆಂದೂ ಅವನ ಅಸಾಧಾರಣ ಧರ್ಮಗಳನ್ನು ತಿಳಿಸಲಾಗಿದೆ. ಆದ್ದರಿಂದ ಹಿಂದೆ ಹೇಳಿದ ಶ್ರುತಿಯಲ್ಲಿ ಬಂದಿರುವ ಪ್ರಜಾಪತಿಶಬ್ದವೂ ಪರಮಶಿವನನ್ನೇ ಪ್ರತಿಪಾದಿಸುತ್ತದೆ ಎಂಬುದೇ ಯುಕ್ತವಾಗುವುದು; ಏಕೆಂದರೆ ಆ ಶ್ರುತಿಯಲ್ಲೂ ಪರಮೇಶ್ವರನ ಧರ್ಮಗಳೇ ವಿಶೇಷ

ವಾಗಿ ನಿರ್ದಿಷ್ಟವಾಗಿವೆ. ಜೀವಸಮಷ್ಟಿರೂಪನಾದ ಹಿರಣ್ಯಗರ್ಭನನ್ನು ಜನ್ಯನೆಂದೂ, ಪರಮಶಿವನನ್ನು ಅಜನ್ಯನೆಂದೂ ಶ್ರುತಿಯಲ್ಲಿ ಭೇದವನ್ನು ಹೇಳಿರುವುದರಿಂದ ಆನಂದಮಯನೆಂದರೆ ಹಿರಣ್ಯಗರ್ಭನಲ್ಲ. ಇದೂ ಅಲ್ಲದೆ "ಪರಮಾತ್ಮನು ರಸಸ್ವರೂಪ ನಿರುವನು. ಅವನನ್ನು ಪಡೆದು ಜೀವನು ಆನಂದಪಡುತ್ತಾನೆ" ಎಂಬಲ್ಲಿ ಜೀವ ಪರಮರಿಗೆ ಭೇದವನ್ನು ಹೇಳಿರುವುದರಿಂದ ಜೀವಸಮಷ್ಟಿ ಎನಿಸಿದ ಹಿರಣ್ಯಗರ್ಭನಿಗೂ ಪರಮಾತ್ಮನಿಗೂ ಭೇದವು ಸಿದ್ಧವೇ ಆಗುವುದು. "ಅನ್ಯೋಽಂತರ ಆತ್ಮಾ ಪ್ರಾಣ ಮಯಃ" ಎಂಬಲ್ಲಿ ಪ್ರಾಣಮಯಾದಿಗಳಲ್ಲಿಯೂ ಆತ್ಮಶಬ್ದವನ್ನು ಪ್ರಯೋಗಿಸಿರುವುದ ರಿಂದ, ಅವೆಲ್ಲವೂ ಹಿರಣ್ಯಗರ್ಭನಿಗಿಂತಲೂ ಬೇರೆ ಎಂದು ಹೇಳಲು ಹೇಗೆ ಸಾಧ್ಯ ವಾದೀತು? ಅದರಂತೆ ಆನಂದಮಯನಿಗಿಂತಲೂ ಬೇರೆಯಾದ ಹಿರಣ್ಯಗರ್ಭನೇ ಬ್ರಹ್ಮ ವೆಂದು ಏಕೆ ಹೇಳಬಾರದು? ಎಂದು ಕೇಳುವುದು ಸರಿಯಲ್ಲ. ವಿಜ್ಞಾನಮಯಶಬ್ದ ದಿಂದ ಜೀವಸಮಷ್ಟಿರೂಪನಾದ ಹಿರಣ್ಯಗರ್ಭನ್ನು ನಿರ್ದೇಶಿಸಿ,ಅವನಿಗಿಂತಲೂ ಆನಂದ ಮಯನು ಭಿನ್ನನು-ಅವನೇ ಬ್ರಹ್ಮನು ಎಂದು ಹೇಳಿರುವುದರಿಂದ ಹಿರಣ್ಯಗರ್ಭನು ಆನಂದಮಯನೂ ಅಲ್ಲ, ಬ್ರಹ್ಮನೂ ಅಲ್ಲ. ಭೃಗುವಲ್ಲಿ ಆನಂದವಲ್ಲಿಗಳಲ್ಲಿ ಆನಂದ ಮಯವನ್ನು ಬ್ರಹ್ಮವೆಂದು ಹೇಳಿರುವುದೇ ಹೊರತು ಅದಕ್ಕಿಂತ ಭಿನ್ನವಾದದ್ದನ್ನು ಬ್ರಹ್ಮವೆಂದು ಹೇಳಿಲ್ಲ. ಹಾಗೆ ಹೇಳುವುದಾದರೆ ಅನವಸ್ಥೆ ಎಂಬ ದೋಷ ಸಂಭವಿ ಸುತ್ತದೆ. ಆದ್ದರಿಂದ ಆನಂದಮಯನು ಪರಶಿವನೆಂದೇ ನಿಶ್ಚಿತವಾಯಿತು.

ನಿರ್ಧರ್ಮಕಸ್ಯ ಪರಮೇಶ್ವರಸ್ಯ ಜಗಜ್ಜನ್ಮಾದಿಹೇತುತ್ವಾಭಾವಾದ ಯಸ್ಕಾಂತಸೂಚೀನ್ಯಾಯೇನ ತತ್ರಾರೋಪಿತಪ್ರಧಾನಸ್ಯೈವ ತತ್ಸತ್ತಾವ ಶಾತ್ ಜಗತ್ಕಾರಣತ್ವಂ ಸಂಭವತೀತ್ಯಾಶಂಕಾಯಾಮಾಹ—

**ಕಾಮಾಚ್ಚ ನಾನುಮಾನಾಪೇಕ್ಷಾ ॥ ೧೯ ॥**

'ಅಜಾಮೇಕಾಂ', 'ಪ್ರಜಾಪತಿರಕಾಮಯತ ಪ್ರಜಾಸ್ಸೃಜೇ ಯೇತಿ', 'ನಾರಾಯಣಾದ್ಬ್ರಹ್ಮಾ ಜಾಯತೇ' ಇತ್ಯಾದಿಶ್ರುತಿಶತೇಷು ಪ್ರಧಾನಸ್ಯ ತ್ರೈಗುಣ್ಯಾತ್ಮಕಚತುರ್ಮುಖಾದೀನಾಂ ಚ ಜಗತ್ಕಾರಣತ್ವಾ ವಗಮೇಽಪಿ ಪರಮೇಶ್ವರಸ್ಯ ಜಗತ್ಕಾರಣತ್ವೇ ಅನುಮಾನಾಪೇಕ್ಷಾ ಯುಕ್ತ್ಯಪೇಕ್ಷಾ ನಾಸ್ತಿ. ಅತಃಪ್ರಧಾನಾದಿಕಸ್ಯ ಅವಾಂತರಸೃಷ್ಟಿವಿಷ ಯತ್ವಾತ್, ಶಿವಸ್ಯ ಪರಬ್ರಹ್ಮಣಃ ಪ್ರಧಾನಹಿರಣ್ಯಗರ್ಭಾದಿಸರ್ವಾತ್ಮ ನಾವಾಂತರಸೃಷ್ಟಿಕರ್ತೃತ್ವಮಪ್ಯುಪದಿಶ್ಯತೆ. "ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ" ಇತಿ, 'ಅನೇನ ಜೀವೇನಾತ್ಮನಾ' ಇತಿ ಪ್ರಧಾನಹಿರಣ್ಯ ಗರ್ಭಾದಿಸರ್ವಾತ್ಮನಾ ಜಗದನುಸ್ಯೂತಸ್ಯ ಪರಮೇಶ್ವರಸ್ಯ ನಾಮರೂಪ ಕರ್ತೃತ್ವಶ್ರವಣಾತ್. ಕಿಂಚ, 'ಸೋಽಕಾಮಯತ ಬಹು ಸ್ಯಾಂ', 'ಮಾಯಾಂ ತು ಪ್ರಕೃತಿಂ–ಸರ್ವಮಿದಂ ಜಗತ್', 'ಪ್ರಧಾನಕ್ಷೇತ್ರಜ್ಞ ಪತಿಃ', "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೌ" "ಯ

ಸ್ಸರ್ವಾನ್ಲೋಕಾನೀಶತ ಈಶನೀಭಿಃ ಪರಮಶಕ್ತಿಭಿಃ", 'ಈಶಾನಸ್ಸರ್ವವಿದ್ಯಾನಾಂ' ಇತ್ಯಾದಿಶ್ರುತಿಶತೇಷು ಪರಬ್ರಹ್ಮಣಶ್ಶಿವಸ್ಯೈವ ನಿರಪೇಕ್ಷತಯಾ ಸರ್ವಕರ್ತೃತ್ವಸರ್ವನಿಯಾಮಕತ್ವಸರ್ವಾಂತರ್ಯಾಮಿತ್ವಸರ್ವಜ್ಞತ್ವಾದಿಧರ್ಮಾಣಾಮನನ್ಯಸಾಧಾರಣತ್ವೇನ ವ್ಯಪದೇಶಾತ್ಸ ಏವಾನಂದಮಯ ಇತಿ ಸಿದ್ಧಂ. ಪ್ರಧಾನಾದಿಕಾರಣತ್ವಮೀಕ್ಷತ್ಯಧಿಕರಣ ನಿರಾಕೃತಮಪಿ ಪ್ರಧಾನಪ್ರಸಂಗಾತ್ ಗತಿಸಾಮಾನ್ಯಪ್ರಪಂಚನಾರ್ಥಂ ಪುನರ್ನಿರಾಕೃತಮಿತಿ ವೇದಿತವ್ಯಂ.

ನಿರ್ವಿಶೇಷ ಬ್ರಹ್ಮವು ಜಗಜ್ಜನ್ಮಾದಿಗಳಿಗೆ ಕಾರಣವಾಗದಿರುವುದರಿಂದ ಅಯಸ್ಕಾಂತಸೂಚೀನ್ಯಾಯದಿಂದ ಬ್ರಹ್ಮದಲ್ಲಿ ಆರೋಪಿತವಾದ ಪ್ರಧಾನವೇ ಬ್ರಹ್ಮಸಾನ್ನಿಧ್ಯದಿಂದ ಜಗತ್ಕಾರಣವಾಗಬಹುದೆಂದು ಆಶಂಕಿಸುತ್ತಾನೆ.

ಕಾಮಾಚ್ಚ ನಾನುಮಾನಾಪೇಕ್ಷಾ ॥ ೧೯ ॥

'ಅಜಾಮೇಕಾಂ' 'ಪ್ರಜಾಪತಿರಕಾಮಯತ' ಮೊದಲಾದ ಶ್ರುತಿಗಳಲ್ಲಿ ಪ್ರಧಾನವೂ, ತ್ರಿಗುಣಾತ್ಮಕರಾದ ಚತುರ್ಮುಖಾದಿಗಳೂ ಜಗತ್ಕಾರಣರೆಂದು ತಿಳಿಸು ಬಂದರೂ, ಪರಮೇಶ್ವರನೇ ಜಗತ್ತಿಗೆ ಕಾರಣನೆಂಬ ಬಗ್ಗೆ ಯಾವ ಯುಕ್ತಿಯನ್ನೂ ಆಶ್ರಯಿಸಬೇಕಾಗಿಲ್ಲ. ಪ್ರಧಾನಾದಿಗಳು ಅವಾಂತರ ಸೃಷ್ಟಿಗಳಿಗೆ ಮಾತ್ರವೇ ಸಂಬಂಧಿಸಿದ್ದರೂ, ಪರಮೇಶ್ವರನೇ ಅವುಗಳ ಮೂಲಕ ಅವಾಂತರಸೃಷ್ಟಿಗಳಿಗೂ ಕರ್ತನೆನಿಸಿರುವನು. "ಪೃಥಿವಿ ಅಪ್ಪು ತೇಜಸ್ಸುಗಳ ವ್ಯವಸ್ಥಿತ ಸಂಯೋಜನವೆಂಬ ತ್ರಿವೃತ್ಕರಣವನ್ನು ಏರ್ಪಡಿಸುವವನೇ ನಾಮರೂಪಗಳನ್ನು ವಿಭಜನಮಾಡುತ್ತಾನೆ" ಎಂದು ಬ್ರಹ್ಮಸೂತ್ರದಲ್ಲೂ, "ಜೀವರೊಳಗೆ ಪ್ರವೇಶಿಸಿ ನಾಮರೂಪಗಳನ್ನು ವ್ಯವಸ್ಥೆಗೊಳಿಸುವನು" ಎಂದು ಶ್ರುತಿಯಲ್ಲೂ ಪ್ರಧಾನ ಮತ್ತು ಹಿರಣ್ಯಗರ್ಭನ ರೂಪದಿಂದ ಜಗತ್ತಿನಲ್ಲಿ ವ್ಯಾಪಿಸಿರುವ ಪರಮೇಶ್ವರನೇ ನಾಮರೂಪಗಳಿಗೆ ಕರ್ತನೆಂದು ಹೇಳಲಾಗಿದೆ. ಇದೂ ಅಲ್ಲದೆ, "ಅವನು ವಿಸ್ತಾರವಾಗಲಿಚ್ಛಿಸಿದನು. ಎಲ್ಲವನ್ನೂ ಸೃಷ್ಟಿಸಿ ಅದರೊಳಗೆ ಪ್ರವೇಶಿಸಿದನು", "ಮಾಯಾಪತಿ ಈಶ್ವರನ ಅವಯವಗಳಾದ ತ್ರಿಮೂರ್ತಿಗಳಿಂದ ಈ ಜಗತ್ತು ವ್ಯಾಪಿಸಿದೆ" 'ಪ್ರಧಾನಜೀವರಿಗೆ ನಿಯಾಮಕನು' "ಒಬ್ಬ ರುದ್ರನೇ ಎರಡನೆಯವನಿಲ್ಲದಿರುವನು" "ಯಾವನು ತನ್ನ ಪರಮಶಕ್ತಿಗಳಿಂದಲೇ ಈ ಲೋಕಗಳನ್ನು ಶಾಸನಮಾಡುತ್ತಿರುವನೋ" "ಯಾವನು ಎಲ್ಲಾ ವಿದ್ಯೆಗಳಿಗಧಿಪತಿಯೂ ಎಲ್ಲಾ ಜೀವರಿಗೆ ನಿಯಾಮಕನೂ ಆಗಿರುವನೋ", ಹೀಗೆ ನೂರಾರು ಶ್ರುತಿಗಳು ಪರಮಶಿವನೇ ಯಾವ ಸಾಧನವನ್ನೂ ಅಪೇಕ್ಷಿಸದೆ ಎಲ್ಲರಿಗೂ ಕರ್ತನೂ ನಿಯಾಮಕನೂ ಅಂತರ್ಯಾಮಿಯೂ ಆಗಿರುವನೆಂದೂ, ಸರ್ವಜ್ಞನೆಂದೂ ಅವನ ಅಸಾಧಾರಣ ಧರ್ಮಗಳನ್ನು ಹೇಳಿರುವುದರಿಂದ ಅವನೇ ಆನಂದಮಯನೆಂಬುದು ಸಿದ್ಧವಾಯಿತು. ಪ್ರಧಾನವೇ ಜಗತ್ಕಾರಣವೆಂಬ ಮತವನ್ನು ಈಕ್ಷತ್ಯಧಿಕರಣದಲ್ಲಿ ನಿರಾಕರಿಸಿದ್ದರೂ ಪ್ರಧಾನದ ಪ್ರಸಂಗಬಂದಿರುವುದರಿಂದ ಉಪನಿಷದ್ವಾಕ್ಯಗಳಿಗೆ ಪರಸ್ಪರ ಸಮನ್ವಯ

ವನ್ನು ತಿಳಿಸಲಿಕ್ಕಾಗಿ ಮತ್ತೆ ಇಲ್ಲಿಯೂ ಅದನ್ನು ನಿರಾಕರಿಸಲಾಗಿದೆ ಎಂದು ತಿಳಿಯಬೇಕು. ಈ ಬಗ್ಗೆ ಮತ್ತೊಂದು ಹೇತುವನ್ನು ಹೇಳುತ್ತಾನೆ.

ಅಸ್ಮಿನ್ನರ್ಥೇ ಪುನರ್ಹೇತ್ವಂತರಮಾಹ— **ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ॥೨೦॥**

ಅಸ್ಮಿನ್ನಾನಂದಮಯೇ ಪರಶಿವೇ ಅಸ್ಯ ಜೀವಸ್ಯ ಚಶಬ್ದೇನ ಪ್ರಧಾನಪ್ರಪಂಚಯೋರಪಿ ತದ್ಯೋಗಂ ಸಿಂಧುಸೈಂಧವವದೈಕ್ಯಂ ಶಾಸ್ತಿ ಶಾಸ್ತ್ರಂ ಪ್ರತಿಪಾದಯತೀತಿ ಭಾವಃ. "ಯಥಾ ಸದ್ಯಃ—ಪುರುಷಮುಪೈತಿ ದಿವ್ಯಂ", 'ಬ್ರಹ್ಮ ವೇದ ಬ್ರಹ್ಮೈವ ಭವತಿ', 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ' ಇತ್ಯಾದಿಶ್ರುತಿಷು ತದ್ಭಾವಾಪತ್ತಿರ್ಮುಕ್ತಿರುಪದಿಶ್ಯತೇ. ಇಹೋಪನಿಷದಿ 'ಬ್ರಹ್ಮವಿದಾಪ್ನೋತಿ ಪರಂ' ಇತ್ಯುಪಕ್ರಮೇ ಬ್ರಹ್ಮಣೋ ವೇದ್ಯತ್ವಂ ಪ್ರಾಪ್ಯತ್ವಂ, ಜೀವಸ್ಯ ವೇದಿತೃತ್ವಂ ಪ್ರಾಪ್ತೃತ್ವಂ ಚೋಪದಿಶ್ಯತೇ. ತಸ್ಮಾಜ್ಜೀವಬ್ರಹ್ಮಣೋರ್ಭಿನ್ನತ್ವಾರಾಧ್ಯಾರಾಧಕತ್ವವ್ಯಾಪಕತ್ವಾಲ್ಪತ್ವಕಿಂಚಿಜ್ಜ್ಞತ್ವಸರ್ವಜ್ಞತ್ವಾದಿಧರ್ಮಾಣಾಂ ಪರಸ್ಪರವಿರುದ್ಧಸ್ವಭಾವತ್ವೇಽಪಿ ಮೋಕ್ಷದಶಾಯಾಂ ತದ್ಭಾವಾಪತ್ತಿಸ್ಸಂಭವತೀತಿ ಸಿದ್ಧಾಂತಃ. ನನು ಸ್ವಾಭಾವಿಕಸ್ಯ ನಿಂಬಕಷಾಯನ್ಯಾಯವತ್ ನಿವೃತ್ತಿಃ ಸರ್ವಥಾ ನ ಸಂಭವತಿ, ತದಂಗೀಕಾರೇಽಪಿ ಜಲೌಷ್ಣ್ಯವದಾಗಂತುಕಸ್ಯಾನಿತ್ಯತ್ವಮೇವ ಸ್ಯಾತ್ತಸ್ಮಾನ್ಮೋಕ್ಷಸ್ಯಾಪ್ಯನಿತ್ಯತ್ವಮೇವೇತಿ ಚೇನ್ನ, ಭ್ರಮರಕೀಟಶುಕ್ತಿಸಲಿಲಾದಿಷು ಸ್ವಾಭಾವಿಕಸ್ಯ ಸರ್ವದಾ ನಿವೃತ್ತಿದರ್ಶನಾತ್ ಭೇದಾಭೇದಮತಮೇವ ವೈದಿಕಸಿದ್ಧಂ. ಕಿಂಚ, "ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ। ಅಥ ಸೋಽಭಯಂ ಗತೋ ಭವತಿ। ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ। ಅಥ ತಸ್ಯ ಭಯಂ ಭವತಿ।" ಇತಿ ಮುಕ್ತಿದಶಾಯಾಂ ಯದೈತಸ್ಮಿನ್ನಾನಂದಮಯೇ ಪರಶಿವೇ ಅಸ್ಯ ಮಂತರಂ ಅತಾದಾತ್ಮ್ಯರೂಪಂ ಪಶ್ಯತಿ ತದಾ ಜನ್ಮಭಯಾನ್ನ ನಿವರ್ತತೇ. ಯದ ಹ್ಯೇತಸ್ಮಿನ್ನಾನಂದಮಯೇ ಉಪಾಸನಕಾಲೇ ತಾದಾತ್ಮ್ಯೇನ ಪಶ್ಯತಿ ತದಾ ಸಂಸಾರಭಯಾದ್ವಿಮುಚ್ಯತೇ. ನನು ಆನಂದಮಯಸ್ಯ ಬ್ರಹ್ಮತ್ವೇ ಅರ್ಧಜರತೀನ್ಯಾಯೇನ ಅನ್ನಮಯಾದೀನಾಮಪಿ ಬ್ರಹ್ಮತ್ವಂ ಕಿಂ ನ ಸ್ಯಾದಿತಿ ಚೇನ್ನ, 'ಸ ಏಷ ಪುರುಷೋಽನ್ನರಸಮಯಃ ತಸ್ಮಾದ್ವಾ ಏತಸ್ಮಾದನ್ನರಸಮಯಾದನ್ಯೋಽಂತರ ಆತ್ಮಾ ಪ್ರಾಣಮಯಃ। ತಸ್ಮಾದ್ವಾ ಏತಸ್ಮಾನ್ಮನೋಮಯಾತ್ ಅನ್ಯೋಽಂತರ ಆತ್ಮಾ ವಿಜ್ಞಾನಮಯಃ। ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾದನ್ಯೋಽಂತರ ಆತ್ಮಾನಂದಮಯಃ' ಇತಿ ಸರ್ವಾಂತರತ್ವೇನ ನಿರತಿಶಯತ್ವೇನ ಚ ಆನಂದಮಯಸ್ಯೈವ ವ್ಯಪದೇಶಾತ್ ನೇತರಸ್ಯ ಬ್ರಹ್ಮತ್ವಂ ಸಿದ್ಧ್ಯತಿ.

**ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ||೨೦||**

ಅಸ್ಮಿನ್–ಈ ಆನಂದಮಯ ಪರಶಿವನಲ್ಲಿ, ಅಸ್ಯ–ಈ ಜೀವನಿಗೂ, ಚ ಶಬ್ದದಿಂದ ಪ್ರಧಾನ ಪ್ರಪಂಚಗಳಿಗೂ, ತದ್ಯೋಗಂ–ನದೀಸಮುದ್ರ ನ್ಯಾಯದಿಂದ ಐಕ್ಯವನ್ನು ಶಾಸ್ತಿ–ಶಾಸ್ತ್ರವು ಬೋಧಿಸುತ್ತದೆ. "ಯಥಾ ನದ್ಯಃ" "ತತ್ತ್ವಮಸಿ", "ಅಹಂ ಬ್ರಹ್ಮಾಸ್ಮಿ" ಎಂಬ ಶ್ರುತಿಗಳಲ್ಲಿ ಶಿವಭಾವವನ್ನು ಹೊಂದುವುದೇ ಮುಕ್ತಿ ಎಂದು ಹೇಳಲಾಗಿದೆ. ಈ ಉಪನಿಷತ್ತುಗಳಲ್ಲಿ 'ಬ್ರಹ್ಮಜ್ಞಾನಿಯು ಬ್ರಹ್ಮವನ್ನು ಹೊಂದುತ್ತಾನೆ' ಎಂದು ಆರಂಭದಲ್ಲಿ ಬ್ರಹ್ಮವು ವೇದ್ಯ ಮತ್ತು ಪ್ರಾಪ್ಯವೆಂದೂ, ಜೀವನು ತಿಳಿಯುವವನು ಮತ್ತು ಸೇರುವವನು ಎಂದು ಹೇಳಲಾಗಿದೆ. ಆದ್ದರಿಂದ ಶಿವಜೀವರಿಗೆ ಪರಸ್ಪರಭೇದವೂ, ಪೂಜ್ಯಪೂಜಕಭಾವವೂ, ವ್ಯಾಪ್ಯವ್ಯಾಪಕಭಾವವೂ, ಸರ್ವಜ್ಞತ್ವ ಕಿಂಚಿಜ್ಞತ್ವವೇ ಮೊದಲಾದ ಧರ್ಮಗಳು ಪರಸ್ಪರ ವಿರುದ್ಧವಾಗಿದ್ದರೂ ಮೋಕ್ಷಕಾಲದಲ್ಲಿ ಇಬ್ಬರಿಗೂ ಐಕ್ಯವುಂಟಾಗುವುದೆಂಬುದು ಸಿದ್ಧಾಂತವೆನಿಸಿದ. "ಸ್ವಾಭಾವಿಕವಾದ ಕಹಿ ಎಂದಿಗೂ ಹೋಗದಿರುವಂತೆ ಶಿವಜೀವರಿಗೆ ಸ್ವಾಭಾವಿಕವಾಗಿರುವ ಭೇದವು ಮೋಕ್ಷದಲ್ಲಿ ಮಾತ್ರ ಹೇಗೆ ತೊಲಗುವುದು? ಮೋಕ್ಷದಲ್ಲಿ ಬರುವ ಅಭೇದವೂ ಜಲದ ಔಷ್ಣ್ಯವಂತೆ ಆಗುಂತಕವೇ ಆದರೆ, ಮೋಕ್ಷವೂ ಅನಿತ್ಯವೇ ಆಗಬೇಕಾಗುವುದು" ಎಂದು ಕೇಳುವುದು ಸರಿಯಲ್ಲ. ಕೀಟವು ಭ್ರಮರವಾಗುವಾಗಲೂ, ನೀರು ಮುತ್ತಾಗುವಾಗಲೂ ಸ್ವಾಭಾವಿಕವಾದ ಧರ್ಮವೂ ತೊಲಗುವುದನ್ನು ನಾವು ಕಂಡಿದ್ದೇವೆ. ಹೀಗೆ ಶಿವಜೀವರ ಭೇದವು ಮೋಕ್ಷದಲ್ಲಿ ತೊಲಗುವುದರಿಂದ ಭೇದಾಭೇದಮತವೇ ವೇದಸಮ್ಮತವೆನಿಸಿದೆ. ಇದೂ ಅಲ್ಲದೆ, "ಅದೃಶ್ಯನೂ ಸ್ವಯಂಪ್ರಕಾಶನೂ, ಅನಿರ್ವಚನೀಯನೂ, ನಿರಾಧಾರನೂ ಆದ ಪರಮೇಶ್ವರನಲ್ಲಿ ಯಾವನು ಭಯವಿಲ್ಲದ ಸ್ಥಿತಿಯನ್ನು ಪಡೆಯುವನೋ ಅವನಿಗೆ ಸಂಸಾರದ ಭಯ ತೊಲಗುವುದು. ಜೀವನು ಯಾವಾಗ ಪರಮೇಶ್ವರನಲ್ಲಿ ಕೊಂಚ ಭೇದವನ್ನು ಕಾಣುವನೋ ಆಗಲೇ ಅವನಿಗೆ ಭಯವುಂಟಾಗುತ್ತದೆ" ಎಂಬ ಶ್ರುತಿಯಲ್ಲಿ ಆನಂದಮಯನಾದ ಶಿವನಲ್ಲಿ ಜೀವನು ಎಲ್ಲಿಯವರೆಗೆ ಭೇದವನ್ನು ಕಾಣುತ್ತಿರುವನೋ ಅಲ್ಲಿಯವರೆಗೆ ಅವನಿಗೆ ಸಂಸಾರಭಯದಿಂದ ಬಿಡುಗಡೆ ಇಲ್ಲವೆಂದೂ ಯಾವಾಗ ಅವನು ಅಭೇದವನ್ನು ಅನುಭವಿಸುವನೋ ಅಂದೇ ಅವನಿಗೆ ಎಲ್ಲಾ ಭಯದ ಬಿಡುಗಡೆಯಾಗುವುದು ಎಂದೂ ತಿಳಿಸಲಾಗಿದೆ. "ಆನಂದಮಯನು ಬ್ರಹ್ಮನಾಗುವುದಾದರೆ ಅನ್ನಮಯಾದಿಗಳೂ ಯಾತಕ್ಕೆ ಬ್ರಹ್ಮವಾಗಬಾರದು? ಇಲ್ಲದಿದ್ದರೆ ಅರ್ಧಜರತೀನ್ಯಾಯದಿಂದ ಕೋಶಗಳಲ್ಲಿ ಕೆಲವನ್ನು ಬ್ರಹ್ಮವೆಂದೂ, ಕೆಲವನ್ನು ಬ್ರಹ್ಮವಲ್ಲವೆಂದೂ ಭಾವಿಸಬೇಕಾಗುತ್ತದೆ" ಎಂದು ಹೇಳುವುದು ಯುಕ್ತವಲ್ಲ. ಶ್ರುತಿಯಲ್ಲಿ ಪುರುಷನನ್ನು ಅನ್ನಮಯನೆಂದು ನಿರ್ದೇಶಿಸಿ, ಈ ಅನ್ನಮಯನಿಗಿಂತಲೂ ಪ್ರಾಣಮಯ ಬೇರೆ ಎಂದೂ, ಪ್ರಾಣಮಯಕ್ಕಿಂತಲೂ ಮನೋಮಯ ಬೇರೆ ಎಂದೂ, ಮನೋಮಯಕ್ಕಿಂತಲೂ ವಿಜ್ಞಾನಮಯ ಬೇರೆ ಎಂದೂ, ವಿಜ್ಞಾನಮಯಕ್ಕಿಂತಲೂ

ಬೇರೆ ಆನಂದಮಯ ಎಂದೂ ಹೇಳಿ, ಆನಂದಮಯದಲ್ಲಿಯೇ ಉಪದೇಶವನ್ನು ಮುಗಿಸಿರುವುದರಿಂದಲೂ, ಆನಂದಮಯವೇ ಕೊನೆಯದಾಗಿ ನಿರತಿಶಯವೆನಿಸಿರುವುದರಿಂದಲೂ ಅದೇ ಬ್ರಹ್ಮವೆಂದೂ, ಉಳಿದವೆಲ್ಲವೂ ಅದಕ್ಕಿಂತಲೂ ನಿಕೃಷ್ಟವಾದ್ದರಿಂದ ಬ್ರಹ್ಮವಾಗಲಾರವೆಂದೂ ತಿಳಿದುಬರುತ್ತದೆ.

ಕೇಚಿದ್ಭ್ರಾಂತಾ ರಜ್ಜ್ವಾರೋಪಿತಸರ್ಪವದ್ಬ್ರಹ್ಮಣಿ ಜೀವತ್ವಂ ಭ್ರಾಂತ್ಯಾರೋಪಯಂತಿ. ಮುಕ್ತಿದಶಾಯಾಂ ಜೀವಭಾವಮಾಪನ್ನಸ್ಯ ಬ್ರಹ್ಮಣಃ ಸ್ವಕಂಠಾಭರಣದರ್ಶನವಿವೇಕಸಂಧಾನಾದಿವತ್ ಸ್ವಸ್ವರೂಪಜ್ಞಾನಮೇವ ಮೋಕ್ಷಃ ಇತಿ ವದಂತಿ. ಶ್ರುತಿಯುಕ್ತ್ಯನುಭವವಿರುದ್ಧತ್ವೇನ ತನ್ಮತಂ ಶ್ರೌತಮುಮುಕ್ಷುಭಿ ರ್ನಾಂಗೀಕರಣೀಯಂ. 'ಸ್ಮಾರ್ತಾನ್ಸರ್ವಮತಭ್ರಷ್ಟಾನ್ ಜಗನ್ಮಿಥ್ಯಾತ್ವಸಾಧಕಾನ್ । ಗಣಿಕಾಮಾರ್ಗಸಂಚಾರಾನ್ ಪಾಷಂಡಾನ್ಪರಿವರ್ಜಯೇತ್' "ದಧೀಚಿಗೌತಮವ್ಯಾಸದುರ್ವಾಸಾದಿಮಹರ್ಷಿಭಿಃ । ಶಪ್ತಾನ್ ಶೈವೈಕವಿದ್ವೇಷಾನ್ ಪಾಷಂಡಾನ್ಪರಿವರ್ಜಯೇತ್ ॥" ಇತಿ ಪೂರ್ವಾಚಾರ್ಯೋಕ್ತೇಃ. ಕಿಂಚ, 'ಬ್ರಹ್ಮವಿದಾಪ್ನೋತಿ ಪರಂ' ಇತ್ಯಾದ್ಯುಪಕ್ರಮಾದಿಸಿದ್ಧವೇದ್ಯತ್ವಪ್ರಾಪ್ಯತ್ವಾದಿವಿರೋಧಃ.' 'ಸೋಽಶ್ನುತೇ ಸರ್ವಾನ್ಕಾಮಾನ್' ಇತಿ ತದುಪಾಸಕಾನಾಂ ಅವಾಪ್ತಸಕಲಕಾಮತ್ವನೈರುದ್ಧ್ಯಂ ಚ. ಸರ್ವಜ್ಞಸ್ಯ ಬ್ರಹ್ಮಣಃ ಭ್ರಾಂತ್ಯಾರೋಪಣೇ ಸರ್ವಜ್ಞತ್ವಾದಿಭಂಗಪ್ರಸಂಗಶ್ಚ. 'ಜ್ಞಾಜ್ಞೌ' ಇತ್ಯಾದಿ ಶ್ರುತಿಶತವಿರೋಧಶ್ಚ ಸ್ಯಾದಿತಿ ನ ವಿದ್ವದ್ರಮಣೀಯಮೇತತ್.

"ರಜ್ಜುವಿನಲ್ಲಿ ಸರ್ಪತೋರುವಂತೆ ಬ್ರಹ್ಮದಲ್ಲಿ ಜೀವನು ಭ್ರಾಂತಿಯಿಂದ ಕಲ್ಪಿತನಾಗಿರುವನು. ಕಂಠದಲ್ಲಿದ್ದ ಆಭರಣವನ್ನು ಕಂಡು ವಿವೇಕ ಹೊಂದುವಂತೆ ಜೀವನಾಗಿದ್ದ ಬ್ರಹ್ಮನಿಗೆ ದೊರಕುವ ಸ್ವಸ್ವರೂಪಜ್ಞಾನವೇ ಮೋಕ್ಷವೆನಿಸುವುದು" ಎಂದು ಕೆಲವರು ಹೇಳುತ್ತಾರೆ. ಈ ಮತವು ಶ್ರುತಿ ಯುಕ್ತಿ ಅನುಭವಗಳಿಗೆ ವಿರುದ್ಧವಾಗಿರುವುದರಿಂದ ಮುಮುಕ್ಷುಗಳಿಗೆ ಗ್ರಾಹ್ಯವಾಗಲಾರದು. "ಸರ್ವಮತಭ್ರಷ್ಟರೂ ಜಗನ್ಮಿಥ್ಯಾತ್ವವಾದಿಗಳೂ ವೇಶ್ಯಾವೃತ್ತಿನಿರತರೂ ಪಾಷಂಡಿಗಳೂ ಆದ ಸ್ಮಾರ್ತರನ್ನು ದೂರೀಕರಿಸಬೇಕು. ದಧೀಚಿ ಗೌತಮ ದುರ್ವಾಸನೇ ಮೊದಲಾದ ಮಹರ್ಷಿಗಳ ಶಾಪಕ್ಕೀಡಾಗಿ, ಶೈವಧರ್ಮವನ್ನು ದ್ವೇಷಿಸುವ ಪಾಷಂಡರನ್ನು ದೂರಮಾಡಬೇಕು". ಹೀಗೆ ಈ ಬಗ್ಗೆ ಪೂರ್ವಾಚಾರ್ಯರು ಹೇಳಿರುವುದರಿಂದಲೂ ಈ ಮತವು ವೈದಿಕರಿಗೆ ಗ್ರಾಹ್ಯವಾಗಲಾರದು. ಇದೂ ಅಲ್ಲದೆ, 'ಬ್ರಹ್ಮಜ್ಞಾನಿಯು ಬ್ರಹ್ಮವನ್ನು ಹೊಂದುತ್ತಾನೆ' ಎಂದು ಉಪಕ್ರಮದಲ್ಲಿ ಹೇಳಿರುವುದೂ ವಿರುದ್ಧವಾಗುತ್ತದೆ. "ಉಪಾಸಕರು ಎಲ್ಲಾ ಭೋಗಗಳನ್ನೂ ಅನುಭವಿಸುತ್ತಾರೆ" ಎಂಬ ವಾಕ್ಯವೂ ವಿರುದ್ಧವಾಗುತ್ತದೆ. ಸರ್ವಜ್ಞನಾದ ಬ್ರಹ್ಮದಲ್ಲಿಯೂ ಭ್ರಾಂತಿಯನ್ನು ಆರೋಪಿಸಿದರೆ, ಅವನು ಸರ್ವಜ್ಞನಾಗದೇ ಹೋಗಬೇಕಾದೀತು. ಇದೂ ಅಲ್ಲದೆ, 'ಜೀವನು ಅಜ್ಞ, ಪರಮಾತ್ಮನು

ಸರ್ವಜ್ಞ' ಎಂದು ಹೇಳುವ ನೂರಾರು ಶ್ರುತಿಗಳ ವಿರೋಧವುಂಟಾಗುವುದು. ಆದ್ದರಿಂದ ಜೀವನೇ ಶಿವನೆಂಬ ಕಲ್ಪನೆ ವಿದ್ವಾಂಸರಿಗೆ ಮಾನ್ಯವಾಗುವುದಿಲ್ಲ.

ಅತ್ರ ಕೇಚಿತ್--ಅಸ್ಮಿನ್ನಾನಂದಮಯೇ ಬ್ರಹ್ಮಣಿ ಜೀವಸ್ಯಾಸ್ಯ ತದ್ಯೋಗಂ ಶೇಷತ್ವಸಂಬಂಧಂ ಶಾಸ್ತಿ ಶಾಸ್ತ್ರಂ ಪ್ರತಿಪಾದಯತೀತಿ ವಿಶಿಷ್ಟಾದ್ವೈತಮೇವ ಮುಖ್ಯಮಿತಿ ಜಲ್ಪಂತಿ. ತದವೈದಿಕತ್ವಾನ್ನ ಮುಮುಕ್ಷುಭಿರ್ಗ್ರಾಹ್ಯಂ. ವೈದಿಕಮೀಮಾಂಸಾಕರ್ತೃಭಿಃ ಭಟಭಾಸ್ಕರಾದಿಪೂರ್ವಾಚಾರ್ಯೈಃ ಸ್ವಸಿದ್ಧಾಂತಸ್ಥಾಪನಾವಸರೇ ಪೂರ್ವಪಕ್ಷಸ್ಯಾಪ್ಯಯೋಗ್ಯತ್ವೇನೋಪೇಕ್ಷಿತತ್ವಾತ್, ವಿಶಿಷ್ಟಾದ್ವೈತಮಿತ್ಯುಕ್ತಿವಿರೋಧಾತ್, ವಿಶಿಷ್ಟಸ್ಯ ದುರ್ನಿರೂಪ್ಯತ್ವೇನ ಮಿಥ್ಯಾತ್ವಾಚ್ಚ. ವಿಶಿಷ್ಟಂ ನಾಮ ವಿಶೇಷಣವಿಶೇಷ್ಯಸಂಬಂಧಾ ಏವ ವಾ? ತದತಿರಿಕ್ತಂ ವಾ? ನಾದ್ಯಃ, ತ್ರಯಾಣಾಮನೇಕತ್ವೇನ ಅದ್ವಯತ್ವಾಸಂಭವಾತ್. "ಏತೇ ದಂಡಪುರುಷಸಂಬಂಧಾಃ" ಇತಿ ಸಮೂಹಾವಲಂಬನಸ್ಯ ದಂಡೀತಿವಿಶಿಷ್ಟಪ್ರತ್ಯಯತ್ವಪ್ರಸಂಗಾತ್. ವಿಶಿಷ್ಟಪ್ರತ್ಯಯಸ್ಯ ಅನತಿರಿಕ್ತವಿಷಯತ್ವಾತ್. ನ ದ್ವಿತೀಯಃ, ವಿಶೇಷ್ಯರೂಪಪರಮಾತ್ಮನೋಽಪ್ಯನ್ಯತ್ವೇನ ವಿಶಿಷ್ಟಾಭಿಮತಪರಮಾತ್ಮನೋ ವಿಶಿಷ್ಟಾದ್ವೈತಾಸಿದ್ಧೇಃ. ಕೇವಲಪುರುಷಾದ್ದಂಡಿಪುರುಷಸ್ಯಾನ್ಯತ್ವಾಂಗೀಕಾರಾತ್. ಅನ್ಯಥಾ ಕೇವಲಪುರುಷೇ ದಂಡೀತಿ ಪ್ರತ್ಯಯಸ್ಯ ವಾ ದಂಡಿನಿ ಪುರುಷೇ ಕೇವಲಪುರುಷ ಇತಿ ಪ್ರತ್ಯಯಸ್ಯ ವಾ ಪ್ರಸಂಗಾತ್. ತ್ರಿತಯಾತಿರಿಕ್ತಸ್ಯ ವಿಶಿಷ್ಟಸ್ಯ ಏತದ್ದಂಡವಿಶಿಷ್ಟತ್ವಂ ವಾ? ಏತದತಿರಿಕ್ತದಂಡವಿಶಿಷ್ಟತ್ವಂ ವಾ? ನಾದ್ಯಃ, ತ್ರಿತಯಾತಿರಿಕ್ತತ್ವಾಸಿದ್ಧೇಃ, ವಿಶೇಷಣಸ್ಯಾಪಿ ವಿಶಿಷ್ಟಶರೀರತ್ವಾತ್, ನ ದ್ವಿತೀಯಃ, ಅನುಪಪತ್ತೇರನವಸ್ಥಾಪಾತಾಚ್ಚ, ಕಿಂಚ ದಂಡಿಪುರುಷಸ್ಯಾನ್ಯತ್ವೇ ಕ್ಲಪ್ತಶುಕ್ಲಶೋಣಿತಾದಿಸಾಮಗ್ರೀಂ ವಿನಾ ಜಾತಸ್ಯ ಸ್ಥಾಣುಪುರುಷವನ್ಮಿಥ್ಯಾತ್ವಾಪತ್ತೇಃ. ಅಜನ್ಯತ್ವೇ ಚ ತಸ್ಯ ನಿತ್ಯತ್ವೇನ ದಂಡಾಪನಯನೇಽಪಿ ದಂಡಿಪುರುಷ ಇತಿ ಪ್ರತೀತಿಪ್ರಸಂಗಾಚ್ಚ. ವಿಶಿಷ್ಟಸ್ಯ ನಿತ್ಯತ್ವಾತ್ ವಿಶಿಷ್ಟಸ್ಯ ತ್ರಿತಯಾದನ್ಯತ್ವೇನ ದೇಹಾದಿವಿಶಿಷ್ಟಸ್ಯೈವಾತ್ಮನಃ ಸುಖದುಃಖಾದಿಕಾರಣತ್ವೇನ ಕೇವಲಸ್ಯಾತ್ಮನಃ ಸುಖದುಃಖಾದಿಗುಣಕತ್ವಂ ನ ಸಿದ್ಧ್ಯೇತ್. ತ್ರಿತಯಾದನ್ಯಸ್ಯ ವಿಶಿಷ್ಟಸ್ಯಾನುಪಲಬ್ಧಿಪರಾಹತತ್ವಾಚ್ಚ. ಉಪಲಬ್ಧೌ ವಾ ತಸ್ಯ ಸ್ಥಾಣುಪುರುಷತುಲ್ಯತ್ವಾಚ್ಚ. ವಿಶಿಷ್ಟಸ್ಯ ತ್ರಿತಯಾಭೇದೇ ಚ ದಂಡಪುರುಷಯೋರಭೇದಪ್ರಸಂಗಾಚ್ಚ. ತದಭಿನ್ನಾಭಿನ್ನಸ್ಯ ತದ್ಭಿನ್ನತ್ವನಿಯಮಾತ್, ದೂರಸ್ಥವನಸ್ಪತಿತ್ರಿತಯಗೋಚರೈಕತ್ವಬುದ್ಧಿವತ್ ತ್ರಿತಯಗೋಚರೈಕತ್ವಬುದ್ಧೇರಪಿ ಭ್ರಾಂತಿತ್ವೇನ ವಿಶಿಷ್ಟಸ್ಯಾಪ್ಯಪ್ರಾಮಾಣಿಕತ್ವಾಪತ್ತೇಃ. ತಸ್ಮಾದ್ವಿಶಿಷ್ಟಸ್ಯ ವಿಶೇಷಣವಿಶೇಷ್ಯ

ಸಂಬಂಧೇಭ್ಯಃ ಸತ್ತ್ವಾಸತ್ತ್ವಾಭ್ಯಾಂ ದುರ್ನಿರೂಪ್ಯತ್ವೇನ ಮಿಥ್ಯಾತ್ವಾತ್ ತಚ್ಛಿನಾದ್ವೈತಮೇವ ಗ್ರಾಹ್ಯಂ. ಅತ ಏವ ಮುಖ್ಯವೇದಾಂತಿಭಿಃ ಜಗದುಭಯಕಾರಣತ್ವಂ ಪರಮೇಶ್ವರಸ್ಯಾಂಗೀಕೃತಂ. ಅತ ಏವಾರಂಭಣಾಧಿಕರಣೇ ಭಗವತಾ ವ್ಯಾಸೇನ ವಾಚಾರಂಭಣಶ್ರುತೀನಾಂ ಕಾರಣಾದನನ್ಯತ್ವಂ ಕಾರ್ಯಸ್ಯ 'ತದನನ್ಯತ್ವಂ' ಇತಿ ಸೂತ್ರೇ ನಿರ್ದಿಷ್ಟಂ. ತಸ್ಮಾತ್ ಶೂದ್ರಬ್ರಾಹ್ಮಣ ಇತಿವದ್ವಿಶಿಷ್ಟಾದ್ವೈತಮಿತಿ ಮತಮವಿದುಷಾಮೇವ ಶೋಭತೆ. ಕಿಂಚ ವಿಶೇಷಣವಿಶೇಷ್ಯತ್ವಾದೇರಪಿ ದುರ್ನಿರೂಪ್ಯತ್ವಂ ಚ. ನ ತಾವದ್ವ್ಯಾವೃತ್ತಿಬುದ್ಧಿಜನಕತ್ವಂ ವಿಶೇಷಣತ್ವಂ, ವಿಶೇಷ್ಯಾದಾವಪಿ ತತ್ಸಂಭವಾತ್, ಅನೇಕಕಾರಣಸ್ಯ ದಂಡಾದೇಸ್ತನ್ಮಾತ್ರಾಸಾಧಾರಣಕಾರಣತ್ವಾಸಂಭವಾಚ್ಚ. ಅತ್ರ ಹಿ ಕಿಂ ವಿಶೇಷಣಂ? ಕಿಂ ವಿಶೇಷ್ಯಂ? ಕೋ ವಾ ಸಂಬಂಧಃ? ಇತಿ ವಿವೇಚನೀಯಂ. ನ ತಾವಜ್ಜೀವೋ ವಿಶೇಷಣಂ, ಪರಮಾತ್ಮಾ ವಿಶೇಷ್ಯಮಿತಿ ಶಕ್ಯಂ ವಕ್ತುಂ. ತನ್ಮತೇ ಅಣುಜೀವಾನಾಮೇಕತ್ವೇ ಏಕಜೀವಭಾವಪ್ರಸಂಗಃ. ಅನೇಕತ್ವೇ ಅನೇಕಜೀವವಿಶಿಷ್ಟಸ್ಯ ಪರಮಾತ್ಮನೋ ದಂಡಕುಂಡಲಾದಿವಿಶಿಷ್ಟಸ್ಯಾದ್ವಯಾನುಪಪತ್ತೇಃ. ನ ಹಿ ದಂಡವಿಶಿಷ್ಟ ಏವ ಕುಂಡಲವಿಶಿಷ್ಟಃ, ದಂಡಕುಂಡಲವಿಶಿಷ್ಟತ್ವಾಕಾರೇಣ ಭೇದಾತ್. ತಯೋರಭೇದೇ ಚ ಕುಂಡಲಾಭಾವೇ ದಂಡಿನಿ ಕುಂಡಲೀತ್ಯಪಿ ವಿಶಿಷ್ಟಪ್ರತೀತಿಪ್ರಸಂಗಾತ್. ವಿಶೇಷಣಭೇದಾದ್ವಿಶಿಷ್ಟಭೇದಾಂಗೀಕಾರೇ ಚ ಅನಂತಜೀವವಿಶಿಷ್ಟಸ್ಯ ಪರಮಾತ್ಮನಃ ಕಥಂ ವಿಶಿಷ್ಟಾದ್ವೈತಂ? ಕಿಂಚ ವಿಶೇಷಣವಿಶೇಷ್ಯಯೋಸ್ಸಂಬಂಧೋ ವಕ್ತವ್ಯಃ, ಅಸಂಬದ್ಧಸ್ಯ ವಿಶೇಷ್ಯತ್ವಾನುಪಪತ್ತೇಃ. ನ ತಾವಜ್ಜೀವಪರಯೋಃ ಸಮವಾಯಸ್ಸಂಬಂಧಃ, ಯುತಸಿದ್ಧತ್ವಾತ್. ನಾಪಿ ಸ್ವರೂಪಸಂಬಂಧಃ ಸ್ವರೂಪದ್ವಯಾತ್ಮಕಸ್ಯ ಸ್ವರೂಪಸಂಬಂಧಸ್ಯ ಸಂಬಂಧಿರೂಪತ್ವಾತ್ಸಂಬಂಧಸಂಬಂಧಿನೋರೇಕತ್ವಾನುಪಪತ್ತೇಃ. ಸ್ವರೂಪದ್ವಯಾತ್ಮಕಸಂಬಂಧಸ್ಯ ಸ್ವವೃತ್ತಿತ್ವೇ ಆತ್ಮಾಶ್ರಯಪ್ರಸಂಗಾತ್. ಸ್ವರೂಪದ್ವಯಸ್ಯ ಸ್ವವೃತ್ತಿತ್ವಾಸಂಭವಾತ್ ಅನ್ಯವೃತ್ತಿತ್ವಾಸಂಭವಾಚ್ಚ. ತಸ್ಮಾನ್ನ ಜೀವಪರಯೋಃ ಸ್ವರೂಪಸಂಬಂಧಃ. ನಾಪಿ ಸಂಯೋಗಸಂಬಂಧಃ. ವ್ಯಾಪ್ಯವೃತ್ತಿಸಂಯೋಗಾಂಗೀಕಾರೇ ತಾದಾತ್ಮ್ಯಾಪತ್ತ್ಯಾ ಜೀವಪರಯೋರಭೇದಪ್ರಸಂಗಾತ್. ನಿಷ್ಪ್ರದೇಶಯೋಸ್ತಯೋರವ್ಯಾಪ್ಯವೃತ್ತಿಸಂಯೋಗಸ್ಯಾಸಂಭವಾತ್. ತತ್ರೌಪಾಧಿಕಪ್ರದೇಶಾಂಗೀಕಾರೇ ಉಪಾಧಿಸಂಬಂಧಸ್ಯಾಪ್ಯುಪಾಧ್ಯಂತರಸಂಬಂಧಾಪೇಕ್ಷತಯಾಽನವಸ್ಥಾಪಾತಾತ್. ಆತ್ಮತ್ವಾವಚ್ಛೇದೇನಾಪಿ ಸಂಯೋಗತದಭಾವಯೋರ್ವೃತ್ತ್ಯಂಗೀಕಾರೇ ಚ ಭಾವಾಭಾವವಿರೋಧಸ್ಯ ದತ್ತಜಲಾಂಜಲಿತ್ವಪ್ರಸಂಗಾತ್, ಸಂಯೋಗಸ್ಯ ಮಿಥ್ಯಾತ್ವಾ

ಪತ್ತೇಶ್ಚ. ತಸ್ಮಾಜ್ಜೀವಪರಯೋಸ್ಸಂಬಂಧಾನಿರೂಪಣಾತ್ ವಿಶೇಷಣ ವಿಶೇಷ್ಯಭಾವಸ್ಯೈರ್ಯರ್ಯಪ್ರೇರಕಭಾವಾಸಂಬಂಧೇನ ಜೀವವಿಶಿಷ್ಟಸ್ಯ ಪರಸ್ಯಾದ್ವೈತಪ್ರಸಕ್ತಿರೇವ ನಾಸ್ತಿ. ತಸ್ಮಾತ್ಸರ್ವಶ್ರುತಿಸಿದ್ಧವಿಶೇಷಾದ್ವೈತ ಮೇವ ಪುನರಾವೃತ್ತಿರಹಿತಮುಕ್ತಿಪ್ರದಾಯಕಮಿತಿ ಸಿದ್ಧಂ. ಕೇಚಿತ್ತು 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಇತ್ಯತ್ರ ಪುಚ್ಛಂ ಪ್ರತಿಷ್ಠಾ ಪರಾಯಣಂ ಲೌಕಿಕಸರ್ವಾನಂದಾನಾಂ ಅಧಿಷ್ಠಾನಭೂತಂ ವದಂತಿ. 'ಸ ಏಕೋ ಬ್ರಹ್ಮಣ ಆನಂದಃ' ಇತಿ ಬ್ರಹ್ಮಾನಂದಸ್ಯೈವ ಸರ್ವಾಧಿಕತ್ವೇನ ವ್ಯಪ ದೇಶಾತ್ ರಾಜಮಾರ್ಗೇ ವಿಶೇಷಾದ್ವೈತಪಕ್ಷೇ ಮದೀಯಸಿದ್ಧಾಂತೇ ನ ವಿರೋಧಃ.

ಆನಂದಮಯವಾದ ಬ್ರಹ್ಮದಲ್ಲಿ ಜೀವನಿಗೆ ಶೇಷತ್ವಸಂಬಂಧವನ್ನು ಶಾಸ್ತ್ರ ಹೇಳು ತ್ತದೆ ಎಂದು ಸೂತ್ರಕ್ಕೆ ಅರ್ಥಮಾಡುತ್ತ ಕೆಲವರು ವಿಶಿಷ್ಟಾದ್ವೈತವೇ ಮುಖ್ಯತತ್ತ್ವ ವೆಂದು ಹೇಳುತ್ತಾರೆ. ಇದೂ ಸಹ ಅವೈದಿಕವಾದ್ದರಿಂದಲೂ, ವೈದಿಕಮೀಮಾಂಸಕ ರಾದ ಭಟ್ಟಭಾಸ್ಕರನೇ ಮೊದಲಾದವರಿಂದ ತಮ್ಮ ಸಿದ್ಧಾಂತನಿರೂಪಣೆಯ ಕಾಲದಲ್ಲಿ ಪೂರ್ವಪಕ್ಷಕ್ಕೂ ಇದನ್ನು ಅನರ್ಹವೆಂದು ಉಪೇಕ್ಷಿಸಿರುವುದರಿಂದಲೂ, ವಿಶಿಷ್ಟಂ ಅದ್ವೈತಂ ಎಂದು ಹೇಳುವ ವಾಕ್ಯವೇ ಪರಸ್ಪರವಿರುದ್ಧವಾಗಿರುವುದರಿಂದಲೂ, ವಿಶಿಷ್ಟ ಎಂಬುವರ ನಿರೂಪಣೆ ಅಸಾಧ್ಯವೂ ಮಿಥ್ಯೆಯೂ ಎನಿಸಿರುವುದರಿಂದಲೂ, ಈ ಮತ ಮುಮುಕ್ಷುಗಳಿಗೆ ಗ್ರಾಹ್ಯವಲ್ಲ. ವಿಶಿಷ್ಟವೆಂದರೆ ವಿಶೇಷಣ, ವಿಶೇಷ್ಯ, ಸಂಬಂಧ ಇವು ಮೂರೂ ಸೇರಿದ್ದೋ? ಅಥವಾ ಇವಕ್ಕಿಂತ ಬೇರೆಯೋ? ಮೊದಲನೇ ಪಕ್ಷದಲ್ಲಿ ಅವು ಮೂರು ಪದಾರ್ಥಗಳಾಗುವುದರಿಂದ ಅದ್ವೈತ ಬರುವಂತಿಲ್ಲ. ದಂಡ, ಪುರುಷ, ಸಂಬಂಧ ಎಂಬ ಸಮೂಹಾಲಂಬನ ಜ್ಞಾನವು 'ದಂಡವುಳ್ಳವನು' ಎಂಬ ವಿಶಿಷ್ಟ ಬುದ್ಧಿಗೆ ಸಮಾನವಾಗಬೇಕಾಗುವುದು; ಯಾಕೆಂದರೆ ವಿಶಿಷ್ಟವೆಂಬುದು ಈ ಮೂರ ಕ್ಕಿಂತಲೂ ಬೇರೆಯಲ್ಲ. ಎರಡನೆಯ ಪಕ್ಷದಲ್ಲಿ ಕೇವಲಪರಮಾತ್ಮನಿಗಿಂತಲೂ ಬೇರೆಯಾದ ವಿಶಿಷ್ಟಪರಮಾತ್ಮನಿಗೆ ಅದ್ವೈತ ಸಿದ್ಧಿಸುವುದೇ ಹೊರತು ಕೇವಲ ಪರಮಾತ್ಮನಿಗೆ ಅದ್ವೈತ ಸಿದ್ಧಿಸುವಂತಿಲ್ಲ. ದಂಡವಿಲ್ಲದ ಪುರುಷನಲ್ಲಿ ದಂಡವಿರುವ ಪುರುಷನ ಭೇದ ಎಲ್ಲರಿಗೂ ಒಪ್ಪಿಗೆಯಾಗಿದೆ. ಹಾಗಿಲ್ಲದಿದ್ದರೆ ದಂಡವಿಲ್ಲದ ಪುರುಷ ನಲ್ಲೂ ದಂಡವುಳ್ಳವನೆಂಬ ಬುದ್ಧಿಯೂ, ದಂಡವಿರುವವನಲ್ಲಿ ದಂಡವಿಲ್ಲದವನು ಎಂಬ ಬುದ್ಧಿಯೂ ಬರಬೇಕಾಗುತ್ತದೆ. ವಿಶೇಷಣ, ವಿಶೇಷ್ಯ, ಸಂಬಂಧ ಈ ಮೂರಕ್ಕಿಂತಲೂ ವಿಶಿಷ್ಟವಸ್ತುವು ಬೇರೆಯಾದರೆ ವಿಶೇಷ್ಯದಲ್ಲಿ ಈ ದಂಡದ ವೈಶಿಷ್ಟ್ಯವನ್ನೇ ಹೇಳ ಬೇಕೆ? ಅಥವಾ ಬೇರೆ ದಂಡದ ವೈಶಿಷ್ಟ್ಯವನ್ನು ಹೇಳಬೇಕೆ? ಎಂಬ ವಿಕಲ್ಪಗಳು ಬರುತ್ತವೆ. ಮೊದಲನೆ ವಿಕಲ್ಪದಲ್ಲಿ ಈ ಮೂರಕ್ಕಿಂತಲೂ ಬೇರೆಯಾಗಿ ವಿಶಿಷ್ಟವಾದ ವಸ್ತು ಸಿದ್ಧಿಸುವಂತಿಲ್ಲ. ವಿಶೇಷಣವು ವಿಶಿಷ್ಟವಾದ ವಸ್ತುವಿನಲ್ಲಿಯೇ ಅಡಗಿ ಹೋಗಿದೆ. ಎರಡನೆಯ ವಿಕಲ್ಪದಲ್ಲಿ ಮತ್ತೊಂದು ದಂಡದ ವೈಶಿಷ್ಟ್ಯವನ್ನು

ಹೇಳಿದರೆ ಅನವಸ್ಥೆಯುಂಟಾಗುತ್ತದೆ. ದಂಡವಿಲ್ಲದ ಪುರುಷನಿಗಿಂತಲೂ ದಂಡವುಳ್ಳ ಪುರುಷನು ಬೇರೆಯೇ ಆಗುವುದಾದರೆ ಅವನು ಕ್ಲೃಪ್ತವಾದ ಶುಕ್ಲಶೋಣಿತಗಳಿಲ್ಲದೆಯೇ ಹುಟ್ಟಿದ್ದರಿಂದ ಸ್ಥಾಣುಪುರುಷನಂತೆ ಮಿಥ್ಯೆಯಾಗಬೇಕಾಗುವುದು. ಯಾವ ಕಾರಣದಿಂದಲೂ ಹುಟ್ಟದೇ ಇರುವುದಾದರೆ ಅವನು ನಿತ್ಯವಾಗಬೇಕಾಗುವುದು. ಇದರಿಂದ ದಂಡವಿಲ್ಲದಿರುವವನನ್ನೂ ದಂಡವುಳ್ಳವನೆಂದೇ ಹೇಳಬೇಕಾಗುವುದು; ಯಾಕೆಂದರೆ ಅವನು ನಿತ್ಯನಿರುವನು. ವಿಶಿಷ್ಟವಸ್ತು ವಿಶೇಷಣ ವಿಶೇಷ್ಯ ಸಂಬಂಧಗಳಿಗಿಂತಲೂ ಬೇರೆಯಾಗುವುದಾದರೆ, ಸುಖದುಃಖಗಳು ದೇಹವಿಶಿಷ್ಟನಾದ ಆತ್ಮನಿಗೇ ಸಂಭವಿಸುವುದರಿಂದ ದೇಹರಹಿತನಾದ ಕೇವಲಾತ್ಮನಿಗೆ ಸುಖದುಃಖಗಳನ್ನು ಗುಣವೆಂದು ಒಪ್ಪಲಾಗದೇ ಹೋಗಬೇಕಾಗುವುದು. ಈ ಮೂರಕ್ಕಿಂತಲೂ ಬೇರೆಯಾದ ವಸ್ತು ಅನುಭವವಿರುದ್ಧವೇ ಆಗುವುದು. ಅದು ಎಲ್ಲಾದರೂ ಕಂಡುಬಂದರೆ, ಹಿಂದೆ ಹೇಳಿದ ಸ್ಥಾಣುಪುರುಷನಂತೆ ಮಿಥ್ಯೆ ಎನಿಸುವುದು. ವಿಶಿಷ್ಟವು ಈ ಮೂರಕ್ಕಿಂತಲೂ ಅಭಿನ್ನವಾದರೆ ದಂಡ ಮತ್ತು ಪುರುಷ ಇಬ್ಬರಿಗೂ ಅಭೇದವು ಬರಬೇಕಾಗುವುದು. ದಂಡಕ್ಕಿಂತ ಬೇರೆಯಾದ ವಿಶಿಷ್ಟವಸ್ತುವಿಗಿಂತಲೂ ಪುರುಷನು ಬೇರೆಯಾಗದೇ ಇರುವುದರಿಂದ ದಂಡವೂ ಪುರುಷನೂ ಒಂದೇ ಆಗಬೇಕಾದೀತು. ದೂರದಲ್ಲಿರುವ ಮೂರು ಮರಗಳನ್ನು ನೋಡಿ 'ಒಂದು' ಎಂಬ ಬುದ್ಧಿ ಬರುವಂತೆ, ವಿಶೇಷಣ, ವಿಶೇಷ್ಯ-ಸಂಬಂಧ ಈ ಮೂರನ್ನು ನೋಡಿ ಒಂದು ಎಂಬ ಬುದ್ಧಿ ಹುಟ್ಟಿದರೆ ಅದು ಭ್ರಾಂತಿ ಎನಿಸುವುದರಿಂದ ವಿಶಿಷ್ಟವೆಂಬ ವಸ್ತು ಅಪ್ರಾಮಾಣಿಕವಾಗುತ್ತದೆ. ಹೀಗೆ ಈ ಮೂರಕ್ಕಿಂತ ಬೇರೆಯಾಗಿ ವಿಶಿಷ್ಟವಸ್ತುವನ್ನು ನಿರೂಪಿಸಲಾಗದ್ದರಿಂದ ಅದು ಮಿಥ್ಯೆಯೇ ಎನಿಸುವುದು. ಆದ್ದರಿಂದ ಶಿವಾದ್ವೈತವೇ ವೈದಿಕರಿಗೆ ಗ್ರಾಹ್ಯವಾಗತಕ್ಕದ್ದು. ಆದ್ದರಿಂದಲೇ ಮುಖ್ಯ ವೇದಾಂತಿಗಳು ಪರಮೇಶ್ವರನನ್ನು ಜಗದುಭಯಕಾರಣನೆಂದು ಒಪ್ಪಿರುವರು. ಆರಂಭಣಾಧಿಕರಣದಲ್ಲಿ ವ್ಯಾಸನು ವಾಚಾರಂಭಣಶ್ರುತಿಗಳ ಪ್ರಕಾರ 'ಕಾರಣಕ್ಕಿಂತಲೂ ಕಾರ್ಯವು ಬೇರೆಯಲ್ಲ' ವೆಂದು 'ತದನನ್ಯತ್ವಂ' ಎಂಬ ಸೂತ್ರದಲ್ಲಿ ಹೇಳಿರುವನು. ಶೂದ್ರಬ್ರಾಹ್ಮಣ ಎಂದು ಹೇಳುವಂತೆ ವಿಶಿಷ್ಟಾದ್ವೈತವೆಂದು ಹೇಳುವ ಮತವು ಪಾಮರರಿಗೆ ಮಾತ್ರವೇ ಗ್ರಾಹ್ಯವಾಗುವುದು. ಇಷ್ಟಲ್ಲದೆ, ವಿಶೇಷಣ, ವಿಶೇಷ್ಯವೆಂಬುವು ಯಾವುವೆಂದು ಹೇಳುವುದೇ ಕಷ್ಟವಾಗುತ್ತದೆ. ಒಂದಕ್ಕಿಂತ ಒಂದು ಬೇರೆ ಎಂಬ ಬುದ್ಧಿಯನ್ನು ಹುಟ್ಟಿಸುವುದೇ ವಿಶೇಷಣವೆಂದು ಹೇಳುವುದು ಸರಿಯಲ್ಲ. ಹಾಗೆ ಹೇಳಿದರೆ ವಿಶೇಷ್ಯವೂ ಅಂತಹದೇ ಆದ್ದರಿಂದ ಅದರಲ್ಲಿ ಅತಿವ್ಯಾಪ್ತಿ ಬರುವುದು. ಅನೇಕ ಕಾರ್ಯಗಳಿಗೆ ಕಾರಣವಾಗುವ ದಂಡವು ಒಂದಕ್ಕೇ ಕಾರಣವೆಂದು ಹೇಳುವುದು ಅಸಂಗತವಾಗುತ್ತದೆ. ವಿಶಿಷ್ಟಾದ್ವೈತ ಪದದಲ್ಲಿ ವಿಶೇಷಣ ಯಾವುದು? ವಿಶೇಷ್ಯ ಯಾವುದು? ಸಂಬಂಧ ಯಾವುದು? ಎಂದು ಹೇಳಬೇಕಾದರೆ ಜೀವನು ವಿಶೇಷಣ, ಪರಮಾತ್ಮನು ವಿಶೇಷ್ಯವೆಂದು ಹೇಳುವುದು ಯುಕ್ತವಲ್ಲ. ಆ ಮತದಲ್ಲಿ ಅಣುವೆನಿಸಿದ ಜೀವರೆಲ್ಲರೂ

ಒಂದಾಗುವುದಾದರೆ, ಜೀವನೊಬ್ಬನೇ ಉಳಿಯಬೇಕಾಗುವುದು. ಅನೇಕ ಜೀವರನ್ನು ವಿಶೇಷಣವಾಗಿ ಹೇಳಿದರೆ, ದಂಡಕುಂಡಲಾದಿವಿಶಿಷ್ಟ ವಸ್ತು ಬೇರೆಯಾಗುವಂತೆ ದ್ವೈತಬರುವುದೇ ಹೊರತು ಅದ್ವೈತ ಬರುವುದಿಲ್ಲ. ದಂಡವಿಶಿಷ್ಟನೇ ಕುಂಡಲ ವಿಶಿಷ್ಟನಾಗುವುದಿಲ್ಲ. ಆ ವಿಶೇಷಣಭೇದದಿಂದ ವಿಶೇಷ್ಯವೂ ಭಿನ್ನವಾಗುತ್ತದೆ. ಇಲ್ಲದಿದ್ದರೆ, ಕುಂಡಲವಿಲ್ಲದಿದ್ದರೂ ದಂಡವಿರುವವನನ್ನು ಕುಂಡಲವುಳ್ಳವನೆಂದೇ ವ್ಯವಹರಿಸಬೇಕಾಗುವುದು. ಹೀಗೆ ವಿಶೇಷಣಭೇದದಿಂದ ವಿಶೇಷ್ಯದ ಭೇದವೂ ಸಿದ್ಧಿಸುವುದರಿಂದ ಅನಂತಜೀವವಿಶಿಷ್ಟನಾದ ಪರಮಾತ್ಮನು ಹೇಗೆ ಒಬ್ಬನಾದಾನು? ಇದಲ್ಲದೆ ವಿಶೇಷಣವಿಶೇಷ್ಯಗಳಿಗೆ ಯಾರು ಸಂಬಂಧವನ್ನು ಹೇಳಬೇಕು? ಪರಸ್ಪರ ಸಂಬಂಧವಿಲ್ಲದಿದ್ದರೆ ವಿಶೇಷಣವಿಶೇಷ್ಯಭಾವ ಬರುವಂತಿಲ್ಲ. ಸಮವಾಯವು ಬೇರೆ ವಸ್ತುವಾಗಿರುವುದರಿಂದ ಅದನ್ನೂ ಸಂಬಂಧವೆಂದು ಹೇಳುವಂತಿಲ್ಲ. ಸ್ವರೂಪವೆಂಬುದು ಸಂಬಂಧಿಯಾಗುವುದರಿಂದ ಅದನ್ನು ಸಂಬಂಧವೆಂದು ಹೇಳುವಂತಿಲ್ಲ. ಇಲ್ಲದಿದ್ದರೆ ಸಂಬಂಧ ಸಂಬಂಧಿ ಎರಡೂ ಒಂದೇ ಆಗಬೇಕಾಗುವುದು. ಸ್ವರೂಪಗಳು ಎರಡಾಗಿ ರುವುದರಿಂದ ತನ್ನಲ್ಲಿಯೇ ತಾನು ಇರುವುದಾದರೆ ಆತ್ಮಾಶ್ರಯ ದೋಷ ಒದಗುತ್ತದೆ. ಎರಡು ಸ್ವರೂಪಗಳೂ ಎರಡರಲ್ಲೂ ಇರುವಂತೆಯೂ ಇಲ್ಲ. ಆದ್ದರಿಂದ ಜೀವಪರಮ ರಿಗೆ ಸ್ವರೂಪಸಂಬಂಧ ಬರುವಂತಿಲ್ಲ. ಅದರಂತೆಯೇ ಸಂಯೋಗವೂ ಸಂಬಂಧ ವಾಗಲಾರದು. ಅವ್ಯಾಪ್ಯವೃತ್ತಿಯಿಂದ ಸಂಯೋಗವನ್ನು ಒಪ್ಪಿದರೆ ಅಭೇದದಲ್ಲಿಯೇ ವಿಶ್ರಾಂತಿಯಾಗುವುದರಿಂದ ಜೀವಪರಮರಿಗೆ ಅಭೇದವೇ ಸಿದ್ಧಿಸುವುದು. ನಿರವಯವ ವಾದ ದ್ರವ್ಯದಲ್ಲಿ ಅವ್ಯಾಪ್ಯವೃತ್ತಿಯಾದ ಸಂಯೋಗವು ಬರುವಂತಿಲ್ಲ. ಔಪಾಧಿಕವಾದ ಪ್ರದೇಶವನ್ನು ಒಪ್ಪಿದರೆ ಉಪಾಧಿ ಸಂಬಂಧಕ್ಕೆ ಮತ್ತೊಂದು ಉಪಾಧಿಯನ್ನು ಹೇಳ ಬೇಕಾಗುವುದರಿಂದ ಅನವಸ್ಥೆಯುಂಟಾಗುವುದು. ಒಂದೇ ಆತ್ಮನಲ್ಲಿ ಸಂಯೋಗ ಮತ್ತು ಅಭಾವ ಎರಡನ್ನೂ ಒಪ್ಪಿದರೆ, ಭಾವ ಮತ್ತು ಅಭಾವಗಳಿಗೆ ವಿರೋಧವನ್ನು ತೋರಿಯಬೇಕಾಗುವುದು. ಇದರಿಂದ ಸಂಯೋಗವು ಮಿಥ್ಯೆಯೇ ಆಗುತ್ತದೆ. ಹೀಗೆ ಜೀವಪರಮರ ಸಂಬಂಧವನ್ನು ಹೇಳುವುದು ಅಸಾಧ್ಯವಾದ್ದರಿಂದ ವಿಶೇಷಣ ವಿಶೇಷ್ಯ ಭಾವದಿಂದಲೋ, ಪ್ರೇರ್ಯಪ್ರೇರಕಭಾವದಿಂದಲೋ ಜೀವವಿಶಿಷ್ಟಪರಮಾತ್ಮನಿಗ ಅದ್ವೈತ ಬರುವಂತಿಲ್ಲ. ಈ ಕಾರಣದಿಂದ ಸಕಲ ಶ್ರುತಿಸಿದ್ಧವಾದ ವಿಶೇಷಾದ್ವೈತವೇ ಪುನರಾವೃತ್ತಿಸಹಿತವಾದ ಮುಕ್ತಿಯನ್ನು ಕೊಡಬಲ್ಲದೆಂದು ಸಿದ್ಧವಾಯಿತು. ಕೆಲವರು 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂಬಲ್ಲಿ ಪುಚ್ಛದಂತೆ ಬ್ರಹ್ಮವು ಲೌಕಿಕವಾದ ಎಲ್ಲಾ ಆನಂದಗಳಿಗೂ ಅಧಿಷ್ಠಾನವೆಂದು ಹೇಳುವರು. ಬ್ರಹ್ಮಾನಂದವೇ ಎಲ್ಲಕ್ಕೂ ಉತ್ಕೃಷ್ಟವೆಂದು ಹೇಳಿರುವುದರಿಂದ, ರಾಜಮಾರ್ಗವೆನಿಸಿದ ವಿಶೇಷಾದ್ವೈತಸಿದ್ಧಾಂತ ದಲ್ಲಿ ಯಾವ ವಿರೋಧವೂ ಇಲ್ಲ. ಅಂತರಧಿಕರಣಂ || ೭ ||

**ಜಗಜ್ಜನ್ಮಾದಿಹೇತುಭೂತಸ್ಯ ಸರ್ವಜ್ಞತ್ವಾದಿಷಡ್ವಿಧಧರ್ಮಾವಚ್ಛಿನ್ನಸ್ಯ ಸರ್ವವ್ಯಾಪಕಸ್ಯ ಪವನಾದಿವನ್ಮೂರ್ತಾಮೂರ್ತಸ್ಯ ಶಿವಸ್ಯ ಪರಬ್ರ**

ಹ್ಮಣಃ ಆನಂದಮಯತ್ವಂ ಪ್ರಸಾಧ್ಯ ನಿಖಿಲಭಕ್ತತಾರಣಾರ್ಥಮಸ್ಯ ಸರ್ವಬ್ರಹ್ಮಾಂಡಾತೀತಮಹಾಕೈಲಾಸವಾಸಸ್ಯ ಪಂಚೋಪನಿಷನ್ಮಯಾಪ್ರಕೃತದಿವ್ಯಮಂಗಳವಿಗ್ರಹಸ್ಯ ಭಕ್ತಪರಿವೇಷ್ಟಿತಸ್ಯ ಹಿರಣ್ಮಯಸ್ಯ ಸದಾಶಿವಸ್ಯ ಪ್ರಭಾಕರಮುಖ್ಯಶರೀರತ್ವಂ ಪ್ರಸಾಧಯಿತುಮಧಿಕರಣಾಂತರಮಾರಭತೇ— ಅಂತಸ್ತದ್ಧರ್ಮೋಪದೇಶಾತ್ ॥ ೨೧ ॥

ಛಾಂದೋಗ್ಯೇ ದೃಶ್ಯತೇಽಸ್ಯ ವಿಷಯಃ—“ ಅಥ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸುವರ್ಣಸ್ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ತಸ್ಯೋದಿತಿ ನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತ ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ ತಸ್ಯರ್ಕ್ಚ ಸಾಮ ಚ ಇತ್ಯಧಿದೈವತಂ ಅಥಾಧ್ಯಾತ್ಮಂ ” (೧-೬-೬) “ ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೆ ಸೈವರ್ಕ್ಸಾಮ ತದುಕ್ಥಂ ತದ್ಯಜುಸ್ತದ್ಬ್ರಹ್ಮ ತಸ್ಯೈತಸ್ಯ ತದೇವ ರೂಪಂ ಯದಮುಷ್ಯ ರೂಪಂ, ಯಾವದಮುಷ್ಯ ಗೇಷ್ಣೌ, ತೌ ಗೇಷ್ಣೌ ಯನ್ನಾಮ ತನ್ನಾಮ ” (೧-೭-೫) ಇತಿ. ಅತ್ರ ಸಂಶಯಃ—ವಿದ್ಯಾತಿಶಯಕರ್ಮೋತ್ಕೃಷ್ಟತ್ವಪ್ರಾಪ್ತಾತಿಶಯಃ ಕಶ್ಚಿದ್ದೇವತಾವಿಶೇಷೋ ವಾ ನಾರಾಯಣೋ ವಾ ಸಾಕ್ಷಾತ್ಪರಶಿವೋ ವೇತಿ. ಪೂರ್ವಪಕ್ಷಸ್ತು—ಪ್ರಭಾಕರಮಂಡಲೇ ಚಕ್ಷುಷಿ ಚ ಸರ್ವೋಪಾಸ್ಯತ್ವೇನ ವ್ಯಪದಿಷ್ಟಃ ಪುರುಷೋ ನ ಮಹೇಶ್ವರಃ ಕಸ್ಮಾತ್? ಹಿರಣ್ಯಶ್ಮಶ್ರುರಿತ್ಯಾದಿನಾ ಸಶರೀರತ್ವಶ್ರವಣಾತ್. ‘ ಅಪಾಣಿಪಾದೋಽಹಂ ’, ‘ ಅಶಬ್ದಮಸ್ಪರ್ಶಂ ’, ‘ ಆಕಾಶವತ್ಸರ್ವಗತಶ್ಚ ಪೂರ್ಣಂ,’ ‘ ಖಂ ವಾಯು ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ’ ಇತ್ಯಾದಿಶ್ರುತಿಶತೇಷು ಪರಮೇಶ್ವರಸ್ಯ ಶಿವಸ್ಯ ಸಾಧಿಷ್ಠಾನತ್ವಸಾವಯವತ್ವನಿಷೇಧೋ ದೃಶ್ಯತೆ. ‘ ಯ ಏಷೋಽಂತರಾದಿತ್ಯೇ ’, ‘ ಯ ಏಷೋಽಂತರಕ್ಷಿಣಿ ’ ಇತಿ ತಸ್ಯ ಅಕ್ಷ್ಯಾದಿತ್ಯಾಧಾರತ್ವೋಪದೇಶಾತ್ ದೇವತಾಂತರಪರತ್ವಮೇವ ಯುಕ್ತಂ. ಪರಮೇಶ್ವರಸ್ಯ ಭಕ್ತೋಪಾಸನಾರ್ಥಂ ರೂಪವತ್ತ್ವಾಂಗೀಕಾರೇ ಸ್ವೇಚ್ಛಯಾ ಜೀವವಚ್ಛರೀರವತ್ತ್ವೇನ ದುಃಖಾನುಭೂತಿರ್ವ್ಯಪದಿಶ್ಯತೆ. ಕಿಂಚ—ಆದಿತ್ಯಮಂಡಲೇ ಚಕ್ಷುಷಿ ಚ ಉಪಾಸ್ಯಃ ಪುರುಷೋ ನಾರಾಯಣ ಏವ, ಪುಂಡರೀಕಾಕ್ಷತ್ವಲೋಚನದ್ವಯವತ್ತ್ವಾದಿಧರ್ಮಾಣಾಂ ತಸ್ಯೈವ ಸಮುಚಿತತ್ವಾತ್. ಸಾಂಖ್ಯಸ್ಮೃತೌ “ ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಸ್ಸರಸಿಜಾಸನಸನ್ನಿವಿಷ್ಟಃ । ಕೇಯೂರವಾನ್ಮಕರಕುಂಡಲವಾನ್ಕಿರೀಟೀ ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ॥ ” ಇತ್ಯಾದಿನಾ ಭಗವತಾ ಕಪಿಲಾಚಾ

ಯೋರ್ಣೇಣ ಮಹರ್ಷಿಣಾ ಸೌರಮಂಡಲಾಂತರ್ವರ್ತಿತ್ವಹಿರಣ್ಮಯತ್ವಾದಿ ಧರ್ಮಾಣಾಂ ನಾರಾಯಣಸ್ಯೈವ ವ್ಯಪದೇಶಾತ್, ಪರಮೇಶ್ವರಪರತ್ವೇ 'ಅಕ್ಷಿಣೀ' ಇತಿ ದ್ವಿವಚನಬಾಧಾಪಿ ದೃಶ್ಯತೆ. ಅಪಿಚ—'ಕಪ್ಯಾಸಂ ಪುಂಡರೀಕಮೇವಮಕ್ಷಿಣೀ' ಇತಿ ತಸ್ಯ ನಿಕೃಷ್ಟಮರ್ಕಟಾಸನತುಲ್ಯಪುಂಡರೀಕಸಾದೃಶ್ಯಸ್ಯಾಕ್ಷ್ಣೋರ್ವ್ಯಪದೇಶಾತ್ಸರ್ವಥಾ ನ ಪರಮೇಶ್ವರಪರತ್ವಂ ಇತಿ ಪ್ರಾಪ್ತೇ ಬ್ರೂಮಃ.

## ಅಂತರಧಿಕರಣಂ ॥ ೭ ॥

ಜಗಜ್ಜನ್ಮಾದಿಗಳಿಗೆ ಕಾರಣನೂ, ಸರ್ವಜ್ಞತೆಯೇ ಮೊದಲಾದ ಆರು ಧರ್ಮಗಳುಳ್ಳವನೂ, ಸರ್ವವ್ಯಾಪಕನೂ, ಗಾಳಿಯಂತೆ ಮೂರ್ತಾಮೂರ್ತನೂ ಆದ ಪರಶಿವನನ್ನು ಆನಂದಮಯನೆಂದು ಸಾಧಿಸಿ, ಬ್ರಹ್ಮಾಂಡಗಳಿಂದಾಚೆಗಿರುವ ಮಹಾಕೈಲಾಸದಲ್ಲಿ ಸಕಲಭಕ್ತರ ಉದ್ಧಾರಕ್ಕಾಗಿ ನೆಲಸಿ ಪಂಚಬ್ರಹ್ಮಮಯವಾದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನವೆಂಬ ದಿವ್ಯಮುಖಗಳಿಂದ ಶೋಭಿಸುತ್ತಿರುವ ಹಿರಣ್ಮಯನಾದ ಸದಾಶಿವನಿಗೆ ಸೂರ್ಯನೇ ಮುಖ್ಯಶರೀರನಾಗಿರುವನೆಂದು ಈ ಅಧಿಕರಣದಲ್ಲಿ ತಿಳಿಸಲಾಗುವುದು.

## ಅಂತಸ್ತದ್ಧರ್ಮೋಪದೇಶಾತ್ ॥ ೨೧ ॥

ಛಾಂದೋಗ್ಯದಲ್ಲಿ ಇದರ ವಿಷಯಬಂದಿದೆ. "ಆದಿತ್ಯನೊಳಗೆ ಹಿರಣ್ಮಯನಾದ ಪುರುಷನು ಕಾಣುತ್ತಾನೆ; ಸ್ವರ್ಣಮಯವಾದ ಗಡ್ಡ ಮೀಸೆಗಳೂ ಮತ್ತು ಕೂದಲೂ ಇದ್ದು ಉಗುರಿನ ಕೊನೆಯವರೆಗೂ ಚಿನ್ನವೇ ಆಗಿರುವ ಆ ಪುರುಷನಿಗೆ ಕಮಲದಂತೆ ವಿಕಸಿತವಾದ ಕಣ್ಣುಗಳಿರುವುವು. ಅವನಿಗೆ ಉತ್ ಎಂದು ಹೆಸರಿದೆ. ಅವನು ಯಾವ ಪಾಪಕ್ಕೂ ಅಂಟದಿರುವನು. ಅವನೇ ಋಕ್ಸಾಮಯಜುರ್ವೇದಗಳೂ ಬ್ರಹ್ಮನೂ ಆಗಿರುವನು. ಅವನನ್ನು ಯಾವನು ತಿಳಿಯುವನೋ ಅವನೂ ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದುವನು" "ಕಣ್ಣಿನೊಳಗೆ ಯಾವ ಪುರುಷನಿರುವನೋ ಅವನೇ ಋಗ್ಯಜುಸ್ಸಾಮವೇದಗಳೂ ಬ್ರಹ್ಮನೂ ಆಗಿರುವನು. ಅವನಿಗೂ ಬ್ರಹ್ಮದ ನಾಮರೂಪಗಾನಗಳೇ ಸಂಭವಿಸುವುವು." ಈ ಮಂತ್ರಗಳಲ್ಲಿ ಪ್ರತಿಪಾದಿತನಾದ ಪುರುಷನು ವಿದ್ಯಾತಿಶಯದಿಂದಲೂ ಕರ್ಮೋತ್ಕರ್ಷದಿಂದಲೂ ಹೆಚ್ಚು ಮಹಿಮೆಯನ್ನು ಗಳಿಸಿದ ಒಬ್ಬ ದೇವತೆಯೋ? ನಾರಾಯಣನೋ? ಅಥವಾ ಸಾಕ್ಷಾತ್ಪರಶಿವನೋ ಎಂಬ ಸಂಶಯಬರುತ್ತದೆ. ಇಲ್ಲಿ ಪೂರ್ವಪಕ್ಷ ಹೀಗೆ ಬರುತ್ತದೆ. ಸೂರ್ಯಮಂಡಲದಲ್ಲೂ, ಕಣ್ಣಿನಲ್ಲೂ ಉಪಾಸ್ಯನೆನಿಸಿರುವ ಪುರುಷನು ಮಹೇಶ್ವರನಲ್ಲ; ಯಾಕೆಂದರೆ ಶ್ರುತಿಯಲ್ಲಿ ಹಿರಣ್ಯಶ್ಮಶ್ರು ಮೊದಲಾದ ಪದಗಳಿಂದ ಅವನಿಗೆ ಶರೀರವಿರುವುದಾಗಿ ತಿಳಿದುಬರುತ್ತದೆ. "ಕೈಕಾಲುಗಳಿಲ್ಲದಿದ್ದರೂ ಅದ್ಭುತಶಕ್ತಿಯುಳ್ಳವನು, ಕಣ್ಣಿಲ್ಲದಿದ್ದರೂ ನೋಡುವೆನು, ಕಿವಿಯಿಲ್ಲದಿದ್ದರೂ ಕೇಳುವೆನು," "ಶಬ್ದಸ್ಪರ್ಶರೂಪಗಳಿಲ್ಲದೆ ನಾಶರಹಿತನಾಗಿರುವನು, ಆಕಾಶದಂತೆ

ಎಲ್ಲೆಲ್ಲೂ ತುಂಬಿರುವನು, ವಿಶ್ವಕ್ಕಾಧಾರವಾದ ಭೂಮಿ, ನೀರು, ಗಾಳಿ, ಬೆಂಕಿ, ಬಯಲೂ ಆಗಿರುವನು" ಈ ಬಗೆಯ ಶ್ರುತಿಗಳಲ್ಲಿ ಪರಮಶಿವನು ಸರ್ವಾಧಿಷ್ಠಾನನೂ ಮತ್ತು ನಿರವಯವನೂ ಆಗಿರುವನೆಂಬ ಬಗ್ಗೆ ನಿಷೇಧವು ಕಂಡುಬಂದಿದೆ. ಆದಿತ್ಯನೊಳಗೂ, ಕಣ್ಣಿನೊಳಗೂ ಇರುವನೆಂಬುದರಿಂದ ಅವನಿಗೆ ಆದಿತ್ಯ ಮತ್ತು ಕಣ್ಣುಗಳನ್ನು ಆಧಾರವೆಂದು ಹೇಳಿದೆ. ಆದ್ದರಿಂದ ಈ ಪುರುಷನು ಒಂದು ದೇವತಾವಿಶೇಷವಿರಬೇಕೆಂಬುದೇ ಯುಕ್ತವಾಗಿದೆ. ಪರಮೇಶ್ವರನು ಭಕ್ತರ ಉಪಾಸನೆಗಾಗಿ ಸ್ವೇಚ್ಛೆಯಿಂದ ರೂಪವನ್ನು ಸ್ವೀಕರಿಸಿದರೆ, ಆ ಶರೀರದ ಸಂಬಂಧದಿಂದ ಅವನಲ್ಲೂ ಜೀವನಂತೆ ದುಃಖದ ಅನುಭವವನ್ನು ಹೇಳಬೇಕಾಗುತ್ತದೆ. ಇದೂ ಅಲ್ಲದೆ, ಆದಿತ್ಯಮಂಡಲದಲ್ಲೂ ಕಣ್ಣಿನಲ್ಲೂ ಉಪಾಸ್ಯನಾಗಿ ನೆಲಸಿರುವ ಪುರುಷನು ನಾರಾಯಣನೇ ಇರಬಹುದು. ಯಾಕೆಂದರೆ ಕಮಲಸದೃಶವಾದ ಕಣ್ಣುಗಳಿರುವಿಕೆ ಮತ್ತು ಎರಡು ಕಣ್ಣುಗಳಿರುವಿಕೆ ಈ ಬಗೆಯ ಧರ್ಮಗಳು ಅವನಿಗೇ ಅನ್ವಯಿಸುತ್ತವೆ. ಸಾಂಖ್ಯಸ್ಮೃತಿಯಲ್ಲಿ "ಸೂರ್ಯಮಂಡಲದೊಳಗೆ ನಾರಾಯಣನು ಬ್ರಹ್ಮನೊಡನೆ ನೆಲಸಿ ಎಲ್ಲರಿಗೂ ಉಪಾಸ್ಯನಾಗಿರುವನು. ಅವನು ಕೇಯೂರ, ಕಿರೀಟ, ಮುಕುಟ ಮತ್ತು ಕುಂಡಲಗಳಿಂದ ಶೋಭಿಸುತ್ತ ಶಂಖಚಕ್ರಧಾರಿಯಾಗಿ ಸ್ವರ್ಣಮಯಶರೀರದಿಂದ ಶೋಭಿಸುತ್ತಿರುವನು" ಎಂದು ಕಪಿಲಮಹರ್ಷಿಯು ನಾರಾಯಣನನ್ನು ಹಿರಣ್ಮಯನೆಂದೂ, ಸೂರ್ಯಮಂಡಲದೊಳಗೆ ಇರುವನೆಂದೂ ತಿಳಿಸಿದ್ದಾನೆ. ಈ ಸ್ಮೃತಿವಾಕ್ಯವನ್ನು ಪರಮೇಶ್ವರನಿಗೆ ಅನ್ವಯಿಸಲಿಕ್ಕೆ 'ಅಕ್ಷಿಣೀ' ಎಂಬಲ್ಲಿ ದ್ವಿವಚನವು ಬಂಧಕವಾಗುತ್ತದೆ. ಇದೂ ಅಲ್ಲದೆ, ಆ ಪುರುಷನ ಕಣ್ಣುಗಳಿಗೆ ನಿಕೃಷ್ಟವಾದ ಮರ್ಕಟದ ಗುದಸ್ಥಾನಕ್ಕೆ ಸಮನಾದ ಪುಂಡರೀಕದ ಸಾದೃಶ್ಯವನ್ನು ಹೇಳಿರುವುದರಿಂದ ಇಂತಹ ಹೀನೋಪಮೆ ಪರಮೇಶ್ವರನಿಗೆ ಅನ್ವಯಿಸುವುದಿಲ್ಲ.

**'ಅಂತಸ್ತದ್ಧರ್ಮೋಪದೇಶಾತ್' ಅಂತಃ=ಆದಿತ್ಯಾಕ್ಷ್ಣೋರಂತಃ ಶ್ರೂಯಮಾಣಃ ಪುರುಷಃ ಸಾಕ್ಷಾತ್ಪರಶಿವ ಏವ. ಕುತಃ? ತದ್ಧರ್ಮೋಪದೇಶಾತ್. ತಸ್ಯ ಮಹೇಶ್ವರಸ್ಯ ಯೇ ಧರ್ಮಾಃ ಇಹೋಪದಿಷ್ಟಾಃ ತೇಷಾಮಸ್ಮಿನ್ವಾಕ್ಯೇ ಉಪದೇಶಾತ್. ತದ್ಯಥಾ 'ತಸ್ಯೋದಿತಿ ನಾಮ' ಇತ್ಯಾದಿವಾಕ್ಯೇ ತಸ್ಯೋದಿತಿನಾಮೇತಿ ದರ್ಶಯಿತ್ವಾ ಸರ್ವಕಿಲ್ಬಿಷರಹಿತತ್ವೇನ ತದ್ಧರ್ಮಶ್ರವಣಾತ್, ತಸ್ಮಾತ್ತದೇವ ನಿರ್ವಚನಂ ಅಕ್ಷಿಪುರುಷಸ್ಯಾಪ್ಯುಪದಿಶತಿ. 'ಯ ಆತ್ಮಾಽಪಹತಪಾಪ್ಮಾ' ಇತ್ಯಾದೌ ಚ ಸರ್ವಕಿಲ್ಬಿಷಶೂನ್ಯತ್ವಂ ಪರಮೇಶ್ವರಸ್ಯೈವ ಶ್ರೂಯತೇ. ತಥಾಽಕ್ಷಿಪುರುಷೇ 'ಸೈವ ಕ್ಸಾಮ' ಇತಿ ವಾಕ್ಯೇ ತಸ್ಯೈವ ಋಕ್ಸಾಮಾದ್ಯಾತ್ಮಕತ್ವಂ ವ್ಯಪದಿಶತಿ. ಕಿಂಚ 'ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ' (ಬೃಹ-೪-೨೨) ಇತ್ಯಾದಾವನಿತರಸಾಧಾರಣಾಃ ಪರಮೇಶ್ವರಧರ್ಮಾಃ**

ಬಹವೋ ನಿರ್ದಿಷ್ಟಾಃ. ಭಕ್ತಾನುಗ್ರಹಾರ್ಥಂ ಸರ್ವವ್ಯಾಪಕಸ್ಯ ಶಿವಸ್ಯ ಪರಬ್ರಹ್ಮಣೋ ಹಿರಣ್ಯಶ್ಮಶ್ರುತ್ವಾದಿಧರ್ಮವಿಶಿಷ್ಟದಿವ್ಯಮಂಗಳವಿಗ್ರಹಾತ್ಮಕತ್ವೇ ನ ದುಃಖಲೇಶಪ್ರಸಂಗಃ, ತ್ರಿಗುಣಾತೀತಶುದ್ಧಸತ್ತ್ವಪ್ರಧಾನ ಚಿಚ್ಛಕ್ತ್ಯಾತ್ಮಕತ್ವಾತ್. ಜಲಾಗ್ನಿಸ್ತಂಭನಶಕ್ತಿಮತಾಂ ತತ್ಪ್ರತಿಬಂಧಕತ್ವಾದರ್ಶನಾಚ್ಚ ಸರ್ವಶಕ್ತಿವಿಶಿಷ್ಟಸ್ಯ ವಶೀಕೃತಮಾಯಾಶಕ್ತೇಃ ಪರಮೇಶ್ವರಸ್ಯ ಕಿಮು ವಕ್ತವ್ಯಂ? ತಸ್ಮಾಚ್ಛರೀರಸಂಬಂಧೇಽಪಿ ಸರ್ವಪಾಪರಾಹಿತ್ಯಂ ಭಗವತೀ ಶ್ರುತಿರೇವ ಪ್ರತಿಪಾದಯತಿ, ನಾರಾಯಣಸ್ಯ ಪ್ರಭಾಕರಾಕ್ಷ್ಯಂತರ್ವರ್ತಿತ್ವಂ ನ ಸಂಭವತಿ. ಸೂರ್ಯಸ್ಯ ಅಷ್ಟಮೂರ್ತೇಶ್ಶಿವಸ್ಯ ಮುಖ್ಯಶರೀರತ್ವೇನ ಶ್ರುತಿಸ್ಮೃತಿಪ್ರಸಿದ್ಧತ್ವಾತ್. ರುದ್ರಾಧ್ಯಾಯೇ "ಅಸೌ ಯೋಽವಸರ್ಪತಿ ನೀಲಗ್ರೀವೋ ವಿಲೋಹಿತಃ । ಉತೈನಂ ಗೋಪಾ ಅದೃಶನ್ನದೃಶನ್ನುದಹಾರ್ಯಃ।" ಇತ್ಯಾದಿನಾ ಯೋ ವಿಲೋಹಿತಸ್ಸನ್ ರುದ್ರಃ ಅರ್ಕಮಂಡಲವರ್ತೀ ಭೂತ್ವಾ ಅವಸರ್ಪತಿ, ಉದಯಾಸ್ತಮಯೇ ಸಂಪಾದಯಿತುಂ ಪ್ರವರ್ತತೇ ತತ್ರಾಭಿವ್ಯಕ್ತಂ ಪುರುಷಂ ರುದ್ರಂ ಶ್ರುತಿಪಾರಗಾ ಉಪಾಸತೇ. ತಥಾಚ ಸ್ಮೃತಿಃ "ಸೌರಮಂಡಲಮಧ್ಯಸ್ಥಂ ಸಾಂಬಂ ಸಂಸಾರಭೇಷಜಂ। ನೀಲಗ್ರೀವಂ ವಿರೂಪಾಕ್ಷಂ ನಮಾಮಿ ಶಿವಮವ್ಯಯಂ ॥ ಸೂರ್ಯೋ ಮುಖ್ಯಶರೀರಂ ಸ್ಯಾಚ್ಛಿವಸ್ಯ ಪರಮಾತ್ಮನಃ। ತಸ್ಮಾತ್ತದಂತರೇ ನಿತ್ಯಂ ಧ್ಯಾಯೇದ್ಯೋಗೀ ಸದಾಶಿವಂ॥ ಸೂರ್ಯಾಕ್ಷಿದಹರೇಷ್ವೇವ ಸಾಂಬಂ ಚಂದ್ರಕಳಾಧರಂ। ಫುಲ್ಲಾಬ್ಜನಯನದ್ವಂದ್ವಂ ಧ್ಯಾಯೇದ್ಯೋಗೀ ನಿರಂತರಂ॥" ಇತ್ಯಾದಿಗೌತಮಬೃಹಚ್ಛಾತಾತಪಾದಿಷು ಸೂರ್ಯಮಂಡಲಾಂತರ್ವರ್ತಿತ್ವಸ್ಯ ಪರಮೇಶ್ವರಸ್ಯೈವ ನಿರ್ದೇಶಾನ್ನಾನ್ಯಾರ್ಥೋ ಯುಕ್ತಃ.

ಆದರೆ ಈ ಆಕ್ಷೇಪಕ್ಕೆ ಸೂತ್ರದಲ್ಲಿ ಸಮಾಧಾನ ಹೀಗಿದೆ. ಅಂತಃ=ಕಣ್ಣಿನೊಳಗೂ ಸೂರ್ಯಮಂಡಲದೊಳಗೂ ಕಾಣುವ ಪುರುಷನು ಸಾಕ್ಷಾತ್ಪರಶಿವನೇ ಇರುವನು. ಯಾಕಂದರೆ ಅವನ ಧರ್ಮಗಳನ್ನೇ ಈ ಶ್ರುತಿಗಳಲ್ಲಿ ಉಪದೇಶಿಸಲಾಗಿದೆ. "ಅವನು ಎಲ್ಲಾ ಪಾಪಗಳನ್ನೂ ದಾಟಿದವನು' ಎಂಬ ವಾಕ್ಯದಲ್ಲಿ 'ಉದಿತ'ನೆಂದು ಹೇಳಿದ್ದರಿಂದ ಅವನಿಗೆ ಪಾಪಸಂಪರ್ಕವಿಲ್ಲವೆಂದು ಅವನ ಧರ್ಮವೇ ಉಕ್ತವಾಗಿದೆ. ಹಾಗೆಯೇ ಕಣ್ಣಿನೊಳಗೆ ಕಾಣುವ ಪುರುಷನೂ ಪಾಪರಹಿತನಾಗಿರುವನೆಂದು ಶ್ರುತಿಯಲ್ಲಿ ಹೇಳಲಾಗಿದೆ. ಪಾಪಲೇಪವಿಲ್ಲದಿರುವಿಕೆ ಎಂಬುದು ಪರಮೇಶ್ವರನ ಧರ್ಮವೆಂದು ಶ್ರುತಿ ಸ್ಪಷ್ಟಪಡಿಸಿದೆ. ಅವನೇ ಋಕ್ಸಾಮಾದಿವೇದಮಯನೆಂದೂ ಶ್ರುತಿಯು ಹೇಳಿದೆ. ಇದೂ ಅಲ್ಲದೆ, 'ಈ ಸರ್ವೇಶ್ವರನೇ ಸರ್ವಭೂತಗಳಿಗೆ ಅಧಿಪತಿಯೂ, ರಕ್ಷಕನೂ, ಜೀವರನ್ನು ದುಃಖಸಾಗರದಿಂದ ದಾಟಿಸುವ ಸೇತುವೆಯೂ, ಆಗಿದ್ದಾನೆ. ವಸ್ತುಗಳನ್ನು ಪರಸ್ಪರ ಸಾಂಕರ್ಯವಿಲ್ಲದಂತೆ ವ್ಯವಸ್ಥೆಗೊಳಿಸುವವನೂ ಆಗಿದ್ದಾನೆ"

ಹೀಗೆ ಶ್ರುತಿಯು ಬೇರೆ ಯಾರಲ್ಲೂ ಇಲ್ಲದ ವಿಶೇಷಧರ್ಮಗಳನ್ನು ಪರಮೇಶ್ವರನಲ್ಲಿ ಹೇಳಿದೆ. ಸರ್ವವ್ಯಾಪಕನಾದ ಪರಶಿವನಿಗೆ ಭಕ್ತಾನುಗ್ರಹಕ್ಕಾಗಿ ಹಿರಣ್ಯಶ್ಮಶ್ರುವೇ ಮೊದಲಾದ ಧರ್ಮಗಳಿಂದ ಕೂಡಿದ ದಿವ್ಯಮಂಗಳವಿಗ್ರಹವಿದ್ದರೂ ದುಃಖಲೇಪ ವುಂಟಾಗಲಾರದು. ಯಾಕೆಂದರೆ ತ್ರಿಗುಣಾತೀತವೂ, ಶುದ್ಧ ಸತ್ತ್ವಮಯವೂ ಆದ ಚಿತ್‌ಶಕ್ತಿಯೇ ಅವನ ಶರೀರವಾಗಿದೆ. ನೀರನ್ನೂ ಬೆಂಕಿಯನ್ನೂ ತಡೆಯುವ ಶಕ್ತಿ ಯುಳ್ಳವನಿಗೆ ನೀರು ಬೆಂಕಿಗಳು ಬಂಧಕವಾಗಲಾರವು. ಇಂತಹ ಸ್ಥಿತಿಯಲ್ಲಿ ಸರ್ವ ಶಕ್ತಿವಿಶಿಷ್ಟನಾಗಿ ಮಾಯಾಶಕ್ತಿಯನ್ನು ವಶಪಡಿಸಿಕೊಂಡಿರುವ ಪರಮೇಶ್ವರನ ಬಗ್ಗೆ ಹೇಳುವುದೇನಿದೆ ? ಆದ್ದರಿಂದ ಚಿನ್ಮಯವಾದ ಶರೀರದ ಸಂಬಂಧದಿಂದ ಅವನಲ್ಲಿ ಯಾವ ಬಗೆಯ ಪಾಪದ ಸಂಪರ್ಕವೂ ಇರುವುದಿಲ್ಲವೆಂದು ಶ್ರುತಿ ಹೇಳುತ್ತಿದೆ. ನಾರಾಯಣನು ಸೂರ್ಯಮಂಡಲದಲ್ಲೂ, ಕಣ್ಣಿನಲ್ಲೂ ಇರುವನೆಂಬುದು ಸಂಭವಿ ಸುವುದಿಲ್ಲ. ಅಷ್ಟಮೂರ್ತಿಯಾದ ಶಿವನಿಗೆ ಸೂರ್ಯನು ಮುಖ್ಯಶರೀರನೆಂಬುದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿದೆ. ರುದ್ರಾಧ್ಯಾಯದಲ್ಲಿ "ಯಾವ ಈ ರುದ್ರನು ನೀಲಿ ಕೆಂಪುಬಣ್ಣವುಳ್ಳವನಾಗಿ ಸೂರ್ಯಮಂಡಲದೊಳಗೆ ಇರುತ್ತ ಉದಯಾಸ್ತ ಮಾನಗಳನ್ನು ನಡೆಸುತ್ತಿರುವನೋ ಅವನನ್ನು ಗೊಲ್ಲರೂ ಮತ್ತು ನೀರನ್ನು ಹೊರುವ ಹೆಂಗಸರೂ ಸಹ ನೋಡುತ್ತಾರೆ" ಈ ಶ್ರುತಿಯಲ್ಲಿ ಹೇಳಿರುವ ಪುರುಷನನ್ನು ರುದ್ರ ನೆಂದು ಶ್ರೋತ್ರಿಯರು ಉಪಾಸನೆಮಾಡುತ್ತಾರೆ. "ನೀಲಗ್ರೀವನೂ, ವಿರೂಪಾಕ್ಷನೂ, ನಾಶರಹಿತನೂ ಸಂಸಾರದುಃಖನಾಶಕನೂ ಆಗಿ ಸೂರ್ಯಮಂಡಲದೊಳಗೆ ನೆಲಸಿರುವ ಸಾಂಬಶಿವನನ್ನು ನಮಸ್ಕರಿಸುತ್ತೇನೆ. ಅವನಿಗೆ ಸೂರ್ಯನೇ ಮುಖ್ಯಶರೀರನು. ಆದ್ದರಿಂದ ಯೋಗಿಯು ಸೂರ್ಯಮಂಡಲದೊಳಗಿನ ಶಿವನನ್ನು ನಿತ್ಯವೂ ಧ್ಯಾನಿಸ ಬೇಕು. ಸೂರ್ಯನಲ್ಲೂ ಕಣ್ಣುಗಳಲ್ಲೂ ಹೃದಯದಲ್ಲೂ ಚಂದ್ರಕಲಾಧರನೂ ವಿಕಸಿತನೇತ್ರನೂ ಆಗಿ ನೆಲಸಿರುವ ಶಿವನನ್ನು ಯೋಗಿಯು ನಿರಂತರವೂ ಧ್ಯಾನಿಸ ಬೇಕು" ಹೀಗೆ ಸ್ಮೃತಿಯಲ್ಲಿ ಹೇಳಿದೆ. ಈ ರೀತಿಯಲ್ಲಿ ಗೌತಮಾದಿಸ್ಮೃತಿಗಳಲ್ಲಿ ಪರಮೇಶ್ವರನು ಸೂರ್ಯಮಂಡಲದೊಳಗಿರುವನೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಇಲ್ಲಿ ಬೇರೆ ಯಾವ ಅರ್ಥವೂ ಹೊಂದುವುದಿಲ್ಲ.

**ಕಿಂಚ ಸೂತಸಂಹಿತಾಯಾಂ ಜ್ಞಾನಯೋಗಖಂಡೇ ಭಗವತಾ ವ್ಯಾಸೇನ ಪರಮೇಶ್ವರಪರತ್ವಂ ಸ್ಪಷ್ಟಮುಕ್ತಂ. "ವೇದಾರ್ಥೋಽಯಂ ಸ್ವಯಂ ಜ್ಞಾತ್ವಾ ತತ್ರಾಜ್ಞಾನಂ ಪ್ರಚಕ್ಷತೇ। ಶ್ರುತಿಸ್ಮೃತಿಪುರಾಣೇಭ್ಯೋ ವೇದಾರ್ಥಮುಪಬೃಂಹಯೇತ್ ॥" ಇತ್ಯಾದಿಸ್ಮೃತಿಷು ವೇದಾರ್ಥಸ್ಯ ಸ್ವಯಂ ವೇತ್ತೃತ್ವನಿಷೇಧವ್ಯವಸ್ಥಾಪನಾತ್, "ಅಥವಾಕಾಶಮಧ್ಯಸ್ಥೇ ಭ್ರಾಜಮಾನೇ ಸುಶೋಭನೇ । ಆದಿತ್ಯಮಂಡಲೇ ಪೂರ್ಣೇ ಲಕ್ಷಯೋಜನವಿಶ್ರುತೇ । ಸರ್ವಲೋಕವಿಧಾತಾರಮೀಶ್ವರಂ ಹೇಮರೂಪಿಣಂ । ಹಿರಣ್ಮಯಶ್ಮಶ್ರುಕೇಶಂ ಹಿರಣ್ಮಯನಖಂ ತಥಾ । ಕಪ್ಯಾಸ್ಯಾಸನವನ್ನೇತ್ರಂ**

ನೀಲಗ್ರೀವಂ ತ್ರಿಲೋಚನಂ । ಆಗೋಪಾದಿಪ್ರಸಿದ್ಧಾಂತಮಂಬಿಕಾರ್ಧಶರೀರಿಣಂ । ಸೋಽಹಮಿತ್ಯಾದರೇಣೈವ ಧ್ಯಾಯೇದ್ಯೋಗೀ ಮಹೇಶ್ವರಂ ॥ ” ಇತಿ. ವೃದ್ಧಶಾತಾತಪೇ—“ ಸೌರಮಂಡಲಮಧ್ಯಸ್ಥಂ ವಿಷ್ಣುವಲ್ಲಭಮವ್ಯಯಂ । ಊರ್ಧ್ವರೇತಂ ವಿರೂಪಾಕ್ಷಂ ಸರ್ವಕಾರಣಕಾರಣಂ ॥ ಹಿರಣ್ಮಯಶ್ಮಶ್ರುಕೇಶಂ ಹಿರಣ್ಮಯನಖಾನ್ವಿತಂ । ಕಂ ಜಲಂ ಕಿರಣೈಸ್ಸಮ್ಯಕ್ಪಿಬತೀತಿ ಪ್ರಭಾಕರಃ । ಕಪಿಶಬ್ದೇನ ನಿರ್ದಿಷ್ಟೋ ವೇದವೇದಾಂತಪಾರಗೈಃ । ಆಸಂ ವಿಕಸನಂ ಪ್ರೋಕ್ತಂ ಯೋಗಿಭಿಃ ಪಾರಮಾರ್ಥಿಕೈಃ । ತಸ್ಮಾದುತ್ಫುಲ್ಲವನಜನಯನದ್ವಯಶೋಭಿತಂ । ಚಿದಚಿದ್ವಿಶ್ವರಕ್ಷಾರ್ಥಂ ಕೃಪಯಾ ಪದ್ಮಕೋಶವತ್ ॥ ಮುಕುಳೀಕೃತಸದ್ವಹ್ನಿನೇತ್ರಂ ಶೂಲಧರಂ ಪ್ರಭುಂ । ಧ್ಯಾಯೇದ್ಯೋಗೀ ಮಹಾದೇವಂ ಜಗಜ್ಜನ್ಮಾದಿಕಾರಣಂ ॥ ” ಇತ್ಯಾದಿನಾ ಶಿವಸ್ಯೈವ ಸರ್ವಮಂಡಲಾಂತರ್ವರ್ತಿತ್ವದರ್ಶನಾತ್. ನೀಲಕಂಠಭಗವತ್ಪಾದಭಟ್ಟಭಾಸ್ಕರಘಂಟಾನಾಥಜ್ಯೋತಿರ್ನಾಥಾದಿಪೂರ್ವಾಚಾರ್ಯೈಃ ಛಾಂದೋಗ್ಯಭಾಷ್ಯೇ“ಕಪ್ಯಾಸಂ ಪುಂಡರೀಕಮೇವಮಕ್ಷಿಣೀ” ಇತಿ ವಾಕ್ಯೇ ತಸ್ಯ ಪರಮೇಶ್ವರಸ್ಯ ಲೋಕಾನುಗ್ರಹಾರ್ಥಂ ಸೂರ್ಯಚಂದ್ರಾತ್ಮಕನೇತ್ರದ್ವಯಂ ವಿಕಸಿತಂ, ಮುಕುಳೀಕೃತಂ ತೃತೀಯಲೋಚನಮಿತಿ ವ್ಯಾಖ್ಯಾತಂ. ತದ್ಯಥಾ-ಕಂ ಜಲಂ ರಶ್ಮಿಭಿಃ ಪಿಬತೀತಿ ಕಪಿಸ್ಸೂರ್ಯಃ, ತೇನ ಆಸಂ-ಅಸಿತಂ-ವಿಕಸಿತಮಿತ್ಯರ್ಥಃ. ಪುಂಡರೀಕಂ ಯಥಾ ಸ್ಫುರತಿ ತಥಾ ಮಹೇಶ್ವರಸ್ಯ ಲೋಚನದ್ವಯಂ. ತೃತೀಯಂ ತು ಮುಕುಳೀಕೃತಸ್ವಭಾವಂ ಸತ್ ವಿಕಸಿತಪುಂಡರೀಕಸದೃಶಂ ನ ಭವತಿ, ಕಿಂತು ಮುಕುಳೀಕೃತಪುಂಡರೀಕಸದೃಶಂ ಇತ್ಯಭಿಪ್ರಾಯೇಣ ‘ ಅಕ್ಷಿಣೀ ’ ಇತಿ ದ್ವಿವಚನಸ್ಯ ನ ತೃತೀಯಲೋಚನಾಭಾವಪರತ್ವಂ. ಪುತ್ರತ್ರಿತಯವಂತಂ ಬ್ರಾಹ್ಮಣಂ ಪ್ರತಿ ‘ ದ್ವೌ ಪುತ್ರೌ ಅಸ್ಮಾಗ್ನಿಕಲ್ಪೌ ’ ಇತ್ಯುಕ್ತೇ ದ್ವಿಪುತ್ರಸಂಖ್ಯಾಗ್ರಹಣಂ ನ ಶೇಷಪುತ್ರನಿಷೇಧಪರಂ, ಕಿಂತು ಪುತ್ರದ್ವಯಸ್ಯಾಗ್ನಿಸಾದೃಶ್ಯಪರಂ, ಏವಂ ಲೋಕೇ ಬಹುಶೋ ವೇದಿತವ್ಯಂ. ಪರಮಶಿವಾಸಾಧಾರಣಾನಾಂ ಹಿರಣ್ಮಯತ್ವಾದಿಲಿಂಗಾನಾಂ ನಾರಾಯಣಸ್ಯಾನುಪಪತ್ತೇಃ ‘ ಸಂದಿಗ್ಧೇಷು ವಾಕ್ಯಶೇಷಾತ್ ’ ಇತಿ ನ್ಯಾಯೇನ ಸೂತ್ರವಿಷಯಸ್ಯ ಸಂದಿಗ್ಧತ್ವಾದತ್ರ ವಾಕ್ಯಶೇಷೋಽಂಗೀಕ್ರಿಯತ ಇತಿ ಚೇತ್ ಮಹೋಪನಿಷದಿ ಸ್ಪಷ್ಟಮುಕ್ತಂ. “ ಆದಿತ್ಯೋ ವಾ ಏಷ ಏತನ್ಮಂಡಲಂ ತಪತಿ ” ಇತ್ಯನುವಾದವಾಕ್ಯೇನ ಪ್ರಭಾಕರಮಂಡಲಂ ನಿರ್ದಿಶ್ಯ “ ಯ ಏಷ ಏತಸ್ಮಿನ್ಮಂಡಲೇಽರ್ಚಿಷಿ ಪುರುಷಃ ” ಇತಿ ಮಂಡಲಾಭಿಮಾನಿಪ್ರಭಾಕರಂ ಪ್ರದರ್ಶ್ಯ “ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ” ಇತ್ಯಾದಿವಾಕ್ಯಾಂತರ್ಯಾ

ಮಿಣಂ ನಿರ್ದಿಶ್ಯ, ಪುನಃ "ಆದಿತ್ಯೋ ವೈ ತೇಜ ಓಜೋ ಬಲಂ ಯಶಃ" ಇತ್ಯಾದಿನಾ ತಸ್ಯ ಪ್ರಭಾಕರಸ್ಯ ವಿಭೂತಿಮಭಿಧಾಯ, 'ಯ ಏಷ ಪುರುಷ ಏಷ ಭೂತಾನಾಮಧಿಪತಿಃ' ಇತಿ ಭೂತಪತಿತ್ವೇನ ವ್ಯಪದಿಶ್ಯ, ಪುನಃ ಕೀದೃಶಃ ಪುರುಷಃ ಇತ್ಯಾಕಾಂಕ್ಷಾಯಾಂ "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ ಹಿರಣ್ಯರೂಪಾಯ ಹಿರಣ್ಯಪತಯೇಽಂಬಿಕಾಪತಯ ಉಮಾಪತಯೇ ಪಶುಪತಯೇ ನಮೋನಮಃ" ಇತ್ಯುಪಸಂಹೃತಂ. ಶತರುದ್ರಿಯೇ—"ನಮೋ ಹಿರಣ್ಯಬಾಹವೇ ಸೇನಾನ್ಯೇ" ಇತ್ಯಾದಿಶ್ರುತಿಸಿದ್ಧಹಿರಣ್ಮಯತ್ವೋಮಾಪತಿತ್ವಪಶುಪತಿತ್ವಾದಿಧರ್ಮಾಣಾಮನನ್ಯಸಾಧಾರಣತ್ವಾತ್, ನಾರಾಯಣಾದನ್ಯತ್ರಾಪಿ ಪುಂಡರೀಕಾಕ್ಷತ್ವಂ ಸಾಧಾರಣಲಿಂಗಂ. 'ಕಮಲಲೋಚನಾ ನಾರೀ,' 'ಕಮಲಾಕ್ಷಃ ಪುರುಷಃ' ಇತಿ ಲೋಕೇ ಪ್ರಯೋಗದರ್ಶನಾತ್, ಸಾಮಾನ್ಯವಿಶೇಷಲಿಂಗಯೋಃ ಪರಸ್ಪರವಿರೋಧೇ ವಿಶೇಷಲಿಂಗಾನುಸಾರೇಣ ವ್ಯಾಖ್ಯಾನಂ ನಿರ್ಣೇತವ್ಯಮಿತಿ ನ್ಯಾಯಾತ್ ಶ್ರುತಿವಿರುದ್ಧಸ್ಮೃತೇಃ ಪ್ರಾಮಾಣ್ಯಾಭಾವಾತ್ ಸಾಂಖ್ಯಸ್ಮೃತೇರವೈದಿಕತ್ವೇನ ಸ್ಮೃತ್ಯನವಕಾಶಾಧಿಕರಣೇ ಭಗವತಾ ವ್ಯಾಸೇನ ನಿರಸ್ತತ್ವಾಚ್ಚ, ಅತ್ರೋದ್ಗೀಥವಿದ್ಯೋಪಾಸ್ಯೋ ಹಿರಣ್ಮಯಃ ಪುರುಷಃ ಪರಮಶಿವ ಏವೇತಿ ಸಿದ್ಧಂ. "ಮೃತ್ಯುಂಜಯಂ ಪರಿತ್ಯಜ್ಯ ಯೇಽನ್ಯದೈವಮುಪಾಸತೇ । ತೇ ಮೃತ್ಯುಮುಖಮಾವಿಶ್ಯ ಜಾಯಂತೇ ಚ ಪುನಃ ಪುನಃ ॥ ಕದನ್ನಮಪ್ಯನನ್ನಸ್ಯ ಪಾಯಸಾನ್ನಮಿತೀರ್ಯತೇ । ಅದೃಷ್ಟಶಿವಪಾದಸ್ಯ ತದ್ವಿಷ್ಣೋಃ ಪರಮಂ ಪದಂ ॥" ಇತ್ಯಾದಿಸ್ಮೃತಿಷು ಶಿವಾನ್ಯದೇವತೋಪಾಸನಸ್ಯೈವ ನಿರಸ್ತತ್ವಾತ್ ಸರ್ವದಾ ಸೂರ್ಯಮಂಡಲಾಕ್ಷ್ಯಾದಿಸ್ಥಾನೇಷು ಸಾಕ್ಷಿಚ್ಛಿವ ಏವ ಮುಮುಕ್ಷೂಣಾಂ ಧ್ಯೇಯ ಇತಿ ರಾದ್ಧಾಂತಃ.

ಇದೂ ಅಲ್ಲದೆ ಸೂತಸಂಹಿತೆಯ ಜ್ಞಾನಯೋಗಖಂಡದಲ್ಲಿ ವ್ಯಾಸನು ಪರಮೇಶ್ವರನ ಪರವಾಗಿ ಸ್ಪಷ್ಟವಾಗಿ ಹೇಳಿದ್ದಾನೆ. "ವೇದಾರ್ಥವನ್ನು ಗುರುವಿನಿಂದ ತಿಳಿಯದೆ ಯಾರು ತಾವಾಗಿಯೇ ತಿಳಿಯಲು ಹೊರಡುವರೋ ಅವರು ಅಜ್ಞರೆನಿಸುತ್ತಾರೆ. ಆದ್ದರಿಂದ ಇತಿಹಾಸ ಪುರಾಣಗಳ ಬಲದಿಂದ ವೇದಾರ್ಥವನ್ನು ನಿಷ್ಕರ್ಷಿಸಬೇಕು". ಹೀಗೆ ಸ್ಮೃತಿಯಲ್ಲಿ ವೇದಾರ್ಥವನ್ನು ಸ್ವತಃ ತಿಳಿಯುವ ಪದ್ಧತಿಯು ನಿಷಿದ್ಧವಾಗಿದೆ. "ಸ್ವರ್ಣರೂಪದಿಂದಲೂ ಚಿನ್ನದ ಮೀಸೆ ಮತ್ತು ಉಗುರುಗಳಿಂದಲೂ ಕಪಿಯ ಆಸನದಂತಹ ನೇತ್ರಗಳಿಂದಲೂ ಶೋಭಿಸುವ ತ್ರಿಲೋಚನನೂ, ನೀಲಕಂಠನೂ ಆದ ಪರಶಿವನು ಆಕಾಶದಲ್ಲಿ ಶೋಭಿಸುತ್ತಿರುವ ಲಕ್ಷಯೋಜನದಷ್ಟು ವಿಸ್ತಾರವೂ ವಿಶಾಲವೂ ಆದ ಸೂರ್ಯಮಂಡಲದಲ್ಲಿ ಲೋಕರಕ್ಷಣೆಗಾಗಿ ನೆಲಸಿರುವನು. ಅವನು ಗೊಲ್ಲ[illegible] ಪರಾಶಕ್ತಿ

ಯೊಡಗೂಡಿದ ಆ ಪರಮೇಶ್ವರನೇ ತಾನೆಂದು ಭಾವಿಸಿ ನಿತ್ಯವೂ ಧ್ಯಾನಿಸುತ್ತಿರಬೇಕು" ಹೀಗೆ ವ್ಯಾಸನು ಅಲ್ಲಿ ತಿಳಿಸಿದ್ದಾನೆ. ವೃದ್ಧಶಾತಾತಪದಲ್ಲೂ "ಸೂರ್ಯಮಂಡಲದೊಳಗೆ ಇರುವ ವಿಷ್ಣುವಲ್ಲಭನೂ, ನಾಶರಹಿತನೂ, ಊರ್ಧ್ವರೇತನೂ, ವಿರೂಪಾಕ್ಷನೂ, ಸರ್ವಕಾರಣನೂ, ಹೊಂಬಣ್ಣದ ಗಡ್ಡ ಮೀಸೆ ಉಗುರು ಉಳ್ಳವನೂ, ಜಗಜ್ಜನ್ಮಾದಿಕಾರಣನೂ ಆದ ಮಹಾದೇವನು ಎಲ್ಲರಿಗೂ ಧ್ಯೇಯನಾಗಿರುವನು. ಅವನ ನೇತ್ರಗಳು ಕಮಲದಂತೆ ಪ್ರಕಾಶಿಸುತ್ತಿರುವುವು. ಇಲ್ಲಿ ಕಪಿ ಎಂದರೆ ಕಿರಣಗಳಿಂದ ನೀರನ್ನು ಹೀರುವವನು ಸೂರ್ಯನೆಂದರ್ಥ. ಕಪ್ಯಾಸಂ-ಅಂದರೆ ಸೂರ್ಯನಿಂದ ವಿಕಾಸವಾಗುವ ಕಮಲವೆಂದರ್ಥ. ಪರಮೇಶ್ವರನು ಆದಿತ್ಯಮಂಡಲದಲ್ಲಿ ಕಮಲದಂತೆ ಪ್ರಕಾಶಿಸುವ ಎರಡು ಕಣ್ಣುಗಳಿಂದ ಶೋಭಿಸುತ್ತಿರುವನು. ಅವನ ಮೂರನೆಯ ಅಗ್ನಿನೇತ್ರವು ಜಗತ್ತಿನ ಹಿತದೃಷ್ಟಿಯಿಂದ ಕಮಲದ ಮೊಗ್ಗಿನಂತೆ ಮುಚ್ಚಿರುವುದು" ಹೀಗೆ ಹೇಳಿದೆ. ಇದರಿಂದ ಶಿವನೇ ಸೂರ್ಯಮಂಡಲದಲ್ಲಿ ನೆಲಸಿರುವನೆಂಬುದು ಸ್ಪಷ್ಟವಾಗಿದೆ. ನೀಲಕಂಠ, ಭಟ್ಟಭಾಸ್ಕರ, ಘಂಟಾನಾಥ, ಜ್ಯೋತಿರ್ನಾಥ ಮೊದಲಾದ ಪೂರ್ವಾಚಾರ್ಯರು "ಕಪ್ಯಾಸಂ ಪುಂಡರೀಕಮೇವಮಕ್ಷಿಣೀ" ಎಂಬ ವಾಕ್ಯಕ್ಕೆ "ಪರಮೇಶ್ವರನು ಲೋಕಾನುಗ್ರಹಕ್ಕಾಗಿ ಸೂರ್ಯಚಂದ್ರರೂಪವಾದ ಎರಡು ಕಣ್ಣುಗಳನ್ನು ಸ್ಪಷ್ಟವಾಗಿ ತೆರೆದು ಮೂರನೆಯ ಅಗ್ನಿನೇತ್ರವನ್ನು ಮುಚ್ಚಿರುವನು" ಎಂದು ಅರ್ಥಮಾಡಿದ್ದಾರೆ. ಕಂ-ನೀರನ್ನು, ಪಿ-ಕಿರಣಗಳಿಂದ ಹೀರುವವನು ಸೂರ್ಯನು. ಅವನಿಂದ ಆಸಂ-ವಿಕಸಿತವಾದದ್ದು ಕಮಲ. ಕಮಲ ಅರಳಿರುವಂತೆ ಶಿವನ ಎರಡು ಕಣ್ಣುಗಳು ಯಾವಾಗಲೂ ಪ್ರಕಾಶಿಸುತ್ತಿವೆ. ತೃತೀಯ ನೇತ್ರವು ಮೊಗ್ಗಿನಂತೆ ಮುಚ್ಚಿರುವುದರಿಂದ ಅದಕ್ಕೆ ವಿಕಸಿತಪುಂಡರೀಕದ ಸಾದೃಶ್ಯವಿಲ್ಲ. ಅಕ್ಷಿಣೀ ಎಂಬಲ್ಲಿ ದ್ವಿವಚನಕ್ಕೆ ಮೂರನೆ ಕಣ್ಣಿಲ್ಲವೆಂಬ ಅರ್ಥವಲ್ಲ. ಮೂರು ಮಕ್ಕಳಿರುವ ಬ್ರಾಹ್ಮಣನನ್ನು ಉದ್ದೇಶಿಸಿ "ಇವನ ಎರಡು ಮಕ್ಕಳು ಬೆಂಕಿಗೆ ಸದೃಶರು" ಎಂದು ಹೇಳಿದರೆ 'ಎರಡು' ಎಂಬ ಸಂಖ್ಯೆ "ಅವನಿಗೆ ಬೇರೆ ಮಕ್ಕಳಿಲ್ಲ" ಎಂಬುದನ್ನು ತಿಳಿಸುವುದಿಲ್ಲ; ಆದರೆ "ಅವನ ಮಕ್ಕಳಲ್ಲಿ ಇಬ್ಬರು ಮಾತ್ರವೇ ಪರಾಕ್ರಮದಲ್ಲಿ ಅಗ್ನಿಸದೃಶರು" ಎಂಬ ಅರ್ಥವನ್ನು ಆ ಪದವು ತಿಳಿಸುತ್ತದೆ. ಹೀಗೆಯೇ ಲೋಕದಲ್ಲಿ ಎಲ್ಲರ ಅನುಭವವೂ ಇದೆ. ಇದೂ ಅಲ್ಲದೆ, ಪರಶಿವನ ಅಸಾಧಾರಣವೆನಿಸಿದ ಹಿರಣ್ಮಯತ್ವವೇ ಮೊದಲಾದ ಧರ್ಮಗಳು ನಾರಾಯಣನಿಗೆ ಅನ್ವಯಿಸುವುದಿಲ್ಲ. 'ಸಂದೇಹ ಬಂದಾಗ ಬೇರೆ ವಾಕ್ಯಗಳಿಂದ ಸಮನ್ವಯಮಾಡಬೇಕು' ಎಂಬ ನ್ಯಾಯದಂತೆ ಸೂತ್ರದ ವಿಷಯದಲ್ಲಿ ಸಂಶಯ ಬಂದಾಗ ಬೇರೆ ಶ್ರುತಿಯ ಆಧಾರದಮೇಲೆ ತತ್ತ್ವವನ್ನು ನಿಶ್ಚಯಿಸಬೇಕು. ಮಹೋಪನಿಷತ್ತಿನಲ್ಲಿ ಈ ಬಗ್ಗೆ ಸ್ಪಷ್ಟವಾದ ಹೇಳಿಕೆ ಇದೆ. 'ಯಾವಲಆದಿತ್ಯನು ಇಲ್ಲಿ ಪ್ರಕಾಶಿಸುವನೋ' ಎಂದು ಸೂರ್ಯಮಂಡಲವನ್ನು ನಿರ್ದೇಶಿಸಿ 'ಈ ಮಂಡಲದಲ್ಲಿ ಯಾವನು ಶೋಭಿಸುತ್ತಾನೋ' ಎಂದು ಮಂಡಲದ ಅಭಿಮಾನಿ ಪ್ರಭಾಕರನನ್ನು

ಸೂಚಿಸಿ, 'ಇದರೊಳಗೆ ಹಿರಣ್ಮಯನಾದ ಪುರುಷನು' ಎಂಬುದರಿಂದ ತದಂತರ್ಯಾಮಿಯನ್ನು ನಿರ್ದೇಶಿಸಿ, 'ಆದಿತ್ಯನೇ ತೇಜಸ್ಸು-ಓಜಸ್ಸು, ಬಲ, ಯಶಸ್ಸು' ಎಂಬುದರಿಂದ ಪ್ರಭಾಕರನ ವೈಭವವನ್ನು ತಿಳಿಸಿ, 'ಯಾವ ಈ ಪುರುಷನುಂಟೋ ಅವನೇ ಸಕಲ ಜೀವರ ನಿಯಾಮಕನು' ಎಂಬುದರಿಂದ ಅಂತರ್ಯಾಮಿಯನ್ನು 'ಭೂತಪತಿ' ಎಂದು ಹೇಳಿ, ಮತ್ತೆ ಅವನು ಹೇಗಿದ್ದಾನೆ ಎಂಬ ಆಕಾಂಕ್ಷೆ ಬಂದರೆ 'ಹಿರಣ್ಯಬಾಹುವೂ, ಹಿರಣ್ಯವರ್ಣನೂ, ಹಿರಣ್ಯರೂಪನೂ, ಹಿರಣ್ಯಪತಿಯೂ, ಅಂಬಿಕಾಪತಿಯೂ ಉಮಾಪತಿಯೂ ಮತ್ತು ಪಶುಪತಿಯೂ ಆಗಿರುವನು' ಎಂದು ಅಲ್ಲಿ ಉಪಸಂಹಾರಮಾಡಲಾಗಿದೆ. ಶತರುದ್ರೀಯದಲ್ಲಿ 'ಹಿರಣ್ಯಬಾಹುವಿಗೆ ನಮಸ್ಕಾರ' ಎಂದು ಹೇಳಿದೆ. ಹೀಗೆ "ಶಿವನೇ ಹಿರಣ್ಮಯನೂ, ಉಮಾಪತಿಯೂ, ಪಶುಪತಿಯೂ ಆಗಿರುವನು" ಎಂದು ಶ್ರುತಿಯಲ್ಲಿ ಶಿವನ ಅಸಾಧಾರಣ ಧರ್ಮಗಳನ್ನು ತಿಳಿಸಲಾಗಿದೆ. ನಾರಾಯಣನು ಪುಂಡರೀಕಾಕ್ಷನೆಂಬ ಮಾತು ಬೇರೆ ಕಡೆಗಳಲ್ಲೂ ಅನ್ವಯಿಸುವುದರಿಂದ ಅದು ಸಾಧಾರಣಧರ್ಮವೆನಿಸಿದೆ. ಕಮಲಲೋಚನೆ, ಕಮಲಾಕ್ಷ ಎಂಬ ಪದಗಳು ಲೋಕದಲ್ಲಿ ಕಮಲದಂತೆ ಕಣ್ಣುಗಳಿರುವವರೆಲ್ಲರಿಗೂ ಅನ್ವಯಿಸುತ್ತವೆ. "ಸಾಮಾನ್ಯ ವಿಶೇಷ ಧರ್ಮಗಳಿಗೆ ಪರಸ್ಪರ ವಿರೋಧ ಬಂದರೆ ವಿಶೇಷ ಧರ್ಮವನ್ನನುಸರಿಸಿ ಅರ್ಥವನ್ನು ನಿರ್ಣಯಿಸಬೇಕು" ಎಂಬ ನ್ಯಾಯವೂ ಇದೆ. ಶ್ರುತಿಸ್ಮೃತಿಗಳಿಗೆ ವಿರುದ್ಧವಾದ ಸ್ಮೃತಿ ಪ್ರಮಾಣವಾಗದ್ದರಿಂದ ಸಾಂಖ್ಯಸ್ಮೃತಿಯು ಅವೈದಿಕವೆಂದು ಸ್ಮೃತ್ಯನವಕಾಶಾಧಿಕರಣದಲ್ಲಿ ವ್ಯಾಸನು ನಿರಾಕರಿಸಿದ್ದಾನೆ. ಆದ್ದರಿಂದ ಇಲ್ಲಿ ಉದ್ಗೀಥವಿದ್ಯೆಯಿಂದ ಉಪಾಸ್ಯನಾದ ಹಿರಣ್ಯಪುರುಷನೆಂದರೆ ಪರಶಿವನೆಂದೇ ಸಿದ್ಧವಾಗುತ್ತದೆ. "ಮೃತ್ಯುಂಜಯನನ್ನು ತೊರೆದು ಬೇರೆ ದೇವನನ್ನು ಯಾವನು ಉಪಾಸನಮಾಡುವನೋ ಅವನು ಮತ್ತೆ ಮೃತ್ಯುವಿಗಧೀನನಾಗುತ್ತಾನೆ. ಅನ್ನವಿಲ್ಲದವನು ಕದನ್ನವನ್ನು ಪಾಯಸವೆಂದು ಭಾವಿಸುತ್ತಾನೆ. ಶಿವನ ಪಾದವನ್ನು ಕಾಣಲಿಕ್ಕಾಗದವನು ವಿಷ್ಣುವಿನ ಸ್ಥಾನವನ್ನೇ ದೊಡ್ಡದೆಂದು ಭಾವಿಸುತ್ತಾನೆ" ಈ ಸ್ಮೃತಿಯಲ್ಲಿ ಶಿವನಲ್ಲದೆ ಬೇರೆ ದೇವತೆಯ ಉಪಾಸನೆ ತಿರಸ್ಕೃತವಾಗಿದೆ. ಆದ್ದರಿಂದ ಸೂರ್ಯಮಂಡಲ ಮತ್ತು ಕಣ್ಣು ಮೊದಲಾದ ಸ್ಥಾನಗಳಲ್ಲಿ ಸಾಕ್ಷಾತ್ ಶಿವನೇ ಮುಮುಕ್ಷುಗಳಿಗೆ ಧ್ಯೇಯನೆನಿಸಿರುವನು.

**"ಅಸಾವಾದಿತ್ಯೋ ಬ್ರಹ್ಮ" ಇತ್ಯಾದಿಶ್ರುತೌ ಪ್ರಭಾಕರಸ್ಯಾಪಿ ಬ್ರಹ್ಮತ್ವೋಪದೇಶಾತ್ ಆದಿತ್ಯಮಂಡಲಾಂತರ್ವರ್ತೀ ಹಿರಣ್ಮಯಃ ಪುರುಷೋ ಹ್ಯಾದಿತ್ಯ ಏವೇತ್ಯಾಶಂಕಾಯಾಮಾಹ—**

**ಭೇದವ್ಯಪದೇಶಾಚ್ಚಾನ್ಯಃ ॥ ೨೨ ॥**

**ಪ್ರಭಾಕರಚಕ್ಷುರಂತಶ್ಶ್ರೂಯಮಾಣಃ ಪುರುಷೋ ಹ್ಯಾದಿತ್ಯಶರೀರಾಭಿಮಾನಿಜೀವಾದನ್ಯ ಏವ. ಕಸ್ಮಾತ್? ಭೇದವ್ಯಪದೇಶಾತ್. ಅಂತರ್ಯಾಮಿಬ್ರಾಹ್ಮಣೇ ಆದಿತ್ಯಶರೀರಾಭಿಮಾನಿಜೀವಾದ್ಭೇದೇನ ವ್ಯಪದೇ**

ಶಾತ್, ಆದಿತ್ಯಹಿರಣ್ಯಗರ್ಭನಾರಾಯಣಾದಿಪಶುಪಾಶಬದ್ಧಜೀವಾನಾಂ ಸದಾ ಪರಬ್ರಹ್ಮತ್ವಂ ನೋಪಪದ್ಯತೇ. "ಯ ಆದಿತ್ಯೇ ತಿಷ್ಠನ್ನಾದಿತ್ಯಾದಂತರೋ ಯಮಾದಿತ್ಯೋ ನ ವೇದ ಯಸ್ಯಾದಿತ್ಯಶ್ಶರೀರಂ ಯ ಆದಿತ್ಯಮಂತರೋ ಯಮಯತ್ಯೇಷ ತ ಆತ್ಮಾಂತರ್ಯಾಮ್ಯಮೃತಃ" ಇತ್ಯಾದಿನಾ ಸರ್ವಾಂತರ್ಯಾಮಿತ್ವೇನ ಪರಶಿವ ಏವ ವ್ಯಪದಿಶ್ಯತೇ. "ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತಿ," 'ಯೋಽಪ್ಸು ತಿಷ್ಠನ್' ಇತ್ಯಾದಿನಾ ಪೃಥಿವ್ಯಾದ್ಯಷ್ಟಮೂರ್ತ್ಯಂತರ್ಯಾಮಿತ್ವಮಷ್ಟಮೂರ್ತ್ಯಾತ್ಮಕತ್ವಂ ನೇತರೇಷಾಂ, ಅಸಂಭವಾತ್. ಕಿಂಚ–'ಅಹಮೇಕಃ ಪ್ರಥಮಮಾಸಂ' 'ಅಂತರಂ ಪ್ರಾವಿಶತ್ ಸೋಽಹಂ ನಿತ್ಯಾನಿತ್ಯೋಽಹಂ ವ್ಯಕ್ತಾವ್ಯಕ್ತೋ ಬ್ರಹ್ಮಾಬ್ರಹ್ಮಾಹಂ ಪ್ರಾಂಚಃ ಪ್ರತ್ಯಂಚೋಽಹಂ" ಇತ್ಯಾದಿನಾ ಆಥರ್ವಣಶ್ರುತೌ ರುದ್ರಸ್ಯ ಪರಬ್ರಹ್ಮಣಃ ಬ್ರಹ್ಮವಿಷ್ಣುಕಾಲರುದ್ರಾದಿಸರ್ವಾತ್ಮಕತ್ವಸ್ಯ ಸರ್ವಾಂತರ್ಯಾಮಿತ್ವಸ್ಯ ಚ ವ್ಯವಸ್ಥಾಪನಾತ್, "ಯೋ ರುದ್ರೋ ಅಗ್ನೌ ಯೋಽಪ್ಸು ಯ ಓಷಧೀಷು ಯೋ ರುದ್ರೋ ವಿಶ್ವಾ ಭುವನಾಽಽವಿವೇಶ ತಸ್ಮೈ ರುದ್ರಾಯ ನಮೋಽಸ್ತು" ಇತ್ಯಾದೌ ಚ ತಥಾ ವ್ಯಪದೇಶಾತ್, ಪರಮಶಿವಾಸಾಧಾರಣಾಮೃತತ್ವಾದಿಲಿಂಗಾನಾಂ ಅನಿತರಸಾಧಾರಣತ್ವಾತ್ ಶತರುದ್ರೀಯಪ್ರಶಂಸಾಪರಜಾಬಾಲೋಪನಿಷದಿ "ಏತಾನಿ ವಾ ಅಮೃತಸ್ಯ ನಾಮಧೇಯಾನಿ" ಇತ್ಯಮೃತಪದಸ್ಯ ಶಿವಪರತ್ವೇನ ನಿರ್ದೇಶಾಚ್ಚ ಅಕ್ಷ್ಯಾದಿತ್ಯಾಂತಃಪುರುಷಃ ಪರಮಶಿವ ಏವೇತಿ ಸಿದ್ಧಂ. 'ಅಸಾವಾದಿತ್ಯೋ ಬ್ರಹ್ಮ' ಇತ್ಯಾದಿಶ್ರುತೀನಾಂ 'ಅನ್ನಂ ಬ್ರಹ್ಮ' ಇತ್ಯಾದಿವದೌಪಚಾರಿಕತ್ವಂ. ಲೋಕೇ ಶರೀರವಾಚಕಪದಾನಾಂ ಶರೀರಿಬೋಧಕತ್ವಾನ್ನ ದೋಷಃ. "ನ ತತ್ರ ಸೂರ್ಯೋ ಭಾತಿ ....... ತಸ್ಯ ಭಾಸಾ ಸರ್ವಮಿದಂ ವಿಭಾತಿ" ಇತ್ಯಾದಿಶ್ರುತಿಷು ಸೂರ್ಯಾದೀನಾಂ ಪರಮೇಶ್ವರಪ್ರಕಾಶೇನ ಪ್ರಕಾಶ್ಯತ್ವಂ ಸ್ಪಷ್ಟಮುಕ್ತಂ. "ಭೀಷಾಸ್ಮಾದ್ವಾತಃ ಪವತೇ" ಇತ್ಯಾದೌ ಪವನಸೂರ್ಯಾಗ್ನೀಂದ್ರಮೃತ್ಯುಪ್ರಭೃತೀನಾಂ ಪರಮೇಶ್ವರಾಜ್ಞಾಭಯಾತ್ ಸ್ವಸ್ವವ್ಯಾಪಾರಪ್ರವೃತ್ತಿದರ್ಶನಾತ್ ಸೂರ್ಯಾದೀನಾಂ ಜೀವಾನಾಂ ಸ್ವತೋ ಬ್ರಹ್ಮತ್ವಂ ನೋಪಪದ್ಯತೇ. ನನು ಸುಬಾಲೋಪನಿಷದಿ 'ಯಸ್ಯಾತ್ಮಾ ಶರೀರಂ' ಇತ್ಯಾರಭ್ಯ 'ಏಷ ಸರ್ವಭೂತಾಂತರಾತ್ಮಾ–ದೇವ ಏಕೋ ನಾರಾಯಣಃ' ಇತ್ಯಾದಿನಾ ನಾರಾಯಣಸ್ಯ ಸರ್ವಾತ್ಮಕತ್ವಾವಗಮಾತ್ ರುದ್ರೇಶ್ವರಮಹೇಶ್ವರಪರಮೇಶ್ವರಶಿವಾದಿಶಬ್ದಾನಾಂ ನಾರಾಯಣಪರತ್ವೇನೈವ ಸಮಂಜಸತ್ವಾತ್ ನಾರಾಯಣೋಪನಿಷದಿ

ತಸ್ಯೈವ ಪರಮಕಾರಣತ್ವವ್ಯಪದೇಶಾಚ್ಚ ನೇತರಸ್ಯ ಪರಬ್ರಹ್ಮತ್ವಂ. "ಯಜ್ಞದತ್ತ ಉತ್ಪನ್ನಃ, ಘಟೋ ನಷ್ಟಃ" ಇತ್ಯಾದಿವದತಿಪ್ರಸಂಗ ಇತಿ ಚೇನ್ನ, ಪ್ರಕರಣಾದಿವಶೇನಾನ್ಯಾರ್ಥಕತ್ವಾತ್. ಶರೀರವಾಚಕನಾಂ ಶರೀರಿವಾಚಕತ್ವವ್ಯಾಪ್ತೌ ಶರೀರಪದೇ ವ್ಯಭಿಚಾರ ಇತಿ ಚೇತ್—ನಿಷ್ಕರ್ಷಕೇತರಪದತ್ವೇನ ವಿಶೇಷಣಾತ್. ಕಿಂಚ ಅಯುತಸಿದ್ಧಪ್ರಕಾರವಾಚಕಾನಾಂ "ಶುಕ್ಲಃಪಟಃ ನೀಲಮುತ್ಪಲಂ" ಇತ್ಯಾದೀನಾಂ ಪದಾನಾಂ ಪ್ರಕರಣೇ ಮುಖ್ಯತ್ವಾವಗಮಾತ್ ಜಗತ್ಪ್ರಕಾಶಕಂ ಬ್ರಹ್ಮ ಸರ್ವಪದವಾಚ್ಯಂ, ಇತಿ ಚೇತನಾಚೇತನಸರ್ವಜಗದುಪಾದಾನಸ್ಯ ಬ್ರಹ್ಮಣಃ ಸರ್ವಪದವಾಚ್ಯತ್ವಂ ಘಟಾದ್ಯುಪಾದಾನಪೃಥಿವ್ಯಾದಿವಾಚಕತ್ವವದಿತಿ ಚೇದತ್ರ ಬ್ರೂಮಃ--

'ಈ ಆದಿತ್ಯನೇ ಬ್ರಹ್ಮ' ಎಂಬ ಶ್ರುತಿಯಲ್ಲಿ ಆದಿತ್ಯನಿಗೂ ಬ್ರಹ್ಮವೆಂದು ಹೇಳಿರುವುದರಿಂದ ಆದಿತ್ಯಮಂಡಲದೊಳಗಿರುವ ಪುರುಷನೂ ಆದಿತ್ಯನೇ ಎಂಬ ಶಂಕೆ ಬಂದರೆ ಅದನ್ನು ಪರಿಹರಿಸುತ್ತಾನೆ—**ಭೇದವ್ಯಪದೇಶಾಚ್ಚಾನ್ಯಃ ||೨೨||**

ಆದಿತ್ಯ ಮತ್ತು ಕಣ್ಣು ಇವುಗಳೊಳಗೆ ಇರುವ ಪುರುಷನು ಆದಿತ್ಯಶರೀರದಲ್ಲಿ ಅಭಿಮಾನಿಸಿಕೊಂಡಿರುವ ಜೀವನಿಗಿಂತಲೂ ಬೇರೆಯಾಗಿದ್ದಾನೆ. ಯಾಕೆಂದರೆ ಇವರಿಬ್ಬರನ್ನೂ ಬೇರೆ ಬೇರೆ ಎಂದು ಅಂತರ್ಯಾಮಿಬ್ರಾಹ್ಮಣದಲ್ಲಿ ತಿಳಿಸಲಾಗಿದೆ. ಆದ್ದರಿಂದ ಆದಿತ್ಯ, ಹಿರಣ್ಯಗರ್ಭ, ನಾರಾಯಣ ಮೊದಲಾದ ಪಾಶಬದ್ಧಜೀವರನ್ನು ಪರಬ್ರಹ್ಮವೆಂದು ಕರೆಯುವುದು ಯುಕ್ತವಾಗುವುದಿಲ್ಲ. "ಯಾವನು ಆದಿತ್ಯನೊಳಗೆ ಇದ್ದುಕೊಂಡೇ ಆದಿತ್ಯನಿಂದ ಹೊರಗೂ ಇರುವನೋ, ಯಾವನನ್ನು ಆದಿತ್ಯನು ಅರಿಯನೋ, ಯಾವನಿಗೆ ಆದಿತ್ಯನೇ ಶರೀರವೋ, ಯಾವನು ಆದಿತ್ಯನನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿರುವನೋ ಅವನೇ ನಿನ್ನ ಆತ್ಮನು, ಅವನೇ ಅಂತರ್ಯಾಮಿಯೂ, ಅಮೃತನೂ ಆಗಿರುವನು" ಇಲ್ಲಿ ಪರಶಿವನನ್ನು ಆದಿತ್ಯನ ಅಂತರ್ಯಾಮಿಯೆಂದು ಹೇಳಲಾಗಿದೆ. ಪರಶಿವನು ಹೀಗೆಯೇ ಭೂಮಿ ನೀರು ಮೊದಲಾದವುಗಳೊಳಗೂ ಇದ್ದು ಹೊರಗೂ ಇರುವನೆಂದು ಅಲ್ಲಿ ಹೇಳಲಾಗಿದೆ. ಹೀಗೆ ಪೃಥಿವ್ಯಾದ್ಯಷ್ಟಮೂರ್ತಿಗಳಲ್ಲಿ ಅಂತರ್ಯಾಮಿಯಾಗಿದ್ದು ಅಷ್ಟಮೂರ್ತಿಸ್ವರೂಪನೂ ಆಗಿರುವುದು ಶಿವನಲ್ಲದೆ ಬೇರೆಯವರಿಗೆ ಅನ್ವಯಿಸುವುದಿಲ್ಲ. ಇದೂ ಅಲ್ಲದೆ, "ನಾನೊಬ್ಬನೇ ಮೊದಲೂ ಇದ್ದೆನು, ಈಗಲೂ ಇದ್ದೇನೆ, ಮುಂದೆಯೂ ಇರುವೆನು, ನನಗಿಂತ ಬೇರೆ ಯಾರೂ ಇಲ್ಲ" ಅವನು ಒಳಗಿಂದ ಒಳಗೇ ಪ್ರವೇಶಿಸಿದನು. ದಿಕ್ಕುಗಳೊಳಗೂ ಪ್ರವೇಶಿಸಿದನು. ನಾನೇ ನಿತ್ಯನೂ ಅನಿತ್ಯನೂ, ವ್ಯಕ್ತನೂ ಅವ್ಯಕ್ತನೂ, ಬ್ರಹ್ಮವೂ ಪ್ರಕೃತಿಯೂ, ಪೂರ್ವವೂ ಪಶ್ಚಿಮವೂ ಆಗಿರುವೆನು." ಹೀಗೆ ಅಥರ್ವಣಶ್ರುತಿಯಲ್ಲಿ ಪರಬ್ರಹ್ಮವೆನಿಸಿದ ರುದ್ರನನ್ನು ಬ್ರಹ್ಮ ವಿಷ್ಣು ಕಾಲರುದ್ರ ಮೊದಲಾದವರೆಲ್ಲರೊಳಗೂ ಇದ್ದು ಎಲ್ಲರನ್ನೂ ನಿಯಮಿಸುವನೆಂದು ತಿಳಿಸಲಾಗಿದೆ.

"ನೀರಿನಲ್ಲಿ ಯಾವ ರುದ್ರನೋ ಅವನೇ ಬೆಂಕಿಯಲ್ಲೂ ಓಷಧಿಗಳಲ್ಲೂ ಇರುವನು. ಅವನೇ ಸಮಸ್ತ ಪ್ರಪಂಚವನ್ನೂ ವ್ಯಾಪಿಸಿರುವನು. ಅಂತಹ ರುದ್ರನಿಗೆ ನಮಸ್ಕಾರ" ಎಂದು ರುದ್ರಾಧ್ಯಾಯದಲ್ಲಿ ತಿಳಿಸಲಾಗಿದೆ. ಹೀಗೆ ಪರಶಿವನ ಅಸಾಧಾರಣವಾದ ಅಮೃತತ್ವವೇ ಮೊದಲಾದ ಧರ್ಮಗಳು ಶ್ರುತಿಯಲ್ಲಿ ನಿರ್ದಿಷ್ಟವಾಗಿವೆ. "ಇವು ಅಮೃತದ ನಾಮಧೇಯಗಳು' ಎಂದು ಜಾಬಾಲೋಪನಿಷತ್ತಿನಲ್ಲಿ ಅಮೃತಪದವನ್ನು ಶಿವಪರವಾಗಿ ತಿಳಿಸಲಾಗಿದೆ. ಆದ್ದರಿಂದ ಅಕ್ಷಿ ಮತ್ತು ಆದಿತ್ಯರೊಳಗೆ ಇರುವ ಪುರುಷನು ಪರಶಿವನೆಂದು ಸಿದ್ಧವಾಯಿತು. 'ಈ ಆದಿತ್ಯನೇ ಬ್ರಹ್ಮ' ಎಂಬ ಶ್ರುತಿ ವಾಕ್ಯಗಳು 'ಅನ್ನವೇ ಬ್ರಹ್ಮ' ಎಂಬಂತೆ ಉಪಚಾರಕ್ಕಾಗಿ ಬಂದಿವೆ. ಲೋಕದಲ್ಲಿ ಶರೀರವಾಚಕಪದಗಳು ಶರೀರಿಯನ್ನೂ ಬೋಧಿಸುತ್ತವೆ. ಇದರಲ್ಲಿ ಯಾವ ದೋಷವೂ ಇಲ್ಲ. "ಅಲ್ಲಿ ಸೂರ್ಯನೂ ಶೋಭಿಸುವುದಿಲ್ಲ; ಚಂದ್ರತಾರೆಗಳೂ ಇಲ್ಲ; ಮಿಂಚೂ ಹೊಳೆಯುವುದಿಲ್ಲ. ಇನ್ನು ಅಗ್ನಿ ಎಲ್ಲಿಂದ ಬಂದಾನು? ಹೀಗೆ ಪ್ರಕಾಶಿಸುತ್ತಿರುವ ಅವನನ್ನು ಹಿಂಬಾಲಿಸಿಕೊಂಡು ಎಲ್ಲವೂ ಶೋಭಿಸುತ್ತಿವೆ. ಅವನ ಕಾಂತಿಯಿಂದಲೇ ಎಲ್ಲವೂ ಹೊಳೆಯುತ್ತಿವೆ." ಈ ಶ್ರುತಿಯಲ್ಲಿ ಸೂರ್ಯಾದಿಗಳು ಪರಮೇಶ್ವರನ ಪ್ರಕಾಶವನ್ನು ಅವಲಂಬಿಸಿಕೊಂಡಿವೆ ಎಂಬುದು ಸ್ಪಷ್ಟವಾಗಿದೆ. 'ಯಾವನ ಭಯದಿಂದ ಗಾಳಿ ಬೀಸುತ್ತದೆಯೋ' ಇಲ್ಲಿ ಗಾಳಿ ಬೆಂಕಿ ಸೂರ್ಯ ಇಂದ್ರ ಇವರೆಲ್ಲರೂ ಪರಮೇಶ್ವರನ ಆಜ್ಞೆಯಂತೆ ತಮ್ಮ ವ್ಯವಹಾರಗಳನ್ನು ನಡೆಸುತ್ತಿರುವರೆಂದು ತಿಳಿದುಬರುತ್ತದೆ. ಹೀಗೆ ಸೂರ್ಯಾದಿಗಳು ಜೀವರಾದ್ದರಿಂದ ಸ್ವತಃ ಬ್ರಹ್ಮವಾಗಲಾರರು. ಸುಬಾಲೋಪನಿಷತ್ತಿನಲ್ಲಿ "ಯಾವನಿಗೆ ಆತ್ಮ, ನೀರು, ಅವ್ಯಕ್ತ ಇವೇ ಶರೀರವಾಗಿವೆಯೋ ಆ ದೇವನಾದ ನಾರಾಯಣನೊಬ್ಬನೇ ಎಲ್ಲಾ ಪ್ರಾಣಿಗಳಲ್ಲೂ ಅಂತರಾತ್ಮನಾಗಿ ಪಾಪಲೇಪವಿಲ್ಲದೆ ನೆಲಸಿರುವನು" ಎಂದು ಹೇಳಿರುವುದರಿಂದ ನಾರಾಯಣನೇ ಸರ್ವಾತ್ಮಕನೆಂದು ತಿಳಿದುಬರುತ್ತದೆ. ರುದ್ರ, ಈಶ್ವರ, ಮಹೇಶ್ವರ, ಪರಮೇಶ್ವರ, ಶಿವ ಎಂಬ ಪದಗಳೂ ಸಹ ಅವನಿಗೇ ಅನ್ವಯಿಸುವುದು ಸಮಂಜಸವಾಗಿದೆ. ನಾರಾಯಣೋಪನಿಷತ್ತಿನಲ್ಲಿ ಅವನೇ ಪರಮಕಾರಣನೆಂದು ವ್ಯವಸ್ಥೆಯಾಗಿರುವುದರಿಂದ ಬೇರೆಯವರು ಪರಬ್ರಹ್ಮವಾಗಲಾರರು. ಶಿವನೇ ಪರಬ್ರಹ್ಮವೆಂದು ಸಿದ್ಧವಾಗಿರುವಾಗ ಹೀಗೆ ಹೇಳಿದರೆ, 'ಯಜ್ಞದತ್ತ ಹುಟ್ಟಿದನು–ಘಟ ನಷ್ಟವಾಯಿತು' ಎಂಬಂತೆ ಅತಿ ಪ್ರಸಂಗ ಬರುವುದಿಲ್ಲವೇ ಅಂದರೆ ಹಾಗಲ್ಲ. ಶಿವನೇ ಪರಬ್ರಹ್ಮವೆಂಬುದಕ್ಕೆ ಪ್ರಕರಣಾನುಗುಣವಾಗಿ ಬೇರೆ ತಾತ್ಪರ್ಯವನ್ನು ಹೇಳಬೇಕಾಗುತ್ತದೆ. ಶರೀರವನ್ನು ಬೋಧಿಸುವ ಪದವು ಶರೀರಿಯಾದ ಆತ್ಮನನ್ನೂ ಬೋಧಿಸಬಲ್ಲದು ಎಂದು ಹೇಳಿದರೆ ಶರೀರಪದವು ವಾಸ್ತವವಾಗಿ ಆತ್ಮನನ್ನು ಬೋಧಿಸದಿರುವುದರಿಂದ ಅದರಲ್ಲಿ ವ್ಯಭಿಚಾರ ಬರುವುದು. ಆದರೆ ಈ ನಿಯಮವು ನಿಷ್ಕರ್ಷಕವಲ್ಲದ ಪದಗಳಿಗೆ ಮಾತ್ರ ಅನ್ವಯಿಸುತ್ತದೆ. ಶರೀರಪದವು ಶರೀರ ಒಂದನ್ನೇ ಬೋಧಿಸುವುದರಿಂದ ಅದು ನಿಷ್ಕರ್ಷಕಪದವಾಗಿದೆ. ಆದ್ದರಿಂದ ಅದು

ಆತ್ಮನನ್ನು ಬೋಧಿಸುವಂತಿಲ್ಲ. ಅದೂ ಅಲ್ಲದೆ, ವಿಶೇಷ್ಯವನ್ನು ಬಿಟ್ಟಿರಲಾರದಂತಹ ವಿಶೇಷಣವನ್ನು ತಿಳಿಸುವ 'ಶುಕ್ಲಃ ಪಟಃ' 'ನೀಲಂ ಉತ್ಪಲಂ' ಎಂಬ ಪದಗಳಿಗೆ ಆಯಾಪ್ರಕರಣಗಳಲ್ಲಿ ಅವನ್ನು ಮುಖ್ಯಪ್ರಯೋಗವೆಂದು ಎಲ್ಲರೂ ಒಪ್ಪಿರುವುದರಿಂದ ಜಗತ್ತು ಎಂಬ ವಿಶೇಷಣವನ್ನು ಹೊಂದಿರುವ ಬ್ರಹ್ಮವು ಜಗತ್ತನ್ನು ತಿಳಿಸುವ ಎಲ್ಲಾ ಪದಗಳಿಂದಲೂ ಬೋಧಿತವಾಗುತ್ತದೆ. ಆದ್ದರಿಂದ ಪೃಥಿವ್ಯಾದಿ ಪದಗಳು ಘಟಕ್ಕೆ ಉಪಾದಾನವಾದ ವಸ್ತುವನ್ನು ತಿಳಿಸುವಂತೆ ಚಿದಚಿತ್ಪ್ರಪಂಚವೆಲ್ಲಕ್ಕೂ ಉಪಾದಾನ ವಾದ ಬ್ರಹ್ಮವು ಸರ್ವಶಬ್ದವಾಚ್ಯವಾಗುವುದು ಉಚಿತವಾಗಿದೆ. ಹೀಗೆ ಅಪೇಕ್ಷೆ ಬರುತ್ತದೆ. ಅದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗುವುದು.

"ಯೋ ಯಚ್ಛರೀರವಾಚಕತ್ವೇನ ಸಂಕೇತಿತಃ ಸಃ ಶರೀರಿ ವಾಚಕಃ" ಇತಿ ವಿಶೇಷವ್ಯಾಪ್ತಿರ್ವಿವಕ್ಷಿತಾ? ಉತ ಸಾಮಾನ್ಯ ವ್ಯಾಪ್ತಿರ್ವಾ? ನಾದ್ಯಃ, ಶರೀರಪದೇ ವ್ಯಭಿಚಾರಾತ್. ನ ಚ ನಿಷ್ಕರ್ಷ ಕೇತರಪದತ್ವೇ ಸತೀತಿ ವಿಶೇಷಣಂ ದೇಯಂ, ನಿಷ್ಕರ್ಷಕೇತರತ್ವಸ್ಯ ವಕ್ತುಮಶಕ್ಯತ್ವಾತ್. ತತ್ಕಿಂ ವಿಶೇಷವಾಚಕಭಿನ್ನತ್ವಂ ವಾ? ಶರೀರ ವಾಚಕಭಿನ್ನತ್ವಂ ವಾ? ವಿಶೇಷಣಮಾತ್ರವಾಚಕತ್ವಂ ವಾ? ನಾದ್ಯಃ, ಶರೀರಪದಸ್ಯಾಪಿ ಶರೀರತ್ವವಿಶಿಷ್ಟಶರೀರವಾಚಕತ್ವಾತ್. ನ ದ್ವಿತೀಯಃ, ಅಪ್ರಸಿದ್ಧೇಃ. ಶರೀರಶಬ್ದಸ್ಯಾಪಿ ತವ ಮತೇ ಸರ್ವಶಬ್ದವಾಚ್ಯೇಶ್ವರ ವಾಚಕತ್ವಾತ್. ಅತ ಏವ ನ ತೃತೀಯಃ, ಶರೀರಪದಸ್ಯಾಪಿ ಶರೀರತ್ವ ವಿಶಿಷ್ಟಶರೀರವಾಚಕತ್ವೇನ ವಿಶೇಷಣಮಾತ್ರವಾಚಕತ್ವಾಸಂಭವೇನ ವ್ಯಭಿಚಾರತಾದವಸ್ಥ್ಯಾತ್. ನಾಪಿ ಸಾಮಾನ್ಯವ್ಯಾಪ್ತಿಃ. ಅವಯವಸಂಧಿ ಬೋಧಕಾಃ ಶರೀರ ವಾಚಕಾಃ" ಇತಿ ವ್ಯಾಪ್ತೌ ಅಂತ್ಯಾವಯವಿ ಚೇಷ್ಟಾ ಭೋಗೇಂದ್ರಿಯಾಶ್ರಯಃ" ಇತಿ ನ್ಯಾಯಶಾಸ್ತ್ರೋಕ್ತಶರೀರಲಕ್ಷಣಾನು ಸಾರೇಣ ಘಟಾದಾವಪ್ರವೃತ್ತೇರೀಶ್ವರಶರೀರತ್ವಾಸಿದ್ಧಿಃ. ನಚ ನಿಯಮ್ಯ ತ್ವಮೇವ ಶರೀರತ್ವಂ ವಕ್ತವ್ಯಂ. ಸ್ವಾಮಿನಿಯಮ್ಯಭೃತ್ಯವಾಚಕಭೃತ್ಯಾದಿ ಪದೇ ಸ್ವಾಮಿವಾಚಕತ್ವಾಭಾವೇನ ವ್ಯಭಿಚಾರಾತ್. ನಚಾಂತಃಪ್ರವಿಶ್ಯ ನಿಯಮ್ಯತ್ವಂ ಶರೀರತ್ವಂ, ಅಂತಃಪ್ರವಿಷ್ಟೇನ ಶಿಲ್ಪಿನಾ ನಿಯಮ್ಯೇ ದಾರು ಪ್ರತಿಮಾದೌ ವ್ಯಭಿಚಾರಾತ್. ನಚಾಪೃಥಕ್ಸಿದ್ಧತ್ವಂ ನಿಯಾಮಕವಿಶೇ ಷಣಂ, ಅಂತಃಪದವೈಯರ್ಥ್ಯಾತ್. ನಚ ತಾವದೇವಾಸ್ತು ಸಾಧಕಮಿತಿ ವಾಚ್ಯಂ, ಅಪೃಥಕ್ಸಿದ್ಧದೇವದತ್ತನಿಯಮ್ಯಹಸ್ತಾದಿವಾಚಕೇಷು ಹಸ್ತಾ ದಿಪದೇಷು ವ್ಯಭಿಚಾರಾತ್. ನಚಾಪೃಥಕ್ಸಿದ್ಧಪ್ರಕಾರತ್ವಂ ರೂಪಾದಿಪದೇ ಘಟಾದಿವಾಚಕತ್ವಾಭಾವೇನ ವ್ಯಭಿಚಾರಾತ್. ಏತೇನ 'ಅಪೃಥಕ್ಸಿದ್ಧ ಪ್ರಕಾರವಾಚಕಾನಾಂ ಪ್ರಕಾರಿವಾಚಕತ್ವಂ' ಇತಿ ವ್ಯಾಪ್ತಿಃ ಪ್ರತ್ಯುಕ್ತಾ. ಪ್ರಕಾರತ್ವಸ್ಯ ನಿರ್ವಕ್ತುಮಶಕ್ಯತ್ವಾತ್, ಘಟಾದಿಧರ್ಮವಾಚಕೇಷು

ವ್ಯಭಿಚಾರಾತ್, ಅನಿಷ್ಕರ್ಷಪದತ್ವಸ್ಯಾತ್ರಾಪಿ ವಿಶೇಷಣತ್ವೇ ಪೂರ್ವೋಕ್ತ ದೋಷಾಪತ್ತೇಶ್ಚ. ನನು ಘಟಾದಿಪದಾನಾಂ ಪಕ್ಷತ್ವಾತ್ ದೇವಮನುಷ್ಯಾದಿಪದಾನಾಂ ದೃಷ್ಟಾಂತತ್ವಾತ್ ಶರೀರವಾಚಕತ್ವಸಾಧ್ಯಕಾಯಾಂ ಸಾಮಾನ್ಯವ್ಯಾಪ್ತೌ ಕಥಂ ವ್ಯಭಿಚಾರಃ? ಶರೀರಾದಿಪದಾನಾಮಪಿ ಈಶ್ವರವಾಚಕತ್ವೇನ ಪಕ್ಷತುಲ್ಯತ್ವಾತ್, ಇತಿ ಚೇನ್ಮೈವಂ—ವ್ಯಾಪ್ತಿಗ್ರಹಣಂ ಪ್ರತ್ಯೇವ ವ್ಯಭಿಚಾರಾಜ್ಞಾನಸ್ಯ ಪ್ರತಿಬಂಧಕತ್ವಾತ್, ಅನ್ಯಥಾ ಕಾರ್ಯತ್ವೇನ ಶರೀರಜನ್ಯತ್ವೇ ಸಾಧ್ಯೇ ಘಟಾದೌ ವ್ಯಾಪ್ತಿಗ್ರಹೇ ಸತಿ ಅಂಕುರಾದಾವಪಿ ಶರೀರಜನ್ಯತ್ವಸಿದ್ಧಿಸ್ಸ್ಯಾತ್? ಅಂಕುರಾದಿವ್ಯಭಿಚಾರಸ್ಥಲಸ್ಯಪಕ್ಷತುಲ್ಯತ್ವೇನ ಅತೀಂದ್ರಿಯಶರೀರಸ್ಯ ಕಲ್ಪಯಿತುಂ ಶಕ್ಯತ್ವಾತ್. ವ್ಯಭಿಚಾರಹೇತುತ್ವಾಭಾಸಮಾತ್ರೋಚ್ಛೇದಾಪತ್ತೇಃ. ವ್ಯಾಪ್ತೌ ವ್ಯಾಪ್ಯಭಾಗೇ ಶರೀರಪದವೈಯರ್ಥ್ಯಾತ್ ವ್ಯಾಪ್ಯತ್ವಾಸಿದ್ಧಿಃ. ಸರ್ವಪದಾನಾಂ ಭಗವದ್ವಾಚಕತ್ವೇನ ವ್ಯಭಿಚಾರಸ್ಥಲಾಭಾವಾತ್. ಏತೇನ ತದ್ವಾರಣಾಯ ಶರೀರಪದಸ್ಯಾಪ್ರಯೋಜಕತ್ವಂ ಚ ಸ್ಯಾತ್. ಪೃಥಿವ್ಯಾದಿಪದಾನಾಂ ಶರೀರವಾಚಕತ್ವೇಽಪಿ ಶರೀರಿಪರ್ಯಂತತ್ವೇ ವಿಪಕ್ಷಬಾಧಕತ್ವಾಭಾವಾತ್. ನಚ ಬ್ರಹ್ಮಣಿ ಮುಖ್ಯತ್ವಾನುಪಪತ್ತಿರ್ವಿಪಕ್ಷಬಾಧಿತಾ, ನಾನಾರ್ಥಗವಾದಿಪದಾನಾಮಿವ ಸ್ವತಂತ್ರಶಕ್ತ್ಯಂತರಕಲ್ಪನೇಽಪಿ ಮುಖ್ಯತ್ವೋಪಪತ್ತೌ ವಿಶಿಷ್ಟಶಕ್ತ್ಯಸಿದ್ಧಿಃ. ನ ಚೇಷ್ಟಾಪತ್ತಿಃ, ಅಪಸಿದ್ಧಾಂತಾತ್. ಕಿಂಚ ಪದಾರ್ಥಮಾತ್ರಶಕ್ತಿವಾದಿನಾ ತ್ವಯಾ ಯಥಾ ವ್ಯವಹಾರಕಾಲೇ ಭಾವೇನ ಗೃಹೀತಾಪಿ ಕಾರ್ಯಾನ್ವಿತೇ ಶಕ್ತಿಃ ಅನ್ಯಲಭ್ಯತ್ವಪ್ರತಿಸಂಧಾನೇ ಸತಿ ಪರಿತ್ಯಕ್ತಾ. ಯಥಾ ತ್ವಯಾ ಗೃಹೀತಾಪಿ ಸರ್ವಪದಾನಾಂ ಶರೀರವಿಶಿಷ್ಟಾತ್ಮಶಕ್ತಿಃ ಗೌರವಾನ್ಯಲಭ್ಯತ್ವಾಭ್ಯಾಂ ಪರಿತ್ಯಾಜ್ಯಾ, ಅನ್ಯಥಾ ಕಾರ್ಯಾನ್ವಿತೇ ಶಕ್ತಿರಪಿ ನ ತ್ಯಾಜ್ಯಾ ಸ್ಯಾತ್. ಕಿಂಚ—ಯಥಾ ಶರೀರವಾಚಕಾನಾಂ ಶರೀರಿಪರ್ಯಂತತ್ವಂ ಕಲ್ಪಿತಂ, ಏವಂ ಶರೀರಿವಾಚಕಾನಾಮಪಿ ಶರೀರವಾಚಕತ್ವಂ ಕುತೋ ನ ಕಲ್ಪ್ಯತೇ? ದೇವಮನುಷ್ಯಾದಿಪದೇಷು ತಥಾತ್ವದರ್ಶನಾತ್. ಅಭೇದವಾಕ್ಯೇಷು ಮುಖ್ಯಸಾಮಾನ್ಯಾಧಿಕರಣ್ಯೋಪಪಾದನರೂಪಫಲಸ್ಯ ತುಲ್ಯತ್ವಾತ್.

ಶರೀರಲಕ್ಷಣಕ್ಕೆ ಯಾವ ವ್ಯಾಪ್ತಿಯಿದೆ. ಸಾಮಾನ್ಯವ್ಯಾಪ್ತಿಯೋ? ವಿಶೇಷವ್ಯಾಪ್ತಿಯೋ? "ಯಾವ ಪದವು ಯಾವ ಆತ್ಮನ ಶರೀರವನ್ನು ತಿಳಿಸುತ್ತದೆಯೋ ಅದು ಆ ಆತ್ಮನನ್ನೂ ತಿಳಿಸಬಲ್ಲದು" ಎಂಬ ವಿಶೇಷವ್ಯಾಪ್ತಿ ಹೊಂದುತ್ತದೆಯೋ ಅಥವಾ ಸಾಮಾನ್ಯವ್ಯಾಪ್ತಿ ಹೊಂದುತ್ತದೆಯೋ? ಮೊದಲನೆಯ ಪಕ್ಷದಲ್ಲಿ ಶರೀರಪದವೇ ಶರೀರಿಯನ್ನು ಬೋಧಿಸುವುದಿಲ್ಲವಾದ್ದರಿಂದ ಆ ಪದದಲ್ಲಿ ವ್ಯಭಿಚಾರ ಬರುತ್ತದೆ. ನಿಷ್ಕರ್ಷಕವಲ್ಲದ ಪದಕ್ಕೆ ಮಾತ್ರವೇ ಈ ನಿಯಮ ಅನ್ವಯಿಸುವುದೆಂದರೆ ಅಂತಹ

ಪದವು ಯಾವುದೆಂದು ಹೇಳುವುದೇ ಕಷ್ಟವಾಗುವುದು. ನಿಷ್ಕರ್ಷಕಪದವೆಂದರೆ ವಿಶೇಷವನ್ನು ತಿಳಿಸದೇ ಇರುವಂತಹದೇ? ಶರೀರವನ್ನು ತಿಳಿಸದೇ ಇರುವಂತಹದೇ? ಅಥವಾ ವಿಶೇಷಣವನ್ನು ಮಾತ್ರ ಹೇಳುವಂತಹದೇ? ವಿಶೇಷವನ್ನು ತಿಳಿಸದೆ ಇರುವುದೇ ನಿಷ್ಕರ್ಷಕಪದವೆಂದು ಹೇಳಿದರೆ ಶರೀರಪದವೂ ಸಹ ಶರೀರತ್ವವೆಂಬ ವಿಶೇಷವನ್ನು ತಿಳಿಸುವುದರಿಂದ ವ್ಯಭಿಚಾರದೋಷ ಬರುತ್ತದೆ. ಶರೀರವನ್ನು ತಿಳಿಸುವುದೇ ನಿಷ್ಕರ್ಷಕಪದವೆಂದರೆ ಪರಮಾತ್ಮನು ಸರ್ವಪದವಾಚ್ಯನೆಂದು ಹೇಳುವ ನಿಮ್ಮ ಮತದಲ್ಲಿ ಶರೀರಪದವೂ ಸಹ ಪರಮಾತ್ಮನನ್ನು ತಿಳಿಸಬೇಕಾಗಿರುವುದರಿಂದ ಇಂತಹ ಪದವನ್ನು ನಿಷ್ಕರ್ಷಕಪದವೆಂದು ಭಾವಿಸುವುದು ಅಪ್ರಸಿದ್ಧವಾಗುತ್ತದೆ. ವಿಶೇಷಣವನ್ನು ಮಾತ್ರ ಹೇಳುವುದೇ ನಿಷ್ಕರ್ಷಕಪದವೆಂದರೆ ಶರೀರಪದವು ಶರೀರತ್ವ ವೆಂಬ ವಿಶೇಷಣವುಳ್ಳ ವಿಶೇಷ್ಯವನ್ನು ತಿಳಿಸುವುದರಿಂದ ವಿಶೇಷಣ ಒಂದನ್ನೇ ಹೇಳು ವಂತಿಲ್ಲ. ಆದ್ದರಿಂದ ಶರೀರಲಕ್ಷಣಕ್ಕೆ ವಿಶೇಷವ್ಯಾಪ್ತಿ ಬರುವುದಿಲ್ಲ. "ಯಾವ ಪದವು ಅವಯವಸಂಧಿಗಳನ್ನು ತಿಳಿಸುವುದೋ ಅದೇ ಶರೀರವನ್ನು ಬೋಧಿಸುತ್ತದೆ" ಎಂಬುದು ಸಾಮಾನ್ಯವ್ಯಾಪ್ತಿ. ಶರೀರಲಕ್ಷಣಕ್ಕೆ ಇದೂ ಸಹ ಹೊಂದಿಕೆಯಾಗು ವುದಿಲ್ಲ. ನ್ಯಾಯಶಾಸ್ತ್ರದಲ್ಲಿ "ಅಂತ್ಯಾವಯವಿಯಾಗಿ ಚೇಷ್ಟೆಗೂ ಭೋಗಕ್ಕೂ ಇಂದ್ರಿಯಗಳಿಗೂ ಆಶ್ರಯವಾಗಿರುವುದೇ ಶರೀರ" ವೆಂದು ಶರೀರದ ಲಕ್ಷಣವನ್ನು ಹೇಳಲಾಗಿದೆ. ಇದು ಘಟಾದಿ ವಸ್ತುಗಳಲ್ಲಿ ಸಂಭವಿಸದಿರುವುದರಿಂದ ಈ ವಸ್ತುಗಳು ಈಶ್ವರನ ಶರೀರವಾಗದೇ ಹೋಗುತ್ತವೆ. ಈಶ್ವರನ ನಿಯಮಕ್ಕೆ ಒಳಪಟ್ಟಿರುವುದೇ ಶರೀರವೆಂದರೆ, ಪ್ರಭುವಿಗೆ ಅಧೀನನಾದ ಸೇವಕನನ್ನು ತಿಳಿಸುವ ಪದವು ಪ್ರಭುವನ್ನು ತಿಳಿಸದೇ ಇರುವುದರಿಂದ ಆ ಪದದಲ್ಲಿ ವ್ಯಭಿಚಾರ ಬರುತ್ತದೆ. ಒಳಗೆ ಪ್ರವೇಶಿಸಿದ ಪ್ರಭುವಿನಿಂದ ನಿಯಮ್ಯವಾಗುವುದೇ ಶರೀರವೆಂದರೆ, ಶಿಲ್ಪಿಯೊಬ್ಬನು ಒಳಗೆ ಪ್ರವೇಶಿಸಿ ಆಡಿಸುವಂತಹ ಮರದ ಬೊಂಬೆಯನ್ನು ಶಿಲ್ಪಿಯ ಶರೀರವೆಂದು ಯಾರೂ ಹೇಳುವು ದಿಲ್ಲವಾದ್ದರಿಂದ ಆ ಪದದಲ್ಲಿ ವ್ಯಭಿಚಾರ ಬರುತ್ತದೆ. "ಶರೀರವನ್ನು ಬಿಟ್ಟು ಬೇರೆ ಯಾಗಿರದವನೇ ನಿಯಮನಮಾಡಬೇಕು," ಎಂಬ ನಿಯಮವನ್ನು ಇಲ್ಲಿ ಹೇಳಲಾಗು ವುದಿಲ್ಲ; ಆವಾಗ "ಒಳಗೆ ಪ್ರವೇಶಿಸಿ" ಎಂದು ಹೇಳಿದ್ದು ವ್ಯರ್ಥವಾಗುವುದು. ಅಷ್ಟನ್ನೇ ಒಪ್ಪಿದರೂ, ಕೈಗಳಿಗಿಂತಲೂ ಬೇರೆಯಾಗಿಲ್ಲದಿರುವ ದೇವದತ್ತನು ಅಳ್ಳಾಡಿ ಸುವ ಕೈಗಳನ್ನು ತಿಳಿಸುವ ಪದವು ದೇವದತ್ತನನ್ನು ಬೋಧಿಸುವುದಿಲ್ಲವಾದ್ದರಿಂದ ಅಲ್ಲಿ ವ್ಯಭಿಚಾರ ಬರುತ್ತದೆ. ವಿಶೇಷ್ಯದಿಂದ ಬೇರೆಯಾಗದಿರುವ ವಿಶೇಷಣವೇ ಶರೀರ ವೆಂದರೆ ಘಟವನ್ನು ಬಿಟ್ಟು ಬೇರೆ ಇರಲಾಗದ ರೂಪವನ್ನು ಬೋಧಿಸುವ ಪದವು ಘಟವನ್ನೂ ತಿಳಿಸಬೇಕಾಗುವುದರಿಂದ 'ವಿಶೇಷ್ಯವನ್ನು ಬಿಟ್ಟಿರಲಾರದ ವಿಶೇಷಣವನ್ನು ತಿಳಿಸುವ ಪದವು ವಿಶೇಷ್ಯವನ್ನೂ ಬೋಧಿಸಬಲ್ಲದು' ಎಂಬ ವ್ಯಾಪ್ತಿ ನಿರಸ್ತವಾಯಿತು. ಯಾವುದು ವಿಶೇಷಣವೆಂಬುದನ್ನು ವಿವೇಚಿಸಲು ಸಾಧ್ಯವಿಲ್ಲ. ಯಾಕೆಂದರೆ ಘಟ ತ್ವಾದಿವಿಶೇಷಣಗಳನ್ನು [illegible] ಬೋಧಿಸುವುದಿಲ್ಲವಾ

ದ್ದರಿಂದ ವ್ಯಭಿಚಾರ ಬರುತ್ತದೆ. ‘ ನಿಷ್ಕರ್ಷಕವಲ್ಲದ ಪದಗಳೇ ವಿಶೇಷ್ಯವನ್ನು ತಿಳಿಸುತ್ತವೆ’ ಎಂದು ಹೇಳಿದರೆ ಹಿಂದೆ ಹೇಳಿದ ದೋಷಗಳೇ ಸಂಭವಿಸುತ್ತವೆ. “ ಘಟಾದಿ ಪದಗಳು ಮನುಷ್ಯಾದಿ ಪದಗಳಂತೆ ಶರೀರವನ್ನು ಬೋಧಿಸುತ್ತವೆ” ಎಂದು ಸಾಧಿಸುವಾಗ ಸಾಮಾನ್ಯವ್ಯಾಪ್ತಿ ಬರುವುದರಿಂದ ವ್ಯಭಿಚಾರ ಹೇಗೆ ಬರುತ್ತದೆ? “ಶರೀರಾದಿ ಪದಗಳೂ ಸಹ ಈಶ್ವರನನ್ನು ತಿಳಿಸುವುದರಿಂದ ಅವೂ ಸಹ ಘಟದಿಪದ ಗಳಂತೆ ಪಕ್ಷವೇ ಆಗುತ್ತವೆ” ಎಂದು ಹೇಳುವುದೂ ಸರಿಯಲ್ಲ. ವ್ಯಭಿಚಾರಜ್ಞಾನವು ವ್ಯಾಪ್ತಿಗೆ ಪ್ರತಿಬಂಧಕವಾದ್ದರಿಂದ ವ್ಯಾಪ್ತಿಜ್ಞಾನವೇ ಬರುವಂತಿಲ್ಲ. ಇಲ್ಲವಾದರೆ ಕಾರ್ಯವೆಲ್ಲವೂ ಶರೀರದಿಂದಲೇ ಹುಟ್ಟುವುದು ” ಎಂಬ ವ್ಯಾಪ್ತಿಯು ಘಟಾದಿಗಳಲ್ಲಿ ಕಂಡುಬಂದಿರುವುದರಿಂದ ಅಂಕುರಾದಿಗಳೂ ಶರೀರದಿಂದಲೇ ಹುಟ್ಟಿದವೆಂದು ಒಪ್ಪ ಬೇಕಾಗುತ್ತದೆ. ಅಂಕುರಾದಿಗಳ ಬಗ್ಗೆ ಸಾಧ್ಯಾಂಶದಲ್ಲಿ ಸಂದೇಹವಿರುವುದರಿಂದ ಅವು ಪಕ್ಷಗಳೆನಿಸುತ್ತವೆ. ಆದ್ದರಿಂದಲೇ ಅಲ್ಲಿ ಅತೀಂದ್ರಿಯವಾದ ಶರೀರವನ್ನು ಕಲ್ಪಿಸಬೇಕಾಗುವುದು. ಇದರಿಂದ ವ್ಯಭಿಚಾರವೆಂಬ ಹೇತ್ವಾಭಾಸಕ್ಕೆ ಅವಕಾಶ ವಿರುವುದಿಲ್ಲ. ವ್ಯಾಪ್ತಿಯಲ್ಲಿ ಸೇರಿರುವ ಸಾಧ್ಯಾಂಶದಲ್ಲಿ ಶರೀರಪದವನ್ನು ವ್ಯರ್ಥ ವಾಗಿ ಹೆಚ್ಚಿಗೆ ಸೇರಿಸುವುದರಿಂದ ವ್ಯಾಪ್ಯತ್ವಾಸಿದ್ಧಿ ಎಂಬ ದೋಷ ಬರುತ್ತದೆ. ಎಲ್ಲಾ ಪದಗಳೂ ಭಗವದ್ವಾಚಕವೇ ಆಗಿರುವುದರಿಂದ ವ್ಯಭಿಚಾರವನ್ನು ಹೇಳುವ ಸ್ಥಳವೇ ದೊರಕದ ಕಾರಣ ವ್ಯಭಿಚಾರಪರಿಹಾರಕ್ಕಾಗಿ ಶರೀರವೆಂಬ ವಿಶೇಷಣವನ್ನು ಕೊಡಬೇಕಾದ ಆವಶ್ಯತೆಯೂ ಇರುವುದಿಲ್ಲ. ಪೃಥಿವ್ಯಾದಿಪದಗಳು ಶರೀರವನ್ನು ಬೋಧಿಸಿದರೂ, ಶರೀರಿಯನ್ನೂ ಯಾಕೆ ಹೇಳಬೇಕು? ಎಂದು ಆಕ್ಷೇಪಿಸಿದರೆ ಇದಕ್ಕೆ ಬದಲಾಗಿ ಅನುಕೂಲ ತರ್ಕವನ್ನು ಹೇಳಲು ಸಾಧ್ಯವಿಲ್ಲ. ಹಾಗಾದರೆ ‘ ಈ ಪದಗಳು ಮುಖ್ಯವೃತ್ತಿಯನ್ನು ಬಿಟ್ಟು ಗೌಣೀವೃತ್ತಿಯಿಂದ ಬ್ರಹ್ಮವನ್ನು ಬೋಧಿಸಬೇಕಾ ಗುವುದು’ ಎನ್ನುವ ತರ್ಕವನ್ನು ಒಪ್ಪಬೇಕಾಗುವುದು. ಇದೇ ತರ್ಕವೇ “ ಎಲ್ಲಾ ಪದಗಳೂ ಬ್ರಹ್ಮವನ್ನು ಬೋಧಿಸುತ್ತವೆ” ಎಂಬುದನ್ನೂ ಸಾಧಿಸುತ್ತದೆ ಎಂದರೆ ನಾನಾರ್ಥವನ್ನು ಕೊಡುವ ಗವಾದಿಪದಗಳಂತೆ ಪೃಥಿವ್ಯಾದಿಪದಗಳಿಗೆ ಸ್ವತಂತ್ರ ವಾದ ಶಕ್ತಿಯನ್ನೇ ಒಪ್ಪಿ ಮುಖ್ಯ ವೃತ್ತಿಯಿಂದಲೇ ಅವು ಪರಮಾತ್ಮನನ್ನು ಬೋಧಿ ಸುತ್ತವೆ ಎಂದು ಹೇಳುವುದನ್ನು ಬಿಟ್ಟು ಹೀಗೆ ಕಲ್ಪಿಸುವ ಆವಶ್ಯಕತೆ ಕಂಡು ಬರುವುದಿಲ್ಲ. ಹಾಗೆಯೇ ಒಪ್ಪುವುದಾದರೆ ಸಿದ್ಧಾಂತಕ್ಕೆ ವಿರೋಧ ಬರುತ್ತದೆ. ಪದಾರ್ಥದಲ್ಲಿ ಮಾತ್ರವೇ ಶಕ್ತಿಯನ್ನು ಒಪ್ಪುವ ನಿಮ್ಮ ಮತದಲ್ಲಿ ವ್ಯವಹಾರಕಾಲ ದಲ್ಲಿ ಕಾರ್ಯವಿಶಿಷ್ಟ ವಸ್ತುವಿನಲ್ಲಿಯೇ ಶಕ್ತಿಯನ್ನು ಗ್ರಹಿಸಿದರೂ, ಅದು ಬೇರೆ ರೀತಿಯಿಂದ ದೊರಕುವ ಪ್ರಯುಕ್ತ ಕಾರ್ಯದಲ್ಲಿ ಶಕ್ತಿಯನ್ನು ತೊರೆಯುವಂತೆಯೇ, ಎಲ್ಲಾ ಪದಗಳೂ ಶರೀರಿಯನ್ನು ಬೋಧಿಸುತ್ತವೆ ಎಂಬ ವಾದವನ್ನೂ ಸಹ ಗೌರವ ಮತ್ತು ಅನ್ಯಲಭ್ಯತ್ವವೆಂಬ ದೋಷಗಳಿಗಾಗಿಯೇ ತೊರೆಯುವುದು ಯುಕ್ತವಾ ಗುತ್ತದೆ; ಇಲ್ಲವಾದರೆ ಕಾರ್ಯವಿಶಿಷ್ಟ ವಸ್ತುವಿನಲ್ಲಿಯೇ [illegible] ಶಕ್ತಿಯನ್ನು

ಒಪ್ಪಬೇಕಾಗುತ್ತದೆ. ಇಷ್ಟಲ್ಲದೆ ಶರೀರವನ್ನು ತಿಳಿಸುವ ಪದಗಳು ಶರೀರಿಯನ್ನು ಹೇಳುವಂತೆ ಶರೀರಿಯನ್ನು ಹೇಳುವ ಪದಗಳೂ ಶರೀರವನ್ನು ತಿಳಿಸುತ್ತವೆ ಎಂದು ಏಕೆ ಒಪ್ಪಬಾರದು? ಯಾಕೆ ಅಂದರೆ, ದೇವ ಮನುಷ್ಯಾದಿ ಪದಗಳಲ್ಲಿ ಆರೀತಿ ಇರುವುದಾಗಿ ಅನುಭವವು ಕಂಡುಬಂದಿದೆ. ಅಭೇದ ವಾಕ್ಯಗಳಲ್ಲಿ ಸಾಮಾನಾಧಿಕರಣ್ಯವನ್ನು ಮುಖ್ಯವೃತ್ತಿಯಿಂದ ಪ್ರತಿಪಾದಿಸಲಿಕ್ಕಾಗಿ ಈ ವಾದವನ್ನು ಅವಲಂಬಿಸಿರುವುದಾಗಿ ಹೇಳುವುದಂತೂ ಎಲ್ಲರಿಗೂ ಸಮಾನವೇ ಆಗಿದೆ. ಅದಕ್ಕಾಗಿಯೇ ಶರೀರಶರೀರಿಭಾವವನ್ನು ಒಪ್ಪಬೇಕಾದ ನಿರ್ಬಂಧವಿಲ್ಲ.

ನನು ವಿಷ್ಣೋಸ್ಸರ್ವಪದವಾಚ್ಯತ್ವಂ ಪುರಾಣೇಷು ಶ್ರುತಂ ಇತಿ ಚೇನ್ನ, 'ಯತೋ ವಾಚೋ ನಿವರ್ತಂತೇ' ಇತಿ ಬ್ರಹ್ಮಣಿ ವಾಚ್ಯತ್ವನಿವೃತ್ತೇರಪಿ ಪ್ರತ್ಯಕ್ಷಶ್ರುತಿಸಿದ್ಧತ್ವಾತ್. ಏತೈರೇವ ದೋಷೈಃ ಪ್ರಕಾರವಾಚಕಾನಾಂ ಪ್ರಕಾರಿಪರ್ಯಂತತ್ವಮಿತಿ ವ್ಯಾಪ್ತಿರ್ನಿರಸ್ತಾ ವೇದಿತವ್ಯಾ. ಕಿಂಚಾಂತರ್ಯಾಮಿಬ್ರಾಹ್ಮಣೇ 'ಯಸ್ಯಾತ್ಮಾ ಶರೀರಂ' ಇತಿ ವಾಕ್ಯಂ ನ ಶರೀರತ್ವವಿಧಾಯಕಂ, "ಯಚ್ಛಬ್ದಯೋಗಃ ಪ್ರಾಥಮ್ಯಂ ಇತ್ಯಾದ್ಯುದ್ದೇಶ್ಯಲಕ್ಷಣಂ। ತಚ್ಛಬ್ದ ಏವಕಾರಶ್ಚ ಸ್ಯಾದುಪಾದೇಯಲಕ್ಷಣಂ॥" ಇತಿ ನ್ಯಾಯೇನ ವಿಧಿಶಕ್ತಿಪ್ರತಿಬಂಧಾತ್. ನ ಚ 'ಯದಾಗ್ನೇಯೋಽಷ್ಟಾಕಪಾಲಃ' ಇತಿವತ್ ವಿಧಾಯಕತ್ವಂ ಯುಕ್ತಂ, ತಸ್ಯ ಲೋಕಪ್ರಾಪ್ತಾರ್ಥತ್ವಾತ್, ಅನ್ಯಸ್ಯ ವಿಧೇಯಸ್ಯಾಭಾವಾಚ್ಚ. ಇಹ ತು 'ಏಷ ತ ಆತ್ಮಾಽಂತರ್ಯಾಮ್ಯಮೃತಃ' ಇತಿ ವಿಧಿಭಾಗಸ್ಯ ವಿದ್ಯಮಾನತ್ವಾತ್ ದಳದ್ವಯೇನಾಪಿ ಸ್ವಪ್ರತಿಪಾದನೇ ಅನೇಕಾರ್ಥವಿಧಾನೇ ವಾಕ್ಯಭೇದಾಪತ್ತೇಃ. ಜಾಮಿತಾರ್ಥವಾದಯೋಗೇನ 'ಉಪಾಂಶುಯಾಜಮಂತರಾ ಯಜತಿ' ಇತ್ಯಸ್ಯ ವಿಧಿವತ್ "ಯಾಜ್ಞವಲ್ಕ್ಯ ಸೂತ್ರಮವಿದ್ವಾನ್ ತಂ ಚಾಂತರ್ಯಾಮಿಣಂ ಬ್ರಹ್ಮಗವೀರುದಜಸೇ ಮೂರ್ಧಾ ತೇ ವಿಪತಿಷ್ಯತಿ"(ಬೃ. ೩-೭-೧) ಇತ್ಯರ್ಥವಾದಯೋಗಾದಂತರ್ಯಾಮಿತ್ವಸ್ಯ ಜ್ಞೇಯತಯಾ ವಿಧೇಯತ್ವಾತ್. ತಥಾಚಾನ್ಯತಃ ಪ್ರಾಪ್ತಂ ಶರೀರತ್ವಮನುವಾದ್ಯಂ. ತಚ್ಚ ನ ಲೋಕಪ್ರಸಿದ್ಧಂ ಭೋಗಾಯತನತ್ವಂ, ಪೃಥಿವ್ಯಾದೌ ತದಭಾವಾತ್. ಕಿಂತು ನಿಯಮ್ಯತ್ವಮಾತ್ರಂ. ತಚ್ಚ ವ್ಯಭಿಚಾರಿತ್ವಾದಸಾರಮಿತ್ಯುಕ್ತಂ. ವಸ್ತುತಸ್ತು ಅಂತರ್ಯಾಮಿಬ್ರಾಹ್ಮಣೇ ಅಂತರ್ಯಾಮಿತ್ವವಿಧಾನಂ ಅಮೃತಪದವಾಚ್ಯಸ್ಯ ಶಿವಸ್ಯೈವ ನತು ವಿಷ್ಣೋರಿತ್ಯುಕ್ತಂ ಪ್ರಾಕ್, 'ಏತಾನಿ ಹ ವಾ ಅಮೃತಸ್ಯ ನಾಮಧೇಯಾನಿ' ಇತಿ ಜಾಬಾಲವಾಕ್ಯೇನ ಅಮೃತಪದಸ್ಯ ರುದ್ರವಾಚಕತ್ವಾವಧಾರಣಾತ್. 'ಕಿಂ ಜಪ್ಯೇನಾಮೃತತ್ವಂ ಬ್ರೂಹೀತಿ ಸ ಹೋವಾಚ ಯಾಜ್ಞವಲ್ಕ್ಯಃ ಶತರುದ್ರೀಯೇಣೇತಿ" ಇತ್ಯುಪಕ್ರಮಾತ್. ನನು 'ಏಷ ಸರ್ವಭೂತಾಂತ

ರಾತ್ಮಾ' ಇತಿ ವಿಷ್ಣೋರೇವಾಂತರ್ಯಾಮಿತ್ವಂ ವಿಧೀಯತ ಇತಿ ಚೇನ್ನ 'ಸೋಽಂತರಾದಂತರಂ ಪ್ರಾವಿಶತ್' 'ಯೋ ರುದ್ರೋಽಗ್ನೌ' ಇತ್ಯಾದಿನಾ ರುದ್ರಸ್ಯೈವ ಪರಬ್ರಹ್ಮಣಃ ಅಂತರ್ಯಾಮಿತ್ವಪ್ರತಿಪಾದನಾತ್, ತಸ್ಯ ಬಹುಶ್ರುತಿಸಂವಾದಿತ್ವಾತ್, ವಿಷ್ಣೋರಪಿ ರುದ್ರಶರೀರತ್ವಾತ್. ತಥಾಹಿ "ಬ್ರಹ್ಮವಾದಿನೋ ವದಂತಿ ಯನ್ನದೇವತಾಯೈ ಜುಹೋತಿ ವಸೋರ್ಧಾರೇತಿ ಅಗ್ನಿರ್ವೈ ವಸುಸ್ತಸ್ಯೈಷಾ ಧಾರಾ, ವಿಷ್ಣುರ್ವಸುಸ್ತಸ್ಯೈಷಾ ಧಾರಾ ಆಗ್ನಾವೈಷ್ಣವ್ಯರ್ಚಾ ವಸೋರ್ಧಾರಾಂ ಜುಹೋತಿ ಭಾಗಧೇಯೇನೈವೈನಾಂ ಸಮರ್ಧಯತ್ಯಥೋ ಏತಾಮೇವಾಹುತಿಮಾಯತನವತೀಂ ಕರೋತಿ ಯತ್ಕಾಮ ಏನಾಂ ಜುಹೋತಿ ತದೇವಾವರುಂಧೇ, ರುದ್ರೋ ವಾ ಏಷ ಯದಗ್ನಿಸ್ತಸ್ಯೈತೇ ತನುವೌ ಘೋರಾನ್ಯಾ ಶಿವಾನ್ಯಾ ಯಚ್ಛತರುದ್ರೀಯಂ ಜುಹೋತಿ ಯೈವಾಸ್ಯ ಘೋರಾ ತನೂಸ್ತಾಂ ತೇನ ಶಮಯತಿ ಯದ್ವಸೋರ್ಧಾರಾಂ ಜುಹೋತಿ ಯೈವಾಸ್ಯ ಶಿವಾ ತನೂಸ್ತಾಂ ತೇನ ಪ್ರೀಣಾತಿ" ಇತಿ ಯಜುಸ್ಸಂಹಿತಾಯಾಂ ಶ್ರೂಯತೇ ತತ್ರ ಪ್ರೀತಿವಾಚಕೇನ ಸಮರ್ಧಯತಿ. ಅತ್ರಾಗ್ನೇರ್ವಿಷ್ಣೋಶ್ಚ ರುದ್ರಶರೀರತ್ವಾಭಾವೇ ತದುಭಯದೇವತಾಕವಸುಧಾರಾಹುತ್ಯಾ ರುದ್ರತನುಃ ಕಥ ಪ್ರೀತಾ ಭವತಿ? ವಿನಿಯುಕ್ತವಿನಿಯೋಗವಿರೋಧಾತ್. ತದುಕ್ತಂ ಶೈವಪುರಾಣೇ "ಘೋರಾ ತನೂಸ್ತವ ಬ್ರಹ್ಮನ್ನಾಪೋ ಧರ್ಮಶ್ಚ ಚಂದ್ರಮಾಃ। ಶಿವಾ ತನೂಸ್ತವ ಬ್ರಹ್ಮ ಸೂರ್ಯೋ ವಿಷ್ಣುರ್ಹುತಾಶನಃ॥" ಇತಿ. ಕೈವಲ್ಯೇ "ಉಮಾಸಹಾಯಂ" ಇತ್ಯಾರಭ್ಯ "ಸ ಏವ ವಿಷ್ಣುಸ್ಸಪ್ರಾಣಸ್ಸಕಾಲೋಽಗ್ನಿಸ್ಸಚಂದ್ರಮಾಸ್ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ ಸನಾತನಂ" ಇತ್ಯಂತೇನ ಸರ್ವಾತ್ಮತ್ವಂ ಶಿವಸ್ಯೈವ ವ್ಯವಸ್ಥಾಪಿತಂ. "ವಿಶ್ವಂ ಭೂತಂ ಭುವನಂ ಚಿತ್ರಂ ಬಹುಧಾ ಜಾತಂ ಜಾಯಮಾನಂ ಚ ಯತ್। ಸರ್ವೋ ಹ್ಯೇಷ ರುದ್ರಸ್ತಸ್ಮೈ ರುದ್ರಾಯ ನಮೋ ಅಸ್ತು" ಇತ್ಯಾದಿ ಶ್ರುತ್ಯಂತರೇಷ್ವಪಿ ಸ್ಪಷ್ಟಮುಕ್ತಂ. ನನು ಶಿವಾತನೂರಿತಿ ಶಬ್ದಾಂತರಾಲ್ಲೋಕವ್ಯವಹಾರಸಿದ್ಧನಾಮಧೇಯಭೇದಾಚ್ಚ, ಅಗ್ನಿವಿಷ್ಣುಭ್ಯಾಂ ಶಿವಾ ತನೂರ್ಭಿನ್ನಾ ಇತಿ ಚೇನ್ಮೈವಂ, ತಾಭ್ಯಾಂ ಸಹ ಶಿವಾ ತನೂರ್ಭಿನ್ನೇತ್ಯಂಗೀಕಾರೇ ವಸುಧಾರಾಽಽಹುತ್ಯಾ ರುದ್ರತನುಪ್ರೀತಿಃ ಕಥಮುಪಪದ್ಯತೆ? ವಿನಿಯುಕ್ತವಿನಿಯೋಗವಿರೋಧಾತ್, ನಿರಾಕಾಂಕ್ಷತ್ವಾತ್, ಮಂತ್ರಲಿಂಗವಿರೋಧಾತ್, ವಾಕ್ಯಭೇದಾಪತ್ತೇಶ್ಚ. ಅಭೇದಾಂಗೀಕಾರೇ ನ ಕಶ್ಚಿದ್ದೋಷಃ; ಅನ್ಯಥಾ "ತಪ್ತೇ ಪಯಸಿ ದಧ್ಯಾನಯತಿ ಸಾ ವೈಶ್ವದೇವ್ಯಾಮಿಕ್ಷಾ ವಾಜಿಭ್ಯೋ ವಾಜಿನಂ" ಇತ್ಯತ್ರ ದ್ರವ್ಯರೂಪಗುಣಾತ್ಸರ್ವಭೇದವತ್ ದೇವತಾರೂಪ

ಗುಣಾದಪಿ ಕರ್ಮಭೇದಾಪತ್ತ್ಯಾ ವಸುಧಾರಾಹೋಮಭೇದೋಽಪಿ ಸ್ಯಾತ್, ಅಪೂರ್ವಾರ್ಥತ್ವಾತ್, ದ್ರವ್ಯದೇವತಯೋಃ ಕರ್ಮಸ್ವರೂಪತ್ವಾವಿಶೇಷಾತ್. 'ರುದ್ರೋ ವಾ ಏಷ ಯದಗ್ನಿಃ' ಇತ್ಯಾದೇರ್ವಸುಧಾರಾರ್ಥವಾದತ್ವೇಽಪಿ ದೇವತಾಧಿಕರಣನ್ಯಾಯೇನ ಮಾನಾಂತರಸಂವಾದಪ್ರತಿಸಂವಾದಯೋರಭಾವೇ ಮಂತ್ರಾರ್ಥವಾದಯೋಃ ಸ್ವಾರ್ಥೇ ಪ್ರಾಮಾಣ್ಯಾಂಗೀಕಾರಾತ್. ಅತ್ಯಂತಪರೋಕ್ಷಾರ್ಥಪರಿಹಾರಾಯ ನಿರಾಲಂಬನಸ್ತುತ್ಯಯೋಗಾಚ್ಚ ಸರ್ವೋತ್ಕೃಷ್ಟರುದ್ರಶರೀರತ್ವೇನೈವಾಗ್ನಿವಿಷ್ಣುಸ್ತುತಿಸಂಭವಾತ್ತದ್ದ್ವಾರಾ ವಸುಧಾರಾಹುತಿಸ್ತುತಿರಿತಿ ಸಿದ್ಧಂ. ವಿಷ್ಣೋರಪಿ ರುದ್ರಶರೀರತ್ವಂ. ಕೌರ್ಮೇ ಈಶ್ವರಗೀತಾಸೂಕ್ತಂ 'ಯೋ ಹಿ ನಾರಾಯಣೋಽನಂತೋ ಲೋಕಾನಾಂ ಪ್ರಭುರವ್ಯಯಃ।ಮಮೈಷಾ ಪರಮಾ ಮೂರ್ತಿಃ ಕರೋತಿ ಪರಿಪಾಲನಂ॥" ಇತಿ ತತ್ರೈವ ಚ ವಿಷ್ಣೋರ್ವಾಕ್ಯಂ—"ಅಸ್ಯೈವ ಚಾಪರಾಂ ಮೂರ್ತಿಂ ವಿಶ್ವಯೋನಿಂ ಸನಾತನೀಂ। ವಾಸುದೇವಾಭಿಧಾನಾಂ ತಾಂ ಮಾಮವೇಹಿ ಪಿತಾಮಹ॥" ಇತಿ ತಸ್ಮಾದ್ವಿಷ್ಣುರ್ನ ಸರ್ವಶಬ್ದವಾಚ್ಯಃ। ತಥಾ ಚ ಪ್ರಯೋಗಃ, "ವಿವಾದಾಧ್ಯಸಿತಾಸ್ಸರ್ವೇ ಶಬ್ದಾಸ್ತೇ ವಿಷ್ಣುವಾಚಕಾಃ" ಇತ್ಯುಭಯವಾದಿಸಿದ್ಧವಿಷ್ಣುವಾಚಕಶಬ್ದತ್ವಾವಚ್ಛಿನ್ನಭಿನ್ನತ್ವಾತ್, ಘಟವತ್, 'ನಚಾಪ್ರಯೋಜಕತ್ವಂ,' ಸರ್ವೇಷಾಂ ವಿಷ್ಣುವಾಚಕತ್ವೇ ಸರ್ವೇಷಾಂ ಶಬ್ದಾನಾಂ ಪರ್ಯಾಯತ್ವಪ್ರಸಂಗಾತ್. ನಚ ವಿಶಿಷ್ಟಶಕ್ತಿಭೇದೇನ ಅಪರ್ಯಾಯತ್ವಂ ವಿಶಿಷ್ಟಶಕ್ತ್ಯಸಂಭವಸ್ಯೋಕ್ತತ್ವಾದಿತ್ಯಲಮತಿವಿಸ್ತರೇಣ. ತಸ್ಮಾದಕ್ಷ್ಯಾದಿತ್ಯಾಂತರ್ವರ್ತಿತ್ವಂ ನೇತರಸ್ಯ ಸಂಭವತಿ.

ವಿಷ್ಣುವು ಸರ್ವಪದವಾಚ್ಯನೆಂಬುದು ಪುರಾಣಾದಿಗಳಲ್ಲಿ ಪ್ರಸಿದ್ಧವಾಗಿದೆ ಎಂಬುದು ಸರಿಯಲ್ಲ 'ಯಾವನನ್ನು ಮಾತು ತಿಳಿಸಲಾರದೆ ಹಿಂತಿರುಗಿತೋ' ಎಂಬ ಶ್ರುತಿಯಿಂದ ಬ್ರಹ್ಮವು ಶಬ್ದವಾಚ್ಯವಲ್ಲವೆಂಬುದು ಸಿದ್ಧವಾಗಿದೆ. ಆದ್ದರಿಂದಲೇ 'ವಿಶೇಷಣವಾಚಕ ಪದಗಳು ವಿಶೇಷ್ಯವನ್ನೂ ಬೋಧಿಸುತ್ತವೆ' ಎಂಬ ವ್ಯಾಪ್ತಿ ತಿರಸ್ಕೃತವಾಯಿತೆಂದು ತಿಳಿದುಬರುತ್ತದೆ. ಅಂತರ್ಯಾಮಿ ಬ್ರಾಹ್ಮಣದಲ್ಲಿ ಬಂದಿರುವ 'ಯಾವನಿಗೆ ಆತ್ಮವು ಶರೀರವೋ' ಎಂಬ ವಾಕ್ಯಗಳು ಆತ್ಮನನ್ನು ಬ್ರಹ್ಮದ ಶರೀರವೆಂದು ವಿಧಿಸಿಲ್ಲ. ಯಾಕೆಂದರೆ "ಯತ್ ಶಬ್ದವೂ ಪ್ರಥಮ ನಿರ್ದೇಶವೂ ಉದ್ದೇಶ್ಯವನ್ನು ಸೂಚಿಸುತ್ತವೆ. ತತ್‌ಶಬ್ದವೂ ಏವಕಾರವೂ ವಿಧಿಯನ್ನು ತಿಳಿಸುತ್ತವೆ" ಎಂಬ ನ್ಯಾಯದಂತೆ 'ಯಸ್ಯ ಆತ್ಮಾ' ಎಂಬಲ್ಲಿ ಯಚ್ಛಬ್ದವು ಯಾವುದನ್ನೂ ವಿಧಿಸುವಂತಿಲ್ಲ. 'ಯದಾಗ್ನೇಯಃ' ಎಂಬ ಕಡೆ ಯತ್ ಶಬ್ದವಿದ್ದರೂ ವಿಧಿಯನ್ನು ಒಪ್ಪಿರುವಂತೆ, 'ಯಸ್ಯಾತ್ಮಾ' ಎಂಬ ಕಡೆಯೂ ವಿಧಿಯನ್ನು ಒಪ್ಪಬೇಣವೆನ್ನುವುದು ಸರಿಯಲ್ಲ. 'ಯದಾಗ್ನೇಯಃ' ಎಂಬಲ್ಲಿ ಲೋಕದಿಂದ ತಿಳಿಯಲಾಗದಿರುವುದರಿಂದಲೂ,

ಬೇರೊಂದನ್ನು ವಿಧೇಯವಾಗಿ ಹೇಳದಿರುವುದರಿಂದಲೂ ವಿಧಿಯನ್ನು ಒಪ್ಪಬಹುದು. ಆದರೆ 'ಯಸ್ಯಾತ್ಮಾ' ಎಂಬ ಕಡೆ ಕೊನೆಯಲ್ಲಿ "ಏಷ ತ ಆತ್ಮಾಂತರ್ಯಾಮೀ" "ಇದು ನಿನ್ನ ಆತ್ಮ ಅದೇ ಅಂತರ್ಯಾಮಿ" ಎಂದು ವಿಧಿಯನ್ನು ಪ್ರತ್ಯೇಕವಾಗಿ ಹೇಳಿ ರುವುದರಿಂದ ಇಲ್ಲಿ ವಿಧಿಗವಕಾಶವಿಲ್ಲ. ಎರಡು ಕಡೆಗಳಲ್ಲೂ ವಿಧಿಯನ್ನು ಒಪ್ಪಿದರೆ ವಾಕ್ಯಭೇದ ಬರುತ್ತದೆ. ಯಜ್ಞದಲ್ಲಿ ಆಲಸ್ಯವನ್ನು ಪರಿಹರಿಸಿಕೊಳ್ಳಲು ಉಪಾಂಶು ಯಾಗವನ್ನು ಮಾಡಬೇಕೆಂಬ ವಿಧಿ ಇರುವಂತೆ 'ಯಾಜ್ಞವಲ್ಕ್ಯನೇ ನೀನು ಸ್ತೋತ್ರ ವನ್ನೂ ಅಂತರ್ಯಾಮಿಯನ್ನೂ ಅರಿಯದೆ ಗೋವನ್ನು ತೆಗೆದುಕೊಂಡರೆ ನಿನ್ನ ತಲೆ ಸೀಳಾಗುವುದು" ಎಂಬ ಅರ್ಥವಾದವಿರುವುದರಿಂದ ಅಂತರ್ಯಾಮಿತ್ವವೇ ಇಲ್ಲಿ ವಿಧೇಯವಾಗಿದೆ. ಆದ್ದರಿಂದ 'ಯಸ್ಯಾತ್ಮಾ ಶರೀರಂ' ಎಂಬ ಕಡೆ ಶರೀರವೆಂದು ತಿಳಿದುಬರುವ ಆತ್ಮಾದಿಗಳು ಅನುವಾದ್ಯವಾಗುವುವೇ ಹೊರತು ವಿಧೇಯವಾಗು ವುದಿಲ್ಲ; ಯಾಕೆಂದರೆ ಈ ಬಗೆಯ ಶರೀರವು ಲೋಕರೂಢಿಯಂತೆ ಭೋಗಸಾಧನ ವಾಗುವುದಿಲ್ಲ. ಪೃಥಿವ್ಯಾದಿಶರೀರಗಳು ಪರಶಿವನಿಗೆ ಭೋಗಸಾಧನವಲ್ಲ. ಆದರೆ ಕೇವಲ ನಿಯಮ್ಯವಾಗಿರುವುವು. ಇಷ್ಟುಮಾತ್ರದಿಂದಲೇ ಜಗತ್ತನ್ನು ಅವನ ಶರೀರ ವೆಂದುಹೇಳುವುದು ಯುಕ್ತವಲ್ಲವೆಂದು ಹಿಂದೆಯೇ ತಿಳಿಸಿದೆ. ವಾಸ್ತವವಾಗಿ ಅಂತ ರ್ಯಾಮಿಬ್ರಾಹ್ಮಣದಲ್ಲಿ ಅಮೃತಪದವಾಚ್ಯನಾದ ಶಿವನೇ ಅಂತರ್ಯಾಮಿ ಎನಿಸಿರು ವನೇ ಹೊರತು ವಿಷ್ಣುವಲ್ಲವೆಂದೂ ಹಿಂದೆ ತಿಳಿಸಿದೆ. 'ಇವು ಅಮೃತದ ಹೆಸರುಗಳು' ಎಂದು ಶತರುದ್ರೀಯವಿಷಯಕವಾದ ಜಾಬಾಲಶ್ರುತಿಯಲ್ಲಿ ಅಮೃತಪದವು ರುದ್ರ ನನ್ನು ಬೋಧಿಸುವುದಾಗಿ ಹೇಳಿದೆ. 'ಯಾವುದನ್ನು ಜಪಿಸಿದರೆ ಅಮೃತಸ್ಥಿತಿ ದೊರಕುವುದೆಂಬ ಪ್ರಶ್ನೆಗೆ ಯಾಜ್ಞವಲ್ಕ್ಯನು ಶತರುದ್ರೀಯದ ಜಪವನ್ನು ಹೇಳಿ ದ್ದಾನೆ.' 'ಇವನೇ ಎಲ್ಲಾ ಪ್ರಾಣಿಗಳಲ್ಲೂ ಅಂತರಾತ್ಮನು' ಎಂಬ ಶ್ರುತಿಯಿಂದ ವಿಷ್ಣುವು ಅಂತರ್ಯಾಮಿಯಾಗಲೆಂದು ಹೇಳುವಹಾಗಿಲ್ಲ. ಯಾಕೆಂದರೆ 'ಅವನು ಒಳಗಿಂದ ಒಳಗೇ ಪ್ರವೇಶಿಸಿದನು. 'ಅಗ್ನಿ, ನೀರು, ಓಷಧಿಗಳಲ್ಲಿ ಯಾವ ರುದ್ರ ನಿರುವನೋ' ಎಂಬ ಶ್ರುತಿಗಳಲ್ಲಿ ರುದ್ರನೇ ಅಂತರ್ಯಾಮಿ ಎಂದು ಪ್ರತಿಪಾದಿಸ ಲಾಗಿದೆ. ಹೀಗೆಯೇ ಅನೇಕ ಶ್ರುತಿಗಳಲ್ಲಿ ಹೇಳಲಾಗಿದೆ. ವಿಷ್ಣುವೂ ಸಹ ರುದ್ರನ ಶರೀರವೆನಿಸಿದ್ದಾನೆ. ಬ್ರಹ್ಮವಾದಿಗಳು ಹೀಗೆ ಹೇಳಿದ್ದಾರೆ. "ಅಗ್ನಿಯೇ ವಸುವೆನಿ ಸಿದ್ದಾನೆ. ಅವನಿಗಾಗಿ ಈ ಹವಿರ್ಧಾರೆ ಅರ್ಪಿತವಾಗಲಿ. ವಿಷ್ಣುವೇ ವಸುವೆನಿಸಿ ದ್ದಾನೆ. ಅವನಿಗಾಗಿ ಈ ಹವಿರ್ಧಾರೆ ಅರ್ಪಿತ. ಅಗ್ನಿ ವಿಷ್ಣು ಇಬ್ಬರಿಗೂ ಈ ಅರ್ಚನೆ ಸಲ್ಲಲಿದೆ. ಅವರಿಬ್ಬರಿಗೂ ಈ ಹವಿರ್ಧಾರೆಯನ್ನು ಅರ್ಪಿಸಲಾಗಿದೆ. ಈ ಹವಿರ್ಭಾಗವು ಅವರಿಬ್ಬರನ್ನೂ ಪುಷ್ಟಿಗೊಳಿಸುತ್ತದೆ. ಈ ಆಹುತಿಯು ಅವರನ್ನು ಸೇರಿ ಸಾರ್ಥಕವಾಗುತ್ತದೆ. ಯಾವ ಇಚ್ಛೆಯಿಂದ ಅವರಿಗೆ ಈ ಹವಿಸ್ಸನ್ನು ಅರ್ಪಿಸಲಾಗುವುದೋ ಆ ಇಚ್ಛೆಯೂ ಈಡೇರುವುದು. ಆ ರುದ್ರನೇ ಈ ಅಗ್ನಿಯು; ಅವನಿಗೆ ಎರಡು ಶರೀರಗಳಿವೆ. ಒಂದು ಘೋರ; ಮತ್ತೊಂದು ಶಿವ. ಶತರುದ್ರಿಯ

ಜಪದಿಂದ ಅವನ ಘೋರಶರೀರವು ಶಾಂತವಾಗುತ್ತದೆ. ಈ ವಸುಧಾರೆಯಿಂದ ಅವನ ಶಿವರೂಪವಾದ ಶರೀರವು ಪ್ರೀತವಾಗುತ್ತದೆ" ಹೀಗೆ ಯಜುಸ್ಸಂಹಿತೆಯಲ್ಲಿ ಹೇಳಲಾಗಿದೆ. ಅಗ್ನಿಯಲ್ಲಿ ವಿಷ್ಣುವಿಗೆ ಕೊಟ್ಟ ಹವಿರ್ಧಾರೆಯಿಂದ ರುದ್ರನಿಗೆ ಪ್ರೀತಿಯಾಗುವುದೆಂದು ಹೇಳಿರುವುದರಿಂದ ಅಗ್ನಿ ವಿಷ್ಣುಗಳಿಬ್ಬರೂ ರುದ್ರನ ಶರೀರವೆನಿಸಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಅವರಿಬ್ಬರೂ ರುದ್ರನ ಶರೀರವಾಗದೇ ಇದ್ದರೆ, ಅವರಿಬ್ಬರಿಗೂ ಕೊಟ್ಟ ವಸುಧಾರೆಯ ಆಹುತಿಯಿಂದ ರುದ್ರನ ಶರೀರವು ಹೇಗೆ ಸಂತೋಷಗೊಳ್ಳುತ್ತಿತ್ತು? ಶೈವಪುರಾಣದಲ್ಲಿ "ನೀರು ಧರ್ಮ, ಚಂದ್ರ ಇವು ಪರಶಿವನ ಘೋರಶರೀರವಾಗಿವೆ. ಸೂರ್ಯ ವಿಷ್ಣು ಅಗ್ನಿ ಇವು ಅವನ ಶಿವಮಯವಾದ ಶರೀರವೆನಿಸಿವೆ" ಎಂದು ಹೇಳಿದೆ. ಕೈವಲ್ಯದಲ್ಲಿ 'ಉಮಾಸಹಾಯಂ' ಎಂದಾರಂಭಿಸಿ 'ಅವನೆ ವಿಷ್ಣು, ಪ್ರಾಣ, ಕಾಲ, ಅಗ್ನಿ, ಚಂದ್ರ, ಹಿಂದೆ ಆದನ್ನು ಮುಂದೆ ಆಗುವುದು ಎಲ್ಲವೂ ಆಗಿದ್ದಾನೆ' ಎಂಬುದರಿಂದ ಶಿವನೇ ಸರ್ವಾತ್ಮಕನೆಂದು ವ್ಯವಸ್ಥಿತವಾಗಿದೆ. ಬೇರೆ ಶ್ರುತಿಯಲ್ಲೂ ವಿಚಿತ್ರವಾದ ಈ ಜಗತ್ತೆಲ್ಲವೂ ರುದ್ರನೆಂದು ಸ್ಪಷ್ಟವಾಗಿ ಹೇಳಿದೆ. 'ಶಿವಾ ತನೂಃ' ಎಂಬಲ್ಲಿ ಲೋಕರೂಢಿಯಂತೆ ಪರಮಾತ್ಮನಿಗೂ ದೇಹಕ್ಕೂ ಭೇದವಿರುವುದರಿಂದ ಶರೀರವೆನಿಸಿದ ಅಗ್ನಿ ವಿಷ್ಣುಗಳಿಂದ ಶಿವರೂಪವಾದ ಶರೀರವು ಭಿನ್ನವೇ ಆಗಿದೆ ಎಂದು ಹೇಳುವುದು ಯುಕ್ತವಲ್ಲ. ಅಗ್ನಿ ವಿಷ್ಣುಗಳಿಂದ ಶಿವಶರೀರವು ಭಿನ್ನವೆಂದು ಒಪ್ಪುವುದಾದರೆ ಅವರಿಬ್ಬರಿಗೂ ಕೊಟ್ಟ ವಸುಧಾರಾಹುತಿಯಿಂದ ರುದ್ರನ ದೇಹಕ್ಕೆ ಹೇಗೆ ಪ್ರೀತಿಯಾಗುತ್ತಿತ್ತು? ಅವರಿಬ್ಬರಿಗೂ ವಿನಿಯೋಗಿಸಿದ ಹವಿರ್ಧಾರೆಯನ್ನು ರುದ್ರನಿಗೆ ವಿನಿಯೋಗಿಸುವುದು ವಿರುದ್ಧವೇ ಆಗುತ್ತಿತ್ತು. ಇದೂ ಅಲ್ಲದೆ, ಹಾಗೆ ಮಾಡಲಿಕ್ಕೆ ಆಕಾಂಕ್ಷೆ ಇಲ್ಲದಿರುವಿಕೆಯೂ, ಮಂತ್ರದಲ್ಲಿ ಪರಸ್ಪರ ವಿರೋಧವೂ ವಾಕ್ಯಭೇದದೋಷವೂ ಸಂಭವಿಸುತ್ತಿದ್ದವು. ಆದರೆ ಅಂತರ್ಯಾಮಿಯಾದ ರುದ್ರನಿಗೂ ಅವನ ಶರೀರವೆನಿಸಿದ ಅಗ್ನಿ ವಿಷ್ಣುಗಳಿಗೂ ಅಭೇದವಿರುವುದರಿಂದ ಈ ದೋಷಗಳಿಗೆ ಪ್ರಸಕ್ತಿ ಇಲ್ಲ. ಹಾಗೆ ಅಭೇದವನ್ನು ಒಪ್ಪದಿದ್ದರೆ 'ಸುಡುವ ಹಾಲಿನಲ್ಲಿ ಮೊಸರನ್ನು ಸೇರಿಸಿದಾಗ ಅದರಲ್ಲಿ ಗಟ್ಟಿಯಾದ ಭಾಗವು ವಿಶ್ವೇದೇವತೆಗಳಿಗೂ, ತಿಳಿಯಾದ ಭಾಗವು ವಾಜಿದೇವತೆಗಳಿಗೂ ಅರ್ಪಿತವಾಗುವುದು' ಎಂಬಂತೆ ಹವಿರ್ದ್ರವ್ಯದ ಭೇದದಿಂದ ಕರ್ಮಭೇದವುಂಟಾಗುವಂತೆ ದೇವತಾಭೇದದಿಂದಲೂ ಕರ್ಮಭೇದವುಂಟಾದೀತು. ಆಗ ವಸುಧಾರಾಹುತಿಯಲ್ಲೂ ಭೇದವೇ ಸಂಭವಿಸಬೇಕಾಗುತ್ತದೆ. ಮಂತ್ರದ ಪೂರ್ವಾರ್ಧ ಮತ್ತು ಉತ್ತರಾರ್ಧಗಳಲ್ಲಿ ಹಾಗೆ ಹೇಳಿದ್ದರೆ ಭೇದವಿರಬಹುದಾಗಿತ್ತು. ಆದರೆ ಒಂದೇ ಪಾದದಲ್ಲಿ ಹೇಳಿರುವುದರಿಂದಲೂ, ಹವಿರ್ದ್ರವ್ಯವನ್ನೂ ದೇವತೆಗಳನ್ನೂ ರುದ್ರಸ್ವರೂಪವೆಂದು ಭಾವಿಸಿರುವುದರಿಂದಲೂ ರುದ್ರನಿಗೂ ಅಗ್ನಿ ವಿಷ್ಣುಗಳಿಗೂ ಭೇದಕ್ಕವಕಾಶವಿಲ್ಲ 'ರುದ್ರನೇ, ಈ ಅಗ್ನಿ' ಎಂಬಲ್ಲಿ ವಸುಧಾರೆಯನ್ನು ರುದ್ರಪ್ರೀತ್ಯರ್ಥವಾಗಿಯೇ ಕೊಡುವುದರಿಂದಲೂ ಇದಕ್ಕೆ ಬೇರೆ ವಾದಪ್ರತಿವಾದಗಳಿಲ್ಲದ್ದರಿಂದಲೂ, ಮಂತ್ರಕ್ಕೂ ಅರ್ಥವಾದಕ್ಕೂ

ಸ್ವಾರ್ಥದಲ್ಲಿಯೇ ಪ್ರಾಮಾಣ್ಯವನ್ನು ಒಪ್ಪಿರುವುದರಿಂದಲೂ, ಭೇದವನ್ನು ಪರಿಹರಿಸ ಲಿಕ್ಕಾಗಿ ನಿರಾಧಾರವಾದ ಸ್ತೋತ್ರವು ಹೊಂದಿಕೆಯಾಗದಿರುವುದರಿಂದಲೂ, ಸರ್ವೋತ್ಕೃಷ್ಟನಾದ ರುದ್ರನ ಶರೀರವಾದ್ದರಿಂದಲೇ, ಅಗ್ನಿ ವಿಷ್ಣುಗಳ ಸ್ತೋತ್ರವು ಸಂಭವಿಸಿರುವುದರಿಂದಲೂ, ಇವರ ಮೂಲಕವೇ ವಸುಧಾರಾಹುತಿಯ ಸ್ತೋತ್ರವು ಬಂದಿರುವುದರಿಂದಲೂ ವಿಷ್ಣುವು ರುದ್ರನ ಶರೀರವೆಂಬುದು ಸಿದ್ಧವಾಯಿತು. ಕೂರ್ಮಪುರಾಣದ ಈಶ್ವರಗೀತೆಯಲ್ಲಿ "ಲೋಕರಕ್ಷಕನೂ ಅನಂತನೂ ಅಚ್ಯುತನೂ ಆದ ನಾರಾಯಣನು ನನ್ನ ದಿವ್ಯಮೂರ್ತಿಯಾಗಿದ್ದಾನೆ" ಎಂದು ಶಿವನು ಹೇಳಿದ್ದಾನೆ. ಅಲ್ಲಿಯೇ ವಿಷ್ಣುವಿನ ವಾಕ್ಯವೂ "ಬ್ರಹ್ಮನೇ, ವಾಸುದೇವನೆಂಬ ಹೆಸರಿನ ಸನಾತನವಾದ ಈ ಮೂರ್ತಿಯೇ ನಾನಾಗಿದ್ದೇನೆ" ಹೀಗಿದೆ. ಆದ್ದರಿಂದ ವಿಷ್ಣುವು ಸರ್ವಶಬ್ದವಾಚ್ಯನಾಗುವುದಿಲ್ಲ. ಹಾಗೆ ಪ್ರಯೋಗವೂ ಇದೆ. ಘಟಾದಿ ಶಬ್ದಗಳಂತೆ ಉಭಯ ಪಕ್ಷದಲ್ಲೂ ಪ್ರಸಿದ್ಧವಾದ ವಿಷ್ಣುವಾಚಕಪದಗಳಿಗಿಂತಲೂ ಬೇರೆಯಾಗಿರುವುದರಿಂದ ವಿವಾದಗ್ರಸ್ತವಾದ ಪದಗಳೆಲ್ಲವೂ ವಿಷ್ಣುವನ್ನು ಬೋಧಿಸುವುದಿಲ್ಲ. ಎಲ್ಲಾ ಶಬ್ದಗಳೂ ವಿಷ್ಣುವಾಚಕವೇ ಆಗುವುದಾದರೆ ಎಲ್ಲವೂ ಪರ್ಯಾಯನಾಮಗಳೇ ಆಗಬೇಕಾದೀತು. ಆಯಾಯ ಪದಕ್ಕೆ ಇರುವ ವಿಶಿಷ್ಟಶಕ್ತಿಯ ಭೇದದಿಂದಲೇ ಎಲ್ಲವನ್ನೂ ಪರ್ಯಾಯಪದಗಳೆಂದು ಹೇಳಲಾಗುವುದಿಲ್ಲವೆಂದರೆ ಅದೂ ಸರಿಯಲ್ಲ. ಒಂದೊಂದು ಪದಕ್ಕೂ ವಿಶಿಷ್ಟಶಕ್ತಿಯು ಸಂಭವಿಸುವುದಿಲ್ಲವೆಂಬ ಅಂಶವನ್ನು ಹಿಂದೆಯೇ ಹೇಳಿಯಾಗಿದೆ. ಆದ್ದರಿಂದ ಎಲ್ಲ ಪದಗಳೂ ವಿಷ್ಣುವಾಚಕಗಳಲ್ಲವೆಂದು ಸಿದ್ಧವಾಯಿತು.

ಆಕಾಶಾಧಿಕರಣಂ ॥೮॥

**ಏವಂ ಪರಶಿವಸ್ಯ ಬ್ರಹ್ಮಣಃ ನಾನಾರೂಪಾದಿವಶಾದನ್ಯತ್ರಾತಿವ್ಯಾಪ್ತಿಮಾಶಂಕ್ಯಾಹ—ಆಕಾಶಸ್ತಲ್ಲಿಂಗಾತ್ ॥೨೪॥**

**ಛಾಂದೋಗ್ಯೇ ಶ್ರೂಯತೇಽಸ್ಯ ವಿಷಯಃ—"ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತ ಆಕಾಶಂ ಪ್ರತ್ಯಸ್ತಂ ಯಂತಿ ಆಕಾಶೋ ಹ್ಯೇವೈಭ್ಯೋ ಜ್ಯಾಯಾನಾಕಾಶಃ ಪರಾಯಣಂ" (೧-೯-೧) ಇತಿ. ಅತ್ರಾಕಾಶಶಬ್ದೇನ ಭೂತಾಕಾಶಃ, ಪರಮಶಿವೋ ವಾ ವಿವಕ್ಷಿತ ಇತಿ ಸಂದಿಹ್ಯತೆ. ಕುತಃ? ಉಭಯೋರಪಿ ಶ್ರುತಿನಿರ್ದೇಶಾತ್. ತಥಾಪಿ ಭೂತಾಕಾಶೇ ಲೋಕೇ ವೇದೇಷು ಚಾಕಾಶಶಬ್ದಸ್ಯ ಪಂಕಜಾದಿವದ್ರೂಢತ್ವಾತ್, ಪರಮಶಿವೈಕಪರತ್ವೇ ವಿನಿಗಮಕಾಭಾವಾತ್, ಮುಖ್ಯಾರ್ಥಪರಿತ್ಯಾಗೇ ಈಕ್ಷತ್ಯಧಿಕರಣವಿರೋಧಾಪತ್ತೇಶ್ಚ, ಮಾನಾಭಾವಾಚ್ಚ. "ಆಕಾಶಾದ್ವಾಯುಃ" ಇತ್ಯಾದೌ ಆಕಾಶಸ್ಯೈವ ಜಗತ್ಕಾರಣತ್ವವ್ಯಪದೇಶಾತ್, 'ಖಂ ಬ್ರಹ್ಮ', 'ಆಕಾಶ ಆತ್ಮಾ', 'ಯದೇಷ ಆಕಾಶ ಆನಂದೋ ನ ಸ್ಯಾತ್' ಇತ್ಯಾದಾವಾಕಾಶಸ್ಯೈವ ಬ್ರಹ್ಮತ್ವೋಪದೇಶಾತ್. 'ಯತೋ ವಾ ಇಮಾನಿ ಭೂತಾನಿ' ಇತ್ಯಾದಿಶ್ರುತಿವಿಹಿತಜಗ**

ಜ್ಜನ್ಮಾದಿಕಾರಣತ್ವಮಾಕಾಶಸ್ಯೈವೋಪಗಮ್ಯತೇ. "ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ" ಇತ್ಯಾದಿನಾ ತಸ್ಯೈವ ಸ್ಪಷ್ಟಮುಕ್ತತ್ವಾತ್. 'ಸದೇವ–ಆಸೀತ್', 'ಆತ್ಮಾವಾ–ಆಸೀತ್' ಇತ್ಯಾದಿಶ್ರುತಿಸಿದ್ಧಸದಾತ್ಮಶಬ್ದವಾಚ್ಯತ್ವಂ ತಸ್ಯೈವೇತಿ, 'ಆತ್ಮನ ಆಕಾಶಃ' ಇತ್ಯಾದಿನಾ ಆಕಾಶಸ್ಯಾತ್ಮಜನ್ಯತ್ವಕಥನಮುಪಚಾರಿಕಮೇವ. ಆಪ್ನೋತೀತ್ಯಾತ್ಮೇತಿ ವ್ಯುತ್ಪತ್ತ್ಯಾ ತಸ್ಯೈವಾತ್ಮಶಬ್ದವಾಚ್ಯತ್ವಂ ನಿಷ್ಪ್ರತ್ಯೂಹಂ. ತಸ್ಮಾದಾಕಾಶ ಏವ ಸರ್ವಕಾರಣಂ ಪರಂ ಬ್ರಹ್ಮೇತಿ ಪ್ರಾಪ್ತೇ ಬ್ರೂಮಃ— ಆಕಾಶಸ್ತಲ್ಲಿಂಗಾತ್–ಅತ್ರಾಕಾಶಃ ಸಾಕ್ಷಾಚ್ಛಿವ ಏವ. ಕುತಃ? ತಲ್ಲಿಂಗಾತ್, ತಸ್ಯ ಪರಮೇಶ್ವರಸ್ಯ ಲಿಂಗಾತ್ ಜಗಜ್ಜನ್ಮಾದಿಕಾರಣತ್ವಲಿಂಗಾತ್, ನ ಭೂತಾಕಾಶ ಇತ್ಯರ್ಥಃ. 'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ' ಇತ್ಯಾದೌ ಪರಮೇಶ್ವರಜನ್ಯತ್ವನಿರ್ದೇಶಾದಾಕಾಶಸ್ಯ, "ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ" "ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್", "ನ ಭೂಮಿರಾಪೋ ನಚ ವಹ್ನಿರಸ್ತಿ ನಚಾನಿಲೋ ಮೇಽಸ್ತಿ ನಚಾಂಬರಂ ಚ" ಇತ್ಯಾದಿನಾ ಪಂಚಮಹಾಭೂತವಿಲಕ್ಷಣತ್ವನಿರ್ದೇಶಾದಾತ್ಮನಃ ಪರಶಿವಸ್ಯ, ಅಚೇತನಭೂತಾಕಾಶೇ ಈಕ್ಷಣಪೂರ್ವಕಜಗತ್ಕಾರಣತ್ವಾದಿಚೇತನಧರ್ಮಾಸಂಭವಾತ್, 'ಆಕಾಶಾದ್ವಾಯುಃ ಇತ್ಯಾದೌ ತದನುಪ್ರವಿಷ್ಟೇಶಾನಾದಿಸದ್ಯೋಜಾತಾಂತಪಂಚಬ್ರಹಾತ್ಮಕಪರಶಿವಕಾರಣತ್ವಂ ಶ್ರೂಯತೇ. ಕಿಂಚ "ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೆ" ಇತ್ಯನೇನ ನಿಮಿತ್ತಕಾರಣತ್ವಂ. 'ಆಕಾಶಂ ಪ್ರತ್ಯಸ್ತಂ ಯಂತಿ" ಇತ್ಯನೇನೋಪಾದಾನಕಾರಣತ್ವಂ ಚಾಭಿಧೀಯತೇ. ಅತೋ ಜಡಭೂತಾಕಾಶೇ ಜಗದುಭಯಕಾರಣತ್ವರೂಪಪರಮೇಶ್ವರಲಿಂಗಾಸಂಭವಾತ್, "ಜ್ಯಾಯಾನ್ ಪೃಥಿವ್ಯಾ ಜ್ಯಾಯಾನಂತರಿಕ್ಷಾಜ್ಜ್ಯಾಯಾನ್ ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ" ಇತಿ ಶ್ರುತೌ ಪರಬ್ರಹ್ಮಣಶ್ಶಿವಸ್ಯೇತರಾನಪೇಕ್ಷತಯಾ ಸರ್ವಕಾರಣತ್ವಪರಾಯಣತ್ವವ್ಯಪದೇಶಾತ್, ಉಪಕ್ರಮೇ—'ಸದೇವ–ಅದ್ವಿತೀಯಂ' 'ತದೈಕ್ಷತ–ಬಹು ಸ್ಯಾಂ', 'ಸೋಽಕಾಮಯತ' ಇತ್ಯಾದಿವಾಕ್ಯಗತಸರ್ವಜ್ಞತ್ವಸತ್ಯಸಂಕಲ್ಪತ್ವಾದಿಲಿಂಗಾನಾಂ ಭೂತಾಕಾಶೇ ಸಮನ್ವಯಾಸಂಭವಾತ್ ಪರಮಶಿವ ಏವಾಕಾಶಶಬ್ದವಾಚ್ಯ ಇತಿ ಸಿದ್ಧಂ.

ಆಕಾಶಾಧಿಕರಣಂ ॥ ೮ ॥

ಪರಶಿವಬ್ರಹ್ಮದ ಲಕ್ಷಣವು ನಾಮರೂಪಗಳ ಸಂಪರ್ಕದಿಂದ ಬೇರೆ ಕಡೆಗಳಲ್ಲೂ ಅನ್ವಯಿಸುವುದರಿಂದ ಅತಿವ್ಯಾಪ್ತಿಯನ್ನು ಆಶಂಕಿಸಿ ನಿರಾಕರಿಸುತ್ತಾನೆ.

## ಆಕಾಶಸ್ತಲ್ಲಿಂಗಾತ್ ॥ ೨೩ ॥

ಛಾಂದೋಗ್ಯದಲ್ಲಿ ಈ ಸೂತ್ರದ ವಿಷಯ ಬಂದಿದೆ. "ಈ ಲೋಕಕ್ಕೆ ಗತಿ ಯಾವುದು ಎಂಬ ಪ್ರಶ್ನೆಗೆ ಆಕಾಶವೆಂದು ಅವನು ಉತ್ತರಿಸಿದನು; ಏಕೆಂದರೆ ಈ ಭೂತಗಳೆಲ್ಲವೂ ಆಕಾಶದಿಂದಲೇ ಹುಟ್ಟಿವೆ, ಮತ್ತೆ ಆಕಾಶದಲ್ಲಿಯೇ ಸೇರುತ್ತವೆ. ಇವೆಲ್ಲಕ್ಕಿಂತಲೂ ಆಕಾಶವೇ ದೊಡ್ಡದು. ಆಕಾಶವೇ ಕೊನೆಯ ಸ್ಥಾನ" (೧-೯-೧) ಇಲ್ಲಿ ಆಕಾಶವೆಂದರೆ ಭೂತಾಕಾಶವೋ ಪರಮಶಿವನೋ ಎಂಬ ಸಂದೇಹ ಬರುತ್ತದೆ. ಯಾಕೆಂದರೆ ಶ್ರುತಿ ಎರಡನ್ನೂ ತಿಳಿಸಿದೆ. ಈ ಎರಡು ಅರ್ಥಗಳಲ್ಲೂ ಆಕಾಶಶಬ್ದದ ಪ್ರಯೋಗವು ಪಂಕಜಾದಿಪದಗಳಂತೆ ಲೋಕದಲ್ಲೂ, ವೇದದಲ್ಲೂ ಕಂಡುಬಂದಿದೆ. ಇದು ಪರಶಿವನೊಬ್ಬನಿಗೇ ಅನ್ವಯಿಸುವುದಕ್ಕೆ ಪ್ರಮಾಣವಿಲ್ಲ. ಮುಖ್ಯಾರ್ಥವನ್ನು ತೊರೆದರೆ ಈಕ್ಷತ್ಯಧಿಕರಣದ ವಿರೋಧ ಬರುತ್ತದೆ. ಹಾಗೆ ತೊರೆಯಲಿಕ್ಕೆ ಪ್ರಮಾಣವೂ ಇಲ್ಲ. 'ಆಕಾಶದಿಂದ ವಾಯು ಹುಟ್ಟಿತು' ಎಂಬಲ್ಲಿ ಆಕಾಶವೇ ಜಗತ್ಕಾರಣವೆಂದು ಹೇಳಲಾಗಿದೆ. 'ಆಕಾಶವೇ ಬ್ರಹ್ಮ,' 'ಆಕಾಶವೇ ಆತ್ಮ,' 'ಈ ಆಕಾಶವು ಆನಂದವಾಗಿಲ್ಲದಿದ್ದರೆ ಯಾರುತಾನೆ ಜೀವಿಸುತ್ತಿದ್ದರು' ಈ ಶ್ರುತಿಗಳಲ್ಲಿ ಆಕಾಶವನ್ನು ಬ್ರಹ್ಮವೆಂದು ಹೇಳಲಾಗಿದೆ. 'ಯಾತರಿಂದ ಈ ಭೂತಗಳು ಹುಟ್ಟಿದವೋ' ಎಂಬ ಶ್ರುತಿಯಲ್ಲಿ ಹೇಳಿರುವ ಜಗತ್ಕಾರಣತ್ವವೂ ಆಕಾಶಕ್ಕೇ ಹೊಂದುತ್ತದೆ. 'ಈ ಭೂತಗಳೆಲ್ಲವೂ ಆಕಾಶದಿಂದಲೇ ಹುಟ್ಟಿವೆ' ಎಂಬ ಶ್ರುತಿಯಲ್ಲಿ ಈ ಅಂಶ ಸ್ಪಷ್ಟವಾಗಿದೆ. 'ಇದೆಲ್ಲವೂ ಮೊದಲು ಆತ್ಮವಾಗಿಯೇ ಇತ್ತು' ಈ ಶ್ರುತಿಗಳಲ್ಲಿ ಬರುವ 'ಸತ್ ಆತ್ಮ' ಶಬ್ದಗಳು ಆತ್ಮವನ್ನೇ ಬೋಧಿಸುತ್ತವೆ. 'ಆತ್ಮನಿಂದ ಆಕಾಶ ಹುಟ್ಟಿತು' ಎಂಬುದು ಕೇವಲ ಉಪಚಾರಕ್ಕಾಗಿ ಬಂದಿದೆ. 'ವ್ಯಾಪಿಸುವ ಸ್ವಭಾವವುಳ್ಳದ್ದು ಆತ್ಮ' ಎಂಬ ವ್ಯುತ್ಪತ್ತಿಯಿಂದ ಆಕಾಶವೇ ಆತ್ಮವೆನಿಸುವುದರಲ್ಲಿ ಯಾವ ಆಕ್ಷೇಪಣೆಯೂ ಇಲ್ಲ. ಆದ್ದರಿಂದ ಆಕಾಶವೇ ಸರ್ವಕಾರಣವಾದ ಪರಬ್ರಹ್ಮವೆನಿಸುತ್ತದೆ. ಹೀಗೆ ಆಕ್ಷೇಪ ಬಂದರೆ ಅದಕ್ಕೆ ಸೂತ್ರದಲ್ಲಿ ಸಮಾಧಾನ ಹೀಗಿದೆ. ಆಕಾಶಸ್ತಲ್ಲಿಂಗಾತ್—ಇಲ್ಲಿ ಆಕಾಶವೆಂದರೆ ಸಾಕ್ಷಾತ್ಪರಶಿವನೇ; ಹೇಗೆಂದರೆ, ಅದರಲ್ಲಿ ಜಗಜ್ಜನ್ಮಾದಿಕಾರಣತ್ವವೆಂಬ ಪರಮೇಶ್ವರನ ಅಸಾಧಾರಣ ಧರ್ಮವು ಕಂಡುಬಂದಿದೆ. ಆದ್ದರಿಂದ ಆಕಾಶಪದವು ಭೂತಾಕಾಶಕ್ಕೆ ಅನ್ವಯಿಸುವುದಿಲ್ಲ. 'ಆ ಈ ಆತ್ಮನಿಂದ ಆಕಾಶ ಹುಟ್ಟಿತು' ಎಂಬಲ್ಲಿ ಆಕಾಶವು ಪರಮೇಶ್ವರನಿಂದ ಹುಟ್ಟಿತೆಂದು ತಿಳಿಸಲಾಗಿದೆ. "ಆಕಾಶ, ವಾಯು, ಅಗ್ನಿ, ನೀರು, ಈ ವಿಶ್ವವನ್ನು ಹೊತ್ತಿರುವ ಭೂಮಿ ಇದೆಲ್ಲವೂ ಆಗಿರುವುದು ಈ ಬ್ರಹ್ಮವೇ" "ಈ ಯಾವ ಪರಬ್ರಹ್ಮವಿದೆಯೋ ಅದೇ ಎಲ್ಲಕ್ಕೂ ಆತ್ಮವೂ, ಆಧಾರಸ್ಥಲವೂ ಆಗಿದೆ" "ನಾನು ಈ ಭೂಮಿಯೂ ಅಲ್ಲ; ನೀರೂ ಅಲ್ಲ; ಬೆಂಕಿಯೂ ಅಲ್ಲ; ಗಾಳಿಯೂ ಅಲ್ಲ; ಆಕಾಶವೂ ಅಲ್ಲ" ಈ ಶ್ರುತಿಗಳಲ್ಲಿ ಪರಶಿವನು ಪಂಚಭೂತಗಳಿಗೂ ವಿಲಕ್ಷಣನೆಂದೂ ಹೇಳಿದೆ. ಅಚೇತನವಾದ ಭೂತಾಕಾಶದಲ್ಲಿ ನೋಡುವಿಕೆ ಮತ್ತು ಜಗತ್ತಿಗೆ

ಕಾರಣವಾಗುವಿಕೆ ಮೊದಲಾದ ಚೇತನಧರ್ಮಗಳು ಅನ್ವಯಿಸುವುದಿಲ್ಲ. 'ಆಕಾಶದಿಂದ ವಾಯು ಹುಟ್ಟಿತು' ಎಂಬ ಶ್ರುತಿಯಲ್ಲಿಯೂ ಸದಾಶಿವನ ಪಂಚಮುಖಗಳೆನಿಸಿದ ಪಂಚಭೂತಗಳೊಳಗೆ ಪ್ರವೇಶಿಸಿದ ಪರಶಿವನೇ ಸರ್ವಕಾರಣನೆಂದು ತಿಳಿದು ಬರುತ್ತದೆ. "ಈ ಭೂತಗಳೆಲ್ಲವೂ ಆಕಾಶದಿಂದಲೇ ಹುಟ್ಟಿವೆ" ಎಂಬುದರಿಂದ ಶಿವನೇ ನಿಮಿತ್ತಕಾರಣವೆನಿಸಿದ್ದಾನೆ. "ಆಕಾಶದಲ್ಲಿ ಎಲ್ಲವೂ ಲಯವಾಗುತ್ತವೆ" ಎಂಬುದರಿಂದ ಅವನೇ ಉಪಾದಾನಕಾರಣವೆನಿಸಿದ್ದಾನೆ. ಆದ್ದರಿಂದ ಜಡವಾದ ಭೂತಾಕಾಶದಲ್ಲಿ ಜಗದುಭಯಕಾರಣನಾದ ಪರಮೇಶ್ವರನ ಧರ್ಮಗಳು ಸಂಭವಿಸಲಾರವು. "ಪೃಥಿವಿ, ಅಂತರಿಕ್ಷ, ಸ್ವರ್ಗ, ಭೂಮಿ ಮತ್ತು ಈ ಲೋಕಗಳು ಇವೆಲ್ಲಕ್ಕೂ ದೊಡ್ಡವನು" ಎಂಬ ಶ್ರುತಿಯಲ್ಲಿ ಪರಶಿವನು ಬೇರೆ ಯಾರ ಅವಲಂಬನವೂ ಇಲ್ಲದ ಎಲ್ಲಕ್ಕೂ ಕಾರಣನೂ ಸ್ಥಲವೂ ಆಗಿರುವನೆಂದು ಹೇಳಿದೆ. ಉಪಕ್ರಮದಲ್ಲಿ 'ಇದೆಲ್ಲವೂ ಸದ್ರೂಪವಾಗಿತ್ತು, ಬ್ರಹ್ಮವೊಂದೇ ಅದ್ವಿತೀಯವಾಗಿತ್ತು, ಅದು ವಿಸ್ತಾರವಾಗಲಿಚ್ಛಿಸಿನೋಡಿತು" ಈ ಬಗೆಯ ವಾಕ್ಯಗಳಲ್ಲಿ ಹೇಳಿರುವ ಸತ್ಯಸಂಕಲ್ಪ, ಸರ್ವಜ್ಞತ್ವ ಮೊದಲಾದ ಧರ್ಮಗಳು ಭೂತಾಕಾಶದಲ್ಲಿ ಅನ್ವಯಿಸುವಂತಿಲ್ಲ. ಆದ್ದರಿಂದ ಆಕಾಶಶಬ್ದವು ಪರಶಿವನನ್ನೇ ಬೋಧಿಸುತ್ತದೆ ಎಂದು ಸಿದ್ಧವಾಯಿತು.

ನನು "ಆಕಾಶಸ್ಯ ಪರಬ್ರಹ್ಮತ್ವೇ ಉಪಕ್ರಮೋಪಸಂಹಾರವಿರೋಧಾತ್ ಮಾಸ್ತು ಬ್ರಹ್ಮತ್ವಮಾಕಾಶಸ್ಯ, ಪ್ರಾಣಸ್ಯ ಜಗಜ್ಜನ್ಮಾದಿಕಾರಣತ್ವವ್ಯಪದೇಶಾದ್ಬ್ರಹ್ಮತ್ವಮಸ್ತು" ಇತ್ಯಾಶಂಕಾಯಾಮಾಹ—

ಅತ ಏವ ಪ್ರಾಣಃ ॥ ೨೪ ॥

ಛಾಂದೋಗ್ಯೇ ಶ್ರೂಯತೇಽಸ್ಯ ವಿಷಯಃ—"ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ" ಇತಿ ಪ್ರಸ್ತುತ್ಯ "ಕತಮಾ ಸಾ ದೇವತೇತಿ, ಪ್ರಾಣ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ ಪ್ರಾಣಮಭ್ಯುಜ್ಜಿಹತೇ ಸೈಷಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರಾಸ್ತೋಷ್ಯಃ ಮೂರ್ಧಾ ತೇ ವ್ಯಪತಿಷ್ಯತ್" (೧-೧೧-೪) ಇತಿ. ಅತ್ರೋದ್ಗೀಥವಿದ್ಯೋಕ್ತಪ್ರಾಣಶಬ್ದಸ್ಯ ಪ್ರಾಣವಾಯುಃ ಪರಮೇಶ್ವರೋ ವಾ ವಾಚ್ಯ ಇತಿ ಸಂಶಯಃ, ತದುಭಯವಿಧಲಿಂಗದರ್ಶನಾತ್. 'ಪ್ರಾಣಬಂಧನಂ ಸೌಮ್ಯ ಮನಃ', 'ಪ್ರಾಣಸ್ಯ ಪ್ರಾಣಃ' "ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ, ಪ್ರಾಣೇನ ಜಾತಾನಿ ಜೀವಂತಿ, ಪ್ರಾಣಂ ಪ್ರಯಂತ್ಯಭಿಸಂವಿಶಂತಿ" ಇತಿ. 'ನಮಸ್ತೇ ವಾಯೋ, ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ' "ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್", "ಪ್ರಾಣ ಏವ ಪ್ರಜ್ಞಾತ್ಮೇದಂ ಶರೀರಂ ಪರಿಗೃಹ್ಯೋತ್ಥಾಪಯತಿ", "ಯದಾ ವೈ ಪುರುಷಃ ಸ್ವಪಿತಿ ತತ್ಪ್ರಾಣಸ್ತರ್ಹಿ ವಾಗಸ್ಯೇತಿ" "ಪ್ರಾಣಶ್ಚಕ್ಷುಃ ಪ್ರಾಣ

ಶ್ರೋತ್ರಂ ಪ್ರಾಣೋ ಮನಃ," "ಸ ಯದಾ ಬಧ್ಯತೇ ಜೀವಃ ಪ್ರಾಣಾದೇವಾಥ ಪುನರ್ಜಾಯತೇ" ಇತಿ ಪ್ರಾತ್ಯಕ್ಷಿಕಶ್ರುತಿಶತೇನ ಭೂತಪ್ರಾಣವಾಯೋರೇವ ಸರ್ವಕಾರಣತ್ವಸರ್ವಾಧಿಕತ್ವವ್ಯವಸ್ಥಾಪನಾತ್, ಶ್ರುತಿಸ್ಮೃತಿಪುರಾಣಶತೇಷು ಪ್ರಾಣಶಬ್ದಸ್ಯ ಭೂತಾವಾಯುಪರತ್ವನಿರ್ದೇಶದರ್ಶನಾತ್ತಸ್ಯೈವ ಸಾಕ್ಷಾತ್ಪರಬ್ರಹ್ಮತ್ವಮಿತಿ ಚೇದುಚ್ಯತೆ—ಪ್ರಾಣಶಬ್ದೇನಾತ್ರ ಷಟ್ಸ್ಥಲಾತ್ಮಕಪರಶಿವ ಏವ ವ್ಯಪದಿಶ್ಯತೇ. ಪೂರ್ವವದತ್ರಾಪಿ ಪರಮಶಿವಲಿಂಗಬಾಹುಳ್ಯದರ್ಶನಾತ್ ಪರಮಶಿವಧರ್ಮಾವಚ್ಛಿನ್ನಭೂತಸಂವೇಶನೋದ್ಗಮನಕರ್ಮತ್ವಂ ವಾಕ್ಯಶೇಷೇ ದೃಶ್ಯತೆ. 'ಯದಾವೈ ಪುರುಷಃ ಸ್ವಪಿತಿ' ಇತ್ಯಾದಿನಾ ಸರ್ವವ್ಯಾಪಾರಶೂನ್ಯಸುಷುಪ್ತಿದಶಾಯಾಂ ಪ್ರಾಣವ್ಯಾಪಾರಸದ್ಭಾವೇಽಪಿ ಪುರುಷವ್ಯಾಪಾರದರ್ಶನಾತ್ ಅಚೇತನಸ್ಯ ಪ್ರಾಣಸ್ಯ ಜಾಗ್ರದವಸ್ಥಾಯಾಂ ಸರ್ವೇಂದ್ರಿಯನಿಯಾಮಕತ್ವಂ ಸುಷುಪ್ತೌ ಕಾರಣಶರೀರಾನುಪ್ರವೇಶಿತ್ವಂ ಚ ಸರ್ವಥಾ ನ ಸಂಭವತಿ, ತಸ್ಮಾತ್ಪ್ರಾಣಶಬ್ದಸ್ಯ ಪರಮಶಿವಪರತ್ವಂ ನಿಷ್ಪ್ರತ್ಯೂಹಂ. ತಥಾ ಕೈವಲ್ಯೇ "ಉಮಾಸಹಾಯಂ ಪರಮೇಶ್ವರಂ" ಇತ್ಯಾಭ್ಯ "ಸ ಏವ ವಿಷ್ಣುಸ್ಸ ಪ್ರಾಣಃ" ಇತ್ಯಾದಿನಾ ಪರಮಶಿವಸ್ಯೈವ ಸರ್ವಾತ್ಮಕತ್ವನಿರ್ದೇಶಾತ್ ಪ್ರಾಣಶಬ್ದೇನಾತ್ರನೇತರೋಽಭಿಧೀಯತೆ.

ಭೂತಾಕಾಶವೇ ಪರಬ್ರಹ್ಮವೆಂದು ಹೇಳಿದರೆ ಉಪಕ್ರಮೋಪಸಂಹಾರಗಳ ವಿರೋಧವುಂಟಾಗುವುದರಿಂದ ಅದು ಬ್ರಹ್ಮವಾಗದಿದ್ದರಿರಲಿ, ಆದರೆ ಪ್ರಾಣವನ್ನು ಜಗತ್ಕಾರಣವೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಅದೇ ಬ್ರಹ್ಮವಾಗಲಿ ಎಂದು ಆಶಂಕಿಸುತ್ತಾನೆ—**ಅತ ಏವ ಪ್ರಾಣಃ || ೨೪ ||**

ಛಾಂದೋಗ್ಯದಲ್ಲಿ "ಎಲೈ ಪ್ರಸ್ತೋತೃವೇ, ಯಾವ ದೇವತೆಯು ಪ್ರಸ್ತಾವವನ್ನು ಅನುಸರಿಸಿಕೊಂಡಿರುವುದೋ ಅದನ್ನು ತಿಳಿಯದೆ ಪ್ರಸ್ತಾವವನ್ನು ಮಾಡಿದ್ದಾದರೆ, ನಿನ್ನ ತಲೆ ಬಿದ್ದುಹೋಗುವುದು" ಎಂದು ಉಪಕ್ರಮಿಸಿ "ಆ ದೇವತೆ ಯಾವುದು? ಎಂದರೆ ಪ್ರಾಣವೆಂದು ಅವನು ಹೇಳಿದನು. ಈ ಎಲ್ಲಾ ಭೂತಗಳೂ ಪ್ರಾಣದಲ್ಲಿಯೇ ಸೇರಿಕೊಳ್ಳುತ್ತವೆ. ಪ್ರಾಣದಿಂದಲೇ ಹೊರಗೆ ಬರುತ್ತವೆ" ಎಂದು ಹೇಳಿದೆ. ಇಲ್ಲಿ ಬಂದಿರುವ ಪ್ರಾಣಶಬ್ದವು ಪ್ರಾಣವಾಯುವೋ? ಪರಮೇಶ್ವರನೋ? ಎಂಬ ಸಂಶಯ ಬರುತ್ತದೆ. ಎರಡಕ್ಕೂ ಅನ್ವಯಿಸುವ ಧರ್ಮಗಳನ್ನು ನಾವು ಶ್ರುತಿಯಲ್ಲಿ ಕಾಣುತ್ತೇವೆ. 'ಮನಸ್ಸು ಪ್ರಾಣದಲ್ಲಿ ಬದ್ಧವಾಗಿದೆ' "ಇವೆಲ್ಲಾ ಭೂತಗಳೂ ಪ್ರಾಣದಿಂದಲೇ ಬಂದು ಅಲ್ಲಿಯೇ ಸೇರುತ್ತವೆ" 'ವಾಯುವೇ ನಿನಗೆ ನಮಸ್ಕಾರ, ನೀನೇ ಸಾಕ್ಷಾದ್ಬ್ರಹ್ಮವಿದ್ದೀಯೆ', 'ಮಾತಿನಿಂದ ಅದನ್ನು ತಿಳಿಯಲಾಗುವುದಿಲ್ಲ. ಆದರೆ ಹೇಳುವವನನ್ನೇ ಆಶ್ರಯಿಸಬೇಕು' "ಪ್ರಾಣವೇ ಪ್ರಜ್ಞಾತ್ಮವೆನಿಸಿ ಈ ಶರೀರದಲ್ಲಿ ಓಡಾಡುತ್ತಿದೆ." 'ಪುರುಷನು

ಮಲಗಿದಾಗ ಅವನ ಮಾತು ಪ್ರಾಣದಲ್ಲಿಯೇ ಅಡಗುತ್ತದೆ' 'ಪ್ರಾಣವೇ ಕಣ್ಣು, ಕಿವಿ, ಮನಸ್ಸು ಆಗಿದೆ. ಜೀವನು ಎಚ್ಚರಗೊಂಡಾಗ ಪ್ರಾಣದಿಂದಲೇ ಮತ್ತೆ ಹುಟ್ಟುತ್ತಾನೆ' ಹೀಗೆ ಅನೇಕ ಶ್ರುತಿಗಳಿಂದ ಭೂತವಾಯುವೇ ಸರ್ವಕಾರಣವೆಂದೂ, ಸರ್ವಾಧಿಕವೆಂದೂ ತಿಳಿದುಬರುತ್ತದೆ. ಶ್ರುತಿಸ್ಮೃತಿ ಪುರಾಣಗಳು ಪ್ರಾಣಶಬ್ದವನ್ನು ಭೂತವಾಯುವಿಗೇ ಅನ್ವಯಿಸಿವೆ. ಆದ್ದರಿಂದ ಅದನ್ನೇ ಸಾಕ್ಷಾದ್ಬ್ರಹ್ಮವೆಂದು ಏಕೆ ಹೇಳಬಾರದು? ಅಂದರೆ ಇದು ಯುಕ್ತವಲ್ಲ. ಶ್ರುತಿಯಲ್ಲಿ ಪ್ರಾಣಶಬ್ದವು ಷಟ್ಸ್ಥಲಾತ್ಮಕಪರಶಿವನಿಗೇ ಅನ್ವಯಿಸುತ್ತದೆ. ಹಿಂದೆ ಹೇಳಿದಂತೆ ಇಲ್ಲಿಯೂ ಪರಶಿವನ ಧರ್ಮಗಳೇ ವಿಶೇಷವಾಗಿವೆ. "ಭೂತಗಳು ಪರಶಿವನೊಳಗೆ ಪ್ರವೇಶಿಸಿ ಹೊರಗೆ ಬರುವುವು" ಎಂಬ ಪರಶಿವನ ಕರ್ಮವೇ ವಾಕ್ಯಶೇಷದಿಂದ ತಿಳಿದುಬರುತ್ತದೆ. 'ಪುರುಷನು ಮಲಗಿದಾಗ ಅವನ ವಾಕ್ಕು ಪ್ರಾಣದಲ್ಲಿ ಸೇರುತ್ತದೆ' ಎಂಬ ವಾಕ್ಯದಲ್ಲಿ ಯಾವ ವ್ಯಾಪಾರವೂ ಇಲ್ಲದಿರುವ ಸುಷುಪ್ತಿಯಲ್ಲಿ ಪ್ರಾಣದ ವ್ಯಾಪಾರವಿದ್ದರೂ ಪುರುಷವ್ಯಾಪಾರವೂ ಕಾಣಬರುತ್ತದೆ. ಅಚೇತನವಾದ ಪ್ರಾಣವು ಎಚ್ಚರಕಾಲದಲ್ಲಿ ಎಲ್ಲಾ ಇಂದ್ರಿಯಗಳನ್ನು ನಿಯಮನಮಾಡಲಿಕ್ಕೂ, ಸುಷುಪ್ತಿಯಲ್ಲಿ ಕಾರಣಶರೀರವನ್ನು ಪ್ರವೇಶಿಸಲಿಕ್ಕೂ ಸಾಧ್ಯವಾಗಲಾರದು. ಆದ್ದರಿಂದ ಪ್ರಾಣಶಬ್ದವು ಪರಶಿವನನ್ನೇ ಬೋಧಿಸುತ್ತದೆ. ಕೈವಲ್ಯದಲ್ಲಿ ಪರಮೇಶ್ವರನೇ ವಿಷ್ಣು, ಪ್ರಾಣ, ಕಾಲ, ಅಗ್ನಿ ಮತ್ತು ಚಂದ್ರನಾಗಿರುವನೆಂದು ಹೇಳಿ ಅವನನ್ನೇ ಸರ್ವಾತ್ಮಕನೆಂದು ಭಾವಿಸಲಾಗಿದೆ. ಆದ್ದರಿಂದ ಶ್ರುತಿಯಲ್ಲಿ ಪ್ರಾಣವೆಂದರೆ ಪರಶಿವನಲ್ಲದೆ ಬೇರೆಯಲ್ಲ.

## ಜ್ಯೋತಿರಧಿಕರಣಂ ॥ ೯ ॥

**'ಅಂತಸ್ತದ್ಧರ್ಮೋಪದೇಶಾತ್' ಇತ್ಯನೇನ ಪರಶಿವಬ್ರಹ್ಮಣಃ ಸರ್ವಾಂತರತ್ವೇ ಮಹಾಲಿಂಗಾತ್ಮಕತ್ವಂ ಪ್ರಸಾಧ್ಯ, 'ಆಕಾಶಸ್ತಲ್ಲಿಂಗಾತ್' ಇತ್ಯನೇನ ತಸ್ಯೈವಾಕಾಶಾಂತರತ್ವೇನ ಪ್ರಸಾದಲಿಂಗತ್ವಂ ನಿರ್ದಿಶ್ಯ 'ಅತ ಏವ ಪ್ರಾಣಃ' ಇತಿ ಸೂತ್ರೇ ತಸ್ಯೈವ ಪ್ರಾಣಪ್ರಕೃತಿಕಚರಲಿಂಗತ್ವಮುಪದಿಶ್ಯ ಪುನಸ್ಸೂತ್ರತ್ರಯೇಣ ಶಿವಲಿಂಗಗುರುಲಿಂಗಾಚಾರಲಿಂಗಾನಿ ದರ್ಶಯತಿ— ಜ್ಯೋತಿಶ್ಚರಣಾಭಿಧಾನಾತ್ ॥ ೨೫ ॥**

**ಛಾಂದೋಗ್ಯೇ ಶ್ರೂಯತೇಽಸ್ಯ ವಿಷಯಃ "ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷ್ವಿದಂ ವಾವ ತತ್ ಯದಿದಮಸ್ಮಿನ್ನಂತಃ ಪುರುಷೇ ಜ್ಯೋತಿಃ" (೩-೧೩-೭) ಇತಿ. ಅತ್ರ ಜ್ಯೋತಿಶ್ಶಬ್ದೇನ ವೈಶ್ವಾನರಸೂರ್ಯಚಂದ್ರಾದಿದೇವತಾಂತರಂ ನಿರ್ದಿಶ್ಯತೆ? ಉತ ಪ್ರಭಾಕರಾದಿಸ್ಥೂಲಸೂಕ್ಷ್ಮಚಿದಚಿತ್ಪ್ರಪಂಚಪ್ರಕಾಶಕಃ ಪರಮೇಶ್ವರಃ? ಇತಿ ವಿಶಯಃ, ತದುಭಯವಿಧಲಿಂಗಬಾಹುಳ್ಯಾತ್. ತಥಾಹಿ ಸೂರ್ಯ**

ಚಂದ್ರಾದಿಜ್ಯೋತಿಷಾಂ ಜ್ಯೋತಿಷ್ಟ್ವಂ ಯುಕ್ತಂ. ತಮೋನಿವಾರಕತ್ವ ದರ್ಶನಾದಾದಿತ್ಯಾದಿಜ್ಯೋತಿಷಃ, ಜ್ಯೋತಿಶ್ಶಬ್ದೇನ ಪ್ರಭಾಕರಾದಿತೇಜೋನಿರ್ದೇಶಾಚ್ಚ, ನಿರ್ವಿಶೇಷಸ್ಯ ಶಿವಲಿಂಗಾತ್ಮಕಸ್ಯ ಪರಬ್ರಹ್ಮಣಃ ನ ಮುಖ್ಯತ್ವೇನ ದೀಪ್ಯಮಾನತ್ವಂ ಸಂಭವತಿ. ಶ್ರುತ್ಯುಕ್ತದ್ಯುಮರ್ಯಾದಾಯಾಸ್ತೇಷಾಮೇವ ಸಿದ್ಧತ್ವಾತ್, ಸರ್ವಾತ್ಮಕಸ್ಯ ಸರ್ವಾಧಿಷ್ಠಾನಸ್ಯ ಸರ್ವಕಾರಣಸ್ಯ ಸರ್ವಥಾ ದ್ಯುಮರ್ಯಾದಾವಿರೋಧಾತ್ಪೂರ್ವೋಕ್ತಮೇವ ಸಮಂಜಸಂ. ನನು "'ಪರೋ ದಿವೋ ಜ್ಯೋತಿಃ' ಇತಿ ಪರಜ್ಯೋತಿರ್ವ್ಯಪದೇಶಾತ್ ಕಾರ್ಯಭೂತಜ್ಯೋತಿಷಾಂ ತಥಾತ್ವಾಭಾವಾತ್ ಸರ್ವವ್ಯಾಪಕತಯಾ ಬ್ರಹ್ಮಣ ಏವ ದ್ಯುಮರ್ಯಾದಾವತ್ತ್ವಂ ಸಮಂಜಸತ್ವಾದ್ಭಕ್ತ್ಯೋಪಾಸನಾಪ್ರಯೋಜನತ್ವಾಚ್ಚ ವ್ಯಪದಿಶ್ಯತೆ ನ ತು ತ್ರಿವೃತ್ಕೃತಜ್ಯೋತಿಃಪರತ್ವಂ" ಇತಿ ಚೇನ್ನ 'ಅಗ್ನಿರಗ್ರೇ ಪ್ರಥಮೋ ದೇವತಾನಾಂ' 'ಅಸಾವಾದಿತ್ಯೋ ಬ್ರಹ್ಮ' ಇತ್ಯಾದಿಶ್ರುತಿಷು ವೈಶ್ವಾನರಾದ್ಯುಪಾಸನಸ್ಯ ಸಪ್ರಯೋಜನತ್ವದರ್ಶನಾತ್, "ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣಿ"ಇತಿ ಶ್ರುತೌ ತ್ರಿವೃತ್ಕೃತಜ್ಯೋತಿಷೋ ಹ್ಯಖಂಡತ್ವದರ್ಶನಾಲ್ಲೋಕೇ ವ್ಯೋಮಾಂತರತ್ವಂ ತಸ್ಯೈವ ಮುಖ್ಯತ್ವಾನ್ನಾನ್ಯಾರ್ಥಕತ್ವಂ. ಸರ್ವತ್ರ ಪ್ರಕಾಶಮಾನಸ್ಯ ವೈಶ್ವಾನರಾದಿಜ್ಯೋತಿಷಃ ಪರದಿವ್ಯಶಬ್ದೌ ಮುಮುಕ್ಷೂಪಾಸನಾರ್ಥಮುಪದಿಷ್ಟೌ. ತಸ್ಮಾನ್ನಾಂತರವಿಶೇಷವಿರೋಧಃ. ಸರ್ವಾಧಿಷ್ಠಾನಸ್ಯ ಶಿವಲಿಂಗಾತ್ಮಕಸ್ಯ ಪರಬ್ರಹ್ಮಣಃ ಪ್ರದೇಶಮಾತ್ರವಿಶೇಷಕಲ್ಪನಾಯೋಗಾತ್. "ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷು" ಇತಿ ಪ್ರದೇಶವಿಶೇಷಕಲ್ಪನಾಶ್ರುತಿಃ ಕಾರ್ಯರೂಪವೈಶ್ವಾನರಾದಿಜ್ಯೋತಿಃಪರತ್ವೈವ ನಿರ್ದಿಶ್ಯತೇ. ನನು 'ಇದಂ ವಾವ ತದ್ಯದಿದಮಸ್ಮಿನ್ನಂತಃಪುರುಷೇ ಜ್ಯೋತಿಃ' ಇತಿ ಕೌಕ್ಷೇಯಜ್ಯೋತಿಷಿ ಪರಜ್ಯೋತಿಷ್ಟ್ವಪರಮಾತ್ಮತ್ವೋಪದೇಶಾದತ್ರಾಪಿ ಜ್ಯೋತಿಶ್ಶಬ್ದಃ ಪರಮಾತ್ಮಪರಃ ಇತಿ ಚೇನ್ನ ಸಾರೂಪ್ಯಮಾತ್ರಂ ಹ್ಯತ್ರೋಪದಿಶ್ಯತೆ. ಕಿಂಚ ಯಥಾ "ತಸ್ಯ ಭೂರಿತಿ ಶಿರಃ ಏಕಗ್ಂ ಶಿರಃ। ಏಕಮೇವ ತದಕ್ಷರಂ" ಇತಿ ಶ್ರುತೌ ಸಾವಯವತ್ವೋಪದೇಶಾತ್ ಕೌಕ್ಷೇಯಸ್ಯ ತೇಜಸಃ ಪ್ರಾಕೃತತೇಜಃಪರತ್ವಂ ನಿಷ್ಪ್ರತ್ಯೂಹಂ. ಉತ. "ತಸ್ಯೈಷಾ ದೃಷ್ಟಿಃ। ತಸ್ಯೈಷಾ ಶ್ರುತಿಃ। ತದೇವ ದೃಷ್ಟಂ ಚ ಶ್ರುತಂ ಚೇತ್ಯುಪಾಸೀತ। ಚಕ್ಷುಷ್ಯಶ್ಶ್ರುತೋ ಭವತಿ॥" ಇತಿ ಚಾಕ್ಷುಷ್ಯಘೋಷದರ್ಶನಶ್ರವಣಾದಿಧರ್ಮಾಣಾಂ ಪರಮಶಿವಪರತ್ವಾಸಂಭವಾತ್. ಅಥವಾ 'ಪರೋ ದಿವೋ ಜ್ಯೋತಿಃ' ಇತ್ಯತ್ರ ಪುರುಷಾಂತರ್ವರ್ತಿ

ತ್ವೇನ ನಿರ್ದಿಶ್ಯಮಾನೋ ಜಾಠರಾಗ್ನಿರ್ವಾ ಸ್ಯಾತ್. ಸರ್ವಥಾ ಪರಮೇಶ್ವರಪಕ್ಷೋ ನ ವಿಧೀಯತೇ. ಇತಿ ಚೇದತ್ರೋಚ್ಯತೇ.

ಜ್ಯೋತಿರಧಿಕರಣಂ ॥ ೯ ॥

'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ ಪರಶಿವನನ್ನು ಸರ್ವಾಂತರ್ಯಾಮಿಯಾದ್ದರಿಂದ ಮಹಾಲಿಂಗಸ್ವರೂಪನೆಂದು ವಾದಿಸಿ, 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ ಅವನನ್ನೇ ಆಕಾಶರೂಪನಾದ ಪ್ರಸಾದಲಿಂಗವೆಂದು ನಿರ್ದೇಶಿಸಿ, 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ಅವನನ್ನೇ ಪ್ರಾಣರೂಪನಾದ ಚರಲಿಂಗವೆಂದು ಉಪದೇಶಿಸಿ, ಮುಂದಿನ ಸೂತ್ರಗಳಲ್ಲಿ ಅವನೇ ಶಿವಲಿಂಗವೂ ಗುರುಲಿಂಗವೂ ಆಚಾರಲಿಂಗವೂ ಆಗಿರುವನೆಂದು ತಿಳಿಸಲಾಗುವುದು.

ಜ್ಯೋತಿಶ್ಚರಣಾಭಿಧಾನಾತ್ ॥ ೨೫ ॥

ಛಾಂದೋಗ್ಯದಲ್ಲಿ ಇದರ ವಿಷಯ ಬಂದಿದೆ. "ಈ ದ್ಯುಲೋಕದಾಚೆಗೆ, ವಿಶ್ವವೆಲ್ಲಕ್ಕೂ ಮೇಲಿನ ಅತ್ಯುತ್ತಮವಾದ ಲೋಕಗಳಲ್ಲಿ ಯಾವ ಜ್ಯೋತಿ ಬೆಳಗುತ್ತಿದೆಯೋ ಅದೇ ಈ ಪುರುಷನೊಳಗೂ ಇದೆ" (೩-೧೩-೭) ಇಲ್ಲಿ ಜ್ಯೋತಿಶ್ಶಬ್ದವು ವೈಶ್ವಾನರ, ಸೂರ್ಯ, ಚಂದ್ರ ಮೊದಲಾದ ದೇವತೆಗಳಿಗೆ ಅನ್ವಯಿಸುವುದೋ ಅಥವಾ ಸೂರ್ಯನೇ ಮೊದಲಾದ ಸಕಲ ಪ್ರಪಂಚವನ್ನೂ ಬೆಳಗುವ ಪರಶಿವನಿಗೆ ಅನ್ವಯಿಸುವುದೋ ಎಂಬ ಸಂಶಯ ಬರುತ್ತದೆ. ಯಾಕೆಂದರೆ ಇಲ್ಲಿ ಎರಡಕ್ಕೂ ಅನ್ವಯಿಸುವ ಧರ್ಮಗಳು ಕಂಡುಬಂದಿವೆ. ಹಾಗಾದರೆ ಸೂರ್ಯ, ಚಂದ್ರ ಮೊದಲಾದವನ್ನು ಜ್ಯೋತಿಗಳೆಂದು ಕರೆಯುವುದೇ ಯುಕ್ತವಾಗಿದೆ. ಜ್ಯೋತಿಯಿಂದ ಕತ್ತಲೆ ತೊಲಗುವುದು ಎಲ್ಲರಿಗೂ ತಿಳಿದಿದೆ. ಸೂರ್ಯಾದಿಗಳ ಜ್ಯೋತಿಯೂ ಹಾಗೆಯೇ ಬೆಳಗುವುದರಿಂದ ಜ್ಯೋತಿಶ್ಶಬ್ದವು ಆದಿತ್ಯನ ತೇಜಸ್ಸಿಗೇ ಅನ್ವಯಿಸುತ್ತದೆ. ನಿರ್ವಿಶೇಷವಾದ ಮಹಾಲಿಂಗವು ಹಾಗೆ ಬೆಳಗುತ್ತದೆ ಎಂದು ಹೇಳಲಿಕ್ಕಾಗುವುದಿಲ್ಲ. ಶ್ರುತಿಯಲ್ಲಿ ಈ ಜ್ಯೋತಿಗೆ ದ್ಯುಲೋಕವೇ ಎಲ್ಲೆಯೆಂದು ಹೇಳಿರುವುದರಿಂದ ಈ ಪದವು ಸೂರ್ಯನೇ ಮೊದಲಾದ ಜ್ಯೋತಿಗಳಲ್ಲಿಯೇ ಪ್ರಸಿದ್ಧವಾಗಿದೆ. ಅಂತೂ ಸರ್ವಾತ್ಮಕವೂ, ಸರ್ವಾಶ್ರಯವೂ, ಸರ್ವಕಾರಣವೂ ಆದ ಮಹಾಲಿಂಗಕ್ಕೆ ದ್ಯುಲೋಕದ ಎಲ್ಲೆಕಟ್ಟೆಂಬುದು ವಿರುದ್ಧವಾಗುವುದರಿಂದ ಹಿಂದೆ ಹೇಳಿದ್ದೇ ಯುಕ್ತವಾಗಿದೆ. "ಉತ್ಕೃಷ್ಟವಾದ ಜ್ಯೋತಿ ಬೆಳಗುತ್ತಿದೆ' ಎಂಬಲ್ಲಿ ಪರಜ್ಯೋತಿಯನ್ನು ಹೇಳಿರುವುದರಿಂದ ಅದರ ಕಾರ್ಯವಾದ ಸೂರ್ಯಾದಿಪ್ರಕಾಶಗಳು ಎಲ್ಲೆಲ್ಲಿಯೂ ಕಂಡುಬಂದರೂ, ಅವುಗಳಿಂದ ಯಾವ ಬಗೆಯ ಪ್ರಯೋಜನವೂ ಆಗುವುದಿಲ್ಲ. ಆದರೆ ಮಹಾಲಿಂಗವು ಸರ್ವವ್ಯಾಪಕವಾಗಿದ್ದರೂ ಭಕ್ತೋಪಾಸನೆಗಾಗಿ ಅದಕ್ಕೆ ದ್ಯುಲೋಕವೆಂಬ ಎಲ್ಲೆ ಇರುವುದು ಸಮಂಜಸವೇ ಆಗುವುದು. ಹಾಗಾದರೆ ತ್ರಿವೃತ್ಕೃತವಾಗುವ ಮೊದಲು ಹುಟ್ಟಿದ್ದ ತೇಜಸ್ಸನ್ನು ಇಲ್ಲಿ ಜ್ಯೋತಿ ಎಂದು ಕರೆಯಲಾಗುವುದಿಲ್ಲ, ಯಾಕೆಂದರೆ ಅಂತಹ ತೇಜಸ್ಸಿನಿಂದ ಯಾವ ಪ್ರಯೋಜನವೂ ಆಗುವುದಿಲ್ಲ" ಎಂದು.

ಹೇಳುವುದು ಯುಕ್ತವಲ್ಲ. ಯಾಕೆಂದರೆ; "ಅಗ್ನಿಯೇ ದೇವತೆಗಳಿಗೆ ಮೊದಲನೆಯವನು", "ಈ ಆದಿತ್ಯನೇ ಬ್ರಹ್ಮವು" ಈ ಬಗೆಯ ಶ್ರುತಿಗಳಲ್ಲಿ ಅಗ್ನ್ಯಾದಿ ದೇವತೆಗಳ ಉಪಾಸನವೇ ಫಲವೆಂದು ತಿಳಿಸಲಾಗಿದೆ. "ಅವುಗಳಲ್ಲಿ ಒಂದೊಂದನ್ನು ಮೂರು ಮೂರಾಗಿ ಮಾಡುವೆನು" ಎಂಬ ಶ್ರುತಿಯಂತೆ ತ್ರಿವೃತ್ಕೃತವಾದ ಜ್ಯೋತಿಯನ್ನೇ ಅಖಂಡವೆಂದು ಹೇಳಿರುವುದರಿಂದ ಅದೇ ಮುಖ್ಯವೆನಿಸುವುದು. ಎಲ್ಲೆಲ್ಲೂ ವ್ಯಾಪಿಸಿದ ಅಗ್ನಿಯೇ ಮೊದಲಾದ ಈ ಜ್ಯೋತಿಗಳಿಗೇ ಪರ ದಿವ್ಯ ಎಂಬ ಶಬ್ದಗಳನ್ನು ಮುಮುಕ್ಷುಗಳ ಹಿತದೃಷ್ಟಿಯಿಂದ ಶ್ರುತಿಯು ಉಪಯೋಗಿಸಿದೆ. ಇದರಲ್ಲಿ ಯಾವ ವಿರೋಧವೂ ಇಲ್ಲ. ಆದರೆ ಯಾವ ಎಲ್ಲೆಯೂ ಇಲ್ಲದ ಮಹಾಲಿಂಗಕ್ಕೆ ಒಂದು ಖಚಿತವಾದ ಎಲ್ಲೆ ಇರುವುದು ಯುಕ್ತವಾಗುವುದಿಲ್ಲ. ಆದ್ದರಿಂದ "ಎಲ್ಲಕ್ಕಿಂತಲೂ ಮೇಲಿನ ಉತ್ತಮ ಲೋಕಗಳಲ್ಲಿ ಇರುವ ಜ್ಯೋತಿ" ಎಂದು ಅನೇಕ ಆಧಾರಗಳನ್ನು ಹೇಳಿರುವ ಶ್ರುತಿಯು ಕಾರ್ಯರೂಪವಾದ ಅಗ್ನಿಯೇ ಮೊದಲಾದ ಜ್ಯೋತಿಯನ್ನೇ ನಿರ್ದೇಶಿಸಿದೆ. 'ಈ ಪುರುಷನೊಳಗಿರುವ ಜ್ಯೋತಿಯೇ ಅದು' ಎಂದು ಹೊಟ್ಟೆಯೊಳಗಿನ ಜ್ಯೋತಿಯನ್ನೇ ಪರಜ್ಯೋತಿ ಎಂದು ಹೇಳಿರುವುದರಿಂದ ಈ ಜ್ಯೋತಿಶ್ಶಬ್ದವು ಪರಮಾತ್ಮನಿಗೆ ಅನ್ವಯಿಸುವುದೆಂದು ಹೇಳುವುದು ಯುಕ್ತವಲ್ಲ; ಯೊಕೆಂದರೆ ಇಲ್ಲಿ ಹೋಲಿಕೆಗೆ ಮಾತ್ರ ಹಾಗೆ ಹೇಳಲಾಗಿದೆ. "ಅವನಿಗೆ ಭೂಮಿಯೇ ತಲೆ, ಏಕೆಂದರೆ ತಲೆಯೂ ಒಂದೇ. ಅಕ್ಷರನಾದ ಅವನೂ ಒಬ್ಬನೇ" ಎಂದು ಶ್ರುತಿಯಲ್ಲಿ ಪರಜ್ಯೋತಿಗೆ ಹೊಟ್ಟೆಯೊಳಗಿನ ಜ್ಯೋತಿಯಂತೆ ಒಂದು ಎಂಬುದಾಗಿ ಅವಯವವನ್ನು ತಿಳಿಸಿದ್ದರೂ ಹೊಟ್ಟೆಯೊಳಗಿನ ಜ್ಯೋತಿಯು ಪ್ರಕೃತಿ ಸಂಬಂಧವಾದ್ದೆಂಬುದು ನಿರ್ವಿವಾದವಾಗಿದೆ. ಇದೂ ಅಲ್ಲದೆ, 'ಇದು ಅದರ ದೃಷ್ಟಿ, ಇದು ಅದರ ಶ್ರುತಿ' ಎಂದೂ "ಇದನ್ನು ದೃಷ್ಟವೆಂದೂ, ಶ್ರುತವೆಂದೂ ತಿಳಿದು ಯಾವನುಉಪಾಸನ ಮಾಡುವನೋ ಅವನು ಪ್ರಕಾಶಮಾನನೂ ಪ್ರಸಿದ್ಧನೂ ಆಗುವನು" ಎಂದೂ ಶ್ರುತಿಯಲ್ಲಿ ಹೇಳಿರುವುದರಿಂದ ಹೀಗೆಯೇ ನಿಶ್ಚಯಿಸಬೇಕು. ಇದೂ ಅಲ್ಲದೆ, ಬಿಸಿಯಾಗಿರುವಿಕೆ, ಶಬ್ದಮಾಡುವಿಕೆ, ನೋಡುವಿಕೆ, ಕೇಳುವಿಕೆ ಮೊದಲಾದ ಧರ್ಮಗಳು ಪರಬ್ರಹ್ಮದಲ್ಲಿ ಸಂಭವಿಸದಿರುವುದರಿಂದ ಜ್ಯೋತಿಶ್ಶಬ್ದವು ಪರಬ್ರಹ್ಮಕ್ಕೆ ಅನ್ವಯಿಸಲಾರದು. ಅಥವಾ ಜ್ಯೋತಿಯು ಪುರುಷನೊಳಗೆ ಇರುವುದೆಂದು ಶ್ರುತಿಯಲ್ಲಿ ಹೇಳಿದಂತೆ ಜ್ಯೋತಿ ಎಂದರೆ ಜಠರಾಗ್ನಿಯೂ ಆಗಬಹುದು. ಒಟ್ಟಿನಲ್ಲಿ ಅದು ಪರಮೇಶ್ವರನಿಗೆ ಅನ್ವಯಿಸಲಾರದು. ಹೀಗೆ ಆಕ್ಷೇಪಬರುತ್ತದೆ.

**ಜ್ಯೋತಿಶ್ಚರಣಾಭಿಧಾನಾತ್. ಅತ್ರ ಜ್ಯೋತಿಶ್ಶಬ್ದೇನ ಶಿವಲಿಂಗಾತ್ಮಕಷಟ್ಸ್ಥಲಬ್ರಹ್ಮೈವ ವ್ಯಪದಿಶ್ಯತೆ. ಕಸ್ಮಾತ್? ಚರಣಾಭಿಧಾನಾತ್ ಪಾದಾಭಿಧಾನಾತ್. "ಪಾದೋಽಸ್ಯ ವಿಶ್ವಾ ಭೂತಾನಿ" ಇತ್ಯನೇನ ಜ್ಯೋತಿಷಃ ಪರಮಶಿವಸ್ಯ ಏಕಾಂಶತಯಾ ವಿಶ್ವಭೂತಾತ್ಮಕಕಾರ್ಯವಿಭೂತಿರ್ವ್ಯಪದಿಶ್ಯತೆ 'ತ್ರಿಪಾದಸ್ಯಾಮೃತಂ ದಿವಿ' ಇತ್ಯನೇನ ತ್ರಿಪಾ**

ದಾಮೃತಂ ದ್ಯುಸಂಬಂಧಿರೂಪಂ ನಿತ್ಯೈಶ್ವರ್ಯಂ ಕಾರಣವಿಭೂತಿರ್ನಿರ್ದಿಶ್ಯತೆ. ದ್ಯುಶಬ್ದಸ್ಯಾಕಾಶವಾಚಿತ್ವಾತ್ "ಪರೋ ದಿವೋ ಜ್ಯೋತಿ" ಇತ್ಯಾಕಾಶಾಂತರ್ವರ್ತಿತ್ವಸ್ಯ ಸೂರ್ಯಾದೀನಾಂ ಸಂಭವೇಽಪಿ ನಿರತಿಶಯದೀಪ್ತಿಮತ್ತ್ವಸ್ಯಾಸಂಭವಾತ್, ತತ್ಪರಿಗ್ರಹೇ ಪ್ರಕೃತಹಾನಾಪ್ರಕೃತಗ್ರಹಣದೋಷಪ್ರಸಂಗಾತ್ ಜ್ಯೋತಿಶ್ಶಬ್ದೇನ ಬ್ರಹ್ಮೈವ ನಿರ್ದಿಶ್ಯತೆ. "ನ ತತ್ರ ಸೂರ್ಯೋ ಭಾತಿ" "ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಂ। ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿರ್ಯತ್ತದಾತ್ಮವಿದೋ ವಿದುಃ॥" "ತಂ ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಂ" ಇತ್ಯಾದಿಶ್ರುತಿಶತೇನ ಪರಮಶಿವಸ್ಯೈವ ಪರಜ್ಯೋತಿಷ್ಟ್ವವ್ಯವಸ್ಥಾಪನಾತ್. ಕಿಂಚ, ಶಾಂಡಿಲ್ಯವಿದ್ಯಾಯಾಂ ಪರಜ್ಯೋತಿಸ್ಸ್ವರೂಪತ್ವಂ ಪರಮೇಶ್ವರಸ್ಯೈವೋಪದಿಶ್ಯತೆ, ಕಾರ್ಯಜ್ಯೋತಿಷಾ ದ್ಯುಮರ್ಯಾದತ್ವಸಂಭವೇಽಪಿ ಅಸ್ಯ ಬ್ರಹ್ಮಪ್ರಕರಣತ್ವಾಜ್ಜಾಠರಾಗ್ನಿಸೂರ್ಯಾದಿಪರಿಚ್ಛಿನ್ನಕಾರ್ಯಜ್ಯೋತಿಷಾಂ ಸರ್ವದ್ಯುಸಂಬಂಧಿತ್ವಂ ಸರ್ವಾಂತರತ್ವಂ ಚ ಸರ್ವಥಾ ನ ಸಂಭವತಿ. ನನು "ಯೇನ ಸೂರ್ಯಸ್ತಪತಿ ತೇಜಸೇದ್ಧಃ" ಇತಿ ಶ್ರುತ್ಯಾ ಚಕ್ಷುರ್ಗ್ರಾಹ್ಯಪ್ರತ್ಯಕ್ಷಜ್ಯೋತಿಷ್ಯೇವ ಜ್ಯೋತಿಶ್ಶಬ್ದೋ ಹ್ಯನುವರ್ತತೆ. ಇತಿ ಚೇನ್ನ, ತಥಾ ವಿನಿಗಮಕಾಭಾವಾತ್. "ವಾಚೈವಾಯಂ ಜ್ಯೋತಿಷಾಽಽಸ್ತೇ" "ಮನೋಜ್ಯೋತಿರ್ಜುಷತಾಂ" ಇತ್ಯಾದೌ ತತೋಽನ್ಯತ್ರಾಪಿ ಪ್ರಯೋಗದರ್ಶನಾತ್. ಯತ್ ಸ್ಥೂಲಸೂಕ್ಷ್ಮಚಿದಚಿತ್ಪ್ರಪಂಚಾವಭಾಸಕಂ ತತ್ ಜ್ಯೋತಿರ್ವಾಕ್ಯೇನ ಬೋಧ್ಯತೇ, ನಿರವಯವಸ್ಯಾಪಿ ಪರಬ್ರಹ್ಮಣೋ ಭಕ್ತೋಪಾಸನಾರ್ಥಂ ಹೃದಯಾದಿಪ್ರದೇಶೇಷು ಸಾವಯವತ್ವೋಪಾಸನಂ ನ ವಿರುಧ್ಯತೇ. ತದುಭಯಸ್ಯಾಪಿ ಬ್ರಹ್ಮಣಸ್ಸ್ವಾಭಾವಿಕತ್ವಾತ್. 'ದ್ವೇ ವಾವ ಬ್ರಹ್ಮಣೋ ರೂಪೇ' ಇತಿ ಶ್ರುತಿದರ್ಶನಾತ್. ಕಿಂಚ 'ಹೃತ್ಪುಂಡರೀಕಂ ವಿರಜಂ' ಇತ್ಯಾದಿನಾ ಹೃದಯಪುಂಡರೀಕಂ ಪ್ರದರ್ಶ್ಯ "ಉಮಾಸಹಾಯಂ—ತಮಸಃ ಪರಸ್ತಾತ್" ಇತ್ಯನೇನ ಸಾವಯವಪರಮೇಶ್ವರೋಪಾಸನಸ್ಯ ನಿರವಯವಸಾಕ್ಷಿಚೈತನ್ಯಪ್ರಾಪಕತ್ವೋಪದೇಶಾತ್ ಕೌಕ್ಷೇಯಶ್ರುತಿವಿಹಿತಜ್ಯೋತಿಃಪ್ರತೀಕೋಪಾಸನಮಪ್ಯವಿರುದ್ಧಂ. ಜಾಠರಾಗ್ನಿಸೂರ್ಯಾದೀನಾಂ ಪಾದಚತುಷ್ಟಯವತ್ತ್ವಾದರ್ಶನಾತ್ ಪರಮೇಶ್ವರಪರತ್ವೇ ಶ್ರುತ್ಯುಕ್ತಯಾವದ್ಧರ್ಮಸಂಭವಾತ್ ಜ್ಯೋತಿಶ್ಶಬ್ದಸ್ಯ ತತ್ಪರತ್ವಂ ನಿಷ್ಪ್ರತ್ಯೂಹಂ.

ಈ ಬಗೆಯ ಆಕ್ಷೇಪವನ್ನು ಸೂತ್ರವು ಹೀಗೆ ಸಮಾಧಾನಮಾಡುತ್ತದೆ. ಜ್ಯೋತಿಶ್ಚರಣಾಭಿಧಾನಾತ್-ಇಲ್ಲಿ ಜ್ಯೋತಿ ಎಂದರೆ ಶಿವಲಿಂಗಸ್ವರೂಪವಾದ ಷಟ್ಸ್ಥಲಬ್ರಹ್ಮ

ವೆಂದು ಸ್ಪಷ್ಟವಾಗಿದೆ. ಏಕೆಂದರೆ ಶ್ರುತಿಯಲ್ಲಿ ಇದಕ್ಕೆ ಚರಣಗಳನ್ನು ಹೇಳಿದೆ. "ಇದರ ಮಹಿಮೆ ಇಷ್ಟು. ಅದಕ್ಕಿಂತಲೂ ಹೆಚ್ಚಿನವನು ಪುರುಷ. ಅವನ ಒಂದು ಪಾದವೇ ಸಕಲ ವಿಶ್ವವೂ ಆಗಿದೆ. ಇತರ ಮೂರು ಪಾದಗಳು ಅಮೃತವೇ ಆಗಿವೆ" ಎಂಬ ಶ್ರುತಿಯಲ್ಲಿ ಪಾದವೆಂಬ ಪದವು ಜ್ಯೋತಿರೂಪನಾದ ಪರಶಿವನ ಒಂದು ಅಂಶವಾಗಿರುವ ವಿಶ್ವದ ಕಾರ್ಯ ವಿಭೂತಿಯನ್ನು ತಿಳಿಸುತ್ತದೆ. ಉಳಿದ ಮೂರು ಪಾದಗಳು ಅಮೃತಮಯವಾಗಿದ್ದು ದ್ಯುಸಂಬಂಧದಿಂದ ನಿತ್ಯೈಶ್ವರ್ಯವೆನಿಸಿದ ಕಾರಣ ವಿಭೂತಿಯನ್ನು ತಿಳಿಸುತ್ತವೆ. ದ್ಯುಶಬ್ದವು ಆಕಾಶವನ್ನು ಬೋಧಿಸುವುದರಿಂದ ಆಕಾಶದೊಳಗೆ ಇರುವಿಕೆ ಎಂಬುದು ಸೂರ್ಯಾದಿಗಳಿಗೆ ಸಂಭವಿಸಿದರೂ, ನಿರತಿಶಯ ಪ್ರಕಾಶ ಅವರ್ಯಾರಿಗೂ ಅನ್ವಯಿಸುವುದಿಲ್ಲ. ಸೂರ್ಯನಿಗೇ ಇದು ಅನ್ವಯಿಸುತ್ತದೆ ಎಂದು ಹೇಳಿದರೆ, ಅವ್ಯವಸ್ಥೆಯುಂಟಾಗುತ್ತದೆ ಮತ್ತು ಪ್ರಕೃತವಾದ್ದನ್ನು ತೊರೆದು ಅಪ್ರಕೃತವಾದ್ದನ್ನು ಪ್ರಾರಂಭಿಸುವ ಪ್ರಸಂಗ ಒದಗುವುದು. ಆದ್ದರಿಂದ ಜ್ಯೋತಿಶ್ಶಬ್ದವು ಪರಬ್ರಹ್ಮಕ್ಕೇ ಅನ್ವಯಿಸುತ್ತದೆ. "ಅಲ್ಲಿ ಸೂರ್ಯ, ಚಂದ್ರ, ನಕ್ಷತ್ರ, ವಿದ್ಯುತ್ತು, ಬೆಂಕಿ ಇವು ಯಾವೂ ಪ್ರವೇಶಿಸುವಂತಿಲ್ಲ. ಅವನ ಪ್ರಕಾಶವನ್ನು ಅವಲಂಬಿಸಿಕೊಂಡೇ ಇವೆಲ್ಲವೂ ಬೆಳಗುತ್ತಿರುವುವು". "ಹಿರಣ್ಮಯವಾದ ದಹರಾಕಾಶದಲ್ಲಿ ಶುದ್ಧ ನಿಷ್ಕಲಲಿಂಗವು ಶೋಭಿಸುತ್ತದೆ. ಇದು ಅಮೃತವೂ, ಶುಭ್ರವೂ, ಉತ್ತಮವೂ ಆದ ಜ್ಯೋತಿ ಎನಿಸಿದೆ. ಈ ಪರಂಜ್ಯೋತಿಯನ್ನು ಜ್ಞಾನಿಗಳು ತಿಳಿದು ಉಪಾಸನಮಾಡುತ್ತಾರೆ". ಹೀಗೆ ಅನೇಕ ಶ್ರುತಿಗಳಲ್ಲಿ ಪರಶಿವನನ್ನೇ ಪರಂಜ್ಯೋತಿಯೆಂದು ವ್ಯವಸ್ಥೆಮಾಡಲಾಗಿದೆ. ಇದೂ ಅಲ್ಲದೆ ಶಾಂಡಿಲ್ಯವಿದ್ಯೆಯಲ್ಲೂ ಪರಶಿವನೇ ಪರಂಜ್ಯೋತಿಯೆಂದು ಹೇಳಲಾಗಿದೆ. ಕಾರ್ಯಜ್ಯೋತಿಗಳಲ್ಲಿ ಸ್ವರ್ಗದ ಎಲ್ಲೆ ಸಂಭವಿಸಿದರೂ, ಇದು ಬ್ರಹ್ಮಪ್ರಕರಣವಾದ್ದರಿಂದ ಜಠರಾಗ್ನಿ, ಸೂರ್ಯ ಮೊದಲಾದ ಕಾರ್ಯಜ್ಯೋತಿಗಳಿಗೆ ದ್ಯುಸಂಬಂಧವೂ, ಎಲ್ಲರೊಳಗೆ ಅಡಗುವಿಕೆಯೂ ಎಂದಿಗೂ ಸಂಭವಿಸಲಾರವು. 'ಯಾವ ತೇಜಸ್ಸಿನಿಂದ ಕಾಂತಿಯನ್ನು ಪಡೆದು ಸೂರ್ಯನು ಬೆಳಗುತ್ತಿರುವನೋ' ಎಂಬ ಶ್ರುತಿಯಲ್ಲಿ ಕಣ್ಣಿಂದ ನೋಡಬಹುದಾದ ತೇಜಸ್ಸನ್ನೇ ಜ್ಯೋತಿಶ್ಶಬ್ದವು ಬೋಧಿಸುತ್ತದೆ ಎಂದು ಹೇಳುವುದು ಸಮಂಜಸವಲ್ಲ; ಏಕೆಂದರೆ ಬೇರೆ ಅರ್ಥದಲ್ಲಿಯೂ ಈ ಶಬ್ದಕ್ಕೆ ಪ್ರಯೋಗವಿರುವುದರಿಂದ ಹಾಗೆ ಹೇಳಲು ಪ್ರಮಾಣವಿಲ್ಲ. "ಈತನು ಮಾತೆಂಬ ಜ್ಯೋತಿಯಿಂದಲೇ ಬೆಳಗುತ್ತಾನೆ" "ಮನಸ್ಸೆಂಬ ಜ್ಯೋತಿ" ಹೀಗೆ ಬೇರೆ ಕಡೆಗಳಲ್ಲೂ ಜ್ಯೋತಿಶ್ಶಬ್ದದ ಪ್ರಯೋಗ ಕಂಡುಬಂದಿದೆ. ವಿಶ್ವವನ್ನು ಬೆಳಗುವ ಯಾವ ಜ್ಯೋತಿಯಿದೆಯೋ ಅದನ್ನೇ ಈ ಪದವು ಬೋಧಿಸುತ್ತದೆ. ನಿರವಯವವಾಗಿದ್ದರೂ ಮಹಾಲಿಂಗವನ್ನು ಭಕ್ತರು ತಮ್ಮ ಸೌಕರ್ಯಕ್ಕಾಗಿ ಹೃದಯವೇ ಮೊದಲಾದ ಪ್ರದೇಶಗಳಲ್ಲಿ ಸಾವಯವನೆಂದು ಪೂಜಿಸುತ್ತಾರೆ. ನಿರವಯವ, ಸಾವಯವಗಳೆರಡೂ ಬ್ರಹ್ಮದ ಸ್ವಭಾವಗಳೆನಿಸಿವೆ. "ಇವೆರಡೂ ಬ್ರಹ್ಮದ ರೂಪಗಳು" ಎಂದು ಶ್ರುತಿಯಲ್ಲಿ ಹೇಳಿದೆ. "ಇದೂ ಅಲ್ಲದೆ, ಹೃದಯಕಮಲ

ಶುದ್ಧವೂ ದೋಷರಹಿತವೂ ಆಗಿದೆ' ಎಂದು ಹೃತ್ಕಮಲವನ್ನು ತಿಳಿಸಿ, "ಸಾಕಾರ ಜ್ಯೋತಿಯನ್ನು ಧ್ಯಾನಿಸಿ ಯೋಗಿಯು ನಿಷ್ಕಲಜ್ಯೋತಿಯನ್ನು ಹೊಂದುತ್ತಾನೆ" ಎಂಬುದರಿಂದ ಸಾಕಾರದ ಉಪಾಸನೆಯಿಂದ ನಿರಾಕಾರಚೈತನ್ಯವು ದೊರಕುವುದಾಗಿ ಶ್ರುತಿ ತಿಳಿಸಿದೆ. ಕೌಕ್ಷೇಯಶ್ರುತಿಯಲ್ಲಿ ಹೇಳಿದ ಜ್ಯೋತಿಃಪ್ರತೀಕದ ಉಪಾಸನವೂ ಹೀಗೆಯೇ ಅವಿರುದ್ಧವೆನಿಸಿದೆ. ಜಠರಾಗ್ನಿ, ಸೂರ್ಯ ಇವಕ್ಕೆ ಪಾದಗಳಿರುವುದಾಗಿ ಕಂಡುಬಂದಿಲ್ಲವಾದ್ದರಿಂದಲೂ, ಅವು ಪರಮೇಶ್ವರನಲ್ಲವೆಂದು ಶ್ರುತಿಯಲ್ಲಿ ಹೇಳಿರುವುದರಿಂದಲೂ ಜ್ಯೋತಿಶ್ಶಬ್ದವು ಸರ್ವಕಾರಣನಾದ ಶಿವನೊಬ್ಬನಿಗೇ ಅನ್ವಯಿಸುವುದೆಂಬುದು ನಿರ್ವಿವಾದವಾಗಿದೆ.

'ಗಾಯತ್ರೀ ವಾ ಇದಂ ಸರ್ವಂ' ಇತಿ ಶ್ರುತೌ ಸರ್ವಾತ್ಮಕತ್ವ ಪಾದಚತುಷ್ಟಯವತ್ತ್ವಯೋರ್ಗಾಯತ್ರೀದೇವತಾಯಾ ದರ್ಶನಾತ್ ಸೈವಾತ್ರ ಜ್ಯೋತಿಶ್ಶಬ್ದೇನ ವ್ಯಪದಿಶ್ಯತೆ ಇತ್ಯಾಶಂಕ್ಯಾಹ—ಛಂದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗಮಾತ್ತಥಾಹಿ ದರ್ಶನಂ ||೨೬||

ಪೂರ್ವಸೂತ್ರೇ ಜ್ಯೋತಿಶ್ಶಬ್ದೇನ ಶಿವಲಿಂಗಾಖ್ಯಂ ಪರ ಬ್ರಹ್ಮ ಪ್ರಸಾಧ್ಯ, ಪರಮಶಿವವಿಮರ್ಶಶಕ್ತ್ಯಾತ್ಮಕಗಾಯತ್ರೀವಾಕ್ಯದ್ವಾರಾ ಗುರುಲಿಂಗಮುಪದಿಶತಿ. "ಗಾಯತ್ರೀ ವಾ ಇದಂ ಸರ್ವಂ" ಇತಿ ಗಾಯತ್ರೀಮುಪಕ್ರಮ್ಯ ತಾಮೇವ ಭೂತಪೃಥಿವೀಶರೀರಹೃದಯವಾಕ್ಪ್ರಾಣಿ ಭೇದೈರ್ವ್ಯಾಖ್ಯಾಯ 'ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ' ಇತ್ಯಾದಿನಾ ತಸ್ಯಾಸ್ಸರ್ವಾತ್ಮಕತ್ವಾದಿಧರ್ಮಾನ್ನಿರ್ದಿಶ್ಯ 'ಯದ್ವೈ ತದ್ಬ್ರಹ್ಮ' ಇತಿ ಛಂದಸೋ ಬ್ರಹ್ಮಶಬ್ದವ್ಯವಸ್ಥಾಪನಾತ್ ಪೂರ್ವಸೂತ್ರೋಕ್ತಃ ಪರಮಶಿವ ಏವಾತ್ರ ನ ವ್ಯಪದಿಶ್ಯತ ಇತಿ ಚೇನ್ನ, ತಥಾ ಚೇತೋಽರ್ಪಣನಿಗಮಾತ್ ಚೇತೋಽರ್ಪಣಸ್ಯ ಚಿತ್ತವಿಕ್ಷೇಪಣಸ್ಯ ನಿಗಮಾತ್ಕಥನಾತ್ ಗಾಯತ್ರೀಶಬ್ದೇನಾತ್ರ ನಹಿ ಛಂದೋಮಾತ್ರಗಾಯತ್ರ್ಯುಪದಿಶ್ಯತೇ, ಛಂದೋಮಾತ್ರಗಾಯತ್ರ್ಯಾಃ ಸರ್ವಾತ್ಮಕತ್ವಾಸಂಭವಾತ್. ಪರಶಿವಸ್ಯೈವ ಗಾಯತ್ರೀಚೇತೋಽರ್ಪಣಮಿಹ ನಿಗಮ್ಯತೇ. ಬ್ರಹ್ಮಣಃ ಪರಶಿವಸ್ಯ ಗಾಯತ್ರೀಸಾದೃಶ್ಯಾನುಸಂಧಾನಂ ಫಲಾಯೋಪದಿಶ್ಯತ ಇತ್ಯರ್ಥಃ. ಸಂಭವತಿ ಚ "ಪಾದೋಽಸ್ಯ–ದಿವಿ" ಇತಿ ಚತುಷ್ಪದೋ ಬ್ರಹ್ಮಣಶ್ಚತುಷ್ಪದಯಾ ಗಾಯತ್ರ್ಯಾ ಸಾದೃಶ್ಯಂ. ಚತುಷ್ಪದಾ ಗಾಯತ್ರೀ ಚ ಕ್ವಚಿದ್ದೃಶ್ಯತೇ. ತದ್ಯಥಾ–ತಥಾಹಿ ದರ್ಶನಂ, ಅನ್ಯತ್ರಾಪಿ ಬಾಹ್ಯಾಭ್ಯಂತರೇಷು ದಹರಪುಂಡರೀಕಸೂರ್ಯಾಗ್ನ್ಯಾದಿಸ್ಥಾನೇಷು ಸಾವಯವತ್ವೇನ ಲಿಂಗರೂಪೇಣ ಅಣ್ವಾದಿರೂಪೇಣ ಚ ಪರಬ್ರಹ್ಮೋಪಾಸನಂ ದೃಶ್ಯತ ಇತಿ ದರ್ಶನಂ ದೃಷ್ಟಮಿತಿ ಭಾವಃ. ಕೈವಲ್ಯೇ 'ಹೃತ್ಪುಂಡರೀಕಂ ವಿರಜಂ' ಇತ್ಯಾರಭ್ಯ ಹೃದಯಕಮಲಂ ಪರಮಾತ್ಮ

ಸ್ಥಾನತ್ವೇನ ನಿರೂಪ್ಯ "ಉಮಾಸಹಾಯಂ-ಧ್ಯಾತ್ವಾ" ಇತ್ಯಾದಿನಾ ಪರಮೇಶ್ವರಸ್ಯ ಸಾವಯವಾತ್ಮಕಂ ರೂಪಂ ಮುಮುಕ್ಷೂಣಾಂ ಧ್ಯೇಯಮಿತಿ ನಿರೂಪಿತಂ. ಯಜುಶ್ಶಾಖಾಯಾಂ "ನಿಧನಪತಯೇ ನಮಃ" ಇತ್ಯಾರಭ್ಯ "ಏತತ್ಸೋಮಸ್ಯ ಪವಿತ್ರಂ" ಇತ್ಯಂತಂ ಲಿಂಗಸ್ಯ ಪರಬ್ರಹ್ಮಾತ್ಮಕತ್ವೇನ ಸರ್ವೈರುಪಾಸ್ಯತ್ವಪ್ರಕಟನಾಯ ಪ್ರತಿಪದಂ ನಮಸ್ಕಾರಪೂರ್ವಕಂ ಶ್ರುತಿರ್ಹಿ ಪ್ರತಿಪಾದಯತಿ. ಅತಶ್ಶಿವಲಿಂಗಾರಾಧನಮಪಿ ಶ್ರೋತ್ರಿಯೈರ್ವೈದಿಕೈರ್ಬ್ರಾಹ್ಮಣೈರವಶ್ಯಂ ಕರ್ತವ್ಯಂ. "ಅಣೋರಣೀಯಾನ್ ಮಹತೋ ಮಹೀಯಾನಾತ್ಮಾ ಗುಹಾಯಾಂ ನಿಹಿತೋಽಸ್ಯ ಜಂತೋಃ। ತಮಕ್ರತುಂ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮೀಶಂ॥" ಇತ್ಯನೇನಾಣುರೂಪೋಪಾಸನಮಪಿ ಪರಮೇಶ್ವರಸ್ಯ ಬಹುಧಾನ್ಯತ್ರ ದೃಷ್ಟಂ. ತಸ್ಮಾತ್ 'ಗಾಯತ್ರೀ ವಾ ಇದಂ ಸರ್ವಂ' ಇತಿ ಶ್ರುತೌ ನಾಕ್ಷರಾವಚ್ಛಿನ್ನಮಾತ್ರಗಾಯತ್ರ್ಯಾಃ ಸರ್ವಾತ್ಮಕತ್ವಮುಪದಿಶ್ಯತೇ, ಕಿಂತು ಗಾಯತ್ರ್ಯವಚ್ಛಿನ್ನಜಗತ್ಕಾರಣಂ ಬ್ರಹ್ಮೈವೇಹ 'ಸರ್ವಂ' ಇತಿ ವ್ಯಪದಿಶ್ಯತೆ.

'ಇದೆಲ್ಲವೂ ಗಾಯತ್ರಿಯೇ' ಎಂಬ ಶ್ರುತಿಯಲ್ಲಿ ಗಾಯತ್ರೀ ದೇವತೆಗೆ ನಾಲ್ಕು ಪಾದಗಳಿರುವುವೆಂದೂ, ಅದೇ ಸರ್ವಾತ್ಮಕವೆಂದೂ ಹೇಳಿರುವುದರಿಂದ ಗಾಯತ್ರಿಯೇ ಜ್ಯೋತಿ ಎನಿಸಲಿ ಎಂದು ಆಶಂಕಿಸಿ ನಿರಾಕರಿಸುತ್ತಾನೆ-**ಛಂದೋಽಭಿಧಾನಾನ್ನೇತಿ ಚೇನ್ನತಥಾ ಚೇತೋಽರ್ಪಣನಿಗದಾತ್ತಥಾ ಹಿ ದರ್ಶನಂ॥೨೬॥**

ಹಿಂದಿನ ಸೂತ್ರದಲ್ಲಿ ಜ್ಯೋತಿಶ್ಶಬ್ದದಿಂದ ಶಿವಲಿಂಗವೆಂಬ ಪರಬ್ರಹ್ಮವನ್ನು ಸಾಧಿಸಿ, ಈಗ ಸೂತ್ರಕಾರನು ಪರಶಿವನ ವಿಮರ್ಶಶಕ್ತಿ ಎನಿಸಿದ ಗಾಯತ್ರೀ ಮಂತ್ರದಿಂದ ಗುರುಲಿಂಗವನ್ನು ತಿಳಿಸುತ್ತಾನೆ. 'ಗಾಯತ್ರಿಯೇ ಈ ವಿಶ್ವ'ವೆಂದು ಉಪಕ್ರಮಿಸಿ, ಅದನ್ನೇ ಭೂತಪೃಥಿವಿ, ಶರೀರ, ಹೃದಯ, ಪ್ರಾಣ ಎಂಬ ಭೇದಗಳಿಂದ ತಿಳಿಸಿ, "ಆ ಈ ಗಾಯತ್ರಿಯು ನಾಲ್ಕು ಪಾದಗಳಿಂದ ಆರು ಬಗೆಯಾಗಿದೆ. ಇದನ್ನೇ ಋಕ್ಕು ಹೇಳಿದೆ. ಇದರ ಮಹಿಮೆ ಅಷ್ಟು" ಎಂಬುದರಿಂದ ಅದನ್ನು ಸರ್ವಾತ್ಮಕವೆಂದು ಬೋಧಿಸಿ 'ಯಾವ ಈ ಬ್ರಹ್ಮವೋ' ಎಂದು ಛಂದಸ್ಸಿಗೆ ಬ್ರಹ್ಮಶಬ್ದವನ್ನು ಪ್ರಯೋಗಿಸಿರುವುದರಿಂದಲೂ, ಇಲ್ಲಿ ಛಂದಸ್ಸನ್ನೇ ಪ್ರಕೃತವಾಗಿ ಹೇಳಿರುವುದರಿಂದಲೂ ಹಿಂದಿನ ಸೂತ್ರದಲ್ಲಿ ಹೇಳಿರುವ ಪರಶಿವನನ್ನು ಇಲ್ಲಿನ ಗಾಯತ್ರೀಪದವು ಬೋಧಿಸಲಾರದು ಎಂದು ಆಕ್ಷೇಪಬಂದರೆ ಚಿತ್ತವನ್ನು ಅರ್ಪಿಸಬೇಕೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಗಾಯತ್ರೀ ಛಂದಸ್ಸಿನಲ್ಲಿ ಚಿತ್ತದ ಅರ್ಪಣೆಗೆ ಅವಕಾಶವಿಲ್ಲದ್ದರಿಂದ ಈ ಆಕ್ಷೇಪ ನಿಲ್ಲುವುದಿಲ್ಲ. ಗಾಯತ್ರೀ ಛಂದಸ್ಸಿನ ಮೂಲಕ ಅದರಲ್ಲಿ ಅನುಗತವಾದ ಬ್ರಹ್ಮದಲ್ಲಿ ಚಿತ್ತವನ್ನು ಅರ್ಪಿಸಬೇಕೆಂದು ಹೇಳಲಾಗಿದೆ. ಇಲ್ಲಿ ಗಾಯತ್ರೀಪದವು ಗಾಯತ್ರೀ ಛಂದಸ್ಸೊಂದನ್ನೇ ತಿಳಿಸುವುದಿಲ್ಲ; ಯಾಕೆಂದರೆ ಛಂದಸ್ಸೆನಿಸಿದ

ಗಾಯತ್ರಿಗೆ ಸರ್ವಾತ್ಮಕತ್ವವು ಸಂಭವಿಸುವುದಿಲ್ಲ. ಆದರೆ ಅದರ ಮೂಲಕ ಪರಶಿವನಲ್ಲಿ ಚೇತೋಽರ್ಪಣವೇ ಇಲ್ಲಿನ ಉದ್ದೇಶವಾಗಿದೆ. ಪರಶಿವನಲ್ಲಿ ಗಾಯತ್ರಿಯ ಸಾದೃಶ್ಯವನ್ನು ಅನುಸಂಧಾನಮಾಡುವುದರಿಂದ ಉತ್ತಮಫಲ ದೊರಕುವುದೆಂಬ ಅರ್ಥವು ಇಲ್ಲಿ ಸೂಚಿತವಾಗಿದೆ. ಅವನ ಒಂದು ಪಾದವು ವಿಶ್ವವನ್ನು ವ್ಯಾಪಿಸಿ ಉಳಿದ ಮೂರು ಪಾದಗಳು ಅಮೃತವಾಗಿರುವುದರಿಂದ ಗಾಯತ್ರಿಯಂತೆ ಬ್ರಹ್ಮಕ್ಕೂ ನಾಲ್ಕು ಪಾದಗಳಿವೆ ಎಂಬ ಸಾದೃಶ್ಯವನ್ನು ಹೇಳುವುದೇ ಇಲ್ಲಿ ತಾತ್ಪರ್ಯವೆನಿಸಿದೆ. ತಥಾಹಿ ದರ್ಶನಂ-ಹಾಗೆ ಬೇರೆ ಕಡೆಗಳಲ್ಲೂ ಕಂಡುಬಂದಿದೆ. ದೇಹದ ಒಳಗೆ ಹೊರಗೆ, ಹೃದಯ, ಕಣ್ಣು, ಸೂರ್ಯ ಮೊದಲಾದ ಸ್ಥಾನಗಳಲ್ಲಿ ಸಾವಯವನಾಗಿ ಲಿಂಗರೂಪದಿಂದಲೂ ಅಣುರೂಪದಿಂದಲೂ ಪರಮೇಶ್ವರನ ಉಪಾಸನವು ಕಂಡುಬಂದಿದೆ. ಈ ಬಗೆಯ ದರ್ಶನವಿರುವುದರಿಂದ ಗಾಯತ್ರಿಯ ಮೂಲಕ ಶಿವನನ್ನೇ ಉಪಾಸನಮಾಡಬೇಕು. ಕೈವಲ್ಯದಲ್ಲಿ ಹೃದಯಕಮಲವನ್ನು ಪರಶಿವನ ಸ್ಥಾನವೆಂದು ತೋರಿಸಿ ಅದರಲ್ಲಿ ದಿವ್ಯಮಂಗಳವಿಗ್ರಹನಾದ ಪರಮೇಶ್ವರನ ದಿವ್ಯರೂಪವನ್ನು ಮುಮುಕ್ಷುವಿಗೆ ಧ್ಯಾನಯೋಗ್ಯವೆಂದು ನಿರೂಪಿಸಲಾಗಿದೆ. ಯಜುರ್ವೇದದಲ್ಲಿ "ನಿಧನಪತಯೇ ನಮಃ-ಪಾಣಿಮಂತ್ರಂ ಪವಿತ್ರಂ" ಎಂಬುದರಿಂದ ಲಿಂಗವನ್ನು ಪರಬ್ರಹ್ಮವಾದ್ದರಿಂದ ಎಲ್ಲರಿಗೂ ಉಪಾಸ್ಯವೆಂದು ತಿಳಿಸಲಿಕ್ಕಾಗಿಯೇ ಪ್ರತಿಯೊಂದು ಪದದಲ್ಲೂ 'ನಮಃ' ಎಂಬ ಪದವನ್ನು ಸೇರಿಸಲಾಗಿದೆ. ಆದ್ದರಿಂದ ವೈದಿಕರೆಲ್ಲರೂ ಶಿವಲಿಂಗದ ಆರಾಧನವನ್ನು ಅವಶ್ಯವಾಗಿ ಆಚರಿಸಬೇಕು. "ಅಣುವಿಗಿಂತಲೂ ಅಣುವೂ, ಮಹತ್ತಿಗಿಂತಲೂ ಮಹತ್ತೂ ಆದ ಆತ್ಮ ಈ ಜೀವನ ಎದೆಗುಹೆಯಲ್ಲಿ ನೆಲಸಿದೆ" ಇಲ್ಲಿ ಪರಮೇಶ್ವರನನ್ನು ಅಣುರೂಪದಿಂದ ಉಪಾಸನಮಾಡುವುದೂ ಸಹ ಕಂಡುಬಂದಿದೆ. ಆದ್ದರಿಂದಲೇ 'ಇದೆಲ್ಲವೂ ಗಾಯತ್ರಿ' ಎಂಬ ಶ್ರುತಿಯು ಗಾಯತ್ರೀಛಂದಸ್ಸಿನ ಅಕ್ಷರಗಳನ್ನು ಸರ್ವಾತ್ಮಕವೆಂದು ಬೋಧಿಸಿಲ್ಲ; ಆದರೆ, ಅಲ್ಲಿ ಹೇಳಿರುವ ಜಗತ್ಕಾರಣವಾದ ಬ್ರಹ್ಮ ಈ ವಿಶ್ವವಾಗಿದೆ ಎಂದು ಬೋಧಿಸುತ್ತದೆ.

### ಗಾಯತ್ರೀವಿಚಾರಃ

**ನನು "ಯೋ ದೇವಸ್ಸವಿತಾಽಸ್ಮಾಕಂ ಧಿಯೋ ಧರ್ಮಾರ್ಥಗೋಚರಾಃ । ಪ್ರೇರಯೇದಸ್ಯ ಯದ್ಭರ್ಗಸ್ತದ್ವರೇಣ್ಯಮುಪಾಸ್ಮಹೇ ॥" ಇತಿ ಸ್ಮೃತೌ ತಸ್ಯಾಸ್ಸೂರ್ಯಪ್ರತಿಪಾದಕತ್ವದರ್ಶನಾತ್ಕಥಂ ಶಿವಪ್ರತಿಪಾದಕತ್ವಂ ಇತಿ ಚೇನ್ನ, ಭರ್ಗಪದಸ್ಯ ತೇಜಸಿ ಪ್ರಯೋಗಸ್ಯ ಕ್ವಾಪ್ಯದರ್ಶನಾತ್. 'ಹರಃ ಸ್ಮರಹರೋ ಭರ್ಗಃ' ಇತಿ ನಿಘಂಟುವಶಾದ್ಭರ್ಗಪದಸ್ಯ ಶಿವೇ ರೂಢತ್ವಾತ್. ಸವಿತುರ್ವರೇಣ್ಯಮಿತಿ ಸೂರ್ಯಾದಿದೇವತಾತ್ವಸ್ಯ 'ಆಸತ್ಯೇನ', 'ಅಗ್ನಿಂದೂತಂ', 'ಕದ್ರುದ್ರಾಯ' ಇತ್ಯಾದೇಗ್ರ್ರಹಯಜ್ಞೇ ಬೋಧಾಯನೋಕ್ತಸ್ಯ ವಿವಕ್ಷಿತತ್ವಾತ್, ವರೇಣ್ಯಪದಸ್ಯ ಸಸಂಬಂಧಿಕತ್ವೇನ ಸಂಬಂಧಿಸಾಕಾಂಕ್ಷತ್ವಾತ್, ಸನ್ನಿಹಿತೇನ ಸವಿತ್ರ**

ಪದೇನ ಜನಿತಾನ್ವಯಬೋಧಕತ್ವಾತ್. ಯಚ್ಛಬ್ದಸ್ಯಾಪಿ ವಿಶೇಷಣಪದತ್ವೇನ ಸಮಾನಲಿಂಗವಿಭಕ್ತಿವಚನವಿಶೇಷ್ಯಸಾಕಾಂಕ್ಷತ್ವಾತ್, ಭರ್ಗಪದಸ್ಯ ತಾದೃಶತ್ವೇನ ತದನ್ವಯಯೋಗ್ಯತ್ವಾತ್. ತತ್ರ ನಪುಂಸಕತ್ವಸ್ಯ ಛಾಂದಸತ್ವಾತ್. 'ಯೋ ಭರ್ಗಃ ಸಃ ಧಿಯಃ ಧರ್ಮಾದಿಗೋಚರಾಃ ಪ್ರೇರಯೇತ್. ಸವಿತುರ್ವರೇಣ್ಯಂ ತದ್ಧೀಮಹಿ,' ಇತಿ ವಾಕ್ಯಾನ್ವಯಸಂಭವಾತ್. ಅನ್ಯಥಾ ಯಚ್ಛಬ್ದಸ್ಯ ವಿಶೇಷ್ಯಾಧ್ಯಾಹಾರಂ ವಿನಾಽನನ್ವಯಾತ್ ಅಧ್ಯಾಹಾರಸ್ಯ ಚ ಜಘನ್ಯತ್ವಾದಸ್ಯ ಮಂತ್ರಸ್ಯ ಸೂರ್ಯತೇಜಃ-ಪರತ್ವೇ ಬ್ರಹ್ಮವಿದ್ಯಾತ್ವಾಭಾವಾತ್ ವರೇಣ್ಯಪದೇನ ಬ್ರಹ್ಮತೇಜೋಲಾಭೇ ಷಷ್ಠ್ಯಂತಸವಿತೃಪದವಿರೋಧಾತ್, ಅಧಿಷ್ಠಾನತ್ವವಿವಕ್ಷಾಯಾಂ ಅಧಿಕರಣತ್ವಸ್ಯೋಕ್ತತ್ವಾದನ್ಯತ್ವಾಭಾವೇನ ಶೇಷಷಷ್ಠ್ಯಾಪಿ ಸಂಗ್ರಹಾಭಾವಾತ್ಸಪ್ತಮ್ಯಂತೇನ ಸವಿತೃಪರೋ ನ ಸಂಮತಃ, ಕಿಂತು ತದಧಿದೇವಶಿವಪರಃ, ತಸ್ಯೈವಾನಾದಿಪ್ರಜ್ಞಾಪ್ರೇರಕತ್ವಾತ್. ತದುಕ್ತಂ ಮಂತ್ರೋಪನಿಷದಿ "ಯದಾ ತಮಸ್ತನ್ನ ದಿವಾ ನ ರಾತ್ರಿಃ ನ ಸನ್ನ ಚಾಸಚ್ಛಿವ ಏವ ಕೇವಲಃ । ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ ॥" ಇತಿ. ಗೀತಾಸು ಚ "ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ" ಇತಿ, ಸ್ಮೃತಿವಾಕ್ಯಾರ್ಥಸ್ತು-ಸವಿತಾ 'ಷೂಙ್ ಪ್ರಾಣಿಪ್ರಸವೇ' ಇತಿ ಧಾತೋಃ ಸಕಲಪ್ರಾಣಿಜನಕಃ, ದೀವ್ಯತೀತಿ ದೇವಃ, ಸಕಲಪಾಪಭಂಜಕತ್ವಾದ್ಭರ್ಗೋ ಹರಃ ಅಸ್ಮಾಕಂ ಧಿಯಃ ಬುದ್ಧೀಃ ಧರ್ಮಾದಿಗೋಚರಾಃ ಪ್ರೇರಯತು. ಯಸ್ಯ ಭರ್ಗಸ್ಯ ವರೇಣ್ಯಂ ವಿಶ್ವಾಧಿಕಂ ಯತ್ಸ್ವರೂಪಂ ಹಿರಣ್ಮಯಂ, "ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷ," "ನೀಲಗ್ರೀವೋ ವಿಲೋಹಿತಃ" ಇತಿ ಶ್ರುತೇಶ್ಚ ನೀಲಗ್ರೀವತ್ವಾದಿವಿಶಿಷ್ಟಮುಪಾಸ್ಮಹೇ ಇತಿ. ತದುಕ್ತಂ ಕೂರ್ಮೇ ವ್ಯಾಸಗೀತಾಸು ವ್ಯಾಸೇನ "ಪ್ರಪದ್ಯೇ ತತ್ಪರಂ ತತ್ತ್ವಂ ವರೇಣ್ಯಂ ಸವಿತುಶ್ಶಿವಂ । ಪ್ರಪದ್ಯೇ ತ್ವಾಂ ವಿರೂಪಾಕ್ಷಂ ಭೂರ್ಭುವಸ್ಸ್ವಸ್ಸ್ವರೂಪಿಣಂ" ಇತಿ. ನ ಚ ಸವಿತೃಪದರೂಢಿತ್ಯಾಗದೋಷಃ ಮಂತ್ರಪದರೂಢಿತ್ಯಾಗಾಪೇಕ್ಷಯಾ ಸ್ಮೃತಿವಾಕ್ಯಸ್ಥಪದರೂಢಿತ್ಯಾಗಸ್ಯ ಶ್ಲಾಘ್ಯತ್ವಾತ್. ತತ್ಪಕ್ಷೇ ಮಂತ್ರಸ್ಥಸವಿತೃಪದರೂಢಿಲಕ್ಷಣೇ ಬ್ರಹ್ಮವಿದ್ಯಾತ್ವಾನುಪಪತ್ತೇರುಕ್ತತ್ವಾತ್. ಸಸಂಬಂಧಿಕವರೇಣ್ಯಪದಸ್ಯಾವಿವಕ್ಷಿತಾರ್ಥತ್ವಂ ತ್ವತ್ಪಕ್ಷೇ ಶ್ರುತಿಸ್ಮೃತ್ಯೋಸ್ಸಮಾನಮಿತ್ಯೇಕ್ಯೋ ದೋಷಃ.

ಅತ್ರ ಕೇಚಿತ್—ಗಾಯತ್ರೀಮಂತ್ರಸ್ಥಪದಾನಾಮೇವಂ ಪದಯೋಜನಾಂ ಕುರ್ವಂತಿ. ದೇವಸ್ಯ ದೀಪ್ಯಮಾನಸ್ಯ ಸವಿತುಃ ಸೂರ್ಯಸ್ಯ ಮಧ್ಯೇ ಯೋ ಭರ್ಗಃ ಪರಮಶಿವಃ ಸಃ ಅಸ್ಮಾಕಂ ಧಿಯಃ ಪ್ರಚೋದ

ಯೋ ಪ್ರೇರಯತಿ. ವರೇಣ್ಯಂ ವರಣೀಯಮುಪಾಸ್ಯಮಿತ್ಯರ್ಥಃ, ಬ್ರಹ್ಮ ಧೀಮಹಿ ಧ್ಯಾಯೇಮೇತ್ಯನ್ವಯೋ ಬೋಧ್ಯಃ. ಅತ್ರ ಸವಿತುರ್ಮಧ್ಯೇ ಇತಿ ಮಧ್ಯಪದಮಧ್ಯಾಹರ್ತವ್ಯಂ. ಶ್ರುತ್ಯಂತರೇ ತಥಾ ದರ್ಶನಾತ್. 'ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ' ಇತ್ಯಾದಿ. ಅಪರೇ ಪ್ರಭಾಕರಸ್ಯಾಪಿ ಶಿವೋಪಾಸಕತ್ವಮತಂ ಮಂತ್ರೇ ವ್ಯಾಚಕ್ಷತೇ. ಯೋ ಭರ್ಗಃ ಪರಮಶಿವಃ ನೋಽಸ್ಮಾಕಂ ಧಿಯಃ ಧರ್ಮಾದಿಗೋಚರಾಃ ಪ್ರೇರಯತಿ. ತತ್ ತಮಿತ್ಯರ್ಥಃ. ಛಾಂದಸತ್ವಾನ್ನ ದೋಷಃ. ಸವಿತುಸ್ಸೂರ್ಯಸ್ಯ ವರೇಣ್ಯಂ ವರಣೀಯಂ ಉಪಾಸ್ಯಂ ಪರಮಶಿವಂ ಧ್ಯಾಯೇಮ. "ಆತ್ಮವಾನ್ಕೋ ಜಿತಕ್ರೋಧೋ ದ್ಯುತಿಮಾನ್ಕೋಽನಸೂಯಕಃ । ಕಸ್ಯ ಬಿಭ್ಯತಿ ದೇವಾಶ್ಚ ಜಾತರೋಷಸ್ಯ ಸಂಯುಗೇ ॥ ಏತದಿಚ್ಛಾಮ್ಯಹಂ ಶ್ರೋತುಂ" ಇತಿ ರಾಮಾಯಣೇ ಲಿಂಗವ್ಯತ್ಯಯಸ್ಯ ದೃಷ್ಟತ್ವಾತ್, ಪ್ರಭುಸಂಮಿತೇ ವೇದೇ ಲಿಂಗವ್ಯತ್ಯಯವಚನವ್ಯತ್ಯಯಾದೀನಾಂ ಕಿಮು ವಕ್ತವ್ಯಂ ಇತಿ. ಅನ್ಯೇ ಕೇಚಿತ್—ರೂಢಿರ್ಯೋಗಮಪಹರತೀತಿ ನ್ಯಾಯಮುಲ್ಲಂಘ್ಯ ರೂಢ್ಯಾ ಅಕುಂಠಿತಶಕ್ತಿಕಂ ಮೂಕಶಬ್ದತುಲ್ಯಂ ಯೋಗಮಾಶ್ರಿತ್ಯ ಶಿವಪದಮಿವ ಈಶ್ವರೇ ರೂಢಂ ಭರ್ಗಪದಂ ಅಶಿವೇ ಅಪರಮೇಶ್ವರೇ ವರ್ಣಯಂತಿ. ಗೋಪಂಕಜಾದಿಶಬ್ದಾನಾಂ ಖರಶೈವಾಲಾದಿವಾಚಕತ್ವವತ್, ಅನ್ಯಥಾ ಅರ್ಥಾಂತರಕಲ್ಪನೇ ಗಾಯತ್ರ್ಯುಪಾಸನಾಯಾ ವಿಪರೀತಫಲಾಪತ್ತೇಃ.

## ಗಾಯತ್ರೀವಿಚಾರ

"ಸವಿತೃದೇವನು ನಮ್ಮ ಬುದ್ಧಿಯನ್ನು ಧರ್ಮಾರ್ಥಗಳಲ್ಲಿಯೇ ಪ್ರವರ್ತಿಸುವಂತೆ ಪ್ರೇರಿಸಲಿ. ಅವನ ಶ್ರೇಷ್ಠ ತೇಜಸ್ಸನ್ನು ಉಪಾಸನಮಾಡೋಣ" ಈ ಸ್ಮೃತಿಯಲ್ಲಿ ಗಾಯತ್ರೀ ಮಂತ್ರವು ಸೂರ್ಯನನ್ನು ತಿಳಿಸುವುದಾಗಿ ಹೇಳಿದೆಯಾದ್ದರಿಂದ ಅದು ಹೇಗೆ ಶಿವನನ್ನು ತಿಳಿಸೀತು? ಎಂದು ಕೇಳುವುದು ಯುಕ್ತವಲ್ಲ. ಯಾಕೆಂದರೆ ಭರ್ಗಶಬ್ದವು ತೇಜಸ್ಸಿನಲ್ಲಿ ಪ್ರಯೋಗವಾಗಿರುವಂತೆ ಎಲ್ಲಿಯೂ ಕಂಡುಬಂದಿಲ್ಲ. 'ಹರಃ ಸ್ಮರಹರೋ ಭರ್ಗಃ' ಎಂಬ ನಿಘಂಟಿನಲ್ಲಿ ಭರ್ಗಶಬ್ದವು ಶಿವನಲ್ಲಿಯೇ ರೂಢವಾಗಿದೆ. 'ಸವಿತುರ್ವರೇಣ್ಯಂ' ಎಂಬುದು ಸೂರ್ಯನಿಗೆ ಅನ್ವಯಿಸುವುದೆಂದು ಗ್ರಹಾರಾಧನಪ್ರಕರಣದಲ್ಲಿ ಬೋಧಾಯನನು ತಿಳಿಸಿದ್ದಾನೆ. ವರೇಣ್ಯಪದವು ಬೇರೊಂದು ಪದದ ಸಹಾಯದಿಂದಲೇ ಅರ್ಥವನ್ನು ಬೋಧಿಸಬೇಕಾಗಿರುವುದರಿಂದ ಪಕ್ಕದಲ್ಲಿರುವ ಸವಿತೃಪದದೊಡನೆ ಅನ್ವಯಿಸಿಯೇ ಅದು ಅರ್ಥವನ್ನು ತಿಳಿಸುತ್ತದೆ. ಯತ್‌ಶಬ್ದವೂ ಸಹ ವಿಶೇಷಣವಾದ್ದರಿಂದ ಸಮಾನವಾದ ಲಿಂಗವಚನವಿಭಕ್ತಿಗಳಿರುವ ವಿಶೇಷ್ಯವನ್ನೇ ಅಪೇಕ್ಷಿಸುತ್ತದೆ. ಭರ್ಗಪದವೂ ಹಾಗೆಯೇ ಇರುವುದರಿಂದ ಯತ್ಪದದೊಡನೆ ಅನ್ವಯವಾಗಲರ್ಹವಾಗಿದೆ. ಇಲ್ಲಿ ಯತ್ಪದವು ವೈದಿಕಪ್ರಯೋಗ

ವಾದ್ದರಿಂದ ನಪುಂಸಕಲಿಂಗದಲ್ಲಿದೆ- "ಯಾವನು ಭರ್ಗನೋ ಆ ಶಿವನು ನಮ್ಮ ಬುದ್ಧಿಗಳನ್ನು ಧರ್ಮಾರ್ಥಗಳಲ್ಲಿ ಪ್ರವರ್ತಿಸುವಂತೆ ಮಾಡಲಿ. ಸೂರ್ಯನಿಗಿಂತಲೂ ಶ್ರೇಷ್ಠವಾದ ಈಶ್ವರನನ್ನು ಉಪಾಸಿಸೋಣ" ಎಂದು ವಾಕ್ಯದ ಅನ್ವಯವಾಗುತ್ತದೆ. ಹೀಗೆ ಹೇಳದಿದ್ದರೆ, ಯತ್‌ಪದಕ್ಕೆ ವಿಶೇಷ್ಯವನ್ನು ಅಧ್ಯಾಹಾರಮಾಡಬೇಕಾಗುವುದರಿಂದ ಅಧ್ಯಾಹಾರದೋಷ ಬರುವುದು. ಈ ಮಂತ್ರವನ್ನು ಸೂರ್ಯನಿಗೆ ಅನ್ವಯಿಸಿದರೆ ಅದು ಬ್ರಹ್ಮವಿದ್ಯೆಗೆ ಅನ್ವಯಿಸದೇಹೋಗುವುದು. ವರೇಣ್ಯಪದವು ಬ್ರಹ್ಮತೇಜಸ್ಸನ್ನೇ ಬೋಧಿಸಿದರೆ, ಷಷ್ಠ್ಯಂತವಾದ ಸವಿತೃಪದಕ್ಕೆ ಅನ್ವಯವಿಲ್ಲದೇ ಹೋಗುವುದು. ಷಷ್ಠೀವಿಭಕ್ತಿಗೆ ಅಧಿಕರಣವೇ ಅರ್ಥವೆಂದು ವಿವಕ್ಷಿತವಾದರೆ ಆ ಅರ್ಥವು ಉಕ್ತವಾಗುವ ಕಾರಣ, ಅನುಕ್ತಾರ್ಥದಲ್ಲಿ ಬರುವ ಶೇಷಷಷ್ಠಿಯು ಹೊಂದಿಕೆಯಾಗದೇ ಹೋಗುವುದು. ಆದ್ದರಿಂದ ಈ ಮಂತ್ರವು ಸೂರ್ಯಪರವಾಗದೆ ಅದಕ್ಕಧಿದೇವನಾದ ಶಿವನಿಗೇ ಅನ್ವಯಿಸುತ್ತದೆ. ಯಾಕೆಂದರೆ ಅವನೇ ಅನಾದಿಪ್ರಜ್ಞೆಯನ್ನು ಪ್ರೇರಿಸುವವನಾಗಿದ್ದಾನೆ. "ಪ್ರಳಯದಲ್ಲಿ ಶಿವನೊಬ್ಬನೇ ಪ್ರಕಾಶಮಾನವಾಗಿದ್ದನು. ಅವನಿಂದಲೇ ಪ್ರಜ್ಞಾಶಕ್ತಿಯು ಹೊರಟಿತು" ಎಂದು ಮಂತ್ರೋಪನಿಷತ್ತಿನಲ್ಲಿ ಹೇಳಿದೆ. "ಆದಿಪುರುಷನಿಂದಲೇ ಎಲ್ಲಾ ಬಗೆಯ ಪ್ರವೃತ್ತಿಯೂ ಹೊರಬಿದ್ದಿದೆ" ಎಂದು ಗೀತೆಯಲ್ಲೂ ಹೇಳಿದೆ. "ಸವಿತೃ ಎಂಬ ಪದವು 'ಸೂ' ಎಂಬ ಧಾತುವಿನಿಂದ ಹುಟ್ಟಿ ವಿಶ್ವದ ಎಲ್ಲಾ ಪ್ರಾಣಿಗಳಿಗೂ ಕಾರಣನೆಂಬ ಅರ್ಥವನ್ನು ತಿಳಿಸುತ್ತದೆ. ಪ್ರಕಾಶಿಸುವುದರಿಂದ ರುದ್ರನು ದೇವನೆನಿಸಿದ್ದಾನೆ. ಎಲ್ಲರ ಪಾಪವನ್ನೂ ನಾಶಪಡಿಸುವುದರಿಂದ ಅವನೇ ಭರ್ಗನೆನಿಸಿದ್ದಾನೆ. ಇವನು ನಮ್ಮ ಬುದ್ಧಿಗಳನ್ನು ಧರ್ಮದ ಕಡೆಗೆ ತಿರುಗಿಸಲಿ. ಆ ಭರ್ಗನ ಉತ್ಕೃಷ್ಟವೂ ಹಿರಣ್ಮಯವೂ ನೀಲಗ್ರೀವಾದಿವಿಶಿಷ್ಟವೂ ಆದ ಸ್ವರೂಪವನ್ನು ಉಪಾಸನಮಾಡೋಣ." ಹೀಗೆ ಸ್ಮೃತಿವಾಕ್ಯದ ಅರ್ಥವಾಗುತ್ತದೆ. ಕೂರ್ಮಪುರಾಣದ ವ್ಯಾಸಗೀತೆಯಲ್ಲಿ "ವಿಶ್ವಕಾರಣನಾದ ಪರಶಿವನ ಮಂಗಳಕರವೂ ಶ್ರೇಷ್ಠವೂ ಆದ ತೇಜಸ್ಸಿಗೆ ಶರಣಾಗುತ್ತೇನೆ. ವಿಶ್ವಾತ್ಮಕನಾದ ಆ ವಿರೂಪಾಕ್ಷನಿಗೆ ಶರಣಾಗುತ್ತೇನೆ" ಎಂದು ಹೇಳಿದೆ. ಸವಿತೃಪದಕ್ಕೆ ಸೂರ್ಯನಲ್ಲಿ ರೂಢಿ ಇರುವುದನ್ನು ಬಿಡುವುದು ದೋಷವೆನಿಸುವುದಿಲ್ಲ, ಯಾಕೆಂದರೆ ಮಂತ್ರದಲ್ಲಿರುವ ಸವಿತೃಪದಕ್ಕೆ ರೂಢಿಯನ್ನು ಬಿಡಬೇಕಾಗಿರುವುದರಿಂದ ಸ್ಮೃತಿವಾಕ್ಯದಲ್ಲೂ ರೂಢಿಯನ್ನು ಬಿಡುವುದು ಶ್ಲಾಘ್ಯವೇ ಆಗುವುದು. ಮಂತ್ರದಲ್ಲಿ ಸವಿತೃಪದಕ್ಕೆ ಸೂರ್ಯನೆಂಬ ಅರ್ಥವನ್ನು ಹೇಳಿದರೆ ಆಗ ಮಂತ್ರವು ಬ್ರಹ್ಮವಿದ್ಯೆಯನ್ನು ಬೋಧಿಸದೇಹೋಗಬೇಕಾದೀತು. ಮತ್ತೊಂದು ಪದದ ಸಹಾಯದಿಂದಲೇ ಅರ್ಥವನ್ನು ಬೋಧಿಸುವ ವರೇಣ್ಯಪದಕ್ಕೆ ವಿವಕ್ಷಿತವಾದ ಅರ್ಥವನ್ನು ಬಿಡುವುದು ಶ್ರುತಿ ಸ್ಮೃತಿಗಳೆರಡರಲ್ಲೂ ಸಮಾನವಾದ ದೋಷವಾಗಿದೆ ಇಲ್ಲಿ ಕೆಲವರು ಗಾಯತ್ರೀಮಂತ್ರದ ಪದಗಳಿಗೆ "ದೇವಸ್ಯ-ಪ್ರಕಾಶಿಸುವ, ಸವಿತುಃ-ಸೂರ್ಯನ ಮಧ್ಯದಲ್ಲಿ ಯಾವ ಪರಮಶಿವನಿರುವನೋ ಅವನು ನಮಗೆ ಸದ್ಬುದ್ಧಿಯನ್ನು ಕೊಡಲಿ ವರೇಣ್ಯಂ-ಅಂದರೆ

ಭಕ್ತರಿಂದ ಉಪಾಸನೆಗೆ ಆರಿಸಿಕೊಳ್ಳಲರ್ಹನಾದ ಆ ಪರಶಿವನನ್ನು ಧ್ಯಾನಿಸುತ್ತೇವೆ" ಹೀಗೆ ಅನ್ವಯಮಾಡುತ್ತಾರೆ. ಇಲ್ಲಿ ಸವಿತುಃ ಮಧ್ಯೇ ಎಂದು ಮಧ್ಯಪದವನ್ನು ಸೇರಿಸಿ ಕೊಳ್ಳಬೇಕು. 'ಸೂರ್ಯನೊಳಗೆ ಯಾವ ಹಿರಣ್ಮಯಪುರುಷನಿರುವನೋ' ಎಂದು ಬೇರೆ ಶ್ರುತಿಯಲ್ಲೂ ಹೀಗೆಯೇ ಹೇಳಿದೆ. ಬೇರೆ ಕೆಲವರು ಸೂರ್ಯನನ್ನು ಶಿವನ ಉಪಾಸಕ ನೆಂದು ಈ ಮಂತ್ರದಲ್ಲಿ ಹೇಳುತ್ತಾರೆ. ಇಲ್ಲಿ ತತ್ ಎಂದರೆ ತಂ ಎಂದರ್ಥ. ವೈದಿಕ ಪ್ರಯೋಗವಾದ್ದರಿಂದ ಲಿಂಗದೋಷವಿಲ್ಲ. ಸವಿತುಃ-ಸೂರ್ಯನಿಗೆ, ವರೇಣ್ಯಂ-ಉಪಾಸನ ಯೋಗ್ಯನಾದ ಪರಶಿವನನ್ನು ಧ್ಯಾನಿಸೋಣ. "ಆತ್ಮವಂತನೂ, ಕ್ರೋಧಾಸೂಯೆ ಗಳಿಲ್ಲದ ಪ್ರಕಾಶಿಸುವವನೂ ಯಾರು? ಯುದ್ಧದಲ್ಲಿ ಕ್ರೋಧಗೊಂಡಾಗ ಯಾವನೆ ದುರಿಗೆ ದೇವತೆಗಳೂ ನಿಲ್ಲಲಾರರೋ ಅಂತವನು ಯಾರು? ಅವನ ಬಗ್ಗೆ ಕೇಳಲಿಚ್ಛಿ ಸುತ್ತೇನೆ" ಹೀಗೆ ರಾಮಾಯಣದಲ್ಲಿ 'ತಂ' ಎಂಬುದರ ಬದಲು 'ತತ್' ಎಂದು ಲಿಂಗವ್ಯತ್ಯಾಸ ಕಂಡುಬಂದಿದೆ. ಇನ್ನು ಪ್ರಭುಸಮ್ಮಿತವಾದ ವೇದದಲ್ಲಿ ಲಿಂಗವಚನ ವ್ಯತ್ಯಾಸದ ಬಗ್ಗೆ ಹೇಳುವುದೇನಿದೆ? ಇನ್ನು ಕೆಲವರು "'ರೂಢಿಯು ಯೋಗವನ್ನು ಬಾಧಿಸುತ್ತದೆ' ಎಂಬ ನ್ಯಾಯವನ್ನು ಮೀರಿ, ರೂಢಿಯಿಂದ ಶಕ್ತಿಯನ್ನು ಕಳೆದು ಕೊಳ್ಳದಂತೆ ಮೂಕಶಬ್ದಕ್ಕೆ ಸಾದೃಶವಾದ ಯೋಗವನ್ನಾಶ್ರಯಿಸಿ ಶಿವಪದದಂತೆ ಈಶ್ವರ ನಲ್ಲಿಯೇ ರೂಢವಾಗಿರುವ ಭರ್ಗಪದವನ್ನು ಶಿವನಲ್ಲದೆ ಬೇರೆ ಕಡೆಯಲ್ಲಿ ಪ್ರಯೋಗಿ ಸುತ್ತಾರೆ ; ಗೋಪದವು ಕತ್ತೆಯನ್ನೂ, ಪಂಕಜಪದವು ಪಾಚಿಯನ್ನೂ ಬೋಧಿಸುವಂತೆ ಭರ್ಗಪದವು ಶಿವನಲ್ಲದೆ ಬೇರೊಂದು ಅರ್ಥವನ್ನು ಬೋಧಿಸುತ್ತದೆ. ಹಾಗೆ ಹೇಳದೆ ಇದಕ್ಕಿಂತ ಬೇರೆ ಅರ್ಥವನ್ನು ಕಲ್ಪಿಸಿದರೆ ಗಾಯತ್ರಿಯ ಉಪಾಸನದಿಂದ ವಿಪರೀತ ಫಲವುಂಟಾದೀತು" ಎಂದು ಹೇಳುತ್ತಾರೆ.

ಕಿಂಚ 'ಯಥೇಂದ್ರಶತ್ರುಸ್ಸ್ವರತೋಽಪರಾಧಾತ್' ಇತಿವತ್ ಸ್ವರಭಂಗಪ್ರಸಂಗಸ್ಸ್ಯಾತ್, ತದುಕ್ತಂ ಚತುರ್ವೇದವೇದಾಂತಭಾಷ್ಯಕಾ ರೇಣ ಹರದತ್ತಾಚಾರ್ಯೇಣ 'ಶ್ರೀಕಂಠ ಭರ್ಗಪದಮಪ್ಯನಘಂ ತವಾದ್ಯಂ ತೇಜಃಪರಂ ಭವತಿ ಚೇದ್ಧ್ರುವಮಾದ್ಯುದಾತ್ತಂ । ತಸ್ಮಾದ ದಂತ ಇತಿ ಕೋಶವಶಾದವೈಮಿ ಮಾರ್ತಾಂಡಮಂಡಲಗತಶ್ಶಿವ ಏವ ನಾಸ್ಯಃ ॥' ಇತಿ. ಹೇ ಶ್ರೀಕಂಠ, ತವ ಅನಘಂ ಪಾಪರಹಿತಂ ಆದ್ಯಂ 'ಭರ್ಗಪದಮಪಿ ತೇಜಃಪರಂ ಭವತಿ ಚೇತ್ ಭರ್ಗೋ ದೇವಸ್ಯ' ಇತ್ಯಾ ದ್ಯುದಾತ್ತಂ ಧ್ರುವಂ ಕಿಲ? ತತ್ರೇರಕತ್ವೋದಾತ್ತತ್ವೇ ಸತಿ ಶಿಷ್ಟಸ್ವರೇಣ ಗಕಾರಾತ್ಪರಸ್ಯಾಕಾರಸ್ಯಾನುದಾತ್ತತ್ವೇ ಚ ಶ್ರೂಯಮಾಣಸ್ವರಭಂಗಾ ಪತ್ತೇಃ. ಭರ್ಗಶಬ್ದಸ್ಯಾಕಾರಾಂತತ್ವೇ ತು ಭಕಾರಾತ್ಪರಾಕಾರಸ್ಯ ಅನು ದಾತ್ತತ್ವೇ ಸತಿ ಶಿಷ್ಟಸ್ವರೇಣ ಅನುದಾತ್ತತ್ವೇ ಉದಾತ್ತಸ್ಯ ಪರಾನುದಾ ತ್ತಸ್ಯ ಸ್ವರಿತತ್ವೇ ಚ ಶ್ರೂಯಮಾಣಸ್ವರಸಿದ್ಧಃ. ತಸ್ಮಾದುದಾತ್ತತ್ವಕಾರ ಣಾತ್ ಅದಂತ ಇತಿ ಕೋಶವಶಾದಭಿಧಾನಶಾಸ್ತ್ರಾದವೈಮಿ. ಅತೋ

ಮೂರ್ತಾಂಡಮಂಡಲಗತಶ್ಶಿವ ಏವ. ಕಿಂಚ ಮೈತ್ರಾವರುಣಶಾಖಾಯಾಂ
"ಭರ್ಗೋ ದೇವಸ್ಯ ಧೀಮಹಿ, ಸವಿತಾ ಮೈ ದೇವಃ, ಯಸ್ಯ ಭರ್ಗಾಖ್ಯಾ,
ತಂ ಚಿಂತಯಾಮಿ" ಇತಿ. ತಥೈವ "ಏಷ ರುದ್ರ ಭರ್ಗಾಖ್ಯೋ ಬ್ರಹ್ಮ
ವಾದಿನೋ ವದಂತಿ" ಇತಿ. ಶ್ರುತ್ಯಂತರೇಽಪಿ "ಕಃ ಸ್ಸವಿತಾ, ಕಾ ಸಾ
ಗಾಯತ್ರೀ" ಇತಿ ಪ್ರಶ್ನಮುಪಕ್ರಮ್ಯ "ತಸ್ಯೈಷ ಪ್ರಥಮಃ ಪಾದಃ,
ದ್ವಿತೀಯಃ ಪಾದೋ ಭರ್ಗಮಯಃ" ಇತ್ಯತ್ರಾಪ್ಯದಂತ ಏವ
ಬೋಧ್ಯತೇ. ತಸ್ಮಾತ್ಪ್ರಾತ್ಯಕ್ಷಿಕಸರ್ವಶ್ರುತಿವಿರುದ್ಧಾ 'ಯೋ ದೇವಸ್ಸವಿತಾ
ಸ್ಮಾಕಂ' ಇತಿ ಸಾಂಖ್ಯಸ್ಮೃತಿಸ್ತು ಸೂರ್ಯಪರತ್ವೇಽಪಿ ಮುಖ್ಯವೃತ್ತ್ಯಾ
ಪರಶಿವಬೋಧಿಕೇತಿ ನ ದೋಷಃ. ತಥಾಪಿ ಸಾಂಖ್ಯಸ್ಮೃತಿತ್ವಾತ್ತಾಂ
ತ್ರಿಕಪರಿಗ್ರಾಹ್ಯೈವ. ಕಿಂಚ 'ಭರ್ಗೋ ದೇವಸ್ಯ ರುದ್ರಾತ್ಮನೇ ಶಿಖಾಯೈ
ವಷಟ್' ಇತ್ಯಾದೌ ತತ್ಪ್ರಕರಣೇ ಪರಶಿವಪರತ್ವಂ ಸ್ಪಷ್ಟಮುಕ್ತಂ. ನನು
"ಆಕಾಶತ್ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ । ಸರ್ವದೇವನ
ಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥" ಇತ್ಯಾದೌ ನಾರಾಯಣಸ್ಯ ಸರ್ವ
ದೇವತಾಧಿಪತಿತ್ವದರ್ಶನಾತ್ ಭರ್ಗಪದವಾಚ್ಯತ್ವಂ ತಸ್ಯೈವೇತಿ ಚೇನ್ನ-
'ಪಂಚಶೀರ್ಷೋಪನಯನೇ ವಿನಿಯೋಗಃ' ಇತಿ ಸಂಧ್ಯಾವಂದನಸ್ಯ
ಪಂಚಶೀರ್ಷವಿಶಿಷ್ಟೇ ಉಪನಯನೇ ಉಪರಿ ನಯನಂ ಯಸ್ಯ ತಸ್ಮಿನ್
ತ್ರಿಲೋಚನೇ ಪರಮಶಿವೇ ವಿನಿಯೋಗದರ್ಶನಾತ್, ತದುಪಕ್ರಮೇ
ಪರಮೇಶ್ವರಪ್ರೀತ್ಯರ್ಥಮಿತಿ ತದುದ್ದೇಶವಿನ್ಯಾಸಾಚ್ಚ. ಕಿಂಚ ಗಾಯ
ತ್ರ್ಯಾತ್ಮಕಶಕ್ತೇಃ ಪರಮಶಿವಾಭಿನ್ನಶಕ್ತಿತ್ವಾತ್ಪರಮೇಶ್ವರಧರ್ಮಾಣಾ
ಮತ್ರ ಭೂಯಸ್ತ್ವಾಚ್ಚ ಭರ್ಗಶಬ್ದವಾಚ್ಯೋ ನೇತರಃ. ಕಿಂಚ 'ಸರ್ವ
ದೇವನಮಸ್ಕಾರಃ ಕೇಶವಂ ಪ್ರತಿಗಚ್ಛತಿ' ಇತಿ ಸ್ಮೃತಿರಪಿ ಸಾಂಖ್ಯ
ಸ್ಮೃತಿಪ್ರಕರಣಪಠಿತತ್ವಾನ್ನಾಂಗೀಕರಣೀಯಾ, ಸ್ಮೃತ್ಯನವಕಾಶಾಧಿಕ
ರಣೇ ಭಗವತಾ ವ್ಯಾಸೇನ ನಿರಾಕೃತತ್ವಾತ್. ವಿನಿಯೋಗಾನುಸಾರೇಣಾ
ರ್ಥಗೌರವಂ ಯುಕ್ತಂ. ತದ್ಭಿನ್ನದೇವತಾಂತರಪರತ್ವೇ "ಮುಕ್ತಾವಿದ್ರು
ಮನೀಲಹೇಮಧವಳಚ್ಛಾಯೈರ್ಮುಖೈಸ್ತ್ರೀಕ್ಷಣೈಃ ಯುಕ್ತಾಮಿಂದುನಿ
ಬದ್ಧರತ್ನಮುಕುಟಾಂ ತತ್ತ್ವಾರ್ಥವರ್ಣಾತ್ಮಿಕಾಂ । ಗಾಯತ್ರೀಂ ವರದಾ
ಭಯಾಂಕುಶಕಶಾಶ್ಶುಭ್ರಂ ಕಪಾಲಂ ಗದಾಂ ಶಂಖಂ ಚಕ್ರಮಥಾರ
ವಿಂದಯುಗಳಂ ಹಸ್ತೈರ್ವಹಂತೀಂ ಭಜೇ ॥" ಇತಿ ಗಾಯತ್ರೀಧ್ಯಾನ
ಶ್ಲೋಕವಿರೋಧೋ ದುರ್ನಿವಾರಃ. ಗಾಯತ್ರ್ಯಾ ಭರ್ಗಪದವಾಚ್ಯತ್ವೇ
ಸಾವಿತ್ರೀತಿ ಕುತಃ ಪ್ರಸಿದ್ಧಿಃ? ಇತಿ ಚೇತ್ ಸವಿತೃಪದಪ್ರಯೋಗಾತ್.
ಪ್ರಭಾಕರಸ್ಯಾಪಿ ಶಿವಾತ್ಮಕತ್ವಂ 'ಅಸೌ ಯೋಽವಸರ್ಪತಿ' ಇತ್ಯಾದಿನಾ
ಪೂರ್ವಮೇವೋಕ್ತಂ. 'ಸ್ತೋಮಂ ವೋ ಅದ್ಯ ರುದ್ರಾಯ ಶಿಕ್ವಸೇ ।

ಕ್ಷಯದ್ವೀರಾಯ ಸಮುಸಾ ವಿಧಿಷ್ಟನಾ ' ಇತಿ ಸಾಮುಶ್ರುತೌ ಸರ್ವದೇವ ತಾನಮಸ್ಕಾರಸ್ತೋತ್ರಯೋಃ ಪರಶಿವಪರತ್ವೇನ ನಿರ್ದೇಶಾತ್. ' ಸ ಏವ ವಿಷ್ಣುಸ್ಸ ಪ್ರಾಣಃ 'ಇತಿ ಕೈವಲ್ಯೇ ತಸ್ಯೈವ ಸರ್ವಾತ್ಮಕತ್ವೋಪದೇಶಾಚ್ಚ ನ ನಮಸ್ಕಾರಾಧಿಪತಿತ್ವಂ ನಾರಾಯಣಸ್ಯ; ನೋ ಚೇತ್ ಶ್ರುತಿವಿರೋಧ ಪ್ರಸಂಗಃ, ಶ್ರೌತವಿಧೇರ್ಬಲೀಯಸ್ತ್ವಾತ್. ಲೋಕೇ ಅಪೂತ್ಯಾದಿಸ ಮರ್ಪಿತದ್ರವ್ಯಾಧಿಪತಿತ್ವಂ ಪ್ರಭೋರೇವ ದೃಶ್ಯತೇ, ತದ್ವನ್ನಮಸ್ಕಾರಾಧಿ ಪತಿತ್ವಂ ಶಿವಸ್ಯೈವ ನಿಷ್ಪ್ರತ್ಯೂಹಂ, ಉಪಸಂಯಮನೇ ವಿನಿಯೋಗ ಇತ್ಯತ್ರ ಕೇಚಿತ್ " ಉಪಸೃತ್ಯ ನಯತಿ ಪ್ರಾಪಯತಿ " ಇತ್ಯರ್ಥಾಂತರಂ ಕಲ್ಪ ಯಂತಿ, ತದಸಂಗತಂ, ಪೂರ್ವವಾಕ್ಯೇ ಪಂಚಶೀರ್ಷ ಇತಿ, ತದುತ್ತ ರತ್ರ ಚ " ನೇತ್ರತ್ರಯಾಯ ವೌಷಟ್ " ಇತ್ಯನನ್ಯಸಾಧಾರಣಧರ್ಮಶ್ರ ವಣಾತ್. ಗಾಯತ್ರೀಪ್ರಕರಣೇ ಭರ್ಗಶಬ್ದಸ್ಯ ರುದ್ರವಾಚಕತ್ವಂ ಅದಂ ತತ್ವಂ ಚ ಶ್ರುತಿಸಮ್ಮತಂ. ತಸ್ಮಾದ್ಗಾಯತ್ರೀಪ್ರತಿಪಾದ್ಯತ್ವಂ ದ್ಯುಸಂಬಂ ಧಿತ್ವಂ ಚ ತಸ್ಯೈವೇತಿ ಸಿದ್ಧಂ.

" ಇಂದ್ರಶತ್ರುಃ " ಎಂಬಲ್ಲಿ ಸ್ವರದೋಷದಿಂದ ಅನರ್ಥವಾದಂತೆ ' ಭರ್ಗಃ ' ಎಂಬಲ್ಲೂ ಸ್ವರಭಂಗವುಂಟಾದೀತು. ಆದ್ದರಿಂದಲೇ ವೇದವೇದಾಂತಪಾರಂಗ ತರಾದ ಹರದತ್ತಾಚಾರ್ಯರು " ಶ್ರೀಕಂಠನೇ, ಪಾಪರಹಿತವೂ ಸನಾತನವೂ ಸರ್ವಾಧಾರವೂ ಆದ ನಿನ್ನ ದಿವ್ಯತೇಜಸ್ಸನ್ನು ಬೋಧಿಸುವ ಭರ್ಗಪದವು ಮೊದಲನೆಯ ಅಕ್ಷರದಲ್ಲಿ ಉದಾತ್ತಸ್ವರವನ್ನು ಪಡೆದು ಅಕಾರಾಂತವಾಗಿದೆಯೆಂದು ಕೋಶ ದಿಂದ ತಿಳಿಯುತ್ತೇನೆ" ಎಂದು ತಿಳಿಸಿದ್ದಾರೆ. ಭರ್ಗ ಎಂಬಲ್ಲಿ ಗಕಾರದಮೇಲಿನ ಅಕಾರವು ಅನುದಾತ್ತವಾಗುವುದರಿಂದ ಪ್ರಸಿದ್ಧವಾಗಿ ಕೇಳಬರುವ ಸ್ವರಕ್ಕೆ ಭಂಗ ವುಂಟಾಗುತ್ತದೆ. ಭರ್ಗಪದವು ಅಕಾರಾಂತವಾದರೆಯೇ ಭಕಾರದ ಮುಂದಿರುವ ಗಕಾರವು ಅನುದಾತ್ತವಾಗಿ ಸ್ವರಿತವಾಗುವುದರಿಂದ ಭಕಾರದಮೇಲಿನ ಅಕಾರವು ಉದಾತ್ತಸ್ವರವಾಗಿ ಸ್ಪಷ್ಟವಾಗಿ ಕೇಳಬರುತ್ತದೆ. ಹೀಗೆ ಭರ್ಗಪದವು ಆದ್ಯುದಾತ್ತ ವಾಗುವುದರಿಂದ ಅಕಾರಾಂತವಾಗಿರುವುದಾಗಿ ಕೋಶದಿಂದ ತಿಳಿದುಬಂದಿದೆ. ಆದ್ದರಿಂದ ಸೂರ್ಯಮಂಡಲದಲ್ಲಿರುವವನು ಶಿವನಲ್ಲದೆ ಬೇರೆಯಲ್ಲವೆಂದು ಅವರು ಹೇಳಿದ್ದಾರೆ. ಮೈತ್ರಾವರುಣಶಾಖೆಯಲ್ಲಿ ' ಸವಿತೃವೆಂದರೆ ದೇವನು. ಅವನಿಗೆ ಭರ್ಗನೆಂಬ ಹೆಸರಿದೆ. ಅವನನ್ನು ಧ್ಯಾನಿಸುತ್ತೇನೆ ' ಎಂದು ಹೇಳಿದೆ. ರುದ್ರನಿಗೆ ಭರ್ಗನೆಂಬ ಹೆಸರನ್ನು ಬ್ರಹ್ಮವಾದಿಗಳು ಹೇಳುತ್ತಾರೆ" ಎಂದು ಅಲ್ಲಿಯೇ ಹೇಳಿದೆ. ಬೇರೆ ಶ್ರುತಿಯಲ್ಲಿ ' ಸವಿತೃ ಯಾರು? ಎಂದು ಪ್ರಶ್ನಿಸಿ " ಅವನಿಗೆ ಗಾಯತ್ರಿಯೇ ಪ್ರಥಮಪಾದ, ಭರ್ಗವೆಂಬುದು ದ್ವಿತೀಯ ಪಾದ" ಎಂದು ಭರ್ಗ ಪದವನ್ನು ಅಕಾರಾಂತವಾಗಿಯೇ ಹೇಳಿದೆ. ಈ ಬಗೆಯ ಎಲ್ಲಾ ಶ್ರುತಿಗಳಿಗೂ ವಿರುದ್ಧವಾದ ಸಾಂಖ್ಯಸ್ಮೃತಿಯು ಸವಿತೃಪದವನ್ನು ಸೂರ್ಯನ ಪರವಾಗಿ ಅನ್ವಯಿ

ಸಿದ್ದರೂ, ಆ ಪದವು ಮುಖ್ಯ ವೃತ್ತಿಯಿಂದ ಪರಶಿವನನ್ನೇ ಬೋಧಿಸುವುದರಿಂದ ಯಾವ ದೋಷವೂ ಇಲ್ಲ. ಆದರೂ ಸಾಂಖ್ಯಸ್ಮೃತಿಯು ಆಗಮಿಕರಿಗೆ ಗ್ರಾಹ್ಯವಾಗುವುದು. 'ಭರ್ಗೋ ದೇವಸ್ಯ ರುದ್ರಾತ್ಮನೇ" ಎಂಬ ಪ್ರಕರಣದಲ್ಲಿ ಭರ್ಗಪದವು ಪರಶಿವಪರವೆಂಬುದು ಸ್ಪಷ್ಟವಾಗಿದೆ. "ಆಕಾಶದಿಂದ ಬಿದ್ದ ನೀರೆಲ್ಲವೂ ಸಮುದ್ರಕ್ಕೆ ಸೇರುವಂತೆ ಎಲ್ಲಾ ದೇವರಿಗೂ ಮಾಡುವ ನಮಸ್ಕಾರವೂ ಕೇಶವನಲ್ಲಿಯೇ ಸೇರುತ್ತದೆ" ಇಲ್ಲಿ ನಾರಾಯಣನನ್ನೇ ಸರ್ವಾಧಿಪತಿ ಎಂದು ಹೇಳಿರುವುದರಿಂದ ಭರ್ಗಪದವೂ ನಾರಾಯಣನಿಗೇ ಅನ್ವಯಿಸಬಹುದಲ್ಲವೇ? ಎಂದರೆ ಇದು ಯುಕ್ತವಲ್ಲ. ಸಂಧ್ಯಾವಂದನಕ್ಕೆ ಪಂಚಶೀರ್ಷವಿಶಿಷ್ಟವಾದ ಉಪನಯನದಲ್ಲಿ ವಿನಿಯೋಗವನ್ನು ಹೇಳುವಾಗ, ಉಪನಯನವೆಂದರೆ ಯಾವನಿಗೆ 'ಉಪರಿನಯನಂ' ಹಣೆಯಲ್ಲಿ ಅಗ್ನಿನೇತ್ರವಿದೆಯೋ ಅಂತಹ ತ್ರಿಲೋಚನನಾದ ಶಿವನೆಂದು ಅರ್ಥವಾಗುತ್ತದೆ. ಸಂಧ್ಯಾವಂದನವೂ ಸಹ ಪರಮೇಶ್ವರನ ಪ್ರೀತಿಗಾಗಿಯೇ ಪ್ರವರ್ತಿಸುವುದೆಂಬ ಉದ್ದೇಶವನ್ನು ವಿನಿಯೋಗವಿಧಿ ಸೂಚಿಸುತ್ತದೆ. ಗಾಯತ್ರಿ ಎಂಬ ಶಕ್ತಿಯೂ ಪರಶಿವನ ಅಭಿನ್ನಶಕ್ತಿಯೇ ಆಗಿದ್ದು ಅಲ್ಲಿ ಅವನ ಧರ್ಮಗಳು ಹೆಚ್ಚಾಗಿರುವುದರಿಂದ ಭರ್ಗಶಬ್ದವು ಪರಮೇಶ್ವರನಿಗೇ ಅನ್ವಯಿಸುತ್ತದೆ. ಸರ್ವದೇವ ನಮಸ್ಕಾರಃ ಎಂಬ ಸ್ಮೃತಿ ಸಾಂಖ್ಯಪ್ರಕರಣದಲ್ಲಿ ಬಂದಿರುವುದರಿಂದ ಗ್ರಾಹ್ಯವಲ್ಲ. ಸ್ಮೃತ್ಯನವಕಾಶಾಧಿಕರಣದಲ್ಲಿ ವ್ಯಾಸನು ಅದನ್ನು ನಿರಾಕರಿಸಿದ್ದಾನೆ. ವಿನಿಯೋಗವನ್ನನುಸರಿಸಿ ಅರ್ಥವನ್ನು ನಿರ್ಣಯಿಸುವುದೇ ಯುಕ್ತವಾದ ಮಾರ್ಗ. ಅದು ಬೇರೆ ದೇವತೆಗೂ ಅನ್ವಯಿಸುವುದಾಗಿ ಹೇಳಿದರೆ ಗಾಯತ್ರೀಧ್ಯಾನಶ್ಲೋಕದ ವಿರೋಧವು ಸಂಭವಿಸುತ್ತದೆ. "ಮುತ್ತು ರತ್ನ ಹವಳ ಮುತ್ತು ನೀಲಮಣಿಗಳ ಬಣ್ಣದ ಮುಖದಿಂದಲೂ, ರತ್ನಖಚಿತವಾದ ಕಿರೀಟದಿಂದಲೂ, ವರಪ್ರದಾನದ ಅಭಯ ಹಸ್ತದಿಂದಲೂ, ಬೇರೆ ಕೈಗಳಲ್ಲಿ ಶಂಖ ಚಕ್ರಗದಾದ್ಯಾಯುಧಗಳನ್ನೂ ಕಮಲಗಳೆರಡನ್ನೂ ಹಿಡಿದು ಪ್ರಣವಸ್ವರೂಪದಿಂದ ಶೋಭಿಸುತ್ತಿರುವ ಗಾಯತ್ರೀ ದೇವಿಯನ್ನು ವಂದಿಸುತ್ತೇನೆ". ಈ ಬಗೆಯ ಧ್ಯಾನವು ವಿರುದ್ಧವಾಗುತ್ತದೆ. ಭರ್ಗಪದವು ಗಾಯತ್ರಿಯನ್ನು ಬೋಧಿಸಿದರೂ ಮಂತ್ರದಲ್ಲಿ ಸವಿತೃಪದದ ಪ್ರಯೋಗವಿರುವುದರಿಂದ ಗಾಯತ್ರಿಗೆ ಸಾವಿತ್ರಿಯೆಂದು ಪ್ರಸಿದ್ಧಿ ಬಂದಿದೆ. 'ಅಸೌ ಯೋಽವಸರ್ಪತಿ' ಎಂಬ ಮಂತ್ರದಲ್ಲಿ ಸವಿತೃವನ್ನು ಶಿವಾತ್ಮಕವೆಂದು ಹೇಳಿದೆ. ಸಾಮಶ್ರುತಿಯಲ್ಲಿ ಸರ್ವದೇವರ ನಮಸ್ಕಾರ ಮತ್ತು ಸ್ತೋತ್ರಗಳೂ ಶಿವನಿಗೇ ಸೇರುವುವೆಂದು ಹೇಳಲಾಗಿದೆ. 'ಅವನೇ ವಿಷ್ಣು ಅವನೇ ಪ್ರಾಣ' ಎಂದು ಕೈವಲ್ಯದಲ್ಲಿ ಅವನೇ ಸರ್ವಾತ್ಮಕನೆಂದು ಹೇಳಿರುವುದರಿಂದ ನಾರಾಯಣನಿಗೆ ಇದು ಅನ್ವಯಿಸಲಾರದು. ಹಾಗೆ ಹೇಳದಿದ್ದರೆ ಶ್ರುತಿಗಳ ವಿರೋಧವುಂಟಾಗುವುದು. ಶ್ರುತಿಯಲ್ಲಿ ಹೇಳಿರುವ ವಿಧಿ ಎಲ್ಲಕ್ಕೂ ಪ್ರಬಲವಾದುದು. ಲೋಕದಲ್ಲಿ ಅಮಾತ್ಯನೇ ಮೊದಲಾದ ಅಧಿಕಾರಿಗಳಿಗೆ ಒಪ್ಪಿಸುವ ಎಲ್ಲಾ ದ್ರವ್ಯಗಳೂ ಪ್ರಭುವಿಗೇ ಸೇರುವುದಾಗಿ ಕಂಡುಬಂದಿದೆ. ಅದರಂತೆ ಎಲ್ಲಾ ದೇವರಿಗೂ ಮಾಡುವ

ನಮಸ್ಕಾರವು ಸರ್ವಕಾರಣನಾದ ಶಿವನಿಗೇ ಸೇರುವುದರಲ್ಲಿ ಸಂದೇಹವಿಲ್ಲ. 'ಉಪನಯನೇ ವಿನಿಯೋಗಃ' ಎಂಬಲ್ಲಿ ಕೆಲವರು 'ಉಪನಯನಂ' ಉಪಸೃತ್ಯ ನಯನಂ, ತನ್ನೊಳಗೆ ಸೇರಿಸಿಕೊಳ್ಳುವಿಕೆ ಎಂದು ಅರ್ಥವನ್ನು ಹೇಳುತ್ತಾರೆ. ಆದರೆ ಪಂಚಶೀರ್ಷ ಎಂಬ ಪದವು ಹಿಂದೆ ಇರುವುದರಿಂದ ಈ ಅರ್ಥ ಅಸಂಗತವಾಗುತ್ತದೆ. ಮುಂದೆ "ನೇತ್ರತ್ರಯಾಯ' ಎಂದು ಶಿವನ ಅಸಾಧಾರಣಧರ್ಮವನ್ನು ಹೇಳಿರುವುದರಿಂದ ಉಪನಯನ ಪದವು ಶಿವನಿಗೇ ಅನ್ವಯಿಸುವುದು ಶ್ರುತಿಸಮ್ಮತವಾಗಿದೆ. ಆದ್ದರಿಂದ ಶಿವನೇ ಗಾಯತ್ರಿಯಲ್ಲಿ ಪ್ರತಿಪಾದ್ಯನೂ, ದ್ಯುಸಂಬಂಧಿಯೂ ಆಗಿರುವನೆಂಬುದು ಸಿದ್ಧವಾಯಿತು.

**ಏವಂ ಗಾಯತ್ರೀಪ್ರತಿಪಾದ್ಯತ್ವೇನ ಗುರುಲಿಂಗಾತ್ಮಕತ್ವಂ ಪರಮೇಶ್ವರಸ್ಯ ಪ್ರಸಾಧ್ಯ ತದ್ವದಾಚಾರಲಿಂಗಾತ್ಮಕತ್ವಂ ಸೂತ್ರಾಂತರೇಣಾಹ—**

**ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಂ ॥ ೨೭ ॥**

**ಅತ್ರ ಗಾಯತ್ರೀವಾಕ್ಯೋಪದಿಷ್ಟಗುರುಲಿಂಗಾತ್ಮಕಪರಶಿವ ಏವ ಆಚಾರಲಿಂಗಾತ್ಮಕತ್ವೇನ ವ್ಯವಹ್ರಿಯತೇ. ಕುತಃ? ಭೂತಾದಿಪಾದವ್ಯಪದೇಶೋಪಪತ್ತೇಃ. ನಹ್ಯಕ್ಷರಸನ್ನಿವೇಶಾತ್ಮಕಗಾಯತ್ರ್ಯಾಃ ಭೂತಾದಿಪಾದವ್ಯಪದೇಶೋಪಪತ್ತಿರುಪಪದ್ಯತೇ. "ತೇ ವಾ ಏತೇ ಪಂಚಬ್ರಹ್ಮಪುರುಷಾಃ" ಇತಿ ಶ್ರುತಿಃ ಪೂರ್ವಂ ಪರಬ್ರಹ್ಮಣಃ ಶಿವಸ್ಯ ಪ್ರಕರಣತ್ವೇನ ಸಂಗಚ್ಛತೇ. ತದ್ಯಥಾ, ಗಾಯತ್ರ್ಯಾತ್ಮಕಸ್ಯ ಪರಶಿವಸ್ಯ ಹೃದಯಪುಂಡರೀಕಾವಚ್ಛಿನ್ನೋಪಾಸನಾಂಗತ್ವೇನ ಸದ್ಯೋಜಾತಾದಿಪಂಚಬ್ರಹ್ಮವ್ಯೂಹವಿಧ್ಯರ್ಥಂ "ತಸ್ಯವಾ ಏತಸ್ಯ ಹೃದಯಸ್ಯ ಪಂಚದೇವಸುಷಯಃ" ಇತ್ಯಾದಿವಾಕ್ಯಂ. ತತ್ರ 'ತೇ ವಾ-ಪುರುಷಾಃ' ಇತಿ ಶ್ರುತಂ. ತಥಾಚೋಪಾಸನಾಂಗಾನಾಂ ಸದ್ಯೋಜಾತಾದಿಪಂಚಬ್ರಹ್ಮಪುರುಷಾಣಾಂ ದಹರಪುಂಡರೀಕಸುಷಿರೇಷು ಸ್ಥಿತಾನಾಂ ಪಂಚಬ್ರಹ್ಮತ್ವೋಕ್ತೇಃ, ದಹರಚ್ಛಿದ್ರೇಷ್ವಪಿ ತೇಷಾಂ ಪರಬ್ರಹ್ಮಸಂಬಂಧೋಽವಗಮ್ಯತೇ. ಪಂಚಪ್ರಾಣಪಂಚಭೂತಾಧಿದೈವಸದ್ಯೋಜಾತಾದಿಪಂಚಬ್ರಹ್ಮವ್ಯೂಹೇಭ್ಯಃ ಪರಂ ಬ್ರಹ್ಮ ಪರಶಿವ ಇತ್ಯುಚ್ಯತೇ. ಸ ಏವ ಪಶುಪಾಶವಿಮೋಚನಸ್ಸರ್ವೋಪಾಸ್ಯಃ. ಗಾಯತ್ರೀಮಾತ್ರಪರತ್ವೇ ತದಂಗಾನಾಂ ಪಂಚಬ್ರಹ್ಮಪುರುಷಾಣಾಂ ಬ್ರಹ್ಮಾತ್ಮಕತ್ವವಿರೋಧೋ ದುರ್ನಿವಾರಃ. ತಸ್ಮಾದ್ದಹರಸುಷಿರೇಷು ಪಂಚಬ್ರಹ್ಮಸಂಬಂಧಾತ್ತತ್ರಸ್ಥಪಂಚಬ್ರಹ್ಮಣಾಂ ಪರಶಿವಸಂಬಂಧಸದ್ಭಾವಾತ್ ಪಂಚಬ್ರಹ್ಮಪುರುಷಶ್ರುತ್ಯುಪಪತ್ತಿಃ. ಹೃದಯಪುಂಡರೀಕಸ್ಯ ಪ್ರಾಗ್ದಕ್ಷಿಣಪಶ್ಚಿಮೋತ್ತರೋರ್ಧ್ವಮುಖಸ್ಥಾಸ್ಸದ್ಯೋಜಾತಾದಿಪಂಚಬ್ರಹ್ಮಪುರುಷಾಃ. ತಸ್ಮಾದ್ಗಾಯತ್ರೀವಾಕ್ಯೇ ಬ್ರಹ್ಮೈವ ಪ್ರತಿಪಾದ್ಯತೇ. ಜ್ಯೋತಿರ್ವಾಕ್ಯೇ ದ್ಯುಸಂಬಂಧಾತ್ತದೇವ ಪ್ರತ್ಯಭಿಜ್ಞಾಯತ ಇತಿ ಸಿದ್ಧಂ. ಭೂತಾದೀನಾಂ**

**ಪಾದಾನಾಮವಯವಾನಾಂ ವ್ಯಪದೇಶಸ್ಯ ಬ್ರಹ್ಮಣ್ಯೇವೋಪಪತ್ತೇಃ ಉಪಪನ್ನತ್ವಾಚ್ಚ, ಏವಂ ಗಾಯತ್ರೀಶಬ್ದೇನ ಗಾಯತ್ರ್ಯವಚ್ಛಿನ್ನಂ ಬ್ರಹ್ಮೈವೋಚ್ಯತ ಇತಿ ಸೂತ್ರಾರ್ಥಃ.**

ಹೀಗೆ ಗಾಯತ್ರಿಯಲ್ಲಿ ಪ್ರತಿಪಾದ್ಯನಾದ್ದರಿಂದ ಪರಮೇಶ್ವರನನ್ನು ಗುರುಲಿಂಗವೆಂದು ಸಾಧಿಸಿ ಹಾಗೆಯೇ ಅವನು ಆಚಾರಲಿಂಗನೂ ಆಗಿರುವನೆಂದು ಈಗ ಸಾಧಿಸುತ್ತಾನೆ—**ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವ** ॥ ೨೭ ॥

ಗಾಯತ್ರಿವಾಕ್ಯದಲ್ಲಿ ಬೋಧಿತನಾದ ಗುರುಲಿಂಗರೂಪನಾದ ಶಿವನೇ ಆಚಾರಲಿಂಗನೆನಿಸಿದ್ದಾನೆ. ಕೇವಲ ಅಕ್ಷರಸನ್ನಿವೇಶರೂಪವಾದ ಗಾಯತ್ರಿಯು ಭೂತಾದಿಪಾದಗಳಿಗೆ ಅನ್ವಯಿಸುವುದೆಂಬುದು ಅಷ್ಟು ಯುಕ್ತವಾಗಿ ಕಾಣುವುದಿಲ್ಲ ಗಾಯತ್ರಿಗೆ ಭೂತ, ಪೃಥಿವಿ, ಶರೀರ, ಹೃದಯ ಎಂಬ ನಾಲ್ಕು ಪಾದಗಳಿವೆ ಎಂದು ಶ್ರುತಿ ಹೇಳಿದೆ. ಇಲ್ಲಿ ಗಾಯತ್ರಿ ಎಂದರೆ ಪರಶಿವಬ್ರಹ್ಮವೆಂದು ಭಾವಿಸದಿದ್ದರೆ, ಗಾಯತ್ರೀ ಛಂದಸ್ಸಿಗೆ ಈ ನಾಲ್ಕು ಪಾದಗಳು ಹೊಂದುವುದಿಲ್ಲ. 'ಇವರು ಐವರು ಬ್ರಹ್ಮಪುರುಷರು' ಎಂದು ಶ್ರುತಿ ಹೇಳಿದೆ. ಪರಶಿವನ ಪ್ರಕರಣವಾದ್ದರಿಂದ ಇದು ಯುಕ್ತವಾಗಿದೆ. ಗಾಯತ್ರೀರೂಪವಾದ ಪರಶಿವನು ಹೃದಯಕಮಲದಲ್ಲಿ ಉಪಾಸ್ಯನಾದ್ದರಿಂದ ಇಲ್ಲಿ ಪಂಚಪುರುಷರೆಂದರೆ ಉಪಾಸನಾಂಗಗಳಾದ ದಹರಾದಿಸ್ಥಾನಗಳಲ್ಲಿ ಇರುವ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನವೆಂಬ ಪಂಚಬ್ರಹ್ಮರೆಂದು ಅರ್ಥವಾಗುತ್ತದೆ. ಇದರಿಂದ ಹೃದಯಾದಿಸ್ಥಾನಗಳಿಗೂ ಪರಶಿವನ ಸಂಬಂಧವಿದೆ ಎಂದು ತಿಳಿದುಬರುತ್ತದೆ. ಪಂಚಪ್ರಾಣಗಳೂ, ಪಂಚಭೂತಗಳೂ ಹೃದಯಾದಿಬಿಲಗಳಲ್ಲಿರುವ ಪಂಚಬ್ರಹ್ಮರೆನಿಸಿವೆ. ಹೀಗೆ ದೇಹದಲ್ಲಿ ಪಂಚಬ್ರಹ್ಮಮಯನಾದ ಶಿವನು ನೆಲಸಿ ಪಶುಪಾಶವಿಮೋಚಕನಾಗಿ ಸರ್ವರಿಗೂ ಉಪಾಸ್ಯನಾಗಿ ಆಚಾರಲಿಂಗನೆನಿಸಿದ್ದಾನೆ. ಮಂತ್ರದಲ್ಲಿ ಬರುವ ಗಾಯತ್ರೀಪದವು ಛಂದಸ್ಸಿಗೇ ಅನ್ವಯಿಸಿದರೆ ಅದರ ಅಂಗಗಳೆನಿಸಿದ ಭೂತಾದಿಗಳನ್ನು ಬ್ರಹ್ಮಪುರುಷರೆಂದು ಬ್ರಹ್ಮಾತ್ಮಕವಾಗಿ ಭಾವಿಸಲಿಕ್ಕಾಗುವುದಿಲ್ಲ. ಆದ್ದರಿಂದ ಹೃದಯದ ಬಿಲಗಳಲ್ಲಿ ಪಂಚಬ್ರಹ್ಮರ ಸಂಬಂಧವಿದ್ದು ಅಲ್ಲಿರುವ ಪಂಚಬ್ರಹ್ಮಗಳಿಗೆ ಪರಶಿವನ ಸಂಪರ್ಕವಿರುವುದರಿಂದ ಪಂಚಭೂತಗಳನ್ನು ಪಂಚಬ್ರಹ್ಮಪುರುಷರೆಂದು ತಿಳಿಸಿರುವ ಶ್ರುತಿ ಯುಕ್ತವಾಗುತ್ತದೆ. ಹೃದಯಕಮಲದ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವಮುಖದಲ್ಲಿರುವವರು ಸದ್ಯೋಜಾತಾದಿ ಪಂಚಬ್ರಹ್ಮರೇ ಆದ್ದರಿಂದ ಗಾಯತ್ರೀವಾಕ್ಯದಲ್ಲಿ ಪರಶಿವನೇ ಪ್ರತಿಪಾದಿತನಾಗಿದ್ದಾನೆ. ಭೂತಾದ್ಯವಯವಗಳನ್ನು ತಿಳಿಸಿರುವುದು ಶಿವನಲ್ಲಿಯೇ ಯುಕ್ತವಾಗುವುದರಿಂದ ಗಾಯತ್ರೀಮಂತ್ರವು ಶಿವನನ್ನೇ ಬೋಧಿಸುತ್ತದೆ ಎಂದು ಸೂತ್ರದ ಅರ್ಥವಾಗುತ್ತದೆ.

**ನನು "ಪಾದೋಽಸ್ಯ ವಿಶ್ವಾಭೂತಾನಿ । ತ್ರಿಪಾದಸ್ಯಾಮೃತಂ ದಿವಿ ।" ಇತಿ ಪುರುಷಸೂಕ್ತೇಽಪಿ ಭೂತಾದಿಪಾದಚತುಷ್ಟಯವತ್ತ್ವಂ ನಾರಾಯಣಸ್ಯೈವ ವ್ಯಪದಿಶ್ಯತ ಇತಿ ತಸ್ಮಿನ್ನಪಿ ದ್ಯುಸಂಬಂಧಿತ್ವದ್ಯೋತ**

ನಾತ್ 'ವೇದಾಹಮೇತಂ ಪುರುಷಂ ಮಹಾಂತಂ' ಇತ್ಯಾದಿನಾ ತಸ್ಯೈವ
ಪುರುಷತ್ವನಿರ್ದೇಶಾತ್ 'ನಾನ್ಯಃ ಪಂಥಾ ವಿದ್ಯತೇಽಯನಾಯ' ಇತ್ಯಾ
ದಿನಾ ತದ್ಜ್ಞಾನಸ್ಯೈವ ಮೋಕ್ಷಕಾರಣತ್ವೋಪದೇಶಾಚ್ಚ ತತ್ಪರತ್ವ
ಮೇವ ಯುಕ್ತಂ, ನನು 'ಪುರುಷೋ ವೈ ರುದ್ರಃ' ಇತ್ಯಾದೌ ರುದ್ರ
ಸ್ಯಾಪಿ ಪುರುಷಶಬ್ದವ್ಯಪದೇಶಾತ್ತತ್ಪರತ್ವಂ ಕಿಂ ನ ಸ್ಯಾದಿತಿ ಚೇನ್ನ,
'ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ ಅಹೋರಾತ್ರೇ ಪಾರ್ಶ್ವೇ' ಇತಿ ವಾಕ್ಯೇ
ಅನಿತರಸಾಧಾರಣಲಕ್ಷ್ಮೀಪತಿತ್ವಲಿಂಗದರ್ಶನಾತ್. ಛಾಂದೋಗ್ಯ
ಬ್ರಾಹ್ಮಣೇ "ಇದಂ ವಿಷ್ಣುಂ ಪಕ್ಷಃ ಸ ವಿಷ್ಣುಃ ಪ್ರಕಾವ್ಯಮುಶನೇವ
ಬ್ರುವಾಣಃ" ಇತಿ, "ವಾರಾಹಮಂತ್ಯಂ ಪುರುಷಂ ವ್ರತೇ ತತ್" ಇತಿ
ಚ "ಏಷಾ ವೈಷ್ಣವೀ ನಾಮ ಸಂಹಿತಾ ಏತಾಂ ಪ್ರಯುಂಜನ್ ವಿಷ್ಣುಂ
ಪ್ರೀಣಾತಿ" ಇತಿ ವೈಷ್ಣವಸಂಹಿತಾತ್ವನಿರ್ದೇಶೇನ ಆಥರ್ವಣಾಷ್ಟಾದಶ
ಮಹಾಶಾಂತಿಷು ತದ್ದೇವತ್ಯಮಂತ್ರವಿನಿಯೋಜನಾವಸರೇ 'ವೈಷ್ಣವ್ಯಾಂ
ಪುರುಷಸೂಕ್ತಂ' ಇತಿ ವೈಷ್ಣವ್ಯಾಂ ಶಾಂತೌ ವಿನಿಯೋಜನೇನ ಶೌನಕ
ಬೋಧಾಯನಾದಿಸ್ಮೃತಿಷು ಬಹುಧಾ ನಾರಾಯಣಸಮಾರಾಧನೇ
ವಿನಿಯೋಜನೇನ, ವಿಷ್ಣುಪುರಾಣಾದಿಷು ಪುರುಷಸೂಕ್ತಾರ್ಥಪ್ರಕ್ರಿ
ಯಾಯಾ ನಾರಾಯಣಸ್ತುತಿದರ್ಶನೇನ ಚ ತದರ್ಥಪ್ರಕಾಶಕಛಾಂ
ದೋಗ್ಯಸ್ಯಾಪಿ ತತ್ಪರತ್ವಮೇವ ಯುಕ್ತಂ ಇತಿ ಚೇದತ್ರೋಚ್ಯತೇ. ಉಪ
ಕ್ರಮೋಪಸಂಹಾರಾದಿಷಡ್ವಿಧತಾತ್ಪರ್ಯಲಿಂಗೈಃ ಪುರುಷಸೂಕ್ತಮಪಿ
ಶಿವೈಕಪರತ್ವೇನ ನಿರ್ದಿಶ್ಯತೇ. 'ಪುರುಷೋ ವೈ ರುದ್ರಃ' 'ಪುರುಷಂ
ಕೃಷ್ಣಪಿಂಗಳಂ' 'ಪುರಾತನೋಽಹಂ ಪುರುಷೋಽಹಮೀಶಃ' ಇತ್ಯಾದಿ
ಶ್ರುತಿಶತೇನ ಪುರುಷಶಬ್ದಸ್ಯ ಶಿವಪರತ್ವೇನ ವ್ಯವಸ್ಥಾಪನಾತ್, ತತ್ರೇ
ಶಾನಪದಸ್ಯ ಶಿವೇ ರೂಢತ್ವಾಚ್ಚ, ಕಿಂಚ ಶಿವಕೇಶವಯೋಃ ಪುರುಷತ್ವ
ಪ್ರಕೃತಿತ್ವೇ ಶ್ರುತಿಸ್ಮೃತಿಪುರಾಣಾಗಮಸಿದ್ಧೇ. ಸಾಮಾಮ್ನಾಯರುದ್ರ
ಸೂಕ್ತೇ—"ಏಕೈವ ಶಕ್ತಿಃ ಪರಮೇಶ್ವರಸ್ಯ ಪ್ರಯೋಜನಾರ್ಥಾಯ
ಚತುರ್ವಿಧಾಽಭೂತ್ । ಭೋಗೇ ಭವಾನೀ ಪುರುಷೇಷು ವಿಷ್ಣುಃ ಕ್ರೋಧೇ
ಚ ಕಾಳೀ ಸಮರೇ ಚ ದುರ್ಗಾ ॥" ಇತಿ. ಆದಿತ್ಯಪುರಾಣೇ ವಿಷ್ಣುಂ
ಪ್ರತಿ ಶಿವವಚನಂ "ಪ್ರಕೃತಿಸ್ತ್ವಂ ಸುರಶ್ರೇಷ್ಠ ಪುರುಷೋಽಹಂ ನ
ಸಂಶಯಃ । ತ್ವನ್ಮಯಂ ಮನ್ಮಯಂ ಸರ್ವಂ ಅವ್ಯಕ್ತಪುರುಷಾತ್ಮಕಂ ॥"
ಇತಿ. ಸ್ಕಾಂದೇ—"ಪುರುಷೋ ನಾಮ ಸಂಪೂರ್ಣಸ್ಸಾಂಬಮೂರ್ತಿಸ್ಸ
ನಾತನಃ । ವಾಸುದೇವಃ ಪರಾಶಕ್ತಿರಿತಿ ವೇದೇ ಪ್ರಪಂಚಿತಂ" ॥ ಇತಿ.
ಗೀತಾಯಾಂ "ವಾಸುದೇವಃ ಪರಾಪ್ರಕೃತಿಃ" ಇತಿ. "ಪ್ರಕೃತಿಃ
ಪರಮೋ ವಿಷ್ಣುಃ ಪುರುಷಃ ಪರಮಶ್ಶಿವಃ" ಇತಿ ಕೂರ್ಮೇ. ಕಿಂಚ

ಶಿವರಹಸ್ಯಖಂಡಾಂತರ್ಭೂತಾಸುರಕಾಂಡಾದಿಷು ನಾರಾಯಣಸ್ಯ ಸ್ತ್ರೀರೂಪತ್ವಂ ಶಿವಸ್ಯ ಪುರುಷತ್ವಂ ತಯೋಃ ಕಾಲಭೈರವವಿಧಾತ್ರೋರುತ್ಪತ್ತಿಶ್ಚ ಬಹುಧಾ ಪ್ರಪಂಚಿತಾ. ಅತಃ 'ಸಹಸ್ರಶೀರ್ಷಾ ಪುರುಷಃ' ಇತ್ಯುಪಕ್ರಮವಾಕ್ಯಸ್ಥಪುರುಷಶಬ್ದಸ್ಯ ಶಿವಪರತ್ವಂ. 'ಯಜ್ಞೇನ ಯಜ್ಞಮಯಜಂತ ದೇವಾಃ' ಇತಿ ಮಧ್ಯಗತವಾಕ್ಯೇನಾಪಿ ತತ್ಪರತ್ವಮೇವಾವಗಮ್ಯತೇ. 'ಯಜ್ಞೋ ವೈ ವಿಷ್ಣುಃ' ಇತಿ ಶ್ರುತೌ ನಾರಾಯಣಸ್ಯ ಯಜ್ಞಾತ್ಮಕತ್ವನಿರ್ದೇಶಾತ್, ಯಜ್ಞೇನ-ಯಜ್ಞಶಬ್ದವಾಚ್ಯವಿಷ್ಣ್ವಾತ್ಮಕಪಶ್ವಾದ್ಯುಪಕರಣೇನ ಯಜ್ಞಂ-ಪರಶಿವಾರಾಧನಾತ್ಮಕಸವನಂ ದೇವಾಃ ಬ್ರಹ್ಮಾದಯಃ ಅಯಜಂತ-ಯಜಂತೀತ್ಯರ್ಥಃ 'ಆವೋ ರಾಜಾನಮಧ್ವರಸ್ಯ ಹೋತಾರಂ ರುದ್ರಂ' ಇತಿ ಶ್ರುತೌ ಯಜ್ಞೇಶ್ವರತ್ವಂ ಪರಮೇಶ್ವರಸ್ಯೈವ ಸ್ಪಷ್ಟಂ ದರ್ಶಿತಂ. ಋಗ್ವೇದೇಽಪಿ 'ಗಾಥಪತಿಂ ಮೇಧಪತಿಂ ರುದ್ರಂ' ಇತ್ಯಾದಿನಾ ಸ್ಪಷ್ಟಮುಕ್ತಂ. ತಥಾ ಸೂತಸಂಹಿತಾಯಾಂ "ಯಜ್ಞರೂಪಂ ಮಹಾವಿಷ್ಣುಂ ಯಜ್ಞೇ ಪಶ್ಯಂತಿ ಯೇ ದ್ವಿಜಾಃ । ಪ್ರಾಧಾನ್ಯೇನ ಮಹಾದೇವೋ ಯಜ್ಞದೇವೋ ನಚಾಪರಃ ॥ ಇತಿ ಜ್ಞಾತ್ವಾ ಯಜಂತೇ ಯೇ ತೇ ವೈ ವಿಜ್ಞಾನಮಾಪ್ನುಯುಃ ॥" ಇತಿ. ಅತ ಏವ ಪರಮೇಶ್ವರಾಷ್ಟಮೂರ್ತೀನಾಂ ಮಧ್ಯೇ ಯಜ್ವನ ಏಕಮೂರ್ತಿತ್ವಂ ನಿರ್ದಿಷ್ಟಂ. ನೃಸಿಂಹಪುರಾಣೇ "ವಿಯಜ್ಜ್ವಲನಭೂವಾಯು ಚಂದ್ರಸೂರ್ಯೋದಕಾನಿ ಚ । ದೀಕ್ಷಿತಶ್ಚೇತಿ ಗೌರೀಶ ತವಾಷ್ಟತನವಃ ಕ್ರಮಾತ್ ॥" ಇತಿ. ಕಿಂಚ ಯಜ್ಞಕರ್ತೃತ್ವಯಜ್ಞಭೋಕ್ತೃತ್ವಯಜ್ಞಪತಿತ್ವಾದಿಕಂ ತಸ್ಯೈವ. ಯೂಪವೇದ್ಯಾದಿಕಾಗ್ನಿಹೋತ್ರಾದಿಕರ್ಮಣಾಂ ರುದ್ರಶೇಷತ್ವೇನೈವ ದರ್ಶನಾತ್ ಅಷ್ಟಮೂರ್ತೇಃ ಪರಮೇಶ್ವರಸ್ಯ ವಹ್ನೇರೇಕಾಂಗತ್ವಾತ್. ಅಂತರ್ಯಾಮಿತ್ವೇನ ವಹ್ನಿಮಂಡಲೇ ಪರಮೇಶ್ವರಸದ್ಭಾವಾನ್ನೇತರಸ್ಯಾಗ್ನಿಹೋತ್ರಾದಿಸರ್ವಕರ್ಮಶೇಷಿತ್ವಂ. ಯಜುರ್ವೇದೇ "ರುದ್ರೋ ವಾ ಏಷ ಯದಗ್ನಿಸ್ತಸ್ಯೈತೇ ತನುವೌ ಘೋರಾನ್ಯಾ ಶಿವಾನ್ಯಾ" ಇತಿ, "ಯೋ ರುದ್ರೋ ಅಗ್ನೌ ಯೋಽಪ್ಸು" ಇತಿ. ತಥಾಚ ಸ್ಮೃತೌ "ಅಗ್ನೌ ಜ್ವಾಲಾವೃತಂ ರುದ್ರಂ ವಹ್ನಿಮಂಡಲಮಧ್ಯಗಂ । ಧ್ಯಾಯೇತ್ಕಲಾದಶಯುತಂ ಶಕ್ತಿಸಂಯುತಂ ಶಕ್ತಿಸ್ವಸ್ತಿಕಧಾರಿಣಂ ॥" ಇತಿ. ರುದ್ರಸ್ಯ ವಹ್ನ್ಯಾತ್ಮಕವಹ್ನಿಮಂಡಲಾಂತರ್ಯಾಮಿತ್ವದರ್ಶನಾತ್. ಕಿಂಚ ಯಾಗೀಯಪುರೋಡಾಶಾದಿದ್ರವ್ಯಾಣಿ ದೇವಾಃ ಶಿವಾನುಜ್ಞಯಾ ಪಶ್ವಾಲಂಭನಂ ಕೃತ್ವಾಶಿವಾತ್ಪರಿಶೇಷಮೇವ ಭುಂಜಂತಿ. ತಥಾ ಯಜುರ್ವೇದೇ, "ಇಮಂ ಪಶುಂ ಪಶುಪತೇ ತೇ ಅದ್ಯ ಬಧ್ನಾಮ್ಯಗ್ನೇ ಸುಕೃತಸ್ಯ ಮಧ್ಯೇ । ಅನುಮನ್ಯಸ್ವ ಸುಯಜಾ ಯಜಾಮ

ಜುಷ್ಟಂ ದೇವಾನಾಮಿದಮಸ್ತು ಹವ್ಯಂ ॥ ” ಇತಿ. “ ಅಯಂ ಸೋಮಃ ಕಪರ್ದಿನಃ ” ಇತ್ಯಾದಿಷು ಬಹುಷಃ ಸ್ಮರಣಾತ್. ಕಿಂಚ ಸಾಮವೇದ ಪ್ರಥಮಮಂತ್ರೇ “ ತಪಶ್ಚ ತೇ ಜಪಶ್ಚ ತೇ ” ಇತ್ಯುಪಕ್ರಮ್ಯ “ ಕರ್ಮಾಧಿಪತಯೇ ನಮಃ ” ಇತ್ಯಂತೇನ ತತ್ರ “ವಿರೂಪಾಕ್ಷೋಽಸಿ” ಇತಿ ಸರ್ವವೈದಿಕಕರ್ಮಾಧಿದೈವತ್ವಂ ಪರಬ್ರಹ್ಮಣಶ್ಶಿವಸ್ಯ ಪ್ರಸಾಧ್ಯ, “ ಸ್ತುತ್ವಾ ತ್ವಾಂ ಪ್ರಪದ್ಯೇ ತ್ವಯಾ ಸ್ಯೂತಮಿದಂ ಕರಿಷ್ಯಾಮಿ ತಸ್ಯೈ ಸಮೃಧ್ಯತಾಂ ತಸ್ಮಾದುಪಪದ್ಯತಾಂ ” ಇತ್ಯಾದೌ ಸಕಲವೈದಿಕಕರ್ಮಣಾಂ ರುದ್ರಾನುಜ್ಞಯಾ ಕರ್ತವ್ಯತ್ವೇನ ವಿಧಿಶ್ರವಣಾತ್ ಯಜ್ಞಾದಿಸರ್ವವೈದಿಕಕರ್ಮಣಾಂ ಮುಖ್ಯದೈವತ್ವಂ ಪರಮೇಶ್ವರಸ್ಯೈವೇತಿ ಸಿದ್ಧಂ. ಕಿಂಚ ಶ್ರುತ್ಯಂತರೇ— “ ಆಖುಸ್ತೇ ರುದ್ರ ಪಶುಸ್ತಂ ಜುಷಸ್ವೈಷ ತೇ ರುದ್ರಭಾಗಸ್ಸಹ ಸ್ವಸ್ರಾಂಬಿಕಯಾ ” ಇತಿ. ಅಸ್ಯಾರ್ಥಃ. ಆಖುಃ ಆಸಮಂತಾತ್ ಖನತೀತ್ಯಾಖುಃ ಮಹಾವರಾಹರೂಪೋ ವಿಷ್ಣುಃ, ಹೇ ರುದ್ರ ತೇ–ತುಭ್ಯಂ ಪಶುಃ–ಯಾಗೀಯಪಶುರೂಪಃ ಅಭೂತ್. ತಂ ಪಶುಂ ಸ್ವಸ್ರಾ ಪ್ರಾಗಭಾವಾಭಾವಸಹಜಸಿದ್ಧಾನುಸ್ಯೂತಯಾ ಅಂಬಿಕಯಾ ಪಾರ್ವತ್ಯಾ ಸಹ ಜುಷಸ್ವ ಭುಂಕ್ಷ್ವ ತೇ ತುಭ್ಯಂ ಭಾಗಃ ಯಾಗಭಾಗ ಇತಿ. ತಥಾ ವೃದ್ಧಶಾತಾತಪೇ “ ಆಖುರೂಪಂ ಮಹಾತ್ಮಾನಂ ಹಿರಣ್ಯಾಕ್ಷಪ್ರಭಂಜನಂ । ಯಾಗೀಯಪಶುರೂಪಂ ತಂ ಮಹಾಯಜ್ಞವರಾಹಕಂ ॥ ಪಾರ್ವತ್ಯಾ ಸಹ ದೇವೇಶ ವಿಶ್ವನಾಥ ಸದಾಶಿವ । ಜುಷಸ್ವ ಕೃಪಯಾ ವಿಷ್ಣುಂ ಶಂಖಚಕ್ರಗದಾಧರಂ ॥ ” ಇತಿ ಶ್ರವಣಾತ್. ಏಷ ಅಭ್ಯಾಸಃ. “ ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ । ಪುರುಷಂ ಜಾತಮಗ್ರತಃ । ತೇನ ದೇವಾ ಅಯಜಂತ । ಸಾಧ್ಯಾ ಋಷಯಶ್ಚ ಯೇ ॥ ” ಇತ್ಯರ್ಥವಾದಃ. ಅಸ್ಯಾರ್ಥಃ– ತಂ ಯಜ್ಞಂ–ಯಜ್ಞಪಶ್ವಾತ್ಮಕಂ ವಿಷ್ಣುಂ, ಬರ್ಹಿಷಿ–ಸವನೇ, ಪ್ರೌಕ್ಷನ್–ಆಲಂಭನಾರ್ಥಂ ಅಸಿಂಚನ್. ಅಗ್ರತಃ ಸೃಷ್ಟೇಃ ಪೂರ್ವಕಾಲೇ ಜಾತಂ–ವಿದ್ಯಮಾನಂ, ಪುರುಷಂ–ರುದ್ರಂ, ತೇನ–ಪಶುನಾ, ದೇವಾಃ ಬ್ರಹ್ಮಾದಯಃ ಸಾಧ್ಯಾಃ ಋಷಯಶ್ಚ, ಅಯಜಂತ ಯಜಂತೆ ಇತಿ. ಸ್ಕಾಂದೇ “ ತಮೇವ ಪುರುಷಂ ಯಜ್ಞಂ ತೇನೈವಾಯಜಮೀಶ್ವರಂ ” ಇತಿ. ತಥಾ ಭಾಗವತದ್ವಿತೀಯಸ್ಕಂದೇ ತದ್ವದುಪದಿಷ್ಟಂ. ಅತ ಏವ ಲೋಕೇ ಆದಿವರಾಹ ಇತಿ ಪ್ರಸಿದ್ಧಂ. ‘ ಆದಿತ್ಯವರ್ಣಂ ತಮಸಃ ಪರಸ್ತಾತ್ ’ ಇತ್ಯಪೂರ್ವತಾ. ಆದಿತ್ಯವರ್ಣತ್ವಂ ಹಿರಣ್ಮಯತ್ವಂ. ತದ್ಧಿರಣ್ಮಯತ್ವಂ ಅಂತರಧಿಕರಣೇ ಸ್ಪಷ್ಟಮುಕ್ತಂ. ಕೈವಲ್ಯೇಽಪಿ “ ಉಮಾಸಹಾಯಂ ” ಇತ್ಯಾರಭ್ಯ “ತಮಸಃ—ಪರಸ್ತಾತ್ ” ಇತ್ಯಂತೇನ ತಸ್ಯೈವ ತಮಃಪರತ್ವಸ್ಯ ವಿವಕ್ಷಿತತ್ವಾತ್. “ ತಮೇವಂ ವಿದ್ವಾನಮೃತ ಇಹ

ಭವತಿ" ಇತಿ ವಾಕ್ಯೇ ಫಲಮುಪದಿಷ್ಟಂ. ಅತ್ರಾಪ್ಯಮೃತಶಬ್ದಃ ಜಾಬಾಲಾದ್ಯುಪನಿಷತ್ಸು ಪರಶಿವಪರತ್ವೇನ ನಿರ್ದಿಷ್ಟಃ. ತಸ್ಮಾದ್ಗತಿಸಾಮಾನ್ಯನ್ಯಾಯೇನ ಷಡ್ವಿಧಲಿಂಗೈಃ ಪುರುಷಸೂಕ್ತಸ್ಯ ಪರಶಿವಪರತ್ವಮೇವ ಜ್ಞೇಯಂ. ಕಿಂಚ ಸರ್ವಾತ್ಮಕಸ್ಯ ಶಿವಸ್ಯ ಸಹಸ್ರಶೀರ್ಷತ್ವಂ ಸಹಸ್ರಾಕ್ಷತ್ವಂ ಸಹಸ್ರಪಾದತ್ವಂ ಸಹಸ್ರಬಾಹುತ್ವಂ ಚ ಯುಕ್ತಂ. "ಸಹಸ್ರಾಕ್ಷಾಯ ಮೀಢುಷೇ" "ಸಹಸ್ರಾಣಿ ಸಹಸ್ರಧಾ ಬಾಹ್ವೋಸ್ತವ ಹೇತಯಃ" ಇತಿ ರುದ್ರಸೂಕ್ತೇ ಸಹಸ್ರಾಕ್ಷತ್ವಸಹಸ್ರಬಾಹುತ್ವಾದಿಕಂ ರುದ್ರಸ್ಯೈವ ನಿರ್ದಿಷ್ಟಂ.

"ಪಾದೋಽಸ್ಯ ವಿಶ್ವಾ ಭೂತಾನಿ" ಎಂದು ಪುರುಷಸೂಕ್ತದಲ್ಲಿ ನಾರಾಯಣನಿಗೆ ನಾಲ್ಕು ಪಾದಗಳಿರುವುದಾಗಿ ಹೇಳಿದೆ. ಅವನಲ್ಲಿಯೇ ದ್ಯುಸಂಬಂಧವೂ ಇರುವುದರಿಂದ, 'ವೇದಾಹಮೇತಂ ಪುರುಷಂ ಮಹಾಂತಂ' ಎಂಬುದರಿಂದ ಅವನು ತಮಸ್ಸಿನ ಆಚೆಗೆ ಇರುವನೆಂದು ಹೇಳಿರುವುದರಿಂದಲೂ, 'ನಾನ್ಯಃ ಪಂಥಾಃ' ಎಂಬಲ್ಲಿ ಅವನ ಜ್ಞಾನವೇ ಮೋಕ್ಷಕಾರಣವೆಂದು ಹೇಳಿರುವುದರಿಂದಲೂ ಪುರುಷಸೂಕ್ತವು ನಾರಾಯಣನಿಗೆ ಅನ್ವಯಿಸುವುದೆಂಬುದೇ ಯುಕ್ತವಾಗಿದೆ. 'ಪುರುಷೋ ವೈ ರುದ್ರಃ' ಎಂಬಲ್ಲಿ ರುದ್ರನಿಗೂ ಪುರುಷನೆಂಬ ಹೆಸರು ಇರುವುದರಿಂದ ಪುರುಷಸೂಕ್ತವು ರುದ್ರನಿಗೂ ಏಕೆ ಅನ್ವಯಿಸಬಾರದು? ಎಂದರೆ 'ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂದು "ಹಗಲೂ ರಾತ್ರಿಯೂ ಅವನ ಪಕ್ಕದಲ್ಲಿ ಭೂಮಿ ಲಕ್ಷ್ಮಿ ಎಂಬ ಇಬ್ಬರು ಪತ್ನಿಯರು" ಎಂದು ಅಸಾಧಾರಣ ಧರ್ಮವನ್ನು ಹೇಳಿರುವುದರಿಂದಲೂ, "ಪುರುಷಸೂಕ್ತವು ವೈಷ್ಣವೀಸಂಹಿತೆ, ಇದರ ಪ್ರಯೋಗದಿಂದ ವಿಷ್ಣು ಪ್ರೀತನಾಗುವನು" ಎಂದು ಛಾಂದೋಗ್ಯಬ್ರಾಹ್ಮಣದಲ್ಲಿ ಹೇಳಿರುವುದರಿಂದಲೂ, ಹದಿನೆಂಟು ಮಹಾಶಾಂತಿಗಳಲ್ಲಿ ಆಯಾಯ ದೇವತೆಯ ಮಂತ್ರಗಳನ್ನು ವಿನಿಯೋಗಿಸುವಾಗ ಪುರುಷಸೂಕ್ತವನ್ನು ವೈಷ್ಣವರು ಉಪಯೋಗಿಸುವುದರಿಂದಲೂ, ಶೌನಕಬೋಧಾಯನಸ್ಮೃತಿಗಳಲ್ಲಿ ನಾರಾಯಣನ ಅರ್ಚನೆಗೆ ಪುರುಷಸೂಕ್ತವನ್ನು ವಿಧಿಸಿರುವುದರಿಂದಲೂ, ವಿಷ್ಣುಪುರಾಣದಲ್ಲಿ ನಾರಾಯಣನನ್ನು ಸ್ತುತಿಸಲಿಕ್ಕಾಗಿ ಪುರುಷಸೂಕ್ತವನ್ನು ಉಪಯೋಗಿಸಿರುವುದಾಗಿ ಕಂಡುಬಂದಿರುವುದರಿಂದಲೂ ಪುರುಷಸೂಕ್ತವು ನಾರಾಯಣನಿಗೇ ಅನ್ವಯಿಸುತ್ತದೆ ಎಂದು ಆಕ್ಷೇಪಬರುತ್ತದೆ. ಇದಕ್ಕೆ ಸಮಾಧಾನ ಹೀಗಿದೆ. ಉಪಕ್ರಮೋಪಸಂಹಾರೈಕ್ಯವೇ ಮೊದಲಾದ ತಾತ್ಪರ್ಯಲಿಂಗಗಳಿಂದ ಪುರುಷಸೂಕ್ತವೂ ಶಿವನಿಗೇ ಅನ್ವಯಿಸುವುದಾಗಿ ಸ್ಪಷ್ಟಪಡುತ್ತದೆ. 'ಪುರುಷೋ ವೈ ರುದ್ರಃ' 'ಪುರುಷೋಽಹಮೀಶಃ' 'ಪುರುಷಂ ಕೃಷ್ಣಪಿಂಗಳಂ' ಈ ಶ್ರುತಿಗಳಲ್ಲಿ ಪುರುಷಶಬ್ದವು ಶಿವಪರವೆಂದು ನಿಶ್ಚಿತವಾಗಿದೆ. ಅದರಲ್ಲೂ ಈಶಾನಪದವು ಶಿವನಲ್ಲಿಯೇ ರೂಢವಾಗಿದೆ. ಶಿವಕೇಶವರು ಪುರುಷಪ್ರಕೃತಿಗಳೆಂದು ಶ್ರುತಿ ಸ್ಮೃತಿ ಪುರಾಣಾಗಮಗಳಲ್ಲಿ ಪ್ರಸಿದ್ಧವಾಗಿದೆ. ಸಾಮಾಮ್ನಾಯರುದ್ರಸೂಕ್ತದಲ್ಲಿ 'ಪರಮೇಶ್ವರನ ಪ್ರಾಣರೂಪವಾದ ಚಿತ್‌ಶಕ್ತಿಯು

ಅವನ ಇಚ್ಛೆಯಂತೆ ಅವನ ಭೋಗಕಾಲದಲ್ಲಿ ಭವಾನಿ ಎಂದೂ, ಪುರುಷರಲ್ಲಿ ವಿಷ್ಣು ವೆಂದೂ, ಕೋಪಕಾಲದಲ್ಲಿ ಕಾಳಿ ಎಂದೂ, ಯುದ್ಧದಲ್ಲಿ ದುರ್ಗಿ ಎಂದೂ, ನಾಲ್ಕು ಬಗೆಯಾಯಿತು" ಎಂದು ಹೇಳಲಾಗಿದೆ. ಆದಿತ್ಯಪುರಾಣದಲ್ಲಿ ವಿಷ್ಣುವಿಗೆ ಶಿವನು 'ನೀನು ಪ್ರಕೃತಿ, ನಾನು ಪುರುಷ. ನಿನ್ನದೆಲ್ಲವೂ ನನ್ನದೇ ಆಗಿದೆ. ಇದೆಲ್ಲವೂ ಅವ್ಯಕ್ತಪುರುಷಮಯವಾಗಿದೆ' ಎಂದು ಹೇಳುತ್ತಾನೆ. ಸ್ಕಾಂದಪುರಾಣದಲ್ಲಿ "ಪರಿಪೂರ್ಣನೂ ಸನಾತನನೂ ಆದ ಸಾಂಬಶಿವನೇ ಪುರುಷನು, ವಾಸುದೇವನೇ ಪರಾಪ್ರಕೃತಿ" ಎಂದು ಹೇಳಿದೆ. "ಗೀತೆಯಲ್ಲಿ, 'ವಾಸುದೇವನೇ ಪರಾಪ್ರಕೃತಿ' ಎಂದೂ, ಕೂರ್ಮ ಪುರಾಣದಲ್ಲಿ 'ವಿಷ್ಣುವೇ ಪರಾಪ್ರಕೃತಿ, ಶಿವನೇ ಪರಮಪುರುಷನು' ಎಂದೂ ಹೇಳಲಾಗಿದೆ. ಶಿವರಹಸ್ಯಖಂಡದೊಳಗಿರುವ ಅಸುರಕಾಂಡದಲ್ಲಿ "ನಾರಾಯಣನು ಸ್ತ್ರೀಯೆಂದೂ, ಶಿವನು ಪುರುಷನೆಂದೂ, ಅವರಿಬ್ಬರ ಸಮಾಗಮದಿಂದ ಕಾಲಭೈರವ ಮತ್ತು ಚತುರ್ಮುಖ ಇವರು ಉತ್ಪನ್ನರಾದರೆಂದೂ ಹೇಳಲಾಗಿದೆ. ಆದ್ದರಿಂದ 'ಸಹಸ್ರಶೀರ್ಷಾ ಪುರುಷಃ' ಎಂಬಲ್ಲಿ ಉಪಕ್ರಮದಲ್ಲಿರುವ ಪುರುಷಶಬ್ದವು ಶಿವಪರವೇ ಆಗಿದೆ. 'ಯಜ್ಞೇನ ಯಜ್ಞಮಯಜಂತ ದೇವಾಃ' ಎಂಬ ಮಧ್ಯವಾಕ್ಯದಲ್ಲೂ ಪುರುಷಸೂಕ್ತವು ಶಿವಪರವೆಂದೇ ತಿಳಿದುಬರುತ್ತದೆ. 'ಯಜ್ಞೋ ವೈ ವಿಷ್ಣುಃ' ಎಂಬ ಶ್ರುತಿಯಲ್ಲಿ ನಾರಾಯಣನನ್ನು ಯಜ್ಞರೂಪನೆಂದು ಹೇಳಿದೆ. ಯಜ್ಞೇನ= ಯಜ್ಞರೂಪವಾದ ವಿಷ್ಣುವೆಂಬ ಪಶುವಿನಿಂದ ಬ್ರಹ್ಮಾದಿದೇವತೆಗಳು, ಯಜ್ಞಂ ಅಯಜಂತ ಶಿವಾರಾಧನವೆಂಬ ಯಜ್ಞವನ್ನು ನಡೆಸಿದರು ಎಂದು ಈ ವಾಕ್ಯದ ಅರ್ಥ. 'ಯಜ್ಞದ ಅಧಿಪತಿಯಾದ ರುದ್ರನನ್ನು ಕರೆಯಿರಿ' ಎಂಬಲ್ಲಿ ಪರಮೇಶ್ವರನು ಯಜ್ಞೇಶ್ವರನೆಂಬುದು ಸ್ಪಷ್ಟವಾಗಿದೆ. ಋಗ್ವೇದದಲ್ಲಿ ರುದ್ರನನ್ನು ಯಜ್ಞಾಧಿಪನೆಂದು ಸ್ಪಷ್ಟವಾಗಿ ಹೇಳಿದೆ. ಸೂತಸಂಹಿತೆಯಲ್ಲಿ, 'ಯಜ್ಞರೂಪವಾದ ವಿಷ್ಣುವನ್ನು ಯಾರು ಯಜ್ಞದಲ್ಲಿ ಕಂಡು, ಮಹಾದೇವನೇ ಯಜ್ಞದಲ್ಲಿ ಪ್ರಧಾನ ದೇವನೆಂದು ಭಾವಿಸಿ ಅರ್ಚಿಸುವರೋ ಅವರು ಆತ್ಮಜ್ಞಾನವನ್ನು ಪಡೆಯುವರು' ಎಂದು ಹೇಳಿದೆ. ಆದ್ದರಿಂದಲೇ ಪರಮೇಶ್ವರನ ಅಷ್ಟಮೂರ್ತಿಗಳಲ್ಲಿ ಯಜ್ಞವೂ ಒಂದು ಮೂರ್ತಿ ಎನಿಸಿದೆ. "ಆಕಾಶ, ಅಗ್ನಿ, ಭೂಮಿ, ವಾಯು, ಚಂದ್ರ, ಸೂರ್ಯ, ನೀರು, ದೀಕ್ಷಿತ ಇವು ಎಂಟು ಅವನ ಅವಯವಗಳೆನಿಸಿವೆ" ಎಂದು ನೃಸಿಂಹಪುರಾಣದಲ್ಲಿ ಹೇಳಿದೆ. ಇದೂ ಅಲ್ಲದೆ, ಅವನೇ ಯಜ್ಞಕರ್ತನೂ, ಯಜ್ಞಭೋಕ್ತನೂ, ಯಜ್ಞಪತಿಯೂ ಆಗಿದ್ದಾನೆ. ವೇದೋಕ್ತವಾದ ಅಗ್ನಿಕಾರ್ಯಗಳೆಲ್ಲದರಲ್ಲೂ ರುದ್ರನಿಗೆ ಹವಿಶ್ಶೇಷವು ಸಲ್ಲುತ್ತದೆ. ಅಷ್ಟಮೂರ್ತಿಯಾದ ಶಿವನಿಗೆ ಬೆಂಕಿಯೂ ಒಂದು ಅಂಗವಾಗಿದೆ. ಅಗ್ನಿಮಂಡಲದಲ್ಲಿ ಶಿವನೇ ಅಂತರ್ಯಾಮಿಯಾಗಿರುವುದರಿಂದ ಅಗ್ನಿಹೋತ್ರವೇ ಮೊದಲಾದ ಕರ್ಮಗಳೆಲ್ಲದರಲ್ಲೂ ಅವನಿಗೆ ಹವಿರ್ಭಾಗವು ಸಲ್ಲಲಿದೆ. ಯಜುರ್ವೇದದಲ್ಲಿ 'ಈ ರುದ್ರನೇ ಅಗ್ನಿಯು-ಅವನಲ್ಲಿ ಭೀಕರವೂ ಶಾಂತವೂ ಆದ ಎರಡು ಶರೀರಗಳಿವೆ.' 'ಅಗ್ನಿ ನೀರು ಓಷಧಿ ಎಲ್ಲದರಲ್ಲೂ ರುದ್ರನಿರುವನು" ಎಂದೂ,

ಸ್ಮೃತಿಯಲ್ಲಿ 'ಅಗ್ನಿಜ್ವಾಲೆಯಿಂದಾವೃತನಾಗಿ ಅಗ್ನಿಮಂಡಲದಲ್ಲಿ ಶಕ್ತಿಯೊಡನೆ ನೆಲಸಿರುವ ಶಿವನನ್ನು ಧ್ಯಾನಿಸಬೇಕು' ಎಂದೂ ಹೇಳಿದೆ. ಇಲ್ಲಿ ರುದ್ರನನ್ನು ಅಗ್ನಿಸ್ವರೂಪನೆಂದೂ ಅಗ್ನ್ಯಂತರ್ಯಾಮಿಯೆಂದೂ ಹೇಳಿದೆ. ಇದೂ ಅಲ್ಲದೆ, ದೇವತೆಗಳು ಪುರೋಡಾಶವೇ ಮೊದಲಾದ ಹವಿಸ್ಸನ್ನು ರುದ್ರನ ಆಜ್ಞೆಯಂತೆ ಶೇಷಪ್ರಸಾದವೆಂದು ಭೋಗಿಸುತ್ತಾರೆ. ಯಜುರ್ವೇದದಲ್ಲಿ "ಪರಿಶುದ್ಧವಾದ ಈ ಯಜ್ಞಭೂಮಿಯಲ್ಲಿ ಈ ಪಶುವನ್ನು ನಿನಗಾಗಿ ಕಟ್ಟುತ್ತೇನೆ. ಇದನ್ನು ನೀನು ಒಪ್ಪಿಸಿಕೋ. ಶುದ್ಧವಾದ ಯಜ್ಞವನ್ನಾಚರಿಸುತ್ತೇವೆ. ಇಲ್ಲಿ ಕೊಡುವ ಹವಿಸ್ಸು ದೇವತೆಗಳಿಗೆ ಭೋಜ್ಯವಾಗಲಿ" 'ಈ ಸೋಮರಸವು ಪರಮೇಶ್ವರನದು' ಎಂದು ಹೇಳಿದೆ. ಸಾಮವೇದದಲ್ಲಿ 'ಜಪತಪಗಳೆಲ್ಲವೂ ನಿನಗಾಗಿ' ಎಂದು ಆರಂಭಿಸಿ 'ಕರ್ಮಾಧಿಪತಿಯಾದ ನಿನಗೆ ನಮಸ್ಕಾರ' ಎಂದು ಕೊನೆಗೊಂಡಿರುವ ಮಂತ್ರದಲ್ಲಿ ಎಲ್ಲಾ ವೈದಿಕಕರ್ಮಗಳಿಗೂ ವಿರೂಪಾಕ್ಷನೇ ಅಧಿದೈವನೆಂದು ಸಾಧಿಸಿ "ನಿನಗೆ ಶರಣಾಗುತ್ತೇನೆ. ನಿನ್ನ ಪ್ರೇರಣೆಯಂತೆ ಇದನ್ನು ಮಾಡುತ್ತೇನೆ. ನೀನು ಇದನ್ನು ನೆರವೇರಿಸಬೇಕು" ಎಂದು ಎಲ್ಲಾ ಕರ್ಮಗಳನ್ನೂ ರುದ್ರನ ಅನುಜ್ಞೆಯಿಂದಲೇ ಮಾಡಬೇಕೆಂದು ವಿಧಿಸಲಾಗಿದೆ. ಇದರಿಂದ ವೈದಿಕ ಕರ್ಮಗಳೆಲ್ಲಕ್ಕೂ ಶಿವನೇ ಮುಖ್ಯವಾದ ದೇವನೆಂಬುದು ಸಿದ್ಧವಾಯಿತು. ಬೇರೆ ಶ್ರುತಿಯಲ್ಲಿ "ಎಲೈ ರುದ್ರನೇ ಮಹಾವರಾಹನೆನಿಸಿದ ವಿಷ್ಣುವು ನಿನಗೆ ಯಜ್ಞಪಶುವಾಗಿದ್ದಾನೆ. ಅವನನ್ನು ನಿನ್ನ ಚಿತ್‌ಶಕ್ತಿಯೊಡನೆ ಭೋಗಿಸು. ನಮ್ಮ ಎಲ್ಲಾ ಆರಾಧನೆಗಳಲ್ಲೂ ನಿನಗೆ ಭಾಗವಿದೆ" ಹೀಗೆಂದು ಹೇಳಿದೆ. ವೃದ್ಧಶಾತಾತಪದಲ್ಲಿ 'ಆದಿವರಾಹನೆನಿಸಿದ ಮಹಾವಿಷ್ಣುವು ಯಜ್ಞೇಶ್ವರನಾದ ರುದ್ರನಿಗೆ ಪಾರ್ವತಿಯಂತೆ ಪರಮಪ್ರಿಯನಾಗಿದ್ದಾನೆ' ಹೀಗೆ ಹೇಳಿದೆ. ಶ್ರುತಿಸ್ಮೃತಿಗಳ ಈ ಹೇಳಿಕೆಯೇ ಅಭ್ಯಾಸವೆನಿಸಿದೆ. "ತಂ ಯಜ್ಞಂ ಬರ್ಹಿಷಿ-ಋಷಯಶ್ಚ ಯೇ" ಎಂಬುದು ಅರ್ಥವಾದವೆನಿಸಿದೆ. ಬ್ರಹ್ಮಾದಿದೇವತೆಗಳು ಮತ್ತು ಋಷಿಗಳು ಯಜ್ಞಪಶುವೆನಿಸಿದ ವಿಷ್ಣುವನ್ನು ಆದಿಪುರುಷನಾದ ರುದ್ರನ ಪ್ರೀತ್ಯರ್ಥವಾಗಿ ಯಜ್ಞದಲ್ಲಿ ಅರ್ಚನಮಾಡಿದರು" ಎಂಬುದೇ ಈ ಮಂತ್ರದ ಅರ್ಥ. ಸ್ಕಾಂದದಲ್ಲಿ 'ಪುರುಷೋ ವಿಷ್ಣುಃ' ಎಂಬಂತೆ "ಪುರುಷರೂಪನಾದ ವಿಷ್ಣುವನ್ನು ಪರಮೇಶ್ವರಪ್ರೀತ್ಯರ್ಥವಾಗಿ ಅರ್ಚಿಸಿದರು" ಎಂದು ಹೇಳಿದೆ. ಹಾಗೆಯೇ ಭಾಗವತದ ಎರಡನೇ ಸ್ಕಂಧದಲ್ಲೂ ತಿಳಿಸಲಾಗಿದೆ. ಆದ್ದರಿಂದಲೇ ನಾರಾಯಣನು ಆದಿವರಾಹನೆಂದು ಪ್ರಸಿದ್ಧನಾಗಿದ್ದಾನೆ. 'ಆದಿತ್ಯವರ್ಣಂ ತಮಸಃ ಪರಸ್ತಾತ್' ಎಂಬಲ್ಲಿ ಅಪೂರ್ವತೆ ಕಂಡುಬಂದಿದೆ. ಇಲ್ಲಿ ಆದಿತ್ಯವರ್ಣನೆಂದರೆ ಹಿರಣ್ಮಯನೆಂದರ್ಥ. ಅಂತರಧಿಕರಣದಲ್ಲಿ ಶಿವನನ್ನು ಹಿರಣ್ಮಯನೆಂದು ಸ್ಪಷ್ಟವಾಗಿ ತಿಳಿಸಿದೆ. ಕೈವಲ್ಯದಲ್ಲಿ ಅವನ ಬಗ್ಗೆ 'ತಮಸಃ ಪರಸ್ತಾತ್, ಎಂದು ಸ್ಪಷ್ಟಪಡಿಸಲಾಗಿದೆ. 'ಅವನನ್ನು ತಿಳಿದವನು ಇಲ್ಲಿಯೇ ಅಮೃತನಾಗುತ್ತಾನೆ' ಎಂಬ ವಾಕ್ಯದಲ್ಲಿ ಫಲವನ್ನು ಹೇಳಿದೆ. ಇಲ್ಲಿನ ಅಮೃತಶಬ್ದವು ಜಾಬಾಲಶ್ರುತಿಯಲ್ಲಿ ಪರಶಿವಪರವೆಂದು ನಿರ್ದಿಷ್ಟವಾಗಿದೆ. ಆದ್ದರಿಂದ ಗತಿಸಾಮಾನ್ಯನ್ಯಾಯ

ದಿಂದ ಆರು ಬಗೆಯ ಲಿಂಗಗಳಿಂದಲೂ ಪುರುಷಸೂಕ್ತವು ಶಿವಪರವೆಂದೇ ತಿಳಿದು ಬರುತ್ತದೆ. ಇದೂ ಅಲ್ಲದೆ, ಸರ್ವಾತ್ಮಕನಾದ ಶಿವನಿಗೆ ಸಾವಿರ ಕಣ್ಣುಗಳು, ಸಾವಿರ ತಲೆಗಳು, ಸಾವಿರ ಪಾದಗಳು, ಸಾವಿರ ಬಾಹುಗಳು ಇರುವುದು ಯುಕ್ತವೇ ಆಗಿದೆ. 'ಪೂಜ್ಯನಾದ ಸಹಸ್ರಾಕ್ಷನಿಗೆ ನಮಸ್ಕಾರ'. 'ನಿನಗೆ ಸಾವಿರಬಾಹುಗಳಲ್ಲಿ ಸಾವಿರ ಆಯುಧಗಳು' ಹೀಗೆ ರುದ್ರಸೂಕ್ತದಲ್ಲಿ ರುದ್ರನ ಬಗ್ಗೆ ತಿಳಿಸಲಾಗಿದೆ.

ನನು "ಪ್ರಜಾಪತಿಶ್ಚರತಿ ಗರ್ಭೇ ಅಂತಃ" ಇತಿ ಶ್ರುತೌ ನಾರಾಯಣಸ್ಯೈವ ಬ್ರಹ್ಮಜನಕತ್ವವ್ಯಪದೇಶಾತ್, "ಮೋಕ್ಷಮಿಚ್ಛೇಜ್ಜನಾರ್ದನಾತ್" ಇತಿ ಮೋಕ್ಷಪ್ರದತ್ವಸ್ಯಾಪಿ ತಸ್ಯೈವ ಸಮುಚಿತತ್ವಾತ್ ಕಥಂ ಪುರುಷಸೂಕ್ತಪ್ರತಿಪಾದ್ಯತ್ವಂ ಶಿವಸ್ಯ? ಇತಿ ಚೇನ್ನ—"ವಿಶ್ವಾಧಿಕೋ ರುದ್ರೋ ಮಹರ್ಷಿಃ" "ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ" ಇತ್ಯಾದಿಶ್ರುತ್ಯಂತರೇಷ್ವಪಿ ಮುಖ್ಯವೃತ್ತ್ಯಾ ಹಿರಣ್ಯಗರ್ಭಜನಕತ್ವಂ ಶಿವಸ್ಯೈವ ವ್ಯಪದಿಶ್ಯತೆ. ಅಥರ್ವಶಿಖಾಯಾಂ ಚ 'ಶಿವ ಏಕೋ ಧ್ಯೇಯಃ ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ' ಇತಿ ಶಿವಂಕರತ್ವಂ ಮುಕ್ತಿಪ್ರದತ್ವಮೇವ. ತಚ್ಚ ತಸ್ಯೈವ ನಾನ್ಯಸ್ಯ ಅಶಿವತ್ವಾತ್. "ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ" "ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ" "ಜ್ಞಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ" "ತಮೀಶಾನಂ ಪುರುಷಂ—ಶಾಂತಿಶ್ಶಾಶ್ವತೀ ನೇತರೇಷಾಂ" (ಕಠ. ೫–೧೩) ಇತ್ಯಾದಿಶ್ರುತಿಷು ಶಿವಸ್ಯೈವ ಮೋಕ್ಷಪ್ರದತ್ವಪ್ರತಿಪಾದನಾತ್, 'ಗಾತುಂ ಯಜ್ಞಾಯ। ಗಾತುಂ ಯಜ್ಞಪತಯೇ।' ಇತಿ ಯಜ್ಞೇಶ್ವರೇ ಪರಮಶಿವೇ ಉಪಸಂಹಾರಾತ್ ಪುರುಷಸೂಕ್ತಂ ಶಿವಸೂಕ್ತಮಿತ್ಯವಗಮ್ಯತೆ. "ರುದ್ರಂ ಪುರುಷಸೂಕ್ತಂ ಚ ಜಪೇತ್ತ್ರಿಯರ್ಗ ಕ್ರಿಪುಂಡ್ರಕಃ। ರುದ್ರಪ್ರೀತ್ಯರ್ಥಮನಿಶಂ ವೈದಿಕೋ ವೇದಪಾರಗಃ॥" ಇತಿ ರುದ್ರಸೂಕ್ತಸಹಪಾಠಾತ್, ನನು "ಹ್ರೀಶ್ಚ ತೆ ಲಕ್ಷ್ಮೀಶ್ಚ ಪತ್ನ್ಯೌ" ಇತಿ ವಾಕ್ಯೇ ಲಕ್ಷ್ಮೀಪತಿತ್ವಾಸಾಧಾರಣಲಿಂಗಸ್ಯೋಪಸಂಹಾರೇ ದರ್ಶನಾದುಪಕ್ರಮವಾಕ್ಯಸ್ಥಪುರುಷಶಬ್ದಸ್ಯಾಪಿ ವಿಷ್ಣುಪರತ್ವಮೇವ, ಇತಿ ಚೇನ್ನ ಸಾಮಾನ್ಯಶಕ್ತ್ಯೈವ ಪ್ರಯೋಗೋಪಪತ್ತೇಃ, "ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ । ಅಹೋರಾತ್ರೇ ಪಾರ್ಶ್ವೇ ।" ಇತಿ ವಾಕ್ಯದ್ವಯಸಿದ್ಧಂ ಗಂಗಾಪತಿತ್ವಂ ಪಾರ್ವತೀಪತಿತ್ವಂ ಚ ಶಿವಸ್ಯೈವ ಘಟತೇ. ತದುಕ್ತಂ ಸ್ಕಾಂದೇ—"ಹಿಮಾದ್ರೇರಪತನ್ಮೌಳೌ ಗಂಗಾ ರುದ್ರಸ್ಯ ವೇಗತಃ । ತದೀಯಭಾರಸಂಭ್ರಾಂತೋ ಹ್ಯಮಾದೀತ್ತಾಂ ಸದಾಶಿವಃ । ಹ್ರೀಮತೀ ಭವ ನಾತ್ಯುಚ್ಚೈರ್ವರ್ತಸ್ವ ಪ್ರಾಪ್ಯ ಮಾಮಿಹ। ಪುರುಷಂ ಪುರುಷಶ್ರೇಷ್ಠಂ ಬ್ರಹ್ಮವಿಷ್ಣ್ವಾದಿಕಾರಣಂ। ಸಾ ತಂ ನತ್ವಾ ಮಹಾದೇವಂ

ತದಾಪ್ರಭೃತಿ ಭಕ್ತಿತಃ ॥ ಹ್ರೀಂಯಾ ಜಟಾಸು ಮಿಳಿತಾ ಹ್ರೀರಿತಿ ಪ್ರೋಚ್ಯತೇ ಬುಧೈಃ" ॥ ಇತಿ. ರುದ್ರಯಾಮಿಳೇ "ತಸ್ಯಾಂಕಮಂಡಲಾರೂಢಾ ಶಕ್ತಿರ್ಮಾಹೇಶ್ವರೀ ಪರಾ । ಮಹಾಲಕ್ಷ್ಮೀರಿತಿ ವಿಖ್ಯಾತಾ ಶ್ಯಾಮಾ ಸರ್ವಮನೋಹರಾ । ತಸ್ಮಾತ್ತೇಜಃಕಣಾಜ್ಜಾತಾ ಲಕ್ಷ್ಮೀರ್ವಾ ಕೋಟಯಃ ಪುರಾ । ಶಿವತೇಜಸ್ಸಮುದ್ಭೂತಾಃ ಹರಿಬ್ರಹ್ಮಾದಿಕೋಟಯಃ । ಕ್ಷೀಯಂತೇ ಪುನರೇವೈತೇ ತತ್ರ ಯೋಽನುಗತಾಸ್ಸದಾ ॥" ಇತಿ. ಕೂರ್ಮೇ "ಹ್ರೀಶಬ್ದೇನ ಭವೇದ್ಗಂಗಾ ಸರ್ವಪಾಪಪ್ರಭಂಜಿನೀ । ಲಕ್ಷ್ಮೀರ್ಗೌರೀರಿತಿ ವಿಖ್ಯಾತಾ ಮಹಾಲಕ್ಷ್ಮೀರ್ಮಹೇಶ್ವರೀ । ಗಂಗಾಲಕ್ಷ್ಮೀಪತಿತ್ವಂ ಚ ಶಿವಸ್ಯ ಪರಮಾತ್ಮನಃ । ಸಾಧಾರಣಂ ತ್ರಿಲೋಕೇಷು ಪ್ರಸಿದ್ಧಂ ವೇದಚೋದನಾತ್ । ತಸ್ಮಾತ್ತದ್ದಕ್ಷಿಣಃ ಪಾರ್ಶ್ವೋ ಹ್ಯಹಸ್ಸಾಮ್ಯಂ ಪ್ರಪದ್ಯತೇ । ವಾಮಭಾಗಸ್ತು ತಸ್ಯೈವ ದೇವೀಪಾರ್ಶ್ವತಯಾ ಸದಾ । ರಾತ್ರಿಸಾದೃಶ್ಯಮಾಪ್ನೋತಿ ಮಹಾದೇವಸ್ಯ ಶೂಲಿನಃ" ಇತಿ. ತಥಾ ಸ್ಕಾಂದೇ "ಹ್ರೀರಭ್ರಗಾ ಸರಿದುಭೇ ಶಿವಧರ್ಮಪತ್ನ್ಯೌ ಗಂಗಾ ಚ ಶೈಲತನಯೇತಿ ಹಿಮಾದ್ರಿಕನ್ಯಾ । ಗಂಗಾಪತಿತ್ವಮಪಿ ಸಾಧಯಿತುಂ ಸಮರ್ಥೈರ್ದ್ವೈರ್ಮಾತುರಾದಿಗಣನಾಥಪದೇನ ಶಾಸ್ತ್ರೈಃ ॥" ಇತಿ. ನನು ವಾಜಸನೇಯಕೇ "ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" ಇತಿ ಪಠ್ಯತೇ. ಇತಿ ಚೇತ್, ಕಿಂ ತತಃ? ಶ್ರೀಶಬ್ದಸ್ಯಾಪಿ ಸಮಾನಪ್ರಕರಣಾಮ್ನಾತಹ್ರೀಲ್ಲೇಖಾತ್ವೇನ ಪರ್ಯವಸಾನಾತ್, ನಚ ವೈಪರಿತ್ಯಂ ಶಂಕ್ಯಂ. ಹ್ರೀಶಬ್ದಸ್ಯ ಕಮಲಾಯಾಂ ಪ್ರಯೋಗಸ್ಯಾದೃಷ್ಟತ್ವಾತ್. ಶ್ರೀಶಬ್ದಸ್ಯ 'ಶ್ರೀಯಂ ಲಕ್ಷ್ಮೀಮೌಪಲಾಮಂಬಿಕಾಂ ಗಾಂ' ಇತ್ಯಾಯುಷ್ಯಸೂಕ್ತೇ ಗೌರ್ಯಾಂ ದೃಷ್ಟಪ್ರಯೋಗತ್ವಾತ್, 'ಹ್ರೀಶ್ಚ ತೇ' ಇತಿ ಮಾತ್ರಸ್ಯ ಗ್ರಹಯಜ್ಞೇ ಸಾಮಾದ್ಯಧೀತಾಯಾಃ ಗೌರ್ಯಾಃ ಪೂಜಾಯಾಂ ವಿನಿಯೋಗಸ್ಯ ಸಮೃತ್ಪರ್ಣವಾದಿಷೂಕ್ತತ್ವೇನ ಹ್ರೀಶಬ್ದಸ್ಯ ಗೌರೀಪರತ್ವಾವಶ್ಯಂಭಾವಾಚ್ಚ, ತಸ್ಮಾತ್ಪ್ರಥಮಶ್ರುತಾನುಗುಣ್ಯೇನ 'ಲಕ್ಷ್ಮೀಶ್ಚ ಪತ್ನ್ಯೌ' ಇತ್ಯಸ್ಯ ಶಿವಪುರಾಣೋಕ್ತಶಿವಾಂಕಸ್ಥಿತಾಂಬಿಕಾತ್ಮಕಲಕ್ಷ್ಮೀಪರತ್ವಮೇವ. ಸೂಕ್ತಸ್ಯ ನಾರಾಯಣಪರತ್ವೇನ ತತ್ಪೂಜಾದೌ ವಿನಿಯೋಗೇಽಪಿ ಶಿವಪರತ್ವೇ ಬಾಧಕಂ ನಾಸ್ತ್ಯೇವ. "ಅಗ್ನಿರ್ಮೂರ್ಧಾ ದಿವಃ" ಇತ್ಯಾದಿಮಂತ್ರಾಣಾಮಭಿಧಾನಶ್ರುತಿಬಲಾದಾಗ್ನೇಯಾದೀನಾಮೇವ ಸತಾಂ ಗ್ರಹಯಜ್ಞೇ ತತ್ರತ್ಯಾರಾಧನೇ ತತ್ತದ್ದೇವತ್ಯಮಂತ್ರವಿನಿಯೋಗಾವಸರೇ ಭೌಮಾದಿಪೂಜಾಯಾಂ ವಿನಿಯೋಗಸ್ಯ ಬಹುಶಸ್ತತ್ಪ್ರೀಣನ ಜಪಾದೌ ವಿನಿಯೋಗಸ್ಯ ಚ ಸಂಪ್ರತಿಪತ್ತೇಃ. ಅನ್ಯಥಾ "ಯಜೇತ್ಪುರುಷಸೂಕ್ತೇನ ಧನದಂ ವಿಶ್ವರೂಪಿಣಂ । ಅಥ ನಾರಾಯಣಾಭ್ಯಾಂ ವಾ

ಪೂಜಯೋದ್ಭಕ್ತಿಮಾನ್ನರಃ" ಇತ್ಯಾದೌ ವಿನಿಯೋಗಾಂತರೇಣಾಪ್ಯನ್ಯತ ರತ್ವೋಪಪತ್ತೇಃ. ಲಿಂಗಪುರಾಣೇऽಪಿ "ದ್ಯೌರ್ಮೂರ್ಧಾ ತು ವಿಭೋ ಸ್ತಸ್ಯ ಖಂ ನಾಭಿಃ ಪರಮೇಷ್ಠಿನಃ । ಚಂದ್ರಸೂರ್ಯಾಗ್ನಯೋ ನೇತ್ರಂ ಶಿರಶ್ಶ್ರೋತ್ರಂ ಪಿನಾಕಿನಃ ॥ ತದಾ ಲೋಕಾ ಮುಖಾದ್ವೇದಾಃ ಪ್ರಾಣಾ ದ್ವಾಯುರಜಾಯತ । ವಕ್ತ್ರಾದಸ್ಯ ಬ್ರಾಹ್ಮಣಾ ಜಾತಾ ಬ್ರಹ್ಮಾ ಚ ಭಗ ವಾನ್ಪ್ರಭುಃ ॥ ಇಂದ್ರವಿಷ್ಣೂ ಭುಜಾಭ್ಯಾಂ ಕ್ಷತ್ರಿಯಾಶ್ಚ ಮಹಾತ್ಮನಃ । ವೈಶ್ಯಾಶ್ಚೋರುಪ್ರದೇಶೇ ತು ಶೂದ್ರಾಃ ಪಾದಾತ್ಪಿನಾಕಿನಃ ॥" ಇತಿ ಭಗವತಾ ಬಾದರಾಯಣೇನ ಶಿವಪರತ್ವೇನ ವ್ಯಾಖ್ಯಾನಾತ್. ತದ್ವ ಚ್ಛಾಂದೋಗ್ಯೇऽಪಿ ಪರಮೇಶ್ವರಲಿಂಗಬಾಹುಳ್ಯಾತ್ತತ್ಪರತ್ವಮೇವ ನಿರ್ಣೀಯತೇ.

'ಪ್ರಜಾಪತಿಶ್ಚರತಿ ಗರ್ಭೇ ಅಂತಃ' ಎಂಬ ಶ್ರುತಿಯಲ್ಲಿ ನಾರಾಯಣನೇ ಬ್ರಹ್ಮನ ಪಿತನೆಂದು ತಿಳಿಸಲಾಗಿದೆ. 'ವಿಷ್ಣುವಿನಿಂದ ಮೋಕ್ಷವನ್ನು ಬಯಸಬೇಕು' ಎಂಬಲ್ಲಿ ವಿಷ್ಣುವೇ ಮೋಕ್ಷಪ್ರದನೆನಿಸಿದ್ದಾನೆ. ಆದ್ದರಿಂದ ಪುರುಷಸೂಕ್ತದಲ್ಲಿ ನಾರಾಯಣನೇ ಏಕೆ ಪ್ರತಿಪಾದಿತನಾಗಿರಬಾರದು? ಅದು ಹೇಗೆ ಶಿವನಿಗೆ ಅನ್ವಯಿ ಸೀತು? ಎಂದು ಕೇಳುವುದು ಯುಕ್ತವಲ್ಲ. "ರುದ್ರನೇ ವಿಶ್ವಕ್ಕೂ ಅಧಿಕನಾದ ಮಹರ್ಷಿ", 'ಮೊದಲು ಹಿರಣ್ಯಗರ್ಭನನ್ನು ಹುಟ್ಟಿಸಿದನು' ಹೀಗೆ ಅನೇಕ ಶ್ರುತಿಗಳಲ್ಲಿ ಶಿವನೇ ಹಿರಣ್ಯಗರ್ಭನ ತಂದೆ ಎಂಬುದು ಸ್ಪಷ್ಟವಾಗಿದೆ. ಅಥರ್ವಣಶಿಖೆಯಲ್ಲಿ "ಶಿವಂಕರನಾದ ಶಿವನೊಬ್ಬನೇ ಧ್ಯೇಯನು" ಎಂದು ಹೇಳಿರುವುದರಿಂದ ಶಿವನಲ್ಲದೆ ಬೇರೆ ಯಾರೂ ಮುಕ್ತಿಯನ್ನು ಕೊಡಲಾರರೆಂದು ಸ್ಪಷ್ಟವಾಗಿದೆ. 'ಆಗ ಶಿವನನ್ನು ತಿಳಿ ಯದೆಯೇ ದುಃಖವು ಕೊನೆಯಾಗುವುದು'. "ಸಾಕಾರವನ್ನು ಧ್ಯಾನಿಸಿ ಯೋಗಿಯು ಪರಂಜ್ಯೋತಿಯಲ್ಲಿ ಸೇರುತ್ತಾನೆ", 'ಅವನನ್ನು ತಿಳಿದು ಮೃತ್ಯುವನ್ನು ದಾಟುತ್ತಾನೆ, ಮುಕ್ತಿಗೆ ಬೇರೆ ದಾರಿಯಿಲ್ಲ', 'ಪೂಜ್ಯನಾದ ಈಶ್ವರನನ್ನು ಧ್ಯಾನಿಸಿ ಪರಮಶಾಂತಿ ಯನ್ನು ಹೊಂದುತ್ತಾನೆ', 'ಅವನನ್ನು ಕಂಡವರಿಗೇ ಶಾಶ್ವತ ಶಾಂತಿ; ಬೇರೆಯವರಿಗಿಲ್ಲ' ಹೀಗೆ ನೂರಾರು ಶ್ರುತಿಗಳಲ್ಲಿ ಶಿವನೇ ಮೋಕ್ಷಪ್ರದನೆಂದು ಹೇಳಲಾಗಿದೆ. 'ಗಾತುಂ ಯಜ್ಞಾಯ। ಗಾತುಂ ಯಜ್ಞಪತಯೇ।' ಎಂದು ಯಜ್ಞೇಶ್ವರನಾದ ಪರಮಶಿವನ ಲ್ಲಿಯೇ ಉಪಸಂಹಾರವಾಗಿರುವುದರಿಂದ ಪುರುಷಸೂಕ್ತವು ಶಿವಸೂಕ್ತವೆಂದೇ ತಿಳಿ ದುಬರುತ್ತದೆ. "ವೈದಿಕರು ರುದ್ರಪ್ರೀತ್ಯರ್ಥವಾಗಿ ತ್ರಿಯರ್ಕತ್ರಿಪುಂಡ್ರರಾಗಿ ರುದ್ರಾಧ್ಯಾ ಯವನ್ನೂ ಪುರುಷಸೂಕ್ತವನ್ನೂ ಜಪಿಸಬೇಕು" ಎಂದು ರುದ್ರದೊಡನೆ ಪುರುಷ ಸೂಕ್ತವನ್ನು ಹೇಳುವ ಪದ್ಧತಿ ಇದೆ. "ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" ಎಂಬಲ್ಲಿ ಲಕ್ಷ್ಮೀಪತಿತ್ವವೆಂಬ ಅಸಾಧಾರಣ ಧರ್ಮವು ಉಪಸಂಹಾರದಲ್ಲಿ ಕಂಡುಬಂದಿರುವುದ ರಿಂದ ಉಪಕ್ರಮವಾಕ್ಯದಲ್ಲಿರುವ ಪುರುಷಶಬ್ದವೂ ವಿಷ್ಣುಪರವೇ ಆಗಲಿ ಎಂದು ಹೇಳುವುದು ಯುಕ್ತವಲ್ಲ. ಇಲ್ಲಿ ಹ್ರೀಲಕ್ಷ್ಮಿಗಳನ್ನು ಪತ್ನಿಯರೆಂದು ಸಾಮಾನ್ಯ

ಶಕ್ತಿಯಿಂದಲೇ ಪ್ರಯೋಗಿಸಿರುವುದರಿಂದ ಈ ಪ್ರಯೋಗದಲ್ಲಿ ಅಸಾಧಾರಣತೆ ಏನೂ ಕಾಣುವುದಿಲ್ಲ. ಇಲ್ಲಿ ಹೇಳಿರುವ ಗಂಗಾಪತಿತ್ವವೂ ಲಕ್ಷ್ಮೀಪತಿತ್ವವೂ ಶಿವನಿಗೇ ಅನ್ವಯಿಸುತ್ತವೆ. ಸ್ಕಾಂದದಲ್ಲಿ ಈ ವಿಷಯ "ಗಂಗೆಯು ಹಿಮಾಲಯದಿಂದ ಶಿವನ ಶಿರಸ್ಸಿನಲ್ಲಿ ವೇಗವಾಗಿ ಬಿದ್ದಳು. ಆ ಭಾರದಿಂದ ಕೊಂಚ ಭ್ರಾಂತನಾಗಿ ಶಿವನು ಅವಳಿಗೆ 'ನೀನು ನನ್ನಲ್ಲಿ ಸೇರಿ ಅಹಂಕಾರದಿಂದ ಮೆರೆಯದೆ ಲಜ್ಜೆಯಿಂದ ಸುಖವಾಗಿ ಬಾಳು' ಎಂದು ಹೇಳಿದನು. ಆಗ ಅವಳು ಸರ್ವಕಾರಣನಾದ ಪರಶಿವನಿಗೆ ಭಕ್ತಿಯಿಂದ ನಮಸ್ಕರಿಸಿ ಅವನ ಜಡೆಯಲ್ಲಿ ಸೇರಿಕೊಂಡಳು. ಆದ್ದರಿಂದ ಅವಳಿಗೆ ವಿದ್ವಾಂಸರು ಹ್ರೀಃ=ಲಜ್ಜಾವತಿ ಎಂದು ಕರೆಯುತ್ತಾರೆ." ರುದ್ರಯಾಮಳದಲ್ಲಿ "ಚಿದ್ರೂಪಳಾದ ಪರಾಶಕ್ತಿಯು ಶಿವನ ತೊಡೆಯಮೇಲೆ ಪ್ರೇಮದಿಂದ ಕುಳಿತು ಮಹಾಲಕ್ಷ್ಮಿ ಎನಿಸಿದಳು. ಶಿವನ ತೇಜಸ್ಸು ಇಂತಹ ಮನೋಹರಶಕ್ತಿಯೊಡನೆ ಬೆರೆತದ್ದರಿಂದ ಹರಿಬ್ರಹ್ಮಾದಿಗಳು ಜನಿಸಿದರು. ಇವರೆಲ್ಲರೂ ಮತ್ತೆ ಆ ಪರಾಶಕ್ತಿಯಲ್ಲಿಯೇ ಲಯವಾಗುತ್ತಾರೆ" ಎಂದು ಹೇಳಿದೆ. ಕೂರ್ಮದಲ್ಲಿ "ಹ್ರೀ ಶಬ್ದವು ಪಾಪವಿಮೋಚಿನಿಯಾದ ಗಂಗೆಯನ್ನೂ, ಲಕ್ಷ್ಮೀಶಬ್ದವು ಮಹೇಶ್ವರಿಯನ್ನು ಬೋಧಿಸುತ್ತವೆ. ಶಿವನೇ ಗಂಗಾ ಲಕ್ಷ್ಮಿಯರ ಪತಿ ಎನಿಸಿದ್ದಾನೆ. ಇದು ಶಿವನಿಗೆ ಅನ್ವಯಿಸುವುದಾಗಿ ಲೋಕದಲ್ಲೂ ವೇದದಲ್ಲೂ ರೂಢಿ ಇದೆ. ಆದ್ದರಿಂದ ಮಹಾದೇವನ ಬಲಭಾಗವು ಹಗಲಿನ ಸಾಮ್ಯವನ್ನೂ, ದೇವಿಯೊಡಗೂಡಿದ ಎಡಭಾಗವು ರಾತ್ರಿಯ ಸಾಮ್ಯವನ್ನು ಹೊಂದಿದೆ" ಎಂದು ಹೇಳಿದೆ. ಸ್ಕಾಂದದಲ್ಲಿ "ಗಣಪತಿಯು ದ್ವೈಮಾತುರನೆಂಬ ಮಾತಿನ ಆಧಾರದಮೇಲೆ ಶಾಸ್ತ್ರಗಳು ಶಿವನಿಗೆ ಗಂಗೆ ಪಾರ್ವತಿ ಇಬ್ಬರು ಧರ್ಮಪತ್ನಿಯರೆಂದು ಸಮರ್ಥಿಸಿವೆ" ಎಂದು ಹೇಳಿದೆ. ವಾಜಸನೇಯದಲ್ಲಿ 'ಹ್ರೀ'ಗೆ ಬದಲು ಶ್ರೀಶ್ಚ ತೇ' ಎಂದು ಹೇಳಿದೆ. ಹೀಗೆ ಹೇಳಿದರೂ ಏನೂ ಫಲವಿಲ್ಲ; ಯಾಕೆಂದರೆ ಶ್ರೀಶಬ್ದವೂ ಒಂದೇ ಪ್ರಕರಣದಲ್ಲಿಯೇ ಬಂದಿರುವುದರಿಂದ ವಿಪರೀತವಾದ ಅರ್ಥವು ಸಂಭವಿಸುವಂತಿಲ್ಲ. ಹ್ರೀಶಬ್ದವನ್ನು ಲಕ್ಷ್ಮಿಯಲ್ಲಿ ಪ್ರಯೋಗಿಸುವುದಾಗಿ ಎಲ್ಲಿಯೂ ಕಂಡುಬಂದಿಲ್ಲ. ಆಯುಷ್ಯಸೂಕ್ತದಲ್ಲಿ ಶ್ರೀಶಬ್ದವನ್ನು ಗೌರೀ ಎಂಬ ಅರ್ಥದಲ್ಲಿ ಪ್ರಯೋಗಿಸಲಾಗಿದೆ. 'ಹ್ರೀಶ್ಚ ತೆ' ಎಂಬಷ್ಟನ್ನು ಗ್ರಹಯಜ್ಞದಲ್ಲಿ ಗೌರೀಪೂಜೆಯ ವಿನಿಯೋಗಕ್ಕಾಗಿ ಹೇಳಿರುವುದರಿಂದ ಹ್ರೀಶಬ್ದವು ಗೌರಿಗೆ ಅನ್ವಯಿಸುವುದೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಪುರುಷಸೂಕ್ತದಲ್ಲಿ ಸಹಜವಾಗಿ ಬಂದಿರುವ 'ಲಕ್ಷ್ಮೀಶ್ಚ ಪತ್ನ್ಯೌ' ಎಂಬಲ್ಲಿ ಲಕ್ಷ್ಮೀ ಎಂದರೆ 'ಪರಾಶಕ್ತಿಯೇ ಶಿವನ ತೊಡೆಯಮೇಲೆ ಕುಳಿತು ಮಹಾಲಕ್ಷ್ಮಿ ಎನಿಸಿದಳು' ಎಂಬ ಶಿವಪುರಾಣದ ಮಾತಿನಂತೆ ಪರಾಶಕ್ತಿರೂಪವಾದ ಲಕ್ಷ್ಮಿ ಎಂದು ತಿಳಿಯಬೇಕು. ಹೀಗೆ ಪುರುಷಸೂಕ್ತವು ನಾರಾಯಣಪರವಾಗಿ ಅವನ ಪೂಜೆಯಲ್ಲಿ ವಿನಿಯೋಗವಾದರೂ ಶಿವಪರವೂ ಆಗುವುದರಲ್ಲಿ ಭಾಧಕವಿಲ್ಲ. 'ಅಗ್ನಿಮೂರ್ಧಾ' ಇತ್ಯಾದಿ ಮಂತ್ರಗಳು ಅಗ್ನಿ ಎಂಬ ಹೆಸರಿನ ಪ್ರಯೋಗಬಲದಿಂದ ಅಗ್ನಿಯ ಆರಾಧನೆಗೆ ಮುಖ್ಯವಾಗಿ ವಿನಿಯೋಗವಾದರೂ ಗ್ರಹಯಜ್ಞದಲ್ಲಿ ಅಂಗಾರ

ಕನ ಅರ್ಚನೆಗೂ ವಿನಿಯೋಗವಾಗುವಂತೆ ಪುರುಷಸೂಕ್ತವನ್ನು ಶಿವನ ಅರ್ಚನೆಗೆ ಉಪಯೋಗಿಸಿದರೂ ನಾರಾಯಣನ ಅರ್ಚನೆಗೂ ಉಪಯೋಗವಾಗುವುದರಲ್ಲಿ ವಿರೋಧವೇನಿಲ್ಲ. ಹಾಗಿಲ್ಲದೇಹೋದರೆ, "ಶಿವನನ್ನು ಪುರುಷಸೂಕ್ತದಿಂದಲೂ ಅಥವಾ ಮಹಾನಾರಾಯಣದ ಮಂತ್ರಗಳಿಂದಲೂ ಭಕ್ತಿಮಂತನು ಅರ್ಚಿಸಬೇಕು" ಎಂಬಲ್ಲಿ ಮಹಾನಾರಾಯಣದ ಪೂರ್ವೋತ್ತರ ಭಾಗಗಳಲ್ಲಿ ಯಾವುದಾದರೊಂದು ಭಾಗವನ್ನು ವಿನಿಸುತ್ತಿರುವುದು ವ್ಯರ್ಥವಾಗುತ್ತದೆ. ಲಿಂಗಪುರಾಣದಲ್ಲೂ 'ಪರಮಾತ್ಮನಿಗೆ ಸ್ವರ್ಗವೇ ತಲೆ, ಆಕಾಶವೇ ನಾಭಿ, ಚಂದ್ರಸೂರ್ಯಾಗ್ನಿಗಳೇ ಕಣ್ಣುಗಳು. ದಿಕ್ಕುಗಳೇ ಕಿವಿ. ಅವನ ಬಾಯಿಂದ ವೇದಗಳೂ, ಪ್ರಾಣದಿಂದ ವಾಯುಗಳೂ, ಮುಖದಿಂದ ಬ್ರಾಹ್ಮಣರು, ಇಂದ್ರ ವಿಷ್ಣು ಬ್ರಹ್ಮರೂ ಹುಟ್ಟಿದರು. ಭುಜದಿಂದ ಕ್ಷತ್ರಿಯರೂ, ತೊಡೆಗಳಿಂದ ವೈಶ್ಯರೂ, ಪಾದಗಳಿಂದ ಶೂದ್ರರೂ ಹುಟ್ಟಿದರು'. ಹೀಗೆ ಬಾದರಾಯಣನು ಶಿವಪರವಾಗಿ ವಿವರಿಸಿರುವುದರಿಂದ, ಇದರಂತೆಯೇ ಛಾಂದೋಗ್ಯದಲ್ಲಿಯೂ ಪರಮೇಶ್ವರನ ಧರ್ಮಗಳೇ ಹೆಚ್ಚಾಗಿರುವುದರಿಂದ ಜ್ಯೋತಿಶ್ಶಬ್ದವು ಪರಂಜ್ಯೋತಿ ಎನಿಸಿದ ಪರಮೇಶ್ವರನಿಗೇ ಅನ್ವಯಿಸುವುದೆಂದು ಸಿದ್ಧವಾಗುವುದು.

**ನನು "ತ್ರಿಪಾದಸ್ಯಾಮೃತಂ ದಿವಿ" ಇತ್ಯತ್ರ ದ್ಯುಸಂಬಂಧಿತ್ವಪ್ರತ್ಯಭಿಜ್ಞಾನಾತ್ "ಪರೋ ದಿವೋ ಜ್ಯೋತಿಃ" ಇತ್ಯತ್ರ ದಿವಃಪರತ್ವನಿರ್ದೇಶಾತ್ ಕಥಮುಭಯೋರ್ವಾಕ್ಯಯೋಃ ಪರಮೇಶ್ವರಪರತ್ವಂ? ಇತ್ಯಾಶಂಕಾಯಾಮಾಹ—**ಉಪದೇಶಭೇದಾನ್ನೇತಿ ಚೇನ್ನ ಉಭಯಸ್ಮಿನ್ನಪ್ಯವಿರೋಧಾತ್ ॥ ೨೮ ॥

**ಯತ್ಪೂರ್ವಮಂತ್ರೇ ದಿವಿ ಇತಿ ಸಪ್ತಮ್ಯಾಃ ದ್ಯೌರಧಿಷ್ಠಾನತ್ವೇನ ನಿರ್ದಿಶ್ಯತೇ. ತತ್ಪುನಃ "ಯದತಃ ಪರೋ ದಿವೋ ಜ್ಯೋತಿಃ" ಇತ್ಯತ್ರ ದಿವ ಇತಿ ಪಂಚಮ್ಯಾಃ ವ್ಯೋಮಾತೀತತತ್ವಮುಪದಿಶ್ಯತೇ. ಕಿಂಚೈತಸ್ಮಿನ್ ವಾಕ್ಯೇ ಜಗದಂತರ್ಯಾಮಿತ್ವಜಗದ್ವಿಲಕ್ಷಣತ್ವೋಪದೇಶಾತ್ ಜ್ಯೋತಿಶ್ಶಬ್ದೇನ ಪರಮೇಶ್ವರಪ್ರತ್ಯಭಿಜ್ಞಾನಂ ನ ಸಂಭವತಿ ಇತಿ ಚೇನ್ನ, ಕಸ್ಮಾತ್ ಉಭಯಸ್ಮಿನ್ನಪ್ಯವಿರೋಧಾತ್. ವಿಭಕ್ತಿವ್ಯತ್ಯಯಾರ್ಥವ್ಯತ್ಯಯೋಭಯಸಂಭವೇಽಪಿ ಪರಮೇಶ್ವರಪ್ರತ್ಯಭಿಜ್ಞಾಯಾ ಅವಿರೋಧಾತ್— ಪೂರ್ವಾಪರಮಧ್ಯಪರಾಮರ್ಶವಿರೋಧಾಭಾವಾದಿತ್ಯರ್ಥಃ. "ಸೌಧಾಗ್ರೇ ಮಯೂರಃ, ಸೌಧಾಗ್ರಾತ್ಪರತೋ ಮಯೂರಃ" ಇತ್ಯಾದೌ ಯಥಾ ತದ್ವದ್ವಾಕ್ಯದ್ವಯೇನ ದಿವಃ ಪರತ್ವಮೇವ ಪ್ರತ್ಯಭಿಜ್ಞಾಯತೇ. ಕಿಂಚ ಜಗದ್ವಿಲಕ್ಷಣತ್ವಂ ಜಗದಂತರತ್ವಮಪಿ ವ್ಯೋಮವದ್ವ್ಯಾಪಕಸ್ಯ ಪರಮೇಶ್ವರಸ್ಯೈವೋಪಪದ್ಯತೇ. 'ಅಣೋರಣೀಯಾನ್–ಜಂತೋಃ', 'ಸರ್ವಾನನಶಿರೋ–ಶಿವಃ', 'ಖಂ ವಾಯುಃ–ಧಾರಿಣೀ' ಇತ್ಯಾದೌ ಪರಶಿವಸ್ಯ ಜಗದ್ವಿಲಕ್ಷಣತ್ವಂ ಜಗದಂತರ್ಯಾಮಿತ್ವಂ ಚ ಘಂಟಾಘೋ**

**ಷೇಣ ಸ್ಪಷ್ಟಮುಕ್ತಂ. ತಸ್ಮಾದ್ವ್ಯಾಪಕಸ್ಯ ಪರಶಿವಸ್ಯ ಮಹಾಲಿಂಗಾದ್ಯಾಚಾರಲಿಂಗಾಂತಷಡ್ವಿಧಲಿಂಗಾತ್ಮಕತ್ವಂ ಚರಮಶರೀರಕಭಕ್ತೋಪಾಸನಾರ್ಥಂ ಸಮುಚಿತಂ. ತಸ್ಮಾನ್ನಿಜೈಕಾಂಶವಿಶಿಷ್ಟಸ್ಥೂಲಸೂಕ್ಷ್ಮಚಿದಚಿತ್ಪ್ರಪಂಚಪ್ರಕಾಶಕಂ ಸಾಧನಾಂತರನಿರಪೇಕ್ಷಸ್ವಯಂಪ್ರಕಾಶಪರಂಜ್ಯೋತಿಃ ಪರಶಿವ ಏವ.**

'ತ್ರಿಪಾದಸ್ಯಾಮೃತಂ ದಿವಿ' ಎಂಬಲ್ಲಿ ದ್ಯುಸಂಬಂಧವನ್ನು ಹೇಳಿರುವುದರಿಂದಲೂ, "ಸ್ವರ್ಗದ ಎಲ್ಲೆಯವರೆಗೂ ಜ್ಯೋತಿ ಪ್ರಕಾಶಿಸುತ್ತಿದೆ" ಎಂಬಲ್ಲಿ ದ್ಯುಲೋಕದ ಎಲ್ಲೆಯನ್ನು ಹೇಳಿರುವುದರಿಂದಲೂ ಈ ಎರಡು ವಾಕ್ಯಗಳೂ ಹೇಗೆ ಪರಮೇಶ್ವರನಿಗೆ ಅನ್ವಯಿಸುತ್ತವೆ ಎಂದು ಆಶಂಕಿಸುತ್ತಾನೆ. **ಉಪದೇಶಭೇದಾನ್ನೇತಿ ಚೇನ್ನ ಉಭಯಸ್ಮಿನ್ನಪ್ಯವಿರೋಧಾತ್ ॥ ೨೮ ॥**

'ತ್ರಿಪಾದಸ್ಯಾಮೃತಂ ದಿವಿ' ಎಂಬಲ್ಲಿ ಸಪ್ತಮೀವಿಭಕ್ತಿಗೆ ದ್ಯುಲೋಕವು ಆಧಾರವಾಗಿ ನಿರ್ದಿಷ್ಟವಾಗಿದೆ. "ಅತಃ ಪರೋ ದಿವೋ ಜ್ಯೋತಿರ್ದೀಪ್ಯತೆ" ಎಂಬಲ್ಲಿ ದ್ಯುಶಬ್ದದ ಪಂಚಮೀವಿಭಕ್ತಿಯು ಆಕಾಶದಿಂದ ಆಚೆ ಎಂಬ ಅರ್ಥವನ್ನು ತಿಳಿಸುತ್ತದೆ. 'ದಿವೋ ಜ್ಯೋತಿಃ' ಎಂಬಲ್ಲಿ ಪರಶಿವನನ್ನು ಜಗದಂತರ್ಯಾಮಿ ಎಂದೂ ಜಗದ್ವಿಲಕ್ಷಣನೆಂದೂ ಹೇಳಿರುವುದರಿಂದ ಈ ಜ್ಯೋತಿರ್ವಾಕ್ಯವು ಪರಮೇಶ್ವರನನ್ನು ತಿಳಿಸುವುದಿಲ್ಲವೆನ್ನುವುದು ಸರಿಯಲ್ಲ. ಯಾಕೆಂದರೆ ಎರಡು ವಾಕ್ಯಗಳಲ್ಲೂ ಪರಸ್ಪರ ವಿರೋಧವೇನೂ ಇಲ್ಲ. ವಿಭಕ್ತಿವ್ಯತ್ಯಾಸ ಮತ್ತು ಅರ್ಥವ್ಯತ್ಯಾಸಗಳೆರಡೂ ಇದ್ದರೂ ಸಹ ಪರಮೇಶ್ವರನನ್ನು ಗುರ್ತಿಸಲಿಕ್ಕೆ ಯಾವ ವಿರೋಧವೂ ಇಲ್ಲ, ಮನೆಯಮೇಲೆ ಕುಳಿತಿರುವ ನವಿಲನ್ನು ತುದಿಯಲ್ಲಿರುವುದೆಂದೂ, ತುದಿಯಿಂದಾಚೆಗೆ ಇರುವುದೆಂದೂ ಎರಡು ರೀತಿಯಲ್ಲಿ ಹೇಳುವುದೂ ಲೋಕದಲ್ಲಿ ರೂಢಿಯಿದೆ. ಹಾಗೆ ದ್ಯುಲೋಕದಲ್ಲಿಯೇ ಇದ್ದರೂ ಬ್ರಹ್ಮವನ್ನು ದ್ಯುಲೋಕದಾಚೆಗೆ ಇರುವವನೆಂದೂ ಹೇಳಿದ್ದರಲ್ಲಿ ತಪ್ಪೇನಿಲ್ಲ. ಆಕಾಶದಂತೆ ವ್ಯಾಪಕನಾದ ಶಿವನು ಜಗದ್ವಿಲಕ್ಷಣನೂ, ಜಗದಂತರ್ಯಾಮಿಯೂ ಆಗಿರುವನೆಂಬುದು ಯುಕ್ತವಾಗಿದೆ. "ಸಣ್ಣದಕಿಂತ ಸಣ್ಣದು ದೊಡ್ಡದಕ್ಕಿಂತ ದೊಡ್ಡದಾದರೂ ಪರಶಿವನು ಎದೆಗುಹೆಯಲ್ಲಿ ನೆಲಸಿದ್ದಾನೆ". "ಎಲ್ಲರ ಮುಖ ಶಿರಸ್ಸು ಕುತ್ತಿಗೆ ಹೃದಯಗಳಲ್ಲಿ ನೆಲಸಿದ್ದರೂ ಅವನು ಸರ್ವವ್ಯಾಪಿಯಾಗಿದ್ದಾನೆ". 'ಅವನೇ ಆಕಾಶ ವಾಯು ಗಾಳಿ ನೀರು ಸರ್ವಾಧಾರವಾದ ಭೂಮಿಯೂ ಆಗಿದ್ದಾನೆ' ಹೀಗೆ ಶಿವನೇ ಜಗದ್ವಿಲಕ್ಷಣನೂ, ಜಗದಂತರ್ಯಾಮಿಯೂ ಆಗಿರುವನೆಂದು ಶ್ರುತಿಯಲ್ಲಿ ಘಂಟಾಘೋಷವಾಗಿ ಹೇಳಿದೆ. ಆದ್ದರಿಂದ ವ್ಯಾಪಕನಾದ ಪರಶಿವನು ಮಹಾಲಿಂಗ, ಪ್ರಸಾದಲಿಂಗ, ಚರಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗಗಳೆನಿಸಿ ಈ ದೇಹದಲ್ಲಿ ಭಕ್ತರ ಉಪಾಸನೆಗಾಗಿ ನೆಲಸಿರುವನೆಂಬುದು ಯುಕ್ತವಾಗಿದೆ. ತನ್ನ ಏಕಾಂಶದಿಂದಲೇ ಯಾವ ಸಾಧನವನ್ನೂ ಅಪೇಕ್ಷಿಸದೆ ಪ್ರಪಂಚಾಕಾರವಾಗಿದ್ದು ಅದರಲ್ಲಿ ಷಡ್ಲಿಂಗಗಳಾಗಿ ಶೋಭಿಸುತ್ತಿರುವ ಸ್ವಯಂಪ್ರಕಾಶವಾದ ಪರಂಜ್ಯೋತಿ ಎಂದರೆ ಪರಶಿವನೆಂದು ಸಿದ್ಧವಾಯಿತು.

## ಪ್ರಾಣಾಧಿಕರಣಂ ॥ ೧೦ ॥

ಜಗಜ್ಜನ್ಮಾದಿಹೇತುಭೂತಸ್ಯ ಸರ್ವವೇದಾಂತಪ್ರತಿಪಾದ್ಯಸ್ಯ ನಿರತಿಶಯಾನಂದಾತ್ಮಕಸ್ಯ ಶಿವಸ್ಯ ಷಡ್ವಿಧಲಿಂಗಾತ್ಮಕತ್ವಂ ಪೂರ್ವತ್ರ ಪ್ರಸಾಧ್ಯ ತಸ್ಯೈವ ಸರ್ವಮುಮುಕ್ಷೂಪಾಸ್ಯಬಾಹ್ಯಪ್ರಾಣಲಿಂಗಾತ್ಮಕತ್ವಮಧಿಕರಣಾಂತರೇಣ ದರ್ಶಯತಿ "ಪ್ರಾಣಸ್ತಥಾನುಗಮಾತ್ ॥ ೨೮ ॥

ಕೌಷೀತಕೀಬ್ರಾಹ್ಮಣೋಪನಿಷದಿ ಇಂದ್ರಪ್ರತರ್ದನಾಖ್ಯಾಯಿಕಾಯಾಂ ಶ್ರೂಯತೇಽಸ್ಯ ವಿಷಯಃ. "ಪ್ರತರ್ದನೋ ಹ ವೈ ದೈವೋದಾಸಿರಿಂದ್ರಸ್ಯ ಪ್ರಿಯಂ ಧಾಮೋಪಜಗಾಮ ಯುದ್ಧೇನ ಪೌರುಷೇಣ ಚ" ಇತ್ಯಾಮ್ನಾತಾ. ತಸ್ಯಾಂ ಶ್ರೂಯತೇ "ಸ ಹೋವಾಚ ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮಿತ್ಯುಪಾಸ್ವ" (೩-೨) ಇತಿ. ತಥೋತ್ತರತ್ರ "ಅಥ ಖಲು ಪ್ರಾಣ ಏವ ಪ್ರಜ್ಞಾತ್ಮೇದಂ ಶರೀರಂ ಪರಿಗೃಹ್ಯೋತ್ಥಾಪಯತಿ" (೩-೩) ಇತಿ. ತಥಾ 'ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್.' ಅಂತೇ ಚ "ಸ ಏಷ ಪ್ರಾಣ ಏವ ಪ್ರಜ್ಞಾತ್ಮಾಽನಂದೋಽಜರೋಽಮೃತಃ" (೩-೮) ಇತಿ. ಅತ್ರ ಪ್ರತರ್ದನವಿದ್ಯಾಯಾಮುಪಾಸ್ಯಃ ಪ್ರಾಣೋ ವಾ ಇಂದ್ರಶಬ್ದಾಭಿಧೇಯಶ್ಶಾರೀರೋ ವಾ? ಉತ ಪರಮೇಶ್ವರೋ ವಾ? ಇತಿ ಸಂದಿಹ್ಯತೇ. 'ಮಾಮೇವ ವಿಜಾನೀಹಿ' ಇತೀಂದ್ರಸ್ಯ ವಚನಂ ದೇವತಾತ್ವಲಿಂಗಂ ಜೀವವಿಷಯಂ. 'ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ' ಇತಿ ಪ್ರಾಣಾಸಾಧಾರಣಲಿಂಗಾತ್ಪ್ರಾಣವಿಷಯಂ. 'ಆನಂದೋಽಜರೋಽಮೃತಃ' ಇತ್ಯಾದಿಪರಶಿವಲಿಂಗಧರ್ಮಬಾಹುಳ್ಯಶ್ರವಣಾತ್ ಗುರುಕರುಣಾದತ್ತಪರಮಶಿವಕಳಾಧಿಷ್ಠಿತಬಾಹ್ಯಪ್ರಾಣಲಿಂಗಮೇವೇತಿ ಸೂಚ್ಯತೇ. ಪೂರ್ವಪಕ್ಷಸ್ತು— ನಾತ್ರ ಸರ್ವಥಾ ಪರಮೇಶ್ವರೋ ನಿರ್ದಿಶ್ಯತೆ, 'ಪ್ರಾಣೋಽಸ್ಮಿ ಮಾಮಾಯುರಮೃತಂ' ಇತಿ. 'ಶರೀರಂ ಪರಿಗೃಹ್ಯೋಪಯತಿ' ಇತಿ ಚ ಭೂತವಾಯ್ವಸಾಧಾರಣಧರ್ಮಶ್ರವಣಾತ್, ಲೋಕೇ ವೇದೇಷು ಚ ಶರೀರಾಂತರ್ಗತಸ್ಯ ವಾಯೋರೇವ ಪ್ರಾಣತ್ವಸ್ಯ ಮುಖ್ಯತ್ವೇನ ವ್ಯವಸ್ಥಾಪನಾತ್ ಪ್ರಾಣಶಬ್ದೇನ ಪ್ರಾಣವಾಯುರೇವಾತ್ರಾಭಿಧೀಯತೇ ಅಥವಾ ಇಂದ್ರಶಬ್ದಸ್ಯ ಜೀವವಿಶೇಷ ಏವ ಪ್ರಸಿದ್ಧೇಃ ತತ್ಸಮಾನಾಧಿಕರಣಸ್ಯ ಪ್ರಾಣಶಬ್ದಸ್ಯಾಪಿ ತತ್ರೈವ ಪ್ರವೃತ್ತೇಃ ಪ್ರಾಣಶಬ್ದೇನೇಂದ್ರ ಏವಾಭಿಧೀಯತೇ. ಅಯಮಿಂದ್ರಾಭಿಧಾನೋ ಜೀವಃ ಪ್ರತರ್ದನೇನ 'ತ್ವಮೇವ ವರಂ ವೃಣೀಷ್ವ ಯಂ ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ' ಇತ್ಯುಕ್ತೋ 'ಮಾಮುಪಾಸ್ವ' ಇತಿ ಸ್ವಾತ್ಮೋಪಾಸನಂ ಹಿತತಮಮುಪದಿದೇಶ. ತಸ್ಮಾದ್ಭೂತಪ್ರಾಣಜೀವಯೋರನ್ಯತರಸ್ಯೈವ ಪ್ರತರ್ದನವಿದ್ಯೋಪಾ

ಸ್ಯತ್ವಂ. ಇತಿ ಚೇದತ್ರ ಬ್ರೂಮಃ, ಪ್ರಾಣಸ್ತಥಾನುಗಮಾತ್. ಅತ್ರ ಪ್ರಾಣಃ ಪರಮಶಿವಕಳಾಧಿಷ್ಠಿತಬಾಹ್ಯಪ್ರಾಣಲಿಂಗಮೇವ. ಕುತಃ? ತಥಾನುಗಮಾತ್. ಯಥಾ ಜ್ಯೋತಿರ್ವಾಕ್ಯೇ ಬ್ರಹ್ಮೈವ ನಿರ್ದಿಷ್ಟಂ ತಥಾ ಪ್ರಾಣಪದಸ್ಯಾಪಿ ಪರಶಿವಪರತ್ವೇ ಅನುಗಮಾತ್ ಅವಗಮಾದಿತ್ಯರ್ಥಃ. ಉಪಕ್ರಮೇ 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮಿತ್ಯುಪಾಸ್ವ' ಇತಿ, ಮಧ್ಯೇ 'ಸ ಯೋ ಮಾಂ ವಿಜಾನೀಯಾತ್ ನಾಸ್ಯ ಕೇನ ಚ ಕರ್ಮಣಾ ಲೋಕೋ ಮೀಯತೇ ಸ ಮಾತೃವಧೇನ ನ ಪಿತೃವಧೇನ ನ ಸ್ತೇಯೇನ ನ ಭ್ರೂಣಹತ್ಯಯಾ, (೩-೧) ಇತ್ಯಾದಿನಾ ಪರಮಶಿವವಿಜ್ಞಾನೇ ಹಿ ಸುಕೃತದುಷ್ಕೃತಸರ್ವಕರ್ಮಸಂಕ್ಷಯೋ ದೃಶ್ಯತೇ. ತಥೋಪಸಂಹಾರೇಽಪಿ 'ಆನಂದೋಽಜರೋಽಮೃತಃ' ಇತ್ಯಾನಂದಾದೀನಿ ಬ್ರಹ್ಮಾತ್ಮಕಪರಶಿವಧರ್ಮಲಿಂಗಾನಿ ಶ್ರೂಯಂತೇ. ತಸ್ಮಾದಚೇತನಮಾರುತಸ್ಯ ಪ್ರಜ್ಞಾತ್ಮಾನಂದತ್ವಾದಿಧರ್ಮಾಸಂಭವಾತ್ ಪ್ರಾಣಶಬ್ದೇನ ಪರಮಶಿವಕಳಾಧಿಷ್ಠಿತಸ್ಥೂಲಶರೀರಾವಚ್ಛಿನ್ನಬಾಹ್ಯಪ್ರಾಣಲಿಂಗಮೇವೋಪದಿಶ್ಯತೇ, ನ ಸರ್ವವ್ಯಾಪಕಪೂರ್ಣಬ್ರಹ್ಮಪರತ್ವಂ. ಉತ್ತರವಾಕ್ಯೇ 'ಯಾವದಸ್ಮಿನ್ ಶರೀರೇ ಪ್ರಾಣೋ ವಸತಿ ತಾವದಾಯುಃ' ಇತ್ಯಾಯುಶ್ಶಬ್ದಸಾಮಾನಾಧಿಕರಣ್ಯವ್ಯಪದೇಶಾತ್. ಕೇವಲಭೂತವಾಯುಪರತ್ವೇ ಪೂರ್ವೋಕ್ತಶ್ರುತಿಸಿದ್ಧಸರ್ವಪಾಪಭಂಜನಾನಂದತ್ವಾಮೃತತ್ವಾಜರತ್ವಾದಿಧರ್ಮವೈರುಧ್ಯಪ್ರಸಂಗಾತ್. ಕಿಂಚ ತದಾ, 'ಸ ನ ಸಾಧುನಾ ಕರ್ಮಣಾ ಭೂಯಾನ್ಭವತಿ ನೋ ಏವಾಸಾಧುನಾ ಕನೀಯಾನೇಷ ಹ್ಯೇವ ಸಾಧುಕರ್ಮ ಕಾರಯತಿ ಏಷ ಉ ಏವೈನಂ ಅಸಾಧುಕರ್ಮ ಕಾರಯತಿ ಏಷ ಲೋಕಪಾಲ ಏಷ ಲೋಕಾಧಿಪತಿರೇಷ ಸರ್ವೇಶ್ವರಃ' ಕೌ. ೩-೯) ಇತ್ಯಾದಿಶ್ರುತಿಸಿದ್ಧಧರ್ಮಾಣಾಂ ಪರಮಶಿವಸ್ಯೈವ ಸಂಭವಾಚ್ಚ. ತಥಾ ಶ್ರುತ್ಯಂತರೇ ಚ "ಯಶ್ಛಂದಸಾಮೃಷಭೋ ವಿಶ್ವರೂಪಃ," "ಅಮೃತಸ್ಯ ದೇವಧಾರಣೋ ಭೂಯಾಸಂ—ಶ್ರುತಂ ಮೇ ಗೋಪಾಯ" ಇತೀಂದ್ರಾತ್ಮಕಪರಶಿವಲಿಂಗಧಾರಣೇನ ಮೋಕ್ಷೋಪದೇಶಾತ್. "ಭದ್ರಂ ಕರ್ಣೇಭಿಶ್ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಗ್‌ಂಸಸ್ತನೂಭಿಃ । ವ್ಯಶೇಮ ದೇವಹಿತಂ ಯದಾಯುಃ ॥" ಇತಿ ಶ್ರುತೌ ಆಯುಃಪರ್ಯಂತಂ ಪರಮಶಿವಲಿಂಗವ್ಯವಸ್ಥಾಪನವ್ಯಪದೇಶಾತ್ಪ್ರಾಣಶಬ್ದಸ್ಯ ಸಾಕ್ಷಾತ್ಪರಶಿವಲಿಂಗಪರತ್ವಮೇವ. ನನು ಪ್ರತರ್ದನವಿದ್ಯಾಯಾಂ 'ಮಾಮೇವ ಹಿ ವಿಜಾನೀಹಿ' ಇತೀಂದ್ರಶಬ್ದಸಾಮಾನಾಧಿಕರಣ್ಯೇನ 'ಜೀವವಿಶೇಷಪರತ್ವಮೇವೋಪದಿಶ್ಯತೇ. 'ಆನಂದೋಽಜರಃ' ಇತ್ಯಾ

ದಿನಾ ಸರ್ವವ್ಯಾಪಕಬ್ರಹ್ಮಧರ್ಮಾಣಾಂ ನಿರ್ದೇಶಾತ್ಕಥಂ ಸ್ಥೂಲಶರೀರಾವಚ್ಛಿನ್ನಪ್ರಾಣಲಿಂಗಮೇವ ಗ್ರಾಹ್ಯಂ? ಇತಿಚೇನ್ನ, 'ಮಾಮೇವ ವಿಜಾನೀಹಿ' ಇತ್ಯಾದಿನಾ ಸಹೇಂದ್ರಶರೀರಮೇವೋಪದಿಶ್ಯತೇ, ಕಿಂತು ತಜ್ಜೀವಾಧಿಷ್ಠಾನಾಂತರಪ್ರಾಣಲಿಂಗಮೇವ ಭಕ್ತ್ಯೋಪಾಸನಾರ್ಥಂ ನಿರ್ದಿಶ್ಯತೇ. 'ಏಷ ಲೋಕಾಧಿಪತಿಃ' ಇತ್ಯಾದಿನಾ ಸರ್ವವ್ಯಾಪಕಜಗದುಭಯಕಾರಣಭಾವಲಿಂಗಪರತ್ವಂ, 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ' ಇತ್ಯಾದಿನೇಷ್ಟಲಿಂಗಾತ್ಮಕಬಾಹ್ಯಪ್ರಾಣಲಿಂಗಪರತ್ವಂ ಚ ನಿರ್ಣೀಯತೇ. ಇಂದ್ರಶರೀರೇಂದ್ರಪ್ರಾಣೇಂದ್ರಜೀವಾನಾಂ ಸರ್ವಥಾ ನ ಮುಮುಕ್ಷೂಪಾಸ್ಯತ್ವಂ, ಪರಬ್ರಹ್ಮತ್ವಂ ಚ ಸಂಭವತಿ. ಇದಂ ಚೈತದಧಿಕರಣೋಪಸಂಹಾರಸೂತ್ರೇ ಸ್ಪಷ್ಟಮುಕ್ತಂ ಬಾದರಾಯಣೇನ.

## ಪ್ರಾಣಾಧಿಕರಣಂ ‖ ೧೦ ‖

ಜಗಜ್ಜನ್ಮಾದಿಕಾರಣನೂ ಸರ್ವವೇದಾಂತಪ್ರತಿಪಾದ್ಯನೂ ನಿರತಿಶಯಾನಂದರೂಪನೂ ಆದ ಶಿವನು ಷಡ್ಲಿಂಗರೂಪನಾಗಿ ದೇಹದಲ್ಲಿ ನೆಲಸಿರುವನೆಂದು ಹಿಂದೆ ಸಾಧಿಸಿ ಎಲ್ಲಾ ಮುಮುಕ್ಷುಗಳ ಉಪಾಸನೆಗಾಗಿ ಅವನೇ ಇಷ್ಟಪ್ರಾಣಲಿಂಗಗಳಾಗಿರುವನೆಂದು ಈಗ ಸಾಧಿಸಲಾಗುವುದು. **ಪ್ರಾಣಸ್ತಥಾನುಗಮಾತ್ ‖ ೨೯ ‖**

ಕೌಷೀತಕೀಬ್ರಾಹ್ಮಣೋಪನಿಷತ್ತಿನಲ್ಲಿ ಇಂದ್ರಪ್ರತರ್ದನರ ಕಥೆ ಇದೆ. "ದಿವೋದಾಸನ ಮಗ ಪ್ರತರ್ದನನು ಯುದ್ಧದಿಂದಲೂ ಪೌರುಷದಿಂದಲೂ ಇಂದ್ರನ ಪ್ರಿಯಸ್ಥಾನಕ್ಕೆ ಹೋದನು" ಎಂದು ಆರಂಭಿಸಿ ಕಥೆ ಮುಂದುವರಿಯುತ್ತದೆ. ಆಗ ಇಂದ್ರನು ಅವನಿಗೆ "ನಾನು ಪ್ರಜ್ಞಾತ್ಮನಾದ ಪ್ರಾಣನಾಗಿದ್ದೇನೆ. ಆ ನನ್ನನ್ನು ಆಯುಸ್ಸು ಅಮೃತವೆಂದು ಉಪಾಸನ ಮಾಡು" ಎಂದು ಹೇಳಿದನು. ಅಲ್ಲಿಂದ ಮುಂದೆ ಅವನು "ಇನ್ನು ಕೇಳು, ಪ್ರಜ್ಞಾತ್ಮನಾದ ಪ್ರಾಣನೇ ಈ ಶರೀರವನ್ನು ಎತ್ತಿ ಹಿಡಿದು ನಿಲ್ಲಿಸಿದ್ದಾನೆ" ಎಂದು ಹೇಳಿದನು. ಕೊನೆಯಲ್ಲಿ 'ಈ ಪ್ರಜ್ಞಾತ್ಮನಾದ ಪ್ರಾಣನೇ ಆನಂದನೂ, ಅಜರನೂ, ಅಮೃತನೂ ಆಗಿದ್ದಾನೆ' ಎಂದೂ ಹೇಳುತ್ತಾನೆ. ಈ ಕಥೆಯಲ್ಲಿ ಬಂದಿರುವ ಪ್ರಾಣಪದವು ಭೂತವಾಯುವನ್ನು ಹೇಳುತ್ತದೆಯೇ ಅಥವಾ ದೇವತಾತ್ಮನನ್ನು ಹೇಳಿದೆಯೇ ಅಥವಾ ಜೀವನನ್ನು ಹೇಳಿದೆಯೇ ಅಥವಾ ಪರಬ್ರಹ್ಮವನ್ನು ಹೇಳಿದೆಯೇ? ಎಂಬ ಸಂದೇಹ ಉಂಟಾಗುತ್ತದೆ. "ನನ್ನನ್ನೇ ಪ್ರಾಣನೆಂದು ತಿಳಿ' ಎಂಬುದರಿಂದ ಇಲ್ಲಿ ಪ್ರಾಣಪದವು ಒಬ್ಬ ದೇವತಾವಿಶೇಷವನ್ನು ತಿಳಿಸುತ್ತದೆಯಾದ್ದರಿಂದ ಅದು ಒಬ್ಬ ಜೀವನಿಗೆ ಅನ್ವಯಿಸುವುದಾಗಿ ಕಂಡುಬರುತ್ತದೆ. 'ಪ್ರಾಣವೇ ಈ ಶರೀರವನ್ನು ಹಿಡಿದು ನಿಲ್ಲಿಸಿದೆ' ಎಂಬಲ್ಲಿ ಪ್ರಾಣದ ಅಸಾಧಾರಣಧರ್ಮವನ್ನು ಹೇಳಿರುವುದರಿಂದ ಈ ಪದವು ಭೂತವಾಯುವಿಗೆ ಅನ್ವಯಿಸಬಹುದು. 'ಆನಂದೋಽಜರೋಽಮೃತಃ' ಎಂಬಲ್ಲಿ ಪರಶಿವನ ಅನೇಕ ಧರ್ಮಗಳು ಬಂದಿರುವುದರಿಂದ ಈ ಪದವು ಗುರುಕರುಣೆಯಿಂದ ಪಡೆದ ಪರಶಿವನ ಚಿತ್ಕಲಾವಿಶಿಷ್ಟಬಾಹ್ಯ

ಪ್ರಾಣಲಿಂಗಕ್ಕೂ ಅನ್ವಯಿಸಬಹುದು. ಆದ್ದರಿಂದ ಇಲ್ಲಿ ಸಂದೇಹಕ್ಕವಕಾಶವಿದೆ. ಇಲ್ಲಿ ಪೂರ್ವಪಕ್ಷ ಹೀಗೆ ಬರುತ್ತದೆ. ಪ್ರಾಣಪದವು ಎಂದಿಗೂ ಪರಮೇಶ್ವರನನ್ನು ಬೋಧಿಸುವುದಿಲ್ಲ. "ಪ್ರಜ್ಞಾತ್ಮನಾದ ಪ್ರಾಣವೇ ಈ ಶರೀರವನ್ನು ಎತ್ತಿ ಹಿಡಿದಿದೆ" ಎಂಬಲ್ಲಿ ಭೂತವಾಯುವಿನ ಸಾಮಾನ್ಯಧರ್ಮಗಳೇ ಉಕ್ತವಾಗಿವೆ. ಲೋಕದಲ್ಲೂ ವೇದಗಳಲ್ಲೂ ಶರೀರಿದೊಳಗಿನ ವಾಯುವಿಗೆ ಪ್ರಾಣವೆಂದೇ ವ್ಯವಸ್ಥೆಮಾಡಲಾಗಿದೆ. ಆದ್ದರಿಂದ ಇಲ್ಲಿ ಪ್ರಾಣವೆಂದರೆ ಪ್ರಾಣವಾಯುವೆಂದೇ ಭಾವಿಸಬೇಕು. ಇದೂ ಅಲ್ಲದೆ, ಇಂದ್ರನೆಂದರೆ ಒಬ್ಬ ಜೀವವಿಶೇಷವೆಂದು ಪ್ರಸಿದ್ಧವಾಗಿದೆ. ಇಂದ್ರಪದದ ಜೊತೆಯಲ್ಲಿಯೇ ಇರುವ ಪ್ರಾಣಪದವೂ ಅದರೊಡನೆಯೇ ಅನ್ವಯಿಸುತ್ತದೆ. ಇಂದ್ರನೆಂಬ ಈ ಜೀವನು 'ವರವನ್ನು ಕೇಳಿಕೋ' ಎಂದು ಹೇಳಲು ಪ್ರತರ್ದನನು 'ಮನುಷ್ಯನಿಗೆ ಯಾವುದು ಅತ್ಯಂತ ಹಿತವೆಂದು ನಿನಗೆ ತೋರುವುದೋ ಅದನ್ನು ನೀನೇ ನನಗೆ ಆರಿಸಿಕೊಂಡು' ಎಂದು ಹೇಳುವನು. ಅದಕ್ಕೆ ಇಂದ್ರನು 'ನನ್ನನ್ನೇ ಉಪಾಸನಮಾಡು,' ಎಂದು ತನ್ನ ಉಪಾಸನವನ್ನು ಹಿತತಮವೆಂದು ಉಪದೇಶಿಸಿದನು. ಆದ್ದರಿಂದ ಪ್ರಾಣವಾಯು ಮತ್ತು ಜೀವಗಳೇ ಪ್ರತರ್ದನವಿದ್ಯೆಯಲ್ಲಿ ಉಪಾಸ್ಯಗಳಾಗಿವೆ. ಹೀಗೆ ಪೂರ್ವಪಕ್ಷ ಬಂದರೆ, ಸಿದ್ಧಾಂತವನ್ನು ಸೂತ್ರದಲ್ಲಿ ತಿಳಿಸಲಾಗಿದೆ. 'ಪ್ರಾಣಸ್ತಥಾನುಗಮಾತ್' ತಥಾನುಗಮಾತ್–ಹೇಗೆ ಜ್ಯೋತಿರ್ವಾಕ್ಯದಲ್ಲಿ ಬ್ರಹ್ಮವೇ ನಿರ್ದಿಷ್ಟವಾಗಿದೆಯೋ ಹಾಗೆ ಪ್ರಾಣಪದವೂ ಪರಶಿವನಿಗೇ ಅನ್ವಯಿಸುವುದೆಂದು ತಿಳಿದುಬಂದಿರುವುದರಿಂದ ಪ್ರಾಣಃ–ಪ್ರಾಣವೆಂದರೆ ಪರಶಿವನ ಚಿತ್ಕಲಾವಿಶಿಷ್ಟ ಬಾಹ್ಯಪ್ರಾಣಲಿಂಗವೇ ಆಗುತ್ತದೆ. ಆರಂಭದಲ್ಲಿ 'ನಾನು ಪ್ರಜ್ಞಾತ್ಮನಾದ ಪ್ರಾಣನು. ನನ್ನನ್ನು ಆಯುರಮೃತವೆಂದು ಉಪಾಸಿಸು' ಎಂದು ಹೇಳಿ, ಮಧ್ಯದಲ್ಲಿ "ನನ್ನನ್ನು ಯಾವನು ಅರಿತುಕೊಳ್ಳುವನೋ ಅವನ ಲೋಕವು ಯಾವ ಕರ್ಮದಿಂದಲೂ ನಾಶವಾಗುವುದಿಲ್ಲ. ಕಳ್ಳತನ ಶಿಶುಹತ್ಯಗಳಿಂದಲೂ ನಾಶವಾಗುವುದಿಲ್ಲ" ಎಂದು ಹೇಳಿ ಪರಶಿವನ ಜ್ಞಾನದಿಂದಲೇ ಸುಕೃತ ದುಷ್ಕೃತಗಳ ನಾಶವನ್ನು ತಿಳಿಸಿರುವುದರಿಂದಲೂ, ಹಾಗೆಯೇ, ಉಪಸಂಹಾರದಲ್ಲೂ "ಆನಂದೋಽಜರೋಽಮೃತಃ" ಆನಂದವೇ ಮೊದಲಾದ ಪರಶಿವನ ಧರ್ಮಗಳೇ ಉಕ್ತವಾಗಿರುವುದರಿಂದಲೂ, ಅಚೇತನವಾಯುವಿಗೆ ಪ್ರಜ್ಞಾನ,ಆನಂದವೇ ಮೊದಲಾದ ಧರ್ಮಗಳು ಸಂಭವಿಸದಿರುವುದರಿಂದಲೂ ಪ್ರಾಣಶಬ್ದವು ಸ್ಥೂಲಶರೀರದಮೇಲೆ ಧರಿಸಿರುವ ಪರಶಿವನ ಚಿತ್ಕಲಾವಿಶಿಷ್ಟವಾದ ಪ್ರಾಣಲಿಂಗವೆಂದೇ ಅರ್ಥವಾಗುತ್ತದೆ; ಆದರೆ ಇದು ಸರ್ವವ್ಯಾಪಕವಾದ ನಿಷ್ಕಲಬ್ರಹ್ಮಕ್ಕೆ ಅನ್ವಯಿಸಲಾರದು. ಮುಂದೆ "ಈ ಶರೀರದಲ್ಲಿ ಎಲ್ಲಿಯವರೆಗೆ ಪ್ರಾಣವಿರುತ್ತಿಯೋ ಅಲ್ಲಿಯವರೆಗೆ ಆಯುಸ್ಸಿರುತ್ತದೆ" ಎಂದು ಆಯುಸ್ಸಿನೊಡನೆ ಪ್ರಾಣಕ್ಕೆ ಸಾಮಾನಾಧಿಕರಣ್ಯವನ್ನು ಹೇಳಲಾಗಿದೆ. ಇದು ಕೇವಲ ಭೂತವಾಯುವಿಗೆ ಅನ್ವಯಿಸಿದರೆ ಹಿಂದೆ ಹೇಳಿದ ಶ್ರುತಿಸಿದ್ಧವಾದ ಸರ್ವಪಾಪಪರಿಹಾರ, ಆನಂದ, ಅಮೃತ ಮೊದಲಾದ ಧರ್ಮಗಳು ವಿರುದ್ಧವಾಗಬೇಕಾಗುತ್ತವೆ. "ಅವನು ಸತ್ಕರ್ಮದಿಂದ ದೊಡ್ಡವನಾಗು

ವುದಿಲ್ಲ, ದುಷ್ಕರ್ಮದಿಂದ ಸಣ್ಣವನೂ ಆಗುವುದಿಲ್ಲ, ಏಕೆಂದರೆ ಯಾವನು ಈತನನ್ನು ಈ ಲೋಕದಿಂದ ಮೇಲಕ್ಕೆ ಒಯ್ಯಲಿಚ್ಛಿಸುವನೋ ಅವನೇ ಇವನಿಂದ ಒಳ್ಳೆಯ ಕರ್ಮವನ್ನು ಮಾಡಿಸುತ್ತಾನೆ. ಯಾವನು ಈತನನ್ನು ಈ ಲೋಕದಿಂದ ಕೆಳಕ್ಕೆ ತಳ್ಳಲಿಚ್ಛಿಸುವನೋ ಅವನೇ ಇವನಿಂದ ಕೆಟ್ಟ ಕರ್ಮವನ್ನು ಮಾಡಿಸುತ್ತಾನೆ. ಆತನೇ ಲೋಕಾಧಿಪತಿಯೂ, ಲೋಕೇಶನೂ ಆಗಿರುವನು" ಈ ಶ್ರುತಿಯಲ್ಲಿ ಹೇಳಿರುವ ಧರ್ಮಗಳೆಲ್ಲವೂ ಪರಶಿವನಿಗೇ ಅನ್ವಯಿಸುತ್ತವೆ. ಹೀಗೆಯೇ ಬೇರೆ ಶ್ರುತಿಗಳಲ್ಲೂ "ಯಾವನು ಅಮೃತರೂಪವಾದ ವೇದಾಗಮಗಳಲ್ಲಿ ಪ್ರತಿಪಾದ್ಯನೋ ಅಂತಹ ಪರಮೈಶ್ವರ್ಯಶಾಲಿಯಾದ ಶಿವನು ನನಗೆ ಪ್ರಜ್ಞಾಶಕ್ತಿಯನ್ನು ಅನುಗ್ರಹಿಸಲಿ. ಲಿಂಗರೂಪನಾದ ಶಿವನನ್ನು ಮೋಕ್ಷಕ್ಕಾಗಿ ದೇಹದಲ್ಲಿ ಧರಿಸುತ್ತೇನೆ. ಚಿಚ್ಛಕ್ತಿಯಿಂದ ಹೊರಹೊಮ್ಮಿದ ಶಿವನ ಪ್ರಾಣಕಲೆಯನ್ನು ಇಷ್ಟಲಿಂಗವಾಗಿ ಧರಿಸುತ್ತೇನೆ. ಇದರಿಂದ ನನ್ನ ಶರೀರ ಪಾಪರಹಿತವಾಗಲಿ. ನನ್ನ ನಾಲಿಗೆ ಹಿತವಾದ ಮಾತನ್ನೇ ನುಡಿಯಲಿ. ಕಿವಿಗಳು ಹಿತವಾದ್ದನ್ನೇ ಕೇಳಲಿ. ಈ ಲಿಂಗವು ಬ್ರಹ್ಮದ ಅಧಿಷ್ಠಾನವೆನಿಸಿದೆ. ಶಿವಜ್ಞಾನವು ಲೌಕಿಕ ಜ್ಞಾನದಿಂದ ಮುಚ್ಚಿರುವುದರಿಂದ ಈ ಲಿಂಗವು ನನಗೆ ನಿಷ್ಕಲ ಶಿವನ ಜ್ಞಾನವನ್ನು ಪ್ರಕಾಶಪಡಿಸಲಿ" ತಿಳಿಸಲಾಗಿದೆ. ಆದ್ದರಿಂದ ಪ್ರತರ್ದನವಿದ್ಯೆಯಲ್ಲಿ ಹೇಳಿರುವ ಇಂದ್ರಪ್ರಜ್ಞಾತ್ಮನ ಉಪಾಸನವು ಇಂದ್ರರೂಪವಾದ ಪರಶಿವಲಿಂಗದ ಧಾರಣಕ್ಕೇ ಅನ್ವಯಿಸುತ್ತದೆ. "ದೇವತೆಗಳೇ, ಮಂಗಳಸ್ವರೂಪವಾದ ಲಿಂಗವನ್ನೇ ಕಿವಿಗಳಿಂದ ಕೇಳೋಣ, ಕಣ್ಣುಗಳಿಂದ ನೋಡೋಣ, ನಾಲಿಗೆಯಿಂದ ನಿರಂತರವೂ ಸ್ತುತಿಸೋಣ, ನಮಗೆ ಆಯುಸ್ಸಿರುವವರೆಗೂ ಪರಶಿವನಿಗೆ ಹಿತವಾದ ಸೇವೆಯನ್ನೇ ಮಾಡೋಣ" ಹೀಗೆ ಶ್ರುತಿಯಲ್ಲಿ ಆಯುಸ್ಸಿರುವವರೆಗೂ ಸ್ಥೂಲಶರೀರದಲ್ಲಿ ಪರಶಿವಲಿಂಗವು ನೆಲಸಿರಲೆಂದು ಆಶಿಸಲಾಗಿದೆ. ಆದ್ದರಿಂದ ಪ್ರಾಣಶಬ್ದವು ಸಾಕ್ಷಾತ್ಪರಶಿವನ ಚಿಲ್ಲಿಂಗವನ್ನೇ ಬೋಧಿಸುತ್ತದೆ. ಆದರೆ ಇಲ್ಲಿ "ನನ್ನನ್ನು ತಿಳಿ" ಎಂದು ಇಂದ್ರಶಬ್ದಕ್ಕೆ ಸಮಾನಾಧಿಕರಣವಾಗಿ ಜೀವವಿಶೇಷವೇ ಉಪದಿಷ್ಟವಾಗಿರುವುದರಿಂದಲೂ 'ಆನಂದೋಽಜರಃ' ಎಂಬಲ್ಲಿ ಸರ್ವವ್ಯಾಪಕವಾದ ಬ್ರಹ್ಮದ ಧರ್ಮಗಳೇ ನಿರ್ದಿಷ್ಟವಾಗಿರುವುದರಿಂದಲೂ ಪ್ರಾಣಶಬ್ದವು ಸ್ಥೂಲಶರೀರದಲ್ಲಿರುವ ಪ್ರಾಣಲಿಂಗಕ್ಕೆ ಹೇಗೆ ಅನ್ವಯಿಸುತ್ತದೆ? ಅಂದರೆ ಅದು ಹಾಗಲ್ಲ. 'ನನ್ನನ್ನು ತಿಳಿ' ಎಂಬಲ್ಲಿ ಇಂದ್ರನ ಶರೀರವು ನಿರ್ದಿಷ್ಟವಾಗಿಲ್ಲ; ಆದರೆ ಜೀವನೊಳಗಿನ ಪ್ರಾಣಲಿಂಗವೇ ಭಕ್ತರ ಉಪಾಸನಕ್ಕಾಗಿ ನಿರ್ದಿಷ್ಟವಾಗಿದೆ. 'ಇವನೇ ಲೋಕೇಶ' ಎಂಬಲ್ಲಿ ಪರಮಾತ್ಮನೇ ಸರ್ವವ್ಯಾಪಕನೂ, ಜಗದುಭಯಕಾರಣನೂ ಆದ ಭಾವಲಿಂಗವಾಗಿರುವನೆಂದು ತಿಳಿಯುತ್ತದೆ. ಆದ್ದರಿಂದ 'ಪ್ರಾಣೋಽಸ್ಮಿ' ಎಂಬಲ್ಲಿ ಇಷ್ಟಲಿಂಗರೂಪವಾದ ಬಾಹ್ಯಪ್ರಾಣಲಿಂಗವೆಂದೇ ನಿರ್ಣಯಿಸಬೇಕಾಗಿದೆ. ಇಂದ್ರನ ಶರೀರಪ್ರಾಣಜೀವಗಳು ಮುಮುಕ್ಷುವಿಗೆ ಉಪಾಸ್ಯವಾಗದಿರುವುದರಿಂದ ಪರಬ್ರಹ್ಮವಾಗಲಾರವು. ಈ ಅಧಿಕರಣದ ಉಪಸಂಹಾರಸೂತ್ರದಲ್ಲಿ ಇದು ಸ್ಪಷ್ಟವಾಗಿದೆ.

ಅಸ್ಮಿನ್ನರ್ಥೇ ಹೇತ್ವಂತರಮಾಹ **ನ ವಕ್ತುರಾತ್ಮೋಪದೇಶಾದಿತಿ ಚೇತ್ ಅಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್ ॥ ೩೦ ॥**

'ಮಾಮೇವ ವಿಜಾನೀಹಿ' ಇತ್ಯುಪಕ್ರಮೇ ಜೀವವಿಶೇಷಲಿಂಗಸ್ಯೈವಮಾತ್ರ ದ್ಯೋತನಾತ್, 'ಆನಂದೋಽಜರೋಽಮೃತಃ' ಇತ್ಯಾದ್ಯುಪಸಂಹಾರೇಽಪ್ಯಾನಂದಾದಿಧರ್ಮಾಣಾಂ ಜೀವೇ ಸಮುಚಿತತ್ವಾದುಪಕ್ರಮೋಪಸಂಹಾರಯೋರೇಕಲಿಂಗತ್ವಾದತ್ರ ವಕ್ತುರಿಂದ್ರಸ್ಯ ಸ್ವಾತ್ಮತ್ವೇನ ಉಪದೇಶಾದಿಂದ್ರ ಏವ ಪ್ರಾಣಶಬ್ದೇನೋಚ್ಯತೇ ಇತಿ ಚೇನ್ನ, ಕಸ್ಮಾತ್ 'ಅಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್' ಹಿ ಯಸ್ಮಾತ್ ಅಸ್ಮಿನ್ ವಾಕ್ಯೇ ಅಧ್ಯಾತ್ಮಸಂಬಂಧಸ್ಯ ಪರಮಶಿವಸಂಬಂಧಸ್ಯ ಭೂಮಾ ಬಾಹುಳ್ಯಂ ವಿದ್ಯತ ಇತ್ಯರ್ಥಃ. ತಥಾ ಹ್ಯುಪಕ್ರಮೇ 'ಯಂ ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ' ಇತ್ಯಾದಿನಾ ತದುಪಾಸನಸ್ಯೈವ ಮೋಕ್ಷಸಾಧನತ್ವೇನ ಹಿತತಮತ್ವೋಪದೇಶಾತ್, ಶ್ರುತ್ಯಂತರೇಷ್ವಪಿ "ಈಶಂ ಜ್ಞಾತ್ವಾ ಅಮೃತಾ ಭವಂತಿ", "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ", "ಶಿವ ಏಕೋ ಧ್ಯೇಯಃ", "ನಾನ್ಯಃ ಪಂಥಾ ವಿದ್ಯತೇಽಯನಾಯ" ಇತ್ಯಾದಿಷು ಮೋಕ್ಷಸ್ಯ ಪರಮಶಿವೋಪಾಸನಾಲಬ್ಧತ್ವೋಪದೇಶಾತ್ ಮನುಷ್ಯಾಣಾಂ ಹಿತತಮತ್ವೇನೋಪಾಸ್ಯಂ ಪರಮೇಶ್ವರಲಿಂಗಮೇವ. "ಏಷ ಏವ ಸಾಧುಕರ್ಮ ಕಾರಯತಿ" ಇತಿ ಸರ್ವಕರ್ಮಕಾರಯಿತೃತ್ವಂ ತಸ್ಯೈವ ಶ್ರೂಯತೇ. ಉಪಸಂಹಾರೇ ಚ "ತದ್ಯಥಾ ರಥಸ್ಯಾರೇಷು ನೇಮಿರರ್ಪಿತಾ ನಾಭಾವರಾ ಅರ್ಪಿತಾ ಏವಮೇವೈತಾ ಭೂತಮಾತ್ರಾಃ ಪ್ರಜ್ಞಾಮಾತ್ರಾಸ್ವರ್ಪಿತಾಃ ಪ್ರಜ್ಞಾಮಾತ್ರಾಃ ಪ್ರಾಣೇ ಅರ್ಪಿತಾಃ ಸ ಏಷ ಪ್ರಾಣ ಏವ ಪ್ರಜ್ಞಾತ್ಮಾಽಽನಂದೋಽಜರೋಽಮೃತಃ" ಇತಿ ಪರಮಶಿವಧರ್ಮಾಃ ಪ್ರತಿಪಾದ್ಯಂತೇ. 'ಏಷ ಲೋಕಾಧಿಪತಿಃ' ಇತ್ಯತ್ರ, ಚ ಪರಮಶಿವ ಏವ ಬೋಧ್ಯತೇ.

ಈ ವಿಷಯದಲ್ಲಿ ಬೇರೆ ಹೇತುವನ್ನು ಹೇಳಲಾಗಿದೆ—**ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್ ॥ ೩೦ ॥**

"ನನ್ನನ್ನೇ ತಿಳಿ, ನಾನು ಪ್ರಜ್ಞಾತ್ಮನಾದ ಪ್ರಾಣನು" ಎಂದು ಆರಂಭದಲ್ಲಿ ಇಂದ್ರನೆಂಬ ಒಬ್ಬ ಜೀವನ ಗುರುತೇ ಕಾಣುತ್ತದೆ. "ಆನಂದೋಽಜರಃ' ಎಂದು ಕೊನೆಯಲ್ಲಿ ಆನಂದಾದಿಗಳನ್ನು ಜೀವನಲ್ಲಿ ಹೇಳಲಾಗಿದೆ. ಹೀಗೆ ಉಪಕ್ರಮೋಪಸಂಹಾರಗಳು ಒಂದೇ ಬಗೆಯಾಗಿರುವುದರಿಂದ ಇಲ್ಲಿ ವಕ್ತೃವಿನ ಆತ್ಮನನ್ನೇ ಉಪದೇಶಿಸಲಾಗಿದೆ. ಆದ್ದರಿಂದ ಇಲ್ಲಿ ಇಂದ್ರನೆಂಬ ಶರೀರಿಯಾದ ಒಬ್ಬ ದೇವತೆಯೇ ಪ್ರಾಣವೆಂದು ಹೇಳಬಹುದಲ್ಲವೇ? ಅಂದರೆ ಇದು ಹೊಂದುವುದಿಲ್ಲ. ಈ ಶ್ರುತಿಯಲ್ಲಿ ಪರಶಿವನ ಧರ್ಮಗಳನ್ನೇ ಬಹಳವಾಗಿ ಹೇಳಿರುವುದರಿಂದ ಇಂದ್ರನೇ ಪ್ರಾಣ

ವೆಂದು ಹೇಳುವುದು ಸರಿಯಲ್ಲ. "ಯಾವುದನ್ನು ನೀನು ಮನುಷ್ಯನಿಗೆ ಹಿತತಮ ವೆಂದು ತಿಳಿದಿರುವೆಯೋ" ಎಂದಾರಂಭಿಸಿ "ಅವನ ಉಪಾಸನವೇ ಮುಕ್ತಿಹೇತು ವಾದ್ದರಿಂದ ಹಿತತಮ' ಎಂದು ಶ್ರುತಿಯಲ್ಲಿ ಹೇಳಿದೆ. ಹಾಗೆಯೇ ಬೇರೆ ಶ್ರುತಿ ಗಳಲ್ಲೂ "ಈಶನನ್ನು ತಿಳಿದು ಅಮೃತನಾಗುತ್ತಾನೆ" "ಬೇರೆ ಎಲ್ಲವನ್ನೂ ಬಿಟ್ಟು ಶಿವಶಂಕರನಾದ ಶಿವನೊಬ್ಬನನ್ನೇ ಧ್ಯಾನಿಸು" "ಅವನನ್ನು ತಿಳಿದು ಮೃತ್ಯುವನ್ನು ದಾಟುತ್ತಾನೆ, ಮುಕ್ತಿಗೆ ಇದಕ್ಕಿಂತ ಬೇರೆ ದಾರಿಯಿಲ್ಲ". ಇಲ್ಲಿ ಮೋಕ್ಷವು ಪರಶಿವೋ ಪಾಸಾನದಿಂದಲೇ ದೊರಕುವುದೆಂದು ಉಪದೇಶಿಸಲಾಗಿದೆ. ಆದ್ದರಿಂದ "ಮನುಷ್ಯ ರಿಗೆ ಅತ್ಯಂತ ಹಿತವಾದ್ದನ್ನು ಉಪದೇಶಿಸು" ಎಂಬುದು ಪರಮೇಶ್ವರನ ಧರ್ಮವೇ ಆಗಿದೆ. ಮಧ್ಯದಲ್ಲಿ "ಇವನೇ ಸಾಧುಕರ್ಮಗಳನ್ನು ಮಾಡಿಸುವನು' ಎಂದು ಹೇಳಿದ್ದರಿಂದ ಕರ್ಮಗಳನ್ನು ಮಾಡಿಸುವುದೆಂಬುದು ಪರಮೇಶ್ವರನಿಗೇ ಸಂಬಂಧಿಸಿ ರುವುದಾಗಿ ತಿಳಿದುಬರುತ್ತದೆ. ಕೊನೆಯಲ್ಲಿ "ರಥದ ಹಾರೆಕೋಲುಗಳಲ್ಲಿ ಹಳಿಯನ್ನು ಸೇರಿಸಿರುವಂತೆ, ಹಾರೆಕೋಲುಗಳನ್ನು ಗುಂಭದಲ್ಲಿ ಸೇರಿಸಿರುವಂತೆ ಭೂತಮಾತ್ರೆ ಗಳನ್ನು ಪ್ರಜ್ಞಾಮಾತ್ರೆಗಳಲ್ಲೂ, ಪ್ರಜ್ಞಾಮಾತ್ರೆಗಳನ್ನು ಪ್ರಾಣನಲ್ಲೂ ಸೇರಿಸ ಲಾಗಿದೆ. ಆ ಈ ಪ್ರಜ್ಞಾತ್ಮನಾದ ಪ್ರಾಣನು ಅಜರನೂ, ಅಮೃತನೂ ಆಗಿದ್ದಾನೆ" ಎಂದು ಪರಮೇಶ್ವರನ ಧರ್ಮಗಳೇ ಉಕ್ತವಾಗಿವೆ. 'ಇವನೇ ಲೋಕೇಶ' ಎಂಬಲ್ಲೂ ಪರಶಿವನೇ ಬೋಧ್ಯನಾಗಿದ್ದಾನೆ.

ನನು 'ತ್ರಿಶೀರ್ಷಾಣಂ ತ್ವಾಷ್ಟ್ರಮಹನಂ' 'ಪ್ರಾಣೋ ವೈ ಬಲಂ' ಇತಿ 'ಇಂದ್ರೋ ವೈ ರಾಜಾ ಜಗತೋ ಯ ಈಶತೇ' ಇತಿ ಚ ಪ್ರಾಣತ್ವಮಿಂದ್ರಸ್ಯ ಬಲವತ್ತ್ವಾದುಪದಿಶ್ಯತೇ. ವೃಷ್ಟ್ಯಾ ಚೇತನಾಚೇತನ ಪ್ರಪಂಚಪೋಷಕತ್ವಾತ್ತಸ್ಯೈವ ಪ್ರಾಣತ್ವಂ ವ್ಯವಹ್ರಿಯತೇ. ತಸ್ಮಾ ದ್ಧಿತತಮತ್ವಾದಿವಚನಾನಿ ತತ್ಪರತ್ವೇನ ಯೋಜನೀಯಾನೀತಿ ಪ್ರತ ರ್ದನಂ ಪ್ರತಿ 'ಮಾಮೇವ ಹಿ ವಿಜಾನೀಹಿ' ಇತ್ಯುಕ್ತತ್ವಾತ್ ಸ್ವವಿಷಯಕೋಪಾಸನಮೇವಾತ್ರೋಪದಿಶ್ಯತ ಇತ್ಯಾಕಾಂಕ್ಷಾಯಾಮಾಹ

—ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ॥ ೩೧ ॥

'ಅನೇನ ಜೀವೇನಾತ್ಮನಾ' ಇತಿ ಶಾಸ್ತ್ರದೃಷ್ಟ್ಯಾ ಸರ್ವಾತ್ಮಕತ್ವಾತ್ಸರ್ವ ಶಬ್ದವಾಚ್ಯಂ ಪರಮೇಶ್ವರಂ "ಮಾಮೇವ ಹಿ ವಿಜಾನೀಹಿ" ಇತ್ಯುಪ ದಿಷ್ಟವಾನಿಂದ್ರಃ. ಯಥಾ ವಾಮದೇವಃ 'ಅಹಂ ಮನುರಭವಂ ಸೂರ್ಯಶ್ಚ' ಇತ್ಯಾದಿನಾ ಸರ್ವಾತ್ಮಕತ್ವಂ ಸ್ವಸ್ಯೋಪದಿಷ್ಟವಾನ್ ತದ್ವದಿತ್ಯರ್ಥಃ. ಕಿಂಚ 'ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ' ಇತಿ ಶ್ರುತೌ ಭ್ರಮರಕೀಟವಚ್ಛಿವೋಪಾಸನಯಾ ಶಿವತ್ವಾಪನ್ನಭಕ್ತಾನಾಂ ಶಿವಾತಿರಿಕ್ತಶೂನ್ಯತ್ವಂ ದೃಶ್ಯತೇ. ತಸ್ಮಾದ್ದಂಡಕಾರಣ್ಯೇ ಭಗವತಾ ಪರ ಮಶಿವೇನ ಶ್ರೀರಾಮಃ 'ಸರ್ವೋ ವೈ ರುದ್ರಃ,' 'ಏಕೋ ಹಿ ರುದ್ರಃ,'

'ಶಿವ ಏಕೋ ಧ್ಯೇಯಃ,' 'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ' ಇತ್ಯಾದಿಸರ್ವವೇದಾಂತಸಾರಶಿವಜ್ಞಾನೇನೋಪದಿಷ್ಟಸ್ಸನ್ ಕೃಷ್ಣಾವತಾರೇ ಅರ್ಜುನಂ ಪ್ರತಿ "ವಾಸುದೇವಸ್ಸರ್ವಂ" "ಮಮೈವಾಂಶಃ" ಇತ್ಯಾದಿವಾಕ್ಯಾನಿ ಶಿವಾತ್ಮದೃಷ್ಟ್ಯಾ ಯಥೋಪದಿದೇಶ ತದ್ವದಿಂದ್ರೋಪದೇಶೋಽಪೀಂದ್ರಸ್ಯ ಪರಶಿವಬ್ರಹ್ಮತ್ವೇನ ನ ವಿರುಧ್ಯತೇ. ತಚ್ಚ 'ಬ್ರಹ್ಮ ವೇದ ಬ್ರಹ್ಮೈವ' ಇತ್ಯಾದೌ ಸ್ಪಷ್ಟಮುಕ್ತಂ. ಅತ ಏವ 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ' ಇತಿ ವಾಕ್ಯೇ ಪರಮಶಿವಕಳಾನುಸ್ಯೂತಬಾಹ್ಯಪ್ರಾಣಲಿಂಗಮೇವೋಪದಿಶ್ಯತೇ. ಸ್ವಕೀಯಾರ್ಚನಯಾ ಭಕ್ತಾನಾಂ ಪ್ರಾಣನಹೇತುತ್ವಾತ್ ತಸ್ಯೈವ ಪ್ರಾಣಶಬ್ದೋನಿಗಮಾಗಮೇಷು ನಿರ್ಣೀಯತೇ.

'ಮೂರು ತಲೆಯ ವಿಶ್ವರೂಪನನ್ನು ಕೊಂದೆನು' ಎಂದು ಇಂದ್ರನು ತನ್ನನ್ನು ಹೊಗಳಿಕೊಂಡಿದ್ದಾನೆ. 'ಪ್ರಾಣವೇ ಬಲ' ಎಂದು ಶ್ರುತಿ ಹೇಳಿದೆ. ಇಂದ್ರನು ಬಲಿಷ್ಠನಾದ್ದರಿಂದ ಅವನೇ ಪ್ರಾಣನೆಂಬುದು ಒಪ್ಪುತ್ತದೆ. ವೃಷ್ಟಿಯಿಂದ ಚರಾಚರ ಪ್ರಪಂಚಕ್ಕೆ ಅವನು ಪೋಷಕನಾದ್ದರಿಂದ ಅವನೇ ಪ್ರಾಣನೆಂದು ಶ್ರುತಿ ಹೇಳಿದೆ. ಆದ್ದರಿಂದ 'ಹಿತತಮ'ವೆಂಬ ಮಾತನ್ನು ಇಂದ್ರನ ಪರವಾಗಿಯೇ ಸೇರಿಸುವುದು ಯುಕ್ತವಲ್ಲವೆ? ಪ್ರತರ್ದನನಿಗೆ ಇಂದ್ರನು 'ನನ್ನನ್ನು ತಿಳಿ' ಎಂದು ಹೇಳಿದ್ದರಿಂದ ತನ್ನ ಉಪಾಸನವನ್ನೇ ಹೇಳಿದಂತಾಯಿತಲ್ಲವೇ? ಆದ್ದರಿಂದ ಇಲ್ಲಿ ಪರಶಿವನ ಉಪಾಸನಕ್ಕೆ ಅವಕಾಶವೆಲ್ಲಿದೆ? ಎಂದು ಆಶಂಕಿಸುತ್ತಾನೆ.

**ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ॥ ೩೦ ॥**

ಇಂದ್ರನೆಂಬ ದೇವತೆ ತನ್ನನ್ನು ಪರಮಾತ್ಮನನ್ನಾಗಿ ಶಾಸ್ತ್ರದೃಷ್ಟಿಯಿಂದ ಕಂಡುಕೊಂಡು 'ನನ್ನನ್ನು ಅರಿತುಕೋ' ಎಂದು ಉಪದೇಶಿಸಿದ್ದಾನೆ. "ಜೀವನೊಳಗೆ ಪ್ರವೇಶಿಸಿ ನಾಮರೂಪಗಳ ವಿಭಜನಮಾಡುತ್ತೇನೆ' ಎಂಬ ಶಾಸ್ತ್ರದ ವಿವೇಚನೆಯಿಂದ ಪರಶಿವನೇ ಸರ್ವಾತ್ಮಕನಾಗಿ ಸರ್ವಶಬ್ದವಾಚ್ಯನಾಗಿರುವುದರಿಂದ 'ನನ್ನನ್ನು ಉಪಾಸಿಸು' ಎಂದು ಇಂದ್ರನು ಉಪದೇಶಿಸಿದ್ದಾನೆ. ವಾಮದೇವ ಋಷಿಯು ಹೇಗೆ 'ನಾನು ಹಿಂದೆ ಮನುವಾಗಿದ್ದೆ, ಸೂರ್ಯನಾಗಿದ್ದೆ' ಎಂದು ಅರಿತು ಹೇಳಿದನೋ ಹಾಗೆ ಇಂದ್ರನು ಹೇಳಿರುವ ಮಾತನ್ನು ಅನ್ವಯಿಸಿಕೊಳ್ಳಬೇಕು. ಇದೂ ಅಲ್ಲದೆ "ಎಲ್ಲಿ ಬೇರೆ ಏನನ್ನೂ ನೋಡುವುದಿಲ್ಲವೋ, ತಿಳಿಯುವುದಿಲ್ಲವೋ" ಎಂಬ ಶ್ರುತಿಯಲ್ಲಿ ಭ್ರಮರಕೀಟದಂತೆ ಶಿವೋಪಾಸನದಿಂದ ಶಿವಭಾವವನ್ನು ಪಡೆದ ಭಕ್ತರಿಗೆ ಎಲ್ಲವೂ ಶಿವನಾಗಿಯೇ ಕಾಣಿಸುತ್ತದೆ ಎಂದು ಸ್ಪಷ್ಟವಾಗಿದೆ. ಆದ್ದರಿಂದಲೇ ದಂಡಕಾರಣ್ಯದಲ್ಲಿ ಪರಶಿವನು ಶ್ರೀರಾಮನಿಗೆ "ಎಲ್ಲವೂ ರುದ್ರನೇ" "ಒಬ್ಬ ರುದ್ರನೇ ಎರಡನೆಯವನಿಲ್ಲದಿರುವನು." "ಎಲ್ಲ ಧರ್ಮಗಳನ್ನೂ ತೊರೆದು ನನ್ನಲ್ಲಿ ಶರಣಾಗು, ನಾನು ನಿನ್ನನ್ನು ಎಲ್ಲಾ ಪಾಪಗಳಿಂದಲೂ ಬಿಡಿಸುವೆನು"

ಹೀಗೆ ಎಲ್ಲಾ ವೇದಾಂತಗಳ ಸಾರವನ್ನು ಉಪದೇಶಿಸಿದ್ದುದರಿಂದ ಆ ರಾಮನೇ ಮುಂದೆ ಕೃಷ್ಣನಾಗಿ ಅವತರಿಸಿ ಅರ್ಜುನನಿಗೆ 'ಸರ್ವವೂ ವಾಸುದೇವನು,' 'ನನ್ನ ಸನಾತನವಾದ ಅಂಶವೇ ಜೀವನೆನಿಸಿದ್ದಾನೆ' ಎಂದು ತಾನೇ ಶಿವನೆಂಬ ದೃಷ್ಟಿಯಿಂದ ಉಪದೇಶಿಸಿರುವನು. ಅದರಂತೆ ಇಂದ್ರಪದವೂ ಪರಶಿವನಿಗೇ ಅನ್ವಯಿಸುತ್ತದೆ.

'ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮಿತ್ಯುಪಾಸ್ಸ' ಇತ್ಯಾದೌ ಬಾಹ್ಯಪ್ರಾಣಲಿಂಗನಿರ್ದೇಶಾತ್ ಕಿಮನ್ಯೋಪಾಸನಮಿತ್ಯಾಶಂಕ್ಯಾಹ—ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ॥ ೩೨ ॥

"ಪ್ರಾಣೋಽಸ್ಮಿ–ಉಪಾಸ್ಸ" ಇತ್ಯಾದಿವಾಕ್ಯೇಷು ಸ್ಥೂಲಶರೀರಾವಚ್ಛಿನ್ನಜೀವಮುಖ್ಯಪ್ರಾಣಲಿಂಗಸ್ಯೈವಾತ್ರೋಪದೇಶಾತ್ ನಿರ್ದೇಶಾತ್ ಜಗದುಭಯಕಾರಣಸರ್ವವ್ಯಾಪಕಪರಶಿವೋಪಾಸನಂ ನೇತಿ ಚೇನ್ನ, ಇಷ್ಟಾಪತ್ತೇಃ, ಕುತಃ? ಉಪಾಸಾತ್ರೈವಿಧ್ಯಸ್ಯಾಂಗೀಕೃತತ್ವಾತ್. ಇಹಾಸ್ಮಿನ್ವಾಕ್ಯೇ ತದ್ಯೋಗಾತ್ ಉಪಾಸನಾತ್ರಯಸ್ಯ ಸ್ಥೂಲಾರುಂಧತೀನ್ಯಾಯೇನ ಪ್ರತ್ಯಗಭಿನ್ನಪರಿಪೂರ್ಣಷಟ್ಸ್ಥಲಪರಶಿವಸ್ಯಾಕ್ಸಾತ್ಕಾರಸಾಧನತ್ವೇನ ಆಶ್ರಿತತ್ವಾದುಪಯುಕ್ತತ್ವಾದಿತ್ಯರ್ಥಃ. ಉಪಕ್ರಮವಾಕ್ಯೇ 'ಪ್ರಾಣೋಽಸ್ಮಿ–ಅಮೃತಂ' ಇತ್ಯಾದಿನಾ ಸ್ಥೂಲಶರೀರಾವಚ್ಛಿನ್ನಮುಖ್ಯೇಷ್ಟಲಿಂಗಧರ್ಮಬಾಹುಳ್ಯಾತ್ ಇಷ್ಟಲಿಂಗೋಪಾಸನಂ, ಮಧ್ಯೇ 'ಏಷ ಏವ ಸಾಧುಕರ್ಮ ಕಾರಯತಿ' ಇತಿ ಸರ್ವಕರ್ಮಕಾರಯಿತೃತ್ವಾದಿಪ್ರಾಣಲಿಂಗಧರ್ಮಬಾಹುಳ್ಯಾತ್ಪ್ರಾಣಲಿಂಗೋಪಾಸನಂ, ಉಪಸಂಹಾರೇ—'ತದ್ಯಥಾ ರಥಸ್ಯ–ಪ್ರಜ್ಞಾತ್ಮಾ' ಇತ್ಯಾದಿನಾ ಭಾವಲಿಂಗಧರ್ಮಭೂಯಸ್ತ್ವಾದ್ಭಾವಲಿಂಗೋಪಾಸನಂ ಚ ವಿಧೀಯತೇ. ಪರಮಶಿವಾದನ್ಯಪರತ್ವೇ ಪೂರ್ವಾಪರಮಧ್ಯವಾಕ್ಯಪರಾಮರ್ಶವಿರೋಧಪ್ರಸಂಗಃ. ತಸ್ಮಾನ್ನ್ಯಾಯ್ಯಾರ್ಥೋಽಯುಕ್ತಃ. ಅತ್ರ ಕೇಚಿತ್ 'ಉಪಾಸಾತ್ರೈವಿಧ್ಯಾದಿತ್ಯತ್ರ ಪ್ರಾಣಜೀವನಿರ್ವಿಶೇಷಬ್ರಹ್ಮೋಪಾಸನಪರತ್ವಂ' ಇತಿ ವದಂತಿ. ತದ್ಯಥಾ 'ಅಥ ಖಲು ಪ್ರಾಣ ಏವ ಪ್ರಜ್ಞಾತ್ಮಾ ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ' ಇತಿ ಪ್ರಾಣಧರ್ಮ ಏವಾತ್ರೋಪದಿಶ್ಯತೇ. ಶರೀರಧಾರಣಸ್ಯ ಮುಖ್ಯಪ್ರಾಣಧರ್ಮತ್ವಾತ್. ಪ್ರಾಣಸಂವಾದೇ ವಾಗಾದೀನ್ ಪ್ರಾಣಾನ್ ಪ್ರಕೃತ್ಯ 'ತಾನ್ವರಿಷ್ಠಃ ಪ್ರಾಣ ಉವಾಚ' ಇತ್ಯಾದಿನಾ ಪ್ರಾಣಸ್ಯ ಚೇತನತ್ವಂ ಸರ್ವೋಪಾಸ್ಯತ್ವಂ ಚೋಪದಿಶ್ಯತೆ. ಕಿಂಚ 'ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್' ಇತ್ಯತ್ರ ವಕ್ತೃತ್ವಾದಿಕಾರ್ಯಕಾರಣಧರ್ಮಾಣಾಂ ಜೀವಪರತ್ವಾತ್ಸ ಏವೋಪದಿಶ್ಯತೇ. ಚೈತನ್ಯಾತ್ಮಕತ್ವಾಜ್ಜೀವೇ ಪ್ರಜ್ಞಾತ್ಮಕತ್ವಮುಪ್ಪಪ

ದ್ಯತೆ. ‘ ಆನಂದೋಽಜರಃ ’ ಇತ್ಯಾದಿನಾ ‘ ನಿರ್ವಿಶೇಷಬ್ರಹ್ಮಪರತ್ವಂ ’ ಸೂಚ್ಯತ ಇತಿ. ತಥಾಪಿ ಜೀವಪ್ರಾಣನಿರ್ವಿಶೇಷಬ್ರಹ್ಮೋಪಾಸನಾತ್ರೈವಿಧ್ಯಮತ್ರ ನ ಘಟತೇ, ಸವಿಶೇಷಬ್ರಹ್ಮಪ್ರಕರಣತ್ವಾತ್. ‘ ಮಾಮೇವ ವಿಜಾನೀಹಿ ’ ಇತ್ಯುಪಕ್ರಮ್ಯ ‘ ಪ್ರಾಣೋಽಸ್ಮಿ–ಅಮೃತಮಿತ್ಯುಪಾಸ್ವ ’ ಇತ್ಯುಕ್ತ್ವಾ ‘ ಸ ಏಷ ಪ್ರಾಣ ಏವ ಅಮೃತಃ ’ ಇತ್ಯುಪಕ್ರಮೋಪಸಂಹಾರಾಭ್ಯಾಂ ಪರಶಿವಾಸಾಧಾರಣಾನಂದತ್ವಾದಿಧರ್ಮಾಣಾಂ ಶಿವೇ ರೂಢತ್ವಾತ್ ಭೂತಾತ್ಮಕಪ್ರಾಣಾತ್ಮಕದಶಾನಾಂ ಚ ಪರಮೇಶ್ವರಾದನ್ಯತ್ರಾರ್ಪಣಾನುಪಪತ್ತೇಃ. ‘ ಸ ಏವ ವಿಷ್ಣುಸ್ಸ ಪ್ರಾಣ ’ ಇತ್ಯಾದಿನಾ ಕೈವಲ್ಯೇ ವಿಷ್ಣುಪ್ರಾಣಾದಿಶಬ್ದಾನಾಂ ಪರಶಿವಪರ್ಯಾಯತ್ವೇನ ನಿರ್ದೇಶಾತ್. ಕಿಂಚ “ ನೋಪಾಸ್ಯೌ ಪ್ರಕೃತಿಜೀವೌ ” ಇತ್ಯಾದೌ ಜೀವಾದ್ಯುಪಾಸನಸ್ಯ ನಿರಸ್ತತ್ವಾತ್, ನಿರ್ವಿಶೇಷಬ್ರಹ್ಮಣ ಉಪಾಸನಾಸಂಭವಾತ್ ಸವಿಶೇಷಪರಶಿವಬ್ರಹ್ಮೋಪಾಸನಪರಮೇವ ತ್ರಿವಿಧೋಪಾಸನಮಿತಿ ನಿರ್ಣೀಯತೇ. “ ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ ” ಇತ್ಯಾದೌ ಅಭಿಧ್ಯಾನಾದಿತ್ಯನೇನ ಪ್ರಾಣಲಿಂಗೋಪಾಸನಂ । ಯೋಜನಾದಿತ್ಯನೇನೇಷ್ಟಲಿಂಗೋಪಾಸನಂ, ತತ್ತ್ವಭಾವಾದಿತ್ಯನೇನ ಭಾವಲಿಂಗೋಪಾಸನಂ ಚ ಸ್ಪಷ್ಟಮುಕ್ತಂ. ‘ ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ ’ ಇತಿ ವಾಕ್ಯೇನ ಪ್ರಾಣಧರ್ಮ ಉಪದಿಶ್ಯತೇ. ಪ್ರಾಣವ್ಯಾಪಾರಸ್ಯಾಪಿ ಪರಮಶಿವಾಧೀನತ್ವಾತ್ ? ಕುತಃ “ ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ । ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥ ” ಇತಿ ಶ್ರುತೇಃ. ‘ ಸ ವಾಚಂ–ವಿದ್ಯಾತ್ ’ ಇತಿ ವಾಕ್ಯೇನ ಜೀವಧರ್ಮೋ ದರ್ಶಿತಃ. “ ಯದ್ವಾಚಾಽನಭ್ಯುದಿತಂ ಯೇನ ವಾಗಭ್ಯುದ್ಯತೇ, ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ” “ ಏಷ ಏವ ಸಾಧುಕರ್ಮ ಕಾರಯತಿ ” ಇತ್ಯಾದೌ ವಾಗಾದಿವ್ಯಾವೃತ್ತಸ್ಯ ಶಾರೀರಸ್ಯ ಬ್ರಹ್ಮಾಧೀನತ್ವೇನ ಧಾರಣಾರ್ಚನಾರ್ಪಣಾತ್ಮಕೋಪಾಸನಾರ್ಹತ್ವೇನ ಚ ಜೀವಮುಖ್ಯತ್ವಂ ಸ್ವೇಷ್ಟಲಿಂಗಸ್ಯೈವ ವಿಧೀಯತೇ. ಜೀವಮುಖ್ಯೇಷ್ಟಶಬ್ದಯೋಃ ಘಟಕುಂಭಕಲಶಾದಿಶಬ್ದವತ್ಪರ್ಯಾಯತ್ವಂ. “ ಯೋ ವಾಮಹಸ್ತಾರ್ಚಿತಲಿಂಕಮೇಕಂ ಪರಾತ್ಪರಂ ಧಾರಯತೇ ವಿಪ್ರಃ ಕ್ಷತ್ರಿಯೋ ವಾ । ತಸ್ಯೈವ ಲಭ್ಯಃ ಪರಮೇಶ್ವರೋಽಸೌ ನಿರಂಜನಃ ಪರಮಂ ಸಾಮ್ಯಮುಪೈತಿ ದಿವ್ಯಂ ॥ ” “ ತ್ಯಕ್ತೇ ತಸ್ಮಿನ್ನ ಭುಂಜೀತ ಪ್ರಾಣಾನೇವ ಪರಿತ್ಯಜೇತ್ ” ಇತಿ ಸಾಮುಜೈಗೀಷೀಯಶಾಖಾಯಾಂ ಸದಾನಂದೋಪನಿಷದಿ ಜೀವಸ್ಯ ಪ್ರಾಣಲಿಂಗಮುಖ್ಯತ್ವಂ ಸೂಚಿತಂ. ತಥಾ ಶಂಕರಸಂಹಿತಾಯಾಂ ಭಗವತಾ ವ್ಯಾಸೇನಾಪಿ.

ನಿರ್ದಿಷ್ಟಂ. "ಶಿಷ್ಯದೇಹೇ ತತಶ್ಶಕ್ತಿಪಾತಂ ಕೃತ್ವಾ ಸ್ವವಿದ್ಯಯಾ। ಪೀಠಸ್ಥಶಿವಲಿಂಗೇ ತು ಶಿಷ್ಯಪ್ರಾಣಂ ನಿಧಾಯ ಚ। ಲಿಂಗಂ ಸಂಸ್ಥಾಪ್ಯ ತತ್ಪ್ರಾಣೇ ಪ್ರಾಣಲಿಂಗಂ ಭವೇತ್ತತಃ॥ ದತ್ವಾ ಶಿಷ್ಯಾಯ ತಲ್ಲಿಂಗಂ ಶ್ರದ್ಧಾಭಕ್ತಿಯುತಾಯ ಸಃ। ನ ತ್ಯಜ ಪ್ರಾಣಲಿಂಗಂ ತ್ವಂ ಯಾವಜ್ಜೀವಂ ಪ್ರತಿಜ್ಞಯಾ। ಪುನರ್ಭವೋ ನ ತೇ ವತ್ಸ ವಿದ್ಯತೇ ಮಾತೃಯೋನಿಷು॥" ಇತಿ. ತಥಾ ಸಿದ್ಧಾಂತಗಮೇ "ಶಿಷ್ಯಸ್ಯ ಪ್ರಾಣಮಾದಾಯ ಲಿಂಗೇ ತತ್ರ ನಿಧಾಪಯೇತ್। ತಲ್ಲಿಂಗಂ ತು ಸುತಪ್ರಾಣೇ ಸ್ಥಾಪಯೇದೇಕಭಾವತಃ। ಏವಂ ಕೃತ್ವಾ ಗುರುರ್ಲಿಂಗಂ ಶಿಷ್ಯಹಸ್ತೇ ನಿಧಾಪಯೇತ್। ಪ್ರಾಣವದ್ಧಾರಣೀಯಂ ತು ಪ್ರಾಣಲಿಂಗಮಿದಂ ತವ। ಕದಾಚಿತ್ಕುತ್ರಚಿದ್ವಾಪಿ ನ ವಿಯೋಜಯ ದೇಹತಃ। ಯದಿ ಪ್ರಮಾದಾತ್ಪತಿತೇ ಲಿಂಗೇ ಲಿಂಗೇ ದೇಹಾತ್ಮಹೀತಲೇ। ಪ್ರಾಣಾನ್ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷಸಂಪದಾಂ॥" ಇತಿ. "ಸ ಉ ಪ್ರಾಣಸ್ಯ ಪ್ರಾಣಃ" ಇತಿ ಶ್ರುತ್ಯಂತರೇಽಪಿ ಪರಮೇಶ್ವರಸ್ಯ ಲಿಂಗತ್ರಯಾತ್ಮಕತ್ವಮುಪದಿಷ್ಟಂ. "ಸರ್ವಾನನಶಿರೋಗ್ರೀವಃ ಸರ್ವಭೂತಗುಹಶಯಃ। ಸರ್ವವ್ಯಾಪೀ ಸ ಭಗವಾನ್ ತಸ್ಮಾತ್ಸರ್ವಗತಶ್ಶಿವಃ॥" "ಇಷ್ಟಮೂರ್ಜಂ ತು ತಪಸಾಮುನುಯಚ್ಛತಿ ಸರ್ವದಾ। ತತ್ಪ್ರಾಣೇಷ್ಟಂತರ್ಮನಸೋ ಲಿಂಗಮಾಹುಃ॥" "ಭಾವಗ್ರಾಹ್ಯಮನೀಡಾಖ್ಯಂ ಭಾವಾಭಾವಕರಂ ಶಿವಂ। ಕಲಾಸರ್ಗಕರಂ ದೇವಂ ಯೇ ವಿದುಸ್ತೇ ಜಹುಸ್ತನುಂ॥" ಇತ್ಯಾದಿಶ್ರುತಿಶತೇನ ಇಷ್ಟಪ್ರಾಣಭಾವಾತ್ಮಕಲಿಂಗತ್ರಯೋಪಾಸನಸ್ಯ ವ್ಯವಸ್ಥಾಪನಾದಿಹಾಪ್ಯುಪಕ್ರಮೋಪಸಂಹಾರಮಧ್ಯಪರಾಮರ್ಶೇನ ಪರಮಶಿವೈಕಪರತ್ವನಿರ್ಣಯಾದಿತರೇಷಾಂ ಮುಕ್ತಿಪ್ರದತ್ವಾದರ್ಶನಾತ್ಪರಮಶಿವಪ್ರಕರಣತ್ವಾಚ್ಚ ನಾನ್ಯಾರ್ಥೋ ವಿಧೀಯತೇ. ತಸ್ಮಾದತ್ರ ಪ್ರಾಣಶಬ್ದೇನ ಪರಶಿವಬ್ರಹ್ಮೈವಾಭಿಧೀಯತ ಇತಿ ರಾದ್ಧಾಂತಃ.

ಇತಿಶ್ರೀಪತಿಪಂಡಿತಕೃತೇ ಬ್ರಹ್ಮಮೀಮಾಂಸಾಸೂತ್ರಾರ್ಥ
ಪ್ರಕಾಶಕೇ ಶ್ರೀಕರಭಾಷ್ಯೇ ಸಮನ್ವಯಾಭಿಧಾನಸ್ಯ
ಪ್ರಥಮಾಧ್ಯಾಯಸ್ಯ ಪ್ರಥಮಪಾದಃ.



## ಬಾಹ್ಯಪ್ರಾಣಲಿಂಗಾಧಿಕರಣ ॥ ೧೧ ॥

'ಪ್ರಜ್ಞಾತ್ಮನಾದ ಪ್ರಾಣನು' ಎಂಬ ಶ್ರುತಿಯಲ್ಲಿ ಪರಶಿವನ ಚಿತ್ಕಲಾವಿಶಿಷ್ಟವಾದ ಇಷ್ಟಲಿಂಗವೇ ಬಾಹ್ಯಪ್ರಾಣಲಿಂಗವೆಂದು ಸ್ಪಷ್ಟವಾಗುತ್ತದೆ. ತನ್ನ ಅರ್ಚನೆಯಿಂದ ಶಿವನು ಭಕ್ತರಿಗೆ ಪ್ರಾಣವಾಗಿರುವುದರಿಂದ ಅವನೇ ಪ್ರಾಣ

ಲಿಂಗವೆಂದು ನಿಗಮಾಗಮಗಳಲ್ಲಿ ನಿರ್ಣಯಿಸಲಾಗಿದೆ. ಆದರೂ 'ಪ್ರಾಣನಾಗಿದ್ದೇನೆ' ಎಂಬಲ್ಲಿ ಪ್ರಾಣಲಿಂಗವನ್ನೇ ಉಪಾಸನೆಗಾಗಿ ಹೇಳಿರುವುದರಿಂದ ಮತ್ತೆ ಬೇರೆ ಉಪಾಸನವೇಕೆ? ಎಂದು ಆಕ್ಷೇಪಿಸಿ ಸಮಾಧಾನವನ್ನು ತಿಳಿಸಲಾಗಿದೆ— **ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನ ಉಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ॥ ೩೨ ॥**

'ಪ್ರಜ್ಞಾತ್ಮನಾದ ಪ್ರಾಣನು', 'ಈ ದೇಹದಲ್ಲ ಪ್ರಾಣವಿರುವವರೆಗೂ ಆಯುಸ್ಸಿರುವುದು', 'ಪ್ರಾಣವೇ ಬಲ' ಈ ವಾಕ್ಯಗಳಲ್ಲಿ ಸ್ಥೂಲಶರೀರದಲ್ಲಿರುವ ಪ್ರಾಣಲಿಂಗವನ್ನೇ ಜೀವನಿಗೆ ಮುಖ್ಯವೂ ಹಿತವೂ ಆದ್ದರಿಂದ ಉಪಾಸ್ಯವೆಂದು ಹೇಳಿರುವುದರಿಂದ ಇದು ಜಗದುಭಯಕಾರಣವೂ ಸರ್ವವ್ಯಾಪಕವೂ ಆದ ಪರಶಿವನ ಉಪಾಸನವಾಗುವುದಿಲ್ಲವೆಂದು ಆಕ್ಷೇಪ ಬಂದರೆ ಅದು ಯುಕ್ತವಲ್ಲವೆಂದು ಸೂತ್ರವು ತಿಳಿಸುತ್ತದೆ; ಯಾಕೆಂದರೆ ಉಪಾಸಾತ್ರೈವಿಧ್ಯಾತ್=ಇಷ್ಟಪ್ರಾಣಭಾವರೂಪದಿಂದ ಪರಶಿವನ ಉಪಾಸನವು ಮೂರು ಬಗೆಯೆಂದು ಅಂಗೀಕೃತವಾಗಿದೆ. ಈ ಶ್ರುತಿಯಲ್ಲಿ ಮೂರು ಬಗೆಯ ಉಪಾಸನವನ್ನು ಪರಶಿವನ ಸಾಕ್ಷಾತ್ಕಾರಕ್ಕೆ ಸಾಧನವೆಂದು ತಿಳಿಸಲಾಗಿದೆ. ಉಪಕ್ರಮದಲ್ಲಿ 'ನಾನೇ ಪ್ರಾಣನು' ಎಂದು ಹೇಳಿರುವುದರಿಂದ ಜೀವನಿಗೆ ಮುಖ್ಯವೆನಿಸಿ ಸ್ಥೂಲಶರೀರದಲ್ಲಿರುವ ಇಷ್ಟಲಿಂಗದ ಧರ್ಮಗಳೇ ಬಹಳವಾಗಿ ಉಕ್ತವಾಗಿವೆ. ಆದ್ದರಿಂದ ಈ ವಾಕ್ಯವು ಇಷ್ಟಲಿಂಗದ ಉಪಾಸನವನ್ನು ತಿಳಿಸುತ್ತದೆ. ಮಧ್ಯದಲ್ಲಿ 'ಇವನೇ ಸಾಧುಕರ್ಮಗಳನ್ನು ಮಾಡಿಸುತ್ತಾನೆ' ಎಂದು ಕರ್ಮಮಾಡಿಸುವಿಕೆ ಮೊದಲಾದ ಪ್ರಾಣಲಿಂಗದ ಧರ್ಮಗಳೇ ಬಹಳವಾಗಿ ಬಂದಿರುವುದರಿಂದ ಈ ವಾಕ್ಯವು ಪ್ರಾಣಲಿಂಗದ ಉಪಾಸನವನ್ನೂ ತಿಳಿಸುತ್ತದೆ. ಕೊನೆಯಲ್ಲಿ 'ರಥಸ್ಯ ಅರೇಷು' ಎಂಬಲ್ಲಿ ಭಾವಲಿಂಗದ ಧರ್ಮಗಳನ್ನು ಬಹಳವಾಗಿ ಹೇಳಿರುವುದರಿಂದ ಈ ವಾಕ್ಯವು ಭಾವಲಿಂಗದ ಉಪಾಸನವನ್ನೂ ತಿಳಿಸುತ್ತದೆ. ಪರಶಿವನಲ್ಲದೆ ಬೇರೆ ಕಡೆಗೆ ಇದನ್ನು ಅನ್ವಯಿಸಿದರೆ ಹಿಂದಿನ ಮುಂದಿನ ವಾಕ್ಯಗಳಿಗೆ ವಿರೋಧ ಉಂಟಾಗುತ್ತದೆ. ಆದ್ದರಿಂದ ಈ ವಾಕ್ಯದಲ್ಲಿ ಪರಶಿವನ ತ್ರಿವಿಧೋಪಾಸನವೇ ಯುಕ್ತವೆನಿಸುತ್ತದೆ. ಇಲ್ಲಿ ಕೆಲವರು ಉಪಾಸಾತ್ರೈವಿಧ್ಯವೆಂಬಲ್ಲಿ ಪ್ರಾಣ, ಜೀವ, ನಿರ್ವಿಶೇಷಬ್ರಹ್ಮ ಇವುಗಳ ಉಪಾಸನವನ್ನು ಹೇಳುತ್ತಾರೆ. 'ಪ್ರಾಣನು ಈ ಶರೀರವನ್ನು ಹಿಡಿದಿದ್ದಾನೆ' ಎಂಬಲ್ಲಿ ಪ್ರಾಣನ ಧರ್ಮಗಳೇ ನಿರ್ದಿಷ್ಟವಾಗಿವೆ. ಶರೀರಧಾರಣವು ಮುಖ್ಯವಾಗಿ ಪ್ರಾಣದ ಧರ್ಮವೇ ಆಗಿದೆ. ಪ್ರಾಣಸಂವಾದದಲ್ಲಿ 'ವಾಗಾದಿಇಂದ್ರಿಯಗಳನ್ನು ತಡೆದು ಬಲಿಷ್ಠವಾದ ಪ್ರಾಣವು ಹೇಳಿತು' ಎಂಬಲ್ಲಿ ಪ್ರಾಣವನ್ನು ಚೇತನವೆಂದೂ ಸರ್ವೋಪಾಸ್ಯವೆಂದೂ ಹೇಳಿದೆ. ಮತ್ತೆ 'ವಾಕ್ಕನ್ನು ವಿಚಾರಿಸದೆ ವಕ್ತೃವನ್ನು ಅರಿಯಬೇಕು' ಎಂಬಲ್ಲಿ ವಕ್ತೃವೇ ಮೊದಲಾದ ಧರ್ಮಗಳು ಜೀವಪರವಾದ್ದರಿಂದ ಅವನೇ ಇಲ್ಲಿ ಉಪದಿಷ್ಟನಾಗಿದ್ದಾನೆ. ಜೀವನು ಚೇತನನಾದ್ದರಿಂದ ಅವನಿಗೆ ಪ್ರಜ್ಞಾತ್ಮವೆಂಬುದು ಯುಕ್ತವಾಗುತ್ತದೆ. 'ಆನಂದೋಽಜರಃ'

ಎಂಬಲ್ಲಿ ನಿರ್ವಿಶೇಷಬ್ರಹ್ಮವನ್ನು ತಿಳಿಸಲಾಗಿದೆ. ಆದ್ದರಿಂದ ಇಲ್ಲಿ ಪ್ರಾಣ, ಜೀವ, ನಿರ್ವಿಶೇಷಬ್ರಹ್ಮ ಇವುಗಳ ಉಪಾಸನವೇ ಉಕ್ತವಾಗಿದೆ ಎಂದು ಅವರು ಹೇಳುತ್ತಾರೆ. ಇದೂ ಕೂಡ ಇಲ್ಲಿ ಹೊಂದುವುದಿಲ್ಲ. 'ನನ್ನನ್ನು ತಿಳಿ' ಎಂದು ಆರಂಭಿಸಿ, 'ಪ್ರಜ್ಞಾತ್ಮನಾದ ಪ್ರಾಣನು' ಎಂದು ಹೇಳಿ 'ಆ ಪ್ರಾಣನೇ ಆನಂದನು' ಎಂದು ಉಪಕ್ರಮೋಪಸಂಹಾರಗಳಲ್ಲಿ ಪರಶಿವನ ಅಸಾಧಾರಣಧರ್ಮಗಳೇ ಉಕ್ತವಾಗಿವೆ. ಪಂಚಪ್ರಾಣಗಳಿಗೆ ಪರಮೇಶ್ವರನಲ್ಲಲ್ಲದೆ ಬೇರೆಕಡೆಗೆ ಅನ್ವಯಿಸುವುದು ಯುಕ್ತವಾಗುವುದಿಲ್ಲ. 'ಅವನೇ ವಿಷ್ಣು-ಅವನೇ ಪ್ರಾಣ' ಎಂದು ಕೈವಲ್ಯದಲ್ಲಿ ವಿಷ್ಣು ಪ್ರಾಣಾದಿ ಶಬ್ದಗಳೆಲ್ಲವನ್ನು ಪರಶಿವನ ಪರ್ಯಾಯ ನಾಮಗಳೆಂದು ನಿರ್ದೇಶಿಸಲಾಗಿದೆ. ಇದೂ ಅಲ್ಲದೆ 'ಜೀವಪ್ರಕೃತಿಗಳು ಉಪಾಸ್ಯರಲ್ಲ' ಎಂದು ಶ್ರುತಿಯಲ್ಲಿ ಜೀವನ ಉಪಾಸನವನ್ನು ನಿಷೇಧಿಸಲಾಗಿದೆ. ನಿರ್ವಿಶೇಷಬ್ರಹ್ಮಕ್ಕೆ ಉಪಾಸನವು ಸಂಭವಿಸುವುದಿಲ್ಲ. ಆದ್ದರಿಂದ ತ್ರಿವಿಧೋಪಾಸನವೂ ಸವಿಶೇಷಬ್ರಹ್ಮಕ್ಕೇ ಅನ್ವಯಿಸುವುದಾಗಿ ನಿರ್ಣಯಿಸಲಾಗಿದೆ. 'ಜೀವಪ್ರಕೃತಿಗಳನ್ನು ಈಶ್ವರನೊಬ್ಬನೇ ನಿಯಮಿಸುತ್ತಾನೆ'. "ಶಿವನನ್ನು ಹೃದಯದಲ್ಲಿ ಧ್ಯಾನಿಸುತ್ತಲೂ, ಹೊರಗೆ ಧರಿಸುತ್ತಲೂ, ಶಿವಭಾವದಲ್ಲಿ ಬೆರೆಯುತ್ತಲೂ ಜೀವನಿಗೆ ಮಾಯೆಯ ಬಿಡುಗಡೆಯಾಗುವುದು' ಈ ಮಂತ್ರದಲ್ಲಿ 'ಅಭಿಧ್ಯಾನಾತ್' ಎಂಬುದರಿಂದ ಪ್ರಾಣಲಿಂಗದ ಉಪಾಸನೆಯೂ, 'ಯೋಜನಾತ್' ಎಂಬುದರಿಂದ ಇಷ್ಟಲಿಂಗದ ಉಪಾಸನವೂ, 'ತತ್ತ್ವಭಾವಾತ್' ಎಂಬುದರಿಂದ ಭಾವಲಿಂಗದಲ್ಲಿ ಐಕ್ಯವೂ ಉಕ್ತವಾಗಿವೆ. 'ಈ ಶರೀರವನ್ನು ಪ್ರಾಣನು ಹಿಡಿದಿದೆ' ಎಂಬಲ್ಲಿ ಪ್ರಾಣಧರ್ಮವು ಉಪದಿಷ್ಟವಾಗಿದೆ. ಪ್ರಾಣವ್ಯಾಪಾರವು ಪರಶಿವನಿಗಧೀನವಾಗಿರುವುದರಿಂದ ಅವನಲ್ಲಿಯೇ ಪ್ರಾಣಪದವು ಅನ್ವಯಿಸುತ್ತದೆ. "ಪ್ರಾಣದಿಂದಲೂ ಅಪಾನದಿಂದಲೂ ಒಬ್ಬನು ಜೀವಿಸಲಾರನು. ಇವೆರಡೂ ಯಾವನನ್ನು ಆಶ್ರಯಿಸಿವೆಯೋ ಅವನಿಂದಲೇ ಇವು ಜೀವಿಸಿವೆ" ಎಂಬ ಶ್ರುತಿಯಿಂದ ಇದು ತಿಳಿದು ಬರುತ್ತದೆ. "ವಾಕ್ಕನ್ನು ವಿಚಾರಿಸದೆ ವಕ್ತೃವನ್ನು ತಿಳಿಯಬೇಕು' ಎಂಬಲ್ಲಿ ಜೀವಧರ್ಮವನ್ನು ತಿಳಿಸಲಾಗಿದೆ. 'ಯಾವುದನ್ನು ವಾಕ್ಕು ತಿಳಿಸಲಾರದೋ, ಯಾವುದರಿಂದ ವಾಕ್ಕು ತಿಳಿಯಬರುವುದೋ ಅದನ್ನು ಬ್ರಹ್ಮವೆಂದು ತಿಳಿ", "ಯಾವುದನ್ನು ಬ್ರಹ್ಮವೆಂದು ಉಪಾಸನಮಾಡುತ್ತಾರೋ ಅದು ಬ್ರಹ್ಮವಲ್ಲ", ಇಲ್ಲಿ ವಚನವೇ ಮುಂತಾದ ಕ್ರಿಯೆಗಳಲ್ಲಿ ತೊಡಗಿರುವ ಜೀವನಿಗೆ ಶಿವನೇ ನಿಯಾಮಕನಾದ್ದರಿಂದಲೂ, ಧಾರಣ ಅರ್ಚನ ಅರ್ಪಣವೆಂಬ ಉಪಾಸನೆಗೆ ಅರ್ಹನಾದ್ದರಿಂದಲೂ, ಶಿವನೇ ಸಕಲ ಇಷ್ಟಾರ್ಥಗಳನ್ನು ನೆರವೇರಿಸಬಲ್ಲನಾದ್ದರಿಂದಲೂ ಜೀವನಿಗೆ ಮುಖ್ಯವಾದ್ದೆಂದರೆ ಆವನ ಇಷ್ಟಲಿಂಗವೆಂದು ವಿಧಿಸಲಾಗಿದೆ. ಜೀವಮುಖ್ಯ ಮತ್ತು ಇಷ್ಟಲಿಂಗಶಬ್ದಗಳು ಘಟಕುಂಭಪದಗಳಂತೆ ಪರ್ಯಾಯನಾಮಗಳಾಗಿವೆ. "ಯಾವನು ಎಡಗೈನಲ್ಲಿ ಪರಶಿವಲಿಂಗವನ್ನು ಹಿಡಿದು ವಿಧಿವತ್ತಾಗಿ ಅರ್ಚಿಸುತ್ತಲಿರುವನೋ ಅವನಿಗೇ ಪರಮೇಶ್ವರನು ಪ್ರಸನ್ನನಾಗುವನು. ಅವನು ನಿಷ್ಕಲಶಿವನೊಡನೆ ಸಮರಸವಾಗಿ ಬೆರೆಯು

ವನು. ಇಷ್ಟಲಿಂಗವನ್ನು ದೇಹದಿಂದ ತೊರೆದರೆ ಜೀವನು ಆಹಾರವನ್ನು ಭೋಗಿಸದೆ. ಪ್ರಾಣವನ್ನೇ ತೊರೆಯಬೇಕು" ಹೀಗೆ ಸದಾನಂದೋಪನಿಷತ್ತಿನಲ್ಲಿ ಜೀವನಿಗೆ, ಇಷ್ಟ ಲಿಂಗದ ಪ್ರಾಮುಖ್ಯತೆಯನ್ನು ತಿಳಿಸಲಾಗಿದೆ. "ಗುರುವು ತನ್ನ ಜ್ಞಾನಬಲದಿಂದ ಶಿಷ್ಯದೇಹದಲ್ಲಿ ಶಕ್ತಿಪಾತವನ್ನು ಅನುಗ್ರಹಿಸಿ ಕರಪೀಠದಲ್ಲಿರುವ ಶಿವಲಿಂಗದಲ್ಲಿ ಶಿಷ್ಯನ ಪ್ರಾಣವನ್ನೂ ಅವನ ಪ್ರಾಣದಲ್ಲಿ ಆ ಲಿಂಗವನ್ನೂ ಸಮಾವೇಶಗೊಳಿಸಿದರೆ ಅದು ಪ್ರಾಣಲಿಂಗವೆನಿಸುತ್ತದೆ. ಅಂತಹ ಪ್ರಾಣಲಿಂಗವನ್ನು ಶ್ರದ್ಧೆಯುಳ್ಳ ಭಕ್ತನಿಗೆ ಗುರುವು ಅನುಗ್ರಹಿಸಿ "ನೀನು ಬದುಕಿರುವವರೆಗೂ ಈ ಪ್ರಾಣಲಿಂಗವನ್ನು ತೊರೆಯಬೇಡ" ಎಂದು ಪ್ರತಿಜ್ಞೆ ಮಾಡಿಸುವನು. ಇದರಿಂದ ಅವನು ಮತ್ತೆ ತಾಯಿಯ ಗರ್ಭಕ್ಕೆ ಬರಲಾರನು" ಎಂದು ವ್ಯಾಸನು ಹೇಳಿದ್ದಾನೆ. ಸಿದ್ಧಾಂತಾಗಮದಲ್ಲಿ "ಶಿಷ್ಯನ ಪ್ರಾಣವನ್ನು ಲಿಂಗದಲ್ಲೂ, ಆ ಲಿಂಗವನ್ನು ಏಕಭಾವದಿಂದ ಅವನ ಪ್ರಾಣದಲ್ಲೂ ನಲೆ ಗೊಳಿಸಬೇಕು, ಹೀಗೆ ಮಾಡಿ ಗುರುವು ಲಿಂಗವನ್ನು ಶಿಷ್ಯನ ಕೈನಲ್ಲಿ ಕೊಟ್ಟು 'ಪ್ರಾಣ ದಂತೆ ಇದನ್ನು ಧರಿಸಬೇಕು. ಯಾವಾಗಲೂ ಎಲ್ಲಿಯೂ ಇದಕ್ಕೆ ದೇಹದಿಂದ ವಿಯೋಗವಾಗದಂತೆ ನೋಡಿಕೋ. ಎಂದಾದರೂ ಪ್ರಮಾದದಿಂದ ಇದು ಕೆಳಗೆ ಬಿದ್ದರೆ ಕೂಡಲೆ ಪ್ರಾಣವನ್ನು ತೊರೆಯಬೇಕು. ಲಿಂಗವಿಲ್ಲದಮೇಲೆ ಈ ದೇಹದಲ್ಲಿ ಇದ್ದು ಫಲವಿಲ್ಲ" ಎಂದು ಹೇಳಿದೆ. 'ಇದು ಪ್ರಾಣಕ್ಕೂ ಪ್ರಾಣವು' ಎಂದು ಶ್ರುತಿ ಹೇಳಿದೆ. 'ಎಲ್ಲರ ಶಿರಸ್ಸು, ಕುತ್ತಿಗೆ ಹೃದಯಗಳಲ್ಲಿದ್ದು, ಶಿವನು ಸರ್ವವ್ಯಾಪಿಯೂ ಸರ್ವಗತನೂ ಆಗಿದ್ದಾನೆ', "ಪರಮೇಶ್ವರನು ಭಕ್ತರ ಅರ್ಚನೆಗೆ ಮೆಚ್ಚಿ ಇಷ್ಟವಾದ ಫಲವನ್ನು ಕೊಡುತ್ತಿರುವುದರಿಂದ ಇಷ್ಟಲಿಂಗನೆನಿಸಿದ್ದಾನೆ." 'ಪ್ರಾಣದೊಳಗಿನ ಮನಸ್ಸೇ ಲಿಂಗ.' "ಪರಶಿವನು ಜೀವಭಾವದ ಸಮರ್ಪಣದಿಂದಲೇ ದೊರಕುವನು. ಹೀಗೆ ಅವನ ಭಾವೈಕಗಮ್ಯನಾದ್ದರಿಂದ ನಿಷ್ಕಲನಾಗಿ ಭಾವಲಿಂಗನೆನಿಸಿದ್ದಾನೆ; ಸಕಲಕಲಾಪರಿ ಪೂರ್ಣನಾದ್ದರಿಂದ ಸಕಲನಾಗಿ ಇಷ್ಟಲಿಂಗನೆನಿಸಿದ್ದಾನೆ; ಅದರಂತೆ ಸಕಲ ನಿಷ್ಕಲನಾಗಿ ಪ್ರಾಣಲಿಂಗವೆನಿಸಿದ್ದಾನೆ". ಹೀಗೆ ಅನೇಕ ಶ್ರುತಿಗಳಲ್ಲಿ ಇಷ್ಟಪ್ರಾಣರೂಪನಾದ ಮಹಾ ಲಿಂಗದ ಉಪಾಸನವನ್ನು ತಿಳಿಸಿರುವುದರಿಂದ ಉಪಕ್ರಮೋಪಸಂಹಾರಗಳನ್ನೂ, ಮಧ್ಯದ ವಾಕ್ಯಗಳನ್ನೂ ಪರಾಮರ್ಶಿಸಿದರೆ 'ಮಾಮುಪಾಸೀತ' ಎಂಬ ಶ್ರುತಿಯು ಪರಶಿವನಲ್ಲಿಯೇ ಅನ್ವಯಿಸುವುದೆಂದು ನಿರ್ಣಯವಾಗುತ್ತದೆ. ಬೇರೆಯವರಿಗೆ ಮುಕ್ತಿ ಪ್ರದಾಯಕತ್ವವು ಅನ್ವಯಿಸದಿರುವುದರಿಂದಲೂ, ಇದು ಪರಶಿವನ ಉಪಾಸನಪ್ರಕರಣ ವಾದ್ದರಿಂದಲೂ ಈ ಮಂತ್ರಕ್ಕೆ ಬೇರೆ ಯಾವ ಅರ್ಥವೂ ಹೊಂದುವುದಿಲ್ಲ. ಆದ್ದರಿಂದ ಇಲ್ಲಿ ಪ್ರಾಣ ಶಬ್ದವು ಪರಶಿವಬ್ರಹ್ಮವನ್ನೇ ತಿಳಿಸುವುದೆಂದು ಸಿದ್ಧವಾಯಿತು.

**ಇಲ್ಲಿಗೆ ಶ್ರೀಪತಿಪಂಡಿತರ ಶ್ರೀಕರಭಾಷ್ಯದ ಸಮನ್ವಯವೆಂಬ ಪ್ರಥಮಾಧ್ಯಾಯದ ಪ್ರಥಮಪಾದ ಮುಗಿಯಿತು.**



# ಸಮನ್ವಯಾಧ್ಯಾಯಸ್ಯ ದ್ವಿತೀಯಃ ಪಾದಃ

## ಸರ್ವತ್ರಪ್ರಸಿದ್ಧ್ಯಧಿಕರಣಂ ॥ ೧ ॥

ಪ್ರಥಮೇ ಪಾದೇ ಪರಶಿವಬ್ರಹ್ಮಣೋ ಜಗದುಭಯಕಾರಣತ್ವ ಸರ್ವವೇದಾಂತಪ್ರತಿಪಾದ್ಯತ್ವಸರ್ವಜ್ಞತ್ವಸರ್ವಶಕ್ತಿತ್ವನಿತ್ಯತೃಪ್ತತ್ವನಿರತಿಶಯಾನಂದತ್ವಾದಿಧರ್ಮಾನ್ ಪ್ರತಿಪಾದ್ಯ, ಕೇಷಾಂಚಿದರ್ಥಾಂತರಾವಬೋಧಕಶಬ್ದಾನಾಂ ಪರಮಶಿವಪರತ್ವಂ ಚ ಪ್ರಸಾಧ್ಯ' ಪುನಃ ಕೇಷಾಂಚಿದಸ್ಪಷ್ಟಲಿಂಗಾನಾಂ ಪದಾನಾಂ ಬ್ರಹ್ಮಪ್ರತಿಪಾದಕತ್ವಂ? ಅರ್ಥಾಂತರಬೋಧಕತ್ವಂ ವೇತಿ ಸಂದೇಹೇ ತನ್ಮ್ಮಖ್ಯಾರ್ಥಾವಬೋಧಾರ್ಥಂದ್ವಿತೀಯಃ ಪಾದೋ ಹ್ಯಾರಭ್ಯತೇ—ಸರ್ವತ್ರ ಪ್ರಸಿದ್ಧೋಪದೇಶಾತ್ ॥ ೧ ॥

ಯಜುರಾರಣ್ಯಕನಾರಾಯಣಾನುವಾಕೇ—'ದಹರಂ ವಿಪಾಪ್ಮಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಗ್‌ಗಸ್ಥಂ । ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಂ ॥" ಇತಿ ಜ್ಯೋತಿರ್ಲಿಂಗಾನುಸಂಧಾನವಿಧಿಂ ನಿರ್ದಿಶ್ಯ ತದ್ವಸ್ತುಸ್ವರೂಪಂ "ಯೋ ವೇದಾದೌ ಸ್ವರಃ-ಯಃ ಪರಸ್ಸ ಮಹೇಶ್ವರಃ" ಇತ್ಯಾದಿನಾ ಸ್ಪಷ್ಟಮುಕ್ತ್ವಾ 'ನಿಧನಪತಯೇ ನಮಃ' ಇತ್ಯಾದಿನಾ ಲಿಂಗಸ್ಯ ಪರಬ್ರಹ್ಮಣಸ್ಸರ್ವಾತ್ಮಕತ್ವಮುಪದಿಶ್ಯ "ಏತತ್ಸೋಮಸ್ಯ-ಪವಿತ್ರಂ" ಇತಿ ಶ್ರೂಯತೇಽಸ್ಯ ವಿಷಯಃ. ನನು ಪ್ರಥಮಾಧಿಕರಣೇ ಪ್ರಾಣಾಧಿಕರಣೇಚ ಬಾಹ್ಯಲಿಂಗೋಪಾಸನಸ್ಯ ಪ್ರಸಾಧಿತತ್ವಾತ್ ಪುನಃ ಕಿಮರ್ಥಮಿದಂ? ಇತಿ ಚೇನ್ನ, ಪ್ರಥಮಾಧಿಕರಣೇ ಅಧಿಕಾರಿನಿರೂಪಣಪ್ರಸ್ತಾವದ್ವಾರಾ ಕಿಂಚಿನ್ನಿರೂಪಿತಂ. ಪ್ರಾಣಾಧಿಕರಣೇ ತ್ರಿವಿಧಲಿಂಗೋಪಾಸನಾವಿಧಿರೇವ ಸಾಧಿತಃ. ಅತ್ರ ಪುನರಪಿ ಸ್ಪಷ್ಟಾರ್ಥಂ ಈಕ್ಷತ್ಯಧಿಕರಣೇ ಪ್ರಧಾನಜಗತ್ಕಾರಣತ್ವಸ್ಯ ನಿರಸ್ತತ್ವೇಽಪಿ 'ಚಮಸವದವಿಶೇಷಾತ್' ಇತ್ಯಾದಿನಾ ಪುನರ್ನಿರಾಕರಣವತ್ ಬಾಹ್ಯಲಿಂಗಧಾರಣಂ ಸಾಧಯಿಷ್ಯಾಮಃ. "ಏತತ್ಸೋಮಸ್ಯ ಸೂರ್ಯಸ್ಯ' ಇತ್ಯತ್ರ ಸೋಮಸೂರ್ಯಶಬ್ದಯೋಶ್ಚಂದ್ರಪ್ರಭಾಕರವಾಚಕತ್ವಾತ್ಪೂರ್ವಾನುವಾಕೇ ಪ್ರಭಾಕರಪ್ರಶಂಸಾದರ್ಶನಾತ್ ಉತ್ತರತ್ರ ಪರಶಿವೈಕಪ್ರತಿಪಾದಕಪಂಚಬ್ರಹ್ಮಪುರುಷಪ್ರಶಂಸಾದ್ಯೋತನಾದತ್ರೋಪಾಸ್ಯಃ ಪ್ರಭಾಕರಃ ಪರಶಿವೋ ವೇತಿ ಸಂಶಯಃ. ಪೂರ್ವಪಕ್ಷಸ್ತು "ಶ್ರುತಿಪಥಗಳಿತಾನಾಂ ತಂತ್ರಮಾರ್ಗೇ ಪ್ರವೇಶಃ" ಇತಿ ಸೂತಸಂಹಿತಾಯಾಂ ತಾಂತ್ರಿಕವೈದಿಕವಿಭಾಗೇ ವೇದಮೂಲಕತ್ವಾಭಾವೇನ ಪಾಂಚರಾತ್ರಾದಿನತ್ಪಾಶುಪತಾದ್ಯಾಗಮಾನಾಂ ನಿರಸ್ತತ್ವಾದ್ಧರ್ಮಸ್ಯ ಚೋದನಾತ್ಮಕಪ್ರಮಾಣಶಬ್ದೈಕಮೂಲಕತ್ವಾತ್ ತತ್ರಾಪ್ಯಾ

ಣ್ಯಸ್ವೀಕಾರೇ "ದೇವ ಪವಿತ್ರಂ ವಾ ಏತತ್ತಂ ಯೋಽನೂತ್ಸೃಜತ್ಯ ಭಾಗೋ ವಾಚಿ ಭವತ್ಯಭಾಗೋ ನಾಕೇ", "ನಹಿ ಪ್ರವೇದ ಸುಕೃತಸ್ಯ ಪಂಥಾನಂ" ಇತ್ಯಾದಿಶ್ರುತಿವಿರೋಧಾತ್, "ಶಾಸ್ತ್ರಯೋನಿತ್ವಾತ್" "ನಾವೇದವಿನ್ಮನುತೇ ತಂ ಬೃಹಾಂತಂ", ನೈಷಾ ತರ್ಕೇಣ ಮತಿರಾಪನೇಯಾ" ಇತ್ಯಾದಿಶ್ರುತಿಸೂತ್ರಾಭ್ಯಾಂ ಬ್ರಹ್ಮಣೋ ವೇದಾಂತಪ್ರತಿಪಾದ್ಯತ್ವವ್ಯವಸ್ಥಾಪನಾಚ್ಚ. ಅತಸ್ತಂತ್ರಾಗಮಾನಾಂ ಧರ್ಮಬ್ರಹ್ಮವ್ಯವಸ್ಥಾಪನೇನೈವ ಕಿಂಚಿತ್ಪ್ರಾಮಾಣ್ಯಂ. ತಸ್ಮಾತ್ 'ಸರ್ವಲಿಂಗಂ ಸ್ಥಾಪಯತಿ, ಇತ್ಯತ್ರ ನ ಸ್ವೇಷ್ಟಲಿಂಗಧಾರಣಮುಪಪದ್ಯತೇ. ಕಿಂತು ಪೂರ್ವಪ್ರಕರಣವಶಾದತ್ರ "ಪ್ರಾತಃಕಾಲೇ ಸ್ವಯಂ ಬ್ರಹ್ಮಾ ಮಧ್ಯಾಹ್ನೇ ತು ಮಹೇಶ್ವರಃ। ಸಾಯಂಕಾಲೇ ತ್ವಯಂ ವಿಷ್ಣುಸ್ತ್ರಯೀಮೂರ್ತಿರ್ದಿವಾಕರಃ" ಇತಿ ಸ್ಮೃತೌ ಪ್ರಭಾಕರಸ್ಯ ಮೂರ್ತಿತ್ರಯಾತ್ಮಕತ್ವವ್ಯವಸ್ಥಾಪನಾತ್ 'ಏತತ್ಸೋಮಸ್ಯ ಸೂರ್ಯಸ್ಯ' ಇತ್ಯತ್ರ ಸೋಮಸ್ಯ ಶಿವಾತ್ಮಕಸ್ಯ ಸೂರ್ಯಸ್ಯ ಪ್ರಭಾಕರಸ್ಯ ಸರ್ವಪ್ರಪಂಚೇ ಲಿಂಗಂ ತಲ್ಲಾಂಛನಂ ಪಾಣಿನಾಭಿಮಂತ್ರಿತಂ ಪಾಣಿಮಂತ್ರಂ ಸ್ಥಾಪಯತಿ ಇತ್ಯರ್ಥಲಾಭಾತ್ ಸರ್ವೇಷಾಂ ವೈದಿಕಾನಾಂ ಪ್ರಭಾಕರೋಪಾಸನಸ್ಯೈವ ಮುಖ್ಯತ್ವಾತ್, ಪೂರ್ವಾನುವಾಕಗತಾನಾಂ 'ಸಹಸ್ರಶೀರ್ಷಂ' ಇತ್ಯಾದಿನಾಂ ನಾರಾಯಣಪ್ರತಿಪಾದಕವಾಕ್ಯಾನಾಂ, ಉತ್ತರಮಂತ್ರಾನುವಾಕಗತನಾಂ ಸದ್ಯೋಜಾತಾದಿವಾಕ್ಯಾನಾಂ ಚ ಪ್ರಭಾಕರಪರತ್ವಮೇವ ವ್ಯಪದಿಶ್ಯತೇ. ತಸ್ಮಾತ್ತತ್ಪರತ್ವಮೇವ ಯುಕ್ತಂ. ಕಿಂಚ 'ನಿಧನಪತಯೇ ನಮಃ' ಇತ್ಯಾದಿನಾ ಶಿವಸ್ಯ ಲಿಂಗಾತ್ಮಕಸ್ಯ ಸರ್ವಾತ್ಮಕತ್ವೋಪದೇಶೇನ, 'ಏತತ್ಸೋಮಸ್ಯ ಸೂರ್ಯಸ್ಯ' ಇತ್ಯತ್ರ ಏತಚ್ಛಬ್ದೇನ ಪ್ರಕೃತಸೋಮಸೂರ್ಯನಮಸ್ಕಾರಪರಾಮರ್ಶಕಶಬ್ದಾಯೋಗಾತ್, 'ನಮಸ್ಸ್ವಸ್ತಿಸ್ವಾಹಾಸ್ವಧಾಲಂವಷಡ್ಯೋಗಾಚ್ಚ' ಇತಿ ಚತುರ್ಥ್ಯಂತತ್ವಾಭಾವೇನ ಷಷ್ಠ್ಯಂತಪದನಿರ್ದೇಶಾತ್, 'ಸರ್ವಲಿಂಗಂ ಸ್ಥಾಪಯತಿ' ಇತಿ ಶಬ್ದಸ್ವಾರಸ್ಯೇನ ಭೂನಿಕ್ಷೇಪಣಲಿಂಗಪರತ್ವವೇವಾತ್ರ ವಿವಕ್ಷಿತಂ. 'ಪಾಣಿಮಂತ್ರಂ' ಇತ್ಯತ್ರ ಪಾಣಿನಾಭಿಮಂತ್ರಿತಂ ಪಾಣಿಮಂತ್ರಂ ಇತ್ಯರ್ಥಸಮನ್ವಯಾತ್ ಬಾಹ್ಯಲಿಂಗಧಾರಣಂ ಸರ್ವಥಾ ನ ಘಟತೇ.

## ದ್ವಿತೀಯ ಪಾದ

### ಸರ್ವತ್ರ ಪ್ರಸಿದ್ಧ್ಯಧಿಕರಣ ॥ ೧ ॥

ಪರಶಿವಬ್ರಹ್ಮವು ಜಗದುಭಯಕಾರಣ, ಸರ್ವವೇದಾಂತಪ್ರತಿಪಾದ್ಯ, ಸರ್ವಜ್ಞ, ಸರ್ವಶಕ್ತ, ಸರ್ವವ್ಯಾಪಕ, ನಿರತಿಶಯಾನಂದ ಎಂದು ಪ್ರಥಮಪಾದದಲ್ಲಿ ತಿಳಿಸಿ,

ಬೇರೆ ಅರ್ಥದಲ್ಲಿ ಅನ್ವಯಿಸಬಹುದಾದ ಇತರ ಕೆಲವು ಪದಗಳಿಗೂ ಪರಶಿವಪರ ವಾಗಿಯೇ ಅನ್ವಯವನ್ನು ತಿಳಿಸಿಲಾಗಿದೆ. ಸ್ಪಷ್ಟವಾದ ಹೇತುವಿಲ್ಲದ ಇನ್ನೂ ಕೆಲವು ಪದಗಳು ಪರಶಿವನಿಗೆ ಅನ್ವಯಿಸುತ್ತವೆಯೇ ಇಲ್ಲವೇ? ಎಂಬ ಸಂದೇಹವುಂಟಾ ದ್ದರಿಂದ ಅಂತಹ ಪದಗಳ ಮುಖ್ಯಾರ್ಥವನ್ನು ತಿಳಿಸಲಿಕ್ಕಾಗಿ ದ್ವಿತೀಯಪಾದವನ್ನು ಆರಂಭಿಸಲಾಗಿದೆ— **ಸರ್ವತ್ರ ಪ್ರಸಿದ್ಧೋಪದೇಶಾತ್ ॥ ೧ ॥**

ಯಜುರಾರಣ್ಯಕದ ನಾರಾಯಣಾನುವಾಕದಲ್ಲಿ "ದೇಹದಲ್ಲಿ ಪರಶಿವನಿಗೆ ವಾಸ ಸ್ಥಾನವೂ ನಿಷ್ಕಲ್ಮಷವೂ ಆದ ದಹರಕಮಲವಿರುವುದು. ಅದರಲ್ಲಿ ಶುದ್ಧವೂ ಗಗನಾಕಾರವೂ ಆದ ಗುಹೆ ಇರುವುದು. ಅದರೊಳಗಿರುವ ಜ್ಯೋತಿ ಉಪಾಸನೆಗೆ ಯೋಗ್ಯವಾದುದು" ಎಂದು ಹೃದಯಕಮಲವನ್ನು ತೋರಿಸಿ ಅದರಲ್ಲಿ ಉಪಾಸನ ಮಾಡಬೇಕೆಂದು ಜ್ಯೋತಿರ್ಲಿಂಗದ ಅನುಸಂಧಾನವನ್ನು ವಿಧಿಸಲಾಗಿದೆ. ಅದರ ಸ್ವರೂಪವನ್ನು ಅಲ್ಲಿಯೇ "ವೇದಗಳು ಹೊರಹೊಮ್ಮುವ ಮೊದಲು ಇದ್ದು, ವೇದಾಂ ತಗಳಲ್ಲಿ ಪ್ರತಿಪಾದ್ಯವಾಗಿ, ಮೂಲಚಿಚ್ಛಕ್ತಿಯಲ್ಲಿ ಲಯವಾಗುವಂತಹ ಪ್ರಣವಕ್ಕೆ ಆಚಿನವನಾದ ಮಹೇಶ್ವರನೇ ದಹರಾಕಾಶದಲ್ಲಿರುವವನು" ಎಂದು ಸ್ಪಷ್ಟವಾಗಿ ತಿಳಿಸ ಲಾಗಿದೆ. ಮುಂದೆ 'ನಿಧನಪತಯೇ ನಮಃ' ಎಂದು ಮುಂತಾಗಿ ಪರಶಿವಲಿಂಗ ವನ್ನು ವಿಶ್ವವ್ಯಾಪಕವೆಂದು ಉಪದೇಶಿಸಿ 'ಅಂತಹ ಪವಿತ್ರಲಿಂಗವನ್ನು ಅರ್ಚನೆಗಾಗಿ ಭಕ್ತನ ಕೈನಲ್ಲಿ ಗುರು ಅನುಗ್ರಹಿಸುವನು' ಎಂಬ ಆ ಶ್ರುತಿಯೇ ಈ ಸೂತ್ರದ ವಿಷಯ ವಾಗಿದೆ. ಪ್ರಥಮಾಧಿಕರಣದಲ್ಲೂ ಪ್ರಾಣಾಧಿಕರಣದಲ್ಲೂ ಬಾಹ್ಯಲಿಂಗದ ಉಪಾಸನ ವನ್ನು ಹೇಳಿರುವುದರಿಂದ ಇಲ್ಲಿ ಮತ್ತೆ ಏಕೆ ಹೇಳಬೇಕು? ಎಂಬ ಪ್ರಶ್ನೆ ಬರುತ್ತದೆ. ಪ್ರಥಮಾಧಿಕರಣದಲ್ಲಿ ಬ್ರಹ್ಮಜಿಜ್ಞಾಸೆಗೆ ಅಧಿಕಾರಿಯನ್ನು ತಿಳಿಸುವ ಸಂದರ್ಭವಿದ್ದು ದರಿಂದ ಅಲ್ಲಿ ಈ ವಿಷಯವನ್ನು ಕೊಂಚ ನಿರೂಪಿಸಿ ಪ್ರಾಣಾಧಿಕರಣದಲ್ಲಿ ತ್ರಿವಿಧ ಲಿಂಗೋಪಾಸನವನ್ನು ಮಾತ್ರವೇ ವಿಧಿಸಲಾಗಿದೆ. ಈಕ್ಷತ್ಯಧಿಕರಣದಲ್ಲಿ ಪ್ರಧಾನವು ಜಗತ್ಕಾರಣವೆಂಬುದನ್ನು ನಿರಾಕರಿಸಿದ್ದರೂ ಮತ್ತೆ ಚಮಸಾಧಿಕರಣದಲ್ಲಿ ಅದನ್ನು ವಿಶೇಷವಾಗಿ ನಿರಾಕರಿಸಿರುವಂತೆ ಲಿಂಗಧಾರಣವನ್ನು ಸ್ಪಷ್ಟಪಡಿಸಲಿಕ್ಕಾಗಿ ಮತ್ತೆ ಇಲ್ಲಿ ನಿರೂಪಿಸಲಾಗಿದೆ. 'ಏತತ್ಸೋಮಸ್ಯ ಸೂರ್ಯಸ್ಯ' ಎಂಬಲ್ಲಿ ಸೋಮಸೂರ್ಯ ಶಬ್ದಗಳು ಚಂದ್ರಸೂರ್ಯರನ್ನು ತಿಳಿಸುವುದರಿಂದಲೂ, ಹಿಂದಿನ ಅನುವಾಕದಲ್ಲಿ ಸೂರ್ಯನ ಪ್ರಶಂಸೆಯೂ, ಮುಂದೆ ಪರಶಿವನ ಪ್ರಶಂಸೆಯೂ ಬಂದಿರುವುದರಿಂದಲೂ ಇಲ್ಲಿ ಉಪಾಸ್ಯನಾದವನು ಸೂರ್ಯನೇ ಅಥವಾ ಪರಶಿವನೇ ಎಂಬ ಸಂಶಯ ಬರುತ್ತದೆ. ಇಲ್ಲಿ ಪೂರ್ವಪಕ್ಷ ಹೀಗೆ ಬರುತ್ತದೆ. 'ವೈದಿಕಮಾರ್ಗದಿಂದ ಪತಿತ ನಾದವನು ತಾಂತ್ರಿಕಮಾರ್ಗದಲ್ಲಿ ಪ್ರವೇಶಿಸಬೇಕು' ಎಂದು ಸೂತಸಂಹಿತೆಯಲ್ಲಿ ತಾಂತ್ರಿಕವೈದಿಕವಿಭಾಗವು ವೇದಮೂಲಕವಲ್ಲದ್ದರಿಂದ ಪಾಶುಪಾತಾಗಮಗಳನ್ನು ಪಾಂಚರಾತ್ರಾಗಮಗಳಂತೆ ನಿಷೇಧಿಸಲಾಗಿದೆ. ಧರ್ಮಕ್ಕೆ ವಿಧಿಯೇ ಪ್ರಮಾಣ ವೆಂಬುದು ಶ್ರುತಿಮೂಲವಾದ್ದರಿಂದ ಅದನ್ನು ಪ್ರಮಾಣವೆಂದು ಒಪ್ಪಿದರೆ "ಯಾವನು

ಪವಿತ್ರವಾದ ಲಿಂಗವನ್ನು ಸ್ವೀಕರಿಸುವುದಿಲ್ಲವೋ ಅವನಿಗೆ ಐಹಿಕಜೀವನದಲ್ಲೂ ಸುಖವಿಲ್ಲ; ಆಮುಷ್ಮಿಕ ಸುಖದಲ್ಲೂ ಭಾಗವಿಲ್ಲ" 'ಅವನು ಸುಕೃತವನ್ನೂ ಅರಿಯನು' ಈ ಬಗೆಯ ಶ್ರುತಿಗಳು ವಿರುದ್ಧವಾಗುತ್ತವೆ. ಇದೂ ಅಲ್ಲದೆ, ಅವನು 'ಶಾಸ್ತ್ರಯೋನಿ' ಎಂದು ತಿಳಿಸುವ ಸೂತ್ರದಲ್ಲೂ 'ವೇದವನ್ನರಿಯದವನು ಬ್ರಹ್ಮವನ್ನರಿಯನು' ಈ ಬಗೆಯ ಶ್ರುತಿಗಳಲ್ಲೂ ಬ್ರಹ್ಮವು ವೇದಾಂತಪ್ರತಿಪಾದ್ಯವೆಂದು ವ್ಯವಸ್ಥೆ ಮಾಡಲಾಗಿದೆ. ಆದ್ದರಿಂದ ತಾಂತ್ರಿಕಾಗಮಗಳಿಗೆ ಧರ್ಮಬ್ರಹ್ಮಗಳನ್ನು ವ್ಯವಸ್ಥೆಗೊಳಿಸಲು ಯಾವ ಪ್ರಮಾಣವೂ ಇಲ್ಲವೆಂದು ತಿಳಿದುಬರುತ್ತದೆ. ಇದರಿಂದ 'ಸರ್ವಲಿಂಗಂ ಸ್ಥಾಪಯತಿ' ಎಂಬಲ್ಲಿ ಇಷ್ಟಲಿಂಗದ ಧಾರಣವು ಯುಕ್ತವೆನಿಸುವುದಿಲ್ಲ. ಆದರೆ ಹಿಂದಿನ ಪ್ರಕರಣದಿಂದ 'ಬೆಳಗ್ಗೆ ಬ್ರಹ್ಮವೆನಿಸಿ, ಮಧ್ಯಾಹ್ನದಲ್ಲಿ ಮಹೇಶ್ವರನೆನಿಸಿ, ಸಾಯಂಕಾಲದಲ್ಲಿ ವಿಷ್ಣುವೆನಿಸಿ ಸೂರ್ಯನು ತ್ರಿಮೂರ್ತ್ಯಾತ್ಮಕನಾಗಿದ್ದಾನೆ' ಎಂಬ ಸ್ಮೃತಿಯಲ್ಲಿ ಸೂರ್ಯನೇ ತ್ರಿಮೂರ್ತ್ಯತೀತನೆಂದು ವ್ಯವಸ್ಥೆಯಾಗಿರುವುದರಿಂದ 'ಸೋಮಸ್ಯ ಸೂರ್ಯಸ್ಯ' ಎಂಬಲ್ಲಿ ಶಿವಾತ್ಮಕನಾದ ಸೂರ್ಯನ, ಸರ್ವಲಿಂಗಂ–ವಿಶ್ವದಲ್ಲಿ ಎಲ್ಲೆಲ್ಲೂ ಅವನ ಗುರುತಾಗಿರುವ ಪ್ರಕಾಶವನ್ನು, ಪಾಣಿಮಂತ್ರಂ–ಕೈನಿಂದ ಅಬಿಮಂತ್ರಿಸುವುದರಿಂದ, ಪವಿತ್ರಂ–ಪವಿತ್ರವನ್ನಾಗಿ ಮಾಡಿ, ಸ್ಥಾಪಯತಿ–ಅರ್ಚಿಸುತ್ತಾನೆ ಎಂಬ ಅರ್ಥ ತೋರುತ್ತದೆ. ಹೀಗೆ ಎಲ್ಲಾ ವೈದಿಕವಾಕ್ಯಗಳೂ ಸೂರ್ಯನ ಉಪಾಸನದಲ್ಲಿಯೇ ಕೊನೆಯಾಗುತ್ತವೆ. ಹಿಂದಿನ ಅನುವಾಕದಲ್ಲಿ 'ಸಹಸ್ರಶೀರ್ಷಂ' ಎಂಬ ನಾರಾಯಣ ಪ್ರತಿಪಾದಕವಾಕ್ಯಗಳಿಗೂ ಉತ್ತರಾನುವಾಕದಲ್ಲಿ ಬರುವ ಸದ್ಯೋಜಾತಾದಿವಾಕ್ಯಗಳಿಗೂ ಸೂರ್ಯನ ಪರವಾಗಿಯೇ ಅರ್ಥಮಾಡಬೇಕು. ಆದ್ದರಿಂದ ದಹರೋಪಾಸನವು ಸೂರ್ಯೋಪಾಸನವೇ ಆಗಿದೆ. ಇದೂ ಅಲ್ಲದೆ, 'ನಿಧನಪತಯೇ ನಮಃ' ಎಂಬ ಮಂತ್ರದಲ್ಲಿ ಲಿಂಗರೂಪನಾದ ಶಿವನನ್ನು ಸರ್ವಾತ್ಮಕನೆಂದು ತಿಳಿಸಿ 'ಏತತ್ಸೋಮಸ್ಯ' ಎಂಬಲ್ಲಿ ಸೋಮಸೂರ್ಯರ ನಮಸ್ಕಾರವನ್ನು ತಿಳಿಸುವ ಶಬ್ದಗಳಿಲ್ಲದಿರುವುದರಿಂದ 'ನಮಃ, ಸ್ವಸ್ತಿ, ಸ್ವಾಹಾ, ಸ್ವಧಾ, ಅಲಂ, ವಷಟ್ ಇವುಗಳಲ್ಲೊಂದು ಪದದ ಸಂಬಂಧದಿಂದ ಚತುರ್ಥಿ ಬರಬೇಕಾದರೂ ಇಲ್ಲಿ ಷಷ್ಠೀವಿಭಕ್ತಿಯೇ ಬಂದಿರುವುದರಿಂದಲೂ, 'ಸರ್ವಲಿಂಗಂ ಸ್ಥಾಪಯತಿ' ಎಂಬ ಶಬ್ದಸ್ವಾರಸ್ಯದಿಂದಲೂ ಇಲ್ಲಿ ಭೂನಿಕ್ಷೇಪಣವೇ ವಿವಕ್ಷಿತವಾಗಿದೆ. 'ಪಾಣಿಮಂತ್ರಂ ಪವಿತ್ರಂ' ಎಂಬಲ್ಲಿ ಪಾಣಿಯಿಂದ ಅಭಿಮಂತ್ರಿತವಾಗಿ ಪವಿತ್ರವಾದದ್ದು ಎಂಬ ಅರ್ಥದ ಸಮನ್ವಯದಿಂದ ಬಾಹ್ಯಲಿಂಗಧಾರಣವು ಎಂದಿಗೂ ಸಂಘಟಿಸುವುದಿಲ್ಲ. ಸರ್ವಲಿಂಗವಾಕ್ಯದ ಬಗ್ಗೆ ಹೀಗೆ ಪೂರ್ವಪಕ್ಷ ಬರುತ್ತದೆ.

**ಇತಿಚೇನ್ನ, ಕುತಃ ಸರ್ವತ್ರ ಪ್ರಸಿದ್ಧೋಪದೇಶಾತ' ಸರ್ವತ್ರ ವೇದವೇದಾಂತಾಗಮಸ್ಮೃತಿಪುರಾಣೇತಿಹಾಸಾದಿಷು ಯತ್ಪ್ರಸಿದ್ಧಂ ಷಟ್ಸ್ಥಲಪರಶಿವಾತ್ಮಕಂ ಬ್ರಹ್ಮ ತಸ್ಮೈವಾತ್ರ 'ದಹರಂ ವಿಪಾಪ್ಮಂ' ಇತ್ಯಾರಭ್ಯ 'ಸರ್ವಲಿಂಗಂ ಸ್ಥಾಪಯತಿ' ಇತ್ಯಂತೇನ ಬಾಹ್ಯಾಭ್ಯಂತರ**

ಧಾರಣೋಪಾಸ್ಯತ್ವೇನ ಉಪದೇಶಾತ್ ವ್ಯಪಸ್ಥಾಪನಾದಿತ್ಯರ್ಥಃ. ವಿಭೂತಿರುದ್ರಾಕ್ಷಶಿವಲಿಂಗಧಾರಣವಿಧಾಯಕಂ ಶೈವಮತಂ ತಂತ್ರಾಗಮಮೂಲಕತ್ವೇನ ನ ವೈದಿಕಪರಿಗ್ರಾಹ್ಯಮಿತಿ ಯತ್ ತದವಿಚಾರಿತರಮಣೀಯಂ. ಕುತಃ? ವೇದವೇದಾಂತಸ್ಮೃತಿಪುರಾಣೇತಿಹಾಸಪ್ರಸಿದ್ಧತ್ವಾತ್. ಕರ್ತೃಕತ್ವೇನ ವೇದಮೂಲಕತ್ವೇನ ವಾ ಕಾಮಿಕಾದಿಶಿವಾಗಮಾನಾಂ ವೇದವತ್ಪ್ರಾಮಾಣ್ಯಾಚ್ಚ, ತದುಭಯಪ್ರತಿಪಾದ್ಯತ್ವೇನ ಶೈವಮತಂ ವೈದಿಕಮೇವ. ತದುಕ್ತಂ ಸಿದ್ಧಾಂತಾಗಮೇ—"ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ। ಏತಾನಿ ಮಾನಭೂತಾನಿ ನೋಪಹನ್ಯಾನಿ ಯುಕ್ತಿಭಿಃ। ವೇದಃ ಪ್ರಧಾನಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮುನೇ। ವೇದಾನುಸರಣಾದೇಷಾಂ ಪ್ರಾಮಾಣ್ಯಮಿತಿ ನಿಶ್ಚಿತಂ॥ ಪಾಂಚರಾತ್ರಸ್ಯ ಸಾಂಖ್ಯಸ್ಯ ಯೋಗಸ್ಯ ಚ ಮಹಾಮುನೇ। ವೇದೈಕದೇಶವರ್ತಿತ್ವಂ ಶೈವಂ ವೇದಮಯಂ ಮತಂ॥ ವೇದೈಕದೇಶವರ್ತಿಭ್ಯಃ ಸಾಂಖ್ಯಾದಿಭ್ಯೋ ಮಹಾಮನೇ। ಸರ್ವವೇದಾನುಸಾರಿತ್ವಾತ್ಪ್ರಮಾಣಂ ವೇದವತ್ಸದಾ।" ಇತಿ. ಕಿಂಚ ಸೂತಸಂಹಿತಾಯಾಂ "ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ। ಕಾಮಿಕಾದಿಪ್ರಭೇದಾನಾಂ ಯಥಾ ದೇವೋ ಮಹೇಶ್ವರಃ" ಇತ್ಯಾದಿನಾ ಕಾಮಿಕಾದಿಶಿವಾಗಮಾನಾಮಿವ ವ್ಯಾಸೋಕ್ತಪುರಾಣಾನಾಂ ಪ್ರಾಮಾಣ್ಯಂ ಮಹರ್ಷಿಣಾ ಸೂತೇನ ಸಾಧಿತಂ. ತಸ್ಮಾತ್ತತ್ರೈವ, "ದ್ವಿಪದಾರ್ಥಂ ಚತುಷ್ಪಾದಂ ಮಹಾತಂತ್ರಂ ಜಗತ್ಪತಿಃ। ಪ್ರೋಕ್ತವಾನ್ ಹಿಮವತ್ಪುತ್ರ್ಯೈ ಧರ್ಮಮೋಕ್ಷೈಕಸಾಧನಂ" ಇತಿ ಶಿವಾಗಮಾನಾಂ ಧರ್ಮಬ್ರಹ್ಮಸಾಧನತ್ವಂ ನಿರ್ದಿಷ್ಟಂ. ಅಪಿಚ ವೇದವೇದಾಂತವತ್ಕೇಚನ ಶೈವಾಗಮಾಃ ಪತಿಪಾಶಪಶುರೂಪತತ್ತ್ವತ್ರಯಪ್ರತಿಪಾದಕಾಃ. ಕೇಚನ ಪಂಚಬ್ರಹ್ಮಪ್ರತಿಪಾದನಪರಾಃ. ಕೇಚನ ಜ್ಯೋತಿಷ್ಟೋಮಾದ್ಯಂಗಕುಂಡಮಂಟಪವಿಧಾಯಕಾಃ. ಕೇಚನ ಶಿವಪೂಜಾಪ್ರತಿಪಾದಕಾಃ. ಕೇಚನ ಭಸ್ಮರುದ್ರಾಕ್ಷಶಿವಲಿಂಗಧಾರಣಪ್ರತಿಪಾದಕಾಃ. ಕೇಚನಾಲಯೋತ್ಸವಪ್ರತಿಷ್ಠಾಪ್ರತಿಪಾದಕಾಃ. ತಥಾಹಿ, 'ಏತಾವಂತೋ ವೈ ಪಶವ ಉತ ದ್ವಿಪಾದಶ್ಚತುಷ್ಪಾದಃ', 'ಯೋಷಾಮೀಶೇ ಪಶುಪತಿಃ ಪಶೂನಾಂ', 'ರುದ್ರಃ ಪಶೂನಾಮಧಿಪತಿಃ', 'ಜ್ಞಾತ್ವಾ ದೇವಂ ಸರ್ವಪಾಶಾಪಹಾನಿಃ', 'ಧ್ಯಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ' ಇತ್ಯಾದಿವಾಕ್ಯಾನಾಂಪ್ರಾತ್ಯಕ್ಷಿಕವೇದವೇದಾಂತೇಷು ದರ್ಶನಾತ್ಪತಿಪಾಶಪಶುಪದಾರ್ಥತ್ರಯಪ್ರತಿಪಾದಕಶೈವಾಗಮಾನಾಂ ವೈದಿಕತ್ವಘಂಟಾಘೋಷಃ. ಚಿದಚಿದೀಶ್ವರಪದಾರ್ಥತ್ರಯಪರಿಭಾಷಾಶ್ರಯಪಾಂಚರಾತ್ರ

ಗಮಸ್ಯ ವೈದಿಕಪರಿಭಾಷಾಮೂಲಕತ್ವಾಭಾವಾದವೈದಿಕತ್ವಂ. ಕಿಂಚ ಸರ್ವೋಪನಿಷತ್ಸಿದ್ಧಜೀವಬ್ರಹ್ಮೈಕ್ಯವ್ಯವಸ್ಥಾಪಕತ್ವೇನ, ಷಡಕ್ಷರತ್ರ್ಯಂಬಕಗಾಯತ್ರ್ಯಾದಿಸರ್ವಮಂತ್ರಾಣಾಂ ಕರಾಂಗನ್ಯಾಸಧ್ಯಾನವಿಧಾಯಕತ್ವೇನ, ಗೌತಮಭರದ್ವಾಜಶೌನಕಾದ್ಯಾಚಾರವಿಷಯಸ್ಥಾವರಲಿಂಗಾನಾಂ ಕರ್ಷಣಾದಿಪ್ರತಿಷ್ಠಾಂತೋತ್ಸವಾದಿವಿಧಾಯಕತ್ವೇನ, 'ಭೂತ್ಯೈ ನ ಪ್ರಮದಿತವ್ಯಂ', 'ಅಗ್ನಿರಿತಿ ಭಸ್ಮ' ಇತ್ಯಾದಿಯಜುರಾಥರ್ವಣಬೃಹಜ್ಜಾಬಾಲಾದಿಪ್ರತಿಪಾದಿತಭೂತಿರುದ್ರಾಕ್ಷವಿಧಾಯಕತ್ವೇನ, ಯಜುರಾರಣ್ಯಕಾಂತರ್ಗತಸದ್ಯೋಜಾತಾದಿಪಂಚಬ್ರಹ್ಮಮಂತ್ರಪ್ರತಿಪಾದಕತ್ವೇನ 'ಯಾ ತೇ ರುದ್ರ ಶಿವಾ ತನೂರಘೋರಾ', 'ಯಶ್ಛಂದಸಾಮೃಷಭೋ', 'ಸೋಮಾರುದ್ರ' ಇತ್ಯಾದಿಶ್ರುತಿಸಿದ್ಧಶಿವಲಿಂಗಧಾರಣವಿಧಾಯಕತ್ವೇನ, 'ಅರ್ಚತ ಪ್ರಾರ್ಚತ', 'ತಮುಷ್ಟುಹಿ' ಇತಿ ಮಂತ್ರಾರ್ಥಾವಬೋಧಕಬೋಧಾಯನಸ್ಮೃತಿಮೂಲಕಶಿವಪೂಜಾವಿಧಾಯಕತ್ವೇನ ಚ ಶ್ರುತ್ಯಾಗಮಾನಾಂ ಸಮಾನಾರ್ಥತ್ವಾತ್ ಸಾಕ್ಷಾದ್ವೈದಿಕತ್ವಮಾಗಮಾನಾಂ ನಿಷ್ಪ್ರತ್ಯೂಹಮೇವ. ತಸ್ಮಾತ್ತತ್ಪ್ರತಿಪಾದಿತಲಿಂಗಧಾರಣಸ್ಯಾಪಿ ತಥಾತ್ವಂ ಸಿದ್ಧಂ. ತಥಾ ಕೂರ್ಮೇ "ನಿರ್ಮಿತಂ ಹಿ ಮಯಾ ಪೂರ್ವಂ ವ್ರತಂ ಪಾಶುಪತಂ ಶುಭಂ । ಗುಹ್ಯಾದ್ಗುಹ್ಯತಮಂ ಸೂಕ್ಷ್ಮಂ ವೇದಸಾರಂ ವಿಮುಕ್ತಯೇ ॥ ಏಷ ಪಾಶುಪತಾಚಾರಃ ಸೇವನೀಯೋ ಮುಮುಕ್ಷುಭಿಃ । ತಾಂತ್ರಿಕಂ ವೈದಿಕಂ ಮಿಶ್ರಂ ತ್ರಿಧಾ ಪಾಶುಪತಂ ಸ್ಮೃತಂ ॥ ತಪ್ತಲಿಂಗಾಂಕಶೂಲಾದಿಧಾರಣಂ ತಾಂತ್ರಿಕಂ ಮತಂ । ಲಿಂಗರುದ್ರಾಕ್ಷಭಸ್ಮಾದಿಧಾರಣಂ ವೈದಿಕಂ ಭವೇತ್ । ರವಿಂ ಶಂಭುಂ ತಥಾ ಶಕ್ತಿಂ ವಿಘ್ನೇಶಂ ಚ ಜನಾರ್ದನಂ । ಯಜಂತಿ ಸಮಭಾವೇನ ಮಿಶ್ರಪಾಶುಪತಂ ಹಿ ತತ್ । ವೇದಮಾರ್ಗೈಕನಿಷ್ಠಾನಾಂ ಮುಮುಕ್ಷೂಣಾಂ ನಿರಂತರಂ । ಶ್ರೌತಂ ಪಾಶುಪತಂ ಗ್ರಾಹ್ಯಂ ನ ಗ್ರಾಹ್ಯೇ ಮಿಶ್ರತಾಂತ್ರಿಕೇ ॥" ಇತಿ. ತಥಾ ಚ ಸ್ಮೃತೌ—"ಯಾನಿ ಶಾಸ್ತ್ರಾಣಿ ದೃಶ್ಯಂತೇ ಯುಗೇಽಸ್ಮಿನ್ವಿವಿಧಾನಿ ತು । ವೇದಮಾರ್ಗವಿರುದ್ಧಾನಿ ತೇಷಾಂ ನಿಷ್ಠಾ ಹಿ ತಾಮಸೀ ॥ ವಿಪ್ರಾಣಾಂ ಶಿವದೈವತ್ವಂ ಶ್ರುತಿಸ್ಮೃತಿಷು ಗೀಯತೇ । ಶಿವೈಕೋಪಾಸನಂ ತಸ್ಮಾತ್ಕರ್ತವ್ಯಂ ಜೀವಿತಾವಧಿ ॥" ಇತಿ ಶ್ರವಣಾನ್ನಾನ್ಯೋಪಾಸನಂ. ವೇದಾಗಮಾನಾಮಂಗಾಂಗಿತ್ವೇನ ನಿಗಮತ್ವಮಾಗಮತ್ವಂ ಚೋಭಯೋಸ್ಸಮಂಜಸಂ.

ಈ ಆಕ್ಷೇಪಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಜೀವನಿಗೆ ತನ್ನ ಪ್ರಾಣದಂತೆ ಮುಖ್ಯವೆನಿಸಿದ ಷಟ್ಸ್ಥಲಾತ್ಮಕ ಪರಶಿವನ ಚಿಲ್ಲಿಂಗವನ್ನು ನಿರಂತರವೂ ದೇಹದಲ್ಲಿ ಧರಿಸಿ ಉಪಾಸನಮಾಡಬೇಕೆಂಬ ಉಪದೇಶವು ವೇದವೇದಾಂತಾಗಮ

ಸ್ಮೃತಿಪುರಾಣೇತಿಹಾಸಗಳಲ್ಲಿ ಎಲ್ಲಾ ಕಡೆಯೂ ಪ್ರಸಿದ್ಧವಾಗಿದೆ. ಹೀಗೆ ಪ್ರಸಿದ್ಧವಾದ ಷಟ್ಸ್ಥಲಾತ್ಮಕ ಪರಶಿವಲಿಂಗವೇ ದೇಹದ ಒಳಗೂ ಹೊರಗೂ ಧರಿಸಿ ಉಪಾಸನಮಾಡಲು ಯೋಗ್ಯವಾದುದೆಂದು 'ದಹರಂ ವಿಪಾಪ್ಮಂ' ಎಂಬ ಮಂತ್ರದಲ್ಲಿ ಉಪದೇಶಿಸಲಾಗಿದೆ. ಈ ಬಗೆಯ ವ್ಯವಸ್ಥೆ ಇರುವುದರಿಂದ ಇಲ್ಲಿ ಭಾವರೂಪವಾದ ಪರಶಿವಬ್ರಹ್ಮವೇ ಒಳಗೆ ಪ್ರಾಣಲಿಂಗವಾಗಿಯೂ, ಹೊರಗೆ ಇಷ್ಟಲಿಂಗವಾಗಿಯೂ ಉಪಾಸ್ಯವೆನಿಸಿದೆ ಎಂಬುದೇ ಈ ಮಂತ್ರದ ಅರ್ಥವಾಗುತ್ತದೆ. ಭೂತಿ, ರುದ್ರಾಕ್ಷ ಶಿವಲಿಂಗಗಳ ಧಾರಣವನ್ನು ವಿಧಿಸುವ ಶೈವಮತವು ತಾಂತ್ರಿಕಾಗಮಮೂಲವಾದ್ದರಿಂದ ವೈದಿಕರಿಗೆ ಗ್ರಾಹ್ಯವಲ್ಲವೆಂಬ ವಾದ ಯುಕ್ತವಲ್ಲ; ಯಾಕೆಂದರೆ ನಿಗಮಾಗಮಗಳಲ್ಲಿ ಪರಶಿವನು ಉಪಾಸನೆಗಾಗಿ ತ್ರಿವಿಧನಾಗಿರುವುದು ಪ್ರಸಿದ್ಧವಾಗಿದೆ. ಇದೂ ಅಲ್ಲದೆ, ಕಾಮಿಕಾದ್ಯಾಗಮಗಳು ವೇದಮೂಲಕವೂ ಶಿವನಿರ್ಮಿತವೂ ಆದ್ದರಿಂದ ವೇದದಂತೆಯೇ ಪ್ರಮಾಣವೆನಿಸಿವೆ. ಹೀಗೆ ವೇದದಲ್ಲೂ ಆಗಮದಲ್ಲೂ ಪ್ರತಿಪಾದ್ಯವಾದ್ದರಿಂದ ಶೈವಮತವು ವೈದಿಕವೇ ಆಗಿದೆ. ಸಿದ್ಧಾಂತಾಗಮದಲ್ಲಿ "ಸಾಂಖ್ಯ, ಯೋಗ, ಪಾಂಚರಾತ್ರ, ವೇದಗಳು, ಪಾಶುಪತ ಇವುಗಳ ಪ್ರಾಮಾಣ್ಯವನ್ನು ಯುಕ್ತಿಯಿಂದ ನಿಷೇಧಿಸಲಾಗುವುದಿಲ್ಲ. ಇವೆಲ್ಲಕ್ಕೂ ವೇದವೇ ಪ್ರಧಾನ. ವೇದವನ್ನು ಅನುಸರಿಸಿರುವುದರಿಂದಲೇ ಇವನ್ನು ಪ್ರಮಾಣವೆಂದು ನಿಶ್ಚಯಿಸಲಾಗಿದೆ. ಪಾಂಚರಾತ್ರ, ಸಾಂಖ್ಯ, ಯೋಗಗಳು ವೇದದ ಒಂದು ಭಾಗವಾದ್ದರಿಂದ ವೈದಿಕವೆನಿಸಿವೆ. ಆದರೆ ವೇದವನ್ನೇ ಪ್ರಧಾನವಾಗಿ ಅವಲಂಬಿಸಿರುವ ಶೈವತಂತ್ರವು ಎಲ್ಲಕ್ಕೂ ಹೆಚ್ಚಿನದೆನಿಸಿದೆ. ಶೈವತಂತ್ರವು ವೇದಗಳೆಲ್ಲಕ್ಕೂ ಅನುಗುಣವಾದ್ದರಿಂದ ವೇದದಂತೆಯೇ ಪ್ರಮಾಣವೆನಿಸಿವೆ" ಎಂದು ಹೇಳಿದೆ. ಸೂತಸಂಹಿತೆಯಲ್ಲಿ 'ಹದಿನೆಂಟು ಪುರಾಣಗಳನ್ನು ಬರೆದವನು ಸತ್ಯವತಿಯ ಮಗ ವ್ಯಾಸನಾದರೆ, ಕಾಮಿಕಾದ್ಯಾಗಮಗಳಿಗೆ ಮಹೇಶ್ವರನೇ ಕರ್ತನು. ಆದ್ದರಿಂದ ಈ ಆಗಮಗಳೂ ಸಹ ವ್ಯಾಸೋಕ್ತಪುರಾಣಗಳಂತೆಯೇ ಪ್ರಮಾಣವಾಗಿವೆ' ಎಂದು ಹೇಳಿದೆ. ಅಲ್ಲಿಯೇ "ಧರ್ಮ ಮೋಕ್ಷಗಳೆಂಬ ಎರಡು ಫಲಗಳನ್ನು ಸಾಧಿಸುವ ಈ ಮಹಾತಂತ್ರವನ್ನು ನಾಲ್ಕು ಪಾದಗಳಲ್ಲಿ ಈಶ್ವರನು ಪಾರ್ವತಿಗೆ ಬೋಧಿಸಿದನು" ಎಂದು ಹೇಳಿರುವುದರಿಂದ ಶಿವಾಗಮಗಳು ಧರ್ಮಬ್ರಹ್ಮಗಳೆರಡಕ್ಕೂ ಸಾಧನವೆನಿಸಿವೆ. ವೇದವೇದಾಂತಗಳಂತೆ ಕೆಲವು ಶಿವಾಗಮಗಳು ಪತಿಪಶುಪಾಶವೆಂಬ ಮೂರು ತತ್ತ್ವಗಳನ್ನೂ, ಕೆಲವು ಪಂಚಬ್ರಹ್ಮಗಳನ್ನೂ, ಕೆಲವು ಜ್ಯೋತಿಷ್ಟೋಮಾದಿ ಯಜ್ಞಗಳಿಗೆ ಬೇಕಾದ ಕುಂಡಮಂಟಪಗಳ ವಿಧಾನವನ್ನೂ, ಕೆಲವು ಶಿವಪೂಜಾಕ್ರಮವನ್ನೂ, ಕೆಲವು ಭಸ್ಮರುದ್ರಾಕ್ಷಶಿವಲಿಂಗಗಳ ಧಾರಣವನ್ನೂ, ಕೆಲವು ಆಲಯೋತ್ಸವಪ್ರತಿಷ್ಠಾದಿಕಾರ್ಯಗಳನ್ನೂ ತಿಳಿಸುತ್ತವೆ. "ರುದ್ರನು ಪಶುಗಳೆಲ್ಲರಿಗೂ ಪತಿಯಾಗಿ ಅವರನ್ನು ನಿಯಮನಮಾಡುತ್ತಿರುವುದರಿಂದ ಪಶುಪತಿ ಎನಿಸಿದ್ದಾನೆ", "ದೇವನನ್ನು ತಿಳಿದರೆ ಸರ್ವಪಾಪಗಳೂ ನಶಿಸುತ್ತವೆ", "ಧ್ಯಾನದಿಂದಲೂ ಇಂದ್ರಿಯನಿಗ್ರಹದಿಂದಲೂ ಪಂಡಿತನು ಪಾಶವನ್ನು ಸುಡುತ್ತಾನೆ"

ಈ ಬಗೆಯ ವಾಕ್ಯಗಳು ನಿಗಮಾಗಮಗಳಲ್ಲಿ ಪ್ರತ್ಯಕ್ಷವಾಗಿ ಕಂಡುಬಂದಿರುವುದರಿಂದ ಪತಿಪಶುಪಾಶಗಳನ್ನು ತಿಳಿಸುವ ಶೈವಾಗಮಗಳು ವೈದಿಕವೆಂಬುದು ಘಂಟಾಘೋಷ ವೆನಿಸಿದೆ. ಚಿತ್, ಅಚಿತ್ ಈಶ್ವರ ಎಂಬ ಮೂರು ಪದಾರ್ಥಗಳನ್ನೊಪ್ಪುವ ಪಾಂಚ ರಾತ್ರಾಗಮಗಳಿಗೆ ವೈದಿಕ ಪರಿಭಾಷೆಯೇ ಮೂಲವಾಗಿಲ್ಲದ್ದರಿಂದ ಅವು ಅವೈದಿಕ ವೆನಿಸಿವೆ. ಶ್ರುತಿಸಿದ್ಧವಾದ ಶಿವಜೀವೈಕ್ಯವನ್ನು ವ್ಯವಸ್ಥೆಗೊಳಿಸಿರುವುದರಿಂದಲೂ, ಷಡಕ್ಷರ, ತ್ರಿಯಂಬಕ, ಗಾಯತ್ರಿ ಮೊದಲಾದ ಮಂತ್ರಗಳಿಗೆ ಅಂಗನ್ಯಾಸ ಕರನ್ಯಾಸ ಧ್ಯಾನಕ್ರಮವನ್ನು ವಿಧಿಸಿರುವುದರಿಂದಲೂ, ಗೌತಮಾದಿ ಋಷಿಗಳು ಅರ್ಚಿಸಿದ ಲಿಂಗಗಳ ಪ್ರತಿಷ್ಠಾವಿಧಾನವನ್ನು ತಿಳಿಸಿರುವುದರಿಂದಲೂ, 'ಭೂತಿಗಾಗಿ ಜಾಗೃತ ನಾಗಿರು', 'ಅಗ್ನಿಯೇ ಭಸ್ಮ' ಎಂದು ಯಜುರಾದಿ ಶ್ರುತಿಗಳಲ್ಲಿ ಪ್ರತಿಪಾದಿತವಾಗಿರುವ ಭಸ್ಮ ರುದ್ರಾಕ್ಷಗಳ ಧಾರಣೆಯನ್ನು ವಿಧಿಸಿರುವುದರಿಂದಲೂ "ಮಾರ್ಗಗಳೆಲ್ಲಕ್ಕು ಶ್ರೇಷ್ಠವಾದ ಮಾರ್ಗದಿಂದ ನೀನೇ ಕೊನೆಯ ಗಮ್ಯಸ್ಥಾನನು" ಎಂಬ ಶ್ರುತಿಯಲ್ಲಿ ಸಿದ್ಧವಾದ ವರ್ಣ, ಪದ, ಮಂತ್ರ, ಭುವನ, ತತ್ತ್ವ, ಕಲೆಗಳೆಂಬ ಷಡಧ್ವಗಳನ್ನು ತಿಳಿಸಿರುವುದರಿಂದಲೂ, 'ಯಾತೇ ರುದ್ರ' 'ಯಶ್ಛಂದಸಾಂ' ಇತ್ಯಾದಿ ಶ್ರುತಿಗಳಲ್ಲಿ ಸಿದ್ಧವಾದ ಶಿವಲಿಂಗಧಾರಣವನ್ನು ವಿಧಿಸಿರುವುದರಿಂದಲೂ, 'ಅರ್ಚತ ಪ್ರಾರ್ಚತ' ಈ ಬಗೆಯ ಮಂತ್ರಗಳ ಅರ್ಥವನ್ನು ತಿಳಿಸುವ ಬೋಧಾಯನಸ್ಮೃತಿಯಂತೆ ಶಿವ ಪೂಜೆಯನ್ನು ವಿಧಿಸಿರುವುದರಿಂದಲೂ ನಿಗಮಾಗಮಗಳು ಸಮಾನಾರ್ಥಕವೆನಿಸಿರು ವುದರಿಂದ ಶೈವಾಗಮಗಳು ವೈದಿಕವೆಂಬಲ್ಲಿ ವಿವಾದವಿಲ್ಲ. ಆದ್ದರಿಂದಲೇ ಅವು ಗಳಲ್ಲಿ ಪ್ರತಿಪಾದಿತವಾದ ಲಿಂಗಧಾರಣವೂ ವೈದಿಕವೆನಿಸಿದೆ. ಕೂರ್ಮದಲ್ಲಿ "ನಾನೇ ಮೊದಲು ಪಾಶುಪತವ್ರತವನ್ನು ನಿರ್ಮಿಸಿದೆನು. ಅದು ಬಹಳ ರಹಸ್ಯವೂ ಪವಿತ್ರವೂ ಆದ್ದರಿಂದ ವೇದಸಾರವೆನಿಸಿದೆ. ಲಿಂಗಮುದ್ರೆ ಮತ್ತು ಶೂಲಾದ್ಯಾಯುಧಗಳ ಧಾರಣ ಇವು ತಾಂತ್ರಿಕವೆನಿಸಿವೆ. ಲಿಂಗ ರುದ್ರಾಕ್ಷ ಭಸ್ಮಗಳ ಧಾರಣವು ವೈದಿಕ ವೆನಿಸಿದೆ. ಆದಿತ್ಯ, ಅಂಬಿಕೆ, ವಿಷ್ಣು, ಗಣೇಶ, ಮಹೇಶ್ವರ ಇವರನ್ನು ಸಮಭಾವ ದಿಂದ ಅರ್ಚಿಸುವವರು ಮಿಶ್ರಶೈವರು. ಆದರೆ, ವೇದಮಾರ್ಗದಲ್ಲಿಯೇ ನಿರತರಾದ ಮುಮುಕ್ಷುಗಳು ವೈದಿಕ ಪಾಶುಪತಮತವನ್ನೇ ಅನುಸರಿಸಬೇಕು. ಅವರಿಗೆ ಮಿಶ್ರಶೈವಮತವು ಗ್ರಾಹ್ಯವಾಗುವುದಿಲ್ಲ. ಈಗ ಕಲಿಯುಗದಲ್ಲಿ ರಚಿತವಾಗಿರುವ ಅನೇಕ ಶಾಸ್ತ್ರಗಳು ವೇದಮಾರ್ಗಕ್ಕೆ ವಿರುದ್ಧವಾಗಿ ತಾಮಸವೆನಿಸಿವೆ. ಬ್ರಾಹ್ಮಣರಿಗೆ ಶಿವನೇ ದೇವನೆಂದು ಶ್ರುತಿಸ್ಮೃತಿಗಳಲ್ಲಿ ಹೇಳಿರುವುದರಿಂದ ಪ್ರಾಣವಿರುವವರೆಗೂ ಅವರು ಶಿವೋಪಾಸನವನ್ನು ಮಾಡಲೇಬೇಕು. ಆದ್ದರಿಂದ ಅವರಿಗೆ ಬೇರೆಬಗೆಯ ಉಪಾಸನವು ವೇದಸಮ್ಮತವಾಗುವುದಿಲ್ಲ.

**ನಾರಾಯಣಾನುವಾಕೇ 'ದಹ್ರಂ ವಿಪಾಪ್ಮಂ' ಇತ್ಯಾದಿನಾ ಭಾವ ಲಿಂಗಪ್ರಾಣಲಿಂಗಾತ್ಮಕಪರಶಿವಬ್ರಹ್ಮಣೋಽಂತರ್ಧಾರಣಂ, 'ನಮೋ ಬ್ರಹ್ಮಣೇ ಧಾರಣಂ ಮೇ ಅಸ್ತು' ಇತ್ಯಾದಿನಾ ಬಾಹ್ಯಧಾರಣಂ ಚ**

ಪ್ರಸಾಧ್ಯ 'ಊರ್ಧ್ವಾಯ ನಮಃ' ಇತ್ಯಾದಿನಾ ಲಿಂಗಸ್ಯ ಸರ್ವಾತ್ಮಕತ್ವಂ ನಿರ್ದಿಶ್ಯ ಸರ್ವಲಿಂಗವಾಕ್ಯೇನ ಬಾಹ್ಯಲಿಂಗಧಾರಣಂ ನಿರ್ದಿಷ್ಟಂ. (ನಿಧನ ಪತಯೇ ನಮಃ) ಇತ್ಯಾರಭ್ಯ 'ಏತತ್ಸೋಮಸ್ಯ' ಇತ್ಯಂತಮರ್ಥವಾದಃ, ತತ್ರ ಸಮುಚ್ಚಯವಿಧಾಯಕಚಕಾರಾಭಾವಾತ್, ನಮಸ್ಕಾರವಿಧಾಯಕಚತುರ್ಥ್ಯತಾಭಾವಾತ್, ಉಪಕ್ರಮೋಪಸಂಹಾರಯೋಃ ಪರಮಶಿವಪರತ್ವೇನ ಮಧ್ಯಗತಸೋಮಸೂರ್ಯಪರತ್ವೇನ ಸಮಂಜಸತ್ವಾಭಾವಾತ್, ಸೂರ್ಯಸ್ಯ ಸೂರ್ಯಮಂಡಲಾಂತರ್ವರ್ತಿನಸ್ಸೋಮಸ್ಯ ಶಿವಸ್ಯ ಲಿಂಗಂ ಪರಶಿವೇಷ್ಟರೂಪಪಂಚಸೂತ್ರಘಟಿತಂ ಸದ್ಗುರುಕರುಣಾಕಟಾಕ್ಷಲಬ್ಧಂ ಸರ್ವಂ ಸರ್ವಜನಾಃ ಇತ್ಯರ್ಥಃ ಸ್ಥಾಪಯತಿ ಧಾರಯತೀತಿ ಸರ್ವಲಿಂಗಂ ಸ್ಥಾಪಯತೀತ್ಯನೇನ ವಾಕ್ಯೇನ ಲಿಂಗಸ್ಥಾಪನಂ ನಿರ್ದಿಶ್ಯ ತಸ್ಯ ಲಿಂಗಸ್ಥಾಪನಸ್ಯಾಧಿಕರಣಂ ಕಿಮಿತ್ಯಾಕಾಂಕ್ಷಾಯಾಂ 'ಪಾಣಿಮಂತ್ರಂ ಪವಿತ್ರಂ' ಇತಿ ಲಿಂಗವಿಶೇಷಾತ್ಪಾಣ್ಯಾದೌ ತದ್ಧಾರಣಂ ವಿಧೀಯತೇ. ಪಾಣೌ ಮನನಾತ್ಪೂಜನಾತ್ತ್ರಾಯತ ಇತಿ ಪಾಣಿಮಂತ್ರಂ ಪವಿತ್ರಮಿತ್ಯನೇನ 'ಯಜ್ಞೋಪವೀತಂ ಪರಮಂ ಪವಿತ್ರಂ' ಇತಿವತ್ ಶೌಚಾಚಮನಾದ್ಯಪಾವಿತ್ರ್ಯಪ್ರಸಕ್ತಿಕಾಲೇ ಪವಿತ್ರತ್ವವಿಧಾನಾದ್ಯಜ್ಞೋಪವೀತವತ್ಸರ್ವಥಾ ಧಾರ್ಯತ್ವಂ ಪ್ರತಿಪಾದ್ಯತೇ. 'ಆಗ್ನೇಯೋಽಷ್ಟಾಕಪಾಲಂ' ಇತಿವತ್ ನಚಾತ್ರ ವಾಕ್ಯಭೇದದೋಷಃ, ತದುಕ್ತಂ "ಧಾರಯೇದ್ಯಸ್ತು ಹಸ್ತೇನ ಲಿಂಗಾಕಾರಂ ಶಿವಂ ಸದಾ । ತಸ್ಯ ಹಸ್ತಸ್ಥಿತಂ ಸಿದ್ಧಂ ಮತ್ಪದಂ ಸಂಪದಾಂ ಪದಂ ॥" ಇತಿ ವಾತುಲೇ. ತಥಾ ಲೈಂಗ್ಯೇ ಭಗವತಾ ವ್ಯಾಸೇನೈತನ್ಮಂತ್ರಾರ್ಥಃ ಸ್ಪಷ್ಟಮುಕ್ತಃ–" ವೇದೇಷು ಶಾಸ್ತ್ರಸಂಘೇಷು ಪುರಾಣೇಷ್ವಾಗಮೇಷು ಚ । ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣಮುತ್ತಮಂ ॥" ಇತ್ಯುಪಕ್ರಮ್ಯ "ಯಜರಪ್ಯಾಹಂ ಸರ್ವಂ ವೈ ಲಿಂಗಂ ಸ್ಥಾಪಯತೀತಿ ಚ । ತಸ್ಮಾದ್ಧಾರ್ಯಂ ಮಹಾಲಿಂಗಂ ಪಾಣಿಮಂತ್ರೇತಿ ಮಂತ್ರತಃ ॥ ಪಾಣೌ ಲಿಂಗಂ ವಿನಿಕ್ಷಿಪ್ಯ ದೀಕ್ಷಾಕಾಲೇ ಗುರುಶ್ಶಿವಂ । ಯೇನ ಸ್ಮರತಿ ತನ್ಮಂತ್ರಂ ಪಾಣಿಮಂತ್ರಂ ವದಂತಿ ಹಿ ॥ ಪವಿತ್ರತ್ವಾನ್ಮಹೇಶಸ್ಯ ಶಿವಸ್ಯ ಪ್ರತಿಪಾದನಾತ್ । ಪವಿತ್ರಕರಣಾತ್ಪುಂಸಾಂ ಪವಿತ್ರಮಿತಿ ಕಥ್ಯತೇ ॥ ತಸ್ಮಾತ್ಸರ್ವೇಷು ಕಾಲೇಷು ಧಾರಯೇಲ್ಲಿಂಗಮುತ್ತಮಂ । ಗಚ್ಛನ್ ತಿಷ್ಠನ್ ಸ್ವಪನ್ ಜಾಗ್ರನ್ನುನ್ಮಿಷನ್ನಿಮಿಷನ್ನಪಿ ॥ ಶುಚಿರ್ವಾಪ್ಯಶುಚಿರ್ವಾಪಿ ಲಿಂಗಂ ಸರ್ವತ್ರ ಧಾರಯೇತ್ । ಲಿಂಗಧಾರೀ ಸದಾ ಶುದ್ಧೋ ನಿಜಲಿಂಗಂ ಮನೋಹರಂ ॥ ಅರ್ಚಯೇದ್ಗಂಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ । ನಿತ್ಯಾನಿ ಕರ್ಮಬೃಂದಾನಿ ತಥಾ ನೈಮಿತ್ತಿಕಾನಿ ಚ । ಶಿವಾರ್ಪಣಧಿಯಾ ಕುರ್ಯಾತ್ಸಮ್ಯಗ್ಜ್ಞಾನಾಭಿವೃದ್ಧಯೇ ॥" ಇತಿ.

ಕಿಂಚ 'ನಿಧನಪತಯೇ ನಮಃ' ಇತ್ಯತ್ರ ನಿಧನಸ್ಯ ಚರಾಚರಪ್ರಪಂಚ ಸಂಹಾರಸ್ಯ ಪತಿಃ ಕರ್ತಾ ಸರ್ವಲಯಾಧಿಷ್ಠಾನಮಿತಿ ಯಾವತ್. ತಸ್ಮೈ ನಮ ಇತ್ಯುಚ್ಯತೇ 'ಪ್ರಪಂಚೋಪಶಮಂ' ಇತಿ ಮಾಂಡೂಕ್ಯಶ್ರುತೇಃ । ಏತತ್ಸ್ಥಿತೇರಪ್ಯುಪಲಕ್ಷಣಂ. ಏತೇನ ಜಗಜ್ಜನ್ಮಸ್ಥಿತಿಲಯಕಾರಣಂ ನಿಷ್ಕಲ ಶಿವತತ್ತ್ವಮುಪದಿಶ್ಯತೇ. 'ನಿಧನಪತಾಂತಿಕಾಯ ನಮಃ' ಇತ್ಯನೇನ ಅವಾಂತರಕಲ್ಪಸಂಹಾರಕಾರಣಕಾಲರುದ್ರಾದೀನಾಂ ಸಂಹಾರಕತ್ವಂ ನಿರ್ದಿಶ್ಯತೇ. 'ಸರ್ವಭೂತದಮನಾಯ ನಮೋ ಮನ್ಮೋನ್ಮನಾಯ ನಮಃ' ಇತ್ಯುತ್ತರತ್ರ ವಿಷ್ಣ್ವಾದಿಸರ್ವಭೂತಸಂಹಾರಕತ್ವಂ ಶ್ರೂಯತೇ. 'ಏಕೋ ವಿಷ್ಣುರ್ಮಹದ್ಭೂತಂ' ಇತ್ಯಾದಿನಾ ವಿಷ್ಣ್ವಾದೀನಾಂ ಭೂತತ್ವಂ. 'ಹರಿಂ ಹರಂತಮನುಯಂತಿ ದೇವಾ ವಿಶ್ವಸ್ಯೇಶಾನಂ ಋಷಭಂ ಮತೀನಾಂ' ಇತ್ಯಾದೌ ವಿಷ್ಣ್ವಾದಿಭೂತಸಂಹಾರಕತ್ವಂ. 'ಈಶಾನಸ್ಸರ್ವವಿದ್ಯಾನಾಂ' ಇತ್ಯಾದೌ ಸರ್ವವಿದ್ಯಾಭೂತಾಧಿಪತಿತ್ವಂ ತಸ್ಯೈವ ನಿರ್ದಿಷ್ಟಂ. 'ಊರ್ಧ್ವಾಯ ನಮಃ, ಊರ್ಧ್ವಲಿಂಗಾಯ ನಮಃ' ಇತ್ಯತ್ರ ಮಹದಾದಿಸರ್ವಾತೀತಶುದ್ಧಮಾಯಾಶಕ್ತ್ಯವಚ್ಛಿನ್ನಸದಾಶಿವ ಏವೋಪದಿಶ್ಯತೇ. 'ಹಿರಣ್ಯಾಯ ನಮಃ, ಹಿರಣ್ಯಲಿಂಗಾಯ ನಮಃ' ಇತ್ಯತ್ರ ಪಶ್ಚಿಮಚಕ್ರಸ್ಥಿತ ಗುಣತ್ರಯಸಮಷ್ಟ್ಯಾತ್ಮಕಮಹಾತಮೋರೂಪಾವಿದ್ಯಾಶಕ್ತ್ಯವಚ್ಛಿನ್ನಂ ಸ್ವಯಂಪ್ರಕಾಶಾತ್ಮಕಂ ಭಾವಲಿಂಗಂ ಉಪಪದ್ಯತೆ. 'ಸುವರ್ಣಾಯ ನಮಃ, ಸುವರ್ಣಲಿಂಗಾಯ ನಮಃ' ಇತ್ಯತ್ರ ಶಿಖಾಚಕ್ರಾನುಗತರಜಶ್ಶಕ್ತ್ಯವಚ್ಛಿನ್ನಚಿತ್ಕಲಾತ್ಮಕಪ್ರಾಣಲಿಂಗಂ ನಿರ್ಣೀಯತೆ. 'ದಿವ್ಯಾಯ ನಮಃ, ದಿವ್ಯಲಿಂಗಾಯ ನಮಃ' ಇತ್ಯತ್ರ ಸಹಸ್ರಾರಚಕ್ರಪ್ರವಿಷ್ಟಗುಣತ್ರಯಪ್ರಾಚುರ್ಯಾತ್ಮಕಮಹಾಶಕ್ತ್ಯವಚ್ಛಿನ್ನಂ ಸ್ವೇಷ್ಟಲಿಂಗಮುಪಪದ್ಯತೆ. 'ಭವಾಯ ನಮಃ, ಭವಲಿಂಗಾಯ ನಮಃ' ಇತ್ಯತ್ರ ಆಜ್ಞೇಯಚಕ್ರಸ್ಥಿತಶುದ್ಧಾಂತಃಕರಣಾವಚ್ಛಿನ್ನಂ ಮಹಾಲಿಂಗಂ ಶ್ರೂಯತೇ. 'ಶರ್ವಾಯ ನಮಃ, ಶರ್ವಲಿಂಗಾಯ ನಮಃ' ಇತ್ಯತ್ರ ವಿಶುದ್ಧಚಕ್ರಸ್ಥಿತವ್ಯೋಮತತ್ತ್ವಾನುಗತಪರಾಶಕ್ತ್ಯವಚ್ಛಿನ್ನಪ್ರಸಾದಲಿಂಗಂ ನಿರೂಪ್ಯತೆ. 'ಶಿವಾಯ ನಮಃ, ಶಿವಲಿಂಗಾಯ ನಮಃ' ಇತ್ಯತ್ರ ಅನಾಹತಚಕ್ರಸ್ಥಿತ ಪವನತತ್ತ್ವಾತ್ಮಕಾದಿಶಕ್ತ್ಯವಚ್ಛಿನ್ನಚರಲಿಂಗಂ ಕಥ್ಯತೇ. 'ಜ್ವಲಾಯ ನಮಃ, ಜ್ವಲಲಿಂಗಾಯ ನಮಃ' ಇತ್ಯತ್ರ ಮಣಿಪುರಚಕ್ರಸ್ಥಿತತೇಜಸ್ತತ್ತ್ವಾತ್ಮಕೇಚ್ಛಾಶಕ್ತ್ಯನುಗತಶಿವಲಿಂಗಂ ವ್ಯವಹ್ರಿಯತೇ. 'ಆತ್ಮಾಯ ನಮಃ, ಆತ್ಮಲಿಂಗಾಯ ನಮಃ' ಇತ್ಯತ್ರ ಸ್ವಾಧಿಷ್ಠಾನಚಕ್ರಸ್ಥಿತಿಜಲತತ್ತ್ವಾತ್ಮಕಜ್ಞಾನಶಕ್ತ್ಯವಚ್ಛಿನ್ನಗುರುಲಿಂಗಂ ವ್ಯಾಚಕ್ಷ್ಯತೆ. 'ಪರಮಾಯ ನಮಃ, ಪರಮಲಿಂಗಾಯ ನಮಃ' ಇತ್ಯತ್ರಾಧಾರಚಕ್ರಸ್ಥಿತಕ್ಷಿ

**ತ್ಯಾತ್ಮಕಕ್ರಿಯಾಶಕ್ತಿವಿಶಿಷ್ಟಾಚಾರಲಿಂಗಂ ಉಪಪದ್ಯತೆ. 'ಏತತ್ಸೋಮಸ್ಯ-ಸ್ಥಾಪಯತಿ' ಇತ್ಯನೇನ ಏತದ್ದಶವಿಧಲಿಂಗಾತ್ಮಕಸೂರ್ಯಸ್ಯ ಸೂರ್ಯಮಂಡಲಾಂತರ್ವರ್ತಿನಸ್ಸೋಮಸ್ಯ ಶಿವಲಿಂಗರೂಪಂ ಶರೀರಂ ಸ್ಥಾಪಯತಿ ಭೂಮಿಶರೀರಸಾಧಾರಣ್ಯೇನ ಪವಿತ್ರಕ್ಷೇತ್ರೇಷು ಪ್ರತಿಷ್ಠಾಪಯತೀತಿ ಗೀಯತೆ. ತಸ್ಮಾದ್ದಶಲಿಂಗಾತ್ಮಕಪಾಣ್ಯಧಿಕರಣಕಸ್ಯೇಷ್ಟಲಿಂಗಸ್ಯ ಬ್ರಹ್ಮಾತ್ಮಕತ್ವಂ ಷಟ್ತ್ರಿಂಶತ್ತತ್ತ್ವಾತ್ಮಕತ್ವಂ ಚ ನಿರೂಪ್ಯತೇ.**

ನಾರಾಯಣಾನುವಾಕದಲ್ಲಿ 'ದಹರಂ ವಿಪಾಪ್ಮಂ' ಎಂಬಲ್ಲಿ ಭಾವರೂಪನಾದ ಪರಶಿವನನ್ನು ಪ್ರಾಣಲಿಂಗವೆಂದು ಹೃದಯದಲ್ಲಿ ಧರಿಸಬೇಕೆಂದು 'ಧಾರಣಂ ಮೇ ಅಸ್ತು' ಎಂದು ತಿಳಿಸಿ, 'ಊರ್ಧ್ವಾಯ ನಮಃ' ಎಂಬಲ್ಲಿ ಲಿಂಗವನ್ನು ಸರ್ವಾತ್ಮಕವೆಂದು ತಿಳಿಸಿ, ಸರ್ವಲಿಂಗವಾಕ್ಯದಿಂದ ಬಾಹ್ಯಲಿಂಗಧಾರಣವನ್ನು ನಿರ್ದೇಶಿಸಲಾಗಿದೆ. 'ಏತತ್ಸೋಮಸ್ಯ' ಎಂಬ ಭಾಗ ಅರ್ಥವಾದವೆನಿಸಿದೆ. ಇಲ್ಲಿ ಎಲ್ಲ ವಾಕ್ಯಗಳನ್ನೂ ಕೂಡಿಸುವ ಚಕಾರವಿಲ್ಲ. ನಮಸ್ಕಾರವನ್ನು ವಿಧಿಸಲು ಚತುರ್ಥೀ ವಿಭಕ್ತಿಯೂ ಇಲ್ಲ. ಆದರೆ ಉಪಕ್ರಮೋಪಸಂಹಾರಗಳು ಶಿವನಿಗೇ ಅನ್ವಯಿಸುವುದರಿಂದ ಮಧ್ಯದಲ್ಲಿ ಬರುವ ಪದಗಳು ಸೋಮಸೂರ್ಯರಿಗೆ ಅನ್ವಯಿಸುತ್ತವೆ ಎಂಬುದು ಸಮಂಜಸವಲ್ಲ. ಆದ್ದರಿಂದ ಸೂರ್ಯಸ್ಯ-ಸೂರ್ಯಮಂಡಲದೊಳಗಿರುವ, ಸೋಮಸ್ಯ-ಉಮಾಶಕ್ತಿಯೊಡಗೂಡಿರುವ ಶಿವನಿಗೆ ಪ್ರಾಣದಂತೆ ಇಷ್ಟವೂ, ಪಂಚಸೂತ್ರಘಟಿತವೂ ಆಗಿ, ಸದ್ಗುರುವಿನ ಕೃಪೆಯಿಂದ ಬಂದ ಶಿವಲಿಂಗವನ್ನು, ಸರ್ವ-ಎಲ್ಲ ಭಕ್ತರೂ ಸ್ಥಾಪಯತಿ ದೇಹದಲ್ಲಿ ಧರಿಸುತ್ತಾರೆ. ಹೀಗೆ "ಸರ್ವಲಿಂಗಂ ಸ್ಥಾಪಯತಿ" ಎಂಬಲ್ಲಿ ಲಿಂಗದ ಸ್ಥಾಪನವನ್ನು ನಿರ್ದೇಶಿಸಿ, ಆ ಲಿಂಗದ ಸ್ಥಾಪನೆಗೆ ಅಧಿಕರಣವ್ಯಾವುದೆಂಬ ಆಕಾಂಕ್ಷೆ ಬಂದು 'ಪಾಣಿಮಂತ್ರಂ' ಎಂಬುದರಿಂದ ಪಾಣಿಯಲ್ಲಿ ಲಿಂಗಧಾರಣವನ್ನು ವಿಧಿಸಲಾಗಿದೆ. ಪಾಣಿಯಲ್ಲಿ ಪೂಜಿಸುವುದರಿಂದ ಜೀವನನ್ನು ರಕ್ಷಿಸುತ್ತದೆಯಾಗಿ ಪಾಣಿಮಂತ್ರವೆನಿಸಿದ ಲಿಂಗವು ದೇಹವನ್ನು ಪಾವನಗೊಳಿಸುತ್ತ ಪವಿತ್ರವೆನಿಸಿದೆ. 'ಯಜ್ಞೋಪವೀತಂ ಪರಮಂ ಪವಿತ್ರಂ' ಎಂಬಂತೆ ಶೌಚವೇ ಮೊದಲಾದ ಅಪವಿತ್ರಸನ್ನಿವೇಶಗಳಲ್ಲೂ ದೇಹವನ್ನು ಪಾವನಗೊಳಿಸುವುದರಿಂದ ಯಜ್ಞೋಪವೀತದಂತೆ ಇಷ್ಟಲಿಂಗವು ಎಲ್ಲಾ ಕಾಲಗಳಲ್ಲೂ ಧಾರ್ಯವಾಗಿದೆ. 'ಆಗ್ನೇಯೋಽಷ್ಟಾಕಪಾಲಂ' ಎಂಬಲ್ಲಿ ಯಾಗ ಮತ್ತು ದ್ರವ್ಯಗಳೆರಡನ್ನೂ ವಿಧಿಸಿರುವುದರಿಂದ ವಾಕ್ಯಭೇದವಿರುವಂತೆ ಲಿಂಗಧಾರಣದಲ್ಲಿ ವಾಕ್ಯಭೇದದ ಪ್ರಸಕ್ತಿ ಇಲ್ಲ. 'ಯಾವನು ಹಸ್ತದಲ್ಲಿ ಲಿಂಗವನ್ನು ಧರಿಸುವನೋ ಅವನ ಕೈಲಿ ಶಿವನ ಸರ್ವವೈಭವವೂ ನೆಲಸುವುದು' ಎಂದು ವಾತುಲದಲ್ಲಿ ಹೇಳಿದೆ. ಹಾಗೆಯೇ ಲಿಂಗಪುರಾಣದಲ್ಲಿ ವ್ಯಾಸನು ಲಿಂಗಧಾರಣಮಂತ್ರದ ಅರ್ಥವನ್ನು "ವೇದಶಾಸ್ತ್ರಪುರಾಣಗಳಲ್ಲಿ ಬ್ರಾಹ್ಮಣನಿಗೆ ಲಿಂಗಧಾರಣವನ್ನು ವಿಧಿಸಲಾಗಿದೆ" ಎಂದಾರಂಭಿಸಿ "ಯಜುರ್ವೇದದಲ್ಲೂ ಸಹ ಭಕ್ತರೆಲ್ಲರೂ ಲಿಂಗವನ್ನು ಧರಿಸಬೇಕೆಂದು ಹೇಳಿದೆ. ದೀಕ್ಷಾಕಾಲದಲ್ಲಿ

ಗುರು ಅನುಗ್ರಹಿಸಿದ ಲಿಂಗವನ್ನು ಭಕ್ತನು ಹಸ್ತದಲ್ಲಿಟ್ಟು ಅರ್ಚಿಸುವುದರಿಂದ ಲಿಂಗವು ಪಾಣಿಮಂತ್ರವೆನಿಸಿದೆ. ಪವಿತ್ರವಾಗಿದ್ದು, ಮಹೇಶ್ವರನನ್ನು ಪ್ರತಿನಿಧಿಸುತ್ತ, ಭಕ್ತನನ್ನು ಪಾವನಗೊಳಿಸುವುದರಿಂದ ಲಿಂಗವು ಪವಿತ್ರವೆನಿಸಿದೆ. ಆದ್ದರಿಂದಲೇ ಶುಚಿ ಮತ್ತು ಅಶುಚಿಕಾಲಗಳಲ್ಲೂ, ಕುಳಿತಾಗಲೂ, ನಡೆಯುವಾಗಲೂ, ಮಲಗಿದ್ದಾಗಲೂ, ಎಚ್ಚರದಲ್ಲೂ ಉಸಿರನ್ನು ಎಳೆಯುವಾಗಲೂ ಬಿಡುವಾಗಲೂ ಲಿಂಗವನ್ನು ಧರಿಸಿರಬೇಕು. ಲಿಂಗಧಾರಿಯು ಯಾವಾಗಲೂ ಶುದ್ಧನು. ಈ ಮನೋಹರವಾದ ಲಿಂಗವನ್ನು ಭಕ್ತನು ಕರಪೀಠದಲ್ಲಿರಿಸಿ ಗಂಧಪುಷ್ಪಗಳಿಂದ ಅರ್ಚಿಸಬೇಕು. ನಿತ್ಯನೈಮಿತ್ತಿಕ ಕರ್ಮಗಳೆಲ್ಲವನ್ನೂ ಜ್ಞಾನಾಭಿವೃದ್ಧಿಗಾಗಿ ಲಿಂಗಾರ್ಪಣಬುದ್ಧಿಯಿಂದಲೇ ಆಚರಿಸಬೇಕು" ಹೀಗೆ ಸ್ಪಷ್ಟಪಡಿಸಿದ್ದಾನೆ. 'ನಿಧನಪತಯೇ' ಎಂಬಲ್ಲಿ ನಿಧನವೆಂದರೆ ಚರಾಚರಜಗತ್ತಿನ ಸಂಹಾರಕ್ಕೆ ಪತಿ-ನಿಯಾಮಕನೆಂದರ್ಥ, ವಿಶ್ವದ ಲಯಕ್ಕಾಶ್ರಯನೆನಿಸಿ ಪರಮಾತ್ಮನು ಸರ್ವರಿಗೂ ವಿಶ್ರಾಂತಿಸ್ಥಲವಾಗಿದ್ದಾನೆ. 'ಪ್ರಪಂಚೋಪಶಮಂ' ಎಂದು ಮಾಂಡೂಕ್ಯಶ್ರುತಿ ಇದನ್ನೇ ಹೇಳಿದೆ. ಇಲ್ಲಿ ಶಿವನಿಗೆ ಸಂಹಾರಕರ್ತೃತ್ವವನ್ನು ಹೇಳಿದ್ದರಿಂದ ಸೃಷ್ಟಿಸ್ಥಿತಿಗಳ ಆಧಿಪತ್ಯವೂ ಅವನಿಗೇ ಸಿದ್ಧಿಸುತ್ತದೆಯಾದ್ದರಿಂದ ಅವನೇ ಜಗಜ್ಜನ್ಮಾದಿಕಾರಣನೆನಿಸಿದ್ದಾನೆ. 'ನಿಧನಪತಾಂತಿಕಾಯ' ಎಂಬಲ್ಲಿ ಅವಾಂತರ ಕಲ್ಪದ ಸಂಹಾರಕಾರ್ಯವನ್ನು ನಡೆಸುವ ಕಾಲರುದ್ರನಿಗೂ ಶಿವನು ಸಂಹಾರಕನೆಂದು ಹೇಳಿದೆ. 'ಜೀವರೆಲ್ಲರನ್ನೂ ನಾಶಪಡಿಸುವವನು ಮತ್ತು ಮನಸ್ಸನ್ನು ಉಚ್ಚಸ್ಥಿತಿಗೇರಿಸುವವನು' ಎಂಬಲ್ಲಿ ವಿಷ್ಣ್ವಾದಿ ಜೀವರನ್ನು ಸಂಹರಿಸುವವನೆಂಬುದು ಸ್ಪಷ್ಟವಾಗಿದೆ. 'ವಿಷ್ಣುವೂ ಒಬ್ಬ ಜೀವವಿಶೇಷನು' ಎಂಬುದರಿಂದ ಬ್ರಹ್ಮ ವಿಷ್ಣು ಮೊದಲಾದವರು ಜೀವರೆಂದು ತಿಳಿದುಬರುತ್ತದೆ. "ವಿಷ್ಣುವನ್ನು ಸಂಹರಿಸುವವನೂ, ವಿಶ್ವೇಶ್ವರನೂ, ಶ್ರೇಷ್ಠ ಬುದ್ಧಿಶಾಲಿಯೂ ಆದ ಶಿವನನ್ನು ದೇವತೆಗಳು ಆಶ್ರಯಿಸುತ್ತಾರೆ" ಎಂಬಲ್ಲಿ ಶಿವನು ವಿಷ್ಣ್ವಾದಿಭೂತಸಂಹಾರಕನೆಂದು ಹೇಳಿದೆ. 'ಎಲ್ಲಾ ವಿದ್ಯೆಗಳಿಗೂ ಭೂತಗಳಿಗೂ ನಿಯಾಮಕನು' ಎಂಬಲ್ಲಿ ಶಿವನೇ ಸರ್ವವಿದ್ಯೆಗಳಿಗೂ ನಿಯಾಮಕನೆಂದು ಹೇಳಿದೆ. 'ಊರ್ಧ್ವಾಯ' ಎಂಬಲ್ಲಿ ಮಹತ್ತೇ ಮೊದಲಾದ ಎಲ್ಲಾ ತತ್ತ್ವಗಳಿಗೂ ಅತೀತವಾದ ಸಾತ್ತ್ವಿಕಶಕ್ತಿಯೊಡಗೂಡಿದ ಸದಾಶಿವನನ್ನು ತಿಳಿಸಲಾಗಿದೆ. 'ಹಿರಣ್ಯಾಯ' ಎಂಬಲ್ಲಿ ಪಶ್ಚಿಮಚಕ್ರದಲ್ಲಿರುವ ಗುಣತ್ರಯ ಸಮಷ್ಟಿರೂಪವಾದ ಮಹಾತಮಸ್ಸೆಂಬ ವಿದ್ಯಾಶಕ್ತಿಯೊಡಗೂಡಿದ ಸ್ವಯಂಪ್ರಕಾಶಕವಾದ ಭಾವಲಿಂಗವನ್ನು ತಿಳಿಸಲಾಗಿದೆ. 'ಸುವರ್ಣಾಯ" ಎಂಬಲ್ಲಿ ಶಿಖಾಚಕ್ರದಲ್ಲಿರುವ ರಜಶ್ಶಕ್ತಿಯೊಡಗೂಡಿದ ಚಿತ್ಕಲಾರೂಪವಾದ ಪ್ರಾಣಲಿಂಗವನ್ನು ತಿಳಿಸಲಾಗಿದೆ. 'ದಿವ್ಯಾಯ' ಎಂಬಲ್ಲಿ ಸಹಸ್ರಾರ ಚಕ್ರದಲ್ಲಿ ಪ್ರವೇಶಿಸಿದ ಮಹಾಶಕ್ತಿಯೊಡಗೂಡಿದ ಸ್ವೇಷ್ಟಲಿಂಗವೆಂಬುದು ಯುಕ್ತವೆನಿಸುತ್ತದೆ. 'ಭವಾಯ' ಎಂಬಲ್ಲಿ ಆಜ್ಞೇಯ ಚಕ್ರದಲ್ಲಿರುವ ಶುದ್ಧಾಂತಃಕರಣರೂಪವಾದ ಮಹಾಲಿಂಗವನ್ನು ತಿಳಿಸಲಾಗಿದೆ. 'ಶರ್ವಾಯ' ಎಂಬಲ್ಲಿ ವಿಶುದ್ಧಿ ಚಕ್ರದಲ್ಲಿರುವ ಆಕಾಶತತ್ತ್ವಾನುಗುಣ

ವಾದ ಪರಾಶಕ್ತಿಯೊಡಗೂಡದ ಪ್ರಸಾದಲಿಂಗವನ್ನು ನಿರೂಪಿಸಲಾಗಿದೆ. 'ಶಿವಾಯ' ಎಂಬಲ್ಲಿ ಅನಾಹತಚಕ್ರದಲ್ಲಿರುವ ವಾಯುತತ್ತ್ವಾನುಗುಣವಾದ ಜ್ಞಾನಶಕ್ತಿಯೊಡ ಗೂಡಿದ ಚರಲಿಂಗವನ್ನು ತಿಳಿಸಲಾಗಿದೆ. 'ಜ್ವಲಾಯ' ಎಂಬಲ್ಲಿ ಮಣಿಪೂರಕ ಚಕ್ರದಲ್ಲಿರುವ ತೇಜಸ್ತತ್ತ್ವಾನುಗುಣವಾದ ಇಚ್ಛಾಶಕ್ತಿಯೊಡಗೂಡಿದ ಶಿವಲಿಂಗ ವನ್ನು ತಿಳಿಸಲಾಗಿದೆ. 'ಆತ್ಮಾಯ' ಎಂಬಲ್ಲಿ ಸ್ವಾಧಿಷ್ಠಾನಚಕ್ರದಲ್ಲಿರುವ ಜಲತತ್ತ್ವ ಮಯವಾದ ಜ್ಞಾನಶಕ್ತಿಯೊಡಗೂಡಿದ ಗುರುಲಿಂಗವನ್ನು ತಿಳಿಸಲಾಗಿದೆ. 'ಪರ ಮಾಯ' ಎಂಬಲ್ಲಿ ಆಧಾರಚಕ್ರದಲ್ಲಿರುವ ಪೃಥಿವೀರೂಪವೂ ಕ್ರಿಯಾಶಕ್ತಿವಿಶಿಷ್ಟವೂ ಆದ ಆಚಾರಲಿಂಗವನ್ನು ತಿಳಿಸಲಾಗಿದೆ. 'ಏತತ್ಸೋಽಮುಷ್ಯ ಸೂರ್ಯಸ್ಯ' ಎಂಬಲ್ಲಿ ಈ ಹತ್ತುಬಗೆಯ ಲಿಂಗಸ್ವರೂಪನಾಗಿ ಸೂರ್ಯಮಂಡಲದಲ್ಲಿ ನೆಲಸಿರುವ ಉಮಾಶಕ್ತಿ ವಿಶಿಷ್ಟಪರಮೇಶ್ವರನ ಲಿಂಗರೂಪವಾದ ಚಿನ್ಮಯಶರೀರವನ್ನು ಭಕ್ತನ ಶರೀರವೆಂಬ ಪವಿತ್ರಕ್ಷೇತ್ರದಲ್ಲಿ ಗುರುವು ಸ್ಥಾಪಿಸುತ್ತಾನೆ ಎಂದು ಅರ್ಥವಾಗುತ್ತದೆ. ಆದ್ದರಿಂದ ದಶಲಿಂಗಾತ್ಮಕವೂ ಪಾಣ್ಯಾಶ್ರಯವೂ ಆದ ಇಷ್ಟಲಿಂಗವನ್ನು ಈ ಮಂತ್ರದಲ್ಲಿ ಪಂಚಬ್ರಹ್ಮಾತ್ಮಕವೆಂದೂ ಷಟ್ತ್ರಿಂಶತ್ತತ್ತ್ವಮಯವೆಂದೂ ನಿರೂಪಿಸಲಾಗಿದೆ.

ಕಿಂಚ ವೇದವೇದಾಂತಸ್ಮೃತಿಪುರಾಣೇತಿಹಾಸಾಗಮಾದಿಷು ಶಿವಾ ಲಿಂಗಧಾರಣಂ ಶ್ರೂಯತೇ. ಋಗ್ವೇದೇ—"ಭದ್ರಂ ಕರ್ಣೇಭಿಃ ಶೃಣಾ ಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈ ಸ್ತುಷ್ಟುವಾಂಸಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ ॥ "ಯಜು ರ್ವೇದೇ "ಚರಣಂ ಪವಿತ್ರಂ ವಿತತಂ ಪುರಾಣಂ ಯೇನ ಪೂತಸ್ತರತಿ ದುಷ್ಕೃತಾನಿ । ತೇನ ಪವಿತ್ರೇಣ ಶುದ್ಧೇನ ಪೂತಾ ಅತಿಪಾಪ್ಮಾನಮರಾತಿಂ ತರೇಮ । ಲೋಕಸ್ಯ ದ್ವಾರಮರ್ಚಿಮತ್ಪವಿತ್ರಂ । ಜ್ಯೋತಿಷ್ಮದ್ಭ್ರಾಜ ಮಾನಂ ಮಹಸ್ವತ್ । ಅಮೃತಸ್ಯ ಧಾರಾ ಬಹುಧಾ ದೋಹಮಾನಂ । ಚರಣಂ ನೋ ಲೋಕೇ ಸುಧಿತಾಂ ದಧಾತು । ಹಿರಣ್ಯಶೃಂಗಂ ವರುಣಂ ಪ್ರಪದ್ಯೇ । ಪವಮಾನಸ್ಸುವರ್ಜನಃ । ಪವಿತ್ರೇಣ ವಿಚರ್ಷಣಿಃ । ಯಃ ಪೂತಾ ಸ ಪುನಾತು ಮಾಂ।" ಇತ್ಯಾದಿನಾ ಸರ್ವದೇವಾನಾಂ ಲಿಂಗಧಾರಣ ಮುಪದಿಶ್ಯತೆ ॥ ಸಾಮೇ ಚ, "ವಿಶ್ವೇಶಂ ವಿದುಷಾ ವೇದಿತವ್ಯಂ ಶ್ರದ್ಧಾಭಕ್ತ್ಯಾ ಶೈವಲಿಂಗಂ ಪ್ರಧೃತಂ ಸರ್ವವೇದ್ಯೈಃ । ತದಾತ್ಮಸಿದ್ಧ್ಯೈ ಮುನಿಭಿರ್ಮುಕ್ತಿಕಾಮ್ಯೈಃ ಕಂಠೇ ಹಸ್ತೇ ಮಸ್ತಕೇ ವಾ ಭವತು ಧಾರ್ಯಂ॥" "ಲಿಂಗಂ ಬಿಭರ್ತಿ ವಪುಷಾ ಪರಮಂ ಪವಿತ್ರಂ ವಿರಜಂ ವಿಶೋಕಂ ದೇವಾನಾಮಮಿತಸ್ಸ ಶಂಭೋಃ । ಸ ಯಾತಿ ಮುಕ್ತಿಂ ಚರಮಂ ವೇದ ವೇದ್ಯಂ ಶೈವಂ ದಿವ್ಯಂ ಶಾಶ್ವತಂ ವೈ ಪುರಾಣಂ॥". ಅಥರ್ವಣೇ ಚ, "ಪರಾತ್ಮಸಿದ್ಧ್ಯೈ ಪರಮಂ ಕಾಲಕಾಲಂ ತನೂಷು ಲಿಂಗಂ ಶಾಂಭವಂ ಬಿಭೃಯಾನ್ಮುಕ್ತಿಕಾಮಃ । ಮಹಾಮಹದ್ಭಿರ್ಮುನಿಭಿರ್ಯೋಗಿಭಿರ್ವಾ

ಧಾರ್ಯಂ ಭವೇತ್ಸರ್ವದಾ ಶಾಂಕರಂ ದೇವದೇವಂ||" "ಶಿವಲಿಂಗಂ ಭೃತ್ವಾ ಬ್ರಹ್ಮಣಸ್ಸಾಯುಜ್ಯಂ ಸಲೋಕತಾಮಾಪ್ನೋತಿ । ತೇನ ಸರ್ವಾನ್ಕಾಮಾನಭಿಯಾತಿ ನ ಸ ಪುನರಾವರ್ತತೇ ನ ಸ ಪುನರಾವರ್ತತೇ" ಇತಿ. ತಥಾ ವೇದಾಂತೇಷು "ಆಪ್ಯಾಯಂತು ಮಮಾಂಗಾನಿ ವಾಕ್ಪ್ರಾಣಶ್ಚಕ್ಷುಃ ಶ್ರೋತ್ರಮಥೋ ಬಲಮಿಂದ್ರಿಯಾಣಿ ಚ ಸರ್ವಾಣಿ ಸರ್ವಂ ಬ್ರಹ್ಮೌಪನಿಷದಂ । ಮಾಹಂ ಬ್ರಹ್ಮ ನಿರಾಕುರ್ಯಾಂ । ಮಾ ಮಾ ಬ್ರಹ್ಮ ನಿರಾಕರೋದನಿರಾಕರಣಮಸ್ತ್ವನಿರಾಕರಣಂ ಮೇ ಅಸ್ತು । ತದಾತ್ಮನಿ ನಿರತೇ ಯೇ ಉಪನಿಷತ್ಸು ಧರ್ಮಾಸ್ತೇ ಮಯಿ ಸಂತು ತೇ ಮಯಿ ಸಂತು" ಇತ್ಯಾದಿ. "ಅಂತರ್ಧಾರಣಶಕ್ತೋ ವಾ ಹ್ಯಶಕ್ತೋ ವಾ ದ್ವಿಜೋತ್ತಮಃ । ಸಂಸ್ಕೃತ್ಯ ಗುರುಣಾ ದತ್ತಂ ಶೈವಂ ಲಿಂಗಮುರಸ್ಥಲೇ । ಧಾರ್ಯಂ ವಿಪ್ರೇಣ ಮುಕ್ತ್ಯರ್ಥಮೇವಂ ವೇದಾಂತವಿದೋ ವದಂತಿ" । ಏತದುಪಬ್ರಹ್ಮಣವಾಕ್ಯಾನಿ ಲೈಂಗೇ ಭಗವತಾ ಬಾದರಾಯಣೇನ ನಿರ್ದಿಷ್ಟಾನಿ. "ಸೌವರ್ಣಂ ರಾಜತಂ ಶೈಲಂ ಕೃತ್ವಾ ತಾಮ್ರಮಯಂ ತು ವಾ । ಪಂಚಸೂತ್ರಕೃತಂ ಲಿಂಗಂ ಅಖಂಡಂ ಧಾರಯೇದ್ದ್ವಿಜಃ ||" ಇತ್ಯುಪಕ್ರಮ್ಯ "ಅಯಂ ಮೇ ಹಸ್ತೋ ಭಗವಾನಿತಿ ಮಂತ್ರೇಣ ಸರ್ವದಾ । ಪಾಣೌ ಲಿಂಗಧೃತಿಃ ಪ್ರೋಕ್ತಾ ಋಗಿತ್ಯಾಹ ಸನಾತನೀ । ಭದ್ರಂ ಪರಶಿವಂ ಭಕ್ತಾಃ ಶೃಣುಯಾಮ ಸುರರ್ಷಭಾಃ । ಭದ್ರಂ ನೇತ್ರೈಃ ಪ್ರಪಶ್ಯಾಮೋ ಲಿಂಗರೂಪಂ ಸದಾಶಿವಂ ಭದ್ರಂ । ಯಜಾಮಸ್ಸತತಂ ತುಷ್ಟುವಾಂಸೋ ಯಥಾವಿಧಿ । ಯಾವದಾಯುಃ ಪ್ರವರ್ತೇತ ತಾವದ್ದೇವಹಿತಂ ಶಿವಂ । ತನೂಭಿಸ್ಸತತಂ ಭಕ್ತ್ಯಾ ಸ್ಥಾಪಯಾಮೋ ಯಥಾವಿಧಿ । ಸ್ವಸ್ತ್ಯಾಖ್ಯಂ ಶಾಂಭವಂ ಲಿಂಗಂ ಇಂದ್ರೋ ವೃದ್ಧಶ್ರವಾಸ್ತಥಾ । ಪೂಷಾ ಚ ವಿಶ್ವೇದೇವಾಶ್ಚ ತಾರ್ಕ್ಷ್ಯೋ ವಿಷ್ಣುಸ್ತಥೈವ ಚ । ಬೃಹಸ್ಪತಿಸ್ತಥಾ ಲಿಂಗಂ ದಧಾತು ಪರಮೇಶ್ವರಂ || ಚರಣಂ ಲಿಂಗಮಾಖ್ಯಾತಂ ಪವಿತ್ರಂ ಪಾಪನಾಶನಂ । ಚರಂ ಜೀವಂ ಪರಾತ್ಮಾನಂ ನಯತಿ ಪ್ರಾಪಯತ್ಯತಃ । ವಿತತಂ ವ್ಯಾಪಕಂ ನಿತ್ಯಂ ಪುರಾಣಂ ಬ್ರಹ್ಮ ಶಾಶ್ವತಂ । ಯೇನ ಲಿಂಗೇನ ಪೂತಸ್ಸನ್ ಪಾಪಾನ್ ಸರ್ವಾಂಸ್ತರಿಷ್ಯತಿ । ತೇನ ಲಿಂಗೇನ ಶುದ್ಧೇನ ಪೂತಾಃ ಪಾಪ್ಮಾನಮಾಣವಂ । ಮಾಯಾಮಲಂ ಕಾರ್ಮಿಕಂ ಚಾಪ್ಯರಾತಿಂ ತೇ ತರೇಮಹಿ || ಲೋಕಸ್ಯ ಭಕ್ತಲೋಕಸ್ಯ ದ್ವಾರಂ ತತ್ಪ್ರಾಪ್ತಿಸಾಧನಂ । ಅರ್ಚಿಮತ್ಸ್ವಪ್ರಕಾಶಂ ಹಿ ಪವಿತ್ರಂ ಲೋಕಪಾವನಂ । ಜ್ಯೋತಿಷ್ಮದ್ದೀಪ್ತಿಮದ್ಭ್ರಾಜಮಾನಂ ಚಿದ್ರೂಪಭಾವತಃ । ಮಹತ್ತ್ವಗುಣಸಂಯುಕ್ತಂ ಮಹತ್ಸ್ವತತ್ಪರಿಕೀರ್ತಿತಂ । ಚರಣಂ ಲಿಂಗಮಾಖ್ಯಾತಂ ಜಗತ್ಸಂಹಾರಹೇತುತಃ । ಅಮೃತಸ್ಯ ಧಾರಾ ಮೋಕ್ಷಸ್ಯ ಸಾಲೋಕ್ಯಾದಿವಿಭೇದತಃ ।

ಬಹುಧಾ ದೋಹಮಾನಂ ಯತ್ತನ್ನೋಽಸ್ಮಾಕಂ ವಿಶೇಷತಃ । ಲೋಕೇ ದೇಹೇ ಸದಾ ದೇವಾಸ್ಸನ್ನಿಧಿತಾಂ ವಾಸಮುನ್ನಹಂ । ದಧಾತು ಕುರುತಾ ತ್ರಿೀತ್ಯಾ ಭವರೋಗೈಕಭೇಷಜಂ । ಪವಮಾನಾನುವಾಕೇನ ಸರ್ವೇಷಾಂ ಲಿಂಗಧಾರಣಂ।ಯಜುಷಾ ಗೀಯತೇ ಯಸ್ಮಾತ್ತಸ್ಮಾತ್ಪಾಶುಪತಂಶುಭಂ। ಪವಮಾನೋಽನಿಲಸ್ಸಮ್ಯಗ್ಸ್ವರ್ಜನಃ ಪಾಪವರ್ಜಿತಃ । ಸ ಪವಿತ್ರೇಣ ಲಿಂಗೇನ ಶೈವಜ್ಞಾನವಿಚಕ್ಷಣಃ। ವರ್ತತೇ ತ್ರಿಷು ಲೋಕೇಷು ಯಃ ಪೂತ ಸ್ಸ ಪುನಾತು ಮಾಂ । ಪಾವನಾತ್ಸರ್ವಜೀವಾನಾಂ ಪವಿತ್ರಂ ಲಿಂಗ ಮುಚ್ಯತೇ । ಹಿರಣ್ಯಂ ಲಿಂಗಮಾಖ್ಯಾತಂ ವಿಶ್ವರೂಪಂ ಮಹೇಶ್ವರಂ । ಶೃಂಗೇ ಶಿರಸಿ ತಲ್ಲಿಂಗಂ ಧೃತಂ ವರುಣಮವ್ಯಯಂ । ಪ್ರಪದ್ಯೇ ಮನಸಾ ವಾಚಾ ಶಿವಭಕ್ತಂ ಸನಾತನಂ । ತೀರ್ಥಂ ದೇಹೀತಿ ವಚಸಾ ಪ್ರಾರ್ಥಿತಂ ವೇದಪೂರುಷೈಃ । ಸರ್ವಂ ಸರ್ವಾತ್ಮಕಂ ಬ್ರಹ್ಮ ಲಿಂಗರೂಪಂ ಸನಾತನಂ । ತದೌಪನಿಷದಂ ದಿವ್ಯಂ ಮಮಾಂಗಾನಿ ವಿಶೇಷತಃ । ಸ್ಥೂಲ ಸೂಕ್ಷ್ಮಾದಿದೇಹಾನಿ ಜ್ಞಾನಕರ್ಮೇಂದ್ರಿಯಾಣಿ ಚ । ಭಾವಾದಿಲಿಂಗ ರೂಪೇಣ ಸ್ಥಿತ್ವಾ ಸರ್ವತ್ರ ಸರ್ವದಾ । ಆಪ್ಯಾಯಯಂತು ಸತತಂ ಪರಮಾನಂದಸಂಪದಾ । ತದಹಂ ಮಾ ನಿರಾಕುರ್ಯಾಂ ನ ತ್ಯಜಾಮಿ ಕದಾಚನ । ಮಾ ಮಾಂ ಬ್ರಹ್ಮ ಸದಾ ಲಿಂಗಂ ನ ತ್ಯಜೇನ್ಮಾ ನಿರಾಕರೋತ್ । ಮೇ ಮಮಾತ್ಮನಿ ದೇಹೇ ತು ತದ್ಬ್ರಹ್ಮಾಸ್ತು ನಿರಂತರಂ । ಅನಿರಾಕರಣಂ ಸಮ್ಯಗನಿರಾಕರಣಂ ಭವೇತ್ । ಉಪನಿಷತ್ಸು ಯೇ ಧರ್ಮಾ ಭಸ್ಮರುದ್ರಾಕ್ಷಸಂಜ್ಞಕಾಃ । ಮಯಿ ತೇ ಸಂತು ತೇ ನಿತ್ಯಂ ಸಂತು ತೇ ಮಯಿ ಸರ್ವದಾ" ಇತ್ಯಾದಿಕಾನಿ. ತತ್ರೈವಾಕರಣೇ ಪ್ರತ್ಯವಾಯಜನಕತ್ವಂ ಚ ದೃಶ್ಯತೇ. "ಲಿಂಗಸ್ಯ ಧಾರಣಂ ಯಸ್ಯ ಸ್ಥೂಲದೇಹೇ ನ ವಿದ್ಯತೇ । ತದ್ದೇಹಂ ನಿಷ್ಫಲಂ ಜ್ಞೇಯಂ ಜೀವತ್ಯಕ್ತಶರೀರವತ್ । ಯದಾ ಶ್ಮಶಾನಗಂ ಕಾಷ್ಠಂ ಅನರ್ಹಂ ಸರ್ವಕರ್ಮಸು । ತಥಾ ಲಿಂಗವಿಹೀನಸ್ತು ಸರ್ವಕರ್ಮಬಹಿಷ್ಕೃತಃ । ಯಸ್ಯ ವಕ್ಷಃಸ್ಥಲೇ ಲಿಂಗಂ ಕಂಠೇ ರುದ್ರಾಕ್ಷಮಾಲಿಕಾ । ನ ಫಾಲೇ ಭೂತಿರೇಖಾಶ್ಚ ತಂ ತ್ಯಜೇದಂತ್ಯಜಂ ಯಥಾ ॥ ಲಿಂಗಸ್ಯ ಧಾರಣಂ ವಿಪ್ರೋ ಮನಸಾಪಿ ನ ಲಂಘಯೇತ್ । ಶ್ರುತ್ಯಾ ವಿಧೀಯತೇ ಯಸ್ಮಾತ್ ತತ್ತ್ಯಾಗೀ ಪತಿತೋ ಭವೇತ್ । ಬ್ರಾಹ್ಮಣಾನಾಂ ಶಿವೋ ದೇವಸ್ತಸ್ಮಾತ್ತಲ್ಲಿಂಗಧಾರಣಂ । ಕರ್ತವ್ಯಂ ಬ್ರಾಹ್ಮಣಾನಾಂ ತು ವೇದವೇದಾಂತಶಾಸನಾತ್ । ಭೃತ್ಯಸ್ಯ ಪ್ರಭುಚಿಹ್ನಂ ತು ಯಥಾ ಧಾರ್ಯಂ ಮಹೀತಲೇ । ತಥಾ ಭಕ್ತಸ್ಯ ಲಿಂಗಾದಿಧಾರಣಂ ಪ್ರೋಚ್ಯತೇ ಸದಾ । ಅನಂತಪದ್ಮನಾಭಸ್ಯ ಹಸ್ತೇ ಲಿಂಗಸ್ಯ ಧಾರಣಂ । ಪಾಂಡುರಂಗೇ

**ತಥಾ ವಿಷ್ಣೋಶ್ಶೀರ್ಷೇ ಲಿಂಗಸ್ಯ ಧಾರಣಂ। ಸುಪ್ರಸಿದ್ಧತಯಾ ದೃಷ್ಟಂ ಕಿಂ ವಕ್ತವ್ಯಂ ನೃಣಾಂ ಸದಾ॥" ಇತ್ಯಾದಿನಾ ಷಟ್ಸ್ಥಲಪರಶಿವಾತ್ಮಕ ಪರಬ್ರಹ್ಮಸ್ವರೂಪಲಿಂಗಧಾರಣಸ್ಯ ದೃಷ್ಟತ್ವಾತ್ಸರ್ವಲಿಂಗವಾಕ್ಯೇನ ತದ್ಧಾರಣಮೇವ ವಿಧೀಯತೇ.**

ಇದೂ ಅಲ್ಲದೆ, ವೇದವೇದಾಂತಸ್ಮೃತಿಪುರಾಣೇತಿಹಾಸಾಗಮಗಳಲ್ಲೂ ಲಿಂಗ ಧಾರಣವು ವಿಹಿತವಾಗಿದೆ. ಋಗ್ವೇದದಲ್ಲಿ 'ಮಂಗಳಕರವಾದ ಶಿವಲಿಂಗವನ್ನು ಕಿವಿಗಳಿಂದ ಕೇಳೋಣ, ಕಣ್ಣುಗಳಿಂದ ನೋಡೋಣ, ನಿಷ್ಕಲವಾದ ನಾಲಿಗೆಯಿಂದ ಸ್ತುತಿಸೋಣ, ಕೈಗಳಿಂದ ಅರ್ಚಿಸೋಣ, ಬದುಕಿರುವವರೆಗೂ ಈ ಲಿಂಗದೇವನ ಸೇವೆ ಮಾಡೋಣ" ಎಂದು ಹೇಳಿದೆ. ಯಜುರ್ವೇದದಲ್ಲಿ 'ಶಿವನ ವಿಸ್ತಾರವೂ ಸನಾತನವೂ ಆದ ಪಾದವೇ ಪವಿತ್ರವೆನಿಸಿದೆ. ಇದರಿಂದ ಶುದ್ಧನಾಗಿ ಜೀವನು ತನ್ನ ಮಲಗಳನ್ನು ಕಳೆದುಕೊಳ್ಳುವನು. ಇಂತಹ ಶುದ್ಧವಾದ ಲಿಂಗದಿಂದ ಪಾವನರಾಗಿ ಪಾಪವನ್ನೂ ಶತ್ರುವನ್ನೂ ಅತಿಕ್ರಮಿಸೋಣ, ಇದು ನಮ್ಮನ್ನು ಲೋಕದುಃಖದಿಂದ ಆನಂದದೆಡೆಗೆ ಬಯ್ಯಲು ಶುದ್ಧವೂ ಕಾಂತಿಯುಕ್ತವೂ ಆದ ಬಾಗಿಲು. ಇದು ವಿಶೇಷ ಜ್ಯೋತಿಯಿಂದೊಡಗೂಡಿದ ಮಹಾಪ್ರಕಾಶ. ಇದು ಅಮೃತ ಧಾರೆಯನ್ನು ಸುರಿಸಬಲ್ಲದು, ಇದು ನಮಗೆ ಈ ಲೋಕದಲ್ಲಿ ಅಮೃತವನ್ನು ದೊರಕಿಸಲಿ. ಇಂತಹ ಶಿವಲಿಂಗವನ್ನು ಶಿರಸ್ಸಿನಲ್ಲಿ ಧರಿಸಿರುವ ಶಿವಭಕ್ತನಿಗೆ ಶರಣಾಗುತ್ತೇನೆ' ಎಂದು ಹೇಳಿದೆ. "ಎಲ್ಲರನ್ನೂ ಸಂತೋಷಗೊಳಿಸುವ ವಾಯು ಲಿಂಗದ ಸಂಪರ್ಕದಿಂದಲೇ ಪ್ರಕಾಶಿಸುತ್ತ ಪವಿತ್ರನಾಗಿ ನಮ್ಮನ್ನು ಪಾವನಗೊಳಿಸಲಿ." ಈ ಮಂತ್ರವು ದೇವತೆ ಗಳಿಗೂ ಲಿಂಗಧಾರಣವನ್ನು ಉಪದೇಶಿಸಿದೆ. ಸಾಮವೇದದಲ್ಲಿ "ವಿಶ್ವಪ್ರಿಯನಾದ ಪರಮೇಶ್ವರನ ಈ ದಿವ್ಯಲಿಂಗವನ್ನು ದೇವತೆಗಳೆಲ್ಲರೂ ಭಕ್ತಿಯಿಂದ ಧರಿಸಿ ಅರ್ಚಿಸು ತ್ತಾರೆ. ಹಾಗೆಯೇ ಮುಮುಕ್ಷುಗಳಾದ ಋಷಿಗಳೂ ಕೂಡ ಆತ್ಮಕಲ್ಯಾಣಕ್ಕಾಗಿ ಕಂಠ ತಲೆ ಹಸ್ತಗಳಲ್ಲೊಂದು ಕಡೆ ಲಿಂಗವನ್ನು ಧರಿಸಿದ್ದಾರೆ. ಪರಮಪವಿತ್ರವೂ ಪಾಪದುಃಖರಹಿತವೂ ಆದ ಶಿವಲಿಂಗವನ್ನು ಧರಿಸಿದವನು ಸ್ವರ್ಗದಿಂದಾಚೆಗೆ ಶಾಶ್ವತ ವಾಗಿ ನೆಲಸಿರುವ ನಿಷ್ಕಲಶಿವನಲ್ಲಿ ಬೆರೆಯುತ್ತಾನೆ' ಎಂದು ಹೇಳಿದೆ. ಅಥರ್ವಣದಲ್ಲಿ 'ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ದೇಹದಲ್ಲಿ ಲಿಂಗವನ್ನು ಧರಿಸಿದವನು ತನ್ನ ಇಷ್ಟಾರ್ಥವನ್ನು ಪಡೆದು ಧನ್ಯನಾಗುತ್ತಾನೆ. ದೇವದೇವನಾದ ಶಿವನನ್ನು ಲಿಂಗ ರೂಪವಾಗಿ ಯೋಗಿಗಳೂ ಋಷಿಗಳೂ ದೇಹದಲ್ಲಿ ಧರಿಸಿದ್ದಾರೆ. ಲಿಂಗಧಾರಿಯು ಶಿವನ ಗುಣಗಳನ್ನು ಪಡೆದು ಶಿವಲೋಕದಲ್ಲಿ ಎಲ್ಲಾ ಇಷ್ಟಾರ್ಥಗಳನ್ನು ಪಡೆದು ಮತ್ತೆ ಹಿಂತಿರುಗುವುದಿಲ್ಲ" ಎಂದು ಹೇಳಿದೆ. ಬೇರೆ ಶ್ರುತಿಗಳಲ್ಲೂ 'ನನ್ನ ನಾಲಿಗೆ ಕಣ್ಣು ಕಿವಿ ಪ್ರಾಣ ಮೊದಲಾದ ಅಂಗಗಳು ಮತ್ತು ಇತರ ಇಂದ್ರಿಯಗಳೂ ಸಂತೋ ಷಗೊಳ್ಳಲಿ. ಇವೆಲ್ಲವೂ ಬ್ರಹ್ಮವೆಂದು ಶ್ರುತಿ ಹೇಳಿದೆ. ನಾನು ಬ್ರಹ್ಮವನ್ನು ನಿರಾ ಕರಿಸೆನು. ಬ್ರಹ್ಮವೂ ನನ್ನನ್ನು ನಿರಾಕರಿಸದಿರಲಿ. ನನಗೆ ಎಲ್ಲಿಂದಲೂ ನಿರಾಕರಣೆ

ಯಾಗದಿರಲಿ, ನಾನು ಶಿವನಲ್ಲಿಯೇ ಅಂಟುವಂತೆ ಶಿವಧರ್ಮಗಳು ನನ್ನಲ್ಲಿ ನೆಲಸಲಿ". "ಒಳಗೆ ಲಿಂಗವನ್ನು ಧರಿಸಲು ಅಶಕ್ತನಾದರೂ ಹೊರಗೆ ಗುರು ಅನುಗ್ರಹಿಸಿದ ಲಿಂಗವನ್ನಾದರೂ ಧರಿಸಬೇಕೆಂದು ಜ್ಞಾನಿಗಳು ಹೇಳುತ್ತಾರೆ", ಹೀಗೆ ಹೇಳಿದೆ. ಇದಕ್ಕೆ ಪೋಷಕವಾಗಿ ಲಿಂಗಪುರಾಣವಲ್ಲಿ ಬಾದರಾಯಣನು "ಚಿನ್ನ ಬೆಳ್ಳಿ ತಾಮ್ರ ಅಥವಾ ಶಿಲೆಯಿಂದ ಮಾಡಿದ ಪಂಚಸೂತ್ರಘಟಿತವಾದ ಆಖಂಡಲಿಂಗವನ್ನು ಭಕ್ತನು ಯಾವಾಗಲೂ ಧರಿಸಬೇಕು" ಎಂದಾರಂಭಿಸಿ "ಈ ಹಸ್ತವೇ ಭಗವಾನ್ರುದ್ರನು ಎಂಬ ಮಂತ್ರದಲ್ಲಿ ಋಗ್ವೇದವು ಕೈನಲ್ಲಿ ಲಿಂಗವನ್ನು ಯಾವಾಗಲೂ ಧರಿಸಬೇಕೆಂದು ಹೇಳಿದೆ. ಮಂಗಳಕರವಾದ ಲಿಂಗವನ್ನು ಭಕ್ತಿಯಿಂದ ಅರ್ಚಿಸೋಣ, ಕಣ್ಣಿಂದ ನೋಡಿ ಕೇಳಿ ಸಂತೋಷಪಡೋಣ. ಲಿಂಗ ಮೆಚ್ಚುವಂತೆ ಬಾಳೋಣ. ಸ್ವಸ್ತಿ ಎನಿಸಿದ ಈ ಲಿಂಗವನ್ನು ಇಂದ್ರಾದಿ ದೇವತೆಗಳೂ ಧರಿಸಿದ್ದಾರೆ. ಚರಣವೆಂದರೆ ಪವಿತ್ರವೂ ಪಾಪನಾಶಿಯೂ ಆದ ಲಿಂಗ. ಜೀವನನ್ನು ಶಿವನೆಡೆಗೆ ಒಯ್ಯುವುದರಿಂದ ಚರಣವು ಲಿಂಗವೆನಿಸಿದೆ. ಇದು ವಿಸ್ತಾರವೂ ವ್ಯಾಪಕವೂ ನಿತ್ಯವೂ ಪುರಾತನವೂ ಶಾಶ್ವತವೂ ಆದ್ದರಿಂದ ಬ್ರಹ್ಮವೆನಿಸಿದೆ. ಯಾವ ಈ ಲಿಂಗದಿಂದ ಪವಿತ್ರನಾಗಿ ಭಕ್ತನು ಪಾಪದುಃಖಗಳನ್ನು ದಾಟುವನೋ ಅಂತಹ ಲಿಂಗದ ಪ್ರಭಾವದಿಂದ ನಾವು ಆಣವ, ಮಾಯೀಯ, ಕಾರ್ಮಿಕ ಮಲಗಳನ್ನು ಕಳೆದುಕೊಳ್ಳೋಣ. ಚರಣವು ಭಕ್ತವರ್ಗಕ್ಕೆ ಶಿವನನ್ನು ದೊರಕಿಸುವ ಬಾಗಿಲು. ಇದು ಸ್ವಪ್ರಕಾಶವೂ ಲೋಕಪಾವನವೂ ಚಿದ್ರೂಪವೂ ಆಗಿ ಶೋಭಿಸುತ್ತಿದೆ. ಮಹತ್ತ್ವಗುಣದಿಂದ ಇದು ಮಹಾಲಿಂಗವೆನಿಸಿದೆ. ಇದು ನಾಲ್ಕುಬಗೆಯ ಮುಕ್ತಿಯನ್ನು ಅನುಗ್ರಹಿಸಲು ಶಕ್ತವಾಗಿದೆ. ನಮಗೆ ಎಲ್ಲಾ ಬಗೆಯ ಇಷ್ಟಗಳನ್ನೂ ಈಡೇರಿಸುವ ಈ ಲಿಂಗವು ಲೋಕದಲ್ಲಿಯೂ ದೇಹದಲ್ಲಿಯೂ ಪ್ರೀತಿಯಿಂದ ನೆಲಸಲಿ. ಸಂಸಾರದ ಎಲ್ಲಾ ರೋಗಗಳಿಗೂ ಇದು ವೈದ್ಯನಂತೆ ಭೀಕರವಾಗಿದೆ. ಪವಮಾನಸೂಕ್ತದಲ್ಲಿ ಯಜುರ್ವೇದವು ಭಕ್ತರೆಲ್ಲರಿಗೂ ಲಿಂಗಧಾರಣವನ್ನು ವಿಧಿಸಿರುವುದರಿಂದ ಲಿಂಗರೂಪವಾದ ಶಿವನನ್ನು ತಿಳಿಸುವ ಪಾಶುಪತಮತವು ವೈದಿಕವೆನಿಸಿದೆ. ವಾಯುವು ಲಿಂಗಸಂಪರ್ಕದಿಂದಲೇ ನಮ್ಮನ್ನು ಸಂತೋಷಗೊಳಿಸುತ್ತಿರುವನು. ಹೀಗೆ ಪವಿತ್ರವೆನಿಸಿದ ಲಿಂಗದ ಸಂಪರ್ಕವನ್ನು ಪಡೆದವನೇ ವಿಚಕ್ಷಣನೆನಿಸುವನು. ಮೂರು ಲೋಕಗಳಲ್ಲೂ ಪವಿತ್ರವೆನಿಸಿರುವ ಲಿಂಗವು ನಮ್ಮನ್ನು ಸದಾ ಪಾವನಗೊಳಿಸಲಿ. ಎಲ್ಲಾ ಜೀವರನ್ನು ಪಾವನಗೊಳಿಸುವುದರಿಂದಲೇ ಲಿಂಗವು ಪವಿತ್ರವೆನಿಸಿದೆ. ಹಿರಣ್ಯವೆಂದರೆ ವಿಶ್ವರೂಪವಾದ ಶಿವಲಿಂಗವೆಂದರ್ಥ. ಇದನ್ನು ಶೃಂಗ=ತಲೆಯಲ್ಲಿ ಧರಿಸಿದ, ವರುಣಂ-ನಾಶರಹಿತನೂ ಸನಾತನನೂ ಆದ ಲಿಂಗಧಾರಿಗೆ ಪ್ರಪದ್ಯೆ-ತ್ರಿಕರಣಗಳಲ್ಲೂ ಶರಣಾಗುತ್ತೇನೆ. ಹೀಗೆ ವೇದಪುರುಷರೂ ಸಹ 'ತೀರ್ಥಂದೇಹಿ' ಎಂದು ಶಿವಭಕ್ತನನ್ನು ಪ್ರಾರ್ಥಿಸಿದ್ದಾರೆ. ಸರ್ವಾತ್ಮಕವೂ ಸನಾತನವೂ ಲಿಂಗರೂಪವೂ ಆಗಿ ಶ್ರುತಿಯಲ್ಲಿ ಪ್ರತಿಪಾದಿತವಾಗಿರುವ ದಿವ್ಯಜ್ಯೋತಿಯು ಭಾವಪ್ರಾಣೇಷ್ಟರೂಪದಿಂದ ನನ್ನ ಕಾರಣ ಸೂಕ್ಷ್ಮ ಸ್ಥೂಲದೇಹ

ಗಳನ್ನೂ ಜ್ಞಾನಕರ್ಮೇಂದ್ರಿಯಗಳನ್ನೂ ಯಾವಾಗಲೂ ಪರಮಾನಂದವೈಭವ ದಿಂದ ತುಂಬಲಿ. ನಾನು ಎಂದಿಗೂ ಲಿಂಗದಿಂದ ಅಗಲಲಾರೆನು. ಈ ಲಿಂಗವೂ ನನ್ನಿಂದ ಅಗಲದಿರಲಿ. ಈ ದೇಹದಲ್ಲೂ ಆತ್ಮನಲ್ಲೂ ಲಿಂಗವು ನಿರಂತರವೂ ನೆಲಸಲಿ. ಇದರಿಂದ ನನಗೆ ಎಂದಿಗೂ ನಿರಾಕರಣವಾಗದಿರಲಿ. ಶ್ರುತಿಯಲ್ಲಿ ವಿಧಿಸಿರುವ ಭಸ್ಮ ರುದ್ರಾಕ್ಷಧಾರಣವೆಂಬ ಧರ್ಮಗಳು ನನ್ನಲ್ಲಿ ಯಾವಾಗಲೂ ಸ್ಥಿರವಾಗಿ ನೆಲಸಲಿ" ಹೀಗೆ ಹೇಳಿದ್ದಾನೆ. "ಯಾವನ ದೇಹದಲ್ಲಿ ಲಿಂಗವಿಲ್ಲವೋ ಅವನು ಹೆಣದಂತೆ ನಿಷ್ಫಲನೆನಿಸುವನು. ಸ್ಮಶಾನದಲ್ಲಿ ಬೆಳೆದ ಕಟ್ಟಿಗೆ ಹೇಗೆ ಅಡಿಗೆಗೆ ಉಪಯೋಗವಾ ಗುವುದಿಲ್ಲವೋ ಹಾಗೆ ಲಿಂಗವಿಲ್ಲದವನು ಎಲ್ಲಾ ಕರ್ಮಗಳಿಗೂ ದೂರನಾಗುವನು. ಯಾವನ ಎದೆಯಮೇಲೆ ಲಿಂಗ, ಕುತ್ತಿಗೆಯಲ್ಲಿ ರುದ್ರಾಕ್ಷಮಾಲೆ, ಹಣೆಯಲ್ಲಿ ವಿಭೂತಿ ಇರುವುದಿಲ್ಲವೋ ಅವನ ಸಂಗವನ್ನು ತೊರೆಯಬೇಕು. ಭಕ್ತರು ಲಿಂಗಧಾರಣ ವನ್ನು ಮನಸಿನಲ್ಲೂ ಅಲ್ಲಗಳೆಯಬಾರದು. ಅದು ಶ್ರುತಿವಿಹಿತವಾದ್ದರಿಂದ ಅದನ್ನು ತೊರೆದವನು ಪತಿತನಾಗುವನು. ಬ್ರಾಹ್ಮಣರಿಗೆ ಶಿವನೇ ದೇವನಾದ್ದರಿಂದ ಲಿಂಗ ಧಾರಣ ಅನಿವಾರ್ಯವಾಗಿದೆ. ನಿಗಮಾಗಮಗಳ ಆಜ್ಞೆಯಂತೆ ಬ್ರಾಹ್ಮಣರು ಲಿಂಗವನ್ನು ಧರಿಸಲೇಬೇಕು. ಭೃತ್ಯರು ಪ್ರಭುವಿನ ಚಿಹ್ನವನ್ನು ಧರಿಸುವಂತೆ ಭಕ್ತ ರೆಲ್ಲರಿಗೂ ಲಿಂಗಧಾರಣ ವಿಹಿತವಾಗಿದೆ. ಅನಂತಪದ್ಮನಾಭನ ಹಸ್ತದಲ್ಲೂ ಪಾಂಡು ರಂಗನ ಶಿರಸ್ಸಿನಲ್ಲೂ ಲಿಂಗವು ಶೋಭಿಸುತ್ತಿರುವಾಗ್ಯೆ, ಮನುಷ್ಯರ ಬಗ್ಯೆ ಹೇಳುವು ದೇನಿದೆ ?" ಹೀಗೆ ಲಿಂಗಪುರಾಣದಲ್ಲಿ ಷಟ್ಸ್ಥಲಾತ್ಮಕ ಪರಶಿವನ ಚಿತ್ಕಲಾರೂಪವಾದ ಲಿಂಗವನ್ನು ಧರಿಸುವ ಬಗ್ಯೆ ಹೇಳಿರುವುದರಿಂದ ಶ್ರುತಿಯು ಸರ್ವಲಿಂಗವಾಕ್ಯದಲ್ಲಿ ಲಿಂಗಧಾರಣವನ್ನು ವಿಧಿಸಿರುವುದು ಯುಕ್ತವಾಗಿದೆ.

**ಅಸ್ಮಿನ್ನರ್ಥೇ ಹೇತ್ವಂತರಮಾಹ--ವಿವಕ್ಷಿತಗುಣೋಪಪತ್ತೇಶ್ಚ॥೨॥**
**ಅತ್ರ ವಿವಕ್ಷಿತಾಃ ಉಪಾಸನಾಯಾಮುಪಾದೇಯತ್ವೇನ ಯೇ ಗುಣಾಃ ಸತ್ಯತ್ವಾದಯಃ ತೇಷಾಂ ಪರಶಿವಬ್ರಹ್ಮಣ್ಯುಪಪತ್ತೇಃ ಉಪಪನ್ನ ತ್ವಾದಿತ್ಯರ್ಥಃ. "ಋತಂ ಸತ್ಯಂ-ವಿಶ್ವರೂಪಾಯ ವೈ ನಮಃ" ಇತ್ಯಾದಿನಾ ತದ್ಧರ್ಮಶ್ರವಣಾತ್. ಶ್ರುತ್ಯಂತರೇ ಚ "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ", "ಅಥ ಖಲು ಕ್ರತುಮಯಃ ಪುರುಷೋ ಯಥಾಕ್ರತುರಸ್ಮಿನ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ ಮನೋಮಯಃ ಪ್ರಾಣಶರೀರೋ ಭಾರೂಪಃ ಸತ್ಯಸಂಕಲ್ಪ ಆಕಾಶಾತ್ಮಾ ಸರ್ವಕರ್ತಾ ಸರ್ವಕಾಮಃ" ಇತ್ಯಾದೌ ಸರ್ವಾತ್ಮಕಸ್ಯ ಪರಮೇಶ್ವರಸ್ಯ ಭಕ್ತೋಪಾಸನಾರ್ಥಂ ಪ್ರಾಣ ಶರೀರತ್ವೇನ ಪರಿಚ್ಛಿನ್ನತ್ವಸ್ಯ ಸತ್ಯಸಂಕಲ್ಪತ್ವಾದೇಶ್ಚ ವಿವಕ್ಷಿತತ್ವಾತ್, ಅತ್ರ 'ನಿಧನಪತಯೇ ನಮಃ' ಇತ್ಯಾದಿನಾ ಸರ್ವಾತ್ಮಕತ್ವಮುಪದಿಶ್ಯ 'ಪಾಣಿಮಂತ್ರಂ ಪವಿತ್ರಂ' ಇತಿ ಪಾಣ್ಯಧಿಕರಣತ್ವೇನ ಪರಿಚ್ಛಿನ್ನತ್ವ**

ಸ್ಯಾಪಿ ತಸ್ಯೈವ ನಿರ್ದೇಶಾನ್ನೇತರೋಪಾಸನಮತ್ರ ವಿಧೀಯತೇ. ನನು ಪುರಾಣಾಂತರೇಷು ಲಿಂಗಸ್ಯ ಪರಮೇಶ್ವರನಿಕೃಷ್ಟಾಂಗತ್ವೇನ ನಿರ್ದೇಶಾತ್, 'ಚರಣಂ ಪವಿತ್ರಂ' ಇತ್ಯಾದಿಶ್ರುತೀನಾಂ ಅಂಘ್ರಿಪರತ್ವೇನ ರೂಢತ್ವಾತ್ ವೇದಬಾಹ್ಯಸಂಕರಜಾತೇರಪಿ ಭಸ್ಮರುದ್ರಾಕ್ಷಶಿವಲಿಂಗಾದಿ ಚಿಹ್ನಾನಾಂ ದೃಷ್ಟತ್ವಾತ್ಕಥಂ ತೇಷಾಂ ಶ್ರೌತತ್ವಮಿತಿ ಚೇನ್ನ, ಲಿಂಗಪುರಾಣೇ ಜ್ಯೋತಿರ್ಲಿಂಗೋತ್ಪತ್ತ್ಯನಂತರಂ, "ತತಃ ಪ್ರಹೃಷ್ಟಮನಸಾ ಪ್ರಣಿಪತ್ಯ ಮಹೇಶ್ವರಂ । ಪ್ರಾಹ ನಾರಾಯಣೋ ನಾಥಂ ಲಿಂಗಸ್ಥಂ ಲಿಂಗಧಾರಿಣಂ । ಯದಿ ಪ್ರೀತಿಸ್ಸಮುತ್ಪನ್ನಾ ಯದಿ ದೇಯೋ ವರಸ್ಯ ನೌ । ಲಿಂಗಾಧಃಪೀಠವದ್ಭಾತಿ ಕುಂಡಲೀಕೃತಪನ್ನಗಃ । ತದೂರ್ಧ್ವಪೀಠವದ್ಭಾತಿ ಧರಾಽಶ್ವತ್ಥಕಳಾಕೃತಿಃ । ತಸ್ಯಾಂ ಸ್ಥಿತಂ ಮಹಾದೇವಜ್ಯೋತಿರೂಪಂ ಮಹತ್ತರಂ । ಆವಯೋರ್ಗರ್ವನಿರ್ಮೂಲಕಾರಣಂ ಲಿಂಗಮೀದೃಶಂ । ಭವದೀಯಂ ಮಹಾದೇವ ದತ್ವಾ ದೀಕ್ಷಾಂ ಹಿ ನೌ ಕುರು । ತದ್ಧಾರಣಾಚ್ಚ ತದ್ಧ್ಯಾನಾತ್ತದರ್ಚನವಿಧಾನತಃ । ಐಹಿಕಾಮುಷ್ಮಿಕಂ ಸೌಖ್ಯಂ ಪ್ರಾಪ್ನುವಾಮ ಇತಿ ಧ್ರುವಂ ॥ ಏವಂ ತದ್ವಚನಂ ಶ್ರುತ್ವಾ ವಿಶ್ವನಾಥಸ್ಸನಾತನಃ । ಇಂದ್ರನೀಲಮಯಂ ಲಿಂಗಂ ವಿಷ್ಣವೇ ಬ್ರಹ್ಮಣೋ ಮಮ । ಪದ್ಮರಾಗಮಯಂ ಲಿಂಗಂ ದತ್ವಾ ದೀಕ್ಷಾಮಕಾರಯತ್ । ತತಃ ಪ್ರದತ್ತವಾನ್ದೇವೋ ಭಕ್ತಿಮವ್ಯಭಿಚಾರಿಣೀಂ । ವಕ್ಷಸ್ಸ್ಥಲೇ ಹರಿರ್ಲಿಂಗಂ ಮೂರ್ಧ್ನಿ ಚಾಹಂ ಪಿತಾಮಹಃ । ಧೃತ್ವಾ ಪ್ರಹೃಷ್ಟಮನಸಾ ಶ್ರದ್ಧಯಾ ಪರಯಾ ಮುದಾ ॥" ಇತ್ಯಾದಿನಾ ಪರಮೇಶ್ವರಸ್ಯೈವ ಲಿಂಗರೂಪತ್ವದರ್ಶನಾತ್. ಕಿಂಚ ಸಿದ್ಧಾಂತಾಗಮೇ "ಬ್ರಹ್ಮಣಾ ವಿಷ್ಣುನಾ ಪೂರ್ವಂ ಯಲ್ಲಿಂಗಂ ಜ್ಯೋತಿರಾತ್ಮಕಂ । ಅಪರಿಚ್ಛೇದ್ಯಮಭವತ್ತೇನ ವಾ ಪರಿಬೋಧ್ಯತೇ । ಪೀಠಿಕಾ ಪರಮಾ ಶಕ್ತಿಃ ಲಿಂಗಂ ಸಾಕ್ಷಾತ್ಪರಃ ಶಿವಃ । ಶಿವಶಕ್ತಿಸಮಾಯೋಗಾದ್ವಿಶ್ವಂ ಲಿಂಗಂ ತದುಚ್ಯತೇ । ವಿಶ್ವಾಧಿಕತ್ವಮೀಶಸ್ಯ ಲಿಂಗಮೂರ್ತೇಸ್ಸ್ವಭಾವಜಂ । ಅನನ್ಯದೇವಸಾದೃಶ್ಯಂ ಶ್ರುತಿರಾಹ ಸನಾತನೀ । ಲೀಯಂತೇ ಯತ್ರ ಗಮ್ಯಂತೇ ಬ್ರಹ್ಮವಿಷ್ಣ್ವಾದಿನಿರ್ಜರಾಃ । ತಲ್ಲಿಂಗಂ ಪರಮಂ ಬ್ರಹ್ಮ ಸಚ್ಚಿದಾನಂದಲಕ್ಷಣಂ ॥ ಪ್ರತಿಮಾಕಾರಶೂನ್ಯಸ್ಯ ಲಿಂಗಸ್ಯ ಪರಮಾತ್ಮನಃ । ಪ್ರತಿಮಾಕಾರದೇವಾನಾಂ ಸಾದೃಶ್ಯಂ ಕಥಮೀರ್ಯತೇ" ಇತ್ಯಾದಿನಾ ತಥಾ ದರ್ಶನಾಚ್ಚ. ವ್ಯಾಸಗೌತಮದಧೀಚಿಶಾಪದಗ್ಧಧೂರ್ತಕಲ್ಪಿತವಾಕ್ಯಾನಾಂ ಶ್ರುತಿವಿರುದ್ಧತ್ವೇನ ನ ಚಾತ್ರ ಪ್ರಾಮಾಣ್ಯಂ. ತಥಾ ಚೇತ್ ಪಾಂಡರಂಗರಾಮೇಶ್ವರಶ್ರೀಶೈಲಾದಿಷು ವಿಷ್ಣುಪ್ರತಿಷ್ಠಿತಲಿಂಗಾನಾಂ ತದ್ವಿಷ್ಣೋರಪಿ ನ ಸರ್ವೋತ್ಕೃಷ್ಟತ್ವಮುಪಪದ್ಯತೇ. ತದಂಗೀಕಾರೇ ಬೌದ್ಧಪಾಷಂಡಮತ

ಪ್ರಸಂಗಸ್ಸ್ಯಾತ್. ಚರಣಶಬ್ದಸ್ಯಾಂಘ್ರಿಪರತ್ವೇ ಚರಣಶ್ರುತಿನಿಷ್ಠವ್ಯಾಪ
ಕತ್ವಸ್ವಯಂಪ್ರಕಾಶತ್ವಾದಿಧರ್ಮಾಣಾ ವಿರೋಧಪ್ರಸಂಗಸ್ಸ್ಯಾತ್. ಪರ
ಮೇಶ್ವರಧರ್ಮಬಾಹುಳ್ಯಾದಾಕಾಶಪ್ರಾಣಾದಿಶಬ್ದವತ್ತಸ್ಯ ಪರಮೇಶ್ವರ
ಪರತ್ವಮೇವ. ಚರ್ಯತೇ ಭಕ್ಷ್ಯತೇ ಜಗದ್ಯೇನೇತಿ ಚರಣಂ। ಇದಂ
ಸ್ಥಿತೇರಪ್ಯುಪಲಕ್ಷಣಂ. ಚರಂ ಜೀವಂ ಮೋಕ್ಷಂ ನಯತೀತಿ ವಾ. 'ಏಷ
ಏವ ಸಾಧುಕರ್ಮ ಕಾರಯತಿ' ಇತಿ ಶ್ರುತೇಃ. ಉತ್ಪತ್ತಿಸ್ಥಿತಿಲಯ
ಕಾರಣಮಿತಿ ಯಾವತ್. ತಾದರ್ಥ್ಯಾಲ್ಲಿಂಗಂ ಚರಣಶಬ್ದವಾಚ್ಯಂ.
'ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ' ಇತ್ಯಾದಿನಾ
ಲಿಂಗಚರಣಶಬ್ದಯೋಃ ಪರ್ಯಾಯತ್ವಂ ಸುಸ್ಥಂ. "ಭಸ್ಮರುದ್ರಾ
ಕ್ಷಕಂ ಲಿಂಗಂ ಗುರುರ್ಮಂತ್ರಂ ತಥಾ ಚರಃ। ಪಾದೋದಕಂ ಪ್ರಸಾ
ದಶ್ಚ ಶೈವಾಷ್ಟವರಣಾನಿ ಹಿ" ಇತ್ಯಾದಿ ವೈದಿಕಶಿವಾಗಮಸಂಸ್ಕಾರಾಭಾ
ವಾದ್ಬ್ರಹ್ಮವಿದ್ಯಾಂಗಶೈವಾಷ್ಟಾವರಣಾನಿ ಸರ್ವಥಾ ತೇಷಾಂ ನ ಸಂಭ
ವಂತಿ. ಅವೈದಿಕಾನಾಂ ಶೈವಾಗ್ನಿಸಂಸ್ಕಾರಾಭಾವಾತ್. ಜಾಬಾಲಾ
ದ್ಯುಪನಿಷತ್ಸಿದ್ಧ ಶೈವಾಗ್ನಿಭಸ್ಮಧಾರಣಂ ನೋಪದಿಶ್ಯತೇ. 'ಶಿಖಾಯಾ
ಮೇಕಮೇಕಾಸ್ಯಂ' ಇತ್ಯಾದಿನಾ ತೇಷಾಂ ವಿಧ್ಯುಕ್ತಶಿಖಾಶೂನ್ಯತ್ವಾ
ದ್ರುದ್ರಾಕ್ಷಧಾರಣಂ ನ ಸಂಭವತಿ. ಪಂಚಾಕ್ಷರೀಮಂತ್ರಸ್ಯ ಶ್ರೌತಪ್ರಕ
ರಣಪಠಿತತ್ವಾತ್ತೇಷಾಂ ವೇದೋಕ್ತಚತುರ್ವಿಧವರ್ಣಾಂತರ್ಭೂತತ್ವಾ
ಭಾವಾತ್ಸ್ಮೃತ್ಯುಕ್ತಾಷ್ಟಾದಶವರ್ಣಬಾಹ್ಯತ್ವಾಚ್ಚ ವ್ಯತ್ಯಾಸಕ್ರಮೇಣಾಪಿ
ತನ್ಮಂತ್ರೋಪದೇಶಾನರ್ಹತ್ವಾಚ್ಚ ಸೋಽಪಿ ನ ಸಂಭವತಿ. ಉಪನಯ
ನಸಂಸ್ಕಾರಶೂನ್ಯಾನಾಂ ವೇದಬಾಹ್ಯಾನಾಂ ಪ್ರಾಣಪ್ರತಿಷ್ಠಾದಿವೈದಿಕ
ಸಂಸ್ಕಾರವಿಧಿಃ ಕಥಮುಪಪದ್ಯತೇ? ತದಭಾವೇ ಲಿಂಗಸ್ಯಾಪ್ಯಭಾವಾತ್ತ
ದ್ಧಾರಣಪೂಜಾದಿನಾ ಸಕಲಪಾಪಕ್ಷಯಪೂರ್ವಕಪರಶಿವತ್ವಪ್ರಾಪ್ತಿಃ
ಕಥಮುಪಪದ್ಯತೇ? "ಬ್ರಾಹ್ಮಣೋ ವೈ ಸರ್ವದೇವತಾಃ" "ವರ್ಣಾನಾಂ
ಬ್ರಾಹ್ಮಣೋ ಗುರುಃ" ಇತ್ಯಾದಿಶ್ರುತಿಸ್ಮೃತಿಸಿದ್ಧಬ್ರಾಹ್ಮಣಾಚಾರ್ಯ
ತ್ವಾನಂಗೀಕಾರಾತ್ ಗುರುಚರಣತೀರ್ಥಪ್ರಸಾದಚತುಷ್ಟಯಮಪಿ
ನ ಸಂಭವತಿ. ಘೃತಗೋಶಾತಕೀಸುವರ್ಣಕಾರ್ಪಾಸಾದೌ ಘೃತತ್ವಸುವ
ರ್ಣತ್ವಾಭಾವೇಽಪಿ ಪ್ರತೀತಿಮಾತ್ರವದತ್ರಾಪಿ ಶೈವತ್ವಂ ಪ್ರತೀಯತೇ.
ತಥಾ ಸಿದ್ಧಾಂತಾಗಮೇ—"ಆಗಮಶ್ಶಿವಲಿಂಗಸ್ಯ ಶರೀರಮಿತಿ ಕಥ್ಯತೇ।
ಶ್ರುತಿರ್ಲಿಂಗಸ್ಯ ಚೈತನ್ಯಂ ವೇದಾಂತಃ ಪ್ರಾಣಮೀರ್ಯತೇ। ತತ್ಸಂಸ್ಕಾರವಿ
ಹೀನತ್ವಾಲ್ಲಿಂಗಿತ್ವಂ ನಹಿ ಸರ್ವದಾ॥" ಇತಿ. ಕಿಂಚ ತತ್ತ್ವಮಸ್ಯಾದಿ
ಮಹಾವಾಕ್ಯಾರ್ಥಪ್ರತಿಪಾದಿತಲಿಂಗಾಂಗೈಕ್ಯಂ ಕಥಂ ಭವೇದ್ವೇದಬಾ
ಹ್ಯಾನಾಂ? ಅಪಶೂದ್ರಾಧಿಕರಣೇ 'ಸಂಸ್ಕಾರಪರಾಮರ್ಶಾತ್' ಇತಿ

ಸೂತ್ರೇ ಬ್ರಾಹ್ಮಣಕ್ಷತ್ರಿಯವೈಶ್ಯಾನಾಮುಪನಯನಸಂಸ್ಕಾರವಿಶಿಷ್ಟತ್ವಾದ್ಬ್ರಹ್ಮವಿದ್ಯಾಧಿಕಾರೋಽಸ್ತಿ ನ ಶೂದ್ರಾಣಾಮಿತಿ ಶೂದ್ರಾಣಾಂ ಶ್ರುತಿಸ್ಮೃತಿಪುರಾಣೇತಿಹಾಸಸಿದ್ಧಾನಾಮಪಿ ಬ್ರಹ್ಮವಿದ್ಯಾಧಿಕಾರಸ್ಯ ನಿಷಿದ್ಧತ್ವಾತ್ಕಿಮನ್ಯೇಷಾಂ ವಕ್ತವ್ಯಂ? ತಸ್ಮಾತ್ಪೂರ್ವೋಕ್ತಮೇವ ಸಮೀಚೀನಂ. ನನು ರುದ್ರಸ್ಯ ಪರಬ್ರಹ್ಮತ್ವಂ ಕಥಂ? ಆಪಸ್ತಂಬಸೂತ್ರೇ ನಿಋರ್‌ತ್ಯಾದಿವತ್ ರುದ್ರಾಹುತ್ಯನಂತರಂ'ಅಪ ಉಪಸ್ಪೃಶ್ಯ'ಇತ್ಯಮಂಗಳದೇವತಾತ್ವನಿರ್ದೇಶಾತ್ ಇತಿಚೇನ್ನ ತಥಾತ್ವೇ ಪ್ರಮಾಣಾಭಾವಾತ್, ಶ್ರೌತಶುಂಠತ್ವಪ್ರಸಂಗಾತ್. "ತಮೀಶ್ವರಾಣಾಂ ಪರಮಂ ಮಹೇಶ್ವರಂ" ಇತ್ಯಾದಿಶ್ರುತಿಶತೇಷು ಪರಬ್ರಹ್ಮಣಃ ಶಿವಸ್ಯ ಅನನ್ಯಸಾಮಾನ್ಯದೇವತಾತ್ವೋಪದೇಶಾತ್, ಸರ್ವದೇವತಾಧಿಪತಿತ್ವಾದಿಧರ್ಮಾಣಾಂ ತಸ್ಯೈವ ನಿರ್ದೇಶಾಚ್ಚ, ತತ್ಸಮೀಪೇ ತದ್ಭೃತ್ಯಾನಾಂ ಬ್ರಹ್ಮವಿಷ್ಣ್ವಾದೀನಾಂ ಪೂಜಾರ್ಹತ್ವಾಸಂಭವಾತ್ ರುದ್ರಾಂತರ್ಧಾನಾರ್ಥಂ ಅಪಾಂ ಪರಿಷೇಚನಂ ವಿಧೀಯತೇ. ತದುಕ್ತಂ ಯಜುರ್ವೇದೇ 'ಅಪಃ ಪರಿಷಿಂಚತಿ ರುದ್ರಸ್ಯಾಂತರ್ಹಿತ್ಯೈ' ಇತಿ. ನಚ ನಿಋ್‌ರತ್ಯಾದಿಪ್ರಕರಣಪಠಿತತ್ವೇನ ನಿಕೃಷ್ಟತ್ವಂ "ಶ್ವಯುವಮಘವನ್‌ಶಬ್ದಾನಾಂ ಉತ್ಕೃಷ್ಟಾಪಕೃಷ್ಟವಾಚಕಾನಾಂ ಏಕಸೂತ್ರೇ ಪಾಣಿನಿನಾ ನಿರ್ದೇಶಾತ್ ವೃದ್ಧಶಾತಾತಪೇ ರಜಸ್ವಲಾದಿಸಾಹಚರ್ಯೇಣ ಗೋವಿಪ್ರಾಣಾಂ ನಿರ್ದೇಶಾಚ್ಚ ನ ಪ್ರಕರಣದೋಷಃ. ತಸ್ಮಾತ್ತಸ್ಯೈವ ಪರಬ್ರಹ್ಮತ್ವಂ ಸಿದ್ಧಂ.

ಈ ಬಗ್ಗೆ ಬೇರೊಂದು ಕಾರಣವಿದೆ. **ವಿವಕ್ಷಿತಗುಣೋಪಪತ್ತೇಃ ॥೨॥** ಉಪಾಸನೆಗೆ ಯೋಗ್ಯವಾದ ಸತ್ಯಸಂಕಲ್ಪವೇ ಮೊದಲಾದ ಗುಣಗಳು ಪರಶಿವನಲ್ಲಿರುವುದು ಯುಕ್ತವಾದ್ದರಿಂದ ಅವನು ಭಕ್ತರಿಗೆ ದೇಹದಲ್ಲಿ ಧಾರ್ಯನೂ ಅರ್ಚನೀಯನೂ ಆಗಿದ್ದಾನೆ. 'ಬ್ರಹ್ಮವು ಋತವೂ ಸತ್ಯವೂ ಆಗಿದೆ', 'ಇದೆಲ್ಲವನ್ನೂ ಬ್ರಹ್ಮವೆಂದು ತಿಳಿದು ಉಪಾಸಿಸು'."ಜೀವನು ಇಂದಿನ ಉಪಾಸನೆಯಂತೆಯೇ ಮುಂದೆ ಆಗುವನು," "ಮನೋಮಯನೂ ಪ್ರಾಣಶರೀರನೂ ನಿತ್ಯಸುಂದರನೂ ಸತ್ಯಸಂಕಲ್ಪನೂ ಚಿದಾಕಾಶಸ್ವರೂಪನೂ ಸರ್ವಕರ್ತನೂ ಆದ ಆತ್ಮನು" ಎಂಬ ಶ್ರುತಿಗಳಲ್ಲಿ ಪರಶಿವನು ಸತ್ಯಸಂಕಲ್ಪನಾಗಿದ್ದರೂ ಭಕ್ತೋಪಾಸನೆಗಾಗಿ ಪ್ರಾಣಲಿಂಗವೆಂದು ಪರಿಚ್ಛಿನ್ನನಾಗಿರುವುದರಿಂದಲೂ, "ನಿಧನಪತಯೇ ನಮಃ" ಎಂಬಲ್ಲಿ ಅವನನ್ನೇ ಸರ್ವಾತ್ಮಕನೆಂದು ಹೇಳಿ, 'ಪಾಣಿಮಂತ್ರಂ ಪವಿತ್ರಂ' ಎಂಬಲ್ಲಿ ಅವನನ್ನೇ ಭಕ್ತರ ಕೈನಲ್ಲಿ ಅಡಗಿರುವನೆಂದು ತಿಳಿಸಿರುವುದರಿಂದಲೂ ಇಲ್ಲಿ ಬೇರೆ ದೇವನ ಉಪಾಸನವು ವಿಹಿತವಲ್ಲ. ಕೆಲವು ಪುರಾಣಗಳಲ್ಲಿ ಲಿಂಗವನ್ನು ಪರಶಿವನ ನಿಕೃಷ್ಟಾಂಗವೆಂದು ಹೇಳಲಾಗಿದೆ. 'ಚರಣಂ ಪವಿತ್ರಂ' ಎಂಬಲ್ಲಿ ಚರಣಪದವು ಪಾದದಲ್ಲಿಯೇ ರೂಢವಾಗಿದೆ. ವೇದಬಾಹ್ಯವಾದ ಸಂಕರಜಾತಿಯಲ್ಲೂ ಭಸ್ಮರುದ್ರಾಕ್ಷಲಿಂಗಗಳ ಧಾರಣವು ಕಂಡುಬಂದಿದೆ. ಆದ್ದರಿಂದ

ಲಿಂಗಧಾರಣವು ಹೇಗೆ ವೈದಿಕವಾದೀತು? ಅಂದರೆ ಹಾಗಲ್ಲ. ಲಿಂಗಪುರಾಣದಲ್ಲಿ ಜ್ಯೋತಿರ್ಲಿಂಗದ ಬಗ್ಗೆ "ನಾರಾಯಣನು ಸಂತುಷ್ಟಹೃದಯನಾಗಿ ಲಿಂಗರೂಪನಾದ ಶಿವನಿಗೆ ವಂದಿಸಿ 'ನಿನಗೆ ನನ್ನ ಅರ್ಚನೆಯಿಂದ ಸಂತೋಷವಾಗಿದ್ದು ನೀನು ವರವನ್ನು ಕೊಡುವುದಾದರೆ ಲಿಂಗದ ಕೆಳಗೆ ಕುಂಡಲಾಕಾರದಲ್ಲಿ ಸರ್ಪವಿರುವಂತೆ ನನಗೂ, ಮೇಲ್ಭಾಗದಲ್ಲಿ ಭೂಮಿ ಅರಳಿಎಲೆಯ ಆಕಾರದಲ್ಲಿ ನೆಲಸಿರುವಂತೆ ಬ್ರಹ್ಮನಿಗೂ, ಈ ಜ್ಯೋತಿರ್ಲಿಂಗದಲ್ಲಿ ಇರುವಂತೆ ಅನುಗ್ರಹಿಸು. ಇಲ್ಲಿ ನಾವು ಸೇರಿದರೆ ನಮ್ಮ ಗರ್ವ ನಾಶವಾಗುವುದು. ಇದರ ಅರ್ಚನೆಯಿಂದ ನಾವು ಐಹಿಕಾಮುಷ್ಮಿಕ ಸೌಖ್ಯವನ್ನು ಪಡೆಯುವೆವು' ಎಂದು ಕೇಳಿಕೊಳ್ಳುವನು. ಇದನ್ನು ಕೇಳಿ ಸಂತುಷ್ಟನಾದ ಶಿವನು ಇಂದ್ರನೀಲಮಣಿಯ ಲಿಂಗವನ್ನು ವಿಷ್ಣುವಿಗೂ, ಪದ್ಮರಾಗಮಣಿಯ ಲಿಂಗವನ್ನು ಬ್ರಹ್ಮನಿಗೂ ಕೊಟ್ಟು ಅವರಿಗೆ ದೀಕ್ಷೆಯನ್ನು ಅನುಗ್ರಹಿಸಿದನು. ಹರಿಯು ಆ ಲಿಂಗವನ್ನು ವಕ್ಷಸ್ಥಳದಲ್ಲೂ ಬ್ರಹ್ಮನು ಶಿರಸ್ಸಿನಲ್ಲೂ ಧರಿಸಿ ಶ್ರದ್ಧೆಯಿಂದ ತಮ್ಮ ಕಾರ್ಯಗಳಲ್ಲಿ ನಿರತರಾಗಿದ್ದಾರೆ" ಹೀಗೆ ಹೇಳಿರುವುದರಿಂದ ಪರಮೇಶ್ವರನಿಗೆ ಲಿಂಗರೂಪವು ಸ್ವತಸ್ಸಿದ್ಧವಾಗಿದೆ. ಸಿದ್ಧಾಂತಾಗಮದಲ್ಲಿ "ಮೊದಲಿಗೆ ಜ್ಯೋತಿರ್ಲಿಂಗವು ಬ್ರಹ್ಮವಿಷ್ಣುಗಳಿಗೂ ತಿಳಿಯಲಾಗುತ್ತಿರಲಿಲ್ಲ. ಅಂತಹ ಲಿಂಗಕ್ಕೆ ಪರಾಶಕ್ತಿಯೇ ಪೀಠವೂ ಪರಶಿವನೇ ದಿವ್ಯಪ್ರಕಾಶವೂ ಆಗಿರುವುದರಿಂದ ಲಿಂಗಾಕಾರನಾದ ಶಿವನು ವಿಶ್ವಾಧಿಕನೆನಿಸಿದ್ದಾನೆ. ಇವನಿಗೆ ಬೇರೆ ಯಾವ ಸಾದೃಶ್ಯವೂ ಇಲ್ಲವೆಂದು ಸನಾತನವಾದ ಶ್ರುತಿಯೇ ತಿಳಿಸುತ್ತಿದೆ. ಬ್ರಹ್ಮವಿಷ್ಣ್ವಾದಿ ದೇವತೆಗಳೆಲ್ಲರೂ ಎಲ್ಲಿ ಸೇರಿ ಮತ್ತೆ ಬರುವರೋ ಅಂತಹ ಲಿಂಗವು ಸಚ್ಚಿದಾನಂದರೂಪವೆನಿಸಿ ಪರಬ್ರಹ್ಮವಾಗಿದೆ. ಪ್ರತಿಮೆಆಕಾರಗಳಲ್ಲದೆ ಅಖಂಡನಾಗಿರುವ ಮಹಾಲಿಂಗಕ್ಕೆ ಪ್ರತಿಮೆ ಆಕಾರಗಳಾಗಿರುವ ದೇವತೆಗಳ ಸಾದೃಶ್ಯ ಹೇಗೆ ಬಂದೀತು" ಎಂದು ಹೇಳಿದೆ. ವ್ಯಾಸ, ಗೌತಮ, ದಧೀಚಿ ಮಹರ್ಷಿಗಳ ಶಾಪಕ್ಕೀಡಾದ ಧೂರ್ತರು ಕಲ್ಪಿಸಿದ ವಾಕ್ಯಗಳು ಶ್ರುತಿವಿರುದ್ಧವಾದ್ದರಿಂದ ಪ್ರಮಾಣವಾಗಲಾರವು. ಅವೇ ಪ್ರಮಾಣವಾಗುವುದಾದರೆ, ರಾಮೇಶ್ವರ, ಪಾಂಡುರಂಗ, ಶ್ರೀಶೈಲಗಳಲ್ಲಿ ವಿಷ್ಣುವಿನಿಂದ ಪ್ರತಿಷ್ಠಿತವಾದ ಲಿಂಗಗಳನ್ನು ಸರ್ವೋತ್ಕೃಷ್ಟವೆಂದು ಭಾವಿಸಿರುವುದು ಅಯುಕ್ತವೆನಿಸುತ್ತದೆ. ಹಾಗೆ ಕಲ್ಪಿತ ವಾಕ್ಯಗಳನ್ನು ನಂಬುವುದಾದರೆ ಬೌದ್ಧರ ಪಾಷಂಡಮತವನ್ನು ಪ್ರವೇಶಿಸಬೇಕಾಗುವುದು. ಚರಣಶಬ್ದವು ಪಾದವೆಂಬ ಅರ್ಥವನ್ನು ಕೊಡುವುದಾದರೆ, ಆ ಶ್ರುತಿಯಲ್ಲಿ ಹೇಳಿರುವ ವ್ಯಾಪಕತ್ವ ಸ್ವಯಂಪ್ರಕಾಶತ್ವ ಮೊದಲಾದ ಪರಮೇಶ್ವರನ ಧರ್ಮಗಳಿಗೆ ವಿರೋಧವುಂಟಾದೀತು. ಆದ್ದರಿಂದ ಪರಮೇಶ್ವರನ ಧರ್ಮಗಳೇ ವಿಶೇಷವಾಗಿರುವುದರಿಂದ ಪ್ರಾಣಶಬ್ದದಂತೆ ಚರಣಶಬ್ದವೂ ಪರಮೇಶ್ವರನಿಗೇ ಅನ್ವಯಿಸುತ್ತದೆ. ಜಗತ್ತನ್ನು ತನ್ನಲ್ಲಿ ಸೇರಿಸಿಕೊಳ್ಳುವ ಸಾಮರ್ಥ್ಯದಿಂದ ಚರಣವು ಲಿಂಗವೆನಿಸಿದೆ. ಹೀಗೆಯೇ ಜಗತ್ತಿನ ರಕ್ಷಣೆಯೂ ಅವನಿಗೇ ಸೇರಿದೆ. ಜೀವನಿಗೆ ಮೋಕ್ಷವನ್ನು ದೊರಕಿಸುವುದರಿಂದಲೂ ಚರಣವು ಲಿಂಗವೆನಿಸಿದೆ. 'ಇವನೇ ಸಾಧುಕರ್ಮವನ್ನು ಮಾಡಿಸುವನು' ಎಂಬ

ಶ್ರುತಿಯಲ್ಲೂ ಶಿವನೇ ಪ್ರೇರಕನೆನಿಸಿದ್ದಾನೆ. ಹೀಗೆ ಜಗತ್ತಿನ ಉತ್ಪತ್ತಿಸ್ಥಿತಿಲಯ ಗಳಿಗೆ ಶಿವನೇ ಕಾರಣನಾಗಿದ್ದಾನೆ. ಇದೇ ಅರ್ಥವು ಹೊಂದಿಕೆಯಾಗುವುದರಿಂದ ಚರಣಪದವು ಲಿಂಗವನ್ನೇ ಬೋಧಿಸುತ್ತದೆ. ಸಮಸ್ತ ಪ್ರಪಂಚಗಳ ಲಯಕ್ಕಾಶ್ರಯ ವಾದ್ದರಿಂದಲೇ ಲಿಂಗವು ಸ್ಥಲವೆನಿಸಿದೆ. ಹೀಗೆ ಲಿಂಗ, ಸ್ಥಲ, ಚರಣಶಬ್ದಗಳು ಸಮಾನಾರ್ಥಕವಾಗಿವೆ. ಭಸ್ಮ, ರುದ್ರಾಕ್ಷ, ಲಿಂಗ, ಗುರು, ಮಂತ್ರ, ಚರ(ಜಂಗಮ) ಪಾದೋದಕ, ಪ್ರಸಾದ ಇವು ಶೈವರ ಅಷ್ಟಾವರಣಗಳು. ವೈದಿಕಸಂಸ್ಕಾರವಿಲ್ಲದ ವರಿಗೆ ಇವು ಎಂದಿಗೂ ಸಂಭವಿಸುವುದಿಲ್ಲ. ಅವೈದಿಕರಿಗೆ ಶೈವಾಗಮದ ಸಂಸ್ಕಾರ ವಿಲ್ಲದ್ದರಿಂದ ಜಾಬಾಲಶ್ರುತಿಯಲ್ಲಿ ಹೇಳಿರುವಂತೆ ಭಸ್ಮಧಾರಣವು ಅನ್ವಯಿಸುವುದಿಲ್ಲ. ಚೌಲಸಂಸ್ಕಾರವಿಲ್ಲದ್ದರಿಂದ ವಿಧ್ಯುಕ್ತವಾದ ಶಿಖೆಯಿಲ್ಲದವರಿಗೆ 'ಶಿಖೆಯಲ್ಲಿ ಏಕ ಮುಖದ ಒಂದು ರುದ್ರಾಕ್ಷವನ್ನು ಧರಿಸಬೇಕು' ಎಂಬ ವಿಧಿ ಅನ್ವಯಿಸದಿರು ವುದರಿಂದ ರುದ್ರಾಕ್ಷಧಾರಣವೂ ಸಂಭವಿಸುವುದಿಲ್ಲ. ಪಂಚಾಕ್ಷರೀಮಂತ್ರದ ಉಪ ದೇಶವೂ ಶ್ರೌತಪ್ರಕರಣದಲ್ಲಿಯೇ ಬಂದಿರುವುದರಿಂದ ಅವೈದಿಕರು ಅದಕ್ಕೂ ಅರ್ಹ ರಾಗುವುದಿಲ್ಲ. ಶಿವದೀಕ್ಷಾಸಂಸ್ಕಾರವಿಲ್ಲದವರಿಗೆ ಷಡಧ್ವಶೋಧನಪೂರ್ವಕವಾಗಿ ಪ್ರಾಣಪ್ರತಿಷ್ಠೆಯೊಡಗೂಡಿದ ಶಿವಲಿಂಗವು ಹೇಗೆ ದೊರೆತೀತು? ಅಸಂಸ್ಕೃತರು ಲಿಂಗವನ್ನು ಧರಿಸಿ ಪೂಜಿಸಿದರೂ ಅದರಿಂದ ಅವರ ಪಾಪ ಹೇಗೆ ನಾಶವಾದೀತು ಮತ್ತು ಶಿವಭಾವ ಹೇಗೆ ದೊರೆತೀತು? "ಆಚಾರ್ಯನೇ ಎಲ್ಲಾ ದೇವತೆಗಳೂ ಆಗಿರುವನು' 'ಎಲ್ಲಾ ವರ್ಣಗಳಿಗೂ ಬ್ರಹ್ಮಜ್ಞಾನಿಯೇ ಗುರು' ಹೀಗೆ ಶ್ರುತಿಸ್ಮೃತಿ ಗಳಲ್ಲಿ ಹೇಳಿರುವುದರಿಂದ ಶಿವಾನುಭವಿಯನ್ನು ಗುರುವೆಂದು ಅಂಗೀಕರಿಸದಿರುವವರಿಗೆ ಗುರುಲಿಂಗತೀರ್ಥಪ್ರಸಾದಗಳ್ಯಾವುವೂ ಸಿದ್ಧಿಸುವುದಿಲ್ಲ. ಘೃತಕೇಶಾತಕಿ ಎಂಬ ಔಷಧದ ಲತೆಯಲ್ಲೂ, ಸುವರ್ಣಕಾರ್ಪಾಸ(ಮೃದುವಾದ ಹತ್ತಿ) ದಲ್ಲೂ ಘೃತ ಸುವ ರ್ಣಗಳ ಸಂಬಂಧವಿಲ್ಲದಿದ್ದರೂ ಆ ಹೆಸರು ಬಂದಿರುವಂತೆ, ಲಿಂಗಪೂಜಕರು ವೈದಿಕ ಸಂಸ್ಕಾರವಿಲ್ಲದಿದ್ದರೆ ಹೆಸರಿಗೆ ಮಾತ್ರ ಶೈವರೆನಿಸುವರು. "ಆಗಮವು ಶಿವಲಿಂಗದ ಶರೀರವೂ, ಶ್ರುತಿಯು ಚೈತನ್ಯವೂ, ವೇದಾಂತಗಳು ಪ್ರಾಣವೂ ಎನಿಸಿವೆಯಾದ್ದರಿಂದ ಆಗಮಶ್ರುತಿವೇದಾಂತಗಳ ಸಂಸ್ಕಾರವನ್ನು ಹೊಂದದವರಿಗೆ ಲಿಂಗವೆಂದಿಗೂ ದೊರಕ ಲಾರದು" ಎಂದು ಸಿದ್ಧಾಂತಾಗಮದಲ್ಲಿ ಹೇಳಿದೆ. 'ತತ್ತ್ವಮಸಿ' ಎಂಬಲ್ಲಿ ಹೇಳಿ ರುವ ಲಿಂಗಾಂಗೈಕ್ಯವು ಅವೈದಿಕರಿಗೆ ಹೇಗೆ ಅನ್ವಯಿಸೀತು? ಅಪಶೂದ್ರಾಧಿಕರಣ ದಲ್ಲಿ 'ಸಂಸ್ಕಾರಪರಾಮರ್ಶಾತ್' ಎಂಬ ಸೂತ್ರದಲ್ಲಿ "ಬ್ರಹ್ಮ ಕ್ಷತ್ರಿಯ ವೈಶ್ಯರು ಶಿವದೀಕ್ಷಾಸಂಸ್ಕಾರ ವಿಶಿಷ್ಟರಾದ್ದರಿಂದ ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆ, ಆದರೆ ಶೂದ್ರರಿಗಿಲ್ಲ' ಎಂದು ಹೇಳಿದೆ. ಶ್ರುತಿ ಸ್ಮೃತಿ ಪುರಾಣೇತಿಹಾಸಗಳನ್ನು ಓದಿರುವ ಶೂದ್ರರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದಮೇಲೆ ಬೇರೆಯವರ ಬಗ್ಗೆ ಹೇಳುವುದೇನಿದೆ? ಆದ್ದರಿಂದ ಸಂಸ್ಕಾರಿಗಳೇ ಬ್ರಹ್ಮವಿದ್ಯೆಗಧಿಕಾರಿಗಳೆಂದು ಹೇಳುವುದೇ ಯುಕ್ತವಾಗಿದೆ. ಆಪಸ್ತಂಬಸೂತ್ರದಲ್ಲಿ ನೈಋತ್ಯಾದಿಗಳಂತೆ ರುದ್ರನಿಗೆ

ಆಹುತಿ ಕೊಟ್ಟಮೇಲೆ 'ಕೈ ತೊಳೆಯಬೇಕು' ಎಂದು ಹೇಳಿರುವುದರಿಂದ ಅಶುಚಿ ಭಾವವನ್ನು ತಿಳಿಸಲಾಗಿದೆಯಾದ್ದರಿಂದ ರುದ್ರನು ಹೇಗೆ ಪರಬ್ರಹ್ಮವಾದಾನು? ಎಂದು ಹೇಳುವುದು ಯುಕ್ತವಲ್ಲ. ಹಾಗೆ ಹೇಳಲು ಯಾವ ಪ್ರಮಾಣವೂ ಇಲ್ಲ. ಹಾಗೆ ಹೇಳಿದರೆ ಶ್ರೌತಕರ್ಮಗಳೆಲ್ಲವೂ ವ್ಯರ್ಥವಾಗಬೇಕಾದೀತು. 'ತ್ರಿಮೂರ್ತಿಗಳಿಗುತ್ಕೃಷ್ಟನೂ ದೇವತೆಗಳೆಲ್ಲರಿಗೂ ಪರಮಾರಾಧ್ಯನೂ, ಪ್ರಭುಗಳೆಲ್ಲರಿಗೂ ಪರಮಪ್ರಭುವೂ ಸರ್ವವಂದ್ಯನೂ ಆದ ಶಿವನನ್ನು ತಿಳಿಯೋಣ" "ವಿಶ್ವಾಧಿಕನೂ ಮಹರ್ಷಿಯೂ ಆದ ರುದ್ರನು" ಹೀಗೆ ಅನೇಕ ಶ್ರುತಿಗಳಲ್ಲಿ ಪರಶಿವನೇ ಅಸಾಧಾರಣದೇವನೆಂದು ಹೇಳಿದೆ. ಅವನ ಸಮೀಪದಲ್ಲಿ ಆವನ ಸೇವಕರಾದ ವಿಷ್ಣ್ವಾದಿದೇವತೆಗಳು ಪೂಜಾರ್ಹರಾಗಲಾರರಾದ್ದರಿಂದ ರುದ್ರನು ಮರೆಯಾಗಲೆಂದು 'ನೀರಿನ ಪರಿಷೇಚನ'ವನ್ನು ತಿಳಿಸಲಾಗಿದೆ. "ರುದ್ರನು ಮರೆಯಾಗಲೆಂದು ನೀರನ್ನು ಪರಿಷೇಚನ ಮಾಡಬೇಕು" ಎಂದು ಯಜುರ್ವೇದದಲ್ಲೂ ಹೇಳಿದೆ. ಒಂದೇ ಪ್ರಕರಣದಲ್ಲಿಯೇ ಹೇಳಿರುವುದರಿಂದ ಇದೇನೂ ನಿಕೃಷ್ಟವೆನಿಸುವುದಿಲ್ಲ. "ಗೋ,ಶ್ವಾನ,ಅಗ್ನಿ,ಬ್ರಾಹ್ಮಣರನ್ನು ಕಂಡರೆ ಸ್ನಾನಮಾಡಬೇಕು? ಎಂಬ ಕಡೆ ಒಂದೇ ಪ್ರಕರಣವಲ್ಲಿ ಉತ್ಕೃಷ್ಟವೂ ಅಪಕೃಷ್ಟವೂ ಆದ ವಸ್ತುಗಳನ್ನು ಒಟ್ಟಿಗೆ ಸೇರಿಸಿದೆ. ಹಾಗೆಯೇ ಶ್ವ, ಯುವ, ಮಘವ ಎಂಬ ಶಬ್ದಗಳನ್ನು ಒಂದೇ ಸೂತ್ರದಲ್ಲಿ ಪಾಣಿನಿ ಪ್ರಯೋಗಿಸಿದ್ದಾನೆ. ಆದ್ದರಿಂದ ರುದ್ರನ ಬಗ್ಗೆ 'ನೀರಿನಿಂದ ಕೈ ತೊಳೆಯಬೇಕು' ಎಂದು ಹೇಳಿದ್ದರಿಂದ ಪ್ರಕರಣದೋಷಕ್ಕೂ ನಿಕೃಷ್ಟಭಾವನೆಗೂ ಅವಕಾಶವಿಲ್ಲ. ಇದರಿಂದ ರುದ್ರನೇ ಪರಬ್ರಹ್ಮವೆಂಬುದು ನಿರ್ವಿವಾದವೆನಿಸಿದೆ.

**ಅತ್ರೋಕ್ತಬ್ರಹ್ಮಲಕ್ಷಣಸ್ಯ ನಾರಾಯಣೇಽತಿವ್ಯಾಪ್ತಿಮಾಶಂಕ್ಯ ನಿರಾಕರೋತಿ—ಅನುಪಪತ್ತೇಸ್ತು ನ ಶಾರೀರಃ ||೩||**

ಅತ್ರ ತುಶಬ್ದೋ ನಿಶ್ಚಯಾರ್ಥಃ. ಪೂರ್ವೋಕ್ತಶಿವಲಿಂಗಧಾರಣಮೇವಶ್ರೋತ್ರಿಯಾಣಾಂ ಬ್ರಹ್ಮವಿದ್ಯೋಪಾಸಕಾನಾಮವಶ್ಯಂ ಕರ್ತವ್ಯಂ. ನ ಶಾರೀರಃ, ಪೂರ್ವಾನುವಾಕೇ 'ಸಹಸ್ರಶೀರ್ಷಂ' ಇತ್ಯಾರಭ್ಯ ಸಹಸ್ರಶೀರ್ಷತ್ವಾದಿವಿಶಿಷ್ಟಸ್ಯ ನಾರಾಯಣಸ್ಯಮೂರ್ತ್ಯಾತ್ಮಕತ್ವೇನ ವ್ಯಪದೇಶಾತ್, ಸಮುದ್ರೇಽಂತಂ' ಇತ್ಯಾದಿನಾ ಸಮುದ್ರಶಾಯಿತ್ವಾದಿಲಿಂಗಾನಾಂತಸ್ಯೈವ ಸಮುಚಿತತ್ವಾತ್, ತದ್ವಾಚಕಾಚ್ಯುತಹರಿಶಬ್ದಪ್ರಯೋಗಾಚ್ಚಮೂರ್ತಿರೂಪನಾರಾಯಣಾತ್ಮಕಶ್ಶಾರೀರ ಏವಾತ್ರೋಪಾಸ್ಯೋ ನ ಭವತಿ, ಕುತಃ ಅನುಪಪತ್ತೇಃ, 'ನಿಧನಪತಯೇ ನಮಃ' ಇತ್ಯಾರಭ್ಯ 'ಸರ್ವಂಲಿಂಗಂ ಸ್ಥಾಪಯತಿ' ಇತ್ಯಂತಂ ಶಿವಲಿಂಗಸ್ಯ ಪರಬ್ರಹ್ಮತ್ವೇನ ಧ್ಯಾನಧಾರಣಾತ್ಮಕಸರ್ವೋಪಾಸನವಿಷಯತ್ವಪ್ರಕಟನಾಯ ಪ್ರತಿಪದನಮಸ್ಕಾರಪೂರ್ವಕಂ ಸರ್ವಾತ್ಮಕತ್ವಪ್ರತಿಪಾದನಾತ್, ಮೂರ್ತ್ಯಾತ್ಮಕಸ್ಯ ವಿಷ್ಣೋಸ್ತದ್ಧರ್ಮಾಣಾಮಸಂಭವಾತ್ ಅಪ್ರತಿಮಾಕಾರಸ್ಯ ಲಿಂಗ

ಸ್ಯೈವ ಸರ್ವೋಪಾಸ್ಯತ್ವಂ ಸಿದ್ಧಂ. ಶೈವೇ "ಶಿವಶಕ್ತ್ಯಾತ್ಮಕಂ ಲಿಂಗಂ ಚಿದ್ರೂಪಂ ಪಾರಮ್ಯೈಶ್ವರಂ । ಬ್ರಹ್ಮವಿಷ್ಣ್ವಾದಿದೇವಾನಾಂ ಧ್ಯೇಯಂ ಧಾರ್ಯಂ ಸನಾತನಂ । ಲೀಯತೇಽಸ್ಮಿನ್ ಜಗತ್ಸರ್ವಂ ಜಂಗಮಸ್ಥಾವರಾತ್ಮಕಂ । ಗಮ್ಯತೇ ಸೃಷ್ಟಿಕಾಲೇ ತು ತಲ್ಲಿಂಗಂ ಬ್ರಹ್ಮ ಶಾಶ್ವತಂ॥" ಇತಿ ವ್ಯುತ್ಪತ್ತ್ಯಾ ಚರಲಿಂಗಸ್ಯ ಮಹತ್ತ್ವಂ ಬ್ರಹ್ಮಲಕ್ಷಣಮುಕ್ತಂ. ಶ್ರುತಿಸ್ಮೃತಿಪುರಾಣಾಗಮಸಿದ್ಧತ್ವಾತ್ತದ್ಧಾರಣೋಪಾಸನಾದಿಕಂ ವೈದಿಕಂ, ವಿಷ್ಣುವಿಗ್ರಹಸಾಲಿಗ್ರಾಮಾದ್ಯುಪಾಸನಸ್ಯ ಶ್ರೌತವಿಧ್ಯಭಾವಾತ್ತಾಂತ್ರಿಕತ್ವಂ ಸಿದ್ಧಂ, ಕಿಂಚ ತತ್ಪ್ರಕರಣಪಠಿತವಿಶ್ವಪತಿತ್ವಾದಿಪರಮೇಶ್ವರಧರ್ಮಾಣಾಂ ನಾರಾಯಣೇಽಸಂಭವಾತ್. 'ಪಶೂನಾಂ ಪತಯೇ–ಜಗತಾಂ ಪತಯೇ ನಮಃ' ಇತ್ಯಾದಿಶ್ರುತಿಶತೇಷು ಶಿವಸ್ಯೈವ ಸಕಲಭುವನಾಧಿಪತಿತ್ವವ್ಯವಸ್ಥಾಪನಾತ್, 'ಏಕ ಏವ ರುದ್ರೋ' ಇತಿ ರುದ್ರವ್ಯತಿರಿಕ್ತಸ್ಯ ಜಗದೀಶ್ವರತ್ವನಿರಾಸಾತ್, 'ವಿಶ್ವಾಧಿಕೋ ರುದ್ರಃ' ಇತಿ ತಸ್ಯೈವ ವಿಶ್ವಾಧಿಕತ್ವಶ್ರವಣಾಚ್ಚ ನ ವಿಷ್ಣ್ವಾದೀನಾಂ ಶರೀರಿಣಾಂ ಸರ್ವೋಪಾಸ್ಯತ್ವಂ. ನನ್ವೇವಂ ನಾರಾಯಣೋಪಾಸನವಿಧಾಯಕವಾಕ್ಯಾನಾಂ ಕಾಂ ಗತಿಃ ಇತಿ ಚೇದುಚ್ಯತೇ–'ತತ್ತ್ವಮಸಿ' ಇತ್ಯಾದಿಷು ಬ್ರಹ್ಮೋಪಾಸಕಾನಾಂ ಬ್ರಹ್ಮತ್ವೋಪದೇಶವತ್ ನಾರಾಯಣಸ್ಯ ಬ್ರಹ್ಮತ್ವಮುಪದಿಶ್ಯ, 'ಪದ್ಮಕೋಶಪ್ರತೀಕಾಶಂ', ಇತಿ ತಸ್ಯ ಹೃದಯಪುಂಡರೀಕಮುಪದಿಶ್ಯ' 'ತಸ್ಯ ಮಧ್ಯೇ ವಹ್ನಿಶಿಖಾ' ಇತಿ ತಸ್ಯ ಜೀವಸ್ವರೂಪಂ ನಿರ್ದಿಶ್ಯ 'ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ' ಇತಿ ಜೀವಾಂತರ್ಯಾಮಿತ್ವೇನ ಪರಮೇಶ್ವರಸ್ಯೋಪಾಸ್ಯತ್ವಂ ವಿಧೀಯತೇ. 'ಸ ಬ್ರಹ್ಮಾ ಸ ಶಿವಸ್ಸೇಂದ್ರಃ' ಇತಿ ತದ್ವಿಭೂತಿರೂಪಬ್ರಹ್ಮವಿಷ್ಣುರುದ್ರೇಂದ್ರಾದಿಸರ್ವಶಬ್ದವಾಚ್ಯತ್ವಂ ತಸ್ಯೈವ ನಿರ್ಣೀಯತೇ. ತಥಾ ಶ್ರುತ್ಯಂತರೇಷ್ವಪಿ ಬ್ರಹ್ಮಣೋ ರುದ್ರಸ್ಯ ಬ್ರಹ್ಮವಿಷ್ಣುಕಾಲರುದ್ರಾತೀತತ್ವಂ ತತ್ಕಾರಣತ್ವಂ ತಚ್ಛಬ್ದವಾಚ್ಯತ್ವಂ ಚ ಶ್ರೂಯತೇ. 'ಶಿವಮದ್ವೈತಂ ಚತುರ್ಥಂ ಮನ್ಯಂತೇ' ಇತಿ ಮಾಂಡೂಕ್ಯೇ ಸರ್ವಾತೀತತ್ವಂ. 'ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ' ಇತ್ಯಥರ್ವಶಿಖಾಯಾಂ 'ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ' ಇತಿ ಕೈವಲ್ಯೇ ಸರ್ವಶಬ್ದವಾಚ್ಯತ್ವವ್ಯವಸ್ಥಾಪನಾತ್ ನಾನ್ಯಸ್ಯಾತ್ರೋಪಾಸ್ಯತ್ವಂ ಸಿದ್ಧ್ಯತಿ. 'ಅಥವಾಹಂ ಹರಿಸ್ಸಾಕ್ಷಾತ್ಸರ್ವಜ್ಞಃ ಪುರುಷೋತ್ತಮಃ । ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷಃ ಸಹಸ್ರಪಾತ್ ॥' ಇತ್ಯಾರಭ್ಯ 'ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ಮಹೇಶ್ವರಂ । ನೀಲಗ್ರೀವಂ ಮಹಾತ್ಮಾನಂ ಪಶ್ಯಂತಂ ಪಾಪನಾಶನಂ' ಇತ್ಯಾದಿನಾ ಭಗವತಾ ಬಾದರಾಯಣೇನ ಸೂತಸಂಹಿತಾಯಾಂ ಧ್ಯಾನ

ಯೋಗಪ್ರಕರಣೇ ವ್ಯಾಖ್ಯಾತತ್ವಾನ್ನಾನ್ಯಾರ್ಥೋ ವೈದಿಕಃ. ಸ್ಮೃತ್ಯಂತರೇಽಪಿ—'ಏವಮುಕ್ತ್ವಾ ಮಹಾಬಾಹುರ್ಮಹಾಯೋಗೀಶ್ವರೋ ಹರಿಃ । ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ।' ಇತಿ. ವಾಮನಪುರಾಣೇ—'ತತೋಽಪ್ಯಯಾತ್ಮಾ ಸ ಹರಿಃ ಸ್ವಹೃತ್ಪಂಕಜಶಾಯಿನಂ । ದರ್ಶಯಾಮಾಸ ದೇವಾನಾಂ ಮುರಾರಿರ್ಲಿಂಗಮೈಶ್ವರಂ ॥' ಇತಿ. ಗೀತಾಯಾಮಪಿ "ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ" ಇತಿ. ಏವಂ ಶ್ರುತಿಸ್ಮೃತಿಪುರಾಣೇಷು ನಾರಾಯಣಸ್ಯೋಪಾಸಕತ್ವಂ ಶಿವಸ್ಯೋಪಾಸ್ಯತ್ವಂ ಚ ಘಂಟಾಘೋಷೇಣ ಶ್ರುತಂ.

ಇಲ್ಲಿ ಹೇಳಿದ ಬ್ರಹ್ಮಲಕ್ಷಣವು ನಾರಾಯಣನಲ್ಲೂ ಬರುವುದೆಂದಾಶಂಕಿಸಿ ನಿರಾಕರಿಸುತ್ತಾನೆ—**ಅನುಪಪತ್ತೇಸ್ತು ನ ಶರೀರಃ ॥೩॥**

ಇಲ್ಲಿ ತು ಶಬ್ದವು ನಿಶ್ಚಯಾರ್ಥವನ್ನು ತಿಳಿಸುತ್ತದೆ. ಹಿಂದೆ ಹೇಳಿದ ಲಿಂಗಧಾರಣವೇ ಬ್ರಹ್ಮವಿದ್ಯೆಯಲ್ಲಾಸಕ್ತರಾದವರಿಗೆ ಅವಶ್ಯಕರ್ತವ್ಯವಾದ್ದರಿಂದ, ನ ಶಾರೀರಃ-ಜೀವನೆನಿಸಿದ ನಾರಾಯಣನು ಉಪಾಸ್ಯನಾಗುವುದಿಲ್ಲ. ಹಿಂದಿನ ಅನುವಾಕದಲ್ಲಿ 'ಸಹಸ್ರಶೀರ್ಷಂ' ಎಂಬಲ್ಲಿ ನಾರಾಯಣನಿಗೆ ಸಾವಿರ ತಲೆ ಮೊದಲಾದ ಅವಯವಗಳನ್ನೂ, 'ಸಮುದ್ರೇಂತಂ' ಎಂಬಲ್ಲಿ ಸಮುದ್ರಶಯನವೇ ಮೊದಲಾದ ಧರ್ಮಗಳನ್ನು ಹೇಳಿರುವುದರಿಂದಲೂ, ಅಚ್ಯುತ ಮೊದಲಾದ ಶಬ್ದಗಳು ನಾರಾಯಣನಿಗೇ ಅನ್ವಯಿಸುವುದರಿಂದಲೂ ನಾರಾಯಣನು ಇಲ್ಲಿ ಉಪಾಸ್ಯನೆನಿಸುವುದಿಲ್ಲ; ಯಾಕೆಂದರೆ ಹಾಗೆ ಹೇಳಲು ಇಲ್ಲಿ ಸಾಧಕವಾದ ಯುಕ್ತಿಗಳಿಲ್ಲ. 'ನಿಧನಪತಯೇ-ಸರ್ವಲಿಂಗಂ ಸ್ಥಾಪಯತಿ' ಎಂಬಲ್ಲಿ ಶಿವಲಿಂಗವನ್ನು ಪರಮಾತ್ಮನಾದ್ದರಿಂದಲೇ ಧ್ಯಾನಧಾರಣಗಳಿಗರ್ಹನೆಂದು ತಿಳಿಸಲಿಕ್ಕಾಗಿ ಪ್ರತಿಯೊಂದು ಪದದಲ್ಲೂ ನಮಃಪದವನ್ನು ಪ್ರಯೋಗಿಸಿ ಅವನೇ ಸರ್ವಾತ್ಮಕನೆಂದು ಹೇಳಿರುವುದರಿಂದಲೂ, ಮೂರ್ತ್ಯಾತ್ಮಕನಾದ ನಾರಾಯಣನಿಗೆ ಆ ಧರ್ಮಗಳು ಸಂಭವಿಸುವುದಿಲ್ಲವಾದ್ದರಿಂದಲೂ, ಪ್ರತಿಮೆಯ ಆಕಾರವಿಲ್ಲದ ಮಹಾಲಿಂಗವು ಸರ್ವರಿಗೂ ಉಪಾಸ್ಯವೆಂಬುದು ಸಿದ್ಧವಾಯಿತು. ಶೈವಪುರಾಣದಲ್ಲಿ "ಶಿವಶಕ್ತ್ಯಾತ್ಮಕವೂ ಚಿದ್ರೂಪವೂ ಸನಾತನವೂ ಆದ ಶಿವಲಿಂಗವು ಬ್ರಹ್ಮವಿಷ್ಣ್ವಾದಿ ದೇವತೆಗಳೆಲ್ಲರಿಗೂ ಧ್ಯಾನಧಾರಣಗಳಿಗರ್ಹವಾಗಿದೆ. ಚರಾಚರ ಜಗತ್ತು ಯಾವುದರಲ್ಲಿ ಲೀನವಾಗಿ ಸೃಷ್ಟಿಕಾಲದಲ್ಲಿ ಹೊರಗೆ ಬರುತ್ತದೆಯೋ ಅದೇ ಲಿಂಗ; ಶಾಶ್ವತ ಬ್ರಹ್ಮ" ಎಂಬ ವ್ಯುತ್ಪತ್ತಿಯಿಂದ ಲಿಂಗದಲ್ಲಿ ಬ್ರಹ್ಮದ ಲಕ್ಷಣವು ಅನ್ವಯಿಸುತ್ತದೆ. ಶ್ರುತ್ಯಾಗಮಗಳಲ್ಲಿ ಹೀಗೆ ಸಿದ್ಧವಾಗಿರುವುದರಿಂದ ಲಿಂಗಧಾರಣಾರ್ಚನಗಳು ವೈದಿಕವೆನಿಸಿವೆ. ಮತ್ತು ವಿಷ್ಣುವಿಗ್ರಹ ಮತ್ತು ಸಾಲಿಗ್ರಾಮಗಳ ಉಪಾಸನವು ಶ್ರುತ್ಯುಕ್ತವಲ್ಲದ್ದರಿಂದ ತಾಂತ್ರಿಕವೆನಿಸಿದೆ. ಇದೂ ಅಲ್ಲದೆ, ಆ ಪ್ರಕರಣದಲ್ಲಿ ಹೇಳಿರುವ ವಿಶ್ವಪತಿತ್ವ ಮೊದಲಾದ ಪರಮೇಶ್ವರಧರ್ಮಗಳು ನಾರಾಯಣನಲ್ಲಿ ಸಂಭವಿಸುವುದಿಲ್ಲ. 'ಪಶುಪತಿಗೂ ಜಗತ್ಪತಿಗೂ ನಮಸ್ಕಾರ' ಹೀಗೆ ಅನೇಕ ಶ್ರುತಿಗಳಲ್ಲಿ ಶಿವನೇ ಸಕಲ ಭುವನ

ಗಳಿಗಧಿಪತಿ ಎಂದು ವ್ಯಸಕ್ತಿಯಾಗಿದೆ. "ರುದ್ರನು ತನ್ನ ಶಕ್ತಿಗಳಿಂದ ಈ ಲೋಕಗಳನ್ನು ಆಳುತ್ತಿರುವನು" ಈ ಶ್ರುತಿಯಲ್ಲಿ ರುದ್ರನಲ್ಲದೆ ಬೇರೆ ಯಾರಿಗೂ ಜಗದೀಶ್ವರತ್ವವನ್ನು ತಿಳಿಸಿಲ್ಲ. ಹಾಗೆಯೇ ವಿಶ್ವಾಧಿಪತಿತ್ವವನ್ನು ಬೇರೆಯವರಿಗೆ ಅನ್ವಯಿಸುವುದಾಗಿಯೂ ಹೇಳಿಲ್ಲ. ಆದ್ದರಿಂದ ವಿಷ್ಣುವೇ ಮೊದಲಾದ ಜೀವರಿಗೆ ವಿಶ್ವಾಧಿಪತಿತ್ವವೂ ಸರ್ವೋಪಾಸ್ಯತ್ವವೂ ಸಂಭವಿಸುವುದಿಲ್ಲ. ಹಾಗಾದರೆ ನಾರಾಯಣನ ಉಪಾಸನವನ್ನು ತಿಳಿಸುವ ವಾಕ್ಯಗಳಿಗೇನು ಗತಿ? ಅಂದರೆ ಅದಕ್ಕೆ ಹೀಗೆ ಹೇಳಲಾಗುವುದು. 'ತತ್ತ್ವಮಸಿ' ಎಂಬಲ್ಲಿ ಬ್ರಹ್ಮೋಪಾಸಕರನ್ನು ಬ್ರಹ್ಮವೆಂದು ಹೇಳಿರುವಂತೆ ನಾರಾಯಣನನ್ನು ಬ್ರಹ್ಮವೆಂದು ಉಪದೇಶಿಸಿ, 'ಪದ್ಮಕೋಶಪ್ರತೀಕಾಶಂ.' ಎಂದು ಅವನ ಹೃದಯಕಮಲವನ್ನು ತಿಳಿಸಿ 'ಅದರ ಮಧ್ಯದಲ್ಲಿ ವಹ್ನಿಶಿಖೆ ಇದೆ' ಎಂದು ನಾರಾಯಣನ ಜೀವಸ್ವರೂಪವನ್ನು ನಿರ್ದೇಶಿಸಿ, 'ಆ ಜೀವಜ್ವಾಲೆಯ ಮಧ್ಯದಲ್ಲಿ ಪರಮಾತ್ಮನು ನೆಲಸಿರುವನು' ಎಂದು ಜೀವಾಂತರ್ಯಾಮಿ ಪರಶಿವನನ್ನು ತಿಳಿಸಿ, ಅವನಿಗೇ ಬ್ರಹ್ಮ ವಿಷ್ಣು ಕಾಲರುದ್ರ, ಇಂದ್ರ ಮೊದಲಾದ ಹೆಸರುಗಳಿರುವುವೆಂದು ನಿರ್ಣಯಿಸಲಾಗಿದೆ. ಹೀಗೆಯೇ ಬೇರೆ ಶ್ರುತಿಯಲ್ಲೂ ಪರಬ್ರಹ್ಮವೆನಿಸಿದ ರುದ್ರನು ತ್ರಿಮೂರ್ತ್ಯತೀತನೆಂದೂ, ಅವರೆಲ್ಲರಿಗೂ ಕಾರಣನೆಂದೂ ಹೇಳಲಾಗಿದೆ. 'ಧ್ಯಾನಾರ್ಹನಾದ ಈಶ್ವರನಿಂದಲೇ ತ್ರಿಮೂರ್ತಿಗಳು ಹುಟ್ಟಿದ್ದಾರೆ,' ಎಂಬಲ್ಲಿ ಅವನೇ ಸರ್ವಕಾರಣನೆಂದು ಹೇಳಿದೆ. 'ಉಮಾಸಹಾಯಂ' ಎಂದಾರಂಭಿಸಿ ಕೈವಲ್ಯಶ್ರುತಿಯು 'ಅವನೇ ಬ್ರಹ್ಮ, ಶಿವ, ಹರಿ, ಇಂದ್ರ-ಅಕ್ಷರ, ಸ್ವತಂತ್ರ' ಎಂದೂ, 'ಅವನೇ ವಿಷ್ಣು, ಪ್ರಾಣ, ಕಾಲ, ಅಗ್ನಿ-ಚಂದ್ರ' ಎಂದೂ, 'ಅವನೇ ಎಲ್ಲವು' ಎಂದೂ ಹೇಳಿ ಅವನನ್ನು ಸರ್ವಶಬ್ದವಾಚ್ಯನೆಂದು ತಿಳಿಸುತ್ತದೆ. ಆದ್ದರಿಂದ ನಾರಾಯಣಸೂಕ್ತದಲ್ಲಿ ಶಿವನಲ್ಲದೆ ಬೇರೆ ಯಾರೂ ಉಪಾಸ್ಯರಲ್ಲವೆಂದು ಸಿದ್ಧವಾಯಿತು. "ಹರಿ ಎನಿಸಿದ ನಾನು ಸರ್ವಜ್ಞನೂ, ಪುರುಷೋತ್ತಮನೂ, ಸಹಸ್ರಾಕ್ಷನೂ, ಸಹಸ್ರಪಾದನೂ ಆದ ಪುರುಷನಾಗಿದ್ದೇನೆ" ಎಂದಾರಂಭಿಸಿ "ಊರ್ಧ್ವರೇತನೂ, ವಿರೂಪಾಕ್ಷನೂ, ನೀಲಗ್ರೀವನೂ, ಮಹಾತ್ಮನೂ, ಪಾಪನಾಶಕನೂ ಆದ ಪರಮೇಶ್ವರನನ್ನು ನೋಡುತ್ತ" ಎಂದು ಕೊನೆಯಾಗಿರುವ ಸೂತಸಂಹಿತೆಯ ಧ್ಯಾನಯೋಗಪ್ರಕರಣದಲ್ಲಿ ಬಾದರಾಯಣನು ತಿಳಿಸಿರುವಂತೆ ನಾರಾಯಣಾನುವಾಕದಲ್ಲಿ ಶಿವನಲ್ಲದೆ ಬೇರೆ ಅರ್ಥ ಹೇಳುವುದು ಶ್ರುತಿಸಮ್ಮತವಾಗುವುದಿಲ್ಲ. "ಹೀಗೆ ಹೇಳಿ ಮಹಾಯೋಗೀಶ್ವರನಾದ ಕೃಷ್ಣನು ಅರ್ಜುನನಿಗೆ ಈಶ್ವರಸಂಬಂಧವಾದ ರೂಪವನ್ನು ತೋರಿಸಿದನು' ಎಂದೂ, "ಆಮೇಲೆ ಹರಿಯು ತನ್ನ ಹೃತ್ಕಮಲದಲ್ಲಿ ನೆಲಸಿದ್ದ ಶಿವಲಿಂಗವನ್ನು ದೇವತೆಗಳಿಗೆ ತೋರಿಸಿದನು" ಎಂದೂ ವಾಮನಪುರಾಣದಲ್ಲಿ ಹೇಳಿದೆ. "ಜೀವಿಗಳೆಲ್ಲರ ಹೃದಯದಲ್ಲೂ ಈಶ್ವರನು ನೆಲಸಿರುವನು" ಎಂದು ಗೀತೆಯಲ್ಲೂ ಹೇಳಿದೆ. ಹೀಗೆ ಅನೇಕ ಶ್ರುತಿ ಸ್ಮೃತಿ ಪುರಾಣಗಳಲ್ಲಿ 'ನಾರಾಯಣನು ಉಪಾಸಕನು, ಶಿವನು ಉಪಾಸ್ಯನು' ಎಂಬುದು ಘಂಟಾಘೋಷವಾಗಿದೆ.

ಪುನರ್ಹೇತ್ವಂತರಮಾಹ--ಕರ್ಮಕರ್ತೃವ್ಯಪದೇಶಾಚ್ಚ ॥ ೪ ॥
ನಾತ್ರೋಪಾಸ್ಯೋ ನಾರಾಯಣಃ, ಕುತಃ ಕರ್ಮಕರ್ತೃವ್ಯಪದೇಶಾತ್. "ಧಾರಯಿತಾ ಭೂಯಾಸಂ ಮಮಾಮುಷ್ಯ ಓಂ" ಇತಿ ನಾರಾಯಣ ಮಂತ್ರೇ ಓಂಕಾರವಾಚ್ಯಶಿವಲಿಂಗಧಾರಣಾತ್ಮಕೋಪಾಸನಕರ್ಮಕರ್ತುರ್ನಾರಾಯಣಸ್ಯ ವ್ಯಪದೇಶಾತ್, ಪರಮಶಿವಲಿಂಗಬಾಹ್ಯಾಭ್ಯಂತರಧಾರಣಾರ್ಚನಾರ್ಪಣಾವಧಾನಾತ್ಮಕೋಪಾಸನಮೇವ ಮುಮುಕ್ಷೂಣಾಂ ಶ್ರೌತಾನಾಮಾವಶ್ಯಕಂ. 'ಪದ್ಮಕೋಶಪ್ರತೀಕಾಶಂ' ಇತ್ಯನೇನ ನಾರಾಯಣಸ್ಯ ದಹರಪುಂಡರೀಕಮುಪದಿಶ್ಯ 'ಪರಮಾತ್ಮಾ ವ್ಯವಸ್ಥಿತಃ' ಇತಿ ತದಂತರ್ವರ್ತಿತ್ವೇನ ಪರಮೇಶ್ವರಸ್ಯ ನಿರ್ದೇಶಾತ್ ಧ್ಯಾತೃತ್ವೇನ ನಾರಾಯಣಸ್ಯ ಧ್ಯೇಯತ್ವೇನ ಚ ಪರಮಶಿವಸ್ಯ ಕರ್ಮಕರ್ತೃತ್ವಂ ನಿರ್ದಿಶ್ಯತೇ. ಅತೋ ನಾರಾಯಣಸ್ಯ ಶಿವೋಪಾಸಕತ್ವಂ ಸಿದ್ಧಂ. ನನು 'ಧಾರಣಂ ಮೇ ಅಸ್ತು' ಇತ್ಯತ್ರ ದೇವತಾಂತರಧಾರಣವಿಧಾಯಕಪ್ರಮಾಣಾಚಾರಾಭಾವೇಽಪಿ ನಾರಾಯಣಪ್ರತಿನಿಧಿತ್ವೇನ ಶಂಖಚಕ್ರಧಾರಣಸ್ಯ ಪಾಂಚರಾತ್ರಮತಸಿದ್ಧತ್ವೇನ ತದ್ಧಾರಣಪರತ್ವಂ ಕಿಂ ನ ಸ್ಯಾತ್? ಇತಿ ಚೇನ್ನ 'ಅನಿರಾಕರಣಂ' ಇತ್ಯನೇನ ನಿರಾಕರಣಂ ಹೇಯಪ್ರಪಂಚಃ ತನ್ನಭವತೀತ್ಯನಿರಾಕರಣಂ ಉಪಾದೇಯಂ ಬ್ರಹ್ಮೇತ್ಯರ್ಥಲಾಭಾತ್. ಬ್ರಹ್ಮಲಿಂಗಶಬ್ದಯೋಃ ಪರ್ಯಾಯತ್ವಾಚ್ಚ ಅರ್ಥಾಲ್ಲಿಂಗಧಾರಣಸಿದ್ಧಿರ್ನ ಪ್ರತ್ಯೂಹಾ. ತದ್ವಚ್ಛಂಖಧಾರಣಂ ನ ವಿಧೇಯಂ, ಕ್ಲಿಷ್ಟಾರ್ಥಕಲ್ಪನೇ ಮಾನಾಭಾವಾತ್. "ಮುಖೇ ಮಂತ್ರಂ ಹೃದಿ ಧ್ಯಾನಂ ಕಂಠೇ ರುದ್ರಾಕ್ಷಮಾಲಿಕಾ । ಶಿಖಾಸೂತ್ರಂ ತಥಾ ಭಸ್ಮ ಇತಿ ಬ್ರಾಹ್ಮಣಲಕ್ಷಣಂ ॥ ವಿಭೂತಿರ್ಯಸ್ಯ ನೋ ಫಾಲೇ ಕಂಠೇ ರುದ್ರಾಕ್ಷಮಾಲಿಕಾ । ಮುಖೇ ಷಡಕ್ಷರೀಮಂತ್ರಸ್ತಂ ತ್ಯಜೇದಂತ್ಯಜಂ ಯಥಾ" ಇತಿ ಗೌತಮಾದಿಸ್ಮೃತಿಷು ಲಿಂಗತ್ರಿಪುಂಡ್ರಾದಿಕಸ್ಯ ಬ್ರಹ್ಮಲಕ್ಷಣತ್ವೇನ ತದತಿಕ್ರಮೇಣ ಪ್ರತ್ಯವಾಯಜನಕತ್ವೇನ ಚ ಶ್ರವಣಾತ್. ಕಿಂಚ ಲಿಂಗಧಾರಣಸ್ಯ ಶ್ರುತ್ಯಾ ಸರ್ವೋತ್ಕೃಷ್ಟತ್ವಪ್ರತಿಪಾದನಾತ್ ತಾಂತ್ರಿಕವಿಧಿನಾ ಶ್ರೌತಾನಾಂ ಪ್ರಯೋಜನಾಭಾವಾಚ್ಚ ತದುಭಯವಿಧ್ಯಂಗೀಕಾರೋ ನ ಯುಕ್ತಃ. "ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ। ಧಾರಯಂತಿ ತು ಯೇ ಭಕ್ತ್ಯಾ ಧಾರಯಂತಿ ತಮೇವ ತೇ॥" ಇತಿ ಜಾಬಾಲೇ, "ತಿರ್ಯಕ್ತಿಸ್ರೋ ರೇಖಾಃ ಪ್ರಕುರ್ವೀತ" ಇತಿ ಕಾಲಾಗ್ನಿರುದ್ರೋಪನಿಷದಿ ತ್ರಿರೇಖಾನಾಂ ತ್ರಿವೇದಾತ್ಮಕತ್ವಸ್ಯ ಚ ಪ್ರತಿಪಾದನಾಲ್ಲಿಂಗಧಾರಣಸ್ಯಾವಶ್ಯಕತ್ವಮತ್ಯಂತಪುಣ್ಯಹೇತುತ್ವಂ ಚ ವಿಧೇಯಮಿತಿ ನಿಶ್ಚಿತಂ. ನನು 'ಲಿಂಗಿನಂ ಚಕ್ರಿಣಂ ದೃಷ್ಟ್ವಾ' ಇತ್ಯಾದೌ ಚಕ್ರಧಾರಣವಲ್ಲಿಂಗಧಾರಣ

ಸ್ಯಾಪಿ ನಿಷೇಧದರ್ಶನಾತ್ಕಥಂ ಶ್ರೌತಪರಿಗ್ರಾಹ್ಯತ್ವಂ? ಇತಿಚೇನ್ನ ಪ್ರಭಾಕರಪ್ರಭಾಯಾಂ ದೀಪಾದಿಪ್ರಕಾಶವತ್ ತಾಂತ್ರಿಕವಿಧಿನಿಷೇಧಯೋಃ ಶ್ರೌತವಿಧಾವಪ್ರಕಾಶಕತ್ವಾತ್, ನಿಷೇಧಾನಾಂ ವೇದಮೂಲಕತ್ವಾಭಾವಾತ್ಪ್ರಮಾಣ್ಯಂ ನಾಶಂಕನೀಯಂ, ಕಿಂಚ ನಿಷೇಧಸ್ಯ ತಾಂತ್ರಿಕತ್ವಾತ್ ತಪ್ತಚಕ್ರಾಂಕನಪ್ರಕರಣಪಠಿತತ್ವಾಚ್ಚ ತಾಂತ್ರಿಕತಪ್ತಲಿಂಗಧಾರಣನಿಷೇಧಪರತ್ವಮಿತಿ ಪೂರ್ವಮೇವೋಕ್ತಂ. 'ತ್ವಂ ದೇವಾನಾಂ ಬ್ರಾಹ್ಮಣಾನಾಮಧಿಪತಿಃ'ಇತ್ಯಾದಿಶ್ರುತಿಷು ಬ್ರಾಹ್ಮಣಾನಾಂ ಶಿವದೇವತ್ವಸ್ಯ, ಅನ್ಯಥಾ ಪ್ರತ್ಯವಾಯಸ್ಯ ಚ ಶ್ರವಣಾತ್. ಸ್ಮೃತಿರಪಿ, "ಬ್ರಾಹ್ಮಣಾನಾಂ ಶಿವೋ ದೇವಸ್ತಸ್ಮಾತ್ತತ್ಪಿಂಡಸಂಭವಃ। ಬ್ರಾಹ್ಮಣಸ್ಯೇತಿ ವಿಜ್ಞೇಯೋ ನೋ ಚೇದಬ್ರಾಹ್ಮಣೋ ಭವೇತ್॥ ರುದ್ರಪಿಂಡಸಮುದ್ಭೂತೋ ರುದ್ರಭೂಮಿಲಯಂ ಗತಃ। ಪಿತರಂ ನಾಭಿಜಾನಾತಿ ತಾತಂ ವೇಶ್ಯಾಸುತೋ ಯಥಾ ॥ ಬ್ರಾಹ್ಮಣೋ ಭಗವಾನ್ರುದ್ರಸ್ತಸ್ಮಾತ್ತತ್ಪಿಂಡಸಂಭವಃ। ಬ್ರಾಹ್ಮಣಶ್ಚೇತಿ ವಿಜ್ಞೇಯೋ ನಾತ್ರ ಕಾರ್ಯಾ ವಿಚಾರಣಾ॥ ಅತಸ್ಸನ್ಯಾಸಿನಾಂ ವಾಪಿ ಪುತ್ರಃ ಪಾರ್ವಣಮಾಚರೇತ್ । ಮಾತಾಪಿತ್ರೋರ್ಮೃತಾಹೇ ತು ನ ಕುರ್ಯಾತ್ಪಾರ್ವಣಂ ಯದಿ । ಬೌದ್ಧಮ್ಲೇಚ್ಛಾದಿವತ್ತ್ಯಾಜ್ಯಸ್ಸ್ವಲೋಕೇ ಪತಿತೋ ಭವೇತ್ ॥" ಇತ್ಯಾದಿನಾ ಬ್ರಾಹ್ಮಣೋತ್ಪತ್ತೇಃ ರುದ್ರಪಿಂಡಹೇತುಕತ್ವಂ ರುದ್ರದೇವತಾತ್ವಂ ಚ ನಿರ್ದಿಷ್ಟಂ. ತಸ್ಮಾದಿತರದೇವತಾದಿಲಾಂಛನಾದಿಕಂ ಬ್ರಾಹ್ಮಣಾನಾಂ ನ ವಿಧೇಯಂ. "ಚಕ್ರಾಂಕಿತತನುರ್ಯತ್ರ ಸ ತತ್ರ ದಿವಸಂ ವಸೇತ್ । ಯದಿ ತಿಷ್ಠೇನ್ಮಹಾಪಾಪೀ ಸಹಸ್ರಬ್ರಹ್ಮಹಾ ಭವೇತ್॥ ಅಜ್ಞಾನಾದಥವಾ ಮೋಹಾದ್ವಾಗತೋ ವಾ ಸುದರ್ಶನಂ । ಧತ್ತೇ ಕುಲಘ್ನಂ ತಂ ದೃಷ್ಟ್ವಾ ಸಚೇಲಃ ಸ್ನಾನಮಾಚರೇತ್ ॥" ಇತ್ಯಾದಿನಾ ಶಾತಾತಪಗಾರುಡಶಂಖವಿಷ್ಣುಸ್ಮೃತ್ಯಾದಿಷು ತನ್ನಿಷೇಧದರ್ಶನಾಲ್ಲಿಂಗಧಾರಣಪರತ್ವಮೇವ ಯುಕ್ತಂ. ತದುಕ್ತಂ ಬ್ರಹ್ಮಾಂಡಪುರಾಣೇ "ನಮೋಽಸ್ತು ಬ್ರಹ್ಮಣೇ ತುಭ್ಯಂ ಆಚಾರ್ಯಾಯ ಮಹಾತ್ಮನೇ। ತನ್ನಿರಾಕರಣಂ ವಿಶ್ವಂ ಜನ್ಯತ್ಮಾನ್ಮೃತ್ಯುನೈವ ಹಿ। ಅನಿರಾಕರಣಂ ಬ್ರಹ್ಮ ಕಾರಣತ್ವಾಚ್ಚಿರಂತನಂ॥ ಅನಿರಾಕರಣಂ ಯತ್ತು ಧಾರಣಂ ದೇಶಿಕೋತ್ತಮಃ। ವೇದಶಾಸ್ತ್ರಪುರಾಣೇಷು ಪ್ರಸಿದ್ಧಂ ಕರ್ಣಯೋಶ್ಶ್ರುತಂ । ಅಥ ಧಾರಯಿತಾ ದೇವಂ ಭೂಯಾಸಂ ಸರ್ವಕಾರಣಂ। ಬ್ರಹ್ಮವಿಷ್ಣ್ವಾದಯೋ ದೇವಾಃ ಪ್ರಸಿದ್ಧಾಶ್ಚ ತಥಾ ಸ್ಮೃತಾಃ। ತೇ ನಿರಾಕರಣಾಸ್ಸರ್ವೇ ಮೃತ್ಯುನಾ ಸರ್ವಶತ್ರುಣಾ। ಮೋ ನಿರಾಕರಣಾಸ್ತ್ವೇತೇ ನಹಿ ಧಾರ್ಯಾಃ ಕದಾಚನ। ನಾಹಂ ಧಾರಯಿತಾ ದೇವಾನ್ ಭೂಯಾಸಂ ಮಜ್ಜತಸ್ಸುರಾನ್ । ನ ಶಕ್ನುವಂತಿ

**ಮಾಂ ತರ್ತುಂ ಮಜ್ಜಂತಂ ಮೃತ್ಯುಸಾಗರೇ । ಊರ್ಧ್ವಂ ಮಮೋದಮೋಂ ಲಿಂಗಂ ಮಾಂ ಚಾಮುಷ್ಯ ಸಮಾಶ್ರಯ ॥" ಇತಿ. ಅನಿರಾಕರಣಪದೇ ಭೂತಿರುದ್ರಾಕ್ಷಯೋಃ, ಓಮಿತಿ ಲಿಂಗಸ್ಯ ಚ ತ್ರಯಾಣಾಮಪಿ ಧಾರಣಸ್ಯ ಪ್ರಾಧಾನ್ಯಂ ಸ್ವಯಂ ಸಂಭವತಿ. 'ಮೇಧಾವೀ ಭೂಯಾಸಂ' 'ಅಹಮೇಕಃ ಪ್ರಥಮಮಾಸಂ' ಇತ್ಯತ್ರೇವ 'ಧಾರಯಿತಾ ಭೂಯಾಸಂ' ಇತ್ಯತ್ರಾಪಿ ಆಶೀರ್ಲಿಜ್ ವಿಧೀಯತೇ.**

ಇಲ್ಲಿ ಬೇರೊಂದು ಹೇತುವನ್ನು ಹೇಳುತ್ತಾನೆ—**ಕರ್ಮಕರ್ತೃವ್ಯಪದೇಶಾಚ್ಚ ॥ ೪ ॥** ಶ್ರುತಿಯಲ್ಲಿ ಉಪಾಸ್ಯ-ಉಪಾಸಕವೆಂಬ ಭೇದವನ್ನು ಹೇಳಿರುವುದರಿಂದ ಉಪಾಸಕನಾದ ನಾರಾಯಣನು ಉಪಾಸ್ಯನಾಗಲಾರನು. 'ಬ್ರಹ್ಮವನ್ನು ನಾನು ಧರಿಸುತ್ತೇನೆ. ನನಗೆ ಇದೆಲ್ಲವೂ ಪ್ರಣವಸ್ವರೂಪವೇ ಆಗಿದೆ' ಎಂಬ ನಾರಾಯಣವಾಕ್ಯದಲ್ಲಿ ಓಂಕಾರದಿಂದ ತಿಳಿದುಬರುವ ಶಿವಲಿಂಗದ ಧಾರಣ ಮತ್ತು ಉಪಾಸನಗಳೆಂಬ ಕರ್ಮವು ಕರ್ತೃನಾರಾಯಣನಿಗೆ ಅನ್ವಯಿಸುವುದಾಗಿ ತಿಳಿಸಲಾಗಿದೆ. ಇಲ್ಲಿ ಶಿವಲಿಂಗವನ್ನು ಒಳಗೂ ಹೊರಗೂ ಅರ್ಚಿಸಿ ತನ್ನನ್ನು ಅದರ ಸೇವೆಗೆ ಒಪ್ಪಿಸಿ ಅದರ ಬಗ್ಯೆ ಎಚ್ಚರದಿಂದಿರುವುದೇ ಅದರ ಉಪಾಸನವೆನಿಸಿದೆ. ಇದು ವೈದಿಕರಾದ ಮುಮುಕ್ಷುಗಳೆಲ್ಲರಿಗೂ ಆವಶ್ಯಕ. 'ಯಶ್ಛಂದಸಾಮೃಷಭಃ' ಎಂದಾರಂಬಿಸಿ 'ಶ್ರುತಂ ಮೇ ಗೋಪಾಯ' ಎಂದು ಕೊನೆಯಾಗಿರುವ ಮಂತ್ರದಲ್ಲೂ ಇದನ್ನೇ ಹೇಳಿದೆ. 'ಪದ್ಮಕೋಶಪ್ರತೀಕಾಶಂ' ಇದರಿಂದ ನಾರಾಯಣನ ದಹರಕಮಲವನ್ನು ಉಪದೇಶಿಸಿ, ಅದರೊಳಗೆ ಶಿವನಿರುವನೆಂದು ನಿರ್ದೇಶಿಸಿರುವುದರಿಂದ ನಾರಾಯಣನು ಧ್ಯಾತೃವೆಂದೂ,ಶಿವನು ಧ್ಯೇಯನೆಂದೂ, ಇಬ್ಬರಿಗೂ ಕರ್ಮಕರ್ತೃತ್ವವನ್ನು ತಿಳಿಸಲಾಗಿದೆ. ಆದ್ದರಿಂದ ನಾರಾಯಣನು ಶಿವೋಪಾಸಕನೆಂಬುದು ಸಿದ್ಧವಾಯಿತು. "ಧಾರಣಂ ಮೇ ಅಸ್ತು" ಎಂಬಲ್ಲಿ ಬೇರೆ ದೇವತೆಯನ್ನು ದೇಹದಲ್ಲಿ ಧರಿಸಬೇಕೆಂದು ತಿಳಿಸುವ ಪ್ರಮಾಣವಿಲ್ಲದಿದ್ದರೂ ನಾರಾಯಣನ ಬದಲಾಗಿ ಶಂಕಚಕ್ರಗಳನ್ನು ಧರಿಸಬೇಕೆಂದು ಪಾಂಚರಾತ್ರಾಗಮದಲ್ಲಿ ಹೇಳಿರುವುದರಿಂದ ಧಾರಣಪದವು ಶಂಖಚಕ್ರಧಾರಣಕ್ಕೆ ಏಕೆ ಅನ್ವಯಿಸಬಾರದು? ಎಂದು ಕೇಳುವುದು ಯುಕ್ತವಲ್ಲ. ಅನಿರಾಕರಣವೆಂಬ ಪದವು ನಿರಾಕರಿಸಲು ಯೋಗ್ಯವಾದ ಹೇಯಪ್ರಪಂಚವೆನಿಸದೆ, ಸರ್ವರಿಗೂ ಗ್ರಾಹ್ಯವಾದ ಬ್ರಹ್ಮವೆಂಬ ಅರ್ಥವನ್ನು ತಿಳಿಸುವುದರಿಂದ ಧಾರಣಪದವು ಬ್ರಹ್ಮಕ್ಕೇ ಅನ್ವಯಿಸುತ್ತದೆ. ಬ್ರಹ್ಮಲಿಂಗಶಬ್ದಗಳು ಸಮಾನಾರ್ಥಕವಾದ್ದರಿಂದ ಬ್ರಹ್ಮಧಾರಣವೆಂದರೆ ಲಿಂಗಧಾರಣವೆಂದು ನಿಶ್ಚಿತವಾಗುತ್ತದೆ. ಆದ್ದರಿಂದ ಶಂಖಚಕ್ರಧಾರಣವು ಇಲ್ಲಿ ವಿಧೇಯವಾಗಲಾರದು. ಸಹಜವಾದ ಅರ್ಥವನ್ನು ಬಿಟ್ಟು ಕ್ಲಿಷ್ಟವಾದ್ದನ್ನು ಕಲ್ಪಿಸಲು ಪ್ರಮಾಣವಿಲ್ಲ. "ಬಾಯಲ್ಲಿ ಮಂತ್ರ, ಹೃದಯದಲ್ಲಿ ಧ್ಯಾನ, ತಲೆಯಲ್ಲಿ ಶಿಖೆ, ರುದ್ರಾಕ್ಷಮಾಲೆ, ಭಸ್ಮಲಿಂಗ ಇವಿರುವುದು ವೈದಿಕನ ಲಕ್ಷಣ. ಯಾವನಿಗೆ ಹಣೆಯಲ್ಲಿ ಭಸ್ಮ , ಕಂಠದಲ್ಲಿ ರುದ್ರಾಕ್ಷಮಾಲೆ, ಬಾಯಲ್ಲಿ ಷಡಕ್ಷರೀಮಂತ್ರ ಇವಿರು

ವುದಿಲ್ಲವೋ ಅವನು ದರ್ಶನಾರ್ಹನಲ್ಲ. ಉದ್ಧೂಳನವನ್ನೂ ತ್ರಿಪುಂಡ್ರವನ್ನೂ ಮನದಲ್ಲೂ ತಿರಸ್ಕರಿಸಬಾರದು. ಇದು ಶ್ರುತಿವಿಹಿತವಾದ್ದರಿಂದ ಇದನ್ನು ತೊರೆದವನು ಪತಿತನಾಗುವನು" ಹೀಗೆ ಗೌತಮಾದಿ ಸ್ಮೃತಿಗಳಲ್ಲಿ 'ಲಿಂಗವೂ ತ್ರಿಪುಂಡ್ರವೂ ಶಿವಭಕ್ತನ ಲಕ್ಷಣವಾದ್ದರಿಂದ ಅವನ್ನು ತಿರಸ್ಕರಿಸುವುದು ದೋಷ'ವೆಂದು ಹೇಳಲಾಗಿದೆ. ಲಿಂಗಧಾರಣವನ್ನು ಶ್ರುತಿಯಲ್ಲಿ ಸರ್ವೋತ್ಕೃಷ್ಟವೆಂದು ವಿಧಿಸಿರುವುದರಿಂದಲೂ, ತಾಂತ್ರಿಕವಿಧಾನವು ವೈದಿಕರಿಗೆ ಅಪ್ರಯೋಜಕವಾದ್ದರಿಂದಲೂ ಈ ಎರಡು ಬಗೆಯ ವಿಧಿಗಳನ್ನೂ ಅಂಗೀಕರಿಸುವುದು ಯುಕ್ತವಲ್ಲ. ಜಾಬಾಲಶ್ರುತಿಯಲ್ಲಿ "ತ್ರಿಪುಂಡ್ರವನ್ನು ನಿಂದಿಸುವವರು ಶಿವನನ್ನೇ ನಿಂದಿಸುತ್ತಾರೆ. ಅದನ್ನು ಧರಿಸಿದವರು ಶಿವನನ್ನೇ ಧರಿಸುತ್ತಾರೆ" ಎಂದೂ, ಕಾಲಾಗ್ನಿರುದ್ರೋಪನಿಷತ್ತಿನಲ್ಲಿ ತ್ರಿಪುಂಡ್ರದ ಮೂರು ಗೆರೆಗಳನ್ನು ಮೂರು ವೇದಸ್ವರೂಪವೆಂದೂ, ಅಕಾರ ಉಕಾರ ಮಕಾರಗಳ ಸ್ವರೂಪವೆಂದೂ, ರುದ್ರ ಮಹೇಶ್ವರ ಸದಾಶಿವರೂಪವೆಂದೂ ಹೇಳಿ ಲಿಂಗಧಾರಣಕ್ಕೆ ಭಸ್ಮಧಾರಣವನ್ನು ಅನಿವಾರ್ಯವೆಂದೂ, ಅತ್ಯಂತಪುಣ್ಯಕರವೆಂದೂ ನಿಶ್ಚಯಿಸಿರುವುದರಿಂದ ಇದು ವಿಧೇಯವೆನಿಸಿದೆ. 'ಲಿಂಗಿನಂ ಚಕ್ರಿಣಂ ದೃಷ್ಟ್ವಾ' ಎಂಬಲ್ಲಿ ಚಕ್ರಧಾರಣದಂತೆ ಲಿಂಗಧಾರಣವೂ ನಿಷಿದ್ಧವಾಗಿರುವುದರಿಂದ ಇದು ಹೇಗೆ ವೈದಿಕವೆನಿಸೀತು? ಅಂದರೆ ಹಾಗಲ್ಲ, ಸೂರ್ಯಪ್ರಭೆಯಲ್ಲಿ ದೀಪಪ್ರಕಾಶದಂತೆ ತಾಂತ್ರಿಕ ವಿಧಿನಿಷೇಧಗಳು ಶ್ರೌತವಿಧಿಯ ಮುಂದೆ ನಿಲ್ಲಲಾರವು. ನಿಷೇಧಗಳು ವೇದಮೂಲಕವಲ್ಲದ್ದರಿಂದ ಅವುಗಳ ಬಗ್ಗೆ ಶಂಕಿಸಬೇಕಾಗಿಯೇ ಇಲ್ಲ. ಇದೂ ಅಲ್ಲದೆ, ಲಿಂಗಧಾರಣದ ನಿಷೇಧವು ಕೇವಲ ತಾಂತ್ರಿಕವಾದ್ದರಿಂದಲೂ, ಇದು ಚಕ್ರದ ಮುದ್ರೆಯನ್ನೊತ್ತಿಕೊಳ್ಳುವ ಪ್ರಕರಣದಲ್ಲಿ ಬಂದಿರುವುದರಿಂದಲೂ ಇದು ತಾಂತ್ರಿಕಾಗಮದ ಹೇಳಿಕೆಯಂತೆ ಲಿಂಗಮುದ್ರೆ ಒತ್ತಿಕೊಳ್ಳುವುದಕ್ಕೆ ಮಾತ್ರವೇ ಅನ್ವಯಿಸುತ್ತದೆ ಎಂದು ಹಿಂದೆಯೇ ತಿಳಿಸಲಾಗಿದೆ. 'ನೀನು ಬ್ರಾಹ್ಮಣರ ದೇವನು' ಎಂಬ ಶ್ರುತಿಯಲ್ಲಿ ಲಿಂಗಧಾರಿಗೆ ಶಿವನೇ ದೇವನೆಂದು ಹೇಳಿರುವುದರಿಂದ ಇದಕ್ಕೆ ತಪ್ಪಿ ನಡೆದರೆ ದೋಷಬರುವುದು. ಲಿಂಗಧಾರಿಯು ತನ್ನನ್ನು ರುದ್ರಪಿಂಡದಿಂದ ಹುಟ್ಟಿದವನೆಂದು ತಿಳಿಯಬೇಕು, ಇಲ್ಲವಾದರೆ ಅವನು ಶೂದ್ರನಾಗುವನು. ಅವನು ರುದ್ರಪಿಂಡದಿಂದ ಹುಟ್ಟಿದ್ದರೂ, ತನ್ನ ತಂದೆಯಾದ ರುದ್ರನನ್ನರಿಯದೆ ಇದ್ದರೆ, ರುದ್ರಭೂಮಿಯಲ್ಲಿ ಲಯವನ್ನು ಹೊರಿಸಿದರೂ ತಂದೆಯನ್ನರಿಯದ ವೇಶ್ಯಾಪುತ್ರನಂತಾಗುವನು. "ರುದ್ರನು ಬ್ರಾಹ್ಮಣನಾದ್ದರಿಂದ ರುದ್ರಪೂಜಕರು ಅವನಿಂದಲೇ ಹುಟ್ಟಿರುವರು. ಆದ್ದರಿಂದಲೇ ರುದ್ರಪೂಜಕನು ಸನ್ಯಾಸಿಯಾಗಿ ಸತ್ತರೂ ಅವನ ಮಗ ಅವನಿಗೆ ಶ್ರಾದ್ಧವನ್ನು ಮಾಡಲೇಬೇಕು. ತಾಯ್ತಂದೆಗಳಿಗೆ ಶ್ರಾದ್ಧವನ್ನು ಮಾಡದವನು ಬೌದ್ಧಾದಿಗಳಂತೆ ಪತಿತನಾಗುವನು" ಎಂಬ ಸ್ಮೃತಿಯಲ್ಲಿ ಲಿಂಗಧಾರಿಯ ಉತ್ಪತ್ತಿಗೆ ರುದ್ರಪಿಂಡವೇ ಹೇತುವೆಂದೂ, ಅವನಿಗೆ ರುದ್ರನೇ ದೇವನೆಂದೂ ಹೇಳಿದೆ. ಆದ್ದರಿಂದ ಇತರ ದೇವತೆಗಳ ಲಾಂಛನವು ರುದ್ರಪೂಜಕರಿಗೆ ವಿಧೇಯವಲ್ಲ. ಚಕ್ರದ ಮುದ್ರೆ ಒತ್ತಿರುವ ದೇಹವಿದ್ದಲ್ಲಿ ವಾಸ

ಮಾಡುವವನು ಮಹಾಪಾಪಿಯಾಗುವನು. ಅಜ್ಞಾನ, ಮೋಹ, ಅಭಿಮಾನಗಳಿಂದ ಚಕ್ರದ ಮುದ್ರೆ ಒತ್ತಿಕೊಂಡವನನ್ನು ಕಂಡರೆ ಸ್ನಾನಮಾಡಬೇಕು. ಸ್ಮಶಾನದ ಕಟ್ಟಿಗೆಯಂತೆ ಚಕ್ರದ ಮುದ್ರೆ ಒತ್ತಿಕೊಂಡವನು ಎಲ್ಲಾ ಕರ್ಮಗಳಿಗೂ ಬಾಹ್ಯನಾಗುವನು". ಹೀಗೆ ಶಾತಾತಪ, ಗಾರುಡ, ಶಂಖ, ವಿಷ್ಣು, ಪುರಾಣಗಳಲ್ಲಿ ಚಕ್ರಮುದ್ರೆಗೆ ನಿಷೇಧವಿದೆಯೇ ಹೊರತು ಲಿಂಗಧಾರಣಕ್ಕೆ ನಿಷೇಧವಿಲ್ಲ. ಬ್ರಹ್ಮಾಂಡಪುರಾಣದಲ್ಲಿ "ಮಹಾತ್ಮನಾದ ಆಚಾರ್ಯನನ್ನು ತಿರಸ್ಕರಿಸಿದರೆ ವಿಶ್ವವೆಲ್ಲವೂ ಮೃತ್ಯುಸದೃಶವಾಗುವುದು. ಜಗತ್ಕಾರಣವಾದ ಬ್ರಹ್ಮವು ನನಗೆ ಪೂಜ್ಯವಾಗಿದೆ. ಅದರ ಧಾರಣವೂ ಮಾನ್ಯವಾಗಿದೆ. ಇದು ನಿಗಮಾಗಮಗಳಲ್ಲಿ ಪ್ರತಿಪಾದಿತವಾಗಿರುವುದರಿಂದಲೇ ಇದನ್ನು ನಾನು ಧರಿಸುತ್ತೇನೆ. ಬ್ರಹ್ಮ ವಿಷ್ಣ್ವಾದಿಗಳೂ ಲಿಂಗವನ್ನು ಧರಿಸಿದ್ದಾರೆ. ಆದ್ದರಿಂದಲೇ ಅವರನ್ನು ಮೃತ್ಯು ನಿರಾಕರಿಸಿದೆ. ಹೀಗೆಯೇ ಮೃತ್ಯು ನನ್ನನ್ನು ನಿರಾಕರಿಸಲಿ. ನಾನು ದೇವನನ್ನು ಧರಿಸದಿದ್ದರೆ, ಮೃತ್ಯುಸಾಗರದಲ್ಲಿ ಮುಳುಗಿರುವ ನನ್ನನ್ನು ಯಾರೂ ಮೇಲೆತ್ತಲಾರರು. ಈ ಲಿಂಗವು ನನ್ನನ್ನು ಊರ್ಧ್ವಲಿಂಗವೆನಿಸಿದ ನಿಷ್ಕಲಶಿವನೊಡನೆ ಬೆರೆಸುವುದು" ಎಂದು ಹೇಳಲಾಗಿದೆ. ಅನಿರಾಕರಣಪದದಿಂದ ಭೂತಿ ರುದ್ರಾಕ್ಷಗಳೂ, ಓಂಕಾರದಿಂದ ಲಿಂಗವೂ ಸೂಚಿತವಾಗುತ್ತವೆ. ಆದ್ದರಿಂದ ಈ ಮೂರೂ ಧಾರಣಯೋಗ್ಯವೆನಿಸಿವೆ. "ಮೇಧಾವಿಯಾಗುವೆನು." ಎಂಬಲ್ಲಿ ವಿಧ್ಯರ್ಥದಲ್ಲಿ ಆಶೀರ್ಲಿಙ ಬಂದಿರುವಂತೆ 'ಧಾರಯಿತಾ ಭೂಯಾಸಂ' ಎಂಬಲ್ಲಿಯೂ ಧಾರಣವಿಧಿಯೇ ವಿವಕ್ಷಿತವಾಗಿದೆ.

**ಜಾಬಾಲಕಾಲಾಗ್ನಿರುದ್ರಾದ್ಯುಪನಿಷತ್ಸು ಶಿವಧಾರಣದ್ಯೋತನಾತ್ ತತ್ಪ್ರತಿಮಾಧಾರಣಂ ಕಿಂ ಸ್ಯಾದಿತ್ಯಾಶಂಕ್ಯಾಹ— ಶಬ್ದವಿಶೇಷಾತ್ ॥ ೫ ॥**

**'ಊರ್ಧ್ವಾಯ' ಇತ್ಯಾರಭ್ಯ 'ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ' ಇತ್ಯಂತೇನ ಲಿಂಗಶಬ್ದಸ್ಯೈವಾತ್ರ ಸರ್ವಾತ್ಮಕತ್ವಪ್ರತಿಪಾದನಾನ್ನಾರಾಯಣಾದಿದೇವತಾವಿಗ್ರಹೋಪಾಸನಂ ನ ಕರ್ತವ್ಯಂ. ಕುತಃ? ಶಬ್ದವಿಶೇಷಾತ್ ಜಿಜ್ಞಾಸ್ಯಬ್ರಹ್ಮಲಕ್ಷಣವಿಧಾಯಕೇನ 'ಜನ್ಮಾದ್ಯಸ್ಯ ಯತಃ' 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ಶ್ರುತಿಸೂತ್ರಪ್ರಮಾಣೈರುಕ್ತಸ್ಯ ಜಗಜ್ಜನ್ಮಾದಿಕಾರಣತ್ವಸ್ಯ ಲಿಂಗಶಬ್ದೇನೈವ ದ್ಯೋತನಾತ್. "ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ। ತಸ್ಮಾಲ್ಲಿಂಗಂ ಪರಂ ಬ್ರಹ್ಮ ಕಾರಣಂ ಸರ್ವಮವ್ಯಯಂ ॥" ಇತಿ ಸ್ಮೃತೇಶ್ಚ. ಯಸ್ಮಿನ್ ಚರಾಚರಪ್ರಪಂಚಃ ಪ್ರಯುಂಕ್ತೇ ವಿಲೀಯತೇ ಪುನಸ್ಸೃಷ್ಟಿಕಾಲೇ ಯಸ್ಮಾದ್ಬಹಿರ್ಗಚ್ಛತೀತಿ ತಲ್ಲಿಂಗಂ ಪ್ರಪಂಚೋತ್ಪತ್ತಿಸ್ಥಿತಿಲಯಾಧಾರಂ ಪರಂಬ್ರಹ್ಮೇತ್ಯಭಿಧೀಯತೇ. ಪುರಾಣೇಷ್ವಪಿ ಲಿಂಗಧಾರಣಪೂಜಾದಿಕಮೇವ ಬಹುಧಾ ಶ್ರೂಯತೇ.**

ಶಂಕರಸಂಹಿತಾಯಾಂ 'ರುದ್ರೋ ಭೂತ್ವಾ ಯಜೇದ್ರುದ್ರಂ ನಾರುದ್ರೋ ರುದ್ರ

ಮರ್ಚಯೇತ್ । ಪ್ರಾಣಲಿಂಗೇನ ಸಂಬಂಧೀ ಸ ರುದ್ರೋ ನಾತ್ರ ಸಂಶಯಃ । ಕ್ರಿಮಿಕೀಟಪತಂಗೇಭ್ಯಃ ಪಶವಃ ಪ್ರಜ್ಞಯಾಧಿಕಾಃ । ಪಶುಭ್ಯೋಽಪಿ ನರಾಃ ಶ್ರೇಷ್ಠಾಸ್ತೇಷು ಶ್ರೇಷ್ಠಾ ದ್ವಿಜಾತಯಃ । ಬ್ರಾಹ್ಮಣೇಷು ಚ ವಿದ್ವಾಂಸೋ ವಿದ್ವತ್ಸು ಕ್ರತುಬುದ್ಧಯಃ । ಕ್ರತುಬುದ್ಧಿಷು ಕರ್ತಾರಸ್ತೇಭ್ಯಃ ಸನ್ಯಾಸಿನೋಽಧಿಕಾಃ । ತೇಷು ವಿಜ್ಞಾನಿನಃ ಶ್ರೇಷ್ಠಾಸ್ತೇಷು ಶಂಕರಪೂಜಕಾಃ । ತೇಷು ಶ್ರೇಷ್ಠಾ ಮಹಾಭಾಗ ಮಮ ಲಿಂಗಾಂಗಸಂಗಿನಃ । ಲಿಂಗಾಂಗಸಂಗಿಷ್ವಧಿಕಃ ಷಟ್ಸ್ಥಲಜ್ಞಾನವಾನ್ : ಭವೇತ್ । ತಸ್ಮಾದಭ್ಯಧಿಕೋ ನಾಸ್ತಿ ಸ ಏವಾಹಂ ನ ಸಂಶಯಃ । ಬ್ರಹ್ಮವಿಷ್ಣ್ವಾದಯೋ ದೇವಾ ಮುನಯೋ ಗೌತಮಾದಯಃ । ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ । ಯತ್ರ ತಿಷ್ಠತಿ ಲಿಂಗಾಂಗಸಂಗೀ ಶಿವಪರಾಯಣಃ । ನಿಮಿಷಂ ನಿಮಿಷಾರ್ಧಂ ವಾ ತಚ್ಛಿವಕ್ಷೇತ್ರಮುಚ್ಯತೇ । ಲಿಂಗಾಂಗಸಂಗಿನಃ ಪುಂಸೋ ಯೇ ದುರ್ವಿಷಯವಾಸಿನಃ । ತೇ ಸರ್ವಪಾಪನಿರ್ಮುಕ್ತಾ ಯಾಸ್ಯಂತಿ ಪರಮಾಂ ಗತಿಂ । ಲಿಂಗಾಂಗಸಂಗಿನಂ ಮರ್ತ್ಯಂ ಲಿಂಗಧ್ಯಾನಪರಾಯಣಂ । ಅನುವ್ರಜತಿ ಯೋ ಮರ್ತ್ಯಸ್ಸೋಽಪಿ ಮುಕ್ತಿಮವಾಪ್ನುಯಾತ್ । ಧೃತಲಿಂಗಸ್ಯ ಮರ್ತ್ಯಸ್ಯ ಪಾದಪ್ರಕ್ಷಾಳನೋದಕಂ । ಪಾಪಶುದ್ಧ್ಯರ್ಥಮಜ್ಞಾನಾಂ ತದ್ಧಾರ್ಯಂ ಶಿಖಿವಾಹನ । ಪ್ರಾಣಲಿಂಗೈಕನಿಷ್ಠಸ್ಯ ದೇಹಂ ಸ್ಪೃಷ್ಟ್ವಾಽವ ಸಮೀರಣಃ । ಯತ್ರ ಗಚ್ಛತಿ ತತ್ರಸ್ಥಾ ಮರ್ತ್ಯಾ ಮುಕ್ತಾ ನ ಸಂಶಯಃ । ಯುಗಪಚ್ಛಿವಲಿಂಗೈಕ್ಯಪಾದಸ್ಪೃಷ್ಟರಜಾಂಸಿ ಚ । ಪತಂತಿ ಮಸ್ತಕೇ ಯಸ್ಯ ಸ ಮುಕ್ತೋ ನಾತ್ರ ಸಂಶಯಃ । ಅನ್ನಂ ವಾ ಜಲಮಾತ್ರಂ ವಾ ಯದ್ದತ್ತಂ ಲಿಂಗಧಾರಿಣೇ । ತದನ್ನಂ ಮೇರುಸದೃಶಂ ತಜ್ಜಲಂ ಸಾಗರೋಪಮಂ । ಲಿಂಗಾಂಗಸಂಗಂ ಕುರ್ವಂತಂ ದೃಷ್ಟ್ವಾಽವ ದ್ವಿಜವರಂ ರವಿಃ । ಸ್ಥಾನಾಚ್ಚಲತ್ಯಯಂ ಭಿತ್ವಾ ಮಂಡಲಂ ಮೇ ವ್ರಜೇಚ್ಛಿವಂ । ಶಿವಲಿಂಗಾಂಗಸಂಬಂಧಭಾಜಾಂ ದರ್ಶನಮಾತ್ರತಃ । ಮುಕ್ತಿಂ ಗಚ್ಛಂತಿ ಮನುಜಾಃ ಪಶುಪಕ್ಷಿಮೃಗಾದಯಃ" ॥

ಇತ್ಯಾದಿನಾ ಲಿಂಗದರ್ಶನಧಾರಣಯೋಸ್ಸರ್ವೋತ್ಕೃಷ್ಟತ್ವಪ್ರತಿಪಾದನಾನ್ನ ವಿಗ್ರಹಧಾರಣಂ ವಿಧೀಯತೇ. ಕಿಂಚ 'ನಾರಾಯಣಪರಂ ಬ್ರಹ್ಮ' ಇತಿ ವಾಕ್ಯೇ ನಾರಾಯಣಾತ್ಪರಂ ಬ್ರಹ್ಮೇತ್ಯುಪದಿಶ್ಯತೇ. 'ಸಮಿಧೋ ಯಜತಿ' ಇತ್ಯಾದಿದರ್ಶಪೂರ್ಣಮಾಸಪ್ರಕರಣಪಠಿತವಾಕ್ಯಾವಗತಾನಾಂ ಪ್ರಯಾಜಾನಾಂ ದರ್ಶಪೂರ್ಣಮಾಸಾಂಗತ್ವವತ್ ನಾರಾಯಣಪ್ರಕರಣಪಠಿತಸ್ಯ ಹೃದಯಸ್ಯ ನಾರಾಯಣಸಂಬಂಧಿತ್ವಮುಚ್ಯತೇ. 'ಅಣೋರಣೀಯಾನ್—ಪ್ರಸಾದಾನ್ಮಹಿಮಾನಮೀಶಂ' ಇತ್ಯುಪಕ್ರಮೇ ಶಿವೈಕಬೋಧಕಾನಾಮೀಶಾದಿಶಬ್ದಾನಾಂ ಮುಖ್ಯತ್ವೇನ ವ್ಯಪದೇಶಾದುತ್ಪತ್ತಿಶಿಷ್ಟಶಿವಪ್ರಶಂಸಾಯಾಸ್ತತ್ಪರತ್ವಂ ವಿಧೀಯತೇ. 'ವಿಶ್ವಾಧಿಕೋ ರುದ್ರೋ ಮಹರ್ಷಿಃ' 'ಯಃ ಪರಸ್ಸ ಮಹೇಶ್ವರಃ' ಇತಿ ಮಧ್ಯೇಽಪಿ ಶಿವಪ್ರಾಚುರ್ಯಂ, 'ಊರ್ಧ್ವರೇತಂ ವಿರೂಪಾಕ್ಷಂ' ಇತ್ಯಂತೇಽಪಿ

ಪ್ರಚುರಶಿವಪ್ರಶಂಸಾಕಥನಾದಭ್ಯಾಸತಾತ್ಪರ್ಯಮಿತಿ ಗೀಯತೇ. ವಿಶ್ವಾಧಿಕತ್ವಾದಿಲಕ್ಷಣಾನಾಮನನ್ಯಸಾಧಾರಣತ್ವಾತ್ತದೇವಾಪೂರ್ವಮಿತ್ಯುಚ್ಯತೇ. 'ಪರಾಮೃತಾತ್ಪರಿಮುಚ್ಯಂತಿ ಸರ್ವೇ' ಇತ್ಯಂತೇನ ಫಲಂ ವ್ಯಪದಿಶ್ಯತೇ. 'ಸಹಸ್ರಶೀರ್ಷಂ' ಇತ್ಯನುವಾಕೇ ನಾರಾಯಣಪ್ರಶಂಸಾ ಹ್ಯರ್ಥವಾದತಾತ್ಪರ್ಯಮಿತ್ಯವಗಮ್ಯತೇ. 'ಯಸ್ಮಾತ್ಪರಂ ನಾಪರ ಮಸ್ತಿ ಕಿಂಚಿತ್' ಇತ್ಯನೇನೋಪಪತ್ತಿಃ. ಏವಂ ಸಾಂಗತಾತ್ಪರ್ಯೇಣ ಶಿವಪರತ್ವಾವಗಮಾನ್ನಾನ್ಯಪರತ್ವಂ. ನಚ ಸಹಸ್ರಶೀರ್ಷಾನುವಾಕ ಏವಾತ್ರೋಪಕ್ರಮಃ, ಉಪಸಂಹಾರಾನುವಾಕಗತೋಮಾಪತಿತ್ವಾದಿ ಧರ್ಮಾಣಾಂ ನಾರಾಯಣೇ ಅಸಮಂಜಸತ್ವಾತ್, ಕಿಂಚೋಪಕ್ರಮೋ ಅಣೋರಣೀಯಾನಿತಿ ಮಂತ್ರೇ ಸರ್ವಚೇತನಗುಹಾಶಯತ್ವಮೀಶ್ವರಸ್ಯ ಪ್ರಸಾಧ್ಯ, ತದನುಗ್ರಹಾದೇವ ಸರ್ವೇಷಾಂ ದುಃಖನಿರ್ಮುಕ್ತತ್ವಮುಪ ದಿಶ್ಯ, 'ಸಪ್ತಪ್ರಾಣಾಃ ಪ್ರಭವಂತಿ' ಇತ್ಯಾರಭ್ಯ 'ಪೂರ್ಣಂ ಪುರುಷೇಣ ಸರ್ವಂ' ಇತ್ಯಂತೇನ ಸೃಷ್ಟ್ಯಾದಿಪ್ರವೃತ್ತಿಧರ್ಮಾತ್ಮಕತ್ವಂ ತಸ್ಯ ಪ್ರದರ್ಶ್ಯ 'ನ ಕರ್ಮಣಾ' ಇತ್ಯದಿನಾ ನಿವೃತ್ತಿಲಕ್ಷಣಧರ್ಮಪ್ರಶಂಸಾ ಮುಪಕ್ರಮ್ಯ 'ಪರೇಣ ನಾಕಂ', ಇತ್ಯಾದಿನಾ ತದುಪಾಸನಾಧಿಕಾರಿತ್ವಂ ಯತೀನಾಂ ನಿರೂಪ್ಯ, 'ಪರಾಮೃತಾತ್ಪರಿಮುಚ್ಯಂತಿ' ಇತ್ಯನೇನ ತದುಪಾ ಸಕಸ್ಯ ಮೋಕ್ಷಫಲಂ ವಿಧಾಯ, 'ದಹರಂ ವಿಪಾಪ್ಮಂ' ಇತ್ಯಾದಿನಾ ತದುಪಾಸನಸ್ಥಾನಮಭಿಧಾಯ 'ಯೋ ವೇದಾದೌ ಸ್ವರಃ' ಇತ್ಯಾದಿನಾ ತತ್ರೋಪಾಸ್ಯತ್ವಂ ಮಹೇಶ್ವರಸ್ಯ ನಿರ್ದಿಶ್ಯ 'ಋತಂ ಸತ್ಯಂ' ಇತ್ಯನೇನೋ ಪಾಸನಾಯಾ ಗುಣವಿಷಯತ್ವೇನ ಪರಮಶಿವಧರ್ಮಾಣಾಮಸಾಧಾರ ಣಾನಾಮತಿಶಯಿತತ್ವಂ ಪ್ರದರ್ಶ್ಯ, ತದರ್ಥವಾದಪ್ರಶಂಸಾಯಾಂ ವಿಶೇ ಷೋಪಾಸಕತ್ವೇನ ಯತೀಂದ್ರತ್ವೇನ ಶಿವಭಕ್ತಾಗ್ರಗಣ್ಯತ್ವೇನ ಸಹಸ್ರಶೀ ರ್ಷಾನುವಾಕೇ ನಾರಾಯಣಸ್ಯೈವ ಮುಖ್ಯಾಧಿಕಾರಿತ್ವಂ ನಿರೂಪ್ಯ, ತತ್ರ 'ನಾರಾಯಣಂ ಮಹಾಜ್ಞೇಯಂ' ಇತ್ಯಾದಿನಾ ನಾರಾಯಣಂ ಪ್ರಸ್ತುತ್ಯ, "ಪದ್ಮಕೋಶ" ಇತಿ ತದ್ಧೃದಯಪುಂಡರೀಕಂ ವ್ಯಪದಿಶ್ಯ, 'ತಸ್ಯಾಶ್ಶಿಖಾ ಯಾ ಮಧ್ಯೇ" ಇತ್ಯನೇನ ಪರಮೇಶ್ವರಸ್ಯ ತದ್ಧೃದಯಪುಂಡರೀಕಾಂತರ್ವ ರ್ತಿತ್ವಮುಪದಿಶ್ಯ 'ಆದಿತ್ಯೋ ವಾ ಏಷ ಏತನ್ಮಂಡಲಂ ತಪತಿ' ಇತ್ಯನೇನ ಪ್ರಭಾಕರಮಂಡಲಸ್ತುತಿಂ ಕೃತ್ವಾ, 'ಯ ಏಷೋಽಂತರಾದಿತ್ಯೇ ಹಿರಣ್ಮ ಯಃ ಪುರುಷಃ' ಇತ್ಯನೇನ ರುದ್ರಸ್ಯ ಪರಬ್ರಹ್ಮಣಃ ತನ್ಮಂಡಲಸ್ಥಿತಿಂ ಪ್ರ ಸಾಧ್ಯ ತತಃ ಪಂಚಬ್ರಹ್ಮಮಂತ್ರೈರುಪಾಸ್ಯಸ್ಯ ಮಹೇಶ್ವರಸ್ಯ ಸರ್ವೇಶ್ವರ ತ್ವಾದಿ ಧರ್ಮಾನ್ ದರ್ಶಯಿತ್ವಾ, 'ನಮೋ ಹಿರಣ್ಯಬಾಹವೇ' ಇತ್ಯಾದಿನಾ ಪವನಾದಿವನ್ಮೂರ್ತಾಮೂರ್ತತ್ವಂ ವ್ಯಪದಿಶ್ಯತೇ. ತಥಾಚ ಸ್ಮೃತಿಃ.

‘ನಾರಾಯಣೇನ ಯತಿನಾ ಪದ್ಮಗರ್ಭೋಽ ಮಹಾಮುನಿಃ। ಜ್ಞಾತ್ವಾ ಶಿವೈಕವಿಜ್ಞಾನಂ ವಸಿಷ್ಠಾಯೋಪದಿಷ್ಟವಾನ್ ॥’ ಇತಿ. ತಥಾ ಸ್ಕಾಂದೇ ಶಿವವಚನಂ ‘ನಾರಾಯಣತ್ಪರೋ ಭಕ್ತಃ ಮಮ ನಾಸ್ತಿ ವರಾನನೇ। ಭಾರ್ಯಾತ್ವಂ ವೃಷಭತ್ವಂ ಚ ಬಾಣತ್ವಮಗಮತ್ಪುರಾ ॥’ ಅಶ್ವತ್ಥಾಮಾನಂ ಪ್ರತಿ ಶಿವವಚನಂ, “ಅಹಂ ಯಥಾ ವರಾರಾಧ್ಯಃ ಕೃಷ್ಣೇನಾಕ್ಲಿಷ್ಟಕರ್ಮಣಾ। ತಸ್ಮಾದಿಷ್ಟತಮಃ ಕೃಷ್ಣಾದನ್ಯೋ ಮಮ ನ ವಿದ್ಯತೇ” ಇತಿ. ಸೌರಸಂಹಿತಾಯಾಂ ಚ “ಶಿವಸ್ಯ ಪರತತ್ತ್ವಾರ್ಥಂ ಸ್ವಯಂ ಜ್ಞಾತ್ವಾ ಶಿವಸ್ತಥಾ। ಉವಾಚ ವಿಷ್ಣವೇ ವಿಷ್ಣುಃ ಪದ್ಮಗರ್ಭಾಯ ಪ್ರೋಕ್ತವಾನ್ । ಚತುರ್ಮುಖೋ ವಸಿಷ್ಠಾಯ ವಸಿಷ್ಠಶ್ಶಕ್ತಯೇ ತಥಾ। ಪರಾಶರಾಯ ಶಕ್ತಿಶ್ಚ ವ್ಯಾಸಾಯ ಚ ಪರಾಶರಃ ॥” ಇತ್ಯಾದಿನಾ ನಾರಾಯಣಪರಮೇಶ್ವರಯೋಃ ಉಪಾಸಕೋಪಾಸ್ಯತ್ವಶಿಷ್ಯತ್ವಗುರುತ್ವಲಕ್ಷಣಂ ಸಮ್ಯಗುಪದಿಶ್ಯತೇ. ತಸ್ಮಾಚ್ಛಿವೋಪಾಸನಯಾ ಶಿವಭಾವಮಾಪನ್ನಸ್ಯ ನಾರಾಯಣಸ್ಯ ಅನಿತರಸಾಧಾರಣದಹರಾವಚ್ಛಿನ್ನಜ್ಯೋತಿರ್ಲಿಂಗಾನುಸಂಧಾನಸಾಮರ್ಥ್ಯಲಿಂಗೇನ “ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿ ವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ” ಇತಿ ಪರಮೇಶ್ವರನಿಷ್ಠವ್ಯಾಪಕತ್ವಾದಿಧರ್ಮಾಣಾಂ ‘ತತ್ತ್ವಮಸಿ’ ಇತ್ಯಾದಿವನ್ನಾರಾಯಣಪರತ್ವೇನ ಸ್ತುತಿರ್ಯುಕ್ತಾ ಸರ್ವೋಪಾದಾನತ್ವಾತ್ಸರ್ವಾಂತರ್ಯಾಮಿತ್ವಾಚ್ಚ ಸರ್ವಾತ್ಮಕತ್ವಂ ಸರ್ವಶಬ್ದವಾಚ್ಯತ್ವಂ ಚ ಪರಮೇಶ್ವರಸ್ಯೈವ ಸಮುಚಿತಂ. ‘ಯೋ ವೈ ರುದ್ರಸ್ಸ ಭಗವಾನ್ಯಶ್ಚ ಬ್ರಹ್ಮಾ ಯಶ್ಚ ವಿಷ್ಣುರ್ಯಶ್ಚ ಮಹೇಶ್ವರಃ’ ಇತ್ಯಥರ್ವಶಿರಸಿ, ‘ಸ ಏವ ವಿಷ್ಣುಸ್ಸ ಪ್ರಾಣಃ’ ಇತಿ ಕೈವಲ್ಯಶ್ರುತೌ ಚ ತಸ್ಯೈವಾಂತರ್ಯಾಮಿತ್ವನಿರ್ದೇಶಾತ್.

ಜಾಬಾಲ, ಕಾಲಾಗ್ನಿರುದ್ರ ಶ್ರುತಿಗಳಲ್ಲಿ ಶಿವನ ಧಾರಣವನ್ನು ಹೇಳಿರುವುದರಿಂದ ಅದು ಏಕೆ ಪ್ರತಿಮೆಯ ಧಾರಣವಾಗಬಾರದು ಎಂದು ಆಶಂಕಿಸಿ ನಿರಾಕರಿಸುತ್ತಾನೆ—**ಶಬ್ದವಿಶೇಷಾತ್. ॥ ೫ ॥**

‘ಸರ್ವಲಿಂಗ ಎಂಬ ಮಂತ್ರದಲ್ಲಿ ಲಿಂಗವೇ ಸರ್ವಾತ್ಮಕವೆಂದು ಪ್ರತಿಪಾದಿಸಲಾಗಿದೆ. ಅಲ್ಲಿ ನಾರಾಯಣನೇ ಮೊದಲಾದ ದೇವತೆಯ ವಿಗ್ರಹಾರಾಧನವು ವಿಹಿತವಾಗಿಲ್ಲ; ಯಾಕೆಂದರೆ, ಶಬ್ದವಿಶೇಷಾತ್-ಜಿಜ್ಞಾಸ್ಯಬ್ರಹ್ಮದ ಲಕ್ಷಣವನ್ನು ಹೇಳುವ ‘ಜನ್ಮಾದ್ಯಸ್ಯ’ ಎಂಬ ಸೂತ್ರದಲ್ಲೂ ‘ಯತೋ ವಾ ಇಮಾನಿ’ ಎಂಬ ಶ್ರುತಿಯಲ್ಲೂ ಲಿಂಗವೇ ಜಗಜ್ಜನ್ಮಾದಿಕಾರಣವೆಂಬ ಅಂಶ ಸ್ಪಷ್ಟಪಡುತ್ತದೆ. ಜಗತ್ತು ಎಲ್ಲಿ ಲೀನವಾಗುವುದೋ ಅದೇ ಲಿಂಗ; ಅದೇ ಪರಬ್ರಹ್ಮ; ಅದೇ ಸರ್ವಕಾರಣವೂ ಅವ್ಯಯವೂ ಆದ ಸ್ಥಲ” ಎಂದು ಸ್ಮೃತಿಯಲ್ಲಿ ಹೇಳಿದೆ. “ಜಗತ್ತು ಎಲ್ಲಿ ಅಡಗಿ ಮತ್ತೆ ಸೃಷ್ಟಿ

ಕಾಲದಲ್ಲಿ ಎಲ್ಲಿಂದ ಹೊರಬರುವುದೋ, ಬಂದಮೇಲೆ ಯಾರ ಆಶ್ರಯದಲ್ಲಿ ಬದುಕುವುದೋ ಅದೇ ಲಿಂಗ. ಅದೇ ಜಗತ್ತಿನ ಉತ್ಪತ್ತಿಸ್ಥಿತಿಲಯಗಳಿಗಾಧಾರವಾದ ಪರಬ್ರಹ್ಮ" ಹೀಗೆ ಶಬ್ದವಿಶೇಷವೆನಿಸಿದ ಶ್ರುತಿಯಲ್ಲಿ ಹೇಳಲಾಗಿದೆ. ಪುರಾಣಗಳಲ್ಲೂ ಲಿಂಗಧಾರಣದ ಬಗ್ಗೆ ವಿಸ್ತಾರವಾಗಿ ಹೇಳಿದೆ. ಶಂಕರಸಂಹಿತೆಯಲ್ಲಿ 'ರುದ್ರನಾಗಿ ರುದ್ರನನ್ನು ಅರ್ಚಿಸಬೇಕು. ರುದ್ರನಲ್ಲದವನು ರುದ್ರನನ್ನು ಅರ್ಚಿಸಲಾರನು. ಪ್ರಾಣಲಿಂಗದೊಡನೆ ಬೆರೆತವನು ರುದ್ರನೇ ಆಗುವನು. ಕ್ರಿಮಿಕೀಟಪತಂಗಗಳಿಗಿಂತಲೂ ಪಶುಗಳು ಪ್ರಜ್ಞೆಯಲ್ಲಿ ಅಧಿಕರು. ಪಶುಗಳಿಗಿಂತಲೂ ಮನುಷ್ಯರು, ಅವರಲ್ಲೂ ಯಜ್ಞಕರ್ತರು, ಅವರಲ್ಲೂ ನಿಷ್ಕಾಮಕರ್ಮಯೋಗಿಗಳು, ಅವರಲ್ಲೂ ಆತ್ಮಜ್ಞಾನಿಗಳು, ಅವರಲ್ಲೂ ಲಿಂಗಪೂಜಕರು, ಅವರಲ್ಲೂ ಲಿಂಗಾಂಗವಿಜ್ಞಾನಿಗಳು, ಅವರಲ್ಲೂ ಷಟ್ಸ್ಥಲಜ್ಞಾನಿಯೇ ಪ್ರಜ್ಞೆಯಲ್ಲಿ ಅಧಿಕನು. ಅವನಿಗಿಂತ ಹೆಚ್ಚಿನವನಿಲ್ಲ. ಅವನೇ ಶಿವನು, ಶಿವನೇ ಅವನು, ಈ ಬಗ್ಗೆ ಸಂಶಯವಿಲ್ಲ. ದೇವತೆಗಳೆಲ್ಲರೂ ಶಿರಸ್ಸಿನಲ್ಲಿ ಯಾವಾಗಲೂ ಲಿಂಗವನ್ನು ಧರಿಸಿದ್ದಾರೆ. ಹರಿಯು ವಕ್ಷಸ್ಥಳದಲ್ಲೂ ಬ್ರಹ್ಮನು ಶಿರಸ್ಸಿನಲ್ಲೂ ಲಿಂಗವನ್ನು ಧರಿಸಿ ಅದರ ನೆನಹಿನಿಂದ ತಮ್ಮ ಕರ್ತವ್ಯವನ್ನು ನಡೆಸುತ್ತಿರುವರು. ಲಿಂಗಾಂಗಸಂಗಿಯಾದ ಶಿವಭಕ್ತನು ಎಲ್ಲಿ ನೆಲಸಿರುವನೋ ಅದೇ ಶಿವಕ್ಷೇತ್ರ. ಅವನು ದುರ್ವಿಷಯಗಳ ಕಡೆ ತಿರುಗಿದರೂ ಪಾಪರಹಿತನಾಗಿ ಉತ್ತಮಗತಿಯನ್ನು ಹೊಂದುವನು. ಲಿಂಗಾಂಗವಿಜ್ಞಾನಿಯೂ, ಶಿವಧ್ಯಾನಾಸಕ್ತನೂ ಆದವನನ್ನು ಆಶ್ರಯಿಸಿದವನೂ ಮುಕ್ತನಾಗುವನು. ಪಾಪವಿಮೋಚನೆಗಾಗಿ ಶಿವಭಕ್ತನ ಪಾದವನ್ನು ತೊಳೆದು ಆ ನೀರನ್ನು ತಲೆಯಲ್ಲಿ ಸ್ವೀಕರಿಸಬೇಕು. ಪ್ರಾಣಲಿಂಗಿಯ ದೇಹಕ್ಕೆ ತಗುಲುವ ಗಾಳಿ ಬೀಸುವ ಕಡೆ ವಾಸಿಸುವವನೂ ಸಹ ಮುಕ್ತನಾಗುವನು. ಲಿಂಗೈಕ್ಯನ ಪಾದಸ್ಪರ್ಶದ ಧೂಳು ಯಾವನ ತಲೆಯಮೇಲೆ ಬೀಳುವುದೋ ಅವನೂ ಮುಕ್ತನಾಗುವನು. ಲಿಂಗಧಾರಿಗೆ ಅರ್ಪಿಸಿದ ಅನ್ನವು ಮೇರುವಿಗೂ, ನೀರು ಸಾಗರಕ್ಕೂ ಸದೃಶವಾಗುವುದು. ಲಿಂಗೈಕ್ಯನನ್ನು ನೋಡಿ ರವಿಯು "ಇವನು ನನ್ನ ಮಂಡಲವನ್ನು ಭೇದಿಸಿಕೊಂಡು ಶಿವನಲ್ಲಿಗೆ ಹೋಗುವನು" ಎಂದು ತಿಳಿದು ತನ್ನ ಸ್ಥಾನದಿಂದ ಚಲಿಸುವನು. ಲಿಂಗಾಂಗಿಗಳ ದರ್ಶನಮಾತ್ರದಿಂದಲೇ ಪಶುಪಕ್ಷಿಮೃಗಗಳೂ ಮನುಷ್ಯರೂ ಮುಕ್ತರಾಗುವರು" ಹೀಗೆ ಹೇಳಿ ಲಿಂಗಧಾರಣ ಮತ್ತು ದರ್ಶನಗಳನ್ನು ಸರ್ವೋತ್ಕೃಷ್ಟವೆಂದು ತಿಳಿಸಿರುವುದರಿಂದ ಲಿಂಗಪೂಜೆ ವಿಗ್ರಹಾರಾಧನವಾಗಲಾರದು. "ನಾರಾಯಣಪರಂ ಬ್ರಹ್ಮ" ಎಂಬಲ್ಲಿ ನಾರಾಯಣನಿಗಿಂತಲೂ ಉತ್ಕೃಷ್ಟವಾದದ್ದು ಬ್ರಹ್ಮವೆಂದು ಹೇಳಲಾಗಿದೆ. ದರ್ಶಪೂರ್ಣಮಾಸಪ್ರಕರಣದಲ್ಲಿ ಹೇಳಿರುವ 'ಸಮಿಧೋ ಯಜತಿ' ಎಂಬ ವಾಕ್ಯದಲ್ಲಿ ಹೇಳಿರುವ ಪ್ರಯಾಜಗಳು ದರ್ಶಪೂರ್ಣಮಾಸದ ಅಂಗವೆಂಬಂತೆ, ನಾರಾಯಣಪ್ರಕರಣದಲ್ಲಿ ಹೇಳಿದ ಹೃದಯವನ್ನು ನಾರಾಯಣನಿಗೆ ಸಂಬಂಧಿಸಿದ್ದೆಂದೇ ಹೇಳಬೇಕು. 'ಅಣೋರಣೀಯಾನ್' ಎಂದು ಆರಂಭದಲ್ಲೂ ಶಿವನೊಬ್ಬನಿಗೇ ಅನ್ವಯಿಸುವ ಈಶನೇ ಮೊದಲಾದ

ಶಬ್ದಗಳನ್ನು ಮುಖ್ಯವಾಗಿ ತಿಳಿಸಿರುವುದರಿಂದಲೂ ನಾರಾಯಣನ ಉತ್ಪತ್ತಿಗೂ ಶಿವನು ಕಾರಣನೆಂಬ ರೀತಿಯಲ್ಲಿ ಶಿವನ ಪ್ರಶಂಸೆಯೇ ಮೊದಲಿಂದಲೂ ಬಂದಿರುವುದರಿಂದಲೂ, 'ವಿಶ್ವಾಧಿಕೋ ರುದ್ರಃ' 'ಯಃ ಪರಸ್ಸಮಹೇಶ್ವರಃ' ಎಂದು ಮಧ್ಯದಲ್ಲೂ ಶಿವನಿಗೇ ಪ್ರಾಚುರ್ಯವಿರುವುದರಿಂದಲೂ, 'ಊರ್ಧ್ವರೇತಂ' ಎಂದು ಕೊನೆಯಲ್ಲೂ ಶಿವನ ಪ್ರಶಂಸೆಯನ್ನೇ ಹೆಚ್ಚಾಗಿ ಹೇಳಿರುವುದರಿಂದಲೂ, ಈ ವಾಕ್ಯವು ಅಭ್ಯಾಸವೆನಿಸಿದೆ. ವಿಶ್ವಾಧಿಪತ್ಯವು ಬೇರೆ ಯಾರಲ್ಲೂ ಇರದೆ ಅಸಾಧಾರಣವಾಗಿರುವುದರಿಂದ ಅದೇ ಅಪೂರ್ವತೆ ಎನಿಸಿದೆ. 'ಅಮೃತವನ್ನು ಪಡೆದು ಬಂಧನದಿಂದ ಬಿಡುಗಡೆ ಹೊಂದುವನು' ಎಂಬಲ್ಲಿ ಫಲವನ್ನು ತಿಳಿಸಲಾಗಿದೆ. 'ಸಹಸ್ರಶೀರ್ಷಂ' ಎಂಬಲ್ಲಿ ನಾರಾಯಣನ ಪ್ರಶಂಸೆ ಅರ್ಥವಾದವೆಂದು ತಿಳಿದುಬರುತ್ತದೆ. "ಬ್ರಹ್ಮಕ್ಕಿಂತಲೂ ಬೇರೆ ಏನೂ ಇಲ್ಲ" ಎಂಬ ವಾಕ್ಯದಿಂದ ಉಪಪತ್ತಿ ತೋರುತ್ತದೆ. ಹೀಗೆ ಮೊದಲಿಂದ ಕೊನೆಯ ವರೆಗೆ ಪರಿಶೀಲಿಸಿದರೂ ನಾರಾಯಣಾನುವಾಕವು ಶಿವಪರವಲ್ಲದೆ ಬೇರೆಯಲ್ಲವೆಂಬುದು ಸ್ಪಷ್ಟಪಡುತ್ತದೆ. ಇಲ್ಲಿ ಸಹಸ್ರಶೀರ್ಷಾನುವಾಕವೇ ಉಪಕ್ರಮವಲ್ಲ; ಯಾಕೆಂದರೆ ಉಪಸಂಹಾರವಾಕ್ಯದಲ್ಲಿ ಬರುವ 'ಉಮಾಪತಿತ್ವ ಮೊದಲಾದ ಧರ್ಮಗಳು ನಾರಾಯಣನಿಗೆ ಅನ್ವಯಿಸುವುದಿಲ್ಲ. ಇದೂ ಅಲ್ಲದೆ, ಉಪಕ್ರಮದಲ್ಲಿ ಬಂದಿರುವ 'ಅಣೋರಣೀಯಾನ್' ಎಂಬ ಮಂತ್ರದಲ್ಲಿ ಈಶ್ವರನನ್ನು ಪ್ರಾಣಿಗಳೆಲ್ಲರಲ್ಲೂ ಗುಹಾಶಯನೆಂದು ಸಾಧಿಸಿ, ಅವನ ಅನುಗ್ರಹದಿಂದಲೇ ಎಲ್ಲರೂ ದುಃಖದಿಂದ ಪಾರಾಗುವರೆಂದು ತಿಳಿಸಿ, 'ಸಪ್ತ ಪ್ರಾಣಾಃ ಪ್ರಭವಂತಿ' ಎಂದಾರಂಭಿಸಿ, "ಎಲ್ಲವೂ ಪುರುಷನಿಂದ ತುಂಬಿದೆ" ಎಂದು ಕೊನೆಗಾಣಿಸಿ, ಸೃಷ್ಟಿಯೇ ಮೊದಲಾದ ಪ್ರವೃತ್ತಿಧರ್ಮಗಳನ್ನು ಅವನವೆಂದು ತೋರಿಸಿ, 'ನ ಕರ್ಮಣಾ' ಎಂಬುದರಿಂದ ನಿವೃತ್ತಿಧರ್ಮವನ್ನು ಪ್ರಶಂಸಿಸಿ 'ಸ್ವರ್ಗದಾಚೆಗೆ ಪರಮಾಕಾಶದಲ್ಲಿ ಅಡಗಿದೆ' ಎಂಬುದರಿಂದ ಆ ಜ್ಯೋತಿಯ ಉಪಾಸನವು ಯತಿಗಳಿಗೆ ಮಾತ್ರ ಸಾಧ್ಯವೆಂದು ತಿಳಿಸಿ, 'ಅದರಲ್ಲಿ ಬೆರೆತವನಿಗೇ ಬಂಧನದ ಬಿಡುಗಡೆ' ಎಂಬಲ್ಲಿ ಫಲವನ್ನು ಸೂಚಿಸಿ, 'ದಹರಂ ವಿಪಾಪ್ಮಂ' ಎಂಬಲ್ಲಿ ಪರಮಾಕಾಶವೇ ಹೃದಯವೆಂದು ಹೇಳಿ 'ಯೋ ವೇದಾದೌ ಸ್ವರಃ' ಎಂಬುದರಿಂದ ಹೃದಯದಲ್ಲಿ ಮಹೇಶ್ವರನೇ ಉಪಾಸ್ಯನೆಂದು ನಿರ್ದೇಶಿಸಿ, 'ಋತಂ ಸತ್ಯಂ' ಎಂಬಲ್ಲಿ ಆ ಉಪಾಸನವು ಗುಣವಿಷಯವಾದ್ದರಿಂದ ಪರಶಿವನ ಧರ್ಮಗಳನ್ನು ಅಸಾಧಾರಣವೆಂದು ನಿರೂಪಿಸಿ, ಸಹಸ್ರಶೀರ್ಷಾನುವಾಕದಲ್ಲಿ ಅವನ ಉಪಾಸನೆಗೆ ಯತೀಂದ್ರನೂ ಶಿವಭಕ್ತಾಗ್ರಗಣ್ಯನೂ ಆದ ನಾರಾಯಣನೇ ಮುಖ್ಯಾಧಿಕಾರಿಯೆಂದು ತಿಳಿಸಿ, 'ನಾರಾಯಣಂ ಮಹಾಜ್ಞೇಯಂ' ಎಂಬಲ್ಲಿ ನಾರಾಯಣನನ್ನು ಸ್ತುತಿಸಿ, 'ಪದ್ಮಕೋಶಪ್ರತೀಕಾಶಂ' ಎಂಬುದರಿಂದ ಅವನ ಹೃತ್ಕಮಲವನ್ನು ನಿರ್ದೇಶಿಸಿ, 'ಅದರ ಮಧ್ಯದಲ್ಲಿ ಪರಮಾತ್ಮನು ನೆಲಸಿರುವನು' ಎಂಬುದರಿಂದ ಪರಮೇಶ್ವರನು ಅಲ್ಲಿ ಅಂತರ್ಯಾಮಿಯಾಗಿ ನೆಲಸಿರುವನೆಂದು ತಿಳಿಸಿ, 'ಆದಿತ್ಯನು ಇಲ್ಲಿ ಶೋಭಿಸುತ್ತಿರುವನು' ಎಂದು ಸೂರ್ಯಮಂಡಲವನ್ನು ಸ್ತುತಿಸಿ, 'ಈ ಆದಿತ್ಯನೊಳಗೆ ಹಿರಣ್ಮಯಪುರುಷನು'

ಎಂಬುವರಿಂದ ರುದ್ರನೇ ಆದಿತ್ಯಮಂಡಲದಲ್ಲಿರುವನೆಂದು ಸಾಧಿಸಿ, ಅನಂತರ ಪಂಚಬ್ರಹ್ಮಮಂತ್ರಗಳಿಂದ ಉಪಾಸ್ಯನಾದ ಪರಶಿವನ ಸರ್ವೇಶ್ವರತ್ವ ಮೊದಲಾದ ಧರ್ಮಗಳನ್ನು ತಿಳಿಸಿ, "ನಮೋ ಹಿರಣ್ಯಬಾಹವೇ" ಎಂಬುದರಿಂದ ವಾಯುವಿನಂತೆ ಶಿವನು ಮೂರ್ತಾಮೂರ್ತನಾಗಿರುವನೆಂದು ಸ್ಪಷ್ಟಪಡಿಸಲಾಗಿದೆ. ಸ್ಮೃತಿಯಲ್ಲಿ "ನಾರಾಯಣನೆಂಬ ಯತಿಯಿಂದ ಪದ್ಮಗರ್ಭ ಋಷಿಯು ಶಿವತತ್ತ್ವವನ್ನು ತಿಳಿದು ವಸಿಷ್ಠನಿಗೆ ಉಪದೇಶಿಸಿದನು" ಎಂದು ಹೇಳಿದೆ. ಸ್ಕಾಂದದಲ್ಲಿ ಶಿವನು "ನನಗೆ ನಾರಾಯಣನಿಗಿಂತ ಉತ್ಕೃಷ್ಟವಾದ ಭಕ್ತನಿಲ್ಲ. ಅವನು ನನಗೆ ಮೊದಲು ಹೆಂಡತಿಯೂ ವೃಷಭನೂ ಬಾಣವೂ ಆಗಿದ್ದನು" ಎಂದು ಹೇಳುತ್ತಾನೆ. ಅಶ್ವತ್ಥಾಮನಿಗೆ ಶಿವನು 'ಕೃಷ್ಣನು ವ್ಯವಹಾರಗಳನ್ನು ಅನಾಯಾಸವಾಗಿ ನಡೆಸಿಕೊಳ್ಳುತ್ತಲೇ ನನ್ನನ್ನು ಆರಾಧಿಸುತ್ತಾನೆ. ಆದ್ದರಿಂದ ನನಗೆ ಅವನಿಗಿಂತ ಉತ್ತಮ ಭಕ್ತನಿಲ್ಲ' ಹೀಗೆ ದ್ರೋಣಪರ್ವದಲ್ಲಿ ಹೇಳಿದ್ದಾನೆ. ಸೌರಸಂಹಿತೆಯಲ್ಲಿ "ಶಿವನು ತನ್ನ ಯಥಾರ್ಥವಾದ ತತ್ತ್ವವನ್ನರಿತು ಅವನನ್ನು ವಿಷ್ಣುವಿಗೆ ಹೇಳಿದನು. ವಿಷ್ಣು ಅದನ್ನು ಬ್ರಹ್ಮನಿಗೂ, ಬ್ರಹ್ಮನು ವಸಿಷ್ಠನಿಗೂ, ವಸಿಷ್ಠನು ಪಾರ್ವತಿಗೂ, ಪಾರ್ವತಿ ಪರಾಶರನಿಗೂ, ಪರಾಶರನು ವ್ಯಾಸನಿಗೂ ಹೇಳಿದರು' ಎಂದು ತಿಳಿಸಿದೆ. ಹೀಗೆ ಶಿವನಾರಾಯಣರಿಗೆ ಪೂಜ್ಯಪೂಜಕಭಾವವೂ ಗುರುಶಿಷ್ಯಭಾವವೂ ಸ್ಪಷ್ಟವಾಗಿದೆ. ಆದ್ದರಿಂದಲೇ ಶಿವೋಪಾಸನದಿಂದ ಶಿವಭಾವವನ್ನು ಹೊಂದಿ ನಾರಾಯಣನು ಬೇರೆ ಯಾರಿಗೂ ಸಾಧ್ಯವಾಗದ ದಹರಾಕಾಶದ ಜ್ಯೋತಿರ್ಲಿಂಗದ ಅನುಸಂಧಾನದಲ್ಲಿ ನುರಿತವನಾದ್ದರಿಂದ "ಈ ಜಗತ್ತಿನಲ್ಲಿ ಕಾಣುವುದು ಕೇಳುವುದು ಒಳಗಿನದು ಹೊರಗಿನದು ಎಲ್ಲವೂ ನಾರಾಯಣನೇ" ಎಂದು ಪರಮೇಶ್ವರನ ವ್ಯಾಪಕತ್ವವನ್ನು 'ತತ್ತ್ವಮಸಿ' ಎಂಬಂತೆ ನಾರಾಯಣನಲ್ಲಿ ಹೇಳಿರುವುದು ಯುಕ್ತವಾಗಿದೆ. ಪೂಜಕನೇ ಪೂಜ್ಯನಾಗುವುದು ಸಹಜ. ಆದರೂ ಸರ್ವೋಪಾದಾನತ್ವ, ಸರ್ವಾಂತರ್ಯಾಮಿತ್ವ, ಸರ್ವೇಶ್ವರತ್ವ, ಸರ್ವಾತ್ಮಕತ್ವ, ಸರ್ವಶಬ್ದವಾಚ್ಯತ್ವ ಇವೆಲ್ಲವೂ ಪರಮೇಶ್ವರನಿಗೇ ಮೀಸಲಾಗಿವೆ. ರುದ್ರನೇ ಬ್ರಹ್ಮವಿಷ್ಣ್ವಾದಿಗಳಾಗಿದ್ದರೂ ದಹರಾಕಾಶದಲ್ಲಿ ಉಪಾಸ್ಯನಾಗಿರುವುದರಿಂದ ಅವನಿಗೇ ಪರಬ್ರಹ್ಮಲಕ್ಷಣವು ಅನ್ವಯಿಸುತ್ತದೆ.

**ಶ್ರುತಿಷು ಪರಶಿವಸ್ಯ ದಹರೋಪಾಸ್ಯತ್ವಕಥನಾತ್ತಸ್ಯೈವ ತತ್ಸಮುಚಿತಮಸ್ತು. ಪವಿತ್ರಸ್ಯ ಪರಮೇಶ್ವರಸ್ಯ ಅಪವಿತ್ರಮಾಮುಹಸ್ತಸ್ಥಿತಿವಿರೋಧಾತ್ಸರ್ವಲಿಂಗವಾಕ್ಯೇ ಶರೀರೇ ಲಿಂಗಧಾರಣಂ ನ ವಿಧೀಯತ ಇತ್ಯಾಶಂಕಾಯಾಮಾಹ—ಸ್ಮೃತೇಶ್ಚ ||೬||**

'ಸರ್ವಲಿಂಗಂ-ಪವಿತ್ರಂ' ಇತಿ ವಾಕ್ಯೇ ಪಾಣಿಲಿಂಗಧೃತಿಸ್ಸರ್ವಥಾ ನ ವ್ಯಪದಿಶ್ಯತ ಇತಿ ಚೇನ್ನ ಕುತಃ? ಸ್ಮೃತೇಶ್ಚ-"ಕೃತೇ ತು ಮಾನವೋ ಧರ್ಮಸ್ತ್ರೇತಾಯಾಂ ಗೌತಮಸ್ಮೃತಿಃ | ದ್ವಾಪರೇ ಶಂಖಲಿಖಿತೌ ಕಲೌ ಪಾರಾಶರಸ್ಮೃತಿಃ ||" ಇತ್ಯಾದಿಸ್ಮೃತಿನಿರ್ದಿಷ್ಟಕೃತಾದಿಯುಗಚತುಷ್ಟಯಪ್ರಸಿದ್ಧಮನ್ವಾದಿಸ್ಮೃತಿಷು ಬ್ರಾ

ಹ್ಮಣಾನಾಂ ಶಿವಲಿಂಗಧಾರಣವಿಧಾಯಕಸ್ಮೃತೇಶ್ಚ ನ ದೇವತಾಂತರಧಾರಣೋಪಾಸನಂ ವೈದಿಕಾನಾಮಂಗೀಕರ್ತವ್ಯಮಿತ್ಯರ್ಥಃ । ತಥಾಹಿ ಮನುಸ್ಮೃತೌ. "ಅಕ್ಷಪಾದಾದಯಸ್ಸರ್ವೇ ಋಷಯಃ ಪರಯಾ ಮುದಾ । ಧಾರಯಂತ್ಯಳಿಕಾಗ್ರೇಷು ಶಿವಲಿಂಗಮಹರ್ನಿಶಂ ॥" ಇತಿ. ತತ್ರೈವ ಧ್ಯಾನಯೋಗಿನಿರೂಪಣೇ "ಶಿವಧ್ಯಾನಪರೋ ಭೂತ್ವಾ ಶಿವಲಿಂಗಾಂಗಸಂಯುತಃ । ಶಿವೇತರಪರಿತ್ಯಾಗೀ ಧ್ಯಾನಯೋಗೀ ಸ ಉಚ್ಯತೇ ॥" ಇತಿ. ಶಂಖಸ್ಮೃತೌ "ಕೀಟೋ ಭ್ರಮರಯೋಗೇನ ಭ್ರಮರೋ ಭವತಿ ಧ್ರುವಂ । ಮಾನವಶ್ಶಿವಯೋಗೇನ ಶಿವೋ ಭವತಿ ಸರ್ವದಾ ॥ ವಾಮಹಸ್ತಸ್ಥಿತಂ ಲಿಂಗಂ ಸಾವಧಾನೇನ ಪೂಜಯೇತ್ । ಮಸ್ತಕೇ ಹೃದಯೇ ಕಂಠೇ ಧಾರಯೇತ್ಸರ್ವದಾ ದ್ವಿಜಃ ॥" ಇತಿ. ಪರಾಶರಸ್ಮೃತೌ "ಕಾಶ್ಯಾಂ ಮೃತಾನಾಂ ಜಂತೂನಾಂ ಯತೀನಾಂ ಲಿಂಗಧಾರಿಣಾಂ । ಬ್ರಹ್ಮತ್ವಮೇವ ಭವತಿ ಪ್ರೇತತ್ವಂ ನಹಿ ವಿದ್ಯತೇ । ಶೈವಲಿಂಗಾರ್ಚನಂ ಯಸ್ಯ ಯಸ್ಯಾ ಚಾಗ್ನಿಪರಿಗ್ರಹಃ । ವಾನಪ್ರಸ್ಥಯತೀನಾಂ ಚ ಶರೀರೇ ನಾಸ್ತಿ ಸೂತಕಂ ॥ ಪೂಜಯೇದ್ಯಸ್ತು ಹಸ್ತಾದೌ ಶಿವಲಿಂಗಂ ಶಿವಾತ್ಮಕಂ । ತಸ್ಯ ಹಸ್ತಸ್ಥಿತಾ ಮುಕ್ತಿಶ್ಶಂಕರಸ್ಯ ಪ್ರಸಾದತಃ ॥" ಇತಿ. ಆನುಶಾಸನಿಕಪರ್ವಣಿ "ಕಿಮಾಹುರ್ಭರತಶ್ರೇಷ್ಠ ಪಾತ್ರಂ ವಿಪ್ರಾಸ್ಸನಾತನಂ । ಲಿಂಗಿನಂ ಬ್ರಾಹ್ಮಣಂ ಚೈವ ಬ್ರಾಹ್ಮಣಂ ಚಾಪ್ಯಲಿಂಗಿನಂ" ಇತಿ ಯುಧಿಷ್ಠಿರಪ್ರಶ್ನೇ "ಸದ್ವೃತ್ತಿಮಪಿ ವಿಜ್ಞಾಯ ಲಿಂಗಿನೇ ಚೇತರಾಯ ಚ । ದೇಯಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ" ॥ ಇತಿ ಭೀಷ್ಮವಚನಂ. ಲೈಂಗೇ-"ವೇದೇಷು ಶಾಸ್ತ್ರಸಂಘೇಷು ಪುರಾಣೇಷ್ವಾಗಮೇಷು ಚ । ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣಮುತ್ತಮಂ" ಇತ್ಯಾರಭ್ಯ "ಯಜುರಪ್ಯಾಹ ಸರ್ವಂ ವೈ ಲಿಂಗಂ ಸ್ಥಾಪಯತೀತಿ ಚ । ತಸ್ಮಾದ್ಧಾರ್ಯಂ ಮಹಾಲಿಂಗಂ ಪಾಣಿಮಂತ್ರೇತಿ ಮಂತ್ರತಃ ॥" ಇತ್ಯಾದಿ ಶ್ರೂಯತೇ. ಸಿದ್ಧಾಂತಾಗಮೇ "ಶ್ರುತಿಸ್ಮೃತಿಪುರಾಣೇಷು ವೈದಿಕಾನಾಂ ವರಾನನೇ । ಲಿಂಗಧಾರಣಮಾಖ್ಯಾತಂ ಸರ್ವಸಿದ್ಧಿಪ್ರದಾಯಕಂ" ॥ ಚಿಚ್ಛಕ್ತಿರ್ನಿಧನಾಖ್ಯಾತಾ ಲಯಾಧಿಷ್ಠಾನತತ್ತ್ವತಃ । ತದಂಗತ್ವಾನ್ಮಹೇಶಸ್ಯ ತತ್ಪತಿತ್ವಂ ವಿಧೀಯತೇ ॥ ನಿಧನಾಧಿಪತಿಃ ಕಾಲರುದ್ರೋ ವಿಶ್ವಲಯಾಧಿಪಃ । ತಸ್ಯಾಂತಕತ್ವಂ ಹಂತೃತ್ವಂ ಶಿವಸ್ಯೈವ ನಿರೂಪ್ಯತೇ ॥ ತತ್ತ್ವಾನಾಂ ಮಹದಾದೀನಾಮೂರ್ಧ್ವದೇಶಪ್ರಚಾರತಃ । ತತೋರ್ಧ್ವಾಯೇತಿ ವಾಕ್ಯೇನ ಪ್ರಧಾನಂ ಪರಿಗೀಯತೇ ॥ ಊರ್ಧ್ವಲಿಂಗಾಯೇತಿ ವಾಕ್ಯೇನ ಸದಾಶಿವ ಇತೀರ್ಯತೇ । ಕಾರಣಾಂಗಂ ತಥಾ ಪ್ರೋಕ್ತಂ ಹಿರಣ್ಯಾಯೇತಿ ವಾಕ್ಯತಃ ॥ ಹಿರಣ್ಯಲಿಂಗಾಯೇತಿವಾಕ್ಯೇನ ಭಾವಲಿಂಗಂ ಪ್ರಚಕ್ಷ್ಯತೇ । ಸುವರ್ಣಾಯೇತಿವಾಕ್ಯೇನ ಸೂಕ್ಷ್ಮದೇಹಃ ಪ್ರಬೋಧ್ಯತೇ ॥ ಸುವರ್ಣಲಿಂಗವಾಕ್ಯೇನ ಪ್ರಾಣಲಿಂಗಂ ಪ್ರಚಕ್ಷ್ಯತೇ । ನಮೋ ದಿವ್ಯಾಯೇತಿವಾಕ್ಯೇ ಸ್ಥೂಲದೇಹಃ ಪ್ರತೀಯತೇ । ದಿವ್ಯಲಿಂಗಾಯೇತಿ ವಾಕ್ಯೇ ಸ್ವೇಷ್ಟಲಿಂಗಂ ವಿಧೀಯತೇ । ಐಕ್ಯಸ್ಥಲಂ ತಥಾ ಪ್ರೋಕ್ತಂ ಭವಾಯೇತಿ ಪದೇನ ಹಿ । ಭವಲಿಂಗಾಯೇತಿ ವಾಕ್ಯೇ ಮಹಾಲಿಂಗಂ ಭವೇತ್ತಥಾ ।

ನಮಶ್ಶರ್ವಾಯೇತಿ ವಾಕ್ಯೇ ಶರಣಸ್ಥಲಮೀರಿತಂ । ಪ್ರಸಾದಲಿಂಗಮಾಖ್ಯಾತಂ ಶರ್ವಲಿಂಗಪದೇ ಶಿವೇ । ಪ್ರಾಣಲಿಂಗಿಸ್ಥಲಂ ಪ್ರೋಕ್ತಂ ಶಿವಾಯೇತಿಪದೇನ ಹಿ । ಶಿವಲಿಂಗಾಯೇತಿವಾಕ್ಯೇ ಚರಲಿಂಗಂ ಪ್ರದರ್ಶಿತಂ । ನಮೋ ಜ್ವಲಾಯೇತಿವಾಕ್ಯೇ ಪ್ರಸಾದಸ್ಥಲಮುಚ್ಯತೇ । ಜ್ವಲಲಿಂಗಾಯೇತಿ ವಾಕ್ಯೇ ಶಿವಲಿಂಗಂ ತಥಾ ಸ್ಮೃತಂ । ನಮ ಆತ್ಮಾಯೇತಿ ವಾಕ್ಯೇ ಮಾಹೇಶ್ವರಪದಂ ತಥಾ । ಆತ್ಮಲಿಂಗಾಯೇತಿ ವಾಕ್ಯೇ ಗುರುಲಿಂಗಂ ತದುಚ್ಯತೇ । ಭಕ್ತಸ್ಥಲಂ ಸಮಾಖ್ಯಾತಂ ಪರಮಾಯೇತಿ ವಾಕ್ಯತಃ । ಆಚಾರಲಿಂಗಮಾಖ್ಯಾತಂ ಪರಮಲಿಂಗಪದೇನ ವೈ ॥ ಏತತ್ಸೂರ್ಯಸ್ಯ ಮಿತ್ರಸ್ಯ ಮಂಡಲಾಂತರವರ್ತಿನಃ । ಸೋಮಸ್ಯ ಪಾರ್ವತೀಶಸ್ಯ ಲಿಂಗಂ ಭವಭಯಾಪಹಂ । ಸರ್ವೇಷು ಭಕ್ತದೇಹೇಷು ಸ್ಥಾಪ್ಯಂ ವೈ ಗುರುಣಾ ಸದಾ । ಪವಿತ್ರಾಣಾಂ ಪವಿತ್ರತ್ವಾತ್ಪವಿತ್ರಮಿತಿ ಕಥ್ಯತೇ । ತಸ್ಮಾದ್ಧಾರ್ಯಂ ಸದಾ ಲಿಂಗಂ ಪಾಣಿಮಂತ್ರೇತಿ ಮಂತ್ರತಃ । ಪಾಣೌ ಲಿಂಗಂ ಸಮಾಸಾದ್ಯ ದೀಕ್ಷಾಕಾಲೇ ಗುರುಶ್ಶಿವಂ । ಮನನಾತ್ಪೂಜನಾದ್ಭಕ್ತಾನ್ ತ್ರಾಯತೀತಿ ನಿರುಕ್ತಿತಃ । ಪಾಣಿಮಂತ್ರಮಿತಿ ಪ್ರೋಕ್ತಂ ತಲ್ಲಿಂಗಂ ಬ್ರಹ್ಮ ಶಾಶ್ವತಂ । ಷಟ್ತ್ರಿಂಶತ್ತತ್ತ್ವರೂಪತ್ವಂ ತಲ್ಲಿಂಗಸ್ಯೈವ ಸರ್ವದಾ । ಪಂಚಬ್ರಹ್ಮಾಭಿಧೈರ್ಮಂತ್ರೈಃ ಪ್ರೋಚ್ಯತೇ ಪರಮಾರ್ಥತಃ । ಸದ್ಯೋಜಾತಸ್ವರೂಪಾಯ ಭೂತತತ್ತ್ವಾಯ ನಮೋಽಸ್ತು ತೇ । ಸದ್ಯೋಜಾತಾಯ ಶರ್ವಾಯ ಜಲತತ್ತ್ವಾಯ ತೇ ನಮಃ । ಭವೇಭವೇ ಮಹಾಲಿಂಗರೂಪಿಣೇ ವಹ್ನಿಮೂರ್ತಯೇ । ತಥಾ ನಾತಿಭವೇ ವಾಯುತತ್ತ್ವರೂಪಾಯ ತೇ ನಮಃ । ನಮೋ ಭವಸ್ವ ಮಾಂ ವ್ಯೋಪರೂಪಿಣೇ ಶೂಲಪಾಣಯೇ । ಭವೋದ್ಭವಾಯ ಸೋಮಾಯ ಗಂಧತತ್ತ್ವಾಯ ತೇ ನಮಃ । ವಾಮದೇವಾಯ ರುದ್ರಾಯ ರಸತತ್ತ್ವಾಯ ತೇ ನಮಃ । ಜ್ಯೇಷ್ಠಾಯ ಶಿವರೂಪಾಯ ರೂಪತತ್ತ್ವಾಯ ತೇ ನಮಃ । ಶ್ರೇಷ್ಠಾಯ ಹರರೂಪಾಯ ಸ್ಪರ್ಶತತ್ತ್ವಾಯ ತೇ ನಮಃ । ರುದ್ರಾಯ ವಾಮದೇವಾಯ ಶಬ್ದತತ್ತ್ವಾಯ ತೇ ನಮಃ । ನಮಃ ಕಾಲಾಯ ಶರ್ವಾಯ ಪಾಯುತತ್ತ್ವಾತ್ಮನೇ ನಮಃ । ಗುಹ್ಯತತ್ತ್ವಾಯ ಕಲವಿಕರಣಾಯ ನಮೋಽಸ್ತುತೇ । ಪಾದತತ್ತ್ವಾಯ ಬಲವಿಕರಣಾಯ ನಮೋಽಸ್ತು ತೇ । ನಮೋ ಬಲಾಯ ಶಾಂತಾಯ ಪಾಣಿತತ್ತ್ವಾಯ ತೇ ನಮಃ । ನಮೋ ವಾಕ್ತತ್ತ್ವರೂಪಾಯ ಬಲಪ್ರಮಥನಾಯ ನಮಃ । ನಾಸಾತ್ಮನೇ ಸರ್ವಭೂತದಮನಾಯ ನಮೋಽಸ್ತು ತೇ । ಮನೋನ್ಮನಾಯ ಭೀಮಾಯ ಜಿಹ್ವಾತತ್ತ್ವಾತ್ಮನೇ ನಮಃ । ಅಘೋರೇಭ್ಯೋ ನಮಶ್ಚಾಸ್ತು ಚಕ್ಷುಸ್ತತ್ತ್ವಾಯ ತೇ ನಮಃ । ನಮಶ್ಚಾಸ್ತ್ವಥ ಘೋರೇಭ್ಯಸ್ತ್ವಕ್ತತ್ತ್ವಾಯ ನಮೋ ನಮಃ । ಘೋರಘೋರತರೇಭ್ಯಸ್ತು ಶ್ರೋತ್ರತತ್ತ್ವಾಯ ತೇ ನಮಃ । ಸರ್ವೇಭ್ಯಶ್ಚ ನಮಶ್ಚಾಹಂಕಾರತತ್ತ್ವಾಯ ತೇ ನಮಃ । ನಮಶ್ಚ ಸರ್ವಶರ್ವೇಭ್ಯಃ ಚಿತ್ತತತ್ತ್ವಾಯ ತೇ ನಮಃ। ನಮಸ್ತೇ ರುದ್ರರೂಪೇಭ್ಯೋ ಬುದ್ಧಿತತ್ತ್ವಾಯ ತೇ ನಮಃ। ತತ್ಪುರುಷಾಯ ನಮಶ್ಚಾಸ್ತು ಮನಸ್ತತ್ತ್ವಾಯ ತೇ ನಮಃ । ಮಹಾದೇವಾಯ ಸೋಮಾಯ ಜೀವತತ್ತ್ವಾಯ ತೇ ನಮಃ । ತನ್ನೋ

ರುದ್ರಾಯ ಭೀಮಾಯ ನಮಃ ಪ್ರಕೃತಿರೂಪಿಣೇ । ಈಶಾನಾಯ ಮಹೇಶಾಯ ರಾಗ ತತ್ತ್ವಾಯ ತೇ ನಮಃ । ಸರ್ವವಿದ್ಯಾಸ್ವರೂಪಾಯ ವಿದ್ಯಾತತ್ತ್ವಾತ್ಮನೇ ನಮಃ । ಈಶ್ವರಾಯ ನಮಸ್ತುಭ್ಯಂ ಕಲಾತತ್ತ್ವಾತ್ಮನೇ ನಮಃ । ಸರ್ವಭೂತಾಧಿಪತಯೇ ನಮೋ ನಿಯತಿರೂಪಿಣೇ।ಬ್ರಹ್ಮಾಧಿಪತಯೇ ತುಭ್ಯಂ ಕಾಲತತ್ತ್ವಾಯ ತೇ ನಮಃ। ಬ್ರಹ್ಮಣೋಽಧಿಪತೇ ತುಭ್ಯಂ ಮಾಯಾತತ್ತ್ವಾಯ ತೇ ನಮಃ । ಮಹೇಶ್ವರಾತ್ಮನೇ ತುಭ್ಯಂ ಬ್ರಹ್ಮಣೇ ಚ ನಮೋ ನಮಃ । ಶಿವರೂಪಾಯ ಸಾಂಬಾಯ ಸದಾಶಿವವಪು ರ್ಧೃತೇ । ಸದಾಶಿವಸ್ವರೂಪಾಯ ಶಕ್ತಿತತ್ತ್ವಾತ್ಮನೇ ನಮಃ । ಶಿವತತ್ತ್ವಾತ್ಮನೇ ತುಭ್ಯಂ ಓಂಕಾರಾಯ ನಮೋ ನಮಃ । ಷಟ್ತ್ರಿಂಶತ್ತತ್ತ್ವರೂಪಸ್ಯ ಲಿಂಗಸ್ಯ ಪರಮಾ ತ್ಮನಃ । ಸಕಲತ್ವಂ ನಿಷ್ಕಲತ್ವಂ ಪ್ರೋಕ್ತಮುತ್ತರತಶ್ಶ್ರುತೇಃ । ತಸ್ಮಾಲ್ಲಿಂಗಂ ಸದಾ ಧಾರ್ಯಂ ಯಾವಜ್ಜೀವಾಗ್ನಿಹೋತ್ರವತ್ ” ಇತಿ.

**ತಸ್ಮಾತ್ತಾಸ್ಸ್ಯಾದೌ ಲಿಂಗಧಾರಣಂ ನ ವಿರುದ್ಧಂ. ಕಿಂಚ ಕರಣತಯಾ ಸ್ವತಂತ್ರವಿಧ್ಯಂತರರಹಿತಸ್ಯಸೌತ್ರಾಮಣೀಬೃಹಸ್ಪತಿಸವನಾದೇರಗ್ನಿಚಯ ನವಾಜಪೇಯಾದ್ಯಂಗತ್ವೇನ ತದುಭಯಬಲಾದುಭಯಸಿದ್ಧಿವದತ್ರ ನಾ ರಾಯಣಾನುವಾಕ್ಯೇ ‘ದಹರಂ ವಿಪಾಪ್ಮಂ’ ಇತ್ಯುಪಕ್ರಮ್ಯ ಜ್ಯೋತಿರ್ಲಿಂ ಗಾನುಸಂಧಾನರೂಪಾಂತರ್ಲಿಂಗಧಾರಣಂ ಪ್ರಸಾಧ್ಯ, “ನಿಧನಪತಯೇ— ಪವಿತ್ರಂ ” ಇತ್ಯತ್ರ ಪರಬ್ರಹ್ಮಣಶ್ಶಿವಸ್ಯ ಬಾಹ್ಯಧಾರಣಸ್ಯಾಪಿ ವ್ಯವಸ್ಥಾ ಪನಾದುಭಯಬಲಾದುಭಯಸಿದ್ಧಿರಿತಿ ಘಂಟಾಘೋಷಃ । ವಾಮಕರಸ್ಯ ನಿಕೃಷ್ಟತ್ವಾತ್ತತ್ರ ಪರಮೇಶ್ವರಸ್ಯ ಧಾರಣಪೂಜಾದಿವಿಧಾಯಕತ್ವಂ ಶ್ರೌತಾನಾಂ ನ ಸಂಭವತೀತಿ ಯದುಕ್ತಂ ತತ್ತುಚ್ಛಂ, ಶ್ರೌತಶುಂತತ್ವ ಪ್ರಸಂಗಾತ್. ‘ಅಂಜಲಿನಾ ವಾ ಪಿಬೇದಖರ್ವೇಣ ವಾ ಪಾತ್ರೇಣ ’ ಇತಿ ಶ್ರುತೌ ಪಾಣ್ಯಾವಚ್ಛಿನ್ನಾಂಜಲಿವಿಧಾಯಕತ್ವೇನ ಬ್ರಹ್ಮಯಜ್ಞಪಿತೃತರ್ಪ ಣಾಂಗತ್ವೇನ ನಮಸ್ಕಾರಾಂಗತ್ವೇನ ಚ ವಾಮಹಸ್ತಸ್ಯ ಶ್ರೌತಾಂಗತ್ವದರ್ಶ ನಾನ್ನತ್ವಪಾವಿತ್ರ್ಯಪ್ರಸಂಗಃ. ತಸ್ಮಾಚ್ಛ್ರುತಿಸ್ಮೃತ್ಯಾದಿಸಿದ್ಧತ್ವಾತ್ಪಾಣಿ ಲಿಂಗಧಾರಣಪೂಜಾದಿಕಂ ಶ್ರೌತಾನಾಂ ಸಿದ್ಧಮೇವ. ಅತ ಏವ ಲೈಂಗೇ “ಲಿಂಗಸ್ಯ ಧಾರಣಾದೇವ ಪಶುತ್ವಂ ವಿನಿವಾರ್ಯತೇ । ನಾನ್ಯಥಾ ಬಹು ಯತ್ನೇನ ಜನ್ಮಕೋಟಿಶತೈರಪಿ । ಯೇ ಲಿಂಗಧಾರಿಣೋ ಲೋಕೇ ತೇ ಭಕ್ತಾ ಇತಿ ಕೀರ್ತಿತಾಃ । ತದನ್ಯೇ ಪಶವಃ ಪ್ರೋಕ್ತಾಸ್ತಸ್ಮಾತ್ಪಾಶುಪತಂ ಚರೇತ್ । ಬ್ರಹ್ಮವಿಷ್ಣ್ವಾದಿದೇವಾಶ್ಚ ಮುನಯೋ ಗೌತಮಾದಯಃ । ಲಿಂಗಸ್ಯ ಧಾರಣಾದೇವ ಪಶುತ್ವವಿನಿವಾರಿತಾಃ ” ಇತ್ಯುಕ್ತಂ.**

ಪವಿತ್ರವಾದ ಪರಮೇಶ್ವರನನ್ನು ಅಪವಿತ್ರವಾದ ಎಡಗೈನಲ್ಲಿ ಇಡುವುದು ವಿರುದ್ಧವಾದ್ದರಿಂದ, ಲಿಂಗಸಂಬಂಧವೇ ಇಲ್ಲದ ಈ ಅಪವಿತ್ರ ಶರೀರದಲ್ಲಿ ಲಿಂಗಧಾರ ಣವು ಯುಕ್ತವಲ್ಲವೆಂದು ಆಶಂಕಿಸಿ ನಿರಾಕರಿಸುತ್ತಾನೆ—**ಸ್ಮೃತೇಶ್ಚ ॥ ೬ ॥**

ಸರ್ವಲಿಂಗವಾಕ್ಯದಲ್ಲಿ ಹಸ್ತದಲ್ಲಿ ಲಿಂಗವನ್ನು ಧರಿಸುವುದು ಎಂದಿಗೂ ಸಾಧ್ಯವಿಲ್ಲವೆಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ಹಾಗೆ ಧರಿಸಬೇಕೆಂದು ಸ್ಮೃತಿ ಹೇಳುತ್ತಿದೆ. "ಕೃತಯುಗದಲ್ಲಿ ಮನುಸ್ಮೃತಿ, ತ್ರೇತಾಯುಗದಲ್ಲಿ ಗೌತಮಸ್ಮೃತಿ, ದ್ವಾಪರದಲ್ಲಿ ಶಂಖಸ್ಮೃತಿ, ಕಲಿಯುಗದಲ್ಲಿ ಪರಾಶರಸ್ಮೃತಿ ಪ್ರಮಾಣವಾಗಿವೆ" ಹೀಗೆ ಆಯಾಯ ಕಾಲಕ್ಕೆ ಒಂದೊಂದು ಸ್ಮೃತಿ ಪ್ರಮಾಣ ವೆನಿಸಿದೆ. ಅದರಲ್ಲಿ ಬ್ರಾಹ್ಮಣರಿಗೆ ಲಿಂಗಧಾರಣವು ವಿಹಿತವಾಗಿದೆಯಾದ್ದರಿಂದ ಬೇರೆ ದೇವತೆಯನ್ನು ಧರಿಸಿ ಪೂಜಿಸುವುದು ಯುಕ್ತವಲ್ಲ. ಮನುಸ್ಮೃತಿಯಲ್ಲಿ "ಅಕ್ಷಪಾದ ಮೊದಲಾದ ಋಷಿಗಳು ಶಿರಸ್ಸಿನಲ್ಲಿ ಲಿಂಗವನ್ನು ಯಾವಾಗಲೂ ಧರಿಸಿದ್ದರು' ಎಂದೂ, ಧ್ಯಾನಯೋಗದ ನಿರೂಪಣಪ್ರಕರಣದಲ್ಲಿ "ನಿಶ್ಚಲಚಿತ್ತದಿಂದ ಶಿವಧ್ಯಾನದಲ್ಲಾಸಕ್ತನಾಗಿ ಶಿವಲಿಂಗವನ್ನು ಅಂಗದಲ್ಲಿ ಧರಿಸುವವನು ಧ್ಯಾನಯೋಗಿ ಎನಿಸುವನು' ಎಂದೂ ಹೇಳಿದೆ. ಗೌತಮಸ್ಮೃತಿಯಲ್ಲಿ 'ಲಿಂಗವನ್ನು ಒಳಗೆ ಧರಿಸಲಾಗದಿದ್ದರೂ ಹೊರಗೆ ಪ್ರಾಣಭಾವನೆಯಿಂದ ಧರಿಸಬೇಕು' ಎಂದೂ, ಶಂಖಸ್ಮೃತಿಯಲ್ಲಿ "ಕೀಟವು ಭ್ರಮರದ ಸಂಬಂಧದಿಂದ ನಿಜವಾಗಿಯೂ ಭ್ರಮರವೇ ಆಗುವಂತೆ ಜೀವನು ಶಿವಯೋಗದಿಂದ ಶಿವನೇ ಆಗುವನು. ಲಿಂಗವನ್ನು ಎಡಗೈನಲ್ಲಿಟ್ಟು ಎಚ್ಚರದಿಂದ ಅರ್ಚಿಸಿ ತಲೆ, ಹೃದಯ ಕಂಠಗಳಲ್ಲೊಂದೆಡೆ ಧರಿಸಬೇಕು" ಎಂದೂ ಹೇಳಿದೆ. ಪರಾಶರ ಸ್ಮೃತಿಯಲ್ಲಿ 'ಕಾಶಿಯಲ್ಲಿ ಸತ್ತ ಜಂತುಗಳೂ ಯತಿಗಳೂ ಲಿಂಗಧಾರಿಗಳೂ ಶಿವಭಾವವನ್ನು ಹೊಂದುವರು; ಅವರು ಪ್ರೇತರಾಗುವುದಿಲ್ಲ. "ಲಿಂಗಪೂಜೆಗೂ ಅಗ್ನಿಪೂಜೆಗೂ ಸೂತಕದೋಷವಿಲ್ಲ. ಎಡಗೈನಲ್ಲಿ ಲಿಂಗವನ್ನು ಅರ್ಚಿಸುವವನಿಗೆ ಶಂಕರಾನುಗ್ರಹದಿಂದ ಮುಕ್ತಿ ಕೈನಲ್ಲಿಯೇ ಇರುತ್ತದೆ" ಎಂದು ಹೇಳಿದೆ. ಮಹಾಭಾರತದ ಅನುಶಾಸನಿಕಪರ್ವದಲ್ಲಿ ಯುಧಿಷ್ಠಿರನು ಭೀಷ್ಮನನ್ನು "ಯಾರು ದಾನಕ್ಕೆ ಅರ್ಹರು? ಲಿಂಗಿಬ್ರಾಹ್ಮಣನೋ ಅಲಿಂಗಿಬ್ರಾಹ್ಮಣನೋ?" ಎಂದು ಕೇಳಲು, ಭೀಷ್ಮನು "ಇಬ್ಬರೂ ತಪಸ್ವಿಗಳೇ. ಅವರವರ ಸದ್ವೃತ್ತಿಯನ್ನು ತಿಳಿದು ಇಬ್ಬರಿಗೂ ದಾನವನ್ನು ಕೊಡಬಹುದು" ಎಂದು ಉತ್ತರಿಸಿದ್ದಾನೆ. ಲಿಂಗಪುರಾಣದಲ್ಲಿ, "ವೇದಶಾಸ್ತ್ರಪುರಾಣಾಗಮಗಳಲ್ಲಿ ಬ್ರಾಹ್ಮಣನಿಗೆ ಲಿಂಗಧಾರಣವೇ ಉತ್ತಮವೆಂದು ಹೇಳಿದೆ" ಎಂದಾರಂಭಿಸಿ "ಯಜುಸ್ಸೂ ಸಹ ಸರ್ವವ್ಯಾಪಕವಾದ ಲಿಂಗವನ್ನು ಸಾಧಕನು ದೇಹದಲ್ಲಿ ಧರಿಸಬೇಕೆಂದು ವಿಧಿಸಿದೆ. ಆದ್ದರಿಂದ ವೈದಿಕನು ಸರ್ವಲಿಂಗಮಂತ್ರದಂತೆ ಯಾವಾಗಲೂ ಲಿಂಗವನ್ನು ದೇಹದಲ್ಲಿ ಧರಿಸಿರಬೇಕು" ಎಂದು ಹೇಳಿದೆ. ಸಿದ್ಧಾಂತಾಗಮವು "ಶ್ರುತಿಸ್ಮೃತಿಗಳಲ್ಲಿ ವೈದಿಕರಿಗೆ ಲಿಂಗಧಾರಣವು ಸರ್ವಫಲಪ್ರದವೆಂದು ಹೇಳಲಾಗಿದೆ.' ಚಿತ್‌ಶಕ್ತಿ ಲಯಕ್ಕಾಶ್ರಯವಾದ್ದರಿಂದ ನಿಧನವೆನಿಸಿದೆ. ಈಶ್ವರನು ಚಿತ್‌ಶಕ್ತಿಗಾಶ್ರಯನಾದ್ದರಿಂದ ನಿಧನಪತಿ ಎನಿಸಿದ್ದಾನೆ. ಕಾಲರುದ್ರನು ವಿಶ್ವದ ಪ್ರಲಯವನ್ನು ನೋಡಿಕೊಳ್ಳುತ್ತ ಕೊನೆಯಲ್ಲಿ ಶಿವನಲ್ಲಿಯೇ ಲಯವಾಗುವುದರಿಂದ ಶಿವನು ನಿಧನಪತಾಂತಿಕನೆನಿಸಿದ್ದಾನೆ. ಮಹದಾದಿ

ತತ್ತ್ವಗಳಿಗೂ ಮೇಲೆ ವ್ಯಾಪಿಸಿರುವುದರಿಂದ ಪ್ರಧಾನವು ಊರ್ಧ್ವವೆನಿಸಿ ಅದಕ್ಕೂ ಶಾಸಕನಾದ್ದರಿಂದ ಶಿವನು ಊರ್ಧ್ವಲಿಂಗನೆನಿಸಿದ್ದಾನೆ. ಹಿರಣ್ಯವೆಂದರೆ ಕಾರಣ ದೇಹ; ಅಲ್ಲಿರುವ ಭಾವಲಿಂಗವೇ ಹಿರಣ್ಯಲಿಂಗವೆನಿಸಿದೆ. ಸುವರ್ಣವೆಂದರೆ ಸೂಕ್ಷ್ಮದೇಹ; ಅಲ್ಲಿ ಪ್ರಕಾಶಿಸುವ ಪ್ರಾಣಲಿಂಗವೇ ಸುವರ್ಣಲಿಂಗವೆನಿಸಿದೆ. ದಿವ್ಯವೆಂದರೆ ಸ್ಥೂಲದೇಹ, ಅಲ್ಲಿ ಪ್ರಕಾಶಿಸುವ ಇಷ್ಟಲಿಂಗವೇ ದಿವ್ಯಲಿಂಗವೆನಿಸಿದೆ. ಭವಾಯ ಎಂಬಲ್ಲಿ ಐಕ್ಯಸ್ಥಲವೂ, ಭವಲಿಂಗವೆಂಬಲ್ಲಿ ಆ ಸ್ಥಿತಿಯಲ್ಲಿ ಅನುಭವಯೋಗ್ಯವಾದ ಮಹಾಲಿಂಗವೂ ನಿರ್ದಿಷ್ಟವಾಗಿವೆ. ಶರ್ವಾಯ ಎಂಬಲ್ಲಿ ಶರಣಸ್ಥಲವೂ, ಶರ್ವಲಿಂಗ ಎಂಬಲ್ಲಿ ಪ್ರಸಾದಲಿಂಗವೂ ನಿರ್ದಿಷ್ಟವಾಗಿವೆ. ಶಿವಾಯ ಎಂಬ ಪದದಿಂದ ಪ್ರಾಣಲಿಂಗಿಸ್ಥಲವೂ, ಶಿವಲಿಂಗಪದದಿಂದ ಜಂಗಮಲಿಂಗವೂ ಉಕ್ತವಾಗಿವೆ. ಜ್ವಾಲಾಯ ಎಂಬುದರಿಂದ ಪ್ರಸಾದಿಸ್ಥಲವೂ, ಜ್ವಲಲಿಂಗವೆಂಬುದರಿಂದ ಶಿವಲಿಂಗವೂ ನಿರ್ದಿಷ್ಟವಾಗಿವೆ. ಆತ್ಮಾಯ ಎಂಬಲ್ಲಿ ಮಾಹೇಶ್ವರಸ್ಥಲವೂ, ಆತ್ಮಲಿಂಗ ಎಂಬಲ್ಲಿ ಗುರುಲಿಂಗವೂ ನಿರ್ದಿಷ್ಟವಾಗಿವೆ. ಪರಮಾಯ ಎಂಬಲ್ಲಿ ಭಕ್ತಸ್ಥಲವೂ, ಪರಮಲಿಂಗ ಎಂಬಲ್ಲಿ ಆಚಾರಲಿಂಗವೂ ನಿರ್ದಿಷ್ಟವಾಗಿವೆ. 'ಏತತ್ಸೋಮಸ್ಯ' ಎಂಬಲ್ಲಿ ಸೂರ್ಯ ಮಂಡಲದಲ್ಲಿರುವ ಪಾರ್ವತೀಪತಿಯ ನಿಜಸ್ವರೂಪದ ಲಿಂಗವು ಭವಭಯಗಳನ್ನು ಪರಿಹರಿಸುವುದರಿಂದ ಅದನ್ನು ಗುರುವಿನಿಂದ ಪಡೆದು ದೇಹದಲ್ಲಿ ಧರಿಸಬೇಕು. ಪವಿತ್ರವಸ್ತುಗಳೆಲ್ಲಕ್ಕೂ ಹೆಚ್ಚು ಪವಿತ್ರವಾದ್ದರಿಂದ ಅದು ಪವಿತ್ರವೆನಿಸಿದೆ. ಕೈನಲ್ಲಿ ಶಿವಲಿಂಗವನ್ನು ನಿರಂತರವೂ ಪೂಜಿಸುವುದರಿಂದ ಅದು 'ಭಕ್ತರನ್ನು ರಕ್ಷಿಸುತ್ತದೆ' ಎಂಬ ನಿರ್ವಚನದಿಂದ ಪಾಣಿಮಂತ್ರವೆನಿದೆ. ಅದು ಶಾಶ್ವತಬ್ರಹ್ಮವೂ ಷಟ್ತ್ರಿಂಶತ್ತತ್ತ್ವಮಯವೂ ಆಗಿದೆ. ಸದ್ಯೋಜಾತವೇ ಮೊದಲಾದ ಪಂಚಬ್ರಹ್ಮಮಂತ್ರ ಮಯವಾದ ಈ ಲಿಂಗವೇ ಭೂ ಜಲ ವಾಯು ಅಗ್ನಿ ಆಕಾಶವೆಂಬ ಪಂಚಭೂತಗಳಾಗಿಯೂ, ಗಂಧ ರಸ ರೂಪ ಸ್ಪರ್ಶ ಶಬ್ದಗಳೆಂಬ ವಿಷಯಗಳಾಗಿಯೂ, ಪಾಯು, ಗುಹ್ಯ, ಪಾದ, ಹಸ್ತ, ವಾಕ್ ಎಂಬ ಕರ್ಮೇಂದ್ರಿಯಗಳಾಗಿಯೂ, ಮೂಗು, ನಾಲಿಗೆ, ಕಣ್ಣು, ಚರ್ಮ, ಕಿವಿ ಎಂಬ ಜ್ಞಾನೇಂದ್ರಿಯಗಳಾಗಿಯೂ, ಅಹಂಕಾರ, ಚಿತ್ತ, ಬುದ್ಧಿ, ಮನಸ್ಸು, ಜೀವರೆನಿಸಿಯೂ, ಪ್ರಕೃತಿ, ರಾಗ, ವಿದ್ಯೆ, ಕಲಾ, ನಿಯತಿ, ಕಾಲ, ಮಾಯೆಗಳಾಗಿಯೂ, ಮಹೇಶ್ವರ (ಬ್ರಹ್ಮ), ಸದಾಶಿವ (ಕಾಲರುದ್ರ), ಶಕ್ತಿ (ನಾರಾಯಣ), ಶಿವ (ಓಂಕಾರ) ರೂಪದಿಂದಲೂ ಪರಿಣಮಿಸಿರುವುದರಿಂದ ಮೂವತ್ತಾರು ತತ್ತ್ವಗಳಾಗಿರುವ ಈ ಲಿಂಗವು ಸಕಲವೂ ನಿಷ್ಕಲವೂ ಅಂದರೆ ಮೂರ್ತಾಮೂರ್ತವೆನಿಸಿದೆ ಎಂದು ಶ್ರುತಿಯು ತಿಳಿಸುತ್ತದೆ. ಆದ್ದರಿಂದ ವೈದಿಕನಿಗೆ ಅಗ್ನಿಹೋತ್ರದಂತೆ ಲಿಂಗವು ಯಾವಾಗಲೂ ಧಾರ್ಯವೆನಿಸಿದೆ ಎಂದು ತಿಳಿದುಬಂದಿರುವುದರಿಂದ ಪಾಣಿಯಲ್ಲಿ ಲಿಂಗವನ್ನು ಧರಿಸುವುದರಲ್ಲಿ ದೋಷವಿಲ್ಲವೆಂಬುದು ಸಿದ್ಧವಾಗುತ್ತದೆ. ಸೌತ್ರಾಮಣಿ ಮತ್ತು ಬೃಹಸ್ಪತಿಸವನವೆಂಬ ಯಾಗಗಳಿಗೆ ಪ್ರತ್ಯೇಕವಾದ ವಿಧಿ ಇಲ್ಲದಿದ್ದರೂ, ಅವು ಅಗ್ನಿಚಯನ ಮತ್ತು ವಾಜಪೇಯವೆಂಬ ಪ್ರಧಾನಯಜ್ಞಗಳ

ಸಾಮಾನ್ಯವಿಧಿಯಿಂದಲೇ ಅಂಗವಾಗುವಂತೆ ನಾರಾಯಣಾನುವಾಕ್ಯದ 'ದಹರಂ ವಿಪಾಪ್ಮಂ' ಎಂಬುದರಿಂದ ಜ್ಯೋತಿರ್ಲಿಂಗಾನುಸಂಧಾನರೂಪವಾದ ಅಂತರ್ಲಿಂಗ ಧಾರಣವನ್ನು ಸಾಧಿಸಿ, 'ನಿಧನಪತಯೇ ನಮಃ' ಎಂಬುದರಿಂದ ಬಾಹ್ಯಲಿಂಗ ಧಾರಣವನ್ನು ವಿಧಿಸಿರುವುದರಿಂದ ಒಳಗೆ ಹೊರಗೆ ಎರಡು ಕಡೆಯೂ ಲಿಂಗವನ್ನು ಧರಿಸಬೇಕೆಂಬುದು ಸಿದ್ಧಿಸುತ್ತದೆ. ವಾಮಹಸ್ತವು ಕನಿಷ್ಠವಾದ್ದರಿಂದ ಅಲ್ಲಿ ಪರಮೇಶ್ವರನನ್ನು ಅರ್ಚಿಸುವುದು ಯುಕ್ತವಲ್ಲವೆಂಬ ವಾದ ಸಮಂಜಸವಲ್ಲ. ಹಾಗೆ ಹೇಳುವವನು ಶ್ರೌತಕರ್ಮಗಳನ್ನರಿಯದವನೆಂದು ಹೇಳಬೇಕಾಗುತ್ತದೆ. "ಅಂಜಲಿಯಿಂದಲೋ ಅಥವಾ ದೊಡ್ಡದಾದ ಪಾತ್ರೆಯಿಂದಲೋ ಸೋಮರಸವನ್ನು ಕುಡಿಯಬೇಕು" ಎಂಬ ಶ್ರುತಿಯಲ್ಲಿ ಎರಡುಕೈಗಳನ್ನು ಕೂಡಿಸಿದ ಅಂಜಲಿಯನ್ನು ಕುಡಿಯುವ ಸಾಧನವೆಂದು ವಿಧಿಸಲಾಗಿದೆ. ಬ್ರಹ್ಮಯಜ್ಞದಲ್ಲಿ ಪಿತೃವಿಗೆ ತರ್ಪಣ ಕೊಡಲಿಕ್ಕೆ ಎಡಗೈಯೇ ಸಾಧನವೆನಿಸಿದೆ. ನಮಸ್ಕಾರಕ್ಕೆ ಅದೂ ಒಂದು ಪ್ರಧಾನಾಂಗವೇ ಆಗಿದೆ. ಆದ್ದರಿಂದ ವಾಮಹಸ್ತವೂ ಶ್ರೌತಕರ್ಮಕ್ಕೆ ಸಂಬಂಧಿಸಿದೆ. ಅದರಲ್ಲಿ ಅಪವಿತ್ರತೆಯ ಸಂಪರ್ಕವೇ ಇಲ್ಲ. ಹೀಗೆ ಶ್ರುತಿಸ್ಮೃತಿಗಳಲ್ಲಿ ಸಿದ್ಧವಾದ್ದರಿಂದ ಕೈಯಲ್ಲಿ ಲಿಂಗವನ್ನು ಇಟ್ಟು ಪೂಜಿಸುವುದು ವೈದಿಕವೇ ಆಗಿದೆ. "ಲಿಂಗ ಧಾರಣದಿಂದ ಜೀವನ ಪಾಶನಿವೃತ್ತಿಯಾಗುವುದು ನೂರಾರು ಜನ್ಮಗಳಲ್ಲಿ ಎಷ್ಟು ಪ್ರಯತ್ನಮಾಡಿದರೂ ಸಾಧ್ಯವಾಗದ್ದು ಲಿಂಗಧಾರಣದಿಂದ ಸುಗಮವಾಗುತ್ತದೆ. ಲಿಂಗಧಾರಿಗಳೆಲ್ಲರೂ ಭಕ್ತರೆನಿಸಿ ಉಳಿದವರು ಪಶುಗಳೆನಿಸುವರು. ಬ್ರಹ್ಮವಿಷ್ಣ್ವಾದಿಗಳೂ, ಗೌತಮಾದಿ ಋಷಿಗಳೂ ಲಿಂಗಧಾರಣದಿಂದಲೇ ಪಶುತ್ವವನ್ನು ಕಳೆದುಕೊಂಡರು" ಎಂದು ಲಿಂಗಪುರಾಣದಲ್ಲಿ ಹೇಳಿದೆ.

ಸರ್ವಗತಸ್ಯ ಪರಮೇಶ್ವರಸ್ಯಾಲ್ಪಪ್ರದೇಶವಿಶೇಷಕಲ್ಪನಾಽಯೋಗಾದತ್ರ ದಹರಾದ್ಯುಪಾಸನಂ ದೇವತಾಂತರವಿಷಯಮಿತ್ಯಾಶಂಕಾಯಾಮಾಹ— **ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ॥ ೭ ॥**

ಅರ್ಭಕಂ ಅಲ್ಪಂ ಓಕಃ ಸ್ಥಾನಂ ಯಸ್ಯ ತಸ್ಯ ಭಾವಸ್ತಸ್ಮಾದರ್ಭಕೌಕಸ್ತ್ವಾತ್. 'ಪದ್ಮಕೋಶಪ್ರತೀಕಾಶಂ' ಇತಿ ಚ ಬಾಹ್ಯಾಭ್ಯಂತರೇಷ್ವಲ್ಪಪ್ರದೇಶವಿಶೇಷನಿರ್ದೇಶಾತ್ತದ್ವ್ಯಪದೇಶಾಚ್ಚ. ತಸ್ಯ ಪರಿಚ್ಛಿನ್ನತ್ವವ್ಯಪದೇಶಾಚ್ಚ. 'ನೀವಾರಶೂಕವತ್ತನ್ವೀ ಪೀತಾ ಭಾಸ್ವತ್ಯಣೂಪಮಾ' ಇತ್ಯಾದಿನಾ ವಹ್ನಿಶಿಖಾಂತರ್ವರ್ತಿತ್ವೇನ ಪಾಣ್ಯಧಿಕರಣ ಲಿಂಗರೂಪತ್ವೇನ ಚ ಪರಿಚ್ಛಿನ್ನತ್ವವ್ಯಪದೇಶಾಚ್ಚ ನ ಸರ್ವಗತಃ ಪರಮೇಶ್ವರ ಇಹೋಪದಿಶ್ಯತ ಇತಿ ಚೇನ್ನ. ಏವಂ ಭಕ್ತಾನುಗ್ರಹಾರ್ಥಂ ಸೂಕ್ಷ್ಮಜ್ಯೋತಿರ್ಲಿಂಗಾತ್ಮನಾ ಗುಹಾರೂಪದಹರಪುಂಡರೀಕೇ ಪಂಚಸೂತ್ರಕೃತಸ್ಥೂಲಲಿಂಗರೂಪೇಣ ಹಸ್ತತಲೇ ಚ ನಿಚಾಯ್ಯತ್ವಾತ್ ಸ್ಥೂಲ

ಸೂಕ್ಷ್ಮಲಿಂಗರೂಪೇಣ ಧ್ಯಾತುಂ ಶಕ್ಯತ್ವಾತ್. ವ್ಯಾಪಕಸ್ಯ ಶಿವಸ್ಯ ಧ್ಯಾನ ಧಾರಣಾದ್ಯುಪಾಸನಾಶಕ್ಯತ್ವಾತ್. ತತ್ರ ದೃಷ್ಟಾಂತಮಾಹ । ವ್ಯೋಮವಚ್ಚ. ಯಥಾ ಸರ್ವಗತಮಪಿ ವ್ಯೋಮ ಜಾಲಸೂಚಿಕಾರಂಧ್ರಾವಚ್ಛೇದೇನ ಪರಿಚ್ಛಿನ್ನಂ, ಸ್ವತೋಽಪರಿಚ್ಛಿನ್ನಂ, ತಥಾ ಪರಮೇಶ್ವರೋಽಪಿ ಸ್ಥೂಲಸೂಕ್ಷ್ಮಕಾರಣಶರೀರಾದ್ಯುಪಾಧಿವಶಾದಿಷ್ಟಾದಿಲಿಂಗತ್ರಯಾತ್ಮನಾ ಪರಿಚ್ಛಿನ್ನಃ, ಸ್ವತೋ ವ್ಯಾಪಕ ಇತ್ಯರ್ಥಃ. ನೈತಾವತಾ ಸರ್ವಗತತ್ವಹಾನಿಃ. ತಥಾ ಶ್ರುತ್ಯಂತರೇಷ್ವಪಿ ಶ್ರೂಯತೇ. "ಅಂಗುಷ್ಠಮಾತ್ರಃ ಪುರುಷೋ ಹ್ಯಂಗುಷ್ಠಂ ತು ಸಮಾಶ್ರಿತಃ । ಈಶಸ್ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್ ॥" "ಹೃತ್ಪುಂಡರೀಕಂ ವಿರಜಂ ವಿಶುದ್ಧಂ ವಿಚಿಂತ್ಯ ಮಧ್ಯೇ ವಿಶದಂ ವಿಶೋಕಂ । ಅಚಿಂತ್ಯಮವ್ಯಕ್ತಮನಂತರೂಪಂ ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಂ ॥" "ವಾಲಾಗ್ರಮಾತ್ರಂ ಹೃದಯಸ್ಯ ಮಧ್ಯೇ ವಿಶ್ವೇದೇವಂ ಜಾತವೇದಸಂ ವರೇಣ್ಯಂ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಶ್ಶಾಶ್ವತೀ ನೇತರೇಷಾಂ ॥" "ಅಂತರ್ಬಹಿರ್ಧಾರಿತಂ ಲಿಂಗಂ ಪರಬ್ರಹ್ಮಾಭಿಧೇಯಂ ಶಾಂಭವಂ" "ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ । ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ", "ಅಯಂ ಮಾತಾಽಯಂ ಪಿತಾಽಯಂ ಜೀವಾತುರಾಗಮತ್ । ಇದಂ ತವ ಪ್ರಸರ್ಪಣಂ ಸುಬಂಧವೇಹಿ ನಿರೀಹಿ" ಇತಿ. ಅತೋ ವ್ಯಾಪಕಸ್ಯ ಪರಮೇಶ್ವರಸ್ಯ ಪರಿಚ್ಛಿನ್ನತ್ವಂ ನ ವಿರುಧ್ಯತೇ. ನನು ಪರಮೇಶ್ವರಧಾರಣೋಪಾಸನಾ ಪ್ರಥಮಾಂಗಭಸ್ಮಧಾರಣಸ್ಯ ಶ್ರುತಿಸ್ಮೃತಿವಿಧ್ಯದರ್ಶನಾತ್ ನ ತಸ್ಯ ಶ್ರೌತತ್ವಂ. ಶಿಷ್ಟಾಚಾರಮಾತ್ರವಿಷಯತ್ವೇ ಅಂಧಪರಂಪರಾಪ್ರಸಂಗಃ. ಪ್ರಮಾಣಪರಿಗ್ರಹೇ? ನಿತ್ಯಂ? ನೈಮಿತ್ತಿಕಂ? ಕಾಮ್ಯಂ ವಾ? ನಾದ್ಯಃ, ಅಕರಣೇ ಪ್ರತ್ಯವಾಯಾದರ್ಶನಾತ್, ನ ದ್ವಿತೀಯಃ, ನಿಮಿತ್ತಾಶ್ರವಣಾತ್ ನ ತೃತೀಯಃ, "ಪಶುಕಾಮಃ ಪುತ್ರಕಾಮಃ ಭಸ್ಮ ಧಾರಯೇತ್" ಇತ್ಯಧಿಕಾರಿವಿಶೇಷವಿಧ್ಯಭಾವಾತ್. ಅಸ್ತಿ ವಿಧಾನಮಿತಿ ಚೇತ್ಕಥಂ ತಸ್ಯ ನಿಷೇಧ ಉಪಪದ್ಯೇತ? ವಿಹಿತೇ ನಿಷೇಧಾಸಂಭವಾತ್. ವಿಧಿನಿಷೇಧಯೋಸ್ತಮಃಪ್ರಕಾಶವತ್ಪರಸ್ಪರವಿರುದ್ಧಸ್ವಭಾವತ್ವಾತ್ತಯೋಸ್ತುಲ್ಯಬಲತ್ವಂ ನ ಸಂಭವತಿ. ಸ್ಮೃತಿಸೂತ್ರನಿಷೇಧವಾಕ್ಯಬಾಹುಳ್ಯಾತ್ತನ್ನಿಷೇಧಸ್ಯೈವಾಧಿಕಬಲತ್ವಂ ಸಿದ್ಧಂ. ತಥಾಹಿ ಸಚ್ಚರಿತ್ರದೀಕ್ಷಾಯಾಂ ಗೌತಮವಚನಂ "ಭಸ್ಮತುಷಕಪಾಲಾಮೇಧ್ಯಾನಿ ನಾಧಿತಿಷ್ಠೇತ್' ಇತಿ. 'ಭಸ್ಮತುಷಾಧಿಷ್ಠಾನೇ ಪಾದಸ್ಯ ಪ್ರಕ್ಷಾಳನಂ' ಇತ್ಯಾಪಸ್ತಂಬಸೂತ್ರೇ. "ಧೂಪಾಗ್ನಿಂ ದೀಪತೈಲಂ ಚ ಭಸ್ಮಚಾಸ್ತಿ ರಜಸ್ವಲಾಂ । ಏತಾನಿ ಬ್ರಾಹ್ಮಣಃ ಸ್ಪೃಷ್ಟ್ವಾ

**ಸವಾಸಾ ಜಲಮಾವಿಶೇತ್ ॥" ಇತಿ ಶಂಖಸ್ಮೃತೌ ನಿಷೇಧದರ್ಶನಾತ್. "ಆಗ್ನೇಯಂ ಭಸ್ಮನಾ ಸ್ನಾನಂ ವಾಯವ್ಯಂ ಗೋರಜಃ ಸ್ಮೃತಂ" ಇತಿ ಸ್ನಾನಕರಣತಯಾ ನಿರ್ದೇಶಾತ್ತಸ್ಯ ವಿಧಿರಿತಿ ಚೇತ್ಸ್ನಾನಮಾತ್ರೇ ತಸ್ಯ ಶುಚಿತ್ವಂ, ಅನ್ಯಥಾ ನಿಷೇಧವಾಕ್ಯಾನಾಂ ದುರ್ನಿವಾರತ್ವಾತ್. ಕಿಂಚ 'ಅಗ್ನಿರಿತ್ಯಾದಿನಾ ಭಸ್ಮ ಗೃಹಿತ್ವಾ ವಿಮೃಜ್ಯಾಂಗಾನಿ ಸಂಸ್ಪೃಶೇತ್' ಇತ್ಯಂತೇನ ಸಮಂತ್ರಕಭಸ್ಮಧಾರಣಸ್ಯ ಅಥರ್ವಶಿರಸಿ ವ್ಯಪದೇಶಾತ್ಸರ್ವಥಾ ವಿಹಿತಮೇವೇತಿ ಚೇತ್ತದಪಿ ಪಾಶುಪತವ್ರತಾಂಗತ್ವದರ್ಶನಾನ್ನ ಸಾರ್ವತ್ರಿಕ ಭಸ್ಮಧಾರಣಮುಪದಿಶ್ಯತೇ. ತಸ್ಮಾನ್ನ ಶ್ರೌತಪರಿಗ್ರಾಹ್ಯಂ.**

ಎಲ್ಲೆಲ್ಲೂ ಇರುವ ಪರಮೇಶ್ವರನನ್ನು ದಹರವೆಂಬ ಅಲ್ಪಪ್ರದೇಶದಲ್ಲಿ ಮಾತ್ರವೇ ಇರುವನೆಂದು ಕಲ್ಪಿಸುವುದು ಯುಕ್ತವಲ್ಲವಾದ್ದರಿಂದ ಈ ದಹರೋಪಾಸನವು ಬೇರೆ ದೇವರಿಗೆ ಅನ್ವಯಿಸುವುದೇ ಹೊರತು ಪರಮೇಶ್ವರನಿಗಲ್ಲವೆಂದು ಆಕ್ಷೇಪಿಸಿ ನಿರಾಕರಿಸುತ್ತಾನೆ—**ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ॥ ೭ ॥**

ಅರ್ಭಕೌಕಸ್ತ್ವವೆಂದರೆ ಅಲ್ಪಸ್ಥಾನವುಳ್ಳದ್ದೆಂದರ್ಥ. ದೇಹದೊಳಗೆ ಮತ್ತು ಹೊರಗೆ ಹೃದಯಕಮಲ ಮತ್ತು ಪಾಣಿ ಎಂಬ ಅಲ್ಪ ಸ್ಥಾನಗಳನ್ನೇ ಇಲ್ಲಿ ಉಪಾಸನೆಗೆ ನಿರ್ದೇಶಿಸಲಾಗಿದೆ. ತದ್ವ್ಯಪದೇಶಾಚ್ಚ–ಇದಕ್ಕಾಗಿಯೇ ಪರಮಾತ್ಮನು ಪರಿಚ್ಛಿನ್ನನಾಗಿರುವನೆಂದು ಶ್ರುತಿಯಲ್ಲಿ ತಿಳಿಸಲಾಗಿದೆ. ಹೃದಯದಲ್ಲಿ "ನೀವಾರಧಾನ್ಯದ ತುದಿಯಂತೆ ಸಣ್ಣದಾಗಿ ಹಳದಿಬಣ್ಣದಲ್ಲಿ ಶೋಭಿಸುವ ವಹ್ನಿಶಿಖೆ"ಯ ರೂಪದಿಂದಲೂ, ಪಾಣಿಯ ಆಶ್ರಯದಲ್ಲಿ ಲಿಂಗರೂಪದಿಂದಲೂ ಪರಮಾತ್ಮನು ಪರಿಚ್ಛಿನ್ನನಾಗಿರುವನೆಂದು ಹೇಳಲಾಗಿದೆ. ಆದರೂ ಸರ್ವವ್ಯಾಪಕವಾದ ಪರಮೇಶ್ವರನು ಇಲ್ಲಿ ನಿರ್ದಿಷ್ಟವಾಗಿಲ್ಲವೆನ್ನುವುದು ಯುಕ್ತವಲ್ಲ. ಭಕ್ತಾನುಗ್ರಹಕ್ಕಾಗಿ ಶಿವನು ಸೂಕ್ಷ್ಮ ಜ್ಯೋತಿಲಿಂಗವಾಗಿ ದಹರಕಮಲದಲ್ಲಿ ಧ್ಯಾನಕ್ಕೂ, ಪಂಚಸೂತ್ರಘಟಿತವಾದ ಸ್ಥೂಲ ಲಿಂಗವಾಗಿ ಹಸ್ತದಲ್ಲಿ ಅರ್ಚನೆಗೂ ಸಾಧ್ಯನಾಗಿದ್ದಾನೆ. ಧ್ಯಾನಧಾರಣಗಳಿಗೂ ಉಪಾಸನೆಗೂ ಸಹಜವಾಗಿ ದೊರಕದಿರುವ ಶಿವನು ಭಕ್ತಾಧೀನನಾಗಿ ಈರೀತಿ ತಾನಾಗಿಯೇ ಭಕ್ತನ ಹೃದಯದಲ್ಲೂ, ಪಾಣಿಯಲ್ಲೂ ಧ್ಯೇಯನಾಗಿ ದೊರೆತಿರುವನು. ಆಕಾಶವು ಎಲ್ಲೆಲ್ಲಿಯೂ ತುಂಬಿಕೊಂಡು ಅಪರಿಚ್ಛಿನ್ನವಾಗಿದ್ದರೂ ಕಿಟಕಿಯ ಬಿಲದಿಂದ ಮನೆಯೊಳಗೆ ಪ್ರವೇಶಿಸಿ ಪರಿಚ್ಛಿನ್ನವೆನಿಸುತ್ತದೆ. ಹಾಗೆ ಪರಮೇಶ್ವರನು ಸ್ಥೂಲಸೂಕ್ಷ್ಮಕಾರಣಶರೀರಗಳಲ್ಲಿ ಇಷ್ಟಪ್ರಾಣಭಾವರೂಪದಿಂದ ತಾನಾಗಿಯೇ ಪರಿಚ್ಛಿನ್ನನಾಗಿದ್ದಾನೆ. ಸ್ವತಃ ವ್ಯಾಪಕನಾದ ಶಿವನಿಗೆ ಇದರಿಂದ ಯಾವ ಬಗೆಯ ಹಾನಿಯಿಲ್ಲ. ಬೇರೆ ಶ್ರುತಿಗಳಲ್ಲೂ 'ಅಂಗುಷ್ಠಮಾತ್ರನಾಗಿ ಪರಮಾತ್ಮನು ಅಂಗುಷ್ಠದಲ್ಲಿಯೇ ಇದ್ದರೂ ಸಮಸ್ತ ಜಗತ್ತಿಗೂ ನಿಯಮಕನಾಗಿ ವಿಶ್ವವನ್ನು ಭೋಗಿಸುತ್ತ ಸಂತೋಷಪಡುತ್ತಿರುವನು" "ಶುದ್ಧವೂ ಪಾಪರಹಿತವೂ ಆದ ಹೃತ್ಕಮಲದಲ್ಲಿ ಅವ್ಯಕ್ತನೂ

ಅನಂತನೂ ಪ್ರಶಾಂತನೂ ಅಮೃತನೂ ಸರ್ವಕಾರಣನೂ ಆದ ಶಿವನನ್ನು ಧ್ಯಾನಿಸ ಬೇಕು" ' ಹೃದಯದಲ್ಲಿ ವಿಶ್ವನಾಥನು ಅಗ್ನಿಯಂತೆ ಶೋಭಿಸುತ್ತ ಬಾಲದ ತುದಿ ಯಷ್ಟು ಪ್ರಮಾಣದಲ್ಲಿ ನೆಲಸಿರುವನು. ಇವನನ್ನು ಕಂಡವರಿಗೇ ಶಾಶ್ವತ ಶಾಂತಿ; ಬೇರೆಯವರಿಗಿಲ್ಲ". " ಒಳಗೂ ಹೊರಗೂ ಇರುವ ಈ ಲಿಂಗವೇ ಪರಬ್ರಹ್ಮವೆನಿಸಿದೆ". "ಕೈನಲ್ಲಿರುವ ಈ ಲಿಂಗವು ನನಗೆ ಶಿವನ ಸಂಪರ್ಕವನ್ನು ದೊರಕಿಸುತ್ತ ಭವರೋಗ ವೈದ್ಯನೆನಿಸಿದೆ. ಇದೇ ನನ್ನ ತಂದೆ, ತಾಯಿ ಮತ್ತು ಜೀವನಾಧಾರ. ನನ್ನ ಪ್ರಿಯ ಬಂಧುವೇ, ನನ್ನಲ್ಲಿ ಸ್ಥಿರವಾಗಿ ನೆಲಸು " ಹೀಗೆ ಭಕ್ತರ ಪ್ರಾರ್ಥನೆಯನ್ನು ತಿಳಿಸ ಲಾಗಿದೆ. ಆದ್ದರಿಂದ ವ್ಯಾಪಕ ಶಿವನು ಉಪಾಸನೆಗಾಗಿ ಪರಿಚ್ಛಿನ್ನನಾಗುವುದರಲ್ಲಿ ದೋಷವಿಲ್ಲ. ಆದರೆ, ಪರಮೇಶ್ವರನ ಧಾರಣೋಪಾಸನಗಳಿಗೆ ಅಂಗವಾಗಿ ಭಸ್ಮಧಾರ ಣವು ಶ್ರುತಿಸ್ಮೃತಿಗಳಲ್ಲಿ ವಿಹಿತವಾಗಿಲ್ಲದ್ದರಿಂದ ಹೇಗೆ ಗ್ರಾಹ್ಯವಾದೀತು ? ಶಿಷ್ಟರು ಆಚರಿಸಿದ್ದರೂ ಅಂಧಪರಂಪರೆಯಿಂದ ಹಾಗೆ ರೂಢಿಗೆ ಬಂದಿದೆಯೇ ಹೊರತು ಅದಕ್ಕೆ ಯಾವ ಪ್ರಮಾಣವೂ ಇಲ್ಲ. ಹಾಗಾದರೆ, ಅದು ನಿತ್ಯಕರ್ಮವೇ ನೈಮಿತ್ತಿಕವೇ ? ಅಥವಾ ಕಾಮ್ಯವೆ ?ಅಂದರೆ ಅದು ನಿತ್ಯವಲ್ಲ; ಯಾಕೆಂದರೆ ಅದನ್ನು ಧರಿಸದಿದ್ದರೆ ಯಾವ ದೋಷವನ್ನೂ ಎಲ್ಲಿಯೂ ಹೇಳಿಲ್ಲ. ಹಾಗೆಯೇ ಅದು ನೈಮಿತ್ತಿಕವೂ ಅಲ್ಲ; ಅದನ್ನು ಧರಿಸಲು ಯಾವ ನಿಮಿತ್ತವನ್ನು ಎಲ್ಲಿಯೂ ಹೇಳಿಲ್ಲ. ಅದರಂತೆ ಅದು ಕಾಮ್ಯಕರ್ಮವೂ ಅಲ್ಲ. ' ಪಶುಕಾಮನೂ ಪುತ್ರಕಾಮನೂ ಭಸ್ಮವನ್ನು ಧರಿಸಬೇಕೆಂದು ಎಲ್ಲಿಯೂ ಹೇಳಿಲ್ಲ. ಅದಕ್ಕೆ ಇಂತವರೇ ಅಧಿಕಾರಿಗಳೆಂದು ಹೇಳುವ ವಿಧಿ ಇಲ್ಲ. ವಿಧಿಯಿದ್ದರೆ ಅದನ್ನು ನಿಷೇಧಿಸಲಾಗುವುದಿಲ್ಲ. ವಿಧಿ ನಿಷೇಧಗಳು ಕತ್ತಲೆ ಬೆಳಕುಗಳಂತೆ ವಿರುದ್ಧ ಸ್ವಭಾವವಾದ್ದರಿಂದ ಅವಕ್ಕೆ ಸಮಬಲವು ಸಂಭವಿಸುವುದಿಲ್ಲ. ಸ್ಮೃತಿಸೂತ್ರಗಳಲ್ಲಿ ನಿಷೇಧವಾಕ್ಯಗಳೇ ಬಹಳವಾಗಿವೆ. ಆದ್ದರಿಂದ ನಿಷೇಧವಾಕ್ಯಕ್ಕೆ ಹೆಚ್ಚು ಬಲವಿರುವು ದೆಂದು ಸಿದ್ಧವಾಯಿತು. ಸಚ್ಚರಿತ್ರದೀಕ್ಷೆಯಲ್ಲಿ ಭಸ್ಮ ತುಷ ಕಪಾಲ ಅಮೇಧ್ಯ ಗಳನ್ನು ಮುಟ್ಟಬಾರದೆಂದು ಗೌತಮನು ಹೇಳಿದ್ದಾನೆ. ಧೂಪಾಗ್ನಿ, ದೀಪತೈಲ, ಭಸ್ಮ, ಮೂಳೆ, ರಜಸ್ವಲೆ ಇವರನ್ನು ನೋಡಿದರೆ ಸಚೇಲಸ್ನಾನ ಮಾಡಬೇಕು' ಎಂದು ಆಪಸ್ತಂಭಸೂತ್ರದಲ್ಲೂ, ಶಂಖಸ್ಮೃತಿಯಲ್ಲೂ ಹೇಳಿದೆ. ಭಸ್ಮದಿಂದ ಮಾಡುವ ಸ್ನಾನ ಆಗ್ನೇಯವೆಂದೂ, ಗೋಧೂಳಿಯಿಂದ ಮಾಡಿದ ಸ್ನಾನ ವಾಯವ್ಯ ವೆಂದೂ, ಭಸ್ಮವನ್ನು ಸ್ನಾನಸಾಧನವಾಗಿ ವಿಧಿಸಿರುವುದರಿಂದ ಭಸ್ಮಕ್ಕೆ ನಿಷೇಧವಿಲ್ಲ ವೆನ್ನುವುದು ಸರಿಯಲ್ಲ, ' ಯಾಕೆಂದರೆ ಸ್ನಾನಕ್ಕೆ ಮಾತ್ರ ಆ ಭಸ್ಮವನ್ನು ಉಪಯಿಸ ಲಿಕ್ಕೆ ವಿಧಿ ಇದೆಯೇ ಹೊರತು ಅನಂತರ ಅದು ಧರಿಸಲಿಕ್ಕೂ ಯೋಗ್ಯವೆಂಬ ಬಗ್ಗೆ ಯಾವ ವಿಧಿಯೂ ಇಲ್ಲ. ಇಲ್ಲವಾದರೆ ಹಿಂದೆ ಹೇಳಿದ ನಿಷೇಧ ವಾಕ್ಯಗಳಿಗೆ ಗತಿಯೇ ಇಲ್ಲವಾಗುವುದು. ಮಂತ್ರಪೂರ್ವಕವಾಗಿ 'ಭಸ್ಮವನ್ನು ಎಲ್ಲಾ ಅಂಗಗ ಳಿಗೂ ಉಜ್ಜಬೇಕು'. ಹೀಗೆ ಅಥರ್ವಶಿರಸ್ಸಿನಲ್ಲಿ ಭಸ್ಮಧಾರಣವನ್ನು ಹೇಳಿರುವುದರಿಂದ ಅದು ವಿಹಿತವಾಗಿದೆ ಎಂದು ಹೇಳಿದರೆ ಅದನ್ನು ಪಾಶುಪತವ್ರತದ ಅಂಗವಾಗಿ ಹೇಳಿ

ರುವುದರಿಂದ ಅದು ಸಾರ್ವತ್ರಿಕಭಸ್ಮಧಾರಣಕ್ಕೆ ಶ್ರೌತ ವಿಧಿಯಾಗಲಿಲ್ಲ. ಆದ್ದರಿಂದ ಭಸ್ಮಧಾರಣವು ವೈದಿಕರಿಗೆ ಗ್ರಾಹ್ಯವಲ್ಲವೆಂದು ಆಕ್ಷೇಪ ಬರುತ್ತದೆ.

ಇತಿ ಚೇದತ್ರ ಬ್ರೂಮಃ. ಋಗ್ವೇದೇ ‘ ತ್ರಿಯಾಯುಷಂ ಜಮದಗ್ನೇಃ ಕಶ್ಯಪಸ್ಯ ತ್ರಿಯಾಯುಷಂ । ಯದ್ದೇವಾನಾಂ ತ್ರಿಯಾಯುಷಂ ತನ್ಮೇ ಅಸ್ತು ತ್ರಿಯಾಯುಷಂ ॥ ” ಇತಿ. ಜಾಬಾಲೋಪನಿಷದಿ “ಸ ಏಷ ಭಸ್ಮಜ್ಯೋತಿಃ, ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ । ಧಾರಯಂತಿ ತು ಯೇ ಭಕ್ತ್ಯಾ ಧಾರಯಂತಿ ತಮೇವ ತೇ ॥ ” ಇತಿ. ಶ್ವೇತಾಶ್ವತರೇ “ ಮಾನಸ್ತೋಕೇತಿ ಮಂತ್ರೇಣ ಮಂತ್ರಿತಂ ಭಸ್ಮ ಧಾರಯೇತ್ । ಊರ್ಧ್ವಪುಂಡ್ರಂ ಭವೇತ್ಸಾಮ ಮಧ್ಯಪುಂಡ್ರಂ ಯಜೂಂಷಿ ಚ । ಅಧಃಪುಂಡ್ರಮೃಚಃ ಸ್ಸಾಕ್ಷಾತ್ತಸ್ಮಾತ್ಪುಂಡ್ರಂ ತ್ರಿಯಾಯುಷಂ ॥ ” ಇತಿ. “ ಭೂತ್ಯೈ ನ ಪ್ರಮದಿತವ್ಯಂ ” ಇತಿ ಯಜುರ್ವೇದೇ, “ ವಿರಜಾ ವಿಪಾಪ್ಮಾ ” ಇತಿ ನಾರಾಯಣಾನುವಾಕೇ ಚ ಶ್ರೂಯತೇ. “ ಭೂತ್ಯೈ ನ ಪ್ರಮದಿತವ್ಯಂ ” ಇತ್ಯತ್ರ ನ ಚೈಶ್ವರ್ಯಪರತ್ವಂ, “ ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ ” ಇತಿ ಪೂರ್ವವಾಕ್ಯೇ ಪ್ರಾಕೃತೈಶ್ವರ್ಯಲಕ್ಷಣಾವಬೋಧಕಧನಾಹರಣವಿಧಾನದರ್ಶನಾದ್ಭೂತಿಶಬ್ದಸ್ಯ ಭಸ್ಮಪರತ್ವಮೇವ. ಬೋಧಾಯನಸೂತ್ರೇ “ ಅಥಾತಸ್ತ್ರಿಪುಂಡ್ರವಿಧಿಂ ವ್ಯಾಖ್ಯಾಸ್ಯಾಮಃ ಭೂತ್ಯೈ ನ ಪ್ರಮದಿತವ್ಯಮಿತಿ ಹಿ ವಿಜ್ಞಾಯತೇ ” ಇತಿ ಮಾನವಪುರಾಣೇ “ ಭೂತ್ಯೈವಾಗ್ನಿಂ ಸಮುತ್ಥಾಯ ತ್ವಯಾ ದೇಹಾವಕುಂಠನಂ । ಲಲಾಟೇ ಹೃದಿ ದೋರ್ದ್ವಂದ್ವೇ ತ್ರಿಪುಂಡ್ರಸ್ಯ ಚ ಧಾರಣಂ । ನೈವ ಪ್ರಮದಿತವ್ಯಂ ಚ ತಥಾ ಲೋಕಾಕ್ಷರಸ್ಮೃತಿಃ ॥ ” ಇತ್ಯಾದಿ ಶ್ರೂಯತೇ. ಸಾಮಶಾಂಡಿಲ್ಯಶಾಖಾಯಾಂ ‘ ವಿಭೂತಿಂ ವಾಮಹಸ್ತೇನ ಪರಿಗೃಹ್ಯ, ದಕ್ಷಿಣಹಸ್ತೇನ ರೌದ್ರಮುದ್ರಯಾ ಸಮ್ಯಗಾಚ್ಛಾದ್ಯ, ಸದ್ಯೋಜಾತಾದಿಪಂಚಬ್ರಹ್ಮಮಂತ್ರೈಃ ಪಂಚವಾರಮೇಕವಾರಂ ವಾಽಭಿಮಂತ್ರ್ಯ, ಈಶಾನ ಇತಿ ಮಸ್ತಕೇ, ತತ್ಪುರುಷಾಯೇತಿ ಮುಖೇ, ಅಘೋರೇಭ್ಯ ಇತಿ ಹೃದಯೇ, ವಾಮದೇವಾಯೇತಿ ಕಟ್ಯಾಂ, ಸದ್ಯೋಜಾತಾಮಿತಿ ಪಾದಯೋಃ, ಪ್ರಣವೇನ ಸರ್ವಾಂಗಮಭಿಷಿಚ್ಯ ” ಇತ್ಯಾದಿನಾ ತದ್ವಿಧಿರ್ಬಹುಧಾ ಶ್ರೂಯತೇ. ಸಾಮಮೈತ್ರೇಯಶಾಖಾಯಾಂ ಚ, “ ಮದ್ಯಂ ಪೀತ್ವಾ ಗುರುದಾರಾಂಶ್ಚ ಗತ್ವಾ ಸ್ತೇಯಂ ಕೃತ್ವಾ ಬ್ರಹ್ಮಹತ್ಯಾಂ ಚ ಕೃತ್ವಾ । ಭಸ್ಮಚ್ಛನ್ನೋ ಭಸ್ಮಶಯ್ಯಾಶಯಾನೋ ರುದ್ರಾಧ್ಯಾಯೀ ಮುಚ್ಯತೇ ಸರ್ವಪಾಪೈಃ ॥ ” ಇತಿ ಸುರಾಪಾನಾದಿಮಹಾಪಾತಕಾನಾಮಪಿ ಪ್ರಾಯಶ್ಚಿತ್ತಂ ಭಸ್ಮಧಾರಣಮೇವೇತಿ ಪ್ರತಿಪಾದಿತಂ. ಅಥರ್ವಶಿರಸಿ ‘ ಅಗ್ನಿ

ರಿತಿ ಭಸ್ಮ' ಇತ್ಯಾರಭ್ಯ 'ಮನ ಏತಾನಿ ಚಕ್ಷೂಂಷಿ ಭಸ್ಮ' ಇತ್ಯಂತೇನ ಭಸ್ಮನಸ್ಸರ್ವಾತ್ಮಕತ್ವಮುಪದಿಶ್ಯ ತತಃ 'ಅಗ್ನಿರಿತ್ಯಾದಿನಾ ಭಸ್ಮ ಗೃಹಿತ್ವಾ ವಿಮೃಜ್ಯಾಂಗಾನಿ ಸಂಸ್ಪೃಶೇತ್' ಇತಿ. ವೃದ್ಧಶಾತಾತಪೇ ತದಕರಣೇ ಪ್ರತ್ಯವಾಯುಶ್ಚ ಶ್ರೂಯತೇ 'ವಿಭೂತಿರ್ಯಸ್ಯ ನೋ ಫಾಲೇ ತಂ ತ್ಯಜೇದಂತ್ಯಜಂ ಯಥಾ" ಇತಿ. ಗಾರುಡಸ್ಮೃತೌ "ತ್ರಿಪುಂಡ್ರಂ ಸುರವಿಪ್ರಾಣಾಂ ವರ್ತುಳಂ ನೃಪವೈಶ್ಯಯೋಃ । ಅರ್ಧ ಚಂದ್ರಂ ತು ಶೂದ್ರಾಣಾಂ ಅನ್ಯೇಷಾಮೂರ್ಧ್ವಪುಂಡ್ರಕಂ ॥" ಇತಿ. ಶಾತಾತಪೇ "ಊರ್ಧ್ವಪುಂಡ್ರಂ ಮೃದಾ ಕುರ್ಯಾರ್ಲ್ಲೀಲಯಾಪಿ ಕದಾ ಚನ । ತದಾಕಾರೇಣ ಶಸ್ತ್ರೇಣ ಪೀಡ್ಯತೇ ಯಮಕಿಂಕರೈಃ ॥ ಊರ್ಧ್ವ ಪುಂಡ್ರಾಂಕುಶಾಶ್ವತ್ಥಪತ್ರವರ್ತುಳರೂಪಧೃತ್ । ತ್ರಿಪುಂಡ್ರಧಾರಣಾ ದೇವ ಭಸ್ಮನಾ ಪೂಯತೇ ನರಃ ॥ ಅಂಕಿತಶ್ಶಂಖಚಕ್ರಾದ್ಯೈಃ ಶರೀರೇ ದೇವತಾಯುಧೈಃ । ತ್ರಿಪುಂಡ್ರಧಾರಣಾದೇವ ಭಸ್ಮನಾ ಪೂಯತೇ ನರಃ ॥" ಇತ್ಯಾದಿನಾ ಶಂಖಚಕ್ರೋರ್ಧ್ವಪುಂಡ್ರಧಾರಿಣಾಂ ಭಸ್ಮಧಾರಣ ಮೇವ ಪ್ರಾಯಶ್ಚಿತ್ತಂ, ನಾನ್ಯತ್ ಇತಿ ಗೌತಮಸ್ಮೃತೌ ಪ್ರತಿಪಾದಿತಂ. ಜಾಬಾಲೇ "ಅಥಾಚಾರಂ ಶೃಣುಷ್ವಾವಹಿತಃ. ಅಗ್ನಿರಿತ್ಯಾದಿನಾ ಭಸ್ಮಗೃ ಹೀತ್ವಾ ವಿಮೃಜ್ಯಾಂಗಾನಿ ಸಂಸ್ಪೃಶೇತ್ತತ್ರೋಪರಿ ತ್ರಿಪುಂಡಂ ಧಾರಯೇ ದ್ಬ್ರಾಹ್ಮಣಾನಾಮಯಂ ಧರ್ಮಃ" ಇತಿ. ವೃದ್ಧಶಾತಾತಪೇ "ತ್ರಿಪುಂಡ್ರೇಣ ವಿನಾ ಸಂಧ್ಯಾ ತ್ರಿಪುಂಡ್ರೇಣ ವಿನಾ ಜಪಃ ತ್ರಿಪುಂಡ್ರೇಣ ವಿನಾ ಶ್ರಾದ್ಧಂ ರಾಕ್ಷಸಂ ಪರಿಕೀರ್ತಿತಂ ॥ ತ್ರಿಪುಂಡ್ರಂ ಬ್ರಾಹ್ಮಣೋ ವಿದ್ವಾನ್ ಮನಸಾಪಿ ನ ಲಂಘಯೇತ್ । ಶ್ರುತ್ಯಾ ವಿಧೀಯತೇ ಯಸ್ಮಾತ್ತತ್ತ್ಯಾಗೀ ಪತಿತೋ ಭವೇತ್" ಇತಿ. ತದೇವಂ ಬಹುಶ್ರುತಿಸ್ಮೃತಿಪುರಾಣಾಗಮಸಿದ್ಧತ್ವೇನ ಭಸ್ಮಧಾರಣಸ್ಯ ಶ್ರೌತವಿಧಿವಿಷಯತ್ವಂ ನಿಷ್ಪ್ರತ್ಯೂಹಂ. ನನು ಕಾಲಾಗ್ನಿ ರುದ್ರೋಪನಿಷದಿ 'ತ್ರಿಪುಂಡ್ರಂ ಭಸ್ಮನಾ ಕರೋತಿ ಯೋ ವಿದ್ವಾನ್ ಸ ಸಮಸ್ತಪಾತಕೋಪಪಾತಕೇಭ್ಯಃ ಪೂತೋ ಭವತಿ, ಸ ಸರ್ವಾನ್ ದೇವಾನ್ ಧ್ಯಾತಾ ಭವತಿ, ಸ ಸರ್ವೇಷು ತೀರ್ಥೇಷು ಸ್ನಾತೋ ಭವತಿ" ಇತ್ಯಾದಿನಾ ಭಸ್ಮಧಾರಣಸ್ಯ ಫಲವ್ಯಪದೇಶಾತ್, ಅಕರಣೇ ಪ್ರತ್ಯ ವಾಯಾನುಪದೇಶಾಚ್ಚ ನ ನಿತ್ಯವಿಧಿವಿಷಯತ್ವಂ ಇತಿ ಚೇನ್ನ 'ಅಗ್ನಿ ಹೋತ್ರಂ ಜುಹುಯಾತ್ಸ್ವರ್ಗಕಾಮಃ' ಇತ್ಯಾದೌ ನಿತ್ಯಾಗ್ನಿಹೋತ್ರಾದೀ ನಾಮಪಿ ಫಲವ್ಯಪದೇಶಾತ್ ತೇಷಾಮಪಿ ನಿತ್ಯವಿಧಿವಿಷಯತ್ವಂ ನ ಸ್ಯಾತ್. ಅಗ್ನಿಹೋತ್ರಾದಿಕರ್ಮಣಾಂ "ಏಷ ದೇವಾನಾಂ ಯೋಽಗ್ನಿ ಮುದ್ವಾಸಯತಿ" ಇತ್ಯಾದಾವಕರಣೇ ಪ್ರತ್ಯವಾಯಶ್ರವಣಾನ್ನಿತ್ಯವಿಧಿ ವಿಷಯತ್ವಂ ನಿಷ್ಪ್ರತ್ಯೂಹಂ ಇತಿ ಚೇತ್ "ಯೇಷಾಂ ನ ಜಾಯತೇ

ಶ್ರದ್ಧಾ ಶ್ರೌತೇ ಭಸ್ಮನಿ ಸರ್ವದಾ । ಗರ್ಭಾಧಾನಾದಿಸಂಸ್ಕಾರಸ್ತೇಷಾಂ ನಾಸ್ತೀತಿ ನಿಶ್ಚಯಃ ॥" ಇತಿ. ಜಾಬಾಲೇ ತದಕರಣೇ ಪ್ರತ್ಯವಾಯ ದರ್ಶನಾತ್ತದ್ವನ್ನಿತ್ಯವಿಧಿವಿಷಯತ್ವಂ ಸಿದ್ಧಂ. ತಸ್ಮಾತ್ಪೂರ್ವೋಕ್ತ ಸ್ಮೃತಿಸಿದ್ಧಭಸ್ಮನಿಷೇಧೋ ಹ್ಯಸ್ಥಿಕಪಾಲಾದ್ಯುಪಸ್ಥಿತಭಸ್ಮವಿಷಯಃ. 'ನಾಧಿತಿಷ್ಠೇತ್' ಇತಿ ನಿಷೇಧಸ್ಯ ನ ಭಸ್ಮನಾ ತ್ರಿಪುಂಡ್ರಧಾರಣನಿಷೇಧ ಪರತ್ವಂ. ಭಸ್ಮಧಾರಣಸ್ಯ ಋಗ್ಯಜಸ್ಸಾಮಾಥರ್ವಜಾಬಾಲಕಾಲಾಗ್ನಿ ರುದ್ರಕಾತ್ಯಾಯನಾಥರ್ವಶಿರಃಪ್ರಭೃತಿಶ್ರುತಿಸಿದ್ಧತ್ವಾತ್, ಭಸ್ಮಸ್ನಾನಸ್ಯ ಮನುಯಾಜ್ಞವಲ್ಕ್ಯಗೌತಮಶಾತಾತಪಾದಿಬಹುಸ್ಮೃತಿವಿಹಿತತ್ವಾತ್, ಸ್ಕಾಂದಲೈಂಗಶೈವಕೂರ್ಮಾದಿಬಹುಪುರಾಣೇತಿಹಾಸಸಿದ್ಧತ್ವಾಚ್ಚ ಶ್ರೌತ ತ್ವಂ ಸಿದ್ಧಂ. ಕಾತ್ಯಾಯನಶಾಖಾಯಾಂ "ತಾನಿ ಹ ವಾ ಏತಾನಿ ರುದ್ರಾಕ್ಷಾಣಿ ಯತ್ರಯೋ ವೇದಾ ಧಾರಯಂತಿ ತಸ್ಮಾದ್ದೇವಾ ಧಾರ ಯಂತಿ, ಯಸ್ತಾನಿ ಧಾರಯನ್ ಗಚ್ಛಂಸ್ತಿಷ್ಠನ್ ಖಾದನ್ ಸ್ವಪನ್ನು ನ್ಮಿಷನ್ ಸರ್ವಾಣ್ಯೇನಾಂಸಿ ತರತಿ ರುದ್ರೋ ಭೂತ್ವಾ ರುದ್ರವದ್ಭವತಿ" ಇತಿ. ಬೃಹಜ್ಜಾಬಾಲೇ ಸಪ್ತಮಬ್ರಾಹ್ಮಣೇ–"ರುದ್ರಾಕ್ಷಾಣಾಂ ತು ಭದ್ರಾಣಾಂ ಧಾರಣೇ ಸ್ಯಾನ್ಮಹಾಬಲಂ । ಧಾತ್ರೀಫಲಪ್ರಮಾಣಂ ಯಜ್ಜ್ಯೇಷ್ಠಮೇತದುದಾಹೃತಂ ॥" ಇತಿ. ಸಂವರ್ತಸ್ಮೃತೌ "ಸ್ನಾನೇ ದಾನೇ ಜಪೇ ಹೋಮೇ ವೈಶ್ವದೇವೇ ಸುರಾರ್ಚನೇ । ಪ್ರಾಯಶ್ಚಿತ್ತೇ ತಥಾ ಶ್ರಾದ್ಧೇ ದೀಕ್ಷಾಕಾಲೇ ವಿಶೇಷತಃ । ಅರುದ್ರಾಕ್ಷಧರೋ ಭೂತ್ವಾ ಯತ್ಕಿಂಚಿತ್ಕರ್ಮ ವೈದಿಕಂ । ಕುರ್ಯಾದ್ವಿಪ್ರಸ್ತು ಯೋ ಮೋಹಾನ್ನಾ ಸಾಪ್ನೋತಿ ತತ್ಫಲಂ ॥" ಇತಿ. "ಪುರಾ ತ್ರಿಪುರವಧಾಯೋನ್ಮೀಲಿತಾ ಕ್ಷೋ ಹರಸ್ತದೀಯಾ ಜಲಬಿಂದವೋ ಭೂಮೌ ಪತಿತಾಸ್ತೇ ರುದ್ರಾಕ್ಷಾ ಜಾತಾಸ್ತದ್ದರ್ಶನಸ್ಪರ್ಶಾಭ್ಯಾಂ ದಶಶತಗೋದಾನಫಲಂ ಭವತಿ, ತದ್ಧಾ ರಣಾದ್ಬ್ರಹ್ಮಘ್ನಗೋಘ್ನಸ್ವರ್ಣಸ್ತೇಯಾದಿಮಹಾಪಾತಕೋಪಪಾತಕೇ ಭ್ಯಃ ಪೂತೋ ಭವತಿ" ಇತಿ ಋಗಾಮ್ನಾಯಾಂತರ್ಗತಶಾಂಡಿಲ್ಯಶಾ ಖಾಯಾಂ ರುದ್ರಾಕ್ಷಧಾರಣವಿಧಾನದರ್ಶನಾತ್ ಸ್ಕಾಂದಲೈಂಗಪುರಾ ಣೇತಿಹಾಸಾದಿಷು ತನ್ಮಾಹಾತ್ಮ್ಯಶ್ರವಣಾಚ್ಚ ಶ್ರೌತತ್ವಂ ನಿಶ್ಚೀಯತೇ.

ಆಕ್ಷೇಪಕ್ಕೆ ಸಮಾಧಾನವನ್ನು ಇಲ್ಲಿ ತಿಳಿಸಲಾಗುವುದು. ಋಗ್ವೇದದಲ್ಲಿ 'ಜಮದಗ್ನಿಯ ತ್ರಿಯಾಯುಷವೂ, ಕಶ್ಯಪನ ತ್ರಿಯಾಯುಷವೂ, ದೇವತೆಗಳ ತ್ರಿಯಾ ಯುಷವೂ ನನಗೆ ಲಭಿಸಲಿ' ಎಂದೂ, ಜಾಬಾಲಶ್ರುತಿಯಲ್ಲಿ 'ಅವನೇ ಈ ಭಸ್ಮ ಜ್ಯೋತಿ'. "ತ್ರಿಪುಂಡ್ರನಿಂದಕನು ಶಿವನನ್ನೇ ನಿಂದಿಸುವನು. ತ್ರಿಪುಂಡ್ರಧಾರಿಯು ಶಿವನನ್ನೇ ಧರಿಸುವನು" ಎಂದೂ, ಶ್ವೇತಾಶ್ವತರದಲ್ಲಿ "ಮಾನಸ್ತೋಕೇ ಎಂಬ ಮಂತ್ರದಿಂದ ಪೂಜಿಸಿದ ಭಸ್ಮವನ್ನೇ ಧರಿಸಬೇಕು. ಊರ್ಧ್ವಪುಂಡ್ರವೇ ಸಾಮವೇದ,

ಮಧ್ಯಪುಂಡ್ರವೇ ಯಜುರ್ವೇದ, ಅಧಃಪುಂಡ್ರವೇ ಋಗ್ವೇದ, ಆದ್ದರಿಂದ ತ್ರಿಪುಂಡ್ರವು ತ್ರಿಯಾಯುಷವೆನಿಸಿದೆ" ಎಂದೂ, ಯಜುರ್ವೇದದಲ್ಲಿ "ವಿಭೂತಿಯ ಬಗ್ಗೆ ಎಚ್ಚರ ದಪ್ಪಬಾರದು" ಎಂದೂ, ನಾರಾಯಣದಲ್ಲಿ 'ಭಸ್ಮ ವಿಶುದ್ಧವೂ ಪಾಪರಹಿತವೂ ಆಗಿದೆ' ಎಂದೂ ಭಸ್ಮಧಾರಣವನ್ನು ವಿಧಿಸಲಾಗಿದೆ. 'ಭೂತಿಗಾಗಿ ಎಚ್ಚರವಿರ ಬೇಕು' ಎಂಬಲ್ಲಿ ಭೂತಿಶಬ್ದವು ಐಶ್ವರ್ಯವಷ್ಟೇ ಅಲ್ಲದೆ, ಆ ಐಶ್ವರ್ಯವನ್ನು ದೊರ ಕಿಸುವ ಮಾರ್ಗವನ್ನೂ ತಿಳಿಸುವುದರಿಂದ ಅದು ಭಸ್ಮಕ್ಕೇ ಅನ್ವಯಿಸುತ್ತದೆ. ಯಜು ರ್ವೇದದಲ್ಲಿ ಹೇಳಿರುವ ತ್ರಿಪುಂಡ್ರವಿಧಿಯನ್ನು ವಿವರಿಸುತ್ತೇವೆ' ಎಂದು ಬೋಧಾ ಯನ ಸೂತ್ರದಲ್ಲಿ ಭಸ್ಮವನ್ನು ವಿಧಿಸಲಾಗಿದೆ. ಮಾನವ ಪುರಾಣದಲ್ಲಿ "ಭಸ್ಮವನ್ನು ಶರೀರಕ್ಕೆ ಪೂರ್ತಿ ಹಚ್ಚಬೇಕು. ಹಣೆ, ಹೃದಯ, ತೋಳುಗಳಲ್ಲೂ ತ್ರಿಪುಂಡ್ರವನ್ನು ಹಚ್ಚಬೇಕು. ಇದಕ್ಕೆ ಯಾವತ್ತೂ ತಪ್ಪಬಾರದು. ಹೀಗೆಯೇ ಲೋಕಾಕ್ಷರಸ್ಮೃತಿ ಯೂ ಹೇಳುತ್ತಿದೆ" ಎಂದು ತಿಳಿಸಲಾಗಿದೆ. ಸಾಮಶಾಂಡಿಲ್ಯಶಾಖೆಯಲ್ಲಿ "ವಿಭೂತಿ ಯನ್ನು ಎಡಗೈನಲ್ಲಿ ಹಿಡಿದು ಬಲಗೈನಲ್ಲಿ ರೌದ್ರಮುದ್ರೆಯಿಂದ ಹಚ್ಚಿಕೊಂಡು ಸದ್ಯೋ ಜಾತಾದಿ ಮಂತ್ರಗಳಿಂದ ಐದುಸಾರಿಯೋ ಒಂದುಸಾರಿಯೋ ಅಭಿಮಂತ್ರಿಸಿ ಈಶಾನ ಮಂತ್ರದಿಂದ ಹಣೆಯಲ್ಲೂ, ತತ್ಪುರುಷಮಂತ್ರದಿಂದ ಮುಖದಲ್ಲೂ, ಅಘೋರಮಂತ್ರ ದಿಂದ ಹೃದಯದಲ್ಲೂ, ವಾಮದೇವಮಂತ್ರದಿಂದ ಕಟಿಯಲ್ಲೂ, ಸದ್ಯೋಜಾತ ಮಂತ್ರದಿಂದ ಪಾದಗಳಲ್ಲೂ, ಪ್ರಣವದಿಂದ ಸರ್ವಾಂಗಗಳಲ್ಲೂ ಧರಿಸಬೇಕು" ಎಂದು ಭಸ್ಮಧಾರಣವಿಧಿ ಬಂದಿದೆ. ಸಾಮಮೈತ್ರೇಯಶಾಖೆಯಲ್ಲಿ "ಮದ್ಯಪಾನಮಾಡಿ ದವನು, ಗುರುಪುತ್ರಿಯನ್ನು ಭೋಗಿಸಿದವನು, ಕಳ್ಳತನ ಮತ್ತು ಶಿಶುಹತ್ಯಮಾಡಿ ದವನು ಭಸ್ಮವನ್ನು ಧರಿಸಿ ರುದ್ರಾಧ್ಯಾಯವನ್ನು ಜಪಿಸಿದರೆ ಪಾಪವಿಮೋಚನೆಯಾ ಗುವುದು" ಎಂದು ಹೇಳಿದೆ. ಹೀಗೆ ಸುರಾಪಾನವೇ ಮೊದಲಾದ ಮಹಾಪಾಪಗಳಿಗೆ ಭಸ್ಮಧಾರಣವೇ ಪ್ರಾಯಶ್ಚಿತ್ತವೆಂದು ವಿಹಿತವಾಗಿದೆ. ಅಥರ್ವಶಿರಸ್ಸಿನಲ್ಲಿ 'ಅಗ್ನಿಯೇ ಭಸ್ಮ' ಎಂದಾರಂಭಿಸಿ ಭಸ್ಮವೇ ಸರ್ವಾತ್ಮಕವೆಂದು ತಿಳಿಸಿ ಭಸ್ಮವನ್ನು ಎಲ್ಲಾ ಅಂಗ ಗಳಿಗೂ ಹಚ್ಚಬೇಕೆಂದು ವಿಧಿಸಲಾಗಿದೆ. ವೃದ್ಧಶಾತಾತಪದಲ್ಲಿ "ಹಣೆಯಲ್ಲಿ ವಿಭೂತಿ ಇಲ್ಲದವನನ್ನು ಅಂತ್ಯಜನೆಂದು ತ್ಯಜಿಸಬೇಕು" ಎಂದು ಭಸ್ಮವನ್ನು ಧರಿಸದಿದ್ದರೆ ದೋಷವನ್ನೂ ಹೇಳಿದೆ. ಗಾರುಡಸ್ಮೃತಿಯಲ್ಲಿ "ದೇವತೆಗಳಿಗೂ ಬ್ರಾಹ್ಮಣರಿಗೂ ತ್ರಿಪುಂಡ್ರಾಕಾರವೂ, ಕ್ಷತ್ರಿಯ ವೈಶ್ಯರಿಗೆ ವರ್ತುಲಾಕಾರವೂ, ಶೂದ್ರರಿಗೆ ಅರ್ಧಚಂದ್ರಾ ಕಾರವೂ ಬೇರೆಯವರಿಗೆ ಊರ್ಧ್ವಪುಂಡ್ರವೂ ವಿಹಿತವಾಗಿವೆ. ಊರ್ಧ್ವಪುಂಡ್ರವನ್ನು ಯಾವನು ವಿನೋದಕ್ಕಾಗಿ ಮಣ್ಣಿನಿಂದಲಾದರೂ ಧರಿಸುವನೋ ಅವನನ್ನು ಅದೇ ಆಕಾರದ ಶಸ್ತ್ರದಿಂದ ಯಮಕಿಂಕರರು ಪೀಡಿಸುವರು. ಊರ್ಧ್ವಪುಂಡ್ರ, ಅಂಕುಶ, ಅಶ್ವತ್ಥಪತ್ರ, ವರ್ತುಲಾಕಾರದ ಚಿಹ್ನೆ ಇವನ್ನು ಧರಿಸಿದವನು ತ್ರಿಪುಂಡ್ರಧಾರಣದಿಂದ ಶುದ್ಧನಾಗುವನು. ಶಂಖ ಚಕ್ರಗಳ ಮುದ್ರೆ ಒತ್ತಿಕೊಂಡವನೂ ಭಸ್ಮದ ತ್ರಿಪುಂಡ್ರ ದಿಂದ ಶುದ್ಧನಾಗುವನು" ಹೀಗೆ ಹೇಳಿದೆ. ಶಂಖ ಚಕ್ರಗಳ ಮುದ್ರೆ ಮತ್ತುನಾಮ

ವನ್ನು ಧರಿಸಿದವರಿಗೆ ಭಸ್ಮಧಾರಣವೇ ಪ್ರಾಯಶ್ಚಿತ್ತವೆಂದು ಗೌತಮಸ್ಮೃತಿಯಲ್ಲಿ ಹೇಳಿದೆ. ಜಾಬಾಲಶ್ರುತಿಯಲ್ಲಿ "ಮೊದಲು ಭಸ್ಮವನ್ನು ಅಂಗಗಳಿಗೆ ಹಚ್ಚಿ ಅದರ ಮೇಲೆ ತ್ರಿಪುಂಡ್ರವನ್ನು ಧರಿಸಬೇಕು ಇದೇ ಬ್ರಾಹ್ಮಣನ ಧರ್ಮ" ಎಂದು ಹೇಳಿದೆ. ತ್ರಿಪುಂಡ್ರವಿಲ್ಲದವನ ಅರ್ಚನೆ, ಜಪ, ಶ್ರಾದ್ಧಗಳು ರಾಕ್ಷಸವೆನಿಸುತ್ತವೆ. ಹೀಗೆ ಅನೇಕ ಶ್ರುತಿ ಸ್ಮೃತಿಗಳು ಭಸ್ಮಧಾರಣವನ್ನು ವಿಧಿಸಿವೆ. ಕಾಲಾಗ್ನಿರುದ್ರೋಪನಿಷತ್ತಿನಲ್ಲಿ ಭಸ್ಮದಿಂದ ತ್ರಿಪುಂಡ್ರವನ್ನು ಧರಿಸಿದವನಿಗೆ ಸಮಸ್ತ ಪಾಪಗಳ ಬಿಡುಗಡೆಯಾಗುವುದಲ್ಲದೆ ಅವನು ಎಲ್ಲಾ ದೇವತೆಗಳ ಧ್ಯಾನದ ಮತ್ತು ಎಲ್ಲಾ ತೀರ್ಥಗಳ ಸ್ನಾನದ ಫಲವನ್ನು ಪಡೆಯುವನೆಂದು ಭಸ್ಮಧಾರಣದ ಫಲವನ್ನು ಹೇಳಿದೆ. ಆದರೆ ಇದನ್ನು ಧರಿಸದಿದ್ದರೆ ಏನೂ ದೋಷವಿಲ್ಲದ್ದರಿಂದ ಇದು ನಿತ್ಯವಿಧಿಯಾಗಲಾರದಾದರೆ ಸ್ವರ್ಗಕಾಮನು ಅಗ್ನಿಷ್ಟೋಮ ಮತ್ತು ಜ್ಯೋತಿಷ್ಟೋಮಯಾಗಗಳನ್ನಾಚರಿಸಬೇಕೆಂಬಲ್ಲಿ ಫಲವನ್ನು ಹೇಳಿ ದೋಷವನ್ನು ಹೇಳದಿರುವುದರಿಂದ ಅವೂ ನಿತ್ಯವಿಧಿಯಾಗದೇ ಹೋಗಬೇಕಾದೀತು. ಆದರೆ ಈ ಯಾಗಗಳನ್ನು ಮಾಡದಿದ್ದರೆ ದೋಷವನ್ನು ಹೇಳಿರುವುದರಿಂದ ಅವಕ್ಕೆ ನಿತ್ಯವಿಧಿ ಎಂಬುದು ನಿರ್ವಿವಾದವಾಗಿದೆ ಎಂದರೆ "ಯಾರಿಗೆ ಭಸ್ಮದಲ್ಲಿ ಶ್ರದ್ಧೆಯಿಲ್ಲವೋ ಅವರಿಗೆ ಗರ್ಭಾಧಾನವೇ ಮೊದಲಾದ ಸಂಸ್ಕಾರವೂ ಇರುವುದಿಲ್ಲ"ವೆಂದು ಜಾಬಾಲ ಶ್ರುತಿಯಲ್ಲಿ ಭಸ್ಮವಿಲ್ಲದಿದ್ದರೆ ದೋಷವನ್ನು ಹೇಳಿರುವುದರಿಂದ ಭಸ್ಮಧಾರಣವೂ ನಿತ್ಯವಿಧಿಯೇ ಆಯಿತು. ಆದ್ದರಿಂದ ಹಿಂದೆ ಹೇಳಿದ ಭಸ್ಮನಿಷೇಧವು ಮೂಳೆ ಬುರುಡೆಗಳ ಭಸ್ಮಕ್ಕೆ ಅನ್ವಯಿಸುತ್ತದೆಯೇ ಹೊರತು ತ್ರಿಪುಂಡ್ರಧಾರಣಕ್ಕೆ ಅನ್ವಯಿಸುವುದಿಲ್ಲ. ಯಾಕೆಂದರೆ ಭಸ್ಮಧಾರಣವು ಎಲ್ಲಾ ಶ್ರುತಿಗಳಲ್ಲೂ, ಸ್ಕಾಂದಾದ್ಯಗಮಗಳಲ್ಲೂ ವಿಹಿತವಾಗಿದೆ. ಇದರಂತೆಯೇ ರುದ್ರಾಕ್ಷಧಾರಣವೂ ವೈದಿಕವೆನಿಸಿದೆ. ಕಾತ್ಯಾಯನಶಾಖೆಯಲ್ಲಿ "ರುದ್ರಾಕ್ಷಗಳನ್ನು ವೇದಗಳೂ ದೇವತೆಗಳೂ ಧರಿಸಿದ್ದಾರೆ. ನಿಂತಾಗ, ಕುಳಿತಾಗ, ಮಲಗುವಾಗ, ತಿರುಗುವಾಗ, ಭುಂಜಿಸುವಾಗ, ರುದ್ರಾಕ್ಷವನ್ನು ಧರಿಸಿದವನು ಎಲ್ಲಾ ಪಾಪಗಳನ್ನು ದಾಟಿ ರುದ್ರನಲ್ಲಿ ಬೆರೆಯುತ್ತಾನೆ" ಎಂದು ಹೇಳಿದೆ. ಬೃಹಜ್ಜಾಬಾಲದಲ್ಲಿ "ರುದ್ರಾಕ್ಷಧಾರಣದಿಂದ ಮಹಾಬಲವುಂಟಾಗುವುದು. ಎಲಚಿಹಣ್ಣಿನ ಪ್ರಮಾಣದ ರುದ್ರಾಕ್ಷವೇ ಶ್ರೇಷ್ಠವಾದುದು" ಎಂದು ಹೇಳಿದೆ. ಸಂವರ್ತಕಸ್ಮೃತಿಯಲ್ಲಿ "ಸ್ನಾನಮಾಡುವಾಗಲೂ ದಾನ, ಜಪ, ಹೋಮ, ಅಗ್ನಿಪೂಜೆ ಮತ್ತು ದೇವಾರ್ಚನೆಗಳಲ್ಲೂ, ಪ್ರಾಯಶ್ಚಿತ್ತ ಶ್ರಾದ್ಧಗಳಲ್ಲೂ, ವಿಶೇಷವಾಗಿ ದೀಕ್ಷೆಯ ಕಾಲದಲ್ಲೂ ರುದ್ರಾಕ್ಷವನ್ನು ಧರಿಸದಿದ್ದರೆ ಆ ಕರ್ಮಗಳ ಫಲ ದೊರಕುವುದಿಲ್ಲ" ಎಂದು ಹೇಳಿದೆ. "ಹಿಂದೆ ತ್ರಿಪುರಾಸುರವಧಕ್ಕಾಗಿ ಶಿವನು ಕಣ್ಣನ್ನು ಅಗಲಿಸಿ ಮೇಲೆ ನೋಡಿದಾಗ ಅವನ ಕಣ್ಣಿಂದ ನೀರಿನ ಬಿಂದುಗಳು ಕೆಳಗೆ ಬಿದ್ದು ರುದ್ರಾಕ್ಷಗಳಾದವು. ಅವುಗಳ ದರ್ಶನ ಸ್ಪರ್ಶಗಳಿಂದ ಸಾವಿರ ಗೋದಾನದ ಫಲ ಬರುತ್ತದೆ. ಧಾರಣದಿಂದ ಪಾಪವಿಮೋಚನೆಯಾಗುವುದು' ಹೀಗೆ ಋಗಾಮ್ನಾಯದೊಳಗಿನ ಶಾಂಡಿಲ್ಯಶಾಖೆಯಲ್ಲಿ ರುದ್ರಾಕ್ಷ

ಧಾರಣದ ಬಗ್ಗೆ ವಿಧಿ ಇದೆ. ಸ್ಕಾಂದದಲ್ಲೂ ಲಿಂಗಪುರಾಣದಲ್ಲೂ ರುದ್ರಾಕ್ಷದ ಮಹಿಮೆ ಬಂದಿರುವುದರಿಂದ ರುದ್ರಾಕ್ಷಧಾರಣವು ವೈದಿಕವೆಂದು ನಿಶ್ಚಯಿಸಲಾಗಿದೆ.

ನನು "ಅನರ್ಹಂ ಮಮ ನೈವೇದ್ಯಂ ನಿರ್ಮಾಲ್ಯಮುದಕಂ ತಥಾ" ಇತ್ಯಾದಿನಾ ಶಿವಪುರಾಣೇಷ್ವಪಿ ಶಿವೇನ ಸ್ವಕೀಯಪಾದೋದಕ ಪ್ರಸಾದನಿಷೇಧಕಥನಾತ್ ಶಿವಪೂಜಾಯಾಃ ಪ್ರಸಾದೈಕಫಲತ್ವೇನ ತನ್ನಿಷೇಧೇ ಪೂಜಾನಿಷೇಧೋಽಪ್ಯರ್ಥಾತ್ಸಿದ್ಧಃ. "ವಿಷ್ಣೋರ್ನಿವೇದಿತಂ ಶುದ್ಧಂ ಮುನಿಭಿರ್ಭೋಜ್ಯಮುಚ್ಯತೇ । ನಿರ್ಮಾಲ್ಯಮಿತರೇಷಾಂ ತು ಭುಕ್ತ್ವಾ ಚಾಂದ್ರಾಯಣಂ ಚರೇತ್ ॥ ಅಕಾಲಮೃತ್ಯುಹರಣಂ ಸರ್ವವ್ಯಾಧಿವಿನಾಶನಂ । ಸರ್ವಪಾಪಪ್ರಶಮನಂ ವಿಷ್ಣೋಃ ಪಾದೋದಕಂ ಶುಭಂ ॥ ಸಾಲಗ್ರಾಮಶಿಲಾವಾರಿ ಪಾಪಹಾರಿ ವಿಶೇಷತಃ । ಆಜನ್ಮಕೃತ ಪಾಪಾನಾಂ ಪ್ರಾಯಶ್ಚಿತ್ತಂ ದಿನೇದಿನೇ ॥" ಇತ್ಯಾದಿಸ್ಮೃತಿಷು ವಿಷ್ಣುಪಾದೋದಕಪ್ರಸಾದಗ್ರಹಣವಿಧಿದರ್ಶನಾತ್ ಸರ್ವೇಷಾಂ ವೈದಿಕಾನಾಂ ವಿಷ್ಣುಪೂಜಾದಿಕಮೇವ ವಿಧೀಯತೇ ಇತಿ ಚೇದುಚ್ಯತೆ. ಅಗ್ನಿಹೋತ್ರಾದಿವಚ್ಛಿವಪೂಜಾಶಿವಪಾದೋದಕಶಿವಪ್ರಸಾದಾನಾಂ ವೇದವೇದಾಂತಾಗಮಸ್ಮೃತಿಪುರಾಣೇತಿಹಾಸಾದಿಭಿರ್ವಿಧೀಯಮಾನತ್ವಾತ್ ಶ್ರೌತತ್ವಂ ಶ್ರೌತಪರಿಗ್ರಾಹ್ಯತ್ವಂ ಚ. ತಾಂತ್ರಿಕವಿಧಿದರ್ಶನಾದ್ವಿಷ್ಣುಪೂಜಾದಿಕಂ ತಾಂತ್ರಿಕಾಧಿಕಾರಿಕಮೇವ. ಶಿವಸ್ಯ ಬ್ರಾಹ್ಮಣತ್ವಾದ್ಬ್ರಾಹ್ಮಣೋಪಾಸ್ಯತ್ವಂ. ತದುಕ್ತಂ ಛಾಂದೋಗ್ಯೇ ಪ್ರಪದಬ್ರಾಹ್ಮಣೇ "ತ್ವಂ ದೇವಾನಾಂ ಬ್ರಾಹ್ಮಣೋಽಸಿ" ಇತಿ. ಯಜುರ್ವೇದೇ 'ವಿಶ್ವಾಧಿಕೋ ರುದ್ರೋ ಮಹರ್ಷಿಃ' ಇತಿ. ಶ್ವೇತಾಶ್ವೇತರೇ 'ಬ್ರಹ್ಮಾಧಿಪತಿಃ—ಸದಾಶಿವೋಂ' ಇತಿ. ಶ್ರುತ್ಯಂತರೇ ಚ "ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ತಸ್ಮಾತ್ಸೋಮರಾಜಾನೋ ಬ್ರಾಹ್ಮಣಾಃ। ಸೋಮೋಽಸ್ಮಾಕಂ ಬ್ರಾಹ್ಮಣಾನಾಂ ರಾಜಾ" ಇತ್ಯಾದಿಶ್ರುತಿಷು ಮಹಾದೇವಸ್ಯ ಬ್ರಾಹ್ಮಣಪರ್ಯಾಯತ್ವ ಬ್ರಾಹ್ಮಣಾಧಿಪತಿತ್ವವ್ಯವಸ್ಥಾಪನಾತ್ ಬ್ರಾಹ್ಮಣಾನಾಂ ಬ್ರಾಹ್ಮಣೈರಾಶ್ರಿತತಯಾ ಮಹಾದೇವ ಏಕ ಏವ ಉಪಧಾವನಸ್ಯಾರಾಧನಸ್ಯ ಚ ಯೋಗ್ಯಃ. ಕೂರ್ಮೇ "ಅನುಲೋಮವಿಲೋಮಾನಾಂ ವರ್ಣಾನಾಂ ಬ್ರಾಹ್ಮಣೋ ಗುರುಃ । ವಿಶೇಷಾದ್ಬ್ರಾಹ್ಮಣಂ ರುದ್ರಮೀಶಾನಂ ಶರಣಂ ವ್ರಜೇತ್॥" ಇತಿ. ಮನುಸ್ಮೃತೌ "ಬ್ರಾಹ್ಮಣಾನಾಂ ಶಿವೋ ದೇವಃ ಕ್ಷತ್ರಿಯಾಣಾಂ ತು ಮಾಧವಃ । ವೈಶ್ಯಾನಾಂ ತು ತಥಾ ಬ್ರಹ್ಮಾ ಶೂದ್ರಾಣಾಂ ಸುರನಾಯಕಃ ॥" ಇತಿ. ಪಾರಾಶರ್ಯಪುರಾಣೇ "ಸರ್ವೇಷಾಮೇವ ದೇವಾನಾಂ ವರಿಷ್ಠಃ ಪರಮೇಶ್ವರಃ । ವರಿಷ್ಠಯೋರ್ಹಿ ಸಂಬಂಧೋ ಯುಜ್ಯತೆ ನ ಪರಸ್ಯ ತು । ತತೋ ವಿಪ್ರಸ್ಯ ಸಂಬಂಧಶ್ಶಿವೇನೈವ ಹಿ

ಯುಜ್ಯತೇ ॥ ಸಂಕರಾಸ್ಸರ್ವದೇವಾಶ್ಚ ವೃಷಲಸ್ತು ಪುರಂದರಃ । ಪಿತಾಮಹಸ್ತು ವೈಶ್ಯಸ್ಸ್ಯಾತ್ ಕ್ಷತ್ರಿಯಃ ಪರಮೋ ಹರಿಃ । ಬ್ರಾಹ್ಮಣೋ ಭಗವಾನ್ರುದ್ರಃ ಸರ್ವೇಷಾಮುತ್ತಮೋತ್ತಮಃ । ಬ್ರಹ್ಮಭೂತಸ್ಯ ರುದ್ರಸ್ಯ ಬ್ರಾಹ್ಮಣ್ಯಂ ನೈವ ಹೇತುಜಂ। ಬ್ರಾಹ್ಮಣೋ ವೈ ಸದಾ ಲೋಕೇ ಬ್ರಾಹ್ಮಣಂ ತೂಪಧಾವತಿ । ನೇತರಃ ಕ್ಷತ್ರಿಯೋ ವೈಶ್ಯಶ್ಶೂದ್ರೋಽಪಿ ಚ ನ ಸಂಕರಃ । ತಸ್ಮಾದ್ವೇದೇನ ಮಾರ್ಗೇಣ ದ್ವಿಜಾತೋ ಬ್ರಾಹ್ಮಣಸ್ಸದಾ । ಮಹಾಬ್ರಾಹ್ಮಣಮೀಶಾನಮುಪಗಚ್ಛೇನ್ನ ಚೇತರಂ । ಸರ್ವಾತ್ಮಭೂತಮಾತ್ಮಾನಂ ವಿರೂಪಾಕ್ಷಂ ದ್ವಿಜೋತ್ತಮಂ । ಯಸ್ತು ನೋಪೈತಿ ಸಾಂಕರ್ಯಂ ತಸ್ಯಾಸ್ತೀಹ ನ ಸಂಶಯಃ ॥" ಇತಿ. ಶ್ರುತಿರಪಿ "ಯೋ ವೈ ಸ್ವಾಂ ದೇವತಾಮತಿಯಜತೇ ಪ್ರಸ್ವಾಯೈ ದೇವತಾಯೈ ಚ್ಯವತೇ ನ ಪರಾಂ ಪ್ರಾಪ್ನೋತಿ ಪಾಪೀಯಾನ್ ಭವತಿ"ಇತಿ. ಸ್ಕಾಂದೇ "ಸ್ವದೇವತಾಂ ಪರಿತ್ಯಜ್ಯ ಯೋಽನ್ಯದೈವಮುಪಾಸತೇ । ತೇ ಪಾಷಂಡಾ ಇತಿ ಜ್ಞೇಯಾಸ್ಸರ್ವಕರ್ಮಬಹಿಷ್ಕೃತಾಃ॥ ನಾದೇವಾಂಶೋ ದದಾತ್ಯನ್ನಂ ನಾವಿಷ್ಣುಃ ಪೃಥಿವೀಪತಿಃ । ನಾನೃಷಿಃ ಕುರುತೇ ಕಾವ್ಯಂ ನಾರುದ್ರಃ ಕ್ರಮಪಾಠಕಃ ॥" ಇತಿ. ಧರ್ಮಶಾಸ್ತ್ರೇ ವೇದಪಾಠಕಸ್ಯ ಬ್ರಾಹ್ಮಣಸ್ಯ ರುದ್ರಾಂಶತ್ವಮುಕ್ತಂ. ತಸ್ಮಾನ್ಮುಮುಕ್ಷೂಣಾಂ ವೈದಿಕಾನಾಂ ತತ್ಪೂಜೈವ ಕರ್ತವ್ಯಾ. 'ನಿಧನಪತಯೇ ನಮಃ' ಇತ್ಯಾದಿಶ್ರುತಿಸ್ಮೃತಿಪುರಾಣಸಿದ್ಧತ್ವಾಚ್ಛಿವಲಿಂಗಸ್ಯೈವ ವೈದಿಕತ್ವಂ, ತಾಂತ್ರಿಕಪ್ರಧಾನತ್ವಾದ್ವಿಷ್ಣ್ವಾತ್ಮಕಸಾಲಗ್ರಾಮಾದೀನಾಂ ತಾಂತ್ರಿಕತ್ವಮೇವ. ಶಿವಲಿಂಗಪೂಜಾದಿಕಮಪಿ ಸರ್ವವೇದಸಿದ್ಧಂ. ಋಗ್ವೇದೇ—'ತವ ಶ್ರಿಯೇ ಮರುತೋ ಅರ್ಚಯಂತ ರುದ್ರ ಯತ್ತೇ ಜನಿಮ ಚಾರುಚಿತ್ರಂ । ಪದಂ ಯದ್ವಿಷ್ಣೋರುಪಮಂ ನ್ಯಧಾಯಿ ತೇನ ಪಾಸಿ ಗುಹ್ಯಂ ನಾಮ ಗೋನಾಂ' ಇತಿ. ಅಸ್ಯಾರ್ಥಃ, ಹೇ ರುದ್ರ, ಚಾರು-ಚಿತ್ರಂ ರತ್ನಹೇಮರಜತಶಿಲಾಪ್ರವಾಳಾದಿಬಹುವಿಧಂ ಜನಿಮ ಲಿಂಗಂ ಯತ್ಪ್ರಾದುರ್ಭೂತಂ, ಮರುತೋ ದೇವಾಃ,ತೇ ತವ ಶ್ರಿಯೇ ಐಶ್ವರ್ಯಾಯ ಅರ್ಚಯಂತ ಅರ್ಚಯಂತೀತ್ಯರ್ಥಃ. ತೇನ ಐಶ್ವರ್ಯಪ್ರದಾಯಕೇನ ಶಿವಲಿಂಗೇನ ಉಪಮಂ ಉಪಸಮೀಪೇ ಮಾ ಲಕ್ಷ್ಮೀರ್ಯಸ್ಮಿನ್ ತದುಪಮಂ ಸರ್ವದಾಽನಪಾಯಿಲಕ್ಷ್ಮೀಕಂ ವಿಷ್ಣೋಃ ಪದಂ ಆಧಿಪತ್ಯಂ ನ್ಯಧಾಯಿ, ಗೋನಾಂ ವೇದಾನಾಂ ಗುಹ್ಯಂ ರಹಸ್ಯಭೂತಂ ನಾಮಾಭಿಧಾನವಾಂಸ್ತ್ವಂ ಪಾಸಿ ರಕ್ಷಸಿ. ಏತಸ್ಯೋಪಬೃಹ್ಮಣಂ ಪರಾಶರಪುರಾಣೇ. "ರೌದ್ರಲಿಂಗಂ ಮಹಾವಿಷ್ಣುರ್ಭಕ್ತ್ಯಾ ಶುದ್ಧಶಿಲಾಮಯಂ । ಚಾರುಚಿತ್ರಂ ಸಮಭ್ಯರ್ಚ್ಯ ಲಬ್ಧವಾನ್ಪರಮಂ ಪದಂ । ಸಾಚ ಲಕ್ಷ್ಮೀಸ್ಸಮಾಖ್ಯಾತಾ ಮಹಾವಿ

ಷ್ಣೋಸ್ತು ವಲ್ಲಭಾ । ಯಸ್ಯ ಲಿಂಗಂ ಸಮಭ್ಯರ್ಚ್ಯ ಸಂಪೂಜ್ಯಂ ಸರ್ವ ಚೇತನೈಃ । ಬ್ರಹ್ಮಾ ಸರ್ವಜಗತ್ಕರ್ತಾ ಯಸ್ಯ ಲಿಂಗಾರ್ಚನೇನ ವೈ॥" ಇತಿ. ತಥಾ ಯಜುರ್ವೇದೇ "ತ್ರಿಯಂಬಕಂ ಯಜಾಮಹೆ" ಇತಿ. ಶ್ರುತ್ಯಂತರೇ ಚ "ಅರ್ಚತಪ್ರಾರ್ಚತ ಪ್ರಿಯಮೇಧಾಸೋ ಅರ್ಚತಾರ್ಚಂತು ಪುತ್ರಕಾಃ ಉತ ಪುನರ್ನ ಧೃಷ್ಣ್ವರ್ಚತ". ಇತ್ಯಾದಿ ಶ್ರುತಿಷು ಪರಮೇಶ್ವರಸ್ಯಾರಾಧ್ಯತ್ವಂ ದೇವಾನಾಮಾರಾಧಕತ್ವಂ ಚ ಶ್ರೂಯತೇ. ಅತಶ್ಶಿವಪೂಜಾಯಾಃ ನಿತ್ಯವಿಧಿವಿಷಯತ್ವಂ ಸಿದ್ಧಂ. ಪುರಃ ತ್ರಿಪುರಾಣಿ ನಾಶಯತೀತಿ ಪುನರ್ನಃ ಸದಾಶಿವ ಇತ್ಯರ್ಥಃ. ತದಕರಣೇ ಪ್ರತ್ಯವಾಯಶ್ಚ ಋಗ್ವೇದೇ ಶ್ರೂಯತೇ "ಅಂತರ್ನೇಚ್ಛಂತಿ ತಂ ಜನೇ ರುದ್ರಂ ಪರೋ ಮನೀಷಯಾ ಗೃಭ್ಣಂತಿ ಜಿಹ್ವಯಾ ಸಸಂ" ಇತಿ. ಜನೇಷು ಸ್ಥಿತಂ ಜಾತಾವೇಕವಚನಂ, ಪರಃ ಪದಂ ಉತ್ಕೃಷ್ಟಂ ರುದ್ರಂ ತತ್ರ ವ್ಯತ್ಯಯಶ್ಛಾಂದಸಃ, ಅಂತರ್ದಹರಾಕಾಶೇ ಮನೀಷಯಾ ಬುದ್ಧಿಪೂರ್ವಕಂ ನೇಚ್ಛಂತಿ ಯೇ ಉಪಾಸಕಾ ನ ಭವಂತಿ ತೇ ಜನಾಃ ಸಸಂ ಸಸ್ಯವಿಕಾರಮನ್ನಂ ಜಿಹ್ವಯಾ ಗೃಭ್ಣಂತಿ ಭಕ್ಷಯಂತೀರ್ಥಃ । ಯೇ ರುದ್ರಾರಾಧನಮಂತರೇಣ ಭುಜಂತೇ ತೇ ಪುರೀಷಮೇವ ಜಿಹ್ವಯಾ ಭಕ್ಷಯಂತೀತಿ ಭಾವಃ. ತದುಕ್ತಂ ವೃದ್ಧಶಾತಾತಪೇ—"ಅಂತರ್ನೇಚ್ಛಂತಿ ಯೇ ರುದ್ರಂ ಭವಾನೀಸಹಿತಂ ಶಿವಂ । ಪುರೀಷಮೇವ ಗೃಭ್ಣಂತಿ ಜಿಹ್ವಯಾ ತೇ ನ ಸಂಶಯಃ ॥ ತಸ್ಮಾಚ್ಛಿವಂ ಮಹಾದೇವಂ ಪೂಜಯೇದ್ಭಕ್ತಿಸಂಯುತಃ ॥" ಇತಿ. ನನು ಅಂತರಿಚ್ಛಂತಿ ಇತ್ಯತ್ರ ಮಾನಸಕ್ರಿಯಾಮಾತ್ರದರ್ಶನಾತ್ ಕಥಂ ಬಾಹ್ಯಪೂಜಾಪರತ್ವಮಿತಿ ಚೇನ್ನ, 'ಯದ್ಧಿ ಮನಸಾ ಧ್ಯಾಯತಿ ತದ್ವಾಚಾ ವದತಿ ತತ್ಕರ್ಮಣಾ ಕರೋತಿ' ಇತಿ. 'ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ' ಇತಿ ಚ ಶ್ರುತಿಸ್ಮೃತಿಪುರಾಣಾಗಮೈಃ ಮನೋವಾಕ್ಕಾಯಕರ್ಮಭಿಃ ಶಿವಪೂಜೋಪದೇಶಾತ್, ಅಂತರಿಚ್ಛಂತೀತ್ಯನೇನ ಬಾಹ್ಯಶಿವಪೂಜಾಪ್ಯರ್ಥಾತ್ಸಿದ್ಧಾ. ಆಪಸ್ತಂಬಸೂತ್ರೇ ಚ "ಅಧೀಮಹೇ ತಸ್ಮಾದ್ಯಜ್ಞೋಪವೀತೇತ್ಯೇವಾಭಿಧೀಯತೇ । ಯಜಾಮಹೇ ಸೌಮನಸಾಯ ರುದ್ರಂ" ಇತಿ ಯಜ್ಞೋಪವಿತವತ್ ಪರಮಶಿವಲಿಂಗವ್ಯವಸ್ಥಾಪನಾತ್ ತತ್ಪೂಜಾದಿಕಮಪ್ಯರ್ಥಾತ್ಸಿದ್ಧಂ. ಸೂತಸಂಹಿತಾಯಾಂ "ವೇದಸಿದ್ಧಂ ಮಹಾದೇವಂ ಸಾಂಬಂ ಚಂದ್ರಾರ್ಧಶೇಖರಂ । ಲಿಂಗೇ ದಿನೇದಿನೇ ದೇವಂ ಶಿವರುದ್ರಾದಿಸಂಜ್ಞಿಕಂ । ನಾರ್ಚಯಿಷ್ಯಂತಿ ಮೋಹೇನ ಪಾಷಂಡೋಪಹಿತಾ ಜನಾಃ" ಇತ್ಯಾದ್ಯನೇಕಶ್ರುತಿಪುರಾಣೇತಿಹಾಸೇಷು ಪ್ರಸಿದ್ಧತ್ವಾಚ್ಛಿವಲಿಂಗಾರಾಧನಮೇವ ಶ್ರೌತಾನಾಂ ವಿಧೇಯಂ.

"ನನಗೆ ಮಾಡಿದ ನೈವೇದ್ಯ ನಿರ್ಮಾಲ್ಯ, ಮತ್ತು ಅಭಿಷೇಕಮಾಡಿದ ನೀರು ಅನರ್ಹ" ವೆಂದು ಶಿವಾಗಮದಲ್ಲಿ ಶಿವನು ತನ್ನ ಪಾದೋದಕ ಪ್ರಸಾದಗಳನ್ನು ನಿಷೇಧಿಸಿದ್ದಾನೆ. ಪ್ರಸಾದಸ್ವೀಕಾರವೇ ಶಿವಪೂಜೆಯ ಫಲವಾದ್ದರಿಂದ ಇಲ್ಲಿ ಪ್ರಸಾದವನ್ನೇ ನಿಷೇಧಿಸಿದಮೇಲೆ ಶಿವಪೂಜೆಯೂ ನಿಷಿದ್ಧವೆಂದು ಸಿದ್ಧವಾಯಿತು. ಇದೂ ಅಲ್ಲದೆ "ವಿಷ್ಣುವಿಗೆ ನಿವೇದಿಸಿದ್ದು ಋಷಿಗಳಿಗೂ ಭೋಜ್ಯವಾಗಬಲ್ಲದು. ಇತರ ದೇವತೆಗಳಿಗೆ ಅರ್ಪಿಸಿದ್ದನ್ನು ತಿಂದರೆ ಚಾಂದ್ರಾಯಣವ್ರತವನ್ನಾಚರಿಸಬೇಕು. ವಿಷ್ಣುಪಾದೋದಕವು ಅಪಮೃತ್ಯುವನ್ನು ಪರಿಹರಿಸಿ ಎಲ್ಲಾ ವ್ಯಾಧಿಗಳನ್ನೂ ಪಾಪಗಳನ್ನೂ ಪರಿಹರಿಸುವುದರಿಂದ ಶುಭವಾದುದು. ಎಷ್ಟೋ ಜನ್ಮಗಳಲ್ಲಿ ಮಾಡಿದ ಪಾಪವೆಲ್ಲಕ್ಕೂ ವಿಷ್ಣುಪಾದೋದಕವೇ ಪ್ರಾಯಶ್ಚಿತ್ತವಾಗಿದೆ". ಹೀಗೆ ಸ್ಮೃತಿಗಳಲ್ಲಿ ವಿಷ್ಣುಪಾದೋದಕ ಪ್ರಸಾದಗಳನ್ನು ಸ್ವೀಕರಿಸಬೇಕೆಂಬ ವಿಧಿ ಇದೆ. ಆದ್ದರಿಂದ ವೈದಿಕರೆಲ್ಲರಿಗೂ ವಿಷ್ಣುಪೂಜೆಯೇ ವಿಹಿತವಾಗಿದೆ ಎಂಬ ಆಕ್ಷೇಪ ಬರುತ್ತದೆ. ಅವಕ್ಕೆ ಸಮಾಧಾನ ಹೀಗಿದೆ. ಅಗ್ನಿಹೋತ್ರದಂತೆ ಶಿವಪೂಜೆ, ಶಿವಪಾದೋದಕ, ಶಿವಪ್ರಸಾದಗಳನ್ನು ನಿಗಮಾಗಮಗಳು ವಿಧಿಸಿವೆ. ವಿಷ್ಣುಪೂಜೆ ಕೇವಲ ತಾಂತ್ರಿಕವಿಧಿಗಳಲ್ಲಿಯೇ ಕಂಡುಬಂದಿದೆಯಾದ್ದರಿಂದ ಅದು ತಾಂತ್ರಿಕರ ಆಚರಣೆಗೆ ಯೋಗ್ಯವಾಗಿದೆ. ಶಿವನು ಬ್ರಾಹ್ಮಣನಾದ್ದರಿಂದ ಶಿವಾರ್ಚನೆಧಾರಣಗಳು ಶ್ರೌತವೆನಿಸಿ ವೈದಿಕರೆಲ್ಲರಿಗೂ ಗ್ರಾಹ್ಯವಾಗಿವೆ. ಯಜುರ್ವೇದದಲ್ಲಿ "ಬ್ರಾಹ್ಮಣನೇ ಬ್ರಾಹ್ಮಣನ ಬಳಿಗೆ ಹೋಗಬಲ್ಲನು" ಎಂದು ಹೇಳಿದೆ. "ರುದ್ರನು ವಿಶ್ವಾಧಿಕನು, ಬ್ರಹ್ಮಾದಿದೇವತೆಗಳಿಗೂ ನಿಯಮಕನು, ಅವನೇ ನನಗೆ ಓಂಕಾರನೂ ಸದಾಶಿವನೂ ಆಗಿರುವನು' ಎಂದು ಶ್ವೇತಾಶ್ವರದಲ್ಲಿ ಹೇಳಿದೆ, "ಇದು ಬ್ರಾಹ್ಮಣನ ನಿತ್ಯವಾದ ಮಹಿಮೆ. ಬ್ರಾಹ್ಮಣರಿಗೆ ಉಮಾಸಹಿತನಾದ ಶಿವನೇ ರಾಜನು. ಅವನಿಂದ ಹುಟ್ಟಿದ್ದರಿಂದಲೇ ಅವರು ಬ್ರಾಹ್ಮಣರೆನಿಸಿದ್ದಾರೆ". ಹೀಗೆ ಶ್ರುತಿಯಲ್ಲಿ ಈಶ್ವರನನ್ನು ಬ್ರಾಹ್ಮಣನೆಂದೂ, ಬ್ರಾಹ್ಮಣರ ಅಧಿಪತಿ ಎಂದೂ ತಿಳಿಸಲಾಗಿದೆ. ಬ್ರಾಹ್ಮಣರು ಬ್ರಾಹ್ಮಣರನ್ನೇ ಆಶ್ರಯಿಸುವರಾದ್ದರಿಂದ ಮಹಾದೇವನೊಬ್ಬನೇ ಅವರಿಗೆ ಆರಾಧ್ಯನಾಗಿರುವನು. ಕೂರ್ಮಪುರಾಣದಲ್ಲಿ "ಎಲ್ಲಾ ವರ್ಣಗಳಿಗೂ ಬ್ರಾಹ್ಮಣನೇ ಗುರು. ಅದರಲ್ಲೂ ವಿಶೇಷವಾಗಿ ಬ್ರಾಹ್ಮಣನೆನಿಸಿ ಲೋಕರಕ್ಷಕನಾಗಿರುವ ರುದ್ರನಿಗೆ ಶರಣಾಗುತ್ತೇನೆ' ಎಂದೂ, ಮನುಸ್ಮೃತಿಯಲ್ಲಿ "ಬ್ರಾಹ್ಮಣರಿಗೆ ಶಿವನೂ, ಕ್ಷತ್ರಿಯರಿಗೆ ವಿಷ್ಣುವೂ, ವೈಶ್ಯರಿಗೆ ಬ್ರಹ್ಮನೂ, ಶೂದ್ರರಿಗೆ ಇಂದ್ರನೂ ದೇವರಾಗಿದ್ದಾರೆ" ಎಂದೂ, ಪರಾಶರಸ್ಮೃತಿಯಲ್ಲಿ "ದೇವತೆಗಳೆಲ್ಲರಲ್ಲೂ ಪರಮೇಶ್ವರನೇ ಶ್ರೇಷ್ಠನು. ಶ್ರೇಷ್ಠರಿಬ್ಬರ ಸಂಬಂಧವೇ ಶೋಭಿಸಬಲ್ಲದು. ಆದ್ದರಿಂದ ಬ್ರಾಹ್ಮಣರಿಗೆ ಶಿವನ ಸಂಬಂಧವೇ ಯುಕ್ತವಾಗಿದೆ. ಇತರ ದೇವತೆಗಳು ಸಂಕರಜಾತಿಯವರು. ಇಂದ್ರನು ವೃಷಲನು, ಬ್ರಹ್ಮ ವೈಶ್ಯನು ಹರಿ ಕ್ಷತ್ರಿಯನು, ರುದ್ರನು ಬ್ರಾಹ್ಮಣನು. ಪರಬ್ರಹ್ಮನಾದ ರುದ್ರನಿಗೆ ಬ್ರಾಹ್ಮಣ್ಯವು ಸಹಜವಾಗಿದೆ. ಲೋಕದಲ್ಲಿ ಬ್ರಾಹ್ಮಣನು ಬ್ರಾಹ್ಮಣನನ್ನೇ ಆರಾಧಿಸುತ್ತಾನೆ.

ಇತರರು ಹಾಗೆ ಆರಾಧಿಸುವುದಿಲ್ಲ. ಆದ್ದರಿಂದ ವೈದಿಕಮಾರ್ಗದಿಂದ ಸಂಸ್ಕಾರ ಹೊಂದಿದ ವೀರಶೈವನು ಮಹಾಬ್ರಾಹ್ಮಣನಾದ್ದರಿಂದ ರುದ್ರನೊಬ್ಬನನ್ನೇ ಆಶ್ರಯಿಸಬೇಕು. ಎಲ್ಲರಲ್ಲೂ ನೆಲಸಿರುವ ಪರಶಿವನನ್ನು ಆಶ್ರಯಿಸದಿರುವವನು ಸಂಕರನಾಗುತ್ತಾನೆ" ಎಂದೂ ಹೇಳಿದೆ. ' ತನ್ನ ದೇವನನ್ನು ಅತಿಕ್ರಮಿಸಿ ಅನ್ಯದೇವನನ್ನು ಭಜಿಸುವವನು ಪಾಷಂಡನೆನಿಸಿ ಎಲ್ಲಾ ಕರ್ಮಗಳಲ್ಲೂ ಬಹಿಷ್ಕೃತನಾಗುವನು ' ಎಂದು ಶ್ರುತಿಯಲ್ಲೂ ಹೇಳಿದೆ. " ದೇವಾಂಶನಲ್ಲದವನು ಅನ್ನವನ್ನು ಕೊಡಲಾರನು, ವಿಷ್ಣುವಿನ ಅಂಶ ನಲ್ಲದವನು ರಾಜನಾಗಲಾರನು, ಋಷಿಯಲ್ಲದವನು ಕಾವ್ಯವನ್ನು ಬರೆಯಲಾರನು. ರುದ್ರನಲ್ಲದವನು ಕ್ರಮಪಾಠವನ್ನು ಹೇಳಲಾರನು" ಎಂದು ಸ್ಕಾಂದದಲ್ಲಿ ಹೇಳಿದೆ. ಹೀಗೆ ಧರ್ಮಶಾಸ್ತ್ರದಲ್ಲಿ ವೇದಪಾಠಕನನ್ನು ಬ್ರಾಹ್ಮಣನೆಂದೂ ರುದ್ರಾಂಶನೆಂದೂ ಹೇಳಿದೆ. ಆದ್ದರಿಂದ ಮುಮುಕ್ಷುಗಳಿಗೆ ಶಿವಪೂಜೆ ಅನಿವಾರ್ಯವಾಗಿದೆ. " ನಿಧನ ಪತಯೇ ನಮಃ' ಇತ್ಯಾದಿ ಶ್ರುತಿಗಳಲ್ಲಿ ಸಿದ್ಧವಾದ್ದರಿಂದ ಶಿವಲಿಂಗವು ವೈದಿಕವೆನಿಸಿದೆ. ತಾಂತ್ರಿಕರಿಗೆ ಮುಖ್ಯವೆನಿಸಿದ ವಿಷ್ಣುರೂಪವಾದ ಸಾಲಗ್ರಾಮದ ಅರ್ಚನೆ ಕೇವಲ ತಾಂತ್ರಿಕವೆನಿಸಿದೆ. ಆದರೆ ಲಿಂಗಪೂಜೆ ಸರ್ವವೇದಗಳಲ್ಲೂ ವಿಹಿತವಾಗಿದೆ. ಋಗ್ವೇದದಲ್ಲಿ " ರುದ್ರನೇ, ನಿನ್ನ ಅನುಗ್ರಹಕ್ಕಾಗಿ ದೇವತೆಗಳು ನಿನ್ನ ನಿತ್ಯಸುಂದರವಾದ ಲಿಂಗವನ್ನು ನಿರಂತರವೂ ಅಭಿಷೇಕದಿಂದ ಅರ್ಚಿಸುತ್ತಾರೆ. ಆ ಲಿಂಗವೇ ವಿಷ್ಣುವಿಗೆ ಲಕ್ಷ್ಮಿಯೊಡನೆ ನಿರ್ಲಿಪ್ತನಾಗಿ ಬಾಳುತ್ತಲೇ ವಿಶ್ವವನ್ನು ರಕ್ಷಿಸುವ ಸಾಮರ್ಥ್ಯವನ್ನು ಕೊಟ್ಟಿದೆ. ವೇದಾಂತಗಳಿಗೂ ತಿಳಿಯದಷ್ಟು ಗೋಪ್ಯನೆನಿಸಿ ನೀನು ಭಕ್ತರನ್ನು ಕಾಪಾಡುತ್ತಿರುವೆ" ಎಂದು ಹೇಳಿದೆ. ಇದಕ್ಕೆ ಉಪಬೃಂಹಣವಾಕ್ಯವು ಪರಾಶರ ಪುರಾಣದಲ್ಲಿ " ಮಹಾವಿಷ್ಣು ಸುಂದರವಾದ ಶಿವಲಿಂಗವನ್ನು ಭಕ್ತಿಯಿಂದ ಅರ್ಚಿಸಿ ಉತ್ತಮಸ್ಥಾನವನ್ನು ಪಡೆದನು. ಅವನ ಹೆಂಡತಿ ಲಕ್ಷ್ಮಿ ಶಿವಲಿಂಗದ ಅರ್ಚನೆಯಿಂದ ಜಗನ್ಮೋಹಿನಿಯೂ, ಬ್ರಹ್ಮನು ಜಗತ್ಕರ್ತನೂ ಆದರು" ಹೀಗೆ ಬಂದಿದೆ. ಯಜುರ್ವೇದದಲ್ಲಿ ಋಷಿಗಳು ತಮ್ಮನ್ನು ಬಂಧನದಿಂದ ಬಿಡಿಸಿ ಅಮೃತದಲ್ಲಿ ನೆಲೆಯಾಗಿ ನಿಲ್ಲಿಸುವಂತೆ ತ್ರಿಯಂಬಕನನ್ನು ಪ್ರಾರ್ಥಿಸಿದ್ದಾರೆ. ಬೇರೆ ವೇದಗಳಲ್ಲೂ ದೇವತೆಗಳು ಶಿವಲಿಂಗವನ್ನು ಭಕ್ತಿಯಿಂದ ಆರಾಧಿಸಿರುವುದಾಗಿ ತಿಳಿದುಬರುವುದರಿಂದ ಪರಮೇಶ್ವರನು ಆರಾಧ್ಯನೆಂದೂ, ವಿಷ್ಣ್ವಾದಿದೇವತೆಗಳೆಲ್ಲರೂ ಆರಾಧಕರೆಂದೂ ಸಿದ್ಧವಾಗುತ್ತದೆ. ಇದರಿಂದ ಲಿಂಗಪೂಜೆ ನಿತ್ಯವಿಧಿ ಎನಿಸಿದೆ. ಲಿಂಗಪೂಜೆಮಾಡದಿದ್ದರೆ ದೋಷವನ್ನು ಋಗ್ವೇದದಲ್ಲಿ " ಯಾರು ಹೃದಯಾಕಾಶದಲ್ಲಿ ಭಕ್ತಿಯಿಂದ ರುದ್ರನನ್ನು ಧ್ಯಾನಿಸದೆ ಊಟಮಾಡುವರೋ ಅವರು ಕೇವಲ ಪದಾರ್ಥ ಭೋಗಿಗಳಾಗುವರೇ ಹೊರತು ಪ್ರಸಾದಜೀವಿಗಳಾಗಲಾರರು" ಎಂದು ಹೇಳಿದೆ. ವೃದ್ಧಶಾತಪದಲ್ಲಿ, " ಭವಾನಿಯೊಡಗೂಡಿದ ಶಿವನನ್ನು ಯಾರು ಹೃದಯದಲ್ಲಿ ಭಾವಿಸಲಾರರೋ ಅವರು ನಾಲಿಗೆಯಿಂದ ಪುರೀಷವನ್ನು ಮೆಲ್ಲುವರು. ಆದ್ದರಿಂದ ಭಕ್ತಿಯಿಂದ ಮಹಾದೇವನನ್ನು ಎಲ್ಲರೂ ಅರ್ಚಿಸಬೇಕು" ಎಂದು ಹೇಳಿದೆ. ಋಗ್ವೇದದಲ್ಲಿ 'ಅಂತರಿ

ಚ್ಛಂತಿ' ಎಂಬಲ್ಲಿ ಮಾನಸಕ್ರಿಯೆಯೊಂದನ್ನೇ ಹೇಳಿರುವುದರಿಂದ ಅದು ಹೇಗೆ ಬಾಹ್ಯಪೂಜೆಗೆ ಅನ್ವಯಿಸುತ್ತದೆ ? ಎಂದರೆ ಅದು ಹಾಗಲ್ಲ. ಯಾವನು ಮನಸಿನಲ್ಲಿ ಧ್ಯಾನಿಸುವನೋ ಅವನು ಬಾಯಿಂದ ಹೇಳಿದ್ದನ್ನು ಕ್ರಿಯೆಯಿಂದಲೂ ಮಾಡುತ್ತಾನೆ. ಮನವಚನಕಾಯಗಳಲ್ಲಿ ಮಹಾತ್ಮರು ಒಂದೇ ಬಗೆಯಾಗಿರುವರು ". ಹೀಗೆ ಶ್ರುತಿ ಸ್ಮೃತಿಗಳಲ್ಲಿ ಮನೋವಾಕ್ಕಾಯಗಳಿಂದಲೂ ಶಿವಪೂಜೆಯನ್ನು ಹೇಳಲಾಗಿದೆ. ಆದ್ದರಿಂದ 'ಅಂತರಿಚ್ಛಂತಿ' ಎಂಬಲ್ಲಿ ಬಾಹ್ಯಪೂಜೆ ಸಹಜವಾಗಿ ಸಿದ್ಧಿಸುತ್ತದೆ. ಆಪಸ್ತಂಬದಲ್ಲಿ ಯಜ್ಞೋಪವೀತದಂತೆ ಶಿವಲಿಂಗವನ್ನು ದೇಹದಲ್ಲಿ ನೆಲೆಗೊಳಿಸಿರುವುದರಿಂದ ಅದರ ಪೂಜೆ ಅರ್ಥದಿಂದಲೇ ಸಿದ್ಧಿಸುವುದಾಗಿ ಹೇಳಿದೆ. ಸೂತಸಂಹಿತೆಯಲ್ಲಿ " ಶಿವ ರುದ್ರ ಮೊದಲಾದ ಸಂಜ್ಞೆಗಳಿರುವ ಲಿಂಗವನ್ನು ಅರ್ಚಿಸದವರು ಪಾಷಂಡರೆನಿಸುವರು" ಎಂದು ಹೇಳಿದೆ. ಹೀಗೆ ಅನೇಕ ಪ್ರಮಾಣಗಳಿಂದ ಸಿದ್ಧವಾದ್ದರಿಂದ ಲಿಂಗಪೂಜೆ ಶ್ರೌತವೆನಿಸಿದೆ.

" ಯೋ ವೈದಿಕಮನಾದೃತ್ಯ ಕರ್ಮ ಸ್ಮಾರ್ತವಿಧಾಯಕಂ । ಮೋಹಾದಾಚರತೇ ಕಿಂಚಿನ್ನ ಸ ಪುಣ್ಯೇನ ಲಿಪ್ಯತೇ " ಇತಿ ಮನುಸ್ಮೃತ್ಯಾ ಪ್ರಾತ್ಯಕ್ಷಿಕಶ್ರುತಿವಿರುದ್ಧಂ. 'ಆದಿತ್ಯಮಂಬಿಕಾಂ ವಿಷ್ಣುಂ ಗಣನಾಥಂ ಮಹೇಶ್ವರಂ' ಇತ್ಯಾದಿಸ್ಮೃತಿಸಿದ್ಧಪಂಚಪೂಜಾದಿಕಂ ಅಶ್ರೌತಪರಿಗ್ರಾಹ್ಯಂ. ತದುಕ್ತಂ ಪಾರಾಶರ್ಯೇಣ " ವಿಹಾಯ ಸಾಂಬಮೀಶಾನಂ ಯಜಂತೇ ದೇವತಾಂತರಂ । ತೇ ಮಹಾಘೋರನರಕೇ ಪತಂತ್ಯೇವ ನ ಸಂಶಯಃ ॥ " ಇತಿ. ಶಿವಗೀತಾಯಾಂ " ತಂ ತ್ಯಕ್ತ್ವಾ ತಾದೃಶಂ ದೇವಂ ಯಸ್ಸೇವೇತಾನ್ಯದೇವತಾಂ । ಸ ವೈ ಭಾಗೀರಥೀಂ ತ್ಯಕ್ತ್ವಾ ಕಾಂಕ್ಷತೇ ಮೃಗತೃಷ್ಣಿಕಾಂ " ಇತಿ. 'ಶಿವ ಏಕೋ ಧ್ಯೇಯಃ ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ' ಇತ್ಯಾದಿನಾ ಶಿವಲಿಂಗಪೂಜಾಯಾ ವೈದಿಕತ್ವಂ ಸರ್ವಪರಿಗ್ರಾಹ್ಯತ್ವಂ ಚ ಶ್ರುತಿಸಿದ್ಧಮೇವ. ತಸ್ಮಾಚ್ಛಿವಪ್ರಸಾದಸ್ಯ ತಾಂತ್ರಿಕನಿಷೇಧವಿಧಿಸತ್ವೇಽಪಿ ತತ್ಸ್ವೀಕಾರೋ ಯುಕ್ತಃ, ಶ್ರೌತವಿಧೇರ್ಬಲವತ್ತ್ವಾತ್. ಕಿಂ ಚ ಸೌರಸಂಹಿತಾಯಾಂ ಭಗವತಾ ವ್ಯಾಸೇನ ಜೈಮಿನಿಸಂವಾದೇ ಸ್ಪಷ್ಟಮುಕ್ತಂ—' ಅನರ್ಹಂ ಮಮ ನಿರ್ಮಾಲ್ಯಂ ಪಾದಾಂಬು ಕುಸುಮಂ ದಳಂ । ಇತೀಶ್ವರೇಣ ಕಥಿತಮಿತಿ ಕೇಚಿನ್ಮಹರ್ಷಯಃ । ವದಂತಿ ಯತ್ಕಥಂ ಸ್ವಾಮಿನ್ ಯಥಾರ್ಥಂ ಕಥಯಸ್ವ ಮೇ ॥" ಇತಿ ಜೈಮಿನಿನಾ ಪೃಷ್ಟಸ್ಸ ಪ್ರಾಹ " ದೇವದೇವಸ್ಯ ವಚಸೋ ವಿಷಯೋ ಯತ್ರ ಜೈಮಿನೇ । ಯೇ ವೀರಭದ್ರಶಪಿತಾಶ್ಶಿವಭಕ್ತಿಪರಾಙ್ಮುಖಾಃ । ಶಂಭೋರನ್ಯತ್ರ ದೇವೇಷು ಯೇ ಭಕ್ತ್ಯಾ ಯೇನ ದೀಕ್ಷಿತಾಃ । ಯೇಽಶುದ್ಧಕರ್ಮಿಣಶ್ಶಂಭೋರನ್ಯತ್ರ ಮತಬುದ್ಧಯಃ । ತೇಷಾಮನರ್ಹಮೀಶಸ್ಯ ತತ್ಪ್ರಸಾದಚತುಷ್ಟಯಂ ॥" ಇತಿ. ತತ್ರೈ

ವೇಶ್ವರವಚನಂ "ಮದೀಯಭುಕ್ತನಿರ್ಮಾಲ್ಯಂ ಪಾದಾಂಬುಕುಸುಮಂ ದಳಂ। ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚ ತನುತೇ ಕ್ರಮಾತ್ ॥ ಏಕಾದಶಸಹಸ್ರೇಷು ದೇಹಶೋಷಣಕೋಟಿಷು। ತತ್ಫಲಂ ಲಭತೇ ದೇವಿ ಮಮ ನೈವೇದ್ಯಸೇವನಾತ್ ॥" ಇತ್ಯಾದಿನಾಂ ತತ್ರೈವ ಪ್ರಸಾದಸ್ವೀಕಾರವಿಧಿದರ್ಶನಾಚ್ಛಿವಭಕ್ತಾನಾಂ ಶಿವಪ್ರಸಾದಸ್ಸ್ವೀಕಾರ್ಯ ಏವ. ನಿಷೇಧಸ್ಯಾಭಕ್ತವಿಷಯತ್ವೇನ ವಿಧಿನಿಷೇಧಯೋರ್ನವಿರೋಧಃ. ಕಾಮಿಕೇ "ಶಿವಾನುಭೂತಮಖಿಲಂ ನಿರ್ಮಾಲ್ಯಂ ಪರಿಭಾಷ್ಯತೇ। ಭೋಜ್ಯಂ ಧಾರ್ಯಮಿತಿ ದ್ವೇಧಾ ಷಡ್ವಿಧಂ ಚ ತದಿಷ್ಯತೇ ॥ ದೇವಸ್ವಂ ದೇವತಾದ್ರವ್ಯಂ ನೈವೇದ್ಯಂ ಚ ನಿವೇದಿತಂ। ಚಂಡದ್ರವ್ಯಂ ಬಹಿಃಕ್ಷಿಪ್ತಂ ನಿರ್ಮಾಲ್ಯಂ ಷಡ್ವಿಧಂ ಸ್ಮೃತಂ। ದೇವಸ್ವಂ ಗ್ರಾಮಭೂಮ್ಯಾದಿದಾಸೀದಾಸಚತುಷ್ಟಯಂ। ಹೇಮರೌಪ್ಯಕರತ್ನಾದಿ ದೇವದ್ರವ್ಯಮಿತಿ ಸ್ಮೃತಂ। ಮನಸಾ ಯಚ್ಛಿವೋದ್ದಿಷ್ಟಂ ದ್ರವ್ಯಂ ನೈವೇದ್ಯಮುಚ್ಯತೇ । ಶಿವೋಪಭುಕ್ತಂ ಸ್ರಗ್ಗಂಧಂ ಅನ್ನಪಾನಾದಿಕಂ ತಥಾ। ನಿವೇದಿತಮಿತಿ ಪ್ರೋಕ್ತಂ ಸುರೈರ್ವಾ ಮುನಿಭಿರ್ನರೈಃ ॥ ಪ್ರತಿಷ್ಠಿತಸ್ಯ ಲಿಂಗಸ್ಯ ನೈವೇದ್ಯಂ ಯತ್ಸಮರ್ಪಿತಂ। ತಚ್ಚಂಡದ್ರವ್ಯಮಿತ್ಯುಕ್ತಂ ಪೂರ್ವಸಂಧ್ಯಾಸಮರ್ಪಿತಂ। ಪತ್ರಂ ಪುಷ್ಪಂ ಬಹಿಃಕ್ಷಿಪ್ತಂ ಇತಿ ಷಡ್ವಿಧಮುಚ್ಯತೇ । ಬಾಣಲಿಂಗೇ ಸ್ವಯಂಭೂತೇ ಚಂದ್ರಕಾಂತೇ ಹೃದಿ ಸ್ಥಿತೇ। ಪುಣ್ಯಂ ಕ್ರತುಶತಸ್ಯೋಕ್ತಂ ಶಂಭೋರ್ನಿರ್ಮಾಲ್ಯಭಕ್ಷಣಾತ್ ॥" ಇತಿ. ಧರ್ಮಶಾಸ್ತ್ರೇ ಚ 'ಲಿಂಗೇ ಸ್ವಯಂಭವೇ ಬಾಣೇ ರತ್ನೇ ರಜತನಿರ್ಮಿತೇ। ಸಿದ್ಧಪ್ರತಿಷ್ಠಿತೇ ಲಿಂಗೇ ನ ಚಂಡಾಧಿಕೃತಿರ್ಭವೇತ್ ॥ ಶಂಭೋರ್ನಿರ್ಮಾಲ್ಯಕಂ ಶುದ್ಧಂ ಭುಂಜೀತೈವಾಪ್ರಮಾದತಃ॥ತಥೇತರಸ್ಯ ನಿರ್ಮಾಲ್ಯಂ ಭುಕ್ತ್ವಾ ಚಾಂದ್ರಯಣಂ ಚರೇತ್ ॥ಏಕ ಏವೇತಿ ಯೋ ರುದ್ರಃ ಸರ್ವವೇದೇಷು ಗೀಯತೇ। ತಸ್ಮಾಚ್ಛಿವೈಕಭುಕ್ತಾನ್ನಂ ಸದಾ ಭುಂಜೀತ ವೈದಿಕಃ॥"ಇತಿ. ಋಗ್ವೇದೇ "ತ್ವಾ ದತ್ತೇಭಿ ರುದ್ರ ಶಂತಮೇಭಿಸ್ತಂ ಹಿಮಾ ಅಶೀಯ ಭೇಷಜೇಭಿಃ। ವ್ಯಸ್ಮದ್ವೇಷೋ ಪಿತರಂ ವ್ಯಗ್ಂಹ" ಇತ್ಯಾದಿ. ಅಸ್ಯಾರ್ಥಃ ಹೇ ರುದ್ರ ತ್ವಯಾ ಅಶೀಯ ಭುಕ್ತ್ವಾ ದತ್ತೇಭಿಃ ದತ್ತೈಃ, ಶಂತಮೇಭಿಃ ಸುಖತಮೈಃ, ಭೇಷಜೇಭಿಃ ಸಂಸಾರಭಯಭೇಷಜ್ಯೈಃ ತತ್ಪರಿಹಾರಹೇತುಭಿರಿತಿ ಯೋಜನಾ, ಯೋಽಹಂ ಪಿತರಂ ತ್ವಾಮುಪಾಸ್ಯ ವ್ಯಸ್ಮದ್ವೇಷಃ ವಿಗತಾಹಂಕಾರಃ ಅತಏವ ವ್ಯಗ್ಂಹಃ ನಿಷ್ಪಾಪೋಽಭವಂ ತಂ ಮಾಮನುಗೃಹಾಣೇತ್ಯರ್ಥಃ. ಈಶಾವಸ್ಯೋಪನಿಷದಿ "ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್। ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಂ" ಇತಿ. ಅಸ್ಯಾರ್ಥಃ ಇದಂ ಸರ್ವಂ ಸ್ಥಾವರಾತ್ಮಕಂ ಜಗತ್

ಜಗತ್ಯಾಂ ಯತ್ಕಿಂಚಿತ್ ಜಂಗಮಾತ್ಮಕಂ ಪ್ರಾಣಿಜಾತಂ ಚ ಸರ್ವಂ ಈಶಾವಾಸ್ಯಂ ಈಶೇನ ಶಿವಲಿಂಗೇನ ಆವಾಸಯೋಗ್ಯಂ, ಸರ್ವತ್ರ ಧಾರಣಯೋಗ್ಯಮಿತ್ಯರ್ಥಃ. 'ಸರ್ವಲಿಂಗಂ ಸ್ಥಾಪಯತಿ' ಇತಿ ಶ್ರುತೇಃ, ತಸ್ಮಾತ್ತೇನ ಶಿವಲಿಂಗೇನ ತ್ಯಕ್ತೇನ ಭುಕ್ತಶೇಷಪ್ರಸಾದೇನ ಭುಂಜೀಥಾಃ 'ಭುಜ ಪಾಲನಾಭ್ಯವಹಾರಯೋಃ' ಇತಿ ಧಾತೋಃ. ಶಿವಭುಕ್ತಶೇಷಪ್ರಸಾದ ಏವ ಭೋಕ್ತವ್ಯ ಇತ್ಯರ್ಥ 'ಮಾಗೃಧಃ' ಇತ್ಯನೇನ ಪರಮೇಶ್ವರೇತರದೇವತಾಪ್ರಸಾದನಿಷೇಧಃ ಶ್ರೌತಾನಾಂ ವಿಧೀಯತೇ. ತಥಾ ಯಜುರ್ವೇದೇ "ಯಚ್ಛಂ ಚ ಯೋಶ್ಚ ಮನುರಾಯಜೇ ಪಿತಾ ತದಶ್ಯಾಮ ತವ ರುದ್ರ ಪ್ರಣೀತೌ", ಹೇ ರುದ್ರ ತವ ಪ್ರಣೀತೌ ಪೂಜಾಯಾಂ ಪಿತಾ ಜಗಜ್ಜನ್ಮಾದಿಕಾರಣಂ ಯಃ ಮನುಃ ಮಂತ್ರಾತ್ಮಕೋ ಭವಾನ್ ಯತ್ ಶಂ ಚ ಸುಖಕರಂ, ಯೋಶ್ಚ ತತ್ಪೃಥಕ್ತ್ವೇನ ನಿರೂಪಿತಂ ಅಪಕ್ವಾದಿಕಂ ಪ್ರಸಾದಂ ಆಯುಜೇ ಸಂಪಾದಿತವಾನ್ ತತ್ ಪಕ್ವಮಪಕ್ವಂ ಚ ಪ್ರಸಾದಂ ಅಶ್ಯಾಮ ತ್ವಯೋಪಭುಕ್ತಂ ಪ್ರಸಾದಂ ಭುಂಜೀಮಹಿ. ಸಾಮಶಾಖಗತಜಾಬಾಲೋಪನಿಷದಿ 'ರುದ್ರಭುಕ್ತಂ ಭುಂಜೀತ ರುದ್ರಪೀತಂ ಪಿಬೇದ್ರುದ್ರಾಘ್ರಾತಂ ಜಿಘ್ರೇದ್ರುದ್ರೇಣಾತ್ತಮಶ್ನೀಯಾತ್ತಸ್ಮಾದ್ಬ್ರಾಹ್ಮಣಾಃ ಪ್ರಶಾಂತಮನಸೋ ನಿರ್ಮಾಲ್ಯಮೇವ ಭಕ್ಷಯಂತಿ ನಿರ್ಮಾಲ್ಯಮೇವ ನಿಷೇವಂತೇ" ಇತಿ. ತಥಾ ಸ್ಕಾಂಧೇ "ಶಿಷ್ಟಾಶ್ಯಾಂ ತಾಶ್ಚ ರುದ್ರೇಣ ಭುಕ್ತಮೇವ ಹಿ ಭುಂಜತೇ। ಘ್ರಾತಮೇವ ಹಿ ಜಿಘ್ರಂತಿ ಪೀತಮೇವ ಪಿಬಂತಿ ಚ ॥" ಇತಿ. ಯಜುರ್ವೇದೇ ಪ್ರದೇಶಾಂತರೇ "ರುದ್ರೇಣಾನ್ನಮಮೃತಂ ದೇವಾ ವೈ ಭೋಕ್ತುಕಾಮಾ ವೇದಾಶ್ಚ ಕಾಮಯಂತೇ" ಇತಿ. ರುದ್ರೇಣೇಶ್ವರೇಣ ಅನ್ನಂ ಅದ್ಯತ ಇತ್ಯನ್ನಂ, ಅಮೃತಂ ಪ್ರಸಾದಂ ಕಾಮಯಂತೀತ್ಯರ್ಥಃ, ಕಾಣ್ವಶಾಖಾಯಾಂ "ಅತ್ರಿಗುಪ್ತಾತಮಶ್ನೀಯಾದ್ಯದಿಪಾಪಾನ್ನಮಶ್ನಿತಂ ಭುಂಕ್ತ್ವಾಮಲಂ ಭುಂಕ್ತ್ವಾಘಂ ಭುಂಕ್ತ್ವಾಧೋ ಗಚ್ಛತಿ" ಇತಿ. ತಿಸ್ರೋ ಗಾವೋ ಯಸ್ಯ ಸಃ ತ್ರಿಗುಃ ತ್ರಿಲೋಚನಃ ತೇನ ಪ್ತಾತಂ ಭಕ್ಷಿತಂ, ಪ್ಸಾ ಭಕ್ಷಣೇ, ಅತ್ರಿಗುಪ್ತಾತಂ ಅನೀಶ್ವರಾರ್ಪಿತಂ ಅಶ್ನೀಯಾದ್ಯದಿ ಸಃ ಪಾಪಭುಕ್ ಮಲಭುಗಧೋ ಗಚ್ಛತಿ ನರಕಂ ಪ್ರಾಪ್ನೋತೀತ್ಯರ್ಥಃ। ತಥಾ ಕೂರ್ಮೇ "ಅಸಮರ್ಪ್ಯಾನ್ನಕಂ ಶಂಭೋರ್ಭುಂಕ್ತೇ ಖಾದತಿ ಪಾತಿ ಚ।ಶ್ವಮಾಂಸಮತ್ತಿ ಮೂತ್ರಂ ಚ ಭುಂಕ್ತೇ ಖಾದತಿ ಪಾತಿ ಚ ॥" ಇತಿ. ಬೋಧಾಯನಶಾಖಾಯಾಂ "ಅಥಾತೋ ಮಹಾದೇವಪಾದೋದಕವಿಧಿಂ ವ್ಯಾಖ್ಯಾಸ್ಯಾಮಃ ಶ್ರೀರುದ್ರೇಣ ಪವಿತ್ರೇಣ ಶತಧಾರೇಣ ಸಹಸ್ರಧಾರೇಣಾಚ್ಛಿದ್ರಧಾರಮನಂತಮಜಮಭೀಷ್ಟಂ ಶಿವಂಪವಿತ್ರಂ ಭಗವಂತಂ ಮಹಾದೇವಂ ಸ್ಥಾಪಯಿತ್ವಾ

‘ಸರ್ವೋ ವೈ ರುದ್ರ’ ಇತಿ ದ್ವಾಭ್ಯಾಮಭಿಮಂತ್ರ್ಯ ಶಿರಸಿ ಸಂಪ್ರೋಕ್ಷ್ಯ ಋತಂ ಸತ್ಯಮಿತಿ ಪ್ರಾಶಯೇತ್” ಇತಿ. ತತ್ರ ಜಾಬಾಲಃ, ‘ಭಗವತಃ ಪಾದೌ ಪ್ರಕ್ಷಾಳ್ಯ ಶಂಖಂ ಪ್ರಪೂರ್ಯ ಗಂಧಪುಷ್ಪಾಕ್ಷತೈರಭ್ಯರ್ಚ್ಯ ಚರುಂ ನಿವೇದ್ಯ ‘ಇಮಂ ಮೇ ಗಂಗೇ’ ಇತ್ಯಭಿಮಂತ್ರ್ಯ ‘ಕದ್ರುದ್ರಾಯ’ ಇತಿ ಶಿರಸಿ ಸಮ್ಮಾರ್ಜನಂ ಕೃತ್ವಾ ‘ಋತಂ ಸತ್ಯಂ’ ಇತಿ ನಿರ್ಮಾಲ್ಯಂ ಪಿಬೇತ್, ಇತಿ. ವಾಯವೀಯಸಂಹಿತಾಯಾಂ “ಶಿವಸ್ಯ ಪೂಜನಂ ಕಾರ್ಯಮಗ್ನಿಪೂಜಾ ತ್ವನಂತರಂ। ತತಸ್ಸ್ವಯಂ ತು ಭುಂಜೀತ ಶುದ್ಧಮನ್ನಂ ಶಿವಾರ್ಪಿತಂ ॥” ಇತಿ. ಶಿವಧರ್ಮಶಾಸ್ತ್ರೇ ‘ಪತ್ರಂ ಪುಷ್ಪಂ ಫಲಂ ತೋಯಮನ್ನಪಾನಾದ್ಯಮೌಷಧಂ। ಶಿವಾರ್ಪಿತಂ ವಿನಾ ಭುಂಕ್ತೇ ಸದ್ಯೋ ಭವತಿ ಕಿಲ್ಬಿಷೀ ॥’ ಇತಿ. ಶಾತಾತಪಸ್ಮೃತೌ “ಘೋರಮೂರ್ತಿರ್ಭವೇದ್ವಹ್ನಿರಘೋರಾ ಲಿಂಗಮುಚ್ಯತೇ। ತಸ್ಮಾಲ್ಲಿಂಗಂ ಪುರಾಭ್ಯರ್ಚ್ಯ ತತೋ ವಹ್ನಿಂ ಸಮರ್ಚಯೇತ್ ॥” ಇತಿ. ಶೈವಪುರಾಣೇ “ಪ್ರಾಣಾಗ್ನಿಹೋತ್ರಂ ಯಃ ಕುರ್ಯಾಚ್ಛಿವಸ್ಯೈವ ಪ್ರಸಾದತಃ। ಅಶ್ವಮೇಧಾಯುತಂ ಪುಣ್ಯಂ ಲಭತೇ ನಾತ್ರ ಸಂಶಯಃ। ಕಬಳೇ ಕಬಳೇ ಕುರ್ವನ್ ಶಂಕರಸ್ಯಾನುಕೀರ್ತನಂ। ಸದೋಪವಾಸೀ ವಿಜ್ಞೇಯೋ ಜೀವನ್ಮುಕ್ತೋ ನ ಸಂಶಯಃ। ಬ್ರಾಹ್ಮಣಾನಾಂ ಶಿವೋ ದೇವ ಇತಿ ಶ್ರುತಿಷು ಗೀಯತೇ। ತಸ್ಮಾತ್ಪ್ರಾಣಾಗ್ನಿಹೋತ್ರೇ ಚ ಸೋಮಯಾಗಾದಿಕೇಷ್ವಪಿ। ಪಾರ್ವಣೇ ವೈಶ್ವದೇವೇ ಚ ಶಿವಾಗ್ನೌ ಕರಣೇ ತಥಾ। ಶಿವಪ್ರಸಾದವಿಧಿನಾ ಕುರ್ಯಾತ್ಕರ್ಮಾಣಿ ನಾನ್ಯಥಾ ॥” ಇತಿ. ಕೌರ್ಮೇ “ಯಶ್ಶ್ರಾದ್ಧಕಾಲೇ ಶಿವಭುಕ್ತಶೇಷಂ ದದಾತಿ ಭಕ್ತ್ಯಾ ಪಿತೃದೇವತಾನಾಂ। ತೇನೈವ ಪಿಂಡೇನ ತಿಲೈರ್ವಿಮಿಶ್ರಂ ಆಕಲ್ಪಕೋಟಿಂ ಪಿತರಸ್ಸುತೃಪ್ತಾಃ” ಇತಿ, ಲೈಂಗೇ “ವಸುರುದ್ರಾರ್ಕರೂಪೇಭ್ಯೋ ಮಧ್ಯಪಿಂಡಂ ತು ಪುತ್ರದಂ। ವೇದೋಕ್ತಂ ರುದ್ರನಿರ್ಮಾಲ್ಯಂ ಕಿಂ ಪುನರ್ಬಹುಭಾಷಣೈಃ ॥ ಇತಿ. ಯಜುರ್ವೇದೇ ‘ಇಮಂ ಪಶುಂ ಪಶುಪತೇ ತೇ ಅದ್ಯ ಬಧ್ನಾಮ್ಯಗ್ರೇ ಸುಕೃತಸ್ಯ ಮಧ್ಯೇ। ಅನುಮನ್ಯಸ್ವ ಸುಯಜಾ ಯಜಾಮ ಜುಷ್ಟಂ ದೇವಾನಾಮಿದಮಸ್ತು ಹವ್ಯಂ ॥’ ಇತ್ಯಾದಿಶ್ರುತಿಷು ಯಾಗೀಯಪಶುರೂಪಾದಿಕಸ್ಯ ಸರ್ವಸ್ಯ ಶಿವಪ್ರಸಾದತ್ವೇನ ನಿರ್ದೇಶಾತ್, ‘ಆಧತ್ತ ಪಿತರೋ ಗರ್ಭಂ ಕುಮಾರಂ ಪುಷ್ಕರಸ್ರಜಂ। ಯಥೇಹ ಪುರುಷೋ ಸದಿತಿ ತಂ ಪತ್ನೀ ಪ್ರಾಶ್ನಾತಿ’ ಇತ್ಯಾಪಸ್ತಂಬಸೂತ್ರೇ ಬ್ರಾಹ್ಮಣೋತ್ಪತ್ತೇಃ ರುದ್ರಪಿಂಡಹೇತುಕತ್ವೋಪದೇಶಾಚ್ಚ. ಲೈಂಗೇ ‘ಏಷ್ಟವ್ಯಾ ಬಹವಃ ಪುತ್ರಾಃ ಶೈವಮಂತ್ರಾನುಸಾರಿಣಃ। ಸಮುದ್ಧರಂತಿ ತೇ ಗೋತ್ರಂ ರಜ್ಜುಃ ಕೂಪಾದ್ಘಟಂ ಯಥಾ ॥’ ಇತ್ಯಾದಿಶ್ರುತಿಸ್ಮೃತಿ

**ಪುರಾಣಾಗಮಸಿದ್ಧತ್ವಾಚ್ಛಿವಪ್ರಸಾದೋದಕಸೇವನಂ ಶ್ರೌತಾನಾಂ ವಿಧೇಯಂ. ನಿಷೇಧವಾಕ್ಯಾನಾಂ ಚಂಡದ್ರವ್ಯಪರತ್ವಮಶೈವದೀಕ್ಷಿತ ಪರತ್ವಂ ವೇತಿ ಶೈವಸಿದ್ಧಾಂತಘಂಟಾಘೋಷಃ.**

"ಶ್ರೌತಕರ್ಮವನ್ನು ಮೋಹದಿಂದ ತೊರೆದು ಸ್ಮಾರ್ತಕರ್ಮವನ್ನಾಚರಿಸುವವನಿಗೆ ಕೊಂಚವೂ ಪುಣ್ಯ ಲಭಿಸದು" ಹೀಗೆ ಮನುಸ್ಮೃತಿಯಲ್ಲಿ ಪ್ರತ್ಯಕ್ಷಶ್ರುತಿಗಳಿಗೆ ವಿರುದ್ಧವಾದ "ಆದಿತ್ಯ, ಅಂಬಿಕೆ, ವಿಷ್ಣು, ಗಣೇಶ, ಮಹೇಶ್ವರ ಈ ಐವರನ್ನೇ ಅರ್ಚಿಸಬೇಕು" ಎಂಬ ಸ್ಮಾರ್ತಕರ್ಮವನ್ನು ಅವೈದಿಕವೆಂದು ತಿಳಿಸಲಾಗಿದೆ. "ಈಶ್ವರನನ್ನು ಬಿಟ್ಟು ಬೇರೆ ದೇವರನ್ನು ಆರಾಧಿಸುವವರು ಘೋರ ನರಕದಲ್ಲಿ ಬೀಳುವರು" ಎಂದು ಪಾರಾಶರದಲ್ಲೂ, "ಶಿವನನ್ನು ತೊರೆದು ಬೇರೆ ದೇವತೆಯನ್ನಾಶ್ರಯಿಸಿದವನು ಭಾಗೀರಥಿಯನ್ನು ತೊರೆದು ಬಿಸಿಲ್ಗೊರೆಯನ್ನು ಆಶ್ರಯಿಸಿದಂತಾಗುವುದು' ಎಂದು ಶಿವಗೀತೆಯಲ್ಲೂ, "ಎಲ್ಲವನ್ನು ಬಿಟ್ಟು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು' ಎಂದು ಶ್ರುತಿಯಲ್ಲೂ ಹೇಳಿದೆ. ಹೀಗೆ ಲಿಂಗಪೂಜೆ ವೈದಿಕವೆಂದೂ, ಸರ್ವಪರಿಗ್ರಾಹ್ಯವೆಂದೂ ಶ್ರುತಿಯಲ್ಲಿ ವಿಹಿತವಾಗಿದೆ. ಆದ್ದರಿಂದ ಶಿವಪ್ರಸಾದಕ್ಕೆ ತಾಂತ್ರಿಕ ನಿಷೇಧವಿದ್ದರೂ ಸಹ ಅದರ ಸ್ವೀಕಾರ ಯುಕ್ತವೆನಿಸಿದೆ. ಸೌರಸಂಹಿತೆಯಲ್ಲಿ ವ್ಯಾಸ ಜೈಮಿನಿ ಸಂವಾದದಲ್ಲಿ "'ನನಗೆ ಅಭಿಷೇಕಮಾಡಿದ ನೀರು, ಅರ್ಚಿಸಿದ ಪುಷ್ಪ ಇವು ನಿರ್ಮಾಲ್ಯವೆನಿಸುತ್ತವೆ' ಎಂದು ಈಶ್ವರನು ಹೇಳಿರುವುದಾಗಿ ಕೆಲವು ಮಹರ್ಷಿಗಳು ಹೇಳುತ್ತಾರೆ. ಇದರಲ್ಲಿ ಯಾವುದು ನಿಜ, ತಿಳಿಸು" ಎಂದು ಜೈಮಿನಿ ಕೇಳುತ್ತಾನೆ. ಅದಕ್ಕೆ ವ್ಯಾಸನು "ಇದು ಮಹಾದೇವನ ಮಾತು. ವೀರಭದ್ರನಿಂದ ಶಪಿತರಾಗಿ ಭಕ್ತಿಯಿಲ್ಲದೆ ಶಿವನನ್ನು ತೊರೆದು ಬೇರೆ ದೇವರನ್ನಾರಾಧಿಸುವವರಿಗೆ ಶಿವನ ಪ್ರಸಾದ ಅನರ್ಹವಾಗುವುದು" ಎಂದು ಹೇಳುತ್ತಾನೆ. ಅಲ್ಲಿಯೇ ಈಶ್ವರನು "ನಾನು ಭೋಗಿಸಿದ ಪ್ರಸಾದಪುಷ್ಪವೂ ಪಾದತೀರ್ಥವೂ ಅವನ್ನು ಉಪಯೋಗಿಸುವವರಿಗೆ ಪುರುಷಾರ್ಥಗಳನ್ನು ದೊರಕಿಸುತ್ತವೆ. ನನ್ನ ನೈವೇದ್ಯಸೇವನೆಯಿಂದ ಸಹಸ್ರ ಏಕಾದಶೀ ಉಪವಾಸದ ಫಲವನ್ನು ಭಕ್ತನು ಪಡೆಯುತ್ತಾನೆ' ಎಂದು ಹೇಳಿದ್ದಾನೆ". ಹೀಗೆ ತಿಳಿದುಬರುವುದರಿಂದ ಪ್ರಸಾದವನ್ನು ಸ್ವೀಕರಿಸಬೇಕೆಂಬ ವಿಧಿ ಸ್ಪಷ್ಟಪಡುತ್ತದೆ. ಪ್ರಸಾದನಿಷೇಧವು ಭಕ್ತರಲ್ಲದವರಿಗೆ ಅನ್ವಯಿಸುವುದರಿಂದ ವಿಧಿ ನಿಷೇಧಗಳಿಗೆ ಯಾವ ವಿರೋಧವೂ ಇಲ್ಲ. ಕಾಮಿಕದಲ್ಲಿ "ಶಿವನಿಗರ್ಪಿಸಿದ್ದೆಲ್ಲವೂ ನಿರ್ಮಾಲ್ಯವೆನಿಸುತ್ತದೆ. ಅದು ಭೋಜ್ಯ ಮತ್ತು ಧಾರ್ಯವೆಂದು ಎರಡು ಬಗೆಯಾಗಿದೆ. ದೇವಸ್ವ, ದೇವದ್ರವ್ಯ, ನೈವೇದ್ಯ, ನಿವೇದಿತ, ಚಂಡದ್ರವ್ಯ, ಬಹಿಃಕ್ಷಿಪ್ತವೆಂದು ಅದು ಮತ್ತೆ ಆರು ಬಗೆಯಾಗಿದೆ. ದೇವನಿಗರ್ಪಿಸಿದ ಗ್ರಾಮ, ಭೂಮಿ, ದಾಸೀ, ದಾಸ ಇವು ದೇವಸ್ವವೆನಿಸುತ್ತವೆ. ಚಿನ್ನ, ಬೆಳ್ಳಿ, ರತ್ನ ಇವು ದೇವದ್ರವ್ಯವೆನಿಸುತ್ತವೆ. ಶಿವನಿಗರ್ಪಿಸಬೇಕೆಂದು ಮನಸ್ಸಿನಲ್ಲಿ ಭಾವಿಸಿದ ದ್ರವ್ಯ ನೈವೇದ್ಯವೆನಿಸುತ್ತದೆ. ಶಿವನು ಭೋಗಿಸಿದ ಗಂಧಪುಷ್ಪಗಳೂ ಅನ್ನಪಾನಾದಿಗಳೂ ನಿವೇದಿತವೆನಿಸುತ್ತವೆ. ಪ್ರತಿಷ್ಠಿತಲಿಂಗಕ್ಕರ್ಪಿ

ಸಿದ ನೈವೇದ್ಯವು ಚಂಡದ್ರವ್ಯವೆನಿಸುತ್ತದೆ. ಪೂಜೆಯಾದಮೇಲೆ ಹೊರಗೆ ಬಿಸಾಡುವ ಪತ್ರಪುಷ್ಪಗಳು ಬಹಿಃಕ್ಷಿಪ್ತವೆನಿಸುತ್ತವೆ. ಬಾಣಲಿಂಗ, ಉದ್ಭವಲಿಂಗ, ಚಂದ್ರಕಾಂತ ಲಿಂಗ, ಜ್ಯೋತಿರ್ಲಿಂಗ ಇವುಗಳ ಪ್ರಸಾದವನ್ನು ಭೋಗಿಸಿದರೆ ನೂರು ಯಜ್ಞಗಳ ಫಲ ದೊರಕುತ್ತದೆ.'' ಎಂದು ಹೇಳಿದೆ. " ಸ್ವಯಂಭುಲಿಂಗ, ಬಾಣಲಿಂಗ, ರತ್ನ ಲಿಂಗ, ರಸನಿರ್ಮಿತಲಿಂಗ, ಪ್ರತಿಷ್ಠಿತಲಿಂಗ ಇವುಗಳಿಗೆ ಅರ್ಪಿತವಾದದ್ದು ಚಂಡ್ರ ದ್ರವ್ಯವಾಗಲಾರದು. ಈ ಲಿಂಗಗಳ ನಿರ್ಮಾಲ್ಯವನ್ನು ಭಕ್ತನು ಎಚ್ಚರಿಕೆಯಿಂದ ಭೋಗಿಸಬಹುದು. ಇತರ ಲಿಂಗಗಳ ನಿರ್ಮಾಲ್ಯವನ್ನು ಭೋಗಿಸಿದರೆ ಚಾಂದ್ರಾಯಣ ವ್ರತವನ್ನಾಚರಿಸಬೇಕು. ವಿಶ್ವದಲ್ಲೆಲ್ಲಾ ಒಬ್ಬ ರುದ್ರನೇ ಇರುವನೆಂದು ಶ್ರುತಿ ತಿಳಿ ಸಿದೆಯಾದ್ದರಿಂದ ರುದ್ರಭುಕ್ತವಾದ ಅನ್ನವನ್ನೇ ವೈದಿಕನು ಭೋಗಿಸಬೇಕು." ಎಂದು ಧರ್ಮಶಾಸ್ತ್ರದಲ್ಲಿ ಹೇಳಿದೆ. ಋಗ್ವೇದದಲ್ಲಿ " ರುದ್ರನೇ, ನಿನ್ನನ್ನು ತಂದೆ ಯೆಂದು ಭಾವಿಸಿ ಉಪಾಸನಮಾಡುತ್ತ ನಿರಹಂಕಾರಿಯೂ ಪಾಪರಹಿತನೂ ಆಗಿರುವ ನನ್ನನ್ನು ಅನುಗ್ರಹಿಸು. ನೀನು ಭೋಗಿಸಿ ಮಿಕ್ಕಿರುವ ಪ್ರಸಾದ ಸಂಸಾರದ ಭಯವನ್ನು ಪರಿಹರಿಸಲು ಸಮರ್ಥವಾದ ಔಷಧದಂತೆ ನನಗೆ ಅತ್ಯಂತ ಹಿತವಾಗಿದೆ. ನೀನೇ ನನಗೆ ತಾಯ್ತಂದೆಗಳಂತೆ ರಕ್ಷಕನು" ಹೀಗೆ ಹೇಳಿದೆ: " ಸ್ಥಾವರರೂಪವಾದ ಈ ಜಗತ್ತು ಮತ್ತು ಇದರಲ್ಲಿರುವ ಪ್ರಾಣಿವರ್ಗ ಇದೆಲ್ಲದರಲ್ಲೂ ಈಶ್ವರನೇ ನೆಲಸಿರುವನು. ಆದ್ದರಿಂದ ನಾವು ಭೋಗಿಸುವುದೆಲ್ಲವೂ ಅವನು ಅನುಭವಿಸಿ ಮಿಕ್ಕಿದ್ದೇ ಆಗಿದೆ. ಅದಲ್ಲದೆ ಬೇರೆ ದೇವತೆಗಳಿಗರ್ಪಿಸಿದ ವಸ್ತುವನ್ನು ಭೋಗಿಸಬಾರದು" ಎಂದು ಈಶಾವಾಸ್ಯಶ್ರುತಿಯಲ್ಲಿ ಶಿವಪ್ರಸಾದಸೇವನೆಯ ಬಗ್ಗೆ ಎಚ್ಚರಿಕೆಯನ್ನು ತಿಳಿಸಲಾಗಿದೆ. ಹಾಗೆಯೇ ಯಜುರ್ವೇದದಲ್ಲಿ ' ರುದ್ರನೇ, ಜಗತ್ಪಿತನೂ ಮಂತ್ರಮಯನೂ ಆದ ನಿನ್ನ ಪೂಜೆಯಿಂದ ನಮಗೆ ದೊರೆಯುವ ಪಕ್ವವೂ ಅಪಕ್ವವೂ ಆದ ಸುಖದುಃಖ ಗಳನ್ನು ನೀನು ಅನುಭವಿಸಿ ಕೊಟ್ಟ ಪ್ರಸಾದವೆಂದು ಸಂತೋಷದಿಂದ ಭೋಗಿಸು ತ್ತೇವೆ" ಎಂದು ಹೇಳಿದೆ. ಜಾಬಾಲದಲ್ಲಿ 'ರುದ್ರನು ಭೋಗಿಸಿದ್ದನ್ನೇ ತಿನ್ನಬೇಕು. ಅವನು ಕುಡಿದದ್ದನ್ನೇ ಕುಡಿಯಬೇಕು. ಆದ್ದರಿಂದ ವೈದಿಕರು ಪ್ರಶಾಂತರಾಗಿ ನಿರ್ಮಾಲ್ಯವನ್ನೇ ಸೇವಿಸುತ್ತಾರೆ" ಎಂದೂ, ಸ್ಕಾಂದದಲ್ಲಿ ' ಸದ್ಭಕ್ತರು ರುದ್ರನ ನೈವೇದ್ಯವನ್ನು ಶಾಂತಚಿತ್ತರಾಗಿ ಭೋಗಿಸುತ್ತಾರೆ" ಎಂದೂ, ಯಜುರ್ವೇದದ ಬೇರೆ ಪ್ರಕರಣದಲ್ಲಿ 'ರುದ್ರನು ಭೋಗಿಸಿ ಮಿಕ್ಕದ್ದನ್ನು ಅಮೃತವೆಂದು ದೇವತೆಗಳು ಭೋಗಿಸುತ್ತಾರೆ. ವೇದಗಳೂ ಅದನ್ನೇ ಬಯಸುತ್ತವೆ,' ಎಂದೂ ಹೇಳಿದೆ. ಕಾಣ್ವ ಶಾಖೆಯಲ್ಲಿ " ಅತ್ರಿಗುಪ್ನಾತಂ=ತ್ರಿಗುವೆಂದರೆ ತ್ರಿಲೋಚನ ಶಿವನೆಂದರ್ಥ. ಅವನು ಭೋಗಿಸದಿರುವ ಅನ್ನಪಾನಾದಿಗಳನ್ನು ತಿಂದವನು ಪಾಪಮಲಗಳನ್ನು ಭೋಗಿಸುತ್ತ ಅಧೋಗತಿಗಿಳಿಯುತ್ತಾನೆ" ಎಂದೂ, ಕೂರ್ಮಪುರಾಣದಲ್ಲಿ " ಶಂಭುವಿಗೆ ಅನ್ನಪಾನ ಗಳನ್ನರ್ಪಿಸದೆ ಭೋಗಿಸುವವನು ಶ್ವಪಚನಾಗುತ್ತಾನೆ" ಎಂದೂ, ಬೋಧಾಯನ ಶಾಖಯಲ್ಲಿ " ಇನ್ನು ಮಹಾದೇವನ ಪಾದೋದಕವಿಧಿಯನ್ನು ವಿವರಿಸುತ್ತೇವೆ"

ಎಂದು ಹೇಳಿ ಪವಿತ್ರನಾದ ಮಹಾಲಿಂಗವನ್ನು ಶ್ರೀರುದ್ರದಿಂದ ನೂರುವೇಳೆ ಅಥವಾ ಸಾವಿರವೇಳೆ ಅರ್ಚಿಸಿ 'ಸರ್ವೋ ವೈ ರುದ್ರಃ' ಎಂದು ಅಭಿಮಂತ್ರಿಸಿದ ಅಭಿಷೇಕ ತೀರ್ಥವನ್ನು ಶಿರಸ್ಸಿನಲ್ಲಿ ಪ್ರೋಕ್ಷಿಸಿ, 'ಋತಂ ಸತ್ಯಂ' ಎಂಬ ಮಂತ್ರದಿಂದ ಕುಡಿಯ ಬೇಕು" ಎಂದು ಹೇಳಿದೆ. ಜಾಬಾಲಶ್ರುತಿಯಲ್ಲಿ 'ಶಿವಲಿಂಗವನ್ನು ಅಭಿಷೇಕಮಾಡಿ ಗಂಧಪುಷ್ಪಾದಿಗಳಿಂದ ಅರ್ಚಿಸಿ, ಚರುವನ್ನು ನಿವೇದಿಸಿ 'ಇಮಂ ಮೇ' ಎಂಬ ಮಂತ್ರದಿಂದ ಅಭಿಮಂತ್ರಿಸಿ 'ಕದ್ರುದ್ರಾಯ' ಎಂಬುದರಿಂದ ಶಿರಸ್ಸಿನಲ್ಲಿ ಸಮ್ಮಾರ್ಜನ ಮಾಡುತ್ತ 'ಋತಂ ಸತ್ಯಂ' ಎಂದು ಹೇಳುತ್ತ ಭೋಗಿಸಬೇಕು" ಎಂದೂ, ವಾಯವೀಯಸಂಹಿತೆಯಲ್ಲಿ "ಶಿವಪೂಜೆಯಾದಮೇಲೆಯೇ ಅಗ್ನಿಪೂಜೆಮಾಡಬೇಕು, ಶಿವಾರ್ಪಿತವಾದ ಅನ್ನವನ್ನು ಉಪಾಸಕನೇ ಭೋಗಿಸಬೇಕು" ಎಂದೂ, ಶಿವಧರ್ಮಶಾಸ್ತ್ರದಲ್ಲಿ, 'ಪುಷ್ಪಫಲಗಳನ್ನೂ ಅನ್ನಪಾನಾದಿಗಳನ್ನೂ ಶಿವನಿಗರ್ಪಿಸದೆ ಭೋಗಿಸಿದರೆ ಪಾಪ ಬರುತ್ತದೆ' ಎಂದೂ, ಶಾತಾತಪದಲ್ಲಿ "ಬೆಂಕಿ ಘೋರಸ್ವರೂಪವೂ, ಲಿಂಗ ಅಘೋರವೂ ಪವಿತ್ರವೂ ಆಗಿರುವುದರಿಂದ ಲಿಂಗಾರ್ಚನೆಯಾದಮೇಲೆ ಅಗ್ನಿಯನ್ನು ಅರ್ಚಿಸಬೇಕು" ಎಂದೂ, ಶೈವಪುರಾಣದಲ್ಲಿ "ಶಿವಪ್ರಸಾದದಿಂದಲೇ ಯಾವನು ವೈಶ್ವಾನರಾಗ್ನಿಯನ್ನು ತೃಪ್ತಿಪಡಿಸುವನೋ ಅವನು ಅಶ್ವಮೇಧದ ಫಲವನ್ನು ಪಡೆಯುವನು. ತುತ್ತುತುತ್ತಿಗೆ ಶಿವನ ಹೆಸರು ಹೇಳುವವನು ಸದೋಪವಾಸಿಯೂ ಜೀವನ್ಮುಕ್ತನೂ ಆಗುವನು. ಬ್ರಾಹ್ಮಣರಿಗೆ ಶಿವನೇ ದೇವನೆಂದು ಹೇಳಿರುವುದರಿಂದ ಶಿವಪ್ರಸಾದ ಸೇವನೆಯಿಂದಲೇ ವೈದಿಕನು ಪ್ರಾಣಾಗ್ನಿಹೋತ್ರ, ಸೋಮಯಾಗ, ಶ್ರಾದ್ಧಾದಿಗಳು, ವೈಶ್ವದೇವ ಮೊದಲಾದ ಕರ್ಮಗಳನ್ನು ಆಚರಿಸಬೇಕು" ಎಂದೂ, ಕೂರ್ಮದಲ್ಲಿ "ಯಾವನು ಶಿವಾರ್ಪಿತವಾದ್ದನ್ನು ಶ್ರಾದ್ಧದಲ್ಲಿ ಪಿತೃಗಳಿಗರ್ಪಿಸುವನೋ ಆ ಪಿಂಡದಿಂದ ಪಿತೃದೇವತೆಗಳು ಕಲ್ಪಕೋಟಿಗಳವರೆಗೂ ಸಂತುಷ್ಟರಾಗುವರು" ಎಂದೂ, ಲಿಂಗಪುರಾಣದಲ್ಲಿ "ವಸು, ರುದ್ರ, ಅರ್ಕ ಇವರಿಗೆ ಅರ್ಪಿಸುವ ಪಿಂಡಗಳಲ್ಲಿ ರುದ್ರನಿಗರ್ಪಿಸುವ ಪಿಂಡದಿಂದ ಪುತ್ರ ಸಂತಾನವುಂಟಾಗುವುದು" ಎಂದೂ ಹೇಳಿದೆ. ಯಜುರ್ವೇದದಲ್ಲಿ "ಪಶುಪತಿಯೇ, ಪರಿಶುದ್ಧವಾದ ಈ ಯಜ್ಞಶಾಲೆಯಲ್ಲಿ ಈ ಪಶುವನ್ನು ನಿನಗಾಗಿ ಕಟ್ಟುತ್ತೇನೆ. ಇದನ್ನು ನೀನು ಒಪ್ಪಿಸಿಕೋ. ಈ ಯಜ್ಞದಿಂದ ನಿನ್ನನ್ನು ಮೆಚ್ಚಿಸುತ್ತವೆ. ಇಲ್ಲಿ ಕೊಡುವ ಹವಿಸ್ಸು ದೇವತೆಗಳಿಗರ್ಪಿತವಾಗಲಿ" ಎಂದೂ, ಆಪಸ್ತಂಬಸೂತ್ರದಲ್ಲಿ "'ಪಿತೃದೇವತೆಗಳೇ, ನೀವು ನನಗೆ ಸರ್ವಲಕ್ಷಣಸಂಪನ್ನನಾದ ಸತ್ಪುತ್ರನನ್ನು ಅನುಗ್ರಹಿಸಿ, ಅವನು ಇಲ್ಲಿ ಒಳ್ಳೆಯವನೆನಿಸಲಿ" ಎಂದು ಸತ್ಪುತ್ರನನ್ನು ಅಪೇಕ್ಷಿಸುವ ಪತ್ನಿಯು ರುದ್ರಪಿಂಡವನ್ನೇ ಭೋಗಿಸಬೇಕು" ಎಂದೂ ಹೇಳಿರುವುದರಿಂದ ಬ್ರಾಹ್ಮಣನ ಉತ್ಪತ್ತಿಗೆ ರುದ್ರಪಿಂಡವೇ ಮೂಲವೆಂಬುದು ಸ್ಪಷ್ಟವಾಗುತ್ತದೆ. "ಹಗ್ಗವು ಭಾವಿಯಿಂದ ಗಡಿಗೆಯನ್ನು ಮೇಲಕ್ಕೆತ್ತುವಂತೆ ರುದ್ರವೀರ್ಯಸಂಭೂತರಾದ ಮಕ್ಕಳು ವಂಶವನ್ನು ಉದ್ಧರಿಸುತ್ತಾರೆ" ಹೀಗೆ ಶ್ರುತಿಸ್ಮೃತ್ಯಾಗಮಗಳಲ್ಲಿ ಸಿದ್ಧವಾಗಿರುವುದರಿಂದ ಶಿವಪ್ರಸಾದ ಮತ್ತು ತೀರ್ಥಗಳ

ಸೇವನೆ ವೈದಿಕರಿಗೆ ಅವಶ್ಯವಾಗಿ ಗ್ರಾಹ್ಯವೆನಿಸಿದೆ. ನಿಷೇಧವಾಕ್ಯಗಳು ಚಂಡ ದ್ರವ್ಯಕ್ಕೂ ಶಿವದೀಕ್ಷೆಯನ್ನು ಪಡೆಯದವರಿಗೂ ಅನ್ವಯಿಸುತ್ತವೆ ಎಂದು ಶಿವ ಸಿದ್ಧಾಂತದ ಘಂಟಾಘೋಷವಾಗಿದೆ.

ಶಿವಪ್ರಸಾದನಿಷೇಧಕತಾಂತ್ರಿಕಸ್ಮೃತಿವಿಧಿಮಾತ್ರಸ್ವೀಕಾರೇ ಪೂರ್ವೋಕ್ತವೇದವೇದಾಂತಸ್ಮೃತ್ಯಾಗಮಪುರಾಣೇತಿಹಾಸಾದೀನಾಂ ದತ್ತಜಲಾಂಜಲಿತ್ವಂ ಪ್ರಸಜ್ಯೇತ. ಅತೋ ವೇದಬಾಹ್ಯತ್ವಪ್ರಸಂಗಾತ್ ಪೂರ್ವೋಕ್ತಮೇವ ಸಮೀಚೀನಂ. ಕಿಂಚ ಭಾಗವತೇ ಚತುರ್ಥಸ್ಕಂಧೇ "ತತ್ಕಿಂ ಶಿವಾಖ್ಯಮಶಿವಂ? ನ ವಿದುಸ್ತ್ವದನ್ಯೇ ಬ್ರಹ್ಮಾದಯಸ್ತಮವ ಕೀರ್ಯ ಜಟಾಃಶ್ಮಶಾನೇ। ತನ್ಮಾಲ್ಯಭಸ್ಮನೃಕಪಾಲ್ಯವರಾನ್ಮಮುಕ್ಷವೋ ಮೂರ್ಧಭಿರ್ದಧತಿ ತಚ್ಚರಣಾವಸೃಷ್ಟಂ॥" ಇತಿ, ರಾಮಾಯಣೇ "ತತ್ರ ದೇವರ್ಷಿಗಂಧರ್ವಾಃ ವಸುಧಾತಲವಾಸಿನಃ। ಭವಾಂಗಪತಿತಂ ತೋಯಂ ಪವಿತ್ರಮಿತಿ ಪಸ್ಪೃಶುಃ" ಇತಿ. ವಿಷ್ಣುಪುರಾಣೇ "ಶಂಭೋ ರ್ಜಟಾಕಲಾಪಾತ್ಸಾ ವಿನಿಷ್ಕ್ರಾಂತಾಸ್ಥಿಶರ್ಕರಾನ್ । ಪ್ಲಾವಯಿತ್ವಾ ದಿವಂ ನಿನ್ಯೇ ಯಾನ್ಪಾಪಾನ್ ಸಗರಾತ್ಮಜಾನ್॥" ಇತ್ಯಾದಿಭಾಗವತ ರಾಮಾಯಣವಿಷ್ಣುಪುರಾಣೇಷ್ವಪಿ ಶಿವಪ್ರಸಾದಸ್ವೀಕಾರವಿಧೇಃ, ಭಾಗ ವತೇ ಏಕಾದಶಸ್ಕಂಧೇ "ಅಪಿ ದೀಪಾವಲೋಕಂ ಮೇ ನೋಪಯುಂಜ್ಯಾ ನ್ನಿವೇದಿತಂ" ಇತ್ಯಾದಿ ವಚನೈರ್ವಿಷ್ಣುಪ್ರಸಾದನಿಷೇಧವಿಧೇಶ್ಚ ದರ್ಶ ತಾತ್ ಶಿವಪ್ರಸಾದ ಏವ ವೈದಿಕಪರಿಗ್ರಾಹ್ಯಃ. ನನು ಭಾಗವತಚತುರ್ಥ ಸ್ಕಂಧೇ—"ತ್ವಯೋಪಭುಕ್ತಸ್ರಗ್ಗಂಧವಾಸೋಽಲಂಕಾರಚರ್ಚಿತಾಃ। ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ತರೇಮಹಿ॥" ಇತ್ಯಾದಿ ವಾಕ್ಯೇಷು ವಿಷ್ಣುಪ್ರಸಾದಸ್ವೀಕಾರವಿಧಿರಪಿ ದೃಶ್ಯತ ಇತಿ ಚೇದುಚ್ಯತೇ, 'ಉಚ್ಛಿಷ್ಟಭೋಜಿನೋ ದಾಸಾಃ' ಇತಿ ವಿಶೇಷಣೇನ ಚ ಛಿದ್ರೋರ್ಧ್ವ ಪುಂಡ್ರತಪ್ತಚಕ್ರಾಂಕಿತಾದಿಕಂ ಪಾಂಚರಾತ್ರಾದಿತಾಂತ್ರಿಕಪರಿಗ್ರಾಹ್ಯ ಮೇವ, ನ ವೈದಿಕಭೋಜ್ಯಂ. ನೋ ಚೇತ್ಪೂರ್ವೋಪಬೃಹ್ಮಿತಾನಾಂ 'ನೋಪಯುಂಜ್ಯಾನ್ನಿವೇದಿತಂ', 'ಮಾ ಗೃಧಃ' ಇತ್ಯಾದಿವಾಕ್ಯಾನಾಂ ವೈಯರ್ಥ್ಯಪ್ರಸಂಗಸ್ಸ್ಯಾತ್. ಸ್ಕಾಂದೇ—"ನಿರ್ಮಾಲ್ಯಂ ಶಂಭುನಾ ಭುಕ್ತಂ ಗೃಹ್ಣೀಯಾದ್ವೈದಿಕಸ್ಸದಾ । ನ ತಥಾ ವಿಷ್ಣುಭುಕ್ತಾನ್ನಂ ಪ್ರಾಣೈಃ ಕಂಠಗತೈರಪಿ॥" ಇತಿ. ಯಾಜ್ಞವಲ್ಕ್ಯಸ್ಮೃತೌ "ಮಾಧ ವಾನ್ನಂ ನ ಭೋಕ್ತವ್ಯಂ ಸರ್ವಥಾ ವೈದಿಕೋತ್ತಮೈಃ। ಸದಾಶಿವೋಪ ಭುಕ್ತಾನ್ನಂ ಭುಂಜೀಯಾದಪ್ರಮಾದತಃ॥" ಇತಿ. ಶಾಂಡಿಲ್ಯಸ್ಮೃತೌ "ನ ಭೋಜ್ಯಂ ಮಾಧವಸ್ಯಾನ್ನಂ ಶ್ರೌತಾನಾಂ ಮೋಕ್ಷಕಾಂಕ್ಷಿಣಾಂ। ಶಿವೋಪಭುಕ್ತಂ ಭೋಕ್ತವ್ಯಂ ಶ್ರೌತವಿಧ್ಯೇಕಶಾಸನಾತ್॥" ಇತಿ.

ಶಾತಾತಪೇ “ ವಿಪ್ರೋ ವಾ ಕ್ಷತ್ರಿಯೋ ವಾಪಿ ವೈಶ್ಯೋ ವಾ ಮೋಹಚೇತಸಾ । ವಿಷ್ಣುಗೇಹಸ್ಥಿತಸ್ಯಾನ್ನಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥” ಇತ್ಯತೋ ವಿಷ್ಣುಪ್ರಸಾದನಿಷೇಧವಾಕ್ಯಾನಿ ಶ್ರೌತಪರಾಣಿ, ಶಿವಪ್ರಸಾದನಿಷೇಧವಚನಾನಿ ಶ್ರೌತೇತರಪರಾಣೀತಿ ನಿರ್ಣೀಯತೇ. ಕಿಂಚ, “ ಶ್ರುತಿಸ್ಮೃತಿವಿರೋಧೇ ತು ಶ್ರುತಿರೇವ ಬಲೀಯಸೀ । ಶ್ರುತಿಶ್ರುತಿವಿರೋಧೇ ತು ವಿಶೇಷವಿಧಿರುಚ್ಯತೇ ॥ ” ಇತಿ ನ್ಯಾಯೇನ ಶಿವಪ್ರಸಾದಸ್ವೀಕಾರವಚನಬಾಹುಳ್ಯಾನ್ನಾನ್ಯಾರ್ಥೋ ಯುಕ್ತಃ. ಕಿಂ ನಿಷೇಧಸತ್ತ್ವಮಾತ್ರೇಣ ಶಿವನಿರ್ಮಾಲ್ಯಸ್ವೀಕಾರಾಧಿಕಾರಿನಿರೂಪಕವಚನಾನಾಮಪ್ರಾಮಾಣ್ಯಂ, ಉತ ತೇಷಾಮನನ್ಯಥಾಸಿದ್ಧತ್ವೇನ? ನಾದ್ಯಃ, ತಥಾಸತ್ಯಾಶ್ರಮಭೇದೇನ ವರ್ಣಭೇದೇನ ಯುಗಭೇದೇನ ಶಾಖಾಭೇದೇನ ದೇಶಕಾಲಪುರುಷಭೇದೇನ ವಸ್ತುಸಾಮಾನ್ಯವಿಶೇಷಭೇದಾನುಸಾರೇಣ ವ್ಯವಸ್ಥಿತಶಾಸ್ತ್ರಸ್ಯ ಪರಸ್ಪರವೈರುಧ್ಯದರ್ಶನಾತ್ಸರ್ವಂ ಶಾಸ್ತ್ರಮಪ್ರಮಾಣಂ ಪ್ರಸಜ್ಯೇತ. ಆಪಸ್ತಂಬಾದಿಕೃತಸನ್ಯಾಸನಿಷೇಧಕಾನಾಂ ಸ್ತ್ರೀಶುದ್ರವೇದಪಾಠನಿಷೇಧಕಾನಾಂ ಸಾಮಾನ್ಯತೋ ಹಿಂಸಾನಿಷೇಧಕಾನಾಂ ಮಾತುಲಕನ್ಯಾಪರಿಣಯನಾದಿನಿಷೇಧಕಾನಾಂ ಚ ವಚನಾನಾಂ ಸದ್ಭಾವಾತ್ ಕಿಂಚಿಚ್ಛಾಸ್ತ್ರಸ್ಯ ಪ್ರಾಮಾಣ್ಯಮಿತಿ ಚೇತ್ಸರ್ವವೈದಿಕಬಾಹ್ಯತ್ವಪ್ರಸಂಗಃ. ನ ದ್ವಿತೀಯಃ, ಉದಿತಾನುದಿತಹೋಮಸ್ಥಲ ಇವ ನಹಿನಿಂದಾನ್ಯಾಯೇನ ತತ್ರತ್ಯಶ್ರುತಿಸ್ಮೃತ್ಯಾದಿಪಠಿತಶಿವಪ್ರಸಾದನಿಷೇದವಚನಾನಾಮಗ್ನಿಹೋತ್ರಾದಿಕರ್ಮಸ್ತುತಿಪರತ್ವೇನಾನ್ಯಥಾಸಿದ್ಧತ್ವಾತ್. ತಥಾಹಿ, ಅಗ್ನಿಹೋತ್ರಾದಿಕರ್ಮಾವಶ್ಯಕತಾಂ ಪ್ರತಿಪಾದಯದ್ಭಿಃ ತತ್ಸ್ತುತಿಂ ಕರಿಷ್ಯದ್ಭಿಃ ಸ್ಮೃತಿಕಾರಾದಿಭಿಸ್ತನ್ನಿಂದಾಪುರಸ್ಸರಂ ಕರ್ಮಾಭಿಮುಖ್ಯಂ ಪ್ರತಿಪಾದಿತಮೇವ. ಶಿವಪ್ರಸಾದಸ್ವೀಕಾರಾವಶ್ಯಕತಾಂ ನಿರೂಪಯದ್ಭಿಶ್ಶಿವಾದಿಭಿಃ ಪುರಾಣಕಾರಾದಿಭಿಶ್ಚ ಶಿವಪ್ರಸಾದಾತಿರಿಕ್ತಾನ್ನಭೋಜನೇ ಶ್ವಮಾಂಸಾದಿವತ್ಪ್ರಾಯಶ್ಚಿತ್ತಾದಿಪುರಸ್ಸರಂ ಭವಿಸ್ಪರ್ಶರಾಹಿತ್ಯಪ್ರತಿಪಾದನಪುರಸ್ಸರಂ ಅಲಿಂಗಧಾರಿನಿಂದಾ ಕೃತಾ, ತಥಾಚೋಭಯತ್ರಾಪಿ ನಿಂದಾಯಾಂ ತಾತ್ಪರ್ಯಂ ನಾಸ್ತ್ಯೇವ, ಕಿಂತು ಸ್ತುತಾವೇವ. ತಸ್ಮಾದವಶ್ಯಮೇವಂ ವ್ಯವಸ್ಥಾಶ್ರಯಣೀಯಾ, ಅನ್ಯಥಾ ಪರಸ್ಪರವಿರೋಧಪ್ರಸಂಗಃ. ಅತಃ ಪೂರ್ವೋಕ್ತನಹಿನಿಂದಾನ್ಯಾಯೇನ ನಿಷೇಧವಚನಾನಾಂ ತತ್ರ ತಾತ್ಪರ್ಯಾಭಾವಾತ್ ಪೂರ್ವೋಕ್ತವಿಶೇಷಣವಿಶಿಷ್ಟಾಧಿಕಾರಿಭೇದೇನ ಸರ್ವಂ ಶಾಸ್ತ್ರಂ ಪ್ರಮಾಣಮೇವ. ನನು ತರ್ಹಿ ಬೌದ್ಧಶಾಸ್ತ್ರಸ್ಯಾಪಿ ಪ್ರಾಮಾಣ್ಯಪ್ರಸಂಗ ಇತಿ ಚೇನ್ನ, ವೇದಬಾಹ್ಯತ್ವಾತ್. ಶಿವೋಪಸನಾಶಿವತತ್ತ್ವವಿಚಾರಶಿವಪ್ರಸಾದೋದಕಾನಾಂ

**ವೇದವೇದಾಂತಪ್ರತಿಪಾದಿತತ್ವಾಚ್ಛೈವಶಾಸ್ತ್ರಸ್ಯ ವೇದಮುಖ್ಯತ್ವಂ. ಸ್ವಾಭಿಪ್ರೇತಾರ್ಥಾನುಸಾರೇಣ ಪಾಂಚರಾತ್ರಾದಯೋಽಪಿ ಶ್ರುತ್ಯರ್ಥವರ್ಣನರೂಪತ್ವಾತ್ಪ್ರಾತಿಭಾಸಿಕವೈದಿಕಾ ಇತ್ಯುಚ್ಯಂತೇ. ತಸ್ಮಾದ್ಬೌದ್ಧಶಾಸ್ತ್ರವೈಲಕ್ಷಣ್ಯಂ, ಬೌದ್ಧಶಾಸ್ತ್ರಸ್ಯ ಸುರಾಪಾನವನ್ನಿಷೇಧ ಏವ ತಾತ್ಪರ್ಯಂ, ಪ್ರದೋಷಕಾಲವಿಷ್ಣುದರ್ಶನವತ್. ಸ್ಕಾಂದೇ "ನ ಪ್ರದೋಷೇ ಹರಿಂ ಪಶ್ಯೇದ್ಯದಿ ಪಶ್ಯೇತ್ಪ್ರಮಾದತಃ। ಚತ್ವಾರಿ ತಸ್ಯ ನಶ್ಯಂತಿ ಚಾಯುಃ ಪ್ರಜ್ಞಾ ಯಶೋ ಬಲಂ॥" ಇತಿ. ಪ್ರದೋಷಕಾಲವಿಷ್ಣುದರ್ಶನತದಾರಾಧನಸ್ಮರಣಪಾದೋದಕಪ್ರಸಾದಾದಿಕಸ್ಯ ಶ್ರೌತೇತರಪರಿಗ್ರಾಹ್ಯತ್ವಂ ಅಶ್ರೌತತ್ವಾತ್.**

ಶಿವಪ್ರಸಾದವನ್ನು ನಿಷೇಧಿಸುವ ತಾಂತ್ರಿಕಸ್ಮೃತಿಗಳನ್ನು ಪ್ರಮಾಣವೆಂದು ಸ್ವೀಕರಿಸಿದರೆ ಹಿಂದೆ ಹೇಳಿದ ಶ್ರುತಿಸ್ಮೃತಿಗಳೆಲ್ಲಕ್ಕೂ ತಿಲಾಂಜಲಿ ಎರೆದು ವೇದಬಾಹ್ಯರಾಗಬೇಕಾದೀತು. ಭಾಗವತದ ನಾಲ್ಕನೇ ಸ್ಕಂಧದಲ್ಲಿ "ಶಿವನೆಂಬ ವಸ್ತು ಅಶಿವನಾಗಬಹುದೆ? ಬ್ರಹ್ಮಾದಿಗಳಲ್ಲಿ ಯಾರೂ ಶಿವನನ್ನು ಸ್ಮಶಾನವಾಸಿ ಎಂದೂ, ಅಮಂಗಳಕರನೆಂದೂ ಭಾವಿಸಿಲ್ಲ. ಮುಮುಕ್ಷುಗಳು ಶಿವನ ಮಾಲ್ಯಭಸ್ಮಕಪಾಲಗಳನ್ನು ಪ್ರಸಾದಭಾವನೆಯಿಂದ ಶಿರಸ್ಸಿನಲ್ಲಿ ಧರಿಸುತ್ತಾರೆ" ಎಂದೂ, ರಾಮಾಯಣದಲ್ಲಿ "ದೇವತೆಗಳೂ, ಗಂಧರ್ವರೂ, ಮಾನವರೂ ಶಿವಾರ್ಪಿತವನ್ನು ಪವಿತ್ರವೆಂದು ಭೋಗಿಸಿದರು" ಎಂದೂ, ವಿಷ್ಣುಪುರಾಣದಲ್ಲಿ "ಶಂಭುವಿನ ಜಡೆಯಿಂದ ಹೊರಗೆ ಬಂದ ಗಂಗೆ ಸಗರಪುತ್ರರ ಮೂಳೆಗಳನ್ನು ಪಾವನಗೊಳಿಸಿ ಆ ಜೀವರನ್ನು ಸ್ವರ್ಗಕ್ಕೆ ಕಳುಹಿಸಿದಳು" ಎಂದೂ ಹೇಳಿರುವುದರಿಂದ ಶಿವಪ್ರಸಾದವು ಸ್ವೀಕಾರಯೋಗ್ಯವೆಂಬ ಬಗ್ಗೆ ವಿಧಿ ಸ್ಪಷ್ಟವಾಗಿದೆ. ಭಾಗವತದ ಹನ್ನೊಂದನೆ ಸ್ಕಂಧದಲ್ಲಿ 'ನನಗೆ ನಿವೇದಿಸಿದ ಆರತಿಯನ್ನು ನೋಡಬಾರದು' ಎಂಬ ಕೃಷ್ಣನ ಮಾತಿನಿಂದ ವಿಷ್ಣುಪ್ರಸಾದವು ನಿಷಿದ್ಧವೆನಿಸಿದೆ. ಆದ್ದರಿಂದ ಶಿವಪ್ರಸಾದವೇ ವೈದಿಕರೆಲ್ಲರಿಗೂ ಗ್ರಾಹ್ಯವಾಗಿದೆ; ಆದರೆ ಭಾಗವತದ ನಾಲ್ಕನೆ ಸ್ಕಂಧದಲ್ಲಿ "ನೀನು ಭೋಗಿಸಿ ಬಿಟ್ಟ ಶೇಷಪ್ರಸಾದವನ್ನು ಸ್ವೀಕರಿಸುತ್ತ ನಿನ್ನ ಮಾಯೆಯಿಂದ ನಾವು ಪಾರಾಗುವೆವು" ಎಂದು ತಿಳಿಸಿರುವುದರಿಂದ ವಿಷ್ಣುಪ್ರಸಾದವನ್ನು ಸ್ವೀಕರಿಸಬೇಕೆಂದು ಹೇಳಿದಂತಾಗುವುದು. ಇದರ ಬಗ್ಗೆ ಶ್ರೌತವಿಧಿ ಇಲ್ಲದ್ದರಿಂದ ಇಲ್ಲಿ ಹೇಳಿರುವ ಉಚ್ಛಿಷ್ಟಭೋಜನ ಮತ್ತು ದಾಸ ಎಂಬ ವಿಶೇಷಣಗಳಿಂದ ದೇಹದಲ್ಲಿ ತಪ್ತಮುದ್ರೆಯನ್ನು ಒತ್ತಿಕೊಳ್ಳುವ ತಾಂತ್ರಿಕರಿಗೆ ಮಾತ್ರವೇ ಇದು ಗ್ರಾಹ್ಯವಾಗುವುದೇ ಹೊರತು ವೈದಿಕರಿಗೆ ಭೋಜ್ಯವಾಗಲಾರದೆಂದು ತಿಳಿದುಬರುತ್ತದೆ. ಹೀಗೆ ಹೇಳದಿದ್ದರೆ, 'ಮಾ ಗೃಧಃ' ಎಂಬ ಈಶಾವಾಸ್ಯದ ಪಂಕ್ತಿಯೂ ಮತ್ತು ಭಾಗವತದ ಹನ್ನೊಂದನೆಯ ಸ್ಕಂಧದ 'ನೋಪಯುಜ್ಯಾನ್ನಿವೇದಿತಂ' ಎಂಬ ಮಾತೂ ವ್ಯರ್ಥವಾಗಬೇಕಾಗುತ್ತವೆ. ಸ್ಕಾಂದದಲ್ಲಿ "ಶಿವನು ಭೋಗಿಸಿದ ನಿರ್ಮಾಲ್ಯವನ್ನೇ ವೈದಿಕನು ಭೋಗಿಸಬೇಕು. ವಿಷ್ಣುಭುಕ್ತಾನ್ನವನ್ನು ಪ್ರಾಣ

ಹೋಗುವಾಗಲೂ ತಿನ್ನಬಾರದು" ಎಂದು ಹೇಳಿದೆ. ಹೀಗೆಯೇ ಯಾಜ್ಞವಲ್ಕ್ಯದಲ್ಲೂ, ಶಾಂಡಿಲ್ಯಸ್ಮೃತಿಯಲ್ಲೂ, ಶಾತಾತಪದದಲ್ಲೂ ಹೇಳಿದೆ. ಈ ರೀತಿಯಾಗಿ ವಿಷ್ಣುಪ್ರಸಾದವನ್ನು ನಿಷೇಧಿಸುವ ವಾಕ್ಯಗಳು ಶ್ರೌತಗಳೆಂದೂ, ಶಿವಪ್ರಸಾದವನ್ನು ನಿಷೇಧಿಸುವ ವಾಕ್ಯಗಳೂ ತಾಂತ್ರಿಕಗಳೆಂದೂ ನಿರ್ಣಯಿಸಲಾಗಿದೆ. "ಶ್ರುತಿಸ್ಮೃತಿಗಳಿಗೆ ವಿರೋಧವುಂಟಾದರೆ ಶ್ರುತಿಯೇ ಬಲಿಷ್ಠವೆನಿಸುವುದು. ಎರಡು ಶ್ರುತಿಗಳಿಗೆ ವಿರೋಧ ಬಂದರೆ ವಿಶೇಷವಿಧಿಯನ್ನೇ ಹೇಳಬೇಕು" ಎಂಬ ನ್ಯಾಯದಿಂದ ಶಿವಪ್ರಸಾದಸ್ವೀಕಾರದ ಬಗ್ಗೆ ಬಹಳ ವಚನಗಳಿರುವುದರಿಂದ ಈ ಬಗ್ಗೆ ಬೇರೆ ಯಾವ ಅರ್ಥವೂ ಹೊಂದುವುದಿಲ್ಲ. ಶಿವಪ್ರಸಾದಕ್ಕೆ ಅಧಿಕಾರಿಯನ್ನು ತಿಳಿಸ.ವ ವಚನಗಳು ನಿಷಿದ್ಧವಾದ ಮಾತ್ರದಿಂದಲೇ ಅಪ್ರಮಾಣವೇ? ಅಥವಾ ಬೇರೆ ರೀತಿಯಲ್ಲಿ ನಿರ್ವಾಹವಾಗುವುದರಿಂದ ಅಪ್ರಮಾಣವೇ? ಎಂಬ ವಿಕಲ್ಪಗಳಲ್ಲಿ ಮೊದಲನೆಯ ಪಕ್ಷವನ್ನು ಒಪ್ಪಿದರೆ ವರ್ಣಭೇದ, ಆಶ್ರಮಭೇದ, ಯುಗಭೇದ, ಶಾಖಾಭೇಧ, ದೇಶಕಾಲಪುರುಷಗಳ ಭೇದ, ವಸ್ತುವಿನ ಸಾಮಾನ್ಯವಿಶೇಷಭೇದ ಇವುಗಳಿಗನುಸಾರವಾಗಿ ವ್ಯವಸ್ಥಿತಕ್ರಮದಲ್ಲಿ ಶಾಸ್ತ್ರದಲ್ಲಿ ಹೇಳಿರುವ ಧರ್ಮಗಳ ಬಗ್ಗೆ ಪರಸ್ಪರ ವಿರೋಧ ಬರುವುದರಿಂದ ಆ ಶಾಸ್ತ್ರಗಳೇ ಅಪ್ರಮಾಣವಾಗಬೇಕಾಗುವುದು. ಆಪಸ್ತಂಬಾದಿಗಳಲ್ಲಿ ಹೇಳಿರುವಂತೆ ಸನ್ಯಾಸ, ಸ್ತ್ರೀಶೂದ್ರರಿಗೆ ವೇದಾಧಿಕಾರ, ಪಶುಹಿಂಸೆ, ಕೃಷಿ, ವಾಣಿಜ್ಯ, ಪಶುಪಾಲನೆಗಳು, ಒಂದು ಕೈಯಿಂದ ಕೊಡುವ ತರ್ಪಣ, ಸೋದರಮಾವನ ಮಗಳ ಮದುವೆ—ಇಂತವನ್ನು ನಿಷೇಧಿಸುವ ವಾಕ್ಯಗಳು ಪರಸ್ಪರ ವಿರೋಧದಿಂದ ಪ್ರಮಾಣವಾಗದೇ ಹೋಗಬೇಕಾದೀತು. ಒಂದು ಬಗೆಯ ವಾಕ್ಯವನ್ನು ಪ್ರಮಾಣವೆಂದು ಒಪ್ಪಿ ಬೇರೆಯವನ್ನು ಬಿಟ್ಟರೆ ವೇದಬಾಹ್ಯರಾಗಬೇಕಾದೀತು. ಎರಡನೇ ಪಕ್ಷವನ್ನು ಒಪ್ಪಿದರೆ, ಉದಯಕ್ಕೆ ಮೊದಲೂ ಅನಂತರವೂ ಹೋಮವನ್ನು ವಿಧಿಸುವ ವಾಕ್ಯಗಳು 'ಒಬ್ಬನ ನಿಂದೆ ಮತ್ತೊಬ್ಬನ ಸ್ತೋತ್ರಕ್ಕಾಗಿಯೇ ಬರುವುದು, ಎಂಬ ನ್ಯಾಯದಂತೆ ಅಗ್ನಿಹೋತ್ರಾದಿಕರ್ಮಗಳ ಪ್ರಶಂಸೆಗಾಗಿಯೇ ಹೇಗೆ ಬಂದಿರುತ್ತವೆಯೋ ಹಾಗೆ ಶ್ರುತಿಸ್ಮೃತಿಗಳಲ್ಲಿ ಬಂದಿರುವ ಶಿವಪ್ರಸಾದನಿಷೇಧದ ವಚನಗಳನ್ನೂ ಬೇರೆ ರೀತಿಯಲ್ಲಿ ಅನ್ವಯಿಸಿ ನಿರ್ವಾಹಮಾಡಬೇಕಾಗುತ್ತದೆ. ಅಗ್ನಿಹೋತ್ರದ ಪ್ರಾಶಸ್ತ್ಯವನ್ನು ತಿಳಿಸಲಿಕ್ಕಾಗಿಯೇ ಸ್ಮೃತಿಕಾರರರು ಅವುಗಳ ನಿಂದೆಯ ಮೂಲಕ ಯಜಮಾನನ ಆಭಿಮುಖ್ಯವನ್ನು ಹುಟ್ಟಿಸುವಂತೆ ಶಿವಪ್ರಸಾದದ ಮಹತ್ತ್ವವನ್ನು ಹೇಳುವ ಪುರಾಣಕಾರರು ಶಿವಪ್ರಸಾದಾತಿರಿಕ್ತವಾದ ಅನ್ನವನ್ನು ಭೋಜನ ಮಾಡಿದರೆ ಶ್ವಮಾಂಸಭಕ್ಷಣದಂತೆ ಭವಿಯ ಸ್ಪರ್ಶವುಂಟಾಗುವುದೆಂದು ಪ್ರಾಯಶ್ಚಿತ್ತವನ್ನು ತಿಳಿಸಿ ಲಿಂಗಧಾರಿಗಳಲ್ಲದವರ ನಿಂದೆಯನ್ನು ಮಾಡಿದ್ದಾರೆ. ಆದ್ದರಿಂದ ಈ ನಿಂದೆಗೆ ನಿಂದೆಯಲ್ಲಿ ತಾತ್ಪರ್ಯವಿಲ್ಲ; ಆದರೆ ಪ್ರಕೃತವಿಷಯದ ಸ್ತುತಿಯಲ್ಲೇ ತಾತ್ಪರ್ಯ. ಈ ರೀತಿಯಾಗಿ ನಿರ್ವಾಹಮಾಡದೇಹೋದರೆ, ಪರಸ್ಪರ ವಿರೋಧವುಂಟಾದೀತು. ಆದ್ದರಿಂದ 'ನಹಿ ನಿಂದಾನ್ಯಾಯ'ದಿಂದ ನಿಷೇಧವಾಕ್ಯ

ಗಳಿಗೆ ನಿಷೇಧದಲ್ಲಿ ತಾತ್ಪರ್ಯವಿಲ್ಲದ್ದರಿಂದ ಅಧಿಕಾರಿಭೇದದಿಂದ ಎಲ್ಲಾ ಶಾಸ್ತ್ರಗಳನ್ನೂ ವ್ಯವಸ್ಥೆಗೊಳಿಸಬೇಕು. ಹೀಗೆ ಹೇಳಿದರೆ ಬೌದ್ಧಶಾಸ್ತ್ರವೂ ಪ್ರಮಾಣವಾಗಬೇಕಾಗುತ್ತದೆ ಎಂದರೆ ಅದು ವೇದಬಾಹ್ಯವೆಂದು ಪ್ರಸಿದ್ಧವಾಗಿರುವುದರಿಂದ ಎಂದೆಂದಿಗೂ ಪ್ರಮಾಣವಾಗಲಾರದು. ಶಿವಪೂಜೆ, ಶಿವತತ್ತ್ವಜಿಜ್ಞಾಸೆ, ಶಿವಪ್ರಸಾದಸೇವನೆ ಇವು ವೇದವೇದಾಂತಗಳಲ್ಲಿ ಪ್ರತಿಪಾದಿತವಾಗಿರುವುದರಿಂದ ಇವನ್ನು ತಿಳಿಸುವ ಶೈವಶಾಸ್ತ್ರ ವೇದಮೂಲವೇ ಆಗಿದೆ. ಇದೇ ರೀತಿಯಾಗಿ ಪಾಂಚರಾತ್ರಾಗಮಗಳೂ ಶ್ರುತ್ಯರ್ಥವರ್ಣನದಿಂದ ವೈದಿಕವೆನಿಸಿವೆಯಾದರೂ ಬೌದ್ಧಶಾಸ್ತ್ರದಿಂದ ವಿಲಕ್ಷಣವಾಗಿವೆ. ಬೌದ್ಧಶಾಸ್ತ್ರವಂತೂ ವೇದವನ್ನು ಪ್ರಮಾಣವಾಗಿ ಅಂಗೀಕರಿಸಿಯೇ ಇಲ್ಲ; ಪ್ರದೋಷಕಾಲದ ವಿಷ್ಣುದರ್ಶನದಂತೆ ಅವು ನಿಷಿದ್ಧವೇ ಆಗಿವೆ. “ಸಂಜೆಹೊತ್ತು ಹರಿಯನ್ನು ಪ್ರಮಾದದಿಂದ ನೋಡಿದರೂ ಆಯಸ್ಸು, ಪ್ರಜ್ಞೆ, ಯಶಸ್ಸು, ಬಲ ಇವು ನಾಲ್ಕೂ ನಾಶವಾಗುತ್ತವೆ” ಎಂಬ ಸ್ಕಾಂದವಚನದಂತೆ ಪ್ರದೋಷಕಾಲದಲ್ಲಿ ವಿಷ್ಣುದರ್ಶನ, ಆರಾಧನ, ಸ್ಮರಣ, ತೀರ್ಥಪ್ರಸಾದಸೇವನ ಇವು ಶ್ರೌತರಲ್ಲದವರಿಗೆ ಮಾತ್ರವೇ ಯೋಗ್ಯವಾದ್ದರಿಂದ ತಾಂತ್ರಿಕವೆನಿಸಿವೆ.

**ಸರ್ವಗತಸ್ಯ ಪರಶಿವಸ್ಯ ಭಕ್ತಾನುಗ್ರಹಾರ್ಥಂ ಶರೀರಪರಿಗ್ರಹೇ ನಾರಾಯಣಾದಿಶರೀರವತ್ ಸುಖದುಃಖವ್ಯಾಪ್ತಿಸ್ಸ್ಯಾದಿತ್ಯಾಶಂಕ್ಯ ನಿರಾಕರೋತಿ—ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ॥ ೮ ॥**

**ಭಕ್ತಕಲ್ಪದ್ರುಮಸ್ಯ ಸ್ವೇಚ್ಛಾಪರಿಗ್ರಹೀತ(?)ಲೀಲಾದಿವ್ಯಮಂಗಳವಿಗ್ರಹಸ್ಯ ಪರಮೇಶ್ವರಸ್ಯ ಜೀವವತ್ಸುಖದುಃಖಸಂಭೋಗಪ್ರಾಪ್ತಿರಿತಿ ಚೇನ್ನ ಕುತಃ? ವೈಶೇಷ್ಯಾತ್. ‘ಅಣೋರಣೀಯಾನ್’ ಇತ್ಯತ್ರಾಣುತ್ವಮಹತ್ತ್ವಸರ್ವಾಂತರ್ಯಾಮಿತ್ವನಿಷ್ಕರ್ಮತ್ವಾದಿಧರ್ಮಾಣಾಂ ಪರಮೇಶ್ವರಸ್ಯೈವೋಪದೇಶಾತ್, ‘ಯೋ ವೇದಾದೌ ಸ್ವರಃ’ ಇತ್ಯಾದೌ ಪ್ರಣವಾತೀತತತ್ತ್ವಸರ್ವಹೃದಯಪುಂಡರೀಕೋಪಾಸ್ಯತ್ವೋಪದೇಶಾತ್, ‘ಈಶಾನಸ್ಸರ್ವವಿದ್ಯಾನಾಂ’ ಇತ್ಯಾದೌ ಸರ್ವವಿದ್ಯಾಧಿಪತಿತ್ವಾದ್ಯಸಾಧಾರಣಧರ್ಮೋಪದೇಶಾತ್, ‘ನಮೋ ಹಿರಣ್ಯಬಾಹವೇ’ ಇತ್ಯಾದಿನಾ ಜ್ಯೋತಿರ್ಮಯಶರೀರತ್ವಾದಿಧರ್ಮಾಣಾಮುಪದೇಶಾಚ್ಚ ಜೀವಪರಮೇಶ್ವರಯೋರ್ವೈಶೇಷ್ಯಂ ತಸ್ಮಾದ್ವಿಶೇಷಾತಿಶಯದ್ಯೋತನಾಜ್ಜೀವಪರಮಾತ್ಮನೋಶ್ಚಿತ್ತ್ವೈಕತ್ವೇಽಪಿ ವಿಭುತ್ವಾಣುತ್ವಸರ್ವಜ್ಞತ್ವಕಿಂಚಿಜ್ಜ್ಞತ್ವನಿತ್ಯತೃಪ್ತತ್ವಸಂಸಾರಭೋಕ್ತೃತ್ವಾದಿಪರಸ್ಪರವಿರುದ್ಧಧರ್ಮಸ್ವಭಾವತ್ವಾತ್ತಯೋಸ್ಸ್ವಾಭಾವಿಕಂ ಭಿನ್ನತ್ವಂ ಸಿದ್ಧಂ. ಶರೀರಾಶ್ರಯತ್ವೇಽಪಿ ಪರಮೇಶ್ವರಸ್ಯ ಜೀವವತ್ಸುಖದುಃಖಭೋಕ್ತೃತ್ವಂ ಸರ್ವಥಾಪಿ ನ ಸಂಭವತಿ. ಅಗ್ನಿಸ್ತಂಭನವಿದ್ಯಾಶ್ರಯಸ್ಯ ದಾಹಭಯಾಭಾವವತ್, ವಶೀಕೃತಮಾಯಸ್ಯ ಮಾಯಾಕೃತಸುಖದುಃಖಭೋಕ್ತೃತ್ವಂ ಕಥಂ ಘಟತೇ? ಅತಃ**

ಸೂತ್ರಕಾರೇಣ ವೈಶೇಷ್ಯಪದಮುಪದಿಷ್ಟಂ. ವಿಶೇಷ ಏವ ವೈಶೇಷ್ಯಂ. ಸ್ವಾರ್ಥೇ ಅಣ್. 'ದ್ವಾ ಸುಪರ್ಣಾ' ಇತ್ಯಾದೌ ಜೀವಸ್ಯ ಸಂಸಾರಭೋಕ್ತೃತ್ವಂ ಪರಮೇಶ್ವರಸ್ಯ ತದಭಾವಶ್ಚ ನಿರ್ದಿಶ್ಯತ ಇತ್ಯುಭಯೋಃ ಪರಸ್ಪರವಿಲಕ್ಷಣತ್ವಂ ಸುಸ್ಥಮೇವ. ಕಿಂಚ ಸ್ವೇಚ್ಛಾಗೃಹೀತಶರೀರಸಂಬಂಧಿತ್ವಂ ಕರ್ಮಜನ್ಯಶರೀರಸಂಬಂಧಿತ್ವಂ ಚ ವೈಶೇಷ್ಯಂ. ತಸ್ಮಾತ್ 'ಅಣೋರಣೀಯಾನ್' ಇತ್ಯಾದ್ಯುಪಕ್ರಮಾದಿಷಡ್ವಿಧತಾತ್ಪರ್ಯಲಿಂಗೇನ ನಾರಾಯಣೋಪನಿಷದೋಽಪಿ ಪರಶಿವಪ್ರತಿಪಾದಕತ್ವಾದತ್ರ ನಾರಾಯಣಸ್ಯೋಪಾಸಕತ್ವಂ, ಪರಶಿವಸ್ಯೋಪಾಸ್ಯತ್ವಂ ಚ ನಿರ್ದಿಶ್ಯತೇ. ನನು 'ತತ್ತ್ವಮಸಿ' ಇತ್ಯಾದೌ ಜೀವಬ್ರಹ್ಮಣೋರೇಕತ್ವೋಪದೇಶಾತ್ ಘಟಪಟವತ್ಪರಸ್ಪರವಿರುದ್ಧಸ್ವಭಾವಯೋಃ ಸ್ವಾಭಾವಿಕಭೇದಃ ಕಥಮುಪದಿಶ್ಯತೇ? ತಥಾಪಿ ಜೀವಬ್ರಹ್ಮಣೋರ್ಭೇದಾಭೇದತ್ವಂ, ಸ್ವಾಭಾವಿಕಭೇದನಿವೃತ್ತಿಶ್ಚ ನ ಕದಾಚಿತ್ಸಂಭವತಿ ಇತಿ ಚೇನ್ನ, ಜೀವಬ್ರಹ್ಮಣೋರ್ಭೇದಾಭಾವೇ ಶ್ರುತ್ಯನುಭವಯುಕ್ತಿವಿರೋಧಪ್ರಸಂಗಾತ್ ಶಾಸ್ತ್ರಪ್ರವೃತ್ತಿರಪಿ ನ ಸ್ಯಾತ್. 'ದ್ವಾ ಸುಪರ್ಣಾ' 'ಜ್ಞಾಜ್ಞೌ' ಇತ್ಯಾದೌ ಜೀವಬ್ರಹ್ಮಣೋರ್ಭೇದವ್ಯಪದೇಶಾತ್ 'ತತ್ತ್ವಮಸಿ' ಇತ್ಯಾದಿಮಹಾವಾಕ್ಯೇಷು ತಯೋರೇಕತ್ವೋಪದೇಶಾದಭೇಧೋ ಯುಕ್ತಃ. ಶ್ರುತ್ಯೇಕದೇಶಪ್ರಾಮಾಣ್ಯೇ ಬೌದ್ಧಾದಿವದ್ವೇದಬಾಹ್ಯತ್ವಪ್ರಸಂಗಾತ್ತಥಾ ಮಾನಾಭಾವಾತ್ಪರಸ್ಪರಶ್ರುತಿವಿರೋಧಾಚ್ಚ. ಕುಂಡಲೀಕೃತಸರ್ಪಸ್ಯ ದೀರ್ಘೀಭೂತಸರ್ಪಸ್ಯ ಚ ಪ್ರಭಾಕರಪ್ರಭಾಯಾಸ್ತನ್ಮಂಡಲಸ್ಯ ಚ ಹ್ರಸ್ವತ್ವದೀರ್ಘತ್ವವ್ಯಾಪಕತ್ವಪರಿಚ್ಛಿನ್ನತ್ವವಜ್ಜೀವೇಶ್ವರಯೋಃ ಚಿತ್ತ್ವೈಕತ್ವೇಽಪ್ಯಣುತ್ವವಿಭುತ್ವಾತ್ಮಕವಿರುದ್ಧಸ್ವಭಾವತ್ವಾದ್ಭೇದಾಭೇದೋ ಹ್ಯವಿರುದ್ಧಃ. ತಸ್ಮಾಜ್ಜೀವೇಶ್ವರಯೋಸ್ಸಂಸಾರದಶಾಯಾಂ ಭೇದೋ ಮೋಕ್ಷದಶಾಯಾಮಭೇದಶ್ಚ ಭ್ರಮರಕೀಟವದುಪದಿಶ್ಯತೇ. ತಥಾಚ ಶ್ರುತಿಃ 'ಬ್ರಹ್ಮವಿದ್ಬ್ರಹ್ಮೈವ ಭವತಿ' 'ಯಥಾ ನದ್ಯಃ' ಇತ್ಯಾದಿನಾ ಭೇದಾಭೇದಃ ಸ್ಪಷ್ಟಮುಪದಿಶ್ಯತೇ. ಇದಮೇವ ಸರ್ವವೇದಾಂತಸಮುಸ್ಥಯಾತ್ಸೂತ್ರಕಾರಮತಮಿತಿ ಘಂಟಾಘೋಷಃ.

ಸರ್ವವ್ಯಾಪಕನಾದ ಪರಶಿವನು ಭಕ್ತಾನುಗ್ರಹಕ್ಕಾಗಿ ಶರೀರವನ್ನು ಸ್ವೀಕರಿಸಿದರೆ ನಾರಾಯಣನಂತೆ ಅವನಿಗೂ ಸುಖದುಃಖಗಳು ಅಂಟುತ್ತವೆ ಎಂದು ಆಶಂಕಿಸಿ ನಿರಾಕರಿಸುತ್ತಾನೆ—**"ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್" ॥ ೮ ॥** ಸ್ವೇಚ್ಛೆಯಿಂದ ಭಕ್ತಾನುಗ್ರಹಲೀಲೆಗಾಗಿ ದಿವ್ಯಮಂಗಳವಿಗ್ರಹವನ್ನು ಸ್ವೀಕರಿಸಿದ ಪರಮೇಶ್ವರನಿಗೆ ಜೀವನಂತೆ ಸುಖದುಃಖಗಳು ಬರುತ್ತವೆ ಎಂಬುದು ಸರಿಯಲ್ಲ. ಏಕೆಂದರೆ ಶಿವಜೀವರಿಗೆ ಭೇದವನ್ನು ಶ್ರುತಿಯಲ್ಲಿ ಹೇಳಿದೆ. "ಸಣ್ಣದಕ್ಕಿಂತ ಸಣ್ಣದೂ,

ದೊಡ್ಡದಕ್ಕಿಂತ ದೊಡ್ಡದೂ ಆಗಿ ಪರಶಿವನು ಜೀವನ ಎದೆಗುಹೆಯಲ್ಲಿ ನೆಲಸಿದ್ದಾನೆ". "ಈಶ್ವರಾನುಗ್ರಹದಿಂದ ದುಃಖವನ್ನು ಕಳೆದುಕೊಂಡವನೇ ಈಶ್ವರನನ್ನು ಕಾಣುತ್ತಾನೆ" ಇಲ್ಲಿ ಅಣುತ್ವ, ಮಹತ್ವ, ಸರ್ವಾಂತರ್ಯಾಮಿ, ನೈಷ್ಕರ್ಮಿಕ ಮೊದಲಾದ ಧರ್ಮಗಳು ಪರಶಿವನಿಗೇ ಅನ್ವಯಿಸುವುದಾಗಿ ಹೇಳಿದೆ. 'ವೇದಗಳ ಆದಿಯಲ್ಲಿ ಯಾವ ಸ್ವರವೋ' ಎಂಬಲ್ಲಿ ಪ್ರಣವಾತೀತನೂ ಎಲ್ಲರ ಹೃತ್ಕಮಲದಲ್ಲಿ ಉಪಾಸ್ಯನೂ ಅವನೇ ಆಗಿರುವನೆಂದು ತಿಳಿಸಲಾಗಿದೆ. 'ಹಿರಣ್ಯಬಾಹವೇ' ಎಂಬಲ್ಲಿ ಅವನಿಗೆ ಜ್ಯೋತಿರ್ಮಯವಾದ ಶರೀರವಿದೆ ಎಂದು ಹೇಳಲಾಗಿದೆ. ಇದೆಲ್ಲವೂ ಶಿವಜೀವರಿಗೆ ಇರುವ ವಿಶೇಷ. ಈ ಬಗೆಯ ವಿಶೇಷವಿರುವುದರಿಂದಲೇ ಅವರಿಗೆ ಚಿದ್ರೂಪವಾದ ಐಕ್ಯವಿದ್ದರೂ ವಿಭು–ಅಣು, ಸರ್ವಜ್ಞ–ಕಿಂಚಿಜ್ಞ, ನಿತ್ಯತೃಪ್ತ–ಸಂಸಾರಭೋಗಿ, ಈ ಬಗೆಯ ಪರಸ್ಪರ ವಿರುದ್ಧ ಧರ್ಮಗಳು ಸ್ವಭಾವವಾಗಿರುವುದರಿಂದ ಅವರಿಬ್ಬರಿಗೂ ಸ್ವಾಭಾವಿಕವಾದ ಭೇದವನ್ನು ಶ್ರುತಿ ತಿಳಿಸಿದೆ. ಆದರೆ ಪರಶಿವನಿಗೆ ಶರೀರದ ಆಶ್ರಯವಿದ್ದರೂ ಜೀವನಂತೆ ಸುಖದುಃಖಗಳ ಭೋಗವು ಸಂಭವಿಸುವುದಿಲ್ಲ. ಅಗ್ನಿಸ್ತಂಭನವಿದ್ಯೆಯನ್ನು ಕಲಿತವನಿಗೆ ದಾಹಭಯವಿರುವುದಿಲ್ಲ. ಮಾಯಾಶಕ್ತಿಯನ್ನು ವಶಪಡಿಸಿಕೊಂಡ ಶಿವನಿಗೆ ಮಾಯೆಯಿಂದಾಗುವ ಸುಖದುಃಖಗಳ ಭೋಗ ಹೇಗೆ ಸಂಭವಿಸೀತು? ಆದ್ದರಿಂದ ಸೂತ್ರಕಾರನು ವೈಶೇಷ್ಯವೆಂಬ ಪದವನ್ನು ತಿಳಿಸಿದ್ದಾನೆ. ವಿಶೇಷವೇ ವೈಶೇಷ್ಯವೆನಿಸುತ್ತದೆ. 'ದ್ವಾ ಸುಪರ್ಣಾ' ಎಂಬಲ್ಲಿ ಜೀವನಿಗೆ ಸಂಸಾರಭೋಗವುಂಟೆಂದೂ, ಪರಶಿವನಿಗೆ ಅದು ಇಲ್ಲವೆಂದೂ ಹೇಳಿದೆ. ಹೀಗೆ ಇಬ್ಬರಿಗೂ ಪರಸ್ಪರವೈಲಕ್ಷಣ್ಯ ಸ್ಪಷ್ಟವಾಗಿದೆ. ಸ್ವೇಚ್ಛೆಯಿಂದ ಪಡೆದ ಶರೀರ ಮತ್ತು ಕರ್ಮದಿಂದ ಬಂದಿರುವ ಶರೀರ, ಈ ಬಗೆಯ ವಿಶೇಷವೂ ಅವರಿಗಿದೆ. ಆದ್ದರಿಂದಲೇ 'ಅಣೋರಣೀಯಾ' ಇವೇ ಮೊದಲಾದ ಷಡ್ವಿಧಲಿಂಗಗಳ ಆಧಾರದಿಂದ ನಾರಾಯಣೋಪನಿಷತ್ತು ಪರಶಿವನನ್ನೇ ಪ್ರತಿಪಾದಿಸುವುದೆಂದೂ, ನಾರಾಯಣನೇ ಉಪಾಸಕನೆಂದೂ, ಪರಶಿವನೇ ಉಪಾಸ್ಯನೆಂದೂ ನಿರ್ಣಯಿಸಲಾಗಿದೆ. 'ಇದೆಲ್ಲವೂ ಮೊದಲು ಸದ್ರೂಪವಾಗಿತ್ತು' 'ಒಬ್ಬನೇ ಅದ್ವಿತೀಯ ಬ್ರಹ್ಮವು' 'ಈ ಆತ್ಮನೇ ಬ್ರಹ್ಮ' 'ಅದೇ ನೀನು' ಎಂಬಲ್ಲಿ ಶಿವಜೀವರಿಗೆ ಐಕ್ಯವನ್ನು ಹೇಳಿರುವುದರಿಂದ ಘಟಪಟಗಳಂತೆ ವಿರುದ್ಧಸ್ವಭಾವದ ಭೇದವನ್ನು ಹೇಗೆ ಹೇಳಬಹುದು? ಅವರಿಗೆ ಸಹಜವಾಗಿರುವ ಭೇದ ಯಾವಾಗಲೂ ತೊಲಗುವಂತೆಯೇ ಇಲ್ಲವಾದ್ದರಿಂದ ಭೇದಾಭೇದವೂ ಹೊಂದಿಕೆಯಾಗುವುದಿಲ್ಲವೆಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ಅವರಿಗೆ ಭೇದವಿಲ್ಲವೆಂದರೆ ಶ್ರುತಿಯುಕ್ತಿ ಅನುಭವಗಳೆಲ್ಲವೂ ವಿರುದ್ಧವಾಗುವ ಪ್ರಸಂಗಬರುತ್ತದೆ. ಅದರಿಂದ ಶಾಸ್ತ್ರದಲ್ಲಿ ಯಾರಿಗೂ ಪ್ರವೃತ್ತಿಹುಟ್ಟದೇ ಹೋದಿತು, 'ದ್ವಾ ಸುಪರ್ಣಾ' ಮೊದಲಾದ ಶ್ರುತಿಗಳು ಅವರಿಗೆ ಭೇದವನ್ನು ಸ್ಪಷ್ಟವಾಗಿ ತಿಳಿಸಿವೆ. ಅದರಂತೆ 'ತತ್ವಮಸಿ' ಮೊದಲಾದ ವಾಕ್ಯಗಳು ಅವರಿಬ್ಬರಿಗೂ ಅಭೇದವನ್ನು ಹೇಳಿರುವುದರಿಂದ ಶಿವಜೀವರಿಗೆ ಭೇದಾಭೇದಗಳೆರಡೂ ಸತ್ಯವಾಗಿ ಬೇರೆಬೇರೆ ಕಾಲಗಳಲ್ಲಿ ಇರಲೇಬೇಕಾದ್ದರಿಂದ ಭೇದಾಭೇದವೇ ಯುಕ್ತ

ವಾಗಿದೆ. ಶ್ರುತಿಯ ಒಂದು ಭಾಗವನ್ನು ಮಾತ್ರ ಪ್ರಮಾಣವೆಂದರೆ ಬೌದ್ಧಮತದಂತೆ ಈ ಮತವೂ ವೇದಬಾಹ್ಯವಾಗಬೇಕಾದೀತು. ಹಾಗೆ ಆಗಲಿಕ್ಕೆ ಆಧಾರವಿಲ್ಲ. ಮತ್ತು ಶ್ರುತಿಗಳ ಪರಸ್ಪರ ವಿರೋಧವುಂಟಾಗುತ್ತದೆ. ಕುಂಡಲಾಕಾರವಾಗಿ ಮಲಗಿರುವ ಸರ್ಪಕ್ಕೂ, ದೀರ್ಘಾಕಾರವಾಗಿ ಹರಿಯುತ್ತಿರುವ ಸರ್ಪಕ್ಕೂ ಸರ್ಪರೂಪದಿಂದ ಐಕ್ಯವಿದ್ದರೂ ಅವಸ್ಥಾವಿಶೇಷದಿಂದ ಸಹಜವಾದ ಭೇದವಿದೆ. ಸೂರ್ಯಪ್ರಭೆಗೂ ಸೂರ್ಯಮಂಡಲಕ್ಕೂ ಪ್ರಕಾಶರೂಪವಾದ ಐಕ್ಯವಿದ್ದರೂ, ವ್ಯಾಪಕತ್ವ–ಪರಿಚ್ಛಿನ್ನತ್ವವೆಂಬ ಭೇದ ಸಹಜವಾಗಿದೆ. ಹಾಗೆಯೇ ಶಿವಜೀವರಿಗೆ ಚಿದೇಕತ್ವವಿದ್ದರೂ, ಅಣುತ್ವ—ವಿಭುತ್ವ ಮೊದಲಾದ ವಿರುದ್ಧಸ್ವಭಾವದಿಂದ ಭೇದ ಅಭೇದವೆರಡೂ ಇರುವುದರಲ್ಲಿ ವಿರೋಧವಿಲ್ಲವಾದ್ದರಿಂದ ಇವರಿಗೆ ಸಂಸಾರದಶೆಯಲ್ಲಿ ಭೇದವನ್ನೂ ಮೋಕ್ಷದಶೆಯಲ್ಲಿ ಅಭೇದವನ್ನೂ ಭ್ರಮರಕೀಟನ್ಯಾಯದಿಂದ ಶ್ರುತಿ ತಿಳಿಸಿದೆ. ‘ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ’ ‘ನದಿಗಳು ಹರಿಯುತ್ತ ನಾಮರೂಪಗಳನ್ನು ತೊರೆದು ಸಮುದ್ರದಲ್ಲಿ ಸೇರುವಂತೆ ಜ್ಞಾನಿಯು ನಾಮರೂಪಗಳ ಅಭಿಮಾನವನ್ನು ತೊರೆದು ಪರಂಜ್ಯೋತಿಯಲ್ಲಿ ಸೇರುತ್ತಾನೆ” ಎಂದು ಶ್ರುತಿಗಳಲ್ಲಿ ಭೇದಾಭೇದವೇ ಸ್ಪಷ್ಟವಾಗಿ ಉಪದಿಷ್ಟವಾಗಿದೆ. ಸರ್ವವೇದಾಂತಗಳ ಸಮನ್ವಯದಿಂದ ಇದೇ ಸೂತ್ರಕಾರನಿಗೂ ಸಮ್ಮತವೆನಿಸಿದೆ.

ಶಿವಸ್ಯ ಪರಬ್ರಹ್ಮಣಃ ನಾರಾಯಣಾದ್ಯುಪಾಸ್ಯತ್ವಂ ತತ್ಕಾರಣತ್ವಂ ತತ್ಪೋಷಕತ್ವಂ ಪ್ರಾಕೃತಭೋಗನಿರಾಸಕತ್ವಂ ಪ್ರಸಾಧ್ಯ ತಸ್ಯೈವ ಸರ್ವಸಂಹಾರಕತ್ವಂ ದರ್ಶಯತಿ—

ಅತ್ತೃತ್ವಾಧಿಕರಣಂ ॥ ೨ ॥ ಚರಾಚರಗ್ರಹಣಾತ್ ॥ ೯ ॥

ಕಠವಲ್ಲೀಷು ದೃಶ್ಯತೇಽಸ್ಯ ವಿಷಯಃ. “ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ। ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ” ಇತಿ. ಅತ್ರ ಮೃತ್ಯೂಪಸೇಚನವಿಶಿಷ್ಟಬ್ರಹ್ಮಕ್ಷತ್ರಾದ್ಯುಪಲಕ್ಷಿತಸಕಲಚರಾಚರಪ್ರಪಂಚೌದನಸೂಚಿತಃ ಕಶ್ಚಿದತ್ತಾ ವ್ಯಪದಿಶ್ಯತೇ. ಸಃ ಕಿಮಗ್ನಿಃ, ಪ್ರಧಾನಂ, ಪೃಥಿವೀ, ಜೀವಃ, ಪರಮೇಶ್ವರೋ ವೇತಿ ಸಂದಿಹ್ಯತೇ. ‘ಅಗ್ನಿರನ್ನಾದಸ್ತಪಸೋರಸ್ಯಃ’ ‘ಅಜಾಮೇಕಾಂ’ ‘ಅನ್ನಾದ್ಧ್ಯೇವ ಖಲ್ವಿಮಾನಿ’ ‘ಅದ್ಯತೇಽತ್ತಿ ಚ ಭೂತಾನಿ’ ‘ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ’ ‘ತಜ್ಜಲಾನಿತಿ ಶಾಂತ ಉಪಾಸೀತ’ ಇತಿ ಶ್ರುತಿದರ್ಶನಾತ್. ತಸ್ಮಾಜ್ಜಾಯತ ಇತಿ ತಜ್ಜಂ, ತಸ್ಮಿನ್‌ಲೀಯತಇತಿ ತಲ್ಲಂ. ತಸ್ಮಿನ್ನನಿತಿ ಚೇಷ್ಟತ ಇತಿ ತದನಂ, ತಜ್ಜಂ ಚ ತಲ್ಲಂ ಚ ತದನಂ ಚ ತಜ್ಜಲಾನಿ. ಅವಯವಲೋಪಶ್ಛಾಂದಸಃ. ಇತಿಶಬ್ದೋ ಹೇತೌ. ಸೃಷ್ಟಿಸ್ಥಿತಿಲಯಾಧಿಷ್ಠಾನಂ ಸರ್ವಂ ಚಿದಚಿದಾತ್ಮಕಂ ಜಗತ್ ಬ್ರಹ್ಮೇತಿ ಶಾಂತ ಉಪಾಸೀತೇತ್ಯರ್ಥಃ. ಪೂರ್ವಪಕ್ಷಸ್ತು ‘ಅನಶ್ನನ್ನನ್ಯೋ ಅಭಿ

ಜಾಕಶೀತಿ, 'ನಿಷ್ಕಳಂ ನಿಷ್ಕ್ರಿಯಂ ಶಾಂತಂ' 'ಸಮಸ್ತಸಾಕ್ಷಿಂ ತಮಸಃ ಪರಸ್ತಾತ್' ಇತ್ಯಾದಿಷು ಕೃಪಾಸಮುದ್ರಸ್ಯ ಸರ್ವಮಂಗಳಾಶ್ರಯಸ್ಯ ಶಿವಸ್ಯ ಸಂಸಾರಭೋಕ್ತೃತ್ವನಿಷ್ಕಳತ್ವನಿಷ್ಕ್ರಿಯತ್ವತಮಃಪರತ್ವಾದಿಧರ್ಮೋಪದೇಶಾತ್ತಸ್ಯಜಗತ್ಸಂಹಾರಕತ್ವಂ ನೋಪಪದ್ಯತೇ. ಸಂಹರ್ತೃತ್ವಂ ಹಿ ಜೀವಪ್ರಾಣಗ್ರಾಹಕತ್ವಂ. ತಸ್ಯ ಕ್ರೋಧ ಏವ ಮೂಲಂ. ಕ್ರೋಧಸ್ಯ ಹಿ ಹೇಯಗುಣಸ್ಯ ಮೋಹ ಏವಾಲವಾಲಂ. ತಸ್ಯ ತಮ ಏವ ಪ್ರಕೃತಿಃ. ತಮಸಃ ಅಜ್ಞಾನಾವೃತತ್ವಾತ್ ಅಜ್ಞಾನತಮೋಮೋಹಕ್ರೋಧಾದೀನಾಂ ಅಮಂಗಳಗುಣತ್ವಾನ್ನಿತ್ಯಶುದ್ಧತ್ವಸರ್ವಜ್ಞತ್ವನಿತ್ಯತೃಪ್ತತ್ವಾದಿ ಸರ್ವಮಂಗಳಗುಣಾಶ್ರಯಸ್ಯ ತಸ್ಯ ಸರ್ವಥಾ ಸಂಹರ್ತೃತ್ವಂ ನ ಸಂಭವತಿ, ಜೀವಸಾಮಾನ್ಯಲಕ್ಷಣತಾಮಸತ್ವಾದಿಗುಣಾನಾಂ ತದ್ವಿಲಕ್ಷಣಪರಮೇಶ್ವರೇ ಕಲ್ಪನೇ ಮಾನಾಭಾವಾತ್. 'ನಿಷ್ಕಳಂ' ಇತ್ಯಾದಿಪೂರ್ವೋಕ್ತಶ್ರುತಿಭಂಗಪ್ರಸಂಗಾಚ್ಚ ಶಾರೀರಾತ್ಮಕವಿಷ್ಣ್ವಾದೀನಾಮೇವ ತದ್ಯುಕ್ತಂ. ತಸ್ಯ ವಿಷ್ಣೋಸ್ತಮೋಗುಣನಿದ್ರಾಶೀಲತ್ವನೀಲವರ್ಣತ್ವ ಸರ್ವಮೋಹಕತ್ವಮಹಾಮಾಯಾತ್ಮಕಪಾರ್ವತ್ಯಂಶಸಂಭೂತತ್ವಾಚ್ಚ ಸ್ಕಾಂದಾದಿಪುರಾಣಕಥಾಸು ಮೋಹಾತಿಶಯೇನ ಬೃಂದಾಶ್ಮಶಾನೇ ಬಹುಕಾಲವಿಲುಂಠನಾದದ್ಯಾಪಿ ಕೃಷ್ಣತುಲಸೀರೂಪೇಣ ಬೃಂದಾವನಸ್ಥಿತತ್ವಾಚ್ಚ, ಅಮಂಗಳಗುಣಸಂಪನ್ನಾನಾಂ ವಿಷ್ಣ್ವಾದೀನಾಂ ಜಗತ್ಸಂಹರ್ತೃತ್ವಂ ಭವತು. ತದುಕ್ತಂ ಸೂತಗೀತಾಸು. 'ಅಸ್ತಿ ರುದ್ರಸ್ಯ ವಿಪ್ರೇಂದ್ರ ಅಂತಸ್ಸತ್ತ್ವಂ ಬಹಿಸ್ತಮಃ। ವಿಷ್ಣೋರಂತಸ್ತಮಸ್ಸತ್ತ್ವಂ ಬಹಿರಸ್ತಿ, ರಜೋಗುಣಃ। ಅಂತರ್ಬಹಿಶ್ಚ ವಿಪ್ರೇಂದ್ರ ಹ್ಯಸ್ತಿ ತಸ್ಯ ಪ್ರಜಾಪತೇಃ। ರಜಸಾ ತಮಸಾಽಽಕ್ರಾಂತೌ ಬ್ರಹ್ಮನಾರಾಯಣೌ ಖಲು ॥' ಇತಿ. 'ಶಿವಮದ್ವೈತಂ ಚತುರ್ಥಂ ಮನ್ಯಂತೇ' ಇತ್ಯಾದಿನಾ ವಿಷ್ಣೋಃ ಪ್ರಬಲತಮೋವೈಶಿಷ್ಟ್ಯಂ ಶಿವಸ್ಯ ಗುಣತ್ರಯಾತೀತತ್ವಂ ಕಾರಣಕಾರಣತ್ವಂ ಚೋಪದಿಶ್ಯತ ಇತಿ ಸರ್ವಥಾ ತಸ್ಯ ಜಗತ್ಸಂಹರ್ತೃತ್ವಂ ನ ಸಂಭವತೀತಿ ವಿಷ್ಣ್ವಾದೀನಾಮೇವ ತತ್ ಇತಿಚೇದತ್ರ ಬ್ರೂಮಃ. ಅತ್ತಾ ಚರಾಚರಗ್ರಹಣಾತ್. ಅತ್ರ ಅತ್ತಾ ಸಾಕ್ಷಾತ್ಪರಶಿವ ಏವ. ಕುತ? ಚರಾಚರಗ್ರಹಣಾತ್ ಚರಾಚರಂ ಚಿದಚಿದಾತ್ಮಕಂ ಯಜ್ಜಗತ್ತಸ್ಯಾದ್ಯತ್ವೇನ ಗ್ರಹಣಾತ್ ಶ್ರವಣಾದಿತ್ಯರ್ಥಃ. ಮೃತ್ಯೂಪಸೇಚನತ್ವೇನ ಸರ್ವಪ್ರಾಣಿಮಾತ್ರಸ್ಯಾದ್ಯತ್ವೇನ ಪ್ರತೀಯಮಾನತ್ವಾತ್ ಬ್ರಹ್ಮಕ್ಷತ್ರಗ್ರಹಣಮುಪಲಕ್ಷಣಾರ್ಥಂ ಜನನಮರಣಸಂಸಾರನಿಮಗ್ನಕಿಂಚಿಜ್ಞನಾರಾಯಣಾದಿಜೀವಾನಾಂ ಚರಾಚರಪ್ರಪಂಚಸಂಹರ್ತೃತ್ವಾಸಂಭವಾತ್ ಅತ್ತಾತ್ರ ಪರಶಿವ ಏವ. 'ಪ್ರಪಂಚೋಪಶಮಂ' 'ನಿಧನಪತಯೇ' 'ಮಹಾಗ್ರಾಸಾಯ'

‘ಯಥೋರ್ಣನಾಭಿಃ’ ‘ಯ ಇಮಾ ವಿಶ್ವಾ ಭುವನಾನಿ ಜಿಹ್ವತಿ’ ಇತ್ಯಾದಿಶ್ರುತಿಶತೇಷು ಚರಾಚರಪ್ರಪಂಚಜನ್ಮಸ್ಥಿತಿಲಯಕಾರಣತ್ವಂ ಪರಮೇಶ್ವರಸ್ಯೈವ ದೃಶ್ಯತ ಇತಿ ನ ವಹ್ನ್ಯಾದಿದೇವತಾನಾಂ ತತ್ಸಂಭವತಿ. ‘ಅನಶ್ನನ್ನನ್ಯೋ’ ಇತಿ ಶ್ರುತಿಃ ಕರ್ಮಫಲಭೋಕ್ತೃತ್ವನಿಷೇಧಮಾತ್ರಮೇವ ನಿರ್ದಿಶತಿ. ತತೋ ನ ವಿರೋಧಃ. ‘ಮಾಯಿನಂ ತು ಮಹೇಶ್ವರಂ’ ಇತ್ಯಾದೌ ವಶೀಕೃತಮಾಯಾಶಕ್ತಿಕತ್ವಸ್ಯ, ‘ಉಮಾಸಹಾಯಂ—ತಮಸಃ ಪರಸ್ತಾತ್’ ಇತಿ ತಮಃಪರತ್ವಸ್ಯ ಚ ನಿರ್ದೇಶಾತ್. ‘ಯದಾ ತಮಃ’ ಇತ್ಯಾದೌ ಪ್ರಳಯೇಽಪಿ ತತ್ಸಾಕ್ಷಿತಯಾ ಪರಿಶೇಷತ್ವಂ ಚ ದೃಶ್ಯತೆ. ‘ನ ಸನ್ನಚಾಸಚ್ಛಿವ ಏವ ಕೇವಲಃ’ ಇತ್ಯನೇನ ಪಶುಪಾಶಾತ್ಮಕಸದಸತೋರ್ನ ಸ್ವರೂಪಸತ್ತಾ ನಿಷಿಧ್ಯತೇ. ‘ಅಮೂಲಮನಾಧಾರಮಿಮಾಃ ಪ್ರಜಾಃ’ ‘ನ ಕದಾಚಿದನೀದೃಶಂ ಜಗತ್’ ಇತ್ಯಾದಿಶ್ರುತ್ಯಾ ಜಗತೋಽನಾದಿತ್ವವ್ಯಪದೇಶಾತ್. ತಥಾ ಚ ಸ್ಮೃತಿಃ “ಚಿದಾತ್ಮೈವ ಹಿ ದೇವೋಽಂತಸ್ಸ್ಥಿತಮಿಚ್ಛಾವಶಾದ್ಬಹಿಃ । ಯೋಗೀವ ನಿರುಪಾದಾನಮರ್ಥಜಾತಂ ಪ್ರಕಾಶಯೇತ್ ॥” ಇತಿ ನಿರುಪಾದಾನಮಿತ್ಯನೇನ ಜಗದುಭಯಕಾರಣತ್ವಮೂರ್ಣನಾಭಿವತ್ತಸ್ಯೈವ ಸೂಚಿತಂ. ತಸ್ಮಾತ್ಸ್ವಾತ್ಮಸಂಕುಚಿತಪ್ರಪಂಚತ್ವೇನ ಶಿವಃ ಕೇವಲ ಇತ್ಯುಪದಿಶ್ಯತೇ. ತಸ್ಮಾತ್ತಸ್ಯೈವ ಸರ್ವಸಂಹರ್ತೃತ್ವಮುಚಿತಂ.

ಪರಶಿವನೇ ನಾರಾಯಣ ಮೊದಲಾದ ಜೀವರಿಗೆ ಉಪಾಸ್ಯನೂ ಕಾರಣನೂ ಆಗಿದ್ದರೂ ಅವನಿಗೆ ಪ್ರಾಕೃತಭೋಗದ ಸಂಬಂಧವಿಲ್ಲವೆಂದು ಸಾಧಿಸಿ ಅವನೇ ಪೋಷಕನೂ ಆಗಿ ಸರ್ವಸಂಹಾರಕನೆಂದು ಈಗ ತಿಳಿಸಲಾಗುವುದು.

ಅತ್ತೃತ್ವಾಧಿಕರಣ ॥ ೨ ॥ ಅತ್ತಾ ಚರಾಚರಗ್ರಹಣಾತ್ ॥ ೯ ॥

ಕಠವಲ್ಲಿಯಲ್ಲಿ ಇದರ ವಿಷಯ ಬಂದಿದೆ. “ಯಾವನಿಗೆ ಬ್ರಹ್ಮಕ್ಷತ್ರಗಳೆರಡೂ ಭಕ್ಷ್ಯಗಳೋ, ಮೃತ್ಯು ಉಪ್ಪಿನಕಾಯಿಯೋ ಅವನು ಎಲ್ಲಿರುವನೆಂಬುದನ್ನು ಯಾರು ಅರಿತಿರುವರು?” ಎಂದು ಕೇಳಲಾಗಿದೆ. ಇಲ್ಲಿ ಮೃತ್ಯುವನ್ನು ಉಪ್ಪಿನಕಾಯಿಯಾಗಿ ಮಾಡಿಕೊಂಡು ಬ್ರಹ್ಮಕ್ಷತ್ರರೆನಿಸಿದ ಚರಾಚರ ಪ್ರಪಂಚವನ್ನು ಸಂಹರಿಸುವವನೆಂದು ಹೇಳಿದ್ದರಿಂದ ವಿಶ್ವದ ಸಂಹಾರಕನೊಬ್ಬನಿರುವನೆಂದು ತಿಳಿದುಬರುತ್ತದೆ. ಅವನು ಅಗ್ನಿಯೇ? ಪ್ರಧಾನವೇ? ಪೃಥಿವಿಯೇ? ಜೀವನೇ? ಪರಶಿವನೇ? ಎಂಬ ಸಂದೇಹ ಬರುತ್ತದೆ. ‘ಅಗ್ನಿಯೇ ಅನ್ನಾದನು’ ಎಂಬ ಶ್ರುತಿಯೂ ಲೋಕಪ್ರಸಿದ್ಧವಾಗಿದೆ. ‘ಅನ್ನದಿಂದಲೇ ಭೂತಗಳು ಹುಟ್ಟಿ ಬೆಳೆಯುತ್ತಿವೆ’ “ಇದು ಪ್ರಾಣಿಗಳಿಗೆ ಭೋಗ್ಯವಾಗಿ ಮತ್ತೆ ಅವನ್ನೇ ನುಂಗುತ್ತದೆ” ಎಂಬಲ್ಲಿ ಪ್ರಧಾನವೂ ಭಕ್ಷಕವೆಂದು ತಿಳಿದುಬರುತ್ತದೆ. ‘ಅವೆರಡರಲ್ಲಿ ಒಂದು ಭೋಗಿಸುತ್ತದೆ’ ಎಂಬಲ್ಲಿ ಜೀವನು ಭಕ್ಷಕನೆಂದು ತಿಳಿಯುತ್ತದೆ. ‘ಎಲ್ಲವೂ ಬ್ರಹ್ಮದಿಂದಲೇ ಹುಟ್ಟಿ ಬೆಳೆದು ಅಲ್ಲಿಯೇ ಲಯ

ವಾಗುವುದು' ಎಂಬ ಶ್ರುತಿಯಲ್ಲಿ ವಿಶ್ವದ ಸೃಷ್ಟಿಸ್ಥಿತಿಲಯಗಳಿಗಾಶ್ರಯಸ್ಥಲವಾಗಿರುವ ಪರಶಿವನನ್ನು ಸರ್ವಭಕ್ಷಕನೆಂದು ಹೇಳಿರುವುದರಿಂದ ಈ ಶ್ರುತಿಯು ಅವನಿಗೂ ಅನ್ವಯಿಸಬಹುದು. ಹೀಗೆ ಅನೇಕ ಸಂಶಯಗಳಿರುವುದರಿಂದ ಪೂರ್ವಪಕ್ಷ ಹೀಗೆ ಬರುತ್ತದೆ. 'ಇಬ್ಬರಲ್ಲಿ ಒಬ್ಬನು ತಿನ್ನದೆ ನೋಡುತ್ತಾನೆ', 'ನಿಷ್ಕಲನೂ ನಿರಂಜನನೂ ಸರ್ವಸಾಕ್ಷಿಯೂ ತಮಸ್ಸಿಗಾಚೆನವನೂ ಆದ ಜ್ಯೋತಿ' ಈ ಶ್ರುತಿಗಳಲ್ಲಿ ದಯಾಸಾಗರನಾದ ಶಿವನನ್ನು ನಿಷ್ಕಲ, ನಿಷ್ಕ್ರಿಯ, ತಮಃಪರ, ಸರ್ವಸಾಕ್ಷಿ ಎಂದು ಹೇಳಿದ್ದರೂ ಜಗತ್ಸಂಹಾರಕನೆಂದು ಹೇಳಿಲ್ಲ. ಸಂಹಾರವೆಂದರೆ ಜೀವರ ಪ್ರಾಣವನ್ನು ಗ್ರಹಿಸುವುದೆಂದರ್ಥ. ಇದಕ್ಕೆ ಕ್ರೋಧವೇ ಮೂಲ. ಈ ಬಗೆಯ ಕ್ರೋಧವೂ ಮೋಹವನ್ನಾಶ್ರಯಿಸಿದೆ. ಆ ಮೋಹವೂ ಅಜ್ಞಾನಮೂಲಕವೇ ಆಗಿದೆ. ಆದ್ದರಿಂದಲೇ ಕ್ರೋಧವು ಅಮಂಗಲವೆನಿಸಿದೆ. ಆದರೆ ಸರ್ವಮಂಗಳಗಳಿಗಾಶ್ರಯನೂ ಶುದ್ಧನೂ ಸರ್ವಜ್ಞನೂ ನಿತ್ಯತೃಪ್ತನೂ ಅವ್ಯಾಜಪ್ರೇಮಿಯೂ ಆದ ಪರಶಿವನು ಹೇಗೆ ಸರ್ವಸಂಹಾರಕನಾದಾನು? ಜೀವರಲ್ಲಿರುವ ತಮೋಗುಣವು ಪರಶಿವನಲ್ಲಿರುವುದೆಂಬುದಕ್ಕೆ ಪ್ರಮಾಣವಿಲ್ಲ. ಹಾಗೆ ಹೇಳಿದರೆ 'ನಿಷ್ಕಲಂ' ಮೊದಲಾದ ಶ್ರುತಿಗಳಿಗೆ ಭಂಗವುಂಟಾದೀತು. ಆದ್ದರಿಂದ ಶರೀರವುಳ್ಳ ವಿಷ್ಣ್ವಾದಿಗಳಿಗೆ ಈ ಬಗೆಯ ಸಂಹಾರ ಸಂಭವಿಸಬಹುದು? ವಿಷ್ಣುವಿನಲ್ಲಿ ತಮೋಗುಣವು ಪ್ರಧಾನವಾದ್ದರಿಂದ ಅವನಲ್ಲಿ ಹೆಚ್ಚು ನಿದ್ರೆ ನೀಲವರ್ಣ, ಸರ್ವಮೋಹಕತ್ವ, ಮಹಾಮಾಯೆ ಎನಿಸಿದ ಪಾರ್ವತಿಯ ಅಂಶದಿಂದ ಹುಟ್ಟಿರುವಿಕೆ ಇವೆಲ್ಲವೂ ಹೊಂದುತ್ತವೆ. ಸ್ಕಾಂದದಲ್ಲಿ ಬಂದಿರುವ ಪುರಾಣಕಥೆಗಳಿಂದ ವಿಷ್ಣುವು ವ್ಯಾಮೋಹದಿಂದ ಬೃಂದಾವನದಲ್ಲಿ ಬಹುಕಾಲ ಸಂಚರಿಸಿದನೆಂದೂ, ಈಗಲೂ ಅಲ್ಲಿ ಕೃಷ್ಣತುಲಸೀರೂಪದಿಂದ ನೆಲಸಿರುವನೆಂದೂ ತಿಳಿದು ಬರುತ್ತದೆ. ಈ ಬಗೆಯ ಅಮಂಗಲಗುಣಗಳ ಸಂಬಂಧದಿಂದ ಅವನು ಸರ್ವಸಂಹಾರಕನಾಗಬಹುದು. "ಕಾಲರುದ್ರನಿಗೆ ಒಳಗೆ ಸತ್ತ್ವ, ಹೊರಗೆ ತಮಸ್ಸು, ವಿಷ್ಣುವಿಗೆ ಒಳಗೆ ಸತ್ತ್ವ, ಹೊರಗೆ ರಜಸ್ಸು' ಹೀಗೆ ಸೂತಗೀತೆಯಲ್ಲಿ ಹೇಳಿದೆ. "ಒಳಗೆ ಸತ್ತ್ವವೂ ಹೊರಗೆ ತಮಸ್ಸೂ ಇದ್ದು ಶಿವನು ಸಾತ್ತ್ವಿಕನೆನಿಸಿದ್ದಾನೆ. ಒಳಗೆ ತಮಸ್ಸು ಹೊರಗೆ ಸತ್ತ್ವವೂ ಇದ್ದು ವಿಷ್ಣು ತಾಮಸನೆನಿಸಿದ್ದಾನೆ' ಎಂದು ಶಿವಧರ್ಮಶಾಸ್ತ್ರದಲ್ಲಿ ಹೇಳಿದೆ. 'ಪ್ರಪಂಚವೆಲ್ಲಕ್ಕೂ ಆಶ್ರಯನೂ ಶಾಂತನೂ ಆದ ಶಿವನು ತ್ರಿಮೂರ್ತ್ಯತೀತನಾಗಿದ್ದಾನೆ' ಎಂದು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ವಿಷ್ಣುವಿಗೆ ತಮೋಗುಣದ ವೈಶಿಷ್ಟ್ಯ ಪ್ರಬಲವಾಗಿದೆ. ಶಿವನು ಗುಣತ್ರಯಾತೀತನೂ ಪರಮಕಾರಣನೂ ಆಗಿರುವುದರಿಂದ ಅವನಿಗೆ ಜಗತ್ಸಂಹಾರಕತ್ವ ಸಂಭವಿಸುವುದಿಲ್ಲ. ಆದ್ದರಿಂದ ವಿಷ್ಣ್ವಾದಿಗಳಿಗೇ ಸರ್ವಸಂಹಾರಕತ್ವವು ಅನ್ವಯಿಸುತ್ತದೆ ಎಂದು ಪೂರ್ವಪಕ್ಷ ಬಂದರೆ ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಶ್ರುತಿಯಲ್ಲಿ ಬಂದಿರುವ ಅತ್ತೃವೆಂದರೆ ಸರ್ವಭಕ್ಷಕನಾದ ಪರಶಿವನೇ ಆಗಿರುವನು; ಯಾಕೆಂದರೆ ಚರಾಚರಪ್ರಪಂಚವನ್ನು ಮೃತ್ಯುವೆಂಬ ಉಪ್ಪಿನಕಾಯಿಯೊಡನೆ ಚಪ್ಪರಿಸುವವನು',

ಎಂದು ಶ್ರುತಿಯಲ್ಲಿ ಹೇಳಿದೆ. ಇಂತಹ ಆಹಾರವನ್ನು ತಿಂದು ಮುಗಿಸುವವನು, ಪರಶಿವನಲ್ಲದೆ ಬೇರೆ ಯಾರೂ ಆಗಲಾರರು. ಅವನೇ ಎಲ್ಲವನ್ನೂ ಸಂಹರಿಸುವವನಾದ್ದರಿಂದ 'ಅದೆಲ್ಲವನ್ನು ತಿನ್ನುವವನು' ಎಂಬುದು ಅವನಿಗೇ ಯುಕ್ತವಾಗುತ್ತದೆ. ಪ್ರಪಂಚದ ಪ್ರಲಯಕ್ಕೆ ಅವನೇ ಸ್ಥಲವಾಗಿರುವುದರಿಂದ ಅವನಿಗೆ ನಿಧನಪತಿ-ಮಹಾಗ್ರಾಸ ಎಂಬ ಹೆಸರುಗಳು ಅನ್ವಯಿಸುತ್ತವೆ. "ಜೇಡರಹುಳ ತನ್ನ ದೇಹದಿಂದ ದಾರವನ್ನು ಹೊರಗೆಡಹಿ ಮತ್ತೆ ತನ್ನಲ್ಲಿಯೇ ಸೇರಿಸಿಕೊಳ್ಳುತ್ತದೆ", 'ಯಾವನು ಸಮಸ್ತ ವಿಶ್ವವನ್ನು ನುಂಗುತ್ತಾನೋ' 'ಯಾವನಿಂದ ಈ ವಿಶ್ವ ಹೊರಬಂದಿದೆಯೋ' ಹೀಗೆ ಶ್ರುತಿಗಳಲ್ಲಿ ಚರಾಚರಜಗತ್ತಿನ ಜನ್ಮ ಸ್ಥಿತಿ ಲಯಗಳಿಗೆ ಪರಶಿವನನ್ನು ಕಾರಣನೆಂದು ಹೇಳಿರುವುದರಿಂದ ಬೆಂಕಿಗೆ ಈ ಬಗೆಯ ಭಕ್ಷಣ ಸಂಭವಿಸುವುದು. 'ಏನೂ ತಿನ್ನದೆ ನೋಡುತ್ತಿರುವವನು' ಎಂಬ ಶ್ರುತಿಯು ಕರ್ಮಫಲದ ಭೋಗವನ್ನು ಮಾತ್ರವೇ ನಿಷೇಧಿಸುತ್ತದೆ. ಆದ್ದರಿಂದ ಇದರಲ್ಲಿ ಯಾವ ವಿರೋಧವೂ ಇಲ್ಲ. ಪರಶಿವನು ಎಲ್ಲವನ್ನೂ ಮಾಡುತ್ತಿದ್ದರೂ ಅದರ ಫಲವನ್ನು ಭೋಗಿಸುವುದಿಲ್ಲ; ಯಾಕೆಂದರೆ ಅವನು ಮಾಯೆಯನ್ನು ವಶಪಡಿಸಿಕೊಂಡು 'ಮಾಯಿ' ಎನಿಸಿದ್ದಾನೆ. ಇದೂ ಅಲ್ಲದೆ, ಅವನ ಕತ್ತಲೆಯಿಂದ ಆಚೆಗೆ ಪೂರ್ಣಜ್ಯೋತಿಯಾಗಿದ್ದಾನೆ. "ಪ್ರಳಯದಲ್ಲಿ ಸರ್ವಕ್ಕು ಸಾಕ್ಷಿಯೂ ನಿರ್ಲಿಪ್ತನೂ ಆಗಿ ಶಿವನೊಬ್ಬನೇ ಇದ್ದನು" ಎಂಬ ಶ್ರುತಿಯಲ್ಲಿ ಸದಸದ್ವಸ್ತುಗಳ ನಾಶವನ್ನು ಹೇಳಿಲ್ಲ. 'ಮೂಲಾಧಾರವಿಲ್ಲದೆ ಜೀವರು ಹುಟ್ಟುತ್ತಾರೆ' 'ಯಾವಾಗಲೂ ಇಂತಹ ಜಗತ್ತಿರಲಿಲ್ಲ' ಎಂಬ ಶ್ರುತಿಗಳು ಜಗತ್ತನ್ನು ಅನಾದಿ ಎಂದು ತಿಳಿಸಿವೆ. "ಚಿತ್ಸ್ವರೂಪನಾದ ದೇವನು ತನ್ನೊಳಗಡಗಿದ್ದ ವಿಶ್ವವನ್ನು ತನ್ನ ಇಚ್ಛೆಯಿಂದ ತಾನಾಗಿಯೇ ಹೊರಗೆಡಹುತ್ತಾನೆ. ಯೋಗಿಯ ಹೃದಯದಿಂದ ಯಾವ ಆಶ್ರಯವೂ ಇಲ್ಲದೆ ಅನೇಕ ವಸ್ತುಗಳು ಹೊರಪಡುವಂತೆ ಪರಶಿವನಿಂದ ಸೃಷ್ಟಿ ಸ್ಥಿತಿ ಪ್ರಳಯಗಳು ಸಹಜವಾಗಿ ನಡೆಯುತ್ತಿವೆ" ಎಂಬ ಸ್ಮೃತಿಯಲ್ಲಿ 'ನಿರುಪಾದಾನಂ' ಎಂಬುದರಿಂದ ಜೇಡರಹುಳದಂತೆ ಶಿವನೇ ಜಗತ್ತಿನ ಉಪಾದಾನಕಾರಣನೆಂಬುದು ಸೂಚಿತವಾಗಿದೆ. ಹೀಗೆ ಪ್ರಳಯಕಾಲದಲ್ಲಿ ಪ್ರಪಂಚವು ಶಿವನಲ್ಲಿ ಸಂಕುಚಿತವಾಗಿದ್ದುದರಿಂದಲೇ ಅವನನ್ನು ಕೇವಲನೆಂದು ಶ್ರುತಿ ತಿಳಿಸಿದೆ. ಆದ್ದರಿಂದ ಅವನೇ ಸರ್ವಸಂಹರ್ತೃವೆನಿಸಿದ್ದಾನೆ.

ಪುನರ್ಹೇತ್ವಂತರಮಾಹ—ಪ್ರಕರಣಾಚ್ಚ ॥ ೧೦ ॥

**'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಇತ್ಯಾದ್ಯನನ್ಯಸಾಧಾರಣಧರ್ಮಾವಚ್ಛಿನ್ನಬ್ರಹ್ಮಪ್ರಕರಣಾತ್ 'ಕ ಇತ್ಥಾ ವೇದ ಯತ್ರ ಸಃ' ಇತಿ ವಾಕ್ಯೇ ದುರ್ವಿಜ್ಞಾನತ್ವಂ, 'ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ' ಇತ್ಯಾದಿನಾ ಪರಮೇಶ್ವರಧರ್ಮಬಾಹುಳ್ಯದರ್ಶನಾತ್, ಪ್ರಕೃತಪರಿತ್ಯಾಗಾಪ್ರಕೃತಸ್ವೀಕಾರೇ ಮಾನಭಾವಾಚ್ಚ. ಪರಮೇಶ್ವರಪ್ರಕರಣಪಠಿತಸರ್ವಸಂಹರ್ತೃತ್ವಂ ನೇತರಸ್ಯೋಪಪದ್ಯತೇ.**

ಸೃಷ್ಟಿಸ್ಥಿತಿಕರ್ತೃತ್ವವತ್ಸಂಹಾರಕರ್ತೃತ್ವಾನಂಗೀಕಾರೇ 'ಏಕ ಏವ ರುದ್ರಃ' ಇತ್ಯಾದಿಶ್ರುತಿವಿರೋಧಪ್ರಸಂಗಾಚ್ಚ. ಬ್ರಹ್ಮಣೋ ಮಹಿಮಾತಿಶಯಭಂಗಪ್ರಸಂಗೋಽಪಿ ಸ್ಯಾತ್. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದೌ ಸಂಹಾರಸ್ಯಾಪಿ ತದಧೀನತ್ವೇನೋಪದೇಶಾನ್ನ ಸಂದೇಹಕಳಂಕಪ್ರಸಂಗಃ. ತಸ್ಮಾದತ್ತಾ ಪರಶಿವ ಏವೇತಿ ಸಿದ್ಧಂ.

ಈ ಬಗ್ಗೆ ಬೇರೊಂದು ಹೇತುವನ್ನು ತಿಳಿಸುತ್ತಾನೆ—**ಪ್ರಕರಣಾಚ್ಚ ॥೧೦॥** ಇಲ್ಲಿಯ ಪ್ರಕರಣವು "ಆತ್ಮಜ್ಞಾನಿ ಹುಟ್ಟುವುದಿಲ್ಲ, ಸಾಯುವುದಿಲ್ಲ" ಎಂದು ಬ್ರಹ್ಮದ ಅನನ್ಯಸಾಧಾರಣಗುಣಗಳನ್ನು ತಿಳಿಸುತ್ತದೆ. 'ಅವನು ಎಲ್ಲಿರುವನೆಂದು ಯಾವನು ಅರಿತಿರುವನೋ' ಎಂಬ ವಾಕ್ಯವು 'ಅವನು ತಿಳಿಯಲಶಕ್ಯನು' ಎಂಬ ಅರ್ಥವನ್ನು ಕೊಡುತ್ತದೆ. 'ಸರ್ವವ್ಯಾಪಕನಾದ ಪರಶಿವನನ್ನು ತಿಳಿದು ಧೀರನು ಶೋಕಿಸುವುದಿಲ್ಲ' ಎಂಬಲ್ಲಿ ಪರಶಿವನ ಧರ್ಮಗಳನ್ನೇ ತಿಳಿಸಲಾಗಿದೆ. ಪ್ರಕೃತವಾದ ಈ ಪ್ರಕರಣವನ್ನು ತೊರೆದು ಅಪಕೃತವಾದ್ದನ್ನು ಸ್ವೀಕರಿಸಲು ಪ್ರಮಾಣವಿಲ್ಲ. ಆದ್ದರಿಂದ ಪರಶಿವ ಪ್ರಕರಣದಲ್ಲಿ ಹೇಳಿದ ಸರ್ವಸಂಹಾರವೂ ಬೇರೆಯವರಿಗೆ ಅನ್ವಯಿಸುವುದಿಲ್ಲ. ಅವನಲ್ಲಿ ಸೃಷ್ಟಿಸ್ಥಿತಿಗಳಂತೆ ಸಂಹಾರವನ್ನು ಅಂಗೀಕರಿಸದಿದ್ದರೆ 'ಏಕ ಏವ ರುದ್ರಃ' ಎಂಬ ಶ್ರುತಿಯ ವಿರೋಧವುಂಟಾಗುತ್ತದೆ ಮತ್ತು ಪರಬ್ರಹ್ಮದ ಮಹಿಮಾತಿಶಯಕ್ಕೆ ಭಂಗ ಒದಗುವ ಪ್ರಸಂಗ ಬರುತ್ತದೆ. 'ಯಾವನಿಂದ ಈ ಪ್ರಾಣಿಗಳು ಹುಟ್ಟಿವೆಯೋ' ಎಂಬ ಶ್ರುತಿಯಲ್ಲಿ ಸೃಷ್ಟಿಯಂತೆ ಸಂಹಾರವೂ ಅವನ ಕೆಲಸವೆಂದೇ ತಿಳಿಸಲಾಗಿದೆಯಾದ್ದರಿಂದ ಸಂದೇಹಕ್ಕವಕಾಶವಿಲ್ಲ. ಹೀಗೆ ಇಲ್ಲಿಯ ಪ್ರಕರಣದಂತೆ ಈ ಮಂತ್ರದಲ್ಲಿ ಅತ್ತೃವೆಂದರೆ ಪರಶಿವನೆಂದು ಸಿದ್ಧವಾಗುತ್ತದೆ.

ಏವಂ ಪರಶಿವಸ್ಯ ಸರ್ವಸಂಹರ್ತೃತ್ವಂ ಪ್ರಸಾಧ್ಯ ಜೀವಬ್ರಹ್ಮಣೋರ್ಬಿಂಬಪ್ರತಿಬಿಂಬಭಾವವಾದಿಮತಮುದ್ಯ ನಿರಾಕರೋತಿ.

### ಗುಹಾಧಿಕರಣಂ ॥ ೩ ॥

**ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ॥ ೧೧ ॥**

"ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧ್ಯೇ । ಛಾಯಾತಪೌ ಬ್ರಹ್ಮವಿದೋ ವದಂತಿ ॥" ಇತಿ ಕಠವಲ್ಲ್ಯಾಂ ವಿದ್ಯತೇಽಸ್ಯ ವಿಷಯಃ. ಕಿಮಿಹ ಗುಹಾಂ ಪ್ರವಿಷ್ಟೌ ಬುದ್ಧಿಜೀವೌ ಕಿಂವಾ ಜೀವೇಶ್ವರಾವಿತಿ ಸಂದಿಹ್ಯತೇ. 'ಅನಶ್ನನ್ನನ್ಯೋ ಅಭಿಚಾಕಶೀತಿ' ಇತಿ ಶ್ರುತೌ ಪರಮೇಶ್ವರಸ್ಯ ಭೋಕ್ತೃತ್ವನಿಷೇಧಾತ್, 'ಋತಂ ಪಿಬಂತೌ' ಇತ್ಯತ್ರ ಭೋಕ್ತೃತ್ವವ್ಯಪದೇಶಾದ್ಬುದ್ಧಿಜೀವಯೋರೇವಾತ್ರ ಭೋಕ್ತೃತ್ವಮುವಗಮ್ಯತೇ. ಚೇತನತ್ವಾಜ್ಜೀವಬ್ರಹ್ಮಣೋರೇಕತ್ವಾಚ್ಛಾಯಾತಪವತ್ಪರಸ್ಪರವೈರುಧ್ಯಂ ನಾಸ್ತಿ. ಚಿಜ್ಜಡಯೋರ್ಜೀವಬುದ್ಧ್ಯೋಃ ಪರಸ್ಪರವಿರುದ್ಧಸ್ವಭಾವತ್ವೇನ ತಯೋರೇವ ಸರ್ವಭೂತ

ಗುಹಾಪ್ರವಿಷ್ಟತ್ವಂ ಸಮುಚಿತಂ. ಕಾರ್ಯಕಾರಣಭಾವಸ್ಯ ಬುದ್ಧಿಪ್ರ
ಧಾನತ್ವಾತ್ತದ್ಭಿನ್ನತ್ವೇನ ಶಾರೀರೋ ವಿಧೀಯತೇ. ನನು "ಯೇಯಂ
ಪ್ರೇತೇ ವಿಚಿಕಿತ್ಸಾ ಮನುಷ್ಯೇ ಅಸ್ತಿತ್ಯೇಕೇ, ನಾಯಮಸ್ತೀತಿ ಚೈಕೇ,
ಏತದ್ವಿದ್ಯಾಮನುಶಿಷ್ಟಸ್ತ್ವಯಾಽಹಂ" ಇತಿ ಶ್ರವಣಾತ್ ಬುದ್ಧಿಜೀವಾ
ವಿತಿ ಪಕ್ಷೈಕಸ್ವೀಕಾರೋ ನ ಯುಕ್ತಃ. 'ದ್ವಾ ಸುಪರ್ಣಾ ಸಯುಜಾ' ಇತಿ
ಮಂತ್ರೇ ಜೀವೇಶ್ವರಯೋಸ್ಸಾಹಚರ್ಯೇಽಪಿ, 'ಅನಶ್ನನ್ನನ್ಯೋ'
ಇತ್ಯತ್ರ ಕರ್ಮಫಲಭೋಕ್ತೃತ್ವಾಭಾವಶ್ರವಣಾದಿತಿ ಚೇತ್-ಶ್ರುತ್ಯಂತರೇ
"ಭೂತಾಶ್ಚ ಭವ್ಯಾಶ್ಚ ಯತ್ತತ್ಪಶ್ಯಸಿ" "ಅನ್ಯತ್ರ ಧರ್ಮಾದನ್ಯತ್ರಾಧ
ರ್ಮಾದನ್ಯತ್ರಾಸ್ಮಾತ್ಕೃತಾಕೃತಾತ್" "ಋತಂ ಪಿಬಂತೌ" ಇತ್ಯತ್ರ ಪರ
ಮೇಶ್ವರಸ್ಯೈವ ಕರ್ಮಫಲಭೋಕ್ತೃತ್ವೋಪದೇಶಾತ್, 'ಸುಕೃತಸ್ಯ
ಲೋಕೇ' ಇತಿ ಪ್ರಾದೇಶಿಕತ್ವಲಿಂಗದರ್ಶನಾಚ್ಚ. "ಋತಂ ಪಿಬಂತೌ"
ಇತಿ ದ್ವಿವಚನೇನ ತಯೋಃ ಪಾನಮುಪದಿಶ್ಯತೇ. ಅಚೇತನಾತ್ಮಕಬು
ದ್ಧೇಸ್ತದಸಂಭವಾನ್ನ ಬುದ್ಧಿಕ್ಷೇತ್ರಜ್ಞಪಕ್ಷೋ ಯುಕ್ತಃ. ಇತಿ ಚೇನ್ನ,
'ಛತ್ರಿಣೋ ಗಚ್ಛಂತಿ' ಇತಿ ವಾಕ್ಯೇ ಛತ್ರ್ಯಚ್ಛತ್ರಿಮನುಷ್ಯಾಣಾಂ
ಛತ್ರಿತ್ವಾಭ್ಯುಪಗಮಾತ್, ತದ್ವದಿಹಾಪಿ ಪಿಬದಪಿಬಂತೌ ದ್ವೌ 'ಪಿಬಂತೌ'
ಇತಿ ನಿರ್ದಿಶ್ಯೇತೇ. ಸರ್ವಗತೇಶ್ವರಸ್ಯ ಏಕದೇಶವೃತ್ತಿತ್ವಂ ನೋಪಪ
ದ್ಯತೇ. 'ಸುಕೃತಸ್ಯ ಲೋಕೇ' ಇತಿ ಚ ಕರ್ಮವೀಕ್ಷಣಾನತಿಕ್ರಮಣಂ
ಪ್ರತಿಪಾದಯತಿ. "ನ ಕರ್ಮಣಾ ವರ್ಧತೇ ನೋ ಕನೀಯಾನ್"
ಇತ್ಯತ್ರ ಪರಮೇಶ್ವರಸ್ಯ ಸುಕೃತದುಷ್ಕೃತಕರ್ಮಸಾಕ್ಷಿತ್ವವ್ಯಪದೇಶಾದತ್ರ
ಬುದ್ಧಿಜೀವಾವೇವ ಪ್ರತಿಪಾದ್ಯೇತೇ ಇತಿ ಚೇದತ್ರ ಬ್ರೂಮಃ. ಗುಹಾಂ
ಪ್ರವಿಷ್ಟೌ ಶಿವಜೀವೌ ವೇದಿತವ್ಯೌ. ಕುತಃ? ಆತ್ಮಾನೌ ಹಿ-ಯಸ್ಮಾ
ದ್ದ್ವಾವಪ್ಯಾತ್ಮಾನಾವಿತ್ಯರ್ಥಃ, 'ಋತಂ ಪಿಬಂತೌ' ಇತಿ ಕರ್ಮಫಲ
ಭೋಗಶ್ರವಣಾದೇಕಸ್ತಾವದಾತ್ಮಾ, ದ್ವಿತೀಯೋಽಪ್ಯಾತ್ಮೈವ ನ್ಯಾಯ್ಯಃ.
ತತ್ರ ಯುಕ್ತಿಮಾಹ ತದ್ದರ್ಶನಾದಿತಿ. ಸಂಖ್ಯಾಶ್ರವಣೇ ತತ್ರ ಸಮಾನ
ಪ್ರತ್ಯಯಸ್ಯೈವ ಲೋಕೇ ದರ್ಶನಾದಿತ್ಯರ್ಥಃ. ಲೋಕೇ ಹಿ 'ಅಸ್ಯ
ಗೋರ್ದ್ವಿತೀಯೋಽನ್ವೇಷ್ಟವ್ಯಃ' ಇತ್ಯುಕ್ತೇ ಗೌರೇವ ದ್ವಿತೀಯೋಽನ್ವಿ
ಷ್ಯತೇ, ನಾಶ್ವೋ ನ ಪುರುಷಃ. ಏವಮಿಹಾಪ್ಯಾತ್ಮತ್ವಸಾಮ್ಯಾಜ್ಜೀವಪರ
ಮಾತ್ಮಾನೌ ವೇದಿತವ್ಯೌ. ಪ್ರಾದೇಶಮಾತ್ರಸರ್ವಭೂತಗುಹಾಪ್ರವಿ
ಷ್ಟತ್ವಂ ಪರಮೇಶ್ವರಸ್ಯ ನ ವಿರುಧ್ಯತೇ. ಶ್ರುತ್ಯಂತರೇ "ಸರ್ವಾನನ
ಶಿರೋಗ್ರೀವಃ-ಸರ್ವಗತಶ್ಶಿವಃ", "ಅಣೋರಣೀಯಾನ್-ಜಂತೋಃ",
"ಏವಂ ವಿದಿತ್ವಾ ಪರಮಾತ್ಮರೂಪಂ ಗುಹಾಶಯಂ ನಿಷ್ಕಲಮದ್ವಿ
ತೀಯಂ", "ಗುಹಾಹಿತಂ ಗಹ್ವರೇಷ್ಠಂ ಪುರಾಣಂ", "ಯೋ ವೇದ

ನಿಹಿತಂ ಗುಹಾಯಾಂ ಪರಮೇ ವ್ಯೋಮನ್", "ಆತ್ಮಾನಮನ್ವಿಚ್ಛ ಗುಹಾಂ ಪ್ರವಿಷ್ಟಂ" ಇತ್ಯಾದಿಶ್ರುತಿಶತೇಷು ಸರ್ವಗತಸ್ಯ ಪರಮೇಶ್ವರಸ್ಯ ಭಕ್ತ್ಯೋಪಾಸನಾರ್ಥಂ ಪ್ರಾದೇಶವಿಶೇಷಮಾತ್ರಗುಹಾಪ್ರವಿಷ್ಟತ್ವೋಪದೇಶಾನ್ನ ವಿರೋಧಃ. ಸುಕೃತಲೋಕಪ್ರವರ್ತಕತ್ವಂ ಚ ಛತ್ರಿತ್ವವದೇಕದೇಶವರ್ತಿತ್ವೇಽಪ್ಯುಭಯೋರ್ಯುಕ್ತಂ. ಛಾಯಾತಪವತ್ಪರಸ್ಪರವೈಲಕ್ಷಣ್ಯಂ ಜೀವೇಶ್ವರಯೋರ್ನ ವಿರುಧ್ಯತೇ. 'ಆನಂದಮಯೋ ಹ್ಯಾನಂದಭುಕ್' 'ಸತ್ಯಾತ್ಮ ಪ್ರಾಣಾರಾಮಂ ಮನಆನಂದಂ' ಇತ್ಯಾದಿ ಶ್ರುತಿಷ್ವಾತ್ಮಾರಾಮಸ್ಯ ಮನೋಮಾತ್ರಗ್ರಾಹ್ಯಸ್ವರೂಪಾನಂದಾನುಭವಶ್ರವಣಾತ್. 'ಅನಶ್ನನ್ನನ್ಯೋ' ಇತಿ ವಾಕ್ಯೇ ಕರ್ಮಫಲಭೋಕ್ತೃತ್ವನಿಷೇಧೋಽಪ್ಯುಪಚರ್ಯತೇ. ತಸ್ಮಾತ್ತಯೋರ್ಭೋಗಸಾಮ್ಯೇನ ಭೋಕ್ತೃವಿಶೇಷಾತ್ಪ್ರಭುಭೃತ್ಯನ್ಯಾಯೇನ ಭೋಜ್ಯವಿಶೇಷೋಽಪಿ ಯುಜ್ಯತೇ. ಯಥಾಃ 'ನಿತ್ಯೋ ನಿತ್ಯಾನಾಂ' 'ಜ್ಞಾಜ್ಞೌ' 'ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ। ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ ಅಸ್ಯ ಮಹಿಮಾನಮಿತಿ ವೀತಶೋಕಃ॥' ಇತ್ಯಾದಿಶ್ರುತಿಷು ಪರಮೇಶ್ವರಸ್ಯ ನಿತ್ಯಮುಕ್ತತ್ವಪ್ರಜ್ಞಾತೃತ್ವಸರ್ವಪಾಪಪ್ರಮೋಚಕತ್ವಾದಿಧರ್ಮಾಣಾಂ ಜೀವಸ್ಯ ಅನಾದ್ಯವಿದ್ಯಾಕೃತಮೋಹಶೋಕಬದ್ಧತ್ವಾದಿಧರ್ಮಾಣಾಂ ಚ ದರ್ಶನಾದುಭಯೋರ್ವೈಲಕ್ಷಣ್ಯಮುಪಪದ್ಯತೇ. ತಥಾಪಿ ಜೀವಪರಮೇಶ್ವರಯೋಶ್ಚಿತ್ತ್ವೇನೈಕತ್ವಾತ್ತತ್ತ್ವಮಸ್ಯಾದಿಶ್ರುತಿಷ್ವಭೇದದರ್ಶನಾಚ್ಚ ಜೀವಪರಮೇಶ್ವರೌ ಗುಹಾಪ್ರವಿಷ್ಟಾವಿತಿ ಗೃಹ್ಯೇತೇ.

ಶಿವನೇ ಸರ್ವ ಸಂಹಾರಕನೆಂದು ಸಾಧಿಸಿ ಶಿವಜೀವರಿಗೆ ಬಿಂಬಪ್ರತಿಬಿಂಬ ಭಾವವನ್ನು ತಿಳಿಸುವ ಮತವನ್ನು ನಿರಾಕರಿಸಲಾಗುವುದು. ॥ಗುಹಾಧಿಕರಣಂ॥೩॥

ಗುಹಾಂಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ॥ ೧೧ ॥

"ಲೋಕದಲ್ಲಿ ಮಾಡುವ ಕರ್ಮಗಳ ಫಲವನ್ನು ಅನುಭವಿಸುತ್ತ ಇಬ್ಬರು ದಹರಾಕಾಶದಲ್ಲಿ ಗುಹೆಯನ್ನು ಪ್ರವೇಶಿಸಿರುವರು. ಇವರನ್ನು ನೆರಳು ಬಿಸಿಲುಗಳೆಂದು ಬ್ರಹ್ಮವಿದರು ಹೇಳುತ್ತಾರೆ". ಹೀಗೆ ಕಠವಲ್ಲಿಯಲ್ಲಿ ಈ ಸೂತ್ರದ ವಿಷಯು ಬಂದಿದೆ. ಇಲ್ಲಿ ಗುಹೆಯನ್ನು ಪ್ರವೇಶಿಸಿದವರು ಬುದ್ಧಿ ಜೀವರೇ? ಅಥವಾ ಶಿವಜೀವರೇ? ಎಂಬ ಸಂದೇಹ ಬರುತ್ತದೆ. 'ಒಬ್ಬನು ಭೋಗಿಸದೆ ನೋಡುತ್ತಿರುವನು' ಎಂಬ ಶ್ರುತಿಯಲ್ಲಿ ಶಿವನು ಭೋಕ್ತೃವಲ್ಲವೆಂದು ಹೇಳಿದೆ. 'ಋತಂ ಪಿಬಂತೌ' ಎಂಬಲ್ಲಿ ಅವನನ್ನು ಭೋಕ್ತೃವೆಂದು ಹೇಳಿದೆ. ಆದ್ದರಿಂದ ಬುದ್ಧಿಜೀವರೇ ಇಲ್ಲಿ ಭೋಕ್ತೃವೆನಿಸಲರ್ಹರಾಗಿದ್ದಾರೆ. ಇದೂ ಅಲ್ಲದೆ, ಶಿವಜೀವರು ಚೇತನರಾದ್ದರಿಂದ ಅವರಿಗೆ ಬೆಳಕು ಕತ್ತಲೆಗಳಂತೆ ಪರಸ್ಪರ ವಿರೋಧವಿಲ್ಲ. ಜೀವನು ಚೇತನನೂ, ಬುದ್ಧಿ

ಜಡವೂ ಆದ್ದರಿಂದ, ಈ ಬಗೆಯ ಪರಸ್ಪರ ವಿರುದ್ಧಸ್ವಭಾವದಿಂದ ಅವರಿಗೆ ಎಲ್ಲಾ ಪ್ರಾಣಿಗಳ ಎದೆ ಗುಹೆಯಲ್ಲೂ ಬಿಸಿಲು ನೆರಳುಗಳಂತೆ ಇರಲು ಸಾಧ್ಯವಾಗುತ್ತದೆ. ಕಾರ್ಯಕಾರಣ ಗಳೆಲ್ಲಕ್ಕೂ ಬುದ್ಧಿಯೇ ಮೂಲವಾದ್ದರಿಂದ ಅದಕ್ಕೆ ಭಿನ್ನನೆಂದು ಜೀವನನ್ನು ಶ್ರುತಿಯಲ್ಲಿ ತಿಳಿಸಲಾಗಿದೆ. "ಸತ್ತಮನುಷ್ಯನ ಬಗ್ಗೆ ಇವನು ಇರುವನೆಂದು ಕೆಲವರೂ, ಇರುವುದಿಲ್ಲವೆಂದು ಕೆಲವರೂ ಹೇಳುತ್ತಾರೆ. ಇದನ್ನು ನಿನ್ನಿಂದ ತಿಳಿಯಬೇಕು" ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಇಲ್ಲಿ ಗುಹೆಯನ್ನು ಪ್ರವೇಶಿಸಿದವರು ಬುದ್ಧಿಜೀವರು ಎಂಬ ಒಂದೇ ಪಕ್ಷವನ್ನು ಸ್ವೀಕರಿಸುವುದು ಯುಕ್ತವಲ್ಲವಾದ್ದರಿಂದ ಶಿವಜೀವರಿಗೂ ಅನ್ವಯಿಸಬಹುದು. ಆದರೆ 'ದ್ವಾ ಸುಪರ್ಣಾ' ಎಂಬಲ್ಲಿ ಜೀವೇಶ್ವರರಿಗೆ ಸಾಹಚರ್ಯವಿದ್ದರೂ, 'ಒಬ್ಬನು ಏನನ್ನೂ ತಿನ್ನದೆ ನೋಡುತ್ತಾನೆ' ಎಂಬುದರಿಂದ ಶಿವನಿಗೆ ಕರ್ಮಫಲದ ಭೋಗವಿಲ್ಲವೆನ್ನುವುದಾದರೆ, 'ಋತಂ ಪಿಬಂತೌ' ಎಂಬಲ್ಲಿ ಕರ್ಮಫಲಭೋಗವನ್ನು ಪರಮೇಶ್ವರನಿಗೇ ಉಪದೇಶಿಸಲಾಗಿದೆ; ಯಾಕೆಂದರೆ ಇಲ್ಲಿ 'ಸುಕೃತಸ್ಯ ಲೋಕೇ' ಎಂಬ ಒಂದು ನಿರ್ದಿಷ್ಟವಾದ ಪ್ರದೇಶವನ್ನು ತಿಳಿಸುವ ಲಿಂಗವಿದೆ. ಆದರೆ 'ಋತಂ ಪಿಬಂತೌ' ಎಂಬಲ್ಲಿ ದ್ವಿವಚನದಿಂದ ಇಬ್ಬರು ಭೋಗಿಸುವರೆಂದು ತಿಳಿದು ಬರುತ್ತದೆಯಾದ್ದರಿಂದ ಅಚೇತನವಾದ ಬುದ್ಧಿಗೆ ಪಾನವು ಸಂಭವಿಸುವುದಿಲ್ಲವೆಂದರೆ 'ಛತ್ರಿಗಳು ಹೋಗುತ್ತಾರೆ' ಎಂಬಲ್ಲಿ ಛತ್ರಿ ಹಿಡಿದವರು ಹಿಡಿಯದವರು ಎಲ್ಲರಿಗೂ ಒಟ್ಟಿಗೆ ಅನ್ವಯವಾಗುವಂತೆ, ಪಾನವೆಂಬುದು ಕುಡಿಯುವ ಜೀವನಿಗೂ ಕುಡಿಯದಿರುವ ಬುದ್ಧಿಗೂ ಒಟ್ಟಿಗೆ ಅನ್ವಯಿಸಬಹುದು. ಆದರೆ ಸರ್ವವ್ಯಾಪಿಯಾದ ಶಿವನನ್ನು ಒಂದು ಕಡೆ ಮಾತ್ರವೇ ಇರುವವನೆನ್ನುವುದು ಯುಕ್ತವಲ್ಲ. 'ಸುಕೃತಸ್ಯ ಲೋಕೇ' ಎಂಬುದು 'ಶಿವನು ಜೀವರ ಕರ್ಮಗಳನ್ನು ನಿರಭಿಮಾನದಿಂದ ಸಾಕ್ಷಿಯಾಗಿ ನೋಡುವವನು' ಎಂಬ ಅರ್ಥವನ್ನು ತಿಳಿಸುತ್ತದೆ. 'ಕರ್ಮದಿಂದ ಹಿಗ್ಗುವುದೂ ಇಲ್ಲ ಕುಗ್ಗುವುದೂ ಇಲ್ಲ' ಎಂಬಲ್ಲಿ ಶಿವನೇ ಸುಕೃತ ದುಷ್ಕೃತಗಳೆರಡಕ್ಕೂ ಸಾಕ್ಷಿ ಎಂದು ಹೇಳಿರುವುದರಿಂದ ಇಲ್ಲಿ ಗುಹೆಯನ್ನು ಪ್ರವೇಶಿಸಿದವರು ಬುದ್ಧಿಜೀವರೇ ಎಂದು ತಿಳಿಯಬಹುದು. ಇದಕ್ಕೆ ಸಮಾಧಾನವನ್ನು ಸೂತ್ರದಲ್ಲಿ ಹೇಳಲಾಗಿದೆ. ಗುಹೆಯನ್ನು ಪ್ರವೇಶಿಸಿರುವವರಿಬ್ಬರೂ ಆತ್ಮರೆನಿಸಿ ಸಮಾನಸ್ವಭಾವದವರಾಗಿರುವುದರಿಂದ ಶಿವಜೀವರಲ್ಲದೆ ಬೇರೆಯಲ್ಲ. 'ಋತಂ ಪಿಬಂತೌ' ಎಂಬಲ್ಲಿ ಫಲಭೋಗವನ್ನು ಹೇಳಲಾಗಿದೆ. ಈ ಬಗ್ಗೆ ಯುಕ್ತಿಯನ್ನು 'ತದ್ದರ್ಶನಾತ್' ಎಂಬುದು ತಿಳಿಸುತ್ತದೆ. ಲೋಕದಲ್ಲಿ ವ್ಯಕ್ತಿಗಳನ್ನು ಎಣಿಸುವಾಗ ಸಮಸ್ವಭಾವದವರನ್ನು ಒಟ್ಟಿಗೆ ಸೇರಿಸುವುದನ್ನು ಕಾಣಬಹುದು. ಈ ಎತ್ತಿಗೆ ಎರಡನೆಯದನ್ನು ಹುಡುಕಬೇಕು ಎಂದರೆ ಎರಡನೆಯ ಎತ್ತನ್ನು ಹುಡುಕುವರೇ ಹೊರತು ಕುದುರೆಯನ್ನಾಗಲೀ ಪುರುಷನನ್ನಾಗಲೀ ಹುಡುಕುವುದಿಲ್ಲ. ಆದ್ದರಿಂದ ಇಲ್ಲಿ ಚೇತನಸಾಮ್ಯದಿಂದ ಶಿವಜೀವರನ್ನೇ ಗ್ರಹಿಸಬೇಕು. ಸರ್ವವ್ಯಾಪಿಪರಶಿವನು ಚೋಟುಪ್ರಮಾಣದ ಗವಿಯಲ್ಲಿ ಇರುವುದರಲ್ಲಿ ವಿರೋಧವೇನೂ ಇಲ್ಲ. 'ಸರ್ವವ್ಯಾಪಿಯಾದರೂ ಶಿವನು ಎಲ್ಲರ

ಮುಖ ಶಿರಸ್ಸು ಕುತ್ತಿಗೆಗಳಲ್ಲೂ ಗುಹೆಯಲ್ಲೂ ಇರುವನು' 'ಸಣ್ಣದಕ್ಕೆ ಸಣ್ಣದೂ ದೊಡ್ಡದಕ್ಕೆ ದೊಡ್ಡದೂ ಆಗಿ ಶಿವನು ಜೀವನ ಹೃದಯದಲ್ಲಿ ನೆಲಸಿರುವನು'. 'ಪರಶಿವನು ಗುಹಾಶಯನೂ ನಿಷ್ಕಲನೂ ಅದ್ವಿತೀಯನೂ ಆಗಿರುವನು. ಹೀಗೆ ಗವಿಯಲ್ಲಿರುವವನನ್ನು ಯಾವನು ತಿಳಿಯುವನೋ ಅವನು ಪರಮಾಕಾಶದಲ್ಲಿ ನೆಲಸುವನು' 'ಗುಹೆಯನ್ನು ಹೊಕ್ಕಿರುವ ಆತ್ಮನನ್ನು ಹುಡುಕು' ಎಂಬ ಶ್ರುತಿಗಳಲ್ಲಿ ಸರ್ವಗತನಾದ ಪರಶಿವನು ಭಕ್ತರ ಉಪಾಸನೆಗಾಗಿ ಒಂದು ಗೊತ್ತಾದ ಪ್ರದೇಶವನ್ನು ಪ್ರವೇಶಿಸಿರುವನೆಂದು ಉಪದೇಶಿಸಿರುವುದರಲ್ಲಿ ಯಾವ ವಿರೋಧವೂ ಇಲ್ಲ. ಛತ್ರಿನ್ಯಾಯವು ಕೊಡೆ ಹಿಡಿದವನಿಗೂ ಹಿಡಿಯದವನಿಗೂ ಒಟ್ಟಿಗೆ ಅನ್ವಯಿಸುವಂತೆ ಶಿವನು ಲೋಕದಲ್ಲಿ ಕರ್ಮಕ್ಕೆ ಪ್ರವರ್ತಕನಾಗಿರುವನೆಂಬುದು ಶಿವಜೀವರಿಬ್ಬರಿಗೂ ಅನ್ವಯಿಸುವುದರಲ್ಲಿ ತಪ್ಪೇನಿಲ್ಲ. 'ನೆರಳು ಬಿಸಿಲುಗಳಂತೆ' ಎಂಬುದು ಪರಸ್ಪರ ವಿಲಕ್ಷಣರಾದ ಶಿವಜೀವರ ಪರಸ್ಪರ ವೈಲಕ್ಷಣ್ಯವನ್ನು ತಿಳಿಸುತ್ತದೆ. ಶಿವನು ಆನಂದಮಯನೂ ಆನಂದಭೋಗಿಯೂ ಆಗಿರುವನು'. 'ಸತ್ಯಾತ್ಮನೂ ಪ್ರಾಣರಾಮನೂ ಮನಆನಂದನೂ ಆಗಿದ್ದಾನೆ' ಎಂಬ ಶ್ರುತಿಗಳಲ್ಲಿ ಆತ್ಮಾರಾಮನಾದ ಶಿವನು ಮನಸ್ಸಿನಿಂದರಿಂದಲೇ ಸ್ವರೂಪಾನಂದವನ್ನು ಅನುಭವಿಸುವನೆಂದು ತಿಳಿಸಲಾಗಿದೆ. 'ಅನಶ್ನನ್ನನ್ಯಃ' ಎಂಬ ಶ್ರುತಿಯಲ್ಲಿ ಕರ್ಮಫಲಭೋಗವು ಅವನಿಗಂಟದಿರುವುದರಿಂದ ಅದರ ನಿಷೇಧವು ಅವನ ಅನಾಸಕ್ತಿಯ ದಿವ್ಯ ಆದರ್ಶವನ್ನು ತಿಳಿಸುತ್ತದೆ. ಆದ್ದರಿಂದ ಶಿವಜೀವರಲ್ಲಿ ಒಬ್ಬನಿಗೆ ಸ್ವರೂಪಭೋಗ ಮತ್ತೊಬ್ಬನಿಗೆ ವಿಷಯಭೋಗ ಹೀಗೆ ದೃಷ್ಟಿಭೇದವಿದ್ದರೂ ಇಬ್ಬರೂ ಭೋಗಸಾಮ್ಯದಿಂದ ಭೋಕ್ತೃವೆನಿಸಿ ನೆಲಸಿದ್ದಾರೆ. "ನಿತ್ಯರಿಗೆ ನಿತ್ಯನೂ ಚೇತನರಿಗೆ ಚೇತನನೂ ಆಗಿದ್ದಾನೆ" 'ಸರ್ವಜ್ಞನೂ ಅಜ್ಞನೂ, ಈಶನೂ ಅನೀಶನೂ ಆದ ಸನಾತನರಿಬ್ಬರು" "ಸಮಾನ ವೃಕ್ಷದಲ್ಲಿ ಜೀವನು ನೆಲಸಿ ಶೋಕದಲ್ಲಿ ಮುಳುಗಿ ಅಶಕ್ತತೆಯಿಂದ ಮೋಹಗೊಂಡು ಅಳುತ್ತಾನೆ. ಪಕ್ಕದಲ್ಲಿರುವ ಈಶ್ವರನನ್ನು ಕಂಡಾಗ ಅವನು ಶೋಕದಿಂದ ಪಾರಾಗುತ್ತಾನೆ" ಈ ಬಗೆಯ ಶ್ರುತಿಗಳಲ್ಲಿ ಪರಶಿವನನ್ನು ನಿತ್ಯಮುಕ್ತ, ಸರ್ವಜ್ಞ, ಸರ್ವಪಾಶವಿಮೋಚಕ ಎಂದೂ, ಜೀವನನ್ನು ಅನಾದಿಯಾದ ಅವಿದ್ಯೆಯಿಂದ ಒದಗಿರುವ ಶೋಕಮೋಹಗಳಿಂದ ಬದ್ಧನಾಗಿರುವನು ಎಂದೂ ಹೇಳಿರುವುದರಿಂದ ಇಬ್ಬರಿಗೂ ಪ್ರಭುಭೃತ್ಯರಂತೆ ವೈಲಕ್ಷಣ್ಯವು ಸ್ಪಷ್ಟವಾಗಿದೆ. ಆದರೆ ಅವರಿಬ್ಬರೂ ಚಿದ್ರೂಪದಿಂದ ಒಂದೇ ಬಗೆಯವರಾದ್ದರಿಂದಲೂ, ಅವರಿಗೆ 'ತತ್ತ್ವಮಸಿ' ಮೊದಲಾದ ಶ್ರುತಿಗಳಲ್ಲಿ ಅಭೇದವನ್ನು ತಿಳಿಸಿರುವುದರಿಂದಲೂ ಅವರ ಗುಹಾಪ್ರವೇಶವೆಂಬುದು ಹೊಂದಿಕೆಯಾಗುತ್ತದೆ.

**'ಯೋನೇಕ್ಷತೇ ಶೃಣೋತಿ' ಇತ್ಯಾದಿವಾಕ್ಯೇಷ್ವಂತಃಕರಣಾತ್ಮಕಬುದ್ಧಿಸಾಹಚರ್ಯೇಣ ಪ್ರಜ್ಞಾತಸ್ಯ ಪರಮೇಶ್ವರಸ್ಯ ಈಕ್ಷಿತೃತ್ವಾದಿಧರ್ಮವ್ಯಪದೇಶಾದ್ಗುಹಾಶಯತ್ವಂ ಬುದ್ಧಿಪರಮೇಶ್ವರಯೋರೇವೇತ್ಯಾಶಂಕಾಯಾಂ ಹೇತ್ವಂತರೇಣ ನಿರಾಕರೋತಿ–ವಿಶೇಷಣಾಚ್ಚ ॥೧೨॥**

" ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು ", " ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ ", " ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಂ। ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥ " ಇತಿ ರಥಿರಥರೂಪವಿವಕ್ಷಯಾ ಶಿವಜೀವಯೋರ್ವಿಶೇಷಣೋಪದೇಶಾತ್, ' ನ ಜಾಯತೇ ' ಇತ್ಯಾದೌ ಬಹುಶರೀರಪ್ರವೇಶನಿರ್ಗಮನವ್ಯಾಪಾರಾವ್ಯಾಪಾರಾವಿಶೇಷಣಾತ್ ಪರಮೇಶ್ವರಸ್ವರೂಪಜ್ಞಾನಾಜ್ಜೀವಸ್ಯ ಹರ್ಷಾಮರ್ಶಪ್ರಮೋಚಕತ್ವದರ್ಶನಾಚ್ಚ ಗುಹಾಂ ಪ್ರವಿಷ್ಟೌ ಜೀವಪರಮೇಶ್ವರಾವಿತ್ಯುಚ್ಯೇತೇ. ಬಿಂಬಪ್ರತಿಬಿಂಬಯೋರೇಕತ್ರಾವಸ್ಥಾನಾಭಾವಾಚ್ಛಿವಜೀವಯೋರ್ಬಿಂಬಪ್ರತಿಬಿಂಬಭಾವಪಕ್ಷೋ ನ ಯುಕ್ತಃ. ಪೂರ್ವಮೇವ ಗತಾರ್ಥತ್ವಾನ್ನ ವಿಸ್ತೃತಂ.

' ಯಾವುದರಿಂದ ನೋಡುತ್ತಾನೋ ಕೇಳುತ್ತಾನೋ ' ಎಂಬಲ್ಲಿ ಅಂತಃಕರಣವೆನಿಸಿದ ಬುದ್ಧಿಯು ಸಾಹಚರ್ಯದಿಂದ ಜ್ಞಾನಸ್ವರೂಪನಾದ ಪರಶಿವನಲ್ಲಿ ಈಕ್ಷಣರೂಪವಾದ ಧರ್ಮವನ್ನು ಹೇಳಿರುವುದರಿಂದ ಬುದ್ಧಿ ಪರಶಿವ ಇಬ್ಬರು ಗುಹೆಯನ್ನು ಪ್ರವೇಶಿಸಿರುವರೆಂದು ಆಶಂಕಿಸಿ ನಿರಾಕರಿಸುತ್ತಾನೆ—ವಿಶೇಷಣಾಚ್ಚ ॥ ೧೨ ॥

' ಆತ್ಮನನ್ನು ರಥಿಯೆಂದೂ ಶರೀರವನ್ನು ರಥವೆಂದೂ ತಿಳಿ. ಅವನು ಮಾರ್ಗದ ಕೊನೆ ಮುಟ್ಟುತ್ತಾನೆ, ಅದೇ ಪರಶಿವನ ಕೊನೆಯ ಸ್ಥಾನ' " ನೋಡಲಾಗದವನು, ಗೂಢನೂ, ಗವಿಯೊಳಗೆ ಪ್ರವೇಶಿಸಿರುವವನೂ ಪುರಾಣನೂ ಆದವನನ್ನು" 'ಧ್ಯಾನಯೋಗದ ಅಭ್ಯಾಸದಿಂದ ದೇವನನ್ನು ತಿಳಿದು ಧೀರನು ಹರ್ಷಶೋಕಗಳೆರಡನ್ನೂ ಬಿಡುವನು' ಈ ಬಗೆಯ ಶ್ರುತಿಗಳಲ್ಲಿ ರಥಿ ರಥ ಮೊದಲಾದವುಗಳ ಮೂಲಕ ಶಿವ ಜೀವರ ವಿಶೇಷಣಗಳನ್ನೇ ಹೇಳಲಾಗಿದೆ. ಇದೂ ಅಲ್ಲದೆ ' ಹುಟ್ಟುಸಾವುಗಳಿಲ್ಲ " ಎಂಬಲ್ಲಿ ಅನೇಕ ಶರೀರಗಳಿಗೆ ಹೋಗುವುದನ್ನೂ ಬರುವುದನ್ನೂ ಹೇಳಿರುವುದರಿಂದಲೂ, ಪರಶಿವನ ಸ್ವರೂಪಜ್ಞಾನದಿಂದ ಜೀವನಿಗೆ ದುಃಖವಿಮೋಚನೆಯನ್ನು ಹೇಳಿರುವುದರಿಂದಲೂ ಗುಹಾಪ್ರವಿಷ್ಟರೆಂದರೆ ಶಿವಜೀವರೆಂದೇ ಹೇಳಬೇಕು. ಬಿಂಬಪ್ರತಿಬಿಂಬಭಾವದಿಂದ ಇಬ್ಬರೂ ಒಂದೇಕಡೆ ಇರುವರೆಂದು ಹೇಳುವ ಪಕ್ಷವೂ ಸರಿಯಲ್ಲ. ಯಾಕೆಂದರೆ ಬಿಂಬಪ್ರತಿಬಿಂಬಗಳೆರಡೂ ಒಂದೇಕಡೆಗೆ ಇರುವಂತಿಲ್ಲ. ಈ ವಿಷಯವನ್ನು ಹಿಂದೆಯೇ ತಿಳಿಸಿರುವುದರಿಂದ ಇಲ್ಲಿ ವಿಸ್ತರಿಸಿಲ್ಲ.

ಸರ್ವಗತಸ್ಯ ಪರಮೇಶ್ವರಸ್ಯ ಗುಹಾಹಿತತ್ವಮುಪದಿಶ್ಯ ತಸ್ಯೈವ ಪ್ರದೇಶಾಂತರಮಧಿಕರಣಾಂತರೇಣ ದರ್ಶಯತಿ—

ಅಂತರಾಧಿಕರಣಂ ॥ ೪ ॥ ಅಂತರ ಉಪಪತ್ತೇಃ ॥ ೧೩ ॥

ಛಾಂದೋಗ್ಯೇ ಶ್ರೂಯತೇಽಸ್ಯ ವಿಷಯಃ. 'ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ ' ಇತ್ಯಾದಿ ಕಿಮತ್ರಾಕ್ಷ್ಯಂತಃಪುರು

ಷೋಽಯಂ ಛಾಯಾಪುರುಷಃ? ಕ್ಷೇತ್ರಜ್ಞೋ ವಾ? ಹೃಷೀಕಾಧಿಷ್ಠಿತಾ ದೇವತಾ ವಾ? ಪರಮೇಶ್ವರೋ ವಾ? ಇತಿ ಸಂಶಯಃ. ಕುತಃ? "ಛಾಯಾತ್ಮಾ ಪುರುಷಃ ಪ್ರತಿರೂಪಃ" ಇತಿ. 'ಯ ಏಷೋಽಕ್ಷಿಣಿ' ಇತಿ ಚ ತಸ್ಯ ಪ್ರಸಿದ್ಧತ್ವೇನ ದೃಶ್ಯಮಾನತ್ವೋಪದೇಶಾತ್. 'ಸ ಹಿ ಚಕ್ಷುಷಾ ರೂಪಂ ಪಶ್ಯನ್ ಚಕ್ಷುಷಿ ಸನ್ನಿಹಿತೋ ಭವತಿ' ಇತ್ಯನೇನ ಕ್ಷೇತ್ರಜ್ಞೋಽಪಿ ಲಭ್ಯತೇ. 'ಅಭಯಮೇತದ್ಬ್ರಹ್ಮ' ಇತಿ ವಾಕ್ಯಶೇಷೇಣ ಪರಮೇಶ್ವರಸ್ಸೂಚಿತಃ. 'ಅಕ್ಷಿಣಿ ಪುರುಷಃ' ಇತಿ ಚಕ್ಷುರಧಿಷ್ಠಾತೃದೇವತಾತ್ಮಕಸ್ಸೂಯೋಽಪಿ ದೃಶ್ಯತೇ. ಪೂರ್ವಪಕ್ಷಸ್ತು ಕ್ಷೇತ್ರಜ್ಞಸ್ಯ ಶಾರೀರಸ್ಯ ಜಗದನುಭವೇ ಚಕ್ಷುರಿಂದ್ರಿಯಪ್ರವಿಷ್ಟತ್ವದರ್ಶನಾದಾತ್ಮಶಬ್ದವಾಚ್ಯತ್ವಾಚ್ಚೇತಸ್ಸಂಬಂಧಾತ್ಸ ಏವೋಪದಿಶ್ಯತೇ. 'ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ' ಇತಿ ವಾಕ್ಯದರ್ಶನಾದಾದಿತ್ಯೋ ವಾ ವಿಧಿಯತೇ. ಅಮೃತತ್ವಾದಿಲಿಂಗಾನಾಂ ಲೋಚನಾಧಿಷ್ಠಾನದೇವತಾವಿಷಯೇ ಅಸಂಭವಾತ್. ಪ್ರದೇಶವಿಶೇಷಪ್ರದರ್ಶನಾನ್ನಾತ್ರ ಪರಮೇಶ್ವರ ಉಪಾಸ್ಯಃ ಇತಿ ಚೇದತ್ರ ಬ್ರೂಮಃ—ಅಂತರಃ ಅಕ್ಷ್ಯಂತರ್ಗತಃ ಪುರುಷಃ ಪರಮಾತ್ಮೈವ ಕುತಃ? ಉಪಪತ್ತೇಃ, ಪರಶಿವೇ ಬ್ರಹ್ಮಣಿ ಆತ್ಮತ್ವಾಮೃತತ್ವಾಭಯತ್ವಾದಿಧರ್ಮಾಣಾಂ ವ್ಯಪದೇಶಾದಿಹಾಪ್ಯಕ್ಷಿಸ್ಥಾನಪುರುಷಸ್ಯಾಪಿ ತದ್ಧರ್ಮಶ್ರವಣಾನ್ನೇತರ ಇತ್ಯುಪದಿಶ್ಯತೇ. 'ಪ್ರಪಂಚೋಪಶಮಂ-ಸ ಆತ್ಮಾ ಸಃ ವಿಜ್ಞೇಯಃ', 'ಶಿವೋಽದ್ವೈತಃ', 'ಋತಂ ಸತ್ಯಂ', 'ಏತಾನಿ ವಾ ಅಮೃತಸ್ಯ ನಾಮಧೇಯಾನಿ' ಇತ್ಯಾದಿಷ್ವಾತ್ಮತ್ವಾಮೃತತ್ವಾಭಯತ್ವಪರಬ್ರಹ್ಮತ್ವಾದಿಧರ್ಮಾಣಾಂ ಶಿವಸ್ಯೈವೋಪದೇಶಾತ್, ಶಿವಬ್ರಹ್ಮಪರಮಾತ್ಮಶಬ್ದಾನಾಂ ಘಟಕಲಶಕುಂಭಶಬ್ದವತ್ಪಾರ್ಯಾಯತ್ವೇನ ವಾಚ್ಯಭೇದಾಭಾವಾತ್, ಮಧುಶಾಂಡಿಲ್ಯೋಪಕೋಸಲಪರ್ಯಂಕಪಂಚಾಗ್ನಿಸಂವರ್ಗದಹರವಿದ್ಯಾದಿದ್ವಾತ್ರಿಂಶದ್ಬ್ರಹ್ಮವಿದ್ಯೋಪಾಸ್ಯತ್ವಂ ಶಿವಸ್ಯೈವ ವಿಧೀಯತೇ. 'ಶಿವ ಏಕೋ ಧ್ಯೇಯಃ ಶಿವಶಂಕರಃ', 'ಏಕ ಏವ ರುದ್ರಃ', 'ವಿಶ್ವಾಧಿಕೋ ರುದ್ರಃ' ಇತ್ಯಾದಿಶ್ರುತಿಭಿಃ ಸರ್ವಾಧಿಕತ್ವಸರ್ವೋಪಾಸ್ಯತ್ವಾದಿಧರ್ಮಾಣಾಂ ತಸ್ಯೈವ ನಿರ್ದೇಶಾತ್ ಚಕ್ಷುರಂತಪುರುಷೋ ಮಹಾದೇವ ಏವ. 'ಯದ್ಯಪ್ಯಸ್ಮಿನ್ಸರ್ಪಿರ್ವೋದಕಂ ವಾ ಸಿಂಚಂತಿ ವರ್ತ್ಮನೀ ಏವ ಗಚ್ಛತಿ' ಇತಿ ಶ್ರವಣಾದಕ್ಷಿಸ್ಥಾನಂ ನಿರಸ್ತಸಮಸ್ತದೋಷಕಳಂಕಂ. "ಏತಂ ಸಂಯದ್ವಾಮ ಇತ್ಯಾಚಕ್ಷತೇ, ಏತಂ ಹಿ ಸರ್ವಾಣಿ ಸಾಮಾನ್ಯಭಿಸಂಯಂತಿ, ಸರ್ವಾಣ್ಯೇನಂ ವಾಮಾನ್ಯಭಿಸಂಯಂತಿ ಯ ಏವಂ ವೇದ ಏಷ ಉ ಏವ ವಾಮನೀರೇಷ ಹಿ ಸರ್ವಾಣಿ ವಾಮಾನಿ ನಯತಿ ಯ ಏವಂ ವೇದ ಏಷ ಉ ಏವ ಭಾಮನೀರೇಷ ಹಿ ಸರ್ವೇಷು

**ಲೋಕೇಷು ಭಾತಿ ಸರ್ವೇಷು ಲೋಕೇಷು ಭಾತಿ ಯ ಏವಂ ವೇದ" (ಛಾ. ೪-೧೫-೨) ಇತಿ ಸಂಯದ್ವಾಮತ್ವಾದಿ ಧರ್ಮಾಣಾಮುಸ್ಮಿನ್ ವ್ಯಪದೇಶಾತ್ಪರಮೇಶ್ವರ ಏವ ಚಕ್ಷುರ್ಮಧ್ಯೋಪಾಸ್ಯ ಇತ್ಯುಚ್ಯತೇ.**

ಸರ್ವಗತನಾದ ಪರಶಿವನು ಗುಹೆಯಲ್ಲಿರುವನೆಂದು ತಿಳಿಸಿ ಅವನಿಗೆ ಬೇರೊಂದು ಪ್ರದೇಶವನ್ನು ಮುಂದಿನ ಅಧಿಕರಣದಲ್ಲಿ ತಿಳಿಸುತ್ತಾನೆ.

**ಅಂತರಧಿಕರಣ ॥ ೪ ॥ ಅಂತರ ಉಪಪತ್ತೇಃ ॥ ೧೩ ॥**

ಛಾಂದೋಗ್ಯದಲ್ಲಿ ಈ ಸೂತ್ರದ ವಿಷಯ ಬಂದಿದೆ. "ಕಣ್ಣಿನಲ್ಲಿ ಕಾಣಿಸುವ ಪುರುಷನೇ ಆತ್ಮನು. ಇವನೇ ಅಮೃತನೂ ಅಭಯನೂ ಬ್ರಹ್ಮವೂ ಆಗಿದ್ದಾನೆ". "ಆ ಈ ಸ್ಥಾನದಲ್ಲಿ ಕರಗಿಸಿದ ತುಪ್ಪವನ್ನಾಗಲೀ ನೀರನ್ನಾಗಲೀ ಚಿಮುಕಿಸಿದರೆ ಅದು ಎರಡು ಕೊನೆಗಳನ್ನೇ ಸೇರುವುದು" ಎಂದು ಮುಂತಾಗಿ ಶ್ರುತಿಯಲ್ಲಿದೆ. ಕಣ್ಣಿನಲ್ಲಿ ಕಾಣುವ ಪುರುಷನೆಂದರೆ ಪ್ರತಿಬಿಂಬಾತ್ಮನೇ? ಜೀವನೇ? ಇಂದ್ರಿಯಗಳಿಗಧಿಷ್ಠಾತೃವಾದ ದೇವತೆಯೇ? ಪರಮೇಶ್ವರನೇ? ಎಂಬ ಸಂಶಯ ಬರುತ್ತದೆ. 'ಈ ಪುರುಷನ ಕಣ್ಣಿನಲ್ಲಿ ಕಾಣಿಸುವವನು' ಎಂದು ಎಲ್ಲರಿಗೂ ಪ್ರಸಿದ್ಧವಾಗಿ ತಿಳಿದಿರುವುದರಿಂದ ಶ್ರುತಿಯು ಪುರುಷನ ನೆರಳಾದ ಛಾಯಾತ್ಮನನ್ನೇ ಇಲ್ಲಿ ತಿಳಿಸಿರಬೇಕು. ಜೀವನು ಕಣ್ಣಿಂದ ರೂಪವನ್ನು ನೋಡುತ್ತ ಅಲ್ಲಿಯೇ ಸನ್ನಿಹಿತನಾಗಿರುವುದರಿಂದ ಶ್ರುತಿಯು ಜೀವನಿಗೂ ಅನ್ವಯಿಸಬಹುದು. "ಇದು ಅಮೃತವೂ ಅಭಯವೂ ಬ್ರಹ್ಮವೂ ಆಗಿದೆ" ಎಂಬುದರಿಂದ ಇದು ಪರಶಿವನಿಗೂ ಅನ್ವಯಿಸಬಹುದು ಅಥವಾ ಕಣ್ಣಿಗೆ ಅಧಿಷ್ಠಾನದೇವತೆಯಾದ ಸೂರ್ಯನೇ ಈ ಪುರುಷನಿರಬಹುದು. ಕ್ಷೇತ್ರಜ್ಞ ಜೀವನು ಜಗತ್ತನ್ನು ಭೋಗಿಸಲು ಕಣ್ಣನ್ನು ಪ್ರವೇಶಿಸುವನೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಇವನಿಗೆ ಆತ್ಮನೆಂಬ ಹೆಸರು ಇರುವುದರಿಂದಲೂ ಮನಸ್ಸಿನ ಸಂಬಂಧವಿರುವುದರಿಂದಲೂ ಅಕ್ಷಿಪುರುಷನೆಂದರೆ ಜೀವನೇ ಆಗಬಹುದು. 'ಈತನು ಕಿರಣಗಳಿಂದ ಇದರಲ್ಲಿ ನೆಲಸಿದ್ದಾನೆ' ಎಂಬ ವಾಕ್ಯದಿಂದ ಈ ಪುರುಷನು ಆದಿತ್ಯನೂ ಆಗಬಹುದು. 'ಅಮೃತಂ ಅಭಯಂ' ಈ ಲಿಂಗಗಳು ಕಣ್ಣಿನ ಅಧಿಷ್ಠಾನದೇವತೆಯಾದ ಸೂರ್ಯನಿಗೂ ಅನ್ವಯಿಸಬಹುದು. ಸರ್ವಗತನಾದ ಪರಶಿವನಿಗೆ ಕಣ್ಣಿನ ಒಂದು ಪ್ರದೇಶವನ್ನು ತಿಳಿಸಿರುವುದರಿಂದ ಅಕ್ಷಿಪುರುಷನೆಂದರೆ ಪರಮೇಶ್ವರನಲ್ಲವೆಂದೇ ತಿಳಿದು ಬರುತ್ತದೆ. ಹೀಗೆ ಪೂರ್ವಪಕ್ಷ ಬಂದರೆ ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಧರ್ಮಿಗಳ ಹೊಂದಿಕೆಯಿಂದ ಅಕ್ಷಿಪುರುಷನೆಂದರೆ ಪರಶಿವನಲ್ಲದೆ ಬೇರೆಯಲ್ಲ. ಪರಶಿವನಲ್ಲಿ ಆತ್ಮ-ಅಮೃತ-ಅಭಯವೆಂಬ ಧರ್ಮಗಳನ್ನು ಶ್ರುತಿಯಲ್ಲಿ ಹೇಳಲಾಗಿದೆ. ಅಕ್ಷಿಪುರುಷನಲ್ಲೂ ಆ ಧರ್ಮಗಳಿರುವುದರಿಂದ ಇವನು ಶಿವನಲ್ಲದೆ ಬೇರೆಯಲ್ಲವೆಂಬುದೇ ಶ್ರುತಿಯ ಅರ್ಥ. 'ಪ್ರಪಂಚಕ್ಕಾಶ್ರಯನೂ ಅದ್ವಿತೀಯನೂ ಆದ ಶಿವನು ತ್ರಿಮೂರ್ತ್ಯತೀತನಾಗಿದ್ದಾನೆ'. 'ಶಿವನೇ ಅದ್ವೈತ-ಅಮೃತ' ಹೀಗೆ ಶ್ರುತಿಯಲ್ಲಿ ಅಮೃತ, ಅಭಯ, ಪರಬ್ರಹ್ಮ ಮೊದಲಾದ ಧರ್ಮಗಳನ್ನು ಶಿವನಿಗೇ ಹೇಳಲಾಗಿದೆ.

ಶಿವ-ಬ್ರಹ್ಮ-ರುದ್ರ-ಪರಮಾತ್ಮ ಈ ಹೆಸರುಗಳು ಘಟ-ಕಲಶ-ಕುಂಭ ಶಬ್ದಗಳಂತೆ ಸಮಾನಾರ್ಥಕವಾಗಿವೆ. ಆದ್ದರಿಂದ ಮಧು, ಶಾಂಡಿಲ್ಯ, ದಹರ ಮೊದಲಾದ ಮೂವತ್ತೆರಡು ವಿದ್ಯೆಗಳಿಂದಲೂ ಉಪಾಸ್ಯನಾದವನು ಶಿವನೆಂದೇ ತಿಳಿದುಬರುತ್ತದೆ. 'ಎಲ್ಲವನ್ನು ಬಿಟ್ಟು ಶಿವಶಂಕರನಾದ ಶಿವನೊಬ್ಬನನ್ನೇ ಉಪಾಸನಮಾಡು' ಎಂಬಲ್ಲಿ ಶಿವನನ್ನು ಸರ್ವಾಧಿಕನೆಂದೂ ಸರ್ವೋಪಾಸ್ಯನೆಂದೂ ತಿಳಿಸಲಾಗಿದೆ. ಆದ್ದರಿಂದ ಕಣ್ಣಿನಲ್ಲಿ ಕಾಣುವವನು ಪರಶಿವನೇ. 'ನೀರಾಗಲೀ ತುಪ್ಪವಾಗಲೀ ಕಣ್ಣಿನಮೇಲೆ ಬಿದ್ದರೆ ಅದು ಎರಡು ತುದಿಗಳಿಗೂ ಹರಿಯುವುದು' ಎಂಬುದರಿಂದ ಕಣ್ಣಿನ ಸ್ಥಾನವು ಯಾವ ಲೋಪದೋಷ ಕಳಂಕಗಳಿಗೂ ಅಂಟದಂತೆ ಶುದ್ಧವಾಗಿರುವುದೆಂದು ತಿಳಿದುಬರುತ್ತದೆ. "ಈತನಲ್ಲಿಯೇ ಎಲ್ಲಾ ಕಾಮಗಳೂ ಬಂದು ಸೇರುತ್ತನೆಯಾದ್ದರಿಂದ ಈತನು 'ಸಂಯದ್ವಾಮ' ನೆನಿಸಿದ್ದಾನೆ. ಈತನೇ ಜೀವರಿಗೆ ಕರ್ಮಫಲಗಳನ್ನು ಕೊಡಬಲ್ಲನಾದ್ದರಿಂದ "ವಾಮನೀ' ಎನಿಸಿದ್ದಾನೆ. ಈತನೇ ಎಲ್ಲಾ ಲೋಕಗಳಲ್ಲಿಯೂ ಬೆಳಗುತ್ತಿರುವುದರಿಂದ 'ಭಾಮನೀ' ಎನಿಸಿದ್ದಾನೆ" ಎಂಬ ಶ್ರುತಿಯಲ್ಲಿ ಹೇಳಿರುವ ಸಂಯದ್ವಾಮತ್ವವೇ ಮೊದಲಾದ ಗುಣಗಳು ಪರಮೇಶ್ವರನಲ್ಲೇ ಹೊಂದಿಕೆಯಾಗುವುದರಿಂದ ಅಕ್ಷಿಪುರುಷನೆಂದರೆ ಪರಮೇಶ್ವರನೆಂದು ಸಿದ್ಧವಾಗುತ್ತದೆ.

**ಸರ್ವಾತೀತಸ್ಯ ಸರ್ವಗತಸ್ಯ ಶಿವಸ್ಯ ಕಥಮಕ್ಷಿಪುರುಷತ್ವಮಿತ್ಯಾಶಂಕಾಯಾಮಾಹ—ಸ್ಥಾನಾದಿವ್ಯಪದೇಶಾಚ್ಚ ॥ ೧೪ ॥**

**'ಯಃ ಪೃಥಿವ್ಯಾಂ ತಿಷ್ಠನ್' ಇತ್ಯಾದಿನಾ ಕ್ಷಿತ್ಯಾದಿಶಾರೀರಕಾಂತಾಷ್ಟಮೂರ್ತಿತ್ವಂ ಪರಮೇಶ್ವರಸ್ಯ ಪ್ರಸಾಧ್ಯ 'ಯಶ್ಚಕ್ಷುಷಿ ತಿಷ್ಠನ್' ಇತಿ ಶ್ರುತೌ ಚಕ್ಷುಸ್ಸ್ಥಾನಮಪಿ ನಿರ್ದಿಷ್ಟಂ, ತಸ್ಮಾತ್ ಹೃದಯೋಪಾಸನಾದಿವದಕ್ಷ್ಯುಪಾಸನಮುಪ್ಪಪನ್ನಂ. ನನೂಪಾಸನಾಯಾ ನಾಮರೂಪಗುಣವೈಶಿಷ್ಟ್ಯಾತ್ ಆಕಾಶವತ್ಸರ್ವಗತಸ್ಯ ತದಭಾವಾತ್ಕಥಂ ತಸ್ಯೋಪಾಸನಂ? ಇತಿ ಚೇನ್ನ 'ತಸ್ಯೋದಿತಿ ನಾಮ', 'ಹಿರಣ್ಯಶ್ಮಶ್ರುಃ' ಇತ್ಯಾದಿನಾ ಪ್ರಾಕೃತಗುಣಾತೀತಸ್ಯ ಮಹೇಶ್ವರಸ್ಯ ನಾಮರೂಪಗುಣವ್ಯಪದೇಶಾತ್ ಅಭ್ಯುದಯನಿಶ್ಶ್ರೇಯಸಫಲಪ್ರದತ್ವೇನ ಸರ್ವಶಕ್ತಿವಿಶಿಷ್ಟಸ್ಯ ಶಿವಸ್ಯ ಬ್ರಹ್ಮಣೋ ದ್ವಿವಿಧಂ ರೂಪಂ ವಕ್ತುಂ ಶಕ್ಯಂ. ಕೈವಲ್ಯೇ 'ಹೃತ್ಪುಂಡರೀಕಂ ವಿರಜಂ' ಇತ್ಯಾದಿನಾ ಹೃದಯಪುಂಡರೀಕಂ ಪ್ರದರ್ಶ್ಯ 'ತಮಾದಿಮಧ್ಯಾಂತವಿಹೀನಮೇಕಂ ವಿಭುಂ ಚಿದಾನಂದಮರೂಪಮದ್ಭುತಂ ಉಮಾಸಹಾಯಂ' ಇತ್ಯಾದಿನಾ ಪವನವದೇಕಸ್ಯೈವ ನಿರವಯತ್ವಸಾವಯವತ್ವೋಪದೇಶಾತ್. ತೈತ್ತಿರೀಯೇ ಚ 'ಋತಗ್ಂ ಸತ್ಯಂ-ವಿಶ್ವರೂಪಾಯ ವೈ ನಮಃ' ಋತಂ-ಮನೋಽತೀತಂ, ಸತ್ಯಂ-ವಾಗತೀತಂ, ಪರಂ ಗುಣತ್ರಯಾತ್ಮಕಮೂರ್ತಿತ್ರಯಾತ್ಪರಂ ಬ್ರಹ್ಮ ಇತಿ ವಾಕ್ಯೇನ ಪರಶಿವಸ್ಯ ನಿಷ್ಕಲತ್ವನಿರವಯವತ್ವಾದಿಕಮುಪದಿಶ್ಯ,**

**ಪುರುಷಂ=ಪುರಿ–ಪೂರ್ವೋಕ್ತದಹರಪುಂಡರೀಕೇ ಶೇತ ಇತಿ ಪುರುಷಂ, ಪರಮಶಕ್ತ್ಯುಮಾಶಬಳಾಕಾರತಯಾ ಕೃಷ್ಣಪಿಂಗಳಂ, ಕೃಶಾನುರೇತಸ್ಕತಯಾ ಊರ್ಧ್ವರೇತಸಂ, ತ್ರಿಲೋಚನತಯಾ ವಿರೂಪಾಕ್ಷಂ, ಜಗದುಭಯಕಾರಣತಯಾ ವಿಶ್ವರೂಪಂ, ಇತ್ಯನೇನ ಸಕಲತ್ವಸಾವಯವತ್ವಾದಿಕಂ ನಿರೂಪಿತಂ. ಅತಃ "ದ್ವೇ ವಿತೇ ಬ್ರಹ್ಮಣೋ ರೂಪೇ" ಇತ್ಯಾದಿಶ್ರುತಿಸಿದ್ಧಮೂರ್ತಾಮೂರ್ತತ್ವಾದಿಕಂ ಪರಬ್ರಹ್ಮಣಶ್ಶಿವಸ್ಯೈವ ಸಿದ್ಧಂ. ತಸ್ಮಾದಂಗಾಂಗಿತ್ವೇನ ತದುಭಯೋಪಾಸನಂ ವಿಧೇಯಂ. ಸಾಧನಂ ವಿನಾ ಸಾಧ್ಯಾನಿಷ್ಪತ್ತೇಸ್ತತ್ಪ್ರಾಪ್ತ್ಯರ್ಥಂ ಅಕ್ಷಿಸ್ಥಾನಪ್ರದೇಶಾದ್ಯುಪಾಸನಾವ್ಯಪದೇಶೋ ಯುಕ್ತಃ.**

ಸರ್ವಗತನೂ ಸರ್ವಾತ್ಮನೂ ಆದ ಪರಶಿವನು ಈ ಕಣ್ಣಿನಲ್ಲಿ ಹೇಗೆ ಇರಬಲ್ಲನೆಂದು ಆಶಂಕಿಸಿ ನಿರಾಕರಿಸುತ್ತಾನೆ.—**ಸ್ಥಾನಾದಿವ್ಯಪದೇಶಾಚ್ಚ ॥ ೧೪ ॥**

ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಸೂರ್ಯ, ಚಂದ್ರ ಜೀವಾತ್ಮ ಇವಿಷ್ಟು ಪರಶಿವನ ಶರೀರಗಳಾಗಿವೆ. "ಅದರಂತೆ, ಯಾವನು ಕಣ್ಣಿನೊಳಗಿದ್ದು ಅದರಿಂದಾಚೆಗೂ ಇರುವನೋ, ಕಣ್ಣು ಯಾವನನ್ನು ತಿಳಿಯದೋ, ಯಾವನಿಗೆ ಕಣ್ಣು ಶರೀರವೋ, ಯಾವನು ಕಣ್ಣುಗಳಮೇಲೆ ಅಧಿಕಾರ ನಡೆಸಬಲ್ಲನೋ, ಅವನೇ ನಿನ್ನ ಆತ್ಮ, ಅಂತರ್ಯಾಮಿ, ಅಮೃತನು". ಈ ಶ್ರುತಿಯಲ್ಲಿ ಕಣ್ಣನ್ನೂ ಸಹ ಪರಶಿವನ ಸ್ಥಾನವೆಂದು ತಿಳಿಸಲಾಗಿದೆ. ಆದ್ದರಿಂದ ಹೃದಯದಲ್ಲಿ ಪರಶಿವನನ್ನು ಉಪಾಸನ ಮಾಡುವಂತೆ ಕಣ್ಣಿನಲ್ಲೂ ಮಾಡುವುದು ಯುಕ್ತವಾಗಿದೆ. ಉಪಾಸನವು ನಾಮರೂಪಗಳಿಗೆ ಸೇರಿದ ಗುಣಗಳನ್ನಾಶ್ರಯಿಸಿರುವುದು. ಆಕಾಶದಂತೆ ಸರ್ವವ್ಯಾಪಕನಾದ ಪರಶಿವನಿಗೆ ನಾಮರೂಪಗಳಿಲ್ಲದ್ದರಿಂದ ಅವನ ಉಪಾಸನವು ಹೇಗೆ ಸಾಧ್ಯವಾದೀತು? ಅಂದರೆ ಅದು ಹಾಗಲ್ಲ. 'ಅವನಿಗೆ ಉತ್ ಎಂಬ ಹೆಸರಿದೆ. 'ಅವನಿಗೆ ಚಿನ್ನದ ಗಡ್ಡ ಮೀಸೆಗಳಿವೆ' ಹೀಗೆ ಶ್ರುತಿಯಲ್ಲಿ ಪ್ರಕೃತಿಯ ಗುಣಗಳಿಗೆ ಸಹಜವಾಗಿ ಅಂಟದಿರುವ ಪರಶಿವನಿಗೆ ನಾಮರೂಪಗುಣಗಳ ಸಂಬಂಧವನ್ನು ಹೇಳಿರುವುದರಿಂದಲೂ, ಅವನು ಭಕ್ತರನ್ನು ಉದ್ಧರಿಸುತ್ತಲೂ ಅವರಿಗೆ ಭುಕ್ತಿ ಮುಕ್ತಿಗಳನ್ನು ಕರುಣಿಸುತ್ತಲೂ ಇರುವುದರಿಂದಲೂ ಸರ್ವಶಕ್ತಿವಿಶಿಷ್ಟನಾದ ಆ ಪರಶಿವನಲ್ಲಿ ಎರಡು ಬಗೆಯ ಸ್ಥಿತಿಯನ್ನು ಹೇಳಲು ಸಾಧ್ಯವಿದೆ. ಕೈವಲ್ಯದಲ್ಲಿ 'ಹೃತ್ಪುಂಡರೀಕಂ' ಎಂಬಲ್ಲಿ ಹೃದಯಕಮಲವನ್ನು ತಿಳಿಸಿ–'ಆದಿ ಮಧ್ಯ ಕೊನೆಗಳೊಂದೂ ಇಲ್ಲದೆ ಅದ್ಭುತಶಕ್ತಿವಿಶಿಷ್ಟನೂ ಚಿದಾನಂದನೂ ವಿಶ್ವವ್ಯಾಪಿಯೂ, ಅರೂಪನೂ ಅದ್ವಿತೀಯನೂ," "ಪ್ರಶಾಂತನೂ ನೀಲಕಂಠನೂ ತ್ರಿಲೋಚನನೂ ವಿಶ್ವರಕ್ಷಕನೂ ಆದ ಪರಮೇಶ್ವರನನ್ನು ಧ್ಯಾನಿಸಿ" ಎಂದು ಹೇಳಿರುವುದರಿಂದ ಅವನೊಬ್ಬನೇ ವಾಯುವಿನಂತೆ ನಿರವಯವನೂ ಸಾವಯವನೂ ಆಗಿರುವನೆಂದು ಸ್ಪಷ್ಟಪಡುತ್ತದೆ. ತೈತ್ತಿರೀಯದ 'ಋತಂ ಸತ್ಯಂ ಪರಂಬ್ರಹ್ಮ' ಎಂಬಲ್ಲಿ ಋತ-ಮನಸ್ಸಿಗೂ ದಕ್ಕದವನು, ಸತ್ಯಂ-ವಾಗತೀತನು, ಪರಂ-ತ್ರಿಮೂರ್ತಿಗ

೪ಗತೀತನೂ ಆದವನೇ ಬ್ರಹ್ಮವೆಂದು ಹೇಳಿದ್ದರಿಂದ ಪರಶಿವನು ನಿಷ್ಕಲ ಮತ್ತು ನಿರವಯವನೆಂದು ಸ್ಪಷ್ಟಪಡುತ್ತದೆ" ಅವನನ್ನು ಪುರುಷನೆಂದೂ ದಹರಕಮಲದಲ್ಲಿ ಮಲಗಿರುವನೆಂದೂ, ಪರಾಶಕ್ತಿರೂಪವಾದ ಉಮೆಯೊಡಗೂಡಿದ್ದರಿಂದ ಕೃಷ್ಣಪಿಂಗಳನೆಂದೂ, ಅಗ್ನಿಯೇ ರೇತಸ್ಸಾಗಿರುವುದರಿಂದ ಊರ್ಧ್ವರೇತಸ್ಕನೆಂದೂ, ಮೂರು ಕಣ್ಣುಗಳಿರುವುದರಿಂದ ವಿರೂಪಾಕ್ಷನೆಂದೂ, ಜಗತ್ತಿಗೆ ಉಭಯಕಾರಣನಾದ್ದರಿಂದ ವಿಶ್ವರೂಪನೆಂದೂ ಅದೇ ಶ್ರುತಿ ತಿಳಿಸುತ್ತದೆ. ಇದರಿಂದ ಅವನು ನಿಷ್ಕಲನಿರವಯವನಾಗಿದ್ದರೂ, ಸಕಲನೂ ಸಾವಯವನೂ ಆಗಿರುವನೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಬ್ರಹ್ಮಕ್ಕೆ ಮೂರ್ತ-ಅಮೂರ್ತವೆಂಬ ಎರಡು ರೂಪಗಳು ಶ್ರುತಿಯಲ್ಲಿ ವಿಹಿತವಾಗಿವೆ. ಇದಕ್ಕಾಗಿಯೇ ಪರಶಿವನ ಮೂರ್ತಾಮೂರ್ತೋಪಾಸನವನ್ನು ಮುಮುಕ್ಷುಗಳು ಅವಶ್ಯವಾಗಿ ಆಚರಿಸಬೇಕು. ಸುಲಭಸಾಧ್ಯವಾದ್ದನ್ನು ಬಿಟ್ಟರೆ ಅಸಾಧ್ಯವಾದ್ದು ದೊರಕಲಾರದು. ಅದನ್ನು ಪಡೆಯಲಿಕ್ಕಾಗಿಯೇ ಕಣ್ಣು ಮೊದಲಾದ ಸ್ಥಾನಗಳಲ್ಲೂ ಪರಶಿವನ ಉಪಾಸನವು ಯುಕ್ತವಾಗಿದೆ.

ಪುನರ್ಹೇತ್ವಂತರಮಾಹ—ಸುಖವಿಶಿಷ್ಟಾಭಿಧಾನಾದೇವ ಚ ||೧೫||

ಅಕ್ಷ್ಯಂತಃಪುರುಷಸ್ಸಾಕ್ಷಾಚ್ಛಿವ ಏವ. ಕುತಃ-ಸುಖವಿಶಿಷ್ಟಾಭಿಧಾನಾದೇವ ಚ. ಏವಕಾರೇಣ ನಾತ್ರ ಸಂಶಯಃ ಕಾರ್ಯ ಇತಿ ಸೂಚ್ಯತೇ. ಸುಖವಿಶಿಷ್ಟಂ ಶಿವಾಭಿಧಾನಂ ಬ್ರಹ್ಮ ವಾಕ್ಯೋಪಕ್ರಮೇ ಶ್ರೂಯತೇ. ತಸ್ಯೈವೇಹಾಭಿಧಾನಾದಿತ್ಯರ್ಥಃ. 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ' ಇತ್ಯುಪಕ್ರಮೇ ಬ್ರಹ್ಮಣ ಸ್ಸುಖವಿಶಿಷ್ಟತ್ವಪ್ರದರ್ಶನಾತ್. ನನು 'ಆಚಾರ್ಯಸ್ತು ತೇ ಗತಿಂ ವಕ್ತಾ' ಇತಿ ವಾಕ್ಯೇ ಬ್ರಹ್ಮಪ್ರಕರಣತ್ವಾದರ್ಶನಾತ್ ಕಶಬ್ದಸ್ಯ ವೈಷಯಿಕಸುಖೇ ರೂಢತ್ವಾತ್ ಖಶಬ್ದಸ್ಯಾಕಾಶೇ ಪ್ರಸಿದ್ಧತ್ವಾತ್ ವಾಕ್ಯೋಪಕ್ರಮೇ ಸುಖವಿಶಿಷ್ಟತ್ವಂ ಬ್ರಹ್ಮಣಃ ಕಥಮುಪಪದ್ಯತೆ? ಇತಿ ಚೇದುಚ್ಯತೇ. 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' ಇತಿ ಗಾರ್ಹಪತ್ಯಾದ್ಯಗ್ನಿನಾಂ ವಚನಂ ಶ್ರುತ್ವೋಪಕೋಸಲ ಉವಾಚ 'ವಿಜಾನಾಮ್ಯಹಂ ಯತ್ಪ್ರಾಣೋ ಬ್ರಹ್ಮೇತಿ ಕಂ ಚ ಖಂ ಚ ನ ವಿಜಾನಾಮಿ' ಇತ್ಯತ್ರೈತದುಕ್ತಂ. "ಯದ್ವಾವ ಕಂ ತದೇವ ಖಂ, ಯದೇವ ಖಂ ತದೇವ ಕಂ" ಇತಿ ವಾಕ್ಯೇ ಕಶಬ್ದಖಶಬ್ದಯೋರ್ವಿಶೇಷಣವಿಶೇಷ್ಯಭಾವೇನ ವ್ಯಪದೇಶಾತ್ಕಶಬ್ದೋಽತ್ರಾನಂದೇ ರೂಢಃ. ತಥಾಪ್ಯದಿಷ್ಮಿತಪ್ರತೀಕತ್ವೇನ ಭೂತಾಕಾಶೇ ಬ್ರಹ್ಮಶಬ್ದೋಽಭಿಹಿತಃ. ಕಂಶಬ್ದಸ್ಸದಾಹೃಷೀಕವಿಷಯವೈಶೇಷಿಕಸುಖೇ ರೂಢತ್ವೇಽಪಿ ಇತರೇತರಬೋಧಕಾ ಕಶಬ್ದಖಶಬ್ದೌ ಸುಖಾತ್ಮಕಬ್ರಹ್ಮಣ್ಯೇವಾಗಮ್ಯೇತೇ. ತತ್ರ 'ಕಂ ಬ್ರಹ್ಮ ಖಂ ಬ್ರಹ್ಮ ಖಂ ಬ್ರಹ್ಮ ಕಂ ಬ್ರಹ್ಮ' ಇತಿ ದ್ವಿರಾವೃತ್ತ್ಯಾ ಬ್ರಹ್ಮಶಬ್ದೇನ ವಿಧೀಯಮಾನಕಶಬ್ದಖಶಬ್ದಯೋರ್ವಿಶೇಷಣವಿಶೇಷ್ಯತ್ವವ್ಯಪದೇಶಾ

ತ್ಸುಖಗುಣಾಧಿಷ್ಠಾನತ್ವಮುಪಪದ್ಯತೇ. ಸುಖಸ್ಯಾಪಿ ಗುಣಸ್ಯ ಗುಣಿವದ್ಧ್ಯೇಯತ್ವಂ ಚ. ತಸ್ಮಾತ್ ಶ್ರುತ್ಯುಪಕ್ರಮೇ ಸುಖವಿಶಿಷ್ಟತ್ವೇನ ಬ್ರಹ್ಮ ನಿರ್ದಿಷ್ಟಂ. ಗಾರ್ಹಪತ್ಯಾದಯೋಽಗ್ನಯಃ ಸ್ವಂ ಸ್ವಂ ಮಹಿಮಾನಮುದ್ದಿಶ್ಯ "ತೇ ಹೋಚುರುಪಕೋಸಲೈಷಾ ಸೋಮ್ಯ ತೇಽಸ್ಮದ್ವಿದ್ಯಾಽಽತ್ಮವಿದ್ಯಾ ಚ" ಇತ್ಯುಪಸಂಹೃತ್ಯ ಪೂರ್ವತ್ರ ಪರಮೇಶ್ವರಪರತ್ವಮುಪದಿಶತಿ. 'ಆಚಾರ್ಯಸ್ತು ತೇ ಗತಿಂ ವಕ್ತಾ' ಇತಿ ವಾಕ್ಯೇ ಗತಿಮಾತ್ರಾಭಿಧಾನಪ್ರತಿಜ್ಞಾನಮರ್ಥಾಂತರವಿವಕ್ಷಾಂ ನಿರಸ್ಯತಿ. "ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ । ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ" (ಛಾಂ. ೪-೧೪-೩) ಇತಿ ಚಕ್ಷುರ್ವ್ಯವಹಿತಪುರುಷವಿಜ್ಞಾನೇನ ನಿರಸ್ತಪಾಪಪಂಕತ್ವಂ ನಿರೂಪ್ಯ, ತಸ್ಯೈವ ಬ್ರಹ್ಮತ್ವಂ ನಿರ್ದಿಶ್ಯತೆ. ತಸ್ಮಾತ್ಪ್ರಕೃತಸ್ಯೈವ ಪರಮೇಶ್ವರಸ್ಯ ಅಕ್ಷಿಸ್ಥಾನಗತತ್ವಂ ಸಂಯದ್ವಾಮತ್ವಾದಿಗುಣಕತ್ವಂ ಚ ನಿರೂಪ್ಯ ಆರ್ಚಿರಂತರ್ವಿದೋ ಗತಿಂ ವಕ್ಷ್ಯಾಮೀತ್ಯಾರಭ್ಯ 'ಯ ಏಷೋಽಕ್ಷಿಣಿ ಪುರುಷಃ' ಇತ್ಯಸಂಕುಚಿತತ್ವೇನ ವ್ಯಪದೇಶಾದಕ್ಷ್ಯಂತಃಪುರುಷಃ ಪರಮೇಶ್ವರ ಇತಿ ಸಿದ್ಧಂ.

ಇಲ್ಲಿ ಬೇರೊಂದು ಯುಕ್ತಿಯಿದೆ-ಸುಖವಿಶಿಷ್ಟಾಭಿಧಾನಾದೇವ ಚ ॥೧೫॥

ಶ್ರುತಿಯಲ್ಲಿ ಸುಖವಿಶಿಷ್ಟವಾದ ವಸ್ತುವನ್ನು ಹೇಳಿರುವುದರಿಂದ ಕಣ್ಣಿನೊಳಗಿರುವ ಪುರುಷನು ಸಾಕ್ಷಾತ್ ಶಿವನೇ ಆಗಿದ್ದಾನೆ. ಇಲ್ಲಿ ಏವಕಾರವು ನಿಶ್ಚಯವನ್ನು ತಿಳಿಸುತ್ತದೆ. ಯಾಕೆಂದರೆ "ಪ್ರಾಣವೇ ಬ್ರಹ್ಮ, ಆಕಾಶವೇ ಬ್ರಹ್ಮ' ಎಂಬಲ್ಲಿ ಸುಖವಿಶಿಷ್ಟವಾದ ಬ್ರಹ್ಮವನ್ನೇ ವಾಕ್ಯಾರಂಭದಲ್ಲಿ ತಿಳಿಸಲಾಗಿದೆ. ಉಪಕೋಸಲನ ಗುರುಶುಶ್ರೂಷೆಗೆ ಮೆಚ್ಚಿದ ಅಗ್ನಿಗಳು ಆವನಿಗೆ ತಿಳಿಸಿದ 'ಆಚಾರ್ಯನು ನಿನಗೆ ಮುಂದಿನ ಗತಿಯನ್ನು ತಿಳಿಸುತ್ತಾನೆ' ಎಂಬ ವಾಕ್ಯದಿಂದ ಇದು ಬ್ರಹ್ಮದ ಪ್ರಕರಣವಲ್ಲವೆಂದು ತಿಳಿದುಬರುತ್ತದೆ. ಕ ಎಂಬುದು ವಿಷಯಸುಖವನ್ನೂ, ಖ ಎಂಬುದು ಆಕಾಶವನ್ನೂ ತಿಳಿಸುತ್ತವೆಯಾದ್ದರಿಂದ ಇಲ್ಲಿ ಸುಖವಿಶಿಷ್ಟವಾದ ಬ್ರಹ್ಮವನ್ನು ಹೇಳಿದೆ ಎಂದು ಹೇಗೆ ಗೊತ್ತಾಗುತ್ತದೆ? ಎಂದರೆ "ಪ್ರಾಣವೇ ಬ್ರಹ್ಮ, ಕ=ಸುಖವೇ ಬ್ರಹ್ಮ, ಖ=ಆಕಾಶವೇ ಬ್ರಹ್ಮ", ಎಂಬ ಅಗ್ನಿಗಳ ಮಾತನ್ನು ಕೇಳಿದ ಉಪಕೊಸಲನು "ಪ್ರಾಣವು ಬ್ರಹ್ಮವೆಂಬುದುದನ್ನು ನಾನು ಬಲ್ಲೆನು. ಆದರೆ 'ಕ ಎಂಬುದು ಬ್ರಹ್ಮವೆಂಬುದನ್ನೂ 'ಖ' ಎಂಬುದೂ ಬ್ರಹ್ಮವೆಂಬುದನ್ನೂ ನಾನು ಅರಿಯೆನು" ಎಂದು ಹೇಳಿದನು. ಅದಕ್ಕೆ ಅಗ್ನಿಗಳು "ಕ ಎಂಬುದು ಯಾವುದೋ ಅದೇ ಖ ಎಂಬುದು" ಎಂದು ಉತ್ತರಕೊಡುತ್ತವೆ. ಈ ವಾಕ್ಯದಲ್ಲಿ ಕ ಶಬ್ದವು ವಿಶೇಷಣವಾಗಿಯೂ, ಖ ಶಬ್ದವು ವಿಶೇಷ್ಯವಾಗಿಯೂ ನಿರ್ದಿಷ್ಟವಾಗಿರುವುದರಿಂದ ಕ ಶಬ್ದವು ಆನಂದದಲ್ಲಿಯೇ ರೂಢವಾಗಿದೆ. ಖ ಶಬ್ದವು ಆಕಾಶವನ್ನೂ, ಹಾಗೆಯೇ ಕ ಶಬ್ದವು ವೈಷಯಿಕ ಸುಖವನ್ನು ಬೋಧಿಸುವುದಾದರೂ, ಪರಸ್ಪರ ವಿಶೇಷಣವಿಶೇಷ್ಯಭಾವ

ದಿಂದ ಪ್ರಯುಕ್ತವಾದ ಈ ಎರಡು ಶಬ್ದಗಳೂ ಸೇರಿ ಬ್ರಹ್ಮವನ್ನೇ ಬೋಧಿಸುತ್ತವೆ. ಕ ಶಬ್ದವು ವೈಷಯಿಕ ಸುಖವನ್ನು ತಿಳಿಸುವುದರಿಂದ ಅದಕ್ಕೆ ಖ ಶಬ್ದವನ್ನು ವಿಶೇಷಣವಾಗಿ ತೆಗೆದುಕೊಳ್ಳಬೇಕು. ಹಾಗೆ ತೆಗೆದುಕೊಳ್ಳದಿದ್ದರೆ ಲೌಕಿಕ ಸುಖವೇ ಬ್ರಹ್ಮವೆಂಬ ಅರಿವಾಗುತ್ತಿತ್ತು. ಇದಕ್ಕೆ ಬದಲು ಕ, ಖ ಶಬ್ದಗಳನ್ನು ಒಂದಕ್ಕೊಂದು ವಿಶೇಷಣವಾಗಿ ಮಾಡಿದರೆ ಅವು ಸುಖರೂಪವಾದ ಬ್ರಹ್ಮವನ್ನು ತಿಳಿಸುತ್ತವೆ. ಇಲ್ಲಿ 'ಕಂ ಬ್ರಹ್ಮ-ಖಂ ಬ್ರಹ್ಮ' ಎಂದು ಬ್ರಹ್ಮಶಬ್ದವನ್ನು ಎರಡು ಸಾರಿ ಹೇಳದೇ ಇದ್ದಿದ್ದರೆ, ಕ ಶಬ್ದವನ್ನು ವಿಶೇಷಣವಾಗಿ ಪ್ರಯೋಗಿಸಿರುವುದರಿಂದ ಸುಖವೆಂಬ ಗುಣವು ಇಲ್ಲಿ ಧ್ಯೇಯವೆಂದು ಗೊತ್ತಾಗುತ್ತಿರಲಿಲ್ಲ. ಅದಕ್ಕಾಗಿಯೇ ಕ ಖ ಶಬ್ದಗಳ ಮುಂದೆ ಬ್ರಹ್ಮಶಬ್ದವನ್ನು ಸೇರಿಸಿ ಹೇಳಲಾಗಿದೆ; ಏಕೆಂದರೆ ಗುಣಿಯಾದ ಪರಶಿವನಿಗೆ ಗುಣವಾಗಿರುವ ಸುಖವನ್ನೂ ಭಕ್ತನು ಧ್ಯಾನಮಾಡಬೇಕೆಂಬುದು ಈ ಶ್ರುತಿಯ ಅಭಿಪ್ರಾಯವಾಗಿದೆ. ಹೀಗೆ ವಿದ್ಯಾರಂಭದಲ್ಲಿ ಸುಖವಿಶಿಷ್ಟನಾದ ಬ್ರಹ್ಮವನ್ನೇ ಉಪದೇಶಿಸಲಾಗಿದೆ. ಗಾರ್ಹಪತ್ಯ—ಅನ್ವಾಹಾರ್ಯ-ಆಹವನೀಯ ಈ ಮೂರು ಅಗ್ನಿಗಳು ಒಂದೊಂದೂ ತಮ್ಮ ಮಹಿಮೆಯನ್ನು ತಿಳಿಸಿ 'ಸೋಮ್ಯನೇ ನಿನಗೆ ನಮ್ಮ ವಿದ್ಯೆಗಳನ್ನೂ, ಆತ್ಮವಿದ್ಯೆಯನ್ನೂ ಹೇಳಿರುತ್ತೇವೆ" ಎಂದು ಕೊನೆಮಾಡಿರುವುದರಿಂದ ಹಿಂದಿನ ವಾಕ್ಯವು ಪರಮೇಶ್ವರನಿಗೆ ಅನ್ವಯಿಸುವುದೆಂದು ತಿಳಿದುಬರುತ್ತದೆ. ಆದರೆ ಗತಿಯನ್ನು ತಿಳಿಸುವ ವಾಕ್ಯವು 'ಬೇರೊಂದು ವಿಷಯವನ್ನು ತಿಳಿಸುವ ಅಭಿಪ್ರಾಯವೂ ಇದೆ' ಎಂಬುದನ್ನು ನಿಷೇಧಿಸುತ್ತದೆ. ಆದರೆ 'ಕಮಲದೆಲೆಗಳಿಗೆ ನೀರು ಹೇಗೆ ಅಂಟುವುದಿಲ್ಲವೋ ಹಾಗೆ ಶಿವನನ್ನು ತಿಳಿದವನಿಗೆ ಪಾಪವಂಟುವುದಿಲ್ಲ' ಎಂಬಲ್ಲಿ ಕಣ್ಣಿನೊಳಗಿರುವ ಶಿವನನ್ನು ತಿಳಿದವನಿಗೆ ಪಾಪದ ಸಂಪರ್ಕವಿಲ್ಲವೆಂದು ಹೇಳಿರುವುದರಿಂದ ಗುರು ಸತ್ಯಕಾಮನು ಉಪಕೋಸಲನಿಗೆ ಕಣ್ಣಿನೊಳಗಿರುವ ಪುರುಷನು ಪರಶಿವನೆಂದು ಬೋಧಿಸುತ್ತಾನೆ ಆದ್ದರಿಂದ ಪ್ರಕರಣೋಚಿತವಾಗಿ ಪರಶಿವನೇ ಕಣ್ಣಿನಲ್ಲಿರುವನೆಂದೂ, ಅವನಲ್ಲಿಯೇ ಸಂಯದ್ವಾಮತ್ವವೇ ಮೊದಲಾದ ಗುಣಗಳಿರುವುವೆಂದೂ ಹೇಳಿ, ಅವನನ್ನು ತಿಳಿದವನಿಗೇ .ಅರ್ಚಿರಾದಿಗತಿಯನ್ನು ಆಚಾರ್ಯನು ತಿಳಿಸುವನೆಂದು ಅಗ್ನಿಗಳು ತಿಳಿಸಿವೆ. ಆದ್ದರಿಂದ ಕಣ್ಣಿನೊಳಗೆ ಕಾಣುವ ಈ ಪುರುಷನೇ ನಿನ್ನ ಆತ್ಮವೆಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಈ ಪುರುಷನು ಪರಮೇಶ್ವರನೆಂದು ಸಿದ್ಧವಾಯಿತು.

**ಇಹೋಪದಿಷ್ಟಾನಾಂ ಧರ್ಮಾಣಾಂ ಛಾಯಾಬ್ರಹ್ಮಣ್ಯತಿವ್ಯಾಪ್ತಿಮಾಶಂಕ್ಯ ನಿರಾಕರೋತಿ—ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ॥ ೧೬ ॥**

**ಇತಶ್ಚಾಕ್ಷ್ಯಂತಃಪುರುಷಶ್ಶಿವ ಏವ, ಕುತಃ? ಶ್ರುತೋಪನಿಷತ್ಕಗತ್ಯಭಿಧಾನಾತ್. ಶ್ರುತೌ- ಅಭ್ಯಸ್ತಾ+ಉಪನಿಷತ್-ಬ್ರಹ್ಮವಿದ್ಯಾ ಯೇನ ಸಃ ಶ್ರುತೋಪನಿಷತ್ಕಃ, ತಸ್ಯ ಯಾ ಗತಿಃ ಅರ್ಚಿರಾದಿರೂಪಾ, ತಸ್ಯಾಃ ಪ್ರಕೃತೇ ಅಭಿಧಾನಾದಿತ್ಯರ್ಥಃ. "ತೇಽರ್ಚಿಷಮೇವಾಭಿಸಂಭವಂತ್ಯರ್ಚಿ**

ಷೋಽಹರಹ್ನ ಅಪೂರ್ಯಮಾಣಪಕ್ಷಂ" (ಛಾಂ. ೫-೧೦-೧) "ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾತ್ಮಾನಮನ್ವಿಷ್ಯಾದಿತ್ಯಮಭಿಜಾಯಂತ ಏತದ್ವೈ ಪ್ರಾಣಾನಾಮಾಯತನಮೇತದಮೃತಮೇತದಭಯಮೇತತ್ಪರಾಯಣಮೇತಸ್ಮಾನ್ನ ಪುನರಾವರ್ತಂತೇ" (ಪ್ರಶ್ನ ೧-೧೦) ಇತಿ ಸೈವೇಹಾಕ್ಷಿಪುರುಷವಿದ್ಯಾಭಿಧೀಯತೇ "ಅಥ ಯದು ಚೈವಾಸ್ಮಿನ್ ಶವ್ಯಂ ಕುರ್ವಂತಿ ಯದಿ ಚ ನಾರ್ಚಿಷಮೇವಾಭಿಸಂಭವತಿ" ಇತ್ಯುಪಕ್ರಮ್ಯ, "ಆದಿತ್ಯಾಚ್ಚಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪುರುಷೋಽಮಾನವಸ್ಸ ಏನಾನ್ ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ" ಇತ್ಯೇವಂ ಪರಯಾ ಗತ್ಯಾಕ್ಷಿಪುರುಷಸ್ಯ ಬ್ರಹ್ಮತ್ವಮುಪದಿಶ್ಯತೇ. "ಅಗ್ನಿರ್ಜ್ಯೋತಿರಹಶ್ಶುಕ್ಲಃ ಷಣ್ಮಾಸಾ ಉತ್ತರಾಯಣಂ। ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ" ಇತಿ ಸ್ಮೃತೌ ಚ ಬ್ರಹ್ಮಗತಿರ್ಗೀಯತೇ. ತಸ್ಮಾದಕ್ಷ್ಯಂತಃಪುರುಷೋ ನ ಛಾಯಾಪುರುಷಃ.

ಇಲ್ಲಿ ಹೇಳಿರುವ ಧರ್ಮಗಳು ಛಾಯಾಪುರುಷನಲ್ಲೂ ಸಂಭವಿಸಬಹುದೆಂದು ಆಶಂಕಿಸಿ ನಿರಾಕರಿಸುತ್ತಾನೆ— **ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ॥ ೧೬ ॥**

ಪರಮರಹಸ್ಯವಾದ ಜ್ಞಾನವನ್ನು ಕೇಳಿರುವ ಬ್ರಹ್ಮಜ್ಞಾನಿಗೆ ಗತಿಯನ್ನು ಹೇಳಿರುವುದರಿಂದ ಅಕ್ಷಿಪುರುಷನೆಂದರೆ ಪರಶಿವನೇ ಆಗಿದ್ದಾನೆ. ಉಪನಿಷತ್ತನ್ನು ಶ್ರವಣ ಮಾಡಿದವನಿಗೆ ಯಾವ ಅರ್ಚಿರಾದಿಮಾರ್ಗವನ್ನು ಹೇಳಿದೆಯೋ ಅದೇ ಮಾರ್ಗವನ್ನು ಅಕ್ಷಿಪುರುಷನ ಉಪಾಸಕನಿಗೂ ಉಪದೇಶಿಸಲಾಗಿದೆ. ಉಪನಿಷತ್ತಿನಲ್ಲಿ "ಅವರು ಹಗಲು, ಶುಕ್ಲಪಕ್ಷ ಇದೇ ಮೊದಲಾದ ಅರ್ಚಿಮಾರ್ಗದಲ್ಲಿಯೇ ಸೇರುತ್ತಾರೆ" ಹೀಗೆ ಹೇಳಿದೆ. ಶ್ರುತಿಯಲ್ಲಿ "ಶ್ರೇಷ್ಠವಾದ ತಪಸ್ಸು-ವಿದ್ಯೆ-ಶ್ರದ್ಧೆ-ಬ್ರಹ್ಮಚರ್ಯಗಳಿಂದ ಆತ್ಮನನ್ನು ಹುಡುಕುತ್ತ ಆದಿತ್ಯನನ್ನು ಜಯಿಸುತ್ತಾರೆ' ಎಂದೂ, "ಇದೇ ಪ್ರಾಣಗಳ ಆಶ್ರಯಸ್ಥಾನ, ಇದೇ ಅಮೃತ, ಅಭಯಸ್ಥಿತಿ, ಇದೇ ಕೊನೆಯ ಹಂತ, ಇದರಿಂದ ಮತ್ತೆ ಹಿಂತಿರುಗುವುದಿಲ್ಲ" ಎಂದೂ ಹೇಳಲಾಗಿದೆ. ಇದನ್ನೇ ಇಲ್ಲಿ ಅಕ್ಷಿಪುರುಷವಿದ್ಯೆ ಎಂದು ತಿಳಿಸಲಾಗಿದೆ. "ಈ ವಿದ್ಯೆಯನ್ನು ತಿಳಿದವರು ಇಲ್ಲಿ ಕರ್ಮವನ್ನು ಮಾಡಲಿ ಬಿಡಲಿ ಆರ್ಚಿರಾದಿ ಮಾರ್ಗವನ್ನೇ ಹಿಡಿಯುವರು' ಎಂದು ಆರಂಭಿಸಿ 'ಆದಿತ್ಯನಿಂದ ಚಂದ್ರನನ್ನೂ, ಚಂದ್ರನಿಂದ ವಿದ್ಯುತ್ತನ್ನೂ ಸೇರುವರು. ಅಲ್ಲಿ ಅಮಾನುಷ ಪುರುಷನು ಬಂದು ಇವರನ್ನು ಪರಶಿವನೆಡೆಗೆ ಸೇರಿಸುವನು. ಇದೇ ದೇವಪಥ ಹಾಗೂ ಬ್ರಹ್ಮಪಥ. ಈ ಮಾರ್ಗದಿಂದ ಪರಶಿವನಲ್ಲಿ ಸೇರಿದವರು ಮತ್ತೆ ಹಿಂತಿರುಗುವುದಿಲ್ಲ". ಹೀಗೆ ಅಕ್ಷಿಪುರುಷವಿದ್ಯೆಗೂ ಉತ್ಕೃಷ್ಟವಾದ ಗತಿಯನ್ನೇ ಹೇಳಿರುವುದರಿಂದ ಅಕ್ಷಿಪುರುಷನೆಂದರೇ ಶಿವನೆಂದೇ ಸಿದ್ಧವಾಗುತ್ತದೆ. "ಅಗ್ನಿ-ಜ್ಯೋತಿ-ಹಗಲು-ಶುಕ್ಲಪಕ್ಷ-ಉತ್ತರಾಯಣ ಈ ಕಾಲದಲ್ಲಿ ಪ್ರಯಾಣಮಾಡಿದ

ಬ್ರಹ್ಮಜ್ಞಾನಿಗಳು ಬ್ರಹ್ಮವನ್ನೇ ಸೇರುವರು" ಎಂಬ ಸ್ಮೃತಿಯಲ್ಲಿ ದೇವಯಾನವೆಂಬ ಗತಿಯನ್ನೇ ಅಕ್ಷಿಪುರುಷೋಪಾಸಕನಿಗೂ ಹೇಳಿರುವುದರಿಂದ ಈ ಅಕ್ಷಿಪುರುಷನೆಂದರೆ ಛಾಯಾಪುರುಷನಲ್ಲ.

ಹೇತ್ವಂತರಮಾಹ—ಅನವಸ್ಥಿತೇರಸಂಭವಾಚ್ಚ ನೇತರಃ || ೧೭ ||

ಅತ್ರೇತರಶ್ಛಾಯಾಪುರುಷಾದಿಃ ಅಕ್ಷ್ಯಂತಃಪುರುಷೋ ನ ಭವತಿ. ಕುತಃ? ಅನವಸ್ಥಿತೇರಸಂಭವಾಚ್ಚ. ಅನವಸ್ಥಿತೇಃ ಉಪಾಸಕಸ್ಯ ಸರ್ವತ್ರಾಕ್ಷಿಣಿ ಛಾಯಾಸಂಪಾದಕಪುರುಷಾಂತರಸ್ಯಾಸನ್ನಿಧಾನಾತ್, ಛಾಯಾಪುರುಷೇಽಮೃತತ್ವಾದಿಗುಣಾನಾಮಸಂಭವಾಚ್ಚೇತ್ಯರ್ಥಃ. ನನು ಯದೈವ ಹಿ ಕಶ್ಚಿತ್ಪುರುಷಃ ಚಕ್ಷುರಾಸೀದತಿ ತದಾ ಚಕ್ಷುಷಿ ಪುರುಷಚ್ಛಾಯಾ ದೃಶ್ಯತೇ, ಅಪಗತೇ ಸತಿ ತಸ್ಮಿನ್ನ ದೃಶ್ಯತೇ ಚ. 'ಯ ಏಷೋಽಕ್ಷಿಣಿ ಪುರುಷಃ' ಇತಿ ಶ್ರುತೌ ಸ್ವಚಕ್ಷುಷಿ ದೃಶ್ಯಮಾನಪುರುಷೋಪಾಸನೋಪದೇಶಾತ್ ತದುಪಾಸನೇ ತದ್ಗ್ರೀವಾಪ್ರದೇಶಂ ಪ್ರವೀಕ್ಷ್ಯ ಕಂಚಿತ್ಪುರುಷಂ ಚಕ್ಷುಸ್ಸಮೀಪೇ ಪಶ್ಯತಿ, ತಸ್ಮಾಚ್ಛಾಯಾಪುರುಷಸ್ಯೈವ ಚಕ್ಷುಃಪ್ರದೇಶವಿಶೇಷೇ ಉಪಾಸನಂ ಇತಿ ಚೇನ್ನ, ಅಮೃತತ್ವಾದೀನಾಂ ಪರಶಿವಧರ್ಮಾಣಾಂ ಛಾಯಾಪುರುಷೇಽಸಂಭವಾತ್. ಚಕ್ಷುರ್ವ್ಯವಸ್ಥಿತಪುರುಷಧರ್ಮಾಣಾಂ ಸರ್ಗಸ್ಥಿತಿಲಯಾದೀನಾಂ ದೇವತಾತ್ಮನ್ಯಸಂಭವಾಚ್ಚ. 'ಭೀಷಾಸ್ಮಾದ್ವಾತಃ ಪವತೇ' ಇತ್ಯಾದೌ ಸೂರ್ಯಾದೀನಾಂ ಪರಮೇಶ್ವರಾಧೀನತ್ವಮುಪದಿಷ್ಟಂ. ಮಹಾನಾರಾಯಣೀಯೇ, "ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ತು ಸಮಾಶ್ರಿತಃ । ಈಶಸ್ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್ ||" ಇತಿ ಶ್ರುತೌ ಅಂಗುಷ್ಠಮಾತ್ರಚಕ್ಷುಸ್ಸ್ಥಿತತ್ವಂ ಪರಮೇಶ್ವರಸ್ಯೈವ ವ್ಯಪದಿಶ್ಯತೇ. ಅತಸ್ತದಂತರೋಪಾಸ್ಯತ್ವಂ ನೇತರಸ್ಯ ಸರ್ವಥಾ ಸಂಭವತಿ. ನನು 'ಆಪಶ್ಚ ಪೃಥಿವೀಚಾನ್ನಮುತ್ತರೌ ವಹ್ನಿಮರುತೌ' ಇತ್ಯಾದೌ ವಾಯೋರಪಿ ಭೋಕ್ತೃತ್ವಾವಗಮಾತ್ ಪ್ರಾಣಾಗ್ನಿಹೋತ್ರಪ್ರಕರಣೋಪದಿಷ್ಟಾಂಗುಷ್ಠಮಾತ್ರಪ್ರದೇಶೋಪಾಸ್ಯತ್ವಂ ಪ್ರಾಣವಾಯೋರೇವ ಸಂಭವತಿ, ತಸ್ಯ ಪಂಚಾಹುತಿಭೋಕ್ತೃತ್ವಂ ಚಾವಗಮ್ಯತೇ. ತಸ್ಮಾನ್ನ ಪರಮೇಶ್ವರ ಏವಾತ್ರೋಪಾಸ್ಯಃ ಇತಿ ಚೇನ್ನ, ಪ್ರಾಣವಾಯೋರ್ಭೋಕ್ತೃತ್ವಾವಗಮೇಽಪಿ ಸಕಲಜಗದೀಶಿತೃತ್ವಚರಾಚರಪ್ರಪಂಚಭೋಕ್ತೃತ್ವಾದಿಧರ್ಮಾಣಾಮಚೇತನೇ ಪ್ರಾಣವಾಯಾವಸಂಭವಾತ್. "ಪ್ರಾಣಾನಾಂ ಗ್ರಂಥಿರಸಿ" ಇತ್ಯಾದೌ ಪ್ರಾಣಾಧಾರಕತ್ವೇನ ಪಂಚಾಹುತಿಭೋಕ್ತೃತ್ವಮಪಿ ಮಹೇಶ್ವರಾಧೀನಮಿತ್ಯುಪದೇಶಾದಂಗುಷ್ಠಮಾತ್ರಪ್ರದೇಶವಿಶೇಷೋಪಾಸ್ಯತ್ವಮಂಗುಷ್ಠಮಾತ್ರತ್ವಮಪಿ ಚ ಪರಮೇಶ್ವರಸ್ಯ ನ ವಿರು

**ಧ್ಯತೇ. ಏತತ್ಪಕ್ಷೇ 'ದೃಶ್ಯತೆ' ಇತಿ ಪ್ರಸಿದ್ಧೋಽಪಾಸನಮಾಚಾರ್ಯ ಕಟಾಕ್ಷಲಭ್ಯಂ ಮುಮುಕ್ಷುವಿಷಯಂ ಚೇತಿ ಜ್ಞೇಯಂ.**

ಇಲ್ಲಿ ಬೇರೊಂದು ಹೇತುವಿದೆ— **ಅನವಸ್ಥಿತೇರಸಂಭವಾಚ್ಚ ನೇತರಃ ||೧೭||**

ಕಣ್ಣಿನಲ್ಲಿರುವ ಪುರುಷನು ಛಾಯಾಪುರುಷನಲ್ಲ; ಯಾಕೆಂದರೆ ಯಾವನಾದರೊಬ್ಬ ಪುರುಷನು ಯಾವಾಗ ಕಣ್ಣಿನ ಬಳಿ ಇರುತ್ತಾನೋ ಆಗ ಮಾತ್ರವೇ ಕಣ್ಣಿನಲ್ಲಿ ಆ ಪುರುಷನ ನೆರಳು ಕಾಣಿಸುತ್ತದೆ. ಅವನು ಅಲ್ಲಿಂದ ಹೊರಟುಹೋದರೆ ಕಣ್ಣಿನಲ್ಲಿ ನೆರಳು ಕಾಣುವುದಿಲ್ಲ. ಆದ್ದರಿಂದ ಛಾಯಾಪುರುಷನು ಕಣ್ಣಿನಲ್ಲಿ ಯಾವಾಗಲೂ ನಿಂತಿರಲು ಸಾಧ್ಯವಾಗುವುದಿಲ್ಲ. ಇದೂ ಅಲ್ಲದೆ, ಛಾಯಾಪುರುಷನಲ್ಲಿ ಅಮೃತತ್ವಾದಿ ಗುಣಗಳು ಸಂಭವಿಸುವುದೂ ಇಲ್ಲ. "ಕಣ್ಣಿನಲ್ಲಿ ಯಾವ ಈ ಪುರುಷನು ಕಾಣಿಸುತ್ತಾನೋ" ಎಂಬ ಶ್ರುತಿ ಉಪಾಸಕನಿಗೆ ಕಣ್ಣಿನಲ್ಲಿ ಕಾಣುವ ಪುರುಷನು ಹತ್ತಿರದಲ್ಲಿಯೇ ಇರುವುದರಿಂದ ಅವನನ್ನೇ ಉಪಾಸನಮಾಡಬೇಕೆಂದು ತಿಳಿಸುತ್ತದೆ. ಹಾಗೆ ಉಪಾಸನಮಾಡುವಾಗ ಕುತ್ತಿಗೆಯ ಹತ್ತಿರ ನೋಡಿ ಕಣ್ಣಿನ ಸಮೀಪದಲ್ಲಿ ಒಬ್ಬ ಪುರುಷನನ್ನು ಉಪಾಸಕನು ಕಾಣುತ್ತಾನೆ. ಆದ್ದರಿಂದ ಕಣ್ಣಿನ ಪ್ರದೇಶದಲ್ಲಿ ಛಾಯಾಪುರುಷನನ್ನೇ ಉಪಾಸನಮಾಡಬಹುದುಲ್ಲವೆ? ಅಂದರೆ ಅಮೃತತ್ವವೇ ಮೊದಲಾದ ಪರಶಿವನ ಧರ್ಮಗಳು ಆ ಛಾಯಾಪುರುಷನಲ್ಲಿ ಹೊಂದುವುದಿಲ್ಲವಾದ್ದರಿಂದ ಅಕ್ಷಿಪುರುಷನು ಪರಶಿವನೇ ಆಗಿರುವನು. ಆದರೆ ಜೀವನಿಗೂ ದೇಹೇಂದ್ರಿಯಗಳ ಸಂಪರ್ಕವು ಸಮಾನವಾಗಿರುವುದರಿಂದಲೂ, 'ದ್ವಾ ಸುಪರ್ಣಾ' ಎಂಬಲ್ಲಿ ಶಿವಜೀವರು ಜೊತೆಯಲ್ಲೇ ಇರುವರೆಂದು ತಿಳಿದುಬರುವುದರಿಂದಲೂ 'ಇವನು ಈ ಕಣ್ಣಿನಲ್ಲಿ ರಶ್ಮಿಗಳಿಂದ ನೆಲಸಿದ್ದಾನೆ' ಎಂಬಲ್ಲಿ ಅಧಿದೇವತೆ ಎನಿಸಿದ ಸೂರ್ಯನೂ ಕಣ್ಣಿನಲ್ಲಿ ಇರುವನೆಂದು ತಿಳಿದುಬರುವುದರಿಂದಲೂ ಪರಮೇಶ್ವರನೇ ಕಣ್ಣಿನೊಳಗೆ ಹೇಗೆ ಉಪಾಸ್ಯನಾದಾನು? ಎಂದರೆ ಇದು ಸಮಂಜಸವಲ್ಲ. ಯಾಕೆಂದರೆ ಶ್ರುತಿಯಲ್ಲಿ ಹೇಳಿರುವ ಸಂಯದ್ವಾಮತ್ವವೇ ಮೊದಲಾದ ಧರ್ಮಗಳು ಪರಶಿವನೊಬ್ಬನಲ್ಲಿಯೇ ಸಂಭವಿಸುತ್ತವೆ. ಇದೂ ಅಲ್ಲದೆ, ಪರಮೇಶ್ವರನ ಸೃಷ್ಟಿ ಸ್ಥಿತಿ ಲಯಾದಿಕರ್ಮಗಳು ಅಧಿಷ್ಠಾನ ದೇವತೆಯಾದ ಸೂರ್ಯನಲ್ಲಿ ಸಂಭವಿಸುವುದಿಲ್ಲ. ಸೂರ್ಯಾದಿ ದೇವತೆಗಳ ವಿಕಾಸವೆಲ್ಲವೂ ಪರಶಿವನಿಗಧೀನವಾಗಿದೆ. 'ಯಾವನ ಭಯದಿಂದ ಗಾಳಿ ಬೀಸುತ್ತದೆಯೋ, ಸೂರ್ಯನು ಉದಯಿಸುತ್ತಾನೋ' ಎಂದು ಶ್ರುತಿ ಹೇಳಿದೆ. "ವಿಶ್ವದ ನಿಯಾಮಕನಾಗಿದ್ದರೂ ಶಿವನು ಅಂಗುಷ್ಠಪ್ರಮಾಣದಲ್ಲಿ ಅಂಗುಷ್ಠದಲ್ಲಿಯೂ ನೆಲಸಿ ವಿಶ್ವವನ್ನು ಸಂತೋಷಪಡಿಸುತ್ತಾನೆ" ಎಂದು ಶ್ರುತಿಯಲ್ಲಿ ಶಿವನು ಅಂಗುಷ್ಠಪ್ರಮಾಣದ ಕಣ್ಣಿನಲ್ಲಿ ಇರುವುದಾಗಿ ತಿಳಿಸಲಾಗಿದೆ. ಆದರೆ ಪ್ರಾಣಾಗ್ನಿಹೋತ್ರಪ್ರಕರಣದಲ್ಲಿ ಹೇಳಿರುವ ಅಂಗುಷ್ಠಮಾತ್ರಪ್ರದೇಶದಲ್ಲಿ ಪ್ರಾಣವಾಯವೇ ಉಪಾಸನಮಾಡಿಸಿಕೊಳ್ಳುವುದೆಂದೂ ಅದೇ ಐದು ಆಹುತಿಗಳನ್ನು ಭೋಗಿಸುವುದೆಂದೂ ತಿಳಿದುಬಂದಿದೆಯಾದ್ದರಿಂದ ಪರಶಿವನೇ ಕಣ್ಣಿನಲ್ಲಿ ಹೇಗೆ ಉಪಾಸ್ಯನಾದಾನು? ಎಂದು ಹೇಳುವುದು

ಯುಕ್ತವಲ್ಲ. ಯಾಕೆಂದರೆ ಇಲ್ಲಿ ಪ್ರಾಣವಾಯು ಭೋಗಿಸುವುದಾಗಿ ತಿಳಿದುಬಂದರೂ, ಸಕಲ ಜಗತ್ತಿಗೂ ನಿಯಮನಮಾಡುವುದು ಮತ್ತು ಎಲ್ಲವನ್ನೂ ಭೋಗಿಸುವುದು ಅಚೇತನ ಪ್ರಾಣವಾಯುವಿಗೆ ಸಂಭವಿಸುವುದಿಲ್ಲ. "ರುದ್ರನೇ ನೀನು ಪ್ರಾಣಾಧಾರನಾಗಿದ್ದೀಯೆ. ನನ್ನೊಳಗೆ ಪ್ರವೇಶಿಸು" ಎಂಬಲ್ಲಿ ಪ್ರಾಣಾಧಾರನಾಗಿ ಐದು ಆಹುತಿಗಳನ್ನು ಭೋಗಿಸುವುದು ಈಶ್ವರನಿಗೇ ಸಂಬಂಧಿಸಿದೆ ಎಂದು ಹೇಳಿರುವುದರಿಂದ ಪರಮಶಿವನಿಗೆ ಅಂಗುಷ್ಠದಷ್ಟು ಪ್ರದೇಶದಲ್ಲಿ ಅದೇ ಪ್ರಮಾಣದಿಂದ ನೆಲಸಿ ಉಪಾಸನೆ ಮಾಡಿಸಿಕೊಳ್ಳಲಿಕ್ಕೆ ಏನೂ ವಿರೋಧವಿಲ್ಲ.

ಸರ್ವಗತಸ್ಯ ಶಿವಸ್ಯ ಪರಬ್ರಹ್ಮಣಃ ಚಕ್ಷುರಂತರೋಪಾಸ್ಯತ್ವಮುಪದಿಶ್ಯ ಸರ್ವಾಂತರೋಪಾಸ್ಯತ್ವಮಧಿಕರಣಾಂತರೇಣ ದರ್ಶಯತಿ—

## ಅಂತರ್ಯಾಮ್ಯಧಿಕರಣಂ ॥ ೫ ॥

**ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ॥ ೧೮ ॥**

ಅಂತರ್ಯಾಮಿಬ್ರಾಹ್ಮಣೇ ಕಥ್ಯತೇಽಸ್ಯ ವಿಷಯಃ—'ಯ ಇಮಂ ಚ ಲೋಕಂ ಪರಂ ಚ ಲೋಕಂ ಸರ್ವಾಣಿ ಚ ಭೂತಾನಿ ಯೋಽಂತರೋ ಯಮಯತಿ' ಇತ್ಯುಪಕ್ರಮ್ಯ 'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷ ತ ಆತ್ಮಾಽಂತರ್ಯಾಮ್ಯಮೃತಃ' ಇತ್ಯಾದ್ಯಧಿದೈವತಾನಂತರಂ, 'ಯಸ್ಸರ್ವೇಷು ಲೋಕೇಷು' ಇತ್ಯಧಿಲೋಕಂ, 'ಯಸ್ಸರ್ವೇಷು ವೇದೇಷು' ಇತ್ಯಧಿದೈವತಂ, 'ಯಸ್ಸರ್ವೇಷು ಯಜ್ಞೇಷು' ಇತ್ಯಧಿಯಜ್ಞಂ, 'ಯಸ್ಸರ್ವೇಷು ಭೂತೇಷು' ಇತ್ಯಧಿಭೂತಂ, 'ಯ ಆತ್ಮನಿ' ಇತ್ಯಧ್ಯಾತ್ಮಂ, ಇತ್ಯಾದಿನಾ ಕಶ್ಚಿದಂತರವಸ್ಥಿತೋ ಯಮಯಿತಾಂತರ್ಯಾಮೀ ಶ್ರೂಯತೇ. ಸ ಕಿಮತ್ರ ಪೃಥಿವ್ಯಾದ್ಯಧಿಷ್ಠಾತೃದೇವತಾವಿಶೇಷೋಽವಗಮ್ಯತೇ? ಉತಾಣಿಮಾದಿವಿಭೂತ್ಯುಪಪನ್ನಃ ಕಶ್ಚಿದ್ಯೋಗೀ? ಅಥವಾ ಪರಮೇಶ್ವರಃ? ಸ ಕಿಮರ್ಥಾಂತರಂ? ಉತ ನೇತಿ ಸಂದಿಹ್ಯತೇ. "ಪೃಥಿವ್ಯೇವ ಯಸ್ಯಾಯತನಮಗ್ನಿರ್ಲೋಕೋ ಮನೋ ಜ್ಯೋತಿಃ" ಇತ್ಯಾದಿನಾ ಕಾರ್ಯಕರಣಸಂಘಾತಸ್ಯ ದೇವತಾಯಾಂ ಶ್ರುತತ್ವೇನ ತಸ್ಯಾಃ ನಿಯಂತೃತ್ವೋಪಪತ್ತೇಃ ಅಶರೀರಸ್ಯ ಶಿವಸ್ಯ ನಿಯಂತೃತ್ವಾಸಂಭವಾತ್ ದೇವತಾತ್ಮಪಕ್ಷೋ ಯುಕ್ತಃ. ಕಸ್ಯಚಿತ್ಸಿದ್ಧಸ್ಯ ಯೋಗಿನೋ ವಾ ಹ್ಯಣಿಮಾದ್ಯಷ್ಟೈಶ್ವರ್ಯಯೋಗೇನ ಸರ್ವಾನುಪ್ರವಿಷ್ಟತ್ವಂ ಯಮಯಿತೃತ್ವಂ ಚ ಸ್ಯಾತ್. ಸ್ವಕರ್ಮಫಲಭೋಗಾಯ ಸರ್ವಭೂತೇಂದ್ರಿಯಾನುಪ್ರವಿಷ್ಟತ್ವಂ ಜೀವಸ್ಯ ನ ವಿರುಧ್ಯತೇ. ಮಹದಹಂಕಾರಾದಿರೂಪೇಣ ಪರಿಣಾಮಿತ್ವಾತ್ಪ್ರಧಾನಸ್ಯ ವ್ಯಾಪಕತ್ವಂ ಸಿದ್ಧಂ. ಸರ್ವಚೇತನೋಪಾದಾನಕಾರಣತಯಾ ವಿರಾಟ್ಪುರುಷಸ್ಯ

ಸರ್ವಭೂತಾನುಪ್ರವೇಶಿತ್ವಮುಚಿತಂ. 'ವಿಶ್ವಾಧಿಕೋ ರುದ್ರಃ' ಇತ್ಯಾದೌ ಪರಮೇಶ್ವರಸ್ಯ ವಿಶ್ವಾಧಿಕತ್ವನಿರ್ದೇಶಾದ್ವಿಕಾರಾತ್ಮಕಚೇತನಾಚೇತನರೂಪಪ್ರಪಂಚಾನುಪ್ರವಿಷ್ಟತ್ವಂ ಸರ್ವಥಾ ನ ಸಂಭವತಿ. ತಸ್ಮಾತ್ತದ್ಭಿನ್ನಸ್ಯೈವ ಸರ್ವಾತ್ಮಕತ್ವಸರ್ವನಿಯಂತೃತ್ವಾದಿಕಮುಪಪನ್ನಮಿತಿ ಪ್ರಾಪ್ತೇ ಬ್ರೂಮಃ. ಅಂತರ್ಯಾಮ್ಯಧಿದೈವಾಧಿಲೋಕೇಷು ತದ್ಧರ್ಮವ್ಯಪದೇಶಾತ್. ಯೋಽಧಿದೈವಾದಿಷ್ವಂತರ್ಯಾಮೀ ವ್ಯಪದಿಶ್ಯತೇ, ಸಃ ಪರಮಶಿವ ಏವ. ಕುತಃ? ತದ್ಧರ್ಮವ್ಯಪದೇಶಾತ್, ತಸ್ಯ ಪರಮೇಶ್ವರಸ್ಯ ಪೃಥಿವ್ಯಾದ್ಯಧಿದೇವತಾಭಿನ್ನತ್ವಸ್ಥೂಲಸೂಕ್ಷ್ಮಪ್ರಪಂಚಾನುಪ್ರವೇಶಿತ್ವನಿಯಂತೃತ್ವಕಾರಣತ್ವಾಮೃತತ್ವಾದಿಧರ್ಮಾಣಾಂ ವ್ಯಪದೇಶಾದುಪದೇಶಾದಿತ್ಯರ್ಥಃ. ನನು ನಿರ್ವಿಕಾರಸ್ಯ ಬ್ರಹ್ಮಣಃ ಯಮಯಿತೃತ್ವಾದ್ಯಸಂಭವಾತ್ ನಿರ್ಗುಣಬ್ರಹ್ಮಾಧ್ಯಸ್ತಮಿಥ್ಯಾಭೂತಪ್ರಧಾನಸತ್ತ್ವಗುಣಪ್ರತಿಬಿಂಬಿತೇಶ್ವರಸ್ಯೈವ ಸರ್ವನಿಯಂತೃತ್ವಾದಿಕಮಿತಿ ಚೇನ್ನ–'ಏಷ ತ ಆತ್ಮಾಂತರ್ಯಾಮ್ಯಮೃತಃ' ಇತಿ ವಾಕ್ಯೇ ಕಾಲತ್ರಯಾಬಾಧ್ಯಸ್ಯಾಮೃತಶಬ್ದಾಭಿಧೇಯಸ್ಯ ಶಿವಸ್ಯೈವ ನಿಯಂತೃತ್ವಾದಿಧರ್ಮನಿರ್ದೇಶಾತ್. ಮಿಥ್ಯಾಭೂತಸ್ಯ ಸರ್ವನಿಯಾಮಕತ್ವಾಸಂಭವಾತ್, ಲೋಕೇ ಪ್ರತಿಬಿಂಬಸ್ಯ ಕರ್ತೃತ್ವಾದರ್ಶನಾಚ್ಚ ಪ್ರತಿಬಿಂಬಿತೇಶ್ವರಸ್ಯ ಸರ್ವನಿಯಂತೃತ್ವಾದಿಕಂ ಸಿದ್ಧಂ. ನನು ನಿಯಾಮಕತ್ವಾದಿಧರ್ಮಾವಚ್ಛಿನ್ನಸ್ಯ ಪರಮೇಶ್ವರಾದನ್ಯಸ್ಯೈವ ಪರಬ್ರಹ್ಮತ್ವಂ ಕಿಂ ನ ಸ್ಯಾತ್? ಇತಿ ಚೇನ್ನ, ಅನವಸ್ಥಾದೋಷಪ್ರಸಂಗಾತ್. ತತ್ಸತ್ತ್ವೇ ಪ್ರಮಾಣಾಭಾವಾತ್. ತೇನ ಲೋಕಸ್ಯ ಪ್ರಯೋಜನಾಭಾವಾಚ್ಚ. ಗುಣಶೂನ್ಯಸ್ಯ ಬ್ರಹ್ಮತ್ವಾಂಗೀಕಾರೇ ಪಾಷಾಣಾದಿವಜ್ಜಡತ್ವಾಪತ್ತೇಃ. ತಸ್ಮಾತ್ತಸ್ಯೈವ ಸಗುಣತ್ವಂ ನಿರ್ಗುಣತ್ವಂ ಚ. ಶಕ್ತಿಸಂಕೋಚಕಾಲೇ ನಿರ್ಗುಣತ್ವಂ, ತದ್ವಿಕಾಸಕಾಲೇ ಸಗುಣತ್ವಂ. ಅತಸ್ಸರ್ವಜಗದುಭಯಕಾರಣತ್ವಸರ್ವಾತ್ಮಕತ್ವಸರ್ವಪ್ರವಿಷ್ಟತ್ವಸರ್ವನಿಯಾಮಕತ್ವಾದಿಕಂ ಮಹಾದೇವಸ್ಯ ಮಹೇಶ್ವರಸ್ಯೈವೋಪಪನ್ನಂ. ತಥಾ ಶ್ರುತ್ಯಂತರೇ 'ಯೋ ರುದ್ರೋ ಅಗ್ನೌ–ನಮೋ ಅಸ್ತು', 'ವಿಶ್ವಂ ಭೂತಂ ಭುವನಂ ಚಿತ್ರಂ–ಸರ್ವೋ ಹ್ಯೇಷ ರುದ್ರಃ' ಇತಿ ತೈತ್ತಿರೀಯೇ, 'ಅಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತಃ' ಇತ್ಯಥರ್ವಶಿರಸಿ ಚ ಶಿವಸ್ಯ ಪರಬ್ರಹ್ಮಣಃ ಸರ್ವಾಂತರ್ಯಾಮಿತ್ವಾದಿಧರ್ಮಾಣಾಂ ದರ್ಶನಾನ್ನಾನ್ಯಸ್ಯ ಪರಬ್ರಹ್ಮತ್ವಸರ್ವಾಂತರ್ಯಾಮಿತ್ವಸರ್ವಾತ್ಮತ್ವಾದಿಕಂ ಸರ್ವಥಾ ಸಂಭವತಿ. ಅನ್ಯಥಾ ಪ್ರಕರಣವಿರೋಧೋಽಪಿ ಸ್ಯಾತ್. ವ್ಯೋಮವತ್ಪರಿಪೂರ್ಣಸ್ಯ ಮಹೇಶ್ವರಸ್ಯ ವಿಶ್ವಾಧಿಕತ್ವಂ ವಿಶ್ವಾನುಪ್ರವಿಷ್ಟತ್ವಮಪ್ಯವಿರುದ್ಧಂ. "ಅಂತ

ಯರ್ಾಮ್ಯಮೃತಃ” ಇತಿ ಶಿವ ಏವಾತ್ರಾಮೃತಶಬ್ದೇನ ನಿರ್ದಿಶ್ಯತೇ. 'ಏತಾನಿ ಹ ವಾ ಅಮೃತಸ್ಯ ನಾಮಧೇಯಾನಿ' ಇತಿ ಜಾಬಾಲೇ ಶ್ರವಣಾತ್. ತತ್ರ ಪ್ರತಿಪರ್ಯಾಯಮಮೃತಶಬ್ದಪ್ರಯೋಗೋ ಹ್ಯಭ್ಯಾಸಃ. ಅಥರ್ವಶಿರಸಿ 'ಯೋ ವೈ ರುದ್ರಸ್ಸ ಭಗವಾನ್' ಇತ್ಯಾದಿನಾ ಸರ್ವಾತ್ಮಕತ್ವಪ್ರಸಾಧನೇ ಅನಂತದಿವ್ಯಮಂಗಳಗುಣರತ್ನಾಕರೇ ಶಿವೇ ಪುನಃ ಪುನರ್ಭಗವಚ್ಛಬ್ದಪ್ರಯೋಗವಜ್ಜಾಬಾಲೇ ಭೂಯೋ ಭೂಯಃ ಪರಮಶಿವೇ ಅಮೃತಶಬ್ದಪ್ರಯೋಗಾಭ್ಯಾಸೋ ರೂಢ್ಯರ್ಥೇ ನಿರ್ದಿಷ್ಟಃ.

ಸರ್ವಗತನಾದ ಶಿವನು ಕಣ್ಣಿನೊಳಗೆ ಉಪಾಸ್ಯನಾಗಿರುವನೆಂದು ತಿಳಿಸಿ ಅದರಂತೆ ಎಲ್ಲರೊಳಗೂ ಉಪಾಸ್ಯನಾಗಿರುವನೆಂಬುದನ್ನು ಇಲ್ಲಿ ಸೂತ್ರಕಾರನು ತಿಳಿಸುತ್ತಾನೆ.

## ಅಂತರ್ಯಾಮ್ಯಧಿಕರಣಂ ॥ ೫ ॥

### ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ॥ ೧೮ ॥

ಅಂತರ್ಯಾಮಿಬ್ರಾಹ್ಮಣದಲ್ಲಿ ಇದರ ವಿಷಯ ಬಂದಿದೆ. "ಯಾವನು ವಿಶ್ವದಲ್ಲಿ ಎಲ್ಲಾ ಕಡೆಯೂ ಇದ್ದುಕೊಂಡು ಎಲ್ಲವನ್ನೂ ನಿಯಮನಮಾಡುವನೋ" ಎಂದಾರಂಭಿಸಿ "ಯಾವನು ಪೃಥಿವಿಯಲ್ಲಿದ್ದು ಅದಕ್ಕೂ ಹೊರಗಿರುವನೋ, ಯಾವನನ್ನು ಪೃಥಿವಿ ಅರಿಯದೋ, ಯಾವನಿಗೆ ಪೃಥಿವಿಯು ಶರೀರವೋ, ಯಾವನು ಪೃಥಿವಿಯನ್ನು ನಿಯಮನಮಾಡುವನೋ, ಅವನೇ ನಿನ್ನ ಆತ್ಮನು, ಅಂತರ್ಯಾಮಿಯು ಮತ್ತು ಅಮೃತನು" ಎಂದು ಮುಂತಾಗಿ ಶ್ರುತಿಯಲ್ಲಿ ಹೇಳಿದೆ. ಇಲ್ಲಿ ಅಧಿದೈವತ ಅಧಿಲೋಕ-ಅಧಿವೇದ-ಅಧಿಯಜ್ಞ-ಅಧಿಭೂತ-ಅಧ್ಯಾತ್ಮ ಇವುಗಳೊಳಗೆ ಇದ್ದು ಎಲ್ಲವನ್ನೂ ನಿಯಮನಮಾಡುವ ಅಂತರ್ಯಾಮಿಯೆಂದರೆ ಅವುಗಳ ಅಭಿಮಾನಿದೇವತೆಯೇ? ಅಥವಾ ಅಣಿಮಾದ್ಯೈಶ್ವರ್ಯಗಳನ್ನು ಹೊಂದಿರುವ ಯಾವನಾದರೊಬ್ಬ ಯೋಗಿಯೇ? ಅಥವಾ ಪರಮೇಶ್ವರನೇ? ಅಥವಾ ಬೇರೆ ಯಾವುದಾದರೊಂದು ಪದಾರ್ಥವೇ? ಎಂದು ಸಂಶಯವುಂಟಾಗುತ್ತದೆ. "ಯಾವನಿಗೆ ಪೃಥಿವಿಯೇ ಆಶ್ರಯವೋ, ಅಗ್ನಿಯೇ ಲೋಕವೋ, ಮನಸ್ಸೇ ಜ್ಯೋತಿಯೋ" ಎಂಬ ಶ್ರುತಿಯ ಪ್ರಕಾರ ಒಬ್ಬ ದೇವತಾತ್ಮನು ಪೃಥಿವ್ಯಾದಿಗಳೊಳಗೆ ಇದ್ದು ಅವನ್ನು ನಿಯಮಿಸುತ್ತಾನೆಂಬ ಕಾರಣದಿಂದ ದೇವತಾತ್ಮನಿಗೆ ಈ ಬಗೆಯ ನಿಯಮನ ಹೊಂದಬಹುದು. ಶರೀರವಿಲ್ಲದ ಶಿವನು ಇವೆಲ್ಲವನ್ನು ಹೀಗೆ ನಿಯಮನಮಾಡಲಾರನು. ಆದ್ದರಿಂದ ದೇವತಾತ್ಮಪಕ್ಷವೇ ಯುಕ್ತವಾಗಿದೆ ಅಥವಾ ಒಬ್ಬ ಸಿದ್ಧನಾದ ಯೋಗಿಯು ಎಲ್ಲದರಲ್ಲೂ ಒಳಹೊಕ್ಕು ಹೀಗೆ ನಿಯಮನಮಾಡಬಹುದು. ಸ್ವಕರ್ಮಫಲಭೋಗಕ್ಕಾಗಿ ಸರ್ವಭೂತಗಳಲ್ಲೂ ಸರ್ವೇಂದ್ರಿಯಗಳಲ್ಲೂ ಜೀವನು ಹೀಗೆ ಪ್ರವೇಶಿಸಲಿಕ್ಕೂ ಅಡ್ಡಿ ಇಲ್ಲ. ಬುದ್ಧಿ-ಅಹಂಕಾರ ರೂಪದಿಂದ ಪ್ರಧಾನವು ಅಪರಿಮಿತವಾದ್ದರಿಂದ ಹೀಗೆ ಎಲ್ಲಾ ಕಡೆಯೂ ವ್ಯಾಪಿಸಿರಬಹುದು. ಎಲ್ಲಾ ಚೇತನಗಳಿಗೂ ಉಪಾದಾನವಾದ್ದರಿಂದ ವಿರಾಟ್ಪುರುಷನು ಹೀಗೆ ಎಲ್ಲವಸ್ತುಗಳಲ್ಲೂ ಪ್ರವೇಶಿಸಿರಬಹುದು. ವಿಶ್ವಾಧಿಕೋ

ರುದ್ರಃ" ಎಂಬಲ್ಲಿ ಪರಶಿವನನ್ನು ವಿಶ್ವಾಧಿಕನೆಂದು ಹೇಳಿರುವುದರಿಂದ ವಿಕಾರಗಳಿಂದೊಡಗೂಡಿದ ಚರಾಚರಪ್ರಪಂಚದೊಳಗೆ ಪ್ರವೇಶಿಸುವುದಂತೂ ಅವನಿಗೆ ಎಂದಿಗೂ ಸಂಭವಿಸಲಾರದು. ಆದ್ದರಿಂದ ಅವನಲ್ಲದೆ ಬೇರೆ ಯಾವುದನ್ನಾದರೂ ಸರ್ವಾತ್ಮಕವೆಂದೂ, ಸರ್ವನಿಯಾಮಕವೆಂದೂ ಹೇಳುವುದೇ ಯುಕ್ತವಾಗಿದೆ. ಹೀಗೆ ಪೂರ್ವಪಕ್ಷ ಬಂದರೆ ಅದಕ್ಕೆ ಸೂತ್ರದಲ್ಲಿ ಸಮಾಧಾನವನ್ನು ಹೇಳಲಾಗಿದೆ. ಅಧಿದೈವವೇ ಮೊದಲಾದವುಗಳಲ್ಲಿ ಯಾವನು ಅಂತರ್ಯಾಮಿಯೆಂದು ಕರೆಯಲ್ಪಡುತ್ತಿರುವನೋ ಅವನು ಪರಮೇಶ್ವರನೇ ಇರುವನು. ಯಾಕೆಂದರೆ ಪರಮೇಶ್ವರನೇ ಪೃಥಿವ್ಯಾದ್ಯಧಿದೇವತೆಗಳಿಂದ ಭಿನ್ನನಾಗಿ ಸ್ಥೂಲಸೂಕ್ಷ್ಮ ಪ್ರಪಂಚಗಳೊಳಗೆ ಪ್ರವೇಶಿಸಿ ಅವನ್ನು ನಿಯಮನಮಾಡುವನೆಂದೂ, ಅವನೇ ಇವೆಲ್ಲಕ್ಕು ಕಾರಣನೂ ಅಮೃತನೂ ಆಗಿರುವನೆಂದೂ, ಶ್ರುತಿಯು ಅವನಲ್ಲಿಯೇ ಈ ಧರ್ಮಗಳನ್ನು ತಿಳಿಸಿದೆ. ಆದ್ದರಿಂದ ಸರ್ವಭೂತಗಳ ಅಂತರ್ಯಾಮಿ ಎಂದರೆ ಪರಮೇಶ್ವರನೇ ಇರುವನೆಂಬುದು ಸ್ಪಷ್ಟಪಡುತ್ತದೆ. ನಿರ್ವಿಕಾರವಾದ ಬ್ರಹ್ಮಕ್ಕೆ ನಿಯಮನವು ಸಂಭವಿಸದಿರುವುದರಿಂದ ನಿರ್ಗುಣಬ್ರಹ್ಮದಲ್ಲಿ ಅಧ್ಯಸ್ತನೂ, ಪ್ರಧಾನದ ಸತ್ತ್ವಗುಣದಲ್ಲಿ ಪ್ರತಿಬಿಂಬಿತನೂ ಆದ ಈಶ್ವರನಿಗೆ ಈ ಬಗೆಯ ನಿಯಮನ ಹೊಂದಬಹುದಲ್ಲವೇ? ಎಂದು ಕೇಳುವುದು ಯುಕ್ತವಲ್ಲ; ಯಾಕೆಂದರೆ ‘ ಇದು ನಿನ್ನ ಆತ್ಮ, ಅಂತರ್ಯಾಮಿ, ಅಮೃತ" ಎಂಬಲ್ಲಿ ಮೂರು ಕಾಲಗಳಲ್ಲೂ ಅಬಾಧಿತವಾಗಿ ಅಮೃತನೆನಿಸಿಕೊಂಡಿರುವ ಶಿವನಿಗೇ ನಿಯಮನವೇ ಮೊದಲಾದ ಧರ್ಮಗಳನ್ನು ಹೇಳಲಾಗಿದೆ. ಮಿಥ್ಯೆಯಾದ ಈಶ್ವರನಿಗೆ ಈ ಬಗೆಯ ನಿಯಮನ ಹೊಂದುವುದಿಲ್ಲ. ಲೋಕದಲ್ಲಿ ಎಲ್ಲಿಯೂ ನೆರಳನ್ನು ಕರ್ತೃವೆಂದು ಯಾರೂ ಹೇಳುವುದಿಲ್ಲ ಮತ್ತು ಹಾಗೆ ನಂಬುವುದೂ ಇಲ್ಲ. ಹೀಗೆ ಬ್ರಹ್ಮದ ನೆರಳೆನಿಸಿದ ಈಶ್ವರನು ಎಲ್ಲಕ್ಕೂ ನಿಯಂತೃವೆಂಬುದು ಯುಕ್ತವಾಗುವುದಿಲ್ಲವಾದ್ದರಿಂದ ಪರಶಿವಬ್ರಹ್ಮನೇ ಸರ್ವಾಂತರ್ಯಾಮಿಯೂ ಸರ್ವನಿಯಂತೃವೂ ಆಗಿದ್ದಾನೆ. ನಿಯಮನವೇ ಮೊದಲಾದ ಧರ್ಮಗಳಿಲ್ಲದ ಬೇರೊಂದು ವಸ್ತು ಏಕೆ ಪರಬ್ರಹ್ಮವಾಗಬಾರದು? ಎಂದು ಕೇಳಿದರೆ ಅನವಸ್ಥೆಯುಂಟಾಗುವುದು. ಯಾಕೆಂದರೆ ಅಂತಹದೊಂದು ವಸ್ತುವಿರುವುದರಲ್ಲಿ ಪ್ರಮಾಣವಿಲ್ಲ. ಅದರಿಂದ ಲೋಕದಲ್ಲಿ ಯಾರಿಗೂ ಏನೂ ಪ್ರಯೋಜನವಾಗಲಾರದು. ಗುಣವಿಲ್ಲದ್ದನ್ನು ಬ್ರಹ್ಮವೆಂದು ಅಂಗೀಕರಿಸಿದರೆ ಅದು ಪಾಷಾಣದಂತೆ ಜಡವೇ ಆಗಬೇಕಾದೀತು. ಆದ್ದರಿಂದ ಒಬ್ಬನೇ ಸಗುಣನೂ ನಿರ್ಗುಣನೂ ಆಗಿರುವನು. ಶಕ್ತಿಸಂಕೋಚಕಾಲದಲ್ಲಿ ಅವನು ನಿರ್ಗುಣನಾಗಿದ್ದು ಶಕ್ತಿವಿಕಾಸಕಾಲದಲ್ಲಿ ಸಗುಣನೆನಿಸುವನು. ಹೀಗೆ ಜಗದುಭಯಕಾರಣನೂ ಸರ್ವಾತ್ಮಕನೂ ಸರ್ವಾಶ್ರಯನೂ ಸರ್ವನಿಯಾಮಕನೂ, ವಿಶ್ವದ ವಿಶ್ರಾಂತಿಸ್ಥಲವೂ ಆದ ಮಹಾದೇವನೇ ಮಹೇಶ್ವರನೆಂಬುದು ಯುಕ್ತವಾಗಿದೆ. " ಅಗ್ನಿ, ಲತೆ, ನೀರು ಎಲ್ಲದರಲ್ಲೂ ರುದ್ರನು ಪ್ರವೇಶಿಸಿರುವನು" " ವಿಶ್ವದಲ್ಲಿ ಹಿಂದೆ ಹುಟ್ಟಿದ್ದು ಮುಂದೆ ಹುಟ್ಟುವುದು ಎಲ್ಲವೂ ರುದ್ರನೇ" ಎಂದು ತೈತ್ತಿರೀಯದಲ್ಲೂ, " ಅವನು ಒಳಗಿಂದ ಒಳಗೆ ಪ್ರವೇಶಿ

ಸಿದನು" ಎಂದು ಅಥರ್ವಶಿರಸ್ಸಿನಲ್ಲೂ ಶಿವನೇ ಅಂತರ್ಯಾಮಿ ಎಂದು ಹೇಳಿರುವು ದರಿಂದ ಸರ್ವಾಂತರ್ಯಾಮಿಯೂ ಸರ್ವಾತ್ಮಕನೂ ಆದವನು ಶಿವನಲ್ಲದೆ ಬೇರೆಯಲ್ಲ ವೆಂಬುದು ಸ್ಪಷ್ಟವಾಗುತ್ತದೆ. ಹಾಗೆ ಹೇಳದಿದ್ದರೆ ಪ್ರಕರಣವಿರೋಧವುಂಟಾಗುತ್ತದೆ. ಆಕಾಶದಂತೆ ಪರಿಪೂರ್ಣನಾದ ಮಹೇಶ್ವರನು ವಿಶ್ವಧಾರನಾದ್ದರಿಂದ ವಿಶ್ವದೊಳಗೆ ಪ್ರವೇಶಿಸುವುದರಲ್ಲಿ ವಿರೋಧವೇನೂ ಕಾಣುವುದಿಲ್ಲ. 'ಅಂತರ್ಯಾಮ್ಯಮೃತಃ' ಎಂಬಲ್ಲಿ ಶಿವನೇ ಅಮೃತನೆಂದು ತಿಳಿಸಲಾಗಿದೆ. 'ಇವೆಲ್ಲವೂ ಅಮೃತದ ಹೆಸರುಗಳು' ಎಂದು ಜಾಬಾಲಶ್ರುತಿಯಲ್ಲೂ ಹೇಳಿದೆ. ಹೀಗೆ ಪ್ರತಿಯೊಂದು ಕಡೆಯೂ ಶಿವನಲ್ಲೇ ಅಮೃತಪದವನ್ನು ಪ್ರಯೋಗಿಸಿರುವುದು ಅಭ್ಯಾಸವೆನಿಸಿದೆ. ಅಥರ್ವಶಿರಸ್ಸಿನಲ್ಲಿ 'ರುದ್ರನೇ ಭಗವಾನ್ ಬ್ರಹ್ಮನು' ಎಂದು ನಿತ್ಯಮಂಗಳಗುಣಗಳಿಗಾಕಾರನಾದ ಶಿವನಲ್ಲಿ ಮತ್ತೆಮತ್ತೆ ಭಗವಚ್ಛಬ್ದವನ್ನು ಪ್ರಯೋಗಿಸಿರುವಂತೆ ಜಾಬಾಲದಲ್ಲಿ ಮತ್ತೆ ಮತ್ತೆ ಪರಶಿವನಲ್ಲಿ ಅಮೃತಶಬ್ದವನ್ನು ಪ್ರಯೋಗಿಸುವ ಅಭ್ಯಾಸವು ರೂಢಿಗೆ ಬಂದಿದೆ.

**ಅಧ್ಯಸ್ತಸ್ಯ ಮಿಥ್ಯಾಭೂತಸ್ಯ ಪ್ರಧಾನಸ್ಯ ಸರ್ವಾಂತರ್ಯಾಮಿತ್ವಮಾಶಂಕ್ಯ ನಿರಾಕರೋತಿ—ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ||೧೯||**

**ಸ್ಮಾರ್ತಂ ಗುಣತ್ರಯಸಮಷ್ಟ್ಯಾತ್ಮಕಂ ಪ್ರಧಾನಂ ತತ್ಸತ್ತ್ವಗುಣಪ್ರತಿಫಲಿತಂ ಚ ನಾಂತರ್ಯಾಮಿಶಬ್ದವಾಚ್ಯಂ ಭವಿತುಮರ್ಹತಿ, ಕಸ್ಮಾತ್? ಅತದ್ಧರ್ಮಾಭಿಲಾಪಾತ್. "ಅದೃಷ್ಟೋ ದ್ರಷ್ಟಾ ಅಶ್ರುತಶ್ರೋತಾ ಅಮತೋ ಮಂತಾ ಅವಿಜ್ಞಾತೋ ವಿಜ್ಞಾತಾ" ಇತಿ ವಾಕ್ಯಶೇಷದರ್ಶನಾದಾತ್ಮತ್ವದ್ರಷ್ಟೃತ್ವಾದಿಧರ್ಮಾಸಂಭವಾದಿತ್ಯರ್ಥಃ. ತಚ್ಛಬ್ದೇನ ಪ್ರಧಾನಮುಚ್ಯತೇ. ನ+ತತ್=ಅತತ್ ಪ್ರಧಾನಭಿನ್ನಃ ಪರಮಶಿವಃ, ತಸ್ಯೈವ ಧರ್ಮಾಃ ಅಮೃತತ್ವಾದಯಃ ತೇಷಾಮಭಿಲಾಪಾದಭಿಧಾನಾದಿತ್ಯರ್ಥಃ. ಪ್ರಧಾನಧರ್ಮಾಣಾಮಭಿಲಾಪಾಭಾವಾತ್ಸಾಂಖ್ಯಾದ್ದ್ವೈತಕಲ್ಪಿತಂ ಪ್ರಧಾನಂ ನಾಂತರ್ಯಾಮೀತಿ ಭಾವಃ. ನನು "ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ" ಇತಿ ಮನುಸ್ಮೃತೌ, 'ಅಜಾಮೇಕಾಂ' ಇತ್ಯಾದಿಶ್ರುತೌ ಚ ಪ್ರಧಾನಸ್ಯ ಸರ್ವಪ್ರಪಂಚಕಾರಣತ್ವೋಪದೇಶಾದಯಸ್ಕಾಂತಸೂಚೀನ್ಯಾಯೇನ ಬ್ರಹ್ಮಸತ್ತಾವಶಾತ್ಕಾರಣತ್ವಾಂತರ್ಯಾಮಿತ್ವಾದಿಕಂ ತಸ್ಯೈವೋಪಪದ್ಯತೇ ಇತಿ ಚೇನ್ನ 'ಸೋಽಕಾಮಯತ' ಇತ್ಯಾದೌ ಪರಬ್ರಹ್ಮಣಶ್ಶಿವಸ್ಯ ಪ್ರಧಾನನಿರಪೇಕ್ಷತಯಾ ಜಗಜ್ಜನ್ಮಾದಿಹೇತುತ್ವಶ್ರವಣಾತ್, 'ಕ್ಷರಾತ್ಮಾನಾವೀಶತೇ ದೇವ ಏಕಃ' 'ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ' ಇತ್ಯಾದೌ ಚ ಪರಮೇಶ್ವರಸ್ಯ ಪ್ರಧಾನಜೀವನಿಯಾಮಕತ್ವನಿರ್ದೇಶಾಚ್ಚ, ತತ್ಪ್ರತಿಬಿಂಬಿತೇಶ್ವರಸ್ಯಾಪಿ ನಾಂತರ್ಯಾಮಿತ್ವಂ. ಪ್ರತಿಫಲಿತಸ್ಯ ಜಡತ್ವಾದಲೀಕತ್ವಾಚ್ಚ ನೀರೂಪಯೋರ್ಬ್ರಹ್ಮಪ್ರಧಾನಯೋರುಭಯೋರ್ಬಿಂಬಪ್ರತಿ**

**ಬಿಂಬಭಾವಕಲ್ಪನಾಶಾಸ್ತ್ರಂ ಗಗನಭಿತ್ತಿಚಿತ್ರವದವಿಚಾರಮನೋಹರಂ. ಅತಸ್ಸರ್ವಾಂತರ್ಯಾಮೀ ಮಹೇಶ್ವರ ಇತಿ ರಾದ್ಧಾಂತಃ.**

ಬ್ರಹ್ಮದಲ್ಲಿ ಅಧ್ಯಸ್ತವಾದ ಪ್ರಧಾನವು ಸರ್ವಾಂತರ್ಯಾಮಿಯಾಗಲೆಂದು ಆಶಂಕಿಸಿ ನಿರಾಕರಿಸುತ್ತಾನೆ- **ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ||೧೯||**

ಸ್ಮೃತಿಯಲ್ಲಿ ಹೇಳಿರುವ ಪ್ರಧಾನವೂ ಅಂತರ್ಯಾಮಿಯಾಗಲಾರದು. ಯಾಕೆಂದರೆ ಅದಕ್ಕೆ ಅಲ್ಲಿ ಹೇಳಿರುವ ಆತ್ಮ, ದ್ರಷ್ಟೃ ಮೊದಲಾದ ಧರ್ಮಗಳು ಸಂಭವಿಸುವುದಿಲ್ಲ. ಗುಣತ್ರಯಸಮಷ್ಟಿ ಎನಿಸಿದ ಪ್ರಧಾನವು ಸತ್ತ್ವಗುಣದಲ್ಲಿ ಪ್ರತಿಫಲಿಸಿದರೂ ಅಂತರ್ಯಾಮಿ ಎನಿಸಲಾರದು. "ದರ್ಶನ ಶ್ರವಣಾದಿಗಳಿಗೆ ವಿಷಯವಾಗದಿದ್ದರೂ ದರ್ಶಶ್ರವಣಾದಿಗಳನ್ನು ನಡೆಸುತ್ತಿರುವವನು" ಎಂಬ ಶ್ರುತಿಯಂತೆ ದರ್ಶನವೇ ಮೊದಲಾದ ಚೇತನಧರ್ಮಗಳು ಅಚೇತನವಾದ ಪ್ರಧಾನಕ್ಕೆ ಹೊಂದುವುದಿಲ್ಲ. ಸೂತ್ರದಲ್ಲಿ ಅತತ್ ಎಂದರೆ ಪ್ರಧಾನಭಿನ್ನವಾದದ್ದು ಪರಶಿವನೆಂದರ್ಥ. ಅವನ ಧರ್ಮಗಳಾದ ಅಮೃತತ್ವವೇ ಮೊದಲಾದವನ್ನೇ ಇಲ್ಲಿ ಹೇಳಿ ಪ್ರಧಾನದ ಧರ್ಮಗಳನ್ನು ಹೇಳದೇ ಇರುವುದರಿಂದ ಸಾಂಖ್ಯರೂ ಅದ್ವೈತಿಗಳೂ ಕಲ್ಪಿಸುವ ಪ್ರಧಾನವು ಅಂತರ್ಯಾಮಿಯಾಗಲಾರದು. "ಊಹಿಸಲಾಗದ್ದು-ತಿಳಿಯಲಾಗದ್ದು, ಎಲ್ಲೆಲ್ಲೂ ಮಲಗಿದಂತಿರುವುದು" ಎಂಬ ಸ್ಮೃತಿಯಲ್ಲೂ, 'ಅಜಾಮೇಕಾಂ' ಎಂಬ ಶ್ರುತಿಯಲ್ಲೂ ಪ್ರಧಾನವೇ ಸರ್ವಕಾರಣವೆಂದು ಹೇಳಲಾಗಿದೆ. ಅಯಸ್ಕಾಂತಸೂಚೀ ನ್ಯಾಯದಂತೆ ಬ್ರಹ್ಮಸಾನ್ನಿಧ್ಯದಿಂದ ಪ್ರಧಾನವೇ ಜಗತ್ಕಾರಣವೂ ಜಗದಂತರ್ಯಾಮಿಯೂ ಏಕೆ ಆಗಬಾರದು?ಎಂದರೆ ಅದು ಹಾಗಾಗಲಾರದು 'ಅವನೇ ವಿಸ್ತಾರವಾಗಲಿಚ್ಛಿಸಿದನು, ಅದನ್ನು ಸೃಜಿಸಿ ಅದರೊಳಗೆ ಪ್ರವೇಶಿಸಿದನು' ಇಲ್ಲಿ ಪರಶಿವನೇ ಸ್ವತಂತ್ರನಾಗಿ ಜಗತ್ಕಾರಣನೆಂದು ಹೇಳಲಾಗಿದೆ. 'ಮಾಯೆ ಪ್ರಕೃತಿ ಎನಿಸಿದರೆ ಈಶ್ವರನು ಮಾಯಾಕೋಲಾಹಲನೆನಿಸಿದ್ದಾನೆ' 'ಪ್ರಧಾನವು ಪರಶಿವನಲ್ಲಿ ಲಯವಾಗತಕ್ಕದ್ದು". "ಶಿವನೊಬ್ಬನೇ ಪ್ರಧಾನಜೀವರನ್ನು ನಿಯಮನಮಾಡಬಲ್ಲನು" ಎಂಬಲ್ಲಿ ಪ್ರಧಾನಕ್ಕೆ ಶಿವನೇ ನಿಯಾಮಕನೆಂದು ಹೇಳಿದೆಯಾದ್ದರಿಂದ ಪ್ರತಿಬಿಂಬನಾದ ಈಶ್ವರನೂ ಅಂತರ್ಯಾಮಿಯಾಗಲಾರನು. ಪ್ರತಿಬಿಂಬಿತವಾದ ಆಕಾರ ಜಡವಾದ್ದರಿಂದ ಸುಳ್ಳಾಗುವುದು. ಹೀಗೆ ರೂಪವಿಲ್ಲದ ಬ್ರಹ್ಮಪ್ರಧಾನಗಳೆರಡಕ್ಕೂ ಬಿಂಬಪ್ರತಿಬಿಂಬಭಾವವನ್ನು ಕಲ್ಪಿಸುವ ಶಾಸ್ತ್ರವು ಆಕಾಶದಲ್ಲಿ ಕಟ್ಟುವ ಗೋಡೆಯಂತೆ ನಿರಾಧಾರವಾದ್ದರಿಂದ ಅದ್ವೈತಮತದಂತೆ ಸಾಂಖ್ಯಮತವೂ ಮುಮುಕ್ಷುಗಳಿಗೆ ಗ್ರಾಹ್ಯವಾಗುವುದಿಲ್ಲ. ಹೀಗೆ ಮಹೇಶ್ವರನೇ ಸರ್ವಾಂತರ್ಯಾಮಿ ಎಂಬುದು ಸಿದ್ಧವಾಯಿತು.

**ಜೀವಸ್ಯ ಚೇತನತ್ವಾದ್ದ್ರಷ್ಟೃತ್ವಾದಿಧರ್ಮಾಣಾಂ ತಸ್ಯೈವೋಪಪತ್ತಿಮಾಶಂಕ್ಯಾಹ- ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ.**

**ಅತ್ರಾಪಿ ನೇತ್ಯನುವರ್ತತೇ. ಶಾರೀರಶ್ಚ ಜೀವೋಽಪಿ ನಾಂತರ್ಯಾಮ್ಯಾಚಕ್ಷ್ಯತೇ. ಕುತಃ? ಉಭಯೇಽಪಿ ಹಿ ಭೇದೇನೈನಮ**

ಧೀಯತೇ. ಉಭಯೋಽಪಿ ಹಿ ಕಾಣ್ವಮಾಧ್ಯಂದಿನಾಶ್ಚ ಏನಂ ಕ್ಷೇತ್ರಜ್ಞಂ ಅಂತರ್ಯಾಮ್ಯಭಿನ್ನತಯಾ ಅಧೀಯತೇ. 'ಯೋ ವಿಜ್ಞಾನೇ ತಿಷ್ಠನ್' ಇತಿ ಕಾಣ್ವಾಃ. 'ಯ ಆತ್ಮನಿ ತಿಷ್ಠನ್' ಇತಿ ಮಾಧ್ಯಂದಿನಾಃ. ವಿಜ್ಞಾನಾತ್ಮಶಬ್ದಯೋರ್ಜೀವಪರ್ಯಾಯತ್ವಾತ್, ಜೀವಾದನ್ಯಃ ಪರಮಶಿವ ಏವಾಂತರ್ಯಾಮಿತ್ಯುಪದಿಶ್ಯತೇ. ತಸ್ಮಾಜ್ಜೀವವಿರಾಟ್ಪುರುಷಪ್ರಧಾನಾದೀನಾಮಂತರ್ಯಾಮಿತ್ವಂ ನ ಘಟತ ಇತಿ ಸಿದ್ಧಂ. ನನು 'ನಾನ್ಯೋಽತೋಽಸ್ತಿ ದ್ರಷ್ಟಾ' ಇತಿ ಶ್ರುತೇಃ ಪರಮೇಶ್ವರಾದನ್ಯಂ ದ್ರಷ್ಟಾರಂ ಶ್ರೋತಾರಂ ಮಂತಾರಂ ವಿಜ್ಞಾತಾರಂ ಚಾತ್ಮಾನಂ ನಿರಸ್ಯತಿ, ತಸ್ಮಾದ್ದ್ರಷ್ಟೃದ್ವಯಂ ಶರೀರೇ ನೋಪಪದ್ಯತೇ ಇತಿ ಚೇನ್ನ, 'ದ್ವಾ ಸುಪರ್ಣಾ' ಇತ್ಯಾದೌ ಜೀವಬ್ರಹ್ಮಣೋಸ್ಸಾಹಚರ್ಯವ್ಯಪದೇಶಾತ್, "ನಾನ್ಯೋಽತೋಽಸ್ತಿ ದ್ರಷ್ಟಾ" ಇತಿ ಶ್ರುತಾವಧಿಷ್ಠಾತ್ರಂತರನಿಷೇಧೋ ಯುಜ್ಯತೇ. "ಯತ್ರ ಹಿ ದ್ವೈತಮಿವ ಭವತಿ" ಇತ್ಯನೇನ ಜೀವಬ್ರಹ್ಮಣೋರಾದೌ ಸಂಸಾರದಶಾಯಾಂ ಭೇದಃ. "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್" ಇತ್ಯನೇನ ಮೋಕ್ಷದಶಾಯಾಂ ಸರ್ವಸ್ಯ ಶಿವಾತ್ಮಕತ್ವಜ್ಞಾನಾತ್ಸಂಸಾರಪ್ರತಿಷೇಧೋಽವಗಮ್ಯತೇ. ತಸ್ಮಾಜ್ಜೀವಬ್ರಹ್ಮಣೋರ್ಭೇದಾಭೇದೋ ಯುಕ್ತಃ. ಅತಸ್ಸರ್ವನಿಯಾಮಕಸ್ಸರ್ವಾಂತರ್ಯಾಮೀ ಪರಮೇಶ್ವರ ಏಕ ಏವೋಚ್ಯತೇ.

ಜೀವನಲ್ಲಿ ದ್ರಷ್ಟೃತ್ವವೇ ಮೊದಲಾದ ಧರ್ಮಗಳು ಹೊಂದುವುದರಿಂದ ಅವನೇ ಅಂತರ್ಯಾಮಿಯಾಗಲೆಂದಾಶಂಕಿಸಿ ನಿರಾಕರಿಸುತ್ತಾನೆ.

**ಶಾರೀರಶ್ಚೋಭಯೋಽಪಿ ಹಿ ಭೇದೇನೈನಮಧೀಯತೇ ॥ ೨೦ ॥**

ಇಲ್ಲಿಯೂ 'ನ' ಎಂಬುದನ್ನು ಸೇರಿಸಿಕೊಳ್ಳಬೇಕು. ಶರೀರದಲ್ಲಿರುವ ಜೀವನು ಅಂತರ್ಯಾಮಿಯಾಗಲಾರನು. ಯಾಕೆಂದರೆ ಕಾಣ್ವಮಾಧ್ಯಂದಿನರಿಬ್ಬರೂ ಇವನನ್ನು ಅಂತರ್ಯಾಮಿಗಿಂತ ಬೇರೆಯೆಂದು ಹೇಳುತ್ತಿದ್ದಾರೆ. 'ವಿಜ್ಞಾನೇ ತಿಷ್ಠನ್' ಎಂದು ಕಾಣ್ವರೂ, 'ಆತ್ಮನಿ ತಿಷ್ಠನ್' ಎಂದು ಮಾಧ್ಯಂದಿನರೂ ಹೇಳಿರುವುದರಿಂದ ವಿಜ್ಞಾನ ಆತ್ಮ ಇವೆರಡು ಶಬ್ದಗಳೂ ಜೀವನ ಹೆಸರೇ ಆಗಿವೆ. ಒಟ್ಟಿನಲ್ಲಿ ಜೀವನಿಗಿಂತಲೂ ಬೇರೆಯಾದ ಪರಶಿವನೇ ಅಂತರ್ಯಾಮಿ ಎಂದು ಎರಡು ಶಾಖೆಯವರೂ ಹೇಳಿದ್ದಾರೆ. ಆದ್ದರಿಂದ ಜೀವ, ವಿರಾಟ್ಪುರುಷ, ಪ್ರಧಾನ ಇವುಗಳಲ್ಲಿ ಯಾವುದನ್ನೂ ಅಂತರ್ಯಾಮಿ ಎಂದು ಹೇಳುವುದು ಹೊಂದುವುದಿಲ್ಲ. 'ಇವನಿಗಿಂತ ಬೇರೆ ದ್ರಷ್ಟೃವಿಲ್ಲ' ಎಂಬ ಶ್ರುತಿಯಲ್ಲಿ ಪರಶಿವನಿಗಿಂತ ಬೇರೆ ದ್ರಷ್ಟೃವನ್ನೂ ಶ್ರೋತೃವನ್ನೂ, ಮಂತೃವನ್ನೂ ವಿಜ್ಞಾತೃವನ್ನೂ ನಿಷೇಧಿಸಲಾಗಿದೆ. ಆದ್ದರಿಂದ ಈ ಶರೀರದಲ್ಲಿ ನೋಡುವವರಿಬ್ಬರಿದ್ದಾರೆಂಬುದು ಯುಕ್ತವಲ್ಲವೆಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನ ಹೀಗಿದೆ. 'ದ್ವಾ ಸುಪರ್ಣಾ'ಎಂಬ ಮಂತ್ರದಲ್ಲಿ ದೇಹದಲ್ಲಿ ಇಬ್ಬರು ಜೊತೆಯಲ್ಲಿರುವರೆಂದು ಹೇಳಿ

ರುವುದರಿಂದ, 'ಇಲ್ಲಿ ಬೇರೆ ದ್ರಷ್ಟೃವಿಲ್ಲ'ವೆಂಬ ಶ್ರುತಿಯು ಬೇರೊಂದು ಆಶ್ರಯವನ್ನು ನಿಷೇಧಿಸುವುದೇ ಹೊರತು ಜೀವನನ್ನು ನಿಷೇಧಿಸುವುದಿಲ್ಲವೆಂದು ತಿಳಿಸುತ್ತದೆ. 'ಎಲ್ಲಿ ಇಬ್ಬರಿರುವರೋ" ಎಂಬಲ್ಲಿ ಶಿವಜೀವರಿಗೆ ಸಂಸಾರದಶೆಯಲ್ಲಿ ಭೇದವೂ, 'ಎಲ್ಲಿ ಇವನಿಗೆ ಎಲ್ಲವೂ ಆತ್ಮವೇ ಆಗುವುದೋ ಅಲ್ಲಿ ನೋಡುವವರು ಯಾರು ? ಕೇಳುವವರು ಯಾರು"? ಎಂಬಲ್ಲಿ ಮೋಕ್ಷದಶೆಯಲ್ಲಿ ಎಲ್ಲವೂ ಶಿವಾತ್ಮಕವೆಂಬ ಜ್ಞಾನವಿರುವುದರಿಂದ ಸಂಸಾರದ ನಿಷೇಧವೂ ಸ್ಪಷ್ಟಪಡುತ್ತದೆ. ಹೀಗೆ ಶಿವಜೀವರಿಗೆ ಭೇದಾಭೇದವೇ ಯುಕ್ತವೆನಿಸುತ್ತದೆ. ಆದ್ದರಿಂದ ಶಿವನೇ ಸರ್ವನಿಯಾಮಕನೆಂಬಲ್ಲಿ ಯಾವ ವಿರೋಧವೂ ಇಲ್ಲ.

ಜೀವಾದೀನಾಂ ಬ್ರಹ್ಮತ್ವಸ್ವಪ್ರವರ್ತಕತ್ವವಾರಣಾಯ ಪರಮಶಿವಸ್ಯ ಸರ್ವಾಂತರ್ಯಾಮಿತ್ವಂ ಪ್ರಸಾಧ್ಯ ತಸ್ಯೈವ ಸರ್ವಾಧಿಕತ್ವವ್ಯವಸ್ಥಾಪನಾರ್ಥಂ ಅದೃಶ್ಯತ್ವಾದಿಗುಣಕತ್ವಮಧಿಕರಣಾಂತರೇಣ ದರ್ಶಯತಿ—

ಅದೃಶ್ಯತ್ವಾಧಿಕರಣಂ ‖ ೬ ‖

ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ‖ ೨೧ ‖

ಆಥರ್ವಣೇ ದೃಶ್ಯತೇಽಸ್ಯ ವಿಷಯಃ. "ಅಥ ಪರಾ ಯಯಾ ತದಕ್ಷರಮಧಿಗಮ್ಯತೇ ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ । ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ ‖" ಇತ್ಯಾದಿ. ಕಿಮತ್ರಾದೃಶ್ಯತ್ವಾದಿಗುಣಕೋ ಭೂತಯೋನಿಃ ? ಶಾರೀರಃ ? ಪ್ರಕೃತಿಃ ? ಪರಮಶಿವೋ ವಾ ? ಇತಿ ಸಂಶಯಃ. 'ಅಜಾಮೇಕಾಂ' ಇತ್ಯಾದೌ ಪ್ರಧಾನಸ್ಯ ಗುಣತ್ರಯಾತ್ಮಕಸ್ಯ ಬಹುಪ್ರಜಾಜನಕತ್ವೇನ ಭೂತಯೋನಿತ್ವೋಪಪತ್ತೇಃ, ಯೋನಿಶಬ್ದಸ್ಯ ನಿಮಿತ್ತವಾಚಕತ್ವಾದ್ಭೂತಯೋನಿರ್ವಿಜ್ಞಾನಾತ್ಮಾ ಸ್ಯಾತ್. ಚಿದ್ರೂಪಸ್ಯ ನಿಷ್ಕಳಂಕಸ್ಯ ಪರಶಿವಸ್ಯ ಪೃಥಿವ್ಯಾದಿರೂಪೇಣ ಮೃದಾದಿವತ್ಪರಿಣಾಮಿತ್ವಂ ನ ಸಂಭವತಿ. 'ಯಥೋರ್ಣನಾಭಿಸ್ಸೃಜತೇ' ಇತ್ಯಾದೌ ಚೇತನೋರ್ಣನಾಭಾವಚೇತನತಂತುಚಕ್ರನಿರ್ಮಾಣೋಪಸಂಹಾರದರ್ಶನಾಚ್ಚಿದ್ರೂಪಸ್ಯ ಚೇತನಾಚೇತನಪ್ರಪಂಚಕಾರಣತ್ವಮುಪಪದ್ಯತ ಇತಿ ಚೇನ್ನ, ನ ಹಿ ಕೇವಲಚೇತನೋರ್ಣನಾಭೇಸ್ತಂತುಪಟಹೇತುತ್ವಂ ತಚ್ಛರೀರಸ್ಯೈವ ತದುಪಾದನಕಾರಣತ್ವದರ್ಶನಾತ್. ತಥಾ ಪುರುಷಶರೀರಸ್ಯೈವ ಲೋಮನಖಾದಿಹೇತುತ್ವಂ. ತಸ್ಮಾದಿಹಾದೃಶ್ಯತ್ವಾದಿಧರ್ಮಾಃ ಪ್ರಧಾನೇ ಯುಜ್ಯಂತೇ. 'ಯಸ್ಸರ್ವಜ್ಞಃ' ಇತ್ಯಾದಿವಾಕ್ಯಶೇಷೇ ಪರಮಶಿವಧರ್ಮಬಾಹುಳ್ಯದ್ಯೋತನಾತ್ಕಥಂ ಪ್ರಕೃತೇ ಭೂತಯೋನಿತ್ವಮಿತಿ ಚೇದಭಿಧೀಯತೇ. "ಅಥ ಪರಾ ಯಯಾ ತದಕ್ಷರಮಧಿಗಮ್ಯತೇ" ಇತ್ಯಾದಾವಕ್ಷರಶಬ್ದೇ

ನಾದೃಶ್ಯತ್ವಾದಿಧರ್ಮಾವಚ್ಛಿನ್ನಂ ಪ್ರಧಾನಂ ಶ್ರಾವಯಿತ್ವಾ ‘ಅಕ್ಷರಾತ್ಪರತಃ ಪರಃ’ ಇತ್ಯತ್ರ ಯೋಽಕ್ಷರಾತ್ಪರಶ್ಶ್ರುತಃ ಸ ಸರ್ವಜ್ಞೋ ಭವಿಷ್ಯತಿ. ತಸ್ಮಾದಕ್ಷರಶಬ್ದವಾಚ್ಯಂ ಪ್ರಧಾನಂ ಭೂತಯೋನಿಃ ಇತಿ ಪ್ರಾಪ್ತೇ ಬ್ರೂಮಃ—ಅತ್ರಾದೃಶ್ಯತ್ವಾದಿಗುಣಕೋ ಭೂತಯೋನಿರ್ಮಹೇಶ್ವರ ಏವ. ಕುತಃ? ಧರ್ಮೋಕ್ತೇಃ. ‘ಯಸ್ಸರ್ವಜ್ಞಃ’ ಇತ್ಯಾದಿ ಪರಮೇಶ್ವರಧರ್ಮಬಾಹುಳ್ಯವಚನಾದಿತ್ಯರ್ಥಃ. ನ ಪ್ರಧಾನಸ್ಯಾಕ್ಷರಶಬ್ದವಾಚ್ಯತ್ವಂ ಜಗತ್ಕಾರಣತ್ವಂ ಚೋಪದಿಶ್ಯತೇ. “ಯಥೋರ್ಣನಾಭಿಸ್ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮೋಷಧಯಸ್ಸಂಭವಂತಿ ಯಥಾ ಸತಃ ಪುರುಷಾತ್ಕೇಶಲೋಮಾನಿ ತಥಾಽಕ್ಷರಾತ್ಸಂಭವತೀಹ ವಿಶ್ವಂ” ಇತ್ಯುಪಕ್ರಾಂತಸ್ಯ ಜಗತ್ಕಾರಣಸ್ಯೈವ “ಯಸ್ಸರ್ವಜ್ಞಸ್ಸರ್ವವಿದ್ಯಸ್ಯ ಜ್ಞಾನಮಯಂ ತಪಃ । ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂ ಚ ಜಾಯತ ॥” ಇತ್ಯತ್ರ ಪ್ರತ್ಯಭಿಜ್ಞಾಯಮಾನತ್ವಾದಚೇತನಪ್ರಧಾನೇ ಸರ್ವಜ್ಞತ್ವಾದಿಧರ್ಮಾಣಾಮಸಂಭವಾತ್, ‘ಅಕ್ಷರಾತ್ಪರತಃ ಪರಃ’ ಇತ್ಯನೇನ ಪ್ರಕರಣಾದ್ಭೂತಯೋನೇರಕ್ಷರಾತ್ಪರೋ ನ ಕಶ್ಚಿದುಪದಿಶ್ಯತೇ. “ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತ್ವಾಂ ತತ್ತ್ವತೋ ಬ್ರಹ್ಮವಿದ್ಯಾಂ” ಇತಿ ಪ್ರಕೃತಸ್ಯಾಕ್ಷರಸ್ಯ ಭೂತಯೋನಿತ್ವವ್ಯಪದೇಶಾತ್. ಶ್ರುತ್ಯಂತರೇಽಪಿ “ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್” ಇತ್ಯಾದಿನಾ ಶಿವಸ್ಯೈವ ಭೂತಯೋನಿತ್ವಾದಿಧರ್ಮೋಪದೇಶಾದ್ಭೂತಯೋನಿರ್ನೇತರಃ. ಕಿಂಚ “ದ್ವೇ ವಿದ್ಯೇ ವೇದಿತವ್ಯೇ–ಪರಾ ಚೈವಾಪರಾ ಚ” ಇತ್ಯಾದೌ ಋಗ್ವೇದಾದಿಲಕ್ಷಣಾಮಪರಾಂ ವಿದ್ಯಾಂ ನಿರ್ದಿಶ್ಯ “ಅಥ ಪರಾ ಯಯಾ” ಇತ್ಯಾದಿನಾ ಪರವಿದ್ಯಾವಿಷಯತ್ವಂ ಬ್ರಹ್ಮಣಃ ಪರಶಿವಸ್ಯೋಪದಿಶ್ಯತೇ. ತಯೋರುಭಯೋರ್ವಿದ್ಯಯೋಃ ಪರಾಪರವಿಭಾಗತ್ವೇನ ಅಭ್ಯುದಯನಿಶ್ಶ್ರೇಯಸಫಲಕತ್ವಂ ನಿರ್ದಿಶ್ಯತೇ. “ತಿಸ್ರಶ್ಚ ವಿದ್ಯಾಃ ಪ್ರತಿಜ್ಞಾಯೇರನ್” ಇತ್ಯಾದಿನಾ ಭೂತಯೋನಿತ್ವಂ ಪರಮೇಶ್ವರಸ್ಯೈವ ಪ್ರಸಾಧಿತಂ. “ದ್ವೇ ಏವ ವಿದ್ಯೇ ಇಹ ವೇದಿತವ್ಯೇ ನಿರ್ದಿಷ್ಟೇ ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ” ಇತ್ಯಾದಾವೇಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾ ಪರಶಿವಬ್ರಹ್ಮಣ್ಯೇವೋಪಪದ್ಯತೇ. ಜಡಪ್ರಧಾನೇ ತತ್ಪ್ರತಿಜ್ಞಾಽಸಂಭವಾತ್. ಕಿಂಚ “ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ” ಇತಿ ಪ್ರಾಧಾನ್ಯೇನ ಬ್ರಹ್ಮವಿದ್ಯಾಮುಪಕ್ರಮ್ಯ ಪರಾಪರವಿಭಾಗೇನ ಪರಾಂ ವಿದ್ಯಾಮಕ್ಷರಾಧಿಗಮನೀಂ ಪ್ರದರ್ಶ್ಯ ತಸ್ಯಾಃ ಬ್ರಹ್ಮವಿದ್ಯಾತ್ವಂ ನಿರ್ದಿಶತಿ. ಅಪರಾ ಹಿ ಋಗ್ವೇದಾದಿಲಕ್ಷಣಾ

**ಕರ್ಮವಿದ್ಯಾ ಬ್ರಹ್ಮವಿದ್ಯೋಪಕ್ರಮಮುಪದಿಶತಿ. ಬ್ರಹ್ಮವಿದ್ಯಾಪ್ರಶಂಸಾಯೈ "ಪ್ಲವಾ ಹ್ಯೇತೇ ಹ್ಯದೃಢಾ ಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ। ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾ ಜರಾಮೃತ್ಯೂ ತೇ ಪುನರೇವಾಪಿ ಯಂತಿ ॥" ಇತ್ಯೇವಮಾದಿನಾ ನಿಂದಾಂ ಕೃತ್ವಾ, ತತೋ ವಿರಕ್ತಸ್ಯ ಪರವಿದ್ಯಾಧಿಕಾರಿತ್ವಂ "ಪರೀಕ್ಷ್ಯ ಲೋಕಾನ್ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ। ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ ॥" ಇತ್ಯಾದಿನೋಪದಿಶತಿ. ತಸ್ಮಾದದೃಶ್ಯತ್ವಾದಿಗುಣಕೋ ಭೂತಯೋನಿರ್ಮಹೇಶ್ವರ ಇತಿ ಸಿದ್ಧಂ.**

ಜೀವರು ಬ್ರಹ್ಮವೆಂಬುದನ್ನೂ ಸ್ವಪ್ರವರ್ತಕರೆಂಬುದನ್ನೂ ನಿರಾಕರಿಸಲಿಕ್ಕಾಗಿ ಮೊದಲು ಪರಶಿವನನ್ನು ಸರ್ವಾಂತರ್ಯಾಮಿ ಎಂದು ಸಾಧಿಸಿ ಅವನೇ ಸರ್ವಾಧಿಕನೆಂಬುದನ್ನು ಸಾಧಿಸಲು ತಿಳಿಸುತ್ತಾನೆ— **ಅದೃಶ್ಯತ್ವಾಧಿಕರಣ ॥ ೬ ॥**

**ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ॥ ೨೧ ॥**

ಅಥರ್ವಣದಲ್ಲಿ ಇದರ ವಿಷಯ ಬಂದಿದೆ. "ಪರವಿದ್ಯೆಯಿಂದ ಅಕ್ಷರನನ್ನು ತಿಳಿಯಲಿಕ್ಕಾಗುತ್ತದೆ". "ಅಕ್ಷರವು ಅದೃಶ್ಯ ಮತ್ತು ಅಗ್ರಾಹ್ಯ, ಅದಕ್ಕೆ ವರ್ಣಗೋತ್ರಗಳಿಲ್ಲ. ಕಣ್ಣು ಕಿವಿಗಳಿಲ್ಲ. ಪಾಣಿಪಾದಗಳಿಲ್ಲ. ಅದು ನಿತ್ಯ, ವಿಭು ಮತ್ತು ಸರ್ವಗತ. ಅದು ಸೂಕ್ಷ್ಮವೂ ಅವ್ಯಯವೂ ಆದದ್ದು. ಈ ಭೂತಯೋನಿಯನ್ನು ಧೀರರು ಎಲ್ಲೆಲ್ಲೂ ಕಾಣುತ್ತಾರೆ"ಎಂದು ಅಲ್ಲಿ ಹೇಳಿದೆ. ಇಲ್ಲಿ ಅದೃಶ್ಯತ್ವಾದಿಗುಣಗಳಿರುವ ಭೂತಯೋನಿಯೆಂದರೆ ಪ್ರಧಾನವೇ ? ಜೀವನೇ ? ಪರಶಿವನೇ? ಎಂಬ ಸಂಶಯ ಬರುತ್ತದೆ. 'ಅಜಾಮೇಕಾಂ' ಎಂಬ ಶ್ರುತಿಯಲ್ಲಿ ಗುಣತ್ರಯಾತ್ಮಕವಾದ ಪ್ರಧಾನವೇ ಬಹುಪ್ರಜೆಗಳಿಗೆ ಕಾರಣವಾದ್ದರಿಂದ ಭೂತಯೋನಿ ಎನಿಸಿದೆ. ಹಾಗೆಯೇ ಯೋನಿಶಬ್ದಕ್ಕೆ ನಿಮಿತ್ತವೆಂಬ ಅರ್ಥವಿರುವುದರಿಂದ ಜೀವನೂ ಭೂತಯೋನಿಯಾಗಬಹುದು. ಚಿದ್ರೂಪನೂ ನಿಷ್ಕಲನೂ ಆದ ಪರಶಿವನಿಗೆ ಮಣ್ಣಿನಂತೆ ಪೃಥಿವ್ಯಾದಿ ರೂಪದಿಂದ ಪರಿಣಾಮ ಸಂಭವಿಸುವುದಿಲ್ಲ. "ಜೇಡರ ಹುಳುವು ನೂಲನ್ನು ಹೊರಗೆಡಹಿ ಹಿಂತೆಗೆದುಕೊಳ್ಳುವುದು" ಎಂಬ ಶ್ರುತಿಯಂತೆ ಚೇತನವಾದ ಜೇಡರಹುಳದಲ್ಲಿ ಅಚೇತನವಾದ ನೂಲನ್ನು ನಿರ್ಮಿಸುವುದನ್ನೂ ಹಿಂತೆಗೆದುಕೊಳ್ಳುವುದನ್ನು ನಾವು ಕಂಡಿದ್ದೇವೆ. ಇದರಂತೆ ಚೇತನ ಶಿವನು ಚಿದಚಿತ್ಪ್ರಪಂಚಕ್ಕೆ ಏಕೆ ಕಾರಣನಾಗಲಾರನು ? ಎಂದು ಕೇಳುವುದು ಯುಕ್ತವಲ್ಲ. ಇಲ್ಲಿ ಚೇತನವಾದ ಊರ್ಣನಾಭಿಯೊಂದೇ ತಂತುವಿಗೆ ಕಾರಣವಾಗಿಲ್ಲ. ಆದರೆ ಅದರ ಶರೀರವೂ ನೂಲಿಗೆ ಉಪಾದಾನ ಕಾರಣವಾಗಿದೆ. ಹಾಗೆಯೇ ಪುರುಷನ ಶರೀರವೇ ಲೋಮನಖಗಳ ಉತ್ಪತ್ತಿಗೆ ಕಾರಣವೆನಿಸಿದೆ. ಆದ್ದರಿಂದ ಶ್ರುತಿಯಲ್ಲಿ ಹೇಳಿರುವ ಅದೃಶ್ಯತ್ವ ಮೊದಲಾದ ಧರ್ಮಗಳು ಪ್ರಧಾನಕ್ಕೂ ಹೊಂದುತ್ತವೆ. ಆದರೆ 'ಯಾವನು ಸರ್ವಜ್ಞನೋ' ಎಂಬಲ್ಲಿ

ಪರಶಿವನ ಧರ್ಮಗಳೇ ಬಹಳವಾಗಿ ಬಂದಿರುವುದರಿಂದ ಅವು ಹೇಗೆ ಪ್ರಧಾನಕ್ಕೆ ಅನ್ವಯಿಸುತ್ತವೆ? ಎಂದರೆ ಅದಕ್ಕೂ ಸಮಾಧಾನವಿದೆ. 'ಈ ಅಕ್ಷರವು ಅದೃಶ್ಯವಾದದ್ದು' ಎಂಬ ಶ್ರುತಿಯಲ್ಲಿ ಅಕ್ಷರಶಬ್ದದಿಂದ ಅದೃಶ್ಯವೇ ಮೊದಲಾದ ಗುಣಗಳಿರುವ ಪ್ರಧಾನವನ್ನು ತಿಳಿಸಿ, ಕೊನೆಯಲ್ಲಿ "ಯಾರು ಅಕ್ಷರಕ್ಕಿಂತಲೂ ಹೆಚ್ಚಿನವನೋ ಅವನೇ ಸರ್ವಜ್ಞನಾಗುವನು"ಎಂದು ಹೇಳಿರುವುದರಿಂದ ಅಕ್ಷರಶಬ್ದದಿಂದ ತಿಳಿದುಬರುವ ಪ್ರಧಾನವೇ ಭೂತಯೋನಿ ಎಂದು ಹೇಳಬಹುದು. ಹೀಗೆ ಆಕ್ಷೇಪಬಂದರೆ ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಅದೃಶ್ಯತ್ವಾದಿ ಗುಣಗಳಿರುವ ಭೂತಯೋನಿ ಎಂದರೆ ಪರಮಶಿವನೇ ಹೊರತು ಬೇರೆಯಲ್ಲ. ಏಕೆಂದರೆ ಆ ಶ್ರುತಿಯಲ್ಲಿ ಆವನ ಧರ್ಮಗಳೇ ಬಹಳವಾಗಿ ಬಂದಿವೆ. 'ಯಃಸರ್ವಜ್ಞಃ'ಎಂಬ ಶ್ರುತಿಯಲ್ಲಿ ಪರಶಿವನ ಧರ್ಮಗಳನ್ನು ಹೇಳಿರುವುದೇ ಕಂಡುಬಂದಿದೆ.ಆದ್ದರಿಂದ ಅಚೇತನವಾದ ಪ್ರಧಾನವು ಅಕ್ಷರವೆನಿಸಲಾರದು. ಜಗತ್ಕಾರಣವೂ ಆಗಲಾರದು. "ಹೇಗೆ ಜೇಡರಹುಳು ದಾರವನ್ನು ಹೊರಪಡಿಸುತ್ತಲೂ ಹಿಂತೆಗೆದುಕೊಳ್ಳುತ್ತಲೂ ಇರುವುದೋ,ಹೇಗೆ ಪೃಥಿವಿಯಲ್ಲಿ ಲತೆಗಳು ಹುಟ್ಟುತ್ತವೆಯೋ, ಹೇಗೆ ಪುರುಷನಿಂದ ಕೇಶಲೋಮಗಳು ಹುಟ್ಟುತ್ತವೆಯೋ ಹಾಗೆ ಅಕ್ಷರನಾದ ಪರಶಿವನಿಂದ ಎಲ್ಲವೂ ಹೊರಬರುತ್ತದೆ" ಎಂದು ಆರಂಭಿಸಿ, ಯಾವನು ಸರ್ವಜ್ಞನೋ, ಯಾವನ ತಪಸ್ಸು ಜ್ಞಾನಮಯವೋ ಅವನಿಂದ ಬ್ರಹ್ಮಮಯವಾದ ನಾಮರೂಪಗಳೂ, ಅನ್ನವೂ ಹೊರಬರುತ್ತವೆ" ಇಲ್ಲಿ ಬ್ರಹ್ಮವನ್ನು ಜಗತ್ಕಾರಣವೆಂದು ತಿಳಿಸಿರುವುದರಿಂದ ಅಚೇತನವಾದ ಪ್ರಧಾನವು ಸರ್ವಜ್ಞವೂ, ಜಗತ್ಕಾರಣವೂ ಆಗಲಾರದು. "ಅಕ್ಷರಕ್ಕಿಂತ ಹೆಚ್ಚಿನದು" ಎಂಬಲ್ಲಿ ಭೂತಯೋನಿಯ ಪ್ರಕರಣವಾದ್ದರಿಂದ ಅಕ್ಷರದಿಂದ ಆಚೆಗಿರುವವನೆಂದು ಯಾರನ್ನೂ ಹೇಳಿಲ್ಲ. 'ಯಾವುದರಿಂದ ಅಕ್ಷರನಾದ ಪುರುಷನನ್ನು ತಿಳಿಯಬಹುದೋ ಆ ಬ್ರಹ್ಮವಿದ್ಯೆಯನ್ನು ತತ್ತ್ವದಿಂದ ತಿಳಿಸಬೇಕು" ಎಂಬಲ್ಲಿ ಅಕ್ಷರನನ್ನೇ ಭೂತಯೋನಿ ಎಂದು ತಿಳಿಸಲಾಗಿದೆ. ಬೇರೆ ಶ್ರುತಿಯಲ್ಲಿ"ಸಾಕಾರಪರಮೇಶ್ವರನನ್ನು ಧ್ಯಾನಿಸಿ ಮುನಿಯು ಭೂತಯೋನಿಯಾದ ನಿಷ್ಕಲಶಿವನನ್ನು ಹೊಂದುತ್ತಾನೆ" ಎಂದು ಹೇಳಿರುವುದರಿಂದ ಶಿವನೇ ಭೂತಯೋನಿ ಎಂದು ಸ್ಪಷ್ಟವಾಗಿದೆಯಾದ್ದರಿಂದ ಶಿವನಲ್ಲದೆ ಬೇರೆ ಯಾವುದೂ ಭೂತಯೋನಿಯಾಗಲಾರದು. ಇದೂ ಅಲ್ಲದೆ, "ಪರ, ಅಪರ ಎಂಬ ಎರಡು ವಿದ್ಯೆಗಳನ್ನು ತಿಳಿಯಬೇಕು" ಎಂಬಲ್ಲಿ ಋಗ್ವೇದವೇ ಮೊದಲಾದ್ದನ್ನು ಅಪರವಿದ್ಯೆ ಎಂದು ಹೇಳಿ 'ಇನ್ನು ಪರವಿದ್ಯೆಯನ್ನು ತಿಳಿಸಲಾಗುವುದು. ಇದರಿಂದ ಅಕ್ಷರವನ್ನು ತಿಳಿಯಬಹುದು" ಎಂದು ಪರವಿದ್ಯೆಗೆ ಅಕ್ಷರನೇ ವಿಷಯವೆಂದು ಹೇಳಲಾಗಿದೆ. ಹೀಗಿರುವಲ್ಲಿ ಪರಮೇಶ್ವರನೇ ಪರವಿದ್ಯೆಗೆ ವಿಷಯನೆಂದು ಸ್ಪಷ್ಟವಾಯಿತು. ಈ ವಿದ್ಯೆಗಳ ವಿಭಾಗವನ್ನು ಅಭ್ಯುದಯ ನಿಶ್ಶ್ರೇಯಸವೆಂಬ ಫಲಗಳಿಗಾಗಿಯೇ ತಿಳಿಸಲಾಗಿದೆ. "ವಿದ್ಯೆಗಳು ಮೂರು ವಿಧವಾಗಿವೆ ಎಂದು ತಿಳಿದುಬರುತ್ತವೆ" ಎಂಬುದರಿಂದ ಪರಶಿವನೇ ಸಮಸ್ತ ಭೂತಗಳಿಗೂ ಮೂಲಕಾರಣನೆಂದು ನಿರೂಪಿತವಾಗಿದೆ. "ಎರಡೇ ವಿದ್ಯೆಗಳು ತಿಳಿಯಲರ್ಹವಾಗಿವೆ.

ಯಾವುದನ್ನು ತಿಳಿದರೆ ಇದೆಲ್ಲವೂ ತಿಳಿಯಬರುವುದೋ" ಎಂಬುದರಿಂದ ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದೆಂಬ ಪ್ರತಿಜ್ಞೆಯು ಪರಶಿವನಲ್ಲಿಯೇ ಯುಕ್ತವಾಗಿ ಹೊಂದುತ್ತದೆ. ಜಡವಾದ ಪ್ರಧಾನದಲ್ಲಿ ಇದು ಅನ್ವಯಿಸುವುದಿಲ್ಲ "ಆತನು ಎಲ್ಲಾ ವಿದ್ಯೆಗಳಿಗೂ ಹೆಚ್ಚಿನದಾದ ಬ್ರಹ್ಮವಿದ್ಯೆಯನ್ನು ಹಿರಿಯಮಗನಾದ ಅಥರ್ವನಿಗೆ ಹೇಳಿದನು" ಎಂಬಲ್ಲಿ ಬ್ರಹ್ಮವಿದ್ಯೆಯನ್ನೇ ಮುಖ್ಯವಾಗಿ ಪ್ರಾರಂಭಿಸಿ, ವಿದ್ಯೆಗಳನ್ನು ಪರ, ಅಪರ ಎಂದು ವಿಂಗಡಿಸಿ, 'ಪರವಿದ್ಯೆಯು ಅಕ್ಷರವನ್ನು ತಿಳಿಸುತ್ತದೆ' ಎಂದು ಹೇಳಿರುವುದರಿಂದ ಪರವಿದ್ಯೆಯೇ ಬ್ರಹ್ಮವಿದ್ಯೆ ಎಂದು ಹೇಳಿದಂತಾಗುತ್ತದೆ. ಅಪರ ವೆನಿಸಿದ ಋಗ್ವೇದವೇ ಮೊದಲಾದ ಕರ್ಮವಿದ್ಯೆಯನ್ನು ಬ್ರಹ್ಮವಿದ್ಯೆಯ ಪ್ರಶಂಸೆ ಗಾಗಿ ಮೊದಲು ಹೇಳಿದೆ. ಏಕೆಂದರೆ "ಈ ಹದಿನೆಂಟು ಯಜ್ಞಾದಿಕರ್ಮಗಳು ದೈನ್ಯ ವನ್ನು ತಿಳಿಸುವುದರಿಂದ ತುಚ್ಛವೆನಿಸಿವೆ. ಇವುಗಳಿಂದಲೇ ಶ್ರೇಯಸ್ಸುಂಟೆಂದು ಯಾವ ಮೂಢನು ಭಾವಿಸುವನೋ ಅವನು ಮತ್ತೆಮೃತ್ಯುವಶನಾಗುವನು"ಎಂದು ಮುಂತಾಗಿ ಕರ್ಮವನ್ನು ನಿಂದಿಸಿ, ಇದರಲ್ಲಿ ವಿರಕ್ತನಾದವನಿಗೇ ಪರವಿದ್ಯೆಯಲ್ಲಿ ಅಧಿಕಾರವಿದೆ ಎಂಬುದನ್ನು "ಕರ್ಮದಿಂದ ದೊರೆತ ನಶ್ವರ ಫಲಗಳನ್ನು ಪರೀಕ್ಷಿಸಿ ಮುಮುಕ್ಷು ನಿರ್ವೇದವನ್ನು ಹೊಂದಬೇಕು. ಯಾಕೆಂದರೆ ಈಶ್ವರಾನುಗ್ರಹದಿಂದ ದೊರಕುವ ಮುಕ್ತಿಯು ಬರಿಯ ಕರ್ಮಗಳಿಂದ ದೊರಕುವುದಿಲ್ಲ. ಅದನ್ನು ತಿಳಿಯಲಿಕ್ಕಾಗಿ ಸಾಧ ಕನು ಸಮಿತ್ಪಾಣಿಯೂ ಆಚಾರನಿಷ್ಠನೂ ಆದ ಗುರುವಿನ ಬಳಿಗೆ ಹೋಗಬೇಕು" ಎಂಬುದರಿಂದ ತಿಳಿಸಲಾಗಿದೆ. ಆದ್ದರಿಂದ ಅದೃಶ್ಯತ್ವಾದಿ ಗುಣಗಳುಳ್ಳ ಭೂತಯೋನಿ ಎಂದರೆ ಮಹೇಶ್ವರನೆಂದು ಸಿದ್ಧವಾಯಿತು.

ಪರಶಿವ ಏವ ಭೂತಯೋನಿರಿತ್ಯತ್ರ ಹೇತ್ವಂತರಮಾಹ—

ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ॥ ೨೨ ॥

ಅತ್ರಾಪಿ ಭೂತಯೋನಿಶ್ಶಿವ ಏವ, ನೇತರೌ ಪ್ರಕೃತಿಜೀವೌ, ಕುತಃ ವಿಶೇಷಣಭೇದವ್ಯಪದೇಶಾಭ್ಯಾಂ ಚ. ವಿಶೇಷಣಂ ಚ ಭೇದವ್ಯಪದೇ ಶಶ್ಚ ತಾಭ್ಯಾಮಿತ್ಯರ್ಥಃ. "ದಿವ್ಯೋ ಹ್ಯಮೂರ್ತಃ ಪುರುಷಸ್ಯ ಬಾಹ್ಯಾ ಭ್ಯಂತರೋ ಹ್ಯಜಃ ಅಪ್ರಾಣೋ ಹ್ಯಮನಾಶ್ಶುಭ್ರೋ ಹ್ಯಕ್ಷರಾತ್ಪರತಃ ಪರಃ" ಇತ್ಯಾದಿನಾ ವಿಶೇಷಣಮುಪದಿಶ್ಯತೇ. ದಿವ್ಯತ್ವಾದಿಧರ್ಮಾಣಾಂ ಪರಮೇಶ್ವರಾದನ್ಯಯೋರ್ಜೀವಪ್ರಧಾನಯೋರಸಂಭವಾತ್. ಭೇದವ್ಯ ಪದೇಶೋಽಪಿ "ಅಕ್ಷರಾತ್ಪರತಃ ಪರಃ" ಇತಿ ಅಕ್ಷರಮವ್ಯಾಕೃತಂ ಪಾಶ ರೂಪಂ ತಸ್ಮಾತ್ಸರ್ವಸ್ಮಾದ್ವಿಕಾರಾತ್ಪರಂ ತಸ್ಮಾತ್ಪರತಃ ಪರ ಇತಿ ಪಾಶ ಪರಮೇಶ್ವರಯೋರ್ಭೇದೇನ ವ್ಯಪದೇಶಃ. ತಸ್ಮಾನ್ನೇತರೋ ಭೂತ ಯೋನಿಃ. ಅಥವಾ ಅಕ್ಷರಾತ್ಪರ ಇತಿ ಜೀವಾತ್ಪರಃ ಪರಶಿವೋ ವಾ ಸ್ಯಾತ್. ಪರತಃ ಪರಮ ಇತಿ ವೈಲಕ್ಷಣ್ಯೇನ ವ್ಯಪದೇಶಾತ್ಪರಮೇಶ್ವರ ಏವಾತ್ರಾವಗಮ್ಯತೇ.

ಪರಶಿವನೇ ಭೂತಯೋನಿ ಎಂಬ ಬಗ್ಗೆ ಬೇರೊಂದು ಹೇತುವನ್ನು ತಿಳಿಸುತ್ತಾನೆ.

**ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ||೨೨||**

ವಿಶೇಷಣವೂ ಭೇದವ್ಯಪದೇಶವೂ ಇರುವುದರಿಂದ ಇತರೌ=ಜೀವಪ್ರಧಾನರಿಬ್ಬರೂ ಭೂತಯೋನಿಯಾಗಲಾರರು. "ದಿವ್ಯಪುರುಷನು ಅಮೂರ್ತನಾಗಿ ಒಳಗೂ ಹೊರಗೂ ಇದ್ದರೂ ಅಜನೂ ಆಗಿರುವನು. "ಪ್ರಾಣ ಮನಸ್ಸುಗಳಿಲ್ಲದೆ ಶುಭ್ರನಾಗಿರುವನು" ಎಂಬಲ್ಲಿ ದಿವ್ಯತ್ವವೇ ಮೊದಲಾದ ವಿಶೇಷಣಗಳು ಪರಮೇಶ್ವರನಲ್ಲದೆ ಬೇರೆ ಯಾರಿಗೂ ಸಂಭವಿಸುವುದಿಲ್ಲ. ಇದರಂತೆ "ಅಕ್ಷರಕ್ಕಿಂತಲೂ ಹೆಚ್ಚಿನದು" ಎಂಬಲ್ಲಿ ಅಕ್ಷರವೆಂದರೆ ಪಾಶರೂಪವಾದ ಮಾಯಾಶಕ್ತಿ. ಇದಕ್ಕಿಂತಲೂ ಹೆಚ್ಚಿನವನೆಂದರೆ ಪರಮೇಶ್ವರನೇ ಆಗುವನಾದ್ದರಿಂದ ಮಾಯಾಶಕ್ತಿಗೂ ಪರಮೇಶ್ವರನಿಗೂ ಭೇದವನ್ನೇ ಶ್ರುತಿಯಲ್ಲಿ ಹೇಳಲಾಗಿದೆ. ಹೀಗೆ ಮಾಯೆಯಿಂದಾಗಿರುವ ಜೀವನೂ ಮಾಯೆಗೆ ಮೂಲವೆನಿಸಿದ ಪ್ರಧಾನವೂ ಪರಮೇಶ್ವರನಿಂದ ಭಿನ್ನವಾದುದರಿಂದ ಅವೆರಡೂ ಭೂತಯೋನಿ ಎನಿಸಲಾರವು. ಅಥವಾ 'ಅಕ್ಷರಾತ್ಪರಃ' ಎಂಬಲ್ಲಿ ಜೀವನೂ ಅಕ್ಷರನಾದ್ದರಿಂದ 'ಜೀವಾತ್ಪರಃ' ಎಂದು ಅರ್ಥಮಾಡಿ ಜೀವನಿಗಿಂತಲೂ ಉತ್ಕೃಷ್ಟನು ಪರಶಿವನೆಂದು ಹೇಳಬಹುದು. ಹೀಗೆ ಹೇಳಿದರೂ ಅವರಿಬ್ಬರಿಗೂ ವೈಲಕ್ಷಣ್ಯವಿರುವುದರಿಂದ ಪರಮೇಶ್ವರನೇ ಭೂತಯೋನಿ ಎಂಬುದು ಸ್ಪಷ್ಟವಾಗುತ್ತದೆ.

**ಪುನರ್ಹೇತ್ವಂತರಮಾಹ—ರೂಪೋಪನ್ಯಾಸಾಚ್ಚ || ೨೩ ||**

ಅತ್ರಾಪಿ ಭೂತಯೋನಿಶ್ಶಿವ ಏವ, ಕುತಃ ರೂಪೋಪನ್ಯಾಸಾಚ್ಚ. ರೂಪಂ ಅವಯವಾತ್ಮಕಂ ಶರೀರಂ, ತಸ್ಯೋಪನ್ಯಾಸಾದಿತ್ಯರ್ಥಃ. "ಅಕ್ಷರಾತ್ಪರತಃ ಪರಃ" ಇತ್ಯನೇನ ಶಿವಸ್ಯ ಜೀವಪ್ರಧಾನವೈಲಕ್ಷಣ್ಯಮುಪದಿಶ್ಯ, ತತಃ "ಏತಸ್ಮಾಜ್ಜಾಯತೇ ಪ್ರಾಣಃ" ಇತಿ ಪ್ರಾಣಾದಿಸರ್ವಕಾರಣತ್ವಂ ಪರಮೇಶ್ವರಸ್ಯ ಪ್ರದರ್ಶ್ಯ "ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಶ್ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ । ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ ||" ಇತ್ಯಾದಿನಾ ತಸ್ಯೈವ ವಿಶ್ವರೂಪತ್ವಂ ದರ್ಶಯತಿ. ಜೀವಪ್ರಧಾನಯೋಸ್ಸರ್ವಕಾರಣತ್ವಸರ್ವಾಂತರ್ಯಾಮಿತ್ವಾದಿಗುಣಕಸ್ಯ ಪರಶಿವಸ್ಯ ಕಥಂ ರೂಪೋಪನ್ಯಾಸ ಇತಿ ಚೇನ್ನ, ಪ್ರಕರಣಾತ್ 'ಏಷ' ಇತಿ ಪ್ರಕೃತಾಕರ್ಷಣಾತ್ 'ಏಷ ಸರ್ವಭೂತಾಂತರಾತ್ಮಾ' ಇತಿ ಶ್ರುತಿರ್ಭೂತಯೋನಿಪರತ್ವಮೇವೋಪದಿಶತಿ. ಪವನಾದಿವನ್ಮೂರ್ತಾಮೂರ್ತತ್ವಂ ತಸ್ಯ ಸ್ವಾಭಾವಿಕಮೇವ. ಕಿಂಚ 'ಏತಸ್ಮಾಜ್ಜಾಯತೇ ಪ್ರಾಣಃ' ಇತ್ಯಾದಿನಾ ಪ್ರಾಣಾದಿಪೃಥಿವ್ಯಂತಕಾರಣತ್ವಂ ಪೂರ್ವತ್ರೋಪದಿಶ್ಯ, "ತಸ್ಮಾದಗ್ನಿಸ್ಸಮಿಧೋ ಯಸ್ಯ ಸೂರ್ಯಃ—ಅತಶ್ಚ ಸರ್ವಾ ಓಷಧಯೋ ರಸಾಶ್ಚ" ಇತ್ಯಾದಿನಾ ಸಮಿಧಾದಿಕಾರಣತ್ವಂ ನಿರ್ದಿಶ್ಯ,

" ಪುರುಷ ಏವೇದ ವಿಶ್ವಂ " ಇತ್ಯಾದಿನಾ ಭೂತಯೋನೇಸ್ಸರ್ವಾತ್ಮಕತ್ವ ಮುಪದಿಶತಿ. " ಹಿರಣ್ಯಗರ್ಭಸ್ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ । ಸ ದಾಧಾರ ಪೃಥಿವೀಂ ದ್ಯಾಮುತೇಮಾಂ " ಇತಿ ಶ್ರುತೌ ತ್ರಿಜಗಚ್ಛರೀರಸ್ಯ ಮಹಾದೇವಸ್ಯ " ಸಮವರ್ತತಾಗ್ರೇ " ಇತಿ ಪದೇನ ಅಜಾತತ್ವಂ ನಿರ್ದಿಷ್ಟಂ. ಪ್ರಾಣಸ್ವರೂಪೇಣ ಸರ್ವಭೂತಾಂತಸ್ಸ್ಥಿತತ್ವಾತ್, ' ಪುರುಷ ಏವೇದಂ ವಿಶ್ವಂ ' ಇತ್ಯೇವಮಾದಿಸರ್ವ ರೂಪೋಪನ್ಯಾಸಃ ಪರಮಶಿವಪ್ರತಿಪತ್ತಿಹೇತುರಿತಿ ರಾದ್ಧಾಂತಃ. ತಸ್ಮಾ ದ್ಭೂತಯೋನಿಃ ಅಕ್ಷರಶಬ್ದವಾಚ್ಯಃ ಪರಮೇಶ್ವರ ಏವ.

ಇಲ್ಲಿ ಬೇರೊಂದು ಹೇತುವನ್ನು ಹೇಳುತ್ತಾನೆ–ರೂಪೋಪನ್ಯಾಸಾಚ್ಚ ॥೨೩॥

ರೂಪವೆಂದರೆ ಅವಯವಗಳುಳ್ಳ ಶರೀರವೆಂದರ್ಥ. ಇದನ್ನು ಹೇಳಿರುವುದರಿಂದ ಇಲ್ಲಿ ಪರಮೇಶ್ವರನೇ ಭೂತಯೋನಿ ಎನಿಸುವನು. 'ಅಕ್ಷರದಿಂದಾಚೆಗಿರುವವನು' ಎಂದು ಶಿವನಿಗೆ ಜೀವಪ್ರಧಾನರ ಭೇದವನ್ನು ಹೇಳಿ, ಅನಂತರ 'ಇವನಿಂದ ಪ್ರಾಣ ಹುಟ್ಟಿದೆ' ಎಂಬಲ್ಲಿ ಪ್ರಾಣಾದಿಪೃಥಿವ್ಯಂತ ತತ್ತ್ವಗಳಿಗೆ ಶಿವನೇ ಕಾರಣನೆಂದು ತಿಳಿಸಿ, ' ಅಗ್ನಿರ್ಮೂರ್ಧಾ ' ಎಂಬ ಮಂತ್ರದಲ್ಲಿ ಅವನಿಗೆ ಅಗ್ನಿಯೇ ತಲೆ, ಚಂದ್ರಸೂರ್ಯರೇ ಕಣ್ಣುಗಳು, ದಿಕ್ಕುಗಳೇ ಕಿವಿ, ವೇದಗಳೇ ವಾಕ್ಕು, ವಾಯುವೇ ಪ್ರಾಣ, ವಿಶ್ವವೇ ಹೃದಯ, ಪೃಥಿವಿಯೇ ಪಾದ, ಅವನೇ ಸರ್ವಭೂತಗಳಿಗೂ ಅಂತರಾತ್ಮನು" ಎಂದು ತಿಳಿಸಿರುವುದರಿಂದ ಅವನೇ ವಿಶ್ವರೂಪನೂ ಭೂತಯೋನಿಯೂ ಆಗಿರುವುದಾಗಿ ತಿಳಿದುಬರುತ್ತದೆ. ಅಲ್ಪಶಕ್ತಿಕನಾದ ಜೀವನಿಗೂ ಜಡಪ್ರಧಾನಕ್ಕೂ ಇಂತಹ ರೂಪವು ಹೊಂದುವುದಿಲ್ಲವಾದ್ದರಿಂದ ಶ್ರುತಿಯ ಈ ಬಗೆಯ ರೂಪೋಪನ್ಯಾಸ ಪರಮೇಶ್ವರ ನಲ್ಲದೆ ಬೇರೆಕಡೆ ಸಂಭವಿಸುವುದಿಲ್ಲ. ಪರಮೇಶ್ವರನು ವಾಸ್ತವವಾಗಿ ಅದೃಶ್ಯನಾದ್ದ ರಿಂದ ಅವನಿಗೆ ಈ ಬಗೆಯ ರೂಪೋಪನ್ಯಾಸ ಹೇಗೆ ಹೊಂದುತ್ತದೆ? ಅಂದರೆ, ಭೂತಯೋನಿ ಪ್ರಕರಣದಿಂದ ' ಇವನು ' ಎಂದು ಶ್ರುತಿಯಲ್ಲಿ ತಿಳಿಸಿರುವುದ ರಿಂದ ' ಇವನು ಸರ್ವಭೂತಗಳಿಗೂ ಅಂತರಾತ್ಮನು ' ಎಂಬ ಶ್ರುತಿಯು ಈಶ್ವರನೇ ಭೂತಯೋನಿ ಎಂದು ತಿಳಿಸುತ್ತದೆ. ವಾಯುವಿನಂತೆ ಮೂರ್ತನೂ ಅಮೂರ್ತನೂ ಆಗಿರುವುದು ಶಿವನ ಸ್ವಭಾವವಾಗಿದೆ. 'ಇವನಿಂದ ಪ್ರಾಣ ಹುಟ್ಟಿತು' ಎಂಬಲ್ಲಿ ಎಲ್ಲಾ ಭೂತಗಳಿಗೂ ಅವನೇ ಕಾರಣನೆಂದು ಮೊದಲು ಹೇಳಿ ಅವನಿಂದಲೇ ಅಗ್ನಿ, ಸಮಿತ್ತು, ಸೂರ್ಯ, ಓಷಧಿ, ರಸಗಳೆಲ್ಲವೂ ಹುಟ್ಟಿದವೆಂದು ಎಲ್ಲಕ್ಕೂ ಅವನನ್ನೇ ಕಾರಣನೆಂದು ತಿಳಿಸಿ, ' ಈ ವಿಶ್ವವೆಲ್ಲವೂ ಪುರುಷನೇ ' ಎಂಬಲ್ಲಿ ಆ ಭೂತಯೋನಿಯೇ ಸರ್ವಾತ್ಮಕ ವೆಂದು ಹೇಳಲಾಗಿದೆ. "ಹಿರಣ್ಯಗರ್ಭನು ಎಲ್ಲಕ್ಕೂ ಮೊದಲು ಇದ್ದನು. ಭೂತಗಳ ಗುಂಪಿಗೆ ಅವನು ಒಡೆಯನಾದನು. ಅವನು ಈ ಎಲ್ಲಾ ಲೋಕಗಳನ್ನೂ ಹಿಡಿದಿರು ವನು. ಆ ಒಬ್ಬ ದೇವನಿಗೆ ಹವಿಸ್ಸನ್ನು ಸಲ್ಲಿಸೋಣ" ಎಂಬ ಶ್ರುತಿಯಲ್ಲಿ ಹಿರಣ್ಯ ವೆಂದರೆ ವಿಶ್ವವೈಚಿತ್ರ್ಯಕಾರಿಯಾದ ಮಾಯಾಶಕ್ತಿ. ಅದನ್ನು ಗರ್ಭದಲ್ಲಿ ಅಡಗಿಸಿ

ಕೊಂಡ ಪರಶಿವನು ಹಿರಣ್ಯಗರ್ಭನೆನಿಸುವನು. ಪ್ರಳಯದಲ್ಲಿ ಮಾಯಾಶಕ್ತಿಗವಕಾಶ ವಿಲ್ಲದ್ದರಿಂದ ಅದು ಅರಮಾತ್ಮನ ಚಿತ್‌ಶಕ್ತಿಯಲ್ಲಡಗಿತ್ತು. ಆಗ ಅವನು ನಿಷ್ಕಲ, ನಿರ್ಗುಣ ಎನಿಸುವನು. ಆ ಸ್ಥಿತಿಯಲ್ಲಿ ಸದ್ರೂಪದಿಂದ ಕೇವಲನೂ ಆತ್ಮಾರಾಮನೂ ಆಗಿದ್ದ ಪರಶಿವನು ವಿಶ್ವಸೃಷ್ಟಿಗಾಗಿ ತನ್ನ ಚಿತ್‌ಶಕ್ತಿಯ ಒಂದಂಶದಿಂದ ಸಗುಣನೂ ಭೂತಮಯನೂ ಭೂತಯೋನಿಯೂ ಆಗುವನು. ವಿಶ್ವವೆಲ್ಲವೂ ಶರೀರವಾಗಿರುವ ಮಹಾದೇವನನ್ನು 'ಮೊದಲು ಇದ್ದನು' ಎಂಬುದರಿಂದ ಅಜಾತನೆಂದು ತಿಳಿಸ ಲಾಗಿದೆ. ಅವನೇ ಪ್ರಾಣರೂಪದಿಂದ ಎಲ್ಲರೊಳಗೂ ಇರುವುದರಿಂದ 'ಇದೆಲ್ಲವೂ ಪುರುಷನೇ' ಎಂಬ ವಿಶ್ವರೂಪದ ಉಪನ್ಯಾಸವು ಪರಶಿವನನ್ನು ತಿಳಿಯಲು ಕಾರಣ ವಾಗಿದೆ. ಆದ್ದರಿಂದ ಅಕ್ಷರನೆನಿಸಿದ ಪರಶಿವನೇ ಭೂತಯೋನಿ ಎನಿಸಿದ್ದಾನೆ.

ವಿಶ್ವಾಧಿಕಸ್ಯ ಮಹೇಶ್ವರಸ್ಯ ವಿಶ್ವಕಾರಣತ್ವಂ ನಿರ್ದಿಶ್ಯ ತಸ್ಯೈವ ಜಾಠರಾಗ್ನಿರೂಪೇಣ ಸರ್ವೋಪಾಸ್ಯತ್ವಂ ದರ್ಶಯತಿ.

ವೈಶ್ವಾನರಾಧಿಕರಣಂ ||೭||  ವೈಶ್ವಾನರಸ್ಸಾಧಾರಣಶಬ್ದವಿಶೇಷಾತ್.

ಛಾಂದೋಗ್ಯೇ ಪಠ್ಯತೇಽಸ್ಯ ವಿಷಯಃ. "ಕೋ ನ ಆತ್ಮಾ ಕಿಂ ಬ್ರಹ್ಮ ಆತ್ಮಾನಮೇವಂ ವೈಶ್ವಾನರಂ ಸಂಪ್ರತ್ಯಧ್ಯೇಷಿ. ತಮೇವ ನೋ ಬ್ರೂಹಿ" ಇತ್ಯಾರಭ್ಯಾಕಾಶಾದಿತ್ಯಾದೀನಾಂ ಗುಣಯೋಗಂ ಏಕೈಕೋ ಪಾಸನತಿರಸ್ಕಾರೇಣ ಚ ಮೂರ್ಧಾದಿಭಾವಮುಪನ್ಯಸ್ಯ ಆಚಕ್ಷತೇ. "ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಃ ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾ ಸಂದೋಹೋ ಬಹುಳೋ ವಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽ ನ್ವಾಹಾರ್ಯಪಚನಮಾಸ್ಯಮಾಹವನೀಯಃ" ಇತ್ಯಾದಿ. ಕಿಮಿಹ ವೈಶ್ವಾನರಶಬ್ದೇನ ಜಾಠರಾಗ್ನಿರ್ಭೂತಾಗ್ನಿಸ್ತದಭಿಮಾನಿದೇವತಾ ಪರ ಮೇಶ್ವರೋ ವೇತಿ ಬಹ್ವ್ಯೋ ವಿಪ್ರತಿಪತ್ತಯಸ್ಸಂದೃಶ್ಯಂತೇ. 'ಅಯ ಮಗ್ನಿರ್ವೈಶ್ವಾನರೋ ಯೋಽಯಮಂತಃಪುರುಷೇ ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ' ಇತ್ಯಾದಿನಾ ಭೂತಾಗ್ನಿರ್ವ್ಯಪದಿಶ್ಯತೇ, ತತ್ಸಾಧಾರಣಶಬ್ದಪ್ರಯೋಗಶ್ರವಣಾತ್. "ವಿಶ್ವಸ್ಮಾದಗ್ನಿಂ ಭುವ ನಾಯ ದೇವಾ ವೈಶ್ವಾನರಂ ಕೇತುಮಹ್ನಾಮಕೃಣ್ವನ್" ಇತ್ಯಾದಾವಗ್ನಿ ದೇವತಾ ದೃಶ್ಯತೇ. "ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾ ಹಿ ಕಂ ಭುವನಾನಾಮಭಿಶ್ರೀಃ" ಇತ್ಯಾದಿಸ್ತುತೇರೈಶ್ವರ್ಯಾವಗತತದ್ದೇವ ತಾಯಾಂ ಪ್ರಯೋಗಸಂಭವಾತ್. ಕಿಂಚ, "ವೈಶ್ವಾನರಂ ದ್ವಾದಶಕ

ಪಾಲಂ ನಿರ್ವಪೇತ್ಸಪುತ್ರೇ ಜಾತಃ" ಇತ್ಯಾದಾವಿಷ್ಟಿದೇವತಾತ್ವೇನ ಫಲದಾತೃತ್ವಶ್ರವಣಾದಾತ್ಮಶಬ್ದವೈಶೇಷ್ಯಾತ್, ಉಪಕ್ರಮೇ ಚ 'ಕೋ ನ ಆತ್ಮಾ' ಇತ್ಯಾತ್ಮಶಬ್ದಶ್ರವಣಾತ್, ಆತ್ಮಶಬ್ದೇನ ವೈಶ್ವಾನರೋ ಹ್ಯುಪದಿಶ್ಯತೇ. ವೈಶ್ವಾನರಶಬ್ದಸ್ಯ ಭೂತಾಗ್ನೌ ರೂಢತ್ವಾತ್ "ಪ್ರಾದೇಶಮಾತ್ರಮಭಿವಿಮಾನಯಾತ್ಮಾನಂ ವೈಶ್ವಾನರಮುಪಾಸ್ತೇ" ಇತಿ ವಾಕ್ಯೇ ಪ್ರಾದೇಶಮಾತ್ರಪರಿಚ್ಛಿನ್ನಪ್ರದೇಶವಿಶೇಷವ್ಯವಸ್ಥಾಪನಾತ್ಸರ್ವವ್ಯಾಪಕಸ್ಯ ಪರಮಶಿವಸ್ಯ ಸರ್ವಥಾ ನ ವೈಶ್ವಾನರಶಬ್ದವಾಚ್ಯತ್ವಮಿತಿ ಚೇದ್ವಕ್ಷ್ಯಾಮಃ. ವೈಶ್ವಾನರಸ್ಸಾಧಾರಣಶಬ್ದವಿಶೇಷಾತ್. ಅತ್ರ ವೈಶ್ವಾನರಃಸಾಕ್ಷಾನ್ಮಹೇಶ್ವರ ಏವ, ಕಸ್ಮಾತ್ ಸಾಧಾರಣ ಶಬ್ದವಿಶೇಷಾತ್. ಸಾಧಾರಣಶಬ್ದಾನಾಂ ಮಧ್ಯೇ ವಿಶೇಷಶಬ್ದಾತ್. ಉಪಕ್ರಮೇ "ಕಿಂ ಬ್ರಹ್ಮ" "ಆತ್ಮಾನವೇವೇಮಂ ವೈಶ್ವಾನರಂ" ಇತ್ಯಾದಿಷು ಪರಮಶಿವಾಸಾಧಾರಣ ಬ್ರಹ್ಮಶಬ್ದಪ್ರಯೋಗಾತ್, ಭೂತಾಗ್ನ್ಯಾದೀನಾಂ ತದಸಂಭವಾದ್ವೈಶ್ವಾನರಸ್ಸಾಕ್ಷಾಚ್ಛಿವಃ. ಕಿಂಚಾತ್ಮಶಬ್ದಸ್ತು ಜೀವಬ್ರಹ್ಮಣೋಃ, ವೈಶ್ವಾನರಶಬ್ದಶ್ಚ ಜಾಠರಾದೀನಾಂ ತ್ರಯಾಣಾಂ ಸಾಧಾರಣಃ. ತಥಾಪಿ ವಿಶೇಷೋ ದೃಶ್ಯತೇ. "ಏತಸ್ಯಾತ್ಮನೋ ವೈಶ್ವಾನರಸ್ಯ" ಇತ್ಯಾದಿನಾ ಆತ್ಮವೈಶ್ವಾನರಶಬ್ದಯೋಃ ಪರಮೇಶ್ವರಪರತ್ವಂ ಪ್ರತಿಪಾದ್ಯತೇ. ಪರಶಿವಸ್ಯೈವಾತ್ರ ದ್ಯುಮೂರ್ಧತ್ವಾದಿಧರ್ಮಾಣಾಂ ಸಂಭವಾತ್. "ಸರ್ವೇಷ್ವಾತ್ಮಸ್ವನ್ನಮತ್ತಿ" ಇತ್ಯಾದೌ ಸರ್ವವ್ಯಾಪಕಸ್ಯ ಪರಮೇಶ್ವರಸ್ಯ ಸರ್ವಲೋಕಾಶ್ರಯಫಲಭೋಕ್ತೃತ್ವಸ್ಯ ಯುಕ್ತತ್ವಾತ್. "ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ" ಇತ್ಯಾದೌ ಸರ್ವಪಾಪಪ್ರಣಾಶಕತ್ವಂ ಪರಮೇಶ್ವರಸ್ಯೈವ ಸಮುಚಿತಮಿತಿ ಉಪಕ್ರಮೋಪಸಂಹಾರಾದೌ ಬ್ರಹ್ಮಧರ್ಮಬಾಹುಳ್ಯಾನ್ನೇತರೋ ವೈಶ್ವಾನರ ಇತಿ ಸಿದ್ಧಂ.

ವಿಶ್ವಾಧಿಕನಾದ ಮಹೇಶ್ವರನು ವಿಶ್ವಕಾರಣನೆಂದು ತಿಳಿಸಿ ಅವನೇ ಜಠರಾಗ್ನಿ ಎನಿಸಿ ಎಲ್ಲರಿಗೂ ಉಪಾಸ್ಯನಾಗಿರುವನೆಂದು ಬೇರೆ ಅಧಿಕರಣದಲ್ಲಿ ತಿಳಿಸಲಾಗಿದೆ.

**ವೈಶ್ವಾನರಾಧಿಕರಣ ||೭|| ವೈಶ್ವಾನರಸ್ಸಾಧಾರಣಶಬ್ದವಿಶೇಷಾತ್ ||೨೪||**

ಛಾಂದೋಗ್ಯದಲ್ಲಿ ಇದರ ವಿಷಯ ಬಂದಿದೆ. "ನನ್ನ ಆತ್ಮ ಯಾವುದು. ಬ್ರಹ್ಮವೆಂದರೆ ಯಾವುದು, ಆತ್ಮನೆನಿಸಿದ ಈ ವೈಶ್ವಾನರನನ್ನು ನೀನು ಚೆನ್ನಾಗಿ ಅರಿತಿರುವೆಯಾದ್ದರಿಂದ ಅದನ್ನು ನನಗೆ ತಿಳಿಸು" ಎಂದಾರಂಭಿಸಿ ಆಕಾಶ ಆದಿತ್ಯ ಇವುಗಳ ಗುಣಯೋಗವನ್ನೂ ಒಂದೊಂದರ ಉಪಾಸನವನ್ನೂ ತಿರಸ್ಕರಿಸಿ ವೈಶ್ವಾನರನಿಗೆ ಇವು ತಲೆ ಮೊದಲಾದ ಅಂಗಗಳಾಗಿರುವುವೆಂದು ತಿಳಿಸಿ, "ಪ್ರಾದೇಶಮಾತ್ರನಾಗಿ ಪರಿಮಿತ ಪ್ರಮಾಣನಾದ ವೈಶ್ವಾನರನನ್ನು ಯಾವನು ಉಪಾಸಿಸುವನೋ ಅವನು ಸರ್ವಲೋಕಗಳಲ್ಲೂ ಸರ್ವಭೂತಗಳಲ್ಲೂ ಸರ್ವ ಆತ್ಮರಲ್ಲೂ ಭೋಗಿಸುತ್ತಾನೆ. ಆ ಈ ಆತ್ಮನಾದ

ವೈಶ್ವಾನರನಿಗೆ ದ್ಯುಲೋಕವೇ ತಲೆ, ಸೂರ್ಯನೇ ಕಣ್ಣು, ವಾಯುವೇ ಪ್ರಾಣ, ಎಲ್ಲೆಲ್ಲೂ ವ್ಯಾಪಿಸುವ ಆಕಾಶವೇ ಸೊಂಟ, ನೀರೇ ಮೂತ್ರಸ್ಥಾನ, ಪೃಥಿವಿಯೇ ಪಾದಗಳು, ವೇದಿಕೆಯೇ ವಕ್ಷಸ್ಥಳ, ಕೂದಲೇ ದರ್ಭೆಹುಲ್ಲು, ಗಾರ್ಹಪತ್ಯಾಗ್ನಿಯೇ ಹೃದಯ, ಅನ್ವಾಹಾರ್ಯಪಚನವೆಂಬ ಅಗ್ನಿಯೇ ಮನಸ್ಸು. ಆಹವನೀಯಾಗ್ನಿಯೇ ಮುಖ"ಎಂದು ಆ ಶ್ರುತಿಯಲ್ಲಿ ಹೇಳಿದೆ. ಇಲ್ಲಿ ವೈಶ್ವಾನರವೆಂದರೆ ಜಠರಾಗ್ನಿಯೋ? ಭೂತಾಗ್ನಿಯೋ? ತದಭಿಮಾನದೇವತೆಯೋ ಅಥವಾ ಪರಮೇಶ್ವರನೋ? ಎಂಬ ಸಂದೇಹ ಬರುತ್ತದೆ. "ತಿನ್ನುವ ಅನ್ನ ಯಾತರಿಂದ ಜೀರ್ಣವಾಗುವುದೋ, ಯಾವುದು ಪುರುಷನೊಳಗೆ ಇರುವುದೋ ಈ ಅಗ್ನಿಯೇ ವೈಶ್ವಾನರನು" ಹೀಗೆ ಜಠರಾಗ್ನಿಯಲ್ಲಿ ವೈಶ್ವಾನರಶಬ್ದವನ್ನು ಸಾಮಾನ್ಯವಾಗಿ ಪ್ರಯೋಗಿಸಿರುವುದು ಕಂಡುಬಂದಿದೆ. "ದೇವತೆಗಳು ವೈಶ್ವಾನರಾಗ್ನಿಯನ್ನು ಹಗಲುಗಳ ಗುರುತನ್ನಾಗಿ ಮಾಡಿದರು" ಎಂಬಲ್ಲಿ ಅಗ್ನಿ ಎಂಬ ಶರೀರವುಳ್ಳ ದೇವತೆಯೇ ವೈಶ್ವಾನರನೆನಿಸಿದೆ. "ವೈಶ್ವಾನರನ ಸತ್ಪ್ರೇರಣೆಯಂತೆ ನಾವು ಬಾಳೋಣ, ಏಕೆಂದರೆ ಅವನೇ ವಿಶ್ವಕ್ಕೆಲ್ಲಕ್ಕೂ ರಾಜನು. ಸುಖಪ್ರದನು ಮತ್ತು ಅಭಿಮುಖವಾದ ಸಂಪತ್ತುಳ್ಳವನು" ಎಂಬ ಶ್ರುತಿಯಲ್ಲಿ ಐಶ್ವರ್ಯವುಳ್ಳ ದೇವತೆಯಲ್ಲಿ ವೈಶ್ವಾನರಶಬ್ದವನ್ನು ಪ್ರಯೋಗಿಸಲಾಗಿದೆ. "ಹನ್ನೆರಡು ಕಪಾಲಗಳುಳ್ಳವೈಶ್ವಾನರ ಯಾಗವನ್ನು ಪುತ್ರರುಳ್ಳವನು ಮಾಡಬೇಕು" ಎಂಬ ಕಡೆ ವೈಶ್ವಾನರನನ್ನು ಯಜ್ಞದೇವತೆಯೆಂದು ಭಾವಿಸಿ ನಿರ್ದಿಷ್ಟವಾದ ಫಲವನ್ನು ಕೊಡಬಲ್ಲವನೆಂದು ತಿಳಿಸಿರುವುದರಿಂದಲೂ, ಆ ಪದದೊಡನೆ ಆತ್ಮಶಬ್ದವನ್ನು ವಿಶೇಷವಾಗಿ ಉಪಯೋಗಿಸಿರುವುದರಿಂದಲೂ, ಆರಂಭದಲ್ಲಿ 'ಆತ್ಮನ್ಯಾರು ಬ್ರಹ್ಮ ಯಾವುದು' ಎಂದು ಆತ್ಮಶಬ್ದವನ್ನು ಪ್ರಯೋಗಿಸಿರುವುದರಿಂದಲೂ ಆತ್ಮಶಬ್ದವು ವೈಶ್ವಾನರಾಗ್ನಿಯನ್ನೇ ತಿಳಿಸುತ್ತದೆ. ವೈಶ್ವಾನರನ ಸಾನ್ನಿಧ್ಯದಿಂದ ಭೋಕ್ತೃವೆನಿಸಿದ ಜೀವನೂ ವೈಶ್ವಾನರನಾಗಬಹುದು. ವೈಶ್ವಾನರಶಬ್ದವು ಭೂತಾಗ್ನಿಯಲ್ಲಿ ರೂಢವಾಗಿರುವುದರಿಂದಲೂ 'ಪ್ರದೇಶಮಾತ್ರ' ಎಂಬ ವಿಶೇಷಣವನ್ನು ಹೇಳಿರುವುದರಿಂದಲೂ ಆ ಶಬ್ದವು ಸರ್ವವ್ಯಾಪಕನಾದ ಪರಶಿವನನ್ನು ಎಂದಿಗೂ ಬೋಧಿಸಲಾರದು. ಹೀಗೆ ಆಕ್ಷೇಪ ಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಶ್ರುತಿಯಲ್ಲಿ ಬಂದಿರುವ ವೈಶ್ವಾನರಶಬ್ದವು ಸಾಕ್ಷಾತ್ ಮಹೇಶ್ವರನನ್ನೇ ಬೋಧಿಸುತ್ತದೆ. ಯಾಕೆಂದರೆ ಅಲ್ಲಿ ಸಾಧಾರಣಶಬ್ದಗಳ ಮಧ್ಯದಲ್ಲಿ ವಿಶೇಷಶಬ್ದ ಬಂದಿದೆ. ಆರಂಭದಲ್ಲಿ ಪರಶಿವನಿಗೆ ಅನ್ವಯಿಸುವ ಸಾಧಾರಣವಾದ ಬ್ರಹ್ಮಶಬ್ದವನ್ನು ಪ್ರಯೋಗಿಸಲಾಗಿದೆ. ಭೂತಾಗ್ನಿಗೆ ಈ ಶಬ್ದವು ಅನ್ವಯಿಸುವುದಿಲ್ಲವಾದ್ದರಿಂದ ವೈಶ್ವಾನರನೆಂದರೆ ಸಾಕ್ಷಾತ್ ಶಿವನೇ ಆಗಬೇಕು. ಆದರೆ ಆತ್ಮಶಬ್ದವು ಜೀವಬ್ರಹ್ಮರಿಗೂ, ವೈಶ್ವಾನರಶಬ್ದವು ಮೂರು ಅಗ್ನಿಗಳಿಗೂ ಸಾಮಾನ್ಯವಾಗಿ ಅನ್ವಯಿಸುತ್ತವೆ. ಆದರೆ ಅವುಗಳೊಳಗೆ ವಿಶೇಷಶಬ್ದವನ್ನೂ ಪ್ರಯೋಗಿಸಲಾಗಿದೆ. "ಆ ಈ ಆತ್ಮನಾದ ವೈಶ್ವಾನರನಿಗೆ ಅಗ್ನಿಯೇ ಶಿರಸ್ಸು" ಎಂದು ಮುಂತಾಗಿ ವಿಶೇಷವೂ ಕಂಡುಬಂದಿದೆ. ಇದರಿಂದ

ಆತ್ಮ ವೈಶ್ವಾನರ ಎರಡು ಶಬ್ದಗಳೂ ಪರಶಿವನಿಗೇ ಅನ್ವಯಿಸುವುದಾಗಿ ತಿಳಿದುಬರುತ್ತದೆ. ಅಲ್ಲಿಗೆ ದ್ಯುಮೂರ್ಧತ್ವವೇ ಮೊದಲಾದ ಧರ್ಮಗಳು ಪರಶಿವನಿಗೇ ಸಹಜವಾಗಿ ಸಂಭವಿಸುವುದರಿಂದ ಶ್ರುತಿಯಲ್ಲಿ ಹೇಳಿದಂತೆ ಅವನೇ ಎಲ್ಲರಲ್ಲೂ ಅನ್ನವನ್ನು ತಿನ್ನುವನೆಂಬುದು ಯುಕ್ತವಾಗುತ್ತದೆ. ಆದ್ದರಿಂದ ಅವನೇ ಸರ್ವಲೋಕಗಳಿಗಾಶ್ರಯನೂ ಸರ್ವಫಲಭೋಕ್ತೃವೂ ಆಗಿರುವನು. 'ಇವನ ಎಲ್ಲಾ ಪಾಪಗಳೂ ಸುಟ್ಟುಹೋಗುತ್ತವೆ' ಎಂಬಲ್ಲಿ ಉಪಾಸಕರ ಎಲ್ಲಾ ಪಾಪಗಳನ್ನೂ ಸುಡುವ ಶಕ್ತಿ ಪರಶಿವನಿಗೇ ಯುಕ್ತವಾಗುವುದರಿಂದಲೂ, ಉಪಕ್ರಮೋಪಸಂಹಾರಗಳಲ್ಲಿ ಪರಶಿವನಿಗನ್ವಯಿಸುವ ಧರ್ಮಗಳೇ ಬಹಳವಾಗಿ ಬಂದಿರುವುದರಿಂದಲೂ, ಇಲ್ಲಿ ವೈಶ್ವಾನರನೆಂದರೆ ಪರಶಿವನೆಂದು ಸಿದ್ಧವಾಗುತ್ತದೆ.

**ಅತ್ರ ಹೇತ್ವಂತರಮಾಹ-ಸ್ಮರ್ಯಮಾಣಮನುಮಾನಂಸ್ಯಾದಿತಿ ॥೨೫॥**

**ಇಹಾಪಿ ಪರಮಶಿವ ಏವ ವೈಶ್ವಾನರ ಇತ್ಯುಚ್ಯತೇ. "ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ" 'ಅಗ್ನಿರಾಸ್ಯಂ' ಇತ್ಯಾದಿಷು ಯತಃ ಪರಮೇಶ್ವರಸ್ಯ ಸರ್ವಾತ್ಮಕತ್ವಂ ಸ್ಮರ್ಯತೇ. ತತೋ ವೈಶ್ವಾನರೋ ನ ಪರಮೇಶ್ವರಾದ್ಭಿನ್ನಃ. "ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ—ಆಸ್ಯಮಾಹವನೀಯಃ" ಇತ್ಯಾದೌ ವೈಶ್ವಾನರಶಬ್ದಸ್ಯ ಪರಶಿವಪರತ್ವೇನ ವ್ಯವಸ್ಥಾಪನಾತ್. "ಯಸ್ಯಾಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ। ಸೂರ್ಯಶ್ಚಕ್ಷುರ್ದಿಶಃ ಶ್ರೋತ್ರಂ ತಸ್ಮೈ ಲೋಕಾತ್ಮನೇ ನಮಃ॥" ಇತಿ ಸ್ಮೃತಿರಪಿ ಪರಮೇಶ್ವರಪರತ್ವಮುಪದಿಶತಿ. ಸ್ಮರ್ಯಮಾಣಂ ಸ್ಮೃತ್ಯುಕ್ತರೂಪಂ ಅನುಮಾನಂ ಗಮಕಂ ಸ್ಯಾದಿತಿ. ಸೂತ್ರಾರ್ಥಃ. ಇತಿ ಶಬ್ದೋ ಹೇತ್ವರ್ಥಃ. ಯಸ್ಮಾದೇವಂ ಗಮಕಂ ತಸ್ಮಾದ್ವೈಶ್ವಾನರಃ ಪರಮೇಶ್ವರ ಇತಿ ನಿರ್ಣೀಯತೇ.**

ಸ್ಮರ್ಯಮಾಣಮನುಮಾನಂ ಸ್ಯಾದಿತಿ ॥ ೨೫ ॥

ಸ್ಮೃತಿಯಲ್ಲೂ ಸಹ ಪರಶಿವನೇ ವೈಶ್ವಾನರನೆಂದು ಹೇಳಲಾಗಿದೆ. "ಅವನಿಗೆ ಅಗ್ನಿಯೇ ಶಿರಸ್ಸು, ಸೂರ್ಯಚಂದ್ರರೇ ಕಣ್ಣುಗಳು" ಎಂದೂ, "ಅಗ್ನಿಯೇ ಬಾಯಿ, ದ್ಯುಲೋಕವೇ ತಲೆ" ಎಂದೂ ಸ್ಮೃತಿಯಲ್ಲಿ ಶಿವನೇ ಸರ್ವಾತ್ಮಕನೆಂದು ಹೇಳಲಾಗಿದೆ. ಆದ್ದರಿಂದ ವೈಶ್ವಾನರನೆಂದರೆ ಪರಶಿವನಲ್ಲದೆ ಬೇರೆಯಲ್ಲ. ಶ್ರುತಿಯಲ್ಲೂ ವೈಶ್ವಾನರ ಶಬ್ದವನ್ನು ಪರಶಿವನಿಗೇ ಅನ್ವಯಿಸುವುದಾಗಿ ವ್ಯವಸ್ಥೆಮಾಡಲಾಗಿದೆ. "ಯಾವನಿಗೆ ಅಗ್ನಿಯೇ ಮುಖವೋ, ದ್ಯುಲೋಕವೇ ತಲೆಯೋ" ಎಂಬ ಶ್ರುತಿಯ ಹೇಳಿಕೆಗೆ ಸ್ಮೃತಿಯೂ ಅನುಗುಣವಾಗಿದೆ. ಆದ್ದರಿಂದ ಸ್ಮೃತಿಯ ಹೇಳಿಕೆಯೂ ವೈಶ್ವಾನರನೆಂದರೆ ಪರಮೇಶ್ವರನಲ್ಲದೆ ಬೇರೆಯಲ್ಲವೆಂಬುದಕ್ಕೆ ಗಮಕವಾಗಿದೆ.

**ಶಬ್ದಾದಿಭ್ಯೋಽಂತಃಪ್ರತಿಷ್ಠಾನಾಚ್ಚ ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ಪುರುಷಮಪಿ ಚೈನಮಧೀಯತೇ ॥ ೨೬ ॥**

ನನು ವೈಶ್ವಾನರೋ ನ ಪರಮೇಶ್ವರಃ, ಕುತಃ ಶಬ್ದಾದಿಭ್ಯೋಽಂತಃ ಪ್ರತಿಷ್ಠಾನಾಚ್ಚ. ಶಬ್ದಸ್ತಾವದ್ವೈಶ್ವಾನರಶಬ್ದೋ ನ ಪರಮೇಶ್ವರಪರಃ, ಜಾಠರಾಗ್ನೌ ಮುಖ್ಯತ್ವಾತ್. 'ಹೃದಯಂ ಗಾರ್ಹಪತ್ಯಃ' ಇತ್ಯಗ್ನಿತ್ರಯಂ ಸೂಚಿತಂ. "ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಂ" ಇತ್ಯಾದಿನಾ ಪ್ರಾಣಾಹುತ್ಯಾಧಾರತಾಸಂಕೀರ್ತನಂ ಚ ಗೃಹ್ಯತೇ. ಏತೇಭ್ಯೋ ಹೇತುಭ್ಯೋ ಜಾಠರ ಏವ ವೈಶ್ವಾನರಃ. ಕಿಂಚ ಅಂತಃಪ್ರತಿಷ್ಠಾನಾತ್, 'ಪುರುಷೋಽಂತಃಪ್ರತಿಷ್ಠಿತಂ ವೇದ' ಇತಿ ವೈಶ್ವಾನರಸ್ಯಾಂತಃಪ್ರತಿಷ್ಠಿತತ್ವಶ್ರವಣಾತ್, ಇದಂ ಚ ಜಾಠರೇ ಸಂಭವತಿ, ಇತಿ ಚೇನ್ನ, ತಥಾ ಜಾಠರಾಗ್ನ್ಯವಚ್ಛಿನ್ನೇ ಮಹೇಶ್ವರೇ ದೃಷ್ಟ್ಯುಪದೇಶಾತ್ ಧ್ಯಾನೋಪದೇಶಾತ್. ಅಸಂಭವಾತ್ ದ್ಯುಮೂರ್ಧತ್ವಾದಿಧರ್ಮಾಣಾಂ ಕೇವಲಜಾಠರಾಗ್ನಾವಸಂಭವಾದಿತ್ಯರ್ಥಃ. ಪುರುಷಮಪಿ ಚೈನಮಧೀಯತೇ—ವಾಜಸನೇಯಿನಃ ಏವಂ ವೈಶ್ವಾನರಂ ಪುರುಷಂ ವದಂತಿ. 'ಸ ಏಷೋಽಗ್ನಿರ್ವೈಶ್ವಾನರೋ ಯತ್ಪುರುಷಃ ಸ ಯೋ ಹ ವೈ ತಮೇವಮಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇಽಂತಃಪ್ರತಿಷ್ಠಿತಂ ವೇದ' ಇತಿ ಪರಮೇಶ್ವರಸ್ಯ ಸರ್ವಾತ್ಮಕತ್ವಾತ್ಪುರುಷವಿಧತ್ವಂ ಪುರುಷೇಽಂತಃಪ್ರತಿಷ್ಠಿತತ್ವಂ ಚ ಸರ್ವಮುಪಪದ್ಯತೇ. ಕೈಶ್ಚಿತ್ 'ಪುರುಷವಿಧಮಭಿಧೀಯತೇ' ಇತಿ ಪಾಠೇಽಪ್ಯಯಮೇವಾರ್ಥಸ್ಸೂಚಿತಃ. ಜಾಠರಸ್ಯ ಪುರುಷವಿಧತ್ವಂ ನ ಸಂಭವತಿ. ಸರ್ವಾತ್ಮಕತ್ವಾತ್ಪರಮಶಿವಸ್ಯ ಭಕ್ತೋಪಾಸನಾರ್ಥಂ ಸರ್ವಮವಿರುದ್ಧಂ. ನನು ಜಾಠರಾಗ್ನೇಸ್ತ್ರೈಲೋಕ್ಯಾತ್ಮಕತ್ವಾಸಂಭವೇಽಪಿ ಬಾಹ್ಯಾಭ್ಯಂತರಸ್ಥಿತಸ್ಯ ಭೂತಾಗ್ನೇರ್ದ್ಯುಲೋಕಸಂಬಂಧದರ್ಶನಾತ್ತ್ರೈಲೋಕ್ಯಾತ್ಮಕತ್ವಂ ಸಂಭವತಿ. "ಯೋ ಭಾನುನಾ ಪೃಥಿವೀಂ ದ್ಯಾಮುತೇಮಾಮಾತತಾನ ರೋದಸೀ" ಇತ್ಯಾದಾವೈಶ್ವರ್ಯಯೋಗಾತ್ತಚ್ಛರೀರದೇವತಾಯಾಃ ದ್ಯುಲೋಕಾವಯವತ್ವಮುಪಪದ್ಯತೇ. ತಸ್ಮಾನ್ನ ಪರಮೇಶ್ವರ ಇತಿ ಚೇನ್ನ, 'ಯೋ ರುದ್ರೋ ಅಗ್ನೌ' ಇತ್ಯಾದಿಷು ಪರಶಿವಸ್ಯೈವ ವೈಶ್ವಾನರಾದ್ಯುಪಾಧಿಕತ್ವನಿರ್ದೇಶಾದತ್ರ ಜಾಠರವೈಶ್ವಾನರೋಪಾಧಿರ್ನೇತರಃ.

ಪರಮೇಶ್ವರನ ಪಕ್ಷದಲ್ಲಿ ಬೇರೊಂದು ಹೇತುವೂ ಇದೆ—

**ಶಬ್ದಾದಿಭ್ಯೋಽಂತಃಪ್ರತಿಷ್ಠಾನಾಚ್ಚ ನೇತಿ ಚೇನ್ನತಥಾದೃಷ್ಟ್ಯುಪದೇಶಾದಸಂಭವಾತ್ಪುರುಷಮಪಿ ಚೈನಮಧೀಯತೇ ॥ ೨೬ ॥**

ಶಬ್ದಸಾಮ್ಯದಿಂದಲೂ, ದೇಹದೊಳಗೆ ಇರುವುದರಿಂದಲೂ ವೈಶ್ವಾನರಶಬ್ದವು ಜಠರಾಗ್ನಿಯಲ್ಲಿ ರೂಢವಾಗಿದೆಯೇ ಹೊರತು ಪರಮೇಶ್ವರನಿಗನ್ವಯಿಸುವುದಿಲ್ಲ. ಇದೂ ಅಲ್ಲದೆ, "ಯಾವ ಅನ್ನವು ಮೊದಲು ಬರುತ್ತದೆಯೋ ಅದನ್ನು ಭಕ್ಷಿಸ

ಬೇಕು" ಎಂಬಲ್ಲಿ ಪ್ರಾಣಾಹುತಿಗೆ ಆಧಾರವೆಂದು ಹೇಳಿರುವುದರಿಂದಲೂ ವೈಶ್ವಾನರ ವೆಂದರೆ ಜಠರಾಗ್ನಿಯೇ ಆಗುತ್ತದೆ ಎಂದು ತಿಳಿಯಬೇಕು. ಹಾಗೆಯೇ, "ಯಾವ ಪುರುಷನು ತನ್ನೊಳಗೆ ಇರುವುದನ್ನು ತಿಳಿಯುವನೋ" ಎಂಬಲ್ಲಿ ಅಂತಃಪ್ರತಿಷ್ಠಾನ ವೆಂಬುದು ಜಠರಾಗ್ನಿಗೇ ಹೊಂದುತ್ತದೆ. ಹೀಗೆ ವೈಶ್ವನರಪದವು ಜಠರಾಗ್ನಿಯನ್ನೇ ತಿಳಿಸುತ್ತದೆ ಎಂದು ಹೇಳುವುದಾದರೆ ಅದು ಯುಕ್ತವಲ್ಲ; ಯಾಕೆಂದರೆ ಜಠರಾಗ್ನಿ ಯೊಳಗೆ ಇರುವ ಮಹೇಶ್ವರನನ್ನು ಧ್ಯಾನಿಸಬೇಕೆಂದು ಶ್ರುತಿ ಉಪದೇಶಿಸುತ್ತಿದೆ. ಹೀಗೆ ಜಠರಾಗ್ನಿಯಲ್ಲೂ ಪರಶಿವನನ್ನೇ ಕಾಣಬೇಕೆಂದು ಶ್ರುತಿಯು ಉಪದೇಶಿಸಿರುವು ದರಿಂದಲೂ, ದ್ಯುಮೂರ್ಧತ್ವಾದಿ ಧರ್ಮಗಳು ಕೇವಲ ಜಠರಾಗ್ನಿಯಲ್ಲಿ ಸಂಭವಿಸು ವುದಿಲ್ಲವಾದ್ದರಿಂದಲೂ, ವಾಜಸನೇಯಿಗಳು ಈ ವೈಶ್ವಾನರನನ್ನು ಪುರುಷನೆಂದು ಹೇಳಿರುವುದರಿಂದಲೂ ವೈಶ್ವಾನರವೆಂದರೆ ಜಠರಾಗ್ನಿಯಾಗಲಾರದು. "ಆ ಈ ವೈಶ್ವಾನರಾಗ್ನಿ ಎಂಬ ಪುರುಷನನ್ನು ಜೀವನೊಳಗೆ ಇರುವವನೆಂದು ಯಾವನು ತಿಳಿ ಯುವನೇ" ಎಂದು ವಾಜಸನೇಯಿಗಳು ವೈಶ್ವಾನರನನ್ನು ಪುರುಷನೆಂದು ಕರೆದಿರು ವುದರಿಂದ ಹಾಗೆ ಪುರುಷನಾಗಿರುವಿಕೆ ಮತ್ತು ಪುರುಷನೊಳಗಿರುವಿಕೆ ಇವೆರಡು ಧರ್ಮಗಳೂ ಸರ್ವಾತ್ಮಕನಾದ ಪರಶಿವನಿಗೇ ಹೊಂದುತ್ತವೆ. ಕೆಲವರು 'ಪುರುಷಂ' ಎಂಬುದರ ಬದಲು 'ಪುರುಷವಿಧಂ' ಎಂದು ಸೂತ್ರದಲ್ಲಿ ಬೇರೆ ಪಾಠವನ್ನು ಹೇಳು ತ್ತಾರೆ. ಆಗಲೂ ಇದೇ ಅರ್ಥವೇ ಸೂಚಿತವಾಗುತ್ತದೆ. ಜಠರಾಗ್ನಿಗೆ ಒಂದು ಬಗೆಯ ಪುರುಷನಾಗುವಿಕೆಯಂತೂ ಸಂಭವಿಸುವುದಿಲ್ಲ. ಸರ್ವಾತ್ಮಕನಾದ್ದರಿಂದ ಪರಶಿವನಿಗೆ ಭಕ್ತೋಪಾಸನೆಗಾಗಿ ಎಲ್ಲವೂ ಹೆಂದುತ್ತದೆ. ಜಠರಾಗ್ನಿ ಹೊಟ್ಟೆಯಲ್ಲಿರುವುದರಿಂದ ಮೂರು ಲೋಕಗಳನ್ನೂ ವ್ಯಾಪಿಸಲಾರದು. ಆದ್ದರಿಂದ ವಿಶ್ವದ ಒಳಗೂ ಹೊರಗೂ ವ್ಯಾಪಿಸಿರುವ ಭೂತಾಗ್ನಿಗೆ ದ್ಯುಲೋಕದ ಸಂಬಂಧವಿರುವುದರಿಂದ ಅದಕ್ಕೆ ಮೂರು ಲೋಕಗಳ ವ್ಯಾಪ್ತಿ ಹೊಂದುತ್ತದೆ. "ಯಾವುದು ಸೂರ್ಯಕಿರಣದಿಂದ ದ್ಯಾವಾ ಭೂಮಿಗಳನ್ನೂ ಅಂತರಿಕ್ಷವನ್ನು ವ್ಯಾಪಿಸಿತೋ "ಎಂಬಲ್ಲಿ ಹೇಳಿರುವ ಐಶ್ವರ್ಯಯೋಗ ದಿಂದ ಅಗ್ನಿ ಶರೀರಕವಾದ ದೇವತೆಗೆ ದ್ಯುಲೋಕವು ಅವಯುವವಾದ್ದರಿಂದ ದ್ಯುಮೂ ರ್ಧತ್ವಾದಿ ಧರ್ಮಗಳು ಈ ದೇವತೆಯಲ್ಲೂ ಸಂಭವಿಸುವುದರಿಂದ ಪರಮೇಶ್ವರನಿಗೇ ಏಕೆ ಅನ್ವಯಿಸಬೇಕು? ಎಂದು ಕೇಳುವುದು ಯುಕ್ತವಲ್ಲ. ಯಾಕೆಂದರೆ 'ಅಗ್ನಿಯಲ್ಲಿ ಯಾವ ರುದ್ರನಿರುವನೋ' ಎಂದು ಅನೇಕ ಶ್ರುತಿಗಳಲ್ಲಿ ಪರಶಿವನೇ ಅಗ್ನಿಯಲ್ಲಿರುವ ವನೆಂದು ಹೇಳಿರುವುದರಿಂದ ಪರಶಿವನೇ ವೈಶ್ವಾನರಾಗ್ನಿ ಎಂದು ಸ್ಪಷ್ಟವಾಯಿತು.

**ಅತ್ರ ಹೇತ್ವಂತರಮುಪದಿಶತಿ–ಅತ ಏವ ನ ದೇವತಾಭೂತಂ ಚ ॥೨೭॥**

**ಮಂತ್ರವರ್ಣೇ ತೃತೀಯಭೂತಾಗ್ನೇರ್ಲೋಕತ್ರಯಾತ್ಮಕತ್ವ ದರ್ಶನಾತ್ "ಮೂರ್ಧೈವ ಸುತೇಜಾಃ "ಇತ್ಯಾದ್ಯವಯುವಸಂಬಂಧಿತ್ವಂ ತಸ್ಯೈವೋಪಪನ್ನಂ ತಚ್ಛರೀರದೇವತಾಯಾ ಐಶ್ವರ್ಯಯೋಗಾತ್ಸ ಮಂಜಸಮಿತಿ ಚೇದ್ಬ್ರೂಮಃ. ದೇವತಾ ಚ ಭೂತಂ ಚ ದೇವತಾಭೂತ**

ಮಿತ್ಯೇಕವದ್ಭಾವಃ. ದ್ವಯಮಪಿ ನ ವೈಶ್ವಾನರಶಬ್ದಾಭಿಧೇಯಮ್. ಅತ ಏವ ಪೂರ್ವೋಕ್ತಹೇತುಭ್ಯಃ ದ್ಯುಮೂರ್ಧತ್ವಾದೇರುಭಯತ್ರಾಸಮಂಜಸತ್ವಾದಿತ್ಯರ್ಥಃ. ಕಿಂಚ ಲೋಹಿತೋಷ್ಣಪ್ರಕಾಶಾತ್ಮಕಭೂತಾಗ್ನೇಸ್ತದಧಿಷ್ಠಾನದೇವತಾಯಾಶ್ಚ ಪರಶಿವೋಪಾಸನಾಪ್ರಾಪ್ತೈಶ್ವರ್ಯತ್ವಾದಾತ್ಮಶಬ್ದಾಭಾವಾತ್ಸರ್ವೇಶ್ವರತ್ವಸರ್ವಾಂತರ್ಯಾಮಿತ್ವಸರ್ವಾತ್ಮಕತ್ವಸರ್ವಶಬ್ದವಾಚ್ಯತ್ವಾದಿಧರ್ಮಾಣಾಂ ಪರಬ್ರಹ್ಮಣಶ್ಶಿವಸ್ಯ ಸಿದ್ಧತ್ವಾದ್ವೈಶ್ವಾನರಶಬ್ದವಾಚ್ಯತ್ವಂ ತಸ್ಯೈವ ಪ್ರಪತ್ತವ್ಯಮ್.

ಈ ಬಗ್ಗೆ ಬೇರೊಂದು ಹೇತುವಿದೆ—**ಅತ ಏವ ನ ದೇವತಾಭೂತಂ ಚ ||೨೭||**

ಮಂತ್ರವರ್ಣದಲ್ಲಿ ಮೂರನೇ ಭೂತಾಗ್ನಿಯು ಮೂರು ಲೋಕಗಳಲ್ಲಿಯೂ ಇರುವುದಾಗಿ ಹೇಳಿದೆ. "ತೇಜಸ್ಸೇ ಶಿರಸ್ಸು" ಎಂಬಲ್ಲಿ ಹೇಳಿರುವ ಅವಯವಗಳ ಸಂಬಂಧವೂ ಅದಕ್ಕೇ ಹೊಂದುತ್ತದೆ. ಅಂತಹ ಶರೀರವುಳ್ಳ ದೇವತೆಯೇ ಐಶ್ವರ್ಯ ಯೋಗದಿಂದ ವೈಶ್ವಾನರನಾಗಲಿ? ಎಂಬ ಆಕ್ಷೇಪವನ್ನು ಈ ಸೂತ್ರದಲ್ಲಿ ನಿರಾಕರಿಸಲಾಗಿದೆ. ದೇವತೆ ಮತ್ತು ಭೂತಾಗ್ನಿ ಎರಡೂ ಸಹ ವೈಶ್ವಾನರವೆನಿಸಲಾರವು; ಯಾಕೆಂದರೆ ಇವೆರಡರಲ್ಲೂ ದ್ಯುಮೂರ್ಧತ್ವವು ಸಂಭವಿಸುವುದಿಲ್ಲ. ಬಿಸಿಲು ಬೆಳಕುಗಳ ರೂಪವಾಗಿರುವ ಭೂತಾಗ್ನಿಗೆ ದ್ಯುಲೋಕವೇ ಶಿರಸ್ಸೆಂಬ ಕಲ್ಪನೆ ಹೊಂದುವುದಿಲ್ಲ. ಅಧಿಷ್ಠಾನದೇವತೆಗೆ ಪರಶಿವನ ಉಪಾಸನದಿಂದಲೇ ಐಶ್ವರ್ಯ ಬಂದಿರುವುದರಿಂದ ಆ ದೇವತೆಯೂ ಅವನಿಗಧೀನವೇ ಆಗಿರುವುದು. ಆದ್ದರಿಂದ ವೈಶ್ವಾನರ ಶಬ್ದವು ಪರಶಿವನಿಗೇ ಅನ್ವಯಿಸುತ್ತದೆ.

**ಅತ್ರ ಪರಮತಂ ದರ್ಶಯತಿ. ಸಾಕ್ಷಾದಪ್ಯವಿರೋಧಂ ಜೈಮಿನಿಃ ||೨೮||**

'ರುದ್ರೋ ವಾ ಏಷ ಯದಗ್ನಿಃ' ಇತಿ ಶ್ರುತಾವಗ್ನೇಸ್ಸಾಕ್ಷಾತ್ಪರಮೇಶ್ವರಾತ್ಮಕತ್ವೇನ ವ್ಯಪದೇಶಾದ್ವೈಶ್ವಾನರಶಬ್ದವಾಚ್ಯತ್ವಂ ಪರಶಿವಸ್ಯಾವಿರುದ್ಧಂ ಜೈಮಿನಿರ್ಮನ್ಯತೇ. ಪೂರ್ವತ್ರ ಜಾಠರಾಗ್ನ್ಯವಚ್ಛಿನ್ನತಯಾ ಪರಶಿವೋಪಾಸನಂ ನಿರ್ದಿಷ್ಟಂ. ಅಂತಃಪ್ರತಿಷ್ಠಿತತ್ವಾದ್ಯನುರೋಧೇನ ಇದಾನೀಂ ಪ್ರತೀಕೋಪಾಸನಂ ವಿನೈವ ಸಾಕ್ಷಾದಪಿ ಪರಮೇಶ್ವರತ್ವೇನ ಉಪಾಸನೇ ಅವಿರೋಧಿತ್ವಂ ಸೂಚಿತಂ. ಕಿಂಚ "ಪುರುಷವಿಧಂ ಪುರುಷೇಽಂತಃಪ್ರತಿಷ್ಠಿತಂ" ಇತ್ಯತ್ರ ತಸ್ಯ ಪರಶಿವಸ್ಯ ಪುರುಷಶಬ್ದೇನಾವಯವವತ್ತ್ವಂ, ಅಂತಃಪ್ರತಿಷ್ಠಿತಮಿತ್ಯನೇನ ನಿರವಯವತ್ವಂ ಚ ಸೂಚಿತಂ. ಪೂರ್ವಾಪರಸಂದರ್ಭೇಣ ಪರಮೇಶ್ವರ ಏವ ವೈಶ್ವಾನರ ಇತ್ಯುಪದಿಶ್ಯತೇ. ವಿಶ್ವಶ್ಚಾಸೌ ನರಶ್ಚೇತಿ, ವಿಶ್ವೇಷಾಂ ನರಃ ಇತಿ, ವಿಶ್ವೇ ನರಾ ಯಸ್ಯೇತಿ ವಾ ವಿಶ್ವನರಃ, ವಿಶ್ವನರ ಏವ ವೈಶ್ವಾನರಃ. ತದ್ಧಿತೋಽನನ್ಯಾರ್ಥೇ ರಾಕ್ಷಸವಾಯಸಾದಿವತ್. ಅಗ್ನಿಶಬ್ದೋಽಪ್ಯಗ್ರಣೀತ್ವಾದಿಗುಣಯೋಗಾಶ್ರಯಣೇನ ಪರಮೇಶ್ವರಪರತ್ವ ಏವ ಭವಿಷ್ಯತಿ.

**ಗಾರ್ಹಪತ್ಯಾದಿಕಲ್ಪನಂ ಪ್ರಾಣಾಹುತ್ಯಧಿಕರಣತ್ವಂ ಚ ಸರ್ವಾತ್ಮತ್ವಾತ್ಪರಮೇಶ್ವರಸ್ಯೈವ ನಿರ್ಣೀಯತೇ.**

ಇಲ್ಲಿ ಪರಮತವನ್ನು ತಿಳಿಸುತ್ತಾನೆ–**ಸಾಕ್ಷಾದಪ್ಯವಿರೋಧಂ ಜೈಮಿನಿಃ ॥೨೮॥**

"ಈ ರುದ್ರನೇ ಅಗ್ನಿಯು ಅವನ ಎರಡು ಶರೀರಗಳಲ್ಲಿ, ಒಂದು ಘೋರ ಮತ್ತೊಂದು ಶಿವ" ಎಂಬ ಶ್ರುತಿಯಲ್ಲಿ ಅಗ್ನಿಯನ್ನು ಸಾಕ್ಷಾತ್ತಾಗಿ ಪರಶಿವನೆಂದು ಹೇಳಿರುವುದರಿಂದ ವೈಶ್ವಾನರಶಬ್ದವು ಪರಶಿವನನ್ನೇ ತಿಳಿಸುವುದರಲ್ಲಿ ಯಾವ ವಿರೋಧವೂ ಇಲ್ಲವೆಂದು ಜೈಮಿನಿ ಹೇಳುತ್ತಾರೆ. ಹಿಂದೆ ಜಠರಾಗ್ನಿಯೊಳಗೆ ಇರುವುದರಿಂದ ಪರಶಿವನನ್ನು ಉಪಾಸನಮಾಡಬೇಕೆಂದು ಹೇಳಿತ್ತು. ಈಗ ಪ್ರತೀಕೋಪಾಸನವಿಲ್ಲದೆ ಸಾಕ್ಷಾತ್ತಾಗಿಯೇ ವೈಶ್ವಾನರನ್ನು ಪರಶಿವನೆಂದು ಉಪಾಸನೆಮಾಡಲು ಏನೂ ವಿರೋಧವಿಲ್ಲವೆಂದು ತಿಳಿಸಲಾಗಿದೆ. ಶ್ರುತಿಯಲ್ಲಿ ಪರಶಿವನನ್ನು ಒಂದು ಬಗೆಯ ಪುರುಷನೆಂದು ಹೇಳಿದ್ದರಿಂದ ಅವನು ಸಾವಯವನೆಂದೂ, 'ಅಂತಃಪ್ರತಿಷ್ಠಿತ'ನೆಂದೂ ಹೇಳಿದ್ದರಿಂದ ಅವನು ನಿರವಯವನೆಂದು ಸೂಚಿತವಾಯಿತು. ಹೀಗೆ ಪೂರ್ವಾಪರಸಂಬಂಧದಿಂದ ಪರಶಿವನೇ ವೈಶ್ವಾನರನೆಂದು ಹೇಳಿದಂತಾಯಿತು. ವಿಶ್ವಾತ್ಮಕನಾದ ನರನು, ವಿಶ್ವಕ್ಕೂ ನರನು, ವಿಶ್ವದಲ್ಲಿಯೂ ನರರುಳ್ಳವನು ವಿಶ್ವನರನು. ಹೀಗೆ ಪರಶಿವನೇ ವಿಶ್ವನರ=ಸರ್ವಾತ್ಮಕನೆನಿಸಿದ್ದಾನೆ. ರಕ್ಷ ಏವ ರಾಕ್ಷಸಃ, ವಯ ಏವ ವಾಯಸಃ ಎಂಬಂತೆ ವಿಶ್ವನರ ಏವ ವೈಶ್ವಾನರಃ ಎಂಬಲ್ಲಿ ಸ್ವಾರ್ಥದಲ್ಲಿ ತದ್ಧಿತಪ್ರತ್ಯಯ ಬಂದಿದೆ. ಅಗ್ನಿಶಬ್ದವು ಅಗ್ರೇ ಸ್ಥಿತ್ವಾ ನಯತಿ=ಮುಂದೆ ಇದ್ದುಕೊಂಡು ಕರ್ಮಫಲಕ್ಕೆ ಒಯ್ಯುತ್ತಾನೆ ಎಂಬ ಅರ್ಥವನ್ನು ತಿಳಿಸುವುದರಿಂದ ಪರಶಿವನಿಗೇ ಅನ್ವಯಿಸುತ್ತದೆ. ಗಾರ್ಹಪತ್ಯಾಗ್ನಿಯೂ ಪ್ರಾಣಾಹುತಿಯೂ ಸರ್ವಾತ್ಮಕನಾದ ಪರಶಿವನಿಗೇ ಅನ್ವಯಿಸುತ್ತವೆ.

**ವ್ಯಾಪಕಸ್ಯ ಶಿವಸ್ಯ ಕಥಂ ಪ್ರಾದೇಶಮಾತ್ರವಾಕ್ಯಮುಪಪದ್ಯತ ಇತ್ಯಾಶಂಕಾಯಾಮಾಹ— ಅಭಿವ್ಯಕ್ತೇರಿತ್ಯಾಶ್ಮರಥ್ಯಃ ॥೨೯॥**

**ಸರ್ವವ್ಯಾಪಕಸ್ಯ ಶಿವಸ್ಯ ಪ್ರಾದೇಶಮಾತ್ರಪರಿಮಾಣಮುಪದಿಶ್ಯತೇ. ಕುತಃ? ಅಭಿವ್ಯಕ್ತೇಃ. ಪರಮಶಿವ ಏವ ಭಕ್ತೋಪಾಸನಾರ್ಥಂ ಹೃದಯಚಕ್ಷುರಾದಿಪ್ರದೇಶವಿಶೇಷೇಷು ಪ್ರಾದೇಶಮಾತ್ರಪರಿಮಾಣೋಽಭಿವ್ಯಜ್ಯತೇ. "ಸರ್ವಾನನಶಿರೋಗ್ರೀವಃ–ಸರ್ವಗತಶ್ಶಿವ" ಇತ್ಯಾದಿಷು ವ್ಯಾಪಕಸ್ಯ ಭಕ್ತೋಪಾಸನಾರ್ಥಂ ಪರಿಚ್ಛಿನ್ನತ್ವವ್ಯಪದೇಶಾದತ್ರಾಪಿ ಪ್ರಾದೇಶಮಾತ್ರಶ್ರುತಿರುಪಪದ್ಯತ ಇತ್ಯಾಶ್ಮರಥ್ಯೋ ವ್ಯಾಚಷ್ಟೇ.**

ವ್ಯಾಪಕನಾದ ಪರಶಿವನು ಪ್ರಾದೇಶಮಾತ್ರದಲ್ಲಿರುವನೆಂದು ತಿಳಿಸುವ ಶ್ರುತಿಯ ಅರ್ಥವನ್ನು ವಿವರಿಸಲಿಕ್ಕಾಗಿ ಬೇರೆ ಆಚಾರ್ಯರ ಮತವನ್ನು ತಿಳಿಸುತ್ತಾನೆ.

**ಅಭಿವ್ಯಕ್ತೇರಿತ್ಯಾಶ್ಮರಥ್ಯಃ ॥೨೯॥**

ಅಳತೆ ಮೀರಿ ಅನಂತನಾಗಿದ್ದರೂ ಪರಶಿವನು ಪ್ರಾದೇಶಮಾತ್ರನೆಂದು ಹೇಳಿ

ರುವುದು ಅಭಿವ್ಯಕ್ತಿಯ ಕಾರಣದಿಂದ ಆಗಬಹುದು. ಪರಶಿವನು ಎಲ್ಲೆಡೆಯಲ್ಲೂ ವ್ಯಾಪಿಸಿದ್ದರೂ ಉಪಾಸಕರಿಗಾಗಿ ಒಂದು ಜೋಟು ಪರಿಮಾಣದವನಾಗಿ ಹೃದಯವೇ ಮೊದಲಾದ ಕಡೆ ವಿಶೇಷವಾಗಿ ಕಾಣಿಸಿಕೊಳ್ಳುತ್ತಾನೆ. "ಶಿವನು ಸರ್ವಗತನಾದರೂ ಎಲ್ಲರ ಮುಖ ಶಿರಸ್ಸು ಕುತ್ತಿಗೆ ಹೃದಯಗಳಲ್ಲಿ ವಿಶೇಷವಾಗಿರುವನು" ಎಂದು ಶ್ವೇತಾಶ್ವತರದಲ್ಲಿ ವ್ಯಾಪಕಶಿವನು ಭಕ್ತೋಪಾಸನೆಗಾಗಿ ಪರಿಚ್ಛಿನ್ನನಾಗುವನೆಂದು ಹೇಳಿರುವುದರಿಂದ ಇಲ್ಲಿಯೂ ಅವನು ಪ್ರಾದೇಶಮಾತ್ರನಿರುವನೆಂದು ತಿಳಿಸುವ ಶ್ರುತಿಯು ಯುಕ್ತವಾಗಿದೆ ಎಂದು ಆಶ್ಮರಥ್ಯಾಚಾರ್ಯನು ಹೇಳುತ್ತಾನೆ.

**ಅಸ್ಮಿನ್ನರ್ಥೇ ಮತಾಂತರಂ ದರ್ಶಯತಿ—ಅನುಸ್ಮೃತೇರ್ಬಾದರಿಃ ॥೩೦॥**

**"ದಹರಂ ವಿಪಾಪ್ಮಂ" ಇತ್ಯಾದಿನಾ ಸರ್ವಗತಸ್ಯ ಶಿವಸ್ಯ ದಹರಗುಹಾಶಯತ್ವವಹ್ನಿಶಿಖಾತ್ಮಕತ್ವಸರ್ವಶಬ್ದವಾಚ್ಯತ್ವಪ್ರಭಾಕರಾಂತರ್ವರ್ತಿತ್ವಲಿಂಗಾತ್ಮಕತ್ವಪಂಚಬ್ರಹ್ಮಾತ್ಮಕತ್ವಹಿರಣ್ಮಯತ್ವಾದಿಧರ್ಮಾಣಾಂ ತೈತ್ತಿರೀಯೇ ದರ್ಶನಾತ್ಸಗುಣನಿರ್ಗುಣಾತ್ಮಕಸ್ಯ ಮಹೇಶ್ವರಸ್ಯ ಸ್ವೇಚ್ಛಯಾ ಲೋಕತಾರಣಾರ್ಥಂ ಹೃದಯಾದಿಪ್ರಾದೇಶಮಾತ್ರಪ್ರದೇಶಸ್ಥಿತತ್ವೇನ ಪ್ರಾದೇಶಮಾತ್ರ ಇತಿ ಮನಸಾ ಬಾದರಿರ್ಮನ್ಯತೇ. ಯಥಾ ಆಢಕಪರಿಮಿತತಂಡುಲಾದಿಕಮಾಢಕ ಇತ್ಯುಚ್ಯತೇ ತಥಾ ಪ್ರಾದೇಶಮಾತ್ರಪ್ರದೇಶಾವಗತಃ ಶಿವಃ ಪ್ರಾದೇಶ ಇತಿ ನಿರ್ದಿಶ್ಯತೇ. ತಸ್ಮಾದ್ವ್ಯಾಪಕಸ್ಯ ಶಿವಸ್ಯ ಪರಿಚ್ಛಿನ್ನತ್ವಮವಿರುದ್ಧಂ.**

ಈ ಬಗ್ಗೆ ಬೇರೊಬ್ಬ ಆಚಾರ್ಯನ ಮತವನ್ನು ಹೇಳುತ್ತಾನೆ—

ಅನುಸ್ಮೃತೇರ್ಬಾದರಿಃ ॥ ೩೦ ॥

'ದಹರಂ ವಿಪಾಪ್ಮಂ' ಎಂದಾರಂಭಿಸಿ 'ಪದ್ಮಕೋಶಪ್ರತೀಕಾಶಂ' ಎಂಬುದರಿಂದ ಸರ್ವಗತನಾದ ಶಿವನನ್ನು ದಹರವೆಂಬ ಗವಿಯಲ್ಲಿರುವವನೆಂದೂ, ವಹ್ನಿಶಿಖೆಯೆಂದೂ, ಸರ್ವಾತ್ಮಕನೆಂದೂ, ಸೂರ್ಯನೊಳಗೆ ಇರುವವನೆಂದೂ, ಲಿಂಗರೂಪನೆಂದೂ, ಪಂಚಬ್ರಹ್ಮಾತಕನೆಂದೂ, ಹಿರಣ್ಮಯನೆಂದೂ ತೈತ್ತಿರೀಯದಲ್ಲಿ ಹೇಳಲಾಗಿದೆ. ಆದ್ದರಿಂದ ಸಗುಣನೂ ನಿರ್ಗುಣನೂ ಆದ ಪರಶಿವನು ಸ್ವೇಚ್ಛೆಯಿಂದ ಲೋಕರಕ್ಷಣೆಗಾಗಿ ಹೃದಯಾದಿ ಪ್ರದೇಶಗಳಲ್ಲಿ ಜೋಟು ಅಳತೆಯವನಾಗಿರುವನೆಂದು ಬಾದರಿಯು ಭಾವಿಸುತ್ತಾನೆ. ಒಂದು ಬಳ್ಳದಲ್ಲಿ ಅಳೆದ ಧಾನ್ಯವನ್ನು ಒಂದು ಬಳ್ಳವೆಂದೇ ಕರೆಯುತ್ತೇವೆ. ಹಾಗೆ ಜೋಟು ಪ್ರಮಾಣದ ಪ್ರದೇಶದಲ್ಲಿ ನೆಲಸಿರುವ ಪರಶಿವನನ್ನು ಜೋಟು ಪ್ರಮಾಣದವನೆಂದು ಬಾದರಿಯ ತಿಳಿಯುತ್ತಾನೆ. ಆದ್ದರಿಂದ ವ್ಯಾಪಕ ವಸ್ತುವಿಗೆ ಪರಿಚ್ಛೇದದಿಂದ ದೋಷವೇನಿಲ್ಲ.

**ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ॥ ೩೧ ॥**

**"ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಂ ವೈಶ್ವನರಮುಪಾಸ್ತೇ" ಇತ್ಯಾದೌ ಮೂರ್ಧಾದಿಚುಬುಕಾಂತಪ್ರಾದೇಶಮಾತ್ರ**

ವೈಶ್ವಾನರೋಪಾಸಕತ್ವವ್ಯಪದೇಶಾತ್ಪರಶಿವಬ್ರಹ್ಮಣಃ ಪ್ರಾದೇಶಮಾತ್ರತ್ವಮವಿರುದ್ಧಂ. ತಸ್ಮಾತ್ಪ್ರಾದೇಶಮಾತ್ರಸಂಪತ್ತೇಃ ಪ್ರಾದೇಶಮಾತ್ರ ಶ್ರುತಿರುಪಪನ್ನೇತಿ ಜೈಮಿನಿರಾಹ. ಸೂತ್ರಕಾರಸ್ತಥಾ ದರ್ಶಯತಿ. ವೈಶ್ವಾನರಸ್ಯ ಪ್ರಾದೇಶಮಾತ್ರತ್ವೇ ಶ್ರುತ್ಯಂತರಂ ದರ್ಶಯತೀತ್ಯರ್ಥಃ. ವಾಜಸನೇಯಬ್ರಾಹ್ಮಣೇ "ಪ್ರಾದೇಶಮಾತ್ರಮಿಹ ವೈ ದೇವಾಸ್ಸುವಿದಿತಾ ಅಭಿಸಂಪನ್ನಾಸ್ತಥಾತ್ವೇನಾನುವಕ್ಷ್ಯಾಮಿ ತಥಾ ಪ್ರಾದೇಶಮಾತ್ರಮೇವಾಭಿಸಂಪಾದಯಿಷ್ಯಾಮೀತಿ ಸ ಹೋವಾಚ. ಮೂರ್ಧಾನಮುಪದಿಶನ್ನುವಾಚ ಏಷ ಏವಾವತಿಷ್ಠನ್ವೈಶ್ವಾನರ ಇತಿ, ಚಕ್ಷುಷೀ ಉಪದಿಶನ್ನುವಾಚೈಷ ವೈ ಸುತೇಜಾ ವೈಶ್ವಾನರ ಇತಿ, ನಾಸಿಕೇ ಉಪದಿಶನ್ನುವಾಚೈಷ ವೈ ಪೃಥಗ್ವರ್ತ್ಮಾ ವೈಶ್ವಾನರ ಇತಿ, ಮುಖ್ಯಮಾಕಾಶಮುಪದಿಶನ್ನುವಾಚೈಷ ವೈ ಬಹುಳೋ ವೈಶ್ವಾನರ ಇತಿ, ಮುಖ್ಯಾ ಅಪ ಉಪದಿಶನ್ನುವಾಚೈಷ ವೈ ರಯಿರ್ವೈಶ್ವಾನರ ಇತಿ, ಚುಬುಕಮುಪದಿಶನ್ನುವಾಚೈಷ ವೈ ಪ್ರತಿಷ್ಠಾ ವೈಶ್ವಾನರ ಇತಿ". ಚುಬುಕಶಬ್ದೇನಾತ್ರ ಮುಖಫಲಕಮಧರಮುಪದಿಶ್ಯತೇ. 'ಆದಿತ್ಯಶ್ಚ ಸುತೇಜಸ್ತ್ವಗುಣಃ' ಇತ್ಯಾದಿನಾ ಲೋಕತ್ರಯಾತ್ಮಕಸ್ಯ ವೈಶ್ವಾನರಸ್ಯ ದ್ಯುಪ್ರಭೃತಿಪೃಥಿವ್ಯಂತಾವಯವಾನ್ ಅಧ್ಯಾತ್ಮ ಮೂರ್ಧಪ್ರಭೃತಿಚುಬುಕಾಂತಶರೀರಾವಯವೇಷು ಪ್ರಾದೇಶಮಾತ್ರ ಸಂಪತ್ತಿಂ ಪರಮೇಶ್ವರಸ್ಯೋಪದಿಶತಿ. ಛಾಂದೋಗ್ಯೇ "ದ್ಯೌಸ್ಸುತೇಜಸ್ತ್ವಗುಣಃ" ಇತಿ ಪ್ರಭಾಕರಸ್ಯ ವಿಶ್ವರೂಪತ್ವಗುಣವಿಶೇಷೇಣೈತಾವತಾ ಕಿಂಚಿದ್ವಿಶೇಷಣಮುಪದಿಶ್ಯತೇ. "ಉರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ" ಇತ್ಯಾದಿನೋಪಾಸಕಸ್ಯ ಉರಃಪ್ರಭೃತೀನಾಂ ವೇದ್ಯಾದಿತ್ವನಿರೂಪಣಂ ಸರ್ವಶಾಖಾಸಂಪತ್ತಿನಿಮಿತ್ತಾ ಪ್ರಾದೇಶಮಾತ್ರ ಶ್ರುತಿರೂಪದಿಶತಿ. ತಸ್ಮಾದ್ವ್ಯಾಪಕಸ್ಯ ಪರಿಚ್ಛಿನ್ನತ್ವಂ ಸಮುಚಿತಮೇವ.

ಸಂಪತ್ತೇರಿತಿ ಜೈಮಿನಿಸ್ತಥಾ ದರ್ಶಯತಿ ||೩೧||

"ಜೋಟುಪ್ರಮಾಣದಿಂದ ನೆಲಸಿರುವ ಆತ್ಮನಾದ ವೈಶ್ವನರನನ್ನು ಉಪಾಸಿಸುತ್ತೇನೆ. ಅವನೇ ಎಲ್ಲಾ ಲೋಕಗಳಲ್ಲೂ ವ್ಯಾಪಿಸಿದ್ದಾನೆ" ಎಂಬಲ್ಲಿ ತಲೆಯಿಂದ ಗಲ್ಲದವರೆವಿಗೂ ಇರುವಷ್ಟು ಪ್ರದೇಶದಲ್ಲಿ ವೈಶ್ವಾನರನನ್ನು ಉಪಾಸನಮಾಡಬೇಕೆಂದು ಹೇಳಿರುವುದರಿಂದ ಪರಶಿವಬ್ರಹ್ಮಕ್ಕೆ ಜೋಟುಪ್ರಮಾಣವೆಂದು ಹೇಳುವುದರಲ್ಲಿ ವಿರೋಧವೇನಿಲ್ಲ. ಆದ್ದರಿಂದಲೇ ಪ್ರಾದೇಶಮಾತ್ರನಿರುವನೆಂಬ ಶ್ರುತಿ ಯುಕ್ತವೆನಿಸುತ್ತದೆ ಎಂದು ಜೈಮಿನಿ ಹೇಳಿದ್ದಾನೆ. ಇದು ಸೂತ್ರಕಾರನಿಗೂ ಸಮ್ಮತವಾದ್ದರಿಂದ ಅವನು ಅದಕ್ಕೆ ಬೇರೆ ಶ್ರುತಿಯ ಆಧಾರವನ್ನು ತಿಳಿಸುತ್ತಾನೆ. ವಾಜಸನೇಯ ಬ್ರಾಹ್ಮಣದಲ್ಲಿ ತ್ರಿಲೋಕಾತ್ಮಕನಾದ ಪರಶಿವನ ಅವಯವಗಳನ್ನು ತಿಳಿಸಿ "ದೇವತೆಗಳು ಅವನನ್ನು ಪ್ರಾದೇಶಮಾತ್ರನಾಗಿರುವನೆಂದು ತಿಳಿದು ಹಾಗೆಯೇ ಕಂಡುಕೊಂಡ

ರಲ್ಲವೆ? ಅದರಂತೆಯೇ ಆವನನ್ನು ಪ್ರಾದೇಶಮಾತ್ರನಾಗಿಯೇ ಪಡೆಯುವಂತೆ ಈ ಅವಯವಗಳನ್ನು ನಿಮಗೆ ಹೇಳುವೆನು ಎಂದು ಹೇಳಿ ತನ್ನ ತಲೆಯನ್ನು ತೋರಿಸಿ "ಇವನೇ ಅವತಿಷ್ಠವೈಶ್ವನರನು" ಎಂದನು. ಕಣ್ಣುಗಳನ್ನು ತೋರಿಸಿ "ಇವನೇ ಸುತೇಜವೈಶ್ವನರನು" ಎಂದನು. ಮೂಗನ್ನು ತೋರಿಸಿ 'ಇವನೇ ಪೃಥಗ್ವರ್ತ್ಮ ವೈಶ್ವಾನರನು' ಎಂದನು. ಬಾಯೊಳಗಿನ ಆಕಾಶವನ್ನು ತೋರಿಸಿ "ಇವನೇ ಬಹುಳ ವೈಶ್ವಾನರನು" ಎಂದನು. ಬಾಯಲ್ಲಿರುವ ನೀರನ್ನು ತೋರಿಸಿ "ಇವನೇ ರಯಿವೈಶ್ವ ನರನು" ಎಂದನು. ಗಲ್ಲವನ್ನು ತೋರಿಸಿ "ಇವನೇ ಪ್ರತಿಷ್ಠವೈಶ್ವಾನರನು" ಎಂದನು. "ಆದಿತ್ಯನೇ ಸುತೇಜಸ್ತ್ವಗುಣವುಳ್ಳವನು" ಎಂಬಲ್ಲಿ ಮೂರುಲೋಕವನ್ನಾರಿಸಿದ ವೈಶ್ವಾನರನಿಗೆ ಬ್ರಹ್ಮಾಂಡದಲ್ಲಿ ದ್ಯುಲೋಕವಾದಿಯಾಗಿ ಪೃಥಿವ್ಯಂತವಾದ ಅವಯವ ಗಳನ್ನು ಹೇಳಿ, ಪಿಂಡಾಂಡದಲ್ಲಿ ತಲೆ ಮೊದಲಾಗಿ ಗಲ್ಲವೇ ಕೊನೆಯಾದ ಶರೀರಾವ ಯವಗಳಲ್ಲಿ ಅವನು ಚೋಟು ಪ್ರಮಾಣದಲ್ಲಿ ನೆಲಸಿರುವನೆಂದು ಉಪದೇಶಿಸಲಾಗಿದೆ. ಆದರೆ, ಛಾಂದೋಗ್ಯದಲ್ಲಿ "ಆದಿತ್ಯನು ವಿಶ್ವರೂಪದ ಗುಣವುಳ್ಳವನೆಂದೂ, ದ್ಯುಲೋ ಕವು ಸುತೇಜಸ್ತ್ವಗುಣವುಳ್ಳದ್ದೆಂದೂ" ಹೇಳಲಾಗಿದೆ. ಹೀಗಿದ್ದರೂ ಇಷ್ಟು ವ್ಯತ್ಯಾಸ ವಿದ್ದರೂ ಯಾವ ಹಾನಿಯೂ ಇಲ್ಲ; ಏಕೆಂದರೆ ಅವನು ಪ್ರಾದೇಶಮಾತ್ರನಿರುವ ನೆಂದು ತಿಳಿಸುವ ಶ್ರುತಿ ಇವೆರಡಕ್ಕೂ ಸಮಾನವೇ ಆಗಿದೆ. ಆದ್ದರಿಂದ ವ್ಯಾಪಕನಾದ ಪರಶಿವನನ್ನು ಪರಿಚ್ಛಿನ್ನನೆಂದು ಹೇಳಿದ್ದು ಯುಕ್ತವೇ ಆಗಿದೆ. "ಎದೆಯೇ ವೇದಿ, ಲೋಮಗಳೇ ದರ್ಭೆ, ಹೃದಯವೇ ಗಾರ್ಹಪತ್ಯಾಗ್ನಿ, ಮನಸ್ಸೇ ಅನ್ವಾಹಾ ರ್ಯಾಗ್ನಿ, ಮುಖವೇ ಆಹವನೀಯಾಗ್ನಿ" ಎಂದು ಆರಂಭಿಸಿ "ಈ ರೀತಿಯಾಗಿ ಜ್ಞಾನಿಯು ಅಗ್ನಿಹೋತ್ರವನ್ನು ಮಾಡಬೇಕು" ಎಂದು ಉಪಾಸಕನಿಗೆ ಎದೆ ಮೊದ ಲಾದುವನ್ನು ವೇದಿ ಮೊದಲಾದ್ದೆಂದು ನಿರೂಪಿಸಿ ಸರ್ವಶಾಖಪ್ರತ್ಯಯನ್ಯಾಯದಿಂದ ಪರಸ್ಪರವಿರುದ್ಧವಾದ ಶ್ರುತಿಗಳೆಲ್ಲದರಲ್ಲೂ ಒಂದೇ ಉಪಾಸನವೇ ವಿಹಿತವಾಗಿದೆ. (ಬೇರೆ ಬೇರೆ ಶಾಖೆಗಳಲ್ಲಿ ವಿಧಿಸಿರುವ ಆಯಾ ಉಪಾಸನೆಗಳನ್ನು ಒಂದೆಂದೇ ಭಾವಿ ಸಬೇಕೆನ್ನುವುದು ಮತ್ತು ಒಂದೇ ವಿದ್ಯೆಯನ್ನು ಬೇರೆ ಬೇರೆ ಶಾಖೆಗಳಲ್ಲಿ ವಿಧಿಸಿ ದ್ದರೂ, ಒಂದು ಶಾಖೆಯಲ್ಲಿ ಹೇಳಿರುವ ಗುಣವನ್ನು ಮತ್ತೊಂದು ಶಾಖೆಯಲ್ಲಿ ಸೇರಿಸಿಕೊಂಡು ಉಪಾಸನಮಾಡಬೇಕೆನ್ನುವುದೂ ಸರ್ವಶಾಖಾಪ್ರತ್ಯಯನ್ಯಾಯ ವೆನಿಸುತ್ತದೆ).

**ಪುನರ್ಹೇತ್ವಂತರಮಾಹ—ಆಮನಂತಿ ಚೈನಮಸ್ಮಿನ್ ॥ ೩೨ ॥**

**ಕಿಂಚಾಸ್ಮಿನ್ ಶರೀರೇ ಏನಂ ಸರ್ವವ್ಯಾಪಕಂ ಪರಮಶಿವಂ ನಾರಾ ಯಣ ಜಾಬಾಲಾದಯಃ ಆಮನಂತಿ. "ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಸ್ತೇನಾನ್ನೇನಾಪ್ಯಾಯಸ್ವ" ಇತಿ, "ಶಿವೋ ಮಾ ವಿಶಾಪ್ರವಾಹಾಯ" ಇತಿ, "ಈಶಸ್ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್" ಇತ್ಯಾದಾವುಪಾಸಕಜಾಠರಾಗ್ನ್ಯವಚ್ಛಿನ್ನತಯಾ**

**ಪರಶಿವಸ್ಯ ಭೋಕ್ತೃತ್ವಂ ಪ್ರಾದೇಶಮಾತ್ರಪರಿಮಿತತ್ವಂ ಚ ಮನ್ಯಂತ ಇತ್ಯರ್ಥಃ. ಕಿಂಚ "ಯ ಏಷೋಽನಂತೋಽವ್ಯಕ್ತೋಽನಂತ ಆತ್ಮಾ ಸೋಽವಿಮುಕ್ತಃ ಪ್ರತಿಷ್ಠಿತ ಇತಿ. ಸೋಽವಿಮುಕ್ತಃ ಕಸ್ಮಿನ್ಪ್ರತಿಷ್ಠಿತ ಇತಿ. ವರುಣಾಯಾಂ ನಾಸ್ಯಾಂ ಚ ಪ್ರತಿಷ್ಠಿತ ಇತಿ. ಕಾ ವೈ ವರುಣಾ ಕಾ ಚ ನಾಸೀತಿ ತತ್ರ ಚೇಮಾಂ ವರುಣಾಂ ನಾಸೀಂ ಚ ಸರ್ವಾಣೀಂದ್ರಿಯಗತಾನಿ ಪಾಪಾನಿ ವಾರಯತಿ ನಾಶಯತಿ ಚ" ಇತಿ ನಿರುಚ್ಯ ಪುನರಪ್ಯಾಮನಂತಿ, "ಕತಮಚ್ಚಾಸ್ಯ ಸ್ಥಾನಂ ಭವತೀತಿ ಭ್ರುವೋರ್ಘ್ರಾಣಸ್ಯ ಚ ಯಸ್ಸಂಧಿಸ್ಸ ಏವ ದ್ಯುಲೋಕಸ್ಯ ಪರಸ್ಯ ಚ ಸಂಧಿರ್ಭವತೀತಿ" ಜಾಬಾಲೇಽಪಿ ಪರಮೇಶ್ವರಸ್ಯ ಪ್ರಾದೇಶಮಾತ್ರಪ್ರದೇಶಪರಿಮಿತತ್ವವ್ಯಪದೇಶಾಜ್ಜಾಠರಾಗ್ನ್ಯವಚ್ಛಿನ್ನಪ್ರಾದೇಶಮಾತ್ರಪ್ರತಿಪಾದಿತಃ ವೈಶ್ವಾನರಶ್ಶಿವ ಏವೇತಿ ಸಿದ್ಧಂ.**

**ಇತಿ ಶ್ರೀಕರಭಾಷ್ಯೇ ಪ್ರಥಮಾಧ್ಯಾಯಸ್ಯ ದ್ವಿತೀಯಪಾದಃ.**

ಇಲ್ಲಿ ಬೇರೊಂದು ಹೇತುವನ್ನು ತಿಳಿಸುತ್ತಾನೆ—**ಆಮನಂತಿ ಚೈನಮಸ್ಮಿನ್ ||೩೨||**

ಸರ್ವವ್ಯಾಪಕನಾದ ಪರಶಿವನನ್ನು ಈ ಶರೀರದಲ್ಲಿಯೇ ನೆಲಸಿರುವನೆಂದು ನಾರಾಯಣಜಾಬಾಲಾದಿಗಳು ತಿಳಿಸುತ್ತವೆ. "ರುದ್ರನೇ ನೀನು ನನ್ನ ಪ್ರಾಣಾಧಾರನು, ನನ್ನೊಳಗೆ ಪ್ರವೇಶಿಸು" "ಈ ಅನ್ನದಿಂದ ಸಂತುಷ್ಟನಾಗು-ನೀನೇ ಶಿವನು". "ಈಶ್ವರನು ಎಲ್ಲ ಜಗತ್ತಿಗೂ ಪ್ರಭುವು ಮತ್ತು ವಿಶ್ವವನ್ನು ಭೋಗಿಸುತ್ತಲೇ ಸಂತೋಷಪಡುವನು" ಇಲ್ಲಿ ಉಪಾಸಕನ ಜಠರಾಗ್ನಿಯಲ್ಲಿರುವ ಪರಶಿವನನ್ನು ಭೋಕ್ತೃವೆಂದೂ, ಜೋಟು ಪ್ರಮಾಣದಷ್ಟೇ ಪರಿಮಿತನಾಗಿರುವನೆಂದೂ ಹೇಳಲಾಗಿದೆ. "ಈ ಅನಂತನೂ ಅವ್ಯಕ್ತನೂ ಆದ ಆತ್ಮನು ಜೀವನಲ್ಲಿ ಅಗಲದಂತೆ ನೆಲಸಿರುವನು. ಆದರೆ ಯಾವಕಡೆ ಇರುವನು? ಎಂದರೆ, ವರುಣೆಯಲ್ಲೂ ನಾಸಿಯಲ್ಲೂ ಇರುವನು. ವರುಣೆ ಎಂದರೆ ಏನು? ನಾಸಿ ಎಂದರೆ ಏನು? ಎಂದರೆ ಯಾವುದು ಇಂದ್ರಿಯಸಂಬಂಧವಾದ ಪಾಪಗಳೆಲ್ಲವನ್ನೂ ತಡೆಯುವುದೋ ಅದು ವರುಣೆ, ಯಾವುದು ಅವನ್ನು ನಾಶಪಡಿಸುವುದೋ ಅದು ನಾಸೀ" ಎಂದು ನಾಸಿಕೆಯನ್ನು ವರಣಾನಸೀ ಎಂದು ನಿರ್ವಚನ ಮಾಡಿ, ಇದರ ಸ್ಥಾನವ್ಯಾವುದು ಎಂದರೆ ಹುಬ್ಬುಗಳಿಗೂ ಮೂಗಿಗೂ ನಡುವೆ ಇರುವ ಸಂಧಿಯೇ ಇದು. ಇದೇ ದ್ಯುಲೋಕ ಪರಲೋಕಗಳ ಸಂಧಿ" ಎಂದು ಜಾಬಾಲ ಶ್ರುತಿಯಲ್ಲಿ ಪರಮೇಶ್ವರನು ಜೋಟು ಪರಿಮಾಣದ ಪ್ರದೇಶದಲ್ಲಿ ಇರುವನೆಂದು ತಿಳಿಸಿರುವುದರಿಂದ ಜಠರಾಗ್ನಿಯಷ್ಟು ಪರಿಮಾಣದ ಪ್ರಮಾಣದಲ್ಲಿ ನೆಲಸಿರುವ ವೈಶ್ವಾನರನೆಂದರೆ ಪರಶಿವನೆಂದು ಸಿದ್ಧವಾಯಿತು.

**ಇಲ್ಲಿಗೆ ಶ್ರೀಕರಭಾಷ್ಯದಲ್ಲಿ ಸಮನ್ವಯವೆಂಬ ಹೆಸರಿನ ಪ್ರಥಮಾಧ್ಯಾಯದ ದ್ವಿತೀಯಪಾದ ಮುಗಿಯಿತು.**

# ತೃತೀಯಪಾದ

ಅಥ ಶ್ರೀಕರಭಾಷ್ಯೇ ಪ್ರಥಮಾಧ್ಯಾಯೇ ತೃತೀಯಪಾದಃ

ಅನಂತಕಲ್ಯಾಣಗುಣರತ್ನಾಕರಸ್ಯ ಸರ್ವಜ್ಞತ್ವಾದಿಷಡ್ವಿಧಧರ್ಮಾವಚ್ಛಿನ್ನಸ್ಯ ಜಗದಭಿನ್ನನಿಮಿತ್ತೋಪಾದಾನಕಾರಣಸ್ಯ ಪರಮಕಾರುಣಿಕಸ್ಯ ಪರಶಿವಬ್ರಹ್ಮಣಃ ಪೂರ್ವೋಕ್ತಪಾದದ್ವಯೇ ಉಪಕ್ರಮಾದಿಷಡ್ವಿಧಲಿಂಗತಾತ್ಪರ್ಯೇಣ ಕಾಸಾಂಚಿತ್ ಶ್ರುತೀನಾಂ ಸಮನ್ವಯಂ ಪ್ರಸಾಧ್ಯ, ಇಹಾಪಿ ಸ್ಪಷ್ಟಾಽಸ್ಪಷ್ಟಶ್ರುತಿವಾಕ್ಯಸಂದೇಹಶೂಕನಿರ್ಮೂಲನಾಯ ಭಗವತಾ ವ್ಯಾಸೇನ ತೃತೀಯಪಾದ ಆರಭ್ಯತೇ.

ದ್ಯುಭ್ವಾದ್ಯಧಿಕರಣಂ ॥ ೧ ॥ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ॥ ೧ ॥

ಮುಂಡಕೋಪನಿಷದಿ ಪಠ್ಯತೇಽಸ್ಯ ವಿಷಯಃ. "ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಸ್ಸಹ ಪ್ರಾಣೈಶ್ಚ ಸರ್ವೈಃ। ತಮೇವೈಕಂ ಜಾನಥಾತ್ಮಾನಮನ್ಯಾ ವಾಚೋ ವಿಮುಂಚಥಾಮೃತಸ್ಯೈಷ ಸೇತುಃ ॥" ಇತಿ. ಅತ್ರ ದ್ಯುಭ್ವಾದ್ಯಧಿಷ್ಠಾನತ್ವೇನ ಶ್ರೂಯಮಾಣಂ ವಸ್ತು ಪರಮೇಶ್ವರೋ ವಾ ತದನ್ಯೋ ವೇತಿ ಸಂದಿಹ್ಯತೇ. ಪ್ರಧಾನಕ್ಷೇತ್ರಜ್ಞಭೂತವಾಯುಪರತ್ವಮೇವಾತ್ರ ಯುಕ್ತಂ. ಪ್ರಧಾನಸ್ಯ ಮಹದಹಂಕಾರಹೇತುತ್ವಾತ್. 'ಅನಂತಮಪಾರಂ' ಇತಿಶ್ರುತೌಪ್ರಧಾನಸ್ಯ ವ್ಯಾಪಕತ್ವವ್ಯಪದೇಶಾತ್. 'ಜಾನಥಾತ್ಮಾನಂ' ಇತಿ ಶ್ರುತಾವಾತ್ಮಶಬ್ದವ್ಯಪದೇಶಾತ್, ಶಾರೀರಸ್ಯ ಭೋಜ್ಯಾಯತನತ್ವದರ್ಶನಾಚ್ಚ ಕ್ಷೇತ್ರಜ್ಞಸ್ಯಾಪಿ ಸರ್ವಾಧಾರತ್ವಮನವದ್ಯಂ. "ವಾಯುರ್ವೈ ಗೌತಮ ತತ್ಸೂತ್ರಂ ವಾಯುರ್ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ। ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವಂತಿ ॥" ಇತಿ ಶ್ರುತೌ ವಾಯೋಸ್ಸರ್ವಾಧಿಷ್ಠಾನತ್ವವ್ಯವಸ್ಥಾಪನಾತ್ ವಾಯೋಶ್ಚ ದ್ಯುಭ್ವಾದ್ಯಾಯತನತ್ವಂ. 'ವಿಶ್ವಾಧಿಕೋ ರುದ್ರಃ' ಇತ್ಯಾದಿಷು ಪರಮೇಶ್ವರಸ್ಯ ವಿಶ್ವಾಧಿಕತ್ವನಿರ್ದೇಶಾತ್ ದ್ಯುಭ್ವಾದ್ಯಾಯತನತ್ವಂ ಸರ್ವಥಾ ನ ಸಂಭವತೀತಿ ಪ್ರಾಪ್ತೇ ಬ್ರೂಮಃ. ದ್ಯುಭ್ವಾದ್ಯಾಯತನಂ ದ್ಯೌಶ್ಚ ಭೂಶ್ಚ ದ್ಯುಭುವೌ ದ್ಯುಭುವಾವಾದಿರ್ಯಸ್ಯ ತತ್ ದ್ಯುಭ್ವಾದಿ. ದ್ಯುಪೃಥಿವ್ಯಂತರಿಕ್ಷಮನಃಪ್ರಾಣಾದಿ. ತಸ್ಯಾಯತನಂ ಸ್ಥಾನಮಿತ್ಯರ್ಥಃ. ಕುತಃ ಸ್ವಶಬ್ದಾತ್—ಸ್ವಸ್ಯ ಬ್ರಹ್ಮಣಃ ಪ್ರತಿಪಾದಕೋ ಯಶ್ಶಬ್ದ ಆತ್ಮಶಬ್ದಸ್ತಸ್ಮಾತ್ 'ಜಾನಥಾತ್ಮಾನಂ' ಇತ್ಯಾತ್ಮಶಬ್ದಶ್ರವಣಾದಿತ್ಯರ್ಥಃ. "ಪ್ರಪಂಚೋಪಶಮಂ ಶಾಂತಂ ಶಿವಂ—ಸ ಆತ್ಮಾ" ಇತ್ಯತ್ರಾಪ್ಯಾತ್ಮಶಬ್ದಸ್ಯ ಶಿವಪರತ್ವಮವಗಮ್ಯತೇ.

ತಸ್ಮಾದ್ದ್ಯುಭ್ವಾದ್ಯಾಯತನಂ ನೇತರಃ. ಕಿಂಚ "ಸನ್ಮೂಲಾಸ್ಸೌಮ್ಯೇಮಾಃ ಪ್ರಜಾಸ್ಸರ್ವಾಸ್ಸದಾಯತನಾಸ್ಸುಪ್ರತಿಷ್ಠಿತಾಃ" ಇತಿ. "ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಂ ಪುರಸ್ತಾತ್ಪಶ್ಚಾದ್ಬ್ರಹ್ಮ ದಕ್ಷಿಣಶ್ಚೋತ್ತರೇಣ" "ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ" "ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ" ಇತ್ಯಾದಿ ಪರಶಿವಸ್ಯೈವ ಸರ್ವಾತೀತತ್ವಸರ್ವಾಧಿಷ್ಠಾನತ್ವವ್ಯಪದೇಶಾದತ್ರ ದ್ಯುಭ್ವಾದ್ಯಾಯತನಂ ಮಹೇಶ್ವರ ಇತಿ ಸಿದ್ಧಂ.

ಅನಂತಕಲ್ಯಾಣಗುಣಾಕರನೂ ಸರ್ವಜ್ಞತಾದಿಗುಣಗಳುಳ್ಳವನೂ ಜಗದುಭಯಕಾರಣನೂ ಪರಮಕಾರುಣಿಕನೂ ಆದ ಪರಶಿವನಲ್ಲಿಯೇ ಆರು ಬಗೆಯ ತಾತ್ಪರ್ಯಲಿಂಗಗಳಿಂದ ಕೆಲವು ಶ್ರುತಿಗಳ ಸಮನ್ವಯವನ್ನು ಸಾಧಿಸಿ, ಈಗ ಅಸ್ಪಷ್ಟ ಶ್ರುತಿವಾಕ್ಯಗಳಲ್ಲಿ ತೋರುವ ಸಂದೇಹಗಳನ್ನು ಪರಿಹರಿಸಲಿಕ್ಕಾಗಿ ಸೂತ್ರಕಾರನು ತೃತೀಯಪಾದವನ್ನಾರಂಭಿಸುತ್ತಾನೆ.

**ದ್ಯುಭ್ವಾದ್ಯಧಿಕರಣಂ ||೧|| ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ||೧||**

ಮುಂಡಕದಲ್ಲಿ ಇದರ ವಿಷಯ ಬಂದಿದೆ. "ದ್ಯುಲೋಕವೂ ಭೂಮ್ಯಂತರಿಕ್ಷಗಳೂ ಎಲ್ಲಾ ಪ್ರಾಣಗಳೊಡಗೂಡಿದ ಮನಸ್ಸೂ ಯಾವನಲ್ಲಿ ಹೊಂದಿಕೊಂಡಿರುವುವೋ ಆ ಒಬ್ಬ ಆತ್ಮನನ್ನೇ ತಿಳಿಯಿರಿ. ಬೇರೆ ಎಲ್ಲಾ ಮಾತನ್ನೂ ಬಿಡಿ. ಅವನೇ ಅಮೃತದ ಸಾಗರನು" ಎಂದು ಹೇಳಿದೆ. ಇಲ್ಲಿ ದ್ಯುಲೋಕವೇ ಮೊದಲಾದವುಗಳಿಗೆ ಆಶ್ರಯನಾಗಿರುವುದಾಗಿ ಹೇಳಿರುವ ವಸ್ತು ಪರಮೇಶ್ವರನೇ? ಅಥವಾ ಬೇರೆಯೇ? ಎಂಬ ಸಂದೇಹವಿದೆ. ಈ ವಸ್ತು ಪ್ರಧಾನ ಜೀವ ಭೂತವಾಯುಗಳಲ್ಲಿ ಒಂದಾಗಿರಬೇಕೆಂಬುದೇ ಯುಕ್ತವಾಗಿದೆ. ಪ್ರಧಾನವೂ ಬುದ್ಧಿ-ಅಹಂಕಾರಗಳಿಗೆ ಕಾರಣವಾಗಿದೆ. 'ಅದು ಅನಂತ ಮತ್ತು ಅಪಾರ'ವೆಂಬ ಶ್ರುತಿಯಲ್ಲಿ ಅದರ ವ್ಯಾಪಕತ್ವವನ್ನು ತಿಳಿಸಲಾಗಿದೆ. ಇದೂ ಅಲ್ಲದೆ, ಇಲ್ಲಿ 'ತಮೇವೈಕಂ ಜಾನಥಾತ್ಮಾನಂ' ಎಂದು ಆತ್ಮಶಬ್ದವನ್ನು ಹೇಳಿರುವುದರಿಂದ ಜೀವನು ಆತ್ಮನೂ ಭೋಜ್ಯಪ್ರಪಂಚಕ್ಕಾಶ್ರಯನೂ ಆಗಿರುವುದರಿಂದಲೂ, ಜೀವನು ಸರ್ವಾಧಾರನೆಂಬುದು ನಿರ್ವಿವಾದವಾಗಿದೆ. "ಗೌತಮನೇ, ವಾಯುವೆಂಬ ಸೂತ್ರವೇ ಈ ಲೋಕವನ್ನೂ ಪರಲೋಕವನ್ನೂ ಸರ್ವಭೂತಗಳನ್ನೂ ಹಿಡಿದಿದೆ"ಎಂಬಲ್ಲಿ ವಾಯುವೇ ಎಲ್ಲಕ್ಕೂ ಆಧಾರವೆಂದು ಹೇಳಿದೆ. "ವಿಶ್ವಾಧಿಕೋ ರುದ್ರಃ" ಎಂಬಲ್ಲಿ ಪರಶಿವನು ವಿಶ್ವಾಧಿಕನಾದ್ದರಿಂದ ವಿಶ್ವಾತೀತನೆಂದು ತಿಳಿದುಬರುವುದರಿಂದ ಅವನು ಸರ್ವಾಧಾರನೆಂಬುದು ಸಂಭವಿಸುವುದಿಲ್ಲ. ಹೀಗೆ ಪೂರ್ವಪಕ್ಷ ಬರುತ್ತದೆ. ಇದಕ್ಕೆ ಸೂತ್ರದಲ್ಲಿ ಸಮಾಧಾನವಿದೆ. ದ್ಯುಲೋಕ-ಭೂಮಿ,ಅಂತರಿಕ್ಷ, ಮನಸ್ಸು-ಪ್ರಾಣ ಇವೆಲ್ಲಕ್ಕೂ ಪರಶಿವನೇ ಆಯತನ= ಆಶ್ರಯನಾದ್ದರಿಂದ ಸ್ಥಲನೆನಿಸಿದ್ದಾನೆ. ಯಾಕೆಂದರೆ ಶ್ರುತಿಯಲ್ಲಿ ಬ್ರಹ್ಮಪ್ರತಿಪಾದಕವಾದ ಆತ್ಮಶಬ್ದವನ್ನು ಪ್ರಯೋಗಿಸಲಾಗಿದೆ. 'ಆತ್ಮನೆನಿಸಿದ ಅವನೊಬ್ಬನನ್ನೇ ತಿಳಿ

ಯಿರಿ' ಎಂಬ ಶ್ರುತಿಯಲ್ಲಿ ಬಂದಿರುವ ಆತ್ಮಶಬ್ದವು ಅವನಿಗೇ ಅನ್ವಯಿಸುತ್ತದೆ. ಮುಂಡಕದಲ್ಲಿ ಬೇರೆ ಕಡೆಯೂ "ಪ್ರಪಂಚವೆಲ್ಲಕ್ಕೂ ಆಶ್ರಯನೂ ಅದ್ವಿತೀಯನೂ ಆದ ಶಿವನನ್ನು ಆತ್ಮನೆಂದು ತಿಳಿಯಬೇಕು" ಎಂದು ಹೇಳಿದೆ. ಆದ್ದರಿಂದ ದ್ಯುಭ್ವಾದ್ಯಾಯತನವೆಂದರೆ ಪರಶಿವನಲ್ಲದೆ ಬೇರೆಯಲ್ಲ. "ಸೌಮ್ಯನೇ, ಈ ಎಲ್ಲಾ ಪ್ರಜೆಗಳೂ ಸನ್ಮೂಲವೂ ಸದಾಯತನವೂ ಆಗಿ ಸುಪ್ರತಿಷ್ಠಿತವಾಗಿದ್ದಾರೆ" ಎಂಬಲ್ಲಿ ಬ್ರಹ್ಮವೇ ಎಲ್ಲಕ್ಕೂ ಆಶ್ರಯವಾಗಿದೆ ಎಂದು ಬ್ರಹ್ಮವಾಚಕವಾದ ಸತ್ಪದಲಿಂದಲೇ ಸ್ಪಷ್ಟವಾಗಿ ಹೇಳಲಾಗಿದೆ. "ಈ ಜೀವ, ಕರ್ಮ-ತಪಸ್ಸು ಎಲ್ಲವೂ ಅಮೃತಮಯವಾದ ಬ್ರಹ್ಮವೇ ಹಿಂದೆ ಮುಂದೆ ದಕ್ಷಿಣಕ್ಕೆ ಉತ್ತರಕ್ಕೆ ಇರುವುದೆಲ್ಲವೂ ಬ್ರಹ್ಮವೇ". "ಆಕಾಶ, ವಾಯು, ಅಗ್ನಿ-ನೀರು-ವಿಶ್ವಾಧಾರವಾದ ಭೂಮಿ ಇದೆಲ್ಲವೂ ಪರಮಾತ್ಮನೇ" ಹೀಗೆ ಅನೇಕ ಶ್ರುತಿಗಳಲ್ಲಿ ಪರಮಾತ್ಮನೇ ವಿಶ್ವಾತೀತನಾದರೂ ವಿಶ್ವಕ್ಕಾಶ್ರಯಸ್ಥಲವೆಂದೂ ಹೇಳಿರುವುದರಿಂದ ಅವನೇ ದ್ಯುಭ್ವಾದ್ಯಾಯತನವೆನಿಸಿದ್ದಾನೆ.

**ಸೇತೋಶ್ಚ ಪಾರವತ್ತ್ವೋಪಪತ್ತೇಃ ಪರಮೇಶ್ವರಾದ್ಭಿನ್ನಂ ದ್ಯುಭ್ವಾದ್ಯಾಯತನಂ ಭವಿಷ್ಯತೀತ್ಯಾಶಂಕಾಯಾಂ ಹೇತ್ವಂತರಮಾಹ.**

**ಮುಕ್ತೋಪಸೃಪ್ಯವ್ಯಪದೇಶಾತ್ ॥ ೨ ॥**

**ಸೇತುಶ್ರುತ್ಯಾ ಸರ್ವಾಧಿಷ್ಠಾನಮಾತ್ರಮುಪದಿಶ್ಯತೇ ನ ಪಾರವತ್ತ್ವಾದಿಲಕ್ಷಣಂ. ಅತ್ರಾಪಿ ದ್ಯುಭ್ವಾದ್ಯಾಯತನತ್ವಂ ಪರಮಶಿವಸ್ಯೈವ. ಕುತಃ ಮುಕ್ತೋಪಸೃಪ್ಯವ್ಯಪದೇಶಾತ್, ಮುಕ್ತೈರುಪಸೃಪ್ಯಂ ಪ್ರಾಪ್ಯಂ ಮುಕ್ತೋಪಸೃಪ್ಯಂ. ಭಾವಪ್ರಧಾನೋ ನಿರ್ದೇಶಃ. ಮುಕ್ತೋಪಸೃಪ್ಯತ್ವಸ್ಯ ವ್ಯಪದೇಶಾತ್ತಸ್ಮಾದಿತ್ಯರ್ಥಃ. ಯದ್ವಾ ಮುಕ್ತೋಪಸೃಪ್ಯಂ ಪ್ರಾಪ್ಯಂ ಯತಸ್ತಸ್ಯಾತ್ರ ನಿರ್ದೇಶಾತ್. ಮುಕ್ತೋಪಸೃಪ್ಯತ್ವವ್ಯಪದೇಶಾದಿತಿ ಪಾಠೇ ನ ಕಶ್ಚಿತ್ಪ್ರಯಾಸಃ. "ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ। ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಂ ಪರಮಂ ಸಾಮ್ಯಮುಪೈತಿ ॥" ಇತ್ಯತ್ರ ಪರಮಶಿವೋಪಾಸಕಾನಾಂ ಶಿವಸಾರೂಪ್ಯಮುಪದಿಶ್ಯ, "ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು। ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ॥" "ಯಥಾ ನದ್ಯಃ" "ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತ್ಯಾದೌ ನಿಷ್ಕಲಪರಮಶಿವೋಪಾಸಕಾನಾಂ ಭಕ್ತಾನಾಂ ಲಿಂಗಶರೀರಭಂಗದ್ವಾರಾ ಪರಮಶಿವಸಾಯುಜ್ಯಮುಪ್ಯುಪದಿಶ್ಯತೇ. ತಸ್ಮಾಜ್ಜೀವಪರಮೇಶ್ವರಯೋಃ ಪ್ರಾಪ್ಯಪ್ರಾಪಕತ್ವೇನ ಭೇದಾಭೇದೋ ನಿರ್ಣೀಯತೇ. "ಪರಾತ್ಪರಂ ಪುರುಷಮುಪೈತಿ" ಇತ್ಯನೇನ ಭ್ರಮರಕೀಟವತ್ಸ್ವಾಭಾವಿಕಭೇದಸಿದ್ಧಸ್ಯ ಜೀವಸ್ಯ ಪರಮಶಿವತ್ವಪ್ರಾಪ್ತ್ಯುಪ**

ದೇಶಾತ್ಸ್ವಕಂಠಾಭರಣವನ್ನಿತ್ಯಬ್ರಹ್ಮಾತ್ಮಕತ್ವಂ ನಿಷಿದ್ಧ್ಯತೇ. ಕಿಂಚ ಶ್ರುತ್ಯಂತರೇಷ್ವಪಿ, 'ತತ್ತ್ವಮಸಿ', 'ಅಹ್ಮಂ ಬ್ರಹ್ಮಾಸ್ಮಿ', 'ಬ್ರಹ್ಮ ವಿದ್ಬ್ರಹ್ಮೈವ' ಇತ್ಯತ್ರ ಜೀವಬ್ರಹ್ಮಣೋರ್ಭೇದಾಭೇದಸ್ಯ ಸ್ಪಷ್ಟಮುಪ ದೇಶಾನ್ನ ಚೈಕಪಕ್ಷಸ್ವೀಕಾರೋ ಯುಕ್ತಃ. ನನು "ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಂ", "ಏಷ ತ ಆತ್ಮಾ ಸರ್ವಾಂತರ ಏಷ ತ ಆತ್ಮಾಂತರ್ಯಾಮ್ಯಮೃತಃ" ಇತ್ಯಾದೌ ಜೀವಬ್ರಹ್ಮಣೋರ್ಧ್ಯಾತೃಧ್ಯೇ ಯತ್ವೇನ ದ್ರಷ್ಟೃದ್ರಷ್ಟವ್ಯತ್ವೇನ ನಿಯಮ್ಯನಿಯಾಮಕತ್ವೇನ ಘಟಪಟ ವತ್ಪರಸ್ಪರವಿರುದ್ಧಸ್ವಭಾವಭೇದವ್ಯವಸ್ಥಾಪನಾತ್ "ಪುರುಷಮುಪೈತಿ" ಇತ್ಯತ್ರ ಪುಣ್ಯಾಪುಣ್ಯಕೃತನಾಮರೂಪಶರೀರಪರಿತ್ಯಾಗಪೂರ್ವಕದಿವ್ಯ ಶರೀರಪ್ರಾಪ್ತಿಮಾತ್ರಮಿತಿ ಚೇನ್ನ 'ಬ್ರಹ್ಮ ವೇದ ಬ್ರಹ್ಮೈವ ಭವತಿ' ಇತ್ಯಾದಿಬಹುಶ್ರುತಿವಿರೋಧಾತ್, ಮುಕ್ತಿಸಂಸಾರಯೋರವಿಶೇಷಪ್ರಸಂ ಗಾಚ್ಚ. ನನು "ಪರಮಂ ಸಾಮ್ಯಮುಪೈತಿ" ಇತ್ಯತ್ರ ಪರಮಶಿವಾನು ಗ್ರಹೇಣ ಪ್ರಧ್ವಸ್ತಪಾಶಪಟಲಾಪ್ರಾತ್ಯಕ್ಷಿಕನಿರತಿಶಯಾನಂದಸ್ವರೂಪಾ ತತ್ಸಮಾನಗುಣಸಾರಾ ಕೈವಲ್ಯಲಕ್ಷ್ಮೀಪ್ರಾಪ್ತಿರೇವ ಮುಕ್ತಿಃ. ಕಿಂಚ "ಆಕಾಶಶರೀರಂ ಬ್ರಹ್ಮ ಸತ್ಯಾತ್ಮ ಪ್ರಾಣರಾಮಂ ಮನಆನಂದಂ" ಇತ್ಯತ್ರಾಕಾಶಪದೇನ ಚಿತ್ಪ್ರಕೃತಿರುಪದಿಶ್ಯತೇ. 'ಮನಆನಂದಂ' ಇತ್ಯನೇನ ದೇಹೇಂದ್ರಿಯಾದ್ಯನಪೇಕ್ಷಿತತ್ವೇನ ಪರಮಶಿವಸ್ಯ ಮನಸ್ಯೇವ ಪರಮಾನಂದಾನುಭವೋ ವ್ಯಪದಿಶ್ಯತೇ. ಇದಮೇವ ಬ್ರಹ್ಮಸಾರೂಪ್ಯ ವತಾಂ ಮುಕ್ತಜೀವಾನಾಮಪಿ ಜ್ಞಾಪಕಂ. ತಸ್ಮಾನ್ನಿರತಿಶಯಾನಂದಾ ನುಭವಸಾಧನಂ ದೇಹೇಂದ್ರಿಯಾದ್ಯನಪೇಕ್ಷಿತಮಂತಃಕರಣಮಸ್ತೀತ್ಯು ಪದಿಶ್ಯತೇ. ತೇಷಾಂ ಜೀವಾನಾಂ ಪರಮೇಶ್ವರವಿದ್ಯಾಶಕ್ತ್ಯಂಶತ್ವಾ ತ್ಸ್ವಾಭಾವಿಕಭೇದಸ್ಯಾವಿನಾಶಿತ್ವಾಚ್ಚ ಅಂಗಾಂಗಿತ್ವೇನ ಸಾಯುಜ್ಯಂ ನ ಸರ್ವಥಾ ಲಿಂಗಶರೀರವಿಲಯಪೂರ್ವಕಶಿವತ್ವಪ್ರಾಪ್ತಿಸ್ಸಂಭವತೀತಿ ಚೇದ್ಬ್ರೂಮಃ, ಪೂರ್ವೋದಾಹೃತಾಭಿಃ 'ಯಥಾ ನದ್ಯಃ' ಇತ್ಯಾದಿ ಶ್ರುತಿಭಿಃ ಸ್ವರೂಪೈಕ್ಯಸ್ಯೈವೋಪದೇಶಾನ್ನ ಚಾಂಗಾಂಗಿತ್ವೇನ ಮುಕ್ತಿಃ. ಕಿಂಚ ಜೀವಬ್ರಹ್ಮಣೋರಂಗಾಂಗಿತ್ವಮನುಪಪನ್ನಂ. ಶೀರ್ಯತ ಇತಿ ಶರೀರಮಿತಿ ವ್ಯುತ್ಪತ್ತಿಸಿದ್ಧಶರೀರತ್ವಾಸಂಭವಾತ್, ನಚ ಶಾರೀರಸ್ಯ ಪರ ಮಾತ್ಮನೋ ಹಿತಾಹಿತತತ್ಪ್ರಾಪ್ತಿಪರಿಹಾರರೂಪಚೇಷ್ಟಾಶ್ರಯತ್ವಂ ಸಂಭ ವತಿ. ಪರಶರೀರಸ್ಯ ಸ್ವಶರೀರತ್ವಾಸಂಭವಾಚ್ಚ. ನಾಪೀಂದ್ರಿಯಾಶ್ರ ಯತ್ವೇನ ಜೀವಸ್ಯ ಶರೀರತ್ವಂ. ಸ್ಥೂಲಶರೀರಸ್ಯೈವೇಂದ್ರಿಯಾಶ್ರಯ ತ್ವೇನ ನಿರವಯವತ್ವೇನ ನಿರವಯವಸ್ಯಾಣ್ವಾತ್ಮನ ಇಂದ್ರಿಯಾಶ್ರಯತ್ವಾ ಭಾವಾತ್. ನಾಪಿ ಭೋಗಾಯತನತ್ವೇನ ಜೀವಶ್ಶರೀರಂ, ಪರಸ್ಯ ನಿತ್ಯ

ತ್ತಪ್ತಸ್ಯ ಸುಖದುಃಖಾನುಭವಭೋಗಾಸಂಭವಾತ್. ನಾಪಿ ಜೀವಃ ಪರಮಾತ್ಮನಶ್ಶರೀರಂ, ಪುರುಷಪ್ರೇರಿತರಥತುರಗಾದೇರಪಿ ಪುರುಷಶರೀರತ್ವಾಪಾತಾತ್. ನಾಪಿ ಸಾಕ್ಷಾತ್ಪ್ರಯತ್ನಾಧಿಷ್ಠೇಯತ್ವಾಜ್ಜೀವಶ್ಶರೀರಂ. ಅಂಗುಳ್ಯಾದೇರಪಿ ಸಾಕ್ಷಾತ್ಪ್ರಯತ್ನಾಧಿಷ್ಠೇಯತ್ವೇನ ಶರೀರತ್ವಾಪಾತಾತ್. ಜೀವಸ್ಯ ಕರ್ಮಜನ್ಯತ್ವಾಭಾವಾತ್, ಅಹಮಿದಂ ಮಮೇದಮಿತ್ಯಜ್ಞಾನವಿಷಯತ್ವಾಭಾವಾತ್, ಅಂತ್ಯಾವಯವತ್ವಾಭಾವಾಚ್ಚ ನ ಜೀವಃ ಪರಮಾತ್ಮನಶ್ಶರೀರಂ. 'ಯಸ್ಯಾತ್ಮಾ ಶರೀರಂ' ಇತ್ಯಾತ್ಮನಿ ಶರೀರಶಬ್ದಪ್ರಯೋಗಮಾತ್ರೇಣ ಶರೀರತ್ವಾಭಾವಾತ್; ಅನ್ಯಥಾ "ವಾಚಂ ಧೇನುಮುಪಾಸೀತ" "ಅನ್ನಂ ಬ್ರಹ್ಮೇತ್ಯುಪಾಸೀತ" ಇತಿ ವಾಚೋಽಪಿ ಧೇನುತ್ವಮನ್ನಸ್ಯಾಪಿ ಬ್ರಹ್ಮತ್ವಂ ಚ ಸ್ಯಾತ್. ತತ್ರ ತಚ್ಛಬ್ದಪರಯೋಗಾತ್ಪರಮಾತ್ಮನಃ ಅಶರೀರತ್ವಪ್ರತಿಪಾದಕಬಹುಶ್ರುತಿವಿರೋಧಾಚ್ಚ. "ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಂ", "ಅಥಾಯಮಶರೀರೋಽಮೃತಃ", "ಪ್ರಾಣೋ ಬ್ರಹ್ಮೈವ ತೇಜ ಏವಾಕಾಯಮವ್ರಣಮಸ್ನಾವಿರಮರಜಗ್ಂ ಶುದ್ಧಮಪಾಪವಿದ್ಧಂ" ಇತ್ಯಾದಿನಾ ತಸ್ಯಾಶರೀರತ್ವಪ್ರತಿಪಾದನಾತ್. "ಅಪ್ರಾಣೋ ಹ್ಯಮನಾಶ್ಶುಭ್ರಃ । ಅಚಕ್ಷುಶ್ಶ್ರೋತ್ರಂ ತದಪಾಣಿಪಾದಂ ॥" ಇತಿ ಚ ಮನಃಪ್ರಾಣಶೂನ್ಯಸ್ಯ ಚಕ್ಷುಃಪಾದರಹಿತಸ್ಯ ಶರೀರತ್ವಾಸಂಭವಾತ್. "ಸರ್ವಸ್ಯಾಂತರವಸ್ಥಾನಾತ್ಸರ್ವಶರೀರಂ" ಇತಿ ವ್ಯಪದೇಶಃ ಉಪಾಸನಾರ್ಥಮುಪಪದ್ಯತೇ. ಉತ ಸರ್ವಶರೀರತ್ವಪರಿಕಲ್ಪನಮಂತರ್ಯಾಮಿಜೀವಯೋರ್ಭೇದಾಭೇದಸೂಚನಾರ್ಥಂ ವಾ ಸ್ಯಾತ್. ಏವಂ ವಿಶಿಷ್ಟಾದ್ವೈತಸ್ಯಾಸಂಗತತ್ವಾದ್ವಿಶೇಷಾದ್ವೈತಮೇವ ಮುಮುಕ್ಷುಭಿರಾದರಣೀಯಂ. ಕಿಂಚ ಶ್ರುತ್ಯಂತರೇ ಚ "ಪ್ರಾಣೇಷ್ವಂತರ್ಮನಸೋ ಲಿಂಗಮಾಹುರ್ಯಸ್ಮಿನ್ಕ್ರೋಧೋ ಯಾ ಚ ತೃಷ್ಣಾ ಕ್ಷಮಾ ಚ ತೃಷ್ಣಾಂ ಭಿತ್ವಾ ಹೇತುಜಾಲಸ್ಯ ಮೂಲಂ ಬುದ್ಧ್ಯಾ ಸಂಚಿಂತ್ಯ ಸ್ಥಾಪಯಿತ್ವಾಥ ರುದ್ರೇ ರುದ್ರತ್ವಮಮಾಹುಃ" ಇತ್ಯಾದಿನಾ ಲಿಂಗಶರೀರವಿಲಯಪೂರ್ವಕಶಿವತ್ವಪ್ರಾಪ್ತಿರೇವ ಮುಕ್ತಿರುಪದಿಶ್ಯತೇ. "ನಹಿ ನಿಂದಾ ನಿಂದಿತುಮಿಷ್ಯತೇ, ಸ್ತುತ್ಯಂ ಸ್ತೋತುಂ ಪ್ರವೃತ್ತಾ" ಇತಿ ನ್ಯಾಯೇನಾತ್ರ ಪರಮತನಿಂದಾಯಾ ನ ಪ್ರತ್ಯವಾಯಜನಕತ್ವಂ, ಜಲ್ಪವಿತಂಡಾಭ್ಯಾಂ ಶಿವಜ್ಞಾನಾಧಿಕ್ಯಸ್ಥಾಪನಸ್ಯ ಪರಪಕ್ಷಪ್ರತಿಕ್ಷೇಪಂ ವಿನಾಽಸಂಭವಾತ್. ಪಾಷಂಡನಿಂದಾಯಾಶ್ಚ ತತ್ತ್ವಸ್ಥಾಪನಾನುಕೂಲವಿಹಿತತ್ವಾತ್. ನಿಷೇಧಸ್ಯ ವಿಹಿತೇತರವಿಷಯತ್ವಾಚ್ಚ. ಜೀವಾನಾಂ ನ ಚಿಚ್ಛಕ್ತ್ಯಂಶತ್ವಂ, 'ತದೈಕ್ಷತ ಬಹು ಸ್ಯಾಂ, ಇತ್ಯಾದೌ ಪಿತೃಪುತ್ರಾದಿವತ್ಸ್ವಾಂಶಭೂತಸ್ವಾಂತರ್ಲೀನಜೀ

**ವಕಾರಣತ್ವದರ್ಶನಾತ್. "ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ। ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥", "ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ। ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ದೃಷ್ಟೇ ಪರಾವರೇ॥" ಇತ್ಯಾದಿನಾ ಪರಮಶಿವಪ್ರಸಾದೇನ ತದುಪಾಸಕಾನಾಂ ಆತ್ಯಂತಿಕಪಾಶನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪಾ ಮುಕ್ತಿರ್ಭವತೀತಿ ವ್ಯಪದೇಶಾತ್ ದ್ಯುಭ್ವಾದ್ಯಾಯತನಂ ಮಹೇಶ್ವರ ಏವೇತಿ ಸಿದ್ಧಂ.**

ಸೇತುಶ್ರುತಿಯಂತೆ ಸೇತುವೆಗೆ ಕೊನೆಯಿರುತ್ತದೆ. ಆದರೆ ಸರ್ವಗತನಾದ ಪರಮೇಶ್ವರನಿಗೆ ಕೊನೆಯಿಲ್ಲದ್ದರಿಂದ ಅವನಲ್ಲದೆ ಬೇರೊಂದು ವಸ್ತು ದ್ಯುಭ್ವಾದ್ಯಾಯತನವಿರಬಹುದೆಂದು ಆಶಂಕಿಸಿ ನಿರಾಕರಿಸುತ್ತಾನೆ.

**ಮುಕ್ತೋಪಸೃಪ್ಯವ್ಯಪದೇಶಾತ್ ॥ ೨ ॥**

'ಅಮೃತಸ್ಯೈಷ ಸೇತುಃ' ಎಂಬಲ್ಲಿ ತಡೆದಿರುವಿಕೆ ಎಂಬುದು ಸೇತುವಿನ ಅರ್ಥವೇ ಹೊರತು ಕೊನೆಯುಳ್ಳದ್ದು ಎಂದು ಅರ್ಥವಲ್ಲ. ಹೀಗೆ ಪರಶಿವನೇ ಎಲ್ಲರನ್ನೂ ದುರ್ಮಾರ್ಗದಿಂದ ತಡೆದಿರುವುದರಿಂದ ಸೇತುವೆನಿಸಿದ್ದಾನೆ. ಆದ್ದರಿಂದಲೇ ಅವನು ಮುಕ್ತಜೀವರಿಗೆ ಹೊಂದಲು ಯೋಗ್ಯಸ್ಥಲನೆಂದು ಶ್ರುತಿಯಲ್ಲಿ ಉಪದೇಶಿಸಲಾಗಿದೆ. ಹೀಗೆ ಮುಕ್ತರಿಗೆ ಹೊಂದಲರ್ಹನಾದ್ದರಿಂದ ಅವನನ್ನು ಸೇತುವೆಂದು ಶ್ರುತಿಯಲ್ಲಿ ತಿಳಿಸಿದೆ. "ಸರ್ವಕಾರಣನೂ ಸರ್ವೇಶ್ವರನೂ ಆದ ಪರಶಿವನನ್ನು ಜೀವನು ಎಂದು ನೋಡುವನೋ ಅಂದು ಅವನು ತನ್ನ ಎಲ್ಲಾ ಪಾಪಗಳನ್ನು ಕಳೆದುಕೊಂಡು ನಿರ್ಮಲನಾಗಿ ನಿಷ್ಕಲಶಿವನಿಗೆ ಸದೃಶನಾಗುತ್ತಾನೆ" ಎಂಬಲ್ಲಿ ಶಿವೋಪಾಸಕರಿಗೆ ಶಿವಸಾರೂಪ್ಯವನ್ನು ಹೇಳಿ, "ಆಗ ಅವನ ಶರೀರದಲ್ಲಿ ಅಡಗಿದ್ದ ಹದಿನೈದು ಕಲೆಗಳು, ಇಂದ್ರಿಯಾಧಿಷ್ಠಿತದೇವತೆಗಳು, ಕರ್ಮಶೇಷಗಳು-ವಿಜ್ಞಾನಮಯವಾದ ಜೀವ ಇವೆಲ್ಲವೂ ಅವ್ಯಯನಾದ ಪರಶಿವನಲ್ಲಿ ಏಕೀಭಾವವನ್ನು ಹೊಂದುತ್ತವೆ". "ನದಿಗಳು ಹರಿಯುತ್ತ ನಾಮರೂಪಗಳನ್ನು ತೊರೆದು ಸಮುದ್ರದಲ್ಲಿ ಲಯವಾಗುವಂತೆ ಶಿವಾನುಭವಿಯು ನಾಮರೂಪಗಳನ್ನು ತೊರೆದು ಪರಂಜ್ಯೋತಿಯನ್ನು ಸೇರುತ್ತಾನೆ" "ಯಾವನು ಪರಬ್ರಹ್ಮವನ್ನು ತಿಳಿಯುವನೋ ಅವನು ಅದೇ ಆಗುತ್ತಾನೆ" ಈ ಶ್ರುತಿಗಳಲ್ಲಿ ನಿಷ್ಕಲಪರಶಿವನ ಉಪಾಸಕರಿಗೆ ಲಿಂಗಶರೀರದ ಭಂಗದಿಂದ ಪರಶಿವನೊಡನೆ ಸಾಯುಜ್ಯವನ್ನೂ ಹೇಳಲಾಗಿದೆ. ಹೀಗೆ ಜೀವಪರಮರಿಗೆ ಪ್ರಾಪ್ಯಪ್ರಾಪಕಭಾವದಿಂದ ಭೇದಾಭೇದವನ್ನು ಶ್ರುತಿಯಲ್ಲಿ ತಿಳಿಸಿದೆ. "ಉಪೈತಿ" ಎಂಬಲ್ಲಿ ಭ್ರಮರಕೀಟನ್ಯಾಯದಿಂದ ಸ್ವಾಭಾವಿಕವಾಗಿ ಭಿನ್ನನಾಗಿದ್ದ ಜೀವನು ಶಿವನನ್ನು ಹೊಂದುವನೆಂದು ಉಪದೇಶಿಸಿರುವುದರಿಂದ ಜೀವನಿಗೆ ತನ್ನ ಕಂಠಾಭರಣದಂತೆ ಶಿವಭಾವವು ನಿತ್ಯಸಿದ್ಧವಾಗಿದೆಯೆಂಬುದನ್ನು ನಿರಾಕರಿಸಲಾಗಿದೆ. 'ತತ್ತ್ವಮಸಿ' ಮೊದಲಾದ ಶ್ರುತಿಗಳಲ್ಲೂ ಜೀವಬ್ರಹ್ಮರಿಗೆ ಭೇದಾಭೇದವನ್ನು ಸ್ಪಷ್ಟವಾಗಿ ಹೇಳಿರುವುದರಿಂದ

ಭೇದ ಅಥವಾ ಅಭೇದ ಒಂದನ್ನೇ ಒಪ್ಪುವುದು ಯುಕ್ತವಲ್ಲ. 'ನೀನು ಅದೇ ಆಗಿದ್ದಿ" ಎಂದು ಗುರುವಿನಿಂದ ತಿಳಿದಮೇಲೆ ಜೀವನು ನಿರಂತರಸಾಧನದಿಂದ ಮುಂದೆ ಅದೇ ಆಗುತ್ತಾನೆ."ನಿಷ್ಕಲನಾದ ಪರಶಿವನನ್ನು ಜೀವನು ಧ್ಯಾನಿಸುತ್ತಾನೆ". "ಎಲ್ಲರೊಳಗೂ ಅಂತರ್ಯಾಮಿಯಾಗಿ ಇರುವ ಇವನೇ ಅಮೃತ-ನಿನ್ನ ಆತ್ಮ" ಈ ಶ್ರುತಿಗಳಲ್ಲಿ ಜೀವನನ್ನು ಧ್ಯಾತೃ, ದ್ರಷ್ಟೃ, ನಿಯಮ್ಯ ಎಂದೂ, ಶಿವನನ್ನು ಧ್ಯೇಯ, ದ್ರಷ್ಟವ್ಯ, ನಿಯಾಮಕ ಎಂದೂ ಹೇಳಿರುವುದರಿಂದ ಅವರು ಘಟಪಟಗಳಂತೆ ಪರಸ್ಪರ ವಿರುದ್ಧ ಸ್ವಭಾವದವರೆಂದು ಅವರಿಗೆ ಭೇದ ವ್ಯವಸ್ಥಿತವಾಗಿದೆ. "ಉಪೈತಿ" ಎಂಬಲ್ಲಿ ಜೀವರು ಹಿಂದಿನ ಪುಣ್ಯಪಾಪಗಳ ಮೂಲಕ ಪಡೆದಿದ್ದ ಶರೀರವನ್ನು ತೊರೆದು ಪರಂಜ್ಯೋತಿಯ ಸಮೀಪಕ್ಕೆ ಹೋಗುವರೆಂದು ಹೇಳಿರುವುದರಿಂದ ಭೇದವೇ ಶ್ರುತಿಗೆ ಸಮ್ಮತವೇ? ಎಂದು ಕೇಳುವುದು ಯುಕ್ತವಲ್ಲ; ಯಾಕೆಂದರೆ 'ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ' ಎಂಬ ಅನೇಕ ಶ್ರುತಿಗಳ ವಿರೋಧ ಬರುವುದರಿಂದಲೂ, ಮುಕ್ತಿ ಸಂಸಾರಗಳಿಗೆ ಯಾವ ವಿಶೇಷವೂ ಇಲ್ಲವೆಂಬ ಪ್ರಸಂಗ ಬರುವುದರಿಂದಲೂ ಮುಕ್ತಿಯಲ್ಲಿ ಶಿವಸಾಯುಜ್ಯವನ್ನೇ ಹೇಳಬೇಕು. ಹಾಗಾದರೆ, "ಜ್ಞಾನಿಯು ಪುಣ್ಯಪಾಪಗಳನ್ನು ಕಳೆದುಕೊಂಡು ನಿರಂಜನ ಶಿವತತ್ತ್ವದ ಸಾಮ್ಯವನ್ನು ಹೊಂದುತ್ತಾನೆ"ಎಂಬ ಶ್ರುತಿಯಂತೆ ಪರಶಿವಾನುಗ್ರಹದಿಂದ ಪಾಶವನ್ನು ಪೂರ್ಣವಾಗಿ ಕಳೆದುಕೊಂಡು ಸರ್ವಜ್ಞತ್ವಾದಿ ಗುಣಗಳ ಪೂರ್ಣವಿಕಾಸದಿಂದ ನಿರತಿಶಯಾನಂದಸ್ವರೂಪವೆನಿಸಿದ ಶಿವಸಾಮ್ಯವನ್ನು ಪಡೆಯುವುದೇ ಕೈವಲ್ಯಮುಕ್ತಿ ಎನಿಸುವುದು. ಇದೂ ಅಲ್ಲದೆ, 'ಆಕಾಶಶರೀರಂ ಬ್ರಹ್ಮ' ಎಂಬಲ್ಲಿ ಆಕಾಶಪದವು ಚಿತ್ರಕೃತಿಯನ್ನು ತಿಳಿಸುವುದರಿಂದ ಶಿವನು ಚಿದಂಬರನೆನಿಸಿದ್ದಾನೆ. 'ಮನಆನಂದಂ' ಎಂಬಲ್ಲಿ ಶಿವನು ದೇಹೇಂದ್ರಿಯಗಳನ್ನು ಅಪೇಕ್ಷಿಸದೆ ಮನಸ್ಸಿನಲ್ಲಿಯೇ ಪರಮಾನಂದವನ್ನು ಅನುಭವಿಸುವನೆಂದೂ ತಿಳಿಸಲಾಗಿದೆ. ಶಿವಸಾರೂಪ್ಯವನ್ನು ಹೊಂದಿದ ಮುಕ್ತರೂ ಸಹ ಹೀಗೆ ಚಿದಂಬರರೂ ಮನಆನಂದರೂ ಆಗಿರುವುದೇ ಅವರಿಗೆ ಗುರುತಾಗಿರುವುದು. ಆ ಜೀವರೂ ಪರಶಿವನ ಚಿತ್‌ಶಕ್ತಿಯ ಅಂಶರಾದ್ದರಿಂದಲೂ,ಅವರ ಸ್ವಾಭಾವಿಕ ಭೇದ ನಾಶವಾಗದಿರುವುದರಿಂದಲೂ ಅವರಿಗೆ ಅಂಗಾಂಗಿಭಾವದಿಂದ ಸಾಮ್ಯರೂಪವಾದ ಮುಕ್ತಿಯೇ ಹೊರತು ಸೂಕ್ಷ್ಮಶರೀರದ ಪೂರ್ಣವಿಯೋಗದಿಂದ ಶಿವನಲ್ಲಿ ಬೆರೆಯುವ ಸಾಮರಸ್ಯರೂಪವಾದ ಮುಕ್ತಿ ಸಂಭವಿಸುವುದಿಲ್ಲ. ಹೀಗೆ ಪೂರ್ವಪಕ್ಷ ಬಂದರೆ ಅದಕ್ಕೆ ಶ್ರುತಿ ಸೂತ್ರಗಳು ಸಮಾಧಾನವನ್ನು ತಿಳಿಸುತ್ತದೆ. ಹಿಂದೆ ಹೇಳಿದ 'ಯಥಾ ನದ್ಯಃ' ಎಂಬ ಶ್ರುತಿಗಳಲ್ಲೂ 'ಮುಕ್ತೋಪಸೃಪ್ಯ'ವೆಂಬ ಸೂತ್ರದಲ್ಲೂ ಮುಕ್ತರಿಗೆ ಶಿವಸ್ವರೂಪದಲ್ಲಿ ಐಕ್ಯವನ್ನು ಹೇಳಿರುವುದರಿಂದ ಅಂಗಾಂಗಿಭಾವದಿಂದ ಮುಕ್ತಿಗೆ ಇಲ್ಲಿ ಪ್ರಸಕ್ತಿ ಇಲ್ಲ. ಇದೂ ಅಲ್ಲದೆ, ಮುಕ್ತನಿಗೂ ಶಿವನಿಗೂ ಅಂಗಾಂಗಿಭಾವ ಹೊಂದುವುದಿಲ್ಲ. 'ನಾಶವಾಗತಕ್ಕದ್ದು ಶರೀರ, ಎಂಬ ಲಕ್ಷಣವು ಮುಕ್ತರಿಗೆ ಸಂಭವಿಸುವುದಿಲ್ಲ. ಅಂಗಿ ಎನಿಸಿದ ಪರಶಿವನು ಹಿತಪ್ರಾಪ್ತಿಗೂ ಅಹಿತನಿವೃತ್ತಿಗೂ ಆವಶ್ಯಕವಾದ ಚೇಷ್ಟೆಗೆ ಆಶ್ರಯನಾಗಿಲ್ಲ. ಮುಕ್ತನು

ಪರಶಿವನಿಗೆ ಶರೀರವಾಗುವ ಸಂಭವವೂ ಇಲ್ಲ. 'ಇಂದ್ರಿಯಾಶ್ರಯವೇ ಶರೀರ' ಎಂಬ ಲಕ್ಷಣವೂ ಮುಕ್ತನಿಗೆ ಬರುವಂತಿಲ್ಲ. ಇಂದ್ರಿಯಗಳು ಸ್ಥೂಲಶರೀರದಲ್ಲಿಯೇ ಇರುವವಾದ್ದರಿಂದಲೂ, ಜೀವನು ಸ್ವತಃ ನಿರವಯವನಾದ್ದರಿಂದಲೂ ಅವನು ಇಂದ್ರಿಯಗಳಿಗಾಶ್ರಯನಾಗಲಾರನು. 'ಭೋಗಾಯತನ'ವೇ ಶರೀರದ ಲಕ್ಷಣವೆಂದು ಹೇಳಿದರೂ ನಿತ್ಯತೃಪ್ತನಾದ ಪರಶಿವನಿಗೆ ಸುಖದುಃಖಾನುಭವರೂಪವಾದ ಭೋಗವಿಲ್ಲದ್ದರಿಂದ ಜೀವನು ಶಿವನಿಗೆ ಈ ಬಗೆಯ ಶರೀರವೂ ಆಗಲಾರನು. ಜೀವನು ಪರಶಿವನ ಪ್ರೇರಣೆಗೊಳಪಟ್ಟಿರುವುದರಿಂದ ಶರೀರವೆನಿಸಿಸುವನೆಂದರೆ ಲೋಕದಲ್ಲಿ ಜೀವನಿಂದ ಪ್ರೇರಿತವಾದ ರಥತುರಂಗವೇ ಮೊದಲಾದವೂ ಸಹ ಜೀವನಿಗೆ ಶರೀರವಾಗಬೇಕಾದೀತು. ನೇರವಾದ ಪ್ರಯತ್ನಕ್ಕೆ ಆಧಾರವಾಗಿರುವುದೇ ಶರೀರವೆಂದು ಹೇಳಿದರೂ ಜೀವನು ಪರಶಿವನ ಶರೀರವಾಗಲಾರನು, ಹೀಗೆ ಹೇಳಿದರೆ ಶರೀರದಲ್ಲಿರುವ ಬೆರಳು ಮೊದಲಾದ ಅವಯವಗಳು ನೇರವಾಗಿಯೇ ಪ್ರಯತ್ನಕ್ಕಾಧಾರವಾಗಿರುವುದರಿಂದ ಅವನ್ನೂ ಶರೀರವೆಂದು ಒಪ್ಪಬೇಕಾದೀತು. ಆದ್ದರಿಂದ ಜೀವನು ಕರ್ಮಾಧೀನನಲ್ಲದ್ದರಿಂದಲೂ, ನಾನು ನನ್ನದು ಎಂಬ ಅಜ್ಞಾನಕ್ಕೆ ವಿಷಯವಾಗದಿರುವುದರಿಂದಲೂ, ಅಂತ್ಯಾವಯವಿಯಾಗದಿರುವುದರಿಂದಲೂ ಅವನು ಪರಶಿವನ ಶರೀರವಾಗಲಾರನು. "ಯಾವನಿಗೆ ಆತ್ಮವೇ ಶರೀರವೋ" ಎಂಬ ಶ್ರುತಿಯಲ್ಲಿ ಜೀವನಿಗೆ ಶರೀರಪದವನ್ನು ಉಪಯೋಗಿಸಿರುವುದರಿಂದಲೇ ಜೀವನನ್ನು ಶರೀರವೆಂದು ಹೇಳಲಾಗುವುದಿಲ್ಲ. ಇಲ್ಲದಿದ್ದರೆ "ವಾಕ್ಕನ್ನು ಗೋವೆಂದೂ, ಅನ್ನವನ್ನು ಬ್ರಹ್ಮವೆಂದೂ ಭಾವಿಸಬೇಕು" ಎಂಬಲ್ಲಿ ವಾಕ್ಕೇ ಧೇನುವೆಂದೂ, ಅನ್ನವೇ ಬ್ರಹ್ಮವೆಂದೂ ಒಪ್ಪಬೇಕಾದೀತು. ಹಾಗೆ ಒಪ್ಪಿದರೆ ಪರಶಿವನನ್ನು ಅಶರೀರನೆಂದು ಹೇಳುವ ಶ್ರುತಿಗಳ ವಿರೋಧ ಬರುತ್ತದೆ. "ಅವನು ಅಶರೀರನಾದರೂ ಅನಿತ್ಯವಾದ ಶರೀರಗಳಲ್ಲೂ ನೆಲಸಿರುವನು" "ಅವನು ಅಶರೀರನು ಮತ್ತು ಅಮೃತನು" "ಪ್ರಾಣವೇ ಬ್ರಹ್ಮ, ತೇಜಸ್ಸೇ ಬ್ರಹ್ಮ" "ಅವನು ವ್ರಣವಿಲ್ಲದವನು, ಮತ್ತು ಮಲದೋಷಗಳಿಲ್ಲದೆ ಶುದ್ಧನು" ಈ ಬಗೆಯ ಶ್ರುತಿಗಳಲ್ಲಿ ಶಿವನು ಅಶರೀರನೆಂಬುದು ಸ್ಪಷ್ಟವಾಗಿದೆ. "ಅವನು ಕಣ್ಣು ಕಿವಿಗಳಿಲ್ಲದೆ, ಮನಃಪ್ರಾಣಗಳಿಲ್ಲದೆ, ಹಸ್ತಪಾದಗಳಿಲ್ಲದೆ ಶುದ್ಧನು" ಎಂಬಲ್ಲಿ ಅವಯವಗಳಿಲ್ಲವೆಂದು ಹೇಳಿದ್ದರಿಂದ ಅವನಿಗೆ ಶರೀರವಿಲ್ಲವೆಂದು ಸಿದ್ಧವಾಯಿತು. ಅವನು ಎಲ್ಲೆಲ್ಲೂ ಅಂತರ್ಯಾಮಿಯಾಗಿರುವುದರಿಂದ ಉಪಾಸನೆಗೆ ಮಾತ್ರ ಸರ್ವಶರೀರನೆನಿಸಿದ್ದಾನೆ. ಈ ರೀತಿಯಲ್ಲಿ ಅವನು ಎಲ್ಲಾ ಶರೀರಗಳಲ್ಲೂ ಇರುವನೆಂದು ಹೇಳಿದ್ದರಿಂದ ಜೀವನಿಗೂ ಅಂತರ್ಯಾಮಿಶಿವನಿಗೂ ಭೇದಾಭೇದವೇ ಸೂಚಿತವಾಗುವುದು. ಆದ್ದರಿಂದಲೇ ಜೀವನೆಂಬ ಶರೀರವಿಶಿಷ್ಟನಾದ ಪರಮಾತ್ಮನೊಡನೆ ಅದ್ವೈತವನ್ನು ಹೇಳುವ ವಿಶಿಷ್ಟಾದ್ವೈತವು ಅಸಂಗತವಾದ್ದರಿಂದ ವಿಶೇಷಾದ್ವೈತವೇ ಮುಮುಕ್ಷುಗಳಿಗೆ ಆದರಣೀಯವಾಗಿದೆ. ಇದೂ ಅಲ್ಲದೆ, ಬೇರೆ ಶ್ರುತಿಗಳಲ್ಲಿ "ತೃಷ್ಣೆ, ಕ್ಷಮೆ-ಕ್ರೋಧಗಳೆಲ್ಲಕ್ಕೂ ಆಶ್ರಯವಾಗಿ ಪ್ರಾಣಗಳೊಳಗೆ ನೆಲಸಿರುವ ಮನಸ್ಸನ್ನೇ ಲಿಂಗವೆಂದು

ಅನುಭವಿಗಳು ಹೇಳುತ್ತಾರೆ. ತೃಷ್ಣೆಯೇ ಸಂಸಾರದ ಹೇತುವೆಂದು ಬುದ್ಧಿಯಿಂದ ತಿಳಿದು ಅದನ್ನು ರುದ್ರನ ಕಡೆಗೆ ತಿರುಗಿಸಿದರೆ ಜೀವನು ರುದ್ರನೇ ಆಗುತ್ತಾನೆ" ಎಂಬ ಶ್ರುತಿಯಲ್ಲಿ ಸೂಕ್ಷ್ಮಶರೀರದ ನಾಶದಿಂದ ಶಿವತ್ವವನ್ನು ಪಡೆಯುವುದೇ ಮುಕ್ತಿ ಎಂದು ಹೇಳಲಾಗಿದೆ. ಹೀಗೆ ಹೇಳಿದರೂ, ನಹಿ ನಿಂದಾನ್ಯಾಯದಿಂದ ಪರಮತನಿಂದೆ ಪಾಪ ಕಾರಿ ಎನಿಸುವುದಿಲ್ಲ. ಯಾಕೆಂದರೆ ಜಲ್ಪವಿತಂಡವಾದಗಳಿಂದ ಶಿವಜ್ಞಾನದ ಆಧಿಕ್ಯವನ್ನು ಸ್ಥಾಪಿಸುವಾಗಲೂ ಪರಮತನಿಂದೆ ಇಲ್ಲದೆ ಸಾಧ್ಯವಾಗುವುದಿಲ್ಲ. ಪಾಷಂಡರ ನಿಂದೆಯನ್ನೂ ಸಪಕ್ಷ ತತ್ತ್ವಸ್ಥಾಪನೆಗೆ ಅನುಕೂಲವೆಂದೇ ಹೇಳಲಾಗಿದೆ. ನಿಷೇಧವು ವಿಹಿತವಾದ್ದನ್ನು ಬಿಟ್ಟು ಬೇರೆಕಡೆಗೇ ಅನ್ವಯಿಸುವುದರಿಂದ ಪರಮತ ನಿಂದೆಗೆ ದೋಷವಿಲ್ಲ. ಜೀವರು ಚಿಚ್ಛಕ್ತಿಯ ಅಂಶರೆಂದು ಹೇಳುವುದೂ ಯುಕ್ತ ವಲ್ಲ. ಯಾಕೆಂದರೆ ಅವರು ನೇರವಾಗಿ ಶಿವನ ಅಂಶರೇ ಆಗಿದ್ದಾರೆ. "ಅವನು ನೋಡಿ ದನು, ವಿಸ್ತಾರವಾದನು" ಎಂಬ ಶ್ರುತಿಯಲ್ಲಿ ಪಿತೃಪುತ್ರಾದಿಗಳಂತೆ ತನ್ನೊಳಗೆ ತನ್ನ ಅಂಶರಾಗಿ ಲೀನವಾಗಿದ್ದ ಜೀವರಿಗೆ ಅವನೇ ಕಾರಣನೆಂದು ಹೇಳಲಾಗಿದೆ. "ಯಾವಾಗ ಜೀವನ ಹೃದಯದಲ್ಲಿರುವ ಕಾಮನೆಗಳೆಲ್ಲವೂ ನಾಶವಾಗುತ್ತವೆಯೋ ಆಗಲೇ ಅವನು ಅಮೃತನಾಗುತ್ತಾನೆ. ಇಲ್ಲಿಯೇ ಶಿವಭಾವವನ್ನು ಅನುಭವಿಸು ತ್ತಾನೆ". "ಯಾವಾಗ ಶಿವನನ್ನು ನೋಡುವನೋ ಆಗಲೇ ಅವನ ಹೃದಯದ ವಾಸನೆಗಳು ತೊಲಗುತ್ತವೆ. ಎಲ್ಲಾ ಸಂಶಯಗಳೂ ಪರಿಹಾರವಾಗುತ್ತವೆ" ಶ್ರುತಿ ಯಲ್ಲಿ ಹೀಗೆ ಹೇಳಿರುವುದರಿಂದ ಪರಶಿವನ ಅನುಗ್ರಹದಿಂದ ಉಪಾಸಕರಿಗೆ ಪಾಶದ ಪೂರ್ಣನಾಶದಿಂದ ಶಿವಭಾವ ಬರುವುದೇ ಮುಕ್ತಿ ಎಂಬುದು ಸ್ಪಷ್ಟವಾಗಿದೆ. ಆದ್ದರಿಂದ ವಿಶ್ವಕ್ಕಾಶ್ರಯನಾದವನು ಮಹೇಶ್ವರನೆಂದು ಸಿದ್ಧವಾಯಿತು.

**ನಾನುಮಾನಮತಚ್ಛಬ್ದಾತ್ ॥ ೩ ॥**

**ಅನುಮೀಯತ ಇತ್ಯನುಮಾನಂ, ಸಾಂಖ್ಯಸ್ಮೃತಿಪ್ರತಿಪಾದಿತಂ ಪ್ರಧಾನಂ ನ ದ್ಯುಭ್ವಾದ್ಯಾಯತನಂ. ಕುತಃ, ಅತಚ್ಛಬ್ದಾತ್. 'ಯಸ್ಸ ರ್ವಜ್ಞಃ' ಇತ್ಯಾದೌ ಪ್ರಧಾನಪ್ರತಿಪಾದಕಶಬ್ದಾಭಾವಾದಚೇತನಸ್ಯ ಪ್ರಧಾನಸ್ಯ ಸರ್ವಜ್ಞತ್ವಾದಿಧರ್ಮಾಣಾಮಸಂಭವಾತ್ಸರ್ವಕಾರಣತ್ವೇನ ಸರ್ವಾಧಿಷ್ಠಾನತ್ವೇನ ಚ ಪರಮಶಿವ ಏವಾತ್ರ ಪರಿಗೃಹ್ಯತೇ.**

**ನಾನುಮಾನಂ ಅತಚ್ಛಬ್ದಾತ್ ॥ ೩ ॥**

ಸಾಂಖ್ಯಸ್ಮೃತಿಯಲ್ಲಿ ಕಲ್ಪಿತವಾಗಿ ಅನುಮಾನದಿಂದ ತಿಳಿದುಬರುವ ಪ್ರಧಾ ನವು ದ್ಯುಭ್ವಾದ್ಯಾಯತನವಾಗಲಾರದು; ಯಾಕೆಂದರೆ ಹಾಗೆ ತಿಳಿಸುವ ಯಾವ ಶಬ್ದವೂ ಶ್ರುತಿಯಲ್ಲಿ ಬಂದಿಲ್ಲ. 'ಯಸ್ಸರ್ವಜ್ಞಃ' ಎಂಬ ಶ್ರುತಿಯಲ್ಲಿ ಪ್ರಧಾನಕ್ಕೆ ಅನ್ವಯಿಸುವ ಯಾವ ಶಬ್ದವೂ ಬಂದಿಲ್ಲ. ಅಚೇತನವಾದ ಈ ಪ್ರಧಾನಕ್ಕೆ ಸರ್ವಜ್ಞ ತ್ವಾದಿಗುಣಗಳು ಸಂಭವಿಸುವುದೂ ಇಲ್ಲ. ಆದ್ದರಿಂದ ಶಿವನೇ ಸರ್ವಕಾರಣನೂ ಸರ್ವಾಧಿಷ್ಠಾನನೂ ಆಗಿ ಸ್ಥಲನೆನಿಸಿದ್ದಾನೆ.

**ಅಚೇತನತ್ವಾತ್ಪ್ರಧಾನಸ್ಯ ದ್ಯುಭ್ವಾದ್ಯಾಯತನತ್ವಾಸಂಭವೇಽಪಿ ಚೇತನತ್ವಾಜ್ಜೀವಸ್ಯ ತದಾಶಂಕ್ಯಾಹ—ಪ್ರಾಣಭೃಚ್ಚ ॥ ೪ ॥**

**ಪ್ರಾಣಭೃಜ್ಜೀವೋಽಪಿ ನ ದ್ಯುಭ್ವಾದ್ಯಾಯತನಃ. ಕುತಃ ಅತಚ್ಛಬ್ದಾದೇವ. ಪ್ರಾಣಭೃತೋ ಜೀವಸ್ಯ ಚಿದ್ರೂಪತ್ವಮಾತ್ಮಶಬ್ದತ್ವಂ ಚ ದೃಶ್ಯತೇ. ತಥಾಪಿ "ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ", "ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಜೀವೋ ಭಾಗಸ್ಸ ವಿಜ್ಞೇಯಃ", "ಜ್ಞಾಜ್ಞೌ" ಇತ್ಯಾದಿಶ್ರುತಿಶತೇಷು ಜೀವಸ್ಯ ಕಿಂಚಿದ್ಜ್ಞತ್ವಪರಿಚ್ಛಿನ್ನತ್ವಾದಿವ್ಯಪದೇಶಾತ್ ದ್ಯುಭ್ವಾದ್ಯಾಯತನತ್ವಂ ನ ಸಂಭವತೀತ್ಯತಚ್ಛಬ್ದತ್ವಂ. ತಸ್ಮಾತ್ಸರ್ವವ್ಯಾಪಕಸ್ಯ ಸರ್ವಶಕ್ತಿವಿಶಿಷ್ಟಶಿವಸ್ಯೈವ ದ್ಯುಭ್ವಾದ್ಯಾಯತನತ್ವಂ.**

ಅಚೇತನವಾದ್ದರಿಂದ ಪ್ರಧಾನವು ವಿಶ್ವಕ್ಕಾಧಾರವಾಗದಿದ್ದರೂ, ಚೇತನ ಜೀವನು ಆಧಾರವಾಗಲೆಂದಾಶಂಕಿಸಿ ನಿರಾಕರಿಸುತ್ತಾನೆ—**ಪ್ರಾಣಭೃಚ್ಚ ॥ ೪ ॥**

ಪ್ರಾಣವನ್ನು ಧರಿಸಿರುವ ಜೀವನೂ ಸಹ ವಿಶ್ವಕ್ಕಾಧಾರನಾಗಲಾರನು. ಯಾಕೆಂದರೆ ಶ್ರುತಿಯಲ್ಲಿ ಅವನಿಗೆ ಅನ್ವಯಿಸುವಂತೆ ಯಾವ ಪದವೂ ಇಲ್ಲ. ಅವನು ಚೇತನನಾದ್ದರಿಂದ ಅವನಲ್ಲಿ ಆತ್ಮಶಬ್ದವು ಅನ್ವಯಿಸಿದರೂ ಸರ್ವಜ್ಞತಾದಿ ಧರ್ಮಗಳು ಅನ್ವಯಿಸುವುದಿಲ್ಲ. "ಈ ಅಣುವಾದ ಆತ್ಮನನ್ನು ಮನಸ್ಸಿನಿಂದ ತಿಳಿಯಬೇಕು". "ಒಂದು ವಸ್ತುವಿನ ಒಂದು ಭಾಗವನ್ನು ನೂರಾರು ಭಾಗಗಳಾಗಿ ವಿಂಗಡಿಸಿದರೆ ಆ ಒಂದು ವಿಭಾಗದ ಪ್ರಮಾಣದಷ್ಟು ಜೀವನ ಪರಿಮಾಣವೆಂದು ತಿಳಿಯಬೇಕು". "ಬ್ರಹ್ಮವು ಸರ್ವಜ್ಞ-ಸರ್ವಶಕ್ತ, ಜೀವನು ಅಜ್ಞ-ಅನೀಶ" ಈ ಬಗೆಯ ಶ್ರುತಿಗಳಲ್ಲಿ ಜೀವನನ್ನು ಅಲ್ಪಜ್ಞ, ಪರಿಚ್ಛಿನ್ನ ಎಂದು ಹೇಳಲಾಗಿದೆ. ಆದ್ದರಿಂದ ಅವನು ಸರ್ವಾಧಾರನಾಗಲಾರನು. ಇದರಿಂದ ಸರ್ವವ್ಯಾಪಕನೂ ಸರ್ವಶಕ್ತಿವಿಶಿಷ್ಟನೂ ಆದ ಶಿವನೇ ಸರ್ವಕ್ಕೂ ಆಶ್ರಯಸ್ಥಲವಾಗಿರುವನೆಂಬುದು ಸ್ಪಷ್ಟವಾಗುತ್ತದೆ.

**ಪುನರ್ಹೇತ್ವಂತರಮಾಹ—ಭೇದವ್ಯಪದೇಶಾತ್ ॥ ೫ ॥**

**ಅತಃ ಪ್ರಾಣಭೃನ್ನ ದ್ಯುಭ್ವಾದ್ಯಾಯತನಂ, ಕುತಃ ಭೇದವ್ಯಪದೇಶಾತ್—ಭೇದೇನ ವ್ಯಪದೇಶಾತ್, "ತಮೇವೈಕಂ ಜಾನಥಾತ್ಮಾನಂ", "ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ", "ಜುಷ್ಟಂ ಯದಾ ಪಶ್ಯತ್ಯನ್ಯಮೀಶಸ್ತದಾಸ್ಯ ಮಹಿಮಾನಮೇತಿ ವೀತಶೋಕಃ", "ದ್ವಾ ಸುಪರ್ಣಾ" ಇತ್ಯಾದೌ ಜೀವಬ್ರಹ್ಮಣೋರ್ಜ್ಞಾತೃಜ್ಞೇಯತ್ವಾದಿಧರ್ಮೈಃ ಸ್ವಾಭಾವಿಕಭೇದವ್ಯಪದೇಶಾತ್ ಕಿಂಚಿದ್ಜ್ಞಸ್ಯ ಜೀವಸ್ಯ ನ ದ್ಯುಭ್ವಾದ್ಯಾಯತನತ್ವಮುಪಪದ್ಯತೇ.**

ಬೇರೊಂದು ಹೇತುವನ್ನು ಹೇಳುತ್ತಾನೆ—**ಭೇದವ್ಯಪದೇಶಾಚ್ಚ ॥೫॥**

ಶ್ರುತಿಯಲ್ಲಿ ಶಿವಜೀವರಿಗೆ ಭೇದವನ್ನು ಹೇಳಿರುವುದರಿಂದ ಜೀವನು ಸರ್ವಾಧಾರ

ನಾಗಲಾರನು. "ಅಮೃತಸಾಗರನಾದ ಆತ್ಮನೊಬ್ಬನನ್ನೇ ತಿಳಿಯಿರಿ". "ದೇಹವೆಂಬ ಒಂದೇ ವೃಕ್ಷದಲ್ಲಿ ಜೀವನು ಅಭಿಮಾನಿಸಿ ವ್ಯವಹರಿಸುತ್ತಾ ಅಶಕ್ತತೆಯಿಂದ ಮೋಹಗೊಂಡು ಅಳುತ್ತಿದ್ದಾನೆ". "ಇವನು ಪ್ರಭುವನ್ನು ಎಂದು ನೋಡುವನೋ ಅಂದು ದುಃಖರಹಿತನಾಗಿ ಅವನ ಮಹಿಮೆಯನ್ನು ತಿಳಿಯುವನು". "ಈ ವೃಕ್ಷದಲ್ಲಿ ಎರಡು ಬಗೆಯ ಹಕ್ಕಿಗಳಿವೆ. ಇವುಗಳಲ್ಲಿ ಒಂದು ಹಕ್ಕಿ ಕಾಯಿ ಮತ್ತು ಹಣ್ಣುಗಳನ್ನು ತಿನ್ನುತ್ತಿದ್ದರೆ, ಮತ್ತೊಂದು ಏನನ್ನೂ ತಿನ್ನದೆ ಪ್ರಕಾಶಿಸುತ್ತಲಿದೆ". ಈ ಶ್ರುತಿಗಳಲ್ಲಿ ಜೀವನು ಜ್ಞಾತೃವೆಂದೂ, ಶಿವನು ಜ್ಞೇಯನೆಂದೂ ಸ್ವಾಭಾವಿಕವಾದ ಭೇದವನ್ನು ಹೇಳಿರುವುದರಿಂದ ಅಲ್ಪಜ್ಞನಾದ ಜೀವನು ವಿಶ್ವಕ್ಕೆ ಸ್ಥಲವಾಗಲಾರನು.

ಪರಮೇಶ್ವರಪಕ್ಷೇ ಹೇತ್ವಂತರಮಾಹ—ಪ್ರಕರಣಾತ್ ॥ ೬ ॥

"ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" ಇತ್ಯನೇನೈಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾಶ್ರುತ್ಯುಪಕ್ರಮಪ್ರದರ್ಶನಾತ್, ಸರ್ವಜಗದುಪಾದಾನಭೂತಪರಶಿವಜ್ಞಾನೇನ ಸರ್ವವಿಜ್ಞಾನಸಂಭವಾತ್ ಜೀವಪ್ರಧಾನಾದೀನಾಂ ದ್ಯುಭ್ವಾದ್ಯಾಯತನತ್ವಂ ನ ಸಂಭವತಿ. ದರ್ಶಪೂರ್ಣಮಾಸಪ್ರಕರಣಪಠಿತಾನಾಂ 'ಸಮಿಧೋ ಯಜತಿ' ಇತಿ ವಾಕ್ಯಾನಾಮಿವ ಪರಮೇಶ್ವರಪ್ರಕರಣಪಠಿತಭೇದಾಭೇದಬೋಧಕಸರ್ವವೇದಾಂತವಾಕ್ಯಾನಾಂ ಪರಮೇಶ್ವರಪರತ್ವಂ. 'ನೇಹ ನಾನಾಸ್ತಿ ಕಿಂಚನ' ಇತ್ಯಾದಿಶ್ರುತಿಷು ಸರ್ವನಿಷೇಧಪೂರ್ವಕನಿಷ್ಪ್ರಪಂಚಬ್ರಹ್ಮಾವಗಮಾತ್ ಸರ್ವವೇದಾಂತೋಪಕ್ರಮೋಪಸಂಹಾರಾದಿಷಡ್ವಿಧತಾತ್ಪರ್ಯಲಿಂಗೈಃ ತತ್ಪರತ್ವಮೇವೇತಿ ಚೇನ್ನ—"ಸದೇವ ಸೌಮ್ಯೇದಮಗ್ರ ಆಸೀತ್", "ಜ್ಞಾಜ್ಞೌ ದ್ವಾವಜೌ" ಇತ್ಯಾದಿಬಹುಶ್ರುತಿವಿರೋಧಾತ್. ಸರ್ವಭೇದನಿಷೇಧಸ್ಯ ಸರ್ವಶಿವಾತ್ಮಕಜ್ಞಾನಸೂಚಕತ್ವಾಚ್ಚ. ನಿಷ್ಪ್ರಪಂಚನಿರ್ವಿಶೇಷಜ್ಞಾನಸ್ಯ ಮಾಯಾಪಾಶಮೋಚಕತ್ವಾಭಾವಾತ್ ನ ಕಿಂಚಿತ್ಪ್ರಯೋಜನಂ ಪಶ್ಯಾಮಃ. ಅಸ್ಯಾಮುಪನಿಷದಿ "ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಂ" ಇತಿ ಬ್ರಹ್ಮವಿದ್ಯಾಮುಪಕ್ರಮ್ಯ "ಏಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" ಇತಿ ಪ್ರಶ್ನೋತ್ತರತ್ವೇನ ಶಿವೈಕಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾಮುಪದಿಶ್ಯ "ದ್ವೇ ವಿದ್ಯೇ ವೇದಿತವ್ಯೇ" ಇತ್ಯಾದಿನಾ ಪ್ರವೃತ್ತಿಪ್ರತಿಪಾದಕಪರಾಽಪರವಿದ್ಯಾಭೇದೇನ ವಿದ್ಯಾದ್ವಯಮುಪನ್ಯಸ್ಯಾದೌ ಚತುರ್ದಶವಿದ್ಯಾನಾಮಪರವಿದ್ಯಾತ್ವಮುಕ್ತ್ವಾ "ಅಥ ಪರಾ ಯಯಾ ತದಕ್ಷರಮಧಿಗಮ್ಯತೇ" ಇತ್ಯುಪಕ್ರಮ್ಯ "ಅಕ್ಷರಾತ್ಸಂಭವತೀಹ ವಿಶ್ವಂ" ಇತ್ಯಂತಂ ತಲ್ಲಕ್ಷಣತ್ವೇನ ಜಗಜ್ಜನ್ಮಾದಿಕಾರಣತ್ವಂ ಪ್ರಸಾಧ್ಯ "ಯಸ್ಸರ್ವಜ್ಞಃ" ಇತ್ಯಾದಿನಾ ತಸ್ಯೈವ ಸ್ವರೂಪಮುಕ್ತ್ವಾ "ಪ್ಲವಾ ಹ್ಯೇತೇಽದೃಢಾಃ" ಇತ್ಯಾದಿನಾ ಪ್ರವೃತ್ತಿ

ಮಾರ್ಗನಿಂದಾಂ ವಿಧಾಯ, "ತಪಶ್ರದ್ಧೇ ಯೇ ಹ್ಯುಪವಸಂತ್ಯರಣ್ಯೇ ಶಾಂತಾ ವಿದ್ವಾಂಸೋ ಭೈಕ್ಷಚರ್ಯಾಂ ಚರಂತಸ್ಸೂರ್ಯದ್ವಾರೇಣ ತೇ ವಿರಜಾಂ ಪ್ರಯಾಂತಿ ಯತ್ರಾಮೃತಃ ಪುರುಷೋ ಹ್ಯವ್ಯಯಾತ್ಮಾ" ಇತ್ಯತ್ರಾಮೃತಪುರುಷಶಬ್ದಾವಸಾಧಾರಣ್ಯೇನ ಶಿವವಾಚಕಾವಿತ್ಯುಪಪಾದಿತಂ. 'ಕ್ಷರಂ ಪ್ರಧಾನ ಮಮೃತಾಕ್ಷರಂ ಹರಃ' ಇತಿ ಶ್ವೇತಾಶ್ವತರೇ ಪರಶಿವಪರತ್ವೇನಾಕ್ಷರಶಬ್ದೋ ನಿರ್ಣೀತಃ. 'ಯೇನಾಕ್ಷರಂ ಪುರುಷಂ ವೇದ ಸತ್ಯಂ' ಇತ್ಯಾದಿನಾ ಜೀವಸೃಷ್ಟಿಹೇತುತ್ವಮುಕ್ತ್ವಾ, "ತದ್ಬೋದ್ಧವ್ಯಂ ಸೌಮ್ಯಂ ವಿದ್ಧಿ" ಇತಿ ತಸ್ಯ ಜ್ಞೇಯತ್ವಂ ನಿರ್ದಿಶ್ಯ "ಧನುರ್ಗೃಹಿತ್ವೌಪನಿಷದಂ" ಇತ್ಯಾದಿನಾ ವೇದಾಂತವೇದ್ಯತ್ವಮುಕ್ತ್ವಾ 'ಯದಾ ಪಶ್ಯಃ' ಇತ್ಯಾದಿನಾ ಹಿರಣ್ಮಯಾತ್ಮಕಪರಮಶಿವಜ್ಞಾನೇನ ಪುಣ್ಯಪಾಪನಿವೃತ್ತಿಪೂರ್ವಕಪರಮಶಿವಸಾರೂಪ್ಯಮುಪದಿಶ್ಯ "ಯಥಾ ನದ್ಯಃ" ಇತ್ಯಾರಭ್ಯ "ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತ್ಯಂತಂ ಷಡ್ವಿಧಲಿಂಗೈಃ ಪರಮಶಿವಪ್ರಕರಣಮಿತಿ ಪ್ರತೀಯತೇ. ಜ್ಞೇಯವಾಚಕೇಶ್ವರಪದಸ್ಯ ಶಿವೇ ರೂಢತ್ವಾತ್, ರುಕ್ಮವರ್ಣಸ್ಯಾಪಿ 'ನಮೋ ಹಿರಣ್ಯಬಾಹವೇ' ಇತ್ಯಾದಿಷು ತತ್ಪರತ್ವೇನ ದರ್ಶನಾಚ್ಚ ವಿಶ್ವಕಾರಣವಿಶ್ವಾಧಿಕವಿಶ್ವನಿಯಾಮಕ ಶಿವಜ್ಞಾನಸ್ಯೈವ ಭವಪಾಶನಾಶಹೇತುತ್ವಂ ಸಿದ್ಧಂ. ತಸ್ಮಾದ್ರಜ್ಜುಸರ್ಪವದವಿದ್ಯಾಕಲ್ಪಿತವಾದಪ್ರಧಾನನಿಷ್ಪ್ರಪಂಚಬ್ರಹ್ಮಾದ್ವೈತವಾದಸ್ತ್ವವೈದಿಕ ಇತಿ ವೇದಿತವ್ಯಃ, ತದ್ವಿಧಾಯಕಶ್ರುತ್ಯದರ್ಶನಾತ್. ಕಿಂಚ ಶ್ರುತ್ಯಂತರೇ ಚ "ಶಿವ ಏಕೋ ಧ್ಯೇಯಃ ಶಿವಂಕರಃ" ಇತಿ ಶಿವೇತರಧ್ಯಾನಪರಿತ್ಯಾಗದರ್ಶನಾತ್, 'ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ' ಇತಿ ಶಿವಜ್ಞಾನಸ್ಯೈವಾತ್ಯಂತಶಾಂತಿಹೇತುತ್ವವ್ಯಪದೇಶಾತ್. 'ಈಶಂ ಜ್ಞಾತ್ವಾ ಅಮೃತಾ ಭವಂತಿ' ಇತಿ ಶಿವಜ್ಞಾನಾದೇವ ಮೋಕ್ಷಶ್ರವಣಾತ್. "ಜ್ಞಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ" ಇತಿ ಶಿವಜ್ಞಾನೈಕನಿರತಾನಾಂ ಸರ್ವಪಾಪನಿವೃತ್ತಿವ್ಯವಸ್ಥಾಪನಾತ್ತದುಪಾಸನಾದೇವ ಮುಕ್ತಿರಿತಿ ಘಂಟಾಘೋಷಃ. ಇಹೋಪನಿಷದಿ ಪರಮಶಿವಧರ್ಮಬಾಹುಳ್ಯಪ್ರಕರಣಾತ್ ದ್ಯುಭ್ವಾದ್ಯಾಯತನಂ ಪರಮಶಿವ ಏವೇತಿ ಸಿದ್ಧಂ.

ಪರಮೇಶ್ವರನ ಪಕ್ಷದಲ್ಲಿ ಬೇರೊಂದು ಹೇತುವನ್ನು ಹೇಳುತ್ತಾನೆ—

ಪ್ರಕರಣಾಚ್ಚ ॥ ೬ ॥

"ಸ್ವಾಮಿ, ಯಾವುದನ್ನು ತಿಳಿದರೆ ಇದೆಲ್ಲವನ್ನು ತಿಳಿಯಬಹುದು" ಎಂಬ ಪ್ರಶ್ನೆಯಿಂದ ಇಲ್ಲಿಯ ಪ್ರಕರಣವು ಆರಂಭವಾಗಿದೆ. ವಿಶ್ವದ ಉಪಾದಾನವಾಗಿರುವ ಪರಶಿವನ ಜ್ಞಾನದಿಂದಲೇ ಸರ್ವವಿಜ್ಞಾನವೂ ಸಂಭವಿಸುವುದೆಂದು ಇಲ್ಲಿ ತಿಳಿಸಲಾಗಿದೆ. ಜೀವಪ್ರಧಾನರು ಹೀಗೆ ವಿಶ್ವದ ಉಪಾದಾನರಾಗಲಾರರು. ಅವರ ಜ್ಞಾನದಿಂದ

ವಿಶ್ವದ ಜ್ಞಾನವೂ ಆಗುವುದಿಲ್ಲ. ದರ್ಶಪೂರ್ಣಮಾಸದ ಪ್ರಕರಣದಲ್ಲಿ ಬಂದಿರುವ 'ಸಮಿಧೋ ಯಜತಿ"ಎಂಬ ವಾಕ್ಯಗಳು ದರ್ಶಪೂರ್ಣಮಾಸದಲ್ಲಿಯೇ ಅನ್ವಯಿಸುವಂತೆ ಪರಶಿವಪ್ರಕರಣದಲ್ಲಿ; ಹೇಳಿದ ಭೇದಾಭೇದಬೋಧಕವಾದ ಎಲ್ಲಾ ವೇದಾಂತವಾಕ್ಯಗಳೂ ಪರಶಿವನಿಗೇ ಅನ್ವಯಿಸುತ್ತವೆ. "ಇಲ್ಲಿ ಯಾವ ಭೇದವೂ ಇಲ್ಲ"ಎಂಬ ಶ್ರುತಿಗಳು ಎಲ್ಲವನ್ನೂ ನಿಷೇಧಿಸಿ ನಿಷ್ಪ್ರಪಂಚಬ್ರಹ್ಮವನ್ನು ತಿಳಿಸುವುದರಿಂದ ವೇದಾಂತವಾಕ್ಯಗಳೆಲ್ಲವೂ ತಾತ್ಪರ್ಯಲಿಂಗಗಳಿಂದ ನಿರ್ವಿಶೇಷಬ್ರಹ್ಮವನ್ನೇ ಬೋಧಿಸುತ್ತವೆ ಎಂದು ಹೇಳುವುದು ಯುಕ್ತವಲ್ಲ. ಹಾಗೆ ಹೇಳಿದರೆ "ಇದೆಲ್ಲವೂ ಮೊದಲು ಸದ್ರೂಪವಾಗಿತ್ತು"ಮೊದಲಾದ ಅನೇಕ ಶ್ರುತಿಗಳ ವಿರೋಧವುಂಟಾಗುವುದು. ಆದ್ದರಿಂದ ಸರ್ವಭೇದನಿಷೇಧವು ಎಲ್ಲವೂ ಶಿವಾತ್ಮಕವೆಂಬ ಜ್ಞಾನವನ್ನು ತಿಳಿಸುತ್ತದೆ. ಇದೂ ಅಲ್ಲದೆ, ನಿರ್ವಿಶೇಷಬ್ರಹ್ಮಜ್ಞಾನವು ಮಾಯಾಪಾಶವನ್ನು ತೊಲಗಿಸಲಾರದ್ದರಿಂದ ನಿಷ್ಫಲವೆನಿಸಿದೆ. 'ಎಲ್ಲಾ ವಿದ್ಯೆಗಳಿಗಾಶ್ರಯವಾದ ಬ್ರಹ್ಮವಿದ್ಯೆಯನ್ನು ಉಪನಿಷತ್ತಿನಲ್ಲಿ ಹೇಳಲಾಗಿದೆ" ಎಂದಾರಂಭಿಸಿ 'ಯಾವುದನ್ನು ತಿಳಿದರೆ ಎಲ್ಲವೂ ತಿಳಿಯಬಹುದು' ಎಂಬ ಪ್ರಶ್ನೆಗೆ ಉತ್ತರವಾಗಿ 'ಶಿವನನ್ನು ತಿಳಿದರೆ ಎಲ್ಲವೂ ತಿಳಿಯುವುದು', ಎಂಬ ಪ್ರತಿಜ್ಞೆಯನ್ನು ತಿಳಿಸಿ, "ಎರಡು ವಿದ್ಯೆಗಳಿವೆ" ಎಂಬಲ್ಲಿ ಪರ ಅಪರವೆಂಬ ಎರಡು ವಿದ್ಯೆಗಳಲ್ಲಿ ಹದಿನಾಲ್ಕು ವಿದ್ಯೆಗಳನ್ನು ಅಪರವಿದ್ಯೆ ಎಂದು ತಿಳಿಸಿ "ಪರವಿದ್ಯೆಯಿಂದ ಅಕ್ಷರವನ್ನು ತಿಳಿಯಬಹುದು" ಎಂಬಲ್ಲಿ ವೇದಾಂತವೇದ್ಯವಾದ ಅಕ್ಷರವನ್ನು ಬ್ರಹ್ಮವೆಂದು ತಿಳಿಸಿ ಈ ಅಕ್ಷರದಿಂದಲೇ ವಿಶ್ವವು ಸಂಭವಿಸಿದೆ ಎಂದು ಜಗಜ್ಜನ್ಮಾದಿಕರಣವೆಂದು ಅದರ ಲಕ್ಷಣವನ್ನು ಹೇಳಿ "ಯಸ್ಸರ್ವಜ್ಞಃ" ಎಂಬುದರಿಂದ ಅವನ ಸ್ವರೂಪವನ್ನು ವಿವರಿಸಿ "ಯಜ್ಞಾದಿ ಕರ್ಮಗಳು ಅನಿತ್ಯ" ವೆಂಬಲ್ಲಿ ಪ್ರವೃತ್ತಿಮಾರ್ಗವನ್ನು ನಿಂದಿಸಿ "ತಪಸ್ಸಿನಲ್ಲಿ ನಿಷ್ಠೆಯಿಂದ ಇರುವವನು ನಿರ್ಲಿಪ್ತತೆಯಿಂದ ಶಾಂತನಾಗಿ ಬಾಳುತ್ತ ಸೂರ್ಯದ್ವಾರದಿಂದ ಶುದ್ಧಶಿವಭಾವವನ್ನು ಹೊಂದಿ ಅಮೃತನಾಗುತ್ತಾನೆ" ಎಂದು ಹೇಳಲಾಗಿದೆ. ಹೀಗೆ ಅಸಾಧಾರಣವಾದ ಅಮೃತ, ಅಕ್ಷರ, ಪುರುಷ ಶಬ್ದಗಳನ್ನು ಶ್ರುತಿಯಲ್ಲಿ ಪ್ರಯೋಗಿಸಿರುವುದರಿಂದ ಇವು ಶಿವನಿಗೇ ಅನ್ವಯಿಸುತ್ತವೆ. "ಹರನು ಅಮೃತನೂ ಅಕ್ಷರನೂ ಆಗಿದ್ದಾನೆ" "ಅಕ್ಷರನಾದ ಪುರುಷನನ್ನು ತಿಳಿಯಬೇಕು". ಹೀಗೆ ಶ್ರುತಿಯಲ್ಲಿ ಶಿವನಿಗೇ ಪುರುಷ-ಅಕ್ಷರ, ಈ ಶಬ್ದಗಳನ್ನು ಹೇಳಲಾಗಿದೆ. ಜೀವನು ಶಿವನನ್ನು ತಿಳಿಯಬೇಕಾದ್ದರಿಂದ ಶಿವನೇ ಜ್ಞೇಯನೆನಿಸಿದ್ದಾನೆ. "ಉಪನಿಷತ್ತಿನಲ್ಲಿ ಹೇಳಿರುವ ಸಾಧನಮಾರ್ಗದಿಂದ ತಿಳಿಯಬೇಕು" ಎಂಬುದರಿಂದ ಶಿವನೇ ವೇದಾಂತವೇದ್ಯನೆನಿಸಿದ್ದಾನೆ. "ಹಿರಣ್ಯವರ್ಣನಾದ ಜಗತ್ಪತಿಯನ್ನು ಜೀವನು ಕಾಣಬೇಕು" ಈ ಬಗೆಯ ಶ್ರುತಿಗಳಿಂದ ಪರಶಿವನ ಜ್ಞಾನದಿಂದ ಜೀವನಿಗೆ ಪುಣ್ಯ ಪಾಪಗಳು ತೊಲಗಿ ಪರಶಿವನ ಸಾರೂಪ್ಯ ಬಂದು, ಕೊನೆಗೆ 'ಯಥಾ ನದ್ಯಃ' ಎಂಬುದರಿಂದ ಶಿವಸಾಯುಜ್ಯವು ಇಲ್ಲಿಯೇ ಲಭಿಸುವುದೆಂದು ಹೇಳಿರುವುದರಿಂದ ಆರು ಬಗೆಯ ತಾತ್ಪರ್ಯಲಿಂಗಗಳ ಬಲದಿಂದ ಇದು ಪರಶಿವನ ಪ್ರಕರಣ

ವೆಂದು ತಿಳಿದುಬರುತ್ತದೆ. ಈಶ್ವರನು ಜ್ಞೇಯನೆಂದಮೇಲೆ ಆ ಪದವು ಶಿವನಲ್ಲಿಯೇ ರೂಢವಾಗಿದೆ. "ಪಶ್ಯತೇ ರುಕ್ಮವರ್ಣಂ" ಎಂಬಲ್ಲಿ ರುಕ್ಮವರ್ಣವೆಂಬ ಪದವು "ನಮೋ ಹಿರಣ್ಯಬಾಹವೇ" ಎಂಬ ಶ್ರುತಿಯಂತೆ ಶಿವನಿಗೇ ಅನ್ವಯಿಸುತ್ತದೆ. ಹೀಗೆ ವಿಶ್ವಕಾರಣನೂ ವಿಶ್ವಾಧಿಕನೂ ವಿಶ್ವನಿಯಾಮಕನೂ ಆದ ಶಿವನ ಜ್ಞಾನವೇ ಭವಪಾಶನಾಶದ ಹೇತುವೆಂದು ಸಿದ್ಧವಾಯಿತು. ಆದ್ದರಿಂದಲೇ ರಜ್ಜುಸರ್ಪದಂತೆ ಜಗತ್ತು ಅವಿದ್ಯಾಕಲ್ಪಿತವೆಂದು ಪ್ರತಿಪಾದಿಸುವವಾದವೇ ಪ್ರಧಾನವಾಗಿರುವ ನಿರ್ವಿಶೇಷಾದ್ವೈತಮತವು ಅದನ್ನು ಪ್ರತಿಪಾದಿಸುವ ಶ್ರುತಿಯಿಲ್ಲದ್ದರಿಂದ ಅವೈದಿಕವೆನಿಸಿದೆ. "ಎಲ್ಲವನ್ನು ಬಿಟ್ಟು ಶಿವಶಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು". "ಶಿವನನ್ನು ತಿಳಿದು ಪರಮಶಾಂತಿಯನ್ನು ಹೊಂದುತ್ತಾನೆ" ಎಂದು ಶ್ರುತಿಯಲ್ಲಿ ಶಿವಜ್ಞಾನವೇ ಪರಮಶಾಂತಿಯ ಹೇತುವೆಂದು ಹೇಳಲಾಗಿದೆ. "ಈಶನನ್ನು ತಿಳಿದು ಅಮೃತನಾಗುತ್ತಾನೆ". "ಜ್ಞಾನದ ನಿರಂತರ ಚಿಂತನೆಯಿಂದ ಜ್ಞಾನಿ ಪಾಶವನ್ನು ದಹಿಸುತ್ತಾನೆ". ಹೀಗೆ ಶಿವಜ್ಞಾನದಲ್ಲಿ ನಿರತರಾದವರಿಗೇ ಸರ್ವಪಾಪನಿವೃತ್ತಿಯನ್ನು ತಿಳಿಸಿರುವುದರಿಂದ ಶಿವನ ಉಪಾಸನದಿಂದಲೇ ಮುಕ್ತಿ ದೊರಕುವುದೆಂಬುದು ಘಂಟಾಘೋಷವೆನಿಸಿದೆ. ಹೀಗೆ ಶ್ರುತಿಯಲ್ಲಿ ಇದು ಪರಶಿವನ ಅಸಾಧಾರಣಧರ್ಮಗಳನ್ನೇ ಹೆಚ್ಚಾಗಿ ತಿಳಿಸಿರುವ ಪ್ರಕರಣವಾದ್ದರಿಂದ ಅವನೇ ವಿಶ್ವಾಧಾರನೆನಿಸಿರುವನು.

ಪರಮೇಶ್ವರಪರತ್ವೇ ಹೇತ್ವಂತರಮಾಹ—ಸ್ಥಿತ್ಯದನಾಭ್ಯಾಂ ಚ || ೭ ||

ಇಹಾಪಿ ನ ಪ್ರಾಣಭೃತ್ ದ್ಯುಭ್ವಾದ್ಯಾಯತನಂ. ಕುತಃ—ಸ್ಥಿತ್ಯದನಾಭ್ಯಾಂ ಚ, ಸ್ಥಿತಿಶ್ಚ ಅದನಂ ಚ ತಾಭ್ಯಾಂ. "ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ | ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ" ಇತ್ಯತ್ರ ಜೀವಸ್ಯ 'ಅತ್ತಿ' ಇತಿ ಕರ್ಮಫಲಭೋಕ್ತೃತ್ವಂ. 'ಅನಶ್ನನ್ನನ್ಯಃ' ಇತಿ ಪರಮೇಶ್ವರಸ್ಯೌದಾಸೀನ್ಯೇನ ಸ್ಥಿತಿರುಪದಿಶ್ಯತೇ. ತಸ್ಮಾದ್ದ್ಯುಭ್ವಾದ್ಯಾಯತನಂ ಮಹೇಶ್ವರ ಏವ. ನನು 'ಏಕ ಏವ ರುದ್ರಃ' ಇತ್ಯಾದಿಶ್ರುತಿಶತೇಷು ಸರ್ವಪ್ರಪಂಚನಿಷೇಧಪೂರ್ವಕಾದ್ವೈತವ್ಯವಸ್ಥಾಪನಾತ್, "ದ್ವಾ ಸುಪರ್ಣಾ" ಇತ್ಯಾದಿಮಂತ್ರಗತಜೀವಬ್ರಹ್ಮಣೋರ್ಭೇದ ಔಪಚಾರಿಕ ಏವೇತಿ ಚೇನ್ನ, ಅದ್ವಿತೀಯತ್ವಪ್ರತಿಪಾದಕಶ್ರುತೀನಾಂ ನಿರ್ಗುಣತ್ವಪ್ರತಿಪಾದಕಶ್ರುತೀನಾಂ ಚ ಸೃಷ್ಟೇಃ ಪೂರ್ವಂ ಮೂರ್ತಾಮೂರ್ತೋಭಯಪ್ರಪಂಚಾಭಾವಾತ್ತತ್ಕಾಲಪರತ್ವಂ. ಭೇದಶ್ರುತೀನಾಂ ಸರ್ವಾಸಾಂ ಸೃಷ್ಟ್ಯುತ್ತರಕಾಲಪರತ್ವಂ. "ಯದಾ ತಮಃ", ಇತಿ ಶ್ವೇತಾಶ್ವತರೇ "ಅಹಮೇಕಃ ಪ್ರಥಮಮಾಸಂ" ಇತ್ಯಥರ್ವಶಿರಸಿ, 'ಆತ್ಮಾ ವಾ ಇದಮೇಕಮೇವಾಗ್ರ ಆಸೀತ್' ಇತ್ಯೈತರೇಯೇ, 'ಸದೇವ ಸೌಮ್ಯ' ಇತಿ ಛಾಂದೋಗ್ಯೇ ಚ ಗತಿಸಾಮಾನ್ಯನ್ಯಾಯೇನ ಸರ್ವವೇ

ದಾಂತೇಷು ಸೃಷ್ಟೇಃ ಪೂರ್ವಮೇವ ಬ್ರಹ್ಮಣಃ ಅದ್ವಿತೀಯತ್ವವ್ಯವಸ್ಥಾಪನಾತ್. 'ಸೋಽಕಾಮಯತ' ಇತ್ಯಾದಿಷು ಸೃಷ್ಟ್ಯುನ್ಮುಖಸ್ಯ ಬ್ರಹ್ಮಣಃ ಕಾಮನಯಾ ಬಹುಭಾವಶ್ರವಣಾತ್ ಸೃಷ್ಟ್ಯುತ್ತರಕಾಲೇ ಬ್ರಹ್ಮಣಸ್ಸಗುಣತ್ವದರ್ಶನಾನ್ನಾನ್ಯಾರ್ಥೋಽಯುಕ್ತಃ. ತಥಾಚ ಸ್ಮೃತಿಃ, "ಸೃಷ್ಟೇಃ ಪೂರ್ವಂ ಮಹಾದೇವಶ್ಶಕ್ತಿಸಂಕೋಚಹೇತುನಾ । ನಿರ್ಗುಣತ್ವೇನ ಶಾಸ್ತ್ರೇಷು ಗೀಯತೇ ತತ್ತ್ವವೇದಿಭಿಃ ॥ ಸೃಷ್ಟ್ಯಾದೌ ಪರಮೇಶಸ್ಯ ಶಕ್ತೇಃ ಪ್ರಾಚುರ್ಯವೈಭವಾತ್ । ಸರ್ವಜ್ಞತ್ವಾದಿಕಲ್ಯಾಣಗುಣವಾನಿತಿ ಕೀರ್ತ್ಯತೇ । ತಸ್ಮಾದ್ದ್ವೈತಶ್ರುತೀನಾಂ ತು ಸೃಷ್ಟ್ಯುತ್ತರಸಮನ್ವಯಃ । ಅದ್ವೈತಶ್ರುತಿಬೋಧಸ್ತು ಸೃಷ್ಟೇಃ ಪ್ರಾಗೇವ ಕಥ್ಯತೇ ॥ ಅಥ ಸತ್ತ್ವಾದಿವೈಶಿಷ್ಟ್ಯಾತ್ಸಗುಣತ್ವಂ ಸದಾಶಿವೇ । ತತ್ಸಾಕ್ಷಿತ್ವಾತ್ಸ್ವಚಿಚ್ಛಕ್ತ್ಯಾ ನಿರ್ಗುಣತ್ವಂ ವಿಧೀಯತೇ। ಸಕಲೋ ನಿಷ್ಕಲಶ್ಚೇತಿ ತಸ್ಮಾದ್ವೇದೇಷು ಗೀಯತೇ॥" ಇತಿ. ಕೈವಲ್ಯೇ 'ಉಮಾಸಹಾಯಂ ತಮಸಃ ಪರಸ್ತಾತ್, ಇತ್ಯಾದಿನಾ ಬ್ರಹ್ಮಣಃ ಮೂರ್ತತ್ವಂ ಪ್ರಶಾಂತತ್ವಂ ಸಗುಣತ್ವಂ ಚೋಪದಿಶ್ಯ. ತದುಪಸಂಹಾರೇ ತಸ್ಯೈವ "ಸಮಸ್ತಸಾಕ್ಷಿಂ" ಇತ್ಯಾದಿನಾ ನಿರವಯತ್ವಂ ಚೋಪದಿಷ್ಟಂ. ನ ಸಾಕ್ಷಿತ್ವಸ್ಯ ಸಗುಣತ್ವಂ, "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಇತಿ ಶ್ರುತೇಃ. ನನು ಮಹೇಶ್ವರೇ ಸೃಷ್ಟೇಃ ಪೂರ್ವಂ ಜಗತ್ಕಾರಣಪ್ರಕೃತಿಸದ್ಭಾವಾತ್ ಕಥಮದ್ವೈತತ್ವಮಿತಿ ಚೇನ್ನ, "ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ", "ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ" ಇತ್ಯಾದಿಶ್ರುತಿಶತೇಷು ತಚ್ಛಕ್ತೇಸ್ತದಭಿನ್ನತ್ವದರ್ಶನಾತ್ ನ ಶಕ್ತಿಶಕ್ತಿಮತೋಸ್ಸ್ವಾಭಾವಿಕಪೃಥಕ್ತ್ವಂ. ತಸ್ಮಾತ್ಸಕಲಪ್ರಪಂಚಪರಮಕಾರಣೀಭೂತಚಿಚ್ಛಕ್ತ್ಯಧಿಷ್ಠಾನತ್ವೇ ಸತಿ ತದಪೃಥಕ್ಸಿದ್ಧತ್ವೇನ ಪರಮಶಿವಸ್ಯಾಭಿನ್ನನಿಮಿತ್ತೋಪಾದಾನಕಾರಣತ್ವವ್ಯವಸ್ಥಾಪಕಭೇದಾಭೇದವಿಶೇಷಾದ್ವೈತಮೇವ ಸರ್ವವೇದಾಂತಘಂಟಾಘೋಷಃ. ನನ್ವದ್ವೈತಶಬ್ದೇನ ಜೀವಬ್ರಹ್ಮಣೋರೇಕತ್ವದರ್ಶನಾತ್ ದ್ವೈತಾಭಾವೇ ಅದ್ವೈತಪ್ರತೀತ್ಯಸಂಭವಾಚ್ಚ ವಿಶೇಷಪದಸ್ಯ ನ ಕಿಂಚಿತ್ಪ್ರಯೋಜನಮಿತಿ ಚೇನ್ನ. ಅದ್ವೈತಪದಸ್ಯ ಭೇದನಿಷೇಧಮಾತ್ರಬೋಧಕತ್ವಾತ್, ಭೇದಸ್ಯ ಸತ್ಯತ್ವಾಸತ್ಯತ್ವಾದರ್ಶನಾಚ್ಚ ವಿಶೇಷಪದಂ ನಿರ್ದಿಷ್ಟಂ. ಏತೇನ ಜೀವಬ್ರಹ್ಮಣೋರ್ಜಾತ್ಯೈಕತ್ವೇಽಪಿ ಜಡಜಾತಾವಶ್ಮಲೋಷ್ಟಕಾಷ್ಠಾದೀನಾಂ ಸ್ವಾಭಾವಿಕಭೇದವಚ್ಚಿದ್ಜ್ಞಯೋಃ ಚಿತ್ತ್ವೇನೈಕತ್ವೇಽಪಿ ಅಣುತ್ವವಿಭುತ್ವಕಿಂಚಿಜ್ಜ್ಞತ್ವಸರ್ವಜ್ಞತ್ವಾದಿಪರಸ್ಪರವಿರುದ್ಧಧರ್ಮಾಣಾಂ ಪೃಥಗ್ದರ್ಶನಾತ್ಪಾರಮಾರ್ಥಿಕಭೇದಉಭಯೋರುಪದಿಶ್ಯತೇ. ವಿಶ್ಚ ಶೇಷಶ್ಚ ವಿಶೇಷೌ. ವಿಶೇಷಯೋರ

ದ್ವೈತಂ ವಿಶೇಷಾದ್ವೈತಮಿತಿ ನಿರುಕ್ತಿಃ. ಅದ್ವೈತಪದೇನ ಭ್ರಮರಕೀಟವಜ್ಜೀವಸ್ಯ ಸ್ವಾಭಾವಿಕಭೇದನಿವೃತ್ತಿರುಪಪದ್ಯತೇ. 'ಹಂಸಹಂಸೇತಿ ಯೋ ಬ್ರೂಯಾತ್' ಇತ್ಯಾದಿಶ್ರುತಿಷು "ವಿಶಬ್ದಶ್ಯಷ್ಪುಷಿ ವ್ಯೋಮ್ನಿ ವಾತೇ ಪರಮಾತ್ಮನಿ ಪಕ್ಷಿಣಿ" ಇತಿ ನೈಘಂಟುಕೇಷು ವಿಶಬ್ದಸ್ಯ ಪರಮಾತ್ಮವಾಚಕತ್ವೇನ ಸ್ಪಷ್ಟೋಪದೇಶಾತ್, ವಾತ್ಯುತ್ಪಾದಯತೀತಿ ವ್ಯುತ್ಪತ್ತ್ಯಾ ಚ ವಿಶಬ್ದೇನ ಜಗತ್ಕಾರಣತ್ವಂ ಬ್ರಹ್ಮಲಕ್ಷಣಂ ಸೂಚಿತಂ. 'ಯಥಾಗ್ನೇರ್ವಿಸ್ಫುಲಿಂಗಾಃ' ಇತಿ ಶ್ರುತಿಷು ಪರಮಶಿವಾಂಶತ್ವೇನ ಜೀವಾನಾಂ ವ್ಯಪದೇಶಾತ್ ಶೇಷಶಬ್ದೇನ ಜೀವೋಽಭಿಧೀಯತೇ. ಅದ್ವೈತಪದೇನ 'ಯಥಾ ನದ್ಯಃ' ಇತ್ಯಾದಿಶ್ರುತಿಸಿದ್ಧಸಾಯುಜ್ಯಂ ಜೀವಬ್ರಹ್ಮಣೋರುಪದಿಷ್ಟಂ. ರಜ್ಜ್ವಾರೋಪಿತಸರ್ಪವಜ್ಜಗಜ್ಜೀವಾನಾಂ ಮಿಥ್ಯಾತ್ವನಿಷೇಧವಿಧಾಯಕವೇದಶಾಸ್ತ್ರಪುರಾಣಾದೀನಾಂ ತಥಾತ್ವೇನ ವೇದಬಾಹ್ಯಪ್ರಸಂಗಸ್ಸ್ಯಾತ್. ಅಸ್ಮನ್ಮತೇ ಸರ್ವಜ್ಞಾನಂ ಸತ್ಯಮೇವ. ತತ್ರಾಪಿ ಸಾದೃಶ್ಯಂ ವಿನಾ ತದ್ಜ್ಞಾನಾಸಂಭವಾಚ್ಚ, ಪಂಚೀಕರಣಪ್ರಕ್ರಿಯಯಾಪಿ ತದಂಶಾನಾಂ ಸತ್ತ್ವಾತ್ ಶುಕ್ತಿರಜತಜ್ಞಾನಮಪಿ ಸತ್ಯಂ. ಶುಕ್ತ್ಯಂಶಾನಾಂ ಭೂಯಸ್ತ್ವಾನ್ನ ತಥಾ ವ್ಯವಹಾರಃ. ಅಂಗುಲ್ಯಾದಿನಾವಷ್ಟಬ್ಧನೇತ್ರೋದ್ಗೀರ್ಣಚಂದ್ರದ್ವಯಗ್ರಾಹಕದೃಕ್ಸಾಮಗ್ರೀದ್ವಯಸ್ಯಾಪಿ ಸತ್ಯತ್ವಾದ್ದ್ವಿಚಂದ್ರಜ್ಞಾನಮಪಿ ಸತ್ಯಂ. ನಿಮಿತ್ತಸ್ಯ ಸತ್ಯತ್ವೇನ ನೈಮಿತ್ತಿಕಸ್ಯಾಪಿ ಸತ್ಯತ್ವಂ. ಸ್ವನಯನಗತಪಿತ್ತದೋಷಾಚ್ಛಾದಿತತ್ವೇನ ಶಂಖಗತಶುಕ್ಲಿಮಾ ಗೃಹ್ಯತೇ, ಸುವರ್ಣಾನುಲಿಪ್ತಶಂಖವತ್. ಸ್ವನಯನನಿಷ್ಕ್ರಾಂತರಶ್ಮಯಃ ಪರಮಸೂಕ್ಷ್ಮತಯಾ ಸ್ವೇನೈವ ಗೃಹ್ಯಂತೇ. ತಸ್ಮಾತ್ಪೀತಶ್ಶಂಖ ಇತ್ಯಾಕಾರಕಜ್ಞಾನಮಪಿ ಸತ್ಯಮೇವ. ತತ್ತದ್ದೇಶಸಂಯೋಗಾತ್ತತ್ತದ್ಜ್ಞಾನಂ ಜಾಯತೇ. ಪರಮಶೀಘ್ರತಯಾ ನಾಂತರಾಲಜ್ಞಾನಮಸ್ತಿ. ತಸ್ಮಾದಲಾತಚಕ್ರಜ್ಞಾನಮಪಿ ಸತ್ಯಂ. ಪಂಚೀಕರಣಪ್ರಕ್ರಿಯಯಾ ಏಕಸ್ಮಿನ್ಭೂತೇ ತದನ್ಯೇಷಾಮಂಶಾನಾಂ ಸತ್ತ್ವಾತ್, ವ್ಯೋಮಾಂಶಭೂಯಸ್ತ್ವಾನ್ನ ಜಲಾರ್ಥಸಿದ್ಧಿಃ ತಸ್ಮಾನ್ಮರುಮರೀಚಿಕಾಜ್ಞಾನಮಪಿ ಸತ್ಯಂ. ಸ್ವಪ್ನಕಾರಣೀಭೂತವಿದ್ಯಾಯಾಸ್ಸತ್ಯತ್ವಾತ್ ಸ್ವಪ್ನಜ್ಞಾನಸ್ಯಾಪಿ ಸತ್ಯತ್ವಂ. ಬೀಜಾಂಕುರನ್ಯಾಯಾತ್ಕಾರಣಸತ್ತ್ವೇ ಕಾರ್ಯಸತ್ಯತ್ವಂ. ಕಿಂಚ ಶುಭಾಶುಭಫಲಸೂಚಕತ್ವಾತ್ಪ್ರಬೋಧೇಽಪಿ ಸ್ವಪ್ನಾನುಭೂತಜ್ಞಾನಸ್ಯ ಸಿದ್ಧತ್ವಾತ್ ನ ಸ್ವಾಪ್ನಿಕಜ್ಞಾನಸ್ಯ ಮಿಥ್ಯಾತ್ವಂ. ಜಾಗ್ರತ್ಪ್ರಪಂಚವತ್ತಸ್ಯಾಪಿ ಪರಮೇಶ್ವರಾಧೀನತ್ವಾತ್, ಐಂದ್ರಜಾಲಿಕಜ್ಞಾನಮಪಿ ಸತ್ಯಂ. ತತ್ಕಾರಣೀಭೂತಮಣಿಮಂತ್ರೌಷಧೀನಾಂ ಸತ್ಯತ್ವಾತ್, ತತ್ರಾಪಿ ಜ್ಞಾನಸ್ಯಾಬಾಧಿತತ್ವಾತ್, ಬುದ್ಧ್ಯುಪಸ್ಥಿತಸರ್ವ

ಪದಾರ್ಥಜ್ಞಾನಸ್ಯ ಪಾರಮಾರ್ಥಿಕತ್ವಾತ್, ಭ್ರಾಂತಿಕಾರಣೀಭೂತತತ್ತತ್ಪ ದಾರ್ಥಾನಾಂ ಸತ್ಯತ್ವಾಚ್ಚ ಸರ್ವಂ ಜ್ಞಾನಂ ಸತ್ಯಮೇವ. 'ಯದ್ದೃಶ್ಯಂ ತನ್ನಷ್ಟಂ' ಇತಿ ವ್ಯಾಪ್ತಿಬಲಾತ್ ಅವಿದ್ಯಾಕಲ್ಪಿತಪ್ರಪಂಚಸ್ಥಿತಪದಾ ರ್ಥಾನಾಂ ಮಿಥ್ಯಾತ್ವೇನ ಪೂರ್ವೋಕ್ತದೃಷ್ಟಾಂತಪದಾರ್ಥಾನಾಮಪಿ ಮಿಥ್ಯಾತ್ವಂ ಕಿಂ ನ ಸ್ಯಾದಿತಿ ಚೇನ್ನ, ಬ್ರಹ್ಮಾನುಭೂತಿರ್ನ ಸ್ಯಾತ್, ಕಿಂಚ ಪ್ರಪಂಚವದ್ಬ್ರಹ್ಮಣೋಽಪಿ ಮಿಥ್ಯಾತ್ವಂ. ಬ್ರಹ್ಮ ಮಿಥ್ಯಾ ಅಸ ತ್ಯಹೇತುಜನ್ಯಜ್ಞಾನವಿಷಯತ್ವಾತ್ ಪ್ರಪಂಚವತ್. ತಸ್ಮಾತ್ಪೂರ್ವೋ ಕ್ತಮೇವ ಸಮುಚಿತಂ. ಯಾ ಮಾ ಸಾ ಮಾಯಾ, ನ ವಿದ್ಯತೇ ಸಾ ಅವಿ ದ್ಯೇತಿ ವ್ಯುತ್ಪತ್ತ್ಯಾ ಜಗದುಪಾದಾನಕಾರಣಮಾಯಾಯಾಃ ಮಿಥ್ಯಾ ತ್ವಾತ್ ತತ್ಕಾರ್ಯಪ್ರಪಂಚಸ್ಯ ಕಥಂ ಸತ್ಯತ್ವಮಿತಿ ಚೇನ್ಮೈವಂ, "ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ" "ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ" ಇತ್ಯಾದಿಶ್ರುತಿಶತೇಷು ಮಾಯಾ ಯಾಃ ಬ್ರಹ್ಮಶಕ್ತಿತ್ವೇನ ವ್ಯಪದೇಶಾತ್, ಚಂದ್ರಚಂದ್ರಿಕಾವಚ್ಛಕ್ತಿಶಕ್ತಿಮ ತೋರಭೇದಾತ್ ಶಕ್ತಿನಾಶೇ ಶಕ್ತಿವಿಶಿಷ್ಟಸ್ಯ ಬ್ರಹ್ಮಣೋಽಪಿ ನಾಶಪ್ರಸಂ ಗೇನ ನಿರೀಶ್ವರಮತಪ್ರವೇಶಸ್ಸ್ಯಾತ್. ತಸ್ಮಾತ್ಸ್ವಶೇಷಭೂತದ್ಯುಭ್ವಾ ದಿಪ್ರಪಂಚಾಧಿಷ್ಠಾನಂ ಪರಮೇಶ್ವರ ಏವ.

ಈ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ—ಸ್ಥಿತ್ಯದನಾಭ್ಯಾಂ ಚ ॥ ೭ ॥

ಸ್ಥಿತಿ ಎಂದರೆ ಇರುವಿಕೆ. ಅದನವೆಂದರೆ ತಿನ್ನುವಿಕೆ, ಇವುಗಳನ್ನು ಶ್ರುತಿಯಲ್ಲಿ ಹೇಳಿರುವುದರಿಂದ ಜೀವನು ವಿಶ್ವಧಾರನಾಗಲಾರನು. 'ದ್ವಾ ಸುಪರ್ಣಾ' ಎಂಬಲ್ಲಿ "ಅತ್ತಿ" ಎಂಬುದರಿಂದ ಜೀವನಿಗೆ ಕರ್ಮಫಲಗಳ ಭೋಗವನ್ನು ಹೇಳಲಾಗಿದೆ. "ಅನಶ್ನನ್" ಎಂಬುದರಿಂದ ಪರಶಿವನು ಉದಾಸೀನನಾಗಿ ಪ್ರಕಾಶಿಸುತ್ತಿರುವನೆಂದು ಹೇಳಲಾಗಿದೆ. ಆದ್ದರಿಂದ ಪರಶಿವನೇ ವಿಶ್ವದ ಆಯತನವೆನಿಸಿದ್ದಾನೆ. 'ಏಕ ಏವ ರುದ್ರಃ' ಮೊದಲಾದ ಅನೇಕ ಶ್ರುತಿಗಳಲ್ಲಿ ವೈವಿಧ್ಯವನ್ನು ನಿಷೇಧಿಸಿ ಅದ್ವೈತಸ್ಥಿತಿ ಯನ್ನು ತಿಳಿಸಿರುವುದರಿಂದ 'ದ್ವಾ ಸುಪರ್ಣಾ' ಮೊದಲಾದ ಶ್ರುತಿಗಳಲ್ಲಿ ಹೇಳಿರುವ ಭೇದ ಕೇವಲ ಉಪಚಾರಕ್ಕಾಗಿ ಮಾತ್ರವೇ ಬಂದಿದೆ ಎಂದು ಹೇಳುವುದು ಯುಕ್ತ ವಲ್ಲ. ಯಾಕೆಂದರೆ ಬ್ರಹ್ಮ, ಅದ್ವಿತೀಯವೆಂದೂ, ನಿರ್ಗುಣವೆಂದೂ ತಿಳಿಸುವ ಶ್ರುತಿ ಗಳು ಪ್ರಳಯದಲ್ಲಿ ವಿಶ್ವವೆಲ್ಲವೂ ಅವ್ಯಕ್ತವಾಗಿ ಶಿವನಲ್ಲಿ ಅಡಗಿದ್ದುದರಿಂದ ಆ ಕಾಲಕ್ಕೆ ಅನ್ವಯಿಸುತ್ತವೆ. ಭೇದ ಶ್ರುತಿಗಳೆಲ್ಲವೂ ಸೃಷ್ಟಿಯ ಅನಂತರಕಾಲಕ್ಕೆ ಅನ್ವಯಿಸು ತ್ತವೆ. "ಹಗಲು ರಾತ್ರಿ, ಸತ್-ಅಸತ್ ಯಾವುದೂ ಇಲ್ಲದ ಪ್ರಳಯದಲ್ಲಿ ಶಿವನೊಬ್ಬನೇ ಇದ್ದನು" ಎಂದು ಶ್ವೇತಾಶ್ವತರದಲ್ಲೂ "ನಾನೊಬ್ಬನೇ ಮೊದಲು, ಈಗ, ಮುಂದೆಯೂ ಇರುವೆನು" ಎಂದು ಅಥರ್ವಶಿರಸ್ಸಿನಲ್ಲೂ, "ಆತ್ಮವೊಂದೇ ಇದೆ ಲ್ಲವೂ ಆಗಿದೆ, ಅದಲ್ಲದೆ ಬೇರೆಯಿಲ್ಲ" ವೆಂದು ಐತರೇಯದಲ್ಲೂ, "ಇದೆಲ್ಲವೂ

ಮೊದಲು ಸದ್ರೂಪವೇ ಆಗಿತ್ತು" ಎಂದು ಛಾಂದೋಗ್ಯದಲ್ಲೂ, ಹೀಗೆ ಎಲ್ಲಾ ವೇದಾಂತಗಳೂ ಸಾಮಾನ್ಯವಾಗಿ ಸೃಷ್ಟಿಗೆ ಮೊದಲು ಶಿವನೊಬ್ಬನೇ ಅದ್ವಿತೀಯನಾಗಿದ್ದನೆಂದು ತಿಳಿಸುತ್ತವೆ. "ಅವನು ಇಚ್ಛಿಸಿದನು" ಎಂಬಲ್ಲಿ ಸೃಷ್ಟ್ಯುನ್ಮುಖನಾದ ಶಿವನಿಗೇ ಇಚ್ಛೆಯಿಂದ ಬಹುಭವನ (ವಿಸ್ತಾರ) ವನ್ನು ಹೇಳಲಾಗಿದೆ. ಹೀಗೆ ಸೃಷ್ಟಿಯ ಅನಂತರ ಬ್ರಹ್ಮವನ್ನು ಸಗುಣನೆಂದು ಹೇಳಿರುವುದರಿಂದ ಜಗನ್ಮಿಥ್ಯಾತ್ವಕ್ಕವಕಾಶವಿಲ್ಲ. "ಸೃಷ್ಟಿಗೆ ಮೊದಲು ಮಹಾದೇವನನ್ನು ಶಕ್ತಿಸಂಕೋಚದಿಂದ ನಿರ್ಗುಣನೆಂದೂ, ಸೃಷ್ಟಿಕಾಲದಲ್ಲಿ ಸರ್ವಜ್ಞತಾದಿ ಗುಣಗಳಿಗವಕಾಶವಿರುವುದರಿಂದ ಪರಶಿವನಲ್ಲಿ ಶಕ್ತಿವಿಕಾಸವುಂಟಾಗುವುದರಿಂದ ಅವನನ್ನು ಸಗುಣನೆಂದೂ ಶಾಸ್ತ್ರದಲ್ಲಿ ತಿಳಿಸಲಾಗಿದೆ. ಸರ್ವಜ್ಞತಾದಿಗುಣವೈಶಿಷ್ಟ್ಯದಿಂದ ಶಿವನು ಸಗುಣನೆನಿಸಿದ್ದರೂ ಅವುಗಳಿಗೆ ಸಾಕ್ಷಿಯಾಗಿದ್ದು ತನ್ನ ಚಿತ್‌ಶಕ್ತಿಯೊಡನೆ ವಿನೋದಿಸುತ್ತ ನಿರ್ಗುಣನೆನಿಸುತ್ತಾನೆ. ಆದ್ದರಿಂದ ಶ್ರುತಿಯಲ್ಲಿ ಅವನನ್ನು ಸಕಲನೆಂದೂ, ನಿಷ್ಕಲನೆಂದೂ ಕರೆಯಲಾಗಿದೆ. ಕೈವಲ್ಯದಲ್ಲಿ "ಉಮಾಸಹಾಯಂ' ಎಂದಾರಂಭಿಸಿ ಶಿವನನ್ನು ಸಾವಯುವ, ಸಗುಣ ಎಂದೂ, ಕೊನೆಯಲ್ಲಿ 'ಸಮಸ್ತಸಾಕ್ಷಿಂ' ಎಂಬಲ್ಲಿ ನಿರವಯವ, ನಿರ್ಗುಣ ಎಂದೂ ಹೇಳಲಾಗಿದೆ. "ಸಾಕ್ಷಿಯಾಗಿರುವ ಚೇತನನು ಕೇವಲನೂ ನಿರ್ಗುಣನೂ ಇರುವನು" ಎಂಬ ಶ್ರುತಿಯಂತೆ ಶಿವನ ಸಾಕ್ಷಿಸ್ಥಿತಿ ಸಗುಣವಾಗಲಾರದು. ಅವನು ಸಹಜವಾಗಿ ನಿಷ್ಕಲನೂ, ಲೀಲೆಗಾಗಿ ಸಕಲನೂ ಆಗುವುದರಿಂದ ಅವನಲ್ಲಿ ಎರಡು ಸ್ಥಿತಿಗಳೂ ಸತ್ಯವೆನಿಸಿವೆ. ಈಶ್ವರನಲ್ಲಿ ಸೃಷ್ಟಿಗೆ ಮೊದಲು ಜಗತ್ಕಾರಣವಾದ ಪ್ರಕೃತಿ ಇದ್ದುದರಿಂದ ಅವನು ಹೇಗೆ ಅದ್ವಿತೀಯನೆನಿಸುತ್ತಾನೆ ಎಂದು ಕೇಳುವುದು ಯುಕ್ತವಲ್ಲ. ಯಾಕೆಂದರೆ "ದೇವನಲ್ಲಿರುವ ಚಿತ್‌ಶಕ್ತಿಯನ್ನು ಸರ್ವಜ್ಞತಾದಿಧರ್ಮಗಳು ಮುಚ್ಚುತ್ತವೆ" ಎಂದೂ, "ಜ್ಞಾನಕ್ರಿಯಾದಿಶಕ್ತಿಗಳು ಅನೇಕ ಬಗೆಯಾಗಿದ್ದರೂ ಶಿವನಲ್ಲಿ ಸ್ವಾಭಾವಿಕವೆನಿಸಿವೆ" ಎಂದೂ ಶ್ರುತಿಗಳಲ್ಲಿ ಶಿವಶಕ್ತಿಗಳಿಗೆ ಅಭೇದವನ್ನು ಹೇಳಲಾಗಿದೆ. ಹೀಗೆ ಭೇದವಿಲ್ಲದ್ದರಿಂದಲೇ ಸಕಲಜಗತ್ಕಾರಣವಾದ ಚಿತ್‌ಶಕ್ತಿಯೊಡನೆ ವಿನೋದಿಸುತ್ತಲಿರುವ ಪರಶಿವನು ಜಗತ್ತಿನ ಅಭಿನ್ನನಿಮಿತ್ತೋಪಾದಾನಕಾರಣನೆಂದು ವ್ಯವಸ್ಥೆಗೊಳಿಸುವ ಭೇದಾಭೇದರೂಪವಾದ ವಿಶೇಷಾದ್ವೈತವೇ ಎಲ್ಲ ವೇದಾಂತವಾಕ್ಯಗಳ ಸಿದ್ಧಾಂತವೆಂಬುದು ಸ್ಪಷ್ಟವಾಗಿದೆ. ಇಲ್ಲಿ ಅದ್ವೈತ ಪದದಿಂದ ಶಿವಜೀವರಿಗೆ ಏಕತ್ವವನ್ನು ಹೇಳಿದ್ದರಿಂದ, ಮೊದಲು ದ್ವೈತವಿಲ್ಲದಿದ್ದರೆ ಅದ್ವೈತ ಬರುವುದು ಅಸಂಭವವಾದ್ದರಿಂದ ವಿಶೇಷಪದಕ್ಕೆ ಪ್ರಯೋಜನವೇ ಇಲ್ಲವೆಂದು ಹೇಳುವುದು ಸರಿಯಲ್ಲ. ಅದ್ವೈತಪದವು ಭೇದನಿಷೇಧವನ್ನು ಮಾತ್ರ ತಿಳಿಸುತ್ತದೆಯೇ ಹೊರತು ಶಿವಜೀವರ ಭೇದದ ಸತ್ಯತೆಯನ್ನು ತಿಳಿಸುವುದಿಲ್ಲ. ಅದಕ್ಕಾಗಿಯೇ ವಿಶೇಷಪದವನ್ನು ಸೇರಿಸಲಾಗಿದೆ. ಇದರಿಂದ ಶಿವಜೀವರು ಜಾತಿಯಲ್ಲಿ ಒಂದೇ ಆಗಿದ್ದರೂ, ಜಡವರ್ಗದಲ್ಲಿ ಕಲ್ಲು ಹೆಂಟೆ ಕಟ್ಟಿಗೆಗಳಿಗೆ ಸ್ವಾಭಾವಿಕಭೇದವಿರುವಂತೆ ಶಿವಜೀವರಿಗೆ ಚಿದ್ರೂಪವಾದ ಏಕತ್ವವಿದ್ದರೂ ಅಣುತ್ವ ವಿಭುತ್ವ, ಅಲ್ಪಜ್ಞತ್ವ ಸರ್ವಜ್ಞತ್ವ ಮೊದಲಾದ ಪರಸ್ಪರ ವಿರುದ್ಧ ಧರ್ಮ

ಗಳಿಂದ ಪಾರಮಾರ್ಥಿಕವಾದ ಭೇದವಿರುವುದೆಂದು ತಿಳಿದುಬರುತ್ತದೆ; ಹೇಗೆಂದರೆ ವಿಶ್ಚ+ಶೇಷಶ್ಚ=ವಿಶೇಷೌ,ತಯೋರದ್ವೈತಂ=ಎಂಬ ನಿರ್ವಚನದಂತೆ ಅದ್ವೈತಪದವು ಭ್ರಮರಕೀಟನ್ಯಾಯದಂತೆ ಜೀವನಿಗೆ ಭೇದವು ಸ್ವಾಭಾವಿಕವಾಗಿದ್ದರೂ ತೊಲಗುವುದು ಯುಕ್ತವೆಂಬುದನ್ನು ತಿಳಿಸುತ್ತದೆ. "ಯಾವನು 'ಸೋऽಹಂ' ಅವನೇ ನಾನು ಎಂದು ನಿರಂತರವೂ ನೆನೆಯುತ್ತಿರುವನೋ ಅವನು ಹಂಸನೇ ಆಗಿ ಕೊನೆಗೆ ಪರಮಹಂಸನಾಗಿ ಶಿವನೆನಿಸುವನು" ಈ ಮಂತ್ರದಲ್ಲೂ, ವಿ ಎಂಬುದು ಪಕ್ಷಿ, ಕಣ್ಣು, ಆಕಾಶ, ಗಾಳಿ, ಪರಮಾತ್ಮ ಇಷ್ಟು ಅರ್ಥವನ್ನು ಕೊಡುವುದೆಂಬ ನಿಘಂಟಿನಿಂದಲೂ "ವಾತೀತಿ ವಿಃ" ವಾತಿ=ಹುಟ್ಟಿಸುತ್ತದೆ ಎಂಬ ವ್ಯುತ್ಪತ್ತಿಯಿಂದಲೂ ವಿ ಎಂಬುದು ಜಗತ್ಕಾರಣವಾದ ಬ್ರಹ್ಮವನ್ನು ತಿಳಿಸುತ್ತದೆ. ಶೇಷಶಬ್ದವು "ಅಗ್ನಿಯಿಂದ ಕಿಡಿಗಳು ಉದುರುವಂತೆ" ಎಂಬ ಶ್ರುತಿಯ ಪ್ರಕಾರ ಜೀವನನ್ನು ಶಿವಾಂಶನೆಂದು ತಿಳಿಸುತ್ತದೆ. ಹೀಗೆ ಶಿವಾಂಶನಾದ್ದರಿಂದಲೇ ಜೀವನು ಮುಕ್ತಿಯಲ್ಲಿ ಶಿವನಾಗುವುದರಿಂದ ಅದ್ವೈತ ಹೊಂದುತ್ತದೆ. 'ಯಥಾ ನದ್ಯಃ' ಮುಂತಾದ ಶ್ರುತಿಗಳು ಜೀವನಿಗೆ ಸಾಯುಜ್ಯಮುಕ್ತಿಯನ್ನು ತಿಳಿಸಿವೆ. ರಜ್ಜುವಿನಲ್ಲಾರೋಪಿತವಾದ ಸರ್ಪದಂತೆ ಜಗಜ್ಜೀವರನ್ನು ಮಿಥ್ಯೆ ಎಂದು ಪ್ರತಿಪಾದಿಸುವ ಮತ್ತು ನಿಷೇಧಿಸುವ ವೇದಶಾಸ್ತ್ರಪುರಾಣಗಳೂ ಹಾಗೆಯೇ ಮಿಥ್ಯೆ ಎನಿಸುವುದರಿಂದ ಮಿಥ್ಯಾವಾದಿಗಳು ವೇದಬಾಹ್ಯರಾಗುವ ಪ್ರಸಂಗವುಂಟಾದೀತು. ನಮ್ಮ ಮತದಲ್ಲಂತೂ ಎಲ್ಲಾ ಜ್ಞಾನವೂ ಸತ್ಯವೇ ಆಗಿದೆ. ಅದರಲ್ಲೂ, ಸಾದೃಶ್ಯಜ್ಞಾನವು ಪರಮಾರ್ಥವಾದ್ದರಿಂದ ರಜ್ಜುಸರ್ಪಜ್ಞಾನವೂ ಸತ್ಯವೇ. ಸಾದೃಶ್ಯವಿಲ್ಲದಿದ್ದರೆ ರಜ್ಜುವಿನಲ್ಲಿ ಸರ್ಪವೆಂಬ ಜ್ಞಾನವೇ ಹುಟ್ಟುತ್ತಿರಲಿಲ್ಲ. ಪಂಚೀಕರಣಪ್ರಕ್ರಿಯೆಯಿಂದ ಶುಕ್ತಿಯಲ್ಲೂ ರಜತಾಂಶಗಳು ಇರುವುದರಿಂದಲೇ ಅದರಲ್ಲಿ ರಜತವೆಂಬ ಜ್ಞಾನ ಸತ್ಯವೇ ಆಗಿದೆ. ಆದರೆ ಶುಕ್ತಿಯ ಅಂಶಗಳೇ ಹೆಚ್ಚಾಗಿರುವುದರಿಂದ ಅದನ್ನು ಶುಕ್ತಿ ಎಂದೇ ವ್ಯವಹರಿಸಲಾಗಿದೆ, ಬೆರಳಿನಿಂದ ಕಣ್ಣನ್ನು ಅದುಮಿದರೆ ಕಣ್ಣಿನ ರಶ್ಮಿ ಎರಡು ಬಗೆಯಾಗಿ ಹೊರಟು ಚಂದ್ರನನ್ನು ಎರಡು ಬಗೆಯಾಗಿ ಗ್ರಹಿಸುತ್ತದೆ. ಕಣ್ಣಿನ ಎರಡು ರಶ್ಮಿಗಳೂ ಸತ್ಯವಾದ್ದರಿಂದ ಎರಡು ಚಂದ್ರರೆಂಬ ಜ್ಞಾನವೂ ಸತ್ಯವೇ ಇರುವುದು. ಕಾರಣ ಸತ್ಯವಾದ್ದರಿಂದ ಕಾರ್ಯವೂ ಸತ್ಯವಾಗಲೇಬೇಕು. ಸುವರ್ಣಲೇಪನದಿಂದ ಶಂಖದ ಶುಕ್ಲವರ್ಣ ಕಾಣದಿರುವಂತೆ, ಕಣ್ಣಿನ ಪಿತ್ತದೋಷವು ಶಂಖವನ್ನಾವರಿಸಿರುವುದರಿಂದ ಶಂಖದಲ್ಲಿರುವ ಶುಕ್ಲವರ್ಣಕ್ಕೆ ಬದಲು ಪೀತವರ್ಣವೇ ಗೋಚರವಾಗುತ್ತದೆ. ತನ್ನ ಕಣ್ಣಿನಿಂದ ಹೊರಟ ರಶ್ಮಿ ಬಹು ಸೂಕ್ಷ್ಮವಾದ್ದರಿಂದ ಅದನ್ನು ತಾನೇ ಗ್ರಹಿಸಬೇಕು; ಬೇರೊಬ್ಬರು ಗ್ರಹಿಸಲಾರರು. ಆದ್ದರಿಂದ ಶಂಖ ಪೀತವಾಗಿದೆ ಎಂಬ ಜ್ಞಾನವು ತನಗೇ ಆಗುವುದರಿಂದಸತ್ಯವೇ. ಉರಿಯುವ ಕೊಳ್ಳಿಯನ್ನು ಸುತ್ತಲೂ ಗುಂಡಾಗಿ ತಿರುಗಿಸುವಾಗ,ಅದು ಬೇಗನೆ ತಿರುಗುವುದರಿಂದ ಅದಕ್ಕೆ ಆ ಪ್ರದೇಶದ ಸಂಪರ್ಕವಿದ್ದರೂ ಆ ಕ್ರಮಗೊತ್ತಾಗುವುದಿಲ್ಲ. ಆದ್ದರಿಂದ ಕೊಳ್ಳಿ ತಿರುಗುವುದೆಂಬ ಜ್ಞಾನವೂ ಸತ್ಯವೇ. ಪಂಚೀಕರಣಪ್ರಕ್ರಿಯೆಯಿಂದ ಒಂದು ಭೂತದಲ್ಲಿ ಉಳಿದ ಭೂತಗಳ ಅಂಶ

ಗಳೂ ಇರುತ್ತವೆಯಾದ್ದರಿಂದ ಬಿಸಿಲ್ಗುದುರೆಯಲ್ಲಿ ಆಕಾಶಾಂಶಗಳೇ ಹೆಚ್ಚಾಗಿರುವುದರಿಂದ ಅದರಲ್ಲಿ ನೀರಿನ ಪ್ರತೀತಿ ಬಂದರೂ ನೀರು ದೊರಕುವುದಿಲ್ಲ. ಆದರೂ ಬಯಲಿನಲ್ಲಿ ಬಿಸಿಲ್ಗುದುರೆಯ ಅರಿವೂ ಸತ್ಯವೇ. ಸ್ವಪ್ನಕಾರಣವಾದ ವಸ್ತುಗಳು ಸತ್ಯವಾದ್ದರಿಂದ ಸ್ವಪ್ನಜ್ಞಾನವೂ ಸತ್ಯವೇ. ಬೀಜ ಸತ್ಯವಾದರೆ ಅದರಿಂದ ಹುಟ್ಟುವ ಅಂಕುರವೂ ಸತ್ಯವೇ ಆಗಿರಬೇಕು. ಶುಭಾಶುಭಫಲಗಳನ್ನು ಸ್ವಪ್ನವು ತಿಳಿಸುವುದರಿಂದ ಎಚ್ಚರಗೊಂಡಮೇಲೂ ಅದರ ಕಾರ್ಯವಿರುತ್ತದೆಯಾಗಿ ಅದು ಮಿಥ್ಯೆಯಾಗಲಾರದು. ಜಾಗ್ರತ್ಪ್ರಪಂಚದಂತೆ ಸ್ವಪ್ನಪ್ರಪಂಚವೂ ಪರಮೇಶ್ವರನಿಗಧೀನವಾಗಿದೆ. ಹಾಗೆಯೇ ಐಂದ್ರಜಾಲಿಕವೂ ಸತ್ಯವೇ. ಯಾಕೆಂದರೆ ಅದಕ್ಕೆ ಕಾರಣವಾದ ಮಣಿಮಂತ್ರೌಷಧಗಳೂ ಸತ್ಯವಾಗಿರುತ್ತವೆ. ಅಲ್ಲಿಯೂ ಜ್ಞಾನ ಅಬಾಧಿತವಾಗಿರುತ್ತದೆ. ಬುದ್ಧಿಗೋಚರವಾದ ಎಲ್ಲಾ ಪದಾರ್ಥಜ್ಞಾನವೂ ಪಾರಮಾರ್ಥಿಕವೇ ಆಗಿರುವುದು. ಭ್ರಾಂತಿಗೆ ಕಾರಣವಾದ ಆಯಾಯ ಪದಾರ್ಥಗಳು ಸತ್ಯವಾದ್ದರಿಂದ ಎಲ್ಲಾ ಜ್ಞಾನವೂ ಸತ್ಯವೇ. "ಕಾಣುವುದೆಲ್ಲವೂ ನಷ್ಟವಾಗುತ್ತದೆ" ಎಂಬ ವ್ಯಾಪ್ತಿಯಿಂದ ಅವಿದ್ಯಾಕಲ್ಪಿತ ಪ್ರಪಂಚದಲ್ಲಿ ಇರುವುದೆಲ್ಲವೂ ಮಿಥ್ಯೆಯಾದ್ದರಿಂದ ಹಿಂದೆ ಹೇಳಿದ ಪದಾರ್ಥಗಳೆಲ್ಲವೂ ಏಕೆ ಮಿಥ್ಯೆಯಾಗಬಾರದು? ಎಂದು ಕೇಳುವುದು ಯುಕ್ತವಲ್ಲ. ಹಾಗೆ ಭಾವಿಸಿದರೆ, ಬ್ರಹ್ಮಾನುಭವವೇ ಇಲ್ಲವಾಗುತ್ತದೆ ಮತ್ತು ಪ್ರಪಂಚದಂತೆ ಬ್ರಹ್ಮವೂ ಮಿಥ್ಯೆಯಾಗಬೇಕಾದೀತು. ಬ್ರಹ್ಮಪ್ರಪಂಚದಂತೆ ಭ್ರಮೆಗೆ ವಿಷಯವಾದ್ದರಿಂದ ಮಿಥ್ಯೆ ಎನಿಸಬೇಕಾಗುವುದು. ಹೀಗೆ ಅವ್ಯವಸ್ಥೆಯಾಗುವುದರಿಂದ ಬ್ರಹ್ಮ ಸತ್ಯವಾಗಿರುವಂತೆ ಬ್ರಹ್ಮಕಾರಣವಾದ ಜಗತ್ತೂ ಸತ್ಯವೆಂದು ಹಿಂದೆ ಹೇಳಿದ್ದೇ ನ್ಯಾಯವಾಗಿದೆ. ಯಾವುದು ಇಲ್ಲವೋ ಅದು ಮಾಯೆ ಎಂಬ ವ್ಯುತ್ಪತ್ತಿಯಿಂದ ಜಗತ್ತಿನ ಉಪಾದಾನಕಾರಣವಾದ ಮಾಯೆಯೇ ಇಲ್ಲದ್ದರಿಂದ ಅದರ ಕಾರ್ಯವಾದ ಜಗತ್ತು ಹೇಗೆ ಸತ್ಯವಾದೀತು? ಎಂದು, ಕೇಳುವುದು ಯುಕ್ತವಲ್ಲ. ಯಾಕೆಂದರೆ ಮಾಯೆಯು ಪರಮಾತ್ಮನ ಶಕ್ತಿ ಎಂದೂ, ಚಂದ್ರಚಂದ್ರಿಕೆಗಳಂತೆ ಶಕ್ತಿಗೂ ಶಕ್ತನಿಗೂ ಅಭೇದವಿರುವುದೆಂದೂ ನೂರಾರು ಶ್ರುತಿಗಳಲ್ಲಿ ಹೇಳಿರುವುದರಿಂದ ಶಕ್ತಿ ಸುಳ್ಳಾದರೆ ಶಕ್ತಿವಿಶಿಷ್ಟಶಿವನೂ ಸುಳ್ಳಾಗುವುದರಿಂದ ನಿರೀಶ್ವರವಾದವನ್ನು ಪ್ರವೇಶಿಸಬೇಕಾಗುವುದು. ಆದ್ದರಿಂದ ವಿಶ್ವವೆಲ್ಲಕ್ಕೂ ಪರಮೇಶ್ವರನೇ ಸ್ಥಲನೆನಿಸಿದ್ದಾನೆ.

**ಅನಂತಕಲ್ಯಾಣಗುಣರತ್ನಾಕರಪರಮಶಿವಜ್ಞಾನವತೋ ಜೀವನ್ಮುಕ್ತಸ್ಯ ನಿರ್ವೈಷಯಿಕಪರಮಾನಂದಪ್ರದರ್ಶನಾರ್ಥಮಾಹ—**

**ಭೂಮಾಧಿಕರಣಂ ॥೨॥ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ॥೮॥**

**ಛಾಂದೋಗ್ಯೇ ವಿದ್ಯತೇಽಸ್ಯ ವಿಷಯಃ. "ಭೂಮಾತ್ವೇವ ವಿಜಿಜ್ಞಾಸಿತವ್ಯಃ" ಇತಿ. "ಭೂಮಾ ಭಗವೋ ವಿಜಿಜ್ಞಾಸ್ಯ" ಇತಿ. "ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ। ಅಥ ಯತ್ರಾನ್ಯತ್ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನತಿ**

ತದಲ್ಪಂ "|| ಇತ್ಯಾದಿ. ಅತ್ರ ಭೂಮೇತಿಪದೇನ ಪ್ರಾಣೋ ವಾ ಪರಮೇಶ್ವರೋ ವೇತಿ ಸಂಶಯಃ. "ಬಹೋರ್ಲೋಪೋ ಭೂ ಚ ಬಹೋಃ" ಇತಿ ಭೂಮಾಶಬ್ದಸ್ಯ ಭಾವಪ್ರತ್ಯಯಾಂತಶ್ರವಣಾದ್ಬಹುತ್ವಂ ಸೂಚಿತಂ. ಕಿಮಾತ್ಮಕಂ ಪುನಸ್ತದ್ಬಹುತ್ವಮಿತಿ ವಿಶೇಷಾಕಾಂಕ್ಷಾಯಾಂ 'ಪ್ರಾಣೋ ವಾ ಆಶಾಯಾ ಭೂಯಾನ್' ಇತಿ ಪೂರ್ವಂ ಪ್ರಾಣಸ್ಯ ಸನ್ನಿಧಾನಾತ್ಪ್ರಾಣೋ ಭೂಮೇತಿ ಪ್ರತಿಭಾತಿ. "ತಥಾ ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಸ್ತರತಿ ಶೋಕಮಾತ್ಮವಿತ್ ಇತಿ, ಸೋಽಹಂ ಭಗವಶ್ಶೋಚಾಮಿ ತಂ ಮಾ ಭಗವಾನ್ಶೋಕಸ್ಯ ಪಾರಂ ತಾರಯತು" ಇತಿ ಬ್ರಹ್ಮಲಿಂಗಬಾಹುಳ್ಯಾತ್ಪರಮೇಶ್ವರೋ ವೇತಿ ಭಾತಿ. ತಸ್ಮಾದತ್ರ ಸಂದಿಹ್ಯತೇ. ಪೂರ್ವಪಕ್ಷಸ್ತು, ಭೂಮಾಶಬ್ದೇನಾತ್ರ ಪ್ರಾಣ ಏವ ಪರಿಗೃಹ್ಯತೇ. 'ಪ್ರಾಣೋ ಬ್ರಹ್ಮ' ಇತಿ ನಾರದಸನತ್ಕುಮಾರಪ್ರಶ್ನ ಪ್ರತಿವಚನದ್ಯೋತನಾತ್ "ಯಥಾ ಹ್ಯಸ್ತಿ ಭಗವೋ ನಾಮ್ನೋ ಭೂಯಃ" ಇತಿ. "ಮನೋ ವಾವ ವಾಚೋ ಭೂಯಃ" ಇತಿ ಚ "ಭೂಯೋ ನಾಮಾದಿಭ್ಯೋ ಹಿ ಆಪ್ರಾಣಾತ್" ಇತಿ ಪ್ರಶ್ನಪ್ರತಿವಚನಾಭ್ಯಾಂ ಪ್ರಾಣ ಏವಾತ್ರ ಪರಿಗೃಹ್ಯತೇ. ಕಿಂಚ ಪುನಃ ಪ್ರಶ್ನಪ್ರತಿವಚನಂ ಶ್ರೂಯತೇ. "ಅಸ್ತಿ ಭಗವಃ ಪ್ರಾಣಾದ್ಭೂಯಃ ಇತಿ ಅದೋ ವಾವ ಪ್ರಾಣಾದ್ಭೂಯಃ" ಇತಿ, "ಪ್ರಾಣಮೇವ ತು ನಾಮಾದಿಭ್ಯ ಆಶಾಂತೇಭ್ಯೋ ಭೂಯಾಂಸಂ। ಪ್ರಾಣೋ ವಾ ಆಶಾಯಾ ಭೂಯಾನ್" ಇತ್ಯಾದಿನಾ ಪ್ರಪಂಚಮುಪದಿಶ್ಯ, ಪ್ರಾಣದರ್ಶಿನಶ್ಚಾತಿವಾದಿತ್ವಂ "ಅತಿವಾದ್ಯಸೀತ್ಯತಿವಾದ್ಯಸ್ಮೀತಿ ಬ್ರೂಯಾನ್ನಾಪಹ್ನುವೀತ" ಇತ್ಯಭ್ಯನುಜ್ಞಾಯೈವ "ಏಷ ತು ವಾ ಅತಿವದತಿ ಯಸ್ಸತ್ಯೇನಾತಿವದತಿ' ಇತಿ ಪ್ರಾಣವ್ರತಸ್ಯ ಅತಿವಾದಿತ್ವಮುಪದಿಶ್ಯ, ತಸ್ಯೈವ ಸತ್ಯಾದಿಪರಂಪರಯಾ ಪ್ರಾಣಮೇವ ಭೂಮಾನಂ ಮನ್ಯತೇ" ಇತ್ಯಾದಿನಾ ತಸ್ಯೈವ ಭೂಮೋಪದೇಶಾತ್ ಪ್ರಾಣಸ್ಯೈವ ಭೂಮಾಶಬ್ದವಾಚ್ಯತ್ವಂ ಯುಕ್ತಂ. ಯತ್ರ 'ನಾನ್ಯತ್ಪಶ್ಯತಿ' ಇತಿ ವಾಕ್ಯವಿಹಿತಭೂಮಾಲಕ್ಷಣಂ ತಸ್ಯೈವ ನಿರ್ದಿಷ್ಟಂ. ಸುಷುಪ್ತ್ಯವಸ್ಥಾಯಾಮಪಿ ಪ್ರಾಣವ್ಯಾಪಾರದರ್ಶನಾತ್ 'ನಾನ್ಯತ್ಪಶ್ಯತಿ' ಇತಿ ಲಕ್ಷಣಂ ಸಮುಚಿತಂ. ತಥಾಚ ಶ್ರುತಿಃ "ನ ಶೃಣೋತಿ ನ ಪಶ್ಯತಿ "ಇತ್ಯಾದಿನಾ ಸರ್ವವ್ಯಾಪಾರಶೂನ್ಯಸುಷುಪ್ತ್ಯವಸ್ಥಾಂ ಪ್ರದರ್ಶ್ಯ, "ಪ್ರಾಣೋಽಗ್ನಯ ಏವೈತಸ್ಮಿನ್ಪುರೇ ಜಾಗ್ರತಿ" ಇತಿ ಸುಪ್ತ್ಯವಸ್ಥಾಯಾಮಪಿ ವೃತ್ತಿಪಂಚಕವಿಶಿಷ್ಟಸ್ಯ ಪ್ರಾಣಸ್ಯ ಜಾಗ್ರದವಸ್ಥಾಂ ಪ್ರಸಾಧ್ಯ, ಪ್ರಾಣಪ್ರಧಾನಂ ಸುಪ್ತಿರಿತಿ ನಿರ್ದಿಶ್ಯತೇ. 'ಯೋ ವೈ ಭೂಮಾ ತತ್ಸುಖಂ' ಇತಿ ವಾಕ್ಯನಿರ್ದಿಷ್ಟಸುಖಂ ತಸ್ಯಾಪ್ಯವಿರುದ್ಧಂ. 'ಪ್ರಾಣೋ

ವಾ ಅಮೃತಂ ' ಇತಿ ಶ್ರವಣಾತ್. ' ಯೋ ವೈ ಭೂಮಾ ತದಮೃತಂ ' ಇತ್ಯಮೃತಶಬ್ದವಾಚ್ಯತ್ವಂ ತಸ್ಯೈವೋಪಪನ್ನಂ. " ಪ್ರಾಣೋ ಹಿ ಪಿತಾ। ಪ್ರಾಣೋ ಮಾತಾ । ಪ್ರಾಣೋ ಭ್ರಾತಾ । ಪ್ರಾಣಸ್ಸಖಾ । ಪ್ರಾಣ ಆಚಾರ್ಯಃ । ಪ್ರಾಣೋ ಬ್ರಾಹ್ಮಣಃ ॥ " ಇತ್ಯಾದಿನಾ ಪ್ರಾಣಸ್ಯೈವ ಸರ್ವಾತ್ಮಕತ್ವೋಪದೇಶಾತ್. " ಪ್ರಾಣಮೇವ ಸರ್ವಾತ್ಮಾನಂ ಕರೋತಿ " ಇತಿ ಪ್ರಾಣಸ್ಯೈವ ಜಗತ್ಕಾರಣತ್ವಮುಪದಿಶತಿ. ತಸ್ಮಾತ್ ' ತರತಿ ಶೋಕಮಾತ್ಮವಿತ್ ' ಇತ್ಯಾತ್ಮವಿವಿದಿಷಯಾ ನ ಪ್ರಕರಣ ವಿರೋಧಃ. ಅತಸ್ಸರ್ವಥಾ ಷಡ್ವಿಧತಾತ್ಪರ್ಯಲಿಂಗೈಃ ಪ್ರಾಣ ಏವ ಭೂಮಾ, ನ ಪರಮೇಶ್ವರ ಇತಿ ಚೇದುಚ್ಯತೇ ಭೂಮಾ ಪರಮೇಶ್ವರ ಏವ. ಕುತಃ ಸಂಪ್ರಸಾದಾದಧ್ಯುಪದೇಶಾತ್. ಸಮ್ಯಕ್ಪ್ರಸೀದತ್ಯಸ್ಮಿನ್ ಜೀವಸ್ಸ್ವರೂಪಮಿತಿ ಸಂಪ್ರಸಾದಃ ಸುಷುಪ್ತ್ಯವಸ್ಥಾ, ತಸ್ಯಾಂ ಚಾವಸ್ಥಾಯಾಂ ಪ್ರಾಣೋ ಜಾಗರ್ತೀತಿ ಸಂಪ್ರಸಾದಶಬ್ದೇನ ಪ್ರಾಣ ಉಚ್ಯತೇ. ತಸ್ಮಾದಧಿ ಪ್ರಾಣಾದೂರ್ಧ್ವಂ ಉಪದೇಶಾದಿತ್ಯರ್ಥಃ. ಕೇಚಿತ್ " ಸಂಪ್ರಸಾದೋ ಜೀವಃ, ತಸ್ಮಾದುಪರಿ " ಇತಿ ವದಂತಿ. ಪ್ರಾಣೋಪದೇಶಾನಂತರಂ " ಏಷ ತು ವಾ ಅತಿವದತಿ ಯಸ್ಸತ್ಯೇನಾತಿವದತಿ " ಇತಿ ತುಶಬ್ದೇನ ಪ್ರಾಣವಾದಸ್ಯಾನತಿವಾದತ್ವಮುಕ್ತ್ವಾ ಸತ್ಯಶಬ್ದವಾಚ್ಯಪರಮಾತ್ಮವಾದಸ್ಯಾತಿವಾದತ್ವಂ ವದನ್ಭೂಮಾನಮುಪದಿಶತಿ. ಕಿಂಚ " ತರತಿ ಶೋಕಮಾತ್ಮವಿತ್ "ಇತ್ಯಾದಿನಾ ಆತ್ಮಜ್ಞಾನೇನ ಮೋಕ್ಷೋಪದೇಶಾತ್, ಜಡಸ್ಯ ಪ್ರಾಣವಾಯೋರ್ಮೋಕ್ಷಪ್ರದಾಯಕತ್ವಾಸಂಭವಾತ್, ಆತ್ಮಶಬ್ದಸ್ಯ ಪರಮಶಿವೇ ಬಹುಶ್ರುತಿರೂಢತ್ವಾತ್. " ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ ", " ಬ್ರಹ್ಮವಿದಾಪ್ನೋತಿ ಪರಂ " ಇತ್ಯಾದಿ ಬಹುಶ್ರುತಿಷು ಪರಶಿವಜ್ಞಾನೇನೈವ ಮೋಕ್ಷೋಪದೇಶಾತ್. " ಅಥಾತ ಆತ್ಮಾದೇಶಃ " ಇತ್ಯಾತ್ಮತ್ವೇನಾಗ್ರೇ ವರ್ಣನಾತ್. ಯತ್ರ ' ನಾನ್ಯತ್ಪಶ್ಯತಿ ' ಇತ್ಯಾದಿವಾಕ್ಯಗತಧರ್ಮಾಣಾಂ ಪ್ರಾಣವಾಯೋರಸಂಭವಾತ್. "ತಂ ಮಾ ಭಗವಾನ್ ಶೋಕಸ್ಯ ಪಾರಂ ತಾರಯತು " ಇತಿ ಪ್ರಕರಣ ಲಿಂಗಬಾಹುಳ್ಯಾದ್ಭೂಮಾಶಬ್ದವಾಚ್ಯಃ ಸಾಕ್ಷಾತ್ಪರಮೇಶ್ವರ ಏವ.

ಅನಂತಕಲ್ಯಾಣಗುಣಾಕರನಾದ ಪರಶಿವನನ್ನು ತಿಳಿದ ಜೀವನ್ಮುಕ್ತನೇ ವಿಷಯ ಸುಖವನ್ನು ತೊರೆದು ಪರಮಾನಂದವನ್ನು ಅನುಭವಿಸಬಲ್ಲನೆಂದು ತಿಳಿಸುತ್ತಾನೆ.

**ಭೂಮಾಧಿಕರಣಂ ॥೨॥ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ॥೮॥**

ಛಾಂದೋಗ್ಯದಲ್ಲಿ ಇದರ ವಿಷಯ ಬಂದಿದೆ. "ಭೂಮವನ್ನೇ ವಿಚಾರ ಮಾಡಬೇಕು", "ಭೂಮವನ್ನೇ ತಿಳಿಯಬೇಕು " "ಎಲ್ಲಿ ಮತ್ತೊಂದನ್ನು ಕಾಣಲಿಕ್ಕೂ ಕೇಳಲಿಕ್ಕೂ ತಿಳಿಯಲಿಕ್ಕೂ ಸಾಧ್ಯವಿಲ್ಲವೋ ಅದೇ ಭೂಮವು. ಎಲ್ಲಿ ಮತ್ತೊಂದನ್ನು

ಕಾಣಲಿಕ್ಕೆ ಕೇಳಲಿಕ್ಕೆ ತಿಳಿಯಲಿಕ್ಕೆ ಸಾಧ್ಯವಿದೆಯೋ ಅದು ಅಲ್ಪ". ಈ ಶ್ರುತಿಯಲ್ಲಿ ಭೂಮವೆಂದರೆ ಪ್ರಾಣವೇ? ಅಥವಾ ಪರಶಿವನೇ? ಎಂಬ ಸಂಶಯ ಬರುತ್ತದೆ. ಭೂಮಾ ಎಂಬ ಪದವು ಬಹು ಶಬ್ದಕ್ಕೆ ಭೂ ಎಂಬ ಆದೇಶದಿಂದಲೂ ಭಾವಪ್ರತ್ಯಯ ದಿಂದಲೂ ನಿಷ್ಪನ್ನವಾಗಿರುವುದರಿಂದ ಬಹುಭಾವವನ್ನು ತಿಳಿಸುತ್ತದೆ. ಈ ಬಹುತ್ವವು ಯಾವ ಬಗೆಯಾದದ್ದು ಎಂಬ ಆಕಾಂಕ್ಷೆಯುಂಟಾಗಲು, 'ಪ್ರಾಣವೇ ಆಶೆಗಿಂತ ದೊಡ್ಡದು' ಎಂಬ ಪಕ್ಕದ ವಾಕ್ಯದಿಂದ ಪ್ರಾಣನೇ ಭೂಮನೆಂದು ತೋರುತ್ತದೆ. ಇದರಂತೆ "ಆತ್ಮಜ್ಞಾನಿಯು ಶೋಕವನ್ನು ದಾಟುತ್ತಾನೆ" ಎಂದು ತಮ್ಮಂತವರಿಂದ ಕೇಳಿದ್ದೇನೆ. ಪೂಜ್ಯರೇ ನಾನು ಶೋಕಿಸುತ್ತೇನೆ. ನನ್ನ ದುಃಖವನ್ನು ತಾವು ಕೊನೆಗಾಣಿಸಿರಿ" ಎಂಬ ಪ್ರಕರಣಬಂದಿರುವುದರಿಂದ ಪರಶಿವನೇ ಭೂಮನೆಂದೂ ತೋರುತ್ತದೆ. ಆದ್ದರಿಂದ ಇಲ್ಲಿ ಸಂಶಯಕ್ಕವಕಾಶವಿದೆ. ಇಲ್ಲಿ ಪೂರ್ವಪಕ್ಷ ಹೀಗೆ ಬರುತ್ತದೆ. ಭೂಮಶಬ್ದವು ಇಲ್ಲಿ ಪ್ರಾಣವನ್ನೇ ತಿಳಿಸುತ್ತದೆ. ಪ್ರಾಣವೇ ಬ್ರಹ್ಮವೆಂದು ನಾರದಸನತ್ಕುಮಾರರಿಗೆ ಪ್ರಶ್ನೋತ್ತರಗಳು ನಡೆಯುವ ಈ ಪ್ರಕರಣದಲ್ಲಿ ನಾಮಕ್ಕಿಂತ ಹೆಚ್ಚಿನದು ಯಾವುದು? ಎಂಬ ಪ್ರಶ್ನೆಗೆ ವಾಕ್ಕೆಂದೂ, ವಾಕ್ಕಿಗಿಂತ ಹೆಚ್ಚಿನದು ಯಾವುದು ಎಂಬ ಪ್ರಶ್ನೆಗೆ ಮನಸ್ಸೆಂದೂ, ಹೀಗೆ ನಾಮದಿಂದ ಪ್ರಾಣದವರಿವಿಗೂ ಪ್ರಶ್ನೋತ್ತರಗಳು ನಡೆದಿವೆ. ಪ್ರಾಣಕ್ಕಿಂತ ಹೆಚ್ಚಿನದು ಯಾವುದು? ಎಂಬುದಕ್ಕೆ ಇಂತಹದೆಂಬ ಉತ್ತರ ಬರುವುದಿಲ್ಲ. ಆದರೆ ನಾಮದಿಂದ ಆಶೆಯವರೆಗಿನ ವಸ್ತುಗಳೆಲ್ಲಕ್ಕೂ ಪ್ರಾಣವೇ ಹೆಚ್ಚಿನದೆಂದು ವಿಸ್ತಾರವಾಗಿ ತಿಳಿಸಿ ಪ್ರಾಣದರ್ಶಿಯು ಅತಿವಾದಿ ಎಂಬುದನ್ನು 'ನೀನು ಅತಿವಾದಿಯಾಗಿರುವೆ ಎಂದು ಅವರು ಹೇಳಿದರೆ ಹಾಗೆಯೇ ಅತಿವಾದಿಯಾಗಿರುವನೆಂದು ಹೇಳಬೇಕು. ಅದಕ್ಕೆ ಇಲ್ಲವೆನ್ನಬಾರದು" ಎಂದು ತಿಳಿಸಿ, 'ಯಾವನು ಸತ್ಯದಿಂದ ಅತಿವಾದವನ್ನು ಮಾಡುವನೋ ಅವನೇ ಅತಿವಾದಿ" ಎಂದು ಪ್ರಾಣೋಪಾಸಕನನ್ನೇ ಅತಿವಾದಿ ಎಂದು ಹೇಳಿ 'ಅವನೇ ಪ್ರಾಣವನ್ನು ಎಲ್ಲಕ್ಕಿಂತ ಹೆಚ್ಚಿನದೆಂದು ತಿಳಿಯುತ್ತಾನೆ' ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಭೂಮಾ ಶಬ್ದವು ಪ್ರಾಣವನ್ನೇ ತಿಳಿಸುತ್ತದೆ ಎಂಬುದೇ ಯುಕ್ತವಾಗಿದೆ. ಸುಷುಪ್ತಿಯಲ್ಲಿ ಪ್ರಾಣದ ವ್ಯಾಪಾರ ಒಂದೇ ಇರುವುದರಿಂದ ಆಗ ಬೇರೆ ಏನನ್ನೂ ಕೇಳುವ ಪ್ರಸಂಗವೇ ಒದಗದಿರುವುದರಿಂದ "ಎಲ್ಲಿ ಏನನ್ನು ಕಾಣುವುದಿಲ್ಲವೋ" ಎಂಬ ವಾಕ್ಯದಲ್ಲಿ ಹೇಳಿದ ಭೂಮಾ ಲಕ್ಷಣವು ಪ್ರಾಣಕ್ಕೇ ಅನ್ವಯಿಸುತ್ತದೆ. "ಸುಷುಪ್ತಿಯಲ್ಲಿ ಏನನ್ನೂ ಕೇಳುವುದಿಲ್ಲ ನೋಡುವುದಿಲ್ಲ" ಎಂಬ ಶ್ರುತಿಯು ಸುಷುಪ್ತಿಯಲ್ಲಿ ಯಾವ ವ್ಯಾಪಾರವೂ ಇರುವುದಿಲ್ಲವೆಂದು ಹೇಳಿದೆ. ಆದರೆ "ಪ್ರಾಣಾಗ್ನಿಗಳು ಈ ದೇಹದಲ್ಲಿ ಎಚ್ಚರವಾಗಿರುತ್ತವೆ" ಎಂಬ ಶ್ರುತಿಯು ಆಗ ಐದು ಬಗೆಯ ವೃತ್ತಿಗಳುಳ್ಳಪ್ರಾಣದ ಎಚ್ಚರವನ್ನೂ ಅದರ ಪ್ರಾಧಾನ್ಯವನ್ನೂ ತಿಳಿಸಿದೆ. 'ಯಾವುದು ಭೂಮವೋ ಅದೇ ಸುಖ' ಎಂಬಲ್ಲಿ ಹೇಳಿದ ಸುಖವೂ ಪ್ರಾಣವಾಯುವಿಗೇ ಅನ್ವಯಿಸುತ್ತದೆ. 'ಪ್ರಾಣವೇ ಅಮೃತ', "ಯಾವುದು ಭೂಮವೋ ಅದೇ ಅಮೃತ" ಇಲ್ಲಿ ಪ್ರಾಣವೇ ಅಮೃತವೆಂದು ಹೇಳಲಾಗಿದೆ.

"ಪ್ರಾಣವೇ ತಂದೆ ತಾಯಿ, ಅಣ್ಣ, ಮಿತ್ರ, ಆಚಾರ್ಯ, ಬ್ರಹ್ಮ"ಎಂಬುದರಿಂದ ಪ್ರಾಣವೇ ಸರ್ವಾತ್ಮಕವೆಂದೂ ಹೇಳಲಾಗಿದೆ. ಇದರಿಂದ ಪ್ರಾಣವೇ ಜಗತ್ಕಾರಣವೆಂದೂ ತಿಳಿದುಬರುತ್ತದೆ. ಆದ್ದರಿಂದಲೇ 'ಆತನನ್ನು ತಿಳಿದವನು ದುಃಖವನ್ನು ದಾಟುತ್ತಾನೆ" ಎಂಬ ಆತ್ಮಜಿಜ್ಞಾಸೆಯ ಪ್ರಕರಣವಾದರೂ ಸರ್ವಾತ್ಮಕವಾದ ಪ್ರಾಣಜಿಜ್ಞಾಸೆಗೆ ಯಾವ ವಿರೋಧವೂ ಇಲ್ಲ. ಹೀಗೆ ಆರು ಬಗೆಯ ತಾತ್ಪರ್ಯಲಿಂಗಗಳಿಂದಲೂ ಭೂಮವೆಂದರೆ ಪ್ರಾಣವಾಯುವೇ ಹೊರತು ಪರಮಶಿವನಲ್ಲವೆಂದು ಪೂರ್ವಪಕ್ಷ ಬರುತ್ತದೆ. ಅದಕ್ಕೆ ಸೂತ್ರವು ಸಿದ್ಧಾಂತವನ್ನು ತಿಳಿಸುತ್ತದೆ. ಶ್ರುತಿಯಲ್ಲಿ ಭೂಮನೆಂದರೆ ಪರಶಿವನೇ ಹೊರತು ಪ್ರಾಣವಾಯುವಲ್ಲ. ಏಕೆಂದರೆ ಅಲ್ಲಿ ಭೂಮನನ್ನು ಸಂಪ್ರಸಾದದ ಮೇಲೆ ಉಪದೇಶಿಸಲಾಗಿದೆ. ಸಂಪ್ರಸಾದವೆಂದರೆ ಸುಸುಪ್ತಿ. ಈ ಅವಸ್ಥೆಯಲ್ಲಿ ಜೀವನು ಇಂದ್ರಿಯಗಳ ಕಾಲುಷ್ಯವನ್ನು ಕಳೆದುಕೊಂಡು ಶಿವನೊಡನೆ ಬೆರೆತು ಪ್ರಸನ್ನನಾಗಿರುತ್ತಾನೆ. ಈ ಅವಸ್ಥೆಯಲ್ಲಿ ಪ್ರಾಣನು ಜಾಗೃತನಾಗಿರುವುದರಿಂದಲೇ ಸಂಪ್ರಸಾದನೆನಿಸುತ್ತಾನೆ. ಶ್ರುತಿಯಲ್ಲಿ ಪ್ರಾಣನಾದಮೇಲೆ ಭೂಮವನ್ನು ಹೇಳಿರುವುದರಿಂದ ಭೂಮನೆಂದರೆ ಪರಮೇಶ್ವರನೇ ಆಗಿರುವನು. ಎಲ್ಲಕ್ಕಿಂತಲೂ ಪ್ರಾಣ ಹೆಚ್ಚಿನದೆಂದು ಹೇಳಿ ಪ್ರಾಣನಾದಮೇಲೆ ಭೂಮನನ್ನು ಹೇಳಿರುವುದರಿಂದ ಭೂಮವೇ ಬೇರೆ ವಸ್ತುವಾಗಿರಬೇಕು. ಆ ವಸ್ತುವೇ ಪರಮಶಿವ. ಕೆಲವರು ಸಂಪ್ರಸಾದನೆಂದರೆ ಜೀವನೆಂದೂ ಜೀವನಮೇಲೆ ಅವನಿಗಿಂತ ಹೆಚ್ಚಿನದೆಂದು ಹೇಳಿರುವುದರಿಂದ ಭೂಮವೇ ಪರಶಿವನೆಂದೂ ಹೇಳುತ್ತಾರೆ. ಪ್ರಾಣವನ್ನು ಉಪದೇಶಿಸಿದ ಮೇಲೆ ಯಾವನು ಸತ್ಯದಿಂದ ಅತಿವಾದಮಾಡುವನೋ ಅವನೇ ಅತಿವಾದಿಯಾಗುತ್ತಾನೆಂದು ಹೇಳುವಾಗ " ಏಷ ತೇ ವಾ' ಎಂಬಲ್ಲಿ ತು ಶಬ್ದದಿಂದ ಪ್ರಾಣೋಪಾಸಕನನ್ನು ಅತಿವಾದಿಯಲ್ಲವೆಂದೂ, ಸತ್ಯಶಬ್ದವಾಚ್ಯನಾದ ಪರಮಶಿವನ ಉಪಾಸಕನನ್ನು ಅತಿವಾದಿ ಎಂದೂ ಹೇಳಿ ಶ್ರುತಿಯು ಪ್ರಾಣದಿಂದ ಭೂಮವನ್ನು ಪ್ರತ್ಯೇಕಿಸಿದೆ. ಶ್ರುತಿಯಲ್ಲಿ ಆತ್ಮಜ್ಞಾನದಿಂದ ಮೋಕ್ಷವನ್ನು ಹೇಳಿರುವುದರಿಂದ ಜಡವಾದ ಪ್ರಾಣವಾಯುವಿಗೆ ಮೋಕ್ಷವನ್ನು ಕೊಡುವ ಶಕ್ತಿ ಸಂಭವಿಸುವಂತಿಲ್ಲ. ಆತ್ಮಶಬ್ದವು ಪರಶಿವನಿಗೇ ಅನ್ವಯಿಸುವುದೆಂದು ಅನೇಕ ಶ್ರುತಿಗಳಲ್ಲಿ ಪ್ರಸಿದ್ಧವಾಗಿದೆ. " ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" ಹೀಗೆ ಅನೇಕ ಶ್ರುತಿಗಳಲ್ಲಿ ಪರಶಿವಜ್ಞಾನದಿಂದಲೇ ಮೋಕ್ಷವನ್ನು ಹೇಳಲಾಗಿದೆ. " ಇದು ಆತ್ಮನ ಆದೇಶ" ಎಂಬಲ್ಲಿ ಶಿವನನ್ನು ಆತ್ಮನೆಂದು ವರ್ಣಿಸಲಾಗಿದೆ. "ಯತ್ರ ನಾನ್ಯತ್ಪಶ್ಯತಿ" ಎಂಬ ಶ್ರುತಿಯಲ್ಲಿ ಹೇಳಿದ ಧರ್ಮಗಳು ಪ್ರಾಣವಾಯುವಿಗೆ ಸಂಭವಿಸುವುದೂ ಇಲ್ಲ. "ಪೂಜ್ಯನೇ ನನ್ನ ದುಃಖವನ್ನು ಕೊನೆಗಾಣಿಸು" ಎಂಬ ಪರಶಿವಪ್ರಕರಣದ ಲಿಂಗಗಳೇ ಬಹಳವಾಗಿರುವುದರಿಂದ ಭೂಮಾಶಬ್ದವು ಪರಶಿವನಿಗೇ ಅನ್ವಯಿಸುತ್ತದೆ.

**ಪರಮೇಶ್ವರಪಕ್ಷೇ ಹೇತ್ವಂತರಮಾಹ—ಧರ್ಮೋಪಪತ್ತೇಶ್ಚ ॥ ೯ ॥**

**" ಯತ್ರ ನಾನ್ಯತ್ಪಶ್ಯತಿ " ಇತ್ಯಾದಿನಾ ಸೃಷ್ಟೇಃಪ್ರಾಕ್ಸರ್ವಾಪ್ಯವ**

ಹಾರಾಭಾವಾದಿಧರ್ಮಾಣಾಂ ಪರಮಶಿವಸ್ಯೋಪಪತ್ತೇಃ. ಇದಮೇವ ಮುಕ್ತಾತ್ಮನಾಂ ಜ್ಞಾಪಕಂ. ಪೂರ್ವೋಕ್ತಾಧಿಕರಣೇ “ಪುರುಷಮುಪೈತಿ ದಿವ್ಯಂ” ಇತ್ಯಾದಿನಾ ಬ್ರಹ್ಮೋಪಾಸಕಸ್ಯ ಶುದ್ಧಜೀವಸ್ಯಾತ್ಯಂತಿಕಪಾಶನಿವೃತ್ತಿಪೂರ್ವಕಶಿವಸಾಯುಜ್ಯಂ ನದೀಸಮುದ್ರದೃಷ್ಟಾಂತೇನ ಪ್ರಸಾಧಿತಂ. ತಸ್ಮಾಚ್ಛಿವತ್ವಾಪನ್ನಜೀವಾನಾಂ ಜೀವನ್ಮುಕ್ತಿವಿದೇಹಮುಕ್ತ್ಯೋಸ್ಸರ್ವಶಿವಾತ್ಮಕಜ್ಞಾನೇನ ಪ್ರಪಂಚನಿಷೇಧೋ ಯುಕ್ತಃ. ನನು “ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ” ಇತಿ ವಾಕ್ಯೇ ಜೀವನ್ಮುಕ್ತಸ್ಯ ವಿದೇಹಮುಕ್ತಿಪರ್ಯಂತಂ ಪ್ರಪಂಚಭೋಗವ್ಯಪದೇಶಾತ್ಕಥಂ ಶಿವಜ್ಞಾನವತಾಂ ಜೀವನ್ಮುಕ್ತಾನಾಂ ಪ್ರಪಂಚನಿಷೇಧ ಉಪಪದ್ಯತೇ ಇತಿ ಚೇತ್, ಶಿವೋಪಾಸಕಜೀವನ್ಮುಕ್ತಾನಾಂ ಪ್ರಚಂಡಾತಪಮಧ್ಯನಿಕ್ಷಿಪ್ತಕರ್ಪೂರದೀಪವದಂತಃಕರಣಸದ್ಭಾವೇಽಪಿ ಸರ್ವಶಿವಾತ್ಮಕಜ್ಞಾನಸದ್ಭಾವಾತ್ ಸಚ್ಚಿದಾನಂದಸ್ವರೂಪಪರಮಶಿವ ಏವ ವಿಶ್ವಾತ್ಮನಾ ದರ್ಶನವಿಷಯೋ ಭವತಿ. ‘ಏತತ್ತತೋ ಭವತಿ’ ಇತ್ಯಾದಿಶ್ರುತಿರಪಿ ತಥಾ ಶ್ರೂಯತೇ. ತಸ್ಮಾಜ್ಜೀವನ್ಮುಕ್ತಾನಾಂ ‘ಅಹಂ ಬ್ರಹ್ಮಾಸ್ಮಿ’ ಇತಿ ಬ್ರಹ್ಮವಿದಾಮನುಭವೋ ದೃಶ್ಯತೇ. “ನಹಿ ದೃಷ್ಟೇರನುಪಪನ್ನಂ ನಾಮ” ಇತಿ ನ್ಯಾಯಾನ್ನಾನ್ಯಾರ್ಥೋ ಯುಕ್ತಃ. ಬ್ರಹ್ಮಣಃ ಪ್ರಪಂಚಸ್ಯಾಭಿನ್ನನಿಮಿತ್ತೋಪಾದಾನಕಾರಣತ್ವಾತ್ತಸ್ಯ ತದಭೇದದೃಷ್ಟಿಸ್ಸಮುಚಿತೈವ. “ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್” ಇತ್ಯಾದಿಶ್ರುತ್ಯಂತರೇ ಸರ್ವಶಿವಾತ್ಮಕಜ್ಞಾನವಿದಾಂ ಪೂರ್ವವತ್ಪ್ರಕೃತಪ್ರಪಂಚವ್ಯವಹಾರಾಭಾವಸ್ಯ ಮುಕ್ತಜೀವಧರ್ಮತ್ವಾವಗಮಾತ್. “ಯೋ ವೈ ಭೂಮಾ ತತ್ಸುಖಂ” ಇತಿ ಭೂಮ್ನಸ್ಸುಖತ್ವಂ ದರ್ಶಿತಂ. “ಯೋ ವೈ ಭೂಮಾ ತದಮೃತಂ” ಇತಿ ಶ್ರೂಯಮಾಣಮಮೃತತ್ವಂ ಪರಮಶಿವಾಸಾಧಾರಣಧರ್ಮಃ. ಕಿಂಚ “ಸ ಭಗವಃ ಪ್ರತಿಷ್ಠಿತಃ ಕಸ್ಮಿನ್ಪ್ರತಿಷ್ಠಿತಸ್ಸ್ವೇ ಮಹಿಮ್ನಿ” ಇತಿ, “ಆತ್ಮೈವೇದಂ ಸರ್ವಂ” ಇತ್ಯಾದಿನಾ ತಸ್ಯೈವ ಪರಮಶಿವಸ್ಯ ಸ್ವಮಹಿಮ್ನಿಪ್ರತಿಷ್ಠಿತತ್ವಸರ್ವಕಾರಣತ್ವಾದಿಧರ್ಮಾಣಾಂ ವ್ಯಪದೇಶಾದ್ಭೂಮಪದವಾಚ್ಯಃ ಪರಮಶಿವ ಏವೇತಿ ಸಿದ್ಧಂ. ನನ್ವೇಕಸ್ಯ ಪರಮಶಿವಸ್ಯ ವ್ಯವಹಾರಭಾವಾಭಾವತ್ವಂ ಕಥಮುಪಪದ್ಯತ ಇತಿ ಚೇತ್, ‘ಲೋಕವತ್ತು ಲೀಲಾಕೈವಲ್ಯಂ’ ಇತಿ ಸೂತ್ರೇ ವ್ಯಾಸೇನೈವೋತ್ತರತ್ರ ಸ್ಪಷ್ಟಮುಚ್ಯತೇ.

ಪರಶಿವನ ಬಗ್ಗೆ ಬೇರೊಂದು ಹೇತುವೂ ಇದೆ— **ಧರ್ಮೋಪಪತ್ತೇಶ್ಚ ॥ ೯ ॥**

“ಎಲ್ಲಿ ಏನೊಂದನ್ನು ಕಾಣುವುದಿಲ್ಲವೋ ಕೇಳುವುದಿಲ್ಲವೋ” ಎಂಬ ಶ್ರುತಿಯಲ್ಲಿ ಸೃಷ್ಟಿಗೆ ಮೊದಲು ದರ್ಶನಾದಿವ್ಯವಹಾರಗಳಿಲ್ಲದಿರುವ ಸ್ಥಿತಿ ಪರಮಶಿವನಿಗೆ

ಯುಕ್ತವೇ ಆಗಿದೆ. ಮುಕ್ತಾತ್ಮನಿಗೂ ಇದೇ ಗುರುತಾಗಿರುವುದು. "ಜ್ಞಾನಿಯು ನಾಮರೂಪಗಳ ಅಭಿಮಾನವನ್ನು ತೊರೆದು ಪರಂಜ್ಯೋತಿಯಲ್ಲಿ ಬೆರೆಯುತ್ತಾನೆ" ಎಂಬ ಶ್ರುತಿಯಂತೆ ಶಿವೋಪಾಸಕನಿಗೆ ಪಾಶವು ಪೂರ್ತಿಯಾಗಿ ತೊಲಗಿ ಶಿವಸಾಯುಜ್ಯವು ದೊರಕುವುದೆಂದು ನದೀಸಮುದ್ರ ದೃಷ್ಟಾಂತದಿಂದ ಹಿಂದಿನ ಅಧಿಕರಣದಲ್ಲಿ ಸಾಧಿಸಲಾಗಿದೆ. ಆದ್ದರಿಂದ ಶಿವಭಾವವನ್ನು ಹೊಂದಿದ ಮುಕ್ತರಿಗೆ ಜೀವನ್ಮುಕ್ತಿ, ವಿದೇಹಮುಕ್ತಿ ಎರಡರಲ್ಲೂ ಎಲ್ಲವೂ ಶಿವನೆಂಬ ಜ್ಞಾನವೇ ಇರುವುದರಿಂದ ಪ್ರಪಂಚದ ಅಭಿಮಾನವಿರುವುದಿಲ್ಲ. ಆದರೆ "ಎಂದು ಈ ದೇಹದಿಂದ ಬಿಡುಗಡೆಯಾಗುವುದೋ ಅಂದೇ ಅವನು ಶಿವನೊಳಗಾಗುತ್ತಾನೆ" ಎಂಬಲ್ಲಿ ಜೀವನ್ಮುಕ್ತನಿಗೆ ವಿದೇಹಮುಕ್ತಿಯವರೆಗೂ ಪ್ರಪಂಚದ ಭೋಗವನ್ನು ಹೇಳಿರುವುದರಿಂದ ಅವನಿಗೆ ಪ್ರಪಂಚ ಹೇಗೆ ಕಾಣದೆಹೋಗುತ್ತದೆ? ಅವನಿಗೂ ಎಲ್ಲರಂತೆ ಭೋಗಾನುಭವವೇ ಇರುವುದಿಲ್ಲವೇ? ಎಂದು ಕೇಳುವುದು ಸರಿಯಲ್ಲ. ಶಿವೋಪಾಸಕರಾದ ಜೀವನ್ಮುಕ್ತರಿಗೆ ಪ್ರಚಂಡಸೂರ್ಯನ ಪ್ರಕಾಶದ ಮಧ್ಯದಲ್ಲಿ ಇಟ್ಟ ಕರ್ಪೂರದೀಪದಂತೆ, ಅಂತಃಕರಣವಿದ್ದರೂ ಸರ್ವವೂ ಶಿವಾತ್ಮಕವೆಂಬ ಜ್ಞಾನವಿರುವುದರಿಂದ ಸಚ್ಚಿದಾನಂದನಾದ ಪರಶಿವನೇ ಎಲ್ಲ ಕಡೆಯೂ ಕಾಣುತ್ತಾನೆ. "ಆಮೇಲೆ ಅವನು ಅದೇ ಆಗುತ್ತಾನೆ" ಎಂಬ ಶ್ರುತಿಯೂ ಹಾಗೆಯೇ ಹೇಳಿದೆ. ಆದ್ದರಿಂದ ಜೀವನ್ಮುಕ್ತನಿಗೆ ನಾನು ಬ್ರಹ್ಮನಿದ್ದೇನೆ, ಎಂಬ ಅನುಭವವಿರುತ್ತದೆ. ಪ್ರತ್ಯಕ್ಷವಾಗಿ ಕಂಡದ್ದಕ್ಕೆ ಅನುಪಪತ್ತಿ ಇರಲಾರದೆಂಬ ನ್ಯಾಯದಿಂದ ಜೀವನ್ಮುಕ್ತನ ಬಗ್ಯೆ ಬೇರೆ ವಿಧವಾಗಿ ಅರ್ಥಮಾಡಲಾಗುವುದಿಲ್ಲ. ಶಿವನೇ ಪ್ರಪಂಚದ ಅಭಿನ್ನನಿಮಿತ್ತೋಪಾದಾನಕಾರಣನಾದ್ದರಿಂದ ಮುಕ್ತನು ಜಗತ್ತನ್ನು ಶಿವಮಯವಾಗಿ ಕಾಣುವುದು ಯುಕ್ತವೇ ಆಗಿದೆ. "ಎಲ್ಲಿ ಯಾವನಿಗೆ ಎಲ್ಲವೂ ಶಿವನೇ ಆಗುವುದೋ ಅಲ್ಲಿ ಅವನು ಯಾರೊಡನೆ ವ್ಯವಹರಿಸುತ್ತಾನೆ" ಎಂಬ ಶ್ರುತಿಯಲ್ಲಿ ಎಲ್ಲವನ್ನೂ ಶಿವನೆಂದು ತಿಳಿದವನಿಗೆ ನಿರಭಿಮಾನದ ವ್ಯವಹಾರವು ಶಿವನ ಹಾಗೂ ಮುಕ್ತನ ಧರ್ಮವೆಂದು ತಿಳಿದುಬಂದಿದೆ. "ಯಾವುದು ಭೂಮವೋ ಅದೇ ಸುಖ, ಅಲ್ಪದಲ್ಲಿ ಸುಖವಿಲ್ಲ". "ಯಾವುದು ಭೂಮವೋ ಅದೇ ಅಮೃತ" ಎಂಬ ಶ್ರುತಿಗಳಲ್ಲಿ ಹೇಳಿರುವ ಸುಖ ಅಮೃತಗಳು ಪರಶಿವನ ಅಸಾಧಾರಣಧರ್ಮಗಳಾಗಿವೆ. "ಇದೆಲ್ಲವೂ ಅವನ ಮಹಿಮೆಯಲ್ಲಿ ಸುಪ್ರತಿಷ್ಠಿತವಾಗಿದೆ" "ಇದೆಲ್ಲವೂ ಆತ್ಮವೇ. ಆತ್ಮನಿಂದಲೇ ಪ್ರಾಣಗಳೂ ಆಕಾಶವೂ ಬಂದಿವೆ". ಈ ಶ್ರುತಿಗಳಲ್ಲಿ ಪರಶಿವನ ಅಸಾಧಾರಣ ಧರ್ಮಗಳನ್ನು ಹೇಳಿರುವುದರಿಂದ ಭೂಮನೆಂದರೆ ಪರಶಿವನೆಂದು ಸಿದ್ಧವಾಯಿತು. ಒಬ್ಬ ಪರಶಿವನಲ್ಲಿಯೇ ಭಕ್ತಾನುಗ್ರಹದ ಲೀಲೆ, ಜಗದ್ವ್ಯಾಪಾರನಿರ್ವಹಣೆಯ ನಿರಭಿಮಾನತೆ ಇವೆರಡೂ ಇರಲಿಕ್ಕೆ ಹೇಗೆ ಸಾಧ್ಯವಾಗುತ್ತದೆ ಎಂಬ ಪ್ರಶ್ನೆಗೆ ವ್ಯಾಸನು ಮುಂದೆ 'ಲೋಕವತ್ತು ಲೀಲಾ ಕೈವಲ್ಯಂ' ಎಂಬ ಸೂತ್ರದಲ್ಲಿ ಸ್ಪಷ್ಟವಾಗಿ ಉತ್ತರವನ್ನು ಕೊಟ್ಟಿದ್ದಾನೆ.

**ಬ್ರಹ್ಮಣಃ ಪರಮಶಿವಸ್ಯ ಸರ್ವಾಧಿಕ್ಯಮುಪದಿಶ್ಯ ಅಕ್ಷರಶಬ್ದವಾ**

ಚ್ಯತ್ವಮಧಿಕರಣಾಂತರೇಣಾಹ--

ಅಕ್ಷರಾಧಿಕರಣಂ ॥ ೩ ॥  ಅಕ್ಷರಮಂಬರಾಂತಧೃತೇಃ ॥ ೧೦ ॥

ಬೃಹದಾರಣ್ಯೇ ಶ್ರೂಯತೇಽಸ್ಯ ವಿಷಯಃ. "ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚೇತಿ ಸ ಹೋವಾಚ", "ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ", "ಅಸ್ಥೂಲಮನಣ್ವದೀರ್ಘಮಹ್ರಸ್ವಮಲೋಹಿತಮಸ್ನೇಹಮಚ್ಛಾಯಂ" ಇತಿ. ಅತ್ರಾಕ್ಷರಶಬ್ದೇನ ಪ್ರಣವೋ ಜೀವಃ ಪರಮೇಶ್ವರೋ ವೇತಿ ಸಂಶಯಃ. "ಓಂಕಾರ ಏವೇದಗ್ಂ ಸರ್ವಂ"ಇತ್ಯಾದೌ ಪ್ರಣವಸ್ಯ ಸರ್ವಾತ್ಮಕತ್ವಪ್ರದರ್ಶನಾತ್. 'ತದಕ್ಷರಸಮಾಮ್ನಾಯಃ' ಇತ್ಯಾದಾವಕ್ಷರಶಬ್ದಸ್ಯ ವರ್ಣೇ ಪ್ರಸಿದ್ಧತ್ವಾತ್, 'ಓಮಿತ್ಯೇಕಾಕ್ಷರಂ ಬ್ರಹ್ಮ' ಇತಿ ಶ್ರುತ್ಯಂತರೇಽಪಿ ಪ್ರಣವಸ್ಯ ಬ್ರಹ್ಮಾತ್ಮಕತ್ವವ್ಯಪದೇಶಾದಕ್ಷರಶಬ್ದವಾಚ್ಯತ್ವಂ ತಸ್ಯೈವೋಪಪನ್ನಂ. 'ಪುರುಷೋಽಕ್ಷರ ಉಚ್ಯತೇ' ಇತಿ ಶ್ರವಣಾದಕ್ಷರಪದವಾಚ್ಯತ್ವಂ ಜೀವಸ್ಯಾಪ್ಯುಪಪನ್ನಂ. ತಸ್ಮಾತ್ಪರಮೇಶ್ವರಸ್ಯಾಕ್ಷರಶಬ್ದವಾಚ್ಯತ್ವಂ ನೋಪಪನ್ನಮಿತಿ ಚೇದ್ಬ್ರೂಮಃ. ಅಕ್ಷರಮಂಬರಾಂತಧೃತೇಃ. ಅತ್ರಾಕ್ಷರಶಬ್ದವಾಚ್ಯಶ್ಶಿವ ಏವ. ಕಸ್ಮಾದಂಬರಾಂತಧೃತೇಃ. ಪೃಥಿವ್ಯಾದ್ಯಾಕಾಶಾಂತಸ್ಯ ಸ್ವಶಕ್ತ್ಯುದ್ಭೂತಸ್ಯ ಪ್ರಪಂಚಸ್ಯ ಧೃತೇರ್ಧಾರಣಾದಿತ್ಯರ್ಥಃ. "ಯದೂರ್ಧ್ವಂ ಗಾರ್ಗಿ ದಿವೋ ಯದರ್ವಾಕ್ಪೃಥಿವ್ಯಾ ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಭವ್ಯಂ ಭವಿಷ್ಯಂ ಚ ಇತ್ಯಾಚಕ್ಷತೇ ಆಕಾಶ ಏವ ತದೋತಂ ಪ್ರೋತಂ ಚ" ಇತ್ಯಾದಿಸರ್ವವಿಕಾರಪ್ರಪಂಚಾಧಿಷ್ಠಾನತಯಾ ನಿರ್ದಿಷ್ಟಾಕಾಶಃ "ಕಸ್ಮಿನ್ನೋತಶ್ಚ ಪ್ರೋತಶ್ಚ" ಇತಿ ಗಾರ್ಗಿಪೃಷ್ಟೇ "ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ" ಇತ್ಯಾದಿನಾ "ಏತಸ್ಮಿನ್ನು ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ" ಇತ್ಯಂತೇನ ಯಾಜ್ಞವಲ್ಕ್ಯವಚನೇನ ನಿರ್ದಿಷ್ಟಸ್ಯಾಕ್ಷರಸ್ಯಾಂಬರಾಂತರಧೃತಿರ್ನಿರ್ಣೀಯತೆ. "ಕ್ಷರಂ ಪ್ರಧಾನಂ ಅಮೃತಾಕ್ಷರಂ ಹರಃ ಕ್ಷರಾತ್ಮಾನಾವೀಶತೇ ದೇವ ಏಕಃ", "ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ । ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್ ॥" ಇತ್ಯಾದಿಶ್ರುತ್ಯಂತರೇಷ್ವಪಿ ಪರಮೇಶ್ವರಸ್ಯ ಮುಖ್ಯತಯಾ ಅಕ್ಷರಶಬ್ದವಾಚ್ಯತ್ವಸ್ಯಾಂಬರಾಂತಧೃತೇಶ್ಚೋಪದೇಶಾನ್ನಾನ್ಯಸ್ಯ ಸಂಭವತಿ. ಯದಪಿ "ಓಂಕಾರ ಏವೇದಂ ಸರ್ವಂ" ಇತಿ ಶ್ರುತೌ ಪ್ರಣವಸ್ಯ ಬ್ರಹ್ಮಪ್ರತಿಪಾದಕತ್ವೇನ ಸ್ತುತ್ಯರ್ಥಂ ಸರ್ವಾತ್ಮಕತ್ವಂ ವರ್ಣಿತಂ. ಅತ್ರ ಪರಮೇಶ್ವರಧರ್ಮಬಾಹುಳ್ಯಾತ್ಪರಮೇಶ್ವರಪ್ರಕರಣಾತ್ತಸ್ಯೈವಾಕ್ಷರಶಬ್ದವಾಚ್ಯತ್ವಂ ಸಿದ್ಧಂ.

ಸರ್ವಾಧಿಕ ಪರಶಿವನೇ ಅಕ್ಷರನೆಂಬುದನ್ನು ಈಗ ತಿಳಿಸುತ್ತಾನೆ—

**ಅಕ್ಷರಾಧಿಕರಣಂ ॥ ೩ ॥ ಅಕ್ಷರಮಂಬರಾಂತಧೃತೇಃ ॥ ೧೦ ॥**

ಬೃಹದಾರಣ್ಯಕದಲ್ಲಿ ಇದರ ವಿಷಯ ಬಂದಿದೆ. "ಆಕಾಶವು ಏತರಲ್ಲಿ ಹಾಸು ಹೊಕ್ಕಾಗಿ ಹೆಣೆದುಕೊಂಡಿದೆಯೋ ಇದನ್ನು ಅಕ್ಷರವೆಂದು ಜ್ಞಾನಿಗಳು ಹೇಳುತ್ತಾರೆ". "ಈ ಅಕ್ಷರವು ದಪ್ಪದಲ್ಲ, ಸಣ್ಣದಲ್ಲ, ಉದ್ದವಲ್ಲ, ಮೋಟಲ್ಲ, ಕೆಂಪಲ್ಲ, ಅಂಟಲ್ಲ, ನೆರಳಲ್ಲ" ಎಂದು ಮುಂತಾಗಿ ಹೇಳಿದೆ. ಅಲ್ಲಿ ಅಕ್ಷರವೆಂದರೆ ಪ್ರಣವವೋ? ಜೀವವೋ? ಪರಮೇಶ್ವರನೋ? ಎಂಬ ಸಂಶಯ ಬರುತ್ತದೆ. "ಇದೆಲ್ಲವೂ ಓಂಕಾರವೇ ಎಂಬಲ್ಲಿ ಪ್ರಣವವನ್ನು ಸರ್ವಾತ್ಮಕವೆಂದು ಹೇಳಿದೆ. 'ಅಕ್ಷರಸಮಾಮ್ನಾಯಃ' ಎಂಬಲ್ಲಿ ಅಕ್ಷರಶಬ್ದವನ್ನು ವರ್ಣಗಳಲ್ಲಿ ಪ್ರಯೋಗಿಸಲಾಗಿದೆ. 'ಓಂ ಎಂಬುದು ಏಕಾಕ್ಷರವಾದ ಬ್ರಹ್ಮ' ಎಂಬಲ್ಲಿ ಪ್ರಣವವನ್ನು ಬ್ರಹ್ಮವೆಂದು ಹೇಳಲಾಗಿದೆ. ಆದ್ದರಿಂದ ಅಕ್ಷರವೆಂದರೆ ಓಂಕಾರವೇ ಆಗಬಹುದು'. 'ಜೀವನು ಅಕ್ಷರನೆನಿಸಿದ್ದಾನೆ" ಎಂಬ ಶ್ರುತಿಯಂತೆ ಅಕ್ಷರನೆಂದರೆ ಜೀವನೂ ಆಗಬಹುದು. ಆದ್ದರಿಂದ ಪರಶಿವನು ಅಕ್ಷರನಲ್ಲವೆಂದು ಪೂರ್ವಪಕ್ಷ ಬಂದರೆ ಸೂತ್ರದಲ್ಲಿ ಸಮಾಧಾನವಿದೆ. ಪಂಚಭೂತಗಳ ವಿಸ್ತಾರವಾದ ಈ ಪ್ರಪಂಚಕ್ಕೆ ಪರಶಿವನೇ ಆಧಾರನಾದ್ದರಿಂದ ಅವನೇ ಅಕ್ಷರನೆನಿಸಿದ್ದಾನೆ. "ಸ್ವರ್ಗದಿಂದಾಚಿನದು, ಭೂಮಿಯಿಂದ ಕೆಳಗಿನದು, ಹಿಂದಿನದು ಈಗಿನದು ಮುಂದಿನದು. ಹೀಗೆ ವಿಸ್ತಾರವಾದೀ ಪ್ರಪಂಚಕ್ಕಾಶ್ರಯವಾದ ಆಕಾಶವು ಯಾವುದರಲ್ಲಿ ಸೇರಿಕೊಂಡಿದೆಯೋ ಅದೇ ಅಕ್ಷರ" ವೆಂದು ಯಾಜ್ಞವಲ್ಕ್ಯನು ಹೇಳುತ್ತಾನೆ. "ಹರನೇ ಅಮೃತನೂ ಅಕ್ಷರನೂ ಆಗಿದ್ದಾನೆ. ಪಂಚಭೂತಗಳೂ ಪರಬ್ರಹ್ಮವೇ. ವಿಶ್ವಕ್ಕೂ ಅವನೇ ಮಹದಾಯತನವಾಗಿದ್ದಾನೆ". "ಈ ಶ್ರುತಿಗಳಲ್ಲಿ ಅಕ್ಷರಶಬ್ದವು ಅಭಿಧಾವೃತ್ತಿಯಿಂದಲೇ ಸ್ಪಷ್ಟವಾಗಿ ಶಿವನನ್ನು ತಿಳಿಸುವುದರಿಂದ ವಿಶ್ವವನ್ನು ಧಾರಣ ಮಾಡುವ ಶಕ್ತಿ ಅವನಿಗೇ ಸಂಭವಿಸುತ್ತದೆ. "ಎಲ್ಲವೂ ಓಂಕಾರವೇ" ಎಂಬ ಶ್ರುತಿಯು ಬ್ರಹ್ಮಪ್ರತಿಪಾದಕವಾದ ಪ್ರಣವವನ್ನು ಪ್ರಶಂಸೆಮಾಡಿದೆ. ಆದ್ದರಿಂದ ಇಲ್ಲಿ ಪರಶಿವನಿಗೆ ಅನ್ವಯಿಸುವ ಧರ್ಮಗಳೇ ಬಹಳವಾಗಿರುವುದರಿಂದ ಅವನೇ ಅಕ್ಷರನೆಂದು ಸಿದ್ಧವಾಯಿತು.

**ಅಂಬರಾಂತಧೃತೇಃ ಪ್ರಧಾನೇ ಅತಿವ್ಯಾಪ್ತಿಮಾಶಂಕ್ಯ ನಿರಾಕರೋತಿ—ಸಾ ಚ ಪ್ರಶಾಸನಾತ್ ॥ ೧೧ ॥**

**ಸಾ ಧೃತಿಃ ಪರಬ್ರಹ್ಮಣಶ್ಶಿವಸ್ಯೈವ ಸಂಭವತಿ. ಕುತಃ ಪ್ರಶಾಸನಾತ್. "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ" ಇತ್ಯಾದಿನಾ ಪರಮಶಿವಸ್ಯೈವ ಪ್ರಶಾಸನಂ ಶ್ರೂಯತೇ, ಜಡಸ್ಯ ಪ್ರಧಾನಸ್ಯ ಪ್ರಶಾಸನಾಸಂಭವಾತ್. ಶ್ರುತ್ಯಂತರೇಽಪಿ 'ಈಶಾನಸ್ಸರ್ವವಿದ್ಯಾನಾಂ' ಇತ್ಯಾದಿನಾ ಸರ್ವನಿಯಾಮಕತ್ವಸ್ಯ ಪರಮಶಿವಧರ್ಮತ್ವೇನ ವ್ಯಪದೇಶಾತ್, ಪ್ರಧಾನಸ್ಯ ಸರ್ವದಾ ಪ್ರಶಾ**

ಸನಮುಯುಕ್ತಂ. ಏತೇನ ಸರ್ವಾಧಿಷ್ಠಾನಬ್ರಹ್ಮಣಸ್ಸವಿಶೇಷತ್ವಮುಪದಿಷ್ಟಂ, ನಿರ್ವಿಶೇಷಸ್ಯ ಧೃತ್ಯಸಂಭವಾತ್. "ಪರಾಽಸ್ಯ ಶಕ್ತಿರ್ವಿವಿಧೈವ" ಇತಿ ಶ್ರುತೌ ಶಕ್ತೇಸ್ಸ್ವಾಭಾವಿಕತ್ವಶ್ರವಣಾನ್ನಿರ್ವಿಶೇಷತ್ವಂ ಕದಾಚಿದಪಿ ಬ್ರಹ್ಮಣೋ ನ ಸಂಭವತಿ. ವಹ್ನಿರ್ದಹತೀತಿ ಶಕ್ತಿಶಕ್ತಿಮತೋರಪೃಥಕ್ಸಿದ್ಧತ್ವೇಽಪಿ ಭೇದವ್ಯವಹಾರಾತ್ ಶಕ್ತಿಶಕ್ತಿಮತೋರ್ಭೇದಾಭೇದಸ್ಸಿದ್ಧಃ. ಭೇದಾಭೇದಯೋರ್ವಿರೋಧ ಇತಿ ಚೇತ್ "ಆನಂದೋ ವಿಷಯಾನುಭವೋ ನಿತ್ಯತ್ವಂ ಚೇತಿ ಸಂತಿ ಧರ್ಮಾಃ' ಇತಿ ಪದಪೃಥಕ್ತ್ವೇಽಪ್ಯಬಾಧಿತಪೃಥಕ್ತ್ವವ್ಯವಹಾರದರ್ಶನಾನ್ನ ವಿರೋಧಃ. ತದುಕ್ತಂ ಕೂರ್ಮೇ "ಚಿದ್ರೂಪಶ್ಚ ಶಿವಸ್ಸಾಕ್ಷಾತ್ಸತ್ಯಾನಂದಮಯೀ ಶಿವಾ" ಇತಿ. ಕಿಂಚ "ಏಕ ಏವ ರುದ್ರಃ ನ ದ್ವಿತೀಯಾಯ ತಸ್ಥೇ" ಇತಿ ಜಗಚ್ಛಾಸನೇ ಪರಮೇಶ್ವರಸ್ಯಾದ್ವಿತೀಯಸ್ಯ ವ್ಯವಸ್ಥಾಪನಾತ್ ಚಿಚ್ಛಕ್ತಿವಿಶಿಷ್ಟಸ್ಯ ಪರಮಶಿವಸ್ಯೈವಾಕ್ಷರಶಬ್ದವಾಚ್ಯತ್ವಂ ನಿಷ್ಪ್ರತ್ಯೂಹಂ.

ವಿಶ್ವದ ಧಾರಣವು ಪ್ರಧಾನಕ್ಕೂ ಅನ್ವಯಿಸುವುದೆಂದು ಆಶಂಕಿಸಿ ನಿರಾಕರಿಸುತ್ತಾನೆ—**ಸಾ ಚ ಪ್ರಶಾಸನಾತ್ ॥ ೧೧ ॥**

"ಈ ಅಕ್ಷರನ ಶಾಸನದಿಂದಲೇ ಸೂರ್ಯಚಂದ್ರರು ಸ್ಥಿರವಾಗಿ ನೆಲಸಿದ್ದಾರೆ" ಎಂಬಲ್ಲಿ ಪರಶಿವನ ಶಾಸನವನ್ನು ಹೇಳಿರುವುದರಿಂದ ವಿಶ್ವದ ಧಾರಣವು ಶಿವನಿಗೇ ಅನ್ವಯಿಸುತ್ತದೆ. ಜಡಪ್ರಧಾವಕ್ಕೆ ಈ ಬಗೆಯ ಶಾಸನವು ಸಂಭವಿಸಲಾರದು. ಬೇರೆ ಶ್ರುತಿಯಲ್ಲೂ "ಈಶ್ವರನೇ ಎಲ್ಲಾ ವಿದ್ಯೆಗಳಿಗೂ ಮತ್ತು ಜೀವರಿಗೂ ನಿಯಾಮಕನು" ಎಂದು ಹೇಳಲಾಗಿದೆ. ಪ್ರಧಾನವು ಎಂದಿಗೂ ಹೀಗೆ ನಿಯಾಮಕವಾಗಲಾರದು. ಆದ್ದರಿಂದ ಸರ್ವಾಶ್ರಯನಾದ ಪರಶಿವನು ಸವಿಶೇಷನೆಂದು ಹೇಳಿದಹಾಗಾಯಿತು. ಯಾಕೆಂದರೆ ಅವನು ನಿರ್ವಿಶೇಷನಾದರೆ ಇದೆಲ್ಲಕ್ಕೂ ಆಧಾರನಾಗಲಾರನು. ಶ್ರುತಿಯಲ್ಲಿ ಶಕ್ತಿಯನ್ನು ಶಿವನ ಸ್ವಭಾವವೆಂದು ಹೇಳಿರುವುದರಿಂದ ಅವನು ಎಂದಿಗೂ ನಿರ್ವಿಶೇಷನೆನಿಸಲಾರನು. ಬೆಂಕಿ ಸುಡುತ್ತದೆ ಎಂಬಂತೆ ಶಕ್ತಿಗೂ ಶಕ್ತನಿಗೂ ಬೇರೆಯಾಗಿರಲಿಕ್ಕೆ ಸಾಧ್ಯವಿಲ್ಲದಿದ್ದರೂ ಭೇದವ್ಯವಹಾರವಿರುವುದರಿಂದ ಭೇದಾಭೇದವು ಸಿದ್ಧಿಸುತ್ತದೆ. ಭೇದಕ್ಕೂ ಅಭೇದಕ್ಕೂ ವಿರೋಧವಿಲ್ಲವೇ ಅಂದರೆ ಲೋಕದಲ್ಲಿ ಆನಂದ-ವಿಷಯಾನುಭವ-ನಿತ್ಯತ್ವವೆಂಬ ಪರಸ್ಪರವಿರುದ್ಧ ಧರ್ಮಗಳನ್ನು ಒಟ್ಟಿಗೆ ಸೇರಿಸಿ ಹೇಳುವಂತೆ ಶಕ್ತಿಗೂ ಶಕ್ತನಿಗೂ ಭೇದ ಮತ್ತು ಅಭೇದವೆರಡೂ ಇರುವುದರಲ್ಲಿ ವಿರೋಧವೇನಿಲ್ಲ. ಕೂರ್ಮಪುರಾಣದಲ್ಲಿ ಶಿವನಂತೆ ಶಕ್ತಿಯೂ ಸಚ್ಚಿದಾನಂದೆಯೆಂದು ಹೇಳಿದೆ. ಶ್ರುತಿಯಲ್ಲಿ ಒಬ್ಬನೇ ರುದ್ರನು ಅದ್ವಿತೀಯನಾಗಿದ್ದಾನೆ" ಎಂದು ಹೇಳಿದೆ. ಆದ್ದರಿಂದ ಜಗಚ್ಛಾಸನಕ್ಕೆ ಶಿವನೇ ಅದ್ವಿತೀಯನೆಂದು ವ್ಯವಸ್ಥೆಮಾಡಲಾಗಿದೆ. ಇದರಿಂದ ಚಿಚ್ಛಕ್ತಿವಿಶಿಷ್ಟಶಿವನೇ ಅಕ್ಷರನೆಂಬುದು ನಿರ್ವಿವಾದವಾಗಿದೆ.

**ಪುನರ್ಹೇತ್ವಂತರಮಾಹ— ಅನ್ಯಭಾವವ್ಯಾವೃತ್ತೇಶ್ಚ ॥ ೧೨ ॥**

ರ್ಭಪಕ್ಷೋಽತ್ರ ನ ವ್ಯಪದಿಶ್ಯತೇ, ನಾರಾಯಣಪಕ್ಷ ಏವಾತ್ರೇತಿ ಚೇದುಚ್ಯತೇ. "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ" ಇತಿ ಶ್ರುತೌ ಬ್ರಹ್ಮವಿಷ್ಣುಕಾಲರುದ್ರಾದೀನಾಂ ಪ್ರಥಮಜೀವತ್ವಪರಶಿವಜನ್ಯತ್ವವ್ಯಪದೇಶಾತ್ತೇಷಾಮಮೃತತ್ವಾಭಯತ್ವಜಗದುಭಯಕಾರಣತ್ವವಿಶ್ವಾಧಿಕತೃತ್ವಾದಿಧರ್ಮಾಃ ಕಥಮುಪಪದ್ಯಂತೇ? "ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ" ಇತ್ಯಾದೌ ನಾರಾಯಣಸ್ಯ ವಿಶ್ವಾತ್ಮಕತ್ವವ್ಯಪದೇಶಾತ್ಕಥಮಸ್ಯೋಪಾಸ್ಯತ್ವಂ ನ ಘಟತ ಇತಿ ಚೇದುಚ್ಯತೇ. "ಏತಸ್ಮಾಜ್ಜೀವಘನಾತ್" ಇತಿ ವಾಕ್ಯೇ ಜೀವಘನಾಜ್ಜೀವಸಮಷ್ಟ್ಯಾತ್ಮಕಹಿರಣ್ಯಗರ್ಭಾತ್ಪರಾದುತ್ಕೃಷ್ಟಾನ್ನಾರಾಯಣಾತ್ಪರಮುತ್ಕೃಷ್ಟಂ ಪುರಿಶಯಂ ಪುರಿ ದಹರಪುಂಡರೀಕೇ ಅಂತರ್ಯಾಮಿತಯಾ ಸ್ಥಿತಂ, ಅತ ಏವ ಪುರುಷಂ ಪರಂ ಬ್ರಹ್ಮ ತದುಪಾಸಕಸ್ಸಾಕ್ಷಾತ್ಪಶ್ಯತೀತಿ ನಿರ್ದೇಶಾನ್ನ ನಾರಾಯಣೋಽತ್ರೋಪಾಸ್ಯಃ. "ನಾರಾಯಣಂ ಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ" ಇತ್ಯಾದೌ ಪರಮಶಿವೋಪಾಸಕಸ್ಯ ನಾರಾಯಣಸ್ಯ ಶ್ವೇತಕೇತ್ವಾದಿವದೌಪಚಾರಿಕತ್ವೇನ ಬ್ರಹ್ಮಧರ್ಮಮುಕ್ತ್ವಾ ನಾರಾಯಣಾತ್ ಯತ್ಪರಂ ತತ್ಪರಂ ಬ್ರಹ್ಮೇತ್ಯುಪದಿಶ್ಯತೇ. ಶ್ರುತ್ಯಂತರೇ ಚ, "ಪರಾತ್ಪರತ್ಪರಂ ಬ್ರಹ್ಮ ತತ್ಪರಾತ್ಪರತೋ ಹರಿಃ। ಯತ್ಪರಾತ್ಪರತೋಽಧೀಶಃ ತನ್ಮೇ ಮನಶ್ಶಿವಸಂಕಲ್ಪಮಸ್ತು॥" ಇತಿ ಬ್ರಹ್ಮವಿಷ್ಣ್ವತೀತಪರಮಶಿವೇ ಮದೀಯಮನಸ್ಸಂಕಲ್ಪೋಽಸ್ತ್ವಿತಿ ವೇದಪುರುಷೈಃ ಪ್ರಾರ್ಥ್ಯತೇ. 'ತದ್ವಿಷ್ಣೋಃ ಪರಮಂ ಪದಂ' ಇತಿ ವಾಕ್ಯೇ ಯದ್ವಿಷ್ಣೋರ್ನಾರಾಯಣಾತ್ಪರಮುತ್ಕೃಷ್ಟಂ ಪದಂ ಶಿವಾಭಿಧೇಯಂ ಪರಬ್ರಹ್ಮ ತತ್ಪದಂ ಸೂರಯಃ ಪರಶಿವೋಪಾಸಕಾಃ ವಿದ್ವಾಂಸಃ ಸದಾ ಪಶ್ಯಂತಿ ಸಾಕ್ಷಾತ್ಕುರ್ವಂತೀತಿ ಬೋಧ್ಯತೇ. ತಥಾಚ ಸ್ಮೃತಿಃ "ವಿಷ್ಣೋರ್ನಾರಾಯಣಾದೂರ್ಧ್ವಂ ಪರಮಂ ಪರಿಶೇಷಿತಂ । ಪದಂ ಶಿವಾಭಿಧಂ ನಿತ್ಯಂ ಸದಾ ಪಶ್ಯಂತಿ ಸೂರಯಃ॥" ಇತಿ. ತಸ್ಮಾನ್ನಾರಾಯಣಾದಧಿಕಂ ಶಿವಪದಮೇವ ಮುಮುಕ್ಷುಭಿರ್ವೇದಿತವ್ಯಂ. ಕಿಂಚ ನಾರಾಯಣಸ್ಯ ವಿಶ್ವಾತ್ಮಕತ್ವಂ ಪರಮೇಶ್ವರೋಮಾಶಕ್ತ್ಯಂಶತ್ವಾತ್ಸಮುಚಿತಂ. 'ಪುರುಷೋ ವೈ ರುದ್ರಃ', 'ವಾಸುದೇವಃ ಪರಾ ಪ್ರಕೃತಿಃ', ಏಕೈವ ಶಕ್ತಿಃ ಪರಮೇಶ್ವರಸ್ಯ ಭಿನ್ನಾ ಚತುರ್ಧಾ ವಿನಿಯೋಗಕಾಲೇ। ಭೋಗೇ ಭವಾನೀ ಪುರುಷೇಷು ವಿಷ್ಣುಃ ಕ್ರೋಧೇ ಚ ಕಾಳೀ ಸಮರೇ ಚ ದುರ್ಗಾ॥'ಇತ್ಯಾದೌ ತಸ್ಯ ಪರಾಶಕ್ತ್ಯಂಶತ್ವಂ ಸ್ಪಷ್ಟಮುಕ್ತಂ. ಅತ ಏವ 'ಋತಂ ಸತ್ಯಂ' ಇತ್ಯತ್ರ ಋತಂ ಸತ್ಯಂ ಅವಾಙ್ಮಾನಸಗೋಚರಂ ತ್ರಿಲೋಚನತ್ವೇನ ವಿರೂಪಾಕ್ಷಂ ಉಮಾರೂಪಪ್ರಣವಶಕ್ತ್ಯಾ

**ಶಬಲಾತ್ಮಕತ್ವೇನ ಕೃಷ್ಣಪಿಂಗಳಂ. "ಪ್ರಣವಾಖ್ಯಾ ಪರಾಶಕ್ತಿಶ್ಶಿವಸ್ವಾತ್ಮಿಕೀ ಸ್ಮೃತಾ। ತತ್ಪರಃ ಪರಮಂ ಬ್ರಹ್ಮ ವಿಶ್ವತೀತೋ ಮಹೇಶ್ವರಃ" ಇತಿ ಸ್ಮೃತೌ ಪ್ರಣವಸ್ಯ ಪರಾಶಕ್ತ್ಯಾತ್ಮಕಶ್ರವಣಾತ್. ಪರಂ ಸರ್ವಾತಿಶಾಯಿ ಬ್ರಹ್ಮಪುರಿಶಯಂ ಪುರುಷಮೀಕ್ಷತೇ ಇತ್ಯುಪದೇಶಾದತ್ರೇಕ್ಷತಿಕರ್ಮತ್ವೇನ ನಿರ್ದಿಶ್ಯಮಾನಃ ಪುರುಷಃ ಸಾಕ್ಷಾಚ್ಛಿವ ಏವೇತಿ ಸಿದ್ಧಂ.**

ಪ್ರತ್ಯಕ್ಷಾದಿಪ್ರಮಾಣಗಳಿಗಗೋಚರನಾದರೂ ಶಿವನು ಕೃಪೆಯಿಂದ ಉಪಾಸಕನಿಗೆ ಗೋಚರನಾಗುವನೆಂದು ಮುಂದೆ ತಿಳಿಸುತ್ತಾನೆ.

**ಈಕ್ಷತಿಕರ್ಮಾಧಿಕರಣ ॥ ೪ ॥ ಈಕ್ಷತಿಕರ್ಮವ್ಯಪದೇಶಾತ್ಸಃ ॥೧೩॥**

ಆಥರ್ವಣದ ಪ್ರಶ್ನೋಪನಿಷತ್ತಿನಲ್ಲಿ ಈ ಸೂತ್ರದ ವಿಷಯ ಬಂದಿದೆ. "ಸತ್ಯಕಾಮನೇ, ಓಂಕಾರವೇ ಪರಬ್ರಹ್ಮವೂ ಅಪರಬ್ರಹ್ಮವೂ ಆಗಿದೆ. ಹೀಗೆ ತಿಳಿದವನು ಇದರ ಆಶ್ರಯದಿಂದಲೇ ಇವೆರಡರಲ್ಲಿ ಒಂದನ್ನು ಸೇರುತ್ತಾನೆ" ಎಂದು ಆರಂಭಿಸಿ "ಮೂರು ಮಾತ್ರೆಗಳಿರುವ ಈ ಓಂ ಎಂಬ ಅಕ್ಷರದ ಮೂಲಕ ಪರಮಪುರುಷನನ್ನು ಧ್ಯಾನಿಸುವವನು ತೇಜಸ್ವಿಯಾದ ಸೂರ್ಯನೊಡನೆ ಸೇರುವನು. ಸರ್ಪವು ಪೊರೆಯಿಂದ ಬಿಡುಗಡೆ ಹೊಂದುವಂತೆ ಅವನು ಪಾಪದಿಂದ ಬಿಡುಗಡೆಹೊಂದಿ ಪರಬ್ರಹ್ಮನಾಗುವನು. ಸಾಮಗಳು ಅವನನ್ನು ಬ್ರಹ್ಮಲೋಕಕ್ಕೆ ಒಯ್ಯುತ್ತವೆ". ಇಲ್ಲಿ ಧ್ಯಾನಯೋಗ್ಯವೆಂದು ಹೇಳಿರುವ ಪರಮಪುರುಷನು ಪರಶಿವನೇ ಅಥವಾ ಅನ್ಯನೇ ಎಂಬ ಸಂಶಯ ಬರುತ್ತದೆ. ಇಲ್ಲಿ ಹಿರಣ್ಯಗರ್ಭನು ಉಪಾಸ್ಯನೇ ಹೊರತು ಪರಶಿವನಲ್ಲ. ಸಾಮಗಳು ಬ್ರಹ್ಮಲೋಕಕ್ಕೆ ಕರೆದೊಯ್ಯುವುದನ್ನೇ ಉಪಾಸಕನಿಗೆ ಇಲ್ಲಿ ಫಲವಾಗಿ ಹೇಳಿದೆ. ಜೀವರೆಲ್ಲರಿಗೂ ಉತ್ಕೃಷ್ಟನೆನಿಸಿದ ಹಿರಣ್ಯಗರ್ಭನಲ್ಲಿ ಪರಮಶಬ್ದದ ಪ್ರಯೋಗವೂ ಯುಕ್ತವಾಗಿದೆ ಅಥವಾ ಪುರುಷನೆನಿಸಿದ ನಾರಾಯಣನಾದರೂ ಇಲ್ಲಿ ಉಪಾಸ್ಯನಾಗಬಹುದು. "ಅದು ವಿಷ್ಣುವಿನ ಪರಮಪದ. ಅದನ್ನು ಜ್ಞಾನಿಗಳು ಕಾಣುತ್ತಾರೆ" ಎಂಬಲ್ಲಿ ವಿಷ್ಣುವಿನ ಸ್ಥಾನವೇ ಜ್ಞಾನಿಗಳಿಗೆ ಗಮ್ಯವೆಂದು ಹೇಳಲಾಗಿದೆ. ಹಾಗೆಯೇ ಪ್ರಣವಶಬ್ದವು ಮುಖ್ಯವೃತ್ತಿಯಿಂದ ಹಿರಣ್ಯಗರ್ಭನನ್ನು ತಿಳಿಸುವುದರಿಂದ ಅವನನ್ನೇ ಇಲ್ಲಿ ಎಲ್ಲರಿಗೂ ಉಪಾಸ್ಯನೆಂದು ಹೇಳಿರಬೇಕು. ಪರಶಿವನಂತೂ ಇಲ್ಲಿ ಉಪಾಸ್ಯನಾಗಲಾರನು ಎಂದು ಪೂರ್ವಪಕ್ಷ ಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಈ ಶ್ರುತಿಯಲ್ಲಿ ಹೇಳಿರುವ ಪರಮಪುರುಷನೆಂದರೆ ಶಿವನಲ್ಲದೆ ಬೇರೆಯಲ್ಲ; ಯಾಕೆಂದರೆ ಅವನನ್ನೇ ಉಪಾಸಕನ ಈಕ್ಷಣಕ್ಕೆ ಕರ್ಮವಾಗಿ ಶ್ರುತಿ ತಿಳಿಸಿದೆ. "ಈ ಜೀವಘನನಿಗಿಂತಲೂ ಶ್ರೇಷ್ಠನೆನಿಸಿ ದೇಹವೆಂಬ ಪುರದಲ್ಲಿ ಮಲಗಿರುವ ಪುರುಷನನ್ನು ಉಪಾಸಕನು ಕಾಣುತ್ತಾನೆ" ಎಂಬ ಶ್ರುತಿಯ ವಾಕ್ಯಶೇಷದಲ್ಲಿ ಧ್ಯೇಯನಾದ ಪುರುಷನೇ ಈಕ್ಷಣಕ್ಕೆ ಕರ್ಮವಾಗಿ ನಿರ್ದಿಷ್ಟನಾಗಿದ್ದಾನೆ. "ಅವನನ್ನು ಸಾಮಗಳು ಬ್ರಹ್ಮಲೋಕಕ್ಕೆ ಒಯ್ಯುತ್ತವೆ" ಎಂಬಲ್ಲಿ ಬ್ರಹ್ಮಶಬ್ದವು ಚತುರ್ಮುಖಬ್ರಹ್ಮನಲ್ಲಿ ರೂಢವಾದ್ದರಿಂದ ಇಲ್ಲಿ ಅವನೇ ಏಕೆ ಉಪಾಸ್ಯನಾಗಬಾರದು ಎಂದು ಕೇಳುವುದು ಸರಿ.

ಯಲ್ಲ. ಯಾಕೆಂದರೆ ಶ್ರುತಿಯಲ್ಲಿ ಹೇಳಿರುವ ಜೀವಘನಪದವು ಸಕಲ ಜೀವರಮೇಲೆ ಅಭಿಮಾನವುಳ್ಳ ಹಿರಣ್ಯಗರ್ಭನಿಗೇ ಅನ್ವಯಿಸುತ್ತದೆ. ಅವನಿಗಿಂತ ಶ್ರೇಷ್ಠನಾದ ಪರಮಶಿವನೇ ಸಾಧಕನ ದರ್ಶನಕ್ಕೆ ಕರ್ಮವಾಗಿ ಅವನೇ ಧ್ಯೇಯನೆನಿಸಿದ್ದಾನೆ. 'ಪರಮಪುರುಷಂ' ಎಂಬ ವಿಶೇಷಣವು ಪರಮಶಿವನಿಗೆ ಮಾತ್ರವೇ ಹೊಂದಿಕೆಯಾಗುತ್ತದೆ. "ಪುರುಷನಿಗಿಂತ ಹೆಚ್ಚಿನದು ಯಾವುದೂ ಇಲ್ಲ", "ಅವನೇ ಕೊನೆಯ ಗಮ್ಯಸ್ಥಾನ" ಎಂಬಲ್ಲಿ ಪರಮಪುರುಷನೆಂದರೆ ಅವನಿಗಿಂತ ಬೇರೆ ಯಾವ ವಸ್ತುವೂ ಇಲ್ಲವೆಂದು ತಿಳಿದುಬರುತ್ತದೆ. ಇದೂ ಅಲ್ಲದೆ, "ಯಾವನು ಭಯ ಮರಣ ಮುಪ್ಪುಗಳಿಲ್ಲದೆ ಶಾಂತನಾದ ಪರಮಾತ್ಮನನ್ನು ಓಂಕಾರದಿಂದ ಹೊಂದುತ್ತಾನೋ" ಎಂಬ ಶ್ರುತಿಯಲ್ಲಿ ಹೇಳಿರುವ ಪರಶಿವನ ಅಸಾಧಾರಣಧರ್ಮಗಳು ಹಿರಣ್ಯಗರ್ಭನಲ್ಲಿ ಸಂಭವಿಸುವುದಿಲ್ಲ. 'ಬ್ರಹ್ಮಲೋಕಂ' ಎಂಬಲ್ಲಿ ಪರಬ್ರಹ್ಮನೆನಿಸಿದ ಪರಶಿವಲೋಕವೇ ಮುಕ್ತನಿಗೆ ಗಮ್ಯಸ್ಥಾನವೆಂದು ನಿರ್ದಿಷ್ಟವಾಗಿದೆ. "ಓಂಕಾರವೇ ಪರ ಮತ್ತು ಅಪರ ಬ್ರಹ್ಮ" ವೆಂದು ವಿಭಾಗಿಸಿ, "ಪರಬ್ರಹ್ಮವನ್ನು ಧ್ಯಾನಿಸಬೇಕು" ಎಂದು ಹೇಳಿದ್ದರಿಂದ ಪರಶಿವನೇ ಇಲ್ಲಿ ಧ್ಯೇಯನೆನಿಸಿದ್ದಾನೆ. "ಅವನೇ ಚತುರ್ಮುಖನಿಗೂ ಅಧಿಪತಿ, ಲೋಕರಕ್ಷಕ, ಸದಾಶಿವ ಮತ್ತು ಶಿವ ಎನಿಸಿದ್ದಾನೆ" "ಅಕಾರವೇ ಬ್ರಹ್ಮ-ಉಕಾರವೇ ವಿಷ್ಣು-ಮಕಾರವೇ ಕಾಲರುದ್ರ ಆದ್ದರಿಂದ ಓಂಕಾರವೇ ಲಿಂಗವಾಗಿದೆ" "ತಾರಕಸ್ವರೂಪನಿಗೆ ನಮಸ್ಕಾರ" ಹೀಗೆ ಅನೇಕ ಶ್ರುತಿಗಳಲ್ಲಿ ಪರಶಿವಬ್ರಹ್ಮವೇ ಪ್ರಣವವೆಂದು ಹೇಳಲಾಗಿದೆ. "ವೇದಗಳ ಆದಿಯಲ್ಲಿ ಸ್ವರವೆಂದೂ, ವೇದಾಂತವೇದ್ಯವೆಂದೂ ಪ್ರಸಿದ್ಧವಾಗಿ ಸರ್ವಾಧಾರವಾದ ಪ್ರಣವಕ್ಕಿಂತಲೂ ಆಚಿನವನು ಮಹೇಶ್ವರನು" ಎಂಬಲ್ಲಿ ಪರಶಿವನು ಪ್ರಣವಕ್ಕಿಂತ ಆಚಿನವನೆಂದು ಹೇಳಿದೆ. ಆದ್ದರಿಂದ ಅವನೇ ಪ್ರಣವರೂಪನೂ ಪ್ರಣವಪರನೂ ಆಗಿರುವನೆಂಬುದು ಯುಕ್ತವಾಗಿದೆ. "ಸರ್ಪವು ಪೊರೆಯಿಂದ ಬಿಡುಗಡೆಯಾಗುವಂತೆ ಉಪಾಸಕನು ಪಾಪದಿಂದ ಬಿಡುಗಡೆ ಹೊಂದುವನು" ಎಂಬಲ್ಲಿ ಪರಶಿವೋಪಾಸಕರಿಗೆ ಎಲ್ಲ ಪಾಪಗಳೂ ನಷ್ಟವಾಗಿ ಸಾಲೋಕ್ಯವೇ ಮೊದಲಾದ ಕ್ರಮಮುಕ್ತಿಯನ್ನು ಹೇಳಲಾಗಿದೆ. "ಈ ಜೀವಘನನಿಗಿಂತ ಆಚಿನ ಪರಪುರುಷನನ್ನು ನೋಡುತ್ತಾನೆ" ಎಂಬಲ್ಲಿ ಜೀವಸಮಷ್ಟಿ ಎನಿಸಿದ ಹಿರಣ್ಯಗರ್ಭನಿಗಿಂತಲೂ ಶ್ರೇಷ್ಠನಾದವನೇ ಉಪಾಸ್ಯನೆಂದು ಹೇಳಿರುವುದರಿಂದ ಹಿರಣ್ಯಗರ್ಭನು ಉಪಾಸ್ಯನಾಗಲಾರನು; ಆದರೆ ನಾರಾಯಣನೇ ಉಪಾಸ್ಯನಾಗಲಿ. 'ಧ್ಯಾಯಿತೇಶಾನಂ' ಎಂಬ ಶ್ರುತಿಯಲ್ಲಿ ಬ್ರಹ್ಮ ವಿಷ್ಣು ಕಾಲರುದ್ರ ಮೊದಲಾದವರು ಜೀವರೆಂದೂ, ಪರಶಿವನಿಂದ ಹುಟ್ಟಿದವರೆಂದೂ ಹೇಳಿರುವುದರೀದ ಅವರೆಲ್ಲರಿಗೂ ಅಮೃತತ್ವ, ಅಭಯತ್ವ, ಜಗದುಭಯಕಾರಣತ್ವ, ವಿಶ್ವಾಧಿಕತ್ವ ಮೊದಲಾದ ಧರ್ಮಗಳ ಹೇಗೆ ಹೊಂದುತ್ತವೆ? ಆದರೆ "ನಾರಾಯಣನೇ, ಜ್ಞೇಯನು, ವಿಶ್ವಾತ್ಮಕನು. ಪರಾಯಣನು." ಎಂಬಲ್ಲಿ ನಾರಾಯಣನನ್ನು ವಿಶ್ವಾತ್ಮಾಕನೆಂದು ಹೇಳಿರುವುದರಿಂದ ಅವನೇ ಉಪಾಸ್ಯನೆಂಬುದು ಯಾತಕ್ಕೆ ಹೊಂದುವುದಿಲ್ಲ? ಎಂದು ಕೇಳುವುದು ಯುಕ್ತವಲ್ಲ.

ಶ್ರುತಿಯಲ್ಲಿ ಜೀವಘನನೆಂದರೆ ಜೀವರೆಲ್ಲರಿಗೂ ಉತ್ಕೃಷ್ಟನಾದ ಹಿರಣ್ಯಗರ್ಭನೆಂದೂ ಅವನಿಗಿಂತ ಉತ್ಕೃಷ್ಟನು ನಾರಾಯಣನೆಂದೂ, ಅವನಿಗಿಂತ ಉತ್ಕೃಷ್ಟನೆನಿಸಿ, ದಹರ ಕಮಲದಲ್ಲಿ ಅಂತರ್ಯಾಮಿಯಾಗಿ ನೆಲಸಿರುವ ಪರಮಪುರುಷನನ್ನು ಉಪಾಸಕನು ನೋಡುತ್ತಾನೆ ಎಂದು ಹೇಳಿರುವುದರಿಂದ ಇಲ್ಲಿ ನಾರಾಯಣನು ಉಪಾಸ್ಯನಾಗ ಲಾರನು. "ನಾರಾಯಣನೇ ಪರಬ್ರಹ್ಮ, ಪರತತ್ತ್ವ"ಎಂಬಲ್ಲಿ ಪರಶಿವೋಪಾಸಕನಾದ ನಾರಾಯಣನನ್ನು ಶ್ವೇತಕೇತುವಿನಂತೆ ಉಪಚಾರಕ್ಕಾಗಿ ಬ್ರಹ್ಮವೆಂದು ತಿಳಿಸಿ ನಾರಾಯ ಣನಿಗಿಂತ ಉತ್ಕೃಷ್ಟವಾದ ಪರಬ್ರಹ್ಮವನ್ನು ಶ್ರುತಿಯಲ್ಲಿ ಉಪದೇಶಿಸಲಾಗಿದೆ. "ಲೋಕ ದಲ್ಲಿ ಶ್ರೇಷ್ಠವಸ್ತುವಿಗಿಂತಲೂ ಬ್ರಹ್ಮನೇ ಶ್ರೇಷ್ಠನು. ಅವನಿಗಿಂತಲೂ ವಿಷ್ಣು ಶ್ರೇಷ್ಠನು. ಅವನಿಗಿಂತಲೂ ಶ್ರೇಷ್ಠನಾದ ಶಿವನಲ್ಲಿ ನಮ್ಮ ಮನಸ್ಸು ಅಂಟಿಕೊಳ್ಳಲಿ", ಎಂದು ವೇದಪುರುಷರು ಬ್ರಹ್ಮ ವಿಷ್ಣುಗಳಿಗಿಂತಲೂ ಬೇರೆಯಾದ ಪರಶಿವನಲ್ಲಿ ಮೊರೆ ಇಟ್ಟಿ ದ್ದಾರೆ. "ವಿಷ್ಣುವಿನ ಪರಮಪದವನ್ನು ಜ್ಞಾನಿಗಳು ನೋಡುತ್ತಾರೆ"ಎಂಬಲ್ಲಿ ವಿಷ್ಣುವಿ ಗಿಂತಲೂ ಉತ್ಕೃಷ್ಟವಾದ ಪರಶಿವಬ್ರಹ್ಮದ ಸ್ಥಾನವನ್ನು ಉಪಾಸಕರು ಯಾವಾಗಲೂ ಅನುಭವಿಸುತ್ತಾರೆ ಎಂದು ಅರ್ಥವಾಗುತ್ತದೆ. "ವಿಷ್ಣುವಿಗಿಂತಲೂ ಮೇಲೆನಿಸಿರುವ ಶಿವಪದವನ್ನು ಜ್ಞಾನಿಗಳು ಕಾಣುತ್ತಾರೆ" ಎಂದು ಸ್ಮೃತಿಯೂ ತಿಳಿಸಿದೆ. ಆದ್ದರಿಂದ ನಾರಾಯಣನಿಗಿಂತ ಅಧಿಕವಾದ ಶಿವಪದವೇ ಮುಮುಕ್ಷುಗಳಿಗೆ ಹೊಂದಲರ್ಹವಾದದ್ದು. ಪರಾಶಕ್ತಿಯ ಅಂಶನಾದ್ದರಿಂದ ನಾರಾಯಣನು ವಿಶ್ವಾತ್ಮಕನಾಗುವುದು ಉಚಿತವೇ ಆಗಿದೆ. "ರುದ್ರನು ಪುರುಷನಾದರೆ, ನಾರಾಯಣನು ಪರಾಪ್ರಕೃತಿ ಎನಿಸಿದ್ದಾನೆ". "ಒಂದೇ ಶಕ್ತಿಪರಶಿವನಿಗೆ ಭೋಗಕಾಲದಲ್ಲಿಭವಾನಿ,ಪುರುಷರೂಪದಿಂದ ನಾರಾಯಣ, ಯುದ್ಧದಲ್ಲಿ ದುರ್ಗಿ, ಸಿಟ್ಟುಬಂದಾಗ ಕಾಳಿ ಎನಿಸಿ ಶೋಭಿಸುತ್ತಿದ್ದಾಳೆ". ಇದರಿಂದ ನಾರಾಯಣನು ಪರಾಶಕ್ತಿಯ ಅಂಶವೆಂಬುದು ಸ್ಪಷ್ಟವಾಗಿದೆ. "ಋತಂ ಸತ್ಯಂ" ಎಂಬ ಮಂತ್ರದಲ್ಲಿ ಶಿವನು ಮಾತಿಗೂ ಮನಸ್ಸಿಗೂ ಅಗೋಚರನೆಂದೂ, ಮೂರು ಕಣ್ಣುಗಳಿರುವುದರಿಂದ ವಿರೂಪಾಕ್ಷನೆಂದೂ, ಉಮೆಯೆಂಬ ಪ್ರಣವಶಕ್ತಿಯೊಡಗೂಡಿ ದ್ದರಿಂದ ಕೃಷ್ಣಪಿಂಗಳನೆಂದೂ ಹೇಳಲಾಗಿದೆ. "ಪ್ರಣವವೆಂಬ ಪರಾಶಕ್ತಿ ಶಿವನಲ್ಲಿ ಸಹಜವಾಗಿ ನೆಲಸಿದ್ದಾಳೆ. ಆದರೂ ಶಿವನು ಪ್ರಣವಕ್ಕಿಂತಲೂ ಆಚೆಗೆ ನೆಲಸಿ ವಿಶ್ವಾ ತೀತನಾಗಿದ್ದಾನೆ" ಎಂಬ ಸ್ಮೃತಿಯಲ್ಲಿ ಪ್ರಣವವು ಪರಾಶಕ್ತಿರೂಪವೆಂದು ಹೇಳ ಲಾಗಿದೆ. "ಪರಂ ಪುರುಷಂ" ಎಂಬ ಶ್ರುತಿಯಲ್ಲಿ ಸರ್ವೋತ್ಕೃಷ್ಟನಾದ ಪರಶಿವನನ್ನು ಜೀವನು ನೋಡುತ್ತಾನೆ ಎಂದು ಹೇಳಿರುವುದರಿಂದ ಈಕ್ಷಣಕ್ಕೆ ಕರ್ಮವಾಗಿ ನಿರ್ದಿಷ್ಟ ನಾಗಿರುವವನು ಸಾಕ್ಷಾತ್ ಶಿವನೆಂದು ಸಿದ್ಧವಾಯಿತು.

**ಬ್ರಹ್ಮವಿಷ್ಣ್ವಾದಿಚರಾಚರಪ್ರಪಂಚಾತೀತಸ್ಯ ಮಹೇಶ್ವರಸ್ಯ ಭಕ್ತ ಸಂಸಾರತಾರಣಾರ್ಥಮಧಿಕರಣಾಂತರಂ ದರ್ಶಯತಿ.—**

**ದಹರಾಧಿಕರಣಂ || ೫ || ದಹರ ಉತ್ತರೇಭ್ಯ || ೧೪ ||**

**ಛಾಂದೋಗ್ಯೇ ದೃಶ್ಯತೇಽಸ್ಯ ವಿಷಯಃ. "ಅಥ ಯದಿದಮಸ್ಮಿ**

ಸ್ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟಿತವ್ಯಂ ತದ್ವಾವ ವಿಜಿಜ್ಞಾಸಿತವ್ಯಂ" ಇತ್ಯಾದಿ. ಅತ್ರ ದಹರಶಬ್ದವಾಚ್ಯತ್ವೇನ ಶ್ರೂಯಮಾಣಂ ವಸ್ತು ಭೂತಾಕಾಶೋ ಜೀವಃ ಪರಮೇಶ್ವರೋ ವೇತಿ ಸಂಶಯಃ. ಅತ್ರ ಭೂತಾಕಾಶ ಏವ ದಹರವಾಚ್ಯಃ, ತಸ್ಯೈವ ಪ್ರಸಿದ್ಧತ್ವಾತ್. ಸೂಚೀರಂಧ್ರಾಂತರ್ಗತವ್ಯೋಮವತ್ತಸ್ಯ ದಹರಾಯತನಾಪೇಕ್ಷಯಾ ದಹರತ್ವಂ. "ಯಾವಾನ್ವಾಽಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ", "ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತಃ" ಇತ್ಯಾಕಾಶೋಪಮಾನತ್ವ ದ್ಯಾವಾಪೃಥಿವ್ಯಧಿಷ್ಠಾನತ್ವವ್ಯಪದೇಶಾತ್ಸರ್ವವ್ಯಾಪಕಸ್ಯಾಕಾಶಸ್ಯಾಂತಃ ಪ್ರವಿಷ್ಟತ್ವೇನ ದಹರಶಬ್ದವಾಚ್ಯತ್ವಮವಿರೋಧಂ. "ಅಥ ಯದಿದಮಸ್ಮಿನ್ ಪುರೇ ದಹರಂ" ಇತ್ಯಾದೌ ಬ್ರಹ್ಮಣಃ ಪರಮಶಿವಸ್ಯ ಪುರಂ ಶರೀರಂ ಬ್ರಹ್ಮಪುರಂ ಜೀವಃ, 'ಯಸ್ಯಾತ್ಮಾ ಶರೀರಂ' ಇತಿ ಶ್ರುತಿದರ್ಶನಾತ್. "ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಜೀವೋ ಭಾಗಸ್ಸ ವಿಜ್ಞೇಯೋ ಹೃದಯೇ ಸರ್ವದೇಹಿನಾಂ ||", "ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ" ಇತ್ಯಾದೌ ಜೀವಸ್ಯಾಲ್ಪಪರಿಮಾಣತ್ವವ್ಯಪದೇಶಾತ್ ದಹರಪದವಾಚ್ಯತ್ವಂ ವ್ಯವಹ್ರಿಯತೇ. ಏಯದುಪಮಾದಿಕಮಪಿ ಪರಶಿವಾಪೇಕ್ಷಯಾ ಜೀವಸ್ಯ ಭೇದಮುಪದಿಶತಿ. ತಸ್ಮಾಜ್ಜೀವಭೂತಾಕಾಶಯೋಃ ದಹರಶಬ್ದವಾಚ್ಯತ್ವಂ ಸರ್ವಾನುಪ್ರವಿಷ್ಟತ್ವಂ ಸಂಭವತೀತಿ ಚೇದ್ಬ್ರೂಮಃ. ದಹರ ಉತ್ತರೇಭ್ಯಃ—ಅತ್ರ ದಹರಾಕಾಶಸ್ಸಾಕ್ಷಾತ್ಪರಮೇಶ್ವರ ಏವ. ಕಸ್ಮಾದುತ್ತರೇಭ್ಯಃ. ವಾಕ್ಯಶೇಷಗತಹೇತುಭ್ಯಃ. ತಥಾಹಿ, ಜಿಜ್ಞಾಸ್ಯತ್ವೇನಾಭಿಹಿತಸ್ಯ ದಹರಾಕಾಶಸ್ಯ "ತಂ ಚೇದ್ಬ್ರೂಯುಃ" ಇತ್ಯುಪಕ್ರಮ್ಯ "ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾ ವಿಜಿಜ್ಞಾಸಿತವ್ಯಂ" ಇತ್ಯಾಕ್ಷೇಪಪೂರ್ವಕಂ ಸಮಾಧಾನವಾಕ್ಯಂ ಉಪದಿಶ್ಯ, "ಸ ಬ್ರೂಯಾದ್ಯಾವಾನ್ವಾ ಅಯಮಾಕಾಶಸ್ತಾವಾನ್ಯೇಷೋಽಂತರ್ಹೃದಯ ಆಕಾಶ"ಇತ್ಯಾದಿನಾ ಆಕಾಶೋಪಮಾನತ್ವಾತ್, ದ್ಯಾವಾಪೃಥಿವ್ಯಧಿಷ್ಠಾನತ್ವೇನ ನಿರ್ದೇಶಾತ್ ಭೂತಾಕಾಶಸ್ಯ ಸರ್ವೋಪಾಸ್ಯತ್ವಂ ನ ಸಂಭವತಿ. "ಏಷ ತ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯು ರ್ವಿಶೋಕೋ ವಿಜಿಘತ್ಸೋಽಪಿಪಾಸಸ್ಸತ್ಯಕಾಮಸ್ಸತ್ಯಸಂಕಲ್ಪಃ" ಇತ್ಯಾದಿವಾಕ್ಯನಿರ್ದಿಷ್ಟಾಪಹತಪಾಪ್ಮತ್ವಾದಯೋ ಗುಣಾಃ ನ ಭೂತಾಕಾಶಜೀವಯೋಸ್ಸಂಭವಂತಿ. ಕಿಂಚ "ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ ಏವಮೇವಾಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ" ಇತಿ ಕರ್ಮಣಾಮನಿತ್ಯಫಲಮುಪದಿಶ್ಯ, "ಅಥ

ಯ ಇಹಾತ್ಮಾನಮನುವಿದ್ಯ ವ್ರಜತ್ಯೇತಾಂಶ್ಚ ಸತ್ಯಾನ್ ಕಾಮಾಂಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ" ಇತಿ ಪ್ರಕೃತದಹರಾಕಾಶಸ್ಯಾನಂದಫಲತ್ವವ್ಯವಸ್ಥಾಪನಾತ್ಪರಮೇಶ್ವರತ್ವಮುಸ್ಯ ನಿರ್ದಿಷ್ಟಂ. ತಸ್ಮಾದ್ದ್ಯಾವಾಪೃಥಿವ್ಯಧಿಷ್ಠಾನಾಕಾಶೋಪಮಿತದಹರಾಕಾಶಃ ಪೂರ್ವೋಕ್ತಹೇತುಭ್ಯಃ ಪರಮಶಿವ ಇತಿ ಸಿದ್ಧಂ.

ತ್ರಿಮೂರ್ತ್ಯತೀತನಾದ ಶಿವನು ಭಕ್ತರ ಉದ್ಧಾರಕ್ಕಾಗಿ ದಹರನೆನಿಸಿದ್ದಾನೆ—

**ದಹರಾಧಿಕರಣ ॥ ೧ ॥ ದಹರ ಉತ್ತರೇಭ್ಯಃ ॥ ೧೪ ॥**

ಛಾಂದೋಗ್ಯದಲ್ಲಿ ಇದರ ವಿಷಯ ಬಂದಿದೆ. "ಈ ಬ್ರಹ್ಮಪುರದಲ್ಲಿ ದಹರ ಕಮಲವೆಂಬ ಮನೆಯೊಳಗೆ ದಹರವೆಂಬ ಆಕಾಶದಲ್ಲಿ ಇರುವವನನ್ನು ಹುಡುಕಬೇಕು ಮತ್ತು ಅವನ ಬಗ್ಗೆ ಜಿಜ್ಞಾಸೆಮಾಡಬೇಕು". ಇಲ್ಲಿ ದಹರವೆಂಬ ವಸ್ತು ಭೂತಾಕಾಶವೇ? ಜೀವನೇ? ಅಥವಾ ಪರಶಿವನೇ? ಎಂದು ಸಂಶಯ ಬರುತ್ತದೆ. ಆಕಾಶ ಪದವು ಭೂತಾಕಾಶದಲ್ಲಿ ಪ್ರಸಿದ್ಧವಾಗಿರುವುದರಿಂದ ದಹರಾಕಾಶವೆಂದರೆ ಭೂತಾಕಾಶಕ್ಕೇ ಅನ್ವಯಿಸುತ್ತದೆ. ಸೂಜಿಯ ರಂಧ್ರದೊಳಗಿನ ಬಯಲಿನಂತೆ ಆಕಾಶವು ದಹರಾಯತನಕ್ಕಿಂತಲೂ ಅತ್ಯಲ್ಪವಾಗಿರುತ್ತದೆ. "ಈ ಆಕಾಶ ಎಷ್ಟು ಪರಿಮಾಣವೋ ಹೃದಯದೊಳಗಿನ ಆಕಾಶವೂ ಅಷ್ಟೇ ಇದೆ","ದ್ಯಾವಾಪೃಥಿವಿಗಳಂತೂ ಅದರೊಳಗೇ ಇರುತ್ತವೆ". ಇಲ್ಲಿ ಆಕಾಶವನ್ನು ಉಪಮಾನವಾಗಿ ಹೇಳಿರುವುದರಿಂದಲೂ, ದ್ಯಾವಾ ಭೂಮಿಗಳಿಗೆ ಆಶ್ರಯವೆಂದು ಹೇಳಿರುವುದರಿಂದಲೂ ಸರ್ವವ್ಯಾಪಕವಾದ ಆಕಾಶ ಹೃದಯದೊಳಗೆ ಪ್ರವೇಶಿಸಿ ದಹರವೆನಿಸುವುದರಲ್ಲಿ ಏನೂ ವಿರೋಧವಿಲ್ಲ. ಇದೂ ಅಲ್ಲದೆ, ಜೀವನೂ ದಹರಾಕಾಶನಾಗಬಹುದು. "ಈ ಬ್ರಹ್ಮಪುರದಲ್ಲಿ ಯಾವ ದಹರವಿದೆಯೋ" ಎಂಬಲ್ಲಿ ಪರಶಿವಬ್ರಹ್ಮದ ಪುರ-ಶರೀರವೆಂದರೆ ಜೀವನೇ. "ಯಾವನಿಗೆ ಆತ್ಮನೇ ಶರೀರವೋ" ಎಂದು ಶ್ರುತಿಯೂ ಹೇಳಿದೆ. "ಬಾಲದ ತುದಿಯ ಸಾವಿರಾರು ಭಾಗದಲ್ಲಿ ಒಂದರಷ್ಟು ಪ್ರಮಾಣದಲ್ಲಿ ಜೀವನು ದೇಹದ ಎಲ್ಲಾ ಭಾಗದಲ್ಲೂ ನೆಲಸಿದ್ದಾನೆ". "ಅಣುವಾದ ಈ ಆತ್ಮನನ್ನು ಮನಸ್ಸಿನಿಂದಲೇ ತಿಳಿಯಬೇಕು" ಇಲ್ಲಿ ಜೀವನ ಅಲ್ಪಪರಿಮಾಣವನ್ನು ತಿಳಿಸಲಾಗಿದೆ. ಆದ್ದರಿಂದಲೇ ಅವನು ದಹರನಾಗಬಹುದು. ಆಕಾಶದ ಉಪಮೆಯೂ ಸಹ ಅವನಿಗೂ ಪರಶಿವನಿಗೂ ಇರುವ ಭೇದವನ್ನು ತಿಳಿಸುತ್ತದೆ. ಹೀಗೆ ದಹರಪದವು ಭೂತಾಕಾಶ ಮತ್ತು ಜೀವರಿಗೆ ಅನ್ವಯಿಸುವುದರಿಂದ ಪರಶಿವನಿಗೆ ಅನ್ವಯಿಸಲಾರದು ಎಂದು ಪೂರ್ವಪಕ್ಷ ಬಂದರೆ ಸೂತ್ರವು ಸಮಾಧಾನವನ್ನು ಹೇಳುತ್ತದೆ. ಶ್ರುತಿಯಲ್ಲಿ ಮುಂದಿನ ವಾಕ್ಯಶೇಷಗಳಲ್ಲಿ ಹೇಳಿರುವ ಹೇತುಗಳಿಂದ ದಹರಾಕಾಶವೆಂದರೆ ಸಾಕ್ಷಾತ್ಪರಶಿವನೇ ಆಗಿರುವುದು. ಜಿಜ್ಞಾಸ್ಯವೆಂದು ಹೇಳಿದ ದಹರಾಕಾಶದಲ್ಲಿ ಏನಿದೆ ಅದನ್ನು ಹುಡುಕಬೇಕು ಎಂದು ಹೇಳಿ "ಹೊರಗಿನ ಆಕಾಶ ಎಷ್ಟಿದೆಯೋ ಅಷ್ಟೇ ಈ ದಹರಾಕಾಶವೂ ಇದೆ. ಇದರಲ್ಲಿಯೇ ದ್ಯಾವಾ ಭೂಮಿಗಳು ಅಡಗಿವೆ"ಎಂಬಲ್ಲಿ ಇದಕ್ಕೆ ಆಕಾಶದ ಉಪಮಾನವನ್ನು ತಿಳಿಸಿ, ಇದನ್ನು

ದ್ಯಾವಾಭೂಮಿಗಳಿಗೆ ಆಶ್ರಯವೆಂದು ಹೇಳಿದ್ದರಿಂದ ಭೂತಾಕಾಶವು ಹೀಗೆ ಜಿಜ್ಞಾಸ್ಯವೂ ಉಪಾಸ್ಯವೂ ಆಗಲಾರದು. "ಇದೇ ನಿನ್ನ ಆತ್ಮ-ಪಾಪವಿಲ್ಲದ್ದು-ಜರಾಮೃತ್ಯುಶೋಕಗಳಿಲ್ಲದ್ದು-ಹಸಿವುತೃಷೆಗಳಿಲ್ಲದ್ದು-ಇದೇ ಸತ್ಯಕಾಮವೂ ಸತ್ಯಸಂಕಲ್ಪವೂ ಆಗಿದೆ" ಎಂಬಲ್ಲಿ ಹೇಳಿದ ಸತ್ಯಸಂಕಲ್ಪಾದಿಗುಣಗಳು ಭೂತಾಕಾಶಕ್ಕೂ ಜೀವನಿಗೂ ಸಂಭವಿಸುವುದಿಲ್ಲ. "ಕರ್ಮದಿಂದ ಗಳಿಸಿದ ಲೋಕ ಇಲ್ಲಿ ನಶಿಸುವಂತೆ ಪುಣ್ಯದಿಂದ ಗಳಿಸಿದ ಲೋಕವೂ ಅಲ್ಲಿ ನಶಿಸುತ್ತದೆ" ಎಂಬಲ್ಲಿ ಕರ್ಮಫಲ ಅನಿತ್ಯವೆಂದು ಹೇಳಿ "ಯಾವನು ಈ ದಹರಸ್ವರೂಪನಾದ ಆತ್ಮನನ್ನು ತಿಳಿಯುವನೋ ಅವನು ಸತ್ಯಕಾಮನಾಗಿ ಎಲ್ಲಾ ಲೋಕಗಳಲ್ಲೂ ಸಂಚರಿಸುತ್ತಾನೆ" ಎಂಬಲ್ಲಿ ದಹರಾಕಾಶವು ಆನಂದವನ್ನು ಕೊಡುವುದೆಂದು ಹೇಳಿರುವುದರಿಂದ ದಹರವೆಂದರೆ ಪರಶಿವನೆಂದು ಸಿದ್ಧವಾಯಿತು.

**ಹೇತ್ವಂತರಮಾಹ—ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಲಿಂಗಂ ಚ ||೧೫||**

**ಉತ್ತರೇಭ್ಯ ಇತ್ಯಸ್ಯ ಪ್ರಪಂಚೋಽಯಂ. ಕಿಂಚ 'ಇಮಾಸ್ಸರ್ವಾಃ ಪ್ರಜಾ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ" ಇತಿ ದಹರವಾಕ್ಯೇ ಪ್ರಕೃತಂ ಪರಮೇಶ್ವರಂ ಬ್ರಹ್ಮಲೋಕಶಬ್ದೇನ ಅಭಿಧಾಯ ಪ್ರಜಾಶಬ್ದವಾಚ್ಯಾನಾಂ ಜೀವಾನಾಂ ಪ್ರತ್ಯಹಂ ತದ್ವಿಷಯಾ ಗತಿರುಚ್ಯಮಾನಾ ಗಂತವ್ಯಸ್ಯ ದಹರಾಕಾಶಸ್ಯ ಬ್ರಹ್ಮತಾಂ ಗಮಯತಿ. ಗತಿಂ ಬ್ರಹ್ಮಲೋಕಶಬ್ದಂ ಚಾಭಿಪ್ರೇತ್ಯ 'ಗತಿಶಬ್ದಾಭ್ಯಾಂ' ಇತಿ ದ್ವಿವಚನಮುಕ್ತಂ ಸೂತ್ರಕಾರೈಃ. ಪ್ರತ್ಯಹಂ ಸುಷುಪ್ತ್ಯವಸ್ಥಾಯಾಂ ಜೀವಸ್ಯ ಪರಮಶಿವಗಮನಂ ತಥಾಹಿ ದೃಷ್ಟಂ. ಹಂಸೋಪನಿಷದಿ "ಏಷೋಽಸೌ ಪರಮಹಂಸಃ—ತಸ್ಯಾಷ್ಟಧಾ ವೃತ್ತಿರ್ಭವತಿ. ಲಿಂಗೇ ಸುಷುಪ್ತಿಃ" ಇತ್ಯಾದಿನಾ ಹೃದಯಾಂತರ್ವರ್ತಿದಹರಾಕಾಶಾತ್ಮಕಪರಶಿವಲಿಂಗಗಮನಮೇವ ದೃಢೀಕೃತಂ. ಲಿಂಗಬ್ರಹ್ಮಶಬ್ದಯೋಃ ಘಟಕುಂಭಕಲಶಾದಿಶಬ್ದವತ್ಪರ್ಯಾಯತ್ವಂ. ದೃಷ್ಟಮಿತ್ಯನೇನ ಪ್ರತ್ಯಹಮನಂತರತ್ನಪ್ರಭಾಭಾಸಮಾನಮಹಾಕೈಲಾಸಾಭಿಧಾನಬ್ರಹ್ಮಲೋಕಗಮನಾಸಂಭವಾತ್ ಬ್ರಹ್ಮೈವ ಲೋಕಃ ಬ್ರಹ್ಮಲೋಕಃ ಪರಶಿವಲೋಕಃ ಇತಿ ಕರ್ಮಧಾರಯಸಮಾಸ ಏವ ಗ್ರಾಹ್ಯಃ. ಅಸ್ಮಿನ್ನರ್ಥೇ ಅಹರಹರ್ಬ್ರಹ್ಮಲೋಕಗಮನಮೇವ ಲಿಂಗಮಿತ್ಯನೇನೋಕ್ತಂ. ಚಶಬ್ದೇನ ನಿಷಾಧಸ್ಥಪತಿನ್ಯಾಯೋಽಪಿ ಕರ್ಮಧಾರಯಸಮಾಸಗ್ರಹಣೇ ಸೂಚಿತಃ. ಸುಷುಪ್ತೌ ತದ್ಭಾವಾಚ್ಚ "ಜೀವಶ್ಶಂಕರತಾಂ ಗತಃ" ಇತಿ ಶಿವಗೀತಾಯಾಮುಪ್ಯುಪದಿಶ್ಯತೇ. ತಸ್ಮಾದ್ದಹರಾಕಾಶಃ ಪರಮಶಿವ ಇತಿ ಸಿದ್ಧಂ.**

**ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಲಿಂಗಂ ಚ ||೧೫||**

ಹಿಂದಿನ ವಿಷಯವನ್ನು ಇಲ್ಲಿ ವಿಸ್ತರಿಸಲಾಗಿದೆ. "ಈ ಜೀವರೆಲ್ಲರೂ ಪ್ರತಿದಿನವೂ ಹೋಗುತ್ತಾರೆ. ಆದರೆ ಬ್ರಹ್ಮಲೋಕವನ್ನು ಮುಟ್ಟುವುದಿಲ್ಲ" ಎಂಬ ದಹರ

ವಾಕ್ಯದಲ್ಲಿ ಬ್ರಹ್ಮಲೋಕಪದದಿಂದ ಪರಶಿವನನ್ನು ತಿಳಿಸಿ, ಮುಕ್ತರಿಗೆ ಅಲ್ಲಿಗೆ ಹೋಗುವ ಮಾರ್ಗವನ್ನು ಹೇಳಿರುವುದರಿಂದ ಅವರು ಹೋಗಿ ಸೇರುವ ದಹರಾಕಾಶವೆಂದರೆ ಪರಶಿವನೆಂದು ತಿಳಿದುಬರುತ್ತದೆ. ಹೀಗೆ ಮುಕ್ತರಿಗೆ ಗತಿಯನ್ನೂ ಗಮ್ಯವಾದ ಬ್ರಹ್ಮಲೋಕವನ್ನೂ ಶ್ರುತಿಯಲ್ಲಿ ಹೇಳಿರುವುದರಿಂದ ಸೂತ್ರದಲ್ಲಿ, 'ಗತಿಶಬ್ದಾಭ್ಯಾಂ' ಎಂಬಲ್ಲಿ ದ್ವಿವಚನ ಬಂದಿದೆ. ಪ್ರತಿದಿನವೂ ಸುಷುಪ್ತಿಯಲ್ಲಿ ಜೀವನು ಪರಶಿವನಲ್ಲಿ ಸೇರುವುದಾಗಿ ಕಂಡುಬಂದಿದೆ. ಹಂಸೋಪನಿಷತ್ತಿನಲ್ಲಿ "ಭಾನುಕೋಟಿಪ್ರಕಾಶನೂ ಪರಮಹಂಸನೂ ಆದ ಶಿವನು ದಹರಕಮಲದ ಎಂಟು ದಳಗಳಲ್ಲಿ ಸಂಚರಿಸುವಾಗ ಪೂರ್ವದಳದಲ್ಲಿದ್ದರೆ ಜೀವನಿಗೆ ಪುಣ್ಯಬುದ್ಧಿಯೂ, ಆಗ್ನೇಯದಲ್ಲಿದ್ದರೆ ಜೀವನಿಗೆ ನಿದ್ರಾಲಸ್ಯಗಳೂ, ಯಮದಿಕ್ಕಿನ ದಳದಲ್ಲಿದ್ದರೆ ಕ್ರೌರ್ಯವೂ, ನೈರುತ್ಯದಿಕ್ಕಿನ ದಳದಲ್ಲಿದ್ದರೆ ಪಾಪಬುದ್ಧಿಯೂ, ಪಶ್ಚಿಮದಳದಲ್ಲಿದ್ದಾಗ ಕ್ರೀಡಾಸಕ್ತಿಯೂ, ವಾಯವ್ಯದಳದಲ್ಲಿದ್ದಾಗ ಗಮನೇಚ್ಛೆಯೂ, ಉತ್ತರದಿಕ್ಕಿನಲ್ಲಿದ್ದಾಗ ಭೋಗಾಸಕ್ತಿಯೂ, ಈಶಾನ್ಯದಳದಲ್ಲಿದ್ದಾಗ ದ್ರವ್ಯಲಾಭವೂ, ಮಧ್ಯದಲ್ಲಿದ್ದಾಗ ವೈರಾಗ್ಯವೂ, ಪರಾಗದಲ್ಲಿದ್ದಾಗ ಜಾಗ್ರದವಸ್ಥೆಯೂ, ಕರ್ಣಿಕೆಯಲ್ಲಿದ್ದಾಗ ಸ್ವಪ್ನವೂ, ಲಿಂಗಸ್ವರೂಪವಾದ ದಹರಾಕಾಶದಲ್ಲಿದ್ದಾಗ ಸುಷುಪ್ತಿಯೂ ಜೀವನಿಗೆ ಉಂಟಾಗುತ್ತವೆ" ಎಂಬಲ್ಲಿ ಹೃದಯದೊಳಗಿನ ದಹರಾಕಾಶವೆಂಬ ಪರಶಿವಲಿಂಗದಲ್ಲಿ ಸೇರುವಿಕೆಯೇ ಜೀವಾತ್ಮನ ಗುರಿ ಎಂಬುದು ಸ್ಪಷ್ಟವಾಗಿದೆ. ಲಿಂಗ ಬ್ರಹ್ಮ ಶಬ್ದಗಳು ಘಟ ಕುಂಭ ಕಲಶ ಎಂಬ ಪದಗಳಂತೆ ಸಮಾನಾರ್ಥಕಗಳಾಗಿವೆ. ಮುಕ್ತನು ಮಹಾಪ್ರಕಾಶವಾದ ಮಹಾಕೈಲಾಸವೆಂಬ ಬ್ರಹ್ಮಲೋಕಕ್ಕೆ ಹೋಗುವುದು ಅಸಂಭವವಾದರೂ ಸುಷುಪ್ತಿಯಲ್ಲಿ ಪ್ರತಿದಿನವೂ ಹೋಗುವುದು ಕಂಡುಬಂದಿರುವುದರಿಂದ ಬ್ರಹ್ಮವೆಂಬ ಲೋಕವೆಂಬಲ್ಲಿ ಪರಶಿವಲೋಕವೆಂದು ಕರ್ಮಧಾರಯಸಮಾಸವನ್ನೇ ಮಾಡಬೇಕು. ಜೀವನು ಪ್ರತಿದಿನವೂ ಸುಷುಪ್ತಿಯಲ್ಲಿ ಶಿವನೊಡನೆ ಬೆರೆಯುವುದು ಈ ಬಗ್ಗೆ ಲಿಂಗ=ಪ್ರಮಾಣವಾಗಿದೆ. ಚ ಶಬ್ದದಿಂದ ನಿಷಾಧಸ್ಥಪತಿ ಎಂಬಲ್ಲಿ ನಿಷಾಧರಿಗೆ ಸ್ಥಪತಿ=ಯಜಮಾನ ಎಂದು ತತ್ಪುರುಷಸಮಾಸವನ್ನು ಮಾಡದೆ, ನಿಷಾಧನೆಂಬ ಸ್ಥಪತಿ ಎಂದು ಕರ್ಮಧಾರಯಸಮಾಸವನ್ನೇ ಮಾಡುವಂತೆ ಇಲ್ಲಿಯೂ ಮಾಡಬೇಕೆಂದು ಸೂಚಿತವಾಗಿದೆ. ಸುಷುಪ್ತಿಯಲ್ಲಿ ಜೀವನು ಶಿವನಾಗುವನೆಂದು ಶಿವಗೀತೆಯಲ್ಲೂ ಹೇಳಿದೆ. ಆದ್ದರಿಂದ ದಹರಾಕಾಶವೆಂದರೆ ಪರಶಿವನೆಂದು ಸಿದ್ಧವಾಯಿತು.

**ಪುನರ್ಹೇತ್ವಂತರಮಾಹ–ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ॥**

**'ಏಷ ಸೇತುರ್ವಿಧರಣಃ' ಇತಿ ಶ್ರುತೌ ಧೃತಿರೂಪಮಹಿಮ್ನಃ ಅಸ್ಮಿನ್ವಾಕ್ಯೇ ಅನ್ಯದಹರಾಕಾಶಸ್ಯೋಪಲಬ್ಧೇಶ್ಚ ದಹರಾಕಾಶಃ ಪರಮೇಶ್ವರ ಏವ. ಕಿಂಚ "ದಹರೋಽಸ್ಮಿನ್ನಂತರ ಆಕಾಶಃ" ಇತ್ಯಾರಭ್ಯ ವ್ಯೋಮಸಾದೃಶ್ಯೇನ ತಸ್ಮಿನ್ಸಮಾಧಾನಮುಪದಿಶ್ಯ ತತ್ರೈವಾತ್ಮನ್ ಶಬ್ದಮುಕ್ತ್ವಾ ಅಪಹತಪಾಪ್ಮತ್ವಾದಿಗುಣವೈಶಿಷ್ಟ್ಯಂ ಪ್ರದರ್ಶ್ಯ ಅನತಿಕ್ರಾಂತಪ್ರಕರಣೇ ತಸ್ಯೈವ ಧೃತಿಮಾಹ "ಅಥ ಯ ಆತ್ಮಾ ಸ ಸೇತು**

33

ರ್ವಿಧೃತಿರೇಷಾಂ ಲೋಕಾನಾಮಸಂಭೇದಾಯ" ಇತಿ. ಅತ್ರ ವಿಧೃತಿರಿತ್ಯಾತ್ಮಶಬ್ದಸಾಹಚರ್ಯಾತ್ಪರಬ್ರಹ್ಮಣಶ್ಶಿವಸ್ಯ ತತ್ತ್ವಾದಿಧಾರಣಮುಪದಿಶ್ಯತೇ. ತಸ್ಮಾತ್ಪರಮೇಶ್ವರಾದನ್ಯಸ್ಯ ವಿಶ್ವಧೃತಿರ್ನ ಸಂಭವತಿ. ಯಥಾ ಸಲಿಲಸಂತಾನಸ್ಯ ಸೇತುರ್ವಿಧಾರಯಿತಾ ಕ್ಷೇತ್ರಸಂಪದಾಮಸಂಭೇದಾಯೈವಮಯಮಾತ್ಮೈಷಾಮಧ್ಯಾತ್ಮಾದಿಭಿನ್ನಾನಾಂ ಲೋಕವರ್ಣಾಶ್ರಮಾಣಾಂ ಚ ವಿಧಾರಿತಾ ಸೇತುರಸಂಭೇದಾಯಾಸಂಕರಾಯೇತಿ. ತದ್ವದತ್ರ ಪ್ರಕರಣೇ ದಹರಸ್ಯ ವಿಧಾರಣತ್ವಲಕ್ಷಣಮಹಿಮಾನಂ ನಿರ್ದಿಶತಿ. ಶ್ರುತ್ಯಂತರೇ ಚರಾಚರಪ್ರಪಂಚಧಾರಣಂ ಪರಶಿವಲಿಂಗಸ್ಯೈವ ಶ್ರೂಯತೇ. "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ" ಇತಿ, "ಏಷ ಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ" ಇತಿ ಚ. ತಸ್ಮಾತ್ಪರಮೇಶ್ವರಾದನ್ಯೋ ನ ದಹರಶಬ್ದವಾಚ್ಯಃ.

**ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ॥ ೧೬ ॥**

"ಈ ಸೇತು ಎಲ್ಲವನ್ನೂ ಧಾರಣಮಾಡಿದೆ" ಎಂಬಲ್ಲಿ ದಹರಾಕಾಶಕ್ಕೆ ಧಾರಣವೆಂಬ ಮಹತ್ತ್ವವನ್ನು ಹೇಳಿರುವುದರಿಂದ ಇದು ಪರಮೇಶ್ವರನೇ ಆಗಿದೆ. "ಇದರೊಳಗಿನದು ದಹರಾಕಾಶ" ವೆಂದಾರಂಭಿಸಿ ಅದಕ್ಕೆ ಆಕಾಶದ ಹೋಲಿಕೆಯನ್ನು ಕೊಟ್ಟು ಅಲ್ಲಿಯೇ ಆತ್ಮಶಬ್ದವನ್ನು ಹೇಳಿ ಸತ್ಯಕಾಮವೇ ಮೊದಲಾದ ಗುಣವೈಶಿಷ್ಟ್ಯವನ್ನು ತಿಳಿಸಿ ಮುಂದಿನ ಪ್ರಕರಣದಲ್ಲಿ "ಆತ್ಮನೇ ಸೇತು. ಅದೇ ಈ ಲೋಕಗಳನ್ನು ಹಿಡಿದಿದೆ" ಎಂದು ಆತ್ಮನಿಗೆ ವಿಶ್ವದ ಧಾರಣವನ್ನು ಹೇಳಲಾಗಿದೆ. ಇಲ್ಲಿ ಆತ್ಮ ವಿಧೃತಿ ಎರಡು ಪದಗಳ ಸಾಹಚರ್ಯದಿಂದ ಪರಶಿವನಿಗೆ ಮೂವತ್ತಾರು ತತ್ತ್ವಗಳ ಧಾರಣವನ್ನು ಹೇಳಲಾಗಿದೆ. ಆದ್ದರಿಂದ ಪರಶಿವನಲ್ಲದೆ ಬೇರೆ ಯಾರಿಗೂ ವಿಶ್ವದ ಧಾರಣ ಸಂಭವಿಸುವುದಿಲ್ಲ. ಲೋಕದಲ್ಲಿ ನೀರಿನ ಪ್ರವಾಹವನ್ನು ಸೇತುವೆ ತಡೆಗಟ್ಟಿರುವುದು ಪೈರು ಮೊದಲಾದವುಗಳ ಬೆಳವಣಿಗೆಗೆ ಹೇಗೆ ಕಾರಣವೋ ಹಾಗೆ ಆತ್ಮನು ಅಧ್ಯಾತ್ಮವೇ ಮೊದಲಾದ ಎಲ್ಲಾ ಲೋಕಗಳ ವರ್ಣಾಶ್ರಮಗಳನ್ನೂ ಸಂಕರವಾಗದಂತೆ ತಡೆಯಲು ಸೇತುವಾಗಿದ್ದಾನೆ. ಹೀಗೆ ಈ ಪ್ರಕರಣದಲ್ಲಿ ದಹರಕ್ಕೆ ವಿಶ್ವಧಾರಣವೆಂಬ ಮಹತ್ತ್ವವನ್ನು ಶ್ರುತಿಯಲ್ಲಿ ತಿಳಿಸಲಾಗಿದೆ. ಚರಾಚರ ಪ್ರಪಂಚವನ್ನು ಹಿಡಿದಿರುವುದು ಪರಶಿವನ ಧರ್ಮವೆಂದು ಬೇರೆ ಶ್ರುತಿಗಳಿಂದಲೂ ತಿಳಿಯುತ್ತದೆ. ಈ "ಅಕ್ಷರಸ್ವರೂಪನಾದ ಶಿವನ ಶಾಸನಕ್ಕೆ ಸೂರ್ಯಚಂದ್ರರು ವಶವಾಗಿದ್ದಾರೆ" "ಇವನೇ ಸರ್ವೇಶ್ವರ, ಭೂತಪತಿ, ವಿಶ್ವನಿಯಾಮಕ, ಭೂತಪಾಲ. ಇವನೇ ಲೋಕಗಳನ್ನು ಸಾಂಕರ್ಯದಿಂದ ತಪ್ಪಿಸಲಿಕ್ಕಾಗಿ ತಕ್ಕ ವ್ಯವಸ್ಥೆಮಾಡಿದ್ದಾನೆ" ಎಂದು ಹೇಳಿರುವುದರಿಂದ ದಹರಶಬ್ದವು ಶಿವನಲ್ಲದೆ ಬೇರೆ ಯಾರಿಗೂ ಅನ್ವಯಿಸುವುದಿಲ್ಲ.

**ಪುನರ್ಹೇತ್ವಂತರಂ ದರ್ಶಯತಿ—ಪ್ರಸಿದ್ಧೇಶ್ಚ ॥ ೧೭ ॥**

ದಹರಶಬ್ದಃ ಪರಮೇಶ್ವರ ಏವ ಪ್ರಸಿದ್ಧಃ. “ಆಕಾಶೋ ಹ ವೈ ನಾಮರೂಪಯೋರ್ನಿರ್ವಹಿತಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ” ಇತ್ಯಾದಿಷ್ವಾಕಾಶಶಬ್ದವಾಚ್ಯತ್ವಸ್ಯ ಪರಮೇಶ್ವರೇ ದರ್ಶನಾದತ್ರ ದಹರಾಕಾಶಃ ಪರಮೇಶ್ವರಃ. ಯದ್ಯಪ್ಯಾಕಾಶಶಬ್ದಸ್ಯ ಭೂತಾಕಾಶೇ ಪ್ರಸಿದ್ಧಸ್ಯಾಪಿ “ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ” ಇತ್ಯುಪಮಾನತ್ವೇನ ಗ್ರಹಣಾತ್ ನೋಪಮೇಯದಹರಾಕಾಶತ್ವಂ ಸಂಭವತಿ. ತಸ್ಮಾದ್ದಹರಪದವಾಚ್ಯೋ ನೇತರಃ. ನನು “ದಹರಂ ವಿಪಾಪ್ಮಂ ಪರವೇಶ್ಮಭೂತಂ” ಇತಿ ತೈತ್ತಿರೀಯೇ, “ಹೃತ್ಪುಂಡರೀಕಂ ವಿರಜಂ” ಇತಿ ಕೈವಲ್ಯೇ ಚ ದಹರಪುಂಡರೀಕಮುಪದಿಶ್ಯ ತನ್ಮಧ್ಯೇ “ಉಮಾಸಹಾಯಂ” ಇತ್ಯಾದಿನಾ ಪರಮಾತ್ಮೋಪಾಸನಂ ಸೂಚಿತಂ. ಅತ್ರ ದಹರಾಕಾಶತ್ವೇನ ಪರಮೇಶ್ವರೋಪದೇಶಾತ್ಪರಸ್ಪರಶ್ರುತಿವಿರೋಧಪ್ರಸಂಗ ಇತಿ ಚೇನ್ನ, ಭೂತಾಕಾಶಸ್ಯಾಪಹತಪಾಪ್ಮತ್ವಾದಿಪರಮೇಶ್ವರಧರ್ಮಾಣಾಮಸಂಭವಾತ್ ದಹರಾಕಾಶಶಬ್ದೇನ ಚಿದಂಬರಪ್ರಕೃತಿರುಚ್ಯತೇ. ಶಕ್ತಿಶಕ್ತಿಮತೋರಭೇದಾನ್ನ ಪರಸ್ಪರಶ್ರುತಿವಿರೋಧಃ. “ಆಕಾಶಶರೀರಂ ಬ್ರಹ್ಮ ಸತ್ಯಾತ್ಮ ಪ್ರಾಣಾರಾಮಂ ಮನಆನಂದಂ” ಇತ್ಯಾದಿನಾ ಚಿದಂಬರಶರೀರತ್ವಂ ಪರಮೇಶ್ವರಸ್ಯೋಪದಿಶ್ಯತೇ. ಕಿಂಚ ಕೂರ್ಮೇ. ವೃಷಭಃ—“ಕೈಷಾ ಭಗವತೀ ದೇವೀ ಶಂಕರಾರ್ಧಶರೀರಿಣೀ। ಶಿವಾ ಸತೀ ಹೈಮವತೀ ಯಥಾವದ್ಬ್ರೂಹಿ ಪೃಚ್ಛತಾಂ॥” ಕೂರ್ಮಃ “ರಹಸ್ಯಮೇತದ್ವಿಜ್ಞಾನಂ ಜಂತೂನಾಮೇವ ಮೋಚನಂ। ವ್ಯೋಮಸಂಜ್ಞಾ ಪರಾಕಾಷ್ಠಾ ಜ್ಞಾನರೂಪಾತಿಲಾಲಸಾ। ಸ್ವಾಭಾವಿಕೀ ಚ ತನ್ಮೂಲಾ ಪ್ರಭಾ ಭಾನೋರಿವಾಮಲಾ। ಏಕಾ ಮಾಹೇಶ್ವರೀ ಶಕ್ತಿರನೇಕೋಪಾಧಿಯೋಗತಃ। ಪರಾಪರೇಣ ರೂಪೇಣ ಕ್ರೀಡತೇ ತಸ್ಯ ಸನ್ನಿಧೌ। ಸೇಯಂ ಕರೋತಿ ಸಕಲಂ ಪಶ್ಯ ಕಾರ್ಯಮಿದಂ ಜಗತ್। ನ ಕಾರ್ಯಂ ನಾಪಿ ಕರಣಂ ಈಶ್ವರಸ್ಯೇತಿ ಸೂರಯಃ। ಅನಯಾ ಪರಯಾ ದೇವಸ್ಸ್ವಾತ್ಮಾನಂದಂ ಸಮಶ್ನುತೇ। ತಯಾ ಸರ್ವಮಿದಂ ಪ್ರೋತಂ ಓತಂ ಚೈವಾಖಿಲಂ ಜಗತ್। ಏಕಾಶಕ್ತಿಶ್ಶಿವೋ ಹ್ಯೇಕಃ ಶಕ್ತಿಮಾನುಚ್ಯತೇ ಶಿವಃ। ಶಕ್ತಿಶಕ್ತಿಮತೋರ್ಭೇದಂ ವದಂತಿ ಪರಮಾರ್ಥತಃ। ಅಭೇದಂ ಚಾನುಪಶ್ಯಂತಿ ಯೋಗಿನಸ್ತತ್ತ್ವಚಿಂತಕಾಃ॥” ತತ್ರೈವ ದೇವೀವಾಕ್ಯಂ “ಮಾಂ ವಿದ್ಧಿ ಪರಮಾಂ ಶಕ್ತಿಂ ಮಹೇಶ್ವರಸಮಾಶ್ರಯಾಂ। ಅನನ್ಯಾಮವ್ಯಯಾಮೇಕಾಂ ಯಾಂ ಪಶ್ಯಂತಿ ಮುಮುಕ್ಷವಃ। ಅಹಂ ವೈ ಸರ್ವಭೂತಾನಾಂ ಆತ್ಮಾ ಸರ್ವಾಂತರಾ ಶಿವಾ। ಶಾಶ್ವತೈಶ್ವರ್ಯವಿಜ್ಞಾನಮೂರ್ತಿಸ್ಸರ್ವಪ್ರವೃತ್ತಿಕಾ।

**ಅನಂತಾನಂತಮಹಿಮಾ ಸಂಸಾರಾರ್ಣವತಾರಿಣೀ ॥" ಇತ್ಯಾದಿನಾ ಭೇದಾಭೇದಶಕ್ತಿವಿಶಿಷ್ಟಶಿವಾದ್ವೈತಪ್ರಸಂಗಸ್ಯ ನಾರಾಯಣೇನ ಕೂರ್ಮ ಪುರಾಣೇ ವ್ಯಾಖ್ಯಾನಾತ್ ದಹರಾತ್ಮಕತ್ವಂ ದಹರಮಧ್ಯವರ್ತಿತ್ವಂ ಚ ಪರಮೇಶ್ವರಸ್ಯ ನ ವಿರುದ್ಧಂ.**

ಈ ಬಗ್ಗೆ ಮತ್ತೆ ಬೇರೆ ಹೇತುವನ್ನು ತಿಳಿಸುತ್ತಾನೆ--ಪ್ರಸಿದ್ಧೇಶ್ಚ ॥ ೧೭ ॥

ದಹರವೆಂದರೆ ಪರಶಿವನೆಂದು ಪ್ರಸಿದ್ಧವಾಗಿದೆ. "ಆಕಾಶವೇ ನಾಮರೂಪಗಳನ್ನು ನಿರ್ವಹಿಸುತ್ತದೆ. ಈ ಭೂತಗಳೆಲ್ಲವೂ ಆಕಾಶದಿಂದಲೇ ಹುಟ್ಟಿವೆ". ಇಲ್ಲಿ ಆಕಾಶಪದವು ಪರಮೇಶ್ವರನಿಗೇ ಅನ್ವಯಿಸುವುದರಿಂದ ದಹರಾಕಾಶವೂ ಅವನಿಗೇ ಅನ್ವಯಿಸಬೇಕು. ಆಕಾಶಶಬ್ದವು ಭೂತಾಕಾಶದಲ್ಲಿ ಪ್ರಸಿದ್ಧವಾಗಿದ್ದರೂ, "ಹೃದಯದೊಳಗಿನ ಆಕಾಶವು ಹೊರಗಿನ ಆಕಾಶದಂತೆಯೇ ಇದೆ" ಎಂಬಲ್ಲಿ ದಹರಕ್ಕೆ ಆಕಾಶವನ್ನು ಉಪಮಾನವಾಗಿ ಹೇಳಿರುವುದರಿಂದ ಉಪಮೇಯವಾದ ದಹರವೂ ಅದೇ ಆಕಾಶವೆಂಬುದು ಸಂಭವಿಸುವುದಿಲ್ಲ. ಆದ್ದರಿಂದ ದಹರವೆಂದರೆ ಶಿವನೇ ಇರಬೇಕು. "ದಹರವೆಂಬ ಕಮಲ ಪರಶಿವನ ಮನೆ. ಅದರಲ್ಲಿ ಸೂಕ್ಷ್ಮವಾದ ಆಕಾಶವಿದೆ. ಅಲ್ಲಿರುವ ಶಿವನನ್ನು ಧ್ಯಾನಿಸಬೇಕು" ಎಂದು ತೈತ್ತಿರೀಯದಲ್ಲೂ, "ಶುದ್ಧವಾದ ಹೃದಯಕಮಲದಲ್ಲಿ ಪರಮೇಶ್ವರನನ್ನು ಧ್ಯಾನಿಸಬೇಕು" ಎಂದು ಕೈವಲ್ಯದಲ್ಲೂ ತಿಳಿಸಿರುವುದರಿಂದ ಇಲ್ಲಿ ದಹರಕಾಶವೇ ಪರಶಿವನೆಂದು ಹೇಳಿದರೆ ಶ್ರುತಿಗಳಲ್ಲಿ ಪರಸ್ಪರ ವಿರೋಧವಾಗುವುದಿಲ್ಲವೇ? ಎಂದು ಕೇಳುವುದು ಯುಕ್ತವಲ್ಲ. ಸರ್ವಜ್ಞತ್ವ ಮೊದಲಾದ ಪರಶಿವನ ಧರ್ಮಗಳು ಭೂತಾಕಾಶಕ್ಕೆ ಸಂಭವಿಸದೇ ಇರುವುದರಿಂದ ದಹರಶಬ್ದವು ಚಿದಂಬರಪ್ರಕೃತಿ ಎನಿಸಿದ ಪರಾಶಕ್ತಿಯನ್ನು ತಿಳಿಸುತ್ತದೆ. ಶಕ್ತಿಗೂ ಶಕ್ತನಿಗೂ ಅಭೇದವಿರುವುದರಿಂದ ಶ್ರುತಿಗಳಲ್ಲಿ ಪರಸ್ಪರವಿರೋಧಕ್ಕವಕಾಶವಿಲ್ಲ". "ಬ್ರಹ್ಮನಿಗೆ ಆಕಾಶವೇ ಶರೀರ-ಸತ್ಯವೇ ಆತ್ಮ-ಪ್ರಾಣವೇ ವಿನೋದಸ್ಥಾನ, ಮನಸ್ಸೇ ಆನಂದಭವನ" ಎಂಬಲ್ಲಿ ಪರಶಿವನಿಗೆ ಚಿದಂಬರವನ್ನು ಶರೀರವೆಂದು ಹೇಳಲಾಗಿದೆ. ಕೂರ್ಮದಲ್ಲಿ "ಶಂಕರನ ಅರ್ಧಾಂಗಿಯಾದ ಈ ಪಾರ್ವತಿಯು ನಿಜಸ್ವರೂಪವೇನು?" ಎಂದು ವೃಷಭನು ಕೇಳಿದಾಗ ಕೂರ್ಮನು ಆ ರಹಸ್ಯವನ್ನು ಹೀಗೆ ಬಿಡಿಸುತ್ತಾನೆ. "ಪಾರ್ವತಿ ಎಂದರೆ ಶಿವನ ಸ್ವಾಭಾವಿಕ ಶಕ್ತಿ; ಚಿತ್ಸ್ವರೂಪಳು. ವಿಶ್ವದ ಕೊನೆಯ ಹಂತವಾದ ಆಕಾಶವೇ ಈ ರೂಪದಿಂದ ಸೂರ್ಯನ ಪ್ರಭೆಯಂತೆ ಶೋಭಿಸುತ್ತಲಿದೆ. ಈ ಮಹೇಶ್ವರೀ ಶಕ್ತಿಯು ಒಂದೇ ಆದರೂ ಶಿವನ ಬಳಿ ಪರ, ಅಪರ ಎಂದು ಎರಡು ಬಗೆಯಾಗಿ ಕ್ರೀಡಿಸುತ್ತಲಿದೆ. ಅಪರಾಶಕ್ತಿಯೇ ವಿಶ್ವದ ಎಲ್ಲಾ ಕಾರ್ಯವನ್ನು ನಡೆಸುತ್ತಲಿರುವುದರಿಂದ ಶಿವನು ಪರಾಶಕ್ತಿಯೊಡನೆ ಆತ್ಮಾನಂದವನ್ನು ಅನುಭವಿಸುತ್ತಿದ್ದಾನೆ. ಈ ಶಕ್ತಿಯಲ್ಲಿಯೇ ಜಗತ್ತೆಲ್ಲವೂ ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ಶಕ್ತಿಯೂ ಒಂದೇ-ಈ ಶಕ್ತಿಯೊಡಗೂಡಿದ ಶಿವನೂ ಒಬ್ಬನೇ. ಆದ್ದರಿಂದ ಶಿವಶಕ್ತಿಯರಿಗೆ ಯಥಾರ್ಥವಾಗಿ ಭೇದ ಅಭೇದ ಎರಡೂ ಇರುವುದಾಗಿ ಜ್ಞಾನಿಗಳು

ಹೇಳುತ್ತಾರೆ" ಎಂದು ಅವನು ಹೇಳುತ್ತಾನೆ. ಅಲ್ಲಿಯೇ ದೇವಿಯ ವಾಕ್ಯ "ನಾನು ಮಹೇಶ್ವರನನ್ನಾಶ್ರಯಿಸಿದ ಪರಾಶಕ್ತಿ. ನಾನು ಅವನಿಗಿಂತ ಬೇರೆಯಲ್ಲ. ನನಗೆ ನಾಶವಿಲ್ಲ. ನಾನೇ ಎಲ್ಲ ಜೀವರಿಗೂ ಆತ್ಮನೆನಿಸಿ ಅವರ ಐಶ್ವರ್ಯ ವಿಜ್ಞಾನಗಳೆಲ್ಲಕ್ಕು ಪ್ರವರ್ತಕಳಾಗಿದ್ದೇನೆ. ನನ್ನ ಮಹಿಮೆ ಅದ್ಭುತವೂ ಅನಂತವೂ ಆಗಿದೆ. ನಾನೇ ಭಕ್ತರನ್ನು ಸಂಸಾರಸಾಗರದಿಂದ ದಾಟಿಸುವವಳು" ಹೀಗಿದೆ. "ನಿನಗೆ ದಿವ್ಯ ನೇತ್ರವನ್ನು ಕೊಡುತ್ತೇನೆ. ಇದರಿಂದ ಈಶ್ವರನ ಪ್ರಭೆಯನ್ನು ನೋಡು" ಎಂದು ಗೀತೆಯಲ್ಲಿ ಕೃಷ್ಣನು ಹೇಳುತ್ತಾನೆ. ಹೀಗೆ ಭೇದಭೇದಾತ್ಮಕಶಕ್ತಿವಿಶಿಷ್ಟಶಿವಾದ್ವೈತದ ಪ್ರಸಂಗವೇ ಕೂರ್ಮಪುರಾಣದಲ್ಲೂ ಬಂದಿರುವುದರಿಂದ. ಪರಮೇಶ್ವರನೇ ದಹರ ಸ್ವರೂಪನಾಗಿ ದಹರದೊಳಗಿರುವನೆಂಬುದರಲ್ಲಿ ಏನೂ ವಿರೋಧವಿಲ್ಲ.

**ಹೇತ್ವಂತರಮಾಹ— ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್ ||**

**ಇತರಪರಾಮರ್ಶಾತ್ 'ಅಥ ಯದಿದಮಸ್ಮಿನ್ಬ್ರಹ್ಮಪುರೇ' ಇತಿ ವಾಕ್ಯೇ ಬ್ರಹ್ಮಶಬ್ದೇನೇತರಸ್ಯ ಜೀವಸ್ಯ ಪರಾಮರ್ಶಾತ್ಪ್ರತಿಪಾದನಾದ್ದಹರಾಕಾಶಸ್ಸ ಇತಿ ಚೇನ್ನ ಅಸಂಭವಾತ್ ಸತ್ಯಸಂಕಲ್ಪಾದಿಧರ್ಮಾಣಾಂ ಜೀವೇ ಅಸಂಭವಾದಿತ್ಯರ್ಥಃ. ಕಿಂಚ "ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಏಷ ಆತ್ಮಾ" ಇತಿ ವಾಕ್ಯಶೇಷಬಲಾತ್ಪರಮೇಶ್ವರ ಏವಾತ್ರ ಪ್ರತಿಗೃಹ್ಯತೇ. ನನು ಶ್ರುತ್ಯಂತರೇ ಸುಷುಪ್ತ್ಯವಸ್ಥಾಯಾಂ ಸಂಪ್ರಸಾದಶಬ್ದನಿರ್ದೇಶಾತ್ತದವಚ್ಛಿನ್ನಶಾರೀರ ಏವಾತ್ರ ವ್ಯಪದಿಶ್ಯತೇ. ಉತ ಶರೀರಾತ್ಸಮುತ್ಥಾನಮಪಿ ಜೀವಲಿಂಗಂ, ತಸ್ಮಾದತ್ರ ಜೀವ ಏವ ದಹರಾಕಾಶಶಬ್ದವಾಚ್ಯ ಇತಿ ಚೇದುಚ್ಯತೇ. ದೇಹೇಂದ್ರಿಯಮನಃಪ್ರಾಣಾದ್ಯವಚ್ಛಿನ್ನಸ್ಯ ಜೀವಸ್ಯ ದಹರಾಕಾಶವರ್ತಿತ್ವೇನ ತದಾಕಾಶೋಪಮಾನಂ ವಿರುಧ್ಯತೇ. ಜೀವಸ್ಯ ಶರೀರಾತ್ಸಮುತ್ಥಾನಪೂರ್ವಕಪರಮೇಶ್ವರಪ್ರಾಪ್ತ್ಯುಪದೇಶಾನ್ನಾತ್ರ ಜೀವಪ್ರಕರಣಂ. ಅತಃ ಪರಮೇಶ್ವರ ಪ್ರಕರಣತ್ವಾತ್ ಪರಮೇಶ್ವರ ಏವಾತ್ರ ದಹರಪದವಾಚ್ಯ ಇತಿ ಸಿದ್ಧಂ.**

**ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್ || ೧೮ ||**

"ಈ ಬ್ರಹ್ಮಪುರದಲ್ಲಿ ಯಾವುದು ಇರುವುದೋ" ಎಂಬಲ್ಲಿ ಬ್ರಹ್ಮಶಬ್ದದಿಂದ ಇತರ ಪರಮಾರ್ಶ ಅಂದರೆ ಬ್ರಹ್ಮಭಿನ್ನನಾದ ಜೀವನನ್ನು ತಿಳಿಸಿರುವುದರಿಂದ ದಹರಕಾಶವೆಂದರೆ ಆ ಜೀವನೇ ಎಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ, ಸತ್ಯಸಂಕಲ್ಪವೇ ಮೊದಲಾದ ಶಿವನ ಅಸಾಧಾರಣಧರ್ಮಗಳು ಜೀವನಲ್ಲಿ ಸಂಭವಿಸುವುದಿಲ್ಲ. "ಈ ಸಂಪ್ರಸಾದನು ಈ ಶರೀರದಿಂದ ಹೊರಟು ಪರಂಜ್ಯೋತಿಯಲ್ಲಿ ಸೇರಿ ತನ್ನ ವಾಸ್ತವರೂಪವನ್ನು ಪಡೆಯುತ್ತಾನೆ" ಎಂಬಲ್ಲಿ ಪರಂಜ್ಯೋತಿ ಎಂದರೆ ಪರಶಿವನೆಂದು ಸ್ಪಷ್ಟವಾಗಿದೆ. ಬೇರೆ ಶ್ರುತಿಯಲ್ಲಿ ಸುಷುಪ್ತಿಯಲ್ಲಿ ಸಂಪ್ರಸಾದ

ಶಬ್ದವನ್ನು ಪ್ರಯೋಗಿಸಿರುವುದರಿಂದ ಆ ಸ್ಥಿತಿಯಲ್ಲಿರುವ ಜೀವನೇ ಏಕೆ ದಹರನೆನಿಸ ಬಾರದು; ಇದೂ ಅಲ್ಲದೆ, ಈ ಶರೀರದಿಂದ ಮೇಲಕ್ಕೆ ಹೊರಡುವನೆಂದು ಶ್ರುತಿಯಲ್ಲಿ ಹೇಳಿರುವುದು ಜೀವನಿಗೇ ಅನ್ವಯಿಸುತ್ತದೆಯಾದ್ದರಿಂದ ಜೀವನೇ ದಹರಾಕಾಶನಾಗಲಿ ಎಂದು ಹೇಳುವುದು ಯುಕ್ತವಲ್ಲ. ದೇಹ, ಇಂದ್ರಿಯ, ಮನಸ್ಸು, ಪ್ರಾಣಗಳುಳ್ಳಜೀವನು ದಹರಾಕಾಶದಲ್ಲಿ ಉಪಾಸನೆಗಾಗಿಯೇ ಇರುವನಾದ್ದರಿಂದ ಅವನಿಗೆ ಆಕಾಶದ ಉಪಮಾನ ಹೊಂದುವುದಿಲ್ಲ. ಜೀವನು ಶರೀರದಿಂದ ಹೊರಟು ಪರಶಿವನನ್ನು ಸೇರುವನೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಇದು ಪರಶಿವನ ಪ್ರಕರಣವಾದ್ದರಿಂದ ಪರಶಿವನೇ ಇಲ್ಲಿ ದಹರನೆನಿಸಿದ್ದಾನೆ.

ಹೇತ್ವಂತರಮಾಹ—ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ‖ ೧೯ ‖

ಉತ್ತರಾಚ್ಚೇತ್ ಉತ್ತರತ್ರ ಪ್ರಜಾಪತಿವಾಕ್ಯೇ "ಅಯಮಾತ್ಮಾ ಅಪಹತಪಾಪ್ಮಾ ವಿಜರೋ" ಇತ್ಯತ್ರ ಜೀವಶಬ್ದವಾಚ್ಯಸ್ಯಾತ್ಮನಃ ಸತ್ಯಸಂಕಲ್ಪತ್ವಾದಿಧರ್ಮಾನುಪದಿಶ್ಯ "ಸೋಽನ್ವೇಷ್ಟವ್ಯಸ್ಸ ವಿಜಿಜ್ಞಾಸಿತವ್ಯಃ" ಇತ್ಯಾದಿನಾ ಜಿಜ್ಞಾಸಾನ್ವೇಷಣಾದೀನಾಂ ತಸ್ಯೈವ ನಿರ್ದೇಶಾತ್. ಕಿಂಚ ದಹರವಿದ್ಯಾಯಾಮುಪರಿ ಪ್ರಜಾಪ್ರತಿವಿದ್ಯಾಯಾಂ "ಏಷೋಽಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ", "ಯ ಏಷ ಸ್ವಪ್ನೇ ಮಹಿಮಾನಶ್ಚರತಿ ಏಷ ಆತ್ಮಾ", "ತದ್ಯತ್ರೈತತ್ಸುಪ್ತಸ್ಸಮಸ್ಸಂಪನ್ನಃ ಸ್ವಪ್ನಂ ನ ವಿಜಾನಾತ್ಯೇಷ ಆತ್ಮಾ" ಇತ್ಯಾದೌ ಜಾಗ್ರತ್ಸ್ವಪ್ನಸುಷುಪ್ತಿಗ್ರಸ್ತಜೀವಸ್ಯೈವಾತ್ರ ಪ್ರತಿಪಾದನಾತ್ತಸ್ಯೈವಾತ್ರಾಪಹತಪಾಪ್ಮತ್ವಾದಿಧರ್ಮೋಪದೇಶಾಚ್ಚ. "ಏತದಮೃತಮೇತದಭಯಮೇತದ್ಬ್ರಹ್ಮ" ಇತಿ ವಾಕ್ಯಸಿದ್ಧಾಮೃತತ್ವಾದಿಧರ್ಮಾಣಾಂ ತಸ್ಯೈವೋಚಿತತ್ವಾದ್ದಹರಾಕಾಶೋ ಜೀವ ಇತಿ ಚೇನ್ನ, ಆವಿರ್ಭೂತಸ್ವರೂಪಸ್ತು ಇತ್ಯತ್ರ ತುಶಬ್ದೇನ ಪಕ್ಷವ್ಯಾವೃತ್ತಿಃ. ಉತ್ತರಾತ್ಪ್ರಜಾಪತಿವಾಕ್ಯಾದಪಿ ನ ಜೀವಶಂಕಾ ಯುಕ್ತಾ. ಆವಿರ್ಭೂತಸ್ವರೂಪೋಽತ್ರ ಜೀವೋ ವಿವಕ್ಷಿತಃ. "ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿಸಂಬಧ್ಯತೇ" ಇತ್ಯುಪಸಂಹಾರವಾಕ್ಯೇ ಮುಕ್ತಜೀವಸ್ಯ ಬ್ರಹ್ಮಭಾವಾವಿರ್ಭಾವೇನಾಪಹತಪಾಪ್ಮತ್ವಾದಿಧರ್ಮಪ್ರತಿಪಾದ್ಯಃ ಪರಮೇಶ್ವರ ಏವ. ಮುಕ್ತಜೀವಸ್ಯ ಬ್ರಹ್ಮತ್ವೇನ ಜೀವತ್ವಾಭಾವಾದ್ಬ್ರಹ್ಮಧರ್ಮೋಪದೇಶೋ ಯುಕ್ತ ಏವ. "ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ" "ಬ್ರಹ್ಮವಿದ್ಬ್ರಹ್ಮೈವ ಭವತಿ" ಇತ್ಯಾದಿಶ್ರುತಿಷು ಮುಕ್ತಜೀವನಾಂ ಬ್ರಹ್ಮಾತ್ಮಕತ್ವಂ ಸೂಚಿತಂ. ತಥಾಚ ಸ್ಮೃತಿಃ "ಅಂತರ್ಬಹಿಶ್ಚ ತತ್ಸರ್ವಂ ಪರಿಪೂರ್ಣಂ ಮಹೇಶ್ವರಂ । ಭಾವಯೇತ್ಪರಮಾನಂದಲಬ್ಧಯೇ ಪಂಡಿತೋತ್ತಮಃ ‖", "ಶಿವೋಽಹಮಿತಿಭಾವೋ ಹಿ ಶಿವತಾ

ಪತ್ತಿಕಾರಣಂ । ನ ಜ್ಞಾನಮಾತ್ರಂ ನಾಚಾರೋ ಭಾವಯುಕ್ತಶ್ಶಿವೋ ಭವೇತ್॥", "ಜ್ಞಾನಂ ವಸ್ತುಪರಿಚ್ಛೇದೋ ಧ್ಯಾನಂ ತದ್ಭಾವಕಾರಣಂ । ತಸ್ಮಾದ್ ಜ್ಞಾನೇ ಮಹಾದೇವೇ ಜ್ಞಾನಯುಕ್ತೋ ಭವೇತ್ಸುಧೀಃ ॥ ನೈರಂತರ್ಯೇಣ ಸಂಪನ್ನೋ ಭವೇದ್ಧ್ಯಾತುಂ ಶಿವಂ ಪ್ರತಿ । ತದ್ಭಾವೋ ಜಾಯತೇ ಯದ್ವತ್ಕೃಮೇಃ ಕೀಟಸ್ಯ ಚಿಂತನಾತ್ ॥ ಗುರೋಃ ಕಟಾಕ್ಷ ವೇಧೇನ ಶಿವೋ ಭವತಿ ಮಾನವಃ। ರಸವೇಧಾದ್ಯಥಾ ಲೋಹೇ ಹೇಮತಾ ಪ್ರತಿಪದ್ಯತೇ ॥" ಇತಿ.

ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ॥ ೧೯ ॥

ಮುಂದೆ ಬರುವ "ಇವನೇ ಆತ್ಮ, ಪಾಪವಿಲ್ಲದವನು, ಜರಾಮೃತ್ಯುಶೋಕಗಳಿಲ್ಲ ದವನು, ಸತ್ಯಕಾಮನು, ಸತ್ಯಸಂಕಲ್ಪನು" ಈ ಶ್ರುತಿವಾಕ್ಯದಲ್ಲಿ ಜೀವನೆನಿಸಿದ ಆತ್ಮನಿಗೆ ಸತ್ಯಸಂಕಲ್ಪವೇ ಮೊದಲಾದ ಧರ್ಮಗಳನ್ನು ಹೇಳಿ," ಅವನನ್ನೇ ಹುಡುಕ ಬೇಕು, ತಿಳಿಯಬೇಕು" ಎಂದು ಹೇಳಿರುವುದರಿಂದಲೂ, ದಹರವಿದ್ಯೆಯ ಮುಂದೆ ಬರುವ ಪ್ರಜಾಪತಿ ವಿದ್ಯೆಯಲ್ಲಿ "ಇವನೇ ಕಣ್ಣಿನಲ್ಲಿ ಕಾಣುತ್ತಾನೆ" "ಇವನೇ ಸ್ವಪ್ನ ದಲ್ಲಿ ಸಂಚರಿಸುತ್ತಾನೆ" "ಮಲಗಿದವನು ತಮಸ್ಸಿನಿಂದ ಆವೃತನಾಗಿ ತಾನು ಕಂಡ ಸ್ವಪ್ನವನ್ನು ತಿಳಿಯುವುದಿಲ್ಲ" ಇಲ್ಲಿ ಜಾಗ್ರತ್ಸ್ವಪ್ನಸುಷುಪ್ತಿಗಳಲ್ಲಿ ಜೀವನನ್ನೇ ಹೇಳಿ ರುವುದರಿಂದಲೂ, ಅವನಿಗೂ ಸತ್ಯಸಂಕಲ್ಪಾದಿಧರ್ಮಗಳು ಅನ್ವಯಿಸುವುದರಿಂದಲೂ "ಇವನೇ ಅಮೃತನೂ, ಅಭಯನೂ ಆದ ಬ್ರಹ್ಮ" ಎಂಬಲ್ಲಿ ಹೇಳಿದ ಅಮೃತತ್ವಾ ದಿಧರ್ಮಗಳೂ ಅವನಿಗೇ ಅನ್ವಯಿಸುವುದರಿಂದಲೂ ದಹರಾಕಾಶವೆಂದರೆ ಜೀವನೇ ಆಗಲಿ ಎಂದು ಆಕ್ಷೇಪಿಸಿದರೆ ಸೂತ್ರವು ಅದನ್ನು ಪರಿಹರಿಸುತ್ತದೆ. ಆವಿರ್ಭೂತ ಸ್ವರೂಪಸ್ತು ಎಂಬಲ್ಲಿ ತುಶಬ್ದವೇ ಆಕ್ಷೇಪವನ್ನು ನಿರಾಕರಿಸುತ್ತದೆ. ದಹರವಿದ್ಯೆಯ ಮುಂದಿನ ಪ್ರಜಾಪತಿವಿದ್ಯೆಯಿಂದಲೂ ದಹರವೆಂದರೆ ಜೀವನೆಂಬ ಆಕ್ಷೇಪವು ಯುಕ್ತ ವೆನಿಸುವುದಿಲ್ಲ, ಯಾಕೆಂದರೆ "ಪರಂಜ್ಯೋತಿಯನ್ನು ಹೊಂದಿ ಜೀವನು ತನ್ನ ವಾಸ್ತವರೂಪವನ್ನು ಪಡೆಯುತ್ತಾನೆ" ಎಂಬಲ್ಲಿ ಜೀವನಿಗೆ ಸ್ವಾಭಾವಿಕ ಜೀವಭಾವ ಹೋಗಿ ವಾಸ್ತವಸ್ವರೂಪದ ಆವಿರ್ಭಾವವನ್ನು ಹೇಳಿರುವುದರಿಂದ ಸತ್ಯಸಂಕಲ್ಪ ಮೊದಲಾದ ಧರ್ಮಗಳುಳ್ಳವನು ಪರಶಿವನೆಂದು ಸ್ಪಷ್ಟವಾಗಿದೆ. ಮುಕ್ತನು ಶಿವ ನಾಗುವುದರಿಂದ ಅವನಿಗೆ ಜೀವಭಾವ ತೊಲಗಿ ಶಿವಧರ್ಮಗಳು ಅನ್ವಯಿಸುವುದು ಯುಕ್ತವೇ ಆಗಿದೆ. "ಜ್ಞಾನಿಯು ನಾಮರೂಪಗಳನ್ನು ತೊರೆದು ಶಿವಸಾಯುಜ್ಯ ವನ್ನು ಹೊಂದುತ್ತಾನೆ." "ಬ್ರಹ್ಮವಿದನು ಬ್ರಹ್ಮವೇ ಆಗುತ್ತಾನೆ" ಇಲ್ಲಿ ಮುಕ್ತರಿಗೆ ಶಿವಭಾವವನ್ನು ಹೇಳಿದೆ. "ಒಳಗೆ ಹೊರಗೆ ಪರಿಪೂರ್ಣನಾಗಿ ನೆಲಸಿರುವ ಪರಶಿವನನ್ನು ಜ್ಞಾನಿಯು ಪರಮಾನಂದಕ್ಕಾಗಿ ಧ್ಯಾನಿಸಬೇಕು." ನಾನು ಶಿವನೆಂಬ ಭಾವವೇ ಶಿವನಾಗಲು ಕಾರಣವಾಗಿದೆ. ಆದರೆ ಕೇವಲಜ್ಞಾನದಿಂದಲೂ, ಕೇವಲಕ್ರಿಯೆ ಯಿಂದಲೂ ಶಿವಭಾವವು ದೊರಕಲಾರದು. ಜ್ಞಾನವು ವಸ್ತುಸ್ವರೂಪವನ್ನು ವಿವೇಚಿ

ಸುತ್ತದೆ. ಆದರೆ ಧ್ಯಾನವು ಆ ಭಾವವನ್ನು ದೊರಕಿಸುತ್ತದೆ. ಆದ್ದರಿಂದ ಗುಂಗೆ ಹುಳವು ಭ್ರಮರದ ಧ್ಯಾನದಿಂದ ಭ್ರಮರವೇ ಆದಂತೆ ಪರಶಿವನ ಜ್ಞಾನವನ್ನು ಪಡೆದು ಜೀವನು ನಿರಂತರವೂ ಧ್ಯಾನಿಸುವುದರಿಂದ ಆ ಶಿವನೇ ಆಗುತ್ತಾನೆ. ರಸಸಂಪರ್ಕದಿಂದ ಲೋಹವು ಹೇಗೆ ಸುವರ್ಣವಾಗುತ್ತದೆಯೋ ಹಾಗೆ ಗುರುಕಟಾಕ್ಷವೆಂಬ ವೇಧಾದೀಕ್ಷೆಯಿಂದ ಮಾನವನು ಶಿವನಾಗುತ್ತಾನೆ" ಎಂದು ಸ್ಮೃತಿಯಲ್ಲೂ ಹೇಳಿದೆ.

**ನನು ದಹರಾಕಾಶಸ್ಯೇಶ್ವರತ್ವೇ 'ಅಥ ಯ ಏಷ ಸಂಪ್ರಸಾದಃ' ಇತ್ಯಾದಿನಾ ಜೀವಪರಾಮರ್ಶೋ ವ್ಯರ್ಥ ಇತ್ಯಾಶಂಕಾಯಾಮಾಹ—**

**ಅನ್ಯಾರ್ಥಶ್ಚ ಪರಾಮರ್ಶಃ ॥ ೨೦ ॥**

**ಪರಾಮರ್ಶಃ ಜೀವಪರಾಮರ್ಶಃ ಅನ್ಯಾರ್ಥಶ್ಚ ಬ್ರಹ್ಮಭೇದಪ್ರತಿಪಾದನಾರ್ಥಃ. "ಪರಂಜ್ಯೋತಿರುಪಸಂಪದ್ಯ" ಇತಿ ವಾಕ್ಯಶೇಷಾವಗತ ಜೀವಪರಾಮರ್ಶೋಽನ್ಯಾರ್ಥಃ ಪರಮೇಶ್ವರಪರ ಏವೋಪಸಂಪತ್ತವ್ಯಃ. ಜೀವಪರಾಮರ್ಶಂ ವಿನಾ ತದಸಂಭವಾತ್ ಜೀವಪರಾಮರ್ಶೋ ನ ಜೀವಪ್ರತಿಪಾದನಾರ್ಥಃ.**

ದಹರಾಕಾಶವೇ ಶಿವನಾದರೆ ಶ್ರುತಿಯಲ್ಲಿ ಜೀವನನ್ನು ಸಂಪ್ರಸಾದನೆಂದು ಹೇಳಿದ್ದು ವ್ಯರ್ಥವಾಗುವುದೆಂದು ಆಶಂಕಿಸಿ ನಿರಾಕರಿಸುತ್ತಾನೆ—

**ಅನ್ಯಾರ್ಥಶ್ಚ ಪರಾಮರ್ಶಃ ॥೨೦॥**

"ಅಥ ಏಷ ಸಂಪ್ರಸಾದಃ" ಎಂಬ ಶ್ರುತಿಯಲ್ಲಿ ಜೀವನಿಗೂ, ಶಿವನಿಗೂ ಭೇದವನ್ನು ತಿಳಿಸಲಿಕ್ಕಾಗಿ ಸಂಪ್ರಸಾದಪದದಿಂದ ಜೀವನನ್ನು ತಿಳಿಸಲಾಗಿದೆ. "ಪರಂಜ್ಯೋತಿಯೊಡನೆ ಬೆರೆತು ಜೀವನು ತನ್ನ ವಾಸ್ತವಸ್ಥಿತಿಯನ್ನು ಪಡೆಯುತ್ತಾನೆ" ಎಂಬಲ್ಲಿ ಜೀವನಿಗೆ ಪರಶಿವನೊಡನೆ ಸಾಮರಸ್ಯವನ್ನು ಹೇಳಿರುವುದರಿಂದ ಯಾರಿಗೆ ಸಾಮರಸ್ಯವೆಂಬುದನ್ನು ತಿಳಿಸಲಿಕ್ಕಾಗಿ ಜೀವನನ್ನು ನಿರೂಪಿಸಲಾಗಿದೆ.

**ಅಲ್ಪಶ್ರುತೇರಿತಿ ಚೇತ್ತದುಕ್ತಂ ॥ ೨೧ ॥**

**'ದಹರೋಽಸ್ಮಿನ್ನಂತರ್ಹೃದಯ ಆಕಾಶಃ' ಇತ್ಯಾದೌ ಪರಶಿವಸ್ಯಾಲ್ಪತ್ವಶ್ರವಣಾದ್ವ್ಯಾಪಕಸ್ಯಾಲ್ಪದಹರತ್ವಾಸಂಭವಾದ್ದಹರಪದವಾಚ್ಯತ್ವಂ ಜೀವಸ್ಯೈವ ಸಮುಚಿತಮಿತಿ ಚೇನ್ನ, ಅರ್ಭಕೌಕಸ್ತ್ವಾದಿತಿ ಸೂತ್ರೇ ವ್ಯೋಮದೃಷ್ಟಾಂತೇನ ಭಕ್ತ್ಯೋಪಾಸನಾರ್ಥಂ ಪರಮೇಶ್ವರಸ್ಯ ಪರಿಚ್ಛಿನ್ನತ್ವಂ ಪೂರ್ವಮೇವೋಕ್ತಂ. ನನು "ಏಷೋಽಕ್ಷಿಣಿ ಪುರುಷಃ" ಇತಿಶ್ರುತೌ ಜಾಗ್ರದವಸ್ಥಾಪನ್ನಜೀವೋಪಕ್ರಮಶ್ರವಣಾತ್ ಜಾಗ್ರದಾದ್ಯನುಭವಸ್ಯ ಜೀವೇ ಸಮುಚಿತತ್ವಾತ್ ಸ ಏವಾತ್ರ ದಹರಪದವಾಚ್ಯ ಇತಿ ಚೇನ್ನ, "ಆಯಮಾತ್ಮಾಪಹತಪಾಪ್ಮಾ", "ನೈನಂ ಸೇತುಮಹೋರಾತ್ರೇ ತರತೋ ನ ಜರಾ ನ ಮೃತ್ಯುರ್ನ ಶೋಕೋ ನ ಸುಕೃತಂ ನ ದುಷ್ಕೃತಂ ಸರ್ವೇ ಪಾಪ್ಮಾನೋಽತೋ ನಿವರ್ತಂತೇ । ಅಪಹತಪಾಪ್ಮಾ**

ಹ್ಯೇಷ ಬ್ರಹ್ಮಲೋಕಸ್ತಸ್ಮಾದ್ವಾ ಏತಂ ಸೇತುಂ ತೀರ್ತ್ವಾನಂದಸ್ಯಾನಂದೋ ಭವತಿ ॥ ", " ತಸ್ಮಾದ್ವಾ ಏತಂ ಸೇತುಂ ತೀರ್ತ್ವಾ ಅಪಿ ಸಕ್ತ್ವಾ ಮಹಾದೇವೋಽಭಿನಿಷ್ಪದ್ಯತೇ, " ಸಕೃದ್ವಿಭಾತೋ ಹ್ಯೇಷ ಬ್ರಹ್ಮಲೋಕಃ " ಇತಿ ವಾಕ್ಯಶೇಷೇ ಬ್ರಹ್ಮಲಿಂಗಬಾಹುಳ್ಯಾನ್ನಾನ್ಯಪ್ರಕರಣಮಿತ್ಯಭಿಧೀಯತೇ. ಅವಸ್ಥಾತ್ರಯಪ್ರತಿಪಾದನಸ್ಯಾಪಿ ಶಾಖಾಚಂದ್ರನ್ಯಾಯೇನ ಪರಮಾತ್ಮಪ್ರತಿಪಾದಕತಯೋಪಪತ್ತೇಃ. ಶ್ರುತ್ಯಂತರೇಽಪಿ " ಆತ್ಮನ್ಯೇವಾತ್ಮಾನಂ ಪಶ್ಯೇಚ್ಛಂಭುರಾಕಾಶಮಧ್ಯೇ ", " ಶಿವ ಏಕೋ ಧ್ಯೇಯಃ " ಇತ್ಯಾದಿಷೂಪಾಸನಾಜ್ಞಾನಸ್ಯ ಮೋಕ್ಷಫಲಂ ವಿಧೀಯತೇ. ತಸ್ಮಾನ್ನಿಷ್ಕಾಮನಿಜಧರ್ಮೋಪೇತನಿಷಿದ್ಧಕಾಮ್ಯಕರ್ಮತ್ಯಾಗಪೂರ್ವಕಶ್ರುತಿಸ್ಮೃತಿಚೋದಿತವರ್ಣಾಶ್ರಮೋಚಿತಕರ್ಮಾನುಷ್ಠಾನಲಬ್ಧಚಿತ್ತಶುದ್ಧ್ಯನುಗತಪರಮಶಿವಭಕ್ತಿಸಂಭಾವಿತಮುಮುಕ್ಷುಭಿರೇವ ಚಿಚ್ಛಕ್ತ್ಯಾತ್ಮಕಜ್ಯೋತಿರ್ಲಿಂಗಸ್ವರೂಪಂ ಅಪಹತಪಾಪ್ಮತ್ವಾದಿಗುಣವಿಶಿಷ್ಟಂ ಶಿವತತ್ತ್ವಮುಪಾಸನೀಯಂ. ನನು ಛಾಂದೋಗ್ಯೇ ಶಿವತತ್ತ್ವಪ್ರತಿಪಾದಕಮುಖ್ಯಲಿಂಗಾದರ್ಶನಾತ್ಕಥಂ ತತ್ಪರತ್ವಮಿತಿ ಚೇದುಚ್ಯತೇ. ತೈತ್ತಿರೀಯೇ ' ದಹರಂ ವಿಪಾಪ್ಮಂ ' ಇತ್ಯಾರಭ್ಯ ' ಯಃ ಪರಸ್ಸ ಮಹೇಶ್ವರಃ ' ಇತ್ಯಂತೇನ, ಕೈವಲ್ಯೇ ' ಹೃತ್ಪುಂಡರೀಕಂ ವಿರಜಂ ' ಇತ್ಯಾರಭ್ಯ ಉಮಾಸಹಾಯಂ ' ಇತ್ಯಾದಿನಾ ಪರಮಶಿವೋಪಾಸನಸ್ಯಾಸಂದಿಗ್ಧತಯಾ ವ್ಯವಸ್ಥಾಪನಾನ್ನಾನ್ಯವಿಷಯತ್ವಂ. ತಥಾ ಗೀತಾಸು " ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ । ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥ " ಇತಿ ಪ್ರತಿಪಾದಿತಂ.

## ಅಲ್ಪಶ್ರುತೇರಿತಿ ಚೇತ್ತದುಕ್ತಂ ॥ ೨೧ ॥

" ಈ ಹೃದಯದೊಳಗೆ ದಹಾರಾಶವಿದೆ " ಎಂಬಲ್ಲಿ ಪರಶಿವನನ್ನು ಅಲ್ಪಪರಿಮಾಣನೆಂದು ಹೇಳಿದರೆ ವ್ಯಾಪಕಶಿವನಿಗೆ ಇಂತಹ ಅಲ್ಪಪರಿಮಾಣವು ಸಂಭವಿಸದೇ ಇರುವುದರಿಂದ ದಹರಪದವು ಜೀವನಿಗೆ ಅನ್ವಯಿಸುವುದೇ ಯುಕ್ತವೆಂದರೆ ಅದು ಸರಿಯಲ್ಲ. " ಅರ್ಭಕೌಕಸ್ತ್ವಾತ್ " ಎಂಬ ಸೂತ್ರದಲ್ಲಿ ಆಕಾಶದೃಷ್ಟಾಂತದಿಂದ ಭಕ್ತೋಪಾಸನಕ್ಕಾಗಿ ಪರಶಿವನು ಪರಿಚ್ಛಿನ್ನನಾಗುವನೆಂದು ಹಿಂದೆಯೇ ತಿಳಿಸಿದೆ. " ಕಣ್ಣಿನಲ್ಲಿ ಈ ಪುರುಷನು ಕಾಣುತ್ತಾನೆ " ಎಂಬಲ್ಲಿ ಜಾಗ್ರದವಸ್ಥೆಯ ಜೀವನನ್ನು ಹೇಳಿದ್ದರಿಂದಲೂ, ಜಗತ್ತಿನ ಅನುಭವವು ಜೀವನಿಗೆ ಹೊಂದುವುದರಿಂದಲೂ ಅವನೇ ದಹರನೆನಿಸಲೆಂದರೆ ಅದೂ ಸರಿಯಾಗುವುದಿಲ್ಲ, ಯಾಕೆಂದರೆ " ಈ ಆತ್ಮನು ಪಾಪರಹಿತನು, ಸತ್ಯಸಂಕಲ್ಪನು. ಈ ಸೇತುಸ್ವರೂಪನಾದ ಆತ್ಮನಿಗೆ ಹಗಲು ರಾತ್ರಿ, ಪುಣ್ಯಪಾಪ, ಜರೆ, ಮೃತ್ಯು, ದುಃಖ ಯಾವುದೂ ಅಂಟುವುದಿಲ್ಲ. ಇದೇ ಪಾಪವಿಲ್ಲದ

ಬ್ರಹ್ಮಲೋಕ, ಇದನ್ನು ದಾಟಿದವನು ಪರಮಾನಂದನಾಗುತ್ತಾನೆ." "ಆದ್ದರಿಂದ ಈ ಸೇತುವನ್ನು ದಾಟಿದವನು ಮಹಾದೇವನಾಗುತ್ತಾನೆ." "ಬ್ರಹ್ಮಲೋಕವು ಒಮ್ಮೆಗೆ ಪ್ರಕಾಶವಾಗುತ್ತದೆ" ಈಶ್ರುತಿಗಳಲ್ಲಿ ಬ್ರಹ್ಮಧರ್ಮಗಳೇ ಬಹಳವಾಗಿ ಬಂದಿರುವುದರಿಂದ ಇದು ಬ್ರಹ್ಮಪ್ರಕರಣವಲ್ಲದೆ ಬೇರೆಯಲ್ಲ. ಇಲ್ಲಿ ಜೀವನ ಮೂರು ಅವಸ್ಥೆಗಳನ್ನು ತಿಳಿಸಿದ್ದೂ ಸಹ ಶಾಖಾಚಂದ್ರನ್ಯಾಯದಿಂದ ಪರಶಿವನನ್ನೇ ತಿಳಿಸಿದ್ದರಿಂದ ಯುಕ್ತವಾಗುತ್ತದೆ. "ಆತ್ಮನಲ್ಲಿಯೇ ಪರಶಿವನನ್ನು ನೋಡಬೇಕು. ಆಕಾಶಮಧ್ಯದಲ್ಲಿ ಶಿವನಿದ್ದಾನೆ" "ಎಲ್ಲವನ್ನು ಬಿಟ್ಟು ಶಿವನನ್ನೇ ಧ್ಯಾನಿಸಬೇಕು" ಈ ಶ್ರುತಿಗಳಲ್ಲಿ ಉಪಾಸನೆಗೆ ಮೋಕ್ಷವೇ ಫಲವೆಂದು ಹೇಳಲಾಗಿದೆ. ಆದ್ದರಿಂದ ಫಲಾಪೇಕ್ಷೆಯಿಲ್ಲದೆ ಸ್ವಧರ್ಮವನ್ನು ಅನುಸರಿಸುತ್ತ ನಿಷಿದ್ಧಕರ್ಮಗಳನ್ನು ತೊರೆದು ಶ್ರುತಿಸ್ಮೃತಿಗಳಲ್ಲಿ ಹೇಳಿದ ವರ್ಣಾಶ್ರಮಕರ್ಮಗಳನ್ನು ಆಚರಿಸುತ್ತ ಚಿತ್ತಶುದ್ಧಿಯನ್ನು ಪಡೆದು ಪರಾಭಕ್ತಿಯೊಡಗೂಡಿದ ಮುಮುಕ್ಷುಗಳು ಸರ್ವಜ್ಞತ್ವಾದಿಗುಣವಿಶಿಷ್ಟವೂ ಚಿಚ್ಛಕ್ತಿರೂಪವೂ ಆದ ಜ್ಯೋತಿರ್ಲಿಂಗವೆಂಬ ಶಿವತತ್ತ್ವವನ್ನು ಉಪಾಸನಮಾಡಬೇಕು. ಛಾಂದೋಗ್ಯದಲ್ಲಿ ಈ ಬಗೆಯ ಶಿವತತ್ತ್ವವನ್ನು ತಿಳಿಸುವ ಸೂಚನೆ ಇಲ್ಲದ್ದರಿಂದ ಶಿವತತ್ತ್ವ ಇಂತಹದೆಂದು ಹೇಗೆ ತಿಳಿಯಬಹುದು? ಎಂದರೆ ತೈತ್ತಿರಿಯ ಕೈವಲ್ಯಶ್ರುತಿಗಳಲ್ಲಿ ಪರಶಿವನನ್ನು ಜ್ಯೋತಿರ್ಲಿಂಗರೂಪದಲ್ಲಿಯೇ ಉಪಾಸನಮಾಡಬೇಕೆಂದು ವ್ಯವಸ್ಥೆಯಾಗಿರುವುದರಿಂದ ಈಬಗ್ಗೆ ಸಂಶಯಕ್ಕವಕಾಶವಿಲ್ಲ. ಗೀತೆಯಲ್ಲಿ "ಈಶ್ವರನು ಎಲ್ಲರ ಹೃದಯದಲ್ಲಿ ನೆಲಸಿ ತನ್ನ ಮಾಯೆಯಿಂದ ಅವರನ್ನಾಡಿಸುತ್ತಿದ್ದಾನೆ. ಅವನಿಗೆ ನೀನು ಸರ್ವಾರ್ಪಣಭಾವದಿಂದ ಶರಣಾಗು. ಅವನ ಅನುಗ್ರಹದಿಂದ ಪರಮಶಾಂತಿಯನ್ನೂ ಸದ್ಗತಿಯನ್ನೂ ಹೊಂದುತ್ತೀಯೆ" ಎಂದು ಹೇಳಲಾಗಿದೆ. ಆದ್ದರಿಂದ ಶಿವನು ಜ್ಯೋತಿರ್ಲಿಂಗನಾಗಿ ಹೃದಯಕಮಲದಲ್ಲಿ ನೆಲಸಿರುವನೆಂದು ಸ್ಪಷ್ಟವಾಗಿದೆ.

**ಸರ್ವವ್ಯಾಪಕಸ್ಯ ಪರಮೇಶ್ವರಸ್ಯ ದಹರಾತ್ಮಕತ್ವಂ ಪ್ರಸಾಧ್ಯ ತಸ್ಯೈವ ಸಾಧನಾಂತರನಿರಪೇಕ್ಷಸ್ವಯಂಪ್ರಕಾಶತ್ವಂ ಸ್ಥೂಲಸೂಕ್ಷ್ಮಚಿದಚಿತ್ಪ್ರಕಾಶಕತ್ವಂ ಚಾಧಿಕರಣಾಂತರೇಣ ದರ್ಶಯತಿ—**

**ಅನುಕೃತ್ಯಧಿಕರಣಂ ॥ ೬ ॥ ಅನುಕೃತೇಸ್ತಸ್ಯ ಚ ॥ ೨೨ ॥**

**ಮುಂಡಕೇ ಶ್ರೂಯತೇ. "ನ ತತ್ರ ಸೂರ್ಯೋ ಭಾತಿ ನ ಚಂದ್ರ, ತಾರಕಾ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ । ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥" ಇತಿ. ಅತ್ರ ಸರ್ವಪ್ರಪಂಚಪ್ರಕಾಶಕತ್ವೇನ ಶ್ರೂಯಮಾಣಂ ವಸ್ತು ತೇಜೋವಿಶೇಷಃ ಪರಮೇಶ್ವರೋ ವೇತಿ ಸಂಶಯಃ. ತೇಜೋವಿಶೇಷ ಏವಾತ್ರೋಪದಿಶ್ಯತೇ. ತೇಜಸ ಏವ ಪ್ರಬಲಪ್ರಕಾಶಕತ್ವೇನ ಪ್ರಸಿದ್ಧೇಃ. ಪ್ರಕೃಷ್ಟತೇಜಸಾ ದುರ್ಬಲಸ್ಯಾಭಿಭವದರ್ಶನಾಚ್ಚ. ಅತೋ ನ ಪರಮೇಶ್ವರ ಇತಿ ಚೇದ್ಬ್ರೂಮಃ—ಅತ್ರ ಪ್ರತಿಪಾದ್ಯಸ್ತೇಜೋವಿಶೇಷಃ**

ಪರಮೇಶ್ವರ ಏವ. ಕುತಃ ಅನುಕೃತೇಃ, ಅನುಕೃತಿರನುಕರಣಂ ಯತ್ 'ತಮೇವ ಭಾಂತಮನುಭಾತಿ ಸರ್ವಂ' ಇತ್ಯನುಭಾತಂ ತದುಚ್ಯತೇ. ಸ ಹಿ ತೇಜಸ್ತೇಜೋಽಂತರೇ ಭಾಸಮಾನೇ ಭಾಸತೇ. ತತಃ ಪ್ರಕಾಶತ್ವೇನ ಭಾಸಮಾನಂ ಶಿವತತ್ತ್ವಂ ಅನು ಸರ್ವಂ ಪ್ರಭಾಕರಚಂದ್ರನಕ್ಷತ್ರಾದಿಕಂ ಭಾಸತ ಇತಿ ಯುಕ್ತಂ. ಸೂತ್ರೋಕ್ತಚೇತಿಪದೇನ "ತಸ್ಯ ಭಾಸಾ ಸರ್ವಮಿದಂ ವಿಭಾತಿ" ಇತಿ ವಿಷಯವಾಕ್ಯೋದಾಹೃತಚತುರ್ಥಚರಣಾಭಿಪ್ರೇತಂ ಸರ್ವಾವಭಾಸಕತ್ವಂ ಸ್ವಯಂಪ್ರಕಾಶಮಾನತ್ವಂ ಶಿವಸ್ಯೈವೋಪಪನ್ನಂ. "ತದೇವ ಜ್ಯೋತಿಷಾಂ ಜ್ಯೋತಿಃ" ಇತ್ಯಾದೌ ಪ್ರಸಿದ್ಧಂ ಚ. 'ನ ತತ್ರ' ಇತಿ ತಚ್ಛಬ್ದೇ ಚ "ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಂ । ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತತ್ತದಾತ್ಮವಿದೋ ವಿದುಃ" ಇತಿ ಪ್ರಕೃತಪರಶಿವಬ್ರಹ್ಮಗ್ರಹಣಮೇವ ಯುಕ್ತಮಿತಿ ಬೋಧ್ಯತೇ. ಹಿರಣ್ಮಯೋ ಜ್ಯೋತಿರ್ಮಯೋ ಹ್ಯಾನಂದಮಯಃ ಪರಮಶಿವ ಇತ್ಯರ್ಥಃ. "ಹಿರಣ್ಯಾಯ ನಮಃ ಹಿರಣ್ಯಲಿಂಗಾಯ ನಮಃ", "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ ಹಿರಣ್ಯರೂಪಾಯ" ಇತ್ಯಾದೌ ಹಿರಣ್ಮಯತ್ವಂ ಪರಮಶಿವಸ್ಯೈವ ಪ್ರಸಿದ್ಧಂ. ತಸ್ಮಿನ್ನನ್ನಮಯಾದ್ಯಪೇಕ್ಷಯಾ ಪರೇ ಕೋಶೇ ದಹರಾಕಾಶೇ 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಇತಿ ಯತ್ಪ್ರತಿಷ್ಠಾಭೂತಂ ಬ್ರಹ್ಮತತ್ಪ್ರತಿಷ್ಠಿತಂ ತಚ್ಚ ವಿರಜಂ ಮಲತ್ರಯಶೂನ್ಯಂ, ನಿಷ್ಕಲಂ ಪಾಶರಹಿತಂ, ಶುಭ್ರಂ ನೈಸರ್ಗಿಕದೋಷಶೂನ್ಯಂ, ಜ್ಯೋತಿಷಾಂ ಸೂರ್ಯಾದೀನಾಂ ಜ್ಯೋತಿರವಭಾಸಕಂ ತಚ್ಚ ವಿದುಷಾಮನುಭವಸಿದ್ಧಮಿತ್ಯರ್ಥಃ.

ಸರ್ವವ್ಯಾಪಕನಾದ ಶಿವನು ಹೀಗೆ ಅಲ್ಪಪರಿಮಿತನಾಗಿದ್ದರೂ ಬೇರೆ ಯಾವ ಸಾಧನವನ್ನೂ ಅಪೇಕ್ಷಿಸದೆ ಸ್ವಯಂಪ್ರಕಾಶನಾಗಿ ವಿಶ್ವವನ್ನು ಪ್ರಕಾಶಿಸುತ್ತಾನೆಂದು ಈಗ ತಿಳಿಸಲಾಗಿದೆ. **ಅನುಕೃತ್ಯಧಿಕರಣ ॥೬॥ ಅನುಕೃತೇಸ್ತಸ್ಯ ಚ ॥೨೨॥**

ಮುಂಡಕದಲ್ಲಿ ಇದರ ವಿಷಯ ಬಂದಿದೆ. "ಅಲ್ಲಿ ಸೂರ್ಯನಾಗಲೀ ಚಂದ್ರ ತಾರೆಗಳಾಗಲೀ ಮಿಂಚಾಗಲೀ ಬೆಳಗುವುದಿಲ್ಲ. ಇನ್ನು ಅಗ್ನಿಗೆ ಪ್ರವೇಶವೆಲ್ಲಿದೆ? ಅವನು ಬೆಳಗುತ್ತಿದ್ದರೆ ಇವೆಲ್ಲವೂ ಬೆಳಗುತ್ತವೆ. ಅವನ ಪ್ರಕಾಶದಿಂದಲೇ ಇವೆಲ್ಲವೂ ಶೋಭಿಸುತ್ತವೆ" ಎಂಬ ಶ್ರುತಿಯಲ್ಲಿ ವಿಶ್ವವನ್ನೂ ಬೆಳಗುವ ಈ ವಸ್ತು ಒಂದು ದಿವ್ಯ ತೇಜಸ್ಸೇ ಅಥವಾ ಪರಶಿವನೇ ಎಂಬ ಸಂಶಯ ಬರುತ್ತದೆ. ತೇಜಸ್ಸೇ ಹೆಚ್ಚು ಪ್ರಕಾಶಿಸುವುದೆಂದು ಪ್ರಸಿದ್ಧಿ ಇರುವುದರಿಂದಲೂ, ಹೆಚ್ಚಿನ ತೇಜಸ್ಸು ಕಡಮೆ ತೇಜಸ್ಸನ್ನು ತಿರಸ್ಕರಿಸುವುದಾಗಿ ಲೋಕದಲ್ಲಿ ಕಂಡುಬಂದಿರುವುದರಿಂದಲೂ ಇಲ್ಲಿ ಹೇಳಿರುವ ವಸ್ತುವನ್ನು ತೇಜೋವಿಶೇಷವೆಂದೇ ಭಾವಿಸಬೇಕು ಎಂದು ಆಕ್ಷೇಪಬಂದರೆ ಸೂತ್ರವು ಹೀಗೆ ಸಮಾಧಾನವನ್ನು ಹೇಳುತ್ತದೆ. ಶ್ರುತಿಯಲ್ಲಿ ತೇಜಸ್ಸಿಗೆ "ಇದರ ಪ್ರಕಾಶವನ್ನು

ಬೇರೆ ಎಲ್ಲವೂ ಅನುಕರಿಸುತ್ತವೆ" ಎಂದು ಅನುಕರಣವನ್ನು ಹೇಳಿರುವುದರಿಂದ ಈ ವಸ್ತುವು ಪರಮೇಶ್ವರನೇ ಆಗಿರಬೇಕು. ಒಂದು ತೇಜಸ್ಸು ಪ್ರಕಾಶಿಸುತ್ತಿರುವಾಗ ಬೇರೊಂದು ತೇಜಸ್ಸು ಶೋಭಿಸಲಾರದು. ಯಾವಾಗಲೂ ಶೋಭಿಸುತ್ತಿರುವ ಶಿವ ತತ್ತ್ವವನ್ನನುಸರಿಸಿಕೊಂಡು ಸೂರ್ಯಚಂದ್ರಾದಿಗಳು ಪ್ರಕಾಶಿಸುತ್ತಾರೆ ಎಂಬುದು ಯುಕ್ತವಾಗಿದೆ. ಸೂತ್ರದಲ್ಲಿ ಬಂದಿರುವ ಚ ಎಂಬ ಪದವು "ಅವನ ಪ್ರಕಾಶ ದಿಂದಲೇ ಎಲ್ಲವೂ ಶೋಭಿಸುತ್ತದೆ" ಎಂಬ ಶ್ರುತಿಯ ನಾಲ್ಕನೆಯ ಪಾದದ ಅರ್ಥವನ್ನು ಸೂಚಿಸುತ್ತದೆ. ಎಲ್ಲರನ್ನು ಬೆಳಗುತ್ತ ಸ್ವಯಂಪ್ರಕಾಶನಾಗಿರುವುದು ಶಿವನೊಬ್ಬನಿಗೇ ಅನ್ವಯಿಸುತ್ತದೆ. "ಅದೇ ಜ್ಯೋತಿಗಳೆಲ್ಲಕ್ಕೂ ಜ್ಯೋತಿಯು" ಎಂಬ ಶ್ರುತಿಯಲ್ಲಿ ಇದು ಪ್ರಸಿದ್ಧವಾಗಿದೆ. 'ನ ತತ್ರ' ಎಂಬಲ್ಲಿ ತಚ್ಛಬ್ದವು "ಸ್ವರ್ಣಮಯವಾದ ದಹರಾ ಕಾಶದಲ್ಲಿ ನಿಷ್ಕಲಬ್ರಹ್ಮವು ಶುಭ್ರವಾದ ಪರಂಜ್ಯೋತಿಯಾಗಿ ನೆಲಸಿದೆ. ಅದನ್ನು ಶಿವಾನುಭವಿಗಳು ತಿಳಿದಿದ್ದಾರೆ" ಎಂಬಂತೆ ಪರಶಿವಬ್ರಹ್ಮವನ್ನೇ ಬೋಧಿಸುತ್ತದೆ. ಶ್ರುತಿಯಲ್ಲಿ ಹಿರಣ್ಮಯಪದವು ಜ್ಯೋತಿರ್ಮಯನೂ ಆನಂದಮಯನೂ ಆದ ಪರಶಿವ ನನ್ನು ತಿಳಿಸುತ್ತದೆ. ಹಿರಣ್ಯಲಿಂಗ-ಹಿರಣ್ಯಬಾಹು ಎಂಬ ಪದಗಳು ಪರಶಿವನಲ್ಲಿಯೇ ಪ್ರಸಿದ್ಧವಾಗಿವೆ. ಆದ್ದರಿಂದ "ಹಿರಣ್ಮಯೇ ಪರೇ ಕೋಶೇ" ಎಂಬಲ್ಲಿ ಅನ್ನಮಯಾದಿ ಕೋಶಗಳಿಗಿಂತಲೂ ಶ್ರೇಷ್ಠವಾದ ದಹರಾಕಾಶದಲ್ಲಿ ನೆಲಸಿ ಮಲಪಾಶದೋಷಗಳಿಲ್ಲದೆ ಶುಭ್ರವಾದ ಪರಂಜ್ಯೋತಿಯನ್ನು ಜ್ಞಾನಿಗಳು ಅನುಭವಿಸಬೇಕೆಂದು ಅರ್ಥವಾಗುತ್ತದೆ.

ಪರಮೇಶ್ವರಪಕ್ಷೇ ಹೇತ್ವಂತರಮಾಹ. ಅಪಿ ಚ ಸ್ಮರ್ಯತೇ॥೨೩॥

"ಅಣೋರಣೀಯಾನಹಮೇವ ತದ್ವನ್ಮಹಾನಹಂ ವಿಶ್ವಮಿದಂ ವಿಚಿತ್ರಂ ಪುರಾತನೋಽಹಂ ಪುರುಷೋಽಹಮೀಶಃ ಹಿರಣ್ಮಯೋಽಹಂ ಶಿವರೂಪ ಮಸ್ಮಿನ್" ಇತಿ ಕೈವಲ್ಯಾದ್ಯುಪನಿಷತ್ಸು ಜ್ಯೋತಿರ್ಮಯತ್ವಂ ಪರಮ ಶಿವಸ್ಯೈವ ಸ್ಮರ್ಯತೇ. ಅಪಿಚೇತಿ ಸಮುಚ್ಚಯೇ. ತಥಾ ಗೀತಾಸು ಚ. "ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ। ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ||" "ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ। ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ" ಇತಿ. ಶಿವಸ್ಯ ಪರಬ್ರಹ್ಮಣಃ ಸಾಧನಾಂ ತರನಿರಪೇಕ್ಷಸ್ವಯಂಪ್ರಕಾಶಕತ್ವೇ ಸತಿ ಸ್ವಾನುಸ್ಯೂತಸ್ಥೂಲಸೂಕ್ಷ್ಮ ಚಿದಚಿತ್ಪ್ರಪಂಚಪ್ರಕಾಶಕತ್ವಮುಪದಿಶ್ಯತೇ. ತಸ್ಮಾನ್ನಾನ್ಯವಿಷಯತ್ವಂ. ನನು ಗೀತಾಸು "ತತ್ತೇಜೋ ವಿದ್ಧಿ ಮಾಮಕಂ" ಇತಿ ಸರ್ವಪ್ರಕಾಶ ಕತ್ವೇನ ನಾರಾಯಣಸ್ಯೈವ ಪರಬ್ರಹ್ಮತ್ವೋಪದೇಶಾತ್ "ಈಶ್ವರಸ್ಸ ರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ" ಇತಿ ವಾಕ್ಯವಿಹಿತಪಹ ರಾಂತರ್ವರ್ತಿತ್ವಂ ತಸ್ಯೈವೋಪಪನ್ನಂ, ಶಿವಪರತ್ವೇ ಪ್ರಕರಣವಿರೋ ಧೋಽತ್ರ ದೃಶ್ಯತೇ. ತಸ್ಮಾನ್ನಾರಾಯಣ ಏವಾತ್ರೋಪದಿಶ್ಯತೇ ಇತಿ

ಚೇನ್ನ, ಉಪಕ್ರಮೋಪಸಂಹಾರಾದಿಷಡ್ವಿಧತಾತ್ಪರ್ಯಲಿಂಗೈಃ ಗೀತಾರ್ಥಸ್ಯಾಪಿ ಪರಮಶಿವಬೋಧಕತ್ವಾತ್. 'ಈಶ್ವರಸ್ಸರ್ವಭೂತಾನಾಂ ಇತ್ಯುಪಕ್ರಮ್ಯ "ತಮೇವ ಶರಣಂ ಗಚ್ಛ" ಇತ್ಯಂತೇನ ಶಿವಪರತ್ವಂ. ತಥಾಪಿ "ಮಾಮೇಕಂ ಶರಣಂ ವ್ರಜ" ಇತ್ಯನೇನ ವಿಷ್ಣುಪರತ್ವಮೇವ ಸೂಚಿತಮಿತಿ ನ ಶಂಕನೀಯಂ, ದಹರೋಪಾಸನಸ್ಯ ವಿಷ್ಣುಪರತ್ವೇ ಪೂರ್ವೋಕ್ತತೈತ್ತಿರೀಯಕೈವಲ್ಯಾದಿಬಹುಶ್ರುತಿವಿರೋಧಾತ್. ಅಗ್ರಿಮವಾಕ್ಯೇನ ಫಲವಿಷಯಪ್ರಕಾರಸಹಿತಸ್ಯ ವಿಷ್ಣೂಪಾಸನಸ್ಯ ಪೃಥಗ್ವಿಧಾನಾಚ್ಚ. ತದುಕ್ತಂ, 'ಸರ್ವಗುಹ್ಯತಮಂ ಭೂಯಃ ಶ್ರುಣು ಮೇ ಪರಮಂ ವಚಃ। ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು। ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ। ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥" ಇತ್ಯಾದೌ, ಅನಯೋಶ್ಶಿವಕೇಶವಯೋರುಪಾಸ್ಯೋಪಕಯೋರಭೇದಃ "ಶ್ಯಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್ ಇತಿ ಸೂತ್ರನ್ಯಾಯೇನ ವೇದಿತವ್ಯಃ. ವಿಷ್ಣೋರಪಿ ಶಿವಾಂಶತ್ವಾದ್ವಿಷ್ಣುಪಾಸನಾಯಾಶ್ಶಿವಪ್ರೀತಿಕರತ್ವಾಚ್ಚ ವಿಷ್ಣೂಪಾಸನಯಾ ಮೋಕ್ಷವಿಧಾಯಕವಾಕ್ಯಾನಾಂ ಸ್ಥೂಲಾರುಂಧತೀನ್ಯಾಯೇನ ಶಿವಭಕ್ತಿಜನನದ್ವಾರಾ ಮೋಕ್ಷಹೇತುತ್ವಮುಪದಿಷ್ಟಂ. ಕೂರ್ಮಪುರಾಣೇ ಈಶ್ವರಗೀತಾಸು ಶ್ರೂಯತೇ. ಶಿವಃ—"ಮಮೈಷಾ ಪರಮಾ ಮೂರ್ತಿರ್ನಾರಾಯಣಸಮಾಹ್ವಯಾ। ಸರ್ವಭೂತಾತ್ಮಭೂತಸ್ಥಾ ಶಾಂತಾ ಚಾಕ್ಷರಸಂಜ್ಞಕಾ। ತಸ್ಮಾದೇಷ ಮಹಾಯೋಗೀ ಮದ್ಭಕ್ತಃ ಪುರುಷೋತ್ತಮಃ। ಅರ್ಚನೀಯೋ ನಮಸ್ಕಾರ್ಯಃ ಮತ್ಪ್ರೀತಿಜನನಾಯ ಹಿ ॥" ಗೀತಾಶಾಸ್ತ್ರಮಪೀಶ್ವರಾಲ್ಲಬ್ಧ್ವಾ ತದಾಜ್ಞಾವಶಾದೇವ ಕೃಷ್ಣೇನಾರ್ಜುನಾಯೋಪದಿಷ್ಟಂ. ತತ್ರೈವ ಶಿವಃ—"ಮಯೈತದ್ಭಾಷಿತಂ ಜ್ಞಾನಂ ಹಿತಾರ್ಥಂ ಬ್ರಹ್ಮವಾದಿನಾಂ। ದಾತವ್ಯಂ ಶಾಂತಚಿತ್ತೇಭ್ಯೋ ಶಿಷ್ಯೇಭ್ಯೋ ಭವತಾ ಸದಾ। ನಾರಾಯಣೋಽಪಿ ಭಗವಾನ್ ದೇವಕೀತನಯೋ ಹರಿಃ। ಅರ್ಜುನಾಯ ಸ್ವಯಂ ಸಾಕ್ಷಾದ್ದತ್ತವಾನಿದಮುತ್ತಮಂ" ಇತಿ. ತಸ್ಮಾತ್ಪರಮೇಶ್ವರ ಏವಾತ್ರೋಪಾಸ್ಯಃ.

ಇಲ್ಲಿ ಬೇರೊಂದು ಹೇತುವನ್ನು ಹೇಳುತ್ತಾನೆ—ಅಪಿಚ ಸ್ಮರ್ಯತೇ ॥ ೨೩ ॥

"ಈ ವಿಚಿತ್ರವಾದ ವಿಶ್ವದಲ್ಲಿ ನಾನು ಸಣ್ಣದಕ್ಕಿಂತ ಸಣ್ಣದೂ ದೊಡ್ಡದಕ್ಕಿಂತ ದೊಡ್ಡದೂ ಆಗಿದ್ದೇನೆ. ನಾನು ಪುರಾತನನೂ ವಿಶ್ವೇಶ್ವರನೂ ಸ್ವರ್ಣಮಯನೂ ಪುರುಷನೂ ಆಗಿ ಶಿವನೆನಿಸಿದ್ದೇನೆ" ಎಂದು ಕೈವಲ್ಯಶ್ರುತಿಯಲ್ಲಿ ಶಿವನು ಜ್ಯೋತಿರ್ಮಯನೆಂದು ಹೇಳಲಾಗಿದೆ. ಹಾಗೆಯೇ ಗೀತೆಯಲ್ಲಿ "ನನ್ನ ಪರಮಪದವನ್ನು

ಸೂರ್ಯಚಂದ್ರಾಗ್ನಿಗಳು ಮುಟ್ಟಲಾರರು. ಅಲ್ಲಿಗೆ ಹೋದವರು ಹಿಂತಿರುಗುವುದಿಲ್ಲ" ಜಗತ್ತನ್ನು ಬೆಳಗುತ್ತಿರುವ ಸೂರ್ಯ-ಚಂದ್ರ-ಅಗ್ನಿಗಳಲ್ಲಿ ಇರುವ ತೇಜಸ್ಸು ನನ್ನದೇ" ಎಂದು ಹೇಳಿದೆ. ಹೀಗೆ ಶಿವನು ಬೇರೆ ಸಲಕರಣೆಗಳನ್ನು ಬಯಸದೆ ಸ್ವತಂತ್ರನಾಗಿ ಬೆಳಗುತ್ತ ತನ್ನನ್ನು ಅನುಸರಿಸುವ ಎಲ್ಲಾ ಪ್ರಪಂಚಗಳನ್ನೂ ಬೆಳಗುತ್ತಿರುವುದರಿಂದ ಶ್ರುತಿಯಲ್ಲಿ ಹೇಳಿರುವ ಪ್ರಕಾಶವಸ್ತು ಶಿವನಿಗೇ ಅನ್ವಯಿಸುತ್ತದೆ. ಗೀತೆಯಲ್ಲಿ 'ತೇಜಸ್ಸು ನನ್ನದು' ಎಂಬಲ್ಲಿ ನಾರಾಯಣನೇ ಸರ್ವಪ್ರಕಾಶಕನಾದ್ದರಿಂದ ಪರಶಿವನೆಂದು ಹೇಳಿದ್ದರಿಂದ "ಎಲ್ಲರ ಹೃದಯದಲ್ಲೂ ಈಶ್ವರನು ನೆಲಸಿರುವನು" ಎಂಬ ವಾಕ್ಯದಲ್ಲಿ ಹೇಳಿದಂತೆ ದಹರಕಮಲದೊಳಗೆ ಇರುವವನು ನಾರಾಯಣನೆಂಬುದೇ ಹೊಂದುತ್ತದೆ. ಇದು ಶಿವನಿಗೆ ಹೊಂದುವುದೆಂದು ಹೇಳಿದರೆ ಪ್ರಕರಣವಿರೋಧವುಂಟಾಗುತ್ತದೆ. ಆದ್ದರಿಂದ ನಾರಾಯಣನೇ ಇಲ್ಲಿ ಉಪಾಸ್ಯನೆಂದು ಹೇಳುವುದು ಯುಕ್ತವಲ್ಲವೆ? ಅಂದರೆ ಉಪಕ್ರಮೋಪಸಂಹಾರೈಕ್ಯವೇ ಮೊದಲಾದ ಆರು ಬಗೆಯ ತಾತ್ಪರ್ಯಲಿಂಗಗಳಿಂದ ಗೀತೆ ಪರಶಿವನನ್ನೇ ಬೋಧಿಸುವುದರಿಂದ ನಾರಾಯಣನನ್ನು ದಹರೋಪಾಸ್ಯನೆಂದು ಹೇಳಲಾಗುವುದಿಲ್ಲ. "ಎಲ್ಲರೊಳಗೂ ಈಶ್ವರನಿದ್ದಾನೆ" ಎಂದಾರಂಭಿಸಿ "ಅವನಿಗೇ ಶರಣಾಗು" ಎಂಬುವವರೆಗೂ ಗೀತೆ ಶಿವಪರವೇ ಆಗಿದೆ. ಇಲ್ಲಿ "ಎಲ್ಲವನ್ನೂ ಬಿಟ್ಟು ನನಗೆ ಶರಣಾಗು" ಎಂಬುದು ವಿಷ್ಣುವಿಗೆ ಅನ್ವಯಿಸುವುದೆಂದು ಶಂಕಿಸಬೇಕಾಗಿಲ್ಲ. ದಹರಕಮಲದಲ್ಲಿ ವಿಷ್ಣು ಉಪಾಸ್ಯನೆಂಬ ಬಗ್ಗೆ ತೈತ್ತಿರೀಯ, ಕೈವಲ್ಯ ಮೊದಲಾದ ಅನೇಕ ಶ್ರುತಿಗಳ ವಿರೋಧವಿರುವುದರಿಂದಲೂ, ಬಹಳ ಗೋಪ್ಯವಾದ ನನ್ನ ಮಾತನ್ನು ಕೇಳು" "ನನ್ನಲ್ಲಿ ಮನಸ್ಸಿಟ್ಟು ನನ್ನ ಭಕ್ತನಾಗು, ನನ್ನಲ್ಲಿಯೇ ನೀನು ಸೇರುತ್ತೀಯೆ. ನೀನು ಪ್ರಿಯನಾಗಿರುವುದರಿಂದ ಇದು ಸತ್ಯವೆಂದು ಪ್ರತಿಜ್ಞೆಮಾಡುತ್ತೇನೆ" ಎಲ್ಲ ಧರ್ಮಗಳನ್ನು ಬಿಟ್ಟು ನನ್ನೊಬ್ಬನಲ್ಲಿ ಶರಣಾಗು, ನಿನ್ನ ಎಲ್ಲಾ ಪಾಪಗಳನ್ನೂ ಬಿಡಿಸುತ್ತೇನೆ, ಅಳಬೇಡ" ಎಂಬ ವಾಕ್ಯಗಳಲ್ಲಿ ಪ್ರತ್ಯೇಕವಾಗಿ ಫಲ, ವಿಷಯ ಮತ್ತು ವಿಧಾನಗಳೊಂದಿಗೆ ವಿಷ್ಣುವಿನ ಉಪಾಸನವನ್ನು ಹೇಳಿರುವುದರಿಂದಲೂ ಗೀತೆಯು ಶಿವಪರವೇ ಆಗಿದೆ. ಶಿವಕೇಶವರಿಗೆ ಉಪಾಸ್ಯೋಪಾಸಕರಾದ್ದರಿಂದ ವಾಸ್ತವವಾಗಿ ಭೇದವಿದ್ದರೂ ಶಾಸ್ತ್ರದಲ್ಲಿ ಅಭೇದವನ್ನು ಹೇಳಲಾಗಿದೆ ಎಂದು ವ್ಯಾಸನೇ ಹೇಳಿದ್ದಾನೆ. ವಿಷ್ಣು ಶಿವನ ಅಂಶನಾದ್ದರಿಂದ ಅವನ ಉಪಾಸನವು ಶಿವನಿಗೆ ಪ್ರೀತಿಕರವಾಗುವುದು. ವಿಷ್ಣುವಿನ ಉಪಾಸನದಿಂದ ಮೋಕ್ಷವನ್ನು ತಿಳಿಸುವ ವಾಕ್ಯಗಳು ಸ್ಥೂಲಾರುಂಧತೀನ್ಯಾಯದಿಂದ ಶಿವಭಕ್ತಿಯನ್ನು ಹುಟ್ಟಿಸುವ ಮೂಲಕ ಮೋಕ್ಷಕ್ಕೆ ಹೇತುಗಳಾಗುತ್ತವೆ. ಕೂರ್ಮಪುರಾಣದ ಈಶ್ವರಗೀತೆಯಲ್ಲಿ "ಸರ್ವರಲ್ಲೂ ನೆಲಸಿ ಅಕ್ಷರನೂ ಪುರುಷೋತ್ತಮನೂ ಮಹಾಯೋಗಿಯೂ ಎನಿಸಿದ ನಾರಾಯಣನು ನನ್ನ ಶಾಂತಮೂರ್ತಿಯಾದ್ದರಿಂದ ನನ್ನ ಪರಮ ಭಕ್ತನಾಗಿದ್ದಾನೆ. ಅವನ ಅರ್ಚನೆಯಿಂದ ನನಗೆ ಸಂತೋಷವಾಗುತ್ತದೆ" ಎಂದು ಶಿವನು ಹೇಳಿದ್ದಾನೆ. ಗೀತೆಯನ್ನೂ ಸಹ ಕೃಷ್ಣನು ಈಶ್ವರನಿಂದ ಪಡೆದು ಅವನ ಆಜ್ಞೆಯಂತೆ ಅರ್ಜುನನಿಗೆ ಉಪದೇಶಿಸಿದನು. ಅಲ್ಲಿಯೇ

ಶಿವನು "ಬ್ರಹ್ಮವಾದಿಗಳ ಹಿತಕ್ಕಾಗಿ ಹೇಳಿದ ಈ ಜ್ಞಾನವನ್ನು ಶಾಂತಚಿತ್ತರಿಗೇ ತಿಳಿಸಬೇಕು" ಎಂದು ಹೇಳಿದ್ದರಿಂದ ಅದರಂತೆ ಕೃಷ್ಣನು ಗೀತೆಯನ್ನು ಅರ್ಜುನನಿಗೆ ಉಪದೇಶಿಸಿದ್ದಾನೆ. ಆದ್ದರಿಂದ ಗೀತೆಯಲ್ಲಿ ಈಶ್ವರನೇ ಉಪಾಸ್ಯನಾಗಿದ್ದಾನೆ.

ಚಿದಚಿತ್ಪ್ರಪಂಚಪ್ರಕಾಶಕಸ್ಯ ಪರಬ್ರಹ್ಮಣಶ್ಶಿವಸ್ಯ ರೂಪೋಪನ್ಯಾಸಮಧಿಕರಣಾಂತರೇಣ ದರ್ಶಯತಿ—

ಪ್ರಮಿತಾಧಿಕರಣಂ ॥ ೭ ॥ ಶಬ್ದಾದೇವ ಪ್ರಮಿತಃ ॥ ೨೪ ॥

ಕಠವಲ್ಲ್ಯಾಂ ಶ್ರೂಯತೇಽಸ್ಯ ವಿಷಯಃ "ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ। ಈಶಾನೋ ಭೂತಭವ್ಯಸ್ಯ ಸ ತತೋ ವಿಜುಗುಪ್ಸತೇ ॥" ಇತಿ. "ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ । ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ ಏತದ್ವೈ ತತ್" ಇತಿ. ಅತ್ರಾಂಗುಷ್ಠಮಾತ್ರತ್ವೇನ ಶ್ರೂಯಮಾಣಃ ಪುರುಷೋಃ ಜೀವಃ ಪರಮೇಶ್ವರೋ ವೇತಿ ಸಂದೇಹಃ. ಅತ್ರಾಂಗುಷ್ಠಮಾತ್ರಪರಿಮಾಣೋಪದೇಶಾಜ್ಜೀವ ಇತ್ಯೂಹನೀಯಂ, ಸೋಪಾಧಿಕತ್ವಾತ್. ಕಿಂಚ "ಸ ವಿಶ್ವರೂಪಸ್ತ್ರಿಗುಣಸ್ತ್ರಿವರ್ತ್ಮಾ ಪ್ರಾಣಾದಿಭಿಸ್ಸಂಚರತಿ ಸ್ವಕರ್ಮಭಿಃ। ಅಂಗುಷ್ಠಮಾತ್ರೋ ರವಿತುಲ್ಯರೂಪಃ ಸಂಕಲ್ಪಾಹಂಕಾರಸಮನ್ವಿತೋಽಯಂ ।" ಇತಿ. "ಅಥ ಸತ್ಯವತಃ ಕಾಯಾತ್ಪಾಶಬಂಧವಶಂಗತಂ । ಅಂಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್" ಇತ್ಯಾದಿಶ್ರುತಿಸ್ಮೃತಿಷು ಶಾರೀರಸ್ಯೈವಾಂಗುಷ್ಠಮಾತ್ರೋಪದೇಶಾತ್. "ಮಧ್ಯ ಆತ್ಮನಿ ತಿಷ್ಠತಿ" ಇತಿ ದೇಹಾಂತರ್ವರ್ತಿತ್ವೇನ ನಿರ್ದೇಶಾತ್ಸರ್ವದಾ ಜೀವಸ್ಯೈವಾಂಗುಷ್ಠಮಾತ್ರತ್ವಮುಪಪದ್ಯತ ಇತಿ ಚೇದುಚ್ಯತೇಽಂ, ಇಹಾಂಗುಷ್ಠಮಾತ್ರಃ ಪುರುಷೋ ಮಹೇಶ್ವರ ಏವ. ಕುತಃ, ಶಬ್ದಾದೇವ ಈಶಾನಶಬ್ದಾದೇವ ಸಾಕ್ಷಾನ್ಮಹೇಶ್ವರಃ ಪ್ರಮಿತಃ ನಿಶ್ಚಿತ ಇತ್ಯರ್ಥಃ. ಇತರ ವ್ಯವಚ್ಛೇದಾರ್ಥೇ ಏವಕಾರಃ. "ಈಶಾನಸ್ಸರ್ವವಿದ್ಯಾನಾಂ" ಇತ್ಯಾದಿಶ್ರುತ್ಯಂತರೇಷ್ವಪಿ ಪರಮಶಿವಸ್ಯೈವೇಶಾನಶಬ್ದಶ್ರವಣಾತ್ ನಹಿ ಶಾರೀರಸ್ಯೇಶ್ವರತ್ವಂ. "ಭೂತಭವ್ಯಸ್ಯ" ಇತಿ ಶ್ರುತ್ಯುಪದಿಷ್ಟಸರ್ವೇಶ್ವರತ್ವಸ್ಯ ಜೀವೇಽನುಪಪನ್ನತ್ವಾತ್. "ಯದ್ಭೂತಂ ಯಚ್ಚ ಭವ್ಯಂ ಉತಾಮೃತತ್ವಸ್ಯೇಶಾನಃ" ಇತಿ ಶ್ರುತ್ಯಂತರೇ ಚ ತಸ್ಯೈವ ಶ್ರವಣಾತ್. 'ಏತದ್ವೈ ತತ್' ಇತಿ ಪ್ರಕರಣಸ್ಯ ಪರಮೇಶ್ವರಾದನ್ಯತ್ರ ಸಾಮಂಜಸ್ಯಾಭಾವಾತ್. 'ಸರ್ವೋ ವೈ ರುದ್ರಃ" ಇತ್ಯಾದೌ ಚರಾಚರಾತ್ಮಕತ್ವಸ್ಯ ತಸ್ಮಿನ್ನೇವ ಶ್ರವಣಾಚ್ಚ. ಪೃಷ್ಟಂಚೇಹ ಬ್ರಹ್ಮ "ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ಕೃತಾಕೃತಾತ್। ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ"

**ಇತಿ ಶಬ್ದಾದೇವಾಭಿಧಾನಶ್ರುತೇರೇವ ಪ್ರಕೃತೇ ಮುಖ್ಯತಯಾ ಪರಮೇಶ್ವರಸ್ಯೈವ ವ್ಯಪದಿಷ್ಟತ್ವಾತ್. "ನಮಸ್ತೇ ಅಸ್ತು ಭಗವನ್ವಿಶ್ವೇಶ್ವರಾಯ" ಇತ್ಯುಪಕ್ರಮ್ಯ "ಸರ್ವೇಶ್ವರಾಯ ಸದಾಶಿವಾಯ ಶ್ರೀಮನ್ಮಹಾದೇವಾಯ ನಮಃ." ಇತ್ಯಂತೇನ ಯಜುಸ್ಸಾಮಸು, "ಸರ್ವೈಶ್ವರ್ಯಸಂಪನ್ನಸ್ಸರ್ವೇಶ್ವರಶ್ಶಂಭುರಾಕಾಶಮಧ್ಯೇ" ಇತ್ಯಥರ್ವಣೇ ಚ ತಸ್ಯೈವ ಸರ್ವೇಶ್ವರತ್ವವ್ಯವಸ್ಥಾಪನಾತ್. "ಅಂಗುಷ್ಠಮಾತ್ರಃ ಪುರುಷೋ ಹ್ಯಂಗುಷ್ಠಂ ತು ಸಮಾಶ್ರಿತಃ । ಈಶಸ್ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್" ಇತ್ಯಾದಿಮಹೋಪನಿಷದಿ ಅಂಗುಷ್ಠಮಾತ್ರಸ್ಯ ಪರಮೇಶ್ವರಸ್ಯ ನಿರ್ದೇಶಾನ್ನೇತರಃ.**

ಚಿದಚಿತ್ಪ್ರಪಂಚವನ್ನು ಬೆಳಗುವ ಶಿವನ ಆಕಾರವಿರುವ ಬಗೆಯನ್ನು ತಿಳಿಸುತ್ತಾನೆ—

**ಪ್ರಮಿತಾಧಿಕರಣಂ ॥ ೭ ॥ ಶಬ್ದಾದೇವ ಪ್ರಮಿತಃ ॥ ೨೪ ॥**

ಕಠವಲ್ಲಿಯಲ್ಲಿ ಇದರ ವಿಷಯ ಬಂದಿದೆ. "ಅಂಗುಷ್ಠಪ್ರಮಾಣದ ಪುರುಷನು ಆತ್ಮನೊಳಗೆ ನೆಲಸಿದ್ದಾನೆ" "ಶಿವನು ಹಿಂದಿನದು ಮುಂದಿನದು ಎಲ್ಲಕ್ಕೂ ನಿಯಾಮಕನಾದ್ದರಿಂದ, ಉಪಾಸಕನು ಜುಗುಪ್ಸೆಪಡುವುದಿಲ್ಲ". "ಹೊಗೆಯಿಲ್ಲದ ಬೆಂಕಿಯಂತೆ ಶೋಭಿಸುತ್ತ ಅವನು ಹಿಂದಿನದು ಮುಂದಿನದು ಎಲ್ಲಕ್ಕೂ, ಇಂದೂ, ನಾಳೆಯೂ ಪ್ರಭುವೆನಿಸಿದ್ದಾನೆ. "ಅದೇ ಇದು" ಈ ಶ್ರುತಿಯಲ್ಲಿ ಅಂಗುಷ್ಠಪ್ರಮಾಣದ ಪುರುಷನೆಂದರೆ ಜೀವನೇ? ಅಥವಾ ಪರಮೇಶ್ವರನೇ? ಎಂಬ ಸಂದೇಹ ಬರುತ್ತದೆ. ಇಲ್ಲಿ ಅಂಗುಷ್ಠಪರಿಮಾಣವನ್ನು ಹೇಳಿದ್ದರಿಂದಲೂ, ಉಪಾಧಿಸಹಿತನಾದ್ದರಿಂದಲೂ ಜೀವನೇ ಈ ಪುರುಷನೆಂದು ಊಹಿಸಬಹುದು. "ಅಂಗುಷ್ಠಪ್ರಮಾಣನಾದ ಜೀವನು ಸಂಕಲ್ಪಾಹಂಕಾರಗಳಿಂದ ಕೂಡಿ ಸೂರ್ಯನಂತೆ ಶೋಭಿಸುತ್ತ ವಿಶ್ವರೂಪನೂ ತ್ರಿಗುಣನೂ ಆಗಿ ತನ್ನ ಕರ್ಮಾನುಸಾರವಾಗಿ ಮೂರುಮಾರ್ಗಗಳಿಂದ ಪ್ರಾಣಗಳೊಡನೆ ಸಂಚರಿಸುತ್ತಾನೆ" ಎಂದು ಶ್ರುತಿಯಲ್ಲೂ, "ಸತ್ಯವಾನನ ಶರೀರದಿಂದ ಯಮನು ಅಂಗುಷ್ಠಪ್ರಮಾಣದ ಜೀವವನ್ನು ಪಾಶದಿಂದ ಸೆಳೆದನು" ಎಂದು ಸ್ಮೃತಿಯಲ್ಲೂ ಜೀವನನ್ನು ಅಂಗುಷ್ಠಪರಿಮಾಣನೆಂದು ಹೇಳಿದೆ. "ದೇಹದ ಮಧ್ಯದಲ್ಲಿ ನೆಲಸಿದ್ದಾನೆ" ಎಂದು ಹೇಳಿದ್ದರಿಂದ ಜೀವನು ಯಾವಾಗಲೂ ಅಂಗುಷ್ಠಪರಿಮಾಣನೆಂಬುದೇ ಯುಕ್ತವಾಗುತ್ತದೆ. ಹೀಗೆ ಆಕ್ಷೇಪ ಬಂದರೆ ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಶ್ರುತಿಯಲ್ಲಿ ಈಶಾನಶಬ್ದವನ್ನು ಹೇಳಿರುವುದರಿಂದ ಪುರುಷನೆಂದರೆ ಮಹೇಶ್ವರನೆಂದೇ ನಿಶ್ಚಿತವಾಗಿದೆ. ಬೇರೆ ಯಾರೂ ಅಲ್ಲವೆಂದು ತಿಳಿಸಲಿಕ್ಕಾಗಿಯೇ ಸೂತ್ರದಲ್ಲಿ ಏವಕಾರ ಬಂದಿದೆ. ಅವಲ್ಲದೆ ಬೇರೆ ಶ್ರುತಿಗಳಲ್ಲೂ ಪರಶಿವನಿಗೇ ಈಶಾನಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ಜೀವನು ಎಂದಿಗೂ ಈಶ್ವರನಾಗಲಾರನು. ಈ ಶ್ರುತಿಯಲ್ಲಿ ಹೇಳಿರುವ ಸರ್ವೇಶ್ವರತ್ವವು ಜೀವನಲ್ಲಿ ಹೊಂದುವುದಿಲ್ಲ. "ಹಿಂದಿನದು ಮುಂದಿನದು ಮತ್ತು ಅಮೃತ ಇವೆಲ್ಲಕ್ಕೂ ಈಶಾನನು" ಎಂಬಲ್ಲೂ

ಈಶಾನಪದವು ಜೀವನಿಗೇ ಅನ್ವಯಿಸುತ್ತದೆ. "ಅದೇ ಇದು" ಎಂಬ ಪ್ರಕರಣವು ಪರಮೇಶ್ವರನಲ್ಲಲ್ಲದೆ ಬೇರೆಕಡೆ ಸಮಂಜಸವಾಗುವುದಿಲ್ಲ. "ಎಲ್ಲವೂ ರುದ್ರನೇ" ಎಂಬಲ್ಲಿ ಅವನೇ ಚರಾಚರಪ್ರಪಂಚವೆಂದು ಹೇಳಲಾಗಿದೆ. "ಧರ್ಮ ಅಧರ್ಮ, ಮಾಡಿದ್ದು ಮತ್ತು ಮಾಡದಿರುವುದು, ಹಿಂದಿನದು ಮುಂದಿನದು ಇದೆಲ್ಲಕ್ಕೂ ಬೇರೆಯಾಗಿ ಯಾವುದನ್ನು ಕಾಣುವೆಯೋ ಅದನ್ನು ಹೇಳು, ಅದೇ ಬ್ರಹ್ಮ" ಎಂದು ಬ್ರಹ್ಮವನ್ನು ತಿಳಿಸುವ ಶ್ರುತಿಯಿಂದಲೇ ಮುಖ್ಯವಾಗಿ ಪರಶಿವನು ನಿರ್ದಿಷ್ಟನಾಗಿದ್ದಾನೆ. "ವಿಶ್ವೇಶ್ವರನೂ ಸದಾಶಿವನೂ ಆದ ಮಹಾದೇವನಿಗೆ ನಮಸ್ಕಾರ" ಎಂದು ಯಜುಸ್ಸಾಮವೇದಗಳಲ್ಲೂ, "ಸರ್ವೈಶ್ವರ್ಯಸಂಪನ್ನನಾದ ಶಂಭು ಚಿದಂಬರದಲ್ಲಿ ಶೋಭಿಸುತ್ತಿರುವನು" ಎಂದು ಅಥರ್ವಣದಲ್ಲೂ ಶಿವನೇ ಈಶ್ವರನೆಂದು ವ್ಯವಸ್ಥೆಯಾಗಿದೆ. "ಅಂಗುಷ್ಠಪ್ರಮಾಣದಲ್ಲಿ ಅಂಗುಷ್ಠದಲ್ಲಿಯೇ ನೆಲಸಿ ಈಶ್ವರನು ವಿಶ್ವವನ್ನು ರಕ್ಷಿಸುತ್ತಲೂ, ಭೋಗಿಸುತ್ತಲೂ ಸಂತೋಷಪಡುತ್ತಿದ್ದಾನೆ" ಎಂದು ಮಹೋಪನಿಷತ್ತಿನಲ್ಲೂ ಶಿವನಿಗೆ ಅಂಗುಷ್ಠಪ್ರಮಾಣವನ್ನು ಹೇಳಿದ್ದರಿಂದ ಪರಮೇಶ್ವರನೇ ಪುರುಷನು.

ವ್ಯಾಪಕಸ್ಯ ಶಿವಸ್ಯ ಪರಬ್ರಹ್ಮಣಃ ಕಥಮಂಗುಷ್ಠಮಾತ್ರತ್ವಮಿತ್ಯಾಶಂಕಾಯಾಮಾಹ-**ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್||೨೫||**

ತುಶಬ್ದೋಽತ್ರ ಶಂಕಾನಿರಾಸಾರ್ಥಕಃ. ಹೃದ್ಯಪೇಕ್ಷಯಾ ಹೃದಯಸ್ಥಾನಾಪೇಕ್ಷಯಾ ವ್ಯೋಮವತ್ಸರ್ವವ್ಯಾಪಕಸ್ಯ ಸಾಧಕಾನುಗ್ರಹಾರ್ಥಂ ಜ್ಯೋತಿರ್ಮಯಲಿಂಗರೂಪೇಣ ಅಂಗುಷ್ಠಪರಿಮಾಣಹೃದಯಾವಚ್ಛಿನ್ನತಯಾಂಗುಷ್ಠಮಾತ್ರತ್ವಮುಪಪನ್ನಂ."ಅಂಗುಷ್ಠಮಾತ್ರಃ" ಇತಿ ಮಹೋಪನಿಷದಿ ಶ್ರೂಯತೇ. "ಹಸ್ತಿಮಶಕಾದಿಶರೀರೇಷು ಹೃದಯಪುಂಡರೀಕಸ್ಯಾನಿಯತಪರಿಮಾಣತ್ವಾತ್ಕಥಮಂಗುಷ್ಠಮಾತ್ರನಿಯಮಃ ಇತಿ ಚೇದತ್ರಾಹ, ಮನುಷ್ಯಾಧಿಕಾರತ್ವಾಚ್ಛಾಸ್ತ್ರಸ್ಯೇತಿ ಶೇಷಃ. ಷಷ್ಠೇ ಫಲಾರ್ಥೇ ಕರ್ಮಣಿ ತಿರ್ಯಗಾದೇರಪಿ ಸ್ವರ್ಗಕಾಮಸ್ಯಾಧಿಕಾರಃ, ಸ್ವರ್ಗಕಾಮಶ್ರುತೇರವಿಶೇಷಾತ್ ಇತ್ಯಾಶಂಕ್ಯ ಅಂಗಶ್ರುತ್ಯರ್ಥಸಾರ್ಥಕ್ಯಸ್ಯ ಸಮರ್ಥವಿಷಯತಯಾ, ತಿರ್ಯಗಾದೇಸ್ಸಾಮರ್ಥ್ಯಾಭಾವೇನ ಸ್ವರ್ಗಕಾಮಪದಂ ಸಂಕೋಚ್ಯ ಮನುಷ್ಯಾಧಿಕಾರತ್ವೇ ಸ್ಥಿತೇ ಚಾತುರ್ವರ್ಣ್ಯಮಧಿಕರೋತಿ ಶಾಸ್ತ್ರಮಿತಿ ಪ್ರಾಪಯ್ಯ "ವಸಂತೇ ಬ್ರಾಹ್ಮಣೋಽಗ್ನಿನಾದಧೀತ ಗ್ರೀಷ್ಮೇ ರಾಜನ್ಯಶ್ಶರದಿ ವೈಶ್ಯಃ" ಇತಿ ತ್ರಯಾಣಾಮೇವಾಗ್ನಿಸಂಬಂಧಶ್ರವಣಾತ್ತ್ರಯಾಣಾಮೇವಾಧಿಕಾರ ಇತಿ ರಾದ್ಧಾಂತಿತಂ. ಕಿಂಚ "ಪರೀಕ್ಷ್ಯ ಲೋಕಾನ್ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ||", "ಅರ್ಥೀ ಸಮರ್ಥೋ ವಿದ್ವಾನ್ ಶಾಸ್ತ್ರೇಣಾಪರ್ಯುದ

ದಾಸೋ ವೈದಿಕೇ ಕರ್ಮಣ್ಯಧಿಕಾರೀ " ಇತಿ ಶ್ರುತಿಸೂತ್ರನಿರ್ದಿಷ್ಟಶಕ್ತತ್ವಾರ್ಥಿತ್ವಾದ್ಯುಪನಯನಾದಿಶಾಸ್ತ್ರಸ್ಯ ಮನುಷ್ಯನಿಯತಪರಿಮಾಣಾಧಿಕಾರಲಕ್ಷಣವಿಷಯತ್ವಾತ್. " ಯತ್ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ " ಇತ್ಯಾದೌ ಮನುಷ್ಯಾಣಾಮೇವ ಹಿತತಮತ್ವೋಪದೇಶಾತ್ತಿರ್ಯಗಾದಾವರ್ಥಿತ್ವಾದಿಧರ್ಮಾಣಾಮಸಂಭವಾತ್ ಶರೀರಾತಿಶಯೇನ ಮನುಷ್ಯಾಣಾಮೇವಾಂಗುಷ್ಠಮಾತ್ರಹೃದಯಪುಂಡರೀಕಸಂಭವಾಚ್ಚ ತೇಷಾಮೇವ ಬ್ರಹ್ಮವಿದ್ಯಾಧಿಕಾರಿತ್ವಂ. ತಸ್ಮಾದುಪಾಸನಾಶಾಸ್ತ್ರವಿಧೇರ್ಮನುಷ್ಯಹೃದಯಂ ಯತ್ಪರಿಣಾಮಂ ತದವಚ್ಛಿನ್ನಸ್ವರೂಪಂ ಪರಮಕಾರುಣಿಕಃ ಪರಮಶಿವಃ ಪ್ರಾಪ್ನೋತಿ, ಘಟಾವಚ್ಛಿನ್ನಾಕಾಶಸ್ಯ ಘಟಪರಿಮಾಣವದಂಗುಷ್ಠಮಾತ್ರದಹರಾಕಾಶಾವಚ್ಛಿನ್ನಸ್ಯ ಪರಮೇಶ್ವರಸ್ಯ ತತ್ಪರಿಮಾಣತ್ವೇ ನ ವಿರೋಧಃ. ಅಂಗುಷ್ಠಮಾತ್ರಜೀವಪ್ರತಿಪಾದಕವಾಕ್ಯಾನಾಂ ಮುಕ್ತಜೀವಪರತ್ವಾನ್ನ ದೋಷಃ. " ಬ್ರಹ್ಮ ವೇದ ಬ್ರಹ್ಮೈವ ಭವತಿ " ಇತ್ಯಾದಿಶ್ರುತಿಷು ಮುಕ್ತಜೀವಸ್ಯ ಬ್ರಹ್ಮಾತ್ಮಕತಯಾ ಬ್ರಹ್ಮಧರ್ಮೋಪದೇಶೋ ಯುಕ್ತಃ. ಕಿಂಚ, " ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ । ತಂ ಸ್ವಾಚ್ಛರೀರಾತ್ಪ್ರಗೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ ತಂ ವಿದ್ಯಾಚ್ಛುಕ್ರಮಮೃತಂ । " ಇತ್ಯಂಗುಷ್ಠಮಾತ್ರತ್ವೇ ನ ಕಶ್ಚಿದ್ವಿರೋಧಃ.

ವ್ಯಾಪಕ ಶಿವನು ಹೇಗೆ ಅಂಗುಷ್ಠಪ್ರಮಾಣನಾಗುವನೆಂದು ಆಶಂಕಿಸಿ ಸಮಾಧಾನವನ್ನು ಹೇಳುತ್ತಾನೆ. **ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್॥೨೫॥**

ತು ಶಬ್ದವು ಶಂಕೆಯನ್ನು ಪರಿಹರಿಸುತ್ತದೆ. ಆಕಾಶದಂತೆ ಸರ್ವವ್ಯಾಪಕನಾದ ಪರಶಿವನು ಹೃದಯದ ಪ್ರಮಾಣಕ್ಕನುಸರಿಸಿ ಜ್ಯೋತಿರ್ಲಿಂಗರೂಪದಿಂದ ಅಂಗುಷ್ಠಪ್ರಮಾಣದಲ್ಲಿ ಅಲ್ಲಿ ನೆಲಸಿರುವುದು ಯುಕ್ತವೇ ಆಗಿದೆ. ಅಂಗುಷ್ಠಪ್ರಮಾಣದಿಂದ ಅಂಗುಷ್ಠದಲ್ಲಿ ಶಿವನು ನೆಲಸಿದ್ದಾನೆಂದು ಮಹೋಪನಿಷತ್ತು ಹೇಳಿದೆ. ಆನೆ ಸೊಳ್ಳೆಗಳ ಶರೀರಗಳಲ್ಲಿ ಹೃದಯಕಮಲವು ಒಂದೇ ಪ್ರಮಾಣದಲ್ಲಿರುವುದಿಲ್ಲವಾದ್ದರಿಂದ ಅಲ್ಲಿ ಅಂಗುಷ್ಠಮಾತ್ರವೆಂಬ ನಿಯಮ ಹೇಗೆ ಹೊಂದುತ್ತದೆ? ಎಂದರೆ ಶಾಸ್ತ್ರವು ಮನುಷ್ಯನ ಹೃದಯವನ್ನು ಅವಲಂಬಿಸಿ ಹೊರಟಿರುವುದರಿಂದ ಅಂಗುಷ್ಟಮಾತ್ರವೆಂಬ ನಿಯಮವು ಏರ್ಪಟ್ಟಿದೆ. ಪೂರ್ವಮೀಮಾಂಸೆಯ ಆರನೇ ಅಧ್ಯಾಯದಲ್ಲಿ ಸ್ವರ್ಗಾದಿ ಫಲಕ್ಕಾಗಿ ವಿಹಿತವಾಗಿರುವ ಕರ್ಮಗಳಲ್ಲಿ ತಿರ್ಯಗ್ಜಂತುಗಳಿಗೂ ಅಧಿಕಾರಬರಲೆಂದು ಆಶಂಕಿಸಿ ಅವುಗಳಿಗೆ ಆ ಕರ್ಮಗಳನ್ನು ನಡೆಸಲು ಸಾಮರ್ಥ್ಯವಿಲ್ಲದ್ದರಿಂದ ಮನುಷ್ಯರಿಗೆ ಮಾತ್ರ ಅನ್ವಯಿಸುವಂತೆ ಶಾಸ್ತ್ರವನ್ನು ಸಂಕೋಚಪಡಿಸಿ, ಇದರಿಂದ ನಾಲ್ಕು ವರ್ಣದವರಿಗೂ ಅಧಿಕಾರ ಪ್ರಾಪ್ತವಾದರೆ, ವಸಂತಕಾಲದಲ್ಲಿ ಬ್ರಾಹ್ಮಣನೂ, ಗ್ರೀಷ್ಮ ಋತುವಿನಲ್ಲಿ ಕ್ಷತ್ರಿಯನೂ, ಶರದೃತುವಿನಲ್ಲಿ ವೈಶ್ಯನೂ ಅಗ್ನ್ಯಾಧಾನಕರ್ಮವನ್ನು

ಮಾಡಬೇಕೆಂದು ಮೂರು ವರ್ಣದವರಿಗೇ ಅಗ್ನಿಸಂಬಂಧವನ್ನು ಹೇಳಿರುವುದರಿಂದ ಅವರಿಗೆ ಮಾತ್ರವೇ ಅಧಿಕಾರವೆಂದು ಸಿದ್ಧಾಂತಮಾಡಲಾಗಿದೆ. "ಲೋಕಸುಖದ ಅನಿತ್ಯತೆಯನ್ನು ತಿಳಿದವನು ವೈರಾಗ್ಯಶೀಲನಾಗಿ ಬ್ರಹ್ಮಜ್ಞಾನಿಯಾದ ಗುರುವಿನ ಬಳಿಗೆ ಮುಕ್ತಿಯ ಬಗ್ಯೆ ತಿಳಿಯಲು ಹೋಗಬೇಕು". ಅರ್ಥಿಯೂ, ಸಮರ್ಥನೂ, ಜ್ಞಾನಿಯೂ, ಶಾಸ್ತ್ರಸಮ್ಮತನೂ ಆದವನೇ ವೈದಿಕ ಕರ್ಮಗಳಿಗೆ ಅಧಿಕಾರಿ ಎನಿಸುವನು" ಎಂಬ ಶ್ರುತಿ ಸೂತ್ರಗಳಲ್ಲಿ ಹೇಳಿದ ಜಿಜ್ಞಾಸೆ, ಸಾಮರ್ಥ್ಯ, ಉಪನಯನಾದಿಸಂಸ್ಕಾರ ಇವು ಮನುಷ್ಯನಿಗೆ ನಿಯತವಾಗಿ ಅನ್ವಯಿಸುತ್ತವೆ. "ನೀನು ಮನುಷ್ಯರಿಗೆ ಅತ್ಯಂತ ಹಿತವಾದ್ದೆಂದು ತಿಳಿದದ್ದನ್ನು ಹೇಳು" ಎಂಬಲ್ಲಿ ಮನುಷ್ಯನನ್ನೇ ಅಧಿಕಾರಿ ಎಂದು ಹೇಳಿರುವುದರಿಂದ ತಿರ್ಯಕ್ಪ್ರಾಣಿಗಳಲ್ಲಿ ಅರ್ಥಿತ್ವಾದಿಧರ್ಮಗಳು ಸಂಭವಿಸದಿರುವುದರಿಂದಲೂ, ಮನುಷ್ಯರಿಗೆ ಮಾತ್ರವೇ ಅಂಗುಷ್ಠಪ್ರಮಾಣದ ಹೃದಯಕಮಲವಿರುವುದರಿಂದಲೂ ಅವರಿಗೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತದೆ. ಆದ್ದರಿಂದ ಶಾಸ್ತ್ರದ ವಿಧಿಯಂತೆ ಮನುಷ್ಯಹೃದಯದ ಪ್ರಮಾಣಕ್ಕನುಗುಣವಾಗಿ ದಯಾಳುವಾದ ಪರಶಿವನು ಆ ರೂಪವನ್ನು ತಾಳುತ್ತಾನೆ. ಘಟದೊಳಗಿನ ಆಕಾಶವು ಘಟದ ಪರಿಮಾಣವನ್ನು ಹೊಂದುವಂತೆ ಅಂಗುಷ್ಠಪ್ರಮಾಣದ ದಹರಾಕಾಶದಲ್ಲಿರುವ ಶಿವನು ಅಷ್ಟೇ ಪ್ರಮಾಣವನ್ನು ಹೊಂದುವುದರಲ್ಲಿ ವಿರೋಧವಿಲ್ಲ. ಅಂಗುಷ್ಠಪ್ರಮಾಣದ ಜೀವನನ್ನು ತಿಳಿಸುವ ವಾಕ್ಯಗಳು ಮುಕ್ತರಿಗೆ ಅನ್ವಯಿಸುತ್ತದೆ. ಶ್ರುತಿಯಲ್ಲಿ ಮುಕ್ತನನ್ನು ಬ್ರಹ್ಮಾತ್ಮಕನೆಂದೇ ಹೇಳಿದೆ. "ಅಂಗುಷ್ಠಪ್ರಮಾಣದ ಪುರುಷನು ಅಂತರಾತ್ಮನಾಗಿ ಎಲ್ಲರ ಹೃದಯದಲ್ಲೂ ನೆಲಸಿದ್ದಾನೆ, ಮುಂಜವೆಂಬ ಹುಲ್ಲಿನಿಂದ ತೆನೆಯನ್ನು ಬೇರ್ಪಡಿಸುವಂತೆ ದೇಹವನ್ನು ಆತ್ಮನಿಂದ "ಬೇರ್ಪಡಿಸುವುದು." ಅವನನ್ನು ಪರಿಶುದ್ಧನೆಂದೂ ಅಮೃತನೆಂದೂ ತಿಳಿಯುವುದು". ಹೀಗೆ ಶ್ರುತಿ ಇರುವುದರಿಂದ ಶಿವನು ದೇಹದಲ್ಲಿ ಅಂಗುಷ್ಠಪ್ರಮಾಣದಲ್ಲಿ ಇರಲಿಕ್ಕೆ ವಿರೋಧವೇನಿಲ್ಲ.

**ಏವಂ ಮನುಷ್ಯಾಣಾಂ ಬ್ರಹ್ಮವಿದ್ಯಾಧಿಕಾರಂ ಪ್ರಸಾಧ್ಯ ದೇವಾನಾಂ ಬ್ರಹ್ಮವಿದ್ಯಾಧಿಕಾರಿತ್ವಮಾಹ—ದೇವತಾಧಿಕರಣಂ ॥ ೮ ॥**

**ತದುಪರ್ಯುಪರಿ ಬಾದರಾಯಣಸ್ಸಂಭವಾತ್ ॥ ೨೬ ॥**

**ಬೃಹದಾರಣ್ಯಕತೃತೀಯಾಧ್ಯಾಯೇ ಶ್ರೂಯತೇಽಸ್ಯ ವಿಷಯಃ. "ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ತಥಾ ಋಷೀಣಾಂ ತಥಾ ಮನುಷ್ಯಾಣಾಂ" ಇತಿ ಮನುಷ್ಯಾಧಿಕಾರತ್ವಾದಿತ್ಯೇತತ್ಪ್ರಸಂಗಾದಾಗತಮಿದಮಧಿಕರಣಂ. ಇಹ ದೇವಾನಾಂ ಬ್ರಹ್ಮವಿದ್ಯಾಧಿಕಾರಿತ್ವಂ ಅಸ್ತಿ ನವೇತಿ ಸಂಶಯಃ. ಅತ್ರ ಬ್ರಹ್ಮವಿದ್ಯಾಯಾಂ ನ ದೇವಾನಾಮಧಿಕಾರಃ. "ಯತ್ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ" ಇತ್ಯಾದೌ ಮನುಷ್ಯಾಣಾಮೇವ ಪರಶಿವೋಪಾಸನಸ್ಯ ಹಿತತಮತ್ವೇನ ವ್ಯಪದೇಶಾದರ್ಥಿತ್ವಾದಿಶಾಸ್ತ್ರಸ್ಯ ಮನುಷ್ಯಾಧಿಕಾರತ್ವಾತ್, ದೇವಾನಾಂ**

ಪಂಚೀಕೃತವಿಗ್ರಹಾಭಾವಾತ್. ಸ್ಥೂಲಶರೀರವಿಶಿಷ್ಟಸ್ಯೈವ ಸ್ತುತಿಧ್ಯಾನಾದಿಕರ್ಮಾಧಿಕಾರದರ್ಶನಾಚ್ಚ. "ಇಂದ್ರೋ ವೃತ್ರಾಯ ವಜ್ರಮುದಯಚ್ಛತ್" ಇತ್ಯಾದೌ ದೇವಾನಾಂ ಶರೀರಿತ್ವಂ ವ್ಯಪದಿಶ್ಯತ ಇತಿಚೇನ್ನ ವಿಧ್ಯೈಕವಾಕ್ಯವಿಷಯಾಣಾಮನ್ಯತ್ರ ಸಮನ್ವಯಾಭಾವಾತ್. ಶರೀರಿತ್ವೇಽಪಿ "ಅರ್ಥೀ ಸಮರ್ಥೋ" ಇತ್ಯಾದಿಶಾಸ್ತ್ರನಿರ್ದಿಷ್ಟಾರ್ಥಿತ್ವಾದಿಕಂ ನ ತೇಷಾಂ ಸಂಭವತಿ, ದೇವಪರಮೇಶ್ವರಯೋಽಸ್ಥಿತ್ಯೈಕತ್ವೋಪದೇಶಾತ್. "ದೇವಾ ಹ ವೈ ಸ್ವರ್ಗಂ ಲೋಕಮಗಮನ್ ತೇ ದೇವಾ ರುದ್ರಮಪೃಚ್ಛನ್" ಇತ್ಯಾದೌ ಸ್ವರ್ಗ ಏವ ಲೋಕೋ ರುದ್ರಸ್ಯ ಪರಮಾತ್ಮನಃ ಪದಂ ದೇವಾನಾಮಪಿ ಪದಮಿತ್ಯಾಚಕ್ಷ್ಯತೇ. ಕಿಂಚ "ಆಪ್ನೋತಿ ಸ್ವಾರಾಜ್ಯಂ" ಇತ್ಯಾದಿಷು ತದ್ವ್ಯಪದೇಶೇಽಪಿ ದೇವಾನಾಂ ಸ್ವಾರಾಜ್ಯಪ್ರಾಪ್ತಿಃ ಶ್ರೂಯತೇ. ಉತ, "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" ಇತ್ಯಾದೌ ಬ್ರಹ್ಮಣೋ ವೇದವೇದ್ಯತ್ವಾವಗಮಾತ್. "ನಾವೇದವಿನ್ಮನುತೇ ತಂ ಬೃಹಂತಂ" ಇತ್ಯಾದೌ ಮಾನಾಂತರಾಭಾವ ಉಪದಿಶ್ಯತೇ. ದೇವಾನಾಂ ಬ್ರಹ್ಮವಿದ್ಯಾಧಿಕಾರಹೇತುಭೂತೋಪನಯನಸಂಸ್ಕಾರಸ್ಯ ವೇದಶಾಸ್ತ್ರೇಷ್ವದೃಷ್ಟತ್ವಾತ್ ಸಾಧನಂ ವಿನಾ ಸಾಧ್ಯಾನಿಷ್ಪತ್ತೇರಿತಿ ನ್ಯಾಯಾದುಪನಯನಾದಿಕರ್ಮಶೂನ್ಯಾನಾಂ ದೇವಾನಾಂ ನ ಸರ್ವಥಾ ಬ್ರಹ್ಮವಿದ್ಯಾಧಿಕಾರಿತ್ವಂ ಸಂಭವತೀತಿ ಪ್ರಾಪ್ತೇ ಬ್ರೂಮಃ. ತೇಷಾಂ ಮನುಷ್ಯಾಣಾಮುಪರ್ಯುಪರ್ಯುಪರಿಷ್ಟಾತ್ ಸ್ವರ್ಗಲೋಕಸ್ಥಿತಾನಾಂ ದೇವಾನಾಮಪಿ ಬ್ರಹ್ಮವಿದ್ಯಾಯಾಮಧಿಕಾರೋಽಸ್ತೀತಿ ಬಾದರಾಯಣೋ ಮನ್ಯತೇ. ಕುತಃ, ಸಂಭವಾತ್. "ದೇವಾಃ ರುದ್ರಮಪೃಚ್ಛನ್ ಕೋ ಭವಾನಿತಿ; ಸೋಽಬ್ರವೀದಹಮೇಕಃ ಪ್ರಥಮಮಾಸಂ ||" ಇತ್ಯಾದಿನಾಥರ್ವಶಿರಸಿ ದೇವಾನಾಮರ್ಥಿತ್ವಸ್ಯ ಪರಮೇಶ್ವರಕರ್ತೃಕಬ್ರಹ್ಮವಿದ್ಯೋಪದೇಶಸ್ಯ ಚ ದೃಷ್ಟತ್ವಾತ್. ತತ್ರೈವ ಪ್ರದೇಶಾಂತರೇ, "ತತೋ ದೇವಾ ರುದ್ರಂ ನಾಪಶ್ಯಂಸ್ತೇ ದೇವಾ ರುದ್ರಂ ಧ್ಯಾಯಂತಿ" ಇತ್ಯಾದೌ ದೇವಾನಾಂ ಪರಮೇಶ್ವರವಿಷಯಮುಪಾಸನಂ ಶ್ರೂಯತೇ. "ತದ್ಯೋಯೋ ದೇವಾನಾಂ ಪ್ರತ್ಯಬುಧ್ಯತ" ಇತ್ಯಾದಿನಾ ದೇವಾನಾಮಪಿ ಬ್ರಹ್ಮವಿದ್ಯಾಕಾಮನಯಾ ಬ್ರಹ್ಮಸ್ವರೂಪೋಪದೇಶಾದ್ಬ್ರಹ್ಮವಿದ್ಯಾಧಿಕಾರಿತ್ವಂ ನ ವಿರುದ್ಧಂ. "ದೇವಾಹ ವೈ ಸ್ವರ್ಗಂ ಲೋಕಮಗಮನ್" ಇತ್ಯತ್ರ ಸ್ವರ್ಗಪದೇನ ಲೋಕಸುಖಸಾಧಾರಣತ್ವೇಽಪಿ ಪ್ರಕೃತಪ್ರಕರಣಾದ್ಧಿರಣ್ಯಗರ್ಭಾದಿದೇವಲೋಕಾದುತ್ಕೃಷ್ಟಂ ಬ್ರಹ್ಮಣಃ ಶಿವಸ್ಯ ಲೋಕವಿಶೇಷತ್ವಂ ವ್ಯಪದಿಶ್ಯತೇ. ದೇವಾದೀನಾಂ ಸದಾ ಭೋಗಶಾಲಿತ್ವೇಽಪಿ ಭೋಗವಸ್ತುಷ್ವನಿತ್ಯತ್ವಾದಿದೋಷದರ್ಶನಾದ್ವೈರಾಗ್ಯಾದಿಕಂ ನಿರತಿಶಯಾನಂದಮೋಕ್ಷಾರ್ಥಿ

ತ್ವಂ ಸಂಭವತಿ. "ಇಂದ್ರೋ ವೃತ್ರಾಯ ವಜ್ರಮುದಯಚ್ಛತ್" ಇತ್ಯಾದಿ ಮಂತ್ರಾರ್ಥವಾದಸ್ಮೃತಿಪುರಾಣಾಗಮಾದಿಷು ದೇವಾನಾಂ ವಿಗ್ರಹವ್ಯಪ ಪದೇಶಾತ್ತೇಷಾಂ ಸ್ವತಸ್ಸಿದ್ಧಾಬಾಧಿತಬ್ರಹ್ಮಸೂತ್ರಸಂಸ್ಕಾರಸಿದ್ಧತ್ವಾತ್ ಸ್ವಯಂಭಾತವೇದವೇದಾಂತಾರ್ಥತ್ವಾಚ್ಚ ಉಪನಯನಸಂಸ್ಕಾರಶಾಸ್ತ್ರಸ್ಯ ಮಾನುಷಕಿಂಚಿದ್‌ಜ್ಞಾನವಿಷಯತ್ವಮೇವೇತಿ ನಿರ್ಣೀಯತೆ. ಉತ "ಏಕಶತಂ ಹ ವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯ ಮುವಾಸ. ಭೃಗುರ್ವೈ ವಾರುಣಿರ್ವರುಣಂ ಪಿತರಮುಪಸಸಾರ. ಅಧೀಹಿ ಭಗವೋ ಬ್ರಹ್ಮ" ಇತ್ಯಾದೌ ಬ್ರಹ್ಮವಿದ್ಯಾಗ್ರಹಣಾರ್ಥಂ ಬ್ರಹ್ಮಚ-ರ್ಯಾದಿಕಂ ದೃಷ್ಟಂ. ಉತ, ಭೃಗ್ವಾದಿಸಗೋತ್ರತ್ವೇನ ಸ್ವತ ಉದ್ಭೂತಯಜ್ಞಸೂತ್ರವಿಶಿಷ್ಟತ್ವೇನ, ಸ್ವತಸ್ಸಿದ್ಧವೇದವೇದಾಂಗಜ್ಞಾನವತ್ವೇನ ಚ ಬ್ರಹ್ಮವಿದ್ಯಾಧಿಕಾರಹೇತುಭೂತಾರ್ಥಿತ್ವಾದಿಕಂ ಸಂಭವತ್ಯೇವ. ದೇವನಾಮರ್ಥವಾದಪ್ರಾಮಾಣ್ಯಾತ್ ಶರೀರಿತ್ವೇನ ತತ್ಸಾಮರ್ಥ್ಯಂ ಸಿದ್ಧ್ಯತಿ. "ಆದಿತ್ಯೋ ಯೂಪಃ ಅಗ್ನಿರ್ಹಿಮಸ್ಯ ಭೇಷಜಂ" ಇತ್ಯಾದಿ ಗುಣವಾದಾನಾಂ ಸ್ವಾರ್ಥೇ ಸಮನ್ವಯವಿರೋಧೇಽಪಿ "ಇಂದ್ರೋ ವೃತ್ರಾಯ ವಜ್ರಮುದಯಚ್ಛತ್" ಇತ್ಯಾದೀನಾಮರ್ಥವಾದಾನಾಂ ವಿರೋಧಸ್ಯ ಮಾನಾಂತರಪ್ರಾಪ್ತ್ಯಭಾವೇನ ಸ್ವಾರ್ಥೇ ಸಮನ್ವಯಸಂಭವಾತ್. ಅಂಗುಷ್ಠಮಾತ್ರಶ್ರುತೇಸ್ಸ್ವಾಂಗುಷ್ಠಾಪೇಕ್ಷಯಾ ವಿರೋಧಾಭಾವಾತ್ತೇಷಾಂ ಯುಕ್ತಂ. ನನು ಚತುರ್ಥ್ಯಂತಶಬ್ದಾನಾಮೇವ ದೇವತ್ವಾತ್ತೇಷಾಮಚೇತನತ್ವಾತ್ಕಥಂ ಬ್ರಹ್ಮವಿದ್ಯಾಯಾಮಧಿಕಾರ ಇತಿ ಚೇನ್ನ ಚತುರ್ಥ್ಯಂತಶಬ್ದವಾಚ್ಯಾನಾಂ ವಿಗ್ರಹವತಾಂ ದೇವಾನಾಂ ಪ್ರತಿಪಾದಿತತ್ವೇನ ಬ್ರಹ್ಮವಿದ್ಯಾಯಾಮಧಿಕಾರಸಂಭವಾತ್.

ಹೀಗೆ ಬ್ರಹ್ಮವಿದ್ಯೆಯಲ್ಲಿ ಮನುಷ್ಯರ ಅಧಿಕಾರವನ್ನು ತಿಳಿಸಿ ದೇವತೆಗಳಿಗೂ ಅದರಲ್ಲಿ ಅಧಿಕಾರವಿದೆ ಎಂದು ತಿಳಿಸುತ್ತಾನೆ—**ದೇವತಾಧಿಕರಣ ॥ ೮ ॥**

**ತದುಪರ್ಯಪಿ ಬಾದರಾಯಣಸ್ಸಂಭವಾತ್ ॥೨೬॥**

ಬೃಹದಾರಣ್ಯಕದ ತೃತೀಯಾಧ್ಯಾಯದಲ್ಲಿ "ದೇವತೆಗಳಲ್ಲಿ ಯಾವನು ಅರಿತನೋ ಅವನು ಅದೇ ಆದನು. ಹಾಗೆಯೇ ಋಷಿಗಳಿಗೂ ಮನುಷ್ಯರಿಗೂ ಇದೇ ನಿಯಮ ಅನ್ವಯಿಸುತ್ತದೆ" ಎಂದು ಮನುಷ್ಯರ ಅಧಿಕಾರವನ್ನು ಪ್ರಸ್ತಾಪಿಸುವಾಗ ದೇವತೆಗಳ ಅಧಿಕಾರದ ವಿಷಯವು ಬಂದಿದೆ. ಆದರೆ ದೇವತೆಗಳಿಗೂ ಬ್ರಹ್ಮವಿದ್ಯೆಯ ಅಧಿಕಾರವಿದೆಯೇ ಇಲ್ಲವೇ ಎಂಬುದು ಸಂಶಯವಾಗಿದೆ. "ಮನುಷ್ಯರಿಗೆ ಹಿತವಾದ್ದನ್ನು ತಿಳಿಸು" ಎಂಬಲ್ಲಿ ಮನುಷ್ಯರಿಗೇ ಪರಶಿವೋಪಾಸನವು ಹಿತವಾದ್ದರಿಂದಲೂ, ಶಾಸ್ತ್ರದಲ್ಲಿ ಹೇಳಿದ ಅರ್ಥಿತ್ವವೇ ಮೊದಲಾದ ನಿಯಮಗಳು ಅವರಿಗೇ ಅನ್ವಯಿಸುವುದರಿಂದಲೂ, ದೇವತೆಗಳಿಗೆ ಪಂಚೀಕೃತವಾದ ಶರೀರವಿಲ್ಲದ್ದರಿಂದಲೂ, ಸ್ಥೂಲ

ಶರೀರವಿದ್ದರೇ ಸ್ತೋತ್ರ ಧ್ಯಾನ ಮೊದಲಾದ ಕರ್ಮಗಳ ಆಚರಣೆ ಸಾಧ್ಯವಾಗುವುದರಿಂದಲೂ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ. "ಇಂದ್ರನು ವೃತ್ರನಿಗೆ ವಜ್ರವನ್ನು ಕೊಟ್ಟನು" ಎಂಬಲ್ಲಿ ದೇವತೆಗಳಿಗೂ ಶರೀರವಿದೆ ಎಂದು ಹೇಳುವುದು ಯುಕ್ತವಲ್ಲ. ಒಂದು ವಿಧಿಯಲ್ಲಿ ಹೇಳಿದ ವಿಷಯವನ್ನು ಬೇರೆಕಡೆಗೆ ಸಮನ್ವಯ ಮಾಡಲಿಕ್ಕಾಗುವುದಿಲ್ಲ. ಹಾಗೆ ಅವರಿಗೆ ಶರೀರವಿದ್ದರೂ, ಅಧಿಕಾರಕ್ಕೆ ಅರ್ಹವಾದ ಜಿಜ್ಞಾಸೆ ಸಾಮರ್ಥ್ಯ ಮೊದಲಾದ ಧರ್ಮಗಳು ಅವರಲ್ಲಿ ಸಂಭವಿಸುವುದಿಲ್ಲ. ಇದೂ ಅಲ್ಲದೆ, ದೇವತೆಗಳೂ ಪರಶಿವನೂ ಒಂದೇಕಡೆ ನೆಲಸಿರುವರೆಂದು ಶ್ರುತಿಯಲ್ಲಿ ಹೇಳಿದೆ. "ದೇವತೆಗಳು ಸ್ವರ್ಗಕ್ಕೆ ಹೋಗಿ ರುದ್ರನನ್ನು ಕೇಳಿದರು" ಎಂಬಲ್ಲಿ ಸ್ವರ್ಗವೇ ರುದ್ರಲೋಕವೆಂದೂ ಅದೇ ದೇವತೆಗಳಿಗೂ ಸ್ಥಾನವೆಂದೂ ಹೇಳಲಾಗಿದೆ. ಇದೂ ಅಲ್ಲದೆ, "ಸ್ವಾತಂತ್ರ್ಯವನ್ನು ಹೊಂದುತ್ತಾನೆ" ಎಂಬಲ್ಲಿ ದೇವತೆಗಳಿಗೆ ಸ್ವಾತಂತ್ರ್ಯಪ್ರಾಪ್ತಿಯನ್ನು ಹೇಳಲಾಗಿದೆ. "ಉಪನಿಷತ್ತಿನಲ್ಲಿ ಹೇಳಿರುವ ಪುರುಷನ ಬಗ್ಗೆ ಕೇಳುತ್ತೇನೆ" ಎಂಬಲ್ಲಿ ಪರಶಿವನನ್ನು ಶ್ರುತಿಯಿಂದಲೇ ತಿಳಿಯಬೇಕೆಂದು ಹೇಳಿದೆ. "ವೇದವನ್ನರಿಯದವನು ಶಿವನನ್ನರಿಯನು" ಎಂಬಲ್ಲಿ ಶಿವಾನುಭವಕ್ಕೆ ಶ್ರುತಿಯಲ್ಲದೆ ಬೇರೆ ಯಾವ ಪ್ರಮಾಣವೂ ಇಲ್ಲವೆಂದು ಹೇಳಲಾಗಿದೆ. ಆದರೆ ದೇವತೆಗಳಿಗೆ ಬ್ರಹ್ಮವಿದ್ಯೆಯ ಅಧಿಕಾರವನ್ನು ದೊರಕಿಸುವ ದೀಕ್ಷಾಸಂಸ್ಕಾರವೇ ವೇದಶಾಸ್ತ್ರಗಳಲ್ಲಿ ಕಂಡುಬಂದಿಲ್ಲ. ಕಾರಣವಿಲ್ಲದೆ ಕಾರ್ಯ ಹುಟ್ಟುವುದಿಲ್ಲವೆಂಬ ನಿಯಮದಿಂದ ಕರ್ಮಾಚರಣೆಯಿಲ್ಲದ್ದರಿಂದ ದೇವತೆಗಳಿಗೆ ಎಂದಿಗೂ ಬ್ರಹ್ಮವಿದ್ಯೆಗೆ ಅಧಿಕಾರವಿಲ್ಲವೆಂದು ಆಕ್ಷೇಪ ಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಮನುಷ್ಯರಿಗೂ ಮೇಲೆ ಸ್ವರ್ಗದಲ್ಲಿ ಇರುವ ದೇವತೆಗಳಿಗೂ ಸಹ ಬ್ರಹ್ಮವಿದ್ಯೆಯಲ್ಲಧಿಕಾರವು ಸಂಭವಿಸುವುದೆಂದು ಬಾದರಾಯಣನು ತಿಳಿಸುತ್ತಾನೆ. "ದೇವತೆಗಳು ಸ್ವರ್ಗಕ್ಕೆ ಹೋಗಿ ರುದ್ರನನ್ನು 'ನೀನು ಯಾರು' ಎಂದು ಕೇಳಿದರು. ಆಗ ಅವನು ತನ್ನ ನಿಜತತ್ತ್ವವನ್ನು ತಿಳಿಸಿದನು" ಎಂದು ಅಥರ್ವಶಿರಸ್ಸಿನಲ್ಲಿ ದೇವತೆಗಳೂ ಬ್ರಹ್ಮವಿದ್ಯೆಗೆ ಅಭ್ಯರ್ಥಿಗಳೆಂದೂ, ಶಿವನೇ ಅವರಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಿದನೆಂದೂ ತಿಳಿದುಬಂದಿದೆ. ಅಲ್ಲಿಯೇ ಬೇರೆ ಕಡೆ "ಆಮೇಲೆ ದೇವತೆಗಳು ರುದ್ರನನ್ನು ಕಾಣದೆ ಧ್ಯಾನಿಸಿದರು" ಎಂಬಲ್ಲಿ ದೇವತೆಗಳಿಗೂ ಪರಶಿವನ ಉಪಾಸನವನ್ನು ಹೇಳಲಾಗಿದೆ. "ದೇವತೆಗಳಲ್ಲಿ ಯಾವನು ಅರಿತನೋ" ಎಂಬಲ್ಲಿ ಅವರಿಗೆ ಬ್ರಹ್ಮವಿದ್ಯೆಯನ್ನು ತಿಳಿಯಬೇಕೆಂಬ ಇಚ್ಛೆಯಿದ್ದುದರಿಂದಲೇ ಬ್ರಹ್ಮಸ್ವರೂಪವನ್ನು ತಿಳಿಸಿರುವುದಾಗಿ ಕಂಡುಬಂದಿರುವುದರಿಂದ ಅವರಿಗೂ ಅಧಿಕಾರವಿರುವುದರಲ್ಲಿ ವಿರೋಧವಿಲ್ಲ. "ದೇವತೆಗಳು ಸ್ವರ್ಗಲೋಕಕ್ಕೆ ಹೋದರು" ಎಂಬಲ್ಲಿ ಸ್ವರ್ಗಪದವು ಪ್ರಕೃತಪ್ರಕರಣದಿಂದ ಚತುರ್ಮುಖಬ್ರಹ್ಮನ ದೇವಲೋಕಕ್ಕಿಂತಲೂ ಉತ್ಕೃಷ್ಟವಾದ ಪರಶಿವಬ್ರಹ್ಮನ ಲೋಕವನ್ನು ತಿಳಿಸುತ್ತದೆ. ದೇವತೆಗಳು ಸ್ವರ್ಗದಲ್ಲಿ ಯಾವಾಗಲೂ ಭೋಗಪಡುತ್ತಿರುವುದರಿಂದ ಆ ಭೋಗವನ್ನು ಅನಿತ್ಯವೆಂದು ತಿಳಿದು ವೈರಾಗ್ಯಶೀಲರಾಗಿ ನಿರತಿಶಯಾನಂದರೂಪ

ವಾದ ಮೋಕ್ಷದ ಬಯಕೆ ಅವರಿಗೂ ಸಂಭವಿಸುತ್ತದೆ. ಮಂತ್ರ, ಅರ್ಥವಾದ, ಸ್ಮೃತಿ, ಪುರಾಣ, ಆಗಮಗಳಲ್ಲಿ ದೇವತೆಗಳಿಗೆ ಶರೀರವಿರುವುದಾಗಿ ಹೇಳಿರುವುದರಿಂದಲೂ, ಬ್ರಹ್ಮಸೂತ್ರಗಳಲ್ಲಿ ಹೇಳಿರುವ ಸಂಸ್ಕಾರಗಳು ಅವರಲ್ಲಿ ಸಹಜವಾಗಿರುವುದರಿಂದಲೂ, ವೇದವೇದಾಂತಗಳ ಅರ್ಥವು ಅವರಿಗೆ ತಾನಾಗಿಯೇ ಹೊಳೆಯುವುದರಿಂದಲೂ, ಉಪನಯನಸಂಸ್ಕಾರವನ್ನು ತಿಳಿಸುವ ಶಾಸ್ತ್ರವು ಅಲ್ಪಜ್ಞರಾದ ಮಾನವರಿಗೆ ಮಾತ್ರವೇ ಅನ್ವಯಿಸುವುದೆಂದು ನಿರ್ಣಯಿಸಲಾಗಿದೆ. "ಇಂದ್ರನು ನೂರು ವರ್ಷಕಾಲ ಬ್ರಹ್ಮನ ಬಳಿ ಬ್ರಹ್ಮಚರ್ಯವನ್ನಾಚರಿಸಿದನು", "ವರುಣಪುತ್ರನಾದ ಭೃಗುವು 'ಪೂಜ್ಯನೇ ಬ್ರಹ್ಮವನ್ನು ತಿಳಿಸು' ಎಂದು ತಂದೆಯ ಬಳಿ ತಿಳಿಸಿದನು" ಎಂಬಲ್ಲಿ ಬ್ರಹ್ಮವಿದ್ಯೆಗಾಗಿ ದೇವತೆಗಳೂ ಬ್ರಹ್ಮಚರ್ಯವನ್ನಾಚರಿಸಿದರೆಂದು ಕಂಡುಬಂದಿದೆ. ದೇವತೆಗಳಿಗೆ ಬ್ರಹ್ಮವಿದ್ಯೆಗೆ ಬೇಕಾದ ಭೃಗ್ವಾದಿ ಗೋತ್ರ, ಯಜ್ಞಸೂತ್ರ, ವೇದವೇದಾಂತಜ್ಞಾನ ಇವು ಇರುವುದರಿಂದ ಅವರಿಗೂ ಅಭ್ಯರ್ಥಿತ್ವ ಮೊದಲಾದ ಧರ್ಮಗಳು ಸಂಭವಿಸುತ್ತವೆ. ದೇವತೆಗಳಿಗೆ ಅರ್ಥವಾದದಿಂದ ಸಿದ್ಧಿಸುವ ಶರೀರವಿರುವುದರಿಂದ ಉಪಾಸನಸಾಮರ್ಥ್ಯವೂ ಸಿದ್ಧಿಸುತ್ತದೆ, "ಆದಿತ್ಯನೇ ಯೂಪವು, ಅಗ್ನಿಯೇ ಹಿಮಕ್ಕೆ ಔಷಧಿ" ಇತ್ಯಾದಿ ಗುಣವಾದಗಳಲ್ಲಿ ಅರ್ಥವಿರೋಧ ತೋರಿದರೂ "ಇಂದ್ರನು ವೃತ್ರನಿಗೆ ವಜ್ರವನ್ನು ಕೊಟ್ಟನು" ಎಂಬ ಅರ್ಥವಾದಗಳಿಗೆ ಯಾವ ವಿರೋಧವೂ ಇಲ್ಲದ್ದರಿಂದ ಅವುಗಳ ಸ್ವಾರ್ಥವನ್ನುಗ್ರಹಿಸುವುದರಲ್ಲಿ ದೋಷವೇನಿಲ್ಲ. ಅಂಗುಷ್ಠಮಾತ್ರಶ್ರುತಿಗೂ ವಿರೋಧವಿಲ್ಲದ್ದರಿಂದ ಆ ಅರ್ಥವು ಯುಕ್ತವೇ ಆಗಿದೆ. ಚತುರ್ಥಿವಿಭಕ್ತ್ಯಂತವಾದ ಶಬ್ದಗಳೇ ದೇವತೆಗಳಾದ್ದರಿಂದ ಅಚೇತನವಾದ ಆ ಶಬ್ದಗಳಿಗೆ ಬ್ರಹ್ಮವಿದ್ಯೆಯಲ್ಲಿ ಹೇಗೆ ಅಧಿಕಾರ ಬರುತ್ತದೆ? ಎಂದರೆ ಚತುರ್ಥೀವಿಭಕ್ತಿಯ ಪದಗಳು ಬೋಧಿಸುವ ದೇವತೆಗಳಿಗೂ ಶರೀರವಿರುವುದಾಗಿ ಶ್ರುತಿಯಲ್ಲಿ ತಿಳಿದುಬಂದಿರುವುದರಿಂದ ಅವರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಸಂಭವಿಸುತ್ತದೆ.

**ದೇವಾನಾಂ ವಿಗ್ರಹವತ್ತ್ವೇ ಬಾಧಕಮಾಶಂಕ್ಯ ನಿರಾಕರೋತಿ—**

**ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರವೃತ್ತೇರ್ದರ್ಶನಾತ್ ॥ ೨೭ ॥**

**ನನು ದೇವಾನಾಂ ವಿಗ್ರಹವತ್ತ್ವಂ ವಿನಾ ಬ್ರಹ್ಮವಿದ್ಯಾಯಾಮನಧಿಕಾರಾತ್ತದಂಗೀಕರಣೀಯಂ. ತಥಾ ಸತಿ ಕರ್ಮಣ್ಯಪಿ ಶರೀರಿತಯಾ ಋತ್ವಿಗಾದಿವತ್ಸನ್ನಿಧಾನೇನೈವೋಪಕಾರಕತ್ವಂ ಸ್ಯಾತ್ತಚ್ಚ ನ ಭವತಿ. ಏಕಸ್ಯ ಶರೀರಸ್ಯಾನೇಕತ್ರ ಯುಗಪತ್ಸನ್ನಿಧಾನಾಸಂಭವಾತ್ತಸ್ಮಾದ್ವಿಗ್ರಹವತ್ತ್ವಾಂಗೀಕಾರೇ ಕರ್ಮಣಿ ದೇವತಾಯಾ ಉಪಕಾರಕತ್ವವಿರೋಧಃ ಪ್ರಸಜ್ಯೇತೇತಿ ಚೇನ್ನೈಷ ದೋಷಃ. ಕುತಃ ಅನೇಕಪ್ರವೃತ್ತೇರ್ದರ್ಶನಾತ್. ವಿಗ್ರಹವತೋಽಪಿ ಸೌಭರ್ಯಾದೇರಿವ ದೇವಾನಾಮೇಕೈಕಶರೀರಿತ್ವೇಽಪಿ ಏಕಸ್ಯ ದೇವಸ್ಯಾನೇಕೇಷಾಂ ಶರೀರಾಣಾಂ ಯುಗಪದ್ವ್ಯಾಪ್ತೇಃ ಶ್ರುತೌ ದರ್ಶನಾತ್. ತಥಾಹಿ ಬೃಹದಾರಣ್ಯಕೇ ಶಾಕಲ್ಯ**

ಬ್ರಾಹ್ಮಣೇ " ಅಥೈನಂ ವಿದಗ್ಧಶ್ಶಾಕಲ್ಯಃ ಪಪ್ರಚ್ಛ ಕತಿ ದೇವಾ ಯಜ್ಞವಲ್ಕ್ಯ " ಇತ್ಯುಪಕ್ರಮ್ಯ " ತ್ರಯಶ್ಚ ತ್ರೀ ಚ ಸಹಸ್ರಂ " ಇತ್ಯುಕ್ತ್ವಾ " ಕತಮೇ ತೇ " ಇತಿ ಪೃಚ್ಛಾಯಾಂ " ಮಹಿಮಾನ ಏವೈತೇ ತ್ರಯಸ್ತ್ರಿಂಶತ್ತ್ವೇನ ದೇವಾಃ " ಇತಿ ಸಹಸ್ರಷಡಧಿಕತ್ರಿಶತದೇವಾನಾಂ ತ್ರಯಸ್ತ್ರಿಂಶದ್ದೇವೇಷ್ವಂತರ್ಭಾವಮುಕ್ತ್ವಾ ತ್ರಯಸ್ತ್ರಿಂಶತ್ತ್ವೇಽಪಿ ಷಟ್ಸು ಷಣ್ಣಾಂ, ತ್ರಿಷು ತ್ರಯಾಣಾಂ, ದ್ವಯೋರ್ದ್ವಯೋರೇಕಸ್ಮಿನ್ವಾಯ್ವಾತ್ಮಕೇ ದೇವೇ ಅಂತರ್ಭಾವಂ ಬ್ರುವತಿ. " ಏಕಸ್ಯ ವಾಯೋರನೇಕಾತ್ಮಕತ್ವಂ ದರ್ಶಯತಿ ". ತಸ್ಮಾದ್ವಿಗ್ರಹವತ್ತ್ವೇಽಪಿ ದೇವಾನಾಂ ಕರ್ಮಾಂಗಭಾವಚೋದನಾದನೇಕವಿಧತ್ವೇ ನ ಕಶ್ಚಿದ್ವಿರೋಧಃ. ಗೀತಾಯಾಮಪಿ " ಆತ್ಮನಾಂ ಚ ಸಹಸ್ರಾಣಿ ಬಹೂನಿ ಭರತರ್ಷಭ । ಯೋಗೀ ಕುರ್ಯಾತ್ಫಲಂ ಪ್ರಾಪ್ಯ ತೈಶ್ಚ ಸರ್ವೈರ್ಮಹೀಂ ಚರೇತ್ ॥ " " ಪ್ರಾಪ್ನುಯಾದ್ವಿಷಯಾನ್ ಕೈಶ್ಚಿತ್ ಕೈಶ್ಚಿದುಗ್ರಂ ತಪಶ್ಚರೇತ್ " ಇತ್ಯಾದಿನಾ ಅಣಿಮಾದ್ಯೈಶ್ವರ್ಯಯೋಗೀಶ್ವರಾಣಾಮಪಿ ಯೋಗಪ್ರಭಾವಾದ್ಯುಗಪದನೇಕಶರೀರಧಾರಣಸ್ಯ ಪ್ರತಿಪಾದಿತತ್ವಾತ್ ತೈಜಸಶರೀರಣಾಮಾಜಾನಸಿದ್ಧದೇವಾನಾಮನೇಕಪ್ರತಿಪತ್ತಿಃ ಕುತಶ್ಶಂಕನೀಯಾ. " ಅನೇಕೈರ್ಭೋಜಯದ್ಭಿರ್ಭೋಜ್ಯಂ ಯುಗಪದೇಕೋ ನ ಭೋಜ್ಯತೇ । ಬಹುಭಿರ್ನಮಸ್ಕುರ್ವಾಣೈಸ್ತು ಯುಗಪದೇಕೋ ನಮಸ್ಕ್ರಿಯತೇ ॥ " ಏವಂ ವಿಗ್ರಹವತೀಮೇಕಾಂ ದೇವತಾಮುದ್ದಿಶ್ಯ ಬಹವಃ ಸ್ವಂ ಸ್ವಂ ದ್ರವ್ಯಂ ಯುಗಪತ್ಪರಿತ್ಯಕ್ಷ್ಯಂತೀತಿ ತತ್ಕರ್ಮಣಿ ನ ವಿರೋಧಃ.

ದೇವತೆಗಳಿಗೆ ಶರೀರವಿರುವ ಬಗ್ಗೆ ಆಕ್ಷೇಪವನ್ನು ಆಶಂಕಿಸಿ ನಿರಾಕರಿಸುತ್ತಾನೆ.

**ವಿರೋಧಃ ಕರ್ಮಣೀತಿ ಚೇನ್ನ ಅನೇಕಪ್ರವೃತ್ತೇರ್ದರ್ಶನಾತ್ ॥೨೭॥**

ದೇವತೆಗಳಿಗೆ ಶರೀರವಿಲ್ಲದಮೇಲೆ ಬ್ರಹ್ಮವಿದ್ಯೆಗೂ ಅಧಿಕಾರವಿಲ್ಲದ್ದರಿಂದ ದೇಹವಿದೆ ಎಂದು ಒಪ್ಪಬೇಕು. ಹಾಗೆ ಶರೀರವಿರುವುದರಿಂದ ಋತ್ವಿಗಾದಿಗಳಂತೆ ಅವರು ಯಜ್ಞಾದಿಕರ್ಮಗಳಲ್ಲೂ ಭೌತಿಕವಾಗಿ ಹಾಜರಿರಬೇಕಾಗುತ್ತದೆ. ಆದರೆ ಹಾಗೆ ಅವರು ಕಂಡುಬರುತ್ತಿಲ್ಲ. ಒಂದೇ ಶರೀರ ಏಕಕಾಲದಲ್ಲಿ ಅನೇಕ ಕಡೆ ಹಾಜರಿರುವುದಕ್ಕೆ ಸಾಧ್ಯವಿಲ್ಲದ್ದರಿಂದ ಅವರಿಗೆ ದೇಹವಿದೆ ಎಂದು ಒಪ್ಪಿದರೆ ಯಜ್ಞದಲ್ಲಿ ದೇವತೆಯಿಂದ ಆಗಬೇಕಾದ ಉಪಕಾರಕ್ಕೆ ಭಂಗವುಂಟಾಗುತ್ತದೆ ಎಂದು ಹೇಳುವುದಾದರೆ, ಸೌಭರಿ ಎಂಬವನು ದೇಹವಿದ್ದರೂ ಅನೇಕ ಕಡೆ ಕಾಣಿಸುತ್ತಿದ್ದಂತೆ ಒಂದು ದೇವತೆಗೆ ಒಂದೇ ಶರೀರವಿದ್ದರೂ, ಅನೇಕ ಶರೀರಗಳಲ್ಲಿ ಒಂದೇಸಾರಿ ಇರುವುದಕ್ಕೆ ಸಾಧ್ಯವೆಂದು ಶ್ರುತಿಯಲ್ಲಿ ಹೇಳಿದೆ. ಬೃಹದಾರಣ್ಯಕದ ಶಾಕಲ್ಯಬ್ರಾಹ್ಮಣದಲ್ಲಿ " ನಿಪುಣನಾದ ಶಾಕಲ್ಯನು ಒಮ್ಮೆ ಯಜ್ಞವಲ್ಕ್ಯನನ್ನು ದೇವತೆಗಳು ಎಷ್ಟುಮಂದಿ ಎಂದು ಕೇಳಿದನು. ಅದಕ್ಕೆ ಅವನು " ಮೂವತ್ತಮೂರುಸಾವಿರ" ಎಂದು ಹೇಳಿದನು.

"ಅವರು ಹೇಗಿದ್ದಾರೆ" ಎಂಬ ಪ್ರಶ್ನೆಗೆ "ದೇವತೆಗಳು ಮೂವತ್ತಮೂರು ಎಂಬುದು ಅವರ ಮಹಿಮೆಯನ್ನು ತಿಳಿಸುತ್ತದೆ. ಮೂವತ್ತಮೂರುಸಾವಿರ ದೇವತೆಗಳು ಮೂವತ್ತಮೂರು ದೇವತೆಗಳೊಳಗೇ ಸೇರುವರು. ಅದರಲ್ಲೂ ಈ ಮೂವತ್ತಮೂರನ್ನು ಆರರಲ್ಲೂ, ಆರನ್ನು ಮೂರರಲ್ಲೂ, ಮೂರನ್ನು ಎರಡರಲ್ಲೂ, ಎರಡನ್ನು ಕೊನೆಗೆ ವಾಯುರೂಪವಾದ ಒಬ್ಬ ದೇವನಲ್ಲೂ ಸೇರಿಸಲಾಗಿದೆ" ಹೀಗೆ ಉತ್ತರಿಸುತ್ತಾನೆ. "ಒಬ್ಬ ವಾಯುವೇ ಅನೇಕ ರೂಪಗಳನ್ನು ತಾಳುತ್ತಾನೆ". ಆದ್ದರಿಂದ ದೇವತೆಗಳಿಗೆ ಶರೀರವಿದ್ದರೂ ಅವರನ್ನು ಕರ್ಮಕ್ಕೆ ಅಂಗವಾಗಿ ವಿಧಿಸಿರುವುದರಿಂದ ಅವರು ಅನೇಕ ಬಗೆಯಾಗಲಿಕ್ಕೆ ಏನೂ ವಿರೋಧವಿಲ್ಲ. ಗೀತೆಯಲ್ಲೂ "ಯೋಗಿಯು ತನ್ನ ಜನ್ಮಗಳನ್ನು ಹೆಚ್ಚಿಸಿಕೊಂಡು ಅವುಗಳ ಫಲದೊಂದಿಗೆ ಎಲ್ಲ ಕಡೆಯೂ ಸಂಚರಿಸಬಹುದು. ಕೆಲವು ಶರೀರಗಳಲ್ಲಿ ವಿಷಯವನ್ನು ಭೋಗಿಸಬಹುದು ಮತ್ತೆ ಕೆಲವು ಶರೀರಗಳಲ್ಲಿ ತಪಸ್ಸನ್ನಾಚರಿಸಬಹುದು". ಹೀಗೆ ಯೋಗಪ್ರಭಾವದಿಂದ ಅಣಿಮಾದಿಸಿದ್ಧಿಗಳನ್ನು ಪಡೆದು ಏಕಕಾಲದಲ್ಲಿ ಅನೇಕ ಶರೀರಗಳನ್ನು ಧರಿಸಬಹುದೆಂದು ಹೇಳಿರುವುದರಿಂದ ತೈಜಸಶರೀರಿಗಳಾದ ದೇವತೆಗಳು ಅನೇಕ ಶರೀರಗಳನ್ನು ಧರಿಸುವರೆಂಬ ಬಗ್ಗೆ ಸಂಶಯಪಡಬೇಕಾಗಿಲ್ಲ. ಅನೇಕರಿಗೆ ಊಟಮಾಡಿಸುವುದರಿಂದ ಒಬ್ಬನಿಗೇ ಏಕಕಾಲದಲ್ಲಿ ಊಟಮಾಡಿಸಿದಂತಾಗುವುದಿಲ್ಲ, ಆದರೆ ಅನೇಕರು ನಮಸ್ಕಾರಮಾಡುತ್ತಿರುವಾಗ್ಯೆ ಒಬ್ಬನೇ ಏಕಕಾಲದಲ್ಲಿ ಅವೆಲ್ಲವನ್ನು ಸ್ವೀಕರಿಸುತ್ತಾನೆ. ಹೀಗೆ ದೇಹಧಾರಿಯಾದ ಒಂದು ದೇವತೆಯನ್ನೇ ಉದ್ದೇಶಿಸಿ ಅನೇಕರು ಯಜ್ಞಮಾಡಬಹುದು.

ಬ್ರಹ್ಮಾದಿದೇವಾನಾಂ ವಿಗ್ರಹವತ್ತ್ವಾಂಗೀಕಾರೇ ವಿಗ್ರಹಾಣಾಮನಿತ್ಯತ್ವಾತ್ತತ್ಪ್ರತಿಪಾದಕವೇದಸ್ಯಾಪ್ಯನಿತ್ಯತ್ವಂ ಸ್ಯಾದಿತ್ಯಾಶಂಕ್ಯಾಹ—

ಶಬ್ದ ಇತಿ ಚೇನ್ನಾಂತಃಪ್ರಭವಾತ್ಪ್ರತ್ಯಕ್ಷಾನುಮಾನಾಭ್ಯಾಂ ॥ ೨೮ ॥

ನನು ಮಾಸ್ತು ಕರ್ಮಣಿ ವಿರೋಧಃ. ಶಬ್ದೇ ವೇದೇ ವಿರೋಧೋ ದೃಶ್ಯತೇ. ಅಸ್ಮದಾದಿವದ್ದೇವಾನಾಂ ವಿಗ್ರಹವತ್ತ್ವಾಂಗೀಕಾರೇ ಜನ್ಮವಿನಾಶಃ ಪ್ರಸಜ್ಯೇತ. ಅತೋಽನಿತ್ಯವಿಗ್ರಹವದ್ದೇವತಾಯಾಃ ನಿತ್ಯವೇದಾರ್ಥತ್ವಾಂಗೀಕಾರೇ ಶಬ್ದಸ್ಯಾರ್ಥೇನ ಸಹ ನಿತ್ಯಸಂಬಂಧಾಭಾವಾನ್ನಿತ್ಯಾನಿತ್ಯಸಂಯೋಗವಿರೋಧಃ. ಕಿಂಚ ಶ್ರುತಿಪತಿಪಾದಿತೇಂದ್ರಾದಿದೇವಾನಾಮನಿತ್ಯತ್ವಾಂಗೀಕಾರೇ ತತ್ಪ್ರತಿಪಾದಿತವೇದಸ್ಯಾಪಿ ತಥಾ ಪೌರುಷೇಯತ್ವಮನಿತ್ಯತ್ವಂ ಚ ಸ್ಯಾತ್. ತಸ್ಮಾದ್ವೇದಚೋದನಾರ್ಥವಾದಾದೇರ್ದತ್ತಜಲಾಂಜಲಿಪ್ರಸಂಗಃ. ತತ್ಪ್ರಣೀತಕರ್ಮಣಾಂ ಚಾಸಿದ್ಧಿರಿತ್ಯನೇಕಾನರ್ಥವಿರೋಧ ಇತಿ ಚೇನ್ನ. ನ ತದ್ವಿರೋಧಃ, ಕುತಃ ಅತಃಪ್ರಭವಾತ್ ದೇವಾದಿನಿಷ್ಠನಿತ್ಯತ್ವಾಕೃತಿವಾಚಕಾದ್ವೇದರಾಶೇರೇವ ದೇವತಾದಿಪ್ರಪಂಚಸ್ಯ ಪ್ರಭವಾದುತ್ಪನ್ನತ್ವಶ್ರವಣಾದಿತ್ಯರ್ಥಃ. ಕಥಮೇವಮವಗಮ್ಯತೇ, ಪ್ರತ್ಯಕ್ಷಾನುಮಾನಾಭ್ಯಾಂ. ಪ್ರತ್ಯಕ್ಷಂ ಶ್ರುತಿಃ. ಅನುಮಾನಂ

ಸ್ಮೃತಿಃ. ಯಥಾಕ್ರಮಂ ಶ್ರುತಿಸ್ಮೃತೀ ನಿರ್ದಿಶತಿ. ತಥಾಚ ಶ್ರುತಿಃ, "ಏತ ಇತಿ ವೈ ಪ್ರಜಾಪತಿರ್ದೇವಾನಸೃಜತ, ಅಸೃಗ್ರಮಿತಿ ಮನುಷ್ಯಾನ್, ಇಂದವ ಇತಿ ಪಿತ್ಯಾಂಸ್ತಿರಃ ಪವಿತ್ರಮಿತಿ ಗ್ರಹಾನಾಶವ ಇತಿ ಸ್ತೋತ್ರಂ ವಿಶ್ವಾನೀತಿ ಶಾಸ್ತ್ರಂ ಅಭಿಸೌಭಗೇತ್ಯನ್ಯಾಃ ಪ್ರಜಾಃ" ಇತಿ. ತದಾ "ಸ ಮನಸಾ ವಾಚಂ ಮಿಥುನಂ ಸಮಭವತ್" ಇತ್ಯಾದಿನಾ ತತ್ರತತ್ರ ಶಬ್ದ ವಿಷಯಸೃಷ್ಟಿರುಪದಿಶ್ಯತೇ. ಸ್ಮೃತಿರಪಿ "ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ । ಆದೌ ವೇದಮಯೀ ದಿವ್ಯಾ ಯತಸ್ಸರ್ವಾಃ ಪ್ರವೃತ್ತಯಃ ||" ಇತಿ. "ನಾಮರೂಪಂ ಚ ಭೂತಾನಾಂ ಕರ್ಮಣಾಂ ಚ ಪ್ರವರ್ತನಂ । ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ ||" ಇತಿ. ತಸ್ಮಾದ್ವೇದಸ್ಯ ನಿತ್ಯತ್ವಂ ದೇವಾದೀನಾಮನಿತ್ಯತ್ವಂ ಚೋದಾಹೃತವಾಕ್ಯೈಃ ಪ್ರತೀಯತ ಇತಿ ನ ವಿರೋಧಃ. ವ್ಯಕ್ತೀನಾಮನಿತ್ಯತ್ವೇಽಪ್ಯಾಕೃತಿನಿತ್ಯತಯಾ ತಸ್ಯಾ ಏವ ಶಬ್ದಾರ್ಥತ್ವೇನ ಗವಾದಿವತ್ಸಂಬಂಧಸ್ಯೌತ್ಪತ್ತಿಕತ್ವಸಿದ್ಧೇಃ ನ ಶಬ್ದೇ ವಿರೋಧಃ. ಕಿಂಚ "ಯದ್ಧಿ ಮನಸಾ ಧ್ಯಾಯತೇ ತದ್ವಾಚಾ ವದತಿ ತತ್ಕರ್ಮಣಾ ಕರೋತಿ" ಇತಿ ನ್ಯಾಯೇನ ಯಥಾ ಗುರುಶ್ಶಿಷ್ಯಪಾಠಾರ್ಥಂ ಪ್ರಾಙ್ಮನೋಗತಶಾಸ್ತ್ರಂ ಸ್ಮೃತ್ವಾ ಪಶ್ಚಾತ್ತದರ್ಥಂ ಛಾತ್ರಾಣಾಮುಪದಿಶತಿ. ಘಟನಿರ್ಮಾಣ ಕಾಲೇ ಯಥಾ ಕುಲಾಲೋ ಘಟಶಬ್ದಾಕೃತಿವಿಶೇಷಂ ಮನೋಗತಂ ಧ್ಯಾತ್ವಾ ಘಟಾದಿಕಂ ಸೃಜತಿ ತದ್ವತ್ಪರಮೇಶ್ವರೋಽಪಿ ಸೃಷ್ಟಿಕಾಲೇ ಸ್ವಹೃದಯಸ್ಥಿತವೈದಿಕೇಂದ್ರಾದಿಶಬ್ದಾಕೃತಿವಿಶೇಷಾನ್ ಸ್ಮೃತ್ವಾ ಪಶ್ಚಾದಿಂದ್ರಾದಿನೇಂದ್ರಾದಿಕಂ ಸೃಜತೀತಿ ನ ಶಬ್ದವಿರೋಧಃ.

ದೇವತೆಗಳಿಗೆ ದೇಹವಿರುವುದಾಗಿ ಒಪ್ಪಿದರೆ, ದೇಹವು ಅನಿತ್ಯವಾದ್ದರಿಂದ ಅದನ್ನು ಪ್ರತಿಪಾದಿಸುವ ವೇದವೂ ಅನಿತ್ಯವೆಂಬುದನ್ನು ಆಶಂಕಿಸಿ ನಿರಾಕರಿಸುತ್ತಾನೆ.

**ಶಬ್ದ ಇತಿ ಚೇನ್ನ ಅತಃ ಪ್ರಭವಾತ್ಪ್ರತ್ಯಕ್ಷಾನುಮಾನಾಭ್ಯಾಂ || ೨೮ ||**

ಯಜ್ಞಾದಿ ಕರ್ಮದಲ್ಲಿ ದೇವತೆಗಳು ಭಾಗವಹಿಸಲಿಕ್ಕೆ ವಿರೋಧವಿಲ್ಲದಿದ್ದರೂ ವೇದದಲ್ಲಿ ವಿರೋಧ ಕಂಡುಬಂದಿದೆ. ಅವರಿಗೆ ದೇಹವಿದೆ ಎಂದು ಒಪ್ಪಿದರೆ, ಅವರೂ ಸಹ ನಮ್ಮಂತೆ ಹುಟ್ಟು ಸಾವುಗಳ ಗೊಂದಲಕ್ಕೆ ಸಿಕ್ಕಬೇಕಾಗುತ್ತದೆ. ಆದ್ದರಿಂದ ಅನಿತ್ಯದೇಹವಿರುವ ದೇವತೆಯನ್ನು ನಿತ್ಯವಾದ ವೇದದ ಅರ್ಥವೆಂದು ಒಪ್ಪಿದರೆ, ಶಬ್ದಾರ್ಥಗಳಿಗೆ ನಿತ್ಯಸಂಬಂಧವಿಲ್ಲದ್ದರಿಂದ ನಿತ್ಯಅನಿತ್ಯಗಳ ಈ ಸಂಯೋಗಕ್ಕೆ ವಿರೋಧವುಂಟಾಗುವುದು. ಶ್ರುತಿಯಲ್ಲಿ ಹೇಳಿರುವ ಇಂದ್ರಾದಿದೇವತೆಗಳನ್ನು ಅನಿತ್ಯವೆಂದು ಒಪ್ಪಿದರೆ, ಅವರನ್ನು ತಿಳಿಸುವ ವೇದವೂ ಸಹ ಹಾಗೆಯೇ ಪೌರುಷೇಯವೂ ಅನಿತ್ಯವೂ ಆಗಬೇಕಾಗುತ್ತದೆ. ಆದ್ದರಿಂದ ವೇದದ ವಿಧಿ ಅರ್ಥವಾದ ಇವೆಲ್ಲಕ್ಕೂ ತಿಲಾಂಜಲಿ ಎರೆಯಬೇಕಾದೀತು. ವೇದವಿಹಿತವಾದ ಕರ್ಮಗಳೂ ಸಿದ್ಧಿಸದೇ

ಹೋಗಬೇಕಾದೀತು ಎಂದು ಅನೇಕ ವಿಧವಾದ ವಿರೋಧಗಳು ಬರುತ್ತವೆ. ಹೀಗೆ ಆಕ್ಷೇಪಬಂದರೆ ಅದು ಯುಕ್ತವೆನಿಸುವುದಿಲ್ಲ. ದೇವತೆಯೆಂಬ ನಿತ್ಯವಾದ ಆಕೃತಿಯನ್ನು ತಿಳಿಸುವ ವೇದರಾಶಿಯಿಂದಲೇ ದೇವತೆಗಳ ಸಮೂಹ ಹುಟ್ಟಿರುವುದರಿಂದ ವೇದದಿಂದ ವಿರೋಧ ಬರುವಂತಿಲ್ಲ. ಇದನ್ನು ಪ್ರತ್ಯಕ್ಷಕ್ಕೆ ವಿಷಯವಾದ ಶ್ರುತಿಯೂ ಅನುಮಾನಕ್ಕೆ ವಿಷಯವಾದ ಸ್ಮೃತಿಯೂ ತಿಳಿಸುತ್ತವೆ. ಪ್ರಜಾಪತಿಯು "ಏತಾಃ" ಎಂದು ನಿರ್ದೇಶಿಸಿ ದೇವತೆಗಳನ್ನೂ, "ಅಸೃಗ್ರಂ"ಎಂದು ಮನುಷ್ಯರನ್ನೂ,"ಇಂದವಃ" ಎಂದು ಪಿತೃಗಳನ್ನೂ, "ತಿರಃ ಪವಿತ್ರಂ" ಎಂದು ಗ್ರಹಗಳನ್ನೂ, "ಆಶವಃ" ಎಂದು ಸ್ತೋತ್ರವನ್ನೂ, 'ವಿಶ್ವಾನಿ' ಎಂದು ಶಸ್ತ್ರವನ್ನೂ—'ಅಭಿಸೌಭಗ' ಎಂದು ಇತರ ಪ್ರಜೆಗಳನ್ನೂ ಸೃಜಿಸಿದನು. ಆಗ ವಾಕ್‌ಮನಸ್ಸು ಎರಡೂ ಒಟ್ಟಿಗೆ ಸೇರಿದವು" ಇದರಿಂದ ಅಲ್ಲಲ್ಲಿ ಶಬ್ದವಿಷಯವಾದ ಸೃಷ್ಟಿಯನ್ನು ಹೇಳಲಾಗಿದೆ. "ಕೊನೆ ಮೊದಲಿಲ್ಲದಂತೆ ನಿತ್ಯವೆನಿಸಿದ ವೇದಮಯವಾದ ದಿವ್ಯವಾಣಿ ಬ್ರಹ್ಮನಿಂದ ಮೊದಲು ಹೊರಟಿತು. ಅದರಿಂದ ಎಲ್ಲಾ ಪ್ರವೃತ್ತಿಗಳೂ ಹೊರಬಂದವು", "ಜೀವರ ನಾಮರೂಪಗಳನ್ನೂ, ಕರ್ಮಗಳ ಪ್ರವೃತ್ತಿಯನ್ನೂ ಮಹೇಶ್ವರನು ವೇದಶಬ್ದಗಳಿಂದಲೇ ಮೊದಲಿಗೆ ಹೊರಪಡಿಸಿದನು"ಎಂದು ಸ್ಮೃತಿಯಲ್ಲೂ ಹೇಳಿದೆ. ಈ ವಾಕ್ಯಗಳಿಂದ ವೇದವು ನಿತ್ಯವೆಂದೂ ದೇವತೆಗಳು ಅನಿತ್ಯವೆಂದೂ ತೋರುವ ಪ್ರಯುಕ್ತ ಯಾವ ವಿರೋಧಕ್ಕೂ ಅವಕಾಶವಿಲ್ಲ. ಗವಾದಿಪದಗಳಿಗೆ ವಾಚ್ಯವಾಚಭಾವಸಂಬಂಧವು ವ್ಯಕ್ತಿಯಲ್ಲಿ ಅನಿತ್ಯವಾಗಿ ಆಕೃತಿಯಲ್ಲಿ ನಿತ್ಯವಾಗಿರುವಂತೆ ಇಂದ್ರಾದ್ಯಾಕೃತಿಯೇ ವೇದದ ಅರ್ಥವಾದ್ದರಿಂದ, ಶಬ್ದದಲ್ಲಿ ವಿರೋಧವಿಲ್ಲ. "ಒಬ್ಬನು ಮನಸಿನಲ್ಲಿ ಆಲೋಚಿಸಿದ್ದನ್ನೇ ಬಾಯಿಂದ ಹೇಳಿ ಕೈನಿಂದ ಮಾಡುವನು" ಎಂಬ ನ್ಯಾಯದಿಂದ ಗುರುವು ಶಿಷ್ಯನಿಗೆ ಬೋಧಿಸುವ ಮೊದಲು ಮನಸ್ಸಿನಲ್ಲಿ ಶಾಸ್ತ್ರವನ್ನು ಆಲೋಚಿಸಿ ಆಮೇಲೆ ಅದರ ಅರ್ಥವನ್ನು ಶಿಷ್ಯರಿಗೆ ಉಪದೇಶಿಸುತ್ತಾನೆ. ಗಡಿಗೆ ಮಾಡುವಾಗ್ಯೆ ಕುಂಬಾರನು ಗಡಿಗೆಯ ಆಕಾರವನ್ನು ಮನಸ್ಸಿನಲ್ಲಿ ಆಲೋಚಿಸಿ ಆಮೇಲೆ ಗಡಿಗೆಯನ್ನು ಮಾಡುತ್ತಾನೆ. ಹಾಗೆಯೇ ಪರಶಿವನೂ ಸಹ ಸೃಷ್ಟಿಕಾಲದಲ್ಲಿ ತನ್ನ ಹೃದಯದಲ್ಲಿದ್ದ ಇಂದ್ರನೇ ಮೊದಲಾದ ವೈದಿಕಶಬ್ದಗಳು ತಿಳಿಸುವ ಆಕೃತಿಗಳ ಬಗ್ಯೆ ಆಲೋಚಿಸಿ ಆಮೇಲೆ ಇಂದ್ರಾದಿದೇವತೆಗಳನ್ನು ಸೃಷ್ಟಿಸುವನಾದ್ದರಿಂದ ವೇದದ ವಿರೋಧ ಸಂಭವಿಸುವುದಿಲ್ಲ.

**ಅಸ್ಮಿನ್ನರ್ಥೇ ಹೇತ್ವಂತಮಾಹ—ಅತ ಏವ ಚ ನಿತ್ಯತ್ವಂ ॥ ೨೯ ॥**

**ಕರ್ತ್ರಸ್ಮರಣಾದಿನಾ ಸಿದ್ಧಮೇವ ವೇದಸ್ಯ ನಿತ್ಯತ್ವಂ. ಅನಿತ್ಯತ್ವಸಂಯೋಗೇನಾನಿತ್ಯತ್ವಮಾಶಂಕ್ಯ ದೇವಾಕೃತಿವಿಶೇಷಾವಚ್ಛಿನ್ನದೇವಾದಿಸೃಷ್ಟಿಪ್ರತಿಪಾದನಾದಾಕೃತೇಶ್ಯಬ್ದಾರ್ಥತ್ವಾತ್ತಸ್ಯಾಶ್ಚ ನಿತ್ಯತ್ವಾನ್ನಾನಿತ್ಯಸಂಯೋಗನಿಬಂಧನಾನಿತ್ಯತ್ವಮಿತ್ಯುಪಸಂಹರತಿ. ಅತ ಏವಾಕೃತೇಃ ಶಬ್ದಾರ್ಥತ್ವಾದೇವ ವೇದಸ್ಯ ನಿತ್ಯತ್ವಮವಿರುದ್ಧಂ. ಕೇಚಿದ್ವೇದೇಶ್ವರಯೋರ್ನಿತ್ಯತ್ವಮವಾಂತರಪ್ರಳಯಾವಸ್ಥಾಯಿತ್ವಮಿತ್ಯಾಚುಃ**

"ವಾಚಾ ವಿರೂಪನಿತ್ಯಯಾ" ಇತ್ಯಾದಿಶ್ರುತಿವಿರೋಧಪ್ರಸಂಗಾತ್ತದಸಂಗತಂ. ಕಿಂಚ ವೇದಾನಾಂ ಪರಮೇಶ್ವರವಿಮರ್ಶಶಕ್ತಿತ್ವೇನ ನಿತ್ಯತ್ವಾತ್ತನ್ಮಿಥ್ಯಾತ್ವೇ ವೇದಬಾಹ್ಯಪಾಷಂಡಮತಪ್ರವೇಶಃ ಪ್ರಸಜ್ಯೇತ. ಅಪಿಚ "ಮಂತ್ರಕೃತೋ ವೃಣೀತೆ" ಇತಿ, "ವಿಶ್ವಾಮಿತ್ರಸ್ಯ ಸೂಕ್ತಂ ಭವತಿ" ಇತಿ ವಿಶ್ವಾಮಿತ್ರಾದೀನಾಂ ಮಂತ್ರಕೃತ್ತ್ವೇಽಪಿ ವಿಶ್ವಾಮಿತ್ರಾದಿಶಬ್ದಾನಾಮಾಕೃತಿವಿಶೇಷಾನ್ ಸ್ಮೃತ್ವಾ ತತ್ತದ್ವೈದಿಕಶಬ್ದೈರ್ಮಂತ್ರಬ್ರಾಹ್ಮಣಾತ್ಮಕಸ್ಯ ವೇದಸ್ಯ ನಿತ್ಯತ್ವಮುಪದಿಶ್ಯತೇ. ಯಸ್ಮಾದ್ಬ್ರಹ್ಮಾ ವೈದಿಕೇಂದ್ರಾದಿಶಬ್ದಾರ್ಥಾನ್ ಸ್ಮೃತ್ವಾ ಸೃಜತಿ, ಅನಧೀತಮಂತ್ರಾರ್ಥವಿಜ್ಞಾನಸಮರ್ಥತ್ವಾತ್. ದೈನಂದಿನಪ್ರಳಯಾನಂತರಂ ಪುನರ್ವಿಶ್ವಾಮಿತ್ರಾದಿಚರಾಚರಾಪ್ರಪಂಚಂ ಸೃಜತಿ ತಸ್ಮಾನ್ಮಂತ್ರಾದಿಕರ್ತೃತ್ವಂ ವೇದನಿತ್ಯತ್ವಂ ಚ ಸಿದ್ಧಂ.

ಈ ಬಗ್ಗೆ ಬೇರೊಂದು ಹೇತುವನ್ನು ತಿಳಿಸುತ್ತಾನೆ. **ಅತ ಏವ ಚ ನಿತ್ಯತ್ವಂ ||೨೯||**

ವೇದದ ಕರ್ತೃವಿನ ಸ್ಮರಣವಿಲ್ಲದ್ದರಿಂದ ವೇದ ನಿತ್ಯವೆಂದು ಸಿದ್ಧವಾಯಿತು. ಅನಿತ್ಯವಾದ ವ್ಯಾಪ್ತಿಗಳ ಸಂಬಂಧದಿಂದ ವೇದಕ್ಕೆ ಅನಿತ್ಯತ್ವವನ್ನು ಆಶಂಕಿಸಿ ಆಕೃತಿ ವಿಶಿಷ್ಟವಾದ ವ್ಯಕ್ತಿಗಳಿಗೇ ಸೃಷ್ಟಿ ಇರುವುದರಿಂದಲೂ, ಆ ಆಕೃತಿಯೇ ಶಬ್ದದ ಅರ್ಥವಾದ್ದರಿಂದಲೂ, ನಿತ್ಯಸಂಯೋಗವೇ ವೇದಕ್ಕೆ ಇರುವುದರಿಂದಲೂ ಅನಿತ್ಯಸಂಯೋಗದಿಂದ ಬಂದ ಅನಿತ್ಯತ್ವದೋಷವು ಅಂಟುವುದಿಲ್ಲವೆಂದು ಉಪಸಂಹರಿಸಲಾಗಿದೆ. ಆದ್ದರಿಂದ ಆಕೃತಿಯೇ ವೇದದ ಅರ್ಥವಾದ್ದರಿಂದ ವೇದ ನಿತ್ಯವೆಂಬುದಕ್ಕೆ ವಿರೋಧವಿಲ್ಲ. ಕೆಲವರು ವೇದವನ್ನೂ ಈಶ್ವರನನ್ನೂ ಅವಾಂತರಪ್ರಳಯದವರೆಗೆ ಮಾತ್ರವೇ ನಿತ್ಯವೆಂದು ಹೇಳುತ್ತಾರೆ. ವೇದವನ್ನು ನಿತ್ಯವೆಂದು ಹೇಳಿರುವ ಶ್ರುತಿಗೆ ವಿರೋಧವಿರುವುದರಿಂದ ಇದು ಅಸಂಗತವಾಗುವುದು. ವೇದಗಳು ಪರಶಿವನ ವಿಮರ್ಶಶಕ್ತಿಯಾದ್ದರಿಂದ ನಿತ್ಯವೆನಿಸಿವೆ. ಅವನ್ನು ಸುಳ್ಳೆಂದು ಭಾವಿಸಿದರೆ, ಅವೈದಿಕವಾದ ಪಾಷಂಡಮತವನ್ನು ಪ್ರವೇಶಿಸಬೇಕಾದೀತು. "ಮಂತ್ರದ ಕರ್ತೃವನ್ನು ಪ್ರಾರ್ಥಿಸುತ್ತಾನೆ". "ಇದು ವಿಶ್ವಾಮಿತ್ರನು ರಚಿಸಿದ ಸೂಕ್ತ". ಹೀಗೆ ವಿಶ್ವಾಮಿತ್ರ ಮೊದಲಾದವರು ಮಂತ್ರವನ್ನು ರಚಿಸಿದ್ದರೂ ಅಂತಹ ಆಕಾರವಿಶೇಷಗಳನ್ನು ಭಾವಿಸಿ ಆಯಾಯ ವೈದಿಕಶಬ್ದಗಳಿಂದಲೇ ಮಂತ್ರಬ್ರಾಹ್ಮಣರೂಪವಾದ ವೇದವನ್ನು ನಿತ್ಯವೆಂದು ಹೇಳಲಾಗಿದೆ. ಬ್ರಹ್ಮನು ಮಂತ್ರವನ್ನು ಓದದಿದ್ದರೂ ಅರ್ಥವನ್ನು ತಿಳಿಯಲು ಶಕ್ತನಾದ್ದರಿಂದ ವೈದಿಕಶಬ್ದಗಳ ಅರ್ಥವನ್ನು ಸ್ಮರಿಸುತ್ತ ವೇದಗಳನ್ನು ಹೊರಪಡಿಸಿ ದೈನಂದಿನಪ್ರಳಯ ಮುಗಿದಮೇಲೆ ಮತ್ತೆ ವಿಶ್ವಾಮಿತ್ರಾದಿಗಳನ್ನು ಸೃಷ್ಟಿಸಿದ್ದಾನೆ. ಆದ್ದರಿಂದ ಮಂತ್ರರಚನೆಯೂ ವೇದಗಳ ನಿತ್ಯತೆಯೂ ಸಿದ್ಧಿಸುತ್ತವೆ.

ಇಂದ್ರಾದೀನಾಂ ಪ್ರತಿಕಲ್ಪಂ ವಿಲಕ್ಷಣನಾಮರೂಪತ್ವಾದ್ವೇದಸ್ಯ ಕಥಂ ತತ್ಪ್ರತಿಪಾದಕತ್ವಮಿತ್ಯಾಶಂಕ್ಯಾಹ—ಸಮಾನನಾಮರೂಪತ್ವಾಚ್ಚಾ

ವೃತ್ತಾವಪ್ಯವಿರೋಧೋ ದರ್ಶನಾತ್ಸ್ಮೃತೇಶ್ಚ ॥ ೩೦ ॥

ಸಮಾನನಾಮರೂಪತ್ವಾತ್ಸರ್ವೇಷಾಮಿಂದ್ರಾಣಾಂ ಸರ್ವೇಷು ಕಲ್ಪೇಷು ಸಮಾನನಾಮರೂಪತ್ವಾದಾವೃತ್ತಾವಪೀಂದ್ರಪರಂಪರಾಯಾ ಮಂಗೀಕ್ರಿಯಮಾಣಾಯಾಮಪ್ಯವಿರೋಧಃ. ವೇದಸ್ಯೇಂದ್ರಪ್ರತಿಪಾದಕತ್ವವಿರೋಧೋ ನಾಸ್ತಿ. ಕುತಸ್ತದ್ದರ್ಶನಾತ್ಸ್ಮೃತೇಶ್ಚ. ಏವಮಗ್ನಿವಾಯುವರುಣಾದಿಷ್ವಪಿ ದ್ರಷ್ಟವ್ಯಂ. ನನ್ವಾಕೃತಿಪದಾರ್ಥತ್ವೇಽಪಿ ಪ್ರಳಯೇ ಸರ್ವಾಕೃತಿವ್ಯಕ್ತಿನಾಶೇ ಪುನಸ್ತದಾಕೃತಿಕವ್ಯಕ್ತ್ಯುತ್ಪತ್ತೌ ಮಾನಾಭಾವಾತ್ ನಿತ್ಯಾನಿತ್ಯಸಂಯೋಗವಿರೋಧಸ್ತದವಸ್ಥ ಇತಿ ಚೇನ್ನ, ಸಂಸಾರಸ್ಯಾನಾದಿತ್ವಾತ್ಪ್ರತಿಸೃಷ್ಟಿ ತದಾಕೃತಿಕಮೇವ ಜನ್ಯತ್ವೇನ ವಿಲಕ್ಷಣಂ ಸ್ವವಸ್ತು ಪ್ರಳಯೇ ಸಂಸ್ಕಾರಾವಶೇಷಮೇವ ನಶ್ಯತಿ, ನತು ನಿರನ್ವಯಧ್ವಂಸಃ. ಜ್ಞಾನಸ್ಯೇವಾರ್ಥಸ್ಯಾಪಿ ತತ್ಸಂಜ್ಞಿತಪದಾರ್ಥೋಪಪತ್ತಿದರ್ಶನೇನ ಸಂಸ್ಕಾರಾಂಗೀಕಾರಾತ್. ಸಂಸ್ಕಾರಾಚ್ಚ ಸಮಾನನಾಮರೂಪೈವ ಸೃಷ್ಟಿರ್ನ ವೈಲಕ್ಷಣ್ಯಂ. ಸಮಾನನಾಮರೂಪತ್ವಸ್ಯ ಶ್ರುತೌ ದರ್ಶನಾತ್ಸ್ಮೃತೇಶ್ಚಾಭ್ಯುಪಗಂತವ್ಯಂ. "ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ । ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸುವಃ ॥", "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ। ತಂ ಹಿ ದೇವಮಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" ಇತ್ಯಾದಿಕಾ ಶ್ರುತಿಃ. ಸ್ಮೃತಿರಪಿ "ಅಪ ಏವ ಸಸರ್ಜಾದೌ ತಾಸು ವೀರ್ಯಮಪಾವಿಶತ್ । ತದಂಡಮಭವದ್ಧೈಮಂ ಸಹಸ್ರಾರ್ಕಸಮಪ್ರಭಂ । ಬ್ರಹ್ಮಾಣಂ ವಿದಧೇ ಪೂರ್ವಂ ವೇದಾಂಶ್ಚಾಸ್ಮೈ ಪ್ರಯಚ್ಛತಿ ॥" ಇತ್ಯಾದಿ. ಕಿಂಚ "ಯಥಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತ್ಯಥಾಸ್ಮಿನ್ಪ್ರಾಣ ಏವೈಕಧಾ ಭವತಿಃ" "ಸ ತಥೈನಂ ವಾಕ್ಸರ್ವೈರ್ನಾಮಭಿಸ್ಸಹಾಪ್ಯೇತಿ । ಚಕ್ಷುಸ್ಸರ್ವೈಃ ರೂಪೈಸ್ಸಹಾಪ್ಯೇತಿ । ಶ್ರೋತ್ರಂ ಸರ್ವೈಶ್ಶಬ್ದೈಸ್ಸಹಾಪ್ಯೇತಿ । ಮನಸ್ಸರ್ವೈರ್ಧ್ಯಾನೈಸ್ಸಹಾಪ್ಯೇತಿ । ಸ ಯಥಾ ಪ್ರತಿಬುಧ್ಯತೇ ॥" ಯಥಾಗ್ನೇರ್ಜ್ವಲತಸ್ಸರ್ವಾ ದಿಶೋ ವಿಸ್ಫುಲಿಂಗಾಃ ಪ್ರವಿಷ್ಠೇರನ್ನೇವಮೇವೈತಸ್ಮಾದಾತ್ಮನಸ್ಸರ್ವೇ ಪ್ರಾಣಾ ಯಥಾಯತನಂ ಪ್ರತಿಷ್ಠಂತೇ। ಪ್ರಾಣೇಭ್ಯೋ ದೇವಾಃ ದೇವೇಭ್ಯೋ ಲೋಕಾಃ ॥ ಇತಿ ಶ್ರುತಿರಪಿ ಮೃದಿ ಮಂಡೂಕಾದಿವತ್ಪೂರ್ವಕಲ್ಪಪ್ರಪಂಚಸಮಾನನಾಮರೂಪತ್ವಮುತ್ತರೋತ್ತರಪ್ರಪಂಚಸ್ಯ ವರ್ಣಯತಿ. ಸುಪ್ತೌ ಸ್ವಪ್ನಜಾಗ್ರತ್ಪ್ರಪಂಚವ್ಯವಹಾರಪ್ರಳಯೇಽಪಿ ಪುನಃ ಪೂರ್ವಪ್ರಬೋಧವ್ಯವಹಾರವದುತ್ತರೋತ್ತರಕಲ್ಪಾಂತರಪ್ರಳಯಯೋರಪ್ಯೇವಮೂಹನೀಯಂ.

ಇಂದ್ರಾದಿಗಳಿಗೆ ಪ್ರತಿಸೃಷ್ಟಿಯಲ್ಲಿ ನಾಮರೂಪಗಳು ಬೇರೆಯಾಗುವುದನ್ನು ವೇದ ಹೇಗೆ ತಿಳಿಸಿತೆಂದರೆ–**ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ಸ್ಮೃತೇಶ್ಚ ||೩೦||**

ಎಲ್ಲಾ ಇಂದ್ರರಿಗೂ ಬೇರೆಬೇರೆ ಸೃಷ್ಟಿಗಳಲ್ಲೂ ಸಮಾನವಾದ ನಾಮರೂಪಗಳೇ ಇರುವುದರಿಂದ ಮತ್ತೆ ಆಇಂದ್ರನ ಪರಂಪರೆಯನ್ನೇ ಒಪ್ಪಿದರೂ ಅಡ್ಡಿ ಇಲ್ಲ. ವೇದವು ಇಂದ್ರನನ್ನು ಪ್ರತಿಪಾದಿಸುವುದೆಂಬುದಕ್ಕೆ ವಿರೋಧವಿಲ್ಲ. ಹೀಗೆಯೇ ಸ್ಮೃತಿಯಲ್ಲೂ ಕಂಡುಬಂದಿದೆ. ಹಾಗೆಯೇ ಅಗ್ನಿ ವಾಯು ವರುಣ ಮೊದಲಾದವರ ಬಗ್ಗೆ ತಿಳಿಯಬೇಕು. ಹೀಗೆ ಆಕೃತಿಯೇ ಪದಾರ್ಥವಾದರೆ ಪ್ರಳಯದಲ್ಲಿ ವ್ಯಕ್ತಿಯೇ ನಾಶವಾಗುವುದರಿಂದ ಮತ್ತೆ ಅದೇ ಆಕಾರದ ವ್ಯಕ್ತಿಯೇ ಹುಟ್ಟುವುದೆಂಬ ಬಗ್ಗೆ ಪ್ರಮಾಣವಿಲ್ಲದ್ದರಿಂದ ಈ ಬಗೆಯ ನಿತ್ಯಾನಿತ್ಯ ವಸ್ತುಗಳ ಸಂಯೋಗದ ವಿರೋಧವು ಎಂದಿನಂತೆ ಇದ್ದೇಇರುವುದೆಂದರೆ, ಸಂಸಾರ ಅನಾದಿಯಾದ್ದರಿಂದ ಪ್ರತಿಸೃಷ್ಟಿಯಲ್ಲೂ ಆಯಾ ಆಕಾರವೇ ಹುಟ್ಟುವುದರಿಂದ ಪ್ರಳಯದಲ್ಲಿ ಆಯಾ ವಸ್ತು ಅದರದರ ಸಂಸ್ಕಾರದೊಡನೆಯೇ ಕಣ್ಮರೆಯಾಗಿರುತ್ತದೆಯಾವರೂ ಅದು ಪೂರ್ಣ ನಾಶವಾಗುವುದಿಲ್ಲ. ಆಯಾ ವಸ್ತುವಿನ ಜ್ಞಾನದಂತೆ ಆಯಾ ವಸ್ತುವು ಅದರದರ ಸಂಜ್ಞೆಯೊಡನೆ ಸಂಸ್ಕಾರರೂಪದಲ್ಲಿ ಉಳಿದಿರುವುದು. ಹೀಗೆ ಸಂಸ್ಕಾರವಿದ್ದೇ ಇರುವುದರಿಂದ ಅದಕ್ಕನುಗುಣವಾದ ನಾಮರೂಪಗಳ ಸೃಷ್ಟಿಯಾಗುವುದೇ ಹೊರತು ಅದಕ್ಕೆ ವಿಲಕ್ಷಣವಾಗಿ ಆಗುವುದಿಲ್ಲ. ಶ್ರುತಿಯಲ್ಲಿ ನಾಮರೂಪಗಳು ಸಮಾನವೆಂದು ಹೇಳಿರುವುದರಿಂದ ಹಾಗೆ ಹೇಳುವ ಸ್ಮೃತಿಯನ್ನೂ ನಾವು ಒಪ್ಪಲೇಬೇಕು. “ಬ್ರಹ್ಮನು ಸೂರ್ಯಚಂದ್ರರನ್ನೂ ದ್ಯುಲೋಕ, ಭೂಮಿ, ಆಕಾಶ, ಸುವರ್ಲೋಕಗಳನ್ನೂ ಹಿಂದಿನ ಕ್ರಮದಂತೆ ಸೃಷ್ಟಿಸಿದನು” “ಯಾವನು ಬ್ರಹ್ಮನನ್ನು ಮೊದಲು ಸೃಷ್ಟಿಸಿ ಅವನಿಗೆ ವೇದಗಳನ್ನು ಕೊಟ್ಟನೋ ಅಂತಹ ಬುದ್ಧಿಗೋಚರನಾದ ದೇವನಿಗೆ ಮುಮುಕ್ಷುವಾದ ನಾನು ಶರಣಾಗುತ್ತೇನೆ” ಎಂದು ಶ್ರುತಿಯು ತಿಳಿಸುತ್ತದೆ. ಮೊದಲು ನೀರನ್ನು ಸೃಷ್ಟಿಸಿ ಅದರಲ್ಲಿ ವೀರ್ಯವನ್ನು ಬಿಟ್ಟನು. ಅದು ಸಾವಿರ ಸೂರ್ಯರಂತೆ ಪ್ರಕಾಶಿಸುವ ಸ್ವರ್ಣದ ಮೊಟ್ಟೆಯಾಯಿತು”. “ಮೊದಲು ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ವೇದಗಳನ್ನು ಕೊಟ್ಟನು. ಸ್ವರ್ಗಾದಿ ಪ್ರಪಂಚಗಳನ್ನೂ ಸೂರ್ಯಚಂದ್ರರನ್ನೂ ಬ್ರಹ್ಮನು ಎಂದಿನಂತೆ ಸೃಷ್ಟಿಸಿದನು” ಎಂದು ಸ್ಮೃತಿಯಲ್ಲೂ ಹೇಳಿದೆ. ಬೇರೆ ಶ್ರುತಿಯಲ್ಲಿ “ಮಲಗಿದವನು ಸ್ವಪ್ನವನ್ನು ಕಾಣದಿರುವಾಗ ಅವನಲ್ಲಿ ಪ್ರಾಣವು ಬೆರೆಯುತ್ತದೆ”. ಆಗ ವಾಕ್ಕು ಎಲ್ಲಾ ನಾಮಗಳೊಡನೆ ಅವನಲ್ಲಿ ಬೆರೆಯುತ್ತದೆ. ಹಾಗೆಯೇ ಕಣ್ಣು ಎಲ್ಲಾ ರೂಪಗಳೊಡನೆಯೂ ಕಿವಿ ಎಲ್ಲಾ ಶಬ್ದಗಳೊಡನೆಯೂ ಮನಸ್ಸು ಎಲ್ಲಾ ಸಂಕಲ್ಪಗಳೊಡನೆಯೂ ಬೆರೆಯುತ್ತದೆ. ಅವನು ಎಚ್ಚರಗೊಂಡಾಗ, ಬೆಂಕಿ ಉರಿಯುವಾಗ ಕಿಡಿಗಳು ಎಲ್ಲಾ ಕಡೆಯೂ ಉದುರುವಂತೆ ಈ ಆತ್ಮನಿಂದ ಎಲ್ಲಾ ಪ್ರಾಣಗಳೂ ತಮ್ಮ ತಮ್ಮ ಸ್ಥಾನಗಳ ಕಡೆಗೆ ಹೊರಡುತ್ತವೆ” “ಪ್ರಾಣಗಳಿಂದ ಇಂದ್ರಿಯಾಧಿ

ಷ್ಠಾನ ದೇವತೆಗಳೂ,ಅವುಗಳಿಂದ ವಿಷಯಗಳೂ ಹೊರಡುತ್ತವೆ"ಎಂಬ ಶ್ರುತಿಯಲ್ಲೂ ಸಹ ಮಣ್ಣಿನಲ್ಲಿರುವ ಕಪ್ಪೆಯಂತೆ ಹಿಂದಿನ ಕಲ್ಪದ ನಾಮರೂಪಗಳಿಗನುಗುಣವಾಗಿಯೇ ಮುಂದಿನ ಸೃಷ್ಟಿಯನ್ನು ತಿಳಿಸಲಾಗಿದೆ. ಸ್ವಪ್ನ ಮತ್ತು ಜಾಗ್ರತ್ಪ್ರಪಂಚದ ವ್ಯವಹಾರಗಳು ಸುಷುಪ್ತಿಯಲ್ಲಿ ನಷ್ಟವಾಗಿದ್ದರೂ ಮತ್ತೆ ಹಿಂದಿನ ವ್ಯವಹಾರದಂತೆಯೇ ಮುಂದಿನ ಸೃಷ್ಟಿ ಪ್ರಳಯಗಳಲ್ಲೂ ಆಗುವುದಾಗಿ ಊಹಿಸಬೇಕು.

**ಪೂರ್ವಪಕ್ಷಸಂಗತ್ಯಾ ಮತಾಂತರಮಾಹ—ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ॥ ೩೧ ॥**

ದೇವಾನಾಮನಧಿಕಾರಂ ಬ್ರಹ್ಮವಿದ್ಯಾಯಾಂ ಜೈಮಿನಿರ್ಮನ್ಯತೇ. ಕುತಃ, ಮಧುವಿದ್ಯಾದಿಷ್ವಧಿಕಾರಾಸಂಭವಾತ್. "ಅಸಾವಾದಿತ್ಯೋ ದೇವಮಧು ದೇವಾನಾಂ ಮೋದನಾನ್ಮಧ್ವೀವ ಮಧು ತಸ್ಯ ಮಧುನೋ ದ್ಯುಲೋಕ ಏವ ತಿರಶ್ಚೀನವಂಶಃ". ಅಂತರಿಕ್ಷೇ ಆದಿತ್ಯಸ್ಯ ಮೋ ಮಧುನೋಽವಸ್ಥಾನಾತ್ತದೇವ ಮಧ್ವಾರೋಪಃ. ರೋಹಿತಂ ಶುಕ್ಲಂ ಕೃಷ್ಣಂ ಗೋಪ್ಯಂ ಚ" ಇತ್ಯಾದಿನಾ ಆದಿತ್ಯಮಂಡಲಪ್ರಾಪ್ತಿಫಲಕೇಷು ಮಧುವಿದ್ಯಾದಿಷ್ವಾದಿತ್ಯಾದೀನಾಮನಧಿಕಾರಃ ಆದಿತ್ಯಾದ್ಯಂತರಾಭಾವಾತ್, ಸ್ವಸ್ಯೈವೋಪಾಸ್ಯತ್ವೋಪಾಸಕತ್ವಾಭಾವಾತ್. ತಥಾಚ ಬ್ರಹ್ಮವಿದ್ಯಾಯಾಮಧಿಕಾರಾಂಗೀಕಾರೇ ವಿದ್ಯಾತ್ವಾಽವಿಶೇಷಾತ್ತತ್ರಾಪಿ ಸ್ಯಾತ್. ತತ್ರ ಚಾಧಿಕಾರಾಸಂಭವಾದ್ಬ್ರಹ್ಮವಿದ್ಯಾಯಾಮಪಿ ನ ಸಂಭವತಿ. ಕಿಂಚ ಆದಿತ್ಯಃ ಕಮನ್ಯಮಾದಿತ್ಯಮುಪಾಸೀತ? ಪುನಶ್ಚ "ಆದಿತ್ಯವ್ಯಪಾಶ್ರಯಾಣಿ ಪಂಚ ರೋಹಿತಾದೀನ್ಯಮೃತಾನಿ" ಇತ್ಯುಪಕ್ರಮ್ಯ "ವಸವೋ ರುದ್ರಾ ಆದಿತ್ಯಾ ಮರುತಸ್ಸಾಧ್ಯಾಶ್ಚ ಪಂಚ ದೇವಗಣಾಃ ಕ್ರಮೇಣ ತತ್ತದಮೃತಮುಪಜೀವಂತಿ" ಇತ್ಯುಪದಿಶ್ಯ "ಸ ಯ ಏತದೇವಾಮೃತಂ ವೇದ ವಸೂನಾಮೇವೈಕೋ ಭೂತ್ವಾಗ್ನಿನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ" ಇತ್ಯಾದಿನಾ ವಸ್ವಾದ್ಯುಪಜೀವ್ಯಾನ್ಯಮೃತಾನಿ ವಿಜಾನತಾಂ ವಸ್ವಾದಿಮಹಿಮಪ್ರಾಪ್ತಿಂ ದರ್ಶಯತಿ. ವಸ್ವಾದಯಸ್ತು ಸ್ವಾತಿರಿಕ್ತವಸ್ವಾದೀನ್ ಕಾನಮೃತೋಪಜೀವಿನೋ ವಿಜಾನೀಯುಃ? ಸ್ವವ್ಯತಿರಿಕ್ತವಸ್ವಾದಿಮಹಿಮಾನಂ ಕಂ ವಾ ಪ್ರೇಕ್ಷೇರನ್? "ಯಥಾಗ್ನಿಃ ಪಾದೋ ವಾಯುಃಪಾದ ಆದಿತ್ಯಃ ಪಾದೋ ದಿಶಃ ಪಾದೋ ವಾಯುರ್ವಾವ ಸಂವರ್ಗ ಆದಿತ್ಯೋ ಬ್ರಹ್ಮೇತ್ಯಾದೇಶಃ" ಇತ್ಯಾದಿಷು ದೇವತಾತ್ಮೋಪಾಸನೇಷು ನ ಚೈಷಾಮಧಿಕಾರಃ. "ತಥೇಮಾವೇವ ಗೌತಮಭರದ್ವಾಜೌ ಅಯಮೇವ ಗೌತಮೋಽಯಂ ಭಾರದ್ವಾಜಃ ಇಮಾವೇವ ವಿಶ್ವಾಮಿತ್ರಜಮದಗ್ನೀ ಅಯಮೇವ ವಿಶ್ವಾಮಿತ್ರೋಽಯಂ ಜಮದಗ್ನಿರಿಮಾವೇವ ವಸಿಷ್ಠಕಶ್ಯಪೌ ಅಯಮೇವ ವಸಿಷ್ಠೋಽಯಂ ಕಶ್ಯಪೋ

**ವಾಗೇವಾತ್ರಿಃ" ಇತ್ಯಾದಿನಾ ಋಷ್ಯುಪಾಸ್ಯವಿದ್ಯಾಸು ನ ತೇಷಾಮೃಷೀಣಾಮಧಿಕಾರಃ. ತಸ್ಮಾದ್ದೇವಾನಾಂ ಸರ್ವಥಾ ಮಧುವಿದ್ಯಾಧಿಕಾರಾಸಂಭವಾದ್ಬ್ರಹ್ಮವಿದ್ಯಾಧಿಕಾರೋ ನ ಸಂಭವತೀತಿ ವಿಧೀಯತೇ.**

ಇಲ್ಲಿ ಆಕ್ಷೇಪರೂಪವಾಗಿ ಬೇರೆ ಮತವನ್ನು ತಿಳಿಸುತ್ತಾನೆ—

**ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ || ೩೧ ||**

ದೇವತೆಗಳಿಗೆ ಮಧುವಿದ್ಯೆಯಲ್ಲಿ ಅಧಿಕಾರವಿಲ್ಲದ್ದರಿಂದ ಬ್ರಹ್ಮವಿದ್ಯೆಯಲ್ಲೂ ಅಧಿಕಾರವಿಲ್ಲವೆಂದು ಜೈಮಿನಿ ಹೇಳುತ್ತಾನೆ. "ಈ ಸೂರ್ಯನು ದೇವತೆಗಳ ಮಧುವಾಗಿರುವನು. ಮಧುವಿನಂತೆ ದೇವತೆಗಳಿಗೆ ಭೋಗ್ಯನಾದ್ದರಿಂದ ಇವನು ಮಧುವೆನಿಸಿರುವನು. ಈ ಮಧುವಿಗೆ ದ್ಯುಲೋಕವೇ ಓಡಾಟದ ಮಾರ್ಗವಾಗಿದೆ" ಎಂಬ ಮಂತ್ರದಲ್ಲಿ ಅಂತರಿಕ್ಷದಲ್ಲಿ ಮಧುರೂಪನಾದ ಸೂರ್ಯನು ಸಂಚರಿಸುವುದರಿಂದ ಅವನಲ್ಲಿ ಮಧುತ್ವವನ್ನು ಆರೋಪಿಸಲಾಗಿದೆ. "ಆದಿತ್ಯನಲ್ಲಿರುವ ರೋಹಿತ, ಶುಕ್ಲ, ಕೃಷ್ಣ, ಪರಃಕೃಷ್ಣ, ಗೋಪ್ಯವೆಂಬ ಐದು ಅಮೃತಗಳನ್ನು ಭೋಗಿಸಬೇಕು" ಎಂದು ಮಧುವಿದ್ಯೆಗೆ ಆದಿತ್ಯಮಂಡಲಪ್ರಾಪ್ತಿಯನ್ನೇ ಫಲವಾಗಿ ಹೇಳಿದೆ. ಇದರಲ್ಲಿ ಆದಿತ್ಯನಿಗೆ ಅಧಿಕಾರವಿರಲಾರದು; ಯಾಕೆಂದರೆ ತಾನೇ ತನ್ನನ್ನು ಉಪಾಸನಮಾಡಲಾರನು. ಒಬ್ಬನೇ ಉಪಾಸ್ಯನೂ ಉಪಾಸಕನೂ ಆಗುವ ಸಂಭವವಿಲ್ಲ. ಆದಿತ್ಯನು ತನ್ನೊಳಗೆ ಮತ್ತೊಬ್ಬ ಆದಿತ್ಯನನ್ನು ಉಪಾಸನಮಾಡಲಾರನು. ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಒಪ್ಪಿಕೊಂಡರೆ ಮಧುವಿದ್ಯೆಯಲ್ಲೂ ಅವರಿಗೆ ಅಧಿಕಾರವಿರಬೇಕಾದೀತು. ಇಲ್ಲಿ ಅಧಿಕಾರವಿಲ್ಲದ್ದರಿಂದ ಬ್ರಹ್ಮವಿದ್ಯೆಯಲ್ಲೂ ಅಧಿಕಾರ ಸಂಭವಿಸುವುದಿಲ್ಲ. ಇದೂ ಅಲ್ಲದೆ, "ಆದಿತ್ಯನಲ್ಲಿರುವ ರೋಹಿತ ಮೊದಲಾದ ಐದು ಅಮೃತಗಳನ್ನು ವಸು, ರುದ್ರ, ಆದಿತ್ಯ, ಮರುತ್, ಸಾಧ್ಯ ಎಂಬ ಐದು ದೇವಗಣಗಳು ಕ್ರಮವಾಗಿ ಭೋಗಿಸುತ್ತಾರೆ" ಎಂದೂ, "ಈ ಅಮೃತವನ್ನು ತಿಳಿದವನು ವಸುಗಳೊಳಗೆ ಏಕೀಭವಿಸಿ ಅಗ್ನಿಮುಖದಿಂದ ಈ ಅಮೃತವನ್ನು ಪಡೆದು ಸಂತೋಷಗೊಳ್ಳುತ್ತಾನೆ" ಎಂದೂ ಹೇಳಿರುವುದರಿಂದ ದೇವತೆಗಳಿಂದ ದೊರಕುವ ಅಮೃತವನ್ನು ಪಡೆದವನಿಗೆ ವಸ್ವಾದಿಗಳ ಮಹಿಮೆ ತಿಳಿಯುವುದೆಂದು ತಿಳಿದುಬರುತ್ತದೆ. ವಸ್ವಾದಿದೇವತೆಗಳು ತಮಗಿಂತ ಬೇರೆ ಯಾವ ವಸ್ವಾದಿದೇವತಗಳನ್ನು ಅಮೃತಭೋಗಿಗಳೆಂದು ತಿಳಿದಾರು? ಮತ್ತೆ ತಮಗಿಂತ ಬೇರೆ ಯಾವ ವಸುವಿನ ಮಹಿಮೆಯನ್ನು ಕಂಡ್ಯಾರು? ಇದರಂತೆ, "ಬ್ರಹ್ಮಕ್ಕೆ ಅಗ್ನಿಯೇ ಪಾದ, ವಾಯುವೇ ಪಾದ, ಆದಿತ್ಯನೇ ಪಾದ, ದಿಕ್ಕುಗಳೇ ಪಾದ, ವಾಯುವೇ ಸಂವರ್ಗ, ಆದಿತ್ಯನೇ ಬ್ರಹ್ಮ ಇದು ಆದೇಶ" ಎಂಬ ದೇವತಾತ್ಮಗಳ ಉಪಾಸನದಲ್ಲೂ ಅವರಿಗೆ ಅಧಿಕಾರವಿಲ್ಲ. "ಇವರೇ ಗೌತಮಭರದ್ವಾಜರು, ಇವನೇ ಗೌತಮ, ಇವನೇ ಭರದ್ವಾಜ, ಇವರೇ ವಿಶ್ವಾಮಿತ್ರ ಜಮದಗ್ನಿಗಳು, ಇವನೇ ಮಿಶ್ವಾಮಿತ್ರ ಇವನೇ ಜಮದಗ್ನಿ, ಇವರೇ ವಶಿಷ್ಠಕಶ್ಯಪರು, ಇವನೇ ವಶಿಷ್ಠ' ಇವನೇ ಕಶ್ಯಪ, ವಾಕ್ಕೇ ಅತ್ರಿಮಹರ್ಷಿ" ಈ ಮಂತ್ರದಲ್ಲಿ ಋಷಿ

ಗಳನ್ನು ಉಪಾಸ್ಯರೆಂದು ಹೇಳಿರುವುದರಿಂದ ಗೌತಮಾದಿಋಷಿಗಳೇ ತಮ್ಮ ಉಪಾಸನೆಯನ್ನು ಮಾಡುವುದು ಯುಕ್ತವಲ್ಲ. ಆದ್ದರಿಂದ ದೇವತೆಗಳಿಗೆ ಮಧುವಿದ್ಯೆಯಲ್ಲಿ ಅಧಿಕಾರವಿಲ್ಲದೇ ಇರುವಪ್ರಯುಕ್ತ ಬ್ರಹ್ಮವಿದ್ಯೆಯಲ್ಲೂ ಅಧಿಕಾರವಿಲ್ಲ.

**ತತ್ರ ಹೇತ್ವಂತರಮಾಹ— ಜ್ಯೋತಿಷ್ಯಭಾವಾಚ್ಚ || ೩೨ ||**

**"ತದೇವ ಜ್ಯೋತಿಷಾಂ ಜ್ಯೋತಿರಾಯುರಿಹೋಪಾಸತೇಽಮೃತಂ" ಇತಿ ಜ್ಯೋತಿಷಿ ಪರಮಶಿವೇ ಅಸಾಧಾರಣತಯಾ ದೇವಾನಾಮುಪಲಬ್ಧತ್ವೇಽಪ್ಯಧಿಕಾರಾಭಾವವಾಕ್ಯದರ್ಶನಾತ್ ಇತರತ್ರ ಮಧ್ವಾದ್ಯುಪಾಸನೇ ನಾಧಿಕಾರೋ ನ್ಯಾಯಸಿದ್ಧ ಇತ್ಯುಪದಿಶ್ಯತೇ. ಕಿಂಚ ಪರಿದೃಶ್ಯಮಾನ ಜ್ಯೋತಿರ್ಮಂಡಲ ಏವ ಸೂರ್ಯಚಂದ್ರಾದಿದೇವತಾಶಬ್ದಾನಾಂ ಲೋಕವ್ಯವಹಾರಸದ್ಭಾವಾನ್ಮಂಡಲಸ್ಯ ಮೃತ್ಪಿಂಡವದಚೇತನತ್ವೇನ ವಿಗ್ರಹಾಭಾವಾದಗ್ನಿವಾಯ್ವಾದೀನಾಮಪಿ ತತ್ತುಲ್ಯತಾ. ಮಂತ್ರಾರ್ಥವಾದಾನಾಂ ಚಾನ್ಯಪರತ್ವೇನ ಸ್ವಾರ್ಥೇ ಪ್ರಾಮಾಣ್ಯಾಭಾವಾನ್ನ ದೇವಾನಾಂ ವಿಗ್ರಹವತ್ತ್ವಂ. ತಸ್ಮಾದಪಿ ತುಲ್ಯತ್ವಾನ್ಮಂತ್ರಾರ್ಥವಾದಾನಾಂ ಚಾನಧಿಕಾರ ಇತಿ ಜೈಮಿನಿರ್ಮನ್ಯತೇ.**

ಇಲ್ಲಿ ಬೇರೊಂದು ಹೇತುವನ್ನು ತಿಳಿಸುತ್ತಾನೆ.— **ಜ್ಯೋತಿಷ್ಯಭಾವಾಚ್ಚ ||೩೨||**

"ಆ ಪರಂಜ್ಯೋತಿಯನ್ನು ಆಯುಸ್ಸೆಂದೂ ಅಮೃತವೆಂದೂ ದೇವತೆಗಳು ಉಪಾಸನಮಾಡುತ್ತಾರೆ" ಎಂಬಲ್ಲಿ ಪರಶಿವನಲ್ಲಿಯೇ ಅಸಾಧಾರಣವೆನಿಸಿದ ಜ್ಯೋತಿಶ್ಶಬ್ದವು ದೇವತೆಗಳಿಗೂ ಅನ್ವಯಿಸುವುದಾದರೂ ಅವರಿಗೆ ಬ್ರಹ್ಮೋಪಾಸನೆಯಲ್ಲಿ ಅಧಿಕಾರವಿಲ್ಲವೆಂಬ ವಾಕ್ಯವಿರುವುದರಿಂದ ಮಧುವಿದ್ಯೆಯಲ್ಲಿ ಅವರಿಗೆ ಅಧಿಕಾರವಿಲ್ಲವೆಂಬುದು ನ್ಯಾಯಸಿದ್ಧವಾಗಿದೆ ಎಂದು ತಿಳಿಸಲಾಗಿದೆ. ಇದೂ ಅಲ್ಲದೆ, ಲೋಕವಲ್ಲಿ ಕಂಡುಬರುವ ಸೂರ್ಯ ಚಂದ್ರ ಮೊದಲಾದ ದೇವತಾಶಬ್ದಗಳನ್ನೇ ಜ್ಯೋತಿರ್ಮಂಡಲವೆಂದು ವ್ಯವಹರಿಸುವುದರಿಂದ ಆ ಮಂಡಲವು ಮಣ್ಣುಮುದ್ದೆಯಂತೆ ಅಚೇತನವಾದ್ದರಿಂದ ಅಗ್ನಿ ವಾಯು ಮೊದಲಾದವೂ ಸಹ ದೇಹವಿಲ್ಲದ್ದರಿಂದ ಹಾಗೆಯೇ ಅಚೇತನವೆನಿಸುತ್ತವೆ. ಹೀಗೆ ಮಂತ್ರಗಳೂ ಅರ್ಥವಾದಗಳೂ ಬೇರೆ ವಸ್ತುವಿಗೆ ಅನ್ವಯಿಸುವುದರಿಂದ ಅವಕ್ಕೆ ಸ್ವಾರ್ಥದಲ್ಲಿ ಪ್ರಾಮಾಣ್ಯ ತಪ್ಪುವ ಪ್ರಯುಕ್ತ ದೇವತೆಗಳಿಗೆ ವಿಗ್ರಹವು ಸಿದ್ಧಿಸುವಂತಿಲ್ಲ. ಇದೇ ನ್ಯಾಯದಿಂದ ಅವರಿಗೆ ಮಂತ್ರಾರ್ಥವಾದಗಳಲ್ಲೂ ಅಧಿಕಾರವಿಲ್ಲವೆಂದು ಜೈಮಿನಿ ಹೇಳುತ್ತಾನೆ. ಹೀಗೆ ಅವನ ಪೂರ್ವಪಕ್ಷವಿದೆ.

**ಏವಂ ದೇವಾನಾಂ ಬ್ರಹ್ಮವಿದ್ಯಾಧಿಕಾರೇ ಜೈಮಿನ್ಯಾಚಾರ್ಯಕೃತಾಕ್ಷೇಪಂ ನಿರಾಕರೋತಿ—ಭಾವಂ ತು ಬಾದರಾಯಣೋಽಸ್ತಿ ಹಿ || ೩೩ ||**

**ತುಶಬ್ದಃ ಶಂಕಾನಿರಾಸಾರ್ಥಃ. ಮಧುವಿದ್ಯಾದಿಷು ದೇವನಾಮಧಿಕಾರಾಭಾವೇಽಪಿ ಬ್ರಹ್ಮವಿದ್ಯಾಯಾಮಧಿಕಾರಂ ಬಾದರಾಯಣೋ ಮನ್ಯತೇ. ಅಸ್ತಿ ಹಿ ಮಂಡಲಾಭಿಮಾನಿನೀ ಮಂಡಲಾತಿರಿಕ್ತಾ ವಿಗ್ರಹ**

ವತೀ ಚೇತನದೇವತಾ. ಅಸ್ತೀತಿ ಪುರಾಣೇಷು ಪ್ರತಿಪಾದ್ಯತ ಇತ್ಯರ್ಥಃ. ಮಧುವಿದ್ಯಾಯಾಮಧಿಕಾರೇಽಪಿ ವಸ್ವಾದಿದೇವಾನಾಂ ಸ್ವಹೃದಯಪುಂಡರೀಕಸ್ಥಬ್ರಹ್ಮೋಪಾಸನಾಧಿಕಾರೋ ನ ವಿರುಧ್ಯತೇ, ಕಲ್ಪಾಂತರೇ ವಸ್ವಾದೇರ್ಬ್ರಹ್ಮತ್ವಪ್ರಾಪ್ತಿಸಂಭವಾತ್. ಸಗುಣನಿರ್ಗುಣಾತ್ಮಕಂ ಶಿವಾಭಿಧಾನಂ ಪರಬ್ರಹ್ಮ ದೇವಾನಾಮುಪಾಸ್ಯಂ ವಿಧಿಯತೇ. 'ಅಸಾವಾದಿತ್ಯೋ ದೇವಮಧು' ಇತ್ಯಾರಭ್ಯ ಆದಿತ್ಯವಸ್ವಾದಿನಾಮರೂಪವಿಶಿಷ್ಟಕಾರ್ಯವಿಶೇಷಾವಸ್ಥಂ ಬ್ರಹ್ಮ ಉಪಾಸ್ಯಂ ವ್ಯಾಚಕ್ಷ್ಯತೇ. ಅಥ "ತತ ಊರ್ಧ್ವಮುದೇತಿ ನೈವೋದೇತಿ ನಾಸ್ತಮೇತಿ" ಇತ್ಯಾದಿನಾ ಸೂಕ್ಷ್ಮಾದಿತ್ಯಾಂತರಾತ್ಮತ್ವೇನ ಪ್ರವಿಷ್ಟಂ ಕಾರಣಾತ್ಮಕಂ ಬ್ರಹ್ಮ ಉಪಾಸ್ಯಮುಪದಿಶ್ಯತೇ. ತತ್ರ "ವಸೂನಾಮೇವೈಕೋ ಭೂತ್ವಾ" ಇತಿ ವಸ್ವಾದಿತ್ಯರೂಪಂ ಫಲಮುಚ್ಯತೇ. "ನ ಹ ವಾ ಅಸ್ಮಾ ಉದೇತಿ ನಿಮ್ಲೋಚತಿ ಸಕೃದ್ಧಿ ವಾ ಹೈವಾಸ್ಮೈ ಭವತಿ । ಯ ಏತಾಮೇವಂ ಬ್ರಹ್ಮೋಪನಿಷದಂ ವೇದ ॥" ಇತಿ ಬ್ರಹ್ಮಪ್ರಾಪ್ತಿಫಲಮುಪದಿಶ್ಯತೇ. ತಸ್ಮಾನ್ಮಧ್ವಾದಿಷ್ವಪಿ ದೇವಾನಾಮಧಿಕಾರಸ್ಸಂಭವತಿ. ಕಿಂಚ ಯದ್ಯಪಿ ದೇವಾನಾಂ ಮಿಶ್ರೋಪಾಸನಾಧಿಕಾರಸ್ತಥಾಪಿ ಬ್ರಹ್ಮವಿದ್ಯಾಯಾಮಪಿ ತೇಷಾಮಧಿಕಾರಸ್ಸಂಭವತಿ ಹಿ. ನ ಯದ್ಯೇಕತ್ರಾನಧಿಕಾರೇ ಸರ್ವತ್ರಾನಧಿಕಾರಃ. ರಾಜಸೂಯಾದ್ಯನಧಿಕೃತಾಂ ಬ್ರಾಹ್ಮಣಾದೀನಾಂ ಜ್ಯೋತಿಷ್ಟೋಮಾನಧಿಕಾರಪ್ರಸಂಗಾತ್. ಯದ್ವಾ ಜ್ಯೋತಿಷಿ ಭಾವಾಚ್ಚೇತ್ ತಸ್ಯೋತ್ತರಮಸ್ತಿ ಹಿ. ಯಥಾಪಿ ದೇವತಾಶಬ್ದಾಃ ಜ್ಯೋತಿಷ್ಟೋಮಾನಧಿಕಾರಪ್ರಸಂಗಾತ್ ಜ್ಯೋತಿಷಿ ಭಾವಾದೌ ಪ್ರಯುಜ್ಯಂತೇ ತಥಾಪಿ ತದಭಿಮಾನಿದೇವತಾಪರಾ ಏವ ತಂ ದೇವತಾತ್ಮಾನಂ ಪ್ರತಿಪಾದಯಂತಿ. ಅಸ್ಮಿನ್ನೈಶ್ವರ್ಯಯೋಗಾದ್ದೇವಾನಾಂ ಜ್ಯೋತೀರುಪೇಣಾವಸ್ಥಾತುಂ ತಂ ತಂ ವಿಗ್ರಹಂ ಗೃಹೀತ್ವಾ ಚ ವ್ಯವಹರ್ತುಂ ಸಾಮರ್ಥ್ಯಂ ತಥಾಹಿ ಶ್ರೂಯತೇ."ಮೇಧಾತಿಥಿರ್ಮೇಷೇತಿ ಮೇಧಾತಿಥಿಂ ಹಿ ಕಾಣ್ವಾಯನಮಿಂದ್ರೋ ಮೇಷೋ ಭೂತ್ವಾ ಜಹಾರ" ಇತಿ ಸ್ಮರ್ಯತೇ ಚ. "ಆದಿತ್ಯಃ ಪುರುಷೋ ಭೂತ್ವಾ ಕುಂತೀಮುಪಜಗಾಮ ಹಿ" ಇತಿ. "ಮೃದಾದಿಷ್ವಧಿಷ್ಠಾತಾರೋಽಭ್ಯುಪಗಮ್ಯಂತೇ", "ಮೃದಬ್ರವೀದಾಪೋಽಬ್ರುವನ್" ಇತ್ಯಾದೌ ದರ್ಶನಾತ್. ನನು ಮಂತ್ರಾರ್ಥವಾದಾನಾಂ ಸ್ವಾರ್ಥತಾತ್ಪರ್ಯಾಭಾವಾತ್ತನ್ಮೂಲೇತಿಹಾಸಪುರಾಣಾನಾಮಪಿ ತಥಾತ್ವಾತ್ಕಥಂ ವಿಗ್ರಹಸಿದ್ಧಿರಿತಿ ಚೇನ್ನ, ಅತ್ರಾಪ್ಯಸ್ತಿ ಹ್ಯೇವೋತ್ತರಂ ತೇಷಾಮಪ್ಯಬಾಧಿತೇಽರ್ಥೇ ಪ್ರಾಮಾಣ್ಯಮಸ್ತೀತ್ಯರ್ಥಃ. ಅರ್ಥವಾದೇಷ್ವಪಿ ಶಬ್ದಶಕ್ತಿಬಲಾಜ್ಜಾತಸ್ಯಾರ್ಥಪ್ರತ್ಯಯಸ್ಯ ಬಾಧಾಭಾವೇ ಪ್ರಾಮಾಣ್ಯಮಪ್ರತಿಹ

ತಮೇವ. ತನ್ಮಾತ್ರೇಣ ಪ್ರಯೋಜನಾನವಾಪ್ತೇಃ. ವಿಧೇಯಸ್ತಾವಕತಯಾ ವಿಧ್ಯೈಕವಾಕ್ಯತ್ವಕಲ್ಪನೇನ ಚೈತಾವತಾ ಅವಾಂತರವಾಕ್ಯಾರ್ಥಬಾಧಸ್ಸಂಭವತಿ, ತಸ್ಯಾಭಾಸೇ ಸ್ತುತಿರಪಿ ನ ಸ್ಯಾತ್. ಅತ ಏವ ವಾಯುವ್ಯಸ್ತವನಾದ್ಯರ್ಥವಾದೇಷ್ವಪಿ ಗುಣವಾದೇನಾಬಾಧಿತಮರ್ಥಮಂಗೀಕೃತ್ಯೈವ ಸ್ತುತಿಪರತ್ವಮಂಗೀಕ್ರಿಯತೇ. ವಸ್ತುತಸ್ತು ಯಥಾ ಸ್ವರ್ಗಾರ್ಥವಾದಾನಾಂ ಚೋದನಾಪೇಕ್ಷಿತಫಲಪ್ರತಿಪಾದಕತಯಾ ಪ್ರಾಮಾಣ್ಯಮೇವಂ ದೇವತಾವಿಗ್ರಹಪ್ರತಿಪಾದಕಾನಾಮಪಿ. ತಥಾಹಿ "ತೃಪ್ತ ಏವೈನಮಿಂದ್ರಃ ಪ್ರಜಯಾ ಪಶುಭಿಸ್ತರ್ಪಯತಿ" ಇತ್ಯಾದಿಪರ್ಯಾಲೋಚನಯಾ ರಾತ್ರಿಸತ್ರನ್ಯಾಯೇನ ದೇವತಾಪ್ರೀತಿರೇವ ಕರ್ಮಣಾಂ ವ್ಯಾಪಾರಪರತ್ವೇನ ಕಲ್ಪ್ಯತೇ. ನತ್ವಾತ್ಮಸಮವೇತಮಪೂರ್ವಾಖ್ಯಂ ಮಾನಾಂತರಾಗೋಚರಂ ಕಲ್ಪನಾರ್ಹಂ. ನ ಚ ಪ್ರದತ್ತಂ ಹ್ಯಗ್ನಿರ್ದೇವತಾ ಭುಂಕ್ತೇ ಪ್ರತ್ಯಕ್ಷವಿರೋಧಾತ್. ನಚಾಭುಂಜಾನಾ ಅಂತಸ್ತೃಪ್ತ್ಯಭಾವಾತ್ಕಥಂ ಪ್ರಸೀದತೀತಿ ವಾಚ್ಯಂ, ಅಭುಂಜಾನಾಯಾ ಅಪಿ ತದುದ್ದೇಶೇನ ತ್ಯಾಗಮಾತ್ರೇಣಾಪಿ ಪ್ರೀತಿಸಂಭವಾತ್. ಯಥಾ ಕಸ್ಮಿಂಶ್ಚಿತ್ಪೂಜ್ಯತಮೇ ಅಸನ್ನಿಹಿತೇಽಪಿ ಸನ್ನಿಹಿತಾನಾಂ ಪೂಜಾಪ್ರಸಂಗೇ ತದುದ್ದೇಶೇನ ಪೂರ್ವಂ ಕಿಂಚಿತ್ತಾಂಬೂಲಾದಿಕಂ ವಿಭಜ್ಯಾಸ್ಮೈ ದತ್ವಾ ಸನ್ನಿಹಿತಪೂಜಾಯಾಂ ಕೃತಾಯಾಂ ತಚ್ಛ್ರುತ್ವಾ ಸೋಽಪಿ ಕಿಂಚಿದಲಭಮಾನೋಽಪಿ ಪ್ರಥಮಂ ಸ್ವೋದ್ದೇಶತ್ಯಾಗಮಾತ್ರೇಣಾತ್ಮಾನಂ ಪೂಜಿತಂ ಮನ್ವಾನಃ ಪ್ರಸೀದತಿ. ತಥಾ ದೇವಾನಾಮಪಿ ತದುದ್ದೇಶೇನ ತ್ಯಕ್ತಹವನೀಯಪಕ್ಷೇಽಪಿ ತೇನ ಪ್ರೀತಿರವಿರುದ್ಧಾ. ಏವಂ ನಮಸ್ಕಾರಾದಿತೃಪ್ತಿಕರಣಾ ಪ್ರೀತಿರುದಾಹರ್ತವ್ಯಾ. ನಚ ಗೃಹಾದೀನಾಮಚೇತನಾನಾಮಪಿ ದೇವತಾವತ್ ಪ್ರೀತ್ಯಸಂಭವಃ, ತದಧಿಷ್ಠಾತೃದೇವತಾಸಂಭವಾತ್. ವಸ್ತುತಸ್ಸರ್ವಾಂತರ್ಯಾಮೀಶ್ವರ ಏವ ಸರ್ವಫಲಪ್ರದ ಇತಿ ತಸ್ಯೈವ ಪ್ರೀತಿಃ ಕಲ್ಪ್ಯತೇ. ಅತ ಏವ ಗೀತಾಸು "ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ । ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ॥ ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ । ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ ಹಿ ತಾನ್ ॥" ಇತಿ. ತಸ್ಮಾಚ್ಚೇತನವತ್ತ್ವಾದ್ವಿಗ್ರಹವತ್ತ್ವಾದ್ದೇವತಾನಾಂ ಬ್ರಹ್ಮವಿದ್ಯಾಧಿಕಾರೋಽಸ್ತೀತಿ ಸಿದ್ಧಂ.

ಹೀಗೆ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಹೇಳಿದ ಜೈಮಿನಿಯ ಆಕ್ಷೇಪವನ್ನು ನಿರಾಕರಿಸುತ್ತಾನೆ. **ಭಾವಂತು ಬಾದರಾಯಣೋಽಸ್ತಿ ಹಿ ॥೩೩॥**

ತು ಶಬ್ದವು ಶಂಕೆಯನ್ನು ಪರಿಹರಿಸುತ್ತದೆ. ಮಧುವಿದ್ಯೆಯಲ್ಲಿ ದೇವತೆಗಳಿಗೆ ಅಧಿ

ಕಾರವಿಲ್ಲದಿದ್ದರೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದು ಬಾದರಾಯಣನು ಹೇಳು ತ್ತಾನೆ. ಮಂಡಲಕ್ಕಿಂತಲೂ ಬೇರೆಯಾಗಿ ಮಂಡಲದ ಅಭಿಮಾನಿಯಾದ ಚೇತನ ದೇವತೆ ಉಂಟೆಂದು ಪುರಾಣಗಳಲ್ಲಿ ಹೇಳಲಾಗಿದೆ. ವಸ್ವಾದಿದೇವತೆಗಳಿಗೆ ಮಧು ವಿದ್ಯೆಯಲ್ಲಿ ಅಧಿಕಾರವಿದ್ದರೂ ತಮ್ಮ ಹೃದಯಕಮಲದಲ್ಲಿರುವ ಬ್ರಹ್ಮನನ್ನು ತಿಳಿ ಯುವ ಅಧಿಕಾರವೂ ಇದೆ. ಕಲ್ಪಾಂತರದಲ್ಲಿ ವಸುದೇವತೆಗಳೂ ಬ್ರಹ್ಮಭಾವವನ್ನು ಹೊಂದುವ ಸಂಭವವಿದೆ. ಸಗುಣ ನಿರ್ಗುಣ ರೂಪವಾದ ಪರಶಿವಬ್ರಹ್ಮವನ್ನು ದೇವತೆ ಗಳಿಗೆ ಉಪಾಸ್ಯವೆಂದು ವಿಧಿಸಲಾಗಿದೆ. ಆದಿತ್ಯ, ವಸು ಮೊದಲಾದ ನಾಮರೂಪ ಗಳಿರುವ ಕಾರ್ಯಬ್ರಹ್ಮವನ್ನು ಮೊದಲು ಉಪಾಸ್ಯವೆಂದು ಹೇಳಿ, ಆಮೇಲೆ " ಪರಮಾತ್ಮನಿಗೆ ಸೂರ್ಯನಂತೆ ಉದಯಾಸ್ತಗಳಿಲ್ಲ. ಅವನು ಇದಕ್ಕೆ ಮೇಲಿನವನು" ಎಂಬ ಶ್ರುತಿಯಪ್ರಕಾರ ಆದಿತ್ಯನಲ್ಲಿ ಅಂತರಾತ್ಮನಾಗಿ ಪ್ರವೇಶಿಸಿದ ಕಾರಣಬ್ರಹ್ಮವನ್ನು ಉಪಾಸ್ಯವೆಂದು ಹೇಳಲಾಗಿದೆ. "ಅಮೃತವನ್ನು ತಿಳಿದವನು ವಸುಗಳಲ್ಲಿ ಏಕೀಭವಿಸಿ ಅಗ್ನಿಮುಖದಿಂದ ಆ ಅಮೃತವನ್ನು ಕಂಡು ತೃಪ್ತನಾಗುತ್ತಾನೆ" ಎಂಬಲ್ಲಿ ವಸ್ವಾದಿತ್ಯ ರೂಪವಾದ ಫಲವನ್ನು ಹೇಳಲಾಗಿದೆ. " ಯಾರು ಈ ರೀತಿಯ ಬ್ರಹ್ಮವಿದ್ಯೆಯನ್ನು ತಿಳಿಯುತ್ತಾರೋ ಅವರು ಉದಯಾಸ್ತಗಳಿಲ್ಲದ ಅವಸ್ಥೆಯನ್ನು ಹೊಂದುತ್ತಾರೆ" ಎಂಬಲ್ಲಿ ಬ್ರಹ್ಮಪ್ರಾಪ್ತಿಯನ್ನೇ ಫಲವೆಂದು ಹೇಳಲಾಗಿದೆ. ಆದ್ದರಿಂದ ದೇವತೆಗಳಿಗೆ ಮಧುವಿದ್ಯೆಯಲ್ಲೂ ಅಧಿಕಾರವು ಸಂಭವಿಸುತ್ತದೆ. ದೇವತೆಗಳಿಗೆ ಅನೇಕ ಬಗೆಯ ಉಪಾಸನಕ್ಕೆ ಅಧಿಕಾರವಿದ್ದರೂ ಬ್ರಹ್ಮವಿದ್ಯೆಯಲ್ಲೂ ಅಧಿಕಾರವಿರುತ್ತದೆ. ಒಂದು ಕಡೆ ಅಧಿಕಾರವಿಲ್ಲದ ಮಾತ್ರಕ್ಕೆ ಎಲ್ಲಾ ಕಡೆಯೂ ಅಧಿಕಾರ ತಪ್ಪುವುದಿಲ್ಲ. ಹಾಗಾದರೆ ರಾಜಸೂಯದಲ್ಲಿ ಅಧಿಕಾರವಿಲ್ಲದ ಬ್ರಾಹ್ಮಣರಿಗೆ ಜ್ಯೋತಿಷ್ಟೋಮದಲ್ಲೂ ಅಧಿಕಾರ ತಪ್ಪಬೇಕಾದೀತು. 'ಜ್ಯೋತಿಷಿ ಭಾವಾಚ್ಚ ಎಂಬ ಪಾಠದಲ್ಲೂ ಪೂರ್ವಪಕ್ಷಕ್ಕೆ ಉತ್ತರವನ್ನು ಹೀಗೆ ಹೇಳಬಹುದು. ದೇವತಾವಾಚಕವಾದ ಶಬ್ದವನ್ನು ಜ್ಯೋತಿಯಲ್ಲಿ ಉಪಯೋಗಿಸಿದರೂ ಅದು ಅಭಿಮಾನಿದೇವತೆಯನ್ನೇ ಹೇಳುತ್ತದೆಯಾದ್ದರಿಂದ ಆ ಐಶ್ವರ್ಯಯೋಗದಿಂದ ದೇವತೆಗಳಿಗೆ ಜ್ಯೋತಿರ್ಮಯವಾದ ಆಕಾರವನ್ನು ಧರಿಸಿ ವ್ಯವಹರಿಸುವ ಸಾಮರ್ಥ್ಯವಿರುವುದಾಗಿ ತಿಳಿದುಬರುತ್ತದೆ. "ಕಣ್ವಗೋತ್ರದ ಮೇಧಾ ತಿಥಿಯನ್ನು ಇಂದ್ರನು ಮೇಷರೂಪದಿಂದ ಅಪಹರಿಸಿದನು" "ಆದಿತ್ಯನು ಪುರುಷನಾಗಿ ಕುಂತಿಯ ಬಳಿಗೆ ಹೋಗಿದ್ದನು" ಹೀಗೆಯೇ ಮಣ್ಣಿನಲ್ಲೂ ಅಧಿಷ್ಠಾತೃದೇವತೆಗಳನ್ನು ಒಪ್ಪಲಾಗಿದೆ. " ಮಣ್ಣು ಹೇಳಿತು" "ನೀರು ಹೇಳಿತು" ಹೀಗೆ ಪ್ರಯೋಗಗಳಿವೆ. ಮಂತ್ರದ ಅರ್ಥವಾದಗಳಿಗೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲದ್ದರಿಂದ ಅದನ್ನು ಅವಲಂಬಿ ಸಿಕೊಂಡಿರುವ ಇತಿಹಾಸಪುರಾಣಗಳಿಗೂ ಹಾಗೆಯೇ ಪ್ರಮಾಣ್ಯವು ತಪ್ಪುವುದರಿಂದ ದೇವತೆಗಳಿಗೆ ವಿಗ್ರಹವಿದೆ ಎಂಬುದು ಹೇಗೆ ಸಿದ್ಧಿಸುತ್ತದೆ? ಎಂದರೆ ಇದಕ್ಕೂ ಉತ್ತರ ವಿದ್ದೇ ಇದೆ. ಅರ್ಥವಾದಗಳಿಗೂ ಅಬಾಧಿತವಾದ ಅರ್ಥದಲ್ಲಿ ಪ್ರಾಮಾಣ್ಯವಿದ್ದೇ ಇರುತ್ತದೆ. ಅವುಗಳಲ್ಲೂ ಶಬ್ದಶಕ್ತಿಯಿಂದ ಬರುವ ಅರ್ಥಜ್ಞಾನಕ್ಕೆ ಬಾಧೆ ಇಲ್ಲದಿದ್ದರೆ

ಪ್ರಾಮಾಣ್ಯಕ್ಕೆ ಯಾವ ತಡೆಯೂ ಇಲ್ಲ. ಆದರೆ ಅಷ್ಟರಿಂದಲೇ ಯಾವ ಪ್ರಯೋಜನವೂ ಆಗುವಂತಿಲ್ಲ. ವಿಧಿವಾಕ್ಯಕ್ಕನುಗುಣವಾಗಿರುವುದರಿಂದ ಅರ್ಥವಾದವು ವಿಧೇಯಾಂಶದ ಸ್ತುತಿಗಾಗಿ ಬಂದಿದೆ ಎಂದು ಕಲ್ಪಿಸಿದರೆ ಅದರಿಂದ ಅವಾಂತರವಾಕ್ಯಾರ್ಥಕ್ಕೆ ಬಾಧವುಂಟಾಗುವುದು. ಹಾಗೆ ಬಾಧವಾಗುವುದರಿಂದ ಸ್ತುತಿಯೇ ತೋರದೆ ಹೋಗಬೇಕಾಗುತ್ತದೆ. ಆದ್ದರಿಂದಲೇ ವಾಯುದೇವತೆಯ ಸ್ತೋತ್ರರೂಪವಾದ ಅರ್ಥವಾದಗಳಲ್ಲಿ ಗುಣಪ್ರಶಂಸೆಯಿಂದ ಅಬಾಧಿತವಾದ ಅರ್ಥವನ್ನು ಅಂಗೀಕರಿಸಿ ಆ ಅರ್ಥವಾದವನ್ನು ಸ್ತುತಿಪರವೆಂದು ಒಪ್ಪಲಾಗಿದೆ. ಸ್ವರ್ಗವಿಷಯಕವಾದ ಅರ್ಥವಾದಗಳು ವಿಧಿಗೆ ಬೇಕಾದ ಫಲವನ್ನು ಹೇಳುವುದರಿಂದ ಹೇಗೆ ಪ್ರಮಾಣವೆನಿಸಿವೆಯೋ ಹಾಗೆ ದೇವತೆಗಳಿಗೆ ವಿಗ್ರಹಗಳನ್ನು ತಿಳಿಸುವ ಅರ್ಥವಾದಗಳೂ ಪ್ರಮಾಣವಾಗುತ್ತವೆ. ಉದಾಹರಣೆಗೆ "ತೃಪ್ತನಾದ ಇಂದ್ರನು ಯಜಮಾನನನ್ನು ಪ್ರಜೆಗಳಿಂದಲೂ ಪಶುಗಳಿಂದಲೂ ತೃಪ್ತಿಪಡಿಸುತ್ತಾನೆ" ಎಂಬ ವಾಕ್ಯವನ್ನು ಪರ್ಯಾಲೋಚಿಸಿದರೆ ರಾತ್ರಿಸತ್ರವನ್ನು ವಿಧಿಸುವ ವಾಕ್ಯವಿಲ್ಲದಿದ್ದರೂ ಅದರ ವಿಧಿಯನ್ನು ಅರ್ಥವಾದದ ವಾಕ್ಯದಿಂದಲೇ ಊಹಿಸುವಂತೆ ದೇವತಾಪ್ರೀತಿಯೇ ಕರ್ಮಗಳ ಸಾಫಲ್ಯಕ್ಕೆ ದ್ವಾರವೆಂಬುದು ಸಿದ್ಧಿಸುತ್ತದೆ. ಆದರೆ ಅಪೂರ್ವವೆಂಬ ಬೇರೊಂದು ಪದಾರ್ಥವು ಯಾವ ಪ್ರಮಾಣದಿಂದಲೂ ಸಿದ್ಧಿಸದೇ ಇರುವುದರಿಂದ ಆತ್ಮನಲ್ಲಿ ಅದನ್ನು ಕಲ್ಪಿಸುವುದು ಯುಕ್ತವಾಗುವುದಿಲ್ಲ. ಆದರೆ ನಾವು ಕೊಡುವ ಹವಿಸ್ಸನ್ನು ದೇವತೆಗಳು ಭೋಗಿಸುವರೆಂಬುದು ಪ್ರತ್ಯಕ್ಷಪ್ರಮಾಣಕ್ಕೆ ವಿರುದ್ಧವಾಗುವುದು. ಅವರು ಅವನ್ನು ಭೋಗಿಸದೇ ಇರುವುದರಿಂದ ಅವರಿಗೆ ತೃಪ್ತಿಯಾಗುವಂತಿಲ್ಲ. ಹಾಗಾದರೆ ಅಂತಹ ದೇವತೆ ನಮಗೆ ಹೇಗೆ ಪ್ರಸನ್ನವಾದೀತು? ಎಂದು ಕೇಳುವುದೂ ಯುಕ್ತವಲ್ಲ. ಆ ದೇವತೆ ನಮ್ಮ ಅರ್ಚನೆಯನ್ನು ಪ್ರತ್ಯಕ್ಷವಾಗಿ ಸ್ವೀಕರಿಸಿದ್ದರೂ ಅದರ ಉದ್ದೇಶದಿಂದ ಅರ್ಚನೆ ಮಾಡಿದರೂ ಅದಕ್ಕೆ ಪ್ರೀತಿಯುಂಟಾಗುವುದು. ಒಬ್ಬ ಪೂಜ್ಯನಾದ ವ್ಯಕ್ತಿ ಎದುರಿಗಿಲ್ಲದಿದ್ದಾಗ ಮತ್ತೊಬ್ಬನನ್ನು ಗೌರವಿಸಬೇಕಾಗಿ ಬಂದರೆ, ಆ ಪೂಜ್ಯನಿಗೆ ಗೌರವ ಸಲ್ಲಿಸಲಿಕ್ಕಾಗಿ ಬಂದು ತಾಂಬೂಲವನ್ನು ಮೊದಲು ತೆಗೆದಿಟ್ಟು ಆಮೇಲೆ ಬೇರೊಬ್ಬನನ್ನು ಗೌರವಿಸಿದರೆ, ಅದನ್ನು ಕೇಳಿ ಆ ಪೂಜ್ಯನು ತನಗೆ ತಾಂಬೂಲ ಬಾರದಿದ್ದರೂ ತನ್ನ ಉದ್ದೇಶದಿಂದ ತಾಂಬೂಲವನ್ನು ಮೊದಲು ತೆಗೆದಿಟ್ಟದ್ದರಿಂದಲೇ ತನ್ನನ್ನು ಪೂಜಿಸಿದಂತಾಯಿತೆಂದು ತಿಳಿದು ಪ್ರಸನ್ನನಾಗುತ್ತಾನೆ. ಹಾಗೆಯೇ ದೇವತೆಗಳಿಗೆ ಅವರ ಉದ್ದೇಶದಿಂದ ಹವಿರ್ಭಾಗವನ್ನು ಕೊಡುವುದರಿಂದಲೂ ಅವರು ಸಂತುಷ್ಟರಾಗುವರು. ಅದರಂತೆ ಪರಮೇಶ್ವರನನ್ನು ಉದ್ದೇಶಿಸಿ ನಮಸ್ಕಾರಮಾಡಿದರೂ ಅವನಿಗೆ ಪ್ರೀತಿಯುಂಟಾಗುತ್ತದೆ. ಗ್ರಹಗಳು ಅಚೇತನವಾದ್ದರಿಂದ ಅವಕ್ಕೆ ದೇವತೆಗಳಂತೆ ಹೇಗೆ ಪ್ರೀತಿಯುಂಟಾದೀತು? ಅಂದರೆ ಅಲ್ಲಿಯೂ ಅವುಗಳ ಅಭಿಮಾನಿದೇವತೆಗಳು ಇರುವುದರಿಂದ ಅವುಗಳ ಮೂಲಕ ಗ್ರಹಗಳಿಗೂ ಪ್ರೀತಿಯುಂಟಾಗುವುದರಿಂದ ಆಕ್ಷೇಪಕ್ಕವಕಾಶವಿಲ್ಲ. ವಾಸ್ತವವಾಗಿ ಸರ್ವಾಂತರ್ಯಾಮಿಯಾದ ಪರಮೇಶ್ವರನೇ ಯಜ್ಞರೂಪ

ವಾದ ಎಲ್ಲಾ ಕರ್ಮಗಳಿಗೂ ಫಲವನ್ನು ಕೊಡುವುದರಿಂದ ಎಲ್ಲದರಿಂದಲೂ ಅವನಿಗೇ ಪ್ರೀತಿಯುಂಟಾಗುವುದೆಂದು ಭಾವಿಸಲಾಗಿದೆ. ಆದ್ದರಿಂದಲೇ ಗೀತೆಯಲ್ಲಿ "ಯಾವನು ಯಾವ ರೂಪವನ್ನು ಭಕ್ತಿಯಿಂದ ಅರ್ಚಿಸುವನೋ ಅವನಿಗೆ ಅದರಲ್ಲಿಯೇ ದೃಢವಿಶ್ವಾಸವನ್ನು ಹುಟ್ಟಿಸಿ ಆ ಅರ್ಚನೆಗೆ ತಕ್ಕ ಫಲವನ್ನು ನಾನೇ ಕೊಡುತ್ತೇನೆ" ಎಂದು ಪರಮಾತ್ಮನೇ ಕೃಷ್ಣನಿಂದ ಹೇಳಿಸಿದ್ದಾನೆ, ಹೀಗೆ ಚೇತನರಾಗಿ ದಿವ್ಯದೇಹದಲ್ಲಿರುವುದರಿಂದ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂಬುದು ಸಿದ್ಧವಾಗುತ್ತದೆ.

"ಅಹಹಾರೇ ತ್ವಾ ಶೂದ್ರ" ಇತಿ ಶೂದ್ರಶಬ್ದಶ್ರವಣಾತ್ಪೂರ್ವತ್ರ ಬ್ರಹ್ಮವಿದ್ಯಾಯಾಸ್ಸಾಮಾನ್ಯೇನ ಮನುಷ್ಯಾಧಿಕಾರವ್ಯಪದೇಶಾತ್ತೇಷಾಮಂಗುಷ್ಠಮಾತ್ರಹೃದಯಪ್ರದೇಶವಿಶೇಷದರ್ಶನಾಚ್ಚ ಶೂದ್ರಾಣಾಮಪಿ ತದಧಿಕಾರೋಽಸ್ತೀತ್ಯಾಶಂಕ್ಯಾಹ || ಅಪಶೂದ್ರಾಧಿಕರಣಂ ||೯||

ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ಸೂಚ್ಯತೇ ಹಿ || ೩೪ ||

ಛಾಂದೋಗ್ಯೇ ಚತುರ್ಥಾಧ್ಯಾಯೇ ಉಪಾಖ್ಯಾಯತೇಽಸ್ಯ ವಿಷಯಃ. "ಅಹಹಾರೇ ತ್ವಾ ಶೂದ್ರ ತವೈವ ಸಹ ಗೋಭಿರಸ್ತು" ಇತಿ "ಆಜಹಾರೇಮಾ ಶೂದ್ರಾನೇನೈವ ಮುಖೇನಾಲಾಪಯಿಷ್ಯಥಾಃ" ಇತಿ. ಇಹ ಶಿಷ್ಯಸ್ಯ ಗುರುಣಾ, "ಅಹಹಾರೇ ತ್ವಾ ಶೂದ್ರ" ಇತಿ ಶೂದ್ರಶಬ್ದೇನ ಸಂಬೋಧನಮುಪಪದ್ಯತೇ. ತಸ್ಮಾದತ್ರ ಶೂದ್ರಸ್ಯ ಬ್ರಹ್ಮವಿದ್ಯಾಯಾಮಧಿಕಾರೋಽಸ್ತಿ ನ ವೇತಿ ಸಂಚಿಂತ್ಯತೇ. ಶೂದ್ರಾಣಾಂ ಬ್ರಹ್ಮವಿದ್ಯಾಯಾಮಧಿಕಾರೋಽಸ್ತಿ, ಶ್ರುತಾವಪಿ ಶೂದ್ರಶಬ್ದಸ್ಯಾಮಂತ್ರಣದರ್ಶನಾತ್. "ವಸಂತೇ ಬ್ರಾಹ್ಮಣೋಽಗ್ನೀನಾದಧೀತ, ಗ್ರೀಷ್ಮೇ ರಾಜನ್ಯಃ, ಶರದಿ ವೈಶ್ಯಃ" ಇತಿ ತ್ರೈವರ್ಣಿಕಾನಾಮೇವಾತ್ರಾಗ್ನಿಸಂಬಂಧದರ್ಶನಾತ್ತೇಷಾಮೇವ ಬ್ರಹ್ಮವಿದ್ಯಾಧಿಕಾರ ಇತಿ ಚೇನ್ನ, ಅರ್ಥಿತ್ವಾದಿಕಸ್ಯ ಶೂದ್ರಾಣಾಮಪಿ ಸಂಭವಾತ್. ಮನುಷ್ಯಾಧಿಕಾರಮುಪಹಾಯ ದೇವಾನಾಮಧಿಕಾರವ್ಯಪದೇಶಾತ್, ತದ್ವತ್ತ್ರೈವರ್ಣಿಕಾಧಿಕಾರ ಇವ ಶೂದ್ರಸ್ಯಾಪ್ಯಧಿಕಾರ ಇತಿ ಪ್ರಾಪ್ತಂ. ಆಹವನೀಯಾಭಾವೇನಾಗ್ನಿಸಾಧ್ಯಕರ್ಮಾನಧಿಕಾರೇಽಪಿ ದೇವಾದಿವದ್ವಿದ್ಯಾಯಾಮಧಿಕಾರಸಂಭವಾತ್, ಉಪನಯನಾದ್ಯಭಾವೇಽಪಿ ದೇವಾದಿವದ್ಬ್ರಹ್ಮವಿದ್ಯಾಧಿಕಾರಃ. ನನು ಸ್ವಯಂಭಾತವೇದವೇದಾರ್ಥತ್ವಾತ್ತೇಷಾಮೇವಾಧಿಕಾರ ಇತಿ ಚೇನ್ನ, ಶೂದ್ರಾಣಾಮಪಿ ಪುರಾಣಶ್ರವಣಾದಿನಾ ಜ್ಞಾನೋಪಪತ್ತೇಃ. ನಿಷಾದಸ್ಥಪತಿನ್ಯಾಯೇನ ಮಹಾವಾಕ್ಯಗ್ರಹಣಾಧಿಕಾರಸಂಭವಾಚ್ಚ. ತಸ್ಮಾದತ್ರ ಶೂದ್ರಸ್ಯ ಮುಖ್ಯಾರ್ಥತಯಾ ಬ್ರಹವಿದ್ಯಾಧಿಕಾರಸ್ಸಂಭವತೀತಿ ಚೇದುಚ್ಯತೇ. ನ ಶೂದ್ರಸ್ಯ ಬ್ರಹ್ಮವಿದ್ಯಾಧಿಕಾರಃ ದೇವಾನಾಮುಪನಯನಾಭಾವೇಽಪಿ ಸುಕೃತವಿಶೇಷಪ್ರಾಪ್ತವೇದ

ವೇದಾರ್ಥತ್ವಾತ್. ಸ್ವಭಾವಸಿದ್ಧಾಬಾಧ್ಯಬ್ರಹ್ಮಸೂತ್ರತ್ವಾತ್ತೇಜಶ್ಶರೀರಿತ್ವಾದ್ಧ್ಯುಲೋಕಸಂಬಂಧಾಚ್ಚ ನಾಧಿಕಾರವಿರೋಧಃ. ವೇದಾಧಿಕಾರಹೇತುಭೂತೋಪನಯನಸ್ಯ ತ್ರೈವರ್ಣಿಕವಿಷಯತ್ವಾದೌಪನಿಷಚ್ಛಾಸ್ತ್ರಸ್ಯ ವೇದಾಂಗತ್ವಾತ್. "ಯಚ್ಚೇದಂ ಶೂದ್ರೋ ಯಜ್ಞೇಽನವಕ್ಲಪ್ತಃ" ಇತಿ ನ್ಯಾಯಾತ್. ಛಾಂದೋಗ್ಯೇ ಚತುರ್ಥಾಧ್ಯಾಯೇ ಸಂಸರ್ಗವಿದ್ಯಾಯಾಂ ಶೂದ್ರಶ್ರವಣನ್ಯಾಯಾಭಾವಾಚ್ಚ ನ ಲಿಂಗಂ ಸಾಧಕಂ. ಲಿಂಗಸ್ಯಾಧಿಕೃತವಿಷಯತ್ವವ್ಯಾಖ್ಯಾನಾರ್ಥಮಿದಂ ಸೂತ್ರಂ, ಶುಗಸ್ಯೇತ್ಯಾದಿ. ಅಸ್ಯ ಜಾನಶ್ರುತೇಃ ಕ್ಷತ್ರಿಯಸ್ಯ ತದನಾದರಶ್ರವಣಾತ್, ತಸ್ಯ ಹಂಸಸ್ಯ ಅನಾದರಶ್ರವಣಾತ್ ಯಾ ಶುಗುತ್ಪನ್ನಾ ಸಾ ಶೂದ್ರಶಬ್ದೇನ ಸೂಚ್ಯತೇ. ರೈಕ್ವೇನ ಸ್ವಸ್ಯ ಸರ್ವಜ್ಞತ್ವಜ್ಞಾಪನಾರ್ಥಂ ತದಾದ್ರವಣಾತ್ ತಯಾ ಶುಚಾ ರೈಕ್ವಂ ಪ್ರತಿ ಜಾನಶ್ರುತಿಃ ಶುಚಮಭಿದುದ್ರಾವೇತಿ ಶೂದ್ರೋ ಜಾನಶ್ರುತಿಃ. ಮುಖ್ಯಾರ್ಥಾಸಂಭವಾದ್ಯೋಗೋ ಗೃಹ್ಯತೇ. ಅತ್ರ ಜಾನಶ್ರುತಿಂ ಪೌತ್ರಾಯಣಂ ರಾಜಾನಂ ಪ್ರಸಾದಸ್ಥಂ ಕದಾಚಿದ್ಧಂಸಾನಾಂ ತದುಪರಿ ಮಾಲಾರೂಪೇಣ ಗಚ್ಛತಾಂ ಏಕೋ ಹಂಸಃ ಏಕಂಪ್ರತ್ಯುವಾಚ "ಅಯಂ ಜಾನಶ್ರುತಿರ್ಮಹಾಭಾಗ" ಇತಿ. ತಮಿತರಃ ಪ್ರತ್ಯುವಾಚ. "ಕೋಽಯಂ ವರಾಕಃ? ದ್ರವತೋಽಪ್ಯುಸ್ಪೃಷ್ಟೋ ರೈಕ್ವಃ" ಇತಿ ತಚ್ಛ್ರುತ್ವಾ ಜಾನಶ್ರುತೇಶ್ಶೋಕ ಉತ್ಪನ್ನಸ್ತೇನೈವ ಶೋಕೇನಾನೀತಂ ರಥಗೋಸುವರ್ಣಾದ್ಯುಪಾಯನಮವಲೋಕ್ಯ ರೈಕ್ವ ಆಹ "ಹೇ ಜಾನಶ್ರುತೇ ಶೂದ್ರ ನೀತಮುಪಾಯನಂ ಚ ತವೈವಾಸ್ತು ನೈತೇನಾಲ್ಪೋಪಾಯೇನ ಅಹಮುಪದೇಕ್ಷ್ಯಾಮಿ" ಇತ್ಯಾಖ್ಯಾಯಿಕಾರ್ಥಸ್ಸಂಕ್ಷೇಪತೋ ಜ್ಞೇಯಃ. ಅಪಿಚ ವೇದಾಧ್ಯಯನಾಭಾವೇನ ತತ್ಸಾಧನೋಪಲಬ್ಧತದ್ಜ್ಞಾನಸಿದ್ಧ್ಯಭಾವಾತ್ ಸ್ಮೃತಿಪುರಾಣೇತಿಹಾಸಾನಿ ಶ್ರುತ್ಯರ್ಥಮುಪಪಾದಯಂತಿ ತಸ್ಮಾತ್ತಚ್ಛ್ರವಣಾಧಿಕಾರೋಽಪಿ ನ ಸ್ವಾತಂತ್ರ್ಯೇಣ ಶೂದ್ರಾಣಾಂ ವಿಧೀಯತೇ. ತಚ್ಛ್ರವಣಜನ್ಯಜ್ಞಾನಂ ತು ಸರ್ವಪಾಪಾಪನಯನಫಲಂ. ವಿದುರಧರ್ಮವ್ಯಾಧಾದೀನಾಂ ದೇವಾಂಶಸಂಭೂತತ್ವಾತ್ಪುರಾಣಶ್ರವಣಜನ್ಯಜ್ಞಾನದ್ವಾರಾಮೋಕ್ಷಾಧಿಕಾರಿತ್ವಂ ನ ವಿರುಧ್ಯತೇ.

"ಶೂದ್ರನೇ ನೀನು ತಂದಿರುವ ಗುರುದಕ್ಷಿಣೆ ಎಲ್ಲವೂ ನಿನಗೇ ಇರಲಿ" ಎಂದು ಶ್ರುತಿಯಲ್ಲಿ ಶೂದ್ರಶಬ್ದವನ್ನು ಹೇಳಿರುವುದರಿಂದ ಮನುಷ್ಯರೆಲ್ಲರೂ ಸಾಮಾನ್ಯವಾಗಿ ಬ್ರಹ್ಮವಿದ್ಯೆಗೆ ಅಧಿಕಾರಿಗಳೆಂದು ಹೇಳಿದಂತೆ ಎಲ್ಲರಿಗೂ ಹೃದಯದಲ್ಲಿ ಅಂಗುಷ್ಠಪ್ರಮಾಣದಲ್ಲಿ ಪರಮೇಶ್ವರನು ನೆಲಸಿರುವುದರಿಂದ ಶೂದ್ರರಿಗೂ ಪರಮೇಶ್ವರನ ಉಪಾಸನೆಗೆ ಅಧಿಕಾರವಿದೆ ಎಂದು ಶಂಕಿಸಿ ಸಮಾಧಾನವನ್ನು ಹೇಳುತ್ತಾನೆ—

### ಅಪಶೂದ್ರಾಧಿಕರಣಂ ॥ ೯ ॥

**ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ಸೂಚ್ಯತೇ ಹಿ || ೩೪ ||**

ಛಾಂದೋಗ್ಯದ ನಾಲ್ಕನೇ ಅಧ್ಯಾಯದಲ್ಲಿ ಇದರ ವಿಷಯ ಬಂದಿದೆ. ಎಲೈ ಶೂದ್ರನೇ "ನೀನು ತಂದಿರುವ ಗೋವು ಮೊದಲಾದ ಈ ಐಶ್ವರ್ಯವೆಲ್ಲವೂ ನಿನಗೇ ಇರಲಿ" ಎಂದೂ "ಎಲೈ ಶೂದ್ರನೇ ಇವನ್ನು ತೆಗೆದುಕೊಂಡು ಬಾ, ಇದರ ಮೂಲಕವೇ ವ್ಯವಹರಿಸೋಣ" ಎಂದೂ ಹೇಳಿದೆ. ಇಲ್ಲಿ ಗುರುವು ಶಿಷ್ಯನಿಗೆ "ನೀನು ಶೂದ್ರ" ಎಂದು ಕರೆದಿರುವುದಾಗಿ ತಿಳಿದುಬಂದಿದೆ. ಆದ್ದರಿಂದ ಶೂದ್ರನಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೇ ಇಲ್ಲವೇ ಎಂಬುದನ್ನು ಆಲೋಚಿಸಬೇಕಾಗಿದೆ. ಶೂದ್ರನಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆ ಎಂದು ಪೂರ್ವಪಕ್ಷ ಬರುತ್ತದೆ. ಯಾಕೆಂದರೆ ಶ್ರುತಿಯಲ್ಲಿ ಶೂದ್ರನನ್ನು ಆ ಶಬ್ದದಿಂದಲೇ ಕರೆಯಲಾಗಿದೆ. ಆದರೆ "ಬ್ರಾಹ್ಮಣನು ವಸಂತಕಾಲದಲ್ಲೂ, ಕ್ಷತ್ರಿಯನು ಗ್ರೀಷ್ಮಕಾಲದಲ್ಲೂ ವೈಶ್ಯನು ಶರತ್ಕಾಲದಲ್ಲೂ ಅಗ್ನಿಯನ್ನು ಅರ್ಚಿಸಬೇಕು" ಎಂಬಲ್ಲಿ ಮೂರು ವರ್ಣದವರಿಗೆ ಮಾತ್ರವೇ ಅಗ್ನಿಸಂಬಂಧವನ್ನು ಹೇಳಲಾಗಿದೆ. ಆದ್ದರಿಂದ ಅವರಿಗೆ ಮಾತ್ರವೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದು ಹೇಳುವುದು ಸರಿಯಲ್ಲ. ಯಾಕೆಂದರೆ, ಮುಕ್ತಿಯ ಬಯಕೆ ಮೊದಲಾದ ಧರ್ಮಗಳು ಶೂದ್ರರಲ್ಲೂ ಸಮಾನವಾಗಿರುವುದು ಮನುಷ್ಯರಷ್ಟೇ ಅಲ್ಲದೆ ದೇವತೆಗಳಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಹೇಳಲಾಗಿದೆ. ಹಾಗೆಯೇ ಮನುಷ್ಯರಲ್ಲಿ ಮೂರು ವರ್ಣದವರಷ್ಟೇ ಅಲ್ಲದೆ ಶೂದ್ರರಿಗೂ ಅಧಿಕಾರವಿರುವುದರಲ್ಲಿ ತಪ್ಪೇನು? ಆದರೆ ಆಹವನೀಯಾಗ್ನಿಯ ಅರ್ಚನೆಗೆ ಅವಕಾಶವಿಲ್ಲದ್ದರಿಂದ ಅಗ್ನಿಸಾಧ್ಯವಾದ ಕರ್ಮಗಳಿಗೆ ಅಧಿಕಾರವಿಲ್ಲದಿದ್ದರೂ, ಮತ್ತು ಉಪನಯನಸಂಸ್ಕಾರವಿಲ್ಲದಿದ್ದರೂ ಅವರಿಗೆ ದೇವತೆಗಳಂತೆ ಬ್ರಹ್ಮವಿದ್ಯೆಗೆ ಅಧಿಕಾರ ಸಂಭವಿಸಬಹುದು. ಆದರೆ ದೇವತೆಗಳು ವೇದಾರ್ಥವನ್ನು ತಾವಾಗಿಯೇ ತಿಳಿದಿರುವುದರಿಂದ ಅವರಿಗೆ ಮಾತ್ರವೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತದೆ, ಶೂದ್ರರಿಗಿರುವುದಿಲ್ಲವೆಂದು ಹೇಳುವುದು ಯುಕ್ತವಲ್ಲ. ಯಾಕೆಂದರೆ ಶೂದ್ರರೂ ಸಹ ಪುರಾಣಶ್ರವಣದಿಂದ ಜ್ಞಾನವನ್ನು ಪಡೆಯುವರೆಂಬುದು ಯುಕ್ತವೇ ಆಗಿದೆ. ಬೇಡರಜಾತಿಯ ಮುಖಂಡನಿಗೆ ಯಜ್ಞದಲ್ಲಿ ಅಧಿಕಾರವಿರುವಂತೆ ಶೂದ್ರನಿಗೆ ಉಪನಿಷತ್ತಿನ ಮಹಾವಾಕ್ಯಗಳನ್ನು ತಿಳಿಯಲು ಅಧಿಕಾರವಿರುವುದರಿಂದಲೂ, ಅವನಿಗೂ ಮೋಕ್ಷದ ಬಯಕೆ ಇರುವುದರಿಂದಲೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದು ಆಕ್ಷೇಪಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ ಶೂದ್ರನಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ. ದೇವತೆಗಳಿಗೆ ಉಪನಯನವಿಲ್ಲದಿದ್ದರೂ ಹಿಂದಿನ ಪುಣ್ಯವಿಶೇಷದಿಂದ ಅವರಿಗೆ ವೇದವೇದಾಂತಗಳ ಪರಿಚಯ ದೊರಕುತ್ತದೆ- ಅವರು ತೇಜಶ್ಶರೀರದಿಂದ ದ್ಯುಲೋಕದೊಡನೆ ಸಂಬಂಧವನ್ನು ಪಡೆದಿರುವುದರಿಂದಲೂ, ಅವರಿಗೆ ಬ್ರಹ್ಮದ ಸಂಪರ್ಕ ಸಹಜವಾಗಿರುವುದರಿಂದಲೂ ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವ ಬಗ್ಗೆ ವಿರೋಧವಿಲ್ಲ. ಇದೂ ಅಲ್ಲದೆ, ವೇದಾಧ್ಯಯನಕ್ಕೆ ಅಧಿಕಾರವನ್ನು ದೊರಕಿಸುವ ಉಪನಯನವು ಮೂರು ವರ್ಣದವರಿಗೆ ಮಾತ್ರವೇ ಅನ್ವಯಿಸುತ್ತದೆ.

ಅದನ್ನು ತಿಳಿಸುವ ಉಪನಿಷತ್ತೂ ಸಹ ವೇದದ ಅಂಗವೇ ಆಗಿದೆ. “ಶೂದ್ರನು ಯಜ್ಞಕ್ಕಧಿಕಾರಿಯಲ್ಲ” ಎಂಬ ನ್ಯಾಯವು ಅವನು ಬ್ರಹ್ಮವಿದ್ಯೆಗೂ ಅಧಿಕಾರಿಯಲ್ಲ ವೆಂಬುದನ್ನು ತಿಳಿಸುತ್ತದೆ. ಆದರೆ ಛಾಂದೋಗ್ಯದ ಸಂವರ್ಗವಿದ್ಯೆಯಲ್ಲಿ ಶೂದ್ರಶಬ್ದ ವನ್ನು ಪ್ರಯೋಗಿಸಲಾಗಿದೆ. ಅದೇ ಈ ವಿಷಯಕ್ಕೆ ಹೇತುವೆನಿಸುವುದರಿಂದ ಅವರಿಗೂ ಅದರಲ್ಲಿ ಅಧಿಕಾರವಿದೆಯೆಂದು ಹೇಳುವುದಾದರೆ ಅಲ್ಲಿ ಶೂದ್ರಶಬ್ದದ ಪ್ರಯೋಗವು ಶೂದ್ರನಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಕೊಡಿಸಲಿಕ್ಕೆ ಸಾಧಕವಾಗಿಲ್ಲವೆಂಬುದನ್ನು ತಿಳಿಸಲಿಕ್ಕಾಗಿಯೇ ಈ ಸೂತ್ರ ಬಂದಿದೆ. ಹಂಸರೂಪವಾದ ಇಬ್ಬರು ಋಷಿಗಳು ಜಾನಶ್ರುತಿ ಎಂಬುವನ ಅರಮನೆಯಮೇಲೆ ಹಾರಿಹೋಗುತ್ತಿರುವಾಗ ಒಂದು ಹಂಸವು ಮತ್ತೊಂದಕ್ಕೆ ಜಾನಶ್ರುತಿಯ ಅನ್ನದಾನದ ಮಹಿಮೆಯ ಕಡೆಗೆ ಕಾಲು ನೀಡದಂತೆ ತಿಳಿಸಲು ಆ ಮತ್ತೊಂದು ಹಂಸವು “ಎಲಾ, ನೀಚನಾದ ಇವನನ್ನು ರೈಕ್ವನೆಂಬ ಬ್ರಹ್ಮಜ್ಞಾನಿಯಂತೆ ಉತ್ಕೃಷ್ಟನೆಂದೆಣಿಸಿ ಹೀಗೆ ಮಾತನಾಡುತ್ತಿರುವೆಯಾ?” ಎಂದು ನುಡಿಯಲು ಆ ಮಾತಿನಲ್ಲಿ ತನ್ನ ತಿರಸ್ಕಾರವನ್ನು ಕೇಳಿದ ಜಾನಶ್ರುತಿಗೆ ಶೋಕವುಂಟಾಯಿತು. ಆ ದುಃಖದಿಂದ ಅವನು ರಥ ಗೋವು ಸುವರ್ಣ ಮೊದಲಾದ ಕಾಣಿಕೆಗಳನ್ನು ತೆಗೆದುಕೊಂಡು ರೈಕ್ವನ ಬಳಿಗೆ ಹೋಗುವನು. ಆಗ ರೈಕ್ವನು“ಎಲೈ ಶೂದ್ರನೇ ನೀನು ತಂದ ಈ ಕಾಣಿಕೆ ಎಲ್ಲವೂ ನಿನಗೇ ಇರಲಿ. ಇದನ್ನು ತೆಗೆದುಕೊಂಡು ನಾನು ಉಪದೇಶಿಸುವುದಿಲ್ಲ” ಎಂದು ಹೇಳುವನು. ಇಲ್ಲಿ ಕ್ಷತ್ರಿಯನಾದ ಜಾನಶ್ರುತಿಗೆ ಹಂಸದ ತಿರಸ್ಕಾರದ ಮಾತನ್ನು ಕೇಳಿದ್ದರಿಂದ ಹುಟ್ಟಿದ ಶೋಕವೇ ಶೂದ್ರಶಬ್ದದಿಂದ ಸೂಚಿತವಾಗಿದೆ. ರೈಕ್ವನು ತನ್ನ ಸರ್ವಜ್ಞತೆಯನ್ನು ತಿಳಿಸಲಿಕ್ಕಾಗಿ ಜಾನಶ್ರುತಿಯ ಬಳಿಗೆ ಬಂದದ್ದರಿಂದಲೂ, ಜಾನಶ್ರುತಿಯೂ ಸಹ ತನ್ನ ದುಃಖದಿಂದ ರೈಕ್ವನ ಬಳಿಗೆ ಹೋಗಿದ್ದರಿಂದಲೂ ಜಾನಶ್ರುತಿಯನ್ನು ಶೂದ್ರನೆಂದು ಕರೆಯಲಾಗಿದೆ. ಹೀಗೆ ಇಲ್ಲಿ ಶೂದ್ರಶಬ್ದದ ಮುಖ್ಯಾರ್ಥಕ್ಕೆ ಬಾಧೆ ಇರುವುದರಿಂದ ಯೌಗಿಕಾರ್ಥವನ್ನು ಹೇಳಲಾಗಿದೆ. ಇದೂ ಅಲ್ಲದೆ, ಶೂದ್ರರಿಗೆ ವೇದಾಧ್ಯಯನವೇ ಇಲ್ಲದ್ದರಿಂದ, ಸ್ಮೃತಿಪುರಾಣೇತಿಹಾಸಗಳೂ ಆ ಶ್ರುತ್ಯರ್ಥವನ್ನೇ ತಿಳಿಸುತ್ತವೆಯಾದ್ದರಿಂದ ಅವುಗಳನ್ನು ಕೇಳಲಿಕ್ಕೂ ಅವರಿಗೆ ಸ್ವತಂತ್ರವಾದ ಅಧಿಕಾರವಿಲ್ಲ. ಅದನ್ನು ಕೇಳುವುದರಿಂದ ಬರುವ ಜ್ಞಾನವೂ ಪಾಪಪರಿಹಾರಕ್ಕೆ ಮಾತ್ರವೇ ಅನ್ವಯಿಸುತ್ತದೆ. ಆದರೆ ವಿದುರ ಧರ್ಮವ್ಯಾಧ ಮೊದಲಾದ ಶೂದ್ರರು ದೇವಾಂಶಸಂಭೂತರಾದ್ದರಿಂದ ಪುರಾಣಶ್ರವಣದಿಂದ ಜ್ಞಾನವನ್ನು ಪಡೆದು ಮೋಕ್ಷಕ್ಕೆ ಅಧಿಕಾರಿಗಳಾಗಿದ್ದರೆಂಬಲ್ಲಿ ವಿರೋಧವಿಲ್ಲ.

ನನು ಮುಖ್ಯ ಏವ ಶೂದ್ರೋ ಜಾನಶ್ರುತಿರಸ್ತು. ಕಿಂ ಜಘನ್ಯೇನ ಯೋಗೇನೇತ್ಯಾಹ. ಕ್ಷತ್ರಿಯತ್ವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್.

ನ ಚಾತ್ರಾಪಿ ಜಾನಶ್ರುತೇಃ ಶೂದ್ರಜಾತಿವಿಷಯತ್ವಂ. ಪ್ರಕೃತ ಪ್ರಕರಣಾದುತ್ತರತ್ರ ಸಂವರ್ಗವಿದ್ಯಾಯಾಮೇವ ಚೈತ್ರರಥೇನ ಪ್ರಸಿದ್ಧ ಕ್ಷತ್ರಿಯೇಣ ಅಭಿಪ್ರತಾರಿಣಾ ಸಹ ಸಮಭಿವ್ಯವಹಾರಾತ್ಮಕಲಿಂಗಾತ್ಸ

ಮಾನಶ್ಚ ಸಮಭಿವ್ಯವಹಾರೋ ಭವತಿ. ಜಾನಶ್ರುತ್ಯುಪಾಸನೋಪಕ್ರಮೇ ಹಿ "ಪೌತ್ರಾಯಣಃ ಶ್ರದ್ಧಾದೇಯೋ ಬಹುದಾಯೀ ಬಹುಪಾಕ್ಯ ಆಸ. ಸ ಸರ್ವತ ಆವಸಥಾನ್ ಮಾಪಯಾಂಚಕ್ರೇ ಸರ್ವತ ಏವ ಮೇಽತ್ಸ್ಯಂತಿ" ಇತಿ ದಾನಶೀಲತ್ವಂ ನಾನಾವಿಧಪಕ್ವಾನ್ನಪ್ರದಾಯಿತ್ವಂ ಚೋಪದಿಶ್ಯ ತನ್ಮಧ್ಯೇ "ಸ ಸಂದಿಹಾನ ಏವ ಕ್ಷತ್ತಾರಮುವಾಚೇ" ಇತಿ ಕ್ಷತ್ತೃಪ್ರೇರಣಮುಪದಿಶ್ಯತೇ. ತದುಪಸಂಹಾರೇ "ಇಯಂ ಜಾಯಾ ಅಯಂ ಗ್ರಾಮೋ ಯಸ್ಮಿನ್ ಆಸ್ಸೇ" ಇತಿ. "ತೇ ಹೈತೇ, ರೈಕ್ವಪರ್ಣಾ ನಾಮ ಮಹಾವೃಷೇಷು ಯತ್ರಾಸ್ಮಾ ಉವಾಸ" ಇತಿ ಬಹುಗ್ರಾಮದಾತೃತ್ವಮುಪದಿಶ್ಯತೇ. ತಸ್ಮಾದೇತದ್ಧರ್ಮೈರ್ಜಾನಶ್ರುತೇಃ ಕ್ಷತ್ರಿಯತ್ವಮೇವಾವಬೋಧ್ಯತೇ. ಅಥ ಶೌನಕಂ ಚ ಕಾಪೇಯಮಭಿಪ್ರತಾರಿಣಂ ಚ ಕಾಕ್ಷಸೇನಿಂ ಸೂದೇನ ಪರಿವಿಷ್ಯಮಾಣೌ ಬ್ರಹ್ಮಚಾರಿಭಿರ್ಭಿಕ್ಷೇ ಇತಿ ಕಾಪೇಯಾಖ್ಯಯಾಜಕಯೋಗಾದಭಿಪ್ರೇತರಿ ಚೈತ್ರರಥಃ ಕ್ಷತ್ರಿಯ ಇತ್ಯುಪದಿಶ್ಯತೇ. ಚೈತ್ರರಥಪುರೋಹಿತತ್ವಂ ಚ ಕಾಪೇಯಾನಾಂ ಶ್ರೌತಪ್ರಸಿದ್ಧಂ. "ಏತೇನ ವೈ ಚಿತ್ರರಥಂ ಕಾಪೇಯಾ ಅಯಾಜಯನ್" ಇತಿ. ಏತೇನ ದ್ವಿರಾತ್ರೇಣ ಸಮಾನಾನ್ವಯಾನಾಂ ಹಿ ಪ್ರಾಯೇಣ ಸಮಾನಾನ್ವಯಾ ಏವ ಯಾಜಕಾ ಭವಂತಿ. ನನು ಚಿತ್ರರಥಪುರೋಹಿತಃ ಕಾಪೇಯಯೋಗಾದಭಿಪ್ರತಾರಿಣಶ್ಚೈತ್ರರಥತ್ವಂ ಭವತಿ, ತಸ್ಮಾನ್ನ ಕ್ಷತ್ರಿಯತ್ವಮಿತಿ ಚೇನ್ನ, "ಚೈತ್ರರಥಿರ್ನಾಮೈಕಃ ಕ್ಷತ್ರಿಯಪತಿರಜಾಯತ" ಇತಿ ವಾಕ್ಯಶೇಷೇ ಚಿತ್ರರಥವಂಶಜತ್ವೇನ ಕ್ಷತ್ರಿಯಪತಿತ್ವೇನ ಚ ಕ್ಷತ್ರಿಯತ್ವವ್ಯಪದೇಶಾತ್ತದ್ವದುತ್ತರತ್ರ ಬ್ರಾಹ್ಮಣೇನ ಕಾಪೇಯೇನ ಯುಕ್ತಾಭಿಪ್ರೇತರಿ ಕ್ಷತ್ರಿಯ ಇತ್ಯುಪದಿಶ್ಯತೇ. ತದ್ವದೇಕೇನ ಬ್ರಾಹ್ಮಣೇನ ಯುಕ್ತೋ ಜಾನಶ್ರುತಿರಪಿ ಕ್ಷತ್ರಿಯ ಇತ್ಯವಗಮ್ಯತೇ. ತಸ್ಮಾತ್ ಕ್ಷತ್ರಿಯಸ್ಯೈವ ಶೂದ್ರೇತಿ ಸಂಬೋಧನಮುಪಪದ್ಯತೇ.

ಜಾನಶ್ರುತಿಯು ಜಾತಿಯಿಂದಲೇ ಶೂದ್ರನೆಂದು ಏಕೆ ಹೇಳಬಾರದು? ದುರ್ಬಲವಾದ ಯೌಗಿಕಾರ್ಥವನ್ನು ಏಕೆ ಆಶ್ರಯಿಸಬೇಕು? ಎಂಬ ಆಕ್ಷೇಪವನ್ನು ನಿರಾಕರಿಸುತ್ತಾನೆ. **ಕ್ಷತ್ರಿಯತ್ವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್ ||**

ಜಾನಶ್ರುತಿಯು ಶೂದ್ರಜಾತಿಯವನೆಂದು ಹೇಳುವುದು ಯುಕ್ತವಲ್ಲ. ಆ ಪ್ರಕರಣದಿಂದಲೂ, ಅನಂತರ ಬರುವ ಸಂಸರ್ಗ ವಿದ್ಯೆಯಲ್ಲಿ ಚೈತ್ರರಥನೆಂದು ಪ್ರಸಿದ್ಧನಾದ ಕ್ಷತ್ರಿಯನೊಡನೆ ಅವನು ವ್ಯವಹರಿಸುವುದರಿಂದಲೂ ಈ ಅರ್ಥ ತಿಳಿಯಬರುವುದು. ಸಮಾನಸ್ಕಂಧರಿಗೇ ಪರಸ್ಪರ ವ್ಯವಹಾರ ಹೊಂದುತ್ತದೆ. ಜಾನಶ್ರುತಿಯ ಉಪಾಸನಾರಂಭದಲ್ಲಿ "ಅವನು ಪೌತ್ರಾಯಣವಂಶದವನೂ ಶ್ರದ್ಧೆಯಿಂದ ಹೆಚ್ಚಾಗಿ ದಾನಮಾಡುವವನೂ, ಅನ್ನವನ್ನು ಕೊಡುವವನೂ ಆಗಿದ್ದನು. ಅವನು ಎಲ್ಲಾ

ಕಡೆಯಲ್ಲೂ ವಸತಿಗೃಹಗಳನ್ನು ಕಟ್ಟಿಸಿದ್ದನು" ಎಂದು ಅವನ ದಾನಧರ್ಮಾದಿಗಳನ್ನು ಪ್ರಶಂಸಿಸಿರುವುದರಿಂದಲೂ, ಮಧ್ಯದಲ್ಲಿ "ಅವನು ಸಂಶಯಗೊಂಡವನಾಗಿ ಸೇವಕರನ್ನು ಆಜ್ಞಾಪಿಸಿದನು" ಎಂದು ಸೇವಕರಿಗೆ ಪ್ರೇರಣೆಮಾಡಿರುವುದರಿಂದಲೂ, ಕೊನೆಯಲ್ಲಿ "ಇವಳು ಪತ್ನಿ. ಇದು ನಾನು ವಾಸಮಾಡುತ್ತಿರುವ ಗ್ರಾಮ. ಮಹಾವೃಕ್ಷವೆಂಬ ದೇಶದಲ್ಲಿರುವ ಈ ಗ್ರಾಮಕ್ಕೆ ರೈಕ್ವಪರ್ಣವೆಂಬ ಹೆಸರಿದೆ. ಇದೆಲ್ಲವನ್ನು ನಿನಗೆ ಕೊಡುವೆನು" ಎಂದು ಗ್ರಾಮದಾನವನ್ನು ಹೇಳಿರುವುದರಿಂದಲೂ ಅವನು ಒಬ್ಬ ಕ್ಷತ್ರಿಯನೆಂದು ಗೊತ್ತಾಗುವುದು". "ಕಾಪೇಯಗೋತ್ರದ ಶೌನಕನನ್ನು, ಕಾಕ್ಷಸೇನ ಗೋತ್ರದ ಅಭಿಪ್ರತಾರಿಯನ್ನು ಭೋಜನಸಮಯದಲ್ಲಿ ಒಬ್ಬ ಬ್ರಹ್ಮಚಾರಿ ಭಿಕ್ಷಾಯಾಚನೆ ಮಾಡಿದನು" ಎಂಬ ಮುಂದಿನ ವಾಕ್ಯದಲ್ಲಿ ಯಜ್ಞಮಾಡಿಸುವ ಶೌನಕನೊಂದಿಗೆ ಅಭಿಪ್ರತಾರಿ ಎಂಬ ಚಿತ್ರರಥನನ್ನು ಹೇಳಿರುವುದರಿಂದ ಅವನು ಕ್ಷತ್ರಿಯನೆಂದು ಗೊತ್ತಾಗುತ್ತದೆ. ಕಾಪೇಯವಂಶದವರು ಈ ಚಿತ್ರರಥನ ಕುಲಪುರೋಹಿತರೆಂಬ ವಿಷಯ "ಕಾಪೇಯರು ಚಿತ್ರರಥನನ್ನು ಯಜ್ಞಮಾಡಿಸಿದರು" ಎಂಬ ಶ್ರುತಿವಾಕ್ಯದಿಂದ ಪ್ರಸಿದ್ಧವಾಗಿದೆ. ಸಮಾನವಂಶದಲ್ಲಿ ಹುಟ್ಟಿದವರಿಗೇ ಸಮಾನವಂಶದ ಪುರೋಹಿತರು ಯಾಜಕರಾಗುವುದು ಪ್ರಸಿದ್ಧವಾಗಿದೆ. ಚಿತ್ರರಥನ ಪುರೋಹಿತನಾದ ಕಾಪೇಯನ ಸಂಬಂಧದಿಂದ ಅಭಿಪ್ರತಾರಿಯು ಚಿತ್ರರಥನ ವಂಶದವನೆಂದು ಗೊತ್ತಾಗುವುದೇ ಹೊರತು ಅವನು ಕ್ಷತ್ರಿಯನೆಂಬುದು ಹೇಗೆ ಗೊತ್ತಾಗುವುದು? ಎಂದು ಕೇಳಿದರೆ "ಚೈತ್ರರಥನೆಂಬ ಕ್ಷತ್ರಿಯನು ಹುಟ್ಟಿದನು" ಎಂಬ ವಾಕ್ಯದಲ್ಲಿ ಚಿತ್ರರಥನ ವಂಶದವರನ್ನು ಕ್ಷತ್ರಿಯರೆಂದು ಕರೆದಿರುವುದರಿಂದಲೂ, ಬ್ರಾಹ್ಮಣನಾದ ಕಾಪೇಯನೊಂದಿಗೆ ಅಭಿಪ್ರತಾರಿಯನ್ನು ಹೇಳಿರುವುದರಿಂದಲೂ ಅವನು ಕ್ಷತ್ರಿಯನೆಂಬುದು ಸ್ಪಷ್ಟವಾಗುತ್ತದೆ. ಜಾನಶ್ರುತಿಯನ್ನು ಈ ಅಭಿಪ್ರತಾರಿಯ ಜೊತೆಯಲ್ಲಿ ಹೇಳಿರುವುದರಿಂದ ಅವನು ಕ್ಷತ್ರಿಯನೆಂಬುದು ತಿಳಿದುಬರುತ್ತದೆ. ಆದ್ದರಿಂದ ಶ್ರುತಿಯಲ್ಲಿ ಕ್ಷತ್ರಿಯನನ್ನೇ ಶೋಕಸಂಬಂಧದಿಂದ ಶೂದ್ರನೆಂದು ಕರೆಯಲಾಗಿದೆ.

**ನಿಷಾದಸ್ಥಪತಿನ್ಯಾಯೇನ ಶೂದ್ರಸ್ಯ ಚೋಪನಿಷದ್ಬ್ರಹ್ಮವಾಕ್ಯಶ್ರವಣಾಧಿಕಾರೋಽಸ್ತೀತ್ಯಾಶಂಕ್ಯ ನಿರಾಕರೋತಿ—**

**ಸಂಸ್ಕಾರಪರಾಮರ್ಶಾತ್ತದಭಾವಾಭಿಲಾಪಾಚ್ಚ ॥ ೩೬ ॥**

**ಅತ್ರಾಪಿ ನ ಶೂದ್ರಾಣಾಂ ಬ್ರಹ್ಮವಿದ್ಯಾಧಿಕಾರಃ, ಕುತಃ ಬ್ರಹ್ಮವಿದ್ಯೋಪದೇಶಪ್ರಕರಣೇ ಉಪನಯನಾದಿಸಂಸ್ಕಾರಪರಾಮರ್ಶಾತ್ "ತಂ ಹೋಪನಿನ್ಯೇ ಅಧೀಹಿ ಭಗವ" ಇತಿ ಹೋಪಸಸಾದ ಬ್ರಹ್ಮಪರಾ ಬ್ರಹ್ಮನಿಷ್ಠಾ ಬ್ರಹ್ಮಾನ್ವೇಷಮಾಣಾಭಿರೇಷ ಹ ವೈ ತತ್ಸರ್ವಂ ವಕ್ಷ್ಯತಿ" ಇತಿ "ತೇ ಹ ಸಮಿತ್ಪಾಣಯೋ ಭಗವಂತಂ ಪಿಪ್ಪಲಾದಮುಪಪನ್ನಾ" ಇತ್ಯಾದಿನಾ ಉಪನಯನಸ್ಯ ಬ್ರಹ್ಮವಿದ್ಯಾಂಗತ್ವೋಪದೇಶಾತ್. ಅತಶ್ಚ ನ ಶೂದ್ರಸ್ಯಾಧಿಕಾರಃ. ನನು "ಶ್ರೌತಾನ್ ಹ ತ್ವಾನುಪನೀಯೈವ" ಇತ್ಯಾ**

ದಾವನುಪನೀತಾನಾಂ ಅದೀಕ್ಷಿತಾನಾಮಪಿ ವೈಶ್ವಾನರವಿದ್ಯಾಯಾಮಧಿಕಾರಿತ್ವವ್ಯಪದೇಶಾದನಿಯತಮುಪನಯನಮಿತಿ ಚೇನ್ನ. ನಿಷೇಧಸ್ಯ ಪ್ರಾಪ್ತಿಪೂರ್ವಕತ್ವಾತ್ ಪ್ರಾಪ್ತೋಪನಯನಾನಾಂ ಶಿವದೀಕ್ಷಿತಾನಾಂ ಪ್ರಾಚೀನಶಾಲಾದೀನಾಂ ದ್ವಿಜಾನಾಮೇವಾಧಿಕಾರಾತ್, ನಿಷೇಧಸ್ತು ಸ್ವವಿದ್ಯೋಪದೇಷ್ಟುರಶ್ವಪತೇ ರಾಜ್ಞೋ ನ್ಯೂನವರ್ಣತ್ವಾದ್ದ್ರಷ್ಟವ್ಯಃ. ತಾನ್ಪ್ರಾಚೀನಶಾಲಾದೀನೃಷೀನನುಪನೀಯೈವ ಅಶ್ವಪತಿರಾಜೋವಾಚೇತಿ ಶ್ರುತ್ಯರ್ಥಃ. ನನು ತರ್ಹಿ ಶೂದ್ರಸ್ಯಾಪ್ಯುಪನಯನಂ ಕಲ್ಪ್ಯತಾಮಿತ್ಯತ ಆಹ ತದಭಾವಾಭಿಲಾಪಾಚ್ಚೇತಿ. "ನ ಶೂದ್ರೇ ಪಾತಕಂ ಕಿಂಚಿನ್ನ ಚ ಸಂಸ್ಕಾರಮರ್ಹತಿ । ಶೂದ್ರಶ್ಚತುರ್ಥೋ ವರ್ಣಸ್ಯಾದೇಕಜಾತಿರಿತಿ ಸ್ಮೃತಿಃ ॥" ಇತ್ಯಾದಿನೋಪನಯನಾದಿಸಂಸ್ಕಾರಾಭಾವಾಭಿಲಾಪಾದಿತ್ಯರ್ಥಃ. ಪಾತಕಂ ಭಕ್ಷ್ಯಾಭಕ್ಷ್ಯವಿಭಾಗಾಭಾವಕೃತಂ. ಏಕಜಾತಿರುಪನಯನರಹಿತ ಇತಿ ಭಾವಃ. "ನಿಷಾಧಸ್ಥಪತಿಂ ಯಾಜಯೇತ್" ಇತಿ ವಿಧಿರಸ್ತೀತಿ ಚೇನ್ನ ಉಪನಯನಸಂಸ್ಕಾರವಿಶಿಷ್ಟತ್ರೈವರ್ಣಿಕಾನಾಮೇವ ಶ್ರುತಿಸ್ಮೃತಿಷು ಮಹಾವಾಕ್ಯಶ್ರವಣೋಪದೇಶಾನ್ನ ಶೂದ್ರಸ್ಯ ಬ್ರಹ್ಮವಿದ್ಯಾಧಿಕಾರಿತ್ವಂ ಸರ್ವದಾ ಸಂಭವತೀತಿ ಸಿದ್ಧಂ.

ನಿಷಾದಸ್ಥಪತಿನ್ಯಾಯದಿಂದ ಶೂದ್ರನಿಗೂ ಉಪನಿಷದ್ವಾಕ್ಯವನ್ನು ಕೇಳಲು ಅಧಿಕಾರವಿದೆ ಎಂಬ ಆಕ್ಷೇಪವನ್ನು ನಿರಾಕರಿಸುತ್ತಾನೆ—

**ಸಂಸ್ಕಾರಪರಾಮರ್ಶಾತ್ ತದಭಾವಾಭಿಲಾಪಾಚ್ಚ ॥ ೩೬ ॥**

ಶೂದ್ರನಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ. ಬ್ರಹ್ಮವಿದ್ಯೆಯನ್ನು ಉಪದೇಶಿಸುವ ಪ್ರಕರಣದಲ್ಲಿ ಉಪನಯನಾದಿ ಸಂಸ್ಕಾರವನ್ನು ಹೇಳಲಾಗಿದೆ. "ಪೂಜ್ಯನೇ ಅಧ್ಯಯನ ಮಾಡಿಸಿರಿ" ಎಂದು ಅವನ ಬಳಿ ಸೇರಿದರು" "ಬ್ರಹ್ಮಪರನಾಗಿ ಬ್ರಹ್ಮನಿಷ್ಠನಾಗಿ ಪರಬ್ರಹ್ಮವನ್ನು ಹುಡುಕುವ ಇವನು ನಮಗೆ ಎಲ್ಲವನ್ನೂ ಹೇಳುವನು" ಎಂದು ಕೈಯಲ್ಲಿ ದರ್ಭೆಯನ್ನು ಹಿಡಿದು ಅವರು ಪೂಜ್ಯಮಹರ್ಷಿಯ ಪಿಪ್ಪಲಾದ ಬಳಿಗೆ ಹೋದರು" ಇವುಗಳಿಂದ ಉಪನಯನವು ಬ್ರಹ್ಮವಿದ್ಯೆಗೆ ಅಂಗವೆಂದು ಗೊತ್ತಾಗುತ್ತದೆ. ಆದ್ದರಿಂದ ಶೂದ್ರನಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ. "ಅವನು ಉಪನಯನವಿಲ್ಲದೆಯೇ ಅವರಿಗೆ ಉಪದೇಶಿಸಿದನು" ಎಂದು ಉಪನಯನವಿಲ್ಲದವರಿಗೂ ವೈಶ್ವಾನರವಿದ್ಯೆಯಲ್ಲಿ ಅಧಿಕಾರವನ್ನು ಹೇಳಿರುವುದರಿಂದ ಉಪನಯನವು ಬ್ರಹ್ಮವಿದ್ಯೆಗೆ ಅಂಗವೆಂಬ ನಿಯಮವಿಲ್ಲವೆಂದು ಹೇಳುವುದು ಸರಿಯಲ್ಲ. ನಿಷೇಧ ಮಾಡಲಿಕ್ಕೆ ಯಾವುದಾದರೊಂದು ವಿಧಿಯ ಪ್ರಸಕ್ತಿ ಇರಬೇಕಾದ್ದರಿಂದ ಪ್ರಾಚೀನಶಾಲರೆಂಬ ಬ್ರಾಹ್ಮಣರಿಗೆ ಮಾತ್ರವೇ ವೈಶ್ವಾನರವಿದ್ಯೆಯಲ್ಲಿ ಅಧಿಕಾರವನ್ನು ಹೇಳಲಾಗಿದೆ. ಅವರಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಿದ ಕ್ಷತ್ರಿಯನಾದ ಅಶ್ವಪತಿಯು ಕೆಳಗಿನ ವರ್ಣದವನಾದ್ದರಿಂದ ಅವನು ಅವರಿಗೆ ಉಪನಯನಮಾಡಿಸಲಿಲ್ಲ. ಹೀಗೆ

ಪ್ರಾಚೀನಶಾಲರಿಗೆ ಅಶ್ವಪತಿರಾಜನು ಉಪನಯನವಿಲ್ಲದೆ ಬ್ರಹ್ಮವಿದ್ಯೆಯನ್ನು ಹೇಳಿದ ನೆಂದು ತಿಳಿದುಬರುತ್ತದೆ. ಹಾಗಾದರೆ ಶೂದ್ರನಿಗೂ ಉಪನಯವನ್ನು ಏಕೆ ವಿಧಿಸ ಬಾರದು? ಎಂದು ಕೇಳಿದರೆ ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ' ಶೂದ್ರನು ಸಂಸ್ಕಾರಹೀನನಾದ್ದರಿಂದ ಅವನಿಗೆ ಯಾವ ಪಾಪವೂ ಇಲ್ಲ" ವೆಂದೂ, " ಶೂದ್ರನು ನಾಲ್ಕನೆ ವರ್ಣದವನು ಮತ್ತು ಒಂದೇ ಜಾತಿಯವನು" ಎಂದೂ ಶೂದ್ರ ನಿಗೆ ಉಪನಯನಾದಿಸಂಸ್ಕಾರವನ್ನು ನಿಷೇಧಿಸಲಾಗಿದೆ. ಇಲ್ಲಿ ಪಾತಕವೆಂಬುದು ಭಕ್ಷ್ಯ ಅಭಕ್ಷ್ಯವೆಂಬ ವಿಭಾಗವಿಲ್ಲದ್ದರಿಂದ ಬರುವ ದೋಷವನ್ನು ತಿಳಿಸುತ್ತದೆ. ಏಕಜಾತಿ ಎಂದರೆ ಉಪನಯನದಿಂದ ದ್ವಿಜನಾಗದಿರುವುದು ಎಂದರ್ಥ. ಬೇಡರ ಜಾತಿಯವನಿಗೆ ಯಜ್ಞದಲ್ಲಿ ಅಧಿಕಾರವನ್ನು ವಿಧಿಸಿದಂತೆ ಇತರ ಶೂದ್ರರಿಗೂ ಆಗಲಿ ಎಂದು ಹೇಳಿದರೆ, ಯಜ್ಞದಲ್ಲಿ ಭಾಗವಹಿಸುವ ಪ್ರಕರಣವೇ ಬೇರೆ, ಉಪನಿಷತ್ತಿನ ಉಪದೇಶವನ್ನು ಕೇಳುವ ಪ್ರಕರಣವೇ ಬೇರೆ. ಉಪನಯನಸಂಸ್ಕಾರ ವನ್ನು ಪಡೆದ ತ್ರೈವರ್ಣಿಕರಿಗೆ ಮಾತ್ರವೇ ವೇದಾಂತಶ್ರವಣದಲ್ಲಿ ಅಧಿಕಾರವನ್ನು ಶ್ರುತಿಸ್ಮೃತಿಗಳು ಹೇಳಿರುವುದರಿಂದ ಶೂದ್ರನಿಗೆ ಬ್ರಹ್ಮವಿದ್ಯೆಯಲ್ಲಿ ಎಂದಿಗೂ ಅಧಿಕಾ ರವಿಲ್ಲವೆಂದು ಸಿದ್ಧವಾಯಿತು.

**ಅತ್ರ ಹೇತ್ವಂತರಮಾಹ—ತದಭಾವನಿರ್ಧಾರಣೇ ಚ ಪ್ರವೃತ್ತೇಃ ॥ ೩೭ ॥**

**ಇಹಾಪಿ ನ ಶೂದ್ರಸ್ಯಾಧಿಕಾರಃ, ಶೂದ್ರತ್ವಾಭಾವನಿರ್ಧಾರಣೇ ಸತ್ಯೇವೋಪದೇಶಪ್ರವೃತ್ತೇರ್ವ್ಯಪದೇಶಾತ್ " ನೈತದಬ್ರಾಹ್ಮಣೋ ವಿವಿಕ್ತುಮರ್ಹತಿ ಸಮಿಧಂ ಸೌಮ್ಯಾಹರೋಪ ತ್ವಾ ನೇಷ್ಯೇ ನ ಸತ್ಯಾದಗಾಃ " ಇತಿ ಲಿಂಗಾತ್ಸತ್ಯಕಾಮೋ ಜಾಬಾಲಃ ಪ್ರಮೀತಪಿತೃಕೋ ಗೌತಮಂ ಸಮೀಪಂ ಗತ್ವಾ ಬ್ರಹ್ಮಚರ್ಯಮುಪೇಯಾಮಿತ್ಯುವಾಚ. "ತಂ ಗೌತಮಃ ಪ್ರಪಚ್ಛ ಕಿಂಗೋತ್ರೋಽಸಿ " ಇತಿ. ಜಾಬಲ ಉವಾಚ " ಮಾತಾಪಿ ನ ಜಾನಾತ್ಯಹಮಪಿ ನ ಜಾನಾಮಿ " ಇತಿ. ತಚ್ಛ್ರುತ್ವಾ ಗೌತಮಃ " ನಾಬ್ರಾಹ್ಮಣಸ್ಯೈತಾದೃಶಸ್ಯ ಯಥಾರ್ಥವಾದಿತ್ವಂ ಸಂಭವತಿ " ಇತಿ ಶೂದ್ರತ್ವಾಭಾವಂ ನಿಶ್ಚಿತ್ಯ ಶುಶ್ರೂಷಾಮಂಗೀಕೃತವಾನ್ " ಇತ್ಯಾಖ್ಯಾಯಿಕಾದರ್ಶನಾಚ್ಚ ನ ಶೂದ್ರಸ್ಯಾಧಿಕಾರ ಇತಿ ಸಿದ್ಧಂ.**

ಈ ಬಗ್ಗೆ ಮತ್ತೆ ಹೇಳುತ್ತಾನೆ. **ತದಭಾವನಿರ್ಧಾರಣೇ ಚ ಪ್ರವೃತ್ತೇಃ** ಇವನು ಶೂದ್ರನಲ್ಲವೆಂದು ನಿರ್ಧರಿಸಿದಮೇಲೆಯೇ ಬ್ರಹ್ಮೋಪದೇಶವನ್ನು ಮಾಡಿರು ವುದಾಗಿ ಶ್ರುತಿಯಲ್ಲಿ ಹೇಳಲಾಗಿದೆ. "ಇದನ್ನು ಶೂದ್ರನಾದವನು ಹೇಳಲಾರನು. ಆದ್ದರಿಂದ ಸಮಿತ್ತನ್ನು ತೆಗೆದುಕೊಂಡು ಬಾ, ನಿನಗೆ ಉಪನಯನಮಾಡಿಸಿ ಉಪ ದೇಶಮಾಡುವೆನು" ಎಂದು ಶ್ರುತಿಯಲ್ಲಿಹೇಳಿದೆ. ಜಾಬಾಲವಂಶದ ಸತ್ಯಕಾಮನು ತಂದೆ ತೀರಿದಮೇಲೆ ಗೌತಮರ ಬಳಿಗೆ ಹೋಗಿ ಬ್ರಹ್ಮೋಪದೇಶಕ್ಕಾಗಿ ಯಾಚಿಸಿ ದಾಗ, ಅವನನ್ನು ಗೌತಮರು " ನೀನು ಯಾವ ಗೋತ್ರದವನೆಂದು ಕೇಳಿದರು.

ಅದಕ್ಕೆ ಜಾಬಾಲನು "ಅದು ನನಗೆ ಗೊತ್ತಿಲ್ಲ. ನನ್ನ ತಾಯಿಗೂ ಗೊತ್ತಿಲ್ಲ" ಎಂದು ಹೇಳಿದನು. ಅದನ್ನು ಕೇಳಿ ಗೌತಮರು "ಬ್ರಾಹ್ಮಣ ನಲ್ಲದವನು ಹೀಗೆ ಸತ್ಯವನ್ನು ಹೇಳಲಾರನು" ಎಂದು ಅವನನ್ನು ಶೂದ್ರನಲ್ಲವೆಂದು ತಿಳಿದಮೇಲೆ ಅವನಿಗೆ ಬ್ರಹ್ಮ ವಿದ್ಯೆಯನ್ನು ಉಪದೇಶಿಸಿದನೆಂದು ತಿಳಿದುಬರುತ್ತದೆ. ಆದ್ದರಿಂದ ಶೂದ್ರನಿಗೆ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರವಿಲ್ಲ.

ನನೂಪನಯನಾಸಂಭವೇಽಪಿ ಬ್ರಹ್ಮೋಚ್ಚಾರಣನಿರಾಸಃ ಕಾದಾಚಿತ್ಕಸ್ಸಾರ್ವತ್ರಿಕೋ ವಾ? ನ ಸರ್ವದಾ ಸಂಭವತಿ. ಡಿಂಭಕಸ್ಯೋಪನಯನಾಸಂಭವೇನ ಬ್ರಹ್ಮಅಭಿವ್ಯಾಹಾರಾಯೇತ್. ಅನ್ಯತ್ರ ಸ್ವಧಾನಿರ್ಣಯಾದಿತಿ ಸ್ವಧಾನಿರ್ಣಯನೇ ಬ್ರಹ್ಮೋಚ್ಚಾರಣವಿಧಾನಾತ್ತಸ್ಮಾತ್ಕಾದಾಚಿತ್ಕ ಇತ್ಯುಪದಿಶ್ಯತೇ. ತತೋಽನುಪನೀತಸ್ಯ ಶೂದ್ರಸ್ಯ ಪಾಕಯಜ್ಞಾದಿಷು ಬ್ರಹ್ಮೋಚ್ಚಾರಣನಿರಾಸಸ್ಸ್ಯಾತ್, ನ ಬ್ರಹ್ಮವಿದ್ಯಾಧಿಕಾರನಿಷೇಧ ಇತ್ಯಾಶಂಕ್ಯಾಹ—ಶ್ರವಣಾಧ್ಯಯನಪ್ರತಿಷೇಧಾತ್ಸ್ಮೃತೇಶ್ಚ ॥ ೩೮ ॥

ಇತಶ್ಚ ನ ಶೂದ್ರಸ್ಯಾಧಿಕಾರಃ. ಕಸ್ಮಾತ್ಸ್ಮೃತೇಶ್ಚ. ಸ್ಮೃತಿತೋ ವೇದಶ್ರವಣಸ್ಯ ತದಧ್ಯಯನಸ್ಯ ತತ್ಪ್ರಯೋಜನಯೋರರ್ಥಜ್ಞಾನಾನುಷ್ಠಾನರೂಪಯೋರರ್ಥಯೋಃ ಪ್ರತಿಷೇಧಾನ್ನಿಷೇಧಾದಿತ್ಯರ್ಥಃ "ಅಥ ವಾಸ್ಯ ವೇದಮುಪಶೃಣ್ವತಸ್ತ್ರಪುಜತುಭ್ಯಾಂ ಶ್ರೋತ್ರಪೂರಣಂ, ಉದಾಹರಣೇ ಜಿಹ್ವಾಚ್ಛೇದಃ, ಧಾರಣೇ ಶರೀರಚ್ಛೇದಃ" ಇತಿ ಶ್ರುತೌ ಶೂದ್ರಸ್ಯ ವೇದಾಧ್ಯಯನಾದೌ ಶಿಕ್ಷಾ ಶ್ರೂಯತೇ, "ಶೂದ್ರಸ್ಯ ವೇದ ಶ್ರವಣೇ ತಚ್ಛ್ರೋತ್ರೇ ತಪ್ತಮಾದರಾತ್ । ತ್ರಪುಂ ಪ್ರಪೂರಯೇದ್ರಾಜಾ ತದುಚ್ಚಾರಣಮಾತ್ರತಃ ॥ ತಜ್ಜಿಹ್ವಾಂ ಛೇದಯತ್ತೂರ್ಣಂ ತದ್ಧಾರಣವಶಾತ್ತದಾ । ಶರೀರಭೇದನಂ ಕುರ್ಯಾದ್ವಿಧಿರೇಷೋಽಯಮುಚ್ಯತೇ ॥" ಇತಿ ಸ್ಮೃತಿರಪಿ ದೃಶ್ಯತೇ. ತಸ್ಮಾದುಪನಯನಾದಿಸಂಸ್ಕಾರವಿಶಿಷ್ಟತ್ರೈವರ್ಣಿಕಾನಾಮೇವ ಪೇದಶ್ರವಣವೇದಾಧ್ಯಯನವೇದಾರ್ಥಾನುಷ್ಠಾನವಿಧಿಸಂಭವಾತ್ತೇಷಾಮೇವ ಬ್ರಹ್ಮವಿದ್ಯಾಧಿಕಾರ ಇತಿ ರಾದ್ಧಾಂತಃ. ನನು ವಿದುರಧರ್ಮವ್ಯಾಧಪ್ರಭೃತೀನಾಂ ಬ್ರಹ್ಮಜ್ಞಾನ ದರ್ಶನಾನ್ನ ಶೂದ್ರಾಣಾಂ ಬ್ರಹ್ಮವಿಧ್ಯಾಧಿಕಾರನಿಷೇಧ ಇತಿ ಚೇನ್ನ, ತೇಷಾಂ ದೇವತಾಂಶತ್ವಾತ್. "ದೇವಾಂಶಸಂಭವಾನಾಂ ತು ಜಾತಿಭೇದಂ ನ ಕಾರಯೇತ್ । ಸ್ವಭಾವಸಿದ್ಧವಿಜ್ಞಾನಾದ್ವಾಮದೇವಾದಿವತ್ಸದಾ । ತತ್ಪುತ್ರಬಾಂಧವಾದೀನಾಂ ಜಾತಿಭೇದಃ ಪ್ರಕಲ್ಪ್ಯತೇ ॥" ಇತ್ಯಾದೌ ಕಾರಣಪುರುಷತ್ವೇನ ನಿರ್ಗತಜಾತಿಭೇದವ್ಯಪದೇಶಾದ್ವಿದುರಾದೀನಾಮಪಿ ಶೂದ್ರತ್ವಮೌಪಚಾರಿಕಮೇವ. ತಥಾಪಿ ತೇಷಾಂ ಗುರುಸಮೀಪೇ ತ್ರೈವರ್ಣಿಕೈಸ್ಸಹ ಪುರಾಣೇತಿಹಾಸಶ್ರವಣಾಧಿಕಾರಮಾತ್ರ

**ಮೇವೇತಿ ವಿಧೀಯತೇ. ನ ಪ್ರತ್ಯಕ್ಷವೇದವೇದಾಂತವಿದ್ಯಾಧಿಕಾರಿತ್ವಂ.**

ಉಪನಯನವಿಲ್ಲದವರಿಗೆ ವೇದಾಧ್ಯಯನದಲ್ಲಿ ಅಧಿಕಾರವಿಲ್ಲವೆನ್ನುವುದು ತಾತ್ಕಾಲಿಕವೇ ಅಥವಾ ಸಾರ್ವತ್ರಿಕವೇ? ಅದನ್ನು ಸಾರ್ವತ್ರಿಕವೆಂದು ಹೇಳುವ ಹಾಗಿಲ್ಲ. ಬಾಲಕನಿಗೆ ಉಪನಯನವಿಲ್ಲದಿದ್ದಾಗ ಪಿತೃಕರ್ಮಕ್ಕೆ ಸಂಬಂಧಪಡುವ ಮಂತ್ರಗಳನ್ನು ಹೇಳಬಾರದೆಂದು ನಿಷೇಧವಿರುವುದರಿಂದ ಅವನ್ನು ಹೇಳಲಿಕ್ಕೆ ಅಧಿಕಾರವನ್ನು ವಿಧಿಸಲಾಗಿದೆ. ಆದ್ದರಿಂದ ನಿಷೇಧವು ತಾತ್ಕಾಲಿಕವೆಂದೇ ಹೇಳಬೇಕು. ಅದರಂತೆ ಶೂದ್ರನಿಗೆ ಇತರ ಯಜ್ಞಗಳಲ್ಲಿ ಅಧಿಕಾರವಿಲ್ಲದಿದ್ದರೂ ಬ್ರಹ್ಮವಿದ್ಯೆಗೆ ಅಧಿಕಾರವಿರುವುದರಲ್ಲಿ ದೋಷವಿಲ್ಲವೆಂದು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನವನ್ನು ಹೇಳಲಾಗಿದೆ—**ಶ್ರವಣಾಧ್ಯಯನಪ್ರತಿಷೇಧಾತ್ಸ್ಮೃತೇಶ್ಚ ||೩೮||**

ಸ್ಮೃತಿಗಳಲ್ಲಿ ಶೂದ್ರನಿಗೆ ವೇದಶ್ರವಣದಲ್ಲೂ, ಅದರ ಅಧ್ಯಯನದಲ್ಲೂ, ಅದರ ಅರ್ಥಾಚರಣೆಯಲ್ಲೂ ನಿಷೇಧವನ್ನು ಹೇಳಿರುವುದರಿಂದ ಶೂದ್ರನಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ. ವೇದವನ್ನು ಕೇಳಿದ ಶೂದ್ರನ ಕಿವಿಗೆ ಸೀಸ ಮತ್ತು ಅರಗುಗಳನ್ನು ಕಾಯಿಸಿ ಬಿಡಬೇಕೆಂದೂ, ಹೇಳಿದವನಿಗೆ ನಾಲಿಗೆ ಕತ್ತರಿಸಬೇಕೆಂದೂ, ಮನನ ಮಾಡಿದವನಿಗೆ ಮರಣದಂಡವನ್ನು ವಿಧಿಸಬೇಕೆಂದೂ ಶ್ರುತಿಯು ಶೂದ್ರನಿಗೆ ವೇದಾಧ್ಯಯನದ ಬಗ್ಗೆ ಶಿಕ್ಷೆಯನ್ನು ಹೇಳಿದೆ. ಇದೇ ಅರ್ಥವನ್ನು ಕೊಡುವ ಸ್ಮೃತಿಯೂ ಕಂಡು ಬಂದಿದೆ. ಆದ್ದರಿಂದ ಉಪನಯನಸಂಸ್ಕಾರವನ್ನು ಹೊಂದಿದ ತ್ರೈವರ್ಣಿಕರಿಗೆ ಮಾತ್ರವೇ ಬ್ರಹ್ಮವಿದ್ಯೆಯ ಶ್ರವಣ-ಅಧ್ಯಯನ-ಅನುಷ್ಠಾನಗಳಲ್ಲಿ ಅಧಿಕಾರವಿರುವುದರಿಂದ ಶೂದ್ರರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಸಿದ್ಧಾಂತವಾಗಿದೆ. ವಿದುರ ಧರ್ಮವ್ಯಾಧ ಮೊದಲಾದವರಿಗೆ ಬ್ರಹ್ಮಜ್ಞಾನವನ್ನು ಹೇಳಿರುವುದರಿಂದ ಶೂದ್ರರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಹೇಳುವುದು ಯುಕ್ತವಲ್ಲವೆಂದು ಕೇಳಿದರೆ ಅವರು ದೇವಾಂಶರಾದ್ದರಿಂದ ಅವರಿಗೆ ಅಧಿಕಾರವುಂಟು. ದೇವಾಂಶಸಂಭೂತರಲ್ಲಿ ಜಾತಿಯ ವ್ಯತ್ಯಾಸವನ್ನು ಕಲ್ಪಿಸಬಾರದು. ಅವರು ವಾಮದೇವಾದಿ ಋಷಿಗಳಂತೆ ಸ್ವತಃ ಜ್ಞಾನಸಿದ್ಧಿಯನ್ನು ಪಡೆದಿರುವರು. ಆದ್ದರಿಂದ ಅವರ ಪುತ್ರಾದಿ ಬಂಧುಗಳಿಗೆ ಮಾತ್ರ ಜಾತಿಭೇದವಿದ್ದರೂ ವಿದುರಾದಿಗಳು ಕಾರಣಪುರುಷರಾದ್ದರಿಂದ ಅವರಲ್ಲಿ ಜಾತಿಭೇದಕ್ಕೆ ಪ್ರಸಕ್ತಿ ಇಲ್ಲ. ಅವರನ್ನು ಶೂದ್ರರೆಂದು ಹೇಳಿರುವುದು ಕೇವಲ ಉಪಚಾರಕ್ಕಾಗಿ. ಅವರೂ ಸಹ ಗುರುಸಮೀಪದಲ್ಲಿ ತ್ರೈವರ್ಣಿಕರೊಂದಿಗೆ ಸೇರಿ ಪುರಾಣೇತಿಹಾಸಗಳನ್ನು ಶ್ರವಣಮಾಡಬಹುದೆಂದು ವಿಧಿಸಲಾಗಿದೆ. ಆದರೆ ತಾವೇ ನೇರವಾಗಿ ಗುರುಗಳಿಂದ ವೇದವೇದಾಂತವಿದ್ಯೆಗಳನ್ನು ಪಡೆಯುವಂತಿಲ್ಲ.

**ಪ್ರಾಸಂಗಿಕಾದಧಿಕಾರಚಿಂತಾ ನಿವೃತ್ತಾ. ಪ್ರಕೃತವಾಕ್ಯಾರ್ಥಸಂಧಾನಮುದ್ಯ ದರ್ಶಯತಿ—ಕಂಪನಾಧಿಕರಣಂ ||೧೦|| ಕಂಪನಾತ್ ||೩೯||**

**ಸರ್ವಗತಸ್ಯ ಶಿವಸ್ಯ ಪರಬ್ರಹ್ಮಣಃ ಸಾಧಕಾನುಗ್ರಹಾಹಾಯ ಮನುಷ್ಯಹೃದಯಪ್ರಮಿತತ್ವಂ ಕಠವಲ್ಲ್ಯುಪಕ್ರಮಣೇ ಪ್ರದರ್ಶ್ಯ**

“ ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಸ್ಸೃತಂ। ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ ॥ ” ಇತಿ ಕಠವಲ್ಲೀ ಷಷ್ಠಾಧ್ಯಾಯೇ ಪಾಠಕವಾಕ್ಯೇ ಪಠ್ಯತೇಽಸ್ಯ ವಿಷಯಃ. ಅತ್ರ ಜಗತ್ಕಂಪನಹೇತುಃ ಪ್ರಾಣೋ ವಾ ಅಶನಿರ್ವಾ ಪರಮೇಶ್ವರೋ ವೇತಿ ಸಂಶಯಃ. “ ಪ್ರಾಣ ಏಜತಿ ನಿಸ್ಸೃತಂ ” ಇತಿ ವಾಕ್ಯೇ ನಿಸ್ಸೃತಮುತ್ಪನ್ನಂ ಯದಿದಂ ಜಗತ್ಸರ್ವಂ ಪ್ರಾಣೇ ನಿಮಿತ್ತೇ ಶ್ರೂಯತೇ. ಪ್ರಾಣಶಬ್ದಸ್ಯ ಪ್ರಾಣವಾಯೌ ಪ್ರಸಿದ್ಧತ್ವಾಜ್ಜಗದಾಪ್ತಸ್ಯ ಪರಮೇಶ್ವರಸ್ಯ ವಿಶ್ವಕಂಪನಹೇತುತ್ವಾಸಂಭವಾತ್. “ ನಮಸ್ತೇ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ ” ಇತ್ಯಾದೌ ತಸ್ಯೈವ ಬ್ರಹ್ಮತ್ವವ್ಯಪದೇಶಾಚ್ಚ. ಅತ್ರ ಪ್ರಾಣೋಪಾಸನಸ್ಯೈವ ಮೋಕ್ಷೋಪದೇಶೇ ನ ವಿರೋಧಃ. ಕಿಂಚ “ ಅಪ ಪುನರ್ಮೃತ್ಯುಂ ಜಯತಿ ಯ ಏವಂ ವೇದ ” ಇತಿ ಶ್ರುತೌ ವಾಯುವಿಜ್ಞಾನಸ್ಯ ಮೋಕ್ಷಫಲಂ ಸ್ಪಷ್ಟಮುಕ್ತಂ. ಅಥವಾ “ ಮಹದ್ಭಯಂ ವಜ್ರಮುದ್ಯತಂ ” ಇತ್ಯತ್ರ ಮಹಾಭಯಹೇತುತ್ವಸ್ಯ ವಜ್ರ ಏವ ವ್ಯಪದೇಶಾತ್, “ ವಾಯೌ ಪರ್ಜನ್ಯಭಾವೇನ ವಿವರ್ತಮಾನೇ ವಿದ್ಯುನ್ಮೇಘವೃಷ್ಟ್ಯಶನಯೋ ಜಾಯಂತೇ ” ಇತಿ ಶ್ರವಣಾತ್, ಅಶನಿಹೇತುವಾಯುಲಕ್ಷಕತ್ವಂ ವಜ್ರಸ್ಯಾಪಿ ಯುಕ್ತಂ. ತಸ್ಮಾತ್ಸರ್ವಥಾತ್ರ ಪರಮೇಶ್ವರಮುಖ್ಯಲಿಂಗಾದರ್ಶನಾನ್ನ ಪರಮೇಶ್ವರ ಏವೋಪದಿಶ್ಯತ ಇತಿ ಚೇದುಚ್ಯತೇ, ಕಂಪನಾತ್ ಅತ್ರ ಜಗತ್ಕಂಪನಹೇತುಃ ಪರಮೇಶ್ವರ ಏವ. ಏಜೃ ಕಂಪನ ಇತಿ ಧಾತೋಃ ಕಂಪನಾರ್ಥತ್ವಾದಿತ್ಯರ್ಥಃ. “ ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ। ಭೀಷಾಸ್ಮಾದಗ್ನಿಶ್ಚೇಂದ್ರಶ್ಚ ಮೃತ್ಯುರ್ಧಾವತಿ ಪಂಚಮಃ ॥ ” ಇತಿ. ಯಸ್ಯ ಶಾಸನಂ ಚ “ ಯೇನ ಸರ್ವೇ ವಯಂ ನಿಷಿದ್ಧವಿಮುಖಾ ವಿಹಿತೇಷು ಪ್ರವರ್ತಾಮಹೇ ” ಇತ್ಯಾದೌ ಚ ಪವನಾದೀನಾಂ ಭಯಹೇತುತ್ವಂ ಪರಮೇಶ್ವರಸ್ಯೈವೋಪದಿಶ್ಯತೇ. ‘ ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ ’ ಇತ್ಯಾದೌ ಜಗನ್ನಿಯಾಮಕತ್ವಸ್ಯ ತಸ್ಮಿನ್ನೇವ ದರ್ಶನಾಜ್ಜಗದ್ಭಯಹೇತುತ್ವಂ ಸಮುಚಿತಂ. ತಸ್ಮಾದ್ರಾಜಮುಖಂ “ ಭೀಷ್ಮಂ ಭಾವುಕಂ ” ಇತಿ ಶ್ರವಣಾತ್ ಕಲ್ಯಾಣಮೂರ್ತೇರಪಿ ಜಗಚ್ಛಾಸಕತಯಾ ಭಯಹೇತುತ್ವಂ. ಸರ್ವೋಪಾದಾನತ್ವಾತ್ತಸ್ಯ ಪ್ರಾಣಶಬ್ದವಾಚ್ಯತ್ವಂ ಯುಕ್ತಂ. “ ಸ ಏವ ವಿಷ್ಣುಸ್ಸ ಪ್ರಾಣಃ ”, “ ಸ ಪ್ರಾಣಸ್ಯ ಪ್ರಾಣಂ ” ಇತ್ಯಾದಿಷು ಶ್ರೂಯತೇ. ಕಿಂಚೋಪಕ್ರಮೋಪಸಂಹಾರಮಧ್ಯಪರಾಮರ್ಶತಯಾ ಪರಮೇಶ್ವರಪ್ರಕರಣತ್ವಾವಗಮಾನ್ನಾನ್ಯವಿಷಯತ್ವಂ. “ ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ, ತಸ್ಮಿನ್ಲೋಕಾ ಶ್ರಿತಾ

ಸ್ಸರ್ವೇ ತದು ನಾತ್ಯೇತಿ ಕಶ್ಚನ" ಇತ್ಯುಪಕ್ರಮವಾಕ್ಯೇ ಪರಮೇಶ್ವರ ಏವೋಪದಿಶ್ಯತೇ. "ಜಗತ್ಸರ್ವಂ ಪ್ರಾಣ ಏಜತಿ" ಇತ್ಯೇಜಯಿತೃತ್ವ ಮಪೀದಂ ಪರಮೇಶ್ವರಸ್ಯೈವೋಪಲಭ್ಯತೇ, ನ ವಾಯುಮಾತ್ರಸ್ಯ. ತಥಾಪಿ ಶ್ರುತ್ಯಂತರೇ ಪ್ರಸಿದ್ಧಂ "ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ। ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥" ಇತಿ. ಉತ್ತರತ್ರಾಪಿ, "ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ। ಭಯಾದಿಂದ್ರಶ್ಚಾಗ್ನಿಶ್ಚ ಮೃತ್ಯುರ್ಧಾವತಿ ಪಂಚಮಃ ॥" ಇತ್ಯಾದಿನಾ ಪರಮೇಶ್ವರಧರ್ಮಬಾಹುಳ್ಯಾತ್ತತ್ಪ್ರಕರಣಮಿತಿ ನಿಶ್ಚೀಯತೇ. ವಜ್ರಶಬ್ದವಾಚ್ಯತ್ವಂ ಸಾಧ್ವಸಕಾರಣತ್ವಸಾಮಾನ್ಯಾತ್ಸಮುಚಿತಂ ಪರಮೇಶ್ವರಸ್ಯೈವ. "ಯ ಏತದ್ವಿದುರಮೃತಾಃ" ಇತ್ಯಾದಾವಮೃತ ಫಲವ್ಯಪದೇಶೋಽಪಿ ಪರಮೇಶ್ವರವಿಷಯಕ ಏವ. "ಈಶಂ ಜ್ಞಾತ್ವಾಮೃತಾ ಭವಂತಿ", "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ" "ಸಂಪಶ್ಯನ್ಬ್ರಹ್ಮ ಪರಮಂ ಯಾತಿ ನಾನ್ಯೇನ ಹೇತುನಾ" ಇತ್ಯಾದೌ ಶಿವ ಜ್ಞಾನಸ್ಯೈವ ಮೋಕ್ಷಹೇತುತ್ವನಿರ್ದೇಶಾತ್, ನ ವಾಯುವಿಜ್ಞಾನಾದಮೃತತ್ವಂ ಕ್ವಚಿದಪಿ ವಿಧೀಯತೇ. ತತ್ರೋಪಸಂಹಾರೇ "ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ" ಇತಿ ಪರಮೇಶ್ವರಸ್ಯೈವೋಕ್ತತ್ವಾಜ್ಜಗತ್ಕಂಪನಹೇತುತ್ವಂ ನೇತರಸ್ಯೇತಿ ಸಿದ್ಧಂ.

ಪ್ರಾಸಂಗಿಕವಾಗಿ ಬಂದ ಬ್ರಹ್ಮವಿದ್ಯಾಧಿಕಾರದ ಸಮಸ್ಯೆಯನ್ನು ಬಗೆಹರಿಸಿ, ಯವನ್ನು ಮುಂದುವರಿಸಲಾಗಿದೆ. ಕಂಪನಾಧಿಕರಣ ॥೧೦॥ ಕಂಪನಾತ್ ॥೩೯॥

ಸರ್ವಗತನಾದ ಶಿವನು ಸಾಧಕರನ್ನು ಅನುಗ್ರಹಿಸಲಿಕ್ಕಾಗಿ ಅವರಲ್ಲಿ ಹೃದಯದ ಪ್ರಮಾಣದಲ್ಲಿ ನೆಲಸಿರುವನೆಂದು ಕಠೋಪನಿಷತ್ತಿನಲ್ಲಿ ಹೇಳಿದೆ. "ಯಾವ ಈ ಜಗತ್ತೆಲ್ಲವೂ ಪ್ರಾಣನಿಂದಲೇ ಹೊರಗೆ ಬಂದು ಕಂಪಿಸುತ್ತಿರುವುದೋ" "ಮೇಲಕ್ಕೆ ಎತ್ತಿರುವ ವಜ್ರಾಯುಧದಂತೆ ಎಲ್ಲರಿಗೂ ಭಯಂಕರವಾಗಿದೆಯೋ ಅಂತಹದನ್ನು ಯಾರು ಅರಿತುಕೊಳ್ಳುವರೋ ಅವರು ಅಮೃತರಾಗುವರು" ಈ ಶ್ರುತಿಯಲ್ಲಿ ಈ ಸೂತ್ರದ ವಿಷಯ ಬಂದಿದೆ. ಇಲ್ಲಿ ಜಗತ್ತನ್ನು ನಡುಗಿಸುವುದಕ್ಕೆ ಕಾರಣವಾದುದು ಪ್ರಾಣವೋ? ಅಶನಿಯೋ? ಪರಮೇಶ್ವರನೋ? ಎಂಬ ಸಂಶಯ ಬರುತ್ತದೆ. ಶ್ರುತಿಯಲ್ಲಿ ಪ್ರಾಣನಿಂದ ಈ ಜಗತ್ತು ಹೊರಟಿರುವುದೆಂದು ಹೇಳಲಾಗಿದೆ. ಪ್ರಾಣಶಬ್ದವು ಪ್ರಾಣವಾಯುವಿನಲ್ಲಿ ಪ್ರಸಿದ್ಧವಾದ್ದರಿಂದ ಜಗದಾಪ್ತನಾದ ಪರಮೇಶ್ವರನು ವಿಶ್ವವನ್ನು ನಡುಗಿಗಿಸುವನೆಂಬುದನ್ನು ನಂಬಲಾಗುವುದಿಲ್ಲ. "ವಾಯುವೇ ನಿನಗೆ ನಮಸ್ಕಾರ, ನೀನೇ ಪ್ರತ್ಯಕ್ಷಬ್ರಹ್ಮನಾಗಿರುವೆ" ಎಂಬಲ್ಲಿ ವಾಯುವನ್ನೇ ಬ್ರಹ್ಮವೆಂದು ಕರೆಯಲಾಗಿದೆ. ಆದ್ದರಿಂದ ಪ್ರಾಣವಾಯುವಿನ ಉಪಾಸನವೇ ಮೋಕ್ಷದ ಮಾರ್ಗವೆಂಬುದರಲ್ಲಿ ವಿರೋಧವೇನಿಲ್ಲ. ಇದೂ ಅಲ್ಲದೆ "ಇವನನ್ನು ತಿಳಿದವರು ಅಪಮೃತ್ಯುವನ್ನು ಗೆಲ್ಲು

ತ್ತಾರೆ" ಎಂಬಲ್ಲಿ ವಾಯುವಿಜ್ಞಾನಕ್ಕೆ ಮೋಕ್ಷವೇ ಫಲವೆಂಬುದು ಸ್ಪಷ್ಟವಾಗಿದೆ. "ವಜ್ರದಂತೆ ಭಯಂಕರವಾಗಿರುವವನು" ಎಂಬಲ್ಲಿ ವಜ್ರಾಯುಧವನ್ನು ಹೆಚ್ಚು ಭಯಕ್ಕೆ ಕಾರಣವೆಂದು ಹೇಳಿರುವುದರಿಂದಲೂ, ಗಾಳಿ ಬೀಸುತ್ತಿರುವಾಗಲೇ ಮಿಂಚು, ಮೋಡ, ಮಳೆ, ಸಿಡಿಲು ಮೊದಲಾದವು ಹುಟ್ಟುವುದರಿಂದಲೂ ಸಿಡಿಲಿಗೆ ಕಾರಣ ವಾದ ವಾಯುವೇ ವಜ್ರಾಯುಧವೆನಿಸುತ್ತದೆ. ಹೀಗೆ ಶ್ರುತಿಯಲ್ಲಿ ಪರಮೇಶ್ವರನ ಸೂಚನೆ ಏನೂ ಬಂದಿಲ್ಲವಾದ್ದರಿಂದ ಪ್ರಾಣಪದವು ಅವನನ್ನು ಉಪದೇಶಿಸಿಲ್ಲವೆಂದು ಆಕ್ಷೇಪಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಇಲ್ಲಿ ಜಗತ್ತನ್ನು ನಡುಗಿಸು ವವನು ಪರಮೇಶ್ವರನೇ ಹೊರತು ವಾಯುವಲ್ಲ. ಶ್ರುತಿಯಲ್ಲಿ ಬಂದಿರುವ ಏಜತಿ ಎಂಬ ಕ್ರಿಯಾಪದದ ಏಜೃ ಧಾತುವಿಗೆ ನಡುಗಿಸುವಿಕೆ ಎಂದರ್ಥ. "ಯಾವನ ಭಯ ದಿಂದ ಗಾಳಿ ಬೀಸುತ್ತಲೂ ಸೂರ್ಯನು ಉದಯಿಸುತ್ತಲೂ, ಅಗ್ನಿ, ಇಂದ್ರ, ಯಮ ಇವರು ತಮ್ಮ ಕೆಲಸವನ್ನು ಮಾಡುತ್ತಲೂ ಇರುವರೋ", ಯಾವನ ಆಜ್ಞೆಯು ನಮ್ಮ ವಿರುದ್ಧಾಚರಣೆಗೆ ತಡೆಯಾಗಿ ವಿಹಿತವಾದ ಕರ್ಮಗಳಲ್ಲಿ ನಮ್ಮನ್ನು ಪ್ರೇರಿಸುತ್ತಿ ದೆಯೋ" ಎಂಬಲ್ಲಿ ಪರಮೇಶ್ವರನ ಶಾಸನವು ದೇವತೆಗಳಿಗೆ ಭಯಹೇತುವೆಂದು ತಿಳಿಸಲಾಗಿದೆ. "ಅವನೇ ಎಲ್ಲ ವಿದ್ಯೆಗಳಿಗೂ ಪ್ರವರ್ತಕನೂ, ಎಲ್ಲಾ ಜೀವರಿಗೂ ಶಾಸಕನೂ ಆಗಿರುವನು" ಎಂದು ಹೇಳಿರುವುದರಿಂದ ಜಗತ್ತನ್ನು ಅವನೇ ನಡೆಸುತ್ತಿ ರುವನೆಂಬುದು ಯುಕ್ತವಾಗಿದೆ. ರಾಜಮುಖವು ಭೀಕರವೂ ಮಂಗಳಕರವೂ ಆಗಿರು ವಂತೆ ಕಲ್ಯಾಣಮೂರ್ತಿಯಾದರೂ ಶಿವನು ಜಗಚ್ಛಾಸಕನಾದ್ದರಿಂದ ಭಯಹೇತುವೂ ಆಗಿದ್ದಾನೆ. ಅವನೇ ಎಲ್ಲಕ್ಕೂ ಉಪಾದಾನವಾದ್ದರಿಂದ ಪ್ರಾಣನೆನಿಸಿರುವುದು ಯುಕ್ತ ವಾಗಿದೆ. "ಅವನೇ ವಿಷ್ಣು, ಪ್ರಾಣ, ಯಮ, ಅಗ್ನಿ, ಚಂದ್ರನಾಗಿದ್ದಾನೆ". "ಅವನೇ ಪ್ರಾಣಕ್ಕೆ ಪ್ರಾಣವಾಗಿದ್ದಾನೆ" ಎಂದು ಅನೇಕ ಶ್ರುತಿಗಳಲ್ಲಿ ಹೇಳಲಾಗಿದೆ. ಹೀಗೆ ಉಪಕ್ರಮೋಪಸಂಹಾರಗಳಲ್ಲೂ, ಮಧ್ಯದಲ್ಲೂ, ಇದು ಪರಮೇಶ್ವರನ ಪ್ರಕರಣ ವೆಂದೇ ತಿಳಿದುಬರುವುದರಿಂದ ಪ್ರಾಣವೆಂದರೆ ಪರಮೇಶ್ವರನಲ್ಲದೆ ಬೇರೆಯಲ್ಲ. "ಇದೇ ಶುಕ್ರ, ಬ್ರಹ್ಮ ಮತ್ತು ಅಮೃತವೆನಿಸಿದೆ. ಇದನ್ನೇ ವಿಶ್ವವೆಲ್ಲವೂ ಆಶ್ರಯಿಸಿದೆ. ಇದನ್ನು ಯಾರೂ ಅತಿಕ್ರಮಿಸುವಂತಿಲ್ಲ" ಎಂದು ಆರಂಭದಲ್ಲಿ ಪರಮೇಶ್ವರನನ್ನೇ ತಿಳಿಸ ಲಾಗಿದೆ. "ಜಗತ್ತೆಲ್ಲವನ್ನೂ ಪ್ರಾಣವು ನಡುಗಿಸುತ್ತಿದೆ" ಎಂಬಲ್ಲಿ ಈ ಬಗೆಯ ನಡುಗಿ ಸುವಿಕೆ ವಾಯುವಿಗೆ ಹೊಂದುವುದಿಲ್ಲ; ಇದು ಪರಮೇಶ್ವರನಿಗೇ ಅನ್ವಯಿಸುತ್ತದೆ. "ಜೀವನು ಪ್ರಾಣಾಪಾನಗಳಿಂದ ಬದುಕಿಲ್ಲ; ಆದರೆ ಇವೆರಡೂ ಯಾವನನ್ನಾಶ್ರಯಿಸಿ ವೆಯೋ ಅವನಿಂದ ಬದುಕಿದ್ದಾನೆ" ಎಂದು ಬೇರೆ ಶ್ರುತಿಯಲ್ಲೂ ಹೇಳಿದೆ. ಮುಂದೆಯೂ "ಇವನ ಭಯದಿಂದ ಅಗ್ನಿ ಸುಡುತ್ತಾನೆ. ಸೂರ್ಯ ಬೆಳಗುತ್ತಾನೆ, ಇಂದ್ರ ಯಮ ಇವರು ವಿಧೇಯರಾಗಿದ್ದಾರೆ" ಎಂದು ಪರಮೇಶ್ವರನ ಧರ್ಮಗಳೇ ಬಹಳ ವಾಗಿ ಬಂದಿರುವುದರಿಂದ ಇದು ಆ ಪ್ರಕರಣವೆಂದು ನಿಶ್ಚಿತವಾಗುತ್ತದೆ. ಭಯವನ್ನು ಹುಟ್ಟಿಸುವುದು ವಜ್ರಕ್ಕೂ ಸಾಮಾನ್ಯವಾದ್ದರಿಂದ ಪರಮೇಶ್ವರನನ್ನು ವಜ್ರನೆಂದು ಹೇಳಿ

ರುವುದೂ ಯುಕ್ತವೇ ಆಗಿದೆ. 'ಇದನ್ನು ತಿಳಿದವರು ಅಮೃತರಾಗುತ್ತಾರೆ" ಎಂಬಲ್ಲಿ ಹೇಳಿದ ಅಮೃತವೆಂಬ ಫಲವೂ ಪರಮೇಶ್ವರನ ಸ್ವರೂಪವೇ ಆಗಿದೆ. "ಪರಶಿವವನ್ನು ಕಂಡವನು ಅವನಲ್ಲಿ ಬೆರೆಯುತ್ತಾನೆ; ಮುಕ್ತಿಗೆ ಇದಲ್ಲದೆ ಬೇರೆ ಮಾರ್ಗವಿಲ್ಲ" ಇಲ್ಲಿ ಶಿವಜ್ಞಾನವೇ ಮೋಕ್ಷಹೇತುವೆಂದು ಹೇಳಿರುವುದರಿಂದ ವಾಯುವಿನ ಜ್ಞಾನದಿಂದ ಅಮೃತ ದೊರಕುವುದೆಂಬುದು ಯುಕ್ತವಾಗುವುದಿಲ್ಲ. ಕೊನೆಯಲ್ಲಿ "ಧರ್ಮ-ಅಧರ್ಮ, ಮಾಡಿದ್ದು-ಮಾಡದಿರುವುದು, ಹಿಂದಿನದು ಮುಂದಿನದು ಎಲ್ಲಕ್ಕಿಂತಲೂ ಬೇರೆಯಾದ್ದನ್ನು ತಿಳಿಸು?" ಎಂದು ಪರಮಾತ್ಮನ ಬಗ್ಗೆ ಹೇಳಿರುವುದರಿಂದ ಜಗತ್ಕಂಪನಹೇತುವೆಂದರೆ ಪರಮೇಶ್ವರನಲ್ಲದೆ ಬೇರೆಯಲ್ಲವೆಂದು ಸಿದ್ಧವಾಗುತ್ತದೆ.

ದಹರಪುಂಡರೀಕಾದಿಪ್ರದೇಶವಿಶೇಷವ್ಯಾಪಕತ್ವೇನ ಪ್ರತಿಪಾದ್ಯಸ್ಯ ಪರಬ್ರಹ್ಮಣಃ ಶಿವಸ್ಯ ವ್ಯಾಪಕತ್ವಮಧಿಕರಣಾಂತರೇಣೋಪಪಾದಯತಿ—

ಜ್ಯೋತಿರಧಿಕರಣಂ ॥ ೧೧ ॥　ಜ್ಯೋತಿರ್ದರ್ಶನಾತ್ ॥ ೪೦ ॥

ಛಾಂದೋಗ್ಯೇ ಪಂಚಮಾಧ್ಯಾಯೇ ಪ್ರಜಾಪತಿವಿದ್ಯಾಯಾಮಾಮ್ನಾಯತೇ. "ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ" ಇತಿ, "ಸ ಉತ್ತಮಃ ಪುರುಷಃ" ಇತಿ. ಇಹ ಜ್ಯೋತಿಶ್ಶಬ್ದೇನ ಪ್ರಸಿದ್ಧಂ ಸೂರ್ಯಾದಿಜ್ಯೋತಿರ್ನಾರಾಯಣಃ ಪರಶಿವೋ ವೇತಿ ಸಂಶಯಃ. ನಾತ್ರ ಜ್ಯೋತಿಶ್ಶಬ್ದೇನ ಪರಮಶಿವಃ ಪ್ರತಿಪಾದ್ಯಃ, ತಸ್ಯ ತೇಜಃಪರತ್ವೇನ ಮುಖ್ಯತ್ವಾತ್. "ಜ್ಯೋತಿಶ್ಚರಣಾಭಿಧಾನಾತ್" ಇತ್ಯತ್ರ ಚರಣಹೇತುತ್ವೇನ ಜ್ಯೋತಿಶ್ಶಬ್ದಸ್ಯ ಸ್ವಾರ್ಥಪರಿತ್ಯಾಗದರ್ಶನಾತ್ತದ್ವದತ್ರ ಪರಮೇಶ್ವರಪರತ್ವಂ ನೋಪಪದ್ಯತೇ. ಕುತಃ? ಕಾರಣಾಭಾವಾತ್. ನ ಮುಕ್ತಪ್ರಾಪ್ತಿಹೇತುತ್ವಮಪಿ ಪರಮೇಶ್ವರಸ್ಯ ಸಂಭವತಿ. "ಅಕ್ಷಯಾ ಏತಾ ಹೃದಯಸ್ಯ ನಾಡ್ಯಃ" ಇತ್ಯಾದಿ ನಾಡೀಖಂಡೇ "ಅಥ ಯತ್ರೈತಸ್ಮಾಚ್ಛರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿರೂರ್ಧ್ವಮಾಕ್ರಮತೇ" ಇತ್ಯಾದಿಶ್ರುತೌ ಪ್ರಭಾಕರಸ್ಯೈವ ಮುಕ್ತಪ್ರಾಪ್ಯತ್ವವ್ಯಪದೇಶಾತ್. ಕಿಂಚ ನಾರಾಯಣಸ್ಯಾಪಿ ಸಮುಚಿತಂ. "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ" ಇತ್ಯಾದೌ ಮುಕ್ತಪ್ರಾಪ್ಯಸ್ಯ ಪರಂಜ್ಯೋತಿಷಃ ಪುರುಷೋತ್ತಮಶಬ್ದವಾಚ್ಯತ್ವೇನ ನಿರ್ದೇಶಾತ್. ಪುರುಷೋತ್ತಮಶಬ್ದಸ್ಯ ತತ್ರೈವ ರೂಢತ್ವಾತ್. ತಸ್ಮಾತ್ತಯೋರೇವ ಪುರುಷೋತ್ತಮಶಬ್ದಸಮಾನಾಧಿಕರಣಪರಂಜ್ಯೋತಿಶ್ಶಬ್ದವಾಚ್ಯತ್ವಂ ಸಂಭವತೀತಿ ಪ್ರಾಪ್ತೇ ಬ್ರೂಮಃ—ಜ್ಯೋತಿರ್ದರ್ಶನಾತ್. ಅತ್ರ ಪರಂಜ್ಯೋತಿಶ್ಶಿವ ಏವ, ಕಸ್ಮಾದ್ದರ್ಶನಾತ್. "ಯ ಆತ್ಮಾಽಪಹತಪಾಪ್ಮಾ" ಇತ್ಯುಪಕ್ರಮ್ಯ ಪರಮಶಿವಸ್ಯೈವ ಪ್ರತಿಪಾದ್ಯತ್ವೇನಾನುವೃತ್ತಿದರ್ಶನಾತ್ ಅತ್ರ ಪರಂಜ್ಯೋತಿಶ್ಶಬ್ದವಾಚ್ಯತ್ವಂ, ಉತ್ತಮ

ಪುರುಷತ್ವಂ ಮುಕ್ತಪ್ರಾಪ್ಯತ್ವಂ ಚ ಪರಮೇಶ್ವರೇ ನ ವಿರುದ್ಧಂ. ಅಪಹತಪಾಪ್ಮತ್ವಾದಿಧರ್ಮವಿಶಿಷ್ಟಪರಮೇಶ್ವರ ಏವಾತ್ರ "ಅನ್ವೇಷ್ಟವ್ಯಃ" ಇತಿ ಪ್ರತಿಜ್ಞಾನಾತ್, "ಏತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ" ಇತ್ಯನುಸಂಧಾನಾತ್, "ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ" ಇತ್ಯಾದೌ ಅಶರೀರತ್ವೇನ ಜ್ಯೋತಿಸ್ಸಂಪತ್ತ್ಯುಪದೇಶಾತ್. ಕಿಂಚೋತ್ತಮಪುರುಷವಿಶೇಷಣಾತ್ಪರಮಪುರುಷ ಏವಾತ್ರ ನಿರ್ದಿಶ್ಯತೇ. ಬ್ರಹ್ಮಪ್ರಕರಣಾನ್ನ ಮುಕ್ತಪ್ರಾಪ್ಯತ್ವಂ ಪ್ರಭಾಕರಸ್ಯೋಪಪದ್ಯತೇ. "ಅತ್ರ ಬ್ರಹ್ಮ ಸಮಶ್ನುತೇ" "ವಿದ್ವಾನ್ ಪರಾತ್ಪರಂ ಪುರುಷಮುಪೈತಿ ದಿವ್ಯಂ" ಇತ್ಯಾದಾವಪುನರಾವೃತ್ತತಯಾ ಮುಮುಕ್ಷೂಣಾಂ ಪರಮಶಿವಪ್ರಾಪ್ತಿದರ್ಶನಾನ್ನ ನಾರಾಯಣಸ್ಯಾಪಿ ಮುಕ್ತಪ್ರಾಪ್ಯತ್ವಂ ಸಂಭವತಿ. "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ", "ಈಶಂ ಜ್ಞಾತ್ವಾ ಅಮೃತಾ ಭವಂತಿ" ಇತ್ಯಾದೌ ಮುಕ್ತಾನಾಂ ಪರಮಶಿವಪ್ರಾಪ್ತಿದರ್ಶನಾತ್. ಪುರುಷೋತ್ತಮಶಬ್ದೋಽಪಿ ಪರಮೇಶ್ವರೇ ಸಂಭವತಿ, ಪುರುಷೇಭ್ಯಃ ಶಾರೀರೇಭ್ಯಃ ಪರಮಃ ಉತ್ಕೃಷ್ಟತ್ವಾತ್. "ಬ್ರಹ್ಮಣೋಽಧಿಕೇ ವೇಷ್ಟಿತಂ ಪುರುಷೋತ್ತಮಂ" ಇತಿ ಪ್ರಾಪ್ಯಸ್ಯ ಪರಮಶಿವಸ್ಯ ಬ್ರಹ್ಮಪರ್ಯಾಯತ್ವೇನ ಹಸ್ತಕರಪಾಣಿಶಬ್ದವತ್ ಪ್ರಯೋಗದರ್ಶನಾತ್. "ಈಶಾನಸ್ಸರ್ವವಿದ್ಯಾನಾಂ" ಇತ್ಯಾದೌ ವೇದಾದಿಸರ್ವವಿದ್ಯಾನಿಯಾಮಕತ್ವಸರ್ವಭೂತಾತ್ಮಕಪುರುಷನಿಯಾಮಕತ್ವಾದಿಧರ್ಮಾಣಾಂ ಪರಮೇಶ್ವರಸ್ಯೋಪದೇಶಾತ್, ಸರ್ವಪುರುಷಾತ್ಮಕಜೀವನಿಯಾಮಕತ್ವೇನ ಪುರುಷೋತ್ತಮಃ ಜ್ಯೋತಿಃ ಪರಶಿವ ಏವ. "ಪರಾತ್ಪರತರಂ ಬ್ರಹ್ಮ ತತ್ಪರಾತ್ಪರತೋ ಹರಿಃ ಯತ್ಪರಾತ್ಪರತೋಽಧೀಶಸ್ತನ್ಮೇ ಮನಶ್ಶಿವಸಂಕಲ್ಪಮಸ್ತು", "ಶಿವಮದ್ವೈತಂ ಚತುರ್ಥಂ ಮನ್ಯಂತೇ", "ವಿಶ್ವಾಧಿಕೋ ರುದ್ರಃ" ಇತ್ಯಾದೌ ಪುರುಷಶಬ್ದವಾಚ್ಯನಾರಾಯಣಾದಿಜೀವೇಭ್ಯೋಽಧಿಕತ್ವವ್ಯಪದೇಶಾತ್ಪರಮಶಿವ ಏವ ಪುರುಷೋತ್ತಮ ಇತಿ ರಾದ್ಧಾಂತಃ. ಪುರುಷೋತ್ತಮಶಬ್ದಸ್ಯ ವಿಷ್ಣಾವೇವ ರೂಢಿರಿತಿ ಚೇತ್ ಹರಿವಂಶೇ ಕೃಷ್ಣಂ ಪ್ರತಿ ಪರಮೇಶ್ವರವಚನಂ "ಯಾನಿ ನಾಮಾನಿ ಗೋವಿಂದ ತವ ಲೋಕೇ ಮಹಾಂತಿ ವೈ । ತಾನ್ಯೇವ ಮಮ ನಾಮಾನಿ ನಾತ್ರ ಕಾರ್ಯಾ ವಿಚಾರಣಾ ॥" ಇತಿ ವಾಕ್ಯದರ್ಶನಾತ್ಪುರುಷೋತ್ತಮಶಬ್ದವಾಚ್ಯತ್ವಂ ತಸ್ಯೈವ ಸಿದ್ಧಂ.

ದಹರಾದಿಪ್ರದೇಶಗಳಲ್ಲಿದ್ದರೂ ಶಿವನು ಎಲ್ಲೆಲ್ಲಿಯೂ ತುಂಬಿರುವನೆಂದು ತಿಳಿಸುತ್ತಾನೆ—ಜ್ಯೋತಿರಧಿಕರಣ ॥೧೧॥ ಜ್ಯೋತಿರ್ದರ್ಶನಾತ್ ॥೪೦॥

ಛಾಂದೋಗ್ಯದ ಐದನೇ ಅಧ್ಯಾಯದ ಪ್ರಜಾಪತಿವಿದ್ಯೆಯಲ್ಲಿ ಈ ಸೂತ್ರದ

ವಿಷಯ ಬಂದಿದೆ. “ಈ ಸಂಪ್ರಸಾದನು ಈ ಶರೀರದಿಂದೆದ್ದು ಪರಂಜ್ಯೋತಿಯನ್ನು ಸೇರಿ ತನ್ನ ವಾಸ್ತವರೂಪವನ್ನು ಪಡೆಯುತ್ತಾನೆ”. “ಅವನೇ ಉತ್ತಮಪುರುಷ” ಇಲ್ಲಿ ಜ್ಯೋತಿಶ್ಶಬ್ದವೆಂದರೆ ಪ್ರಸಿದ್ಧವಾದ ಸೂರ್ಯಾದಿ ದೇವತೆಯೇ? ನಾರಾಯಣನೇ? ಪರಶಿವನೇ? ಎಂಬ ಸಂಶಯಬರುತ್ತದೆ. ಅವನು ತೇಜಸ್ಸಿಗಿಂತ ಅಚಿನವನೆಂದು ಪ್ರಸಿದ್ಧನಾಗಿರುವುದರಿಂದ ಜ್ಯೋತಿಶ್ಶಬ್ದವು ಪರಶಿವನನ್ನು ಪ್ರತಿಪಾದಿಸಲಾರದು. ಜ್ಯೋತಿಶ್ಚರಣಾಭಿಧಾನಾತ್ ಎಂಬ ಸೂತ್ರದಲ್ಲಿ ‘ಪಾದೋಽಸ್ಯ ವಿಶ್ವಭೂತಾನಿ” ಎಂಬ ಹೇಳಿಕೆಯಂತೆ ಜ್ಯೋತಿಶ್ಶಬ್ದಕ್ಕೆ ಮುಖ್ಯಾರ್ಥವನ್ನು ಬಿಟ್ಟು ಷಟ್ಸ್ಥಲಾತ್ಮಕ ಶಿವಲಿಂಗವೆಂದು ತಿಳಿಸಿರುವಂತೆ ಈ ಸೂತ್ರದಲ್ಲಿ ಅಂತಹ ಕಾರಣಗಳಿಲ್ಲದ್ದರಿಂದ ಜ್ಯೋತಿಶ್ಶಬ್ದವು ಪರಶಿವನನ್ನು ತಿಳಿಸಲಾರದು ಮತ್ತು ಶಿವನು ಮುಕ್ತಿಯನ್ನು ದೊರಕಿಸುವನೆಂಬುದೂ ಸಂಭವಿಸುವುದಿಲ್ಲ. “ಹೃದಯದ ಈ ನಾಡಿಗಳು ಅಕ್ಷಯಗಳು” ಎಂದು ತಿಳಿಸುವ ನಾಡೀಖಂಡದಲ್ಲಿ “ಈ ಶರೀರದಿಂದ ಹೊರಟ ಜೀವನು ಈ ರಶ್ಮಿಗಳಿಂದ ಮೇಲಕ್ಕೆ ಏರುತ್ತಾನೆ” ಎಂಬಲ್ಲಿ ಮುಕ್ತನು ಸೂರ್ಯನಲ್ಲಿ ಸೇರುವನೆಂದು ಹೇಳಲಾಗಿದೆ. “ಉತ್ತಮಪುರುಷನೊಬ್ಬನು ಬೇರೆ ಇದ್ದಾನೆ. ಅವನೇ ಪರಮಾತ್ಮನೆನಿಸಿರುವನು” ಎಂಬಲ್ಲಿ ಮುಕ್ತರು ಹೊಂದುವ ಪರಂಜ್ಯೋತಿಯನ್ನು ಪುರುಷೋತ್ತಮನೆಂದು ಕರೆದಿರುವುದರಿಂದಲೂ, ಪುರುಷೋತ್ತಮಶಬ್ದವು ನಾರಾಯಣನಲ್ಲಿಯೇ ರೂಢವಾದ್ದರಿಂದಲೂ ಇಲ್ಲಿ ಜ್ಯೋತಿಶ್ಶಬ್ದವು ನಾರಾಯಣನಿಗೂ ಅನ್ವಯಿಸಬಹುದು. ಆದ್ದರಿಂದ ಸೂರ್ಯ ನಾರಾಯಣ ಇವರಿಬ್ಬರೇ ಪರಂಜ್ಯೋತಿ ಎನಿಸಿರುವರು ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ‘ಯಾವನು ಪಾಪರಹಿತನೋ” ಎಂಬ ಶ್ರುತಿಯಲ್ಲಿ ಶಿವನೇ ಪರಂಜ್ಯೋತಿ ಎಂದು ಸ್ಪಷ್ಟವಾಗಿ ಕಂಡುಬಂದಿರುವುದರಿಂದ ಜ್ಯೋತಿಶ್ಶಬ್ದವು ಶಿವನನ್ನೇ ತಿಳಿಸುತ್ತದೆ. “ಪಾಪವಿಲ್ಲದಿರುವಿಕೆ ಮೊದಲಾದ ಧರ್ಮಗಳುಳ್ಳ ಶಿವನನ್ನೇ ಹುಡುಕಬೇಕು” ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಅವನೇ ಪರಂಜ್ಯೋತಿ, ಉತ್ತಮಪುರುಷ ಮತ್ತು ಮುಕ್ತರಿಗೆ ಗಮ್ಯಸ್ಥಲನೆಂದು ಹೇಳುವುದರಲ್ಲಿ ವಿರೋಧವೇನಿಲ್ಲ. “ಇದನ್ನೇ ನಿನಗೆ ಮತ್ತೆ ತಿಳಿಸುವೆನು” ಎಂದಾರಂಭಿಸಿ “ಶರೀರವಿಲ್ಲದೆ ಇರುವವನಿಗೆ ಪ್ರಿಯಾಪ್ರಿಯಗಳು ಅಂಟುವುದಿಲ್ಲ” ಎಂದು ತಿಳಿಸಿರುವುದರಿಂದ ಅಶರೀರನಾದ್ದರಿಂದ ಪರಶಿವನೇ ಜ್ಯೋತಿಯಾಗಿರುವನೆಂದು ತಿಳಿದುಬರುತ್ತದೆ. ಇದೂ ಅಲ್ಲದೆ, ಉತ್ತಮಪುರುಷ ಎಂಬ ವಿಶೇಷಣದಿಂದ ಪರಮಪುರುಷನನ್ನೇ ಇಲ್ಲಿ ನಿರ್ದೇಶಿಸಲಾಗಿದೆ; ಇದು ಬ್ರಹ್ಮಪ್ರಕರಣವಾದ್ದರಿಂದ ಸೂರ್ಯನು ಮುಕ್ತರಿಗೆ ಗಮ್ಯಸ್ಥಲವೆಂಬುದು ಹೊಂದುವುದಿಲ್ಲ. “ಇಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ” “ಜ್ಞಾನಿಯು ನಾಮರೂಪಗಳನ್ನು ತೊರೆದು ಪರಮಪೂಜ್ಯನಾದ ದಿವ್ಯಪುರುಷನಲ್ಲಿ ಸೇರುತ್ತಾನೆ” ಎಂಬಲ್ಲಿ ಮುಕ್ತನು ಮತ್ತೆ ಹಿಂತಿರುಗದಿರುವುದರಿಂದ ಅವನಿಗೇ ನಾರಾಯಣನು ಗಮ್ಯಸ್ಥಲನೆಂಬುದು ಸಂಭವಿಸುವುದಿಲ್ಲ. “ಜೀವನಿಗೆ ಆಕಾಶವು ಚರ್ಮದಂತೆ ಎಂದು ಹೊಂದಿಕೆಯಾಗುವುದೋ ಅಂದೇ ಅವನಿಗೆ

ದಃಖದ ಕೊನೆಯಾಗುವುದು. ಆಗ ಅವನು ಶಿವನೇ ಆಗಿರುವುದರಿಂದ ಮತ್ತೆ ಶಿವನನ್ನು ತಿಳಿಯುವ ಆವಶ್ಯಕತೆ ಇಲ್ಲ". "ಈಶ್ವರನನ್ನು ತಿಳಿದು ಅಮೃತರಾಗುತ್ತಾರೆ". ಇಲ್ಲಿ ಮುಕ್ತರಿಗೆ ಪರಶಿವನೇ ಗಮ್ಯಸ್ಥಲವೆಂದು ಹೇಳಲಾಗಿದೆ. ಪುರುಷೋತ್ತಮಶಬ್ದವೂ ಪುರುಷರೆನಿಸಿವ ಜೀವರೆಲ್ಲರಿಗೂ ಉತ್ತಮ ಅಂದರೆ ಉತ್ಕೃಷ್ಟನಾದ್ದರಿಂದ ಪರಮೇಶ್ವರ ನಿಗೇ ಸಂಭವಿಸುತ್ತದೆ. ಮುಕ್ತರಿಗೆ ಗಮ್ಯನಾದ ಪರಮಶಿವನನ್ನು ಹಸ್ತಕರಪಾಣಿ ಎಂಬ ಶಬ್ದಗಳಂತೆ ಬ್ರಹ್ಮದ ಪರ್ಯಾಯನಾಮವಾಗಿ ಹೇಳಿದೆ. ಅವನೇ ಎಲ್ಲಾ ವಿದ್ಯೆಗಳಿಗೂ ಜೀವರಿಗೂ ನಿಯಾಮಕನೂ ಆಗಿರುವುದರಿಂದ ಪುರುಷರೆನಿಸಿದ ಜೀವರೆಲ್ಲರಿಗೂ ಉತ್ತ ಮವಾದ ಜ್ಯೋತಿ ಎಂದರೆ ಪರಶಿವನೇ ಆಗಿರುವನು. "ಶ್ರೇಷ್ಠವಸ್ತುವೆಲ್ಲಕ್ಕಿಂತ ಬ್ರಹ್ಮನು ಶ್ರೇಷ್ಠನು. ಅವನಿಗಿಂತ ವಿಷ್ಣು ಶ್ರೇಷ್ಠನು, ಅವನಿಗಿಂತ ಶ್ರೇಷ್ಠನಾದ ಈಶ್ವರನ ಸಂಕಲ್ಪದಂತೆ ನನ್ನ ಮನವು ಪ್ರವರ್ತಿಸಲಿ" "ಶಿವನು ತ್ರಿಮೂರ್ತ್ಯತೀತನೂ ಅದ್ವೈತನೂ ಇರುವನು; ಅವನೇ ಆತ್ಮನು". ವಿಶ್ವಾಧಿಕನೂ ಮಹರ್ಷಿಯೂ ಆದ ರುದ್ರನು ಪುರುಷರೆನಿಸಿದ ನಾರಾಯಣಾದಿಜೀವರೆಲ್ಲರಿಗೂ ಅಧಿಕನೆಂದು ಹೇಳಿರುವುದರಿಂದ ಅವನೇ ಪುರುಷೋತ್ತಮನೆಂದು ತೀರ್ಮಾನವಾಗಿದೆ. ಪುರುಷೋತ್ತಮಶಬ್ದವು ವಿಷ್ಣುವಿನಲ್ಲಿಯೇ ರೂಢವಾಗಿದೆ ಎಂದರೆ ಹರಿವಂಶದಲ್ಲಿ ಶಿವನೇ ಕೃಷ್ಣನಿಗೆ "ನಿನ್ನನ್ನು ತಿಳಿಸುವ ಹೆಸರುಗಳು ನನ್ನವೇ ಆಗಿವೆ. ಈ ಬಗ್ಗೆ ವಿಚಾರಮಾಡಬೇಕಾಗಿಲ್ಲ" ಎಂದು ಹೇಳಿರುವುದರಿಂದ ಶಿವನೇ ಪುರುಷೋತ್ತಮನೆಂದು ಸಿದ್ಧವಾಯಿತು.

## ಅರ್ಥಾಂತರತ್ವಾದಿವ್ಯಪದೇಶಾಧಿಕರಣಂ || ೧೨ ||

## ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್ || ೪೧ ||

**ಛಾಂದೋಗ್ಯಸ್ಯಾಷ್ಟಮಾಧ್ಯಾಯೇ ಪಠ್ಯತೇಽಸ್ಯ ವಿಷಯಃ. "ಆಕಾಶೋ ಹ ವೈ ನಾಮರೂಪಯೋರ್ನಿರ್ವಹಿತಾ । ತೇ ಯದಂತರಾ ತದ್ಬ್ರಹ್ಮ ತದಮೃತಂ ಸ ಆತ್ಮಾ ||" ಇತೀಹ ಸರ್ವಾಧಿಕ್ಯತ್ವೇನೋಪದಿಷ್ಟ ಆಕಾಶೋ ಭೂತಾಕಾಶಃ ಕಿಂ ಜೀವಃ ಉತ ಪರಮೇಶ್ವರೋ ವೇತಿ ಸಂಶಯಃ. ವಿಯತ್ತ್ವಾಕಾಶಶಬ್ದಸ್ಯ ರೂಢತ್ವಾದವಕಾಶಪ್ರದಾತೃತ್ವೇನ ತಸ್ಯ ನಾಮರೂಪವಿಭಾಗಯೋಗ್ಯತ್ವಸಂಭವಾತ್. "ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ" ಇತ್ಯಾದೌ ಜಗತ್ಕಾರಣತ್ವಸ್ಯ ತತ್ರೈವ ವ್ಯಪದೇಶಾತ್ತದೇವ ಯುಕ್ತಂ. ಉತ ಜೀವೋಽಪಿ ಸ್ಯಾತ್. "ಅನೇನ ಜೀವೇನಾತ್ಮಾನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" ಇತಿ ವಿಕಾರಜಾತಸ್ಯ ನಾಮರೂಪವ್ಯಾಕೃತತ್ವಾನ್ನಿರ್ವಿಕಾರಸ್ಯ ಪರಮೇಶ್ವರಸ್ಯ ತದಸಂಭವಾತ್, ತಸ್ಯ ನಾಮರೂಪವ್ಯಾಕರಣದರ್ಶನಾತ್ ಚಿದಾಕಾಶರೂಪತ್ವಾಚ್ಚ. ತಸ್ಮಾತ್ತಯೋರೇವ ಆಕಾಶಶಬ್ದವಾಚ್ಯತ್ವಮುಚ್ಯತ ಇತಿ ಚೇದ್ಬ್ರೂಮಃ. ಅತ್ರಾಕಾಶಶಬ್ದವಾಚ್ಯಃ ಶಿವ ಏವ, ಕಸ್ಮಾದರ್ಥಾಂತರತ್ವಾದಿವ್ಯಪದೇಶಾತ್.**

ಅರ್ಥಾನಾಂ ಪದಾರ್ಥಾನಾಂ ಅಂತರತ್ವವ್ಯಪದೇಶಾತ್ ನಾಮರೂಪಾತ್ಮಕಸ್ಥೂಲಸೂಕ್ಷ್ಮಚಿದಚಿತ್ಪ್ರಪಂಚಾಂತರಾತ್ಮವ್ಯಪದೇಶಾನ್ನಿರ್ದೇಶಾದಿತ್ಯರ್ಥಃ. ಆದಿಶಬ್ದೇನ "ತೇ ಯದಂತರಾ ತದ್ಬ್ರಹ್ಮ" ಇತ್ಯಾದಿನಾ ಬ್ರಹ್ಮತ್ವಾದಿವ್ಯಪದೇಶೋ ದ್ರಷ್ಟವ್ಯಃ. ಪರಮೇಶ್ವರಾದ್ಭಿನ್ನಸ್ಯ ಭೂತಾಕಾಶಾದೇರಾತ್ಮತ್ವಾಮೃತತ್ವಾದಿಧರ್ಮಾಣಾಮಸಂಭವಾತ್ಪ್ರಕರಣವಿರೋಧಾಚ್ಚ ಬ್ರಹ್ಮಲಿಂಗಭೂಯಸ್ತ್ವಾನ್ನೇತರ ಇತಿ ಸಿದ್ಧಂ.

ಅರ್ಥಾಂತರತ್ವಾದಿವ್ಯಪದೇಶಾಧಿಕರಣ ||೧೨||

ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್ ||೪೧||

ಛಾಂದೋಗ್ಯದ ಎಂಟನೇ ಅಧ್ಯಾಯದಲ್ಲಿ ಈ ಸೂತ್ರದ ವಿಷಯ ಬಂದಿದೆ. "ಆಕಾಶವೇ ಎಲ್ಲಾ ನಾಮರೂಪಗಳನ್ನೂ ನಿರ್ವಹಿಸುತ್ತಿದೆ. ಅವು ಎಲ್ಲಿರುವುವೋ ಅದೇ ಬ್ರಹ್ಮ-ಅದೇ ಅಮೃತ-ಅದೇ ಆತ್ಮ". ಇಲ್ಲಿ ಎಲ್ಲಕ್ಕೂ ಹೆಚ್ಚಿನದೆಂದು ಹೇಳಿರುವ ಆಕಾಶವು ಭೂತಾಕಾಶವೋ ಜೀವನೋ ಪರಮೇಶ್ವರನೋ ಎಂಬ ಸಂಶಯ ಬರುತ್ತದೆ. ಭೂತಾಕಾಶದಲ್ಲಿ ಆಕಾಶಶಬ್ದವು ರೂಢವಾಗಿದೆ. ಅವಕಾಶವನ್ನೇರ್ಪಡಿಸಿರುವುದರಿಂದ ನಾಮರೂಪಗಳ ನಿರ್ವಹಣೆಯನ್ನು ಆಕಾಶಕ್ಕೆ ಹೊಂದಿಸಬಹುದಾಗಿದೆ. "ಆಕಾಶದಿಂದಲೇ ಈ ಭೂತಗಳೆಲ್ಲವೂ ಬಂದಿವೆ" ಎಂಬಲ್ಲಿ ಆಕಾಶವನ್ನೇ ಜಗತ್ಕಾರಣವೆಂದು ಹೇಳಲಾಗಿದೆ. ಆದ್ದರಿಂದ ಆಕಾಶವು ಭೂತಾಕಾಶಕ್ಕೆ ಅನ್ವಯಿಸುತ್ತದೆ. ಇದೂ ಅಲ್ಲದೆ, ಜೀವನಲ್ಲಿಯೂ ಆಕಾಶಶಬ್ದವು ಅನ್ವಯಿಸಬಹುದು. "ಈ ಜೀವನಲ್ಲಿ ಪ್ರವೇಶಿಸಿ ನಾಮರೂಪಗಳ ವಿಭಾಗಮಾಡುತ್ತೇನೆ" ಎಂಬಲ್ಲಿ ಹೇಳಿರುವ ನಾಮರೂಪಗಳ ವಿಭಾಗ ವಿಕಾರಮಯವಾದ್ದರಿಂದ ನಿರ್ವಿಕಾರನೂ ಚಿದಾಕಾಶನೂ ಆದ ಪರಶಿವನಿಗೆ ಈ ಬಗೆಯ ವಿಕಾರವು ಸಂಭವಿಸುವುದಿಲ್ಲವಾದ್ದರಿಂದ ಶ್ರುತಿಯಲ್ಲಿ ಬಂದಿರುವ ಆಕಾಶಪದವು ಭೂತಾಕಾಶಕ್ಕೂ ಜೀವನಿಗೂ ಅನ್ವಯಿಸುತ್ತದೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರದಲ್ಲಿ ಸಮಾಧಾನವಿದೆ. ನಾಮರೂಪಾತ್ಮಕವಾದ ಪ್ರಪಂಚಕ್ಕೆ ಪರಮೇಶ್ವರನನ್ನು ಅಂತರಾತ್ಮನೆಂದು ಶ್ರುತಿಯಲ್ಲಿ ನಿರ್ದೇಶಿಸಿರುವುದರಿಂದ ಆಕಾಶಶಬ್ದವು ಶಿವನನ್ನೇ ಬೋಧಿಸುತ್ತದೆ. "ಇವೆಲ್ಲದರಲ್ಲೂ ಯಾವುದು ಅಂತರಾತ್ಮವೋ ಅದೇ ಅಮೃತ-ಬ್ರಹ್ಮ-ಆತ್ಮ" ಎಂಬಲ್ಲಿ ಹೇಳಿರುವ ಅಮೃತ-ಬ್ರಹ್ಮ-ಆತ್ಮ ಈ ಪದಗಳು ಪರಮೇಶ್ವರನಿಗೇ ಅನ್ವಯಿಸುತ್ತವೆ, ಭೂತಾಕಾಶ ಜೀವರಿಗೆ ಇವು ಅನ್ವಯಿಸುವುದಿಲ್ಲ. ಇದೂ ಅಲ್ಲದೆ, ಬ್ರಹ್ಮಲಿಂಗಗಳೇ ಹೆಚ್ಚಾಗಿರುವ ಈ ಪ್ರಕರಣದಲ್ಲಿ ಭೂತಾಕಾಶ ಜೀವರಿಗೆ ಪ್ರಸಕ್ತಿಯೂ ಇಲ್ಲ. ಆದ್ದರಿಂದ ಆಕಾಶವೆಂದರೆ ಪರಶಿವನೆಂದು ಸಿದ್ಧವಾಯಿತು.

ಸುಷುಪ್ತ್ಯಧಿಕರಣಂ || ೧೩ || ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ || ೪೨ ||

ವ್ಯಪದೇಶಾದಿತ್ಯನುವರ್ತತೇ. ಬೃಹದಾರಣ್ಯಕೇ ಷಷ್ಠಾಧ್ಯಾಯೇ ದೃಶ್ಯತೇಽಸ್ಯ ವಿಷಯಃ. "ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಸ್ಸಮಾನಸ್ಸನ್ನುಭೌ ಲೋಕಾವನುಸಂಚ

ರತಿ ” ಇತಿ. ಅತ್ರ ವಿಜ್ಞಾನಮಯಃ ಲಿಂಗಶರೀರಾವಚ್ಛಿನ್ನಶಾರೀರಃ ಪರಮೇಶ್ವರೋ ವೇತಿ ಸಂಶಯಃ. ಅತ್ರ ಜೀವ ಏವಾಭಿಧೀಯತೇ. ಉಪಕ್ರಮೋಪಸಂಹಾರಾಭ್ಯಾಸಪರಾಮರ್ಶಾದಿಭಿರ್ಜೀವಸ್ಯೈವ ಪ್ರವೃತ್ತತ್ವಾತ್. “ ಯೋಽಯಂ ವಿಜ್ಞಾನಮಯಃ ಪ್ರಾಣೇಷು ” ಇತಿ ಶಾರೀರ ಪ್ರಕರಣಾತ್. “ ಸ ವಾ ಏಷ ಮಹಾನಜ ಆತ್ಮಾಯಂ ” ಇತ್ಯುಪಸಂಹಾರೇಽಪಿ ತದನಿರಾಕರಣದರ್ಶನಾತ್. ಮಧ್ಯೇಽಪಿ “ ಏಷೋಽಂತರ್ಹೃದಯ ಆಕಾಶಃ ” ಇತಿ ಹೃದಯಾಂತರೇ ವ್ಯವಸ್ಥಾನವ್ಯಪದೇಶಾದತ್ರ ಪೂರ್ವಾಪರಮಧ್ಯಪರಾಮರ್ಶೇಷು ಪರಮೇಶ್ವರಪರತ್ವವಿಧಾಯಕಶಬ್ದಾದರ್ಶನಾದವಸ್ಥಾತ್ರಯಾನುಗತಜೀವಸ್ಯೈವ ವಿದ್ಯಮಾನತ್ವಾತ್ಸ ಏವಾತ್ರ ಪ್ರತಿಪಾದ್ಯತ ಇತಿ ಚೇದುಚ್ಯತೇ. “ ಕತಮ ಆತ್ಮಾ ಯೋಽಯಂ ವಿಜ್ಞಾನಮಯಃ ” ಇತಿ ಶ್ರುತೌ ಭ್ರಮರಕೀಟವನ್ಮುಕ್ತಜೀವಃ ಪ್ರತಿಪಾದ್ಯತೇ; ನತು ಬದ್ಧಜೀವಃ. ಕುತಃ ಸುಷುಪ್ತ್ಯವಸ್ಥಾಯಾಂ ಉತ್ಕ್ರಾಂತ್ಯವಸ್ಥಾಯಾಂ ಚ ಜೀವಬ್ರಹ್ಮಭೇದಸ್ಯ ಭೇದೇನ ದ್ವಿವಾರಂ ಪ್ರತಿಪಾದಿತತ್ವಾದಿತ್ಯರ್ಥಃ. ಸುಷುಪ್ತೌ ತಾವದಯಂ ಪುರುಷಃ “ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದ ನಾಂತರಂ ” ಇತಿ ಜೀವಪ್ರಥಕ್ತ್ವೇನ ಪ್ರಾಜ್ಞಶಬ್ದೇನ ಪರಮಶಿವೋ ನಿರ್ದಿಶ್ಯತೇ. ನನ್ವತ್ರ ಜೀವಃ ಪುರುಷೋ ಭವತಿ, ತಸ್ಯ ಶರೀರೇ ಬಾಹ್ಯಾಭ್ಯಂತರವಿಜ್ಞಾನತ್ವಸಂಭವಾತ್. ಶರೀರಾಧಿಪತಿತ್ವಾತ್, ಉಪಕ್ರಮೋಪಸಂಹಾರಾದಿಷಡ್ವಿಧಲಿಂಗೈಸ್ತದ್ಧರ್ಮದರ್ಶನಾಚ್ಚ ಜೀವ ಏವಾತ್ರ ಪ್ರಾಜ್ಞಶಬ್ದವಾಚ್ಯ ಇತಿ ಚೇನ್ನ, ಪ್ರಾಜ್ಞಶಬ್ದೇನಾತ್ರ ಪರಮಶಿವ ಏವ ಪ್ರತಿಪಾದ್ಯತೇ. ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ ಸರ್ವಸ್ಯೇಶಾನಸ್ಸರ್ವಪತಿಃ ” ಇತ್ಯಾದಿ ಶ್ರುತಿನಿರ್ದಿಷ್ಟಸರ್ವಜ್ಞತ್ವಸರ್ವೇಶ್ವರತ್ವಾದಿಧರ್ಮಾಣಾಮನ್ಯತ್ರಾಸಂಭವಾತ್. ತಥೋತ್ಕ್ರಾಂತ್ಯವಸ್ಥಾಯಾಂ “ ಶಾರೀರ ಆತ್ಮಾ ಪ್ರಾಜ್ಞೇನಾತ್ಮನಾನ್ವಾರೂಢ ಉತ್ಸರ್ಜನ್ಯಾತಿ ” ಇತಿ ಶಾರೀರಾದ್ವ್ಯತಿರಿಕ್ತತಯಾ ಪರಮೇಶ್ವರಉಪದಿಶ್ಯತೇ. ತತ್ರಾಪಿ ಕ್ರಮೋ ತಾವದ್ಯೋಽಯಂ ವಿಜ್ಞಾನಮಯಃ ಪ್ರಾಣೇಷ್ವಿತಿ ಶಾರೀರಧರ್ಮಾಣಾಂ ಅನುಪದೇಶಾತ್, ಕಿಂಚ ಶಾರೀರಧರ್ಮಾನನೂದ್ಯ ತಸ್ಯ ಭ್ರಮರಕೀಟವತ್ ಶಿವೈಕಭಾವತ್ವಂ ನಿರ್ದಿಶ್ಯತೇ. ತಥೋಪಸಂಹಾರೇಽಪಿ, “ ಸ ವಾ ಮಹನಜ ಆತ್ಮಾ ” ಇತಿ ಪರಮೇಶ್ವರ ಏವಾತ್ರಾಜತ್ವಾದಿಧರ್ಮನಿರ್ದಿಷ್ಟಃ. ತತೋ ಮಧ್ಯೇ, “ ಯದತ ಊರ್ಧ್ವಂ ಮೋಕ್ಷಾಯ ಬ್ರೂಹಿ ” ಇತಿ ಪದೇಪದೇ ಪ್ರಶ್ನಃ. “ ಅನನ್ವಾಗತಸ್ತೇನ ಭವತ್ಯಸಂಗೋ ಹ್ಯಯಂ ಪುರುಷಃ ” ಇತಿ ಪುನಃ

ಪುನಃ ಪ್ರತಿವಚನಂ ಚ. ವಾಕ್ಯಭೇದೋಽಸ್ಯಾಭೇದಪರತ್ವಂ ಜ್ಞಾಪಯತಿ. "ಅನನ್ವಾಗತಂ ಪುಣ್ಯೇನಾನವಗತಂ ಪಾಪೇನ ತೀರ್ಣೋ ಹಿ ತದಾ ಸರ್ವಾನ್ಲೋಕಾನ್" ಇತಿ ಶರೀರೇಂದ್ರಿಯ ವಿಲಕ್ಷಣಪರಮೇಶ್ವರ ಪ್ರತಿಪಾದನಪರತ್ವವ್ಯಪದೇಶಾನ್ನ ಶಾರೀರಪರತ್ವಮಿತಿ ಸಿದ್ಧಂ.

ಸುಷುಪ್ತ್ಯಧಿಕರಣ ||೧೩|| ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ||೪೨||

ಬೃಹದಾರಣ್ಯಕದ ಆರನೇ ಅಧ್ಯಾಯದಲ್ಲಿ ಈ ಸೂತ್ರದ ವಿಷಯ ಬಂದಿದೆ. "ಈ ವಿಜ್ಞಾನಮಯನು ಪ್ರಾಣಗಳಲ್ಲೂ ಹೃದಯದಲ್ಲೂ ನೆಲಸಿರುವ ಜ್ಯೋತಿಗೆ ಸಮಾನನಾಗಿ ಎರಡು ಲೋಕಗಳಲ್ಲೂ ಸಂಚರಿಸುತ್ತಾನೆ" ಎಂಬ ಮಂತ್ರದಲ್ಲಿ ವಿಜ್ಞಾನಮಯನೆಂದರೆ ಸೂಕ್ಷ್ಮಶರೀರದೊಳಗಿನ ಜೀವನೇ ಅಥವಾ ಪರಶಿವನೇ ಎಂದು ಸಂಶಯ ಬರುತ್ತದೆ. ಉಪಕ್ರಮೋಪಸಂಹಾರಗಳಲ್ಲೂ ಮಧ್ಯದಲ್ಲೂ, ಪರ್ಯಾಲೋಚಿಸಿದರೆ ಇಲ್ಲಿ ವಿಜ್ಞಾನಮಯವೆಂದರೆ ಜೀವನೆಂದು ತಿಳಿದುಬರುತ್ತದೆ. "ಪ್ರಾಣದಲ್ಲಿ ಯಾವ ಈ ವಿಜ್ಞಾನಮಯನು"ಎಂಬುದರಿಂದ ಇದು ಜೀವನ ಪ್ರಕರಣವೆನಿಸುತ್ತದೆ. "ಇವನು ಅಜನು ಆತ್ಮನು" ಎಂದು ಕೊನೆಯಲ್ಲಿ ಅದನ್ನೇ ಪುಷ್ಟೀಕರಿಸಿರುವುದರಿಂದಲೂ, "ಹೃದಯದೊಳಗಿನ ಆಕಾಶದಲ್ಲಿ ಯಾವುದಿದೆಯೋ" ಎಂದು ಮಧ್ಯದಲ್ಲಿ ತಿಳಿಸಿರುವುದರಿಂದಲೂ, ಇಲ್ಲಿ ಎಲ್ಲಿಯೂ ಪರಮೇಶ್ವರನಿಗನ್ವಯಿಸುವ ಶಬ್ದವಿಲ್ಲದ್ದರಿಂದಲೂ, ಜಾಗ್ರತ್ಸ್ವಪ್ನಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿ ಸಿಲುಕಿರುವ ಜೀವನನ್ನು ತಿಳಿಸುವ ಶಬ್ದವಿರುವುದರಿಂದಲೂ ವಿಜ್ಞಾನಮಯಪದವು ಜೀವನಿಗೇ ಅನ್ವಯಿಸುತ್ತದೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. "ಆತ್ಮನು ಯಾರು? ವಿಜ್ಞಾನಮಯನೇ ಆತ್ಮನು" ಎಂಬ ಶ್ರುತಿಯು ಭ್ರಮರಕೀಟದಂತೆ ಮುಕ್ತಜೀವನು ಶಿವನೇ ಆದ್ದರಿಂದ ಅಂತಹ ಮುಕ್ತಜೀವನನ್ನು ತಿಳಿಸುತ್ತದೆಯೇ ಹೊರತು ಬದ್ಧಜೀವನನ್ನು ತಿಳಿಸುವುದಿಲ್ಲ. ಯಾಕೆಂದರೆ ಸುಷುಪ್ತಿಯಲ್ಲೂ, ಉತ್ಕ್ರಾಂತಿಯಲ್ಲೂ ಶಿವಜೀವರಿಗೆ ಭೇದವಿದೆ ಎಂದು ಎರಡುವೇಳೆ ಸ್ಪಷ್ಟವಾಗಿ ತಿಳಿಸಲಾಗಿದೆ. ಸುಷುಪ್ತಿಯಲ್ಲಿ "ಈ ಪುರುಷನು ಪ್ರಾಜ್ಞನೊಡಗೂಡಿರುವುದರಿಂದ ಅವನಿಗೆ ಒಳಹೊರ ಅರಿವು ಇರುವುದಿಲ್ಲ" ಎಂಬಲ್ಲಿ ಪ್ರಾಜ್ಞನೆಂಬ ಶಬ್ದದಿಂದ ಜೀವನಿಗಿಂತ ಬೇರೆಯಾಗಿ ಪರಮಶಿವನನ್ನು ತಿಳಿಸಲಾಗಿದೆ. ಇಲ್ಲಿ ಜೀವನು ದೇಹದೊಳಗಿದ್ದು ಒಳಗಿನ ಮತ್ತು ಹೊರಗಿನ ಅರಿವನ್ನು ಪಡೆದಿರುವುದರಿಂದ ಪುರುಷನೆನಿಸಿದ್ದಾನೆ. ಅವನು ಶರೀರಕ್ಕಧಿಪತಿಯಾದ್ದರಿಂದಲೂ, ಅವನಿಗೆ ಆರು ಬಗೆಯ ತಾತ್ಪರ್ಯಲಿಂಗಗಳಿಂದ ಅಜ-ಆತ್ಮ, ಮೊದಲಾದ ಧರ್ಮಗಳು ಅನ್ವಯಿಸುವುದರಿಂದಲೂ, ಅವನೇ ಏಕೆ ಪ್ರಾಜ್ಞನೆನಿಸಬಾರದು? ಎಂದು ಕೇಳುವುದು ಯುಕ್ತವಲ್ಲ. "ಹೃದಯದೊಳಗೆ ಮಲಗಿರುವ ಈತನು ಎಲ್ಲರಿಗೂ ಶಾಸಕನು" ಎಂಬ ಶ್ರುತಿಯಲ್ಲಿ ಹೇಳಿರುವ ಸರ್ವಜ್ಞತ್ವ ಸರ್ವೇಶ್ವರತ್ವ ಮೊದಲಾದ ಧರ್ಮಗಳು ಶಿವನಲ್ಲಲ್ಲದೆ ಬೇರೆ ಎಲ್ಲೂ ಸಂಭವಿಸದಿರುವುದರಿಂದ ಜೀವನು ಪ್ರಾಜ್ಞನೆನಿಸಲಾರನು. ಉತ್ಕ್ರಾಂತಿ

ಯಲ್ಲಿ "ಶರೀರದೊಳಗಿದ್ದ ಈ ಆತ್ಮನು ಪ್ರಾಜ್ಞನೊಡಗೂಡಿ ಆನಂದದಿಂದ ಕೂಗುತ್ತ ಹೋಗುತ್ತಾನೆ" ಎಂದು ಜೀವನಿಗಿಂತ ಬೇರೆಯಾಗಿ ಪರಶಿವನನ್ನು ಹೇಳಲಾಗಿದೆ. ಇಲ್ಲಿಯೂ "ಪ್ರಾಣಗಳಲ್ಲಿ ಯಾವ ಈ ವಿಜ್ಞಾನಮಯನಿರುವನೋ" ಎಂಬಲ್ಲಿ ಜೀವನ ಧರ್ಮಗಳನ್ನು ತಿಳಿಸಿಲ್ಲ. ಆದರೆ ಜೀವಧರ್ಮಗಳನ್ನು ಹೇಳಿ ಭ್ರಮರಕೀಟದಂತೆ ಅವನಿಗೆ ಶಿವೈಕ್ಯವನ್ನು ತಿಳಿಸಲಾಗಿದೆ. ಹಾಗೆಯೇ ಕೊನೆಯಲ್ಲೂ "ಪ್ರಾಣಗಳಲ್ಲಿರುವ ಈ ವಿಜ್ಞಾನಮಯನು ಅಜನೂ ವಿಭುವೂ ಆದ ಆತ್ಮನಾಗಿರುವನು" ಎಂಬಲ್ಲಿ ಅಜತ್ವಾದಿ ಧರ್ಮಗಳುಳ್ಳ ಪರಶಿವನನ್ನೇ ಹೇಳಲಾಗಿದೆ. ಮಧ್ಯದಲ್ಲೂ, "ಇದರ ಮುಂದೆ ಮೋಕ್ಷಕ್ಕಾಗಿ ಹೇಳಬೇಕಾದ್ದನ್ನು ತಿಳಿಸು" ಎಂದು ಅನೇಕಸಾರಿ ಪ್ರಶ್ನೆಯೂ, "ಇವನು ಯಾವುದನ್ನೂ ಅವಲಂಬಿಸಿದವನಲ್ಲ. ಈ ಪುರುಷನು ಅಸಂಗನು" ಎಂದು ಅನೇಕಸಾರಿ ಪ್ರತಿವಚನವೂ ಇದೆ. ಇಲ್ಲಿ ಈ ಎರಡು ವಾಕ್ಯಗಳಿಂದ ಶಿವಜೀವರಿಗೆ ಅಭೇದವು ತೋರುತ್ತದೆ. "ಪುಣ್ಯಪಾಪಗಳಿಂದ ದೂರನಾಗಿ ಹೃದಯದ ಎಲ್ಲಾ ದುಃಖಗಳಿಂದಲೂ ವಿಮುಕ್ತನಾಗುತ್ತಾನೆ" ಎಂದು ಶರೀರೇಂದ್ರಿಯಗಳಿಗಿಂತಲೂ ಬೇರೆಯಾದ ಪರಶಿವನನ್ನು ಇಲ್ಲಿ ಹೇಳಿರುವುದರಿಂದ ಇದು ಜೀವನಿಗೆ ಅನ್ವಯಿಸುವುದಿಲ್ಲವೆಂದು ಸಿದ್ಧವಾಯಿತು.

**ಪರಮೇಶ್ವರಪಕ್ಷೇ ಹೇತ್ವಂತರಮಾಹ—ಪತ್ಯಾದಿಶಬ್ದೇಭ್ಯಃ ॥ ೪೩ ॥**

**ಇತಶ್ಚ ಪರಮಶಿವಪ್ರತಿಪಾದನಮೇವೈತತ್. ತತೋಽಸ್ಮಿನ್ಸಂದರ್ಭೇ ಪರಮೇಶ್ವರಪ್ರತಿಪಾದಕಾಃ ಪತ್ಯಾದಯಶ್ಶಬ್ದಾ ದೃಶ್ಯಂತೇ· "ಸರ್ವಸ್ಯೇಶಾನಸ್ಸರ್ವಾಧಿಪತಿಃ", "ಭೂತಾಧಿಪತಿರೇಷ ಭೂತಪಾಲಃ" ಇತ್ಯಾದಿಕಂ ಶ್ರೂಯತೇ. "ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿಃ" "ಪಶೂನಾಂ ಪತಯೇ ವೃಕ್ಷಾಣಾಂ ಪತಯೇ ಜಗತಾಂ ಪತಯೇ" ಇತ್ಯಾದಿಷು ಸರ್ವಾಧಿಪತಿತ್ವಂ ಪರಮೇಶ್ವರಸ್ಯೈವ ಪ್ರಸಿದ್ಧಂ. ಏವಂ ಸರ್ವೇಶ್ವರತ್ವಾದಿಜಾತೀಯಕಾಃ ಧರ್ಮಾಃ ನ ಕುತ್ರಾಪಿ ಜೀವಸ್ಯಾದೃಷ್ಟತ್ವಾದತ್ರ ಪರಮಶಿವ ಏವ ಪ್ರತಿಪಾದ್ಯತ ಇತಿ ರಾದ್ಧಾಂತಃ.**

**ಇತಿ ಶ್ರೀಕರಭಾಷ್ಯೇ ಪ್ರಥಮಾಧ್ಯಾಯೇ ತೃತೀಯಃ ಪಾದಃ**

ಪರಮೇಶ್ವರನ ಬಗ್ಗೆ ಬೇರೊಂದು ಹೇತುವಿದೆ. **ಪತ್ಯಾದಿಶಬ್ದೇಭ್ಯಃ ॥ ೪೩ ॥**

ಈ ಪ್ರಕರಣದಲ್ಲಿ ಪರಮೇಶ್ವರನನ್ನು ತಿಳಿಸುವ ಪತ್ಯಾದಿಶಬ್ದಗಳೇ ಕಂಡು ಬಂದಿವೆ. "ಅವನು ಎಲ್ಲವನ್ನು ವಶಪಡಿಸಿಕೊಂಡವನು. ಸರ್ವಶಕ್ತನೂ, ಸರ್ವಾಧಿಪತಿಯೂ ಆಗಿದ್ದಾನೆ" (ಬೃ. 4–4–22). "ಇವನು ಸರ್ವೇಶ್ವರನು ಭೂತಪತಿಯು ಮತ್ತು ಭೂತಪಾಲಕನು" "ಚತುರ್ಮುಖನಿಗೆ ಜನಕನಾದ ಪರಶಿವಬ್ರಹ್ಮವು ಪ್ರಣವಾತ್ಮಕವಾಗಿ ಸದಾಶಿವನೆನಿಸಿದ್ದಾನೆ". "ಉಮಾಪತಿಯೂ ಪಶುಪತಿಯೂ ಆದವನಿಗೆ ನಮಸ್ಕಾರ" "ಪಶುಗಳಿಗೂ, ವೃಕ್ಷಗಳಿಗೂ, ಜಗತ್ತುಗಳಿಗೂ ಪತಿಯಾದವನಿಗೆ ನಮಸ್ಕಾರ". ಹೀಗೆ ಅನೇಕ ಶ್ರುತಿಗಳಲ್ಲಿ ಪರಮೇಶ್ವರನೇ ಸರ್ವಾಧಿಪತಿ ಎಂದು ಪ್ರಸಿ

ದ್ಧನಾಗಿದ್ದಾನೆ. ಹೀಗೆ ಸರ್ವೇಶ್ವರತ್ವ ಮೊದಲಾದ ಧರ್ಮಗಳು ಜೀವನಿಗೆ ಅನ್ವಯಿಸುವುದಾಗಿ ಎಲ್ಲಿಯೂ ಕಂಡುಬಂದಿಲ್ಲವಾದ್ದರಿಂದ ಇಲ್ಲಿ ಪರಶಿವನೇ ಪ್ರಾಜ್ಞನೆನಿಸಿರುವನೆಂಬುದು ಸಿದ್ಧಾಂತವಾಗಿದೆ.

**ಇಲ್ಲಿಗೆ ಪ್ರಥಮಾಧ್ಯಾಯದ ತೃತೀಯಪಾದ ಮುಗಿಯಿತು.**

---

## ಅಥ ಶ್ರೀಕರಭಾಷ್ಯೇ ಪ್ರಥಮಾಧ್ಯಾಯೇ ಚತುರ್ಥಃ ಪಾದಃ

ಶಾಸ್ತ್ರಾರಂಭೇ ಮುಮುಕ್ಷೂಣಾಂ ಪುನರಾವೃತ್ತಿರಹಿತಫಲಸಿದ್ಧ್ಯರ್ಥಂ ಬ್ರಹ್ಮಜಿಜ್ಞಾಸಾಮುಪದಿಶ್ಯ ತದ್ಬ್ರಹ್ಮಣೋ ನಿರ್ವಿಶೇಷತ್ವನಿರಾಕಾರಣಪೂರ್ವಕಸರ್ವಜ್ಞತ್ವಾದಿಪ್ರಸಾಧನಾರ್ಥಂ 'ಲಕ್ಷಣಪ್ರಮಾಣಾಧೀನಾ ಹಿ ವಸ್ತುಸಿದ್ಧಿಃ' ಇತಿ ನ್ಯಾಯೇನ ವಸ್ತುಸಿದ್ಧ್ಯರ್ಥಂ ಜಗಜ್ಜನ್ಮಾದಿಲಕ್ಷಣಂ ಶಾಸ್ತ್ರಪ್ರಮಾಣಕತ್ವಮುಕ್ತ್ವಾ ಪರಸ್ಪರವಿರುದ್ಧಸ್ವಭಾವಭೇದಾಭೇದಶ್ರುತೀನಾಮವಿರೋಧತಯಾ ಚತುರ್ಥಸೂತ್ರೇ ಬ್ರಹ್ಮಣಿ ಸಮನ್ವಯಂ ಪ್ರದರ್ಶಯಿತ್ವಾ, ಉಕ್ತಬ್ರಹ್ಮಲಕ್ಷಣಸ್ಯ ಪ್ರಧಾನೇ ಅತಿವ್ಯಾಪ್ತಿಮಾಶಂಕ್ಯ "ಈಕ್ಷತೇರ್ನಾಶಬ್ದಂ" ಇತ್ಯಾರಭ್ಯ "ಗತಿಸಾಮಾನ್ಯಾತ್" ಇತ್ಯಂತಂ ಅಶಬ್ದತ್ವೇನ ಪ್ರಧಾನಜಗತ್ಕಾರಣತ್ವಂ ಪ್ರಥಮಪಾದೇ ವೇದಾಂತವಾಕ್ಯೈರ್ನಿವಾರಿತಂ. ದ್ವಿತೀಯತೃತೀಯಪಾದಯೋರಸ್ಪಷ್ಟಸ್ಪಷ್ಟಬ್ರಹ್ಮಲಿಂಗಾನಾಮುಪಾಸನದ್ವಾರಾ ಬ್ರಹ್ಮಣಿ ಸಮನ್ವಯಮುಪಪಾದ್ಯ, ಕ್ವಚಿಚ್ಛಾಖಾಸು ಪ್ರಧಾನಜಗತ್ಕಾರಣತ್ವಪ್ರತಿಪಾದಕಶಬ್ದಾನಾಂ ದೃಷ್ಟತ್ವಾದಶಬ್ದತ್ವಂ ಕಥಂ ತಸ್ಯೋಪಪದ್ಯತ ಇತ್ಯಾಶಂಕಾಯಾಂ ಚತುರ್ಥಪಾದೋ ಹ್ಯಾರಭ್ಯತೇ. ಆನುಮಾನಿಕಾಧಿಕರಣಂ ||೧||

ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ ||೧|| ಕಠವಲ್ಲ್ಯಾಮುಪದಿಶ್ಯತೇಽಸ್ಯ ವಿಷಯಃ. "ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ । ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ಪರಃ । ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ । ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರ ಗತಿಃ ||" ಇತಿ. ಇಹ ಮಹತ್ಪರತ್ವೇನೋಪದಿಶ್ಯಮಾನಮವ್ಯಕ್ತಶಬ್ದನಿರ್ದಿಷ್ಟಂ ಸಾಂಖ್ಯಪ್ರಧಾನಂ ಉತ ಶಾರೀರೋ ವೇತಿ ಸಂದೇಹಃ. ಪೂರ್ವಾಪರವಾಕ್ಯಸಂದರ್ಭೇಣ ಪ್ರಧಾನಮೇವಾತ್ರ ಪ್ರತಿಜ್ಞಾಯತೇ. ಸಾಂಖ್ಯಶಾಸ್ತ್ರೇ ಮಹದವ್ಯಕ್ತಪುರುಷಶಬ್ದಾನಾಂ ತತ್ತ್ವತ್ರಯೇ ಪ್ರಸಿದ್ಧತ್ವಾತ್ತೇಷಾಮೇವಾತ್ರ ಪ್ರತ್ಯಭಿಜ್ಞಾನಾತ್ ನಾಶಬ್ದತ್ವಂ ತಸ್ಯೋಪಪನ್ನಂ. ಅವ್ಯಕ್ತಪ್ರಕೃತಿಪ್ರಧಾನಮಾಯಾದಿಶಬ್ದಾನಾಂ ಪ್ರಾತ್ಯಕ್ಷಿಕವೇದೇ ದರ್ಶ

ನಾಚ್ಚ, ಬ್ರಹ್ಮಣ್ಯೇವ ವೇದಾಂತಾನಾಂ ಸಮನ್ವಯ ಇತಿ ನಿಯಮಾಭಾವಾತ್, ಕಾಪಿಲಸ್ಮೃತ್ಯಾದಿಷು ಪ್ರಧಾನಸ್ಯ ಜಗತ್ಕಾರಣತ್ವೇ ಶ್ರುತಿಸ್ಮೃತಿನ್ಯಾಯಸಿದ್ಧತ್ವಾದೇವಾತ್ರ ಪ್ರತಿಪಾದ್ಯತ ಇತಿ ಚೇದ್ವಕ್ಷ್ಯಾಮಃ ಆನುಮಾನಿಕಮಿತ್ಯಾದಿನಾ. ಆನುಮಾನಿಕಮಿತ್ಯನುಮಾನಗಮ್ಯತ್ವಾತ್ಪ್ರಧಾನಂ. ತದಪ್ಯೇಕೇಷಾಂ ಶಾಖಾನಾಂ ಪ್ರಸಿದ್ಧಂ. ಅವ್ಯಕ್ತಶಬ್ದೇನ ಪ್ರತ್ಯಕ್ಷಂ ಪ್ರತಿಪಾದ್ಯತ ಇತ್ಯಶಬ್ದತ್ವಮಸಿದ್ಧಮಿತಿ ಚೇನ್ನ, ಶರೀರಸ್ಯ ಪೂರ್ವವಾಕ್ಯೇ ರಥರೂಪೇಣ ವಿನ್ಯಸ್ತಸ್ಯ ಪ್ರತಿಪಾದಿತಸ್ಯ ಅತ್ರ ವಾಕ್ಯೇ ಅವ್ಯಕ್ತಶಬ್ದೇನ ಗೃಹೇತೇರ್ಗ್ರಹಣಾತ್. ನನ್ವವ್ಯಕ್ತಶಬ್ದಸ್ಯ ಕಥಂ ಶರೀರಪರತ್ವಮಿತ್ಯತ ಆಹ ದರ್ಶಯತಿ ಚೇತಿ. ಪೂರ್ವೋಕ್ತವಾಕ್ಯಸಂದರ್ಭಃ ಪರ್ಯಾಲೋಚ್ಯಮಾನಃ ಔಚಿತ್ಯೇನಾವ್ಯಕ್ತಶಬ್ದೇನ ಶರೀರಗ್ರಹಣಂ ದರ್ಶಯತಿ. "ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು। ಬುದ್ಧಿಂ ಚ ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ। ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್। ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ॥" ಇತ್ಯುಪಕ್ರಮ್ಯ "ಸೋಽಧ್ವನಃ ಪರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ" ಇತಿ ಶ್ರಾವಯಿತ್ವಾ ಕಿಂ ತದ್ವಿಷ್ಣೋಃ ಪದಮಿತ್ಯಾಕಾಂಕ್ಷಾಯಾಂ "ಇಂದ್ರಿಯೇಭ್ಯಃ ಪರಾಃ" ಇತ್ಯಾರಭ್ಯ "ಸಾ ಕಾಷ್ಠಾ ಸಾ ಪರಾಗತಿಃ" ಇತ್ಯಂತೇನ ಪ್ರಕೃತೇಂದ್ರಿಯೇಭ್ಯಃ ಪರಾಂ ಗತಿಂ ದರ್ಶಯತಿ. ಅತ್ರ ಪೂರ್ವಪ್ರಕೃತಾನಾಮಿಂದ್ರಿಯಾರ್ಥಮನೋಬುದ್ಧೀನಾಮಸ್ಮಿನ್ವಾಕ್ಯೇ ಸ್ವಶಬ್ದೈರೇವೋಪಾದಾನಂ. ಪೂರ್ವತ್ರಾತ್ಮಶಬ್ದೇನೋಪದಿಷ್ಟಾ ಉತ್ತರತ್ರ ಪುರುಷಶಬ್ದೇನ, ಉತ್ತರವಾಕ್ಯೇ ಮಹಚ್ಛಬ್ದೇನ ಚೋಕ್ತಾ ಬುದ್ಧಿಃ ಪೂರ್ವವಾಕ್ಯೇ ಬುದ್ಧಿಶಬ್ದೇನೈವ ಸಂಗೃಹೀತಾ. ಬುದ್ಧಿರ್ದ್ವಿವಿಧಾ ಹಿರಣ್ಯಗರ್ಭಬುದ್ಧಿರಸ್ಮದಾದಿಬುದ್ಧಿಶ್ಚ. "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ" ಇತಿ ಶ್ರುತಿದರ್ಶನಾತ್, ಪ್ರಥಮೋತ್ಪನ್ನಹಿರಣ್ಯಗರ್ಭಬುದ್ಧಿರಸ್ಮದಾದಿಬುದ್ಧೀನಾಂ ಪರಾ. ತಸ್ಮಾದಸ್ಯಾಃ ಮಹತ್ತ್ವಂ. ಪೂರ್ವತ್ರ ದ್ವಯಮೇಕೀಕೃತ್ಯ ನಿರ್ದಿಷ್ಟಂ. ಇಹ ಪೃಥಕ್ತ್ವಮಿತಿ ವಿವೇಕಃ. ಪೂರ್ವತ್ರ ಶರೀರಪದಮುತ್ತರತ್ರಾವ್ಯಕ್ತಪದಂ. ತಯೋಃ ಪರಿಶೇಷಾದೇಕಾರ್ಥತ್ವಮಿತ್ಯವಗಂತವ್ಯಂ ಶರೀರಮಿತಿ. "ತದ್ವಿಷ್ಣೋಃ ಪರಮಂ"ಇತ್ಯತ್ರ ಪಂಚಮ್ಯರ್ಥ ಏವ ನಿಶ್ಚೀಯತೇ. ತಥಾ ಬ್ರಹ್ಮಗೀತಾಸು "ಪದಂ ಯತ್ಪರಮಂ ವಿಷ್ಣೋಸ್ತದೇವಾಖಿಲದೇಹಿನಾಂ।ಋತೇ ಸಾಂಬಂ ಮಹಾದೇವಂ ಕಿಂ ಭವೇತ್ಪರಮಂ ಪದಂ"ಇತಿ ದರ್ಶನಾತ್."ವೇದಾರ್ಥೋಽಯಂ ಸ್ವಯಂ ಜ್ಞಾತ್ವಾ ತತ್ರಾಜ್ಞಾನಂ ಪ್ರಚಕ್ಷತೇ। ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹ

ಯೇತ್ ॥ " ಇತಿ ಉಪಬೃಂಹಣಾದಿಪುರಸ್ಕಾರೇಣೈವ ವೇದಾರ್ಥವಿಜ್ಞಾನವ್ಯಪದೇಶಾತ್ ನೇತರೋಽತ್ರ ಪ್ರತಿಪಾದ್ಯಃ. ಕಿಂಚ " ಏಷ ಸರ್ವೇಷು ಭೂತೇಷು ಗೂಢೋಽತ್ಮಾ ನ ಪ್ರಕಾಶತೇ । ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥ " ಇತಿ ವಾಕ್ಯೇ. ನಾರಾಯಣಾತ್ಪರಸ್ಯ ಶಿವಸ್ಯ ದುರವಗಾಹಿತ್ವಮುಪದಿತ್ಯ ತದುಪಲಬ್ಧ್ಯರ್ಥಂ ಯೋಗಉಪನ್ಯಸ್ಯತೇ. "ಯಚ್ಛೇದ್ವಾಙ್ಮನಸಿ ಪ್ರಾಜ್ಞಸ್ತದ್ಯಚ್ಛೇದ್ ಜ್ಞಾನ ಆತ್ಮನಿ । ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ತದ್ಯಚ್ಛೇಚ್ಛಾಂತ ಆತ್ಮನಿ ॥ " ಇತ್ಯೇತದುಪದಿಶ್ಯತೇ. ವಾಚಂ ಮನಸಿ ಸಂಯಚ್ಛೇದ್ವಾಗಾದಿಬಾಹ್ಯೇಂದ್ರಿಯವ್ಯಾಪಾರಂ ಪರಿತ್ಯಜ್ಯ ಮನೋಮಾತ್ರೇಣಾವತಿಷ್ಠೇತ್. ಮನೋವಿಷಯಕಲ್ಪನಾಭಿಮುಖವಿಕಲ್ಪದೋಷವರ್ಜನೇನ ಜ್ಞಾನಂ ಬುದ್ಧೌ ಅಧ್ಯವಸಾಯಸ್ವಭಾವಾಯಾಂ ಧಾರಯೇತ್. ತಾಮಪಿ ಬುದ್ಧಿಂ ಮಹತ್ಯಾತ್ಮನಿ ಭೋಕ್ತರಿ ಅಗ್ರ್ಯಾಯಾಂ ವಾ ಬುದ್ಧೌ ಸೂಕ್ಷ್ಮತಾಪಾದನೇನ ನಿಯಚ್ಛೇತ್. ಮಹಾಂತಂ ಚಾತ್ಮಾನಂ ಶಾಂತ ಆತ್ಮನಿ ಪರಸ್ಮಿನ್ ಪುರುಷೇ ಶಿವಾಪರಪರ್ಯಾಯೇ ಪರಸ್ಯಾಂ ಕಾಷ್ಠಾಯಾಂ ಪ್ರತಿಷ್ಠಾಪಯೇತ್. ತಸ್ಮಾದುಪಕ್ರಮೋಪಸಂಹಾರಮಧ್ಯಪರಾಮರ್ಶೇನ ಸಾಂಖ್ಯಪ್ರಧಾನಸ್ಯ ನಿರವಕಾಶತ್ವಾತ್ಪರಮಶಿವ ಏವ ಸರ್ವೋಪಾಸ್ಯತ್ವೇನ ವಿಧೀಯತ ಇತಿ ರಾದ್ಧಾಂತಃ.

## ಪ್ರಥಮಾಧ್ಯಾಯದ ಚತುರ್ಥಪಾದ

ಮುಮುಕ್ಷುಗಳಿಗೆ ನಿತ್ಯಾನಂದವನ್ನು ದೊರಕಿಸಲಿಕ್ಕಾಗಿ ಶಾಸ್ತ್ರಾರಂಭದಲ್ಲಿ ಬ್ರಹ್ಮಜಿಜ್ಞಾಸೆಯನ್ನು ಉಪದೇಶಿಸಿ, ಬ್ರಹ್ಮ ನಿರ್ವಿಶೇಷವೆಂಬುದನ್ನು ನಿರಾಕರಿಸಿ ಅವನಲ್ಲಿ ಸರ್ವಜ್ಞತೆಯನ್ನು ಸಾಧಿಸಲಿಕ್ಕಾಗಿ "ಲಕ್ಷಣ ಪ್ರಮಾಣಗಳಿಂದ ಪ್ರಮೇಯವು ಸಿದ್ಧಿಸುವುದು" ಎಂಬ ನ್ಯಾಯದಂತೆ ಪರಶಿವನಿಗೆ ಜಗಜ್ಜನ್ಮಾದಿಕಾರಣವೆಂಬ ಲಕ್ಷಣವನ್ನು ಶಾಸ್ತ್ರಾಧಾರದಮೇಲೆ ಹೇಳಿ, ವಿರುದ್ಧಸ್ವಭಾವದ ಭೇದಾಭೇದ ಶ್ರುತಿಗಳಿಗೆ ಪರಸ್ಪರ ವಿರೋಧವಾಗದಂತೆ ಪರಶಿವನಲ್ಲಿಯೇ ಸಮನ್ವಯವನ್ನು ತೋರಿಸಿ, ಆ ಲಕ್ಷಣವು ಪ್ರಧಾನದಲ್ಲಿಯೂ ಕಾಣಬರುವುದೆಂದು ಶಂಕಿಸಿ 'ಈಕ್ಷತೇರ್ನಾಶಬ್ದಂ' ಎಂದಾರಂಭಿಸಿ 'ಗತಿಸಾಮಾನ್ಯಾತ್' ಎಂಬುದರವರೆಗಿನ ಸೂತ್ರಗಳಲ್ಲಿ ಪ್ರಧಾನವು ಜಗತ್ಕಾರಣವಲ್ಲವೆಂದು ಸ್ಥಾಪಿಸಿ, ಎರಡು ಮೂರನೆ ಪಾದಗಳಲ್ಲಿ ಅಸ್ಪಷ್ಟವಾದ ಬ್ರಹ್ಮಲಿಂಗಗಳಿಗೆ ಉಪಾಸನೆಯ ಮೂಲಕ ಪರಶಿವನಲ್ಲಿ ಸಮನ್ವಯಮಾಡಿ ಕೆಲವು ಶಾಖೆಗಳಲ್ಲಿ ಪ್ರಧಾನವೇ ಜಗತ್ಕಾರಣವೆಂದು ಪ್ರತಿಪಾದಿಸುವ ಶಬ್ದಗಳು ಕಂಡುಬಂದಿರುವುದರಿಂದ ಅದು ಶ್ರುತಿಪ್ರತಿಪಾದಿತವಲ್ಲವೆಂಬುದು ಹೇಗೆ ಹೊಂದುತ್ತದೆ ಎಂಬ ಆಶಂಕೆಯಿಂಡ ಚತುರ್ಥಪಾದವು ಆರಂಭವಾಗುತ್ತದೆ.

**ಆನುಮಾನಿಕಾಧಿಕರಣಂ ||೧|| ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹಿತೇರ್ದರ್ಶಯತಿ ಚ ||೧||**

ಕಠವಲ್ಲಿಯಲ್ಲಿ ಇದರ ವಿಷಯ ಬಂದಿದೆ. "ಇಂದ್ರಿಯಗಳಿಗಿಂತ ವಿಷಯಗಳೂ, ಅವಕ್ಕಿಂತ ಮನಸ್ಸೂ, ಅದಕ್ಕಿಂತ ಬುದ್ಧಿಯೂ, ಅದಕ್ಕಿಂತ ಮಹತ್ತಾದ ಆತ್ಮವೂ, ಅದಕ್ಕಿಂತ ಅವ್ಯಕ್ತವೂ, ಅದಕ್ಕಿಂತ ಪುರುಷನೂ ಹೆಚ್ಚಿನವನು. ಅವನಿಗಿಂತ ಹೆಚ್ಚಿನವನಿಲ್ಲ. ಅವನೇ ಕೊನೆಯ ಗಮ್ಯಸ್ಥಲವಾಗಿದ್ದಾನೆ" ಇಲ್ಲಿ ಬುದ್ಧಿಗಿಂತ ಹೆಚ್ಚಿನದೆಂದು ಹೇಳಿರುವ ಅವ್ಯಕ್ತವು ಸಾಂಖ್ಯರು ಹೇಳಿರುವ ಪ್ರಧಾನವೇ ಅಥವಾ ಜೀವನೇ ಎಂಬ ಸಂದೇಹ ಬರುತ್ತದೆ. ಹಿಂದಿನ ಮುಂದಿನ ವಾಕ್ಯಸಂದರ್ಭದಿಂದ ಇದು ಪ್ರಧಾನವೆಂದೇ ತಿಳಿದುಬರುತ್ತದೆ. ಸಾಂಖ್ಯಶಾಸ್ತ್ರದಲ್ಲಿ ಪ್ರಸಿದ್ಧವಾದ ಮಹತ್, ಅವ್ಯಕ್ತ, ಮಾಯಾ ಎಂದು ಮೂರು ತತ್ತ್ವಗಳನ್ನೇ ಈ ಶ್ರುತಿಯಲ್ಲಿ ಹೇಳಿರುವುದರಿಂದ ಪ್ರಧಾನವನ್ನು ಶ್ರುತಿಯಲ್ಲಿ ಹೇಳಿಲ್ಲವೆಂಬುದು ಅಯುಕ್ತವಾಗುತ್ತದೆ. ಅವ್ಯಕ್ತ, ಪ್ರಕೃತಿ, ಪ್ರಧಾನ, ಮಾಯಾ ಈ ಬಗೆಯ ಶಬ್ದಗಳು ವೇದದಲ್ಲಿ ಸ್ಪಷ್ಟವಾಗಿ ಕಂಡು ಬಂದಿವೆಯಾದ್ದರಿಂದ ವೇದಾಂತವಾಕ್ಯಗಳೆಲ್ಲಕ್ಕೂ ಬ್ರಹ್ಮದಲ್ಲಿಯೇ ಸಮನ್ವಯವೆಂದು ನಿಯಮಮಾಡಲಾಗುವುದಿಲ್ಲ. ಪ್ರಧಾನವೇ ಜಗತ್ಕಾರಣವೆಂದು ಕಪಿಲರು ಸ್ಮೃತಿಯಲ್ಲಿ ಹೇಳಿದ್ದು ಶ್ರುತಿಗೂ ಸಮ್ಮತವಾದ್ದರಿಂದ ಅದೇ ಜಗತ್ಕಾರಣವಾಗಬಹುದು ಎಂದು ಆಕ್ಷೇಪಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಸೂತ್ರದಲ್ಲಿ ಆನುಮಾನಿಕವೆಂಬ ಪದವು ಅನುಮಾನದಿಂದ ತಿಳಿದುಬರುವ ಪ್ರಧಾನವನ್ನು ಬೋಧಿಸುತ್ತದೆ. ಈ ಪ್ರಧಾನವನ್ನು ಕೆಲವು ಶಾಖೆಗಳು ಅವ್ಯಕ್ತಶಬ್ದದಿಂದ ತಿಳಿಸಿರುವುದರಿಂದ ಅದಕ್ಕೂ ಶಬ್ದಪ್ರಮಾಣವು ಸಿದ್ಧಿಸಿತು. ಹೀಗೆ ಶ್ರುತಿ ಸ್ಮೃತಿ ನ್ಯಾಯಗಳಿಂದ ಸಿದ್ಧವಾಗುವುದರಿಂದ ಪ್ರಧಾನವೇ ಜಗತ್ಕಾರಣವಾಗಲಿ ಎಂದರೆ ಇದು ಹೊಂದುವುದಿಲ್ಲ. ಯಾಕೆಂದರೆ ಶ್ರುತಿಯಲ್ಲಿ ಶರೀರವನ್ನು ರಥದೊಡನೆ ಹೋಲಿಸುವಾಗ ಮಾತ್ರ ಅವ್ಯಕ್ತಶಬ್ದದ ಪ್ರಯೋಗ ಕಂಡುಬಂದಿದೆ. "ಆತ್ಮನೇ ರಥಿ, ಶರೀರವೇ ರಥ, ಬುದ್ಧಿಯೇ ಸಾರಥಿ, ಮನಸ್ಸೇ ಹಗ್ಗ. ಇಂದ್ರಿಯಗಳೇ ಕುದುರೆಗಳು. ರೂಪಾದಿ ವಿಷಯಗಳೇ ಭೋಜ್ಯವಸ್ತು. ಶರೀರ ಇಂದ್ರಿಯ ಮನಸ್ಸುಗಳಿಂದ ಕೂಡಿದ ಆತ್ಮನೇ ಭೋಕ್ತನು" ಹೀಗೆ ಆರಂಭಿಸಿ "ಇಂತವನು ಪ್ರಯಾಣದ ಕೊನೆಯನ್ನು ಮುಟ್ಟುತ್ತಾನೆ, ಅದೇ ಕೊನೆಯ ಸ್ಥಾನ"ಎಂದು ತಿಳಿಸಿ 'ಅದಕ್ಕೂ ಹೆಚ್ಚಿನದು ಯಾವುದು'ಎಂಬ ಆಕಾಂಕ್ಷೆಗೆ "ಇಂದ್ರಿಯಗಳಿಗಿಂತ ವಿಷಯಗಳು" ಎಂದಾರಂಭಿಸಿ ಕೊನೆಗೆ ಗಮ್ಯಸ್ಥಾನವನ್ನು ಹೇಳಿರುವುದರಿಂದ ಇದನ್ನು ತಿಳಿಸುವುದೇ ಶ್ರುತಿಯ ಉದ್ದೇಶವಾಗಿದೆ. ಇಲ್ಲಿ ಇಂದ್ರಿಯ ಅರ್ಥ-ಮನ-ಬುದ್ಧಿಗಳನ್ನು ಆಯಾಯ ಶಬ್ದಗಳಿಂದಲೇ ತಿಳಿಸಲಾಗಿದೆ. ಆದರೆ ಮೊದಲು ಆತ್ಮಶಬ್ದದಿಂದಲೂ ಪುರುಷಶಬ್ದದಿಂದಲೂ, ಆಮೇಲೆ ಮುಂದಿನ ವಾಕ್ಯದಲ್ಲಿ ಮಹತ್‌ಶಬ್ದದಿಂದಲೂ ಹೇಳಿರುವ ಬುದ್ಧಿಯನ್ನೇ ಹಿಂದಿನ ವಾಕ್ಯದ ಬುದ್ಧಿಶಬ್ದವು ತಿಳಿಸುತ್ತದೆ. ಬುದ್ಧಿ ಹಿರಣ್ಯಗರ್ಭನ ಬುದ್ಧಿ ಮತ್ತು ನಮ್ಮಂತವರ ಬುದ್ಧಿ ಎಂದು

ಎರಡು ಬಗೆಯಾಗಿದೆ. ಶ್ರುತಿಯಲ್ಲಿ ಹಿರಣ್ಯಗರ್ಭ ಮೊದಲು ಹುಟ್ಟಿದವನೆಂದು ಹೇಳಿರುವುದರಿಂದ ಅವನ ಬುದ್ಧಿ ನಮ್ಮದಕ್ಕಿಂತಲೂ ಹೆಚ್ಚಿನದು. ಆದ್ದರಿಂದ ಅದು ಮಹತ್ ಎನಿಸಿದೆ. 'ಬುದ್ಧೇರಾತ್ಮಾ ಮಹಾನ್ ಪರಃ' ಎಂಬಲ್ಲಿ ಮಹತ್ ಎಂಬುದು ಹಿರಣ್ಯಗರ್ಭನ ಬುದ್ಧಿಗೆ ಅನ್ವಯಿಸುತ್ತದೆ. ಶ್ರುತಿಯಲ್ಲಿ ಮೊದಲು ಎರಡನ್ನೂ ಒಟ್ಟಿಗೆ ಸೇರಿಸಿ ಹೇಳಿದೆ. ಇಲ್ಲಿ ಬೇರೆಬೇರೆಯಾಗಿ ಹೇಳಿದೆ ಎಂದಿಷ್ಟು ಮಾತ್ರ ಇಲ್ಲಿ ವಿಶೇಷವೆನಿಸಿದೆ. ಮೊದಲು ಶರೀರಪದವನ್ನೂ, ಆಮೇಲೆ ಅವ್ಯಕ್ತಪದವನ್ನೂ ಹೇಳಿರುವುದರಿಂದ ಎರಡೂ ಒಂದೇ ಅರ್ಥವನ್ನು ತಿಳಿಸುತ್ತವೆ. "ತದ್ವಿಷ್ಣೋಃ ಪರಮಂ ಪದಂ' ಎಂಬಲ್ಲಿ ವಿಷ್ಣೋಃ ಎಂಬುದಕ್ಕೆ 'ವಿಷ್ಣುವಿಗಿಂತಲೂ' ಎಂದು ಪಂಚಮೀವಿಭಕ್ತಿಯ ಅರ್ಥವನ್ನೇ ಹೇಳಬೇಕು. 'ವಿಷ್ಣುವಿಗಿಂತ ಹೆಚ್ಚಿನ ಸ್ಥಾನವೇ ಎಲ್ಲರಿಗೂ ಗಮ್ಯವಾಗಿರುವುದರಿಂದ ಮಹಾದೇವನನ್ನು ಬಿಟ್ಟರೆ ಬೇರೆ ಗಮ್ಯಸ್ಥಲವೆಲ್ಲಿದ್ದೀತು ?" ಎಂದು ಈ ಶ್ರುತಿಯ ಅಭಿಪ್ರಾಯವಾಗಿದೆ. ಇತಿಹಾಸಪುರಾಣಗಳ ಪೋಷಕ ವಾಕ್ಯಗಳ ಆಧಾರದಮೇಲೆ ವೇದಾರ್ಥವನ್ನು ತಿಳಿಯಬೇಕೆಂದು ಸ್ಮೃತಿಯಲ್ಲಿ ಹೇಳಿದೆ. ಆದ್ದರಿಂದ ಶರೀರರೂಪಕದ ಈ ಶ್ರುತಿಗೆ ಮಹತ್ಪದದಿಂದ ಪ್ರಧಾನವನ್ನು ವಿಧಿಸುವ ಉದ್ದೇಶವಿಲ್ಲ. ಇದೂ ಅಲ್ಲದೆ, "ಎಲ್ಲಾ ಜೀವರಲ್ಲೂ ಆತ್ಮನು ಗೂಢನಾಗಿದ್ದಾನೆ. ಅವನು ಸೂಕ್ಷ್ಮಬುದ್ಧಿಗೆ ಮಾತ್ರ ಗೋಚರನಾಗುವನು' ಎಂಬ ವಾಕ್ಯದಲ್ಲಿ ನಾರಾಯಣನಿಗಿಂತ ಆಚಿನ ಶಿವನನ್ನು ತಿಳಿಯಲಶಕ್ಯವೆಂದು ಹೇಳಿ ಅವನೊಡನೆ ಬೆರೆಯಲಿಕ್ಕಾಗಿ ಶ್ರುತಿಯು ಯೋಗಮಾರ್ಗವನ್ನು ತಿಳಿಸುತ್ತದೆ. 'ಜ್ಞಾನಿಯು ಮಾತನ್ನು ಮನಸ್ಸಿನಲ್ಲೂ, ಮನಸ್ಸನ್ನು ಬುದ್ಧಿಯಲ್ಲೂ, ಬುದ್ಧಿಯನ್ನು ಮಹದಾತ್ಮನಲ್ಲೂ, ಅದನ್ನು ಶಾಂತಾತ್ಮನೆನಿಸಿದ ಪರಶಿವನಲ್ಲೂ ಸೇರಿಸಬೇಕು" ಎಂದು ಅಲ್ಲಿ ಹೇಳಲಾಗಿದೆ. ಜೀವನು ವಾಗ್ವ್ಯವಹಾರಗಳೆಲ್ಲವನ್ನೂ ತಡೆದು ಮನಸ್ಸಿನಲ್ಲಿ ನಿಲ್ಲಬೇಕು. ಮನಸ್ಸಿನ ಎಲ್ಲಾ ಕಲ್ಪನೆಗಳನ್ನೂ ತೊರೆದು ನಿಶ್ಚಯಾತ್ಮಕವಾದ ಬುದ್ಧಿಯಲ್ಲಿ ನಿಲ್ಲಬೇಕು. ಆ ಬುದ್ಧಿಯನ್ನು ಮಹದಾತ್ಮನೆನಿಸಿದ ಭೋಕ್ತೃ ಅಥವಾ ಹಿರಣ್ಯಗರ್ಭನ ಬುದ್ಧಿಯಲ್ಲಿ ಸೇರಿಸಬೇಕು. ಆ ಮಹದಾತ್ಮನನ್ನು ಅಂತ್ಯಸ್ಥಾನವೆನಿಸಿದ ಪರಶಿವನಲ್ಲಿ ಬೆರೆಸಬೇಕು. ಹೀಗೆ ಶ್ರುತಿಯಲ್ಲಿ ಮೊದಲು ಕೊನೆ ಮಧ್ಯದಲ್ಲಿ ಹೇಳಿರುವುದರಿಂದ ಸಾಂಖ್ಯರ ಪ್ರಧಾನಕ್ಕೆ ಅವಕಾಶವೇ ಇಲ್ಲದ್ದರಿಂದ ಇಲ್ಲಿ ಪರಶಿವನನ್ನೇ ಎಲ್ಲರಿಗೂ ಉಪಾಸ್ಯನೆಂದು ವಿಧಿಸಲಾಗಿದೆ.

**ನನು ಸ್ಥೂಲಶರೀರಸ್ಯ ವ್ಯಕ್ತಶಬ್ದಾರ್ಹಸ್ಯ ಕಥಮವ್ಯಕ್ತಶಬ್ದವಾಚ್ಯತ್ವಮಿತ್ಯಾಶಂಕಾಯಾಮಾಹ—ಸೂಕ್ಷ್ಮಂ ತದರ್ಹತ್ವಾತ್ ॥ ೨ ॥**

**ತುಶಬ್ದೇನ ಶಂಕಾನಿರಾಸಃ, ದರ್ಶಯತೀತ್ಯನುಷಂಗಃ ಸ್ಥೂಲಶರೀರಾರಂಭಕಂ ಭೂತಾನಾಂ ಸೂಕ್ಷ್ಮಕಾರಣಂ ಅವ್ಯಕ್ತಶಬ್ದೇನ ದರ್ಶಯತಿ. ಕುತಃ ತದರ್ಹತ್ವಾದವ್ಯಕ್ತಶಬ್ದಾರ್ಹತ್ವಾತ್. "ಗೋಭಿರ್ಮಿಶ್ರೀಣೋಮ" ಮಿತಿವತ್ ಪ್ರಕೃತಿಶಬ್ದೇನ ವಿಕೃತ್ಯಭಿಧಾನಂ ಯುಕ್ತಂ.**

ವ್ಯಕ್ತವೆನಿಸಿದ ಸ್ಥೂಲಶರೀರವು ಹೇಗೆ ಅವ್ಯಕ್ತವೆನಿಸುತ್ತದೆ ಎಂದು ಆಕ್ಷೇಪಿಸಿ ನಿರಾಕರಿಸುತ್ತಾನೆ—**ಸೂಕ್ಷ್ಮಂ ತದರ್ಹತ್ವಾತ್ ॥ ೨ ॥**

ತು ಶಬ್ದವು ಆಕ್ಷೇಪವನ್ನು ಅಲ್ಲಗಳೆಯುತ್ತದೆ. ಸ್ಥೂಲಶರೀರವನ್ನು ಹುಟ್ಟಿಸಲು ಕಾರಣವಾದ ತನ್ಮಾತ್ರವೆಂಬ ಭೂತಸೂಕ್ಷ್ಮಗಳನ್ನು ಶ್ರುತಿಯಲ್ಲಿ ಬಂದಿರುವ ಅವ್ಯಕ್ತ ಪದವು ತಿಳಿಸುತ್ತದೆ; ಯಾಕೆಂದರೆ ಅವೇ ಅವ್ಯಕ್ತವೆನಿಸಲರ್ಹವಾಗಿವೆ. ಉದಾಹರಣೆಗೆ ಗೋವುಗಳಿಂದ ಸೋಮದ್ರವ್ಯವನ್ನು ಚೆಕೆಸಬೇಕು" ಎಂಬಲ್ಲಿ ಗೋಪದವು ಗೋವಿಕಾರವಾದ ಹಾಲನ್ನು ತಿಳಿಸುತ್ತದೆ. ಇದರಂತೆ ಸ್ಥೂಲಶರೀರಕ್ಕೆ ಕಾರಣವೆನಿಸಿದ ಸೂಕ್ಷ್ಮಶರೀರವು ಅವ್ಯಕ್ತಪದದಿಂದ ಬೋಧಿತವಾಗುತ್ತದೆ.

ಪರಶಿವಪರತ್ವೇ ಹೇತ್ವಂತರಮಾಹ ತದಧೀನತ್ವಾತ್ತದರ್ಥವತ್ ॥೩॥

ಜಗತ್ಸೂಕ್ಷ್ಮಾವಸ್ಥಾಯಾಮೇವ ಸಾಂಖ್ಯೈಃ ಪ್ರಧಾನತ್ವಾಂಗೀಕಾರೇ ನೈಷ ದೋಷಃ. ಕುತಃ? ತದಧೀನತ್ವಾದೀಶ್ವರಾಧೀನತ್ವಾತ್. "ಸ್ವತಂತ್ರಮವ್ಯಕ್ತಂ ಜಗತ್ಕಾರಣಂ" ಇತ್ಯೇತನ್ಮತಸಿದ್ಧಾಂತೇ ಈಶ್ವರಾಧಿಷ್ಠಿತಂ ಮಾಯಾವಿದ್ಯಾದಿಶಬ್ದವಾಚ್ಯಂ ಪ್ರಧಾನಂ ಕಾರಣಮಿತ್ಯತ್ಯಂತಭೇದಾತ್. ನನು ಸೂಕ್ಷ್ಮಪ್ರಪಂಚಸ್ಯಾನಭಿವ್ಯಕ್ತನಾಮರೂಪಬೀಜಸ್ಯಪ್ರಾಗವಸ್ಥಾಯಾಮವ್ಯಕ್ತಶಬ್ದಯೋಗ್ಯತ್ವಮುಪಪದ್ಯೇತ. ತದಾತ್ಮನಾ ಚ ದೇಹಸ್ಯಾವ್ಯಕ್ತಶಬ್ದಯೋಗ್ಯತ್ವಮವಗಮ್ಯೇತ. ತರ್ಹಿ ಸಾಂಖ್ಯವಾದ ಏವೋಪದಿಶ್ಯೇತ. ಸೂಕ್ಷ್ಮಚಿದಚಿತದ್ಧಾತ್ಮಕಸ್ಯ ಪ್ರಪಂಚಸ್ಯೈವ ಪ್ರಾಗವಸ್ಥಾಪ್ರಕೃತಿತ್ವೇನ ವಿಧೀಯತ ಇತಿ ಚೇದುಚ್ಯತೇ. ಪರಮೇಶ್ವರಶಕ್ತಿತಯಾ ಜಡಪ್ರಧಾನಸ್ಯ ನ ಜಗತ್ಕಾರಣತ್ವಂ ವಕ್ತುಂ ಶಕ್ಯಂ. ಪ್ರಧಾನಾಧಿಷ್ಠಾನಪರಮೇಶ್ವರಾದೇವ ಜಗದುತ್ಪತ್ತೇಸ್ಸಂಭವಾದವ್ಯಕ್ತಶಬ್ದವೈಯರ್ಥ್ಯಮಿತ್ಯಾಶಂಕ್ಯೋಕ್ತಮರ್ಥವದಿತಿ ಪ್ರಯೋಜನವದಿತ್ಯರ್ಥಃ. ಈಶ್ವರಸ್ಯ ಸಹಕಾರಿರೂಪಮವ್ಯಕ್ತಮಾವಶ್ಯಕಂ. "ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ" ಇತಿ ಮಾಯಾಯಾಃ ಪರಮೇಶ್ವರಾಧೀನತ್ವಂ ಶ್ರೂಯತೇ. ಮಾಯಾಪ್ರತಿಪಾದಿತಜಗಜ್ಜನ್ಮಾದಿಕಾರಣತ್ವಂ ವಶೀಕೃತಮಾಯಿಕಪರಮೇಶ್ವರಾಧೀನಮೇವ. "ವಾಯವ್ಯಂ ಶ್ವೇತಮಾಲಭೇತ ಭೂತಿಕಾಮಃ" ಇತ್ಯತ್ರ ಯಥಾ ವಿಧ್ಯುದ್ದೇಶವರ್ತಿನಾಂ ವಾಯವ್ಯಾದೀನಾಂ ಶಬ್ದಾನಾಂ ವಿಧಿನಾ ಸಂಬಂಧ ಏವ. "ವಾಯುರ್ವೈ ಕ್ಷೇಪಿಷ್ಠಾ ದೇವತಾ ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ । ಸ ಏವೈನಂ ಭೂತಿಂ ಗಮಯತಿ ॥" ಇತ್ಯೇತೇಷಾಮರ್ಥವಾದವಿಶಿಷ್ಟಾನಾಂ ವಾಕ್ಯಾನಾಂ ನ ಮುಖ್ಯಂ ಪ್ರಾಮಾಣ್ಯಂ. "ವಾಯುರ್ವಾ ಆಲಭೇತ ಕ್ಷೇಪಿಷ್ಠಾ ದೇವತಾ ಆಲಭೇತ" ಇತ್ಯಾದಿವಾಯುಸ್ವಭಾವಸ್ತುತಿತ್ವೇನಾವಾಂತರವಾಕ್ಯಸಮನ್ವಯವತ್ ಮಾಯಾಜಗತ್ಕಾರಣತ್ವವಾಕ್ಯಾನಾಂ ತದ್ವತ್ ಸ್ತುತಿಪರತ್ವಂ, ತದಧಿಷ್ಠಾನಪರಮೇಶ್ವರಬೋಧಕತ್ವಮವಿರುದ್ಧಂ. ನ ಚೈವಮವ್ಯಕ್ತಶಬ್ದಸ್ಯ

ಅವಿದ್ಯಾಪರತ್ವೇ ತದ್ವಿಕಾರತಯೇಂದ್ರಿಯಾದೀನಾಮಿವ ತಚ್ಛಬ್ದೇನೋಪಾದಾನಸಂಭವಾತ್ಕಥಂ ಶಾರೀರಸ್ಯೈವ ಗ್ರಹಣಮಿತಿ ವಾಚ್ಯಂ. ತೇಷಾಂ ಸ್ವಶಬ್ದೈರೇವೋಪಪಾದನಾತ್ ಪರಿಶೇಷತಸ್ತತ್ಸಿದ್ಧೇಃ. ಸೂತ್ರದ್ವಯಸ್ಯಾಪರಾ ವ್ಯಾಖ್ಯಾ. ಶರೀರಂ ದ್ವಿವಿಧಂ ಜ್ಞೇಯಂ ಸ್ಥೂಲಂ ಚ. ಪೂರ್ವವಾಕ್ಯೇ ದ್ವಯಮಪಿ ಶರೀರಗ್ರಹಣೇಽನುಗೃಹೀತಂ. ಉತ್ತರಸ್ಮಿನ್ ಸೂಕ್ಷ್ಮಮೇವಾವ್ಯಕ್ತಶಬ್ದೇನೋಕ್ತಂ ತದರ್ಹತ್ವಾತ್. ತಚ್ಚಾವಶ್ಯಮಭ್ಯುಪೇಯಂ. ಸಕಲಜೀವಾಶ್ರಯಮಹಾಸುಷುಪ್ತ್ಯಾತ್ಮಕಮವ್ಯಕ್ತಂ ಕೇಚಿದಾಕಾಶ ಇತಿ ಕೇಚಿನ್ಮಾಯೇತಿ ಕೇಚಿದಕ್ಷರಮಿತಿ ವದಂತಿ. ಏತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ" ಇತಿ ಶ್ರುತಾವಾಕಾಶ ಇತಿ, "ಮಾಯಾಂ ತು ಪ್ರಕೃತಿಂ" ಇತಿ ಮಂತ್ರೇ ಮಾಯೇತಿ, "ಅಕ್ಷರಾತ್ಪರತಃ" ಇತಿ ಶ್ರುತಾವಕ್ಷರ ಇತಿ ನಿರ್ದಿಷ್ಟಂ. ತದೇವ "ಮಹತಃ ಪರಮವ್ಯಕ್ತಂ" ಇತ್ಯುಚ್ಯತೇ. ತಚ್ಚ ಸ್ಥೂಲಶರೀರತ್ವೇನ ಪೂರ್ವತ್ರಾಭಿಧೀಯತೇ ಸೂಕ್ಷ್ಮತ್ವೇನೇದಾನೀಮುಪದಿಶ್ಯತೇ. "ತದನಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ" ಇತಿ ತದುಭಯಮಪಿ ಶರೀರಮವಿಶೇಷಾತ್. ಪೂರ್ವತ್ರ ರಥತ್ವೇನ ವರ್ಣಿತಮತ್ರ ತು ಸೂಕ್ಷ್ಮಮವ್ಯಕ್ತಶಬ್ದೇನ ವ್ಯಾಚಕ್ಷ್ಯತೇ. ಸೂಕ್ಷ್ಮಶರೀರಸ್ಯಾವ್ಯಕ್ತಶಬ್ದಾರ್ಹತ್ವೇನ ತದಧೀನತ್ವೇನ ಚ ಜೀವನಿಷ್ಠಬಂಧಮೋಕ್ಷಕಾರಣತ್ವಂ ತಸ್ಯೋಪದಿಶ್ಯತೇ. ತಸ್ಮಾಜ್ಜೀವಾಧಿಕತ್ವಂ ಪರಮಶಿವಸ್ಯ ನಿರ್ದಿಷ್ಟಂ. "ಪ್ರಧಾನಕ್ಷೇತ್ರಜ್ಞಪತಿಃ", "ಏಷಾಮೀಶೇ ಪಶುಪತಿಃ", "ಮಾಯೀ ಸೃಜತೇ ವಿಶ್ವಮೇತತ್", "ನಾನ್ಯೋ ಬ್ರಹ್ಮಣಿ ವೇದಿತವ್ಯಃ", "ವಿದ್ಯಾವಿದ್ಯೇ ಈಶತೇ ಯಸ್ತು ಸೋಽನ್ಯಃ", "ಕ್ಷರಾತ್ಮಾನಾವೀಶತೇ ದೇವ ಏಕಃ" ಇತ್ಯಾದೌ ತಥಾ ಶ್ರೂಯತೇ. ತಸ್ಮಾತ್ಪರಮೇಶ್ವರಪ್ರಕರಣಮಿತಿ ಸಿದ್ಧಂ.

ಬೇರೊಂದು ಹೇತುವನ್ನು ಹೇಳುತ್ತಾನೆ—ತದಧೀನತ್ವಾತ್ತದರ್ಥವತ್ ‖ ೩ ‖

ಜಗತ್ತಿನ ಸೂಕ್ಷ್ಮಸ್ಥಿತಿಯಲ್ಲಿ ಸಾಂಖ್ಯರು ಪ್ರಧಾನವನ್ನು ಅಂಗೀಕರಿಸಿದರೆ ಅದಕ್ಕೆ ಜಗತ್ಕಾರಣವೆಂಬ ದೋಷ ಸಂಭವಿಸುವುದಿಲ್ಲ. ಯಾಕೆಂದರೆ ಆಗ ಅದು ಈಶ್ವರನಿಗೇ ಅಧೀನವಾಗಿರುತ್ತದೆ. ಸ್ವತಂತ್ರವಾದ ಅವ್ಯಕ್ತವೇ ಜಗತ್ಕಾರಣವೆಂದು ಹೇಳುವುದಾದರೆ ಅದು ಈಶ್ವರನಲ್ಲಿರುವುದೆಂಬುದಕ್ಕೂ, ಅದನ್ನು ಮಾಯೆ-ಅವಿದ್ಯೆ ಎಂಬ ಹೆಸರಿನಿಂದ ಕರೆಯುವುದಕ್ಕೂ ವಿರೋಧವುಂಟಾಗುತ್ತದೆ. ನಾಮರೂಪಗಳ ಮೂಲವನ್ನೇ ತಿಳಿಸದಿರುವ ಸೂಕ್ಷ್ಮಪ್ರಪಂಚವನ್ನು ಹಿಂದಿನ ಅವಸ್ಥೆಯಲ್ಲಿ ಅವ್ಯಕ್ತವೆಂದು ಕರೆದಿರುವುದೇನೋ ಸರಿ. ಅದರಂತೆ ದೇಹವನ್ನೂ ಅವ್ಯಕ್ತವೆಂದೇ ತಿಳಿಯಬಹುದು. ಅಲ್ಲಿಗೆ ಸಾಂಖ್ಯವಾದವೇ ಯುಕ್ತವೆನಿಸುತ್ತದೆ. ಆದ್ದರಿಂದ ಸೂಕ್ಷ್ಮಪ್ರಪಂಚದ ಹಿಂದಿನ ಅವಸ್ಥೆಯನ್ನೇ ಪ್ರಕೃತಿ ಎಂದು ವಿಧಿಸಲಾಗಿದೆ ಎಂದು ಹೇಳು

ವುದಾದರೆ, ಪ್ರಧಾನವು ಪರಮೇಶ್ವರನ ಶಕ್ತಿಯಾದರೂ ಜಡವಾದ್ದರಿಂದ ಅದನ್ನು ಜಗತ್ಕಾರಣವೆಂದು ಹೇಳಲಾಗುವುದಿಲ್ಲ. ಅದಕ್ಕಾಧಾರನಾದ ಪರಮೇಶ್ವರನಿಂದಲೇ ಜಗತ್ತಿನ ಉತ್ಪತ್ತಿಯಾಗಬೇಕಾದ್ದರಿಂದ ಶ್ರುತಿಯಲ್ಲಿ ಬಂದಿರುವ ಅವ್ಯಕ್ತಶಬ್ದವು ವ್ಯರ್ಥವಾಯಿತೆಂದು ಆಶಂಕಿಸಿ ಅದಕ್ಕೊಂದು ಪ್ರಯೋಜನವನ್ನು ತಿಳಿಸಲಾಗಿದೆ. ಈಶ್ವರನಿಗೆ ಅವ್ಯಕ್ತವು ಸೃಷ್ಟಿಗೆ ಸಹಕಾರಿಯಾಗಿದೆ ಎಂಬುದೇ ಈ ಪ್ರಯೋಜನ. "ಈಶ್ವರನನ್ನು ಮಾಯಾಪತಿ ಎಂದೂ ತಿಳಿ" ಎಂದು ಶ್ರುತಿಯಿಂದ ಇದು ತಿಳಿದುಬರುತ್ತದೆ. ಆದ್ದರಿಂದ ಮಾಯೆಗೆ ಅನ್ವಯಿಸುವ ಜಗತ್ಕಾರಣತ್ವವು ಆ ಮಾಯೆಯನ್ನು ವಶಪಡಿಸಿಕೊಂಡ ಈಶ್ವರನಿಗಧೀನವೇ ಆಗಿದೆ. "ಐಶ್ವರ್ಯಾಪೇಕ್ಷಿಯು ವಾಯುದೇವತೆಯ ಪ್ರೀತ್ಯರ್ಥವಾಗಿ ಬಿಳಿಯ ಪಶುವನ್ನು ಬಲಿಕೊಡಬೇಕು" ಎಂಬ ಕಡೆ ವಿಧಿವಾಕ್ಯದಲ್ಲಿರುವ ಶಬ್ದಗಳು ವಿಧಿಯೊಂದಿಗೆ ಸೇರುವಂತೆ, "ವಾಯುವೆನ್ನುವುದು ಶೀಘ್ರವಾಗಿ ಓಡಾಡುವ ದೇವತೆಯಾದ್ದರಿಂದ ಯಜಮಾನನಿಗೆ ಬೇಗನೆ ಫಲ ಕೊಡುತ್ತದೆ"ಎಂಬ ಅರ್ಥವಾದವಾಕ್ಯಕ್ಕೆ ವಿಧಿಯೊಂದಿಗೆ ಸೇರಿಯೇ ಪ್ರಾಮಾಣ್ಯವೇ ಹೊರತು ಸ್ವತಂತ್ರವಾದ ಪ್ರಾಮಾಣ್ಯವಿಲ್ಲ. ವಾಯುವಿನ ಪ್ರಶಂಸೆಗಾಗಿ ಬಂದಿರುವ "ವಾಯುರ್ವಾ ಆಲಭೇತ" ಮೊದಲಾದ ವಾಕ್ಯಗಳು ಕೇವಲ ಸ್ತುತಿರೂಪವಾಗಿಯೇ ಅನ್ವಯಿಸುವಂತೆ ಪ್ರಧಾನವನ್ನು ಜಗತ್ತಿಗೆ ಕಾರಣವೆಂದು ತಿಳಿಸುವ ವಾಕ್ಯಗಳೂ ಹೀಗೆಯೇ ಪ್ರಶಂಸಾತ್ಮಕವಾಗಿವೆ. ಅದಕ್ಕಾಶ್ರಯವಾದ ಪರಮೇಶ್ವರನನ್ನೇ ಅವು ಬೋಧಿಸುತ್ತವೆ ಎಂಬುದಕ್ಕೆ ಯಾವ ವಿರೋಧವೂ ಇಲ್ಲ. ಹೀಗೆ ಅವ್ಯಕ್ತಶಬ್ದವು ಅವಿದ್ಯೆಗೆ ಅನ್ವಯಿಸಿದರೆ ಅದರ ವಿಕಾರಗಳೆನಿಸಿದ ಇಂದ್ರಿಯ, ವಿಷಯ ಮೊದಲಾದವನ್ನೂ ಆ ಶಬ್ದವೇ ತಿಳಿಸಬಹುದಾದ್ದರಿಂದ ಅದು ಹೇಗೆ ಶರೀರವನ್ನು ತಿಳಿಸೀತೆಂದರೆ ಅವನ್ನು ಆಯಾ ಶಬ್ದಗಳಿಂದಲೇ ಹೇಳಿರುವುದರಿಂದ ಆ ಅರ್ಥ ತಾನಾಗಿಯೇ ಸಿದ್ಧಿಸುತ್ತದೆ. "ಶರೀರವು ಸ್ಥೂಲ ಸೂಕ್ಷ್ಮ ಎಂದು ಎರಡು ಬಗೆಯಾಗಿದೆ. ಹಿಂದಿನ ವಾಕ್ಯದಲ್ಲಿ ಶರೀರಪದದಿಂದ ಎರಡನ್ನು ತಿಳಿಸಿದೆ. ಮುಂದಿನ ವಾಕ್ಯದಲ್ಲಿ ಅವ್ಯಕಶಬ್ದವು ಸೂಕ್ಷ್ಮಶರೀರ ಒಂದನ್ನೇ ತಿಳಿಸಿದೆ. ಅದಕ್ಕೆ ಅಷ್ಟೇ ಅರ್ಹತೆ ಇರುವುದರಿಂದ ಅದನ್ನು ಅವಶ್ಯವಾಗಿ ಒಪ್ಪಬಹುದು. ಎಲ್ಲ ಜೀವರಿಗೂ ಆಶ್ರಯವಾದ ಮಹಾಸುಷುಪ್ತಿಯೇ ಅವ್ಯಕ್ತವೆನಿಸಿದೆ. ಅದನ್ನು ಕೆಲವರು ಆಕಾಶವೆಂದೂ ಕೆಲವರು ಮಾಯೆ ಎಂದೂ ಕೆಲವರು ಅಕ್ಷರವೆಂದೂ ಕರೆಯುತ್ತಾರೆ. "ಈ ಅಕ್ಷರದಲ್ಲಿಯೇ ಆಕಾಶವು ಹೆಣೆದುಕೊಂಡಿದೆ" ಎಂಬಲ್ಲಿ ಆಕಾಶವೆಂದೂ "ಮಾಯೆಯೇ ಪ್ರಕೃತಿ" ಎಂಬಲ್ಲಿ ಮಾಯೆ ಎಂದೂ, 'ಅಕ್ಷರಕ್ಕಿಂತ ಆಚಿನದು" ಎಂಬಲ್ಲಿ ಅಕ್ಷರವೆಂದೂ ಅವ್ಯಕ್ತವನ್ನೇ ತಿಳಿಸಲಾಗಿದೆ. 'ಮಹತ್ತಿಗಿಂತ ಹೆಚ್ಚಿನದು ಅವ್ಯಕ್ತ' ಎಂಬ ಶ್ರುತಿಯಲ್ಲಿ ಹೇಳಿದ ಅವ್ಯಕ್ತವೆಂದರೆ ಇದೇಯೇ. ಇದನ್ನೇ ಮೊದಲನೆ ಸೂತ್ರದಲ್ಲಿ ಸ್ಥೂಲಶರೀರವೆಂದೂ, ಎರಡನೆ ಸೂತ್ರದಲ್ಲಿ ಸೂಕ್ಷ್ಮವೆಂದೂ ಹೇಳಲಾಗಿದೆ" ಎಂದು ಈ ಸೂತ್ರಗಳಿಗೆ ಬೇರೆ ಅರ್ಥವೂ ಇದೆ. "ತದಂತರಪ್ರತಿಪತ್ತೌ" ಎಂಬ ಸೂತ್ರದಲ್ಲಿ ಇವೆರಡನ್ನು

ಸಾಮಾನ್ಯವಾಗಿ ಶರೀರವೆಂದೇ ಹೇಳಲಾಗಿದೆ. ಇಲ್ಲಿ ಮೊದಲನೆ ಸೂತ್ರದಲ್ಲಿ ಅವ್ಯಕ್ತವನ್ನೇ ರಥವೆಂದೂ, ಎರಡನೆ ಸೂತ್ರದಲ್ಲಿ ಸೂಕ್ಷ್ಮವೆಂದೂ ಹೇಳಿದೆ. ಇಲ್ಲಿ ಸೂಕ್ಷ್ಮಶರೀರವೇ ಅವ್ಯಕ್ತವೆನಿಸಲರ್ಹವಾದ್ದರಿಂದಲೂ ಪರಶಿವನಿಗಧೀನವಾದ್ದರಿಂದಲೂ ಜೀವನ ಬಂಧಮೋಕ್ಷಗಳಿಗೆ ಅವನೇ ಕಾರಣವೆಂದು ಹೇಳಲಾಗಿದೆ. ಹೀಗೆ ಪರಶಿವನೇ ಜೀವನಿಗೆ ಅಧಿಕನೆಂದು ತಿಳಿಸಲಾಗಿದೆ. "ಪ್ರಧಾನ ಜೀವರಿಗೆ ಪತಿ" "ಒಳಗೆ ಪ್ರವೇಶಿಸಿ ನಿಯಮನಮಾಡುವವನು" "ಮಾಯಾ ಪತಿಯು ನಮ್ಮನ್ನೂ ವಿಶ್ವವನ್ನೂ ಸೃಷ್ಟಿಸುತ್ತಾನೆ". "ಬ್ರಹ್ಮದಲ್ಲಿ ಬೇರೆ ಏನನ್ನು ತಿಳಿಯಬೇಕಾಗಿಲ್ಲ". "ವಿದ್ಯೆ ಅವಿದ್ಯೆ ಎರಡನ್ನೂ ಇವನಲ್ಲದೆ ಬೇರೆ ಯಾರೂ ನಿಗ್ರಹಿಸಲಾರರು". ಹೀಗೆ ಶ್ರುತಿಯಲ್ಲಿ ಹೇಳಿದ್ದರಿಂದ ಇದು ಪರಮೇಶ್ವರನ ಪ್ರಕರಣವೆಂದು ಸಿದ್ಧವಾಯಿತು.

**ಪರಮೇಶ್ವರಪಕ್ಷೇ ಹೇತ್ವಂತರಮಾಹ—ಜ್ಞೇಯತ್ವಾವಚನಾಚ್ಚ ॥ ೪ ॥**

ಕಿಂಚ ಸಾಂಖ್ಯೈಃ ಪ್ರಕೃತಿಪುರುಷವಿವೇಕಾನ್ಮೋಕ್ಷಮಂಗೀಕೃತ್ಯ ಪ್ರಕೃತಿರಪಿ ತದರ್ಥಂ ಜ್ಞೇಯೇತ್ಯುಕ್ತಂ; ನಚ ತಾದೃಶಪ್ರಜ್ಞಾನೋಪಯುಕ್ತಂ ಕಿಂಚಿದತ್ರೋಕ್ತಂ ಅವ್ಯಕ್ತಮಾತ್ಮಶಬ್ದಶ್ರವಣಾತ್. ತಸ್ಮಾದಪಿ ನಾಽವ್ಯಕ್ತಂ ಪ್ರಧಾನಂ ವದತೀತಿ ಚೇನ್ನ, ಪ್ರಾತ್ಯಕ್ಷಿಕಪ್ರಕರಣಾತ್. ನನು ಜ್ಞೇಯತ್ವಾವಚನಾದಿತ್ಯಸಂಗತಂ, ಅವ್ಯಕ್ತಶಬ್ದವಾಚ್ಯಸ್ಯೈವೋತ್ತರತ್ರ ಜ್ಞೇಯತ್ವವಚನಾತ್. "ಅರೂಪಮವ್ಯಯಂ ತಥಾರಸಂನಿತ್ಯಮಗಂಧವಚ್ಚ ಯತ್ । ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ ॥" ಇತಿ. ಇಹ ತು ಇಚ್ಛಾದಿರಹಿತ ಪ್ರಧಾನಂ ಮಹತ್ಪರಂ ಕಾಪಿಲಶಾಸ್ತ್ರೇ ನಿರ್ಣೀತಂ. ತದೇವ ನಿಚಾಯ್ಯತ್ವೇನ ವ್ಯಪದಿಶ್ಯತೇ. ಅತಃ ಪ್ರಧಾನಮೇವಾವ್ಯಕ್ತಮಿತಿ ಚೇದುಚ್ಯತೇ, 'ಪುರುಷಾನ್ನಪರಂ ಕಿಂಚಿತ್' ಇತಿ ಶ್ರುತೌ ಸರ್ವಾಧಿಕ್ಯತ್ವೇನಾತ್ರ ಪರಮೇಶ್ವರಸ್ಯೈವ ವ್ಯಪದೇಶಾನಿಚಾಯ್ಯತ್ವಂ ನೇತರಸ್ಯೋಪದಿಶ್ಯತೇ.

ಮತ್ತೊಂದು ಕಾರಣವನ್ನು ತಿಳಿಸುತ್ತಾನೆ—**ಜ್ಞೇಯತ್ವಾವಚನಾಚ್ಚ ॥೪॥**

ಸಾಂಖ್ಯರು ಪ್ರಕೃತಿಪುರುಷರ ವಿವೇಕದಿಂದ ಮೋಕ್ಷವನ್ನು ಒಪ್ಪಿ ಅದಕ್ಕಾಗಿಯೇ ಪ್ರಕೃತಿಯನ್ನು ತಿಳಿಯಬೇಕೆಂದು ಹೇಳಿದ್ದಾರೆ. ಹಾಗೆ ಅದನ್ನು ತಿಳಿಯಬೇಕೆಂದು ತಿಳಿಸುವ ಯಾವ ಶಬ್ದವನ್ನೂ ಶ್ರುತಿಯು ಹೇಳಿಲ್ಲ. ಅವ್ಯಕ್ತವನ್ನು ತಿಳಿಸುವಾಗ ಆತ್ಮಶಬ್ದವನ್ನು ಹೇಳಿರುವುದರಿಂದ ಅವ್ಯಕ್ತವು ಪ್ರಧಾನವಾಗಲಾರದು ಎಂದು ಕೇಳಿದರೆ ಅವ್ಯಕ್ತಶಬ್ದದಿಂದ ತಿಳಿದುಬರುವುದನ್ನೇ ಮುಂದೆ ತಿಳಿಯಬೇಕೆಂದು ಹೇಳಿರುವುದರಿಂದ ಪ್ರಧಾನವನ್ನು ತಿಳಿಯಬೇಕೆಂಬ ಶಬ್ದ ಶ್ರುತಿಯಲ್ಲಿ ಬಂದಹಾಗಾಯಿತು. ಆದ್ದರಿಂದ ಅವ್ಯಕ್ತವೆಂದರೆ ಪ್ರಧಾನವೇ ಆಗಬಹುದು. "ಶಬ್ದಸ್ಪರ್ಶರೂಪರಸಗಂಧಗಳಿಲ್ಲದೆ ಆದಿಅಂತ್ಯಗಳಿಲ್ಲದೆ ಮಹತ್ತಿಗಿಂಗಿಲೂ ಹೆಚ್ಚಿನದೂ ಅವ್ಯಯವೂ ಆದದ್ದನ್ನು ತಿಳಿದು ಮೃತ್ಯುವಿನಿಂದ ಬಿಡುಗಡೆಯಾಗುತ್ತಾನೆ" ಎಂಬಲ್ಲಿ ಮಹತದವು ಇಚ್ಛಾದಿ

ಗಳಿಲ್ಲದ ಪ್ರಧಾನವನ್ನು ಬೋಧಿಸುತ್ತದೆ ಎಂದು ಸಾಂಖ್ಯಶಾಸ್ತ್ರವು ನಿರ್ಣಯಿಸಿದೆ. ಆದ್ದರಿಂದ ಮಹತ್-ಅವ್ಯಕ್ತ ಪದಗಳು ಪ್ರಧಾನವನ್ನೇ ತಿಳಿಸುತ್ತವೆ ಎಂದು ಹೇಳಿದರೆ ಸೂತ್ರವು ಇದಕ್ಕೆ ಸಮಾಧಾನವನ್ನು ತಿಳಿಸುತ್ತದೆ. "ಪುರುಷನಿಗಿಂತ ಹೆಚ್ಚಿನದು ಬೇರೆ ಇಲ್ಲ" ಎಂಬ ಶ್ರುತಿಯಲ್ಲಿ ಪರಶಿವನೇ ಎಲ್ಲಕ್ಕೂ ಹೆಚ್ಚಿನವನೆಂದು ಹೇಳಿರುವುದರಿಂದ ಅವನೊಬ್ಬನೇ ಧ್ಯಾನಕ್ಕರ್ಹನೆನಿಸುತ್ತಾನೆ. ಇದರಿಂದ ಪ್ರಧಾನವನ್ನು ತಿಳಿಯಬೇಕೆಂದು ತಿಳಿಸುವ ಪದವು ಶ್ರುತಿಯಲ್ಲಿ ಬಂದಿಲ್ಲವೆಂಬುದೇ ಸ್ಪಷ್ಟವಾಗುತ್ತದೆ.

ಅತ್ರ ಹೇತ್ವಂತರಮಾಹ–ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್ ||

" ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ " ಇತ್ಯಾದೌ ಗುಣತ್ರಯಾತ್ಮಕಪ್ರಧಾನಸ್ಯಾಪಚಾರಿಕತ್ವೇನ ಜಗತ್ಕಾರಣತ್ವಶ್ರವಣಾದತ್ರ ನಿಚಾಯ್ಯತ್ವೇನ ಪ್ರಧಾನಮೇವೋಪದಿಶ್ಯತ ಇತಿ ಚೇನ್ನ, ಪ್ರಾಜ್ಞೋ ಹ್ಯತ್ರ ಪರಮೇಶ್ವರಃ ನಿಚಾಯ್ಯತ್ವೇನ ನಿರ್ದಿಶ್ಯತೇ. ಕಸ್ಮಾತ್–ಪ್ರಕರಣಾತ್. ಪ್ರಾಜ್ಞಸ್ಯ ಹಿ ಪ್ರಕರಣಮಿಹೋಪಕ್ರಮೋಪಸಂಹಾರಾಭ್ಯಾಂ ದೃಶ್ಯತೇ. "ಈಶಾನೋ ಭೂತಭವ್ಯಸ್ಯ" ಇತಿ ಹೃದಯಾವಚ್ಛಿನ್ನಸ್ಯ ಪುರುಷಸ್ಯ ದೇವತಾನ್ಯತ್ವಭ್ರಾಂತಿವಾರಣಾಯ ಪರಮಶಿವಾಸಾಧಾರಣೇಶಾನಶಬ್ದಮುಪದಿಶ್ಯ, " ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ " ಇತಿ ತಸ್ಯೈವ ಸರ್ವಾಧಿಕತ್ವವ್ಯಪದೇಶಾತ್. " ಏಷ ಸರ್ವೇಷು ಭೂತೇಷು ಗೂಢೋಽತ್ಮಾ ನ ಪ್ರಕಾಶತೇ " ಇತಿ ತಸ್ಯ ದೃಗಾದ್ಯವಿಷಯತ್ವಾತ್ಮತ್ವನಿರ್ದೇಶಾತ್. " ಯಚ್ಛೇದ್ವಾಙ್ಮನಸಿ ಪ್ರಾಜ್ಞಃ " ಇತ್ಯಂಜನಾದರ್ಥಲಾಭವತ್ತದ್ವಿಜ್ಞಾನಾಯ ಯೋಗೋಪದೇಶಾತ್ " ಮೃತ್ಯುಮುಖಾತ್ಪ್ರಮುಚ್ಯತೇ " ಇತಿ ತದ್ವಿದುಷಾಂ ಮೃತ್ಯುಮೋಚನಫಲಶ್ರವಣಾಚ್ಚೇದಂ ಪರಮಶಿವಪ್ರಕರಣಮಿತಿ ಸಿದ್ಧಂ. ಕಪಿಲಶಾಸ್ತ್ರೇಽಪಿ ನ ಕೇವಲಪ್ರಧಾನವಿಜ್ಞಾನೇನ ನಿರ್ವಾಣವ್ಯಪದೇಶಃ. ಜಡಾಜಡಪ್ರಕೃತಿಪುರುಷವಿಜ್ಞಾನೇನ ತದ್ದರ್ಶನಾತ್ ನೇದಂ ಪರಮಾತ್ಮಪ್ರಕರಣಮಿತಿ ಚೇನ್ನ, ಇಹ ಚೇತನಾಚೇತನಾತ್ಮಕವಿಜ್ಞಾನಾದೇವ ಮೃತ್ಯುಮುಖಮೋಚಕತ್ವನಿರ್ದೇಶಾತ್. " ತಮೇವ ವಿದಿತ್ವಾಽತಿಮೃತ್ಯುಮೇತಿ ", " ಸಂಪಶ್ಯನ್ ಬ್ರಹ್ಮ ಪರಮಂ ಯಾತಿ "ಇತಿ ಸರ್ವೋಪನಿಷತ್ಸು ಶಬ್ದಾದಿಧರ್ಮವತ್ತ್ವಂ ಪ್ರಾಜ್ಞಸ್ಯ ಶಿವಸ್ಯೈವ ವಿವಕ್ಷ್ಯತೇ. ಅತೋ ಹ್ಯತ್ರ ಜ್ಞೇಯತ್ವಮವ್ಯಕ್ತಶಬ್ದವಾಚ್ಯತ್ವಂ ಚ ಪ್ರಧಾನಸ್ಯ ವಕ್ತುಂ ನ ಶಕ್ಯಮಿತಿ ಸಿದ್ಧಂ.

ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್ || ೫ ||

'ಅಜಾಮೇಕಾಂ' ಎಂಬ ಶ್ರುತಿಯಲ್ಲಿ ತ್ರಿಗುಣಾತ್ಮಕವಾದ ಪ್ರಧಾನವನ್ನು ಉಪಚಾರಕ್ಕಾಗಿ ಜಗತ್ಕಾರಣವೆಂದು ಹೇಳಿದ್ದರಿಂದ ಪ್ರಧಾನವನ್ನು ತಿಳಿಯಬೇಕೆಂದು ಹೇಳಿದಂತಾಯಿತಲ್ಲವೆ ? ಅಂದರೆ ಇಲ್ಲಿಯೂ ಪ್ರಾಜ್ಞನೆನಿಸಿದ ಪರಮೇಶ್ವರನನ್ನೇ

ತಿಳಿಯಬೇಕೆಂದು ಪ್ರಕರಣದಿಂದ ತಿಳಿದುಬರುತ್ತದೆ. "ಅಂಗುಷ್ಠಪ್ರಮಾಣದ ಪುರುಷನು ಹೃದಯದಲ್ಲಿ ಹೊಗೆ ಇಲ್ಲದ ಬೆಂಕಿಯಂತೆ ನೆಲಸಿದ್ದಾನೆ. ಅವನೇ ಎಲ್ಲಕ್ಕೂ ನಿಯಾಮಕನು" ಎಂಬಲ್ಲಿ ಹೃದಯದಲ್ಲಿರುವ ಪುರುಷನೆಂದರೆ ಬೇರೆ ದೇವತೆಯೂ ಆಗಬಹುದೆಂಬ ಭ್ರಾಂತಿಯನ್ನು ಪರಿಹರಿಸಲು ಪರಶಿವನ ಅಸಾಧಾರಣವಾದ ಈಶಾನ ಶಬ್ದವನ್ನು ಹೇಳಿ "ಪುರುಷನಿಗಿಂತ ಬೇರೆ ಗಮ್ಯಸ್ಥಾನವಿಲ್ಲ" ಎಂದು ಅವನೇ ಸರ್ವಾಧಿಕನೆಂದು ತಿಳಿಸಲಾಗಿದೆ. "ಎಲ್ಲರಲ್ಲೂ ಇವನು ಗೂಢನಾಗಿರುವುದರಿಂದ ಕಾಣಬರುವುದಿಲ್ಲ" ಎಂಬಲ್ಲಿ ಅವನು ಯಾರಿಗೂ ನೋಟಕ್ಕೆ ಸಿಕ್ಕುವುದಿಲ್ಲವೆಂದು ಹೇಳಿ, ಗುಪ್ತವಾದ ನಿಧಿಗೆ ಅಂಜನದಂತೆ ಅವನನ್ನು ತಿಳಿಯಲಿಕ್ಕಾಗಿ ಯೋಗಮಾರ್ಗವನ್ನು ತಿಳಿಸಿ, ಅದನ್ನು ತಿಳಿದವರಿಗೆ ಬಂಧವಿಮೋಚನೆಯೆಂದು ಹೇಳಿದ್ದರಿಂದ ಇದು ಪರಶಿವನ ಪ್ರಕರಣವೆಂದು ಸಿದ್ಧವಾಯಿತು. ಸಾಂಖ್ಯಶಾಸ್ತ್ರದಲ್ಲೂ ಪ್ರಧಾನ ಒಂದನ್ನು ತಿಳಿದರೆ ಮುಕ್ತಿಯುಂಟಾಗುವುದೆಂದು ಹೇಳಿಲ್ಲ, ಆದರೆ ಜಡಪ್ರಕೃತಿ ಮತ್ತು ಚೇತನಜೀವ ಇವರಿಬ್ಬರ ವಿವೇಚನವನ್ನು ಮುಕ್ತಿಮಾರ್ಗವೆಂದು ಹೇಳಲಾಗಿದೆ. ಆದ್ದರಿಂದ ಇದು ಪರಶಿವನ ಪ್ರಕರಣವಲ್ಲವೆನ್ನುವುದು ಸರಿಯಲ್ಲ. "ಪರಬ್ರಹ್ಮವನ್ನು ತಿಳಿದು ಅದರಲ್ಲಿ ಬೆರೆಯುತ್ತಾನೆ" ಹೀಗೆ ಅನೇಕ ಶ್ರುತಿಗಳಲ್ಲಿ ಚೇತನ ಜಡ ಇವುಗಳ ವಿಜ್ಞಾನದಿಂದಲೇ ಜೀವನಿಗೆ ಬಂಧವಿಮೋಚನೆಯನ್ನು ಹೇಳಿರುವುದರಿಂದ ಶಬ್ದಪ್ರಮಾಣವೆನಿಸಿದ ಎಲ್ಲಾ ಶ್ರುತಿಗಳೂ ಶಿವನನ್ನೇ ತಿಳಿಸುತ್ತವೆಯಾಗಿ ಪ್ರಧಾನವನ್ನು ಜ್ಞೇಯವೆಂದೂ ಅವ್ಯಕ್ತವೆಂದೂ ಹೇಳಲಿಕ್ಕೆ ಸಾಧ್ಯವಿಲ್ಲ.

ಹೇತ್ವಂತರಮಾಹ--ತ್ರಯಾಣಾಮೇವ ಚೈವಮುಪನ್ಯಾಸಃಪ್ರಶ್ನಶ್ಚ ||

ಅತ್ರಾಪಿ ನ ಪ್ರಧಾನಸ್ಯಾವ್ಯಕ್ತಶಬ್ದವಾಚ್ಯತ್ವಂ ಜ್ಞೇಯತ್ವಂ ಚ ಭವತಿ. ಯತಸ್ತ್ರಯಾಣಾಮಗ್ನಿಶಾರೀರಪರಮೇಶ್ವರಾಣಾಮೇವ ಕಠವಲ್ಲೀಷು ವರದಾತೃತ್ವಪ್ರಭಾವಾದವ್ಯಕ್ತತ್ವೇನೋಪನ್ಯಾಸಶ್ಚ ಪ್ರಶ್ನಸ್ಯ ತತ್ಪರತ್ವೇನ ಗೀಯತೇ, ನ ಪ್ರಧಾನಾದೇಃ. ತತ್ರ ತಾವತ್ "ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಂ ಶ್ರದ್ದಧಾನಾಯ ಮಹ್ಯಂ" ಇತ್ಯಗ್ನಿವಿಷಯಃ ಪ್ರಶ್ನಃ. "ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತಿತ್ಯೇಕೇ ನಾಯಮಸ್ತೀತಿ ಚೈಕೇ | ಏತದ್ವಿದ್ಯಾಮನುಶಿಷ್ಟಸ್ತ್ವಯಾಹಂ" ಇತಿ ಜೀವವಿಷಯಃ. "ಅನ್ಯತ್ರ ಧರ್ಮಾತ್ ಯತ್ತತ್ಪಶ್ಯಸಿ ತದ್ವದ" ಇತಿ ಪರಮೇಶ್ವರವಿಷಯಃ. ಪ್ರತ್ಯುತ್ತರಮಪಿ "ಲೋಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ ಯಾವತೀರ್ಯಥಾ ವಾ" ಇತ್ಯಗ್ನಿವಿಷಯಂ. "ಹಂತ ತ ಇದಂ ವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಂ | ಯಥಾ ಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ | ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ | ಸ್ಥಾಣುಮನ್ಯೇಽನುಸಂಯಂತಿ ಯಥಾ ಕರ್ಮ ಯಥಾ ಶ್ರುತಂ||" ಇತಿ ಜೀವವಿಷಯಂ. "ನ

ಜಾಯತೇ ಮ್ರಿಯತೇ ವಾ ವಿಪಶ್ಚಿತ್ " ಇತ್ಯಾದೌ ಪರಮಾತ್ಮವಿಷಯಂ ದೃಷ್ಟಂ. ನಹ್ಯೇವಂ ಪ್ರಧಾನಸ್ಯ ಪ್ರಶ್ನೋತ್ತರೇ ದೃಶ್ಯೇತೇ. ನನ್ವಪೃಷ್ಟತ್ವಾತ್ತಸ್ಯ ನೋಪನ್ಯಾಸ ಇತಿ ಚೇದುಚ್ಯತೇ. ಯೋಽಯಮಾತ್ಮವಿಷಯಃ ಪ್ರಶ್ನಃ " ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತಿ," ಕಿಂ ಸ ಏವಾಯಂ " ಅನ್ಯತ್ರ ಧರ್ಮಾತ್ " ಇತಿ ಪುನರನುಕೃಷ್ಯತೇ ? ಕಿಂವಾ ತತೋಽನ್ಯೋಽಯಮಪೂರ್ವಃ ಪ್ರಶ್ನ ಉತ್ಥಾಪ್ಯತ ? ಇತಿ. ಉತ ತಸ್ಮಾದೇಷೋಽಯಂ ಪ್ರಶ್ನಃ ' ಭೂಯೋಽನುಗೃಹ್ಯತೆ ' ಇತಿ ಯದುಪದಿಶ್ಯೇತ? ಪರಮೇಶ್ವರವಿಷಯಪ್ರಶ್ನದ್ವಯಯೋರಭೇದಸಂಭವಾತ್. ನ ತದ್ವೈಶ್ವಾನರಾತ್ಮವಿಷಯಪ್ರಶ್ನದ್ವಯಮೇವಾತ್ರ ವಕ್ತುಂ ಶಕ್ಯಂ, ತ್ರಯಾಣಾಂ ಪ್ರಶ್ನೋಪನ್ಯಾಸಾದೇವಂ ತಥಾನ್ಯೋಽಯಮಪೂರ್ವಃ ಪ್ರಶ್ನ ಉತ್ಥಾಪ್ಯತ ಇತಿ ವ್ಯಾಚಕ್ಷೀತ. ಅತೋ ಯಥೈವ ವರದಾತೃತ್ವಾತಿರೇಕೇಣ ಪ್ರಶ್ನಕಲ್ಪನಾಯಾಮದೋಷಃ ತದ್ವತ್ಪ್ರಶ್ನಪ್ರತಿವಚನಾಭಾವೇಽಪಿ ಪ್ರಧಾನೋಪನ್ಯಾಸೋಪಪತ್ತೌ ಅದೋಷ ಇತಿ ಚೇದ್ಬ್ರೂಮಃ. ವಾಕ್ಯಾರಂಭಕಪ್ರಭಾವಾದತ್ರ ವರಪ್ರದಾನಭೇದೇನ ಕಂಚಿತ್ಪ್ರಶ್ನಂ ಕಲ್ಪಯಾಮಃ. ವರಪ್ರದಾನೋಪಕ್ರಮಾದತ್ರ ಮೃತ್ಯುನಚಿಕೇತಸ್ಸಂವಾದಾತ್ಮಕವಾಕ್ಯಪ್ರವೃತ್ತಿಃ ಕಠವಲ್ಲ್ಯಾಮಾಸಮಾಪ್ತಿ ದೃಶ್ಯತೇ. ಮೃತ್ಯುಃ ಕಿಲ ನಚಿಕೇತಸೇ ಪಿತ್ರಾ ಪ್ರಹಿತಾಯ ತ್ರೀನ್ವರಾನ್ ದದೌ, ನಚಿಕೇತಾಃ ಕಿಲ ತೇಷಾಂ ಪ್ರಥಮೇನ ವರೇಣ ಪಿತುಸ್ಸೌಮನಸ್ಯಂ ವವ್ರೇ. ದ್ವಿತೀಯೇನಾಗ್ನಿವಿದ್ಯಾಂ, ತೃತೀಯೇನಾತ್ಮವಿದ್ಯಾಂ " ಯೇಯಂ ಪ್ರೇತೇ " ಇತಿ. ' ವರೇಷ್ವಯಂ ತೃತೀಯಃ ' ಇತ್ಯಾತ್ಮವಿದ್ಯೋಪನ್ಯಾಸಾದತ್ರ ಯದಿ " ಅನ್ಯತ್ರ ಧರ್ಮಾತ್ " ಇತ್ಯಪೂರ್ವೋಽಯಮನ್ಯಃ ಪ್ರಶ್ನ ಉತ್ಥಾಪ್ಯೇತ, ತಸ್ಮಾದ್ವರದಾತೃತ್ವಭೇದೇನಾಪಿ ಪ್ರಶ್ನಕಲ್ಪನೋಪನ್ಯಾಸ ಅಸಂಭಾವ್ಯಃ. ನನ್ವಪೂರ್ವೋಽಯಂ ಪ್ರಶ್ನಃ ? ಪ್ರಷ್ಟವ್ಯವ್ಯತಿರೇಕಾದ್ವಾಕ್ಯಂ ವಕ್ತುಂ ಶಕ್ಯಂ. ಪ್ರಾಗೇವ ತು ಜೀವವಿಷಯಃ ಪ್ರಶ್ನಃ "ವರಾಣಾಮೇಷ ವರಸ್ತೃತೀಯಃ " ಇತಿ. ಅತ್ರ ಸಂಶಯದರ್ಶನಾತ್ ಶಾರೀರಸ್ಯ ಧರ್ಮಾದಿಗೋಚರತ್ವಾತ್. ನ " ಅನ್ಯತ್ರ ಧರ್ಮಾತ್ " ಇತ್ಯತ್ರ ಪ್ರಶ್ನ ಉಪಯುಕ್ತಃ. ಪ್ರಾಜ್ಞಸ್ಯ ಧರ್ಮಾತಿರಿಕ್ತತ್ವಾತ್ ಅನ್ಯತ್ರ ಧರ್ಮಾದಿತಿ ಪ್ರಶ್ನ ಅಭಿಹಿತಃ. ಪ್ರಶ್ನಭಾಸಾ ಚ ಸಾದೃಶ್ಯತ್ವಂ ದೃಶ್ಯತೇ, ಪೂರ್ವಸ್ಯ ಭಾವತ್ವಾಭಾವತ್ವಪರತ್ವಾತ್ ಉತ್ತರಸ್ಯ ಚ ಧರ್ಮಾತಿರಿಕ್ತವಸ್ತುಪರತ್ವಾತ್. ಅತಃ ವಿಜ್ಞಾತೃತ್ವತ್ವಾಭಾವಾತ್ಪ್ರಶ್ನಭೇದೋ ನ ಪೂರ್ವೋತ್ತರಸಂಬಂಧ ಇತಿ ಚೇನ್ನ, ಬದ್ಧದಶಾಯಾಂ ' ಜೀವಬ್ರಹ್ಮಣೋರ್ಭೇದೇಽಪಿ ಮುಕ್ತದಶಾಯಾಂ ಭ್ರಮರಕೀಟವದೇಕತ್ವೋಪಪ

ದೇಶಾತ್ ಪ್ರಷ್ಟವ್ಯಭೇದಾತ್ಪ್ರಶ್ನಭೇದೋ ದ್ರಷ್ಟವ್ಯಃ. ಅತ್ರಾಪಿ "ಅನ್ಯತ್ರ ಧರ್ಮಾತ್" ಇತ್ಯಸ್ಯ ಪ್ರಶ್ನಸ್ಯ ಪ್ರತ್ಯುತ್ತರಂ "ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್" ಇತ್ಯುತ್ಪತ್ತಿಪ್ರಳಯಪ್ರತಿಷೇಧೇನ ಪ್ರೋಚ್ಯಮಾನಂ ಜೀವಶಿವಯೋರಭೇದಮುಪದಿಶತಿ. ತಥಾ "ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ । ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ" ಇತಿ ಜಾಗ್ರತ್ಸ್ವಪ್ನಪ್ರಪಂಚಾನುಭವವತೋ ಜೀವಸ್ಯೈವ ಮಹತ್ತ್ವವಿಭುತ್ವವಿಶೇಷಣಸ್ಯ ಪರಮೇಶ್ವರಸ್ಯ ವೇದನೇನ ಶೋಕನಿವೃತ್ತಿಂ ಪ್ರತಿಪಾದ್ಯ ಬ್ರಹ್ಮಾನುಗತಸ್ಯ ಜೀವಸ್ಯ ಪರಮೇಶ್ವರಾನನ್ಯಭಾವ ಉಪದಿಶ್ಯತೇ. "ಪ್ರಾಜ್ಞವಿಜ್ಞಾನಾದ್ಧಿ ಶೋಕವಿಚ್ಛೇದಃ" ಇತಿ ವೇದಾಂತಸಿದ್ಧಾಂತಃ. ತಥೋತ್ತರೇ "ಯದೇವೇಹ ತದಮುತ್ರ ಯದಮುತ್ರ ತದನ್ವಿಹ । ಮೃತ್ಯೋಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" ಇತಿ ಮುಕ್ತಜೀವಪ್ರಾಜ್ಞಯೋರೈಕ್ಯಮುಪದಿಶ್ಯತೇ. ತಥಾ ಶಾರೀರವಿಷಯಕಭಾವಾಭಾವತ್ವಪ್ರಶ್ನಾತ್ಪರಮನ್ಯಂ "ನಚಿಕೇತೋ ವೃಣೀಷ್ವ" ಇತ್ಯುಪಕ್ರಮ್ಯ ಮೃತ್ಯುನಾ ತೈಸ್ತೈಃ ಕಾಮೈಃ ಪ್ರಲೋಭ್ಯಮಾನೋಽಪಿ ನಚಿಕೇತಾಃ ಯದಾ ನ ಚಚಾಲ ತದೈನಂ ಮೃತ್ಯುರಭ್ಯುದಯನಿಶ್ಶ್ರೇಯಸಫಲವಿಭಾಗಪ್ರದರ್ಶನೇನ ಜ್ಞಾನಾಜ್ಞಾನವಿಭಾಗಸಂದರ್ಶನೇನ ಚ "ವಿದ್ಯಾಭೀಪ್ಸಿನಂ ನಚಿಕೇತಸಂ ಮನ್ಯೇ ನ ತ್ವಾ ಕಾಮಾ ಬಹವೋಽಲೋಲುಪಂತ" ಇತಿ ಪ್ರಶ್ನಮಪಿ ತದೀಯಂ ಪ್ರಶಂಸಯನ್ನಿದಮುವಾಚ "ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಂ । ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥" ಇತ್ಯತ್ರಾಪಿ ಶಾರೀರಪರಮಾತ್ಮನೋರ್ಮುಕ್ತಿದಶಾಯಾಮಭೇದ ಇತಿ ವ್ಯಾಚಕ್ಷ್ಯತೇ. ನ ಚಾಸ್ಯಾಮುಪನಿಷದಿ ಪ್ರಧಾನಸ್ಯ ಪ್ರಶ್ನೋತ್ತರೇಸ್ತಃ ಇತಿ ನ ಪ್ರಧಾನಮವ್ಯಕ್ತಂ.

ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ ॥ ೬ ॥

ಶ್ರುತಿಯಲ್ಲಿ ಅವ್ಯಕ್ತಪದವು ಪ್ರಧಾನಕ್ಕೇ ಅನ್ವಯಿಸುವುದೆಂದೂ, ಪ್ರಧಾನವೇ ಜ್ಞೇಯವೆಂದೂ ಹೇಳಿಲ್ಲ. ಯಮನಿಗೆ ವರಕೊಡುವ ಸಾಮರ್ಥ್ಯವಿರುವುದರಿಂದ ನಚಿಕೇತನು ಅವನನ್ನು ಅವ್ಯಕ್ತವೆನಿಸಿದ್ದ ಅಗ್ನಿ, ಜೀವ, ಮತ್ತು ಪರಶಿವ ಇವರ ಬಗ್ಗೆ ಪ್ರಶ್ನೆಮಾಡುತ್ತಾನೆಯೇ ಹೊರತು ಪ್ರಧಾನದ ಬಗ್ಗೆ ಪ್ರಶ್ನೆ ಮಾಡುವುದಿಲ್ಲವೆಂದು ಕಠವಲ್ಲಿಯು ಸ್ಪಷ್ಟವಾಗಿ ತಿಳಿಸುತ್ತದೆ. "ನೀನು ಸ್ವರ್ಗದ ಅಗ್ನಿಯ ಸ್ವರೂಪವನ್ನು ಬಲ್ಲೆ. ಅದನ್ನು ಶ್ರದ್ಧಾಳುವಾದ ನನಗೆ ಹೇಳು" ಎಂಬುದು ಅಗ್ನಿಯ ಬಗ್ಗೆ ಪ್ರಶ್ನೆ. "ಮನುಷ್ಯ ಸತ್ತಮೇಲೆ ಇರುವನೇ ಇಲ್ಲವೇ? ಇದನ್ನು ನಿನ್ನಿಂದ ತಿಳಿಯಬೇಕು.

"ಇದು ಮೂರನೇ ವರ" ಎಂಬುದು ಜೀವನ ಬಗ್ಗೆ ಪ್ರಶ್ನೆ. "ಧರ್ಮ ಅಧರ್ಮ, ಭೂತ ಭವ್ಯ ಎಲ್ಲಕ್ಕೂ ಬೇರೆಯಾದದ್ದು ಯಾವುದು" ಎಂಬುದು ಪರಶಿವನ ಬಗ್ಗೆ ಪ್ರಶ್ನೆ. ಇದಕ್ಕೆ ಉತ್ತರಗಳೂ ಹೀಗೆಯೇ ಬರುತ್ತವೆ. "ಅಗ್ನಿ ಇಂತಹದು. ಅದಕ್ಕೆ ಇಷ್ಟೇ ಇಟ್ಟಿಗೆಗಳಿಂದ ಅಗ್ನಿಕುಂಡವನ್ನು ಕಟ್ಟಬೇಕು" ಎಂಬುದು ಅಗ್ನಿಯ ಬಗ್ಗೆ ಉತ್ತರ. ಸತ್ತಮೇಲೆ ಕೆಲವು ಜೀವರು ಕರ್ಮಾನುಸಾರವಾಗಿ ಮತ್ತೊಂದು ಜನ್ಮವನ್ನೂ ಮತ್ತೆ ಕೆಲವರು ಶಾಶ್ವತಸ್ಥಾನವನ್ನು ಹೊಂದುತ್ತಾರೆ" ಎಂಬುದು ಜೀವನ ಬಗ್ಗೆ ಉತ್ತರ. "ಇವನಿಗೆ ಹುಟ್ಟು ಸಾವುಗಳಿಲ್ಲ" ಎಂಬುದು ಪರಶಿವನ ಬಗ್ಗೆ ಉತ್ತರ. ಇಲ್ಲಿ ಎಲ್ಲೂ ಪ್ರಧಾನದ ಬಗ್ಗೆ ಪ್ರಶ್ನೋತ್ತರಗಳೇ ಬಂದಿಲ್ಲ. ಅದರ ಬಗ್ಗೆ ಕೇಳದೇ ಇದ್ದುದರಿಂದ ಉತ್ತರವನ್ನು ಹೇಳಿಲ್ಲವೆಂದರೆ ಜೀವನ ಬಗ್ಗೆ ಪ್ರಶ್ನೆ ಮುಗಿದಮೇಲೆ ಪರಶಿವನ ಬಗ್ಗೆ ಕೇಳಿದಾಗ "ಇದೇನೂ ಅದಕ್ಕಿಂತಲೂ ಹೊಸದೇನಲ್ಲ" ಎಂದು ಹಿಂದಿನದನ್ನು ಅನುಸರಿಸಿ ಅದೇ ಪ್ರಶ್ನೆಗೆ ಮತ್ತೆ ಉತ್ತರಿಸಲಾಗಿದೆ ಎಂದು ಹೇಳುವುದಾದರೆ ಪರಶಿವನ ಬಗ್ಗೆ ಕೇಳಿದ ಎರಡು ಪ್ರಶ್ನೆಗಳನ್ನೂ ಒಂದೆಂದು ಹೇಳಬೇಕಾಗುತ್ತದೆ. ಶ್ರುತಿಯಲ್ಲಿ ಮೂರು ಪ್ರಶ್ನೆಗಳೆಂದು ತಿಳಿಸಿರುವುದರಿಂದ ನಚಿಕೇತನು ಅಗ್ನಿ ಮತ್ತು ಪರಶಿವ ಇವರ ಬಗ್ಗೆ ಎರಡು ಪ್ರಶ್ನೆಗಳನ್ನು ಕೇಳಿದನೆಂದು ಹೇಳಲು ಸಾಧ್ಯವಿಲ್ಲ. ಪ್ರಧಾನದ ಬಗ್ಗೆ ವರವನ್ನು ಕೇಳದಿದ್ದರೂ ಅದರ ವಿಷಯದಲ್ಲಿ ಪ್ರಶ್ನೆಯನ್ನು ಕಲ್ಪಿಸುವುದರಲ್ಲಿ ತಪ್ಪೇನಿಲ್ಲ. ಹಾಗೆ ಪ್ರಶ್ನೋತ್ತರಗಳು ನಡೆಯದೇ ಇದ್ದರೂ ಪ್ರಧಾನದ ಬಗ್ಗೆ ತಿಳಿಸುವುದು ಯುಕ್ತವೆಂಬಲ್ಲಿ ಯಾವ ದೋಷವೂ ಇರಲಾರದು ಎಂದು ಕೇಳಿದರೆ, ಬೇರೆ ವಾಕ್ಯವನ್ನು ಆರಂಭಿಸಿದ ಪ್ರಯುಕ್ತ ಇಲ್ಲಿ ವರ ಕೊಡುವ ರೀತಿಯಿಂದಲೇ ಅದಕ್ಕೆ ತಕ್ಕಂತೆ ಪ್ರಶ್ನೆಯನ್ನು ಕಲ್ಪಿಸಬಹುದು. ಆದರೆ ವರಪ್ರದಾನವನ್ನೇ ಉದ್ದೇಶಿಸಿ ಯಮನಿಗೂ ನಚಿಕೇತನಿಗೂ ಸಂವಾದವಾರಂಭವಾಗುತ್ತದೆ. ಇದೇ ಕೊನೆಯವರೆಗೂ ಕಂಡುಬಂದಿದೆ. "ಯಮನು ನಚಿಕೇತನಿಗೆ ಮೂರು ವರಗಳನ್ನು ಕೊಟ್ಟನು. ಅವನು ಅವುಗಳಲ್ಲಿ ಮೊದಲನೆಯದರಿಂದ ತಂದೆಯ ಪ್ರೇಮವನ್ನೂ, ಎರಡನೆಯದರಿಂದ ಅಗ್ನಿವಿದ್ಯೆಯನ್ನೂ, ಮೂರನೆಯದರಿಂದ ಆತ್ಮವಿದ್ಯೆಯನ್ನೂ ಕೇಳಿದನು. "ವರಗಳಲ್ಲಿ ಇದು ಮೂರನೆಯದು" ಎಂದು ಆತ್ಮವಿದ್ಯೆಯ ಬಗ್ಗೆ ಹೇಳಿರುವುದರಿಂದ "ಧರ್ಮ ಅಧರ್ಮಗಳಿಗಿಂತಲೂ ಬೇರೆಯಾದದ್ದು ಯಾವುದು" ಎಂಬಲ್ಲಿ ಬೇರೊಂದು ಪ್ರಶ್ನೆಯೇ ಹುಟ್ಟಿರಬೇಕು. ಆದ್ದರಿಂದ ವರಕೊಡುವ ರೀತಿಯಿಂದಲೂ ಬೇರೆ ಪ್ರಶ್ನೆಯನ್ನು ಇಲ್ಲಿ ಕಲ್ಪಿಸುವುದು ಅಸಂಭವವೆನಿಸುತ್ತದೆ. ಹಾಗಾದರೆ ಪರಮಾತ್ಮನ ಬಗ್ಗೆ ಕೇಳಿದ ಪ್ರಶ್ನೆಯೂ ಹೊಸದಲ್ಲವೇ? ಅಂದರೆ ಜೀವನಿರುವನೇ ಇಲ್ಲವೇ ಎಂಬ ಬಗ್ಗೆ ಕೇಳುವ ಪ್ರಶ್ನೆ ಮೂರನೆಯದೆಂದು ಹೇಳಿರುವುದರಿಂದಲೂ, ಇಲ್ಲಿ ಕೊಂಚ ಸಂಶಯ ಬಂದದ್ದರಿಂದಲೂ, ಜೀವನು ಧರ್ಮ ಅಧರ್ಮಗಳಿಗೆ ಗೋಚರನಾಗುವುದರಿಂದಲೂ, ಇವೆರಡಕ್ಕೂ ಗೋಚರನಾಗದಿರುವವನು ಯಾರು? ಎಂಬ ಪ್ರಶ್ನೆಗೆ "ಪರಶಿವನೇ ಇಂತವನು" ಎಂಬ ಉತ್ತರ ಬರುತ್ತದೆ. ಹೀಗೆ ಇಲ್ಲಿನ ಪ್ರಶ್ನೆ 'ಜೀವನಿರುವನೇ ಇಲ್ಲವೇ'

ಎಂದು ಮೊದಲು ಆರಂಭಿಸಿ ಆಮೇಲೆ ಧರ್ಮ ಮತ್ತು ಅಧರ್ಮವೆರಡಕ್ಕೂ ಮೀರಿದ ವಸ್ತುವ್ಯಾವುದು? ಎಂಬುದಕ್ಕೆ ಅನ್ವಯಿಸುತ್ತದೆ. ಆದ್ದರಿಂದ ಜೀವನೆಂದು ಬೇರೊಬ್ಬನು ಇಲ್ಲದ್ದರಿಂದ ಜೀವ ಮತ್ತು ಪರಶಿವ ಇವರ ಬಗ್ಗೆ ಬೇರೆ ಬೇರೆ ಪ್ರಶ್ನೆ ಮಾಡಿದರೆ ಪೂರ್ವಾಪರವಿರುದ್ಧವಾಗುವುದಿಲ್ಲವೇ ?ಎಂದು ಕೇಳಿದರೆ ಸಂಸಾರದಶೆಯುಲ್ಲಿ ಜೀವಬ್ರಹ್ಮರಿಗೆ ಭೇದವಿದ್ದರೂ, ಮುಕ್ತದಶೆಯಲ್ಲಿ ಭ್ರಮರಕೀಟದಂತೆ ಐಕ್ಯವಿರುವುದರಿಂದ ಕೇಳಬೇಕಾದ ವಿಷಯದಲ್ಲಿ ಭೇದವಿದ್ದುದರಿಂದ ಹೀಗೆ ಪ್ರಶ್ನಭೇದ ಬಂದಿದೆ. ಇಲ್ಲಿಯೂ ಧರ್ಮ ಮತ್ತು ಅಧರ್ಮಗಳಿಗೆ ಮೀರಿದ ವಸ್ತುವಿನ ಬಗ್ಗೆ "ಹುಟ್ಟುಸಾವುಗಳಿಲ್ಲದ್ದು" ಎಂದು ಉತ್ತರವನ್ನು ಹೇಳಿ ಉತ್ಪತ್ತಿನಾಶಗಳಿಲ್ಲದ ಶಿವಜೀವರ ಐಕ್ಯವನ್ನು ಬೋಧಿಸಲಾಗಿದೆ. ಹಾಗೆಯೇ ಸ್ವಪ್ನ ಮತ್ತು ಜಾಗ್ರದವಸ್ಥೆಗಳಲ್ಲಿರುವವನನ್ನು ಯಾವನ ಕೃಪೆಯಿಂದ ನೋಡುತ್ತಾನೆಯೋ ಅಂತಹ ವಿಭುವಾದ ಪರಶಿವನನ್ನು ತಾನೆಂದು ಕಂಡವನು ದುಃಖಪಡುವುದಿಲ್ಲ". ಹೀಗೆ ಜಾಗ್ರತ್ಸ್ವಪ್ನಗಳನ್ನು ಅನುಭವಿಸಿದ ಜೀವನೇ ಮಹಂತನೂ ವಿಭುವೂ ಆದ ಪರಶಿವನನ್ನು ತಿಳಿದು ದುಃಖವನ್ನು ಕೊನೆಗಾಣಿಸಿಕೊಂಡು ಶಿವನೇ ಆಗುವುದರಿಂದ ಇಂತವನು ಪರಮೇಶ್ವರನಿಗಿಂತ ಬೇರಯಲ್ಲವೆಂದು ಶ್ರುತಿಯು ಹೇಳುತ್ತಲಿದೆ. ಪ್ರಾಜ್ಞನನ್ನರಿಯುವುದರಿಂದ ದುಃಖನಾಶವಾಗುವುದೆಂಬುದು ವೇದಾಂತದ ನಿರ್ಣಯವೂ ಆಗಿದೆ. ಹಾಗೆಯೇ ಯಮನು ಉತ್ತರ ಹೇಳುವಾಗಲೂ "ಇಲ್ಲಿರುವುದೇ ಅಲ್ಲಿದೆ; ಅಲ್ಲಿರುವುದೇ ಇಲ್ಲಿದೆ. ಇದಕ್ಕೆ ಬೇರೆಯಾಗಿ ಕಂಡವನು ಮತ್ತೆ ಮತ್ತೆ ಸಾಯುತ್ತಾನೆ"ಎಂಬಲ್ಲಿ ಮುಕ್ತಜೀವನಿಗೂ ಪ್ರಾಜ್ಞನಿಗೂ ಇರುವ ಐಕ್ಯವನ್ನು ತಿಳಿಸುತ್ತಾನೆ. ಹಾಗೆಯೇ ಜೀವನ ಬಗ್ಗೆಅವನು ಇರುವನೇ ಇಲ್ಲವೇ ಎಂಬ ಪ್ರಶ್ನೆಯಾದಮೇಲೆ ಯಮನು ಬೇರೆ ಪ್ರಶ್ನೆ ಕೇಳು' ಎಂದು ಹೇಳಿ ನಚಿಕೇತನನ್ನು ಅನೇಕ ಮರಾಶೆಗಳಿಂದ ವಂಚಿಸಿದರೂ ಅವನು ನಿಶ್ಚಲನಾಗಿದ್ದುದನ್ನು ಕಂಡು ಯಮನು ಅವನಿಗೆ ಅಭ್ಯುದಯ, ಶ್ರೇಯಸ್ಸುಗಳೆಂದು ಫಲವನ್ನು ವಿಭಾಗಿಸಿ, ಜ್ಞಾನ-ಅಜ್ಞಾನವೆಂಬ ವಿಭಾಗವನ್ನು ತಿಳಿಸುವನು. ಆಗ ನಚಿಕೇತನು ಜ್ಞಾನವನ್ನೇ ಬಯಸಿದ್ದರಿಂದ ಯಮನು "ಈ ಅಭ್ಯುದಯಗಳಲ್ಲೊಂದೂ ಸಹ ನಿನ್ನನ್ನು ಮೋಹಗೊಳಿಸಲಿಲ್ಲ" ವೆಂದು ನಚಿಕೇತನ ಪ್ರಶ್ನೆಯನ್ನು ಪ್ರಶಂಸಿಸುತ್ತ "ದೇಹದೊಳಗೆ ಗೋಪ್ಯವಾಗಿ ಅಡಗಿರುವ ಸನಾತನಸತ್ಯನಾದ ಪರಶಿವನನ್ನು ಯೋಗಮಾರ್ಗದಿಂದ ತಿಳಿದವನು ಸುಖದುಃಖಗಳೆರಡನ್ನೂ ತೊರೆಯುತ್ತಾನೆ" ಎಂಬಲ್ಲಿ ಶಿವಜೀವರಿಗೆ ಮುಕ್ತಿದಶೆಯಲ್ಲಿ ಅಭೇದವನ್ನು ತಿಳಿಸುತ್ತಾನೆ. ಇಲ್ಲಿ ಹೀಗೆ ಅಗ್ನಿ-ಜೀವ-ಪರಶಿವರ ಬಗ್ಗೆ ಪ್ರಶ್ನೋತ್ತರಗಳು ನಡೆದು ಪ್ರಧಾನದ ಬಗ್ಗೆ ಪ್ರಶ್ನೋತ್ತರಗಳಿಗೆ ಅವಕಾಶವೇ ಇಲ್ಲದ್ದರಿಂದ ಅವ್ಯಕ್ತವೆಂದರೆ ಪ್ರಧಾನವೆನಿಸಲಾರದು.

**ಪುನರ್ಹೇತ್ವಂತರಮಾಹ—ಮಹದ್ವಚ್ಚ ॥ ೭ ॥**

**ಯಥಾ ಮಹಚ್ಛಬ್ದಸ್ಯ ವೇದೇ ಸರ್ವತ್ರ "ಬುದ್ಧೇರಾತ್ಮಾ ಮಹಾನ್ಪರಃ", "ಮಹಾಂತಂ ವಿಭುಮಾತ್ಮಾನಂ ಮತ್ವಾ", "ವೇದಾಹಮೇತಂ**

ಪುರುಷಂ ಮಹಾಂತಂ" ಇತ್ಯಾದೌ ಬುದ್ಧ್ಯಾಖ್ಯದ್ವಿತೀಯ ತತ್ತ್ವಮಿತಿ ನಾಂಗೀಕ್ರಿಯತೇ ಸಾಂಖ್ಯೈಸ್ತಥಾ ವೈದಿಕಾವ್ಯಕ್ತಶಬ್ದೈರ್ನಾಪ್ರಕೃತ ಪ್ರಧಾನಮಂಗೀಕ್ರಿಯತೇ. ತಸ್ಮಾತ್ಪ್ರಕೃತಶರೀರಪರಮೇವಾವ್ಯಕ್ತಪದ ಮಿತ್ಯಶಬ್ದತ್ವಂ ಪ್ರಧಾನಸ್ಯೇತಿ ಸಿದ್ಧಂ.

ಪರಶಿವನ ಪಕ್ಷದಲ್ಲಿ ಬೇರೊಂದು ಹೇತುವನ್ನು ಹೇಳುತ್ತಾನೆ—ಮಹದ್ವಚ್ಚ ॥೭॥

"ಬುದ್ಧಿಗಿಂತಲೂ ಮಹದಾತ್ಮವು ಹೆಚ್ಚಿನದು" "ಮಹತ್ತಾದ ಪುರುಷನನ್ನು ನಾನು ತಿಳಿದಿದ್ದೇನೆ" ಎಂಬ ಶ್ರುತಿಗಳಲ್ಲಿ ಮಹತ್‌ಶಬ್ದವು ಬುದ್ಧಿ ಎಂಬ ಸಾಂಖ್ಯರ ಎರಡನೆಯ ತತ್ವವನ್ನು ಬೋಧಿಸುವುದಿಲ್ಲ. ಅದರಂತೆಯೇ ಅವ್ಯಕ್ತಶಬ್ದವೂ ಅಪ್ರಕೃತ ಪ್ರಧಾನಕ್ಕೆ ಅನ್ವಯಿಸದೆ ಶರೀರವನ್ನೇ ಬೋಧಿಸುತ್ತದೆ. ಹೀಗೆ ಶ್ರುತಿಯು ಪ್ರಧಾನ ವನ್ನು ಧ್ಯೇಯವೆಂದು ತಿಳಿಸದೇ ಇರುವುದರಿಂದ ಅದು ಅಶಬ್ದವೆನಿಸಿದೆ.

ನನ್ವನ್ಯತ್ರ ಪ್ರಧಾನಸ್ಯ ಜಗತ್ಕಾರಣತ್ವೋಪದೇಶಾತ್ ಪ್ರಕೃತಪ್ರಕ ರಣರಹಿತಸ್ಯ ತಸ್ಯ ತ್ರಿವಿಧತ್ವಾನುಗತತ್ವಾದತ್ರಾಪಿ ಪ್ರಸ್ತಾವೋಽಸ್ತೀತ್ಯಾ ಶಂಕ್ಯ ನಿರಾಕರೋತಿ—ಚಮಸಾಧಿಕರಣಂ ॥ ಚಮಸವದವಿಶೇಷಾತ್ ॥

ಭೂಯೋಽಪಿ ಕಾಪಿಲವಾದೀ ಪ್ರಕೃತೇರಶಬ್ದತ್ವಂ ನ ಸಂಭವ ತೀತ್ಯಾಹ, ಕುತಃ ಮಂತ್ರವರ್ಣಾತ್. "ಅಜಾಮೇಕಾಂ ಲೋಹಿತಶುಕ್ಲ ಕೃಷ್ಣಾಂ" ಇತ್ಯತ್ರ ಕಿಮಜಾಶಬ್ದೇನ ಪ್ರಧಾನಮುಪದಿಶ್ಯತೇ ಉತ ತೇಜೋಽಬನ್ನಾತ್ಮಿಕಾ ಛಾಂದೋಗ್ಯಸಿದ್ಧಾ ಅವಾಂತರಪ್ರಕೃತಿರಥವಾ ಚಿಚ್ಛಕ್ತಿರ್ವೇತಿ ಸಂದಿಹ್ಯತೇ. ಇಹ "ನ ಜಾಯತ ಇತ್ಯಜಾ ಸಾಂಖ್ಯಸಿದ್ಧ ಪ್ರಕೃತಿರೇವ ಸತ್ತ್ವರಜಸ್ತಮೋಗುಣಾತ್ಮಿಕತ್ವೇನ ಲೋಹಿತಶುಕ್ಲ ಕೃಷ್ಣಾ ಚ ಭವತಿ. ಏತದ್ಗುಣಸಾಮ್ಯಾವಸ್ಥಾ ಪ್ರಕೃತಿರೇವಾತ್ರೋಪ ದಿಶ್ಯತೇ. ನನ್ವಜಾಶಬ್ದಸ್ಯ ಛಾಗೇ ಮುಖ್ಯತ್ವಾತ್ತತ್ಪರತ್ವಂ ಕಿಂ ನ ಸ್ಯಾದಿತಿ ಚೇನ್ನ, ವಿದ್ಯಾಪ್ರಕರಣಾತ್. "ಬಹ್ವೀಂ ಪ್ರಜಾಂ ಜನ ಯಂತೀಂ"ಇತ್ಯಾದಿಬಹುಪ್ರಜಾಜನಕತ್ವಂ ಲೋಹಿತಶುಕ್ಲಕೃಷ್ಣವರ್ಣಾ ತ್ಮಕತ್ವಂ ಚ ತಸ್ಯಾ ಅಸಂಭವಾತ್. ಉತ "ಅಜೋ ಹ್ಯೇಕೋ ಜುಷ ಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ" ಇತ್ಯತ್ರ ಬದ್ಧಜೀವಸ್ಯ ಜನನಮರಣಪ್ರವಾಹಸಂಸಾರಭೋಗವಿಶಿಷ್ಟತ್ವೇನ ಸುಖದುಃಖಾನುಭೂತಿತ್ವಸ್ಯ, ತದತಿರಿಕ್ತಸ್ಯ ಮುಕ್ತಜೀವಸ್ಯ ಕೃತಭೋಗ ವಿವೇಕೇನ ಮಾಯಾಪಾಶನಿವೃತ್ತೇಶ್ಚ ದರ್ಶನಾತ್, ಜೀವಾತಿರಿಕ್ತವ್ಯಪ ದೇಶಾದಜಾ ಪ್ರಧಾನಮೇವಾತ್ರೋಪಪದ್ಯತೇ. ತಸ್ಮಾನ್ನಾಶಬ್ದಂ ಪ್ರಧಾನಂ. ಅತಃ ಪ್ರಧಾನಜಗತ್ಕಾರಣತ್ವಂ ಶ್ರುತಿಸಿದ್ಧತ್ವೇನ ಕಾಪಿಲಂ ವೈದಿಕಮಿತಿ ಪ್ರಾಪ್ತೇ ಬ್ರೂಮಃ. ನ ಪ್ರಧಾನಸಾಪೇಕ್ಷತ್ವೇನ ಪ್ರತಿಪತ್ತಿ ರಸ್ತಿ, ಕಸ್ಮಾತ್ ಅವಿಶೇಷಾತ್. ನ ಜಾಯತ ಇತ್ಯಜಾ ಇತ್ಯನ್ಯತ್ರಾಪಿ

**ಯೋಜಯಿತುಂ ಶಕ್ಯಂ. ಲೋಹಿತತ್ವಾದಿಕಂ ರೂಪೈಕಾರ್ಥಸಮವೇತಂ, ಯೇನಕೇನಚಿತ್ ಕಲ್ಪನೇನ ಸರ್ವೇಷ್ವಪ್ಯಜಾತ್ವಾದಿಸಂಗ್ರಹಣೋಪಪತ್ತೇಃ ಕಾಪಿಲವಾದ ಏವಾತ್ರೋಪದಿಶ್ಯತ ಇತಿ ವಿಶೇಷಾವಧಾರಣಹೇತ್ವಭಾವಾಚ್ಚ. ಚಮಸವತ್, ಯಥಾ "ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ" ಇತ್ಯಸ್ಮಿನ್ಮಂತ್ರೇ ಅಯಂ ಚಮಸ ಇತಿ ಜ್ಞಾತುಂ ನ ಶಕ್ಯತೇ. ಯಥಾಕಥಂಚಿದರ್ವಾಗ್ಬಿಲತ್ವಾದೇರನ್ಯತ್ರಾಪಿ ಸಂಭವಾತ್. ಏವಮಜಾಮಂತ್ರೇಽಪಿ ನ ಪ್ರಧಾನನಿರ್ಣಯಃ. ತಸ್ಮಾದಶಬ್ದಂ ಪ್ರಧಾನಂ.**

ಈ ಪ್ರಕರಣಕ್ಕೆ ಸಂಬಂಧಪಡದಿರುವ ತ್ರಿಗುಣಾತ್ಮಕವಾದ ಪ್ರಧಾನವನ್ನು 'ಅಜಾಮೇಕಾಂ' ಎಂಬ ಶ್ರುತಿಯಲ್ಲಿ ಜಗತ್ಕಾರಣವೆಂದು ಹೇಳಿರುವುದರಿಂದ ಅಲ್ಲಿಯೂ ಪ್ರಧಾನವನ್ನೇ ಪ್ರತಿಪಾದಿಸಲಾಗಿದೆ ಎಂದು ಆಶಂಕಿಸಿ ನಿರಾಕರಿಸುತ್ತಾನೆ.

**ಚಮಸಾಧಿಕರಣ ॥ ೨ ॥ ಚಮಸವದವಿಶೇಷಾತ್ ॥ ೮ ॥**

ಮತ್ತೆ ಸಾಂಖ್ಯನು ಪ್ರಧಾನವನ್ನು ಶ್ರುತಿಯು ಪ್ರತಿಪಾದಿಸಿದೆ ಎಂದು ವಾದಿಸುತ್ತಾನೆ. ಶ್ವೇತಾಶ್ವತರದಲ್ಲಿ "ಸಮಾನಕಾರವ ಸಂತತಿಯನ್ನು ಕೊಡುವ ಸತ್ತ್ವರಜಸ್ತಮೋಗುಣಾತ್ಮಕವಾದ ಸನಾತನ ಪ್ರಕೃತಿಯನ್ನು ಒಬ್ಬ ಜೀವನು ಭೋಗಿಸುತ್ತಿರುವಾಗ ಮತ್ತೊಬ್ಬನು ಭೋಗಿಸಿ ತೊರೆದಿರುವನು" ಎಂದು ಹೇಳಲಾಗಿದೆ. ಇಲ್ಲಿ ಅಜೆ ಎಂದರೆ ಪ್ರಧಾನವೇ ? ಅಥವಾ ತೇಜಸ್ಸು, ನೀರು, ಮತ್ತುಪೃಥಿವೀ ರೂಪವಾದ ಅವಾಂತರ ಪ್ರಕೃತಿಯೇ ? ಅಥವಾ ಚಿಚ್ಛಕ್ತಿಯೇ ?ಎಂದು ಸಂದೇಹ ಬರುತ್ತದೆ. ಯಾವ ಆಶ್ರಯದಿಂದಲೂ ಹುಟ್ಟದೇ ಇರುವುದರಿಂದ ಅಜೆಯು, ಲೋಹಿತ ಎಂದರೆ ಕೆಂಪು-ರಜೋಗುಣ, ಶುಕ್ಲ ಎಂದರೆ ಬಿಳಿಪು–ಸತ್ತ್ವಗುಣ, ಕೃಷ್ಣ ಎಂದರೆ ಕಪ್ಪು–ತಮೋಗುಣ ಈ ಮೂರು ಗುಣಗಳ ಸಾಮ್ಯಾವಸ್ಥೆ ಎನಿಸಿದ ಪ್ರಕೃತಿಯನ್ನೇ ಇಲ್ಲಿ ತಿಳಿಸುತ್ತದೆ. ಅಜಾಶಬ್ದವು ಹೆಣ್ಣಾಡಿಯಲ್ಲಿ ರೂಢವಾಗಿದ್ದರೂ ಇದು ಜ್ಞಾನಪ್ರಕರಣವಾದ್ದರಿಂದ ರೂಢಿಯನ್ನು ಇಲ್ಲಿ ಆಶ್ರಯಿಸಲಾಗುವುದಿಲ್ಲ. ಆದರೆ ಅನೇಕಸಂತತಿಗಳನ್ನು ಕೊಡುವಿಕೆ ಮತ್ತು ಮೂರು ಗುಣಗಳಿರುವಿಕೆ ಇವು ಪ್ರಕೃತಿಗೇ ಸಂಭವಿಸುತ್ತವೆ. ಇದೂ ಅಲ್ಲದೆ, ಒಬ್ಬನಿಗೆ ಅದರ ಭೋಗವನ್ನೂ, ಮತ್ತೊಬ್ಬನಿಗೆ ಅದರ ತ್ಯಾಗವನ್ನೂ ಹೇಳಿದ್ದರಿಂದ ಬದ್ಧಜೀವನು ಸಂಸಾರದಲ್ಲಿ ಸುಖದುಃಖಗಳನ್ನು ಭೋಗಿಸುತ್ತಿರುವನೆಂದೂ, ಮುಕ್ತನು ವಿವೇಕದಿಂದ ಮಾಯೆಯನ್ನು ಜಯಿಸಿರುವನೆಂದೂ ತಿಳಿದುಬರುತ್ತದೆ. ಇಲ್ಲಿ ಜೀವನಿಗಿಂತ ಬೇರೆಯಾಗಿ ಹೇಳಿರುವುದರಿಂದ ಅಜೆ ಎಂದರೆ ಪ್ರಧಾನವೆಂಬುದು ಯುಕ್ತವಾಗುತ್ತದೆ. ಇದರಿಂದ ಪ್ರಧಾನವು ಶ್ರುತಿಬೋಧಿತವೇ ಆಗುವುದರಿಂದ ಅದನ್ನು ಜಗತ್ತಿಗೆ ಕಾರಣವೆಂದು ಏಕೆ ಹೇಳಬಾರದು ? ಎಂದು ಆಕ್ಷೇಪಬಂದರೆ ಸೂತ್ರವು ಸಮಾಧಾನವನ್ನು ಹೇಳುತ್ತದೆ. ಶ್ರುತಿಯಲ್ಲಿ ಈ ಪದಗಳು ಪ್ರಧಾನವೊಂದಕ್ಕೆ ಅನ್ವಯಿಸುವಂತಹ ವಿಶೇಷಗಳನ್ನು ತಿಳಿಸುವುದಿಲ್ಲ. ಅಜಾ-ಲೋಹಿತ ಇತ್ಯಾದಿ ಪದಗಳನ್ನು ಬೇರೊಂದು ವಸ್ತುವಿಗೂ ಅನ್ವಯಿಸಬಹುದಾಗಿದೆ. ಈ ಪದಗಳು ಸಾಂಖ್ಯರ

ಪ್ರಧಾನವನ್ನೇ ತಿಳಿಸುತ್ತವೆ ಎಂದು ಹೇಳಲಿಕ್ಕೆ ವಿಶೇಷವಾದ ಯಾವ ಕಾರಣವೂ ಇಲ್ಲ. "ತಲೆಕೆಳಗಾಗಿರುವ ಚಮಸದಂತೆ" ಎಂಬುವ ಮಂತ್ರದಲ್ಲಿ ಚಮಸವೆಂದರೆ ಯಾವುದು ಎಂಬುದನ್ನು ತಿಳಿಯಲಾಗುವುದಿಲ್ಲ. ಕೆಳಕ್ಕೆ ಬಾಯಿ ಇರುವಿಕೆ ಎಂಬ ವಿಶೇಷಣವು ಬೇರೆ ವಸ್ತುಗಳಿಗೂ ಸಮಾನವಾಗಿ ಅನ್ವಯಿಸುವಂತಹುದಾಗಿದೆ. ಹಾಗೆಯೇ ಅಜಾ ಎಂಬ ವಿಶೇಷಣವೂ ಬೇರೆ ಕಡೆಗಳಲ್ಲೂ ಅನ್ವಯಿಸಬಹುದಾದ್ದರಿಂದ ಅದು ಪ್ರಧಾನಕ್ಕೆ ಅನ್ವಯಿಸುವುದೆಂದು ನಿರ್ಣಯಿಸಲಾಗುವುದಿಲ್ಲ.

ನನು "ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನ" ಇತಿ ವಾಕ್ಯಶೇಷಾತ್ ಶಿರಶ್ಚಮಸನಿರ್ಣಯ ಇಹ ಕಥಮುತ ಆಹ—

ಜ್ಯೋತಿರುಪಕ್ರಮಾತ್ತಥಾ ಹ್ಯಧೀಯತ ಏಕೇ ॥ ೯ ॥

'ಯದಗ್ನೇರ್ಲೋಹಿತಂ ರೂಪಂ' ಇತ್ಯಾದಿಶ್ರುತೇರ್ಜ್ಯೋತಿರುಪಕ್ರಮಾತ್ ತೇಜೋಬನ್ನಾತ್ಮಿಕಾವಾಂತರಪ್ರಕೃತಿರಜಾಶಬ್ದೇನ ಪ್ರತಿಪಾದ್ಯತೇ. ಏಕೇ ಶಾಖಿನಃ ಯಥಾಲೋಹಿತಶುಕ್ಲಕೃಷ್ಣತ್ವಂ ತೇಜೋಬನ್ನಾನಾಮಧೀಯತೇ. ಅಜಾಶಬ್ದಸ್ಯ ಜನ್ಮರಹಿತವಸ್ತುವಾಚಕತ್ವಾತ್ ಪರಮಶಿವವಾಚಕತ್ವಂ ಯುಕ್ತಂ. ಹಿಶಬ್ದೋಽವಧಾರಣಾರ್ಥಃ. ನನು ಜ್ಯೋತಿರ್ವಾಕ್ಯೋಪಕ್ರಮೋ ಪ್ರಕೃತಿಃ ಸ್ವೇದಜಾದಿಚತುರ್ವಿಧಭೂತಗ್ರಾಮಾತ್ಮಿಕೇಯಂ ಇಹ ಅಜಾಶಬ್ದೇನ ವಿವಕ್ಷಿತಾ, ತಸ್ಮಾದ್ಗುಣತ್ರಿತಯಾತ್ಮಿಕೇಯಮತ್ರ ಜಗತ್ಕಾರಣತ್ವೇನ ಪ್ರತಿಪತ್ತವ್ಯೇತಿ ಚೇನ್ನ, ನ ಕಾಪಿಲತನ್ತ್ರೈಗುಣ್ಯಾತ್ಮಕಪ್ರಕೃತೇರ್ಜಗತ್ಕಾರಣತ್ವಂ. "ಯದಗ್ನೇರ್ಲೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯ" ಇತಿ ಸರ್ವವೇದಾಂತಪ್ರತ್ಯಯನ್ಯಾಯಾತ್ ಶಾಖಾಂತರಪ್ರಸಿದ್ಧಲೋಹಿತಾದಿಪ್ರತ್ಯಭಿಜ್ಞಾನಾತ್ ತೇಜೋಽಬನ್ನಾನಾಮೇವಾತ್ರ ಗ್ರಹಣಂ. ಲೋಹಿತಾದಿಶಬ್ದಸಾಮ್ಯಾದ್ರೋಹಿತಾದೀನಾಂ ಚ ಶಬ್ದಾನಾಂ ರೂಪವಿಶೇಷೇಷು ರೂಢತ್ವಾತ್ ಭಾಕ್ತತ್ವಾಚ್ಚ ತ್ರಿಗುಣಪರತ್ವಸ್ಯ ಸಂದೇಹಾಭಾವೇನ ಚ ಸಂದಿಗ್ಧಸ್ಯ ನಿಗಮನನ್ಯಾಯಾನ್ನ ಪ್ರಧಾನಮತ್ರವಿಚಾರ್ಯತೇ. ಅಸ್ಮಿನ್ನೇವ ಪ್ರಕರಣೇ "ಬ್ರಹ್ಮವಾದಿನೋ ವದಂತಿ ಕಿಂ ಕಾರಣಂ ಬ್ರಹ್ಮ" ಇತ್ಯುಪಕ್ರಮ್ಯ "ತೇ ಧ್ಯಾನಯೋಗಾನುಗದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ" ಇತಿ ವಾಕ್ಯೋಪಕ್ರಮೇ ಪರಮಶಿವಶಕ್ತೇರ್ಮಾಯಾಯಾಃ ಜಗಜ್ಜನಕತ್ವಮವಗಮ್ಯತೇ. ವಾಕ್ಯಶೇಷೇಽಪಿ "ಮಾಯಾಂ ತು ಪ್ರಕೃತಿಂ ವಿಂದ್ಯಾತ್" ಇತಿ. "ಯೋ ಯೋನಿಂ ಯೋನಿಮಧಿತಿಷ್ಠತ್ಯೇಕಃ" ಇತಿ ಚ ತಸ್ಯಾ ಏವಾವಗಮಾತ್ ನ ಕದಾಚಿದಪಿ ಸ್ವಾತಂತ್ರ್ಯಂ. ಪರಮಶಿವಕಾರಣಿಕೇಯಮಜಾ ಪ್ರಕೃತಿರುಚ್ಯತೇ. ಸೈವ ಮಹೇಶ್ವರಶಕ್ತಿರವ್ಯಾಕೃತನಾಮರೂಪಾ ನಾಮರೂಪ

ಯೋರಜಾಮಾತ್ರೇಣ ಪ್ರಾಗವಸ್ಥಾ ನಿರ್ದಿಶ್ಯತ ಇತ್ಯುಪದಿಶ್ಯತೇ. ಅತೋಽಪಿ ವಿಕಾರವಿಷಯೇಂದ್ರಿಯೇಣ ತ್ರಿವಿಧರೂಪೇಣ ತ್ರಿವಿಧಾತ್ಮಕತ್ವಮುಕ್ತಂ. ಕಥಂ ಭೂಯಸ್ತೇಜೋಽತಿರಿಕ್ತಾನಾಂ ತ್ರಿವಿಧರೂಪೇಣ ರೂಪತ್ರಯಾತ್ಮಿಕಾ ಅಜೇತಿ ವಕ್ತುಂ ಶಕ್ಯತೇ. ತಥಾಪಿ ಪರಮೇಶ್ವರಾನುಗೃಹೀತಾಯಾ ಏವ ತೈತ್ತಿರೀಯಕೇಽಪಿ ಸ್ವಾತಂತ್ರ್ಯಮಾಮ್ನಾಯತೇ. "ಅಣೋರಣೀಯಾನ್ಮಹತೋ ಮಹೀಯಾನ್" ಇತ್ಯುಪಕ್ರಮ್ಯ "ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್" ಇತ್ಯಾದಿನಾ ಜಗತ್ಕಾರಣತ್ವಂ ಪರಮೇಶ್ವರಸ್ಯ ಪ್ರಸಾಧ್ಯ ತಜ್ಜನ್ಯತ್ವೇನ ತದಾತ್ಮಕತ್ವೋಪದೇಶಕಾಲೇ 'ಅಜಾಮೇಕಾಂ' ಇತಿ ನಿರ್ದಿಶತಿ. ತತಃ ಪೂರ್ವಾಪರಪರ್ಯಾಲೋಚನಯಾ ತೇಜೋಽಬನ್ನಾತ್ಮಿಕಾಯಾಃ ಕಾರ್ಯಪ್ರಕೃತೇಃ ಕಾರಣತ್ವಂ ಪರಮೇಶ್ವರಾನುಗ್ರಹೇಣೇತಿ ವಿಧೀಯತೇ. ತಸ್ಮಾನ್ನ ಸ್ವತಂತ್ರಸಿದ್ಧ ಇತಿ ಕಾಪಿಲವಾದೋ ಯುಕ್ತಃ.

"ಈ ಶಿರಸ್ಸೇ ತಲೆಕೆಳಗಾಗಿರುವ ಚಮಸ" ವೆಂಬ ವಾಕ್ಯಶೇಷದಿಂದ ಶಿರಸ್ಸೇ ಚಮಸವೆಂದು ತಿಳಿಯುವಂತೆ ಅಜೆ ಎಂದರೆ ಇಂತಹದೆಂದು ತಿಳಿಯಲಾಗುವುದಿಲ್ಲವೇ? ಎಂದು ಆಶಂಕಿಸುತ್ತಾನೆ. **ಜ್ಯೋತಿರುಪಕ್ರಮಾತ್ತಥಾ ಹ್ಯಧೀಯತ ಏಕೇ ||**

ಕೆಲವು ಶಾಖೆಯವರು "ಅಗ್ನಿಯ ಕೆಂಪುಬಣ್ಣವು ತೇಜಸ್ಸಿನದು, ಬಿಳಿಯಬಣ್ಣ ನೀರಿನದು, ಕಪ್ಪುಬಣ್ಣ ಅನ್ನದ್ದು" ಎಂಬ ಶ್ರುತಿಯಲ್ಲಿ ತೇಜೋಽಬನ್ನರೂಪವಾದ ಅವಾಂತರಪ್ರಕೃತಿಯನ್ನು ಅಜೆ ಎಂದು ಹೇಳುತ್ತಾರೆ. ಅಜಾ ಪದವು ಜನ್ಮರಹಿತವಾದ ವಸ್ತುವನ್ನು ತಿಳಿಸುವುದರಿಂದ ಪರಶಿವನಿಗೂ ಅನ್ವಯಿಸುತ್ತದೆ. ಸೂತ್ರದಲ್ಲಿ ಬಂದಿರುವ ಹಿ ಶಬ್ದವು ನಿಶ್ಚಯವನ್ನು ತಿಳಿಸುತ್ತದೆ. ತೇಜಸ್ಸನ್ನು ತಿಳಿಸುವ ಈ ವಾಕ್ಯದ ಆರಂಬದಲ್ಲಿ ಸ್ವೇದಜ, ಅಂಡಜ, ಉದ್ಭಿಜ, ಜರಾಯುಜವೆಂಬ ಪ್ರಾಣಿಗಳ ಸಮೂಹವೆನಿಸಿದ ಪ್ರಕೃತಿಯನ್ನು ಇಲ್ಲಿ ಅಜಾಶಬ್ದದಿಂದ ತಿಳಿಸಲಾಗಿದೆ. ಆದ್ದರಿಂದ ತ್ರಿಗುಣಾತ್ಮಕವಾದ ಈ ಪ್ರಕೃತಿಯನ್ನೇ ಜಗತ್ಕಾರಣವೆಂದು ತಿಳಿಯಬಹುದಲ್ಲವೆ? ಎಂದರೆ ಸಾಂಖ್ಯರು ಹೇಳುವ ಈ ತ್ರಿಗುಣಾತ್ಮಕವಾದ ಪ್ರಕೃತಿ ಜಗತ್ಕಾರಣವಾಗಲಾರದು. ಅಗ್ನಿಯಲ್ಲಿರುವ ಮೂರು ಬಗೆಯ ಬಣ್ಣಗಳು ಅಗ್ನಿ ಒಂದರದೇ ಅಲ್ಲ; ಆದರೆ ತೇಜಸ್ಸು-ನೀರು ಮತ್ತು ಪೃಥಿವಿ ಇವು ಮೂರಕ್ಕೂ ಸಂಬಂಧಿಸಿರುವುವೆಂದು ಇಲ್ಲಿ ತಿಳಿಸಲಾಗಿದೆ. ಲೋಹಿತ ಮತ್ತು ರೋಹಿತ ಎಂಬ ಶಬ್ದಗಳ ಹೋಲಿಕೆಯಿಂದಲೂ, ರೋಹಿತಾದಿಶಬ್ದಗಳು ಒಂದೊಂದು ರೂಪದಲ್ಲಿ ರೂಢವಾಗಿರುವುದರಿಂದಲೂ, ಅಗ್ನಿಯಲ್ಲಿರುವ ಮೂರು ಬಣ್ಣಗಳನ್ನು ತಿಳಿಸುವ ತ್ರಿಗುಣಶಬ್ದವು ಗೌಣವೆನಿಸುವುದರಿಂದಲೂ, ಮುಖ್ಯವಾದ ತ್ರಿಗುಣಗಳನ್ನು ಪಡೆದಿರುವ ಪ್ರಧಾನದ ಬಗ್ಗೆ ಈ ಪ್ರಕರಣದಲ್ಲಿ ಸಂದೇಹವೇ ಇಲ್ಲದ್ದರಿಂದಲೂ, 'ಸಂದೇಹಬಂದರೆ ಮಾತ್ರವೇ ವಿಚಾರಮಾಡಬೇಕು' ಎಂಬ ನ್ಯಾಯದಿಂದ ಪ್ರಧಾನದ ಬಗ್ಗೆ ಇಲ್ಲಿ ವಿಚಾರಮಾಡಿಯೇ ಇಲ್ಲ. ಇದೇ ಪ್ರಕರಣದಲ್ಲಿ

ಬ್ರಹ್ಮವಾದಿಗಳು ಹೇಳುತ್ತಾರೆ." ಕಾರಣಭೂತವಾದ ಬ್ರಹ್ಮ ಯಾವುದು "ಎಂದಾರಂಭಿಸಿ "ದೇವನಲ್ಲಿರುವ ಶಕ್ತಿ ಅವನ ಗುಣಗಳಿಂದ ಮುಚ್ಚಿರುವುದೆಂದು ಅವರು ಧ್ಯಾನಯೋಗದಿಂದ ಕಂಡುಕೊಂಡರು" ಎಂಬಲ್ಲಿ ಪರಶಿವನ ಶಕ್ತಿ ಎನಿಸಿದ ಮಾಯೆಯು ಜಗತ್ಕಾರಣವೆಂದು ತಿಳಿದುಬರುತ್ತದೆ "ಮಾಯೆಯೇ ಪ್ರಕೃತಿ" "ಒಬ್ಬನೇ ಪ್ರತಿಯೊಂದು ಯೋನಿಯಲ್ಲೂ ನೆಲಸಿದ್ದಾನೆ" ಎಂಬ ವಾಕ್ಯಶೇಷದಲ್ಲಿಯೂ ಅವನ್ನೇ ತಿಳಿಸಿರುವುದರಿಂದ ಈ ಪ್ರಕೃತಿಗೆ ಎಂದಿಗೂ ಸ್ವಾತಂತ್ರ್ಯವಿಲ್ಲವೆಂದೂ, ಅದಕ್ಕೆ ಈಶ್ವರನೇ ಕಾರಣನೆಂದೂ ಗೊತ್ತಾಗುತ್ತದೆ. ಈ ಮಾಹೇಶ್ವರ ಶಕ್ತಿಯು ನಾಮರೂಪಗಳ ವಿಭಾಗವಾಗುವ ಮುನ್ನವೇ ಅಜೆ ಎನಿಸಿರುವುದಾಗಿ ಹೇಳಿರುವುದರಿಂದ ವಿಕಾರ, ವಿಷಯ ಮತ್ತು ಇಂದ್ರಿಯಗಳಿಂದ ಅದು ಮೂರು ಬಗೆಯಾಗಿರುವುದೆಂದು ತಿಳಿದುಬರುತ್ತದೆ, ತೇಜಸ್ಸನ್ನು ಬಿಟ್ಟು ಉಳಿದ ಭೂತಗಳಲ್ಲಿ ಮೂರು ಬಗೆಯ ಬಣ್ಣಗಳಿಲ್ಲದಿರುವುದರಿಂದ ಈ ಬಗೆಯ ತ್ರೈವಿಧ್ಯವು ಇಲ್ಲಿ ಹೊಂದದೇ ಇರುವುದರಿಂದ ಹಿಂದೇ ಹೇಳಿದ ವಿಕಾರ, ವಿಷಯ, ಇಂದ್ರಿಯಗಳ ತ್ರೈವಿಧ್ಯವನ್ನೇ ಹೇಳಬೇಕು. ಆದ್ದರಿಂದ ಈಶ್ವರನಿಗೆ ಸಲಕರಣೆಯಾದ್ದರಿಂದಲೇ ಅದಕ್ಕೆ ಒಂದು ಬಗೆಯ ಸ್ವಾತಂತ್ರ್ಯವನ್ನು ತೈತ್ತಿರೀಯದಲ್ಲಿ ಹೇಳಲಾಗಿದೆ. "ಸಣ್ಣದಕಿಂತ ಸಣ್ಣದು, ದೊಡ್ಡದಕ್ಕಿಂತ ದೊಡ್ಡದು" ಎಂದಾರಂಭಿಸಿ "ಅದರಿಂದ ಏಳು ಪ್ರಾಣಗಳು ಹುಟ್ಟುತ್ತವೆ" ಎಂಬುದರಿಂದ ಪರಮೇಶ್ವರನೇ ಜಗತ್ಕಾರಣವೆಂದು ಹೇಳಿ ಅವನಿಂದ ಹುಟ್ಟಿದ್ದು ಅವನ ರೂಪವೇ ಆಗಿರುವುದೆಂದು ಹೇಳುವಾಗ "ಅಜಾಮೇಕಾಂ" ಎಂಬ ಮಂತ್ರವು ಅಲ್ಲಿ ಬಂದಿದೆ. ಹೀಗೆ ಹಿಂದೆಮುಂದೆ ಆಲೋಚಿಸುವುದರಿಂದ ತೇಜಸ್ಸು, ನೀರು, ಪೃಥಿವೀರೂಪವಾದ ಕಾರ್ಯಪ್ರಕೃತಿಯೂ ಈಶ್ವರಾನುಗ್ರಹದಿಂದಲೇ ಕಾರಣವೆನಿಸಿದೆ ಎಂದು ತಿಳಿದುಬರುತ್ತದೆ. ಆದ್ದರಿಂದ ಪ್ರಕೃತಿ ಸ್ವತಂತ್ರವಾಗಿ ಜಗತ್ಕಾರಣವಾಗಲಾರದು.

**ನನು ತೇಜೋಽಬನ್ನಾನಾಂ ಉತ್ಪತ್ತಿಶ್ರವಣಾದ್ಯೋಗರೂಢೇ ತದಸಂಭವಾತ್ಕಥಮಜಾಶಬ್ದೇನ ತೇಷಾಂ ಗ್ರಹಣಮಿತ್ಯತ ಆಹ—**

**ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ॥ ೧೦ ॥**

**ಚಶಬ್ದಶ್ಚೋದ್ಯನಿರಾಸೇ. ನ ಅಜಾಶಬ್ದಾನುಪಪತ್ತಿಃ, ಕುತಃ ಕಲ್ಪನೋಪದೇಶಾತ್. ತೇಜೋಽಬನ್ನಾತ್ಮಿಕಾಯಾ ಅಜಾತ್ವಂ ಕಲ್ಪ್ಯತೇ. ಯಥಾ ಲೋಕೇ ಪ್ರಸಿದ್ಧಾಮಜಾಂ ಭುಕ್ತಭೋಗಾಂ ಏಕ ಅಜಸ್ತ್ಯಜತಿ. ಅನ್ಯಸ್ತಾಮನುವರ್ತತೇ. ಏವಂ ತ್ಯಾಗಭೋಗಯೋಃ ಕಾರ್ಯಕಾರಣಸಂಘಾತಾದ್ಯುಪಾದಾನಭೂತಾಯಾಸ್ತೇಜೋಽಬನ್ನಾತ್ಮಿಕಾಯಾಃ ಪ್ರಕೃತೇಸ್ಸಾಮ್ಯಪ್ರತಿಪತ್ತ್ಯರ್ಥಂ ಮಧ್ವಾದಿವತ್ "ಯಥಾಸೌ ವಾ ಆದಿತ್ಯೋ ವಾ ದೇವಮಧು", "ವಾಚಂ ಧೇನುಮುಪಾಸೀತ" ಇತ್ಯಾದಾವಾದಿತ್ಯಾದೇರ್ಮಧ್ವಾದಿಕಲ್ಪನಾ ತದ್ವದಜಾತ್ವಕಲ್ಪನಾಯಾಮವಿರೋಧಃ. ನನ್ವತ್ರ ಸ್ವಾತಂತ್ರ್ಯೇಣ ಪ್ರಕೃತೇಃ ಪ್ರಪಂಚಕಾರಣತ್ವಮು**

ಪದಿಶ್ಯತ ಇತಿ ಚೇನ್ನ, "ಛಂದಾಂಸಿ ಯಜ್ಞಾಃ ಕ್ರತವೋ ವ್ರತಾನಿ ಭೂತಂ ಭವ್ಯಂ ಚ ದೇವಾ ವದಂತಿ। ಕಸ್ಮಾನ್ಮಾಯೀ ಸೃಜತೇ ವಿಶ್ವಮೇ ತತ್ತಸ್ಮಿಂಶ್ಚಾನ್ಯೋ ಮಾಯಯಾ ಸನ್ನಿರುದ್ಧಃ॥ "ಇತಿ ಸೃಷ್ಟ್ಯುಪಕ್ರಮೇ ಮಾಯಾವಿಶಿಷ್ಟಸ್ಯ ಪರಮೇಶ್ವರಸ್ಯೈವ ಕಾರಣತ್ವೋಪದೇಶಾತ್. ಉತ ಜಡಪ್ರಕೃತೇರೇವ ಪರಮೇಶ್ವರಾದ್ಭಿನ್ನತ್ವಂ, ಮೋಕ್ಷದಶಾಯಾಂ ಪರಮ ಶಿವೇ ವಿಲೀನತ್ವಂ ಯುಕ್ತಂ. ನತು ಚಿಚ್ಛಕ್ತೇಃ. ತಥಾಚ ಸ್ಮೃತಿಃ "ಶಕ್ತಿರಸ್ಯ ಜಗತ್ಕೃತ್ಸ್ನಂ ಶಕ್ತಿಮಾಂಸ್ತು ಮಹೇಶ್ವರಃ। ಶಕ್ತಿಸ್ತು ಶಕ್ತಿಮ ದ್ರೂಪಾ ವ್ಯತಿರಿಕ್ತಾ ಹಿ ನ ಕ್ವಚಿತ್। ತಾದಾತ್ಮ್ಯಮನಯೋರ್ನಿತ್ಯಂ ವಹ್ನಿದಾಹಕಶಕ್ತಿವತ್। ಶಕ್ತಿಶಕ್ತಿಮತೋರ್ಯಸ್ಮಾದಭೇದಸ್ಸರ್ವದಾ ಸ್ಥಿತಃ॥" ಇತಿ. ಅತ್ರ ಪರಮೇಶ್ವರಾದಪೃಥಕ್ಸಿದ್ಧತ್ವೇನ ಪರಮೇಶ್ವರ ನಿಷ್ಠಕಾರಣತ್ವಮಜಾಶಬ್ದವಾಚ್ಯಕಾರಣಪ್ರಕೃತೇರ್ನ ವಿರೋಧಃ. ನನು ಅಜೋ ಹ್ಯೇಕೋ ಜುಷಮಾಣೋಽನುಶೇತೇ" ಇತ್ಯಾದೌ ಸ್ವಾತಂತ್ರ್ಯೇ ಣೈಕಸ್ಯ ಜೀವಸ್ಯ ಮಾಯಾನುಪ್ರವಿಷ್ಟತ್ವಸ್ಯ, ಏಕಸ್ಯ ಜೀವಸ್ಯ ಸ್ವಾತಂ ತ್ರ್ಯೇಣ ಮಾಯಾಮೋಚಕತ್ವಸ್ಯ ಚ ವ್ಯಪದೇಶಾನ್ನ ಪರಮೇಶ್ವರಸ್ಯ ಬಂಧಮೋಕ್ಷಹೇತುತ್ವಮಸ್ತೀತಿ ಚೇನ್ನ, "ಕ್ಷರಾತ್ಮಾನಾವೀಶತೇ ದೇವ ಏಕಃ। ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವ ಮಾಯಾನಿವೃತ್ತಿಃ"ಇತ್ಯನೇನೇಷ್ಟಾದಿಲಿಂಗತ್ರಯಧಾರಣದ್ವಾರಾ ಜೀವಾ ನಾಂಕ್ಷಿಮಾಯಾಮೋಚಕತ್ವವ್ಯವಸ್ಥಾಪನಾನ್ನಾನ್ಯಥೇತಿ ಸಿದ್ಧಂ.

ತೇಜೋಽಬನ್ನಗಳು ಹುಟ್ಟುವುವೆಂದು ತಿಳಿದಿದ್ದರಿಂದ ಅವನ್ನು ಯೋಗರೂಢ ವಾದ ಅಜಾ ಶಬ್ದವು ಹೇಗೆ ತಿಳಿಸಬಲ್ಲದು ಎಂದು ಆಶಂಕಿಸಿ ನಿರಾಕರಿಸುತ್ತಾನೆ—

ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ॥ ೧೦ ॥

ಚ ಶಬ್ದವು ಆಕ್ಷೇಪವನ್ನು ನಿರಾಕರಿಸುತ್ತದೆ. ತೇಜೋಽಬನ್ನಗಳನ್ನು ಅಜೆ ಯೆಂದು ಕರೆದಿರುವುದರಿಂದ ಅಯುಕ್ತವೇನಲ್ಲ. ಲೋಕವಲ್ಲಿ ಭೋಗಿಸಿದ ಆ ಪ್ರಾಣಿ ಯನ್ನು ಒಬ್ಬನು ತೊರೆಯುತ್ತಾನೆ. ಮತ್ತೊಬ್ಬನು ಅನುಸರಿಸುತ್ತಾನೆ. ಹೀಗೆ ತ್ಯಾಗಭೋಗಗಳ ಕಾರ್ಯಕಾರಣಭಾವಸಮುದಾಯಕ್ಕೆ ಸಮವಾಯಿಕಾರಣವೆನಿ ಸಿದ ತೇಜೋಽಬನ್ನರೂಪವಾದ ಪ್ರಕೃತಿಯನ್ನು ಅಜೆ ಎಂದು ಕಲ್ಪಿಸಿದ್ದರಲ್ಲಿ ವಿರೋ ಧವಿಲ್ಲ. "ಈ ಆದಿತ್ಯನೇ ಮಧು" "ವಾಕ್ಕನ್ನು ಧೇನುವೆಂದು ಉಪಾಸಿಸು" ಎಂಬಲ್ಲಿ ಆದಿತ್ಯನನ್ನು ಮಧುವೆಂದು ಕಲ್ಪಿಸಿರುವಂತೆ ಪ್ರಕೃತಿಯನ್ನು ಅಜೆ ಎಂದು ಕಲ್ಪಿಸಿದ್ದ ರಲ್ಲಿ ತಪ್ಪೇನಿಲ್ಲ. ಪ್ರಕೃತಿಯು ಸ್ವತಂತ್ರವಾಗಿ ಏಕೆ ಜಗತ್ತಿಗೆ ಕಾರಣವಾಗಬಾರದು? ಎಂದು ಕೇಳುವುದು ಸರಿಯಲ್ಲ. "ಯಾವನಿಗೆ ಯಜ್ಞಗಳೇ ಛಂದಸ್ಸೋ, ಕ್ರತುಗಳೇ ವ್ರತಗಳೋ, ದೇವತೆಗಳೇ ಸಕಲ ವಸ್ತುಗಳೋ, ಯಾತರಿಂದ ಈ ಮಾಯಿಕನು ಈ ವಿಶ್ವವನ್ನು ಸೃಜಿಸುತ್ತಾನೆಯೋ ಅದರಲ್ಲಿ ಮತ್ತೊಬ್ಬನು ಮಾಯೆಗೆ ಅಧೀನನಾಗಿರು

ತ್ತಾನೆ" ಇಲ್ಲಿ ಸೃಷ್ಟಿಯಾರಂಭದಲ್ಲಿ ಮಾಯಾವಿಶಿಷ್ಟನಾದ ಪರಮೇಶ್ವರನನ್ನು ಕಾರಣನೆಂದು ಹೇಳಲಾಗಿದೆ. ಇದೂ ಅಲ್ಲದೆ ಜಡಪ್ರಕೃತಿಯೇ ಈಶ್ವರನಿಂದ ಭಿನ್ನವಾಗಿದ್ದು ಮುಕ್ತದಶೆಯಲ್ಲಿ ಶಿವನಲ್ಲಿ ವಿಲೀನವಾಗುವುದೆಂಬುದೂ ಯುಕ್ತವಾಗುತ್ತದೆ. ಆದರೆ ಚಿಚ್ಛಕ್ತಿಗೆ ಹೀಗೆ ಹೊರಗೆ ಬರುವಿಕೆ ಮತ್ತೆ ಸೇರುವಿಕೆ ಹೊಂದಿಕೆಯಾಗುವುದಿಲ್ಲ. "ವಿಶ್ವವೆಲ್ಲವೂ ಅವನ ಶಕ್ತಿಯಾಗಿ ಅವನೇ ಅದಕ್ಕಧಿಪತಿಯೂ ಆಗಿದ್ದಾನೆ. ಶಕ್ತಿಯೂ ಶಕ್ತನ ಪ್ರಾಣರೂಪವಾಗಿ ಎಂದಿಗೂ ಅವನಿಂದ ಭಿನ್ನವಾಗುವಂತಿಲ್ಲ. ಬೆಂಕಿಗೂ ಸುಡುವ ಶಕ್ತಿಗೂ ಇರುವಂತೆ ಶಕ್ತನಿಗೂ ಶಕ್ತಿಗೂ ಅಭೇದ ನಿತ್ಯವಾಗಿರುವುದು" ಎಂಬ ಸ್ಮೃತಿಯಂತೆ ಶಕ್ತಿ ಪರಶಿವನನ್ನು ಬಿಟ್ಟಿರಲಾರದಾದ್ದರಿಂದ ಪರಮೇಶ್ವರನು ಜಗತ್ಕಾರಣನೆಂಬುದಕ್ಕೂ, ಅಜಾಶಬ್ದದಿಂದ ತಿಳಿದುಬರುವಂತೆ ಅವನೇ ಕಾರಣ ಮತ್ತು ಪ್ರಕೃತಿ ಎನಿಸುವುದಕ್ಕೂ ವಿರೋಧವಿಲ್ಲ. "ಒಬ್ಬನು ಅಜೆಯನ್ನು ಭೋಗಿಸುತ್ತಾನೆ. ಒಬ್ಬನು ಭೋಗಿಸಿಬಿಟ್ಟಿದ್ದಾನೆ" ಎಂಬಲ್ಲಿ ಒಬ್ಬ ಜೀವನು ಸ್ವತಂತ್ರವಾಗಿ ಮಾಯೆಯೊಳಗೆ ಸಿಕ್ಕಿರುವನೆಂದೂ, ಒಬ್ಬನು ಸ್ವತಂತ್ರವಾಗಿ ಮಾಯೆಯಿಂದ ಬಿಡುಗಡೆಯಾಗಿರುವನೆಂದು ಹೇಳಿದ್ದರಿಂದ ಪರಶಿವನಿಗೆ ಬಂಧಮೋಕ್ಷಗಳ ಸಂಬಂಧವಿಲ್ಲವೆಂದರೆ, "ಕ್ಷರವೆನಿಸಿದ ಪ್ರಕೃತಿ, ಅಮೃತನೆನಿಸಿದ ಜೀವ ಇಬ್ಬರನ್ನೂ ಒಬ್ಬ ದೇವನು ನಿಯಮಿಸುತ್ತಾನೆ". "ಮತ್ತೆ ಮತ್ತೆ ಅವನ ಧ್ಯಾನಧಾರಣಾನುಸಂಧಾನಗಳಿಂದ ಕೊನೆಗೆ ಮಾಯೆ ತೊಲಗುವುದು" ಈ ಶ್ರುತಿಗಳಲ್ಲಿ ಇಷ್ಟಲಿಂಗಧಾರಣದಿಂದಲೂ, ಪ್ರಾಣಲಿಂಗಧ್ಯಾನದಿಂದಲೂ, ಭಾವಲಿಂಗಾನುಸಂಧಾನದಿಂದಲೂ ಜೀವರಿಗೆ ಮಾಯೆಯು ತೊಲಗಬೇಕಾಗಿರುವುದರಿಂದ ಪರಶಿವನೇ ಬಂಧಮೋಕ್ಷಗಳಿಗೆ ಕಾರಣನೆನಿಸಿದ್ದಾನೆ.

ಏವಂ ಪ್ರಧಾನಸ್ಯ ಸ್ವಾತಂತ್ರ್ಯೇಣ ಜಗತ್ಕಾರಣತ್ವಂ ನಿರಸ್ಯ ಪಂಚವಿಂಶತಿತತ್ತ್ವಾನಿ ನಿರಾಕರೋತಿ–ಸಂಖ್ಯೋಪಸಂಗ್ರಹಾಧಿಕರಣಂ ॥ ೩ ॥

ನ ಸಾಖ್ಯೋಪಗ್ರಹಣಾದಪಿ । ನಾನಾಭಾವಾದತಿರೇಕಾಚ್ಚ ॥ ೧೧ ॥

ಬೃಹದಾರಣ್ಯಕೇ ಷಷ್ಠಾಧ್ಯಾಯೇ ಪಠ್ಯತೇಽಸ್ಯ ವಿಷಯಃ. "ತದೇವ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಂ" ಇತ್ಯನಂತರಂ "ಯಸ್ಮಿನ್ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ", "ತಮೇವ ಮನ್ಯೇ ಹ್ಯಾತ್ಮಾನಂ ವಿದ್ವಾನ್ಬ್ರಹ್ಮಾಮೃತೋಽಮೃತಂ" ಇತಿ. "ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಂ ಮನಸೋ ಯೇ ಮನೋ ವಿದುಸ್ತೇ ನಿಚಿಕ್ಯುರ್ಬ್ರಹ್ಮ ಪುರಾಣಮಗ್ರ್ಯಂ" ಇತಿ. ಅಸ್ಮಿನ್ಮಂತ್ರೇ ಪಂಚಪಂಚಜನಾ ಆಕಾಶಶ್ಚಾಶ್ರಿತಾಃ ತಮಾಶ್ರಯಭೂತಮಾತ್ಮಾನಂ ಅಮೃತಂ ಮನ್ಯೇ. ಏವಂ ಬ್ರಹ್ಮವಿದ್ವಾನ್ ಅಮೃತಂ ಸ್ಯಾತ್, "ಅಹಮಮೃತೋ ಭವಾಮಿ" ಇತಿ. ಅತ್ರ "ಪಂಚ ಪಂಚಜನಾ" ಇತಿ ಸಾಂಖ್ಯಸಿದ್ಧಾಂತ"ಮೂಲಪ್ರಕೃತಿರವಿಕೃತಿರ್ಮಹದಾದ್ಯಾಃ ಪ್ರಕೃತಿವಿಕೃತಯಸ್ಸಪ್ತ । ಷೋಡಶಕಸ್ತು ವಿಕಾರೋ ನ ಪ್ರಕೃತಿರ್ನ

ವಿಕೃತಿಃಪುರುಷಃ" ಇತಿ ಸಂಗೃಹೀತಾನಿ ಪಂಚವಿಂಶತಿತತ್ತ್ವಾನಿ? ಕಿಂವಾ ಪ್ರಾಣಾದಯಃ ಪಂಚಪದಾರ್ಥಾಃ ಶ್ರುತಿಸಿದ್ಧಾಃ? ಇತಿ ಸಂಶಯೇ, ತತ್ತ್ವಾನೀತಿ ಪ್ರಾಪ್ತಂ. ಪಂಚಪಂಚೇತ್ಯನೇನ ಪಂಚವಿಂಶತಿಸಂಖ್ಯಾಕಾಃ ಪದಾರ್ಥಾ ಉಚ್ಯಂತೇ. ಜನಶಬ್ದಸ್ಯ ತತ್ತ್ವೋಪಲಕ್ಷಣಾರ್ಥತ್ವಾತ್ ಪ್ರಾಣಾದಿಷ್ವಪ್ಯಮುಖ್ಯತ್ವಾಚ್ಚ, ನ ಪ್ರಧಾನಮಶಬ್ದಮಿತಿ ಪ್ರಾಪ್ತೇ ಬ್ರೂಮಃ. ಉದಾಹೃತಶ್ರುತೌ ಪಂಚವಿಂಶತಿಸಂಖ್ಯಾಶ್ರವಣಾತ್ ಪ್ರಧಾನಸ್ಯ ಶಬ್ದವತ್ತ್ವಮಿತ್ಯಪಿ ನ ಸಂಭವತಿ. ಕುತಃ ನಾನಾಭಾವಾತ್. ನಾನಾತ್ವಾದವಾಂತರಸಂಖ್ಯಾಯಾ ಅನುಗಮಕಧರ್ಮಾಭಾವೇನ ಪಂಚಪಂಚಕಾನಾಂ ಪ್ರತಿಪಾದಯಿತುಮಶಕ್ಯತ್ವಾತ್. ನಾನಾತ್ವೇಽಪಿ ಕಿಂಚಿತ್ತ್ವಸ್ಯ ಚ ವಿಂಶತಿಸಂಖ್ಯಾಪ್ರತಿಪಾದಕತ್ವಾಂಗೀಕಾರೇ ಬಾಧಕಾಂತರಮಾಹ ಅತಿರೇಕಾಚ್ಚೇತಿ. ಪಂಚಜನಾಪೇಕ್ಷಯಾ ಆಕಾಶಪುರುಷಕಾಲಾದೀನಾಮತಿರಿಕ್ತತ್ವಾತ್ ಷಟ್ತ್ರಿಂಶತ್ಸಂಖ್ಯೋಪಪತ್ತೇರ್ನ ಪಂಚವಿಂಶತಿಸಂಖ್ಯಾಪ್ರತಿಪತ್ತಿರಿತ್ಯುಪದಿಶ್ಯತೇ. ತಥಾಹಿ ಪಂಚಜನಶಬ್ದಸ್ಯ ಸ್ವವಿಶೇಷಣೈಕಪದ್ಯನಿಶ್ಚಯಾತ್ತದೇಕದೇಶಸ್ಯ ಪಂಚಶಬ್ದಸ್ಯ ಪಂಚಶಬ್ದೇನಾನ್ವಯಾಯೋಗಾತ್ ನ ಪಂಚವಿಂಶತಿಸಂಖ್ಯಾಪ್ರತೀತಿಃ. ನನ್ವತ್ರ ಕಾಲಾದಿತತ್ತ್ವಾನಾಮದರ್ಶನಾತ್ ಕಥಂ ಷಟ್ತ್ರಿಂಶತ್ತತ್ತ್ವಸಂಖ್ಯಾಪ್ರತಿಪತ್ತಿರಿತಿ ಚೇತ್ ವೃದ್ಧಜಾಬಾಲೋಪನಿಷದಿ ಪ್ರಥಮಂ ಪಶುಪಾಶಪತಿಪದಾರ್ಥತ್ರಯಂ ನಿರೂಪ್ಯ ತತಶ್ಶಿವಸ್ಯ ಪರಬ್ರಹ್ಮಣಃ ಪಂಚಕೃತ್ಯಕರ್ತೃತ್ವಂ ಪ್ರಸಾಧ್ಯ "ಸ ಪುನಸ್ತಗ್ಂ ಹೋವಾಚ ಕಾನಿ ಷಟ್ತ್ರಿಂಶತ್ತತ್ತ್ವಾನೀತಿ ಸ ತಸ್ಮಾ ಆಹ ಶಿವಶ್ಶಕ್ತಿಸ್ಸದಾಶಿವ ಈಶ್ವರಶ್ಶುದ್ಧವಿದ್ಯಾ" ಇತ್ಯೇತಾನಿ ಶುದ್ಧಾನಿ ಪಂಚತತ್ತ್ವಾನಿ; ಮಾಯಾ, ಕಾಲೋ, ನಿಯತಿಃ, ಕಲಾ, ವಿದ್ಯಾ, ರಾಗಃ, ಪುರುಷ ಇತಿ ಶುದ್ಧಾಶುದ್ಧಾನಿ ಸಪ್ತ; ತತಃ ಪ್ರಕೃತಿಃ, ಪ್ರಕೃತೇರ್ಗುಣತ್ರಯಂ, ಗುಣತ್ರಯಾನ್ನಾಮರೂಪಕ್ರಿಯಾಸ್ಪದಾಃ ಪರಸ್ಪರವಿಭಿನ್ನಾಃ ಧರಣ್ಯಾದೀನಿ ವಿಂಶತಿತತ್ತ್ವಾನಿ. ದೃಗ್ವಿಲಕ್ಷಣಾಂ ಶಕ್ತಿಂ ಪರಮೇಶ್ವರೋ ಯದಾ ಸಂಕ್ರಮತೇ ತದಾ ಪ್ರಾಜ್ಞತೈಜಸಮಿಶ್ರಾಖ್ಯಾ ಆಗಚ್ಛಂತಿ" ಇತಿ ಷಟ್ತ್ರಿಂಶತ್ತತ್ತ್ವಾನಾಮಸಂಕುಚಿತತ್ವೇನ ವ್ಯಪದೇಶಾತ್. ಶ್ವೇತಾಶ್ವತರನಾರಾಯಣಾದ್ಯುಪನಿಷತ್ಸು ಅತಿವಿಸ್ಪಷ್ಟತಯಾ ತದ್ದರ್ಶನಾತ್ ಶ್ರುತ್ಯಾಗಮಾನುಸಾರೇಣ ದ್ವಿತೀಯಪಾದಪ್ರಥಮಾಧಿಕರಣೇ ಬಹುಧಾ ಪ್ರಪಂಚಿತಂ. ತಸ್ಮಾತ್ ಷಟ್ತ್ರಿಂಶತ್ತತ್ತ್ವಗ್ರಹಣಮೇವಾತ್ರ ಯುಕ್ತಂ.

ಹೀಗೆ ಪ್ರಧಾನವು ಸ್ವತಂತ್ರವಾಗಿ ಜಗತ್ಕಾರಣವೆಂಬುದನ್ನು ನಿರಾಕರಿಸಿ ಅದರ ಇಪ್ಪತ್ತೈದು ತತ್ತ್ವಗಳನ್ನು ಮುಂದೆ ನಿರಾಕರಿಸುತ್ತಾನೆ—

**ನ ಸಾಂಖ್ಯೋಪಗ್ರಹಣಾದಪಿ ನಾನಾಭಾವಾದತಿರೇಕಾಚ್ಚ ॥ ೧೧ ॥**

ಬೃಹದಾರಣ್ಯಕದ ಆರನೇ ಅಧ್ಯಾಯದಲ್ಲಿ ಇದರ ವಿಷಯು ಬಂದಿದೆ. "ಅದೇ ಜ್ಯೋತಿಗಳ ಜ್ಯೋತಿ; ಅದೇ ಆಯುಸ್ಸು ಮತ್ತು ಅಮೃತ", "ಯಾವುದರಲ್ಲಿ ಪಂಚ ಪಂಚ ಜನರೂ ಮತ್ತು ಆಕಾಶವೂ ಸೇರಿರುವುವೋ ಅಂತಹ ಆತ್ಮವನ್ನು ತಿಳಿದವನು ಅಜರನೂ ಅಮರನೂ ಆಗುತ್ತಾನೆ". "ಯಾವುದು ಪ್ರಾಣಕ್ಕೆ ಪ್ರಾಣವೋ, ಕಣ್ಣಿಗೆ ಕಣ್ಣಾಗಿರುವುದೋ, ಮನಸ್ಸಿಗೆ ಮನಸ್ಸಾಗಿರುವುದೋ ಅದೇ ಬ್ರಹ್ಮ" ಈ ಮಂತ್ರದಲ್ಲಿ ಬರುವ ಪಂಚಪಂಚಜನಾಃ" ಎಂಬುದಕ್ಕೆ ಸಾಂಖ್ಯರು "ಸನಾತನವಾದ ಮೂಲಪ್ರಕೃತಿ ಒಂದು, ಅದರಿಂದ ಹುಟ್ಟಿದ ಮಹತ್(ಬುದ್ಧಿ), ಅಹಂಕಾರ, ಪಂಚತನ್ಮಾತ್ರಗಳು, ಏಳು(ಪ್ರಕೃತಿಯೂ ವಿಕೃತಿಯೂ ಆಗುವಂತವು), ಉಳಿದ ಹದಿನಾರು ("ಹನ್ನೊಂದು ಇಂದ್ರಿಯಗಳು ಮತ್ತು ಐದು ಭೂತಗಳು (ಇವು ಯಾವಾಗಲೂ ವಿಕೃತಿಗಳೇ). ಪ್ರಕೃತಿ ವಿಕೃತಿಗಳೆರಡೂ ಅಲ್ಲದ ಪುರುಷನೊಬ್ಬನು". ಹೀಗೆ ಇಪ್ಪತ್ತೈದು ತತ್ತ್ವಗಳನ್ನು ಹೇಳಿದ್ದಾರೆ. ಇಲ್ಲಿ ಪಂಚಜನಾಃ ಎಂದರೆ ಶ್ರುತಿಸಿದ್ಧವಾದ ಪಂಚಪ್ರಾಣಗಳೇ? ಅಥವಾ ಸಾಂಖ್ಯರು ಹೇಳಿದ ಇಪ್ಪತ್ತೈದು ತತ್ತ್ವಗಳೇ? ಎಂದು ಸಂಶಯವುಂಟಾಗುತ್ತದೆ. ಇಲ್ಲಿ 'ಪಂಚಪಂಚಜನಾಃ' ಎಂಬಲ್ಲಿ ಜನಶಬ್ದವು ಪ್ರಾಣಕ್ಕೆ ಮುಖ್ಯವಾಗಿ ಅನ್ವಯಿಸದೆ ತತ್ತ್ವವನ್ನು ಬೋಧಿಸುವುದರಿಂದ ಐವನ್ನು ಐದರಿಂದ ಗುಣಿಸಿ ಇಪ್ಪತ್ತೈದು ತತ್ತ್ವಗಳೆಂದು ಹೇಳುವುದೇ ಯುಕ್ತವಾಗಿದೆ. ಆದ್ದರಿಂದ ಪ್ರಧಾನವು ಶಬ್ದರೂಪವಾದ ಶ್ರುತಿಯಲ್ಲಿ ಬೋಧಿತವಾಯಿತು ಎಂದು ಆಕ್ಷೇಪ ಬರುತ್ತದೆ. ಅದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಇಲ್ಲಿ ಹೇಳಿದ ಶ್ರುತಿಯಲ್ಲಿ ಇಪ್ಪತ್ತೈದರ ಸಂಖ್ಯೆಯನ್ನು ಹೇಳಿದ್ದರೂ ಪ್ರಧಾನವನ್ನು ಶ್ರುತಿಯು ಬೋಧಿಸಿದೆ ಎಂಬುದು ಸಂಭವಿಸುವುದಿಲ್ಲ; ಯಾಕೆಂದರೆ "ಪಂಚ ಪಂಚಜನಾಃ" ಎಂಬ ಶಬ್ದವು ಇಪ್ಪತ್ತೈದು ಎಂಬ ಸಂಖ್ಯೆಯೊಂದನ್ನೇ ಬೋಧಿಸುವುದರಲ್ಲಿ ಪ್ರಮಾಣವಿಲ್ಲ. ಅದಕ್ಕಿಂತ ಹೆಚ್ಚಿನ ಸಂಖ್ಯೆಯನ್ನೂ ಅದು ಬೋಧಿಸಬಹುದಾಗಿದೆ. ಇಪ್ಪತ್ತೈದಕ್ಕಿಂತಲೂ ಬೇರೆಯಾದ ಆಕಾಶ ಪುರುಷ ಕಾಲ ಕಲಾ ವಿದ್ಯಾ ರಾಗ ನಿಯತಿ ಮೊದಲಾಗಿ ಮೂವತ್ತಾರು ತತ್ತ್ವಗಳನ್ನೂ ಅದು ತಿಳಿಸಬಹುದಾದ್ದರಿಂದ ಇಪ್ಪತ್ತೈದೇ ತತ್ತ್ವಗಳನ್ನು ತಿಳಿಸುವುದೆಂದು ಹೇಳಲಾಗುವುದಿಲ್ಲ. ಪಂಚಜನಾಃ ಎಂಬಲ್ಲಿ ಪಂಚಪದವು ಜನಪದಕ್ಕೆ ವಿಶೇಷಣವಾಗಿರುವುದರಿಂದಲೂ, ಅದಕ್ಕೆ ಹಿಂದಿನ ಪಂಚಶಬ್ದದೊಂದಿಗೆ ಅನ್ವಯಬರುವುದು ಸಾಧ್ಯವಿಲ್ಲದ್ದರಿಂದಲೂ, 5 × 5=25 ಎಂಬ ಸಂಖ್ಯೆ ಇಲ್ಲಿ ತೋರುವಹಾಗಿಲ್ಲ. ಆದರೆ ಇಲ್ಲಿ ಕಾಲವೇ ಮೊದಲಾದ ತತ್ತ್ವಗಳನ್ನು ಶ್ರುತಿಯಲ್ಲಿ ಹೇಳಿಲ್ಲವಾದ್ದರಿಂದ ಮೂವತ್ತಾರು ತತ್ತ್ವಗಳಿವೆ ಎಂದು ಹೇಗೆ ತಿಳಿಯಬಹುದು? ಎಂದರೆ ವೃದ್ಧ ಜಾಬಾಲೋಪನಿಷತ್ತಿನಲ್ಲಿ ಮೊದಲು ಪಶು, ಪಾಶ, ಪತಿ ಎಂಬ ಮೂರು ಪದಾರ್ಥಗಳನ್ನು ಹೇಳಿ ಆಮೇಲೆ ಶಿವನನ್ನು ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗ್ರಹವೆಂಬ ಐದು ಕಾರ್ಯಗಳಿಗೆ ಕರ್ತನೆಂದು ಸಾಧಿಸಿ, "ಶಿವ ಶಕ್ತಿ ಸದಾಶಿವ ಈಶ್ವರ ಶುದ್ಧವಿದ್ಯೆ" ಎಂಬ ಐದು ಶುದ್ಧತತ್ತ್ವಗಳು; ಮಾಯೆ, ಕಾಲ, ನಿಯತಿ, ಕಲಾ, ವಿದ್ಯೆ, ರಾಗ, ಪುರುಷ ಎಂಬ ಏಳು ಶುದ್ಧಾಶುದ್ಧತತ್ತ್ವಗಳು;

ಪ್ರಕೃತಿ ಮತ್ತು ಅದರ ಗುಣಗಳು ಸೇರಿ ನಾಲ್ಕು; ಈ ಮೂರು ಗುಣಗಳಿಂದ ಪರಸ್ಪರ ವಿಭಿನ್ನವಾದ ನಾಮರೂಪ ಕ್ರಿಯೆಗಳುಳ್ಳ ಭೂಮಿ ಮೊದಲಾದವು ಇಪ್ಪತ್ತು ತತ್ತ್ವಗಳು". ಹೀಗೆ ಮೂವತ್ತಾರು ತತ್ತ್ವಗಳನ್ನು ಹೇಳಿ "ಪರಮಶಿವನು ಕ್ರಿಯಾಶಕ್ತಿಯಲ್ಲಿ ಅಭಿಮಾನಿಸಿದಾಗ ಪ್ರಾಜ್ಞ ತೈಜಸ ವಿಶ್ವವೆಂಬ ಮೂರು ರೂಪಗಳುಂಟಾಗುತ್ತವೆ" ಎಂದೂ ಹೇಳಲಾಗಿದೆ. ಶ್ವೇತಾಶ್ವತರ ಮಹಾನಾರಾಯಣ ಮೊದಲಾದ ಕಡೆಯೂ ಹೀಗೆಯೇ ಸ್ಪಷ್ಟವಾಗಿ ಹೇಳಿದೆ. ಶ್ರುತಿ ಆಗಮಗಳ ಪ್ರಕಾರ ಎರಡನೇ ಪಾದದ ಮೊದಲನೆ ಅಧಿಕರಣದಲ್ಲೂ ಈ ಬಗ್ಗೆ ವಿಸ್ತರಿಸಲಾಗಿದೆ. ಆದ್ದರಿಂದ ಮೂವತ್ತಾರು ತತ್ತ್ವಗಳೆಂಬುದೇ ಇಲ್ಲಿ ಯುಕ್ತವಾಗಿದೆ.

ಏವಂ ಸಂಖ್ಯಾಂತರಪ್ರತೀತೌ ನಿರಸ್ತಾಯಾಂ ಪಂಚಜನಶಬ್ದೇನ ಕಿಂ ವಿವಕ್ಷ್ಯತ ಇತ್ಯಾಹ--ಪ್ರಾಣಾದಯೋ ವಾಕ್ಯಶೇಷಾತ್ ‖ ೧೨ ‖

ಪ್ರಾಣಶ್ಚಕ್ಷುಶ್ಶ್ರೋತ್ರಾನ್ನಮನಾಂಸಿ ಪಂಚಜನಶಬ್ದೇನೋಚ್ಯಂತೇ. ಕಸ್ಮಾದ್ವಾಕ್ಯಶೇಷಾತ್. ಉತ್ತರಮಂತ್ರೇ "ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಯೇ ಮನೋ ವಿದುಃ" ಇತಿ ಪ್ರಾಣಾದೀನಾಂ ಪಂಚಾನಾಮನುಕ್ರಮಣಾತ್ಪಂಚಜನಾ ಇತ್ಯುಚ್ಯಂತೇ. ತರ್ಹಿ ಭೂಯಃ ಪ್ರಾಣಾದೀನಾಂ ತತ್ತ್ವಾದೀನಾಂ ಚ ಜನಶಬ್ದಪ್ರಯೋಗಃ ಕಥಂ ಸಂಭವತಿ, ಸಮಾನೇ ತು ಪ್ರಸಿಧ್ಯತಿ. ಸನ್ನಿಧಾನವಾಕ್ಯವಿಶೇಷಾತ್ ಪ್ರಾಣಪಂಚಕಮೇವೋಪದಿಶ್ಯತೇ. ಪುರುಷವಾಚಕತ್ವೇನ ಪ್ರಸಿದ್ಧಸ್ಯಾಪಿ ಪಂಚಜನಶಬ್ದಸ್ಯ ಪ್ರಕೃತೇ ತತ್ಸಂಬಂಧಿಪ್ರಾಣಾದೌ ಲಕ್ಷಣಯಾ ವೃತ್ತಿರವಿರುದ್ಧಾ. ಮಾನುಷಶಬ್ದಪರ್ಯಾಯಃ ಪುರುಷಶಬ್ದಸ್ತು ಪ್ರಾಣೇಷು ಪರಿಗೃಹ್ಯತೇ. "ತೇ ವಾ ಏತೇ ಪಂಚ ಬ್ರಹ್ಮಪುರುಷಾಃ" ಇತ್ಯತ್ರ "ಪ್ರಾಣೋ ಹಿ ಪಿತಾ, ಪ್ರಾಣೋ ಮಾತಾ" ಇತ್ಯಾದಿ ಚ ಬ್ರಾಹ್ಮಣಂ. ತುಲ್ಯಬಲಸಮೂಹಸ್ಯ ಮುಖ್ಯತ್ವಮವಿರುದ್ಧಂ. ತಸ್ಮಾತ್ಕಥಂ ಮಸತಿ ಪ್ರಥಮಪ್ರಯೋಗೇ ರೂಢಿಂ ಶಕ್ತ್ಯಾಶ್ರಯಿತುಂ ಶಕ್ಯಂ ಭವೇದಿತ್ಯಾಹ. ಮುಖ್ಯಾರ್ಥಸಮುಕ್ಷೇ ಹ್ಯಮುಖ್ಯಾರ್ಥಶಬ್ದಃ ಪ್ರವಿಷ್ಟಸ್ಸಮಭಿವ್ಯಾಹಾರಾತ್ತದ್ವಿಷಯೋ ವಿಧೀಯತೇ. ಯಥಾ "ಉದ್ಭಿದಾ ಯಜೇತ, ಯೂಪಂ ಛಿನತ್ತಿ, ವೇದಿಂ ಕರೋತಿ" ಇತ್ಯಾದಿವದತ್ರಾಪಿ ಪಂಚಜನಶಬ್ದಸ್ಯ ಸಮಾನವ್ಯಾಖ್ಯಾನಾದವಗತಃ ಸಂಜ್ಞಾಭಾವಃ ವಾಕ್ಯಶೇಷಸಮಭಿವ್ಯಾಹೃತೇಷು ಸಂಜ್ಞಾಕಾಂಕ್ಷಿಪ್ರಾಣಾದಿಷು ವರ್ತಿಷ್ಯತೇ. ಕೈಶ್ಚಿತ್ ದೇವಪಿತೃಗಂಧರ್ವಾಸುರರಕ್ಷಾಂಸಿ ಪಂಚಪಂಚಜನಾಃ ವ್ಯಾಖ್ಯಾತಾಃ. ಅನ್ಯೈಶ್ಚತ್ವಾರೋ ವರ್ಣಾ ನಿಷಾದಪಂಚಮಾಃ ಪರಿಗೃಹೀತಾಃ. ಕ್ವಚಿಚ್ಚ 'ಯತ್ಪಾಂಚಜನ್ಯಯಾ ವಿಶ' ಇತಿ ಪ್ರಜಾಪರಪ್ರಯೋಗಃ ಪಂಚಜನ

**ಶಬ್ದಸ್ಯ ಶ್ರೂಯತೇ. ತತ್ಸಂಗ್ರಹಣೇsಪ್ಯತ್ರ ನ ಬಾಧಃ.**

ಹೀಗೆ ನಿಷ್ಕರ್ಷೆಮಾಡಿದರೆ ಪಂಚಜನಶಬ್ದದಿಂದ ಏನು ಹೇಳಿದ ಹಾಗಾಯಿತು ಎಂಬುದನ್ನು ತಿಳಿಸುತ್ತಾನೆ—**ಪ್ರಾಣಾದಯೋ ವಾಕ್ಯವಿಶೇಷಾತ್ ॥ ೧೨ ॥**

ಪ್ರಾಣ-ಕಣ್ಣು-ಕಿವಿ-ಅನ್ನ-ಮನಸ್ಸು ಇವು ಐದನ್ನು ಶ್ರುತಿಯಲ್ಲಿ ಪಂಚಜನರೆಂದು ತಿಳಿಸಲಾಗಿದೆ. "ಪ್ರಾಣಕ್ಕೆ ಪ್ರಾಣವು, ಕಣ್ಣಿಗೆ ಕಣ್ಣು, ಕಿವಿಗೆ ಕಿವಿಯೂ, ಅನ್ನಕ್ಕೆ ಅನ್ನವೂ, ಮನಸ್ಸಿಗೆ ಮನಸ್ಸೂ ಆಗಿರುವುದನ್ನು ಯಾರು ತಿಳಿಯುವರೋ" ಎಂಬಲ್ಲಿ ಪ್ರಾಣ-ಕಣ್ಣು-ಕಿವಿ-ಅನ್ನ-ಮನಸ್ಸು ಈ ಐದನ್ನು ಪಂಚಜನರೆಂದು ಕ್ರಮವಾಗಿ ತಿಳಿಸಲಾಗಿದೆ. ಹಾಗಾದರೆ ಪ್ರಾಣವೇ ಮೊದಲಾದ ಈ ಐದು ತತ್ತ್ವಗಳಿಗೂ ಜನಶಬ್ದ ಪ್ರಯೋಗವು ಹೇಗೆ ಸಂಭವಿಸುತ್ತದೆ? ಅಂದರೆ ಜನಶಬ್ದವು ಈ ಐದಕ್ಕೂ ಅನ್ವಯಿಸಬಹುದೆಂದು ಪ್ರಸಿದ್ಧವಾಗಿದೆ. ಪಕ್ಕದಲ್ಲಿರುವ ವಾಕ್ಯದಿಂದ ಪಂಚಜನವೆಂದರೆ ಐದು ಪ್ರಾಣವಾಯುಗಳೆಂದು ತಿಳಿದುಬರುತ್ತದೆ. ಜನಶಬ್ದವು ಪುರುಷನಲ್ಲಿ ಪ್ರಸಿದ್ಧವಾದರೂ ಪಂಚಜನಶಬ್ದವು ಇಲ್ಲಿ ಪುರುಷಸಂಬಂಧಿಗಳಾದ ಪ್ರಾಣಾದಿಗಳನ್ನೂ ಬೋಧಿಸುವುದರಲ್ಲಿ ವಿರೋಧವೇನಿಲ್ಲ. ಮನುಷ್ಯ ಎಂಬ ಅರ್ಥವನ್ನು ತಿಳಿಸುವ ಪುರುಷಶಬ್ದವೂ ಸಹ ಪ್ರಾಣಗಳನ್ನು ಬೋಧಿಸುತ್ತದೆ. "ಈ ದೇವತೆಗಳು ಪಂಚಬ್ರಹ್ಮಪುರುಷರು", "ಪ್ರಾಣವೇ ತಂದೆ ತಾಯಿ" ಎಂದು ಬ್ರಾಹ್ಮಣದಲ್ಲೂ ಹೇಳಿದೆ. ಜನಶಬ್ದವು ಅನೇಕ ಅರ್ಥಗಳನ್ನು ಸಮಾನವಾಗಿ ಬೋಧಿಸುವುದರಲ್ಲಿ ಯಾವ ವಿರೋಧವೂ ಇಲ್ಲ. ಆದರೆ ಎಲ್ಲಿಯೂ ಪ್ರಯೋಗವಿಲ್ಲದಿರುವಾಗ ಆ ಅರ್ಥದಲ್ಲಿ ಮುಖ್ಯವೃತ್ತಿಯಿಂದಲೇ ರೂಢಿಯನ್ನಾಶ್ರಯಿಸುವುದು ಹೇಗೆ ಸಾಧ್ಯವೆಂದರೆ ಮುಖ್ಯಾರ್ಥದಲ್ಲಿ ಪ್ರಯೋಗವು ಕಂಡಿರುವಾಗ ಅಮುಖ್ಯಾರ್ಥವನ್ನು ಕೊಡುವ ಶಬ್ದವು ಅದರಲ್ಲಿ ಸೇರಿದರೆ ಆಗ ಆ ಪದವೂ ಮುಖ್ಯಾರ್ಥವನ್ನೇ ಕೊಡಬಲ್ಲದು. ಉದ್ಭಿತ್ ಎಂಬ ಪದವು ಮುಖ್ಯವೃತ್ತಿಯಿಂದಲೇ ಯಜ್ಞವನ್ನು ಬೋಧಿಸುತ್ತದೆ. ಯೂಪ ಎಂಬಲ್ಲಿ ಮರದ ತುಂಡಿನಿಂದ ಯೂಪವನ್ನು ಮಾಡಿರುವುದರಿಂದ ಆ ತುಂಡಿನಲ್ಲಿಯೇ ಯೂಪಶಬ್ದವನ್ನು ಮುಖ್ಯವೃತ್ತಿಯಿಂದಲೇ ಪ್ರಯೋಗಿಸಲಾಗಿದೆ. ವೇದಿ ಎಂಬಲ್ಲಿ ವೇದಿಕೆಯನ್ನು ಸಿದ್ಧಪಡಿಸುವಾಗಲೇ ವೇದಿ ಎಂಬ ಶಬ್ದವನ್ನು ಮುಖ್ಯ ವೃತ್ತಿಯಿಂದಲೇ ಪ್ರಯೋಗಿಸುತ್ತಾರೆ. ಹಾಗೆಯೇ ಇಲ್ಲಿ ಪಂಚಜನಶಬ್ದದ ಸಮಾಸದಿಂದ ತೋರುವ ಸಂಜ್ಞೆಯು ವಾಕ್ಯಶೇಷದಲ್ಲಿ ಬಂದಿರುವ ಐದು ಯಾವುವು ಎಂಬ ಪ್ರಶ್ನೆಗೆ ಉತ್ತರವಾಗಿರುವ ಪ್ರಾಣಾದಿಗಳನ್ನು ಮುಖ್ಯವೃತ್ತಿಯಿಂದಲೇ ಬೋಧಿಸುತ್ತದೆ. "ದೇವತೆಗಳು, ಪಿತೃಗಳು, ಗಂಧರ್ವರು, ಅಸುರರು, ರಾಕ್ಷಸರು ಈ ಐವರು ಪಂಚಜನರು" ಎಂದು ಕೆಲವರ ಹೇಳುತ್ತಾರೆ. ಬೇರೆಯವರು ನಾಲ್ಕು ವರ್ಣಗಳ ಜೊತೆಗೆ ಬೇಡರವನನ್ನು ಸೇರಿಸಿ ಪಂಚಜನರೆಂದು ಹೇಳುತ್ತಾರೆ. ಕೆಲವು ಕಡೆ ಪಂಚಜನ ಶಬ್ದಕ್ಕೆ "ಪಂಚಜನರಿಗೆ ಸಂಬಂಧಿಸಿದ್ದು" ಎಂದು ಜೀವಪರವಾಗಿ ಪ್ರಯೋಗವೂ ಕಂಡುಬಂದಿದೆ. ಅದನ್ನು ಗ್ರಹಿಸಿದರೂ ದೋಷವಿಲ್ಲ.

**ಸೂತ್ರಕಾರಸ್ತು ಪಂಚವಿಂಶತಿಸಂಖ್ಯಾಮತ್ರ ಪರಿಗೃಹ್ಣಾತಿ. ತದ್ಧಿ**

ಲಕ್ಷಣತ್ವೇನ ಪ್ರಾಣಾದೀನಾಂ ವಾಕ್ಯಶೇಷೇ ದರ್ಶನಾತ್, ಮಾಧ್ಯಂದಿನಾನಾಮನ್ನಸ್ಯ ಪ್ರಾಣಾಧಿಷ್ಠಾನಾಮ್ನಾಯಾತ್ ಕಥಂ ಪಂಚಜನಸಂಖ್ಯೇತ್ಯತ ಆಹ— ಜ್ಯೋತಿಷೈಕೇಷಾಮಸತ್ಯನ್ನೇ ‖ ೧೩ ‖

ಏಕೇಷಾಂ ಕಾಣ್ವಾನಾಮಸತ್ಯನ್ನೇ ಜ್ಯೋತಿಷಾ ಪಂಚತ್ವಂ ಪೂರ್ಯತೇ. "ತದೇವ ಜ್ಯೋತಿಷಾಂ ಜ್ಯೋತಿಃ" ಇತಿ ಪೂರ್ವವಾಕ್ಯೇ ಜ್ಯೋತಿಷಃ ಪ್ರಕೃತತ್ವಾತ್ಕಥಂ ಭೂಯೋ ದ್ವಯೋರಪಿ ಸಮಾನತ್ವೇನ ಇದಂ ಜ್ಯೋತಿಃ ಪಠ್ಯಮಾನಂ ಸದೃಶಮಂತ್ರಗತಪಂಚಸಂಖ್ಯಾಪೂರ್ವಕತ್ವೇನ ಕೇಷಾಂಚಿದವಗಮ್ಯೇತ ನ ಕೇಷಾಂಚಿದಿತೀಚ್ಛಾಭೇದಾದತ್ರಾಹ. ಮಾಧ್ಯಂದಿನಾನಾಂ ತುಲ್ಯಮಂತ್ರಪಠಿತಪ್ರಾಣಾದಿಪಂಚಜನಪರಿಗ್ರಹಾತ್ ನ ಮಂತ್ರಾಂತರಪಠಿತೇ ಜ್ಯೋತಿಷ್ಯಪೇಕ್ಷಾ ಭವತಿ. ಕಾಣ್ವಾನಾಂ ತದಭಾವಾದಿಚ್ಛಾ ಭವತಿ. ಇಚ್ಛಾಭೇದಾಚ್ಚ ತುಲ್ಯತ್ವೇಽಪಿ ಮಂತ್ರೇ ಜ್ಯೋತಿಸ್ಸ್ವೀಕಾರಾಸ್ವೀಕಾರೇ ತಥಾತ್ವಾತ್. ಏವಂ ನ ತಾವಚ್ಛ್ರುತಿಪ್ರಸಿದ್ಧಿಃ. ತಸ್ಮಾತ್ಪ್ರಧಾನಸ್ಯಾಶಬ್ದತ್ವಂ ಸಿದ್ಧಂ.

ಸೂತ್ರಕಾರನಾದರೋ 'ಪಂಚಜನ' ಎಂಬಲ್ಲಿ ಇಪ್ಪತ್ತೈದೆಂಬ ಸಂಖ್ಯೆಯನ್ನು ಸ್ವೀಕರಿಸಿದ್ದಾನೆ. ಅದಕ್ಕೆ ವಿಲಕ್ಷಣವಾಗಿ ಪ್ರಾಣಾದಿಗಳು ವಾಕ್ಯಶೇಷದಲ್ಲಿ ಕಂಡುಬಂದಿರುವುದರಿಂದಲೂ, ಮಾಧ್ಯಂದಿನರು ಅನ್ನಕ್ಕೆ ಪ್ರಾಣದ ಆಶ್ರಯವನ್ನು ಹೇಳಿ ಅದನ್ನು ಪ್ರಾಣದಲ್ಲಿ ಸೇರಿಸಿರುವುದರಿಂದಲೂ ಐದೆಂಬ ಸಂಖ್ಯೆ ಹೇಗೆ ಹೊಂದುತ್ತದೆ ಎಂಬುದಕ್ಕೆ ಸಮಾಧಾನವನ್ನು ಹೇಳುತ್ತಾನೆ. **ಜ್ಯೋತಿಷೈಕೇಷಾಮಸತ್ಯನ್ನೇ ‖೧೩‖**

ಕಾಣ್ವಶಾಖೆಯಲ್ಲಿ ಅನ್ನದ ಬದಲು ಜ್ಯೋತಿಸ್ಸನ್ನು ಸೇರಿಸಿ ಪಂಚಸಂಖ್ಯೆಯನ್ನು ಪೂರೈಸಲಾಗಿದೆ. "ಜ್ಯೋತಿಗಳೆಲ್ಲಕ್ಕೂ ಜ್ಯೋತಿಯಾದ ಪರತತ್ತ್ವದ ಬಗ್ಗೆ ಇಲ್ಲಿ ಹೇಳಿರುವುದರಿಂದ, ಜ್ಯೋತಿ ಆಯುಸ್ಸು ಎರಡಕ್ಕೂ ಸಮಾನವಾಗಿ ಅನ್ವಯಿಸುವ ಈ ಮಂತ್ರದಲ್ಲಿ ಬಂದಿರುವ ಐದು ಎಂಬ ಸಂಖ್ಯೆಗೆ ಇಚ್ಛಾಭೇದದಿಂದ ಕಾಣ್ವರು ಪ್ರಾಣಾದಿಪಂಚಜನರನ್ನು ಹೇಳುತ್ತಾರೆ. ಮಾಧ್ಯಂದಿನರು ಇದಕ್ಕೆ ಸಮಾನವಾದ ಬೇರೆ ಮಂತ್ರದಲ್ಲಿ ಹೇಳಿರುವ ಪ್ರಾಣ, ಚಕ್ಷು, ಶ್ರೋತ್ರ, ಅನ್ನ, ಮನಸ್ಸು ಈ ಐದನ್ನು ಗ್ರಹಿಸುತ್ತಾರೆ. ಬೇರೆ ಮಂತ್ರದಲ್ಲಿ ಹೇಳಿರುವ ಜ್ಯೋತಿಯನ್ನು ಸೇರಿಸಿ ಐದು ಎಂದು ಅವರು ಹೇಳುವುದಿಲ್ಲ. ಕಾಣ್ವರಿಗೆ ಜ್ಯೋತಿಯೇ ಇರುವುದರಿಂದ ಅದನ್ನು ಸೇರಿಸಲು ಅವರು ಇಚ್ಛಿಸುತ್ತಾರೆ. ಈ ರೀತಿಯ ಇಚ್ಛಾಭೇದದಿಂದ ಮಂತ್ರದಲ್ಲಿ ಜ್ಯೋತಿಯನ್ನು ಸೇರಿಸುವುದು ಮತ್ತು ಬಿಡುವುದು ಹೀಗೆ ಕಂಡುಬಂದಿರುವುದಷ್ಟರಿಂದಲೇ ಪ್ರಧಾನವು ಶ್ರುತಿಬೋಧಿತವೆನಿಸಲಾರದು.

ಶ್ರುತಾವಾಕಾಶಮಾತ್ರಸ್ಯ ಬ್ರಹ್ಮಜನ್ಯತ್ವಪ್ರತಿಪಾದನಾದ್ಬ್ರಹ್ಮಣಃ ಪಂಚಮಹಾಭೂತಕಾರಣತ್ವಮನುಪಪನ್ನಮಿತ್ಯಾಶಂಕ್ಯಾಹ. ಕಾರಣತ್ವಾಧಿಕರಣಂ‖ ಕಾರಣತ್ವೇನ ಚಾಕಾಶಾದಿಷು ತಥಾ ವ್ಯಪದಿಷ್ಟೋಕ್ತೇಃ‖೧೪‖

ಪಾದತ್ರಯೇಣ ಪ್ರತಿಪಾದಿತಸ್ಯ ಪರಶಿವ ಬ್ರಹ್ಮಸಮನ್ವಯಸ್ಯಾಕ್ಷೇಪಸಮಾಧಾನಾರ್ಥಮಿದಮಾರಭತೇ. ಉಕ್ತಸಮನ್ವಯೋ ನ ಸಂಭವತಿ. ವೇದಾಂತೇಷು ಪರಸ್ಪರವಿರೋಧೇನ ಪ್ರಾಮಾಣ್ಯಸ್ಯೈವ ದುಸ್ತರತ್ವಾತ್. ತಥಾಹಿ “ಆತ್ಮನ ಆಕಾಶಃ ಸಂಭೂತಃ” ಇತಿ ತೈತ್ತಿರೀಯೇ. “ತತ್ತೇಜೋಽಸೃಜತ” ಇತಿ ಛಾಂದೋಗ್ಯೇ. “ಸ ಇಮಾಂಲ್ಲೋಕಾನಸೃಜತಾಗ್ನಿಭ್ಯೋ ಮರೀಚಿಭಿರ್ಮರುರೂಪಃ” ಇತಿ ತೈತ್ತಿರೀಯಕೇ. “ಏತಸ್ಮಾಜ್ಜಾಯತೇ ಪ್ರಾಣಃ” ಇತಿ ಮುಂಡಕೇ. ಏವಂ ಕಾರ್ಯೇ ಪರಸ್ಪರವಿರೋಧಃ. ಕಾರಣಸ್ವರೂಪೇಽಪಿ “ಸದೇವ ಸೌಮ್ಯೇದಮಗ್ರ ಆಸೀತ್” ಇತಿ ತೈತ್ತಿರೀಯಕೇ. “ಆತ್ಮಾ ವಾ ಇದಮೇಕ ಏವಾಗ್ರ ಆಸೀತ್” ಇತ್ಯೈತರೇಯೇ. ತಸ್ಮಾನ್ನ ಯುಕ್ತಸ್ಸಮನ್ವಯಃ ಇತಿ ಪ್ರಾಪ್ತೇ ಬ್ರೂಮಃ. ಕಾರ್ಯವಿಷಯಂ ವಿಗಾನಮಕ್ರಮಾದಿಪ್ರಯುಕ್ತಂ, ‘ನ ವಿಯದಶ್ರುತೇಃ’ ಇತ್ಯಾದಿನಾ ಕ್ರಮದ್ವಾರಕಂ ಪರಿಹರಿಷ್ಯತಿ. ಸೂತ್ರಕಾರಃ ಅತ್ರ ತು ಕಾರಣೇ ತಾವದ್ವಿಗಾನಮಸ್ತೀತ್ಯುಚ್ಯತೇ. ಚಶಬ್ದಸ್ತು ಸಮಾನಾರ್ಥಕಃ ಶಂಕಾನಿರಾಸಂ ವಕ್ತಿ. ಆಕಾಶಾದಿಷು ಪರಮೇಶ್ವರಕಾರಿತ್ವೇ ವಿರೋಧೋ ನಾಸ್ತಿ, ಕಸ್ಮಾತ್-ಯಥಾ ವ್ಯಪದಿಷ್ಟೋಕ್ತೇಃ. ಆಕಾಶಾದಿಷು ಯಥಾಭೂತ ಈಶ್ವರಃ ಏಕಸ್ಮಿನ್ ವೇದಾಂತೇ ಸರ್ವಜ್ಞಸ್ಸರ್ವೇಶ್ವರಃ ಕಾರಣತ್ವೇನ ವ್ಯಪದಿಷ್ಟಃ ತಥಾಭೂತಸ್ಯೈವ ಶಾಖಾಂತರೇಽಪ್ಯುಕ್ತೇರ್ನ ವಿಗಾನಮಿತ್ಯುಪದಿಶ್ಯತೇ. ‘ಬಹು ಸ್ಯಾಂ’ ಇತಿ ಚೇತನಸ್ಯ ಪರಮಾತ್ಮನಃ ಸರ್ವವಿಕಾರಕಾರಣತ್ವಮಭಾಣಿ. ‘ತದಿದಂ ಸರ್ವಮಸೃಜತ ಯದಿದಂ ಕಿಂಚ’ ಇತಿ ವಿಶ್ವಕಾರಣತ್ವೇನ ಸೃಷ್ಟೇಃ ಪೂರ್ವಂ ಸ್ರಷ್ಟಾರಮುಪದಿಶತಿ. “ಯದಾ ತಮಃ-ಶಿವ ಏವ ಕೇವಲಃ” ಇತಿ ಶಿವಶಬ್ದವಾಚ್ಯಂ ವಸ್ತು ಕಾರಣತ್ವೇನ ಜಗತ್ಪೂರ್ವಭಾವಿ ಬ್ರಹ್ಮೇತ್ಯಾಚಕ್ಷ್ಯತೇ. ಯಲ್ಲಕ್ಷಣಂ ಬ್ರಹ್ಮ ಹೇತುತ್ವೇನ ಸೂಚಿತಂ ತಲ್ಲಕ್ಷಣಂ ಉಪನಿಷದಂತರೇಽಪಿ ಶ್ರೂಯತೇ. “ಏಕಮೇವಾದ್ವಿತೀಯಂ” “ಆತ್ಮಾ ವಾ ಇದಮೇಕ ಏವ” ಇತ್ಯಾದ್ಯುಪನಿಷತ್ಸು ಸರ್ವಕಾರಣತ್ವಸ್ಯ ಪರಮೇಶ್ವರ ಏವೋಪದೇಶಾನ್ನಾನ್ಯಸ್ಯ ಕಾರಣತ್ವಂ. ತೈತ್ತಿರೀಯಕೇ ಆಕಾಶಾದಿಸೃಷ್ಟಿಃ, ಛಾಂದೋಗ್ಯೇ ತೇಜಆದಿಕೇತ್ಯೇವಂ ಕಾರ್ಯಪರವಿಕಲ್ಪಃ ಪ್ರತಿಜ್ಞಾಯತೇ. ಕಾರ್ಯಪರವಿಕಲ್ಪೇನ ಜಗದ್ಧೇತುಭೂತಂ ಬ್ರಹ್ಮಾಪಿ ಸಕಲೋಪನಿಷತ್ಸು ವಿಗೀತಮುಪಸ್ಪೃಶ್ಯಮಾನಂ ಸದ್ವಿವಕ್ಷಿತಂ ವಕ್ತುಂ ಶಕ್ಯಮಿತಿ ವಿಧೀಯತೇ. ವ್ಯಾಖ್ಯಾತುಮಸಂಬಂಧಾತ್ಸೂತ್ರಕಾರೋಽತ್ರ ಸಮಾಧಾನಮಭಾಷತ. ಕಾರ್ಯಪರವಿಕಲ್ಪೇ ಸತ್ಯಪ್ಯಾಕಾಶಾದಿಶ್ರುತೇರವಿವಕ್ಷಿತತ್ವಾತ್. ನಹ್ಯತ್ರಾದಿಸೃಷ್ಟಿಪ್ರಸಂಗಃ. ತಸ್ಮಾನ್ನ ತದ್ವಿ

ರೋಧಃ. ವಿಕಲ್ಪತಯಾ ನ ಪ್ರಧಾನಸ್ಯ ಕ್ವಚಿತ್ಪುರುಷಾರ್ಥೋ ವ್ಯವಹ್ರಿಯತೇ ದೃಶ್ಯತೇ ವಾ. ನ ತದ್ವಿಕಲ್ಪಯಿತುಂ ಚೋದ್ಯತೇ, ಪೂರ್ವಾಪರಮಧ್ಯಪರಾಮರ್ಶತಯಾ ಪರಮೇಶ್ವರವಾಕ್ಯವಿಶೇಷದರ್ಶನಾತ್. "ಅನ್ನೇನ ಸೌಮ್ಯ ಶೃಂಗೇನಾಪೋ ಮೂಲಮನ್ವಿಚ್ಛಾದ್ಭಿಸ್ಸೌಮ್ಯ ಶೃಂಗೇನ ತೇಜೋಮೂಲಮನ್ವಿಚ್ಛ ತೇಜಸಾ ಸೌಮ್ಯ ಶೃಂಗೇನ ಸನ್ಮೂಲಮನ್ವಿಚ್ಛ" ಇತಿ ಮೃದಾದಿದೃಷ್ಟಾಂತೈಶ್ಚ ಕಾರ್ಯಕಾರಣಯೋರಭೇದಂ ವಕ್ತುಂ ಜನ್ಮಾದಿವಿಶಿಷ್ಟಂ ಜಗಚ್ಛಾಭ್ರವ್ಯತ ಇತ್ಯುಪದಿಶ್ಯತೇ.

ಆತ್ಮನಿಂದ ಆಕಾಶ ಹುಟ್ಟಿತು ಎಂಬಲ್ಲಿ ಆಕಾಶ ಒಂದೇ ಬ್ರಹ್ಮದಿಂದ ಹುಟ್ಟಿತೆಂದು ಹೇಳಿರುವುದರಿಂದ ಪಂಚಭೂತಗಳಿಗೆ ಅವನು ಕಾರಣನೆಂಬುದು ಅಯುಕ್ತವೆಂದು ಆಶಂಕಿಸಿ ನಿರಾಕರಿಸುತ್ತಾನೆ—**ಕಾರಣತ್ವಾಧಿಕರಣಂ ॥ ೪ ॥**

**ಕಾರಣತ್ವೇನ ಚಾಕಾಶಾದಿಷು ತಥಾ ವ್ಯಪದಿಷ್ಟೋಕ್ತೇಃ ॥೧೪॥**

ಹಿಂದಿನ ಮೂರು ಪಾದಗಳಲ್ಲಿ ಹೇಳಿದ ಬ್ರಹ್ಮಸಮನ್ವಯದ ಬಗ್ಗೆ ಬರುವ ಆಕ್ಷೇಪಕ್ಕೆ ಸಮಾಧಾನಮಾಡಲಿಕ್ಕಾಗಿ ಇದನ್ನು ಆರಂಭಿಸಲಾಗಿದೆ. ಹಿಂದೆ ಹೇಳಿದ ಸಮನ್ವಯವು ಸಂಭವಿಸುವುದಿಲ್ಲ. ವೇದಾಂತವಾಕ್ಯಗಳಲ್ಲಿ ಪರಸ್ಪರ ವಿರೋಧವಿರುವುದರಿಂದ ಅವು ಪ್ರಮಾಣವಾಗುವುದೇ ಕಷ್ಟವಾಗುತ್ತದೆ. 'ಆತ್ಮನಿಂದ ಆಕಾಶ ಹುಟ್ಟಿತು" ಎಂದು ತೈತ್ತಿರೀಯವೂ-'ಅದು ತೇಜಸ್ಸನ್ನು ಹುಟ್ಟಿಸಿತು' ಎಂದು ಛಾಂದೋಗ್ಯವೂ, "ಅವನು ಲೋಕಗಳನ್ನು ಸೃಜಿಸಿದನು"ಎಂದು ತೈತ್ತಿರೀಯವೂ, "ಇದರಿಂದ ಪ್ರಾಣ ಹುಟ್ಟಿತು" ಎಂದು ಮುಂಡಕವೂ ತಿಳಿಸುತ್ತವೆ. ಇದರಿಂದ ಕಾರ್ಯದ ಬಗ್ಗೆ ಒಂದು ಕ್ರಮವಿಲ್ಲದ್ದರಿಂದ ವಿರೋಧ ಕಾಣುತ್ತದೆ. ಕಾರಣಸ್ವರೂಪದ ಬಗ್ಗೆ "ಅದು ಮೊದಲು ಸತ್ ಆಗಿತ್ತು"ಎಂದು ಛಾಂದೋಗ್ಯವೂ, "ಇದು ಅಸತ್ ಆಗಿತ್ತು, ಅದರಿಂದ ಸತ್ ಹುಟ್ಟಿತು" ಎಂದು ತೈತ್ತಿರೀಯವೂ, 'ಇದೆಲ್ಲವೂ ಒಂದೇ ಆತ್ಮವಾಗಿತ್ತು" ಎಂದು ಐತರೇಯವೂ ತಿಳಿಸುವುದರಿಂದ ಇಲ್ಲಿ ಸಮನ್ವಯವಿಲ್ಲವೆಂದು ಆಕ್ಷೇಪ ಬರುತ್ತದೆ. ಕಾರ್ಯದ ಬಗ್ಗೆ ಇರುವ ವಿರೋಧವನ್ನು "ನ ವಿಯದಶ್ರುತೇಃ" ಎಂಬ ಸೂತ್ರದಲ್ಲಿ ಮುಂದೆ ಪರಿಹರಿಸಲಾಗುವುದು. ಇಲ್ಲಿ ಕಾರಣದ ಬಗ್ಗೆ ಇರುವ ವಿರೋಧವನ್ನು ಪರಿಹರಿಸಲಾಗಿದೆ. ಇಲ್ಲಿ ಚ ಶಬ್ದವು ತು ಶಬ್ದದಂತೆ ಆಕ್ಷೇಪವನ್ನು ಅಲ್ಲಗಳೆಯುತ್ತದೆ. ಆಕಾಶಾದಿಗಳಿಗೆ ಪರಮೇಶ್ವರನೇ ಕರ್ತನೆಂಬ ಬಗ್ಗೆ ಯಾವ ವಿರೋಧವೂ ಇಲ್ಲ; ಯಾಕೆಂದರೆ ಶ್ರುತಿಯಲ್ಲಿ ಹಾಗೆ ಸ್ಪಷ್ಟವಾಗಿ ಹೇಳಿಯಾಗಿದೆ. ಆಕಾಶಾದಿಗಳ ಸೃಷ್ಟಿಕ್ರಮದಲ್ಲಿ ವಿರೋಧವಿದ್ದರೂ ಸೃಷ್ಟೃವಿನ ಬಗ್ಗೆ ಯಾವ ವಿರೋಧವೂಇಲ್ಲ. ಸರ್ವಜ್ಞನೂ ಸರ್ವೇಶ್ವರನೂ ಆದ ಪರಶಿವನನ್ನು ಕಾರಣನೆಂದು ಒಂದು ವೇದಾಂತದಲ್ಲಿ ಹೇಳಿದ ಮೇಲೆ ಬೇರೆ ವೇದಾಂತಗಳೂ ಅವನನ್ನೇ ಕಾರಣನೆಂದು ಹೇಳಿರುತ್ತವೆ. ಅವನು ವಿಸ್ತಾರವಾಗುವೆನೆಂದು ಹೇಳಿದ್ದರಿಂದ ಒಬ್ಬ ಚೇತನ ಪರಶಿವನನ್ನೇ ಎಲ್ಲಾ ವಿಸ್ತಾರಗಳಿಗೂ ಕಾರಣನೆಂದು ಹೇಳಲಾಗಿದೆ. "ಅವನು ಇದೆಲ್ಲವನ್ನು ಸೃಜಿಸಿದನು"

ಎಂಬಲ್ಲಿ ಇದೆಲ್ಲಕ್ಕೂ ಅವನೇ ಕಾರಣನಾದ್ದರಿಂದ ಅವನೊಬ್ಬನೇ ಮೊದಲಿಗೆ ಇದ್ದವನೆಂದು ತಿಳಿಯುತ್ತದೆ. 'ಪ್ರಳಯದಲ್ಲಿ ಶಿವನೊಬ್ಬನೇ ಇದ್ದನು' ಎಂಬಲ್ಲಿ ಶಿವನೆನಿಸಿದ ಬ್ರಹ್ಮವೇ ಜಗತ್ಕಾರಣವಾಗಿ ಮೊದಲಿಗೆ ಇದ್ದನೆಂದು ತಿಳಿಯುತ್ತದೆ. ಒಂದು ಶ್ರುತಿಯಲ್ಲಿ ಬ್ರಹ್ಮಕ್ಕೆ ಯಾವ ಲಕ್ಷಣವನ್ನು ಹೇಳಿದೆಯೋ ಅದನ್ನೇ ಬೇರೆ ಶ್ರುತಿಗಳಲ್ಲೂ ಹೇಳಲಾಗಿದೆ. "ಒಂದೇ ಬ್ರಹ್ಮ ಮೊದಲಿಗೆ ಸದ್ರೂಪವಾಗಿತ್ತು." "ಆತ್ಮವಲ್ಲದೆ ಬೇರೆ ಏನೂ ಇರಲಿಲ್ಲ" ಎಂಬಲ್ಲಿ ಎಲ್ಲಕ್ಕು ಈಶ್ವರನೇ ಕಾರಣನೆಂದು ಸ್ಪಷ್ಟವಾಗಿ ಹೇಳಿದೆ. ಆದರೆ ತೈತ್ತಿರೀಯದಲ್ಲಿ ಸೃಷ್ಟಿ ಆಕಾಶದಿಂದಲೂ, ಛಾಂದೋಗ್ಯದಲ್ಲಿ ತೇಜಸ್ಸಿನಿಂದಲೂ ಆರಂಭವಾಗುವುದರಿಂದ ಕಾರ್ಯದಲ್ಲಿ ಪರಸ್ಪರ ವಿರೋಧವೇನೋ ತೋರುತ್ತದೆ. ಇದರಂತೆ ಜಗತ್ಕಾರಣವಾದ ಬ್ರಹ್ಮಕ್ಕೆ ಎಲ್ಲಾ ಶ್ರುತಿಗಳಲ್ಲೂ ವಿಕಲ್ಪವು ತೋರಿದರೂ ಮುಕ್ತರಿಗೆ ಗಮ್ಯವೆನಿಸಿದ ಸದ್ವಸ್ತು ಒಂದೇ ಎಂದು ಹೇಳಲಿಕ್ಕೆ ಯಾವ ತಡೆಯೂ ಇಲ್ಲ. ಹೀಗೆ ಕಾರಣವಸ್ತುವಿನಲ್ಲಿ ವೈವಿಧ್ಯ ತೋರುವುದರಿಂದ ಅದು ಇಂತಹದೆಂದು ವಿವರಣೆಗೆ ಸಿಕ್ಕದೇ ಇರುವುದರಿಂದ ಸೂತ್ರಕಾರನು ಇಲ್ಲಿ ಸಮಾಧಾನವನ್ನು ಹೇಳುತ್ತಾನೆ. ಸೃಷ್ಟಿಕ್ರಮದ ಬಗ್ಗೆ ಹೀಗೆ ವಿರೋಧವಿದ್ದರೂ ಇಲ್ಲಿ ಹೇಳಿರುವ ಆಕಾಶಾದಿ ಅಥವ ತೇಜ ಆದಿ ಎಂಬ ಸೃಷ್ಟಿಯೇ ಪ್ರಧಾನವಲ್ಲ; ಏಕೆಂದರೆ ಇದೇ ಆದಿಸೃಷ್ಟಿಯಲ್ಲವಾದ್ದರಿಂದ ಯಾವ ವಿರೋಧವೂ ಸಂಭವಿಸುವುದಿಲ್ಲ. ಈ ರೀತಿಯಾಗಿ ಕಾರ್ಯದಲ್ಲಿ ವಿಕಲ್ಪ ಕಂಡುಬಂದರೂ ಪ್ರಧಾನಕ್ಕೆ ಎಲ್ಲಿಯೂ ಪ್ರಾಧಾನ್ಯವನ್ನು ಕೊಟ್ಟಿಲ್ಲ. ಆದ್ದರಿಂದ ಅದನ್ನು ಕಾರ್ಯವಿಕಲ್ಪದಲ್ಲಿ ಸೇರಿಸಬೇಕಾಗಿಲ್ಲ. ವಾಕ್ಯದ ಆರಂಭ-ಅಂತ್ಯ-ಮಧ್ಯಗಳನ್ನು ಪರಿಶೀಲಿಸಿದರೆ ಪರಶಿವನಿಗೆ ಅನ್ವಯಿಸುವ ವಾಕ್ಯವಿಶೇಷಗಳೇ ಇರುವುದರಿಂದ ಅವುಗಳಲ್ಲಿ ಆನುರೂಪ್ಯವನ್ನು ಕಾಣಬಹುದು. "ಸೌಮ್ಯನೇ ಅನ್ನದಿಂದ ನೀರಿನ ಮೂಲವನ್ನು ಹುಡುಕು. ನೀರಿನಿಂದ ತೇಜಸ್ಸಿನ ಮೂಲವನ್ನು ಹುಡುಕು. ತೇಜಸ್ಸಿನಿಂದ ಸದ್ವಸ್ತುವಿನ ಮೂಲವನ್ನು ಹುಡುಕು". ಈ ಬಗೆಯ ದೃಷ್ಟಾಂತಗಳಿಂದ ಕಾರ್ಯವು ಕಾರಣಕ್ಕಿಂತ ಬೇರೆಯಲ್ಲವೆಂಬುದನ್ನು ತಿಳಿಸಲಿಕ್ಕಾಗಿಯೇ ಜಗತ್ತಿನ ಸೃಷ್ಟ್ಯಾದಿವಿವರಗಳನ್ನು ಶ್ರುತಿಯಲ್ಲಿ ತಿಳಿಸಲಾಗಿದೆ.

**ಪರಮೇಶ್ವರಸ್ಯ ಜಗತ್ಕಾರಣತ್ವೇ "ಅಸದ್ವಾ ಇದಮಗ್ರ ಆಸೀತ್" ಇತ್ಯಾದಿಷು ವಿರೋಧಮಾಶಂಕ್ಯ ಪರಿಹರತಿ. ಸಮಾಕರ್ಷಾತ್ ॥ ೧೫ ॥**

**'ಅಸದ್ವಾ ಇದಮಗ್ರ' ಇತ್ಯತ್ರ ಪೂರ್ವಪ್ರಕೃತಸ್ಯ ಸತ್ತ್ವಾಕರ್ಷಣಾನ್ನಾಸತ್ಕಾರಣತಾಪರಮಿದಂ. ತಥಾಹಿ 'ಅಸನ್ನೇವ ಸ ಭವತಿ' ಇತ್ಯಸದ್ವಾದಂ ನಿರಾಕೃತ್ಯ, 'ಅಸ್ತಿ ಬ್ರಹ್ಮೇತಿ ಚೇದ್ವೇದ' ಇತಿ ಸದಾತ್ಮಾನಂ ನಿರ್ಧಾರ್ಯ, 'ಸೋಽಕಾಮಯತ' ಇತಿ ತತ್ಸಕಾಶಾತ್ಸೃಷ್ಟಿಮುಪದಿಶ್ಯ 'ತತ್ಸತ್ಯಮಿತ್ಯಾಚಕ್ಷತೇ' ಇತ್ಯುಪಸಂಹೃತಂ. "ತದಪ್ಯೇಷ ಶ್ಲೋಕೋ ಭವತಿ" ಇತಿ ಪ್ರಕೃತವಿಷಯಃ ಶ್ಲೋಕ ಉದಾಹೃತಃ. ತತ್ರ ನ ಅಸತ್ ಶಬ್ದೇನ ಶೂನ್ಯವಾದಃ ಪರಿಗೃಹೀತುಂ ಶಕ್ಯತೇ, ಪ್ರಕೃತಹಾನಾಪ್ರಕೃತ**

ಕಲ್ಪನಾಪ್ರಸಂಗಾತ್. ಸತ್ಯೇಽಪ್ಯಸಚ್ಛಬ್ದಸ್ಯ ನಾಮರೂಪವ್ಯಾಕರಣಾಭಾವೇನ ಪ್ರಾಗಸತೋಽಪ್ಯೌಪಚಾರಿಕಪ್ರಯೋಗಸಂಭವಾದೇವಂ ಸರ್ವತ್ರ ಯಥಾವ್ಯಪದಿಷ್ಟೋಕ್ತೇರೂಹ್ಯತೇ. "ತದ್ಧೇದಂ ತರ್ಹ್ಯವ್ಯಾಕೃತಮಾಸೀನ್ನಾಮರೂಪಾಭ್ಯಾಮೇವಂ ವ್ಯಾಕ್ರಿಯತೇ" ಇತ್ಯತ್ರಾಪಿ, "ಸ ಏಷ ಇಹ ಪ್ರವಿಷ್ಟ ಆನಖಾಗ್ರೇಭ್ಯಃ" ಇತ್ಯಧಿಷ್ಠಿತಸ್ಯ ಪ್ರಪಂಚಪ್ರವಿಷ್ಟತ್ವೇನ ಸಮಾಕರ್ಷಾತ್. ನಿರಧಿಷ್ಠಿತಸ್ಯ ವ್ಯಾಕರಣಾಭ್ಯುಪಲಬ್ಧೌ ತು ತತಃ ಪರಂ ಪ್ರಕರಣಾನುಷಂಗಿಣಾ 'ಸ' ಇತ್ಯನೇನ ಸರ್ವಶಬ್ದವಾಚ್ಯಃ ಕಃ ಪ್ರಪಂಚಾನುಷಂಗೇ ಸಂಗೃಹ್ಯೇತ? ಚಿದ್ರೂಪಸ್ಯ ಪರಮೇಶ್ವರಸ್ಯ ದೇಹಾಭ್ಯುಪಗಮತ್ವಂ ದೃಶ್ಯತೇ. ಅಧಿಷ್ಠಿತಸ್ಯ ಚಿದ್ರೂಪತ್ವವ್ಯಪದೇಶಾತ್. "ಪಶ್ಯಂಶ್ಚಕ್ಷುಃ ಶೃಣ್ವನ್ ಶ್ರೋತ್ರಂ ಮನ್ವಾನೋ ಮನಃ" ಇತಿ. ಕಿಂಚ ಪರಿದೃಶ್ಯಮಾನಮಿದಂ ಸಕರ್ತೃಕಂ ವ್ಯಾಚಕ್ಷ್ಯತೇ. ಏವಂ ಪ್ರಥಮಸ್ರಷ್ಟಾಪ್ಯುಪಲಭ್ಯತೇ. 'ನಹಿ ದೃಷ್ಟೇರನುಪಪನ್ನಂ ನಾಮ' ಇತಿ ನ್ಯಾಯಾತ್. "ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ", ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಇತ್ಯಾದಿಷ್ವಪಿ ಸಾಧಿಪತಿತ್ವಮುಪದಿಶ್ಯತೇ. 'ವ್ಯಾಕ್ರಿಯತೇ' ಇತ್ಯತ್ರ ಕರ್ತೃಬೋಧಕಲಕಾರಃ ಕರ್ಮಣ್ಯೇವ ದೃಶ್ಯತೇ. ಸ್ಥಿತೇ ಪರಮಾತ್ಮನಿ ವ್ಯಾಕರಣಸೌಷ್ಠವಮಪಿ ದೃಷ್ಟ್ವಾ ದ್ರಷ್ಟವ್ಯಂ. "ಕೇದಾರಸ್ಸ್ವಯಮೇವ" ಇತಿವತ್ ಸತ್ಯಪಿ ಪೃಥಕ್ಕರ್ತರಿ ನ ವಿರುಧ್ಯತೇ. ಯದ್ವಾ ಕರ್ಮಣ್ಯೇವಾಯಂ ಲಕಾರಃ "ಗಮ್ಯತೇ ಗ್ರಾಮಃ" ಇತ್ಯಾದಿವದ್ದ್ರಷ್ಟವ್ಯಃ. ಏವಂ ಪರಮೇಶ್ವರಸ್ಯ ಸರ್ವಕಾರಣತ್ವೇ ನ ಕಶ್ಚಿದ್ವಿರೋಧಃ. ನಾಪಿ ಸೃಷ್ಟಿವಿರೋಧಾತ್ಕಾರಣೇ ಪರಶಿವಬ್ರಹ್ಮಣಿ ವಿರೋಧಃ.

ಪರಶಿವನೇ ಜಗತ್ಕಾರಣನೆಂಬುದಕ್ಕೆ "ಅಸದ್ವಾ ಇದಮಗ್ರ ಆಸೀತ್" ಇತ್ಯಾದಿ ಶ್ರುತಿಗಳಲ್ಲಿ ವಿರೋಧವನ್ನು ಆಶಂಕಿಸಿ ಪರಿಹರಿಸುತ್ತಾನೆ—ಸಮಾಕರ್ಷಾತ್ || ಮೊದಲು ಇದೆಲ್ಲವೂ ಅಸತ್ತಾಗಿತ್ತು" ಎಂಬಲ್ಲಿ ನಿರಾತ್ಮಕವಾದ ಅಸತ್ತನ್ನು ಜಗತ್ಕಾರಣವೆಂದು ಶ್ರುತಿಯಲ್ಲಿ ಹೇಳಿಲ್ಲ; ಏಕೆಂದರೆ "ಬ್ರಹ್ಮವನ್ನು ಇಲ್ಲವೆಂದು ತಿಳಿದರೆ ಅವನು ಇಲ್ಲವೇ ಆಗುವನು. ಬ್ರಹ್ಮವಿದೆ ಎಂದು ತಿಳಿದರೆ ಅದರಿಂದ ಅವನು ಇದ್ದೇ ಇರುವನೆಂಬ ಬಗ್ಗೆ ನಿಶ್ಚಯವಾಗುವುದು" ಎಂದು ಅಸದ್ವಾದವನ್ನು ಹಳಿದು, "ಅವನು ಇಚ್ಛಿಸಿದನು" ಎಂದು ಪರಬ್ರಹ್ಮವನ್ನೇ ಮುಂದಕ್ಕೆನೇರಿಸಿಕೊಂಡು ಅವನಿಂದಾದ ಸೃಷ್ಟಿಯ ವಿವರವನ್ನು ತಿಳಿಸಿ 'ಅದನ್ನು ಸತ್ಯವೆಂದು ಕರೆಯುವರು" ಎಂದು ಕೊನೆಗಾಣಿಸುವುದರಲ್ಲಿಯೇ "ಇದು ಮೊದಲು ಸತ್ತಾಗಿತ್ತು" ಎಂಬ ಶ್ಲೋಕವನ್ನು ಉದಾಹರಿಸಲಾಗಿದೆ. ಆದರೆ ನಿರಾತ್ಮಕವಾದ ಅಸತ್ತು ಈ ಶ್ಲೋಕದ ಅಭಿಪ್ರಾಯವಾಗಿದ್ದರೆ, ಸದ್ವಸ್ತುವನ್ನು ಮುಂದುವರಿಸುವಾಗ ಅಸತ್ತನ್ನು ಉದಾಹರಿಸುವುದರಿಂದ ಈ ವಾಕ್ಯವು

ಅಸಂಬದ್ಧವಾಗುತ್ತಿತ್ತು. ಆದ್ದರಿಂದ ಸೃಷ್ಟಿಗೆ ಮೊದಲು ನಾಮರೂಪಗಳ ವಿಭಾಗವಿರಲಿಲ್ಲವಾದ್ದರಿಂದ ಆಗ ಬ್ರಹ್ಮವು ಸತ್ತಾಗಿದ್ದರೂ ಅಸತ್ತಿನಂತೆ ಇತ್ತು ಎಂದು ಉಪಚಾರಕ್ಕಾಗಿ ಹೇಳಲಾಗಿದೆ. ಹಾಗೆ ಅಸತ್ಪದದಿಂದ ಶೂನ್ಯವಾದವನ್ನೇ ಪರಿಗ್ರಹಿಸಿದರೆ ಪ್ರಕೃತವಾದ್ದನ್ನು ಬಿಟ್ಟು ಅಪ್ರಕೃತವಾದ್ದನ್ನು ಕಲ್ಪಿಸಿದಂತಾದೀತು. ಸೃಷ್ಟಿಗೆ ಮೊದಲು ಜಗತ್ತು ಅವ್ಯಾಕೃತವಾಗಿತ್ತು ಎಂಬಲ್ಲಿ ಯಾವ ಆಧಾರವೂ ಇಲ್ಲದೆ ಜಗತ್ತು ತಾನಾಗಿಯೇ ವಿಭಾಗವಾಯಿತೆಂದೂ ಹೇಳಿಲ್ಲ; ಏಕೆಂದರೆ "ಆ ಈತನು ಉಗುರಿನ ತುದಿಯವರೆಗೂ ಇಲ್ಲಿ ಹೊಕ್ಕಿರುವನು" ಎಂದು ಪರಶಿವನೇ ವಿಸ್ತಾರವಾದ ಈ ಜಗತ್ತನ್ನು ಒಳಹೊಕ್ಕಿರುವನೆಂದು ಅವನನ್ನೇ ಮುಂದು ಮುಂದಕ್ಕೂ ಬಿಡದೆ ಸೇರಿಸಿಕೊಳ್ಳಲಾಗಿದೆ. "ಯಾವ ಅಧ್ಯಕ್ಷನೂ ಇಲ್ಲದೆ ಜಗತ್ತು ತಾನೇ ವಿಸ್ತಾರವಾಯಿತು"ಎಂದು ಒಪ್ಪುವುದಾದರೆ ಮುಂದೆ ಬರುವ 'ಅವನು ಇಚ್ಛಿಸಿದನು"ಎಂಬಲ್ಲಿ ಸರ್ವನಾಮದಿಂದ ಅವನು ಎಂಬುದಕ್ಕೆ ಬೇರೆ ಯಾರನ್ನು ತೆಗೆದುಕೊಳ್ಳಬಹುದು? ಶರೀರದೊಳಹೊಕ್ಕಿರುವವನು ಚೇತನನಾದ್ದರಿಂದ ಅದು ಪರಶಿವನಿಗೇ ಹೊಂದುತ್ತದೆ. "ಅವನು ಕಣ್ಣಾಗಿಯೂ ನೋಡುತ್ತಲೂ, ಕಿವಿಯಾಗಿಯೂ ಕೇಳುತ್ತಲೂ, ಮನಸ್ಸಾಗಿಯೂ ತಿಳಿಯುತ್ತಲೂ ಇರುವನು" ಎಂಬಲ್ಲಿ ಅವನೇ ಎಲ್ಲಕ್ಕೂ ಕರ್ತನೆಂದು ಹೇಳಲಾಗಿದೆ. ಕಣ್ಣಿನಿಂದ ಕಾಣುವುದಕ್ಕೆ ಅನುಪತ್ತಿಯೇ ಇಲ್ಲವೆಂಬ ನ್ಯಾಯದಿಂದ ಪ್ರಥಮಸೃಷ್ಟಿಯೂ ಹೀಗೆಯೇ ಆಗಿರುವುದಾಗಿ ತಿಳಿಯಬರುತ್ತದೆ. "ಈ ಜೀವನಲ್ಲಿ ಆತ್ಮನಾಗಿ ಪ್ರವೇಶಿಸಿ ನಾಮರೂಪಗಳನ್ನು ವಿಸ್ತರಿಸುತ್ತೇನೆ" ಎಂಬಲ್ಲಿ ಅವನೇ ಅಧಿಪತಿ ಎಂದು ಹೇಳಲಾಗಿದೆ. 'ವ್ಯಾಕ್ರಿಯತೇ' ಎಂಬಲ್ಲಿ ಕರ್ತೃಬೋಧಕವಾದ ಲಕಾರವು ಕರ್ಮಾರ್ಥವನ್ನು ತಿಳಿಸುತ್ತದೆ. 'ಗದ್ದೆಯ ಕೊಯ್ಲು ಆಗುತ್ತದೆ' ಎಂಬಲ್ಲಿ ಯಜಮಾನನು ನಿಂತಿದ್ದರೆ ಆ ಕೆಲಸ ತಾನಾಗಿಯೇ ನಡೆಯುವಂತೆ ಇಲ್ಲಿಯೂ ಶಿವನ ಸಾನ್ನಿಧ್ಯದಿಂದ ಕರ್ಮ ನಡೆಯುತ್ತದೆ. ಅಥವಾ ಒಬ್ಬನು ಸರಾಗವಾಗಿ ಒಂದು ಊರಿಗೆ ಹೋಗುತ್ತಿರುವಾಗ "ಗ್ರಾಮಃ ಗಮ್ಯತೇ" ಎಂದು ಕರ್ಮಣಿ ಪ್ರಯೋಗವನ್ನು ಹೇಳುವಂತೆ 'ವ್ಯಾಕ್ರಿಯತೇ' ಎಂಬಲ್ಲೂ ಕರ್ಮಾರ್ಥದಲ್ಲಿಯೇ ಕ್ರಿಯಾಪದವನ್ನು ಪ್ರಯೋಗಿಸಬಹುದು. ಹೀಗೆ ಪರಶಿವನು ಸರ್ವಕಾರಣನಾದ್ದರಿಂದ ಯಾವ ವಿರೋಧವೂ ಸಂಭವಿಸುವುದಿಲ್ಲ. ಸೃಷ್ಟಿಕ್ರಮದ ವಿರೋಧದಿಂದಲೂ ಶಿವನೇ ಜಗತ್ಕಾರಣನೆಂಬ ಬಗ್ಗೆ ಯಾವ ವಿರೋಧವೂ ಇಲ್ಲ.

ಏವಂ ಪ್ರಧಾನಜಗತ್ಕಾರಣವಾದಿಸಾಂಖ್ಯಮತಂ ನಿರಸ್ಯ ನಿರ್ವಿಶೇಷಬ್ರಹ್ಮಸಾನ್ನಿಧ್ಯೇನ ಪ್ರಧಾನಸ್ಯ ಜಗತ್ಕಾರಣತ್ವವ್ಯವಸ್ಥಾಪಕಂ ಸರ್ವದಾ ಜೀವಬ್ರಹ್ಮೈಕ್ಯಭೇದಪ್ರಧಾನಶುದ್ಧಾದ್ವೈತಮತಂ ನಿರಾಕರೋತಿ—

**ಬಾಲಾಕ್ಯಧಿಕರಣಂ ॥ ೫ ॥ ಜಗದ್ವಾಚಿತ್ವಾತ್ ॥ ೧೬ ॥**

"ಬ್ರಹ್ಮ ತೇ ಬ್ರವಾಣಿ" ಇತ್ಯುಪಕ್ರಮ್ಯ "ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯ ವೈ ತತ್ಕರ್ಮ ಸ ವೈ ವೇದಿತವ್ಯಃ" ಇತಿ ಕೌಷೀತಕೀಬ್ರಾಹ್ಮಣೇ ಬಾಲಾಕ್ಯಜಾತಶತ್ರುಸಂವಾದೇ ದೃಶ್ಯತೇ.

ಅತ್ರ ವೇದಿತವ್ಯಃ ಪ್ರಾಣಃ? ಜೀವಃ? ಪರಮೇಶ್ವರೋ? ವೇತಿ ಸಂದೇಹಃ. ಅತ್ರ ಪ್ರಾಣ ಏವಾಭಿಧೀಯತೇ. ಕಸ್ಮಾತ್ 'ಯಸ್ಯ ವೈ ತತ್ಕರ್ಮ' ಇತಿ ದರ್ಶನಾತ್. ಕರ್ಮಣಶ್ಚಲನಾತ್ಮಕಸ್ಯ ಪ್ರಾಣಾಶ್ರಯತ್ವಾತ್. ವಾಕ್ಯಶೇಷೇ ಚ "ಅಥಾಸ್ಮಿನ್ಪ್ರಾಣ ಏವೈಕಧಾ ಭವತಿ" ಇತಿ ಪ್ರಾಣಶಬ್ದ ಶ್ರವಣಾತ್. ಪ್ರಾಣಸ್ಯ ಹಿ ಮುಖ್ಯಪ್ರಾಣೇ ಪ್ರಾಣವಾಯೌ ರೂಢ ತ್ವಾತ್. "ಯೋ ಚೈತೇ ಪುರಸ್ತಾಡ್ಬಾಲಾಕಿನ್ನಾದಿತ್ಯೇ ಪುರುಷಶ್ಚಂದ್ರಮಸಿ ಪುರುಷಃ" ಇತ್ಯೇವಮಾದಯೋ ಜೀವಾ ನಿರೂಪಿತಾಃ. ತೇಷಾಮಪಿ ಪ್ರಾಣೋಽಸ್ತ್ಯಧಿಷ್ಠಾತಾ ಪ್ರಾಣಾವಸ್ಥಾವಿಶೇಷತ್ವಾತ್. ಆದಿತ್ಯಾದಿದೇವ ತಾತ್ಮನಾಂ "ಕತಮ ಏಕೋ ದೇವ ಇತಿ, ಪ್ರಾಣ ಇತಿ, ಸ ಬ್ರಹ್ಮ ಸ ಆದಿತ್ಯ ಆಚಕ್ಷತೇ" ಇತಿ ಶ್ರುತ್ಯಂತರಸಿದ್ಧೇಃ. ಉತ ಶಾರೀರೋ ವಾ ನಿರ್ಣೀಯತೇ. ಯಸ್ಯ ಚೈತತ್ಕರ್ಮೇತಿ ಧರ್ಮಾಧರ್ಮಲಕ್ಷಣಕರ್ಮೋಪ ದೇಶಸಂಭವಾತ್ ಪೂರ್ವಮಪ್ರಕೃತಾನಾಮಾದಿತ್ಯೇ ಪುರುಷಃ ಇತ್ಯಾ ದೀನಾಂ ಭೋಕ್ತೃಜೀವಸ್ಯ ಕರ್ತೃತ್ವಸಂಭವೇನೈತೇಷಾಂ ಪುರುಷಾಣಾಂ ಕರ್ತೇತಿ ನಿರ್ದೇಶೋಪಪತ್ತೇರ್ಜೀವಲಿಂಗಮಪ್ಯತ್ರ ದೃಶ್ಯತೇ. "ತದ್ಯಥಾ ಶ್ರೇಷ್ಠೀ ಸ್ವೈರ್ಭುಂಕ್ತೈರ್ಭುಂಕ್ತೇ ಯಥೈತೇ ಶ್ರೇಷ್ಠಿನಂ ಭುಂಜತೇ ಏವಮೇವೈಷ ಪ್ರಜ್ಞಾತ್ಮಾ ತೈರಾತ್ಮಭಿರ್ಭುಂಕ್ತೇ ಏವಮೇವೈತ ಆತ್ಮಾನ ಏತಮಾತ್ಮಾನಂ ಭುಂಜಂತಿ" ಇತಿ. ವೇದಿತವ್ಯಪುರುಷೋನ್ಮುಖಂ ಬಾಲಾಕಿಂ ಪ್ರತ್ಯಾಜಾತಶತ್ರುಣಾ ಸುಪ್ತಪುರುಷಮಾಮಂತ್ರಣೇನ ಸಂಬೋಧ್ಯ ತತೋಽನುತ್ಥಿತಂ ಪಾಣಿಘಾತೇನೋತ್ಥಿತಂ ಪ್ರದರ್ಶ್ಯ ಪ್ರಾಣಾದಿವ್ಯತಿರಿಕ್ತ ಜೀವಸ್ಯ ಪ್ರತಿಪಾದನಾತ್, ನಿರಾಕೃತಸರ್ವಕರ್ಮಬಂಧಪರಮೇಶ್ವರೇ ತದಸಂಭವಾತ್, ಪರಮೇಶ್ವರವಿಷಯಕಲಿಂಗಾನಾಮತ್ರಾದರ್ಶನಾಚ್ಚ, ಪ್ರಾಣಜೀವಯೋರೇಕ ಏವಾತ್ರ ನಿರ್ಣೇತವ್ಯ ಇತಿ ಚೇದುಚ್ಯತೇ. ಅತ್ರ ಪರಮೇಶ್ವರ ಏವ ಜೀವಾಧಿಷ್ಠಾತೃತ್ವೇನ ವೇದಿತವ್ಯಃ. "ಬ್ರಹ್ಮ ತೇ ಬ್ರವಾಣಿ" ಇತಿ ಪರಬ್ರಹ್ಮಪ್ರತಿಪಾದನಮುಪಕ್ರಮ್ಯ ಆದಿತ್ಯಾದಿಷು ಪುರುಷೋಪನ್ಯಾಸೇ ಬಾಲಾಕಿನಾ ಕೃತೇ "ಮೃಷಾ ವೈ ಖಲು ಮಾ ಸಂವದಿಷ್ಠಾಃ" ಇತ್ಯಾದಿನಾ ತನ್ನಿರಾಕೃತೇ ಸ್ವಯಮಜಾತಶತ್ರುರೇತೇಷಾಂ ಪುರುಷಾಣಾಂ ಕರ್ತಾ ಯಸ್ಯ ಚೈತತ್ಕರ್ಮೇತ್ಯುಕ್ತವಾನ್. ತನ್ನೈತನ್ಮುಖ್ಯ ಬ್ರಹ್ಮಪರತ್ವಂ. ಯುಕ್ತಿಮತ್ಪುರುಷಕರ್ತೃತ್ವಂ ಚ ಸ್ವಾತಂತ್ರ್ಯೇಣೇಶ್ವರ ಸ್ಯೈವೋಪಪನ್ನಂ. "ಈಶಾನಸ್ಸರ್ವವಿದ್ಯಾನಾಂ" "ಏಷಾಮೀಶೇ ಪಶುಪತಿಃ ಪಶೂನಾಂ" ಇತ್ಯಾದಿಷ್ವಪಿ ಸರ್ವನಿಯಂತೃತ್ವಸ್ಯ ಪರಬ್ರಹ್ಮಣಿ ಶಿವ ಏವ ವ್ಯವಸ್ಥಾಪನಾತ್ ನಚ ತತ್ರ ಕರ್ಮಶಬ್ದಾನುಪಪತ್ತಿಃ. ಜಗದ್ವಾಚಿತ್ವಾತ್ ಕರ್ಮಶಬ್ದಸ್ಯ ಕ್ರಿಯತ ಇತಿ ಕರ್ಮೇತಿ ಜಗತ ಏವ ಪುರು

**ಷಕರ್ತೃತ್ವಸ್ಯಾಪಿ ಪ್ರಾಪ್ತೌ ಬಾಲಾಕಿನೋ ವೇದಿತವ್ಯತ್ವೇನೋಪದಿಷ್ಟ ಜ್ಞಾಪನಾರ್ಥಂ ಬ್ರಾಹ್ಮಣಪರಿವ್ರಾಜಕನ್ಯಾಯೇನ ಪುರುಷಾಣಾಮಪಿ ಪೃಥಙ್ನಿರ್ದೇಶಃ. ನನು ವಿಶ್ರಾಂತಿಸ್ಥಿತಜೀವಸ್ಯ ಚೇತನತ್ವಾತ್ ಸ್ವಾತಂತ್ರ್ಯೇಣ ಸರ್ವಕರ್ತೃತ್ವಮುಪದಿಶ್ಯತ ಇತಿಚೇನ್ನ ಗಾರ್ಗ್ಯೇಣ ಬ್ರಹ್ಮತ್ವೇನೋಕ್ತಪುರುಷಾಣಾಂ ಬ್ರಹ್ಮಾತಿರಿಕ್ತದ್ಯೋತನಾಯ ಗೋಬಲೀವರ್ದನ್ಯಾಯೇನ ಪೃಥಗ್ವ್ಯಪದೇಶಾನ್ನೇತರಃ.**

ಪ್ರಧಾನವೇ ಜಗತ್ಕಾರಣವೆಂಬ ಸಾಂಖ್ಯಮತವನ್ನು ನಿರಾಕರಿಸಿ ನಿರ್ವಿಶೇಷ ಬ್ರಹ್ಮದ ಸಾನ್ನಿಧ್ಯದಿಂದ ಪ್ರಧಾನವನ್ನು ಜಗತ್ಕಾರಣವೆಂದು ಹೇಳುವ ಶುದ್ಧಾದ್ವೈತ ಮತವನ್ನು ಮುಂದೆ ನಿರಾಕರಿಸುತ್ತಾನೆ—

## ಬಾಲಾಕ್ಯಧಿಕರಣಂ ॥ ೫ ॥ ಜಗದ್ವಾಚಿತ್ವಾತ್ ॥

ಕೌಷೀತಕೀಬ್ರಾಹ್ಮಣದಲ್ಲಿ ಬಾಲಾಃ ಮತ್ತು ಜಾತ ಶತ್ರು ಇವರ ಸಂವಾದದಲ್ಲಿ "ಎಲೈ ಬಾಲಾಕಿಯೇ, ಈ ಜೀವರೆಲ್ಲರಿಗೂ ಯಾವನು ಕರ್ತನೋ, ಇದೆಲ್ಲವೂ ಯಾವನ ಕರ್ಮವೋ ಅವನನ್ನು ತಿಳಿಯಬೇಕು" ಎಂದು ಹೇಳಿದೆ. ಇಲ್ಲಿ ವೇದ್ಯ ವಸ್ತು ಪ್ರಾಣವೇ? ಜೀವನೇ? ಅಥವಾ ಪರಶಿವನೇ? ಎಂಬ ಸಂಶಯ ಬರುತ್ತದೆ. ಇಲ್ಲಿ ಈ ವಸ್ತು ಪ್ರಾಣವೇ ಎಂದು ಹೇಳಬಹುದು. "ಇದು ಯಾವನ ಕರ್ಮವೋ" ಎಂಬಲ್ಲಿ ಚಲನರೂಪವಾದ ಕರ್ಮವು ಪ್ರಾಣವನ್ನಾಶ್ರಯಿಸಿದೆ. "ಆಗ ಈ ಪ್ರಾಣನಲ್ಲಿ ಬೆರೆಯುತ್ತಾನೆ"ಎಂಬ ವಾಕ್ಯಶೇಷದಲ್ಲಿ ಪ್ರಾಣಶಬ್ದವು ಬಂದಿದೆ. ಇದೂ ಅಲ್ಲದೆ, ಪ್ರಾಣಶಬ್ದವು ಮುಖ್ಯಪ್ರಾಣವೆನಿಸಿದ ಪ್ರಾಣವಾಯುವಿನಲ್ಲಿ ರೂಢವೂ ಆಗಿದೆ. "ಬಾಲಾಕಿಯೇ, ಮುಂದಿರುವ ಸೂರ್ಯನಲ್ಲೂ ಚಂದ್ರನಲ್ಲೂ ಪುರುಷನಿರುವನು" ಎಂಬಲ್ಲಿ ಜೀವರನ್ನು ನಿರೂಪಿಸಲಾಗಿದೆ. "ಅವರೆಲ್ಲರೂ ಪ್ರಾಣದ ಅವಸ್ಥಾವಿಶೇಷವಾದ್ದರಿಂದ ಅವರಿಗೆ ಪ್ರಾಣವು ಆಶ್ರಯವಾಗಿದೆ" "ಆದಿತ್ಯಾದಿ ದೇವತೆಗಳಿಗೆ ಒಬ್ಬ ದೇವನು ಯಾರು? ಅವನೇ ಪ್ರಾಣ-ಅವನೇ ಬ್ರಹ್ಮ-ಆವನೇ ಆದಿತ್ಯನೆನಿಸಿದ್ದಾನೆ" ಎಂದು ಬೇರೆ ಶ್ರುತಿಗಳೂ ಹೇಳಿವೆ. ಅಥವಾ ಈ ಶ್ರುತಿಯಲ್ಲಿ ಧರ್ಮ ಅಧರ್ಮರೂಪವಾದ ಕರ್ಮವನ್ನು ಉಪದೇಶಿಸಿರುವುದರಿಂದಲೂ, ಹಿಂದೆ ಹೇಳಿದ ಆದಿತ್ಯ, ಪುರುಷ ಮೊದಲಾದ ಜೀವರಿಗೆ ಕರ್ತೃತ್ವವು ಸಂಭವಿಸುವುದರಿಂದಲೂ, ಅವರನ್ನು ಕರ್ತರೆಂದು ಕರೆದಿರುವುದರಿಂದಲೂ "ಶ್ರೇಷ್ಠಿಯು ಹೇಗೆ ತನ್ನವರಿಂದ ಭೋಗಿಸುವನೋ ಅಥವಾ ತನ್ನವರು ಹೇಗೆ ಆ ಶ್ರೇಷ್ಠಿಯನ್ನು ಭೋಗಿಸುವರೋ ಹಾಗೆಯೇ ಈ ಪ್ರಜ್ಞಾತ್ಮನು ಈ ಆತ್ಮರನ್ನು ಭೋಗಿಸುವನು. ಆತ್ಮರೂ ಅವನನ್ನು ಭೋಗಿಸುವರು". ಹೀಗೆ ಜೀವನಿಗೆ ಅನ್ವಯಿಸುವ ಧರ್ಮಗಳೂ ಇಲ್ಲಿ ಕಂಡುಬರುತ್ತವೆ. ಆದಿತ್ಯಾದಿಜೀವರೆಲ್ಲರ ಕರ್ತನನ್ನು ತಿಳಿಯಬೇಕೆಂದು ಹತ್ತಿರಕ್ಕೆ ಬಂದ ಬಾಲಾಕಿಗೆ ಆ ಬಗ್ಗೆ ತಿಳಿಸಲಿಕ್ಕಾಗಿ ಅಜಾತಶತ್ರುವು ಸುಪ್ತಪುರುಷನೊಬ್ಬನನ್ನು ಕರೆಯುವನು. ಅವನು ಆ ಶಬ್ದವನ್ನು ಕೇಳದೆ ಇದ್ದುದರಿಂದ ಆಗಲೂ ಅವನಲ್ಲಿ ಎಚ್ಚರವಾಗಿದ್ದ ಪ್ರಾಣಾದಿಗಳನ್ನು ಜೀವ

ನಲ್ಲವೆಂದು ತಿಳಿಸಿ, ಅವನನ್ನು ದೊಣ್ಣೆಯಿಂದ ಹೊಡೆದೆಬ್ಬಿಸಿ ಪ್ರಾಣಕ್ಕಿಂತ ಬೇರೆಯಾದ ಜೀವನೇ ಭೋಕ್ತನೆಂದು ತಿಳಿಸುವನು. ಆದ್ದರಿಂದ ಇಲ್ಲಿ ವೇದ್ಯನಾದವನು ಜೀವನೂ ಆಗಬಹುದು. ಎಲ್ಲಾ ಕರ್ಮಸಂಬಂಧವನ್ನು ತೊರೆದ ಪರಮೇಶ್ವರನಲ್ಲಂತೂ ಕರ್ತೃತ್ವವು ಸಂಭವಿಸುವುದಿಲ್ಲ. ಇದೂ ಅಲ್ಲದೆ, ಪರಶಿವನ ಬಗ್ಗೆ ಯಾವ ಸೂಚನೆಯೂ ಇಲ್ಲಿ ಕಂಡುಬಂದಿಲ್ಲ. ಆದ್ದರಿಂದ ಪ್ರಾಣಜೀವರಲ್ಲೊಬ್ಬನನ್ನು ಇಲ್ಲಿ ವೇದ್ಯನೆಂದು ಭಾವಿಸುವುದೇ ಯುಕ್ತವಾಗಿದೆ ಎಂದು ಆಕ್ಷೇಪ ಬಂದರೆ ಅದಕ್ಕೆ ಸೂತ್ರದಲ್ಲಿ ಸಮಾಧಾನವನ್ನು ಹೇಳಲಾಗಿದೆ. ಇಲ್ಲಿ ಪರಮೇಶ್ವರನನ್ನೇ ಜೀವರಿಗೆ ಆಶ್ರಯಸ್ಥಲವೆಂದು ತಿಳಿಯಬೇಕು. ಬ್ರಹ್ಮಪ್ರತಿಪಾದನಪ್ರಕರಣದಲ್ಲಿ ಬಾಲಾಕಿಯು ಅಜಾತಶತ್ರುವಿನೊಡನೆ "ನಿನಗೆ ಬ್ರಹ್ಮವನ್ನು ತಿಳಿಸುವೆನು" ಎಂದು ವಾದವನ್ನಾರಂಭಿಸಿ ಆದಿತ್ಯ ಮೊದಲಾದ ಕೆಲವು ಪುರುಷರನ್ನು ತಿಳಿಸಿ ಸುಮ್ಮನಾದನು. ಅದಕ್ಕೆ ಅವನು ಬ್ರಹ್ಮವನ್ನು ತಿಳಿಸುವುದಾಗಿ ಸುಳ್ಳು ಹೇಳಿದೆಯೆನ್ನಲು ಆದಿತ್ಯ ಮೊದಲಾದ ಅಮುಖ್ಯಬ್ರಹ್ಮರೆಲ್ಲರಿಗೂ ಕರ್ತನಾದ ಮತ್ತೊಬ್ಬ ಆತ್ಮನನ್ನು ತಿಳಿಯಬೇಕು ಎಂದು ತಿಳಿಸುವನು. ಹೀಗಿರುವಾಗ ಆ ಮತ್ತೊಬ್ಬ ಆತ್ಮನೂ ಅಮುಖ್ಯ ಬ್ರಹ್ಮವೇ ಆಗುವುದಾದರೆ ಬ್ರಹ್ಮಪ್ರಕರಣದ ಆರಂಭವೇ ಬಾಧಿತವಾಗುವುದು. ಆದ್ದರಿಂದ ಈ ಮತ್ತೊಬ್ಬ ಆತ್ಮನು ಪರಶಿವನೇ ಆಗಿರಬೇಕು. ಅಮುಖ್ಯ ಬ್ರಹ್ಮರೆಲ್ಲರಿಗೂ ಕರ್ತನಾಗಿರುವುದೆಂದರೆ ಪರಶಿವನೊಬ್ಬನಿಗೇ ಸ್ವತಂತ್ರವಾಗಿ ಅನ್ವಯಿಸುವ ಧರ್ಮವಾಗಿದೆ. ಅವನೇ ಎಲ್ಲರಿಗೂ ಈಶಾನ, ಪತಿ, ನಿಯಾಮಕ ಎಂದು ಪ್ರಸಿದ್ಧನಾಗಿದ್ದಾನೆ. ಆದ್ದರಿಂದ ಶ್ರುತಿಯಲ್ಲಿ ಬಂದಿರುವ ಕರ್ಮವು ಪರಶಿವನ ಲೀಲಾರಂಗಭೂಮಿಯಾದ ಜಗತ್ತಿಗೆ ಅನ್ವಯಿಸುತ್ತದೆ. ಇಡೀ ಜಗತ್ತೇ ಅವನ ಕರ್ಮವಾಗಿದೆ ಎಂದು ತಿಳಿಸುವುದೇ ಶ್ರುತಿಯ ಅಭಿಪ್ರಾಯ. ಹಾಗಾದರೆ, ಈ ಪುರುಷರಿಗೆ ಅವನು ಕರ್ತನೆಂದು ವಿಶೇಷವಾಗಿ ಪುರುಷರನ್ನು ವಿಂಗಡಿಸಿ ಹೇಳಿರುವುದು ವ್ಯರ್ಥವಲ್ಲವೇ ? ಅಂದರೆ, ಬ್ರಹ್ಮವೆಂಬ ಅಭಿಪ್ರಾಯದಿಂದ ಬಾಲಾಕಿಯು ಯಾವ ಪುರುಷರನ್ನು ಹೇಳಿದ್ದನೋ ಅವರು ಬ್ರಹ್ಮವಲ್ಲವೆಂದು ತಿಳಿಸಲಿಕ್ಕಾಗಿಯೇ ಇಂತಹ ಪುರುಷರ ಕರ್ತನೆಂದು ವಿಶೇಷವಾಗಿ ಹೇಳಿದೆ. ಪರಿವ್ರಾಜಕರು ಬ್ರಾಹ್ಮಣರಲ್ಲಿ ಸೇರಿದ್ದರೂ ಬ್ರಾಹ್ಮಣರನ್ನೂ ಪರಿವ್ರಾಜಕರನ್ನೂ ಕರೆದುಕೊಂಡು ಬರುವಂತೆ ವಿಶೇಷವಾಗಿ ತಿಳಿಸುವುದು ಲೋಕವಲ್ಲಿ ರೂಢಿಯಲ್ಲಿದೆ. ಹಾಗೆ ಪುರುಷರು ಜಗತ್ತಿನಲ್ಲಿ ಸೇರಿದ್ದರೂ, ಜಗತ್ತನ್ನು ಸಾಮಾನ್ಯವಾಗಿಯೂ, ಪುರುಷರನ್ನು ವಿಶೇಷವಾಗಿಯೂ ಶ್ರುತಿಯಲ್ಲಿ ತಿಳಿಸಿದೆ. ಬಾಲಾಕಿಯು ಹೇಳಿದ ಪುರುಷರೊಳಗೇ ಅನುಭವಸ್ಥನಾದ ಒಬ್ಬ ಜೀವನನ್ನು ಚೇತನನಾದ್ದರಿಂದ ಸ್ವತಂತ್ರವಾಗಿ ಉಳಿದೆಲ್ಲಾ ಜೀವರಿಗೂ ಕರ್ತನಂದು ಏಕೆ ಹೇಳಬಾರದು ? ಅಂದರೆ, ಎತ್ತುಗಳೆಲ್ಲವನ್ನೂ ಗೋವೆಂದು ಕರೆದರೂ ಬಲಿಷ್ಠವಾದ್ದನ್ನು ಬಲೀವರ್ದವೆಂದು ಪ್ರತ್ಯೇಕವಾಗಿ ಕರೆಯುವಂತೆ ಬಾಲಾಕಿಯು ಹೇಳಿದವರೆಲ್ಲರೂ ಅಮುಖ್ಯಬ್ರಹ್ಮರೇ ಆದ್ದರಿಂದ ಮುಖ್ಯಬ್ರಹ್ಮನೊಬ್ಬನು ಅವರೆಲ್ಲರಿಗೂ ಬೇರೆಯಾಗಿರುವನೆಂದು ತಿಳಿಸಲಿಕ್ಕಾಗಿ ಶ್ರುತಿಯಲ್ಲಿ ಪರಬ್ರಹ್ಮವನ್ನು

ಪುರುಷರ ಕರ್ತನೆಂದು ಪ್ರತ್ಯೇಕವಾಗಿ ಹೇಳಲಾಗಿದೆ.

ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇತ್ತದ್ವ್ಯಾಖ್ಯಾತಂ || ೧೭ ||

"ಯಥೈತೇ ಶ್ರೇಷ್ಠಿನಂ ಭುಂಜಂತಿ" ಇತಿ, "ಅಥಾಸ್ಮಿನ್ ಪ್ರಾಣ ಏವೈಕಧಾ ಭವತಿ" ಇತಿ ವಾಕ್ಯಶೇಷೇ ಪರಿಚ್ಛಿನ್ನಜೀವಮುಖ್ಯಪ್ರಾಣ ಲಿಂಗಸ್ಯೈವಾತ್ರ ದ್ಯೋತನಾನ್ನ ಸರ್ವವ್ಯಾಪಕಬ್ರಹ್ಮೋಪಾಸನಮತ್ರ ಪರಮಿತಿ ಚೇತ್ತದ್ವ್ಯಾಖ್ಯಾತಂ, ಪೂರ್ವತ್ರ ಪ್ರಾಣಾಧಿಕರಣೇ ಪ್ರತರ್ದನ ವಿದ್ಯಾಯಾಂ ಇಷ್ಟಾದಿಲಿಂಗತ್ರಯೋಪಾಸನಂ ವ್ಯಾಖ್ಯಾತಂ. ತದ್ವದಿ ಹಾಪಿ ಉಪಕ್ರಮೋಪಸಂಹಾರಮಧ್ಯಪರಾಮರ್ಶತಯಾ ವೇದಿತವ್ಯಂ. "ಬ್ರಹ್ಮ ತೇ ಬ್ರವಾಣಿ" ಇತ್ಯುಪಕ್ರಮೇ ಪರಬ್ರಹ್ಮೋಪಕ್ರಮದರ್ಶ ನಾತ್. "ಯಸ್ಯ ವೈ ತತ್ಕರ್ಮ" ಇತಿ ಮಧ್ಯೇ ಚ ಸರ್ವಜಗತ್ಕರ್ತೃ ತ್ವಸ್ಯ ತಸ್ಮಿನ್ನೇವ ನಿರ್ದೇಶಾತ್. "ಸರ್ವಾನ್ಪಾಪ್ಮನೋಽಪಹತ್ಯ ಸರ್ವೇಷಾಂ ಭೂತಾನಾಂ ಶ್ರೈಷ್ಠ್ಯಂ ಸ್ವಾರಾಜ್ಯಮಾಧಿಪತ್ಯಂ ಪರ್ಯೇತಿ ಯ ಏವಂ ವೇದ" ಇತ್ಯುಪಸಂಹಾರೇ ನಿರತಿಶಯಫಲಪ್ರದಾನಾಚ್ಚ ನಾನ್ಯಪರತ್ವಂ ವ್ಯಾಚಕ್ಷ್ಯತೇ. "ಪ್ರಾಣಬಂಧನಂ ಹಿ ಸೌಮ್ಯ ಮನಃ" ಇತ್ಯತ್ರ ಪ್ರಾಣಶಬ್ದಸ್ಯ ಬ್ರಹ್ಮಪರತ್ವಮುಪದಿಶ್ಯತೇ. ತಸ್ಮಾದತ್ರ ತದ ಭೇದೇನ ಲಿಂಗತ್ರಯೋಪಾಸನಂ ದ್ರಷ್ಟವ್ಯಂ. ನಚೈವಂ ಪ್ರತರ್ದನ ವಿಚಾರಣಸ್ಯ ಗತಾರ್ಥತಾ.

ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇತ್ತದ್ವ್ಯಾಖ್ಯಾತಂ ||೧೭||

"ಒಬ್ಬ ಶ್ರೇಷ್ಠಿಯನ್ನು ಅವನ ಕಡೆಯವರು ಹೇಗೆ ಭೋಗಿಸುವರೋ ಅವನು ಅವ ರನ್ನು ಆಶ್ರಯಿಸಿ ಹೇಗೆ ಭೋಗಿಸುವನೋ ಹಾಗೆ ಈ ಪ್ರಜ್ಞಾತ್ಮನು ಈ ಜೀವರಿಂದ ಭೋಗವನ್ನು ಅನುಭವಿಸುತ್ತಾನೆ; ಜೀವರೂ ಅವನಿಂದ ಭೋಗಪಡುತ್ತಿದ್ದಾರೆ". "ಆಗ ಈ ಪ್ರಾಣದಲ್ಲಿ ಒಂದಾಗುತ್ತಾನೆ" ಎಂಬ ಕಡೆಯೂ ಅಲ್ಪಶಕ್ತನಾದ ಜೀವಾತ್ಮನಿಗೆ ಮುಖ್ಯವೆನಿಸಿದ ಪ್ರಾಣಲಿಂಗವನ್ನೇ ಉಪಾಸನಮಾಡಬೇಕೆಂದು ಹೇಳಿರುವುದರಿಂದ ಸರ್ವವ್ಯಾಪಕನಾದ ಶಿವನ ಉಪಾಸನೆಯನ್ನು ಹೇಳಲಿಲ್ಲವೆಂದರೆ ಅದನ್ನು ಹಿಂದೆಯೇ ಪ್ರಾಣಾಧಿಕರಣದಲ್ಲಿ ಪ್ರತರ್ದನವಿದ್ಯೆಯಲ್ಲಿ ಇಷ್ಟಪ್ರಾಣಭಾವಲಿಂಗಗಳ ಉಪಾಸನ ವನ್ನು ತಿಳಿಸುವಾಗ ಹೇಳಿಯಾಗಿದೆ. ಅದರಂತೆ ಈ ಶ್ರುತಿಗಳ ಉಪಕ್ರಮ ಮತ್ತು ಉಪ ಸಂಹಾರಗಳಲ್ಲೂ ಮಧ್ಯದಲ್ಲೂ ಪರಾಮರ್ಶಿಸಿದರೆ ಇವು ಪರಶಿವನ ಉಪಾಸನವನ್ನೇ ತಿಳಿಸುತ್ತವೆ ಎಂಬುದು ಸ್ಪಷ್ಟವಾಗುತ್ತದೆ. "ನಿನಗೆ ಬ್ರಹ್ಮವನ್ನು ತಿಳಿಸುತ್ತೇನೆ" ಎಂಬಲ್ಲಿ ಪರಬ್ರಹ್ಮಪ್ರಕರಣವು ಬ್ರಹ್ಮನಿರ್ದೇಶದಿಂದಲೇ ಆರಂಭವಾಗಿದೆ. "ಇದೆಲ್ಲವೂ ಯಾವನ ಕರ್ಮವೋ" ಎಂಬಲ್ಲಿ ಅವನೇ ಜಗತ್ಕರ್ತನೆಂದು ಹೇಳಲಾಗಿದೆ. "ಅವನನ್ನು ತಿಳಿದವನು ಎಲ್ಲ ಪಾಪಗಳಿಂದಲೂ ಬಿಡುಗಡೆಹೊಂದಿ ಎಲ್ಲಾ ಜೀವರಮೇಲೂ ಯಾಜ ಮಾನ್ಯವನ್ನು ಪಡೆಯುತ್ತಾನೆ" ಎಂಬುದರಿಂದ ಇಂತಹ ನಿರತಿಶಯವಾದ ಫಲವನ್ನು

ಕೊಡುವವನು ಪರಶಿವನಲ್ಲದೇ ಬೇರೆ ಯಾರೂ ಇಲ್ಲವೆಂದು ತಿಳಿಸಲಾಗಿದೆ. "ಸೋಮ್ಯನೇ ಮನಸ್ಸನ್ನು ಪ್ರಾಣದಲ್ಲಿ ಬಂಧಿಸಬೇಕು" ಎಂದು ಹೇಳಿದ್ದರಿಂದ ಪ್ರಾಣಶಬ್ದವು ಬ್ರಹ್ಮಕ್ಕೇ ಅನ್ವಯಿಸುತ್ತದೆ. ಇಷ್ಟಲಿಂಗಕ್ಕೂ ಪ್ರಾಣಲಿಂಗಕ್ಕೂ ಶಿವಭಾವದೊಡನೆ ಅಭೇದವಿರುವುದರಿಂದ ದೇಹದಲ್ಲಿ ಈ ಮೂರುರೂಪಗಳಿಂದಲೂ ನೆಲಸಿರುವ ಪರಶಿವನೇ ಉಪಾಸ್ಯನೆಂದು ಈ ಶ್ರುತಿಗಳಲ್ಲಿ ತಿಳಿದುಬರುತ್ತದೆ.

ಕರ್ಮಶಬ್ದಸ್ಯ ಜಗದ್ವಾಚಿತ್ವಸ್ಯ ತತ್ರಾಪ್ರತಿಪಾದನಾದನ್ಯಪರತ್ವಮಸ್ತೀತ್ಯಾಶಂಕಾಯಾಂ ಪುನರ್ಹೇತ್ವಂತರಮಾಹ—ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ ॥ ೧೮ ॥

ಜೈಮಿನ್ಯಾಚಾರ್ಯೋ ಜೀವಪರಾಮರ್ಶಮಸ್ಮಿನ್ಪ್ರಕರಣೇ ಅನ್ಯಾರ್ಥಂ ಬ್ರಹ್ಮಪ್ರತಿಪತ್ತ್ಯರ್ಥಂ ಮನ್ಯತೇ. ಕಸ್ಮಾತ್ಪ್ರಶ್ನಪ್ರತಿವಚನಾಭ್ಯಾಂ, ಪ್ರಶ್ನಸ್ತಾವತ್ಸುಪ್ತಪ್ರತಿಬೋಧನೇನ ಪ್ರಾಣಾದಿಪ್ರಭಿನ್ನ ಶರೀರೇ ಬುದ್ಧೇ ಪುನಶ್ಶಾರೀರಾದ್ಭಿನ್ನವಿಷಯಃ ಶ್ರೂಯತೇ. "ಕ್ವೈಷ ಏತದ್ಬಾಲಾಕೇ ಪುರುಷೋಽಶಯಿಷ್ಟ ಕ್ವ ವಾ ವೈ ಏತದಭೂತ್ಕುತ ಏತದಗಾತ್" ಇತಿಪ್ರಶ್ನಪ್ರತಿವಚನಮಪಿ. "ಯದಾ ಸುಪ್ತೋ ನ ಕಂಚನ ಸ್ವಪ್ನಂ ಪಶ್ಯತ್ಯಥಾಸ್ಮಿನ್ಪ್ರಾಣ ಏವೈಕಧಾ ಭವತಿ। ಸತಾ ಸೌಮ್ಯ ಸದಾ ಸಂಪನ್ನೋ ಭವತಿ", "ಏತಸ್ಮಾದಾತ್ಮನಃ ಸರ್ವೇ ಪ್ರಾಣಾ ಯಥಾಯತನಂ ಪ್ರತಿಷ್ಠಂತೇ" ಇತಿ ಚ ಜೀವಸ್ಯ ಸುಪ್ತೌ ಶಿವಪ್ರಾಪ್ತಿ ಬ್ರಹ್ಮಣಃ ಪ್ರಾಣಾದಿಕಂ ಜಗಜ್ಜಾಯತ ಇತಿ ಜಗತ್ಕಾರಣತ್ವಂ ಚ ಶ್ರೂಯತೇ. ತಸ್ಮಾತ್ಪರಮೇಶ್ವರವಿಜ್ಞಾನೇನ ಜೀವಸ್ಯ ತದಾತ್ಮಕತ್ವಮುಪದಿಶ್ಯತೇ. ಅಪಿ ಚೈವಮೇಕೇ ವಾಜಸನೇಯಿನೋ ಬಾಲಾಕ್ಯಜಾತಶತ್ರುಸಂವಾದೇ ಹ್ಯಸಂದಿಗ್ಧತಯಾ ವಿಜ್ಞಾನಮಯಂ ಜೀವಂ ತದ್ಭಿನ್ನಂ ಪರಮೇಶ್ವರಂ ಚಾಮನಂತಿ. "ಕ್ವೈಷ ತದಾಭೂತ್ಕುತ ಏತದಗಾತ್" ಇತಿ ಪ್ರಶ್ನೇ, "ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ" ಇತ್ಯುತ್ತರೇ ಚ ಆಕಾಶಶಬ್ದೋ ಬ್ರಹ್ಮಣಿ ಪ್ರಸಿದ್ಧಃ, ಸರ್ವವೇದಾಂತಪ್ರತ್ಯಯತ್ವಾಚ್ಚ. ಅತ್ರಾಪಿ ಸ ಏವ ನಿಶ್ಚಯಃ. ಅತಃ ಪರಮೇಶ್ವರಸ್ಯೈವ ಜಗದ್ವಾಚಿತ್ವಂ.

ಕರ್ಮಶಬ್ದವು ಜಗತ್ತನ್ನು ಬೋಧಿಸುವುದೆಂದು ಶ್ರುತಿಯಲ್ಲಿ ಹೇಳದಿರುವುದರಿಂದ ಅದು ಬೇರೆ ಕಡೆಗೆ ಅನ್ವಯಿಸಲೆಂದು ಆಶಂಕಿಸುತ್ತಾನೆ—

**ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ ॥**

ಬ್ರಹ್ಮವನ್ನು ತಿಳಿಸಲಿಕ್ಕಾಗಿಯೇ ಈ ಪ್ರಕರಣದಲ್ಲಿ ಜೀವನನ್ನು ನಿರ್ದೇಶಿಸಲಾಗಿದೆ ಎಂದು ಜೈಮಿನ್ಯಾಚಾರ್ಯರು ಹೇಳುತ್ತಾರೆ. ಯಾಕೆಂದರೆ ಪ್ರಶ್ನೋತ್ತರಗಳಿಂದ ಹಾಗೆಯೇ ತಿಳಿದುಬರುತ್ತದೆ. ನಿದ್ರಿಸುತ್ತಿದ್ದವನೊಬ್ಬನನ್ನು ಎಬ್ಬಿಸಿದ್ದರಿಂದ ಪ್ರಾಣಾದಿಗಳಿಗಿಂತ ಬೇರೆಯಾಗಿರುವ ಚೇತನನನ್ನು ತಿಳಿಸಿದಮೇಲೆ ಮತ್ತೆ ಜೀವನಿ

ಗಿಂತ ಬೇರೆಯಾಗಿರುವ ಬ್ರಹ್ಮದ ವಿಷಯದಲ್ಲಿ "ಬಾಲಾಕಿಯೇ ಈ ಪುರುಷನು ಹೇಗೆ ನಿದ್ರಿಸಿದನು? ಎಲ್ಲಿದ್ದನು? ಎಲ್ಲಿಂದ ಬಂದನು?" ಎಂಬ ಪ್ರಶ್ನೆ ಬರುತ್ತದೆ. "ನಿದ್ರಿಸುವವನು ಯಾವ ಸ್ವಪ್ನವನ್ನೂ ಕಾಣದೆ ಇರುವಾಗ ಪ್ರಾಣದಲ್ಲಿ ಬೆರೆಯುತ್ತಾನೆ", "ಈ ಆತ್ಮನಿಂದಲೇ ಪ್ರಾಣಗಳು ತಮ್ಮ ತಮ್ಮ ಸ್ಥಾನಗಳಿಗೆ ಹೊರಡುತ್ತವೆ. ಅವುಗಳ ಹಿಂದೆಯೇ ಇಂದ್ರಿಯಗಳೂ ವಿಷಯಗಳೂ ಹೊರಡುತ್ತವೆ" ಎಂಬ ಉತ್ತರವೂ ಬರುತ್ತದೆ. ಇದರಿಂದ ಸುಷುಪ್ತಿಯಲ್ಲಿ ಜೀವನು ಬ್ರಹ್ಮದಲ್ಲಿ ಸೇರುತ್ತಾನೆ, ಬ್ರಹ್ಮದಿಂದಲೇ ಪ್ರಾಣ ಮೊದಲಾದ ಜಗತ್ತು ಹೊರಹೊಮ್ಮಿರುವುದು ಎಂದು ಸ್ಪಷ್ಟಪಡುತ್ತದೆ. ಆದ್ದರಿಂದಲೇ ಪರಶಿವನ ಉಪಾಸನೆಯಿಂದ ಜೀವನು ಶಿವನಾಗುವನೆಂದು ಇಲ್ಲಿ ತಿಳಿಸಲಾಗಿದೆ. ಇದಲ್ಲದೆ ವಾಜಸನೇಯಿಗಳು ಬಾಲಾಕ್ಯಜಾತಶತ್ರು ಸಂವಾದದಲ್ಲಿ ವಿಜ್ಞಾನಮಯನಾದ ಜೀವನನ್ನೂ ಅವನಿಗಿಂತ ಬೇರೆಯಾಗಿ ಪರಶಿವನನ್ನೂ ಸ್ಪಷ್ಟವಾಗಿ ತಿಳಿಸಿದ್ದಾರೆ. "ಯಾವ ಈ ವಿಜ್ಞಾನಮಯ ಪುರುಷನು ಎಲ್ಲಿ ಇದ್ದನು? ಎಲ್ಲಿಗೆ ಹೋಗಿದ್ದನು? ಎಂಬ ಪ್ರಶ್ನೆಗೆ "ಹೃದಯದೊಳಗಿನ ದಹರಾಕಾಶದಲ್ಲಿ ಈತನಿದ್ದನು" ಎಂಬ ಉತ್ತರ ಬಂದಿದೆ. ಇಲ್ಲಿ ಆಕಾಶವೆಂದರೆ ಬ್ರಹ್ಮವೆಂದು ಪ್ರಸಿದ್ಧವಾಗಿದೆ. ಹಾಗೆಯೇ ಎಲ್ಲಾ ವೇದಾಂತಗಳೂ ತಿಳಿಸಿವೆಯಾದ್ದರಿಂದ ಇಲ್ಲೂ ಇದೇ ನಿಶ್ಚಿತವಾಗಿದೆ. ಆದ್ದರಿಂದ ಪರಶಿವನೇ ಜಗದ್ರೂಪನಾಗಿದ್ದಾನೆ.

ಜೀವಬ್ರಹ್ಮಣೋರ್ಮೈತ್ರೇಯೀಬ್ರಾಹ್ಮಣೇ ಸ್ವಶಬ್ದೈಕಪರತ್ವೇನ ವಿಧಾನಾತ್ಕಥಂ ಸಾಮಾನಾಧಿಕರಣ್ಯಮಿತ್ಯಾಶಂಕ್ಯಾಹ. ವಾಕ್ಯಾನ್ವಯಾಧಿಕರಣಂ ||೬|| **ವಾಕ್ಯಾನ್ವಯಾತ್ || ೧೯ ||**

**ಬೃಹದಾರಣ್ಯಕೇ ಮೈತ್ರೇಯೀಬ್ರಾಹ್ಮಣೇ ದೃಶ್ಯತೇಽಸ್ಯ ವಿಷಯಃ. "ಸ ಹೋವಾಚ ನವಾರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ" ಇತ್ಯಾರಭ್ಯ "ನವಾರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮಾ ವಾಽರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇಯ್ಯಾತ್ಮನೋ ವಾಽರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಂ ಸರ್ವಂ ವಿದಿತಂ" ಇತಿ. ಅತ್ರ ಕಿಂ ದ್ರಷ್ಟವ್ಯತ್ವಾದಿನಾ ನಿರ್ದಿಷ್ಟೋಽಯಂ ಜೀವಃ ಪರಮೇಶ್ವರೋ ವೇತಿ ಸಂದಿಹ್ಯತೇ. ವಿಜ್ಞಾನಾತ್ಮಾ ಜೀವ ಏವಾತ್ರ ವ್ಯವಹ್ರಿಯತೇ. ಕುತಃ ಉಪಕ್ರಮಸಾಮರ್ಥ್ಯಾತ್ ಪತಿಜಾಯಾಪುತ್ರಪಶುವಿತ್ತಾದಿಪ್ರಪಂಚಸ್ಯಾತ್ಮಾರ್ಥತ್ವೇನ ಪ್ರಿಯತ್ವವ್ಯಪದೇಶಾತ್. ಕಿಂಚ ತತ್ರೈವ "ನವಾಽರೇ ಪತ್ಯುಃ" ಇತ್ಯಾದಿನಾ ಭೋಕ್ತೃಜೀವೋಪಕ್ರಮಾತ್, ಮಧ್ಯೇಽಪಿ "ಇದಂ ಮಹದ್ಭೂತಮನಂತಮಪಾರಂ ವಿಜ್ಞಾನಘನ ಏವೈತೇಭ್ಯೋ ಭೂತೇಭ್ಯಸ್ಸಮುತ್ಥಾಯ ತಾನ್ಯೇವಾನುವಿನಶ್ಯತಿ ನ ಪ್ರೇತ್ಯ**

ಸಂಜ್ಞಾಸ್ತಿ" ಇತಿ ಸ್ವಭೂತೇಭ್ಯಃ ಸಮುತ್ಥಾನಸ್ಯ ಶಾರೀರೇ ಉಪದೇಶಾತ್ ತಸ್ಯೈವ ದ್ರಷ್ಟವ್ಯತ್ವಂ ನಿರ್ದಿಶತಿ. ತಥಾ "ವಿಜ್ಞಾತಾರಮರೇ ಕೇನ ವಿಜಾನೀಯಾತ್" ಇತಿ ಕರ್ತೃಪ್ರತಿಪಾದಿತವಾಕ್ಯೇನೋಪಸಂಹಾರಾತ್ ಶಾರೀರ ಏವೋಪದಿಷ್ಟಃ. ತಸ್ಮಾದುಪಕ್ರಮೇ ಭಿನ್ನಸಾಧ್ಯೇನ ಕರ್ಮಣಾ ಕಿಮಮೃತತ್ವಮಸ್ತೀತಿ ಮೈತ್ರೇಯೀಪ್ರಶ್ನದರ್ಶನಾದೇತತ್ಪ್ರಕರಣಂ ನೇತರಸ್ಯೋಪದಿಶ್ಯತ ಇತಿ ಪ್ರಾಪ್ತೇಽಭಿಧೀಯತೇ. ಅತ್ರ ದ್ರಷ್ಟವ್ಯತ್ವೇನ ಉಪದಿಶ್ಯಮಾನಃ ಪುರುಷಃ ಪರಮೇಶ್ವರ ಏವ. ಕುತಃ—ವಾಕ್ಯಾನ್ವಯಾತ್. ವಾಕ್ಯಸ್ಯ ತೂಪಕ್ರಮೋಪಸಂಹಾರಮಧ್ಯಪರಾಮರ್ಶತಯಾ ಪರಬ್ರಹ್ಮಣಿ ಶ್ರಿವ ಏವ ಸಮನ್ವಯಾತ್. 'ಅಮೃತಸ್ಯ ತು ನಾಶಾಸ್ತಿ ವಿತ್ತೇನ' ಇತಿ ವಿತ್ತಸಾಧ್ಯೇನ ಕರ್ಮಣಾ ಮೋಕ್ಷಂ ಪ್ರತ್ಯಾಶಾ ನಾಸ್ತೀತಿ ಯಾಜ್ಞವಲ್ಕ್ಯಾದುಪಶ್ರುತ್ಯ ಮೈತ್ರೇಯೀ ಮೋಕ್ಷಸಾಧನಂ ಪೃಚ್ಛತಿ. "ಯೇನಾಹಂ ನಾಮೃತಾ ಸ್ಯಾಂ ಕಿಮಹಂ ತೇನ ಕುರ್ಯಾಂ. ಯದೇವ ಭಗವಾನ್ವೇದ ತದೇವ ಮೇ ಬ್ರೂಹಿ" ಇತಿ ಪ್ರಶ್ನಾನಂತರಂ ಆತ್ಮಜ್ಞಾನಮುಪದಿಶ್ಯತೇ 'ಆತ್ಮಾ ವಾಽರೇ ದ್ರಷ್ಟವ್ಯಃ' ಇತ್ಯಾದಿನಾ. ನಹಿ ಜೀವಜ್ಞಾನಾನ್ಮೋಕ್ಷ ಇತಿ ಕಶ್ಚಿದಭ್ಯುಪೈತಿ. ಅತೋ ದ್ರಷ್ಟವ್ಯಃ ಪರಮೇಶ್ವರಸ್ತಥಾ "ಆತ್ಮನೋ ವಾಽರೇ ದರ್ಶನೇನ" ಇತಿ ಯದಾತ್ಮಶ್ರವಣಾತ್ ಜ್ಞಾನಾತ್ಸರ್ವಜ್ಞಾನಂ ಪ್ರತಿಜ್ಞಾತಂ ಭವತಿ. ಉಪಕ್ರಮೇ ಭಿನ್ನಸಾಧ್ಯೇನ ಕರ್ಮಣಾ ಕಿಮಮೃತತ್ವಮಸ್ತೀತಿ ಮೈತ್ರೇಯೀಪ್ರಶ್ನದರ್ಶನಾತ್ "ಏತಾವದರೇ ಖಲ್ವಮೃತತ್ವಂ" ಇತ್ಯುಪಸಂಹಾರದರ್ಶನಾಚ್ಚ. ಅತಃ "ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತೇ ಇದಂ ಸರ್ವಂ ವಿಜ್ಞಾಯತೇ" ಅತ್ರ ತತ್ತ್ವೇನ ವಿಜಾನೀಯಾದಿತ್ಯವಸಾನಕೃಚ್ಛ್ರವಾಕ್ಯಮಪಿ ಪರಮೇಶ್ವರಂ ಗಮಯತಿ. ಅತಃ ಅಮೃತತ್ವಸ್ಯ ಸಾಧನಮಾತ್ಮಮಾತ್ರೋಪದೇಶಃ ಪರಮಾತ್ಮವಿಷಯ ಏವ ನ ಜೀವವಿಷಯಃ.

ಜೀವಬ್ರಹ್ಮರನ್ನು ಮೈತ್ರೇಯೀ ಬ್ರಾಹ್ಮಣದಲ್ಲಿ ತಿಳಿಸಲಾಗಿದೆ. ಹಾಗಾದರೆ ಅವರಿಬ್ಬರಿಗೂ ಆಯಾ ಶಬ್ದಗಳಿಂದಲೇ ಸಾಮಾನಾಧಿಕರಣ್ಯ ಹೇಗೆ ಬರುತ್ತದೆ? ಎಂಬುದನ್ನು ಆಶಂಕಿಸಿ ನಿರಾಕರಿಸುತ್ತಾನೆ—

**ವಾಕ್ಯಾನ್ವಯಾಧಿಕರಣಂ ||೬|| ವಾಕ್ಯಾನ್ವಯಾತ್ ||೧೯||**

ಬೃಹದಾರಣ್ಯಕದ ಮೈತ್ರೇಯೀ ಬ್ರಾಹ್ಮಣದಲ್ಲಿ "ಪತಿಯ ಇಚ್ಛೆಗಾಗಿ ಜಗತ್ತಿನ ಎಲ್ಲಾ ವಸ್ತುಗಳೂ ಪ್ರಿಯವಾಗುತ್ತವೆ. ಆತ್ಮನನ್ನು ಕೇಳಿ ವಿಚಾರಿಸಿ ಚಿಂತಿಸಿ ಕಂಡುಕೊಳ್ಳಬೇಕು". ಆತ್ಮನ ಶ್ರವಣ-ಮನನ-ಧ್ಯಾನ-ದರ್ಶನಗಳಿಂದ ಎಲ್ಲವೂ ತಿಳಿದುಬರುತ್ತದೆ" ಎಂದು ಹೇಳಿದೆ. ಇಲ್ಲಿ ಕಾಣಬೇಕೆಂದು ಹೇಳಿರುವ ವಸ್ತು ಜೀವನೇ? ಪರಶಿವನೇ? ಎಂಬ ಸಂದೇಹ ಬರುತ್ತದೆ. ಆರಂಭದಲ್ಲಿ ಪತಿ, ಪತ್ನಿ,

ಪುತ್ರ, ಪಶು, ವಿತ್ತ ಮೊದಲಾದ ಪ್ರಪಂಚವೆಲ್ಲವೂ ಆತ್ಮನಿಗಾಗಿಯೇ ಪ್ರಿಯವಾಗುವುದೆಂದು ಹೇಳಿರುವುದರಿಂದ ಇಲ್ಲಿ ಜೀವನು ತನ್ನನ್ನೇ ಕಂಡುಕೊಳ್ಳಬೇಕೆಂದು ಹೇಳಿರಬಹುದು. ಇದೂ ಅಲ್ಲದೆ, ಅಲ್ಲಿಯೇ ಭೋಕ್ತೃವಾದ ಜೀವನ ಬಗ್ಗೆ ಆರಂಭಿಸಿ, ಮಧ್ಯದಲ್ಲಿ "ಈ ಅನಂತವೂ ಅಪಾರವೂ ಆದ ದೊಡ್ಡ ಭೂತವು ವಿಜ್ಞಾನದ ಗಟ್ಟಿಯೇ ಆಗಿದೆ. ಇದು ಈ ಭೂತಗಳಿಂದ ಮೇಲೆದ್ದು ಅವುಗಳೊಡನೆಯೇ ಕಣ್ಮರೆಯಾಗುತ್ತದೆ. ಹಾಗೆ ಹೋದ ಬಳಿಕ ಈ ದೇಹದಲ್ಲಿ ಜ್ಞಾನವಿರುವುದಿಲ್ಲ" ಎಂಬಲ್ಲಿ ಜೀವನು ಭೂತಗಳಿಂದ ಮೇಲೆ ಏಳುವನೆಂದು ತಿಳಿಸಿರುವುದರಿಂದಲೂ, "ಈ ವಿಜ್ಞಾತೃವನ್ನು ಯಾತರಿಂದ ತಿಳಿಯಬಹುದು?" ಎಂದು ಉಪಸಂಹಾರದಲ್ಲಿ ಅವನ ಬಗ್ಗೆ ಹೇಳಿರುವುದರಿಂದಲೂ ಜೀವನೇ ದ್ರಷ್ಟವ್ಯನೆನಿಸಿದ್ದಾನೆ. ಆದ್ದರಿಂದ ಆರಂಭದಲ್ಲಿ "ಹಣವೇ ಮೊದಲಾದ ಬೇರೆ ಸಾಧನದಿಂದ ಅಮೃತ ದೊರಕುತ್ತದೆಯೇ?" ಎಂಬ ಮೈತ್ರೇಯಿಯ ಪ್ರಶ್ನೆಗೆ "ಆತ್ಮನ ಹಿತಕ್ಕಾಗಿಯೇ ಹೆಂಡತಿ ಮೊದಲಾದವರು ಹಿತವೆನಿಸುತ್ತಾರೆ" ಎಂದು ಉತ್ತರವನ್ನು ಹೇಳಿರುವುದರಿಂದ ಇಲ್ಲಿ ಜೀವನಲ್ಲದೆ ಬೇರೆ ಯಾರನ್ನೂ ಹೇಳಲಾಗುವುದಿಲ್ಲವೆಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರದಲ್ಲಿ ಸಮಾಧಾನ ಹೀಗಿದೆ. ಇಲ್ಲಿ ದ್ರಷ್ಟವ್ಯನೆನಿಸಿದ ಪುರುಷನು ಪರಮೇಶ್ವರನಲ್ಲದೆ ಬೇರೆಯಲ್ಲ; ಯಾಕೆಂದರೆ ಆರಂಭ ಮಧ್ಯ ಕೊನೆಗಳನ್ನು ಪರಿಶೀಲಿಸಿದರೆ ಅವೆಲ್ಲವೂ ಪರಶಿವನಲ್ಲಿಯೇ ಸಮನ್ವಯಿಸುತ್ತವೆ. 'ಹಣದಿಂದ ಅಮೃತ ದೊರಕುವ ಸಂಭವವಿಲ್ಲ' ಎಂಬುದರಿಂದ ಮೈತ್ರೇಯಿ-ನಿರಾಶಳಾಗಿ "ಯಾತರಿಂದ ನಾನು ಅಮರಳಾಗಲಾರೆನೋ ಅದರಿಂದ ನನಗೇನು ಪ್ರಯೋಜನವಾದೀತು? ನೀನು ತಿಳಿದಿರುವುದನ್ನು ನನಗೆ ಹೇಳು" ಎಂದು ಮೋಕ್ಷದ ಮಾರ್ಗವನ್ನು ಕೇಳುತ್ತಾಳೆ. ಆಮೇಲೆ ಯಾಜ್ಞವಲ್ಕ್ಯನು ಅವಳಿಗೆ ಆತ್ಮಜ್ಞಾನವನ್ನು ಉಪದೇಶಿಸುತ್ತಾನೆ. ಇಲ್ಲಿ ಜೀವನ ಜ್ಞಾನದಿಂದ ಮೋಕ್ಷವಾಗುವುದೆಂದು ಯಾರೂ ಅಂಗೀಕರಿಸುವುದಿಲ್ಲ. ಆದ್ದರಿಂದ ಪರಮೇಶ್ವರನೇ ಇಲ್ಲಿ ದ್ರಷ್ಟವ್ಯನೆನಿಸಿದ್ದಾನೆ. ಆರಂಭದಲ್ಲಿ "ಬಾಹ್ಯಕರ್ಮದಿಂದ ಅಮೃತ ದೊರಕುವುದೇ?" ಎಂಬ ಪ್ರಶ್ನೆಯು "ಅಮೃತ ಇಂತಹದು" ಎಂದು ಕೊನೆಯಾಗಿರುವುದರಿಂದಲೂ, ಆತ್ಮನನ್ನು ಕೇಳಿ ತಿಳಿದು ಭಾವಿಸಿ ಕಂಡರೆ ಎಲ್ಲವೂ ತಿಳಿಯುತ್ತದೆ" ಎಂದು ಹೇಳಿರುವುದರಿಂದಲೂ ಅಮೃತವನ್ನು ದೊರಕಿಸುವ ಆತ್ಮೋಪದೇಶವು ಪರಶಿವನಿಗೆ ಅನ್ವಯಿಸುವುದೇ ಹೊರತು ಜೀವನಿಗೆ ಅನ್ವಯಿಸುವುದಿಲ್ಲ.

**" ನವಾಽರೇ ಪತ್ಯುಃ " ಇತ್ಯಾದಿನಾ ಜೀವೋಪಕ್ರಮದರ್ಶನಾತ್ಕಥಂ ಬ್ರಹ್ಮಜ್ಞಾನೇನ ಸರ್ವವಿಜ್ಞಾನಪ್ರತಿಪಾದಕವಾಕ್ಯಸ್ಯ ಬ್ರಹ್ಮವಿಷಯತ್ವಂ. "ಜ್ಞಾಜ್ಞೌ ದ್ವಾವಜಾ" ಇತಿ ಶಾರೀರಸ್ಯಾಜನ್ಯತ್ವಪ್ರತಿಪಾದನಾತ್ ಬ್ರಹ್ಮಜನ್ಯತ್ವಂ ನ ಸಂಭವತಿ. ತಸ್ಮಾದ್ಬ್ರಹ್ಮಜ್ಞಾನೇನ ಜೀವಜ್ಞಾನಮನುಪಪನ್ನಮಿತ್ಯಾಶಂಕ್ಯಾಹ— ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ॥ ೨೦ ॥**

**" ಆತ್ಮನಿ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ ", " ಇದಂ**

ಸರ್ವಂ ಯದಯಮಾತ್ಮಾ ” ಇತಿ ಚೈಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾಯಾಸ್ಸಿದ್ಧೇಃ ಲಿಂಗಂ ಸೂಚಕಂ ಜೀವಪರಮಾತ್ಮನೋರತ್ಯಂತವಿಲಕ್ಷಣತ್ವಾದೇಕವಿಜ್ಞಾನೇನ ಸರ್ವವಿಜ್ಞಾನವಾಕ್ಯಂ ನ ವಿರುಧ್ಯತೇ. “ಯತೋ ವಾ ಇಮಾನಿ ಭೂತಾನಿ ಜಾಯಂತೆ ” ಇತ್ಯಾದೌ ಭೂತಪಂಚಕವತ್ತೇಷಾಂ ಜೀವಾನಾಮಪಿ ಬ್ರಹ್ಮಜನ್ಯತ್ವಾವಗಮಾತ್, ಕಾರ್ಯಕಾರಣಯೋಃ ಪರಸ್ಪರಭೇದಾಂಗೀಕಾರಾಚ್ಚ ತಯೋರಭೇದೋ ನ ಸಂಭವತಿ. ತಸ್ಮಾದ್ದಧಿಕ್ಷೀರವದೇಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾವಾಕ್ಯಮುಪಪನ್ನಂ. ಅತಸ್ತಯೋರ್ಭೇದಾಂಶಪ್ರತಿಪತ್ತ್ಯರ್ಥಂ ಜೀವೋಪಕ್ರಮಣಮಿತ್ಯಾಶ್ಮರಥ್ಯೋ ಮನ್ಯತೇ. ಉತ ‘ ಯಸ್ಯಾತ್ಮಾ ಶರೀರಂ ’ ಇತ್ಯಾದಿನಾ ಸರ್ವವಿಜ್ಞಾನಪ್ರತಿಜ್ಞಾಸಿದ್ಧಿಸ್ಸಂಭವತಿ. ಲೋಕೇ “ ಕೃಶೋಽಹಂ ಶ್ವೇತೋಽಹಂ ” ಇತ್ಯಾದ್ಯನುಭೂತೌ ಪರಸ್ಪರವೈಲಕ್ಷಣ್ಯೇಽಪಿ ಧರ್ಮೈಕತ್ವದರ್ಶನಾದಂಗಾಂಗಿವತ್ಸಂಯುಕ್ತಭೇದದ್ಯೋತನಾರ್ಥಂ ವಾ ಜೀವೋಪಕ್ರಮಣಮಿತಿ ಸಃ ಭೇದವಾದೀ ಮನ್ಯತೇ.

“ನವ್ಯಾರೇ” ಎಂಬ ಶ್ರುತಿಯಲ್ಲಿ ಜೀವನ ಬಗ್ಗೆ ಆರಂಭಿಸಿರುವುದರಿಂದ ಬ್ರಹ್ಮಜ್ಞಾನದಿಂದ ಎಲ್ಲವೂ ತಿಳಿಯುವುದೆಂಬ ವಾಕ್ಯವು ಹೇಗೆ ಬ್ರಹ್ಮಕ್ಕೆ ಅನ್ವಯಿಸುತ್ತದೆ? ಶ್ರುತಿಯಲ್ಲಿ ಜೀವನನ್ನು ಅಜನೆಂದು ಹೇಳಿರುವುದರಿಂದ ಅವನು ಬ್ರಹ್ಮದಿಂದ ಹುಟ್ಟುವನೆಂಬುದು ಸಂಭವಿಸುವುದಿಲ್ಲ. ಆದ್ದರಿಂದ ಬ್ರಹ್ಮಜ್ಞಾನದಿಂದ ಜೀವಜ್ಞಾನ ದೊರಕಲಾರದು ಎಂದಾಶಂಕಿಸಿ ವಿವಿಧ ಮತಗಳನ್ನು ತಿಳಿಸುತ್ತಾನೆ.

ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ॥ ೨೦ ॥

“ ಇದೆಲ್ಲವೂ ಆತ್ಮವೇ, ಆದ್ದರಿಂದ ಆತ್ಮನನ್ನು ತಿಳಿದರೆ ಎಲ್ಲವೂ ತಿಳಿಯುತ್ತದೆ” ಎಂಬುದು ಏಕವಿಜ್ಞಾನದಿಂದ ಸರ್ವವಿಜ್ಞಾನಪ್ರತಿಜ್ಞೆ ಎನಿಸಿದೆ. ಜೀವಬ್ರಹ್ಮರಿಗೆ ಅತ್ಯಂತ ಭೇದವಿದ್ದರಯೆ, ಸರ್ವವಿಜ್ಞಾನವಾಕ್ಯವು ಸಮಂಜಸವಾಗುತ್ತದೆ ಎಂಬುದೇ ಈ ಪ್ರತಿಜ್ಞಾಸಿದ್ಧಿಗೆ ಸೂಚಕವಾಗುತ್ತದೆ. “ ಯಾವನಿಂದ ಈ ಭೂತಗಳು ಹುಟ್ಟವೆಯೋ ” ಎಂಬಲ್ಲಿ ಪಂಚಭೂತಗಳಂತೆ ಜೀವರೂ ಬ್ರಹ್ಮದಿಂದಲೇ ಹುಟ್ಟಿರುವರೆಂದು ತಿಳಿದುಬರುವುದು. ಕಾರ್ಯಕಾರಣಗಳಿಗೆ ಪರಸ್ಪರ ಭೇದವಿರುವುದರಿಂದ ಅವೆರಡಕ್ಕೂ ಅಭೇದ ಸಂಭವಿಸುವುದಿಲ್ಲ. ಆದ್ದರಿಂದ ಹಾಲೇ ಮೊಸರಾಗುವಂತೆ ಏಕವಿಜ್ಞಾನದಿಂದ ಸರ್ವವಿಜ್ಞಾನವೂ ಆಗುವುದೆಂಬ ಪ್ರತಿಜ್ಞಾವಾಕ್ಯವು ಯುಕ್ತವೆನಿಸುತ್ತದೆ. ಹೀಗೆ ಜೀವಬ್ರಹ್ಮರಿಗೆ ಭೇದವನ್ನು ತಿಳಿಸಲಿಕ್ಕಾಗಿ ಶ್ರುತಿಯು ಜೀವನ ಪ್ರತಿಪಾದನೆಯಿಂದ ಆರಂಭವಾಗಿದೆ ಎಂದು ಆಶ್ಮರಥ್ಯನು ಹೇಳುತ್ತಾನೆ.“ಯಾವನಿಗೆ ಆತ್ಮನು ಶರೀರವೋ” ಎಂಬುದರಿಂದಲೂ ಸರ್ವವಿಜ್ಞಾನ ಪ್ರತಿಜ್ಞೆಯು ಸಿದ್ಧಿಸುತ್ತದೆ. “ ನಾನು ಕೃಶನು, ಬೆಳ್ಳಗಾಗಿದ್ದೇನೆ” ಎಂಬ ಲೋಕದ ಅನುಭವದಲ್ಲಿ ಕೃಶತ್ವ ಶ್ವೇತತ್ವ ಎಂಬ ಎರಡು ಧರ್ಮಗಳಿಂದ ಪರಸ್ಪರವೈಲಕ್ಷಣ್ಯವು ತೋರಿದರೂ ಚೇತನತ್ವರೂಪದಿಂದ ಧರ್ಮಿಯಲ್ಲಿ

ಐಕ್ಯವೂ ಕಂಡುಬರುತ್ತದೆ. ಹೀಗೆ ಭಿನ್ನಧರ್ಮಗಳು ಅಂಗಾಂಗಿಭಾವದಿಂದ ಕೂಡಿದ್ದರೂ ಅಂಗಿಗೂ ಅಂಗಕ್ಕೂ ಭೇದವೇ ಇರುವುದರಿಂದ ಆ ಭೇದವನ್ನು ತಿಳಿಸಲಿಕ್ಕಾಗಿ ಶ್ರುತಿಯು ಜೀವನಿಂದ ಆರಂಭವಾಗಿದೆ ಎಂದು ಆಶ್ಮರಥ್ಯನು ಹೇಳುತ್ತಾನೆ.

**ಏವಂ ಘಟಪಟವಜ್ಜೀವಬ್ರಹ್ಮಣೋರಸಂಯುಕ್ತಭೇದವಾದಿಮತಂ ಅಂಗಾಂಗಿವತ್ಸಂಯುಕ್ತಭೇದಮತಂ ಚೋಪದಿಶ್ಯ ಶುದ್ಧಾದ್ವೈತಮತಮಾಹ—ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ ॥ ೨೧ ॥**

**ಉತ್ಕ್ರಮಿಷ್ಯತಃ ಸ್ವಾವಿದ್ಯೋಪಾಧಿಂ ತ್ಯಜತೋ ಜೀವಸ್ಯ ಘಟಾಕಾಶೇ ಮಹಾಕಾಶವದ್ಬ್ರಹ್ಮಾಭಿನ್ನತ್ವಾತ್ಸರ್ವದಾ ಬ್ರಹ್ಮಾಭಿನ್ನತಯಾ ಜೀವೋಪಕ್ರಮಣಂ, ತಸ್ಮಾದ್ಬ್ರಹ್ಮಜ್ಞಾನೇನ ಸರ್ವವಿಜ್ಞಾನಮುಪಪನ್ನಮಿತ್ಯೌಡುಲೋಮ್ಯಾಚಾರ್ಯೋ ಮನ್ಯತೇ. ಅಥವಾ ರಜ್ಜ್ವಾರೋಪಿತಸರ್ಪಭ್ರಾಂತಿನಿವೃತ್ತೌ ರಜ್ಜುಮಾತ್ರಪರಿಶೇಷವತ್ ಸ್ವಾತ್ಮಾರೋಪಿತಜೀವಭ್ರಾಂತಿನಿವೃತ್ತ್ಯನಂತರಂ ಸ್ವಾತ್ಮಾ ಪರಿಶಿಷ್ಯತ ಇತ್ಯೌಡುಲೋಮಿರ್ಮನ್ಯತೇ. ತತ್ತ್ವಮಸ್ಯಾದಿಶ್ರುತಿಶತೇಷು ಜೀವಬ್ರಹ್ಮಣೋರೇಕತ್ವೋಪದೇಶಾದ್ಬಿಂಬಪ್ರತಿಬಿಂಬಭಾವವದ್ಘಟಾಕಾಶಮಹಾಕಾಶವದಭೇದಸ್ಸರ್ವಥಾ ಸಿದ್ಧ ಇತಿ ಕೇಚಿತ್. ರಜ್ಜುಸರ್ಪವದ್ಬ್ರಹ್ಮಣಿ ಜೀವತ್ವಸ್ಯಾರೋಪಿತತ್ವಾದಧಿಷ್ಠಾನವ್ಯತಿರೇಕೇಣಾಧ್ಯಾಸಾದರ್ಶನಾಚ್ಚ ವಸ್ತುತಸ್ತು ಭ್ರಾಂತಿನಿರ್ಮುಕ್ತತಯಾ ಬ್ರಹ್ಮೈವ ಸಿದ್ಧಮಿತ್ಯಭೇದಬುದ್ಧ್ಯಾ ಜೀವೋಪಕ್ರಮಣಮಿತ್ಯದ್ವೈತಾನುಸಾರಿಣಃ ಕೇಚಿನ್ಮನ್ಯಂತೇ.**

ಹೀಗೆ ಘಟಪಟಗಳಂತೆ ಜೀವಬ್ರಹ್ಮರು ಕೊಂಚವೂ ಬೆರೆಯದೆ ಭಿನ್ನರೇ ಆಗಿರುವರೆಂದು ಹೇಳುವ ಭೇದಮತವನ್ನೂ, ಭಿನ್ನರಾಗಿದ್ದರೂ ಅಂಗಾಂಗಿಭಾವದಿಂದ ಕೂಡಿರುವರೆಂದು ಹೇಳುವ ವಿಶಿಷ್ಟಾದ್ವೈತಮತವನ್ನೂ ತಿಳಿಸಿ ಮುಂದೆ ಶುದ್ಧಾದ್ವೈತಮತವನ್ನು ತಿಳಿಸುತ್ತಾನೆ. **ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ॥**

ಘಟ ನಾಶವಾದರೆ ಅದರೊಳಗಿನ ಆಕಾಶವು ಮಹಾಕಾಶವಾಗುವಂತೆ ಅವಿದ್ಯೆ ಎಂಬ ಉಪಾಧಿ ನಷ್ಟವಾದರೆ ಜೀವನು ಬ್ರಹ್ಮನೇ ಆಗುವನು. ಅವನು ಯಾವಾಗಲೂ ಬ್ರಹ್ಮದಿಂದ ಭಿನ್ನನಾಗದಿರುವುದರಿಂದ ಶ್ರುತಿಯು ಜೀವನ ಪ್ರತಿಪಾದನೆಯಿಂದಲೇ ಆರಂಭವಾಗಿದೆ. ಆದ್ದರಿಂದಲೇ ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದೆಂಬ ಪ್ರತಿಜ್ಞೆ ಯುಕ್ತವಾಗುತ್ತದೆ ಎಂದು ಔಡುಲೋಮ್ಯಾಚಾರ್ಯನು ಹೇಳುತ್ತಾನೆ. ಅಥವಾ ಹಗ್ಗದಲ್ಲಿ ಆರೋಪಿತವಾಗಿರುವ ಸರ್ಪದ ಭ್ರಮೆ ತೊಲಗಿದರೆ ಹಗ್ಗವೊಂದೇ ಉಳಿಯುವಂತೆ ತನ್ನಲ್ಲಿ ಆರೋಪಿತವಾಗಿರುವ ಜೀವನೆಂಬ ಭ್ರಮೆ ತೊಲಗಿದೊಡನೆ ತಾನೊಬ್ಬನೇ ಉಳಿಯುತ್ತಾನೆ ಎಂದು ಔಪಾಧಿಕ ಮತ್ತು ಅಧ್ಯಾಸವಾದಗಳನ್ನು ಔಡುಲೋಮಿ ತಿಳಿಸುತ್ತಾನೆ. "ತತ್ತ್ವಮಸಿ ಮೊದಲಾದ ಅನೇಕ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಏಕಭಾವವನ್ನು ಹೇಳಿರುವುದರಿಂದ ಬಿಂಬ ಪ್ರತಿಬಿಂಬಗಳಂತೆಯೂ, ಘಟಾ

ಕಾಶ ಮಹಾಕಾಶಗಳಂತೆಯೂ ಅಭೇದವು ಯಾವಾಗಲೂ ಸಿದ್ಧವಾಗಿದೆ" ಎಂದು ಕೆಲವರು ಹೇಳುತ್ತಾರೆ. "ಹಗ್ಗದಲ್ಲಿ ಸರ್ಪದಂತೆ ಬ್ರಹ್ಮದಲ್ಲಿ ಜೀವಭಾವವನ್ನು ಆರೋಪಿಸಿರುವುದರಿಂದ ಒಂದು ಆಶ್ರಯವನ್ನು ಬಿಟ್ಟು ಬೇರೆಕಡೆಯಲ್ಲಿ ಅಧ್ಯಾಸವು ಸಂಭವಿಸದಿರುವುದರಿಂದ ವಾಸ್ತವಿಕವಾಗಿ ಭ್ರಾಂತಿ ತೊಲಗಿದೊಡನೆ ಬ್ರಹ್ಮವೇ ಸಿದ್ಧವಾಗುತ್ತದೆ. ಈರೀತಿಯಾಗಿ ಅಭೇದಬುದ್ಧಿಯಿಂದಲೇ ಶ್ರುತಿಯು ಜೀವನ ಪ್ರತಿಪಾದನೆಯಿಂದ ಆರಂಭವಾಗಿದೆ" ಎಂದು ಕೆಲವು ಅದ್ವೈತಿಗಳು ಹೇಳುತ್ತಾರೆ.

ತಸ್ಮಾದೇವಂ ಶ್ರುತ್ಯೇಕದೇಶಪ್ರಾಮಾಣ್ಯಮತದ್ವಯಮುಪಪಾದ್ಯ ಸರ್ವಶ್ರುತ್ಯಭಿಪ್ರೇತಮುಖ್ಯವೇದಾಂತಸಿದ್ಧಾಂತಮತಂ ದರ್ಶಯತಿ—

ಅವಸ್ಥಿತೇರಿತಿ ಕಾಶಕೃತ್ಸ್ನಃ ‖ ೨೨ ‖

ಇದಮೇವ ಸೂತ್ರಕಾರಮತಂ. "ದ್ವಾ ಸುಪರ್ಣಾ" ಇತ್ಯಾದಿಭೇದಶ್ರುತೀನಾಂ ತತ್ತ್ವಮಸ್ಯಾದ್ಯಭೇದಶ್ರುತೀನಾಂ ಚಾವಿರೋಧತಯಾ ಭೇದಾಭೇದಮತೇ ಅವಸ್ಥಿತೇರವಸ್ಥಾನಾತ್ ಜೀವಬ್ರಹ್ಮಣೋರ್ಭೇದಾಭೇದಪ್ರದರ್ಶನಾರ್ಥಮತ್ರ ಜೀವೋಪಕ್ರಮಣಮಿತಿ ಸರ್ವಶ್ರುತಿತಾತ್ಪರ್ಯವೇದೀ ಮುಖ್ಯಸಿದ್ಧಾಂತೀ ಕಾಶಕೃತ್ಸ್ನೋ ಮನ್ಯತೇ. ತಸ್ಮಾತ್ಸರ್ವಶ್ರುತಿಸಿದ್ಧತೃತೀಯಮತಂ ಪಾರಮಾರ್ಥಿಕಮಿತಿ ವೇದಿತವ್ಯಂ. "ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ", ಯಥಾ ನದ್ಯಃ", "ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ", "ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ", "ಬ್ರಹ್ಮವಿದಾಪ್ನೋತಿ ಪರಂ", "ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತ್ಯಾದಿಷು ಸಂಸಾರದಶಾಯಾಂ ಜೀವಬ್ರಹ್ಮಣೋರ್ಭೇದಃ, ಮೋಕ್ಷದಶಾಯಾಮಭೇದಶ್ಚ ಪ್ರತಿಪಾದ್ಯತೇ. ನನು ಭೇದಾಭೇದಯೋಸ್ತಮಃಪ್ರಕಾಶವತ್ಪರಸ್ಪರವಿರುದ್ಧಸ್ವಭಾವತ್ವಾತ್ತಯೋರೇಕಃ ಪಕ್ಷಃ ಸಿದ್ಧಾಂತತ್ವೇನ ನಿರ್ಣೇತವ್ಯಃ ಇತಿಚೇನ್ನ ಶ್ರುತ್ಯೇಕದೇಶಪ್ರಾಮಾಣ್ಯೇ ಮಾನಾಭಾವಾತ್, ಪಕ್ಷೈಕಸ್ವೀಕಾರೇ ಪರಸ್ಪರಶ್ರುತ್ಯಪ್ರಾಮಾಣ್ಯಪ್ರಸಂಗಾಚ್ಚ, ಸುಪ್ತಿಪ್ರಭೋದವತ್ತಮಸ್ಸತ್ತ್ವವದ್ವಹ್ನಿಸಲಿಲವತ್ತಮಃಪ್ರಕಾಶವದ್ವಿರೋಧೋ ನ ವಿಭಾವ್ಯಃ. ಭೇದಾಭೇದಯೋಃ ಪರಸ್ಪರವಿರೋಧಾಂಗೀಕಾರಸ್ತುವಸ್ತು ವಿರೋಧಾದ್ವಾ? ಕಾರಣಾಭಾವಾದ್ವಾ? ಅಯುಕ್ತತ್ವಾದ್ವಾ? ಅಭಾವಾದ್ವಾ? ಅಮಾನಾದ್ವಾ, ಅಸಂಭವಾದ್ವಾ? ಅಫಲಾದ್ವಾ, ಅಮೃತಾದ್ವಾ? ಅವಿಶೇಷಾದ್ವಾ? ಶ್ರುತ್ಯೇಕತ್ವಾಭಾವಾದ್ವಾ? ನಾದ್ಯಃ. "ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್" ಇತ್ಯಾದೌ ದ್ವೈತಾದ್ವೈತಾತ್ಮಕಪ್ರಪಂಚಬ್ರಹ್ಮಣೋರಾಧಾರಾಧೇಯತ್ವಂ. "ತಮೇವ ಭಾಂತಮನುಭಾತಿ ಸರ್ವಂ" ಇತ್ಯಾದೌ ಭಾಸ್ಯಭಾಸಕತ್ವಂ. "ಸಮಸ್ತ

ಸಾಕ್ಷಿಂ ತಮಸಃ ಪರಸ್ತಾತ್ "ಇತ್ಯಾದೌ ಸಾಕ್ಷ್ಯಸಾಕ್ಷಿತ್ವಂ. "ತತ್ಸೃಷ್ಟ್ವಾ ತದೇವಾನುಪ್ರಾವಿಶತ್ "ಇತ್ಯಾದೌ ಜಗತ್ಕಾರಣತ್ವಂ ತದನುಪ್ರವಿಷ್ಟತ್ವಂ ಚ ದೃಷ್ಟಂ. ಉತ ಜೀವೇ ಜ್ಞಾನಾಜ್ಞಾನಾನುಭೂತತ್ವಂ. ಪ್ರಕೃತೌ ಗುಣತ್ರಯಾತ್ಮಕತ್ವಂ. ವಿಕೃತೌ ಲೋಕತ್ರಯಾವಸ್ಥಾತ್ರಯಾತ್ಮಕತ್ವಂ. ಕಾಣಾದೇ ಪ್ರಪಂಚಸ್ಯ ನಿತ್ಯಾಽನಿತ್ಯತ್ವಂ. ಪೃಥಿವೀವಾಯ್ವೋರನುಷ್ಣಾ ಶೀತತ್ವಂ. ಮಹೇಶ್ವರಸ್ಯಾರ್ಧನಾರೀಶ್ವರತ್ವಂ. ಲಕ್ಷಣಾಯಾಂ ಜಹದ ಜಹತ್ತ್ವಂ. ಸಾಂಖ್ಯಾದ್ವೈತಮತೇಷು ಸಾಕ್ಷಿರೂಪಸ್ಯ ಸಗುಣನಿರ್ಗು ಣಾತ್ಮಕತ್ವಂ. ಮಾನುಷೇ ಪುಣ್ಯಾಪಾಪೋಭಯವಿಶಿಷ್ಟತ್ವಂ. ಖದ್ಯೋ ತಸ್ಯ ಪ್ರಕಾಶಾಪ್ರಕಾಶತ್ವಂ ಇತ್ಯೇತೇಷಾಂ ದರ್ಶನಾತ್. ಸ ದ್ವಿತೀಯಃ. "ಯದಾ ತಮಃ" ಇತ್ಯಾದಿಷು ಸೃಷ್ಟೇಃ ಪ್ರಾಗಪಿ ಸ್ವಪ್ರಕಾಶಸ್ಯ ಪರಮೇ ಶ್ವರಸ್ಯ ತಮಃಪ್ರಕೃತಿವಿಶಿಷ್ಟತ್ವಂ. "ಯತೋ ವಾ ಇಮಾನಿ" ಇತ್ಯಾದೌ ಅದ್ವೈತಸ್ಯ ಶಿವಸ್ಯ ದ್ವೈತಜಗಜ್ಜನ್ಮಾದಿಹೇತುತ್ವಂ. "ಪರಾಽಸ್ಯ ಶಕ್ತಿ ರ್ವಿವಿಧೈವ" ಇತ್ಯಾದಿನಾ ಧರ್ಮಧರ್ಮಿಣೋರಿವ ಮಣಿಪ್ರಕಾಶಯೋ ರಿವ ಸ್ವಾಭಾವಿಕಶಕ್ತಿವೈಶಿಷ್ಟ್ಯಂ, ತದಭಾವೇ ಸೃಷ್ಟ್ಯಭಾವಃ ಸೂಚ್ಯತೇ. ಗಗನಾರವಿಂದಶಶಶೃಂಗವನ್ಮಾಯಾಪ್ರಪಂಚಯೋರ್ಮಿಥ್ಯಾತ್ವಾಂಗೀ ಕಾರೇ "ಮಮ ಮಾತಾ ವಂಧ್ಯಾ" ಇತಿವತ್ ಪ್ರತ್ಯಕ್ಷವಿರೋಧೋ ದುರ್ನಿವಾರಃ. ಉತ "ದ್ವಾ ಸುಪರ್ಣಾ" ಇತ್ಯಾದೌ ಜೀವಬ್ರಹ್ಮಣೋ ರ್ಭೇದವ್ಯಪದೇಶಾತ್, ತತ್ತ್ವಮಸ್ಯಾದಿಶ್ರುತಿಶತೇಷ್ವಭೇದವ್ಯಪದೇ ಶಾಚ್ಚ ಭೇದಾಭೇದಸ್ವೀಕಾರೋ ಯುಕ್ತಃ. ಪಕ್ಷೈಕಸ್ವೀಕಾರೇ ಶ್ರುತಿ ಸಂಕೋಚಾಪತ್ತಿಃ. ಸ ತೃತೀಯಃ "ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ", "ಏಷೋಽಣುಜೀವೋ ಹೃದಯೇ ಸನ್ನಿವಿಷ್ಟಃ", "ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ। ಜೀವೋ ಭಾಗಃ", "ಆಕಾಶವತ್ಸರ್ವಗತೋ ನಿರಂಶಃ", "ಮಹಾಂತಂ ವಿಭೂಮಾತ್ಮಾನಂ ಮತ್ವಾ ಧೀರೋ ನ ಶೋಚತಿ", "ಅಂತಃಪೂರ್ಣೋ ಬಹಿಃಪೂರ್ಣಃ ಪೂರ್ಣಕುಂಭ ಇವಾಂಭಸಿ। ಅಂತಶ್ಶೂನ್ಯೋ ಬಹಿಃಶೂನ್ಯಃ ಶೂನ್ಯ ಕುಂಭ ಇವಾಂತರೇ॥", "ತಮಾದಿಮಧ್ಯಾಂತವಿಹೀನಮೇಕಂ ವಿಭುಂ ಚಿದಾನಂದಮರೂಪಮದ್ಭುತಂ" ಇತ್ಯಾದೌ ಜೀವಬ್ರಹ್ಮಣೋಶ್ಚಿದೇಕತ್ವ ವ್ಯಪದೇಶೇಽಪಿ ಅಣುತ್ವವಿಭುತ್ವಾತ್ಮಕಪರಸ್ಪರವಿರುದ್ಧಪರಿಮಾಣವತ್ತ್ವ ದರ್ಶನಾದ್ಭೇದಾಭೇದೋ ಯುಕ್ತಃ. ಯಥಾ ಕುಂಡಲೀಭೂತಸರ್ಪಸ್ಯ ದೀರ್ಘೀಭೂತಸರ್ಪಸ್ಯ ಚ ಸರ್ಪತ್ವೇನೈಕತ್ವೇಽಪಿ ಹ್ರಸ್ವದೀರ್ಘತ್ವಾತ್ಮಕ ಪರಸ್ಪರವಿರುದ್ಧಪರಿಮಾಣವತ್ತ್ವಂ. ಯಥಾ ಸೂರ್ಯಪ್ರಭಾಯಾಃ ಪ್ರಭಾಶ್ರಯಸೂರ್ಯಮಂಡಲಸ್ಯ ಚ ತೇಜಸ್ತ್ವಾತ್ ತೇಜಸ್ತ್ವೇನೈಕ

ತ್ವೇಽಪಿ ವ್ಯಾಪಕತ್ವಪರಿಚ್ಛಿನ್ನತ್ವಾತ್ಮಕಪರಸ್ಪರವಿರುದ್ಧಧರ್ಮವತ್ತ್ವಂ. ಏವಂ ಸಂಕುಚಿತವಿಸ್ತೃತಪಟಾದಿದೃಷ್ಟಾಂತಾನುರೋಧೇನಾಪಿ ಭೇದಾಭೇದಸ್ಯ ಸಿದ್ಧತ್ವಾತ್. ನ ಚತುರ್ಥಃ, "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ", "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ", "ತದನನ್ಯತ್ವಮಾರಂಭಣಶಬ್ದಾದಿಭ್ಯಃ" ಇತಿ ಶ್ರುತಿಸೂತ್ರೇಷ್ವನ್ಯೋಽನ್ಯವಿಲಕ್ಷಣಬ್ರಹ್ಮಪ್ರಪಂಚಯೋಃ ಕಾರ್ಯಕಾರಣಯೋರ್ಮೃತ್ತಿಕಾದಿದೃಷ್ಟಾಂತೇನ ಭೇದಾಭೇದವ್ಯಪದೇಶಾತ್. ತಥಾಥರ್ವಶಿರಸಿ "ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತಃ" ಇತ್ಯಾರಭ್ಯ "ಜ್ಯೋತಿರಿತ್ಯಹಮೇಕಸ್ಸರ್ವೇ ಚಾಹಮೇವ ಮಾಂ ಯೋ ವೇದ ಸ ಸರ್ವಾನ್ವೇದ" ಇತಿ ಪ್ರಥಮಖಂಡೇ "ಯೋ ವೈ ರುದ್ರಃ ಸ ಭಗವಾನ್, ಯಶ್ಚ ಬ್ರಹ್ಮಾ—ಯಶ್ಚ ವಿಷ್ಣುಃ" ಇತ್ಯುಪಕ್ರಮ್ಯ ಬ್ರಹ್ಮವಿಷ್ಣುಕಾಲರುದ್ರಾದಿಕಾರ್ಯಜಾತಸ್ಯ ಪ್ರಪಂಚಸ್ಯ ಕಾರಣಶಿವಾದಭಿನ್ನತ್ವಂ ದ್ವಿತೀಯಖಂಡೇ ನಿರ್ಣೀತಂ. "ಸ ಬ್ರಹ್ಮಾ ಸ ಶಿವಸ್ಸ ಹರಿಸ್ಸೇಂದ್ರಃ", "ಸ ಏವ ವಿಷ್ಣುಸ್ಸ ಪ್ರಾಣಸ್ಸ ಕಾಲೋಽಗ್ನಿಃ", "ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ", "ಋತಂ ಸತ್ಯಂ" ಇತಿ ಕೈವಲ್ಯತೈತ್ತಿರೀಯಾದೌ ಚ ಕಾರ್ಯಪ್ರಪಂಚಸ್ಯ ಕಾರಣಪರಶಿವಾಭಿನ್ನತ್ವವ್ಯಪದೇಶಾತ್. ನ ಪಂಚಮಃ, "ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತ್ಯಾದೌ ಬ್ರಹ್ಮಣಃ ಪೃಥಗ್ಭೂತಸ್ಯ ಜೀವಸ್ಯ ತದುಪಾಸನದ್ವಾರಾ ತದಾತ್ಮಕತ್ವದರ್ಶನಾದ್ಭೇದಾಭೇದಯೋಃ ಪ್ರಾಮಾಣ್ಯಮವಿರುದ್ಧಂ. ನ ಷಷ್ಠಃ, "ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ", "ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ", "ವಿದ್ಯಾವಿದ್ಯೇ ಈಶತೇ ಯಸ್ತು ಸೋಽನ್ಯಃ" ಇತ್ಯಾದಿಷು ದ್ವೈತಾದ್ವೈತಾತ್ಮಕಪ್ರಪಂಚಪರಮಾತ್ಮನೋರ್ನಿಯಮ್ಯನಿಯಾಮಕತ್ವಸ್ಯಾವಿರೋಧತಯಾ ದರ್ಶನಾತ್. ನ ಸಪ್ತಮಃ, "ಧ್ಯಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ", "ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಗ್ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ" ಇತ್ಯಾದಿಷು ಧ್ಯಾನಧಾರಣಾದ್ಯದ್ವೈತಕರ್ಮಾನುಷ್ಠಾನದ್ವಾರಾ ಪರಮಾದ್ವೈತಪರಮಶಿವತ್ವಪ್ರಾಪ್ತಿಫಲದರ್ಶನಾತ್. ನನು ದ್ವೈತಕರ್ಮಣಾಮದ್ವೈತಬ್ರಹ್ಮಪ್ರಾಪ್ತಿಹೇತುತ್ವೇ ಕಿಮನೇನ ನಿಗಮಾಂತಶಾಸ್ತ್ರವಿಚಾರಪ್ರಯಾಸೇನೇತಿ ಚೇನ್ನ ಫಲಾಭಿಲಾಷಾರಹಿತಕರ್ಮಣಾಂ ದುರಿತಕ್ಷಯದ್ವಾರಾ ಸ್ಥೂಲಾರುಂಧತೀನ್ಯಾಯೇನ ಬ್ರಹ್ಮಪ್ರಾಪ್ತಿಹೇತುತ್ವಾತ್. ತಥಾಚ ಸ್ಮೃತಿಃ "ಯಸ್ಯೈತೇಽಷ್ಟಾಚತ್ವಾರಿಂಶತ್ಸಂಸ್ಕಾರಾ" ಇತ್ಯಾರಭ್ಯ "ಸ ಬ್ರಹ್ಮಣಸ್ಸಾಯುಜ್ಯಂ

ಸಾಲೋಕ್ಯಂ ಗಚ್ಛತಿ"ಇತ್ಯಂತೇನ ಗರ್ಭಾಧಾನಾದಿಕರ್ಮಣಾಂ ಪಾಪ
ಕ್ಷಯದ್ವಾರಾ ಬ್ರಹ್ಮಪ್ರಾಪ್ತ್ಯುಪದೇಶಾತ್. ಅತ ಆರಾಧನರೂಪ
ಕರ್ಮಣಾಂ ಆರಾಧ್ಯರೂಪಪರಮೇಶ್ವರಸ್ಯ ಚ ಪ್ರಾಪ್ಯಪ್ರಾಪಕತ್ವೇ ಅವಿ
ರೋಧಃ. ನಚ "ಸರ್ವ ಏತೇ ಪುಣ್ಯಲೋಕಾ ಭವಂತಿ" ಇತಿ ಶ್ರುತ್ಯು
ಕ್ತಾಶ್ರಮಫಲವಿರೋಧಃ. ಸಕಾಮಾನುಷ್ಠಿತಕರ್ಮಣಾಂ ಫಲಸ್ವಾ
ತಂತ್ರ್ಯೇಽಪಿ ನಿಷ್ಕಾಮಾನುಷ್ಠಿತಕರ್ಮಣಾಮಾಣವಾದಿಮಲತ್ರಯ
ನಿರ್ಮುಕ್ತಪರಮಪುರುಷಾರ್ಥೋಪಪತ್ತೇಃ. ನೋ ಚೇತ್ಕರ್ಮಾನುಷ್ಠಾ
ನಾಭಾವೇ ಚಿತ್ತಶುದ್ಧ್ಯಭಾವಃ. ತದಭಾವೇ ಜ್ಞಾನಾನುತ್ಪತ್ತಿಃ. ತದ
ಭಾವೇಽನಿರ್ಮೋಕ್ಷಪ್ರಸಂಗಃ. ತಸ್ಮಾತ್ಪೂರ್ವೋಕ್ತಮೇವ ವಿದ್ವದ್ರಮ
ಣೀಯಂ. ನತ್ವಷ್ಟಮಃ, ಸಾಂಗವೇದವೇದಾಂತವಿಮುಖಕತರ್ಕಕರ್ಕಶ
ವಾದವಾರಣಾಯ ಸರ್ವಜ್ಞಶಿಖಾಮಣಿನಾ ಭಗವತಾ ವ್ಯಾಸೇನ
ಚತುರ್ಥಾಧ್ಯಾಯಚತುರ್ಥಪಾದೇ "ಅಭಾವಂ ಬಾದರಿಃ". "ಭಾವಂ
ಜೈಮಿನಿಃ" ಇತಿ ಸೂತ್ರದ್ವಯೇನ ದ್ವೈತಾದ್ವೈತಾತ್ಮಕಮತದ್ವಯಂ
ಶ್ರುತ್ಯೇಕದೇಶಪ್ರಾಮಾಣ್ಯಾತ್ಪರಮತತ್ತ್ವೇನ ಪ್ರದರ್ಶ್ಯ "ದ್ವಾದಶಾಹವ
ದುಭಯವಿಧಂ ಬಾದರಾಯಣೋಽತಃ"ಇತ್ಯನೇನ ಸರ್ವಶಾಸ್ತ್ರಾರ್ಥಸಾರ
ಭೂತಸ್ವಾಭಿಪ್ರೇತಸ್ಯ ಭೇದಾಭೇದಮತತ್ವೇನ ವ್ಯಪದೇಶಾತ್. ನಚ
ಸವಮಃ, ದ್ವೈತಮತೇ ನದೀಸಮುದ್ರವತ್ಪುನರಾವೃತ್ತಿರಹಿತಬ್ರಹ್ಮೈಕತ್ವ
ಪ್ರಾಪ್ತ್ಯಸಂಭವಾತ್. ಅದ್ವೈತಮತೇ ಸಗುಣಬ್ರಹ್ಮತ್ವಮೀಶ್ವರತ್ವಂ
ಚ ರಜ್ಜುಸರ್ಪವತ್ಕಲ್ಪಿತಮಿತಿ ಸಿದ್ಧಾಂತೇನ ಭಕ್ತಿಶಾಸ್ತ್ರಾಣಾಂ ವಿಧಿನಿಷೇ
ಧವ್ಯವಸ್ಥಾಪಕವೇದಶಾಸ್ತ್ರಾತ್ ಪುರಾಣಾಗಮಾದೀನಾಂ ದತ್ತಜಲಾಂಜ
ಲಿಪ್ರಸಂಗಾತ್ಪೂರ್ವೋಕ್ತಮತದ್ವಯಂ ನ ವಿಧೇಯಂ. "ಅನೀಶಯಾ
ಶೋಚತಿ ಮುಹ್ಯಮಾನಃ", "ಬ್ರಹ್ಮವಿದ್ಬ್ರಹ್ಮೈವ ಭವತಿ" ಇತ್ಯಾದೌ
ಮಾಯಾಬದ್ಧತ್ವೇನ ಜೀವಸ್ಯ ದುಃಖಭೋಕ್ತೃತ್ವಂ ಪರಮಶಿವಜ್ಞಾ
ನೇನ ತಸ್ಯ ತದಾತ್ಮಕತ್ವಂ ಚ ನಿರ್ಣೀಯತೇ. ತಥಾ ಕೈವಲ್ಯೇ "ಉಮಾ
ಸಹಾಯಂ" ಇತ್ಯಾರಭ್ಯ", "ತಮಸಃ ಪರಸ್ತಾತ್" ಇತ್ಯಂತೇನ ಸಗುಣೇ
ಶ್ವರಭಕ್ತಿಧ್ಯಾನೋಪಾಸನದ್ವಾರಾ ನಿರ್ಗುಣಸಾಕ್ಷಿಬ್ರಹ್ಮಪ್ರಾಪ್ತ್ಯುಪದೇ
ಶಾತ್ಸರ್ವಮತಾಪೇಕ್ಷಯಾ ಅಸ್ಮಿನ್ಮತೇ ಭಕ್ತಿಕ್ರಿಯಾಜ್ಞಾನಾತ್ಮಕಕಾಂಡ
ತ್ರಯಸಮುಗ್ರಸದ್ಭಾವೇನ ಸರಿತ್ಸಾಗರವತ್ಸಾಯುಜ್ಯನಿರ್ದೇಶಾದುಭಯ
ಶ್ರುತ್ಯನುಗಮಾಚ್ಚ ಭೇದಾಭೇದಯೋರವಿರೋಧಃ. ನಚಾದ್ವೈತಮತೇ
ಭಕ್ತಿಕ್ರಿಯಾಜ್ಞಾನಾದಯೋ ದೃಶ್ಯಂತ ಇತಿ ವಾಚ್ಯಂ. ಅಸತಿ ಕಲ್ಪಿತೇ
ಅವಿದ್ಯೇಶ್ವರೇ ಕೃತಿಮಸಾಲಗ್ರಾಮ ಇವ ಭಕ್ತಿಶ್ರದ್ಧಾವಿಶ್ವಾಸಾಃ ಕಸ್ಯ
ವಾ ಭವೇಯುಃ? ರಜ್ಜ್ವಾರೋಪಿತಸರ್ಪವತ್ಕಲ್ಪಿತೇಶ್ವರಃ ಸರ್ವಕರ್ಮಾರಾ

ಧಿತತ್ವೇನ ಕಥಂವಾ ಸರ್ವಾಭೀಷ್ಟಪಲಪ್ರದಾತಾ ಭವೇತ್. ನಾಪಿ ದಶಮಃ,
ಯಥಾ ವ್ರೀಹಿಪ್ರೋಕ್ಷಣಂ ದರ್ಶಪೂರ್ಣಮಾಸೋತ್ಪತ್ತ್ಯಪೂರ್ವಕಾರ
ಣತ್ವೇನ ಸ್ವರ್ಗೇ ಸಮುಚ್ಚೀಯತೇ, ತಥಾ ಧ್ಯಾನಧಾರಣಾದಿಸರ್ವಕ
ರ್ಮಾಣಿ ಮುಕ್ತಿಪ್ರಯೋಜಕತ್ವೇನ ಸವಿಶೇಷಾದ್ವೈತಬ್ರಹ್ಮಣಿ ಸಮು
ಚ್ಚೀಯಂತೇ. ತಸ್ಮಾದಾಘಾರದರ್ಶಪೂರ್ಣಮಾಸವದಂಗಾಂಗಿತ್ವೇನ
ಪಂಚಪ್ರಯಾಜವದೇಕಾಂಗಿಪ್ರಯುಕ್ತಾನೇಕಾಂಗತ್ವೇನ, ಗೋದೋಹ
ನಾದಿವದಧಿಕಾರಾಂತರಪ್ರಯುಕ್ತ್ಯುಪಜೀವಿತ್ವೇನ ಷಡ್ಯಾಗವತ್ಫಲೈ
ಕ್ಯೇನ ವಾ ಸರ್ವಥಾ ನಿರ್ಬಾಧಕತ್ವೇನ ಭೇದಾಭೇದಸಮನ್ವಯಸ್ಸಿದ್ಧಃ.
"ದ್ವಾ ಸುಪರ್ಣಾ" ಇತಿ ಮಂತ್ರೇ ವಿದ್ಯಾಽವಿದ್ಯಾವಚ್ಛಿನ್ನಶಿವಜೀವಯೋಸ್ಸಾ
ಹಚರ್ಯಶ್ರವಣಾತ್ ಶುದ್ಧಾಽದ್ವೈತಮತಸ್ಥಾನಾಮವಿರೋಧಿತಯಾ
ಅದ್ವೈತಬ್ರಹ್ಮಣಿ ದ್ವೈತಪ್ರಪಂಚಸ್ವೀಕಾರಾದ್ಭೇದಾಭೇದಯೋರ್ನಚೈ
ಕತ್ರ ವಿರೋಧಃ. ನ ಚೋಭಯಪರತ್ವೇ ವಿರೋಧಃ. ಸಮಿಧೋ
ಯಜತೀತಿವಾಕ್ಯಾನಾಂ ಪಂಚಪ್ರಯಾಜತದನುಷ್ಠಾನಯೋಃ ವಿಧಾಯ
ಕತ್ವವತ್, ಕರಣತಯಾ ಸ್ವತಂತ್ರವಿಧ್ಯಂತರರಹಿತಸ್ಯ ಸೌತ್ರಾಮಣಿಬೃಹ
ಸ್ಪತಿಸವನಾದೇರಗ್ನಿಚಯನವಾಜಪೇಯಾದ್ಯಂಗತ್ವೇನ ತದುಭಯಬಲಾ
ದುಭಯಸಿದ್ಧಿವತ್, "ಆತ್ಮಾ ವಾರೇ ದ್ರಷ್ಟವ್ಯಃ" ಇತ್ಯಾದೌ ವೇದಾಂತಾನಾಂ
ಬ್ರಹ್ಮಪ್ರಮಾಪಕತ್ವಬ್ರಹ್ಮಜ್ಞಾನವಿಧಾಯಕತ್ವಯೋರುಭಯೋರಪಿ
ಸಂಭವಾಚ್ಚ. "ಅಥಾತೋ ಬ್ರಹ್ಮಜಿಜ್ಞಾಸಾ" ಇತ್ಯಾದಿಪ್ರತ್ಯಧಿಕರಣಂ
ಪೂರ್ವಪಕ್ಷಸಿದ್ಧಾಂತವದ್ಭೇದಾಽಭೇದೋಭಯದ್ಯೋತನಾತ್. ಕಿಂಚ
ದ್ವಾದಶಾಹಯಜ್ಞದೃಷ್ಟಾಂತೇನ ತದುಭಯಂ ವಿಧೇಯಮಿತಿ ಸ್ವಮತಂ
ಪ್ರದರ್ಶ್ಯ "ಸಂಧ್ಯವದುಪಪತ್ತೇಃ" ಇತ್ಯತ್ರ ಸಂಧಿಕಾಲದೃಷ್ಟಾಂತೇನ
ತದುಭಯಸಿದ್ಧಾಂತಸ್ಥಾಪನಾದ್ಭೇದಾಭೇದಪ್ರಧಾನಕಾಶಕೃತ್ಸ್ನಮತ
ಮೇವ ಮುಖ್ಯಸಿದ್ಧಾಂತ ಇತಿ ಘಂಟಾಘೋಷಃ, "ಯ ಆತ್ಮನಿ
ತಿಷ್ಠನ್" ಇತ್ಯಾದೌ ವಿಜ್ಞಾನಾತ್ಮನಿ ಪರಮಾತ್ಮಾವಸ್ಥಾನವ್ಯಪದೇಶಾ
ಜ್ಜೀವಬ್ರಹ್ಮಣೋರ್ಭೇದಸ್ಸಿದ್ಧ ಇತಿ ಮಧ್ಯವಾಕ್ಯಪ್ರಮಾಣಮಾದಾಯ
ಆಶ್ಮರಥ್ಯಃ ತತ್ತ್ವಮಸ್ಯಾದ್ಯಭೇದಶ್ರುತಿವೈರುಧ್ಯಂ ಸಾದೃಶ್ಯೇನ ವಾರ
ಯತಿ. ಔಡುಲೋಮಿಸ್ತು "ನೇಹ ನಾನಾಸ್ತಿ ಕಿಂಚನ" ಇತ್ಯಾದಿವಾಕ್ಯ
ಪ್ರಮಾಣಮಾದಾಯ ರಜ್ಜುಸರ್ಪವದದ್ವೈತಬ್ರಹ್ಮಣ್ಯವಿರೋಧತಯಾ
ದ್ವೈತಪ್ರಪಂಚಭಾನಮುಪದಿಶತಿ, ಕಾಶಕೃತ್ಸ್ನಸ್ತು ಸರ್ವವೇದಾಂತ
ಪೂರ್ವಾಪರಮಧ್ಯಪರಾಮರ್ಶವಿಚಾರಬುದ್ಧ್ಯಾ ಷಡ್ವಿಧತಾತ್ಪರ್ಯ
ಲಿಂಗೈಃ ಭೇದಾಭೇದಮೇವ ಮನುತೇ. ಏತದೇವ ಮುಖ್ಯವೇದಾಂತಿ
ಮತಮಿತಿ ವೇದಿತವ್ಯಂ.

ಹೀಗೆ ಶ್ರುತಿಯ ಒಂದೊಂದು ಅಂಶವನ್ನು ಪ್ರಮಾಣವೆಂದು ಅಂಗೀಕರಿಸಿದ ಎರಡು ಮತಗಳನ್ನು ತಿಳಿಸಿ ಎಲ್ಲಾ ಶ್ರುತಿಗಳಿಗೂ ಸಮ್ಮತವಾದ ಮುಖ್ಯ ವೇದಾಂತ ಮತವನ್ನು ಮುಂದೆ ತೋರಿಸುತ್ತಾನೆ. **ಅವಸ್ಥಿತೇರಿತಿ ಕಾಶಕೃತ್ಸ್ನಃ ॥೨೨॥**

ಇದೇ ಸೂತ್ರಕಾರನ ಮತ. 'ದ್ವಾಸುಪರ್ಣಾ ಸಯುಜಾ' ಮೊದಲಾದ ಭೇದಶ್ರುತಿಗಳಿಗೂ 'ತತ್ತ್ವಮಸಿ' ಮೊದಲಾದ ಅಭೇದಶ್ರುತಿಗಳಿಗೂ ವಿರೋಧವಾಗದಂತೆ ಭೇದಾಭೇದಮತದಲ್ಲಿ ಹೊಂದಿಕೆಯಾಗುವುದರಿಂದ ಜೀವಬ್ರಹ್ಮರಿಗೆ ಭೇದಾಭೇದಗಳೆರಡನ್ನೂ ತಿಳಿಸಲಿಕ್ಕಾಗಿ ಶ್ರುತಿವಾಕ್ಯವನ್ನು ಜೀವನಿಂದ ಆರಂಭಮಾಡಲಾಗಿದೆ ಎಂದು ಸರ್ವಶ್ರುತಿಗಳ ತಾತ್ಪರ್ಯವನ್ನು ತಿಳಿದ ಕಾಶಕೃತ್ಸ್ನಾಚಾರ್ಯನೆಂಬ ಮುಖ್ಯ ವೇದಾಂತಿಯು ಹೇಳುತ್ತಾನೆ. ಆದ್ದರಿಂದ ಎಲ್ಲಾ ಶ್ರುತಿಗಳಿಗೂ ಸಮ್ಮತವಾದ ಭೇದಾಭೇದಮತವೇ ಪಾರಮಾರ್ಥಿಕವೆಂದು ತಿಳಿಯಬೇಕು. "ಈ ಸಂಪ್ರಸಾದನು ಶರೀರದಿಂದ ಹೊರಟು ಪರಂಜ್ಯೋತಿಯೊಡನೆ ಸೇರಿ ತನ್ನ ವಾಸ್ತವರೂಪವನ್ನು ಪಡೆಯುತ್ತಾನೆ". "ನದಿಗಳು ನಾಮರೂಪಗಳನ್ನು ತೊರೆದು ಸಮುದ್ರದಲ್ಲಿ ಸೇರುವಂತೆ ಜ್ಞಾನಿಯು ನಾಮರೂಪಗಳನ್ನು ತೊರೆದು ದಿವ್ಯಪುರುಷನಲ್ಲಿ ಸೇರುತ್ತಾನೆ". ಹೀಗೆ ಅನೇಕ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಸಂಸಾರದಶೆಯಲ್ಲಿ ಭೇದವನ್ನೂ ಮೋಕ್ಷದಶೆಯಲ್ಲಿ ಅಭೇದವನ್ನೂ ತಿಳಿಸಲಾಗಿದೆ. ಭೇದ ಅಭೇದಗಳೆರಡೂ ಕತ್ತಲೆ ಬೆಳಕುಗಳಂತೆ ಪರಸ್ಪರ ವಿರುದ್ಧಸ್ವಭಾವದವಾದ್ದರಿಂದ ಅವೆರಡರಲ್ಲಿ ಒಂದನ್ನು ಮಾತ್ರ ಮುಖ್ಯ ತತ್ತ್ವವೆಂದು ನಿರ್ಣಯಿಸಬೇಕು ಎಂದರೆ, ಇದು ಸರಿಯಲ್ಲ; ಯಾಕೆಂದರೆ ಶ್ರುತಿಯಲ್ಲಿ ಒಂದಂಶವನ್ನು ಮಾತ್ರವೇ ಅಂಗೀಕರಿಸಲಿಕ್ಕೆ ಆಧಾರವಿಲ್ಲ, ಒಂದೇ ಪಕ್ಷವನ್ನು ಒಪ್ಪಿದರೆ ಎರಡು ಶ್ರುತಿಗಳೂ ಪ್ರಮಾಣವಾಗದೇ ಹೋಗುತ್ತವೆ. ಆದ್ದರಿಂದ ನಿದ್ರೆ ಎಚ್ಚರಗಳಂತೆ, ತಮಸ್ಸತ್ತ್ವಗುಣಗಳಂತೆ, ಬೆಂಕಿ ನೀರುಗಳಂತೆ, ಕತ್ತಲೆ ಬೆಳಕುಗಳಂತೆ ಭೇದ ಅಭೇದಗಳಿಗೆ ವಿರೋಧವುಂಟೆಂದು ಹೇಳಲಾಗುವುದಿಲ್ಲ. ಅವೆರಡಕ್ಕು ವಿರೋಧವಾದರೂ ಯಾತರಿಂದ ಬಂದೀತು? ವಸ್ತುವಿರೋಧದಿಂದಲೇ ಅಥವಾ ಕಾರಣವಿಲ್ಲದ್ದರಿಂದಲೇ? ಅಥವಾ ಅಯುಕ್ತತೆಯಿಂದಲೇ? ಅಭಾವದಿಂದಲೇ? ಪ್ರಮಾಣವಿಲ್ಲದ್ದರಿಂದಲೇ? ಅಸಂಭವದಿಂದಲೇ? ಫಲವಿಲ್ಲದ್ದರಿಂದಲೇ? ಭೇದಾಭೇದವೆಂಬ ಮತವೇ ಇಲ್ಲದ್ದರಿಂದಲೇ? ಅಥವಾ ಇವುಗಳಲ್ಲಿ ಯಾವ ವಿಶೇಷವೂ ಇಲ್ಲದ್ದರಿಂದಲೇ? ಅಥವಾ ಶ್ರುತಿಯಲ್ಲಿ ಏಕರೂಪತೆ ಇಲ್ಲದ್ದರಿಂದಲೇ? ಎಂದು ಈ ಬಗ್ಗೆ ಹತ್ತು ವಿಕಲ್ಪಗಳು ಸಂಭವಿಸುತ್ತವೆ. ಭೇದ ಅಭೇದಗಳಿಗೆ ವಸ್ತುವಿರೋಧ ಹೊಂದುವುದಿಲ್ಲ. "ಪರಬ್ರಹ್ಮವೇ ವಿಶ್ವಕ್ಕಾಶ್ರಯವಾಗಿ ಸ್ಥಲವೆನಿಸಿದೆ" ಎಂಬಲ್ಲಿ ಬ್ರಹ್ಮಪ್ರಪಂಚಗಳಿಗೆ ಆಧಾರಾಧೇಯಭಾವವನ್ನೂ, "ಅವನ ಪ್ರಕಾಶದಿಂದ ಇದೆಲ್ಲವೂ ಬೆಳಗುತ್ತಿದೆ" ಎಂಬಲ್ಲಿ ಭಾಸ್ಯಭಾಸಕಸಂಬಂಧವನ್ನೂ ಹೇಳಲಾಗಿದೆ. "ಸಮಸ್ತಸಾಕ್ಷಿಂ" ಎಂಬಲ್ಲಿ ಅವನು ಸಾಕ್ಷಿ ಎಂದೂ, ವಿಶ್ವವು ಅವನಿಗೆ ದೃಶ್ಯವೆಂದೂ, "ಅದನ್ನು ಸೃಷ್ಟಿಸಿ ಅದರೊಳಗೆ

ಪ್ರವೇಶಿಸಿದನು" ಎಂಬಲ್ಲಿ ಅವನೇ ಜಗತ್ಕಾರಣನೂ, ಜಗದಂತರ್ಯಾಮಿಯೂ ಆಗಿರುವನೆಂದೂ ತಿಳಿಸಲಾಗಿದೆ. ಹಾಗೆಯೇ ಜೀವನಲ್ಲಿ ಜ್ಞಾನ ಮತ್ತು ಅಜ್ಞಾನ ಇವೆರಡೂ ಇರುವುದನ್ನು ಕಂಡಿದ್ದೇವೆ. ತ್ರಿಗುಣಾತ್ಮಕವಾದ ಈ ಪ್ರಪಂಚದಲ್ಲಿ ಮೂರು ಲೋಕಗಳು, ಮೂರು ಶರೀರಗಳು, ಮೂರು ಅವಸ್ಥೆಗಳು ಇರುವುವನ್ನೂ, ವೈಶೇಷಿಕಮತದಲ್ಲಿ ಅದು ನಿತ್ಯವೂ ಅನಿತ್ಯವೂ ಆಗಿರುವುದನ್ನೂ ಕೇಳಿದ್ದೇವೆ. ಹಾಗೆಯೇ ಪೃಥಿವೀ ಮತ್ತು ವಾಯುವಿನಲ್ಲಿ ಅನುಷ್ಣಾಶೀತಸ್ಪರ್ಶವಿದೆ. ಮಹೇಶ್ವರ ನಲ್ಲಿ ಅರ್ಧಭಾಗ ಪುರುಷರೂಪವೂ, ಉಳಿದ ಅರ್ಧಭಾಗ ಸ್ತ್ರೀರೂಪವೂ ಆಗಿದೆ. ಲಕ್ಷಣೆಯಲ್ಲಿ ಶಬ್ದದ ಅರ್ಥವನ್ನು ಕೊಂಚ ಇಟ್ಟುಕೊಂಡು ಮತ್ತು ಕೊಂಚ ಬಿಡುವ ಪದ್ಧತಿ ಇದೆ. ಸಾಂಖ್ಯರಲ್ಲೂ ಅದ್ವೈತಿಗಳಲ್ಲೂ ಸಾಕ್ಷಿಯಾದ ವಸ್ತುವನ್ನು ಸಗುಣ ವೆಂದೂ, ನಿರ್ಗುಣವೆಂದೂ ಕರೆಯುವ ವಾಡಿಕೆ ಇದೆ. ಮನುಷ್ಯನಲ್ಲಿ ಪುಣ್ಯಪಾಪ ಗಳೆರಡೂ ಇರುವುದನ್ನು ಕಂಡಿದ್ದೇವೆ. ಮಿಂಚುಹುಳ ಕೊಂಚಹೊತ್ತು ಪ್ರಕಾಶಿ ಸುತ್ತಲೂ, ಬೇರೆ ಕಾಲದಲ್ಲಿ ಪ್ರಕಾಶವಿಲ್ಲದೆಯೂ ಇರುತ್ತದೆ. ಆದ್ದರಿಂದ ಭೇದ ಅಭೇದಗಳೆರಡಕ್ಕೂ ವಸ್ತುವಿರೋಧವು ಸಂಭವಿಸುವುದಿಲ್ಲ. "ಪ್ರಳಯದಲ್ಲಿ ಹಗಲು ರಾತ್ರಿ ಸತ್ ಅಸತ್ ಯಾವುದೂ ಇಲ್ಲದೆ ಶಿವನೊಬ್ಬನೇ ಇದ್ದನು" ಹೀಗೆ ಅನೇಕ ಶ್ರುತಿಗಳಲ್ಲಿ ಸೃಷ್ಟಿಗೆ ಮೊದಲು ಸ್ವಪ್ರಕಾಶನಾದ ಪರಮೇಶ್ವರನು ತಮಃಪ್ರಕೃತಿಯೊ ಡಗೂಡಿದ್ದನೆಂದೂ, "ಯಾವನಿಂದ ಇವೆಲ್ಲವೂ ಹುಟ್ಟಿದವೋ" ಎಂಬಲ್ಲಿ ಅದ್ವೈತ ನಾದ ಶಿವನು ದ್ವೈತಮಯವಾದ ಜಗತ್ತಿಗೆ ಕಾರಣನೆಂದೂ, ತಿಳಿಸಿ 'ಅವನಲ್ಲಿ ಅನೇಕ ಬಗೆಯ ಶಕ್ತಿ ಸಹಜವಾಗಿದೆ' ಎಂಬ ಶ್ರುತಿಯಿಂದ ಮಣಿಪ್ರಕಾಶಗಳಂತೆ ಧರ್ಮಧರ್ಮಿಗಳಿಗೆ ಸ್ವಾಭಾವಿಕಶಕ್ತಿಯ ವೈಶಿಷ್ಟ್ಯವನ್ನು ಹೇಳಿರುವುದರಿಂದ ಆ ಶಕ್ತಿಯಿಲ್ಲದಿದ್ದರೆ ಸೃಷ್ಟಿಯಾಗಲಾರದೆಂದು ಸೂಚಿಸಲಾಗಿದೆ. ಆಕಾಶಪುಷ್ಪ ಮತ್ತು ಮೊಲದ ಕೊಂಬುಗಳಂತೆ ಮಾಯಾಶಕ್ತಿ ಮತ್ತು ಪ್ರಪಂಚಗಳನ್ನು ಸುಳ್ಳೆಂದು ಒಪ್ಪಿ ದರೆ "ನನ್ನ ತಾಯಿ ಬಂಜೆ" ಎಂದು ಹೇಳುವಂತೆ ಪ್ರತ್ಯಕ್ಷವಿರೋಧವುಂಟಾಗುವುದು. "ದ್ವಾ ಸುಪರ್ಣಾ" ಮೊದಲಾದ ಮಂತ್ರಗಳಲ್ಲಿ ಜೀವಬ್ರಹ್ಮರಿಗೆ ಭೇದವನ್ನೂ, "ತತ್ತ್ವಮಸಿ" ಮೊದಲಾದ ಮಂತ್ರಗಳಲ್ಲಿ ಅಭೇದವನ್ನು ಹೇಳಿರುವುದರಿಂದ ಭೇದಾ ಭೇದವನ್ನು ಸ್ವೀಕರಿಸುವುದೇ ಯುಕ್ತವಾಗುತ್ತದೆ. ಒಂದೇ ಪಕ್ಷವನ್ನು ಒಪ್ಪಿದರೆ ಶ್ರುತಿಯನ್ನು ಸಂಕೋಚಪಡಿಸಬೇಕಾದೀತು. ಆದ್ದರಿಂದ ಜೀವಬ್ರಹ್ಮರಿಗೆ ಕಾರಣ ವಿರೋಧವೂ ಸಂಭವಿಸುವುದಿಲ್ಲ. "ಈ ಅಣುಜೀವನು ಹೃದಯದಲ್ಲಿ ನೆಲಸಿದ್ದಾನೆ" "ಇವನನ್ನು ಮನಸ್ಸಿನಿಂದಲೇ ತಿಳಿಯಬೇಕು". "ಆಕಾಶದಂತೆ ನಿರಂಶನಾಗಿ ಎಲ್ಲೆಲ್ಲಿಯೂ ಇದ್ದಾನೆ". "ವಿಭುವಾದ ಪರಶಿವನನ್ನು ತಿಳಿದ ಧೀರನಿಗೆ ದುಃಖ ನಾಶ ವಾಗುವುದು". "ನೀರಿನೊಳಗಿನ ಪೂರ್ಣ ಕುಂಭದಂತೆ ಶಿವನು ಒಳಗೆ ಹೊರಗೆ ತುಂಬಿದ್ದಾನೆ, ಬಯಲಿನಲ್ಲಿರುವ ಖಾಲಿ ಗಡಿಗೆಯಂತೆ ಜೀವನು ಒಳಗೆ ಹೊರಗೆ ಶೂನ್ಯನಾಗಿದ್ದಾನೆ". "ಆದಿ ಮಧ್ಯ ಅಂತ್ಯಗಳೊಂದೂ ಇಲ್ಲದೆ ಅದ್ಭುತನೂ ಅರೂ

ಪನೂ ಅದ್ವೈತನೂ ಆದ ಚಿದಾನಂದ ಪ್ರಭುವನ್ನು ಕಾಣಬೇಕು" ಈ ಶ್ರುತಿಗಳಲ್ಲಿ ಜೀವ ಬ್ರಹ್ಮರಿಗೆ ಚಿದ್ರೂಪದಿಂದ ಐಕ್ಯವೂ, ಅಣುತ್ವ ವಿಭುತ್ವವೆಂಬ ಪರಸ್ಪರ ವಿರುದ್ಧವಾದ ಪರಿಮಾಣವೂ ಇರುವುದರಿಂದ ಭೇದಾಭೇದವೇ ಯುಕ್ತವಾಗುತ್ತದೆ. ಸುರುಳಿ ಸುತ್ತಿಕೊಂಡು ಮಲಗಿರುವ ಸರ್ಪವೂ ಉದ್ದವಾಗಿಹರಿಯುತ್ತಿರುವ ಸರ್ಪವೂ ಸರ್ಪರೂಪದಿಂದ ಒಂದೇ ಆದರೂ, ಹ್ರಸ್ವ-ದೀರ್ಘವೆಂಬ ಪರಸ್ಪರವಿರುದ್ಧವಾದ ಆಕಾರಗಳಿಂದ ಬೇರೆಯೇ ಆಗಿರುತ್ತವೆ. ಸೂರ್ಯಪ್ರಭೆ ಮತ್ತು ಅದಕ್ಕಾಶ್ರಯವಾದ ಸೂರ್ಯಮಂಡಲ ಇವೆರಡರಲ್ಲೂ ಪ್ರಕಾಶ ಒಂದೇ ಆಗಿದ್ದರೂ ಒಂದು ವ್ಯಾಪಕವಾಗಿ ಮತ್ತೊಂದು ಪರಿಮಿತವಾಗಿ ಎರಡಕ್ಕೂ ಪರಸ್ಪರವಿರುದ್ಧಧರ್ಮಗಳಿರುವುದು ಯುಕ್ತವೇ ಆಗಿದೆ. ಹೀಗೆಯೇ ಡೇರೆಯ ಬಟ್ಟೆಯನ್ನು ವಿಸ್ತಾರವಾಗಿ ಹರಡಿದ್ದಾಗಲೂ ಮತ್ತು ಮಡಿಸಿ ಇಟ್ಟಿದ್ದಾಗಲೂ ಒಂದೇ ಹೆಸರಿನಿಂದ ಕರೆದರೂ, ಹರಡಿದ್ದೊಂದು ಮಡಿಸಿಟ್ಟಿದ್ದೊಂದು ಹೀಗೆ ಎರಡು ಅವಸ್ಥೆಗಳು ಬೇರೆ ಎಂದು ಭಾವಿಸುವುದು ಯುಕ್ತವೇ ಆಗಿದೆ. ಆದ್ದರಿಂದ ಭೇದಾಭೇದಗಳಿಗೆ ಯುಕ್ತಿವಿರೋಧವಿಲ್ಲ. "ಮಣ್ಣೊಂದೇ ಸತ್ಯ. ಅದರಿಂದಾಗಿರುವ ಗಡಿಗೆ ಮೊದಲಾದವು ವ್ಯವಹಾರಕ್ಕಾಗಿ ಬಂದಿವೆ". "ಎಲ್ಲವೂ ಅವನಿಂದ ಬಂದು ಬಾಳಿ ಅವನಲ್ಲಿಯೇ ಸೇರುವವಾದ್ದರಿಂದ ಇವನ್ನು ಅವನೆಂದೇ ನಂಬು" "ವಾಚಾರಂಭಣಶ್ರುತಿಯ ಪ್ರಕಾರ ಇವೆಲ್ಲವೂ ಅವನಿಂದ ಅನ್ಯವಾಗಲಾರವು" ಹೀಗೆ ಶ್ರುತಿ ಸೂತ್ರಗಳಲ್ಲಿ ಪರಸ್ಪರಭಿನ್ನವಾದ ಬ್ರಹ್ಮಪ್ರಪಂಚಗಳಿಗೆ ಮೃದ್ಘಟಗಳಂತೆ ಕಾರ್ಯಕಾರಣಗಳಾಗಿರುವುದರಿಂದ ಭೇದಾಭೇದವನ್ನು ಯುಕ್ತವೆಂದು ಹೇಳಲಾಗಿದೆ. "ನಾನು ಹಿಂದೆಯೂ ಇದ್ದೆನು, ಇಂದೂ ಇದ್ದೇನೆ. ಮುಂದೆಯೂ ಇರುವೆನೆಂದು ರುದ್ರನು ಹೇಳುತ್ತಾನೆ" ಎಂದಾರಂಭಿಸಿ ಅಥರ್ವಶಿರಸ್ಸು "ನಾನೇ ಜ್ಯೋತಿ, ನಾನೇ ಎಲ್ಲವೂ, ನನ್ನನ್ನು ತಿಳಿದವನು ಎಲ್ಲವನ್ನೂ ತಿಳಿಯುತ್ತಾನೆ" ಎಂದು ಅವನ ಮಾತನ್ನು ತಿಳಿಸಿ ರುದ್ರನೇ ಬ್ರಹ್ಮ, ವಿಷ್ಣು, ಕಾಲರುದ್ರ ಮೊದಲಾದ ಕಾರ್ಯಪ್ರಪಂಚಕ್ಕೆ ಕಾರಣನೆಂದು ನಿರ್ಣಯಿಸಿದೆ. "ಅವನೇ ಬ್ರಹ್ಮ, ಶಿವ, ಹರಿ, ಇಂದ್ರ, ಅಕ್ಷರ" "ಅವನೇ ವಿಷ್ಣು, ಪ್ರಾಣ, ಕಾಲ, ಅಗ್ನಿ, ಚಂದ್ರ" "ಹಿಂದಿನದು, ಮುಂದಿನದು ಎಲ್ಲವೂ ಅವನೇ" ಹೀಗೆ ಕೈವಲ್ಯ ತೈತ್ತಿರೀಯಗಳಲ್ಲೂ ಕಾರ್ಯಪ್ರಪಂಚಕ್ಕೂ ಕಾರಣಶಿವನಿಗೂ ಅಭೇದವನ್ನು ಹೇಳಿದೆ. ಆದ್ದರಿಂದ ಭೇದ ಅಭೇದವೆರಡಕ್ಕೂ ವಿರೋಧದ ಪ್ರಶ್ನೆಯೇ ಹುಟ್ಟುವುದಿಲ್ಲ. "ಬ್ರಹ್ಮವಿದನು ಬ್ರಹ್ಮವೇ ಆಗುತ್ತಾನೆ" ಇಲ್ಲಿ ಬ್ರಹ್ಮನಿಗಿಂತ ಬೇರೆಯಾದ ಜೀವನಿಗೆ ಬ್ರಹ್ಮದ ಉಪಾಸನದಿಂದ ಬ್ರಹ್ಮಭಾವ ಬರುವುದೆಂದು ಹೇಳಿದ್ದರಿಂದ ಭೇದಾಭೇದಗಳಿಗೆ ಪ್ರಾಮಾಣ್ಯವಿರೋಧವೂ ಇಲ್ಲ. ಎರಡಕ್ಕು ಶ್ರುತ್ಯಾದಿಪ್ರಮಾಣಗಳು ಹೇರಳವಾಗಿರುವುದರಿಂದ ವಿರೋಧಕ್ಕೆ ಅವಕಾಶವೇ ಇಲ್ಲ. "ಪರಮೇಶ್ವರನ ಅವಯವಗಳಾದ ತ್ರಿಮೂರ್ತಿಗಳಿಂದ ಈ ವಿಶ್ವವು ವ್ಯಾಪಿಸಿದೆ". "ಇವನಿಂದಲೇ ಮನಃಪ್ರಾಣೇಂದ್ರಿಯಗಳು ಬಂದಿವೆ". "ಜೀವ, ಪ್ರಪಂಚ ಇವೆರಡನ್ನೂ ನಿಯಮಿಸುವವನೊಬ್ಬನು ಬೇರೆ ಇದ್ದಾನೆ". ಹೀಗೆ ಅನೇಕ ಶ್ರುತಿಗಳಲ್ಲಿ

ಪ್ರಪಂಚಕ್ಕೂಬ್ರಹ್ಮಕ್ಕೂ ನಿಯಮ್ಯನಿಯಾಮಕಭಾವವನ್ನು ಹೇಳಿರುವುದರಿಂದ ಭೇದಾಭೇದಗಳಿಗೆ ಯಾವ ವಿರೋಧವೂ ಸಂಭವಿಸುವುದಿಲ್ಲ. "ಶ್ರದ್ಧಾ ಭಕ್ತಿಧ್ಯಾನಯೋಗದಿಂದ ತಿಳಿ". "ಶಿವನ ನಿರಂತರಧ್ಯಾನದಿಂದ ಜ್ಞಾನಿಯ ಪಾಶವು ಹಳಿಯುತ್ತದೆ". "ಸತ್ಯಜ್ಞಾನಬ್ರಹ್ಮಚರ್ಯಗಳಿಂದ ಪಡೆಯಬೇಕು". ಈ ಶ್ರುತಿಗಳಲ್ಲಿ ಧ್ಯಾನಧಾರಣವೇ ಮೊದಲಾದ ದ್ವೈತಕರ್ಮಾಚರಣೆಗೆ ಅದ್ವೈತರೂಪನಾದ ಪರಮಶಿವನ ಪ್ರಾಪ್ತಿಯೇ ಫಲವೆಂದು ಹೇಳಲಾಗಿದೆ. ಹೀಗೆ ದ್ವೈತಕರ್ಮಾಚರಣೆಗೂ ಬ್ರಹ್ಮಪ್ರಾಪ್ತಿಯೇ ಫಲವಾದರೆ ಇನ್ನು ಶಾಸ್ತ್ರವಿಚಾರವೇ ಬೇಕಿಲ್ಲವೆಂದು ಹೇಳಕೂಡದು. ಫಲಾಪೇಕ್ಷೆಯಿಲ್ಲದೆ ಮಾಡಿದ ಕರ್ಮವು ಪಾಪನಾಶದಿಂದ ಬ್ರಹ್ಮಪ್ರಾಪ್ತಿಗೆ ಸಾಧನವಾಗುವುದು. "ಇಪ್ಪತ್ತನಾಲ್ಕು ಸಂಸ್ಕಾರಗಳನ್ನು ಪಡೆದವನು ಸಾಯುಜ್ಯ ಸಾಲೋಕ್ಯ ಮುಕ್ತಿಗಳನ್ನು ಹೊಂದುವನು" ಎಂಬಲ್ಲಿ ಗರ್ಭಾಧಾನವೇ ಮೊದಲಾದ ಕರ್ಮಗಳು ಪಾಪನಾಶದ ಮೂಲಕ ಬ್ರಹ್ಮವನ್ನು ದೊರಕಿಸುತ್ತವೆ ಎಂದು ಹೇಳಲಾಗಿದೆ. ಆದ್ದರಿಂದ ಕರ್ಮಗಳಿಂದ ಆರಾಧಿಸಲಿಕ್ಕೂ ಅದರಿಂದ ಪರಮೇಶ್ವರನನ್ನು ಪಡೆಯಲಿಕ್ಕೂ ವಿರೋಧವೇನೂ ಇಲ್ಲ. "ಇವೆಲ್ಲವೂ ಪುಣ್ಯಲೋಕಗಳಲ್ಲ" ಎಂಬ ಶ್ರುತಿಯಲ್ಲಿ ಹೇಳಿದ ಆಶ್ರಮಫಲಕ್ಕೆ ವಿರೋಧ ಸಂಭವಿಸುವುದಿಲ್ಲ. ಫಲಾಪೇಕ್ಷೆಯಿಂದ ಮಾಡಿದ ಕರ್ಮಗಳಿಗೆ ಫಲಬರುವಂತೆ ನಿಷ್ಕಾಮಕರ್ಮಗಳಿಂದಲೂ ಆಣವ ಮಾಯೀಯ ಕಾರ್ಮಿಕ ಮಲಗಳು ತೊಲಗಿ ಪರಮಪುರುಷಾರ್ಥ ದೊರಕುವುದು ಯುಕ್ತವಾಗಿದೆ. ಹಾಗೆ ಕರ್ಮವನ್ನೇ ಮಾಡದಿದ್ದರೆ ಚಿತ್ತಶುದ್ಧಿಯೂ ಇಲ್ಲ; ಶಿವನ ಜ್ಞಾನವೂ ದೊರಕುವುದಿಲ್ಲ; ಶಿವಸಾಮರಸ್ಯರೂಪವಾದ ಮುಕ್ತಿಯೂ ದೊರಕುವುದಿಲ್ಲ. ಆದ್ದರಿಂದ ಕರ್ಮಾಚರಣೆ ಆವಶ್ಯಕ. ಇದಕ್ಕೂ ಮೋಕ್ಷರೂಪವಾದ ಫಲವನ್ನು ಹೇಳಿರುವುದರಿಂದ ಭೇದಾಭೇದಗಳೆರಡೂ ಪರಸ್ಪರವಾಗಿ ವಿರುದ್ಧವಲ್ಲ. ಭೇದಾಭೇದವೆಂಬುದೊಂದು ಮತವೇ ಇಲ್ಲದ್ದರಿಂದ ಇವೆರಡಕ್ಕೆ ವಿರೋಧವುಂಟೆಂದು ಹೇಳುವುದೂ ಯುಕ್ತವಲ್ಲ. ವೇದಾಂತವನ್ನರಿಯದವರ ತರ್ಕದ ಶುಷ್ಕವಾದವನ್ನು ಖಂಡಿಸಲಿಕ್ಕಾಗಿ ಪೂಜ್ಯ ಬಾದರಾಯಣನು ನಾಲ್ಕನೇ ಅಧ್ಯಾಯದ ನಾಲ್ಕನೇ ಪಾದದಲ್ಲಿ ಬಾದರಿಯ ಅಭೇದ ಮತವನ್ನೂ, ಜೈಮಿನಿಯ ಭೇದಮತವನ್ನೂ ಶ್ರುತ್ಯೈಕದೇಶಪ್ರಮಾಣವೆಂದು ತಿಳಿಸಿ ದ್ವಾದಾಶಾಪದೃಷ್ಟಾಂತದಿಂದ ಸರ್ವಶಾಸ್ತ್ರಾರ್ಥಸಾರವೆನಿಸಿದ ಭೇದಾಭೇದಮತವನ್ನು ಸರ್ವಶ್ರುತಿಸಮ್ಮತವೆಂದು ನಿರೂಪಿಸಿದ್ದಾನೆ. ಹೀಗೆ ಭೇದಾಭೇದವೆಂಬುದೊಂದು ಮತವಿರುವುದರಿಂದ ಭೇದಾಭೇದಗಳಿಗೆ ಯಾವ ವಿರೋಧವೂ ಇಲ್ಲ. ದ್ವೈತಮತದಲ್ಲಿ ಜೀವಬ್ರಹ್ಮರಿಗೆ ನದೀಸಮುದ್ರಗಳಂತೆ ಐಕ್ಯ ದೊರಕುವ ಸಂಭವವಿಲ್ಲ. ಅದ್ವೈತಮತದಲ್ಲಿ ಸಗುಣಬ್ರಹ್ಮ ಈಶ್ವರ ಇವರು ರಜ್ಜುಸರ್ಪದಂತೆ ಕಲ್ಪಿತರಾದ್ದರಿಂದ ಭಕ್ತಿಶಾಸ್ತ್ರಗಳಿಗೂ ವಿಧಿನಿಷೇಧಗಳನ್ನು ತಿಳಿಸುವ ವೇದಾಗಮಗಳಿಗೂ ತಿಲಾಂಜಲಿ ಎರೆಯಬೇಕಾಗುತ್ತದೆ. ಆದ್ದರಿಂದ ಇವೆರಡು ಮತಗಳೂ ಅಶಕ್ತತೆಯಿಂದ ಗೊಳಾಡುವ ಪಾಶಬದ್ಧ ಜೀವನಿಗೆ ಫಲಕಾರಿಯಾಗುವುದಿಲ್ಲ. ಇಂತಹವನು ಶಿವಜ್ಞಾನದಿಂದ ಶಿವನೇ ಆಗಬೇ

ಕಾದರೆ ಭೇದಾಭೇದಮತವೇ ಸುಗಮವಾಗಿದೆ. ಕೈವಲ್ಯದಲ್ಲಿ "ಉಮಾಸಹಾಯಂ" ಎಂಬ ಮಂತ್ರದಲ್ಲಿ ಸಾಕಾರಶಿವನ ಉಪಾಸನ ಮತ್ತು ನಿರಾಕಾರ ಪರಶಿವನ ಧ್ಯಾನ ಇವೆರಡರಿಂದಲೂ ನಿಷ್ಕಲವೂ ಸಾಕ್ಷಿಯೂ ಆದ ಪರಶಿವನು ದೊರಕುವನೆಂದು ಹೇಳ ಲಾಗಿದೆ. ಆದ್ದರಿಂದ ಇತರ ಎರಡು ಮತಗಳಿಗಿಂತಲೂ ಈ ಮತದಲ್ಲಿ ಭಕ್ತಿ ಕ್ರಿಯೆ ಜ್ಞಾನ ಮೂರಕ್ಕೂ ಸದವಕಾಶವಿರುವುದರಿಂದಲೇ ಭೇದಾಭೇದಗಳಿಗೆ ವಿರೋಧವಿಲ್ಲ. ಅದ್ವೈತಮತದಲ್ಲೂ ಭಕ್ತಿ ಜ್ಞಾನ ಕ್ರಿಯೆ ಶ್ರದ್ಧೆಗಳು ಕಾಣಬರುತ್ತವೆ ಎಂದರೆ ಕಲ್ಪಿತ ವಾದ ಅವಿದ್ಯೇಶ್ವರನಲ್ಲಿ ಕೃತ್ರಿಮ ಸಾಲಗ್ರಾಮದಂತೆ ಯಾರಿಗೆ ತಾನೆ ಭಕ್ತಿ ಶ್ರದ್ಧೆ ಗಳು ಹುಟ್ಟಬಹುದು? ರಜ್ಜು ಸರ್ಪದಂತೆ ಕಲ್ಪಿತನಾದ ಈಶ್ವರನನ್ನು ಎಷ್ಟೇ ಕರ್ಮ ಗಳಿಂದ ಆರಾಧಿಸಿದರೂ ಅವನು ಹೇಗೆ ನಮ್ಮ ಇಷ್ಟಾರ್ಥಗಳನ್ನು ಕೊಡಬಲ್ಲನು? ಆದ್ದರಿಂದ ಅದ್ವೈತಿಗೆ ಭಕ್ತಿಯ ಆಚರಣೆಗೆ ಅವಕಾಶವಿಲ್ಲ. ಹಾಗೆ ಆಚರಿಸಿದರೆ ಅವನೂ ದ್ವೈತಿಯೇ ಆಗುವನು. ಭೇದಾಭೇದಮತದಲ್ಲಾದರೋ ದ್ವೈತದ ಕರ್ಮಾಚರಣೆಗೂ ಅದ್ವೈತದ ಸಾಮರಸ್ಯಕ್ಕೂ ಅವಕಾಶವಿರುವುದೊಂದು ವಿಶೇಷ ವೆನಿಸಿದೆ. ಹೀಗೆ ಭೇದಾಭೇದಗಳು ಉಭಯ ಶ್ರುತಿಸಮ್ಮತವಾದ್ದರಿಂದ ಅವಕ್ಕೆ ಯಾವ ವಿರೋಧವೂ ಇಲ್ಲ. ದರ್ಶಪೂರ್ಣಮಾಸಯಾಗದಿಂದ ಸ್ವರ್ಗ ದೊರಕುವಂತೆಯೇ ಅದರ ಅಂಗವಾದ ವ್ರೀಹಿಪ್ರೋಕ್ಷಣವೆಂಬ ಕರ್ಮವೂ ಅಪೂರ್ವವನ್ನು ಹುಟ್ಟಿಸುವ ಮೂಲಕ ಹೇಗೆ ಸ್ವರ್ಗವನ್ನು ದೊರಕಿಸಬಲ್ಲದೋ ಹಾಗೆ ಶಿವಧ್ಯಾನಧಾರಣ ಮೊದ ಲಾದ ಎಲ್ಲಾ ಕರ್ಮಗಳೂ ಮುಕ್ತಿಗೆ ಸಾಧಕಗಳಾಗುವುದರಿಂದ ವಿಶೇಷಾದ್ವೈತರೂಪ ನಾದ ಪರಶಿವನಿಗೆ ಪ್ರಿಯವಾಗುತ್ತವೆ. ಆದ್ದರಿಂದ ಆಘಾರದರ್ಶಪೂಣಮಾಸದಂತೆ ಅಂಗಾಂಗಿಭಾವದಿಂದಾಗಲೀ, ಪಂಚಪ್ರಯಾಜಯಾಗದಂತೆ ಒಂದು ಪ್ರಧಾನವಾದ ಕರ್ಮದಲ್ಲಿ ಅನೇಕ ಕರ್ಮಗಳನ್ನು ಅಂಗವಾಗಿ ಆಚರಿಸುವಂತೆಯೋ, ಯಜ್ಞದಲ್ಲಿ ಮುಂದಿನ ಕರ್ಮಕ್ಕೆ ಅಧಿಕಾರವನ್ನು ದೊರಕಿಸಿಕೊಳ್ಳಲಿಕ್ಕಾಗಿ ಮಧ್ಯದಲ್ಲಿ ಗೋದೋಹನವನ್ನು ಮಾಡುವಂತೆಯೂ, ಷಡ್ಯಾಗದಂತೆ ಫಲೈಕ್ಯದಿಂದಾಗಲೀ ಲಿಂಗಧಾರಣಾದಿಕರ್ಮಗಳ ಆಚರಣೆಗೆ ಯಾವ ಭಾಧವೂ ಇಲ್ಲದ್ದರಿಂದ ಭೇದಾಭೇದವೇ ಸಮನ್ವಯಮತವೆನಿಸಿದೆ. "ದ್ವಾ ಸುಪರ್ಣಾ" ಎಂಬಲ್ಲಿ ಚಿಚ್ಛಕ್ತಿವಿಶಿಷ್ಟಶಿವನಿಗೂ ಮಾಯಾಶಕ್ತಿವಿಶಿಷ್ಟ ಜೀವ ನಿಗೂ ಸಾಹಚರ್ಯವನ್ನು ಹೇಳಿದ್ದರಿಂದ ಶುದ್ಧಾದ್ವೈತಮತೀಯರಿಗೆ ವಿರೋಧವಾಗ ದಂತೆ ಅದ್ವೈತಬ್ರಹ್ಮದಲ್ಲಿ ದ್ವೈತಪ್ರಪಂಚವನ್ನೂ ಒಪ್ಪಿ ಭೇದಾಭೇದಗಳೆರಡೂ ಒಂದೆಡೆ ಸೇರಲಿಕ್ಕೆ ಅವಕಾಶವಾಗಿದೆ. "ದ್ವಾ ಸುಪರ್ಣಾ" ಎಂಬ ಶ್ರುತಿಯು ಜೀವ ಬ್ರಹ್ಮರಿಬ್ಬರಿಗೂ ಅನ್ವಯಿಸುವುದರಲ್ಲಿ ಯಾವ ವಿರೋಧವೂ ಇಲ್ಲ. "ಸಮಿಧೋ ಯಜತಿ" ಎಂಬ ವಾಕ್ಯಗಳು ಪಂಚಪ್ರಯಾಜಯಾಗವನ್ನು ವಿಧಿಸುತ್ತಲೇ ಅದರ ಅನುಷ್ಠಾನವನ್ನೂ ವಿಧಿಸುವಂತೆ, ಸೌತ್ರಾಮಣಿ ಮತ್ತು ಬೃಹಸ್ಪತಿಸವನವೆಂಬ ಯಾಗಗಳಿಗೆ ಸ್ವತಂತ್ರವಾದ ವಿಧಿ ಇಲ್ಲದಿದ್ದರೂ ಅಗ್ನಿ ಚಯನ ಮತ್ತು ವಾಜಪೇಯ ವೆಂಬ ಪ್ರಧಾನ ಯಜ್ಞಗಳಿಗೆ ಅಂಗವಾಗುವುದರಿಂದ ಎರಡಕ್ಕೂ ಬಲವಿರುವುದರಿಂದ

ಎರಡೂ ಸಿದ್ಧಿಸುವಂತೆ "ಆತ್ಮದರ್ಶನವಾಗಬೇಕು" ಎಂಬ ವೇದಾಂತ ವಾಕ್ಯಗಳು ಬ್ರಹ್ಮವನ್ನು ತಿಳಿಸುತ್ತಲೇ ಬ್ರಹ್ಮಜ್ಞಾನವನ್ನೂ ವಿಧಿಸುತ್ತವೆ. ಜಿಜ್ಞಾಸಾಧಿಕರಣವೇ ಮೊದಲಾದ ಕಡೆಗಳಲ್ಲಿ ಆಕ್ಷೇಪಸಿದ್ಧಾಂತಗಳೆರಡನ್ನೂ ಒಪ್ಪುವಂತೆ, ಭೇದಅಭೇದಗಳೆರಡೂ ಒಂದುಕಡೆ ಸಂಭವಿಸುವುದರಿಂದ ವ್ಯಾಸನು ದ್ವಾದಶಾಹಯಜ್ಞದ ದೃಷ್ಟಾಂತದಿಂದ ಭೇದ ಅಭೇದವೆರಡನ್ನೂ ಒಪ್ಪಬೇಕೆಂದು ತನ್ನ ಮತವನ್ನು ತಿಳಿಸಿ "ಸಂಧ್ಯವದುಪಪತ್ತೇಃ" ಎಂಬ ಸೂತ್ರದಲ್ಲಿ ಸಂಧ್ಯಾಕಾಲದ ದೃಷ್ಟಾಂತದಲ್ಲಿ ಭೇದ ಅಭೇದ ಸಿದ್ಧಾಂತಗಳೆರಡಕ್ಕೂ ಸಮನ್ವಯಮಾಡಿದ್ದಾನೆ. ಈ ಭೇದಾಭೇದಮತವು ಕಾಶಕೃತ್ಸ್ನಾಚಾರ್ಯನಿಗೂ ಸಮ್ಮತವಾದ್ದರಿಂದ ಮುಖ್ಯಸಿದ್ಧಾಂತವೆನಿಸಿದೆ. "ಯಾವನು ಆತ್ಮನೊಳಗೆ ಇರುವನೋ" ಎಂಬಲ್ಲಿ ಜೀವನಲ್ಲಿ ಪರಶಿವನಿರುವನೆಂದು ಹೇಳಿರುವುದರಿಂದ ಶಿವಜೀವರಿಗೆ ಭೇದವು ಸಿದ್ಧಿಸುತ್ತದೆ. ಆಶ್ಮರಥ್ಯನು ಇದನ್ನು ಪ್ರಮಾಣವಾಗಿಟ್ಟುಕೊಂಡು ಜೀವನು ಪರಶಿವನಿಗೆ ಸದೃಶನಾಗಿರುವನೆಂದು ಹೇಳುತ್ತ ಅಭೇದಶ್ರುತಿಯ ವಿರೋಧವನ್ನು ಪರಿಹರಿಸುತ್ತಾನೆ. ಔಡುಲೋಮಿಯು "ಇಲ್ಲಿ ಯಾವಭೇದವೂ ಇಲ್ಲ" ಎಂಬ ವಾಕ್ಯವನ್ನು ಪ್ರಮಾಣವಾಗಿಟ್ಟುಕೊಂಡು ರಜ್ಜುವಿನಲ್ಲಿ ಸರ್ಪತೋರುವಂತೆ ಅದ್ವೈತಬ್ರಹ್ಮದಲ್ಲಿ ದ್ವೈತಪ್ರಪಂಚವು ತೋರುವುದೆಂದು ತಿಳಿಸುತ್ತಾನೆ. ಕಾಶಕೃತ್ಸ್ನನಾದರೋ ಎಲ್ಲಾ ವೇದಾಂತಗಳ ಆದಿಮಧ್ಯ ಕೊನೆಗಳನ್ನು ಪರಿಶೀಲಿಸಿ ಅವೆಲ್ಲಕ್ಕೂ ಆರುಬಗೆಯ ತಾತ್ಪರ್ಯಲಿಂಗಗಳಿಂದ ಭೇದಾಭೇದವೇ ಸಮ್ಮತವೆಂದು ಹೇಳಿದ್ದಾನೆ. ಆದ್ದರಿಂದ ಇದೇ ಮುಖ್ಯವೇದಾಂತವಾಗಿದೆ.

ಏವಂ ಜೀವಬ್ರಹ್ಮಣೋರವಿರುದ್ಧತಯಾ ಭೇದಾಭೇದಂ ಪ್ರತಿಪಾದ್ಯ ಜಗದ್ಬ್ರಹ್ಮಣೋರ್ಭೇದಾಭೇದಮಾಹ— ಪ್ರಕೃತ್ಯಧಿಕರಣಂ ‖ ೭ ‖

ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ‖ ೨೩ ‖

"ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ", "ದ್ಯಾವಾಪೃಥಿವೀ ಜನಯನ್ದೇವ ಏಕಃ", "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ". "ಸ ಈಕ್ಷತ ಬಹು ಸ್ಯಾಂ" ಇತ್ಯಾದಿವಾಕ್ಯಾನ್ಯಸ್ಯ ವಿಷಯಃ. "ಜನ್ಮಾದ್ಯಸ್ಯ ಯತಃ" ಇತಿ ಸೂತ್ರೇ ಜಗತ್ಕಾರಣತ್ವಂ ಬ್ರಹ್ಮಣೋ ಲಕ್ಷಣಮಿತ್ಯುಕ್ತಂ ತತ್ರ ವಿಚಾರ್ಯತೇ. ಯದ್ಯಪಿ ಜನ್ಮಾದಿ ಸೂತ್ರಾನಂತರಮೇತಸ್ಯ ಯುಕ್ತಂ. ತಥಾಪಿ ಷಡ್ವಿಧತಾತ್ಪರ್ಯಲಿಂಗ ಬೋಧಕೈರ್ವೇದಾಂತೈರ್ನಿಮಿತ್ತತ್ವಮಾತ್ರಸಾಧಕಾನುಮಿತೇರ್ವಿರೋಧೋಕ್ತೇಸ್ಸಮನ್ವಯಾವಸಾನೇ ಲಿಖಿತಮಿದಮಧಿಕರಣಮಿತಿ ಬೋಧ್ಯಂ. ನಚ ಜನ್ಮಾಧಿಕರಣಸ್ಯ ವೈಯರ್ಥ್ಯಂ. ಅತ್ರ ಬ್ರಹ್ಮಣಃ ಕುಲಾಲಾದಿವನ್ನಿಮಿತ್ತತ್ವಮೇವೋಪದಿಶ್ಯತೇ. "ಸ ಈಕ್ಷಾಂಚಕ್ರೇ" ಇತ್ಯಾದಾವೀಕ್ಷಣಪೂರ್ವಕಜಗತ್ಕರ್ತೃತ್ವದರ್ಶನಾತ್, ಮೃತ್ಪಿಂಡಕುಲಾಲಾದೇರನ್ಯೋನ್ಯೇ

ವೈಲಕ್ಷಣ್ಯದ್ಯೋತನಾತ್, ಪರಮೇಶ್ವರಸ್ಯೋಪಾದಾನಕಾರಣತ್ವೇ ಮೃದಾದಿವದ್ವಿಕಾರಿತ್ವಪ್ರಸಂಗಾಚ್ಚ ನ ಚೈಕಸ್ಯೋಭಯಕಾರಣತ್ವಂ ಸಂಭವತಿ. ಘಟಪಟಾದಿನಿರ್ಮಾಣೇ ಕುಲಾಲಕುವಿಂದಾದೀನಾಂ ತತ್ಪರಿಮಿತತ್ವಾದರ್ಶನಾತ್, ಲೋಕೇಽನಾತ್ಮಕಹೇತುಭೂತಾ ಚ ಕ್ರಿಯಾಫಲಸಿದ್ಧಿಃ ಪ್ರತಿಭಾತಿ. ಜಗತ್ಕಾರಣಸ್ಯ ಮೃದಾದಿವತ್ಪರಿಸಂಕ್ರಮಣೇ ಈಶ್ವರತ್ವಭಂಗಃ, ನಿಷ್ಪ್ರಯೋಜನತ್ವಂ ಚ. ಅತಃ ಪರಮೇಶ್ವರಸ್ಯ ನಿಮಿತ್ತಕಾರಣತ್ವಂ ವಿಧೀಯತೇ. ಉತ "ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ" ಇತ್ಯಾದೌ ನಿರ್ಗುಣಸ್ಯ ಪರಬ್ರಹ್ಮಣಃ ಕಾರ್ಯಕಾರಣತ್ವನಿಷೇಧಾತ್ ರಜ್ಜುಸರ್ಪವತ್ಸ್ವಸ್ವರೂಪಾಪರಿತ್ಯಾಗಪೂರ್ವಕಪರಸ್ವರೂಪಭಾವಾತ್ಮಕವಿವರ್ತಕಾರಣತ್ವಂ ವಾ ಭಾವ್ಯತೇ, ನೋ ಚೇತ್ಕಾರಣಸ್ಯ ಪರಶಿವಬ್ರಹ್ಮಣಃ ಕಾರ್ಯಾತ್ಮಕಜಗನ್ನಿಷ್ಠಸಾವಯವತ್ವಮಪರಿಶುದ್ಧತ್ವಮಚೇತನತ್ವಂ ಚ ಸಂಭವೇತ್. ತಸ್ಮಾದೇಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾಯಾಃ ಗೌಣತ್ವಂ. ಜಗತ್ಕಾರಣತ್ವವಿಧಾಯಕಶ್ರುತೀನಾಂ ನಿಮಿತ್ತಮಾತ್ರತ್ವಂ ವಿವರ್ತಕಾರಣತ್ವಂ ವಾಭ್ಯುಪಗಂತವ್ಯಮಿತಿ ಪ್ರಾಪ್ತೇಽಭಿಧೀಯತೇ. ಅತ್ರ ಪರಶಿವಸ್ಯ ಜಗದುಭಯಕಾರಣತ್ವಮೇವಾಭಿಹಿತಂ. "ಯಥೋರ್ಣನಾಭಿಃ" ಇತ್ಯಾದಿಶ್ರುತಿಶತೇಷ್ವಭಿನ್ನನಿಮಿತ್ತೋಪಾದಾನಕಾರಣತ್ವಸ್ಯ ದೃಷ್ಟಾಂತಮುಖೇನ ದರ್ಶನಾತ್. ಉತ ಕೇವಲನಿಮಿತ್ತತ್ವಾಂಗೀಕಾರೇ ಕಾರಣವ್ಯವಸ್ಥಾಪನಂ ಜಗದಧಿಷ್ಠಾನತ್ವಂ ಚ ನೋಪದಿಶ್ಯೇತ. ಪ್ರಕೃತಿಶ್ಚ ಬ್ರಹ್ಮ, ಚಕಾರಾನ್ನಿಮಿತ್ತತ್ವಮಪಿ ಸೂಚಿತಂ. ಕುತಃ ಪ್ರತಿಜ್ಞಾದೃಷ್ಟಾಂತಾನುಪರೋಧಾತ್, ಅಭಿನ್ನನಿಮಿತ್ತೋಪಾದಾನಕಾರಣತ್ವೇನೈವ ಪ್ರತಿಜ್ಞಾದೃಷ್ಟಾಂತಶ್ರುತಿಸಮನ್ವಯಾತ್. ಪ್ರತಿಜ್ಞಾದೃಷ್ಟಾಂತಯೋರನುಪರೋಧೋಽವಿರೋಧಃ ಸಾಮಂಜಸ್ಯಂ ತಸ್ಮಾದಿತ್ಯರ್ಥಃ. "ಉತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ" ಇತಿ ಪ್ರತಿಜ್ಞಾ. ಅತ್ರ ಚೈಕವಿಜ್ಞಾನೇನ ಸರ್ವವಿಜ್ಞಾನಮುಪದಿಶ್ಯತೇ. ತಚ್ಚೋಪದಾನತ್ವ ಏವ ಸಂಭವತಿ. ಉಪಾದಾನೋಪಾದೇಯಯೋರವ್ಯತಿರೇಕಾತ್ ಉಪಾದಾನಾತ್ಮಕಜ್ಞಾನೇನ ಸರ್ವಜ್ಞಾನಸಂಭವಾತ್. ನಿಮಿತ್ತೋಪಾದಾನಯೋರ್ಭೇದೇ ಸತಿ ರಥಗೋಪುರಪ್ರಾಸಾದಾದಿವದೇಕವಿಜ್ಞಾನೇನ ಸರ್ವವಿಜ್ಞಾನವಿರೋಧಾತ್. ದೃಷ್ಟಾಂತಸ್ತು, "ಯಥಾ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ" ಇತ್ಯುಪಾದಾನವಿಷಯ ಏವ ದೃಶ್ಯತೇ. ಯಥೈಕೇನ ಲೋಹಮಣಿನಾ ಸರ್ವಂ ಲೋಹ

ಮಯಂ ವಿಜ್ಞಾತಂ ಸ್ಯಾತ್, ಏಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾದಿತಿ, ತಥೈವಾನ್ಯತ್ರಾಪಿ "ಏಕಸ್ಮಿನ್ ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" ಇತಿ ಪ್ರತಿಜ್ಞಾ. "ಯಥಾ ಪೃಥಿವ್ಯಾಮೋಷಧಯಸ್ಸಂಭವಂತಿ" ಇತಿ ದೃಷ್ಟಾಂತಃ. "ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತೇ ಇದಂ ಸರ್ವಂ ವಿದಿತಂ" ಇತಿ ಪ್ರತಿಜ್ಞಾಯ, "ಸ ಯಥಾ ದುಂದುಭೇರ್ಹನ್ಯಮಾನಸ್ಯ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ಗ್ರಹಣಾಯ ದುಂದುಭೇಸ್ತು ಗ್ರಹಣೇನ ದುಂದುಭ್ಯಾಘಾತಸ್ಯ ವಾ" ಇತಿ ದೃಷ್ಟಾಂತಃ. ಕಿಂಚ "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿಶ್ರುತ್ಯನುಗತಜನ್ಮಾಧಿಕರಣೇ ಶಕ್ತಿವಿಶೇಷವಿಶಿಷ್ಟಶಿವಾದ್ವೈತಂ ಸೂತ್ರಕಾರೇಣ ಸೂಚಿತಂ, ನಿರ್ವಿಶೇಷಸ್ಯ ಬ್ರಹ್ಮಣಃ ಕಾರ್ಯಕಾರಣತ್ವಾಸಂಭವಾತ್. ವಿವರ್ತೋಪಾದಾನಕಾರಣತ್ವಂ ತದ್ವಿಧಾಯಕಪ್ರಾತ್ಯಕ್ಷಿಕಶ್ರುತ್ಯದರ್ಶನಾತ್, ಪ್ರತಿಜ್ಞಾದೃಷ್ಟಾಂತಶ್ರುತಿವಿರೋಧಾಚ್ಚ ಮುಮುಕ್ಷುಭಿರ್ನ ವಿಧೇಯಂ. "ಯತೋ ವಾ ಇಮಾನಿ" ಇತ್ಯತ್ರ ಪರಮೇಶ್ವರಶಕ್ತೇರೇವ ಜಗದುಪಾನಕಾರಣತ್ವಂ, ಪರಮೇಶ್ವರಸ್ಯ ನಿಮಿತ್ತತ್ವಂ ಚ ಸೂಚಿತಂ. ತಥಾಪಿ ಮೃತ್ಪಿಂಡಕುಲಾಲಯೋರಿವ ನ ಪೃಥಕ್ತ್ವಂ. "ಪರಾಽಸ್ಯ ಶಕ್ತಿರ್ವಿವಿಧೈವ" ಇತಿ ಶ್ರುತೌ ಪರಮೇಶ್ವರನಿಷ್ಠಮಾಯಾಶಕ್ತೇರ್ವಹ್ನೇ ದಾಹಶಕ್ತಿವತ್ಸ್ವಾಭಾವಿಕತ್ವನಿರ್ದೇಶಾತ್. ತಸ್ಮಾತ್ಸರ್ವದಾ ನ ನಿರ್ವಿಶೇಷಂ ಬ್ರಹ್ಮೇತಿ ನಿಶ್ಚಿತಂ.

ಶಿವಜಗತ್ತುಗಳಿಗೂ ಭೇದಾಭೇದವನ್ನು ತಿಳಿಸುತ್ತಾನೆ. ಪ್ರಕೃತ್ಯಧಿಕರಣಂ ||

ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ || ೨೩ ||

"ಈ ಆತ್ಮನಿಂದ ಆಕಾಶ ಹುಟ್ಟಿತು" "ಒಬ್ಬ ದೇವನು ಭೂಮಿ ಆಕಾಶಗಳನ್ನು ಸೃಷ್ಟಿಸಿದನು" "ಬ್ರಹ್ಮವಿಷ್ಣುಕಾಲರುದ್ರರು ಅವನಿಂದಲೇ ಹುಟ್ಟಿದ್ದಾರೆ" "ವಿಸ್ತಾರವಾಗುವೆನೆಂದು ಅವನು ನೋಡಿದನು". ಈ ಬಗೆಯ ವಾಕ್ಯಗಳೇ ಈ ಸೂತ್ರದ ವಿಷಯ. "ಜನ್ಮಾದ್ಯಸ್ಯ ಯತಃ" ಎಂಬ ಸೂತ್ರದಲ್ಲಿ ಬ್ರಹ್ಮಕ್ಕೆ ಜಗತ್ಕಾರಣತ್ವವೆಂಬ ಲಕ್ಷಣವನ್ನು ಹೇಳಲಾಗಿದೆ. ಅದರ ಯುಕ್ತಾಯುಕ್ತತೆಯನ್ನು ಇಲ್ಲಿ ವಿಮರ್ಶಿಸಲಾಗಿದೆ. ಆ ಸೂತ್ರದ ಅನಂತರವೇ ಈ ಅಧಿಕರಣ ಬರಬೇಕಾಗಿತ್ತು. ಆದರೂ ಆರು ಬಗೆಯ ತಾತ್ಪರ್ಯಲಿಂಗಗಳನ್ನು ತಿಳಿಸುವ ವೇದಾಂತವಾಕ್ಯಗಳು ಅನುಮಾನಪ್ರಮಾಣದಿಂದ ಪರಬ್ರಹ್ಮವನ್ನು ಜಗತ್ತಿಗೆ ನಿಮಿತ್ತವೆಂದಷ್ಟನ್ನೇ ಸಾಧಿಸಿದ್ದರಿಂದ ವಿರೋಧವುಂಟಾದ ಪ್ರಯುಕ್ತ ಎಲ್ಲಾ ಶಬ್ದಗಳಿಗೂ ಪರಬ್ರಹ್ಮದಲ್ಲಿಯೇ ಸಮನ್ವಯಮಾಡಿದ್ದಾದಮೇಲೆ ಈ ಪ್ರಕೃತ್ಯಧಿಕರಣ ಬಂದದ್ದೇ ಯುಕ್ತವೆಂದು ತಿಳಿಯಬೇಕು. ಇದರಿಂದ ಜನ್ಮಾಧಿಕರಣವು ವ್ಯರ್ಥವಾಗಲಿಕ್ಕಿಲ್ಲ. ಇಲ್ಲಿ ಬ್ರಹ್ಮವು ಕುಂಬಾರನಂತೆ ಜಗತ್ತಿಗೆ ನಿಮಿತ್ತನೋ ಅಥವಾ ಮಣ್ಣು ಮತ್ತು ಚಿನ್ನದಂತೆ ಉಪಾದಾನನೋ? ಎಂಬ ಸಂದೇಹ ಬರುತ್ತದೆ.

ಇಲ್ಲಿ ಕುಂಬಾರನಂತೆ ಬ್ರಹ್ಮನನ್ನು ನಿಮಿತ್ತವೆಂದೇ ಹೇಳಲಾಗಿದೆ. "ಅವನು ನೋಡಿದನು", "ಪ್ರಾಣವನ್ನು ಸೃಷ್ಟಿಸಿದನು" ಇಲ್ಲಿ ನೋಡುವ ಮೂಲಕ ಈಶ್ವರನು ಜಗತ್ತಿಗೆ ಕರ್ತನೆಂದು ಹೇಳಲಾಗಿದೆ. ಮಣ್ಣು ಮತ್ತು ಕುಂಬಾರ ಇವರಿಗೆ ಪರಸ್ಪರ ಭೇದವು ತೋರುತ್ತದೆ. ಪರಮೇಶ್ವರನು ಉಪಾದಾನವಾದರೆ ಮಣ್ಣಿನಂತೆ ವಿಕಾರ ವನ್ನು ಹೊಂದಬೇಕಾಗುವುದರಿಂದ ಒಬ್ಬನೇ ಎರಡು ಬಗೆಯ ಕಾರಣನಾಗಲು ಸಾಧ್ಯ ವಿಲ್ಲ. ಇದೂ ಅಲ್ಲದೆ, ಗಡಿಗೆ ಮಾಡುವಾಗ್ಯೆ ಕುಂಬಾರನು ಆ ಗಡಿಗೆಯಷ್ಟೇ ಸಂಕುಚಿತ ನಾಗದೆ ಅದಕ್ಕಿಂತಲೂ ಹೆಚ್ಚು ವ್ಯಾಪಕನಾಗಿರುವನು. ಲೋಕದಲ್ಲಿ ಕ್ರಿಯೆಯಿಂದ ಫಲ ದೊರಕಬೇಕಾದರೆ ಜಡವಸ್ತುವಿನ ಸಹಾಯದಿಂದ ಆಗಬೇಕೇ ಹೊರತು ಕೇವಲ ಚೇತನನಿಂದ ಆಗುವುದಿಲ್ಲ. ಚೇತನನಿಗೆ ಮಣ್ಣಿನಂತೆ ಪರಿಣಾಮವನ್ನು ಒಪ್ಪಿದರೆ ಅವನೂ ಜಡವಾಗಬೇಕಾಗುತ್ತದೆ. ಹಾಗೆ ಅವನನ್ನು ಉಪಾದಾನನೆಂದು ಹೇಳುವ ಆವಶ್ಯಕತೆಯಾದರೂ ಏನಿರುವುದು? ಆದ್ದರಿಂದ ಪರಮೇಶ್ವರನನ್ನು ನಿಮಿತ್ತಕಾರಣ ನೆಂದೇ ಹೇಳಬಹುದು. "ಬ್ರಹ್ಮವು ನಿಷ್ಕಲವೂ ನಿಷ್ಕ್ರಿಯವೂ ಶಾಂತವೂ ನಿರ್ದೋ ಷವೂ ನಿರಂಜನವೂ ಆಗಿದೆ" ಎಂಬಲ್ಲಿ ನಿರ್ಗುಣಬ್ರಹ್ಮಕ್ಕೆ ಕಾರ್ಯಕಾರಣಭಾವವನ್ನು ನಿಷೇಧಿಸಲಾಗಿದೆ. ಆದ್ದರಿಂದ ರಜ್ಜುಸರ್ಪದಂತೆ ಪರಬ್ರಹ್ಮವು ತನ್ನ ಸ್ವರೂಪವನ್ನು ಬದಲಾಯಿಸದೆ ಬೇರೆ ರೀತಿಯಾಗಿ ತೋರುವುದೆಂಬ ವಿವರ್ತವಾದವೇ ಯುಕ್ತವಾ ಗುತ್ತದೆ. ಇಲ್ಲದೇಹೋದರೆ, ಕಾರಣನಾದ ಪರಶಿವಬ್ರಹ್ಮವು ಕಾರ್ಯವಾದ ಜಗತ್ತಿ ನಂತೆ ಸಾವಯವನೂ ಅಶುದ್ಧನೂ ಅಚೇತನನೂ ಆಗಬೇಕಾದೀತು. ಆದ್ದರಿಂದ ಏಕವಿಜ್ಞಾನದಿಂದ ಸರ್ವವಿಜ್ಞಾನವೂ ಆಗುವುದೆಂಬ ಪ್ರತಿಜ್ಞೆಯನ್ನು ಗೌಣವೆಂದೂ, ಜಗತ್ಕಾರಣವನ್ನು ತಿಳಿಸುವ ಶ್ರುತಿಗಳು ಬ್ರಹ್ಮವನ್ನು ಕೇವಲ ನಿಮಿತ್ತ ಮತ್ತು ವಿವರ್ತ ಕಾರಣನಷ್ಟೇ ಎಂದು ತಿಳಿಸುತ್ತವೆ ಎಂದೂ ಒಪ್ಪಬೇಕು. ಹೀಗೆ ಆಕ್ಷೇಪ ಬಂದರೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. ಪರಶಿವಬ್ರಹ್ಮವೇ ಜಗತ್ತಿಗೆ ನಿಮಿತ್ತೋ ಪಾದಾನನೆಂಬುದೇ ಯುಕ್ತವಾಗಿದೆ. "ಯಥೋರ್ಣನಾಭಿಃ" ಮೊದಲಾದ ಶ್ರುತಿ ಗಳಲ್ಲಿ ಅನೇಕ ದೃಷ್ಟಾಂತಗಳಿಂದ ಶಿವನೇ ಎರಡೂ ಆಗಿರುವನೆಂದು ತಿಳಿಸಲಾಗಿದೆ. ಅವ ನನ್ನು ಕೇವಲ ನಿಮಿತ್ತನೆಂದೇ ಒಪ್ಪಿದರೆ, ಜಗತ್ತಿಗೆ ಆಶ್ರಯನೂ ಕಾರಣನೂ ಯಾರೆಂ ಬುದು ವ್ಯವಸ್ಥೆಯಾಗುವುದಿಲ್ಲ. ಸೂತ್ರದಲ್ಲಿ ಪ್ರಕೃತಿಶ್ಚ ಎಂಬುದರಿಂದ ಪರಬ್ರಹ್ಮವು ಪ್ರಕೃತಿ ಅಂದರೆ ಉಪಾದಾನವೂ ಚಶಬ್ದದಿಂದ ನಿಮಿತ್ತವೂ ಆಗಿರುವುದೆಂದು ಸೂಚಿ ತವಾಗುತ್ತದೆ; ಯಾಕೆಂದರೆ ಅವನು ನಿಮಿತ್ತ ಮತ್ತು ಉಪಾದಾನ ಎರಡೂ ಆಗಿರುವ ನೆಂದು ತಿಳಿಸುವ ಪ್ರತಿಜ್ಞೆ ಮತ್ತು ದೃಷ್ಟಾಂತ ಶ್ರುತಿಗಳೆರಡಕ್ಕೂ ಸಾಮರಸ್ಯವು ಕಂಡುಬಂದಿದೆ. "ತಿಳಿಯದೇ ಇರುವಂತಹದೂ ಸಹ ಯಾವುದರಿಂದ ತಿಳಿದುಬರು ತ್ತದೆಯೋ ಅಂತಹದೊಂದು ವಸ್ತುವಿನ ಬಗ್ಯೆ ಕೇಳುತ್ತೇನೆ" ಎಂಬುದು ಪ್ರತಿಜ್ಞೆ ಎನಿ ಸುತ್ತದೆ. ಈ ಪ್ರಕರಣದಲ್ಲಿಯೇ ಒಂದನ್ನು ತಿಳಿದರೆ ಎಲ್ಲದರ ಅರಿವೂ ಆಗುವುದೆಂದು ಹೇ ಳಲಾಗಿದೆ. ಇದಾದರೂ ಉಪಾದಾನೋಪಾದೇಯಗಳು ಒಂದೇ ಆಗಿದ್ದರೆಯೇ ಸಂಭ

ವಿಸುತ್ತದೆ. ಅವೆರಡೂ ಒಂದಕ್ಕೊಂದು ಬೇರೆಯಾಗದಿರುವುದರಿಂದ, ಉಪಾದಾನವನ್ನು ತಿಳಿದೊಡನೆ ಉಪಾದೇಯ ವಸ್ತುಗಳೆಲ್ಲದರ ಜ್ಞಾನವೂ ಸಂಭವಿಸುತ್ತವೆ. ನಿಮಿತ್ತ ಮತ್ತು ಉಪಾದಾನಗಳು ಬೇರೆಯಾದರೆ ರಥ ಗೋಪುರ ಪ್ರಸಾದಗಳಂತೆ ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದೆಂಬ ಪ್ರತಿಜ್ಞೆಗೆ ವಿರೋಧವುಂಟಾಗುತ್ತದೆ. "ಒಂದು ಮಣ್ಣು ಮುದ್ದೆಯನ್ನು ತಿಳಿದರೆ ಮಣ್ಣಿನ ವಿಕಾರಗಳೆಲ್ಲವೂ ತಿಳಿಯುತ್ತವೆ" ಎಂಬುದೇ ದೃಷ್ಟಾಂತ. "ಒಂದು ಲೋಹದ ಮಣಿಯಿಂದ ಎಲ್ಲಾ ಮಣಿಗಳನ್ನೂ ತಿಳಿಯಬಹುದು. ಒಂದು ಕಬ್ಬಿಣದ ಮೊಳೆಯಿಂದ ಕಬ್ಬಿಣದಿಂದಾಗಿರುವ ಎಲ್ಲಾ ಸಾಧನಗಳನ್ನೂ ತಿಳಿಯಬಹುದು. ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದು" ಎಂಬುದು ಪ್ರತಿಜ್ಞೆ. "ಭೂಮಿಯಲ್ಲಿ ಹೇಗೆ ಓಷಧಿ ಲತೆಗಳು ಹುಟ್ಟುತ್ತವೆಯೋ" ಎಂಬುದು ದೃಷ್ಟಾಂತ. "ಆತ್ಮನನ್ನು ಕೇಳಿ ತಿಳಿದು ಭಾವಿಸಿ ಕಂಡರೆ ಇದೆಲ್ಲವೂ ತಿಳಿಯುತ್ತದೆ" ಎಂಬುದು ಪ್ರತಿಜ್ಞೆ. "ದುಂದುಭಿಯನ್ನು ಭಾರಿಸುವಾಗ ಅದರ ಶಬ್ದವನ್ನು ಬಿಟ್ಟು ಬೇರೆ ಶಬ್ದವನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ. ದುಂದುಭಿಯ ಜ್ಞಾನ ಬಂದರೆ ಅದರ ಶಬ್ದದ ಜ್ಞಾನವೂ ಉಂಟಾಗುವುದು" ಎಂಬುದು ದೃಷ್ಟಾಂತ. ಇದೂ ಅಲ್ಲದೆ "ಯಾವನಿಂದ ಈ ಜೀವರು ಹುಟ್ಟಿದ್ದಾರೋ" ಎಂಬ ಶ್ರುತಿಗನುಗುಣವಾದ ಜನ್ಮಾದ್ಯಧಿಕರಣದಲ್ಲಿ ಶಕ್ತಿ ವಿಶೇಷವಿಶಿಷ್ಟಶಿವಾದ್ವೈತವನ್ನು ಸೂತ್ರಕಾರನು ತಿಳಿಸಿದ್ದಾನೆ. ಯಾಕೆಂದರೆ ನಿರ್ವಿಶೇಷಬ್ರಹ್ಮಕ್ಕೆ ಕಾರ್ಯಕಾರಣಭಾವ ಸಂಭವಿಸುವುದಿಲ್ಲ. ಬ್ರಹ್ಮವೇ ಜಗದ್ರೂಪವಾಗಿ ತೋರುವನೆಂದು ಹೇಳಲಿಕ್ಕೆ ಹಾಗೆ ತಿಳಿಸುವ ಶ್ರುತಿಯೇ ಕಂಡುಬಂದಿಲ್ಲ. ಹಾಗೆ ಹೇಳಿದರೆ ಪ್ರತಿಜ್ಞಾದೃಷ್ಟಾಂತಶ್ರುತಿಗಳಿಗೆ ವಿರೋಧವುಂಟಾಗುತ್ತದೆ. ಆದ್ದರಿಂದ ವಿವರ್ತವಾದವು ಮುಮುಕ್ಷುಗಳಿಗೆ ವಿಹಿತವಲ್ಲ. "ಯತೋ ವಾ ಇಮಾನಿ" ಎಂಬುದರಿಂದ ಪರಮೇಶ್ವರನ ಶಕ್ತಿಯೇ ಜಗತ್ತಿಗೆ ಉಪಾದನಕಾರಣವೆಂದೂ, ಪರಮೇಶ್ವರನೇ ನಿಮಿತ್ತನೆಂದೂ ಸೂಚಿತವಾಗಿದೆ. ಆದರೂ ಮಣ್ಣುಮುದ್ದೆ ಕುಂಬಾರರಂತೆ ಶಿವಶಕ್ತಿಗಳಿಗೆ ಪ್ರತ್ಯೇಕತೆ ಇಲ್ಲ. "ಶಕ್ತಿ ಅವನ ಸ್ವಭಾವವಾಗಿರುವುದು" ಎಂದು ಶ್ರುತಿಯಲ್ಲಿ ಬೆಂಕಿಯಲ್ಲಿ ದಾಹಕಶಕ್ತಿಯಂತೆ ಪರಮೇಶ್ವರನಲ್ಲಿ ಮಾಯಾಶಕ್ತಿ ಸ್ವಭಾವಿಕವೆಂದು ಹೇಳಿದ್ದರಿಂದ ಬ್ರಹ್ಮ ಎಂದಿಗೂ ನಿರ್ವಿಶೇಷವಾಗಲಾರದು.

**ನಿರ್ವಿಶೇಷತ್ವನಿಮಿತ್ತತ್ವೇ ನಿರಾಕರೋತಿ—ಅಭಿಧ್ಯೋಪದೇಶಾಚ್ಚ ॥೨೪॥**

**ಪರಶಿವೇ ಬ್ರಹ್ಮಣಿ ಕರ್ತೃತ್ವಸ್ಯೋಪಾದಾನತ್ವಸ್ಯ ಚ ನಿರ್ದೇಶಾತ್, "ಸೋಽಕಾಮಯತ", ಇತಿ ಕಾಮನಯಾ ಬ್ರಹ್ಮಣಿ ಕರ್ತೃತ್ವೇನ ನಿಮಿತ್ತತ್ವಂ, "ಬಹು ಸ್ಯಾಂ" ಇತ್ಯನೇನೋಪಾದಾನತ್ವಂ ಚ ಗಮ್ಯತೇ. ತಸ್ಮಾದ್ಬ್ರಹ್ಮಣಃ ನಿರ್ವಿಶೇಷತ್ವಂ ನಿಮಿತ್ತಮಾತ್ರತ್ವಂ ಚ ನ ಸಂಭವತಿ.**

ಶಿವನು ನಿಮಿತ್ತನೂ ನಿರ್ವಿಶೇಷನೂ ಆಗಿರುವನೆಂಬುವನ್ನು ನಿರಾಕರಿಸಲು ಬೇರೊಂದು ಕಾರಣವನ್ನು ತಿಳಿಸುತ್ತಾನೆ. **ಅಭಿಧ್ಯೋಪದೇಶಾಚ್ಚ ॥೨೪॥**

ಇಲ್ಲಿ ಅಭಿಧ್ಯೆ ಎಂದರೆ ಸಂಕಲ್ಪವೆಂದರ್ಥ. 'ಅವನು ವಿಸ್ತಾರವಾಗಲಿಚ್ಛಿಸಿ

ದನು' ಎಂಬಲ್ಲಿ 'ಇಚ್ಛೈಸಿದನು' ಎಂಬುದರಿಂದ ಬ್ರಹ್ಮವೇ ಕರ್ತನಾದ್ದರಿಂದ ನಿಮಿತ್ತಕಾರಣನೆಂದೂ, 'ವಿಸ್ತಾರವಾಗುವೆನು" ಎಂಬುವ ಸಂಕಲ್ಪದಿಂದ ಅವನೇ ಉಪಾದಾನಕಾರಣನೆಂದೂ ಶ್ರುತಿಯಲ್ಲಿ ಹೇಳಿರುವುದರಿಂದ ಬ್ರಹ್ಮ ನಿರ್ವಿಶೇಷವೆಂಬುದೂ, ಕೇವಲ ನಿಮಿತ್ತಕಾರಣನೆಂಬುದೂ ಸಂಭವಿಸುವುದಿಲ್ಲ.

**ನನು "ವಿಶ್ವಾಧಿಕೋ ರುದ್ರೋ ಮಹರ್ಷಿಃ", "ಹಿರಣ್ಯಗರ್ಭಂ ಪಶ್ಯತ ಜಾಯಮಾನಂ" ಇತಿ ಶ್ರುತೌ ಪರಮೇಶ್ವರಃ ಸ್ವೇಚ್ಛಯಾ ಜಗತ್ಸೃಷ್ಟಿಕರ್ತಾರಂ ಹಿರಣ್ಯಗರ್ಭಂ ಸೃಷ್ಟ್ವಾ ಕೃಪಯಾ ಪಶ್ಯತೀತಿ ಶ್ರವಣಾತ್ಕಥಂ ತಸ್ಯ ವಿಶ್ವೋಪಾದಾನತ್ವಮುಪಪದ್ಯತೇ? "ಮಾಯಾಂ ತು ಪ್ರಕೃತಿಂ ವಿಂದ್ಯಾತ್" ಇತ್ಯಾದೌ ಪ್ರಧಾನಸ್ಯೋಪಾದಾನತ್ವಮಾಮ್ನಾಯತೇ. "ತಸ್ಮಾದ್ವಿರಾಡಜಯತ । ವಿರಾಜೋ ಅಧಿಪುರುಷಃ ॥" ಇತ್ಯಾದೌ ಪ್ರಕೃತಿತ್ವಂ ದೃಶ್ಯತೇ. ಪ್ರಕೃತಿವಾಚಕತ್ವೇನ ವಿಶ್ವೋಪಾದಾನತ್ವಂ ಪ್ರಧಾನಸ್ಯೈವೇತ್ಯಾಶಂಕ್ಯ ನಿರಾಕರೋತಿ–ಸಾಕ್ಷಾಚ್ಚೋಭಯಾಮ್ನಾನಾತ್ ॥**

**ಸಾಕ್ಷಾತ್ಪ್ರತ್ಯಕ್ಷಿಕವೇದಾಂತೇಷು ಶಿವಸ್ಯ ಬ್ರಹ್ಮಣಃ ಜಗದುಭಯಕಾರಣತ್ವಮಾಮ್ನಾಯತೇ. "ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತ್ಯಸ್ತಂ ಯಂತಿ" ಇತಿ ಪ್ರಭವಪ್ರಳಯಹೇತುತ್ವೇನ ನಿಮಿತ್ತೋಪಾದಾನಕಾರಣತ್ವಂ ತಸ್ಯ ಪ್ರಸಿದ್ಧಂ. ಶ್ರುತ್ಯಂತರೇಽಪಿ "ಈಶಾನಸ್ಸರ್ವವಿದ್ಯಾನಾಂ" ಇತ್ಯಾದೌ ನಿಮಿತ್ತತ್ವಂ. "ಸರ್ವೋ ವೈ ರುದ್ರಃ" ಇತ್ಯಾದಿನಾ ಪ್ರಕೃತಿತ್ವಾತ್ಪ್ರಪಂಚಸ್ವರೂಪತ್ವೇನ ಉಪಾದಾನತ್ವಂ ಚ ಸ್ಮರ್ಯತೇ. ತಥಾ ಶತರುದ್ರೀಯೇ "ನಮೋ ಹಿರಣ್ಯಬಾಹವೇ" ಇತ್ಯಾರಭ್ಯ "ಕುಲುಂಚಾನಾಂ ಪತಯೇ" ಇತ್ಯಂತೇನ ಜಗದೀಶ್ವರತ್ವಂ. ತತಃ "ನಮಃ ಪರ್ಣ್ಯಾಯ ಚ ಪರ್ಣಶದ್ಯಾಯ ಚ" ಇತ್ಯಂತೇನ ವಿಶ್ವಾತ್ಮಕತ್ವಂ ಚ ವ್ಯಪದಿಶ್ಯತೇ. ಶ್ರುತ್ಯಂತರೇ ಚ "ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀತ್ ಬ್ರಹ್ಮಾಧ್ಯತಿಷ್ಠದ್ಭುವನಾನಿ ಧಾರಯನ್" ಇತ್ಯುಭಯಪ್ರತೀತಿಃ. ಅಥರ್ವಶಿರಸಿ "ಅಹಮೇಕಃ ಪ್ರಥಮಮಾಸಂ" ಇತ್ಯಾರಭ್ಯ ಪ್ರಥಮದ್ವಿತೀಯಖಂಡಯೋಸ್ಸರ್ವಜಗದಾತ್ಮಕತ್ವಸ್ಯ ವಿಶ್ವಾಧಿಪತಿತ್ವಸ್ಯ ಚ ಪ್ರತ್ಯಕ್ಷೇಣೋಭಯಾಮ್ನಾನಾತ್ ಜಗದುಭಯಕಾರಣತ್ವಂ ಪರಮೇಶ್ವರಸ್ಯ ಸಿದ್ಧಂ.**

"ರುವ್ರನು ವಿಶ್ವಾಧಿಕನು" "ಹುಟ್ಟುತ್ತಿರುವ ಹಿರಣ್ಯಗರ್ಭನನ್ನು ನೋಡಿದನು" ಎಂಬಲ್ಲಿ "ಪರಶಿವನು ತನ್ನ ಇಚ್ಛೆಯಂತೆ ಹಿರಣ್ಯಗರ್ಭನನ್ನು ಜಗತ್ಸೃಷ್ಟಿಗೋಸ್ಕರ ಸೃಷ್ಟಿಸಿ ಅವನನ್ನು ನೋಡಿದನು ಎಂದು ಹೇಳಿದ್ದರಿಂದ ಪರಶಿವನು ವಿಶ್ವಕ್ಕೆ ಉಪಾದಾನನೆಂಬುದು ಹೇಗೆ ಸಂಭವಿಸುತ್ತದೆ? "ಮಾಯೆಯನ್ನೇ ಪ್ರಕೃತಿ" ಎಂದು ಹೇಳುವ ಶ್ರುತಿಯಲ್ಲಿ ಪ್ರಕೃತಿಯೇ ಉಪಾದಾನವೆಂದು ತಿಳಿದುಬರುತ್ತದೆ. "ಅವನಿಂದ

ವಿರಾಟ್ಪುರುಷನು, ಅವನಿಂದ ಅಧಿಪುರುಷನು ಹುಟ್ಟಿದನು" ಎಂಬಲ್ಲಿ, ವಿರಾಟ್ ಮತ್ತು ಅಧಿಪುರುಷರಿಬ್ಬರನ್ನೂ ಜಗತ್ಕಾರಣರೆಂದು ಹೇಳಿದೆ. ಇವರಿಬ್ಬರೂ ಪ್ರಕೃತಿಯ ಅವಸ್ಥಾ ವಿಶೇಷವಾಗಿರುವುದರಿಂದ ಪ್ರಕೃತಿಯೇ ವಿಶ್ವಕ್ಕೂ ಉಪಾದಾನವಾಗಲೆಂದು ಆಶಂಕೆಸಿ ನಿರಾಕರಿಸುತ್ತಾನೆ. **ಸಾಕ್ಷಾಚ್ಚೋಭಯಾಮ್ನಾನಾತ್ ||೨೫||**

ಸಾಕ್ಷಾತ್ ಎಂದರೆ ಮೂಲಭೂತವಾದ ವೇದಾಂತವಾಕ್ಯಗಳು. ಇವುಗಳಲ್ಲಿ ಶಿವನೇ ಜಗತ್ತಿನ ಉಭಯಕಾರಣನೆಂದು ಹೇಳಲಾಗಿದೆ. "ಈ ಎಲ್ಲಾ ಭೂತಗಳೂ ಆಕಾಶಸ್ವರೂಪನಾದ ಪರಶಿವನಿಂದಲೇ ಹುಟ್ಟಿವೆ ಕೊನೆಗೆ ಅದರಲ್ಲಿಯೇ ಲಯವಾಗುತ್ತವೆ" ಇಲ್ಲಿ ಉತ್ಪತ್ತಿ ಪ್ರಳಯಗಳಿಗೆ ಕಾರಣವಾದ್ದರಿಂದ ಅವನೇ ನಿಮಿತ್ತೋಪಾದಾನನೆಂದು ಪ್ರಸಿದ್ಧವಾಗಿದೆ. ಬೇರೆಕಡೆಯೂ, ಈಶಾನಪದದಿಂದ ಅವನೇ ನಿಮಿತ್ತನೆಂದೂ, "ಎಲ್ಲವೂ ರುದ್ರನೇ" ಎಂಬುದರಿಂದ ಅವನೇ ಪ್ರಕೃತಿಯಾದ್ದರಿಂದ ಉಪಾದಾನನೆಂದೂ ಹೇಳಲಾಗಿದೆ. ಶತರುದ್ರೀಯದಲ್ಲಿ "ನಮೋ ಹಿರಣ್ಯಬಾಹವೇ" ಎಂಬುದರಿಂದ "ಕುಲುಂಚಾನಾಂ ಪತಯೇ" ಎಂಬುವವರೆಗೂ ಪರಶಿವನೇ ಜಗದೀಶ್ವರನೆಂದೂ, "ನಮಃ ಪರ್ಣ್ಯಾಯ" ಎಂಬುದರಿಂದ ಜಗದಾತ್ಮಕನೆಂದೂ ಹೇಳಲಾಗಿದೆ. ಬೇರೆಕಡೆ "ಬ್ರಹ್ಮವೇ ವನ ಬ್ರಹ್ಮವೇ ವೃಕ್ಷ. ಬ್ರಹ್ಮವೇ ಎಲ್ಲ ಪ್ರಪಂಚವನ್ನು ವ್ಯಾಪಿಸಿ ಧರಿಸಿರುವುದು "ಎಂಬಲ್ಲಿ ಆಧಾರ ಮತ್ತು ಆಧೇಯವೆರಡೂ ಅವನೇ ಎಂದು ಹೇಳಿದೆ. ಅಥರ್ವಶಿರಸ್ಸಿನಲ್ಲಿ "ನಾನೊಬ್ಬನೇ ಮೊದಲು ಇದ್ದೆನು" ಎಂದಾರಂಭವಾಗಿ, ಒಂದು ಎರಡನೇ ಖಂಡಗಳಲ್ಲಿ ಅವನೇ ಜಗದ್ರೂಪನೂ ಜಗದಧಿಪತಿಯೂ ಆಗಿರುವನೆಂದು ಹೇಳಿದೆ. ಹೀಗೆ ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಪರಶಿವನೇ ಜಗತ್ತಿಗೆ ಅಭಿನ್ನನಿಮಿತ್ತೋಪಾದಾನಕಾರಣನೆಂದು ಸಿದ್ಧವಾಯಿತು.

ಪುನರ್ಹೇತ್ವಂತರಮಾಹ--**ಆತ್ಮಕೃತೇಃ ಪರಿಣಾಮಾತ್ || ೨೬ ||**

**ಇತಶ್ಚ ನಿಮಿತ್ತೋಪಾದಾನತ್ವೇ ಬ್ರಹ್ಮಣಃ. ಆತ್ಮನಸ್ಸಂಬಂಧಿನೀ ಕೃತಿರಾತ್ಮಕೃತಿಃ. ಕರ್ತೃತ್ವಸಾಧಾರಣ್ಯೇನಾತ್ಮಕೃತೇರ್ದರ್ಶನಾತ್ "ತದಾತ್ಮಾನಂ ಸ್ವಯಮಕುರುತ" ಇತ್ಯಾತ್ಮಶಬ್ದವಾಚ್ಯಸ್ಯ ಪರಮೇಶ್ವರಸ್ಯ ಸ್ವಯಮಿತಿ ಕರ್ತೃತ್ವಂ, ಆತ್ಮಾನಮಿತಿ ಕರ್ಮತ್ವಂ ಚೇತಿ ಕರ್ಮತ್ವೇನೋಪಾದಾನಸಿದ್ಧಿಃ. ನನು ಪೂರ್ವಸಿದ್ಧಸ್ಯ ಶಿವಸ್ಯಾತ್ಮನಃ ಕಥಂ ಕೃತಿಕರ್ಮತ್ವಮಿತ್ಯಾಶಂಕ್ಯಾಹ. ಪರಿಣಾಮಾತ್ ನಿರತಿಶಯಾನಂದಸ್ವಭಾವಸ್ಯ ನಿರ್ಲೇಪಸ್ಯಾನಂತಕಲ್ಯಾಣಗುಣಾಕರಸ್ಯ ನಿಮಿತ್ತಕಾರಣಭೂತಸ್ಯ ಮಹೇಶ್ವರಸ್ಯ ಪ್ರಕೃತಿತ್ವೇನ ವಿಶ್ವಾತ್ಮಕತ್ವಂ ನ ವಿರುಧ್ಯತೇ, ಚೇತನಾಚೇತನಾತ್ಮಕಪ್ರಪಂಚಾಕಾರೇಣ ಪರಿಣಾಮಾತ್. ನನು ದಧಿಕ್ಷೀರವತ್ಸ್ವಸ್ವರೂಪಪರಿತ್ಯಾಗಪೂರ್ವಕರೂಪಾಂತರಪ್ರಾಪ್ತಿರೇವ ಪರಿಣಾಮಃ. ನಿತ್ಯಶುದ್ಧಸ್ಯ ಮಹೇಶ್ವರಸ್ಯ ಪರಿಣಾಮಿತ್ವೇನ ಸ್ವರೂಪನಾಶಿತ್ವಂ ವಿಕಾರಗುಣಪ್ರಸಂಗಶ್ಚ ಸ್ಯಾದಿತಿ ಚೇನ್ನ ನಿಮಿತ್ತಭೂತಸ್ಯೋಪಾದಾನತ್ವೇಽಪಿ ನ ವಿಕಾರಾದಿ**

ಸ್ಪರ್ಶಃ, ಪರಮೇಶ್ವರಮಾಯಾಶಕ್ತೇರ್ಜಗದ್ರೂಪೇಣ ಪರಿಣಾಮಿತ್ವಸ್ಯ, ಪರಮೇಶ್ವರಸ್ಯ ನಿಮಿತ್ತಕಾರಣತ್ವಸ್ಯ ಚ ಪ್ರತಿಪಾದನಾತ್, "ಮಾಯಾಂ ತು ಪ್ರಕೃತಿಂ ವಿಂದ್ಯಾತ್" ಇತ್ಯಾದೌ ಸ್ವಭಿನ್ನಮಾಯಾಯಾಃ ನಿಯಮ್ಯತ್ವಸ್ಯ, ಪರಮೇಶ್ವರಸ್ಯ ನಿಯಾಮಕತ್ವಸ್ಯ ಚ ಶ್ರವಣಾತ್ ವಿಶ್ವೋಭಯ ಕಾರಣತ್ವಂ ನಾನ್ಯಸ್ಯೇತಿ ಸಿದ್ಧಂ.

ಮತ್ತೊಂದು ಕಾರಣವನ್ನು ಹೇಳುತ್ತಾನೆ. **ಆತ್ಮಕೃತೇಃ ಪರಿಣಾಮಾತ್॥**

ಹೀಗೆ ಬ್ರಹ್ಮವು ನಿಮಿತ್ತನೂ ಉಪಾದಾನನೂ ಆಗುತ್ತಾನೆ. ಆತ್ಮನಿಗೆ ಸೇರಿದ ಕೃತಿಯೇ ಆತ್ಮಕೃತಿ ಎನಿಸುವುದು. ಪರಮಾತ್ಮನೇ ಜಗತ್ಕರ್ತನೆಂಬುದು ಅವನ ಕೃತಿಯಿಂದಲೇ ಕಂಡುಬರುತ್ತದೆ. "ಪರಮಾತ್ಮನು ತನ್ನನ್ನೇ ಜಗದಾಕಾರವಾಗಿ ಮಾಡಿಕೊಂಡನು" ಎಂಬ ಕಡೆ ಪರಮೇಶ್ವರನೇ ಕರ್ತನೆಂದೂ ಕರ್ಮವೆಂದೂ ಹೇಳಲಾಗಿದೆ. ಆದ್ದರಿಂದ ಅವನೇ ಎರಡೂ ಆಗಿದ್ದಾನೆ. ನಿತ್ಯಸಿದ್ಧನಾದ ಈಶ್ವರನಿಗೆ ತನ್ನನ್ನು ತಾನು ಮಾಡಿಕೊಂಡನೆಂಬುದು ಹೇಗೆ ಸಾಧ್ಯವೆಂದಾಶಂಕಿಸಿ 'ಪರಿಣಾಮಾತ್' ಎಂಬುದರಿಂದ ಸಮಾಧಾನವನ್ನು ಹೇಳುತ್ತಾನೆ. ನಿರತಿಶಯಾನಂದಸ್ವರೂಪನೂ ನಿರ್ಲೇಪನೂ ಅನಂತಕಲ್ಯಾಣಗುಣಾಕರನೂ ನಿಮಿತ್ತಕಾರಣನೂ ಆದ ಮಹೇಶ್ವರನೇ ಪ್ರಪಂಚಾಕಾರವಾಗಿ ಪರಿಣಮಿಸಿರುವುದರಿಂದ ಸರ್ವಾತ್ಮನಾಗಲಿಕ್ಕೆ ಯಾವ ಅಡ್ಡಿಯೂ ಇಲ್ಲ. ಹಾಲೇ ಮೊಸರಾಗುವಂತೆ ಸ್ವರೂಪವನ್ನು ತೊರೆದು ಬೇರೆ ಸ್ವರೂಪವನ್ನು ಹೊಂದುವುದೇ ಪರಿಣಾಮವೆನಿಸುತ್ತದೆ. ನಿತ್ಯಶುದ್ಧನಾದ ಮಹೇಶ್ವರನು ಹೀಗೆ ಪರಿಣಮಿಸುವುದರಿಂದ ಅವನ ಸ್ವರೂಪವು ನಾಶವಾಗಿ ಅವನಲ್ಲಿ ವಿಕಾರವುಂಟಾಗಬಹುದಲ್ಲವೇ? ಅಂದರೆ ನಿಮಿತ್ತನೇ ಉಪಾದಾನನಾಗುವುದಾದರೆ ಅವನಿಗೆ ವಿಕಾರಗಳು ಅಂಟಲಾರವೆಂದೂ, ಪರಮೇಶ್ವರನ ಮಾಯಾಶಕ್ತಿಯೇ ಜಗದ್ರೂಪದಿಂದ ಪರಿಣಮಿಸುತ್ತದೆ ಎಂದೂ ಹೇಳಬೇಕಾಗುತ್ತದೆ. ಪರಮೇಶ್ವರನು ನಿಮಿತ್ತನಾಗಿದ್ದರೂ ಅವನಿಂದನ್ಯವಲ್ಲದ ಮಾಯಾಶಕ್ತಿ ಅವನಿಗಧೀನವಾಗಿ ಅವನ ನಿಯಮನಕ್ಕೊಳಪಟ್ಟಿರುವುದರಿಂದ ಅವನಲ್ಲದೆ ಬೇರೆ ಯಾರೂ ವಿಶ್ವಕ್ಕೆ ಉಭಯಕಾರಣವಾಗಲಾರರೆಂದು ಸಿದ್ಧವಾಯಿತು.

ಪುನರ್ಹೇತ್ವಂತರಮಾಹ— **ಯೋನಿಶ್ಚ ಹಿ ಗೀಯತೇ ॥ ೨೭ ॥**

ಇಹಾಪಿ ಪರಮೇಶ್ವರ ಏವ ಪ್ರಕೃತಿಃ. ಹಿ ಯಸ್ಮಾದ್ಯೋನಿರಿತಿ ಪಠ್ಯತೇ, "ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ" ಕರ್ತಾರಮೀಶಂ ಬ್ರಹ್ಮಯೋನಿಂ "ಧ್ಯಾತ್ವಾ ಮುನಿರ್ಗಚ್ಛಂತಿ ಭೂತಯೋನಿಂ" ಇತ್ಯಾದೌ ಪ್ರಕೃತಿಪರ್ಯಾಯಯೋನಿಶಬ್ದೇನ ಪರಮೇಶ್ವರೋಽಭಿಧೀಯತೇ. ತಸ್ಮಾದುಪಾದಾನತ್ವಂ ನಿಮಿತ್ತತ್ವಂ ಚ ಪರಮೇಶ್ವರಸ್ಯೈವ ಸಿದ್ಧಂ. ಯೋನಿಶಬ್ದಸ್ಯ ಪ್ರಕೃತಿಪರ್ಯಾಯತ್ವಂ ಲೋಕೇ ದೃಶ್ಯತೇ. "ಪೃಥಿವೀ ಯೋನಿರೋಷಧಿವನಸ್ಪತೀನಾಂ" ಇತಿ. ಸ್ತ್ರೀಯೋನೇರಪ್ಯಸ್ತ್ಯೇವಾವಯವದ್ವಾರೇಣ ಗರ್ಭಂ ಪ್ರತ್ಯುಪಾದಾನತ್ವಂ, ಅನ್ಯತ್ರ ಯೋನಿಶಬ್ದೇನ

ಸ್ಥಿತ್ಯಧಿಕರಣಮುಪಿ ದೃಶ್ಯತೇ. "ಯೋನಿಷ್ಟ ಇಂದ್ರ ನಿಷದೇಃಕಾಃ" ಇತಿ ವಾಕ್ಯಶೇಷಾದತ್ರ ಪ್ರಕೃತಿಪರ್ಯಾಯತ್ವಮುಪದಿಶ್ಯತೇ. ತಥಾಪಿ "ಯಥೋರ್ಣನಾಭಿಸ್ಸೃಜತೇ ಗೃಹ್ಯತೇ ಚ" ಇತ್ಯಾದಾವುಪಾದಾನ ಕಾರಣತ್ವಂ ಶಿವಸ್ಯೈವ ದೃಶ್ಯತೇ. ತಸ್ಮಾದವಿರೋಧಃ.

ಮತ್ತೊಂದು ಹೇತುವನ್ನು ಹೇಳುತ್ತೇನೆ. **ಯೋನಿಶ್ಚ ಹಿ ಗೀಯತೇ॥೨೭॥**

ಇಲ್ಲಿಯೂ ಪರಶಿವನೇ ಪ್ರಕೃತಿಯೆಂದು ಹೇಳಲಾಗಿದೆ. "ಭೂತಯೋನಿಯನ್ನು ಧೀರರು ನೋಡುತ್ತಾರೆ". "ಬ್ರಹ್ಮಯೋನಿಯಾದ ಪುರುಷನನ್ನು" "ಯೋಗಿಯು ಭೂತಯೋನಿಯನ್ನು ಸೇರುತ್ತಾನೆ" ಇಲ್ಲಿ ಪ್ರಕೃತಿ ಎಂಬ ಅರ್ಥದಲ್ಲಿ ಯೋನಿಶಬ್ದ ವನ್ನು ಪ್ರಯೋಗಿಸಿರುವುದರಿಂದ ಅದು ಪರಮೇಶ್ವರನಿಗೇ ಅನ್ವಯಿಸುತ್ತದೆ. ಆದ್ದರಿಂದ ಅವನೇ ಉಪಾದಾನನೂ ನಿಮಿತ್ತನೂ ಆಗಿರುವನೆಂದು ಸಿದ್ಧವಾಯಿತು. ಯೋನಿಶಬ್ದವು ಪ್ರಕೃತಿಯನ್ನು ಬೋಧಿಸುವುದಾಗಿ "ಪೃಥಿವಿಯು ಓಷಧಿವೃಕ್ಷಗಳಿಗೆ ಯೋನಿಯಾಗಿದೆ" ಎಂದು ಮುಂತಾಗಿ ಲೋಕದಲ್ಲಿ ಕಂಡುಬಂದಿದೆ. ಸ್ತ್ರೀಯೋನಿಯೂ ಸಹ ಅವಯವದ ಮೂಲಕ ಗರ್ಭಕ್ಕೆ ಉಪಾದಾನವಾಗುವುದು. ಬೇರೆ ಕಡೆಯೂ ಯೋನಿಪದವು ಆಶ್ರಯಸ್ಥಲವನ್ನು ಬೋಧಿಸುವುದಾಗಿ ಕಂಡುಬಂದಿದೆ. 'ಯೋನಿಷ್ಟ ಇಂದ್ರಃ' ಎಂಬಲ್ಲಿ ಯೋನಿಪದವು ಪ್ರಕೃತಿ ಎಂಬ ಅರ್ಥವನ್ನು ತಿಳಿಸುತ್ತದೆ. ಆದ್ದರಿಂದ ಬ್ರಹ್ಮವೆಂಬ ಯೋನಿ ಎಂಬಲ್ಲಿ ಪರಶಿವಬ್ರಹ್ಮವನ್ನು ವಿಶ್ವದ ಉಪಾದಾನವೆಂದು ಹೇಳುವುದರಲ್ಲಿ ಯಾವ ವಿರೋಧವೂ ಇಲ್ಲ.

### ಸರ್ವವ್ಯಾಖ್ಯಾನಾಧಿಕರಣಂ ॥ ೮ ॥

### ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ ॥ ೨೮ ॥

ಛಾಂದೋಗ್ಯೇ ಷಷ್ಠೇ ಶ್ವೇತಕೇತುಂ ಪ್ರತ್ಯುದ್ದಾಲಕವಾಕ್ಯಮುಸ್ಯ ವಿಷಯಃ. "ನ್ಯಗ್ರೋಧಫಲಮಥ ಆಹರೇತಿ, ಇದಂ ಭಗವಃ ಇತಿ, ಭಿಂದೀತಿ, ಭಿನ್ನಂ ಭಗವಃ ಇತಿ, ಕಿಮತ್ರ ಪಶ್ಯಸೀತಿ ಅಣವ ಏವೇಮಾ ಧಾನಾ ಭಗವಃ ಇತಿ, ಆಸಾಂಗೈಕಾಂ ಭಿಂದೀತಿ, ಭಿನ್ನಾ ಭಗವಾ ಇತಿ, ಕಿಮತ್ರ ಪಶ್ಯಸಿ 'ನ ಕಿಂಚನ ಭಗವಃ' ಇತಿ. ಏತಸ್ಯೈವ ಸೋಮ್ಯೈಷೋಽಣಿಮ್ನೋ ಮಹಾನ್ನ್ಯಗ್ರೋಧಸ್ತಿಷ್ಠತಿ" ಇತಿ ಕರ್ಮಬ್ರಹ್ಮಬೋಧಕ ವೇದವೇದಾಂತಾನಾಂ ಷಡ್ವಿಧತಾತ್ಪರ್ಯಲಿಂಗೈಃ ಷಟ್ಸ್ಥಲಪರಶಿವ ಪ್ರತಿಪಾದಕತ್ವಮುತ ಶಾರೀರಕತ್ವಂ ವಾ ಪರಮಾಣುವಾದಪರತ್ವಂ ವೇತಿ ಸಂದಿಹ್ಯತೇ. 'ವಿಶ್ವಾಧಿಕೋ ರುದ್ರಃ' ಇತ್ಯಾದೌ ಪರಮೇಶ್ವರಸ್ಯೈವ ವಿಶ್ವಾಧಿಕತ್ವೋಪದೇಶಾತ್ತಸ್ಯ ವಿಶ್ವಾನುಗತವೇದಾಂತಪ್ರಮಾಣವಿಷಯತ್ವಂ ನ ಸಂಭವತಿ. ಪೂರ್ವೋಕ್ತಕರ್ಮಪ್ರಕರಣಪಠಿತಶತರುದ್ರೀಯಾದೀನಾಂ ಜೀವವಿಷಯತ್ವಮೇವ ಯುಕ್ತಂ; ಪರಮೇಶ್ವರಪರತ್ವೇ ಪ್ರಕರಣಪ್ರಯೋಜನವಿರೋಧಾತ್. ಸ್ಮೃತ್ಯಾಗಮಾದೀನಾಂ ತು

ನಾನಾದೇವತಾವಿಷಯತ್ವಾಚ್ಚ. ಉತ "ಈಕ್ಷತೇರ್ನಾಶಬ್ದಂ" ಇತ್ಯಾದಿನಾ ಪ್ರಧಾನವಾದಸ್ಯ ನಿರಾಕೃತತ್ವೇಽಪಿ ಪುನಶ್ಛಾಂದೋಗ್ಯೇ ಸೂಕ್ಷ್ಮತತ್ತ್ವೇ ಸ್ಥೂಲಜಗದಂತರ್ಭಾವಪ್ರತಿಪಾದಕವಚನದರ್ಶನಾದಣುಸ್ವಭಾವಾಸತ್ಕಾರ್ಯವಾದೋ ಯುಕ್ತಃ. "ನ್ಯಗ್ರೋಧಫಲಮಥ ಆಹರ" ಇತ್ಯಾರಭ್ಯ "ನ್ಯಗ್ರೋಧಸ್ತಿಷ್ಠತಿ" ಇತ್ಯಂತ್ಯೇನ ವಿಶ್ವಪ್ರಾಗವಸ್ಥಾದೃಷ್ಟಾಂತಃ ಶ್ರೂಯತೇ. ತತ್ರ ದೃಷ್ಟಾಂತೇ 'ನ ಕಿಂಚನ' ಇತ್ಯಣುಶಬ್ದಶ್ರವಣಾಚ್ಛೂನ್ಯಸ್ವಭಾವಾಣುವಾದೋ ದಾರ್ಷ್ಟಾಂತಿಕತ್ವೇನ ಪ್ರತಿಭಾತಿ. ತಸ್ಮಾತ್ಸರ್ವಥಾ ವೇದಾಂತಾನಾಂ ಬ್ರಹ್ಮಪರತ್ವಂ ನ ಸಂಭವತೀತಿ ಪ್ರಾಪ್ತೇ, ಬ್ರೂಮಃ. ನಾನಾದೇವತಾಪರತ್ವೇಽಪಿ ವೇದಾಂತಾನಾಂ ಮುಖ್ಯವೃತ್ತ್ಯಾ ಲಕ್ಷಣಾಯಾ ಅತದ್ವ್ಯಾವೃತ್ತ್ಯಾ ಚ ಪರಶಿವಬ್ರಹ್ಮಪ್ರಮಾಪಕತ್ವಂ ಭವತಿ. "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ", "ಸರ್ವೇ ವೇದಾ ಯತ್ಪದಮಾಮನಂತಿ", "ನಾವೇದವಿನ್ಮನುತೇ ತಂ ಬೃಹಂತಂ" ಇತ್ಯಾದಿಶ್ರುತಿಶತೇಷು ಗತಿಸಾಮಾನ್ಯನ್ಯಾಯೇನ ಸರ್ವವೇದಾಂತಾನಾಂ ಬ್ರಹ್ಮಸ್ಥಾಪಕತ್ವವ್ಯವಸ್ಥಾಪನಾತ್. ಕರ್ಮಪ್ರಕರಣಪಠಿತತ್ವೇಽಪಿ ಪುರುಷಸೂಕ್ತಶತರುದ್ರೀಯಾದೀನಾಂ ನಾನ್ಯಪರತ್ವಂ. ಲಿಂಗೇನ ಪ್ರಕರಣಬಾಧೋ ವಾರ್ಯತ ಇತಿ ನ್ಯಾಯೇನ ಲಿಂಗೇನ ಪ್ರಕರಣಬಾಧೋ ಯುಕ್ತ ಏವ. "ಪಶೂನಾಂ ಪತಯೇ ವೃಕ್ಷಾಣಾಂ ಪತಯೇ ಜಗತಾಂ ಪತಯೇ," "ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ವಿದ್ಯತೇಽಯನಾಯ" ಇತ್ಯಾದಿಬ್ರಹ್ಮಲಿಂಗಭೂಯಸ್ತ್ವಾನ್ನಾನ್ಯವಿಷಯತ್ವಮತ್ರ. ಕಿಂಚ ವೇದವೇದಾಂತಸ್ಮೃತಿಪುರಾಣೇತಿಹಾಸಾದಿಷು ಯತ್ರಯತ್ರ ಜಗತ್ಕಾರಣತ್ವಾದಿಧರ್ಮಾಃ ಪ್ರತಿಪಾದ್ಯಂತೇ ತತ್ರತತ್ರ ಷಟ್ಸ್ಥಲಪರಶಿವಬ್ರಹ್ಮಪರತ್ವಮೇವೇತಿ ರಾದ್ಧಾಂತಃ. ಕಿಂಚ ಶ್ರುತಿಸ್ಮೃತ್ಯಾಗಮಪುರಾಣಾದೀನಾಮಪಿ ನಾನಾದೇವತಾಪರತ್ವೇಽಪಿ ಷಡ್ವಿಧತಾತ್ಪರ್ಯಲಿಂಗಾನುಸಾರೇಣ ಪರಮಶಿವೇ ಸಮನ್ವಯಾತ್ಸರ್ವಂ ಸಮಂಜಸಮೇವ. ಏತೇನೇತ್ಯಾತ್ಮವಿಜ್ಞಾನೇನ ಸ್ವಸ್ವರೂಪಾಭಿವ್ಯಕ್ತ್ಯಾ ಸರ್ವವಿಜ್ಞಾನೇನ ಸರ್ವಂ ವಿದಿತಂ ಸ್ಯಾದಿತಿ ಸರ್ವವಿಜ್ಞಾನಪ್ರತಿಜ್ಞಾವಿರೋಧೇನೈವ ಪರಮಾಣ್ವಾದಿಪಕ್ಷಾಃ ನಿರಸ್ತತಯಾ ವ್ಯಾಖ್ಯಾತಾಃ. ಪರಮಾಣ್ವಾದೇಃ ಕಾರಣತ್ವೇ ಚಾತ್ಮವಿಜ್ಞಾನೇಽಪಿ ನ ಸರ್ವಂ ವಿದಿತಂ ಸ್ಯಾದನುಪಾದಾನತ್ವಾತ್. ತಸ್ಮಾತ್ "ನ ಕಿಂಚನ" ಇತ್ಯನೇನ ನಾಮರೂಪಾನಭಿವ್ಯಕ್ತಿಪ್ರತಿಪಾದಕತ್ವೇ ನ ವಿರೋಧಃ. ಸೂಕ್ಷ್ಮತ್ವಾಚ್ಚಾಣುತ್ವಂ ಬ್ರಹ್ಮಣ್ಯುಪಚರಿತಂ. ತಸ್ಮಾದ್ವೇದಾಂತೇಷು ಬ್ರಹ್ಮೈವ ಜಗತ್ಕಾರಣಂ ಪ್ರತೀಯತೇ. ವ್ಯಾಖ್ಯಾತಾ ವ್ಯಾಖ್ಯಾತಾ ಇತಿ ಪದದ್ವಯೇನ ಅಧ್ಯಾಯಪರಿಸ

ಮಾಪ್ತಿಸ್ಸೂಚಿತಾ. ಏತೇನ ಸವಿಶೇಷಸ್ಯ ಬ್ರಹ್ಮಣಃ ಪ್ರಪಂಚಾಭಿನ್ನನಿಮಿತ್ತೋಪಾದಾನಕಾರಣತ್ವವ್ಯವಸ್ಥಾಪನೇನ ನ್ಯಾಯವೈಶೇಷಿಕಸಾಂಚರಾತ್ರಾದಿಶ್ರುತ್ಯೇಕದೇಶಪ್ರಾಮಾಣ್ಯವಾದಭೇದಾಸ್ಸರ್ವೇ ಏಕತರಮಿಥ್ಯಾತ್ವವಾದಸರ್ವಮಿಥ್ಯಾತ್ವವಾದಪ್ರಧಾನಾಭೇದವಾದಾಶ್ಚ ವ್ಯಾಖ್ಯಾತಾ ವ್ಯಾಖ್ಯಾತಾ ನಿರಾಕೃತಾ ಇತ್ಯರ್ಥಃ. ಪ್ರತಿಜ್ಞಾದೃಷ್ಟಾಂತಲಕ್ಷಣದೃಷ್ಟಾಂತಭೇದಾಭೇದಪ್ರಧಾನವಿಶೇಷಾದ್ವೈತಮತಸ್ಯ ಮಹಾದೇವೇ ಪರಮಕಾರುಣಿಕೇ ಪರಮಶಿವೇ ಸಮನ್ವಯಃ. ತಸ್ಮಾತ್ತದೇವ ವೈದಿಕಂ ನಾನ್ಯದಿತಿ ಸಿದ್ಧಂ. ಇತಿ ಶ್ರೀಕರಭಾಷ್ಯೇ ಪ್ರಥಮಾಧ್ಯಾಯಸ್ಸಮಾಪ್ತಃ.

ಸರ್ವವ್ಯಾಖ್ಯಾನಾಧಿಕರಣಂ || ೮ ||

ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ || ೨೮ ||

ಛಾಂದೋಗ್ಯದ ಆರನೇ ಅಧ್ಯಾಯದಲ್ಲಿ ಶ್ವೇತಕೇತುವಿಗೆ ಉದ್ದಾಲಕನು ಹೇಳುವ ಮಾತು ಈ ಸೂತ್ರದ ವಿಷಯವಾಗಿದೆ. "ಈ ನ್ಯಗ್ರೋಧಫಲವನ್ನು ಕೆಳಕ್ಕೆ ತೆಗೆದುಕೊಂಡುಬಾ", "ಇಗೋ ತಂದೇನು", "ಇದನ್ನು ಭೇದಿಸು", "ಭೇದಿಸಿದ್ದೇನೆ", "ಇದರಲ್ಲಿ ಏನನ್ನು ನೋಡಿದೆ?", "ಸಣ್ಣ ಕಾಳುಗಳನ್ನು ನೋಡಿದೆನು" "ಅದರಲ್ಲಿ ಒಂದನ್ನು ಭೇದಿಸು", "ಭೇದಿಸಿದೆನು", "ಅದರಲ್ಲಿ ಏನು ನೋಡಿದೆ", "ಏನೂ ಇಲ್ಲ" ಈ ರೀತಿಯಾಗಿ ಸೂಕ್ಷ್ಮವಾಗಿರುವ ಈ ಬೀಜದಿಂದಲೇ ದೊಡ್ಡದಾದ ಆಲದ ಮರವು ಎದ್ದು ನಿಂತಿದೆ" ಎಂದು ತಿಳಿಸುವ ವಾಕ್ಯವು ಇದರ ವಿಷಯ. ಈ ಬಗೆಯ ಕರ್ಮಬ್ರಹ್ಮಬೋಧಕ ವೇದವೇದಾಂತಗಳು ಆರು ಬಗೆಯ ತಾತ್ಪರ್ಯಲಿಂಗಗಳಿಂದಲೂ ಷಟ್ಸ್ಥಲಾತ್ಮಕಪರಶಿವನನ್ನು ತಿಳಿಸುತ್ತವೆಯೇ? ಅಥವಾ ಜೀವನನ್ನೋ? ಅಥವಾ ಅವು ಪರಮಾಣುವಾದಕ್ಕೆ ಅನ್ವಯಿಸುತ್ತವೆಯೋ? ಎಂಬ ಸಂದೇಹ ಬರುತ್ತದೆ. "ವಿಶ್ವಾಧಿಕೋ ರುದ್ರಃ" ಎಂಬಲ್ಲಿ ರುದ್ರನನ್ನು ವಿಶ್ವೋತ್ತರನೆಂದು ಹೇಳಿದ್ದರಿಂದ ಅವನನ್ನು ವಿಶ್ವದೊಳಗೆ ವ್ಯಾಪಿಸಿರುವ ಈ ವೇದಾಂತದಿಂದ ತಿಳಿಯಲಾಗುವುದಿಲ್ಲ. ಹಿಂದೆ ಕರ್ಮಪ್ರಕರಣದಲ್ಲಿ ಹೇಳಿದ ಶತರುದ್ರೀಯದ ನಾಮಗಳನ್ನು ಜೀವನಿಗೆ ಅನ್ವಯಿಸುವುದೇ ಯುಕ್ತವಾಗಿದೆ. ಯಾಕೆಂದರೆ ಅವನ್ನು ಪರಮೇಶ್ವರನಿಗೆ ಅನ್ವಯಿಸಲಿಕ್ಕೆ ಪ್ರಕರಣದ ವಿರೋಧವಿದೆ ಮತ್ತು ಹಾಗೆ ಅನ್ವಯಿಸಿದ್ದರಿಂದ ಯಾವ ಪ್ರಯೋಜನವೂ ಇಲ್ಲ. ಸ್ಮೃತ್ಯಾಗಮಗಳಾದರೋ ಅನೇಕ ದೇವತೆಗಳನ್ನು ಬೋಧಿಸುತ್ತವೆ. ಇದೂ ಅಲ್ಲದೆ, "ಈಕ್ಷತೇರ್ನಾಶಬ್ದಂ" ಎಂಬುದರಿಂದ ಪ್ರಧಾನವಾದವನ್ನು ನಿರಾಕರಿಸಿದ್ದರೂ ಸಹ ಮತ್ತೆ ಛಾಂದೋಗ್ಯದ ಆರನೇ ಅಧ್ಯಾಯದಲ್ಲಿ ಶ್ವೇತಕೇತುವಿಗೆ ಉದ್ದಾಲಕನು ಸೂಕ್ಷ್ಮತತ್ತ್ವದಲ್ಲಿ ಸ್ಥೂಲಜಗತ್ತಿನ ಅಂತರ್ಭಾವವನ್ನು ತಿಳಿಸಿದ್ದರಿಂದ ಅಣುಸ್ವಭಾವದ ಅಸತ್ಕಾರ್ಯವಾದವೇ ಇಲ್ಲಿ ಸಂಭವಿಸಬಹುದು. "ನ್ಯಗ್ರೋಧ ಫಲವನ್ನು ಕೆಳಕ್ಕೆ ತೆಗೆದುಕೊಂಡು ಬಾ' ಎಂದಾರಂಭಿಸಿ "ನ್ಯಗ್ರೋಧವು ಇಲ್ಲಿ ನಿಂತಿದೆ" ಎಂದು ಕೊನೆಯಾಗಿರುವ ಮಂತ್ರದಲ್ಲಿ ವಿಶ್ವದ ಪ್ರಾಗವಸ್ಥೆಯ

ದೃಷ್ಟಾಂತವು ಕಂಡುಬಂದಿದೆ. ಇಲ್ಲಿ ದೃಷ್ಟಾಂತದಲ್ಲಿ 'ಏನೂ ಇಲ್ಲ' ಎಂಬುದರಿಂದ ಅಣುವಾದ ಒಂದು ವಸ್ತುವನ್ನು ಹೇಳಿರುವುದರಿಂದ ಶೂನ್ಯಸ್ವಭಾವದ ಅಣುವಾದವೇ ದಾರ್ಷ್ಟಾಂತಿಕದಲ್ಲೂ ತೋರುತ್ತದೆ. ಆದ್ದರಿಂದ ವೇದಾಂತಗಳು ಶಿವಪರವೆಂಬುದು ಸಂಭವಿಸುವುದಿಲ್ಲ. ಹೀಗೆ ಆಕ್ಷೇಪ ಬಂದರೆ ಅದಕ್ಕೆ ಸಮಾಧಾನವನ್ನು ಮುಂದೆ ಹೇಳಲಾಗಿದೆ. ವೇದಾಂತಗಳು ಅನೇಕ ದೇವತೆಗಳಿಗೆ ಅನ್ವಯಿಸಿದರೂ ಮುಖ್ಯ ವೃತ್ತಿಯಿಂದಲೂ, ಲಕ್ಷಣೆಯಿಂದಲೂ, ವ್ಯಾವೃತ್ತಿಯಿಂದಲೂ ಪರಶಿವನನ್ನೇ ಬೋಧಿಸುತ್ತವೆ. "ಉಪನಿಷತ್ತಿನಲ್ಲಿ ಹೇಳಿರುವ ಪುರುಷನ ಬಗ್ಗೆ ಕೇಳುತ್ತೇನೆ" "ಎಲ್ಲಾ ವೇದಗಳೂ ಯಾವನ ಸ್ಥಾನವನ್ನು ತಿಳಿಸುತ್ತವೆಯೋ" "ವೇದವನ್ನರಿಯದವನು ಬ್ರಹ್ಮವನ್ನು ತಿಳಿಯುವುದಿಲ್ಲ" ಹೀಗೆ ನೂರಾರು ಶ್ರುತಿಗಳಲ್ಲಿ ಗತಿಸಾಮಾನ್ಯನ್ಯಾಯದಿಂದ ಎಲ್ಲಾ ವೇದಾಂತಗಳೂ ಬ್ರಹ್ಮವನ್ನೇ ತಿಳಿಸುತ್ತವೆ ಎಂದು ತಿಳಿಸಲಾಗಿದೆ. ಕರ್ಮಪ್ರಕರಣದಲ್ಲಿ ಬಂದಿದ್ದರೂ ಪುರುಷಸೂಕ್ತಶತರುದ್ರೀಯಗಳು ಶಿವನಲ್ಲದೆ ಬೇರೆಯವರಿಗೆ ಅನ್ವಯಿಸುವುದಿಲ್ಲ. "ತಾತ್ಪರ್ಯಲಿಂಗವು ಪ್ರಕರಣವನ್ನು ಬಾಧಿಸುತ್ತದೆ" ಎಂಬ ನ್ಯಾಯದಿಂದ ಲಿಂಗವು ಪ್ರಕರಣವನ್ನು ಬಾಧಿಸುವುದು ಯುಕ್ತವೇ ಆಗಿದೆ. "ಪಶುಗಳಿಗೂ ವೃಕ್ಷಗಳಿಗೂ ಜಗತ್ತಿಗೂ ಪತಿಯು". "ಅವನಿಂದ ವಿರಾಡ್ಬ್ರಹ್ಮನು ಹುಟ್ಟಿದನು". "ಆದಿತ್ಯವರ್ಣನಾದ ಪರಶಿವನು ಕತ್ತಲೆಯಿಂದಾಚೆಗಿರುವನು" "ಅವನನ್ನು ತಿಳಿದು ಮೃತ್ಯುವನ್ನು ದಾಟುತ್ತಾನೆ. "ಅವನನ್ನು ತಿಳಿದವನು ಇಲ್ಲಿಯೇ ಅಮೃತನಾಗುತ್ತಾನೆ." ಈ ಬಗೆಯ ಬ್ರಹ್ಮಲಿಂಗಗಳೇ ಹೆಚ್ಚಾಗಿರುವುದರಿಂದ ಪುರುಷಸೂಕ್ತ ಶತರುದ್ರೀಯಗಳು ಬೇರೆಯವರಿಗೆ ಅನ್ವಯಿಸಲಾರವು. ಇದೂ ಅಲ್ಲದೆ, ವೇದಾಗಮಗಳಲ್ಲಿ ಎಲ್ಲೆಲ್ಲಿ ಜಗತ್ಕಾರಣತ್ವ ಮೊದಲಾದ ಧರ್ಮಗಳನ್ನು ಹೇಳಿದೆಯೋ ಅಲ್ಲೆಲ್ಲಾ ಅವು ಷಟ್ಸ್ಥಲಾತ್ಮಕನಾದ ಶಿವನಿಗೇ ಅನ್ವಯಿಸುತ್ತವೆ. ಶ್ರುತಿಸ್ಮೃತಿಗಳು ಅನೇಕ ದೇವತೆಗಳಿಗೆ ಅನ್ವಯಿಸಿದರೂ ಆರು ಬಗೆಯ ತಾತ್ಪರ್ಯಲಿಂಗಗಳಿಗನುಗುಣವಾಗಿ ಪರಶಿವನಲ್ಲಿಯೇ ಸಮನ್ವಯವಾಗುವುದರಿಂದ ಎಲ್ಲವೂ ಸಮಂಜಸವಾಗುತ್ತದೆ. ಈ ರೀತಿಯ ಆತ್ಮವಿಜ್ಞಾನದಿಂದಲೇ ತನ್ನ ವಾಸ್ತವಸ್ವರೂಪದ ಪ್ರಕಾಶವುಂಟಾಗಿ, ಅದರಿಂದ ಸರ್ವವಿಜ್ಞಾನವೂ ಸಿದ್ಧಿಸುತ್ತದೆ. ಈ ಸರ್ವವಿಜ್ಞಾನಪ್ರತಿಜ್ಞೆಗೆ ವಿರೋಧ ಬರುವುದರಿಂದಲೇ ಪರಮಾಣುಗಳನ್ನು ಕಾರಣವೆಂದು ಹೇಳುವ ಪಕ್ಷವು ತಿರಸ್ಕೃತವಾಯಿತೆಂದು ತಿಳಿಯುವುದು. ಆ ಪಕ್ಷದಲ್ಲಿ ಆತ್ಮನು ಉಪಾದಾನನಾಗದಿರುವುದರಿಂದ ಆತ್ಮವಿಜ್ಞಾನದಿಂದ ಸರ್ವವಿಜ್ಞಾನ ಬರುವಂತಿಲ್ಲ. "ನ ಕಿಂಚನ ಭಗವಃ" ಎಂಬ ಶ್ರುತಿಯಲ್ಲೂ ನಾಮರೂಪಗಳಿಲ್ಲದ ಅವಸ್ಥೆಯನ್ನು ಹೇಳಿದೆಯೇ ಹೊರತು ಶೂನ್ಯಸ್ಥಿತಿಯನ್ನು ಹೇಳಿಲ್ಲ. ಸೂಕ್ಷ್ಮವಾದ್ದರಿಂದ ಅಣುವಾಗಿರುವಿಕೆ ಬ್ರಹ್ಮನಿಗೂ ಸಮಾನವಾಗಿದೆ. ಆದ್ದರಿಂದ ವೇದಾಂತಗಳಲ್ಲಿ ಬ್ರಹ್ಮವೇ ಜಗತ್ಕಾರಣವೆಂದು ನಿಶ್ಚಿತವಾಗಿದೆ. ಅಧ್ಯಾಯದ ಕೊನೆಯನ್ನು ತಿಳಿಸಲಿಕ್ಕಾಗಿ ವ್ಯಾಖ್ಯಾತ ಎಂಬ ಪದವನ್ನು ಎರಡುವೇಳೆ ಹೇಳಲಾಗಿದೆ. ಹೀಗೆ ಸವಿಶೇಷವಾದ ಬ್ರಹ್ಮವೇ ಪ್ರಪಂಚಕ್ಕೆ ನಿಮಿತ್ತೋಪಾದಾನ

ಕಾರಣವೆಂದು ಹೇಳಿದ್ದರಿಂದ ಶ್ರುತ್ಯೈಕದೇಶಕ್ಕೆ ಪ್ರಾಮಾಣ್ಯವನ್ನವಲಂಬಿಸಿಕೊಂಡು ಬಂದಿರುವ ನ್ಯಾಯ ವೈಶೇಷಿಕ ಪಾಂಚರಾತ್ರಾದಿಮತಗಳೂ, ಬಾಹ್ಯವಸ್ತು ಒಂದೇ ಮಿಥ್ಯೆ ಎಂದೂ, ಎಲ್ಲವೂ ಮಿಥ್ಯೆ ಎಂದೂ ಹೇಳುವ ಮತಗಳೂ, ಪ್ರಧಾನವೇ ಜಗತ್ಕಾರಣವೆಂಬ ವಾದವೂ ನಿರಾಕೃತವಾಗಿವೆ. ಈ ರೀತಿಯಲ್ಲಿ ಪ್ರತಿಜ್ಞಾದೃಷ್ಟಾಂತಗಳಿಂದ ಭೇದಾಭೇದವೇ ಪ್ರಧಾನವೆಂದು ಬೋಧಿಸುವ ವಿಶೇಷಾದ್ವೈತಮತವೇ ಮಹಾದೇವನೂ ಪರಮ ಕಾರುಣಿಕನೂ ಆದ ಪರಶಿವನಲ್ಲಿ ಸಮನ್ವಿತವಾಗುತ್ತದೆ. ಆದ್ದರಿಂದ ಅದುವೇ ವೇದಸಮ್ಮತವಾದ ಮತವೆಂದು ಸಿದ್ಧವಾಯಿತು.

**ಇಲ್ಲಿಗೆ ಶ್ರೀಕರಭಾಷ್ಯದ ಪ್ರಥಾಮಾಧ್ಯಾಯ ಮುಗಿಯಿತು.**

---

# ದ್ವಿತೀಯಾಧ್ಯಾಯಃ (ಅವಿರೋಧಾಧ್ಯಾಯಃ)

## ಪ್ರಥಮಃ ಪಾದಃ (ಸ್ಮೃತಿಪಾದಃ)

**ಅಥ ಶ್ರೀಕರಭಾಷ್ಯೇ ದ್ವಿತೀಯಾಧ್ಯಾಯಸ್ಯ ಪ್ರಥಮಃ ಪಾದಃ**

**ಪ್ರಥಮಾಧ್ಯಾಯೇ ಸ್ವಾಭಾವಿಕಸರ್ವಶಕ್ತತ್ವಸರ್ವಜ್ಞತ್ವಸರ್ವಕಾರಣತ್ವಸರ್ವನಿಯಾಮಕತ್ವಸರ್ವಾನಂದಪ್ರದಾಯಕತ್ವಸರ್ವವಿಲಕ್ಷಣತ್ವಸರ್ವಾಂತರ್ಯಾಮಿತ್ವಸರ್ವಾತ್ಮಕತ್ವಾದಿಕಂ ಶಿವಸ್ಯ ಪರಬ್ರಹ್ಮಣಃ ಸರ್ವವೇದಾಂತಾವಿರೋಧಿತ್ವೇನ ಪ್ರಸಾಧ್ಯ, ವೇದಾಂತವಿರುದ್ಧಸ್ಮೃತಿತರ್ಕಾದಿನಿರಾಕರಣಪೂರ್ವಕಂ ಜಗಜ್ಜನ್ಮಾದಿಕಾರಣತ್ವಂ ತಸ್ಯೈವ ದರ್ಶಯಿತುಂ ದ್ವಿತೀಯಾಧ್ಯಾಯಮಾರಭತೇ. ಅಶಬ್ದತಯಾ ಜಗಜ್ಜನ್ಮಾದಿಹೇತುತ್ವಮೀಕ್ಷತ್ಯಧಿಕರಣೇ ಪ್ರಧಾನಸ್ಯ ನಿರಾಕೃತಮಪಿ ತಜ್ಜಗತ್ಕಾರಣತ್ವೇ ಸ್ಮೃತಿಪ್ರಮಾಣಮಸ್ತೀತ್ಯಾಶಂಕ್ಯಾಹ—ಸ್ಮೃತ್ಯನವಕಾಶಾಧಿಕರಣಂ ॥ ೧ ॥**

**ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಂಗಾತ್ ॥೧॥ ಪ್ರಧಾನಸ್ಯ ಜಗತ್ಕಾರಣತ್ವಾನಂಗೀಕಾರೇಣ ಸ್ಮೃತ್ಯನವಕಾಶದೋಷಪ್ರಸಂಗಃ ಸಾಂಖ್ಯಾದಿಸ್ಮೃತ್ಯಾದೀನಾಮಪ್ರಾಮಾಣ್ಯದೋಷಪ್ರಸಂಗ ಇತಿ ಚೇನ್ನ ಶಿವಸ್ಯ ಬ್ರಹ್ಮಣಃ ಜಗತ್ಕಾರಣತ್ವಾನಂಗೀಕಾರೇ ಅನ್ಯಸ್ಮೃತೀನಾಂ ಮನ್ವಾದೀನಾಂ ಅಪ್ರಾಮಾಣ್ಯದೋಷಪ್ರಸಂಗಾತ್. ನಚ ವಿನಿಗಮಕಾಭಾವಃ ವೇದಮೂಲಕಮನ್ವಾದಿಸ್ಮೃತೀನಾಂ ಪ್ರಬಲತ್ವಾತ್ ವೇದವಿರುದ್ಧಸಾಂಖ್ಯಾದೀನಾಂ ದುರ್ಬಲತ್ವಾತ್ ಅಪ್ರಾಮಣ್ಯ ಮಿತ್ಯರ್ಥಃ. ಏತದಧ್ಯಾಯಸ್ಯ ಪ್ರಥಮಪಾದೇ ಸ್ಮೃತಿತರ್ಕಾದಿವಿರೋಧಃ, ದ್ವಿತೀಯೇ ತನ್ಮತಾನಾಂ ದುಷ್ಟತ್ವಂ, ತೃತೀಯೇ ಪೃಥಿವ್ಯಾದಿಕಾರಣತ್ವಶ್ರುತಿವಿರೋಧಃ, ಚತುರ್ಥೇ ಜೀವಲಿಂಗಶರೀರಬೋಧಕಶ್ರುತಿವಿರೋಧಶ್ಚ ನಿರಾಕ್ರಿಯತೇ. “ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇ ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್ ”**

ಇತಿ ವಾಕ್ಯೇ ಕಪಿಲಸ್ಯ ಜ್ಞಾನಾತಿಶಯಿತ್ವೇನ ಸರ್ವೋತ್ಕೃಷ್ಟತ್ವದರ್ಶನಾತ್. "ಯದ್ವೈ ಕಿಂಚ ಮನುರವದತ್ತದ್ಭೇಷಜಂ" ಇತಿ ಶ್ರುತಾವೌಷಧವನ್ಮನುವಾಕ್ಯಸ್ಯ ಮುಖ್ಯವಿಧೇಯತ್ವನಿರ್ದೇಶಾತ್, ತಯೋಃ ಪರಸ್ಪರವಿರೋಧದ್ಯೋತನಾತ್ ಸಾಂಖ್ಯಾದೀನಾಂ ಮನ್ವಾದೀನಾಂ ವಾ ಪ್ರಾಧಾನ್ಯಂ? ಉತೋಪನಿಷದ್ವಾಕ್ಯಾನಾಂ ಸಾಂಖ್ಯಾದಿಸ್ಮೃತ್ಯನುಸರಣಂ ಮನ್ವಾದಿಸ್ಮೃತ್ಯನುಸರಣಂವಾ ಪ್ರಧಾನಮಿತಿ ಸಂದಿಹ್ಯತೇ. ಪರಮಶಿವ ಜಗತ್ಕಾರಣತ್ವಪರವೇದಾಂತವಾಕ್ಯಾನಿ ಪ್ರಧಾನಸ್ಯೈವೋಪಪನ್ನಾನಿ. "ಸ್ಮೃತ್ಯಾಗಮಪುರಾಣೈಶ್ಚ ವೇದಾರ್ಥಂ ಗ್ರಾಹಯೇದ್ಬುಧಃ" ಇತಿ ನಿಯಮಾತ್. ಶ್ರುತಿಸ್ಮೃತಿಪುರಾಣೇಷ್ವಭ್ಯುದಯಫಲಜನಕದರ್ಶಪೂರ್ಣಮಾಸಸೋಮಪೌಂಡರೀಕಾದಿಕರ್ಮ ಯಥಾ ದರ್ಶಿತಂ ತಥಾ ಪರಮಾಪ್ತಕಪಿಲಮಹರ್ಷಿಕೃತನಿಶ್ಶ್ರೇಯಸಫಲಸಾಧನಭೂತಸಾಂಖ್ಯಸ್ಮೃತ್ಯನಪೇಕ್ಷತಯಾ ವೇದಾಂತಾರ್ಥನಿಶ್ಚಯಾಯೋಗಾತ್, ಶ್ರುತಾವಪ್ರತಿಹತಜ್ಞಾನನಿಷ್ಠತ್ವಸ್ಯ ಕಪಿಲೇ ನಿರ್ದೇಶಾಚ್ಚ ಮಹರ್ಷಿಪ್ರಣೀತ ಪ್ರಧಾನಕಾರಣಸಾಂಖ್ಯಸ್ಮೃತೀನಾಮೇವ ಪ್ರಾಧಾನ್ಯಮಿತಿ ಪ್ರಾಪ್ತೇ ಬ್ರೂಮಃ. 'ಋಷಿಂ ಪ್ರಸೂತಂ ಕಪಿಲಂ' ಇತಿ ಶ್ರುತೌ ಕಪಿಲಸ್ಯ ಜ್ಞಾನಾಧಿಕತ್ವೇನ ಪರಮಾಪ್ತತ್ವವ್ಯಪದೇಶಾತ್ ತತ್ಸ್ಮೃತ್ಯನುರೋಧೇನ ವೇದಾಂತಾರ್ಥಬೋಧೋ ನ್ಯಾಯ್ಯ ಇತಿ ಯತ್ತದಯುಕ್ತಂ, "ತದ್ವಿಷ್ಣೋರೇಕಮುತ್ತಮಂ" ಇತ್ಯಾದಿಷು ವಿಷ್ಣೋರಪಿ ಸರ್ವಾತಿಶಯಿತ್ವ ಸಂಕೀರ್ತನಾತ್ತತ್ಪ್ರಣೀತಬುದ್ಧಪಾಂಚರಾತ್ರಾಗಮಾನುಸಾರೇಣ ವೇದಾಂತಾರ್ಥನಿಶ್ಚಯಪ್ರಸಕ್ತಿಃ ಪ್ರಸಜ್ಯೇತ. ಕಿಂಚ, ಶ್ರುತಿಸ್ಮೃತಿಪುರಾಣೇಷ್ವಪ್ರತಿಹತಜ್ಞಾನನಿಷ್ಠತ್ವೇನ ಬೃಹಸ್ಪತೇಸ್ಸರ್ವಾಧಿಕತ್ವಕಥನಾತ್ತತ್ಪ್ರಣೀತ ಲೋಕಾಯತಸ್ಮೃತ್ಯನುಸಾರೇಣ ಶ್ರುತ್ಯರ್ಥನಿಶ್ಚಯಪ್ರಸಕ್ತಿಃ ಸ್ಯಾತ್. ಉತ, ನಾನ್ಯಸ್ಮೃತ್ಯನವಕಾಶದೋಷಪ್ರಸಂಗಾತ್. "ಆಸೀದಿದಂ ತಮೋಭೂತಮಪ್ರಜ್ಞಾತಮಲಕ್ಷಣಂ । ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ । ತತಸ್ಸ್ವಯಂಭೂರ್ಭಗವಾನವ್ಯಕ್ತೋ ವ್ಯಂಜಯನ್ನಿದಂ ॥" ಇತ್ಯನೇನ ತಮೋರೂಪಮಾಯಾಶಕ್ತ್ಯಾ ಕಾಲರುದ್ರಸ್ಯ ಬ್ರಹ್ಮಾದಿಸರ್ವಕಾರಣತ್ವಮುಪನ್ಯಸ್ತಂ. "ವಿಶ್ವಂ ಭೂತಂ ಭುವನಂ ಚಿತ್ರಂ ಬಹುಧಾ ಜಾತಂ ಜಾಯಮಾನಂ ಚ ಯತ್ । ಸರ್ವೋ ಹ್ಯೇಷ ರುದ್ರಃ ॥" ಇತ್ಯಾದಿಪ್ರತ್ಯಕ್ಷಶ್ರುತಿಸಿದ್ಧಪರಮಶಿವಕಾರಣತ್ವದರ್ಶನಾನ್ನಾನುಮೇಯವೇದಮೂಲಕಸಾಂಖ್ಯಸ್ಮೃತೇಃ ಪ್ರಾಮಾಣ್ಯಂ. ಕಿಂಚ "ಸರ್ವೇ ವೇದಾಃ ಯತ್ಪದಮಾಮನಂತಿ", "ಸರ್ವೈಶ್ವರ್ಯಸಂಪನ್ನಸ್ಸರ್ವೇಶ್ವರಶ್ಶಂಭುರಾಕಾಶಮಧ್ಯೇ । ಶಿವ ಏಕೋ ಧ್ಯೇಯಶ್ಶಿವಂಕರಸ್ಸ

ರ್ವಮನ್ಯತ್ಪರಿತ್ಯಜ್ಯ ॥ " ಇತ್ಯಾದಿಶ್ರುತಿಷು, " ಕೋಟಿಜನ್ಮಾರ್ಜಿತೈಃ ಪುಣ್ಯೈಃ ಶಿವೇ ಭಕ್ತಿಃ ಪ್ರಜಾಯತೇ." " ಬಹುನಾತ್ರ ಕಿಮುಕ್ತೇನ ಯಸ್ಯ ಭಕ್ತಿಶ್ಶಿವೇ ದೃಢಾ । ಮಹಾಪಾಪೋಪಪಾಪೌಘೈರಪಿ ಗ್ರಸ್ತೋ ವಿಮುಚ್ಯತೇ ॥ " ಇತ್ಯಾದಿಶಿವಗೀತಾದಿಬಹುಸ್ಮೃತಿಷ್ವಪಿ ಪರಮಪುರುಷಸ್ಯ ಶಿವಸ್ಯಾರಾಧ್ಯತ್ವಂ ಶ್ರೌತಸ್ಮಾರ್ತನಿತ್ಯನೈಮಿತ್ತಿಕಾದಿಸರ್ವೇಷಾಂ ಕರ್ಮಣಾಂ ತದಾರಾಧನಭೂತತ್ವಂ ಪ್ರದರ್ಶಿತಂ. ಅಪಿಚ " ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ ", " ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ " ಇತ್ಯಾದಿಶ್ರುತಿಷು, " ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮ " ಇತಿ ಸ್ಮೃತಿಷ್ವಪಿ ಪ್ರಧಾನನಿಯಾಮಕತ್ವಂ ಚ ತಸ್ಯೈವ ಸ್ಮರ್ಯತೇ. " ಶ್ರುತಿಸ್ಮೃತಿವಿರೋಧೇ ತು ಶ್ರುತಿರೇವ ಬಲೀಯಸೀ । ಸ್ಮೃತಿಸ್ಮೃತ್ಯೋರ್ವಿರೋಧೇ ತು ವೇದಾನುಸರಣಂ ವರಂ ॥ " ಇತ್ಯಾದಿಮೀಮಾಂಸಾನ್ಯಾಯದರ್ಶನಾತ್ ಶ್ರುತ್ಯನುಸಾರಿ ಮನ್ವಾದಿಸ್ಮೃತೀನಾಮೇವ ಪ್ರಾಧಾನ್ಯಮಿತಿ ನಿರ್ದಿಷ್ಟಂ.

# ದ್ವಿತೀಯಾಧ್ಯಾಯ (ಅವಿರೋಧಾಧ್ಯಾಯ)

## ಪ್ರಥಮಪಾದ (ಸ್ಮೃತಿಪಾದ)

ಪ್ರಥಮಾಧ್ಯಾಯದಲ್ಲಿ ಪರಶಿವನು ಸಹಜವಾಗಿಯೇ ಸರ್ವಶಕ್ತನೂ ಸರ್ವಜ್ಞನೂ ಸರ್ವಕಾರಣನೂ, ಸರ್ವನಿಯಾಮಕನೂ, ಎಲ್ಲರನ್ನು ಸಂತೋಷಪಡಿಸುವವನೂ, ಎಲ್ಲಕ್ಕಿಂತ ವಿಲಕ್ಷಣನೂ, ಸರ್ವಾಂತರ್ಯಾಮಿಯೂ, ಸರ್ವಾತ್ಮಕನೂ ಇರುವನೆಂದು ಎಲ್ಲ ವೇದಾಂತಗಳಿಗೂ ವಿರೋಧವಾಗದ ರೀತಿಯಲ್ಲಿ ಸಾಧಿಸಿ, ಈಗ ವೇದಾಂತಕ್ಕೆ ವಿರುದ್ಧವಾದ ಸ್ಮೃತಿತರ್ಕಗಳನ್ನು ನಿರಾಕರಿಸಿ ಅವನೇ ಜಗದ್ವ್ಯಾಪಾರಗಳ ನಿರ್ವಾಹಕ ಎಂದು ತಿಳಿಸಲಿಕ್ಕಾಗಿ ದ್ವಿತೀಯಾಧ್ಯಾಯವನ್ನು ಆರಂಭಿಸಲಾಗಿದೆ. ಶ್ರುತಿಯಲ್ಲಿ ಪ್ರತಿಪಾದ್ಯವಲ್ಲದ ಪ್ರಧಾನವು ಜಗದ್ವ್ಯಾಪಾರಗಳನ್ನು ನಿರ್ವಹಿಸಲಾರದೆಂದು ಈಕ್ಷತ್ಯಧಿಕರಣದಲ್ಲಿ ನಿರೂಪಿತವಾಗಿದ್ದರೂ ಇಲ್ಲಿ ಸ್ಮೃತಿಯ ಪ್ರಾಮಾಣ್ಯದಿಂದ ಅದನ್ನೇ ಜಗತ್ಕಾರಣವೆಂದಾಶಂಕಿಸಿ ಸಮಾಧಾನವನ್ನು ಹೇಳುತ್ತಾನೆ.

**ಸ್ಮೃತ್ಯನವಕಾಶಾಧಿಕರಣಂ ॥೧॥ ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಂಗಾತ್ ॥೧॥**

ಪ್ರಧಾನವು ಜಗತ್ಕಾರಣವಲ್ಲವೆಂದು ಹೇಳಿದರೆ ಅದೇ ಜಗತ್ಕಾರಣವೆಂದು ಹೇಳುವ ಸಾಂಖ್ಯಸ್ಮೃತಿಗೆ ಪ್ರಮಾಣವಲ್ಲವೆಂಬ ದೋಷ ಬರುತ್ತದೆ ಎಂದು ಕೇಳುವುದು ಸರಿಯಲ್ಲ; ಯಾಕೆಂದರೆ ಪ್ರಧಾನವೇ ಜಗತ್ಕಾರಣವೆಂದು ಹೇಳಿದರೆ ಪರಶಿವನೇ ಕಾರಣನೆಂದು ಹೇಳುವ ಮನ್ವಾದಿಸ್ಮೃತಿಗಳಿಗೆ ಅಪ್ರಮಾಣ್ಯದೋಷ ಬರುತ್ತದೆ. ಇವೆರಡು ಸ್ಮೃತಿಗಳಿಗೂ ಸಮಾನಬಲವಿರುವುದರಿಂದ ಯಾವುದನ್ನು

ಗ್ರಹಿಸಬೇಕೆಂದರೆ ವೇದಮೂಲಕವಾದ ಮನ್ವಾದಿಸ್ಮೃತಿಗಳು ಪ್ರಬಲವೆನಿಸಿ ಸಾಂಖ್ಯ ಸ್ಮೃತಿಗಳು ವೇದವಿರುದ್ಧವಾದ್ದರಿಂದ ದುರ್ಬಲವೆನಿಸುವುದರಿಂದ ಸಾಂಖ್ಯಸ್ಮೃತಿಯೇ ಅಪ್ರಮಣವಾಗುತ್ತದೆ. ಈ ಅಧ್ಯಾಯದ ಮೊದಲನೆ ಪಾದದಲ್ಲಿ ಸ್ಮೃತಿತರ್ಕಗಳಿಂದ ಬರುವ ವಿರೋಧವನ್ನು ವಿಚಾರಿಸಲಾಗಿದೆ. ಎರಡನೇ ಪಾದದಲ್ಲಿ ಆ ಮತಗಳ ದೋಷಗಳನ್ನು ತಿಳಿಸಲಾಗಿದೆ. ತೃತೀಯಪಾದದಲ್ಲಿ ಪೃಥಿವ್ಯಾದಿಗಳೇ ಕಾರಣವೆಂದು ಹೇಳುವ ಶ್ರುತಿಗಳ ವಿರೋಧವನ್ನು ಪರಿಹರಿಸಲಾಗಿವೆ. ಚತುರ್ಥಪಾದದಲ್ಲಿ ಜೀವನನ್ನೂ ಮತ್ತು ಲಿಂಗಶರೀರವನ್ನೂ ಬೋಧಿಸುವ ಶ್ರುತಿಗಳಲ್ಲಿ ತೋರುವ ವಿರೋಧವನ್ನು ನಿರಾಕರಿಸಲಾಗಿದೆ. "ಯಾವನು ಕಪಿಲಋಷಿಯನ್ನು ಸೃಷ್ಟಿಸಿ ಜ್ಞಾನವನ್ನು ತುಂಬಿದನೋ" ಎಂಬ ಶ್ರುತಿಯಲ್ಲಿ ಕಪಿಲಮಹರ್ಷಿಯನ್ನು ಜ್ಞಾನಪೂರ್ಣನೆಂದು ಹೇಳಿ ಅವನ ಸರ್ವೋತ್ಕೃಷ್ಟತೆಯನ್ನು ತಿಳಿಸಲಾಗಿದೆ. ಹೀಗೆ "ಮನು ಹೇಳಿದ್ದೆಲ್ಲವೂ ಔಷಧ" ವೆಂಬ ಶ್ರುತಿಯಲ್ಲಿ ಮನುಸ್ಮೃತಿಯನ್ನು ಔಷಧದಂತೆ ಹಿತಕರವೆಂದು ತಿಳಿಸಲಾಗಿದೆ. ಈರೀತಿಯಾಗಿ ಎರಡಕ್ಕೂ ವಿರೋಧ ತೋರುವುದರಿಂದ ಇವುಗಳಲ್ಲಿ ಯಾವುದು ಪ್ರಧಾನ? ಉಪನಿಷತ್ತಿಗೆ ಅರ್ಥವನ್ನು ಸಾಂಖ್ಯಸ್ಮೃತಿಯಂತೆ ಹೇಳಬೇಕೇ? ಅಥವಾ ಮನ್ವದಿಸ್ಮೃತಿಗಳಂತೆ ಹೇಳಬೇಕೆ? ಎಂದು ಸಂದೇಹಬರುತ್ತದೆ. ಜಗತ್ಕಾರಣವನ್ನು ಹೇಳುವ ವೇದಾಂತವಾಕ್ಯಗಳೆಲ್ಲವೂ ಪ್ರಧಾನಕ್ಕೇ ಹೊಂದುತ್ತವೆ."ವೇದಾರ್ಥವನ್ನು ಸ್ಮೃತ್ಯಾಗಮಪುರಾಣಗಳ ಆಧಾರದಮೇಲೆಯೇ ನಿಶ್ಚಯಿಸಬೇಕು" ಎಂಬ ನಿಯಮದಂತೆ ಶ್ರುತಿಸ್ಮೃತಿಪುರಾಣಗಳಲ್ಲಿ ಇಹಪರ ಸುಖಗಳಿಗ ಕಾರಣವಾದ ದರ್ಶಪೂರ್ಣಮಾಸ, ಸೋಮ, ಪೌಂಡರಿಕ ಮೊದಲಾದ ಕರ್ಮಗಳನ್ನು ಹೇಳಿರುವಂತೆ ಪರಮಾಪ್ತರಾದ ಕಪಿಲಮಹರ್ಷಿಯು ಮೋಕ್ಷಸಾಧನವಾಗಿ ಸಾಂಖ್ಯಸ್ಮೃತಿಯನ್ನು ರಚಿಸಿರುವುದರಿಂದ ಆ ಸ್ಮೃತಿಯನ್ನು ಬಿಟ್ಟು ಉಪನಿಷತ್ತುಗಳಿಗೆ ಅರ್ಥವನ್ನು ನಿಶ್ಚಯಿಸಲು ಸಾಧ್ಯವಿಲ್ಲ. ಶ್ರುತಿಯಲ್ಲೇ ಕಪಿಲನು ಮಹಾಜ್ಞಾನಿ ಎಂದು ಹೇಳಿದೆ. ಆದ್ದರಿಂದ ಪ್ರಧಾನವನ್ನು ಕಾರಣವೆಂದು ಹೇಳುವ ಸಾಂಖ್ಯಸ್ಮೃತಿಯೇ ಪ್ರಮಾಣವೆನಿಸಿದೆ ಎಂದು ಆಕ್ಷೇಪ ಬಂದರೆ ಸೂತ್ರದಲ್ಲಿ ಸಮಾಧಾನವನ್ನು ತಿಳಿಸಲಾಗಿದೆ. "ಕಪಿಲರು ಜ್ಞಾನಿ ಮತ್ತು ಪರಮಾಪ್ತರು" ಎಂದು ಹೇಳಿರುವುದರಿಂದ ಅವರ ಸ್ಮೃತಿಯಂತೆ ವೇದಾರ್ಥವನ್ನು ಗ್ರಹಿಸಬೇಕೆಂದು ಹೇಳಿದರೆ ವಿಷ್ಣುವೇ ಸರ್ವೋತ್ತಮನೆಂದು ಹೇಳುವ ಶ್ರುತಿಯಿರುವುದರಿಂದ ಅವನು ರಚಿಸಿದ ಬೌದ್ಧ ಮತ್ತು ಪಾಂಚರಾತ್ರಾಗಮಗಳನ್ನು ಅನುಸರಿಸಿ ವೇದಾರ್ಥವನ್ನು ನಿಶ್ಚಯಿಸಬೇಕಾದೀತು. ಇಷ್ಟಲ್ಲದೆ, ಶ್ರುತಿಸ್ಮೃತಿಪುರಾಣಗಳಲ್ಲಿ ಮಹಾಜ್ಞಾನಿ ಎಂದು ಪ್ರಸಿದ್ಧನಾದ ಬೃಹಸ್ಪತಿಯು ಸರ್ವೋತ್ಕೃಷ್ಟನಾದ್ದರಿಂದ ಅವನು ಹೇಳಿದ ಚಾರ್ವಾಕಸ್ಮೃತಿಯನ್ನು ಅನುಸರಿಸಿ ವೇದಾಂತಾರ್ಥವನ್ನು ನಿಶ್ಚಯಿಸಬೇಕಾದೀತು. ಮತ್ತೆ ಹೀಗೆಲ್ಲಾ ಹೇಳಿದರೆ ಮನ್ವಾದಿಸ್ಮೃತಿಗಳಿಗೆ ಅಪ್ರಾಮಾಣ್ಯಬರುವುದು."ಮೊದಲಿಗೆ ಇದೆಲ್ಲವೂ ತಮೋರೂಪವಾದ ಮಾಯಾಶಕ್ತಿಯ ಸ್ವರೂಪವಾಗಿತ್ತು. ಅದರಿಂದ ಪರಮಾತ್ಮನು ಇದೆಲ್ಲವನ್ನೂ

ಹೊರಪಡಿಸಿದನು" ಎಂದು ತಮೋರೂಪವಾದ ಮಾಯಾಶಕ್ತಿಯಿಂದ ಕಾಲರುದ್ರನೇ ಬ್ರಹ್ಮಾದಿಗಳಿಗೆ ಕಾರಣನೆಂದು ಹೇಳಲಾಗಿದೆ. "ವಿಶ್ವದಲ್ಲಿ ಹಿಂದಿನದು ಮುಂದಿನದು ಎಲ್ಲವೂ ರುದ್ರನೇ" ಈ ಬಗೆಯ ಅನೇಕ ಪ್ರತ್ಯಕ್ಷಶ್ರುತಿಗಳಲ್ಲಿ ಪರಮಶಿವನೇ ಜಗತ್ಕಾರಣನೆಂದು ಹೇಳಿರುವುದರಿಂದ ಅನುಮೇಯಶ್ರುತಿಗಳನ್ನು ಅವಲಂಬಿಸಿದ ಸಾಂಖ್ಯಸ್ಮೃತಿಯು ಪ್ರಮಾಣವಾಗಲಾರದು. "ಎಲ್ಲ ವೇದಗಳೂ ಯಾವನನ್ನು ಸ್ತುತಿಸುತ್ತವೆಯೋ", "ಸರ್ವೈಶ್ವರ್ಯಸಂಪನ್ನನೂ ಸರ್ವೇಶ್ವರನೂ ಶಿವಂಕರನೂ ಆದ ಶಂಭುವೊಬ್ಬನನ್ನೇ ಜೀವನು ದಹರಾಕಾಶದಲ್ಲಿ ಧ್ಯಾನಿಸಬೇಕು" ಎಂದು ಶ್ರುತಿಗಳಲ್ಲೂ "ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದಿಂದಲೇ ಜೀವನಿಗೆ ಶಿವನಲ್ಲಿ ಭಕ್ತಿ ಹುಟ್ಟುತ್ತದೆ" ಎಂದು ಶಿವಗೀತೆ ಮೊದಲಾದ ಸ್ಮೃತಿಗಳಲ್ಲೂ ಪರಶಿವನನ್ನು ಆರಾಧ್ಯನೆಂದೂ, ಶ್ರೌತಸ್ಮಾರ್ತನಿತ್ಯನೈಮಿತ್ತಿಕಕರ್ಮಗಳೆಲ್ಲವೂ ಅವನ ಆರಾಧನೆ ಎಂದೂ ಹೇಳಿದೆ. ಇಷ್ಟಲ್ಲದೆ, "ಜೀವಪ್ರಧಾನರಿಗೆ ನಿಯಾಮಕನು", "ಯಾವನಲ್ಲಿ ಭಕ್ತಿ ಸ್ಥಿರವಾಗಿರುವುದೋ ಅವನ ಪಾಪಗಳೆಲ್ಲವೂ ತೊಲಗುತ್ತವೆ", "ಅವನ ಧ್ಯಾನಧಾರಣಾನುಸಂಧಾನಗಳಿಂದ ಜೀವನ ಮಾಯೆ ಪೂರ್ತಿಯಾಗಿ ತೊಲಗುತ್ತದೆ" ಎಂದು ಶ್ರುತಿಗಳಲ್ಲೂ, "ಅವನಿಂದಲೇ ಈ ತ್ರಿಗುಣಾತ್ಮಕವಾದ ಪ್ರಧಾನ ಹುಟ್ಟಿತು" ಎಂಬ ಸ್ಮೃತಿಯಲ್ಲೂ ಪ್ರಧಾನಕ್ಕೆ ಈಶ್ವರನೇ ನಿಯಾಮಕನೆಂದು ಹೇಳಲಾಗಿದೆ. "ಶ್ರುತಿಸ್ಮೃತಿಗಳಿಗೆ ವಿರೋಧಬಂದರೆ ವೇದಾನುಗುಣವಾದ ಸ್ಮೃತಿಯೇ ಪ್ರಬಲ" ವೆಂದು ಮೀಮಾಂಸಾನ್ಯಾಯವಿರುವುದರಿಂದ ವೇದಾನುಗುಣವಾದ ಮನ್ವಾದಿಸ್ಮೃತಿಗಳೇ ಪ್ರಬಲವೆಂದು ನಿಶ್ಚಿತವಾಯಿತು.

**ಗುಣತ್ರಯಾತ್ಮಕಸ್ಯ ಜಡಸ್ಯ ಪ್ರಧಾನಸ್ಯ ಚೇತನಜೀವಾವಿರ್ಭಾವಹೇತುತ್ವಾಯೋಗೇಽಪಿ ತತ್ಸಾನ್ನಿಧ್ಯವಶಾತ್ಕಾಪಿಲಸ್ಮೃತಿಪ್ರಸಿದ್ಧಮಹದಹಂಕಾರಾದೀನಾಂ ಕಾರಣತ್ವಮುಪಪನ್ನಮಿತ್ಯಾಶಂಕ್ಯ ನಿರಾಕರೋತಿ—**

**ಇತರೇಷಾಂ ಚಾನುಪಲಬ್ಧೇಃ ॥ ೨ ॥**

**ಇತರೇಷಾಮಚೇತನಮಹದಹಂಕಾರಾದೀನಾಂ ಚಾನುಪಲಬ್ಧೇಃ 'ಆತ್ಮನ ಆಕಾಶಸ್ಸಂಭೂತಃ', 'ಏತಸ್ಮಾಜ್ಜಾಯತೇ ಪ್ರಾಣಃ', 'ಅಕ್ಷರಾತ್ಸಂಭವತೀಹ ವಿಶ್ವಂ' ಇತ್ಯಾದಿಶ್ರುತಿಸ್ಮೃತ್ಯಾಗಮೇಷ್ವಪಿ ಮಹದಹಂಕಾರಕಾರಣತ್ವಸ್ಯ ಪರಮಶಿವ ಏವ ದರ್ಶನಾದ್ಘಟಾದಿವದಚೇತನಸ್ಯ ಪ್ರಧಾನಸ್ಯ ಮಹದಾದಿಕಾರಣತ್ವಂ ಸರ್ವಥಾ ನ ಸಂಭವತಿ. ಯದ್ವೈ ಕಿಂಚ ಮನುರವದತ್"ಇತಿ ಶ್ರುತಿಪ್ರಸಿದ್ಧಾನಾಂ ಮನ್ವಾದೀನಾಂ ಜಗದ್ಭೇಷಜಭೂತಸ್ವವಾಕ್ಯಾನಾಮೇವ ವೇದಾಂತೋಪಯೋಗಿತ್ವಂ ಯುಕ್ತಂ.**

ತ್ರಿಗುಣಾತ್ಮಕವಾದ ಜಡಪ್ರಧಾನವು ಚೇತನಜೀವರಿಗೆ ಕಾರಣವಾಗದಿದ್ದರೂ ಚೇತನಸಾನ್ನಿಧ್ಯದಿಂದ ಬುದ್ಧಿ ಅಹಂಕಾರ ಮೊದಲಾದವಕ್ಕೆ ಕಾರಣವಾಗಲೆಂದಾಶಂಕಿಸಿ ನಿರಾಕರಿಸುತ್ತಾನೆ—**ಇತರೇಷಾಂ ಚಾನುಪಲಬ್ಧೇಃ ॥ ೨ ॥**

"ಆತ್ಮನಿಂದ ಆಕಾಶಾದಿಗಳು ಹುಟ್ಟಿದವು" ಇತ್ಯಾದಿ ಶ್ರುತಿಗಳಲ್ಲೂ ಸ್ಮೃತ್ಯಾಗಮಗಳಲ್ಲೂ ಪರಮಶಿವನೇ ಮಹದಹಂಕಾರಗಳಿಗೆ ಕಾರಣನೆಂದು ಕಂಡುಬಂದಿದೆಯೇ ಹೊರತು ಪ್ರಧಾನವು ಕಾರಣವೆಂದು ಕಂಡುಬಂದಿಲ್ಲ. ಆದ್ದರಿಂದ ಘಟಾದಿಗಳಂತೆ ಅಚೇತನವಾದ ಪ್ರಧಾನವು ಜಗತ್ಕಾರಣವಾಗಲಾರದು. 'ಮನುವಿನ ಮಾತು ಔಷಧ' ವೆಂದು ಶ್ರುತಿಯಲ್ಲಿ ಪ್ರಸಿದ್ಧವೆನಿಸಿರುವುದರಿಂದ ಮನ್ವಾದಿವಾಕ್ಯಗಳಿಂದಲೇ ವೇದಾರ್ಥವನ್ನು ನಿಶ್ಚಯಿಸಬೇಕೆಂಬುದು ಯುಕ್ತವಾಗುತ್ತದೆ.

ಸ್ವತಃ ಪ್ರಧಾನಸ್ಯ ಜಗದುಪಾದಾನತ್ವಾಸಂಭವೇಽಪಿ ಈಶ್ವರನಿಯೋಗೇನ ಸಂಭವತೀತ್ಯಾಶಂಕ್ಯ ತದ್ವಿಧಾಯಕಯೋಗಮತಂ ನಿರಾಕರೋತಿ.

ಯೋಗಪ್ರತ್ಯುಕ್ತ್ಯಧಿಕರಣಂ ॥ ೨ ॥ ಏತೇನ ಯೋಗಃ ಪ್ರತ್ಯುಕ್ತಃ ॥ ೩ ॥

ಸಾಂಖ್ಯಯೋಗಯೋಃ ಸ್ವಾತಂತ್ರ್ಯಾಸ್ವಾತಂತ್ರ್ಯಭೇದೇಽಪಿ ಹಿರಣ್ಯಗರ್ಭಶ್ರುತೇಃ ಪ್ರಧಾನೋಪಾದಾನಪ್ರಾಧಾನ್ಯನಿರ್ದೇಶಾತ್ ಸಾಂಖ್ಯಸ್ಮೃತಿನಿರಾಕರಣೇನೈವ ಯೋಗಸ್ಮೃತಿರಪಿ ನಿರಾಕೃತಃ ತಿರಸ್ಕೃತಃ. "ಸರ್ವೋ ವೈ ರುದ್ರಃ", "ಸರ್ವಂ ಖಲ್ವಿದಂ ಬ್ರಹ್ಮ", "ಐತದಾತ್ಮ್ಯಮಿದಂ ಸರ್ವಂ", "ಏಕಸ್ಮಿನ್ ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" ಇತ್ಯಾದಿಷು ಜಗದಾತ್ಮಕತ್ವಂ ಬ್ರಹ್ಮಣೋ ನಿರ್ದಿಷ್ಟಂ. ತದುಪಾದಾನತ್ವಾಯೋಗೇ ತದಾತ್ಮಕತ್ವಾಯೋಗಾತ್, "ಹಿರಣ್ಯಗರ್ಭಸ್ಸಮವರ್ತತಾಗ್ರೇ" ಇತ್ಯಾದಿಷು ಹಿರಣ್ಯಗರ್ಭಸ್ಯ ಸರ್ವಾತಿಶಾಯಿತ್ವಸ್ಮರಣಾತ್, "ತ್ರಿರುನ್ನತಂ ಸ್ಥಾಪ್ಯಸಮಂ ಶರೀರಂ" ಇತ್ಯಾದಿನಾ ಶ್ವೇತಾಶ್ವತರಾದಿಶ್ರುತಿಶತೇಷು ಅಭ್ಯುದಯನಿಶ್ಶ್ರೇಯಸಫಲಸಾಧನತ್ವೇನ ಯೋಗವಿದ್ಯಾಯಾಃ ಪ್ರಪಂಚಿತತ್ವಾತ್, ಯೋಗಸ್ಮೃತ್ಯನುಸಾರೇಣ ಪ್ರಧಾನಸ್ಯ ಪ್ರಪಂಚೋಪಾದಾನತ್ವಂ ಉತ ಬ್ರಹ್ಮಕಾರಣತ್ವಂ ವೇತಿ ಸಂಶಯಃ. ಮೃತ್ಕುಲಾಲವತ್ಪ್ರಧಾನಸ್ಯೋಪಾದಾನತ್ವಮೀಶ್ವರಸ್ಯ ನಿಮಿತ್ತತ್ವಂ ಯುಕ್ತಂ. ಜಗತಃ ಪರಮೇಶ್ವರೋಪಾದಾನತ್ವೇ ಮೃದಾದಿವದ್ವಿಕಾರಿತ್ವವಿನಾಶಿತ್ವಾದಿನಾನಾದೋಷಭೂಯಸ್ತ್ವಂ ದುರ್ನಿವಾರಂ. ಕಿಂಚಾಭ್ಯುದಯನಿಶ್ಶ್ರೇಯಸಫಲಹೇತುತ್ವೇನ ಸ್ಮೃತಿಪುರಾಣೇಷು ಯೋಗಭೂಯಸ್ತ್ವದರ್ಶನಾತ್. ಶ್ರುತ್ಯರ್ಥಪ್ರಕಾಶಕಕಾಮಿಕಾದಿಶೈವಾಗಮೇಷ್ವಪಿ ಪ್ರಾಕೃತವೈಕೃತಾತ್ಮಕಮಂತ್ರಲಯಹಠರಾಜವಿಭಾಗೇನ ತತ್ಪ್ರಪಂಚಿತತ್ವಾತ್. "ಆಕುಂಚನೇನ ಕುಂಡಲಿನ್ಯಾ ಕವಾಟಮುದ್ಘಾಟ್ಯ ಮೋಕ್ಷದ್ವಾರಂ ವಿಭೇದಯೇತ್", "ಮರುತೋ ಮಧ್ಯಸಂಚಾರೇ ಮನಸ್ಸ್ಥೈರ್ಯಂ ಪ್ರಜಾಯತೇ । ಸರ್ವಚಿಂತಾಂ ಪರಿತ್ಯಜ್ಯ ಸಾವಧಾನೇನ ಚೇತಸಾ । ನಿರ್ವಿಕಲ್ಪಪ್ರಸನ್ನಾತ್ಮಾ ಪ್ರಾಣಾಯಾಮಂ ಸಮಭ್ಯಸೇತ್ ॥", ಮರುನ್ನಿರೋಧ ಅಭ್ಯಸನೀಯಃ" ಇತ್ಯಾದಿನೋಪನಿಷತ್ಸು,

"ಯೋಗಶ್ಚಿತ್ತವೃತ್ತಿನಿರೋಧಃ"ಇತಿಸ್ಮೃತಿಷು,"ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ । ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ॥" ಇತಿ ಗೀತಾಯಾಂ ಚಿತ್ತವೃತ್ತಿನಿರೋಧಕತ್ವಪಾಪಮೋಚಕತ್ವಬ್ರಹ್ಮಪ್ರಾಪ್ತ್ಯಾದಿಸಾಧನತ್ವೇನ ಯೋಗಸ್ಯೈವ ನಿರ್ದೇಶಾತ್ತದ್ವಿಧಾಯಕಹಿರಣಗರ್ಭಸ್ಮೃತ್ಯಾಸುಗುಣ್ಯೇನ ವೇದಾಂತಾರ್ಥನಿಶ್ಚಯೋ ಯುಕ್ತ ಇತಿ ಚೇದುಚ್ಯತೇ, ಯೋಗಸ್ಯ ಶ್ರುತ್ಯಾಗಮಾದಿಷು ಧರ್ಮಬ್ರಹ್ಮಸಾಧನತ್ವೇನ ಮನೋನಿರೋಧಕತ್ವೇನ ಶಿಷ್ಟೈರಾಚರಿತತ್ವೇನ ಚ ಪ್ರಾಧಾನ್ಯೇಽಪಿ ತನ್ನಿಷ್ಠಪ್ರಧಾನೋಪಪಾದನತ್ವಂ ನೋಪಪನ್ನಂ, "ಏಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾದ್ವಾಚಾರಂಭಣಂ ವಿಕಾರೋನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ"ಇತ್ಯೇಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾದೃಷ್ಟಾಂತಸ್ಥಾಪಕಸರ್ವವೇದಾಂತವಿರೋಧಾತ್. "ಸ್ಮೃತ್ಯಾಗಮಪುರಾಣೇಷು ಯೋಽಥಃ ಸ್ಮೃತ್ಯಾ ವಿರುಧ್ಯತೇ । ತಂತ್ರಾರ್ಥಸ್ಸ ತು ವಿಜ್ಞೇಯಃ ಗರ್ಹಿತಂ ವೇದಾವಾದಿಭಿಃ ॥" ಇತಿ ಮೀಮಾಂಸಾನ್ಯಾಯದರ್ಶನಾತ್. "ಪರಾಽಸ್ಯ ಶಕ್ತಿರ್ವಿವಿಧೈವ", "ಯಥೋರ್ಣನಾಭಿಃ" ಇತ್ಯಾದಿಷು ಅಭಿನ್ನನಿಮಿತ್ತೋಪಾದಾನಕಾರಣತ್ವಸ್ಯ ಪರಮೇಶ್ವರೇ ನಿರ್ದೇಶಾತ್. ಪರಮೇಶ್ವರಸ್ಯೋಪಾದಾನತ್ವೇ ಮೃದಾದಿವದ್ವಿಕಾರಿತ್ವಾದಿದೋಷಪ್ರಸಕ್ತಿರಿತಿ ಯದುಕ್ತಂ ತದಸತ್. ಜೀವಶಕ್ತಿವತ್ಪರಮೇಶ್ವರಶಕ್ತೇರುಪಾದಾನವಿಕಾರಿತ್ವಾಂಗೀಕಾರಾತ್ ಶಕ್ತಸ್ಯ ಪರಮೇಶ್ವರಸ್ಯ ಪರಿಣಾಮವಿಕಾರಿತ್ವಾದಿಕಂ ನೋಪಪನ್ನಂ. ಕುಲಾಲವನ್ನಿಮಿತ್ತತ್ವಾಂಗೀಕಾರೇ"ಯತ್ಪ್ರಯಂತ್ಯಭಿಸಂವಿಶಂತಿ" ಇತ್ಯಾದಿಶ್ರುತಿವಿರೋಧೋ ದುರ್ನಿವಾರಃ. ತಸ್ಮಾತ್ಸಾಂಖ್ಯಸ್ಮೃತಿವದ್ಯೋಗೋ ನಿರಾಕೃತಃ. ತದಾ ಸಾಂಖ್ಯಯೋಗಶಾಸ್ತ್ರಯೋಃ ಕಾ ಗತಿರಿತಿ ಚೇದ್ವೇದಾಂತಾವಿರೋಧೇನ ಸಾಂಖ್ಯಯೋಗಶಾಸ್ತ್ರಸಮನ್ವಯೋ ಯೋಜನೀಯಃ.

ಸ್ವತಂತ್ರವಾದ ಪ್ರಧಾನವು ಜಗತ್ಕಾರಣವಾಗದಿದ್ದರೂ ಈಶ್ವರನ ನಿಯೋಗದಿಂದ ಅದು ಜಗತ್ಕಾರಣವಾಗಿದೆ ಎಂಬ ಯೋಗಮತವನ್ನು ನಿರಾಕರಿಸುತ್ತಾನೆ.

ಏತೇನ ಯೋಗಃ ಪ್ರತ್ಯುಕ್ತಃ ॥ ೩ ॥

ಪ್ರಧಾನವು ಸ್ವತಂತ್ರವಾಗಿ ಜಗತ್ಕಾರಣವೆಂದು ಸಾಂಖ್ಯರೂ ಪರಮೇಶ್ವರನಿಗಧೀನವಾಗಿ ಜಗತ್ಕಾರಣವೆಂದು ಯೋಗಮತೀಯರೂ ಹೇಳಿದರೂ ಇಬ್ಬರೂ ಪ್ರಧಾನವನ್ನೇ ಜಗತ್ತಿಗೆ ಉಪಾದಾನಕಾರಣವೆಂದು ಹೇಳಿರುವುದರಿಂದ ಸಾಂಖ್ಯಸ್ಮೃತಿಯನ್ನು ನಿರಾಕರಿಸಿದ ನ್ಯಾಯದಿಂದಲೇ ಯೋಗವನ್ನೂ ನಿರಾಕರಿಸಿದಂತಾಯಿತು. "ಇದೆಲ್ಲವೂ ಪರಶಿವಾತ್ಮಕವು" ಎಂದು ಶ್ರುತಿಯಲ್ಲಿ ಹೇಳಿದೆ. ಇಲ್ಲಿ ಶಿವನನ್ನೇ ಜಗದುಪಾದಾನನೆಂದು ಹೇಳದಿದ್ದರೆ ಅವನು ಜಗದ್ರೂಪನಾಗಲಾರನು. ಆದರೆ

"ಹಿರಣ್ಯಗರ್ಭನು ಜಗತ್ತೆಲ್ಲಕ್ಕೂ ಪತಿಯಾಗಿ ಮೊದಲಿದ್ದನು" ಎಂಬ ಶ್ರುತಿಯಲ್ಲಿ ಹಿರಣ್ಯಗರ್ಭನನ್ನು ಸರ್ವೋತ್ಕೃಷ್ಟನೆಂದು ಹೇಳಿರುವುದರಿಂದ ಶ್ವೇತಾಶ್ವತರಾದಿ ಶ್ರುತಿಗಳಲ್ಲಿ ಸ್ವರ್ಗಾಪವರ್ಗಗಳಿಗೆ ಸಾಧನವಾಗಿ ಯೋಗವನ್ನು ಪ್ರಶಂಸಿಸಿರುವುದರಿಂದ ಯೋಗಸ್ಮೃತಿಯಲ್ಲಿ ಪ್ರಧಾನವೇ ಜಗದುಪಾದಾನವೆಂದು ಹೇಳಲಾಗಿದೆ. ಆದ್ದರಿಂದ ಇವೆರಡರಲ್ಲಿ ಯಾವುದು ಯುಕ್ತವೆಂಬ ಸಂಶಯ ಬಂದರೆ ಘಟಕ್ಕೆ ಮಣ್ಣಿನಂತೆ ಜಗತ್ತಿಗೆ ಪ್ರಧಾನವೇ ಉಪಾದಾನವೆಂದೂ, ಕುಂಬಾರನಂತೆ ಶಿವನು ನಿಮಿತ್ತನೆಂದೂ ಹೇಳುವುದೇ ಯುಕ್ತವಾಗುತ್ತದೆ. ಪರಶಿವನನ್ನೇ ಜಗತ್ತಿಗೆ ಉಪಾದಾನನೆಂದು ಹೇಳಿದರೆ ಅವನು ಮಣ್ಣಿನಂತೆ ವಿಕಾರಹೊಂದಿ ನಾಶವಾಗಬೇಕಾದೀತು. ಇದಲ್ಲದೆ ಸ್ಮೃತಿಪುರಾಣಗಳಲ್ಲಿ ಸ್ವರ್ಗ ಅಪವರ್ಗಗಳಿಗೆ ಸಾಧನವಾಗಿ ಯೋಗವನ್ನು ವರ್ಣಿಸಲಾಗಿದೆ. ವೇದಾರ್ಥವನ್ನು ಪ್ರಕಾಶಿಸುವ ಕಾಮಿಕಾದಿ ಶೈವಾಗಮಗಳಲ್ಲೂ ಪ್ರಾಕೃತ, ವೈಕೃತರೂಪವಾದ ಮಂತ್ರ, ಲಯ, ಹಠ ಮತ್ತು ರಾಜಯೋಗಗಳನ್ನು ತಿಳಿಸಲಾಗಿದೆ. "ಕುಂಡಲಿನೀಶಕ್ತಿಯನ್ನು ಅಡಗಿಸಿ ಮೋಕ್ಷದ ಬಾಗಿಲನ್ನು ತೆರೆಯಬೇಕು. ಪ್ರಾಣವಾಯುವಿನ ನಿರೋಧದಿಂದ ಮನಸ್ಸಿನಲ್ಲಿ ಸ್ಥೈರ್ಯವುಂಟಾಗುತ್ತದೆ. ಎಲ್ಲಾ ಚಿಂತೆಯನ್ನು ತೊರೆದು ಪ್ರಶಾಂತಚಿತ್ತನಾಗಿ ನಿರ್ಮಲವಾದ ಮನಸ್ಸಿನಿಂದ ಪ್ರಾಣಯಾಮವನ್ನು ಆಚರಿಸಬೇಕು". "ಚಿತ್ತವೃತ್ತಿಯನ್ನು ಅಡಗಿಸುವುದೇ ಯೋಗ" ಎಂದು ಸ್ಮೃತಿಗಳಲ್ಲೂ, "ಸಾಂಖ್ಯರು ಹೊಂದುವ ಜ್ಞಾನವನ್ನು ಯೋಗಸಿಷ್ಠರೂ ಹೊಂದುತ್ತಾರೆ. ಸಾಂಖ್ಯಯೋಗಗಳು ಬೇರೆ ಎಂದು ಹೇಳುವವರು ಬಾಲಕರೇ ಹೊರತು ಪಂಡಿತರಲ್ಲ" ಎಂದು ಗೀತೆಯಲ್ಲೂ ಚಿತ್ತವೃತ್ತಿಗಳನ್ನು ತಡೆಯಲಿಕ್ಕೂ, ಪಾಪವಿಮೋಚನೆಗೂ,ಬ್ರಹ್ಮಪ್ರಾಪ್ತಿಗೂ ಸಾಧನವಾಗಿ ಯೋಗವನ್ನು ಹೇಳಿರುವುದರಿಂದ ಆ ಯೋಗವನ್ನು ತಿಳಿಸುವ ಹಿರಣ್ಯಗರ್ಭವಿರಚಿತಯೋಗಸ್ಮೃತಿಗೆ ಅನುಗುಣವಾಗಿಯೇ ವೇದಾಂತಾರ್ಥವನ್ನು ತಿಳಿಯಬೇಕು ಎಂದು ಆಕ್ಷೇಪ ಬಂದರೆ ಸಿದ್ಧಾಂತವನ್ನು ಹೇಳಲಾಗುವುದು. ಯೋಗವನ್ನು ಶ್ರುತ್ಯಾಗಮಗಳಲ್ಲಿ ಧರ್ಮಬ್ರಹ್ಮಗಳಿಗೂ, ಮನೋನಿರೋಧಕ್ಕೂ ಸಾಧನವೆಂದು ಹೇಳಿದ್ದರೂ ಶಿಷ್ಟರು ಆಚರಿಸಿದ್ದರೂ ಆ ಸ್ಮೃತಿಯಂತೆ ಪ್ರಧಾನವನ್ನೇ ಜಗತ್ಕಾರಣವೆಂದು ಹೇಳುವುದು ಯುಕ್ತವಲ್ಲ. ಹಾಗಾದರೆ ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದೆಂದು ಹೇಳುವ ಎಲ್ಲಾ ವೇದಾಂತಗಳಿಗೂ ವಿರೋಧ ಬರುವುದು. ಸ್ಮೃತ್ಯಾಗಮಗಳಲ್ಲಿ ಶ್ರುತಿಗೆ ವಿರೋಧವೆನಿಸಿದ ಅರ್ಥವು ವೈದಿಕರಿಗೆ ಗ್ರಾಹ್ಯವಲ್ಲವೆಂದು ಮೀಮಾಂಸಾನ್ಯಾಯವಿರುವುದರಿಂದ ಹಿರಣ್ಯಗರ್ಭಸ್ಮೃತಿ ಪ್ರಮಾಣವಾಗಲಾರದು. "ಮಾಯೆಯೇ ಪ್ರಕೃತಿ, ಈಶ್ವರನು ಮಾಯಾಪತಿ" ಎಂದು ಅನೇಕ ಶ್ರುತಿಗಳಲ್ಲಿ ಪರಮೇಶ್ವರನೇ ಜಗತ್ತಿಗೆ ಉಪಾದಾನ ಮತ್ತು ನಿಮಿತ್ತನೆಂದು ಹೇಳಿದೆ. ಹಾಗಾದರೆ ಮಣ್ಣಿನಂತೆ ಪರಮಶಿವನಿಗೆ ವಿಕಾರಗಳು ಬರುತ್ತವೆ ಎಂದು ಹೇಳುವುದು ಸರಿಯಲ್ಲ. ಜೀವಶಕ್ತಿಯಂತೆ ಪಶಶಿವನ ಶಕ್ತಿಯನ್ನೇ ಉಪಾದಾನವೆಂದು ಭಾವಿಸಿ ಅದಕ್ಕೆ ವಿಕಾರವನ್ನು ಹೇಳುವುದರಿಂದ ಶಕ್ತಿವಿಶಿಷ್ಟನಾದ ಪರಶಿವನಿಗೆ ವಿಕಾ

ರದ ಪ್ರಸಕ್ತಿ ಇಲ್ಲ. ಕುಂಬಾರನಂತೆ ಅವನು ನಿಮಿತ್ತಕಾರಣನೆಂದು ಹೇಳಿದರೆ "ಎಲ್ಲವೂ ಅವನಲ್ಲಿಯೇ ಲೀನವಾಗುವುದು" ಎಂಬ ಶ್ರುತಿಗೆ ವಿರೋಧವುಂಟಾಗುವುದು. ಆದ್ದರಿಂದ ಸಾಂಖ್ಯಸ್ಮೃತಿಯಂತೆ ಯೋಗಸ್ಮೃತಿಯೂ ಅಪ್ರಮಾಣವೇ ಆಗುವುದು. ಹಾಗಾದರೆ ಸಾಂಖ್ಯಯೋಗ ಶಾಸ್ತ್ರಗಳಿಗೆ ಗತಿ ಏನೆಂದು ಕೇಳಿದರೆ ವೇದಾಂತಕ್ಕೆ ವಿರೋಧವಿಲ್ಲದ ಕಡೆ ಅವನ್ನು ಅನ್ವಯಿಸಬೇಕೆಂದು ಹೇಳಬೇಕು.

ತ್ರಿಗುಣಾತೀತಸ್ಯೇಶ್ವರಸ್ಯ ಕಥಂ ತ್ರಿಗುಣಾತ್ಮಕಜಗತ್ಕಾರಣತ್ವಮುಪಪನ್ನಮಿತ್ಯಾಶಂಕ್ಯಾಹ—ನ ವಿಲಕ್ಷಣತ್ವಾಧಿಕರಣಂ || ೩ ||

ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ || ೪ ||

ನಿರ್ಗುಣಸ್ಯ ಬ್ರಹ್ಮಣಃ ಗುಣತ್ರಯಾತ್ಮಕಸ್ಯ ಪ್ರಧಾನಸ್ಯ ಚ ವಿಲಕ್ಷಣತ್ವಾದಸ್ಯ ಪ್ರಧಾನಸ್ಯೈವ ತ್ರಿಗುಣಾತ್ಮಕಚೇತನಾಚೇತನಜಗದುಪಾದಾನತ್ವಂ ಸಂಭವತೀತಿ ಚೇನ್ನ, ತಥಾತ್ವಂ ಚಶಬ್ದಾತ್, ತಥಾತ್ವಮುಪಾದಾನಂ ಚಶಬ್ದೇನ ನಿಮಿತ್ತಕಾರಣಂ. ಚಶಬ್ದಾತ್, "ಯಥೋರ್ಣನಾಭಿಃ ಸೃಜತೇ ಗೃಹ್ಯತೇ ಚ । ಯಥಾ ಪೃಥಿವ್ಯಾಮೋಷಧಯಸ್ಸಂಭವಂತಿ । ತಥಾಕ್ಷರಾತ್ಸಂಭವತೀಹ ವಿಶ್ವಂ ||" ಇತ್ಯಾದಿವೇದಶಬ್ದಾತ್ಪರಮೇಶ್ವರಸ್ಯೈವ ಜಗದುಭಯಕಾರಣತ್ವಂ ಸಂಭವತಿ. "ಅಜಾಮೇಕಾಂ" ಇತಿ ಶ್ರುತೌ ಪರಮೇಶ್ವರಸ್ಯ ಜಗತ್ಕಾರಣತ್ವಾನವಗಮಾತ್ಸಂದೇಹಃ. ಅಸ್ಯಾಂ ಶ್ರುತೌ ಅಸಂದಿಗ್ಧತಯಾ ಗುಣತ್ರಯವಿಶಿಷ್ಟಪ್ರಧಾನಸ್ಯ ಚೇತನಾಚೇತನಕಾರಣತ್ವಂ ಸೂಚ್ಯತೇ. ಲೋಕೇ ಚೇತನಾಚ್ಚೇತನೋತ್ಪತ್ತೇರಚೇತನಾದಚೇತನೋತ್ಪತ್ತೇಶ್ಚ ಸ್ವಧರ್ಮತ್ವೇನ ದರ್ಶನಾತ್, "ವಿಶ್ವಾಧಿಕೋ ರುದ್ರೋ ಮಹರ್ಷಿಃ", "ಪ್ರಧಾನಕ್ಷೇತ್ರಜ್ಞಪತಿಃ" ಇತ್ಯಾದಿಷು ಜಗನ್ನಿಯಾಮಕತ್ವೇಽಪಿ ತದ್ವಿಲಕ್ಷಣತ್ವಂ ಚ ಪ್ರಚಕ್ಷ್ಯತೇ. ಮನುನಾಪಿ ಚತುರ್ಮುಖಾದೀನಾಂ ತಮೋಭೂತಪ್ರಧಾನಹೇತ್ವತ್ವಂ ಪ್ರದರ್ಶಿತಂ. ತಸ್ಮಾತ್ಪರಮೇಶ್ವರನಿಮಿತ್ತಕಾರಣತ್ವಮಾತ್ರಪ್ರತಿಪಾದಕಯೋಗಸ್ಮೃತ್ಯನುಸಾರೇಣೈವ ವೇದಾಂತಾರ್ಥನಿಶ್ಚಯೋ ಯುಕ್ತ ಇತಿ ಚೇದಭ್ರಮಃ. ಶ್ರುತ್ಯಾ ಚೇತನೋರ್ಣನಾಭೌ ಅಚೇತನತಂತುಪಟೋತ್ಪತ್ತಿಃ. ಚೇತನಪುರುಷಾದಚೇತನಲೋಮನಖೋತ್ಪತ್ತಿಶ್ಚೋಪಪದರ್ಶಿತಾ. 'ಅಜಾಮೇಕಾಂ' ಇತಿ ಶ್ರುತಿನಿಷ್ಠಪ್ರಧಾನಕಾರಣತ್ವಸ್ಯ ಬ್ರಹ್ಮಣ್ಯುಪಪತ್ತೇಃ. "ಪ್ರಧಾನಕ್ಷೇತ್ರಜ್ಞಪತಿಃ" ಇತ್ಯಾದಿಷು ಪ್ರಧಾನನಿಯಾಮಕತ್ವಂ ಶಿವಸ್ಯೈವೋಪದಿಷ್ಟಂ. ತಸ್ಮಾದಚೇತನತ್ವಮಲಿನತ್ವಾನೀಶ್ವರತ್ವದುಃಖಾತ್ಮಕತ್ವಚಿದಚಿದಾತ್ಮಕಪ್ರಪಂಚಕಾರಣತ್ವಮವಿರೋಧಂ. ಏತೇನ ಮನುಸ್ಮೃತ್ಯುಕ್ತಪ್ರಧಾನಪ್ರಕೃತಿಕಚತುರ್ಮುಖಾದಿಕಾರಣತ್ವಂ ತಜ್ಜಡಪ್ರಧಾನಾಧಿಷ್ಠಾನೇಶ್ವರಸ್ಯೈವ ನಿರ್ದಿಷ್ಟಂ. ನನು "ನಾರಾಯಣಾದ್ರುದ್ರೋ

ಜಾಯತೇ ” ಇತ್ಯಾದಿಷು ಬ್ರಹ್ಮಾದಿಕಾರಣತ್ವಸ್ಯ ನಾರಾಯಣೇ ಉಪದೇಶಾತ್. ಕಿಂಚ “ ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ । ತಾ ಯದಸ್ಯಾಯನಂ ಪೂರ್ವಂ ತೇನ ನಾರಾಯಣಸ್ಸ್ಮೃತಃ ॥ ” ಇತಿ ತದುತ್ತರತ್ರ ನಾರಾಯಣಶಬ್ದೋ ವಿವಕ್ಷಿತಃ. ತದುಪಸಂಹಾರೇ “ರುಕ್ಮಾಭಂ ಸ್ವಪ್ನಧೀಗಮ್ಯಂ ವಿಂದ್ಯಾತ್ತಂ ಪುರುಷಂ ಪರಂ” ಇತಿ ಹಿರಣ್ಮಯತ್ವಾದಿಧರ್ಮಾಶ್ಚ ತಸ್ಯೈವೋಕ್ತಾಃ. “ ವಿಷ್ಣೋಸ್ಸಕಾಶಾದುತ್ಪನ್ನಂ ಜಗತ್ ”, “ ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ ” ಇತಿ ವಿಷ್ಣುಪುರಾಣಾದಿಷು ಜಗಜ್ಜನ್ಮಾದಿಕಾರಣತ್ವಂ ಚ ಸ್ಪಷ್ಟಮುಪದಿಷ್ಟಂ. ಅತಏವ ಮನುಸ್ಮೃತ್ಯಭಿಹಿತಹಿರಣ್ಯಗರ್ಭಾದಿಜನಕತ್ವಂ ನಾರಾಯಣಸ್ಯಾಭಿಪ್ರೇತಮಿತಿ ಚೇತ್ತದಸತ್. “ ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ ”, “ ಯೋ ಬಹ್ಮಾಣಂ ವಿದಧಾತಿ ಪೂರ್ವಂ ” ಇತ್ಯಾದಿಷು ಹಿರಣ್ಯಗರ್ಭಾದಿಕಾರಣತ್ವಮುಸಂಧಿಗ್ಧತಯಾ ಶಿವಸ್ಯೈವ ಸೂಚಿತಂ. “ ನಾರಾಯಣಾದ್ಬ್ರಹ್ಮಾ ಜಾಯತೇ ” ಇತ್ಯಾದಿಷು ಮೂರ್ತಿತ್ರಯಕಾರಣತ್ವಸ್ಯ ನಾರಾಯಣೇಽದರ್ಶನಾತ್ ತದವಾಂತರಸೃಷ್ಟಿವಿಷಯತ್ವಮಿತಿ ವೇದಿತವ್ಯಂ. “ ಋತಂ ಸತ್ಯಂ ”, “ ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ,” “ ಪುರುಷೋ ವೈ ರುದ್ರಃ ”, “ ತತ್ಪುರುಷಾಯ ವಿದ್ಮಹೇ—ತನ್ನೋ ರುದ್ರಃ ಪ್ರಚೋದಯಾತ್ ” ಇತ್ಯಾದಿಶ್ರುತಿಶತೇಷು ಶಿವಸ್ಯೈವ ಹಿರಣ್ಮಯತ್ವಪುರುಷಶಬ್ದವಾಚ್ಯತ್ವಾದಿದರ್ಶನಾತ್. ಶ್ರುತಿವಿರುದ್ಧವಿಷ್ಣುಪುರಾಣವಚನಾನಾಂ ಬೌದ್ಧಾದ್ಯಾಗಮಾದಿವದ್ಭ್ರಾಂತಿಮೂಲಕತ್ವಾದ್ವೇದೋಪಬೃಂಹಣಂ ನ ನ್ಯಾಯ್ಯಮಿತಿ ವೇದಿತವ್ಯಂ. ಮನುಪ್ರಣೀತತಮಶ್ಶಬ್ದಸ್ಯ ಬಹಿಸ್ತಮೋಗುಣವಿಶಿಷ್ಟಕಾಲರುದ್ರಪರಮಿತಿ ವ್ಯವಹ್ರಿಯತೇ.

ತ್ರಿಗುಣಾತೀತನಾದ ಈಶ್ವರನು ತ್ರಿಗುಣಾತ್ಮಕವಾದ ಜಗತ್ತಿಗೆ ಕಾರಣನೆಂಬುದು ಹೇಗೆ ಹೊಂದುತ್ತದೆ ಎಂದಾಶಂಕಿಸಿ ನಿರಾಕರಿಸುತ್ತಾನೆ. **ನವಿಲಕ್ಷಣತ್ವಾಧಿಕರಣ ॥**

**ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ॥ ೪ ॥**

ನಿರ್ಗುಣಬ್ರಹ್ಮಕ್ಕೂ ಗುಣತ್ರಯರೂಪವಾದ ಪ್ರಧಾನಕ್ಕೂ ವೈಲಕ್ಷಣ್ಯವಿರುವುದರಿಂದ ತ್ರಿಗುಣಾತ್ಮಕವಾದ ಜಗತ್ತಿಗೆ ಪ್ರಧಾನವೇ ಉಪಾದಾನಕಾರಣವೆಂಬುದು ಸಂಭವಿಸುತ್ತದೆ ಎಂದು ಹೇಳುವುದು ಯುಕ್ತವಲ್ಲ. ಯಾಕೆಂದರೆ ಶ್ರುತಿಯಲ್ಲಿ ಪರಶಿವನೇ ಜಗತ್ತಿಗೆ ಉಪಾದಾನನೂ ನಿಮಿತ್ತನೂ ಆಗಿರುವನೆಂದು ಹೇಳಲಾಗಿದೆ. ಸೂತ್ರದಲ್ಲಿ “ ತಥಾತ್ವಂ ” ಎಂದರೆ ಉಪಾದಾನವೆಂದೂ, “ ಚ ” ಶಬ್ದದಿಂದ ನಿಮಿತ್ತವೆಂದೂ ಅರ್ಥವಾಗುತ್ತದೆ. ಪೃಥಿವಿಯಲ್ಲಿ ಲತೆಗಳು ಹುಟ್ಟುವಂತೆಯೂ, ದೇಹದಲ್ಲಿ ಜೀವನಿದ್ದರೆ ಕೇಶಲೋಮಗಳು ಹುಟ್ಟುವಂತೆಯೂ, ಅಕ್ಷರನಾದ ಪರಶಿವನಿಂದ ಈ

ವಿಶ್ವವು ಹೊರಬಂದಿದೆ " ಎಂದು ಶ್ರುತಿಯಲ್ಲಿ ಪರಶಿವನೇ ಜಗತ್ತಿಗೆ ಉಭಯಕಾರಣನೆಂದು ಹೇಳಲಾಗಿದೆ. ಆದರೆ 'ಅಜಾಮೇಕಾಂ' ಎಂಬ ಶ್ರುತಿಯಲ್ಲಿ ಪರಮೇಶ್ವರನೇ ಜಗತ್ಕಾರಣನೆಂದು ಸ್ಪಷ್ಟವಾಗಿ ತಿಳಿಯದಿರುವುದರಿಂದ ಸಂದೇಹವುಂಟಾಗುತ್ತದೆ. ಆ ಶ್ರುತಿಯೇ ತ್ರಿಗುಣಮಯವಾದ ಚೇತನಗಳಿಗೂ ಅಚೇತನಕ್ಕೂ ಪ್ರಕೃತಿಯನ್ನು ಕಾರಣವೆಂದು ಸ್ಪಷ್ಟವಾಗಿ ಸೂಚಿಸಿದೆ. ಆದರೆ ಚೇತನದಿಂದ ಚೇತನವೂ, ಅಚೇತನದಿಂದ ಅಚೇತನವಸ್ತುವೂ ಹುಟ್ಟುವುದು ಅದರದರ ಸ್ವಭಾವವೆಂದು ಲೋಕದಲ್ಲಿ ಕಂಡುಬಂದಿದೆಯಾದ್ದರಿಂದ ಶಿವನು ನಿಮಿತ್ತನೆಂದೂ,ಪ್ರಧಾನವು ಉಪಾದಾನವೆಂದೂ ಹೇಳಬಹುದು. "ಪ್ರಧಾನ ಜೀವರಿಗೆ ನಿಯಾಮಕನು" "ಸರ್ವವಿದ್ಯೆಗಳಿಗೆ ಅಧಿಪತಿ" ಎಂದು ನೂರಾರು ಶ್ರುತಿಗಳಲ್ಲಿ ಪರಶಿವನು ಜಗತ್ತಿಗೆ ನಿಯಾಮಕನಾದ್ದರಿಂದ ಅದಕ್ಕಿಂತ ಭಿನ್ನನಾಗಿರುವನೆಂದು ಹೇಳಲಾಗಿದೆ. ಮನುವೂ ಸಹ ತಮೋರೂಪವಾದ ಪ್ರಧಾನವನ್ನೇ ಚತುರ್ಮುಖ ಮೊದಲಾದವರಿಗೆ ಕಾರಣವೆಂದು ಹೇಳಿದ್ದಾನೆ. ಆದ್ದರಿಂದ ಪರಮೇಶ್ವರನನ್ನು ನಿಮಿತ್ತಕಾರಣನೆಂದು ಹೇಳುವ ಯೋಗಸ್ಮೃತಿಗನುಗುಣವಾಗಿಯೇ ವೇದಾಂತದ ಅರ್ಥವನ್ನು ನಿಶ್ಚಯಿಸುವುದೇ ಯುಕ್ತವಾಗುತ್ತದೆ. ಹೀಗೆ ಆಕ್ಷೇಪಬಂದರೆ ಅದಕ್ಕೆ ಸೂತ್ರವು ಸಮಾಧಾನವನ್ನು ಹೇಳುತ್ತದೆ. ಶ್ರುತಿಯಲ್ಲಿ ಚೇತನ ಪ್ರಾಣಿಯಿಂದ ಜಡವಾದ ದಾರ ಹೊರಗೆ ಬರುವುದನ್ನೂ,ಚೇತನಪುರುಷನಿಂದ ಜಡವಾದ ಲೋಮನಖಗಳು ಹುಟ್ಟುವುದನ್ನೂ ತಿಳಿಸಲಾಗಿದೆ. ಆ ಶ್ರುತಿಯಲ್ಲಿ ಹೇಳಿರುವ ಪ್ರಧಾನಕ್ಕೂ ಬ್ರಹ್ಮವೇ ಕಾರಣವೆಂಬುವದನ್ನು ಮುಂದಿನ ಶ್ರುತಿ ತಿಳಿಸಿದೆ. ಶಿವನೇ ಪ್ರಧಾನದ ನಿಯಾಮಕನೆಂದು ಆ ಶ್ರುತಿಯಲ್ಲಿ ತಿಳಿಸಲಾಗಿದೆ. ಆದ್ದರಿಂದ ಜಡವೂ ಮಲಿನವೂ, ಅಶಕ್ತವೂ ದುಃಖಿಯೂ ಆದ ಚಿದಚಿತ್ಪ್ರಪಂಚಕ್ಕೆ ಶಿವನು ಕಾರಣನಾಗುವುದಕ್ಕೆ ಯಾವ ವಿರೋಧವೂ ಇಲ್ಲ. ಇದರಿಂದ ಮನುಸ್ಮೃತಿಯಲ್ಲಿ ಚತುರ್ಮುಖ ಮೊದಲಾದವರಿಗೆ ಪ್ರಧಾನವೇ ಕಾರಣವೆಂದು ಹೇಳಿದ್ದು ಆ ಜಡಪ್ರಧಾನಕ್ಕಾಶ್ರಯವಾದ ಪರಶಿವನಿಗೇ ಅನ್ವಯಿಸುತ್ತದೆ. ನಾರಾಯಣನಿಂದ ಬ್ರಹ್ಮರುದ್ರರು ಹುಟ್ಟಿದ್ದಾರೆ"ಎಂಬಲ್ಲಿ ನಾರಾಯಣನನ್ನೇ ಬ್ರಹ್ಮನ ಕಾರಣನೆಂದು ಹೇಳಿದೆ. ಇದೂ ಅಲ್ಲದೆ "ನಾರ ಎಂದರೆ ನೀರು. ಅದು ಮೂಲಪುರುಷನೆನಿಸಿದ ಪರಬ್ರಹ್ಮನಿಂದಲೇ ಹುಟ್ಟಿದ್ದು. ಅದೇ ಆಶ್ರಯವಾಗುಳ್ಳವನು ನಾರಾಯಣನು" ಎಂದು ಮುಂದೆ ನಾರಾಯಣ ಶಬ್ದವನ್ನು ವಿವರಿಸಲಾಗಿದೆ. ಕೊನೆಯಲ್ಲಿ "ಬುದ್ಧಿಯಿಂದಲೇ ತಿಳಿಯಬಹುದಾದ ಸ್ವರ್ಣವರ್ಣದ ನಾರಾಯಣನನ್ನು ಪರಮಪುರುಷನೆಂದು ತಿಳಿಯಬೇಕು" ಇಲ್ಲಿ ಹಿರಣ್ಮಯತ್ವ ಮೊದಲಾದ ಧರ್ಮಗಳನ್ನು ಅವನಿಗೇ ಹೇಳಿದೆ. "ವಿಷ್ಣುವಿನಿಂದಲೇ ಎಲ್ಲಾ ಜಗತ್ತೂ ಹುಟ್ಟಿದೆ." "ನಾನೇ ಎಲ್ಲಕ್ಕೂ ಕಾರಣನು, ನನ್ನಿಂದಲೇ ಎಲ್ಲವೂ ಹೊರಟಿದೆ" ಹೀಗೆ ವಿಷ್ಣುಪುರಾಣದಲ್ಲಿ ವಿಷ್ಣುವೇ ಜಗತ್ಕಾರಣನೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಮನುಸ್ಮೃತಿಯಲ್ಲಿ ಹೇಳಿದ ಹಿರಣ್ಯಗರ್ಭನ ಉತ್ಪತ್ತಿ ಎಂಬುದೂ ನಾರಾಯಣನಿಗೇ ಅನ್ವಯಿಸುತ್ತದೆ ಎಂದರೆ ಅದು ಯುಕ್ತವೆನಿಸುವುದಿಲ್ಲ.

"ಪ್ರಳಯದಲ್ಲಿ ಏನೊಂದೂ ಇಲ್ಲದಿದ್ದಾಗ ಶಿವನೊಬ್ಬನೇ ಇದ್ದನು. ಅವನು ಅಕ್ಷರನಾಗಿ ಸೂರ್ಯನಿಗಿಂತಲೂ ಪ್ರಕಾಶಮಾನನಾಗಿದ್ದನು. ಅವನಿಂದ ಪ್ರಜ್ಞಾಶಕ್ತಿ ಹುಟ್ಟಿತು." "ಎಲ್ಲಕ್ಕೂ ಮೊದಲಿಗೆ ಇದ್ದ ಯಾವ ರುದ್ರನು ಆಗತಾನೆ ಹುಟ್ಟುತ್ತಿದ್ದ ಬ್ರಹ್ಮನನ್ನು ಕಂಡು ಅನುಗ್ರಹಿಸಿದನೋ ಅವನು ನಮಗೆ ನಿರ್ಮಲವಾದ ಬುದ್ಧಿಯನ್ನು ಕೊಡಲಿ". "ಯಾವನು ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ವೇದಗಳನ್ನು ಅನುಗ್ರಹಿಸಿದನೋ ಅಂತಹ ಪ್ರಭುವಿಗೆ ಶರಣಾಗುತ್ತೇನೆ" ಹೀಗೆ ಉಪನಿಷತ್ತುಗಳಲ್ಲಿ ಶಿವನೇ ಹಿರಣ್ಯಗರ್ಭನಿಗೆ ಕಾರಣನೆಂದು ಸ್ಪಷ್ಟವಾಗಿ ತಿಳಿಸಲಾಗಿದೆ. ಆದರೆ "ನಾರಾಯಣನಿಂದ ಬ್ರಹ್ಮರುದ್ರರು ಹುಟ್ಟಿದರು" ಎಂಬುದು ಅವಾಂತರ ಸೃಷ್ಟಿಗೆ ಮಾತ್ರವೇ ಅನ್ವಯಿಸುತ್ತದೆ ಎಂದು ತಿಳಿಯಬೇಕು. ಯಾಕೆಂದರೆ "ಅವನೇ ಹಿರಣ್ಯವರ್ಣನೂ, ಹಿರಣ್ಯರೂಪನೂ, ಆಗಿ ಪುರುಷನೆನಿಸಿರುವನು" ಎಂದು ಶ್ರುತಿಗಳಲ್ಲಿ ಶಿವನೇ ಹಿರಣ್ಮಯನೆಂದೂ, ಪುರುಷನೆಂದೂ ಸ್ಪಷ್ಟವಾಗಿ ಹೇಳಿದೆ. ಈ ಶ್ರುತಿಗಳಿಗೆ ವಿರುದ್ಧವಾದ ಪುರಾಣವಚನಗಳು ಬೌದ್ಧಾಗಮಗಳಂತೆ ಭ್ರಾಂತಿಮೂಲವಾದ್ದರಿಂದ ವೇದಕ್ಕೆ ಪೋಷಕಗಳೆನಿಸಲಾರವು. ಮನು ಹೇಳಿರುವ ತಮಶ್ಶಬ್ದವು ಹೊರಗೆ ತಮೋಗುಣದ ವ್ಯಾಪ್ತಿಯುಳ್ಳ ಕಾಲರುದ್ರನಿಗೆ ಅನ್ವಯಿಸುತ್ತದೆ ಎಂದು ಹೇಳಬೇಕು.

"ತೇ ಹೇಮೇ ಪ್ರಾಣಾಃ ಅಹಂಶ್ರೇಯಸೇ ವಿವದಮಾನಾಃ" "ಮೃದಬ್ರವೀತ್," "ಆಪೋಽಬ್ರುವನ್" ಇತ್ಯಾದಿಷು ಚೇತನಪೃಥಿವ್ಯಾದೀನಾಂ ಚೈತನ್ಯಯೋಗಃ ಶ್ರೂಯತೇ. ಅಚೇತನಾನಾಮಪಿ ಪುರಾಣೇಷು ಚೇತನತ್ವಂ ಪಠ್ಯತೇ. ಅತೋ ಬ್ರಹ್ಮಪ್ರಧಾನಯೋರ್ನವೈಲಕ್ಷಣ್ಯಮಿತ್ಯಾಶಂಕ್ಯಾಹ— ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ॥

ತುಶಬ್ದಶ್ಶಂಕಾನಿರಾಸಾರ್ಥಃ. "ಪೃಥಿವ್ಯಬ್ರವೀತ್" ಇತ್ಯಾದಿಶ್ರುತಿಸಿದ್ಧವಚನಪ್ರವರ್ತಕತ್ವಂ ಪೃಥಿವ್ಯಾದ್ಯಭಿಮಾನಿದೇವತಾನಾಮೇವೋಪದಿಷ್ಟಂ. ಕುತಃ, ವಿಶೇಷಾನುಗತಿಭ್ಯಾಂ. ಕೌಷೀತಕೀಬ್ರಾಹ್ಮಣೇ "ಹಂತಾಹಮಿಮಾಸ್ತಿಸ್ರೋ ದೇವತಾಃ", "ಸರ್ವಾ ಹ ವೈ ದೇವತಾ ಅಹಂಶ್ರೇಯಸೇ ವಿವದಮಾನಾಃ", "ತೇ ದೇವಾ ಪ್ರಾಣೇ ನಿಃಶ್ರೇಯಸಂ ವಿದಿತ್ವಾ", "ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ । ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್ । ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶತ್ ।" ಇತ್ಯಾದಿಬಹುಶ್ರುತಿಷು ವಾಗಾದ್ಯಭಿಮಾನಿದೇವತಾನಾಮೇವ ಪ್ರವಚನೀಯತ್ವಂ ಗಮ್ಯತೇ, ತಸ್ಮಾದಚೇತನಪ್ರಧಾನಾದಿವೈಲಕ್ಷಣ್ಯಂ. ಕಿಂಚ "ಯೋ ರುದ್ರೋ ಅಗ್ನೌ ಯೋ ಅಪ್ಸು" ಇತ್ಯಾದಿಷು ಪೃಥಿವ್ಯಾದೀನಾಂ ತದಧಿಷ್ಠಾನದೇವತಾನಾಮಂತರ್ಯಾಮಿತ್ವಂ ರುದ್ರಸ್ಯೈವೋಕ್ತಂ. ಅತಸ್ಸರ್ವಾತ್ಮಕತ್ವಸರ್ವವಿಲಕ್ಷಣತ್ವಸರ್ವನಿಯಾಮಕತ್ವ ಸರ್ವಕಾರಣತ್ವಾದಿಕಂ ನೇತರಸ್ಯೋಪಪನ್ನಂ.

"ಪ್ರಾಣಗಳು 'ನಾನು ಮುಂದು ತಾನು ಮುಂದು' ಎಂದು ವಿವಾದ ಮಾಡಿದವು," "ಮಣ್ಣು ಹೇಳಿತು" "ನೀರು ಹೇಳಿತು," ಇಲ್ಲಿ ಅಚೇತನವಸ್ತುಗಳಿಗೆ ಚೈತನ್ಯದ ಸಂಬಂಧವನ್ನು ತಿಳಿಸಲಾಗಿದೆ. ಪುರಾಣಗಳಲ್ಲಿ ಅಚೇತನವಾದ ನದೀ ಸಮುದ್ರ ವೃಕ್ಷಗಳಿಗೂ ಚೇತನವಿರುವುದಾಗಿ ಹೇಳಲಾಗಿದೆ. ಆದ್ದರಿಂದ ಬ್ರಹ್ಮ ಪ್ರಧಾನಗಳಿಗೆ ಭೇಧವಿಲ್ಲವೆಂದಾಶಂಕಿಸಿ ನಿರಾಕರಿಸುತ್ತಾನೆ.

ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ॥ ೫ ॥

ತು ಶಬ್ದವು ಆಕ್ಷೇಪವನ್ನು ಅಲ್ಲಗಳೆಯುತ್ತದೆ. "ಮಣ್ಣು ಹೇಳಿತು" ಎಂಬಲ್ಲಿ ಹೇಳಿಕೆ ಎಂಬ ಪದವು ಮಣ್ಣಿನ ಅಭಿಮಾನಿದೇವತೆಗೆ ಅನ್ವಯಿಸುತ್ತದೆ; ಏಕೆಂದರೆ "ನಾನೇ ತ್ರಿಮೂರ್ತಿಗಳಾಗಿರುವೆನು" "ಈ ದೇವತೆಗಳು ಶ್ರೇಯಸ್ಸಿಗಾಗಿ ನಾನು ಮುಂದು ತಾನು ಮುಂದೆಂದು ವಿವಾದಮಾಡಿದವು. ಆ ದೇವತೆಗಳು ಪ್ರಾಣವನ್ನೇ ಶ್ರೇಷ್ಠವೆಂದು ತಿಳಿದವು" "ಅಗ್ನಿಯೇ ವಾಕ್ಕಾಗಿ ಬಾಯಿನಲ್ಲಿ ನೆಲಸಿದ್ದಾನೆ. ಆದಿತ್ಯನೇ ಪ್ರಕಾಶವೆನಿಸಿ ಕಣ್ಣನ್ನು ಹೊಕ್ಕಿದ್ದಾನೆ. ವಾಯುವೇ ಪ್ರಾಣವಾಗಿ ಮೂಗಿನಲ್ಲಿ ನೆಲಸಿದ್ದಾನೆ." ಹೀಗೆ ಅನೇಕ ಶ್ರುತಿಗಳಲ್ಲಿ ವಾಗಾದ್ಯಭಿಮಾನಿದೇವತೆಗಳಿಗೆ ಚೈತನ್ಯಶಕ್ತಿಯನ್ನು ಅನ್ವಯಿಸಲಾಗಿದೆ. ಆದ್ದರಿಂದ ಅಚೇತನ ಪ್ರಧಾನವು ಚೇತನಕ್ಕಿಂತ ಭಿನ್ನವೆನಿಸಿದೆ. "ಬೆಂಕಿ, ನೀರು, ಔಷಧಿ, ಲತೆ ಮತ್ತು ಸಮಸ್ತಪ್ರಪಂಚಗಳು ಇವೆಲ್ಲದರಲ್ಲೂ ರುದ್ರನು ಅಂತರ್ಯಾಮಿಯಾಗಿ ಪ್ರವೇಶಿಸಿದ್ದಾನೆ" ಹೀಗೆ ಪೃಥಿವ್ಯಾದಿ ವಸ್ತುಗಳ ಅಧಿಷ್ಠಾನದೇವತೆಗಳೊಳಗೆ ರುದ್ರನೇ ಅಂತರ್ಯಾಮಿ ಎಂದು ಹೇಳಲಾಗಿದೆ. ಆದ್ದರಿಂದ ಶಿವನೇ ಸರ್ವಾತ್ಮಕನೂ ಸರ್ವವಿಲಕ್ಷಣನೂ ಸರ್ವನಿಯಾಮಕನೂ ಸರ್ವಕಾರಣನೂ ಇರುವನೆಂಬುದು ಯುಕ್ತವಾಗಿದೆ.

ಅಸ್ಮಿನ್ನರ್ಥೇ ಹೇತ್ವಂತರಮಾಹ—ದೃಶ್ಯತೇ ತು ॥ ೬ ॥

ತುಶಬ್ದೋ ಹ್ಯವೈದಿಕತರ್ಕನಿರಾಸಾರ್ಥಃ. "ಏತಸ್ಮಾಜ್ಜಾಯತೇ ಪ್ರಾಣಃ", "ಯತೋ ವಾ ಇಮಾನಿ ಭೂತಾನಿ ಜಾಯಂತೇ", "ಭೀಷಾಸ್ಮಾದ್ವಾತಃ ಪವತೇ", "ವಿಜ್ಞಾನಂ ಚಾವಿಜ್ಞಾನಂ ಚ" "ಏವಮೇವೈತಾ ಭೂತಮಾತ್ರಾಃ ಪ್ರಜ್ಞಾಮಾತ್ರಾಸ್ವರ್ಪಿತಾಃ, ಪ್ರಜ್ಞಾಮಾತ್ರಾಃ ಪ್ರಾಣೇಷ್ವರ್ಪಿತಾಃ", "ಸಮಾನೇ ವೃಕ್ಷೇ ಪುರುಷೋ ನಿಮಗ್ನಃ ಅನೀಶಯಾ ಶೋಚತಿ ಮುಹ್ಯಮಾನಃ", "ತರತಿ ಶೋಕಮಾತ್ಮವಿತ್" ಇತ್ಯಾದಿಷು ಸರ್ವಕಾರಣತ್ವಾದಿಕಂ ಶಿವಸ್ಯೈವ ದೃಶ್ಯತೇ. ವಿಚಿತ್ರನಾನಾಶಕ್ತಿವಿಶಿಷ್ಟತ್ವೇನ ಸರ್ವಾಂತರ್ಯಾಮಿತಯಾ ಚೇತನಪುರುಷೇಷ್ವಚೇತನಲೋಮನಖದಂತಾದ್ಯುತ್ಪತ್ತಿಃ. ಅಚೇತನಗೋಮಯಕಾಷ್ಠಾದಿಷು ಚೇತನವೃಶ್ಚಿಕಾದಿಕ್ರಿಮಿಕೀಟೋತ್ಪತ್ತಿಃ. ಮಧುಮಕ್ಷಿಕೇಷು ಕ್ರಿಮ್ಯಾದ್ಯುತ್ಪತ್ತಿಃ. ಕ್ರಿಮೀಣಾಂ ಕೀಟಕವಶಾದ್ಭ್ರಮರರೂಪತ್ವಪ್ರಾಪ್ತಿಶ್ಚಾವಗಮ್ಯತೇ. ತಸ್ಮಾತ್ತಸ್ಯ ಜಗದುಭಯಕಾರಣತ್ವಂ ಸಿದ್ಧಂ.

"ಪ್ರಳಯದಲ್ಲಿ ಏನೊಂದೂ ಇಲ್ಲದಿದ್ದಾಗ ಶಿವನೊಬ್ಬನೇ ಇದ್ದನು. ಅವನು ಅಕ್ಷರನಾಗಿ ಸೂರ್ಯನಿಗಿಂತಲೂ ಪ್ರಕಾಶಮಾನನಾಗಿದ್ದನು. ಅವನಿಂದ ಪ್ರಜ್ಞಾಶಕ್ತಿ ಹುಟ್ಟಿತು." "ಎಲ್ಲಕ್ಕೂ ಮೊದಲಿಗೆ ಇದ್ದ ಯಾವ ರುದ್ರನು ಆಗತಾನೆ ಹುಟ್ಟುತ್ತಿದ್ದ ಬ್ರಹ್ಮನನ್ನು ಕಂಡು ಅನುಗ್ರಹಿಸಿದನೋ ಅವನು ನಮಗೆ ನಿರ್ಮಲವಾದ ಬುದ್ಧಿಯನ್ನು ಕೊಡಲಿ". "ಯಾವನು ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ವೇದಗಳನ್ನು ಅನುಗ್ರಹಿಸಿದನೋ ಅಂತಹ ಪ್ರಭುವಿಗೆ ಶರಣಾಗುತ್ತೇನೆ" ಹೀಗೆ ಉಪನಿಷತ್ತುಗಳಲ್ಲಿ ಶಿವನೇ ಹಿರಣ್ಯಗರ್ಭನಿಗೆ ಕಾರಣನೆಂದು ಸ್ಪಷ್ಟವಾಗಿ ತಿಳಿಸಲಾಗಿದೆ. ಆದರೆ "ನಾರಾಯಣನಿಂದ ಬ್ರಹ್ಮರುದ್ರರು ಹುಟ್ಟಿದರು" ಎಂಬುದು ಅವಾಂತರ ಸೃಷ್ಟಿಗೆ ಮಾತ್ರವೇ ಅನ್ವಯಿಸುತ್ತದೆ ಎಂದು ತಿಳಿಯಬೇಕು. ಯಾಕೆಂದರೆ "ಅವನೇ ಹಿರಣ್ಯವರ್ಣನೂ, ಹಿರಣ್ಯರೂಪನೂ, ಆಗಿ ಪುರುಷನೆನಿಸಿರುವನು" ಎಂದು ಶ್ರುತಿಗಳಲ್ಲಿ ಶಿವನೇ ಹಿರಣ್ಮಯನೆಂದೂ, ಪುರುಷನೆಂದೂ ಸ್ಪಷ್ಟವಾಗಿ ಹೇಳಿದೆ. ಈ ಶ್ರುತಿಗಳಿಗೆ ವಿರುದ್ಧವಾದ ಪುರಾಣವಚನಗಳು ಬೌದ್ಧಾಗಮಗಳಂತೆ ಭ್ರಾಂತಿಮೂಲವಾದ್ದರಿಂದ ವೇದಕ್ಕೆ ಪೋಷಕಗಳೆನಿಸಲಾರವು. ಮನು ಹೇಳಿರುವ ತಮಶ್ಶಬ್ದವು ಹೊರಗೆ ತಮೋಗುಣದ ವ್ಯಾಪ್ತಿಯುಳ್ಳ ಕಾಲರುದ್ರನಿಗೆ ಅನ್ವಯಿಸುತ್ತದೆ ಎಂದು ಹೇಳಬೇಕು.

"ತೇ ಹೇಮೇ ಪ್ರಾಣಾಃ ಅಹಂಶ್ರೇಯಸೇ ವಿವದಮಾನಾಃ" "ಮೃದಬ್ರವೀತ್," "ಆಪೋಽಬ್ರುವನ್" ಇತ್ಯಾದಿಷು ಚೇತನಪೃಥಿವ್ಯಾದೀನಾಂ ಚೈತನ್ಯಯೋಗಃ ಶ್ರೂಯತೇ. ಅಚೇತನಾನಾಮಪಿ ಪುರಾಣೇಷು ಚೇತನತ್ವಂ ಪಠ್ಯತೇ. ಅತೋ ಬ್ರಹ್ಮಪ್ರಧಾನಯೋರ್ನವೈಲಕ್ಷಣ್ಯಮಿತ್ಯಾಶಂಕ್ಯಾಹ—ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ॥

ತುಶಬ್ದಶ್ಶಂಕಾನಿರಾಸಾರ್ಥಃ. "ಪೃಥಿವ್ಯಬ್ರವೀತ್" ಇತ್ಯಾದಿಶ್ರುತಿಸಿದ್ಧವಚನಪ್ರವರ್ತಕತ್ವಂ ಪೃಥಿವ್ಯಾದ್ಯಭಿಮಾನಿದೇವತಾನಾಮೇವೋಪದಿಷ್ಟಂ. ಕುತಃ, ವಿಶೇಷಾನುಗತಿಭ್ಯಾಂ. ಕೌಷೀತಕೀಬ್ರಾಹ್ಮಣೇ "ಹಂತಾಹಮಿಮಾಸ್ತಿಸ್ರೋ ದೇವತಾಃ", "ಸರ್ವಾ ಹ ವೈ ದೇವತಾ ಅಹಂಶ್ರೇಯಸೇ ವಿವದಮಾನಾಃ", "ತೇ ದೇವಾ ಪ್ರಾಣೇ ನಿಃಶ್ರೇಯಸಂ ವಿದಿತ್ವಾ", "ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ । ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್ । ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶತ್ ।" ಇತ್ಯಾದಿಬಹುಶ್ರುತಿಷು ವಾಗಾದ್ಯಭಿಮಾನಿದೇವತಾನಾಮೇವ ಪ್ರವಚನೀಯತ್ವಂ ಗಮ್ಯತೇ, ತಸ್ಮಾದಚೇತನಪ್ರಧಾನಾದಿವೈಲಕ್ಷಣ್ಯಂ. ಕಿಂಚ "ಯೋ ರುದ್ರೋ ಅಗ್ನೌ ಯೋ ಅಪ್ಸು" ಇತ್ಯಾದಿಷು ಪೃಥಿವ್ಯಾದೀನಾಂ ತದಧಿಷ್ಠಾನದೇವತಾನಾಮಂತರ್ಯಾಮಿತ್ವಂ ರುದ್ರಸ್ಯೈವೋಕ್ತಂ. ಅತಸ್ಸರ್ವಾತ್ಮಕತ್ವಸರ್ವವಿಲಕ್ಷಣತ್ವಸರ್ವನಿಯಾಮಕತ್ವ ಸರ್ವಕಾರಣತ್ವಾದಿಕಂ ನೇತರಸ್ಯೋಪಪನ್ನಂ.

"ಪ್ರಾಣಗಳು 'ನಾನು ಮುಂದು ತಾನು ಮುಂದು' ಎಂದು ವಿವಾದ ಮಾಡಿದವು," "ಮಣ್ಣು ಹೇಳಿತು" "ನೀರು ಹೇಳಿತು," ಇಲ್ಲಿ ಅಚೇತನವಸ್ತುಗಳಿಗೆ ಚೈತನ್ಯದ ಸಂಬಂಧವನ್ನು ತಿಳಿಸಲಾಗಿದೆ. ಪುರಾಣಗಳಲ್ಲಿ ಅಚೇತನವಾದ ನದೀ ಸಮುದ್ರ ವೃಕ್ಷಗಳಿಗೂ ಚೇತನವಿರುವುದಾಗಿ ಹೇಳಲಾಗಿದೆ. ಆದ್ದರಿಂದ ಬ್ರಹ್ಮ ಪ್ರಧಾನಗಳಿಗೆ ಭೇಧವಿಲ್ಲವೆಂದಾಶಂಕಿಸಿ ನಿರಾಕರಿಸುತ್ತಾನೆ.

**ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ॥ ೫ ॥**

ತು ಶಬ್ದವು ಆಕ್ಷೇಪವನ್ನು ಅಲ್ಲಗಳೆಯುತ್ತದೆ. "ಮಣ್ಣು ಹೇಳಿತು" ಎಂಬಲ್ಲಿ ಹೇಳಿಕೆ ಎಂಬ ಪದವು ಮಣ್ಣಿನ ಅಭಿಮಾನಿದೇವತೆಗೆ ಅನ್ವಯಿಸುತ್ತದೆ; ಏಕೆಂದರೆ "ನಾನೇ ತ್ರಿಮೂರ್ತಿಗಳಾಗಿರುವೆನು" "ಈ ದೇವತೆಗಳು ಶ್ರೇಯಸ್ಸಿಗಾಗಿ ನಾನು ಮುಂದು ತಾನು ಮುಂದೆಂದು ವಿವಾದಮಾಡಿದವು. ಆ ದೇವತೆಗಳು ಪ್ರಾಣವನ್ನೇ ಶ್ರೇಷ್ಠವೆಂದು ತಿಳಿದವು" "ಅಗ್ನಿಯೇ ವಾಕ್ಕಾಗಿ ಬಾಯಿನಲ್ಲಿ ನೆಲಸಿದ್ದಾನೆ. ಆದಿತ್ಯನೇ ಪ್ರಕಾಶವೆನಿಸಿ ಕಣ್ಣನ್ನು ಹೊಕ್ಕಿದ್ದಾನೆ. ವಾಯುವೇ ಪ್ರಾಣವಾಗಿ ಮೂಗಿನಲ್ಲಿ ನೆಲಸಿದ್ದಾನೆ." ಹೀಗೆ ಅನೇಕ ಶ್ರುತಿಗಳಲ್ಲಿ ವಾಗಾದ್ಯಭಿಮಾನಿದೇವತೆಗಳಿಗೆ ಚೈತನ್ಯಶಕ್ತಿಯನ್ನು ಅನ್ವಯಿಸಲಾಗಿದೆ. ಆದ್ದರಿಂದ ಅಚೇತನ ಪ್ರಧಾನವು ಚೇತನಕ್ಕಿಂತ ಭಿನ್ನವೆನಿಸಿದೆ. "ಬೆಂಕಿ, ನೀರು, ಔಷಧಿ, ಲತೆ ಮತ್ತು ಸಮಸ್ತಪ್ರಪಂಚಗಳು ಇವೆಲ್ಲದರಲ್ಲೂ ರುದ್ರನು ಅಂತರ್ಯಾಮಿಯಾಗಿ ಪ್ರವೇಶಿಸಿದ್ದಾನೆ" ಹೀಗೆ ಪೃಥಿವ್ಯಾದಿ ವಸ್ತುಗಳ ಅಧಿಷ್ಠಾನದೇವತೆಗಳೊಳಗೆ ರುದ್ರನೇ ಅಂತರ್ಯಾಮಿ ಎಂದು ಹೇಳಲಾಗಿದೆ. ಆದ್ದರಿಂದ ಶಿವನೇ ಸರ್ವಾತ್ಮಕನೂ ಸರ್ವವಿಲಕ್ಷಣನೂ ಸರ್ವನಿಯಾಮಕನೂ ಸರ್ವಕಾರಣನೂ ಇರುವನೆಂಬುದು ಯುಕ್ತವಾಗಿದೆ.

**ಅಸ್ಮಿನ್ನರ್ಥೇ ಹೇತ್ವಂತರಮಾಹ—ದೃಶ್ಯತೇ ತು ॥ ೬ ॥**

**ತುಶಬ್ದೋ ಹ್ಯನೈದಿಕತರ್ಕನಿರಾಸಾರ್ಥಃ. "ಏತಸ್ಮಾಜ್ಜಾಯತೇ ಪ್ರಾಣಃ", "ಯತೋ ವಾ ಇಮಾನಿ ಭೂತಾನಿ ಜಾಯಂತೇ", "ಭೀಷಾಸ್ಮಾದ್ವಾತಃ ಪವತೇ", "ವಿಜ್ಞಾನಂ ಚಾವಿಜ್ಞಾನಂ ಚ" "ಏವಮೇವೈತಾ ಭೂತಮಾತ್ರಾಃ ಪ್ರಜ್ಞಾಮಾತ್ರಾಸ್ವರ್ಪಿತಾಃ, ಪ್ರಜ್ಞಾಮಾತ್ರಾಃ ಪ್ರಾಣೇಷ್ವರ್ಪಿತಾಃ", "ಸಮಾನೇ ವೃಕ್ಷೇ ಪುರುಷೋ ನಿಮಗ್ನಃ ಅನೀಶಯಾ ಶೋಚತಿ ಮುಹ್ಯಮಾನಃ", "ತರತಿ ಶೋಕಮಾತ್ಮವಿತ್" ಇತ್ಯಾದಿಷು ಸರ್ವಕಾರಣತ್ವಾದಿಕಂ ಶಿವಸ್ಯೈವ ದೃಶ್ಯತೇ. ವಿಚಿತ್ರನಾನಾಶಕ್ತಿವಿಶಿಷ್ಟತ್ವೇನ ಸರ್ವಾಂತರ್ಯಾಮಿತಯಾ ಚೇತನಪುರುಷೇಷ್ವಚೇತನಲೋಮನಖದಂತಾದ್ಯುತ್ಪತ್ತಿಃ. ಅಚೇತನಗೋಮಯಕಾಷ್ಠಾದಿಷು ಚೇತನವೃಶ್ಚಿಕಾದಿಕ್ರಿಮಿಕೀಟೋತ್ಪತ್ತಿಃ. ಮಧುಮಕ್ಷಿಕೇಷು ಕ್ರಿಮ್ಯಾದ್ಯುತ್ಪತ್ತಿಃ. ಕ್ರಿಮೀಣಾಂ ಕೀಟಕವಶಾದ್ಭ್ರಮರರೂಪತ್ವಪ್ರಾಪ್ತಿಶ್ಚಾವಗಮ್ಯತೇ. ತಸ್ಮಾತ್ತಸ್ಯ ಜಗದುಭಯಕಾರಣತ್ವಂ ಸಿದ್ಧಂ.**

ಈ ಬಗ್ಗೆ ಬೇರೊಂದು ಕಾರಣವನ್ನು ಹೇಳುತ್ತಾನೆ—**ದೃಶ್ಯತೇ ತು ॥ ೬ ॥**

ತುಶಬ್ದವು ಅವೈದಿಕವಾದ ತರ್ಕವನ್ನು ನಿಷೇಧಿಸುತ್ತದೆ. "ಇವನಿಂದ ಪ್ರಾಣ ಮನಸ್ಸು ಇಂದ್ರಿಯಗಳು ಹುಟ್ಟಿವೆ" "ಇವನಿಂದಲೇ ಎಲ್ಲಾ ಭೂತಗಳೂ ಹುಟ್ಟಿವೆ?" "ಇವನ ಭಯದಿಂದಲೇ ದೇವತೆಗಳು ಕೆಲಸಮಾಡುತ್ತಿದ್ದಾರೆ" "ಇವನೇ ಅರಿವೂ ಮರವೆಯೂ ಆಗಿದ್ದಾನೆ". "ಈ ಪಂಚಭೂತಗಳು ಜೀವನನ್ನಾಶ್ರಯಿಸಿವೆ. ಜೀವನು ಪರಶಿವನನ್ನಾಶ್ರಯಿಸಿದ್ದಾನೆ." "ಒಂದೇ ದೇಹದಲ್ಲಿ ಜೀವನು ನೆಲಸಿ ಅಶಕ್ತತೆಯಿಂದ ಮೋಹಗೊಂಡು ಅಳುತ್ತಿದ್ದಾನೆ". "ಆತ್ಮಜ್ಞಾನಿಯು ದುಃಖವನ್ನು ದಾಟುತ್ತಾನೆ" ಹೀಗೆ ಅನೇಕ ಶ್ರುತಿಗಳಲ್ಲಿ ಶಿವನೇ ಸರ್ವಕಾರಣನೆಂದು ಕಂಡುಬರುತ್ತದೆ. ಅವನು ಅನೇಕ ಬಗೆಯ ವಿಚಿತ್ರಶಕ್ತಿಯೊಡನೆ ಎಲ್ಲಾ ಜೀವರಲ್ಲೂ ಅಂತರ್ಯಾಮಿಯಾಗಿ ನೆಲಸಿರುವುದರಿಂದ ಚೇತನಪುರುಷರಲ್ಲಿ ಅಚೇತನವಾದ ಲೋಮನಖಗಳು ಹುಟ್ಟುತ್ತವೆ. ಜಡವಾದ ಸಗಣಿ ಕಟ್ಟಿಗೆ ಮೊದಲಾದವುಗಳಲ್ಲಿ ಚೇತನಗಳಾದ ಚೇಳು ಮೊದಲಾದ ಹುಳಗಳು ಹುಟ್ಟುತ್ತವೆ. ಜೇನುಹುಳದಿಂದ ಕ್ರಿಮಿಗಳು ಹುಟ್ಟುತ್ತವೆ. ಆ ಕ್ರಿಮಿಯು ಭ್ರಮರದ ಸಂಪರ್ಕದಿಂದ ಭ್ರಮರವೇ ಆಗುತ್ತದೆ. ಆದ್ದರಿಂದ ಶಿವನು ಜಗತ್ತಿಗೆ ಉಭಯಕಾರಣನೆಂಬುದಕ್ಕೆ ಯಾವ ವಿರೋಧವೂ ಇಲ್ಲ.

**ಏವಂ ಜಗಜ್ಜೀವೇಶ್ವರಸಿದ್ಧಾಂತಸಾಂಖ್ಯಯೋಗಾತ್ಮಕಸ್ಮಾರ್ತಮತದ್ವಯಂ ನಿರಸ್ಯ ಜಗಜ್ಜೀವೇಶ್ವರಮಿಥ್ಯಾವಾದಪ್ರಧಾನಸ್ಮಾರ್ತೈಕದೇಶಾದ್ವೈತಮತಮತಂ ನಿರಸ್ಯತೇ. ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್॥**

**"ನತು ತದ್ದ್ವಿತೀಯಮಸ್ತಿ," "ನೇಹ ನಾನಾಸ್ತಿ ಕಿಂಚನ", "ಶಶಶೃಂಗೇಣ ನಾಗೇಂದ್ರೋ ಮೃತಶ್ಚೇದಸ್ತ್ವಿದಂ ಜಗತ್ । ಜ್ವಾಲಾಗ್ನಿಮಂಡಲೇ ಪದ್ಮವೃದ್ಧಿಶ್ಚೇದಸ್ತ್ವಿದಂ ಜಗತ್ । ಮಾಯಾಕಾರ್ಯಾದಿಕಂ ನಾಸ್ತಿ ಮಾಯಾ ನಾಸ್ತಿ ಭಯಂ ನ ಹಿ । ಗಗನೇ ನೀಲಿಮಾಸತ್ಯೇ ಜಗತ್ಸತ್ಯಂ ಭವಿಷ್ಯತಿ ॥" ಇತ್ಯಾದಿಶ್ರುತಿಸ್ಮೃತಿಷು ಶಶಶೃಂಗವತ್ಪ್ರಪಂಚಸ್ಯಾಸತ್ಯವಾಕ್ಯಾಭಾಸದರ್ಶನಾತ್ ಚೇತನಾಚೇತನಾತ್ಮಕಂ ಜಗದಸದಿತಿ ಚೇನ್ಮಿಥ್ಯಾಭೂತಮಿತಿ ಚೇನ್ನ. ಕುತಃ, ಪ್ರತಿಷೇಧಮಾತ್ರತ್ವಾತ್. ಪ್ರಳಯೇಽಪಿ ಪ್ರಪಂಚಸ್ಯ ಸ್ಥೂಲಾವಸ್ಥಾನಿಷೇಧಮಾತ್ರತ್ವಾತ್ ಪ್ರಳಯೇಽಪಿ ಬೀಜಾಂಕುರವತ್ ಸೂಕ್ಷ್ಮರೂಪೇಣ ಪರಮೇಶ್ವರೇ ಪ್ರಪಂಚಸ್ಯ ಸತ್ತ್ವಾತ್ತಲ್ಲೀಲಯಾ ಸೃಷ್ಟಿಕಾಲೇ ಪುನರುತ್ಪದ್ಯತೇ. "ಧಾತಾ ಯಥಾಪೂರ್ವಮಕಲ್ಪಯತ್", "ದ್ವಾ ಸುಪರ್ಣಾ" ಇತ್ಯಾದಿಶ್ರುತಿಷು ಪ್ರಪಂಚಸ್ಯ ಸತ್ಯತ್ವವ್ಯಪದೇಶಾತ್. "ನ ಕದಾಚಿದೀದೃಶಂ ಜಗತ್," "ನೇಹ ನಾನಾಸ್ತಿ ಕಿಂಚನ", "ಸದೇವ–ಆಸೀತ್ । ಏಕಮೇವಾದ್ವಿತೀಯಂ ಬ್ರಹ್ಮ" ಇತ್ಯಾದಿಷು ಪ್ರಪಂಚಸ್ಯ ಮಿಥ್ಯಾತ್ವಶ್ರವಣಾತ್ ಚಿದಚಿದಾತ್ಮಕಪ್ರಪಂಚಸ್ಯ ಸರ್ವದಾ ಸತ್ತ್ವಮಸತ್ತ್ವಂ ವೇತಿ ಸಂಶಯಃ.**

“ ನೇಹ ನಾನಾಸ್ತಿ,” “ ಅಥಾತ ಆದೇಶೋ ನೇತಿ ನೇತಿ,” “ಆದಾವಂತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ತಥಾ ”, “ ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನೇತರಃ ”, “ ಕಾರ್ಯೋಪಾಧಿರಯಂ ಜೀವಃ ಕಾರಣೋಪಾಧಿರೀಶ್ವರಃ । ಕಾರ್ಯಕಾರಣತಾಂ ತ್ಯಕ್ತ್ವಾ ಪೂರ್ಣಬೋಧೋಽವಶಿಷ್ಯತೇ । ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚತೇ । ಶಿಷ್ಯಾಣಾಂ ಬೋಧನಾರ್ಥಾಯ ತತ್ತ್ವಜ್ಞೈಃ ಕಲ್ಪಿತಃ ಕ್ರಮಾತ್ ॥ ” ಇತಿ ಶ್ರುತಿಸ್ಮೃತಿಪೂರ್ವಾಚಾರ್ಯನ್ಯಾಯದರ್ಶನಾಜ್ಜಗನ್ಮಿಥ್ಯಾತ್ವಂ ಯುಕ್ತಂ; ನೋ ಚೇತ್ಪೂರ್ವೋಕ್ತಶ್ರುತಿಸ್ಮೃತಿಸಮನ್ವಯವಿರೋಧೋ ದುರ್ನಿವಾರಃ ಇತಿ ಪ್ರಾಪ್ತೇ ತತ್ರೋತ್ತರಂ ವದಾಮಃ. “ ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚತೇ ” ಇತಿ ಪೂರ್ವಾಚಾರ್ಯಕಲ್ಪಿತನ್ಯಾಯೇನ ಜಗದಸತ್ಯತ್ವಂ ನ ಶ್ರಾವಣೀಯಂ, ತದಧ್ಯಾರೋಪಾಪವಾದವಿಧಾಯಕಪ್ರಾತ್ಯಕ್ಷಿಕಶ್ರುತಿಸ್ಮೃತಿವಾಕ್ಯಾದರ್ಶನಾತ್. “ ಯತೋ ವಾ ಇಮಾನಿ ಭೂತಾನಿ ” ಇತ್ಯಾದಿಸೃಷ್ಟಿಸ್ಥಿತಿಪ್ರಳಯವಿಧಾಯಕಸರ್ವವೇದಾಂತಸ್ಮೃತಿಪುರಾಣಾಗಮಾದೀನಾಂ ದತ್ತಾಂಜಲಿಪ್ರಸಂಗಾಚ್ಚ, “ ಅಸದ್ವಾ ಇದಮಗ್ರ ಆಸೀತ್ ” ಇತಿ ಪ್ರಳಯಾವಸ್ಥಾಯಾಮಪಿ ಚೇತನಾಚೇತನಾತ್ಮಕಪ್ರಪಂಚಸ್ಯ ಪ್ರಜ್ಞಾನಘನಪರಮಶಿವೇ ಗ್ರೀಷ್ಮಕಾಲಧರಿತ್ರೀವಿಲೀನತೃಣಾದಿಬೀಜವತ್ಸೂಕ್ಷ್ಮರೂಪೇಣಾವಸ್ಥಾನಂ ನಿರ್ದಿಶ್ಯತೇ. “ ತತೋ ವೈ ಸದಜಾಯತ ” ಇತ್ಯುತ್ತರವಾಕ್ಯೇ ಪುನಸ್ಸೃಷ್ಟ್ಯುಪದೇಶಾತ್. “ ಸತ್ಯಜ್ಞಾನಘನಾನಂದೇ ಶಿವೇ ಪರಮಕಾರಣೇ।ಚರಾಚರಜಗಜ್ಜಾಲಂ ಗ್ರೀಷ್ಮೇ ಕ್ಷ್ಮಾಲೀನಬೀಜವತ್ ॥ ಸೂಕ್ಷ್ಮರೂಪೇಣ ಸಂಸ್ಥಿತ್ಯ ಪುನಃ ಸ್ವಸ್ವಚಿಕೀರ್ಷಯಾ । ಸ್ಥೂಲತ್ವೇನ ಬಹಿರ್ಯಾತಿ ಮುಕ್ತಾತ್ಮಾ ನ ಪುನರ್ಭವಃ ॥ ”, “ ನೇಹ ನಾನಾಸ್ತಿ ” ಇತ್ಯಾದಿ ಜಗದಭಾವಬೋಧಕವಾಕ್ಯಾನಾಂ ಪ್ರಳಯಾವಸ್ಥಾವಿಷಯಮಿತಿ ವೇದಿತವ್ಯಂ ; “ ಸ ಐಕ್ಷತ ಲೋಕಾನ್ನು ಸೃಜೈ ” ಇತ್ಯುತ್ತರವಾಕ್ಯೇ ಸೃಷ್ಟ್ಯುಪದೇಶಾತ್. “ ದ್ವಾ ಸುಪರ್ಣಾ ” ಇತ್ಯಾದಿಭೇದಬೋಧಕವಾಕ್ಯಾನಾಂ ಸಂಸಾರದಶಾವಿಷಯತ್ವಂ, “ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್ ” ಇತ್ಯಾದೀನಾಂ ಪರಮಶಿವಾನಂದಾನುಭವಪೂರ್ಣಸಮಾಧಿದಶಾವಿಶೇಷವಿಶಿಷ್ಟವಿದ್ವದನುಭವಪರತ್ವಂ. ತಸ್ಮಾಚ್ಛ್ರುತಿಸೂತ್ರಾದಿವಿರುದ್ಧತದಧ್ಯಾರೋಪವಿಧಾಯಕಾದ್ವೈತಮತಮುಪೇಕ್ಷಣೀಯಂ. ಅತೋ ಬ್ರಹ್ಮಪ್ರಪಂಚಯೋಃ ಕಾರಣಕಾರ್ಯತ್ವವಾದ ಏವ ಯುಕ್ತಃ.

ಹೀಗೆ ಜಗತ್ತು, ಜೀವ, ಈಶ್ವರ ಇವರಿಗೆ ಸ್ಮೃತಿಯ ಆಧಾರದಿಂದ ಭೇದವನ್ನು ತಿಳಿಸುವ ಸಾಂಖ್ಯಯೋಗಮತಗಳೆರಡನ್ನು ನಿರಾಕರಿಸಿ ಹಾಗೆಯೇ ಅವನ್ನು ಮಿಥ್ಯೆ

ಎಂದು ತಿಳಿಸುವ ಅದ್ವೈತಮತವನ್ನು ಈಗ ನಿರಾಕರಿಸುತ್ತಾನೆ.

**ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ॥ ೭ ॥**

"ಅದಕ್ಕೆ ಎರಡನೆಯದಿಲ್ಲ" "ಇಲ್ಲಿ ಬೇರೆ ಯಾವುದೂ ಇಲ್ಲ" "ಮೊಲದ ಕೊಂಬಿನಿಂದ ನಾಗರಾಜನು ಸಾಯುವುದಾದರೆ, ಉರಿಯುವ ಬೆಂಕಿಯಲ್ಲಿ ಕಮಲವು ಬೆಳೆಯುವುದಾದರೆ ಈ ಜಗತ್ತು ಸತ್ಯವಾಗಿದ್ದೀತು. ಮಾಯೆ ಎಂಬುದೂ ಇಲ್ಲ. ಅದರ ಕಾರ್ಯವೂ ಇಲ್ಲ. ಆದ್ದರಿಂದ ಯಾರಿಗೂ ಭಯವೂ ಇಲ್ಲ. ಆಕಾಶದಲ್ಲಿ ನೀಲವರ್ಣವು ಸತ್ಯವಾಗಿರುವುದಾದರೆ ಜಗತ್ತೂ ಸತ್ಯವೆನಿಸೀತು" ಹೀಗೆ ಶ್ರುತಿಸ್ಮೃತಿಗಳಲ್ಲಿ ಮೊಲದ ಕೊಂಬಿನಂತೆ ಪ್ರಪಂಚವನ್ನು ಸುಳ್ಳೆಂದು ತಿಳಿಸುವ ವಾಕ್ಯಗಳು ಕಂಡುಬಂದಿವೆ. ಆದ್ದರಿಂದ ಈ ಜಗತ್ತೆಲ್ಲವೂ ಅಸತ್=ಮಿಥ್ಯೆ ಎನಿಸಿದೆ ಎಂದು ಹೇಳುವುದಾದರೆ ಅದು ಸಮಂಜಸವಲ್ಲ; ಯಾಕೆಂದರೆ ಪ್ರಳಯದಲ್ಲಿ ಪ್ರಪಂಚದ ಸ್ಥೂಲರೂಪವನ್ನು ನಿಷೇಧಿಸಿದ ಮಾತ್ರಕ್ಕೆ ಪ್ರಪಂಚವೇ ಇಲ್ಲವೆನಿಸಲಾರದು. ಆಗಲೂ ಬೀಜದಲ್ಲಿ ಅಂಕುರವು ಸೂಕ್ಷ್ಮವಾಗಿರುವಂತೆ ಪರಮೇಶ್ವರನಲ್ಲಿ ಪ್ರಪಂಚವು ಸೂಕ್ಷ್ಮರೂಪದಿಂದ ಇದ್ದು ಅವನ ವಿನೋದಕ್ಕಾಗಿ ಸೃಷ್ಟಿಕಾಲದಲ್ಲಿ ಮತ್ತೆ ಹೊರಬರುತ್ತದೆ. "ಬ್ರಹ್ಮನು ಹಿಂದಿನಂತೆ ಸೃಷ್ಟಿಸಿದನು" "ಇಲ್ಲಿ ಒಂದೇಬಗೆಯ ಎರಡು ಪಕ್ಷಿಗಳಿವೆ" ಈ ಬಗೆಯ ಶ್ರುತಿಗಳಲ್ಲಿ ಪ್ರಪಂಚ ಸತ್ಯವೆಂದು ತಿಳಿಸಲಾಗಿದೆ. "ಯಾವಾಗಲೂ ಇಂತಹ ಜಗತ್ತಿರಲಿಲ್ಲ! ಇಲ್ಲಿ ಬೇರೆ ಯಾವುದೂ ಇಲ್ಲ" "ಬ್ರಹ್ಮ ಒಂದೇ ಅದ್ವಿತೀಯವೆನಿಸಿತ್ತು" ಈ ಶ್ರುತಿಗಳಲ್ಲಿ ಪ್ರಪಂಚವಿರಲಿಲ್ಲವೆಂದು ಕಂಡುಬರುವುದರಿಂದ ಇದು ಯಾವಾಗಲೂ ಇರುತ್ತೆಯೇ ಇಲ್ಲವೇ ಎಂಬ ಸಂಶಯ ಬರುತ್ತದೆ. "ಇಲ್ಲಿ ಏನೊಂದೂ ಇಲ್ಲ". "ಯಾವುದೂ ಇಲ್ಲವೆಂಬುದೇ ಆದೇಶ" "ಮೊದಲೂ ಕೊನೆಯಲ್ಲೂ ಇಲ್ಲದ್ದು ಮಧ್ಯದಲ್ಲೂ ಇರುವುದಿಲ್ಲ". "ಬ್ರಹ್ಮ ಒಂದೇ ಸತ್ಯ, ಜಗತ್ತು ಮಿಥ್ಯೆ, ಜೀವನು ಬ್ರಹ್ಮನಲ್ಲದೆ ಬೇರೆಯಲ್ಲ" "ಕಾರ್ಯಕ್ಕಾಗಿ ಜೀವನೂ ಕಾರಣಕ್ಕಾಗಿ ಈಶ್ವರನೂ ಕಲ್ಪಿತರು, ಕಾರ್ಯಕಾರಣಗಳೆರಡನ್ನೂ ಬಿಟ್ಟರೆ ಜ್ಞಾನ ಒಂದೇ ಉಳಿಯುತ್ತದೆ. ಅಧ್ಯಾಸ ಮತ್ತು ನಿಷೇಧಗಳಿಂದ ಪ್ರಪಂಚವಿಲ್ಲವೆನ್ನುವುದು ನಿಶ್ಚಿತವಾಗುತ್ತದೆ. ಶಿಷ್ಯರಿಗೆ ಬೋಧಿಸಲಿಕ್ಕಾಗಿ ತತ್ತ್ವಜ್ಞಾನಿಗಳು ಜೀವೇಶ್ವರರನ್ನು ಕಲ್ಪಿಸಿದ್ದಾರೆ" ಹೀಗೆ ಶ್ರುತಿಸ್ಮೃತಿಗಳ ಮತ್ತು ಪೂರ್ವಾಚಾರ್ಯರ ನ್ಯಾಯಗಳು ಕಂಡುಬಂದಿರುವುದರಿಂದ ಜಗತ್ತನ್ನು ಮಿಥ್ಯೆ ಎಂದು ಹೇಳುವುದೇ ಯುಕ್ತವೆನಿಸುತ್ತದೆ. ಇಲ್ಲವಾದರೆ, ಹಿಂದೆ ಹೇಳಿದ ಶ್ರುತಿ-ಸ್ಮೃತಿ ನ್ಯಾಯಗಳಿಗೆ ಸಮನ್ವಯಮಾಡುವುದೇ ಬಹಳ ಕಷ್ಟವಾಗುತ್ತದೆ. ಹೀಗೆ ಆಕ್ಷೇಪ ಬಂದರೆ ಅದಕ್ಕೆ ಸಮಾಧಾನವನ್ನು ಸೂತ್ರದಲ್ಲಿ ಹೇಳಲಾಗಿದೆ. ಪ್ರಪಂಚವಿಲ್ಲವೆಂಬ ಬಗ್ಗೆ ಹಿಂದಿನ ಆಚಾರ್ಯರು ಕಲ್ಪಿಸಿರುವ ನ್ಯಾಯದಿಂದ ಅದನ್ನು ಸುಳ್ಳೆಂದು ಹೇಳಲಿಕ್ಕೆ ಪ್ರಬಲವಾದ ಶ್ರುತಿಸ್ಮೃತಿವಾಕ್ಯಗಳೇ ಕಂಡುಬಂದಿಲ್ಲ. ಹಾಗೆ ಹೇಳುವುದಾದರೆ "ಯಾವನಿಂದ ಈ ಪ್ರಪಂಚ ಹುಟ್ಟಿತೋ" ಎಂದು ಮುಂತಾಗಿ ಸೃಷ್ಟಿಸ್ಥಿತಿಪ್ರಳಯಗಳನ್ನು ವಿಧಿಸಿರುವ ವೇದಾಂತಸ್ಮೃತಿ

ಪುರಾಣಗಳೆಲ್ಲಕ್ಕೂ ತಿಲಾಂಜಲಿ ಎರೆಯಬೇಕಾದೀತು. “ ಮೊದಲಿಗೆ ಇದೆಲ್ಲವೂ ಅಸದ್ರೂಪವಾಗಿತ್ತು” ಎಂಬಲ್ಲಿ ಪ್ರಳಯದಲ್ಲಿಯೂ ಈ ಪ್ರಪಂಚವು ಜ್ಞಾನಸ್ವರೂಪನಾದ ಪರಮಶಿವನಲ್ಲಿ ಬೇಸಿಗೆಯಲ್ಲಿ ನೆಲದಲ್ಲಿ ಹುಲ್ಲಿನ ಬೀಜಗಳು ಅಡಗಿರುವಂತೆ ಸೂಕ್ಷ್ಮರೂಪದಿಂದ ಸೇರಿತ್ತೆಂದು ತಿಳಿಸಲಾಗಿದೆ. “ಅದರಿಂದ ಸದ್ರೂಪ ಹುಟ್ಟಿತು” ಎಂಬ ಮುಂದಿನ ವಾಕ್ಯದಲ್ಲಿ ಮತ್ತೆ ಸೃಷ್ಟಿಯನ್ನು ಹೇಳಲಾಗಿದೆ. “ ಸರ್ವಕಾರಣನೂ ಸತ್ಯಜ್ಞಾನಾನಂದರೂಪನೂ ಆದ ಶಿವನಲ್ಲಿ ಚರಾಚರಪ್ರಪಂಚವು ಗ್ರೀಷ್ಮಕಾಲದಲ್ಲಿ ನೆಲದಲ್ಲಿ ಹುದುಗಿದ ಬೀಜದಂತೆ ಸೂಕ್ಷ್ಮರೂಪದಿಂದ ಇದ್ದು ಮತ್ತೆ ಅವನಿಗೆ ಇಚ್ಛೆಬಂದಾಗ ಸ್ಥೂಲರೂಪದಿಂದ ಹೊರಗೆ ಬರುತ್ತದೆ. ಮುಕ್ತನು ಮಾತ್ರ ಬರುವುದಿಲ್ಲ ಎಂದು ಸ್ಮೃತಿಯು ತಿಳಿಸುತ್ತದೆ. “ ಇದೆಲ್ಲವೂ ಮೊದಲು ಸದ್ರೂಪವಾಗಿತ್ತು. ಬ್ರಹ್ಮವಲ್ಲದೆ ಬೇರೆ ಏನೂ ಇರಲಿಲ್ಲ” ಹೀಗೆ ಜಗತ್ತಿರಲಿಲ್ಲವೆಂದು ತಿಳಿಸುವ ಶ್ರುತಿವಾಕ್ಯವು ಪ್ರಳಯಕಾಲಕ್ಕೆ ಅನ್ವಯಿಸುವುದೆಂದು ತಿಳಿಯಬೇಕು. ಆಗ ಎಲ್ಲವೂ ಸೂಕ್ಷ್ಮಾವಸ್ಥೆಯಲ್ಲಿತ್ತೆಂಬುದಷ್ಟೇ ಆ ವಾಕ್ಯಗಳ ಅರ್ಥ. “ಅವನು ಲೋಕಗಳನ್ನು ಸೃಷ್ಟಿಸುವೆನೆಂದು ನೋಡಿದನು” ಎಂಬ ಮುಂದಿನ ವಾಕ್ಯಗಳಲ್ಲಿ ಸೃಷ್ಟಿಯನ್ನು ಹೇಳಿರುವುದರಿಂದ “ಒಂದೇ ಬಗೆಯ ಎರಡು ಪಕ್ಷಿಗಳು ಇದ್ದಾರೆ” ಎಂಬ ವಾಕ್ಯ ಜೀವರ ಸಂಸಾರಾವಸ್ಥೆಗೂ, “ ಎಲ್ಲವೂ ಆತ್ಮನೇ ಆದಾಗ ಯಾರು ಯಾರೊಡನೆ ವ್ಯವಹರಿಸಬಹುದು” ಎಂಬ ವಾಕ್ಯಗಳು ಶಿವಾನಂದವನ್ನು ಪೂರ್ಣವಾಗಿ ಅನುಭವಿಸುತ್ತ. ಶಿವಯೋಗದಲ್ಲಿಯೇ ನಿರತರಾದ ಶಿವಯೋಗಿಗಳಿಗೂ ಅನ್ವಯಿಸುತ್ತವೆ ಎಂದೂ ತಿಳಿಯಬೇಕು. ಆದ್ದರಿಂದ ಶ್ರುತಿಸೂತ್ರಗಳಿಗೆ ವಿರುದ್ಧವಾಗಿ ಬ್ರಹ್ಮದ ಆರೋಪವನ್ನು ತಿಳಿಸುವ ಅದ್ವೈತಮತವು ಆದರಣೀಯವಲ್ಲ. ಆದ್ದರಿಂದ ಬ್ರಹ್ಮಪ್ರಪಂಚವೆಂಬ ಕಾರಣಕಾರ್ಯಗಳು ಸತ್ಯವೆಂಬ ವಾದವೇ ಯುಕ್ತವಾಗಿದೆ.

**ರಜ್ಜುಸರ್ಪವಜ್ಜೀವೇಶ್ವರಾದಿಜಗತಃ ಅವಿದ್ಯಾವಶಾತ್ಸಂಸಾರದಶಾಯಾಂ ಭಾಸಮಾನತ್ವೇಽಪಿ ದಶಮವಿವೇಕಸಂಧಾನಪೂರ್ವಕಸ್ವಸ್ವರೂಪಸಾಕ್ಷಾತ್ಕಾರಜ್ಞಾನಾನುಭವಾತ್ಪ್ರಳಯಾವಸ್ಥಾವದಸತ್ತ್ವಮೇವೇತ್ಯಾಶಂಕಾಯಾಮಾಹ— ಅಪೀತೌ ತದ್ವತ್ಪ್ರಸಂಗಾದಸಮಂಜಸಂ ॥ ೮ ॥**

**ಅಪೀತೌ ಪ್ರಳಯಕಾಲೇ ತದ್ವತ್ಪ್ರಸಂಗಾತ್ ಮಂಡೂಕಾದಿಶರೀರಾಣಾಂ ಪೃಥಿವ್ಯಾಮೇಕಭೂತಾನಾಂ ಯಥಾ ವರ್ಷಾಕಾಲೇ ಪುನರುತ್ಪತ್ತಿಸ್ತದ್ವದ್ಬ್ರಹ್ಮಣ್ಯೇಕಭೂತಸ್ಯ ಸಂಸ್ಕಾರಸ್ವರೂಪೇಣ ವಿದ್ಯಮಾನಸ್ಯ ಚೇತನಾಚೇತನಾತ್ಮಕಪ್ರಪಂಚಸ್ಯೋತ್ಪತ್ತೇಃ “ ಸ ಈಕ್ಷತ ” ಇತ್ಯಾದಿಷು ಪ್ರಸಂಗಾತ್ ಪ್ರತಿಪಾದನಾತ್ ಅಸಮಂಜಸಂ, ಜಗಜ್ಜೀವೇಶ್ವರಮಿಥ್ಯಾವಾದ ಅಯುಕ್ತಃ. ನನು ‘ಏಕಮೇವಾದ್ವಿತೀಯಂ ಬ್ರಹ್ಮ’ “ಆತ್ಮಾ ವಾ ಇದಮಗ್ರ ಆಸೀತ್ ”ಇತ್ಯತ್ರ ಸೃಷ್ಟೇಃ ಪ್ರಾಗ್ಬ್ರಹ್ಮಣ ಏವಾವಗಮಾತ್, “ಯತ್ರ ನಾನ್ಯತ್ಪಶ್ಯತಿ ಸರ್ವಮಾತ್ಮೈವಾಭೂತ್ ” ಇತ್ಯಾತ್ರಾಪಿ ಸರ್ವತ್ರ**

ಭೇದನಿರಾಸೋಪದೇಶಾಚ್ಚ ತದೇವ ಯುಕ್ತಂ. "ಯಥಾ ಸುದೀಪ್ತಾತ್ ಪಾವಕಾತ್," "ಏಷ ಸಂಪ್ರಸಾದಃ– ಅಭಿನಿಷ್ಪದ್ಯತೇ" "ತತ್ತ್ವಮಸಿ." "ಯಥಾ ನದ್ಯಃ" ಇತ್ಯಾದಿಶ್ರುತಿಷು ಪ್ರಾಪ್ಯಪ್ರಾಪಕತ್ವೇನ ಮುಕ್ತ ಜೀವಸ್ಯ ಸ್ವಾಭಾವಿಕಜೀವಭಾವನಿವೃತ್ತಿಪೂರ್ವಕಬ್ರಹ್ಮತಾಪತ್ತಿಲಕ್ಷಣಾ ತ್ಮಕಮುಕ್ತೇರಾಕಾಶವದವರ್ಜನೀಯತ್ವೇನ ನಿರ್ದೇಶಾತ್ ದ್ವೈತಾದ್ವೈ ತಮತಮೇವ ಸರ್ವವೇದಾಂತಶ್ರುತಿಸ್ಮೃತಿಸೂತ್ರಪುರಾಣಾದಿಮುಖ್ಯ ಸಿದ್ಧಾಂತಾಭಿಪ್ರೇತಮಿತಿ ಚೇತ್ತದಸಂಗತಂ, ಸ್ವಾಭಾವಿಕಭೇದಭಾವಮಾ ಪನ್ನಸ್ಯ ಜೀವಸ್ಯ ಬ್ರಹ್ಮಭಾವಾಸಂಭವಾತ್. ಶೈತ್ಯಸ್ವಭಾವಸ್ಯ ಜಲಸ್ಯ ಜ್ವಲನಾದುಷ್ಣತ್ವಸಂಭವೇಽಪಿ ಯಾವಮಾತ್ಪೂರ್ವಮೇವ ಪುನಶ್ಶೈತ್ಯಸ್ವ ಭಾವದರ್ಶನಾಚ್ಚ, ಜೀವಸ್ಯ ಭೇದಸ್ವರೂಪಾವಚ್ಛಿನ್ನತ್ವೇನ ಸತ್ತ್ವಾತ್ ಜೀವಾತ್ಮನೋ ಬ್ರಹ್ಮತ್ವಸಂಭವೇಽಪಿ ತಸ್ನ ಸ್ಥಾಯಿ ಆಂಗತುಕತ್ವಾತ್. ಭೇದಶ್ಚ ನ ನಷ್ಟಃ. ತಸ್ಮಾದ್ಭೇದ ಔಪಾಧಿಕ ಅಭೇದ ಆಗಂತುಕ ಇತಿ ವೇದಿತವ್ಯಂ. "ಬಿಂಬತ್ವಂ ಪ್ರತಿಬಿಂಬತ್ವಂ ಯಥಾ ಪೂಷಣಿ ಕಲ್ಪಿತಂ । ಜೀವತ್ವಮೀಶ್ವರತ್ವಂ ಚ ತಥಾ ಬ್ರಹ್ಮಣಿ ಕಲ್ಪಿತಂ" ಇತಿ ಶಾಸ್ತ್ರೇ ಜೀವೇಶ್ವ ರಯೋಃ ಮಾಯಾಕಲ್ಪಿತತ್ವಮಲೀಕತ್ವಂ ಚೋಪದಿಷ್ಟಂ. ತಸ್ಮಾತ್ "ಏಷ ಸಂಪ್ರಸಾದಃ – ಸ್ವೇನ ರೂಪೇಣಾಭಿಸಂಪದ್ಯತೇ" ಇತ್ಯಾದಿದ್ವೈತಾ ದ್ವೈತವಿಧಾಯಕಪ್ರಾಪ್ಯಪ್ರಾಪಕಶ್ರುತೀನಾಂ ಸ್ವಾಭಾವಿಕಭೇದನಿವೃತ್ತ್ಯ ಯೋಗೇನ ಸೋಽಯಂದೇವದತ್ತವಾಕ್ಯಸಿದ್ಧಜಹದಜಹಲ್ಲಕ್ಷಣೋಪದಿ ಷ್ಟಮಾಯಾವಿದ್ಯಾನಿವೃತ್ತಿಪೂರ್ವಕಜೀವೇಶ್ವರಚೈತನ್ಯೈಕತ್ವಪಾದಕಮ ತಮೇವ ಮುಖ್ಯಮಿತಿ ಚೇದಾಶ್ರಾವಯ. ಸ್ವಾಭಾವಿಕಭೇದನಿವೃತ್ತಿರ್ಭ್ರ ಮರಕೀಟಲೋಹರಸಜಲವಾಕ್ತಿಕಾದಿನಾನಾವಿಧದೃಷ್ಟಾಂತಾನುಸಾರೇ ಣ ಜಿಜ್ಞಾಸಾಧಿಕರಣೇ ಸ್ಪಷ್ಟಮುಪದಿಷ್ಟಂ. "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿಷು ಜೀವಸ್ಯ ಪ್ರಾಚೀನಕರ್ಮಫಲ ಭೋಗಾನುಸಾರೇಣ ಸರ್ಗೋಪದೇಶಾತ್. ಅನ್ಯಥಾ ವಿಷಮಸೃಷ್ಟ್ಯಾಪತ್ತೇಶ್ಚ ಬ್ರಹ್ಮಪ್ರಾಪ್ತ್ಯುಪಾಯಭೂತಕರ್ಮಭಕ್ತಿವೈರಾಗ್ಯಯೋಗಶಮದ ಮಭೂತದಯಾವಿಚಾರಶ್ರವಣಮನನನಿದಿಧ್ಯಾಸಾವಧಾನಜ್ಞಾನಸಹಕೃ ತತದುಪಾಸನಾಯಾಮನಧಿಕೃತತ್ವಪ್ರಸಂಗಃ. ಕಿಂಚ ತದುಪಾಸನವಿಧಾ ಯಕಾನಾಂ ವೇದವೇದಾಂತಾಗಮಾದೀನಾಂ ನಿರವಕಾಶಪ್ರಸಕ್ತಿಃ ದುರ್ನಿ ವಾರಃ. ಬಿಂಬಪ್ರತಿಬಿಂಬಭಾವತಯಾ ಜೀವಾದೀನಾಂ ಮಾಯಾಕಲ್ಪಿತ ತ್ವವ್ಯಪದೇಶೇ ಘಟಾದಿವನ್ನಷ್ಟಪ್ರಸಂಗಾತ್ ಮುಕ್ತೇರಪುರುಷಾರ್ಥತ್ವಾತ್ "ಜ್ಞಾಜ್ಞೌ" ಇತ್ಯಾದಿಶ್ರುತಿವಿಹಿತತ್ವೇನ ಜೀವೇಶ್ವರಯೋರಜತ್ವವಿಧಾ ಯಕಶ್ರುತಿವಿರೋಧಾಚ್ಚ. ಪ್ರಾಗಪಿ ಶಾರೀರಸ್ಯ ಬ್ರಹ್ಮತ್ವೇ "ಪರಂ

ಜ್ಯೋತಿರುಪಸಂಪದ್ಯ” ಇತಿ ವಾಕ್ಯವಿರೋಧಃ ಪ್ರಸಜ್ಯತೇ. ನಿರಂಜನಸ್ಯ ನಿತ್ಯಮುಕ್ತಸ್ಯ ನಿರವಯವಸ್ಯ ನಿರತಿಶಯಸ್ಯ ಸ್ವಪ್ರಕಾಶಸ್ಯ ಬ್ರಹ್ಮಣಃ ಮಾಯೋಪಾಧಿಕಲ್ಪನಸ್ವೀಕಾರೇ ತದದ್ವೈತಹಾನಿಃ. ಪ್ರಾಗಪಿ ಬ್ರಹ್ಮ ಭೇದಸ್ಯ ರಜ್ಜುಸರ್ಪವದಪಾರಮಾರ್ಥಿಕತ್ವೇ ಜೀವಬ್ರಹ್ಮಪ್ರಾಪ್ತಿವಿಧಾಯಕತತ್ತ್ವಮಸ್ಯಾದಿಮಹಾವಾಕ್ಯಪ್ರಾಮಾಣ್ಯಂ ಕಥಮಾಕೃಷ್ಯತೇ? ಗುರುಶಿಷ್ಯಯೋರ್ಮೌನಪ್ರಸಕ್ತಿಶ್ಚ ಪ್ರಯುಜ್ಯತೇ. “ಬ್ರಹ್ಮಣಃ ಬ್ರಹ್ಮತ್ವ ಪ್ರಾಪ್ತಿಃ ಪಿಷ್ಟಪೇಷಣವದವಿಶೇಷಾತ್ತಚ್ಛ್ರವಣಮನನಾದೀನಾಂ ವೈಫಲ್ಯಂ. “ಛಿನ್ನೇ ಪುಚ್ಛೇ ಲೂನೇ ಕರ್ಣೇ ಶ್ವಾ ಶ್ವಾ ಏವ ಭವತಿ ನಾಶ್ವೋ ನ ಗರ್ದಭಃ” ಇತಿ ನ್ಯಾಯಾತ್, ಜ್ಞಾನಾನಂದಸ್ವಭಾವಸ್ಯ ನಿತ್ಯಮುಕ್ತಸ್ಯ ಸ್ವಪ್ರಕಾಶಸ್ಯ ಪರಮಾತ್ಮನಃ ಸ್ವಾವಿದ್ಯಾತಿರೋಹಿತತ್ವೇಽಪಿ ಸ್ವಪ್ರಕಾಶವತ್ಸರ್ವಜ್ಞತ್ವನಿತ್ಯಮುಕ್ತತ್ವಾದಿವಿಧಾಯಕಶ್ರುತಿವಿರೋಧಃ, ಸಾವಯತ್ವಸಗುಣತ್ವಾದಿಯುಕ್ತಿಶ್ಚ ಪ್ರಸಜ್ಯೇತ. ತಸ್ಮಾತ್ಪೂರ್ವೋಕ್ತ ಸರ್ವಶ್ರುತಿವಿಹಿತದ್ವೈತಾದ್ವೈತಮತಮೇವ ರಾದ್ಧಾಂತಃ. ಯಥಾ ಜಾಗ್ರತ್ಸ್ವಪ್ನಯೋರ್ದ್ವೈತಸಿದ್ಧಿಃ ಸುಪ್ತಾವದ್ವೈತಂ ಚ ಸರ್ವಾನುಭವಸಿದ್ಧಂ ದುರ್ನಿವಾರಂ ತಥಾ ಶಿವತ್ವಪ್ರಾಪ್ತಿಪರ್ಯಂತಂ ಭೇದಃ, ತತೋ ನದೀಸಮುದ್ರವಜ್ಜೀವಬ್ರಹ್ಮಣೋರಭೇದೇ ನ ವಿರೋಧಃ.

ಹಗ್ಗದಲ್ಲಿ ಸರ್ಪ ತೋರುವಂತೆ ಜೀವ ಈಶ್ವರ ಜಗತ್ತುಗಳು ಅವಿದ್ಯೆಯಿಂದ ಸಂಸಾರದಶೆಯಲ್ಲಿ ತೋರಿದರೂ ‘ ನೀನು ಹತ್ತನೆಯವನು ’ ಎಂಬ ವಾಕ್ಯದ ಸ್ಮರಣದಿಂದ ತನ್ನ ಸ್ವರೂಪವು ತಿಳಿದುಬರುವುದರಿಂದ ಪ್ರಪಂಚವೆಂಬುದು ಪ್ರಳಯಾವಸ್ಥೆಯಂತೆ ಅಸದ್ರೂಪವೆಂದು ಆಶಂಕಿಸಿ ನಿರಾಕರಿಸುತ್ತಾನೆ.

**ಅಪೀತೌ ತದ್ವತ್ಪ್ರಸಂಗಾದಸಮಂಜಸಂ ॥ ೮ ॥**

ಅಪೀತಿ ಎಂದರೆ ಪ್ರಳಯಕಾಲ. ಆಗ ಪ್ರಪಂಚವು ಬೇಸಿಗೆಯಲ್ಲಿ ಕಪ್ಪೆ ಮೊದಲಾದವು ನೆಲದಲ್ಲಿ ಸೇರಿಕೊಂಡಿದ್ದು ಮಳೆಗಾಲದಲ್ಲಿ ಮತ್ತೆ ಹೊರಗೆ ಬರುವಂತೆ ಬ್ರಹ್ಮದಲ್ಲಿ ತಮ್ಮತಮ್ಮ ಸಂಸ್ಕಾರದೊಡನೆ ಸೇರಿಕೊಂಡಿದ್ದು ಮತ್ತೆ ಹುಟ್ಟುವುದೆಂದು “ ಅವನು ನೋಡಿದನು ” ಮುಂತಾದ ಶ್ರುತಿಗಳಲ್ಲಿ ತಿಳಿಸಿರುವುದರಿಂದ ಜಗಜ್ಜೀವೇಶ್ವರರು ಸುಳ್ಳೆಂಬ ವಾದ ಯುಕ್ತವೆನಿಸಲಾರದು. “ ಇದೆಲ್ಲವೂ ಮೊದಲು ಸದ್ರೂಪವಾಗಿತ್ತು” “ ಆಗ ಬ್ರಹ್ಮ ಒಂದೇ ಇತ್ತು” ಎಂಬಲ್ಲಿ ಸೃಷ್ಟಿಗೆ ಮೊದಲು ಬ್ರಹ್ಮ ಒಂದೇ ಇತ್ತೆಂದು ತಿಳಿದುಬರುತ್ತದೆ. “ ಎಲ್ಲಿ ಬೇರೊಂದನ್ನು ನೋಡುವುದಿಲ್ಲವೋ ಮತ್ತು ಕೇಳುವುದಿಲ್ಲವೋ ” ಎಂಬ ಶ್ರುತಿಯಲ್ಲಿಯೂ ಭೇದವನ್ನು ನಿರಾಕರಿಸಿರುವುದರಿಂದ ಜಗತ್ತು ಸತ್ಯವೆಂಬುದೇ ಯುಕ್ತವಾಗುತ್ತದೆ. ‘‘ ಉರಿಯುವ ಬೆಂಕಿಯಿಂದ ಒಂದೇ ಬಗೆಯ ಕಿಡಿಗಳು ಉದುರುವಂತೆ ಅಕ್ಷರನಾದ ಪರಶಿವನಿಂದ ಸಮಾನಾಕಾರದ ಜೀವರು ಹುಟ್ಟಿದ್ದಾರೆ ಮತ್ತೆ ಅಲ್ಲಿಯೇ ಸೇರುತ್ತಾರೆ.” “ಸಂಪ್ರಸಾದನೆನಿಸಿದ ಈ

ಮುಕ್ತಜೀವನು ಈದೇಹದಿಂದ ಹೊರಟು ಪರಂಜ್ಯೋತಿಯಲ್ಲಿ ಸೇರಿ ತನ್ನ ವಾಸ್ತವ ರೂಪವನ್ನು ಪಡೆಯುತ್ತಾನೆ." "ನೀನು ಬ್ರಹ್ಮವಾಗಿದ್ದಿ. ನಾನು ಬ್ರಹ್ಮವಾಗಿದ್ದೇನೆ" "ನದಿಗಳು ಹರಿಯುತ್ತ ಸಮುದ್ರದಲ್ಲಿ ಸೇರಿ ನಾಮರೂಪಗಳನ್ನು ಕಳೆದುಕೊಳ್ಳುವಂತೆ ಶಿವಾನುಭವಿಯು ಶಿವಸಾಮರಸ್ಯದಿಂದ ಹಮ್ಮಭಿಮಾನಗಳನ್ನು ತೊರೆಯುತ್ತಾನೆ" ಈ ಶ್ರುತಿಗಳಲ್ಲಿ ಮುಕ್ತಜೀವನು ತನ್ನ ಸ್ವಾಭಾವಿಕವಾದ ಜೀವವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುವನೆಂದು ಹೇಳಿರುವುದರಿಂದ ದ್ವೈತಾದ್ವೈತಮತವೇ ಮುಖ್ಯಸಿದ್ಧಾಂತವೆಂದು ಎಲ್ಲಾ ಶ್ರುತಿಸ್ಮೃತಿಸೂತ್ರಪುರಾಣಗಳಿಗೂ ಸಮ್ಮತವೆನಿಸಿದೆ ಎಂದು ಹೇಳುವುದು ಸಮಂಜಸವಲ್ಲ; ಯಾಕೆಂದರೆ ಸಹಜವಾಗಿ ಭಿನ್ನನಾಗಿರುವ ಜೀವನಿಗೆ ಶಿವಭಾವ ದೊರಕುವ ಸಂಭವವಿಲ್ಲ. ಶೀತಸ್ವಭಾವದ ನೀರು ಬೆಂಕಿಯಿಂದ ಉಷ್ಣವಾಗಿದ್ದರೂ ಕೊಂಚಹೊತ್ತಿನಮೇಲೆ ಮತ್ತೆ ಅದರ ಶೀತಸ್ವಭಾವವೇ ಕಾಣ ಬರುತ್ತದೆ. ಜೀವನಲ್ಲಿ ಭೇದವೇ ಸ್ವಭಾವವಾಗಿರುವುದರಿಂದ ಅವನು ಶಿವನಾದರೂ ಆ ಶಿವಭಾವ ಆಗಂತುಕವಾದ್ದರಿಂದ ಬಹಳಕಾಲ ಇರಲಾರದು. ಅಲ್ಲಿಗೆ ಜೀವಭಾವ ಹೋಗಲೇ ಇಲ್ಲವಾದ್ದರಿಂದ ಭೇದ ಔಪಾಧಿಕವೆಂದೂ ಅಭೇದ ಆಗಂತುಕವೆಂದೂ ತಿಳಿಯಬೇಕು. "ಸೂರ್ಯನಲ್ಲಿ ಬಿಂಬ ಪ್ರತಿಬಿಂಬಗಳನ್ನು ಕಲ್ಪಿಸುವಂತೆ ಬ್ರಹ್ಮದಲ್ಲಿ ಕಾರ್ಯಕ್ಕಾಗಿ ಜೀವನೂ, ಕಾರಣಕ್ಕಾಗಿ ಈಶ್ವರನೂ ಕಲ್ಪಿತರಾಗಿದ್ದಾರೆ. ಈ ಕಾರ್ಯ ಕಾರಣಗಳೆಂಬ ಎರಡು ಅಂಶಗಳನ್ನು ತೊರೆದರೆ ಜ್ಞಾನ ಒಂದೇ ಉಳಿಯುತ್ತದೆ" ಎಂಬಲ್ಲಿ ಜೀವೇಶ್ವರರನ್ನು ಕಲ್ಪಿತರೆಂದೂ, ಸುಳ್ಳೆಂದೂ ತಿಳಿಸಲಾಗಿದೆ. "ಈ ಜೀವನು ಪರಂಜ್ಯೋತಿಯಲ್ಲಿ ಸೇರಿ ತನ್ನ ಸ್ವರೂಪವನ್ನು ಪಡೆಯುತ್ತಾನೆ" ಈ ಬಗೆಯ ಶ್ರುತಿಗಳಲ್ಲಿ ಜೀವನಿಗೆ ಸ್ವಾಭಾವಿಕವಾದ ಭೇದ ತೊಲಗದಿರುವುದರಿಂದ "ಅವನೇ ಈ ದೇವದತ್ತನು" ಎಂಬಲ್ಲಿ ಹೇಳುವ ಜಹದಜಹಲ್ಲಕ್ಷಣೆಯಂತೆ ಮಾಯೆ ಅವಿದ್ಯೆ ಎಂಬ ಉಪಾಧಿಗಳು ತೊಲಗಿದ ಮೇಲೆ ಜೀವೇಶ್ವರರು ಚೈತನ್ಯರೂಪದಿಂದ ಒಂದೇ ಆಗುವರೆಂದು ಹೇಳುವ ಅದ್ವೈತಮತವೇ ಮುಖ್ಯವೆನಿಸುತ್ತದೆ ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಜೀವರಲ್ಲಿ ಭೇದವು ಸ್ವಾಭಾವಿಕವಾಗಿದ್ದರೂ ತೊಲಗುತ್ತದೆ ಎಂಬುದಕ್ಕೆ ಭ್ರಮರಕೀಟ, ಲೋಹರಸ, ಜಲ ಮೌಕ್ತಿಕ ಮೊದಲಾದ ಅನೇಕ ದೃಷ್ಟಾಂತಗಳನ್ನು ಹಿಂದೆಯೇ ಜಿಜ್ಞಾಸಾಧಿಕರಣದಲ್ಲಿ ಕೊಡಲಾಗಿದೆ. "ಯಾವನಿಂದ ಈ ಜೀವರು ಹುಟ್ಟಿದ್ದಾರೋ" ಎಂಬಲ್ಲಿ ಆಯಾ ಜೀವರು ಅವರವರ ಕರ್ಮಫಲವನ್ನು ಭೋಗಿಸಲಿಕ್ಕಾಗಿಯೇ ಹುಟ್ಟುತ್ತಿರುವರೆಂದು ಹೇಳಲಾಗಿದೆ. ಹಾಗೆ ಹೇಳದಿದ್ದರೆ, ವಿಷಮಸೃಷ್ಟಿಯನ್ನು ಹೇಳಬೇಕಾದೀತು ಮತ್ತು ಶಿವಭಾವವನ್ನು ಪಡೆಯಲು ಸಾಧನಗಳೆನಿಸಿದ ಭಕ್ತಿ, ವೈರಾಗ್ಯ, ಇಂದ್ರಿಯನಿಗ್ರಹ, ಶಮ, ದಮ, ಭೂತದಯೆ, ಶಿವನ ವಿಚಾರವನ್ನು ಕೇಳುವುದು, ತಿಳಿಯುವುದು, ಧ್ಯಾನಿಸುವುದು, ಮನಸ್ಸಿನಲ್ಲಿ ಭಾವಿಸುವುದು ಈ ಬಗೆಯ ಉಪಾಸನೆಯಲ್ಲಿ ಜೀವನಿಗೆ ಅಧಿಕಾರವೇ ಇಲ್ಲವಾದೀತು; ಶಿವನ ಉಪಾಸನವನ್ನು ವಿಧಿಸುವ ವೇದಾಗಮಗಳೆ

ಲ್ಲವೂ ವ್ಯರ್ಥವಾಗಬೇಕಾದೀತು; ಬ್ರಹ್ಮದ ಪ್ರತಿಬಿಂಬವೆನಿಸಿದ ಜೀವೇಶ್ವರರನ್ನು ಕಲ್ಪಿತರೆಂದು ಹೇಳಿದರೆ ಅವರು ಘಟದಂತೆ ನಷ್ಟವಾಗಬೇಕಾದೀತು ಮತ್ತು ಮುಕ್ತಿಯು ಬಂದು ಪುರುಷಾರ್ಥವೆನಿಸದೇಹೋದೀತು; ಜೀವೇಶ್ವರರಿಬ್ಬರನ್ನೂ ಅಜರೆಂದು ಹೇಳಿರುವ ಶ್ರುತಿಗೆ ವಿರೋಧವುಂಟಾದೀತು. ಜೀವನು ಮೊದಲೇ ಬ್ರಹ್ಮ ವಾಗಿದ್ದ ಪಕ್ಷದಲ್ಲಿ "ಬ್ರಹ್ಮದಲ್ಲಿ ಸೇರುತ್ತಾನೆ" ಎಂಬ ವಾಕ್ಯಕ್ಕೆ ವಿರೋಧವುಂಟಾ ದೀತು. ನಿರಂಜನನೂ ನಿತ್ಯಮುಕ್ತನೂ ನಿರವಯವನೂ ನಿರತಿಶಯಪ್ರಕಾಶನೂ ಆದ ಪರಬ್ರಹ್ಮಕ್ಕೆ ಮಾಯೆಯ ಉಪಾಧಿಯನ್ನು ಸ್ವೀಕರಿಸಿದರೆ ಬ್ರಹ್ಮದ ಅದ್ವೈತಕ್ಕೆ ಭಂಗ ವುಂಟಾಗುವುದು. ಹಗ್ಗದಲ್ಲಿ ಸರ್ಪ ತೋರುವಂತೆ ಜೀವನಲ್ಲಿ ಮೊದಲಿಗೇ ಬ್ರಹ್ಮ ಭೇದವು ಯಥಾರ್ಥವಾಗಿ ಇಲ್ಲದೇಹೋದರೆ ಜೀವನು ಬ್ರಹ್ಮನಾಗುವನೆಂದು ತಿಳಿಸುವ ತತ್ತ್ವಮಸಿ ಮೊದಲಾದ ಮಹಾವಾಕ್ಯಗಳು ಹೇಗೆ ಪ್ರಮಾಣವಾದಾವು? ಇದರಿಂದ ಗುರುಶಿಷ್ಯರಿಬ್ಬರಿಗೂ ಮೌನಮುದ್ರೆಯನ್ನು ಒತ್ತಬೇಕಾದೀತು. ಬ್ರಹ್ಮವೇ ಆಗಿರು ವವನು ಮತ್ತೆ ಬ್ರಹ್ಮವನ್ನು ಸೇರುವನೆಂಬುದರಲ್ಲಿ ಯಾವ ವಿಶೇಷವೂ ಇಲ್ಲದ್ದರಿಂದ ಬ್ರಹ್ಮದ ಶ್ರವಣಮನನಗಳು ಪಿಷ್ಟಪೇಷಣದಂತೆ ವ್ಯರ್ಥವಾಗುತ್ತವೆ. "ನಾಯಿಯ ಬಾಲ ಕಿವಿಗಳನ್ನು ಕತ್ತರಿಸಿದ್ದರೂ ಅದು ಕುದುರೆ ಮತ್ತು ಕತ್ತೆಯಾಗದೆ ನಾಯಿಯೇ ಆಗಿರುತ್ತದೆ" ಎಂಬಂತೆ ಜ್ಞಾನಾನಂದಸ್ವರೂಪನೂ ಸ್ವಪ್ರಕಾಶನೂ ನಿತ್ಯಮುಕ್ತನೂ ಆದ ಪರಶಿವನು ತನ್ನ ಮಾಯಾಶಕ್ತಿಯಿಂದಲೇ ತಿರೋಹಿತನಾಗಿ ಈಶ್ವರನೆನಿಸಿದ್ದರೂ ಅವನು ಎಂದಿನಂತೆ ಸ್ವಪ್ರಕಾಶನೂ ಸರ್ವಜ್ಞನೂ ನಿತ್ಯಮುಕ್ತನೂ ಆಗಿರಲಿಕ್ಕೇ ಬೇಕೆಂದು ತಿಳಿಸುತ್ತಿರುವ ಶ್ರುತಿಯನ್ನು ನಾವು ಅವಶ್ಯವಾಗಿ ಒಪ್ಪಲೇಬೇಕು. ಅವನು ನಿರವಯವನಾಗಿದ್ದರೂ ಸಾವಯವನೂ, ಮುನಃಪ್ರಾಣನೂ ಆಗಿರುವನೆಂಬ ಯುಕ್ತಿ ಯನ್ನೂ ನಾವು ಒಪ್ಪಲೇಬೇಕು. ಆದ್ದರಿಂದ ಎಲ್ಲಾ ಶ್ರುತಿಗಳಿಗೂ ವಿಹಿತವಾದ ದ್ವೈತಾದ್ವೈತಮತವೇ ಸಿದ್ಧಾಂತವೆಂದು ನಿಶ್ಚಯಿಸಲಾಗಿದೆ. ಜಾಗ್ರತ್ಸ್ವಪ್ನಗಳೆರಡ ರಲ್ಲೂ ಜೀವನಿಗೆ ಶಿವನಿಂದ ಭೇದವೂ, ಸುಷುಪ್ತಿಯಲ್ಲಿ ಜೀವನು ಶಿವನೊಡನೆ ಬೆರೆ ಯುವುದರಿಂದ ಅಭೇದವೂ ಪ್ರತಿದಿನವೂ ಸಂಭವಿಸುತ್ತಿರುವುದು ಎಲ್ಲರಿಗೂ ತಿಳಿ ದದ್ದೇ ಆಗಿದೆ. ಇದನ್ನು ಇಲ್ಲವೆಂದು ಯಾರೂ ಹೇಳಲಾರರು. ಆದ್ದರಿಂದ ಜೀವ ನಿಗೆ ಶಿವಭಾವ ಬರುವವರೆಗೂ ಭೇದವಿರುತ್ತದೆ. ಆಮೇಲೆ ನದೀಸಮುದ್ರಗಳಂತೆ ಜೀವಶಿವರಿಗೆ ಅಭೇದವುಂಟಾಗುವುದರಲ್ಲಿ ಯಾವ ವಿರೋಧವೂ ಇಲ್ಲ.

**"ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚತೇ" ಏತನ್ನ್ಯಾಯಾತಿಕ್ರಮಣೇ ಜ್ಞಾನೋತ್ಪತ್ತ್ಯಭಾವತಯಾ ಮುಕ್ತ್ಯಭಾವ ಪ್ರಸಂಗಾತ್, "ಅಹಮಜ್ಞಃ" ಇತ್ಯಾತ್ಮನ್ಯವಿದ್ಯಾನುಭವದರ್ಶನಾಚ್ಚ ಜೀವೇಶ್ವರಯೋರ್ಮಾಯಾಕಲ್ಪಿತತ್ವೇನ ಬಿಂಬಪ್ರತಿಬಿಂಬವದಲೀಕ ತ್ವಂ. ಮಾಯಾಯಾಃ "ಯಾ ಮಾ ಸಾ ಮಾಯಾ" ಇತಿ ವ್ಯುತ್ಪತ್ತ್ಯಾ ವಿಚಾರ್ಯಮಾಣೇ ಸದಸದ್ಭಾವಚಿದಚಿದ್ಭಾವಾದಿವಿರುದ್ಧತಯಾ ಮಿಥ್ಯಾ**

ತ್ವಾಂಗೀಕಾರಾತ್ತತ್ಕೃತಜಗಜ್ಜನ್ಮಾದಿಕಂ ಸ್ವಪ್ನೇಂದ್ರಜಾಲವದ್ಭ್ರಾಂತಿಮಾತ್ರಮೇವೇತ್ಯಾಶಂಕಾಯಾಮಾಹ- ನ ಚ ದೃಷ್ಟಾಂತಾಭಾವಾತ್ ॥೯॥

ಮಾಯಾಯಾ ಮಿಥ್ಯಾತ್ವಸ್ಯ ಜೀವೇಶ್ವರಯೋರಲೀಕತ್ವಸ್ಯ ಚ ಪ್ರಾತ್ಯಕ್ಷಿಕವೇದವೇದಾಂತೇಷು ಮನುಗೌತಮಪರಾಶರಾದಿಸ್ಮೃತಿಷು ಚ ದೃಷ್ಟಾಂತಾಭಾವಾತ್, ಪೂರ್ವಪಕ್ಷಸ್ಯಾಪ್ಯಯೋಗ್ಯತ್ವೇನ ಯತ್ರ ಕುತ್ರಾಪಿ ದೃಷ್ಟಾಂತವಾರ್ತಾಯಾ ಅದರ್ಶನಾತ್ ಜಗನ್ಮಿಥ್ಯಾತ್ವವಾದೋ ನ ಸರ್ವಥಾ ಯುಕ್ತಃ. ‘ಯತೋ ವಾ ಇಮಾನಿ’ ಇತ್ಯಾದಿಶ್ರುತಿಷು ಅಸಂದಿಗ್ಧತಯಾ ಬ್ರಹ್ಮಣಃ ಜಗಜ್ಜನ್ಮಾದಿಕಾರಣತ್ವನಿರ್ದೇಶೇನ ವೈದಿಕಾನಾಂ ತದೇವ ಗ್ರಾಹ್ಯಂ. “ಸ್ವಪ್ನೇಂದ್ರಜಾಲಸದೃಶಮಚಿಂತ್ಯರಚನಾತ್ಮಕಂ” ಇತ್ಯಾದ್ಯದ್ವೈತಶಾಸ್ತ್ರಾನುಸಾರೇಣ ಜಗತ್ಸ್ವಪ್ನೇಂದ್ರಜಾಲದೃಷ್ಟಾಂತಾಂಗೀಕಾರೇಽಪಿ ಮಾಯಾಯಾ ಜಡಾತ್ಮಕತ್ವಾತ್ ಬ್ರಹ್ಮಕರ್ತೃತ್ವಂ ಸೂಚಿತಂ. ತೇನ ನಿರ್ಗುಣತ್ವನಿರ್ವಿಶೇಷತ್ವಾದಿವಿಧಾಯಕಸ್ವಶಾಸ್ತ್ರವಿರೋಧಃ. “ಯಾ ಮಾ ಸಾ ಮಾಯಾ” ಇತಿ ವ್ಯುತ್ಪತ್ತ್ಯಾ ಮಾಯಾಯಾಃ ಮಿಥ್ಯಾತ್ವಂ ನ ಯುಕ್ತಂ. “ಮಂ ಶಿವಂ ಅಯತಿ ಪ್ರಾಪ್ನೋತಿ” ಇತಿ ವ್ಯುತ್ಪತ್ತ್ಯಾ ಮಾಯಾಯಾಃ ಪರಮಶಿವನಿಷ್ಠಸ್ವಾಭಾವಿಕಶಕ್ತಿತ್ವೇನ, “ಪರಾಽಸ್ಯ ಶಕ್ತಿರ್ವಿವಿಧೈವ”, “ಮಾಯಾಂ ತು ಪ್ರಕೃತಿಂ” ಇತ್ಯಾದಿಶ್ರುತಿದರ್ಶನಾತ್. ಕಿಂಚ, “ಯತ್ತತ್ಕಾರಣಮವ್ಯಕ್ತಂ ನಿತ್ಯಂ ಸದಸದಾತ್ಮಕಂ । ತದ್ವಿಶಿಷ್ಟಸ್ಸ ಪುರುಷೋ ಲೋಕೇ ಬ್ರಹ್ಮೇತಿ ಕೀರ್ತ್ಯತೇ” ಇತಿ ಮನುಸ್ಮೃತೌ, “ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ । ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ ॥” ಇತಿ ಶಿವಾಗಮೇ ಚ ಶಿವಶಕ್ತಿಸಾಮರಸ್ಯಂ ನಿಶ್ಚಿತಂ. ಸ್ವಪ್ನಪ್ರಪಂಚದ್ರವ್ಯಂ ಪುನರ್ಜಾಗ್ರತ್ಸ್ವಪ್ನಯೋರಪ್ಯದೃಷ್ಟಂ. ಅತ್ರ ತು ಪೂರ್ವದಿನದೃಷ್ಟಪದಾರ್ಥಸ್ಯೋತ್ತರದಿನೇಽಪಿ ಸತ್ತ್ವಾತ್, “ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ “ಕರ್ಮಚಿತೋ ಲೋಕಃ ಕ್ಷೀಯತೇ” ಇತಿ ಶ್ರುತಿನಿರ್ದಿಷ್ಟೇಹಪರಲೋಕಕರ್ಮಫಲಭೋಕ್ತೃತ್ವಸ್ಯ ಚ ಶ್ರುತಿಸ್ಮೃತಿಪುರಾಣಾದಿಷು ದೃಷ್ಟತ್ವಾತ್, ಸ್ವಪ್ನಕೃತಜ್ಯೋತಿಷ್ಟೋಮಬ್ರಹ್ಮಹತ್ಯಾದಿಧರ್ಮಾಧರ್ಮಕರ್ಮಣೋಸ್ಸ್ವರ್ಗನರಕಪ್ರಾಪ್ತಿವಿಧಾಯಕಶಾಸ್ತ್ರದರ್ಶನಾಚ್ಚ ತಚ್ಛಾಸ್ತ್ರಮವಿಚಾರಿತರಮಣೀಯಂ. ಲೋಕೇ ಚೇತನನರಮೃಗಸೂರ್ಯಚಂದ್ರಾದಿಪ್ರತಿಬಿಂಬಸ್ಯ ಚೇತನತ್ವಾಯೋಗಾತ್ ಮೃತ್ಪಾಷಾಣಗೋಮಯಾದಿಕಲ್ಪಿತಗಜಾಶ್ವಾದೀನಾಂ ಸ್ವಸಾಮರ್ಥ್ಯತಯಾ ಗಮನಾದಿಕಾರ್ಯಾಭಾವಾತ್ ಶ್ರುತಿಯುಕ್ತ್ಯನುಭವತಯಾ ಜೀವೇಶ್ವರಯೋಸ್ಸ್ವಭಾವಚಿತ್ತ್ವಾವಗಮಾಚ್ಚ ಜೀವೇಶ್ವರಯೋಶ್ಚಿದಾ

**ಭಾಸತ್ವವಿಧಾಯಕತನ್ಮೋಹಶಾಸ್ತ್ರಂ ಪಾರಮಾರ್ಥಿಕೈರನಂಗೀಕರಣೀಯಂ. ತಸ್ಮಾತ್ಪರಮೇಶ್ವರಕಾರಣತ್ವಾಜ್ಜಗತಸ್ಸತ್ಯತ್ವಮಪ್ರತಿಹತಂ.**

ಪ್ರಪಂಚವೇ ಇಲ್ಲವೆಂದು ಹೇಳಿದರೆ ಜೀವನಿಗೆ ಶಿವಜ್ಞಾನವೇ ಹುಟ್ಟದಿರುವುದರಿಂದ ಮುಕ್ತಿಯೇ ಆಗದೇಹೋಗಬೇಕಾದೀತು. "ನಾನು ಅಜ್ಞನು" ಎಂಬಲ್ಲಿ ಜೀವನು ಅಜ್ಞಾನವನ್ನು ಅನುಭವಿಸುತ್ತಿರುವುದಾಗಿ ಕಂಡುಬರುವುದರಿಂದಲೂ, ಜೀವೇಶ್ವರರು ಮಾಯೆಯಿಂದ ಕಲ್ಪಿತರಾದ್ದರಿಂದಲೂ ಬಿಂಬ ಪ್ರತಿಬಿಂಬಗಳಂತೆ ಮಿಥ್ಯೆ ಎನಿಸಿದ್ದಾರೆ. "ಯಾವುದು ಇಲ್ಲವೋ ಅದು ಮಾಯೆ" ಎಂಬ ವ್ಯುತ್ಪತ್ತಿಯಿಂದ ಮಾಯೆ ಎಂಬುದು ಸತ್, ಅಸತ್, ಚಿತ್ (ಚೇತನ) ಅಚಿತ್ (ಜಡ) ಇವೆರಡಕ್ಕೂ ವಿಲಕ್ಷಣವಾದ್ದರಿಂದ ಮಿಥ್ಯೆ ಎನಿಸುವುದು. ಈ ಸ್ಥಿತಿಯಲ್ಲಿ ಅದರಿಂದಾಗಿರುವ ಜಗಜ್ಜೀವೇಶ್ವರರೂ ಸ್ವಪ್ನದಂತೆಯೂ ಇಂದ್ರಜಾಲವಿದ್ಯೆಯಂತೆಯೂ ತೋರಿಕೆಗೆ ಮಾತ್ರವೇ ಇರುವರು ಎಂದಾಶಂಕಿಸಿ ನಿರಾಕರಿಸುತ್ತಾನೆ.

**ನ ಚ ದೃಷ್ಟಾಂತಾಭಾವಾತ್ ॥ ೯ ॥**

ಮಾಯೆಯನ್ನು ಮಿಥ್ಯೆ ಎಂಬುದಕ್ಕೂ ಜೀವೇಶ್ವರರನ್ನು ಸುಳ್ಳೆಂಬುದಕ್ಕೂ ಸ್ಮೃತಿಗಳಲ್ಲಿ ಎಲ್ಲಿಯೂ ದೃಷ್ಟಾಂತವೇ ಕಂಡಿಲ್ಲ. ಇಲ್ಲಿ ಆಕ್ಷೇಪವೂ ನಿರಾಧಾರವಾದ್ದರಿಂದ ಎಲ್ಲಿಯೂ ಅದಕ್ಕೆ ಉದಾಹರಣೆಯೇ ಕೇಳಬಂದಿಲ್ಲ. ಆದ್ದರಿಂದ ಜಗನ್ಮಿಥ್ಯಾತ್ವವಾದವು ಎಂದಿಗೂ ಹೊಂದುವುದಿಲ್ಲ "ಯಾವನಿಂದ ಈ ಜೀವರು ಹುಟ್ಟಿದ್ದಾರೋ" ಈ ಬಗೆಯ ನೂರಾರು ಶ್ರುತಿಗಳಲ್ಲಿ ಬ್ರಹ್ಮವನ್ನೇ ಜಗತ್ಕಾರಣವೆಂದು ಸ್ಪಷ್ಟವಾಗಿ ಹೇಳಿರುವುದರಿಂದ ವೈದಿಕರಿಗೂ ಇದೇ ಗ್ರಾಹ್ಯವಾಗುತ್ತದೆ. "ಇದರ ರಚನೆ ಸ್ವಪ್ನ ಮತ್ತು ಇಂದ್ರಜಾಲಗಳಿಗೆ ಸದೃಶವಾದದ್ದು" ಎಂಬ ಅದ್ವೈತಶಾಸ್ತ್ರದಂತೆ ಜಗತ್ತಿಗೆ ಸ್ವಪ್ನ ಮತ್ತು ಇಂದ್ರಜಾಲಗಳನ್ನು ದೃಷ್ಟಾಂತವಾಗಿ ಅಂಗೀಕರಿಸಿದರೂ ಮಾಯೆ ಜಡವಾದ್ದರಿಂದ ಅದಕ್ಕೆ ಬ್ರಹ್ಮವೇ ಕರ್ತನೆಂದು ಸೂಚಿತವಾಗುತ್ತದೆ. ಇದರಿಂದ ಬ್ರಹ್ಮವನ್ನು ನಿರ್ಗುಣ ಮತ್ತು ನಿರ್ವಿಶೇಷನೆಂದು ಹೇಳುವ ಅದ್ವೈತಶಾಸ್ತ್ರವೇ ವಿರುದ್ಧವಾಗುತ್ತದೆ. "ಯಾವುದು ಇಲ್ಲವೋ ಅದೇ ಮಾಯೆ' ಎಂಬ ವ್ಯುತ್ಪತ್ತಿಯಿಂದ ಮಾಯೆಯನ್ನು ಮಿಥ್ಯೆ ಎಂದು ತಿಳಿಯುವುದು ಯುಕ್ತವಲ್ಲ ಮ ಎಂದರೆ ಶಿವ, ಅವನಲ್ಲಿ ಅಯತಿ ಎಂದರೆ 'ಸೇರುವುದು' ಎಂಬ ವ್ಯುತ್ಪತ್ತಿಯಿಂದ ಮಾಯೆ ಪರಶಿವನಲ್ಲಿರುವ ಸ್ವಾಭಾವಿಕಶಕ್ತಿ ಎನಿಸುತ್ತದೆ. "ನಿತ್ಯವೂ ಸದ್ರೂಪವೂ ಅವ್ಯಕ್ತವೂ ಎನಿಸಿದ ಮಾಯೆ ವಿಶ್ವವೆಲ್ಲಕ್ಕೂ ಕಾರಣವೆನಿಸಿದೆ. ಅದರೊಡಗೂಡಿದ ಪರಬ್ರಹ್ಮವು ಲೋಕವ್ಯವಹಾರನಿರ್ವಹಣೆಗಾಗಿ ಈಶ್ವರನೆನಿಸಿದ್ದಾನೆ" ಎಂದು ಮನುಸ್ಮೃತಿಯಲ್ಲಿ ಹೇಳಿದೆ. "ಮಾ+ಅಯತಿ=ಪರಶಿವನಿಂದ ಬಂದು ತನ್ನ ಕಾರ್ಯ ಮುಗಿದೊಡನೆ ಅವನಲ್ಲಿಯೇ ಸಹಜವಾಗಿ ಸೇರುವುದಾದ್ದರಿಂದ ಮಾಯೆ ಪರಶಿವನ ಶಕ್ತಿ ಎನಿಸಿದೆ" ಹೀಗೆ ಶಿವಾಗಮದಲ್ಲಿ ಶಿವಶಕ್ತಿಗಳಿಗೆ ಸಾಮರಸ್ಯವನ್ನು ತಿಳಿಸಲಾಗಿದೆ. ಸ್ವಪ್ನದಲ್ಲಿ ಕಂಡ ವಸ್ತುಗಳು ಮತ್ತೆ ಜಾಗ್ರದವಸ್ಥೆಯಲ್ಲೂ ಸ್ವಪ್ನದಲ್ಲೂ ಕಾಣುವುದಿಲ್ಲ. ಈ

ಪ್ರಪಂಚದಲ್ಲಾದರೋ ಹಿಂದಿನ ದಿನ ಕಂಡದ್ದೇ ಮುಂದಿನ ದಿನವೂ ಇರುತ್ತದೆ. "ಸ್ವರ್ಗಕಾಮನು ಜ್ಯೋತಿಷ್ಟೋಮವನ್ನಾಚರಿಸಬೇಕು" "ಕರ್ಮದಿಂದ ಗಳಿಸಿದ ಲೋಕ ನಾಶವಾಗುತ್ತದೆ" ಈ ಶ್ರುತಿಗಳಲ್ಲಿ ಜೀವನು ಮುಂದೆ ಸುಖಗಳನ್ನು ಅನುಭವಿಸುವನೆಂಬುದನ್ನು ನಾವು ಕೇಳುತ್ತೇವೆ. ಸ್ವಪ್ನದಲ್ಲಿ ಮಾಡಿದ ಜ್ಯೋತಿಷ್ಟೋಮ, ಬ್ರಹ್ಮಹತ್ಯ ಮೊದಲಾದ ಧರ್ಮ ಅಧರ್ಮಗಳಿಂದಲೂ ಜೀವನಿಗೆ ಸ್ವರ್ಗ ನರಕಗಳು ದೊರಕುತ್ತವೆ ಎಂಬ ಶಾಸ್ತ್ರವೂ ಕಂಡುಬಂದಿದೆ. ಆದ್ದರಿಂದ ಜೀವೇಶ್ವರರು ಸುಳ್ಳೆಂಬುದು ವಿಚಾರವಿಲ್ಲದೆ ಹೇಳಿದ ಮಾತೆನಿಸುತ್ತದೆ. ಚೇತನರಾದ ಮನುಷ್ಯ ಮೃಗ ಸೂರ್ಯ ಚಂದ್ರ ಇವರ ಪ್ರತಿಬಿಂಬಗಳು ಚೇತನವಲ್ಲವೆಂದೂ, ಮಣ್ಣು ಕಲ್ಲು ಸಗಣಿಗಳಿಂದ ಮಾಡಿದ ಗೋವು ಕುದುರೆ ಮೊದಲಾದವುಗಳು ಸ್ವಶಕ್ತಿಯಿಂದ ಚಲಿಸಲಾರವೆಂದು ಲೋಕದಲ್ಲಿ ಕಂಡುಬಂದಿದೆ. ಶ್ರುತಿ ಯುಕ್ತಿ ಅನುಭವಗಳಿಂದ ಜೀವೇಶ್ವರರು ಸಹಜವಾಗಿ ಚಿದ್ರೂಪರೆಂದು ತಿಳಿದುಬಂದಿದೆಯಾದ್ದರಿಂದ ಅವರು ಚೇತನರಂತೆ ತೋರಿಕೆಗೆ ಮಾತ್ರವೇ ಇರುವರೆಂದು ಹೇಳುವ ಶಾಸ್ತ್ರವು ಯಥಾರ್ಥವಲ್ಲದ್ದರಿಂದ ಅದನ್ನು ವೈದಿಕರು ಅಂಗೀಕರಿಸಬಾರದು. ಆದ್ದರಿಂದ ಪರಮಶಿವನೇ ಕಾರಣನಾದ ಪ್ರಯುಕ್ತ ಜಗತ್ತು ಸತ್ಯವೆಂಬುವಕ್ಕೆ ಯಾವ ಬಗೆಯ ತಡೆಯೂ ಇಲ್ಲವೆಂಬುದು ನಿಶ್ಚಿತವಾಯಿತು.

**"ಯಾವದುತ್ಪದ್ಯತೇ ಜ್ಞಾನಂ ತಾವದನುಷ್ಠೇಯಂ ಕರ್ಮ। ತಾವತ್ಸತ್ಯಂ ಜಗದ್ಭಾತಿ ಶುಕ್ತಿಕಾರಜತಂ ಯಥಾ। ಯಾವನ್ನ ಜ್ಞಾಯತೇ ಬ್ರಹ್ಮ ಸರ್ವಾಧಿಷ್ಠಾನಮದ್ವಯಂ॥" ಇತಿ ಶ್ರುತಿಪೂರ್ವಾಚಾರವಾಕ್ಯೇಷ್ವಪಿ ಸ್ವರೂಪಜ್ಞಾನಾನುಭೂತ್ಯಂತಂ ಶುಕ್ತಿರಜತವದಜ್ಞಾನೇನ ಜಗದ್ಭಾನಾಂಗೀಕಾರಾತ್ ತಾವತ್ಪರ್ಯಂತಮೇವ ವೇದಶಾಸ್ತ್ರಕರ್ಮಸತ್ಯತ್ವಪ್ರವೃತ್ತಿಸ್ಸಂಭವತೀತ್ಯಾಶಂಕ್ಯ ನಿರಾಕರೋತಿ—ಸ್ವಪಕ್ಷದೋಷಾಚ್ಚ ॥ ೧೦ ॥**

**ಶುಕ್ತಿರಜತವದಜ್ಞಾನದಶಾಯಾಮೇವ ಜಗದ್ಭಾನಾಂಗೀಕಾರೇ ತದದ್ವೈತಶಾಸ್ತ್ರಾಚಾರ್ಯಪರಂಪರಾಽಸಂಭವದೋಷಪ್ರವೃತ್ತೇಃ, ತದೂರ್ಧ್ವಂ ಕ್ಷುತ್ಪಿಪಾಸಾದಿದ್ವೈತಕರ್ಮಾವಲಂಬನದೋಷಪ್ರವೃತ್ತೇಶ್ಚ ಸಂಭವಾತ್ ಜಗನ್ಮಿಥ್ಯಾತ್ವವಾದೋ ನ ಯುಕ್ತಃ. ಶುಕ್ತಿರಜತವದ್ಬ್ರಹ್ಮಣ್ಯಧ್ಯಾಸಾಂಗೀಕಾರೇ ಬ್ರಹ್ಮಣಃ? ಪ್ರಧಾನಸ್ಯ? ಚಿದಾಭಾಸಸ್ಯ ವಾ? ನಾದ್ಯಃ, ನಿರ್ವಿಕಾರತ್ವಾತ್. ನ ದ್ವಿತೀಯಃ, ಜಡತ್ವಾತ್. ನ ತೃತೀಯಃ, ಕಲ್ಪಿತತ್ವಾತ್. ಉತ ಸರ್ವವ್ಯಾಪಕಸ್ಯ ನಿರವಯವಸ್ಯ ಬ್ರಹ್ಮಣಃ ಪ್ರತಿಬಿಂಬತ್ವಮುಪಪನ್ನಂ, ವ್ಯೋಮಪ್ರತಿಫಲನವದಿತಿ ಚೇತ್ತದಯುಕ್ತಂ. ಸಾಭ್ರನಕ್ಷತ್ರಾದ್ಯವಚ್ಛಿನ್ನಾಕಾಶಸ್ಯೈವ ಲೋಕೇ ಪ್ರತಿಫಲನಂ ದೃಷ್ಟಂ. ತಮಃಪ್ರಕಾಶವೈಲಕ್ಷಣ್ಯೇನ ವ್ಯೋಮಾದರ್ಶನಾತ್. ಅಮೂರ್ತಸ್ಯ ಪ್ರತಿಫಲನೇನ ಪವನಕಾಲಾದೀನಾಮಪಿ ಕಿಂ ನ ಸ್ಯಾತ್? ಅತಃ**

**ಪೂರ್ವೋಕ್ತಮೇವ ಯುಕ್ತಂ. ಶುಕವಾಮದೇವಾದೀನಾಂ ಶಾಸ್ತ್ರೇ ಸ್ವಾವಿದ್ಯಾನಿವೃತ್ತಿಪೂರ್ವಕಜೀವನ್ಮುಕ್ತತ್ವವ್ಯಪದೇಶಾತ್, ಸರ್ವೇಷಾಂ ಮುಕ್ತಿಪ್ರಸಂಗಸ್ಸ್ಯಾತ್. ತಥಾ ಚೇದಹಮಜ್ಞ ಇತ್ಯವಿದ್ಯಾನುಭವೋ ನ ಸ್ಯಾತ್. ಕಿಂಚ ಚೇತನಾಽಚೇತನಶರೀರೋತ್ಪತ್ತಿರ್ನ ಸಂಭವೇತ್. ತಸ್ಮಾನ್ನ ಜೀವೈಕತ್ವವಾದೋ ಯುಕ್ತಃ.**

"ಜ್ಞಾನ ಹುಟ್ಟುವವರೆಗೂ ಕರ್ಮಮಾಡಬೇಕು. ಸರ್ವಾಧಿಷ್ಠಾನವೂ ಅದ್ವೈತವೂ ಆದ ಶಿವನನ್ನು ತಿಳಿಯುವವರೆಗೂ ಶುಕ್ತಿಯಲ್ಲಿ ರಜತ ತೋರುವಂತೆ ಜಗತ್ತು ಸತ್ಯವಾಗಿ ಕಾಣುತ್ತದೆ" ಎಂದು ಶ್ರುತಿಯಲ್ಲೂ,ಹಿಂದಿನವರ ಆಚರಣೆಯಲ್ಲೂ ಜೀವನಿಗೆ ಸ್ವರೂಪಜ್ಞಾನವಾಗುವವರೆಗೂ ಜಗತ್ತು ತೋರುವುದೆಂದು ತಿಳಿದುಬರುವುದರಿಂದ ಅಲ್ಲಿಯವರೆಗೆ ಮಾತ್ರವೇ ವೇದೋಕ್ತಕರ್ಮಗಳು ಸತ್ಯವೆನಿಸುತ್ತವೆ ಎಂದಾಶಂಕಿಸಿ ನಿರಾಕರಿಸುತ್ತಾನೆ— **ಸ್ವಪಕ್ಷದೋಷಾಚ್ಚ ||೧೦||**

ಶುಕ್ತಿಯಲ್ಲಿ ಬೆಳ್ಳಿ ತೋರುವಂತೆ ಅಜ್ಞಾನದಿಂದ ಜಗತ್ತು ತೋರುವಾಗ ಅದ್ವೈತಶಾಸ್ತ್ರವನ್ನು ಬೋಧಿಸುವ ಗುರುಪರಂಪರೆಯೇ ಇಲ್ಲದೇಹೋಗಬೇಕಾದೀತು ಮತ್ತು ಅದ್ವೈತವನ್ನು ಅನುಭವಿಸುವುದಕ್ಕಿಂತ ಮುಂಚೆ ಹಸಿವು ನೀರಡಿಕೆ ಮೊದಲಾದ ದ್ವೈತಕರ್ಮಗಳನ್ನು ಆಚರಿಸಿದ ದೋಷವೂ ಸಂಭವಿಸುತ್ತದೆ. ಆದ್ದರಿಂದ ಜಗತ್ತನ್ನು ಮಿಥ್ಯೆ ಎಂದು ಹೇಳುವ ವಾದ ಯುಕ್ತವಲ್ಲ. ಶುಕ್ತಿಯಲ್ಲಿ ರಜತದಂತೆ ಬ್ರಹ್ಮದಲ್ಲಿ ಅಧ್ಯಾಸವನ್ನು ಒಪ್ಪಿದರೆ ಆ ಅಧ್ಯಾಸ ಬ್ರಹ್ಮಕ್ಕೋ? ಪ್ರಧಾನಕ್ಕೋ? ಚೇತನದಂತೆ ತೋರುವ ಈಶ್ವರನಿಗೋ? ಎಂಬ ವಿಕಲ್ಪಗಳು ಬರುತ್ತವೆ. ಬ್ರಹ್ಮವು ನಿರ್ವಿಕಾರನಾದ್ದರಿಂದಲೂ, ಪ್ರಧಾನವು ಜಡವಾದ್ದರಿಂದಲೂ, ಈಶ್ವರನು ಕಲ್ಪಿತನಾದ್ದರಿಂದಲೂ ಈ ಮೂವರಿಗೂ ಅಧ್ಯಾಸ ಸಂಭವಿಸುವುದಿಲ್ಲ. ಆಕಾಶವು ನೀರಿನಲ್ಲಿ ಪ್ರತಿಬಿಂಬಿಸುವಂತೆ ಸರ್ವವ್ಯಾಪಕನೂ ನಿರವಯವನೂ ಆದ ಬ್ರಹ್ಮವೇ ಪ್ರತಿಬಿಂಬಿಸುತ್ತದೆ ಎಂದು ಹೇಳುವುದು ಯುಕ್ತವಲ್ಲ. ನಕ್ಷತ್ರಮೇಘಗಳಿಂದ ಕೂಡಿದ ಆಕಾಶವು ನೀರಿನಲ್ಲಿ ಪ್ರತಿಬಿಂಬಿಸುವುದೆಂಬುದು ಲೋಕದಲ್ಲಿ ಕಂಡುಬಂದಿದೆ. ಆದರೆ ನೀಲವರ್ಣ ಮತ್ತು ಪ್ರಕಾಶಗಳನ್ನು ಬಿಟ್ಟು ಬೇರೆ ಆಕಾಶವೆಂಬ ವಸ್ತು ಒಂದು ನೀರಿನಲ್ಲಿ ಕಾಣುವುದಿಲ್ಲ. ಅಮೂರ್ತವಾದ ಆಕಾಶವು ನೀರಿನಲ್ಲಿ ಪ್ರತಿಬಿಂಬಿಸುವುದಾದರೆ ವಾಯು ಕಾಲ ಮೊದಲಾದವೂ ಏಕೆ ಬೇರೆಕಡೆ ಪ್ರತಿಫಲಿಸಬಾರದು? ಎಂಬ ಪ್ರಶ್ನೆ ಬರುತ್ತದೆ. ಆದ್ದರಿಂದ ಹಿಂದೆ ಹೇಳಿದ್ದೇ ಯುಕ್ತವಾಗುತ್ತದೆ. ಶುಕ ವಾಮದೇವ ಮೊದಲಾದವರು ತಮ್ಮ ಅವಿದ್ಯೆಯನ್ನು ಕಳೆದುಕೊಂಡು ಜೀವನ್ಮುಕ್ತರಾಗಿದ್ದರೆಂದು ಶಾಸ್ತ್ರದಲ್ಲಿ ಹೇಳಿರುವುದರಿಂದ ಅದರಂತೆ ಎಲ್ಲರಿಗೂ ಮುಕ್ತಿಯುಂಟಾಗಬೇಕಾದೀತು. ಹಾಗಾದರೆ, ನಾನು ಅಜ್ಞನೆಂಬ ಅನುಭವವೇ ಇಲ್ಲದೇಹೋದೀತು ಮತ್ತು ಚೇತನ ಅಚೇತನಗಳ ಶರೀರಗಳೇ ಹುಟ್ಟದೇಹೋಗಬೇಕಾದೀತು. ಆದ್ದರಿಂದ ಎಲ್ಲರಲ್ಲೂ ಒಬ್ಬನೇ ಜೀವನಿರುವನೆಂಬ ವಾದ ಯುಕ್ತವಲ್ಲ.

ಪ್ರಾತ್ಯಕ್ಷಿಕಶ್ರುತಿಷ್ವಧ್ಯಾಸಾದರ್ಶನೇಽಪಿ ವಾಚಾರಂಭಣಶ್ರುತಾವಪವಾದದ್ಯೋತನಾದಧ್ಯಾಸೋಗ್ರಾಹ್ಯ ಇತಿ ಚೇದಾಹತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ ॥ ೧೧ ॥

ತರ್ಕಾಣಾಂ ಶಾಕ್ಯೋಲೂಕ್ಯಾಕ್ಷಪಾದಕಪಿಲಾದಿಪ್ರಮುಖತರ್ಕಾಣಾಮಪ್ರತಿಷ್ಠಾನಾತ್ ಅನ್ಯೋನ್ಯವ್ಯಾಘಾತದೋಷದುಷ್ಟತ್ವೇನ ತತ್ತ್ವಾರ್ಥನಿಶ್ಚಯಾಭಾವಾದಪ್ಯನ್ಯಥಾನುಮೇಯಮಿತಿ ಚೇತ್, "ಮೃತ್ತಿಕೇತ್ಯೇವ ಸತ್ಯಂ" ಇತಿ ವಾಕ್ಯಾಭಾಸತಯಾ ಜಗಜ್ಜೀವೇಶ್ವರಮಿಥ್ಯಾತ್ವಂ "ಪರ್ವತೋ ವಹ್ನಿಮಾನ್ ಧೂಮಾತ್" ಇತ್ಯಾದಿನ್ಯಾಯೇನಾನುಮೇಯಮಿತಿ ಚೇತ್, ಏವಮಪಿ ಶಾಕ್ಯೋಲೂಕ್ಯಬೌದ್ಧಾದಿವದನಿರ್ಮೋಕ್ಷಪ್ರಸಂಗಃ. "ಯಥಾ ನದ್ಯಃ" ಇತ್ಯಾದಿಬಹುಶ್ರುತಿಸಿದ್ಧಶಿವಜೀವೈಕ್ಯಾತ್ಮಕಮೋಕ್ಷಾಭಾವಪ್ರಸಂಗಃ. ತಸ್ಮಾತ್ "ಯತೋ ವಾ," "ಏಷ ಸಂಪ್ರಸಾದಃ", "ನ ಸ ಪುನರಾವರ್ತತೇ" ಇತ್ಯಾದಿಬ್ರಹ್ಮಜಗತ್ಕಾರಣತ್ವತತ್ಪ್ರಾಪಕತ್ವಾದಿಪ್ರಾತ್ಯಕ್ಷಿಕಶ್ರುತಿಸಿದ್ಧತರ್ಕಾಣಾಮೇವ ಮೋಕ್ಷೋಪಯೋಗಿತ್ವಂ, "ವಾಚಾರಂಭಣಂ ವಿಕಾರಃ" ಇತ್ಯತ್ರ ಜಗನ್ಮಿಥ್ಯಾತ್ವಾವಗಮಾತ್. "ಯತ್ಸತ್ತ್ವೇ ಯತ್ಸತ್ತ್ವಂ" ಇತಿ ನ್ಯಾಯೇನ ಅಧ್ಯಾಸೋ ಗ್ರಾಹ್ಯ ಇತಿ ಚೇತ್ತದಸತ್. "ನಾವೇದವಿನ್ಮನುತೇ ತಂ ಬೃಹಂತಂ", "ನೈಷಾ ತರ್ಕೇಣ ಮತಿರಾಪನೇಯಾ" ಇತ್ಯಾದಿಶ್ರುತಿಷು "ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್," "ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ । ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ" ಇತ್ಯಾದಿಸ್ಮೃತಿಪುರಾಣಾದಿಷ್ವಪಿ ರುಚಿವೈಚಿತ್ರ್ಯಸ್ವಮತಿಪರಿಣಾಮಕುತರ್ಕನಿರಾಕರಣಮುಪದಿಷ್ಟಂ. ಪುರುಷಬುದ್ಧಿಮೂಲಕತರ್ಕಾನುವಾದೇ ಕಾಲಾಂತರದೇಶಾಂತರೇಷು ತದಧಿಕಕುತರ್ಕಕುಶಲಪುರುಷೇಕ್ಷಿತತರ್ಕದೂಷ್ಯತ್ವಸದ್ಭಾವತಯಾ ವ್ಯವಸ್ಥಾದರ್ಶನಾತ್. ಮಿಥ್ಯಾದ್ವೈತಶೂನ್ಯಾದ್ವೈತಸಾಂಖ್ಯಯೋಗನ್ಯಾಯವೈಶೇಷಿಕಬೌದ್ಧಕ್ಷಪಣಕಾದಿಕುತರ್ಕಾಣಾಂ ನಿರ್ಮೋಕ್ಷಪ್ರಸಂಗೋ ದುರ್ನಿವಾರಃ. ತಸ್ಮಾತ್ಪರಮಾತ್ಮವಿಷಯೇ ಭಗವತಾ ವ್ಯಾಸೇನ "ಶಾಸ್ತ್ರಯೋನಿತ್ವಾತ್" ಇತಿ ಸೂತ್ರೇ ವೇದಾತ್ಮಕಶಾಸ್ತ್ರಪ್ರಮಾಣಮೇವೋಪದಿಷ್ಟಂ. ಬ್ರಹ್ಮೋಪಾದಾನಸ್ಯ ಪ್ರಪಂಚಸ್ಯ ಮಿಥ್ಯಾತ್ವಾಂಗೀಕಾರೇ "ಸರ್ವಂ ಖಲ್ವಿದಂ ಬ್ರಹ್ಮ", "ಸರ್ವೋ ವೈ ರುದ್ರಃ" ಇತ್ಯಾದಿಜಗದ್ಬ್ರಹ್ಮಾತ್ಮಕತ್ವವಿಧಾಯಕಶ್ರುತಿವಿರುದ್ಧಪ್ರಸಂಗಃ. ಉತ್ತರತ್ರ ಭಗವತಾ ಬಾದರಾಯಣೇನ "ತದನನ್ಯತ್ವಮಾರಂಭಣಶಬ್ದಾದಿಭ್ಯಃ" ಇತಿ ಸೂತ್ರೇ ವಾಚಾರಂಭಣಶ್ರುತೀನಾಂ ಬ್ರಹ್ಮಕಾರಣಸ್ಯ

ಪ್ರಪಂಚಸ್ಯ ಬ್ರಹ್ಮಾತ್ಮಕತ್ವಂ ಜಗನ್ಮಿಥ್ಯಾವಾದನಿರಾಸಾರ್ಥಕಮಿತಿ ಸ್ಪಷ್ಟಮುಪದಿಷ್ಟಂ. ಅತೋ ನ ಸಂದೇಹಕಳಂಕಃ. "ವಾಚಾರಂಭಣವಾಕ್ಯಾನಾಂ ತದನನ್ಯತ್ವಬೋಧನಾತ್ । ನ ಮಿಥ್ಯಾತ್ವಾಯ ಕಲ್ಪ್ಯಂತೇ ಜಗತಶ್ಶಿವರೂಪತಃ ॥" ಇತಿ ಸ್ಕಾಂದೇ ತಥಾ ನಿರ್ದಿಷ್ಟಂ. "ಬ್ರಹ್ಮವಿದಾಪ್ನೋತಿ ಪರಂ" ಇತ್ಯಾದಿಷು ಜ್ಞಾನಸ್ಯೈವ ಮೋಕ್ಷಹೇತುತ್ವವ್ಯಪದೇಶಾತ್. "ದಶಮಸ್ತ್ವಮಸಿ" ಇತಿ ದಶಮಾವಿವೇಕಸಂಧಾನವಶಾತ್ ಸ್ವಸ್ವರೂಪಜ್ಞಾನಸ್ಯೈವ ಮೋಕ್ಷಕಾರಣತ್ವಮಿತಿ ಚೇತ್ತದಸಂಗತಂ, "ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ ॥" ಇತ್ಯಾದಿಶ್ರುತಿಶತದರ್ಶನಾತ್, "ಬ್ರಹ್ಮವಿದಾಪ್ನೋತಿ" ಇತ್ಯಾದಿವಾಕ್ಯಾನಾಮುಪಾಸನಾಜನ್ಯಜ್ಞಾನಸ್ಯೈವ ಮೋಕ್ಷಹೇತುತ್ವಂ ನಿಶ್ಚೀಯತೇ. ಕೇವಲಜ್ಞಾನಸ್ಯ ವೈದ್ಯಶಾಸ್ತ್ರಾದಿಜ್ಞಾನವದಪುರುಷಾರ್ಥಕತ್ವಮೇವ. "ಯಾವದುತ್ಪದ್ಯತೇ ಜ್ಞಾನಂ ತಾವದನುಷ್ಠೇಯಂ ಕರ್ಮ" ಇತಿ ಜ್ಞಾನೋತ್ಪತ್ತಿಪರ್ಯಂತಮೇವ ದ್ವೈತಜಗದ್ಭಾಸನಾತ್ಕರ್ಮಾನುಷ್ಠಾನಮಿತಿ ಯದುಕ್ತಂ ತದವಿಚಾರಿತರಮಣೀಯಂ. "ಏವಂ ವಿದ್ವಾನಗ್ನಿಹೋತ್ರಂ ಜುಹೋತಿ" ಇತ್ಯಾದಿಶ್ರುತಿಷು, "ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ । ಕುರ್ಯಾದ್ವಿದ್ವಾಂಸ್ತಥಾಽಸಕ್ತಶ್ಚಿಕೀರ್ಷುರ್ಲೋಕಸಂಗ್ರಹಂ ॥", "ಆಚಾರಹೀನಃ ಪುರುಷೋ ಲೋಕೇ ಭವತಿ ನಿಂದಿತಃ । ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹಪಾತನಾತ್", "ಅಪಶ್ಯನ್ನಂಧಕೋ ದಗ್ಧಃ ಪಶ್ಯನ್ಪಂಗುಶ್ಚ ದಹ್ಯತೇ", "ಅಂಧಪಂಗುವದನ್ಯೋನ್ಯಂ ಸಾಪೇಕ್ಷೇ ಜ್ಞಾನಕರ್ಮಣೀ । ಪಕ್ಷೈಕೇನ ಯಥಾ ಪಕ್ಷೀ ನ ಗಚ್ಛತಿ ನಭಸ್ಸ್ಥಲಂ । ತಥಾ ಜ್ಞಾನೈಕಮಾರ್ಗೇಣ ನ ಮೋಕ್ಷೋಽಪಿ ವಿಧೀಯತೇ ॥" ಇತ್ಯಾದಿಶ್ರುತಿಸ್ಮೃತ್ಯಾಗಮೇಷು ಜ್ಞಾನಸಿದ್ಧ್ಯನಂತರಮಪಿ ದ್ವೈತಕರ್ಮಾನುಷ್ಠಾನವಿಧಿರುಪದಿಷ್ಟಾ. ತಸ್ಮಾಚ್ಛುಕ್ತಿರಜತನ್ಯಾಯವತ್ ಬ್ರಹ್ಮಜ್ಞಾನೇನ ಜಗನ್ಮಿಥ್ಯಾತ್ವಜ್ಞಾನಮಯುಕ್ತಂ. ಅದ್ವೈತೇಽಪ್ಯಹಮದ್ವೈತ ಇತಿ ವಾಕ್ಯಪ್ರವೃತ್ತಿರ್ನೋಪಪದ್ಯತೇ. ತೇಷಾಂ ಸ್ನಾನಸಂಧ್ಯೋರ್ಧ್ವಪುಂಡ್ರತಿರ್ಯಕ್ಪುಂಡ್ರವರ್ಣಾಶ್ರಮಾಚಾರವಿಧಾಯಕಶ್ರುತಿಸ್ಮೃತಿಪುರಾಣಪ್ರಸಿದ್ಧದ್ವೈತಕರ್ಮಣಾಂ ದತ್ತಾಂಜಲಿಃ. ದ್ವೈತರೂಪಪ್ರಪಂಚಸ್ಯ ದೃಷ್ಟತ್ವಾತ್ ನಾಸ್ತೀತಿವಾದೋ "ಮಮ ಮಾತಾ ವಂಧ್ಯೇ" ತಿವತ್ ಪ್ರತ್ಯಕ್ಷಾಪಲಾಪಪ್ರಸಂಗಃ. ಬ್ರಹ್ಮಾದ್ವೈತಪಕ್ಷೇ ತತ್ಸಗುಣಂ? ನಿರ್ಗುಣಂ? ಉಭಯಾತ್ಮಕಂ ವಾ? ನಾದ್ಯಃ, ಸಗುಣಚತುರ್ಮುಖಸ್ವೀಕಾರೇ ತಲ್ಲಾಂಛನಕಮಂಡಲ್ವಾದಿಧಾರಣಮೇವ ಯುಕ್ತಂ, ನ ಚೋರ್ಧ್ವಪುಂಡ್ರತಿ

**ರ್ಯಕ್ಷ್ಪಂಡ್ರಶಿವಕೇಶವಾದಿಪೂಜಾವಶ್ಯಕತ್ವಮುಪಪದ್ಯೇತ. ತಥಾಪ್ಯ ದ್ವೈತಭಂಗಪ್ರಸಂಗೋ ದುರ್ನಿವಾರಃ. ನ ದ್ವಿತೀಯಃ, ತದುಪಾಸನಾಽ ಸಂಭವಾತ್. ನ ತೃತೀಯಃ, ಸ್ವಮತಭಂಗಪ್ರಸಂಗಾತ್. ಉತಾದ್ವೈತೇ ಪ್ರತಿಪಾದ್ಯಪ್ರತಿಪಾದಕತ್ವಂ ನೋಪಪದ್ಯತೇ. ಮೃತಸ್ಯಾಹಂ ಮೃತ ಇತಿ ವಾರ್ತಾಽದರ್ಶನಾತ್ ಅದ್ವೈತಸ್ಯಾಹಮುದ್ವೈತ ಇತಿ ಪ್ರತೀತಿಃ ಕಥಂ ನಿರ್ಣೀಯತೇ? ದ್ವೈತಸ್ಯೈವ ವ್ಯವಹಾರೋಪಪತ್ತಿಃ. ವ್ಯಾವ ಹಾರಿಕಮಾತ್ರತ್ವಾಂಗೀಕಾರೇ ವ್ಯಾವಹಾರಿಕಾದ್ವೈತಮಿತಿ ವ್ಯವಹ ರ್ತವ್ಯಂ. ಅದ್ವೈತಸ್ಯ ವ್ಯವಹಾರಾಸಂಭವಾತ್, ಬ್ರಹ್ಮಣ್ಯದ್ವೈತತ್ವಾಂಗೀ ಕಾರೇ ತಸ್ಯ ಧರ್ಮತ್ವಾತ್ಸಗುಣಬ್ರಹ್ಮವಾದೋ ದುರ್ನಿವಾರಃ. ಅತಃ ಪೂರ್ವೋಕ್ತಮೇವ ಸಮೀಚೀನಂ.**

ಪ್ರತ್ಯಕ್ಷ ಶ್ರುತಿಗಳಲ್ಲಿ ಅಧ್ಯಾಸವನ್ನು ಹೇಳದೆ ಇದ್ದರೂ ವಾಚಾರಂಭಣ ಶ್ರುತಿ ಯಲ್ಲಿ ಪ್ರಪಂಚಕ್ಕೆ ನಿಷೇಧವಿರುವುದರಿಂದ ಅಧ್ಯಾಸವನ್ನು ಒಪ್ಪಬೇಕೆಂದಾಶಂಕಿಸಿ ನಿರಾಕರಿಸುತ್ತಾನೆ. **ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇ ವಮಪ್ಯನಿರ್ಮೋಕ್ಷಪ್ರಸಂಗಃ ॥ ೧೧ ॥**

ತರ್ಕಗಳೆಂದರೆ ಶಾಕ್ಯ, ಕಣಾದ, ಗೌತಮ ಕಪಿಲ, ಪತಂಜಲಿ, ಬೌದ್ಧ ಮೊದ ಲಾದವರು ಹೇಳುವ ತರ್ಕಗಳು. ಇವುಗಳಲ್ಲಿ ಪರಸ್ಪರವಿರೋಧದಿಂದ ತತ್ತ್ವದ ಬಗ್ಗೆ ನಿಶ್ಚಯಜ್ಞಾನವುಂಟಾಗುವುದಿಲ್ಲ. ಆದ್ದರಿಂದ "ಮಣ್ಣೆಂಬುದೊಂದೇ ಸತ್ಯ" ವೆಂಬ ವಾಕ್ಯದಿಂದ ತೋರುವಂತೆ ಜಗತ್ತುಜೀವ ಈಶ್ವರ ಇವರು ಮಿಥ್ಯೆ ಎಂಬುದನ್ನು ಅನು ಮಾನಪ್ರಮಾಣದಿಂದಲೇ ಸಾಧಿಸಬೇಕು ಎಂದು ಹೇಳಿದರೂ ಶಾಕ್ಯ ಕಣಾದ ಬೌದ್ಧ ಶಾಸ್ತ್ರಗಳಂತೆ ಜೀವನಿಗೆ ಮೋಕ್ಷವೇ ಸಂಭವಿಸದೆ ಹೋದೀತು. "ಯಥಾ ನದ್ಯಃ" ಎಂಬ ಅನೇಕಶ್ರುತಿಗಳಲ್ಲಿ ಹೇಳಿರುವ ಶಿವಜೀವರ ಐಕ್ಯರೂಪವಾದ ಮೋಕ್ಷವು ಆಗದೇ ಹೋದೀತು. ಆದ್ದರಿಂದ ಬ್ರಹ್ಮವೇ ಜಗತ್ಕಾರಣವೆಂದೂ, ಜೀವನು ಬ್ರಹ್ಮವನ್ನು ಸೇರುವನೆಂದೂ ತಿಳಿಸುವ ಪ್ರತ್ಯಕ್ಷಶ್ರುತಿಗಳಲ್ಲಿ ಸಿದ್ಧವಾಗಿರುವ ತರ್ಕಗಳೇ ಮೋಕ್ಷಕ್ಕೆ ಅನುಕೂಲವೆನಿಸಿವೆ. ವಾಚಾರಂಭಣಶ್ರುತಿಯಲ್ಲಿ ಜಗತ್ತು ಮಿಥ್ಯೆ ಎಂದು ತಿಳಿದು ಬರುವುದರಿಂದ ಅಧ್ಯಾಸವನ್ನು ಒಪ್ಪಬೇಕೆಂದು ಹೇಳಿದ್ದು ಯುಕ್ತವಲ್ಲ, "ವೇದವನ್ನ ರಿಯದವನು ಬ್ರಹ್ಮವನ್ನರಿಯನು. ತರ್ಕದಿಂದ ಬ್ರಹ್ಮಜ್ಞಾನ ದೊರಕುವುದಿಲ್ಲ" ಎಂದು ಶ್ರುತಿಯಲ್ಲೂ, "ಇತಿಹಾಸಪುರಾಣಗಳಿಂದ ವೇದಾರ್ಥವನ್ನು ನಿಶ್ಚಯಿಸಬೇಕು, ವೇದಶಾಸ್ತ್ರಗಳ ಅರ್ಥಕ್ಕೆ ವಿರೋಧವಾಗದ ತರ್ಕದಿಂದ ಯಾರು ಉಪದೇಶವನ್ನು ಗ್ರಹಿಸುವರೋ ಅವರೇ ಧರ್ಮವನ್ನರಿಯುವರು" ಎಂದು ಸ್ಮೃತಿಪುರಾಣಗಳಲ್ಲಿಯೂ ಅವರವರ ಇಚ್ಛೆಯಂತೆ ತರ್ಕಿಸುವ ದುರ್ಮಾರ್ಗವನ್ನು ನಿರಾಕರಿಸಲಾಗಿದೆ. ಅವರವರ ಬುದ್ಧಿಗನುಗುಣವಾಗಿ ತಿಳಿಸುವ ತರ್ಕವನ್ನು ಬೇರೆಕಾಲ ಮತ್ತು ದೇಶಗಳಲ್ಲಿ ಅದಕ್ಕೂ ಹೆಚ್ಚಾಗಿ ಕುತರ್ಕಮಾಡುವಂತಹ ಜನರ ದುರ್ವಾದಗಳು ದೂಷಿಸಬಹುದಾದ್ದರಿಂದ

ತರ್ಕಮಾರ್ಗದಲ್ಲಿ ಒಂದು ವ್ಯವಸ್ಥೆಯೇ ಇಲ್ಲವಾಗುವುದು. ಮಿಥ್ಯಾದ್ವೈತ, ಶೂನ್ಯಾದ್ವೈತ, ಸಾಂಖ್ಯ, ಯೋಗ, ನ್ಯಾಯವೈಶೇಷಿಕ, ಬೌದ್ಧ ಜೈನ ಇವರ ಕುತರ್ಕಗಳಿಂದ ಜೀವನಿಗೆ ಮೋಕ್ಷವೇ ಸಂಭವಿಸದೇಹೋಗುವುದು. ಆದ್ದರಿಂದಲೇ ಪೂಜ್ಯ ವ್ಯಾಸನು 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರದಲ್ಲಿ ವೇದರೂಪವಾದ ಶಾಸ್ತ್ರವೇ ಪರಮಾತ್ಮನ ಬಗ್ಗೆ ಪ್ರಮಾಣವೆಂದು ಹೇಳಿದ್ದಾನೆ. ಬ್ರಹ್ಮವೇ ಉಪಾದಾನವಾಗಿರುವ ಈ ಪ್ರಪಂಚವನ್ನು ಸುಳ್ಳೆಂದು ಹೇಳಿದರೆ, 'ಇದೆಲ್ಲವೂ ಬ್ರಹ್ಮ' 'ಇದೆಲ್ಲವೂ ರುದ್ರ' ಎಂದು ಜಗತ್ತನ್ನು ಶಿವಮಯವೆಂದು ತಿಳಿಸುವ ಶ್ರುತಿಗಳೆಲ್ಲಕ್ಕೂ ವಿರೋಧ ವುಂಟಾದೀತು. ಮುಂದೆ ಬಾದರಾಯಣನು 'ತದನನ್ಯತ್ವಂ' ಎಂಬ ಸೂತ್ರದಲ್ಲಿ ಬ್ರಹ್ಮಕಾರಣವಾದ ಪ್ರಪಂಚವು ಬ್ರಹ್ಮಾತ್ಮಕವೇ ಆದ್ದರಿಂದ ಅದು ಮಿಥ್ಯೆಯಲ್ಲ ವೆಂಬುದೇ ವಾಚಾರಂಭಣಶ್ರುತಿಯ ಅರ್ಥವೆಂದು ಸ್ಪಷ್ಟವಾಗಿ ತಿಳಿಸಿದ್ದಾನೆ. ಆದ್ದರಿಂದ ಸಂದೇಹಕ್ಕವಕಾಶವಿಲ್ಲ. "ಜಗತ್ತು ಶಿವರೂಪವಾದ್ದರಿಂದ ಶಿವನಿಗಿಂತ ಬೇರೆಯಲ್ಲವೆಂದೂ, ಸುಳ್ಳಲ್ಲವೆಂದೂ ವಾಚಾರಂಭಣವಾಕ್ಯಗಳು ತಿಳಿಸುತ್ತವೆ" ಎಂದು ಸ್ಕಾಂದದಲ್ಲೂ ಹೇಳಿದೆ. "ಬ್ರಹ್ಮವಿದನು ಬ್ರಹ್ಮವೇ ಆಗುತ್ತಾನೆ" ಎಂದು ಶ್ರುತಿಗಳಲ್ಲಿ ಜ್ಞಾನವೇ ಮೋಕ್ಷಹೇತುವೆಂದು ಹೇಳಿದ್ದರಿಂದ "ನೀನು ಪತ್ತನೆಯವನು" ಎಂಬ ಮಾತನ್ನು ಕೇಳಿದಾಗ ಉಂಟಾಗುವ ವಿವೇಕದಂತೆ ಜೀವನಿಗೆ ಸ್ವರೂಪಜ್ಞಾನವೇ ಮೋಕ್ಷವೆಂದು ಹೇಳುವುದೂ ಯುಕ್ತವಲ್ಲ. "ಶಿವನ ನಿರಂತರ ಧ್ಯಾನಧಾರಣಾನುಸಂಧಾನಗಳಿಂದಲೇ ಜೀವನ ಮಾಯೆ ತೊಲಗುವುದು" "ಬ್ರಹ್ಮವನ್ನು ತಿಳಿದವನೇ ಬ್ರಹ್ಮವನ್ನು ಹೊಂದುತ್ತಾನೆ" ಎಂದು ಮುಂತಾದ ಅನೇಕ ಶ್ರುತಿಗಳಲ್ಲಿ ಉಪಾಸನದಿಂದ ದೊರಕುವ ಜ್ಞಾನವೇ ಮೋಕ್ಷಹೇತುವೆಂದು ನಿಶ್ಚಯಿಸಲಾಗಿದೆ. ಬ್ರಹ್ಮದ ಕೇವಲ ಜ್ಞಾನವು ವೈದ್ಯಶಾಸ್ತ್ರದ ಜ್ಞಾನದಂತೆ ಸಾರ್ಥಕವಾಗಲಾರದು. ಜ್ಞಾನ ಹುಟ್ಟುವವರೆಗೆ ಮಾತ್ರ ಕರ್ಮಮಾಡಬೇಕು' ಎಂದು ಹೇಳುವುದೂ ವಿಚಾರವಿಲ್ಲದ ಮಾತೇ ಸರಿ. "ಹೀಗೆ ತಿಳಿದವನು ಅಗ್ನಿಹೋತ್ರವನ್ನಾಚರಿಸುತ್ತಾನೆ" ಎಂದು ಶ್ರುತಿಯಲ್ಲೂ, "ಅಜ್ಞಾನಿಗಳು ಆಸಕ್ತಿಯಿಂದ ದುಡಿದರೆ ಜ್ಞಾನಿಯು ಲೋಕಹಿತೇಚ್ಛೆಯಿಂದ ಅನಾಸಕ್ತನಾಗಿ ದುಡಿಯುತ್ತಾನೆ," "ಆಚಾರಹೀನನು ಲೋಕದಲ್ಲಿ ನಿಂದಿತನಾಗುವನು. ಆದ್ದರಿಂದ ಜ್ಞಾನಿಯು ದೇಹಬಿಡುವವರೆಗೂ ಕರ್ಮವನ್ನು ಮಾಡುತ್ತಲೇ ಇರಬೇಕು," "ಕುರುಡನು ಕಾಣದೆ ಇರುವುದರಿಂದಲೂ, ಕುಂಟನು ನಡೆಯಲಾಗದ್ದರಿಂದಲೂ ಕೆಡುತ್ತಾನೆ," "ಕುರುಡಕುಂಟರಂತೆ ಜ್ಞಾನಕರ್ಮಗಳು ಒಂದನ್ನೊಂದು ಅಪೇಕ್ಷಿಸುತ್ತವೆ," "ಒಂದೇ ರೆಕ್ಕೆಯಿಂದ ಪಕ್ಷಿ ಆಕಾಶಕ್ಕೆ ಹೇಗೆ ಹಾರಲಾರದೋ ಹಾಗೆ ಜ್ಞಾನಒಂದರಿಂದಲೇ ಮೋಕ್ಷವು ದೊರಕಲಾರದು" ಹೀಗೆ ಅನೇಕ ಆಗಮಗಳಲ್ಲೂ ಜ್ಞಾನವು ಸಿದ್ಧಿಸಿದಮೇಲೂ ಕರ್ಮಾಚರಣೆಯನ್ನು ವಿಧಿಸಲಾಗಿದೆ. ಆದ್ದರಿಂದ ಶುಕ್ತಿರಜತದಂತೆ ಬ್ರಹ್ಮಜ್ಞಾನದಿಂದ ಜಗತ್ತು ಮಿಥ್ಯೆ ಎನಿಸುವುದೆಂಬುದು ಯುಕ್ತವಲ್ಲ. ಅದ್ವೈತಮತದಲ್ಲೂ "ನಾನು ಅದ್ವೈತಸಿದ್ಧನೆ" ಎಂದು ಜೀವನಿಗೆ

ಹೇಳಿಕೊಳ್ಳುವುದಕ್ಕೂ ಅವಕಾಶವಿಲ್ಲ. ಹಾಗೆ ಅವನು ಹೇಳುತ್ತಾ ಕುಳಿತರೆ, ಸ್ನಾನ, ಅರ್ಚನೆ, ಭಸ್ಮ ರುದ್ರಾಕ್ಷಧಾರಣ, ವರ್ಣಾಶ್ರಮಾಚಾರ ಇವನ್ನು ವಿಧಿಸುವ ಶ್ರುತಿ ಸ್ಮೃತ್ಯಾಗಮವಾಕ್ಯಗಳೆಲ್ಲಕ್ಕೂ ತಿಲಾಂಜಲಿ ಎರೆಯಬೇಕಾದೀತು. ಅವೆಲ್ಲವನ್ನೂ ಅವನುಆಚರಿಸುತ್ತಿದ್ದರೂ ಇಲ್ಲವೆನ್ನುವುದು ನನ್ನ ತಾಯಿ ಬಂಜೆ ಎಂಬುವಂತೆ ವ್ಯರ್ಥಾಲಾಪವಾದೀತು. ಬ್ರಹ್ಮವು ಅದ್ವೈತವಾದರೆ ಅದು ಸಗುಣವೋ? ನಿರ್ಗುಣವೋ? ಅಥವಾ ಎರಡೂವೋ? ಎಂಬ ವಿಕಲ್ಪಗಳು ಬರುತ್ತವೆ. ಅದು ಸಗುಣವೆಂದರೆ ಸಗುಣಚತುರ್ಮುಖನನ್ನು ಒಪ್ಪಿ ಅವನ ಲಾಂಛನವಾದ ಕಮಂಡಲುವನ್ನು ಭಕ್ತನು ಧರಿಸಬೇಕಾಗುತ್ತದೆ. ಆಗ ಊರ್ಧ್ವಪುಂಡ್ರ ಮತ್ತು ತಿರ್ಯಕ್ಪುಂಡ್ರಗಳನ್ನು ಧರಿಸಿ ಮಾಡಬೇಕಾದ ಶಿವಕೇಶವರ ಪೂಜೆಯನ್ನು ಬಿಡಬೇಕಾಗುತ್ತದೆ. ಹಾಗಾದರೂ ಅದ್ವೈತಕ್ಕೆ ಭಂಗವುಂಟೇ ಆಗುವುದು. ಬ್ರಹ್ಮ ನಿರ್ಗುಣವೆನ್ನುವುದಾದರೆ, ಅದಕ್ಕೆ ಉಪಾಸನವೇ ಸಂಭವಿಸುವುದಿಲ್ಲ. ಬ್ರಹ್ಮದಲ್ಲಿ ಸಗುಣ ಮತ್ತು ನಿರ್ಗುಣ ಎಂದು ಎರಡನ್ನೂ ಒಪ್ಪಿದರೆ ಅದ್ವೈತಸಿದ್ಧಾಂತವೇ ಕೆಡುತ್ತದೆ. ಇದೂ ಅಲ್ಲದೆ, ಆ ಮತದಲ್ಲಿ ಎಲ್ಲವೂ ಒಬ್ಬನೇ, ಆದ್ದರಿಂದ ಪ್ರತಿಪಾದ್ಯಪ್ರತಿಪಾದಕಭಾವಸಂಬಂಧವೇ ಹೊಂದುವುದಿಲ್ಲ. ಸತ್ತವನಿಗೆ 'ನಾನು ಸತ್ತಿನು' ಎಂಬ ಸಮಾಚಾರ ಕೇಳದಿರುವಂತೆ ಅದ್ವೈತನಿಗೆ ನಾನು ಅದ್ವೈತನಿದ್ದೇನೆಂಬ ಜ್ಞಾನ ಹೇಗೆ ಬಂದೀತು? ಎಲ್ಲಾ ವ್ಯವಹಾರವೂ ದ್ವೈತಕ್ಕೇ ಹೊಂದುತ್ತವೆ. ವ್ಯವಹಾರಕ್ಕಾಗಿ ನಾನು ಅದ್ವೈತನೆಂಬ ಮಾತು ಇರಬಹುದೆಂದರೆ ವ್ಯಾವಹಾರಿಕಾದ್ವೈತವೆಂದಷ್ಟೇ ಹೇಳಬೇಕಾಗುತ್ತದೆ. ಅದ್ವೈತಕ್ಕೆ ವ್ಯವಹಾರ ಸಂಭವಿಸದಿರುವುದರಿಂದ ಬ್ರಹ್ಮದಲ್ಲಿ ಅದ್ವೈತವನ್ನು ಒಪ್ಪಿದರೆ ಅದು ಅವನಲ್ಲಿ ಧರ್ಮವಾದ್ದರಿಂದ ಸಗುಣಬ್ರಹ್ಮವಾದವನ್ನು ತಡೆಯಲಾಗುವುದೇ ಇಲ್ಲ. ಆದ್ದರಿಂದ ದ್ವೈತಾದ್ವೈತವನ್ನೇ ಒಪ್ಪಬೇಕು.

"ಆಕಾಶವತ್ಸರ್ವಗತಶ್ಚ ಪೂರ್ಣಃ", "ನಿಷ್ಕಲಂ ನಿಷ್ಕ್ರಿಯಂ" ಇತ್ಯಾದಿಷು ಬ್ರಹ್ಮಣಃ ಪೂರ್ಣತ್ವನಿರ್ವಿಶೇಷತ್ವಾವಗಮಾತ್ ತತ್ಸಕಾಶತಯಾ ಜಗತ್ಕಾರಣತ್ವಂ ಪ್ರಧಾನಸ್ಯ? ಉತ ಪರಮಾಣ್ವಾದೀನಾಂ? ಇತ್ಯಾಶಂಕಾಯಾಮಾಹ—ಶಿಷ್ಟಾಪರಿಗ್ರಹಾಧಿಕರಣಂ ॥ ೪ ॥

ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ ॥ ೧೨ ॥

ಏತೇನ ಪೂರ್ವೋಕ್ತಮಿಥ್ಯಾದ್ವೈತಶೂನ್ಯಾದ್ವೈತಕಪಿಲಕಾಣಾದಾದಿಮತನಿರಾಕರಣೇನ ಶಿಷ್ಟಾಪರಿಗ್ರಹಾ ಅಪಿ, ಶಿಷ್ಟಾಶ್ಚ ಅಪರಿಗ್ರಹಾಶ್ಚ ಶಿಷ್ಟಾಪರಿಗ್ರಹಾಃ, ಶಿಷ್ಟಾಃ ಚತುರ್ಥ್ಯಂತದೇವತಾಪ್ರಧಾನಜೈಮಿನೀಯಶಾಸ್ತ್ರಾಚಾರನಿಪುಣಾಃ ಸಂಯುಕ್ತಾಸಂಯುಕ್ತಭೇದವಾದಿನಃ. ಅಪರಿಗ್ರಹಾಃ ವೇದಜಗಜ್ಜೀವೇಶ್ವರಮಿಥ್ಯಾವಾದತತ್ಪರಾಃ, ಮಿಥ್ಯಾದ್ವೈತಶೂನ್ಯಾದ್ವೈತಜೈನಬೌದ್ಧಲೋಕಾಯುತಾದ್ಯವೈದಿಕಾಶ್ಚಾಪಿ ವ್ಯಾಖ್ಯಾತಾಃ ವೇದಾಂತಸ್ಮೃತ್ಯಾಗಮಪುರಾಣಾದಿಭಿಃ ವೇದವೇದಾಂತ

ನಿಷ್ಠಾಗರಿಷ್ಠಮನುಪಾಮದೇವಾಗಸ್ತ್ಯದೂರ್ವಾಸೋಪಮನ್ಯುರೇವಣ ಸಿದ್ಧಮರುಳಸಿದ್ಧಾದಿಭಿಶ್ಚ ನಿರಾಕೃತಾಃ. ವಿಭುತ್ವಾದಾಕಾಶವನ್ನಿರ್ವಿಶೇಷತ್ವಾಚ್ಚಿನ್ಮಯತ್ವಾಚ್ಚೇತ್ಯಾದಿನ್ಯಾಯನೈಶೇಷಿಕಾದ್ಯನುಮಾನೇನ ಪರಮಾಣ್ವಾದೀನಾಂ ಜಗದುಪಾದಾನತ್ವಂ ಸೂಚಿತಂ. "ಪರೀಕ್ಷ್ಯ ಲೋಕಾನ್", "ಕರ್ಮಚಿತೋ ಲೋಕಃ ಕ್ಷೀಯತೇ" ಇತ್ಯಾದಿಷು ಲೋಕಜೀವಯೋಃ ಕರ್ಮಹೇತುತ್ವಾವಗಮಾತ್ ಕರ್ಮಣೋ ಜಗತ್ಕರ್ತೃತ್ವಂ ದರ್ಶಿತಂ. "ಅಜಾಮೇಕಾಂ", "ಮಾಯಾಭಾಸೇನ ಜೀವೇಶೌ ಕರೋತಿ" ಇತ್ಯಾದೌ ಮಾಯಾಯಾಃ ಜೀವೇಶ್ವರಾದಿಪ್ರಪಂಚಕಾರಣತ್ವಂ ಭಾಸತೇ. ತಸ್ಮಾತ್ಸಂದೇಹಃ "ಅಚಕ್ಷುಶ್ಶ್ರೋತ್ರಮಪಾಣಿಪಾದಂ" ಇತ್ಯಾದಿಷು ಬ್ರಹ್ಮಣೋ ವ್ಯಾಪಕತ್ವನಿರವಯವತ್ವಜ್ಞಾನಾತ್ಮಕತ್ವಾದಿನಿರ್ಣಯೇನ ಬ್ರಹ್ಮಕಾರಣತ್ವಸ್ಯಾನುಮಾನೇನ ಬಾಧಿತತ್ವಾತ್ಪರಮಾಣ್ವಾದೀನಾಮೇವ ಜಗದುಪಾದಾನತ್ವಂ ಯುಕ್ತಂ. ಅಥವಾ "ಪರೀಕ್ಷ್ಯ ಲೋಕಾನ್" ಇತ್ಯತ್ರ ಲೋಕಾನಾಂ ಕರ್ಮಹೇತುತ್ವಾವಗಮಾತ್, "ಕರ್ಮಣಾ ಜಾಯತೇ ಜಂತುಃ ಕರ್ಮಣಾ ಚ ಪ್ರವರ್ತತೇ। ಕರ್ಮಣಾ ಪ್ರವಿಲೀಯಂತೇ ತಸ್ಮಾತ್ಕರ್ಮಾತ್ಮಕಂ ಜಗತ್॥", "ಮಾಯಯಾ ಜಾಯತೇ ವಿಶ್ವಂ ಮಾಯಯಾ ಪರಿವರ್ತತೇ। ಮಾಯಯಾ ಲೀಯತೇ ಯಸ್ಮಾತ್ತಸ್ಮಾನ್ಮಾಯಾಮಯಂ ಜಗತ್॥" ಇತ್ಯಾದಿನಾ ಕರ್ಮಾತ್ಮಕತ್ವಂ ಮಾಯಾಮಯತ್ವಂ ಚ ಪ್ರಪಂಚಸ್ಯ ಪ್ರತೀಯತೇ. ತಸ್ಮಾತ್ತದಪಿ ಯುಕ್ತಂ "ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ", "ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ" ಇತ್ಯಾದಿಷು ಬ್ರಹ್ಮಣಃ ಕಾರ್ಯಕಾರಣತ್ವಾದಿಶೂನ್ಯತಯಾ ನಿರ್ವಿಶೇಷತ್ವಾವಗಮಾತ್. ಸರ್ವಥಾ ಶಿವಸ್ಯ ಪರಬ್ರಹ್ಮಣಃ ನ ಪ್ರಪಂಚೋಭಯಕಾರಣತ್ವಮಿತಿ ಪ್ರಾಪ್ತೇಽಭಿಧೀಯತೇ. "ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಂ, ತದೇವ ಬ್ರಹ್ಮ ತ್ವಂ ವಿದ್ಧಿ" ಇತ್ಯಾದಿಶ್ರುತಿಷ್ವನುಮಾನನಿರಾಕರಣಮುಪದಿಷ್ಟಂ. "ಯಥೋರ್ಣನಾಭಿಃ" ಇತ್ಯಾದಿಭಿರ್ದೃಷ್ಟಾಂತಾನುಸಾರೇಣ ಶ್ರುತೌ ಜಗದುಭಯಕಾರಣತ್ವನಿರ್ದೇಶಾತ್ ಜಡಕರ್ಮಪ್ರಧಾನಪರಮಾಣ್ವಾದೀನಾಂ ನ ಜಗದುಭಯಹೇತುತ್ವಮುಪತಿಷ್ಠತೇ. "ಪ್ರಧಾನಕ್ಷೇತ್ರಜ್ಞಪತಿಃ" ಇತ್ಯಾದಿಷು ವೇದಜೀವಕರ್ಮಪ್ರಧಾನಾದೀನಾಂ ಪರಮೇಶ್ವರಾಧೀನತ್ವಂ ಶ್ರೂಯತೇ. ಲೋಕಶಾಸ್ತ್ರಯೋಶ್ಚೋರತ್ವಾದಿದುಷ್ಟಕರ್ಮವಿಶಿಷ್ಟಾನಾಂ ಪ್ರಭುದಂಡನವಿಧಿರೇವ ದರ್ಶಿತಃ ನ ತತ್ಕರ್ಮಣಾಂ. ಅಪಿಚ "ಯನ್ನಿಮಿತ್ತಕೃತಂ ಧರ್ಮಮಧರ್ಮಂ ಧರ್ಮತಾಂ ವ್ರಜೇತ್" ಇತ್ಯಾದಿಪುರಾಣೇಷು ಪಿತೃಹನನಾದಿ

ಪಾಪಕರ್ಮಕೃತ್ಕಾಟಕೋಟಾದೀನಾಂ ಯಜ್ಞಾದಿಪುಣ್ಯಕರ್ಮಕೃದ್ದ ಕ್ಷಾದೀನಾಂ ಚ ವಿಪರೀತಕರ್ಮಫಲಾನುಭವೋ ದೃಷ್ಟಃ. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ । ಇತ್ಯಾದಿಶ್ರುತಯ ಸ್ಸರ್ವೇ ಮಾಹಾತ್ಮ್ಯಜ್ಞಾಪನಾಯ ವೈ । ತಸ್ಮಾಚ್ಛಿವಸ್ಯ ಮಾಹಾತ್ಮ್ಯಂ ಬ್ರಹ್ಮಣಾಪಿ ನ ವಿದ್ಯತೇ॥" "ಅತೀತಃ ಪಂಥಾನಂ ತವ ಚ ಮಹಿಮಾ ವಾಙ್ಮನಸಯೋರತದ್ವ್ಯಾವೃತ್ತ್ಯಾ ಯಂ ಚಕಿತಮಭಿದತ್ತೇ ಶ್ರುತಿರಪಿ" ಇತ್ಯಾದ್ಯಚಿಂತ್ಯಮಹಿಮಾವಿಶಿಷ್ಟತ್ವಮುಪದಿಷ್ಟಂ. ಅತಃ "ನ ತಸ್ಯ ಕಾರ್ಯಂ ಕಾರಣಂ ಚ ವಿದ್ಯತೇ" ಇತ್ಯಾದಿಶ್ರುತೀನಾಂ ಮಹಾದೇವಸ್ಯ ಪರಬ್ರಹ್ಮಣ ಶ್ಶಿವಸ್ಯ ಮಹಿಮಾಜ್ಞಾಪನಾರ್ಥಪರಮಿತಿ ವೇದಿತವ್ಯಂ. ಏತೇನ ಶೂನ್ಯಾ ತ್ಮಕತ್ವಾಶೂನ್ಯಾತ್ಮಕತ್ವಜ್ಞಾನಾತ್ಮಕತ್ವಾಜ್ಞಾನಾತ್ಮಕತ್ವಾರ್ಥಾತ್ಮಕತ್ವಕ್ಷ ಣಿಕಾತ್ಮಕತ್ವನಿತ್ಯತ್ವೈಕಾಂತತ್ವಸತ್ತ್ವಾದಿವಿಸಂವಾದವಾದಿನೋ ನಿರಸ್ತಾಃ.

"ಆಕಾಶದಂತೆ ಸರ್ವಗತನು ಮತ್ತು ಪೂರ್ಣನು" "ನಿಷ್ಕಲನು ಮತ್ತು ನಿಷ್ಕ್ರಿಯನು" ಎಂಬಲ್ಲಿ ಬ್ರಹ್ಮವು ಪೂರ್ಣವೂ ನಿರ್ವಿಶೇಷವೂ ಎಂದು ತಿಳಿದುಬರುವುದರಿಂದ ಅವನ ಸಾನ್ನಿಧ್ಯದಿಂದ ಪ್ರಧಾನ ಅಥವಾ ಪರಮಾಣುಗಳು ಜಗತ್ಕಾರಣವಾಗಲೆಂದು ಆಶಂಕಿಸಿ ನಿರಾಕರಿಸುತ್ತಾನೆ—**ಶಿಷ್ಟಾಪರಿಗ್ರಹಾಧಿಕರಣಂ ॥ ೪ ॥**

**ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ ॥ ೧೨ ॥**

ಏತೇನ ಅಂದರೆ ಹಿಂದೆ ಹೇಳಿದ ಮಿಥ್ಯಾದ್ವೈತ, ಶೂನ್ಯಾದ್ವೈತ, ಸಾಂಖ್ಯ, ವೈಶೇಷಿಕಾದಿಮತಗಳ ನಿರಾಕರಣದಿಂದ ಶಿಷ್ಟ ಅಂದರೆ ಚತುರ್ಥೀ ವಿಭಕ್ತಿಯ ಪದ ದಿಂದ ಬೋಧಿತವಾಗುವ ದೇವತೆಗಳಿಗೆ ಪ್ರಾಧಾನ್ಯವನ್ನು ಹೇಳುವ ಜೈಮಿನಿಮತ ಮತ್ತು ಶರೀರಶರೀರಿಭಾವವನ್ನು ಹೇಳುವ ವಿಶಿಷ್ಟಾದ್ವೈತಮತ ಇವೂ, ಅಪರಿಗ್ರಹ ಅಂದರೆ ವೇದ ಜಗತ್ತು ಜೀವ ಈಶ್ವರ ಇವರೆಲ್ಲರನ್ನು ಸುಳ್ಳೆಂದು ಹೇಳುವ ಅವೈದಿಕ ವಾದ ಜೈನ ಬೌದ್ಧ ಚಾರ್ವಾಕಾದಿ ಮತಗಳೂ ವ್ಯಾಖ್ಯಾತಾಃ ವೇದಾಂತಸ್ಮೃತ್ಯಾಗಮಪುರಾಣಗಳಿಂದಲೂ, ವೇದಾಂತಜ್ಞಾನಿಗಳೆನಿಸಿದ ಮನು, ವಾಮದೇವ, ಅಗಸ್ತ್ಯ, ದೂರ್ವಾಸ, ಉಪಮನ್ಯು, ರೇವಣಸಿದ್ಧ, ಮರುಳಸಿದ್ಧ ಮೊದಲಾದ ಆಚಾರ್ಯ ರಿಂದಲೂ ನಿರಾಕೃತವಾಗುತ್ತವೆ. ವಿಭುವಾದ್ದರಿಂದಲೂ ಆಕಾಶದಂತೆ ನಿರ್ವಿಶೇಷ ವಾದ್ದರಿಂದಲೂ ಚಿದ್ರೂಪವಾದ್ದರಿಂದಲೂ ಪರಮಾಣುಗಳನ್ನು ನ್ಯಾಯವೈಶೇಷಿಕರು ಜಗತ್ತಿಗೆ ಸಮವಾಯಿಕಾರಣವೆಂದು ಅನುಮಾನದಿಂದ ಸಾಧಿಸುತ್ತಾರೆ. "ಕರ್ಮ ದಿಂದ ಗಳಿಸಿದ ಲೋಕವನ್ನು ಪರೀಕ್ಷಿಸಿ ಜ್ಞಾನಿಯು ವೈರಾಗ್ಯವನ್ನು ಹೊಂದಬೇಕು" "ಕರ್ಮದಿಂದ ಗಳಿಸಿದ ಲೋಕ ನಶಿಸುತ್ತದೆ" ಇಲ್ಲಿ ಲೋಕವೂ ಜೀವರೂ ಕರ್ಮಕ್ಕೆ ಅಧೀನರೆಂದು ತಿಳಿದುಬರುತ್ತದೆ. ಇದರಿಂದ ಕರ್ಮವೇ ಜಗತ್ತಿನ ಕರ್ತೃವೆಂದು ತಿಳಿಯಬಹುದು. "ಅಜಾಮೇಕಾಂ" ಎಂಬಲ್ಲಿ ಮಾಯೆಯೇ ಜೀವ ಈಶ್ವರ ಮೊದ ಲಾದ ಜಗತ್ತಿಗೆ ಕಾರಣವೆಂದು ಕಂಡುಬರುತ್ತದೆ. ಆದ್ದರಿಂದ ಇಲ್ಲಿ ಸಂದೇಹ

ಬರುತ್ತದೆ. "ಕಣ್ಣು ಕಿವಿ ಕೈಕಾಲುಗಳಿಲ್ಲದೆ ಆಕಾಶದಂತೆ ಸರ್ವಗತನೂ ನಿರಂಜನನೂ ಆಗಿರುವವನು" ಎಂಬಲ್ಲಿ ಪರಶಿವನು ಸರ್ವವ್ಯಾಪಕನೂ ನಿರವಯವನೂ ಜ್ಞಾನರೂಪನೂ ಆಗಿರುವನೆಂದು ನಿರ್ಣಯವಾಗಿರುವುದರಿಂದ ಅವನು ಜಗತ್ತಿಗೆ ಕಾರಣನೆಂಬುದು ಅನುಮಾನದಿಂದ ಬಾಧಿತವಾಗುತ್ತದೆ. ಆದರಿಂದ ಪರಮಾಣುಗಳೇ ಜಗತ್ತಿಗೆ ಸಮವಾಯಿಕಾರಣವೆಂಬುದೇ ಯುಕ್ತವಾಗಿದೆ ಅಥವಾ ಶ್ರುತಿಯಲ್ಲಿ ಲೋಕಗಳಿಗೆ ಕರ್ಮವೇ ಹೇತುವೆಂದು ತಿಳಿದುಬರುವುದರಿಂದಲೂ, "ಕರ್ಮದಿಂದಲೂ, ಮಾಯೆಯಿಂದಲೂ ಜೀವನು ಹುಟ್ಟಿ ಬೆಳೆದು ಅಲ್ಲಿಯೇ ಲಯಹೊಂದುವುದರಿಂದ ಜಗತ್ತು ಕರ್ಮಾತ್ಮಕವೂ ಮಾಯಾತ್ಮಕವೂ ಆಗಿದೆ" ಎಂಬ ಸ್ಮೃತಿಯಿಂದಲೇ ಜಗತ್ತು ಮಾಯೆ ಮತ್ತು ಕರ್ಮಗಳಿಂದ ಕೂಡಿರುವುದರಿಂದಲೂ, "ಪರಶಿವನಿಗೆ ಸಮಾನನಾಗಲೀ ಅಧಿಕನಾಗಲೀ ಯಾರೂ ಇಲ್ಲ" ಕಾರ್ಯಕಾರಣಗಳೂ ಅವನಿಗೆ ಸಂಬಂಧಿಸುವುದಿಲ್ಲ" ವೆಂಬ ಶ್ರುತಿಯಲ್ಲಿ ಅವನು ಯಾವ ಸಂಪರ್ಕವೂ ಇಲ್ಲದೆ ನಿರ್ವಿಶೇಷನಾಗಿರುವನೆಂದು ಹೇಳಿರುವುದರಿಂದಲೂ ಪರಶಿವನು ಜಗತ್ತಿಗೆ ಅಭಿನ್ನ ನಿಮಿತ್ತೋಪಾದನಕಾರಣನಾಗಲಾರನು ಎಂದು ಆಕ್ಷೇಪ ಬಂದರೆ ಸಮಾಧಾನವನ್ನು ಈ ಸೂತ್ರವು ತಿಳಿಸುತ್ತದೆ. "ಯಾವುದನ್ನು ಮನಸ್ಸು ತಿಳಿಯಲಾರದೋ, ಯಾವುದು ಮನಸ್ಸನ್ನು ತಿಳಿಯಬಲ್ಲದೋ ಅದನ್ನು ಬ್ರಹ್ಮವೆಂದು ತಿಳಿ." "ತರ್ಕದಿಂದ ಪರಮಾತ್ಮಜ್ಞಾನ ದೊರಕುವುದಿಲ್ಲ" ಈ ಶ್ರುತಿಗಳಲ್ಲಿ ಅನುಮಾನವನ್ನು ನಿರಾಕರಿಸಲಾಗಿದೆ. ಜೇಡರಹುಳದ ದೃಷ್ಟಾಂತದಿಂದ ಶ್ರುತಿಯಲ್ಲಿ ಶಿವನೇ ಜಗತ್ತಿಗೆ ಉಭಯಕಾರಣನೆಂದು ಹೇಳಲಾಗಿದೆ. ಆದ್ದರಿಂದ ಜಡಕರ್ಮ ಪ್ರಧಾನ ಪರಮಾಣು ಇವು ಜಗತ್ತಿಗೆ ಉಭಯಕಾರಣವಾಗಲಾರವು. "ಪ್ರಧಾನಜೀವರಿಗೆ ನಿಯಾಮಕನು ಮತ್ತು ಜೀವರ ಸಂಸಾರ ಮೋಕ್ಷಸ್ಥಿತಿ ಬಂಧಗಳಿಗೂ ಕಾರಣನು" "ಎಲ್ಲಾ ವಿದ್ಯೆಗಳಿಗೂ ಅಧಿಪತಿಯು" ಈ ಬಗೆಯ ಶ್ರುತಿಗಳಲ್ಲಿ ವೇದ, ಜೀವ, ಕರ್ಮ, ಪ್ರಧಾನ ಇವೆಲ್ಲವೂ ಪರಶಿವನಿಗಧೀನವೆಂದು ಹೇಳಲಾಗಿದೆ. ಲೋಕದಲ್ಲೂ ಶಾಸ್ತ್ರದಲ್ಲೂ ಕಳ್ಳತನ ಮೊದಲಾದ ದುಷ್ಟಕರ್ಮಗಳನ್ನು ಮಾಡಿದವರಿಗೆ ಪ್ರಭುವು ಶಿಕ್ಷೆಯನ್ನು ವಿಧಿಸುವನೇ ಹೊರತು ಆಯಾ ಕರ್ಮಗಳಿಗೇ ಶಿಕ್ಷೆಯನ್ನು ವಿಧಿಸುವುದಿಲ್ಲ. ಇದೂ ಅಲ್ಲದೆ, "ಯಾವ ನಿಮಿತ್ತದಿಂದ ಮಾಡಿದ ಧರ್ಮವು ಅಧರ್ಮವಾಗುವುದೋ, ಅಧರ್ಮವು ಧರ್ಮವಾಗುವುದೋ" ಎಂಬ ಪುರಾಣದಂತೆ ತಂದೆಯ ಕೊಲೆ ಮೊದಲಾದ ಪಾಪವನ್ನಾಚರಿಸಿದ ಕಾಟಕೋಟ ಮೊದಲಾದವರೂ, ಯಜ್ಞವೇ ಮೊದಲಾದ ಪುಣ್ಯವನ್ನಾಚರಿಸಿದ ದಕ್ಷ ಮೊದಲಾದವರೂ ವಿಪರೀತವಾದ ಫಲವನ್ನು ಅನುಭವಿಸಿದ್ದುದು ಕಂಡುಬಂದಿದೆ. "ವಾಕ್ಕು ಮತ್ತು ಮನಸ್ಸು ಅವನನ್ನು ಹೊಂದದೆ ಹಿಂತಿರುಗುತ್ತವೆ" ಮೊದಲಾದ ಶ್ರುತಿಗಳು ಅವನ ಮಹಿಮೆಯನ್ನು ತಿಳಿಸುತ್ತವೆಯಾದ್ದರಿಂದ ಶಿವನ ಮಹಿಮೆಯು ಚತುರ್ಮುಖನಿಗೂ ತಿಳಿಯದು. "ನಿನ್ನ ಮಹಿಮೆಯು ವಾಕ್ಕು ಮನಸ್ಸು ಇವುಗಳ ಮಾರ್ಗವನ್ನು ಮೀರಿದೆ. ಅವೆಲ್ಲಕ್ಕೂ ಮೀರಿದ ಶಿವನ ಬಗ್ಗೆ ಶ್ರುತಿಯೂ ಸಹ ಅಂಜಿಕೆಯಿಂದಲೇ ಕೊಂಚ

ತಿಳಿಸುತ್ತದೆ" ಎಂದು ಪುರಾಣೇತಿಹಾಸಗಳಲ್ಲೂ ಅವನ ಮಹಿಮೆಯನ್ನು ಅಚಿಂತ್ಯವೆಂದು ಹೇಳಲಾಗಿದೆ. "ಅವನಿಗೆ ಯಾವ ಕಾರಣವೂ ಇಲ್ಲ, ಕಾರ್ಯವೂ ಇಲ್ಲ" ಎಂಬ ಶ್ರುತಿಯು ಮಹಾದೇವನ ಮಹಿಮೆಯನ್ನು ತಿಳಿಸುತ್ತದೆಯಾದ್ದರಿಂದ ಶೂನ್ಯವಾದ, ಅಶೂನ್ಯವಾದ, ಜ್ಞಾನವಾದ, ಅಜ್ಞಾನವಾದ, ಅರ್ಧಸತ್ಯತಾವಾದ, ಕ್ಷಣಿಕವಾದ, ನಿತ್ಯತ್ವವಾದ, ಏಕಾಂತತ್ವವಾದ, ಸದ್ವಾದ, ಅಸದ್ವಾದ ಮೊದಲಾದ ಪರಸ್ಪರ ವಿರುದ್ಧವಾದ ಮತಗಳೆಲ್ಲವೂ ನಿರಸ್ತವಾದುವು.

"ಯಃ ಪೃಥಿವ್ಯಾಂ ತಿಷ್ಠನ್ಯಸ್ಯ ಪೃಥಿವೀ ಶರೀರಂ" ಇತ್ಯಾರಭ್ಯ "ಯೋ ವಿಜ್ಞಾನೇ ತಿಷ್ಠನ್," "ಯ ಆತ್ಮನಿ ತಿಷ್ಠನ್ಯಸ್ಯಾತ್ಮಾ ಶರೀರಂ" ಇತ್ಯಂತೇನ ಕಾಣ್ವಶಾಖಾಯಾಮಂತರ್ಯಾಮಿಬ್ರಾಹ್ಮಣೇ ಪರಮಾತ್ಮನಃ ಶಿವಸ್ಯಾಷ್ಟಮೂರ್ತಿತ್ವವ್ಯಪದೇಶಾಚ್ಛರೀರಶರೀರಿಣೋರಿವ ಜೀವಶರೀರ ವಿಶಿಷ್ಟಪರಮೇಶ್ವರಸ್ಯ ಜೀವನಿಷ್ಠಸುಖದುಃಖಭೋಕ್ತೃತ್ವಾದಿಕಂ ಸಂಭವತೀತ್ಯಾಶಂಕ್ಯಾಹ—ಭೋಕ್ತ್ರಾಪತ್ತ್ಯಧಿಕರಣಂ ॥ ೫ ॥

ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್ ॥ ೧೩ ॥

"ಯಸ್ಯಾತ್ಮಾ ಶರೀರಂ" ಇತ್ಯತ್ರ ಜೀವೇಶ್ವರಯೋಃ ಶರೀರಶರೀರಿತ್ವವ್ಯಪದೇಶಾತ್. ಭೋಕ್ತ್ರಾಪತ್ತೇಃ ಜೀವನಿಷ್ಠಸಂಸಾರಸುಖದುಃಖಾಪತ್ತೇಃ. ಅವಿಭಾಗಶ್ಚೇತ್ "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ" ಇತ್ಯಾದಿಶ್ರುತಿಸಿದ್ಧಜೀವೇಶ್ವರಯೋರ್ಬದ್ಧತ್ವ ನಿತ್ಯಮುಕ್ತತ್ವಭೋಕ್ತೃತ್ವಾಭೋಕ್ತೃತ್ವಾದಿವಿಭಾಗೋ ನ ಸ್ಯಾದಿತಿ ಚೇನ್ನ, ಸ್ಯಾಲ್ಲೋಕವತ್. ಲೋಕೇ ಯಥಾಕಾಶಸ್ಸರ್ವಗತತ್ವೇಽಪಿ ಸರ್ವಕಾರಣತ್ವೇಽಪಿ ಸ್ವಸೃಷ್ಟಸರ್ವಜಗದ್ದೋಷಕಲಂಕನಿರ್ಮುಕ್ತತಯಾ ವ್ಯವಸ್ಥಿತಃ ತಥಾ ಪರಮೇಶ್ವರಃ ಸರ್ವಕಾರಣತ್ವಸರ್ವಶರೀರತ್ವ ಸರ್ವಾಂತರ್ಯಾಮಿತ್ವೇನ ವ್ಯವಸ್ಥಿತೋಽಪಿ ಸರ್ವದೋಷಕಲಂಕವಿಲಕ್ಷಣಃ. "ಯಸ್ಯ ಪೃಥಿವೀ ಶರೀರಂ" ಇತ್ಯಾರಭ್ಯ "ಯಸ್ಯಾತ್ಮಾ ಶರೀರಂ" ಇತ್ಯಂತೇನ ಚೇತನಾಚೇತನಶರೀರವಿಶಿಷ್ಟತ್ವಂ ಶ್ರೂಯತೇ. "ಅಚಕ್ಷುಃಶ್ರೋತ್ರಂ ತದಪಾಣಿಪಾದಂ", "ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ", "ಅಪ್ರಾಣೋ ಹ್ಯಮನಾಶ್ಶುಭ್ರಃ" ಇತ್ಯಾದಿಶ್ರುತಿಷು ತಸ್ಯಾಶರೀರತ್ವಮುಪದಿಷ್ಟಂ. ತಸ್ಮಾತ್ಸಂದೇಹಃ. ಪರಮೇಶ್ವರಸ್ಯ ಶರೀರಾದ್ಯಭಾವೇ ಸರ್ವೇಶ್ವರತ್ವಸರ್ವಜ್ಞತ್ವಸರ್ವನಿಯಾಮಕತ್ವಸರ್ವಜನಕತ್ವಾದಿಧರ್ಮಾಣಾಮಸಂಭವತ್ವಾಜ್ಜೀವಶರೀರ ವಿಶಿಷ್ಟತ್ವಂ ಯುಕ್ತಂ. "ದ್ವಾ ಸುಪರ್ಣಾ" ಇತ್ಯಾದಿಶ್ರುತಿಸಿದ್ಧಜೀವೇಶ್ವರಧರ್ಮವಿಭಾಗತ್ವಮೌಪಚಾರಿಕಂ ಶರೀರಶರೀರಿವತ್. ಜೀವನಿಷ್ಠಸುಖದುಃಖಾದಿಕಂ ಪರಮೇಶ್ವರಸ್ಯೈವ ಸಿದ್ಧಮತೋ ಜೀವಸ್ಯಾರಾಧ

ಕತ್ವಂ ಪರಮೇಶ್ವರಸ್ಯಾರಾಧ್ಯತ್ವಂ ನ ಸಂಭವತಿ. “ ವಿಗ್ರಹಂ ಪಾರ್ವ
ತೀಶಸ್ಯ ಜಗದೇತಚ್ಚರಾಚರಂ । ಏತದರ್ಥಂ ನ ಜಾನಂತಿ ಪಶವಃ ಪಾಶ
ಗೌರವಾತ್ ॥ ” ಇತ್ಯಾದಿಶೈವಸ್ಕಾಂದಾದಿಪುರಾಣೇಷ್ವಪಿ ತಸ್ಯೈವ ಜಗ
ಚ್ಛರೀರತ್ವಮುಪದಿಷ್ಟಂ. ತಸ್ಮಾದೀಶ್ವರಸ್ಯ ವಿಲಕ್ಷಣತ್ವೇನ ನಿರ್ದೇಹ
ನಿರ್ವಿಶೇಷಪರಮಾತ್ಮಾವಲಂಬನಂ ಯುಕ್ತಮಿತಿ ಪ್ರಾಪ್ತೇ ಬ್ರೂಮಃ.
“ ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಮೇವ
ಚ ” ಇತ್ಯಾದಿಶ್ರುತಿಷು ಪವನಾದಿವನ್ಮೂರ್ತಾಮೂರ್ತತ್ವಮುಪದಿಷ್ಟಂ.
ಅಮೂರ್ತಸ್ಯ ಪವನಸ್ಯ ವೃಕ್ಷಕಂಪನೋತ್ಪಾಟನಾದಿಸಾಮರ್ಥ್ಯಂ
ದೃಷ್ಟಂ. ತಥಾ “ ಅಪಾಣಿಪಾದೋ ಜವನೋ ಗೃಹೀತಾ ” ಇತಿ ಶ್ವೇತಾ
ಶ್ವತರೇ, “ ಪಶ್ಯಾಮ್ಯಚಕ್ಷುಸ್ಸ ಶೃಣೋಮ್ಯಕರ್ಣಃ–ನ ಚಾಸ್ತಿ ವೇತ್ತಾ
ಮಮ ಚಿತ್ಸದಾಹಂ ”, “ ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತಕೃದ್ವೇದವಿದೇವ ಚಾಹಂ ”, “ ನ ಪುಣ್ಯಪಾಪೇ ಮಮ ನಾಸ್ತಿ
ನಾಶೋ ನ ಜನ್ಮದೇಹೇಂದ್ರಿಯಬುದ್ಧಿರಸ್ತಿ ” ಇತಿ ಕೈವಲ್ಯೇ ಚ ಶಿವಸ್ಯ
ಶರೀರೇಂದ್ರಿಯಾದಿನಿರಪೇಕ್ಷತಯಾ ಸರ್ವಜ್ಞತ್ವಸರ್ವಶಕ್ತಿತ್ವಸರ್ವಕಾರ
ಣತ್ವಸರ್ವನಿಯಂತೃತ್ವಸರ್ವೋಪಾಸ್ಯತ್ವಸರ್ವಾನುಗ್ರಾಹಕತ್ವಸರ್ವಗತ್ವ
ಸರ್ವಪುರುಷಾರ್ಥಹೇತುತ್ವಾದಿಕಂ ನಿರ್ದಿಷ್ಟಂ. ಅತೋ ನ ಶಂಕಾ
ಕಳಂಕಃ. “ ಪರಾಽಸ್ಯ ಶಕ್ತಿಃ ” ಇತ್ಯತ್ರ ಬ್ರಹ್ಮಣಸ್ಸ್ವಾಭಾವಿಕಶಕ್ತಿಮ
ತ್ತ್ವೋಪದೇಶಾತ್ ನ ನಿರ್ವಿಶೇಷಬ್ರಹ್ಮವಾದೋ ಯುಕ್ತಃ. ಅತಃ
“ ಅಥಾತೋ ಬ್ರಹ್ಮಜಿಜ್ಞಾಸಾ ” ಇತ್ಯಾರಭ್ಯ “ ಅನಾವೃತ್ತಿಶ್ಶಬ್ದಾದಿ ” ತ್ಯಂತಂ
ವೇದಾಂತಶಾಸ್ತ್ರೇ ಸವಿಶೇಷತ್ವಮೇವ ದೃಶ್ಯತೇ. “ ಅಥಾತೋ ಬ್ರಹ್ಮ
ಜಿಜ್ಞಾಸೇ ” ತಿ ಸೂತ್ರೇ ಬ್ರಹ್ಮಣಃ ಪುರುಷವಿಶೇಷಸ್ಯ ಜಿಜ್ಞಾಸಾವಿಷಯತ್ವ
ವ್ಯಪದೇಶಾತ್, “ ಜನ್ಮಾದ್ಯಸ್ಯ ಯತಃ ” ಇತಿ ಸೂತ್ರೇ ಜಗಜ್ಜನ್ಮಸ್ಥಿತಿಲಯ
ತಿರೋಧಾನಾನುಗ್ರಹವತ್ವಾದಿಕಸ್ಯ ಬ್ರಹ್ಮಲಕ್ಷಣತ್ವೇನ ನಿರ್ದೇಶಾತ್,
“ ಶಾಸ್ತ್ರಯೋನಿತ್ವಾದಿ ” ತ್ಯತ್ರ ತಸ್ಯ ಶಾಸ್ತ್ರಕಾರಣತ್ವಶಾಸ್ತ್ರಪ್ರತಿಪಾದಕ
ತ್ವೋಪದೇಶಾತ್, “ ತತ್ತು ಸಮನ್ವಯಾದಿ ” ತ್ಯತ್ರ ತಸ್ಯೈವ ಸರ್ವವೇದಾಂತ
ಸಮನ್ವಯತ್ವೇನ ಪ್ರಸಾಧಿತತ್ವಾಚ್ಚ ತಸ್ಯ ಸವಿಶೇಷತ್ವಮೇವ ಯುಕ್ತಂ.
ನಿರ್ವಿಶೇಷೇ ಜಿಜ್ಞಾಸಾದಿಧರ್ಮಾಣಾಮಸಂಭವಾತ್. “ ವಾಚೋ ಧೇನು
ಮುಪಾಸೀತ, ” “ ತಸ್ಯ ಯಜುರೇವ ಶಿರಃ । ಋಗ್ದಕ್ಷಿಣಃ ಪಕ್ಷಃ । ಸಾಮೋ
ತ್ತರಃ ಪಕ್ಷಃ ॥ ಅನ್ನಂ ಬ್ರಹ್ಮ ” ಇತ್ಯಾದಿವತ್ ತಸ್ಯ ಶರೀರಿತ್ವಮೌಪಚಾ
ರಿಕಂ, ತದುಪಾಸನಾಮಾತ್ರವಿಷಯಮೇವ. ಪರಮೇಶ್ವರಸ್ಯ ಶರೀರಪರಿ
ಗ್ರಹವಾದೇಽಪಿ ನ ಸುಖದುಃಖಾದಿಪ್ರಾಪ್ತಿಃ, ತಚ್ಛರೀರಸ್ಯ ಕರ್ಮಜನ್ಯ
ತ್ವಾಭಾವಾತ್, ಸ್ವತಂತ್ರತ್ವಾಚ್ಚ. ಬ್ರಹ್ಮೇಶ್ವರಶಿವಮಹಾದೇವಶಂಕರಾ.

ದಿಶಬ್ದಾನಾಂ ಘಟಕುಂಭಕಲಶಾದಿಶಬ್ದವತ್ಪರ್ಯಾಯತ್ವಮೇವೇತಿ ವೇದಿತವ್ಯಂ. "ದ್ವಾವಜೌ" ಇತ್ಯಾದೌ ಜೀವೇಶ್ವರಯೋರಜನ್ಯತ್ವಶ್ರವಣಾತ್, "ಮಾಯಾಭಾಸೇನ ಜೀವೇಶೌ ಕರೋತಿ" ಇತ್ಯಾಭಾಸಶ್ರುತೇಃ ಪರಮೇಶ್ವರಸ್ಯ ಶಕ್ತ್ಯಾತ್ಮಕತಯಾ ಮಾಯಾಯಾಃ ಸೃಷ್ಟಿಃ ಪರಮೇಶ್ವರೇಚ್ಛಯಾ ಜೀವೇಶ್ವರಭಾವಂ ಪ್ರಕಟೀಕರೋತೀತ್ಯಭಿಪ್ರಾಯಃ. ತಸ್ಮಾತ್ತತ್ಕರ್ತೃತ್ವಂ ತಸ್ಯೈವೋಪದಿಷ್ಟಂ, ಶಕ್ತ್ಯಪೃಥಕ್ತ್ವೇನ ಶಕ್ತೇರಸತ್ತ್ವಾತ್. ಅತಃ ಪೂರ್ವೋಕ್ತಮೇವ ಸಮೀಚೀನಂ. ಏತದ್ದ್ವೈತಾದ್ವೈತಮತಮೇವ ಕೇಚಾದ್ವಿಶೇಷಾದ್ವೈತಮಿತಿ, ಸೇಶ್ವರಾದ್ವೈತಮಿತಿ, ಶಿವಾದ್ವೈತಮಿತಿ, ಸರ್ವಶ್ರುತಿಸಾರಮತಮಿತಿ ಪರ್ಯಾಯತ್ವೇನ ಪ್ರವದಂತಿ.

ಕಾಣ್ವಶಾಖೆಯ ಅಂತರ್ಯಾಮಿ ಬ್ರಾಹ್ಮಣದಲ್ಲಿ ಪರಶಿವನಿಗೆ ಪೃಥಿವ್ಯಾದ್ಯಷ್ಟಮೂರ್ತಿಗಳನ್ನು ಹೇಳಿರುವುದರಿಂದ ಶರೀರಶರೀರಿಗಳಂತೆ ಜೀವನೆಂಬ ಶರೀರವಿಶಿಷ್ಟನಾದ ಪರಶಿವನಿಗೆ ಜೀವನಲ್ಲಿರುವ ಸುಖದುಃಖಭೋಗಗಳೂ ಸಂಭವಿಸುತ್ತವೆ ಎಂದು ಆಶಂಕಿಸಿ ನಿರಾಕರಿಸುತ್ತಾನೆ—**ಭೋಕ್ತ್ರಾಪತ್ತ್ಯಧಿಕರಣಂ ॥ ೫ ॥**

**ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್ ॥ ೧೩ ॥**

"ಯಾವನಿಗೆ ಶರೀರವೇ ಆತ್ಮವೋ" ಎಂಬಲ್ಲಿ ಜೀವೇಶ್ವರರಿಗೆ ಶರೀರಶರೀರಿಭಾವವನ್ನು ಹೇಳಿದ್ದರಿಂದ ಜೀವನಲ್ಲಿರುವ ಸುಖದುಃಖಭೋಗವು ಈಶ್ವರನಿಗೂ ಬರಬೇಕಾಗುತ್ತದೆ. ಇದರಿಂದ 'ಜೀವನು ಭೋಗಿಸುತ್ತಾನೆ. ಈಶ್ವರನು ನಿರ್ಲಿಪ್ತನಾಗಿದ್ದಾನೆ" ಎಂಬ ಶ್ರುತಿಯಲ್ಲಿ ಹೇಳಿರುವಂತೆ ಜೀವನು ಬದ್ಧ ಮತ್ತು ಭೋಗಿ, ಶಿವನು ನಿತ್ಯಮುಕ್ತ ಮತ್ತು ನಿರ್ಲಿಪ್ತ ಎಂಬ ವಿಭಾಗವು ತಪ್ಪಿಹೋಗಬೇಕಾದೀತು? ಅಂದರೆ ಇದು ಯುಕ್ತವಲ್ಲ. ಲೋಕದಲ್ಲಿ ಆಕಾಶವು ಸರ್ವವ್ಯಾಪಿಯೂ ಸರ್ವಕಾರಣವೂ ಆಗಿದ್ದರೂ ಜಗತ್ತಿನ ದೋಷ ಕಳಂಕಗಳಿಗೆ ಅಂಟದೆ ನಿರ್ಲಿಪ್ತವಾಗಿರುವಂತೆ ಪರಶಿವನು ಸರ್ವಕಾರಣನೂ ಸರ್ವಶರೀರನೂ ಸರ್ವಾಂತರ್ಯಾಮಿಯೂ ಆಗಿದ್ದರೂ ಯಾವ ದೋಷಕಳಂಕಗಳಿಗೂ ಅಂಟಲಾರನು. ಅಂತರ್ಯಾಮಿಬ್ರಾಹ್ಮಣದಲ್ಲಿ ಪರಶಿವನಿಗೆ ಪೃಥಿವ್ಯಾದಿಪಂಚಭೂತಗಳೂ ಸೂರ್ಯ ಚಂದ್ರ ಜೀವರೂ ಶರೀರವೆಂದು ಹೇಳಿದೆ. ಆದರೂ "ಅವನಿಗೆ ಕಣ್ಣು ಪವಿ ಕೈಕಾಲುಗಳಿಲ್ಲ, ಪ್ರಿಯಾಪ್ರಿಯಗಳಿಲ್ಲ" "ಪ್ರಾಣ ಮನಸ್ಸುಗಳಿಲ್ಲದೆ ಶುಭ್ರನು" ಎಂಬಲ್ಲಿ ಅವನಿಗೆ ಶರೀರವಿಲ್ಲವೆಂದು ಹೇಳಿದೆ. ಆದ್ದರಿಂದ ಇಲ್ಲಿ ಸಂದೇಹ ಬರುತ್ತದೆ. ಶಿವನಿಗೆ ಶರೀರವಿಲ್ಲದಮೇಲೆ ಅವನಲ್ಲಿ ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವನಿಯಾಮಕತ್ವ, ಸರ್ವಕಾರಣತ್ವ ಮೊದಲಾದ ಧರ್ಮಗಳೂ ಸಂಭವಿಸುವುದಿಲ್ಲ. ಆದ್ದರಿಂದ ಜೀವನು ಅವನಿಗೆ ಶರೀರವಾಗಿರುವುದೇ ಯುಕ್ತವೆನಿಸುತ್ತದೆ. "ದ್ವಾ ಸುಪರ್ಣಾ" ಎಂಬ ಮಂತ್ರಗಳಲ್ಲಿ ಬಂದಿರುವ ಜೀವೇಶ್ವರರ ವಿಭಾಗ ಕೇವಲ ಉಪಚಾರಕ್ಕಾಗಿ ಬಂದಿದೆ. ಶರೀರಶರೀರಿಗಳಂತೆ ಜೀವನ ಸುಖ

ದುಃಖಾದಿಗಳು ಪರಶಿವನಿಗೂ ಸಂಬಂಧಿಸುತ್ತವೆಯಾದ್ದರಿಂದ ಜೀವನು ಆರಾಧಕ, ಶಿವನು ಆರಾಧ್ಯ ಎಂಬುದು ಸಂಭವಿಸಲಾರದು. "ಈ ಜಗತ್ತು ಶಿವನ ಶರೀರವಾಗಿದೆ. ಇದನ್ನು ಪಶುಗಳು ಪಾಶದಿಂದ ಮೋಹಿತರಾಗಿ ತಿಳಿಯಲಾರರು". ಆದ್ದರಿಂದ ಇಂತಹ ಈಶ್ವರನಿಗೆ ಬದಲಾಗಿ ನಿರ್ದೋಷನೂ ನಿರ್ವಿಶೇಷನೂ ಆದ ಪರಮಾತ್ಮನನ್ನು ಆಶ್ರಯಿಸುವುದೇ ಯುಕ್ತವೆಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. "ಬ್ರಹ್ಮದಲ್ಲಿ ಮೂರ್ತ ಅಮೂರ್ತವೆಂದು ಎರಡು ರೂಪಗಳಿವೆ" ಎಂಬ ಶ್ರುತಿಯಲ್ಲಿ ವಾಯುವಿನಂತೆ ಅವನಿಗೆ ಎರಡು ರೂಪಗಳನ್ನೂ ಹೇಳಲಾಗಿದೆ. ಅಮೂರ್ತವಾದ ಗಾಳಿ ಮರಗಳನ್ನು ಅಲ್ಲಾಡಿಸುವುದನ್ನು ನಾವು ಕಾಣುತ್ತೇವೆ. ಹಾಗೆ ಶಿವನು ಕೈಕಾಲುಗಳಿಲ್ಲದಿದ್ದರೂ ಎಲ್ಲವನ್ನೂ ಹಿಡಿಯುತ್ತ, ಕಣ್ಣಿಲ್ಲದಿದ್ದರೂ ನೋಡುತ್ತ, ಕಿವಿಯಿಲ್ಲದಿದ್ದರೂ ಕೇಳುತ್ತಲಿರುವನು. "ರೂಪವಿಲ್ಲದಿದ್ದರೂ ನಾನು ನೋಡುವೆನು. ನನ್ನನ್ನು ತಿಳಿದವನೇ ಇಲ್ಲ". "ಎಲ್ಲಾ ವೇದಾಂತಗಳಿಂದಲೂ ತಿಳಿಯಬಹುದಾದ ವಸ್ತು ನಾನೇ. ನನಗೆ ಪುಣ್ಯಪಾಪಗಳಿಲ್ಲ, ಜನನ ಮರಣಗಳಿಲ್ಲ, ದೇಹೇಂದ್ರಿಯ ಬುದ್ಧಿಗಳಿಲ್ಲ" ಹೀಗೆ ಕೈವಲ್ಯಾದಿಶ್ರುತಿಗಳಲ್ಲಿ ಪರಶಿವನು ಸಾಧನಗಳ ಅಪೇಕ್ಷೆಯಿಲ್ಲದೆ ಎಲ್ಲವನ್ನು ನಿರ್ವಹಿಸುತ್ತ ಸರ್ವಜ್ಞನೂ ಸರ್ವಕಾರಣನೂ ಸರ್ವನಿಯಾಮಕನೂ ಸರ್ವೋಪಾಸ್ಯನೂ ಸರ್ವಾನುಗ್ರಾಹಕನೂ ಸರ್ವರಿಗೂ ಪರಮಪುರುಷಾರ್ಥನೂ ಸರ್ವಾಗತನೂ ಆಗಿರುವನೆಂದು ಹೇಳಲಾಗಿದೆ. ಆದ್ದರಿಂದ ಅವನಿಗೆ ಯಾವ ಕಳಂಕವೂ ಅಂಟುವುದಿಲ್ಲ. ಶ್ರುತಿಯಲ್ಲಿ ಅವನಿಗೆ ಸ್ವಾಭಾವಿಕವಾದ ಶಕ್ತಿಯನ್ನು ಹೇಳಿರುವುದರಿಂದ ಅವನು ನಿರ್ವಿಶೇಷನೆಂಬ ವಾದ ಯುಕ್ತವಲ್ಲ. ಆದ್ದರಿಂದ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದಾರಂಭಿಸಿ 'ಅನಾವೃತ್ತಿಶ್ಶಬ್ದಾತ್' ಎಂದು ಕೊನೆಯಾಗಿರುವ ವೇದಾಂತಸೂತ್ರಗಳಲ್ಲಿ ಬ್ರಹ್ಮ ಸವಿಶೇಷವೆಂದೇ ಕಂಡುಬಂದಿದೆ. ಜಿಜ್ಞಾಸಾಸೂತ್ರದಲ್ಲಿ ಬ್ರಹ್ಮವೇ ಜಿಜ್ಞಾಸೆಗೆ ವಿಷಯನೆಂದೂ, ಜಗಜ್ಜನ್ಮಾದಿಸೂತ್ರದಲ್ಲಿ ಜಗದ್ವ್ಯಾಪಾರನಿರ್ವಹಣೆಯೇ ಬ್ರಹ್ಮದ ಲಕ್ಷಣವೆಂದೂ, ಶಾಸ್ತ್ರಯೋನಿಸೂತ್ರದಲ್ಲಿ ಅವನನ್ನು ಶಾಸ್ತ್ರಕ್ಕೆ ಕಾರಣನೆಂದೂ ಮತ್ತು ಅವನನ್ನು ಶಾಸ್ತ್ರದಿಂದಲೇ ತಿಳಿಯಬೇಕೆಂದೂ, ಸಮನ್ವಯಸೂತ್ರದಲ್ಲಿ ಅವನಲ್ಲಿಯೇ ಎಲ್ಲಾ ವೇದಾಂತಗಳೂ ಸಮನ್ವಯವಾಗುತ್ತವೆ ಎಂದೂ ಸಾಧಿಸಿರುವುದರಿಂದ ಬ್ರಹ್ಮ ಸವಿಶೇಷವೆಂಬುದೇ ಯುಕ್ತವಾಗಿದೆ. ನಿರ್ವಿಶೇಷಬ್ರಹ್ಮಕ್ಕೆ ಜಿಜ್ಞಾಸಾದಿಧರ್ಮಗಳು ಸಂಭವಿಸುವುದಿಲ್ಲ. "ಅವನಿಗೆ ಯಜುರ್ವೇದವೇ ಶಿರಸ್ಸು, ಋಗ್ವೇದವೇ ಬಲಭಾಗ, ಸಾಮವೇದವೇ ಉತ್ತರಭಾಗ, ಅಥರ್ವವೇದವೇ ಬಾಲ" ಎಂಬ ಶ್ರುತಿಯು "ಅನ್ನವೇ ಬ್ರಹ್ಮ-ಪ್ರಾಣವೇ ಬ್ರಹ್ಮ ಮನಸ್ಸೇ ಬ್ರಹ್ಮ-ವಿಜ್ಞಾನವೇ ಬ್ರಹ್ಮ" ಎಂಬಂತೆ ಕೇವಲ ಉಪಚಾರಕ್ಕಾಗಿ ಮತ್ತು ಭಕ್ತರ ಉಪಾಸನೆಗಾಗಿ ಶಿವನಿಗೆ ಶರೀರವನ್ನು ತಿಳಿಸಿರುವುದು. ಅವನ ಶರೀರವು ಕರ್ಮದಿಂದ ಬಂದದ್ದಲ್ಲವಾದ್ದರಿಂದಲೂ, ಅದು ಸ್ವತಂತ್ರವಾದ್ದರಿಂದಲೂ ಅದರಿಂದ ಅವನಿಗೆ ಸುಖದುಃಖಗಳು ಸಂಭವಿಸುವುದಿಲ್ಲ. ಆದ್ದರಿಂದ ಬ್ರಹ್ಮ-ಈಶ್ವರ,

ಶಿವ, ಮಹಾದೇವ, ರುದ್ರ, ಶಂಕರ ಈ ಶಬ್ದಗಳು ಘಟ-ಕುಂಭ ಕಲಶ ಎಂಬ ಶಬ್ದಗಳಂತೆ ಸಮಾನಾರ್ಥಕಗಳೆಂದು ತಿಳಿಯಬೇಕು. ಶ್ರುತಿಯಲ್ಲಿ ಶಿವಜೀವರನ್ನು ಅಜನ್ಯರೆಂದು ಹೇಳಿದೆ. 'ಮಾಯೆಯ ಆಭಾಸದಿಂದ ಜೀವೇಶ್ವರರಾಗುತ್ತಾರೆ,' ಎಂಬ ಶ್ರುತಿಗೆ ಪರಮೇಶ್ವರನು ಮಾಯಾಶಕ್ತಿಯಿಂದ ತನ್ನ ವಿನೋದಕ್ಕಾಗಿ ಪೂಜ್ಯಪೂಜಕಲೀಲೆಯಿಂದ ಜೀವೇಶ್ವರರನ್ನು ಪ್ರಕಾಶಗೊಳಿಸುತ್ತಾನೆ ಎಂದು ಅಭಿಪ್ರಾಯವಾಗುತ್ತದೆ. ಅವನೇ ಭಕ್ತಾನುಗ್ರಹಕ್ಕಾಗಿ ಭಕ್ತರ ಹೃದಯದಲ್ಲಿ ಈಶ್ವರನಾಗಿ ನೆಲಸಿರುವುದರಿಂದ ಮಾಯೆಯಿಂದಾಗಿರುವ ಜೀವೇಶ್ವರರಿಗೂ ಪರಮೇಶ್ವರನೇ ಕರ್ತನೆಂಬುದು ಸ್ಪಷ್ಟವಾಗುತ್ತದೆ. ಶಕ್ತನಾದ ಪ್ರಭುವನ್ನು ಬಿಟ್ಟು ಶಕ್ತಿ ಬೇರೆಯಾಗಿರಲಾರದಾದ್ದರಿಂದ ಹಿಂದೆಹೇಳಿದ್ದೇ ಯುಕ್ತವಾಗುತ್ತದೆ. ಈ ಮತವೇ ದ್ವೈತಾದ್ವೈತವೆಂದೂ, ವಿಶೇಷಾದ್ವೈತವೆಂದೂ, ಸೇಶ್ವರಾದ್ವೈತವೆಂದೂ, ಶಿವಾದ್ವೈತವೆಂದೂ, ಸರ್ವಶ್ರುತಿಸಾರಮತವೆಂದೂ, ಭೇದಾಭೇದವೆಂದೂ ಪ್ರಸಿದ್ಧವಾಗಿದೆ.

"ಜ್ಞಾಜ್ಞೌ ದ್ವಾವಜೌ" ಇತ್ಯಾದಿಷು ಜೀವೇಶ್ವರಯೋರಜನ್ಯತ್ವದರ್ಶನಾತ್ ತನ್ಮಿಥ್ಯಾತ್ವಾಭಾವೇಽಪಿ, ಜಗತ್ಸತ್ಯತ್ವಶ್ರುತ್ಯದರ್ಶನಾತ್ ವಾಚಾರಂಭಣಶ್ರುತೌ ಜಗನ್ಮಿಥ್ಯಾತ್ವಾವಗಮಾತ್ತದೇವ ಯುಕ್ತಮಿತ್ಯಾಶಂಕ್ಯಾಹ—

ಆರಂಭಣಾಧಿಕರಣಂ ||೬|| ತದನನ್ಯತ್ವಮಾರಂಭಣಶಬ್ದಾದಿಭ್ಯಃ ||೧೪||

ತದನನ್ಯತ್ವಂ "ಶಕ್ತಿಶಕ್ತಿಮತೋರಭೇದಃ" ಇತಿ ನ್ಯಾಯಸಿದ್ಧಶಿವಶಕ್ತಿಸಾಮರಸ್ಯತಯಾ ತಯೋಃ ಸ್ವಶಕ್ತ್ಯಂಶಪ್ರಪಂಚಸ್ಯ, ಶಕ್ತಸ್ಯ ಪರಮಶಿವಸ್ಯ ಅನನ್ಯತ್ವಂ ಮೃದ್ಘಟಾದಿವತ್ಕಾರ್ಯಕಾರಣಯೋರಭಿನ್ನತ್ವಮಂಗೀಕರ್ತವ್ಯಂ. ಕುತಃ ಆರಂಭಣಶಬ್ದಾದಿಭ್ಯಃ "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ", "ಸರ್ವೋ ವೈ ರುದ್ರಃ", "ಋತಂ ಸತ್ಯಂ ಪರಂ ಬ್ರಹ್ಮ", "ಯಥೋರ್ಣನಾಭಿಃ", "ತಜ್ಜಲಾನಿತಿ ಶಾಂತ ಉಪಾಸೀತ" ಇತ್ಯಾದಿಶ್ರುತಿಭ್ಯಃ ಬ್ರಹ್ಮಶಕ್ತ್ಯುಪಾದಾನಸ್ಯ ಪ್ರಪಂಚಸ್ಯ ಬ್ರಹ್ಮಾತ್ಮಕತ್ವಮುಪದಿಷ್ಟಂ. ಏತೇನ ರಜ್ಜುಸರ್ಪವತ್ಪ್ರಪಂಚಸ್ಯ ಬ್ರಹ್ಮಣ್ಯಧ್ಯಸ್ತತ್ವಾನ್ಮಿಥ್ಯಾತ್ವಮಿತ್ಯದ್ವೈತಮತಂ, ಘಟಪಟವತ್ಪ್ರಪಂಚಬ್ರಹ್ಮಣೋರ್ಭೇದಾಂಗೀಕಾರದ್ವೈತಮತಂ, ಶರೀರಿಶರೀರಯೋರಿವ ಸಂಯುಕ್ತಭೇದಾಂಗೀಕಾರವಿಶಿಷ್ಟಮತಂ ಚ ನಿರಸ್ತಮಿತಿ ಸೂತ್ರಸೂಚಿತಾರ್ಥೋ ವೇದಿತವ್ಯಃ. "ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ಯತ್ಪರಂ ಬ್ರಹ್ಮ" ಇತ್ಯಾದಿಷು ಬ್ರಹ್ಮಣಃ ಮೂರ್ತಾಽಮೂರ್ತಜಗದ್ವಿಲಕ್ಷಣತ್ವಂ. "ಐತದಾತ್ಮ್ಯಮಿದಂ ಸರ್ವಂ" "ಬ್ರಹ್ಮೈವೇದಂ ಸರ್ವಂ" ಇತ್ಯಾದಿನಾ ತಸ್ಯ ಚಿದಚಿದಾತ್ಮಕಜಗದಾತ್ಮಕತ್ವಂ ಚ ಶ್ರುತಂ. ಅತಃ ಕಾರಣಕಾರ್ಯಾತ್ಮಕಪ್ರಪಂಚಯೋಶ್ಶಿವ

ಶಕ್ತಿಸಾಮರಸ್ಯತಯಾ ತದನನ್ಯತ್ವಂ ಯುಕ್ತಂ ನ ವೇತಿ ಶಂಕೋತ್ಪದ್ಯತೇ. "ಜ್ಞಾಜ್ಞೌ" ಇತ್ಯತ್ರ ಜೀವೇಶ್ವರಯೋಃ ಪರಸ್ಪರವೈಲಕ್ಷಣ್ಯಂ. "ಆತ್ಮನ ಆಕಾಶಸ್ಸಂಭೂತಃ" ಇತ್ಯಾದಿನಾ ಜಗದ್ಬ್ರಹ್ಮಣೋಃ ಕಾರ್ಯಕಾರಣಾತ್ಮಕತ್ವೇನ ಪರಸ್ಪರಭಿನ್ನತ್ವಂ ಚ ದರ್ಶಿತಂ. ಸತ್ಯಜ್ಞಾನಾನಂದಾತ್ಮಕಬ್ರಹ್ಮಣಃ ಅನೃತಜಡದುಃಖಾತ್ಮಕಪ್ರಪಂಚಸ್ಯ ಚ ಕಥಮನನ್ಯತ್ವಂ? ಮಾಕ್ಷಿಕಾದಿಷು ಕ್ರಿಮ್ಯಾದ್ಯುತ್ಪತ್ತಿದರ್ಶನಾನ್ನ ಕಾರ್ಯಕಾರಣಯೋರನನ್ಯತ್ವಂ. ತಂತುಪಟಾದಿಷ್ವರ್ಥಸಿದ್ಧಿಕ್ರಿಯಾಸಿದ್ಧಿವೈಲಕ್ಷಣ್ಯೇನ ಭೇದೋಪಪತ್ತಿಃ. ಕಾರ್ಯಕಾರಣಯೋರನನ್ಯತ್ವೇ ಜಗದ್ಬ್ರಹ್ಮಣೋರಭೇದೇನೈಹಿಕಾಮುಷ್ಮಿಕಸುಖದುಃಖಫಲಭೋಗವ್ಯವಹಾರೋ ನ ಸ್ಯಾದತೋ ಜಗದ್ಬ್ರಹ್ಮಣೋರನನ್ಯತ್ವಂ ನೋಪಪದ್ಯತ ಇತಿ ಚೇತ್ಪ್ರಚಕ್ಷ್ಮಹೇ. "ಸ್ತಬ್ಧೋಽಸ್ಯುತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ" ಇತ್ಯತ್ರ ಕೃತ್ಸ್ನಸ್ಯ ಪ್ರಪಂಚಸ್ಯ ಪರಮಶಿವೈಕಕಾರಣತ್ವಮುಕ್ತಂ. ಕಾರಣಾತ್ಕಾರ್ಯಸ್ಯಾನನ್ಯತ್ವಂ ಚ ಮನಸಿ ನಿಧಾಯ ಕಾರಣಾತ್ಮಕಪರಶಿವವಿಜ್ಞಾನೇನ ಕಾರ್ಯಭೂತಸರ್ವಪ್ರಪಂಚವಿಜ್ಞಾನೇ ಪ್ರತಿಜ್ಞಾತೇ ಸತಿ ಕೃತ್ಸ್ನಸ್ಯ ಶಿವೈಕಕಾರಣತಾಮಜಾನತಾ ಶಿಷ್ಯೇಣ "ಕಥಂ ನು ಭಗವನ್ಸ ಆದೇಶಃ?" ಇತ್ಯಾತ್ಮಜ್ಞಾನೇನಾನ್ಯಜ್ಞಾತತಾಸಂಭವಶ್ಚೋದಿತಃ. ಪ್ರಪಂಚಸ್ಯ ಪರಮಾತ್ಮೈಕಕಾರಣತಾಮುದ್ದೈಷ್ಯನ್ ಗುರುಃ ಲೌಕಿಕಪ್ರತೀತಿಸಿದ್ಧಂ ಕಾರಣಾತ್ಕಾರ್ಯಸ್ಯಾನನ್ಯತ್ವಂ ತಾವತ್ "ಯಥಾ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ" ಇತ್ಯುಪದಿಶತಿ. ಯಥೈಕಮೃತ್ಪಿಂಡಾರಬ್ಧಾಃ ಘಟಶರಾವಾದಯಃ ತದನತಿರಿಕ್ತದ್ರವ್ಯತಯಾ ತದ್ಜ್ಞಾನೇನ ಜ್ಞಾಯಂತೇ ತಥಾ ಶಿವೋಪಾದನಕಂ ಜಗತ್ ಶಿವಜ್ಞಾನೇನ ಜ್ಞಾಯತ ಇತ್ಯಾರಂಭಣಶ್ರುತೇರಾಶಯಃ. ಅತ್ರ ಕಾಣಾದಾದಿಮತೇನ ಕಾರಣಾತ್ಕಾರ್ಯಸ್ಯ ದ್ರವ್ಯಾಂತರತ್ವಮಾಶಂಕ್ಯ ಲೋಕವ್ಯವಹಾರೇಣೈವ ಕಾರ್ಯಕಾರಣಯೋರನನ್ಯತ್ವಂ ದರ್ಶಯತಿ ವಾಚಾರಂಭಣಮಿತ್ಯಾದಿನಾ. ಆರಭ್ಯತೇ ಆಲಭ್ಯತೇ ಸ್ಪೃಶ್ಯತ ಇತ್ಯಾರಂಭಣಂ ಕೃತ್ಯಲ್ಯುಟೋ ಬಹುಲಂ' ಇತಿ ಕರ್ಮಣಿ ಲ್ಯುಟ್. ವಾಚಾ ವಾಕ್ಪೂರ್ವಕೇಣ ವ್ಯವಹಾರೇಣ ಹೇತುನೇತ್ಯರ್ಥಃ. ಘಟೇನೋದಕಮಾಹರೇತ್ಯಾದಿವಾಕ್ಪೂರ್ವಕೋದಾಹರಣಾದಿವ್ಯವಹಾರಃ. ತದ್ವ್ಯವಹಾರಸಿದ್ಧ್ಯರ್ಥಂ ತನ್ಮೃದ್ದ್ರವ್ಯೇಣ ಪೃಥುಬುಧ್ನೋದರಾದಿಲಕ್ಷಣೋ ವಿಕಾರಃ ಸಂಸ್ಥಾನವಿಶೇಷಃ, ತತ್ರ ಯುಕ್ತಂ ಚ ಘಟ ಇತ್ಯಾದಿನಾಮಧೇಯಂ ಸ್ಪೃಶ್ಯತೇ. ಜಲಾಹರಣಾ

ದಿವ್ಯವಹಾರವಿಶೇಷಸಿದ್ಧ್ಯರ್ಥಂ ಮೃದ್ದ್ರವ್ಯಮೇವಾವಸ್ಥಾಂತರಸಂಜ್ಞಾಂ ಪ್ರಾಪ್ನೋತಿ. ತಸ್ಮಾದ್ಘಟಾದ್ಯಪಿ ಮೃತ್ತಿಕಾದ್ರವ್ಯಮೇವ ಸತ್ಯಮಿತ್ಯುಪದಿಶ್ಯತೇ. 'ಮೃತ್ತಿಕೇತ್ಯೇವ ಸತ್ಯ'ಮಿತ್ಯತ್ರ ಕಾರ್ಯಕಾರಣಯೋರನನ್ಯತ್ವಂ. ರಜ್ಜುಸರ್ಪವತ್ಕಾರ್ಯಸ್ಯ ಮಿಥ್ಯಾತ್ವಮಿತಿ ಯತ್ತದಸತ್. ತಯೋಃ ಕಾರ್ಯಕಾರಣಯೋರನನ್ಯತ್ವಂ ಸಿದ್ಧ್ಯತಿ ಸತ್ಯಮಿಥ್ಯಾಪದಾರ್ಥಯೋರೈಕ್ಯತ್ವಾನುಪಪತ್ತೇಃ. ತಥಾ ಸತಿ ಬ್ರಹ್ಮಣಃ ಮಿಥ್ಯಾತ್ವಂ ಜಗತಸ್ಸತ್ಯತ್ವಂ ವಾ ಸ್ಯಾತ್. ಯೇ ಚ ಕಾರ್ಯಮಪಿ ಪಾರಮಾರ್ಥಿಕಮಭ್ಯುಪಯಂತ ಏವ ಜೀವಬ್ರಹ್ಮಣೋರೌಪಾಧಿಕಮನ್ಯತ್ವಂ ಸ್ವಾಭಾವಿಕಚಾನನ್ಯತ್ವಂ, ಅಚಿದ್ಬ್ರಹ್ಮಣೋಸ್ತು ದ್ವಯಮಪಿ ಸ್ವಾಭಾವಿಕಮಿತಿ ವದಂತಿ. ತೇಷಾಮುಪಾಧೇರ್ಬ್ರಹ್ಮವ್ಯತಿರಿಕ್ತವಸ್ತ್ವಂತರಾಭಾವಾನ್ನಿರವಯವಸ್ಯ ಪರಿಪೂರ್ಣಸ್ಯ ಪರಮಶಿವಸ್ಯೈವೋಪಾಧಿಸಂಬಂಧಾದ್ಬ್ರಹ್ಮಸ್ವರೂಪಸ್ಯೈವ ಹೇಯಾಕಾರಪರಿಣಾಮತ್ವಂ ಸ್ಯಾತ್. ಜೀವಾಶ್ರಯಾವಿದ್ಯಾಯಾಸ್ತತ್ತ್ವಜ್ಞಾನೇನ ನಾಶೇ ಸತಿ ಜೀವೋ ನಶ್ಯೇದ್ವಾ ನವಾ? ಯದಿ ನಶ್ಯೇತ್ಸ್ವರೂಪೋಚ್ಛೇದಲಕ್ಷಣೋ ಮೋಕ್ಷಸ್ಸ್ಯಾತ್. ನೋ ಚೇದವಿದ್ಯಾನಾಶೇಽಸ್ಯ ನಿರ್ಮೋಕ್ಷಪ್ರಸಂಗಃ, ಬ್ರಹ್ಮಸ್ವರೂಪವ್ಯತಿರಿಕ್ತಜೀವತ್ವಾವಸ್ಥಾನಾತ್. ಅತೋಽವಿದ್ಯಾಭ್ರಾಂತಿರ್ಬ್ರಹ್ಮಣೋ ವಾ ತದನ್ಯಸ್ಯ ವಾ? ನಾದ್ಯಃ, ತಮಃಪ್ರಕಾಶವತ್ಪರಸ್ಪರವಿರುದ್ಧತ್ವಾತ್, ಅಜ್ಞಸ್ಯ ಬ್ರಹ್ಮತ್ವಾಭಾವಾಚ್ಚ. ನ ದ್ವಿತೀಯಃ, ಚೈತನ್ಯಾಂತರಾಯೋಗಾತ್. ಚೈತನ್ಯದ್ವಿತೀಯಾಂಗೀಕಾರೇ ಸ್ವಶಾಸ್ತ್ರವಿರೋಧಾತ್. ಅತಃ ಯಥೋರ್ಣನಾಭಿರ್ಜಂತುಸ್ಸ್ವಕಾರ್ಯಂ ತಂತುಚಕ್ರಂ ಕಾರಣಾವಸ್ಥಾಯಾಂ ನಾಮರೂಪವಿಭಾಗಾನರ್ಹಸೂಕ್ಷ್ಮರೂಪೇಣ ಸ್ವಸ್ಮಿನ್ನಿಧಾಯ ಕಾರ್ಯಾವಸ್ಥಾಯಾಂ ನಾಮರೂಪವಿಭಾಗಾರ್ಹಸ್ಥೂಲರೂಪೇಣ ಪ್ರಕಟೀಕರೋತಿ ತಥಾ ಪರಮೇಶ್ವರಶ್ಚಿದಚಿದಾತ್ಮಕಂ ಪ್ರಪಂಚಂ ಪ್ರಳಯಾವಸ್ಥಾಯಾಂ ಸೂಕ್ಷ್ಮರೂಪೇಣ ಸ್ವಸ್ಮಿನ್ ಸಂಸ್ಥಾಪ್ಯ ಸೃಷ್ಟಿಕಾಲೇ ಸ್ಥೂಲಾತ್ಮಕತ್ವೇನ ಪ್ರಕಾಶಯತಿ. ಅತಃ ಕಾರ್ಯಕಾರಣಯೋರನನ್ಯತ್ವಂ ಸಿದ್ಧಂ.

"ಜೀವೇಶ್ವರರು ಅಜರು" ಎಂಬಲ್ಲಿ ಜೀವೇಶ್ವರರನ್ನು ಅಜನ್ಯರೆಂದು ಹೇಳಿದ್ದರಿಂದ ಅವರು ಮಿಥ್ಯೆಯಲ್ಲದಿದ್ದರೂ, ಜಗತ್ತನ್ನು ಸತ್ಯವೆಂದು ತಿಳಿಸುವ ಶ್ರುತಿ ಇಲ್ಲದ್ದರಿಂದಲೂ, ವಾಚಾರಂಭಣಶ್ರುತಿಯಲ್ಲಿ ಜಗತ್ತು ಮಿಥ್ಯೆ ಎಂದು ತಿಳಿದುಬರುವುದರಿಂದಲೂ ಅದೇ ಯುಕ್ತವೆಂದಾಶಂಕಿಸಿ ನಿರಾಕರಿಸುತ್ತಾನೆ.

**ಆರಂಭಣಾಧಿಕರಣಂ ॥ ತದನನ್ಯತ್ವಮಾರಂಭಣಶಬ್ದಾದಿಭ್ಯಃ ॥ ೧೪ ॥**

"ಶಕ್ತಿಗೂ ಶಕ್ತನಿಗೂ ಅಭೇದವಿದೆ" ಎಂಬ ನ್ಯಾಯದಂತೆ ಶಿವಶಕ್ತಿಯರಿಗೆ ಸಾಮರಸ್ಯವಿರುವುದರಿಂದ ಅವರ ಒಂದಂಶವಾದ ಪ್ರಪಂಚವು ಶಕ್ತನಾದ ಪರಶಿವನಿಗೆ

ಬೇರೆ ಎನಿಸಲಾರದು. ಆದ್ದರಿಂದ ಮಣ್ಣು ಮತ್ತು ಗಡಿಗೆಯಂತೆ ಕಾರ್ಯಕಾರಣಗಳಿಗೆ ಅಭೇದವನ್ನು ಅಂಗೀಕರಿಸಬೇಕು. "ಎಲ್ಲವೂ ರುದ್ರನೇ". "ಎಲ್ಲವನ್ನು ಬ್ರಹ್ಮವೆಂದು ತಿಳಿಯುವುದು". "ಮಣ್ಣಿನ ವಿಕಾರಗಳೆಲ್ಲವೂ ವಾಗ್ವ್ಯವಹಾರಗಳೆನಿಸಿದ್ದರೂ ಮಣ್ಣಿನಂತೆಯೇ ಸತ್ಯವೆನಿಸಿವೆ". ಈ ಬಗೆಯ ಶ್ರುತಿಗಳಲ್ಲಿ ಶಿವಶಕ್ತಿಯರೇ ಉಪಾದಾನವಾಗಿರುವ ಈ ಪ್ರಪಂಚವನ್ನು ಶಿವರೂಪವೆಂದು ಹೇಳಿದೆ. ಇದರಿಂದ ರಜ್ಜುಸರ್ಪದಂತೆ ಪ್ರಪಂಚವು ಬ್ರಹ್ಮದಲ್ಲಿ ಅಧ್ಯಸ್ತವಾದ್ದರಿಂದ ಸುಳ್ಳು ಎಂದು ಹೇಳುವ ಅದ್ವೈತ ಮತವೂ, ಘಟಪಟಗಳಂತೆ ಜಗತ್ತಿಗೂ ಬ್ರಹ್ಮಕ್ಕೂ ಭೇದವನ್ನು ಹೇಳುವ ದ್ವೈತ ಮತವೂ, ಶರೀರಶರೀರಿಗಳಂತೆ ಸಂಯುಕ್ತಭೇದವನ್ನು ಒಪ್ಪುವ ವಿಶಿಷ್ಟಾದ್ವೈತ ಮತವೂ ನಿರಾಕೃತವಾದುವು. "ಪರಮಾತ್ಮನು ಪಂಚಭೂತಗಳ ರೂಪದಿಂದ ವಿಶ್ವವನ್ನಾವರಿಸಿ ವಿಶ್ವಕ್ಕಾಶ್ರಯನಾಗಿರುವನು" ಈ ಬಗೆಯ ಶ್ರುತಿಗಳಲ್ಲಿ ಅವನು ಮೂರ್ತನೂ ಅಮೂರ್ತನೂ ಆಗಿ ಜಗದ್ವಿಲಕ್ಷಣನಾಗಿರುವನೆಂದೂ, 'ಇದೆಲ್ಲವೂ ಬ್ರಹ್ಮವೇ' ಎಂಬಲ್ಲಿ ಅವನೇ ಜಗದ್ರೂಪನೆಂದೂ ತಿಳಿದುಬರುತ್ತದೆ. ಶಿವಶಕ್ತಿಗಳಿಗೆ ಸಾಮರಸ್ಯವಿರುವಾಗ ಶಿವನೊಬ್ಬನೇ ಕಾರಣವೂ ಕಾರ್ಯವೂ ಆಗಿರುವುದರಿಂದ ಶಿವನಿಗೂ ಪ್ರಪಂಚಕ್ಕೂ ಅಭೇದವು ಯುಕ್ತವೇ ಅಲ್ಲವೇ? ಎಂದು ಸಂದೇಹ ಬರುತ್ತದೆ. 'ಜ್ಞಾಜ್ಞೌ'ಎಂಬಲ್ಲಿ ಜೀವೇಶ್ವರರು ಪರಸ್ಪರ ವಿಲಕ್ಷಣರೆಂದೂ, "ಆತ್ಮನಿಂದ ಆಕಾಶ ಹುಟ್ಟಿತು" ಎಂಬಲ್ಲಿ ಜಗತ್ತು ಮತ್ತು ಬ್ರಹ್ಮಗಳು ಕಾರ್ಯಕಾರಣವಾದ್ದರಿಂದ ಪರಸ್ಪರ ಭಿನ್ನರೆಂದೂ ಹೇಳಿದೆಯಾದ್ದರಿಂದ ಸತ್ಯಜ್ಞಾನಾನಂದನೆನಿಸಿದ ಬ್ರಹ್ಮಕ್ಕೂ, ಅನೃತವೂ ಜಡವೂ ದುಃಖಮಯವೂ ಆದ ಪ್ರಪಂಚಕ್ಕೂ ಅಭೇದ ಹೇಗೆ ಹೊಂದುತ್ತದೆ? ಜೇನುಸೊಣದಿಂದ ಕ್ರಿಮಿಗಳು ಹುಟ್ಟುವುದಾಗಿ ಕಂಡುಬಂದಿರುವುದರಿಂದ ಕಾರ್ಯಕಾರಣಗಳಿಗೆ ಅಭೇದ ಹೊಂದಲಾರದು. ತಂತುವಿನಿಂದ ಪಟವು ಹುಟ್ಟಿದರೂ ಅವೆರಡಕ್ಕೂ ಅರ್ಥಕ್ರಿಯೆಗಳಲ್ಲಿ ಭೇದವಿರುವುದು ಯುಕ್ತವೇ ಆಗಿದೆ. ಕಾರ್ಯಕಾರಣಗಳೆರಡೂ ಒಂದೇ ಆಗುವುದಾದರೆ, ಜಗತ್ತು ಬಹ್ಮಗಳೆರಡೂ ಒಂದೇ ಆಗುವುದರಿಂದ ಇಹಪರ ಸುಖದುಃಖಗಳನ್ನು ಅನುಭವಿಸುವ ವ್ಯವಹಾರವೇ ನಿಂತುಹೋಗಬೇಕಾದೀತು. ಆದ್ದರಿಂದ ಜಗದ್ಬ್ರಹ್ಮಗಳಿಗೆ ಅಭೇದ ಯುಕ್ತವಲ್ಲವೆಂದು ಆಕ್ಷೇಪಬರುತ್ತದೆ. "ನೀನು ನಿಶ್ಚಿಂತನಾಗಿದ್ದೀಯೆ. ಯಾವ ವಸ್ತುವನ್ನು ತಿಳಿದರೆ ಎಲ್ಲವೂ ತಿಳಿದಂತಾಗುವುದೋ ಅಂತಹ ವಸ್ತುವನ್ನು ನೀನು ತಿಳಿದಿರುವೆಯೋ" ಎಂಬಲ್ಲಿ ಸಮಸ್ತ ಪ್ರಪಂಚಕ್ಕೂ ಪರಶಿವನೊಬ್ಬನೇ ಕಾರಣನಾದ್ದರಿಂದ ಕಾರ್ಯವಾದ ಪ್ರಪಂಚವೂ ಅವನಿಂದ ಬೇರೆಯಲ್ಲವೆಂದು ಭಾವಿಸಿ ಕಾರಣನಾದ ಪರಶಿವನನ್ನು ತಿಳಿದರೆ ಕಾರ್ಯವಾದ ಪ್ರಪಂಚವೆಲ್ಲವೂ ತಿಳಿಯುವುದೆಂದು ಪ್ರತಿಜ್ಞೆಮಾಡಲಾಗಿದೆ. ಆದರೂ, ಹೀಗೆ ಸಕಲ ಪ್ರಪಂಚಕ್ಕೂ ಶಿವನೊಬ್ಬನೇ ಕಾರಣನೆಂಬುದನ್ನು ತಿಳಿಯದ ಶಿಷ್ಯನು 'ಸ್ವಾಮಿ, ಸರ್ವನಿಯಾಮಕನು ಹೇಗೆ ಇದ್ದಾನೆ" ಎಂದು ಕೇಳಲಾಗಿ "ಅವನ ಜ್ಞಾನದಿಂದಲೇ ಎಲ್ಲವೂ ತಿಳಿಯುವುದೆ"ಂದು ಗುರುವು ಉತ್ತರಿಸುತ್ತಾನೆ. ಪ್ರಪಂಚಕ್ಕೆ ಪರಮಾತ್ಮ

ನೊಬ್ಬನೇ ಕಾರಣನೆಂಬುದನ್ನು ಕಂಡ ಗುರುವು "ಕಾರಣದಿಂದ ಕಾರ್ಯವು ಬೇರೆಯಲ್ಲ ವೆಂಬುದು ಲೋಕಾನುಭವದಿಂದಲೇ ಸಿದ್ಧಿಸುವುದೆ"ಂದು ತಿಳಿಸುತ್ತಾನೆ. ಒಂದು ಮಣ್ಣು ಮುದ್ದೆಯಿಂದ ಮಣ್ಣಿನ ಎಲ್ಲಾ ವಿಕಾರಗಳನ್ನೂ ಮಣ್ಣೆಂದೇ ಹೇಗೆ ತಿಳಿಯ ಬಹುದೋ, ಒಂದೇ ಮಣ್ಣೆಂಬುದನ್ನು ತಿಳಿದರೆ ಅವರಿಂದಾಗಿರುವ ಪಾತ್ರೆಗಳೆಲ್ಲವೂ ಹೇಗೆ ಅದರಿಂದ ಬೇರೆಯಾಗುವುದಿಲ್ಲವೋ ಹಾಗೆ ಶಿವನಿಂದಾಗಿರುವ ಜಗತ್ತೆಲ್ಲವೂ ಶಿವನನ್ನು ತಿಳಿದರೆ ಶಿವಮಯವೆಂದೇ ತಿಳಿದುಬರುತ್ತದೆ. ಇಂತಹ ಲೋಕದೃಷ್ಟಾಂತ ದಿಂದ ಕಾರ್ಯಕಾರಣಗಳಿಗೆ ಶ್ರುತಿ ಅಭೇದವನ್ನು ಬೋಧಿಸುತ್ತದೆ. ಇಲ್ಲಿ ವೈಶೇಷಿಕ ದರ್ಶನದಂತೆ ಕಾರ್ಯವನ್ನು ಕಾರಣದಿಂದ ಬೇರೆ ಎಂದಾಶಂಕಿಸಿ ಸೂತ್ರಕಾರನು ಲೋಕವ್ಯವಹಾರದಿಂದಲೇ ಕಾರ್ಯಕಾರಣಗಳಿಗೆ ಅಭೇದವನ್ನು ತೋರಿಸುತ್ತಾನೆ. ಸೂತ್ರದಲ್ಲಿ ಬಂದಿರುವ ವಾಚಾರಂಭಣ ಎಂಬುದಕ್ಕೆ ವಾಗ್ವ್ಯವಹಾರವೆಂದರ್ಥ. 'ಗಡಿಗೆಯಿಂದ ನೀರನ್ನು ತೆಗೆದುಕೊಂಡುಬಾ' ಎಂಬ ಮಾತಿನಂತೆ ನೀರು ತರುವುದೇ ಮೊದಲಾದ ವ್ಯವಹಾರವು ಸಿದ್ಧಿಸಲಿಕ್ಕಾಗಿ ಮಣ್ಣಿನಿಂದ ಗಡಿಗೆ ಮೊದಲಾದ ಪಾತ್ರೆ ಗಳು ಹುಟ್ಟಿ ಅವಕ್ಕೆ ಆಯಾ ಹೆಸರುಗಳು ಬಂದಿವೆ. ವ್ಯವಹಾರಸೌಕರ್ಯಕ್ಕಾಗಿ ಮಣ್ಣೇ ಆ ಬಗೆಯ ಅವಸ್ಥೆಯಿಂದ ಆ ಸಂಜ್ಞೆಯನ್ನು ತಾಳಿದೆ. ಹೀಗೆ ಗಡಿಗೆ ಮೊದಲಾದವೆಲ್ಲವೂ ಮಣ್ಣಾದ್ದರಿಂದಲೇ ಸತ್ಯವೆಂದು ಶ್ರುತಿಯು ಕಾರ್ಯಕಾರಣಗಳ ಅಭೇದವನ್ನು ಬೋಧಿಸಿದೆಯಾದ್ದರಿಂದ ರಜ್ಜುಸರ್ಪದಂತೆ ಕಾರ್ಯಪ್ರಪಂಚವನ್ನು ಸುಳ್ಳೆಂದು ಹೇಳುವುದು ಯುಕ್ತವಲ್ಲ; ಸತ್ಯವೂ ಮಿಥ್ಯೆಯೂ ಆದ ಪದಾರ್ಥಗಳೆರ ಡಕ್ಕೂ ಐಕ್ಯಹೊಂದುವುದಿಲ್ಲವಾದ್ದರಿಂದ ಕಾರ್ಯಕಾರಣಗಳಿಗೆ ಅಭೇದ ಸಿದ್ಧಿಸುತ್ತದೆ. ಹಾಗೆ ಅವು ಬೇರೆಯಾಗುವುದಾದರೆ, ಬ್ರಹ್ಮ ಮಿಥ್ಯೆಯೂ ಜಗತ್ತು ಸತ್ಯವೂ ಆಗಬೇಕಾ ದೀತು. ಇಲ್ಲಿ ಕೆಲವರು "ಕಾರ್ಯವಾದ ಜಗತ್ತನ್ನು ಸತ್ಯವೆಂದು ಒಪ್ಪಿ ಜೀವಬ್ರಹ್ಮರಿಗೆ ಭೇದವನ್ನು ಔಪಾಧಿಕವೆಂದೂ, ಅಭೇದವನ್ನು ಸ್ವಾಭಾವಿಕವೆಂದೂ, ಪ್ರಪಂಚಬ್ರಹ್ಮ ರಿಗೆ ಎರಡೂ ಸ್ವಾಭಾವಿಕವೆಂದೂ ಹೇಳುತ್ತಾರೆ. ಅವರ ಮತದಲ್ಲಿ ಉಪಾಧಿ ಮತ್ತು ಬ್ರಹ್ಮ ಇವೆರಡಕ್ಕಿಂತ ಬೇರೆ ವಸ್ತುವಿಲ್ಲದ್ದರಿಂದಲೂ ನಿರವಯವನೂ ಪರಿಪೂರ್ಣನೂ ಆದ ಪರಶಿವನಿಗೇ ಉಪಾಧಿಸಂಬಂಧವನ್ನು ಒಪ್ಪಬೇಕಾಗಿರುವುದರಿಂದಲೂ ಬ್ರಹ್ಮ ಸ್ವರೂಪವೇ ಹೇಯವಾದ ಜಗದಾಕಾರದಿಂದ ಪರಿಣಮಿಸಬೇಕಾಗುತ್ತದೆ. ಜೀವನ ನ್ನಾಶ್ರಯಿಸಿದ ಅವಿದ್ಯೆಯು ತತ್ತ್ವಜ್ಞಾನದಿಂದ ನಾಶವಾದಾಗ ಜೀವನು ನಾಶವಾಗು ತ್ತಾನೆಯೇ ಇಲ್ಲವೇ? ಎಂಬ ಸಂಶಯ ಬರುತ್ತದೆ. ಅವನು ನಾಶವಾಗುವುದಾದರೆ ಸ್ವರೂಪನಾಶವೇ ಮೋಕ್ಷವೆನಿಸಬೇಕಾಗುತ್ತದೆ. ಇಲ್ಲವೆಂದರೆ, ಅವಿದ್ಯೆ ಕಳೆದರೂ ಜೀವನಿಗೆ ಮೋಕ್ಷವೇ ಆಗದೆಹೋಗಬೇಕಾದೀತು. ಏಕೆಂದರೆ, ಬ್ರಹ್ಮಸ್ವರೂಪಕ್ಕಿಂ ತಲೂ ಬೇರೆಯಾಗಿಯೇ ಜೀವನು ಉಳಿಯಬೇಕಾಗುವುದು. ಈ ಅವಿದ್ಯೆಯ ಭ್ರಾಂತಿ ಯಾದರೂ ಬ್ರಹ್ಮಕ್ಕೋ? ಅಥವಾ ಬೇರೆ ವಸ್ತುವಿಗೋ? ಎಂಬಲ್ಲಿ ಬ್ರಹ್ಮಕ್ಕೆಂದೇ ಹೇಳಿದರೆ, ಕತ್ತಲೆ ಬೆಳಕುಗಳಂತೆ ಬ್ರಹ್ಮಕ್ಕೆ ಅದು ಹೊಂದುವುದಿಲ್ಲ. ಅದರಿಂದ

ಬ್ರಹ್ಮವು ಅಜ್ಞನೆನಿಸಿ ಬ್ರಹ್ಮವೇ ಆಗಲಾರದು. ಬ್ರಹ್ಮಕ್ಕಿಂತ ಬೇರೊಂದು ವಸ್ತುವೇ ಇಲ್ಲದ್ದರಿಂದ ಎರಡನೆ ಪಕ್ಷವೂ ಸರಿಯಲ್ಲ. ಬೇರೊಂದು ವಸ್ತುವನ್ನು ಒಪ್ಪಿದರೆ ಅದ್ವೈತ ಸಿದ್ಧಾಂತಕ್ಕೇ ವಿರೋಧಬರುವುದು. ಆದ್ದರಿಂದ ಜೇಡರಹುಳದಂತೆ ಶಿವನು ಪ್ರಪಂಚವನ್ನು ಪ್ರಳಯಾವಸ್ಥೆಯಲ್ಲಿ ಸೂಕ್ಷ್ಮರೂಪದಿಂದ ತನ್ನಲ್ಲಿ ಇಟ್ಟುಕೊಂಡು ಸೃಷ್ಟಿಕಾಲದಲ್ಲಿ ಸ್ಥೂಲರೂಪದಿಂದ ಹೊರಗೆಡಹುತ್ತಾನೆಂಬುದೇ ಯುಕ್ತವಾದ್ದರಿಂದ ಕಾರಣಕ್ಕಿಂತಲೂ ಕಾರ್ಯವು ಬೇರೆಯಲ್ಲವೆಂದು ಸಿದ್ಧವಾಗುತ್ತದೆ.

**ಘಟಪಟವತ್ಕಾರ್ಯಕಾರಣಯೋರರ್ಥಸಿದ್ಧಿಕ್ರಿಯಾಸಿದ್ಧಿಭೇದಾಪನನ್ಯತ್ವಂ ನೋಪಪದ್ಯತೇ. ಅತಃ ಪ್ರಪಂಚಸ್ಯ ಬ್ರಹ್ಮಣ್ಯಧ್ಯಸ್ತತ್ವಮಂಗೀಕೃತ್ಯಾಧಿಷ್ಠಾನಾಧ್ಯಸ್ತಯೋರನನ್ಯತ್ವಮಂಗೀಕರ್ತವ್ಯಮಿತಾಶಂಕಾಯಾಮಾಹ—ಭಾವೇ ಚೋಪಲಬ್ಧೇಃ ॥ ೧೫ ॥**

**ಭಾವಪದಂ ಕಾರಣಸತ್ತಾವಾಚಕಂ. ಉಪಲಬ್ಧಿಪದಂ, ಕಾರ್ಯಸತ್ತಾವಾಚಕಂ. ಚಕಾರಪದಂ ತದುಭಯುಸಾಮರಸ್ಯಸತ್ತಾಬೋಧಕಮುಪದಿಷ್ಟಂ. “ಸನ್ಮೂಲಾಸ್ಸೌಮ್ಯೇಮಾಃ ಸರ್ವಾಃ ಪ್ರಜಾಸ್ಸದಾಯತನಾಸ್ಸತ್ಪ್ರತಿಷ್ಠಿತಾಃ”, “ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ” ಇತ್ಯಾದೌ ಜಗತಃ ಬ್ರಹ್ಮಾಧೀನಸೃಷ್ಟಿಸ್ಥಿತಿಲಯಾವಿರ್ಭಾವಾನುಗ್ರಹಾತ್ಮಕತ್ವದರ್ಶನಾತ್ ನಾಧ್ಯಾಸೋಪಪತ್ತಿಃ. ಐತದಾತ್ಮ್ಯಮಿತಿ ಬ್ರಹ್ಮಕಾರ್ಯಪ್ರಪಂಚಸ್ಯ ಬ್ರಹ್ಮಾತ್ಮಕತ್ವಸ್ಯ, ಜೀವಾನಾಮಪಿ ಸತ್ಯಬ್ರಹ್ಮಪ್ರಾಪ್ಯತ್ವಸ್ಯ ಚ ದರ್ಶನಾತ್. ಕಿಂಚ ಲೋಕೇ ಘಟಾದಿಕಾರ್ಯಸದ್ಭಾವೇ ಚ ಕಾರಣಭೂತಮೃತ್ಪಿಂಡೋಪಲಬ್ಧೇಃ “ಅಯಂ ಘಟಃ ಮೃದೇವ” ಇತಿ ಮೃದಾತ್ಮಕತ್ವೇನ ಪ್ರತ್ಯಕ್ಷಜ್ಞಾನಾಚ್ಚ ಕಾರ್ಯಕಾರಣಯೋರನನ್ಯತ್ವಂ ಯುಕ್ತಂ.**

ಘಟಪಟಗಳಂತೆ ಕಾರ್ಯಕಾರಣಗಳಿಗೆ ಅರ್ಥಕ್ರಿಯಾಸಿದ್ಧಿಗಳಲ್ಲಿ ಭೇದವಿರುವುದರಿಂದ ಐಕ್ಯವೆಂಬುದು ಹೊಂದುವುದಿಲ್ಲ. ಪ್ರಪಂಚವೆಲ್ಲವೂ ಬ್ರಹ್ಮದಲ್ಲಿ ಅಧ್ಯಸ್ತವಾಗಿದೆ ಎಂದು ಒಪ್ಪಿಕೊಂಡು ಆ ಮೂಲಕ ಬ್ರಹ್ಮಪ್ರಪಂಚಗಳು ಬೇರೆಯಲ್ಲವೆಂದು ಏಕೆ ಒಪ್ಪಬಾರದು ಎಂದಾಶಂಕಿಸಿ ನಿರಾಕರಿಸುತ್ತಾನೆ—**ಭಾವೇ ಚೋಪಲಬ್ಧೇಃ ॥**

ಭಾವಪದವು ಕಾರಣದ ಸತ್ಯತೆಯನ್ನು ತಿಳಿಸುತ್ತದೆ. ಉಪಲಬ್ಧಿಪದವು ಕಾರ್ಯದ ಸತ್ಯತೆಯನ್ನು ತಿಳಿಸುತ್ತದೆ. ಚಕಾರವು ಅವೆರಡರ ಸಾಮರಸ್ಯವನ್ನು ತಿಳಿಸುತ್ತದೆ. “ಇದೆಲ್ಲವು ಅದೇಯೇ” ಮೊದಲಾದ ಶ್ರುತಿಗಳಲ್ಲಿ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರ ಆವಿರ್ಭಾವ ಅನುಗ್ರಹಗಳು ಬ್ರಹ್ಮಕ್ಕೆ ಅಧೀನವಾಗಿವೆ ಎಂದು ಕಂಡುಬರುವುದರಿಂದ ಬ್ರಹ್ಮದಲ್ಲಿ ಜಗತ್ತು ಅಧ್ಯಸ್ತವಾಗಿದೆ ಎಂಬುದು ಹೊಂದುವುದಿಲ್ಲ. ಬ್ರಹ್ಮನಿರ್ಮಿತವಾದ ಪ್ರಪಂಚವು ಬ್ರಹ್ಮಾತ್ಮಕವೆಂದೂ, ಜೀವರು ಸತ್ಯವಾದ ಬ್ರಹ್ಮದಲ್ಲಿಯೇ ಸೇರುವರೆಂದೂ ಶ್ರುತಿಯು ತಿಳಿಸುತ್ತಿದೆ. ಲೋಕದಲ್ಲಿಯೂ ಗಡಿಗೆ ಮೊದಲಾದ

ಕಾರ್ಯಗಳಿದ್ದರೆಯೇ ಕಾರಣವಾದ ಮಣ್ಣಿನ ಜ್ಞಾನವಾಗುತ್ತದೆ. ಗಡಿಗೆಯನ್ನು ನೋಡಿ "ಈ ಗಡಿಗೆಯೂ ಮಣ್ಣೇ "ಎಂಬ ಸ್ಮರಣ ಬರುವುದರಿಂದ ಕಾರ್ಯಕಾರಣಗಳು ಬೇರೆಯಲ್ಲವೆಂಬುದು ಯುಕ್ತವಾಗುತ್ತದೆ.

**ಜಗತ್ಸತ್ಯತ್ವೇ ಹೇತೂನ್ ದರ್ಶಯತಿ—ಸತ್ತ್ವಾಚ್ಚಾಪರಸ್ಯ ॥ ೧೬ ॥**

**"ಸದೇವ ಸೌಮ್ಯೇದಮಗ್ರ ಆಸೀತ್" ಇತ್ಯಾದಿಷು ಅಪರಸ್ಯ ಕಾರ್ಯಸ್ಯ ಚೇತನಾಚೇತನಾತ್ಮಕಪ್ರಪಂಚಸ್ಯ ಕಾರಣೇ ಪರಶಿವಬ್ರಹ್ಮಣಿ ಸತ್ತ್ವಾಚ್ಚ ಕಾರಣಾತ್ಕಾರ್ಯಸ್ಯಾನನ್ಯತ್ವಂ ಸಿದ್ಧ್ಯತಿ. ಲೋಕೇ ಸರ್ವಮಿದಂ ಘಟಶರಾವಾದಿಕಂ ಪೂರ್ವಾವಸ್ಥಾಯಾಂ ಮೃದಾತ್ಮಕಮೇವ ಭಾತಿ. ಅತೋ ಜಗತ್ಸತ್ಯತ್ವೇ ನ ವಿರೋಧಃ.**

ಜಗತ್ತು ಸತ್ಯವೆಂಬುದಕ್ಕೆ ಕಾರಣಗಳನ್ನು ಹೇಳುತ್ತಾನೆ—**ಸತ್ತ್ವಾಚ್ಚಾಪರಸ್ಯ ॥**

'ಇದೆಲ್ಲವೂ ಮೊದಲು ಸದ್ರೂಪವಾಗಿತ್ತು' ಮೊದಲಾದ ಶ್ರುತಿಗಳಲ್ಲಿ ಕಾರ್ಯ ರೂಪವಾದ ಈ ಪ್ರಪಂಚವೆಲ್ಲವೂ ಮೊದಲಿಗೆ ಕಾರಣನಾದ ಬ್ರಹ್ಮದಲ್ಲಿಯೇ ಇತ್ತೆಂದು ತಿಳಿದುಬರುವುದರಿಂದಲೂ, ಲೋಕದಲ್ಲಿ ಗಡಿಗೆ ಮೊದಲಾದವೆಲ್ಲವೂ ಮೊದಲಿಗೆ ಮಣ್ಣೇ ಆಗಿದ್ದುವು ಎಂಬ ಅನುಭವ ಎಲ್ಲರಿಗೂ ಇರುವುದರಿಂದಲೂ ಕಾರ್ಯಕಾರಣ ಗಳು ಬೇರೆಯೆನಿಸುವುದಿಲ್ಲ.

**ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್ ॥೧೭॥**

**ಅಸದ್ವ್ಯಪದೇಶಾತ್ "ಅಸದ್ವಾ ಇದಮಗ್ರ ಆಸೀತ್" ಇತಿ ಶ್ರುತೌ ಶಶಶೃಂಗವತ್ಸೃಷ್ಟೇಃ ಪೂರ್ವಂ ಪ್ರಪಂಚಸ್ಯಾಸತ್ತ್ವನಿರ್ದೇಶಾತ್, ವರ್ತಮಾನಕಾಲೇ ರಜ್ಜುಸರ್ಪವದ್ಬ್ರಹ್ಮಣ್ಯವಭಾಸಮಾನೋಽಪಿ ಸರ್ವದಾ ಚಿದಚಿದಾತ್ಮಕಪ್ರಪಂಚೋ ನಾಸ್ತೀತಿ ಚೇನ್ನ, ಧರ್ಮಾಂತರೇಣ ವಾಕ್ಯಶೇಷಾತ್. ಧರ್ಮಾಂತರೇಣ ಸೂಕ್ಷ್ಮತ್ವರೂಪಧರ್ಮಾಂತರವಿಶಿಷ್ಟತ್ವಮಾತ್ರೇಣಾಸತ್ತ್ವವ್ಯಪದೇಶಃ, ಕುತಃ ವಾಕ್ಯಶೇಷಾತ್. "ತತೋ ವೈ ಸದಜಾಯತ" ಇತ್ಯುತ್ತರವಾಕ್ಯೇ ಸೃಷ್ಟ್ಯನಂತರಸ್ಥೂಲಾವಸ್ಥಾಭಿಧಾನಾತ್ "ಅಸದ್ವಾ" ಇತ್ಯತ್ರ ಸೃಷ್ಟೇಃ ಪ್ರಾಗಿದಂ ಜಗದಸದಾಸೀತ್ ಸೂಕ್ಷ್ಮಾವಸ್ಥಾಪನ್ನಮಾಸೀತ್. "ತತೋ ವೈ ಸದಜಾಯತ" ಇತ್ಯತ್ರ ಸೃಷ್ಟ್ಯನಂತರಂ ಜಗತ್ ಸ್ಥೂಲಾವಸ್ಥಾವಿಶಿಷ್ಟಮಾಸೀದಿತಿ ಭಾವಃ. ಸ್ವರೂಪಾಪರಿತ್ಯಾಗಪೂರ್ವಕಪರಸ್ವರೂಪಭಾಕ್ತ್ವಂ ವಿವರ್ತತ್ವಮಿತಿ ನ್ಯಾಯೇನ ರಜ್ಜುಸರ್ಪವದ್ಬ್ರಹ್ಮಣಿ ಪ್ರಪಂಚಸ್ಯ ವಿವರ್ತೋಪಾದಾನತ್ವಂ ಪ್ರಸಾಧ್ಯ ಜಗನ್ಮಿಥ್ಯಾತ್ವಂ ಕಿಂ ನ ಯುಕ್ತಂ? "ಅಸದೇವೇದಮಗ್ರ ಆಸೀತ್". "ಇದಂ ವಾ ಅಗ್ರೇ ನೈವ ಕಿಂಚನಾಸೀತ್" ಇತಿ ಶ್ರುತಿಷು, ಲೋಕೇ ಚ ಘಟಶರಾವಾದಿಕಂ ಸರ್ವಂ ಪ್ರಾಙ್ಮೃದಿ ನಾಸೀದಿ ಜ್ಞಾಯತೇ ತಸ್ಮಾತ್ಪ್ರಪಂಚಸ್ಯ ಶಶಶೃಂಗವದಸತ್ತ್ವಂ ಯುಕ್ತಮಿತಿ ಚೇತ್ತನ್ನ. ಏಕಸ್ಯೈವ**

**ಶರೀರಸ್ಯ ಬಾಲತ್ವಯುವತ್ವಸ್ಥವಿರತ್ವವತ್ಪ್ರಪಂಚಸ್ಯ ಸೂಕ್ಷ್ಮತ್ವಸ್ಥೂಲತ್ವ ವ್ಯವಸ್ಥಾ ಕಾಲಭೇದೇನ ನಿರ್ದಿಷ್ಟಾ. ಅತೋಽಸಚ್ಛಬ್ದಸ್ಯ ಸೂಕ್ಷ್ಮಾತ್ಮಕತ್ವಂ ತದ್ಭಿನ್ನಸತ್ತ್ವಸ್ಯ ಸ್ಥೂಲಾತ್ಮಕತ್ವಮಿತಿ ನಿರ್ದಿಷ್ಟಂ. ತಸ್ಮಾತ್ಪ್ರಪಂಚಸ್ಯ ಸತ್ಯತ್ವಂ ಬ್ರಹ್ಮಾಭಿನ್ನತ್ವಂ ಚ ಸಮಂಜಸಂ.**

**ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್ ||**

ಶ್ರುತಿಯಲ್ಲಿ "ಇದೆಲ್ಲವೂ ಮೊದಲು ಅಸತ್ ಆಗಿತ್ತು" ಎಂದು ಮೊಲದ ಕೊಂಬಿನಂತೆ ಸೃಷ್ಟಿಗೆ ಮೊದಲು ಪ್ರಪಂಚವು ಇರಲಿಲ್ಲವೆಂದು ಹೇಳಿರುವುದರಿಂದ, ಈಗ ಹಗ್ಗದಲ್ಲಿ ಸರ್ಪದಂತೆ ಬ್ರಹ್ಮದಲ್ಲಿ ಪ್ರಪಂಚವು ತೋರಿದರೂ ಈ ಪ್ರಪಂಚವು ಯಾವಾಗಲೂ ಇರುವುದಿಲ್ಲವೆಂದರೆ ಇದು ಯುಕ್ತವಲ್ಲ. ಮೊದಲಿಗೆ ಪ್ರಪಂಚವು ಬಹಳ ಸೂಕ್ಷ್ಮವಾಗಿ ಇಂದ್ರಿಯಗಳಿಗೆ ಗೋಚರವಾಗದಂತೆ ಇದ್ದುದರಿಂದ ಶ್ರುತಿಯಲ್ಲಿ 'ಅಸತ್ ಆಗಿತ್ತು' ಎಂದು ಹೇಳಿದ್ದರೂ, ಮುಂದಿನ ವಾಕ್ಯಶೇಷದಲ್ಲಿ "ಅಸತ್‌ನಿಂದ ಸದ್ರೂಪ ಹುಟ್ಟಿತು " ಎಂದು ಹೇಳಿರುವುದರಿಂದ ಪ್ರಪಂಚವು ಆಗ ಇರಲಿಲ್ಲವೆಂಬುದು ಹೊಂದುವುದಿಲ್ಲ. ಆದರೆ, ಸೃಷ್ಟಿಗೆ ಮೊದಲು ಜಗತ್ತು ಅಸತ್ ಎಂದರೆ ಸೂಕ್ಷ್ಮಾವಸ್ಥೆಯಲ್ಲಿತ್ತು, ಸೃಷ್ಟಿಕಾಲದಲ್ಲಿ ಸತ್ ಅಂದರೆ ಸ್ಥೂಲಾವಸ್ಥೆಯನ್ನು ಹೊಂದಿತು ಎಂಬುದೇ ಶ್ರುತಿಯ ಅಭಿಪ್ರಾಯವಾಗಿದೆ. ತನ್ನ ಸ್ವರೂಪವನ್ನು ಬಿಡದೆ ಪರಸ್ವರೂಪವನ್ನು ಹೊಂದುವುದೇ ವಿವರ್ತವೆನಿಸುತ್ತದೆ. ಹೀಗೆ ರಜ್ಜುವಿನಲ್ಲಿ ಸರ್ಪದಂತೆ ಬ್ರಹ್ಮದಲ್ಲಿ ಈ ಪ್ರಪಂಚವು ತೋರುತ್ತದೆ ಎಂದು ಸಾಧಿಸಿ, ಸರ್ಪ ಸುಳ್ಳಾಗಿರುವಂತೆ ಜಗತ್ತನ್ನು ಸುಳ್ಳೆಂದು ಹೇಳುವುದೇ ಯುಕ್ತವಲ್ಲವೆ? ಶ್ರುತಿಯಲ್ಲೂ "ಇದೆಲ್ಲವೂ ಮೊದಲು ಅಸದ್ರೂಪವಾಗಿತ್ತು"ಎಂದು ಸ್ಪಷ್ಟವಾಗಿ ಹೇಳಿದೆ. ಗಡಿಗೆ ಮೊದಲಾದವೆಲ್ಲವೂ ಮೊದಲು ಮಣ್ಣಿನಲ್ಲಿ ಇರಲಿಲ್ಲವೆಂದು ಲೋಕವಲ್ಲಿ ಕಂಡುಬರುತ್ತದೆ. ಆದ್ದರಿಂದ ಪ್ರಪಂಚವು ಮೊಲದ ಕೊಂಬಿನಂತೆ ಅಸತ್ಯವೆಂಬುದೇ ಯುಕ್ತವಾಗುತ್ತದೆ ಎಂದು ಆಕ್ಷೇಪಬಂದರೆ ಸೂತ್ರವು ಹೀಗೆ ಸಮಾಧಾನವನ್ನು ತಿಳಿಸುತ್ತದೆ. ಒಂದೇ ಶರೀರವು ಬಾಲ್ಯಯೌವನ ಮುಪ್ಪುಗಳನ್ನು ಪಡೆಯುವಂತೆ ಒಂದೇ ಪ್ರಪಂಚವು ಕಾಲಭೇದದಿಂದ ಸೂಕ್ಷ್ಮಸ್ಥೂಲ ಅವಸ್ಥೆಗಳನ್ನು ಹೊಂದುವುದರಲ್ಲಿ ದೋಷವೇನು? ಆದ್ದರಿಂದ ಅಸತ್ಪದವು ಪ್ರಪಂಚದ ಸೂಕ್ಷ್ಮಾವಸ್ಥೆಯನ್ನೂ ಸತ್ಪದವು ಅದರ ಸ್ಥೂಲಾವಸ್ಥೆಯನ್ನೂ ತಿಳಿಸುವುದಾಗಿ ಒಪ್ಪಲೇಬೇಕು. ಹೀಗೆ ಪ್ರಪಂಚವು ಸತ್ಯವೆಂದೂ ಮತ್ತು ಬ್ರಹ್ಮಕ್ಕಿಂತಲೂ ಯಲ್ಲವೆಂದೂ ಹೇಳುವುದು ಸಮಂಜಸವಾಗುತ್ತದೆ.

**ಮಿಥ್ಯಾತ್ವನಿರಾಕರಣೇ ಹೇತುಮಾಹ--ಯುಕ್ತೇಃಶ್ಶಬ್ದಾಂತರಾಚ್ಚ ||೧೮||**

**ಯುಕ್ತೇರ್ಯಥಾ ಕೂರ್ಮಃ ಸ್ವಶಕ್ತ್ಯಾ ಸ್ವಪಾದಾದ್ಯವಯವಾನಿ ಸ್ವೇಚ್ಛಯಾ ಬಹಿರ್ಗತಾನಿ ಕೃತ್ವಾ ಪುನಸ್ಸ್ವಾತ್ಮನಿವೇಶನಂ ಕರೋತಿ ತಥಾ ಪರಮಶಿವಸ್ಸೃಷ್ಟಿಕಾಲೇ ನಾಮರೂಪವಿಭಾಗವತ್ತ್ವೇನ ಬಹಿಃಪ್ರಕಟೀಕೃತ್ಯ ಪ್ರಳಯೇ ಸ್ವಾತ್ಮನಿ ಸ್ವಭಿನ್ನತ್ವೇನ ಚಿದಚಿದಾತ್ಮಕಪ್ರಪಂಚಂ**

**ಗೋಪಯತೀತ್ಯಾದಿಯುಕ್ತೇಃ, ಶಬ್ದಾಂತರಾಚ್ಚ "ತದಸದೇವ ಸನ್ನ ಕುರುತ ಸ್ಯಾಮಿತಿ", "ಇದಂ ವಾಗ್ರೇ ನೈವ ಕಿಂಚಿದಾಸೀತ್" "ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ತನ್ನಾಮರೂಪಾಭ್ಯಾಂ ವ್ಯಾಕ್ರಿಯತ" ಇತ್ಯಾದಿಷ್ವಸಚ್ಛಬ್ದವ್ಯಾಕೃತಾದಿಶಬ್ದಾಚ್ಚ, ಪ್ರಳಯಾವಸ್ಥಾಯಾಂ ಪ್ರಪಂಚಸ್ಯ ಸಂಕುಚಿತತ್ವಂ ಸೃಷ್ಟಿಕಾಲೇ ವಿಕಾಸಕತ್ವಂ ಚ ಸ್ಪಷ್ಟಮುಪದಿಷ್ಟಂ.**

ಜಗತ್ತು ಸುಳ್ಳೆಂಬುದನ್ನು ನಿರಾಕರಿಸುತ್ತಾನೆ—**ಯುಕ್ತೇಃ ಶಬ್ದಾಂತರಾಚ್ಚ** ||೧೮||

ಜಗತ್ತು ಸತ್ಯವೆಂಬುದಕ್ಕೆ ಯುಕ್ತಿ ಇರುವುದರಿಂದಲೂ, ಶ್ರುತಿಯಲ್ಲಿ ಅದನ್ನು ಸತ್ಯವೆಂದು ಹೇಳಿರುವುದರಿಂದಲೂ ಅದು ಸುಳ್ಳಾಗಲಾರದು. ಆಮೆಯು ಸ್ವಶಕ್ತಿಯಿಂದಲೇ ತನ್ನ ಅವಯವಗಳನ್ನು ತನ್ನ ಇಚ್ಛೆಯಂತೆ ಹೊರಪಡಿಸಿ ಮತ್ತೆ ತನ್ನಲ್ಲಿಯೇ ಸೇರಿಸಿಕೊಳ್ಳುತ್ತದೆ. ಹಾಗೆಯೆ, ಪರಶಿವನು ಪ್ರಳಯಕಾಲದಲ್ಲಿ ಪ್ರಪಂಚಕ್ಕೆ ಸ್ಥಲವೆನಿಸಿಕೊಂಡು ತನ್ನಲ್ಲಿ ತನಗಿಂತ ಬೇರೆಯಾಗಿ ಇರಿಸಿಕೊಂಡಿದ್ದು ಸೃಷ್ಟಿಕಾಲದಲ್ಲಿ ನಾಮರೂಪಗಳ ವಿಭಾಗಮಾಡಿ ಹೊರಗೆಡಹುತ್ತಾನೆ. ಈ ಬಗೆಯ ಯುಕ್ತಿ ಸಮಂಜಸವಾಗಿದೆ. "ಅಸದ್ರೂಪವಾಗಿದ್ದುದನ್ನು ಅವನು ಸದ್ರೂಪಕ್ಕೆ ತಂದನು". "ವಿಭಾಗವಿಲ್ಲದ ಸ್ಥಿತಿಯಲ್ಲಿ ಇದ್ದುದನ್ನು ನಾಮರೂಪಗಳಿಂದ ವಿಸ್ತರಿಸಿದನು" ಎಂದು ಶ್ರುತಿಯಲ್ಲಿ ಸತ್-ವ್ಯಾಕೃತ ಮೊದಲಾದ ಶಬ್ದಗಳು ಬಂದಿರುವುದರಿಂದ ಪ್ರಳಯದಲ್ಲಿ ಪ್ರಪಂಚವು ಸಂಕುಚಿತಾಗಿದ್ದು ಸೃಷ್ಟಿಕಾಲದಲ್ಲಿ ವಿಸ್ತಾರವಾಯಿತೆಂದು ಸ್ಪಷ್ಟಪಡುತ್ತದೆ. ಇದರಿಂದ ಜಗತ್ತು ಸತ್ಯವೆಂದು ಸಾಧಿತವಾಯಿತು.

**ಏವಂ ಜಗತ್ಸತ್ಯತ್ವಂ ಪ್ರಸಾಧ್ಯೇದಾನೀಂ ಕಾರ್ಯಕಾರಣಯೋರನನ್ಯತ್ವೇ ನಿದರ್ಶನಂ ಸೂತ್ರದ್ವಯೇನ ದರ್ಶಯತಿ—ಪಟವಚ್ಚ || ೧೯ ||**

**ಯಥಾ ಪಟಸ್ಯ ಕದಾಚಿತ್ಸಂಕುಚಿತಾವಸ್ಥಾ ಕದಾಚಿದ್ವಿಕಾಸಾವಸ್ಥಾ ಚ ವಿಲಕ್ಷಣಪ್ರತೀತಿವಿಷಯತ್ವೇನ ದೃಶ್ಯತೇ, ತದ್ವತ್ಪರಮಶಿವಶಕ್ತಿಸಂಕುಚಿತಾವಸ್ಥಾ ಕಾರಣಂ ಶಕ್ತಿಪ್ರಸಾರಿತಾವಸ್ಥಾ ಕಾರ್ಯಂ. ಯಥಾ ಪಟಸ್ಯ ವೇಷ್ಟಿತಪ್ರಸಾರಿತಭೇದೇಽಪ್ಯಭೇದಃ ತಥಾ ಕಾರ್ಯಕಾರಣಯೋರ್ಮೃದ್ಘಟಾದಿವದಭೇದಃ. ನನು ಮೃದ್ಘಟಾದಿದೃಷ್ಟಾಂತೇ ಮೃದ್ಘಟೌ ಭಿನ್ನೌ, ವಿಲಕ್ಷಣಪ್ರತೀತಿವಿಷಯತ್ವಾತ್. ತಸ್ಮಾದ್ಘಟಪಟವತ್ತಸ್ಯ ಹೇತೋರ್ವ್ಯಭಿಚಾರ ಇತಿ ಚೇನ್ನ, ಮೃದ್ದ್ರವ್ಯಸ್ಯ ಪೃಥುಬುಧ್ನೋದರಾದ್ಯಾಕಾರೋ ಘಟ ಇತಿ ವ್ಯವಹಾರಹೇತುಃ. ತಸ್ಯೈವ ತತ್ಪ್ರತಿಯೋಗ್ಯವಸ್ಥಾಂತರಯೋಗೋ ಘಟಾಭಾವವ್ಯವಹಾರಹೇತುಃ. ತತ್ರ ಕಪಾಲದ್ವಯಾವಸ್ಥಾಯಾಃ ತತ್ಪ್ರತಿಯೋಗಿತ್ವೇನ ಸೈವ ಘಟಾವಸ್ಥಾ ಅಸ್ಯ ನಾಸ್ತೀತಿ ವ್ಯವಹಾರಹೇತುಃ. ನಚ ತದ್ವ್ಯತಿರಿಕ್ತೋ ಘಟಾಭಾವೋ ನಾಮ ಕಶ್ಚಿದುಪಲಭ್ಯತೇ, ನ ಚಾಪಿ ಕಲ್ಪ್ಯತೇ, ತಾವತೈವಾಭಾವಸ್ಯ ವ್ಯವಹಾರೋಪಪತ್ತೇಃ. ತಸ್ಮಾದ್ಯಥಾ ಮೃದಾತ್ಮನಾ**

**ಸತ್ತ್ವೇಽಪಿ ಮೃದೇಕಾಂಶೇನ ಘಟಶರಾವಾತ್ಮಕತ್ವೇನ ಪರಿಣಾಮೇಽಪಿ ಮೃದಾತ್ಮಕತ್ವಂ ನ ವಿರುಧ್ಯತೇ ತಥಾ ಶಿವಸ್ಯ ಸ್ವಶಕ್ತ್ಯೇಕಾಂಶತ್ವೇನ ಜಗದಾತ್ಮನಾ ಪರಿಣಾಮೇಽಪಿ ಜಗದನನ್ಯತ್ವಂ ನ ವಿರುಧ್ಯತೇ.**

ಕಾರ್ಯಕಾರಗಳು ಬೇರೆಯಲ್ಲವೆಂಬುದನ್ನು ಈಗ ತಿಳಿಸುತ್ತಾನೆ—**ಪಟವಚ್ಚ ||೧೯||**

ಡೇರೆಯ ಬಟ್ಟೆ ಕೆಲವು ವೇಳೆ ಸಂಕುಚಿತವಾಗುವುದನ್ನೂ, ಕೆಲವು ವೇಳೆ ವಿಸ್ತಾರವಾಗುವುದನ್ನು ನಾವು ಲೋಕದಲ್ಲಿ ಕಂಡಿದ್ದೇವೆ. ಹಾಗೆಯೇ ಪರಮಶಿವನ ಶಕ್ತಿಯ ಸಂಕೋಚವೇ ಜಗತ್ತಿನ ಕಾರಣಾವಸ್ಥೆ ಅಥವಾ ಪ್ರಳಯದ ಸೂಕ್ಷ್ಮಸ್ಥಿತಿ ಎನಿಸುತ್ತದೆ. ಶಕ್ತಿಯ ವೈಶಾಲ್ಯವೇ ಜಗತ್ತಿನ ಸೃಷ್ಟಿ ಅಥವಾ ಸ್ಥೂಲಾವಸ್ಥೆ ಎನಿಸುತ್ತದೆ. ಬಟ್ಟೆಗೆ ಸಂಕೋಚ ವಿಸ್ತಾರಗಳಿಂದ ಭೇದವಿದ್ದರೂ ಅಭೇದವಿರುವಂತೆ, ಕಾರ್ಯಕಾರಣಗಳಿಗೂ ಮಣ್ಣುಗಡಿಗೆಗಳಂತೆ ಅಭೇದವೇ ಇರುತ್ತದೆ. ಆದರೆ ಈ ದೃಷ್ಟಾಂತದಲ್ಲಿ ಮಣ್ಣು ಮತ್ತು ಗಡಿಗೆ ಇವು ಎರಡೂ ಬೇರೆಬೇರೆಯಾಗಿಯೇ ತೋರುವುದರಿಂದ ಈ ದೃಷ್ಟಾಂತ ಇಲ್ಲಿ ಹೊಂದುವುದಿಲ್ಲವಾದ್ದರಿಂದ ಘಟಪಟಗಳೆರಡಕ್ಕೂ ಹೇಗೆ ಅಭೇದ ಬರುವುದಿಲ್ಲವೋ ಹಾಗೆಯೇ ಕಾರ್ಯಕಾರಣಗಳಿಗೂ ಅಭೇದವು ಬರುವುದಿಲ್ಲವೆಂದು ಕೇಳಿದರೆ ಇದು ಯುಕ್ತವಲ್ಲ. ಮಣ್ಣೇ ಒಂದು ಬಗೆಯ ಆಕಾರವನ್ನು ತಾಳಿದಾಗ ಘಟವೆನಿಸುತ್ತದೆ. ಅದೇ ಅದಕ್ಕೆ ವಿರುದ್ಧವಾದ ಕಪಾಲಾವಸ್ಥೆಯನ್ನು ಹೊಂದಿದಾಗ ಘಟವಿಲ್ಲವೆಂಬ ವ್ಯವಹಾರವಿರುತ್ತದೆ. ಆದ್ದರಿಂದ ಈ ಕಪಾಲಾವಸ್ಥೆಗಿಂತ ಬೇರೆ ಘಟಾಭಾವವೆಂಬುದು ಕಂಡುಬರುವುದಿಲ್ಲ. ಇಷ್ಟರಿಂದಲೇ ವ್ಯವಹಾರವನ್ನು ನಿರ್ವಹಿಸಬಹುದಾದ್ದರಿಂದ ಅಭಾವವನ್ನು ಕಲ್ಪಿಸಬೇಕಾಗಿಯೇ ಇಲ್ಲ. ಆದ್ದರಿಂದ ಮಣ್ಣು ಹೇಗೆ ಮಣ್ಣಾಗಿಯೇ ಇದ್ದುಕೊಂಡು ಕೊಂಚಭಾಗದಲ್ಲಿ ಮಾತ್ರ ಗಡಿಗೆ ಮೊದಲಾದ ವಸ್ತುಗಳಾಗಿ ಪರಿಣಮಿಸುವುದರಿಂದ ಅವನ್ನೇ ಮಣ್ಣೆಂದು ಕರೆಯಲು ಏನೂ ಅಡ್ಡಿ ಇಲ್ಲ. ಹಾಗೆ ಪರಮೇಶ್ವರನು ತನ್ನ ಶಕ್ತಿಯ ಒಂದಂಶದಿಂದ ಜಗದ್ರೂಪನಾಗಿ ಪರಿಣಮಿಸಿದ್ದರೂ ಜಗತ್ತಿಗಿಂತ ಬೇರೆಯಲ್ಲವೆಂಬುದಕ್ಕೆ ಯಾವ ವಿರೋಧವೂ ಇಲ್ಲ.

ಪರಸ್ಪರವಿಲಕ್ಷಣಯೋಃ ಕಾರ್ಯಕಾರಣಯೋರಭೇದೇ ವ್ಯವಹಾರಾತಂಕಮಾಶಂಕ್ಯಾಹ—**ಯಥಾಚ ಪ್ರಾಣಾದಿಃ ||೨೦||**

**ಯಥಾ ವಾಯುರೇಕಃ ಪ್ರಾಣಾಪಾನಾದಿವೃತ್ತಿಭೇದೇನ ನಾಮರೂಪಾತ್ಮಕಕಾರ್ಯಭೇದಂ ಭಜತೇ, ತದ್ವತ್ಪರಮಶಿವ ಏವ ಸ್ವಶಕ್ತಿಮಹಿಮ್ನಾ ಚಿದಚಿದಾತ್ಮಕಪ್ರಪಂಚರೂಪೇಣ ಭಾಸಮಾನೋಽಪ್ಯನನ್ಯ ಏವ. ಕಿಂಚ ಯಥಾ ಶಿವಯೋಗೀ ಪರಮಶಿವಧ್ಯಾನಕಾಲೇ ಪ್ರಾಣಾಯಾಮಾದಿನಾ ಪ್ರಾಣಾಪಾನಾದಿವಾಯುಸಂಕೋಚನಂ ಕರೋತಿ, ವ್ಯವಹಾರಕಾಲೇ ಪ್ರಸಾರಣಾದಿಕಾರ್ಯಂ ಕರೋತಿ, ತದ್ವತ್ಪರಮೇಶ್ವರಸ್ಸೃಷ್ಟಿಕಾಲೇ ಜಗತ್ಪ್ರಸಾರಣಂ ಪ್ರಳಯಕಾಲೇ ತದಾಕುಂಚನಂ ಕರೋತಿ. ತಸ್ಮಾತ್ಪರಮಕಾರಣಪರಶಿವಾತ್ಕಾರ್ಯರೂಪಂ ಜಗದನನ್ಯಮಿತಿ ಸಿದ್ಧಂ.**

**ತದನನ್ಯತ್ವಾಚ್ಚೈಕವಿಜ್ಞಾನಾತ್ಸರ್ವವಿಜ್ಞಾನಪ್ರತಿಜ್ಞಾ ಸಿದ್ಧಾ ಭವತಿ.**

ಪರಸ್ಪರಭಿನ್ನವಾದ ಕಾರ್ಯಕಾರಣಗಳಿಗೆ ಅಭೇದವನ್ನು ಒಪ್ಪಿದರೆ ಲೋಕವ್ಯವಹಾರಗಳ ಅಡಚಣೆಯನ್ನಾಶಂಕಿಸಿ ನಿರಾಕರಿಸುತ್ತಾನೆ. **ಯಥಾ ಚ ಪ್ರಾಣಾದಿಃ ||**

ವಾಯು ಒಂದೇ ಆದರೂ ವೃತ್ತಿಭೇದದಿಂದ ಪ್ರಾಣ ಅಪಾನ ಎಂಬ ಹೆಸರುಗಳಿಂದ ಬೇರೆ ಬೇರೆ ಕಾರ್ಯಗಳನ್ನು ನಿರ್ವಹಿಸುತ್ತದೆ. ಹಾಗೆಯೇ ಪರಶಿವನೊಬ್ಬನೇ ತನ್ನ ಶಕ್ತಿಯ ಮಹಿಮೆಯಿಂದ ಜೀವರಾಗಿಯೂ, ಜಡಪ್ರಪಂಚವಾಗಿಯೂ ಪ್ರಕಾಶಿಸುತ್ತಿರುವನು. ಒಬ್ಬ ಶಿವಯೋಗಿಯು ಪರಶಿವನನ್ನು ಧ್ಯಾನಿಸುವಾಗ ಪ್ರಾಣಾಯಾಮದಿಂದ ಪ್ರಾಣವಾಯುವನ್ನು ಸಂಕೋಚಗೊಳಿಸಿ ಮತ್ತೆ ವ್ಯವಹಾರಕಾಲದಲ್ಲಿ ವಿಸ್ತಾರಗೊಳಿಸುತ್ತಾನೆ. ಹಾಗೆಯೇ ಶಿವನು ಸೃಷ್ಟಿಕಾಲದಲ್ಲಿ ಜಗದ್ವಿಸ್ತಾರವನ್ನೂ ಪ್ರಳಯದಲ್ಲಿ ಅದರ ಸಂಕೋಚವನ್ನೂ ಏರ್ಪಡಿಸುತ್ತಾನೆ. ಆದ್ದರಿಂದ ಪರಮಕಾರಣನಾದ ಪರಶಿವನಿಗಿಂತಲೂ ಕಾರ್ಯವಾದ ಜಗತ್ತು ಬೇರೆಯಲ್ಲವೆಂದು ಸಿದ್ಧವಾಯಿತು. ಹೀಗೆ ಜಗತ್ತು ಶಿವನಿಂದ ಬೇರೆಯಲ್ಲದ್ದರಿಂದ ಶಿವನನ್ನು ತಿಳಿದರೆ ಶಿವಮಯವಾದ ಈ ಜಗತ್ತೆಲ್ಲವೂ ತಿಳಿಯುವುದೆಂಬ ಪ್ರತಿಜ್ಞೆ ಸಿದ್ಧಿಸುತ್ತದೆ.

**ಏವಂ ಜಗದೀಶ್ವರಭೇದವಾದಸ್ಯ ಜಗನ್ಮಿಥ್ಯಾತ್ವವಾದಸ್ಯ ಚ ನಿರಸ್ತತ್ವೇನ ಭೇದಾಭೇದಮತಮೇವ ಸ್ವಾಭಿಪ್ರೇತಮಿತಿ ಪ್ರದರ್ಶ್ಯ ಜೀವಬ್ರಹ್ಮವಾದಿಮತಮುದ್ಯ ನಿರಾಕರೋತಿ—ಇತರವ್ಯಪದೇಶಾಧಿಕರಣಂ || ೭ ||**

ಇತರವ್ಯಪದೇಶಾತ್ ಹಿತಾಕರಣಾದಿದೋಷಪ್ರಸಕ್ತಿಃ || ೨೧ ||

**ಇತರವ್ಯಪದೇಶಾತ್ ಬ್ರಹ್ಮೇತರಸ್ಯ ಜೀವಸ್ಯ ಬ್ರಹ್ಮತ್ವೇನ ವ್ಯಪದೇಶಾತ್ ಹಿತಾಕರಣಾದಿದೋಷಪ್ರಸಕ್ತಿಃ. ಹಿತಾನಾಮಿಷ್ಟಸಾಧಕಾನಾಂ ಸ್ರಕ್ಚಂದನಾದೀನಾಮಕರಣಮಸಂಪಾದನಂ, ಆದಿಶಬ್ದೇನಾನಿಷ್ಟಸಾಧಕವ್ಯಾಘ್ರಾದೀನಾಂ ಸಂಪಾದನಂ ವ್ಯಾಚಕ್ಷ್ಯತೇ. ಏತಾದೃಶದೋಷಪ್ರಸಕ್ತಿಃ. ತಸ್ಮಾಜ್ಜೀವ ಏವ ಬ್ರಹ್ಮೇತಿ ವಾದೋ ನ ಯುಕ್ತಃ. "ದ್ವಾ ಸುಪರ್ಣಾ" ಇತ್ಯಾದಿಷು ಜೀವಬ್ರಹ್ಮಣೋರ್ಭೇದವ್ಯಪದೇಶಾತ್. "ಅಯಮಾತ್ಮಾ ಬ್ರಹ್ಮ" ಇತ್ಯಾದಿಷು ತಯೋರಭೇದನಿರ್ದೇಶಾತ್. ತಸ್ಮಾತ್ತಯೋರ್ಭೇದೋ ನ ವೇತಿ ಸಂಶಯಃ. ಜೀವಬ್ರಹ್ಮಭೇದಬೋಧಕಶ್ರುತಿನಾಂ ಉಪಾಧಿಪರತ್ವಾತ್, "ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುಃ", "ಮೃತ್ಯೋಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" ಇತ್ಯಾದಿಷು ಜೀವಬ್ರಹ್ಮಣೋರಭೇದಶ್ರವಣಾತ್, "ಬಿಂಬತ್ವಂ ಪ್ರತಿಬಿಂಬತ್ವಂ ಯಥಾ ಪೂಷಣಿ ಕಲ್ಪಿತಂ । ಜೀವತ್ವಮೀಶ್ವರತ್ವಂ ಚ ಬ್ರಹ್ಮಣ್ಯೇಕತ್ರ ಕಲ್ಪಿತಂ ||" ಇತ್ಯತ್ರ ಬಿಂಬಪ್ರತಿಬಿಂಬವಜ್ಜೀವಬ್ರಹ್ಮಣೋರಭೇದನಿರ್ಧಾರಣಾತ್,"ಯತೋ ವಾ ಇಮಾನಿ ಭೂತಾನಿ ಜಾಯಂತೇ"**

ಇತ್ಯಾದೌ ತಯೋಃ ಕಾರ್ಯಕಾರಣತ್ವೋಪದೇಶಾತ್, ವಾಚಾರಂಭಣ ಶ್ರುತೌ ಕಾರ್ಯಕಾರಣಯೋರೇಕತ್ವನಿರ್ದೇಶಾಚ್ಚ ಜೀವಾತಿರಿಕ್ತಃ ಈಶ್ವರೋ ನಾಸ್ತೀತಿ ಪ್ರಾಪ್ತೇಽಭಿಧೀಯತೇ. "ಅನ್ನಂ ಬ್ರಹ್ಮ, ಪ್ರಾಣೋ ಬ್ರಹ್ಮ, ಅಸಾವಾದಿತ್ಯೋ ಬ್ರಹ್ಮ" ಇತ್ಯಾದಿವಜ್ಜೀವಸ್ಯಾಪಿ ಬ್ರಹ್ಮತ್ವಮೌಪಚಾರಿಕಂ. ಜೀವಸ್ಯ ಬ್ರಹ್ಮತ್ವಪ್ರತಿಪಾದನೇ ಜೀವಾನಾಮಿಷ್ಟಸಂಪಾದನಮನಿಷ್ಟಸಾಧನಂ ಚ ಯತ್ತತ್ಸರ್ವಂ ಬ್ರಹ್ಮಣ ಏವಾಂಗೀಕರ್ತವ್ಯಂ. ತಥಾ ಚೇದಿಷ್ಟಪ್ರಪಂಚನಿರ್ಮಾಣತ್ವಂ ಸ್ವತಂತ್ರಬ್ರಹ್ಮಣಸ್ಸಂಭವತೀತ್ಯನಿಷ್ಟಪ್ರಪಂಚ ಅನುಪಪನ್ನಸ್ಸ್ಯಾತ್. ಯಚ್ಚೋಕ್ತಂ ಮಣಿಕೃಪಾಣದರ್ಪಣಾದಿಷೂಪಲಭ್ಯಮಾನಮುಖಮಲಿನತ್ವವಿಮಲತ್ವಾದಿವತ್ ಶುದ್ಧ್ಯಶುದ್ಧ್ಯಾದಿವ್ಯವಸ್ಥೋಪಪತ್ತಿರಿತಿ ತತ್ರೇದಂ ವಿಮರ್ಶನೀಯಂ. ಅಲ್ಪತ್ವಮಲಿನತ್ವಾದಯಃ ಔಪಾಧಿಕದೋಷಾಃ ಕದಾ ನಶ್ಯೇಯುರಿತಿ ಕೃಪಾಣಾದ್ಯುಪಾಧ್ಯುಪಗಮ ಇತಿಚೇತ್ ಕಿಂ ತದಲ್ಪತ್ವಾದ್ಯಾಶ್ರಯಃ ಪ್ರತಿಬಿಂಬಸ್ತಿಷ್ಠತಿ ವಾ ನವಾ? ತಿಷ್ಠತಿ ಚೇತ್ತತ್ಸ್ಥಾನೀಯಸ್ಯ ಜೀವಸ್ಯಾಪಿ ಸ್ಥಿತತ್ವಾದನಿರ್ಮೋಕ್ಷಪ್ರಸಂಗಃ. ನಶ್ಯತೀತಿ ಚೇತ್ತದ್ವದೇವ ಜೀವನಾಶಾತ್ಸ್ವರೂಪೋಚ್ಛೇದಲಕ್ಷಣೋ ಮೋಕ್ಷಸ್ಸ್ಯಾತ್. ಕಿಂಚ, ಜೀವಸ್ಯ ಬ್ರಹ್ಮತ್ವೇ ತಸ್ಮಿನ್ ಸರ್ವಜ್ಞತ್ವಸರ್ವೇಶ್ವರತ್ವಸರ್ವನಿಯಾಮಕತ್ವಸತ್ಯಸಂಕಲ್ಪಾದೀನಾಮದರ್ಶನಾಜ್ಜೀವವಿಲಕ್ಷಣಃ ಪರಮೇಶ್ವರ ಇತಿ ಸಿದ್ಧಂ.

ಜಗದೀಶ್ವರರ ಭೇದವೂ ಮತ್ತು ಜಗನ್ಮಿಥ್ಯಾತ್ವವಾದವೂ ನಿರಾಕೃತವಾದ್ದರಿಂದ ಭೇದಾಭೇದಮತವೇ ತನಗಭಿಮತವೆಂದು ತಿಳಿಸಿ ಜೀವನೇ ಬ್ರಹ್ಮವೆಂಬ ಅದ್ವೈತಮತವನ್ನು ಮುಂದೆ ನಿರಾಕರಿಸುತ್ತಾನೆ. ಇತರ ವ್ಯಪದೇಶಾಧಿಕರಣಂ || ೭ ||

ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ || ೨೧ ||

ಇತರ ವ್ಯಪದೇಶವೆಂದರೆ ಬ್ರಹ್ಮಕ್ಕಿಂತ ಬೇರೆಯಾದ ಜೀವನನ್ನು ಬ್ರಹ್ಮವೆಂದು ಹೇಳುವುದು. ಹಾಗೆ ಹೇಳಿದರೆ ಇಷ್ಟಸಾಧನಗಳಾದ ಸ್ರಕ್ಚಂದನಾದಿಗಳನ್ನು ಅನಿಷ್ಟಸಾಧನಗಳಾದ ದುಷ್ಟಮೃಗಗಳನ್ನು ಒಬ್ಬನೇ ಸೃಷ್ಟಿಸಿಕೊಳ್ಳುತ್ತಾನೆಂದು ಹೇಳಬೇಕಾಗುತ್ತದೆ. ಜೀವನು ತನಗನಿಷ್ಟವಾದ್ದನ್ನು ತಾನೇ ಸೃಷ್ಟಿಸಿಕೊಳ್ಳುವುದಿಲ್ಲ. ಈ ಬಗೆಯ ದೋಷವು ಸಂಭವಿಸಬಹುದಾದ್ದರಿಂದ ಜೀವನೇ ಬ್ರಹ್ಮನೆಂಬ ವಾದವು ಯುಕ್ತವಲ್ಲ. "ದ್ವಾ ಸುಪರ್ಣಾ"ಎಂಬಲ್ಲಿ ಜೀವರಿಗೆ ಭೇದವನ್ನು ಹೇಳಿದೆ. 'ಈ ಆತ್ಮವೇ ಬ್ರಹ್ಮ' ಎಂಬಲ್ಲಿ ಇಬ್ಬರಿಗೂ ಅಭೇದವನ್ನು ಹೇಳಿದೆ. ಆದ್ದರಿಂದ ಅವರಿಗೆ ಭೇದವುಂಟೇ ಇಲ್ಲವೇ? ಎಂಬ ಸಂಶಯ ಬರುತ್ತದೆ. ಜೀವಬ್ರಹ್ಮರಿಗೆ ಭೇದವನ್ನು ತಿಳಿಸುವ ಶ್ರುತಿಗಳು ಉಪಾಧಿಗೆ ಅನ್ವಯಿಸುತ್ತವೆ. "ಯಾವನು ಬೇರೆ ದೇವತೆಯನ್ನು ಇದೇ ಬೇರೆ ನಾನೇ ಬೇರೆ ಎಂದು ಉಪಾಸನಮಾಡುತ್ತಾನೋ ಅವನು ಪಶುವಿನಂತೆ ಅಜ್ಞನು." "ಭೇದವನ್ನು ಕಾಣುವವನು ಮತ್ತೆ ಮತ್ತೆ ಸಾಯುತ್ತಾನೆ". "ಈ

ಜೀವನೊಳಗೇ ಪ್ರವೇಶಿಸಿ ನಾಮರೂಪಗಳ ವಿಸ್ತಾರವಮಾಡುತ್ತೇನೆ" ಈ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಅಭೇದವನ್ನು ಹೇಳಿದೆ. "ಸೂರ್ಯನೇ ಬಿಂಬವಾಗಿ ಅವನಲ್ಲಿ ಪ್ರತಿ ಬಿಂಬವು ಕಲ್ಪಿತವಾಗಿರುವಂತೆ ಬ್ರಹ್ಮದಲ್ಲಿ ಜೀವನೂ ಈಶ್ವರನೂ ಕಲ್ಪಿತರಾಗಿರುವರು" ಎಂಬಲ್ಲಿ ಬಿಂಬ ಪ್ರತಿಬಿಂಬಗಳಂತೆ ಜೀವಬ್ರಹ್ಮರ ಅಭೇದವನ್ನು ನಿರ್ಧರಿಸಲಾಗಿದೆ. "ಯಾವನಿಂದ ಈ ಭೂತಗಳು ಹುಟ್ಟಿದಾವೋ" ಎಂಬಲ್ಲಿ ಶಿವನಿಗೂ ಜಗತ್ತಿಗೂ ಕಾರ್ಯಕಾರಣಭಾವವನ್ನು ಹೇಳಲಾಗಿದೆ. ವಾಚಾರಂಭಣಶ್ರುತಿಯಲ್ಲಿ ಕಾರ್ಯಕಾರಣಗಳೆರಡೂ ಒಂದೇ ಎಂದು ತಿಳಿಸಲಾಗಿದೆ. ಆದ್ದರಿಂದ ಜೀವನಿಗಿಂತ ಬೇರೆ ಈಶ್ವರನಿಲ್ಲವೆಂದು ಆಕ್ಷೇಪ ಬರುತ್ತದೆ. ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. "ಅನ್ನವೇ ಬ್ರಹ್ಮ, ಮನವೇ ಬ್ರಹ್ಮ, ವಿಜ್ಞಾನವೇ ಬ್ರಹ್ಮ, ಆನಂದವೇ ಬ್ರಹ್ಮ, ಆಕಾಶವೇ ಬ್ರಹ್ಮ, ಆದಿತ್ಯವೇ ಬ್ರಹ್ಮ" ಎಂಬಂತೆ ಜೀವನನ್ನು ಬ್ರಹ್ಮವೆಂದು ಉಪಚಾರಕ್ಕಾಗಿ ಹೇಳಿದೆ. ಜೀವನೇ ಬ್ರಹ್ಮವೆಂದು ಹೇಳಿದರೆ ಜೀವನ ಇಷ್ಟಾನಿಷ್ಟಸಾಧನವನ್ನು ಬ್ರಹ್ಮಕ್ಕೂ ಅಂಗೀಕರಿಸಬೇಕಾದೀತು. ಹಾಗೆ ಅಂಗೀಕರಿಸಿದರೆ ಇಷ್ಟಪ್ರಪಂಚದ ನಿರ್ಮಾಣವು ಬ್ರಹ್ಮಕ್ಕೆ ಸಂಭವಿಸಿ ಅನಿಷ್ಟಪ್ರಪಂಚದ ನಿರ್ಮಾಣ ಸಂಭವಿಸದೇ ಹೋಗುತ್ತದೆ. ಮಣಿ ಹರಿತವಾದ ಕತ್ತಿ ಮತ್ತು ಕನ್ನಡಿಗಳಲ್ಲಿ ನೋಡುವವನಮುಖದ ಮಾಲಿನ್ಯ ಮತ್ತು ಸ್ವಚ್ಛತೆಗಳೆರಡೂ ಕಾಣುವಂತೆ ಬ್ರಹ್ಮದಲ್ಲಿ ಶುದ್ಧಿ ಮತ್ತು ಅಶುದ್ಧಿಗಳೆರಡೂ ವ್ಯವಸ್ಥೆಯಿಂದ ಹೊಂದುತ್ತವೆ ಎಂದು ಹೇಳುವುದಾದರೆ ಆಗ ಬ್ರಹ್ಮದಲ್ಲಿ ಬರುವ ಅಲ್ಪತನ ಮಲಯುಕ್ತತೆ ಮೊದಲಾದ ಔಪಾಧಿಕ ದೋಷಗಳು ಯಾವಾಗ ಕಳೆಯುತ್ತವೆ? ಎಂದು ಕೇಳಬೇಕಾಗುತ್ತದೆ. ಕತ್ತಿಯೇ ಮೊದಲಾದ ಉಪಾಧಿಗಳು ತೊಲಗಿದರೆ ದೋಷಗಳೂ ಕಳೆಯುತ್ತವೆ ಎಂದು ಹೇಳುವುದಾದರೆ, ಆಗ ಆ ದೋಷಗಳಿಗಾಶ್ರಯವಾದ ಪ್ರತಿಬಿಂಬವು ಇರುತ್ತದೆಯೋ ನಾಶವಾಗುತ್ತದೆಯೋ ಎಂಬ ಪ್ರಶ್ನೆ ಏಳುತ್ತದೆ. ಆಗಲೂ ಅದು ಇರುತ್ತದೆ ಎಂದು ಹೇಳಿದರೆ ಆ ಪ್ರತಿಬಿಂಬದ ಸ್ಥಾನದಲ್ಲಿರುವ ಜೀವನೂ ಉಳಿಯುವುದರಿಂದ ಅವನಿಗೆ ಮೋಕ್ಷವೇ ಆಗದೇಹೋಗುತ್ತದೆ. ಅದು ನಾಶವಾಗುತ್ತದೆ ಎಂದು ಹೇಳಿದರೆ ಅದರಿಂದ ಜೀವನೇ ನಾಶವಾಗುವುದರಿಂದ ಸ್ವರೂಪ ನಾಶವೇ ಮೋಕ್ಷವೆನಿಸಬೇಕಾಗುತ್ತದೆ. ಇದೂ ಅಲ್ಲದೆ ಜೀವನೇ ಬ್ರಹ್ಮವೆಂದು ಹೇಳಿದರೆ ಅವನಲ್ಲಿ ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವನಿಯಾಮಕತ್ವ, ಸತ್ಯಸಂಕಲ್ಪತ್ವ ಮೊದಲಾದ ಧರ್ಮಗಳೇ ಹೊಂದದಿದ್ದರಿಂದ ಜೀವನಿಗಿಂತ ಬೇರೆಯಾಗಿ ಪರಮೇಶ್ವರನಿರುವನೆಂದು ಸಿದ್ಧವಾಗುತ್ತದೆ.

**ಜೀವಬ್ರಹ್ಮಣೋರಜ್ಞಾನಾತ್ಮಕತ್ವೇನೈಕತ್ವೇಽಪ್ಯವಿದ್ಯೋಪಾಧಿಭೇದೇನ ಭೇದದರ್ಶನಾತ್ತಯೋರ್ಭೇದವಿಧಾಯಕಶ್ರುತಿನಾಮೌಪಾಧಿಕಭೇದವಿಷಯತ್ವಮೇವೇತ್ಯಾಶಂಕ್ಯಾಹ — ಅಧಿಕಂ ತು ಭೇದನಿರ್ದೇಶಾತ್ ॥**

**ತುಶಬ್ದೋ ನಿಶ್ಚಯಾರ್ಥಃ. ಆಧ್ಯಾತ್ಮಿಕಾಧಿಭೌತಿಕಾಧಿದೈವಿಕಾದಿ ದುಃಖಾಕರಾತ್ಪ್ರತ್ಯಗಾತ್ಮನಃ ಜೀವಾದಧಿಕಮರ್ಥಾಂತರಭೂತಂ ಬ್ರಹ್ಮ.**

ಕುತಃ, ಭೇದನಿರ್ದೇಶಾತ್. “ಆತ್ಮಾ ವಾರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ”, “ಸತಾ ಸೌಮ್ಯ ತದಾ ಸಂಪನ್ನೋ ಭವತಿ”ಇತ್ಯಾದಿನಾ ಪ್ರತ್ಯಗಾತ್ಮಭೂತಸ್ಯ ಜೀವಸ್ಯ ಚ ಪರಮಾತ್ಮನಶ್ಶಿವಸ್ಯ ಪರಸ್ಪರಭೇದವ್ಯಪದೇಶಾಜ್ಜೀವ ಏವ ಬ್ರಹ್ಮೇತಿವಾದೋ ನ ಯುಕ್ತಃ. ಜೀವಬ್ರಹ್ಮಭೇದಸತ್ಯತ್ವಬೋಧಕಾನಾಂ ಶ್ರುತೀನಾಮೌಪಾಧಿಕಭೇದವಿಷಯತ್ವಂ ವಾ? ಉತ ಆರೋಪಿತಭೇದವಿಷಯತ್ವಂ ವಾ? ನಾದ್ಯಃ, ಸ್ವಭಾವತಃ ಸ್ವಸ್ಮಾದಭಿನ್ನಸ್ಯ ಜೀವಸ್ಯ ತದುಪಾಸನಾಽಸಂಭವಾತ್. ತಥಾಪಿ ಬ್ರಹ್ಮ ತಂ ಜಾನಾತಿ ವಾ ನವಾ? ಸ ಜಾನಾತಿ ಚೇತ್ಸರ್ವಜ್ಞತ್ವಹಾನಿಃ, ಜಡತ್ವಪ್ರಸಂಗಶ್ಚ. ಜಾನಾತಿಚೇತ್ಸ್ವಸ್ಮಾದಭಿನ್ನಸ್ಯ ಜೀವಸ್ಯಾಧ್ಯಾತ್ಮಿಕಾದಿದುಃಖಂ ಸ್ವದುಃಖಮಿತಿ ಜಾನೀಯಾತ್. ಏವಂ ಚೇತ್ ಬ್ರಹ್ಮಣಃ ಹಿತಾಕರಣಾಹಿತಕರಣಾಖ್ಯದೋಷಪ್ರಸಕ್ತಿರನಿವಾರ್ಯಾ. ನ ದ್ವಿತೀಯಃ. ತತ್ರಾಪಿ ಜೀವಾಜ್ಞಾನಪಕ್ಷೇ ಪೂರ್ವೋಕ್ತವಿಕಲ್ಪಸ್ಥಫಲತಾದವಸ್ಥ್ಯಾತ್. ಬ್ರಹ್ಮಾಜ್ಞಾನಪಕ್ಷೇ ಸ್ವಪ್ರಕಾಶಸ್ವರೂಪಸ್ಯ ಬ್ರಹ್ಮಣ ಅಜ್ಞಾನಸಾಕ್ಷಿತ್ವಂ ತತ್ಕೃತಜಗತ್ಸೃಷ್ಟ್ಯಾದಿಕಂ ಚ ನ ಸಂಭವತಿ. ಅಜ್ಞಾನೇನ ಪ್ರಕಾಶಸ್ತಿರೋಹಿತ ಇತಿ ಚೇತ್ ತಿರೋಧಾನಸ್ಯ ಪ್ರಕಾಶನಿವೃತ್ತಿಕರತ್ವೇನ ಸ್ವಪ್ರಕಾಶಸ್ಯೈವ ಸ್ವರೂಪತ್ವಾತ್ಸ್ವರೂಪನಿವೃತ್ತಿರೇವೇತಿ ಸ್ವರೂಪನಾಶಾದಿದೋಷಸಹಸ್ರಂ ಪ್ರಾಗೇವಾವೇದಿತಂ. ತಸ್ಮಾಜ್ಜಡಜಾತಿಲೋಹಾದೌ ತಾಮ್ರಸುವರ್ಣಾದಿವಚ್ಚಿಜ್ಜಾತೌ ಜೀವಬ್ರಹ್ಮಣೋಸ್ಸ್ವಾಭಾವಿಕಭೇದೋ ನಿರ್ದಿಷ್ಟಃ. ತಥಾಪ್ಯಚೇತನರಸಸಂಯೋಗೇನ ತಾಮ್ರಸ್ಯ ತಾಮ್ರಸ್ವಭಾವನಿವೃತ್ತಿಪೂರ್ವಕಾಬಾಧಿತಸುವರ್ಣತ್ವಪ್ರಾಪ್ತಿವಚ್ಚೇತನಜೀವಸ್ಯಾಪಿ ಪರಮೇಶ್ವರೋಪಾಸನಯಾ ತದನುಗ್ರಹವಶಾದಬಾಧಿತಶಿವತ್ವಂ ಸಿಧ್ಯತಿ. ತಸ್ಮಾಜ್ಜೀವೇಶ್ವರೈಕ್ಯವಿಧಾಯಕಾನಾಂ ತತ್ತ್ವಮಸ್ಯಾದಿವಾಕ್ಯಾನಾಮವಿರೋಧಃ. ಕಿಂಚ “ಅಧಿಕಂ ತು” ಇತಿ ಸೂತ್ರೇ ಜೀವಬ್ರಹ್ಮಣೋಸ್ಸ್ವಾಭಾವಿಕಭೇದನಿರ್ದೇಶಾತ್, “ತದನನ್ಯತ್ವಂ”ಇತಿ ಸೂತ್ರೇ ಅಭೇದವ್ಯಪದೇಶಾಚ್ಚ ಭೇದಾಭೇದಮತಮೇವ ಸೂತ್ರಕಾರಸಮ್ಮತಮಿತಿ ಬಾಲಾನಾಮಪಿ ವಿಜ್ಞಾಯತೇ. ನನು ಭೇದಾಭೇದಯೋರ್ವಸ್ತುವಿರೋಧಾತ್ಸ್ವಾಭಾವಿಕಭೇದಸ್ಯ ನಿವೃತ್ತ್ಯಸಂಭವಾಚ್ಚ ಭೇದಾಭೇದಕಲ್ಪಕಂ ವಿಶಿಷ್ಟಾದ್ವೈತಂ ಚತುರ್ಥಮತಮೇವ ಸಮಂಜಸಂ. ಭೇದಾಭೇದಮತವದತ್ರಾಪ್ಯಂಗಾಂಗಿತ್ವೇನ ಸರ್ವಶ್ರುತಿಸಮನ್ವಯದರ್ಶನಾತ್, ಸೂರ್ಯಾತಪವಚ್ಚಂದ್ರಚಂದ್ರಿಕಾವದ್ಧರ್ಮಧರ್ಮಿವದ್ಗುಣಗುಣಿವದ್ದಂಡದಂಡಿವದ್ವಿಶಿಷ್ಟಮುಪಪನ್ನಂ. ಅತ್ರ ಶೈವಾಗ್ರಗಣ್ಯಶ್ರೀಕಂಠಶಿವಾರಾಧ್ಯಕೃತ ಬ್ರಹ್ಮಮೀಮಾಂಸಾಭಾಷ್ಯೇ ವಿಶಿಷ್ಟಾದ್ವೈತಂ ಸ್ವಾಭಿಪ್ರೇತತ್ವೇನ ಪ್ರಸಾ

ಧಿತಂ. ತತ್ರ ಮುಕ್ತಾತ್ಮನಾಂ ಗೌರೀಪತಿತ್ವಜಗತ್ಕಾರಣತ್ವಸರ್ವಾಂತರ್ಯಾಮಿತ್ವಾದಿಧರ್ಮನಿರಾಕರಣಪೂರ್ವಕತತ್ಸಾಮ್ಯಪಂಚೋಪನಿಷನ್ಮಯದಿವ್ಯಮಂಗಳವಿಗ್ರಹಾತ್ಮಕಸರ್ವೈಶ್ವರ್ಯವಿಶಿಷ್ಟಕಲ್ಯಾಣವಿಭೂತಿರ್ಬಹುಧಾ ಪ್ರಪಂಚಿತಾ. "ಯುಷಾ ಸದ್ಯಃ" ಇತ್ಯಾದಿಶ್ರುತಿನಿಷ್ಠತ್ರಿಪಾದ್ವಿಭೂತ್ಯಧಿಕಕೈವಲ್ಯವಿಭೂತ್ಯಾತ್ಮಕಶಿವಸಾಯುಜ್ಯಲಕ್ಷಣಾ ಮುಕ್ತಿರ್ನಿರೂಪ್ಯತೇ. ತಸ್ಮಾದಿದಮೇವ ಯುಕ್ತಮಿತಿ ಪ್ರಾಪ್ತೇ ಬ್ರೂಮಃ. ಭೇದಾಭೇದಯೋರ್ವಸ್ತುವಿರೋಧ ಇತಿ ಯತ್ತದವಿಚಾರಿತರಮಣೀಯಂ. ಶ್ರುತಿಸ್ಮೃತಿಪುರಾಣಾಗಮಸೂತ್ರಾದಿಷು ಭೇದಾಭೇದಪ್ರದರ್ಶನಾತ್. ಜಾಗ್ರತ್ಸ್ವಪ್ನಾವಸ್ಥಯೋರ್ಭೇದಸ್ಯ ಸುಷುಪ್ತ್ಯವಸ್ಥಾಯಾಮಭೇದಸ್ಯ ಸರ್ವಾನುಭವಸಿದ್ಧತ್ವಾಚ್ಚ. ತಥಾ ಶಿವಾಗಮೇ "ಸುಪ್ತಿರೇವ ಹಿ ದೃಷ್ಟಾಂತಸ್ಸೃಷ್ಟಿಪ್ರಳಯಯೋರಪಿ । ಸೃಷ್ಟಿಕಾಲೇ ಭವೇದ್ಭೇದಃ ಅಭೇದಃ ಪ್ರಳಯೇ ಸ್ಮೃತಃ ॥" ಇತಿ ಜೀವಸ್ಯ ಜ್ಞಾನಾಜ್ಞಾನೋಭಯತ್ವದರ್ಶನಾನ್ನ ವಸ್ತುವಿರೋಧಃ. "ಮೇರುಮಂದಿರಮಾಸಾದ್ಯ ಕಾಕೋಽಪಿ ಕನಕಾಯತೇ । ತಥಾ ಭಕ್ತ್ಯಾ ಶಿವಂ ಪ್ರಾಪ್ಯ ಜೀವೋ ಭವತಿ ಶಂಕರಃ ॥" ಇತಿ ವಚನಾತ್ ಪದಾರ್ಥಾನಾಂ ಪೂರ್ವಾವಸ್ಥಾ ನ ದೃಶ್ಯತೇ. "ರಸವೇಧಾದ್ಯಥಾ ತಾಮ್ರಂ ಕಾಂಚನಂ ಭವತಿ ಧ್ರುವಂ । ಗುರೋಃ ಕಟಾಕ್ಷವೇಧೇನ ಜೀವೋ ಭವತಿ ಶಂಕರಃ ॥" ಇತ್ಯಾದಿಬಹುದೃಷ್ಟಾಂತಶಾಸ್ತ್ರಾನುಭವದರ್ಶನಾತ್ ಸ್ವಾಭಾವಿಕಭೇದನಿವೃತ್ತೇರ್ನ ವಿರೋಧಃ. ಅಂತರ್ಯಾಮಿಬ್ರಾಹ್ಮಣೇ "ಯಃ ಪೃಥಿವ್ಯಾಂ ತಿಷ್ಠನ್, ಯ ಆತ್ಮನಿ ತಿಷ್ಠನ್ಯಸ್ಯಾತ್ಮಾ ಶರೀರಂ"ಇತ್ಯಾದಿವಾಕ್ಯಾನಾಂ ಪರಮೇಶ್ವರಸ್ಯಾಷ್ಟಮೂರ್ತಿತ್ವಸರ್ವಾಂತರ್ಯಾಮಿತ್ವಪ್ರದರ್ಶಕಾನಾಮನನ್ಯಭಕ್ತ್ಯುಪಾಸನಾಪರತ್ವಮಿತಿ ವಿವಕ್ಷಿತಂ. ನೋ ಚೇತ್ "ಆಕಾಶವತ್ಸರ್ವಗತಶ್ಚ ಪೂರ್ಣಃ", "ಅಪ್ರಾಣೋ ಹ್ಯಮನಾಶ್ಶುಭ್ರಃ" ಇತ್ಯಾದಿಬಹುಶ್ರುತಿವಿರೋಧಃ. "ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ" ಇತ್ಯತ್ರ ಶರೀರೇಂದ್ರಿಯನಿರಪೇಕ್ಷತಯಾ ಪರಬ್ರಹ್ಮಣಶ್ಶಿವಸ್ಯ ಸರ್ವಶಕ್ತತ್ವಾವಗಮಾತ್, ವಿಶಿಷ್ಟಾದ್ವೈತವಿಧಾಯಕಶ್ರುತಿಸೂತ್ರಾದ್ಯದರ್ಶನಾತ್. ಅಂಗಾಂಗಿತ್ವಸ್ವೀಕಾರೇ ಜೀವವತ್ಪರಿಚ್ಛಿನ್ನತ್ವಪ್ರಸಕ್ತಿರ್ದುರ್ವಾರಾ. "ಅಂತಃಪೂರ್ಣೋ ಬಹಿಃಪೂರ್ಣಃ ಪೂರ್ಣಕುಂಭ ಇವಾರ್ಣವೇ." "ಪಾದೋಽಸ್ಯ ವಿಶ್ವಾ ಭೂತಾನಿ" ಇತ್ಯಾದಿಶ್ರುತಿಷು ಪರಮಶಿವಶಕ್ತ್ಯೇಕಾಂಶಪ್ರಪಂಚೇಷು ತದ್ಭಿನ್ನಸ್ಥಲೇಷು ಚ ಬ್ರಹ್ಮಣಃ ಪೂರ್ಣತ್ವಮುಪದಿಷ್ಟಂ. ಅತಸ್ತನ್ಮತಮುಪೇಕ್ಷಣೀಯಂ. ಕಿಂಚ "ದ್ವೇ ವಾವ ಬ್ರಹ್ಮಣೋ ರೂಪೇ." "ಸರ್ವಾನನಶಿರೋಗ್ರೀವಃ" ಇತ್ಯಾದಿನಾ ಉಪಾಸನಾರ್ಥಂ

ಬ್ರಹ್ಮಣಃ ಪವನವಸ್ಮೂರ್ತಾನಮೂರ್ತತ್ವವ್ಯಪದೇಶಾತ್, ಜೀವಮುಖ್ಯ ಪ್ರಾಣಲಿಂಗಸೂತ್ರೇ ಭಕ್ತ್ಯೋಪಾಸನಾರ್ಥಂ ಪರಮೇಶ್ವರಸ್ಯೋಪಾಸನಾ ತ್ರಯಮುಪದಿಷ್ಟಮಿತಿ ತತ್ರ ಬಹುಧಾ ಪ್ರಪಂಚಿತಂ. "ತೇ ಬ್ರಹ್ಮ ಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ" "ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ "ಸೋಽಶ್ನು ತೇ ಸರ್ವಾನ್ಕಾಮಾನ್ ಸಹ" "ನಿರಂಜನಂ ಪರಮಂ ಸಾಮ್ಯಮುಪೈತಿ" "ಪರಾತ್ಪರಂ ಪುರುಷಮುಪೈತಿ ದಿವ್ಯಂ" ಇತ್ಯಾದಿಬಹುಶ್ರುತಿಷು ಪರಮ ಶಿವತ್ರಿಪಾದ್ವಿಭೂತ್ಯಾತ್ಮಕಸಾಲೋಕ್ಯಸಾಮೀಪ್ಯಸಾರೂಪ್ಯಸಿದ್ಧಕಲ್ಯಾಣ ವಿಭೂತೇಃ ಸ್ವಾಭಾವಿಕಜೀವಭಾವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪ ಕೈವಲ್ಯವಿಭೂತೇಶ್ಚ ದರ್ಶನಾಚ್ಚತುರ್ವಿಧಮುಕ್ತಿಪ್ರತಿಪಾದಕಂ ಸರ್ವಂ ಶಾಸ್ತ್ರಂ ಪ್ರಮಾಣಮೇವ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದಿಶ್ರುತಿಸಿದ್ಧೇಂದ್ರಾದ್ಯೈಶ್ವರ್ಯಾತ್ಮಕಕಾರ್ಯವಿಭೂ ತಿಃ ಹಠಾದಿಯೋಗಸಿದ್ಧಚತುರ್ಮುಖಬ್ರಹ್ಮಲೋಕೈಶ್ವರ್ಯಾತ್ಮಕಕಾ ರಣವಿಭೂತಿಶ್ಚೇತ್ಯಧಿಕಾರಿತಾರತಮ್ಯೇನ ಸರ್ವಮುಪಾದೇಯಂ. ಅತೋ ಮುಮುಕ್ಷೂಣಾಂ ವೀತರಾಗಿಣಾಂ ಶಮದಮಾದಿಸಹಕೃತಗುರುಚರೇಶ್ವ ರಕೈಂಕರ್ಯಾತ್ಮಕಬಹುಜನ್ಮಾರ್ಜಿತಪಸಿದ್ಧಾವ್ಯಭಿಚಾರಭಕ್ತಿರೇವ ಸಾಲೋ ಕ್ಯಾದಿಚತುರ್ವಿಧಮುಕ್ತಿಹೇತುರಿತಿ ವೇದಿತವ್ಯಂ. ಶ್ರದ್ಧಾಭಕ್ತಿಧ್ಯಾನ ಯೋಗಾದವೇಹಿ" ಇತ್ಯಾದಿಶ್ರುತಿದರ್ಶನಾತ್. ನನು "ಏಷ ಸರ್ವಭೂ ತಾಂತರಾತ್ಮಾಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ" ಇತಿ ಸುಬಾಲೋಪನಿಷದಿ ನಾರಾಯಣಸ್ಯೈವ ಸರ್ವಶರೀರಾತ್ಮಕತ್ವ ಸರ್ವಾಂತರ್ಯಾಮಿತ್ವದರ್ಶನಾತ್ತಸ್ಯೈವ ತದುಪಪತ್ತಿರಿತಿ ಚೇನ್ನ, ಆಕಾ ಶಾದಿಶಬ್ದವನ್ನಾರಾಯಣಶಬ್ದೋಽಪಿ ಪರಮಶಿವಪರ ಏವ. "ಸರ್ವೋ ವೈ ರುದ್ರಃ" "ಸ ಏವ ವಿಷ್ಣುಸ್ಸ ಪ್ರಾಣಃ" "ಯೋ ರುದ್ರೋ ಅಗ್ನೌ ಯೋ ಅಪ್ಸು"–"ಸೋಽಂತರಾದಂತರಂ ಪ್ರಾವಿಶತ್" ಇತ್ಯಾದಿ ಶ್ರುತಿಷು, "ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ" ಇತ್ಯಾದಿಸ್ಮೃತಿ ಷ್ವಪಿ ಸರ್ವಾಂತರ್ಯಾಮಿತ್ವಂ ಶಿವಸ್ಯೈವೋಪದಿಷ್ಟಂ. ಅಷ್ಟಮೂರ್ತಿತ್ವಸ್ಯ ನಾರಾಯಣೇ ಯತ್ರಕುತ್ರಾಪ್ಯದರ್ಶನಾತ್, ಬಾಲವಾಕ್ಯಾತ್ಕಾಣ್ವಮಾ ಧ್ಯಂದಿನತೈತ್ತಿರೀಯಾದಿಶ್ರುತೇರ್ಬಲಾಚ್ಚ ಸರ್ವಾತ್ಮಕತ್ವಸರ್ವಾಂತರ್ಯಾ ಮಿತ್ವಸರ್ವಾಧಿಕತ್ವಾದಿಧರ್ಮಾಣಾಂ ಶಿವಸ್ಯೈವೋಪಪನ್ನಮಿತಿ ಸಿದ್ಧಂ.

ಜೀವಬ್ರಹ್ಮರಿಗೆ ಜ್ಞಾನರೂಪದಿಂದ ಐಕ್ಯವಿದ್ದರೂ ಉಪಾಧಿಭೇದದಿಂದ ವೈಲ ಕ್ಷಣ್ಯವೇ ಇರುವುದರಿಂದ ಭೇದಶ್ರುತಿಗಳು ಔಪಾಧಿಕಭೇದವನ್ನೇ ತಿಳಿಸುತ್ತವೆ ಎಂದಾ ಶಂಕಿಸಿ ನಿರಾಕರಿಸುತ್ತಾನೆ—**ಅಧಿಕಂ ತು ಭೇದನಿರ್ದೇಶಾತ್ ॥ ೨೨ ॥**

ತು ಶಬ್ದವು ನಿಶ್ಚಯವನ್ನು ತಿಳಿಸುತ್ತದೆ. ಆಧ್ಯಾತ್ಮಿಕ(ದೈಹಿಕ ಮತ್ತು ಮಾನಸಿಕ), ಆಧಿಭೌತಿಕ (ಪಂಚಭೂತಗಳಿಂದ ಬರುವಂತಹದು), ಆಧಿದೈವಿಕ (ಮಿಂಚು ಸಿಡಿಲುಮುಂತಾದವು) ಎಂಬ ಮೂರು ಬಗೆಯ ದುಃಖಗಳಿಗೆ ಸಿಲುಕಿರುವ ಜೀವನಿಗಿಂತಲೂ ಬ್ರಹ್ಮನನ್ನು ಶ್ರುತಿಯಲ್ಲಿ ಬೇರೆಯಾಗಿ ತಿಳಿಸಿರುವುದರಿಂದ ಬ್ರಹ್ಮವು ಜೀವನಿಗಿಂತ ಬೇರೆ ಎಂಬುದು ಸ್ಪಷ್ಟವಾಗುತ್ತದೆ. "ಆತ್ಮನನ್ನು ಕೇಳಿ ತಿಳಿದು ಭಾವಿಸಿ ಕಾಣಬೇಕು." "ಆಗ ಜೀವನು ಸದ್ವಸ್ತುವಿನೊಡನೆ ಬೆರೆಯುತ್ತಾನೆ" ಎಂಬಲ್ಲಿ ಬೇರೆಯಾಗಿರುವ ಜೀವನಿಗೂ ಪರಮಶಿವನಿಗೂ ಪರಸ್ಪರ ಭೇದವನ್ನು ಹೇಳಿರುವುದರಿಂದ ಜೀವನೇ ಬ್ರಹ್ಮನೆಂಬ ವಾದ ಯುಕ್ತವಲ್ಲ. ಭೇದಶ್ರುತಿಗಳು ಜೀವಬ್ರಹ್ಮರಿಗೆ ಔಪಾಧಿಕ ಭೇದವನ್ನು ತಿಳಿಸುತ್ತವೆಯೋ ಅಥವಾ ಆರೋಪಿತಭೇದವನ್ನು ತಿಳಿಸುತ್ತವೆಯೋ ? ಎಂಬಲ್ಲಿ ಮೊದಲನೆವಿಕಲ್ಪದಂತೆ ಸಹಜವಾಗಿ ಜೀವಭಾವವನ್ನು ಹೊಂದಿರುವ ಜೀವನು ಬ್ರಹ್ಮವನ್ನು ಉಪಾಸನೆಮಾಡಲಿಕ್ಕಾಗುವುದಿಲ್ಲ. ಹಾಗಾದರೆ ಬ್ರಹ್ಮವು ಜೀವನನ್ನು ತಾನೆಂದು ತಿಳಿಯುತ್ತಾನೆಯೋ ಇಲ್ಲವೋ? ಎಂಬಲ್ಲಿ ತಿಳಿಯುವುದಿಲ್ಲವೆಂದರೆ ಅವನು ಸರ್ವಜ್ಞನೇ ಆಗದೆ ಜಡವೆನಿಸಬೇಕಾಗುವುದು. ತಿಳಿಯುತ್ತಾನೆ ಎಂದರೆ ತನಗಿಂತ ಬೇರೆಯಲ್ಲದ ಜೀವನಿಗೆ ಬರುವ ದುಃಖಗಳೆಲ್ಲವೂ ತನ್ನವೇ ಆಗಬೇಕಾಗುತ್ತವೆ. ಇದೂ ಅಲ್ಲದೆ, ಬ್ರಹ್ಮಕ್ಕೆ ತನ್ನ ಹಿತವನ್ನು ಸಾಧಿಸದಿರುವಿಕೆ ಮತ್ತು ಅಹಿತವನ್ನು ಸಾಧಿಸುವಿಕೆ ಎಂಬ ದೋಷವೂ ತಪ್ಪುವಂತಿಲ್ಲ. ಭೇದಶ್ರುತಿಗಳು ಆರೋಪಿತವಾದ ಭೇದವನ್ನು ತಿಳಿಸುತ್ತವೆ ಎಂದರೆ ಅದರಲ್ಲೂ ಜೀವನಲ್ಲಿ ಅಜ್ಞಾನವನ್ನು ಒಪ್ಪುವ ಪಕ್ಷದಲ್ಲಿ ಹಿಂದಿನ ದೋಷಗಳೇ ಸಂಭವಿಸುತ್ತವೆ. ಬ್ರಹ್ಮದಲ್ಲಿ ಅಜ್ಞಾನವನ್ನು ಒಪ್ಪಿದರೆ ಸ್ವಪ್ರಕಾಶನಾದ ಬ್ರಹ್ಮನು ಅಜ್ಞಾನಕ್ಕೆ ಸಾಕ್ಷಿಯಾಗುವುದರಿಂದ ಅವನಿಂದ ಜಗತ್ಸೃಷ್ಟ್ಯಾದಿಗಳು ಆಗದೇಹೋಗುತ್ತವೆ. ಅಜ್ಞಾನವು ಪ್ರಕಾಶವನ್ನು ಮುಚ್ಚುವುದೆಂದು ಹೇಳಿದರೆ ಹೀಗೆ ಪ್ರಕಾಶವೇ ತೊಲಗಿದಮೇಲೆ ಪ್ರಕಾಶರೂಪವಾದ ಸ್ವರೂಪವೂ ತೊಲಗಬೇಕಾಗುತ್ತದೆ. ಹೀಗೆ ಸ್ವರೂಪನಾಶವೇ ಉಂಟಾಗುವುದರಿಂದ ಅನೇಕ ದೋಷಗಳು ಸಂಭವಿಸುತ್ತವೆ ಎಂದು ಹಿಂದೆ ಹೇಳಿಯಾಗಿದೆ. ಆದ್ದರಿಂದ ಜಡಜಾತಿಯ ಲೋಹಗಳಲ್ಲಿ ತಾಮ್ರಸುವರ್ಣಗಳಿಗಿರುವಂತೆ ಚೈತನ್ಯಜಾತಿಯಲ್ಲೂ ಜೀವಬ್ರಹ್ಮರಿಗೆ ಸ್ವಾಭಾವಿಕವಾದ ಭೇದವನ್ನೇ ಹೇಳಬೇಕು. ಆದರೂ, ಅಚೇತನವಾದ ರಸದ ಸಂಪರ್ಕದಿಂದ ತಾಮ್ರವು ಅದರ ಸ್ವಭಾವವನ್ನು ಕಳೆದುಕೊಂಡು ಸುವರ್ಣವಾಗುವಂತೆ ಚೇತನಜೀವನೂ ಸಹ ಪರಮೇಶ್ವರನ ಉಪಾಸನೆಯಿಂದ ಅವನ ಅನುಗ್ರಹಕ್ಕೆ ಪಾತ್ರನಾಗಿ ಶಿವನಾಗಲಿಕ್ಕೆ ಯಾವ ಬಾಧೆಯೂ ಇಲ್ಲ. ಆದ್ದರಿಂದ ಜೀವೇಶ್ವರರಿಗೆ ಐಕ್ಯವನ್ನು ತಿಳಿಸುವ ತತ್ತ್ವಮಸಿ ಮೊದಲಾದ ವಾಕ್ಯಗಳಿಗೆ ವಿರೋಧವಿಲ್ಲ. ಇದಲ್ಲದೆ 'ಅಧಿಕಂ ತು ಭೇದನಿರ್ದೇಶಾತ್' ಎಂಬಲ್ಲಿ ಜೀವಬ್ರಹ್ಮರಿಗೆ ಸ್ವಾಭಾವಿಕವಾದ ಭೇದವನ್ನೂ, 'ತದನನ್ಯತ್ವಂ' ಎಂಬ ಸೂತ್ರದಲ್ಲಿ ಅಭೇದವನ್ನೂ ಹೇಳಿರುವುದರಿಂದ ಭೇದಾಭೇದಮತವೇ ಸೂತ್ರಕಾರನಿಗೆ ಸಮ್ಮತವೆಂಬುದು ಸ್ಪಷ್ಟವಾಗುತ್ತದೆ. ಆದರೆ ಭೇದಾ

ಭೇದಗಳಿಗೆ ವಸ್ತುವಿರೋಧವಿರುವುದರಿಂದಲೂ, ಸ್ವಾಭಾವಿಕಭೇದವು ತೊಲಗದಿರುವುದರಿಂದಲೂ ಭೇದಾಭೇದಗಳನ್ನು ಹೊಂದಿಸುವ ವಿಶಿಷ್ಟಾದ್ವೈತವೆಂಬ ನಾಲ್ಕನೇ ಮತವೇ ಸಮಂಜಸವಾಗಲಿ. ಭೇದಾಭೇದಮತದಂತೆಯೇ ಅಲ್ಲಿಯೂ ಅಂಗಾಂಗಿಭಾವದಿಂದ ಸರ್ವಶ್ರುತಿಸಮನ್ವಯವೂ ಸಂಭವಿಸುತ್ತದೆ. ಸೂರ್ಯಪ್ರಕಾಶಗಳಂತೆಯೂ, ಚಂದ್ರಚಂದ್ರಿಕೆಗಳಂತೆಯೂ, ಧರ್ಮಧರ್ಮಿಗಳಂತೆಯೂ, ಗುಣಗುಣಿಗಳಂತೆಯೂ, ದಂಡದಂಡಿಗಳಂತೆಯೂ ಬ್ರಹ್ಮವು ವಿಶಿಷ್ಟವೆಂಬುದೂ ಹೊಂದುತ್ತದೆ. ಹೀಗೆ ಶ್ರೀಕಂಠ ಶಿವಾಚಾರ್ಯನು ಬ್ರಹ್ಮಮೀಮಾಂಸಾಭಾಷ್ಯದಲ್ಲಿ ಈ ವಿಶಿಷ್ಟಾದ್ವೈತವೇ ತನಗೆ ಸಮ್ಮತವೆಂದು ಸಾಧಿಸಿದ್ದಾನೆ. ಅಲ್ಲಿ ಮುಕ್ತರಿಗೆ ಗೌರೀಪತಿತ್ವ ಜಗತ್ಕಾರಣತ್ವ ಸರ್ವಾಂತರ್ಯಾಮಿತ್ವ ಮೊದಲಾದ ಧರ್ಮಗಳನ್ನು ನಿರಾಕರಿಸಲಾಗಿದೆ. ಮುಕ್ತರು ಶಿವಸಮಾನವೂ ಪಂಚಬ್ರಹ್ಮಮಯವೂ ಆದ ದಿವ್ಯಮಂಗಳವಿಗ್ರಹದಲ್ಲಿ ಸಕಲೈಶ್ವರ್ಯ ವಿಶಿಷ್ಟವಾದ ಕಲ್ಯಾಣವಿಭೂತಿಯನ್ನು ಅನುಭವಿಸುತ್ತಾರೆಂದು ತಿಳಿಸಲಾಗಿದೆ. "ಯಥಾ ನದ್ಯಃ" ಎಂಬ ಶ್ರುತಿಯಲ್ಲಿ ಹೇಳಿದಂತೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯಗಳಿಗಿಂತಲೂ ಹೆಚ್ಚಿನದಾದ ಕೈವಲ್ಯವಿಭೂತಿ ಎಂಬ ಶಿವಸಾಯುಜ್ಯರೂಪವಾದ ಮುಕ್ತಿಯು ಸಂಭವಿಸದಿರುವುದರಿಂದ ಕಲ್ಯಾಣವಿಭೂತಿಯೇ ಯುಕ್ತವೆನಿಸುತ್ತದೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವನ್ನು ಸೂತ್ರವು ಹೀಗೆ ತಿಳಿಸುತ್ತದೆ. ಭೇದಾಭೇದಗಳಿಗೆ ವಸ್ತುವಿರೋಧವಿದೆ ಎಂಬುದು ವಿಚಾರವಿಲ್ಲದೆ ಆಡುವ ಮಾತು. ಶ್ರುತಿಸ್ಮೃತ್ಯಾಗಮಸೂತ್ರಗಳಲ್ಲಿ ಭೇದ ಮತ್ತು ಅಭೇದವೆರಡನ್ನೂ ತಿಳಿಸಲಾಗಿದೆ. ಜಾಗತ್ಸ್ವಪ್ನಾವಸ್ಥೆಗಳಲ್ಲಿ ಜೀವಬ್ರಹ್ಮರಿಗೆ ಭೇದವೂ, ಸುಷುಪ್ತಿಯಲ್ಲಿ ಅಭೇದವೂ ಇರುವುದನ್ನು ಎಲ್ಲರೂ ಕಂಡಿದ್ದಾರೆ. ಜೀವನಿಗೆ ಜ್ಞಾನ ಅಜ್ಞಾನವೆರಡೂ ಇರುವುದಾಗಿ ಕಂಡುಬಂದಿದೆ. ಆದ್ದರಿಂದ ಅವಕ್ಕೆ ವಸ್ತುವಿರೋಧವಿಲ್ಲ. "ಮೇರುಪರ್ವತದ ತಪ್ಪಲಿನಲ್ಲಿ ಹೊರಳಾಡುವ ಕಾಗೆಯೂ ಸುವರ್ಣವಾಗುತ್ತದೆ. ಹಾಗೆಯೇ ಭಕ್ತಿಯಿಂದ ಜೀವನು ಶಿವನಲ್ಲಿ ಸೇರಿ ಶಿವನೇ ಆಗುತ್ತಾನೆ" ಎಂಬಂತೆ ಪದಾರ್ಥಗಳ ಪೂರ್ವಾವಸ್ಥೆ ಬದಲಾಯಿಸಬಲ್ಲದು. "ರಸಸಂಪರ್ಕದಿಂದ ತಾಮ್ರ ಚಿನ್ನವಾಗುವಂತೆ ಗುರುಕಟಾಕ್ಷವೆಂಬ ವೇಧಾದೀಕ್ಷೆಯಿಂದ ಜೀವನು ಶಿವನಾಗುತ್ತಾನೆ" ಹೀಗೆ ಸ್ವಾಭಾವಿಕವಾದ ಭೇದವು ತೊಲಗುವುದೆಂಬ ಬಗ್ಗೆ ಅನೇಕ ದೃಷ್ಟಾಂತಗಳು ಕಂಡುಬಂದಿವೆ. ಅಂತರ್ಯಾಮಿಬ್ರಾಹ್ಮಣದಲ್ಲಿ ಪರಮೇಶ್ವರನನ್ನೇ ಅಷ್ಟಮೂರ್ತಿ ಎಂದೂ, ಸರ್ವಾಂತರ್ಯಾಮಿ ಎಂದೂ ತಿಳಿಸಿರುವುದು ಜೀವನಿಗೆ ಭಕ್ತಿಪೂರ್ವಕವಾದ ಉಪಾಸನೆಗಾಗಿ ಮಾತ್ರವೆಂದು ತಿಳಿಯಬೇಕು. ಅಷ್ಟಮೂರ್ತಿಯಾಗಿರುವುದಷ್ಟೇ ಪರಮಶಿವನ ಸ್ವರೂಪವೆಂದು ಹೇಳಿದರೆ,"ಆಕಾಶದಂತೆ ಸರ್ವಗತನು ಮತ್ತು ಪೂರ್ಣನು," "ಶರೀರವಿಲ್ಲದೆಯೇ ಇರುವವನು", "ಕೈಕಾಲು ಕಣ್ಣು ಕಿವಿಗಳಿಲ್ಲದಿದ್ದರೂ ಎಲ್ಲಾ ವ್ಯಾವಹಾರಗಳನ್ನೂ ನಡೆಸುವವನು" ಎಂಬ ಅನೇಕ ಶ್ರುತಿಗಳಿಗೆ ವಿರೋಧವುಂಟಾದೀತು. ಶರೀರೇಂದ್ರಿಯಗಳನ್ನು ಅಪೇಕ್ಷಿಸದೆಯೇ ಶಿವನು ಎಲ್ಲಾ ಬಗೆಯ ಶಕ್ತಿಯಿಂದಲೂ ಕೂಡಿರುವುದ

ರಿಂದಲೂ, ವಿಶಿಷ್ಟಾದ್ವೈತವನ್ನು ತಿಳಿಸುವ ಶ್ರುತಿಸೂತ್ರಗಳೇ ಇಲ್ಲದ್ದರಿಂದಲೂ, ಅಂಗಾಂಗಿಭಾವವನ್ನು ಒಪ್ಪಿದರೆ ಜೀವನಂತೆ ಶಿವನೂ ಪರಿಚ್ಛಿನ್ನನಾಗಬೇಕಾದೀತು. ಅವನು ಒಳಗೆ ಹೊರಗೆ ಸಮುದ್ರದಲ್ಲಿ ಪೂರ್ಣಕುಂಭದಂತೆ ಪರಿಪೂರ್ಣನಾಗಿದ್ದಾನೆ." "ಅವನು ಒಂದಂಶದಿಂದ ವಿಶ್ವವಾಗಿ ಉಳಿದ ಅಂಶಗಳಲ್ಲಿ ದಿವ್ಯನೂ ಅಮೃತನೂ ಆಗಿದ್ದಾನೆ." ಹೀಗೆ ಪರಶಿವನು ಶಕ್ತಿಯ ಒಂದಂಶದಿಂದ ಅಷ್ಟಮೂರ್ತಿಯಾಗಿದ್ದರೂ ಉಳಿದ ಅಂಶಗಳಲ್ಲಿ ಪರಿಪೂರ್ಣನಾಗಿರುವುದರಿಂದ ಕೇವಲ ಶರೀರಶರೀರಿಭಾವವನ್ನು ಅವಲಂಬಿಸಿದ ವಿಶಿಷ್ಟಾದ್ವೈತವು ಗ್ರಾಹ್ಯವಲ್ಲ. "ಬ್ರಹ್ಮನಿಗೆ ಮೂರ್ತ ಅಮೂರ್ತವೆಂದು ಎರಡು ರೂಪಗಳಿವೆ" "ಎಲ್ಲರ ಮುಖ ಶಿರಸ್ಸು ಕುತ್ತಿಗೆ ಹೃದಯಗಳಲ್ಲಿದ್ದರೂ ಶಿವನು ಸರ್ವವ್ಯಾಪಿಯೂ ಸರ್ವಗತನೂ ಆಗಿದ್ದಾನೆ" ಎಂದು ಶ್ರುತಿಯಲ್ಲಿ ಉಪಾಸನೆಗಾಗಿ ಬ್ರಹ್ಮನು ವಾಯುವಿನಂತೆ ಮೂರ್ತನೂ ಅಮೂರ್ತನೂ ಆಗಿರುವನೆಂದು ಹೇಳಿದೆ. ಜೀವಮುಖ್ಯಪ್ರಾಣಲಿಂಗಸೂತ್ರದಲ್ಲಿ ಭಕ್ತರ ಸೌಕರ್ಯಕ್ಕಾಗಿ ಪರಮೇಶ್ವರನ ತ್ರಿವಿಧೋಪಾಸನೆಯನ್ನು ತಿಳಿಸಲಾಗಿದೆ. "ಮುಕ್ತರು ಶರೀರವನ್ನು ತೊರೆದ ಮೇಲೆ ಬ್ರಹ್ಮಲೋಕದಲ್ಲಿ ಅಮೃತರಾಗಿ ಎಲ್ಲಾ ಪಾಪಗಳಿಂದಲೂ ಬಿಡುಗಡೆಹೊಂದುತ್ತಾರೆ." "ಯಾವನು ಪರಮಾಕಾಶದಲ್ಲಿ ಇರುವ ತತ್ತ್ವವನ್ನು ತಿಳಿಯುವನೋ ಅವನು ಎಲ್ಲಾ ಫಲಗಳನ್ನೂ ಪಡೆಯುತ್ತಾನೆ." "ದಿವ್ಯಮಂಗಳಮೂರ್ತಿಯನ್ನು ಕಂಡವನು ಪುಣ್ಯಪಾಪಗಳನ್ನು ಕಳೆದುಕೊಂಡು ಆ ಪರಮನಿರಂಜನನ ಸಾಮ್ಯವನ್ನು ಹೊಂದುವನು". "ಬ್ರಹ್ಮವನ್ನರಿತವನು ಬ್ರಹ್ಮವೇ ಆಗುವನು". "ನದಿಗಳು ಸಮುದ್ರವನ್ನು ಸೇರುವಂತೆ ಜ್ಞಾನಿಯು ದಿವ್ಯಪುರುಷನೆನಿಸಿದ ಪರಮಾತ್ಮನಲ್ಲಿ ಬೆರೆಯುತ್ತಾನೆ" ಹೀಗೆ ಅನೇಕ ಶ್ರುತಿಗಳಲ್ಲಿ ಮುಕ್ತನು ಪರಮಶಿವನ ವಿಭೂತಿರೂಪವಾದ ಸಾಲೋಕ್ಯಸಾಮೀಪ್ಯ ಸಾರೂಪ್ಯವೆಂಬ ಕಲ್ಯಾಣವಿಭೂತಿಯನ್ನೂ, ಹಾಗೆಯೇ ಜೀವಭಾವವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುವ ಕೈವಲ್ಯವಿಭೂತಿಯನ್ನೂ ಹೇಳಿರುವುದರಿಂದ ಈ ನಾಲ್ಕುಬಗೆಯ ಮುಕ್ತಿಯನ್ನು ತಿಳಿಸಿರುವ ವೇದಾಂತಶಾಸ್ತ್ರವೆಲ್ಲವೂ ಪ್ರಮಾಣವೆನಿಸಿದೆ. "ಸ್ವರ್ಗವನ್ನು ಬಯಸುವವನು ಜ್ಯೋತಿಷ್ಟೋಮಯಾಗ ಮಾಡಬೇಕು" ಎಂಬಲ್ಲಿ ಇಂದ್ರನ ಐಶ್ವರ್ಯವನ್ನು ಪಡೆಯುವ ಕಾರ್ಯವಿಭೂತಿಯನ್ನೂ, ಹಠಾದಿಯೋಗಗಳಿಂದ ಚತುರ್ಮುಖಬ್ರಹ್ಮನ ಸ್ವರ್ಗಲೋಕದ ಐಶ್ವರ್ಯವನ್ನು ಪಡೆಯುವ ಕಾರಣವಿಭೂತಿಯನ್ನೂ ಅಧಿಕಾರಿಗಳ ತಾರತಮ್ಯದಿಂದ ಹೇಳಲಾಗಿದೆ. ಆದರೆ ಎಲ್ಲಾ ಆಶೆ ಅಭಿಮಾನಗಳನ್ನು ತೊರೆದು ಶಮದಮಾದಿಸಂಪನ್ನರಾದ ಮುಮುಕ್ಷುಗಳಿಗೆ ಹರ ಗುರು ಚರಮೂರ್ತಿಗಳ ಕೈಂಕರ್ಯವೆಂಬ ತಪಸ್ಸಿನಿಂದ ದೊರಕುವ ಪರಾಭಕ್ತಿಯೇ ಸಾಲೋಕ್ಯ ಮೊದಲಾದ ನಾಲ್ಕುಬಗೆಯ ಮುಕ್ತಿಗೂ ಹೇತುವೆಂದು ತಿಳಿಯಬೇಕು. "ಶ್ರದ್ಧಾಭಕ್ತಿಗಳಿಂದೊಡಗೂಡಿದ ಧ್ಯಾನಯೋಗದಿಂದ ಶಿವನನ್ನು ತಿಳಿಯಬೇಕು" ಎಂದು ಶ್ರುತಿ ಹೇಳುತ್ತಿದೆ. ಸುಬಾಲೋಪನಿಷತ್ತಿನಲ್ಲಿ ನಾರಾಯಣನನ್ನೇ ಸರ್ವಾಂತರ್ಯಾಮಿ ಎಂದು ಹೇಳಿರುವುದರಿಂದ ಅವನೇ

ಮುಕ್ತರಿಗೆ ಏಕೆ ಗಮ್ಯಸ್ಥಲನಾಗಬಾರದು ಎಂದು ಕೇಳುವುದು ಯುಕ್ತವಲ್ಲ; ಯಾಕೆಂದರೆ ಆಕಾಶಾದಿಶಬ್ದಗಳಂತೆ ನಾರಾಯಣಶಬ್ದವೂ ಪರಮಶಿವನಿಗೇ ಅನ್ವಯಿಸುತ್ತದೆ. "ಎಲ್ಲವೂ ರುದ್ರನೇ" "ಅವನೇ ವಿಷ್ಣು-ಪ್ರಾಣ," "ಅಗ್ನಿ-ನೀರು-ಓಷಧಿಗಳಲ್ಲಿ ಇರುವ ರುದ್ರನೇ ವಿಶ್ವವನ್ನಾವರಿಸಿದ್ದಾನೆ," ಅವನೇ ಒಳಗಿಂದ ಒಳಗೆ ಪ್ರವೇಶಿಸಿದನು" ಎಂದು ಶ್ರುತಿಗಳಲ್ಲೂ "ಹೃದಯದೊಳಗೆ ನೆಲಸಿರುವ ಈಶ್ವರನಿಗೆ ಶರಣಾಗು" ಎಂದು ಸ್ಮೃತಿಗಳಲ್ಲೂ ಶಿವನೇ ಸರ್ವಾಂತರ್ಯಾಮಿ ಎಂದು ಹೇಳಲಾಗಿದೆ. ನಾರಾಯಣನು ಅಷ್ಟಮೂರ್ತಿ ಎಂದು ಎಲ್ಲಿಯೂ ಕಂಡುಬಂದಿಲ್ಲ. ಬಾಲವಾಕ್ಯಕ್ಕಿಂತಲೂ ಕಾಣ್ವಮಾಧ್ಯಂದಿನರ ತೈತ್ತಿರೀಯಾದಿ ಶ್ರುತಿಯೇ ಬಲಿಷ್ಠವಾಗಿದೆ. ಆದ್ದರಿಂದ ಶಿವನೇ ಸರ್ವಾತ್ಮಕನೂ, ಸರ್ವಾಂತರ್ಯಾಮಿಯೂ, ಸರ್ವೋತ್ಕೃಷ್ಟನೂ ಆಗಿರುವನೆಂಬುದು ಯುಕ್ತವಾಗಿದೆ.

ಜೀವಬ್ರಹ್ಮಣೋಸ್ಸ್ವಭಾವಭಿನ್ನತ್ವೇ ದೃಷ್ಟಾಂತಮಾಹ
ಅಶ್ಮಾದಿವಚ್ಚ ತದನುಪಪತ್ತಿಃ ॥ ೨೩ ॥

ಅಶ್ಮಾದಿವಚ್ಚ ಅಶ್ಮಾದಿವಿಜಾತೀಯದೃಷ್ಟಾಂತೇನ ತದನುಪಪತ್ತಿಃ ತತ್ "ಅಯಮಾತ್ಮಾ ಬ್ರಹ್ಮ" ಇತ್ಯಾದಿಶ್ರುತಿಸಿದ್ಧಪೂರ್ವೋಕ್ತ ಬ್ರಹ್ಮತ್ವಂ ಜೀವಸ್ಯಾನುಪಪನ್ನಮಸಂಭವಮಿತ್ಯರ್ಥಃ. ತಸ್ಮಾತ್ಸರ್ವದಾ ಸ್ವಭಾವಸಿದ್ಧತಯಾ ಜೀವಬ್ರಹ್ಮಣೋರ್ವಿಜಾತೀಯಾಶ್ಮಾದಿದೃಷ್ಟಾಂತವತ್ಸಜಾತೀಯಭೇದಸ್ಸಿದ್ಧಃ. ಯಥಾ ಲೋಹಾಶ್ಮಕಾಷ್ಠತರುಗುಲ್ಮಾದೀನಾಮಚೇತನಾನಾಂ ಸ್ವಭಾವಸಿದ್ಧಪರಸ್ಪರಭೇದಸ್ತದ್ವತ್ಸಜಾತೀಯಚೇತನಯೋಃ ಜೀವೇಶ್ವರಯೋಃ ಪರಸ್ಪರಸ್ವಾಭಾವಿಕಭೇದಃ, ಯಥಾ ಭೂಮ್ಯಾಂ ವಜ್ರವೈಢೂರ್ಯಗೋಮೇಧಿಕಪುಷ್ಯರಾಗಮರಕತಮಾಣಿಕ್ಯಾದಿಮಣಯಃ, ಸ್ವರ್ಣರಜತಾದಿಲೋಹಜಾತಯಃ, ವ್ಯರ್ಥಪಾಷಾಣಾದಯಃ ಪರಸ್ಪರಭೇದೇನ ದೃಶ್ಯಂತೇ ತಥಾ ಜೀವೇಶ್ವರಯೋರಪಿ ಭೇದೋ ದೃಶ್ಯತೇ. "ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತೇನಾಮೃತತ್ವಮೇತಿ" ॥ "ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ" "ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ". "ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್." "ನಾನ್ಯೋ ಬ್ರಹ್ಮಣಿ ವೇದಿತವ್ಯೋ ಪರಂ ಚಾಪರಂ ಚ." "ಅಮೃತಸ್ಯ ದೇವಧಾರಣೋ ಭೂಯಾಸಂ" ಇತ್ಯಾದಿಶ್ರುತಿಭಿರ್ಜೀವಬ್ರಹ್ಮಣೋಃ ಪರಸ್ಪರಸ್ವಭಾವವೈಲಕ್ಷಣ್ಯಂ ದರ್ಶಿತಂ. ತಯೋರಭೇದತ್ವೇ ಪೂರ್ವೋಕ್ತಹಿತಮಹಿತರೂಪಂ ಜಗತ್ಕಾರಣಮಿತ್ಯಾದಯೋ ದೋಷಾಃ ಪ್ರಸಜ್ಯೇರನ್.

ಜೀವಬ್ರಹ್ಮರ ಭೇದವನ್ನು ಉದಾಹರಿಸುತ್ತಾನೆ. **ಅಶ್ಮಾದಿವಚ್ಚ ತದನುಪಪತ್ತಿಃ ||**

ಕಲ್ಲು ಮೊದಲಾದ ವಿಜಾತೀಯದೃಷ್ಟಾಂತದಿಂದ ಜೀವನೇ ಬ್ರಹ್ಮನೆಂಬುದು ಅಯುಕ್ತವೆನಿಸುತ್ತದೆ. ಆದ್ದರಿಂದ ವಿಜಾತೀಯವಸ್ತುಗಳಲ್ಲೂ ಪರಸ್ಪರಭೇದವು ಸ್ವಭಾವಸಿದ್ಧವಾಗಿರುವಂತೆ ಜೀವಬ್ರಹ್ಮರು ಸಜಾತೀಯರಾದರೂ ಅವರಿಗೆ ಭೇದವು ಸಹಜವಾಗಿದೆ. ಕಲ್ಲು, ಮಣ್ಣು, ಕಟ್ಟಿಗೆ, ಮರ, ಪೊದರೆ ಮೊದಲಾದ ಜಡವಸ್ತುಗಳಲ್ಲೂ ಪರಸ್ಪರಭೇದ ಸಹಜವಾಗಿರುವಂತೆ ಚೇತನರಿಂದ ಜೀವಬ್ರಹ್ಮರಿಗೂ ಪರಸ್ಪರಭೇದ ಸ್ವಾಭಾವಿಕವಾಗಿದೆ. ಭೂಮಿಯಲ್ಲಿ ವಜ್ರ, ವೈಡೂರ್ಯ, ಗೋಮೇಧಿಕ, ಪುಷ್ಯರಾಗ, ಮರಕತ, ಮಾಣಿಕ್ಯ ಮೊದಲಾದ ಮಣಿಗಳು, ಚಿನ್ನ ಬೆಳ್ಳಿ ಮೊದಲಾದ ಲೋಹಗಳು, ವ್ಯರ್ಥವಾದ ಕಲ್ಲ ಮೊದಲಾದವು ಒಂದರಿಂದೊಂದು ಭಿನ್ನವಾಗಿಯೇ ಇರುತ್ತವೆ. ಹಾಗೆಯೇ ಜೀವೇಶ್ವರರಿಗೂ ಭೇದವು ಸಹಜವಾಗಿದೆ. "ಪ್ರೇರಕವಾಗಿ ಬೇರೆಯಾಗಿರುವ ದೇವನನ್ನು ತಿಳಿದವನು ಅಮೃತನಾಗುತ್ತಾನೆ". "ಪರಶಿವನ ನಿರಂತರ ಧ್ಯಾನಧಾರಣಾನುಸಂಧಾನಗಳಿಂದ ಮಾಯೆಯು ಪೂರ್ಣವಾಗಿ ತೊಲಗುವುದು." "ಪ್ರಾಜ್ಞನಾದ ಆತ್ಮನೊಡನೆ ಕೂಡಿ". "ಮಾಯಾಪತಿ ಈ ವಿಶ್ವವನ್ನು ಸೃಷ್ಟಿಸುತ್ತಾನೆ. ಅದರೊಳಗೆ ಒಬ್ಬನು ಮಾಯೆಯಿಂದ ಬದ್ಧನಾಗಿದ್ದಾನೆ," "ನಿತ್ಯರಾದ ಅನೇಕ ಚೇತನರ ಇಚ್ಛೆಯನ್ನು ಪೂರೈಸುತ್ತ ಶಿವನು ನಿತ್ಯಚೇತನನಾಗಿ ಅದ್ವಿತೀಯನಾಗಿರುವನು." "ಬ್ರಹ್ಮದಲ್ಲಿ ಪರ ಮತ್ತು ಅಪರವೆಂಬ ಎರಡನ್ನು ತಿಳಿಯಬೇಕು," "ಅಮೃತಕ್ಕಾಗಿ ದೇವನನ್ನು ಧರಿಸುತ್ತೇನೆ" ಈ ಬಗೆಯ ಅನೇಕ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಸ್ವಾಭಾವಿಕಭೇದವನ್ನು ಹೇಳಲಾಗಿದೆ. ಅವರಿಬ್ಬರೂ ಒಂದೇ ಎಂದು ಹೇಳಿದರೆ ಹಿಂದೆ ಹೇಳಿದ ಹಿತಾಹಿತಸಂಪರ್ಕವನ್ನು ಬ್ರಹ್ಮಕ್ಕೂ ಹೇಳಬೇಕಾಗುತ್ತದೆ.

**ತತ್ತ್ವಮಸೀತ್ಯುಪಸಂಹಾರೇಽಪಿ ಜೀವಾಭೇದತಯಾ ಬ್ರಹ್ಮನಿರ್ದೇಶಾತ್ ಜೀವಬ್ರಹ್ಮಣೋರಶ್ಮಲೋಷ್ಟಾಶ್ಮವತ್ ಸ್ವಭಾವಭಿನ್ನತ್ವೇ ತನ್ನಿವೃತ್ತ್ಯಸಂಭವಾಚ್ಚ ಬ್ರಹ್ಮಣ ಏವ ಜೀವತ್ವಂ ಶುಕ್ತಿರಜತವದಾರೋಪಿತಮಾತ್ರಮೇವೇತ್ಯಾಶಂಕಾಯಾಮಾಹ ||. ಉಪಸಂಹಾರದರ್ಶನಾಧಿಕರಣಂ || ೮ || ಉಪಸಂಹಾರದರ್ಶನಾದಿತಿ ಚೇನ್ನ ಕ್ಷೀರವದ್ಧಿ || ೨೪ ||**

**"ಏಕಮೇವಾದ್ವಿತೀಯಂ ಬ್ರಹ್ಮ" ಇತ್ಯುಪಕ್ರಮೇ 'ತತ್ತ್ವಮಸಿ' ಇತ್ಯುಪಸಂಹಾರೇಽಪಿ ಜೀವಬ್ರಹ್ಮಣೋರಭೇದದರ್ಶನಾತ್ ಮಧ್ಯಸ್ಥವಾಕ್ಯೇನ ಅಶ್ಮಲೋಷ್ಟಕಾಷ್ಠಾದಿವತ್ತಯೋಸ್ಸ್ವಾಭಾವಿಕಭೇದತ್ವಾಂಗೀಕಾರೇ ಸ್ವಾಭಾವಿಕಭೇದಸ್ಯ ಜಲಾದಿವನ್ನಿವೃತ್ತಿರ್ನ ಸಂಭವತೀತಿ ಚೇನ್ನ. ಕ್ಷೀರವದ್ಧಿ—ತಕ್ರಾದಿಸಂಪರ್ಕವಶಾತ್ ಕ್ಷೀರಸ್ಯ ದಧಿರೂಪೇಣ ಸ್ವಭಾವನಿವೃತ್ತಿತಯಾ ಪರಿಣಾಮಸ್ತಥಾ ಜೀವಸ್ಯ ಶ್ರವಣಮನನಾದಿಸಹಕೃತಭಕ್ತಿಭಾವೇನ ಸ್ವಾಭಾವಿಕಜೀವತ್ವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರ್ನ ವಿರುಧ್ಯತ ಏವ. "ದ್ವಾ ಸುಪರ್ಣಾ" ಇತ್ಯಾದಿಷು ಜೀವಬ್ರಹ್ಮಣೋ**

ರ್ಭೇದಾವಗಮಾತ್, 'ತತ್ತ್ವಮಸಿ' ಇತ್ಯಾದಿಷು ತಯೋರಭೇದವ್ಯವಸ್ಥಾಪನಾಚ್ಚ ತದ್ಭೇದಸ್ಸ್ವಾಭಾವಿಕಃ ಆಗಂತುಕೋ ವೇತಿ ಸಂದಿಹ್ಯತೇ. ಸ ಭೇದ ಆಗಂತುಕ ಏವ ಸ್ವಭಾವತ್ವೇ ನಿವೃತ್ತ್ಯಯೋಗಾತ್. ಜಲಾದೌ ಪಾಕಾದಿನಾ ಸ್ವಭಾವತಿರೋಹಿತತ್ವೇಽಪಿ ಕಾಲಾಂತರೇಣ ಸ್ವಭಾವಸ್ಯೈವ ಸ್ಥಿತತ್ವಾತ್. ಅಭೇದಶ್ರುತ್ಯನಂಗೀಕಾರೇಽಪಿ ಅರ್ಧಜರತೀನ್ಯಾಯವದವೈದಿಕತ್ವಪ್ರಸಂಗಾತ್ ಪರಮೇಶ್ವರಮಹಿಮ್ನಾ ಸ್ವಭಾವನಿವೃತ್ತಿಸ್ಸಂಭವತೀತಿ ಚೇನ್ನ, ಮಾನುಷಾನ್ಮಾನುಷೋತ್ಪತ್ತೇಸ್ತಿರ್ಯಗಾದಿಭ್ಯಸ್ತಿರ್ಯಗುತ್ಪತ್ತೇಶ್ಚ ದರ್ಶನಾತ್ ಶುಕ್ತಿರಜತವದಾಗಂತುಕತ್ವಮೇವ ಸಮಂಜಸಮಿತಿ ಪ್ರಾಪ್ತೇಽಭಿಧೀಯತೇ. ಯಥಾ ಲೋಕೇ ಕ್ಷೀರಸ್ಯ ತಕ್ರಾದಿಸಂಯೋಗೇನ ಸ್ವಭಾವಸಿದ್ಧಕ್ಷೀರತ್ವನಿವೃತ್ತಿಪೂರ್ವಕದಧಿತ್ವಪರಿಣಾಮಸಿದ್ಧಿದ್ಯೋತನಾತ್, ಮನುಷ್ಯಾಣಾಂ ತಕ್ರಾದಿನಿವೇಶನೇನ ಕ್ಷೀರಸ್ವಭಾವತ್ಯಾಗಪೂರ್ವಕದಧ್ಯಾಕಾರಪರಿಣಮನಶಕ್ತಿಸಂಭವಾತ್, ಕೀಟಜಾತ್ಯುತ್ಪನ್ನಭೃಂಗಸ್ಯ ಸ್ವಜಾತ್ಯತಿರಿಕ್ತ ಕ್ರಿಮಿಜಂತೋಸ್ಸ್ವಭಾವಕ್ರಿಮಿತ್ವನಿವೃತ್ತಿಪೂರ್ವಕಸ್ಸ್ವಸಮಾನರೂಪಪ್ರಾಪ್ತಿಪ್ರದಾಯಕತ್ವಶಕ್ತಿದರ್ಶನಾಚ್ಚ ತಥಾ ಘಟನಾಘಟನಸಮರ್ಥಸ್ಯ ಸರ್ವಶಕ್ತಿವಿಶಿಷ್ಟಸ್ಯ ಭಕ್ತವತ್ಸಲಸ್ಯ ಭಕ್ತಾಭೀಷ್ಟಫಲಪ್ರದಾಯಕಸ್ಯ ಸರ್ವವಿದ್ಯಾಶ್ರಯಸ್ಯ ಸತ್ಯಕಾಮಸ್ಯ ಸತ್ಯಸಂಕಲ್ಪಸ್ಯ ಪರಶಿವಸ್ಯ ಸ್ವಭಕ್ತಸ್ವಾಭಾವಿಕಜೀವಭಾವನಿವೃತ್ತಿಪೂರ್ವಕಪುನರಾವೃತ್ತಿರಹಿತಸ್ಸ್ವಸ್ವರೂಪಪ್ರಾಪ್ತಿಪ್ರದಾಯಕಶಕ್ತಿಮತ್ತ್ವೇ ಹಿ ಕಿಂ ವಕ್ತವ್ಯಂ? ಕಿಂಚ "ದ್ಯಾವಾಪೃಥಿವೀ ಜನಯನ್ದೇವ ಏಕಃ" ಇತ್ಯಾದಿಶ್ರುತಿಷು ಶಿವಸ್ಯ ಉಪಕರಣಸಾಪೇಕ್ಷಾಭಾವತಯಾ ಗಗನಪವನಾನಲಜಲಾದಿವಿಚಿತ್ರಜಗಜ್ಜನ್ಮಾದಿಕಾರಣತ್ವಂ ಶ್ರೂಯತೇ, ಚೇತನಪುರುಷಾದಚೇತನಲೋಮನಖಾದ್ಯುತ್ಪತ್ತಿರಚೇತನಗೋಮಯೇ ಚೇತನವೃಶ್ಚಿಕಾದ್ಯುತ್ಪತ್ತಿಶ್ಚ ದೃಶ್ಯತೇ. ಅತಸ್ತಸ್ಯ ಅಘಟಿತಘಟನಸಾಮರ್ಥ್ಯಂ ಸಿದ್ಧಂ.

"ತತ್ತ್ವಮಸಿ" ಎಂಬಲ್ಲಿ ಜೀವಬ್ರಹ್ಮರಿಗೆ ಅಭೇದವನ್ನು ಹೇಳಿರುವುದರಿಂದಲೂ, ಅವರು ಕಲ್ಲುಮಣ್ಣುಗಳಂತೆ ಸಹಜವಾಗಿ ಭಿನ್ನರಾದರೆ ಆ ಭೇದವು ತೊಲಗದಿರುವುದರಿಂದಲೂ ಶುಕ್ತಿಯಲ್ಲಿ ರಜತದಂತೆ ಬ್ರಹ್ಮದಲ್ಲಿ ಜೀವಭಾವವು ಆರೂಪಿತವಾಗಿದೆ ಎಂದಾಶಂಕಿಸಿ ನಿರಾಕರಿಸುತ್ತಾನೆ. **ಉಪಸಂಹಾರದರ್ಶನಾಧಿಕರಣಂ ||೮||**

**ಉಪಸಂಹಾರದರ್ಶನಾನ್ನೇತಿ ಚೇನ್ನ ಕ್ಷೀರವದ್ಧಿ || ೨೪ ||**

"ಸದೇವ ಸೌಮ್ಯ" ಎಂದಾರಂಭಿಸಿ 'ತತ್ತ್ವಮಸಿ' ಎಂದು ಉಪಸಂಹಾರದಲ್ಲೂ ಜೀವಬ್ರಹ್ಮರಿಗೆ ಅಭೇದವನ್ನು ಹೇಳಿದ್ದರೂ, ಮಧ್ಯದ ವಾಕ್ಯದಲ್ಲಿ ಮಣ್ಣುಕಲ್ಲುಗಳಂತೆ ಅವರಿಗೆ ಸ್ವಾಭಾವಿಕಭೇದವನ್ನು ಒಪ್ಪಿದ್ದರಿಂದ ಆ ಭೇದವು ತೊಲಗಲಾರದು ಎಂದು ಹೇಳುವುದು ಯುಕ್ತವಲ್ಲ, ಯಾಕೆಂದರೆ ಹಾಲು ಮಜ್ಜಿಗೆಯ ಸಂಬಂಧದಿಂದ ಮೊಸ

ರಾಗಿ ಬದಲಾವಣೆಯಾಗುವಂತೆ ಜೀವನಿಗೆ ಶಿವನ ನಿರಂತರೋಪಾಸನದಿಂದ ಜೀವ ಭಾವತೊಲಗಿ ಶಿವಭಾವ ಬರುವುದರಲ್ಲಿ ವಿರೋಧವೇನಿಲ್ಲ. "ದ್ವಾ ಸುಪರ್ಣಾ" ಎಂಬಲ್ಲಿ ಜೀವಬ್ರಹ್ಮರಿಗೆ ಭೇದವೂ "ತತ್ತ್ವಮಸಿ" ಎಂಬಲ್ಲಿ ಅಭೇದವೂ ವ್ಯವಸ್ಥಿತವಾಗಿರು ವುದರಿಂದ ಭೇದ ಆಗಂತುಕವೇ? ಸ್ವಾಭಾವಿಕವೇ? ಎಂಬ ಸಂದೇಹ ಬರುತ್ತದೆ. ಅದು ಸ್ವಾಭಾವಿಕವಾದರೆ ತೊಲಗಲಾರದು. ಆದ್ದರಿಂದ ಆಗಂತುಕವೇ ಇರಬೇಕು. ನೀರಿನಲ್ಲಿ ಪಾಕದಿಂದ ಶೀತಸ್ವಭಾವ ಮರೆಯಾಗಿದ್ದರೂ ಸ್ವಲ್ಪಹೊತ್ತಿನಮೇಲೆ ತಾನಾ ಗಿಯೇ ಕಾಣಬರುತ್ತದೆ. ಅಭೇದಶ್ರುತಿಯನ್ನು ಅಂಗೀಕರಿಸದಿದ್ದರೂ ಅರ್ಧಜರತೀ ನ್ಯಾಯದಿಂದ ಅವೈದಿಕರಾಗುವ ಪ್ರಸಂಗ ಬರುತ್ತದೆ. ಶ್ರುತಿಯಲ್ಲಿ ಅರ್ಧಭಾಗವನ್ನು ಒಪ್ಪಿ ಉಳಿದರ್ಧವನ್ನು ಕೈಬಿಡುವುದು ಅರ್ಧಜರತೀನ್ಯಾಯವೆನಿಸುತ್ತದೆ. ಆದ್ದರಿಂದ ಸ್ವಾಭಾವಿಕವಾದರೂ ಜೀವಭಾವವು ಪರಮೇಶ್ವರನ ಮಹಿಮೆಯಿಂದ ತೊಲಗಬಹುದು. ಎಂದರೆ ಮನುಷ್ಯನಿಂದ ಮನುಷ್ಯನೂ, ಪ್ರಾಣಿಗಳಿಂದ ಪ್ರಾಣಿಗಳೂ ಹುಟ್ಟುವುದನ್ನು ಕಂಡಿರುವಂತೆ, ಶುಕ್ತಿರಜತದಂತೆ ಜೀವಭಾವ ಆಗಂತುಕವೆಂಬುದೇ ಸಮಂಜಸವೆನಿ ಸುತ್ತದೆ ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಹಾಲಿಗೆ ಮಜ್ಜಿಗೆ ಬೆರೆತರೆ ಸಹಜವಾದ ಹಾಲಿನರೂಪ ಹೋಗಿ ಮೊಸರಿನ ರೂಪ ಬರುವುದನ್ನು ಲೋಕದಲ್ಲಿ ಕಂಡಿದ್ದೇವೆ. ಹಾಲಿಗೆ ಹೀಗೆ ಮಜ್ಜಿಗೆಯನ್ನು ಬೆರಸಿ ಮೊಸರು ಮಾಡುವಂತಹ ಶಕ್ತಿ ಮನುಷ್ಯರಲ್ಲಿ ಕಂಡುಬಂದಿದೆ. ಕೀಟಜಾತಿಯಲ್ಲಿ ಹುಟ್ಟಿದ ಭೃಂಗವು ಬೇರೆ ಜಾತಿಯ ಕ್ರಿಮಿಯ ಸ್ವಾಭಾವಿಕವಾದ ರೂಪವನ್ನು ತೊಲ ಗಿಸಿ ತನಗೆ ಸಮಾನವಾದ ರೂಪವನ್ನು ದೊರಕಿಸಬಲ್ಲದೆಂದು ಲೋಕವಲ್ಲಿ ಕಂಡು ಬಂದಿದೆ. ಹಾಗೆಯೇ, ಎಲ್ಲವನ್ನೂ ಕೂಡಿಸಲಿಕ್ಕೂ ಬೇರ್ಪಡಿಸಲಿಕ್ಕೂ, ಸಮರ್ಥನೂ, ಸರ್ವಶಕ್ತಿವಿಶಿಷ್ಟನೂ, ಭಕ್ತವತ್ಸಲನೂ, ಭಕ್ತರ ಇಷ್ಟಾರ್ಥದಾಯಕನೂ, ಸರ್ವ ವಿದ್ಯಾಶ್ರಯನೂ, ಸತ್ಯಕಾಮನೂ, ಸತ್ಯಸಂಕಲ್ಪನೂ ಆದ ಪರಶಿವನು ತನ್ನ ಭಕ್ತನ ಸ್ವಾಭಾವಿಕ ಜೀವಭಾವವನ್ನು ತೊಲಗಿಸಿ ಮತ್ತೆ ಹುಟ್ಟದಂತೆ ಅವನನ್ನು ತನ್ನ ಸ್ವರೂಪದಲ್ಲಿ ಸಮರಸವಾಗಿ ಬೆರೆಸಲು ಶಕ್ತನೆಂಬ ಬಗ್ಗೆ ಹೇಳುವುದೇನಿದೆ! "ಭೂಮಿ ಆಕಾಶಗಳನ್ನು ಒಬ್ಬ ದೇವನೇ ಸೃಷ್ಟಿಸುತ್ತಾನೆ" ಎಂಬಲ್ಲಿ ಶಿವನು ಕಾರಣಸಾಮಗ್ರಿ ಗಳ ಅಪೇಕ್ಷೆ ಇಲ್ಲದಯೇ ಆಕಾಶ, ವಾಯು, ಬೆಂಕಿ, ನೀರು ಮೊದಲಾದ ವಿಚಿತ್ರ ಜಗತ್ತಿಗೆ ಕಾರಣನಾಗಿರುವನೆಂದು ಹೇಳಲಾಗಿದೆ. ಚೇತನಪುರುಷನಿಂದ ಜಡವಾದ ಕೂದಲು, ಉಗುರು ಮೊದಲಾದವೂ ಜಡವಾದ ಸಗಣಿಯಲ್ಲಿ ಚೇತನಪ್ರಾಣಿಗಳು ಹುಟ್ಟುವುದೂ ಕಂಡುಬಂದಿವೆ. ಇದರಿಂದ ಪರಮೇಶ್ವರನು ಅಸಾಧ್ಯವಾದದ್ದನ್ನು ಸಾಧಿಸಲು ಸಮರ್ಥನಿರುವನೆಂದು ಸಿದ್ಧವಾಯಿತು.

**ಅತ್ರ ದೃಷ್ಟಾಂತಂ ದರ್ಶಯತಿ—ದೇವಾದಿವದಪಿ ಲೋಕೇ ॥೨೫॥**

**ಯಥಾ ಲೋಕೇ ಪರಿಚ್ಛಿನ್ನಶಕ್ತ್ಯವಚ್ಛಿನ್ನಾನಾಂ ದೇವರ್ಷಿಸಿದ್ಧಾದೀನಾಂ ಸ್ವಾನುಗ್ರಹೇಣ ಸ್ವಾಶ್ರಯಪುರುಷನಿಷ್ಠಮೌಢ್ಯತ್ವದರಿದ್ರತ್ವಾದಿ**

ನಿರಾಕರಣಪೂರ್ವಕವಿದ್ಯಾಧನಸಂತಾನಾದ್ಯಪೂರ್ವಫಲಪ್ರದಾಯಕತ್ವವ ತ್ತಥಾ ಸರ್ವಶಕ್ತಿವಿಶಿಷ್ಟಸ್ಯ ಪರಮೇಶ್ವರಸ್ಯ ಸ್ವಭಕ್ತಸ್ವಾಭಾವಿಕಜೀವತ್ವ ನಿರಾಕರಣಪೂರ್ವಕಸ್ವಪ್ರಾಪ್ತಿರೂಪಕೈವಲ್ಯವಿಭೂತಿಪ್ರದಾಯಕತ್ವೇ ಕಿಮಸಾಧ್ಯಂ? "ಇಮಾನ್ಲೋಕಾನೀಶತ ಈಶನೀಭಿರ್ಜನನೀಭಿಃ ಪರಮ ಶಕ್ತಿಭಿಃ" ಇತ್ಯಾದಿಶ್ರುತಿಷು "ಶಿವ ಏವ ಹಿ ದೇವೋಽಂತಸ್ಸ್ಥಿತಮಿಚ್ಛಾ ವಶಾದ್ಬಹಿಃ।ಯೋಗೀವನಿರೂಪಾದಾನಮರ್ಥಜಾತಂ ಪ್ರಕಾಶಯೇತ್॥" ಇತಿ ಸ್ಮೃತೌ ಶಿವಸ್ಯಾಘಟನಕರ್ಮಸಂಧಾನವಿಚಿತ್ರಾನಂತಶಕ್ತಿಮತ್ತ್ವಂ ಶ್ರೂಯತೇ. ತಸ್ಮಾತ್ತನ್ಮಹಿಮಾತಿಶಯಿತ್ವೇ ನ ಶಂಕಾಕಲಂಕಃ.

ಅವನ ಸಾಮರ್ಥ್ಯದ ಬಗ್ಗೆ ಮತ್ತೆ ಹೇಳುತ್ತಾನೆ. **ದೇವಾದಿವದಪಿ ಲೋಕೇ ॥**

ಲೋಕದಲ್ಲಿ ಪರಿಮಿತವಾದ ಶಕ್ತಿಯುಳ್ಳ ದೇವತೆ, ಋಷಿ, ಸಿದ್ಧ ಮೊದಲಾದವರು ತಮ್ಮನ್ನಾಶ್ರಯಿಸಿದವರ ಮೂಢತನ, ಬಡತನ ಮೊದಲಾದವನ್ನು ತೊಲಗಿಸಿ ವಿದ್ಯೆ, ಧನ, ಸಂತಾನ ಮೊದಲಾದ ಅಪೂರ್ವಫಲಗಳನ್ನು ಕೊಡಬಲ್ಲರೆಂದು ಕಂಡು ಬಂದಿದೆ. ಹೀಗಿರುವಾಗ ಸರ್ವಶಕ್ತಿವಿಶಿಷ್ಟನಾದ ಪರಶಿವನು ತನ್ನ ಭಕ್ತರ ಸ್ವಾಭಾವಿಕ ಜೀವಭಾವವನ್ನು ತೊಲಗಿಸಿ ಸಾಮರಸ್ಯರೂಪವಾದ ಕೈವಲ್ಯವಿಭೂತಿಯನ್ನು ಅನುಗ್ರಹಿಸುವುದರಲ್ಲಿ ಅಸಾಧ್ಯವೇನಿದೆ? "ಈ ಲೋಕಗಳನ್ನು ತನ್ನ ಸಮರ್ಥವಾದ ಶಕ್ತಿಗಳಿಂದ ನಡೆಸುತ್ತಿರುವನು" ಎಂದು ಶ್ರುತಿಗಳಲ್ಲೂ, "ಯೋಗಿಯು ನಿರಾಧಾರವಾದ ವಸ್ತುಗಳನ್ನು ತೋರಿಸುವಂತೆ ಶಿವನು ತನ್ನೊಳಗಿನ ವಿಶ್ವವನ್ನು ತನ್ನ ಇಚ್ಛೆಯಂತೆ ಹೊರಪಡಿಸುತ್ತಾನೆ" ಎಂದು ಸ್ಮೃತಿಯಲ್ಲೂ ಶಿವನಲ್ಲಿ ಅಸಾಧ್ಯವಾದ್ದನ್ನು ಸುಲಭವಾಗಿ ಸಾಧಿಸುವಷ್ಟು ವಿಚಿತ್ರವೂ ಅನಂತವೂ ಆದ ಶಕ್ತಿ ಪ್ರಾಣರೂಪವಾಗಿ ನೆಲಸಿರುವುದೆಂದು ತಿಳಿದುಬರುತ್ತದೆ. ಹೀಗೆ ಅವನ ಮಹಿಮಾತಿಶಯವು ಪೂರ್ಣವಾಗಿದೆ.

ಏವಂ ಪರಮೇಶ್ವರಸ್ಯ ಸ್ವಾಭಾವಿಕಜೀವತ್ವನಿವೃತ್ತಿಪೂರ್ವಕಸ್ವಾತ್ಮಪ್ರಾಪ್ತಿಪ್ರದಾಯಕಶಕ್ತಿಮತ್ತ್ವಂ ಪ್ರಸಾಧ್ಯ ತಸ್ಯೈವ ಮೂರ್ತಾಮೂರ್ತೋಭಯಾತ್ಮಕತ್ವಂ ದರ್ಶಯತಿ. ಕೃತ್ಸ್ನಪ್ರಸಕ್ತ್ಯಧಿಕರಣಂ ॥

**ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋ ವಾ ॥ ೨೬ ॥**

ವೇದಾಂತೇಷು ಬ್ರಹ್ಮ ನಿರವಯವಸ್ಸಾವಯವೋ ವಾ? ನಿರವಯವಶ್ಚೇತ್ ಕೃತ್ಸ್ನಪ್ರಸಕ್ತಿಃ ವ್ಯಾಪಕಸ್ಯ ಬ್ರಹ್ಮಣಃ ಜಗನ್ನಿರ್ಮಾಣೇ ಪರಿಚ್ಛಿನ್ನತ್ವಪ್ರಸಂಗಃ. ಸಾವಯವಶ್ಚೇನ್ನಿರವಯತ್ವಶಬ್ದಕೋಪೋ ವಾ. ನಿರವಯವತ್ವಪ್ರತಿಪಾದಕಶ್ರುತ್ಯಪ್ರಾಮಾಣ್ಯಪ್ರಸಂಗಃ. ತಸ್ಮಾತ್ಪರಮೇಶ್ವರಸ್ಯ ಸ್ವತಂತ್ರತ್ವಾತ್ ಮೂರ್ತಾಮೂರ್ತೋಭಯತ್ವಮಂಗೀಕರ್ತವ್ಯಂ. "ಸತ್ಯಾತ್ಮ ಪ್ರಾಣಾರಾಮಂ ಮನಆನಂದಂ" "ಅಚಿಂತ್ಯಮವ್ಯಕ್ತಮನಂತಬೋಧಂ ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಂ" "ಉಮಾಸಹಾಯಂ ಪರಮೇಶ್ವರಂ ಪ್ರಭುಂ ನೀಲಕಂಠಂ ಪ್ರಶಾಂತಂ ಧ್ಯಾತ್ವಾ ಮುನಿರ್ಗಚ್ಛತಿ

ಭೂತಯೋನಿಂ ” ಇತ್ಯಾದಿಶ್ರುತಿಶತೇಷು ಶಿವಸ್ಯ ಮೂರ್ತಾಮೂರ್ತಾ ತ್ಮಕತ್ವಸ್ಯ ಮೂರ್ತಶಿವೋಪಾಸನಯಾ ಸರ್ವಾಭೀಷ್ಟಸಿದ್ಧಿಪೂರ್ವಕ ನಿರವಯವಸಾಕ್ಷಿಪ್ರಾಪಕತ್ವಸ್ಯ ಚ ದರ್ಶನಾತ್ ಜಗತ್ಕಾರಣತ್ವಂ ನಿರ ವಯವಸ್ಯ ಸಾವಯವಸ್ಯ ವೇತಿ ಸಂದೇಹಃ. ನಿರವಯವಬ್ರಹ್ಮಪ್ರತಿ ಪಾದಕಾನಾಂ ಸಾವಯವಬ್ರಹ್ಮಪ್ರತಿಪಾದಕಾನಾಂ ಚ ಶ್ರುತೀನಾಂ ತಮಃ ಪ್ರಕಾಶವತ್ಪರಸ್ಪರವಿರೋಧಾತ್ತದುಭಯಮಪ್ರಮಾಣಮೇವ. ತದು ಭಯಶ್ರುತಿಸ್ವೀಕಾರೇ ವ್ಯವಸ್ಥೋಚ್ಛೇದಪ್ರಸಂಗಃ. ತಸ್ಮಾತ್ಪ್ರಧಾನಸ್ಯ ಪರಮಾಣ್ವಾದೀನಾಂ ವಾ ಜಗತ್ಕಾರಣತ್ವಮುಪಪನ್ನಮಿತಿಪ್ರಾಪ್ತೇ ಪ್ರಚ ಕ್ಷ್ಮಹೇ. ಸ್ವತಂತ್ರತ್ವಾಚ್ಛಿವಸ್ಯ ಮೂರ್ತಾಮೂರ್ತತ್ವಮುಪಪನ್ನಂ. “ ಉದಿತೇ ಜುಹೋತಿ । ಅನುದಿತೇ ಜುಹೋತಿ ” “ ಯವೈರ್ವಾ ಯಜೇತ ತಂಡುಲೈರ್ವಾ ಯಜೇತ ” ಇತ್ಯಾದಿಶ್ರುತೀನಾಮುಭಯಸಿದ್ಧಿ ರಿತಿ ನ್ಯಾಯೇನ ತದುಭಯಸ್ವೀಕಾರವದತ್ರಾಪಿ ಮೂರ್ತಾಮೂರ್ತೋ ಭಯವಿಧಾಯಕಶ್ರುತಿದರ್ಶನಾತ್ತದುಭಯಂ ವಿಧೇಯಮೇವ. ತದು ಭಯೋರೇಕಾಂಶಪ್ರಾಧಾನ್ಯೇಽಪಿ ಅರ್ಧಜರತೀನ್ಯಾಯೇನ ಶ್ರುತ್ಯ ಪ್ರಾಮಾಣ್ಯಪ್ರಸಂಗೋ ದುರ್ನಿವಾರಃ. ಶಿವಸ್ಯಾವಯವಿತ್ವೇನ ಮಹಾ ಕೈಲಾಸಾದ್ಯಪ್ರಕೃದಿವ್ಯವೈಭವಸ್ಥಾನೇಷು ಸ್ಥಿತ್ವಾ ತದುಪಾಸಕಾನಾಂ ಭಕ್ತಾನಾಂ ಸಾಲೋಕ್ಯಾದಿತ್ರಿವಿಧಸತ್ಯಕಲ್ಯಾಣವಿಭೂತಿಂ ದತ್ವಾ ಸ್ವನಿರ ವಯವಚಿದ್ಘನೋಪಾಸಕಾನಾಂ ನಿರಸ್ತಸಮಸ್ತದೋಷಾದಿಕಳಂಕಾನಾಂ ಕೈವಲ್ಯವಿಭೂತ್ಯಾತ್ಮಕಸ್ವಪ್ರಾಪ್ತಿಂ ವಿದಧಾತಿ. ತಸ್ಮಾತ್ತದುಭಯೋ ಪಾಸನಮುಪ್ಯುಕ್ತಂ. “ ಯತ್ಸತ್ತ್ವೇ ಯತ್ಸತ್ತ್ವಂ ” ಇತಿ ನ್ಯಾಯೇನ ಶರೀರಪರಿಗ್ರಹೇಣ ದೇವಾದೀನಾಂ ಪುರಾಣೇಷು ದುಃಖಿತ್ವದರ್ಶನಾತ್ ಸಾಲೋಕ್ಯಾದಿತ್ರಿವಿಧಮುಕ್ತಿಪ್ರಾಪ್ತಾನಾಂ ಭಕ್ತಾನಾಂ ಚ ತದಾ ಶರೀರ ಪರಿಗ್ರಹೇ ದುಃಖಪ್ರಾಪ್ತಿರನಿವಾರ್ಯೇತಿ ಚೇನ್ನ, ತೇಷಾಂ ಕಾರಣ ಶರೀರತ್ವಾತ್. ಪುಣ್ಯಪಾಪಕರ್ಮಶರೀರಿಣಾಮೇವ ಪ್ರಾಕೃತ ದುಃಖಾದಿಪ್ರಾಪ್ತಿತ್ವಂ. ಅಪ್ರಾಕೃತಾನಾಂ ಸ್ವೇಚ್ಛಾಕೃತವಿಗ್ರಹಾಣಾಂ ತನ್ನಿಯಮೋ ನಾಸ್ತಿ. “ ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರ ಮೀಶಂ ಬ್ರಹ್ಮಯೋನಿಂ । ತದಾ ವಿದ್ವಾನ್ಪುಣ್ಯಪಾಪೇ ವಿಧೂಯ ನಿರಂ ಜನಂ ಪರಮಂ ಸಾಮ್ಯಮುಪೈತಿ ॥ ” ಇತಿ ಶ್ರುತಿದರ್ಶನಾತ್.

ಹೀಗೆ ಪರಶಿವನಿಗೆ ಜೀವನ ಸ್ವಭಾವವನ್ನು ತೊಲಗಿಸಿ ತನ್ನೊಡನೆ ಬೆರೆಯು ವಂತೆ ಮಾಡಿಕೊಳ್ಳುವ ಸಾಮರ್ಥ್ಯವನ್ನು ತಿಳಿಸಿ ಅವನೇ ಮೂರ್ತಾಮೂರ್ತನಾಗಿರು ವನೆಂದು ತಿಳಿಸುತ್ತಾನೆ—ಕೃತ್ಸ್ನಪ್ರಸಕ್ತ್ಯಧಿಕರಣಂ ॥ ೯ ॥

ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋ ವಾ ॥ ೨೬ ॥

ವೇದಾಂತಗಳಲ್ಲಿ ಬ್ರಹ್ಮ ನಿರವಯನೇ ಸಾವಯವವನೇ? ನಿರವಯವನಾದರೆ ಸರ್ವವ್ಯಾಪಕನಾದ ಬ್ರಹ್ಮವು ಜಗತ್ತನ್ನು ನಿರ್ಮಿಸುವಾಗ ಪರಿಚ್ಛಿನ್ನನಾಗಬೇಕಾಗುವುದು. ಸಾವಯವನೆಂದರೆ ನಿರವಯವನೆಂದು ಹೇಳುವ ಶ್ರುತಿಗೆ ವಿರೋಧವುಂಟಾಗುವುದು. ಆ ಶ್ರುತಿಯು ಪ್ರಮಾಣವಾಗದೇಹೋಗಬೇಕಾಗುವುದು. ಆದರೆ ಅವನು ಸ್ವತಂತ್ರನಾದ್ದರಿಂದ ಅವನು ಸಾವಯವ ಮತ್ತು ನಿರವಯವ ಎರಡೂ ಆಗಿರುವನೆಂದೇ ಅಂಗೀಕರಿಸಬೇಕು. 'ಆಕಾಶವೇ ಅವನ ಶರೀರ,' 'ಮನಃಪ್ರಾಣಗಳಿಲ್ಲದೆ ಶುಭ್ರನು' 'ಸತ್ಯಾತ್ಮನೂ, ಪ್ರಾಣಾರಾಮನೂ, ಮನಆನಂದನೂ ಆಗಿದ್ದಾನೆ' 'ಅಚಿಂತ್ಯನೂ ಅವ್ಯಕ್ತನೂ, ಜ್ಞಾನಸ್ವರೂಪನೂ, ಪ್ರಶಾಂತನೂ, ವಿಶ್ವಕಾರಣನೂ, ಅಮೃತನೂ, ಆದಿಮಧ್ಯಾಂತಗಳಿಲ್ಲದೆ, ರೂಪವಿಲ್ಲದೆ ಅದ್ಭುತನೂ, ಚಿದಾನಂದಮಯನೂ ವಿಭುವೂ ಉಮಾಸಹಾಯನೂ, ತ್ರಿಲೋಚನನೂ, ನೀಲಕಂಠನೂ ಆದ ಪರಮೇಶ್ವರನನ್ನು ಧ್ಯಾನಿಸಿ ಯೋಗಿಯು ನಿಷ್ಕಲದಿವ್ಯತೇಜಸ್ಸಿನಲ್ಲಿ ಬೆರೆಯುತ್ತಾನೆ" ಹೀಗೆ ಶ್ರುತಿಗಳಲ್ಲಿ ಪರಶಿವನನ್ನು ಮೂರ್ತಾಮೂರ್ತನೆಂದೂ, ಮೂರ್ತಶಿವನ ಉಪಾಸನದಿಂದ ಸಾಧಕನು ಎಲ್ಲಾ ಇಷ್ಟಾರ್ಥವನ್ನು ಪಡೆದು ಅನುಭವಿಸಿ ಕೊನೆಗೆ ಅಮೂರ್ತಪರಶಿವನಲ್ಲಿ ಬೆರೆಯುವನೆಂದೂ ಹೇಳಿರುವುದರಿಂದ ಜಗತ್ಕಾರಣತ್ವವು ನಿರವಯವ ಪರಶಿವನಿಗೋ ಸಾವಯವ ಶಿವನಿಗೋ? ಎಂಬ ಸಂದೇಹ ಬರುತ್ತದೆ. ನಿರವಯವಪರಮಶಿವನನ್ನು ತಿಳಿಸುವ ಶ್ರುತಿಗಳಿಗೂ ಮತ್ತು ಸಾವಯವ ಶಿವನನ್ನು ತಿಳಿಸುವ ಶ್ರುತಿಗಳಿಗೂ ಕತ್ತಲೆ ಬೆಳಕುಗಳಂತೆ ಪರಸ್ಪರವಿರೋಧವಿರುವುದರಿಂದ ಎರಡೂ ಪ್ರಮಾಣವಾಗದೇ ಹೋಗುತ್ತವೆ. ಎರಡನ್ನೂ ಒಪ್ಪಿದರೆ ಅವ್ಯವಸ್ಥೆಯಾಗುತ್ತದೆ. ಆದ್ದರಿಂದ ಪ್ರಧಾನ ಅಥವಾ ಪರಮಾಣುಗಳನ್ನು ಜಗತ್ಕಾರಣವೆಂದು ಹೇಳುವುದೇ ಯುಕ್ತವಾಗುತ್ತದೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಶಿವನು ಸ್ವತಂತ್ರನಾದ್ದರಿಂದ ಸಾವಯವ ಮತ್ತು ನಿರವಯವ ಎಂದು ಎರಡು ಬಗೆಯಾಗಿಯೂ ಇರುವನೆಂಬುದೇ ಯುಕ್ತವಾಗುತ್ತದೆ. "ಉದಯವಾದಮೇಲೆ ಮತ್ತು ಉದಯಕ್ಕೆ ಮೊದಲು ಹೋಮಮಾಡುತ್ತಾನೆ". ಗೋಧಿಯಿಂದಲೋ ಅಥವಾ ಅಕ್ಕಿಯಿಂದಲೋ ಹೋಮಮಾಡಬಹುದು" ಎಂದು ಶ್ರುತಿಯಲ್ಲಿ ಹೇಳಿದ್ದರಿಂದಲೇ ಎರಡನ್ನೂ ಒಪ್ಪುವಂತೆ ಪರಶಿವನಲ್ಲಿ ಮೂರ್ತ ಅಮೂರ್ತ ಎಂದು ಎರಡು ಅವಸ್ಥೆಗಳನ್ನೂ ಶ್ರುತಿಯಲ್ಲಿ ಹೇಳಿರುವುದರಿಂದ ಎರಡನ್ನೂ ಒಪ್ಪಲೇಬೇಕು. ಇವೆರಡರಲ್ಲಿ ಒಂದನ್ನು ಮಾತ್ರ ಒಪ್ಪಿ ಮತ್ತೊಂದನ್ನು ಬಿಟ್ಟರೆ ಶ್ರುತಿಯೆಲ್ಲವೂ ಅಪ್ರಮಾಣವೆನಿಸಬೇಕಾಗುವುದು. ಶಿವನು ಸಾವಯವನಾದ್ದರಿಂದ ಮಹಾಕೈಲಾಸ ಮೊದಲಾದ ಅಪ್ರಾಕೃತದಿವ್ಯವೈಭವಸ್ಥಾನದಲ್ಲಿ ಇದ್ದುಕೊಂಡು ತನ್ನನ್ನು ಉಪಾಸನೆಮಾಡುವ ಭಕ್ತರಿಗೆ ಸಾಲೋಕ್ಯ-ಸಾಮೀಪ್ಯ-ಸಾರೂಪ್ಯವೆಂಬ ಕಲ್ಯಾಣವಿಭೂತಿಯನ್ನುಕೊಟ್ಟು, ತನ್ನ ನಿರವಯವ ಚಿತ್ಕಲೆಯನ್ನೇ ಧ್ಯಾನಿಸುತ್ತ, ಎಲ್ಲಾ ಮಲವಾಸನೆಗಳನ್ನೂ ಕಳೆದುಕೊಂಡವರಿಗೆ ಕೈವಲ್ಯವಿಭೂತಿಯನ್ನು ಅನುಗ್ರಹಿಸಿ ಅವರನ್ನು ತನ್ನ ನಿಷ್ಕಲನಿರವಯವ

ಚಿತ್ಸ್ವರೂಪದಲ್ಲಿ ಸೇರಿಸಿಕೊಳ್ಳುವನು. ಆದ್ದರಿಂದ ಭಕ್ತರ ಹಿತದೃಷ್ಟಿಯಿಂದ ಪರಶಿವನ ಲೀಲಾಕೈವಲ್ಯರೂಪವಾದ ಸಾವಯವ ಮತ್ತು ನಿರವಯವಸ್ಥಿತಿಗಳೆರಡೂ ಆವಶ್ಯಕವೆನಿಸಿವೆ. ಆದರೆ ಶರೀರಧಾರಣದಿಂದ ದೇವತೆಗಳು ದುಃಖವನ್ನು ಅನುಭವಿಸಿದರೆಂದು ಪುರಾಣದಲ್ಲಿ ಕೇಳಿದ್ದೇವೆ. ಅದರಂತೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯವೆಂಬ ಮುಕ್ತಿಯನ್ನು ಹೊಂದಿದ ಭಕ್ತರಿಗೂ ಶರೀರವಿರುವುದರಿಂದ ದುಃಖ ಬಂದೇತೀರಬೇಕು ಎಂದು ಆಕ್ಷೇಪ ಬಂದರೆ ಅದು ಹೊಂದುವುದಿಲ್ಲ. ಈ ಮೂರು ಬಗೆಯ ಮುಕ್ತರಿಗೂ ಕಾರಣಶರೀರವಿರುವುದರಿಂದ ಅವರಿಗೆ ಕರ್ಮಶರೀರಿಗಳಂತೆ ದುಃಖ ಬರುವುದಿಲ್ಲ. ಕಾರಣಶರೀರವೆಂದರೆ ಸ್ವೇಚ್ಛೆಯಿಂದ ಪಡೆದ ಅಪ್ರಾಕೃತ ದಿವ್ಯಮಂಗಳ ವಿಗ್ರಹ. ಅದಕ್ಕೆ ಯಾವ ದುಃಖಲೇಪವೂ ಇರುವುದಿಲ್ಲ. "ಶಿವನ ಸುಂದರಮೂರ್ತಿಯನ್ನು ಕಂಡವನು ಪುಣ್ಯಪಾಪಗಳನ್ನು ತೊರೆದು ನಿರಂಜನಸ್ಥಿತಿಯಲ್ಲಿ ಆ ಶಿವನ ಸಾಮ್ಯವನ್ನು ಪಡೆಯುತ್ತಾನೆ" ಎಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿದೆ.

"ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ" "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಇತ್ಯಾದಿಷು ಶಿವಸ್ಯ ಮನೋವಾಚಾಮಗೋಚರತ್ವವ್ಯವಸ್ಥಾಪನಾತ್ತಸ್ಯ ಶರೀರಿತ್ವಾಂಗೀಕಾರೋ ನ ವಿಧೇಯ ಇತ್ಯಾಶಂಕಾಯಾಮಾಹ— ಶ್ರುತೇಸ್ತು ಶಬ್ದಮೂಲತ್ವಾತ್ ||

ತು ಶಬ್ದಃ ಪೂರ್ವಪಕ್ಷನಿರಾಸಾರ್ಥಃ. "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" "ಆತ್ಮಾ ಗುಹಾಯಾಂ ನಿಹಿತೋಽಸ್ಯ ಜಂತೋಃ," "ನಾವೇದವಿನ್ಮನುತೇ ತಂ ಬೃಹಂತಂ" ಇತ್ಯಾದಿಶ್ರುತಿಷು ಶಿವಸ್ಯ ಪರಬ್ರಹ್ಮಣಃ ಶಬ್ದಮೂಲತ್ವಾತ್ ವೇದಪ್ರಮಾಣಕತ್ವಾತ್, ಶ್ರುತೇಃ ತದುಭಯವಿಧಿವಿಧಾಯಕಶ್ರುತಿಬಲಾಚ್ಚ, ತಸ್ಯ ನಿರವಯವತ್ವಸರ್ವೋಪಾಸ್ಯತ್ವಸರ್ವವಿಲಕ್ಷಣತ್ವಸರ್ವಾಧಾರತ್ವಸರ್ವಪ್ರಕಾಶಕತ್ವಸರ್ವಾಂತರ್ಯಾಮಿತ್ವಸರ್ವೇಶ್ವರತ್ವಸರ್ವೈಶ್ವರ್ಯತ್ವಾದಿಕಂ ಸರ್ವಂ ಸಮುಪಪನ್ನಂ. ನನ್ವೇಕಸ್ಯ ಭೇದಾಽಭೇದತ್ವಂ ಮೂರ್ತಾಽಮೂರ್ತತ್ವಂ ಸತ್ಯಾಸತ್ಯತ್ವಂ ಜ್ಞಾನಾಽಜ್ಞಾನತ್ವಂ ಕಾರ್ಯಕಾರಣತ್ವಂ ವ್ಯಾಪಕತ್ವಾಽವ್ಯಾಪಕತ್ವಂ ವ್ಯಾಪ್ಯತ್ವಾಽವ್ಯಾಪ್ಯತ್ವಂ ಚ ವಸ್ತುವಿರೋಧಾದಯುಕ್ತಮಿತಿ ಚೇತ್ತದವಿಚಾರಿತರಮಣೀಯಂ, ಲೋಕವೇದಸಿದ್ಧತ್ವಾತ್. ಲೋಕೇ ಮೃದ್ಘಟಯೋರ್ದೀಪಪ್ರಭಯೋಶ್ಚಂದ್ರಚಂದ್ರಿಕಯೋಃ ಪ್ರಭಾಕರಾತಪಯೋಃ ಶಕ್ತಶಕ್ತ್ಯೋಶ್ಚ ಭೇದಾಭೇದತ್ವಂ. ಪ್ರಧಾನಸ್ಯ ಕಾರಣಾವಸ್ಥಾಯಾಮಮೂರ್ತತ್ವಂ ಕಾರ್ಯಾವಸ್ಥಾಯಾಂ ಮೂರ್ತತ್ವಂ. ಪವನಸ್ಯ ಸಾವಯವತ್ವೇನ ದಿಗೇಕದೇಶವರ್ತಿತ್ವಂ ನಿರವಯವತ್ವೇನ ನಿಖಿಲಜಗದ್ವ್ಯಾಪಕತ್ವಂ. ಪ್ರಾತ್ಯಕ್ಷಿಕಸರ್ಪಸ್ಯ ಸತ್ಯತ್ವಂ ರಜ್ಜ್ವಾರೋಪಿತಸತ್ಯಸ್ಯಾನಿತ್ಯತ್ವಂ. ಘಟಾದೀನಾಂ ಮೃದಾತ್ಮಕತ್ವೇನ ಸತ್ಯತ್ವಂ. ಕಂಬು

ಗ್ರೀವಾದಿರೂಪೇಣಾಸತ್ಯತ್ವಂ. ಚಿತ್ರಸ್ಥಿತಪರ್ವತಾದೀನಾಮಸತ್ಯತ್ವಂ. ಅರ್ಥಕ್ರಿಯಾಸಿದ್ಧ್ಯನುಗತಪರ್ವತಾದೀನಾಮೇವ ಸತ್ಯತ್ವಂ. ಖದ್ಯೋತಸ್ಯ ಪ್ರಕಾಶಾಪ್ರಕಾಶಕತ್ವಂ. ಜೀವಸ್ಯ ಜ್ಞಾನಾಽಜ್ಞಾನತ್ವಂ, ಪುರುಷೈಕಶರೀರೇ ಶರೀರಸ್ಯ ಚೇತನತ್ವಂ ನಖರೋಮದಂತಾನಾಮಚೇತನತ್ವಂ. ಊರ್ಣನಾಭಾವಭಿನ್ನನಿಮಿತ್ತೋಪಾದಾನಕತ್ವಂ. ದೇವಾದೀನಾಂ ಯೋಗೀಶ್ವರಾದೀನಾಂ ಚೈಕಕಾಲೇ ಸಕಲಲೋಕವರ್ತಿತ್ವಂ. ವ್ಯೋಮ್ನಸ್ತತ್ಕಾರ್ಯಪವನಾನಲಭೂಮ್ಯಾದಿಷು ಪೂರ್ಣತ್ವಮಪೂರ್ಣತ್ವಂ ಚ ದೃಷ್ಟಂ. ವೇದೇ ಚ, "ವಿಜ್ಞಾನಂ ಚಾವಿಜ್ಞಾನಂ ಚ ಸತ್ಯಂ ಚಾನೃತಂ ಚ ಸತ್ಯಮಭವತ್" ಇತಿ ದರ್ಶಿತಂ ಅತಸ್ತಸ್ಯ ಸರ್ವಶಕ್ತತ್ವಾತ್ ಸ್ವತಂತ್ರತ್ವಾತ್ಸರ್ವಮವಿರೋಧಂ. "ಅಹಂ ವಿಜಾನಾಮಿ ವಿವಿಕ್ತರೂಪೋ ನ ಚಾಸ್ತಿ ವೇತ್ತಾ ಮಮ" ಇತ್ಯಾದಿನಾ ಕೈವಲ್ಯೇಽಪಿ ಶರೀರೇಂದ್ರಿಯೋದ್ಯನಪೇಕ್ಷತಯಾ ತಸ್ಯ ಸರ್ವಶಕ್ತತ್ವಂ ಶ್ರೂಯತೇ. ಅತಃ ಸಾವಯವಸ್ಯ ಬ್ರಹ್ಮಣ ಏವ ವಿಚಿತ್ರಜಗನ್ನಿರ್ಮಾಣಾದಿಹೇತುತ್ವಂ.

"ಕಣ್ಣಿಂದ ನೋಡಲಾಗುವುದಿಲ್ಲ" "ವಾಕ್ಕು ಅವನನ್ನರಿಯದೆ ಹಿಂತಿರುಗಿತು" ಎಂದು ಶ್ರುತಿಯಲ್ಲಿ ಶಿವನು ಮನೋವಾಗತೀತನೆಂದು ಹೇಳಿರುವುದರಿಂದ ಅವನಿಗೆ ಶರೀರವಿರುವಬಗ್ಗೆಆಶಂಕಿಸಿ ನಿರಾಕರಿಸುತ್ತಾನೆ. **ಶ್ರುತೇಸ್ತು ಶಬ್ದಮೂಲತ್ವಾತ್**॥

ತು ಶಬ್ದವು ಆಕ್ಷೇಪವನ್ನು ನಿರಾಕರಿಸುತ್ತದೆ. "ಉಪನಿಷತ್ಪ್ರತಿಪಾದ್ಯನಾದ ಪುರುಷನ ಬಗ್ಗೆ ಕೇಳುತ್ತೇನೆ" "ಆತ್ಮನು ಈ ಜೀವನ ಎದೆಗುಹೆಯಲ್ಲಿ ನೆಲಸಿದ್ದಾನೆ" "ವೇದವನ್ನರಿಯದವನು ಬ್ರಹ್ಮವನ್ನರಿಯನು" ಇಲ್ಲಿ ಪರಶಿವಬ್ರಹ್ಮಕ್ಕೆ ವೇದವೇ ಪ್ರಮಾಣವಾದ್ದರಿಂದಲೂ ಅವನು ಮೂರ್ತನೂ ಅಮೂರ್ತನೂ ಆಗಿರುವನೆಂದು ತಿಳಿಸುವ ಎರಡು ಶ್ರುತಿಗಳೂ ಪ್ರಬಲವಾದ್ದರಿಂದ ಅವನು ನಿರವಯವನೂ, ಸಾವಯವನೂ, ಸರ್ವೋಪಾಸ್ಯನೂ, ಸರ್ವವಿಲಕ್ಷಣನೂ, ಸರ್ವಾತ್ಮಕನೂ, ಸರ್ವಾಧಾರನೂ, ಸರ್ವಪ್ರಕಾಶಕನೂ, ಸರ್ವಾಂತರ್ಯಾಮಿಯೂ, ಸರ್ವೇಶ್ವರನೂ, ಎಲ್ಲರ ಐಶ್ವರ್ಯರೂಪನೂ ಆಗಿರುವನೆಂಬುದೇ ಯುಕ್ತವೆನಿಸುತ್ತದೆ. ಒಬ್ಬನೇ ಭಿನ್ನನೂ ಅಭಿನ್ನನೂ, ಮೂರ್ತನೂ ಅಮೂರ್ತನೂ, ಸತ್ಯನೂ ಅಸತ್ಯನೂ, ಜ್ಞಾನವೂ ಅಜ್ಞಾನವೂ, ಕಾರ್ಯವೂ ಕಾರಣನೂ, ವ್ಯಾಪಕನೂ ಅವ್ಯಾಪಕನೂ, ವ್ಯಾಪ್ಯನೂ ಅವ್ಯಾಪ್ಯನೂ ಆಗಿರುವುದಕ್ಕೆ ವಾಸ್ತವವಾಗಿ ವಿರೋಧವಿರುವುದರಿಂದ ಅಯುಕ್ತವಲ್ಲವೇ? ಎಂದು ಕೇಳುವ ಆಕ್ಷೇಪ ವಿಚಾರವಿಲ್ಲದೆ ಆಡುವ ಮಾತೆನಿಸುತ್ತದೆ. ಲೋಕದಲ್ಲಿಯೂ ವೇದದಲ್ಲಿಯೂ ಹೀಗೆ ಭಿನ್ನಧರ್ಮಗಳು ಒಟ್ಟಿಗೆ ಸೇರಿರುವುದಾಗಿ ಕಂಡುಬಂದಿದೆ. ಮಣ್ಣು ಗಡಿಗೆಗಳಿಗೂ, ದೀಪ ಬೆಳಕುಗಳಿಗೂ, ಚಂದ್ರಚಂದ್ರಿಕೆಗಳಿಗೂ, ಸೂರ್ಯಪ್ರಕಾಶಗಳಿಗೂ, ಶಕ್ತ ಮತ್ತು ಶಕ್ತಿಗೂ, ಭೇದ ಅಭೇದಗಳೆರಡೂ ಇರುವುದನ್ನು ಲೋಕದಲ್ಲಿ ನಾವು ಕಾಣುತ್ತೇವೆ. ಪ್ರಧಾನವು ಕಾರಣಾವಸ್ಥೆಯಲ್ಲಿ ಅಮೂರ್ತವೂ,

ಕಾರ್ಯಾವಸ್ಥೆಯಲ್ಲಿ ಮೂರ್ತವೂ ಆಗಿರುತ್ತದೆ. ಗಾಳಿ ಸಾವಯವವಾಗಿ ಒಂದು ಪ್ರದೇಶದಲ್ಲಿದ್ದು ನಿರವಯವವಾಗಿ ಸಮಸ್ತ ಜಗತ್ತನ್ನೂ ವ್ಯಾಪಿಸಿರುತ್ತದೆ. ಪ್ರತ್ಯಕ್ಷವಾದ ಸರ್ಪ ನಿತ್ಯವೂ, ಹಗ್ಗದಲ್ಲಿ ಆರೋಪಿತವಾದ ಸರ್ಪ ಅನಿತ್ಯವೂ ಆಗಿದೆ. ಗಡಿಗೆ ಮೊದಲಾದವು ಮಣ್ಣಾದ್ದರಿಂದ ಸತ್ಯವೂ, ಆಯಾ ಆಕಾರಗಳಿಂದ ಅಸತ್ಯವೂ ಆಗಿವೆ. ಚಿತ್ರದಲ್ಲಿರುವ ಪರ್ವತ ಮೊದಲಾದವು ಅಸತ್ಯವೂ, ಕಾರ್ಯೋಪಯೋಗಿಗಳಾದ ಪರ್ವತಾದಿಗಳು ಸತ್ಯವೂ ಆಗಿವೆ. ಬೆಂಕಿಹುಳದಲ್ಲಿ ಪ್ರಕಾಶ ಅಪ್ರಕಾಶವೆರಡೂ, ಜೀವನಲ್ಲಿ ಜ್ಞಾನ ಅಜ್ಞಾನವೆರಡೂ ಇರುತ್ತವೆ. ಈ ಶರೀರದಲ್ಲಿ ಚೇತನ ಜೀವನೂ ಉಗುರು ಕೂದಲು ಮೊದಲಾದ ಅಚೇತನವಸ್ತುಗಳೂ ಸೇರಿವೆ. ಜೇಡರಹುಳುವು ನೂಲಿಗೆ ನಿಮಿತ್ತವೂ ಉಪಾದಾನವೂ ಆಗಿದೆ. ದೇವತೆಗಳೂ ಯೋಗೀಶ್ವರರೂ ಏಕಕಾಲದಲ್ಲಿ ಅನೇಕ ಲೋಕಗಳಲ್ಲಿ ಇರಬಲ್ಲರು. ಆಕಾಶ ಮತ್ತು ಅದರ ಕಾರ್ಯಗಳಾದ ಗಾಳಿ ಬೆಂಕಿ ನೀರು ಭೂಮಿ ಇವು ಪೂರ್ಣವೂ ಅಪೂರ್ಣವೂ ಆಗಿರುವುದನ್ನು ಲೋಕದಲ್ಲಿ ನಾವು ಕಾಣುತ್ತೇವೆ. " ಅವನು ಸತ್ಯವೂ ಅನೃತನೂ ಆಗಿದ್ದಾನೆ " "ಅವನೇ ಅರಿವೂ ಮರವೆಯೂ ಆಗಿದ್ದಾನೆ," ಹೀಗೆ ವೇದದಲ್ಲಿಯೂ ಅನೇಕ ಕಡೆಗಳಲ್ಲಿ ಹೇಳಲಾಗಿದೆ. ಅವನು ಸರ್ವಶಕ್ತನೂ ಸ್ವತಂತ್ರನೂ ಆದ್ದರಿಂದ ಇದ್ಯಾವುದಕ್ಕೂ ವಿರೋಧವಿಲ್ಲ. " ಇಂದ್ರಿಯಗಳಿಲ್ಲದಿದ್ದರೂ ಎಲ್ಲದರಲ್ಲೂ ವ್ಯವಹರಿಸುತ್ತೇನೆ. ರೂಪವಿಲ್ಲದಿದ್ದರೂ ತಿಳಿಯುತ್ತೇನೆ." " ಎಲ್ಲಾ ವೇದಗಳಿಂದಲೂ ಜೀವನಿಗೆ ವೇದ್ಯನಾದವನು ನಾನೇಯೇ" ಹೀಗೆ ಶರೀರೇಂದ್ರಿಯಗಳನ್ನು ಅಪೇಕ್ಷಿಸದೆ ತನ್ನ ಪ್ರಾಣಶಕ್ತಿಯಿಂದಲೇ ಎಲ್ಲವನ್ನು ಶಿವನು ನಡೆಸುವನೆಂದು ಶ್ರುತಿಸ್ಮೃತಿಗಳು ಸ್ಪಷ್ಟವಾಗಿ ತಿಳಿಸುತ್ತವೆ.

**ನಿರವಯವಸ್ಯ ಬ್ರಹ್ಮಣಃ ಕಥಂ ಸಾವಯವತ್ವಂ ಪ್ರಪಂಚಕಾರಣತ್ವಮಿತ್ಯಾಶಂಕಾಯಾಮಾಹ. ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ॥ ೨೮ ॥**

**ಪರಿಚ್ಛಿನ್ನಶಕ್ತಿವಿಶಿಷ್ಟೇ ನಿರವಯವೇ ಜೀವಾತ್ಮನ್ಯೇವ ಸ್ವಮನಶ್ಶಕ್ತ್ಯಾ ಜಾಗ್ರತ್ಪ್ರಪಂಚವತ್ಸ್ವಪ್ನಕಾಲೇ ಗಜತುರಗಾದಿನಾನಾವಿಧಪ್ರಪಂಚಕಲ್ಪನವಿಚಿತ್ರಾಃ ದೃಷ್ಟಾಃ. ಏವಂ ಸರ್ವಶಕ್ತಿವಿಶಿಷ್ಟೇ ನಿರವಯವೇ ಪರಮಾತ್ಮನಿ ಪರಶಿವೇ ಸ್ವಮಾಯಾಶಕ್ತ್ಯಾ ವಿಚಿತ್ರನಾನಾವಿಧಬ್ರಹ್ಮಾಂಡಕಲ್ಪನಮುಪಪನ್ನಂ. ಕಿಂಚ ಚೇತನಪುರುಷೇಽಚೇತನಪುರುಷಕೇಶನಖಾದಿವಿಚಿತ್ರಾಃ. ಜಲಾನಲಾದೀನಾಮನ್ಯೋನ್ಯವಿಜಾತೀಯಾನಾಂ ಔಷ್ಣ್ಯಾದಿಶಕ್ತಯಶ್ಚ ವಿಜಾತೀಯಾಃ ದೃಶ್ಯಂತೇ. ತಮಃಪ್ರಕಾಶವದ್ವಿರುದ್ಧಸ್ವಭಾವವಹ್ನಿಸಲಿಲಯೋರವಿರೋಧಿತ್ವೇನ ಸಮುದ್ರೇ ದೃಷ್ಟತ್ವಾತ್, ಪುರುಷಶರೀರೇ ಜಾಠರಾಗ್ನಿದರ್ಶನಾಚ್ಚ ಲೋಕಾತೀತಸ್ಯ ಸರ್ವಮಹಿಮಾತಿಶಯಸ್ಯ ಶಿವಸ್ಯ ನ ಕಿಂಚಿದನುಪಪನ್ನಂ. ತದುಕ್ತಂ ಭಗವತಾ ಬಾದರಾಯಣೇನ. " ನಿರ್ಗುಣಸ್ಯಾಪ್ರಮೇಯಸ್ಯ ಶುದ್ಧಸ್ಯಾಪ್ಯಮಲಾತ್ಮನಃ । ಕಥಂ ಸರ್ಗಾದಿಕರ್ತೃತ್ವಂ ಬ್ರಹ್ಮಣೋಽಭ್ಯುಪ**

ಗಮ್ಯತೇ " || ಇತಿ ಪ್ರಶ್ನೇ " ಶಕ್ತಯಸ್ಸರ್ವಭಾವಾನಾಮಚಿಂತ್ಯಜ್ಞಾನ ಗೋಚರಾಃ । ಯತೋಽತೋ ಬ್ರಹ್ಮಣಸ್ತಾಸ್ತು ಸರ್ಗಾದ್ಯಾ ಭಾವ ಶಕ್ತಯಃ । ಭವಂತಿ ತಪಸಾಂ ಶ್ರೇಷ್ಠ ಪಾವಕಸ್ಯ ಯಥೋಷ್ಣತಾ || " ಇತಿ. ಶ್ರುತಿಶ್ಚ " ಕಿಂ ಸ್ವಿದ್ವನಂ ಕಂ ಉ ಸ ವೃಕ್ಷ ಆಸೀದ್ಯತೋ ದ್ಯಾವಾ ಪೃಥಿವೀ ನಿಷ್ಟತಕ್ಷುಃ " " ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀತ್ " " ಮನೀಷಿಣೋ ಮನಸೋ ವಿಬ್ರವೀಮಿ ವೋ ಬ್ರಹ್ಮಾಧ್ಯತಿಷ್ಠದ್ಭುವನಾನಿ ಧಾರಯನ್ " ಇತಿ ಶ್ರುತಿಸ್ಮೃತಿಷ್ವಪಿ ನಿರವಯವಸ್ಯ ಪರಮಶಿವಸ್ಯೈವ ಕರ್ತೃತ್ವದರ್ಶನಾತ್ತದೇವ ಯುಕ್ತಂ.

ಸಾಕಾರಶಿವನೇ ವಿಚಿತ್ರವಾದ ಈ ಜಗತ್ತಿಗೆ ಕಾರಣನಾಗಬೇಕು. ಸಾವಯವವಾದ ಈ ಜಗತ್ತಿಗೆ ನಿರಾಕಾರನಾದ ಪರಮಶಿವವು ಹೇಗೆ ಕಾರಣನಾದಾನೆಂದಾಶಂಕಿಸಿ ನಿರಾಕರಿಸುತ್ತಾನೆ—**ಆತ್ಮನಿ ಚೈವಂ ವಿಚಿತ್ರಾಶ್ಚ ಹಿ || ೨೮ ||**

ಪರಿಮಿತಶಕ್ತಿವಿಶಿಷ್ಟನೂ ನಿರವಯವನೂ ಆದ ಜೀವಾತ್ಮನಲ್ಲಿಯೇ ಅವನ ಮನಶ್ಶಕ್ತಿಯಿಂದ ಜಾಗ್ರತ್ಪ್ರಪಂಚದಂತೆಯೇ ಸ್ವಪ್ನದಲ್ಲೂ ಆನೆ ಕುದುರೆ ಮೊದಲಾದ ನಾನಾವಿಧ ಪ್ರಪಂಚವನ್ನು ಕಲ್ಪಿಸುವ ವೈಚಿತ್ರ್ಯಗಳು ಕಂಡುಬಂದಿವೆ. ಇನ್ನು ಸರ್ವ ಶಕ್ತಿವಿಶಿಷ್ಟನೂ ನಿರವಯವನೂ ಆದ ಪರಮಶಿವನಿಗೆ ತನ್ನ ಮಾಯಾಶಕ್ತಿಯಿಂದ ವಿಚಿತ್ರವೂ ನಾನಾವಿಧವೂ ಆದ ಬ್ರಹ್ಮಾಂಡಗಳ ರಚನೆಯ ಬಗ್ಗೆ ಹೇಳುವುದೇನಿದೆ? ಇದೂ ಅಲ್ಲದೆ, ಚೇತನಪುರುಷನಲ್ಲಿಯೆ, ಜಡವಾದ ಕೂದಲು ಮೊದಲಾದವು ಹುಟ್ಟುತ್ತವೆ. ನೀರು ಬೆಂಕಿ ಮೊದಲಾದ ವಿಜಾತೀಯ ವಸ್ತುಗಳಲ್ಲಿಯೇ ಬೇರೆಬೇರೆ ಶಕ್ತಿಗಳನ್ನು ಕಾಣುತ್ತೇವೆ. ಕತ್ತಲೆ ಬೆಳಕುಗಳಂತೆ ವಿರುದ್ಧಸ್ವಭಾವದ ಬೆಂಕಿ ನೀರು ಇವೆರಡೂ ಸಮುದ್ರದಲ್ಲಿ ಒಂದೇಕಡೆ ವಿರೋಧವಿಲ್ಲದಂತೆ ಸೇರಿವೆ. ಪುರುಷನ ಶರೀರದಲ್ಲಿಯೇ ಜಠರಾಗ್ನಿ ನೆಲಸಿದೆ. ಲೋಕದಲ್ಲಿಯೇ ಹೀಗಿರುವಾಗ ಲೋಕಾತೀತನೂ ಅದ್ವೈತನೂ ಮಹಿಮಾಶಾಲಿಯೂ ಆದ ಪರಶಿವನಿಗೆ ಯಾವುದು ತಾನೆ ಅಸಾಧ್ಯವಾದೀತು? " ಶುದ್ಧನೂ ನಿರ್ಮಲನೂ ಆದ ನಿರ್ಗುಣಬ್ರಹ್ಮವು ಹೇಗೆ ಜಗತ್ಕರ್ತೃವಾದೀತು? " ಎಂಬ ಪ್ರಶ್ನೆಗೆ ಬೆಂಕಿಯಲ್ಲಿ ಉಷ್ಣದಂತೆ ಆ ಬ್ರಹ್ಮದಲ್ಲಿ ಅದ್ಭುತವೂ ಅಚಿಂತ್ಯವೂ ಆದ ಶಕ್ತಿಗಳಿರುವುದರಿಂದ ಅವುಗಳಿಂದ ಜಗತ್ಸೃಷ್ಟ್ಯಾದಿಗಳು ಸಹಜವಾಗಿ ನಡೆಯುತ್ತವೆ" ಎಂಬ ಉತ್ತರ ಬಂದಿದೆ ಎಂದು ಪೂಜ್ಯ ಬಾದರಾಯನೇ ಹೇಳಿದ್ದಾನೆ. " ಈ ಪ್ರಪಂಚ ಯಾವುದನ್ನು ಆಶ್ರಯಿಸಿ ನಿಂತಿದೆ? ಭೂಮ್ಯಾಕಾಶಗಳು ಯಾವುದರಿಂದ ಹುಟ್ಟಿವೆ? " ಯಾವುದು ಇದನ್ನೆಲ್ಲಾ ಧರಿಸಿದೆ? ಈ ಪ್ರಶ್ನೆಗಳಿಗೆ. ಜಗತ್ತುಬ್ರಹ್ಮವನ್ನಾಶ್ರಯಿಸಿ ನಿಂತಿದೆ. ಭೂಮ್ಯಾಕಾಶಗಳೂ ಅವನಿಂದಲೇ ಬಂದಿವೆ. ಬ್ರಹ್ಮವೇ ಎಲ್ಲವನ್ನೂ ಧರಿಸಿದೆ ". ಹೀಗೆ ಉತ್ತರ ಬಂದಿರುವುದರಿಂದ ಶ್ರುತಿಸ್ಮೃತಿಗಳಲ್ಲೂ ನಿರವಯವ ಪರಮಶಿವನಿಗೇ ಜಗತ್ಕರ್ತೃತ್ವವನ್ನು ಹೇಳಲಾಗಿದೆ.

ನಿರವಯವಸ್ಯ ನಿರ್ಗುಣಸ್ಯ ಬ್ರಹ್ಮಣಃ ಜಗತ್ಕಾರಣತ್ವೇ ಜೀವವನ್ಮಾಯಾವಶತ್ವಮಸ್ತೀತ್ಯಾಶಂಕಾಯಾಮಾಹ. ಸ್ವಪಕ್ಷದೋಷಾಚ್ಚ ॥೨೯॥

ಸ್ವಪಕ್ಷೇ ಹ್ಯಯಸ್ಕಾಂತಸೂಚೀನ್ಯಾಯೇನ ನಿರ್ಗುಣಸ್ಯ ಬ್ರಹ್ಮಣಃ ಸತ್ತಾವಶಾತ್ಪ್ರಕೃತಿಜಗತ್ಕಾರಣತ್ವಪ್ರತಿಪಾದಕಾದ್ವೈತಪಕ್ಷೇ ದೋಷಾಚ್ಚ ನಿರವಯವಪ್ರಕೃತಿಜಗತ್ಕಾರಣದೋಷಾಚ್ಚ, ಉತ ಕೇವಲಜಡಸ್ಯ ಜಗತ್ಕಾರಣತ್ವಾಯೋಗೇನ ತತ್ಸಾನ್ನಿಧ್ಯಾತ್ ಪ್ರಧಾನಸ್ಯಾಯಸ್ಕಾಂತಸೂಚೀದೃಷ್ಟಾಂತೇನ ಜಗತ್ಕಾರಣತ್ವಾಂಗೀಕಾರೇಽಪಿ ಬ್ರಹ್ಮಣಃ ನಿರ್ವಿಶೇಷತ್ವಭಂಗಃ. ತಚ್ಛಕ್ತೇಸ್ತದಧೀನತ್ವಾತ್ ತಸ್ಯ ಸಗುಣತ್ವಮನಿವಾರ್ಯಂ. ನಿರವಯವಸ್ಯ ಪ್ರಧಾನಸ್ಯ ಮಹದಾದಿವಿಚಿತ್ರವಿಶ್ವಾಕಾರಪರಿಣಾಮತ್ವಂ ಸಾಂಖ್ಯೈರಪ್ಯಂಗೀಕೃತಂ. ಕಾಣಾದಿಭಿರಪಿ ತಥೈವ ನಿರವಯವನಿರಂಶನಿಷ್ಪ್ರದೇಶಜಡಪರಮಾಣುಸಂಯೋಜನೇನ ಜಗದಾಕಾರಪರಿಣಾಮತ್ವಮಂಗೀಕೃತಂ. ತಥಾಪಿ ಜಡಸ್ಯ ಸ್ವಾತಂತ್ರ್ಯಾಯೋಗೇನ ತತ್ಕಾರಣತ್ವಂ ಬ್ರಹ್ಮಣ್ಯರ್ಥಾತ್ಸಿದ್ಧಂ. ತಸ್ಮಾತ್ಸ್ವಪಕ್ಷದೋಷೋ ದುರ್ವಾರಃ.

ನಿರವಯವನೂ ನಿರ್ಗುಣನೂ ಆದ ಪರಶಿವನೇ ಜಗತ್ಕಾರಣನಾದರೆ ಜೀವನಂತೆ ಮಾಯೆಗೆ ಅಧೀನನಾಗುವನೆಂದು ಆಶಂಕಿಸುತ್ತಾನೆ—**ಸ್ವಪಕ್ಷದೋಷಾಚ್ಚ॥**

ಸ್ವಪಕ್ಷದಲ್ಲಿ ನಿರ್ಗುಣಬ್ರಹ್ಮದ ಇರುವಿಕೆಯಿಂದ ಪ್ರಕೃತಿಯನ್ನು ಜಗತ್ಕಾರಣವೆಂದು ಹೇಳುವ ಅದ್ವೈತಪಕ್ಷದಲ್ಲಿ ದೋಷವಿರುವುದರಿಂದ, ಜಡವೂ ನಿರವಯವವೂ ಆದ ಪ್ರಕೃತಿಯು ಜಗತ್ತಿಗೆ ಕಾರಣವಾಗಲಾರದು. ಹಾಗೆ ಬ್ರಹ್ಮಸಾನ್ನಿಧ್ಯದಿಂದ ಅದನ್ನು ಜಗತ್ಕಾರಣವೆಂದು ಒಪ್ಪಿದರೂ ಬ್ರಹ್ಮದ ನಿರ್ವಿಶೇಷತ್ವಕ್ಕೆ ಭಂಗವುಂಟಾಗುವುದು. ಶಕ್ತಿಯೂ ಅವನಿಗೇ ಅಧೀನವಾಗಿರುವುದರಿಂದ ಅವನನ್ನು ಸಗುಣನೆಂದು ಒಪ್ಪಲೇಬೇಕು. ನಿರವಯವವಾದ ಪ್ರಧಾನವು ಬುದ್ಧಿ ಮೊದಲಾದ ವಿಚಿತ್ರವಾದ ಆಕಾರದಿಂದ ಪರಿಣಮಿಸುವುದನ್ನು ಸಾಂಖ್ಯರು ಒಪ್ಪಿದ್ದಾರೆ. ವೈಶೇಷಿಕರೂ ಸಹ ಹಾಗೆಯೇ ನಿರವಯವವಾದ ಜಡಪರಮಾಣುಗಳು ಪರಸ್ಪರಸಂಯೋಗದಿಂದ ಜಗದಾಕಾರವಾಗಿ ಪರಿಣಮಿಸುತ್ತವೆ ಎಂದು ಒಪ್ಪಿದ್ದಾರೆ. ಆದರೂ ಜಡವಸ್ತುಗಳಿಗೆ ಸ್ವಾತಂತ್ರ್ಯವಿಲ್ಲದ್ದರಿಂದ ಬ್ರಹ್ಮವೇ ಅವುಗಳ ಕಾರಣನೆಂಬುದು ತಾನಾಗಿಯೇ ಸಿದ್ಧಿಸುತ್ತದೆ. ಆದ್ದರಿಂದ ಸ್ವಪಕ್ಷದೋಷವನ್ನು ನಿರ್ವಹಿಸುವುದೇ ಕಷ್ಟವಾಗುತ್ತದೆ.

ಯಾ ಮಾ ಸಾ ಮಾಯಾ ಇತಿ ವ್ಯುತ್ಪತ್ತ್ಯಾ ಮಾಯಾಯಾಶ್ಶಶಶೃಂಗತ್ವಾವಗಮಾತ್ ಜಡಾಜಡಯೋರ್ಮಾಯಾಬ್ರಹ್ಮಣೋಸ್ಸತ್ಯತ್ವಾಸತ್ಯತ್ವಸ್ವಭಾವಯೋಃ ಘಟಪಟವತ್ಪರಸ್ಪರವಿಲಕ್ಷಣತ್ವಾತ್ತದಯೋಗೇ ತಸ್ಯ ಜಗತ್ಕಾರಣತ್ವಾಯೋಗಾನ್ನಿರ್ವಿಕಾರಸ್ಯ ಮಾಯಿಕತ್ವಾಸಂಭವಾಚ್ಚ ರಜ್ಜುಸರ್ಪವದ್ಬ್ರಹ್ಮಣಿ ಮಾಯಾಧ್ಯಸ್ತವಾದಸ್ಸಮುಚಿತ ಇತ್ಯಾಶಂಕಾಯಾಮಾಹ—ಸರ್ವೋಪೇತಾ ಚ ತದ್ದರ್ಶನಾತ್ ॥ ೩೦ ॥

ಸರ್ವೋಪೇತಾ ಜಗಜ್ಜನ್ಮಾದಿಸರ್ವಶಕ್ತಿವಿಶಿಷ್ಟಾ ಪರಾಶಕ್ತಿಃ. ತದ್ದರ್ಶನಾತ್ ತಸ್ಮಿನ್ ಪರಶಿವಬ್ರಹ್ಮಣಿ ದರ್ಶನಾತ್ ಶ್ರುತಿಪ್ರತಿಪಾದಿತತ್ವಾದಿತ್ಯರ್ಥಃ. "ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ." "ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ." "ಇಂದ್ರೋ ಮಾಯಾಭಿಃ ಪುರುರೂಪ ಈಯತೇ" ಇತ್ಯಾದಿಶ್ರುತಿಷು ಸರ್ವಗತಸ್ಯ ನಿರವಯವಸ್ಯ ಪರಮೇಶ್ವರಸ್ಯ ಸ್ವಾಭಾವಿಕಸರ್ವಶಕ್ತಿಮತ್ತ್ವಂ ಪ್ರತಿಪಾದ್ಯತೇ. ತಸ್ಮಾನ್ನ ಕದಾಚಿದಪಿ ನಿರ್ವಿಶೇಷಂ ಬ್ರಹ್ಮ ತ್ರಿಗುಣಾತ್ಮಕಜಗದುಪಾದಾನಕಾರಣಂ ಭವೇತ್. ತಸ್ಯ ಶಕ್ತಿದ್ವಯವಿಶಿಷ್ಟತಯಾ ಮಾಯಾ ಭಿನ್ನಶಕ್ತಿಃ, ಚಿಚ್ಛಕ್ತಿರಭಿನ್ನಶಕ್ತಿಃ. ಏವಂ ಸ್ವತಂತ್ರಾಘಟಿತಘಟನಸಮರ್ಥೋಽದ್ವಿತೀಯಶ್ಶಿವಃ ಕಾಲತ್ರಯೇಽಪ್ಯೇಕರೂಪತಯಾ ಸ್ಥಿತಃ. ತಸ್ಯ ನಿರ್ವಿಶೇಷತ್ವೇ ಜಗತ್ಕಾರಣತ್ವಂ ನ ಸಂಭವತಿ. ಏವಂ ತಸ್ಯ ಸ್ವಾಭಾವಿಕಶಕ್ತಿಮತ್ತ್ವ ಸರ್ವಕಾರಣತ್ವಾದಿದರ್ಶನೇನ ತದಧ್ಯಸ್ತಮಿಥ್ಯಾವಾದೋ ನ ಯುಕ್ತಃ.

"ಯಾವುದು ಇಲ್ಲವೋ ಅದೇ ಮಾಯೆ" ಎಂಬ ವ್ಯುತ್ಪತ್ತಿಯಿಂದ ಮಾಯೆಯು ಮೊಲದ ಕೊಂಬಿಗೆ ಸಮವೆಂದು ತಿಳಿದುಬರುತ್ತದೆ. ಜಡವೂ ಅಸತ್ಯವೂ ಆದ ಮಾಯೆಗೂ ಚೇತನನೂ ಸತ್ಯಸ್ವರೂಪನೂ ಆದ ಪರಶಿವನಿಗೂ ಘಟಪಟಗಳಂತೆ ಪರಸ್ಪರ ಭೇದವೇ ಇದೆ. ಆದರೂ ಅದರ ಸಂಬಂಧವಿಲ್ಲದೆ ಅವನು ಜಗತ್ಕಾರಣನಾಗಲಾರನು. ನಿರ್ವಿಕಾರನಾದ್ದರಿಂದ ಅವನಿಗೆ ಮಾಯೆಯ ಸಂಬಂಧ ಹೊಂದುವುದಿಲ್ಲ. ಆದ್ದರಿಂದ ರಜ್ಜುಸರ್ಪದಂತೆ ಮಾಯೆಯಲ್ಲಿ ಅವನು ಅಧ್ಯಸ್ತನಾಗುವನೆಂದಾಶಂಕಿಸಿ ನಿರಾಕರಿಸುತ್ತಾನೆ. **"ಸರ್ವೋಪೇತಾ ಚ ತದ್ದರ್ಶನಾತ್ ॥ ೩೦ ॥**

ಸರ್ವೋಪೇತಾ ಎಂದರೆ ಜಗತ್ತಿನ ಸೃಷ್ಟಿಸ್ಥಿತಿಸಂಹಾರಕತಿರೋಧಾನ ಅನುಗ್ರಹವೆಂಬ ಐದು ಕಾರ್ಯಗಳನ್ನು ನಿರ್ವಹಿಸಲು ಸಮರ್ಥವಾದ ಪರಾಶಕ್ತಿ ಎಂದರ್ಥ. ಇದು ಪರಶಿವನಲ್ಲಿ ಪ್ರಾಣಸ್ವರೂಪವಾಗಿ ಬೇರ್ಪಡಿಸಲಾಗದಂತೆ ನೆಲಸಿದೆ ಎಂದು ಶ್ರುತಿಯಲ್ಲಿ ಕಂಡುಬರುತ್ತದೆ. "ಪರಾಶಕ್ತಿಯು ಅವನಲ್ಲಿ ಸ್ವಾಭಾವಿಕವಾಗಿದೆ." "ಅವನು ಮಾಯೆಗೆ ಅಧಿಪತಿಯಾಗಿದ್ದಾನೆ." "ಸಮರ್ಥನಾದ ಪರಶಿವನು ಮಾಯಾಶಕ್ತಿಗಳಿಂದಲೇ ವಿಸ್ತಾರವಾಗಿ ವ್ಯಾಪಿಸಿರುವನು. ಈ ಶ್ರುತಿಗಳು ಸರ್ವಗತನೂ ನಿರವಯವನೂ ಆದ ಪರಶಿವನ ಸ್ವಭಾವಿಕ ಶಕ್ತಿಯನ್ನು ತಿಳಿಸುತ್ತವೆ. ಆದ್ದರಿಂದ ನಿರ್ವಿಶೇಷಬ್ರಹ್ಮವು ಎಂದಿಗೂ ತ್ರಿಗುಣಮಯವಾದ ಜಗತ್ತಿಗೆ ಉಪಾದಾನಕಾರಣವಾಗಲಾರದು. ಅವನ ಎರಡು ಬಗೆಯ ಶಕ್ತಿಗಳಲ್ಲಿ ಒಂದು ಭಿನ್ನಶಕ್ತಿ; ಅದೇ ಮಾಯಾಶಕ್ತಿ. ಮತ್ತೊಂದು ಅಭಿನ್ನಶಕ್ತಿ; ಅದೆ ಚಿತ್‌ಶಕ್ತಿ. ಆದ್ದರಿಂದಲೇ ಶಿವನು ಸ್ವತಂತ್ರನೂ, ಅಘಟಿತಘಟನಾಸಮರ್ಥನೂ, ಅದ್ವಿತೀಯನೂ, ಮೂರು ಕಾಲದಲ್ಲೂ ಏಕರೂಪನೂ ಆಗಿದ್ದಾನೆ. ನಿರ್ವಿಶೇಷಬ್ರಹ್ಮಕ್ಕೆ ಜಗತ್ಕಾರಣವೆಂಬುದೇ ಸಂಭವಿಸುವುದಿಲ್ಲ. ಶ್ರುತ್ಯಾ

ಗಮಗಳಲ್ಲಿ ಪರಶಿವನನ್ನು ಸ್ವಾಭಾವಿಕಶಕ್ತಿಮಂತನೆಂದೂ, ಸರ್ವಕಾರಣನೆಂದೂ ಹೇಳಿರುವುದರಿಂದ ಮಾಯೆಯಲ್ಲಿ ಅಧ್ಯಸ್ತನಾಗಿರುವನೆಂಬುದು ಯುಕ್ತವಲ್ಲ.

**ಸರ್ವಶಕ್ತಿಮತ್ತ್ವೇನ ಬ್ರಹ್ಮಣಃ ಜಗತ್ಕಾರಣತ್ವಾಂಗೀಕಾರೇ ಮೃದಾದಿವತ್ಪರಿಣಾಮಿತ್ವವಿಕಾರಿತ್ವಾದಿದೋಷಃ ಪ್ರಸಜ್ಯೇತ ಇತ್ಯಾಶಂಕಾಯಾಮಾಹ. ವಿಕರಣತ್ವಾನ್ನೇತಿ ಚೇತ್ತದುಕ್ತಂ ॥ ೩೧ ॥**

**ವಿಕರಣತ್ವಾತ್ "ಅಚಕ್ಷುಶ್ಶ್ರೋತ್ರಂ ತದಪಾಣಿಪಾದಂ" ಇತ್ಯಾದೌ ವಿಕರಣತ್ವಾತ್ ಶರೀರೇಂದ್ರಿಯಾದಿಸಾಧನರಹಿತತ್ವಾತ್, ನೇತಿ ಚೇತ್ ಬ್ರಹ್ಮಣಃ ಜಗತ್ಕಾರಣತ್ವಂ ನ ಸಂಭವತೀತಿ ಚೇತ್ತದುಕ್ತಂ ತತ್ರೋತ್ತರಂ "ಶಬ್ದಮೂಲತ್ವಾತ್" "ವಿಚಿತ್ರಾಶ್ಚ ಹಿ" ಇತ್ಯಾದಿನಾ. ವೇದೈಕಪ್ರಮಾಣಸ್ಯ ಬ್ರಹ್ಮಣಶ್ಶರೀರೇಂದ್ರಿಯಾದ್ಯಭಾವೇಽಪಿ ಸರ್ವಕಾರ್ಯಸಮರ್ಥತ್ವಮುಪಪನ್ನಂ. "ಅಪಾಣಿಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ" ಇತಿ ಶ್ರುತಿರ್ಭಗವತಃ ಪ್ರಮಾಣಭೂತಾ. "ಪರಾಽಸ್ಯ ಶಕ್ತಿಃ," "ಪಾದೋಽಸ್ಯ ವಿಶ್ವಾ ಭೂತಾನಿ" ಇತ್ಯಾದಿಷು ವಿಚಿತ್ರಾನಂತಶಕ್ತಸ್ಯ ಪರಶಿವಸ್ಯ ಸ್ವಶಕ್ತ್ಯೇಕಾಂಶೇನ ಜಗದಾತ್ಮಕತ್ವಂ ಸ್ವತೋ ಜಗದ್ವಿಲಕ್ಷಣತ್ವಂ ಚ ವ್ಯಪದಿಶ್ಯತೇ. ಶೈವಪುರಾಣೇ ಚ "ವಿಶ್ವೋತ್ತರೋತ್ತರವಿಚಿತ್ರಮನೋರಥಸ್ಯ ಯಸ್ಯೈಕಶಕ್ತಿಶಕಲೇ ಸಕಲಸ್ಸಮಾಪ್ತಃ। ಅಧ್ವಾನಮಧ್ವಪತಿಮಧ್ವವಿದೋ ವದಂತಿ ತಸ್ಮೈ ನಮಸ್ಸಕಲಲೋಕವಿಲಕ್ಷಣಾಯ॥" ಇತಿ ದರ್ಶಿತಂ. ಅತಸ್ಸರ್ವಶಕ್ತಿವಿಶಿಷ್ಟಸರ್ವೇಶ್ವರಃ ಪರಮಶಿವ ಏವ ಸರ್ವದಾ ಮುಮುಕ್ಷುಭಿರಾಶ್ರಯಣೀಯಃ.**

ಸರ್ವಶಕ್ತನಾದ್ದರಿಂದ ಶಿವನನ್ನು ಜಗತ್ಕಾರಣನೆಂದು ಒಪ್ಪಿದರೆ ಅವನಿಗೆ ಮಣ್ಣಿನಂತೆ ವಿಕಾರಪರಿಣಾಮಗಳ ದೋಷವು ಅಂಟುವುದೆಂದಾಶಂಕಿಸಿ ನಿರಾಕರಿಸುತ್ತಾನೆ—**ವಿಕರಣತ್ವಾನ್ನೇತಿ ಚೇತ್ತದಯುಕ್ತಂ ॥ ೩೧ ॥**

"ಕಣ್ಣು ಕಿವಿ ಕೈಕಾಲುಗಳಿಲ್ಲದವನು" ಎಂದು ಶ್ರುತಿಯಲ್ಲಿ ಶಿವನಿಗೆ ದೇಹೇಂದ್ರಿಯಾದಿ ಸಾಧನಗಳಿಲ್ಲವೆಂದು ಹೇಳಿದೆ. ಆದ್ದರಿಂದ ಶಿವನು ಜಗತ್ಕಾರಣನಾಗಲಾರನು ಎಂದು ಕೇಳಿದರೆ ಅದಕ್ಕೆ ಉತ್ತರವನ್ನು ಹಿಂದಿನ ಸೂತ್ರಗಳಲ್ಲಿ ತಿಳಿಸಲಾಗಿದೆ. ಶಿವನು ಇಂದ್ರಿಯಗಳಿಲ್ಲದಿದ್ದರೂ ಎಲ್ಲಾ ಕಾರ್ಯಗಳನ್ನು ನಡೆಸಬಲ್ಲನೆಂದು ಶ್ರುತಿಯೇ ಸ್ಪಷ್ಟವಾಗಿ ಹೇಳಿದೆ. "ಕೈಕಾಲುಗಳಿಲ್ಲದಿದ್ದರೂ ಎಲ್ಲವನ್ನೂ ಹಿಡಿದಿದ್ದೇನೆ." ಕಣ್ಣಿಲ್ಲದಿದ್ದರೂ ಎಲ್ಲವನ್ನು ನೋಡುತ್ತೇನೆ. ಕಿವಿಯಿಲ್ಲದಿದ್ದರೂ ಕೇಳುತ್ತೇನೆ" ಈ ಶ್ರುತಿಯೇ ಶಿವನು ಜಗತ್ಕಾರಣನೆಂಬುದಕ್ಕೆ ಪ್ರಮಾಣವಾಗಿದೆ. "ಅವನ ಶಕ್ತಿ ಅನಂತವಾಗಿದೆ." "ಅವನ ಒಂದು ಪಾದವೇ ವಿಶ್ವವನ್ನು ಏರಿಸಿದೆ. ಉಳಿದ ಪಾದಗಳು ಅಮೃತವಾಗಿವೆ" ಈ ಶ್ರುತಿಗಳಲ್ಲಿ ವಿಚಿತ್ರಾನಂತ ಶಕ್ತಿವಿಶಿಷ್ಟನಾದ ಪರಶಿವನು ತನ್ನ ಶಕ್ತಿಯ ಒಂದಂಶದಿಂದ ಜಗದ್ರೂಪನೂ, ಸ್ವತಃ ಜಗದ್ವಿಲಕ್ಷಣನೂ ಆಗಿರುವನೆಂದು

ತಿಳಿಸಲಾಗಿದೆ. ಶೈವಪುರಾಣದಲ್ಲಿ "ವಿಶ್ವಕ್ಕೆ ಮೀರಿದ ವಿಚಿತ್ರಸಂಕಲ್ಪಗಳುಳ್ಳ ಪರಶಿವನ ಒಂದು ಶಕ್ತಿಯ ಅಂಶದಲ್ಲಿಯೇ ಎಲ್ಲವೂ ಮುಗಿದಿದೆ. ಅವನನ್ನು ಅಧ್ವನೆಂದೂ, ಅಧ್ವಪತಿ ಎಂದೂ ಅಧ್ವವಿಜ್ಞಾನಿಗಳು ಹೇಳುತ್ತಾರೆ. ಹೀಗೆ ಸಕಲಲೋಕ ವಿಲಕ್ಷಣನಾದ ಶಿವನಿಗೆ ನಮಸ್ಕರಿಸುತ್ತೇನೆ" ಎಂದು ಹೇಳಿದೆ. ಆದ್ದರಿಂದ ಸರ್ವಶಕ್ತಿ ವಿಶಿಷ್ಟನೂ ಸರ್ವೇಶ್ವರನೂ ಆದ ಪರಮಶಿವನೇ ಯಾನಾಗಲೂ ಮುಮುಕ್ಷುಗಳಿಗೆ ಆಶ್ರಯಸ್ಥಲವಾಗಿರುವನೆಂದು ತಿಳಿಯಬೇಕು.

ನಿರ್ವಿಶೇಷಸ್ಯ ನಿರ್ವಿಕಾರಸ್ಯ ಬ್ರಹ್ಮಣಃ ಜಗತ್ಕಾರಣತ್ವೇ ವಿಕಾರಿತ್ವಂ ಪ್ರಸಜ್ಯೇತ, ತಸ್ಮಾನ್ಮಾಯಾಶಬಲಿತಬ್ರಹ್ಮಣ ಏವ ಜಗತ್ಕಾರಣತ್ವಮಿತ್ಯಾಶಂಕ್ಯ ನಿರಾಕರೋತಿ— ನ ಪ್ರಯೋಜನವತ್ತ್ವಾತ್ ॥ ೩೨ ॥

"ಪರಾಽಸ್ಯ ಶಕ್ತಿಃ" ಇತಿ ಶ್ರುತಿದರ್ಶನಾತ್ ಬ್ರಹ್ಮಣಃ ಕದಾಚಿದಪಿ ನಿರ್ವಿಶೇಷತ್ವಂ ನ ಸಂಭವತಿ, ಪ್ರಯೋಜನವತ್ತ್ವಾತ್. "ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ' ಇತ್ಯಾದೌ ಜಗಜ್ಜನ್ಮಾದಿಪ್ರಯೋಜನಸ್ಯ ಬ್ರಹ್ಮಣ್ಯೇವ ದರ್ಶನಾತ್, "ಸಂಸಾರ ಮೋಕ್ಷಸ್ಥಿತಿಬಂಧಹೇತುಃ"ಇತ್ಯಾದೌ ಬ್ರಹ್ಮಣಃ ಪ್ರಯೋಜನವತ್ತ್ವಾವಗಮಾತ್, "ಅಮೃತಸ್ಯ ದೇವಧಾರಣೋ ಭೂಯಾಸಂ" ಇತ್ಯಾದೌ ಭಕ್ತತಾರಣಾರ್ಥಂ ಸ್ಥೂಲಸೂಕ್ಷ್ಮಕಾರಣಶರೀರೇಷು ಇಷ್ಟಪ್ರಾಣಭಾವಸಂಜ್ಞಿಕಲಿಂಗರೂಪೇಣ ಧಾರಣಪ್ರಯೋಜನವ್ಯಪದೇಶಾತ್ ಪ್ರಕರ್ಷೇಣ ಯೋಜನಂ ಅಸ್ಯಾಸ್ತೀತಿ ಪ್ರಯೋಜನವಾನ್. ತದ್ಭಾವಾತ್ಪ್ರಕರ್ಷೇಣ ಪರಮಪ್ರೇಮಾಸ್ಪದತ್ವೇನ ಯೋಜನಂ ಪ್ರಯೋಜನಂ ಸಂಯೋಜನಂ ಸ್ಥೂಲಾ...ಶರೀರೇಷು ಇಷ್ಟಾದಿಲಿಂಗರೂಪೇಣ ಧಾರಣಂ ಸಂಭವತಿ. "ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ" ಇತಿ ನ್ಯಾಯೇನ ಮುಮುಕ್ಷೂಣಾಂ ಪ್ರಯೋಜನಾಭಾವೇ ತಂ ನ ಕೋಽಪ್ಯಾಶ್ರಯೇತ. ಸರ್ವೇಷಾಂ ಚ ಭಕ್ತಾನಾಮೈಹಿಕಾಮುಷ್ಮಿಕಫಲಪ್ರಯೋಜನಂ ಫಲಪ್ರಾಪ್ತಿರ್ನಿರ್ವಿಶೇಷೇ ನೋಪಪದ್ಯತೇ. ಅತಃ ರಜ್ಜುಸರ್ಪವನ್ಮಾಯಾಶಬಲಿತಬ್ರಹ್ಮಕಾರಣತ್ವವಾದೋ ಹ್ಯವಿಚಾರಿತರಮಣೀಯಃ. ಜಲಾದಿಪ್ರತಿಬಿಂಬವದಲೀಕಸ್ಯ ಜಡಸ್ಯ ಮಾಯಾಪ್ರತಿಫಲಿತಸ್ಯ ಜಗತ್ಕಾರಣತ್ವಾಯೋಗಾತ್,'ನಿಷ್ಕಲಂ ನಿಷ್ಕ್ರಿಯಂ ಶಾಂತಂ,' "ಏತಸ್ಮಾಜ್ಜಾಯತೇ ಪ್ರಾಣಃ" ಇತ್ಯಾದಿಷು ನಿಷ್ಕ್ರಿಯತ್ವಸ್ಯ ಕ್ರಿಯಾಶ್ರಯತ್ವಸ್ಯ ಚ ದ್ಯೋತನಾತ್ ಜಗಜ್ಜನ್ಮಾದಿಕಾರಣತ್ವಂ ನಿರ್ವಿಶೇಷಬ್ರಹ್ಮಣಃ ಸವಿಶೇಷ ಶಬಲಸ್ಯ ವೇತಿ ಸಂದಿಹ್ಯತೇ. ನಿರ್ವಿಶೇಷಚಿನ್ಮಾತ್ರಬ್ರಹ್ಮಣಿ ನ ಕದಾಚಿದಪಿ ಜಗಜ್ಜನ್ಮಾದಿಹೇತುತ್ವಂ ಸಂಭವತಿ, ನಿರ್ವಿಕಾರತ್ವಾನ್ನಿಷ್ಕ್ರಿಯತ್ವಾನ್ನಿಶ್ಶಕ್ತಿಕತ್ವಾಚ್ಚ. ಅತಸ್ತತ್ರಾರೋಪಿತಮಾಯಾಕಲ್ಪಿತಶಬಲೇಶ್ವರಸ್ಯ

ಜಗತ್ಕಾರಣತ್ವಮುಪಪನ್ನಮಿತಿ ಪ್ರಾಪ್ತೇ ಸಿದ್ಧಾಂತಮಾಹ ನ ಪ್ರಯೋ
ಜನವತ್ತ್ವಾದಿತಿ. "ಪರಾಽಸ್ಯ ಶಕ್ತಿ"ರಿತಿ ಶ್ರುತಿದರ್ಶನಾದ್ಬ್ರಹ್ಮಣಸ್ಸವಿಶೇ
ಷತ್ವಂ ಸಂಭವತಿ, ಕುತಃ ಪ್ರಯೋಜನವತ್ತ್ವಾತ್. ಸವಿಶೇಷಬ್ರಹ್ಮಣ್ಯೇವ
ಸರ್ವೇಷಾಂ ವೇದಾಂತಾನಾಂ ದೇವಮನುಷ್ಯಾಣಾಂ ಚ ಸರ್ವಾಭೀಷ್ಟ
ಪ್ರದಾನತಯಾ ಪ್ರಯೋಜನವತ್ತ್ವಾತ್ ಮಾಯಾವಾದಿಮತಮಧ್ಯಾತ್ಮ
ವಾದಿಭಿರನಾದರಣೀಯಂ. ತಥಾಹಿ ನಿರ್ವಿಶೇಷವಸ್ತುವಾದಿಭಿರ್ನಿರ್ವಿ
ಶೇಷೇ ವಸ್ತುನಿ ಇದಂ ಪ್ರಮಾಣಮಿತಿ ಕಥಂ ವಕ್ತುಂ ಶಕ್ಯತೇ, ಸವಿಶೇಷ
ವಸ್ತುವಿಷಯತ್ವಾತ್ ಸರ್ವಪ್ರಮಾಣಾನಾಂ. ಯಸ್ತು ಸ್ವಾನುಭವಸಿದ್ಧಃ
ಸ್ವಗೋಷ್ಠಿನಿಷ್ಠಸ್ಸಮಯಃ ಸೋಽಪ್ಯಾತ್ಮಸಾಕ್ಷಿಕಂ ಸವಿಶೇಷಾನುಭವೇನ
ನಿರಸ್ತಃ. "ಇದಮಹಮದರ್ಶಂ" ಇತಿ ಯತ್ಕಿಂಚಿದ್ವಿಶೇಷವಿಶಿಷ್ಟವಿಷಯ
ತ್ವಾತ್ ಸರ್ವೇಷಾಮನುಭವಾನಾಂ ಸವಿಶೇಷಮನುಭೂಯಮಾನೋಽ
ನುಭವಃ ಕೇನಚಿದುಕ್ತ್ಯಾಭಾಸೇನ ನಿರ್ವಿಶೇಷ ಇತಿ ನಿಷ್ಕೃಷ್ಯಮಾಣಃ
ನಿಷ್ಕರ್ಷಹೇತುಭೂತೈಸ್ಸತ್ತಾತಿರಿಕ್ತೈಸ್ಸ್ವಸಾಧಾರಣೈಸ್ಸ್ವಭಾವವಿಶೇ
ಷೈಸ್ಸವಿಶೇಷ ಏವಾವತಿಷ್ಠತೇ. ತತಃ ಕೈಶ್ಚಿದ್ವಿಶೇಷೈರ್ವಿಶಿಷ್ಟಸ್ಯೈವ
ವಸ್ತುನೋಽನ್ಯೇ ವಿಶೇಷಾ ನಿರಸ್ಯಂತ ಇತಿ ನ ಕ್ವಚಿನ್ನಿರ್ವಿಶೇಷವಸ್ತು
ಸಿದ್ಧಿಃ. ಧಿಯೋ ಹಿ ಸೋಪಾಧಿಕತ್ವಸ್ಯ ಸ್ವಪ್ರಕಾಶತ್ವಸ್ಯ ಚ ಜ್ಞಾತುರ್ವಿಷ
ಯಪ್ರಕಾಶನಸ್ವಭಾವತಯೋಪಲಬ್ಧೇಃ, ಸ್ವಾಪಮದಮೂರ್ಛಾಸು ಚ
ಸವಿಶೇಷ ಏವಾನುಭವ ಇತಿ ಸ್ವಾವಸರೇ ನಿಪುಣತರಮುಪಪಾದಯಿ
ಷ್ಯಾಮಃ. ಸ್ವಾಭ್ಯುಪಗತಾಶ್ಚ ನಿತ್ಯತ್ವಾದಯೋ ಹ್ಯನೇಕವಿಶೇಷಾಸ್ಸಂ
ತ್ಯೇವ. ತೇ ಚ ನ ವಸ್ತುಮಾತ್ರಮಿತಿ ಶಕ್ಯೋಪಪಾದನಾಃ. ವಸ್ತುಮಾ
ತ್ರಾಭ್ಯುಪಗಮೇ ಸತ್ಯಪಿ ತತ್ಪ್ರಕಾರಭೇದವಿವಾದದರ್ಶನಾತ್ ಸ್ವಾಭಿಮತ
ತತ್ಪ್ರಕಾರಭೇದೈಶ್ಚ ಸ್ವಮತೋಪಪಾದನಾತ್ ಪ್ರಾಮಾಣಿಕೈಸ್ಸವಿಶೇಷ
ಮೇವ ವಸ್ತ್ವಿತಿ ವಕ್ತವ್ಯಂ. ಶಬ್ದಸ್ಯ ತು ವಿಶೇಷೇಣ ಸವಿಶೇಷ ಏವ
ವಸ್ತುನ್ಯಭಿಧಾನಸಾಮರ್ಥ್ಯಂ ಪದವಾಕ್ಯರೂಪೇಣ ಪ್ರವೃತ್ತೇಃ. ಪ್ರಕೃತಿ
ಪ್ರತ್ಯಯಯೋಗೇನ ಹಿ ಪದತ್ವಂ. ಪ್ರಕೃತಿಪ್ರತ್ಯಯಯೋರರ್ಥಭೇದೇನ
ಪದಸ್ಯೈವ ವಿಶೇಷಾರ್ಥಪ್ರತಿಪಾದನಮವರ್ಜನೀಯಂ. ಪದಭೇದಶ್ಚಾ
ರ್ಥಭೇದನಿಬಂಧನಃ. ಪದಸಂಘಾತರೂಪಸ್ಯ ವಾಕ್ಯಸ್ಯಾನೇಕಪದಾರ್ಥ
ಸಂಸರ್ಗವಿಶೇಷಾಭಿಧಾಯಿತ್ವೇನ ನಿರ್ವಿಶೇಷವಸ್ತುಪ್ರತಿಪಾದನಾಽಸಾಮ
ರ್ಥ್ಯಾತ್ ನ ನಿರ್ವಿಶೇಷವಸ್ತುನಿ ಶಬ್ದಃ ಪ್ರಮಾಣಂ. ಪ್ರತ್ಯಕ್ಷಸ್ಯ ನಿರ್ವಿ
ಕಲ್ಪಕಸವಿಕಲ್ಪಕಭೇದಭಿನ್ನಸ್ಯ ನ ನಿರ್ವಿಶೇಷವಸ್ತುನಿ ಪ್ರಾಮಾಣ್ಯಂ.
ಸವಿಕಲ್ಪಕಂ ಜಾತ್ಯಾದ್ಯನೇಕಪದಾರ್ಥವಿಶಿಷ್ಟವಿಷಯತ್ವಾದೇವ ಸವಿಶೇಷ
ವಿಷಯಂ. ನಿರ್ವಿಕಲ್ಪಕಮಪಿ ಸವಿಶೇಷವಿಷಯಮೇವ. ಸವಿಕಲ್ಪಕೇ

**ಸ್ವಸ್ಮಿನ್ನನುಭೂತಪದಾರ್ಥವಿಶಿಷ್ಟಪ್ರತಿಸಂಧಾನಹೇತುತ್ವಾತ್ ನಿರ್ವಿಕಲ್ಪಕಂ ನಾಮ ಕೇನಚಿದ್ವಿಶೇಷೇಣ ನಿಯುಕ್ತಸ್ಯ ಗ್ರಹಣಂ; ನ ಸರ್ವವಿಶೇಷರಹಿತಸ್ಯ. ತಥಾಭೂತಸ್ಯ ಕದಾಚಿದಪಿ ಗ್ರಹಣಾದರ್ಶನಾದನುಪಪತ್ತೇಶ್ಚ. ಕೇನಚಿದ್ವಿಶೇಷೇಣೇದಮಿತ್ಥಮಿತಿ ಹಿ ಸರ್ವಾ ಪ್ರತೀತಿರೂಪಜಾಯತೇ. ತಸ್ಮಾತ್ಪೂರ್ವೋಕ್ತಮೇವ ಸಮಂಜಸಂ.**

ನಿರ್ವಿಶೇಷನೂ ನಿರ್ವಿಕಾರನೂ ಆದ ಪರಶಿವನು ಜಗತ್ಕಾರಣನಾದರೆ ವಿಕಾರಿಯಾಗಬೇಕಾಗುತ್ತದೆ. ಆದ್ದರಿಂದ ಮಾಯೆಯೊಡಗೂಡಿದ ಈಶ್ವರನು ಜಗತ್ಕಾರಣನಾಗಲೆಂದು ಆಶಂಕಿಸಿ ನಿರಾಕರಿಸುತ್ತಾನೆ—**ನ ಪ್ರಯೋಜನವತ್ತ್ವಾತ್** ॥೩೨॥

"ಶಕ್ತಿಯು ಅನೇಕ ಬಗೆಯಿಂದ ಶಿವನಲ್ಲಿ ಸಹಜವೆನಿಸಿದೆ" ಎಂಬ ಶ್ರುತಿಯಿಂದ ಶಿವನು ಎಂದಿಗೂ ನಿರ್ವಿಶೇಷನಾಗಲಾರನು. "ಯಾವನಿಂದ ಈ ಜೀವರು ಹುಟ್ಟಿ ಬೆಳೆದು ಯಾವನಲ್ಲಿ ಮತ್ತೆ ಸೇರುತ್ತಾರೋ" ಎಂಬ ಶ್ರುತಿಯಲ್ಲಿ ಶಿವನು ಜಗತ್ತಿಗೆ ಆಶ್ರಯಸ್ಥಲವಾಗಿರುವನೆಂಬ ಪ್ರಯೋಜನವನ್ನು ತಿಳಿಸಲಾಗಿದೆ. ಇದೂ ಅಲ್ಲದೆ, "ಶಿವನು ಪ್ರಧಾನ ಜೀವರಿಗೆ ಪತಿಯೂ, ಗುಣಗಳಿಗೆ ನಿಯಾಮಕನೂ ಜೀವರ ಬಂಧಮೋಕ್ಷಗಳಿಗೆ ಕಾರಣನೂ ಆಗಿರುವನು" ಎಂಬಲ್ಲಿಯೂ ಶಿವನಿಗೆ ಪ್ರಯೋಜನವನ್ನು ಹೇಳಲಾಗಿದೆ. "ಅಮೃತತ್ವಕ್ಕಾಗಿ ದೇವನನ್ನು ಧರಿಸುತ್ತೇನೆ. ಲಿಂಗದ ಸಂಪರ್ಕದಿಂದ ನನ್ನ ಶರೀರ ಬಲಿಷ್ಠವಾಗಲಿ," "ದೇಹದ ಎಲ್ಲಾ ಅವಯವಗಳಲ್ಲೂ ನೆಲಸಿರುವ ಈ ಪವಿತ್ರವಾದ ಲಿಂಗವನ್ನು ಪಾಣಿಯಲ್ಲಿ ಅರ್ಚನೆಗಾಗಿ ಧರಿಸುತ್ತೇನೆ" ಈ ಶ್ರುತಿಗಳಲ್ಲೂ ಭಕ್ತನ ಉದ್ಧಾರಕ್ಕಾಗಿ ಸ್ಥೂಲಸೂಕ್ಷ್ಮಕಾರಣ ಶರೀರಗಳಲ್ಲಿ ಪರಶಿವನನ್ನು ಇಷ್ಟಪ್ರಾಣಭಾವಲಿಂಗರೂಪದಿಂದ ಧರಿಸುವುದೇ ಪ್ರಯೋಜನವೆನಿಸಿದೆ. ಇಲ್ಲಿ ಪ್ರಯೋಜನವೆಂದರೆ "ಪ್ರಕರ್ಷೇಣ ಯೋಜನಂ" ಶಿವನನ್ನು ತನಗೆ ಪರಮಪ್ರೇಮಾಸ್ಪದನೆಂದು ಭಾವಿಸಿ ಭಕ್ತನು ತನ್ನ ಮೂರುದೇಹಗಳಲ್ಲಿ ಮೂರು ಲಿಂಗಗಳ ರೂಪದಿಂದ ಧರಿಸುವುದೆಂದು ಅರ್ಥವಾಗುತ್ತದೆ. ಪ್ರಯೋಜನವಿಲ್ಲದೆ ಯಾವ ಮೂಢನೂ ಬಂದು ಕಾರ್ಯದಲ್ಲಿ ತೊಡಗುವುದಿಲ್ಲವಾದ್ದರಿಂದ ಮುಮುಕ್ಷುಗಳು ದೇಹದಲ್ಲಿ ಲಿಂಗಧಾರಣವಿಲ್ಲದೆ ಲಿಂಗಸ್ವರೂಪನಾದ ಶಿವನನ್ನು ಹೇಗೆ ಕಂಡಾರು? ಹೀಗೆ ಭಕ್ತರ ಇಹಪರ ಸುಖಗಳು ಪ್ರಯೋಜನವನ್ನವಲಂಬಿಸಿರುವುದರಿಂದ ಇಂತಹ ಪ್ರಯೋಜನವು ನಿರ್ವಿಶೇಷವಸ್ತುವಿನಿಂದ ದೊರಕಲಾರದು. ಆದ್ದರಿಂದ ಅದ್ವೈತಮತದ ರಜ್ಜುಸರ್ಪದಂತೆ ಮಾಯೆಯೊಳಗೆ ಸಿಲುಕಿದ ಈಶ್ವರನು ಜಗತ್ಕಾರಣನೆಂಬ ವಾದ ವಿಚಾರಶೂನ್ಯವೆನಿಸುತ್ತದೆ. ನೀರಿನಲ್ಲಿ ಕಾಣುವ ನೆರಳಿನಂತೆ ತೋರಿಕೆಯ ಈಶ್ವರನು ಜಗತ್ಕಾರಣನಾಗಲಾರನು. "ನಿಷ್ಕಲನು ಮತ್ತು ನಿಷ್ಕ್ರಿಯನು" ಎಂಬಲ್ಲಿ ಶಿವನು ನಿಷ್ಕ್ರಿಯನೆಂದೂ, "ಇವನಿಂದ ಪ್ರಾಣಾದಿಗಳು ಪುಟ್ಟುತ್ತವೆ" ಎಂಬಲ್ಲಿ ಶಿವನು ಕ್ರಿಯಾಶ್ರಯನೆಂದೂ ಹೇಳಿರುವುದರಿಂದ ಜಗತ್ಕಾರಣತ್ವವು ನಿರ್ವಿಶೇಷಬ್ರಹ್ಮಕ್ಕೋ? ಸವಿಶೇಷಬ್ರಹ್ಮಕ್ಕೋ? ಎಂಬ ಸಂದೇಹ ಬರುತ್ತದೆ. ನಿರ್ವಿಶೇಷವೂ ಚಿನ್ಮಾತ್ರವೂ ಆದ ಬ್ರಹ್ಮಕ್ಕೆ ಜಗತ್ಕಾರ

ಣವೆಂಬುದು ಎಂದಿಗೂ ಹೊಂದುವುದಿಲ್ಲ. ಅದು ನಿರ್ವಿಕಾರವೂ ನಿಷ್ಕ್ರಿಯವೂ ನಿಶ್ಶಕ್ತಿಕವೂ ಆದ್ದರಿಂದ ಅದರಲ್ಲಿ ಆರೋಪಿತವಾಗಿ ಮಾಯೆಯಲ್ಲಿ ಕಾಣಬರುವ ಈಶ್ವರನೇ ಜಗತ್ಕಾರಣನೆಂಬುದು ಹೊಂದುತ್ತದೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಪರಮಾತ್ಮನಲ್ಲಿ ಪರಾಶಕ್ತಿಯ ವೈಶಿಷ್ಟ್ಯ ವನ್ನು ಶ್ರುತಿಯು ತಿಳಿಸಿರುವುದರಿಂದ ಅವನು ನಿರ್ವಿಶೇಷನೆಂಬುದು ಸಂಭವಿಸು ವುದಿಲ್ಲ; ಯಾಕೆಂದರೆ ಎಲ್ಲಾ ವೇದಾಂತಗಳೂ ದೇವತೆಗಳ ಮತ್ತು ಮನುಷ್ಯರ ಇಷ್ಟಾರ್ಥಗಳೆಲ್ಲವನ್ನೂ ನೆರವೇರಿಸಲು ಸವಿಶೇಷಬ್ರಹ್ಮವನ್ನೇ ಪ್ರಯೋಜನವೆಂದು ಹೇಳುತ್ತಿವೆ. ಆದ್ದರಿಂದ ಮಾಯಾವಾದವು ಮುಮುಕ್ಷುಗಳಿಗೆ ಆದರಣೀಯವಲ್ಲ. ನಿರ್ವಿಶೇಷವಾದಿಗಳು ಬ್ರಹ್ಮ ನಿರ್ವಿಶೇಷವೆಂಬುದಕ್ಕೆ ಯಾವೊಂದು ಪ್ರಮಾಣವನ್ನು ಕೊಡಲಿಕ್ಕೂ ಸಾಧ್ಯವಿಲ್ಲ. ಎಲ್ಲಾ ಪ್ರಮಾಣಗಳೂ ಸವಿಶೇಷ ವಸ್ತುವನ್ನೇ ಅವಲಂಬಿ ಸಿವೆ. ನಿರ್ವಿಶೇಷವಸ್ತುವು ತನ್ನ ಅನುಭವಕ್ಕೆ ಗೋಚರವೆಂದು ಯಾವನು ಹೇಳು ತ್ತಾನೆಯೋ ಅವನು ತನ್ನ ಮನಸ್ಸಾಕ್ಷಿಯಾಗಿ ಸವಿಶೇಷವಸ್ತುವನ್ನೇ ಕಾಣುತ್ತಾನೆ. 'ಇದನ್ನು ನಾನು ನೋಡಿದೆನು' ಎಂಬಲ್ಲಿ ಸವಿಶೇಷವಸ್ತುವೇ ಎಲ್ಲರಿಗೂ ಅನುಭವಕ್ಕೆ ಬರುತ್ತದೆ. ಹಾಗೆ ಸವಿಶೇಷವಾಗಿ ತೋರುವ ವಸ್ತುವನ್ನೇ ಉಕ್ತಿವೈಚಿತ್ರ್ಯದಿಂದ ನಿರ್ವಿಶೇಷವೆಂದು ಹೇಳಿಕೊಳ್ಳಬಹುದು. ಯಥಾರ್ಥವಾಗಿ ನೋಡಿದರೆ ಅಲ್ಲಿಯೂ ವಸ್ತುಸ್ವರೂಪಕ್ಕಿಂತಲೂ ಬೇರೆಯಾದ ಅಸಾಧಾರಣವಾದ ವಿಶೇಷದೊಂದಿಗೆಯೇ ಅದು ಅನುಭವಕ್ಕೆ ಬಂದು ಸವಿಶೇಷವಾಗಿಯೇ ಉಳಿಯುವುದು. ಆದ್ದರಿಂದ ಕೆಲವು ವಿಶೇಷಣಗಳಿಂದ ಕೂಡಿರುವ ವಸ್ತುವಿಗೆ ಬೇರೆ ಕೆಲವು ವಿಶೇಷಣಗಳನ್ನು ನಿರಾಕರಿಸ ಬಹುದೇ ಹೊರತು ಎಲ್ಲವನ್ನೂ ನಿರಾಕರಿಸಲಾಗುವುದಿಲ್ಲ. ಆದ್ದರಿಂದ ನಿರ್ವಿಶೇಷ ವಸ್ತುವೆಂಬುದೊಂದು ಸಿದ್ಧವೇ ಆಗುವುದಿಲ್ಲ. ಜ್ಞಾನಕ್ಕೆ ಉಪಾಧಿಯನ್ನೂ ಸ್ವಪ್ರಕಾ ಶತೆಯನ್ನೂ ಹೇಳಬೇಕಾದರೂ ಜ್ಞಾನಕ್ಕಾಶ್ರಯವಾದ ಪುರುಷನನ್ನು ಒಪ್ಪಿಕೊಂಡು ಅವನ ಸಂಬಂಧದಿಂದಲೇ ಅದಕ್ಕೆ ಅವನ್ನು ಹೇಳಬೇಕಾಗುತ್ತದೆ. ಸುಷುಪ್ತಿ, ಮದ, ಮೂರ್ಛೆಗಳಲ್ಲೂ ಸವಿಶೇಷವಸ್ತುವೇ ಅನುಭವಗೋಚರವಾಗುವುದೆಂದು ಅದರ ಪ್ರಕರಣದಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗುವುದು. ಅದ್ವೈತಮತದಲ್ಲೂ ನಿತ್ಯತ್ವವೇ ಮೊದಲಾದ ವಿಶೇಷಗಳನ್ನು ಬ್ರಹ್ಮದಲ್ಲಿ ಒಪ್ಪಿರುವರು. ಇವನ್ನು ವಸ್ತುಸ್ವರೂಪ ಮಾತ್ರವೆಂದು ಹೇಳಲಿಕ್ಕಾಗುವುದಿಲ್ಲ; ಏಕೆಂದರೆ ವಸ್ತುಸ್ವರೂಪವು ಸರ್ವಸಮ್ಮತ ವಾದರೂ ಅದರ ಪ್ರಕಾರವೇ ಮೊದಲಾದ ಭೇದಗಳಲ್ಲಿ ಪರಸ್ಪರ ವಿರೋಧವೇ ಕಂಡು ಬರುತ್ತದೆ. ಹೀಗೆ ಪ್ರಕಾರಭೇದಗಳಿಂದಲೇ ಅದ್ವೈತಿಯು ತನ್ನ ಮತವನ್ನು ಪ್ರತಿಪಾದಿಸುವುದರಿಂದ ವಸ್ತು ಸವಿಶೇಷವೇ ಆಗಿರುವುದೆಂದು ಪ್ರಾಮಾಣಿಕರು ಹೇಳುತ್ತಾರೆ. ಶಬ್ದವಂತೂ ಒಂದು ವಿಶೇಷವಿಶಿಷ್ಟವಾದ ವಸ್ತುವನ್ನೇ ಬೋಧಿ ಸುತ್ತದೆ; ಏಕೆಂದರೆ ಪ್ರಕೃತಿಪ್ರತ್ಯಯದೊಡಗೂಡಿದ ಪದಸಮುದಾಯವೇ ವಾಕ್ಯವೆ ನಿಸುತ್ತದೆ. ಪ್ರಕೃತಿಪ್ರತ್ಯಯಗಳಿಗೆ ಬೇರೆ ಬೇರೆ ಅರ್ಥವಿರುವುದರಿಂದ ವಿಶಿಷ್ಟವಸ್ತುವೇ

ಪದದಿಂದ ಬೋಧಿತವಾಗುತ್ತದೆ. ಪದಸಮುದಾಯವೇ ವಾಕ್ಯವಾದ್ದರಿಂದ ಅನೇಕ ಪದಾರ್ಥಗಳ ಪರಸ್ಪರಸಂಬಂಧದಿಂದ ಕೂಡಿರುವ ಅರ್ಥವನ್ನು ವಾಕ್ಯವು ಬೋಧಿಸುವುದೇ ಹೊರತು ನಿರ್ವಿಶೇಷ ವಸ್ತುವನ್ನು ಬೋಧಿಸುವ ಸಾಮರ್ಥ್ಯವೇ ಅದಕ್ಕಿಲ್ಲ. ಆದ್ದರಿಂದ ನಿರ್ವಿಶೇಷ ವಸ್ತುವಿರುವುದರಲ್ಲಿ ಶಬ್ದವೂ ಪ್ರಮಾಣವಾಗಲಾರದು. ನಿರ್ವಿಕಲ್ಪಕ ಸವಿಕಲ್ಪಕವೆಂಬ ಪ್ರತ್ಯಕ್ಷವೂ ಸಹ ನಿರ್ವಿಶೇಷವಸ್ತುವಿರುವುದರಲ್ಲಿ ಪ್ರಮಾಣವಾಗಲಾರದು. ಜಾತಿ ಮೊದಲಾದ ಅನೇಕ ವಿಶೇಷಗಳಿಂದ ಕೂಡಿದ ವಸ್ತುವೇ ಸವಿಕಲ್ಪಕ ಪ್ರತ್ಯಕ್ಷದಲ್ಲಿ ವಿಷಯವಾಗುವುದು. ನಿರ್ವಿಕಲ್ಪಿಕ ಪ್ರತ್ಯಕ್ಷವೂ ಸಹ ಸವಿಶೇಷ ವಸ್ತುವನ್ನೇ ಅವಲಂಬಿಸಿದೆ. ಸವಿಕಲ್ಪಕಪ್ರತ್ಯಕ್ಷದಲ್ಲಿ ಸಮಾನವಾದ ಅನೇಕ ವಸ್ತುಗಳಲ್ಲಿ ಒಂದೇ ವಿಶೇಷದ ಅನುಸಂಧಾನ ತೋರುವುದು, ಆದರೆ ನಿರ್ವಿಕಲ್ಪಕ ಪ್ರತ್ಯಕ್ಷದಲ್ಲಿ ಆ ಬಗೆಯ ಅನುಸಂಧಾನ ತೋರುವುದಿಲ್ಲ. ಯಾವುದೋ ಒಂದು ವಿಶೇಷ ತೋರದಿರುವುದರಿಂದ ಅದನ್ನು ನಿರ್ವಿಕಲ್ಪಿಕವೆಂದು ಹೇಳಬಹುದೇ ಹೊರತು ಯಾವ ವಿಶೇಷವೂ ತೋರದಿರುವ ಒಂದು ಪ್ರತೀತಿಯು ಯಾರಿಗೂ ಅನುಭವಕ್ಕೆ ಬರಲಾರದು. ಯಾವುದೋ ಒಂದು ವಿಶೇಷದೊಂದಿಗೆ ಕೂಡಿ ಇದು ಇಂತಹದು ಎಂಬುದಾಗಿಯೇ ಎಲ್ಲಾ ಪ್ರತೀತಿಯೂ ನಮಗೆ ಬರುವುದು ಸಹಜವಾಗಿದೆ. ಆದ್ದರಿಂದ ಹಿಂದೆ ಹೇಳಿದ ಸವಿಶೇಷವಾದವೇ ಸಮಂಜಸವಾಗುವುದು.

**ನನು ಪರಮಾನಂದಸ್ವಭಾವಸ್ಯ ನಿರವಯವಸ್ಯ ಶಿವಸ್ಯ ಕಿಮರ್ಥಂ ಜಗಜ್ಜನ್ಮಾದಿಹೇತುತ್ವಮಿತ್ಯಾಶಂಕ್ಯಾಹ. ಲೋಕವತ್ತು ಲೀಲಾಕೈವಲ್ಯಂ॥ ಶಿವಸ್ಯ ಪರಬ್ರಹ್ಮಣಃ ಕದಾಚಿಲ್ಲೀಲಾ ವಿಲಾಸಃ, ಕದಾಚಿತ್ಕೈವಲ್ಯಂ ಸ್ವಯಮೇವಾವಸ್ಥಾನಂ ಚ ನಿರ್ಣೀಯತೇ. ಯಥಾ ಲೋಕೇ ಸರ್ವೈಶ್ವರ್ಯಧೈರ್ಯಶೌರ್ಯವೀರ್ಯಪರಾಕ್ರಮಧುರ್ಯಸ್ಯ ಸಪ್ತದ್ವೀಪಪರಿವೃತಸರ್ವಮಂಡಲಾಧೀಶ್ವರಸ್ಯ ಮಹಾರಾಜಸ್ಯ ಕದಾಚಿದ್ವಿಲಾಸೇನ ಕಾರ್ಯಾರಂಭಕತ್ವಂ ಕದಾಚಿತ್ತೂಷ್ಣೀಮವಸ್ಥಾನಂ ಚ ದೃಶ್ಯತೇ, ಕಿಂಚ ಸರ್ವೇಷಾಂ ಚೇತನಾನಾಂ ಯಥಾ ಸ್ವಾಭಾವಿಕತ್ವೇನ ಪ್ರಾಣಾಪಾನಾದಿವಾಯುಸಂಚಾರತ್ವಂ, ತಥಾ ಪರಮಾನಂದಕಂದಸ್ಯ ಪರಮಶಿವಸ್ಯ ಸ್ವಭಾವೇನ ಜಗಜ್ಜನ್ಮಾದಿಕಾರ್ಯಾನುಸರಣಂ ವಾ ಸ್ಯಾತ್. ಸಂಪ್ರಾಪ್ತಸರ್ವಕಾಮಸ್ಯ ಪರಮಾನಂದಸ್ವಭಾವಸ್ಯ ಶಿವಸ್ಯ ಸ್ವಲೀಲಯಾ ಜಗಜ್ಜನ್ಮಾದಿಕಾರ್ಯಾರಂಭವ್ಯಾಪಾರಕತ್ವಂ, ಪ್ರಳಯಾದೂರ್ಧ್ವಂ ಪುನಸ್ಸೃಷ್ಟಿಪರ್ಯಂತಂ ಸ್ವಯಮೇವಾಸ್ಥಾನಂ ಚ ನಿರವದ್ಯಂ.**

ಆನಂದಸ್ವರೂಪನೂ ನಿರವಯವನೂ ಆದ ಮಹಾದೇವನು ಯಾತಕ್ಕಾಗಿ ಜಗದ್ವ್ಯಾಪಾರಗಳನ್ನು ನಡೆಸುತ್ತಿರುವನೆಂದಾಶಂಕಿಸಿ ನಿರಾಕರಿಸುತ್ತಾನೆ.

**ಲೋಕವತ್ತು ಲೀಲಾಕೈವಲ್ಯಂ ॥ ೩೩ ॥**

ಪರಶಿವನಿಗೆ ಕೆಲವು ವೇಳೆ ಲೀಲಾವಿಲಾಸವೂ, ಕೆಲವು ವೇಳೆ ಕೈವಲ್ಯಾನು

ಭವವೂ ಇರುತ್ತವೆ. ಒಮ್ಮೆ ಭಕ್ತಾನುಗ್ರಹಲೀಲೆಯೂ, ಒಮ್ಮೆ ತಾನೂ ತಾನೇ ಆಗಿರುವ ಸ್ವಯಂಭುಸ್ಥಿತಿಯೂ ಅವನಲ್ಲಿರುತ್ತವೆ. ಲೋಕದಲ್ಲಿ ಧೈರ್ಯ ಶೌರ್ಯ ವೀರ್ಯ ಪರಾಕ್ರಮ ಐಶ್ವರ್ಯಗಳಿಂದ ಸಮಸ್ತ ಭೂಮಂಡಲಕ್ಕೂ ಯಾಜಮಾನ್ಯವನ್ನು ಪಡೆದಿರುವ ಮಹಾರಾಜನು ಕೆಲವು ವೇಳೆ ವಿಲಾಸದಿಂದ ಕಾರ್ಯೋನ್ಮುಖನಾಗುವುದನ್ನೂ, ಕೆಲವು ವೇಳೆ ಎಲ್ಲವನ್ನೂ ತೊರೆದು ಉದಾಸೀನನಾಗಿರುವುದನ್ನೂ ನಾವು ಕಾಣುತ್ತೇವೆ. ಎಲ್ಲಾ ಜೀವರಿಗೂ ಪ್ರಾಣಾದಿವಾಯುಗಳ ಸಂಚಾರ ಹೇಗೆ ಸ್ವಾಭಾವಿಕವೋ ಹಾಗೆ ಪರಮಾನಂದಸಾಗರನಾದ ಪರಶಿವನಿಗೆ ಜಗದ್ವ್ಯಾಪಾರಗಳ ನಿರ್ವಹಣೆ ಸ್ವಾಭಾವಿಕವಾಗಿದೆ. ಪೂರ್ಣಕಾಮನೂ ಆನಂದಮಯನೂ ಆದ ಶಿವನು ತನ್ನ ವಿನೋದಕ್ಕಾಗಿ ಜಗದ್ವ್ಯಾಪಾರಗಳನ್ನು ನಡೆಸುತ್ತಿರುವನು. ಪ್ರಳಯವಾದಮೇಲೆ ಮತ್ತೆ ಸೃಷ್ಟಿಯವರೆಗೂ ಅವನು ಸ್ವಯಂಭುಸ್ಥಿತಿಯಲ್ಲಿ ಆತ್ಮಾರಾಮನಾಗಿರುವನು.

**ನಿರ್ಗುಣಸ್ಯ ನಿರ್ಲಿಪ್ತಸ್ಯ ಪರಶಿವಸ್ಯ ಜಗತ್ಕಾರಣತ್ವಾಂಗೀಕಾರೇ ರೋಗಾರೋಗಾದಿಧರ್ಮಾನುಸಾರೇಣ ದೇವತಿರ್ಯಙ್ಮನುಷ್ಯಾದ್ಯುತ್ತಮಾಧಮಮಧ್ಯಮಸೃಷ್ಟ್ಯಾ ಬದ್ಧಜೀವವದ್ವೈಷಮ್ಯನೈರ್ಘೃಣ್ಯಾದಿದೋಷೋ ದುರ್ವಾರ ಇತ್ಯಾಶಂಕ್ಯಾಹ. ವೈಷಮ್ಯನೈರ್ಘೃಣ್ಯಾಧಿಕರಣಂ ||**

**ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾಹಿ ದರ್ಶಯತಿ ||೩೪||**

**ಲೋಕೇ ಜೀವಾನಾಂ ಸುಖದುಃಖಭೋಗದರ್ಶನಾತ್ಪರಮೇಶ್ವರಸ್ಯ ವೈಷಮ್ಯನೈರ್ಘೃಣ್ಯಾದಿಪ್ರಸಕ್ತಿರ್ನೋಪದ್ಯತೇ, ಕುತಃ ಸಾಪೇಕ್ಷತ್ವಾತ್ ಜೀವಕೃತಪುಣ್ಯಪಾಪಸಾಪೇಕ್ಷತ್ವಾತ್. ತಥಾಹಿ ದರ್ಶಯತಿ ಶ್ರುತಿರ್ದ್ಯೋತನಾತ್. ಯದ್ಯಪಿ ಪರಮಪುರುಷಸ್ಯ ಶಿವಸ್ಯ ಸ್ವಾಭಾವಿಕಚಿಚ್ಛಕ್ತಿಸತ್ತ್ವೇನ ನಿರವಯವಸ್ಯಾಪಿ ವಿಚಿತ್ರನಾನಾವಿಧಜಗಜ್ಜನ್ಮಾದಿಹೇತುತ್ವಂ ಸಂಭಾವ್ಯೇತ. ತಥಾಪಿ ದೇವತಿರ್ಯಙ್ಮನುಷ್ಯಾದ್ಯುತ್ತಮಮಧ್ಯಮಾಧಮಸೃಷ್ಟ್ಯಾ ಬದ್ಧಜೀವವತ್ಪಕ್ಷಪಾತಃ ಪ್ರಸಜ್ಯೇತ. ಸ್ವರ್ಗನರಕಸುಖದುಃಖಾದಿಧರ್ಮಾಣಾಂ ಚೇತನೇಷು ದ್ಯೋತನಾತ್ ಪರಶಿವಸ್ಯ ನೈರ್ಘೃಣ್ಯಾದಿದೋಷೋ ನ ವರ್ಜನೀಯ ಇತಿ ಚೇನ್ನ, ತತ್ರೋತ್ತರಂ ಸಾಪೇಕ್ಷತ್ವಾದಿತಿ. ವೈಷಮ್ಯನೈರ್ಘೃಣ್ಯೇ ನ ಪ್ರಸಜ್ಯೇಯಾತಾಂ ಸಾಪೇಕ್ಷತ್ವಾತ್. ಸೃಜ್ಯಮಾನದೇವಾದಿಶರೀರಾಣಾಂ ಜೀವಕರ್ಮಸಾಪೇಕ್ಷತ್ವಾದ್ವಿಷಮಸೃಷ್ಟಿರನಿವಾರ್ಯಾ. ದೇವಾದಿತತ್ತಜ್ಜೀವಾನಾಂ ತತ್ತತ್ಕರ್ಮಸಾಪೇಕ್ಷತ್ವಂ ದರ್ಶಯಂತಿ ಹಿ ಶ್ರುತಯಃ. "ಸಾಧುಕಾರೀ ಸಾಧುರ್ಭವತಿ ಪಾಪಕಾರೀ ಪಾಪೀ ಭವತಿ", "ಪುಣ್ಯಃ ಪುಣ್ಯೇನ ಕರ್ಮಣಾ ಭವತಿ । ಪಾಪಃ ಪಾಪೇನ ಕರ್ಮಣಾ ಭವತಿ," ಇತಿ. ತಥಾಚ ನ್ಯಾಸೋಕ್ತಿಃ "ನಿಮಿತ್ತಮಾತ್ರಮೇವಾಸೌ ಸೃಜ್ಯಾನಾಂ ಸ್ವರ್ಗಕರ್ಮಣಿ । ಪ್ರಧಾನಕಾರಣೀಭೂತಾಃ ಯತೋ ವೈ ಸೃಜ್ಯಶಕ್ತಯಃ । ನಿಮಿತ್ತ**

**ಮಾತ್ರಂ ಮುಕ್ತ್ವೈವ ನಾನ್ಯತ್ಕಿಂಚಿದಪೇಕ್ಷ್ಯತೇ । ನೀಯತೇ ತಪಸಾಂ ಶ್ರೇಷ್ಠ ಸ್ವಶಕ್ತ್ಯಾ ವಸ್ತು ವಸ್ತುತಾಂ ॥" ಇತ್ಯಾದಿನಾ ದೇವಾದಿವೈಚಿತ್ರ್ಯ ಹೇತುಸ್ಸೃಜ್ಯಮಾನಕ್ಷೇತ್ರಜ್ಞಪ್ರಾಚೀನಕರ್ಮಶಕ್ತಿರೇವೇತ್ಯುಕ್ತಂ.**

ನಿರ್ಗುಣನೂ ನಿರ್ಲಿಪ್ತನೂ ಆದ ಪರಶಿವನೇ ಜಗತ್ಕಾರಣನಾದರೆ, ದೇವತೆಗಳಲ್ಲೂ ಮನುಷ್ಯರಲ್ಲೂ ತಿರ್ಯಕ್ಪ್ರಾಣಿಗಳಲ್ಲೂ ದರಿದ್ರರನ್ನೂ ಶ್ರೀಮಂತರನ್ನೂ ಸುಖಿಗಳನ್ನೂ ದುಃಖಿಗಳನ್ನೂ ಬೇರೆ ಬೇರೆ ಅಂತಸ್ತುಗಳಲ್ಲಿ ಸೃಷ್ಟಿಸುವುದರಿಂದ ಅವನೂ ಜೀವನಂತೆ ವಿಷಮನೂ ನಿರ್ದಯನೂ ಆಗಬೇಕಾಗುತ್ತದೆ ಎಂದಾಶಂಕಿಸಿ ನಿರಾಕರಿಸುತ್ತಾನೆ—**ವೈಷಮ್ಯನೈರ್ಘೃಣ್ಯಾಧಿಕರಣಂ ॥ ೧೦ ॥**

**ವೈಷಮ್ಯನೈರ್ಘೃಣ್ಯೇನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ ॥ ೩೪ ॥**

ಲೋಕದಲ್ಲಿ ಜೀವರ ಸುಖದುಃಖಗಳ ಅನುಭವವನ್ನು ಕಂಡದ್ದರಿಂದ ಪರಶಿವನಿಗೂ ವೈಷಮ್ಯ ನಿಷ್ಕರುಣೆಗಳು ಅಂಟುವುವೆಂಬುದು ಯುಕ್ತವಾಗುವುದಿಲ್ಲ. ಜೀವನು ಹಿಂದೆ ಮಾಡಿದ್ದ ಪುಣ್ಯ ಪಾಪಗಳನ್ನವಲಂಬಿಸಿ ಅವನಿಗೆ ಸುಖದುಃಖಗಳು ಒದಗುತ್ತವೆ. ಹಾಗೆಯೇ ಶ್ರುತಿಯಲ್ಲಿ ಕಂಡುಬಂದಿದೆ. ಪರಶಿವನು ನಿರವಯವನಾದರೂ ಸ್ವಾಭಾವಿಕವಾದ ಚಿಚ್ಛಕ್ತಿಯ ವೈಶಿಷ್ಟ್ಯದಿಂದ ಈ ವಿಚಿತ್ರವಾದ ಜಗತ್ತಿಗೆ ಕಾರಣನಾಗುವುದೇನೋ ಸರಿ. ಆದರೆ ಸೃಷ್ಟಿಯಲ್ಲಿ ಅನೇಕಬಗೆಯ ವ್ಯತ್ಯಾಸಗಳಿರುವುದರಿಂದ ಅವನಿಗೆ ಬದ್ಧಜೀವನಂತೆ ಪಕ್ಷಪಾತವುಂಟಾದೀತು. ಸ್ವರ್ಗ ನರಕ, ಸುಖ ದುಃಖ ಮೊದಲಾದ ದ್ವಂದ್ವಸೃಷ್ಟಿಯಿಂದ ಅವನು ನಿಷ್ಕರುಣಿ ಎನಿಸಬೇಕಾದೀತು. ಹೀಗೆ ಆಕ್ಷೇಪಬಂದರೆ ಅದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಸೃಷ್ಟಿಯ ವೈವಿಧ್ಯ ವೈಚಿತ್ರ್ಯಗಳು ಆಯಾ ಜೀವರ ಹಿಂದಿನ ಕರ್ಮವನ್ನವಲಂಬಿಸಿರುವುದರಿಂದ ಪರಶಿವನಿಗೆ ವೈಷಮ್ಯನೈರ್ಘೃಣ್ಯಗಳು ಅಂಟುವುದಿಲ್ಲ. ಆಯಾ ಜೀವಗಳ ಕರ್ಮದಂತೆ ಸೃಷ್ಟಿಯಾಗುವುದೆಂದು ಶ್ರುತಿಗಳು ಸ್ಪಷ್ಟವಾಗಿ ತಿಳಿಸಿವೆ. 'ಒಳ್ಳೆಯದನ್ನು ಮಾಡಿದವನು ಒಳ್ಳೆಯವನಾಗುತ್ತಾನೆ, ಪಾಪ ಮಾಡಿದವನು ಪಾಪಿಯಾಗುತ್ತಾನೆ". "ಪುಣ್ಯಕರ್ಮದಿಂದ ಪುಣ್ಯವೂ, ಪಾಪಕರ್ಮದಿಂದ ಪಾಪವೂ ಬರುತ್ತವೆ" ಹೀಗೆ ಶ್ರುತಿಯಲ್ಲಿ ಹೇಳಿದೆ. "ಪರಮಾತ್ಮನು ಸೃಷ್ಟಿವ್ಯಾಪಾರದಲ್ಲಿ ನೆಪಕ್ಕೆ ಮಾತ್ರವೇ ಇರುವನು. ಆಯಾ ಪ್ರಾಣಿಗಳಲ್ಲಿರುವ ಪುಣ್ಯ ಪಾಪ ಕರ್ಮಗಳೇ ಪ್ರಧಾನ ಕಾರಣವಾಗಿರುವುವು. ಅಷ್ಟನ್ನು ಮಾತ್ರ ಅವಲಂಬಿಸಿ ಪರಮಾತ್ಮನು ಸೃಷ್ಟಿಸುವನೇ ಹೊರತು ಬೇರೆ ಯಾವುದನ್ನೂ ಅಪೇಕ್ಷಿಸುವುದಿಲ್ಲ. ಆಯಾ ವಸ್ತು ತನ್ನ ಶಕ್ತಿಯಿಂದಲೇ ತನ್ನ ನಿಜಸ್ವರೂಪವನ್ನು ಹೊಂದುತ್ತದೆ" ಎಂದು ವ್ಯಾಸರು ಹೇಳಿದ್ದಾರೆ. ಇದರ ಪ್ರಕಾರ ಸೃಷ್ಟಿವೈಚಿತ್ರ್ಯಕ್ಕೆ ಜೀವನ ಪ್ರಾಚೀನ ಕರ್ಮಶಕ್ತಿಯೇ ಕಾರಣವೆಂದು ಹೇಳಲಾಗಿದೆ. ಆದ್ದರಿಂದ ವಿಷಯಸೃಷ್ಟಿಯಲ್ಲಿ ಯಾವ ವಿರೋಧವೂ ಇಲ್ಲ.

**ಅವಾಂತರಸೃಷ್ಟೌ ಪುಣ್ಯಪಾಪಸಾಪೇಕ್ಷತ್ವಂ ಶಿವಸ್ಯೋಪಪದ್ಯತೇ. ಪ್ರಾಥಮಿಕಸೃಷ್ಟೌ ಜೀವಾನಾಂ ಪುಣ್ಯಪಾಪಕರ್ಮಣಾಮಭಾವಾನ್ನಿರ್ಗು**

ಣಬ್ರಹ್ಮಕರ್ತೃತ್ವೇ ವೈಷಮ್ಯನೈರ್ಘೃಣ್ಯಾದಿದೋಷೋ ಹ್ಯವರ್ಜನೀಯಃ. ತಸ್ಮಾನ್ಮಿಥ್ಯಾಭೂತಸ್ಯ ಜಗತಃ ಮಿಥ್ಯಾಭೂತಶಬಲಬ್ರಹ್ಮಕಾರಣತ್ವಮೇವ ಯುಕ್ತಮಿತ್ಯಾಶಂಕ್ಯಾಹ—ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾದುಪಪದ್ಯತೇ ಚಾಪ್ಯುಪಲಭ್ಯತೇ ಚ ॥ ೩೫ ॥

ಸೃಷ್ಟೇಃ ಪ್ರಾಗ್ಜೀವಾನಾಂ ಕರ್ಮ ನಾಸ್ತ್ಯೇವ, ಕುತಃ ಅವಿಭಾಗಾತ್. ಚೇತನಾಚೇತನಪ್ರಪಂಚಸ್ಯ ಪ್ರಳಯೇ ವಿನಾಶೇನ ಕರ್ಮಣಾಮಪಿ ನಷ್ಟತ್ವಾದಿತಿ ಚೇನ್ನ, ಅನಾದಿತ್ವಾತ್. ಪ್ರವಾಹತರಂಗನ್ಯಾಯೇನ ಸೃಷ್ಟಿಪ್ರಳಯಪರಂಪರಾಯಾಃ ಅನವಚ್ಛಿನ್ನತಯಾ ಸತ್ತ್ವೇನ ಪ್ರಪಂಚಸ್ಯಾನಾದಿತ್ವಾತ್. ಪೂರ್ವಸೃಷ್ಟಿಕೃತಜೀವಕರ್ಮಣಾಂ ಪ್ರಳಯೇಽಪಿ ಸುಪ್ತಿವತ್ಸಂಸ್ಕಾರತ್ವೇನ ಸ್ಥಿತತ್ವಾತ್. ಉತ್ಪದ್ಯತೇ ಪುನಸ್ಸೃಷ್ಟಿಕಾಲೇ ಜೀವಕೃತಪುಣ್ಯಪಾಪಕರ್ಮಸಾಪೇಕ್ಷತ್ವೇನ ಜಗಜ್ಜಾಯತೇ. ಅಪಿಚ ಪುನಃ ಪ್ರಳಯಕಾಲೇ ಉಪಲಭ್ಯತೇ ಚ ಪರಮೇಶ್ವರೇಚ್ಛಯಾ ಸೂಕ್ಷ್ಮರೂಪಂ ಪ್ರಾಪ್ನೋತಿ. ಅತಃ ಪ್ರಪಂಚಸ್ಯ ಸತ್ಯತ್ವಮನಿವಾರ್ಯಂ. ಸೃಷ್ಟೇಃ ಪ್ರಾಗ್ಜೀವಾನಾಂ ಬ್ರಹ್ಮಣಿ ಸೂಕ್ಷ್ಮಾತ್ಮಕತ್ವೇನ ಸ್ಥಿತಿಃ ಕಥಮುಪಪದ್ಯತೇ. ಕಥಂ ಜೀವಕೃತಪೂರ್ವಕರ್ಮಸಾಪೇಕ್ಷತ್ವಂ ಸೃಷ್ಟಿವೈಷಮ್ಯಂ ಚೋದ್ಯತ ಇತಿ ಚೇನ್ನ ಅನಾದಿತ್ವಾತ್, ಪ್ರವಾಹತರಂಗನ್ಯಾಯೇನ ಜೀವಾನಾಂ ತತ್ಕೃತಕರ್ಮಣಾಂ ಚ ತದನಾದಿತ್ವೇನಾಪ್ಯವಿಭಾಗ ಉಪಪದ್ಯತೇ. ಯತಸ್ತದಾನೀಂ ಜೀವಾನಾಂ ಗ್ರೀಷ್ಮಕಾಲೇ ಕ್ಷಿತೌ ಬೀಜಾನಾಮಿವ ಸೂಕ್ಷ್ಮರೂಪೇಣ ಸ್ಥಿತಿರುಪದಿಶ್ಯತೇ. ತಥಾ ತತ್ಕರ್ಮಣಾಮಪ್ಯೇವಮಂಗೀಯತೇ. ತದನಂಗೀಕಾರೇ ಕೃತನಾಶಾಕೃತಾಭ್ಯಾಗಮದೋಷಃ ಪ್ರಸಜ್ಯೇತ. ತಸ್ಮಾತ್ ಕ್ಷೇತ್ರಜ್ಞಾನಾಂ ತತ್ಕರ್ಮಣಾಂ ಚಾನಾದಿತ್ವಮನಿವಾರ್ಯಂ. ಅತಃ ಸೃಷ್ಟೇಃ ಪ್ರವಾಹರೂಪೇಣ ಸತ್ಯತ್ವಮುಪದಿಶ್ಯತೇ. “ಜ್ಞಾಜ್ಞೌ” ಇತ್ಯತ್ರ ಕ್ಷೇತ್ರಜ್ಞಾನಾಮನಾದಿತ್ವವ್ಯವಸ್ಥಾಪನಾತ್ ತತ್ಕರ್ಮಣಾಮಪ್ಯರ್ಥಾತ್ಸಿದ್ಧಮನಾದಿತ್ವಂ. ನನು ಜೀವಾನಾಂ ತತ್ಕರ್ಮಣಾಮನಾದಿತ್ವಮಸ್ತು. ತಥಾಪಿ ಪರಶಿವಸ್ಯ ಜೀವದೇಹಕಲ್ಪನಾದೇವ ತತ್ಕರ್ಮೋಪಪದ್ಯತೇ. ಅಚೇತನಕರ್ಮಣಾಂ ಚೇತನಪ್ರಯೋಜನತ್ವೇನ ಸಾಮರ್ಥ್ಯಾದೀಶ್ವರಸ್ಯೈವ ತತ್ಕರ್ಮಕಾರಣತ್ವಮರ್ಥಾತ್ಪ್ರಸಜ್ಯೇತ. ಸುಪ್ತಿವತ್ಸ್ವಾತ್ಮಲಯಸುಖಾಸುಭವಾಜ್ಜೀವಾನಾಂ ಸರ್ವಕ್ಲೇಶಾಯುತನಶರೀರೇ ಕುತೋ ಭೂಯಃ ಪ್ರವೇಶಾತ್ಮಕಸೃಷ್ಟಿರುಪಪದ್ಯತೇ. ತಸ್ಮಾತ್ತಸ್ಯ ನಿರ್ದಯತ್ವಂ. ಜೀವಾನಾಂ ಶರೀರಪ್ರವೇಶಾಭಾವೇ ತದಶೇಷಕ್ಲೇಶನಿರ್ಮುಕ್ತಸ್ವಾನುಗ್ರಹಸ್ವಪ್ರಾಪ್ತ್ಯಭಾವತ್ವಾತ್ಸೃಷ್ಟಿರಿತಿ ಚೇದ್ಯುಕ್ತಂ. ತಥಾಪಿ ಸರ್ವೇಷಾಂ ಕ್ಷೇತ್ರಜ್ಞಾನಾಮೇಕ

ಕಾಲೇ ಸ್ವಾನುಗ್ರಹೇಣ ಸರ್ವಕರ್ಮಪಾಶನಿರ್ಮುಕ್ತತಯಾ ಕಲ್ಯಾಣ ಕೈವಲ್ಯಾತ್ಮಕಸ್ವವಿಭೂತಿಃ. ಕುತೋ ನ ದಾಸ್ಯತ ಇತಿ ಚೇನ್ನ ಶಿವಃ ಪರಮಕಾರುಣಿಕೋಽಪಿ ಸರ್ವಕ್ಷೇತ್ರಜ್ಞೈಕಕಾಲಮುಕ್ತಿಪ್ರದಾನಸಮರ್ಥೋಽಪಿ ಪೃಥಿವೀಶ್ವರವತ್ಸ್ವಶಾಸನಾನುಸಾರೇಣ ಜೀವಕರ್ಮಪರಿಪಾಕತಯಾ ತತ್ಪಾಶವಿಚ್ಛೇದಂ ಕರೋತಿ. ಲೋಕೇ ಪ್ರಭುರಪಿ ಸ್ವಾಜ್ಞೋಲ್ಲಂಘನಕಾರಿಣಂ ಪುತ್ರಮಪಿ ಸ್ವದಂಡನಂ ವಿನಾ ನ ಸ್ವಾನುಗ್ರಹಪ್ರಾಪ್ತಿಭಾಜನಂ ಕರೋತಿ. ತಥಾ ಪರಮೇಶ್ವರಃ ಜೀವಕೃತಪುಣ್ಯಪಾಪಪಾಲನಂ ವಿನಾ ಸ್ವಪ್ರಾಪ್ತಿಂ ನಾನುಗೃಹ್ಣಾತಿ. ಪ್ರಭಾಕರಃ ಸ್ವಪ್ರಭಾಪ್ರಸಾರಣತಯಾ ವಿಕಸನಾನುಕೂಲಪಂಕಜಾನ್ಯೇವ ವಿಕಾಸಯತಿ. ತದ್ವದೀಶ್ವರಃ ಶಮದಮಭಕ್ತಿಯೋಗಸಹಕೃತಜೀವಾನಾಮೇವ ಪಾಶನಿವೃತ್ತಿಂ ಕರೋತಿ. ನನು "ಏಷ ಏವ ಸಾಧುಕರ್ಮ ಕಾರಯತಿ ತಮೂರ್ಧ್ವಲೋಕಂ ನಿನೀಷಯತಿ" ಇತ್ಯಾದಿಶ್ರುತಿಷು ಪರಮೇಶ್ವರಸ್ಯೈವ ಜೀವನಿಯಾಮಕತ್ವಶ್ರವಣಾನ್ನ ಕಿಂಚಿಜ್ಜೀವಸ್ಯ ಕರ್ತವ್ಯಂ. ತಸ್ಮಾತ್ತಸ್ಯ ವೈಷಮ್ಯನೈರ್ಘೃಣ್ಯದೋಷಸ್ಸಂಭವತೀತಿ ಚೇತ್ತದಯುಕ್ತಂ, ಜೀವಾನಾಂ ಪರಮೇಶ್ವರವತ್ಸರ್ವಕರ್ತೃತ್ವಸರ್ವಜ್ಞತ್ವಾದ್ಯಭಾವೇಽಪಿ ಚೇತನತ್ವಾತ್ಕಿಂಚಿದ್‌ಜ್ಞತ್ವಂ ಕಿಂಚಿತ್ಕರ್ತೃತ್ವಂ ಸ್ವೇಚ್ಛಯಾ ಸಂಭವತಿ. ಅತಸ್ಸ್ವೇಚ್ಛಾಕೃತಕರ್ಮಾನುಭೂತಿರ್ಜೀವಾನಾಮನಿವಾರ್ಯಾ. ಯಥಾ ಲೋಕೇ ಮನುಷ್ಯಾದಯಃ ಪ್ರಭಾಕರಪ್ರಭಾನುಸಾರೇಣ ಸ್ವಸ್ವವ್ಯಾಪಾರೇಷು ಪ್ರವರ್ತಂತೇ, ತದ್ವತ್ ಕ್ಷೇತ್ರಜ್ಞಾಸ್ಸ್ವಕರ್ಮಾನುಸಾರೇಣ ಪರಮೇಶ್ವರಸತ್ತಾವಶಾತ್ತತ್ತತ್ಕರ್ಮ ಕುರ್ವಂತಿ. "ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್" ಇತಿ ಭಗವತೀ ಶ್ರುತಿಸ್ತಸ್ಯ ಸೂರ್ಯವತ್ಸರ್ವಸಾಕ್ಷಿತ್ವಂ ದರ್ಶಯತಿ. ಅತಸ್ತಸ್ಯ ನ ದೋಷಕಳಂಕಃ. ತಸ್ಮಾಜ್ಜೀವಜಗತ್ಕರ್ಮಣಾಮನಾದಿತ್ವಂ ಪರಮೇಶ್ವರಾಧೀನತ್ವಂ ಚ ಸಿದ್ಧಂ. "ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್" ಇತ್ಯಾದಿಶ್ರುತಿಷು, "ಸತ್ಯಜ್ಞಾನಾತ್ಮಕೋಽನಂತೋ ವಿಭುರಾತ್ಮಾ ಮಹೇಶ್ವರಃ । ತಸ್ಯೈವಾಂಶೋ ಜೀವಲೋಕೇ ಪ್ರಾಣಿನಾಂ ಹೃದಯೇ ಸ್ಥಿತಃ ॥ ವಿಸ್ಫುಲಿಂಗಾ ಯಥಾ ವಹ್ನೇಜಾಯಂತೇ ಕಾಷ್ಠಯೋಗತಃ । ಅನಾದಿಕರ್ಮಸಂಬಂಧಾತ್ತದಂಶಾಶ್ಚ ಮಹೇಶಿತುಃ । ಅನಾದಿವಾಸನಾಯುಕ್ತಃ ಕ್ಷೇತ್ರಜ್ಞ ಇತಿ ಕೀರ್ತಿತಃ । ಶಿವಭಕ್ತಿಶ್ಚ ಸರ್ವೇಷಾಂ ಸರ್ವದಾ ಸರ್ವತೋಮುಖೀ । ತಸ್ಯಾಂ ತು ವಿದ್ಯಮಾನಾಯಾಂ ಯಸ್ತು ಮರ್ತ್ಯಃ ಪ್ರಮುಚ್ಯತೇ । ಶಿವಭಕ್ತಿರತಿರ್ಯಸ್ಯ ಸೋಽಂತ್ಯಜೋಽಪಿ ವಿಮುಚ್ಯತೇ" ಇತಿ ಶಿವಗೀತೋಪ

**ನಿಷತ್ಸು, “ ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವುಪಿ ” ಇತಿ ಕೃಷ್ಣಗೀತಾಸು ಚ ನಿರ್ದಿಷ್ಟಂ. ಅತಸ್ತಸ್ಯ ನ ಕಳಂಕಲೇಪಃ.**

ಅವಾಂತರ ಸೃಷ್ಟಿಯಲ್ಲಿ ಶಿವನು ಜೀವರ ಪುಣ್ಯಪಾಪಗಳಂತೆ ಪ್ರವರ್ತಿಸಲಿ. ಆದರೆ ಆದಿಸೃಷ್ಟಿಯಲ್ಲಿ ಜೀವರಿಗೆ ಪುಣ್ಯಪಾಪಗಳೇ ಇರಲಿಲ್ಲ. ಆಗಿನ ಸೃಷ್ಟಿಯಲ್ಲೇ ವೈವಿಧ್ಯವಿರುವುದರಿಂದ ವೈಷಮ್ಯನೈರ್ಘೃಣ್ಯಗಳ ದೋಷವಂತೂ ತಪ್ಪುವಂತಿಲ್ಲ. ಆದ್ದರಿಂದ ಮಾಯೆಯಲ್ಲಿ ಪ್ರತಿಬಿಂಬಿಸಿದ ಈಶ್ವರನೇ ಮಿಥ್ಯೆಯಾದ ಈ ಜಗತ್ತಿಗೆ ಕಾರಣನೆಂದು ಹೇಳುವುದೇ ಯುಕ್ತವೆಂದಾಶಂಕಿಸಿ ನಿರಾಕರಿಸುತ್ತಾನೆ-- **ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾದುಪಪದ್ಯತೇ ಚಾಪ್ಯುಪಲಭ್ಯತೇ ಚ ||೩೫||**

ಪ್ರಳಯದಲ್ಲಿ ಚೇತನಾಚೇತನ ಪ್ರಪಂಚವು ನಷ್ಟವಾಗುವುದರಿಂದ ಕರ್ಮವೂ ನಷ್ಟವಾಗುತ್ತದೆ. ಇದರಿಂದ ಸೃಷ್ಟಿಗೆ ಮೊದಲು ಜೀವರಿಗೆ ಕರ್ಮವೇ ಇರುವುದಿಲ್ಲವೆಂದು ಆಕ್ಷೇಪಿಸುವುದು ಯುಕ್ತವಲ್ಲ. ಪ್ರವಾಹದಲ್ಲಿ ಅಲೆಗಳು ನಿರಂತರವೂ ಇರುವಂತೆ ಸೃಷ್ಟಿಪ್ರಳಯಗಳ ಪರಂಪರೆಗೆ ಕೊನೆಮೊದಲೇ ಇಲ್ಲದ್ದರಿಂದ ಪ್ರಪಂಚ ಅನಾದಿ ಎನಿಸಿದೆ. ಹಿಂದಿನ ಸೃಷ್ಟಿಯಲ್ಲಿ ಜೀವರು ಮಾಡಿದ್ದ ಕರ್ಮಗಳು ಪ್ರಳಯದಲ್ಲೂ ಸುಷುಪ್ತಿಯಲ್ಲಿರುವಂತೆ ಸಂಸ್ಕಾರರೂಪವಾಗಿ ಇದ್ದೇ ಇರುತ್ತವೆ. ಮತ್ತೆ ಸೃಷ್ಟಿಕಾಲದಲ್ಲಿ ಜೀವರ ಕರ್ಮವನ್ನವಲಂಬಿಸಿಯೇ ಸೃಷ್ಟಿ ಆರಂಭವಾಗುತ್ತದೆ. ಹಾಗೆಯೇ ಪ್ರಳಯದಲ್ಲಿ ಪ್ರಪಂಚವು ಪರಶಿವನ ಇಚ್ಛೆಯಂತೆ ಸೂಕ್ಷ್ಮರೂಪವನ್ನು ತಾಳುತ್ತದೆ. ಆದ್ದರಿಂದ ಪ್ರಪಂಚದ ಸತ್ಯತೆಯು ಅನಿವಾರ್ಯವೆನಿಸುತ್ತದೆ. ಸೃಷ್ಟಿಗೆ ಮೊದಲು ಜೀವರು ಪರಶಿವನಲ್ಲಿ ಸೂಕ್ಷ್ಮರೂಪದಲ್ಲಿರುವರೆಂಬುದು ಹೇಗೆ ತಿಳಿಯುತ್ತದೆ? ಪ್ರಳಯಕಾಲದಲ್ಲಿ ಜೀವರು ಶಿವನಲ್ಲಿ ವಿಭಾಗವಾಗದಂತೆ ಸೇರಿರುವರೆಂದು ಶ್ರುತಿಯು ತಿಳಿಸುತ್ತದೆ. ‘ಬ್ರಹ್ಮವೊಂದೇ ಮೊದಲಿತ್ತು’ ‘ಆತ್ಮವೊಂದೇ ಮೊದಲಿತ್ತು.” “ಪ್ರಳಯದಲ್ಲಿ ಹಗಲು ರಾತ್ರಿ, ಸತ್ ಅಸತ್‌ಗಳಿಲ್ಲದೆ ಶಿವನೊಬ್ಬನೇ ಇದ್ದನು” ಈ ಶ್ರುತಿಗಳಲ್ಲಿ ಜೀವರೇ ಇರಲಿಲ್ಲವೆಂದು ತಿಳಿದುಬರುವುದರಿಂದ ಶಿವನು ಸೃಷ್ಟಿಗೆ ಜೀವರ ಕರ್ಮವನ್ನನುಸರಿಸುವನೆಂಬುದು ಯುಕ್ತವಲ್ಲ. ಆದ್ದರಿಂದ ಈ ಬಗೆಯ ಸೃಷ್ಟಿವೈಚಿತ್ರ್ಯ ಹೇಗೆ ಬಂದಿತು? ಎಂದು ಕೇಳಿದರೆ ಸೃಷ್ಟಿ ಅನಾದಿಯಾದ್ದರಿಂದಲೂ, ಜೀವರೂ ಅವರ ಕರ್ಮಗಳೂ ಅನಾದಿಯಾದ್ದರಿಂದಲೂ ಜೀವರು ಆಗ ಬೇರೆಯಾಗಿ ಕಾಣುವುದಿಲ್ಲ. ಬೇಸಿಗೆ ಕಾಲದಲ್ಲಿ ನೆಲದಲ್ಲಿ ಬೀಜಗಳು ಅಡಗಿರುವಂತೆ ಜೀವರು ಪ್ರಳಯದಲ್ಲಿ ಶಿವನಲ್ಲಿ ಅಡಗಿರುವರೆಂದು ಶ್ರುತಿಯಲ್ಲಿ ಹೇಳಿದೆ. ಹಾಗೆಯೇ ಅವರ ಕರ್ಮಗಳೂ ಸೂಕ್ಷ್ಮವಾಗಿ ಇದ್ದೇ ಇರುತ್ತವೆ ಎಂದು ಒಪ್ಪಲೇಬೇಕು. ಹಾಗೆ ಒಪ್ಪದಿದ್ದರೆ ಅವರವರು ತಾವು ಮಾಡಿದ್ದನ್ನು ಅನುಭವಿಸದೆ, ಮಾಡದಿರುವುದನ್ನು ಅನುಭವಿಸಬೇಕಾಗುತ್ತದೆ. ಹೀಗೆ ಜೀವರೂ ಅವರ ಕರ್ಮಗಳೂ ಅನಾದಿಎಂಬುದು ಅನಿವಾರ್ಯವೆನಿಸುತ್ತದೆ. ಸೃಷ್ಟಿಯನ್ನು ಪ್ರವಾಹರೂಪದಿಂದ ಸತ್ಯವೆಂದು ಹೇಳಲಾಗಿದೆ. ಶ್ರುತಿಯಲ್ಲಿ ಜೀವರು ಅಜರೆಂದು ವ್ಯವಸ್ಥೆಯಾಗಿರುವುದರಿಂದ ಅವರ ಕರ್ಮಗಳೂ ಅನಾದಿ

ಎಂಬುದು ಸಿದ್ಧಿಸುತ್ತದೆ. ಜೀವರೂ ಅವರ ಕರ್ಮಗಳೂ ಅನಾದಿಯಾಗಲಿ. ಆದರೂ ಪರಶಿವನು ಜೀವರಿಗೆ ಅವರವರ ಕರ್ಮದ ಫಲವಾಗಿ ದೇಹವನ್ನು ಕೊಡುತ್ತಾನೆಂದು ಹೇಳಲೇಬೇಕು. ಇದರಿಂದ ಅಚೇತನವಾದ ಕರ್ಮಗಳು ಚೇತನನ ಪ್ರಯೋಜನಕ್ಕಾಗಿಯೇ ಇರುವುದರಿಂದ ಈಶ್ವರನೇ ಆ ಕರ್ಮಗಳನ್ನು ಪ್ರೇರಿಸುವನೆಂದು ಸ್ಪಷ್ಟವಾಯಿತು. ಸುಷುಪ್ತಿಯಂತೆ ಪ್ರಳಯದಲ್ಲಿ ತನ್ನಲ್ಲಿ ಲೀನರಾಗಿ ನಿಶ್ಚಿಂತರಾಗಿದ್ದ ಜೀವರಿಗೆ ಈ ಕ್ಲೇಶದಾಯಕವಾದ ಶರೀರೇಂದ್ರಿಯಗಳನು ಕೊಡುವುದರಿಂದ ಅವನು ನಿರ್ದಯನೆನಿಸುತ್ತಾನೆ. ಜೀವರಿಗೆ ಶರೀರವೇ ಇಲ್ಲದಿದ್ದರೆ ಪರಶಿವನ ಅನುಗ್ರಹದಿಂದ ಮುಕ್ತಿ ಬರಲಿಕ್ಕೆ ಆಗುವುದಿಲ್ಲವಾದ್ದರಿಂದ ಅವರ ಹಿತಕ್ಕಾಗಿಯೇ ಈ ಸೃಷ್ಟಿಯಾಗಿದೆ ಎಂದು ಹೇಳಬಹುದಾದರೂ ಸರ್ವಶಕ್ತನಾದ ಪರಶಿವನು ಎಲ್ಲಾ ಜೀವರಿಗೂ ಅವರವರ ಕರ್ಮವನ್ನು ತೊಲಗಿಸಿ ಒಂದೇ ಸಮಯದಲ್ಲಿ ಕಲ್ಯಾಣ ಮತ್ತು ಕೈವಲ್ಯರೂಪವಾದ ತನ್ನ ವಿಭೂತಿಯನ್ನು ಏಕೆ ಕೊಡುವುದಿಲ್ಲ? ಎಂದು ಕೇಳಿದರೆ ಇದೂ ಸರಿಯಾಗುವುದಿಲ್ಲ. ಶಿವನು ಪರಮಕಾರುಣಿಕನಾದರೂ ಎಲ್ಲಾ ಜೀವರಿಗೂ ಒಂದೇ ಕಾಲದಲ್ಲಿ ಮುಕ್ತಿಯನ್ನು ಕೊಡಬಲ್ಲನಾದರೂ, ಒಬ್ಬ ರಾಜನು ಲೋಕದಲ್ಲಿ ತನ್ನ ಶಾಸನಕ್ಕನುಗುಣವಾಗಿ ಆಯಾ ಜೀವರಿಗೆ ಫಲವನ್ನು ಕೊಡುವಂತೆಯೂ, ತನ್ನ ಶಾಸನವನ್ನು ಅತಿಕ್ರಮಿಸಿದವರಿಗೆ ದಂಡಿಸುವಂತೆಯೂ, ಜೀವನು ಮಾಡಿದ ಪುಣ್ಯಪಾಪಗಳಿಗನುಗುಣವಾಗಿ ಶಿವನು ಸೃಷ್ಟಿಯನ್ನು ನಡೆಸಬೇಕಾಗಿರುವುದರಿಂದ ಅವನು ಎಲ್ಲರಿಗೂ ಒಂದೇ ಸಮಯದಲ್ಲಿ ಕೈವಲ್ಯವನ್ನು ಕೊಡಲಾರನು. ಸೂರ್ಯನು ತನ್ನ ಕಿರಣಗಳಿಂದ ವಿಕಾಸಯೋಗ್ಯವಾದ ಕಮಲಗಳನ್ನೇ ವಿಕಾಸಗೊಳಿಸುತ್ತಾನೆ. ಹಾಗೆಯೇ ಈಶ್ವರನು ಶಮದಮಭಕ್ತಿಗಳುಳ್ಳ ಜೀವರಿಗೇನೇ ಪಾಶವನ್ನು ತೊಲಗಿಸುತ್ತಾನೆ. ಆದರೆ, "ಇವನೇ ಒಳ್ಳೆಯದನ್ನು ಮಾಡಿಸಿ ಮೇಲಕ್ಕೆ ಒಯ್ಯುತ್ತಾನೆ. ಕೆಟ್ಟದ್ದನ್ನು ಮಾಡಿಸಿ ಕೆಳಗೆ ತಳ್ಳುತ್ತಾನೆ" ಈ ಬಗೆಯ ಶ್ರುತಿಗಳಲ್ಲಿ ಪರಮೇಶ್ವರನೇ ಜೀವನಿಯಾಮಕನೆಂದು ಹೇಳಿರುವುದರಿಂದ ಜೀವರಿಗೆ ಯಾವ ಕರ್ತವ್ಯವೂ ಉಳಿದಿಲ್ಲವಾದ್ದರಿಂದ ಜೀವರ ಪುಣ್ಯಪಾಪಗಳಿಗೆ ಪರಶಿವನೇ ಹೊಣೆಯಾಗುವನು. ಹೀಗೆ ವೈಷಮ್ಯನೈರ್ಘೃಣ್ಯಗಳ ದೋಷ ಅವನಿಗೇ ಸಂಭವಿಸುತ್ತದೆಯಲ್ಲವೇ? ಅಂದರೆ ಈ ಆಕ್ಷೇಪವೂ ಯುಕ್ತವಲ್ಲ. ಜೀವರು ಪರಮೇಶ್ವರನಂತೆ ಸರ್ವಕರ್ತರಾಗದಿದ್ದರೂ ಚೇತನರಾದ್ದರಿಂದ ಕಿಂಚಿದ್‌ಜ್ಞರೂ, ಕಿಂಚಿತ್ಕರ್ತರೂ ಆಗಿರುವುದು ಸಹಜ. ಆದ್ದರಿಂದ ಅವರು ಸ್ವೇಚ್ಛೆಯಿಂದ ಮಾಡಿದ ಕರ್ಮಗಳಿಗೆ ತಾವೇ ಹೊಣೆಯಾಗುವರು. ಜೀವನು ತನಗೆಂದು ಬಯಸದೆ, ಪರಮೇಶ್ವರನ ಪ್ರೀತಿಗಾಗಿಯೇ ಅವನ ಪ್ರೇರಣೆಯಂತೆ ಮಾಡುವ ಕೆಲಸ ತನಗೆ ಅಂಟಲಾರದು. ಆದರೆ ಜೀವನು ಪರಶಿವನ ಸ್ಮರಣೆಯೇ ಇಲ್ಲದೆ ತನಗೆಂದೇ ಇಚ್ಛಿಸಿ ಅಭಿಮಾನದಿಂದ ಮಾಡಿದ ಕೆಲಸಕ್ಕೆ ಪರಶಿವನ ಹೊಣೆ ಇರಲಾರದು. ಲೋಕದ ಜನರು ಸೂರ್ಯನ ಪ್ರಕಾಶದೊಳಗೆಯೇ ತಮ್ಮ ತಮ್ಮ ಕೆಲಸಗಳನ್ನು ನಡೆಸುತ್ತಾರೆ. ಹಾಗೆಯೇ ಜೀವರು ಪರಮೇಶ್ವರನ ಸಾನ್ನಿಧ್ಯ

ದಿಂದ ಅವರವರ ಬುದ್ಧಿಗನುಗುಣವಾಗಿ ಕೆಲಸಮಾಡುತ್ತಾರೆ. ಆದ್ದರಿಂದಲೇ ಶ್ರುತಿಯು ಪರಮೇಶ್ವರನನ್ನು ಸೂರ್ಯನಂತೆ ಸರ್ವಸಾಕ್ಷಿ ಎಂದು ತಿಳಿಸಿದೆ. ಹೀಗೆ ಅವನಿಗೆ ಯಾವ ದೋಷವೂ ಅಂಟುವುದಿಲ್ಲವಾದ್ದರಿಂದ ಜೀವ ಜಗತ್ತು ಕರ್ಮ ಇವು ಅನಾದಿ ಎಂದೂ, ಪರಮೇಶ್ವರನಿಗಧೀನವೆಂದೂ ಸಿದ್ಧವಾಯಿತು. "ಬ್ರಹ್ಮನು ಸೂರ್ಯ ಚಂದ್ರರನ್ನು ಎಂದಿನಂತೆ ಸೃಷ್ಟಿಸಿದನು". "ಇದೆಲ್ಲವೂ ಮೊದಲು ಅವ್ಯಾಕೃತವಾಗಿತ್ತು. ಅದನ್ನು ನಾಮರೂಪಗಳಾಗಿ ವಿಭಾಗಿಸದನು" ಎಂದು ಶ್ರುತಿಗಳಲ್ಲೂ "ಸಚ್ಚಿದಾನಂದನಾದ ಮಹೇಶ್ವರನು ಪ್ರಾಣಿಗಳೆಲ್ಲರ ಹೃದಯದಲ್ಲಿದ್ದಾನೆ. ಅವನ ಅಂಶವೇ ಜೀವನೆನಿಸಿದೆ." "ಕಾಷ್ಠಯೋಗದಿಂದ ಬೆಂಕಿಯಲ್ಲಿ ಕಿಡಿಗಳು ಉದುರುವಂತೆ ಅನಾದಿಕರ್ಮಸಂಬಂಧದಿಂದ ಈಶ್ವರನ ಅಂಶಗಳು ಹೊರಬೀಳುತ್ತಾರೆ". "ಶಿವಭಕ್ತಿಯುಳ್ಳವನು ಶೂದ್ರನಾದರೂ ಎಲ್ಲಾ ಬಂಧನಗಳಿಂದಲೂ ಬಿಡುಗಡೆ ಹೊಂದುತ್ತಾನೆ" ಎಂದು ಶಿವಗೀತೆಯಲ್ಲೂ, "ಪ್ರಕೃತಿಪುರುಷರಿಬ್ಬರನ್ನೂ ಅನಾದಿ ಎಂದು ತಿಳಿ" ಎಂದು ಕೃಷ್ಣಗೀತೆಯಲ್ಲೂ ಇದೇ ಅಂಶವನ್ನು ಹೇಳಲಾಗಿದೆ.

"ನಿಷ್ಕಲಂ ನಿಷ್ಕ್ರಿಯಂ ಶಾಂತಂ" ಇತ್ಯಾದಿನಿಷ್ಕ್ರಿಯತ್ವವಿಧಾಯಕಶ್ರುತೀನಾಮಧಿಷ್ಠಾನಬ್ರಹ್ಮವಿಷಯತ್ವಂ. "ಸತ್ಯಕಾಮಸ್ಸತ್ಯಸಂಕಲ್ಪಃ" ಇತ್ಯಾದಿಶ್ರುತೀನಾಂ ಮಾಯಾಪ್ರತಿಫಲಿತಶಬಲಬ್ರಹ್ಮಪರತ್ವಮೇವಾಂಗೀಕರ್ತವ್ಯಂ. ನೋಚೇತ್ಪರಸ್ಪರವಿರೋಧೇನ ವೇದಾಂತಾನಾಂ ಸರ್ವೇಷಾಮಪ್ರಾಮಾಣ್ಯಪ್ರಸಕ್ತಿದುರ್ವಾರೇತ್ಯಾಶಂಕಾಯಾಮಾಹ—

ಸರ್ವಧರ್ಮೋಪಪತ್ತ್ಯಧಿಕರಣಂ||೧೧|| ಸರ್ವಧರ್ಮೋಪಪತ್ತೇಶ್ಚ||೩೬||

"ಲೋಕವತ್ತು ಲೀಲಾ ಕೈವಲ್ಯಂ" ಇತ್ಯತ್ರ ಕದಾಚಿತ್ಕಾಲೇ ಬ್ರಹ್ಮಣಃ ಲೀಲಾಪ್ರಯೋಜನತ್ವಸ್ಯ ಕದಾಚಿತ್ಕಾಲೇ ಸ್ವಯಮೇವಾವಸ್ಥಾನಸ್ಯ ಚ ವ್ಯವಸ್ಥಾಪನಾತ್, "ಯಸ್ಸರ್ವಜ್ಞಃ", "ವಾಮದೇವಾಯ ನಮಃ" ಇತ್ಯಾದಿಶ್ರುತಿಸಿದ್ಧಸರ್ವಜ್ಞತ್ವಾದಿಧರ್ಮಾಣಾಂ ಪರಮೇಶ್ವರಲೀಲಾಕಾಲಪರತ್ವಂ, ನಿಷ್ಕ್ರಿಯತ್ವಾದಿಧರ್ಮಾಣಾಂ ಸ್ವಶಕ್ತಿಸಂಕೋಚಾವಸ್ಥಾಪರತ್ವಂ ಚ. ತಸ್ಮಾತ್ಸರ್ವೇಷಾಂ ಸಗುಣತ್ವನಿರ್ಗುಣತ್ವಧರ್ಮಾಣಾಮೇಕಸ್ಯೈವ ಪರಶಿವಸ್ಯೋಪಪತ್ತಿಃ. "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ", "ಏಕಮೇವಾದ್ವಿತೀಯಂ ಬ್ರಹ್ಮ" ಇತ್ಯಾದಿಶ್ರುತಿಷು ಬ್ರಹ್ಮೈಕತ್ವವ್ಯಪದೇಶಾತ್ ಸ್ವಮುಖಪ್ರತಿಬಿಂಬವತ್ಕಲ್ಪಿತಸ್ಯ ಮಾಯಾಶಬಲಿತಸ್ಯ ಸತ್ತಾಽಯೋಗಾತ್, ವ್ಯಾಪಕಸ್ಯ ನಿರವಯವಸ್ಯ ಪ್ರತಿಫಲನಾಭಾವಾತ್, ಸ್ವಮುಖಪ್ರತಿಬಿಂಬನಿಷ್ಠನೇತ್ರೋನ್ಮೀಲನಾದಿಧರ್ಮಾಣಾಂ ಸ್ವಸ್ಯೈವ ಸಂಭವಾಚ್ಚ ಪ್ರಾತ್ಯಕ್ಷಿಕಶ್ರುತಿಸ್ಮೃತಿವಿರುದ್ಧಜೀವೇಶ್ವಜಗನ್ಮಿಥ್ಯಾತ್ವವಾದಕಮೋಹಶಾಸ್ತ್ರಾಣಿ ಮುಮುಕ್ಷುಣಾಂ ಶಿವಭಕ್ತಾನಾಮನಾದರಣೀಯಾನ್ಯನಾಶ್ರಯಣೀಯಾನೀತಿ ಸಿದ್ಧಂ.

"ಕೇಚಿದದ್ವೈತಮಾಶ್ರಿತ್ಯ ಬಿಡಾಲಪ್ರತಿಮಾ ನರಾಃ। ರುದ್ರೇಣ ಸಾಮ್ಯ ಮನ್ಯೇಷಾಂ ಪ್ರವದಂತಿ ವಿಮೋಹಿತಾಃ ॥ ಜಗಜ್ಜೀವೇಶ್ವರಾಣಾಂ ಚ ಮಿಥ್ಯಾತ್ವಪ್ರತಿಪಾದನಾತ್ । ಭಕ್ತಿಭಾವಂ ಪರಿತ್ಯಜ್ಯ ಗಮಿಷ್ಯಂತಿ ಯಮಾಲಯಂ॥ ಅಹಂ ಬ್ರಹ್ಮೇತಿ ವಾದೇನ ದೇವೇ ಹಿ ಭಕ್ತಿವರ್ಜಿತಃ। ನರೋ ಯಾತಿ ಮಹಾಘೋರನರಕಂ ಕಾಲಮಕ್ಷಯಂ ॥" ಇತ್ಯಾದಿನಾ ಸ್ಕಾಂದಲೈಂಗ್ಯಕೂರ್ಮಾದಿಪುರಾಣೇಷು ಜಗನ್ಮಿಥ್ಯಾಥ್ಯಾತ್ವವಾದಸ್ಯ ನಿರಸ್ತತ್ ಪರಬ್ರಹ್ಮಣಶ್ಶಿವಸ್ಯ ಜಗಜ್ಜನ್ಮಾದಿಕಾರಣವೇದಾಂತವಾದೋ ಮುಮುಕ್ಷುಭಿರಾಶ್ರಯಣೀಯ ಇತಿ ನಿಷ್ಪ್ರತ್ಯೂಹಂ.

ಇತಿ ಶ್ರೀಕರಭಾಷ್ಯೇ ದ್ವಿತೀಯಾಧ್ಯಾಯೇ ಪ್ರಥಮಃ ಪಾದಃ.

"ಬ್ರಹ್ಮ ನಿಷ್ಕಲವೂ ನಿಷ್ಕ್ರಿಯನೂ ಆಗಿದೆ" ಎಂಬ ಶ್ರುತಿಗಳು ಅಧಿಷ್ಠಾನ ಬ್ರಹ್ಮಕ್ಕೂ, "ಅವನು ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿದ್ದಾನೆ" ಎಂಬ ಶ್ರುತಿಗಳು ಮಾಯೆಯಲ್ಲಿ ಪ್ರತಿಫಲಿಸಿದ ಈಶ್ವರನಿಗೂ ಅನ್ವಯಿಸುತ್ತವೆ ಎಂದು ಅಂಗೀಕರಿಸಬೇಕು; ಹಾಗೆ ಹೇಳದೇ ಹೋದರೆ ಪರಸ್ಪರವಿರೋಧದಿಂದ ವೇದಾಂತಗಳೆಲ್ಲವೂ ಅಪ್ರಮಾಣವಾಗಬೇಕಾದೀತೆಂದಾಶಂಕಿಸಿ ನಿರಾಕರಿಸುತ್ತಾನೆ.

**ಸರ್ವಧರ್ಮೋಪಪತ್ತ್ಯಧಿಕರಣಂ॥೧೧॥ ಸರ್ವಧರ್ಮೋಪಪತ್ತೇಶ್ಚ॥೩೬॥**

"ಲೋಕವತ್ತು" ಎಂಬ ಸೂತ್ರದಲ್ಲಿ ಪರಶಿವನಿಗೆ ಭಕ್ತಾನುಗ್ರಹಲೀಲೆಯೂ ಕೆಲವು ವೇಳೆ ಸ್ವಯಂಭುಸ್ಥಿತಿಯೂ ಸಹಜವಾಗಿರುತ್ತವೆಂದು ತಿಳಿಸಲಾಗಿದೆ. "ಅವನು ಸರ್ವಜ್ಞನು" ಎಂಬ ಶ್ರುತಿಯಲ್ಲೂ, ವಾಮದೇವ ಮಂತ್ರದಲ್ಲೂ ಹೇಳಿರುವ ಸರ್ವಜ್ಞತ್ವಾದಿಧರ್ಮಗಳು ಅವನ ಲೀಲಾಕಾಲದ ಶಕ್ತಿವಿಕಾಸಾವಸ್ಥೆಗೆ ಅನ್ವಯಿಸುತ್ತವೆ. "ನಿಷ್ಕಲಂ ನಿಷ್ಕ್ರಿಯಂ ಶಾಂತಂ" ಮುಂತಾದ ಶ್ರುತಿಯಲ್ಲಿ ಹೇಳಿರುವ ನಿರಂಜನತ್ವಾದಿಧರ್ಮಗಳು ಅವನ ಕೈವಲ್ಯಾನುಭವಕಾಲದ ಶಕ್ತಿಸಂಕೋಚಾವಸ್ಥೆಗೆ ಅನ್ವಯಿಸುತ್ತವೆ. ಹೀಗೆ ಸಗುಣ ನಿರ್ಗುಣರೂಪವಾದ ಧರ್ಮಗಳೆಲ್ಲವೂ ಒಬ್ಬ ಪರಶಿವನಿಗೇ ಅನ್ವಯಿಸುತ್ತವೆ. "ಒಬ್ಬನೇ ರುದ್ರನು ಅದ್ವಿತೀಯನಾಗಿದ್ದಾನೆ" ಎಂಬ ಶ್ರುತಿಯಲ್ಲಿ ಪರಶಿವನೊಬ್ಬನೇ ಇರುವನೆಂದು ತಿಳಿಸಲಾಗಿದೆ. ಕನ್ನಡಿಯಲ್ಲಿ ತನ್ನ ಮುಖದ ನೆರಳು ಕಾಣುವಂತೆ ಮಾಯೆಯಲ್ಲಿ ಪ್ರತಿಬಿಂಬಿಸುವ ಈಶ್ವರನು ಸತ್ಯನಾಗಲಾರನು. ವ್ಯಾಪಕನೂ ನಿರವಯವನೂ ಆದ ಪರಶಿವನು ಹಾಗೆ ಪ್ರತಿಫಲಿಸುವನೆಂಬುದು ಹೊಂದುವುದಿಲ್ಲ. ತನ್ನ ಮುಖದ ಪ್ರತಿಬಿಂಬದಲ್ಲಿ ಕಾಣುವ 'ಕಣ್ಣು ತೆರೆಯುವಿಕೆ' ಮೊದಲಾದ ಧರ್ಮಗಳು ತನ್ನವೇ ಆಗಿವೆ. ಆದ್ದರಿಂದ ಪ್ರತ್ಯಕ್ಷವಾದ ಶ್ರುತಿಸ್ಮೃತಿಗಳಿಗೆ ವಿರುದ್ಧವಾಗಿ ಜೀವ ಈಶ್ವರ ಜಗತ್ತು ಇವನ್ನು ಮಿಥ್ಯೆ ಎಂದು ಕಲ್ಪಿಸುವ ಅದ್ವೈತವಾದವು ಮುಮುಕ್ಷುಗಳಾದ ಶಿವಭಕ್ತರಿಗೆ ಕೇಳಲಿಕ್ಕೂ ಆಚರಿಸಲಿಕ್ಕೂ ಯೋಗ್ಯವಾದುದಲ್ಲವೆಂದು ಸಿದ್ಧವಾಯಿತು. "ಭ್ರಾಂತರಾದ ಕೆಲವರು ದ್ವೈತಭಾವದಿಂದ ತ್ರಿಮೂರ್ತಿಗಳನ್ನು ರುದ್ರನಿಗೆ ಸಮವೆಂದು ಹೇಳುತ್ತಾರೆ. ಗೌತಮ, ದಧೀಚಿ, ವ್ಯಾಸ ಇವರ ಶಾಪಕ್ಕೀಡಾದವರು

ಜಗತ್ತನ್ನು ಮಿಥ್ಯೆ ಎಂದು ಭಾವಿಸಿ ನರಕದಲ್ಲಿ ಬೀಳುತ್ತಾರೆ. ಅಂತವರು ಜಗತ್ತು ಜೀವ ಈಶ್ವರರನ್ನು ಸುಳ್ಳೆಂದು ಹೇಳುತ್ತ ಭಕ್ತಿಯನ್ನು ಆಚರಿಸದೆ, ತಾನೇ ಬ್ರಹ್ಮನೆಂದು ಹೇಳುತ್ತ ಯಮಲೋಕಕ್ಕೆ ತೆರಳುತ್ತಾರೆ". ಹೀಗೆ ಸ್ಕಾಂದ-ಲೈಂಗ್ಯ-ಕೂರ್ಮಪುರಾಣಗಳಲ್ಲಿ ಜಗನ್ಮಿಥ್ಯಾತ್ವವಾದವನ್ನು ನಿರಾಕರಿಸಲಾಗಿದೆ. ಆದ್ದರಿಂದ ಪರಶಿವನೇ ಜಗತ್ತಿನ ವ್ಯಾಪಾರಗಳಿಗೆ ಕಾರಣನೆಂಬ ವೇದಾಂತಮತವನ್ನು ಮುಮುಕ್ಷುಗಳು ಆಶ್ರಯಿಸಬೇಕೆಂಬಲ್ಲಿ ಯಾವ ವಿವಾದವೂ ಇಲ್ಲ.

**ಇಲ್ಲಿಗೆ ದ್ವಿತೀಯಾಧ್ಯಾಯದ ಪ್ರಥಮಪಾದ ಮುಗಿಯಿತು.**

---

**ಅಥ ಶ್ರೀಕರಭಾಷ್ಯೇ ದ್ವಿತೀಯಾಧ್ಯಾಯಸ್ಯ ತೃತೀಯಃ ಪಾದಃ**

ಅತ್ರ ಪ್ರಥಮಪಾದೇ ವಿಪಕ್ಷಾಸ್ಸಾಂಖ್ಯಯೋಗಕಾಣಾದಾದ್ವೈತಾದಿತರ್ಕಕರ್ಕಶವಾದಾಃ ಸರ್ವವೇದಾಂತಸಿದ್ಧದ್ವೈತಾದ್ವೈತಮತಸಿದ್ಧಾಂತಸ್ವಪಕ್ಷಸಿದ್ಧ್ಯರ್ಥಂ ನಿರಾಕೃತಾಃ. ಈಕ್ಷತ್ಯಧಿಕರಣೇ ವೇದಾಪ್ರತಿಪಾದ್ಯತ್ವೇನ ಪ್ರಧಾನಜಗತ್ಕಾರಣತ್ವಂ ನಿರಸ್ಯ ಬ್ರಹ್ಮಕಾರಣತ್ವಂ ಸಾಧಿತಂ; ಇಹ ತು ಕೇವಲಯುಕ್ತ್ಯಾಭಾಸಪ್ರಾಧಾನ್ಯೇನ ಪ್ರಧಾನಸ್ಯ ಜಗತ್ಕಾರಣತ್ವಂ ಯುಕ್ತಮಿತ್ಯಾಕ್ಷೇಪೇ ಯುಕ್ತಿಯುಕ್ತತ್ವೇನ ಪುನರ್ನಿರಸ್ತತ್ವಾದಪೌನರುಕ್ತ್ಯದೋಷಃ. ಸಾಂಖ್ಯಾದಿದುರ್ವಾದನಿರಾಸೇನ ಮುಮುಕ್ಷೂಣಾಂ ಶುದ್ಧವೈದಿಕಮಾರ್ಗನಿಷ್ಠಾದೃಢೀಕರಣಾದಸ್ಯ ಪಾದಸ್ಯ ಶ್ರುತ್ಯವಿರೋಧಾಧ್ಯಾಯಸಂಗತಿಃ. ಸರ್ವವೇದಾಂತಸಮನ್ವಯವಿರೋಧಪರಿಹಾರಪೂರ್ವಕಸ್ವಪಕ್ಷಸ್ಥಾಪನಸ್ಯ ಪೂರ್ವಪಾದೇಽಪಿ ಸಿದ್ಧತ್ವಾದುಭಯೋಃ ಪೂರ್ವಾಪರಪಾದಯೋರುಪಜೀವ್ಯೋಪಜೀವಕಭಾವಸಂಗತಿಃ. ಪರಪಕ್ಷಪ್ರತಿಕ್ಷೇಪಾಭಾವೇ ಸ್ವಪಕ್ಷಸಿದ್ಧಾಂತಜ್ಞಾನಾಯೋಗಾತ್ ಸ್ವಪಕ್ಷಸ್ಥಾಪನಹೇತುತ್ವೇನ ಪೂರ್ವಪಾದಸ್ಯೋಪಜೀವಿತ್ವಂ ವ್ಯಾಚಕ್ಷ್ಯತೇ. ಪರಪಕ್ಷನಿರಾಸಪರತ್ವಾದೇವ ಸರ್ವೇಷಾಮಧಿಕರಣಾನಾಂ ಸಾರಸಂಗತಿರುಪದಿಷ್ಟಾ. ಸರ್ವಧರ್ಮೋಪಪತ್ತೇಶ್ಚೇತಿ ಪೂರ್ವಪಾದಾಂತ್ಯಸೂತ್ರೇ ನಿರ್ಗುಣಸಗುಣತ್ವಾದಿಧರ್ಮಾಣಾಂ ಪರಮಶಿವಶಕ್ತಿಸಂಕೋಚವಿಕಾಸತ್ವೇನ ತಸ್ಯೋಪಪತ್ತಿರಿತಿ ಸಿದ್ಧಾಂತೇ ತೇಷಾಂ ಧರ್ಮಾಣಾಂ ಸಂಕೋಚವಿಕಾಸಹೇತುತ್ವಂ ಪ್ರಧಾನಸ್ಯಾಪಿ ಸಂಭವತೀತ್ಯಾಕ್ಷೇಪೇ ತನ್ನಿರಾಕರಣಾರ್ಥಮಧಿಕರಣಾರಂಭಕತ್ವಾದೇಷಾವಾಂತರಸಂಗತಿಃ. ತತ್ರ ಫಲಮುಪಕ್ರಮೋಪಸಂಹಾರಾಂತಂ ವೇದವಿರುದ್ಧಯುಕ್ತ್ಯಾಭಾಸನಿರಾಸಪೂರ್ವಕಸರ್ವವೇದಾಂತಸಿದ್ಧಭೇದಾಭೇದಮತಸಮನ್ವಯಸಿದ್ಧಿರಿತ್ಯುಪದಿಷ್ಟಾ. ರಚನಾನುಪಪತ್ತ್ಯಧಿಕರಣಂ ॥ ೧ ॥

ರಚನಾನುಪಪತ್ತೇಶ್ಚ ನಾನುಮಾನಂ ಪ್ರವೃತ್ತೇಶ್ಚ ॥ ೧ ॥

ಅನುಮಾನಂ ಅನುಮಾನಸಾಧ್ಯಂ ಪ್ರಧಾನಂ ಜಗತ್ಕಾರಣಂ ನ ಭವತಿ. ಕುತಃ ರಚನಾನುಪಪತ್ತೇಃ, ಸ್ವಪರಜ್ಞಾನಶೂನ್ಯಸ್ಯ ಜಡಸ್ಯ ಪ್ರಧಾನಸ್ಯ ಜಗತ್ಸೃಷ್ಟಿಹೇತುತ್ವಸ್ಯಾನುಪಪತ್ತೇಶ್ಚ. ಕಿಂಚ ಜಡಸ್ಯ ಪ್ರವೃತ್ತೇಃ ಪ್ರಯತ್ನಸ್ಯಾಪ್ಯನುಪಪತ್ತೇಶ್ಚ. ತಸ್ಮಾತ್ಪ್ರಧಾನಂ ಜಗತ್ಕಾರಣಂ ನ ಭವತಿ. ಸಾಂಖ್ಯಸ್ಯ ವೇದಾಂತಾನುಕೂಲತ್ವೇನ ಶಿಷ್ಟೈರನುಷ್ಠಿತತ್ವಾತ್ತತ್ಪ್ರೋಕ್ತಪ್ರಧಾನಜಗದುಪಾದಾನತ್ವಂ ಪ್ರಮಾಣಮೂಲಂ ಭ್ರಾಂತಿಮೂಲಂ ವೇತಿ ಸಂದಿಹ್ಯತೇ. ಪ್ರಧಾನಜಗದುಪಾದಾನತ್ವಂ ಪ್ರಮಾಣಮೂಲಮೇವ. "ಮೂಲಪ್ರಕೃತಿರವಿಕೃತಿರ್ಮಹದಾದ್ಯಾಃ ಪ್ರಕೃತಿವಿಕೃತಯಸ್ಸಪ್ತ। ಷೋಡಶಕಶ್ಚ ವಿಕಾರೋ ನ ಪ್ರಕೃತಿರ್ನ ವಿಕೃತಿಃ ಪುರುಷಃ॥" ಇತಿ ತತ್ತ್ವಸಂಗ್ರಹಃ. ಮೂಲಪ್ರಕೃತಿರ್ನಾಮ ಸುಖದುಃಖಮೋಹಾತ್ಮಕಾನಿ ಲಾಘವಪ್ರಕಾಶಚಲನೋಪಷ್ಟಂಭನಗೌರವಾವರಣಕಾರ್ಯಾಣ್ಯತ್ಯಂತಾತೀಂದ್ರಿಯಾಣಿ, ಕಾರ್ಯೈಕನಿರೂಪಣವಿವೇಕಾನ್ಯನ್ಯೂನಾನತಿರೇಕಾಣಿ ಸಮತಾಮುಪೇತಾನಿ ಸತ್ತ್ವರಜಸ್ತಮಾಂಸಿ ದ್ರವ್ಯಾಣಿ. ಸಾ ಚ ಸತ್ತ್ವರಜಸ್ತಮಸಾಂ ಸಾಮ್ಯರೂಪಾ ಪ್ರಕೃತಿರೇಕಾ ಸ್ವಯಮಚೇತನಾ ಅನೇಕಚೇತನಭೋಗಾಪವರ್ಗಾರ್ಥಾ ನಿತ್ಯಾ ಸರ್ವಗತಾ ಸತತವಿಕ್ರಿಯಾ ನ ಕಸ್ಯಚಿದ್ವಿಕೃತಿಃ ; ಅಪಿ ತು ಪರಮಕಾರಣಮೇವ. ಮಹದಾದ್ಯಾಸ್ತದ್ವಿಕೃತಯೋಽನ್ಯೇಷಾಂ ಚ ಪ್ರಕೃತಯಸ್ಸಪ್ತ ; ಮಹಾನಹಂಕಾರಃ ಶಬ್ದಸ್ಪರ್ಶರೂಪರಸಗಂಧತನ್ಮಾತ್ರಾಣಿ. ತತ್ರಾಹಂಕಾರಸ್ತ್ರಿಧಾ ವೈಕಾರಿಕಸ್ತೈಜಸೋ ಭೂತಾದಿಶ್ಚ, ಕ್ರಮಾತ್ಸಾತ್ತ್ವಿಕೋ ರಾಜಸಸ್ತಾಮಸಶ್ಚ. ತತ್ರ ವೈಕಾರಿಕಸ್ಸಾತ್ತ್ವಿಕ ಇಂದ್ರಿಯಾದಿಃ, ಭೂತಾದಿಸ್ತಾಮಸೋ ಮಹಾಭೂತಹೇತುಭೂತತನ್ಮಾತ್ರಹೇತುಃ. ತೈಜಸೋ ರಾಜಸಸ್ತೂಭಯೋರನುಗ್ರಾಹಕಃ. ಆಕಾಶಾದೀನಿ ಪಂಚಮಹಾಭೂತಾನಿ, ಶ್ರೋತ್ರಾದೀನಿ ಪಂಚಜ್ಞಾನೇಂದ್ರಿಯಾಣಿ, ವಾಗಾದೀನಿ ಪಂಚಕರ್ಮೇಂದ್ರಿಯಾಣಿ, ಮನ ಇತಿ ಕೇವಲವಿಕಾರಾಃ ಷೋಡಶ. ಪುರುಷಸ್ತು ನಿಷ್ಪರಿಣಾಮತ್ವೇನ ನ ಕಸ್ಯಚಿತ್ಪ್ರಕೃತಿಃ ನ ಕಸ್ಯಚಿದ್ವಿಕೃತಿಶ್ಚ; ಅತ ಏವ ನಿರ್ಧರ್ಮಕಶ್ಚೈತನ್ಯಮಾತ್ರವಪುರ್ನಿತ್ಯೋ ನಿಷ್ಕ್ರಿಯಸ್ಸರ್ವಗತಃ ಪ್ರತಿಶರೀರಂ ಭಿನ್ನಶ್ಚ. ನಿರ್ವಿಕಾರತ್ವಾನ್ನಿಷ್ಕ್ರಿಯತ್ವಾಚ್ಚ ತಸ್ಯ ಕರ್ತೃತ್ವಂ ಭೋಕ್ತೃತ್ವಂ ಚ ನ ಸಂಭವತಿ. ಏವಂಭೂತೇಽಪಿ ತತ್ತ್ವೇ ಮೂಢಾಃ ಪ್ರಕೃತಿಪುರುಷಸನ್ನಿಧಿಮಾತ್ರೇಣ ಪುರುಷಸ್ಯ ಚೈತನ್ಯಂ ಪ್ರಕೃತಾವಧ್ಯಸ್ಯ ಪ್ರಕೃತೇಶ್ಚ ಕರ್ತೃತ್ವಂ ಸ್ಫಟಿಕಮಣಾವಿವ ಜಪಾಕುಸುಮಸ್ಯಾರುಣಿಮಾನಂ ಪುರುಷೇ ಅಧ್ಯಸ್ಯ 'ಅಹಂ ಕರ್ತಾ ಭೋಕ್ತಾ' ಇತಿ ಮನ್ಯಂತೇ. ಏವಮಜ್ಞಾನಾದ್ಭೋಗಃ, ತತ್ತ್ವಜ್ಞಾನಾದಪವರ್ಗಃ. ತದೇತತ್ಪ್ರತ್ಯ

ಕ್ಷಾನುಮಾನಾಗಮೈಃ ಸಾಧಯಂತಿ. ತತ್ರ ಪ್ರತ್ಯಕ್ಷಸಿದ್ಧೇಷು ಪದಾರ್ಥೇಷು ನ ತವ ವಿವಾದಪದಮಸ್ತಿ. ಆಗಮೋಽಪಿ ಕಪಿಲಾದಿಸರ್ವಜ್ಞಜ್ಞಾನಮೂಲಮಿತಿ ಪ್ರತಿಪಾದನಾತ್, ಕಿಂಚ ಆಧ್ಯಾತ್ಮಿಕಾದಿತಾಪತ್ರಯದುಃಖಮೋಹಾತ್ಮಕಪ್ರಕೃತಿಸಾಮಾನ್ಯಧರ್ಮಾಣಾಮೇವ ಪ್ರಪಂಚೇ ದರ್ಶನಾತ್ ಪ್ರಧಾನಸ್ಯೈವ ಜಗದುಪಾದಾನತ್ವಂ ಸಮುಚಿತಂ, ತದನ್ವಿತತ್ವಾತ್. ಯದ್ಯತ್ರಾನ್ವಿತಂ ತತ್ತತ್ರೋಪಾದಾನಂ ಘಟಾದಿವತ್. ಕಾರಣಧರ್ಮಾಃ ಕಾರ್ಯೇ ಪರಿಸಂಕ್ರಮಂತೀತಿ ನ್ಯಾಯೇನ, ಪ್ರಧಾನನಿಷ್ಠಜಡದುಃಖಮೋಹಾದಿಧರ್ಮಾಣಾಂ ಪ್ರಪಂಚೇ ದ್ಯೋತನಾಚ್ಚ ತದೇವ ಜಗದುಪಾದಾನಮಿತಿ ಪ್ರಾಪ್ತೇ ಸಮಾಧೀಯತೇ. ಸ್ಮೃತ್ಯನವಕಾಶಾಧಿಕರಣೇ ಕಾಪಿಲಶಾಸ್ತ್ರಂ ನಿರಸ್ತಂ. ರಚನಾನುಪಪತ್ತೇಶ್ಚೇತ್ಯತ್ರ ಅನುಮೀಯತ ಇತ್ಯಾನುಮಾನಮಿತಿ ತ್ವದುದೀರಿತಪ್ರಧಾನಸ್ಯ ಜಡತ್ವೇನ ಚೇತನಾಚೇತನಾತ್ಮಕವಿಚಿತ್ರನಾನಾವಿಧಪ್ರಪಂಚಿತತ್ವಂ ನ ಸಂಭವತಿ. ಕುತಃ ರಚನಾನುಪಪತ್ತೇಃ ಅಚೇತನತ್ವಾತ್ ಪರಸ್ಪರಭಾವಾಭಿಜ್ಞಾನಶೂನ್ಯತ್ವೇನ ವಿಚಿತ್ರನಾನಾವಿಧಜಗದ್ರಚನಾನುಪಪತ್ತೇಃ. ತದ್ಯಥಾ ಲೋಕೇ ಮಂಡಪಗೋಪುರಪ್ರಾಕಾರಪ್ರಾಸಾದರಥಾದಿಕಲ್ಪನೇ ಜಡಪಾಷಾಣಸೈಕತಕಾಷ್ಠಾದೀನಾಂ ಸ್ವಾತಂತ್ರ್ಯೇಣ ತತ್ತನ್ಮಂಟಪಾದಿಕಲ್ಪನಾದರ್ಶನಾತ್, ಚೇತನಾಧಿಷ್ಠಿತತ್ವೇನ ತತ್ಕಾರ್ಯಾರಂಭದ್ಯೋತನಾಚ್ಚ ನ ಜಡಸ್ಯ ಪ್ರಧಾನಸ್ಯ ಸ್ವಾತಂತ್ರ್ಯೇಣ ಜಗದುಪಾದಾನತ್ವಮುಪದಿಶ್ಯತೇ. ಚಕಾರದ್ವಯಮನೈಕಾಂತ್ಯಂ ಸಮುಚ್ಚಿನೋತಿ, ನಹ್ಯನ್ವಿತಂ ಶೌಕ್ಲ್ಯಂ ಗೋತ್ವಾದಿ ಕಾರಣತ್ವವ್ಯಾಪ್ತಮಿತಿ. ಮಾಭೂದನ್ವಿತಾನಾಮಪಿ ಶೌಕ್ಲ್ಯಾದಿಧರ್ಮಾಣಾಂ ಕಾರಣತ್ವಂ. ದ್ರವ್ಯಸ್ಯ ತು ಹೇಮಾದೇಃ ಕಾರ್ಯಾನ್ವಿತಸ್ಯ ಕಾರಣತ್ವವ್ಯಾಪ್ತಿರಸ್ತ್ಯೇವ. ಸತ್ತ್ವಾದೀನ್ಯಪಿ ದ್ರವ್ಯಾಣಿ ಕಾರ್ಯೇ ಅನ್ವಿತಾನಿ ಕಾರಣತ್ವವ್ಯಾಪ್ತಾನೀತಿ ವಾಚ್ಯಂ ನಚ; ಯತಸ್ಸತ್ತ್ವಾದಯೋ ದ್ರವ್ಯಧರ್ಮಾಃ ನತು ದ್ರವ್ಯಸ್ವರೂಪಂ, ಸತ್ತ್ವಾದಯೋ ಹಿ ಪೃಥಿವ್ಯಾದಿದ್ರವ್ಯಗತಲಘುತ್ವಪ್ರಕಾಶಾದಿಹೇತುಭೂತಾಸ್ತತ್ಸ್ವಭಾವವಿಶೇಷಾ ಏವ. ನತು ಮೃದ್ಧಿರಣ್ಯಾದಿದ್ರವ್ಯತಯಾ ಕಾರ್ಯಾನ್ವಿತಾ ಉಪಲಭ್ಯಂತೇ. ಗುಣಾ ಇತ್ಯೇವ ಚ ಸತ್ತ್ವಾದೀನಾಂ ಪ್ರಸಿದ್ಧಿಃ, ಯಚ್ಚ ಕಾರಣವ್ಯವಸ್ಥಾಸಿದ್ಧಯೇ ಜಗತ ಏಕಮೂಲತ್ವಮುಕ್ತಂ. ತಥಾಪಿ ಸತ್ತ್ವಾದೀನಾಮನೇಕತ್ವಾನ್ನೋಪಪದ್ಯತೇ. ಅತ ಏವ ಕಾರಣವ್ಯವಸ್ಥಾ ಚ ನ ಸಿದ್ಧ್ಯತಿ. ಸಾಮ್ಯಾವಸ್ಥಾಸ್ಸತ್ತ್ವಾದಯ ಏವ ಹಿ ಪ್ರಧಾನಮಿತಿ ತ್ವನ್ಮತಂ. ಅತಃ ಕಾರಣಬಹುತ್ವಾದನವಸ್ಥಾ ತದವಸ್ಥೈವ. ನಚ ತೇಷಾಮಪರಿಮಿತತ್ವೇನ ವ್ಯವಸ್ಥಾಸಿದ್ಧಿಃ. ಅಪರಿಮಿತತ್ವೇ ಹಿ ತ್ರಯಾಣಾಮಪಿ ಸರ್ವಗತ

**ತ್ವೇನ ನ್ಯೂನಾಧಿಕತ್ವಾಭಾವಾದ್ವೈಷಮ್ಯಾಸಿದ್ಧೇಃ ಕಾರ್ಯಾರಂಭಾಸಂಭವಾತ್, ಕಾರ್ಯಾರಂಭಸ್ಯೈವ ಪರಿಮಿತತ್ವಮವಶ್ಯಾಶ್ರಯಣೀಯಂ.**

# ದ್ವಿತೀಯಾಧ್ಯಾಯದ ದ್ವಿತೀಯಪಾದ

ಪ್ರಥಮಪಾದದಲ್ಲಿ ಸಾಂಖ್ಯಯೋಗ, ವೈಶೇಷಿಕ, ಅದ್ವೈತ ಮೊದಲಾದ ತರ್ಕಮೂಲದ ವಿವಾದಗಳನ್ನು ಸರ್ವವೇದಾಂತಸಮ್ಮತವಾದ ದ್ವೈತಾದ್ವೈತಸಿದ್ಧಾಂತದ ರಕ್ಷಣೆಗಾಗಿ ನಿರಾಕರಿಸಿಯಾಯಿತು. ಈಕ್ಷತ್ಯಧಿಕರಣದಲ್ಲಿ ಪ್ರಧಾನವು ವೇದಪ್ರತಿಪಾದ್ಯವಲ್ಲದ್ದರಿಂದ ಜಗತ್ಕಾರಣವಲ್ಲವೆಂದು ಸಾಧಿಸಲಾಗಿತ್ತು. ಆದರೆ ಈ ಅಧ್ಯಾಯದ ಹಿಂದಿನ ಪಾದದಲ್ಲೂ ಯುಕ್ತ್ಯಾಭ್ಯಾಸಗಳಿಂದ ಪ್ರಧಾನವೇ ಜಗತ್ಕಾರಣವೆಂದಾಕ್ಷೇಪಿಸಿ ನಿರಾಕರಿಸಿದ್ದರಿಂದ ಪುನರುಕ್ತಿದೋಷಕ್ಕವಕಾಶವಿಲ್ಲ. ಹೀಗೆ ಸಾಂಖ್ಯಾದಿದುರ್ಮತಗಳನ್ನು ನಿರಾಕರಿಸಿ ಮುಮುಕ್ಷುಗಳಿಗೆ: ಶುದ್ಧವೈದಿಕಮಾರ್ಗದಲ್ಲಿ ನಿಷ್ಠೆಯನ್ನು ಬಲಪಡಿಸುವುದರಿಂದ ಹಿಂದಿನ ಪಾದವು ವಿರೋಧಪರಿಹಾರವೆಂಬ ಈ ಅಧ್ಯಾಯದಲ್ಲಿ ಸಂಬದ್ಧವಾಗಿದೆ. ಎಲ್ಲಾ ವೇದಾಂತಗಳ ಸಮನ್ವಯಕ್ಕೆ ಅಡ್ಡಲಾಗಿರುವ ವಿರೋಧವನ್ನು ಪರಿಹರಿಸುವ ಮೂಲಕ ತನ್ನ ಪಕ್ಷದ ಸ್ಥಾಪನೆ ಹಿಂದಿನ ಪಾದದಲ್ಲಿಯೇ ಸಿದ್ಧವಾಗಿರುವುದರಿಂದ ಈ ಎರಡು ಪಾದಗಳಿಗೂ ಆಶ್ರಯಾಶ್ರಯಿಭಾವದ ಹೊಂದಿಕೆ ಇದೆ. ಪರಪಕ್ಷವನ್ನು ನಿರಾಕರಿಸದಿದ್ದರೆ ಸ್ವಪಕ್ಷದ ಸಿದ್ಧಾಂತಜ್ಞಾನವು ಬರುವಂತಿಲ್ಲ. ಹಿಂದಿನ ಪಾದದ ಎಲ್ಲಾ ಅಧಿಕರಣಗಳಲ್ಲೂ ಪರಪಕ್ಷಗಳನ್ನು ನಿರಾಕರಿಸಿ ಸ್ವಪಕ್ಷದ ಸ್ಥಾಪನೆಯನ್ನು ಹೇಳಿದ್ದರಿಂದ ಅದು ಮುಂದಿನ ಪಾದಕ್ಕಾಶ್ರಯವಾಗಿದೆ. "ಸರ್ವಧರ್ಮೋಪಪತ್ತೇಶ್ಚ" ಎಂಬ ಸೂತ್ರದಲ್ಲಿ ನಿರ್ಗುಣಸಗುಣತ್ವಾದಿಧರ್ಮಗಳು ಪರಮಶಿವನ ಶಕ್ತಿಸಂಕೋಚವಿಕಾಸರೂಪಗಳೆಂದು ಸಿದ್ಧಾಂತಮಾಡಲಾಗಿದೆ. ಈ ಬಗೆಯ ಸಂಕೋಚವಿಕಾಸಗಳು ಪ್ರಧಾನಕ್ಕೂ ಹೊಂದಿಕೆಯಾಗುವುದರಿಂದ ಅದೇ ಜಗತ್ಕಾರಣವಾಗಲೆಂದು ಮುಂದೆ ಆಕ್ಷೇಪಿಸಲಾಗಿದೆ. ಆರಂಭದಿಂದ ಕೊನೆಯವರೆಗೆ ವೇದವಿರುದ್ಧವಾದ ಯುಕ್ತ್ಯಾಭಾಸಗಳನ್ನು ನಿರಾಕರಿಸಿ ಎಲ್ಲಾ ವೇದಾಂತಗಳಿಗೂ ಸಮ್ಮತವಾದ ದ್ವೈತಾದ್ವೈತಸಮನ್ವಯವನ್ನು ಸಾಧಿಸುವುದೇ ಈ ಅಧಿಕರಣದ ಫಲವೆನಿಸಿದೆ.

**ರಚನಾನುಪಪತ್ತ್ಯಧಿಕರಣಂ ॥ ೧ ॥**

**ರಚನಾನುಪಪತ್ತೇಶ್ಚ ನಾನುಮಾನಂ ಪ್ರವೃತ್ತೇಶ್ಚ ॥ ೧ ॥**

ಅನುಮಾನಸಾಧ್ಯವಾದ ಪ್ರಧಾನವು ಜಗತ್ಕಾರಣವಲ್ಲ; ಯಾಕೆಂದರೆ ಜ್ಞಾನಶೂನ್ಯವಾದ ಜಡಪ್ರಧಾನಕ್ಕೆ ಜಗತ್ಸೃಷ್ಟಿಯು ಹೊಂದುವುದಿಲ್ಲ. ಇದೂ ಅಲ್ಲದೆ, ಅದಕ್ಕೆ ಪ್ರವೃತ್ತಿಯೇ ಇಲ್ಲದ್ದರಿಂದ ಸೃಷ್ಟಿಪ್ರಯತ್ನವೂ ಬರುವಂತಿಲ್ಲ. ಅದಕ್ಕೆ ಸಂಕಲ್ಪವೇ ಹೊಂದದಿರುವುದರಿಂದ ಅದು ಜಗತ್ಕಾರಣವಾಗಲಾರದು. ಸಾಂಖ್ಯಮತವು ವೇದಾನುಕೂಲವೆಂದು ಶಿಷ್ಟರು ಒಪ್ಪಿರುವುದರಿಂದ ಅದರಲ್ಲಿ ಪ್ರಧಾನವೇ ಜಗತ್ತಿಗೆ

ಉಪಾದಾನಕಾರಣವೆಂದು ಹೇಳಿರುವುದು ಪ್ರಮಾಣಮೂಲವೇ ? ಭ್ರಾಂತಿಮೂಲವೇ ? ಎಂದು ಸಂದೇಹ ಬರುತ್ತದೆ. ಪ್ರಧಾನವೇ ಜಗದುಪಾದಾನವೆಂಬುದು ಪ್ರಮಾಣ ಮೂಲವೇ ಆಗುತ್ತದೆ. "ಮೂಲಪ್ರಕೃತಿ ಸಹಜವಾದದ್ದು; ಬುದ್ಧಿ-ಅಹಂಕಾರ-ಶಬ್ದ-ಸ್ಪರ್ಶ-ರೂಪ-ರಸ-ಗಂಧ-ತನ್ಮಾತ್ರಗಳೆಂಬ ಅದರ ವಿಕಾರಗಳು ಏಳು ; ಅವುಗಳ ವಿಕಾರಗಳು ಹದಿನಾರು ; ಚೇತನಪುರುಷನೊಬ್ಬನು" ಎಂದು ಅವರ ತತ್ವಗಳನ್ನು ತಿಳಿಸಲಾಗಿದೆ. ಸುಖದುಃಖಮೋಹರೂಪವಾಗಿ ಲಾಘವ ಮತ್ತು ಪ್ರಕಾಶ, ಚಲನ ಮತ್ತು ಸಹಕಾರ, ಗುರುತ್ವ ಮತ್ತು ಆವರಣಗಳೆಂಬ ಕಾರ್ಯವನ್ನು ಹುಟ್ಟಿಸುತ್ತ, ಅತೀಂದ್ರಿಯವೂ, ಕಾರ್ಯದಿಂದಲೇ ತಿಳಿದುಬರುವಂತಹುದೂ, ಹೆಚ್ಚುಕಡಿಮೆ ಇಲ್ಲದೆ ಸಮನಾಗಿಯೂ ಇರುವ ಸತ್ತ್ವರಜಸ್ತಮೋಗುಣಗಳೆಂಬ ದ್ರವ್ಯವೇ ಮೂಲಪ್ರಕೃತಿ ಎನಿಸುತ್ತದೆ. ಈ ಸತ್ತ್ವರಜಸ್ತಮೋಗುಣಗಳ ಸಾಮ್ಯರೂಪವಾದ ಪ್ರಕೃತಿಯು ಅಚೇತನವಾಗಿದ್ದರೂ ಅನೇಕ ಚೇತನರಿಗೆ ಭೋಗಾಪವರ್ಗಗಳನ್ನು ದೊರಕಿಸಿಕೊಡುತ್ತ ನಿತ್ಯವೂ ವಿಭುವೂ ಪರಿಣಾಮಶೀಲವೂ ಆಗಿ, ತಾನು ಯಾವುದರಿಂದಲೂ ಹುಟ್ಟದೆ ಇದ್ದರೂ ಎಲ್ಲಕ್ಕೂ ಕಾರಣವಾಗಿದೆ. ಬುದ್ಧಿ(ಮಹತ್) ಮೊದಲಾದವು ತಮ್ಮ ಕಾರ್ಯ ಗಳೆನಿಸಿದ ಮುಂದಿನ ತತ್ತ್ವಗಳಿಗೆ ಕಾರಣವಾಗಿರುವುವು. ಅವುಗಳಲ್ಲಿ ಅಹಂ ಕಾರವು ವೈಕಾರಿಕ, ತೈಜಸ, ಭೂತಾದಿ ಎಂದು ಮೂರು ಬಗೆಯಾಗಿದೆ. ಇವು ಕ್ರಮವಾಗಿ ಸಾತ್ತ್ವಿಕ-ರಾಜಸ-ತಾಮಸವೆನಿಸುತ್ತವೆ. ಅದರಲ್ಲಿ ವೈಕಾರಿಕವೆಂಬ ಸಾತ್ತ್ವಿಕಾಹಂಕಾರವು ಇಂದ್ರಿಯಗಳಿಗೂ, ಭೂತಾದಿ ಎಂಬ ತಾಮಸಾಹಂಕಾರವು ಪಂಚಮಹಾಭೂತಗಳ ಕಾರಣವಾದ ತನ್ಮಾತ್ರಗಳಿಗೂ ಕಾರಣವಾಗಿರುವುದು. ತೈಜಸ ವೆಂಬ ರಾಜಸಾಹಂಕಾರವು ಎರಡಕ್ಕೂ ಸಹಕಾರಿಯಾಗಿರುವುದು. ಆಕಾಶಾದಿಗಳೈದು ಮಹಾಭೂತಾಗಳು, ಶ್ರೋತ್ರಾದಿಗಳು ಐದು ಜ್ಞಾನೇಂದ್ರಿಯಗಳು, ವಾಗಾದಿಗಳು ಐದು ಕರ್ಮೇಂದ್ರಿಗಳು, ಮನಸ್ಸೂ ಸೇರಿ ವಿಕಾರಗಳು ಹದಿನಾರು ಬಗೆಯಾಗಿವೆ. ಪುರುಷನಿಗೆ ಯಾವ ಪರಿಣಾಮವೂ ಇಲ್ಲದ್ದರಿಂದ ಅವನು ಯಾವುದರಿಂದಲೂ ಹುಟ್ಟದೆ, ಯಾವುದಕ್ಕೂ ಕಾರಣನೂ ಆಗಿಲ್ಲ; ಆದ್ದರಿಂದ ಅವನು ನಿರ್ಧರ್ಮಕ, ಚೇತನಸ್ವರೂಪ, ನಿತ್ಯ, ನಿಷ್ಕ್ರಿಯ, ವಿಭು ಮತ್ತು ಪ್ರತಿಶರೀರದಲ್ಲೂ ಭಿನ್ನನೂ ಆಗಿರುವನು. ಹೀಗೆ ನಿರ್ವಿಕಾರನಾಗಿರುವುದರಿಂದ ಅವನು ಕರ್ತನೂ ಅಲ್ಲ, ಭೋಕ್ತನೂ ಅಲ್ಲ. ವಾಸ್ತವಾಂಶ ಹೀಗಿದ್ದರೂ ಮೂಢರು ಪುರುಷನ ಚೈತನ್ಯವನ್ನು ಪ್ರಕೃತಿಯಲ್ಲೂ, ಪ್ರಕೃತಿಯಲ್ಲಿರುವ ಕರ್ತೃತ್ವವನ್ನೂ ಕೆಂಪುದಾಸಿವಾಳದ ಬಣ್ಣವನ್ನು ಅದರ ಪಕ್ಕದ ಗಾಜಿನಲ್ಲಿ ಆರೋಪಿಸುವಂತೆ ಪುರುಷನಲ್ಲೂ ಆರೋಪಿಸಿ "ನಾನೇ ಕರ್ತನು ಭೋಕ್ತನು" ಎಂದು ತಪ್ಪಾಗಿ ತಿಳಿಯುತ್ತಾರೆ. ಹೀಗೆ ಅಜ್ಞಾನದಿಂದ ಭೋಗವೂ, ತತ್ತ್ವಜ್ಞಾನದಿಂದ ಮೋಕ್ಷವೂ ದೊರಕುವುದು. ಇದನ್ನು ಪ್ರತ್ಯಕ್ಷ ಅನುಮಾನ ಆಗಮಗಳಿಂದ ಸಾಧಿಸಲಾಗಿದೆ. ಹಿಂದೆ ಹೇಳಿದ ಪ್ರತ್ಯಕ್ಷಸಿದ್ಧವಾದ ವಸ್ತುಗಳಲ್ಲಿ ಯಾವ ವಿವಾದಕ್ಕೂ ಅವಕಾಶವಿಲ್ಲ. ಇವುಗಳನ್ನು ತಿಳಿಸುವ ಆಗಮವೂ

ಸಹ ಸರ್ವಜ್ಞರಾದ ಕಪಿಲಮಹರ್ಷಿಗಳಿಂದಲೇ ವಿರಚಿತವಾಗಿದೆ. ಇದಲ್ಲದೆ, ಆಧ್ಯಾತ್ಮಿಕಾದಿತಾಪತ್ರಯಗಳು, ದುಃಖಮೋಹಗಳು ಮೊದಲಾದ ಪ್ರಕೃತಿಯ ಸಾಮಾನ್ಯ ಧರ್ಮಗಳೇ ಪ್ರಪಂಚದಲ್ಲಿ ಕಾಣುವುದರಿಂದ ಪ್ರಕೃತಿಯೇ ಜಗತ್ತಿಗೆ ಕಾರಣವೆಂಬುದು ಯುಕ್ತವಾಗುತ್ತದೆ. ಯಾವ ಗುಣ ಎಲ್ಲಿ ಕಾಣುವುದೋ ಅದು ಅದರ ಕಾರ್ಯವಾಗುವುದೆಂಬುದು ಗಡಿಗೆ ಮೊದಲಾದವುಗಳಲ್ಲಿ ಕಂಡುಬಂದಿದೆ. ಕಾರಣಧರ್ಮಗಳು ಕಾರ್ಯದಲ್ಲಿ ಅನ್ವಯಿಸುತ್ತವೆ ಎಂಬ ನ್ಯಾಯವೂ ಇದೆ. ಹೀಗೆ ಪ್ರಧಾನದಲ್ಲಿರುವ ಜಡದುಃಖಮೋಹಗಳು ಪ್ರಪಂಚದಲ್ಲಿ ಕಂಡುಬಂದಿರುವುದರಿಂದ ಅದೇ ಜಗತ್ತಿನ ಮೂಲಕಾರಣವೆಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರವು ಹೀಗೆ ಸಮಾಧಾನವನ್ನು ತಿಳಿಸುತ್ತದೆ. ಸ್ಮೃತ್ಯನವಕಾಶಾಧಿಕರಣದಲ್ಲಿಯೇ ಸಾಂಖ್ಯಶಾಸ್ತ್ರವನ್ನು ನಿರಾಕರಿಸಲಾಗಿದೆ. ಅಲ್ಲಿ ಹೇಳಿರುವ ಪ್ರಧಾನವು ಜಡವಾದ್ದರಿಂದ ಚೇತನಾತ್ಮಕವಾದ ಈ ವಿಚಿತ್ರ ಜಗತ್ತಿನ ರೂಪವನ್ನು ತಾಳಲಾರದು ; ಏಕೆಂದರೆ ಅದು ಅಚೇತನವಾದ್ದರಿಂದಲೂ, ಪರಸ್ಪರಾಭಿಪ್ರಾಯವನ್ನು ತಿಳಿಯಲಶಕ್ತವಾದ್ದರಿಂದಲೂ ಆದರಿಂದ ಲೋಕದ ಸೃಷ್ಟಿಯಾಗಲಾರದು. ಲೋಕದಲ್ಲಿ ಮಂಟಪ, ಗೋಪುರ ಮೊದಲಾದವನ್ನು ನಿರ್ಮಿಸುವಾಗ ಜಡವಾದ ಕಲ್ಲು, ಮರ ಮೊದಲಾದವು ತಮಗೆ ತಾವೇ ಅವನ್ನು ನಿರ್ಮಿಸಿಕೊಳ್ಳುವುದಿಲ್ಲ ; ಆದರೆ ಚೇತನದಿಂದ ಪ್ರೇರಿತವಾಗಿಯೇ ಅವು ಆ ಕಾರ್ಯವನ್ನು ಮಾಡುತ್ತವೆ. ಆದ್ದರಿಂದ ಜಡವಾದ ಪ್ರಧಾನವು ತನ್ನಷ್ಟಕ್ಕೆ ತಾನೇ ಜಗತ್ತಿನ ಕಾರಣವಾಗಲಾರದು. ಸೂತ್ರದಲ್ಲಿರುವ ಎರಡು ಚಕಾರಗಳು ಹೇತುವಿನಲ್ಲಿ ಅದರೊಂದಿಗಿರುವ ಶುಕ್ಲ ಮೊದಲಾದ ಬಣ್ಣಗಳೂ, ಗೋತ್ವ ಮೊದಲಾದ ಜಾತಿಗಳೂ ಕಾರ್ಯಕ್ಕೆ ಕಾರಣವಾಗುವುದಿಲ್ಲವೆಂಬ ವ್ಯಭಿಚಾರವನ್ನು ತಿಳಿಸುತ್ತವೆ. ಆದರೆ ಕಾರಣದಲ್ಲಿರುವ ಶುಕ್ಲರೂಪಾದಿಗಳು ಗುಣವಾದ್ದರಿಂದ ಒಂದು ಕಾರ್ಯಕ್ಕೆ ಕಾರಣವಾಗದಿದ್ದರೂ, ದ್ರವ್ಯವು ಕಾರಣವಾಗಬಹುದು. ಸುವರ್ಣವು ಒಡವೆಗಳಿಗೆ ಕಾರಣವಾಗಿರುವುದನ್ನು ಎಲ್ಲರೂ ಕಂಡಿದ್ದಾರೆ. ಹೀಗೆಯೇ ಸತ್ತ್ವಾದಿಗಳೂ ದ್ರವ್ಯವಾದ್ದರಿಂದ ಜಗತ್ತಿಗೆ ಕಾರಣವಾಗಬಹುದಾದ್ದರಿಂದ ವ್ಯಭಿಚಾರಕ್ಕವಕಾಶವಿಲ್ಲವೆಂದು ಹೇಳಿದರೆ ಅದೂ ಸರಿಯಲ್ಲ; ಏಕೆಂದರೆ ಸತ್ತ್ವಾದಿಗಳೂ ಸಹ ದ್ರವ್ಯದ ಗುಣವೇ ಹೊರತು ದ್ರವ್ಯವಲ್ಲ. ಪೃಥಿವ್ಯಾದಿ ದ್ರವ್ಯಗಳಲ್ಲಿ ಲಘುತ್ವಾದಿಗಳಿಗೆ ಕಾರಣವಾದ ಗುಣಗಳೇ ಸತ್ತ್ವ ರಜಸ್ಸು ತಮಸ್ಸು ಎನಿಸಿವೆ. ಮಣ್ಣು ಚಿನ್ನಗಳಂತೆ ಅವು ದ್ರವ್ಯವಲ್ಲ; ಆದರೆ ಅವು ಗುಣವೆಂದೇ ಪ್ರಸಿದ್ಧವಾಗಿವೆ. ಆದ್ದರಿಂದಲೇ ಅವು ಕಾರಣವೆನಿಸುವುದಿಲ್ಲ. ಜಗತ್ತಿಗೆ ಕಾರಣವಾಗತಕ್ಕದ್ದು ಒಂದೇ ವಸ್ತುವಾಗಬೇಕಾದ್ದರಿಂದ ಪ್ರಧಾನವೇ ಜಗತ್ತಿನ ಕಾರಣವೆಂದು ಸಾಂಖ್ಯರು ಹೇಳುವುದು ಸರಿಯಲ್ಲ. ಅವರ ಮತದಲ್ಲಿ ಸತ್ತ್ವಾದಿ ಮೂರು ಗುಣಗಳೇ ಕಾರಣವಾದ್ದರಿಂದ ಜಗತ್ತಿಗೆ ಒಂದೇ ಕಾರಣವೆಂಬುದು ಹೊಂದುವುದಿಲ್ಲ. ಆದ್ದರಿಂದ ಕಾರಣದ ವ್ಯವಸ್ಥೆ ಸಿದ್ಧಿಸುವುದಿಲ್ಲ. ಸಾಮ್ಯಾವಸ್ಥೆಯನ್ನು ಹೊಂದಿದ ಸತ್ತ್ವಾದಿ ಮೂರು ಗುಣಗಳೇ ಪ್ರಧಾನ

ವೆಂದು ಅವರು ಹೇಳುವುದರಿಂದ ಕಾರಣವೂ ಅನೇಕವಾಗುತ್ತದೆ. ಇದರಿಂದ ಅನವಸ್ಥೆಯುಂಟಾಗುತ್ತದೆ. ಮೂರೂ ಒಟ್ಟಿಗೆ ವ್ಯಾಪಿಸಿರುವುದರಿಂದ ಅನವಸ್ಥೆಗವಕಾಶವಿಲ್ಲವೆಂದು ಹೇಳುವುದೂ ಸರಿಯಲ್ಲ. ಮೂರೂ ಒಟ್ಟಿಗೆ ಸಮವಾಗಿ ಸೇರಿರುವುದಾದರೆ ವೈಷಮ್ಯವಿಲ್ಲದ್ದರಿಂದ ಜಗತ್ಸೃಷ್ಟಿಯೇ ಆಗಲಾರದು. ಜಗತ್ಸೃಷ್ಟಿಯಾಗಬೇಕಾದರೆ ಗುಣಗಳಲ್ಲಿ ವೈಷಮ್ಯವಿದ್ದೇ ಇರಬೇಕು. ಆದ್ದರಿಂದ ಪ್ರಧಾನವು ಜಗತ್ಕಾರಣವಾಗಲಾರದೆಂದು ಸಿದ್ಧವಾಗುತ್ತದೆ.

**ನನು ರಥಾದಿಷು ಸ್ಪಷ್ಟಂ ಚೇತನಾಧಿಷ್ಠಿತತ್ವಂ ದೃಷ್ಟಂ, ತದ್ವ್ಯತಿರಿಕ್ತಂ ಸರ್ವಂ ಪಕ್ಷೀಕೃತಮಿತ್ಯಾಶಂಕ್ಯಾಹ—ಪಯೋಂಬುವಚ್ಚೇತ್ತತ್ರಾಪಿ ॥೨॥**

**ಪಯಸಃ ಕ್ಷೀರಸ್ಯ ಸ್ತನೇಷು ವಿದ್ಯಮಾನಸ್ಯ ಯಥಾ ಸ್ವಾತಂತ್ರ್ಯೇಣ ಬಹಿರ್ನಿರ್ಗಮನಂ, ಯಥಾಂಭಸೋ ಜಲಸ್ಯ ನದ್ಯಾಂ ಸ್ವಾತಂತ್ರ್ಯೇಣ ಚಲನಂ ತದ್ವದಚೇತನಸ್ಯ ಪ್ರಧಾನಸ್ಯ ಸ್ವಾತಂತ್ರ್ಯೇಣ ಮಹದಹಂಕಾರಾದಿಜಗದ್ಧೇತುತ್ವಮಿತಿ ಚೇತ್ತತ್ರಾಪಿ ಕ್ಷೀರಜಲಯೋರಪಿ ಪರಮೇಶ್ವರಪ್ರೇರಕತ್ವೇನ ಸ್ವಾತಂತ್ರ್ಯಾಭಾವಾತ್. ಅತ್ರ ಅನ್ಯೋಽಪ್ಯರ್ಥಃ. ಅಚೇತನಪ್ರಧಾನಸ್ಯವಿಚಿತ್ರಜಗದ್ರಚನಾನುಪಪತ್ತಿರಿತಿ ಯದುಕ್ತಂ ತನ್ನ, ಯತಃ ಪಯೋಽಂಬುವತ್ಪ್ರವೃತ್ತಿರ್ದೃಶ್ಯತೇ. ಪಯಸಸ್ತಾವದ್ದಧಿಭಾವೇನ ಪರಿಣಮಮಾನಸ್ಯಾನ್ಯಾನಪೇಕ್ಷಸ್ಯಾದ್ಯಪರಿಸ್ಪಂದಪ್ರಭೃತಿಪರಿಣಾಮಪರಂಪರಾ ಸ್ವತ ಏವೋಪಪದ್ಯತೇ. ಯಥಾ ಚ ವಾರಿದವಿಮುಕ್ತಸ್ಯಾಂಬುನ ಏಕರಸಸ್ಯ ನಾರಿಕೇಳತಾಲಚೂತಕಪಿತ್ಥನಿಂಬತಿಂತ್ರಿಣ್ಯಾದಿವಿಚಿತ್ರರಸರೂಪೇಣ ಪರಿಣಾಮಪ್ರವೃತ್ತಿಸ್ಸ್ವತ ಏವ ದೃಶ್ಯತೇ. ತಥಾ ಪ್ರಧಾನಸ್ಯಾಪಿ ಪರಿಣಾಮಸ್ವಭಾವಸ್ಯಾನ್ಯಾನಧಿಷ್ಠಿತಸ್ಯೈವ ಪ್ರತಿಸರ್ಗಾವಸ್ಥಾಯಾಂ ಸದೃಶಪರಿಣಾಮೇಽವಸ್ಥಿತಸ್ಯ ಸರ್ಗಾವಸ್ಥಾಯಾಂ ಗುಣವೈಷಮ್ಯನಿಮಿತ್ತ ವಿಚಿತ್ರಪರಿಣಾಮ ಉಪಪದ್ಯತೇ. ಯಥೋಕ್ತಂ ಪರಿಣಾಮತಸ್ಸಲಿಲವತ್ಪ್ರತಿಪ್ರತಿಗುಣಾಶ್ರಯವಿಶೇಷಾದಿತಿ. ತದೇವಾವ್ಯಕ್ತಮನನ್ಯಾಪೇಕ್ಷಂ ಪ್ರವರ್ತತ ಇತಿ ಚೇದ್ವದಾಮಃ ತತ್ರಾಪೀತಿ. ಯತ್ತು ಕ್ಷೀರಜಲಾದಿದೃಷ್ಟಾಂತತಯಾ ನಿದರ್ಶಿತಂ ತತ್ರಾಪಿ ಪ್ರಾಜ್ಞಾನಧಿಷ್ಠಾನೇ ಪ್ರವೃತ್ತಿರ್ನೋಪಪದ್ಯತೇ. ತದಪಿ ಪೂರ್ವತ್ರ ಪಕ್ಷೀಕೃತಮಿತ್ಯಭಿಪ್ರಾಯಃ. "ಯೋ ರುದ್ರೋ ಅಗ್ನೌ ಯೋ ಅಪ್ಸು" ಇತ್ಯಾದಿಷು ಸರ್ವಾಂತರ್ಯಾಮಿತ್ವೇನ ಸರ್ವಪ್ರೇರಕತ್ವಸ್ಯ ಪರಮೇಶ್ವರ ಏವ ವ್ಯವಸ್ಥಾಪನಾತ್ ಪಯೋಽಂಬುಸ್ರಾವಚಲನಪರಿಣಾಮಾದಿಕಮಪಿ ಪರಮೇಶ್ವರಾಧೀನಮಿತಿ ನಿರ್ಣೀಯತೇ, ಜಡಸ್ಯ ಸ್ವಾತಂತ್ರ್ಯಾಭಾವಾತ್.**

ಚೇತನರಿಂದ ಪ್ರೇರಿತವಾದ ರಥ ಮೊದಲಾದವನ್ನು ಬಿಟ್ಟು ಚೇತನ ಸಂಬಂಧವೇ ಇಲ್ಲದ ಕಡೆಯಲ್ಲಿ ಪ್ರಧಾನವೇ ಕಾರಣವಾಗುವುದೆಂದಾಶಂಕಿಸಿ ನಿರಾಕರಿಸುತ್ತಾನೆ.

## ಪಯೋಂಬುವಚ್ಚೇತ್ತತ್ರಾಪಿ ॥ ೨ ॥

ಹಾಲು ಸ್ತನದಿಂದ ಸ್ವತಂತ್ರವಾಗಿ ಬರುವಂತೆಯೂ, ನದಿ ಸ್ವತಂತ್ರವಾಗಿ ಹರಿಯುವಂತೆಯೂ ಅಚೇತನವಾದ ಪ್ರಧಾನವೂ ಸ್ವತಂತ್ರವಾಗಿ ಜಗತ್ಸೃಷ್ಟಿಯನ್ನು ಮಾಡಬಲ್ಲದು ಎಂದು ಹೇಳಿದರೆ ಅಲ್ಲೂ ಪರಮೇಶ್ವರನ ಪ್ರೇರಣೆಯಿಂದಲೇ ಆ ಕಾರ್ಯಗಳು ನಡೆಯುವುದರಿಂದ ಸ್ವತಂತ್ರವಾಗಿ ಅವು ಕಾರ್ಯವನ್ನು ಮಾಡಲಾರವು. ಈ ಸೂತ್ರಕ್ಕೆ ಬೇರೆಯೊಂದು ಅರ್ಥವನ್ನೂ ಹೇಳಬಹುದು. ಅಚೇತನವಾದ ಪ್ರಧಾನವು ಜಗತ್ತನ್ನು ಸೃಷ್ಟಿಸುವುದಿಲ್ಲವೆನ್ನುವುದು ಸರಿಯಲ್ಲ; ಏಕೆಂದರೆ ಹಾಲು ಸ್ವತಂತ್ರವಾಗಿ ಮೊಸರಾಗುವುದನ್ನು ನಾವು ಕಂಡಿದ್ದೇವೆ. ಹಾಗೆಯೇ ಮೇಲಿಂದ ಬಿದ್ದ ಶುದ್ಧವಾದ ನೀರಿನಲ್ಲಿ ಒಂದೇ ರಸವಿದ್ದರೂ ತೆಂಗು, ಮಾವು, ನಿಂಬೆ ಮೊದಲಾದುವುಗಳಲ್ಲಿ ಸೇರಿ ಅದು ಅನೇಕ ಬಗೆಯ ರಸಗಳನ್ನು ತಾನಾಗಿಯೇ ಹೊಂದುವುದು ಎಲ್ಲರಿಗೂ ತಿಳಿದಿದೆ. ಹಾಗೆಯೇ ಪ್ರಧಾನವೂ ಚೇತನಪ್ರೇರಿತವಾಗದೆಯೇ ಸ್ವತಃ ಜಗದ್ರೂಪದಿಂದ ಪರಿಣಮಿಸುತ್ತದೆ. ಇದೇ ಅರ್ಥವನ್ನು "ಪರಿಣಾಮತಃ ಸಲಿಲವತ್" ಎಂಬ ಸಾಂಖ್ಯಕಾರಿಕೆಯಲ್ಲೂ ಕೊಡಲಾಗಿದೆ. ಆದ್ದರಿಂದ ಸ್ವತಂತ್ರವಾದ ಪ್ರಧಾನವೇ ಜಗತ್ಕಾರಣವಾಗಬಹುದು ಎಂದು ಆಕ್ಷೇಪಬಂದರೆ ಸಮಾಧಾನವನ್ನು ಹೀಗೆ ಹೇಳಬಹುದು. ಅಲ್ಲಿಯೂ ಪರಶಿವನ ಪ್ರೇರಣೆ ಇಲ್ಲದಿದ್ದರೆ ಕಾರ್ಯ ನಡೆಯುವಂತಿಲ್ಲ. "ನೀರು ಅಗ್ನಿ ಓಷಧಿ ಎಲ್ಲಾ ಕಡೆಯಲ್ಲೂ ರುದ್ರನೇ ಇರುವನು" ಈ ಬಗೆಯ ಶ್ರುತಿಗಳಲ್ಲಿ ಪರಶಿವನನ್ನು ಎಲ್ಲರಲ್ಲೂ ಅಂತರ್ಯಾಮಿ ಮತ್ತು ಪ್ರೇರಕನೆಂದು ಹೇಳಲಾಗಿದೆ. ಆದ್ದರಿಂದ ನೀರಿನ ಪರಿಣಾಮವೂ ಸಹ ಪರಶಿವನಿಗಧೀನವಾದ ಪ್ರಯುಕ್ತ ಜಡವಾದ ಪ್ರಧಾನವು ಸ್ವತಂತ್ರವಾಗಿ ಜಗತ್ತಿನ ಕಾರಣವಾಗಲಾರದು.

## ಹೇತ್ವಂತರಮೂಹ—ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್ ॥ ೩ ॥

**ಕಾಪಿಲಮತೇ ವ್ಯತಿರೇಕಾನವಸ್ಥಿತೇಃ ಪ್ರಧಾನವ್ಯತಿರಿಕ್ತಪ್ರೇರಕೇಶ್ವರಸ್ಯಾನವಸ್ಥಿತೇರನಂಗೀಕಾರಾದನಪೇಕ್ಷತ್ವಾತ್, ಸ್ವಾತಂತ್ರ್ಯಾತ್ಸರ್ವಕಾಲೇಷ್ವಪಿ ಪ್ರಕೃತೇಃ ಪ್ರಪಂಚಸೃಷ್ಟಿಸ್ಸ್ಯಾತ್. ತಥಾಚ ತದುಪಾದಾನಕಾರಣತ್ವೇನ ಚೇತನಾಚೇತನಪ್ರಪಂಚಪ್ರಳಯಾಸಂಭವಾತ್, ಪರಶಿವಸ್ಯ ಸರ್ವಜ್ಞತ್ವೇನ ಕಾಲಜ್ಞಾನದರ್ಶನಾತ್ ಕದಾಚಿಜ್ಜಗನ್ನಿರ್ಮಾಪಕತ್ವಲೀಲಾ, ತೂಷ್ಣೀಂಭೂತಾವಸ್ಥಾಯಾಂ ಕದಾಚಿತ್ಕೇವಲಾವಸ್ಥಾ ಚ ಯುಕ್ತಾ. ಪ್ರಜ್ಞಾಹೀನಸ್ಯ ಪ್ರಧಾನಸ್ಯ ಅಂಧಸಂಧ್ಯಾನ್ಯಾಯವತ್ಕಾಲಜ್ಞಾನಾಯೋಗಾನ್ನ ಕದಾಚಿದಪಿ ಜಗತ್ಕಾರಣತ್ವಮುಪಪದ್ಯತೇ. ಸತ್ಯಸಂಕಲ್ಪೇಶ್ವರಾಧಿಷ್ಠಾನಾನಪೇಕ್ಷಪರಿಣಾಮಿತ್ವೇ ಸರ್ವವ್ಯತಿರೇಕೇಣ ಪ್ರತಿಸರ್ಗಾವಸ್ಥಾಯಾ ಅನವನಸ್ಥಿತೇರಿತಿ ಪ್ರಸಂಗಾಚ್ಚ ನ ಪ್ರಾಜ್ಞಾನಧಿಷ್ಠಿತಂ ಪ್ರಧಾನಂ ಕಾರಣಂ. ಪ್ರಾಜ್ಞಾಧಿಷ್ಠಿತತ್ವೇ ತಸ್ಯ ಸತ್ಯಸಂಕಲ್ಪತ್ವೇನ ಸರ್ಗಪ್ರತಿಸರ್ಗವಿಚಿತ್ರಸೃಷ್ಟಿವ್ಯವಸ್ಥಾಸಿದ್ಧಿಃ. ಪ್ರಾಜ್ಞಾ**

ಧಿಷ್ಠಿತತ್ವೇಽಪಿ ತಸ್ಯಾವಾಪ್ತಸಮಸ್ತಕಾಮಸ್ಯ ಪರಿಪೂರ್ಣಸ್ಯಾನವಧಿಕಾತಿಶಯಾನಂದಸ್ಯ ನಿರವದ್ಯಸ್ಯ ನಿರಂಜನಸ್ಯ ಸರ್ಗಪ್ರತಿಸರ್ಗವ್ಯವಸ್ಥಾಹೇತ್ವಭಾವಾತ್ ವಿಷಮಸೃಷ್ಟೌ ನಿರ್ದಯತ್ವಪ್ರಸಂಗಾಚ್ಚ ಸರ್ವಾನೋಽಯಂ ದೋಷ ಇತಿ ನಚ ವಾಚ್ಯಂ, ಪರಿಪೂರ್ಣಸ್ಯಾಪಿ ಲೀಲಾರ್ಥಪ್ರವೃತ್ತಿಸಂಭವಾತ್, ಸರ್ವಜ್ಞಸ್ಯ ತಸ್ಯ ಪರಿಣಾಮವಿಶೇಷಾಪನ್ನಪ್ರಕೃತಿದರ್ಶನರೂಪಸರ್ಗಪ್ರತಿಸರ್ಗವಿಶೇಷಹೇತೋಸ್ಸಂಭವಾತ್, ಕ್ಷೇತ್ರಜ್ಞಕರ್ಮಣಾಮೇವ ವಿಷಮಸೃಷ್ಟಿವ್ಯವಸ್ಥಾಪಕತ್ವಾಚ್ಚ. ನನ್ವೇವಂ ಕ್ಷೇತ್ರಜ್ಞಪುಣ್ಯಪಾಪರೂಪಕರ್ಮಭಿರೇವ ಸರ್ವಾವಸ್ಥಾಸ್ಸಿದ್ಧ್ಯಂತೀತಿ ಕೃತಮೀಶರೇಣಾಧಿಷ್ಠಾತ್ರಾ. ಪುಣ್ಯಾಪುಣ್ಯರೂಪಾನುಷ್ಠಿತಕರ್ಮಸಂಸ್ಕೃತಾ ಪ್ರಕೃತಿರೇವ ಪುರುಷಾರ್ಥಾನುರೂಪಂ ತಥಾತಥಾವ್ಯವಸ್ಥಯಾ ಪರಿಣಂಸ್ಯತೇ. ತಥಾ ವಿಷಾದಿದೂಷಿತಾನಾಮನ್ನಪಾನಾದೀನಾಮೌಷಧವಿಶೇಷಾಪ್ಯಾಯಿತಾನಾಂ ಚ ಸುಃಖದುಃಖಹೇತುಭೂತಃ ಪರಿಣಾಮವಿಶೇಷೋ ದೇಶಕಾಲವ್ಯವಸ್ಥಯಾ ದೃಶ್ಯತೇ. ಉತ ಸರ್ಗಪ್ರತಿಸರ್ಗವ್ಯವಸ್ಥಾ ದೇವಾದಿವಿಷಮಸೃಷ್ಟಿಃ ಕೈವಲ್ಯವ್ಯವಸ್ಥಾ ಚ ಸರ್ವಪ್ರಕಾರಪರಿಣಾಮಶಕ್ತಿಯುಕ್ತಸ್ಯ ಪ್ರಧಾನಸ್ಯೈವೋಪಪದ್ಯತ ಇತಿಚೇತ್ ಅನಭಿಜ್ಞೋ ಭವಾನ್ ಪುಣ್ಯಾಪುಣ್ಯಕರ್ಮಸ್ವರೂಪಯೋಃ. ಪುಣ್ಯಾಪುಣ್ಯಸ್ವರೂಪೇ ಹಿ ಶಾಸ್ತ್ರೈಕಸಮಧಿಗಮ್ಯೇ. ಶಾಸ್ತ್ರಂ ಚಾನಾದಿನಿಧನಾವಿಚ್ಛಿನ್ನಪಾತಂ ವೇದಾಖ್ಯಾಕ್ಷರರಾಶಿಃ. ತಚ್ಚ ಸಂಪ್ರದಾಯಾನಾಘ್ರಾತಪ್ರಮಾದದೋಷಗಂಧಾನ್ ನ ಸಹತೇ. ತಚ್ಚ ಪರಮಪುರುಷಾರಾಧನತದ್ವಿಪರ್ಯಯರೂಪೇ ಕರ್ಮಣೀ ಪುಣ್ಯಾಪುಣ್ಯೇ ತದನುಗ್ರಹನಿಗ್ರಹಾಯತ್ತೇ, ತತ್ಫಲೇ ಚ ಸುಖದುಃಖೇ ಇತಿ ವದತಿ. ತದಾಹ ಭಟ್ಟಾಚಾರ್ಯಃ. "ಫಲಸಂಬಿಭತ್ಸಯಾ ಹಿ ಕರ್ಮಭಿರಾತ್ಮಾನಂ ಪಿಪ್ರೀಷಂತಿ, ಸ ಪ್ರೀತೋಽಲಂ ಫಲಾಯೇತಿ ಶಾಸ್ತ್ರಮರ್ಯಾದಾ" ಇತಿ. ತಥಾಚ ಶ್ರುತಿಃ "ಇಷ್ಟಾಪೂರ್ತಂ ಬಹುಧಾ ಜಾತಂ ಜಾಯಮಾನಂ ವಿಶ್ವಂ ಬಿಭರ್ತಿ ಭುವನಸ್ಯ ನಾಭಿಃ" ಇತಿ. ತಥಾಚ ಭಗವತಾ ಸ್ವಯಮೇವೋಕ್ತಂ "ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ । ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥" ಇತಿ, "ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥" ಇತಿ ಚ. ಸ ಭಗವಾನ್ಮಹಾದೇವೋಽವಾಪ್ತಸಮಸ್ತಕಾಮಸ್ಸರ್ವಜ್ಞಸ್ಸರ್ವೇಶ್ವರಸ್ಸತ್ಯಸಂಕಲ್ಪಃ ಸ್ವಮಾಹಾತ್ಮ್ಯಾನುಗುಣಲೀಲಾಪ್ರವೃತ್ತಃ ಏತಾನಿ ಕರ್ಮಾಣಿ ಸಮೀಚೀನಾನ್ಯೇತಾನ್ಯಸಮೀಚೀನಾನೀತಿ ಕರ್ಮದ್ವೈವಿಧ್ಯಂ ಸಂವಿಧಾಯ ತದುಪಾಸನೋಚಿತದೇಹೇಂದ್ರಿ

ಯಾದಿಕಂ ತನ್ನಿಯಮನಶಕ್ತಿಂ ಚ ಸರ್ವೇಷಾಂ ಕ್ಷೇತ್ರಜ್ಞಾನಾಂ ಸಾಮಾನ್ಯತಃ ಪ್ರದಿಶ್ಯ ಸ್ವಶಾಸನಾವಬೋಧಿಶಾಸ್ತ್ರಂ ಪ್ರದರ್ಶ್ಯ ತದುಪಸಂಹಾರಾರ್ಥಂ ಚಾಂತರಾತ್ಮತಯಾನುಪ್ರವಿಶ್ಯಾನುಮಂತೃತಯಾ ಚ ನಿಯಚ್ಛಂಸ್ತಿಷ್ಠತಿ. ಕ್ಷೇತ್ರಜ್ಞಾಸ್ತು ತದಾಹಿತಶಕ್ತಯಸ್ತತ್ಪ್ರದಿಷ್ಟಕರಣಕಳೇವರಾದಿಕಾಸ್ತದಾಧಾರಾಶ್ಚ ಸ್ವಯಮೇವ ಸ್ವೇಚ್ಛಾನುಗುಣ್ಯೇನ ಪುಣ್ಯಾಪುಣ್ಯರೂಪೇ ಕರ್ಮಣೀ ಉಪಾದದತೇ. ತತಶ್ಚ ಪುಣ್ಯರೂಪಕರ್ಮಕಾರಿಣಂ ಸ್ವಶಾಸನಾನುವರ್ತಿನಂ ಜ್ಞಾತ್ವಾ ಧರ್ಮಾರ್ಥಕಾಮಮೋಕ್ಷೈರ್ವರ್ಧಯತೇ, ಶಾಸನಾತಿವರ್ತಿನಂ ಚ ತದ್ವಿಪರ್ಯಯೈರ್ಯೋಜಯತಿ. ಅತಸ್ಸ್ವಾತಂತ್ರ್ಯಾದಿವೈಕಲ್ಯಚೋದ್ಯಾನಿ ನಾವಕಾಶಂ ಲಭಂತೇ. ದಯಾ ಹಿ ನಾಮ ಸ್ವಾರ್ಥನಿರಪೇಕ್ಷಾ ಪರದುಃಖಾಸಹಿಷ್ಣುತಾ ಸಾ ಚ ಸ್ವಶಾಸನಾತಿವೃತ್ತಿವ್ಯವಸಾಯಿನ್ಯಪಿ ವರ್ತಮಾನಾ ಸಗುಣಾಯಾವ ಕಲ್ಪತೇ, ಪ್ರತ್ಯುತ ಅಪುಂಸ್ತ್ವಮೇವಾವಹತಿ; ತನ್ನಿಗ್ರಹ ಏವ ತತ್ರ ಗುಣಃ. ಅನ್ಯಥಾ ಶತ್ರುನಿಗ್ರಹಾದೀನಾಮಗುಣತ್ವಪ್ರಸಂಗಾತ್. ಸ್ವಶಾಸನಾತಿವೃತ್ತಿವ್ಯವಸಾಯನಿವೃತ್ತಿಮಾತ್ರೇಣ ಅನಾದ್ಯನಂತಕಲ್ಪೋಪಚಿತದುರ್ವಿಷಹಾನಂತಾಪರಾಧಾನಂಗೀಕಾರೇಣ ಸಃ ನಿರತಿಶಯಸುಖಸಂವೃದ್ಧಯೇ ಸ್ವಯಮೇವ ಪ್ರಯತತೇ. ಯಥೋಕ್ತಂ " ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ । ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ । ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ । ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ " ಇತಿ. ಸ ತಸ್ಮಾತ್ಪ್ರಧಾನಂ ಜಗತ್ಕಾರಣಂ.

ಇಲ್ಲಿ ಬೇರೊಂದು ಕಾರಣವಿದೆ—ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್ ॥

ಸಾಂಖ್ಯಮತದಲ್ಲಿ ಪ್ರಧಾನಕ್ಕಿಂತಲೂ ಬೇರೆಯಾಗಿ ಅದರ ಪ್ರೇರಕನಾದ ಈಶ್ವರನನ್ನು ಒಪ್ಪದೇ ಇರುವುದರಿಂದ ಅದು ತನ್ನಷ್ಟಕ್ಕೆ ತಾನೇ ಸೃಷ್ಟಿಸುವುದಾದರೆ ಸೃಷ್ಟಿಯೇ ಯಾವಾಗಲೂ ಆಗಬೇಕಾಗುವುದರಿಂದ ಪ್ರಪಂಚದ ಪ್ರಳಯವೇ ಸಂಭವಿಸುವಂತಿಲ್ಲ. ಪರಶಿವನನ್ನು ಒಪ್ಪಿದರೆ ಅವನು ಸರ್ವಜ್ಞನೂ ತ್ರಿಕಾಲಜ್ಞನೂ ಆದ್ದರಿಂದ ಅವನಿಗೆ ಕೆಲವು ವೇಳೆ ಜಗತ್ಸೃಷ್ಟಿಯ ಲೀಲೆಯೂ ಕೆಲವು ವೇಳೆ ಕೇವಲಾವಸ್ಥೆಯೂ ಹೊಂದುತ್ತವೆ. ಪ್ರಧಾನವು ಜ್ಞಾನಶೂನ್ಯವಾದ್ದರಿಂದ ಕುರುಡನಿಗೆ ಸಂಧ್ಯಾಕಾಲದ ಅರಿವಿಲ್ಲದಿರುವಂತೆ ಪ್ರಧಾನಕ್ಕೆ ಪ್ರಪಂಚದ ಜ್ಞಾನವಿಲ್ಲದ್ದರಿಂದ ಅದು ಜಗತ್ಕಾರಣವಾಗುವಂತಿಲ್ಲ. ಈಶ್ವರನ ಪ್ರೇರಣೆಯಿಲ್ಲದೆಯೇ ಪ್ರಧಾನವು ಪ್ರವರ್ತಿಸುವುದಾದರೆ ಯಾವಾಗಲೂ ಜಗತ್ಸೃಷ್ಟಿಯೇ ನಡೆಯಬೇಕಾಗುವುದರಿಂದ ಅವನ ಆಶ್ರಯವಿಲ್ಲದೆ ಪ್ರಧಾನವು ಜಗತ್ಕಾರಣವಾಗುವುದಿಲ್ಲ. ಅದರ ಆಶ್ರಯವಾಗಿ ಈಶ್ವರನನ್ನು ಒಪ್ಪಿದರೆ ಅವನು ಸತ್ಯಸಂಕಲ್ಪನಾದ್ದರಿಂದ ವಿಚಿತ್ರವಾದ ಜಗತ್ತಿನ

ಸೃಷ್ಟಿ ಅವನಿಗೆ ಹೊಂದುತ್ತದೆ. ಪೂರ್ಣಕಾಮನೂ ಸ್ವತಂತ್ರನೂ ಆನಂದರೂಪನೂ ನಿರ್ದುಷ್ಟನೂ ನಿರ್ಮಲನೂ ಆದ ಪರಶಿವನು ಜಗತ್ಕಾರಣನಾದರೆ ಅಲ್ಲಿ ಸೃಷ್ಟಿ ಪ್ರಳಯಗಳ ವ್ಯವಸ್ಥೆ ಹೇಗೆ ಹೊಂದುತ್ತದೆ? ಈರೀತಿ ವಿಷಮವಾದ ಸೃಷ್ಟಿಯಿಂದ ಅವನು ನಿರ್ದಯನಾಗಬೇಕಾಗುತ್ತದೆಯಾದ್ದರಿಂದ ಸಿದ್ಧಾಂತದಲ್ಲೂ ಈ ದೋಷ ಅನಿವಾರ್ಯವೆನಿಸಿದೆ ಎಂದು ಕೇಳಿದರೆ ಈಶ್ವರನು ಪರಿಪೂರ್ಣನಾದರೂ ಲೀಲೆಗಾಗಿ ಜಗತ್ಸೃಷ್ಟಿಯನ್ನು ಮಾಡುವನೆಂದು ಸಮಾಧಾನವನ್ನು ಹೇಳಬೇಕು. ಅವನು ಸರ್ವಜ್ಞನಾದ್ದರಿಂದ ಪ್ರಕೃತಿಯ ಪರಿಣಾಮವನ್ನು ತಿಳಿದು ಸೃಷ್ಟಿಪ್ರಳಯಗಳನ್ನು ಅನಾಯಾಸವಾಗಿ ನಡೆಸಬಲ್ಲನು. ವಿಷಮಸೃಷ್ಟಿಗೆ ಚೇತನರ ಕರ್ಮವೇ ಕಾರಣ ವಾದ್ದರಿಂದ ಈಶ್ವರನು ನಿರ್ದಯನೆನಿಸುವುದಿಲ್ಲ. ಹೀಗೆ ಚೇತನರ ಪುಣ್ಯಪಾಪ ಗಳಿಂದಲೇ ಎಲ್ಲಾ ವ್ಯವಸ್ಥೆಯಾಗುವುದಾದರೆ ಈಶ್ವರನನ್ನು ಏಕೆ ಒಪ್ಪಬೇಕು? ಚೇತನರ ಕರ್ಮಗಳಿಂದ ಸಂಸ್ಕಾರವನ್ನು ಹೊಂದಿದ ಪ್ರಕೃತಿಯೇ ಸೃಷ್ಟ್ಯಾದಿ ಗಳನ್ನು ನಡೆಸಬಹುದಲ್ಲವೇ? ವಿಷದಿಂದ ದೂಷಿತವಾದ ಅನ್ನಪಾನಾದಿಗಳು ಓಷಧಿಲತೆಗಳಿಂದ ಸಂಸ್ಕೃತವಾದರೆ ದೇಶಕಾಲಗಳಿಗನುಗುಣವಾಗಿ ಸುಖದುಃಖ ಮೊದಲಾದ ವಿಚಿತ್ರಪರಿಣಾಮವನ್ನುಂಟುಮಾಡುವುದನ್ನು ನಾವು ಕಂಡಿದ್ದೇವೆ. ಆದ್ದರಿಂದ ಸರ್ಗಪ್ರಳಯಾದಿ ವ್ಯವಸ್ಥೆಯೂ, ದೇವ, ಮನುಷ್ಯ ಮೊದಲಾದ ವಿಷಮ ಸೃಷ್ಟಿಯೂ, ಕೈವಲ್ಯವೂ ಎಲ್ಲಾ ಬಗೆಯ ಪರಿಣಾಮಕ್ಕನುಕೂಲವಾದ ಶಕ್ತಿಯನ್ನು ಪಡೆದ ಪ್ರಕೃತಿಯಿಂದಲೇ ಸಾಧ್ಯವಾಗುತ್ತವೆ ಎಂದು ಆಕ್ಷೇಪ ಬಂದರೆ ಇದು ಪುಣ್ಯ ಪಾಪಗಳ ಸ್ವರೂಪವನ್ನು ಅರಿಯದವನ ಮಾತೆನಿಸುತ್ತದೆ; ಏಕೆಂದರೆ ಇವುಗಳ ಸ್ವರೂಪವನ್ನು ಶಾಸ್ತ್ರದಿಂದಲೇ ನಾವು ತಿಳಿಯಬೇಕು. ಕೊನೆ ಮೊದಲಿಲ್ಲದೆ ಅವಿಚ್ಛಿನ್ನ ವಾದ ಸಂಪ್ರದಾಯಕ್ಕೆ ಹೊಂದಿಕೊಂಡು ಯಾವ ಬಗೆಯ ದೋಷಕ್ಕೂ ಅಂಟದಿರುವ ವೇದವೇ ಶಾಸ್ತ್ರವೆನಿಸಿದೆ. ಅದು ಪರಮಪುರುಷನ ಆರಾಧನವನ್ನೇ ಪುಣ್ಯವೆಂದೂ, ಅದನ್ನು ತೊರೆಯುವುದೇ ಪಾಪವೆಂದೂ, ಅವೂ ಸಹ ಅವನ ಅನುಗ್ರಹ ಮತ್ತು ನಿಗ್ರಹಗಳನ್ನವಲಂಬಿಸಿವೆ ಎಂದೂ, ಸುಖದುಃಖಗಳೆಲ್ಲವೂ ಅವುಗಳ ಪರಿಣಾಮ ವೆಂದೂ ತಿಳಿಸುತ್ತದೆ. "ಭಕ್ತರು ಫಲವನ್ನು ಪಡೆಯಲಿಕ್ಕಾಗಿ ಕರ್ಮಗಳಿಂದ ಪರಶಿವನನ್ನು ಮೆಚ್ಚಿಸುತ್ತಾರೆ, ಹೀಗೆ ಪ್ರೀತನಾಗಿ ಅವನು ಎಲ್ಲಾ ಫಲಗಳನ್ನೂ ಕೊಡಬಲ್ಲನು ಎಂಬುದು ಶಾಸ್ತ್ರದ ನಿರ್ಣಯ" ವೆಂದು ಭಟ್ಟಾಚಾರ್ಯನು ಹೇಳಿದ್ದಾನೆ. ಇಷ್ಟಾಪೂ ರ್ತವೇ ಮೊದಲಾದ ಅನೇಕ ಕರ್ಮಗಳೂ ಪರಶಿವನನ್ನೇ ಆಶ್ರಯಿಸಿವೆ ಎಂದು ಶ್ರುತಿಯೇ ಹೇಳುತ್ತದೆ. ಭಗವಂತನೂ ಸಹ ಗೀತೆಯಲ್ಲಿ "ಜನರು ಅವರವರ ಕರ್ಮದಿಂದ ನನ್ನನ್ನು ಪೂಜಿಸಿ ಸಿದ್ಧಿಯನ್ನು ಹೊಂದುತ್ತಾರೆ" ಎಂದೂ, "ನನ್ನನ್ನು ದ್ವೇಷಿಸುವ ದುಷ್ಟರನ್ನು ನಿರಂತರವಾಗಿ ನರಕದಲ್ಲಿ ತಳ್ಳುತ್ತೇನೆ" ಎಂದೂ ಹೇಳಿರುವನು. ಪೂರ್ಣ ಕಾಮನು ಸರ್ವಜ್ಞನೂ ಸತ್ಯಸಂಕಲ್ಪನೂ ಆದ ಮಹಾದೇವನು ತನಗೆ ತಕ್ಕಂತೆ ಲೀಲೆಯಲ್ಲಿ ಪ್ರವರ್ತಿಸಿ "ಈ ಕರ್ಮಗಳು ಒಳ್ಳೆಯವು ಇವು ಕೆಟ್ಟವು" ಎಂದು ಎರಡು

ಬಗೆಯ ಕರ್ಮಗಳನ್ನೇರ್ಪಡಿಸಿ, ತನ್ನ ಉಪಾಸನೆಗೆ ಬೇಕಾದ ದೇಹೇಂದ್ರಿಯಗಳನ್ನೂ, ಅವುಗಳ ನಿಗ್ರಹಶಕ್ತಿಯನ್ನೂ ಜೀವರಿಗೆ ಅನುಗ್ರಹಿಸಿ ತನ್ನ ಆಜ್ಞೆಯನ್ನು ತಿಳಿಸುವ ಶಾಸ್ತ್ರವನ್ನೂ ಉಪದೇಶಿಸಿ, ಅವರ ಸಹಾಯಕ್ಕಾಗಿ ಅಂತರ್ಯಾಮಿಯಾಗಿ ಅವರ ಜೊತೆಯಲ್ಲೇ ಇದ್ದುಕೊಂಡು ಎಲ್ಲಾ ಕೆಲಸಗಳನ್ನೂ ನಡೆಸುತ್ತಿರುವನು. ಅವನಿಂದ ಶಕ್ತಿಯನ್ನು ಪಡೆದ ಜೀವರಂತೂ ತಮ್ಮ ಇಚ್ಛಾನುಗುಣವಾಗಿ ಪುಣ್ಯಪಾಪಗಳಲ್ಲಿ ನಿರತರಾಗುತ್ತಾರೆ. ಪುಣ್ಯಮಾಡಿದವರು ಶಿವನ ಶಾಸನವನ್ನು ಅನುವರ್ತಿಸುವರಾದ್ದರಿಂದ ಅವರಿಗೆ ನಾಲ್ಕುಬಗೆಯ ಪುರುಷಾರ್ಥಗಳನ್ನು ಅವನೇ ಅನುಗ್ರಹಿಸುತ್ತಾನೆ; ತನ್ನ ಆಜ್ಞೆಯನ್ನು ಮೀರಿದವರಿಗೆ ಅದಕ್ಕನುಗುಣವಾದ ಅಧೋಗತಿಯನ್ನು ಕೊಟ್ಟು ದಂಡಿಸುತ್ತಾನೆ. ಆದ್ದರಿಂದ ಜೀವರಿಗೆ ಸ್ವಾತಂತ್ರ್ಯವಿದೆಯೋ ಇಲ್ಲವೋ ಎಂಬ ಆಶಂಕೆಗೆ ಅವಕಾಶವಿಲ್ಲ. ಸ್ವಾರ್ಥವನ್ನು ಬಯಸದೆ ಪರದುಃಖವನ್ನು ಸಹಿಸದಿರುವುದೇ ದಯೆ ಎನಿಸುವುದು. ತನ್ನ ಆಜ್ಞೆಯನ್ನು ಅತಿಕ್ರಮಿಸುವ ದುಷ್ಟನ ವಿಷಯದಲ್ಲಿಯೂ ಇದನ್ನು ಪ್ರಯೋಗಿಸಿದರೆ ಇದು ಗುಣವೆನಿಸಿದರೂ ದೌರ್ಬಲ್ಯವನ್ನು ತಿಳಿಸುತ್ತದೆಯಾದ್ದರಿಂದ ಆ ದುಷ್ಟನ ನಿಗ್ರಹವೇ ಇಲ್ಲಿ ಭೂಷಣವೆನಿಸುತ್ತದೆ. ಇಲ್ಲವಾದರೆ, ಶತ್ರುನಿಗ್ರಹ ಮೊದಲಾದ ಕರ್ಮಗಳು ಗುಣವೆನಿಸದೇ ಹೋಗಬೇಕಾದೀತು. ಆಜ್ಞೆಯನ್ನುಲ್ಲಂಘಿಸದೆ ಅನೇಕ ಜನ್ಮಗಳಿಂದ ಅನುಸರಿಸಿಕೊಂಡು ಬಂದ ದುರ್ವಿಷಯಗಳಿಗೆ ಗಮನಕೊಡದೆ ಜೀವನು ನಿರತಿಶಯಸುಖವನ್ನು ಪಡೆಯಲಿಕ್ಕಾಗಿ ತಾನಾಗಿಯೇ ಪ್ರಯತ್ನಪಡುತ್ತಾನೆ. "ಪ್ರೀತಿಯಿಂದ ನನ್ನನ್ನು ನಿರಂತರವೂ ಆಶ್ರಯಿಸಿದ ಸದ್ಭಕ್ತರಿಗೆ ಸದ್ಬುದ್ಧಿಯನ್ನು ಅನುಗ್ರಹಿಸುವೆನು. ಅದರಿಂದ ಅವರು ನನ್ನಲ್ಲಿ ಬಂದು ಸೇರುತ್ತಾರೆ. ಅವರ ಮೇಲಿನ ದಯೆಯಿಂದ ನಾನು ಅವರೊಳಗೆ ನೆಲಸಿ ಜ್ಞಾನದೀಪದಿಂದ ಅವರ ಅಜ್ಞಾನಾಂಧಕಾರವನ್ನು ನಾಶಪಡಿಸುತ್ತೇನೆ" ಎಂದು ಗೀತೆಯಲ್ಲಿ ಈಶ್ವರನು ಹೇಳುತ್ತಾನೆ. ಆದ್ದರಿಂದ ಪ್ರಧಾನವು ಜಗತ್ಕಾರಣವಲ್ಲ.

**ಗೋಭಕ್ಷಿತತೃಣಾದಿಪದಾರ್ಥಾನಾಂ ಕ್ಷೀರಾದ್ಯಾಕಾರೇಣ ಪರಿಣಾಮದರ್ಶನಾದಚೇತನಪ್ರಧಾನಸ್ಯ ಸ್ವಾತಂತ್ರ್ಯೇಣ ಪ್ರಪಂಚೋಪಾದಾನತ್ವಮಾಶಂಕ್ಯಾಹ. ಅನ್ಯತ್ರಾಭಾವಾಚ್ಚ ನ ತೃಣಾದಿವತ್ ॥ ೪ ॥**

ತೃಣಾದಿಪದಾರ್ಥಾನಾಂ ನಿಮಿತ್ತಾಂತರಾನಪೇಕ್ಷತಯಾ ಕ್ಷೀರಾದ್ಯಾಕಾರೇಣ ಪರಿಣಾಮಿತ್ವಾತ್ತದ್ವದಚೇತನಪ್ರಧಾನಸ್ಯಾಪಿ ಮಹದಹಂಕಾರಾದಿಪ್ರಪಂಚಾಕಾರೇಣ ಪರಿಣಾಮಿತ್ವಂ ಸಂಭವತೀತಿ ಚೇನ್ನ, ತೃಣಸ್ಯಾಪಿ ನ ಸ್ವಾತಂತ್ರ್ಯೇಣ ಪರಿಣಾಮಿತ್ವಂ ಯುಜ್ಯತೇ, ಕುತಃ ಅನ್ಯತ್ರಾಭಾವಾಚ್ಚ. ವೃಷಭೋದರವಿದ್ಯಮಾನತೃಣಾದೀನಾಂ ಕ್ಷೀರಾಕಾರೇಣ ಪರಿಣಾಮಾಯೋಗಾತ್ ಸ್ವಾತಂತ್ರ್ಯೇಣ ಪರಿಣಾಮಿತ್ವಾಂಗೀಕಾರೇ ಸರ್ವಪಶುಭಕ್ಷಿತತೃಣಾದೀನಾಂ ಕ್ಷೀರಾಕಾರೇಣ ಪರಿಣಾಮಃ ಪ್ರಸಜ್ಯೇತ ? ತಸ್ಮಾತ್ಪರಮಶಿವಪ್ರೇರಣೇನೈವ ತೃಣಾದೀನಾಂ ಕ್ಷೀರಾಕಾರೇಣ

**ಪರಿಣಾಮಿತ್ವಂ ವ್ಯಪದಿಶ್ಯತೇ. ಪ್ರಧಾನಸ್ಯ ಸ್ವತಃ ಪರಿಣಾಮಿತ್ವಾಭ್ಯುಪಗಮೇ ಪುರುಷಾರ್ಥಸ್ಯಾಪೇಕ್ಷಾಭಾವಃ ಪ್ರಸಜ್ಯೇತ? ಅಚೇತನಸ್ಯ ಪ್ರಧಾನಸ್ಯ ಸ್ವತಃ ಪುರುಷಾರ್ಥಸಾಧನತ್ವೇ ಘಟಾದೀನಾಂ ಸ್ವತೋ ಜಲಾಕರ್ಷಣಸಿದ್ಧಿರುಪಪದ್ಯೇತ? ಪ್ರಾಜ್ಞಾಧಿಷ್ಠಿತತ್ವೇಽಪಿ ಪ್ರಧಾನಂ ಚೇತನ ಪುರುಷಾರ್ಥಂ ಸಾಧಯತೀತಿ ಚೇತ್ ತದೀಶ್ವರಾಯತ್ತಮೇವ. ಅಚೇತನಸ್ಯ ಚೇತನಾನುಕೂಲಪ್ರಯೋಜನೇಚ್ಛಾಪರಿಣಾಮಿತ್ವಾಯೋಗಾತ್ ನ ಪ್ರಧಾನಸ್ಯ ತತ್ತ್ವತೋ ಜಗದುಪಾದಾನತ್ವಂ.**

ಗೋವು ತಿಂದ ಹುಲ್ಲು ಮೊದಲಾದವು ಸಹಜವಾಗಿ ಹಾಲಿನ ರೂಪದಿಂದ ಬದಲಾಯಿಸುವಂತೆ ಜಡಪ್ರಧಾನವು ಸ್ವತಂತ್ರವಾಗಿ ಏಕೆ ಜಗತ್ತಿಗೆ ಕಾರಣವಾಗಬಾರದೆಂದಾಶಂಕಿಸಿ ನಿರಾಕರಿಸುತ್ತಾನೆ—**ಅನ್ಯತ್ರಭಾವಾಚ್ಚ ನ ತೃಣಾದಿವತ್ ||೪||**

ಹುಲ್ಲು ಮೊದಲಾದವು ಬೇರೆ ಕಾರಣವನ್ನು ಅಪೇಕ್ಷಿಸದೆ ಹಾಲಿನ ರೂಪದಿಂದ ಬದಲಾವಣೆಯಾಗುವಂತೆ ಜಡಪ್ರಧಾನವೂ ಸಹ ಬುದ್ಧಿ ಅಹಂಕಾರ ಮೊದಲಾದ ಜಗದ್ರೂಪದಿಂದ ಪರಿಣಮಿಸುತ್ತದೆ ಎಂದು ಹೇಳುವುದು ಯುಕ್ತವಲ್ಲ, ಹುಲ್ಲೂ ಸಹ ಸ್ವತಂತ್ರವಾಗಿ ಪರಿಣಮಿಸುವುದೆಂಬುದನ್ನು ಒಪ್ಪಲಾಗುವುದಿಲ್ಲ. ಆಕಳಿನಲ್ಲಿ ಹಾಗೆ ಪರಿಣಮಿಸುವಂತೆ ವೃಷಭದಲ್ಲಿ ಹುಲ್ಲು ಹಾಲಾಗಿ ಪರಿಣಮಿಸದಿರುವುದರಿಂದ ಸ್ವತಂತ್ರವಾಗಿ ಹುಲ್ಲಿನ ಬದಲಾವಣೆಯನ್ನು ಒಪ್ಪಿದರೆ ಎಲ್ಲಾ ಪಶುಗಳು ತಿನ್ನುವ ಹುಲ್ಲೂ ಸಹ ಹಾಲಿನ ರೂಪದಿಂದ ಪರಿಣಮಿಸಬೇಕಾದೀತು? ಆದ್ದರಿಂದ ಪರಶಿವನ ಪ್ರೇರಣೆಯಿಂದಲೇ ಹುಲ್ಲು ಹಾಲಾಗಿ ಪರಿಣಮಿಸುತ್ತದೆ ಎಂದೇ ಹೇಳಬೇಕು. ಇದರಂತೆ ಪ್ರಧಾನವು ತಾನಾಗಿಯೇ ಪರಿಣಮಿಸಬಲ್ಲದೆಂದು ಒಪ್ಪಿದರೆ ಪುರುಷನ ಅಪೇಕ್ಷೆಯೇ ಇಲ್ಲದಂತಾಗುವುದು. ಜಡವಾದ ಪ್ರಧಾನವು ತಾನಾಗಿಯೇ ಕಾರ್ಯಗಳನ್ನು ನಿರ್ವಹಿಸುವುದಾದರೆ ಗಡಿಗೆ ಮೊದಲಾದವು ತಾವಾಗಿಯೇ ನೀರನ್ನು ತರಬೇಕಾಗುತ್ತದೆ. ಚೇತನನ ಆಶ್ರಯದಿಂದಲೇ ಪ್ರಧಾನವು ಆ ಚೇತನನ ಕಾರ್ಯವನ್ನು ಸಾಧಿಸುತ್ತದೆ ಎಂದರೆ ಅದು ಈಶ್ವರನಿಗೇ ಸೇರಿದ್ದಾಗುತ್ತದೆ. ಹೀಗೆ ಚೇತನಪ್ರಧಾನವು ಚೇತನನಿಗೆ ಅನುಕೂಲವಾಗುವ ರೀತಿಯಲ್ಲಿ ತಾನಾಗಿಯೇ ಪರಿಣಮಿಸಲಾರದು. ಆದ್ದರಿಂದ ಅದು ಜಗತ್ತಿಗೆ ಕಾರಣವಾಗಲಾರದು.

**ಪುನರ್ಹೇತ್ವಂತರಂ ದರ್ಶಯತಿ—ಪುರುಷಾಶ್ಮವದಿತಿ ಚೇತ್ತಥಾಪಿ || ೫ ||**

**ಪುರುಷಾಶ್ಮವದಿತಿ ಚೇದ್ಯಥಾ ಲೋಕೇ ಕ್ಷೇತ್ರಜ್ಞಸನ್ನಿಧಾನಾದಿಂದ್ರಿಯಾಣಾಂ ವಿಷಯೇಷು ವ್ಯಾಪಾರಃ ಯಥಾಶ್ಮನಾಮಯಸ್ಕಾಂತಮಣೀನಾಂ ಸನ್ನಿಧಾನಾದಯಸ್ಸೂಚ್ಯಾದಿಚಲನಂ ತದ್ವತ್ಪರಮಶಿವಸಾನ್ನಿಧ್ಯಾತ್ಪ್ರಧಾನಸ್ಯಾಪಿ ಮಹದಾದಿಜಗದಾಕಾರೇಣ ಪರಿಣಾಮಸ್ಸಂಭವತೀತಿ ಚೇತ್ತಥಾಪಿ ದೋಷಾಣಾಮನಿರ್ಮೋಕ್ಷಪ್ರಸಂಗಃ. ತಥಾಹಿ ಪ್ರಧಾನಸ್ಯ ಪುರುಷಪ್ರೇರಿತತ್ವೇ ಪ್ರಧಾನಂ ಸ್ವತಂತ್ರಮಿತಿ ಸ್ವಾಭ್ಯುಪಗ-**

ಮವಿರೋಧಃ. ಕೂಟಸ್ಥಸ್ಯ ಪ್ರವರ್ತಕತ್ವೇ ಕೂಟಸ್ಥತ್ವಹಾನಿಃ, ಸ್ವಸ್ವವ್ಯಾಪಾರಂ ವಿನಾ ಪ್ರವರ್ತಕತ್ವಾಯೋಗಾತ್. ಪಂಗೋರಪಿ ವಾಗ್ವ್ಯಾಪಾರಸ್ಯ ಸತ್ತ್ವಾತ್. ಅಯಸ್ಕಾಂತಸ್ಯಾಯಸ್ಸನ್ನಿಧಿರೇವ ವ್ಯಾಪಾರಃ. ಪ್ರಧಾನಪುರುಷಸನ್ನಿಧೇರ್ನಿತ್ಯತ್ವೇನ ವ್ಯಾಪಾರತ್ವಾಯೋಗಃ. ನಿತ್ಯಸ್ಯಾಪಿ ವ್ಯಾಪಾರತ್ವೇ ಪ್ರಧಾನಪ್ರವೃತ್ತ್ಯವಚ್ಛೇದಾದಯೋ ದೋಷಾಃ ದ್ರಷ್ಟವ್ಯಾಃ. ತಸ್ಮಾತ್ಪ್ರಧಾನಸ್ಯ ತತ್ಸನ್ನಿಧಾನಾತ್ಸ್ವಾತಂತ್ರ್ಯಮಪಿ ನ ಸಂಭವತಿ. ಯದ್ಯಪಿ ಚೈತನ್ಯಮಾತ್ರವಪುಃ ಪುರುಷೋ ನಿಷ್ಕ್ರಿಯಃ, ಪ್ರಧಾನಮಪಿ ಚಿಚ್ಛಕ್ತಿವಿಕಲಂ, ತಥಾಪಿ ಪುರುಷಸನ್ನಿಧಾನಾತ್ತಚ್ಚೈತನ್ಯೋಪಕೃತೋ ದೃಕ್ಛಕ್ತಿವಿಕಲಃ ಪ್ರವೃತ್ತಿಶಕ್ತೋಽಂಧಃ ಪ್ರವರ್ತತೇ. ಅಯಸ್ಕಾಂತಸನ್ನಿಧಾನಾಚ್ಚಾಯಃ ಪ್ರವರ್ತತೇ. ಏವಂ ಪ್ರಕೃತಿಪುರುಷಸಂಯೋಗತೋ ಜಗತ್ಸರ್ವಂ ಪ್ರವರ್ತತೇ. ಪುರುಷಸ್ಯ ದರ್ಶನಾರ್ಥಂ ಕೈವಲ್ಯಾರ್ಥಂ ಚ ಪುರುಷಸನ್ನಿಧಾನಾತ್ಪ್ರಧಾನಂ ಸರ್ಗಾದೌ ಪ್ರವರ್ತತ ಇತಿ ಚೇದತ್ರೋತ್ತರಂ ತಥಾಪೀತಿ. ಏವಮಪಿ ಪ್ರಧಾನಸ್ಯ ಪ್ರವೃತ್ತ್ಯಸಂಭವಸ್ತದವಸ್ಥ ಏವ. ಪಂಗೋರ್ಗಮನಶಕ್ತಿವಿಕಲಸ್ಯಾಪಿ ಮಾರ್ಗದರ್ಶನತದುಪದೇಶಾದಯಃ ಕಾದಾಚಿತ್ಕಾಃ ವಿಶೇಷಾಸ್ಸಹಸ್ರಶಸ್ಸಂತಿ. ಅಂಧೋಽಪಿ ಚೇತನಸ್ಸಂಸ್ತದುಪದೇಶಾವಗಮೇನ ಪ್ರವರ್ತತೇ. ತಥಾಯಸ್ಕಾಂತಮಣೇರಪ್ಯಯಸ್ಸಮೀಪಾಗಮನಾದಯಸ್ಸಂತಿ. ಪುರುಷಸ್ಯ ತು ನಿಷ್ಕ್ರಿಯಸ್ಯ ನ ತಾದೃಶಾ ವಿಕಾರಾಸ್ಸಂಭವಂತಿ. ಸನ್ನಿಧಾನಮಾತ್ರಸ್ಯ ನಿತ್ಯತ್ವೇನ ನಿತ್ಯಸರ್ಗಪ್ರಸಂಗಃ, ನಿತ್ಯಮುಕ್ತತ್ವೇನ ಬಂಧಾಭಾವೋಽಪವರ್ಗಾಭಾವಶ್ಚ. ಅತಃ ಪ್ರಧಾನಂ ಕಾರಣಂ ನ ಭವತಿ.

ಇಲ್ಲಿ ಬೇರೊಂದು ಹೇತುವನ್ನು ಹೇಳುತ್ತಾನೆ. **ಪುರುಷಾಶ್ಮವದಿತಿ ಚೇತ್ತಥಾಪಿ ||**

ಲೋಕದಲ್ಲಿ ಪುರುಷನ ಸಾನ್ನಿಧ್ಯದಿಂದ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳೊಡನೆ ವ್ಯವಹರಿಸುತ್ತವೆ. ಅಯಸ್ಕಾಂತಮಣಿಯ ಸಾನ್ನಿಧ್ಯದಿಂದ ಸೂಜಿ ಚಲಿಸುತ್ತದೆ. ಅದರಂತೆ ಪರಶಿವನ ಸಾನ್ನಿಧ್ಯದಿಂದ ಪ್ರಧಾನವು ಬುದ್ಧಿ ಮೊದಲಾದ ಪ್ರಪಂಚಾಕಾರವಾಗಿ ಪರಿಣಮಿಸುತ್ತದೆ ಎಂದು ಹೇಳಿದರೂ ಅನೇಕ ದೋಷಗಳೇ ಸಂಭವಿಸುತ್ತವೆ. ಪ್ರಧಾನವು ಪುರುಷನಿಂದ ಪ್ರೇರಿತವಾದರೂ ಸ್ವತಂತ್ರವಾಗಿರುವುದೆಂದು ಹೇಳಿದರೆ ನಿಮ್ಮ ಶಾಸ್ತ್ರಕ್ಕೇ ವಿರುದ್ಧವಾಗುತ್ತದೆ. ಉದಾಸೀನನಾಗಿರುವವನು ಪ್ರೇರಕನಾಗುವುದಾದರೆ ಪ್ರಯತ್ನವಿಲ್ಲದೆ ಪ್ರವರ್ತಿಸುವುದು ಅಸಾಧ್ಯವಾದ್ದರಿಂದ ಅವನ ಔದಾಶೀನ್ಯಕ್ಕೇ ಭಂಗವುಂಟಾಗುತ್ತದೆ. ಕುಂಟನಿಗೂ ವ್ಯಾಪಾರವಿರುವುದರಿಂದಲೇ ಪ್ರವೃತ್ತಿ ಸಂಭವಿಸುತ್ತದೆ. ಸೂಜಿಗಲ್ಲಿಗೆ ಸೂಜಿಯ ಸಾಮೀಪ್ಯವೇ ವ್ಯಾಪಾರವಾಗುತ್ತದೆ. ಇದರಿಂದ ಪ್ರಧಾನಪುರುಷ ಇವರ ಸಾನ್ನಿಧ್ಯವೇ ನಿತ್ಯವಾಗಿರುವುದರಿಂದ ಅದು ವ್ಯಾಪಾರವಾಗಲಾರದು. ವ್ಯಾಪಾರವು ನಿತ್ಯವಾಗುವುದಾದರೆ

ಪ್ರಧಾನದ ಪ್ರವೃತ್ತಿಯೇ ನಾಶವಾಗದೆ ಹೋಗಬೇಕಾದೀತು. ಇದರಿಂದ ಪ್ರಳಯವೇ ಇಲ್ಲದೆಹೋಗಬೇಕಾದೀತು? ಆದ್ದರಿಂದ ಪ್ರಧಾನಕ್ಕೆ ಚೇತನದ ಸಾಮೀಪ್ಯದಿಂದಲೂ ಸ್ವಾತಂತ್ರ್ಯ ಬರುವುದಿಲ್ಲ. ಪುರುಷನು ಚೈತನ್ಯಮಾತ್ರನೇ ಆಗಿದ್ದರೂ ಕ್ರಿಯೆ ಇಲ್ಲದಿರುವನು. ಪ್ರಧಾನವಾದರೋ ಚೇತನಶಕ್ತಿ ಇಲ್ಲದಿದ್ದರೂ ಪುರುಷನ ಸಾನ್ನಿಧ್ಯದಿಂದ ಪ್ರವರ್ತಿಸುತ್ತದೆ. ಹಾಗೆ ಲೋಕದಲ್ಲೂ ಕಂಡುಬಂದಿದೆ. ಗಮನಶಕ್ತಿ ಇಲ್ಲದೆ ಕೇವಲ ನೇತ್ರಶಕ್ತಿಯುಳ್ಳ ಕುಂಟನ ಸಾಮೀಪ್ಯದಿಂದ ನೇತ್ರಪಾಟವವಿಲ್ಲದ ಅಂಧನು ಪ್ರವರ್ತಿಸಲು ಶಕ್ತನಾಗಿರುವನು. ಅಯಸ್ಕಾಂತಮಣಿಯ ಸಾಮೀಪ್ಯದಿಂದ ಕಬ್ಬಿಣವು ಪ್ರವರ್ತಿಸುತ್ತದೆ. ಹೀಗೆ ಪ್ರಕೃತಿಪುರುಷರ ಸಂಪರ್ಕದಿಂದ ಜಗತ್ತು ಪ್ರವರ್ತಿಸುತ್ತದೆ. "ಪುರುಷನಿಗೆ ಜ್ಞಾನವನ್ನು ದೊರಕಿಸಲಿಕ್ಕೂ ಮತ್ತು ಅವನ ಮೋಕ್ಷಕ್ಕೂ ಅವನ ಸಾನ್ನಿಧ್ಯದಿಂದಲೇ ಪ್ರಧಾನವು ಸೃಷ್ಟ್ಯಾದಿಗಳಲ್ಲಿ ಪ್ರವರ್ತಿಸುತ್ತದೆ" ಹೀಗೆ ಹೇಳಿದರೆ ಇದಕ್ಕೆ ಉತ್ತರವನ್ನು ಸೂತ್ರದಲ್ಲಿರುವ 'ತಥಾಪಿ' ಎಂಬ ಪದವು ತಿಳಿಸುತ್ತದೆ. ಹೀಗಾದರೂ ಪ್ರಧಾನವು ಸೃಷ್ಟ್ಯಾದಿಗಳಲ್ಲಿ ಪ್ರವರ್ತಿಸುವಂತಿಲ್ಲ; ಏಕೆಂದರೆ ಕುಂಟನಿಗೆ ಗಮನಶಕ್ತಿ ಇಲ್ಲದಿದ್ದರೂ ದಾರಿತೋರಿಸುವ ಸಾಮರ್ಥ್ಯವಿರುತ್ತದೆ. ಕುರುಡನೂ ಸಹ ಚೇತನನೇ ಆದ್ದರಿಂದ ಕುಂಟನ ಸಲಹೆಯಂತೆ ಪ್ರವರ್ತಿಸುತ್ತಾನೆ. ಹಾಗೆಯೇ ಅಯಸ್ಕಾಂತ ಮಣಿಗೂ ಕಬ್ಬಿಣದ ಸಾನ್ನಿಧ್ಯವಿರುತ್ತದೆ. ಪುರುಷನಾದರೋ ನಿಷ್ಕ್ರಿಯನಾದ್ದರಿಂದ ಅವನಿಗೆ ಅಂತಹ ವಿಕಾರಗಳು ಸಂಭವಿಸುವುದಿಲ್ಲ. ಹೀಗೆ ಸಾನ್ನಿಧ್ಯದಿಂದಲೇ ಪ್ರಧಾನವು ಪ್ರವರ್ತಿಸುವುದಾದರೆ, ಅದು ನಿತ್ಯವಾಗಿರುವುದರಿಂದ ನಿತ್ಯವೂ ಸೃಷ್ಟಿಯೇ ಆಗಬೇಕಾಗುವುದು. ಪುರುಷನು ನಿತ್ಯಮುಕ್ತನಾದ್ದರಿಂದ ಅವನಿಗೆ ಬಂಧಮೋಕ್ಷಗಳೇ ಇಲ್ಲವಾದೀತು. ಆದ್ದರಿಂದ ಪ್ರಧಾನವು ಜಗತ್ತಿಗೆ ಕಾರಣವಾಗಲಾರದು.

**ಪುನರ್ಹೇತ್ವಂತರಮಾಹ— ಅಂಗಿತ್ವಾನುಪಪತ್ತೇಶ್ಚ ॥ ೬ ॥**

**ಪ್ರಳಯೇ ಗುಣತ್ರಯಸಾಮ್ಯಾವಸ್ಥಾರೂಪೇಣ ವಿದ್ಯಮಾನಾನಾಂ ಗುಣತ್ರಯಾಣಾಮೀಶ್ವರಪ್ರೇರಣಾಂ ವಿನಾ ಪರಸ್ಪರಮಂಗಾಂಗಿಭಾವಾನುಪಪತ್ತೇಶ್ಚ, ಸಾತ್ತ್ವಿಕರಾಜಸತಾಮಸಪ್ರಪಂಚಸೃಷ್ಟಿರ್ನ ಸಂಭವತಿ. ಗುಣತ್ರಯಾಣಾಮುತ್ಕರ್ಷನಿಷ್ಕರ್ಷನಿಬಂಧನಾದಂಗಾಂಗಿಭಾವಾದ್ಧಿ ಜಗತ್ಪ್ರವೃತ್ತಿಃ ಪ್ರತಿಪ್ರತಿತ್ರಿಗುಣಾಶ್ರಯವಿಶೇಷಾದಿತಿ ವದದ್ಭಿರ್ಭವದ್ಭಿರುಪಗಮ್ಯತೇ. ಪ್ರತಿಸರ್ಗಾವಸ್ಥಾಯಾಂ ತು ಸಾಮ್ಯಾವಸ್ಥಾನಾಂ ಸತ್ತ್ವರಜಸ್ತಮಸಾಮನ್ಯೋನ್ಯಾಧಿಕ್ಯನ್ಯೂನತ್ವಾಭಾವಾದಂಗಾಂಗಿಭಾವಾನುಪಪತ್ತೇರ್ನ ಜಗತ್ಸರ್ಗ ಉಪಪದ್ಯತೇ. ತಥಾಪಿ ವೈಷಮ್ಯಾಭ್ಯುಪಗಮೋ ನಿತ್ಯಸರ್ಗಪ್ರಸಂಗಃ. ತಸ್ಮಾನ್ನ ಪ್ರಧಾನಂ ಜಗದುಪಾದಾನಂ.**

ಈ ಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ— **ಅಂಗಿತ್ವಾನುಪಪತ್ತೇಶ್ಚ ॥**

ಪ್ರಳಯದಲ್ಲಿ ಸಾಮ್ಯರೂಪದಿಂದ ಇರುವ ಮೂರು ಗುಣಗಳಿಗೂ ಈಶ್ವರನ ಪ್ರೇರಣವಿಲ್ಲದೆ ಪರಸ್ಪರವಾಗಿ ಅಂಗಾಂಗಿಭಾವವು ಹೊಂದುವುದಿಲ್ಲವಾದ್ದರಿಂದ

ಸಾತ್ತ್ವಿಕ ರಜಸ ತಾಮಸ ಪ್ರಪಂಚಗಳ ಸೃಷ್ಟಿಯುಂಟಾಗುವುದಿಲ್ಲ. ಆದರೆ ಸತ್ತ್ವರಜಸ್ತಮೋಗುಣಗಳು ಹೆಚ್ಚು ಕಡಮೆ ಪ್ರಮಾಣದಲ್ಲಿ ಅಂಗಾಂಗಿಭಾವದಿಂದ ಕೂಡಿದ್ದರೆಯೇ ಜಗತ್ಸೃಷ್ಟ್ಯಾದಿಗಳು ನಡೆಯುತ್ತವೆ ಎಂದು ನೀವೇ ಒಪ್ಪಿದ್ದೀರಿ. ಪ್ರಳಯಾವಸ್ಥೆಯಲ್ಲಿ ಸಮಸ್ಥಿತಿಯಲ್ಲಿರುವ ಸತ್ತ್ವರಜಸ್ತಮೋಗುಣಗಳು ಪರಸ್ಪರವಾಗಿ ಹೆಚ್ಚು ಕಡಮೆ ಪ್ರಮಾಣದಲ್ಲಿ ಇಲ್ಲದಿರುವುದರಿಂದ ಅಂಗಾಂಗಿಭಾವವೇ ಹೊಂದದೆ ಜಗತ್ತಿನ ಉತ್ಪತ್ತಿಯೇ ಆಗುವುದಿಲ್ಲ. ಆಗಲೂ ವೈಷಮ್ಯವನ್ನು ಒಪ್ಪಿದರೆ ನಿತ್ಯಸೃಷ್ಟಿಯೇ ಆಗಬೇಕಾಗುತ್ತದೆ. ಆದ್ದರಿಂದ ಪ್ರಧಾನವು ಜಗತ್ತಿಗೆ ಉಪಾದಾನಕಾರಣವಾಗಲಾರದೆಂದು ಸಿದ್ಧವಾಯಿತು.

**ಗುಣತ್ರಯಾಣಾಮಪಿ ಸಮಪ್ರಾಧಾನ್ಯೇನ ಪ್ರವೃತ್ತ್ಯಯೋಗಃ. ಕಿಂತು ಸಾತ್ತ್ವಿಕಸೃಷ್ಟೌ ಸತ್ತ್ವಗುಣಸ್ಯ ಪ್ರಾಧಾನ್ಯಂ. ತದಿತರಯೋರುಪಸರ್ಜನತ್ವಂ. ಏವಂ ರಾಜಸತಾಮಸಯೋರಪಿ ಕಾಲಭೇದೇನ ನಾನಾವಿಧಸ್ವಭಾವವಿಶಿಷ್ಟಪ್ರಧಾನಮೇವಾನುಮೀಯತ ಇತ್ಯಾಶಂಕ್ಯ ನಿರಸ್ಯತಿ.**

**ಅನ್ಯಥಾನುಮಿತೌ ಚ ಜ್ಞಾನಶಕ್ತಿವಿಯೋಗಾತ್ ॥ ೭ ॥**

**ಅನ್ಯಥಾ ನಾನಾಸ್ವಭಾವವಿಶಿಷ್ಟತ್ವೇನ ಪ್ರಧಾನಸ್ಯಾನುಮಿತಾವಂಗೀಕ್ರಿಯಮಾಣಾಯಾಮಪ್ಯಚೇತನಸ್ಯ ಜ್ಞಾನಶಕ್ತಿವಿಯೋಗಾತ್ ಜ್ಞಾನಶಕ್ತ್ಯಭಾವಾತ್ಕಾಲವಿಶೇಷಜ್ಞಾನಾಯೋಗಾತ್ಸರ್ವದಾ ತಸ್ಯ ಜಗದುಪಾದಾನಕಾರಣತ್ವಂ ನ ಸಂಭವತಿ.**

ಮೂರುಗುಣಗಳಲ್ಲೂ ಸಮಸ್ಥಿತಿ ಇರುವುದರಿಂದ ಪ್ರವೃತ್ತಿಯೇ ಹುಟ್ಟುವುದಿಲ್ಲ. ಆದರೂ ಸಾತ್ತ್ವಿಕಸೃಷ್ಟಿಯಲ್ಲಿ ಸತ್ತ್ವಗುಣವು ಪ್ರಧಾನವಾಗಿ ಉಳಿದ ಎರಡೂ ಗೌಣವಾಗಿರುತ್ತವೆ. ಹೀಗೆ ರಜಸ್ಸು ಮತ್ತು ತಮಸ್ಸುಗಳಿಗೂ ಕಾಲಭೇದದಿಂದ ಅನೇಕ ಬಗೆಯ ಸ್ವಭಾವದಿಂದ ಕೂಡಿದ ಪ್ರಧಾನವನ್ನೇ ಅನುಮಾನದಿಂದ ಕಲ್ಪಿಸಬೇಕೆಂಬುದನ್ನು ನಿರಾಕರಿಸುತ್ತಾನೆ—**ಅನ್ಯಥಾನುಮಿತೌ ಚ ಜ್ಞಾನಶಕ್ತಿವಿಯೋಗಾತ್ ॥**

ಪ್ರಧಾನವು ಅನೇಕ ಬಗೆಯ ಸ್ವಭಾವವುಳ್ಳದ್ದೆಂದು ಅನುಮಾನದಿಂದ ಒಪ್ಪಿದರೂ ಅದು ಜಡವಾದ್ದರಿಂದಲೂ, ಅದಕ್ಕೆ ಜ್ಞಾನಶಕ್ತಿ ಇಲ್ಲದ್ದರಿಂದಲೂ ಅದು ಎಂದಿಗೂ ಜಗತ್ತಿಗೆ ಉಪಾದಾನಕಾರಣವೆನಿಸಲಾರದು.

**ಪುನರ್ಹೇತ್ವಂತರಮಾಹ—ಅಭ್ಯುಪಗಮೇಽಪ್ಯರ್ಥಾಭಾವಾತ್ ॥ ೮ ॥**

**ಅಭ್ಯುಪಗಮೇಽಪಿ ಪ್ರಾಜ್ಞಾಧಿಷ್ಠಿತಸ್ಯ ಸ್ವಾತಂತ್ರ್ಯೇಣ ಪರಿಣಾಮಾಂಗೀಕಾರೇಽಪಿ ಜಡಸ್ಯ ಪ್ರಧಾನಸ್ಯ ಪ್ರಪಂಚನಿರ್ಮಾಣೇನ ಅರ್ಥಾಭಾವಾದ್ಭೋಗಮೋಕ್ಷಾದಿಪ್ರಯೋಜನಾಭಾವಾತ್ಪ್ರಪಂಚಜನಕತ್ವಮನುಪಪನ್ನಂ. ಅನುಮಾನೇನ ಪ್ರಧಾನಸಿದ್ಧ್ಯಭ್ಯುಪಗಮೇಽಪಿ ಪ್ರಧಾನೇನ ಪ್ರಯೋಜನಾಭಾವಾನ್ನ ತದನುಮಾತವ್ಯಂ. "ಪುರುಷಸ್ಯ ದರ್ಶನಾರ್ಥಂ ಕೈವಲ್ಯಾರ್ಥಂ ತಥಾ ಪ್ರಧಾನಸ್ಯ" ಇತಿ ಪ್ರಧಾನಸ್ಯ ಪ್ರಯೋ-**

ಜನಂ ಪುರುಷಭೋಗಾಪವರ್ಗಾವಭಿಮತೌ. ತೌ ಚ ನ ಸಂಭವತಃ. ಪುರುಷಸ್ಯ ಚೈತನ್ಯಮಾತ್ರವಪುಷೋ ನಿಷ್ಕ್ರಿಯಸ್ಯ ನಿರ್ವಿಕಾರಸ್ಯ ನಿರ್ಮಲಸ್ಯ ತತ ಏವ ನಿತ್ಯಮುಕ್ತಸ್ವರೂಪಸ್ಯ ಪ್ರಕೃತಿದರ್ಶನರೂಪೋ ಭೋಗಸ್ತದ್ವಿಯೋಗರೂಪೋಽಪವರ್ಗಶ್ಚ ಸ ಸಂಭವತಿ. ಏವಂ ರೂಪಸ್ಯೈವ ಪ್ರಕೃತಿಸನ್ನಿಧಾನಾತ್ಪರಿಣಾಮವಿಶೇಷಸುಖದರ್ಶನರೂಪಭೋಗಸಂಭಾವನಾಯಾಂ ಪ್ರಕೃತಿಸನ್ನಿಧಾನಸ್ಯ ನಿತ್ಯತ್ವೇನ ಕದಾಚಿದಪ್ಯಪವರ್ಗೋ ನ ಸಿದ್ಧ್ಯತಿ. ಪ್ರಯೋಜನರಹಿತಸ್ಯಾಪಿ ಶಿವಸ್ಯ ಪರಬ್ರಹ್ಮಣಃ ಲೀಲಯಾ ಜಗಜ್ಜನಕತ್ವಮುಪಪನ್ನಂ. ಅಚೇತನಸ್ಯ ಪ್ರಧಾನಸ್ಯ ಲೀಲಾಽಸಂಭವಾತ್ ಜಗತ್ಕಾರಣತ್ವಮಯುಕ್ತಂ.

ಬೇರೊಂದು ಹೇತುವನ್ನು ಹೇಳುತ್ತಾನೆ— **ಅಭ್ಯುಪಗಮೇಽಪ್ಯರ್ಥಾಭಾವಾತ್ ॥**

ಚೇತನನ ಆಶ್ರಯದಿಂದ ಜಡಪ್ರಧಾನವು ಸ್ವತಂತ್ರವಾಗಿಯೇ ಪರಿಣಮಿಸುವುದೆಂದು ಒಪ್ಪಿದರೂ ಅದಕ್ಕೆ ಜಗತ್ಸೃಷ್ಟಿಯಿಂದ ಭೋಗ ಮೋಕ್ಷ ಮೊದಲಾದ ಯಾವ ಫಲವೂ ಇಲ್ಲದ್ದರಿಂದ ಅದು ಜಗತ್ತಿಗೆ ಕಾರಣವೆಂಬುದು ಹೊಂದುವುದಿಲ್ಲ. ಅನುಮಾನದಿಂದ ಪ್ರಧಾನವು ಸಿದ್ಧಿಸುವುದೆಂದು ಒಪ್ಪಿದರೂ ಸಹ ಅದಕ್ಕೆ ಯಾವ ಪ್ರಯೋಜನವೂ ಇಲ್ಲದ್ದರಿಂದ ಹಾಗೆ ಅನುಮಾನದಿಂದ ಅದನ್ನು ಸಾಧಿಸಲಾಗುವುದಿಲ್ಲ. ಪುರುಷನಿಗೆ ಭೋಗ ಮೋಕ್ಷಗಳನ್ನು ದೊರಕಿಸುವುದೇ ಪ್ರಧಾನದ ಪ್ರಯೋಜನವೆಂದು ನೀವು ಹೇಳುವುದೂ ಸಂಭವಿಸಲಾರದು. ಪುರುಷನು ಚೇತನನಾದ್ದರಿಂದ ನಿಷ್ಕ್ರಿಯನೂ ನಿರ್ವಿಕಾರನೂ ನಿರ್ಮಲನೂ ಆಗಿ ನಿತ್ಯಮುಕ್ತನೇ ಆಗಿರುವುದರಿಂದ ಅವನಿಗೆ ಪ್ರಕೃತಿಯ ದರ್ಶನರೂಪವಾದ ಭೋಗವಾಗಲೀ, ತದ್ವಿಯೋಗರೂಪವಾದ ಮೋಕ್ಷವಾಗಲೀ ಸಂಭವಿಸುವುದಿಲ್ಲ. ಇಂತಹ ಸ್ಥಿತಿಯಲ್ಲಿರುವ ಪುರುಷನಿಗೆ ಪ್ರಕೃತಿಯ ಪರಿಣಾಮವೆನಿಸಿದ ಸುಖದುಃಖಾದಿ ಭೋಗವು ಪ್ರಕೃತಿಯ ಸಾನ್ನಿಧ್ಯದಿಂದಲೇ ಆಗುವುದಾದರೆ, ಅದು ನಿತ್ಯವಾದ್ದರಿಂದ ಚೇತನನಿಗೆ ಯಾವಾಗಲೂ ಮುಕ್ತಿಯೇ ಸಿದ್ಧಿಸುವುದಿಲ್ಲ. ಯಾವ ಪ್ರಯೋಜನವೂ ಇಲ್ಲದಿದ್ದರೂ ಪರಶಿವನು ಲೀಲೆಯಿಂದ ಜಗತ್ತನ್ನು ಸೃಷ್ಟಿಸುವನೆಂಬುದು ಅವನಿಗೆ ಹೊಂದುತ್ತದೆ. ಜಡವಾದ ಪ್ರಧಾನಕ್ಕೆ ಈ ಬಗೆಯ ಲೀಲೆ ಸಂಭವಿಸದಿರುವುದರಿಂದ ಅದು ಕಾರಣವೆಂಬುದು ಯುಕ್ತವಲ್ಲ.

**ಪುನರ್ಹೇತ್ವಂತರಮಾಹ—ವಿಪ್ರತಿಷೇಧಾಚ್ಚಾಸಮಂಜಸಂ ॥ ೯ ॥**

ವಿಪ್ರತಿಷೇಧಾಚ್ಚ ಸಕಲವೇದಾಂತವಿರುದ್ಧತ್ವಾಚ್ಚ ಸಾಂಖ್ಯಮತಮಸಮಂಜಸಮನುಪಪನ್ನಂ. ವಿಪ್ರತಿಷಿದ್ಧಂ ಚೇದಂ ಸಾಂಖ್ಯಾನಾಂ ದರ್ಶನಂ. ತಥಾಹಿ ಪ್ರಕೃತೇಃ ಪದಾರ್ಥತ್ವೇನ ದೃಶ್ಯತ್ವೇನ ಭೋಗ್ಯತ್ವೇನ ಚ ಪ್ರಕೃತೇರ್ಭೋಕ್ತಾರಮಧಿಷ್ಠಾತಾರಂ ದ್ರಷ್ಟಾರಂ ಸಾಕ್ಷಿಣಂ ಚ ಪುರುಷಮಭ್ಯುಪಗಮ್ಯ ಪ್ರಕೃತ್ಯೈವ ಸಾಧನಭೂತಯಾ ತಸ್ಯ ಕೈವಲ್ಯಮುಪಿಪ್ರಾಪ್ಯಂ ವದಂತ ಏವ ತಸ್ಯ ನಿತ್ಯನಿರ್ವಿಕಾರಚೈತನ್ಯಮಾತ್ರಸ್ವರೂಪ

ತಯಾ ಅಕರ್ತೃತ್ವಂ ಕೈವಲ್ಯಂ ಚ ಸ್ವರೂಪಮೇವಾಹುಃ. ತತ ಏವ ಬಂಧಮೋಕ್ಷಸಾಧನಾನುಷ್ಠಾನಂ ಮೋಕ್ಷಂ ಚ ಪ್ರಕೃತೇರೇವೇತ್ಯಾಹುಃ. ಏವಂಭೂತನಿರ್ವಿಕಾರೋದಾಸೀನಪುರುಷಸನ್ನಿಧಾನಾತ್ಪ್ರಕೃತೇರಿತರೇತರಾಧ್ಯಾಸೇನ ಸರ್ಗಾದಿಪ್ರವೃತ್ತಿಂ ಪುರುಷಭೋಗಾಪವರ್ಗಾರ್ಥತ್ವಂ ಚಾಹುಃ. "ಸಂಘಾತಪರಾರ್ಥತ್ವಾತ್ತ್ರಿಗುಣಾದಿವಿಪರ್ಯಯಾಧಿಷ್ಠಾನಾತ್ । ಪುರುಷೋಽಸ್ತಿ ಭೋಕ್ತೃಭಾವಾತ್ಕೈವಲ್ಯಾರ್ಥಂ ಪ್ರವೃತ್ತೇಶ್ಚ ॥ ತಸ್ಮಾಚ್ಚ ವಿಪರ್ಯಾಸಾತ್ಸಿದ್ಧಂ ಸಾಕ್ಷಿತ್ವಮಸ್ಯ ಪುರುಷಸ್ಯ । ಕೈವಲ್ಯಮಾಧ್ಯಸ್ಥ್ಯಂ ದ್ರಷ್ಟೃತ್ವಮಕರ್ತೃಭಾವಶ್ಚ । ಪುರುಷವಿಮೋಕ್ಷನಿಮಿತ್ತಂ ತಥಾ ಪ್ರವೃತ್ತಿಸ್ತಥಾ ಪ್ರಧಾನಸ್ಯ॥" ಇತ್ಯುಕ್ತ್ವೈವಮಾಹುಃ. "ತಸ್ಮಾನ್ನ ಬಾಧ್ಯತೆ ನಾಪಿ ಮುಚ್ಯತೇ ನಾಪಿ ಸಂಸರತಿ ಕಶ್ಚಿತ್ । ಸಂಸರತಿ ಬದ್ಧ್ಯತೇ ಮುಚ್ಯತೇ ನಾನಾಶ್ರಯಾ ಪ್ರಕೃತಿರಿತಿ । ತಸ್ಮಾತ್ತತ್ಸಂಯೋಗಾದಚೇತನಂ ಚೇತನಾವದಿವ ಲಿಂಗಂ । ಗುಣಕರ್ತೃತ್ವೇ ಚ ತಥಾ ಕರ್ತೇವ ಭವತ್ಯುದಾಸೀನಃ ॥ ಪುರುಷಸ್ಯ ದರ್ಶನಾರ್ಥಂ ಕೈವಲ್ಯಾರ್ಥಂ ತಥಾ ಪ್ರಧಾನಸ್ಯ । ಪಂಗ್ವಂಧವದುಭಯೋರಪಿ ಸಂಯೋಗಸ್ತತ್ಕೃತಸ್ಸರ್ಗಃ ॥" ಇತಿ. ಸಾಕ್ಷಿತ್ವದ್ರಷ್ಟೃತ್ವಭೋಕ್ತೃತ್ವಾದಯೋ ನಿತ್ಯನಿರ್ವಿಕಾರಸ್ಯ ಅಕರ್ತುರುದಾಸೀನಸ್ಯ ಕೈವಲ್ಯೈಕಸ್ವರೂಪಸ್ಯ ನ ಸಂಭವಂತಿ. ಏವಂರೂಪಸ್ಯ ತಸ್ಯ ಅಧ್ಯಾಸಮೂಲಭ್ರಮೋಽಪಿ ನ ಸಂಭವತಿ, ಅಧ್ಯಾಸಭ್ರಮಯೋರಪಿ ವಿಕಾರಿತ್ವಾತ್ಪ್ರಕೃತೇಶ್ಚ ತೌ ನ ಸಂಭವತಃ, ತಯೋಶ್ಚೇತನಧರ್ಮತ್ವಾತ್. ಅಧ್ಯಾಸೋ ನಾಮ ಅನ್ಯಸ್ಮಿನ್ನನ್ಯಧರ್ಮಾನುಸಂಧಾನಂ. ಸ ಚ ಚೇತನಧರ್ಮೋ ವಿಕಾರಶ್ಚ. ನಚ ಪುರುಷಸ್ಯ ಪ್ರಕೃತಿಸನ್ನಿಧಿಮಾತ್ರೇಣಾಧ್ಯಾಸಾದಯಸ್ಸಂಭವಂತಿ. ನಿರ್ವಿಕಾರತ್ವಾದೇವ ಸಂಭವಂತಿ ಚೇನ್ನಿತ್ಯಂ ಪ್ರಸಜ್ಯೇರನ್. ಸನ್ನಿಧೇರಕಿಂಚಿತ್ಕಾರಣತ್ವಂ ಚ ನ ವಿಲಕ್ಷಣತ್ವಾದಿತ್ಯತ್ರ ಪ್ರತಿಪಾದಿತಂ. ಪ್ರಕೃತಿರೇವ ಸಂಸರತಿ ಬದ್ಧ್ಯತೇ ಮುಚ್ಯತೇ ಚೇತ್ಕಥಂ ನಿತ್ಯಮುಕ್ತಸ್ಯ ಪುರುಷಸ್ಯೋಪಕಾರಿಣೀ ಸೇತ್ಯುಚ್ಯತೇ? ವದಂತಿ ಹಿ "ನಾನಾವಿಧೈರುಪಾಯೈರುಪಕಾರಿಣ್ಯನುಪಕಾರಿಣಃ ಪುಂಸಃ । ಗುಣವತ್ಯಗುಣಸ್ಯ ಸತಸ್ತಸ್ಯಾರ್ಥಮಪಾರ್ಥಕಂ ಚರತಿ॥" ತಥಾ "ಪ್ರಕೃತಿರ್ಯೇನ ಪುರುಷೇಣ ಯಥಾಸ್ವಭಾವಾ ದೃಷ್ಟಾ ತಸ್ಮಾತ್ಪುರುಷಾತ್ತದಾನೀಮೇವ ನಿವರ್ತತ" ಇತಿ ಚಾಹುಃ. "ರಂಗಸ್ಯ ದರ್ಶಯಿತ್ವಾ ನಿವರ್ತತೇ ನರ್ತಕೋ ಯಥಾ ನೃತ್ತಾತ್ । ಪುರುಷಸ್ಯ ತಥಾತ್ಮಾನಂ ಪ್ರಕಾಶ್ಯ ನಿವರ್ತತೇ ಪ್ರಕೃತಿಃ ॥ ಪ್ರಕೃತೇಸ್ಸುಕುಮಾರತರಂ ನ ಕಿಂಚಿದಸ್ತೀತಿ ಮೇ ಮತಿರ್ಭವತಿ । ಯಾ ದೃಷ್ಟಾಸ್ಮೀತಿ ಪುನರ್ನ ದರ್ಶನಮುಪೈತಿ ಪುರುಷಸ್ಯ ॥" ಇತಿ ಯತ್ತದಸಂಗತಂ. ಪುರುಷೋ

ಹಿ ನಿತ್ಯಮುಕ್ತತ್ವಾತ್ ನಿರ್ವಿಕಾರತ್ವಾತ್ ನ ತಾಂ ಕದಾಚಿದಪಿ ಪಶ್ಯತಿ, ನಾಧ್ಯಸ್ಯತಿ ಚ, ಸ್ವಯಂಚ ಸ್ವಾತ್ಮಾನಂ ನ ಪಶ್ಯತ್ಯಚೇತನತ್ವಾತ್. ಪುರುಷಸ್ಯ ಸ್ವಾತ್ಮದರ್ಶನಂ ಸ್ವದರ್ಶನಮಿತಿ. ನಾಧ್ಯಸ್ಯತಿ ಚ ಸ್ವಯಮಚೇತನತ್ವಾತ್, ಪುರುಷಸ್ಯ ದರ್ಶನರೂಪವಿಕಾರಾಸಂಭವಾತ್. ಅತಸ್ಸನ್ನಿಧಿಮಾತ್ರಮೇವ ದರ್ಶನಮಿತ್ಯುಚ್ಯತೇ. ಸನ್ನಿಧೇರ್ನಿತ್ಯತ್ವೇನ ನಿತ್ಯದರ್ಶನಪ್ರಸಂಗ ಇತ್ಯುಕ್ತಂ. ಸ್ವರೂಪಾತಿರಿಕ್ತಕಾದಾಚಿತ್ಕಸನ್ನಿಧಿರಪಿ ನಿತ್ಯನಿರ್ವಿಕಾರಸ್ಯ ನೋಪಪದ್ಯತೇ. ಕಿಂಚ ಮೋಕ್ಷಹೇತುಸ್ತು ಸ್ವಸನ್ನಿಧಾನರೂಪಮೇವ ದರ್ಶನಂ ಚೇದ್ಬಂಧಹೇತುರಪಿ ತದೇವೇತಿ ನಿತ್ಯವದ್ಬಂಧೋ ಮೋಕ್ಷಶ್ಚ ಸ್ಯಾತಾಂ. ಅಯಥಾದರ್ಶನಂ ಬಂಧಹೇತುಃ ಯಥಾವತ್ಸ್ವರೂಪದರ್ಶನಂ ಮೋಕ್ಷಹೇತುರಿತಿ ಚೇದುಭಯವಿಧಸ್ಯಾಪಿ ದರ್ಶನಸ್ಯ ಸನ್ನಿಧಾನರೂಪತಾನತಿರೇಕಾತ್ಸದೋಭಯಪ್ರಸಂಗ ಏವ. ಸನ್ನಿಧೇರ್ನಿತ್ಯತ್ವೇ ತಸ್ಯ ಹೇತುರನ್ವೇಷಣೀಯಃ, ತಸ್ಯಾಪೀತ್ಯನವಸ್ಥಾ. ಅಥೈತದ್ದೋಷಪರಿಜಿಹೀರ್ಷಯಾ ಸ್ವರೂಪಸದ್ಭಾವ ಏವ ಸನ್ನಿಧಿರಿತಿ. ತದಾ ಸ್ವರೂಪಸ್ಯ ನಿತ್ಯತ್ವೇನ ನಿತ್ಯವದ್ಬಂಧಮೋಕ್ಷೌ. ಅತಃ ಏವಮಾದೇರ್ವಿಪ್ರತಿಷೇಧಾತ್ಸಾಂಖ್ಯಾನಾಂ ದರ್ಶನಮಸಮಂಜಸಂ. ಯೇಽಪಿ ಕೂಟಸ್ಥನಿತ್ಯನಿರ್ವಿಶೇಷಸ್ವಪ್ರಕಾಶಚಿನ್ಮಾತ್ರಂ ಬ್ರಹ್ಮ ಅವಿದ್ಯಾಸಾಕ್ಷಿತ್ವೇನ ಅಪಾರಮಾರ್ಥಿಕಬಂಧಮೋಕ್ಷಭಾಗಿತಿ ವದಂತಿ ತೇಷಾಮುಪ್ಯುಕ್ತರೀತ್ಯಾ ಅವಿದ್ಯಾಸಾಕ್ಷಿತ್ವಾಧ್ಯಾಸಾದ್ಯಸಂಭವಾಸಾಮಂಜಸ್ಯಮೇವ. ಇಯಾಂಸ್ತು ವಿಶೇಷಃ. ಸಾಂಖ್ಯಾಃ ಜನನಮರಣಪ್ರತಿನಿಯಮಾದಿವ್ಯವಸ್ಥಾಸಿದ್ಧ್ಯರ್ಥಂ ಪುರುಷಬಹುತ್ವಮಿಚ್ಛಂತಿ. ತೇ ತು ತದಪಿ ನೇಚ್ಛಂತೀತಿ ಸುತರಾಮಸಾಮಂಜಸ್ಯಂ. ಯತ್ತು ಪ್ರಕೃತೇಃ ಪಾರಮಾರ್ಥ್ಯಾಪಾರಮಾರ್ಥ್ಯವಿಭಾಗೇನ ವೈಷಮ್ಯಮುಕ್ತಂ ತದಯುಕ್ತಂ. ಪಾರಮಾರ್ಥಿಕತ್ವೇಽಪ್ಯಪಾರಮಾರ್ಥಿಕತ್ವೇಽಪಿ ನಿತ್ಯನಿರ್ವಿಕಾರಸ್ವಪ್ರಕಾಶೈಕರಸಚಿನ್ಮಾತ್ರಸ್ಯ ವ್ಯತಿರಿಕ್ತಸಾಕ್ಷಿತ್ವಾದ್ಯನುಪಪತ್ತೇಃ, ಪಾರಮಾರ್ಥಿಕತ್ವೇ ತು ತಸ್ಯಾಃ ದೃಶ್ಯತ್ವಬಾಧ್ಯತ್ವಾಭ್ಯುಪಗಮಾತ್ಸುತರಾಮಸಂಗತಂ. ಔಪಾಧಿಕಭೇದಾಭೇದವಾದೇಽಪ್ಯುಪಾಧಿಸಂಬಂಧಿನೋ ಬ್ರಹ್ಮಣೋಽಯಮೇವ ಸ್ವಭಾವ ಇತ್ಯುಪಾಧಿಸಂಧ್ಯಾದ್ಯನುಪಪತ್ತೇರಸಾಮಂಜಸ್ಯಂ ಪ್ರಾಗೇವೋಕ್ತಂ.

ಇಲ್ಲಿ ಬೇರೊಂದು ಕಾರಣವನ್ನು ಹೇಳುತ್ತಾನೆ. **ವಿಪ್ರತಿಷೇಧಾಚ್ಚಾಸಮಂಜಸಂ ||**

ಎಲ್ಲಾ ವೇದವೇದಾಂತಗಳಿಗೂ ವಿರುದ್ಧವಾದ್ದರಿಂದ ಸಾಂಖ್ಯದರ್ಶನವು ಅಯುಕ್ತವೆನಿಸುತ್ತದೆ. ಪ್ರಕೃತಿಯು ಪದಾರ್ಥವಾದ್ದರಿಂದ ದೃಶ್ಯವೂ ಭೋಗ್ಯವೂ ಆಗಿದೆ. ಆದ್ದರಿಂದ ಇದಕ್ಕೆ ಭೋಕ್ತನೂ ಆಶ್ರಯನೂ ಸಾಕ್ಷಿಯೂ ದ್ರಷ್ಟೃವೂ ಆದ ಚೇತನನನ್ನು ಒಪ್ಪಿಕೊಂಡು ಆ ಪ್ರಕೃತಿಯ ಸಹಕಾರದಿಂದಲೇ ಅವನಿಗೆ ಕೈವಲ್ಯವೂ

ಲಭಿಸುವುದೆಂದು ಹೇಳುವ ಸಾಂಖ್ಯರೇ ಪುರುಷನು ನಿತ್ಯನೂ ನಿರ್ವಿಕಾರನೂ ಆದ ಚೇತನನಾಗಿರುವುದರಿಂದ ಕರ್ತನಾಗದೆ ಕೇವಲ ಸಾಕ್ಷಿಯಾಗಿರುವನೆಂದೂ ಹೇಳುತ್ತಾರೆ. ಅವರಂತೆಯೇ ಪ್ರಕೃತಿಯು ಪುರುಷನ ಬಂಧಮೋಕ್ಷಗಳನ್ನು ಸಾಧಿಸುವುದೆಂದೂ, ಇಂತಹ ನಿರ್ವಿಕಾರನೂ ಉದಾಸೀನನೂ ಆದ ಪುರುಷನ ಸಾನ್ನಿಧ್ಯದಿಂದಲೇ ಪ್ರಕೃತಿಗೆ ಒಂದರಲ್ಲೊಂದರ ಆರೋಪದಿಂದ ಪುರುಷನ ಭೋಗಾಪವರ್ಗಗಳಿಗಾಗಿ ಸೃಷ್ಟಿಯು ಮೊದಲಾದ ಪ್ರವೃತ್ತಿಯುಂಟಾಗುವುದೆಂದೂ ಅವರು ಹೇಳುತ್ತಾರೆ. "ಪ್ರಕೃತಿ ಎಂಬ ನಲ್ಲೆಯು ಪುರುಷನ ಚಿತ್ತಕ್ಕೆ ಬಿಟ್ಟಿಗೆ ಸೇರುವುದರಿಂದಲೂ, ಮೂರು ಗುಣಗಳಿಂತ ಬೇರೆಯಾಗಿಯೂ, ಅವಕ್ಕೆ ಆಶ್ರಯನಾಗಿಯೂ, ಕೈವಲ್ಯವನ್ನು ಅನುಭವಿಸುವುದಕ್ಕಾಗಿಯೇ ಒಬ್ಬ ಪುರುಷನಿರುವನು" ಹೀಗೆ ತ್ರಿಗುಣಗಳಿಲ್ಲದ್ದರಿಂದ ಅವನು ಕೇವಲ ಸಾಕ್ಷಿಯೂ ಮತ್ತು ಉದಾಸೀನನೂ ಆದ್ದರಿಂದಲೇ ಕರ್ತನಾಗಲಾರನೆಂಬುದು ಸ್ಪಷ್ಟವಾಗುತ್ತದೆ. ಪ್ರಧಾನವು ಪುರುಷನ ಬಿಡುಗಡೆಗಾಗಿ ಪ್ರವರ್ತಿಸುತ್ತದೆ ಎಂದು ಸಾಂಖ್ಯರು ಹೇಳುತ್ತಾರೆಯಾದ್ದರಿಂದ ಪುರುಷನು ಬದ್ಧನೂ ಅಲ್ಲ, ಮುಕ್ತನೂ ಅಲ್ಲ; ಅವನಿಗೆ ಹುಟ್ಟುಸಾವುಗಳ ಗೊಂದಲವೂ ಇಲ್ಲ. ಎಲ್ಲಕ್ಕೂ ಆಶ್ರಯವಾಗಿರುವ ಪ್ರಕೃತಿಗೇ ಬಂಧ ಮೋಕ್ಷಗಳು ಅಂಟುತ್ತವೆ. ಆದ್ದರಿಂದ ಪುರುಷನ ಸಂಯೋಗದಿಂದ ಜಡಪ್ರಧಾನವೂ ಚೇತನದಂತೆ ಕರ್ತೃತ್ವವನ್ನು ನಿರ್ವಹಿಸುತ್ತದೆ. ಪುರುಷನು ವಾಸ್ತವವಾಗಿ ಉದಾಸೀನನಾಗಿಯೇ ಇರುವನು. ಗುಣಗಳ ಸಂಗದಿಂದ ಅವನು ಕರ್ತನಾದರೂ, ಉದಾಸೀನನಾಗಿದ್ದೇ ಕರ್ತನಂತೆ ಆಚರಿಸುವನು. ಪುರುಷನ ವಿವೇಕಕ್ಕೂ ಕೈವಲ್ಯಕ್ಕೂ ಪ್ರಧಾನವು ಪ್ರವರ್ತಿಸುತ್ತದೆ. ಕುಂಟ ಮತ್ತು ಕುರುಡರ ಮೇಳನದಂತೆ ಪ್ರಕೃತಿಪುರುಷರ ಸಂಪರ್ಕದಿಂದ ಸೃಷ್ಟಿಯುಂಟಾಗುತ್ತದೆ. ಹೀಗೆ ಸಾಂಖ್ಯರು ಹೇಳಿರುವುದರಿಂದ ನಿತ್ಯನಿರ್ವಿಕಾರನೂ, ಅಕರ್ತನೂ, ಉದಾಸೀನನೂ, ಕೇವಲನೂ ಆದ ಪುರುಷನಿಗೆ ಸಾಕ್ಷಿ, ದ್ರಷ್ಟೃ, ಭೋಕ್ತೃತ್ವವೆಂಬುದು ಸಂಭವಿಸುವುದಿಲ್ಲ. ಇಂತಹ ಪುರುಷನಿಗೆ ಅಧ್ಯಾಸಮೂಲಕವಾದ ಭ್ರಾಂತಿಯೂ ಸಂಭವಿಸುವುದಿಲ್ಲ. ಅಧ್ಯಾಸಭ್ರಾಂತಿಗಳೆರಡೂ ವಿಕಾರಗಳಾದ್ದರಿಂದಲೂ, ಚೇತನದ ಧರ್ಮವಾದ್ದರಿಂದಲೂ ಪ್ರಕೃತಿಗೂ ಅನ್ವಯಿಸುವಂತಿಲ್ಲ. ಒಂದರಲ್ಲಿ ಮತ್ತೊಂದರ ಧರ್ಮಗಳನ್ನು ಅನ್ವಯಿಸುವುದೇ ಅಧ್ಯಾಸವೆನಿಸುತ್ತದೆ. ಇದು ಚೇತನದ ಧರ್ಮವೂ ಮತ್ತು ವಿಕಾರವೂ ಆಗಿರುತ್ತದೆ. ಪುರುಷನಿಗೆ ಪ್ರಕೃತಿಯ ಸಾನ್ನಿಧ್ಯದಿಂದ ಇಂತಹ ಅಧ್ಯಾಸ ಉಂಟಾಗುತ್ತದೆ. ಅವನು ನಿರ್ವಿಕಾರನಾದ್ದರಿಂದಲೇ ಹೀಗಾಗುತ್ತದೆ ಎಂದರೆ ನಿತ್ಯವೂ ಹೀಗೆಯೇ ಇರಬೇಕಾಗುತ್ತದೆ. ಇದರಿಂದ ಅವರಿಬ್ಬರ ಸಾನ್ನಿಧ್ಯವು ವ್ಯರ್ಥವಾಗಬೇಕಾಗುತ್ತದೆ ಎಂದು "ನ ವಿಲಕ್ಷಣತ್ವಾತ್" ಎಂಬ ಸೂತ್ರದಲ್ಲಿ ಹೇಳಿಯಾಗಿದೆ. ಪ್ರಕೃತಿಯೇ ಸಂಸಾರದಲ್ಲಿ ಅಲೆಯುತ್ತಾ ಬದ್ಧವಾಗಿದ್ದು ಮುಕ್ತವಾಗುತ್ತದೆ ಎಂದು ಹೇಳಿದರೆ ನಿತ್ಯಮುಕ್ತನಾದ ಪುರುಷನಿಗೆ ಅದು ಉಪಕಾರಮಾಡುತ್ತದೆ ಎಂದು ಹೇಗೆ ಹೇಳುತ್ತೀರಿ? "ಪ್ರಕೃತಿಯು ಯಾವ ವಿಧವಾದ ಉಪಕಾರವನ್ನೂ ಅಪೇಕ್ಷಿಸದೆ ಪುರುಷನಿಗೆ ಅನೇಕಬಗೆಯ ಉಪಕಾರಗಳನ್ನು

ಮಾಡುತ್ತಿದೆ. ಪ್ರಕೃತಿಯನ್ನು ಅದರ ಸ್ವಭಾವದೊಂದಿಗೆ ಯಾವನು ಯಾವಾಗ ನೋಡುತ್ತಾನೆಯೋ ಆಗಲೇ ಅದು ಅವನನ್ನು ಬಿಟ್ಟು ಅಗಲುತ್ತದೆ. ನಟನು ತನ್ನ ಚಾತುರ್ಯವನ್ನು ಅಭಿನಯಿಸಿ ರಂಗಸ್ಥಳದಿಂದ ಹಿಂತಿರುಗುವಂತೆ ಪ್ರಕೃತಿಯು ಪುರುಷನಿಗೆ ತನ್ನ ಸ್ವರೂಪವನ್ನು ತೋರಿಸಿ ಹಿಂತಿರುಗುತ್ತದೆ. ಪ್ರಕೃತಿಗಿಂತಲೂ ಮೃದುವಾದದ್ದು ಬೇರೆ ಇಲ್ಲವೆಂದು ನನಗೆ ತೋರುತ್ತದೆ. ಯಾಕೆಂದರೆ ತನ್ನ ಸ್ವರೂಪವನ್ನು ಕಂಡವನ ಹತ್ತಿರ ಇವನು ತನ್ನನ್ನು ತಿಳಿದಿರುವನೆಂದು ಭಾವಿಸಿ ಪ್ರಕೃತಿಯು ಮತ್ತೆ ಅವನ ಬಳಿಗೆ ಗೋಚರವಾಗುವುದಿಲ್ಲ" ಹೀಗೆ ಹೇಳಿರುವುದು ಸಮಂಜಸವಲ್ಲ. ಪುರುಷನು ನಿತ್ಯಮುಕ್ತನೂ ನಿರ್ವಿಕಾರನೂ ಆಗಿರುವುದರಿಂದ ಯಾವತ್ತೂ ಪ್ರಕೃತಿಯನ್ನು ಗಮನಿಸುವುದೇ ಇಲ್ಲ! ಅದನ್ನು ತಾನು ಅಂಟಿಸಿಕೊಳ್ಳುವುದೂ ಇಲ್ಲ. ಪ್ರಕೃತಿ ಅಚೇತನವಾದ್ದರಿಂದ ತನ್ನನ್ನು ತಾನು ಕಂಡುಕೊಳ್ಳುವುದೂ ಇಲ್ಲ. ಪುರುಷನಿಗೆ ತನ್ನನ್ನು ತೋರಿಸಿಕೊಡಬೇಕೆಂಬ ಜ್ಞಾನವೂ ಅದಕ್ಕಿರುವುದಿಲ್ಲ. ಪುರುಷನಿಗೂ ಸಹ ಪ್ರಕೃತಿದರ್ಶನವೆಂಬ ವಿಕಾರವೂ ಸಂಭವಿಸುವಂತಿಲ್ಲ. ಆದ್ದರಿಂದ ಇಲ್ಲಿ ಪರಸ್ಪರ ಸಾನ್ನಿಧ್ಯಮಾತ್ರವೇ ದರ್ಶನವೆನಿಸುತ್ತದೆ. ಈ ಸಾನ್ನಿಧ್ಯವು ನಿತ್ಯವಾಗಿರುವುದರಿಂದ ನಿತ್ಯದರ್ಶನವೇ ಇರಬೇಕಾದೀತೆಂದು ಹಿಂದೆ ಹೇಳಿದೆ. ಸ್ವರೂಪಕ್ಕಿಂತ ಬೇರೆಯಾಗಿ ಕೊಂಚಕಾಲವೇ ಸಾನ್ನಿಧ್ಯವಿರುವುದಾದರೂ ಅದು ನಿತ್ಯವೂ ನಿರ್ವಿಕಾರವೂ ಆದ ಚೇತನನಿಗೆ ಹೊಂದುವುದಿಲ್ಲ. ಪುರುಷನಿಗೆ ತನ್ನ ಸಾನ್ನಿಧ್ಯವೇ ದರ್ಶನವೆನಿಸಿ ಮೋಕ್ಷಕ್ಕೆ ಕಾರಣವಾಗುವುದಾದರೆ ಬಂಧಹೇತುವೂ ಅದೇ ಆಗುವುದರಿಂದ ಬಂಧಮೋಕ್ಷಗಳು ನಿತ್ಯವಾಗಿರಬೇಕಾದೀತು. ತಪ್ಪಾಗಿ ತಿಳಿಯುವುದೇ ಬಂಧಹೇತುವೆಂದೂ, ಯಥಾರ್ಥವಾಗಿ ತಿಳಿಯುವುದೇ ಮೋಕ್ಷಹೇತುವೆಂದೂ ಹೇಳಿದರೆ ಎರಡು ಬಗೆಯ ಜ್ಞಾನವೂ ಸಾನ್ನಿಧ್ಯಕ್ಕಿಂತ ಬೇರೆಯಾಗದಿರುವುದರಿಂದ ಅವೆರಡೂ ಯಾವಾಗಲೂ ಇರಬೇಕಾಗುತ್ತದೆ. ಸಾನ್ನಿಧ್ಯವೇ ಅನಿತ್ಯವೆಂದರೆ ಅದರ ಕಾರಣವನ್ನು ಹುಡುಕಬೇಕು. ಮತ್ತೆ ಅದಕ್ಕೊಂದು ಹೇತುವನ್ನು ಹುಡುಕಬೇಕು. ಹೀಗೆ ಅನವಸ್ಥೆಯುಂಟಾಗುತ್ತದೆಯಾದ್ದರಿಂದ ಈ ದೋಷದ ಪರಿಹಾರಕ್ಕಾಗಿ ಸ್ವರೂಪವನ್ನೇ ಸನ್ನಿಧಿ ಎಂದು ಹೇಳಿದರೆ, ಆಗ ಸ್ವರೂಪವು ನಿತ್ಯವಾಗುವುದರಿಂದ ಬಂಧಮೋಕ್ಷಗಳೂ ನಿತ್ಯವಾಗುತ್ತವೆ. ಈ ಬಗೆಯ ವಿರೋಧದಿಂದಲೇ ಸಾಂಖ್ಯದರ್ಶನವು ಅಸಮಂಜಸವೆನಿಸಿದೆ. "ಕೂಟಸ್ಥವೂ, ನಿತ್ಯವೂ, ನಿರ್ವಿಶೇಷವೂ, ಸ್ವಪ್ರಕಾಶವೂ, ಚೈತನ್ಯರೂಪವೂ ಆದ ಬ್ರಹ್ಮ ಅವಿದ್ಯೆಗೆ ಸಾಕ್ಷಿಯಾಗಿ ಬಂಧಮೋಕ್ಷಗಳನ್ನು ಹೊಂದಿರುವಂತೆ ಕಾಣುವುದು" ಎಂದು ಕೆಲವರು ಹೇಳುತ್ತಾರೆ. ಅವರ ಮತದಲ್ಲೂ ಬ್ರಹ್ಮದಲ್ಲಿ ಅಧ್ಯಾಸವೂ ಮತ್ತು ಅದು ಅವಿದ್ಯೆಗೆ ಸಾಕ್ಷಿಯಾಗುವುದೆಂಬುದೂ ಸಮಂಜಸವಲ್ಲ. ಆದರೆ ಇವೆರಡು ಮತಗಳಿಗೂ ಇಷ್ಟು ವಿಶೇಷವಿದೆ. ಸಾಂಖ್ಯರು ಜನನ ಮರಣಗಳನ್ನು ವ್ಯವಸ್ಥೆಗೊಳಿಸಲಿಕ್ಕಾಗಿ ಪುರುಷರು ಅನೇಕರೆಂದು ಹೇಳುತ್ತಾರೆ. ಅದ್ವೈತಿಗಳಾದರೋ ಅದನ್ನು ಇಚ್ಛಿಸುವುದಿಲ್ಲವಾದ್ದರಿಂದ ಈ ಮತವು ಮತ್ತಷ್ಟು ಅಯುಕ್ತವೆನಿಸುತ್ತದೆ. ಸಾಂಖ್ಯರಿಗೆ

ಪ್ರಕೃತಿಯು ಸತ್ಯವೆಂದೂ, ಅದ್ವೈತಿಗಳಿಗೆ ಅಸತ್ಯವೆಂದೂ ವೈಷಮ್ಯವನ್ನು ಕೆಲವರು ಹೇಳುವರು. ಅದೂ ಯುಕ್ತವಲ್ಲ. ಈ ಎರಡು ಪಕ್ಷಗಳಲ್ಲೂ ನಿತ್ಯನಿರ್ವಿಕಾರವೂ ಸ್ವಪ್ರಕಾಶವೂ ಚಿನ್ಮಾತ್ರವೂ ಆದ ಪುರುಷನಿಗೆ ತನಗಿಂತ ಬೇರೆಯಾದ ಸಾಕ್ಷಿತ್ವಾದಿ ಧರ್ಮಗಳನ್ನು ಒಪ್ಪುವಂತಿಲ್ಲ. ಸಾಕ್ಷಿತ್ವಾದಿಗಳು ಪಾರಮಾರ್ಥಿಕವಾದರೆ, ಬ್ರಹ್ಮವನ್ನು ದೃಶ್ಯವಾದ್ದರಿಂದ ಬಾಧ್ಯವೆಂದೂ ಅಂಗೀಕರಿಸಬೇಕಾಗುವುದು. ಆದ್ದರಿಂದ ಈ ಮತವು ಪೂರ್ತಿ ಅಯುಕ್ತವಾಗುತ್ತದೆ. ಔಪಾಧಿಕಭೇದಾಭೇದಗಳನ್ನು ಒಪ್ಪಿದರೂ ಉಪಾಧಿಸಂಬಂಧವೇ ಬ್ರಹ್ಮದ ಸ್ವಭಾವವಾಗುವುದರಿಂದ ಹಿಂದಿನ ದೋಷಗಳೇ ಇಲ್ಲಿಯೂ ಬರುವುದರಿಂದ ಇದೂ ಅಯುಕ್ತವೇ ಆಗುತ್ತದೆ.

**ಏವಂ ಸ್ಮಾರ್ತಮತಂ ನಿರಾಕೃತ್ಯ ವೈಶೇಷಿಕನೈಯಾಯಿಕಮತಂ ನಿರಾಕರೋತಿ—ಮಹದ್ದೀರ್ಘಾಧಿಕರಣಂ || ೨ ||**

**ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ || ೧೦ ||**

**'ಕಾರಣಗುಣಾ ಹಿ ಕಾರ್ಯಗುಣಾರಂಭಕಾಃ' ಇತಿ ನ್ಯಾಯಾತ್ ಜ್ಞಾನಾನಂದಾತ್ಮಕೇಶ್ವರೋಪಾದಾನತ್ವೇ ಜಗತಸ್ತದ್ಧರ್ಮಾತ್ಮಕತ್ವಂ ಸ್ಯಾದಿತಿ ಚೇತ್, ಹ್ರಸ್ವಪರಿಮಂಡಲಾಭ್ಯಾಂ ಹ್ರಸ್ವಾಭ್ಯಾಂ ಪರಿಮಂಡಲಾಭ್ಯಾಂ ಪರಮಾಣುಭ್ಯಾಂ ಮಹತ್ಪರಮಾಣ್ವಪೇಕ್ಷಯಾ ಅಧಿಕಪರಿಣಾಮವಿಶಿಷ್ಟಂ ದೀರ್ಘಂ ಚ ದ್ವ್ಯಣುಕಂ ಚ ಯಥೋಪಪದ್ಯತೇ ತಥಾ ಜ್ಞಾನಾನಂದಾತ್ಮಕೇಶ್ವರಾಜ್ಜಡದುಃಖಾತ್ಮಕಚೇತನಾಚೇತನಪ್ರಪಂಚಕಾರಣತ್ವಂ ಸಮುಚಿತಂ. ಚೇತನಾಚೇತನಾತ್ಮಕತ್ವೇನ ಪ್ರಪಂಚಸ್ಯೋಪಪನ್ನತ್ವಾಜ್ಜಗತಃ ಪರಮಾಣುಕಾರಣತ್ವಂ ಬ್ರಹ್ಮಕಾರಣತ್ವಂ ವೇತಿ ಸಂಶಯಃ. "ಕಾರಣಗುಣಾಃ ಕಾರ್ಯೇ ಸ್ವಸಮಾನಜಾತೀಯಗುಣಾರಂಭಕಾಃ" ಇತಿ ನ್ಯಾಯೇನ ಜಡದುಃಖಾತ್ಮಕಸ್ಯ ಪ್ರಪಂಚಸ್ಯ ಪ್ರಜ್ಞಾನಂದಾತ್ಮಕಸ್ಯ ಬ್ರಹ್ಮಣಃ ಪರಿಣಾಮತ್ವಂ ನೋಪಪದ್ಯತೇ. ಪರಮಾಣ್ವಾದೀನಾಮಚೇತನತ್ವೇನ ಚೇತನಕ್ಷೇತ್ರಜ್ಞಕರ್ಮಾನುಗುಣ್ಯೇಶ್ವರಪ್ರೇರಣಯಾ ದ್ವ್ಯಣುಕತ್ರ್ಯಣುಕಾದಿಕ್ರಮೇಣ ಪರಮಾಣೂನಾಮೇವ ಜಗತ್ಕಾರಣತ್ವಂ ಸಮಂಜಸಮಿತಿ ಪ್ರಾಪ್ತೇ ವದಾಮಃ. ಪ್ರಧಾನಕಾರಣವಾದವದ್ಯುಕ್ತ್ಯಾಭಾಸಪ್ರಾಧಾನ್ಯಪರಮಾಣುಕಾರಣವೈಶೇಷಿಕಮತವಾದೋಽಪ್ಯಸಮಂಜಸಃ. ಸೂತ್ರೇ ವಾಶಬ್ದಶ್ಚಾರ್ಥೇ. ಹ್ರಸ್ವಪರಿಮಂಡಲಾಭ್ಯಾಂ ದ್ವ್ಯಣುಕಪರಮಾಣುಭ್ಯಾಂ ಮಹದ್ದೀರ್ಘವತ್ತ್ರ್ಯಣುಕೋತ್ಪತ್ತಿವಾದವದನ್ಯಚ್ಚ ತದಭ್ಯುಪಗತಂ ಸರ್ವಮಸಂಜಸಂ. ಪರಮಾಣುಭ್ಯೋ ದ್ವ್ಯಣುಕಾದಿಕ್ರಮೇಣ ಜಗದುತ್ಪತ್ತಿವಾದವದಸ್ಯಾಪ್ಯಸಾಮಂಜಸ್ಯಮಿತ್ಯರ್ಥಃ. ತಥಾಹಿ ತಂತುಪ್ರಭೃತಯೋ ಹ್ಯವಯವಾಸ್ಸ್ವಂಶೈಸ್ತೈಸ್ತೈಃ ಪಾರ್ಶ್ವೈರ್ಸ್ಸಂಯುಜ್ಯಮಾನಾಃ ಅವಯವಿನಮುತ್ಪಾದ**

ಯಂತಿ. ಪರಮಾಣವೋಽಪಿ ಸ್ವಕೀಯೈಸ್ಸ್ವೈಸ್ಸ್ವೈಃ ಪಾರ್ಶ್ವೈಸ್ಸಂಯುಜ್ಯಮಾನಾಃ ದ್ವ್ಯಣುಕಾದೀನಾಮುತ್ಪಾದಕಾ ಭವೇಯುಃ. ಅನ್ಯಥಾ ಪರಮಾಣೂನಾಂ ಪ್ರದೇಶಭೇದಾಭಾವೇ ಸಕಿಸಹಸ್ರಪರಮಾಣುಸಂಯೋಗೇಽಪ್ಯೇತಸ್ಮಾತ್ಪರಮಾಣೋರನತಿರಿಕ್ತಪರಿಮಾಣಕಯಾ ಅಣುತ್ವಹ್ರಸ್ವತ್ವಮಹತ್ತ್ವದೀರ್ಘತ್ವಾದ್ಯಸಿದ್ಧಿಸ್ಸ್ಯಾತ್. ಪ್ರದೇಶಭೇದಾಭ್ಯುಪಗಮೇ ಪರಮಾಣವೋಽಪಿ ಸ್ವಾಂಶಾಸ್ಸ್ವಕೀಯೈರಂಶೈಃ, ತೇ ಚ ಸ್ವಕೀಯೈರಂಶೈರಿತ್ಯನವಸ್ಥೇತಿ ನಚ ವಾಚ್ಯಂ. ಅವಯವಾಲ್ಪತ್ವಮಹತ್ತ್ವಾಭ್ಯಾಂ ಹಿ ಸರ್ಷಪಮಹೀಧರಯೋರ್ವೈಷಮ್ಯಂ. ಪರಮಾಣೋರಪ್ಯಂತಾವಯವತ್ವೇ ಅವಯವಾನಂತ್ಯಸಾಮ್ಯಾತ್ಸರ್ಷಪಮಹೀಧರಯೋರ್ವೈಷಮ್ಯಾಸಿದ್ಧೇಃ ಅವಯವಾಪಕರ್ಷಕಾಷ್ಠಾ ಅವಶ್ಯಾಭ್ಯುಪಗಮನೀಯಾ. ಪರಮಾಣೂನಾಂ ಪ್ರದೇಶಭೇದಾಭಾವೇ ಸತ್ಯೇಕಪರಮಾಣುಪರಿಮಾಣಾತಿರೇಕಪ್ರಥಿಮಾ ನ ಜಾಯತೇ. ಸರ್ಷಪಮಹೀಧರಯೋರಂತರ ಏವಾಸಿದ್ಧೇಃ ಕಿಂ ಕುರ್ಮ ಇತಿ ಚೇದ್ವೈದಿಕಃ ಪಕ್ಷಃ ಪರಿಗೃಹ್ಯತಾಂ. ಯತ್ತು ಪರೈರ್ಬ್ರಹ್ಮಕಾರಣವಾದದೂಷಣಪರಿಹಾರಪರಮಿದಂ ವ್ಯಾಖ್ಯಾತಂ ತದಸಂಗತಂ ಸ ಪೌನರುಕ್ತ್ಯಂ ಚ. ಬ್ರಹ್ಮಕಾರಣವಾದೇ ಪರೋಕ್ತಾನ್ ದೋಷಾನ್ ಪೂರ್ವಸ್ಮಿನ್ಪಾದೇ ಪರಿಹೃತ್ಯ ಪರಪಕ್ಷಪ್ರತಿಕ್ಷೇಪೋ ಹ್ಯಸ್ಮಿನ್ಪಾದೇ ಕ್ರಿಯತೇ. ಚೇತನಾದ್ಬ್ರಹ್ಮಣೋ ಜಗದುತ್ಪತ್ತಿಸಂಭವಶ್ಚ "ನವಿಲಕ್ಷಣತ್ವಾದಿ"ತ್ಯತ್ರ ಪ್ರಪಂಚಿತಃ. ಅತೋ ಹ್ರಸ್ವಪರಿಮಂಡಲಾಭ್ಯಾಂ ಮಹದ್ದೀರ್ಘಾಣುಹ್ರಸ್ವೋತ್ಪತ್ತಿವದನ್ಯಚ್ಚ ತದಭ್ಯುಪಗತಂ ಸರ್ವಸಮಂಜಸಂ.

ಹೀಗೆ ಸ್ಮಾರ್ತಮತವನ್ನು ನಿರಾಕರಿಸಿ ನ್ಯಾಯವೈಶೇಷಿಕಮತವನ್ನು ಮುಂದಿನ ಅಧಿಕರಣದಲ್ಲಿ ನಿರಾಕರಿಸುತ್ತಾನೆ—ಮಹದ್ದೀರ್ಘಾಧಿಕರಣಂ ॥ ೨ ॥

ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ ॥ ೧೦ ॥

'ಕಾರಣಗುಣಗಳು ಕಾರ್ಯಗುಣಗಳನ್ನಾರಂಭಿಸುತ್ತವೆ' ಎಂಬ ನ್ಯಾಯದಿಂದ ಜ್ಞಾನಾನಂದಸ್ವರೂಪನಾದ ಈಶ್ವರನೇ ಉಪಾದಾನವಾಗಿರುವ ಈ ಜಗತ್ತಿನಲ್ಲೂ ಅವೇ ಧರ್ಮಗಳಿರಲೆಂದರೆ ಹ್ರಸ್ವಪ್ರಮಾಣದ ಪರಮಾಣುಗಳಿಂದ ಅವುಗಳಿಗಿಂತಲೂ ಅಧಿಕವೂ ದೀರ್ಘವೂ ಆದ ದ್ವ್ಯಣುಕವು ಹುಟ್ಟುವಂತೆ ಜ್ಞಾನಾನಂದರೂಪನಾದ ಈಶ್ವರನಿಂದ ಜಡವೂ ಅಜಡವೂ ಆದ ಚೇತನ ಮತ್ತು ಅಚೇತನ ಪ್ರಪಂಚಗಳು ಹುಟ್ಟುವುದು ಯುಕ್ತವೇ ಆಗಿದೆ. ಆದ್ದರಿಂದ ಚೇತನ ಮತ್ತು ಅಚೇತನವಾದ ಪ್ರಪಂಚಕ್ಕೆ ಪರಮಾಣುಗಳು ಕಾರಣವೇ? ಅಥವಾ ಬ್ರಹ್ಮವು ಕಾರಣವೇ? ಎಂದು ಸಂಶಯ ಬರುತ್ತದೆ. "ಕಾರಣಗುಣಗಳು ಕಾರ್ಯದಲ್ಲಿ ತಮಗೆ ಸಮಾನವಾದ ಗುಣಗಳನ್ನೇ ಹುಟ್ಟಿಸುತ್ತವೆ, ಎಂಬ ನ್ಯಾಯದಿಂದ ಜಡವೂ ದುಃಖಮಯವೂ ಆದ ಪ್ರಪಂಚವು

ಜ್ಞಾನಾನಂದರೂಪವಾದ ಬ್ರಹ್ಮದ ಪರಿಣಾಮವೆಂಬುದು ಹೊಂದುವುದಿಲ್ಲ. ಪರಮಾಣುಗಳು ಅಚೇತನವಾದ್ದರಿಂದ ಚೇತನಜೀವರ ಕರ್ಮಾನುಗುಣವಾಗಿ ಈಶ್ವರನ ಪ್ರೇರಣೆಯಿಂದ ದ್ವ್ಯಣುಕ ತ್ರ್ಯಣುಕ ಮೊದಲಾದ ಕ್ರಮದಿಂದ ಅವೇ ಜಗತ್ತಿಗೆ ಕಾರಣವಾಗುವುವೆಂದು ಹೇಳುವುದೇ ಸಮಂಜಸವೆನಿಸುತ್ತದೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರವು ಹೀಗೆ ಸಮಾಧಾನಮಾಡುತ್ತದೆ. ಪ್ರಧಾನವೇ ಜಗತ್ಕಾರಣವೆಂಬ ವಾದದಂತೆ ಆಭಾಸವಾದ ಯುಕ್ತಿಗಳನ್ನವಲಂಬಿಸಿ ಪರಮಾಣುವೇ ಜಗತ್ಕಾರಣವೆನ್ನುವ ವೈಶೇಷಿಕವಾದವೂ ಅಸಮಂಜಸವೇ ಆಗುತ್ತದೆ. ಕಡಮೆ ಪ್ರಮಾಣದ ದ್ವ್ಯಣುಕಗಳಿಂದ ಅವಕ್ಕಿಂತಲೂ ದೊಡ್ಡದೂ ಮತ್ತು ದೀರ್ಘವೂ ಆದ ತ್ರ್ಯಣುಕವು ಹುಟ್ಟುವುದೆಂಬ ವಾದವೂ, ಇದರಂತೆ ವೈಶೇಷಿಕರು ಒಪ್ಪುವ ಬೇರೆ ವಾದಗಳೂ ಅಸಮಂಜಸವೇ ಆಗುತ್ತವೆ. ಪರಮಾಣುಗಳಿಂದ ದ್ವ್ಯಣುಕವೇ ಮೊದಲಾದ ಕ್ರಮದಿಂದ ಜಗತ್ತು ಹುಟ್ಟುತ್ತದೆ ಎಂಬ ವಾದದಂತೆ ಇದೂ ಸಹ ಅಯುಕ್ತವೇ ಆಗುತ್ತದೆ. ತಂತು ಮೊದಲಾದ ಅವಯವಗಳು ತಮ್ಮ ಅಂಶಗಳೊಡನೆ ಕೂಡಿಕೊಂಡು ಬಟ್ಟೆಯನ್ನು ಹುಟ್ಟಿಸುತ್ತವೆ. ಅದರಂತೆ ಪರಮಾಣುಗಳೂ ಸಹ ತಮ್ಮ ಅಂಶಗಳೊಡನೆ ಸೇರಿಕೊಂಡು ದ್ವ್ಯಣುಕಾದಿಗಳನ್ನು ಹುಟ್ಟಿಸುತ್ತವೆ. ಇಲ್ಲವಾದರೆ ಪರಮಾಣುಗಳಿಗೆ ಬೇರೆ ಪ್ರದೇಶವಿಲ್ಲದ್ದರಿಂದ ಸಾವಿರಾರು ಪರಮಾಣುಗಳು ಬೆರೆತರೂ ಒಂದು ಪರಮಾಣುವಿಗಿಂತ ಹೆಚ್ಚಿನ ಪರಿಮಾಣವೇ ಆಗದಿರುವುದರಿಂದ ಅಣು ಹ್ರಸ್ವ-ಮಹತ್-ದೀರ್ಘ ಮೊದಲಾದವು ಸಿದ್ಧಿಸದೆ ಹೋಗುತ್ತವೆ. ಪ್ರದೇಶಭೇದವನ್ನು ಒಪ್ಪಿದರೆ ಪರಮಾಣುಗಳು ತಮ್ಮ ಅಂಶಗಳೊಡನೆಯೂ ಅವು ತಮ್ಮ ಅಂಶಗಳೊಡನೆಯೂ ಸೇರುವುವೆಂದು ಅನವಸ್ಥೆ ಬರುವುದಿಲ್ಲವೇ ? ಎಂದರೆ ಹಾಗೆ ಹೇಳುವುದು ಯುಕ್ತವಲ್ಲ. ಅವಯವಗಳು ಕಡಮೆ ಮತ್ತು ಹೆಚ್ಚಾಗುವುದರಿಂದಲೇ ಸಾಸಿವೆಗೂ ಬೆಟ್ಟಕ್ಕೂ ಅಂತರವಿರುತ್ತದೆ. ಪರಮಾಣುವಿನಲ್ಲೂ ಅನೇಕ ಅವಯವಗಳಿರುವುದಾದರೆ ಅವಯವಗಳು ಅನಂತವಾಗಿರುವುವೆಂಬ ಸಾಮ್ಯದಿಂದ ಸಾಸಿವೆಗೂ ಬೆಟ್ಟಕ್ಕೂ ವೈಷಮ್ಯವು ಸಿದ್ಧಿಸದೇ ಹೋಗುವುದು. ಆದ್ದರಿಂದ ಅವಯವದ ಒಂದು ಕೊನೆಯ ಪರಿಮಾಣವನ್ನು ಅವಶ್ಯವಾಗಿ ಒಪ್ಪಲೇಬೇಕಾಗುತ್ತದೆ. ಪರಮಾಣುಗಳಿಗೆ ಪ್ರದೇಶ ಭೇದವಿಲ್ಲದಿದ್ದರೆ, ಒಂದು ಪರಮಾಣುವಿನ ಪರಿಮಾಣಕ್ಕಿಂತ ಹೆಚ್ಚಿನ ವಿಸ್ತಾರವೇ ತೋರುವುದಿಲ್ಲ. ಆಗ ಸಾಸಿವೆಗೂ ಬೆಟ್ಟಕ್ಕೂ ಅಂತರವೇ ಸಿದ್ಧಿಸದಿದ್ದರೆ ಏನುಮಾಡಬೇಕೆಂದು ಕೇಳಿದರೆ ವೈದಿಕಮತವನ್ನು ಸ್ವೀಕರಿಸಬೇಕೆಂದೇ ಹೇಳಬೇಕಾಗುತ್ತದೆ. ಬ್ರಹ್ಮಕಾರಣವಾದದಲ್ಲಿ ದೋಷವನ್ನು ಪರಿಹರಿಸಲಿಕ್ಕಾಗಿ ಈ ಅಧಿಕರಣ ಬಂದಿದೆ ಎಂದು ಕೆಲವರು ಹೇಳುವುದು ಸರಿಯಲ್ಲ; ಏಕೆಂದರೆ ಅದರಿಂದ ಹೇಳಿದ್ದನ್ನೇ ಹೇಳಿದಂತಾಗುವುದು. ಆದ್ದರಿಂದ ಬ್ರಹ್ಮವೇ ಜಗತ್ಕಾರಣವೆಂಬ ಮತದಲ್ಲಿ ದೋಷಗಳನ್ನು ಹಿಂದಿನ ಪಾದದಲ್ಲಿ ಪರಿಹರಿಸಿ ಪರಪಕ್ಷದ ನಿರಾಕರಣವನ್ನೇ ಈ ಪಾದದಲ್ಲಿ ತಿಳಿಸಲಾಗುವುದು. ಚೇತನ ಬ್ರಹ್ಮದಿಂದಲೇ ಜಗತ್ತಿನ ಉತ್ಪತ್ತಿಯಾಗುವುದೆಂಬ

ಅಂಶವನ್ನು 'ನ ವಿಲಕ್ಷಣತ್ವಾತ್' ಎಂಬ ಸೂತ್ರದಲ್ಲಿ ವಿಸ್ತರಿಸಲಾಗಿದೆ. ಆದರಿಂದ ಅಲ್ಪಪ್ರಮಾಣದ ಪರಮಾಣುಗಳಿಂದ ದೊಡ್ಡಪ್ರಮಾಣದ ದ್ವ್ಯಣುಕಾದಿಗಳು ಹುಟ್ಟುತ್ತವೆ ಎಂಬ ವಾದವು ಯುಕ್ತವಲ್ಲ.

**ಅನ್ಯದಸಾಮಂಜಸ್ಯಮಾಹ—ಉಭಯಥಾಪಿ ನ ಕರ್ಮಾತಸ್ತದಭಾವಃ ॥**

ಪರಬ್ರಹ್ಮಣಶ್ಶಿವಸ್ಯ ಕ್ಷೇತ್ರಜ್ಞಾನಾಂ ವಾ ಪರಮಾಣುಪ್ರೇರಕತ್ವಂ. ಉಭಯಥಾಪಿ ಪಕ್ಷದ್ವಯೇಽಪಿ ಪರಮಾಣೂನಾಂ ಕರ್ಮ ಚಲನಂ ನ ಸಂಭವತಿ ಕ್ಷೇತ್ರಜ್ಞಪರಮೇಶ್ವರಯೋರುಭಯೋರಪಿ ನಿರವಯವತ್ವೇನ ನಿರವಯವಕ್ಷೇತ್ರಜ್ಞಾನಾಂ ನಿರವಯವಪರಮಾಣುಭಿಸ್ಸಹ ಸಂಯೋಗಸಂಬಂಧಾಭಾವಾದಸಂಬಂಧಯೋಃ ಕ್ಷೇತ್ರಜ್ಞಪರಮೇಶ್ವರಯೋಃ ಪ್ರೇರಕತ್ವಾಭಾವಾದತಸ್ತದಭಾವಃ; ಅತಶ್ಚಲನಾಭಾವಾತ್, ನ ತದಭಾವಃ ಪರಮಾಣೂನಾಮನ್ಯೋನ್ಯಸಂಯೋಗಾಭಾವಃ. ತಥಾಚ ದ್ವ್ಯಣುಕತ್ರ್ಯಣುಕಾದಿಜಗದುದ್ಭವೋ ನ ಸಂಭವತಿ. ಪರಮಾಣುಕಾರಣವಾದೇ ಹಿ ಪರಮಾಣುಗತಕರ್ಮಜನಿತತತ್ಸಂಯೋಗಪೂರ್ವಕದ್ವ್ಯಣುಕಾದಿಕ್ರಮೇಣ ಜಗದುತ್ಪತ್ತಿರಿಷ್ಯತೇ. ತತ್ರ ನಿಖಿಲಜಗದುತ್ಪತ್ತಿಕಾರಣಭೂತಪರಮಾಣುಗತಮಾದ್ಯಂ ಕರ್ಮಾದೃಷ್ಟಕಾರಿತಮಿತ್ಯಭ್ಯುಪಗಮ್ಯತೇ. "ಅಗ್ನೇರೂರ್ಧ್ವಜ್ವಲನಂ ವಾಯೋಸ್ತಿರ್ಯಗ್ಗಮನಮಣುಮನಸೋಶ್ಚಾದ್ಯಂ ಕರ್ಮೇತ್ಯದೃಷ್ಟಕಾರಿತಾನಿ" ಇತಿ ತದಿದಂ ಪರಮಾಣುಗತಂ ಕರ್ಮ ಸ್ವಗತಾದೃಷ್ಟಕಾರಿತಂ? ಆತ್ಮಗತಾದೃಷ್ಟಾಕಾರಿತಂ ವಾ? ಉಭಯಥಾಪಿ ನ ಸಂಭವತಿ, ಕ್ಷೇತ್ರಜ್ಞಪುಣ್ಯಪಾಪಾನುಷ್ಠಾನಜನಿತಸ್ಯಾದೃಷ್ಟಸ್ಯ ಪರಮಾಣುಗತತ್ವಾಸಂಭವಾತ್. ಸಂಭವೇ ಚ ಸದೋತ್ಪಾದಕತ್ವಪ್ರಸಂಗಃ. ಆತ್ಮಗತಸ್ಯಾದೃಷ್ಟಸ್ಯ ಪರಮಾಣುಗತೋತ್ಪತ್ತಿಹೇತುತ್ವಂ ನ ಸಂಭವತಿ. ಅಥಾದೃಷ್ಟವದಾತ್ಮಸಂಯೋಗಾದಣುಷು ಕರ್ಮೋತ್ಪತ್ತಿಃ. ತದಾ ತಸ್ಯಾದೃಷ್ಟಪ್ರವಾಹಸ್ಯ ನಿತ್ಯತ್ವೇನ ನಿತ್ಯಸರ್ಗಪ್ರಸಂಗಃ. ನನ್ವದೃಷ್ಟಂ ವಿಪಾಕಾಪೇಕ್ಷಂ ಫಲಾಯ ಅಲಂ. ಕಾನಿಚಿದದೃಷ್ಟಾನಿ ತದಾನೀಮೇವ ವಿಪಚ್ಯತೇ. ಕಾನಿಚಿಜ್ಜನ್ಮಾಂತರೇ, ಕಾನಿಚಿತ್ಕಾಲಾಂತರೇ, ಅತೋ ವಿಪಾಕಾಪೇಕ್ಷತ್ವಾನ್ನ ಸರ್ವದೋತ್ಪಾದಕತ್ವಪ್ರಸಂಗ ಇತಿ ನೈತದನಂತೈರಾತ್ಮಭಿರಸಂಕೇತಪೂರ್ವಕಮಯುಗಪದನುಷ್ಠಿತಾನೇಕವಿಧಕರ್ಮಜನಿತಾನಾಮದೃಷ್ಟಾನಾಮೇಕಸ್ಮಿನ್ಕಾಲೇ ಏಕರೂಪವಿಪಾಕಸ್ಯಾಪ್ರಾಮಾಣಿಕತ್ವಾದತ ಏವ ಯುಗಪತ್ಸರ್ವಸಂಹಾರೋ ದ್ವಿಪರಾರ್ಧಕಾಲವಿಪಾಕೇನಾವಸ್ಥಾನಂ ಚನ ಸಂಗಚ್ಛತೇ. ನಚೇಶ್ವರೇಚ್ಛಾವಿಶೇಷಾದೃಷ್ಟಸಂಯೋಗಾದಣುಷು ಕರ್ಮ ಆನುಮಾನಿಕೇಶ್ವರಾ

**ಸಿದ್ಧೇಃ ಶಾಸ್ತ್ರಯೋನಿತ್ವಾದಿತ್ಯತ್ರೋಪಪಾದಿತತ್ವಾತ್. ಅತೋ ಜಗದುತ್ಪತ್ತೇಃ ಪರಮಾಣುಗತಕರ್ಮಪೂರ್ವಕತ್ವಾಭಾವಃ.**

ಈ ಪಕ್ಷದಲ್ಲಿ ಬೇರೊಂದು ದೋಷವನ್ನು ತಿಳಿಸುತ್ತಾನೆ—

**ಉಭಯಥಾಪಿ ನ ಕರ್ಮಾತಸ್ತದಭಾವಃ ॥ ೧೧ ॥**

ಪರಶಿವನಾಗಲೀ ಜೀವರಾಗಲೀ ಪರಮಾಣುಗಳಿಗೆ ಪ್ರೇರಕರಾಗುವರೆಂಬ ಎರಡು ಪಕ್ಷಗಳಲ್ಲೂ ಪರಮಾಣುಗಳಿಂದ ಕರ್ಮವಾಗುತ್ತದೆ ಎಂಬುದು ಸಂಭವಿಸುವುದಿಲ್ಲ. ಜೀವ ಪರಶಿವ ಇಬ್ಬರೂ ನಿರವಯವರಾದ್ದರಿಂದ ನಿರವಯ ಜೀವರಿಗೆ ನಿರವಯವ ಪರಮಾಣುಗಳೊಡನೆ ಸಂಯೋಗವಾಗದಿರುವುದರಿಂದಲೂ, ಪರಸ್ಪರ ಸಂಬಂಧವಿಲ್ಲದ ಜೀವಪರಶಿವರು ಪ್ರೇರಕರಾಗದ್ದರಿಂದಲೂ ಪರಮಾಣುಗಳಿಗೆ ಚಲನವು ಸಂಭವಿಸುವಂತಿಲ್ಲ. ಹೀಗೆ ಅವಕ್ಕೆ ಪರಸ್ಪರ ಸಂಯೋಗವಿಲ್ಲದ್ದರಿಂದ ದ್ವ್ಯಣುಕ ತ್ರ್ಯಣುಕ ಮೊದಲಾದ ಜಗತ್ತಿನ ಉತ್ಪತ್ತಿಯೂ ಸಂಭವಿಸುವುದಿಲ್ಲ. ಪರಮಾಣುವೇ ಜಗತ್ಕಾರಣವೆಂಬ ವಾದದಲ್ಲಿ ಪರಮಾಣುಗಳು ಪರಸ್ಪರಸಂಯೋಗದಿಂದ ದ್ವ್ಯಣುಕವೇ ಮೊದಲಾದ ಕ್ರಮದಿಂದ ಜಗತ್ತಿನ ಉತ್ಪತ್ತಿಗೆ ಕಾರಣವಾಗುತ್ತವೆ. ಇಲ್ಲಿ ಎಲ್ಲಾ ಜಗತ್ತಿನ ಉತ್ಪತ್ತಿಗೂ ಕಾರಣವಾದ ಪರಮಾಣುವಿನಲ್ಲಿರುವ ಮೊದಲನೆಯ ಕರ್ಮ ಅದೃಷ್ಟದಿಂದ ಆಗುವುದೆಂದು ಒಪ್ಪಿರುವರು. "ಅಗ್ನಿಯ ಮೇಲುಮುಖವಾದ ಉರಿಯುವಿಕೆ, ವಾಯುವಿನ ಅಡ್ಡಲಾದ ಓಡುವಿಕೆ, ಪರಮಾಣು ಮತ್ತು ಮನಸ್ಸಿನ ಮೊದಲನೆಯ ಚಲನ ಇವು ಅದೃಷ್ಟದಿಂದ ಆಗತಕ್ಕವು." ಪರಮಾಣುವಿನಲ್ಲಿ ಆಗುವ ಈ ಬಗೆಯ ಕರ್ಮ ಅದರ ಅದೃಷ್ಟದಿಂದ ಆಗುವುದೋ ಜೀವರ ಅದೃಷ್ಟದಿಂದ ಆಗುವುದೋ? ಎಂಬೀ ಎರಡು ಪಕ್ಷಗಳು ಒದಗುತ್ತವೆ. ಅದೃಷ್ಟವು ಚೇತನನ ಗುಣವಾದ್ದರಿಂದ ಪರಮಾಣುವಿನಲ್ಲಿ ಅದು ಇರುವುದೆಂಬ ಮೊದಲನೆ ಪಕ್ಷ ಸರಿಯಲ್ಲ. ಅಲ್ಲಿ ಅದೃಷ್ಟವಿರುವುದಾದರೆ ಯಾವಾಗಲೂ ಪ್ರಪಂಚದ ಸೃಷ್ಟಿಯೇ ಆಗಬೇಕಾಗುವುದು. ಜೀವರ ಪುಣ್ಯಪಾಪಗಳಿಂದ ಪರಮಾಣುವಿನಲ್ಲಿ ಕರ್ಮ ಹುಟ್ಟುವುದೆಂಬ ಎರಡನೇ ಪಕ್ಷವೂ ಸರಿಯಲ್ಲ. ಅದೃಷ್ಟವುಳ್ಳ ಆತ್ಮನ ಸಂಯೋಗದಿಂದ ಪರಮಾಣುಗಳಲ್ಲಿ ಕರ್ಮ ಹುಟ್ಟುತ್ತದೆ ಎಂದು ಹೇಳಿದರೆ, ಆಗ ಅದೃಷ್ಟದ ಪ್ರವಾಹವು ನಿತ್ಯವಾಗಿರುವುದರಿಂದ ಸೃಷ್ಟಿಯೂ ನಿತ್ಯವಾಗಬೇಕಾಗುವುದು. ಅದೃಷ್ಟವು ಪರಿಣಾಮವನ್ನು ಅಪೇಕ್ಷಿಸಿಯೇ ಫಲವನ್ನು ಕೊಡಲು ಶಕ್ತವಾಗಿರುತ್ತದೆ. ಕೆಲವು ಅದೃಷ್ಟಗಳು ಆಗಲೇ ಫಲ ಕೊಡುತ್ತವೆ; ಕೆಲವು ಬೇರೆ ಜನ್ಮದಲ್ಲೂ, ಕೆಲವು ಬೇರೆ ಕಾಲದಲ್ಲೂ ಫಲಿಸುತ್ತವೆ. ಹೀಗೆ ಪರಿಣಾಮವನ್ನು ಅಪೇಕ್ಷಿಸುವುದರಿಂದ ಅವು ಯಾವಾಗಲೂ ಉತ್ಪಾದಕಗಳೇ ಆಗುವುವೆಂಬ ಪ್ರಸಕ್ತಿ ಇಲ್ಲವೆಂದು ಹೇಳುವುದಾದರೆ ಅದೂ ಹೊಂದುವುದಿಲ್ಲ. ಅನೇಕ ಆತ್ಮರು ಪರಸ್ಪರ ಸಂಕೇತವಿಲ್ಲದೆ ಬೇರೆ ಬೇರೆ ಕಾಲಗಳಲ್ಲಿ ಮಾಡಿದ ಅನೇಕ ಕರ್ಮಗಳಿಂದ ಹುಟ್ಟಿದ ಅದೃಷ್ಟಗಳು ಒಂದೇ ಕಾಲದಲ್ಲಿ ಒಂದೇ ಬಗೆಯ ಫಲವನ್ನು ಕೊಡುತ್ತವೆ ಎಂಬುದಕ್ಕೆ ಪ್ರಮಾಣವಿಲ್ಲದ್ದರಿಂದ ಏಕಕಾಲದಲ್ಲಿ

ವಿಶ್ವದ ಸಂಹಾರವೂ ಮತ್ತು ಬಹಳಕಾಲದಮೇಲೆ ಒಂದೇ ಸಮಯದಲ್ಲಿ ಸೃಷ್ಟಿಯೂ ಆಗದೇಹೋದೀತು. ಈಶ್ವರನ ಇಚ್ಛೆಯಿಂದ ಕೂಡಿದ ಅದೃಷ್ಟಗಳಿಂದಲೇ ಪರಮಾಣುಗಳಲ್ಲಿ ಕರ್ಮ ಹುಟ್ಟುತ್ತದೆ ಎಂದು ಹೇಳುವುದೂ ಸರಿಯಲ್ಲ. ನೈಯಾಯಿಕರು ಹೇಳುವ ರೀತಿಯಲ್ಲಿ ಅನುಮಾನದಿಂದ ಈಶ್ವರನೇ ಸಿದ್ಧಿಸುವುದಿಲ್ಲವೆಂದು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಹೇಳಿದೆಯಾದ್ದರಿಂದ ಜಗತ್ತಿನ ಸೃಷ್ಟಿಗೆ ಪರಮಾಣುಗಳು ಕಾರಣವಲ್ಲ.

ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ ॥ ೧೨ ॥

ಉತ ನೈಯಾಯಿಕಮತೇ ತಂತುಪಟಯೋಸ್ಸಮವಾಯಪರಿಗ್ರಹಾತ್ ಸಾಮ್ಯಾತ್ಸಮವಾಯಸಂಬಂಧಸ್ಯಾಪಿ ಸಂಯೋಗಸಂಬಂಧತುಲ್ಯತ್ವಾತ್ ಘಟಪಟಸಂಯೋಗಸ್ಯ ಯಥಾ ಸಂಬಂಧಾಂತರಮಂಗೀಕೃತಮೇವಂ ತಂತುಪಟಸಮವಾಯಸ್ಯಾಪಿ ದ್ವಿತೀಯಸಂಬಂಧಾಂತರಂ ವಕ್ತವ್ಯಂ. ಏವಂ ತಸ್ಯಾಪಿ ತೃತೀಯಸಂಬಂಧಾಂತರಂ ವಿವಕ್ಷಿತವ್ಯಂ. ತಥಾಚಾನವಸ್ಥಿತೇರನವಸ್ಥಾಪ್ರಸಂಗಾದೇತನ್ನೈಯಾಯಿಕಮತಮಯುಕ್ತಂ, ಸಮವಾಯಾಭ್ಯುಪಗಮಾಚ್ಚಾಸಮಂಜಸಂ. ಕುತಃ ಸಾಮ್ಯಾದನವಸ್ಥಿತೇಃ ಸಮವಾಯಸ್ಯಾಪ್ಯವಯವಜಾತಿಗುಣವದುತ್ಪಾದಕಾಂತರಾಪೇಕ್ಷಾಸಾಮ್ಯಾದುಪಪಾದಕಾಂತರಸ್ಯಾಪಿ ತಥೇತ್ಯನವಸ್ಥಿತೇರಸಮಂಜಸಮೇವ. ಏತದುಕ್ತಂ ಭವತಿ. ಅಯುತಸಿದ್ಧಾನಾಮಾಧಾರಾಧೇಯಭೂತಾನಾಮಿಹ ಪ್ರತ್ಯಯಹೇತುಸ್ಸಂಬಂಧಃ ಸ ಸಮವಾಯ ಇತ್ಯಭ್ಯುಪಗಮ್ಯತೇ. ಅಪೃಥಕ್ಸಿದ್ಧ್ಯುಪಲಬ್ಧಾನಾಂ ಜಾತೀಯಾನಾಂ ತದಭಾವಸ್ಯ ನಿರ್ವಾಹಕತ್ವೇನ ಚೇತ್ಸಮವಾಯೋಽಭ್ಯುಪಗಮ್ಯತೇ, ಸಮವಾಯಸ್ಯಾಪಿ ತತ್ಸಾಮ್ಯಾತ್ತಥಾಭಾವಹೇತುರನ್ವೇಷಣೀಯಃ. ತಸ್ಯಾಪಿ ತಥೇತ್ಯನವಸ್ಥಿತಿಃ. ಸಮವಾಯಸ್ಯ ತದಪೃಥಕ್ಸಿದ್ಧತ್ವಂ ಸ್ವಭಾವ ಇತಿ ಪರಿಕಲ್ಪ್ಯತೇ ಚೇಜ್ಜಾತಿಗುಣಾನಮೇವೈಷ ಸ್ವಭಾವಃ ಪರಿಕಲ್ಪನೀಯಃ. ನ ಪುನರದೃಷ್ಟಚರಂ ಸಮವಾಯಮಭ್ಯುಪಗಮ್ಯ ತಸ್ಯೈಷ ಸ್ವಭಾವ ಇತಿ ಕಲ್ಪಯಿತುಂ ಯುಕ್ತಮಿತಿ ವ್ಯಾಚಕ್ಷ್ಯತೇ. ಸಮವಾಯಸ್ಯ ನಿತ್ಯತ್ವೇ ಚಾನಿತ್ಯತ್ವೇ ಚ ದೋಷಸ್ಸಮಾನೋಽಯಂ.

ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ ॥ ೧೨ ॥

ನೈಯಾಯಿಕಮತದಲ್ಲಿ ತಂತುಪಟಗಳಿಗೆ ಸಮವಾಯ ಸಂಬಂಧವನ್ನು ಒಪ್ಪಿರುವುದರಿಂದಲೂ, ಸಮವಾಯ ಮತ್ತು ಸಂಯೋಗಗಳೆರಡೂ ಸಮಾನವಾದ್ದರಿಂದಲೂ, ಘಟಪಟಸಂಯೋಗಕ್ಕೆ ಬೇರೊಂದು ಸಂಬಂಧವನ್ನು ಒಪ್ಪುವಂತೆ ತಂತುಪಟಸಮವಾಯಕ್ಕೂ ಎರಡನೆಯ ಸಂಬಂಧವನ್ನೂ, ಈ ಎರಡನೆಯ ಸಂಬಂಧಕ್ಕೂ ಮೂರನೇ ಸಂಬಂಧವನ್ನು ಹೇಳಬೇಕಾಗುತ್ತದೆ. ಹೀಗಾಗಿ ಅನವಸ್ಥೆಯುಂಟಾಗುವುದರಿಂದ ನೈಯಾಯಿಕಮತವು ಅಯುಕ್ತವೆನಿಸುತ್ತದೆ. ಸಮವಾಯಕ್ಕೂ ಅವಯವ,

ಜಾತಿ, ಗುಣಗಳಂತೆ ಉತ್ಪತ್ತಿಹೇತುವನ್ನೂ ಹೇಳಬೇಕಾಗಿರುವುದರಿಂದ ಅವಕ್ಕೊಂದು ಹೆ ತುವನ್ನೂ, ಅದಕ್ಕೆ ಮತ್ತೊಂದು ಹೇತುವನ್ನೂ ಒಪ್ಪಬೇಕೆಂಬ ಅನವಸ್ಥೆ ಬರುವುದರಿಂದ ಅದೂ ಯುಕ್ತವಲ್ಲ. ಇದರ ಅಭಿಪ್ರಾಯವೇನೆಂದರೆ, ಒಂದನ್ನೊಂದು ಬಿಟ್ಟಿರಲಾರದ ಎರಡು ವಸ್ತುಗಳಿಗೆ ಇರುವ ಪರಸ್ಪರಸಂಬಂಧವನ್ನು ಸಮವಾಯವೆಂದು ಇಲ್ಲಿ ಒಪ್ಪಲಾಗಿದೆ. ಸಮವಾಯಕ್ಕೆ ಮತ್ತೊಂದು ಸಂಬಂಧವನ್ನು ಒಪ್ಪಿದರೆ ಅನವಸ್ಥೆಬರುವುದು. ಅದಕ್ಕೆ ಅದೇ ಸಂಬಂಧವೆಂದರೆ ಜಾತಿಗುಣಕ್ರಿಯೆಗಳನ್ನೂ ಹಾಗೆಯೇ ಸಂಬಂಧವೆಂದು ಒಪ್ಪಬಹುದಾದ್ದರಿಂದ ಸಮವಾಯವೇ ವ್ಯರ್ಥವಾಗುತ್ತದೆ. ಹಾಗೆ ಅದನ್ನು ಕಲ್ಪಿಸಿದರೂ ಗೌರವದೋಷಬರುತ್ತದೆ. ಹೀಗೆ ಅದು ನಿತ್ಯವಾದರೂ ಅಥವಾ ಅನಿತ್ಯವಾದರೂ ದೋಷ ಸಮಾನವಾಗಿದೆ.

ನಿತ್ಯತ್ವೇ ದೋಷಾಂತರಮಾಹ—ನಿತ್ಯಮೇವ ಚ ಭಾವಾತ್ ॥ ೧೩ ॥

**ಸಮವಾಯಸ್ಯ ಸಂಬಂಧತ್ವಾತ್ಸಂಬಂಧಸ್ಯ ನಿತ್ಯತ್ವೇ ಸಂಬಂಧಿನೋ ಜಗತಶ್ಚ ನಿತ್ಯಮೇವ ಭಾವಾದಸಮಂಜಸಂ. ಅಪಿಚ ಪರಮಾಣೂನಾಂ ನಿತ್ಯತ್ವಂ. ಸರ್ವದಾಸ್ಯ ಭಾವಾತ್ ದೃಷ್ಟತ್ವಾತ್ ಪ್ರಳಯೇಽಪಿ ಸೃಷ್ಟಿಪ್ರಸಂಗಃ, ನಚೇಶ್ವರಪ್ರೇರಣವಶಾತ್ಕದಾಚಿದೇವ ಸೃಷ್ಟಿರ್ನ ಸರ್ವದೇತಿ ವಾಚ್ಯಂ ನಿರವಯವೇಶ್ವರಸ್ಯ ನಿರವಯವಪರಮಾಣುಭಿಸ್ಸಹ ಸಂಯೋಗಸಂಬಂಧಾಭಾವೇನ ಪ್ರೇರಕತ್ವಮೇವ ನ ಸಂಭವತೀತಿ ಪ್ರಾಗುಕ್ತಂ.**

ಸಮವಾಯ ನಿತ್ಯವಾದರೆ ಬೇರೆ ದೋಷವಿದೆ. **ನಿತ್ಯಮೇವ ಚ ಭಾವಾತ್ ॥೧೩॥**

ಸಮವಾಯವು ಒಂದು ಸಂಬಂಧವಾದ್ದರಿಂದ ಸಂಬಂಧವು ನಿತ್ಯವಾದರೆ ಆ ಸಂಬಂಧವುಳ್ಳ ಜಗತ್ತೂ ನಿತ್ಯವೆನಿಸಬೇಕಾಗುವುದು. ಇದೂ ಅಲ್ಲದೆ, ಪರಮಾಣುಗಳು ಯಾವಾಗಲೂ ಇರುವುದಾಗಿ ಕಂಡುಬರುವುದರಿಂದ ನಿತ್ಯವೆನಿಸಿ ಪ್ರಳಯದಲ್ಲೂ ಸೃಷ್ಟಿಯೇ ಆಗಬೇಕಾದೀತು. ಈಶ್ವರನ ಪ್ರೇರಣದಿಂದ ಯಾವಾಗಲೂ ಸೃಷ್ಟಿಯಾಗದೆ ಕೆಲವು ವೇಳೆ ಮಾತ್ರವೇ ಆಗುವುದೆಂದು ಹೇಳುವುದೂ ಸರಿಯಲ್ಲ. ನಿರವಯವನಾದ ಈಶ್ವರನಿಗೆ ನಿರವಯವ ಪರಮಾಣುಗಳೊಡನೆ ಸಂಯೋಗ ಸಂಬಂಧವಿಲ್ಲದ್ದರಿಂದ ಆವನು ಅವಕ್ಕೆ ಪ್ರೇರಕನೂ ಆಗುವುದಿಲ್ಲವೆಂದು ಹಿಂದೆ ಹೇಳಿಯಾಗಿದೆ.

**ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್ ॥ ೧೪ ॥**

**ಉತ ನೈಯಾಯಿಕಮತೇ ಪೃಥಿವ್ಯಪ್ತೇಜೋವಾಯುಪರಮಾಣೂನಾಂ ರಪರಸಗಂಧಸ್ಪರ್ಶವಿಶಿಷ್ಟತ್ವಾಂಗೀಕಾರಾದ್ವಿಪರ್ಯಯಃ ಅನಿತ್ಯತ್ವಸಾವಯವತ್ವಾದಿದೋಷಪ್ರಸಂಗಸ್ಸ್ಯಾತ್. ಕುತಃ ದರ್ಶನಾತ್ ರೂಪಾದಿಮತಾಂ ಘಟಾದೀನಾಮನಿತ್ಯತ್ವಸಾವಯವತ್ವದರ್ಶನಾತ್. ತಥಾಚ ಪರಮಾಣೂನಾಮನಿತ್ಯತ್ವೇ ದ್ವ್ಯಣುಕಾದಿಜಗತ್ಕಾರಣತ್ವಂ ನ ಸಂಭವತಿ. ಪರಮಣೂನಾಂ ಪೃಥಿವ್ಯಪ್ತೇಜಸವಾಯವೀಯಾನಾಂ ಚತುರ್ವಿಧಾನಾಂ ರೂಪರಸಗಂಧಸ್ಪರ್ಶವತ್ತ್ವಾಭ್ಯುಪಗಮಾದಭಿಮತ**

ನಿತ್ಯತ್ವಸೂಕ್ಷ್ಮತ್ವನಿರವಯುವತ್ವಾದಿವಿಪರ್ಯಯೇಣಾನಿತ್ಯತ್ವಸ್ಥೂಲತ್ವ ಸಾವಯುವತ್ವಾದಿಕಂ ಪ್ರಸಜ್ಯತೇ. ರೂಪಾದಿಮತಾಂ ಘಟಾದೀನಾಮ ನಿತ್ಯತ್ವತಥಾವಿಧಕಾರಣಾಂತರಾರಬ್ಧತ್ವಾದಿದರ್ಶನಾತ್. ನಹಿ ದರ್ಶ ನಾನುಗುಣ್ಯೇನಾದೃಷ್ಟಾರ್ಥಃ ಕಲ್ಪ್ಯಮಾನಃ ಸ್ವಾಭಿಮತವಿಶೇಷೇಽಪ್ಯವ ಸ್ಥಾಪಯಿತುಂ ಶಕ್ಯಃ. ದರ್ಶನಾನುಗುಣ್ಯೇನ ವಾ ಪರಮಾಣೂನಾಂ ರೂಪಾದಿಮತ್ತ್ವಂ ತ್ವಯಾ ಕಲ್ಪ್ಯತೇ. ಅತೋಽಪ್ಯಸಮಂಜಂ. ಅಥೈತ ದ್ದೋಷಪರಿಜಿಹೀರ್ಷಯಾ ಪರಮಾಣೂನಾಂ ರೂಪಾದಿಮತ್ತ್ವಂ ನಾಭ್ಯುಪಗಮ್ಯತೇ. ಅತಸ್ತೇಷಾಂ ಜಗತ್ಕಾರಣತ್ವಂ ನಯುಕ್ತಂ.

**ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್ ॥ ೧೪ ॥**

ನೈಯಾಯಿಕಮತದಲ್ಲಿ ಭೂಮಿ, ನೀರು, ಬೆಂಕಿ, ವಾಯುಗಳ ಪರಮಾಣು ಗಳು ರೂಪರಸಗಂಧಸ್ಪರ್ಶಗಳಿಂದ ಕೂಡಿರುವುವೆಂದು ಒಪ್ಪಿರುವುದರಿಂದ ಅವನ್ನು ಅನಿತ್ಯವೆಂದೂ, ಸಾವಯವವೆಂದೂ ಭಾವಿಸಬೇಕಾಗುವುದು. ಯಾಕೆಂದರೆ ಲೋಕ ದಲ್ಲಿ ರೂಪರಸಗಂಧಸ್ಪರ್ಶಗಳುಳ್ಳ ಘಟಾದಿವಸ್ತುಗಳನ್ನು ಅನಿತ್ಯವೆಂದೂ ಸಾವಯ ವವೆಂದೂ ಕಂಡಿದ್ದೇವೆ. ಹಾಗೆಯೇ ಪರಮಾಣುಗಳೂ ಅನಿತ್ಯವಾದರೆ ದ್ವ್ಯಣು ಕವೇ ಮೊದಲಾದ ಜಗತ್ತುಗಳಿಗೆ ಅವು ಕಾರಣವಾಗಲಾರವು. ಇದರಿಂದ ಪರಮಾ ಣುಗಳು ನಿತ್ಯ-ಸೂಕ್ಷ್ಮ ಮತ್ತು ನಿರವಯವವೆಂಬ ಭಾವನೆ ತಪ್ಪುವುದಲ್ಲದೆ ಅವನ್ನು ಅನಿತ್ಯ ಸ್ಥೂಲ ಸಾವಯವವೆಂದು ಹೇಳಬೇಕಾಗುತ್ತದೆ. ಲೋಕದ ವಸ್ತುಗಳು ಅನಿತ್ಯವೆಂದೂ ಮತ್ತು ಅಂತಹ ಕಾರಣಗಳಿಂದಲೇ ಹುಟ್ಟಿರುವುವೆಂದೂ ಕಂಡು ಬಂದಿದೆ. ಇಲ್ಲಿ ಕಂಡದ್ದಕ್ಕೆ ಅನುಗುಣವಾಗಿ ಕಾಣದಿರುವುದನ್ನು ಕಲ್ಪಿಸಿದರೂ ತನ್ನ ಇಚ್ಛೆಯಂತೆ ಯಾವುದನ್ನಾದರೂ ಸಾಧಿಸಲಿಕ್ಕಾಗುವುದಿಲ್ಲ. ಇದರಿಂದ ಅನುಭವಕ್ಕೆ ತಕ್ಕಂತೆ ಪರಮಾಣುಗಳಿಗೂ ರೂಪಾದಿಗಳನ್ನು ಕಲ್ಪಿಸಲಾಗಿದೆ. ಹೀಗೆ ಅವೂ ಅನಿತ್ಯ ವಾಗಬೇಕಾಗುವುದರಿಂದ ಈ ದೋಷವನ್ನು ಬಗೆಹರಿಸಲಿಕ್ಕಾಗಿಯೇ ಪರಮಾಣು ಗಳಿಗೆ ರೂಪಾದಿಗಳಿವೆ ಎಂಬುದನ್ನು ಒಪ್ಪಲಾಗುವುದಿಲ್ಲ.

**ಅತ್ರ ಹೇತ್ವಂತರಮಾಹ— ಉಭಯಥಾ ಚ ದೋಷಾತ್ ॥ ೧೫ ॥**

ನ ಕೇವಲಂ ಪರಮಾಣೂನಾಂ ರೂಪಾದಿಮತ್ತ್ವಾಭ್ಯುಪಗಮ ಏವ ದೋಷಃ. ರೂಪಾದಿವಿರಹಿತೇಽಪಿ ಕಾರಣಗುಣಪೂರ್ವಕತ್ವಾತ್ಕಾರ್ಯ ಗುಣಾನಾಂ ಪೃಥಿವ್ಯಾದಯೋ ರೂಪಾದಿಶೂನ್ಯಾಸ್ಸ್ಯುಃ. ತತ್ಪರಿಜಿಹೀ ರ್ಷಯಾ ರೂಪಾದಿಮತ್ತ್ವಾಭ್ಯುಪಗಮೇ ಪೂರ್ವೋಕ್ತದೋಷ ಇತ್ಯುಭ ಯಥಾ ದೋಷಾದಸಮಂಜಸಂ. ಅತೋ ವೈಶೇಷಿಕಮತಮಯುಕ್ತಂ.

ಈ ಬಗ್ಗೆ ಮತ್ತೆ ತಿಳಿಸುತ್ತಾನೆ— **ಉಭಯಥಾ ಚ ದೋಷಾತ್ ॥೧೫॥**

ಪರಮಾಣುಗಳಿಗೆ ರೂಪರಸಗಂಧಸ್ಪರ್ಶಗಳಿವೆ ಎಂದು ಒಪ್ಪದಿರುವುದಷ್ಟೇ ದೋಷವಲ್ಲ. ಆದರಂತೆ ರೂಪಾದಿಗಳಿಲ್ಲದಿದ್ದರೂ, ಕಾರ್ಯಗುಣಗಳು ಕಾರಣ

ಗಳನ್ನೇ ಅವಲಂಬಿಸಿರುವುದರಿಂದ ಪೃಥಿವ್ಯಾದಿಗಳಲ್ಲೂ ರೂಪಾದಿಗಳು ಇಲ್ಲದೇ ಹೋಗಬೇಕಾಗುತ್ತದೆ. ಇದನ್ನು ತಪ್ಪಿಸಲಿಕ್ಕಾಗಿ ಪರಮಾಣುಗಳಲ್ಲಿ ರೂಪಾದಿಗಳನ್ನು ಒಪ್ಪಿದರೆ ಹಿಂದೆ ಹೇಳಿದ ದೋಷವೇ ಬರುತ್ತದೆ. ಹೀಗೆ ಎರಡು ಕಡೆಯಿಂದಲೂ ದೋಷ ಬರುವುದರಿಂದ ಈ ಮತ ಅಯುಕ್ತವಾಗುತ್ತದೆ.

**ಪುನರ್ಹೇತ್ವಂತರಮಾಹ—ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ॥ ೧೬ ॥**

**ಕಾಪಿಲಯೋಗಾದಿಮತಪಕ್ಷಸ್ಯ ಶ್ರುತಿನ್ಯಾಯವಿರೋಧಪರಿತ್ಯಕ್ತಸ್ಯಾಪಿ ಸತ್ಕಾರ್ಯವಾದಾದೀನಾಂ ಕ್ವಚಿದಂಶೇ ವೈದಿಕೈರ್ಮನ್ವಾದಿಭಿಶ್ಚ ಪರಿಗ್ರಾಹ್ಯೋಽಸ್ತಿ. ಕಾಣಾದಪಕ್ಷಸ್ಯ ಪೂರ್ವಪಕ್ಷಸ್ಥಿತೇರಪ್ಯಯೋಗ್ಯತ್ವೇನ ಮನ್ವಾದಿಶಿಷ್ಟೈರಪರಿಗ್ರಹತ್ವಾದನುಪಪನ್ನತ್ವಾಚ್ಚಾತ್ಯಂತಮನಪೇಕ್ಷೈವ ಮೋಕ್ಷಾರ್ಥಿಭಿರಿತಿ ವೇದಿತವ್ಯಂ.**

ಇಲ್ಲಿ ಬೇರೊಂದು ಹೇತುವೂ ಇದೆ—**ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ ॥**

ಸಾಂಖ್ಯಯೋಗ ಮತಗಳು ಶ್ರುತಿಗೂ ನ್ಯಾಯಕ್ಕೂ ವಿರುದ್ಧವೆಂದು ಅವನ್ನು ನಿರಾಕರಿಸಿದ್ದರೂ ಅವು ಸತ್ಕಾರ್ಯವಾದವನ್ನು ಪ್ರತಿಪಾದಿಸುವುದರಿಂದ ಆ ಅಂಶದಲ್ಲಿ ಅವನ್ನು ವೈದಿಕರಾದ ಮನು ಮೊದಲಾದವರು ಪರಿಗ್ರಹಿಸಿದ್ದಾರೆ. ವೈಶೇಷಿಕ ಮತವಂತೂ ಪೂರ್ವಪಕ್ಷವಾಗಲಿಕ್ಕೂ ಅರ್ಹವಲ್ಲದ್ದರಿಂದ ಅದನ್ನು ಮನ್ವಾದಿ ಶಿಷ್ಟರು ಪರಿಗ್ರಹಿಸಿಲ್ಲ. ಆದ್ದರಿಂದ ಮುಮುಕ್ಷುಗಳಿಗೆ ಅದು ಪೂರ್ತಿ ಅನಪೇಕ್ಷಿತವೇ ಆಗಿದೆ.

**ಬೌದ್ಧಮತಂ ನಿರಾಕರೋತಿ – ಸಮುದಾಯಾಧಿಕರಣಂ ॥ ೩ ॥**

**ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ ॥ ೧೭ ॥**

**ಬೌದ್ಧಾಸ್ತತ್ರ ಚತುರ್ವಿಧಾಃ, ಜ್ಞಾನಾರ್ಥೋಭಯಾಸ್ತಿತ್ವವಾದಿನಃ, ತದುಭಯನಾಸ್ತಿತ್ವವಾದಿನಃ. ಜ್ಞಾನಮಾತ್ರಾಸ್ತಿತ್ವವಾದಿನಃ ತನ್ನಾಸ್ತಿತ್ವವಾದಿನಃ ಇತಿ. ಪ್ರಥಮಮುಭಯಾಸ್ತಿತ್ವವಾದಿನಾಂ ಮತಂ ನಿರಸ್ಯತೇ. ತನ್ಮತಮೇವಂ ದರ್ಶಿತಂ. ಗಂಧಪರಮಾಣುಸಮಷ್ಟಿರೇವ ಕ್ಷಿತಿಃ. ರಸಪರಮಾಣುಕದಂಬಂ ಸಲಿಲಂ. ರೂಪಪರಮಾಣುಬೃಂದೋಽಗ್ನಿಃ. ಸ್ಪರ್ಶಪರಮಾಣುಸಮುದಾಯೋ ವಾಯುರಿತಿ ವ್ಯವಹ್ರಿಯತೇ. ತಜ್ಜಾತೀಯಾನಿ ಚೇತನಾಚೇತನಾಗಾತ್ರಾಣಿ. ಘಟಪಟಾದಯಶ್ಚ ಪರಮಾಣುಪುಂಜಾ ಏವ. ಗಗನಾರವಿಂದವದಾಕಾಶಸ್ಸರ್ವದಾತ್ಯಂತಾಭಾವಃ. ಸೋಪದ್ರವಜ್ಞಾನಸಂತಾನಾತ್ಮಕೋ ಜೀವಃ. ನಿರುಪದ್ರವಜ್ಞಾನರೂಪವಾನೀಶ್ವರ ಇತಿ. ಕಿಂಚ ಬಾಹ್ಯಾಭ್ಯಂತರಭೇದೇನ ಸಮುದಾಯೋ ದ್ವಿವಿಧಃ. ಬಾಹ್ಯಃ ಪೃಥಿವ್ಯಾದಿಃ, ಆಂತರಶ್ಚಿತ್ತಚೈತ್ಯಾತ್ಮಕಃ, ಸಮುದಾಯದ್ವಯಮೇವ ಸರ್ವಂ ಜಗದಿತಿ. ತಥಾಹಿ ಬಾಹ್ಯಸಮುದಾಯಸ್ಯ ಪರಮಾಣವಃ ಕಾರಣಂ. ತೇಚ ಚತುರ್ವಿಧಾಃ ಪಾರ್ಥಿವಾಪ್ಯೈಜಸವಾಯವೀಯಾಃ. ತೇಭ್ಯೋ ಯುಗಪತ್ಪುಂಜೀಭೂ**

ತೇಭ್ಯಸ್ಸಮುದಾಯೋ ಬಾಹ್ಯೋ ಜಾಯತೇ. ಆಂತರಸಮುದಾಯಸ್ಯ
ಸ್ಕಂಧಪಂಚಕಂ ಕಾರಣಂ, ರೂಪವಿಜ್ಞಾನವೇದನಾಸಂಜ್ಞಾಸಂಸ್ಕಾರ
ರೂಪಾಃ ಪಂಚಸ್ಕಂಧಾಃ. ಚಿತ್ತೇನ ನಿರೂಪ್ಯಮಾಣಾಶ್ಶಬ್ದಸ್ಪರ್ಶಾ
ದಯಃ ರೂಪಸ್ಕಂಧಃ. ತದಭಿವ್ಯಕ್ತಿರ್ವಿಜ್ಞಾನಸ್ಕಂಧಃ. ತಜ್ಜಸ್ಸುಖದುಃಖಂ
ವೇದನಾಸ್ಕಂಧಃ. ದೇವದತ್ತಾದಿನಾಮ ಸಂಜ್ಞಾಸ್ಕಂಧಃ. ತೇಷಾಂ
ವಾಸನಾ ಸಂಸ್ಕಾರಸ್ಕಂಧಃ. ತೇಭ್ಯಃ ಪುಂಜಿತೇಭ್ಯಸ್ಸಮುದಾಯೋ
ಜಾಯತ ಇತಿ ವದಂತಿ. ತನ್ಮತಸಿದ್ಧಭೂತಚತುಷ್ಟಯವಾದೋ ನಿರ
ಸ್ಯತೇ. ಉಭಯಹೇತುಕೇ ಭೂತಾಭೌತಿಕಾತ್ಮಕೇ ಪರಮಾಣುಪುಂಜೇ
ಪರಿಗೃಹ್ಯಮಾಣೇಽಪಿ ತದಪ್ರಾಪ್ತಿಃ. ತಸ್ಯ ಸಮುದಾಯಸ್ಯಾಪ್ರಾಪ್ತೇರ
ನುಪಪತ್ತೇಃ ತನ್ಮತೇ ಕ್ಷೇತ್ರಜ್ಞಸ್ಯಾಭಾವಾತ್ಸ್ಥಿರಸ್ಯ ಚ ಕ್ಷಣಿಕಜ್ಞಾನಸಂ
ತಾನಾತ್ಮಕತ್ವೇನಾನಿತ್ಯತಯಾ ಕ್ಷಣಿಕಪರಮಾಣುಮೇಳನಕರ್ತೃತ್ವಾಸಂಭ
ವಾತ್. ಯಾವದತ್ರ ವೈಶೇಷಿಕಃ ಪರಮಾಣುಭೇದೇನ ಶರೀರಾದೇರಾ
ಶುತರಧ್ವಂಸವ್ಯವಸ್ಥಾಪನಾದಾತ್ಮನಸ್ಸ್ಥಾಯಿತ್ವಾಂಗೀಕಾರಾಚ್ಚಾರ್ಧವೈ
ನಾಶಿಕಃ; ಸರ್ವಕ್ಷಣಿಕಾವಾದೀ ತು ಪೂರ್ಣವೈನಾಶಿಕ ಇತಿ ನಿರ್ಣೀ
ಯತೇ. ಅತಃ ವೈನಾಶಿಕವೈಶೇಷಿಕಮತನಿರಾಕರಣಾತ್ಪರಂ ಪೂರ್ಣವೈನಾಶಿ
ಕಮತಂ ಬುದ್ಧಿಸ್ಥಮಿದಾನೀಂ ನಿರಾಕ್ರಿಯತೇ. ತಸ್ಯ ದೇಶಾವಾಂತರಸಂಗ
ತಿರೂಹ್ಯಾ. ತತ್ರ ತಾವದ್ಬುದ್ಧಮುನಿಸಿದ್ಧಾಗಮಸ್ತು ವೈಭಾಷಿಕಸೌತ್ರಾಂತ್ರಿ
ಕವಿಜ್ಞಾನಾತ್ಮಕಸರ್ವಶೂನ್ಯಕಾಖ್ಯಚತುರ್ವಿಧಶಿಷ್ಯಪ್ರವೃತ್ತಿವೈಚಿ
ತ್ರ್ಯಾಚ್ಚತುರ್ವಿಧೋ ಭವತಿ. ತತ್ರ ವೈಭಾಷಿಕಸೌತ್ರಾಂತಿಕಯೋರ್ಹಿ
ಜ್ಞಾನಂ ತದತಿರಿಕ್ತಪದಾರ್ಥಾಶ್ಚ ಸರ್ವೇ ಕ್ಷಣಿಕಾಸ್ಸತ್ಯಭೂತಾಸ್ಸಂತಿ.
ಪರಮಿಯಾನ್ಭೇದಃ. ವೈಭಾಷಿಕಸ್ಯ ಘಟಾದಿಪದಾರ್ಥಾಃ ಪ್ರತ್ಯಕ್ಷಾಃ.
ಸೌತ್ರಾಂತಿಕಸ್ಯ ತು ಜ್ಞಾನಮೇವ ಘಟಪಟಾದ್ಯಾಕಾರೇಣೋತ್ಪದ್ಯಂ.
ತೇನಾಕಾರೇಣ ಪ್ರತ್ಯಕ್ಷೇಣಾಪ್ರತ್ಯಕ್ಷಘಟಾದಯೋ ಗಮ್ಯಂತ ಇತಿ ವದಂ
ತಿ. ತತ್ರಾದೌ ವೈಭಾಷಿಕಸೌತ್ರಾಂತಿಕಯೋರ್ಬಾಹ್ಯಾರ್ಥಾಸ್ತಿತ್ವಾವಿಶೇಷಾ
ತ್ತಯೋರ್ಮತಮೇಕೀಕೃತ್ಯ ತನ್ಮತಂ ಪ್ರಮಾಣಮೂಲಂ ಭ್ರಾಂತಿಮೂಲಂ
ವೇತಿ ಸಂದಿಹ್ಯತೇ, ತದುಭಯಧರ್ಮಾಣಾಮಪಿ ದ್ಯೋತನಾತ್, ವೇದ
ವಿರುದ್ಧಪ್ರತ್ಯಕ್ಷಸಿದ್ಧತ್ವಾಚ್ಚ. ಪಾರ್ಥಿವಾದಿಪರಮಾಣುಸಂಘಾತಾತ್ಮಕ
ಭೂತಭೌತಿಕಬಾಹ್ಯಾನ್ ಚಿತ್ತಚೈತ್ಯರೂಪಾಭ್ಯಂತರಾನ್ ಪ್ರತ್ಯಕ್ಷಾನು
ಮಾನಸಿದ್ಧಾನಭ್ಯುಪಯಂತಿತೇ. ಅನ್ಯೇ ತು ಬಾಹ್ಯಾರ್ಥಾನ್ಸರ್ವಾನ್ಪೃಥಿ
ವ್ಯಾದೀನ್ವಿಜ್ಞಾನಾನುಮೇಯಾನ್ ವದಂತಿ. ಅಪರೇ ತ್ವರ್ಥಶೂನ್ಯಂ
ವಿಜ್ಞಾನಮೇವ ಪರಮಾರ್ಥಸತ್, ಬಾಹ್ಯಾರ್ಥಾಸ್ತು ಸ್ವಪ್ನಾರ್ಥಕಲ್ಪಾ
ಇತ್ಯಾಹುಃ. ತ್ರಯೋಽಪ್ಯೇತೇ ಸ್ವಾಭ್ಯುಪಗತಂ ವಸ್ತು ಕ್ಷಣಿಕಮಾಚ

ಕ್ಷತೇ. ಉಕ್ತಭೂತಭೌತಿಕಚಿತ್ತಚೈತ್ಯವ್ಯತಿರಿಕ್ತಮಾತ್ಮಾಕಾಶಾದಿಕಂ ಸ್ವರೂಪೇಣೈವ ನಾನುಮನ್ಯಂತೇ. ಅನ್ಯೇ ತು ಸರ್ವಶೂನ್ಯತ್ವಮೇವ ಸಂಗಿರಂತೇ. ತತ್ರ ಯೇ ಬಾಹ್ಯಾರ್ಥಾಸ್ತಿತ್ವವಾದಿನಃ ತೇ ತಾವನ್ನಿರಸ್ಯಂತೇ. ತೇ ಚೈವಂ ಮನ್ಯಂತೇ. ರೂಪರಸಗಂಧಸ್ಪರ್ಶಸ್ವಭಾವಾಃ ಪಾರ್ಥಿವಾಃ ಪರಮಾಣವಃ. ರೂಪರಸಸ್ಪರ್ಶಸ್ವಭಾವಾಶ್ಚಾಪ್ಯಾಃ. ರೂಪಸ್ಪರ್ಶಸ್ವಭಾವಾಶ್ಚ ತೈಜಸಾಃ. ಸ್ಪರ್ಶಸ್ವಭಾವಾಶ್ಚ ವಾಯವೀಯಾಃ. ತೇ ಚ ಪೃಥಿವ್ಯಪ್ತೇಜೋವಾಯುರೂಪೇಣ ಸಂಹನ್ಯಂತೇ. ತೇಭ್ಯಶ್ಚ ಪೃಥಿವ್ಯಾದಿಭ್ಯಃ ಶರೀರೇಂದ್ರಿಯವಿಷಯಸಂಘಾತಾ ಭವಂತಿ. ತತ್ರ ಚ ಶರೀರಾಂತರ್ವರ್ತಿಗ್ರಾಹಕಾಭಿಮಾನಾರೂಢೋ ವಿಜ್ಞಾನಸಂತಾನ ಏವಾತ್ಮತ್ವೇನಾವತಿಷ್ಠತೇ. ತತ ಏವ ಸರ್ವೋ ಲೌಕಿಕೋ ವ್ಯವಹಾರಃ ಪ್ರವರ್ತತ ಇತಿ ಪ್ರಾಪ್ತೇ ತತ್ರಾಭಿಧೀಯತೇ ಸಮುದಾಯ ಇತ್ಯಾದಿನಾ. ಯೋಽಯಂ ಪರಮಾಣುಹೇತುಕಃ ಪೃಥಿವ್ಯಾದಿಭೂತಾತ್ಮಕಸ್ಸಮುದಾಯಃ, ಯಶ್ಚ ಪೃಥಿವ್ಯಾದಿಹೇತುಕಶ್ಶರೀರೇಂದ್ರಿಯವಿಷಯರೂಪಸ್ಸಮುದಾಯಃ, ತಸ್ಮಿನ್ನುಭಯಹೇತುಕೇಽಪಿ ಸಮುದಾಯೇ ತದಪ್ರಾಪ್ತಿರ್ನೋಪಪದ್ಯತೇ. ಜಗದಾತ್ಮಕಸಮುದಾಯೋತ್ಪತ್ತಿರ್ನೋಪಪದ್ಯತೇ. ಪರಮಾಣೂನಾಂ ಪೃಥಿವ್ಯಾದಿಭೂತಾನಾಂ ಚ ಕ್ಷಣಿಕತ್ವಾಭ್ಯುಪಗಮಾತ್, ಕ್ಷಣಧ್ವಂಸಿನಃ ಪರಮಾಣವಃ ಭೂತಾನಿ ಚ ಕದಾ ಸಂಹತಾ ವ್ಯಾಪ್ರಿಯಂತೇ? ಕದಾ ಸಂಹನ್ಯಂತೇ? ಕದಾ ವಿಜ್ಞಾನವಿಷಯಭೂತಾಃ? ಕದಾ ಚ ಹಾನೋಪಾದಾನಾದಿವ್ಯವಹಾರಾಸ್ಪದತಾಂ ಭಜಂತೆ? ಕೋ ವಾ ವಿಜ್ಞಾನಾತ್ಮಾ? ಕಂ ಚ ವಿಷಯಂ ಸ್ಪೃಶತಿ? ಕಂ ಚ ವಿಜ್ಞಾನಾತ್ಮಕಮರ್ಥಂ ಕದಾ ವೇದಯತೇ? ಕಂ ವಾ ವಿದಿತಮರ್ಥಂ ಕಶ್ಚ ಕದೋಪಾದತ್ತೇ? ಸ್ಪ್ರಷ್ಟಾ ಹಿ ನಷ್ಟಃ. ಸ್ಪೃಷ್ಟಶ್ಚ ನಷ್ಟಃ. ತಥಾ ವೇದಿತಾ ವಿದಿತಶ್ಚ ನಷ್ಟಃ. ಕಥಂ ಚಾನ್ಯೇನ ಸ್ಪೃಷ್ಟಮನ್ಯೋ ವೇದಯತೇ? ಕಥಂ ಚಾನ್ಯೇನ ವಿದಿತಮರ್ಥಂ ಅನ್ಯ ಉಪಾದತ್ತೇ? ಸಂತಾನಾನಾಮನೇಕತ್ವೇಽಪಿ ಸಂತಾನಿಭ್ಯಸ್ತೇಷಾಂ ವಸ್ತುತೋ ವಸ್ತ್ವಂತರತ್ವಾನಭ್ಯುಪಗಮಾನ್ನ ತನ್ನಿಬಂಧನಂ ವ್ಯವಹಾರಾದಿಕಮುಪಪದ್ಯತೇ. ಅಹಮರ್ಥ ಏವಾತ್ಮಾ ಸಚ ಜ್ಞಾತೈವೇತಿ ಚೋಪಪಾದಿತಂ ಪರಸ್ತಾತ್. ತಸ್ಮಾತ್ತನ್ಮತಂ ಭ್ರಾಂತಿಮೂಲಂ.

ಹೀಗೆ ವೈಶೇಷಿಕಾದಿಮತಗಳನ್ನು ನಿರಾಕರಿಸಿ ಮುಂದೆ ಬೌದ್ಧಮತವನ್ನು ನಿರಾಕರಿಸುತ್ತಾನೆ. **ಸಮುದಾಯಾಧಿಕರಣಂ ॥ ೩ ॥**

**ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ ॥ ೧೭॥**

ಜ್ಞಾನ ಅರ್ಥವೆರಡನ್ನೂ ಒಪ್ಪುವವರು, ಇವೆರಡನ್ನೂ ಇಲ್ಲವೆನ್ನುವವರು. ಜ್ಞಾನವೊಂದನ್ನೇ ಒಪ್ಪುವವರು, ಜ್ಞಾನವೊಂದೇ ಇಲ್ಲವೆನ್ನುವವರು ಎಂದು ಬೌದ್ಧರು.

ನಾಲ್ಕು ಬಗೆಯಾಗಿದ್ದಾರೆ. ಎರಡನ್ನೂ ಒಪ್ಪುವವರ ಮತದಲ್ಲಿ ಗಂಧಪರಮಾಣುಗಳ ಸಮೂಹವೇ ಭೂಮಿ, ರಸ ಪರಮಾಣು ಸಮೂಹವೇ ನೀರು, ರೂಪಪರಮಾಣುಗಳ ಸಮೂಹವೇ ಅಗ್ನಿ, ಸ್ಪರ್ಷಪರಮಾಣು ಸಮುದಾಯವೇ ವಾಯುವೆಂದು ಹೇಳಲಾಗಿದೆ. ಚೇತನ ಮತ್ತು ಅಚೇತನರ ಶರೀರಗಳೂ ಅದೇ ಜಾತಿಗೆ ಸೇರಿವೆ. ಘಟಾದಿ ವಸ್ತುಗಳೂ ಪರಿಮಾಣುಗಳ ರಾಶಿಯೇ. ಗಗನಪುಷ್ಪದಂತೆ ಆಕಾಶವು ಯಾವಾಗಲೂ ಪೂರ್ಣ ಅಭಾವವೇ ಆಗಿದೆ. ಜೀವೇಶ್ವರರು ಜ್ಞಾನಸಂತಾನವೇ ಆದರೂ ಈಶ್ವರನ ಜ್ಞಾನ ತಡೆಯಿಲ್ಲದ್ದು; ಜೀವನ ಜ್ಞಾನ ತಡೆಯುಳ್ಳದ್ದಾಗಿರುತ್ತದೆ. ಇಲ್ಲಿ ಹೊರಗೆ ಒಳಗೆ ಎಂಬ ಭೇದದಿಂದ ಸಮುದಾಯ ಎರಡು ಬಗೆಯಾಗಿದೆ. ಭೂಮಿ ಮೊದಲಾದವು ಹೊರಗಿನವು. ಒಳಗಿನದು ಚಿತ್ತ, ಚೈತ್ಯ ಮೊದಲಾದವು. ಇವೆರಡೂ ಸೇರಿದ್ದೆಲ್ಲವೂ ಜಗತ್ತೆನಿಸುತ್ತದೆ. ಆದರೂ ಹೊರಗಿನದಕ್ಕೆ ಪರಮಾಣುಗಳೇ ಕಾರಣವೆನಿಸಿವೆ. ಅವು ಭೂಮಿ ನೀರು ಬೆಂಕಿ ಗಾಳಿಗಳೆಂದು ನಾಲ್ಕು ಬಗೆಯಾಗಿವೆ. ಇವು ಒಟ್ಟಿಗೆ ಕೂಡಿದರೆ ಹೊರಗಿನ ಪದಾರ್ಥ ಹುಟ್ಟುತ್ತದೆ. ಒಳಗಿನ ಪದಾರ್ಥಕ್ಕೆ ಸ್ಕಂಧಗಳು ಕಾರಣ. ರೂಪ, ವಿಜ್ಞಾನ, ವೇದನೆ, ಸಂಜ್ಞೆ, ಸಂಸ್ಕಾರವೆಂದು ಅವು ಐದು ಬಗೆಯಾಗಿವೆ. ಚಿತ್ತದಿಂದ ನಿರೂಪಿಸಬಹುದಾದ ಶಬ್ದಸ್ಪರ್ಷಾದಿಗಳು ರೂಪಸ್ಕಂಧವೆನಿಸಿವೆ. ಅವುಗಳ ಪ್ರಕಾಶವೇ ವಿಜ್ಞಾನಸ್ಕಂಧ. ಅವುಗಳಿಂದ ಹುಟ್ಟುವ ದುಃಖವೇ ವೇದನಾಸ್ಕಂಧ. ದೇವದತ್ತ ಮೊದಲಾದ ಹೆಸರೇ ಸಂಜ್ಞಾಸ್ಕಂಧ. ಅವುಗಳ ವಾಸನೆಯೇ ಸಂಸ್ಕಾರಸ್ಕಂಧ. ಇವೆಲ್ಲವೂ ಒಟ್ಟಿಗೆ ಸೇರಿಯೇ ಒಂದು ಪದಾರ್ಥವಾಗುತ್ತದೆ ಎಂದು ಅವರು ಹೇಳುತ್ತಾರೆ. ಈ ಮತದಲ್ಲಿ ಹೇಳಿರುವ ನಾಲ್ಕು ಭೂತಗಳೆಂಬ ವಾದವನ್ನು ನಿರಾಕರಿಸಲಾಗುವುದು. ಭೂತಸಮುದಾಯ ಮತ್ತು ಭೌತಿಕ ವಸ್ತುಗಳ ಸಮುದಾಯ ಈ ಎರಡನ್ನು ಒಪ್ಪಿದರೂ ಅವನ್ನು ನಿರ್ವಹಿಸುವುದು ಸಾಧ್ಯವಿಲ್ಲ; ಏಕೆಂದರೆ ಇವರ ಮತದಲ್ಲಿ ಜೀವೇಶ್ವರರು ಕ್ಷಣಿಕ ಜ್ಞಾನದ ಸಂತಾನರೂಪವಾದ್ದರಿಂದ ಅನಿತ್ಯರೆನಿಸಿದ್ದಾರೆ. ಕ್ಷಣಿಕವಾದ ಪರಮಾಣುಗಳ ಮೇಳನವು ಕರ್ತೃವೆನಿಸಲಿಕ್ಕೆ ಸಾಧ್ಯವಿಲ್ಲ. ವೈಶೇಷಿಕರು ಪರಮಾಣುಗಳಿಗಿಂತಲೂ ಬೇರೆಯಾಗಿ ಶರೀರಗಳನ್ನು ಒಪ್ಪಿ, ಅವು ಬೇಗನೆ ನಾಶವಾಗುತ್ತವೆಯೆಂದೂ ಹೇಳಿ ಆತ್ಮನನ್ನು ಸ್ಥಿರನೆಂದು ಒಪ್ಪಿರುವುದರಿಂದ ಅವರು ಅರ್ಧವೈನಾಶಿಕರೆನಿಸಿದ್ದಾರೆ. ಎಲ್ಲವೂ ಕ್ಷಣಿಕವೆಂದು ಹೇಳುವ ಬೌದ್ಧಮತವು ಪೂರ್ಣವೈನಾಶಿಕವೆನಿಸಿದೆ. ಅರ್ಧ ವೈನಾಶಿಕರಾದ ವೈಶೇಷಿಕರನ್ನು ನಿರಾಕರಿಸಿದಮೇಲೆ ಪೂರ್ಣವೈನಾಶಿಕರಾದ ಬೌದ್ಧರ ಸ್ಮರಣೆ ಬರುವುದು ಸಹಜವಾದ್ದರಿಂದ ಅವರನ್ನು ಇಲ್ಲಿ ನಿರಾಕರಿಸಲಾಗುವುದು. ಇದರಲ್ಲಿ ಬುದ್ಧಮತವು ನಾಲ್ಕುಬಗೆಯ ಶಿಷ್ಯರ ಪ್ರವೃತ್ತಿಯಂತೆ ವೈಭಾಷಿಕ, ಸೌತ್ರಾಂತಿಕ, ಯೋಗಾಚಾರ, ಮಾಧ್ಯಮಿಕ(ಶೂನ್ಯ)ಎಂದು ನಾಲ್ಕು ಬಗೆಯಾಗಿದೆ. ಇದರಲ್ಲಿ ವೈಭಾಷಿಕ ಸೌತ್ರಾಂತಿಕರಿಗೆ ಜ್ಞಾನ ಮತ್ತು ಉಳಿದ ಪದಾರ್ಥಗಳು ಕ್ಷಣಿಕವೂ ಸತ್ಯವೂ ಆಗಿದೆ. ಆದರೆ ವೈಭಾಷಿಕರಿಗೆ ಘಟಾದಿ ವಸ್ತುಗಳು ಪ್ರತ್ಯಕ್ಷಗಳೆನಿಸಿವೆ.

ಸೌತಾಂತ್ರಿಕರಿಗೆ ಜ್ಞಾನವೇ ಘಟಾದಿ ವಸ್ತುಗಳಾಗಿ ಪರಿಣಮಿಸುತ್ತದೆ. ಆ ಆಕಾರದಿಂದ ಅಪ್ರತ್ಯಕ್ಷವಾದ ಘಟಾದಿವಸ್ತುಗಳನ್ನು ಅವರು ಅನುಮಾನದಿಂದ ಊಹಿಸುತ್ತಾರೆ. ಇದೇ ಇವರಿಬ್ಬರಿಗೂ ಇರುವ ಭೇದ. ತಿಳಿಯಬೇಕಾದ ವಸ್ತುವಿದೆ ಎಂಬುದು ಇಬ್ಬರಿಗೂ ಸಮಾನವಾಗಿರುವುದರಿಂದ ಆವೆರಡು ಮತಗಳನ್ನು ಒಟ್ಟುಗೂಡಿಸಿದರೆ ಆ ಮತವು ಸಪ್ರಮಾಣವೇ ಅಲ್ಲವೇ ಎಂಬ ಸಂಶಯಬರುತ್ತದೆ; ಯಾಕೆಂದರೆ ಅದು ಪ್ರತ್ಯಕ್ಷಸಿದ್ಧವಾದ್ದರಿಂದ ಸಪ್ರಮಾಣವೂ ಆಗಿದೆ, ವೇದವಿರುದ್ಧವಾದ್ದರಿಂದ ಭ್ರಾಂತಿಮೂಲವೂ ಆಗಿದೆ. ಪರಮಾಣು ಸಮೂಹ ರೂಪವಾದ ಹೊರಗಿನ ಭೂತಗಳು ಚಿತ್ತವೊದಲಾದ ಒಳಗಿನ ವಸ್ತುಗಳೂ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಿದ್ಧಿಸುತ್ತವೆ ಎಂದು ಅವರು ಒಪ್ಪಿದ್ದಾರೆ. ಬೇರೆಯವರು ಹೊರಗಿನ ಎಲ್ಲಾ ವಸ್ತುಗಳನ್ನೂ ಜ್ಞಾನದಿಂದ ಊಹಿಸಬೇಕೆಂದು ಹೇಳುತ್ತಾರೆ. ಘಟಾದಿ ವಿಷಯಗಳಿಲ್ಲದ ಜ್ಞಾನವೇ ಯಥಾರ್ಥವಾದದ್ದು, ಹೊರಗಿನ ವಸ್ತುಗಳು ಸ್ವಪ್ನಸದೃಶವಾದವು ಎಂದು ಇತರರು ಹೇಳುತ್ತಾರೆ. ಈ ಮೂವರೂ ತಾವು ಒಪ್ಪುವ ವಸ್ತುವನ್ನು ಕ್ಷಣಿಕವೆಂದೇ ಹೇಳುತ್ತಾರೆ. ಹಿಂದೆ ಹೇಳಿದ ನಾಲ್ಕು ಭೂತಗಳನ್ನೂ ಚಿತ್ತ ಮತ್ತು ಅದರ ವಿಕಾರಗಳನ್ನೂ ಬಿಟ್ಟು ಉಳಿದ ಆಕಾಶಾದಿಗಳನ್ನು ಅವರು ಒಪ್ಪುವುದಿಲ್ಲ. ಬೇರೆಯವರು ಇವೆಲ್ಲವನ್ನೂ ಶೂನ್ಯವೆಂದು ಹೇಳುತ್ತಾರೆ. ಅದರಲ್ಲಿ ಹೊರಗಿನ ವಸ್ತುವಿದೆ ಎಂದು ಹೇಳುವವರ ಮತವನ್ನು ಇಲ್ಲಿ ನಿರಾಕರಿಸಲಾಗುವುದು. ಅವರು ಹೀಗೆ ಹೇಳುತ್ತಾರೆ. ಪಾರ್ಥಿವ ಪರಮಾಣುಗಳು ರೂಪರಸಗಂಧಸ್ಪರ್ಶಮಯವೂ, ಜಲಪರಮಾಣುಗಳು ರೂಪರಸಸ್ಪರ್ಶಮಯವೂ, ತೇಜಃಪರಮಾಣುಗಳು ರೂಪಸ್ಪರ್ಶಮಯವೂ, ವಾಯುಪರಮಾಣುಗಳು ಸ್ಪರ್ಶಮಯವೂ ಆಗಿವೆ. ಇವುಗಳಿಂದಲೇ ನಾಲ್ಕು ಭೂತಗಳೂ, ಈ ಭೂತಗಳ ಸಂಘಟನೆಯಿಂದ ಶರೀರೇಂದ್ರಿಯಾದಿಗಳೂ ಆಗುತ್ತವೆ. ಅದರಲ್ಲೂ ಶರೀರದೊಳಗಿದ್ದು ಎಲ್ಲವನ್ನು ಗ್ರಹಿಸುವ ಅಭಿಮಾನದಿಂದ ಕೂಡಿದ ಜ್ಞಾನಸಂತಾನವೇ ಆತ್ಮವೆನಿಸಿದೆ. ಅದರಿಂದಲೇ ಎಲ್ಲಾ ಲೌಕಿಕ ವ್ಯವಹಾರವೂ ನಡೆಯುತ್ತದೆ ಎಂದು ಆಕ್ಷೇಪ ಬಂದರೆ ಅದಕ್ಕೆ ಸೂತ್ರವು ಸಮಾಧಾನವನ್ನು ಹೇಳುತ್ತದೆ. ಪರಮಾಣುಗಳಿಂದ ಹುಟ್ಟಿರುವ ಪೃಥಿವ್ಯಾದಿಭೂತಗಳೂ ಇವುಗಳಿಂದ ಹುಟ್ಟಿದ ಶರೀರೇಂದ್ರಿಯಗಳೂ ಈ ಎರಡು ಬಗೆಯ ಸಮೂಹದಿಂದಲೂ ಜಗದ್ರೂಪವಾದ ಸಮುದಾಯವು ಹುಟ್ಟಲಾರದು; ಯಾಕೆಂದರೆ ಪರಮಾಣುಗಳನ್ನು ಮತ್ತು ಭೂತಗಳನ್ನು ಕ್ಷಣಿಕವೆಂದು ಒಪ್ಪಿರುವುದರಿಂದ ಕ್ಷಣಕಾಲದಲ್ಲಿ ನಾಶವಾಗುವ ಈ ಪರಮಾಣುಗಳು ಮತ್ತು ಭೂತಗಳು ಯಾವಾಗ ನಾಶವಾಗುತ್ತವೆ? ಮತ್ತೆ ಯಾವಾಗ ಕೂಡುತ್ತವೆ? ಯಾವಾಗ ಜ್ಞಾನಗೋಚರವಾಗುತ್ತವೆ? ಯಾವಾಗ ವ್ಯವಹಾರಕ್ಕೆ ವಿಷಯವಾಗುತ್ತವೆ? ಇವನ್ನು ತಿಳಿಯುವವನು ಯಾರು? ಅವನು ಯಾವ ವಿಷಯವನ್ನು ಯಾವಾಗ ತಿಳಿಯುತ್ತಾನೆ? ತಿಳಿದದ್ದನ್ನು ಯಾವನು ಯಾವಾಗ ಗ್ರಹಿಸುತ್ತಾನೆ? ಮುಟ್ಟು

ವವನೂ ಮುಟ್ಟಿದ ವಸ್ತುವೂ, ಹಾಗೆಯೇ ತಿಳಿಯುವವನೂ ತಿಳಿದ ವಸ್ತುವೂ ಎಲ್ಲವೂ ನಷ್ಟವಾಗುವುದರಿಂದ ಒಬ್ಬನು ಮುಟ್ಟಿದ್ದನ್ನು ಮತ್ತೊಬ್ಬನು ಹೇಗೆ ತಿಳಿಯುತ್ತಾನೆ? ಒಬ್ಬನು ತಿಳಿದದ್ದನ್ನು ಮತ್ತೊಬ್ಬನು ಹೇಗೆ ಗ್ರಹಿಸುತ್ತಾನೆ? ಜ್ಞಾನದ ಪರಂಪರೆ ಒಂದೇ ಆದರೂ ಅದರಲ್ಲಿ ಸೇರಿರುವ ವಸ್ತುಗಳು ಕ್ಷಣಿಕವಾದ್ದರಿಂದಲೂ ಅದಕ್ಕಿಂತಲೂ ಬೇರೆ ಪರಂಪರೆಯೆಂಬ ವಸ್ತುವನ್ನು ಒಪ್ಪದಿರುವುದರಿಂದಲೂ ಹಿಂದೆ ಹೇಳಿದ ದೋಷಗಳೆಲ್ಲವೂ ಸಂಭವಿಸುತ್ತವೆ. “ಅಹಂ ಪದದ ಅರ್ಥವೇ, ಆತ್ಮನು, ಅವನೇ ಎಲ್ಲವನ್ನೂ ತಿಳಿಯುವವನು” ಎಂದು ಹಿಂದೆಯೇ ಹೇಳಿಯಾಗಿದೆ. ಆದ್ದರಿಂದ ಅವರ ಮತವು ಭ್ರಾಂತಿಮೂಲವೇ ಆಗಿದೆ.

ಅತ್ರ ಹೇತ್ವಂತರಮಾಹ—ಇತರೇತರಪ್ರತ್ಯಯತ್ವಾದುಪಪನ್ನಮಿತಿ ಚೇನ್ನ ಸಂಘಾತಭಾವಾನಿಮಿತ್ತತ್ವಾತ್ ॥ ೧೮ ॥

ಅವಿದ್ಯಾದೀನಾಮಿತರೇತರಹೇತುತ್ವೇನೋಪಪನ್ನಂ ಸಂಘಾತಭಾವಾದಿಕಮಿತಿ ಚೇದೇತದುಕ್ತಂ ಭವತಿ. ಯದ್ಯಪಿ ಕ್ಷಣಿಕಾಸ್ಸರ್ವೇ ಭಾವಾಃ. ತಥಾಪ್ಯವಿದ್ಯಯೈತತ್ಸರ್ವಮುಪಪದ್ಯತೇ. ಅವಿದ್ಯಾ ಹಿ ನಾಮ ವಿಪರೀತಬುದ್ಧಿಃ, ಕ್ಷಣಿಕಾದಿಷು ಸ್ಥಿರತ್ವಾದಿಗೋಚರಾ. ತತಶ್ಚ ಸಂಸ್ಕಾರಾಖ್ಯಾಃ ರಾಗದ್ವೇಷಾದಯೋ ಜಾಯಂತೇ. [illegible]ಸ್ಥಿತ್ಯಭಿಜ್ವಲನರೂಪಂ ವಿಜ್ಞಾನಂ; ತತಶ್ಚ ನಾಮರೂಪಾಖ್ಯಾಶ್ಚತ್ವಾರಃ, ಪೃಥಿವ್ಯಾದಿಕಂ ಚ ರೂಪಿದ್ರವ್ಯಂ; ತತಷ್ಷಡಾಯತನಾಖ್ಯಮಿಂದ್ರಿಯಷಟ್ಕಂ, ತತಸ್ಸ್ಪರ್ಶಾಖ್ಯಃ ಕಾಯಃ, ತತೋ ವೇದನಾದಯಃ; ತತಶ್ಚ ಪುನರಪ್ಯವಿದ್ಯಾದಯೋ ಯಥೋಕ್ತಾ ಇತ್ಯನಾದಿರಿಯಮವಿದ್ಯಾದಿಕಾನ್ಯೋನ್ಯಮೂಲಾ ಚಕ್ರಪರಿವೃತ್ತಿಃ. ಏವಂಚ ಸರ್ವಂ ಪೃಥಿವ್ಯಾದಿಭೂತಭೌತಿಕಸಂಘಾತಮಂತರೇಣ ನೋಪಪದ್ಯತೇ. ತಸ್ಮಾತ್ಸಂಘಾತಭಾವಾದಿಕಮುಪಪನ್ನಮಿತಿ ಪ್ರಾಪ್ತೇ ತತ್ರೋತ್ತರಂ ನ ಸಂಘಾತಭಾವಾನಿಮಿತ್ತತ್ವಾದಿತಿ. ನೈತದುಪಪದ್ಯತೇ, ಏಷಾಮವಿದ್ಯಾದೀನಾಂ ಪೃಥಿವ್ಯಾದಿಭೂತಭೌತಿಕಸಂಘಾತಭಾವಂ ಪ್ರತ್ಯನಿಮಿತ್ತತ್ವಾತ್. ನಖಲ್ವಸ್ಥಿರಾದಿಷು ಸ್ಥಿರತ್ವಾದಿಬುದ್ಧ್ಯಾತ್ಮಿಕಾ ಅವಿದ್ಯಾ ತನ್ನಿಮಿತ್ತರಾಗದ್ವೇಷಾದಯೋ ವಾ ಘಾರ್ಥಾಂತರಸ್ಯ ಕ್ಷಣಿಕಸ್ಯ ಸಂಹತಿಹೇತುತಾಂ ಪ್ರತಿಪದ್ಯಂತೇ. ಶುಕ್ತಿಕಾರಜತಾದಿಬುದ್ಧಿರ್ಹಿ ನ ಶುಕ್ತ್ಯಾದ್ಯರ್ಥಸಂಹತಿಹೇತುರ್ಭವತಿ. ಕಿಂಚ ಯಸ್ಯ ಕ್ಷಣಿಕೇ ಸ್ಥಿರತ್ವಬುದ್ಧಿಃ ಸ ತದೈವ ನಷ್ಟ ಇತಿ ಕಸ್ಯ ರಾಗಾದಯ ಉತ್ಪದ್ಯಂತೇ? ಸಂಸ್ಕಾರಾಶ್ರಯಂ ಸ್ಥಿರಮೇಕಂ ದ್ರವ್ಯಮನಭ್ಯುಪಗಚ್ಛತಾಂ ಸಂಸ್ಕಾರಾನುವೃತ್ತಿರಪಿ ನ ಶಕ್ಯಾ ಕಲ್ಪಯಿತುಮಿತಿ ಸಿದ್ಧಂ.

ಇಲ್ಲಿ ಬೇರೊಂದು ಹೇತುವನ್ನು ಹೇಳುತ್ತಾನೆ. ಇತರೇತರಪ್ರತ್ಯಯತ್ವಾದುಪಪನ್ನಮಿತಿ ಚೇನ್ನ ಸಂಘಾತಭಾವಾನಿಮಿತ್ತತ್ವಾತ್ ॥ ೧೮ ॥

ಅವಿದ್ಯೆ ಮೊದಲಾದವುಗಳ ಪರಸ್ಪರಕಾರ್ಯಕಾರಣಭಾವದಿಂದಲೇ ಭೂತ ಭೌತಿಕ ಸಮೂಹಗಳು ಸಂಭವಿಸುತ್ತವೆ. ಅಂದರೆ ಎಲ್ಲಾ ವಸ್ತುಗಳೂ ಕ್ಷಣಿಕವೇ ಆಗಿದ್ದರೂ ಅವಿದ್ಯೆಯಿಂದ ಪರಸ್ಪರ ಹೊಂದಿಕೆಯಾಗುತ್ತವೆ. ಅವಿದ್ಯೆ ಎಂದರೆ ವಿಪರೀತಬುದ್ಧಿ. ಕ್ಷಣಿಕ ವಸ್ತುವನ್ನು ಸ್ಥಿರವೆಂದು ತಿಳಿಯುವುದೇ ಈ ಅವಿದ್ಯೆ. ಇದರಿಂದ ಸಂಸ್ಕಾರರೂಪವಾದ ರಾಗದ್ವೇಷಗಳು ಹುಟ್ಟುತ್ತವೆ. ಅದರಿಂದ ಚಿತ್ತದ ಉದ್ರೇಕರೂಪವಾದ ವಿಜ್ಞಾನವೂ, ಅದರಿಂದ ವ್ಯವಹಾರನಾಮಗಳೂ, ಅವುಗಳಿಂದ ಪೃಥಿವಿ ಮೊದಲಾದ ಸಾಕಾರ ದ್ರವ್ಯಗಳೂ, ಅವುಗಳಿಂದ ಆರು ಇಂದ್ರಿಯಗಳೂ, ಅದರಿಂದ ಸ್ಪರ್ಶರೂಪವಾದ ಶರೀರವೂ, ಅದರಿಂದ ವೇದನೆಗಳೂ, ಅದರಿಂದ ಮತ್ತೆ ಹಿಂದಿನಂತೆ ಅವಿದ್ಯಾದಿಗಳೂ ಹುಟ್ಟುತ್ತವೆ. ಆದ್ದರಿಂದ ಅವಿದ್ಯಾದಿಗಳು ಅನಾದಿಯೂ ಚಕ್ರದಂತೆ ಪರಸ್ಪರವಾಗಿ ಪರಿವರ್ತನವಾಗುತ್ತಲೂ ಇರುತ್ತವೆ. ಹೀಗೆ ನಾಲ್ಕು ಭೂತಗಳ ಸಂಘಟನೆ ಇಲ್ಲದೆ ಯಾವೊಂದು ಕಾರ್ಯವೂ ಆಗುವಂತಿಲ್ಲವಾದ್ದರಿಂದ ಸಂಘಟನೆ ಯುಕ್ತವೆನಿಸುತ್ತದೆ ಎಂದು ಹೇಳಿದರೆ ಅದಕ್ಕೆ ಉತ್ತರವನ್ನು ಸೂತ್ರವು ತಿಳಿಸುತ್ತದೆ. ಪೃಥಿವ್ಯಾದಿಗಳ ಸಮುದಾಯಕ್ಕೆ ಅವಿದ್ಯೆ ಮೊದಲಾದವು ಕಾರಣವಾಗಲಾರವು; ಏಕೆಂದರೆ ಅಸ್ಥಿರ ವಸ್ತುಗಳಲ್ಲಿ ಸ್ಥಿರತ್ವಬುದ್ಧಿ ಎನಿಸಿದ ಅವಿದ್ಯೆಯೂ, ಅದರಿಂದುಂಟಾಗಿರುವ ರಾಗದ್ವೇಷಗಳೂ ಬೇರೊಂದು ಕ್ಷಣಿಕವಸ್ತುವಿನ ಸಂಘಟನೆಗೆ ಕಾರಣವಾಗಲಾರವು. ಶುಕ್ತಿಯಲ್ಲಿ ರಜತವೆಂಬ ಬುದ್ಧಿಯು ಶುಕ್ತಿ ಎಂಬ ವಸ್ತುವನ್ನು ಹುಟ್ಟಿಸುವುದಿಲ್ಲ. ಮತ್ತು ಯಾವನಿಗೆ ಕ್ಷಣಿಕ ವಸ್ತುವಿನಲ್ಲಿ ಸ್ಥಿರವೆಂಬ ಬುದ್ಧಿ ಇರುತ್ತೆಯೋ ಅವನು ಆಗಲೇ ನಷ್ಟನಾಗುತ್ತಾನೆ. ಆದ್ದರಿಂದ ಯಾರಿಗೆ ರಾಗದ್ವೇಷಗಳು ಹುಟ್ಟುತ್ತವೆ ಎಂಬಲ್ಲಿ ಸಂಸ್ಕಾರಗಳಿಗಾಶ್ರಯವಾದ ಒಂದು ವಸ್ತುವನ್ನೇ ಅಂಗೀಕರಿಸದಿರುವವರಿಗೆ ಸಂಸ್ಕಾರದ ಅನುಸರಣೆಯನ್ನು ಕಲ್ಪಿಸಲಿಕ್ಕಾಗುವುದಿಲ್ಲವೆಂದು ಸಿದ್ಧವಾಯಿತು.

**ಅನ್ಯೋ ಹೇತುರಸ್ತಿ. ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ॥೧೯॥**

**ಇತಶ್ಚ ಕ್ಷಣಿಕತ್ವಪಕ್ಷೇ ಜಗದುತ್ಪತ್ತಿರ್ನೋಪಪದ್ಯತೇ, ಉತ್ತರಕ್ಷಣೋತ್ಪತ್ತಿಕಾಲೇ ಪೂರ್ವಕ್ಷಣಸ್ಯ ವಿನಷ್ಟತ್ವಾತ್. ತಸ್ಯೋತ್ತರಕ್ಷಣಂ ಪ್ರತಿ ಹೇತುತ್ವಾನುಪಪತ್ತೇಃ. ಅಭಾವಸ್ಯ ಹೇತುತ್ವೇ ಸರ್ವಂ ಸರ್ವತ್ರ ಸರ್ವದೋತ್ಪದ್ಯೇತ. ಅಥ ಪೂರ್ವಕ್ಷಣವರ್ತಿತ್ವಮೇವ ಹೇತುತ್ವಮಿತ್ಯುಚ್ಯತೇ, ಏವಂ ತರ್ಹಿ ಕಶ್ಚಿದೇವ ಘಟಕ್ಷಣಸ್ತದುತ್ತರಕಾಲಭಾವಿನಾಂ ಸರ್ವೇಷಾಮೇವ ಗೋಮಹಿಷಾಶ್ವಕುಡ್ಯಪಾಷಾಣಾದೀನಾಂ ತ್ರೈಲೋಕ್ಯವರ್ತಿನಾಂ ಹೇತುಸ್ಸ್ಯಾತ್. ಅಥೈಕಜಾತೀಯಸ್ಯೈವ ಪೂರ್ವಕ್ಷಣವರ್ತಿನೋ ಹೇತುತ್ವಮಿಷ್ಯತೇ, ತಥಾಪಿ ಸರ್ವದೇಶವರ್ತಿನಾಮುತ್ತರಕ್ಷಣಭಾವಿನಾಂ ಘಟಾನಾಮೇಕ ಏವ ಪೂರ್ವಕ್ಷಣವರ್ತೀ ಘಟೋ ಹೇತುಸ್ಸ್ಯಾತ್. ಅಥೈಕಸ್ಯೈವ ಹೇತುರೇಕ ಇತಿ ಮನುಷೇ, ತಥಾಪಿ ಕಸ್ಯ ಕಸ್ಯ ಕೋ ಹೇತುರಿತಿ ನ ಜ್ಞಾಯತೇ. ಅಥ ಯಸ್ಮಿನ್ದೇಶೇ ಯೋ ಘಟ**

ಕ್ಷಣಸ್ಸ್ಥಿತಃ ತದ್ದೇಶಸಂಬಂಧಿನ ಏವೋತ್ತರಘಟಕ್ಷಣಸ್ಯ ಸ ಹೇತುರಿತಿ ಚೇತ್ಕಿಂ ದೇಶಸ್ಯ ಸ್ಥಿರತ್ವಂ ಮನುಷೇ? ಕಿಂಚ ಚಕ್ಷುರಾದಿಸಂಪ್ರಯುಕ್ತಸ್ಯಾರ್ಥಸ್ಯ ಜ್ಞಾನೋತ್ಪತ್ತಿಕಾಲೇಽನವಸ್ಥಿತತ್ವಾನ್ನ ಕಸ್ಯಚಿದರ್ಥಸ್ಯ ಜ್ಞಾನವಿಷಯತ್ವಂ ಸಂಭವತೀತಿ ವೇದಿತವ್ಯಂ.

ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ‖ ೧೯ ‖

ಇದೂ ಅಲ್ಲದೆ, ಕ್ಷಣಿಕ ವಾದದಲ್ಲಿ ಜಗತ್ತಿನ ಉತ್ಪತ್ತಿಯೇ ಹೊಂದುವುದಿಲ್ಲ. ಮುಂದಿನ ಕ್ಷಣ ಬರುವ ವೇಳೆಗೆ ಹಿಂದಿನ ಕ್ಷಣವೇ ನಷ್ಟವಾಗಿರುತ್ತದೆ. ಆದ್ದರಿಂದ ಅದು ಮುಂದಿನ ಕ್ಷಣಕ್ಕೆ ಹೇತುವೇ ಆಗುವುದಿಲ್ಲ. ಅಭಾವವನ್ನೇ ಹೇತುವೆಂದು ಹೇಳಿದರೆ, ಎಲ್ಲವೂ ಎಲ್ಲೆಲ್ಲಿಯೂ ಯಾವಾಗಲೂ ಹುಟ್ಟುತ್ತಲೇ ಇರಬೇಕಾದೀತು. ಆ ಕ್ಷಣದಲ್ಲಿ ಇರದಿದ್ದರೂ ಹಿಂದಿನ ಕ್ಷಣದಲ್ಲಿ ವಸ್ತುವಿದ್ದುದನ್ನೇ ಕಾರಣವೆಂದು ಹೇಳಿದರೆ ಆಗಲೂ ಘಟವಿದ್ದ ಒಂದು ಕಾಲವು ಮುಂದಿನ ಎಲ್ಲಾ ಕಾಲಗಳಲ್ಲೂ ಮೂರು ಲೋಕಗಳಲ್ಲೂ ಇರುವ ಆಕಳು, ಎಮ್ಮೆ ,ಗಡಿಗೆ,ಕಲ್ಲು ಮೊದಲಾದ ಎಲ್ಲಾ ವಸ್ತುಗಳಿಗೂ ಕಾರಣವಾಗಬೇಕಾದೀತು. ಒಂದೇ ಜಾತಿಗೆ ಸೇರಿ ಹಿಂದಿನ ಕ್ಷಣದಲ್ಲಿ ಇದ್ದದ್ದೇ ಮುಂದಿನದಕ್ಕೆ ಕಾರಣವಾಗುವುದೆಂದು ಹೇಳಿದರೆ, ಹಾಗಾದರೂ ಎಲ್ಲ ದೇಶಗಳಲ್ಲೂ ಮುಂದಿನ ಕ್ಷಣದಲ್ಲಿ ಇರುವಂತಹ ಗಡಿಗೆಗಳೆಲ್ಲಕ್ಕೂ ಹಿಂದಿನ ಕ್ಷಣದಲ್ಲಿದ್ದ ಒಂದು ಗಡಿಗೆಯೇ ಕಾರಣವಾಗಬೇಕಾಗುವುದು. ಒಂದಕ್ಕೆ ಒಂದೇ ಕಾರಣವೆಂದು ಹೇಳುವುದಾದರೆ ಹಾಗಾದರೂ ಯಾವುದಕ್ಕೆ ಯಾವುದು ಕಾರಣವೆಂಬುದು ತಿಳಿಯುವುದಿಲ್ಲ. ಯಾವ ಕಡೆ ಯಾವ ಗಡಿಗೆ ಇತ್ತೋ ಆ ಕಾಲವು ಆ ಸ್ಥಳಕ್ಕೆ ಸಂಬಂಧಿಸಿದಂತೆ ಮುಂದಿನ ಗಡಿಗೆ ಇರುವ ಕಾಲಕ್ಕೆ ಕಾರಣವಾಗುವುದೆಂದು ಹೇಳಿದರೆ ಇದರಿಂದ ಆ ಪ್ರದೇಶವನ್ನು ಸ್ಥಿರವೆಂದು ಒಪ್ಪಬೇಕಾಗುತ್ತದೆ. ಇದೂ ಅಲ್ಲದೆ, ಕಣ್ಣಿನಿಂದ ಕಂಡ ವಸ್ತುವು ಜ್ಞಾನ ಹುಟ್ಟುವಾಗ ಇರುವುದಿಲ್ಲವಾದ್ದರಿಂದ ಯಾವ ವಸ್ತುವೂ ಜ್ಞಾನಕ್ಕೆ ವಿಷಯವೇ ಆಗುವುದಿಲ್ಲವೆಂದು ತಿಳಿಯಬೇಕಾಗುತ್ತದೆ.

ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ ‖ ೨೦ ‖

ಅಸತ್ಯಪಿ ಹೇತೌ ಕಾರ್ಯಮುತ್ಪದ್ಯತೇ ಚೇತ್ಸರ್ವಂ ಸರ್ವತ್ರ ಸರ್ವದೋತ್ಪದ್ಯೇತೇತ್ಯುಕ್ತಂ. ನ ಕೇವಲಮುತ್ಪತ್ತಿವಿರೋಧ ಏವ, ಪ್ರತಿಜ್ಞಾ ಚ ಭವತಾಮುಪರುಧ್ಯೇತ. ಅಧಿಪತಿಸಹಕಾರ್ಯಾವಲಂಬನಸಮನಂತರಪ್ರತ್ಯಯಾಶ್ಚತ್ವಾರೋ ವಿಜ್ಞಾನೋತ್ಪತ್ತೌ ಹೇತವ ಇತಿ ವಃ ಪ್ರತಿಜ್ಞಾ. ಅಧಿಪತಿರಿಂದ್ರಿಯಂ. ಅಥ ಪ್ರತಿಜ್ಞಾನುಪರೋಧಾಯ ಘಟಕ್ಷಣೇ ಸ್ಥಿತ ಏವ ಘಟಕ್ಷಣಾಂತರೋತ್ಪತ್ತಿರಿಷ್ಯತೇ. ತಥಾಚ ಸತಿ ದ್ವಯೋಃ ಕಾರ್ಯಕಾರಣಯೋಃ ಘಟಕ್ಷಣಯೋರ್ಯೌಗಪದ್ಯೇನ ಉಪಲಬ್ಧಿಃ ಪ್ರಸಜ್ಯೇತ. ನಚ ತಥೋಪಲಭ್ಯತೇ. ಕ್ಷಣಿಕತ್ವಪ್ರತಿಜ್ಞಾ ಚೈವಂ ಹೀಯೇತ. ಕ್ಷಣಿಕತ್ವಂ ಸ್ಥಿತಿಮಿತಿ ಚೇದಿಂದ್ರಿಯಸಂಪ್ರಯೋಗ

ಜ್ಞಾನಯೋರ್ಯೌಗಪದ್ಯಂ ಪ್ರಸಜ್ಯೇತ.

**ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ ॥ ೨೦ ॥**

ಕಾರಣವಿಲ್ಲದಿದ್ದರೂ ಕಾರ್ಯ ಹುಟ್ಟುತ್ತದೆಯಾದರೆ ಎಲ್ಲವೂ ಎಲ್ಲೆಲ್ಲಿಯೂ ಯಾವಾಗಲು ಹುಟ್ಟಬೇಕಾದೀತು ಎಂದು ಹೇಳಿದ್ದು ವಸ್ತುವಿನ ಉತ್ಪತ್ತಿಗಷ್ಟೇ ಅಲ್ಲದೆ ನಿಮ್ಮ ಪ್ರತಿಜ್ಞೆಗೂ ವಿರುದ್ಧವಾಗುವುದು. ಇಂದ್ರಿಯಗಳು, ಸಹಕಾರಿ, ಆಶ್ರಯ, ಮುಂದಿನ ಜ್ಞಾನ ಇವು ನಾಲ್ಕೂ ವಿಜ್ಞಾನದ ಕಾರಣಗಳು ಎಂಬುದು ನಿಮ್ಮ ಪ್ರತಿಜ್ಞೆ. ಈ ಪ್ರತಿಜ್ಞೆ ಕೆಡದಂತೆ ಘಟವಿದ್ದ ಒಂದು ಕ್ಷಣದಿಂದಲೇ ಅದರ ಬೇರೊಂದು ಕ್ಷಣದ ಉತ್ಪತ್ತಿಯನ್ನು ಒಪ್ಪಬೇಕಾಗುತ್ತದೆ. ಹಾಗಾದರೆ ಕಾರ್ಯ ಕಾರಣಗಳಾದ ಅವೆರಡು ಕ್ಷಣಗಳೂ ಒಟ್ಟಿಗೇ ತೋರಬೇಕಾಗುತ್ತದೆ. ಆದರೆ ಹಾಗೆ ತೋರುತ್ತಿಲ್ಲ. ಇದರಿಂದ ಎಲ್ಲವೂ ಕ್ಷಣಿಕವೆಂಬ ಪ್ರತಿಜ್ಞೆಯೇ ತಪ್ಪಿಹೋಗುತ್ತದೆ. ಕ್ಷಣಿಕತ್ವವಿದ್ದೇ ಇರುತ್ತದೆ ಎಂದರೆ, ಇಂದ್ರಿಯಕ್ಕೂ ವಸ್ತುವಿಗೂ ಇರುವ ಸಂಬಂಧ ಮತ್ತು ಜ್ಞಾನ ಇವೆರಡೂ ಏಕಕಾಲದಲ್ಲಿ ಇರಬೇಕೆಂದು ಹೇಳಬೇಕಾಗುತ್ತದೆ.

**ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್ ॥ ೨೧ ॥**

ಪ್ರತಿಸಂಖ್ಯಾನಿರೋಧೋ ನಾಮ ಪಾಷಾಣಪ್ರಕ್ಷೇಪಾದಿನಾ ಬುದ್ಧಿಪೂರ್ವಕಘಟಪಟಾದಿಭೌತಿಕಪದಾರ್ಥನಾಶಃ. ಅಪ್ರತಿಸಂಖ್ಯಾನಿರೋಧೋ ನಾಮ ಕಾಲವಶಾತ್ಸ್ವತ ಏವ ಪೃಥಿವ್ಯಾದಿಮಹಾಭೂತನಾಶಃ. ತಯೋಃ ನಿರೋಧಯೋರಪ್ರಾಪ್ತಿರನುಪಪತ್ತಿಃ. ಕುತಃ ಅವಿಚ್ಛೇದಾತ್. ಬೌದ್ಧಮತೇ ಪೂರ್ವಪೂರ್ವಪರಮಾಣೂನಾಮುತ್ತರೋತ್ತರಪರಮಾಣೂನ್ಪ್ರತಿ ಸ್ವಾತಂತ್ರ್ಯೇಣ ಕಾರಣತ್ವಾಂಗೀಕಾರಾಜ್ಜಡಾನಾಂ ಪರಮಾಣೂನಾಂ ಕಾಲವಿಶೇಷಪರಿಜ್ಞಾನಾಭಾವಾತ್ಪರಮಾಣುಸಂತಾನಾನಾಂ ಕದಾಪಿ ವಿಚ್ಛೇದಾನುಪಪತ್ತೇಃ. ತಥಾಚ ಬೌದ್ಧಮತೇ ಸೃಷ್ಟಿಪ್ರಳಯಾವುಭಾವಪ್ಯನುಪಪನ್ನೌ. ಏವಂ ತಾವದಸತ ಉತ್ಪತ್ತಿರ್ನಿರಸ್ತಾ. ಸತೋ ನಿರನ್ವಯವಿನಾಶೋಽಪಿ ನೋಪಪದ್ಯತ ಇತ್ಯುಚ್ಯತೇ. ಕ್ಷಣಿಕತ್ವವಾದಿಭಿರ್ಮುದ್ಗರಾದ್ಯಭಿಘಾತಾದ್ಯನಂತರಭಾವಿತಯಾ ಉಪಲಬ್ಧಿಯೋಗ್ಯಸ್ಸದೃಶಸಂತಾನಾವಸಾನರೂಪಃ ಸ್ಥೂಲೋ ಯಸ್ಸದೃಶಸಂತಾನಃ, ಪ್ರತಿಕ್ಷಣಾಭಾವೀ ಚೋಪಲಬ್ಧ್ಯನರ್ಹಸ್ಸೂಕ್ಷ್ಮಶ್ಚ ಯೋ ನಿರನ್ವಯೋ ವಿನಾಶಶ್ಚ, ದ್ವಾವಪಿ ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಶಬ್ದಾಭ್ಯಾಮಭಿಧೀಯೇತೇ. ತೌ ನ ಸಂಭವತಃ ಕುತಃ ಅವಿಚ್ಛೇದಾತ್. ಸತೋ ನಿರನ್ವಯವಿಚ್ಛೇದಾಸಂಭವಾತ್. ಅಸಂಭವಶ್ಚ ಸತ ಉತ್ಪತ್ತಿವಿನಾಶೋ ನಾಮಾವಸ್ಥಾಂತರಾಪತ್ತಿರೇವ. ಅವಸ್ಥಾಯೋಗಿ ತು ದ್ರವ್ಯಮೇಕಮೇವ ಸ್ಥಿರಮಿತಿ ಕಾರಣಾದನನ್ಯತ್ವಂ ಕಾರ್ಯಸ್ಯೋಪಪಾದಯದ್ಭಿರಸ್ಮಾಭಿ "ಸ್ತದನನ್ಯತ್ವಮಿ" ತ್ಯತ್ರ ಪ್ರತಿಪಾದಿತಂ. ನಿರ್ವಾಣಸ್ಯ ದೀಪಸ್ಯ

**ನಿರನ್ವಯುವಿನಾಶದರ್ಶನಾದನ್ಯತ್ರಾಪಿ ವಿನಾಶೋ ನಿರನ್ವಯೋಽನುಮೀಯತ ಇತಿ ಚೇನ್ನ, ಘಟಶರಾವಾದೌ ಮೃದಾದಿದ್ರವ್ಯಾನುವೃತ್ತ್ಯುಪಲಬ್ಧ್ಯಾ ಸತೋ ದ್ರವ್ಯಸ್ಯಾವಸ್ಥಾಂತರಾಪತ್ತಿರೇವ ವಿನಾಶ ಇತಿ ನಿಶ್ಚಿತೇ ಸತಿ ಪ್ರದೀಪಾದೌ ಸೂಕ್ಷ್ಮದಶಾಪತ್ತ್ಯಾಪ್ಯನುಪಲಂಭೋಪಪತ್ತೇಸ್ತತ್ರಾಪ್ಯವಸ್ಥಾಂತರಾಪತ್ತಿಕಲ್ಪನಸ್ಯೈವ ಯುಕ್ತತ್ವಾದಿತಿ ನಿಶ್ಚೀಯತೇ.**

**ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್ ॥೨೧॥**

ಒಂದು ಕಲ್ಲನ್ನು ಎಸೆದು ಗಡಿಗೆ ಮೊದಲಾದ ಭೌತಿಕವಸ್ತುವನ್ನು ನಾಶಪಡಿಸುವುದು ಪ್ರತಿಸಂಖ್ಯಾನಿರೋಧವೆನಿಸುತ್ತದೆ. ಕಾಲಕ್ರಮದಿಂದ ತಾವಾಗಿಯೇ ಮಹಾಭೂತಗಳು ನಾಶವಾಗುವುದು ಅಪ್ರತಿಸಂಖ್ಯಾನಿರೋಧವೆನಿಸುತ್ತದೆ. ಇವೆರಡೂ ಸಹ ವಸ್ತುಗಳಿಗೆ ಸಂಭವಿಸುವಂತಿಲ್ಲ; ಯಾಕೆಂದರೆ ಬೌದ್ಧಮತದಲ್ಲಿ ಹಿಂದಿನ ಪರಮಾಣುಗಳನ್ನು ಮುಂದಿನ ಪರಮಾಣುಗಳಿಗೆ ಸ್ವತಂತ್ರವಾಗಿ ಕಾರಣವೆಂದು ಅಂಗೀಕರಿಸಿರುವುದರಿಂದ ಜಡವಾದ ಈ ಪರಮಾಣುಗಳು ಕಾಲವಿಶೇಷವನ್ನು ತಿಳಿಯಲಾರವಾದ್ದರಿಂದ ಪರಮಾಣುಸಂತಾನಗಳು ಯಾವಾಗಲೂ ನಾಶವೇ ಆಗುವಂತಿಲ್ಲ. ಆದ್ದರಿಂದ ಈ ಮತದಲ್ಲಿ ಸೃಷ್ಟಿಪ್ರಳಯಗಳೆರಡೂ ಹೊಂದುವುದಿಲ್ಲ. ಹೀಗೆ ಅಸದ್ವಸ್ತುವಿನ ಉತ್ಪತ್ತಿಯನ್ನು ನಿರಾಕರಿಸಿ ಇರುವ ವಸ್ತುವಿಗೆ ಪೂರ್ಣವಿನಾಶವೂ ಹೊಂದುವುದಿಲ್ಲವೆಂದು ಹೇಳಲಾಗಿದೆ. ದೊಣ್ಣೆಯಿಂದ ಗಡಿಗೆಯನ್ನು ಹೊಡೆದಾಗ ಘಟಪರಮಾಣುಗಳ ಪರಂಪರೆ ಹೋಗಿ ಅವಕ್ಕಿಂತ ಬೇರೆಯಾದ ಚೂರುಗಳ ಪರಮಾಣುಪರಂಪರೆಯ ರೂಪವಾದ ಸ್ಥೂಲವಿನಾಶವೂ, ಹಾಗೆಯೇ ಪ್ರತಿಕ್ಷಣದಲ್ಲೂ ಆಗುತ್ತಿರುವ ಸೂಕ್ಷ್ಮವಿನಾಶವೂ ಪ್ರತಿಸಂಖ್ಯಾನಿರೋಧಗಳೆನಿಸುತ್ತವೆ. ಇವೆರಡೂ ಪೂರ್ತಿಯಾಗಿ ಯಾವ ವಸ್ತುವಿನಲ್ಲೂ ಸಂಭವಿಸುವಂತಿಲ್ಲ. ಹೀಗೆ ವಿಚ್ಛೇದವೇ ಸಂಭವಿಸದಿರುವುದರಿಂದ ಇವೆರಡೂ ಬೌದ್ಧಮತದಲ್ಲಿ ಹೊಂದುವುದಿಲ್ಲ. ಇರುವ ವಸ್ತುವಿಗೆ ಉತ್ಪತ್ತಿಮತ್ತುವಿನಾಶಗಳೆಂದರೆ ಬೇರೆ ಅವಸ್ಥೆಯನ್ನು ಹೊಂದುವುದೇ ಆಗಿದೆ. ಈ ಎರಡು ಅವಸ್ಥೆಗಳನ್ನು ಹೊಂದುವಂತಹ ದ್ರವ್ಯ ಒಂದೇ ಸ್ಥಿರವಾಗಿರುತ್ತದೆಯಾದ್ದರಿಂದ ಕಾರ್ಯಕಾರಣಗಳು ಬೇರೆಯಲ್ಲವೆಂದು ಹೇಳುವ ನಾವು ಇದನ್ನು ಹಿಂದೆಯೇ 'ತದನನ್ಯತ್ವಂ' ಎಂಬ ಸೂತ್ರದಲ್ಲಿ ತಿಳಿಸಿದ್ದೇವೆ. ಆರಿಹೋಗುವ ದೀಪವು ಪೂರ್ಣವಾಗಿಯೇ ಕಾಣದಿರುವುದರಿಂದ ಬೇರೆಕಡೆಯೂ ಇಂತಹ ವಿನಾಶವನ್ನೇ ಊಹಿಸಬಹುದೆಂದು ಹೇಳುವುದೂ ಯುಕ್ತವಲ್ಲ. ಗಡಿಗೆ ಮೊದಲಾದ ಕಡೆ ಮಣ್ಣು ಮೊದಲಾದ ದ್ರವ್ಯವೇ ಅನುವರ್ತಿಸಿಕೊಂಡು ಬರುವುದೆಂದು ತಿಳಿದುಬಂದಿದೆಯಾದ್ದರಿಂದ ಇರುವ ದ್ರವ್ಯವೇ ಬೇರೆ ಅವಸ್ಥೆಯನ್ನು ಹೊಂದುವುದೇ ವಿನಾಶವೆಂದು ನಿಶ್ಚಿತವಾಗುವುದರಿಂದ ಆರಿದ ದೀಪವು ಸೂಕ್ಷ್ಮದಶೆಯನ್ನು ಹೊಂದುವುದರಿಂದ ಅದನ್ನು ನೋಡಲಾಗುವುದಿಲ್ಲ. ಆದ್ದರಿಂದ ಅಲ್ಲಿಯೂ ವಸ್ತುವು ಬೇರೊಂದು ಅವಸ್ಥೆಯನ್ನು ಹೊಂದುವುದೇ ನಾಶವೆನಿಸುತ್ತದೆ ಎಂದು ನಿಶ್ಚಯಿಸಲಾಗುವುದು. ಹೀಗೆ ಬೌದ್ಧಮತವನ್ನು ನಿರಾಕರಿಸಲಾಗಿದೆ.

ಪುನರ್ಹೇತ್ವಂತರಂ ದರ್ಶಯತಿ— ಉಭಯಥಾ ಚ ದೋಷಾತ್ ‖ ೨೨ ‖

ಉತ ಘಟಪಟಾದಿ ಪರಮಾಣುಸಂತಾನಾನಾಂ ಕಂಚಿತ್ಕಾಲಂ ಸ್ಥಿರತ್ವಂ ಕ್ಷಣಿಕತ್ವಂ ವಾ? ಉಭಯಥಾ ಚ ಪಕ್ಷದ್ವಯೇಽಪಿ ದೋಷಾತ್. ಸ್ಥಿರತ್ವಪಕ್ಷೇ ಬೌದ್ಧಮತೇ ಕ್ಷಣಿಕತ್ವಾಂಗೀಕಾರಾತ್ಸ್ವಮತಭಂಗದೋಷಃ. ಕ್ಷಣಿಕತ್ವಪಕ್ಷೇ ಘಟಾದೀನಾಂ ಜಲಾವರಣಾದಿಕಾರ್ಯಕಾರಿತ್ವಂ ನ ಸ್ಯಾತ್. ತಸ್ಮಾತ್ಪಕ್ಷದ್ವಯೇಽಪಿ ದೋಷಪ್ರದರ್ಶನಾತ್ ಬೌದ್ಧಮತಮಸಂಜಸಂ. ಕ್ಷಣಿಕತ್ವವಾದಿಭಿರುಭ್ಯುಪೇತಾ ತುಚ್ಛಾದುತ್ಪತ್ತಿರುತ್ಪನ್ನಸ್ಯ ತುಚ್ಛತಾಪತ್ತಿಶ್ಚ ನ ಸಂಭವತೀತ್ಯುಕ್ತಂ. ತದುಭಯಪ್ರಕಾರಾಭ್ಯುಪಗತೌ ದೋಷಶ್ಚ ಭವತಿ. ತುಚ್ಛಾದುತ್ಪತ್ತೌ ತುಚ್ಛಾತ್ಮಕಮೇವ ಕಾರ್ಯಂ ಸ್ಯಾತ್. ಯದ್ಧಿ ಯಸ್ಮಾದುತ್ಪದ್ಯತೇ ತತ್ತದಾತ್ಮಕಂ ದೃಷ್ಟಂ, ಯಥಾ ಮೃತ್ಸುವರ್ಣಾದೇರುತ್ಪನ್ನಂ ಮಣಿಕಟಕಮುಕುಟಾದಿ ಮೃತ್ಸುವರ್ಣಾದ್ಯಾತ್ಮಕಂ ದೃಷ್ಟಂ. ನಚ ಜಗತ್ತುಚ್ಛಾತ್ಮಕಂ ಭವದ್ಭಿರಭ್ಯುಪಗಮ್ಯತೇ. ನಚ ಪ್ರತೀಯತೇ. ಸತೋ ನಿರನ್ವಯವಿನಾಶೇ ಸತ್ಯೇಕಕ್ಷಣಾದೂರ್ಧ್ವಂ ಕೃತ್ಸ್ನಸ್ಯ ಜಗತಸ್ತುಚ್ಛತಾಪತ್ತಿರೇವ ಸ್ಯಾತ್. ಪಶ್ಚಾತ್ತುಚ್ಛಾಜ್ಜಗದುತ್ಪತ್ತೌ ಅನಂತರೋಕ್ತಂ ತುಚ್ಛಾತ್ಮಕಮೇವ ಸ್ಯಾತ್. ತಸ್ಮಾದುಭಯಥಾಪಿ ದೋಷಾನ್ನ ಭವದುಕ್ತಪ್ರಕಾರಾದುತ್ಪತ್ತಿನಿರೋಧೌ ಭವತಃ. ನನು ಬೌದ್ಧಮತೇ ಕ್ಷಣಿಕತ್ವಂ ಪರಮಾಣೂನಾಂ. ತತ್ಸಂತಾನಾತ್ಮಕಾನಾಂ ಘಟಪಟಾದೀನಾಂ ತು ಸ್ಥಿರತ್ವಮೇವ. ತಥಾಪಿ ಜಲಾವರಣಾದಿಕಾರ್ಯಕಾರಿತ್ವಂ ಘಟಾದೀನಾಮುಪಪದ್ಯತ ಇತಿ ಚೇತ್ತರ್ಹಿ ಪರಮಾಣ್ವಪೇಕ್ಷಯಾ ತತ್ಸಂತಾನಾನಾಂ ಪೃಥಕ್ತ್ವಾಂಗೀಕಾರೇ ಘಟಪಟಾದಿಪದಾರ್ಥಾನಾಂ ದ್ವ್ಯಣುಕಾದಿಕ್ರಮೇಣ ಪರಮಾಣುಜನ್ಯತ್ವಮೇವಾಂಗೀಕರ್ತವ್ಯಂ. ತಥಾಚೇನ್ನೈಯಾಯಿಕಮತಪ್ರವೇಶಾಪತ್ತೇಃ ಬೌದ್ಧಾನಾಮುಪಸಿದ್ಧಾಂತಸ್ಸ್ಯಾತ್.

ಇಲ್ಲಿ ಬೇರೊಂದು ಹೇತುವನ್ನು ಹೇಳುತ್ತಾನೆ-- **ಉಭಯಥಾ ಚ ದೋಷಾತ್ ‖**

ಘಟಪಟ ಮೊದಲಾದ ಪರಮಾಣುಸಮೂಹಗಳು ಕೊಂಚಕಾಲ ಸ್ಥಿರವೋ ಅಥವಾ ಪೂರ್ತಿ ಕ್ಷಣಿಕವೋ? ಎಂದರೆ ಈ ಎರಡು ಪಕ್ಷಗಳಲ್ಲೂ ದೋಷವಿದ್ದೇ ಇರುತ್ತದೆ. ಅವನ್ನು ಸ್ಥಿರವೆಂದು ಭಾವಿಸಿದರೆ, ಕ್ಷಣಿಕವೆಂದು ಒಪ್ಪುವ ನಿಮ್ಮ ಮತಕ್ಕೆ ಭಂಗವುಂಟಾಗುವುದು. ಅವನ್ನು ಕ್ಷಣಿಕವೆಂದು ಭಾವಿಸಿದರೆ ಗಡಿಗೆ ಮೊದಲಾದವುಗಳಿಂದ ನೀರು ತರುವಿಕೆ ಮೊದಲಾದ ಕ್ರಿಯೆಯೇ ನಡೆಯದೇ ಹೋಗಬೇಕಾಗುತ್ತದೆ. ಆದ್ದರಿಂದ ಎರಡು ಪಕ್ಷಗಳಲ್ಲೂ ದೋಷವಿರುವುದರಿಂದ ಬೌದ್ಧಮತವು ಸಮಂಜಸವಲ್ಲ. ಕ್ಷಣಿಕತ್ವವಾದಿಗಳು ಅಂಗೀಕರಿಸಿದಂತೆ ತುಚ್ಛವಸ್ತುವಿನಿಂದ ಉತ್ಪತ್ತಿ ಮತ್ತು ಉತ್ಪನ್ನವಸ್ತುವಿಗೆ ತುಚ್ಛವೆಂಬ ಭಾವನೆ ಇವೆರಡೂ ಸಂಭವಿಸುವುದಿಲ್ಲ. ಇವೆರಡನ್ನೂ

ಒಪ್ಪಿದರೆ ದೋಷ ಸಂಭವಿಸುತ್ತದೆ. ತುಚ್ಛವಸ್ತುವಿನಿಂದ ಉತ್ಪತ್ತಿಯಾಗುವುದಾದರೆ ಕಾರ್ಯವೂ ತುಚ್ಛವೇ ಆಗಬೇಕಾದೀತು. ಯಾವುದರಿಂದ ಯಾವುದು ಹುಟ್ಟುವುದೋ ಅದು ಆ ರೂಪವಾಗಿಯೇ ಕಾಣುತ್ತದೆ. ಮಣ್ಣು ಚಿನ್ನಗಳಿಂದ ಆಗಿರುವ ಗಡಿಗೆ ಆಭರಣ ಮೊದಲಾದವೂ ಮಣ್ಣಾಗಿಯೂ ಚಿನ್ನವಾಗಿಯೂ ಇರುವುದನ್ನು ಲೋಕದಲ್ಲಿ ಕಂಡಿದ್ದೇವೆ. ಆದರೆ ಜಗತ್ತನ್ನು ತುಚ್ಛವೆಂದು ನೀವೂ ಒಪ್ಪಿಲ್ಲ. ಅದು ಹಾಗೆ ತೋರುವುದೂ ಇಲ್ಲ. ಇರುವುದು ಪೂರ್ತಿ ನಾಶವಾಗುವುದಾದರೆ, ಒಂದು ಕ್ಷಣವಾದಮೇಲೆ ಸಮಸ್ತ ಜಗತ್ತೂ ತುಚ್ಛವೇ ಆಗಬೇಕಾದೀತು. ತುಚ್ಛವಸ್ತುವಿನಿಂದ ಜಗತ್ತು ಹುಟ್ಟುವುದಾದರೆ, ಮುಂದೆಹುಟ್ಟಿದ ಜಗತ್ತು ತುಚ್ಛವೇ ಆಗಬೇಕಾದೀತು. ಹೀಗೆ ಎರಡು ವಿಧದಲ್ಲೂ ದೋಷವಿರುವುದರಿಂದ ನೀವು ಹೇಳುವಂತೆ ಉತ್ಪತ್ತಿ ವಿನಾಶಗಳಾಗುವುದಿಲ್ಲ. ಬೌದ್ಧಮತದಲ್ಲಿ ಪರಮಾಣುಗಳು ಕ್ಷಣಿಕಗಳಾದರೂ, ಅವುಗಳ ಸಮೂಹವೆನಿಸಿದ ಗಡಿಗೆ ಮೊದಲಾದವು ಸ್ಥಿರವೆನಿಸಿರುವುದರಿಂದ ನೀರುತರುವಿಕೆ ಮೊದಲಾದ ಕಾರ್ಯಗಳು ಗಡಿಗೆ ಮೊದಲಾದವಕ್ಕೆ ಹೊಂದುತ್ತವೆ ಎಂದು ಹೇಳಿದರೆ ಪರಮಾಣುಸಮೂಹಗಳನ್ನು ಪರಮಾಣುವಿಗಿಂತ ಬೇರೆ ಎಂದೂ, ಈ ಸಮೂಹಗಳು ದ್ವ್ಯಣುಕಾದಿಕ್ರಮದಿಂದ ಪರಮಾಣುಗಳಿಂದಲೇ ಹುಟ್ಟುತ್ತವೆ ಎಂದೂ ಒಪ್ಪಬೇಕಾಗುತ್ತದೆ. ಹಾಗಾದರೆ ನೈಯಾಯಿಕ ಮತವನ್ನು ಪ್ರವೇಶಿಸಬೇಕಾಗುವುದರಿಂದ ಬೌದ್ಧರ ಸಿದ್ಧಾಂತವೇ ಕೆಡುತ್ತದೆ. ಹೀಗೆ ನಾಲ್ಕು ಭೂತಗಳನ್ನು ಪರಮಾಣುಸಮೂಹವೆಂದು ತಿಳಿಸುವ ಬೌದ್ಧಮತವನ್ನು ನಿರಾಕರಿಸಲಾಗಿದೆ.

**ಬೌದ್ಧಾಮಭಿಪ್ರೇತಭೂತಚತುಷ್ಟಯಸ್ಯ ಪರಮಾಣುಪುಂಜತ್ವಂ ನಿರಸ್ಯಾಕಾಶಸ್ಯ ಶೂನ್ಯತ್ವಂ ನಿರಾಕರೋತಿ. ಆಕಾಶೇ ಚಾವಿಶೇಷಾತ್.**

**ಆಕಾಶೇ ಚ ಸರ್ವೇಷಾಂ ಕ್ಷೇತ್ರಜ್ಞಾನಾಮಸ್ತಿತ್ವಪ್ರತೀತೇರವಿಶೇಷಾತ್ತುಲ್ಯತ್ವಾತ್ ಭೂತಚತುಷ್ಟಯಸ್ಯ ಪ್ರತ್ಯಕ್ಷಪರಮಾಣುಪುಂಜರೂಪತ್ವವತ್ ಜಾನುದಘ್ನಜಲನ್ಯಾಯೇನಾಕಾಶಸ್ಯಾಪ್ಯತೀಂದ್ರಿಯಪುಂಜರೂಪತ್ವಮೇವಾಂಗೀಕರ್ತವ್ಯಂ. ತಥಾಚ ಶೂನ್ಯತ್ವಾಂಗೀಕಾರೋ ಹ್ಯಯುಕ್ತಃ. ಬಾಹ್ಯಾಭ್ಯಂತರವಸ್ತುನಸ್ಸ್ಥಿರತ್ವಪ್ರತಿಪಾದನಾಯ ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಯೋಸ್ತುಚ್ಛರೂಪತಾ ನಿರಾಕೃತಾ. ತತ್ಪ್ರಸಂಗೇನ ತಾಭ್ಯಾಂ ಸಹ ತುಚ್ಛತ್ವೇನ ಸೌಗತೈಃ ಪರಿಗಣಿಸ್ಯಾಕಾಶಸ್ಯಾಪಿ ತುಚ್ಛತಾ ಪ್ರತಿಕ್ಷಿಪ್ಯತೇ. ಆಕಾಶೇ ಚ ನೀರೂಪಾಖ್ಯತಾ ನ ಯುಕ್ತಾ' ಭಾವರೂಪತ್ವೇನಾಭ್ಯುಪಗತಪೃಥಿವ್ಯಾದಿವದಾಕಾಶಸ್ಯಾಪ್ಯಬಾಧಿತಪ್ರತೀತಿಸಿದ್ಧತ್ವಾವಿಶೇಷಾತ್. ಪ್ರತೀಯತೇ ಹ್ಯಾಕಾಶೋಽತ್ರಶ್ಯೇನಃ ಪತತ್ಯತ್ರಗೃಧ್ರ ಇತಿ ಶ್ಯೇನಾದಿಪತನದೇಶತ್ವೇನ. ನಚ ಪೃಥಿವ್ಯಾದ್ಯಭಾವಮಾತ್ರಮಾಕಾಶ ಇತಿ ವಕ್ತುಂ ಶಕ್ಯಂ, ವಿಕಲ್ಪಾಸಹತ್ವಾತ್. ಪೃಥಿವ್ಯಾದೇಃ ಪ್ರಾಗಭಾವಃ ಪ್ರಧ್ವಂಸಾಭಾವ ಇತರೇತರಾಭಾವ ಅತ್ಯಂತಾಭಾವೋ**

ವಾಕಾಶಃ? ತಥಾಪ್ಯಾಕಾಶಪ್ರತೀತ್ಯನುಪಪತ್ತಿಸ್ಸ್ಯಾತ್. ಪ್ರಾಗಭಾವ ಪ್ರಧ್ವಂಸಾಭಾವಯೋರಾಕಾಶತ್ವೇ ಪೃಥಿವ್ಯಾದಿಷು ವರ್ತಮಾನೇಷು ಆಕಾಶಪ್ರತೀತ್ಯಯೋಗಾನ್ನಿರಾಕಾಶಂ ಜಗತ್ಸ್ಯಾತ್. ಇತರೇತರಾಭಾವಸ್ಯಾಕಾಶತ್ವೇ ಇತರೇತರಾಭಾವಸ್ಯ ತತ್ತದ್ವಸ್ತುಗತತ್ವೇನ ತೇಷಾಮಂತರಾಳೇ ಆಕಾಶಪ್ರತೀತಿರ್ನ ಸ್ಯಾತ್. ಅತ್ಯಂತಾಭಾವಸ್ತು ಪೃಥಿವ್ಯಾದೀನಾಂ ನ ಸಂಭವತಿ. ಅಭಾವಸ್ಯ ವಿದ್ಯಮಾನಪದಾರ್ಥಾವಸ್ಥಾವಿಶೇಷತ್ವೋಪಾದಾನಾಚ್ಚಾಕಾಶಸ್ಯಾಭಾವರೂಪತ್ವೇಽಪಿ ನ ನೀರೂಪಾಖ್ಯತ್ವಂ. ಅಣ್ವಂತರ್ವರ್ತಿನ ಆಕಾಶಸ್ಯ ತ್ರಿವೃತ್ಕರಣೋಪದೇಶಪ್ರದರ್ಶಿತಪಂಚೀಕರಣೇನ ರೂಪಾವತ್ತ್ವಾಚ್ಚಾಕ್ಷುಷತ್ವೇಽಪ್ಯವಿರೋಧಃ. ತಸ್ಮಾದಾಕಾಶಶೂನ್ಯತ್ವವಾದೋ ಹ್ಯವಿಚಾರಿತರಮಣೀಯಃ.

ಆಕಾಶವಿಲ್ಲವೆಂಬುದನ್ನು ನಿರಾಕರಿಸುತ್ತಾನೆ—**ಆಕಾಶೇ ಚಾವಿಶೇಷಾತ್** ॥೨೩॥

ಆಕಾಶದಲ್ಲಿ ಎಲ್ಲ ಜೀವರೂ ಇರುವರೆಂಬುದು ಸಮಾನವಾಗಿದೆ. ನಾಲ್ಕು ಭೂತಗಳನ್ನು ಪ್ರತ್ಯಕ್ಷಪರಮಾಣುಗಳ ಸಮೂಹವೆಂದು ಹೇಳುವಂತೆ ಆಕಾಶವು ಅತೀಂದ್ರಿಯರೂಪವಾದ ಪರಮಾಣುಗಳ ಸಮೂಹವೆಂದು ನೀರಿನಲ್ಲಿ ಮುಳುಗಿರುವವನ ಮೊಳಕಾಲು ಹೊರಗೆ ಕಾಣದಿದ್ದರೂ ಯಥಾರ್ಥವಾಗಿ ನೀರೊಳಗಿರುವಂತೆ ಆಕಾಶದ ಬಗ್ಗೆ ಒಪ್ಪಲೇಬೇಕು. ಆದ್ದರಿಂದ ಅದನ್ನು ಶೂನ್ಯವೆಂದು ಹೇಳುವುದು ಯುಕ್ತವಲ್ಲ. ಒಳಹೊರ ವಸ್ತುಗಳನ್ನು ಸ್ಥಿರವಲ್ಲವೆಂದು ತಿಳಿಸಲಿಕ್ಕಾಗಿ ಎರಡು ಬಗೆಯ ವಿನಾಶವೂ ತುಚ್ಛವೆಂಬುದನ್ನು ನಿರಾಕರಿಸಲಾಯಿತು. ಆ ಪ್ರಸಂಗದಲ್ಲಿ ಅವುಗಳಂತೆಯೇ ತುಚ್ಛವೆಂದು ಬೌದ್ಧರು ಭಾವಿಸಿರುವ ಆಕಾಶವೂ ಸಹ ತುಚ್ಛವೆಂಬುದನ್ನು ಈಗ ನಿರಾಕರಿಸಲಾಗುವುದು. ಆಕಾಶದಲ್ಲಿ ರೂಪವಿಲ್ಲವೆಂಬುದು ಯುಕ್ತವಲ್ಲ. ಭಾವರೂಪವೆಂದು ಒಪ್ಪಿರುವ ಪೃಥಿವ್ಯಾದಿಗಳಂತೆಯೇ ಆಕಾಶವೂ ಅಬಾಧಿತವಾಗಿ ಜ್ಞಾನಗೋಚರವಾಗುವುದೆಂದು ಸಿದ್ಧವಾಗಿದೆ. "ಇಲ್ಲಿ ಗಿಡಗ ಬಿದ್ದಿತು, ಇಲ್ಲಿ ರಣಹದ್ದು ಬಿದ್ದಿತು" ಎಂದು ಬೀಳಲಿಕ್ಕೆ ಸ್ಥಳವಾಗಿ ಆಕಾಶವನ್ನು ತಿಳಿಸುವುದು ಸರ್ವಾನುಭವಸಿದ್ಧವಾಗಿದೆ. ಇಲ್ಲಿ ಪೃಥಿವ್ಯಾದಿಗಳ ಅಭಾವವನ್ನು ಆಕಾಶವೆಂದು ಹೇಳಲಾಗುವುದಿಲ್ಲ. ಏಕೆಂದರೆ ಆಕಾಶವು ಪೃಥಿವ್ಯಾದಿಗಳ ಪ್ರಾಗಭಾವವೇ? ಪ್ರಧ್ವಂಸಾಭಾವವೇ ? ಅನ್ಯೋನ್ಯಾಭಾವವೇ ? ಅಥವಾ ಅತ್ಯಂತಾಭಾವವೇ ? ಎಂದು ನಾಲ್ಕು ವಿಕಲ್ಪಗಳು ಬರುತ್ತವೆ. ಮೊದಲಿನ ಎರಡು ಪಕ್ಷಗಳಲ್ಲಿ ಪೃಥಿವಿ ಇದ್ದಾಗ ಆಕಾಶವು ಅನುಭವಸಿದ್ಧವಾದ್ದರಿಂದ ಅದರ ಜ್ಞಾನವು ಬರದೇ ಹೋಗಬೇಕಾದೀತು. ಪೃಥಿವ್ಯಾದಿಗಳ ಅನ್ಯೋನ್ಯಾಭಾವವನ್ನೇ ಆಕಾಶವೆಂದು ಹೇಳಿದರೆ ಆಯಾಯ ಅನ್ಯೋನ್ಯಾಭಾವ ಆಯಾ ವಸ್ತುಗಳಲ್ಲಿಯೇ ಇರುವುದರಿಂದ ಮಧ್ಯದಲ್ಲಿ ಆಕಾಶದ ಪ್ರತೀತಿ ಬರದೇ ಹೋಗಬೇಕಾದೀತು. ಪೃಥಿವ್ಯಾದಿಗಳಿಗೆ ಅತ್ಯಂತಾಭಾವವೇ ಬರುವುದಿಲ್ಲವಾದ್ದರಿಂದ ನಾಲ್ಕನೆಯ ಪಕ್ಷವೂ ಸರಿಯಲ್ಲ. ಅಭಾವವೂ ಸತ್ಪದಾರ್ಥದ ಅವಸ್ಥಾವಿಶೇಷವೆಂದು

ಹಿಂದೆಯೇ ಹೇಳಿದೆ. ಆಕಾಶವನ್ನು ಅಭಾವರೂಪವೆಂದು ಹೇಳಿದರೂ ಅದು ತುಚ್ಛ ವೆನಿಸುವುದಿಲ್ಲ. ಎಲ್ಲಾ ಕಡೆಯಲ್ಲೂ ತುಂಬಿರುವ ಆಕಾಶವು ಪಂಚೀಕರಣಪ್ರಕ್ರಿಯೆ ಯಿಂದ ಸಾಕಾರವಾಗುವುದರಿಂದ ಅದು ಕಣ್ಣಿಗೆ ಗೋಚರವೇ ಆಗುತ್ತದೆ. ಆದ್ದರಿಂದ ಆಕಾಶವಿಲ್ಲವೆಂಬ ವಾದ ವಿಚಾರಶೂನ್ಯವೆನಿಸುತ್ತದೆ.

ಪರಾಭಿಮತಪಂಚಭೂತಾನಿ ನಿರಾಕೃತ್ಯೇದಾನೀಂ ಕ್ಷಣಿಕಜ್ಞಾನ ಸಂತಾನರೂಪತ್ವಮೇವ ಜೀವಾನಾಮಿತ್ಯೇವಂ ರೂಪಂ ಬುದ್ಧಮತ ಸಿದ್ಧಾಂತಮಧುನಾ ನಿರಾಕರೋತಿ— ಅನುಸ್ಮೃತೇಶ್ಚ || ೨೫ ||

ಪೂರ್ವವಾಸರಾನುಭೂತಪದಾರ್ಥಾನಾಮುತ್ತರದಿನೇಷ್ವನುಸ್ಮೃ ತೇಸ್ಸ್ಮರಣಾನುಭವದರ್ಶನಾಜ್ಜೀವಾನಾಂ ನಿತ್ಯತ್ವಮಬಾಧ್ಯಂ. ಜ್ಞಾನ ಸಂತಾನರೂಪತ್ವಾಂಗೀಕಾರೇ ಪೂರ್ವವಾಸರಾನುಭೂತಜ್ಞಾನಸಂತಾ ನಾನಾಂ ಸುಷುಪ್ತಿಕಾಲೇಷು ನಷ್ಟತ್ವೇನ ಸ್ಮರ್ತೃತ್ವಾಭಾವಾತ್. ನಚೋ ತ್ತರದಿನೇಷೂತ್ಪನ್ನಾನಾಂ ಜ್ಞಾನಸಂತಾನಾನಾಂ ಸ್ಮರ್ತೃತ್ವಂ ಭವಿಷ್ಯತೀತಿ ವಾಚ್ಯಂ, ಅನ್ಯೇನಾನುಭೂತಪದಾರ್ಥಾನಾಮನ್ಯೇನ ಸ್ಮರಣಾಸಂಭ ವಾತ್. ತಸ್ಮಾತ್ ಕ್ಷೇತ್ರಜ್ಞಾನಾಂ ಜ್ಞಾನಸಂತಾನಾತ್ಮಕತ್ವಮಯುಕ್ತಂ. ಪೂರ್ವಪ್ರಸ್ತುತಂ ವಸ್ತುವಿಷಯಜ್ಞಾನಂ ಪ್ರತ್ಯಭಿಜ್ಞಾನಂ ತದೇವೇದ ಮಿತಿ. ಸರ್ವಂ ವಸ್ತುಜಾತಮತೀತಕಾಲಾನುಭೂತಂ ಪ್ರತ್ಯಭಿಜ್ಞಾ ಯತೇ. ನಚ ಭವದ್ಭಿರ್ಜ್ವಾಲಾದಿಷ್ವಿವ ಸಾದೃಶ್ಯನಿಬಂಧನೋಽಯಮೇ ಕತ್ವವ್ಯಾಮೋಹ ಇತಿ ವಕ್ತುಂ ಶಕ್ಯಂ, ವ್ಯಾಮುಹ್ಯತೋ ಜ್ಞಾತುರೇಕ ಸ್ಯಾನಭ್ಯುಪಗಮಾತ್. ನಹ್ಯನ್ಯಾನುಭೂತಮೈಕತ್ವಂ ಸಾದೃಶ್ಯಂ ವಾ ಅನ್ಯೋಽನುಸಂಧತ್ತೇ. ತಸ್ಮಾದ್ಭಿನ್ನಕಾಲವಸ್ತ್ವಾಶ್ರಯಸಾದೃಶ್ಯಾಶ್ರಯ ನಿಬಂಧನಮೇಕತ್ವವ್ಯಾಮೋಹಂ ವದದ್ಭಿರ್ಜ್ಞಾತುರೇಕತ್ವಮವಶ್ಯಾಶ್ರ ಯಣೀಯಂ. ನಚ ಜ್ಞೇಯೇಷ್ವಪಿ ಘಟಾದಿಷು ಜ್ವಾಲಾದಿಷ್ವಿವ ಭೇದ ಸಾಧನಪ್ರಮಾಣಮುಪಲಭಾಮಹೇ ; ಯೇನ ಸಾದೃಶ್ಯನಿಬಂಧನಾನಾಂ ಪ್ರತ್ಯಭಿಜ್ಞಾಂ ಕಲ್ಪಯೇಮ. ಯದಪಿ ಚೇದಮುಚ್ಯತೇ " ಪ್ರತ್ಯಕ್ಷಾನು ಮಾನಾಭ್ಯಾಂ ಘಟಾದೇಃ ಕ್ಷಣಿಕತ್ವಂ ಸಿದ್ಧ್ಯತಿ. ಪ್ರತ್ಯಕ್ಷಂ ತಾವದ್ವರ್ತ ಮಾನಾರ್ಥವಿಷಯಮವರ್ತಮಾನಾದ್ವಸ್ತುನೋ ವ್ಯಾವೃತ್ತಂ ಸ್ವವಿಷಯ ಮವಗಮಯತಿ ನೀಲಮಿವ ಪೀತಾತ್. ಏವಂ ಚ ಭೂತಭವಿಷ್ಯದ್ಭ್ಯಾಂ ವರ್ತಮಾನಸ್ಯ ವಸ್ತ್ವಂತರತ್ವಮವಗತಂ ಭವತಿ. ಅತ್ರಾನುಮಾನಮಪಿ, ಅರ್ಥಕ್ರಿಯಾಕಾರಿತ್ವಾತ್ಸತ್ತ್ವಾಚ್ಚ ಘಟಾದಿಃ ಕ್ಷಣಿಕಃ, ಯದಕ್ಷಣಿಕಂ ಶಶವಿಷಾಣಾದಿ ತದನರ್ಥಕ್ರಿಯಾಕಾರಿ, ಅಸಚ್ಚ. ತಥಾಂತ್ಯಘಟಕ್ಷಣ ಸತ್ತ್ವಾತ್ ಪೂರ್ವಘಟಕ್ಷಣಸತ್ತ್ವಾನಿ ವಿನಷ್ಟಾನಿ ಘಟಕ್ಷಣಸತ್ತ್ವಾದಂ ತ್ಯಘಟಕ್ಷಣಸತ್ತ್ವವತ್ " ಇತಿ, ತಚ್ಚ ಕಾರ್ಯಕಾರಣಭಾವಾನುಪಪ

ತ್ತ್ವಾದಿಭಿಃ ಪೂರ್ವಮೇವ ನಿರಸ್ತಂ. ಕಿಂಚ ಪ್ರತ್ಯಕ್ಷಗಮ್ಯವರ್ತಮಾನಸ್ಯಾವರ್ತಮಾನಾದ್ವ್ಯಾವೃತ್ತಿರ್ನ ವರ್ತಮಾನಸ್ಯ ವಸ್ತ್ವಂತರತ್ವಮವಗಮಯತಿ; ಅಪಿತು ವರ್ತಮಾನಕಾಲಯೋಗಿತಾಮಾತ್ರಂ. ನಚ ತಾವತಾ ವಸ್ತ್ವಂತರತ್ವಂ ಸಿದ್ಧ್ಯತಿ, ತಸ್ಯೈವ ಕಾಲಾಂತರಯೋಗಸಂಭವಾತ್. ಯತ್ತು ಸತ್ತ್ವಾದರ್ಥಕ್ರಿಯಾಕಾರಿತ್ವಾಚ್ಚೇತಿ ಕ್ಷಣಿಕತ್ವೇ ಹೇತುದ್ವಯಮುಕ್ತಂ ತದಭಿಮತವಿಪರೀತಸಾಧನತ್ವಾದ್ವಿರುದ್ಧಂ. ಸತ್ತ್ವಾದರ್ಥಕ್ರಿಯಾಕಾರಿತ್ವಾದ್ವಾ ಘಟಾದಿ ಸ್ಥಾಸ್ನು, ಯದಸ್ಥಾಸ್ನು ತದಸದನರ್ಥಕ್ರಿಯಾಕಾರಿ ಚ, ಯಥಾ ಶಶವಿಷಾಣಮಿತ್ಯಪಿ ಹಿ ವಕ್ತುಂ ಶಕ್ಯಂ. ಕಿಂಚಾರ್ಥಕ್ರಿಯಾಕಾರಿತ್ವಮಕ್ಷಣಿಕತ್ವಮೇವ ಸಾಧಯೇತ್. ಕ್ಷಣಧ್ವಂಸಿನೋ ಹಿ ವ್ಯಾಪಾರಾಸಂಭವಾದರ್ಥಕ್ರಿಯಾಕಾರಿತ್ವಂ ನ ಸಂಭವತೀತ್ಯುಕ್ತಂ. ತಥಾಂತ್ಯಘಟಕ್ಷಣಸ್ಯ ಹೇತುತ್ವೇ ನಾಶದರ್ಶನಾದಿತರೇಽಪಿ ಘಟಕ್ಷಣಾಃ ಹೇತ್ವಪೇಕ್ಷಯಾ ನಷ್ಟಾಸ್ಸ್ಯುರಿತಿ ಮುದ್ಗರಾದಿಹೇತೂಪನಿಪಾತಾತ್ ಸ್ಥಾಸ್ನುತ್ವಮೇವ. ನಚ ವಾಚ್ಯಂ ಮುದ್ಗರಾದಯೋ ವಿಶಾಶಹೇತವಃ ಅಪಿ ತು ಕಪಾಲಾದಿವಿಸದೃಶಸಂತಾನೋತ್ಪತ್ತಿಹೇತವ ಇತಿ, ಕಪಾಲತ್ವಾವಸ್ಥಾಪತ್ತಿರೇವ ಘಟಾದೀನಾಂ ವಿನಾಶಃ ಇತ್ಯುಪಪಾದಿತತ್ವಾತ್. ಕಪಾಲೋತ್ಪತ್ತಿವ್ಯತಿರಿಕ್ತತ್ವಾಭ್ಯುಪಗಮೇಽಪಿ ಮುದ್ಗರಾದೇಃ ವಿನಾಶಹೇತುತ್ವಮೇವ. ಮುದ್ಗರಾದೇಃ ಕಪಾಲಹೇತುತ್ವಮಿತಿ ಯತ್ತದಯುಕ್ತಂ. ಅತಃ ಪ್ರತ್ಯಭಿಜ್ಞಯಾ ಸ್ಥಿರತ್ವಮವಗಮ್ಯಮಾನಂ ನ ಕೇನಾಪಿ ಪ್ರಕಾರೇಣಾಪಹ್ನೋತುಂ ಶಕ್ಯಂ. ಪೂರ್ವಾಪರಕಾಲಸಂಬಂಧ್ಯರ್ಥೈಕ್ಯವಿಷಯಾಯಾಃ ಪ್ರತ್ಯಭಿಜ್ಞಾಯಾ ಅನ್ಯವಿಷಯತ್ವಂ ಬ್ರೂಯಾತ್. ಕಿಂಚ ಪ್ರಮಾತೃಪ್ರಮೇಯಯೋಃ ಕ್ಷಣಿಕತ್ವಂ ವದದ್ಭಿರ್ವ್ಯಾಪ್ತ್ಯವಧಾರಣತತ್ಸ್ಮರಣಪೂರ್ವಕಾನುಮಾನಾಭ್ಯುಪಗಮೋಽಪಿ ದುಶ್ಶಕಃ. ತಥೇದಂ ಕ್ಷಣಿಕಮಿತ್ಯಾದಿಪ್ರತಿಜ್ಞಾಪೂರ್ವಕಹೇತೂಪನ್ಯಾಸಾದಿಕಮಪಿ ನೋಪಪದ್ಯತೇ ಭವತಾಂ, ಪ್ರತಿಜ್ಞೋಪಕ್ರಮಕ್ಷಣ ಏವ ವಕ್ತುರ್ವಿನಷ್ಟತ್ವಾತ್. ನಹ್ಯನ್ಯೇನೋಪಕ್ರಾಂತಮಜಾನದ್ಭಿರನ್ಯೈಸ್ಸಮಾಪಯಿತುಂ ಶಕ್ಯಂ. ತಸ್ಮಾದ್ವೈದಿಕಶಾಸ್ತ್ರಂ ಯುಕ್ತಂ.

ಹೀಗೆ ನಾಲ್ಕೇ ಭೂತಗಳೆಂಬುದನ್ನು ನಿರಾಕರಿಸಿ ಕ್ಷಣಿಕಜ್ಞಾನಸಂತಾನವೇ ಜೀವನೆಂಬ ಬೌದ್ಧಸಿದ್ಧಾಂತವನ್ನು ನಿರಾಕರಿಸುತ್ತಾನೆ. **ಅನುಸ್ಮೃತೇಶ್ಚ ||೨೪||**

ಹಿಂದಿನ ದಿನ ಅನುಭವಿಸಿದ ಪದಾರ್ಥಗಳನ್ನು ಮುಂದಿನ ದಿನಗಳಲ್ಲಿ ಸ್ಮರಿಸಿಕೊಳ್ಳುವುದಾಗಿ ಲೋಕದಲ್ಲಿ ಕಂಡುಬಂದಿರುವುದರಿಂದ ಜೀವರನ್ನು ನಿತ್ಯವೆಂದು ಹೇಳಲೇಬೇಕು. ಜ್ಞಾನಸಂತಾನವೇ ಜೀವನೆಂದು ಹೇಳಿದರೆ ಅಂದಿನ ದಿನ ಅನುಭವಿಸಿದ ಜ್ಞಾನಸಂತಾನಗಳು ಸುಷುಪ್ತಿಯಲ್ಲಿ ನಷ್ಟವಾಗುವುದರಿಂದ ಸ್ಮರಿಸುವವನೇ ಇಲ್ಲವಾ

ಗುತ್ತದೆ. ಆದರೂ ಮಾರನೆ ದಿನ ಹುಟ್ಟುವ ಜ್ಞಾನಸಂತಾನಗಳಿಗೆ ಸ್ಮರಣ ಬರಬಹುದೆಂದು ಹೇಳಿದರೆ, ಒಬ್ಬನು ಅನುಭವಿಸಿದ ವಸ್ತುಗಳನ್ನು ಮತ್ತೊಬ್ಬನು ಸ್ಮರಿಸಲಾರನಾದ್ದರಿಂದ ಜೀವರು ಜ್ಞಾನಸಂತಾನರೂಪರೆಂಬುದು ಯುಕ್ತವಲ್ಲ. ಹಿಂದೆ ಹೇಳಿದಂತೆ ವಸ್ತುವಿನ ಸ್ಥಿರತೆಯನ್ನೇ ಇಲ್ಲಿಯೂ ಹೀಗೆ ಪ್ರತಿಪಾದಿಸಲಾಗಿದೆ. ಹಿಂದೆ ಅನುಭವಿಸಿದ ವಸ್ತುವನ್ನು ತಿಳಿಯುವುದೇ ಅನುಸ್ಮರಣವೆನಿಸುತ್ತದೆ. ಎಲ್ಲಾ ವಸ್ತುಗಳನ್ನು ಹಿಂದಿನಕಾಲದಲ್ಲಿ ಅನುಭವಿಸಿದ್ದಂತೆ ತಿಳಿಯುವುದರಿಂದ ಇದೇ ಪ್ರತ್ಯಭಿಜ್ಞಾನವೆನಿಸುತ್ತದೆ. ಒಂದೇ ದೀಪದ ಜ್ವಾಲೆ ಎಂಬ ಸ್ಮರಣ ಬರುವಂತೆ ಸಾದೃಶ್ಯಮೂಲಕವಾಗಿ ಜ್ಞಾತೃವಾದ ಜೀವನೂ ಒಬ್ಬನೇ ಆಗುತ್ತಾನೆಯಾದ್ದರಿಂದ ಅವನನ್ನು ಒಬ್ಬನೇ ಎಂದು ಹೇಳುವುದು ಅಜ್ಞಾನವೆಂದರೆ ಇದೂ ಸರಿಯಲ್ಲ; ಯಾಕೆಂದರೆ ಆ ಅಜ್ಞಾನವನ್ನು ಅನುಭವಿಸುವ ಒಬ್ಬ ಚೇತನನನ್ನು ನೀವು ಒಪ್ಪುವುದಿಲ್ಲ. ಒಬ್ಬನು ಅನುಭವಿಸಿದ ಏಕತ್ವವನ್ನಾಗಲೀ, ಸಾದೃಶ್ಯವನ್ನಾಗಲೀ ಮತ್ತೊಬ್ಬನು ಸ್ಮರಿಸುವಂತಿಲ್ಲ. ಆದ್ದರಿಂದ ಬೇರೆಬೇರೆ ಕಾಲದಲ್ಲಿರುವ ವಸ್ತುಗಳಲ್ಲಿ ಸಾದೃಶ್ಯಾನುಭವದಿಂದ ಏಕತ್ವವನ್ನು ಅಜ್ಞಾನವೆಂದು ಹೇಳುವವರು ಆ ಬಗೆಯ ವ್ಯಾಮೋಹವನ್ನು ಅನುಭವಿಸುವ ಒಬ್ಬ ಚೇತನನನ್ನು ಒಪ್ಪಲೇಬೇಕು. ದೀಪಜ್ವಾಲೆಯನ್ನು ಬೇರೆ ಬೇರೆ ಎಂದು ಸಾಧಿಸುವ ಅನುಮಾನ ಪ್ರಮಾಣವಿದ್ದರೂ ಗಡಿಗೆಯ ಬಗ್ಗೆ ಆ ರೀತಿಯ ಪ್ರಮಾಣ ಸಿಕ್ಕುವುದಿಲ್ಲ. ಆದ್ದರಿಂದ ಒಂದೇ ಘಟ ಎಂಬ ವ್ಯವಹಾರವನ್ನು ಸಾದೃಶ್ಯಮೂಲವೆಂದು ಹೇಳಲಾಗುವುದಿಲ್ಲ. "ಪ್ರತ್ಯಕ್ಷ ಮತ್ತು ಅನುಮಾನಗಳಿಂದಲೇ ಗಡಿಗೆ ಮೊದಲಾದವು ಕ್ಷಣಿಕವೆಂದು ಸಿದ್ಧವಾಗುತ್ತವೆ. ಗಡಿಗೆ ನೀಲವಾಗಿದೆ ಎಂದು ಹೇಳಿದರೆ ಹಳದಿ ಮೊದಲಾದ ಬಣ್ಣಗಳಿಲ್ಲವೆಂಬುದು ಸಿದ್ಧವಾಗುವಂತೆ ಗಡಿಗೆ ಇದೆ ಎಂದು ಹೇಳಿದರೆ ಭೂತ ಮತ್ತು ಭವಿಷ್ಯತ್ಕಾಲಗಳಲ್ಲಿ ಅದು ಇಲ್ಲವೆಂದು ಸಿದ್ಧವಾಗುತ್ತದೆ. ಇದರಿಂದಲೂ ಗಡಿಗೆ ಮೊದಲಾದ ವಸ್ತುಗಳು ಕ್ಷಣಿಕವೆಂಬುದು ಸಿದ್ಧವಾಯಿತು. ಅನುಮಾನದಿಂದಲೂ ವಸ್ತು ಕ್ಷಣಿಕವೆಂಬುದು ಸಿದ್ಧಿಸುತ್ತದೆ. ಗಡಿಗೆ ಮೊದಲಾದವು ಕಾರ್ಯೋಪಯೋಗಿಗಳಾದ್ದರಿಂದ ಕ್ಷಣಿಕವಾಗುತ್ತವೆ. ಕಾರ್ಯಕ್ಕೆ ಉಪಯೋಗವಾಗದ ಮೊಲದ ಕೊಂಬು ಮೊದಲಾದವು ಕ್ಷಣಿಕವಲ್ಲ. ಆದ್ದರಿಂದ ಕಾರ್ಯೋಪಯೋಗಿಗಳಾದ ಗಡಿಗೆ ಮೊದಲಾದವು ಕ್ಷಣಿಕಗಳು. ಹಾಗೆಯೇ ಹಿಂದಿನ ಘಟಕ್ಷಣಗಳು ಕೊನೆಯ ಘಟಕ್ಷಣದಂತೆ ನಾಶವಾಗುವುವು. ಹೀಗೆ ಈ ಬಗೆಯ ಅನುಮಾನದಿಂದಲೂ ಗಡಿಗೆ ಮೊದಲಾದವು ಕ್ಷಣಿಕವೆಂದು ಸಿದ್ಧವಾಯಿತು" ಎಂದು ಬೌದ್ಧರು ಹೇಳುವುದು ಸರಿಯಲ್ಲ; ಏಕೆಂದರೆ ಕ್ಷಣಿಕ ವಾದದಲ್ಲಿ ಕಾರ್ಯಕಾರಣಭಾವವೇ ಹೊಂದುವುದಿಲ್ಲವೆಂದು ಹಿಂದೆಯೇ ಹೇಳಿಯಾಗಿದೆ. ಇದಲ್ಲದೆ, ಪ್ರತ್ಯಕ್ಷಪ್ರಮಾಣದಿಂದ ಘಟವಿದೆ ಎಂದು ಹೇಳಿದರೆ ಈಗ ಅದರ ಇಲ್ಲದಿರುವಿಕೆಯನ್ನು ಅದು ನಿರಾಕರಿಸುವುದೇ ಹೊರತು ಇರುವ ವಸ್ತುವನ್ನು ಭೂತಭವಿಷ್ಯತ್ಕಾಲಗಳಲ್ಲೂ ಇರುವುದಿಲ್ಲವೆಂದು ಅದು ತಿಳಿಸುವುದಿಲ್ಲ. ವಸ್ತು ವರ್ತಮಾನಕಾಲದಲ್ಲಿ ಇದೆ ಎಂಬುದು ಮಾತ್ರವೇ ಪ್ರತ್ಯಕ್ಷ

ಜ್ಞಾನದಿಂದ ಸಿದ್ಧವಾಗುವುದೇ ಹೊರತು ಅದು ಭೂತಭವಿಷ್ಯತ್ಕಾಲದಲ್ಲಿ ಇಲ್ಲವೆಂಬುದು ಸಿದ್ಧವಾಗುವುದಿಲ್ಲ. ಆದರೆ ವರ್ತಮಾನಕಾಲದಲ್ಲಿ ಇರುವ ವಸ್ತುವಿಗೆ ಭೂತಭವಿಷ್ಯಕಾಲದಲ್ಲೂ ಸಂಬಂಧ ಬರಬಹುದು. ವಸ್ತುಗಳೆಲ್ಲವೂ ಸದ್ರೂಪವೂ ಕಾರ್ಯೋಪಯೋಗಿಯೂ ಆಗುವುದರಿಂದ ಕ್ಷಣಿಕವೆಂದು ಹೇಳಿದ್ದು ಸರಿಯಲ್ಲ; ಏಕೆಂದರೆ ಅಂತಹ ವಸ್ತು ಸ್ಥಿರವೇ ಆಗಬೇಕಾಗುವುದು. ಇಲ್ಲದಿದ್ದರೆ, ಮೊಲದ ಕೊಂಬಿನಂತೆ ಅದು ಇಲ್ಲವೇ ಆಗುವುದು. ಇದೂ ಅಲ್ಲದೆ, ವಸ್ತುವು ಕ್ಷಣಿಕವಾಗಿದ್ದರೆ ಕಾರ್ಯೋಪಯೋಗಿಯಾಗಲು ಸಾಧ್ಯವಿಲ್ಲ. ಕ್ಷಣಿಕ ವಸ್ತುಗಳಿಗೆ ವ್ಯಾಪಾರವೇ ಸಂಭವಿಸದಿರುವುದರಿಂದ ಅವು ಹೇಗೆ ಕಾರ್ಯೋಪಯೋಗಿಯಾಗಬಲ್ಲವು? 'ಕೊನೆಯ ಘಟಕ್ಷಣದಂತೆ ಎಲ್ಲಾ ಘಟಕ್ಷಣಗಳೂ ನಾಶಹೊಂದುತ್ತವೆ ಎಂದು ಹೇಳಿದ್ದೂ ಸರಿಯಲ್ಲ; ಯಾಕೆಂದರೆ ಒಂದು ಕಾರಣದಿಂದ ಕೊನೆಯ ಘಟಕ್ಷಣ ನಾಶವಾಗುವಂತೆ ಇತರ ಘಟಕ್ಷಣಗಳೂ ನಿರ್ದಿಷ್ಟವಾದ ಕಾರಣದಿಂದ ನಾಶವಾಗುತ್ತವೆಯಾದ್ದರಿಂದ ಅವಕ್ಕೆ ಸ್ಥಿರತ್ವವೇ ಬರುವುದಿಲ್ಲ. "ದೊಣ್ಣೆಯ ಹೊಡೆತ ಘಟದ ನಾಶಕ್ಕೆ ಕಾರಣವಲ್ಲ; ಆದರೆ ಕಪಾಲಗಳ ಉತ್ಪತ್ತಿಗೆ ಕಾರಣ"ವೆಂದು ಹೇಳುವುದೂ ಸರಿಯಲ್ಲ; ಯಾಕೆಂದರೆ ಕಪಾಲಗಳ ಅವಸ್ಥೆಯನ್ನು ಹೊಂದುವುದೇ ಘಟದ ನಾಶವೆಂದು ಹಿಂದೆಯೇ ಹೇಳಿಯಾಗಿದೆ. ಕಪಾಲಗಳಿಗಿಂತಲೂ ಬೇರೆಯಾಗಿ ಘಟದ ನಾಶವನ್ನು ಒಪ್ಪಿದರೂ ದೊಣ್ಣೆಯ ಹೊಡೆತದಿಂದಲೇ ಆ ನಾಶವು ಹುಟುವುದರಿಂದ ದೊಣ್ಣೆಯನ್ನೇ ಅದಕ್ಕೆ ಕಾರಣವೆಂದು ಒಪ್ಪಬೇಕು. ಆದ್ದರಿಂದ ದೊಣ್ಣೆಯು ಕಪಾಲಗಳ ಉತ್ಪತ್ತಿಗೆ ಕಾರಣವೆಂದು ಅವರು ಹೇಳಿದ್ದು ಯುಕ್ತವಲ್ಲ. ಹೀಗೆ ಅದೇ ಇದು ಎಂಬ ಸ್ಮರಣದಿಂದ ವಸ್ತುಗಳಲ್ಲಿ ಸರ್ವಸಮ್ಮತವಾದ ಅನುಭವವನ್ನು ಯಾರೂ ನಿರಾಕರಿಸಲಾಗುವುದಿಲ್ಲ. ಹಿಂದಿನ ಮುಂದಿನ ಕಾಲಗಳಲ್ಲಿ ವಸ್ತುವಿನ ಏಕರೂಪತೆಯನ್ನು ತಿಳಿಸುವ ಪ್ರತ್ಯಭಿಜ್ಞೆಯನ್ನು ನಿರಾಕರಿಸಿದರೆ, ನೀಲಾದಿ ಜ್ಞಾನಗಳೂ ಸಹ ಆಯಾ ವಿಷಯಗಳನ್ನು ತಿಳಿಸುವುದಿಲ್ಲವೆಂದು ನಿರಾಕರಿಸಬೇಕಾಗುತ್ತದೆ. ಇದಲ್ಲದೆ ಪ್ರಮಾಣ, ಪ್ರಮೇಯ, ಪ್ರಮಾತೃ ಇವೆಲ್ಲವೂ ಕ್ಷಣಿಕವಾದ್ದರಿಂದ ವ್ಯಾಪ್ತಿ, ಅದರ ಸ್ಮರಣ, ಅದನ್ನು ಅವಲಂಬಿಸಿದ ಅನುಮಾನ ಇವೆಲ್ಲವನ್ನೂ ನಿರ್ವಹಿಸಲಿಕ್ಕೇ ಆಗುವುದಿಲ್ಲ. ಹಾಗೆಯೇ ಸದ್ರೂಪವೇ ಮೊದಲಾದ ಹೇತುಗಳಿಂದ ವಸ್ತುಗಳನ್ನು ಕ್ಷಣಿಕವೆಂದು ಸಾಧಿಸಲಿಕ್ಕೂ ಆಗುವುದಿಲ್ಲ. ನಿಮ್ಮ ಸಿದ್ಧಾಂತದಂತೆ ಮೊದಲನೇ ವಾಕ್ಯವನ್ನು ಮುಗಿಸಿ ಎರಡನೇ ವಾಕ್ಯವನ್ನು ಹೇಳುವುದರೊಳಗೆ ಆ ಚೇತನನೇ ನಷ್ಟವಾಗಿರುತ್ತಾನೆ. ಅವನೇ ನಷ್ಟವಾದಮೇಲೆ ಮತ್ತೊಬ್ಬನು ಅದನ್ನು ನೆರವೇರಿಸಲು ಹೇಗೆ ಸಾಧ್ಯವಾದೀತು? ಆದ್ದರಿಂದ ವೈದಿಕಶಾಸ್ತ್ರವೇ ಯುಕ್ತವಾದುದು.

**ಪುನರ್ಹೇತ್ವಂತರೇಣ ನಿರಾಕರೋತಿ—ನಾಸತೋಽದೃಷ್ಟತ್ವಾತ್ ॥ ೨೫ ॥**

**ಅಸತಸ್ಸುಷ್ಪ್ತಿಕಾಲೇ ನಷ್ಟಾತ್ಪೂರ್ವಪೂರ್ವಜ್ಞಾನಸಂತಾನಾದುತ್ತರೋತ್ತರಜ್ಞಾನಸಂತಾನಾನಾಮುತ್ಪತ್ತಿರ್ನ ಸಂಭವತಿ, ಕುತಃ ಅದೃಷ್ಟ**

ತ್ವಾತ್, ನಷ್ಟಮೃತ್ಪಿಂಡಾದೇರ್ಘಟಾದಿಜನಕತ್ವಾದರ್ಶನಾತ್. ಏವಂ ತಾವದ್ವೈಭಾಷಿಕಸೌತ್ರಾಂತಿಕಯೋರ್ಬಾಹ್ಯಾರ್ಥಾಸ್ತಿತ್ವವಾದಿನೋಽಸ್ಸಾಧಾರಣಾನಿ ದೂಷಣಾನ್ಯುಕ್ತಾನಿ. ತತ್ರ ಯದುಕ್ತಂ ಸಂಪ್ರಯುಕ್ತಸ್ಯಾರ್ಥಸ್ಯ ಜ್ಞಾನೋತ್ಪತ್ತಿಕಾಲೇಽನವಸ್ಥಿತತ್ವಾನ್ನ ಕಸ್ಯಚಿದರ್ಥಸ್ಯ ಜ್ಞಾನವಿಷಯತ್ವಂ ಸಂಭವತೀತಿ ಕತ್ರ ಸೌತ್ರಾಂತಿಕಃ ಪ್ರತ್ಯವತಿಷ್ಠತೇ. ನ ಜ್ಞಾನಕಾಲೇಽನವಸ್ಥಾನಮರ್ಥಸ್ಯ ಜ್ಞಾನಾವಿಷಯತ್ವಹೇತುಃ. ಜ್ಞಾನೋತ್ಪತ್ತಿಹೇತುತ್ವಮೇವ ಹಿ ಜ್ಞಾನವಿಷಯತ್ವಂ. ನಚೈತಾವತಾ ಚಕ್ಷುರಾದೇರ್ಜ್ಞಾನವಿಷಯತ್ವಪ್ರಸಂಗಃ. ಸ್ವಕಾರಣಸಮರ್ಪಣೇನ ಜ್ಞಾನಹೇತೋರೇವ ಜ್ಞಾನವಿಷಯತ್ವಾಭ್ಯುಪಗಮಾತ್. ಜ್ಞಾನೇ ಸ್ವಾಕಾರಂ ಸಮರ್ಪ್ಯ ವಿನಷ್ಟೋಽಪ್ಯರ್ಥಃ ಜ್ಞಾನಗತೇನ ನೀಲಾದ್ಯಾಕಾರೇಣಾನುಮೀಯತೇ. ನಚ ಪೂರ್ವಪೂರ್ವಜ್ಞಾನೇನೋತ್ತರೋತ್ತರಜ್ಞಾನಾಕಾರಸಿದ್ಧಿಃ. ನೀಲಜ್ಞಾನಸತ್ತ್ವೇಽಪಿ ತದ್ಬ್ಜ್ಞಾನಾನುತ್ಪತ್ತಿಪ್ರಸಂಗಾತ್. ಅತೋಽರ್ಥಕೃತಮೇವ ಜ್ಞಾನವೈಚಿತ್ರ್ಯಮಿತಿ ಚೇದತ್ರೋಚ್ಯತೇ ನಾಸತೋಽದೃಷ್ಟತ್ವಾದಿತಿ. ಯೋಽಯಂ ಜ್ಞಾನೇ ನೀಲಾದಿರಾಕಾರ ಉಪಲಭ್ಯತೇ ಸ ವಿನಷ್ಟಸ್ಯಾಸತೋಽರ್ಥಸ್ಯಾಕಾರೋ ಭವಿತುಂ ನಾರ್ಹತಿ, ಕುತಃ ಅದೃಷ್ಟತ್ವಾತ್. ನಖಲು ಧರ್ಮಿಣಿ ವಿನಷ್ಟೇ ತದ್ಧರ್ಮಸ್ಯಾರ್ಥಾಂತರೇ ಸಂಕ್ರಮಣಂ ದೃಷ್ಟಂ. ಪ್ರತಿಬಿಂಬಾದಿಕಮಪಿ ಸ್ಥಿರಸ್ಯೈವ ಭವತಿ. ತತ್ರಾಪಿ ನ ಧರ್ಮಮಾತ್ರಸ್ಯ. ಅತೋಽರ್ಥವೈಚಿತ್ರ್ಯಂ ಕೃತಂ. ಜ್ಞಾನವೈಚಿತ್ರ್ಯಮರ್ಥಸ್ಯ ಜ್ಞಾನಕಾಲೇಽವಸ್ಥಾನಾದೇವ ಭವತಿ. ತಸ್ಮಾದ್ಬೌದ್ಧಸಮಯೋಽಸಮಂಜಸ ಇತಿ ವೇದಿತವ್ಯಂ.
ಮತ್ತೆ ಬೌದ್ಧಮತವನ್ನು ನಿರಾಕರಿಸುತ್ತಾನೆ. **ನಾಸತೋಽದೃಷ್ಟತ್ವಾತ್ ||೨೫||**

ಮಲಗಿದ್ದಾಗ ಹಿಂದಿನ ಜ್ಞಾನಸಂತಾನವೇ ನಷ್ಟವಾದ್ದರಿಂದ ಮುಂದಿನ ಜ್ಞಾನಸಂತತಿಯೂ ಹುಟ್ಟುವುದಿಲ್ಲ; ಯಾಕೆಂದರೆ ನಷ್ಟವಾದ ಮಣ್ಣುಮುದ್ದೆ ಗಡಿಗೆಯನ್ನು ಹುಟ್ಟಿಸಲಾರದೆಂದು ಲೋಕದಲ್ಲಿ ಸ್ಪಷ್ಟವಾಗಿ ಕಂಡುಬಂದಿದೆ. ಹೀಗೆ ಹೊರಗಿನ ವಸ್ತುವನ್ನು ಒಪ್ಪುವ ವೈಭಾಷಿಕ ಸೌತ್ರಾಂತಿಕರ ಬಗ್ಗೆ ದೂಷಣಗಳನ್ನು ಹೇಳಿಯಾಯಿತು. ಜ್ಞಾನದಲ್ಲಿ ತೋರಬೇಕಾದ ವಸ್ತುವು ಆ ಜ್ಞಾನ ಹುಟ್ಟುವ ಕಾಲದಲ್ಲಿ ಇರುವುದಿಲ್ಲವಾದ್ದರಿಂದ ಯಾವ ವಸ್ತುವೂ ಜ್ಞಾನಗೋಚರವಾಗುವುದಿಲ್ಲವೆಂದು ವೈಭಾಷಿಕರು ಹೇಳಿದ್ದನ್ನು ಸೌತ್ರಾಂತಿಕರು ಈರೀತಿ ಸಮಾಧಾನವನ್ನು ಮಾಡುತ್ತಾರೆ. ಜ್ಞಾನ ಹುಟ್ಟುವ ಕಾಲದಲ್ಲಿ ವಸ್ತುವಿಲ್ಲದ ಜ್ಞಾನಗೋಚರವಾಗದಿರಲಿಕ್ಕೆ ಕಾರಣವಾಗಲಾರದು. ಯಾಕೆಂದರೆ ಜ್ಞಾನ ಹುಟ್ಟಲಿಕ್ಕೆ ಯಾವುದು ಕಾರಣವೋ ಅದೇ ಜ್ಞಾನದಲ್ಲಿ ವಿಷಯವಾಗುವುವು. ಇದರಿಂದ ಕಣ್ಣು ಮೊದಲಾದ ಇಂದ್ರಿಯಗಳು ಜ್ಞಾನದಲ್ಲಿ ವಿಷಯವಾಗುವಂತಿಲ್ಲ; ಯಾಕೆಂದರೆ ಯಾವುದು

ತನ್ನನ್ನು ಅರ್ಪಿಸುವ ಮೂಲಕ ಜ್ಞಾನಸಾಧನವಾಗುವುದೋ ಅದೇ ಜ್ಞಾನಕ್ಕೆ ವಿಷಯವಾಗುವುದೆಂದು ಒಪ್ಪಲಾಗಿದೆ. ವಸ್ತುವು ಜ್ಞಾನದಲ್ಲಿ ತನ್ನ ಆಕಾರವನ್ನು ಅರ್ಪಿಸಿ ನಷ್ಟವಾದರೂ ಆ ಜ್ಞಾನದಲ್ಲಿರುವ ನೀಲ ಮೊದಲಾದ ಆಕಾರದಿಂದಲೇ ಆ ವಸ್ತುವನ್ನು ಊಹಿಸಲಾಗುವುದು. "ಹಿಂದಿನ ಜ್ಞಾನದಿಂದ ಮುಂದಿನ ಜ್ಞಾನದ ಆಕಾರವು ಸಿದ್ಧಿಸುವುದಿಲ್ಲ; ನೀಲದ ಜ್ಞಾನವಿದ್ದರೂ ಆ ಜ್ಞಾನ ಹುಟ್ಟದೇಹೋಗುವುದರಿಂದ ಜ್ಞಾನದ ವೈವಿಧ್ಯವು ಆಯವಸ್ತುವನ್ನೇ ಅವಲಂಬಿಸಿದೆ" ಎಂದು ಹೇಳುವುದಾದರೆ ಅದಕ್ಕೆ ಸಮಾಧಾನವನ್ನು ಸೂತ್ರದಲ್ಲಿ ಕಾಣಬಹುದು. ಜ್ಞಾನದಲ್ಲಿ ಕಾಣುವ ನೀಲ ಮೊದಲಾದ ಆಕಾರವು ನಷ್ಟವಾದ ವಸ್ತುವಿನ ಆಕಾರವಾಗಲಾರದು ; ಯಾಕೆಂದರೆ ಧರ್ಮಿಯೇ ನಷ್ಟವಾದರೆ ಅದರ ಧರ್ಮವು ಬೇರೆ ವಸ್ತುವಿನಲ್ಲಿ ಸಂಕ್ರಮಿಸುವುದನ್ನು ಲೋಕದಲ್ಲಿ ನಾವು ಕಾಣಲಾರೆವು. ಪ್ರತಿಬಿಂಬವೂ ಸಹ ಸ್ಥಿರವಾದ ವಸ್ತುವಿಗೇ ಸಂಭವಿಸುತ್ತದೆ. ಅದರಲ್ಲೂ ಧರ್ಮಿಯನ್ನು ಬಿಟ್ಟು ಧರ್ಮವೊಂದಕ್ಕೇ ಪ್ರತಿಬಿಂಬವಿರುವುದಿಲ್ಲ. ಆದ್ದರಿಂದಲೇ ವಸ್ತುಗಳ ವೈವಿಧ್ಯದಿಂದ ಉಂಟಾಗುವ ಜ್ಞಾನದ ವೈವಿಧ್ಯವು ಜ್ಞಾನಕಾಲದಲ್ಲಿ ಆ ವಸ್ತುಗಳಿರುವುದರಿಂದಲೇ ಸಾಧ್ಯವಾಗುತ್ತದೆ. ಹೀಗೆ ಬೌದ್ಧಮತವನ್ನು ಯುಕ್ತವಲ್ಲವೆಂದು ತಿಳಿಯಬೇಕು.

**ನಷ್ಟಪದಾರ್ಥಸ್ಯಾಪಿ ಕಾರ್ಯಜನಕತ್ವಾಂಗೀಕಾರೇ ಬಾಧಕಮಾಶಂಕ್ಯಾಹ— ಉದಾಸೀನಾನಾಮಪಿ ಚೈವಂ ಸಿದ್ಧಿಃ ॥ ೨೬ ॥**

**ಏವಮಪಿ ನಷ್ಟಸ್ಯಾಪಿ ಕಾರ್ಯಜನಕತ್ವೇ ಸತಿ ಉದಾಸೀನಾನಾಂ ನಿರ್ವ್ಯಾಪಾರಿಣಾಮಪಿ ಜೀವಾನಾಂ ಸಕಲಕಾರ್ಯಸಿದ್ಧಿಸ್ಸ್ಯಾತ್. ತಸ್ಮಾದೇತದಸಮೀಚೀನಂ. ಏವಂ ಕ್ಷಣಿಕತ್ವಾಸದುತ್ಪತ್ತ್ಯಹೇತುಕವಿನಾಶಾದ್ಯಭ್ಯುಪಗಮೇ ಉದಾಸೀನಾನಾಂ ಅನುದ್ಯುಕ್ತಾನಾಮಪಿ ಸರ್ವಾರ್ಥಸಿದ್ಧಿಸ್ಸ್ಯಾತ್. ಇಷ್ಟಪ್ರಾಪ್ತಿರನಿಷ್ಟನಿವೃತ್ತಿರ್ವಾ ಪ್ರಯತ್ನಾದಿಭಿಸ್ಸಾಧ್ಯತೇ. ಕ್ಷಣಧ್ವಂಸೇ ಹಿ ಸರ್ವೇಷಾಂ ಭಾವಾನಾಂ ಪೂರ್ವಪೂರ್ವಂ ವಸ್ತು, ತದ್ಗತೋ ವಾ ವಿಶೇಷಃ, ಸಂಸ್ಕಾರಾದಿಕಃ ವಿದ್ಯಾದಿರ್ವಾ ಉತ್ತರತ್ರ ನ ಕಶ್ಚಿದನುವರ್ತತ ಇತಿ ಪ್ರಯತ್ನಾದಿಸಾಧ್ಯಂ ನ ಕಿಂಚಿದಸ್ತಿ. ಏವಂ ಸತ್ಯಹೇತುಸಾಧ್ಯತ್ವಾತ್ಸರ್ವಸಿದ್ಧೀನಾಮುದಾಸೀನಾನಾಮಪ್ಯೈಹಿಕಾಮುಷ್ಮಿಕಫಲಂ ಮೋಕ್ಷಶ್ಚ ಸಿದ್ಧ್ಯೇತ್. ತಸ್ಮಾದಸುರಮೋಹಕಲ್ಪಕವಿಷ್ಣ್ವವತಾರಕೃತ ಬುದ್ಧಮತಂ ವೈದಿಕೈಸ್ಸರ್ವಥಾ ನಾಂಗೀಕರಣೀಯಂ.**

ನಷ್ಟವಾದ ವಸ್ತುವೂ ಸಹ ಕಾರ್ಯವನ್ನು ಹುಟ್ಟಿಸುವುದೆಂದು ಒಪ್ಪಿದರೆ ಹಾನಿ ಏನೆಂದು ಶಂಕಿಸಿ ನಿರಾಕರಿಸುತ್ತಾನೆ. **ಉದಾಸೀನಾನಾಮಪಿ ಚೈವಂ ಸಿದ್ಧಿಃ ॥**

ಹೀಗೆ ನಷ್ಟವಾದ ವಸ್ತುವಿನಿಂದಲೂ ಕಾರ್ಯವು ಹುಟ್ಟುವುದಾದರೆ ಯಾವ ಕೆಲಸವನ್ನೂ ಮಾಡದೆ ಉದಾಸೀನರಾಗಿರುವ ಜೀವರಿಂದಲೂ ಎಲ್ಲಾ ಕಾರ್ಯವೂ ಆಗಬೇಕಾಗುತ್ತದೆ. ಆದ್ದರಿಂದ ಈ ವಾದ ಯುಕ್ತವಲ್ಲ. ಹೀಗೆ ವಸ್ತುಗಳು ಕ್ಷಣಿಕ

ವೆಂದೂ, ಸದ್ವಸ್ತುವಿನಿಂದ ಹುಟ್ಟದೆ ಅವು ನಿಷ್ಕಾರಣವಾಗಿ ನಾಶವಾಗುತ್ತವೆ ಎಂದೂ ಒಪ್ಪಿದರೆ ಉದ್ಯೋಗರಹಿತರಿಗೂ ಎಲ್ಲಾ ಕಾರ್ಯಗಳೂ ಸಿದ್ಧಿಸಬೇಕಾಗುತ್ತದೆ. ಇಷ್ಟಪ್ರಾಪ್ತಿ ಮತ್ತು ಅನಿಷ್ಟನಿವೃತ್ತಿಗಳನ್ನು ಪ್ರಯತ್ನದಿಂದಲೇ ಸಾಧಿಸಬೇಕಾಗಿದೆ. ಎಲ್ಲವೂ ಒಂದೇ ಕ್ಷಣದಲ್ಲಿಯೇ ನಷ್ಟವಾಗುವುದಾದರೆ ಎಲ್ಲಾ ಜೀವರಿಗೂ ಹಿಂದಿನ ವಸ್ತು, ಅದರದರ ವಿಶೇಷ, ವಿದ್ಯಾದಿ ಸಂಸ್ಕಾರ ಇದು ಯಾವುದೂ ಮುಂದಕ್ಕೆ ಅನುಸರಿಸಿಕೊಂಡು ಬರುವುದಿಲ್ಲವಾದ್ದರಿಂದ ಪ್ರಯತ್ನದಿಂದ ಸಾಧಿಸುವಂತಹದು ಯಾವುದೂ ಇರುವುದಿಲ್ಲ. ಹೀಗಾದರೆ ಎಲ್ಲಾ ಕಾರ್ಯಗಳನ್ನೂ ಕಾರಣವಿಲ್ಲದೆ ಸಾಧಿಸಬಹುದಾದ್ದರಿಂದ ಐಹಿಕಾಮುಷ್ಮಿಕ ಫಲಗಳೆಲ್ಲವೂ ಉದಾಸೀನರಿಗೂ ಸಿದ್ಧಿಸಬೇಕಾದೀತು. ಆದ್ದರಿಂದ ರಾಕ್ಷಸರಿಗೆ ಮೋಹಗೊಳಿಸಲಿಕ್ಕಾಗಿ ವಿಷ್ಣುವಿನ ಅವತಾರವೆನಿಸಿದ ಬುದ್ಧನಿಂದ ರಚಿತವಾದ ಬೌದ್ಧಪ್ರಕ್ರಿಯೆ ವೈದಿಕರಿಗೆ ಗ್ರಾಹ್ಯವಲ್ಲ.

ಏವಂ ಬುದ್ಧಮತಂ ನಿರಸ್ಯ ಪ್ರಚ್ಛನ್ನಬೌದ್ಧಾಭಿಧಾನಜೀವೇಶ್ವರಜಗನ್ಮಿಥ್ಯಾತ್ವಪ್ರತಿಪಾದಕನಿರ್ವಿಶೇಷಾದ್ವೈತಮತಮಧುನಾ ನಿರಾಕರೋತಿ—ನಾಭಾವಾಧಿಕರಣಂ ॥ ೮ ॥ ನಾಭಾವ ಉಪಲಬ್ಧೇಃ ॥ ೨೮ ॥

ಜೀವೇಶ್ವರಾವಚ್ಛಿನ್ನಪಂಚಮಹಾಭೂತಾತ್ಮಕಚೇತನಾಚೇತನಾರ್ಥಪ್ರಪಂಚಸ್ಯ ಅಸತ್ತ್ವಂ ನಾಮ ಶಶಶೃಂಗಗಂಗನಾರವಿಂದವಂಧ್ಯಾಪುತ್ರವತ್ ಶೂನ್ಯತ್ವಂ ಸ್ವಪ್ನಪ್ರಪಂಚಾದಿವನ್ಮಿಥ್ಯಾತ್ವಂ ವಾ? ನಾದ್ಯಃ—ನಾಭಾವ ಜೀವೇಶ್ವರಾತ್ಮಕಚೇತನಾಚೇತನಾತ್ಮಕಪ್ರಪಂಚಸ್ಯಾಭಾವಃ. ತಸ್ಯ ಶೂನ್ಯತ್ವಂ ನ ಸಂಭವತಿ, ಕುತಃ ಉಪಲಬ್ಧೇಃ ಪ್ರತ್ಯಕ್ಷಪ್ರಮಾಣಾರ್ಥಸಿದ್ಧಿಕ್ರಿಯುಸಿದ್ಧ್ಯಾತ್ಮಕತಯಾ ಪ್ರಪಂಚಸ್ಯ ವಿದ್ಯಮಾನತ್ವಾತ್. ವಂಧ್ಯಾಪುತ್ರಾದಿವಚ್ಛೂನ್ಯತ್ವಾಂಗೀಕಾರೇ ಪ್ರತ್ಯಕ್ಷೋಪಲಬ್ಧಿರ್ನ ಸ್ಯಾತ್. ಏವಂ ವಿಜ್ಞಾನಾಭಿಧಾನಬುದ್ಧಾದ್ವೈತ್ಯಪಾದಕಬುದ್ಧಮತಂ ನಿರಾಕೃತ್ಯ ತನ್ನಿರಾಕರಣಪೂರ್ವಕಪ್ರಜ್ಞಾನಾಭಿಧಾನಜೀವಬ್ರಹ್ಮವಾದಕವಾಸಿಷ್ಠಮತಂ ನಿರಸ್ಯತಿ. ತಸ್ಮಾದ್ವಿಜ್ಞಾನಮತಪ್ರಜ್ಞಾನಮತಯೋರುಪಜೀವ್ಯುಪಜೀವಕಭಾವಸಂಗತಿಃ. ಪ್ರಜ್ಞಾನಜೀವಬ್ರಹ್ಮವಾದಿನೋ ನಿರ್ವಿಶೇಷಾದ್ವೈತಸ್ಯ ಯೋಽಯಂ ಸಿದ್ಧಾಂತಃ "ಬ್ರಹ್ಮ ಸತ್ಯಂ ಜಗನ್ಮಿಥ್ಯೇ" ತಿ ತನ್ಮತನ್ಯಾಯೇನ ಸ್ವಾತ್ಮಾತಿರಿಕವಸ್ತ್ವಭಾವ ಇತಿ ಸೋಽಯಮಧಿಕರಣಸ್ಯ ವಿಷಯಃ. ಪೂರ್ವಪಾದೇ ಶ್ರುತ್ಯಾದಿಸಹಕೃತತ್ವೇನ ಸ್ವಸಿದ್ಧಾಂತಪ್ರತಿಯೋಗಿತಯಾ ನಿರಾಕೃತತ್ವೇಽಪಿ ಪುನರ್ಯುಕ್ತಿಪ್ರಾಧಾನ್ಯೇನ ನಿರಾಕರಣಾನ್ನ ಪೌನರುಕ್ತ್ಯದೋಷಃ. ಶ್ರುತ್ಯೇಕದೇಶಪ್ರಾಮಾಣ್ಯತಯಾ ತಚ್ಛಾಸ್ತ್ರಸ್ಯ ವಿದ್ಯಮಾನತ್ವಾತ್. ತನ್ಮತಂ ಪ್ರಮಾಣಮೂಲಂ ನ ವೇತಿ ಸಂದಿಹ್ಯತೇ. "ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್ಕೇನ ಕಂ ವದೇತ್ ನೇಹ ನಾನಾಸ್ತಿ ಕಿಂಚನ" ಇತ್ಯಾದಿಷು ವಂಧ್ಯಾಪುತ್ರಾದಿ

ವತ್ಪ್ರಪಂಚಾಭಾವತ್ವಪ್ರದರ್ಶನಾತ್ ಗಗನನೀಲಿಮಮರುಮರೀಚಿಕ
ರಜ್ಜುಸರ್ಪಾದೌ ಭ್ರಾಂತ್ಯಾ ನೀಲಿಮಾದ್ಯವಭಾಸಮಾನೇಽಪಿ ವಿಚಾ
ರ್ಯಮಾಣೇ ತ್ರೈಕಾಲಿಕಾಭಾವತ್ವವತ್ಪ್ರಪಂಚಸ್ಯ ಸ್ವಾವಿದ್ಯಯಾ
ಮೂಢಾನಾಂ ವಿದ್ಯಮಾನತ್ವೇಽಪಿ ವಿವೇಕದೃಷ್ಟ್ಯಾ ಕಾಲತ್ರಯೇಽಪಿ
ಶುಕ್ತಿರಜತಾದಿವದಭಾವ ಏವೇತಿ ಪ್ರಾಪ್ತೇ ಪ್ರಚಕ್ಷ್ಮಹೇ. "ಜೀವೋ
ಬ್ರಹ್ಮೈವ ನೇತರಃ" ಇತಿ ಯತ್ತದಸತ್-ನಾಭಾವ ಉಪಲಬ್ಧೇಃ.
ಸ್ವಾತ್ಮಾತಿರಿಕ್ತಸ್ಯಾರ್ಥಸ್ಯಾಭಾವೋ ವಕ್ತುಂ ನ ಶಕ್ಯತೇ. ಕುತ ಉಪ
ಲಬ್ಧೇಃ, ಜ್ಞಾತುರಾತ್ಮನೋಽರ್ಥವಿಶೇಷವ್ಯವಹಾರಯೋಗ್ಯತಾಪಾದನ
ರೂಪೇಣ ಜ್ಞಾನಸ್ಯೋಪಲಬ್ಧೇಃ. ಏವಮೇವ ಹಿ ಸರ್ವೇ ಲೌಕಿಕಾಃ
ಪ್ರತಿಯಂತಿ. 'ಘಟಮಹಂ ಜಾನಾಮಿ' ಇತ್ಯೇವಂ ರೂಪೇಣ ಸಕರ್ಮ
ಕೇಣ ಸಕರ್ತೃಕೇಣ ಜ್ಞಾತೃತ್ವಾರ್ಥೇನ ಸರ್ವಲೋಕಸಾಕ್ಷಿಕಮಪರೋ
ಕ್ಷಮವಭಾಸಮಾನೇನೈವ ಜ್ಞಾನಮಾತ್ರಮೇವ ಪರಮಾರ್ಥ ಇತಿ ಸಾಧ
ಯಂತಸ್ಸರ್ವಲೋಕೋಪಹಾಸೋಪಕರಣಂ ಭವಂತೀತಿ ವ್ಯಾಚಕ್ಷ್ಯತೇ.
'ಸರ್ವಮಾತ್ಮೈವಾಭೂತ್' ಇತ್ಯಾದಿಶ್ರುತೀನಾಂ ಶಿವಸ್ಯ ಕೇವಲಾವ
ಸ್ಥಾಪರತ್ವಮಿತಿ ಪೂರ್ವಮೇವೋಕ್ತಂ. ನೋಚೇದರ್ಥಕ್ರಿಯಾಸಿದ್ಧ್ಯಾ
ತ್ಮಕತಯಾ ಪ್ರಪಂಚಸ್ಯ ವಿದ್ಯಮಾನತ್ವಾತ್, 'ದ್ವಾ ಸುಪರ್ಣಾ' ಇತ್ಯಾ
ದಿಬಹುಶ್ರುತಿವಿರೋಧಾತ್, ಮಮ ಮಾತಾ ವಂಧ್ಯೇತಿವತ್ಪ್ರತ್ಯಕ್ಷಿಕವಿರು
ದ್ಧಪ್ರಸಂಗಾಚ್ಚ, ಲೋಕೇ ಪುರಾಕೃತಪುಣ್ಯಪಾಪಕರ್ಮವಶಾದ್ವಿದ್ಯಾಧನ
ಧಾನ್ಯಪುತ್ರಪೌತ್ರಾಂಧಪಂಗುಕಾಣರಾಜಯುಕ್ತಾದಿಸುಖದುಃಖಾನು
ಭವೋ ದುರ್ನಿವಾರಸ್ಸ್ಯಾತ್. ಅತಃ "ಪುಣ್ಯಾತ್ಸ್ವರ್ಗೋ ಪಾಪಾನ್ನರಕಃ"
ಇತ್ಯಾದಿಷು ಜಗತ್ಸತ್ಯತ್ವಮುಪದಿಷ್ಟಂ. ಕಿಂಚ ಜಗದಭಾವೇ ಪ್ರಾಗ
ಭಾವಃ ಪ್ರಧ್ವಾಸಾಭಾವೋಽತ್ಯಂತಾಭಾವೋಽನ್ಯೋನ್ಯಾಭಾವೋ ವಾ?
ನಾದ್ಯಃ, "ಅಸದ್ವಾ ಇದಮಗ್ರ ಆಸೀತ್ತತೋ ವೈ ಸದಜಾಯತ" ಇತ್ಯಾ
ದಿಷು ಬಾಲ್ಯಯೌವನಾದಿವತ್ಪ್ರಲಯೇ ಪ್ರಪಂಚಸೂಕ್ಷ್ಮತ್ವಸ್ಯ ಪುನ
ಸ್ಸೃಷ್ಟಿಕಾಲೇ ಸ್ಥೂಲತ್ವಸ್ಯ ಚ ವ್ಯಪದೇಶಾತ್. ನ ದ್ವಿತೀಯಃ, 'ಸದೇವ
ಸೌಮ್ಯೇದಮಗ್ರ ಆಸೀತ್' ಇತ್ಯಾದಿಷು 'ನಾಶಃ ಕಾರಣಲಯಃ' ಇತಿ
ನ್ಯಾಯೇನ ಪ್ರಲಯೇಽಪಿ ಪ್ರಪಂಚಸ್ಯ ಸದಾತ್ಮಕತ್ವೇನ ಸ್ಥಿತ್ಯುಪದೇ
ಶಾತ್. ನ ತೃತೀಯಃ, ಅರ್ಥಸಿದ್ಧಿಕ್ರಿಯಾಸಿದ್ಧ್ಯಾತ್ಮಕತ್ವೇನ ಪ್ರಪಂಚಸ್ಯ
ದೃಷ್ಟತ್ವಾತ್. ನ ಚತುರ್ಥಃ, ಆಕಾಶೇ ಭೂತಚತುಷ್ಟಯವತ್
"ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್" ಇತ್ಯಾ
ದಿಷು ಬ್ರಹ್ಮಪ್ರಪಂಚಯೋರಾಧಾರಾಧೇಯತ್ವನಿರ್ದೇಶಾತ್. ತಸ್ಮಾ
ತ್ಪ್ರಪಂಚಸ್ಯ ವಂಧ್ಯಾಪುತ್ರಶುಕ್ತಿರಜತಾದಿವದಭಾವತ್ವಂ ನೋಪಪದ್ಯತೇ.

ಹೀಗೆ ಬೌದ್ಧಮತವನ್ನು ನಿರಾಕರಿಸಿ ಪ್ರಚ್ಛನ್ನಬೌದ್ಧರೆನಿಸದ ಅದ್ವೈತಿಗಳ ಜೀವ, ಈಶ್ವರ, ಜಗತ್ತು ಇವನ್ನು ಮಿಥ್ಯೆ ಎಂದು ಹೇಳುವ ಕಲ್ಪಿತಶ್ರುತಿಯ ಆಧಾರದಮೇಲೆ ಹೊರಟಿರುವ ನಿರ್ವಿಶೇಷಾದ್ವೈತಮತವನ್ನು ಮುಂದೆ ನಿರಾಕರಿಸುತ್ತಾನೆ.

**ನಾಭಾವಾಧಿಕರಣಂ || ೮ || ನಾಭಾವ ಉಪಲಬ್ಧೇಃ || ೨೭ ||**

ಜೀವೇಶ್ವರದಿಂದ ಕೂಡಿ ಪಂಚಭೂತಗಳ ವಿಸ್ತಾರವೆನಿಸಿದ ಈ ಪ್ರಪಂಚವು ಮೊಲದ ಕೊಂಬು ಆಕಾಶಪುಷ್ಪ ಬಂಜೆಯಮಗನಂತೆ ಶೂನ್ಯವೋ? ಅಥವಾ ಸ್ವಪ್ನಪ್ರಪಂಚದಂತೆ ಸುಳ್ಳೋ? ಎಂಬಲ್ಲಿ ಜೀವೇಶ್ವರರಿಂದ ತುಂಬಿರುವ ಈ ಪ್ರಪಂಚವು ಪ್ರತ್ಯಕ್ಷಪ್ರಮಾಣದಿಂದ ಗೋಚರವಾಗಿ ಅರ್ಥಕ್ರಿಯೆಗಳ ಸಿದ್ಧಿಗೆ ಅನುಕೂಲವಾಗಿರುವುದರಿಂದ ಇದನ್ನು ಶೂನ್ಯವೆಂದು ಹೇಳುವಂತಿಲ್ಲ. ಇದನ್ನು ಬಂಜೆಯ ಮಗನಂತೆ ಶೂನ್ಯವೆಂದು ಒಪ್ಪಿದರೆ ಇದು ಪ್ರತ್ಯಕ್ಷ ಗೋಚರವಾಗದೇ ಇರಬೇಕಾಗಿತ್ತು. ಹೀಗೆ ವಿಜ್ಞಾನವಾದಿಗಳ ಮತವನ್ನು ನಿರಾಕರಿಸಿ ಈ ವಿಜ್ಞಾನವಾದಕ್ಕೂ ಪ್ರಜ್ಞಾನವಾದಕ್ಕೂ ಆಶ್ರಯಾಶ್ರಯಿಭಾವಸಂಬಂಧವಿರುವುದರಿಂದ ಅದನ್ನೂ ನಿರಾಕರಿಸುತ್ತಾನೆ. ನಿರ್ವಿಶೇಷಾದ್ವೈತಮತದಲ್ಲಿ "ಪ್ರಜ್ಞಾನವೇ ಬ್ರಹ್ಮ, ಬ್ರಹ್ಮವೊಂದೇ ಸತ್ಯ. ಜೀವನೂ ಬ್ರಹ್ಮವಲ್ಲದೆ ಬೇರೆಯಲ್ಲ" ಎಂಬುದೇ ಸಿದ್ಧಾಂತ. ಇದರ ಪ್ರಕಾರ ತನಗಿಂತ ಬೇರೆ ವಸ್ತುವಿಲ್ಲವೆಂದು ಹೇಳುವುದೇ ಈ ಅಧಿಕರಣದ ವಿಷಯವೆನಿಸಿದೆ. ಹಿಂದಿನ ಪಾದದಲ್ಲಿ ಶ್ರುತಿಗೆ ಸಮ್ಮತವಾದರೂ ಸಿದ್ಧಾಂತಕ್ಕೆ ವಿರುದ್ಧವಾದ್ದರಿಂದ ಪ್ರಜ್ಞಾನವಾದವನ್ನು ನಿರಾಕರಿಸಿದ್ದರೂ ಮತ್ತೆ ಯುಕ್ತಿಯ ಅವಲಂಬನದಿಂದ ಅದನ್ನು ಇಲ್ಲಿ ನಿರಾಕರಿಸುವ ಪ್ರಯುಕ್ತ ಅದು ಪುನರುಕ್ತವೆನಿಸುವುದಿಲ್ಲ. ಅದಕ್ಕೆ ಶ್ರುತಿಯ ಏಕದೇಶವೇ ಪ್ರಮಾಣವಾಗಿರುವುದರಿಂದ ಅದು ಪ್ರಮಾಣಮೂಲವೇ ಅಥವಾ ಭ್ರಾಂತಿಮೂಲವೇ ಎಂದು ಸಂದೇಹ ಬರುತ್ತದೆ. "ಎಲ್ಲವೂ ಆತ್ಮವೇ ಆಗಿರುವಾಗ ಯಾವನು ಯಾರೊಡನೆ ಏನನ್ನು ನೋಡಿ ವ್ಯವಹರಿಸಿಯಾನು?" "ಇಲ್ಲಿ ಆತ್ಮನಲ್ಲದೆ ಬೇರೆ ಏನೊಂದೂ ಇಲ್ಲ", ಈಶ್ರುತಿಗಳಲ್ಲಿ ಬಂಜೆಯಮಗ ಎಂಬಂತೆ ಪ್ರಪಂಚವೇ ಇಲ್ಲವೆಂದು ಕಂಡುಬರುತ್ತದೆ. ಆಕಾಶದಲ್ಲಿ ಕಪ್ಪುಬಣ್ಣ, ಮರಳಿನಲ್ಲಿ ಬಿಸಿಲ್ದೊರೆ, ಹಗ್ಗದಲ್ಲಿ ಸರ್ಪ ತೋರುವುದಾದರೂ ವಿಚಾರಮಾಡಿ ನೋಡಿದರೆ ಯಾವಾಗಲೂ ಅವು ಅಲ್ಲಿ ಇಲ್ಲವೆಂದು ತಿಳಿಯುವಂತೆ ಪ್ರಪಂಚವು ಮೂಢರಿಗೆ ತಮ್ಮ ಅವಿದ್ಯೆಯಿಂದ ತೋರಿದರೂ ವಿವೇಕವುಂಟಾದರೆ ಶುಕ್ತಿಯಲ್ಲಿ ರಜತದಂತೆ ಅದು ಅಜ್ಞಾನದ ತೋರಿಕೆಯಷ್ಟೇ ಹೊರತು ವಾಸ್ತವವಲ್ಲವೆಂದು ಒಪ್ಪಬೇಕಾಗುತ್ತದೆ. ಹೀಗೆ ಆಕ್ಷೇಪ ಬಂದರೆ ಇದಕ್ಕೆ ಸೂತ್ರದಲ್ಲಿ ಸಮಾಧಾನವಿದೆ. 'ಜೀವನು ಬ್ರಹ್ಮವೇ ಹೊರತು ಬೇರೆಯಲ್ಲ' ವೆಂದು ಹೇಳಿದ್ದು ಯುಕ್ತವಲ್ಲ. ಯಾಕೆಂದರೆ ತನಗಿಂತ ಬೇರೆಯಾದ ವಸ್ತುವೊಂದು ಇರುವುದಾಗಿ ಕಂಡುಬರುವುದರಿಂದ ಅದನ್ನು ಇಲ್ಲವೆಂದು ಹೇಳಲಿಕ್ಕೆ ಶಕ್ಯವಿಲ್ಲ. ತಿಳಿಯುವ ಆತ್ಮನಿಗೆ ಬೇರೆಬೇರೆ ವಸ್ತುಗಳು ವ್ಯವಹಾರಯೋಗ್ಯವಾಗಿರುವುದರಿಂದ ಅವುಗಳಜ್ಞಾನ ಅವನಿಗೆ ಉಂಟಾಗುತ್ತದೆ. ಇದರಂತೆಯೇ ಲೋಕದಲ್ಲಿ

ಎಲ್ಲರೂ ತಿಳಿಯುತ್ತಾರೆ. "ನಾನು ಘಟವನ್ನು ತಿಳಿಯುತ್ತೇನೆ" ಎಂಬಲ್ಲಿ ಎಲ್ಲ ಜ್ಞಾನವೂ ಕರ್ಮಕರ್ತೃಗಳೊಡನೆ ಕೂಡಿಯೇ ಇರುವುದಾಗಿ ಲೋಕದಲ್ಲಿ ಎಲ್ಲ ರಿಗೂ ಅನುಭವಗೋಚರವೂ ಪ್ರತ್ಯಕ್ಷವೂ ಆಗಿರುವುದರಿಂದ ಜ್ಞಾನ ಒಂದನ್ನೇ ಪರ ಮಾರ್ಥವೆಂದು ಸಾಧಿಸುವವರು ಎಲ್ಲರಿಗೂ ಹಾಸ್ಯಾಸ್ಪದರಾಗುವರು. "ಎಲ್ಲವೂ ಆತ್ಮವೇ ಆಗಿತ್ತು" ಎಂಬ ಶ್ರುತಿಗಳು ಶಿವನ ಕೈವಲ್ಯಾವಸ್ಥೆಯನ್ನು ತಿಳಿಸುತ್ತವೆ ಎಂದು ಹಿಂದೆಯೇ ಹೇಳಿದೆ. ಹಾಗಿಲ್ಲದಿದ್ದರೆ, ಪ್ರಪಂಚದಿಂದ ಅರ್ಥಕ್ರಿಯಾಸಿದ್ಧಿ ಗಳಾಗುತ್ತಿರುವುದರಿಂದಲೂ, 'ದ್ವಾ ಸುಪರ್ಣಾ' ಮೊದಲಾದ ಅನೇಕ ಶ್ರುತಿಗಳಿಗೆ ವಿರೋಧವಾಗುವುದರಿಂದಲೂ "ನನ್ನ ತಾಯಿ ಬಂಜೆ" ಎಂಬಂತೆ ಪ್ರತ್ಯಕ್ಷ ವಿರೋಧ ವುಂಟಾಗುವುದು. ಇದಲ್ಲದೆ, ಲೋಕದಲ್ಲಿ ಹಿಂದೆ ಮಾಡಿದ್ದ ಪುಣ್ಯ ಪಾಪಕರ್ಮ ಗಳಿಂದ ಬರುವ ವಿದ್ಯೆ, ಧನ, ಧಾನ್ಯ, ಪುತ್ರಾದಿ ಸುಖಗಳನ್ನೂ ಮತ್ತು ಕುಂಟುತನ, ಕುರುಡತನ, ರೋಗ ಈ ಬಗೆಯ ದುಃಖಗಳನ್ನೂ ಅನುಭವಿಸದೆ ಬಿಡಲಿಕ್ಕಾಗುವುದಿಲ್ಲ. "ಪುಣ್ಯದಿಂದ ಸ್ವರ್ಗವೂ ಪಾಪದಿಂದ ನರಕವೂ ಬರುತ್ತವೆ." ಈ ಬಗೆಯ ಶ್ರುತಿಗಳಲ್ಲಿ ಜಗತ್ತನ್ನು ಸತ್ಯವೆಂದು ಹೇಳಲಾಗಿದೆ. ಜಗತ್ತನ್ನು ಇಲ್ಲವೆನ್ನುವುದಾದರೆ ಯಾವ ಅಭಾವವನ್ನು ಹೇಳಬಹುದು? ಅಸದ್ರೂಪವಾಗಿದ್ದ ಜಗತ್ತು ಸದ್ರೂಪವಾಯಿತು ಎಂದು ಶ್ರುತಿಯಲ್ಲಿ ಬಾಲ್ಯ ಯೌವನ ಮೊದಲಾದ ಅವಸ್ಥೆಗಳಂತೆ ಪ್ರಪಂಚದ ಸೂಕ್ಷ್ಮ ಮತ್ತು ಸ್ಥೂಲಾವಸ್ಥೆಗಳನ್ನು ಹೇಳಿರುವುದರಿಂದ ಜಗತ್ತಿಗೆ ಪ್ರಾಗಭಾವವು ಹೊಂದು ವುದಿಲ್ಲ. "ಇದೆಲ್ಲವೂ ಮೊದಲು ಸದ್ರೂಪವೇ ಆಗಿತ್ತು" ಎಂಬ ಶ್ರುತಿಯಲ್ಲಿ ಕಾರ್ಯವು ಕಾರಣದಲ್ಲಿ ಸೇರುವುದೇ ನಾಶವೆನಿಸುವುದು" ಎಂಬ ನ್ಯಾಯದಿಂದ ಪ್ರಳಯದಲ್ಲೂ ಜಗತ್ತು ಸದ್ರೂಪದಿಂದ ಇತ್ತೆಂದು ಹೇಳಿರುವುದರಿಂದ ಅದಕ್ಕೆ ಪ್ರಧ್ವಂಸಾಭಾವ ಹೊಂದುವುದಿಲ್ಲ. ಜಗತ್ತಿನಿಂದ ಅರ್ಥಕ್ರಿಯಾಸಿದ್ಧಿಗಳಾಗುವುದಾಗಿ ಕಂಡುಬರುವುದ ರಿಂದ ಅದು ಅತ್ಯಂತಾಭಾವವೂ ಅಲ್ಲ. ಹಾಗೆಯೇ ಆಕಾಶದಲ್ಲಿ ನಾಲ್ಕುಭೂತಗಳೂ ಇರುವಂತೆ ಪರಮಾತ್ಮನೇ ಎಲ್ಲವೂ ಆಗಿ ಎಲ್ಲಕ್ಕೂ ಆಶ್ರಯವನ್ನು ಕೊಟ್ಟು ಸ್ಥಲವೆನಿ ಸಿದ್ದಾನೆ ಎಂದು ಶ್ರುತಿಗಳಲ್ಲಿ ಬ್ರಹ್ಮಪ್ರಪಂಚಗಳಿಗೆ ಆಧಾರಾಧೇಯಭಾವವನ್ನು ಹೇಳಿ ರುವುದರಿಂದ ಬಂಜೆಯ ಮಗನಂತೆ ಜಗತ್ತಿಗೆ ಅತ್ಯಂತಾಭಾವವೂ ಹೊಂದುವುದಿಲ್ಲ.

**ಸರ್ವಾನುಭವಸಿದ್ಧತ್ವೇನ ಪ್ರಪಂಚಸ್ಯ ಸತ್ತ್ವೇಽಪಿ ಸ್ವಪ್ನವನ್ಮಿ ಥ್ಯಾತ್ವಂ ತಸ್ಯೋಪಪದ್ಯತ ಇತ್ಯಾಶಂಕಾಯಾಮಾಹ—**

**ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ॥ ೨೮ ॥**

**ಸ್ವಪ್ನೇಂದ್ರಜಾಲಾದಿದೃಷ್ಟಾಂತೇನ ಜಾಗ್ರತ್ಪ್ರಪಂಚಸ್ಯ ಮಿಥ್ಯಾತ್ವಂ ವಕ್ತುಂ ನ ಶಕ್ಯತೇ. ಕುತಃ ವೈಧರ್ಮ್ಯಾತ್ ಸ್ವಪ್ನೇಂದ್ರಜಾಲಜಾಗ್ರತ್ಪ್ರ ಪಂಚಯೋರ್ವೈಲಕ್ಷಣ್ಯಸ್ಯ ವಿದ್ಯಮಾನತ್ವಾತ್. ಸ್ವಪ್ನೇಂದ್ರಜಾಲ ಪ್ರಪಂಚಸ್ಯ ಪ್ರಬೋಧಾನಂತರಂ ಪ್ರತ್ಯಕ್ಷೇಣ ಬಾಧ್ಯಮಾನತ್ವಾನ್ಮಿಥ್ಯಾತ್ವ ಮುಪಪನ್ನಂ. ಜಾಗ್ರತ್ಪ್ರಪಂಚಸ್ಯ ತು ಬಾಧಾದರ್ಶನಾನ್ಮಿಥ್ಯಾತ್ವಂ ನೋಪ**

ಪದ್ಯತೇ. ಕಿಂಚಸ್ವಪ್ನಕೃತಜ್ಯೋತಿಷ್ಟೋಮಬ್ರಹ್ಮಹತ್ಯಾದಿಕರ್ಮಣಾಂ ಸ್ವರ್ಗನರಕಾದಿಪ್ರಾಪ್ತ್ಯಭಾವಾತ್, ಜಾಗ್ರತ್ಪ್ರಪಂಚಕೃತಸುಕೃತದುಷ್ಕೃತಾನಾಮಿಹ ಪರಲೋಕೇಷು ತತ್ಫಲಪ್ರಾಪ್ತಿದರ್ಶನಾಚ್ಚ, ತತ್ಸಾದೃಶ್ಯಂ ಸರ್ವದಾ ಅಸ್ಯ ಪ್ರಪಂಚಸ್ಯ ನೋಪಪನ್ನಂ. ಸ್ವಪ್ನಜ್ಞಾನವೈಧರ್ಮ್ಯಾಜ್ಜಾಗರಿತಜ್ಞಾನಾನಾಮರ್ಥಶೂನ್ಯತ್ವಂ ನ ಯುಜ್ಯತೇ ವಕ್ತುಂ. ಸ್ವಪ್ನಜ್ಞಾನಾನಿ ಹಿ ನಿದ್ರಾದಿದೋಷದುಷ್ಟಕರಣಜನ್ಯಾನಿ, ಬಾಧಿತಾನಿ ಚ. ಜಾಗರಿತಜ್ಞಾನಾನಿ ತು ತದ್ವಿಪರೀತಾನೀತಿ ತೇಷಾಂ ನ ತತ್ಸಾಮ್ಯಂ. ಸರ್ವೇಷಾಂ ಚ ಜ್ಞಾನಾನಾಮರ್ಥಶೂನ್ಯತ್ವೇ ಭವದ್ಭಿಸ್ಸಾಧ್ಯೋಽಪ್ಯರ್ಥೋ ನ ಸಿದ್ಧ್ಯತಿ, ನಿರಾಲಂಬನಾನುಮಾನಸ್ಯಾಪ್ಯರ್ಥಶೂನ್ಯತ್ವಾತ್. ತಸ್ಯಾರ್ಥವತ್ತ್ವೇ ಜ್ಞಾನವತ್ತ್ವಸ್ಯಾನೈಕಾಂತ್ಯಾತ್ಸುತರಾಮರ್ಥಶೂನ್ಯತ್ವಾಸಿದ್ಧಿಃ. ಕಿಂಚ "ಯತ್ರಾಸೌ ಸರ್ವಮಾತ್ಮೈವಾಭೂತ್" ಇತಿ ಶ್ರುತ್ಯಾ ಜಾಗ್ರತ್ಪ್ರಪಂಚಸ್ಯಾಪಿ ಬ್ರಹ್ಮಜ್ಞಾನಬಾಧ್ಯತ್ವಂ ಪ್ರತಿಪಾದ್ಯತ ಇತಿ ಚೇತ್ತದಯುಕ್ತಂ. ಪ್ರಪಂಚಸ್ಯ ಸತ್ಯತ್ವೇಽಪಿ ಸುಪ್ತಸ್ಯ ಪುರುಷಸ್ಯ ಪ್ರಪಂಚಜ್ಞಾನಶೂನ್ಯತ್ವವತ್ ಬ್ರಹ್ಮವಿಲೀನಸ್ಯ ವೃತ್ತಿಶೂನ್ಯತ್ವೇನ ಪ್ರಪಂಚಸ್ಯ ಸತ್ತ್ವೇಽಪಿ ಸ್ವಜ್ಞಾನಪ್ರಪಂಚಜ್ಞಾನಶೂನ್ಯತ್ವಂ ಯುಜ್ಯತೇ. ನ ತೇನ ಪ್ರಪಂಚಸ್ಯ ಬಾಧೋಽಭಿಧೀಯತೇ. ಜೀವನ್ಮುಕ್ತಸ್ಯ ತು ಸಮಾಧಿಕಾಲೇ ಸುಪ್ತಿಮೂರ್ಛಾದಿವತ್ಪರಮಾತ್ಮಾಸಂದಾನುಭವತಯಾ ಸ್ವಪರಜ್ಞಾನಶೂನ್ಯತ್ವಂ. ಪುನರುತ್ಥಾನಕಾಲೇ ವ್ಯವಹಾರದರ್ಶನಾತ್ ಬ್ರಹ್ಮಜ್ಞಾನಬಾಧ್ಯತ್ವಂ ನ ಸಂಭವತಿ. ಚಕಾರೇಣ ರಜ್ಜುಸರ್ಪಾದಿವದಧ್ಯಾರೋಪಾಪವಾದಃ, ಆದಿಶಬ್ದೇನ ಗಂಧರ್ವನಗರೇಂದ್ರಜಾಲಾದಿತಚ್ಛಾಫಸ್ತ್ರದೃಷ್ಟಾಂತಮಪಿ ನಿರಸ್ತಂ. ನೋಚೇತ್ಪ್ರಪಂಚಸ್ಯ ಸ್ವಪ್ನಾದಿವನ್ಮಿಥ್ಯಾತ್ವಾಂಗೀಕಾರೇ ಕೃತನಾಶಾಕೃತಾಭ್ಯಾಗಮದೋಷಪ್ರಸಂಗೇನ ಬೌದ್ಧಮತಪ್ರವೇಶಾಪತ್ತಿರ್ದುರ್ವಾರೇತಿ ವಿವೇಕಿಭಿರ್ವೇದಿತವ್ಯಂ.

ಅನುಭವಸಿದ್ಧವಾದ್ದರಿಂದ ಜಗತ್ತು ಇರುವುದಾದರೂ ಸ್ವಪ್ನದಂತೆ ಮಿಥ್ಯೆ ಎನಿಸಲೆಂಬುದನ್ನು ನಿರಾಕರಿಸುತ್ತಾನೆ. **ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ॥ ೨೮ ॥**

ಸ್ವಪ್ನ-ಇಂದ್ರಜಾಲ ಮೊದಲಾದ ಜಗತ್ತಿನ ದೃಷ್ಟಾಂತದಿಂದ ಜಾಗ್ರತ್ಪ್ರಪಂಚವನ್ನು ಸುಳ್ಳೆಂದು ಹೇಳಲಿಕ್ಕೆ ಸಾಧ್ಯವಿಲ್ಲ; ಯಾಕೆಂದರೆ ಸ್ವಪ್ನ ಮತ್ತು ಇಂದ್ರಜಾಲಗಳಿಗೂ ಜಾಗ್ರತ್ಪ್ರಪಂಚಕ್ಕೂ ವೈಲಕ್ಷಣ್ಯವು ಸ್ಪಷ್ಟವಾಗಿರುತ್ತದೆ. ಸ್ವಪ್ನಪ್ರಪಂಚವು ಎಚ್ಚರವಾದಮೇಲೆ ಬಾಧಿತವಾಗುವುದರಿಂದ ಅದನ್ನು ಸುಳ್ಳೆಂದು ಹೇಳುವುದು ಯುಕ್ತವಾಗುತ್ತದೆ. ಆದರೆ ಜಾಗ್ರತ್ಪ್ರಪಂಚವು ಹಾಗೆ ಬಾಧಿತವಾಗುವುದಿಲ್ಲವಾದ್ದರಿಂದ ಅದನ್ನು ಸುಳ್ಳೆಂದು ಹೇಳುವುದು ಯುಕ್ತವಲ್ಲ. ಸ್ವಪ್ನದಲ್ಲಿ ಮಾಡಿದ ಜ್ಯೋತಿಷ್ಟೋಮಯಾಗವು ಸ್ವರ್ಗವನ್ನು ದೊರಕಿಸಲಾರದು. ಹಾಗೆಯೇ ಬ್ರಹ್ಮಹತ್ಯವೂ ನರಕ

ವನ್ನು ಕೊಡಲಾರದು. ಜಾಗ್ರತ್ಪ್ರಪಂಚದಲ್ಲಿ ಮಾಡುವ ಪುಣ್ಯ ಪಾಪ ಕರ್ಮಗಳು ಇಹ ಪರ ಸುಖಗಳನ್ನು ಕೊಡುತ್ತವೆ ಎಂಬುದು ಕಂಡುಬಂದಿದೆ. ಆದ್ದರಿಂದ ಇದಕ್ಕೆ ಸ್ವಪ್ನದ ಸಾದೃಶ್ಯವು ಎಂದಿಗೂ ಹೊಂದುವುದಿಲ್ಲ. ಜಾಗ್ರದವಸ್ಥೆಯಲ್ಲಿ ಬರುವ ಜ್ಞಾನಕ್ಕೂ ಸ್ವಪ್ನದ ಜ್ಞಾನಕ್ಕೂ ಸಾದೃಶ್ಯವಿಲ್ಲದ್ದರಿಂದ ಜಾಗೃತ ಜ್ಞಾನಗಳನ್ನು ಅರ್ಥ ಶೂನ್ಯವೆಂದು ಹೇಳಲಾಗುವುದಿಲ್ಲ. ಸ್ವಪ್ನ ಜ್ಞಾನಗಳಾದರೋ ನಿದ್ರೆ ರೋಗ ಮೊದ ಲಾದ ದುಷ್ಟಕಾರಣಗಳಿಂದ ಬರುತ್ತವೆ, ಆದ್ದರಿಂದಲೇ ಬಾಧಿತವಾಗುತ್ತವೆ. ಜಾಗೃತ ಜ್ಞಾನಗಳಾದರೂ ನಿರ್ದುಷ್ಟವೂ ಅಬಾಧಿತವೂ ಆಗಿರುತ್ತವೆ. ಆದ್ದರಿಂದ ಇವಕ್ಕೂ ಅವಕ್ಕೂ ಸಾದೃಶ್ಯವಿಲ್ಲ. ಎಲ್ಲಾ ಜ್ಞಾನಗಳೂ ಅರ್ಥಶೂನ್ಯವೇ ಎಂದು ಹೇಳಿದರೆ ನಿಮ್ಮ ಇಷ್ಟಾರ್ಥವೇ ಸಿದ್ಧಿಸುವುದಿಲ್ಲ. ಏಕೆಂದರೆ ನೀವು ಹೇಳಿದ ಅನುಮಾನದಲ್ಲಿ ವಿಷಯವನ್ನು ಒಪ್ಪಿದರೆ ಅರ್ಥವನ್ನೂ ಒಪ್ಪಿದಂತಾಗುತ್ತದೆ. ಅದಕ್ಕೆ ವಿಷಯವನ್ನೇ ಒಪ್ಪದಿದ್ದರೆ ಅಂತಹ ಅನುಮಾನದಿಂದ ಯಾವ ಉದ್ದೇಶವೂ ಸಿದ್ಧಿಸುವುದಿಲ್ಲ. ಆದ್ದ ರಿಂದ ಜ್ಞಾನವನ್ನು ಅರ್ಥಶೂನ್ಯವೆಂದು ಹೇಳಲಿಕ್ಕಾಗುವುದಿಲ್ಲ. ಇದೂ ಅಲ್ಲದೆ, "ಅಲ್ಲಿ ಎಲ್ಲವೂ ಆತ್ಮವೇ ಆಗಿತ್ತು" ಎಂಬ ಶ್ರುತಿಯಿಂದ ಜಾಗ್ರತ್ಪ್ರಪಂಚವು ಬ್ರಹ್ಮಜ್ಞಾನ ದಿಂದ ಬಾಧಿತವಾಗುತ್ತದೆ ಎಂದು ಹೇಳುವುದು ಯುಕ್ತವೆನಿಸುವುದಿಲ್ಲ. ಪ್ರಪಂಚ ಸತ್ಯವಾದರೂ ಮಲಗಿದ್ದವನಿಗೆ ಪ್ರಪಂಚವೇ ಇಲ್ಲದಿರುವಂತೆ, ಬ್ರಹ್ಮದಲ್ಲಿ ಬೆರೆತವನಿಗೆ ಬ್ರಹ್ಮವಲ್ಲದೆ ಬೇರೆ ವೃತ್ತಿಯೇ ಇಲ್ಲದಿರುವುದರಿಂದ ಪ್ರಪಂಚವಿದ್ದರೂ ತನ್ನ ಮತ್ತು ಪ್ರಪಂಚದ ಜ್ಞಾನವೇ ಇರುದಿಲ್ಲವೆಂಬುದು ಹೊಂದುತ್ತದೆ. ಇದರಿಂದ ಪ್ರಪಂಚಕ್ಕೆ ಯಾವ ಬಾಧೆಯನ್ನೂ ಹೇಳಿದಂತಾಗಲಿಲ್ಲ. ಜೀವನ್ಮುಕ್ತನು ಸಮಾಧಿಕಾಲದಲ್ಲಿ ಸುಪ್ತಿ ಮೂರ್ಛೆಗಳಂತೆ ಪರಶಿವನ ಆನಂದವನ್ನೇ ಅನುಭವಿಸುತ್ತಿರುವುದರಿಂದ ಅವ ನಿಗೆ ಆಗ ತನ್ನ ಮತ್ತು ಇತರರ ಜ್ಞಾನವೇ ಇರುವುದಿಲ್ಲ. ಸಮಾಧಿಯಿಂದ ಹೊರಗೆ ಬಂದಾಗ ಅವನಿಗೆ ಎಲ್ಲಾ ವ್ಯವಹಾರಗಳೂ ಇರುವುದರಿಂದ ಜಗತ್ತಿಗೆ ಬ್ರಹ್ಮಜ್ಞಾನ ದಿಂದ ಬಾಧೆಯಿಲ್ಲ. ಸೂತ್ರದಲ್ಲಿರುವ ಚಕಾರದಿಂದ ರಜ್ಜುಸರ್ಪದಂತೆ ಆರೋಪ-ಅಪವಾದಗಳನ್ನೂ, ಆದಿಪದದಿಂದ ಗಂಧರ್ವನಗರ, ಇಂದ್ರಜಾಲ ಇವೇ ಮೊದಲಾದ ಅದ್ವೈತಶಾಸ್ತ್ರದ ದೃಷ್ಟಾಂತಗಳನ್ನೂ ನಿರಾಕರಿಸಲಾಗಿದೆ. ಇಲ್ಲವಾದರೆ, ಪ್ರಪಂಚ ವನ್ನು ಸ್ವಪ್ನಾದಿಗಳಂತೆ ಸುಳ್ಳೆಂದು ಒಪ್ಪಿದರೆ, ಮಾಡಿದ್ದನ್ನು ಬಿಟ್ಟು ಮಾಡದೇ ಇರುವುದನ್ನು ಒಪ್ಪಿಕೊಳ್ಳುವ ಪ್ರಸಂಗವುಂಟಾಗತ್ತದೆ ಎಂದು ತಿಳಿಯಬೇಕು.

**ಪುನರ್ಹೇತ್ವಂತರೇಣ ನಿರಾಕರೋತಿ—ನ ಭಾವೋಽನುಪಲಬ್ಧೇಃ ॥೨೯॥**

**ನಿರ್ವಿಶೇಷಾದ್ವೈತಶಾಸ್ತ್ರೇ ಸ್ವಪ್ನಶುಕ್ತಿರಜತಾದಿದೃಷ್ಟಾಂತತ್ವೇನ ಪ್ರಪಂಚಸ್ಯ ಮಿಥ್ಯಾತ್ವಾಂಗೀಕಾರೇ ನಿರ್ವಿಶೇಷಬ್ರಹ್ಮಣಃ ಭಾವೋ ವಿದ್ಯ ಮಾನತ್ವಂ ನಾಸ್ತಿ, ಕುತಃ ಅನುಪಲಬ್ಧೇಃ. ತನ್ಮತೇ ಪಾರಮಾರ್ಥಿಕ ತ್ವೇನ ವೇದವೇದಾಂತಾನಾಂ ಪ್ರಮಾಣತ್ವಾಭಾವಾತ್ ತನ್ಮತಂ ನಿಶ್ರ್ಶೇ ಯಸಾರ್ಥಿಭಿರ್ನಾಂಗೀಕರಣೀಯಂ. ನ ಕೇವಲಂ ನಿರ್ವಿಶೇಷಸ್ಯ**

ಬ್ರಹ್ಮಣೋ ಭಾವಸ್ಸಂಭವತಿ ಕುತಃ ಕ್ವಚಿದಪ್ಯನುಪಲಬ್ಧೇಃ. ನಹ್ಯಕರ್ತೃಕಸ್ಯಾಕರ್ಮಕಸ್ಯ ಜ್ಞಾನಾತ್ಮಕಸ್ಯ ಬ್ರಹ್ಮಣಃ ವೇದವೇದಾಂತಾನಾಮನುಪಲಬ್ಧೇಃ "ಮಿಥ್ಯಾತ್ವವಾದಿವಾಕ್ಯಾನಿ ಮಿಥ್ಯೇತಿ ಪರಿಗೀಯಂತೇ" ಇತಿ ನ್ಯಾಯೇನ ತನ್ಮತೇ ವೇದವೇದಾಂತಾನಾಂ ಮಿಥ್ಯಾಭೂತತ್ವಾಂಗೀಕಾರಾತ್ ತನ್ಮಿಥ್ಯಾಭೂತವೇದವೇದಾಂತಪ್ರತಿಪಾದ್ಯಬ್ರಹ್ಮಣಸ್ಸತ್ಯತ್ವಂ ಕಥಮುಪಪದ್ಯತೇ? ನಿರ್ವಿಶೇಷೇ ವೇದವೇದಾಂತಾನಾಂ ಪ್ರತಿಪಾದ್ಯತ್ವಾಯೋಗಾತ್, ಬ್ರಹ್ಮಸತ್ತ್ವೇ ತದತಿರಿಕ್ತಪ್ರಮಾಣಾಭಾವಾಚ್ಚ. ತಸ್ಮಾತ್ತಚ್ಛಾಸ್ತ್ರೋಕ್ತಜಗಜ್ಜೀವೇಶ್ವರಾದಿಪ್ರಪಂಚವತ್ತನ್ನಿರ್ವಿಶೇಷಬ್ರಹ್ಮಣಃ ಮಿಥ್ಯಾತ್ವಂ ದುರ್ನಿವಾರಂ. ತಸ್ಮಾದ್ವಿಜ್ಞಾನಾತ್ಮಕಬುದ್ಧಮತವದದ್ವೈತಮತಮಪ್ಯವಿಚಾರಿತರಮಣೀಯಂ. ತದುಭಯೋರಪಿ ಜಗಜ್ಜೀವೇಶ್ವರಪ್ರಪಂಚಮಿಥ್ಯಾತ್ವಸ್ಯ ಅದ್ವಯವಾದಸ್ಯ ಚಾಂಗೀಕಾರಾತ್ತದುಭಯಂ ತುಲ್ಯಮಿತಿ ನಿಶ್ಚಿತಂ. ಉತ ಸ್ವಪ್ನಸ್ಯಾಪಿ ಸತ್ಯತ್ವಮನಿರ್ವಾರ್ಯಂ, ಸ್ವಪ್ನೇ ಸ್ವಪ್ನಪ್ರಪಂಚಸ್ಯ ಸತ್ಯತ್ವಾತ್, ಸ್ವಪ್ನಸ್ಯಾಪಿ ಪರಮೇಶ್ವರಹೇತುಕತ್ವಾತ್. ಜಾಗ್ರದವಸ್ಥಾಯಾಮಪಿ ತದ್ವಾಸನಾನಾಂ ವಿದ್ಯಮಾನತ್ವಾತ್. 'ಜಾಗ್ರದ್ವಾಸನಾಯುಕ್ತಃ ಸ್ವಪ್ನಃ' ಇತಿ ನ್ಯಾಯೇನ ಸ್ವಪ್ನಸ್ಯಾಪಿ ಜಾಗ್ರದ್ವಾಸನಾಹೇತುತ್ವೋಪದೇಶಾತ್ ಜಾಗ್ರದದೃಷ್ಟಪದಾರ್ಥದರ್ಶನೇಽಪಿ ಪೂರ್ವಭಾವವಾಸನಾಸಿದ್ಧತ್ವಾಚ್ಚ. ಕಿಂಚ "ಯಸ್ಸ್ವಪ್ನೇ ಪುರುಷಂ ಕೃಷ್ಣಂ ಪಶ್ಯತಿ ಸ ಷಾಣ್ಮಾಸಜೀವೀ ಭವತಿ", "ಸ್ವಪ್ನೇ ತು ಕಾಲಪುರುಷಂ ರಕ್ತವಸ್ತ್ರಧರಂ ತಥಾ। ಗಂಧರ್ವನಗರಂ ಚೈವ ಯಃ ಪಶ್ಯತಿ ವಿಶೇಷತಃ। ಸ ಷಾಣ್ಮಾಸಾದ್ಯಮುಲೋಕಂ ಪ್ರಾಪ್ನುತೇ ನಾತ್ರ ಸಂಶಯಃ॥" ಇತ್ಯಾದಿಬಹುಶ್ರುತ್ಯಾಗಮದರ್ಶನಾತ್, ಸ್ವಪ್ನಾಧ್ಯಾಯಪ್ರಕಾರೇಣ ಸರ್ವೇಷಾಮನುಭವದ್ಯೋತನಾಚ್ಚ ತತ್ಸತ್ಯತ್ವಂ ಸಿದ್ಧಂ.

ಜಗನ್ಮಿಥ್ಯತ್ವವನ್ನು ಮತ್ತೆ ನಿರಾಕರಿಸುತ್ತಾನೆ– **ನ ಭಾವೋಽನುಪಲಬ್ಧೇಃ ॥೨೯॥**

ನಿರ್ವಿಶೇಷಾದ್ವೈತಮತದಲ್ಲಿ ಸ್ವಪ್ನ–ಶುಕ್ತಿರಜತ ಮೊದಲಾದವು ದೃಷ್ಟಾಂತಗಳಾಗಿರುವುದರಿಂದ ಜಗತ್ತನ್ನು ಸುಳ್ಳೆಂದು ಒಪ್ಪುವುದಾದರೆ, ಆ ಮತವು ಪಾರಮಾರ್ಥಿಕವೆಂಬುದಕ್ಕೆ ವೇದವೇದಾಂತಗಳೇ ಪ್ರಮಾಣವಾಗಿಲ್ಲದ್ದರಿಂದ ಬ್ರಹ್ಮವೇ ಸಿದ್ಧಿಸದೇ ಹೋಗುತ್ತದೆ. ಆದ್ದರಿಂದ ಆ ಮತವು ಮೋಕ್ಷಾಧಿಕಾರಿಗಳಿಗೆ ಅಂಗೀಕಾರಾರ್ಹವಲ್ಲ. ನಿರ್ವಿಶೇಷಬ್ರಹ್ಮವಿದೆ ಎಂಬುದೇ ಮೊದಲು ಸಂಭವಿಸುವುದಿಲ್ಲ; ಯಾಕೆಂದರೆ ಕರ್ತೃಕರ್ಮಗಳ ಸಂಬಂಧವಿಲ್ಲದ ಜ್ಞಾನವೇ ಬ್ರಹ್ಮವೆಂದು ಯಾವ ವೇದಾಂತದಲ್ಲೂ ಕಂಡುಬಂದಿಲ್ಲ. "ಸುಳ್ಳೆಂದು ತಿಳಿಸುವ ವಾಕ್ಯಗಳೂ ಸಹ ಸುಳ್ಳೇ ಆಗುತ್ತವೆ" ಎಂಬ ನ್ಯಾಯದಿಂದ ಅದ್ವೈತಮತದಲ್ಲಿ ಎಲ್ಲಾ ವೇದಾಂತವಾಕ್ಯಗಳನ್ನೂ ಸುಳ್ಳೆಂದೇ ಅಂಗೀಕರಿಸಿರುವುದರಿಂದ ಅಂತಹ ಸುಳ್ಳಾದ ವೇದಾಂತಗಳಲ್ಲಿ ಹೇಳಿರುವ

ಬ್ರಹ್ಮ ಹೇಗೆ ಸತ್ಯವೆನಿಸಿಯಾನು? ಆದ್ದರಿಂದ ನಿರ್ವಿಶೇಷ ಬ್ರಹ್ಮವು ವೇದಾಂತದಲ್ಲಿ ಪ್ರತಿಪಾದ್ಯವಾಗಲಾರದು. ಬ್ರಹ್ಮವಿರುವುದರಲ್ಲಿ ವೇದಾಂತಕ್ಕಿಂತಲೂ ಬೇರೆ ಪ್ರಮಾಣವೇ ಇಲ್ಲವಾದ್ದರಿಂದ ಅದರಲ್ಲಿ ಹೇಳಿರುವ ಜಗತ್ತು ಜೀವ ಮತ್ತು ಈಶ್ವರರಂತೆಯೇ ನಿರ್ವಿಶೇಷಬ್ರಹ್ಮವೂ ಸುಳ್ಳೆಂದೇ ಸಿದ್ಧಿಸುತ್ತದೆ. ಇದರಿಂದ ವಿಜ್ಞಾನಾತ್ಮಕವಾದ ಬುದ್ಧಮತದಂತೆ ಅದ್ವೈತಮತವೂ ವಿಚಾರವಿಲ್ಲದ ವಾದವೆನಿಸುತ್ತದೆ. ಇವೆರಡು ಮತಗಳಲ್ಲೂ ಜಗತ್ತು ಜೀವ ಈಶ್ವರ ಇವರನ್ನು ಮಿಥ್ಯೆ ಎಂದು ಹೇಳಿ ಅದ್ವೈತವಾದವನ್ನು ಅಂಗೀಕರಿಸಿರುವುದರಿಂದ ಇವು ಸಮಾನವೆನಿಸಿವೆ. ಇದೂ ಅಲ್ಲದೆ, ಸ್ವಪ್ನವೂ ಸತ್ಯವೇ ಎನಿಸಿದೆ. ಅದರಲ್ಲಿ ಕಾಣುವ ವಸ್ತುಗಳೂ ಸತ್ಯವೇ ಆಗಿವೆ. ಸ್ವಪ್ನಕ್ಕೂ ಪರಮೇಶ್ವರನೇ ಕಾರಣನಾಗಿದ್ದಾನೆ. ಜಾಗ್ರದವಸ್ಥೆಯಲ್ಲೂ ಸ್ವಪ್ನದ ವಾಸನೆಗಳೇ ಇರುತ್ತವೆ. "ಸ್ವಪ್ನವು ಜಾಗ್ರದವಸ್ಥೆಯ ವಾಸನೆಯೊಡಗೂಡಿರುತ್ತದೆ" ಎಂಬ ನ್ಯಾಯದಂತೆ ಸ್ವಪ್ನಕ್ಕೂ ಜಾಗ್ರದ್ವಾಸನೆಯನ್ನೇ ಕಾರಣವೆಂದು ಹೇಳಿರುವುದರಿಂದ ಜಾಗ್ರದವಸ್ಥೆಯಲ್ಲಿ ಕಾಣದಿರುವ ವಸ್ತುವನ್ನು ನಾವು ಸ್ವಪ್ನದಲ್ಲಿ ಕಂಡರೂ ಅದು ಹಿಂದಿನ ಜನ್ಮದ ವಾಸನೆಯಿಂದಲೇ ಉಂಟಾಗುತ್ತದೆ. ಇದೂ ಅಲ್ಲದೆ, " ಸ್ವಪ್ನದಲ್ಲಿ ಕಪ್ಪು ಬಣ್ಣದ ವ್ಯಕ್ತಿಯನ್ನು ನೋಡಿದವನು ಆರು ತಿಂಗಳವರಿಗೆ ಮಾತ್ರವೇ ಬದುಕುವನು" " ಸ್ವಪ್ನದಲ್ಲಿ ಕಪ್ಪುಬಣ್ಣದವನನ್ನೂ ಕೆಂಪುಬಟ್ಟೆ ಹೊದ್ದಿರುವವನನ್ನೂ ಗಂಧರ್ವನಗರವನ್ನೂ ಕಂಡವನು ಆರು ತಿಂಗಳಲ್ಲಿ ಸಾಯುವನು " ಹೇಗೆ ಅನೇಕ ಶ್ರುತ್ಯಾಗಮಗಳಲ್ಲಿ ಹೇಳಿರುವುದರಿಂದಲೂ, ಹಾಗೆಯೇ ಎಲ್ಲರಿಗೂ ಅನುಭವದಲ್ಲಿ ಕಂಡುಬರುತ್ತಿರುವುದರಿಂದಲೂ ಸ್ವಪ್ನವು ಸತ್ಯವೆಂದು ಸಿದ್ಧವಾಯಿತು.

**ಏವಂ ನಿಶ್ಶ್ರೇಯಸವಿರೋಧೇನ ಶುಷ್ಕವೇದಾಂತನಿರ್ವಿಶೇಷಾದ್ವೈತಪ್ರತಿಪಾದಕವಾಸಿಷ್ಠಮತಂ ನಿರಾಕೃತ್ಯ ಸ್ವಾತ್ಮಹನನಸಿದ್ಧಾಂತಶೂನ್ಯಾದ್ವೈತಾಖ್ಯಸಾಂದೀಪಮತಮುದ್ಯ ನಿರಾಕರೋತಿ—**

**ಸರ್ವಥಾನುಪಪತ್ತ್ಯಧಿಕರಣಂ ॥ ೫ ॥ ಸರ್ವಥಾನುಪಪತ್ತೇಶ್ಚ ॥ ೩೦ ॥**

**ಜ್ಞಾನಾರ್ಥೋಭಯಮಿಥ್ಯಾತ್ಮಕಸ್ಯ ಸರ್ವಶೂನ್ಯವಾದಿಮತಸ್ಯ ಪ್ರತ್ಯಕ್ಷಾನುಮಾನಶ್ರುತ್ಯಾಗಮಾದಿಸಕಲಪ್ರಮಾಣವಿರುದ್ಧತ್ವಾತ್ ತನ್ಮತಮತ್ಯಂತಮಸಂಗತಂ. ವಿಜ್ಞಾನಪ್ರಜ್ಞಾನವಾದಯೋಃ ಶ್ರುತಿಯುಕ್ತ್ಯನುಭವವಿರೋಧಾತ್ತದುಭಯಮನಂಗೀಕರಣೀಯಂ. ಮೂಲಾಭಾವಾತ್ ಪ್ರಜ್ಞಾನಸ್ಯ ಪ್ರಪಂಚಸ್ಯ ಚ ಶೂನ್ಯತ್ವಂ ಕಿಂ ನ ಸ್ಯಾದಿತ್ಯಾಶಂಕಾಯಾಂ ತನ್ಮತನಿರಾಕರಣಾರ್ಥಮಸ್ಯಾರಂಭಕತ್ವಾತ್ ಮಿಥ್ಯಾದ್ವೈತಶೂನ್ಯದ್ವೈತಯೋಸ್ಸ್ವತ್ವಸತ್ಯತ್ವಸ್ವಾತ್ಮನಷ್ಟತ್ವವೈಲಕ್ಷಣ್ಯೇಽಪಿ ತದುಭಯಶಾಸ್ತ್ರಯೋರಂಗಾಂಗಿತ್ವೇನ ಪೂರ್ವೋತ್ತರಾಧಿಕರಣಯೋರುಪಜೀವ್ಯಪಜೀವಕತ್ವಸಂಗತಿಃ. " ಕಂ ಬ್ರಹ್ಮ ಖಂ ಬ್ರಹ್ಮ ", " ಆಕಾಶ ಆತ್ಮಾ " ಇತಿ ಶ್ರುತಿದರ್ಶನಾತ್ತನ್ಮತಂ ಪ್ರಮಾಣಮೂಲಂ ಭ್ರಾಂತಿಮೂಲಂ ವೇತಿ**

ಸಂಶಯಃ. ಸರ್ವಶೂನ್ಯವಾದ ಏವ ಹಿ ಸುಗತಮತತುಲ್ಯಸಾಂದೀಪ ಕಾಷ್ಠಾ. "ಶಿಷ್ಯಬುದ್ಧಿಯೋಗ್ಯತಾನುಗುಣ್ಯೇನಾಭ್ಯುಪಗಮಾದಿನಾ ಕ್ಷಣಿಕ ತ್ವಾದಯ ಉಕ್ತಾಃ. ವಿಜ್ಞಾನಂ ಬಾಹ್ಯಾರ್ಥಾಶ್ಚ ಸರ್ವೇ ನ ಸಂತಿ. ಶೂನ್ಯಾರ್ಥಮೇವ ತತ್ತ್ವಂ. ಅಭಾವಪತ್ತಿರೇವ ಚ ಮೋಕ್ಷಃ" ಇತ್ಯೇವ ಬುದ್ಧಾದಿವತ್ಸಾಂದೀಪಾಭಿಪ್ರಾಯಸ್ತದೇವ ಹಿ ಯುಕ್ತಂ. ಶೂನ್ಯಸ್ಯಾಹೇ ತುಸಾಧ್ಯತಯಾ ಸ್ವತಸ್ಸಿದ್ಧೇಃ. ಸ್ವತ ಏವ ಹಿ ಹೇತುರನ್ವೇಷಣೀಯಃ. ತಚ್ಚ ಸದ್ಭಾವಾದಭಾವಾಚ್ಚ ನೋತ್ಸದ್ಯತೇ. ಭಾವಾತ್ತಾವನ್ನ ಕಸ್ಯಚಿದು ತ್ಪತ್ತಿರ್ದೃಷ್ಟಾ. ನಹಿ ಘಟಾದಿರನುಪಮೃದಿತೇ ಪಿಂಡಾದಿಕೇ ಜಾಯತೇ. ನಾಪ್ಯಭಾವಾದುತ್ಪತ್ತಿಸ್ಸಂಭವತಿ. ನಷ್ಟೇ ಪಿಂಡಾದಿಕೇ ಹ್ಯಭಾವಾದುತ್ಪ ದ್ಯಮಾನಂ ಘಟಾದಿಕಮಭಾವಾತ್ಮಕಮೇವ ಸ್ಯಾತ್. ತಥಾ ಸ್ವತಃ ಪರ ತಶ್ಚೋತ್ಪತ್ತಿರ್ನ ಸಂಭವತಿ. ಸ್ವತಸ್ಸ್ವಸ್ಯೋತ್ಪತ್ತಾವಾತ್ಮಾಶ್ರಯದೋಷ ಪ್ರಸಂಗಾತ್ಪ್ರಯೋಜನಾಭಾವಾಚ್ಚ. ಪರತಃ ಪರೋತ್ಪತ್ತೌ ಪರತ್ವಾವಿಶೇ ಷಾತ್ಸರ್ವೇಷಾಂ ಸರ್ವೇಭ್ಯ ಉತ್ಪತ್ತಿಪ್ರಸಂಗಃ. ಜನ್ಮಾಭಾವಾದೇವ ವಿನಾಶಸ್ಯಾಪ್ಯಭಾವಃ. ಅತಶ್ಶೂನ್ಯಮೇವ ತತ್ತ್ವಂ. ಅತೋ ಜನ್ಮವಿ ನಾಶಸದಸದಾದಯೋ ಭ್ರಾಂತಿಮಾತ್ರಂ, ನಚ ನಿರಧಿಷ್ಠಾನಭ್ರಮಾಸಂ ಭವಾದ್ಭ್ರಮಾಧಿಷ್ಠಾನಂ ಕಿಂಚಿತ್ಪಾರಮಾರ್ಥಿಕಂ ತತ್ತ್ವಮಾಶ್ರಯಿ ತವ್ಯಂ. ದೋಷದೋಷಾಶ್ರಯತ್ವಜ್ಞಾತೃತ್ವಾದ್ಯಪಾರಮಾರ್ಥಿಕೇಽಪಿ ಭ್ರಮೋಪಪತ್ತಿವದಧಿಷ್ಠಾನಾಪಾರಮಾರ್ಥ್ಯೇಽಪಿ ಭ್ರಮೋಪಪತ್ತೇಃ ಶೂನ್ಯಮೇವ ತತ್ತ್ವಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ ಸರ್ವಥಾನುಪ ಪತ್ತೇಶ್ಚೇತಿ. ತಥಾಚ ಸರ್ವಶೂನ್ಯತ್ವಂ ಭವದಭಿಪ್ರೇತಂ ನ ಸಂಭವತಿ. ಕಿಂ ಭವಾನ್ ಸರ್ವಂ ಸದಿತಿ ಪ್ರತಿಜಾನೀತೇ? ಅಸದಿತಿ ವಾ? ಅನ್ಯಥಾ ವಾ? ಸರ್ವಥಾ ತವಾಭಿಪ್ರೇತಂ ತುಚ್ಛತ್ವಂ ನ ಸಂಭವತಿ, ಲೋಕೇ ಭಾವಾ ಭಾವಶಬ್ದಯೋಸ್ತತ್ಪ್ರತೀತ್ಯೋಶ್ಚ ವಿದ್ಯಮಾನಸ್ಯೈವ ವಸ್ತುನೋಽವಸ್ಥಾ ವಿಶೇಷಗೋಚರತ್ವಸ್ಯ ಪ್ರತಿಪಾದಿತತ್ವಾತ್. ಅತಸ್ಸರ್ವಂ ಶೂನ್ಯಮಿತಿ ಯಃ ಪ್ರತಿಜಾನಾತಿ ಸಃ ಸರ್ವಂ ಸದಿತ್ಯೇವ ಪ್ರತಿಜಾನಾತಿ. ತಸ್ಮಾತ್ ಸರ್ವಸ್ಯ ವಿದ್ಯಮಾನಸ್ಯಾವಸ್ಥಾವಿಶೇಷಯೋಗಿತ್ವೈವ ಪ್ರತಿಜ್ಞಾತಾ ಭವತೀತಿ ಭವ ದಭಿಮತಾ ತುಚ್ಛತಾ ನ ಕುತಶ್ಚಿದಪಿ ಸಿದ್ಧ್ಯತಿ. ಕಿಂಚ, ಕುತಶ್ಚಿತ್ಪ್ರಮಾ ಣಾತ್ ಶೂನ್ಯತ್ವಮುಪಲಭ್ಯ ತದೇವ ಸಿಷಾಧಯಿಷತಾ ತಸ್ಯ ಪ್ರಮಾ ಣಸ್ಯ ಸತ್ಯತ್ವಮಭ್ಯುಪೇಯಂ. ತಸ್ಯ ಸತ್ಯತ್ವೇ ಸರ್ವಂ ಸತ್ಯಂ ಸ್ಯಾದಿತಿ ಸರ್ವಥಾ ಸರ್ವಶೂನ್ಯತ್ವಂ ಚಾನುಪಪನ್ನಂ. ತಸ್ಮಾತ್ಸ್ವಾತ್ಮಹನನತ್ವ ಜಡತತ್ತ್ವಾತ್ಮಕತ್ವಚಿಜ್ಜನ್ಯತ್ವಾತ್ಮಕಸಾಂದೀಪಮತಂ ಬೌದ್ಧಾಪರಪ ರ್ಯಾಯಂ ನಿಶ್ಶ್ರೇಯಸಾರ್ಥಿಭಿರ್ನ ಮಂತವ್ಯಂ.

ಹೀಗೆ ಮೋಕ್ಷಕ್ಕೆ ವಿರುದ್ಧವೂ ಶುಷ್ಕವೇದಾಂತವೂ ಆದ ನಿರ್ವಿಶೇಷಾದ್ವೈತವನ್ನು ಪ್ರತಿಪಾದಿಸುವ ವಾಸಿಷ್ಠಮತವನ್ನು ನಿರಾಕರಿಸಿ, ಆತ್ಮನಾಶದಲ್ಲಿ ಕೊನೆಗಾಣುವ ಶೂನ್ಯಾದ್ವೈತವನ್ನು ಬೋಧಿಸುವ ಸಾಂದೀಪಮತವನ್ನು ಮುಂದೆ ನಿರಾಕರಿಸುತ್ತಾನೆ. **ಸರ್ವಥಾನುಪಪತ್ತ್ಯಧಿಕರಣಂ ||೫|| ಸರ್ವಥಾನುಪಪತ್ತೇಶ್ಚ ||**

ಜ್ಞಾನ ಮತ್ತು ವಸ್ತು ಎರಡನ್ನು ಸುಳ್ಳೆಂದು ಹೇಳುವ ಸರ್ವಶೂನ್ಯವಾದವು ಪ್ರತ್ಯಕ್ಷ ಅನುಮಾನ ಶ್ರುತಿಸ್ಮೃತ್ಯಾಗಮ ಮೊದಲಾದ ಪ್ರಮಾಣಗಳೆಲ್ಲಕ್ಕೂ ವಿರುದ್ಧವಾದ್ದರಿಂದ ಅತ್ಯಂತ ಅಸಂಗತವೆನಿಸಿದೆ. ವಿಜ್ಞಾನವಾದ ಮತ್ತು ಪ್ರಜ್ಞಾನವಾದ ಎರಡೂ ಶ್ರುತಿ ಯುಕ್ತಿ ಅನುಭವಗಳಿಗೆ ವಿರುದ್ಧವಾದ್ದರಿಂದ ಎರಡೂ ಅಂಗೀಕಾರಾರ್ಹಗಳಲ್ಲ. ಆಧಾರವಿಲ್ಲದ್ದರಿಂದ ಪ್ರಜ್ಞಾನವೂ ಪ್ರಪಂಚವೂ ಶೂನ್ಯವೆನಿಸುತ್ತವೆ ಎಂದಾಶಂಕಿಸಿ ನಿರಾಕರಿಸಲಿಕ್ಕಾಗಿ ಈ ಅಧಿಕರಣವನ್ನಾರಂಭಿಸಲಾಗಿದೆ. ಮಿಥ್ಯಾದ್ವೈತಶೂನ್ಯಾದ್ವೈತಗಳೆರಡಕ್ಕೂ ಆತ್ಮನ ಸತ್ಯತೆ ಮತ್ತು ಆತ್ಮವಿನಾಶ ಎಂಬ ವೈಲಕ್ಷಣ್ಯವಿದ್ದರೂ ಜಗನ್ಮಿಥ್ಯಾತ್ವಪ್ರಯುಕ್ತವಾಗಿ ಅಂಗಾಂಗಿಭಾವವಿರುವುದರಿಂದ ಇವನ್ನು ತಿಳಿಸುವ ಈ ಎರಡು ಅಧಿಕರಣಗಳಿಗೂ ಆಶ್ರಯಾಶ್ರಯಿಭಾವಸಂಗತಿ ಹೊಂದುತ್ತದೆ. "ಸುಖವೇ ಬ್ರಹ್ಮ, ಆಕಾಶವೇ ಬ್ರಹ್ಮ" "ಆಕಾಶವೇ ಆತ್ಮ" ಎಂದು ಶ್ರುತಿ ಇರುವುದರಿಂದ ಶೂನ್ಯಾದ್ವೈತಮತವು ಪ್ರಮಾಣಮೂಲವೇ ಭ್ರಾಂತಿಮೂಲವೇ ಎಂದು ಸಂಶಯವುಂಟಾಗುತ್ತದೆ. ಸರ್ವಶೂನ್ಯವಾದವೇ ಬೌದ್ಧಮತಕ್ಕೆ ಸದೃಶವಾದ ಸಾಂದೀಪಮತದಲ್ಲಿ ಕೊನೆಗೊಂಡಿದೆ. ಶಿಷ್ಯರ ಬುದ್ಧಿ ಮತ್ತು ಯೋಗ್ಯತೆಗಳಿಗನುಗುಣವಾಗಿ ಅಂಗೀಕರಿಸಿದ್ದರಿಂದ ಕ್ಷಣಿಕತ್ವವಾದವೂ ವಿಜ್ಞಾನವಾದವೂ ಬಂದಿರುವಂತೆ, ವಿಜ್ಞಾನ ಮತ್ತು ಹೊರಗಿನ ವಿಷಯ ಇವ್ಯಾವುದೂ ಇಲ್ಲವೆಂದೂ, ಶೂನ್ಯವೇ ಮೋಕ್ಷವೆಂದೂ ಹೇಳುವ ಸಾಂದೀಪಮತವೂ ಬೌದ್ಧಮತದಂತೆ ಬಂದಿರುವುವು. ಶೂನ್ಯವನ್ನು ಸಕಾರಣವಾಗಿ ಸಾಧಿಸಲಾಗುವುದಿಲ್ಲವಾದ್ದರಿಂದ ಅದು ತಾನಾಗಿಯೇ ಸಿದ್ಧಿಸುತ್ತದೆ. ಇಲ್ಲವಾದರೆ, ಅದಕ್ಕೊಂದು ಕಾರಣವನ್ನು ಹುಡುಕಬೇಕಾಗುತ್ತದೆ. ಆ ಹೇತು ಸದ್ರೂಪವೋ? ಅಸದ್ರೂಪವೋ? ಎಂದು ಕೇಳಿದರೆ ಸದ್ರೂಪವೆಂದು ಹೇಳುವುದು ಸರಿಯಲ್ಲ; ಯಾಕೆಂದರೆ ಕಾರಣವಿದ್ದಾಗಲೇ ಕಾರ್ಯವನ್ನು ನಾವು ಎಲ್ಲಿಯೂ ಕಂಡಿಲ್ಲ. ಮಣ್ಣಿನ ಮುದ್ದೆ ಇದ್ದಹಾಗೆಯೇ ಇದ್ದರೆ ಅದರಿಂದ ಘಟ ಹೇಗೆ ಬಂದೀತು? ಅಭಾವದಿಂದ ಉತ್ಪತ್ತಿಯೂ ಸಂಭವಿಸುವುದಿಲ್ಲ. ಮಣ್ಣೇ ನಷ್ಟವಾದರೆ ಆ ಅಭಾವದಿಂದ ಹುಟ್ಟುವ ಗಡಿಗೆಯೂ ಅಭಾವರೂಪವೇ ಆಗಬೇಕು. ಆಗ ತನಗೆ ತಾನೆ ಕಾರಣವೆಂದೂ ಅಥವಾ ಬೇರೆಯೊಂದು ಕಾರಣವೆಂದೂ ಹೇಳಲಾಗುವುದಿಲ್ಲ. ತನ್ನಿಂದತಾನೇ ಹುಟ್ಟುವುದಾದರೆ ಆತ್ಮಾಶ್ರಯದೋಷ ಬರುತ್ತದೆ ಮತ್ತು ಅದರಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಬೇರೆಯೊಂದರಿಂದ ಮತ್ತೊಂದು ಹುಟ್ಟುವುದಾದರೆ, ಆ ಬೇರೆಯಾದದ್ದು ಎಲ್ಲಕ್ಕೂ ಸಮಾನವಾದ್ದರಿಂದ ಎಲ್ಲವೂ ಎಲ್ಲದರಿಂದಲೂ ಹುಟ್ಟಬೇಕಾದೀತು. ಹೀಗೆ ವಸ್ತು ಹುಟ್ಟದಿರುವುದರಿಂದಲೇ ಅದಕ್ಕೆ ವಿನಾಶವೂ ಇಲ್ಲ. ಈ ರೀತಿ

ಯಲ್ಲಿ ಶೂನ್ಯವೇ ತತ್ತ್ವವೆನಿಸುವುದರಿಂದ ಜನನ ಮರಣ, ಸತ್ ಅಸತ್ ಎಂಬಿವೆಲ್ಲವೂ ಭ್ರಾಂತಿರೂಪವೇ ಆಗಿವೆ. ನಿರಾಶ್ರಯವಾಗಿ ಭ್ರಾಂತಿ ಸಂಭವಿಸುವುದಿಲ್ಲವಾದ್ದರಿಂದ ಭ್ರಾಂತಿಗಾಶ್ರಯವಾಗಿ ಯಥಾರ್ಥವಾದ ತತ್ತ್ವವೊಂದನ್ನಾಶ್ರಯಿಸಬೇಕೆಂದರೆ ಅದೂ ಸರಿಯಲ್ಲ. ಯಾಕೆಂದರೆ ದೋಷ, ಅದರ ಆಶ್ರಯ ಮತ್ತು ಅದನ್ನು ತಿಳಿಯುವವನು ಇವೆಲ್ಲವೂ ಪರಮಾರ್ಥವಲ್ಲದಿದ್ದರೂ ಭ್ರಾಂತಿ ಬರುವಂತೆ ಆಶ್ರಯವು ಯಥಾರ್ಥವಾಗಿಲ್ಲದಿದ್ದರೂ ಭ್ರಾಂತಿ ಬರಬಹುದು. ಆದ್ದರಿಂದ ಶೂನ್ಯವೇ ತತ್ತ್ವವೆನಿಸುತ್ತದೆ. ಹೀಗೆ ಆಕ್ಷೇಪ ಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ನೀವು ಒಪ್ಪುವಂತೆ ಎಲ್ಲವೂ ಶೂನ್ಯವೆಂಬ ವಾದವು ಎಲ್ಲಾ ವಿಧದಲ್ಲೂ ಅಯುಕ್ತವಾದ್ದರಿಂದ ಸಂಭವಿಸುವುದಿಲ್ಲ. ಎಲ್ಲವೂ ಸದ್ರೂಪವೆಂದು ನೀವು ಒಪ್ಪುವಿರೋ? ಅಥವಾ ಅಸದ್ರೂಪವೆಂದೋ? ಅಥವಾ ಬೇರೆ ರೀತಿಯಲ್ಲೋ? ಈ ಎಲ್ಲಾ ವಿಧದಲ್ಲೂ ನೀವು ಹೇಳುವ "ಎಲ್ಲವೂ ತುಚ್ಛ"ವೆಂಬ ವಾದವು ಸಂಭವಿಸುವುದಿಲ್ಲ. ಭಾವ ಮತ್ತು ಅಭಾವವೆಂಬ ಶಬ್ದಗಳೂ, ಅವುಗಳ ಜ್ಞಾನವೂ ಸದ್ರೂಪವಾದ ವಸ್ತುವಿನ ಅವಸ್ಥಾವಿಶೇಷಗಳಿಗೆ ಅನ್ವಯಿಸುತ್ತವೆ ಎಂದು ಲೋಕದಲ್ಲಿ ಕಂಡುಬರುತ್ತದೆ. ಆದ್ದರಿಂದ ಎಲ್ಲವೂ ಶೂನ್ಯವೆಂದು ಯಾರು ಹೇಳುತ್ತಾರೋ ಅವರು ಎಲ್ಲವನ್ನೂ ಸದ್ರೂಪವೆಂದೇ ಒಪ್ಪುತ್ತಾರೆ. ಸದ್ರೂಪವಾದ ವಸ್ತುವಿನ ಅವಸ್ಥಾವಿಶೇಷವೇ ಇದರಿಂದ ತಿಳಿಯಬರುವುದರಿಂದ ನೀವು ಹೇಳುವ ತುಚ್ಛತ್ವವೇ ಸಿದ್ಧಿಸುವುದಿಲ್ಲ. ಇದೂ ಅಲ್ಲದೆ, ಯಾವ ಪ್ರಮಾಣವೂ ಇಲ್ಲವೆಂಬುದನ್ನು ತಿಳಿದು ಸಾಧಿಸುವವನು ಆ ಪ್ರಮಾಣದ ಸತ್ಯತೆಯನ್ನು ಅಂಗೀಕರಿಸಬೇಕು. ಅದು ಸತ್ಯವಾದರೆ ಎಲ್ಲವೂ ಸತ್ಯವೇ ಆಗುತ್ತದೆಯಾದ್ದರಿಂದ ಶೂನ್ಯವಾದ ಎಲ್ಲಾ ವಿಧದಲ್ಲೂ ಅಯುಕ್ತವೇ ಆಗುತ್ತದೆ. ಹೀಗೆ ಜಡರೂಪವಾದ ಆತ್ಮನನ್ನು ಒಪ್ಪಿದ್ದರೂ ಆತ್ಮನಾಶದಲ್ಲಿಯೇ ಕೊನೆಯಾಗುವುದರಿಂದ ಸಾಂದೀಪಮತವು ಬೌದ್ಧಮತದಂತೆಯೇ ಮುಮುಕ್ಷುಗಳಿಗೆ ಗ್ರಾಹ್ಯವಿಲ್ಲ.

**ಅಸ್ಮಿನ್ನರ್ಥೇ ಹೇತ್ವಂತರಮಾಹ—ಕ್ಷಣಿಕತ್ವಾಚ್ಚ ॥ ೩೧ ॥**

**ಸಾಂದೀಪಮತೇ ಜ್ಞಾನಾತ್ಮನಃ ಪಾಷಾಣಾಗ್ನಿವತ್ಸೌದಾಮಿನೀಲತಿಕವದ್ಭೂತಾಕಾಶಮಧ್ಯೇ ಸ್ವಾತಂತ್ರ್ಯೇಣ ಮೂಲಾಭಾವತಯಾ ಚಿದುತ್ಪತ್ತೇಃ ಕ್ಷಣಿಕತ್ವಾಂಗೀಕಾರಾತ್ತನ್ಮತಂ ನಾಂಗೀಕರ್ತವ್ಯಂ. ಮೂಲಾಭಾವತಯಾ ಯಥಾ ಸ್ವಯಮೇವ ಸ್ವತ ಉತ್ಪದ್ಯತೇ ಕ್ಷಣೇನ ತಥಾ ಸ್ವಯಮೇವ ಕ್ಷಣಿಕತ್ವಾದ್ವಿನಶ್ಯತಿ. ತಥಾಚೇತ್ತದ್ಜ್ಞಾನಸ್ಯ ಸ್ವತಸ್ಸಾಮರ್ಥ್ಯಂ ವಾ ಶರೀರಾನುಸರಣೇನ ವಾ? ಕಾರಣಾಭಾವೇ ಕಾರ್ಯಂ ನಾಸ್ತೀತಿ ನ್ಯಾಯೇನ ಕಾರ್ಯಭೂತಸ್ಯ ಜ್ಞಾನಸ್ಯ ಸ್ವಕೀಯೋತ್ಪತ್ತೌ ಸ್ವಸಾಮರ್ಥ್ಯಂ ನಾಸ್ತಿ, ಲೋಕೇ ಯತ್ರ ಕುತ್ರಾಪಿ ಕಾರಣಾಭಾವತಯಾ ಕಾರ್ಯೋತ್ಪತ್ತ್ಯದರ್ಶನಾತ್. ತ್ವಚ್ಛಾಸ್ತ್ರೇ ಶರೀರೇಂದ್ರಿಯಾದಿನಿರಪೇಕ್ಷತಯಾ ಜ್ಞಾನಸ್ಥಿತ್ಯನಂಗೀಕಾರಾಚ್ಚ. ಶರೀರಾನುಸರಣೇನ ಸಾಮರ್ಥ್ಯ**

ಮಿತಿ ಚೇತ್ ಸ್ತಜ್ಞಾನವ್ಯತಿರಿಕ್ತತಯಾ ಜಗತ್ಕಾರಣೇಶ್ವರಸ್ಯಾನಂಗೀಕಾ
ರಾತ್ ಶರೀರೇಂದ್ರಿಯಾದಿಕಂ ಕಸ್ಮಾದುತ್ಪದ್ಯತೇ ? ಜ್ಞಾನಾರ್ಥೋಽಭ
ಯೋತ್ಪತ್ತ್ಯನಂಗೀಕಾರೇ ಅಹಂಪ್ರತ್ಯಯವಿರೋಧೇನ “ಮಮ ಮಾತಾ
ವಂಧ್ಯಾ” ಇತಿವತ್ಪ್ರತ್ಯಕ್ಷವಿರುದ್ಧಪ್ರಸಂಗಃ. ತನ್ಮತಾನುಸರಣೇನ ಜ್ಞಾನ
ಶರೀರಯೋರೇಕತ್ವಾಂಗೀಕಾರೇ ಸರ್ವೇಷಾಂ ಶರೀರಪತನೇ ಸುಪ್ತೌ ಚ
ಜ್ಞಾನಶರೀರಯೋಃ ಪೃಥಕ್ತ್ವದರ್ಶನಾಚ್ಚ ಶ್ರುತಿಯುಕ್ತ್ಯನುಭವವಿ
ರೋಧೋ ದುರ್ನಿವಾರಃ. “ರಜ್ಜುಸರ್ಪವದಾತ್ಮಾನಂ ಜೀವಂ ಜ್ಞಾತ್ವಾ
ಭಯಂ ವಹೇತ್ । ನಾಹಂ ಜೀವಃ ಪರಾತ್ಮೇತಿ ಜ್ಞಾತಶ್ಚೇನ್ನಿರ್ಭಯೋ
ಭವೇತ್ ॥” ಇತಿ. ವಾಸಿಷ್ಠಮತಾನುಕೂಲಶುಷ್ಕಾದ್ವೈತಾನುಸರಣೇನ
“ರಜ್ಜುಸರ್ಪವದ್ಬ್ರಹ್ಮೈವಾಹಂ ನಾಹಂ ಜೀವಃ” ಇತಿ ವಾಕ್ಯೋಪ
ದೇಶಕ್ಷಣೇನ ಧ್ಯಾನಧಾರಣಾದಿನಿರಪೇಕ್ಷತಯಾ ಯಥಾ ಮುಕ್ತಿರಿತ್ಯದ್ವೈ
ತವಾದಿನಃ ಪ್ರವದಂತಿ, ತಥಾ “ಅಶರೀರಂ ಸರ್ವದಾಸ್ತಿ ಶರೀರರಹಿತಂ
ಸದಾ । ಇಯಮೇವ ಸದಾಮುಕ್ತಿರನ್ಯಥಾ ಭ್ರಮಕಾರಣಂ ॥” ಇತಿ
ವೇದಬಾಹ್ಯತಂತ್ರಪ್ರಧಾನಬೃಹದ್ವಾಸಿಷ್ಠಾನುಸಾರೇಣ ಸಾಂದೀಪಮತಾ
ನುಸಾರಿಣಃ “ಸರ್ವದಾ ಶರೀರಾಭಿಧಾನಭೂತಾಕಾಶೋಽಸ್ತಿ, ಮೂಲಾಭಾ
ವತಯಾ ಶರೀರಾತ್ಮಕಜ್ಞಾನಶೂನ್ಯತ್ವನಿಶ್ಚಯಮಾತ್ರಮೇವ ಕ್ಷಣಿಕತ್ವಾ
ನ್ಮುಕ್ತಿಃ” ಇತಿ ಪ್ರಲಪಂತಿ. ಕಾರಣಾಭಾವೇ ಕಾರ್ಯಾಭಾವ ಇತಿ ನ್ಯಾಯೇನ
ಮೂಲಾಭಾವತಯಾ ಬ್ರಹ್ಮಾತ್ಮಕಜ್ಞಾನಸ್ಯ ಸದಾ ಶೂನ್ಯತ್ವಾಂಗೀಕಾ
ರೇಣ ತದ್ವೇದ್ಯಪ್ರಪಂಚಶೂನ್ಯತ್ವಮರ್ಥಾತ್ಸಿದ್ಧಂ. “ಶುದ್ಧೇ ಸುಷುಪ್ತಿ
ದೃಷ್ಟಾಂತಂ ತಸ್ಮಾನ್ನಾಹಂ ಕದಾಚನ” ಇತಿ ತಚ್ಛಾಸ್ತ್ರಸ್ಯ ನಿಶ್ಚಯೇನ
ವಕ್ತೃತ್ವಕರ್ತೃತ್ವಭೋಕ್ತೃತ್ವಜ್ಞಾತೃತ್ವಸ್ಮರ್ತೃತ್ವಾದಿನಾ ಅಹಂಪ್ರತ್ಯ
ಯಸ್ಯ ವಿದ್ಯಮಾನತ್ವೇಽಪಿ ಗಜಸಿಂಹಸ್ವಪ್ನಪ್ರಬೋಧಾದಿದೃಷ್ಟಾಂತೇನ
ಗುರುಸೂಚನಯಾ ಕ್ಷಣೇನ ಸದಾ ಸರ್ವಂ ಅಹಂಪ್ರತ್ಯಯಾದಿಕಂ
ಶೂನ್ಯಮಿತಿ ರಾದ್ಧಾಂತಿತಂ. ಕಿಂಚೈತನ್ಮತೇ ಶರೀರಾತ್ಮನೋರೇಕತ್ವಂ
ಆತ್ಮನಃ ಪೂರ್ವೋತ್ತರಜನ್ಮಶೂನ್ಯತ್ವಂ. ಗೋಮಯೇ ಕೀಟೋತ್ಪ
ತ್ತಿವಚ್ಛುಕ್ಲಶೋಣಿತಸಂಯೋಗೇನ ಜೀವಜನ್ಯತ್ವಂ ಚೋಕ್ತಂ. ತಸ್ಮಾದೇ
ತನ್ಮತಬೌದ್ಧಮತಯೋರ್ವೈಷಮ್ಯಾಭಾವಾತ್ ಶ್ರೇಯಃಕಾಮೈರ್ವೈದಿ
ಕೈರೇತಚ್ಛಾಸ್ತ್ರಮುಪೇಕ್ಷಣೀಯಂ. ಪಾಷಾಣವಜ್ಜಡಾಕಾಶಸ್ಯ ನಿಷ್ಪ್ರ
ಯೋಜಕತ್ವಾತ್ತದುಪಾಸನತಯಾ ತದಸ್ತಿತ್ವನಿಶ್ಚಯೇ ನ ಕಿಂಚಿತ್ಫಲಮು
ಪಪದ್ಯತೇ. ಕಿಂಚ ತನ್ಮತಜ್ಞಾನಶೂನ್ಯಾನಾಂ ಪುನರಾವೃತ್ತಿರಸ್ತಿ ವಾ
ನವಾ ? ನಾದ್ಯಃ. ವಿದ್ಯುದಭ್ರವದ್ಜ್ಞಾನಸ್ಯ ಸ್ವತ ಉತ್ಪನ್ನತ್ವಾಂಗೀಕಾ
ರಾತ್ ಸ್ವಯಮೇವ ವಿನಶ್ಯತಿ. ಅತಸ್ತಚ್ಛಾಸ್ತ್ರಪ್ರವೃತ್ತಿರ್ನೋಪಲ

**ಭ್ಯತೇ, ಸ್ವಜನ್ಯತ್ವವತ್ಸ್ವವಿನಾಶಸ್ಯ ಚ ಸ್ವಸ್ಯೈವ ಧರ್ಮತ್ವಾತ್ಸ್ವತಂತ್ರತ್ವಾಚ್ಚ. ಶರೀರಾತ್ಮನೋರೇಕತ್ವಾಂಗೀಕಾರಾತ್ ಶುಕ್ಲಶೋಣಿತಮೇಳನೇನ ಜೀವೋತ್ಪತ್ತ್ಯಂಗೀಕಾರಾತ್ ಸ್ವಶರೀರನಾಶ ಏವ ಸ್ವಮೋಕ್ಷ ಇತ್ಯರ್ಥಸಿದ್ಧತ್ವಾತ್ಸ್ವವಚನವ್ಯಾಘಾತೋ ದುರ್ನಿವಾರಃ. ನ ದ್ವಿತೀಯಃ ಪುನರಾವೃತ್ತ್ಯಭಾವೇ ತ್ವಚ್ಛಾಸ್ತ್ರೇ ಗುರುಶಿಷ್ಯಯೋಃ ಪ್ರವೃತ್ತ್ಯಸಂಭವಾತ್. ತಥಾಚೇತ್ಪಶ್ವಾದಿವನ್ಮೂಢತ್ವಪ್ರಸಂಗಾಚ್ಚ ಶ್ರುತಿಯುಕ್ತ್ಯನುಭವವಿರೋಧಿತ್ವೇನೈತನ್ಮತಮವಿಚಾರಿತರಮಣೀಯಂ. ಅಕಾಶಸ್ತಲ್ಲಿಂಗಾಧಿಕರಣೇ ಆಸಮಂತಾತ್ಪ್ರಕಾಶತ ಇತ್ಯಾಕಾಶ ಇತಿ ವ್ಯುತ್ಪತ್ತ್ಯಾ ಆಕಾಶಶಬ್ದಸ್ಯ ಜಗತ್ಕಾರಣತ್ವಾದಿಬ್ರಹ್ಮಲಿಂಗತ್ವೇನ ವಾಯ್ವಾಕಾಶಜ್ಯೋತಿಸ್ಸೂರ್ಯಾದಿಶಬ್ದಾನಾಂ ತತ್ಪರತ್ವಸಾಧನತ್ವಾತ್, "ಕಂ ಬ್ರಹ್ಮ" ಇತ್ಯಾದಿವಾಕ್ಯಾನಾಂ ನಾನ್ಯವಿಷಯತ್ವಮಿತಿ ವೇದಿತವ್ಯಂ.**

ಈ ಬಗ್ಗೆ ಬೇರೊಂದು ಕಾರಣವನ್ನು ಹೇಳುತ್ತಾನೆ. ಕ್ಷಣಿಕತ್ವಾಚ್ಚ ॥ ೩೧ ॥

ಸಾಂದೀಪಮತದಲ್ಲಿ ಕಲ್ಲಿನಿಂದ ಬೆಂಕಿ ಹುಟ್ಟುವಂತೆಯೂ, ಆಕಾಶದಲ್ಲಿ ಮಿಂಚು ಕಾಣುವಂತೆಯೂ ಯಾವ ಕಾರಣವೂ ಇಲ್ಲದೆ ಸ್ವತಂತ್ರವಾಗಿ ಜ್ಞಾನರೂಪವಾದ ಆತ್ಮವು ಹುಟ್ಟುವುದೆಂದೂ, ಅದನ್ನು ಕ್ಷಣಿಕವೆಂದೂ ಹೇಳಿರುವುದರಿಂದ ಆ ಮತವು ಗ್ರಾಹ್ಯವಲ್ಲ. ಕಾರಣವಿಲ್ಲದೆಯೇ ಹೇಗೆ ಆತ್ಮವು ಹುಟ್ಟುವುದೋ ಹಾಗೆಯೇ ಅದರ ನಾಶವೂ ಆಗುವುದರಿಂದ ಅದು ಕ್ಷಣಿಕವೆಂಬುದು ಸಿದ್ಧವಾಗುತ್ತದೆ. ಹಾಗಾದರೆ, ಜ್ಞಾನರೂಪವಾದ ಆತ್ಮವು ಶರೀರವನ್ನು ಅನುಸರಿಸಿಕೊಂಡು ಹುಟ್ಟುವುದೋ? ಅಥವಾ ತನ್ನ ಸಾಮರ್ಥ್ಯದಿಂದಲೇ ಹುಟ್ಟುವುದೋ? ಎಂದು ವಿಕಲ್ಪ ಬರುತ್ತದೆ. ಕಾರಣವಿಲ್ಲದೆ ಕಾರ್ಯವು ಬರುವುದಿಲ್ಲವೆಂಬ ನ್ಯಾಯದಿಂದ ಕಾರ್ಯವೆನಿಸಿದ ಜ್ಞಾನವು ತನ್ನ ಸಾಮರ್ಥ್ಯದಿಂದಲೇ ಹುಟ್ಟುವಂತಿಲ್ಲ. ಲೋಕದಲ್ಲಿ ಯಾವ ಕಾರ್ಯವೂ ತನಗಿಂತ ಬೇರೊಂದು ಕಾರಣವಿಲ್ಲದೆ ಹುಟ್ಟುವುದಾಗಿ ಕಂಡುಬಂದಿಲ್ಲ. ನಿಮ್ಮ ಮತದಲ್ಲಿ ಶರೀರೇಂದ್ರಿಯಗಳ ಸಂಬಂಧವಿಲ್ಲದೆ ಜ್ಞಾನವನ್ನು ಒಪ್ಪುವುದೂ ಇಲ್ಲ. ಹಾಗಾದರೆ ಶರೀರವನ್ನು ಅನುಸರಿಸಿಕೊಂಡೇ ಆತ್ಮ ಹುಟ್ಟುತ್ತದೆ ಎಂದು ಎರಡನೆ ವಿಕಲ್ಪವನ್ನು ಹೇಳಿದರೆ ತನಗಿಂತಲೂ ಬೇರೆಯಾದ ಶರೀರಕ್ಕೆ ಕಾರಣವ್ಯಾವುದು? ಎಂದು ಕೇಳಬೇಕಾಗುತ್ತದೆ. ಜಗತ್ಕಾರಣನಾಗಿ ಈಶ್ವರನನ್ನೇ ನೀವು ಒಪ್ಪುವುದಿಲ್ಲವಾದ್ದರಿಂದ ಶರೀರವನ್ನು ಅನುಸರಿಸಿಯೂ ಆತ್ಮವು ಹುಟ್ಟುವಂತಿಲ್ಲ. ಆತ್ಮ(ಜ್ಞಾನ) ಮತ್ತು ಶರೀರ(ಜ್ಞೇಯ) ಎರಡರ ಉತ್ಪತ್ತಿಯನ್ನು ಒಪ್ಪದಿದ್ದರೆ ನಾನು ಎಂಬ ಪ್ರತೀತಿಯೇ ಹುಟ್ಟುವುದಿಲ್ಲವಾದ್ದರಿಂದ ನನ್ನ ತಾಯಿ ಬಂಜೆ ಎಂಬಂತೆ ಪ್ರತ್ಯಕ್ಷ ವಿರೋಧವುಂಟಾಗುವುದು. ಅವರ ಮತದಂತೆ ಜ್ಞಾನ ಮತ್ತು ಶರೀರಗಳೆರಡರ ಐಕ್ಯವನ್ನು ಒಪ್ಪಿದರೆ ಎಲ್ಲರಿಗೂ ಶರೀರ ಬಿದ್ದಮೇಲೂ ಹಾಗೆಯೇ ನಿದ್ರೆಯಲ್ಲೂ ಬೇರೆಬೇರೆಯಾಗಿ ಜ್ಞಾನ ಮತ್ತು ಶರೀರವೆರಡನ್ನೂ ನಾವು ಕಾಣುವುದರಿಂದ ಶ್ರುತಿ

ಯುಕ್ತಿ ಅನುಭವಗಳ ವಿರೋಧವೂ ಬರುವುದು. "ಹಗ್ಗದಲ್ಲಿ ಸರ್ಪದಂತೆ ಆತ್ಮವನ್ನು ಜೀವನೆಂದು ತಿಳಿದವನು ಭಯಗೊಳ್ಳುತ್ತಾನೆ. ಆದರೆ ನಾನು ಜೀವನಲ್ಲ; ಪರಶಿವನು ಎಂದು ತಿಳಿದವನು ನಿರ್ಭಯನಾಗುತ್ತಾನೆ" ಎಂಬ ವಾಸಿಷ್ಠಮತಕ್ಕನುಗುಣವಾದ ಶುಷ್ಕಾದ್ವೈತವನ್ನನುಸರಿಸಿ "ರಜ್ಜುಸರ್ಪದಂತೆ ನಾನು ಜೀವನಲ್ಲ; ಬ್ರಹ್ಮನೇ" ಎಂಬ ವಾಕ್ಯೋಪದೇಶವಷ್ಟರಿಂದಲೇ ಧ್ಯಾನಧಾರಣಗಳು ಇಲ್ಲದೆಯೇ, ಮೋಕ್ಷ ಬರುವುದೆಂದು ಅದ್ವೈತಿಗಳು ಹೇಳುವಂತೆ "ಆತ್ಮನು ಯಾವಾಗಲೂ ಶರೀರವಿಲ್ಲದವನು. ಹೀಗಿರುವುದೇ ಸದಾ ಮುಕ್ತಿ. ಬೇರೆ ಎಲ್ಲವೂ ಭ್ರಾಂತಿಗೆ ಕಾರಣವಾಗುವುದು" ಎಂಬ ತಾಂತ್ರಿಕಪ್ರಧಾನವಾದ ಬೃಹದ್ವಾಸಿಷ್ಠಮತವನ್ನನುಸರಿಸಿ ಸಾಂದೀಪಮತಾನುಯಾಯಿಗಳೂ ಸಹ "ಯಾವಾಗಲೂ ಶರೀರವೆನಿಸಿದ ಈ ಭೂತಾಕಾಶವೇ ಇರುತ್ತದೆ. ಇದಕ್ಕೆ ಬೇರೆ ಮೂಲವಿಲ್ಲದ್ದರಿಂದ ಈ ಶರೀರವೇ ಆತ್ಮನೆಂಬ ಜ್ಞಾನ ಹೊರಟು ಹೋಗುವುದರಿಂದಲೇ ಕ್ಷಣಿಕವಾದ ಶರೀರವೂ ತೊಲಗುವುದರಿಂದ ಮುಕ್ತಿ ಬರುವುದು" ಎಂದು ಹೇಳುತ್ತಾರೆ. ಕಾರಣವಿಲ್ಲದಿದ್ದರೆ ಕಾರ್ಯವೂ ಇರುವುದಿಲ್ಲವೆಂಬ ನ್ಯಾಯದಂತೆ ಮೂಲವೇ ಇಲ್ಲದ್ದರಿಂದ ಆತ್ಮವೇ ಬ್ರಹ್ಮವೆಂಬ ಜ್ಞಾನವನ್ನು ಶೂನ್ಯವೆಂದೇ ಒಪ್ಪಬೇಕಾಗುವ ಪ್ರಯುಕ್ತ ಆ ಜ್ಞಾನಗೋಚರವಾದ ಪ್ರಪಂಚವೂ ಶೂನ್ಯವೆಂದೇ ಸಿದ್ಧವಾಗುತ್ತದೆ. "ಶುದ್ಧಸ್ವರೂಪನಲ್ಲಿ ಸುಷುಪ್ತಿಯೇ ನಿದರ್ಶನವಾಗಿದೆಯಾದ್ದರಿಂದ ನಾನೆಂಬುದೇ ಎಂದಿಗೂ ಇರುವುದಿಲ್ಲ" ಎಂಬ ಆ ಶಾಸ್ತ್ರದ ನಿಶ್ಚಯದಂತೆ ಅಹಂಪದಾರ್ಥವೇ ಹೇಳುವವನಾಗಿ, ಮಾಡುವವನಾಗಿ, ಅನುಭವಿಸುವವನಾಗಿ, ತಿಳಿಯುವವನಾಗಿ, ಸ್ಮರಿಸುವವನಾಗಿ ಲೋಕದಲ್ಲಿ ತೋರುತ್ತಿದ್ದರೂ,ಆನೆಯು ಸ್ವಪ್ನದಲ್ಲಿ ಸಿಂಹವನ್ನು ಕಂಡಂತೆ, ಸ್ವಪ್ನವನ್ನು ಕಂಡವನು ಎಚ್ಚರಗೊಂಡಂತೆ, ಒಂದು ಕ್ಷಣದಲ್ಲಿಯೇ ನಾನು ಎಂಬ ಜ್ಞಾನವೆಲ್ಲವೂ ಶೂನ್ಯವೆಂದು ಗುರುವಿನ ಉಪದೇಶದಿಂದ ಸಿದ್ಧವಾಗುವುದು. ಇದಲ್ಲದೆ ಈ ಮತದಲ್ಲಿ ಶರೀರಾತ್ಮರಿಗೆ ಐಕ್ಯವನ್ನೂ, ಈ ಆತ್ಮನಿಗೆ ಹಿಂದಿನ ಮುಂದಿನ ಜನ್ಮಗಳಿಲ್ಲವೆಂದೂ, ಸಗಣಿಯಲ್ಲಿ ಹುಳ ಹುಟ್ಟುವಂತೆ ಜೀವನು ಶುಕ್ಲಶೋಣಿತಗಳ ಸಂಯೋಗದಿಂದ ತಾನಾಗಿಯೇ ಹುಟ್ಟುವನೆಂದೂ ಹೇಳಲಾಗಿದೆ. ಈ ಮತವು ಬೌದ್ಧಮತಕ್ಕಿಂತಲೂ ಬೇರೆಯಲ್ಲದ್ದರಿಂದ ಶ್ರೇಯೋಽಭಿಲಾಷಿಗಳಾದ ವೈದಿಕರಿಗೆ ಗ್ರಾಹ್ಯವಲ್ಲ. ಪಾಷಾಣದಂತೆ ಜಡವಾದ ಆಕಾಶವಿರುವುದರಿಂದ ಯಾವ ಪ್ರಯೋಜನವೂ ಇಲ್ಲದ್ದರಿಂದಲೂ, ಅದರ ಉಪಾಸನದಿಂದಲೂ, ಅದರ ಇರುವಿಕೆಯನ್ನು ತಿಳಿಯುವುದರಿಂದಲೂ ಯಾವ ಪ್ರಯೋಜನವೂ ದೊರಕುವುದಿಲ್ಲ. ಇದಲ್ಲದೆ, ಈ ಮತದ ತತ್ತ್ವವನ್ನು ತಿಳಿಯದವರಿಗೆ ಪುನರ್ಜನ್ಮವುಂಟೇ ಇಲ್ಲವೆ? ಎಂದು ಕೇಳಿದರೆ ಮೊದಲನೆಯ ಪಕ್ಷ ಸರಿಯಲ್ಲ. ಏಕೆಂದರೆ ಮೇಘದಲ್ಲಿ ಮಿಂಚಿನಂತೆ ಜೀವನೂ ತಾನಾಗಿಯೇ ಹುಟ್ಟಿ ನಶಿಸುವನೆಂದು ಈ ಮತದಲ್ಲಿ ಹೇಳಿರುವುದರಿಂದ ಇದರಲ್ಲಿ ಯಾರಿಗೂ ಪ್ರವೃತ್ತಿಯೇ ಬರುವಂತಿಲ್ಲ. ತನ್ನ ಉತ್ಪತ್ತಿಯಂತೆ ನಾಶವೂ ತನ್ನ ಧರ್ಮವೇ ಆಗುವುದರಿಂದಲೂ, ಅದಕ್ಕೆ ಬೇರೊಂದು ಕಾರಣದ ಅಪೇಕ್ಷೆ

ಇಲ್ಲದ್ದರಿಂದಲೂ, ಶರೀರ ಆತ್ಮರಿಗೆ ಐಕ್ಯವನ್ನು ಒಪ್ಪಿರುವುದರಿಂದಲೂ, ಶುಕ್ಲ ಶೋಣಿತಗಳ ಸಂಪರ್ಕದಿಂದಲೇ ಜೀವೋತ್ಪತ್ತಿಯನ್ನು ಅಂಗೀಕರಿಸಿರುವುದರಿಂದಲೂ, ತನ್ನ ನಾಶವೇ ತನಗೆ ಮೋಕ್ಷವೆಂದು ಸಹಜವಾಗಿ ತಿಳಿದುಬರುವುದರಿಂದಲೂ ತನ್ನ ಮಾತೇ ತನಗೆ ವಿರುದ್ಧವಾಗುವುದು. ಇದರಂತೆ ಎರಡನೆ ಪಕ್ಷವೂ ಸರಿಯಲ್ಲ; ಏಕೆಂದರೆ ನಿಮ್ಮ ಶಾಸ್ತ್ರವನ್ನು ಓದದಿದ್ದರೂ ಪುನರ್ಜನ್ಮ ಬರುವುದಿಲ್ಲವೆಂದರೆ ನಿಮ್ಮ ಶಾಸ್ತ್ರದಲ್ಲಿ ಗುರುಶಿಷ್ಯರು ಪ್ರವರ್ತಿಸುವುದೇ ವ್ಯರ್ಥವಾಗಿ ಪಶ್ವಾದಿಗಳಂತೆ ಎಲ್ಲರೂ ಮೂಢರಾಗಬೇಕಾಗುತ್ತದೆ. ಈ ಮತವು ಶ್ರುತಿಯುಕ್ತಿಅನುಭವಗಳಿಗೆ ವಿರುದ್ಧವಾಗುವುದರಿಂದ ವಿಚಾರಹೀನವೆನಿಸುತ್ತದೆ. ಆಕಾಶಾಧಿಕರಣದಲ್ಲಿ ಆಕಾಶಪದವು ಜಗತ್ಕಾರಣವಾದ ಬ್ರಹ್ಮವನ್ನು ತಿಳಿಸುವುದೆಂದು ಹೇಳಿರುವುದರಿಂದಲೂ ವಾಯು, ಆಕಾಶ, ಜ್ಯೋತಿ, ಸೂರ್ಯ ಮೊದಲಾದ ಪದಗಳನ್ನು ಬ್ರಹ್ಮಪರವೆಂದು ಸಾಧಿಸಿರುವುದರಿಂದಲೂ "ಅಹಂ ಬ್ರಹ್ಮ" ಎಂಬಲ್ಲಿ ಬ್ರಹ್ಮವನ್ನೇ ತಿಳಿಯಬೇಕು.

**ಏವಂ ಸಾಂದೀಪಮತಂ ನಿರಸ್ಯ ತತ್ತುಲ್ಯಜೈನಮತಂ ನಿರಾಕರೋತಿ.**

**ಏಕಸ್ಮಿನ್ನಸಂಭವಾಧಿಕರಣಂ ॥ ೬ ॥ ನೈಕಸ್ಮಿನ್ನಸಂಭವಾತ್ ॥ ೩೨ ॥**

**ಜೈನಾಃ ಪ್ರಪಂಚಸ್ಯೈಕಕಾಲೇ ಸತ್ತ್ವಮಸತ್ತ್ವಂ ಸದಸದಾತ್ಮಕತ್ವಂ ಸದಸದ್ಭಿನ್ನತ್ವಂ ಚ ವದಂತಿ. ತನ್ನ ಸಂಭವತಿ. ಏಕಸ್ಮಿನ್ಪ್ರಪಂಚೇ ಏಕಕಾಲೇ ಸತ್ತ್ವಾಸತ್ತ್ವಾದೀನಾಂ ವಾಸ್ತವಾನಾಂ ವಿರುದ್ಧಧರ್ಮಾಣಾಮಸಂಭವಾತ್. ಕಾಲಭೇದೇನಾಂಗೀಕಾರೇ ನ ವಿರೋಧಃ. ವೇದವಿರುದ್ಧಧರ್ಮಾಶ್ರಯತ್ವಾತ್ಪೂರ್ವೋತ್ತರಮತನಿರಾಕರಣಾನುಕೂಲಾಧಿಕರಣಯೋರುಪಜೀವ್ಯಪಜೀವಕತ್ವಸಂಗತಿಃ. ದಿಗಂಬರಮತಮತ್ರ ಪ್ರಮಾಣಮೂಲಂ ಭ್ರಾಂತಿಮೂಲಂ ವೇತಿ ಸಂದಿಹ್ಯತೇ, ತಸ್ಯಾಪಿ ಬಹುದೇಶೀಯಜನಾನಾಮಂಗೀಕಾರಾತ್. ತೇ ಕಿಲ ಮನ್ಯಂತೇ "ಜೀವಾಜೀವಾತ್ಮಕಂ ಸರ್ವಂ ಜಗದೇತನ್ನಿರೀಶ್ವರಂ. ತಚ್ಚ ಷಡ್ದ್ರವ್ಯಾತ್ಮಕಂ. ತಾನಿ ಚ ದ್ರವ್ಯಾಣಿ ಜೀವಧರ್ಮಾಧರ್ಮಪುದ್ಗಲಕಾಲಾಕಾಶಾಖ್ಯಾನಿ. ತತ್ರ ಜೀವಾಃ ಬದ್ಧಾಃ ಯೋಗಸಿದ್ಧಾಃ ಮುಕ್ತಾಶ್ಚೇತಿ ತ್ರಿವಿಧಾಃ. ಧರ್ಮೋ ನಾಮ ಗತಿಮತಾಂ ಗತಿಹೇತುಭೂತೋ ದ್ರವ್ಯವಿಶೇಷೋ ಜಗದ್ವ್ಯಾಪೀ. ಅಧರ್ಮಶ್ಚ ಸ್ಥಿತಿಹೇತುಭೂತೋ ವ್ಯಾಪೀ. ಪುದ್ಗಲೋ ನಾಮ ವರ್ಣಗಂಧರಸಸ್ಪರ್ಶವದ್ದ್ರವ್ಯಂ. ತಚ್ಚ ದ್ವಿವಿಧಂ ಪರಮಾಣುರೂಪಂ ತತ್ಸಂಘಾತರೂಪಂ ಚ, ಪವನಜ್ವಲನಸಲಿಲಧರಣೀತನುಭುವನಾದಿಕಂ. ಕಾಲಃ ವಸ್ತು ಅಭೂದಸ್ತಿ ಭವಿಷ್ಯತೀತಿ ವ್ಯವಹಾರಹೇತುರಣುರೂಪೋ ದ್ರವ್ಯವಿಶೇಷಃ. ಆಕಾಶೋಽಪ್ಯೇಕ ಅನಂತಪ್ರದೇಶಶ್ಚ. ತೇಷು ಚಾಣುದ್ರವ್ಯಾತಿರಿಕ್ತದ್ರವ್ಯಾಣಿ ಪಂಚ ಅಸ್ತಿಕಾಯಾ ಇತಿ ಸಂಗೃಹ್ಯಂತೇ. ಜೀವಾಸ್ತಿಕಾಯೋ ಧರ್ಮಾಸ್ತಿಕಾಯೋಽಧರ್ಮಾಸ್ತಿಕಾಯೋ ಪುದ್ಗಲಾಸ್ತಿಕಾಯೋ ಹ್ಯಾಕಾಶಾಸ್ತಿ**

ಕಾಯ ಇತ್ಯನೇಕದೇಶವರ್ತಿನಿ ದ್ರವ್ಯೇಽಸ್ತಿಕಾಯಶಬ್ದಃ ಪ್ರವರ್ತತೇ. ಜೀವಾನಾಂ ಮೋಕ್ಷೋಪಯೋಗಿನಮಪರಮಪಿ ಸಂಗ್ರಹಂ ಕುರ್ವಂತಿ "ಜೀವಾಜೀವಾಸ್ರವಬಂಧನಿರ್ಜರಸಂವರಮೋಕ್ಷಾ" ಇತಿ. ಮೋಕ್ಷಸಂಗ್ರಹೇಣ ಮೋಕ್ಷೋಪಾಯಶ್ಚ ಗೃಹೀತಃ. ಸಚ ಸಮ್ಯಗ್ಜ್ಞಾನದರ್ಶನಚಾರಿತ್ರರೂಪಃ. ತತ್ರ ಜೀವಸ್ತು ಜ್ಞಾನದರ್ಶನಸುಖವೀರ್ಯಗುಣಃ. ಅಜೀವಶ್ಚ ಜೀವಭೋಗ್ಯವಸ್ತುಜಾತಂ. ಆಸ್ರವಸ್ತದ್ಭೋಗೋಪಕರಣಭೂತಮಿಂದ್ರಿಯಾದಿಕಂ. ಬಂಧಶ್ಚಾಷ್ಟವಿಧಃ ಘಾತಿಕರ್ಮಚತುಷ್ಟಯಮಘಾತಿಕರ್ಮಚತುಷ್ಟಯಂ ಚೇತಿ. ತತ್ರಾದ್ಯಂ ಜೀವಗುಣಾನಾಂ ಸ್ವಾಭಾವಿಕಾನಾಂ ಜ್ಞಾನದರ್ಶನವೀರ್ಯಸುಖಾನಾಂ ಪ್ರತಿಘಾತಕರಂ. ಅಪರಂ ಶರೀರಸಂಸ್ಥಾನತದಭಿಮಾನತತ್ಸ್ಥಿತಿತತ್ಪ್ರಯುಕ್ತಸುಖದುಃಖೋಪೇಕ್ಷಾಹೇತುಭೂತಂ. ನಿರ್ಜರಂ ಮೋಕ್ಷಸಾಧನಮರ್ಹದುಪದೇಶಾವಗತಂ ತಪಃ. ಸಂವರೋ ನಾಮೇಂದ್ರಿಯನಿರೋಧಸ್ಸಮಾಧಿರೂಪಃ. ಮೋಕ್ಷಸ್ತು ನಿವೃತ್ತರಾಗಾದಿಕ್ಲೇಶಸ್ಯ ಸ್ವಭಾವಿಕಾತ್ಮಸ್ವರೂಪಾವಿರ್ಭಾವಃ. ಪೃಥಿವ್ಯಾದಿಹೇತುಭೂತಾಶ್ಚಾಣವೋ ವೈಶೇಷಿಕಾದೀನಾಮಿವ ನ ಚತುರ್ವಿಧಾಃ, ಅಪಿ ತ್ವೇಕಸ್ವಭಾವಾಃ. ಪೃಥಿವ್ಯಾದಿಭೇದಸ್ತು ಪರಿಣಾಮಕೃತಃ. ಸರ್ವಂ ಚ ವಸ್ತುಜಾತಂ ಸತ್ತ್ವಾಸತ್ತ್ವನಿತ್ಯತ್ವಾನಿತ್ಯತ್ವಭಿನ್ನತ್ವಾಭಿನ್ನತ್ವಾದಿಭಿರನೈಕಾಂತಿಕಮಿಚ್ಛಂತಿ. "ಸ್ಯಾದಸ್ತಿ, ಸ್ಯಾನ್ನಾಸ್ತಿ, ಸ್ಯಾದಸ್ತಿ ಚ ನಾಸ್ತಿ ಚ, ಸ್ಯಾದವಕ್ತವ್ಯಂ, ಸ್ಯಾದಸ್ತಿ ಚಾವಕ್ತವ್ಯಂ ಚ, ಸ್ಯಾನ್ನಾಸ್ತಿ ಚಾವಕ್ತವ್ಯಂ ಚ, ಸ್ಯಾದಸ್ತಿ ಚ ನಾಸ್ತಿ ಚಾವಕ್ತವ್ಯಂ ಚೇತಿ ಸರ್ವತ್ರ ಸಪ್ತಭಂಗಿನಯಾವತಾರಾತ್ ಸರ್ವಂ ವಸ್ತುಜಾತಂ ದ್ರವ್ಯಪರ್ಯಾಯಾತ್ಮಕಮಿತಿ ದ್ರವ್ಯಾತ್ಮನಾ ಸತ್ತ್ವೈಕತ್ವನಿತ್ಯತ್ವಾದ್ಯುಪಪಾದಯಂತಿ ಪರ್ಯಾಯಾತ್ಮನಾ ಚ ತದ್ವಿಪರೀತಂ. ಪರ್ಯಾಯಾಶ್ಚ ದ್ರವ್ಯಸ್ಯಾವಸ್ಥಾವಿಶೇಷಾಃ. ತೇಷಾಂ ಚ ಭಾವಾಭಾವರೂಪತ್ವಾತ್ಸತ್ತ್ವಾಸತ್ತ್ವಾದಿಕಂ ಸರ್ವಮುಪಪನ್ನಮಿತ್ಯತ್ರಾಭಿಧೀಯತೇ ನೈಕಸ್ಮಿನ್ನಸಂಭವಾದಿತಿ. ನೈತದುಪಪದ್ಯತೇ, ಕುತಃ ಏಕಸ್ಮಿನ್ನಸಂಭವಾತ್ ಏಕಸ್ಮಿನ್ನೇಕಕಾಲೇ ವಸ್ತುನಿ ಅಸ್ತಿತ್ವನಾಸ್ತಿತ್ವಾದೇರ್ವಿರುದ್ಧಸ್ಯ ಛಾಯಾತಾಪವದ್ಯುಗಪದಸಂಭವಾತ್. ಏತದುಕ್ತಂ ಭವತಿ. ದ್ರವ್ಯಸ್ಯ ತದ್ವಿಶೇಷಣಭೂತಪರ್ಯಾಯಶಬ್ದಾಭಿಧೇಯಾವಸ್ಥಾವಿಶೇಷಸ್ಯ ಪೃಥಕ್ಪದಾರ್ಥತ್ವಾನ್ನೈಕಸ್ಮಿನ್ವಿರುದ್ಧಧರ್ಮಸಮಾವೇಶಸ್ಸಂಭವತಿ ಇತಿ. ತಥಾಹಿ ಏಕೇನಾಸ್ತಿತ್ವಾದಿನಾ ಅವಸ್ಥಾವಿಶೇಷೇಣ ವಿಶಿಷ್ಟಸ್ಯ ತದಾನೀಮೇವ ನ ತದ್ವಿಪರೀತನಾಸ್ತಿತ್ವಾದಿವಿಶಿಷ್ಟತ್ವಂ ಸಂಭವತಿ. ಉತ್ಪತ್ತಿವಿನಾಶಾಖ್ಯಪರಿಣಾಮವಿಶೇಷಾಸ್ಪದತ್ವಂ ಚ ದ್ರವ್ಯಸ್ಯಾನಿತ್ಯತ್ವಂ. ತದ್ವಿಪರೀತಂ ಚ ನಿತ್ಯತ್ವಂ ತಸ್ಮಿನ್ಕಥಂ ಸಮವೈತಿ? ವಿರೋಧಿಧರ್ಮಾಶಯತ್ವಂ ಚ್ರ

ಭಿನ್ನತ್ವಂ ತದ್ವಿಪರೀತಂ ಚಾಭಿನ್ನತ್ವಂ ಕಥಂ ವಾ ತಸ್ಮಿನ್ಸಮುನ್ವೈತಿ? ಯಥಾಶ್ವತ್ವಮಹಿಷತ್ವಯೋರ್ಯುಗಪದೇಕಸ್ಮಿನ್ನಸಂಭವಃ. ಅಯಮರ್ಥಃ ಪೂರ್ವಮೇವೋಕ್ತಃ. ಕಾಲಭೇದೇನ ಭೇದಾಭೇದಾಂಗೀಕಾರೇ ಸ್ವಮತ ಭಂಗಪ್ರಸಂಗಃ. ಲೋಕೋಽಸ್ತಿ ನಾಸ್ತೀತಿ ವ್ಯವಹಾರೋ ವ್ಯವಹರ್ತ್ಯಾಣಾಂ ಜಾತ್ಯಾದ್ಯಸ್ತಿತ್ವನಾಸ್ತಿತ್ವವ್ಯವಹಾರತುಲ್ಯಃ. ಜಾತ್ಯಾದಯೋ ಹಿ ದ್ರವ್ಯವಿಶೇಷಣತಯೈವ ಪ್ರತೀಯಂತೆ ಇತಿ ಪೂರ್ವಮೇವೋಕ್ತಂ. ಕಥಂ ಪುನರೇಕಮೇವ ಶಿವಾತ್ಮಕಂ ಪರಬ್ರಹ್ಮ ಸರ್ವಾತ್ಮಕಮಿತಿ ಶ್ರೋತ್ರಿಯೈರುಚ್ಯತೇ? ಇತಿಚೇತ್ ಚೇತನಾಚೇತನಪ್ರಪಂಚಹೇತುಭೂತಸರ್ವಜ್ಞತ್ವಾದ್ಯನನ್ಯಸಾಧಾರಣಧರ್ಮಾವಚ್ಛಿನ್ನಸತ್ಯಸಂಕಲ್ಪಸ್ಯ ಮಹೇಶ್ವರಸ್ಯೇತ್ಯುಕ್ತಂ. ಸ್ವಭಾವತಃ ಕ್ಷೇತ್ರಜ್ಞಾನಾಂ ಭಿನ್ನತ್ವೇಽಪಿ ಭ್ರಮರಕೀಟವತ್ ಶಿವಧ್ಯಾನಧಾರಣೋಪಾಸನಯಾ ಸ್ವಭಾವಜೀವತ್ವನಿವೃತ್ತಿಪೂರ್ವಕನಿತ್ಯಮಂಗಳಾತ್ಮಕಶಿವತ್ವಪ್ರಾಪ್ತಿರೇವ ಮುಕ್ತಿರಿತಿ ಸರ್ವವೇದಾಂತಸಿದ್ಧಾಂತಃ. ಕಿಂಚ ಜೀವಾದೀನಾಂ ಷಣ್ಣಾಂ ದ್ರವ್ಯಾಣಾಮೇಕದ್ರವ್ಯಪರ್ಯಾಯತ್ವಾಭಾವಾತ್ತೇಷು ದ್ರವ್ಯೈಕತ್ವೇನ ಪರ್ಯಾಯಾತ್ಮನಾಚೈಕತ್ವಾನೇಕತ್ವಾದಯೋ ದುರುಪಪಾದಾಃ. ಅಥೋಚ್ಯೇತ ಷಡೇತಾನಿ ದ್ರವ್ಯಾಣಿ ಸ್ವಕೀಯೈಃ ಪರ್ಯಾಯೈಃ ಸ್ವೇನ ಸ್ವೇನ ಚಾತ್ಮನಾ ತಥಾ ಭವಂತೀತಿ, ಏಕಮಪಿ ಸರ್ವಮನೈಕಾಂತಿಕಮಿತ್ಯಭ್ಯುಪಗಮವಿರೋಧಃ ಅನ್ಯೋನ್ಯತಾದಾತ್ಮ್ಯಾಭಾವಾತ್. ಅತೋ ನ ಯುಕ್ತಮಿದಂ ಜೈನಮತಂ. ಈಶ್ವರಾನಧಿಷ್ಠಿತಪರಮಾಣುಕಾರಣವಾದೇ ಪೂರ್ವೋಕ್ತದೋಷಾಸ್ತಥೈವಾವತಿಷ್ಠಂತೇ.

ಹೀಗೆ ಸಾಂದೀಪಮತವನ್ನು ನಿರಾಕರಿಸಿ ಜೈನಮತವನ್ನು ನಿರಾಕರಿಸುತ್ತಾನೆ.

**ಏಕಸ್ಮಿನ್ನಸಂಭವಾಧಿಕರಣಂ ||೬|| ನೈಕಸ್ಮಿನ್ನಸಂಭವಾತ್ ||೩೨||**

ಜೈನರು ಒಂದೇ ಸಮಯದಲ್ಲಿಯೇ ವಸ್ತುವಿನ ಇರುವಿಕೆ, ಇಲ್ಲದಿರುವಿಕೆ, ಎರಡೂ ಆಗಿರುವಿಕೆ, ಮತ್ತು ಎರಡೂ ಅಲ್ಲದಿರುವಿಕೆ ಇಷ್ಟನ್ನೂ ಒಪ್ಪುತ್ತಾರೆ. ಇದು ಸರಿಯಲ್ಲ; ಏಕೆಂದರೆ ಒಂದೇ ವಸ್ತುವಿನಲ್ಲಿ ಒಂದೇ ಕಾಲದಲ್ಲಿ ವಾಸ್ತವವಾಗಿ ಸತ್ತ್ವ ಅಸತ್ತ್ವ ಮೊದಲಾದ ನಾಲ್ಕು ಧರ್ಮಗಳು ಪರಸ್ಪರ ವಿರುದ್ಧವಾದ್ದರಿಂದ ಸಂಭವಿಸಲಾರವು. ಕಾಲಭೇದದಿಂದ ಒಪ್ಪುವುದಾದರೆ ವಿರೋಧ ಬರುವುದಿಲ್ಲ. ಬೌದ್ಧ ಜೈನ ಮತಗಳು ವೇದ ವಿರುದ್ಧವಾದ ಧರ್ಮವನ್ನಾಶ್ರಯಿಸಿರುವುದರಿಂದ ಇವನ್ನು ತಿಳಿಸುವ ಈ ಎರಡು ಅಧಿಕರಣಗಳಿಗೂ ಪರಸ್ಪರವಾಗಿ ಆಶ್ರಯಾಶ್ರಯೀಭಾವ ಸಂಗತಿ ಇದೆ. ಜೈನರಲ್ಲಿ ಒಂದು ಭಾಗವೆನಿಸಿದ ದಿಗಂಬರಮತವನ್ನು ಅನೇಕ ಜನರು ಅಂಗೀಕರಿಸಿರುವುದರಿಂದ ಇದಕ್ಕೆ ಪ್ರಮಾಣವಿದೆಯೇ? ಇಲ್ಲವೇ? ಎಂದು ಇಲ್ಲಿ ವಿಚಾರಿಸಲಾಗುವುದು. ಅವರು ಹೀಗೆ ಹೇಳುತ್ತಾರೆ. "ಪ್ರಪಂಚವೆಲ್ಲವೂ ಜೀವ ಮತ್ತು ಅಜೀವರೂಪವಾಗಿದೆ. ಇದಕ್ಕೆ ಈಶ್ವರನು ಕಾರಣನಲ್ಲ. ಈ ಪ್ರಪಂಚದಲ್ಲಿ ಜೀವ-ಧರ್ಮ-ಅಧರ್ಮ-

ಪುದ್ಗಲ-ಕಾಲ-ಆಕಾಶ ಎಂಬ ಆರು ದ್ರವ್ಯಗಳಿವೆ. ಇದರಲ್ಲಿ ಜೀವರು ಬದ್ಧ-ಸಿದ್ಧ-ಮುಕ್ತ ಎಂದು ಮೂರು ಬಗೆಯಾಗಿದ್ದಾರೆ. ಧರ್ಮವೆಂಬುದುದು ಜೀವರ ಗಮನಕ್ಕೆ ಸಾಧನವಾದ ದ್ರವ್ಯ. ಇದು ಜಗತ್ತನ್ನು ವ್ಯಾಪಿಸಿದೆ. ಅಧರ್ಮವೆಂಬುದು ಸ್ಥಿತಿಗೆ ಸಾಧಕವಾದ ದ್ರವ್ಯ. ಇದೂ ಜಗತ್ತಿನ ತುಂಬ ವ್ಯಾಪಿಸಿದೆ. ಪುದ್ಗಲವೆಂದರೆ ರೂಪ ರಸ ಗಂಧ ಸ್ಪರ್ಶಗಳೆಂಬ ದ್ರವ್ಯ. ಇದು ಪರಮಾಣು ಮತ್ತು ಅವುಗಳ ಸಮುದಾಯವೆಂದು ಎರಡು ಬಗೆಯಾಗಿದೆ. ಇವುಗಳ ಸಮುದಾಯವೇ ವಾಯು, ಅಗ್ನಿ, ನೀರು, ಭೂಮಿ, ಶರೀರ, ಪ್ರಪಂಚ ಮುಂತಾದವು. ವಸ್ತು ಇತ್ತು ಇದೆ ಮತ್ತು ಇರುವುದು ಎಂಬ ವ್ಯವಹಾರಕ್ಕೆ ಕಾರಣವಾಗಿ ಅಣುವೆನಿಸಿದ ದ್ರವ್ಯವೇ ಕಾಲ. ಆಕಾಶವು ಒಂದೇ ಆಗಿ ಎಲ್ಲಾ ಕಡೆಯೂ ವ್ಯಾಪಿಸಿದೆ. ಇವುಗಳಲ್ಲಿ ಅಣುರೂಪವಾದ ದ್ರವ್ಯಗಳನ್ನು ಬಿಟ್ಟು ಉಳಿದವಕ್ಕೆ ಜೀವಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಪುದ್ಗಲಾಸ್ತಿಕಾಯ, ಆಕಾಶಾಸ್ತಿಕಾಯ ಹೀಗೆ ಐದು ಬಗೆಯ ಅಸ್ತಿಕಾಯಗಳೆಂಬ ಹೆಸರಿವೆ. ಅನೇಕ ಕಡೆಗಳಲ್ಲಿ ಇರುವ ವಸ್ತುವೇ ಅಸ್ತಿಕಾಯವೆನಿಸುತ್ತದೆ. ಜೀವ, ಅಜೀವ, ಆಸ್ರವ, ಬಂಧ, ನಿರ್ಜರ, ಸಂವರ, ಮೋಕ್ಷಗಳೆಂದು ಮೋಕ್ಷಕ್ಕೆ ಆವಶ್ಯಕವಾದ ಬೇರೊಂದು ಸಾಧನಮಾರ್ಗವನ್ನೂ ಅವರು ತಿಳಿಸುತ್ತಾರೆ. ವಿವೇಕದಿಂದ ಪರಿಶೀಲಿಸಿ ನೋಡುವುದೇ ಈ ಸಾಧನಮಾರ್ಗವೆನಿಸಿದೆ. ಇದರಲ್ಲಿ ಮೊದಲನೆಯವನಾದ ಜೀವನಿಗೆ ಜ್ಞಾನ, ದರ್ಶನ, ಸುಖ, ವೀರ್ಯಗಳೇ ಗುಣಗಳು. ಅಜೀವವೆಂದರೆ ಜೀವನಿಗೆ ಭೋಗಾರ್ಹವಾದ ವಸ್ತುಗಳು. ಆಸ್ರವವೆಂದರೆ ಅವನ್ನು ಪಡೆಯಲು ಸಾಧನವಾದ ಇಂದ್ರಿಯಗಳು. ಬಂಧ ಎಂಟು ಬಗೆ; ಹಿಂಸಾರೂಪವಾದವು ನಾಲ್ಕು; ಅಹಿಂಸಾರೂಪವಾದವು ನಾಲ್ಕು. ಹಿಂಸಾತ್ಮಕಬಂಧಗಳು ಜೀವರ ಸಹಜಗುಣಗಳೆನಿಸಿದ ಜ್ಞಾನ, ದರ್ಶನ, ವೀರ್ಯ, ಸುಖಗಳನ್ನು ನಾಶಮಾಡುತ್ತವೆ. ಅಹಿಂಸಾತ್ಮಕಬಂಧಗಳು ಶರೀರದ ಸಂಘಟನೆ, ಅಭಿಮಾನ, ರಕ್ಷಣೆ, ಇದರಿಂದ ಬರುವ ಸುಖದುಃಖ, ಇವುಗಳ ಉಪೇಕ್ಷೆಗೆ ಕಾರಣವಾಗುತ್ತವೆ. ನಿರ್ಜರವೆಂದರೆ ಮೋಕ್ಷಕ್ಕೆ ಸಾಧನವಾಗಿ ಅರ್ಹ ಎಂಬ ಜ್ಞಾನಿಯ ಉಪದೇಶದಿಂದ ತಿಳಿದು ಆಚರಿಸುವ ತಪಸ್ಸು. ಮನಸ್ಸನ್ನು ಸಮಾಧಾನಪಡಿಸುವ ಇಂದ್ರಿಯನಿಗ್ರಹವು ಸಂವರವೆನಿಸುತ್ತದೆ. ರಾಗವೇ ಮೊದಲಾದ ಕ್ಲೇಶಗಳು ತೊಲಗಿದಮೇಲೆ ಉಂಟಾಗುವ ಸಹಜವಾದ ಆತ್ಮಸ್ವರೂಪದ ವಿಕಾಸವೇ ಮೋಕ್ಷವೆನಿಸುತ್ತದೆ. ಪೃಥಿವ್ಯಾದಿಗಳಿಗೆ ಕಾರಣವಾದ ಅಣುಗಳು ವೈಶೇಷಿಕರಂತೆ ನಾಲ್ಕು ಬಗೆಯಲ್ಲ; ಆದರೆ ಒಂದೇ ಸ್ವಭಾವದವಾಗಿವೆ. ಪೃಥಿವಿ ಮೊದಲಾದ ಭೇದಗಳು ಪರಿಣಾಮದಿಂದ ಉಂಟಾಗುತ್ತವೆ. ವಸ್ತುಗಳೆಲ್ಲವೂ ಸದ್ರೂಪವೂ, ಅಸದ್ರೂಪವೂ, ನಿತ್ಯವೂ, ಅನಿತ್ಯವೂ, ಭಿನ್ನವೂ, ಅಭಿನ್ನವೂ ಆಗಿರುತ್ತವೆ ಎಂಬುದು ಜೈನಸಿದ್ಧಾಂತ. "ವಸ್ತು ಇದ್ದರೂ ಇರಬಹುದು, ಇಲ್ಲದೆಯೂ ಇರಬಹುದು, ಇದ್ದೂ ಇಲ್ಲದೆಯೂ ಇರಬಹುದು, ಅದನ್ನು ತಿಳಿಸಲಿಕ್ಕಾಗದೆಯೂ ಇರಬಹುದು, ಇದ್ದೂ ತಿಳಿಸಲಿಕ್ಕಾಗದಿರಬಹುದು, ಇಲ್ಲದೆಯೂ ತಿಳಿಸಲಾಗದಿರಬಹುದು, ಇದ್ದೂ ಇಲ್ಲದೆಯೂ ತಿಳಿಸಲಾಗದಿರಬಹುದು"

ಹೀಗೆ ಒಂದು ವಸ್ತು ಏಳು ಬಗೆಯಾಗಿರಬಹುದೆಂದು ತಿಳಿಸುವ ನ್ಯಾಯವನ್ನು ಜೈನರು ಎಲ್ಲಾ ವಸ್ತುಗಳಿಗೂ ಅನ್ವಯಿಸುತ್ತಾರೆ. ಎಲ್ಲಾ ವಸ್ತುಗಳೂ ದ್ರವ್ಯಗಳೇ ಆದ್ದರಿಂದ ಅವು ಸದ್ರೂಪದಿಂದ ಒಂದೇ ಬಗೆ ಮತ್ತು ನಿತ್ಯಗಳೆಂದು ಅವರು ಹೇಳುತ್ತಾರೆ. ಅವು ದ್ರವ್ಯದ ಅವಸ್ಥಾವಿಶೇಷಗಳಾದ್ದರಿಂದ ಬೇರೆ ರೀತಿಯಲ್ಲೂ ಇರುತ್ತವೆ. ಅದರಿಂದಲೇ ಅವು ಭಾವ ಮತ್ತು ಅಭಾವರೂಪವಾದ್ದರಿಂದ ಸದಸದ್ರೂಪವಾಗಿರುವುದು ಯುಕ್ತವಾಗಿದೆ ಎಂದು ಜೈನಮತದ ಆಕ್ಷೇಪ ಬರುತ್ತದೆ. ಇದು ಯುಕ್ತವಲ್ಲವೆಂದು ಸೂತ್ರವು ತಿಳಿಸುತ್ತದೆ; ಏಕೆಂದರೆ ಒಂದೇ ಕಾಲದಲ್ಲಿ ಕತ್ತಲೆ ಬೆಳಕುಗಳಂತೆ ವಸ್ತುವಿನ ಇರುವಿಕೆ, ಇಲ್ಲದಿರುವಿಕೆ ಮೊದಲಾದ ಪರಸ್ಪರ ವಿರುದ್ಧ ಧರ್ಮಗಳು ಸಂಭವಿಸಲಾರವು. ದ್ರವ್ಯಕ್ಕೂ ಅದರ ಪರ್ಯಾಯವೆನಿಸಿದ ಅವಸ್ಥಾವಿಶೇಷಕ್ಕೂ ಬೇರೆಬೇರೆ ಅರ್ಥವೇ ಇರುವುದರಿಂದ ಒಂದೇ ವಸ್ತುವಿನಲ್ಲಿ ಹೀಗೆ ವಿರುದ್ಧಧರ್ಮಗಳ ಸಮಾವೇಶ ಉಂಟಾಗುವುದಿಲ್ಲ. ಇರುವಿಕೆ ಎಂಬ ಒಂದು ಅವಸ್ಥೆಯಿಂದ ಕೂಡಿದ ವಸ್ತುವಿಗೆ ಆ ಕಾಲದಲ್ಲಿಯೇ ಅದಕ್ಕೆ ವಿರುದ್ಧವಾಗಿ ನಾಸ್ತಿತ್ವವೂ ಬರಲಾರದು. ಉತ್ಪತ್ತಿವಿನಾಶಗಳೆಂಬ ಪರಿಣಾಮಕ್ಕೆ ಆಶ್ರಯವಾಗಿರುವುದೇ ಅನಿತ್ಯವೆನಿಸುತ್ತದೆ. ಇದಕ್ಕೆ ವಿರುದ್ಧವಾದುದೇ ನಿತ್ಯವೆನಿಸುತ್ತದೆ. ಇವೆರಡೂ ಒಂದೇ ಕಡೆ ಹೇಗೆ ಅನ್ವಯಿಸಬಲ್ಲವು? ವಿರುದ್ಧ ಧರ್ಮಗಳಿಗಾಶ್ರಯವಾದುದೇ ಭಿನ್ನವೆನಿಸುತ್ತದೆ. ಇದಕ್ಕೆ ವಿಪರೀತವಾದದ್ದು ಅಭಿನ್ನವೆನಿಸುತ್ತದೆ. ಇವೆರಡೂ ಒಂದರಲ್ಲಿ ಹೇಗೆ ಸೇರುತ್ತವೆ? ಒಂದು ಪ್ರಾಣಿ ಒಂದೇ ಕಾಲದಲ್ಲಿ ಕುದುರೆ ಮತ್ತು ಎಮ್ಮೆ ಎರಡೂ ಆಗಲಾರದು. ಈ ವಿಷಯವನ್ನು ಹಿಂದೆಯೇ ಹೇಳಿದೆ. ಕಾಲಭೇದದಿಂದ ಇವೆರಡನ್ನೂ ಒಪ್ಪಿದರೆ ಜೈನಮತಕ್ಕೆ ಹೊಂದಿಕೆಯಾಗುವುದಿಲ್ಲ. ಲೋಕವಿದೆ ಮತ್ತು ಇಲ್ಲವೆಂಬ ವ್ಯವಹಾರವು ವ್ಯವಹರಿಸುವವರ ಜಾತಿ ಮೊದಲಾದವು ಏಕಕಾಲದಲ್ಲಿ ಇವೆ ಎಂದೂ ಮತ್ತು ಇಲ್ಲವೆಂದೂ ಹೇಳಿದಂತಾಗುತ್ತದೆ. ಜಾತಿ ಮೊದಲಾದವು ದ್ರವ್ಯದ ವಿಶೇಷಣವಾಗಿಯೇ ತೋರುತ್ತವೆ ಎಂದು ಹಿಂದೆಯೇ ಹೇಳಿದೆ. ಹಾಗಾದರೆ ಒಬ್ಬ ಪರಶಿವನನ್ನು ವಿಶ್ವರೂಪನೆಂದು ವೈದಿಕರು ಹೇಗೆ ಹೇಳುತ್ತಾರೆ? ಎಂದರೆ ಸಮಸ್ತ ಪ್ರಪಂಚಕ್ಕೂ ಕಾರಣವಾದ ಸರ್ವಜ್ಞತೆಯೇ ಮೊದಲಾದ ಅಸಾಧಾರಣಧರ್ಮಗಳಿಂದ ಕೂಡಿ ಸತ್ಯಸಂಕಲ್ಪನೆನಿಸಿದ ಪರಮೇಶ್ವರನೊಬ್ಬನಿಗೆ ಈ ವೈವಿಧ್ಯ ಹೊಂದುತ್ತದೆ ಎಂದು ಹಿಂದೆ ಹೇಳಿದೆ. ಜೀವರು ಸಹಜವಾಗಿ ಭಿನ್ನರಾಗಿದ್ದರೂ, ಕೀಟವೇ ಭ್ರಮರವಾಗುವಂತೆ ಶಿವನ ಧ್ಯಾನಧಾರಣೋಪಾಸನೆಯಿಂದ ಸ್ವಾಭಾವಿಕವಾದ ಜೀವಭಾವವನ್ನು ಕಳೆದುಕೊಂಡು ನಿತ್ಯಮಂಗಲವೆನಿಸಿದ ಶಿವಭಾವವನ್ನು ಪಡೆಯುವುದೇ ಮುಕ್ತಿ ಎಂದು ಎಲ್ಲಾ ವೇದಾಂತಗಳ ನಿರ್ಣಯವಾಗಿದೆ. ಇದೂ ಅಲ್ಲದೆ ಜೀವ ಮುಂತಾದ ಆರುದ್ರವ್ಯಗಳು ಒಂದೇ ದ್ರವ್ಯದ ಪರಿಣಾಮವಲ್ಲದ್ದರಿಂದ ಅವುಗಳಲ್ಲಿ ಐಕ್ಯ ಬರಲು ಸಾಧ್ಯವೂ ಇಲ್ಲ. ಹೀಗೆ ಪರಿಣಾಮದೃಷ್ಟಿಯಿಂದ ದ್ರವ್ಯಗಳಿಗೆ ಏಕತ್ವ ಮತ್ತು ಅನೇಕತ್ವಗಳೆರಡನ್ನೂ ಪ್ರತಿಪಾದಿಸಲು ಸಾಧ್ಯವಾಗುವುದಿಲ್ಲ. ಈ ಎಲ್ಲಾ ದ್ರವ್ಯಗಳೂ ತಮ್ಮ ತಮ್ಮ ಅವಸ್ಥೆಗಳಿಂದಲೂ ಮತ್ತು

ಸ್ವರೂಪದಿಂದಲೂ ಒಂದು ಮತ್ತು ಅನೇಕವೆಂಬ ವ್ಯವಹಾರಗಳಿಗೆ ವಿಷಯವಾಗುವುವೆಂದು ಹೇಳಿದರೂ ಎಲ್ಲಾ ಧರ್ಮಗಳೂ ಎಲ್ಲಾ ದ್ರವ್ಯಗಳಲ್ಲೂ ಇರುವುವೆಂಬ ಅವರ ಸಿದ್ಧಾಂತಕ್ಕೆ ವಿರೋಧ ಬರುವುದು ; ಏಕೆಂದರೆ ಈ ಆರು ದ್ರವ್ಯಗಳೂ ಪರಸ್ಪರ ಭಿನ್ನವೇ ಆಗಿವೆ. ಆದ್ದರಿಂದ ಜೈನಮತವು ಯುಕ್ತವಲ್ಲ. ಈಶ್ವರನ ಆಶ್ರಯವಿಲ್ಲದೆಯೇ ಪರಮಾಣುಗಳು ಜಗತ್ಕಾರಣವಾಗುವುವೆಂಬ ಇವರ ವಾದದಲ್ಲೂ ಹಿಂದಿನ ವೈಶೇಷಿಕಮತದಲ್ಲಿ ಹೇಳಿದ ದೋಷಗಳೇ ಬರುತ್ತವೆ.

**ಕ್ಷೇತ್ರಜ್ಞಾನಾಂ ಕ್ಷಪಣಕಾಃ ಶರೀರಪರಿಮಾಣತುಲ್ಯಪರಿಮಾಣತ್ವಂ ಸಾಧಯಂತಿ—ತದಪಿ ನಿರಾಕರೋತಿ. ಏವಂ ಚಾತ್ಮಾಕಾರ್ತ್ಸ್ನ್ಯಂ ||**

**ಏವಂ ಭವದಭ್ಯುಪಗಮೇ ಸತಿ ಆತ್ಮನಶ್ಚಾಕಾರ್ತ್ಸ್ನ್ಯಂ ಪ್ರಸಜ್ಯತೇ. ಜೀವಂಘಾತಪ್ರದೇಶೋ ದೇಹಪರಿಮಾಣ ಇತಿ ಹಿ ಭವತಾಂ ಸ್ಥಿತಿಃ. ತತ್ರ ಹಸ್ತ್ಯಾದಿಶರೀರೇಽವಸ್ಥಿತಸ್ಯಾತ್ಮನಸ್ತತೋ ನ್ಯೂನಪರಿಮಾಣೇಽಪಿ ಪಿಪೀಲಿಕಾದಿಶರೀರೇ ಪ್ರವಿಶತೋಽಲ್ಪದೇಶವ್ಯಾಪಿತ್ವೇನಾಕಾರ್ತ್ಸ್ನ್ಯಂ ಪ್ರಸಜ್ಯತೇ. ಕಿಂಚ ಜೀವಸ್ಯ ಶರೀರತುಲ್ಯಪರಿಮಾಣತ್ವಾಂಗೀಕಾರೇ ಶರೀರನಿರ್ಗಮನಾಸಂಭವಾತ್ ಶರೀರೇಣ ಸಹ ಪರಲೋಕಪ್ರಾಪ್ತಿರುಪಪದ್ಯತೇ. ತಸ್ಮಾಜ್ಜೀವಸ್ಯ ಸೂಕ್ಷ್ಮತ್ವಮಂಗೀಕರ್ತವ್ಯಂ.**

ಜೀವರು ಶರೀರದ ಅಳತೆಗೆ ತಕ್ಕಂತೆ ಪರಿಮಾಣವುಳ್ಳವರು ಎಂದು ಜೈನರು ಹೇಳುವುದನ್ನು ನಿರಾಕರಿಸುತ್ತಾನೆ—**ಏವಂ ಚಾತ್ಮಾಕಾರ್ತ್ಸ್ನ್ಯಂ || ೩೩ ||**

ಈ ರೀತಿಯಲ್ಲಿ ನೀವು ಒಪ್ಪಿದರೆ ಆತ್ಮನು ಆಯಾ ಶರೀರಗಳಲ್ಲಿ ಅಪೂರ್ಣನಾಗಿ ಉಳಿಯಬೇಕಾಗುತ್ತದೆ. ಜೀವನು ಭೂತಗಳ ಸಮುದಾಯವೆನಿಸದೆ ಆಯಾ ಶರೀರಕ್ಕೆ ತಕ್ಕ ಪರಿಮಾಣವನ್ನು ಹೊಂದುವನೆಂಬುದೇ ನಿಮ್ಮ ಸಿದ್ಧಾಂತ. ಜೀವನು ಆನೆಯ ಶರೀರದಲ್ಲಿದ್ದಾಗ ಅದಕ್ಕೆ ತಕ್ಕ ಪರಿಮಾಣವನ್ನು ಹೊಂದುತ್ತಾನೆ. ಅವನೇ ಆ ಇರುವೆಯ ಶರೀರವನ್ನು ಹೊಂದಿದಾಗ ಪೂರ್ಣವಾಗಿ ಅದರಲ್ಲಿ ಹಿಡಿಯದ್ದರಿಂದ ಅವನು ಇರುವೆಯ ಶರೀರದಲ್ಲಿ ಇರಲಿಕ್ಕಾಗುವುದಿಲ್ಲ. ಇದಲ್ಲದೆ ಜೀವನಿಗೆ ಶರೀರಕ್ಕೆ ತಕ್ಕಂತೆ ಪರಿಮಾಣವಿರುವುದಾದರೆ, ಮರಣಾನಂತರ ಪರಲೋಕಕ್ಕೆ ಹೋಗುವ ಜೀವನು ಶರೀರದೊಂದಿಗೆ ಹೋಗಬೇಕಾಗುತ್ತದೆಯಾದ್ದರಿಂದ ಜೀವನನ್ನು ಸೂಕ್ಷ್ಮಪರಿಮಾಣ ಅಂದರೆ ಅಣುವೆಂದೇ ಒಪ್ಪಬೇಕು.

**ಶರೀರಾಣಾಂ ಚಾನವಸ್ಥಿತಪರಿಮಾಣತ್ವಾತ್ || ೩೪ ||**

**ಮಶಕಾದಿಶರೀರವರ್ತಿನಾಂ ಸೂಕ್ಷ್ಮಜೀವಾನಾಂ ಕರ್ಮವಶಾದ್ಗಜಾದಿಶರೀರಪ್ರಾಪ್ತೌ ಸತ್ಯಾಂ ಗಜಾದಿಶರೀರವ್ಯಾಪಿತ್ವಂ ನ ಸ್ಯಾತ್, ಜೀವಸ್ಯಾಲ್ಪತ್ವಾತ್. ತಥಾ ಗಜಾದಿಶರೀರವರ್ತಿನಾಂ ಸ್ಥೂಲಜೀವಾನಾಂ ಕರ್ಮವಶಾನ್ಮಶಕಾದಿಶರೀರಪ್ರಾಪ್ತೌ ಸತ್ಯಾಂ ಮಶಕಾದಿಶರೀರಸ್ಯ ಸ್ವಲ್ಪತ್ವೇನಾನವಕಾಶಾತ್.**

ಶರೀರಾಣಾಂ ಚಾನವಸ್ಥಿತಪರಿಮಾಣತ್ವಾತ್ || ೩೪ ||

ಸೊಳ್ಳೆಯ ಶರೀರದಲ್ಲಿ ಇರುವ ಸಣ್ಣಜೀವನು ಕರ್ಮವಶದಿಂದ ಆನೆಯ ಶರೀರವನ್ನು ಹೊಂದುವಾಗ ಆ ಜೀವನು ಸಣ್ಣದಾದುದರಿಂದ ಆನೆಯ ಶರೀರವನ್ನು ವ್ಯಾಪಿಸುವಂತಿಲ್ಲ. ಹಾಗೆ ಗಜಶರೀರದಲ್ಲಿರುವ ದೊಡ್ಡಜೀವನು ಕರ್ಮವಶದಿಂದ ಸಣ್ಣಶರೀರವನ್ನು ಹೊಂದುವಾಗ ಅಲ್ಲಿ ಆ ದೊಡ್ಡ ಆತ್ಮನಿಗೆ ಅವಕಾಶವಿಲ್ಲದೇ ಹೋಗುವುದು.

ತೂಲಪಿಂಡವಜ್ಜೀವಾನಾಮಪಿ ಸಾವಯವತ್ವಾಂಗೀಕಾರಾನ್ಮಶಕಾದಿಶರೀರೇಷು ಸಂಕುಚಿತತ್ವಂ ಗಜಾದಿಶರೀರೇಷು ವಿಕಾಸಾವಸ್ಥಾ ಚ ಭವಿಷ್ಯಾತೀತ್ಯಾಶಂಕ್ಯ ನಿರಾಕರೋತಿ—

ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ || ೩೫ ||

ಪರ್ಯಾಯಾತ್ ಶರೀರಕ್ರಮೇಣ ಸಂಕೋಚವಿಕಾಸಾಂಗೀಕಾರಾದವಿರೋಧಃ. ಗಜತುರಗಪುತ್ರಪುತ್ರಿಕಾಮಶಕಾದಿಶರೀರಪ್ರವೇಶವಿರೋಧೋ ನಾಸ್ತೀತಿ ಚೇನ್ನ. ತಥಾಪಿ ಜೀವಾನಾಂ ಸಾವಯವತ್ವೇನ ಘಟಪಟಾದಿವದ್ವಿಕಾರಿತ್ವವಿನಾಶಿತ್ವಾದಿದೋಷಪ್ರಸಂಗ ಇತ್ಯುಪದಿಶ್ಯತೇ.

ಹತ್ತಿಯ ಮೂಟೆಯಂತೆ ಜೀವರನ್ನು ಸಾವಯವವೆಂದು ಒಪ್ಪುವುದರಿಂದ ಅವು ಸೊಳ್ಳೆ ಶರೀರದಲ್ಲಿ ಇದ್ದಾಗ ಸಂಕೋಚವನ್ನೂ ಆನೆಯ ಶರೀರದಲ್ಲಿ ಇದ್ದಾಗ ವಿಕಾಸವನ್ನೂ ಹೊಂದುತ್ತವೆ ಎಂದು ಆಶಂಕಿಸಿ ನಿರಾಕರಿಸುತ್ತಾನೆ—

ನಚ ಪರ್ಯಾಯಾದಪ್ಯವಿರೋಧಃ ವಿಕಾರಾದಿಭ್ಯಃ || ೩೫ ||

ಸಂಕೋಚವಿಕಾಸರೂಪವಾದ ವಿಕಾರಗಳನ್ನು ಒಪ್ಪುವುದರಿಂದ ಆನೆ, ಕುದುರೆ, ಸೊಳ್ಳೆ ಮೊದಲಾದ ಪ್ರಾಣಿಗಳ ಶರೀರಗಳಲ್ಲಿ ಅವಕ್ಕೆ ತಕ್ಕಂತೆ ಜೀವನಿರುವುದರಲ್ಲಿ ವಿರೋಧವಿಲ್ಲವೆಂದು ಹೇಳುವುದು ಸರಿಯಲ್ಲ; ಹಾಗೆ ಹೇಳಿದರೆ ಜೀವರು ಸಾವಯವರಾದ್ದರಿಂದ ಗಡಿಗೆಯಂತೆ ನಾಶವನ್ನು ಹೊಂದಬೇಕಾಗುತ್ತದೆ.

ಪುನರ್ನಿರಾಕರೋತಿ–ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಃ ||

ಜೀವಸ್ಯ ಯದಂತ್ಯಂ ಪರಿಮಾಣಂ ಮೋಕ್ಷಾವಸ್ಥಾಗತಂ ತಸ್ಯ ಪಶ್ಚಾದ್ದೇಹಾಂತರ ಪರಿಗ್ರಹಾಭಾವಾದವಸ್ಥಿತತ್ವಾದಾತ್ಮನಶ್ಚ ಮೋಕ್ಷಾವಸ್ಥಸ್ಯ ತತ್ಪರಿಮಾಣಸ್ಯ ಚೋಭಯೋರ್ನಿತ್ಯತ್ವಾತ್ತದೇವಾತ್ಮನಸ್ಸ್ವಾಭಾವಿಕಂ ಪರಿಣಾಮಮಿತಿ ಪೂರ್ವಮಪಿ ತಸ್ಮಾದವಿಶೇಷಸ್ಸ್ಯಾತ್. ಅತೋ ದೇಹಪರಿಮಾಣತ್ವಮಾತ್ಮನೋ ನ ಸ್ಯಾದಿತ್ಯಸಂಗತಮೇವೇತಿ ವೇದಬಾಹ್ಯಮಿದಂ ಮತಂ ವಿವೇಕಿಭಿರ್ವೇದಿತವ್ಯಂ.

ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಃ || ೩೬ ||

ಜೀವನು ಕೊನೆಯ ಶರೀರದ ಪರಿಮಾಣವೇ ಮೋಕ್ಷದಲ್ಲಿಯೂ ಉಳಿಯುವುದು ಎಂದು ಒಪ್ಪಿರುವುದರಿಂದ ಮೋಕ್ಷಕಾಲದಲ್ಲಿ ಅವನಿಗೆ ಶರೀರವಿಲ್ಲದ್ದರಿಂದ ಆಗ ಇರುವ ಪರಿಮಾಣವೇ ನಿತ್ಯವಾದ್ದರಿಂದ ಅದೇ ಜೀವನ ಸ್ವಾಭಾವಿಕಪರಿಣಾಮ

ವೆಂದು ಅದನ್ನು ಮೊದಲಿಂದಲೇ ಒಪ್ಪಬೇಕೇ ಹೊರತು ಆಯಾ ದೇಹಕ್ಕೆ ತಕ್ಕಂತೆ ಪರಿಮಾಣವನ್ನು ಹೊಂದುವನೆಂದು ಹೇಳುವುದು ಯುಕ್ತವಲ್ಲ. ಆದ್ದರಿಂದ ಈ ಜೈನ ಮತವು ವೇದಸಮ್ಮತವಲ್ಲವೆಂದು ವಿವೇಕಿಗಳು ತಿಳಿಯಬೇಕು.

ಆನುಮಾನಿಕವೇದಪ್ರಾಮಾಣಿಕಕಪಿಲಾದಿಮತಾನಿ ವೇದಬಾಹ್ಯ ಬುದ್ಧಾದಿಮತಾನಿ ಚ ನಿರಸ್ಯ ಶ್ರುತ್ಯೇಕದೇಶಪ್ರಾಮಾಣ್ಯಮಿಶ್ರರೌದ್ರ ತಂತ್ರಪಾಶುಪತಗಾಣಾಪತ್ಯಸೌರಶಕ್ತಕಾಪಾಲಿಕವೈಷ್ಣವಾದಿಮತಾಭಿ ಮಾನಿಭಿಃ ಪಶುಪತೇಶ್ಶಿವಸ್ಯ ಪರಬ್ರಹ್ಮಣಃ ಚಿದಚಿದ್ಭೂತಾತ್ಮಕಜಗದು ಭಯಕಾರಣತ್ವಸ್ಯಾನಂಗೀಕೃತತ್ವಾತ್ತನ್ಮತಾನ್ಯದ್ಯ ನಿರಾಕರೋತಿ –

ಪತ್ಯಧಿಕರಣಂ ॥ ೭ ॥　ಪತ್ಯುರಸಾಮಂಜಸ್ಯಾತ್ ॥ ೩೭ ॥

ಪೂರ್ವಾಧಿಕರಣೇ ಕ್ಷಪಣಕಮತೇ ಸತ್ತ್ವಾಸತ್ತ್ವಯೋರ್ಯುಗ ಪದೇಕತ್ರ ವಿರೋಧಾದಸಮಂಜಸಮಿತ್ಯುಕ್ತ್ವಾ ತದ್ವದುಪಾದಾನತ್ವಕರ್ತೃ ತ್ವಯೋರೇಕತ್ರ ವಿರೋಧಾದಯುಕ್ತಮಿತಿ ದೃಷ್ಟಾಂತಸಂಗತ್ಯಾ ಪೂರ್ವ ಪಕ್ಷೇ ಸರ್ವಶಕ್ತಿವಿಶಿಷ್ಟಸ್ಯ ಸ್ವತಂತ್ರಸ್ಯ ಶಿವಸ್ಯ ಜಗದುಭಯಕಾರಣತ್ವಂ ಸಂಭವತೀತಿ ಸಾಧನಾರ್ಥಮಧಿಕರಣಾರಂಭಕತ್ವಾದ್ವಿರೋಧಪರಿಹಾರ ಸಂಗತ್ಯಾ ಸಿದ್ಧಾಂತಸಂಗತಿರುಪಪದ್ಯತೇ. ಪತ್ಯುಃ ಪಶುಪತೇಶ್ಶಿವಸ್ಯ ಪರಬ್ರಹ್ಮಣಃ ಜಗದುಪಾದಾನಪ್ರಧಾನಾದಿಪ್ರೇರಕತ್ವೇನ ನಿಮಿತ್ತಕಾರಣ ಮಾತ್ರತ್ವಂ ನ ಸಂಭವತಿ, ಕುತಃ ಅಸಾಮಂಜಸ್ಯಾತ್ ಪರಮೇಶ್ವರಸ್ಯ ಜಗದುಭಯಕಾರಣತ್ವವಿಧಾಯಕಾನಾಂ "ಯಥೋರ್ಣನಾಭಿಸ್ಸೃಜತೇ ಗೃಹ್ಯತೇ ಚ" ಇತ್ಯಾದಿವೇದಾಂತಾನಾಂ ಸಮನ್ವಯಾಭಾವಾತ್, ಭೂತಪತೇಶ್ಶಿವಸ್ಯ ಜಗದುಭಯಕಾರಣತ್ವವಿಧಾಯಕಶುದ್ಧಸಾತ್ತ್ವಿಕ ಶೈವಮತಸ್ಯ ಪ್ರಾಧಾನ್ಯಂ ಉತ ಶೈವಮತಾಭಾಸಕಮಿಶ್ರರೌದ್ರಪಾಶು ಪತಗಾಣಾಪತ್ಯಸೌರಶಾಕ್ತಕಾಪಾಲಿಕವೈಷ್ಣವಾದಿಮತಾನಾಂ ವೇತಿ ಸಂಶಯಃ. "ಸೈಷಾವಿಚಿತ್ರಾ ಸುದೃಢಾ ಬಹ್ವಂಕುರಾ ಸ್ವಯಂಗುಣಭಿನ್ನಾ ಪರಾಶಕ್ತಿಃ" ಇತ್ಯಾದಿಷು ಶಕ್ತೇರ್ಮೂರ್ತಿತ್ರಯಕಾರಣತ್ವೋಪದೇ ಶಾತ್, "ನಾರಾಯಣಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ" ಇತ್ಯಾದಿನಾ ನಾರಾಯಣಸ್ಯ, "ಅಸಾವಾದಿತ್ಯೋ ಬ್ರಹ್ಮ" ಇತ್ಯಾದಿನಾ ಸೂರ್ಯಸ್ಯ ಚ ಬ್ರಹ್ಮತ್ವದರ್ಶನಾತ್ "ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಂ" ಇತ್ಯತ್ರ ಗಣಾನಾಂ ಬ್ರಹ್ಮವಿಷ್ಣುಕಾಲ ರುದ್ರಾದೀನಾಂ ಪತಿಃ ಗಣಪತಿರಿತಿ ತಚ್ಛಾಸ್ತ್ರೇ ಸರ್ವಾಧಿಕ್ಯಸ್ಯ ವಿಘ್ನೇಶ್ವರೇ ನಿರ್ದೇಶಾತ್, ಕಿಂಚ ಪುರಾಣೇಷು ತ್ರಿಪುರಸಂಹಾರಾದಿಕಾಲೇಷು ತಸ್ಯ ಮೂರ್ತಿತ್ರಯಾರ್ಚಿತತ್ವವ್ಯಪದೇಶಾಚ್ಚ ಜಗತ್ಕಾರಣತ್ವಂ ಪೂರ್ವೋ ಕ್ತಾನಾಂ ಶಕ್ತ್ಯಾದೀನಾಮೇವೋಪಪನ್ನಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ.

'ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ' 'ಈಶಾನಸ್ಸರ್ವ ವಿದ್ಯಾನಾಂ' 'ಸರ್ವಭೂತದಮನಾಯ' ಇತ್ಯಾದಿಶ್ರುತಿಷು ತಜ್ಜನಕತ್ವೇನ ತಸ್ಯ ನಿಮಿತ್ತತ್ವಸ್ಯ ತಸ್ಮಿನ್ ತಲ್ಲಯತ್ವೇನ ತಸ್ಯೋಪಾದಾನತ್ವಸ್ಯ ಚ ವ್ಯವಸ್ಥಾಪನಾತ್, ಶಕ್ತ್ಯಾದೀನಾಂ ಜಗತ್ಕಾರಣತ್ವಮವಾಂತರಸೃಷ್ಟಿವಿಷಯತ್ವಂ. ಕಿಂಚ ನಿರಧಿಷ್ಠಾನಶಕ್ತೇರಭಾವಾತ್ ಶಕ್ತಿನಿಷ್ಠಕಾರಣತ್ವಂ ಶಕ್ತಸ್ಯೈವಾರ್ಥಾತ್ಸಿದ್ಧಂ. ಶೈವವಾಯವೀಯಸಂಹಿತಾಯಾಂ "ತ್ರಯಸ್ತೇ ಕಾರಣಾತ್ಮಾನೋ ಜಾತಾಸ್ಸಾಕ್ಷಾನ್ಮಹೇಶ್ವರಾತ್ | ಚರಾಚರಸ್ಯ ವಿಶ್ವಸ್ಯ ಸರ್ಗಸ್ಥಿತ್ಯಂತಹೇತವೇ | ಪಿತ್ರಾ ನಿಯಮಿತಾಸ್ಸರ್ವೇ ತ್ರಯೋಽಪಿ ತ್ರಿಷು ಕರ್ಮಸು||" ಇತಿ ದರ್ಶನಾತ್ ನಾರಾಯಣಾದೀನಾಂ ಜಗತ್ಕಾರಣತ್ವಂ ನ ಅನಾದಿಸಿದ್ಧಮಿತಿ ಜ್ಞಾಯತೇ. "ಅನ್ನಂ ಬ್ರಹ್ಮ"ಇತ್ಯಾದಿವತ್ತೇಷಾಂ ಬ್ರಹ್ಮತ್ವಂ ಔಪಚಾರಿಕಮಿತಿ ಜನ್ಮಾಧಿಕರಣೇ ಬಹುಧಾ ಪ್ರಪಂಚಿತಂ. ತಥಾಪಿ ಮೂರ್ತಿತ್ರಯೇಷು ರುದ್ರಸ್ಯೈವಾಧಿಕ್ಯಮನಿವಾರ್ಯಂ. 'ವಿಶ್ವಾಧಿಕೋ ರುದ್ರೋ ಮಹರ್ಷಿಃ' "ಪರಾತ್ಪರತರೋ ಬ್ರಹ್ಮಾ ತತ್ಪರಾತ್ಪರತೋ ಹರಿಃ ಯತ್ಪರಾತ್ಪರತೋಽಧೀಶಃ" ಇತ್ಯಾದಿಶ್ರುತಿಷು, "ಅಸ್ತಿ ರುದ್ರಸ್ಯ ವಿಪ್ರೇಂದ್ರಾಃ ಅಂತಸ್ಸತ್ತ್ವಂ ಬಹಿಸ್ತಮಃ | ರಜಸಾ ತಮಸಾ ಕ್ರಾಂತೌ ಬ್ರಹ್ಮನಾರಾಯಣೌ ಖಲು" ಇತ್ಯಾದಿನಾ ಸೂತಸಂಹಿತಾಯಾಂ ಚ ಮೂರ್ತಿತ್ರಯತಾರತಮ್ಯೋಪದೇಶಾತ್. "ರುದ್ರೋ ವಾ ಏಷ ಯದಗ್ನಿಸ್ತಸ್ಯೈತೇ ತನುವೌ ಘೋರಾನ್ಯಾ ಶಿವಾನ್ಯಾ" ಇತಿ ತೈತ್ತಿರೀಯೇ ಶಿವಸ್ಯ ಶಾಂತಾಶಾಂತಾತ್ಮಕಮೂರ್ತಿದ್ವಯಸ್ಯ ಅಘೋರಶರೀರೇಣ ಭಕ್ತರಕ್ಷಣಸ್ಯ ಚ ವ್ಯಪದೇಶಾತ್, ತಪ್ತಲಿಂಗಮುದ್ರಾಂಕಿತರೌದ್ರಮತಾತ್ ತಪ್ತಶೂಲಡಮರುಗಮುದ್ರಾಂಕಿತತಂತ್ರಪಾಶುಪತಮತಾಚ್ಚ ಶ್ರೌತಶಿವಲಿಂಗಧಾರಣಾಪಚ್ಛಿನ್ನಶೈವಮತಸ್ಯ ಸರ್ವಾಧಿಕತ್ವಮನಿವಾರ್ಯಂ. ಕೈವಲ್ಯೇ "ನೀಲಕಂಠಂ ಪ್ರಶಾಂತಂ ಧ್ಯಾತ್ವಾ ಮುನಿರ್ಗಚ್ಛತಿ—ಸಮಸ್ತಸಾಕ್ಷಿಂ ತಮಸಃ ಪರಸ್ತಾತ್" ಇತಿ ಶಿವಸ್ಯ ಪ್ರಶಾಂತತತ್ವತಮಃಪರತ್ವಮೂರ್ತಿತ್ರಯವಿಲಕ್ಷಣತ್ವನಿರ್ದೇಶಾತ್ ಶಿವಮತಸ್ಯ ಶುದ್ಧಸತ್ತ್ವಪ್ರಾಧಾನ್ಯಮುಪದಿಷ್ಟಂ. "ಶಿವಮದ್ವೈತಂ ಚತುರ್ಥಂ" ಇತಿ ಮಾಂಡೂಕ್ಯೇ ತಥಾ ನಿದರ್ಶನಾತ್. ಸಿದ್ಧಾಂತಾಗಮೇ "ವೇದೈಕದೇಶವರ್ತಿಭ್ಯಸ್ಸಾಂಖ್ಯಾದಿಭ್ಯೋ ಮಹಾಮತೇ | ಸರ್ವವೇದಾನುಸಾರಿತ್ವಾಚ್ಛೈವತಂತ್ರಂ ವಿಶಿಷ್ಯತೇ" ಇತ್ಯಾದಿನಾ ಸರ್ವವೇದಧರ್ಮಾನುಕೂಲಕಾಮಿಕಾದ್ಯಷ್ಟಾವಿಂಶತ್ಯಾಗಮಸಿದ್ಧಸಿದ್ಧಾಂತಾಭಿಧಾನವೀರಶೈವಮೇವ ಮುಮುಕ್ಷುಭಿರುಪಾದೇಯಮಿತಿ ನಿರ್ದಿಷ್ಟಂ. ಪುನಸ್ತತ್ರ "ಪತ್ರಪುಷ್ಪಾದಿರೂಪೇಣ ಯಥಾ ತಿಷ್ಠತಿ ಪಾದಪಃ | ತಥಾ ಭೂಮ್ಯಾದಿ

**ರೂಪೇಣ ಶಿವ ಏಕೋ ವಿರಾಜತೇ ॥ ಯಥಾ ತಂತುಭಿರುತ್ಪನ್ನಃ ಪಟಸ್ತಂತುಮಯಃ ಸ್ಮೃತಃ । ತಥಾ ಶಿವಾತ್ಸಮುತ್ಪನ್ನಂ ಶಿವ ಏವ ಚರಾಚರಂ ॥ ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ ॥ ಕುಟೀಭಾವಾದ್ಯಥಾ ಭಾತಿ ಪಟಸ್ಸ್ವಸ್ಯ ಪ್ರಸಾರಣಾತ್" ಇತ್ಯಾದಿನಾ ಶಿವಸ್ಯ ಜಗದುಭಯಕಾರಣತ್ವಸ್ಯ, "ಭೃಂಗಧ್ಯಾನಾದ್ಯಥಾ ಕೀಟೋ ಭೃಂಗರೂಪೋ ಭವೇತ್ಸದಾ । ಶಿವಧ್ಯಾನಾತ್ತಥಾ ಜೀವಃ ಶಿವೋ ಭವತಿ ನಾನ್ಯಥಾ" ಇತಿ ದ್ವೈತಾದ್ವೈತಸಿದ್ಧಾಂತಸ್ಯ ಚ ವ್ಯವಸ್ಥಾಪನಾತ್ ವೇದವತ್ಕಾಮಿಕಾದ್ಯಷ್ಟಾವಿಂಶತಿಶಿವಾಗಮಾನಾಂ ಪ್ರಾಮಾಣ್ಯಂ. "ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ । ಕಾಮಿಕಾದಿಪ್ರಭೇದಾನಾಂ ಯಥಾ ದೇವೋ ಮಹೇಶ್ವರಃ ॥" ಇತಿ ಸೂತಸಂಹಿತಾಯಾಂ ಭಗವತಾ ವ್ಯಾಸೇನ ಕಾಮಿಕಾದ್ಯಾಗಮದೃಷ್ಟಾಂತೇನ ಪುರಾಣಾನಾಂ ಪ್ರಾಮಾಣ್ಯವ್ಯವಸ್ಥಾಪನಾತ್, ಸ್ಮೃತ್ಯನವಕಾಶಾಧಿಕರಣೇ ವೇದಾನುಕೂಲಮನ್ವಾದಿಸ್ಮೃತಿವಿರುದ್ಧಸಾಂಖ್ಯಾದಿಸ್ಮೃತಿನಿರಾಕರಣವದ್ವೇದಾನುಕೂಲಕಾಮಿಕಾದ್ಯಾಗಮವಿರುದ್ಧಪಾಶುಪತಪಾಂಚರಾತ್ರಾದ್ಯಾಗಮನಿರಾಕರಣಮುಪಾದೇಯಂ. ಏವಂ ರೇವಣಸಿದ್ಧಮರುಳಸಿದ್ಧೈಕೋರಾಮಸಿದ್ಧೋದ್ಭಟಾರಾಧ್ಯವೇಮನಾರಾಧ್ಯಾದಿಭಿಃ ಶ್ರೌತಶೈವಾಚಾರ್ಯೈರ್ನ್ಯರ್ಪದೇಶಾತ್, 'ಸಭಾಭ್ಯಸ್ಸಭಾಪತಿಭ್ಯಶ್ಚ ವೋ ನಮಃ' "ಜಗತಾಂ ಪತಯೇ ಪಶುಪತಯೇ ನಮಃ" ಇತ್ಯಾದಿಷು ಶಿವಸ್ಯೈವ ಸರ್ವಪತಿತ್ವೋಪದೇಶಾತ್ "ಪತ್ಯಾದಿಶಬ್ದೇಭ್ಯಃ" ಇತ್ಯಸ್ಮಿನ್ ಸೂತ್ರೇ ಪಶುಪತಿತ್ವಾದಿಧರ್ಮಾಣಾಂ ಶಿವಸ್ಯೈವ ಮುಖ್ಯತ್ವಪ್ರತಿಪಾದನಾತ್, 'ಪತ್ಯುರಸಾಮಂಜಸ್ಯಾತ್' ಇತ್ಯತ್ರ ಪತ್ಯುಃ ಪಶುಪತೇಶ್ಶಿವಸ್ಯಾತಿರಿಕ್ತಸ್ಯ ಜಗದುಭಯಕಾರಣತ್ವಮಸಮಂಜಸಂ ವೇದವಿರೋಧಾದಪ್ರಮಾಣಮಿತಿ ಕೇಚಿದ್ವದಂತಿ ತದಪ್ಯವಿರುದ್ಧಂ.**

ವೇದವನ್ನು ಪ್ರಮಾಣವಾಗಿ ಒಪ್ಪಿದರೂ ಅನುಮಾನವನ್ನು ಅವಲಂಬಿಸಿ ಬಂದಿರುವ ಕಪಿಲಮತವನ್ನು ಮತ್ತು ವೇದಬಾಹ್ಯವಾದ ಬೌದ್ಧಾದಿಮತಗಳನ್ನು ನಿರಾಕರಿಸಿ, ಶ್ರುತಿಯ ಒಂದೊಂದು ಭಾಗವನ್ನು ಪ್ರಮಾಣವೆಂದು ಒಪ್ಪಿರುವ ಮಿಶ್ರ, ರೌದ್ರ-ತಂತ್ರ-ಪಾಶುಪತ, ಗಾಣಾಪತ್ಯ, ಸೌರ, ಶಾಕ್ತ, ಕಾಪಾಲಿಕ, ವೈಷ್ಣವ ಮುಂತಾದ ಮತಗಳಲ್ಲಿ ಪಶುಪತಿಯಾದ ಪರಮಶಿವನೇ ಚಿದಚಿದ್ರೂಪವಾದ ಪ್ರಪಂಚಕ್ಕೆ ಉಭಯಕಾರಣನೆಂದು ಒಪ್ಪದಿರುವುದರಿಂದ ಆ ಮತಗಳನ್ನು ಈಗ ನಿರಾಕರಿಸುತ್ತಾನೆ. **ಪತ್ಯಧಿಕರಣ ॥೭॥ ಪತ್ಯುಂರಸಾಮಂಜಸ್ಯಾತ್ ॥೩೭॥**

ಹಿಂದಿನ ಅಧಿಕರಣದಲ್ಲಿ ಜೈನಮತದಲ್ಲಿ ಸತ್ತ್ವಾಸತ್ತ್ವವೆಂದು ಧರ್ಮಗಳು ಪರಸ್ಪರವಿರುದ್ಧವಾದ್ದರಿಂದ ಒಂದೇ ವಸ್ತುವಿನಲ್ಲಿ ಒಂದೇ ಕಾಲದಲ್ಲಿರಲಾರವೆಂದು

ಹೇಳಿತ್ತು. ಹಾಗಾದರೆ ಅದರಂತೆಯೇ ಉಪಾದಾನನಿಮಿತ್ತವೆರಡೂ ಒಂದೇ ವಸ್ತುವಿಗೆ ವಿರುದ್ಧವಾಗುವುದರಿಂದವೇದಾಂತಮತವೂ ಯುಕ್ತವಲ್ಲವೆಂದು ದೃಷ್ಟಾಂತ ಸಂಗತಿಯಿಂದ ಆಕ್ಷೇಪ ಬರುತ್ತದೆ. ಶಿವನು ಸರ್ವಶಕ್ತಿವಿಶಿಷ್ಟನೂ ಸ್ವತಂತ್ರನೂ ಆದ್ದರಿಂದ ಜಗತ್ತಿಗೆ ಉಭಯಕಾರಣನಾಗಬಲ್ಲನು ಎಂದು ಸಿದ್ಧಾಂತದಲ್ಲಿ ಹೇಳಿರುವು ದರಿಂದ ವಿರೋಧಪರಿಹಾರಾಧ್ಯಾಯದ ಈ ಪಾದದಲ್ಲಿ ಇದಕ್ಕೆ ಹೊಂದಿಕೆಯಾಗುತ್ತದೆ. ಪಶುಪತಿಯಾದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣವಾದ ಪ್ರಧಾನವನ್ನು ನಿಯ ಮಿಸುವುದರಿಂದ ನಿಮಿತ್ತನಷ್ಟೇ ಆಗುವನೆಂದು ಹೇಳುವುದು ಸರಿಯಲ್ಲ; ಏಕೆಂದರೆ ಹಾಗೆ ಹೇಳಿದರೆ ಪರಶಿವನೇ ಜಗತ್ತಿಗೆ ಉಭಯಕಾರಣನೆಂದು ಹೇಳುವ "ಯಥೋ ರ್ಣನಾಭಿಃ" ಮೊದಲಾದ ವೇದಾಂತಗಳಿಗೆ ಸಮನ್ವಯವಾಗದೆಹೋಗುತ್ತದೆ. ಭೂತಪತಿಯಾದ ಶಿವನೇ ಜಗದುಭಯಕಾರಣನೆಂದು ಹೇಳುವ ಶುದ್ಧ ಸಾತ್ವಿಕ ಶೈವ ಮತವೇ ಪ್ರಧಾನವೋ? ಅಥವಾ ಶೈವದ ಆಭಾಸರೂಪವಾದ ಮಿಶ್ರ ಮೊದಲಾದ ಮತಗಳೇ ಪ್ರಮಾಣವೋ? ಎಂದು ಸಂಶಯ ಬರುವುದು. "ಪರಾಶಕ್ತಿಯು ವಿಚಿತ್ರವೂ ಬಲಿಷ್ಠವೂ ಆಗಿ ವಿವಿಧ ಪ್ರಪಂಚಗಳನ್ನು ಸೃಷ್ಟಿಸುತ್ತಲೂ, ತ್ರಿಗುಣಾತ್ಮಕವಾಗಿಯೂ ಇದ್ದು ತನ್ನ ಕಾರ್ಯಗಳನ್ನೂ ಹಾಗೆಯೇ ಹುಟ್ಟಿಸುತ್ತದೆ"ಎಂದು ಶಕ್ತಿಯನ್ನೇ ತ್ರಿಮೂರ್ತಿ ಗಳಿಗೆ ಕಾರಣವೆಂದು ಹೇಳಿದೆ. "ನಾರಾಯಣನೇ ಪರಬ್ರಹ್ಮ" ಎಂಬಲ್ಲಿ ನಾರಾಯಣ ನನ್ನೂ "ಈ ಆದಿತ್ಯನೇ ಬ್ರಹ್ಮ" ವೆಂಬಲ್ಲಿ ಸೂರ್ಯನನ್ನೂ ಬ್ರಹ್ಮವೆಂದು ಹೇಳಿದೆ. "ಎಲ್ಲ ಗಣಗಳಿಗಧಿಪತಿಯಾದ ನಿನ್ನನ್ನು ಪೂಜಿಸುತ್ತೇವೆ" ಎಂಬಲ್ಲಿ ಬ್ರಹ್ಮ-ವಿಷ್ಣು ರುದ್ರರೆಂಬ ಗಣಗಳಿಗೆ ಪತಿ ಎಂದು ಗಣಪತಿಯನ್ನು ಹೇಳಿರುವುದರಿಂದ ಅವನೇ ಎಲ್ಲಕ್ಕೂಉತ್ಕೃಷ್ಟನಾಗಿದ್ದಾನೆ. ಇದಲ್ಲದೆ ಪುರಾಣಗಳಲ್ಲಿ ತ್ರಿಪುರಸಂಹಾರಪ್ರಕರಣದಲ್ಲಿ ತ್ರಿಮೂರ್ತಿಗಳು ಶಕ್ತಿಯನ್ನು ಅರ್ಚಿಸಿದರೆಂದು ಹೇಳಿರುವುದರಿಂದ ಶಕ್ತಿಯೇ ಜಗ ತ್ತಿಗೆ ಉಪಾದಾನವೆಂದೂ ಹೇಳಬಹುದು. ಹೀಗೆ ಆಕ್ಷೇಪ ಬಂದರೆ ಸಿದ್ಧಾಂತವನ್ನು ಹೇಳಲಾಗುವುದು. "ತ್ರಿಮೂರ್ತಿಗಳು ಪರಶಿವನಿಂದಲೇ ಹುಟ್ಟುತ್ತಾರೆ". ಈ ಬಗೆಯ ಶ್ರುತಿಗಳಲ್ಲಿ ಅವನೇ ಎಲ್ಲರಿಗೂ ಕಾರಣನಾದ್ದರಿಂದ ನಿಮಿತ್ತನೂ, ಅವನ ಲ್ಲಿಯೇ ಎಲ್ಲಕ್ಕೂ ಲಯವನ್ನು ಹೇಳಿರುವುದರಿಂದ ಉಪಾದಾನವೂ ಆಗಿರುವನೆಂದು ಸಿದ್ಧವಾಯಿತು. ಆದರೆ ಅವಾಂತರಸೃಷ್ಟಿಯಲ್ಲಿ ಶಕ್ತಿ ಮೊದಲಾದವು ಕಾರಣವಾಗ ಬಹುದು. ಇದಲ್ಲದೆ ಶಕ್ತಿಯು ಆಧಾರವಿಲ್ಲದೆ ಇರಲಾರದಾದ್ದರಿಂದ ಅದನ್ನು ಕಾರಣ ವೆಂದು ಹೇಳಿದರೆ, ಶಕ್ತಿಗಾಶ್ರಯವಾದ ವ್ಯಕ್ತಿಯೇ ಕಾರಣವೆಂದು ಸಿದ್ಧವಾಗುವುದು. ಶೈವಪುರಾಣದ ವಾಯವೀಯಸಂಹಿತೆಯಲ್ಲಿ ತ್ರಿಮೂರ್ತಿಗಳು ಮಹೇಶ್ವರನಿಂದಲೇ ಹೊರಟಿರುವರೆಂದೂ, ಅವನ ಅನುಗ್ರಹದಿಂದ ಅವರು ಒಂದೊಂದು ಕಲ್ಪದಲ್ಲಿ ಸೃಷ್ಟಿ ಮಾಡುವರೆಂದು ಹೇಳಿರುವುದರಿಂದಲೂ ನಾರಾಯಣಾದಿಗಳಿಗೆ ಜಗತ್ಕಾರಣತ್ವವು ಅನಾದಿಕಾಲದಿಂದಲೂ ಬಂದಿಲ್ಲ. "ಅನ್ನವೇ ಬ್ರಹ್ಮ" ವೆಂಬಂತೆ ಉಪಚಾರಕ್ಕಾಗಿ ಅವರನ್ನು ಬ್ರಹ್ಮವೆಂದು ಹೇಳಿರುವುದಾಗಿ ಜನ್ಮಾದ್ಯಧಿಕರಣದಲ್ಲಿ ತಿಳಿಸಲಾಗಿದೆ.

ತ್ರಿಮೂರ್ತಿಗಳಲ್ಲೂ ರುದ್ರನೇ ಉತ್ಕೃಷ್ಟನು. "ಶ್ರೇಷ್ಠ ವಸ್ತುಗಳಿಗಿಂತ ಬ್ರಹ್ಮನೂ, ಅವನಿಗಿಂತ ವಿಷ್ಣುವೂ, ಅವನಿಗಿಂತ ಕಾಲರುದ್ರನೂ ಶ್ರೇಷ್ಠರು," ಇದೇ ಮೊದಲಾದ ಶ್ರುತಿಗಳಲ್ಲಿ ರುದ್ರನನ್ನು ಬ್ರಾಹ್ಮಣರಿಗೆ ದೇವನಾದ್ದರಿಂದಲೂ, ತಾನೂ ಬ್ರಾಹ್ಮಣನಾದ್ದರಿಂದಲೂ ದೇವತೆಗಳೆಲ್ಲರಿಗೂ ಶ್ರೇಷ್ಠನೆಂದು ಒಪ್ಪಲಾಗಿದೆ. ಇದಲ್ಲದೆ ಶಿವನಿಗೆ ಘೋರ ಅಘೋರವೆಂಬ ಎರಡು ಶರೀರಗಳೆಂದೂ, ಅಘೋರ ಶರೀರದಿಂದ ಭಕ್ತರನ್ನು ರಕ್ಷಿಸುತ್ತಾನೆ ಎಂದೂ ಹೇಳಲಾಗಿದೆ. ಆದ್ದರಿಂದ ತಪ್ತಲಿಂಗಮುದ್ರೆಯನ್ನು ಬೋಧಿಸುವ ರೌದ್ರಾದಿಮತಗಳಿಗಿಂತಲೂ ಲಿಂಗಧಾರಣವನ್ನು ತಿಳಿಸುವ ಶೈವಮತವೇ ಉತ್ಕೃಷ್ಟವೆಂದು ಸಿದ್ಧವಾಗುತ್ತದೆ. 'ಉಮಾಸಹಾಯಂ' ಎಂಬ ಶ್ರುತಿಯಲ್ಲಿ ಶಿವನನ್ನು ಪ್ರಶಾಂತನೆಂದೂ, ಕತ್ತಲೆಯಿಂದ ಆಚೆನವನೆಂದೂ, ತ್ರಿಮೂರ್ತ್ಯತೀತನೆಂದೂ ಹೇಳಿರುವುದರಿಂದ ಶಿವಮತವೇ ಶುದ್ಧಸತ್ತ್ವಪ್ರಧಾನವಾದುದು. "ಪ್ರಪಂಚೋಪಶಮಂ" ಎಂಬ ಮಾಂಡೂಕ್ಯಶ್ರುತಿಯೂ ಇದನ್ನೇ ಹೇಳುತ್ತದೆ. ಸಿದ್ಧಾಂತಾಗಮದಲ್ಲಿ "ವೇದದ ಒಂದೊಂದು ಭಾಗವನ್ನವಲಂಬಿಸಿರುವ ಸಂಖ್ಯಾದಿ ಮತಗಳಿಗಿಂತಲೂ ಸರ್ವವೇದಾಂತಸಾರವೆನಿಸಿದ ಶೈವಮತವೇ ಶ್ರೇಷ್ಠವಾದುದು" ಎಂದು ಹೇಳಿದೆ. ಇದರಿಂದ ಎಲ್ಲಾ ವೇದಗಳಿಗೂ ಸಮ್ಮತವಾದ ಕಾಮಿಕಾದಿ ೨೮ ಆಗಮಗಳ ಕೊನೆಯಲ್ಲಿ ಹೇಳಿರುವ ಸಿದ್ಧಾಂತವೆಂಬ ವೀರಶೈವ ಮತವೇ ಮುಮುಕ್ಷುಗಳಿಗೆ ಗ್ರಾಹ್ಯವೆಂದು ತಿಳಿಯಬೇಕು. ಕಾಮಿಕ ಮತ್ತು ಸಿದ್ಧಾಂತಶಿಖಾಮಣಿಯಲ್ಲಿ ಯೋಗಿ ವೃಕ್ಷ ಪಟ ಮೊದಲಾದ ದೃಷ್ಟಾಂತಗಳಿಂದ ಪರಶಿವನೇ ಜಗತ್ತಿಗೆ ನಿಮಿತ್ತೋಪಾದಾನನೆಂದು ಹೇಳಿದೆ. ಭೃಂಗದ ಸ್ಮರಣದಿಂದ ಕೀಟವು ಭೃಂಗವಾಗುವಂತೆ ಜೀವನು ಶಿವಧ್ಯಾನದಿಂದ ಶಿವನಾಗುವನೆಂದು ದ್ವೈತಾದ್ವೈತಸಿದ್ಧಾಂತವನ್ನು ತಿಳಿಸಲಾಗಿದೆ. ಸೂತಸಂಹಿತೆಯಲ್ಲಿ ಕಾಮಿಕಾದ್ಯಾಗಮಗಳಿಗೆ ಈಶ್ವರನೇ ಕರ್ತನೆಂದು ವ್ಯಾಸರು ಹೇಳಿರುವುದರಿಂದ ಇಪ್ಪತ್ತೆಂಟು ಶೈವಾಗಮಗಳೂ ವೇದದಂತೆಯೇ ಪ್ರಮಾಣವೆನಿಸಿವೆ. ಸ್ಮೃತ್ಯನವಕಾಶಾಧಿಕರಣದಲ್ಲಿ ವೇದಕ್ಕನುಗುಣವಾಗಿ ಮನ್ವಾದಿಸ್ಮೃತಿಗಳಿಗೆ ವಿರುದ್ಧವಾದ ಸಾಂಖ್ಯಾದಿಸ್ಮೃತಿಗಳನ್ನು ನಿರಾಕರಿಸಿದ್ದರಿಂದ ವೇದಾನುಕೂಲವಾದ ಕಾಮಿಕಾದ್ಯಾಗಮಗಳಿಗೆ ವಿರುದ್ಧವಾದ ಪಾಶಪತಪಾಂಚರಾತ್ರಾದ್ಯಾಗಮಗಳು ಅಯುಕ್ತವೆನಿಸಿವೆ. ಹೀಗೆಯೇ ರೇವಣಸಿದ್ಧ ಮರುಳಸಿದ್ಧ ಏಕೋರಾಮ ಉದ್ಭಟಾರಾಧ್ಯ ವೇಮನಾರಾಧ್ಯ ಮೊದಲಾದ ವೈದಿಕ ಶೈವಾಚಾರ್ಯರೂ ಹೇಳಿದ್ದಾರೆ. "ಹಿರಣ್ಯಪತಯೇ ನಮಃ" ಮುಂತಾದ ಶ್ರುತಿಗಳಲ್ಲಿ ಶಿನನೇ ಸರ್ವಾಧಿಪತಿ ಎಂದು ಹೇಳಿದೆ. "ಪತ್ಯಾದಿಶಬ್ದೇಭ್ಯಃ" ಎಂಬ ಮೊದಲನೇ ಅಧ್ಯಾಯದ ಸೂತ್ರದಲ್ಲೂ ಶಿವನನ್ನೇ ಪತಿ ಎಂದು ತಿಳಿಸಲಾಗಿದೆ. ಆದ್ದರಿಂದ ಶಿವನೇ ಪಶುಪತಿ ಎಂಬುದು ನಿರ್ವಿವಾದವೆನಿಸಿದೆ. "ಶಿವನಲ್ಲದೆ ಬೇರೆಯವನು ಜಗದುಭಯಕಾರಣನೆಂಬುದು ವೇದವಿರುದ್ಧವಾದ್ದರಿಂದ ಸಮಂಜಸವಲ್ಲ. ಆದ್ದರಿಂದ ಪಾಶುಪತಮತವು ಅಪ್ರಮಾಣವಾಗುವುದು" ಎಂದು ಕೆಲವರು ಈ ಸೂತ್ರಕ್ಕೆ ಅರ್ಥವನ್ನು ಹೇಳುತ್ತಾರೆ. ಅದೂ ಯುಕ್ತವೇ ಆಗಿದೆ.

ಅಸ್ಮಿನ್ನರ್ಥೇ ಹೇತ್ವಂತರಮಾಹ—ಸಂಬಂಧಾನುಪಪತ್ತೇಶ್ಚ ||೩೮||

ಶಿವೇತರನಾರಾಯಣಾದೀನಾಂ ಜಗತ್ಕಾರಣತ್ವಪಶುಪತಿತ್ವಾಂಗೀಕಾರೇ "ನಮೋ ಹಿರಣ್ಯಬಾಹವೇ—ಪಶುಪತಯೇ ನಮಃ" "ಬ್ರಹ್ಮಾಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು" "ಸರ್ವೋ ವೈ ರುದ್ರಃ" ಇತ್ಯಾದಿಶ್ರುತಿಸಿದ್ಧಹಿರಣ್ಮಯತ್ವೋಮಾಪತಿತ್ವಸರ್ವವಿದ್ಯಾನಿಯಾಮಕತ್ವಸರ್ವಭೂತನಿಯಾಮಕತ್ವಾದಿಧರ್ಮಸಂಬಂಧಾನಾಮನುಪಪತ್ತೇಶ್ಚ ಅಸಂಭವಾಚ್ಚ ಪಶುಪತಿತ್ವಂ ಜಗಜ್ಜನ್ಮಾದಿಕಾರಣತ್ವಂ ಚ ಶಿವೇತರಾಣಾಂ ನೋಪಪದ್ಯತೇ. ತಸ್ಮಾಚ್ಛ್ರುತ್ಯೇಕದೇಶಮಿಶ್ರಾದಿಮತಾನಿ ವೈದಿಕೈರನಾದರಣೀಯಾನಿ. "ಆದಿತ್ಯಮಂಬಿಕಾಂ ವಿಷ್ಣುಂ ಗಣನಾಥಂ ಮಹೇಶ್ವರಂ| ಪೂಜಯೇದೇಕಭಾವೇನ ಮಧ್ಯೇ ಸ್ವೇಷ್ಟಂ ವಿನಿಕ್ಷಿಪೇತ್" ಇತಿ ವಚನದರ್ಶನಾತ್ತನ್ಮತಮೇವಾವಶ್ಯಕಮಿತಿ ಚೇತ್ತದಸತ್, ತದ್ವಿಧಾಯಕಪ್ರಾತ್ಯಕ್ಷಿತಶ್ರುತಿಸ್ಮೃತ್ಯದರ್ಶನಾತ್, ಭಕ್ತ್ಯವ್ಯಭಿಚರಿತತ್ವಾತ್, ತನ್ಮತೇ ಜಗಜ್ಜನ್ಮಾದಿಕಾರಣೇಶ್ವರಸ್ಯ ಮಿಥ್ಯಾತ್ವಾಂಗೀಕಾರಾತ್, ಅಧಿಷ್ಠಾನಬ್ರಹ್ಮಣೋ ನಿರ್ವಿಶೇಷತ್ವವ್ಯಪದೇಶಾತ್, ವೇದವಿರುದ್ಧಾಧ್ಯಾಸಸ್ವೀಕಾರಾದಿಬಹುದೋಷಪ್ರಸಂಗಾಚ್ಚ ತನ್ಮತಮನುಪಾದೇಯಂ. "ಸೃಷ್ಟ್ಯಾದೌ ಶಾಂಭವೀಶಕ್ತ್ಯಾಂ ಅಂಡತ್ರಯಮಜಾಯತ | ಶುದ್ಧಸ್ಫಟಿಕಸಂಕಾಶೇ ಸಾತ್ತ್ವಿಕಾಂಡೇ ಮಹಾಮತೇ || ವಾಣೀರುದ್ರೌ ಸಮುದ್ಭೂತೌ ತಸ್ಮಾತ್ಸತ್ತ್ವಗುಣಾನ್ವಿತೌ | ರಾಜಸಾಂಡೇ ರಕ್ತಮಯೇ ಶ್ರೀ ಬ್ರಹ್ಮಾಣೌ ಸಮುದ್ಭೂತೌ || ಅತಸ್ತೌ ರಕ್ತವರ್ಣಾಂಗೌ ರಜೋಗುಣಸಮನ್ವಿತೌ | ಕಾಲಾಂಬುದಸಮಾಕಾರೇ ತಮೋಽಂಡೇ ತಮಸಾವೃತೌ|| ಉಮಾವಿಷ್ಣೂ ಸಮೂದ್ಭೂತೌ ತಸ್ಮಾದೇತೌ ತಮೋಗುಣೌ || ಗುಣಾತೀತಾ ಪರಾಶಕ್ತಿಸ್ಸಚ್ಚಿದಾನಂದರೂಪಿಣೀ| ಶಿವಾತ್ಮಿಕಾ ಶಿವಾಧೀನಾ ಚಿದಚಿದ್ವಿಶ್ವಕಾಶಿನೀ||" ಇತಿ ಶಕ್ತಿಪುರಾಣೇ ನಾರಾಯಣಾಂಬಿಕಯೋಸ್ತಮೋಽಂಡಸಂಭವತ್ವವ್ಯಪದೇಶಾತ್, ರಾಕ್ಷಸಾದಿವತ್ ಶಾಕ್ತಾಗಮಪಾಂಚರಾತ್ರಾಗಮಯೋರ್ಮದ್ಯಪಾನಮಾಂಸನಿಷೇವಣಕುಲವಿಹೀನಭೋಜನಗುರುದತ್ತಪತ್ನೀಪುನರ್ಗ್ರಹಣರಕ್ತಶುಕ್ಲಾದ್ಯಷ್ಟಮೂರ್ತಿಸ್ವೀಕಾರಮದ್ಯಭಾಂಡಪೂಜಾದಿವೇದಬಾಹ್ಯಾಚಾರಭೂಯಿಷ್ಠತ್ವಾತ್ತನ್ಮತೇ ಮುಮುಕ್ಷುಭಿರ್ನ ವಿಧೇಯೇ. "ಶಿವಕೇಶವಸಂಭೂತಂ ಕಲಯೇ ಕಾಲಭೈರವಂ | ಶಂಕರಶ್ಶೂಲಪಾಣಿಶ್ಚ ಖಟ್ವಾಂಗೀ ವಿಷ್ಣುವಲ್ಲಭಃ" ಇತ್ಯಾದಿನಾ ಕಾರಣಗುಣಾಃ ಕಾರ್ಯೇ ಸಂಕ್ರಾಮಂತೀತಿ ನ್ಯಾಯೇನ ಭೈರವಸ್ಯ ಶಿವವೀರ್ಯೋತ್ಪನ್ನಸ್ಯಾಪಿ ವಿಷ್ಣೂಪಾದಾನತ್ವೇನ ನೀಲವರ್ಣತ್ವಸುರಾಪಾನಮಾಂಸಪ್ರಿಯತ್ವಾದಿಪಾಂಚರಾತ್ರಾಗಮಧರ್ಮಾಣಾಂ ಕಪಾಲಾಗಮೇಽಪಿ

**ಪ್ರವೃತ್ತಿರುಪಪದ್ಯತೇ. ತಸ್ಮಾತ್ತದಪಿ ನ ವಿಧೇಯಂ. ವೇದವಿರುದ್ಧರಕ್ತ ಚಂದನೋಚ್ಛಿಷ್ಟಭಕ್ಷಣಾದಿಧರ್ಮಾಂಗೀಕಾರತ್ವೇನ ಸೌರಾದಿಮತಾನಿ ನ ವಿಧೇಯಾನಿ. ತೇಷಾಂ ಮತೇಷು ಶ್ರುತಿಬಾಹುಳ್ಯಾದರ್ಶನಾತ್. ಸಾವಯವಮಾತ್ರಸ್ವೀಕಾರಾನ್ನಿಮಿತ್ತಕಾರಣತ್ವಮಾತ್ರವ್ಯಪದೇಶಾಚ್ಚ.**
ಈ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ—**ಸಂಬಂಧಾನುಪಪತ್ತೇಶ್ಚ ||**

ಶಿವನನ್ನು ಬಿಟ್ಟು ನಾರಾಯಣಾದಿಗಳನ್ನು ಜಗತ್ಕಾರಣನೆಂದೂ ಪಶುಪತಿ ಎಂದೂ ಹೇಳಿದರೆ, "ನಮೋ ಹಿರಣ್ಯಬಾಹವೇ" ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವ ಹಿರಣ್ಮಯತ್ವ-ಉಮಾಪತಿತ್ವ, ಸರ್ವವಿದ್ಯಾನಿಯಾಮಕತ್ವ, ಸರ್ವಭೂತನಿಯಾಮಕತ್ವ ಮೊದಲಾದ ಧರ್ಮಗಳ ಸಂಬಂಧವು ಅವರಿಗೆ ಬರುವುದಿಲ್ಲವಾದ್ದರಿಂದ ಶಿವನಲ್ಲದೆ ಬೇರೆ ಯಾರೂ ಜಗತ್ಕಾರಣರೂ ಪಶುಪತಿಯೂ ಆಗಲಾರರು. ಆದ್ದರಿಂದ ಶ್ರುತಿಯ ದೊಂದು ಭಾಗವನ್ನಾಶ್ರಯಿಸಿದ ಮಿಶ್ರಾದಿ ಮತಗಳು ವೈದಿಕರಿಗೆ ಆದರಣೀಯವಲ್ಲ. "ಆದಿತ್ಯ-ಅಂಬಿಕೆ, ವಿಷ್ಣು-ಗಣೇಶ-ಮಹೇಶ್ವರ ಇವರನ್ನು ಏಕಭಾವದಿಂದ ಅರ್ಚಿಸಿ ಇವರೊಳಗೆ ಒಬ್ಬನನ್ನು ತನ್ನ ಇಷ್ಟದೇವನೆಂದು ಭಾವಿಸಿ ಈ ಐವರನ್ನೂ ಅರ್ಚಿಸ ಬೇಕು" ಎಂದು ಹೇಳುವುದು ಯುಕ್ತವಲ್ಲ. ಹಾಗೆ ಅರ್ಚಿಸಬೇಕೆಂದು ವಿಧಿಸಿರುವ ಶ್ರುತಿಯೇ ಎಲ್ಲಿಯೂ ಕಂಡಿಲ್ಲ. ಹೀಗೆ ಐವರ ಅರ್ಚನೆಯಲ್ಲಿ ಸಾಧಕನ ಭಕ್ತಿ ಏಕ ಮುಖವಾಗುವುದಿಲ್ಲ. ಇದೂ ಅಲ್ಲದೆ, ಆ ಮತದಲ್ಲಿ ಜಗತ್ಕಾರಣನಾದ ಈಶ್ವರನನ್ನು ಸುಳ್ಳೆಂದೂ, ಮೂಲಬ್ರಹ್ಮವನ್ನು ನಿರ್ವಿಶೇಷವೆಂದೂ ಹೇಳಿದೆ. ವೇದವಿರುದ್ಧವಾದ ಅಧ್ಯಾಸವನ್ನು ಒಪ್ಪಿದರೆ ಅನೇಕ ದೋಷಗಳು ಬರುತ್ತವೆ. ಆದ್ದರಿಂದ ಆ ಮತ ಯುಕ್ತವಲ್ಲ. "ಸೃಷ್ಟಿಯ ಆದಿಯಲ್ಲಿ ಪರಾಶಕ್ತಿಯಿಂದ ಮೂರು ಅಂಡಗಳು ಹೊರ ಟವು. ಅವುಗಳಲ್ಲಿ ಬಿಳಿಯ ಸಾತ್ತ್ವಿಕಾಂಡದಲ್ಲಿ ವಾಣಿ ಮತ್ತು ಕಾಲರುದ್ರರು ಹುಟ್ಟಿ ದರು. ಆದ್ದರಿಂದ ಅವರಲ್ಲಿ ಸತ್ತ್ವಗುಣವಿದೆ. ಕೆಂಪಾದ ರಾಜಸಾಂಡದಲ್ಲಿ ಲಕ್ಷ್ಮಿ ಬ್ರಹ್ಮರು ಹುಟ್ಟಿದರು. ಅವರಲ್ಲಿ ರಜೋಗುಣವಿದೆ. ಕಪ್ಪುಬಣ್ಣದ ತಾಮಸಾಂಡದಲ್ಲಿ ಉಮೆ ಮತ್ತು ವಿಷ್ಣು ಹುಟ್ಟಿದರು. ಅವರಲ್ಲಿ ತಮೋಗುಣವಿದೆ. ಪರಾಶಕ್ತಿಯು ಗುಣಾ ತೀತಳೂ ಸಚ್ಚಿದಾನಂದರೂಪಿಣಿಯೂ ಆಗಿ ಚಿದಚಿದ್ವಿಶ್ವವನ್ನು ಬೆಳಗುತ್ತ ಶಿವೆ ಎನಿಸಿ ಶಿವನಿಗಧೀನಳಾಗಿದ್ದಾಳೆ". ಹೀಗೆ ಶಕ್ತಿಪುರಾಣದಲ್ಲಿ ಉಮೆ ವಿಷ್ಣು ಇವರನ್ನು ತಾಮಸರೆಂದು ಹೇಳಿರುವುದರಿಂದ ರಾಕ್ಷಸರಂತೆ ಶಾಕ್ತಾಗಮ ಪಾಂಚರಾತ್ರಾಗಮ ಗಳಲ್ಲಿ ಮದ್ಯಪಾನ, ಮಾಂಸಭಕ್ಷಣ, ದುಷ್ಕುಲದಲ್ಲಿ ಭೋಜನ, ಗುರುಪತ್ನೀಗಮನ, ಮದ್ಯಭಾಂಡದ ಪೂಜೆ ಇದೇ ಮೊದಲಾದ ವೇದವಿರುದ್ಧವಾದ ಆಚಾರಗಳೇ ಹೆಚ್ಚಾ ಗಿರುವುದರಿಂದ ಇವೆರಡು ಮತಗಳೂ ಮುಮುಕ್ಷುಗಳಿಗೆ ಗ್ರಾಹ್ಯವಲ್ಲ. "ಶಿವಕೇಶವ ರಿಂದ ಕಾಲಭೈರವನು ಹುಟ್ಟಿದನು". "ಶಿವನಿಗೆ ವಿಷ್ಣುವಲ್ಲಭನೆಂಬ ಹೆಸರೂ ಇದೆ" ಈ ವಾಕ್ಯಗಳಂತೆಯೂ, 'ಕಾರಣಗುಣಗಳು ಕಾರ್ಯದಲ್ಲಿ ಅಂಟುತ್ತವೆ' ಎಂಬ ನ್ಯಾಯ ದಿಂದಲೂ, ಭೈರವನು ಶಿವನ ವೀರ್ಯದಿಂದ ಹುಟ್ಟಿದರೂ ವಿಷ್ಣುವಿನ ಸಂಬಂಧ

ದಿಂದ ಅವನು ನೀಲವರ್ಣನೂ ಆಗಿ ಅವನಲ್ಲಿ ಸುರಾಪಾನ ಮಾಂಸಭಕ್ಷಣ ಮೊದಲಾದ ಧರ್ಮಗಳು ಇರುವುದಾಗಿ ಕಾಪಾಲಾಗಮದಲ್ಲಿ ಹೇಳಿದೆ. ಆದ್ದರಿಂದ ಈ ಆಗಮವೂ ಗ್ರಾಹ್ಯವಲ್ಲ. ವೇದ ವಿರುದ್ಧವಾಗಿರುವ ರಕ್ತಚಂದನ ಉಚ್ಛಿಷ್ಟಭಕ್ಷಣ ಮೊದಲಾದ ಧರ್ಮಗಳನ್ನು ಒಪ್ಪಿರುವುದರಿಂದ ಸೌರಗಾಣಾಪತ್ಯಮತಗಳೂ ಗ್ರಾಹ್ಯವಲ್ಲ. ಆ ಮತಗಳಿಗೆ ಆಧಾರವಾದ ಶ್ರುತಿಗಳೂ ಬಹಳವಾಗಿಲ್ಲ. ಇದೂ ಅಲ್ಲದೆ, ಅವುಗಳು ಶ್ರುತಿಯ ಒಂದೊಂದು ಭಾಗವನ್ನು ಮಾತ್ರ ಒಪ್ಪುತ್ತವೆ ಮತ್ತು ಶಿವನನ್ನು ಜಗತ್ತಿಗೆ ನಿಮಿತ್ತನೆಂದಷ್ಟನ್ನೇ ತಿಳಿಸುತ್ತವೆ.

**ತೇಷಾಂ ನಿರಾಕರಣೇ ಹೇತ್ವಂತರಮಾಹ. ಅಧಿಷ್ಠಾನಾನುಪಪತ್ತೇಶ್ಚ॥**

**ಅಧಿಷ್ಠಾನಬ್ರಹ್ಮಾತಿರಿಕ್ತಮಾಯಾಪ್ರತಿಬಿಂಬಿತೇಶ್ವರಸ್ಯ ಜಗಜ್ಜನ್ಮಾದಿಕಾರಣತ್ವಾಂಗೀಕಾರೇ ಅಧಿಷ್ಠಾನಾನುಪಪತ್ತೇಸ್ತನ್ಮತೇ ಹ್ಯಧಿಷ್ಠಾನಬ್ರಹ್ಮಣೋ ನಿರ್ವಿಶೇಷತ್ವಾಂಗೀಕಾರತ್ವೇನ ತಸ್ಮಿನ್ವೇದವೇದಾಂತಾನಾಮನುಪಪತ್ತೇಶ್ಚ ಪ್ರವೃತ್ತ್ಯಸಂಭವಾತ್ ಬ್ರಹ್ಮಣಶ್ಯಶಶೃಂಗವನ್ಮಿಥ್ಯಾತ್ವಮರ್ಥಾತ್ಸಿದ್ಧಂ. ತನ್ಮತೇ ಜೀವಭಿನ್ನೇಶ್ವರಾನಂಗೀಕಾರೇ ತ್ವಧಿಷ್ಠಾನಾನುಪತ್ತೇಃ. "ಸೋऽಂತರಾದಂತರಂ ಪ್ರಾವಿಶತ್," ಉತ "ಯೋ ರುದ್ರೋ ಅಗ್ನೌ" ಇತ್ಯಾದಿಶ್ರುತಿಸಿದ್ಧಚೇತನಪ್ರಪಂಚಾಧಿಷ್ಠಾನತ್ವಂ ಪರಮೇಶ್ವರಸ್ಯ ಅನುಪಪತ್ತೆರಸಂಭವಾತ್, ಕಿಂಚ ತನ್ಮತೇ ಜಗಜ್ಜೀವೇಶ್ವರಾದಿಪ್ರಪಂಚಸ್ಯಾಧಿಷ್ಠಾನಬ್ರಹ್ಮಣ್ಯಾರೋಪಿತತ್ವಾದನುಷ್ಠಾನಾನುಪಪತ್ತೇಃ. ತನ್ಮತೇ ಚೈತನ್ಯದ್ವಯಾನಂಗೀಕಾರಾದ್ಬ್ರಹ್ಮಣ ಅಜ್ಞತ್ವಸಂಭವಾತ್ತತ್ಸರ್ವಜ್ಞತ್ವವಿಧಾಯಕವೇದಾಂತಾನಾಮನುಪಪತ್ತೇಃ ಪ್ರವೃತ್ತ್ಯಸಂಭವಾತ್. ಅಪಿಚ ಪಾಂಚರಾತ್ರಮತೇ, "ಯಸ್ಯ ಪೃಥಿವೀ ಶರೀರಂ। ಯಸ್ಯಾತ್ಮಾ ಶರೀರಂ" ಇತ್ಯಾದಿಶ್ರುತ್ಯಾ ಜಗಜ್ಜೀವೇಶ್ವರಯೋರಂಗಾಂಗೀತ್ವಾಂಗೀಕಾರೇ ಅಂಗಿನಸ್ಸೂಕ್ಷ್ಮತ್ವಮಂಗಸ್ಯ ಸ್ಥೂಲತ್ವಮಿತಿ ವ್ಯವಹಾರದರ್ಶನಾತ್, "ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್" ಇತ್ಯಾದಿಶ್ರುತಿಸಿದ್ಧಸರ್ವಾಧಿಷ್ಠಾನತ್ವಾನುಪಪತ್ತಿರುಪಪದ್ಯತೇ. ಕಿಂಚಾಂಗಿನ್ಯಂಗಸ್ಯ ನಿಮಿತ್ತೋಪಾದಾನಕಾರಣತ್ವಾಯೋಗಾತ್ ಅಂಗಾಂಗಿತ್ವಸ್ವೀಕಾರೇ ಜೀವಸ್ವರೂಪಾಂಗನಿಷ್ಠರಾಗದ್ವೇಷದುಃಖಾದಿಕಮಂಗಿನಃ ಪರಮೇಶ್ವರಸ್ಯಾನಿವಾರ್ಯಂ. ತದಂಗೀಕಾರೇ ಸರ್ವಶ್ರುತಿವಿರೋಧಃ. ಅತಏವ ವೇದಬಾಹ್ಯಪಾಂಚರಾತ್ರಮತಂ ಸುತರಾಮನುಪಪನ್ನಂ. ಏತೇನ ದ್ವೈತನಿರಾಸ ಅರ್ಥಾತ್ಸಿದ್ಧಃ, ಉಭಯೋರ್ವೈಷ್ಣವತ್ವಾತ್.**

ಈ ಮತಗಳನ್ನು ಮತ್ತೆ ನಿರಾಕರಿಸುತ್ತಾನೆ—ಅಧಿಷ್ಠಾನಾನುಪಪತ್ತೇಃ ॥೩೯॥

ಮೂಲಬ್ರಹ್ಮಕ್ಕಿಂತ ಬೇರೆಯಾಗಿ ಮಾಯೆಯಲ್ಲಿ ಪ್ರತಿಫಲಿಸಿದ ಈಶ್ವರನನ್ನು

ಜಗತ್ಕಾರಣನೆಂದು ಒಪ್ಪಿದರೆ, ಆ ಮತದಲ್ಲಿ ಮೂಲಬ್ರಹ್ಮವನ್ನು ನಿರ್ವಿಶೇಷವೆಂದು ಒಪ್ಪಿ ಆ ಬಗ್ಗೆ ವೇದಾಂತಗಳು ಪ್ರಮಾಣವಾಗದಿರುವುದರಿಂದ ಸೃಷ್ಟ್ಯಾದಿವ್ಯಾಪಾರ ಗಳು ನಡೆಯದೆ ಬ್ರಹ್ಮವು ಮೊಲದ ಕೊಂಬಿನಂತೆ ಸುಳ್ಳೆಂಬುದು ಸ್ವತಸ್ಸಿದ್ಧವಾಗು ತ್ತದೆ. ಅಲ್ಲಿ ಜೀವರಿಗಿಂತ ಬೇರೆ ಈಶ್ವರನನ್ನು ಒಪ್ಪದಿರುವುದರಿಂದ ವಿಶ್ವಕ್ಕಾಶ್ರಯವೇ ಇಲ್ಲದೆ ಹೋಗುವುದು. ಇದರಿಂದ ರುದ್ರನು ಅಗ್ನಿ ನೀರು ಎಲ್ಲದರಲ್ಲೂ ನೆಲಸಿರುವ ನೆಂಬ ಶ್ರುತಿಯಲ್ಲಿ ಹೇಳಿರುವ ಚೇತನ ಮತ್ತು ಜಡವಾದ ಪ್ರಪಂಚಕ್ಕೆ ಪರಮೇಶ್ವರನು ಆಶ್ರಯನೆಂಬ ಅರ್ಥ ಹೊಂದದೆಹೋಗುವುದು. ಈ ಮತದಲ್ಲಿ ಜಗತ್ತು ಜೀವ ಈಶ್ವರ ಮೊದಲಾದ ಪ್ರಪಂಚವು ಮೂಲಬ್ರಹ್ಮದಲ್ಲಿ ಆರೋಪಿತವಾದ್ದರಿಂದ ಬ್ರಹ್ಮವು ಇದೆಲ್ಲಕ್ಕೂ ಆಶ್ರಯವಾಗಲಾರದು. ಇದೂ ಅಲ್ಲದೆ, ಅಲ್ಲಿ ಬ್ರಹ್ಮಕ್ಕೆ ಸ್ವರೂಪಕ್ಕಿಂತ ಬೇರೆಯಾದ ಜ್ಞಾನವನ್ನು ಒಪ್ಪದಿರುವುದರಿಂದ ಬ್ರಹ್ಮವು ಜ್ಞಾನಶೂನ್ಯವಾದೀತು. ಇದರಿಂದ ಅವನನ್ನು ಸರ್ವಜ್ಞನೆಂದು ತಿಳಿಸುವ ಶ್ರುತಿಗಳಿಗೆ ವಿರೋಧದಿಂದ ಪ್ರವೃ ತ್ತಿಯೇ ಇಲ್ಲವಾಗುವುದು. ಪಾಂಚರಾತ್ರಮತದಲ್ಲಿ ಜಗಜ್ಜೀವೇಶ್ವರರಿಗೆ ಅಂಗಾಂಗಿ ಭಾವವನ್ನು ಒಪ್ಪಿರುವುದರಿಂದ ಅಂಗಿಯಾದ ಈಶ್ವರನನ್ನು ಸೂಕ್ಷ್ಮನೆಂದೂ, ಅಂಗ ವಾದ ಜಗಜ್ಜೀವರನ್ನು ಸ್ಥೂಲವೆಂದೂ ವ್ಯವಹರಿಸಬೇಕಾಗುತ್ತದೆ. "ಪರಶಿವನೇ ಪಂಚಭೂತಗಳೂ ಆಗಿ ವಿಶ್ವದ ಆಶ್ರಯಸ್ಥಲವೆನಿಸಿದ್ದಾನೆ". ಈ ಬಗೆಯ ಶ್ರುತಿಗಳಲ್ಲಿ ಅವನೇ ಎಲ್ಲಕ್ಕೂ ಆಶ್ರಯನೆಂದು ಹೇಳಿದ್ದು ಹೊಂದದೆಹೋದೀತು. ಅಂಗವು ಅಂಗಿಯಲ್ಲಿ ನಿಮಿತ್ತ ಮತ್ತು ಉಪಾದಾನವೆರಡೂ ಆಗುವಂತಿಲ್ಲ. ಇದೂ ಅಲ್ಲದೆ, ಅಂಗಾಂಗಿ ಭಾವವನ್ನು ಒಪ್ಪಿದರೆ, ಅಂಗನಾದ ಜೀವನಲ್ಲಿರುವ ರಾಗದ್ವೇಷ ಮೊದಲಾ ದವು ಅಂಗಿಯಾದ ಈಶ್ವರನಲ್ಲೂ ಬರಬೇಕಾಗುತ್ತದೆ. ಅದನ್ನು ಒಪ್ಪಿದರೆ ಶ್ರುತಿಗಳೆ ಲ್ಲಕ್ಕೂ ವಿರೋಧವುಂಟಾಗುತ್ತದೆ. ಹೀಗೆ ವೇದಬಾಹ್ಯವಾದ್ದರಿಂದ ಪಾಂಚರಾತ್ರಮತವು ಯುಕ್ತವಲ್ಲ. ದ್ವೈತಮತವೂ ಇದರಂತೆಯೇ ವೈಷ್ಣವವಾದ್ದರಿಂದಲೂ ಜಗತ್ಕಾರಣ ವಾದ ಬ್ರಹ್ಮವನ್ನು ಸಾಕಾರವೆಂದು ಹೇಳಿರುವುದರಿಂದಲೂ ನಿರಾಕೃತವಾಯಿತು.

**ಜಗತ್ಕಾರಣಸ್ಯ ಶರೀರಾಂಗೀಕಾರಾಚ್ಚ ದ್ವೈತಭಾಗವತಪಾಂಚರಾತ್ರಾದಿವೈಷ್ಣವಮತೇ ಜಗತ್ಕಾರಣಸ್ಯ ನಾರಾಯಣಸ್ಯ ಸಾವಯವತ್ವಂ, ಜೀವಾನಾಂ ಮುಕ್ತದಶಯಾಮಪಿ ಭಕ್ತಿಪ್ರಪತ್ತಿಸಾಧನತ್ವೇನ ತತ್ಸಮಾನಕಿಂಚಿದ್ಭೇದಶರೀರಪ್ರಾಪ್ತ್ಯತ್ವಮಿತಿ ವ್ಯಪದೇಶಾತ್ ವೈದಿಕಾನಾಂ ತದಸಂಗತಮಿತಿ ನಿರಾಕರೋತಿ—ಕರಣವಚ್ಚೇನ್ನ ಭೋಗಾದಿಭ್ಯಃ ॥ ೪೦ ॥**

**ಜೀವವಜ್ಜಗತ್ಪ್ರಯೋಜನತ್ವೇ ನಾರಾಯಣಸ್ಯ ಶರೀರೇಂದ್ರಿಯವತ್ತ್ವಮಿತಿ ಚೇನ್ನ ಕುತಃ ಭೋಗಾದಿಭ್ಯಃ, "ಅಪಾಣಿಪಾದೋ ಜವನೋ ಗೃಹೀತಾ" ಇತ್ಯಾದಿಷು ಶರೀರೇಂದ್ರಿಯನಿರಪೇಕ್ಷತಯಾ ಜಗತ್ಕಾರಣೇಶ್ವರಸ್ಯ ಸ್ವತಂತ್ರಸ್ಯ ಸರ್ವಕರ್ತೃತ್ವೋಪದೇಶಾತ್ ಜೀವವತ್ಪರಮೇಶ್ವರಸ್ಯ ಜಗತ್ಕಲ್ಪನಾದಿಪ್ರಯೋಜನೇ ಶರೀರೇಂದ್ರಿಯಾದಿಸಾಪೇಕ್ಷತ್ವಮು**

ನಂಗೀಕರ್ತವ್ಯಂ. ಅತ್ರ ಪರಮೇಶ್ವರಸ್ಯ ಶರೀರೇಂದ್ರಿಯನಿರಾಸೇನ
ದ್ವೈತವಿಶಿಷ್ಟಾದಿಭೇತಮತನಿರಾಕರಣಂ, "ಭೋಗಾದಿಭ್ಯ" ಇತಿ
ಭೋಗೋಪದೇಶಾತ್ ಪರಮೇಶ್ವರಸ್ಯ ನಿರ್ವಿಶೇಷತ್ವವ್ಯವಸ್ಥಾಪಕಮಿ
ಥ್ಯಾದ್ವೈತಶೂನ್ಯಾದ್ವೈತನಿರಾಕರಣಂ ಚೋಪದಿಷ್ಟಂ. ಅತಃ ವೇದ
ವೇದಾಂತಾನುಸರಣವಿವೇಕಿಭಿರ್ಮುಮುಕ್ಷುಭಿರ್ದ್ವೈತಾದ್ವೈತಪ್ರತಿಪಾ
ದಿತವೀರಶೈವಮತಮೇವಾಂಗೀಕರ್ತವ್ಯಮಿತಿ ಸೂತ್ರಕಾರಮುಖ್ಯಾಭಿ
ಪ್ರಾಯಃ. ಸಿದ್ಧಾಂತಾಗಮೇ "ದ್ವೈತಾದ್ವೈತಮತಂ ವೀರಶೈವಂ
ಮೋಕ್ಷೈಕಕಲ್ಪಿಕಂ । ಸರ್ವವೇದಾಂತಸಿದ್ಧಾಂತಸಾರಂ ಸರ್ವಾರ್ಥಸಿ
ದ್ಧಿದಂ ॥" ಇತಿ ನಿರ್ದಿಷ್ಟತ್ವಾತ್ತದೇವ ಪರಮಿತಿ ಘಂಟಾಘೋಷಃ. ಕಿಂಚ
ಜಗತ್ಕಾರಣೇಶ್ವರಸ್ಯ ಶರೀರತ್ವವ್ಯವಸ್ಥಾಪನೇ ಘಟಾದಿವತ್ಪರಿಚ್ಛಿನ್ನತ್ವ
ಮೂರ್ತತ್ವಪ್ರಸಕ್ತ್ಯಾ ಮೂರ್ತಪ್ರಧಾನಜೀವವಾಯ್ವಾಕಾಶಾಂತರ್ಯಾ
ಮಿತ್ವಂ ನೋಪಪದ್ಯತೇ. "ತತ್ತ್ವಮೇವ ತತ್", "ನ ತತ್ರ ಪ್ರಾಣಾ
ನೋತ್ಕ್ರಾಮಂತೇ ತತ್ರೈವ ಸಮವಲೀಯಂತೇ" ಇತ್ಯಾದಿಶ್ರುತಿವಿರೋ
ಧಾತ್ ಮೂರ್ತಾಮೂರ್ತತ್ವಯೋರೇಕತ್ರಾಯೋಗಾತ್ ತಸ್ಯೇಶ್ವರತ್ವಂ
ನ ಘಟತೇ. ನನು ಶಿವಸ್ಯ ಪರಬ್ರಹ್ಮಣಃ "ಪುರುಷಂ ಕೃಷ್ಣಪಿಂಗಳಂ"
ಇತ್ಯಾದೌ ಶರೀರತ್ವವ್ಯಪದೇಶಾತ್ ತದ್ವದಸಮಂಜಸಪ್ರಸಂಗ ಇತಿ
ಚೇತ್ತದಯುಕ್ತಂ ಶಿವಸ್ಯ ಲೀಲಾಮಂಗಲವಿಗ್ರಹತ್ವಾತ್. ಶರೀರಾದ್ಯ
ಭಾವೇಽಪಿ 'ಅಪಾಣಿಪಾದೋ ಜವನೋ ಗೃಹೀತಾ' ಇತ್ಯಾದಿಶ್ರುತ್ಯಾ
ಸರ್ವಕಾರಣತ್ವನಿರ್ದೇಶಾತ್ ನಾರಾಯಣವಜ್ಜನನಮರಣಾಸಂಭವಾತ್
ಕಾರ್ಯಾರ್ಥಶರೀರಾಯೋಗಾಚ್ಚ ಲೀಲಾಮಂಗಲವಿಗ್ರಹಸ್ಯ ಶಿವಸ್ಯ
ನ ದೋಷಶಂಕಾಕಳಂಕಃ. ನನು "ಆದಿತ್ಯಮಂಬಿಕಾಂ ವಿಷ್ಣುಂ ಗಣ
ನಾಥಂ ಮಹೇಶ್ವರಂ" ಇತಿ ಪಂಚಪೂಜಾವಿಧಾನೇ ಸರ್ವಂ ಶೈವತ್ವ
ದ್ಯೋತನಾತ್ಮಕತಸ್ತಸ್ಯ ನಿರಾಸಾ. "ಸೂರ್ಯೋ ಮುಖ್ಯಶರೀರಂ
ಸ್ಯಾಚ್ಛಿವಸ್ಯ ಪರಮಾತ್ಮನಃ", "ಆದಿತ್ಯಹೃದಯೇ ರುದ್ರೋ ಭಾತಿ ತಸ್ಯ
ನಿಯಾಮಕಃ", "ಸೌರಮಂಡಲಮಧ್ಯಸ್ಥಂ ಸಾಂಬಂ ಸಂಸಾರಭೇಷಜಂ"
ಇತಿ ಸ್ಕಾಂದಲೈಂಗ್ಯಕೂರ್ಮಾದಿಷು ದರ್ಶನಾತ್. ಕಿಂಚ "ವಂದೇ
ಸೂರ್ಯಶಶಾಂಕವಹ್ನಿನಯನಂ ವಂದೇ ಮುಕುಂದಪ್ರಿಯಂ"
ಇತ್ಯತ್ರ ತಸ್ಯ ತಲ್ಲೋಚನತ್ವನಿರ್ದೇಶಾತ್ ಸೌರಸ್ಯ ಶೈವತ್ವಂ.
ಅಂಬಿಕಾಯಾಸ್ತತ್ಪತ್ನೀತ್ವೇನ ವಿಘ್ನೇಶ್ವರಸ್ಯ ತತ್ಪುತ್ರತ್ವೇನ
ವಿಷ್ಣೋಸ್ತು ತದ್ಭಕ್ತತ್ವೇನ ಶೈವತ್ವಮನಿವಾರ್ಯಂ. ವಿಷ್ಣೋಃಶಿವಭ
ಕ್ತತ್ವಂ ಸ್ಕಾಂದೇ "ಬಾಣತ್ವಂ ವೃಷಭತ್ವಂ ಚ ಭಾರ್ಯಾತ್ವಂ ಘೋಣ
ರೂಪತಾಂ । ಅರ್ಚಕತ್ವಂ ಸಖಿತ್ವಂ ಚ ಶಿವಸ್ಯ ಪರಮಾತ್ಮನಃ । ಅಭೂ

ನ್ನಾರಾಯಣಸ್ತಸ್ಮಾದ್ಭಕ್ತವರ್ಯ ಇತೀರ್ಯತೇ॥" ಇತಿ. ಶೈವೇ "ಗೋಪಾಲಕಶ್ಶಿರಸಿ ಲಿಂಗಮುವಾಹ ಭಕ್ತ್ಯಾ ಲಿಂಗಸ್ಯ ಧಾರಣಮಹೋ ಕಿಮು ಸಂಶಯಸ್ತೇ । ಭೋ ಪಾಂಡುರಂಗಮೃತಸ್ಯ ಮನೋಃ ಪ್ರಭಾವಾತ್ ಪಶ್ಯಂತು ಯೇ ವಿಮತನಿರ್ಮಲಭಾವಬೋಧಾಃ॥" ಇತಿ. ಶಂಕರಸಂಹಿತಾಯಾಮಪಿ," "ಉರಸ್ಸ್ಥಲೇ ಹರಿರ್ಲಿಂಗಂ ಧೃತ್ವಾ ಮೂರ್ಧ್ನಿ ಪಿತಾಮಹಃ। ಲಿಂಗಸ್ಥಂ ಮಾಂ ಸಮಾರಾಧ್ಯ ಸ್ವಂ ಸ್ವಂ ಪದಮವಾಪತುಃ॥" ಇತಿ ದರ್ಶನಾತ್ ವಿಷ್ಣೋಶ್ಶಿವಭಕ್ತತ್ವಂ ಸಿದ್ಧಂ. ವೀರಾಗಮೇ ದಶವಿಧಶೈವನಿರೂಪಣೇ", "ಸಾಮಾನ್ಯಶೈವಂ ದೇವೇಶಿ ವೈಷ್ಣವಂ ಪರಿಕೀರ್ತಿತಂ । ಶಿಖಾಪಂಚಕಸಂಸ್ಕಾರಾದ್ಗಾಯತ್ರೀಭರ್ಗಚೋದನಾತ್ । ಮೇಧಾವೀ ಭಸ್ಮಸಂಧಾನಾದ್ರುದ್ರಪಿಂಡಸಮುದ್ಭವಾತ್ । ಪೂರ್ವಶೈವಂ ಮಹಾದೇವಿ ಸೌರಂ ತು ಪರಿಕೀರ್ತಿತಂ। ಸೌರಮಂಡಲಮಧ್ಯಸ್ಥಸಾಂಬಮೂರ್ತಿವ್ಯವಸ್ಥಿತೇಃ। ತಸ್ಯಾಷ್ಟಮೂರ್ತೇರಂಗತ್ವಾತ್ಪೂರ್ವಕರ್ಮನಿಷೇವಣಾತ್। ಪಂಚಪೂಜಾವಿಧಾನಂ ತು ಮಿಶ್ರಶೈವಮಿತೀರ್ಯತೇ॥" ಇತ್ಯಾದಿನಾ ಸೌರಾದಿಮತಾನಾಂ ಶೈವಮತಾಂತರ್ಭೂತತ್ವೇನ ವ್ಯವಸ್ಥಾಪನಾತ್ ಶೈವಾನಾಂ ತನ್ನಿರಾಸಾ ಕಥಮುಪಪದ್ಯತ ಇತಿ ಚೇನ್ನ, "ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ", "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ" ಇತ್ಯಾದಿನಾ ಶೈವಾನಾಂ ಶ್ರುತೌ ಶಿವೋಪಾಸನವಿಧೇರೇವ ದರ್ಶನಾತ್, ಸೌರಾದೀನಾಂ ಶಿವಾಧಿಕ್ಯನಿಷ್ಠಾಭಾವಾತ್ ಪಶುಪತೇರ್ಜಗದುಭಯಕಾರಣತ್ವಾಽಸ್ವೀಕಾರಾತ್, ಸಮಷ್ಟಿಪೂಜಾವಿಧಾಯಕಶ್ರುತ್ಯಭಾವಾಚ್ಚ ತನ್ನಿರಾಕರಣಮನಿವಾರ್ಯಂ. ತ್ರಿಲೋಚನಶಿವಾಚಾರ್ಯಾದಿಮತತಪ್ತಲಿಂಗಾಂಕಸ್ಯ ಪಾಂಚರಾತ್ರಾದಿವದವೈದಿಕತ್ವಾತ್ ಶೈವತ್ವಾನಾಚಾರತ್ವಾದ್ಯಭಾವೇಽಪಿ ಹಿರಣ್ಯಗರ್ಭಾದಿಮತವಚ್ಛಿವಸ್ಯ ನಿಮಿತ್ತಕಾರಣತ್ವಮಾತ್ರಸ್ವೀಕಾರಾದವೈದಿಕಪಾಂಚರಾತ್ರಾದಿವದಂಗಾಂಗಿತ್ವಪರಿಗ್ರಹಾಚ್ಚ ಪ್ರಾಣಲಿಂಗಧಾರಣವಿಶಿಷ್ಟವೀರಶೈವತುಲ್ಯತ್ವಂ ನ ಸಂಭವತಿ. ತದುಕ್ತಂ ಸ್ಕಾಂದೇ "ಲಿಂಗಾಂಕಂ ಚ ಭಗಾಂಕಂ ಚ ಶೈವವೈಷ್ಣವಯೋರಪಿ। ಗ್ರಾಹ್ಯಂ ತಥಾಪಿ ರೌದ್ರಸ್ಯ ಸರ್ವಾಧಿಕ್ಯಮಿತೀರ್ಯತೇ॥" ಇತಿ ದರ್ಶನಾತ್ ಭಗಾತ್ಮಕಚಕ್ರಾಂಕಸ್ಯ ಲಿಂಗಾಂಕನಮುತ್ಕೃಷ್ಟಂ. ಶ್ರೀಚಕ್ರಸ್ಯ ಭಗಾಕಾರತ್ವಾತ್, ಭಗಸ್ಯ ಸ್ವಾಧಿಷ್ಠಾನಚಕ್ರತ್ವೇನ ಸರ್ವವೇದಾಂತದರ್ಶನಾಚ್ಚ ಚಕ್ರಸ್ಯ ಭಗಾಭಿಧೇಯತ್ವಮನಿವಾರ್ಯಂ. ತಸ್ಮಾತ್ಪೂರ್ವೋಕ್ತಮೇವ ಯುಕ್ತಂ.

ದ್ವೈತ ಭಾಗವತ ಪಾಂಚರಾತ್ರ ಮೊದಲಾದ ವೈಷ್ಣವಮತಗಳಲ್ಲಿ ಜಗತ್ಕಾರಣ

ನಾದ ನಾರಾಯಣನನ್ನು ಸಾಕಾರನೆಂದೂ, ಜೀವರು ಮುಕ್ತಿಯಲ್ಲೂ ಶರಣಾಗತರಾಗಿ ಸೇವೆಯನ್ನು ಸಲ್ಲಿಸಲಿಕ್ಕಾಗಿ ಬೇರೊಂದು ಶರೀರವನ್ನು ಪಡೆಯುವರೆಂದೂ ಹೇಳಿದೆ. ಅದನ್ನು ಅಸಂಗತವೆಂದು ತಿಳಿಸುತ್ತಾನೆ—**ಕರಣವಚ್ಚೇನ್ನ ಭೋಗಾದಿಭ್ಯಃ** ||

ಜಗತ್ತಿನ ಹಿತಕ್ಕಾಗಿ ಜೀವನಂತೆ ನಾರಾಯಣನಿಗೆ ಶರೀರೇಂದ್ರಿಯಗಳಿವೆ ಎಂದು ಹೇಳುವುದು ಯುಕ್ತವಲ್ಲ. ಯಾಕೆಂದರೆ ಶ್ರುತಿಗಳಲ್ಲಿ ಶರೀರೇಂದ್ರಿಯಗಳನ್ನು ಅಪೇಕ್ಷಿಸದೆಯೇ ಜಗತ್ಕಾರಣನೂ ಸ್ವತಂತ್ರನೂ ಆದ ಈಶ್ವರನನ್ನು ಎಲ್ಲಕ್ಕೂ ಕರ್ತನೆಂದು ಹೇಳಿರುವುದರಿಂದ ಜೀವನಂತೆ ಈಶ್ವರನಿಗೆ ಜಗತ್ತಿನ ಹಿತಕ್ಕಾಗಿ ಶರೀರೇಂದ್ರಿಯಗಳ ಅವಲಂಬನವನ್ನು ಒಪ್ಪಬೇಕಾಗಿಲ್ಲ. ಪರಮೇಶ್ವರನಿಗೆ ಶರೀರೇಂದ್ರಿಯಗಳಿಲ್ಲವೆಂಬುದರಿಂದ ದ್ವೈತ ವಿಶಿಷ್ಟಾದ್ವೈತವೆಂಬ ಭೇದವಮತಗಳನ್ನೂ, 'ಭೋಗಾದಿಭ್ಯಃ' ಎಂಬುದರಿಂದ ಬ್ರಹ್ಮವನ್ನು ನಿರ್ವಿಶೇಷವೆಂದು ಹೇಳುವ ಮಿಥ್ಯಾದ್ವೈತ, ಶೂನ್ಯಾದ್ವೈತಮತಗಳನ್ನು ನಿರಾಕರಿಸಲಾಗಿದೆ. ಆದ್ದರಿಂದ ವೇದಾಂತಾನುಯಾಯಿಗಳೂ ವಿವೇಕಿಗಳೂ ಆದ ಮುಮುಕ್ಷುಗಳು ದ್ವೈತಾದ್ವೈತರೂಪವಾದ ವೀರಶೈವಮತವನ್ನೇ ಅಂಗೀಕರಿಸಬೇಕೆಂಬುದು ಸೂತ್ರಕಾರವ ಮುಖ್ಯಾಭಿಪ್ರಾಯವಾಗಿದೆ. ಸಿದ್ಧಾಂತಾಗಮದಲ್ಲೂ "ದ್ವೈತಾದ್ವೈತವೆನಿಸಿದ ವೀರಶೈವವು ಎಲ್ಲಾ ವೇದಾಂತಗಳ ಸಾರವೆನಿಸಿ ಸಾಧಕರ ಐಹಿಕ ಸಿದ್ಧಿಗಳನ್ನು ದೊರಕಿಸುತ್ತಲೇ ಮೋಕ್ಷವನ್ನೂ ಕೊಡಬಲ್ಲದು" ಎಂದು ಹೇಳಿರುವುದರಿಂದ ಈ ಮತವೇ ಉತ್ಕೃಷ್ಟವಾದುದೆಂದು ಘಂಟಾಘೋಷವಾಗಿದೆ. ಜಗತ್ಕಾರಣನಾದ ಈಶ್ವರನಿಗೆ ಶರೀರವಿದೆ ಎಂದು ಹೇಳಿದರೆ ಅವನು ಘಟದಂತೆ ಪರಿಚ್ಛಿನ್ನನೂ ಮೂರ್ತನೂ ಆಗುವುದರಿಂದ ಮೂರ್ತವೆನಿಸಿದ ಪ್ರಕೃತಿ, ಜೀವ, ವಾಯು, ಆಕಾಶಗಳಲ್ಲಿ ಅಂತರ್ಯಾಮಿಯಾಗಲಾರನು. "ಅದೇ ನೀನು, ನೀನೇ ಅದು". "ಅಲ್ಲಿಂದ ಪ್ರಾಣಗಳು ಹೊರಡುವುದಿಲ್ಲ. ಆದರೆ ಅಲ್ಲಿಯೇ ಲೀನವಾಗುತ್ತವೆ" ಈ ಬಗೆಯ ಶ್ರುತಿಗಳ ವಿರೋಧದಿಂದಲೂ, ಮೂರ್ತ ಅಮೂರ್ತಗಳೆರಡೂ ಒಂದೆಡೆ ಸೇರುವುದಿಲ್ಲವಾದ್ದರಿಂದಲೂ ಅವನು ಈಶ್ವರನೇ ಆಗಲಾರನು. ಶಿವನಿಗೆ 'ಪುರುಷಂ ಕೃಷ್ಣಪಿಂಗಳಂ' ಎಂಬ ಶ್ರುತಿಯಲ್ಲಿ ಶರೀರವನ್ನು ಹೇಳಿರುವುದರಿಂದ ಶರೀರವಿರುವುದರಲ್ಲಿ ದೋಷವಿಲ್ಲವೆಂದರೆ ಅದು ಭಕ್ತಾನುಗ್ರಹಲೀಲೆಗಾಗಿ ಧರಿಸಿದ ದಿವ್ಯಮಂಗಳವಿಗ್ರಹವಾದ್ದರಿಂದಲೂ, ಶರೀರವಿಲ್ಲದಿದ್ದರೂ ಅವನು ವಿಶ್ವವನ್ನು ಹಿಡಿದಿರುವನೆಂದೂ, ಅವನೇ ಸರ್ವಕಾರಣನೆಂದೂ ಶ್ರುತಿಯಲ್ಲಿ ಹೇಳಿರುವುದರಿಂದಲೂ, ಅವನಿಗೆ ನಾರಾಯಣನಂತೆ ಹುಟ್ಟುಸಾವುಗಳಿಲ್ಲದ್ದರಿಂದಲೂ, ಕಾರ್ಯಶರೀರವನ್ನು ಪಡೆಯದಿರುವುದರಿಂದಲೂ, ಲೀಲಾಮಂಗಳವಿಗ್ರಹದಿಂದ ಶಿವನಿಗೆ ಯಾವ ದೋಷವೂ ಅಂಟುವುದಿಲ್ಲ. ಆದಿತ್ಯ-ಅಂಬಿಕೆ, ವಿಷ್ಣು, ಗಣೇಶ-ಮಹೇಶ್ವರ ಇವರೆಲ್ಲರ ಪೂಜೆಯೂ ಶೈವವೇ ಎನಿಸಿದ್ದರಿಂದ ಇದರಿಂದಲೂ ಶಿವನನ್ನು ಬಿಟ್ಟಂತಾಗುವುದಿಲ್ಲ. "ಸೂರ್ಯನೇ ಶಿವನ ಶರೀರ. ಆದಿತ್ಯನಲ್ಲಿ ರುದ್ರನೇ ನಿಯಾಮಕನು. ಸೂರ್ಯಮಂಡಲದೊಳಗೆ ಭವರೋಗವೈದ್ಯನಾದ ಶಿವನಿರುವನು" ಹೀಗೆ ಸ್ಕಾಂದಾ

ದಿಪುರಾಣಗಳಲ್ಲಿ ಹೇಳಿದೆ. " ಮುಕುಂದಪ್ರಿಯನಾದ ಶಿವನಿಗೆ ಸೂರ್ಯ-ಚಂದ್ರ-ಅಗ್ನಿ ಈ ಮೂವರು ನೇತ್ರಗಳು " ಎಂಬಲ್ಲಿ ಶಿವನಿಗೆ ಸೂರ್ಯನನ್ನು ನೇತ್ರವೆಂದು ಹೇಳಿದೆ ಯಾದ್ದರಿಂದ ಸೂರ್ಯೋಪಾಸನವೂ ಶೈವವೇ ಆಗಿದೆ. ಇದರಂತೆ ಅಂಬಿಕೆ ಅವನ ಹೆಂಡತಿ, ಗಣೇಶ ಅವನ ಮಗ, ವಿಷ್ಣು ಅವನ ಭಕ್ತ. ಆದ್ದರಿಂದ ಇವರೆಲ್ಲರ ಅರ್ಚನೆಯೂ ಶೈವವೆನಿಸಿದೆ. ವಿಷ್ಣು ಶಿವಭಕ್ತನೆಂಬುದನ್ನು ಸ್ಕಾಂದದಲ್ಲಿ " ನಾರಾಯಣನು ಶಿವನಿಗೆ ಬಾಣವೂ ವೃಷಭವೂ ಭಾರ್ಯೆಯೂ ಅರ್ಚಕನೂ ಮಿತ್ರನೂ ಆದ್ದರಿಂದ ಪರಮಭಕ್ತನೆನಿಸಿದ್ದಾನೆ" ಎಂಬಲ್ಲಿ ಹೇಳಿದೆ. ಶೈವಪುರಾಣದಲ್ಲಿ"ಕೃಷ್ಣನು ಶಿರಸ್ಸಿನಲ್ಲಿ ಲಿಂಗವನ್ನು ಧರಿಸಿದ್ದಾನೆ. ಈ ಬಗ್ಗೆ ಸಂಶಯಪಡಬೇಕಾಗಿಲ್ಲ. ಇದಕ್ಕೆ ಪಾಂಡುರಂಗನೇ ನಿದರ್ಶನವಾಗಿರುವನು. ಅಮೃತಮಯವಾದ ಪಂಚಾಕ್ಷರೀಮಂತ್ರದ ಪ್ರಭಾವದಿಂದ ನಿರ್ಮಲಹೃದಯರಾದವರೆಲ್ಲರೂ ಪಾಂಡುರಂಗನಲ್ಲಿ ಲಿಂಗವನ್ನು ನೋಡಬಹುದು"ಎಂದು ಹೇಳಿದೆ. ವೀರಾಗಮದಲ್ಲಿ "ವಿಷ್ಣು ವಕ್ಷಸ್ಥಲದಲ್ಲೂ ಬ್ರಹ್ಮ ತಲೆಯಲ್ಲೂ ಲಿಂಗವನ್ನು ಧರಿಸಿ ಲಿಂಗದಲ್ಲಿರುವ ನನ್ನನ್ನು ಆರಾಧಿಸಿ ತಮ್ಮ ಸ್ಥಾನಮಾನಗಳನ್ನು ಪಡೆದರು"ಎಂದು ಹೇಳಿದೆ. ಆದ್ದರಿಂದ ವಿಷ್ಣು ಶಿವಭಕ್ತನೆಂದು ಸಿದ್ಧವಾಯಿತು. ವೀರಾಗಮದಲ್ಲಿ "ಹತ್ತುಬಗೆಯ ಶೈವದಲ್ಲಿ ವೈಷ್ಣವಮತವು ಸಾಮಾನ್ಯಶೈವವೆನಿಸಿದೆ. ಶಿಖೆ ಯಜ್ಞೋಪವೀತ, ಭಸ್ಮ ರುದ್ರಾಕ್ಷಗಳನ್ನು ಧರಿಸಿದ ಬ್ರಾಹ್ಮಣನು ರುದ್ರಪಿಂಡದಿಂದ ಹುಟ್ಟಿದವನಾಗಿ ಗಾಯತ್ರೀಪ್ರತಿಪಾದ್ಯನಾದ ಶಿವನನ್ನಾರಾಧಿಸುವುದರಿಂದ ಸಾಮಾನ್ಯ ಶೈವನೆನಿರುವನು. ಆದಿತ್ಯಾದಿ ಐವರ ಉಪಾಸಕನು ಮಿಶ್ರಶೈವನೆನಿಸುವನು. ಹೀಗೆ ಸೌರಾದಿಮತಗಳೂ ಶೈವದಲ್ಲಿಯೇ ಸೇರುವುದರಿಂದ ಅವುಗಳನ್ನು ನಿರಾಕರಿಸಲಾಗುವುದಿಲ್ಲ" ಎಂದು ಆಕ್ಷೇಪ ಬರುತ್ತದೆ. ಅದಕ್ಕೆ ಸಮಾಧಾನವನ್ನು ಮುಂದೆ ಹೇಳಲಾಗುವುದು. "ಎಲ್ಲರನ್ನೂ ಬಿಟ್ಟು ಶಿವಶಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು" ಎಂಬಲ್ಲಿ ಶೈವರೆಲ್ಲರಿಗೂ ಶಿವನೊಬ್ಬನ ಉಪಾಸನವನ್ನೇ ವಿಧಿಸಲಾಗಿದೆ. ಸೌರಮತೀಯರಿಗೆ ಶಿವಾಧಿಕ್ಯದಲ್ಲಿ ನಿಷ್ಠೆ ಇಲ್ಲದ್ದರಿಂದಲೂ, ಶಿವನನ್ನೇ ಜಗತ್ತಿಗೆ ಉಭಯಕಾರಣನೆಂದು ಒಪ್ಪದಿರುವುದರಿಂದಲೂ, ಆದಿತ್ಯ ಮೊದಲಾದ ಐವರನ್ನೂ ಪೂಜಿಸಬೇಕೆಂದು ತಿಳಿಸುವ ಶ್ರುತಿ ಇಲ್ಲದ್ದರಿಂದಲೂ ಅದನ್ನು ಅನಿವಾರ್ಯವಾಗಿ ನಿರಾಕರಿಸಬೇಕು. ದೇಹದಲ್ಲಿ ಲಿಂಗಮುದ್ರೆ ಒತ್ತಬೇಕೆಂದು ಹೇಳುವ ತ್ರಿಲೋಚನಶಿವಾಚಾರ್ಯರ ಪಾಶುಪತಮತವೂ ಸಹ ಪಾಂಚರಾತ್ರದಂತೆ ಅವೈದಿಕವೂ ಅನಾಚಾರವೂ ಆಗದೆ ಶೈವವೇ ಆಗುತ್ತದೆಯಾದರೂ ಅದು ದ್ವೈತ ಮತ್ತು ಯೋಗಮತಗಳಂತೆ ಶಿವನಿಗೆ ನಿಮಿತ್ತಕಾರಣವಷ್ಟನ್ನೇ ಒಪ್ಪುವುದರಿಂದಲೂ ಅವೈದಿಕವಾದ ಪಂಚರಾತ್ರದಂತೆ ಅಂಗಾಂಗಿಭವವನ್ನು ಒಪ್ಪುವುದರಿಂದಲೂ ಪ್ರಾಣಲಿಂಗವನ್ನು ಗುರುವಿನಿಂದ ಹೊರಗೆ ಪಡೆದು ಧರಿಸಿ ಅರ್ಚಿಸಬೇಕೆಂದು ವಿಧಿಸಿರುವ ವೀರಶೈವಮತಕ್ಕೆ ಸಮಾನವಾಗಲಾರದು. ಶೈವರು ಲಿಂಗಮುದ್ರೆಯನ್ನೂ ವೈಷ್ಣವರು ಭಗಮುದ್ರೆಯನ್ನು ಒತ್ತಿಕೊಳ್ಳುವರೆಂದೂ, ಇವುಗಳಲ್ಲಿ ಭಗಾಕಾರದ ಶ್ರೀ ಚಕ್ರದ ಮುದ್ರೆಗಿಂತಲೂ ಲಿಂಗದ ಮುದ್ರ

ಉತ್ತಮವೆಂದೂ ಹೇಳಿದೆ. ಭಗವೆಂಬುದು ಅಧಿಷ್ಠಾನಚಕ್ರವೆಂದು ಎಲ್ಲಾ ವೇದಾಂತಗಳಲ್ಲೂ ಹೇಳಲಾಗಿದೆ. ಆದ್ದರಿಂದ ಭಗಾಂತವೆಂದರೆ ಚಕ್ರದ ಮುದ್ರೆ ಎಂದು ಭಾವಿಸಲಾಗಿದೆ. ದೇಹದಲ್ಲಿ ಈ ಚಕ್ರ ಮುದ್ರೆಗಿಂತಲೂ ಲಿಂಗಮುದ್ರೆಯನ್ನು ಧರಿಸುವುದೇ ಉತ್ತಮವೆನಿಸಿದೆ. ಹೀಗೆ ಲಿಂಗಮುದ್ರೆಯನ್ನು ತಿಳಿಸುವ ಶೈವಮತವು ಪ್ರಾಣಲಿಂಗಧಾರಣಮಾಡುವ ವೀರಶೈವಕ್ಕೆ ಸಮನಾಗಲಾರದೆಂದು ಹಿಂದೆ ಹೇಳಿದ್ದೇ ಯುಕ್ತವೆಂದು ತಿಳಿಯಬೇಕು.

ಪಶುಪತೇಶ್ಶಿವಾದತಿರಿಕ್ತಸ್ಯ ಜಗತ್ಕಾರಣತ್ವಾಯೋಗೇ ಪಶುಪತಿಮತವ್ಯತಿರಿಕ್ತಮತನಿರಾಕರಣೇ ಚ ಹೇತ್ವಂತರಮಾಹ—

ಅಂತವತ್ತ್ವಮಸರ್ವಜ್ಞತಾ ವಾ ॥ ೪೧ ॥

“ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ” ಇತ್ಯಾದಿಷು ವಿಷ್ಣೋರ್ಭೂತತ್ವಂ, “ಈಶ್ವರಸ್ಸರ್ವಭೂತಾನಾಂ” ಇತ್ಯಾದಿಷು ಶಿವಸ್ಯ ಭೂತನಿಯಾಮಕತ್ವೇನ ತತ್ಪತಿತ್ವವ್ಯವಸ್ಥಾಪನಾತ್. ವಾಶಬ್ದಶ್ಚಾರ್ಥೇ. ಪಶುಪತಿವ್ಯತಿರಿಕ್ತನಾರಾಯಣಾದೀನಾಂ ಜೀವವದಂತವತ್ತ್ವಾಸರ್ವಜ್ಞತ್ವಯೋಶ್ಚ ದರ್ಶನಾತ್ತೇಷಾಂ ಜಗಜ್ಜನ್ಮಾದಿಕಾರಣತ್ವಂ ನೋಪಪದ್ಯತೇ. “ಅಜಾತ ಇತ್ಯೇವಂ ಕಶ್ಚಿದ್ಧೀರುಃ ಪ್ರಪದ್ಯತೇ,” “ಯಸ್ಸರ್ವಜ್ಞಃ” ಇತ್ಯಾದಿಶ್ರುತಿಷು ಶಿವಸ್ಯೈವಾಜಾತತ್ವಸತ್ಯತ್ವಸರ್ವಜ್ಞತ್ವಾದಿಧರ್ಮಾಣಾಂ ವ್ಯವಸ್ಥಾಪನಾತ್ತಸ್ಯ ಸರ್ವಾಧಿಕತ್ವಂ ನಿಷ್ಪ್ರತ್ಯೂಹಂ. “ಪತ್ಯಾದಿಶಬ್ದೇಭ್ಯಃ” ಇತಿ ಪ್ರಥಮಾಧ್ಯಾಯೇ ಪರಶಿವೇ ಪತ್ಯಾದಿಶಬ್ದಾಃ ಉಪದಿಷ್ಟಾಃ. ತನ್ಮತವ್ಯತಿರಿಕ್ತಶ್ರುತ್ಯೇಕದೇಶಪ್ರಾಮಾಣ್ಯವೈಷ್ಣವಾದಿಮತಾನಾಂ ನಿರಾಸಾರ್ಥಂ ‘ಪತ್ಯುರಸಾಮಂಜಸ್ಯಾತ್’ ಇತಿ ಪುನರಧಿಕರಣಾಂತರಮಾರಬ್ಧಂ. ಕೈಶ್ಚಿನ್ಮಿಶ್ರಶೈವವೈಷ್ಣವಯೋರ್ವೇದಾವಿರೋಧಿನ ಇವ ಕೇಚಿದ್ಧರ್ಮಾಃ ಪ್ರತಿಪಾದ್ಯಂತೇ. ತಥಾಪಿ ಮಿಶ್ರಶೈವಾನಾಮದ್ವೈತಮತಾಶ್ರಯತ್ವೇನ ಕ್ವಚಿತ್ಕಾಲೇ ಶಿವಕೇಶವಸಾಮ್ಯಸ್ಯ ಜಗತ್ಕಾರಣೇಶ್ವರಮಿಥ್ಯಾತ್ವಸ್ಯ ಚ ಪ್ರತಿಪಾದನಾತ್ತದಯುಕ್ತಂ. “ರುದ್ರಪಿಂಡಸಮುದ್ಭೂತಾಃ ರುದ್ರಭೂಮೌ ಲಯಂ ಗತಾಃ । ಪಿತರಂ ನಾಭಿಜಾನಂತಿ ತಾತಂ ವೇಶ್ಯಾಸುತಾ ಇವ ॥ ಲಿಂಗೇ ದಿನೇದಿನೇ ದೇವಂ ಶಿವಂ ರುದ್ರಾದಿಸಂಜ್ಞಿಕಂ। ನಾರ್ಚಯಿಷ್ಯಂತಿ ಮೋಹೇನ ಪಾಷಂಡೋಪಹತಾ ಜನಾಃ ॥” ಇತ್ಯಾದಿನಾ ಶೈವಲೈಂಗ್ಯಸ್ಕಾಂದಾದಿಷು ದಧೀಚಿಭೃಗುಶಾಪವಶಾತ್ ವೈಷ್ಣವಾನಾಂ ಪಾಷಂಡತ್ವೋಪದೇಶಾತ್ತನ್ಮತಮುಪೇಕ್ಷ್ಯಂ. ಕಿಂಚೈತತ್ಸೂತ್ರೇ ಶ್ರುತ್ಯೇಕದೇಶಪ್ರಾಮಾಣ್ಯಾದ್ವೈತನಿರಾಸಾದ್ವೈತನಿರಾಸಾ ಚ ವ್ಯವಹ್ರಿಯತೇ. ಭಾಗವತಪಾಂಚರಾತ್ರಾದಿವೈಷ್ಣವಮತೇಷು ಜಗತ್ಕಾರಣೇಶ್ವರಸ್ಯ ಶರೀರತ್ವಪರಿಗ್ರಹಾತ್ ಘಟಪಟಾದಿವದಂತ

ವತ್ತ್ವಂ ವಿನಾಶಿತ್ವಂ, ಅದ್ವೈತವಾದಿನಾಂ ಬ್ರಹ್ಮಣೋ ನಿರ್ವಿಶೇಷತಾಂಗೀ
ಕಾರಾತ್ ರಜ್ಜುಸರ್ಪವದಧ್ಯಾಸಪೂರ್ವಕಾನಾದ್ಯವಿದ್ಯಾಸ್ವೀಕಾರಾಚ್ಚ
ಅಸರ್ವಜ್ಞತ್ವಸ್ಯ ಚ ನಿರ್ದೇಶಾತ್ ಶ್ರುತಿವಾಕ್ಯಪೂರ್ವಾಪರಪರಾ
ಮರ್ಶಶೂನ್ಯಯುಕ್ತ್ಯಾಭಾಸಪ್ರಾಮಾಣ್ಯಪೂರ್ವೋಕ್ತಮತದ್ವಯಮನ
ಪೇಕ್ಷ್ಯಂ. ನನು "ಏಕ ಏವ ನಾರಾಯಣ ಆಸೀತ್ ನ ಬ್ರಹ್ಮಾ
ನೇಶಾನಃ", "ನಾರಾಯಣಪರಂ ಬ್ರಹ್ಮ", "ವೇದಾಹಮೇತಂ
ಪುರುಷಂ ಮಹಾಂತಂ । ಆದಿತ್ಯವರ್ಣಂ ತಮಸಸ್ತು ಪಾರೇ" ಇತ್ಯಾದಿನಾ
ಮಹಾನಾರಾಯಣಪುರುಷಸೂಕ್ತಾದಿಷು, 'ವಾಸುದೇವಸ್ಸರ್ವಂ' ಇತಿ
ಭಗವದ್ಗೀತಾಯಾಂ ಚ ದರ್ಶನಾತ್ ಬ್ರಹ್ಮಭೂತನಾರಾಯಣವೇದನ
ಸ್ಯೈವ ಮೋಕ್ಷಸಾಧನತ್ವೇನ ಜಗಜ್ಜನ್ಮಾದಿಕಾರಣತ್ವಂ ತಸ್ಯೈವೋಪಪ
ನ್ನಮಿತಿ ಚೇನ್ನ "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ",
"ಸರ್ವಾಣಿ ಚೇಂದ್ರಿಯಾಣಿ ನ ಕಾರಣಂ ಕಾರಣಾನಾಂ ಧ್ಯಾತಾ ಕಾರಣಂ
ತು ಧ್ಯೇಯಃ", "ಸರ್ವೈಶ್ವರ್ಯಸಂಪನ್ನಸ್ಸರ್ವೇಶ್ವರಶ್ಶಂಭುರಾಕಾಶ
ಮಧ್ಯೇ ಶಿವ ಏಕೋ ಧ್ಯೇಯಶ್ಶಿವಂಕರಃ" ಇತ್ಯಾದಿಶ್ರುತಿಶತೇಷುಮೂರ್ತಿ
ತ್ರಯವಿಲಕ್ಷಣತ್ವಕಾರಣಕಾರಣತ್ವಾದೇಃ ಶಿವ ಏವ ನಿರ್ದೇಶಾನ್ನೇತ
ರಸ್ಯ ಜಗಜ್ಜನ್ಮಾದಿಕಾರಣತ್ವಮುಚಿತಂ. "ನಾರಾಯಣಪರಂಬ್ರಹ್ಮ"
ಇತ್ಯಾದಿಶ್ರುತೀನಾಂ "ಅನ್ನಂ ಬ್ರಹ್ಮ" ಇತ್ಯಾದಿವದೌಪಚಾರಿಕತ್ವಂ. ಪ್ರಥ
ಮಾಧ್ಯಾಯದ್ವಿತೀಯಪಾದೇ ಸರ್ವತ್ರ ಪ್ರಸಿದ್ಧ್ಯಧಿಕರಣೇ ಮಹಾನಾರಾ
ಯಣತಾತ್ಪರ್ಯಂ, ತತ್ಪ್ರಥಮಪಾದೇ ಜ್ಯೋತಿಶ್ಚರಣಾಧಿಕರಣೇ ಪುರುಷ
ಸೂಕ್ತತಾತ್ಪರ್ಯಂ. "ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವ
ವತ್" ಇತಿ ಸೂತ್ರೇ ಷಡ್ವಿಧತಾತ್ಪರ್ಯಲಿಂಗೈಃ ಭಗವದ್ಗೀತಾತಾ
ತ್ಪರ್ಯಂ ಚ ಪರಶಿವಬ್ರಹ್ಮಪರತ್ವೇನ ಸ್ಪಷ್ಟಮುಕ್ತಂ. "ತದೈಕ್ಷತ
ಬಹು ಸ್ಯಾಂ", "ತದಾತ್ಮಾನಂ ಸ್ವಯಮಕುರುತ", "ಸರ್ವೋ ವೈ
ರುದ್ರಃ," "ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್"
ಇತ್ಯಾದಿಷು ಶಿವಸ್ಯೈವ ಜಗದುಭಯಕಾರಣತ್ವವ್ಯಪದೇಶಾನ್ನ ಚೈಕ
ಪಕ್ಷೋ ಯುಕ್ತಃ. ನಾರಾಯಣಜಗತ್ಕಾರಣತ್ವವಿಧಾಯಕಪಾಂಚರಾ
ತ್ರಾದೀನಾಂ ವಿರೋಧಪ್ರಸಂಗ ಇತಿ ಚೇತ್ತದಸತ್. ಸ್ಕಾಂದೇ "ಯದಾ
ಸಾನಂದಮುನಿರ್ನಾರಕಾನುದತಾರಯತ್ । ತದಾ ಭಾನುಸುತಃ ಕ್ರೋಧಾ
ತ್ಕೈಲಾಸಗಿರಿಮಾಯಯೌ। ತತ್ರ ಸರ್ವೇಶ್ವರಂ ಸಾಂಬಂ ದೃಷ್ಟ್ವಾ ನತ್ವಾ
ಪುನಃಪುನಃ । ಸಾನಂದಕೃತವೃತ್ತಾಂತಮಬ್ರವೀದ್ದುಃಖಸಂಯುತಃ ।
ತಚ್ಛ್ರುತ್ವಾ ಭಗವಾನ್ರುದ್ರೋ ನಾರಾಯಣಮಪೃಚ್ಛತ । ಅನಾಂ
ಯಮಸ್ಯ ಲೋಕಸ್ಯ ಪುನಃಪೂರಣಹೇತವೇ । ಮನ್ನಿಂದಕಾನಿ ಶಾಸ್ತ್ರಾಣಿ

ಕುರುತಾಂ ಮೋಹಸಿದ್ಧಯೇ । ತಚ್ಛ್ರುತ್ವಾ ಸ ಹರಿಸ್ತದ್ವತ್ಕೃತವಾನ್ ಬುದ್ಧಶಾಸ್ತ್ರಕಂ । ಪಾಂಚರಾತ್ರಂ ಚ ಚಾರ್ವಾಕಮುಘೋರಂ ಕ್ಷಪಣಂ ತಥಾ । ತದ್ವದ್ರುದ್ರೋ ಮಹಾದೇವಃ ಯಮಲೋಕಸ್ಯ ಪೂರಣೇ । ಶಾಕ್ತಂ ಕಾಪಾಲಿಕಂ ಮಿಶ್ರಂ ತಂತ್ರಂ ಪಾಶುಪತಂ ತಥಾ । ಚಕಾರ ಮೋಹಶಾಸ್ತ್ರಾಣಿ ವೇದಶಾಸ್ತ್ರಾಣಿ ಸಾದರಾತ್ ॥" ಇತಿ. ಕಿಂಚ ಕೂರ್ಮೇ "ಪುರಾ ದಾನವಮೋಹಾರ್ಥಂ ಕೇಶವೇನ ಶಿವೇನ ಚ । ಪಾಂಚರಾತ್ರಂ ಚ ಕಪಾಲಂ ಯಾಮ್ಯಂ ಲೋಕಾಯಿತಂ ತಥಾ । ಬುದ್ಧಂ ಜೈನಂ ಚ ಚಾರ್ವಾಕಂ ಕೃತಂ ಶಾಸ್ತ್ರಮನಂತಕಂ । ತಸ್ಮಾತ್ತತ್ಪಾಂಚರಾತ್ರಾದಿವೇದಬಾಹ್ಯಾತ್ಮಕಾನಿ ವೈ॥ಶಾಸ್ತ್ರಾಣಿ ನ ಸ್ಪೃಶೇತ್ ಕ್ವಾಪಿ ಪ್ರಾಣೈಃ ಕಂಠಗತೈರಪಿ" ಇತಿ ಶ್ರವಣಾತ್. ಶಮನಲೋಪೂರಣಾರ್ಥಂ ದನುಜ ಮೋಹಕೃತಪಾಂಚರಾತ್ರಾದ್ಯಾಗಮಾನಾಂ ನ ಚ ಪ್ರಾಮಾಣ್ಯಂ. ಉತ ಸ್ಕಾಂದೇ ಶಿವರಹಸ್ಯಖಂಡೇ. "ದಶ ಶೈವಪುರಾಣಾನಿ ಸಾತ್ತ್ವಿಕಾನಿ ವಿದುರ್ಬುಧಾಃ। ಶ್ರದ್ಧೇಯಾನಿ ದ್ವಿಜವರೈಸ್ತೇಷಾಂ ಧರ್ಮಾಸ್ತು ತತ್ರ ಯತ್ । ಸತ್ತ್ವಂ ಶುದ್ಧಂ ಸಮಾದಿಷ್ಟಂ ಸುಖಜ್ಞಾನಾಸ್ಪದಂ ತು ಯತ್ । ವಿದ್ಯೋಪದಿಷ್ಟಯೋಗಿಭ್ಯಶ್ಶುದ್ಧಸ್ಫಟಿಕಸನ್ನಿಭಃ । ನ ನಿದ್ರಾತಿ ಶಿವಃ ಕ್ವಾಪಿ ಬ್ರಾಹ್ಮಣಾಧಿಪತಿಶ್ಶಿವಃ। ಬ್ರುವಂತ್ಯೇವಂ ಪುರಾಣಾನಿ ಬ್ರಾಹ್ಮಣಾನಾಂ ಕಥಾಃ ಶುಭಾಃ ॥" ಇತಿ ದರ್ಶನಾತ್ ಬ್ರಹ್ಮಾಣಾನಾಂ ಶಿವೋಕ್ತನಿಗಮಾಗಮಶಾಸ್ತ್ರಾನುಸರಣಲಿಂಗಭಸ್ಮಶಿಖಾಮಂತ್ರಧ್ಯಾನಸ್ಫಟಿಕಾಕ್ಷಮಾಲಿಕಾಧಾರಣಪೂರ್ವಕಶಿವೋಪಾಸನಮೇವ ಕಲ್ಯಾಣಕೈವಲ್ಯವಿಭೂತ್ಯಾತ್ಮಕನಿಶ್ಶ್ರೇಯಸಫಲಹೇತುಕಮಿತಿ ನಿಶ್ಚೀಯತೇ. ತಥಾ ಲೈಂಗೇ "ಶಿವಲಿಂಗಂ ಶಿಖಾ ಮಂತ್ರಂ ಧ್ಯಾನಂ ರುದ್ರಾಕ್ಷಮೇವ ಚ। ವಿಭೂತಿಧಾರಣಂ ಚೈವ ಮುದ್ರಾಷಟ್ಕಂ ಪ್ರಚಕ್ಷತೇ ॥" ಇತಿ ವ್ಯವಸ್ಥಾಪನಾತ್ತದೇವ ಯುಕ್ತಂ. ಉತ "ಅಂತವತ್ತ್ವಮಸರ್ವಜ್ಞತಾ ವಾ" ಇತ್ಯತ್ರ "ಹರಿಂ ಹರಂತಮನುಯಂತಿ ದೇವಾಃ ವಿಶ್ವಸ್ಯೇಶಾನಂ ವೃಷಭಂ ಮತೀನಾಂ" ಇತಿ ಶ್ರುತೌ, "ಮತ್ಸ್ಯಕೂರ್ಮವರಾಹಾಂಗೈರ್ನೃಸಿಂಹಮನುಜಾದಿಭಿಃ । ಜಾತೇನ ನಿಧನಂ ಪ್ರಾಪ್ತಂ ವಿಷ್ಣುನಾಪಿ ಮಹಾತ್ಮನಾ ॥" ಇತಿಸ್ಮೃತೌ ಚ ಶಿವೇತರನಾರಾಯಣಾದೀನಾಮಂತವತ್ತ್ವಂ ಚ "ರಜಸಾ ತಮಸಾಕ್ರಾಂತೌ ಬ್ರಹ್ಮನಾರಾಯಣೌ ಖಲು" ಇತಿಸೂತಸಂಹಿತಾಸೂತಗೀತಾಸು ತಮಸಾವೃತತ್ವವ್ಯಪದೇಶಾನ್ನಾರಾಯಣಸ್ಯ ಸರ್ವಜ್ಞತಾಽಭಾವಃ ಅರ್ಥಾತ್ಸಿದ್ಧ ಇತಿ ಕೇಚಿದ್ವದಂತಿ. ತಥಾಪಿ ತಮಸಾವೃತಜನನಮರಣವಿಶಿಷ್ಟಾನಾಂ ಪಶುಪತಿವ್ಯತಿರಿಕ್ತನಾರಾಯಣಾದೀನಾಂ ಜಗದುಯಕಾರಣತ್ವನಿಷೇಧಾದವಿರೋಧ ಇತಿ ಸಿದ್ಧಂ.

ಶಿವನಲ್ಲದೆ ಬೇರೆ ಯಾರೂ ಜಗತ್ಕಾರಣರಲ್ಲವೆಂಬುದನ್ನು ಬೇರೆ ಮತಗಳ ನಿರಾಕರಣದಿಂದ ತಿಳಿಸುತ್ತಾನೆ. **ಅಂತವತ್ತ್ವಮಸರ್ವಜ್ಞತಾ ವಾ ||೪೧||**

"ವಿಷ್ಣು ಒಬ್ಬನೇ ಮಹಾಭೂತನು. ಉಳಿದ ಜೀವರು ಅನೇಕ ಬಗೆಯಾಗಿವೆ" ಈ ಬಗೆಯ ಶ್ರುತಿಗಳಲ್ಲಿ ವಿಷ್ಣುವನ್ನು ಭೂತನೆಂದೂ, ಈಶಾನಶ್ರುತಿಯಲ್ಲಿ ಶಿವನೇ ಭೂತನಿಯಾಮಕನಾದ್ದರಿಂದ ಭೂತಪತಿಯೆಂದೂ ವ್ಯವಸ್ಥೆಯಾಗಿದೆ. ಸೂತ್ರದಲ್ಲಿ ಬಂದಿರುವ ವಾ ಶಬ್ದವು ಪಶುಪತಿಯಲ್ಲದೆ ಬೇರೆ ನಾರಾಯಣಾದಿಗಳಿಗೆ ಜೀವರಂತೆಯೇ ಕೊನೆ ಇರುವುದರಿಂದ ಅವರಲ್ಲಿ ಯಾರೂ ಸರ್ವಜ್ಞರಲ್ಲವೆಂದು ತಿಳಿಸುತ್ತದೆ. ಆದ್ದರಿಂದ ಅವರು ಜಗತ್ಕಾರಣರಾಗಲಾರರು. "ಶಿವನು ಉತ್ಪತ್ತಿರಹಿತನೆಂದು ಮುಮುಕ್ಷುಗಳು ಅವನನ್ನಾಶ್ರಯಿಸುತ್ತಾರೆ" ಮೊದಲಾದ ಶ್ರುತಿಗಳಲ್ಲಿ ಶಿವನನ್ನು ಅಜಾತ, ಸತ್ಯ, ಸರ್ವಜ್ಞನೆಂದು ತಿಳಿಸಿರುವುದರಿಂದ ಅವನೇ ಸರ್ವಾಧಿಕನೆಂಬುದು ನಿರ್ವಿವಾದವಾಗಿದೆ. ಪ್ರಥಮಾಧ್ಯಾಯದ "ಪತ್ಯಾದಿಶಬ್ದೇಭ್ಯ" ಎಂಬ ಸೂತ್ರದಲ್ಲಿ ಶಿವನಲ್ಲಿ ಪತ್ಯಾದಿಶಬ್ದಗಳನ್ನು ಹೇಳಲಾಗಿದೆ. ಆದರೆ, ಆ ಮತಕ್ಕಿಂತ ಬೇರೆಯಾದ ವೈಷ್ಣವ ಮತಗಳು ಶ್ರುತಿಯ ಒಂದು ಭಾಗವನ್ನು ಮಾತ್ರವೇ ಒಪ್ಪಿರುವುದರಿಂದ ಅದನ್ನು ನಿರಾಕರಿಸಲಿಕ್ಕಾಗಿ "ಪತ್ಯುರಸಾಮಂಜಸ್ಯಾತ್" ಎಂಬ ಬೇರೊಂದು ಅಧಿಕರಣವನ್ನು ಆರಂಭಿಸಲಾಯಿತು. ಮಿಶ್ರಶೈವ ಮತ್ತು ವೈಷ್ಣವಮತಗಳೆರಡರಲ್ಲೂ ವೇದಕ್ಕೆ ವಿರುದ್ಧವಲ್ಲದ ಕೆಲವು ಧರ್ಮಗಳಿವೆ. ಆದರೂ, ಮಿಶ್ರಶೈವರು ಅದ್ವೈತಮತವನ್ನಾಶ್ರಯಿಸಿದ್ದರಿಂದ ಕೆಲವು ವೇಳೆ ಶಿವಕೇಶವರನ್ನು ಸಮವೆಂದೂ, ಜಗತ್ಕಾರಣನಾದ ಈಶ್ವರನನ್ನು ಸುಳ್ಳೆಂದೂ ಹೇಳುತ್ತಾರೆ. ಆದ್ದರಿಂದ ಆ ಮತವು ಅಯುಕ್ತವೆಂದು ಸೂತಸಂಹಿತೆಯ ಸೂತಗೀತೆಯಲ್ಲಿ ನಿರಾಕರಿಸಲಾಗಿದೆ. "ರುದ್ರಪಿಂಡದಿಂದ ಹುಟ್ಟಿರುವ ಬ್ರಾಹ್ಮಣರು ಬ್ರಾಹ್ಮಣನೆನಿಸಿದ ರುದ್ರನನ್ನು ಅರ್ಚಿಸದೆ ಸತ್ತರೆ ವೇಶ್ಯಾಪುತ್ರನಂತೆ ಪಿತೃವನ್ನು ಗುರ್ತಿಸಲಾರರು. ದಧೀಚಿ ಭೃಗು ಮೊದಲಾದವರ ಶಾಪದಿಂದ ವಿಷ್ಣುಭಕ್ತರು ಲೋಕದಲ್ಲಿ ಶಿವದ್ವೇಷಿಗಳಾಗಿ ಹುಟ್ಟಿ ದುರ್ವರ್ತನೆಯಿಂದ ಸಂಚರಿಸುತ್ತ ನರಕಕ್ಕೆ ಹೋಗುತ್ತಾರೆ. ವಿಶ್ವಾಧಿಕನಾದ ಶಿವನನ್ನು ವೈಷ್ಣವರು ವಿವೇಕಹೀನರಾಗಿ ನಿಂದಿಸುತ್ತಾರೆ. ವೇದಸಿದ್ಧನಾದ ಚಂದ್ರಶೇಖರನನ್ನು ಲಿಂಗದಲ್ಲಿ ದಿನವೂ ಅರ್ಚಿಸದಿರುವವರೂ ಹಾಗೆಯೇ ದೇಹದಲ್ಲಿ ಶಂಖ, ಚಕ್ರ, ಗದೆ, ಪದ್ಮಗಳ ಮುದ್ರೆಗಳನ್ನು ಧರಿಸುವವರೂ ಪಾಷಂಡರೆನಿಸುತ್ತಾರೆ". ಹೀಗೆ ಶೈವವೈಂಗ್ಯಸ್ಕಾಂದ ಪುರಾಣಗಳಲ್ಲಿ ಹೇಳಿರುವುದರಿಂದ ಆ ಮತವೂ ಗ್ರಾಹ್ಯವಲ್ಲ. ಇದೂ ಅಲ್ಲದೆ, ಈ ಸೂತ್ರದಲ್ಲಿ ಶ್ರುತಿಯ ಒಂದೊಂದು ಭಾಗವನ್ನು ಪ್ರಮಾಣವಾಗಿ ಒಪ್ಪುವ ದ್ವೈತಮತವನ್ನೂ ಅದ್ವೈತಮತವನ್ನೂ ನಿರಾಕರಿಸಲಾಗಿದೆ. ಭಾಗವತ ಪಾಂಚರಾತ್ರವೇ ಮೊದಲಾದ ವೈಷ್ಣವಮತಗಳು ಜಗತ್ಕಾರಣನಾದ ಈಶ್ವರನಿಗೆ ಶರೀರವನ್ನು ಒಪ್ಪಿದ್ದರಿಂದ ಘಟಪಟಗಳಂತೆ ಅವನಿಗೆ ನಾಶವನ್ನು ಒಪ್ಪಬೇಕಾಗುವುದು. ಅದ್ವೈತಿಗಳು ಬ್ರಹ್ಮವನ್ನು ನಿರ್ವಿಶೇಷನೆಂದು ಒಪ್ಪಿ ರಜ್ಜುಸರ್ಪದಂತೆ ಅಧ್ಯಾಸಕ್ಕಾಗಿ ಅನಾದಿ

ಯಾದ ಅವಿದ್ಯೆಯನ್ನು ಅಂಗೀಕರಿಸಿರುವುದರಿಂದ ಬ್ರಹ್ಮವು ಸರ್ವಜ್ಞನಲ್ಲವೆನಿಸು ತ್ತದೆ. ಹೀಗೆ ಶ್ರುತಿಯ ಹಿಂದುಮುಂದಿನ ವಾಕ್ಯಗಳನ್ನು ಪರ್ಯಾಲೋಚಿಸದೆ ಆಭಾಸ ವೆನಿಸಿದ ಯುಕ್ತಿಗಳನ್ನು ಅವಲಂಬಿಸಿ ಬಂದಿರುವ ಈ ಮತಗಳೆರಡೂ ಯುಕ್ತವೆನಿಸುವು ದಿಲ್ಲ." ನಾರಾಯಣನೇ ಪರಬ್ರಹ್ಮ, ಪರಂಜ್ಯೋತಿ. ಅವನೇ ಪರತತ್ತ್ವ" "ಆದಿತ್ಯ ವರ್ಣನೆನಿಸಿ ಕತ್ತಲೆಯಿಂದಾಚೆಗಿರುವ ಆ ಪುರುಷನನ್ನು ತಿಳಿದವನು ಇಲ್ಲಿಯೇ ಅಮೃತ ನಾಗುತ್ತಾನೆ" ಎಂದು ಮಹಾನಾರಾಯಣ ಮತ್ತು ಪುರುಷಸೂಕ್ತಗಳಲ್ಲೂ "ವಾಸು ದೇವನೇ ಎಲ್ಲವೂ" ಎಂದು ಭಗವದ್ಗೀತೆಯಲ್ಲೂ ಹೇಳಿರುವುದರಿಂದ ಬ್ರಹ್ಮವೆನಿಸಿದ ನಾರಾಯಣನನ್ನು ತಿಳಿಯುವುದೇ ಮುಕ್ತಿಗೆ ಸಾಧನವೆನಿಸಿದೆ. ಇದರಿಂದ ಅವನನ್ನೇ ಜಗತ್ಕಾರಣನೆಂದು ಹೇಳುವುದು ಯುಕ್ತವಾಗುತ್ತದೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಈ ಸೂತ್ರದಲ್ಲಿ ಸಮಾಧಾನವನ್ನು ಹೇಳಲಾಗುವುದು. "ಈಶ್ವರನೇ ಧ್ಯಾನಾ ರ್ಹನು, ಅವನಿಂದಲೇ ಬ್ರಹ್ಮ, ವಿಷ್ಣು, ಕಾಲರುದ್ರರು ಹುಟ್ಟಿದ್ದಾರೆ". "ಎಲ್ಲಾ ಇಂದ್ರಿಯಗಳೂ ಅವನಿಂದಲೇ ಬಂದಿವೆ. ಅವನಿಗೆ ಮತ್ತೊಂದು ಕಾರಣವಿಲ್ಲ. ಎಲ್ಲಾ ಕಾರಣಗಳನ್ನು ತಿಳಿದಿರುವ ಶಿವನೇ ಧ್ಯಾನಾರ್ಹನು" "ಸರ್ವಜ್ಞತಾದಿಸಕ ಲೈಶ್ವರ್ಯಸಂಪನ್ನನಾದ ಶಂಕರನನ್ನು ದಹರಾಕಾಶದಲ್ಲಿ ಧ್ಯಾನಿಸಬೇಕು" ಈ ಬಗೆಯ ಶ್ರುತಿಗಳಲ್ಲಿ ಶಿವನು ತ್ರಿಮೂರ್ತ್ಯತೀತನೆಂದೂ, ಕಾರಣಗಳೆಲ್ಲಕ್ಕೂ ಕಾರಣ ನೆಂದೂ ಹೇಳಿರುವುದರಿಂದ ಬೇರೆಯವರು ಜಗತ್ಕಾರಣವಾಗಲಾರರು. ನಾರಾಯ ಣನೇ ಪರಂಬ್ರಹ್ಮವೆಂದು ಹೇಳುವ ಶ್ರುತಿಗಳು ಅನ್ನವೇ ಬ್ರಹ್ಮ, ಆಕಾಶವೇ ಬ್ರಹ್ಮ ಎಂಬಂತೆ ಔಪಚಾರಿಕವೆನಿಸಿವೆ. ಪ್ರಥಮಾಧ್ಯಾಯದ ದ್ವಿತೀಯಪಾದದ "ಶಬ್ದವಿಶೇ ಷಾತ್" ಎಂಬ ಸೂತ್ರದಲ್ಲಿ ಮಹಾನಾರಾಯಣೋಪನಿಷತ್ತಿಗೂ, ಪ್ರಥಮಪಾದದ ಜ್ಯೋತಿಶ್ಚರಣಾಧಿಕರಣದಲ್ಲಿ ಪುರುಷಸೂಕ್ತಕ್ಕೂ, "ಶಾಸ್ತ್ರದೃಷ್ಟ್ಯಾತೂಪದೇಶಃ" ಎಂಬ ಸೂತ್ರದಲ್ಲಿ ಆರುಬಗೆಯ ತಾತ್ಪರ್ಯ ಲಿಂಗಗಳ ಆಧಾರದಮೇಲೆ ಭಗವದ್ಗೀತೆಗೂ ಪರಶಿವನಲ್ಲಿಯೇ ತಾತ್ಪರ್ಯವೆಂದು ಸ್ಪಷ್ಟವಾಗಿ ತಿಳಿಸಲಾಗಿದೆ. "ಅವನು ವಿಸ್ತಾರ ವಾಗುವೆನೆಂದು ನೋಡಿದನು"–"ಎಲ್ಲವೂ ರುದ್ರನೇ". "ವಿಶ್ವದಲ್ಲಿರುವ ಪ್ರತಿ ಯೊಂದು ವಸ್ತುವೂ ಪರಮೇಶ್ವರನಿಗೆ ವಾಸಕ್ಕೆ ಯೋಗ್ಯವಾಗಿದೆ" "ವಿಶ್ವರೂಪನಿಗೆ ನಮಸ್ಕಾರ" ಈ ಬಗೆಯ ಶ್ರುತಿಗಳಲ್ಲಿ ಶಿವನೇ ಜಗತ್ತಿನ ಉಭಯಕಾರಣನೆಂದು ಹೇಳಿ ದೆಯಾದ್ದರಿಂದ ಅವನು ಒಂದೇ ಬಗೆಯ ಕಾರಣನೆಂಬ ವಾದವು ಯುಕ್ತವಲ್ಲ. ನಾರಾಯಣನೇ ಜಗತ್ಕಾರಣನೆಂದು ವಿಧಿಸುವ ಪಾಂಚರಾತ್ರಾಗಮಗಳ ವಿರೋಧ ವುಂಟಾಗುವುದಾದರೆ ಅದು ಯುಕ್ತವಲ್ಲ; ಸ್ಕಾಂದದಲ್ಲಿ "ಸಾನಂದ ಮುನಿ ನರಕದಲ್ಲಿ ದ್ದವರನ್ನು ತನ್ನ ಪ್ರಭಾವದಿಂದ ಬಿಡುಗಡೆ ಮಾಡಿಸಿದಾಗ ಯಮನು ಕ್ರೋಧದಿಂದ ಕೈಲಾಸಕ್ಕೆ ಹೋಗಿ ಶಿವನಿಗೆ ಈ ವಿಷಯವನ್ನು ತಿಳಿಸಿದನು. ಇದನ್ನು ಕೇಳಿ ರುದ್ರನು ನಾರಾಯಣನಿಗೆ ಈ ನರಕವನ್ನು ತುಂಬಿಸಲಿಕ್ಕಾಗಿ ಜಗನ್ಮೋಹಕವಾದ ಶಾಸ್ತ್ರ ಗಳನ್ನು ರಚಿಸುವಂತೆ ಹೇಳಿದನು. ವಿಷ್ಣುವು ಅದರಂತೆಯೇ ಬೌದ್ಧ-ಪಾಂಚರಾತ್ರ-

ಚಾರ್ವಕ—ಜೈನಶಾಸ್ತ್ರಗಳನ್ನು ರಚಿಸಿದನು. ಅದರಂತೆ ಮಹಾದೇವನಾದ ರುದ್ರನು ಶಾಕ್ತ, ಕಾಪಾಲಿಕ, ಮಿಶ್ರ, ತಂತ್ರ, ಪಾಶುಪತವೆಂಬ ವೇದಬಾಹ್ಯವಾದ ಮೋಹಕ ಶಾಸ್ತ್ರಗಳನ್ನು ರಚಿಸಿದನು" ಎಂದು ಹೇಳಿದೆ. ಕೂರ್ಮದಲ್ಲಿ "ಹಿಂದೆ ದಾನವರನ್ನು ಮೋಹಗೊಳಿಸಲು ಶಿವಕೇಶವರು ಪಾಂಚರಾತ್ರ-ಕಾಪಾಲ-ಚಾರ್ವಕ-ಬೌದ್ಧ-ಜೈನ-ಲೋಕಾಯತ ಶಾಸ್ತ್ರಗಳನ್ನು ರಚಿಸಿದರು. ಇವು ವೇದಬಾಹ್ಯವಾದ್ದರಿಂದ ಇವನ್ನು ಸಾಧಕನು ಪ್ರಾಣಬಿಡುವಾಗಲೂ ಕೇಳಬಾರದು" ಎಂದು ಹೇಳಿದೆ. ಯಮಲೋಕವನ್ನು ತುಂಬಿಸಲಿಕ್ಕಾಗಿ ರಾಕ್ಷಸರಿಗೆ ಮೋಹಗೊಳಿಸುವಂತಹ ಈ ಆಗಮಗಳು ರಚಿತವಾಗಿರುವುದರಿಂದ ಪ್ರಮಾಣವಾಗಲಾರವು. ಸ್ಕಾಂದಪುರಾಣದ ಶಿವರಹಸ್ಯಖಂಡದಲ್ಲಿ "ಹತ್ತು ಶೈವಪುರಾಣಗಳು ಸಾತ್ತ್ವಿಕಗಳು. ಅವೆಲ್ಲವನ್ನೂ ಬ್ರಾಹ್ಮಣರು ಸನ್ಮಾನಿಸಬೇಕು ಮತ್ತು ಅಲ್ಲಿ ಹೇಳಿರುವ ಧರ್ಮಗಳನ್ನು ಆಚರಿಸಬೇಕು" ಎಂದು ಹೇಳಿರುವುದರಿಂದ ಬ್ರಾಹ್ಮಣರಿಗೆ ಶಿವೋಕ್ತವಾದ ನಿಗಮಾಗಮಗಳ ಪ್ರಕಾರ ಲಿಂಗ, ಭಸ್ಮ, ಶಿಖೆ ರುದ್ರಾಕ್ಷ ಮತ್ತು ಅಕ್ಷಮಾಲಿಕೆಗಳನ್ನು ಧರಿಸಿ ಮಂತ್ರವನ್ನು ಧ್ಯಾನಿಸುತ್ತ ಶಿವನನ್ನು ಉಪಾಸನಮಾಡುವುದೇ ಕಲ್ಯಾಣಕೈವಲ್ಯವಿಭೂತಿ ಎನಿಸಿದ ಮುಕ್ತಿಗೆ ಹೇತುವೆಂದು ನಿಶ್ಚಯಿಸಲಾಗಿದೆ. ಲೈಂಗ್ಯಪುರಾಣದಲ್ಲಿ "ಶಿವಲಿಂಗ, ಶಿಖೆ, ರುದ್ರಾಕ್ಷ ಮತ್ತು ವಿಭೂತಿಗಳನ್ನು ಧರಿಸಿ ಮಂತ್ರವನ್ನು ಸ್ಮರಿಸುತ್ತ ನಿಷ್ಕಲಶಿವನನ್ನು ಧ್ಯಾನಿಸುವುದೇ ಆರುಬಗೆಯ ಮುದ್ರೆ ಎನಿಸುತ್ತದೆ" ಎಂದು ವ್ಯವಸ್ಥೆಯಾಗಿರುವುದರಿಂದ ಹಿಂದೆ ಹೇಳಿದ್ದೇ ಯುಕ್ತವಾಗಿದೆ. "ವಿಶ್ವಕ್ಕೆ ನಿಯಾಮಕನೂ ಸಂಹಾರಕನೂ ಬುದ್ಧಿವರ್ಧಕನೂ ಆದ ಶಿವನನ್ನು ದೇವತೆಗಳು ಅರ್ಚಿಸುತ್ತಾರೆ" ಎಂಬ ಶ್ರುತಿಯಲ್ಲೂ, "ಮತ್ಸ್ಯ, ಕೂರ್ಮ, ವರಾಹ, ನರಸಿಂಹ ಮತ್ತು ವಾಮನರೂಪಗಳಿಂದ ಅವತರಿಸಿದ ವಿಷ್ಣುವೂ ಸಹ ಮರಣವನ್ನು ಹೊಂದಿದನು" ಎಂಬ ಸ್ಮೃತಿಯಲ್ಲೂ ಶಿವನಲ್ಲದೆ ಬೇರೆಯವರಿಗೆ ನಾಶವುಂಟೆಂದು ಹೇಳಲಾಗಿದೆ. "ಬ್ರಹ್ಮ ನಾರಾಯಣರು ರಜಸ್ತಮೋಗುಣದಿಂದ ಕೂಡಿರುವರೆಂದು ಸೂತಗೀತೆಯಲ್ಲಿ ಹೇಳಿರುವುದರಿಂದ ನಾರಾಯಣನಲ್ಲಿ ಸರ್ವಜ್ಞತೆ ಇಲ್ಲವೆಂಬುದು ಸಿದ್ಧವಾಗುತ್ತದೆ" ಎಂದು ಕೆಲವರು ಈ ಸೂತ್ರಕ್ಕೆ ಅರ್ಥ ಮಾಡುತ್ತಾರೆ. ಹಾಗಾದರೂ ನಾರಾಯಣಾದಿಗಳು ತಮಸ್ಸಿನಿಂದ ಆವರಿಸಿ ಜನನ ಮರಣಗಳಿಗೆ ಸಿಲುಕಿದ್ದುದರಿಂದ ಜಗತ್ತಿಗೆನಿಮಿತ್ತೋಪಾದನರಾಗಲಾರರೆಂಬುದುಸಿದ್ಧ.

**ಪಾಂಚರಾತ್ರಾದೀನಾಂ ವೇದೈಕದೇಶಪ್ರಾಮಾಣ್ಯಪ್ರತಿಪಾದಕತ್ವೇನ ನಿರಸನೇ "ತದ್ವಿಷ್ಣೋರೇಕಮುತ್ತಮಂ" "ನಾರಾಯಣಪರಂ ಬ್ರಹ್ಮ" ಇತ್ಯಾದಿಶ್ರುತಿಸಿದ್ಧಸರ್ವಾಧಿಕಭಗವನ್ನಾರಾಯಣೇನ ಕೃತಃ ಪಾಂಚರಾತ್ರಾಗಮಃ ಕಥಂ ವೇದವಿರುದ್ಧ ಇತ್ಯಾಶಂಕ್ಯ ನಿರಾಕರೋತಿ—**

**ಉತ್ಪತ್ತ್ಯಸಂಭವಾಧಿಕರಣಂ ॥ ೮ ॥ ಉತ್ಪತ್ತೇರಸಂಭವಾತ್ ॥ ೪೨ ॥**

**ಉತ್ಪತ್ತೇಃ ಪರಮಪುರುಷನಾರಾಯಣಾತ್ ಕ್ಷೇತ್ರಜ್ಞೋತ್ಪತ್ತೇರ್ಜನನಸ್ಯ ಅಸಂಭವಾತ್ ಶ್ರುತಿಯುಕ್ತ್ಯನುಭವವಿರೋಧಾತ್ ಜೀವೋ**

ತ್ಪತ್ತಿವಿಧಾಯಕಪಾಂಚರಾತ್ರಾಗಮಶಾಸ್ತ್ರಂ ಸರ್ವಥಾ ವೈದಿಕೈರ್ನಾಂಗೀ
ಕರಣೀಯಂ. ಪಂಚಮಹಾಭೂತವತ್ ಕ್ಷೇತ್ರಜ್ಞಾನಾಂ ಪರಮಾತ್ಮ
ಸಕಾಶಾದುತ್ಪತ್ತ್ಯಂಗೀಕಾರೇ ತದ್ವಜ್ಜೀವಾನಾಂ ನಷ್ಟಪ್ರಸಂಗಾತ್
ತಚ್ಚಾಭಸ್ರೋಕ್ತಕಿಂಚಿದ್ಭೇದನಾರಾಯಣಸಾರೂಪ್ಯಾತ್ಮಕಮುಕ್ತಿರ್ನ
ಸ್ಯಾತ್. ಜೀವಜನ್ಯತ್ವವ್ಯಪದೇಶಕಪಾಂಚರಾತ್ರಶಾಸ್ತ್ರಂ ಪ್ರಮಾಣ
ಮೂಲಂ ಭ್ರಾಂತಿಮೂಲಂ ವೇತಿ ಸಂಶಯಃ. ಪರಬ್ರಹ್ಮಭೂತವಾಸುದೇವ
ಪ್ರಣೀತತ್ವಾತ್ತತ್ಪರತ್ವಾನ್ನಿಶ್ಶ್ರೇಯಸಸಾಧನಾವಬೋಧಕತ್ವಾಸ್ಮನ್ವಾದೇ
ರಧಿಕತ್ವಾತ್ತದುಕ್ತಪಾಂಚರಾತ್ರಾಗಮಸ್ಯ ವೇದವತ್ಪ್ರಾಮಾಣ್ಯಂ. ತತ್ರ
ಕ್ರಿಯಾ ಚ, " ಪರಮಕಾರಣಭೂತವಾಸುದೇವಾತ್ಸಂಕರ್ಷಣೋ ನಾಮ
ಜೀವೋ ಜಾಯತೇ. ಸಂಕರ್ಷಣಾತ್ಪ್ರದ್ಯುಮ್ನಸಂಜ್ಞಂ ಮನ ಉತ್ಪದ್ಯತೇ.
ತಸ್ಮಾದನಿರುದ್ಧಸಂಜ್ಞಕೋಽಹಂಕಾರಃ ಪ್ರಭವತಿ. ಏತೇ ಚತ್ವಾರೋ
ವ್ಯೂಹಾಸ್ಸರ್ವೇಶ್ವರಸ್ಯ" ಇತಿ. ತಸ್ಮಾತ್ತಚ್ಛಾಸ್ತ್ರಮನಿವಾರ್ಯಂ. ಕಿಂಚ
ಸರ್ವೇಷಾಂ ಬ್ರಾಹ್ಮಣಾನಾಂ ಯಾಗಶ್ರಾದ್ಧದಾನಾದಿಕರ್ಮಸು ಕೃಷ್ಣಾ
ರ್ಪಣವಿನಿಯೋಗದರ್ಶನಾತ್, " ಪ್ರಾಯಶ್ಚಿತ್ತಾನ್ಯಶೇಷಾಣಿ ತಪಃ
ಕರ್ಮಾತ್ಮಕಾನಿ ವೈ। ಯಾನಿ ತೇಷಾಮಶೇಷಾಣಾಂ ಕೃಷ್ಣಾನುಸ್ಮರಣಂ
ಪರಂ ॥ ", ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ
ವಾ ಪ್ರಕೃತೇಸ್ಸ್ವಭಾವಾತ್ । ಕರೋಮಿ ಯದ್ಯತ್ಸಕಲಂ ತದಸ್ಮೈ ನಾರಾ
ಯಣಾಯೇತಿ ಸಮರ್ಪಯಾಮಿ ॥ " ಇತ್ಯಾದಿವಚನೇಷು ಸರ್ವಕ
ರ್ಮಸು ವಿಷ್ಣುಸ್ಮರಣಪೂರ್ವಕತ್ವಂ ತೇಷಾಂ ವಿಷ್ಣ್ವಾರಾಧನಪೂರ್ವಕ
ತ್ವೋಪದೇಶಾತ್, ಸರ್ವಕ್ರಿಯಾಸಂಕಲ್ಪೇ ಶ್ರೀಗೋವಿಂದಗೋವಿಂದೇತಿ
ವ್ಯವಹಾರದರ್ಶನಾತ್, ಶ್ರಾದ್ಧೇ ಚ ವಿಷ್ಣೋರ್ಮುಖ್ಯದೇವತ್ವಾಭಿಮಾ
ನಾತ್, " ಗಯಾಯಾಂ ಶ್ರೀವಿಷ್ಣುಪಾದೇ ದತ್ತಮಸ್ತು, ಅನೇನ ಶ್ರೀ
ಜನಾರ್ದನಃ ಪ್ರಿಯತಾಂ " ಇತ್ಯತ್ರ ವಿಷ್ಣುಸಮರ್ಪಣಸ್ಯೈವ ದ್ಯೋತ
ನಾತ್, " ಅಚ್ಯುತಾನಂತ ಗೋವಿಂದ " ಇತ್ಯಾದಿನಾ ಶಾರೀರಶುದ್ಧಿಸಂಪಾ
ದನಾರ್ಥಂ ಕೇಶವಾದಿದ್ವಾದಶನಾಮೋಚ್ಚಾರಣವಿಧಾನಸ್ಯ ಸ್ಮೃತಿಷು
ಬಹುಧಾ ಪ್ರಪಂಚಿತತ್ವಾತ್, ಸಂಧ್ಯಾವಂದನೋಪಸ್ಥಾನೇ " ಧ್ಯೇಯ
ಸ್ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ," " ಗೋವಿಂದ
ಪುಂಡರೀಕಾಕ್ಷ ರಕ್ಷ ಮಾಂ ಶರಣಾಗತಂ " ಇತಿ ಸೌರಮಂಡಲೇ
ನಾರಾಯಣಪ್ರಾರ್ಥನಾದರ್ಶನಾತ್, " ನಮೋ ಬ್ರಹ್ಮಣ್ಯದೇವಾಯ
ಗೋಬ್ರಾಹ್ಮಣಹಿತಾಯ ಚ । ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ
ನಮೋ ನಮಃ " ಇತಿ ಗೋವಿಂದಸ್ಮೃತಿಂ ಕೃತ್ವಾ, " ಆಕಾಶಾತ್ಪತಿತಂ
ತೋಯಂ ಯಥಾ ಗಚ್ಛತಿ ಸಾಗರಂ । ಸರ್ವದೇವನಮಸ್ಕಾರಃ ಕೇಶವಂ

ಪ್ರತಿಗಚ್ಛತಿ ॥ ” ಇತಿ ವಾಕ್ಯೇನ ತದಿತರಸಕಲದೇವತಾಕರ್ತೃಕನಮಸ್ಕಾರಾದೀನಾಂ ಕೇಶವಸ್ಯೈವ ಮುಖ್ಯೋದ್ದೇಶ್ಯವ್ಯವಸ್ಥಾಪನಾತ್ ವೈಷ್ಣವಲಾಂಛನಮೂರ್ಧ್ವಪುಂಡ್ರಮೇವ ಸರ್ವೇಷಾಂ ಪ್ರಾತರ್ವಿಧೇಯತ್ವದರ್ಶನಾತ್ಸಾಲಗ್ರಾಮಂ ವಿನಾ ಲಿಂಗತೀರ್ಥಪ್ರಸಾದಾಸ್ವೀಕಾರಾತ್, ಕಿಂಚ ಸ್ಮಾರ್ತವೈಷ್ಣವಾದಿಮತೇಷ್ವಪಿ ರಾಮಾಯಣಸ್ಯೈವೋಪದೇಶಗ್ರಹಣಾತ್ ವಿಷ್ಣುಸಹಸ್ರನಾಮೋಚ್ಚಾರಣಸ್ಯೈವ ಸರ್ವೇಷಾಂ ಮುಖ್ಯಾನುಸಂಧೇಯತ್ವಾಚ್ಚ ಸರ್ವೇಷಾಂ ಬ್ರಾಹ್ಮಣಾನಾಂ ವಿಷ್ಣುಪರತ್ವಮೇವಾಭಿಹಿತಂ. “ ರುದ್ರೋ ವೈ ಕ್ರೂರಃ ” ಇತಿ ಯಜುಶ್ಶ್ರುತೌ ರುದ್ರಸ್ಯ ತಾಮಸತ್ವವ್ಯಪದೇಶಾತ್ ತತ್ಪ್ರಣೀತಶಿವಾಗಮಾನಾಂ ತತ್ಪ್ರತಿಪಾದಕಶ್ರುತಿಸ್ಮೃತಿಪುರಾಣಾನಾಂ ಚ ತಾಮಸತ್ವಾದಪ್ರಾಮಾಣ್ಯಮರ್ಥಾತ್ಸಿದ್ಧಂ. ತಥಾ ಶಾಂಡಿಲ್ಯಸ್ಮೃತೌ “ ಯಾನಿ ಸರ್ವಪರಂ ವಿಷ್ಣುಂ ವದಂತಿ ಪರಮೇಶ್ವರಂ । ತಾನಿ ಸರ್ವಾಣಿ ಶಾಸ್ತ್ರಾಣಿ ಸಾತ್ತ್ವಿಕಾನಿ ಮತಾನಿ ವೈ । ಪ್ರಜಾಪತಿಂ ಕೃಶಾನುಂ ಚ ತಥಾ ದೇವೀಂ ಸರಸ್ವತೀಂ । ಪರತ್ವೇನ ವದೇಚ್ಛಾಸ್ತ್ರಂ ರಾಜಸಂ ಚ ಪ್ರಚಕ್ಷತೇ ॥ ಯಚ್ಛಾಸ್ತ್ರೇ ಲಿಂಗಪಾರಮ್ಯಂ ವಾಮದೇವಮುಮಾಪತಿಂ । ಪರತ್ವೇನ ವದೇಚ್ಛಾಸ್ತ್ರಂ ತತ್ತಾಮಸಮುದಾಹೃತಂ ॥ ” ಇತಿ ಸ್ಪಷ್ಟಮುಕ್ತಂ. ಕಿಂಚ ಸರ್ವಯಜ್ಞಕ್ರಿಯಾದಿಷು ರುದ್ರಾಹುತ್ಯನಂತರಮಪ ಉಪಸ್ಪೃಶ್ಯೇತಿ ಶ್ರವಣಾತ್ತದೇವ ಶಿವಸ್ಯ ತಾಮಸತ್ವಾಮಂಗಲತ್ವಪ್ರದರ್ಶನೇ ಮುಖ್ಯದೃಷ್ಟಾಂತಃ. “ ನಾರಾಯಣಾದ್ರುದ್ರೋ ಜಾಯತೇ ” ಇತ್ಯಾದೌ ನಾರಾಯಣಸ್ಯ ಜಗಜ್ಜನ್ಮಾದಿಕಾರಣತ್ವೋಪದೇಶಾಚ್ಚ ತತ್ಪ್ರಣೀತಪಾಂಚರಾತ್ರಾಗಮಸ್ಯ ಸಮುತ್ಕೃಷ್ಟತ್ವಾತ್ಸರ್ವೇಷಾಂ ಬ್ರಾಹ್ಮಣಾನಾಂ ತದೇವ ಗ್ರಾಹ್ಯಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ. ವೈದಿಕಾನಾಂ ಪಾಂಚರಾತ್ರಾಗಮಪ್ರತಿಪಾದಿತವೈಷ್ಣವಮತಂ ನ ವಿಧೇಯಂ, ಕುತಃ ತಂತ್ರಪ್ರಧಾನತ್ವಾತ್. “ ಜ್ಞಾಽಜ್ಞೌ ದ್ವಾವಜಾವೀಶಾನೀಶೌ, ” “ ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ ” ಇತ್ಯಾದಿಸ್ಮೃತಿಷು ಜೀವಾನಾಮನಾದಿತ್ವನಿರ್ದೇಶಾತ್ ಜೀವೋತ್ಪತ್ತ್ಯಾದಿಶ್ರುತಿಬಾಹ್ಯಧರ್ಮಪ್ರಕಾಶಕಪಾಂಚರಾತ್ರಾಗಮಮತಮವೈದಿಕರಮಣೀಯಂ. ಜೀವಾನಾಂ ಜನ್ಯತ್ವೇ ಕೃತನಾಶಾಕೃತಾಭ್ಯಾಗಮದೋಷೋ ಬುದ್ಧಮತವದುಪಪದ್ಯೇತ. ಪಾಂಚರಾತ್ರಾಗಮಾನಾಂ ಪ್ರಾಧಾನ್ಯಂ ನಾರಾಯಣಪ್ರಣೀತತ್ವೇನ ಉತ ವೈಷ್ಣವಗೂಢಾಚಾರಧರ್ಮಪ್ರಕಾಶಕತ್ವೇನ ? ನಾದ್ಯಃ, ಬುದ್ಧಾಗಮಾದಿಷ್ವತಿವ್ಯಾಪ್ತೇಃ. ನ ದ್ವಿತೀಯಃ, ಕುಚಿಮಾರಾದಿಗ್ರಂಥಪ್ರಾಮಾಣ್ಯಪ್ರಸಂಗಾತ್. ತಥಾ ಚೇತ್ “ ಸ್ಮೃತಿತಂತ್ರಪುರಾಣೇಷು ಯೋಽರ್ಥಶ್ಶ್ರುತ್ಯಾ ವಿರುದ್ಧ್ಯತೇ । ತಂತ್ರಾರ್ಥಸ್ಸ

ತು ವಿಜ್ಞೇಯೋ ಗರ್ಹಿತೋ ಬ್ರಾಹ್ಮಣಾದಿಭಿಃ ||" ಇತಿ ಪಾರಾಶರ ವ್ಯವಸ್ಥಾದರ್ಶನಾತ್. ತದಂಗೀಕಾರೇ ವರ್ಣಚತುಷ್ಟಯಾತೀತಸ್ಯಪ್ರಸಂಗೋ ದುರ್ನಿವಾರಃ. ಕ್ವಚಿತ್ ಸ್ಮೃತಿಪುರಾಣೇಷು ಸರ್ವಕರ್ಮಾರಂಭೇ ವಿಷ್ಣುನಾಮಸ್ಮರಣಾದ್ವಿಷ್ಣೋರುತ್ಕೃಷ್ಟತ್ವಂ, ಪರಬ್ರಹ್ಮತ್ವಂ ವೈದಿಕದೇವತಾಪ್ರಾಧಾನ್ಯಂ ವಾ? ನಾದ್ಯಃ, "ವಿಶ್ವಾಧಿಕೋ ರುದ್ರೋ ಮಹರ್ಷಿಃ", "ರುದ್ರೋ ವೈ ಶಾಶ್ವತಂ ವೈ ಪುರಾಣಂ" ಇತ್ಯಾದಿಶ್ರುತಿಶತೇಷು ಶಿವಸ್ಯೈವಸರ್ವಾಧಿಕ್ಯವ್ಯವಸ್ಥಾಪನಾನ್ನೇತರಸ್ಯ ಸರ್ವಾಧಿಕ್ಯಂ. "ತ್ವಂ ದೇವೇಷು ಬ್ರಾಹ್ಮಣೋಽಸಿ ಅಹಂ ಮನುಷ್ಯೇಷು ಬ್ರಾಹ್ಮಣಃ", "ಬ್ರಾಹ್ಮಣೋ ವೈ ಬ್ರಾಹ್ಮಣಮುಪಧಾವತಿ," "ತ್ವಂ ದೇವಾನಾಂ ಬ್ರಾಹ್ಮಣಾನಾಮಧಿಪತಿರ್ವಿಷ್ಣುಃಕ್ಷತ್ರಿಯಾಣಾಮಧಿಪತಿಃ", "ಬ್ರಾಹ್ಮಣಾನಾಂ ಬ್ರಾಹ್ಮಣೈರಾಶ್ರಿತತಯಾ ಮಹಾದೇವ ಏಕ ಏವೋಪಾಸ್ಯಃ" ಇತ್ಯಾದಿನಾ ಯಜುಸ್ಸಾಮಶ್ರುತಿಷು ಶಿವಸ್ಯ ಬ್ರಾಹ್ಮಣತ್ವಂ,ಬ್ರಾಹ್ಮಣೋಪಾಸ್ಯತ್ವಂಚೋಪದಿಷ್ಟಂ."ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ತಸ್ಮಾತ್ಸೋಮರಾಜಾನೋ ಬ್ರಾಹ್ಮಣಾಃ | ಸೋಮೋಽಸ್ಮಾಕಂ ಬ್ರಾಹ್ಮಣಾನಾಂ ರಾಜಾ ಸೋಮ ಏವ ನೋ ರಾಜೇತ್ಯಾಹುರ್ಬ್ರಾಹ್ಮಣಾಃ ಪ್ರಜಾಃ" ಇತ್ಯಾದಿಷು ಶಿವಸ್ಯ ಬ್ರಾಹ್ಮಣತ್ವಂ ಬ್ರಾಹ್ಮಣಾಧಿಪತಿತ್ವಂ ಚೋಪದಿಷ್ಟಂ. ಕೂರ್ಮೇ "ಬ್ರಾಹ್ಮಣೋ ಭಗವಾನ್ರುದ್ರಃ ಸರ್ವೇಷಾಮುತ್ತಮೋತ್ತಮಃ | ಬ್ರಹ್ಮಭೂತಸ್ಯ ರುದ್ರಸ್ಯ ಬ್ರಾಹ್ಮಣ್ಯಂ ನೈವ ಹೇತುಜಂ | ಬ್ರಾಹ್ಮಣೋ ವೈ ಸದಾ ಲೋಕೇ ಬ್ರಾಹ್ಮಣಂ ತೂಪಧಾವತಿ | ನೇತರಃ ಕ್ಷತ್ರಿಯೋ ವೈಶ್ಯಃ ನ ಶೂದ್ರೋ ನ ಚ ಸಂಕರಃ | ತಸ್ಮಾದ್ವೇದೈಕಮಾರ್ಗೇಣ ದ್ವಿಜಾತೋ ಬ್ರಾಹ್ಮಣಸ್ಸದಾ | ಮಹಾಬ್ರಾಹ್ಮಣಮೀಶಾನಮುಪಗಚ್ಛೇನ್ನ ಚೇತ್ತರಂ | ಸರ್ವಾತ್ಮಭೂತಮಾತ್ಮಾನಂ ವಿರೂಪಾಕ್ಷಂ ದ್ವಿಜೋತ್ತಮಂ|ಯಸ್ತು ನೋಪೈತಿ ಸಾಂಕರ್ಯಂ ತಸ್ಯಾಸ್ತ್ಯನ್ಯೋ ನ ಸಂಶಯಃ ||" ಇತಿ. ತಥಾ ಯಜುರ್ವೇದೇ "ಯೋ ವೈ ಸ್ವಾಂ ದೇವತಾಮತಿಯಜತೇ ಪ್ರಸ್ವಾಯೈ ದೇವತಾಯೈ ಚ್ಯವತೇ | ನ ಪರಾಂ ಪ್ರಾಪ್ನೋತಿ ಪಾಪೀಯಾನ್ ಭವತಿ ||" ಇತಿ. ಯಸ್ತು ಸ್ವಾಂ ದೇವತಾಮತಿಕ್ರಮ್ಯ ದೇವತಾಂತರಂ ಯಜತೇ ಸಃ ಪರಾಂ ದೇವತಾಂ ನ ಪ್ರಾಪ್ನೋತಿ, ಪಾಪೀಯಾನ್ ಭವತೀತಿ ಶ್ರುತ್ಯರ್ಥಃ. "ಅಂತರ್ನೇಚ್ಛಂತಿ ತಂ ಜನೇ ರುದ್ರಂ ಪರೋ ಮನೀಷಯಾ ಗೃಭ್ಣಂತಿ ಜಿಹ್ವಯಾ ಸಸಂ" ಇತ್ಯೇತಚ್ಛ್ರುತ್ಯುಪಷ್ಟಂಭಕತಯಾ ಕೂರ್ಮೇ "ಅಂತರ್ನೇಚ್ಛಂತಿ ಯೇ ರುದ್ರಂ ಭವಾನೀಸಹಿತಂ ಶಿವಂ | ಪುರೀಷಮೇವ ಗೃಭ್ಣಂತಿ ಜಿಹ್ವಯಾ ತೇ ನ ಸಂಶಯಃ|ಶ್ರೌತಸ್ಮಾರ್ತಸದಾಚಾರೈರ್ಬ್ರಾಹ್ಮಣಃ ಪರಮೇಶ್ವರಂ|

ಮಹಾಬ್ರಾಹ್ಮಣಮೀಶಾನಮುಪಗಚ್ಛೇತ್ಸದೈವ ತು । ತಚ್ಛೇಷತ್ವೇನ ವಿಷ್ಣ್ವಾದೀನ್ ಸರ್ವೇಷಾಂ ಹ್ಯಾಸ್ತಿಕೋತ್ತಮಃ । ಅಪಗಚ್ಛೇತ್ಸದಾ ವಿಪ್ರೋ ನ ಪ್ರಧಾನತಯಾ ಸದಾ । ಜನ್ಮನಾ ಲಬ್ಧಜಾತೀನಾಮಾಶ್ರಮಾಣಾಂ ತಥೈವ ಚ । ಪ್ರಾಧಾನ್ಯೇನ ಮಹಾದೇವಃ ಪೂಜ್ಯೋ ನಾನ್ಯೋಽಸ್ತಿ ಸಿದ್ಧಯೇ । ತತ್ಪ್ರಾಪ್ತ್ಯರ್ಥಂ ಮಹಾವಿಷ್ಣುಸ್ಸರ್ವೈಃ ಪೂಜ್ಯಸ್ಸನಾತನಃ ॥" ಇತ್ಯಾದಿನಾ ಸ್ಕಾಂದೇ ಶಿವಸ್ಯೈವ ಬ್ರಾಹ್ಮಣತ್ವಮವಗಮ್ಯತೇ. "ನಾರುದ್ರಃ ಕ್ರಮಪಾಠಕಃ" ಇತಿ ಸ್ಕಾಂದೇ ರುದ್ರಾಂಶಸ್ಯೈವ ಬ್ರಾಹ್ಮಣಸ್ಯ ವೇದಕ್ರಮಪಾಠಕತ್ವೇನ ಬ್ರಾಹ್ಮಣ್ಯಮುಕ್ತಂ. "ನಾವಿಷ್ಣುಃ ಪೃಥಿವೀಪತಿಃ" ಇತಿ ವಿಷ್ಣೋಃ ಪೃಥಿವೀಪತಿತ್ವೇನ ಕ್ಷತ್ರಿಯತ್ವಮುಕ್ತಂ. "ಅಲಂಕಾರಪ್ರಿಯೋ ವಿಷ್ಣುರಭಿಷೇಕಪ್ರಿಯಶ್ಶಿವಃ" ಇತಿ ರಾಮಕೃಷ್ಣಾದ್ಯವತಾರಾಣಾಂ ಕ್ಷತ್ರಿಯಕುಲೇ ಜನ್ಮಶ್ರವಣಾತ್, ಲೋಕೇ ವಿಷ್ಣುವಿಗ್ರಹೇಷು ಗೋವಿಂದರಾಜವರದರಾಜರಂಗರಾಜಾದಿಶಬ್ದಪ್ರಯೋಗದರ್ಶನಾತ್, ಕಿಂಚ ಪಾಂಚರಾತ್ರಾಗಮೋಕ್ತಕಲ್ಯಾಣೋತ್ಸವಾದಿಷು ವರ್ಮಶಬ್ದಪ್ರಯೋಗಾಚ್ಚ ವಿಷ್ಣೋಃ ಕ್ಷತ್ರಿಯತ್ವಮನಿರ್ವಾಯ್ಯಂ. "ಬ್ರಾಹ್ಮಣಾನಾಂ ಶಿವೋ ದೇವಃ ಕ್ಷತ್ರಿಯಾಣಾಂ ತು ಮಾಧವಃ । ವೈಶ್ಯಾನಾಂ ತು ತಥಾ ಬ್ರಹ್ಮಾ ಶೂದ್ರಾಣಾಂ ಸುರನಾಯಕಃ ॥" ಇತಿ ಮನುಸ್ಮೃತೌ ಚ ವಿಷ್ಣೋಃ ಕ್ಷತ್ರಿಯದೇವತ್ವಂ ಸ್ಪಷ್ಟಮುಕ್ತಂ. ನನು ವೆಂಕಟೇಶ್ವರವಿಠಲೇಶ್ವರಸ್ಥಾನೇ ವಿಷ್ಣೋರೀಶ್ವರಶಬ್ದಶ್ರವಣಾತ್ ಪರಶುರಾಮಾವತಾರೇ ತಸ್ಯ ಬ್ರಾಹ್ಮಣಕುಲಸಂಭವಶ್ರವಣಾತ್ಕಥಂ ಕ್ಷತ್ರಿಯತ್ವಮುಪದಿಶ್ಯತ ಇತಿಚೇನ್ನ ವೆಂಕಟೇಶ್ವರಸ್ಯ ಆಭಾಸವಿಷ್ಣುತ್ವಂ ತದಂಗೇ ನಾಗಭೂಷಣಾದಿಧರ್ಮಾಣಾಂ ದ್ಯೋತನಾತ್ ಮೂಲವಿಗ್ರಹೇ ಶಂಖಚಕ್ರಾದಿಲಾಂಛನಾನಾಮದರ್ಶನಾತ್ ವೀರೇಶ್ವರಸ್ಯ ರಾಮಾನುಜಕಲ್ಪಿತವೆಂಕಟೇಶ್ವರತ್ವಂ ರಜ್ಜುಸರ್ಪವದಾಭಾಸಮಾತ್ರಮೇವ. ಕಿಂಚ ತತ್ಪಾಣ್ಯಧೋದೇಶೇ ಶಿವಲಿಂಗಸ್ಯ ದರ್ಶನಾದೀಶ್ವರಶಬ್ದೋ ವ್ಯವಹ್ರಿಯತೇ. ವಿಠಲೇಶ್ವರಸ್ಯ ವಿಷ್ಣೋಶ್ಶಿರಸಿ ಶಿವಲಿಂಗಧಾರಣದರ್ಶನಾತ್ ತತ್ರ ಷಷ್ಠೀತತ್ಪುರುಷಸಮಾಸೇನೇಶ್ವರಶಬ್ದೋ ನಿರ್ಣೀತಃ. ರುದ್ರಾಂಶಸಂಭೂತಸ್ಯ ವಿಶ್ವಾಮಿತ್ರಸ್ಯ ಕ್ಷತ್ರಿಯೋತ್ಪನ್ನಸ್ಯಾಪಿ ತಪಸಾ ಬ್ರಾಹ್ಮಣತ್ವಂ, ನಾರಾಯಣಾಂಶಸಂಭೂತಸ್ಯ ಪರಶುರಾಮಸ್ಯ ಬ್ರಾಹ್ಮಣೋತ್ಪನ್ನಸ್ಯಾಪಿ ವ್ಯಾಪಾರೇಣ ಕ್ಷತ್ರಿಯಕಾರ್ಯಕಾರಣತ್ವಂ ದೃಷ್ಟಂ. ತಚ್ಚ ರುದ್ರವ್ಯತ್ಯಾಸಹೇತುಕಮಿತಿ ಹರಿವಂಶೇ ಪ್ರತಿಪಾದಿತಂ. "ಭೃಗೋಶ್ಚರುವಿಪರ್ಯಾಯೇ ಶೈವವೈಷ್ಣವಯೋಃ ಪುರಾ । ಜಗತ್ಯಾಂ ವೈಷ್ಣವಾಂಶಶ್ಚ ಜಾಮದಗ್ನ್ಯೋಹ್ಯಜಾಯತ ।

ವಿಶ್ವಾಮಿತ್ರಸ್ತು ಶೈವಾಂಶೈರ್ಗಾಧಿಃ ಕೌಶಿಕನಂದನಃ । ಜನಯಾಮಾಸ ಪುತ್ರಂ ತು ತಪೋವಿದ್ಯಾಶಮಾತ್ಮಕಂ । ಪ್ರಾಪ್ಯ ಬ್ರಹ್ಮರ್ಷಿಸಮತಾಂ ಗತಃ ॥ " ಇತಿ. ತಸ್ಮಾಚ್ಛಿವಸ್ಯ ಬ್ರಾಹ್ಮಣತ್ವಂ ಬ್ರಾಹ್ಮಣಾಧಿಪತಿತ್ವಂ, ಅತ ಏವ ಸರ್ವೋತ್ಕೃಷ್ಟತ್ವಂ. " ರುದ್ರಪಿಂಡೋದ್ಭವೋ ವಿಪ್ರಃ ರುದ್ರಂ ಸರ್ವೇಶ್ವರಂ ವಿಭುಂ । ಮೋಹಾನ್ನೈವ ನ ಜಾನಾತಿ ತಾತಂ ವೇಶ್ಯಾಸುತೋ ಯಥಾ । ಯಃ ಪುತ್ರಃ ಪಿತರಂ ದ್ವೇಷ್ಟಿ ತಂ ವಿಂದ್ಯಾದನ್ಯರೇತಸಂ । ಯೋ ವಿಪ್ರಾಸ್ಸತತಂ ದ್ವೇಷ್ಟಿ ತಂ ವಿಂದ್ಯಾದನ್ಯರೇತಸಂ ॥ " ಇತ್ಯಾದಿನಾ ಸ್ಕಾಂದೇ ರುದ್ರಸ್ಯ ಬ್ರಾಹ್ಮಣತ್ವಾದ್ಬ್ರಾಹ್ಮಣೋತ್ಪತ್ತಿಹೇತುತ್ವಾಚ್ಚ ರುದ್ರದ್ವೇಷಿಣಾಂ ಬ್ರಾಹ್ಮಣೇಭ್ಯೋ ಬಹಿಷ್ಕಾರ ಇತಿ ಘಂಟಾಘೋಷಃ. " ಆಧತ್ತ ಪಿತರೋ ಗರ್ಭಂ ಕುಮಾರಂ ಪುಷ್ಕರಸ್ರಜಂ ಯಥೇಹ ಪುರುಷಸ್ಸದಿತಿ " ಇತ್ಯಾಪಸಂಬಗೃಹ್ಯಸೂತ್ರೇ ಬ್ರಾಹ್ಮಣಸ್ಯ ರುದ್ರಪಿಂಡಹೇತುತ್ವಂ ಶ್ರೂಯತೇ. ನನು ವಸ್ವಾದಿಪಾಠೇನ ಏಕಾದಶರುದ್ರಾಣಾಮೇವ ಅತ್ರನಿರ್ದೇಶ ಇತಿಚೇನ್ನ, ತೇಷಾಮೀಶ್ವರಾಂಶತ್ವೇನೈವ ರುದ್ರತ್ವವ್ಯಪದೇಶೋ ಯುಕ್ತಃ, ಅಂಶಾಂಶಿನೋರಭೇದಾತ್. ಪ್ರಕೃತಿವಿಕೃತಿನ್ಯಾಯೇನ ಶ್ರಾದ್ಧಾದೌ ತದ್ವದುತ್ಪತ್ತಿಃ. ತಸ್ಮಾದ್ವಿಷ್ಣ್ವಾದ್ಯಪೇಕ್ಷಯಾ ರುದ್ರಸ್ಯೈವ ಸರ್ವೋತ್ಕೃಷ್ಟತ್ವಂ ಸಿದ್ಧಂ.

ಪಾಂಚರಾತ್ರಾದಿಮತಗಳು ವೇದದ ಒಂದು ಭಾಗವನ್ನು ಮಾತ್ರವೇ ಪ್ರಮಾಣವೆಂದು ಒಪ್ಪಿರುವುದರಿಂದ ಅವನ್ನು ನಿರಾಕರಿಸಿ, " ನಾರಾಯಣನೇ ಪರಬ್ರಹ್ಮ. ಅದು ವಿಷ್ಣುವಿನ ಉತ್ತಮಸ್ಥಾನ" ಎಂಬಂತೆ ಸರ್ವೋತ್ಕೃಷ್ಟನಾರಾಯಣನು ರಚಿಸಿದ ಪಾಂಚರಾತ್ರಾಗಮವು ಹೇಗೆ ವೇದವಿರುದ್ಧವಾದೀತೆಂದು ಶಂಕಿಸಿ ನಿರಾಕರಿಸುತ್ತಾನೆ.

**ಉತ್ಪತ್ತ್ಯಸಂಭವಾಧಿಕರಣಂ ॥೮॥ ಉತ್ಪತ್ತೇರಸಂಭವಾತ್ ॥೪೨॥**

ಪರಮಪುರುಷನಾದ ನಾರಾಯಣನಿಂದ ಜೀವನು ಹುಟ್ಟಿದನೆಂಬುದು ಅಸಂಭವವಾದ್ದರಿಂದಲೂ, ಹಾಗೆ ಹೇಳಿದರೆ ಶ್ರುತಿಯುಕ್ತಿ ಅನುಭವಗಳಿಗೆ ವಿರೋಧವಾಗುವುದರಿಂದಲೂ ಜೀವರ ಉತ್ಪತ್ತಿಯನ್ನು ತಿಳಿಸುವ ಪಾಂಚರಾತ್ರಾಗಮಶಾಸ್ತ್ರವು ವೈದಿಕರಿಗೆ ಎಂದೆಂದಿಗೂ ಗ್ರಾಹ್ಯವಾಗಲಾರದು. ಪಂಚಭೂತಗಳಂತೆ ಜೀವರು ಪರಮಾತ್ಮನಿಂದ ಹುಟ್ಟಿದರೆಂದು ಒಪ್ಪಿದರೆ ಆ ಭೂತಗಳಂತೆ ಜೀವರೂ ನಷ್ಟವಾಗಬೇಕಾಗುತ್ತದೆ ಮತ್ತು ಆ ಶಾಸ್ತ್ರದಲ್ಲಿ ಹೇಳಿರುವಂತೆ ಈಷದ್ಭೇದಗರ್ಭಿತವಾದ ನಾರಾಯಣಸಾರೂಪ್ಯವೆಂಬ ಮುಕ್ತಿಯನ್ನು ಪಡೆಯಲಿಕ್ಕೂ ಸಾಧ್ಯವಾಗದೆ ಹೋಗುತ್ತದೆ. ಜೀವನು ಹುಟ್ಟುವನೆಂದು ಹೇಳುವ ಪಾಂಚಾರಾತ್ರಶಾಸ್ತ್ರಕ್ಕೆ ಪ್ರಮಾಣವಿದೆಯೇ ಇಲ್ಲವೇ ? ಎಂಬ ಸಂಶಯ ಬರುತ್ತದೆ. ಪರಮಾತ್ಮನೆನಿಸಿದ ವಾಸುದೇವನಿಂದ ರಚಿತವಾಗಿ ಅವನನ್ನೇ ಅವಲಂಬಿಸಿಕೊಂಡು ಮೋಕ್ಷದ ಸಾಧನವನ್ನು ತಿಳಿಸುತ್ತ ಮನ್ವಾದಿಸ್ಮೃತಿಗಳಿಗಿಂತ ಹೆಚ್ಚಿನದಾಗಿರುವುದರಿಂದ ಪಾಂಚರಾತ್ರಾಗಮವು ವೇದದಂತೆ ಪ್ರಮಾಣ

ವೆನಿಸಿದೆ. "ಪರಮಕಾರಣನಾದ ವಾಸುದೇವನಿಂದ ಸಂಕರ್ಷಣನೆಂಬ ಜೀವನೂ, ಆವನಿಂದ ಪ್ರದ್ಯುಮ್ನವೆಂಬ ಮನಸಸ್ಸೂ, ಅದರಿಂದ ಅನಿರುದ್ಧವೆಂಬ ಅಹಂಕಾರವೂ ಹುಟ್ಟವೆ. ಇವು ನಾಲ್ಕೂ ಈಶ್ವರನ ವ್ಯೂಹಗಳೆನಿಸಿವೆ" ಎಂಬುದು ಆ ಶಾಸ್ತ್ರದ ಪ್ರಕ್ರಿಯೆ. ಆದ್ದರಿಂದ ಆ ಶಾಸ್ತ್ರವೂ ನಮಗೆ ಅವಶ್ಯಕ. ಇದೂ ಅಲ್ಲದೆ, ಎಲ್ಲಾ ಬ್ರಾಹ್ಮಣರೂ ಯಾಗಶ್ರಾದ್ಧದಾನಾದಿಕರ್ಮಗಳನ್ನು ಮಾಡುವಾಗ ಕೃಷ್ಣಾರ್ಪಣ ವೆಂದೇ ಹೇಳುವರು. "ತಪಸ್ಸು ಮೊದಲಾದ ಎಲ್ಲಾ ಕರ್ಮಗಳ ಲೋಪದೋಷ ಗಳಿಗೂ ಕೃಷ್ಣನ ಸ್ಮರಣವೇ ಪ್ರಾಯಶ್ಚಿತ್ತವು". "ತ್ರಿಕರಣಗಳಿಂದಲೂ ಮಾಡುವು ದೆಲ್ಲವನ್ನೂ ನಾರಾಯಣನಿಗೇ ಸಮರ್ಪಿಸುತ್ತೇನೆ" ಎಂಬಲ್ಲೂ ವಿಷ್ಣುಸ್ಮರಣವನ್ನೇ ಹೇಳಲಾಗಿದೆ. ಎಲ್ಲಾಕ್ರಿಯೆಗಳನ್ನೂ ವಿಷ್ಣುವಿನ ಆರಾಧನೆಯಿಂದಲೇ ಆರಂಭಿಸಲಾ ಗುವುದು. ಸಂಕಲ್ಪಮಾಡುವಾಗ ಗೋವಿಂದನನ್ನೇ ಹೇಳಲಾಗುವುದು. ಶ್ರಾದ್ಧದಲ್ಲಿ ವಿಷ್ಣುವನ್ನೇ ಮುಖ್ಯದೇವನೆಂದು ಹೇಳಿದೆ. 'ಗಯೆಯಲ್ಲಿ ಹಾಕಿದ ಪಿಂಡ ವಿಷ್ಣು ಪಾದವನ್ನು ಮುಟ್ಟುವುದರಿಂದ ವಿಷ್ಣು ಪ್ರೀತನಾಗಲಿ' ಎಂಬಲ್ಲಿ ವಿಷ್ಣುವಿನ ಸ್ಮರಣೆ ಯನ್ನೇ ಹೇಳಿದೆ. ಶರೀರಶುದ್ಧಿಗಾಗಿ ಅಚ್ಯುತ, ಅನಂತ, ಗೋವಿಂದ ಮೊದಲಾದ ಹೆಸರುಗಳನ್ನೇ ಉಚ್ಚರಿಸಬೇಕೆಂದು ಸ್ಮೃತಿಯಲ್ಲಿ ಹೇಳಿದೆ. ಸಂಧ್ಯಾವಂದನೆಯ ಆರಂಭದಲ್ಲಿ ಸೂರ್ಯಮಂಡಲದಲ್ಲಿರುವ ನಾರಾಯಣನನ್ನು ಧ್ಯಾನಿಸಬೇಕೆಂದು ಹೇಳಿದೆ. "ಎಲ್ಲರ ಹಿತಕ್ಕಾಗಿಯೂ ಗೋವಿಂದನಿಗೆ ನಮಸ್ಕಾರಮಾಡಬೇಕೆಂದು ಹೇಳಿದೆ. "ಆಕಾಶದಲ್ಲಿ ಬಿದ್ದ ನೀರು ಸಮುದ್ರವನ್ನು ಸೇರುವಂತೆ ಎಲ್ಲಾ ದೇವರ ನಮಸ್ಕಾರವೂ ಕೇಶವನಿಗೇ ಮುಟ್ಟುವುದು" ಎಂದೂ, "ವೈಷ್ಣವಲಾಂಛನವನ್ನೇ ಎಲ್ಲರೂ ಧರಿಸಬೇಕು ಮತ್ತು ಸಾಲಗ್ರಾಮದ ತೀರ್ಥವಲ್ಲದೆ ಲಿಂಗದ ತೀರ್ಥವನ್ನು ಸ್ವೀಕರಿಸಬಾರದು" ಎಂದೂ ವೈಷ್ಣವಾಗಮಗಳು ಹೇಳುತ್ತವೆ. ಸ್ಮಾರ್ತ, ವೈಷ್ಣವ ಮತಗಳಲ್ಲಿ ರಾಮಾಯಣಪಠನ ಮತ್ತು ವಿಷ್ಣುಸಹಸ್ರನಾಮ ಪಾರಾಯಣಗಳನ್ನೇ ಬ್ರಾಹ್ಮಣರು ಮುಖ್ಯವಾಗಿ ಆಚರಿಸಬೇಕೆಂದು ಹೇಳಿರುವುದರಿಂದ ಅವರಿಗೆ ವಿಷ್ಣುವೇ ಉಪಾಸ್ಯನೆಂದು ಹೇಳಲಾಗಿದೆ. "ರುದ್ರನು ಕ್ರೂರನು" ಎಂದು ಯಜುರ್ವೇದದಲ್ಲಿ ರುದ್ರನನ್ನು ತಾಮಸನೆಂದು ಹೇಳಿದೆ. ಅವನು ಹೇಳಿದ ಆಗಮಪುರಾಣಗಳೂ ತಾಮ ಸವೇ ಆದ್ದರಿಂದ ಪ್ರಮಾಣವಾಗಲಾರವು. ಶಾಂಡಿಲ್ಯಸ್ಮೃತಿಯಲ್ಲಿ "ವಿಷ್ಣುವನ್ನು ವರ್ಣಿಸುವ ಶಾಸ್ತ್ರಗಳು ಸಾತ್ತ್ವಿಕ. ಬ್ರಹ್ಮ ಅಗ್ನಿ ಸರಸ್ವತಿಯರನ್ನು ವರ್ಣಿಸುವವು ರಾಜಸ. ಶಿವನನ್ನು ವರ್ಣಿಸುವವು ತಾಮಸ" ವೆಂದು ಹೇಳಿದೆ. ಎಲ್ಲಾ ಯಜ್ಞ ಗಳಲ್ಲೂ ರುದ್ರನಿಗೆ ಆಹುತಿ ಕೊಟ್ಟಮೇಲೆ ಆಚಮನವನ್ನು ಹೇಳಲಾಗಿದೆ. ಶಿವನು ತಾಮಸ ಮತ್ತು ಅಮಂಗಳನೆನಿಸಲು ಇದೇ ಮುಖ್ಯದೃಷ್ಟಾಂತವಾಗಿದೆ. "ನಾರಾ ಯಣನಿಂದ ಬ್ರಹ್ಮ ಹುಟ್ಟುತ್ತಾನೆ, ರುದ್ರನು ಹುಟ್ಟುತ್ತಾನೆ" ಎಂಬಲ್ಲಿ ನಾರಾಯ ಣನೇ ಜಗತ್ಕಾರಣನೆಂದು ಹೇಳಿದ್ದರಿಂದಲೂ, ಅವನು ರಚಿಸಿದ ಪಾಂಚರಾತ್ರಗಮವು ಸರ್ವೋತ್ಕೃಷ್ಟವಾದ್ದರಿಂದಲೂ ಬ್ರಾಹ್ಮಣರಿಗೆ ಅದೇ ಗ್ರಾಹ್ಯವೆಂದು ಆಕ್ಷೇಪ ಬರು

ತ್ತದೆ. ಇದಕ್ಕೆ ಸಮಾಧಾನವನ್ನು ಮುಂದೆ ಹೇಳಲಾಗುವುದು. ವೈದಿಕರಿಗೆ ಪಾಂಚರಾತ್ರಾಗಮದಲ್ಲಿ ಹೇಳಿದ ವೈಷ್ಣವಮತವು ತಂತ್ರಪ್ರಧಾನವಾದ್ದರಿಂದ ಗ್ರಾಹ್ಯವಲ್ಲ. "ಜೀವೇಶ್ವರರು ಅಜರು" ಎಂಬಲ್ಲಿ ಜೀವರನ್ನು ಅನಾದಿ ಎಂದು ಹೇಳಿರುವುದರಿಂದ ಜೀವರು ಹುಟ್ಟುವರೆಂದು ಹೇಳುವ ಪಾಂಚರಾತ್ರಮತವು ವೇದಬಾಹ್ಯವಾದ ಧರ್ಮವನ್ನು ಪ್ರಕಾಶಪಡಿಸುವುದರಿಂದ ಅವೈದಿಕವೆನಿಸಿದೆ. ಜೀವರು ಹುಟ್ಟುವುದಾದರೆ ಒಬ್ಬನು ಮಾಡಿದ್ದನ್ನು ಮತ್ತೊಬ್ಬನು ಅನುಭವಿಸುವ ಪ್ರಸಂಗವು ಬರುವುದರಿಂದ ಬೌದ್ಧಮತದಂತಾದೀತು. ವೈಷ್ಣವಾಗಮಗಳಿಗೆ ಪ್ರಾಧಾನ್ಯವು ನಾರಾಯಣನು ಅವನ್ನು ರಚಿಸಿದ್ದರಿಂದಲೋ ಅಥವಾ ಅವು ವೈಷ್ಣವರ ಗೂಢಾಚಾರಗಳನ್ನು ಪ್ರಕಾಶಿಸುವುದರಿಂದಲೋ? ಎಂದು ಕೇಳಿದರೆ ಬುದ್ಧಾಗಮಗಳೂ ನಾರಾಯಣನಿಂದಲೇ ರಚಿತವಾದ್ದರಿಂದ ಅವುಗಳಂತೆಯೇ ಪಂಚಾರಾತ್ರಗಮಗಳಿಗೂ ಪ್ರಾಧಾನ್ಯ ಬರಬೇಕಾಗುವುದು. ಎರಡನೆಯ ಪಕ್ಷದಲ್ಲಿ ಕೂಚಿಮಾರನ ಗ್ರಂಥಗಳೂ ಗೂಢಾಚಾರವನ್ನು ಪ್ರಕಟಿಸುವುದರಿಂದ ಇವುಗಳಂತೆಯೇ ಪ್ರಮಾಣವಾಗಬೇಕಾದೀತು. ಹಾಗಾದರೆ "ಶ್ರುತಿಗೆ ವಿರುದ್ಧವಾದ ಅರ್ಥವು ಬ್ರಾಹ್ಮಣರಿಗೆ ಗ್ರಾಹ್ಯವಲ್ಲ" ಎಂದು ಪರಾಶರನು ಹೇಳಿರುವುದರಿಂದ ಪಾಂಚರಾತ್ರಾಗಮವನ್ನು ಒಪ್ಪಿದರೆ ಹಾಗೆ ಒಪ್ಪುವವರು ವರ್ಣಾಶ್ರಮದಿಂದ ಹೊರಗಾಗಬೇಕಾಗುತ್ತದೆ. ಕೆಲವು ಸ್ಮೃತಿಪುರಾಣಗಳಲ್ಲಿ ಎಲ್ಲ ಕರ್ಮಗಳ ಆರಂಭದಲ್ಲೂ ವಿಷ್ಣುವನ್ನು ಸ್ಮರಿಸಿರುವುದರಿಂದ ವಿಷ್ಣುವೇ ಉತ್ಕೃಷ್ಟನೂ ಪರಬ್ರಹ್ಮನೂ ವೈದಿಕದೇವತೆಗಳಂತೆ ಪ್ರಧಾನನೂ ಆಗುವನೆಂದು ಹೇಳಿದರೆ, "ರುದ್ರನು ವಿಶ್ವಾಧಿಕನು" "ರುದ್ರನೊಬ್ಬನೆಂದು ಹೇಳುತ್ತಾರೆ." "ರುದ್ರನೇ ಶಾಶ್ವತನು ಪುರಾಣನು" "ಪ್ರಪಂಚಕ್ಕಾಶ್ರಯನಾದ ಶಿವನನ್ನು ತ್ರಿಮೂರ್ತ್ಯತೀತನೆಂದು ಹೇಳುತ್ತಾರೆ" "ಶಿವನೇ ಅದ್ವೈತನು" ಎಂದು ನೂರಾರು ಶ್ರುತಿಗಳಲ್ಲಿ ಶಿವನೇ ಸರ್ವಾಧಿಕನೆಂದು ವ್ಯವಸ್ಥೆಯಾಗಿರುವುದರಿಂದ ನಾರಾಯಣನು ಉತ್ಕೃಷ್ಟನಾಗುವುದಿಲ್ಲ. "ನೀನು ದೇವತೆಗಳಿಗೂ ಬ್ರಾಹ್ಮಣರಿಗೂ ಅಧಿಪತಿ; ವಿಷ್ಣು ಕ್ಷತ್ರಿಯರಿಗೂ ಅಧಿಪತಿಯು" "ಬ್ರಾಹ್ಮಣರನ್ನೇ ಬ್ರಾಹ್ಮಣರು ಆಶ್ರಯಿಸಬೇಕಾದ್ದರಿಂದ ಅವರಿಗೆ ಮಹಾದೇವನೊಬ್ಬನೇ ಉಪಾಸ್ಯನು" ಹೀಗೆ ಯಜುಸ್ಸಾಮಶ್ರುತಿಗಳಲ್ಲಿ ಶಿವನನ್ನು ಬ್ರಾಹ್ಮಣನೆಂದೂ, ಬ್ರಾಹ್ಮಣರಿಗೆ ಉಪಾಸ್ಯನೆಂದೂ ಹೇಳಿದೆ. "ಉಮಾಸಹಿತನಾದ ಶಿವನೇ ಬ್ರಾಹ್ಮಣರಿಗೆ ರಾಜನು". ಹೀಗೆ ಬೇರೆ ಶ್ರುತಿಯಲ್ಲೂ ಶಿವನು ಬ್ರಾಹ್ಮಣ ಮತ್ತು ಬ್ರಾಹ್ಮಣರ ಅಧಿಪತಿ ಎಂದು ಹೇಳಿದೆ. ಕೂರ್ಮದಲ್ಲಿ "ಪೂಜ್ಯರುದ್ರನು ಸರ್ವೋತ್ತಮನಾದ ಬ್ರಾಹ್ಮಣನು. ಇದರಿಂದ ಅವನಿಗೆ ಬ್ರಾಹ್ಮಣ್ಯವು ಸಹಜವೆಂದು ಸಿದ್ಧವಾಗುತ್ತದೆ. ಲೋಕದಲ್ಲಿ ಬ್ರಾಹ್ಮಣನೇ ಬ್ರಾಹ್ಮಣನನ್ನಾಶ್ರಯಿಸುತ್ತಾನೆ. ಆದ್ದರಿಂದ ಬ್ರಾಹ್ಮಣನು ವೇದದಿಂದಲೇ ಬ್ರಾಹ್ಮಣನಾದ ಶಿವನನ್ನು ಅರಿಯಬೇಕು. ಸರ್ವರೊಳಗೂ ವ್ಯಾಪಿಸಿರುವ ಶಿವನನ್ನು ಯಾವನು ಕಾಣುವುದಿಲ್ಲವೋ ಅವನು ಸಂಕರನಾಗುತ್ತಾನೆ" ಎಂದು ಹೇಳಿದೆ. "ಯಾವನು ತನ್ನ

ದೇವನನ್ನು ತೊರೆದು ಬೇರೆ ದೇವನನ್ನು ಆಶ್ರಯಿಸುತ್ತಾನೋ ಅವನು ಪಾಪಿಷ್ಠ ನಾಗುವನು" ಎಂದು ಯಜುರ್ವೇದದಲ್ಲಿ ಹೇಳಿದೆ. "ಭವಾನಿಯೊಡಗೂಡಿದ ಶಿವನನ್ನು ಯಾವನು ಹೃದಯದಲ್ಲಿ ನೆನೆಯುವುದಿಲ್ಲವೋ ಅವನು ಮಲವನ್ನು ನಾಲಿಗೆಯಿಂದ ನೆಕ್ಕುವನು" ಎಂದು ಕೂರ್ಮದಲ್ಲಿ ಶ್ರುತ್ಯರ್ಥಕ್ಕೆ ಉಪಷ್ಟಂಭಕ್ತ ವಾಗಿ ಹೇಳಿದೆ. "ಯಾವನು ಬ್ರಾಹ್ಮಣನಾದ ಶಿವನನ್ನು ಪ್ರಧಾನನೆಂದೂ ವಿಷ್ಣ್ವಾದಿಗಳನ್ನು ಅವನ ಅನುಯಾಯಿಗಳೆಂದೂ ಆಶ್ರಯಿಸುವನೋ ಅವನು ಆಸ್ತಿಕನೆನಿಸುವನು. ಯಾವನು ಇದಕ್ಕೆ ಅತಿಕ್ರಮಿಸುವನೋ ಅವನು ವರ್ಣಾಶ್ರಮ ಧರ್ಮಗಳಿಗೆ ದೂರನಾಗುವನು. ಆದ್ದರಿಂದ ಮಹಾದೇವನೇ ಸಕಲಸಿದ್ಧಿಪ್ರದಾಯಕನೂ ಪರಮಪೂಜ್ಯನೂ ಆಗಿರುವನು. ಅವನನ್ನು ಹೊಂದಲಿಕ್ಕಾಗಿಯೇ ಮಹಾವಿಷ್ಣುವೂ ಎಲ್ಲರಿಗೂ ಪೂಜ್ಯನಾಗಿರುವನು" ಎಂದು ಸ್ಕಾಂದದಲ್ಲಿ ಶಿವನೇ ಬ್ರಾಹ್ಮಣನೆಂದು ತಿಳಿದುಬರುತ್ತದೆ. "ರುದ್ರನ ಅಂಶನಲ್ಲದವನು ವೇದಮಂತ್ರಗಳ ಕ್ರಮಪಾಠವನ್ನು ಹೇಳಲಾರನು" ಎಂಬಲ್ಲಿ ರುದ್ರಾಂಶನಾದ ಬ್ರಾಹ್ಮಣನೇ ಕ್ರಮಪಾಠಕನೆಂದು ಹೇಳಿದೆ. ಹಾಗೆಯೇ ವಿಷ್ಣುವಿನ ಅಂಶವಲ್ಲದವನು ರಾಜನೂ ಆಗಲಾರನೆಂಬಲ್ಲಿ ವಿಷ್ಣುವನ್ನು ಕ್ಷತ್ರಿಯನೆಂದೂ, ಪೃಥಿವೀಪತಿ ಎಂದೂ ಹೇಳಿದೆ. "ಶಿವನು ಅಭಿಷೇಕಪ್ರಿಯ, ವಿಷ್ಣು ಅಲಂಕಾರಪ್ರಿಯ" ಎಂಬಂತೆ ರಾಮ ಕೃಷ್ಣ ಮೊದಲಾದ ಅವತಾರಗಳು ಅಲಂಕಾರಪ್ರಿಯರಾದ ಕ್ಷತ್ರಿಯಜಾತಿಯಲ್ಲಿಯೇ ಆಗಿವೆ. ಲೋಕದಲ್ಲಿ ಗೋವಿಂದರಾಜ, ವರದರಾಜ, ರಂಗರಾಜ ಮೊದಲಾದ ವಿಷ್ಣುವಿಗ್ರಹಗಳಿಗೆ ರಾಜನ್ ಶಬ್ದವನ್ನು ಪ್ರಯೋಗಿಸಲಾಗಿದೆ. ಪಾಂಚರಾತ್ರಾಗಮದಲ್ಲಿ ಹೇಳಿರುವ ಕಲ್ಯಾಣೋತ್ಸವಗಳಲ್ಲಿ ವರ್ಮ ಎಂಬ ಶಬ್ದವನ್ನು ಉಪಯೋಗಿಸಲಾಗಿದೆ. ಆದ್ದರಿಂದ ವಿಷ್ಣು ಕ್ಷತ್ರಿಯನೆಂಬುದು ಸ್ಪಷ್ಟವಾಗಿದೆ. "ಬ್ರಾಹ್ಮಣರಿಗೆ ಶಿವನೂ, ಕ್ಷತ್ರಿಯರಿಗೆ ವಿಷ್ಣುವೂ ವೈಶ್ಯರಿಗೆ ಬ್ರಹ್ಮನೂ, ಶೂದ್ರರಿಗೆ ಇಂದ್ರನೂ ದೇವನು" ಎಂದು ಮನುಸ್ಮೃತಿಯಲ್ಲಿ ಹೇಳಿದೆ. ಆದ್ದರಿಂದ ವಿಷ್ಣುವು ಕ್ಷತ್ರಿಯರ ದೇವನೆಂಬುದು ಸ್ಪಷ್ಟ. ವೆಂಕಟೇಶ್ವರ-ವಿಠಲೇಶ್ವರ ಎಂಬಲ್ಲಿ ವಿಷ್ಣುವಿಗೂ ಈಶ್ವರ ಶಬ್ದವನ್ನು ಪ್ರಯೋಗಿಸಿರುವಂತೆ ಪರಶುರಾಮಾವತಾರದಲ್ಲಿ ವಿಷ್ಣುವು ಬ್ರಾಹ್ಮಣಕುಲದಲ್ಲಿ ಹುಟ್ಟಿದ್ದರಿಂದ ಅವನು ಹೇಗೆ ಕ್ಷತ್ರಿಯನಾದಾನು? ಎಂದರೆ ಇದು ಯುಕ್ತವಲ್ಲ. ವೆಂಕಟರಮಣನ ಮೂಲವಿಗ್ರಹದಲ್ಲಿ ನಾಗಭೂಷಣ ಮೊದಲಾದ ಶಿವಧರ್ಮಗಳೇ ಇವೆ. ಶಂಖ ಚಕ್ರ ಮೊದಲಾದ ಗುರುತುಗಳಿಲ್ಲದ್ದರಿಂದ ಆ ವಿಗ್ರಹವು ಆಭಾಸ ವಿಷ್ಣುವೆನಿಸಿದೆ. ಹಗ್ಗ ಕತ್ತಲೆಯಲ್ಲಿ ಸರ್ಪವಾಗಿ ತೋರುವಂತೆ ವೀರೇಶ್ವರನನ್ನು ರಾಮಾನುಜರು ವೆಂಕಟೇಶ್ವರನೆಂದು ಕಲ್ಪಿಸಿದ್ದಾರೆ. ಇದೂ ಅಲ್ಲದೆ ವೆಂಕಟರಮಣನ ಕೈನ ಕೆಳಭಾಗದಲ್ಲಿ ಶಿವಲಿಂಗವಿರುವುದರಿಂದಲೇ ಅಲ್ಲಿ ಈಶ್ವರಶಬ್ದವನ್ನು ಪ್ರಯೋಗಿಸಲಾಗಿದೆ. ವಿಠಲನ ಶಿರಸ್ಸಿನಲ್ಲಿ ಶಿವಲಿಂಗವನ್ನು ಕಾಣಬಹುದು. ಆದ್ದರಿಂದ ಷಷ್ಠೀ ತತ್ಪುರುಷಸಮಾಸದಿಂದ ವಿಠಲ ಮೂರ್ತಿಗೆ ಉಪಾಸ್ಯನಾದ ಈಶ್ವರನು ಅಲ್ಲಿ ಇರುವನೆಂದು ನಿರ್ಣಯಿಸಲಾಗಿದೆ.

"ರುದ್ರಾಂಶನಾದ ವಿಶ್ವಾಮಿತ್ರನು ಕ್ಷತ್ರಿಯವಂಶದಲ್ಲಿ ಹುಟ್ಟಿದರೂ ತಪಸ್ಸಿನಿಂದ ಬ್ರಾಹ್ಮಣನಾದನು. ನಾರಾಯಣನ ಅಂಶನಾದ ಪರಶುರಾಮನು ಬ್ರಾಹ್ಮಣನಾಗಿ ಹುಟ್ಟಿದರೂ ವ್ಯಾಪಾರದಿಂದ ಕ್ಷತ್ರಿಯನ ಕಾರ್ಯವನ್ನೇ ಮಾಡಿದನು. ಭೃಗು ಮಹರ್ಷಿಯು ಅನುಗ್ರಹಿಸಿದ ಎರಡು ಬಗೆಯಾದ ಚರುದ್ರವ್ಯಗಳ ಬದಲಾವಣೆ ಯಿಂದ ಬ್ರಾಹ್ಮಣವಂಶದಲ್ಲಿ ಕ್ಷತ್ರಿಯನಾದ ಪರಶುರಾಮನೂ, ಕ್ಷತ್ರಿಯವಂಶದಲ್ಲಿ ಬ್ರಾಹ್ಮಣನಾದ ವಿಶ್ವಾಮಿತ್ರನೂ ಹುಟ್ಟಿದರು" ಎಂದು ಹರಿವಂಶದಲ್ಲಿ ಹೇಳಿದೆ. ಆದ್ದ ರಿಂದ ಶಿವನು ಬ್ರಾಹ್ಮಣನೂ ಮತ್ತು ಬ್ರಾಹ್ಮಣರಿಗೆ ಪೂಜ್ಯನೂ, ಸರ್ವೋತ್ಕೃಷ್ಟನೂ ಆಗಿದ್ದಾನೆ. "ರುದ್ರಪಿಂಡದಿಂದ ಹುಟ್ಟಿದ ಬ್ರಾಹ್ಮಣನು ಸರ್ವೇಶ್ವರನಾದ ರುದ್ರನನ್ನು ಮೋಹದಿಂದ ತಿಳಿಯದಿದ್ದರೆ ವೇಶ್ಯಾಸುತನಂತಾಗುವನು. ತಂದೆಯನ್ನು ದ್ವೇಷಿಸುವ ಮಗನನ್ನು, ಮತ್ತು ಬ್ರಾಹ್ಮಣರ ನಿಂದಕನನ್ನು ರುದ್ರವೀರ್ಯವಲ್ಲದೆ ಬೇರೆ ಕಡೆ ಯಿಂದ ಹುಟ್ಟಿದವನೆಂದು ಭಾವಿಸಬೇಕು". ಹೀಗೆ ಸ್ಕಾಂದದಲ್ಲಿ ರುದ್ರನು ಬ್ರಾಹ್ಮಣ ನೆಂದೂ, ಬ್ರಾಹ್ಮಣರ ಉತ್ಪತ್ತಿಗೆ ಕಾರಣನೆಂದೂ ಹೇಳಿರುವುದರಿಂದ "ರುದ್ರನಿಂದಕ ರನ್ನು ಬ್ರಾಹ್ಮಣರು ಬಹಿಷ್ಕರಿಸಬೇಕೆಂಬುದು ಘಂಟಾಘೋಷವೆನಿಸಿದೆ. ರುದ್ರಸ್ವರೂಪ ರಾದ ಪಿತೃದೇವತೆಗಳೇ, ಸರ್ವಲಕ್ಷಣಸಂಪನ್ನನಾಗಿ ಲೋಕದಲ್ಲಿ ಒಳ್ಳೆಯವನೆನಿಸಿ ಕೊಳ್ಳುವ ಪುತ್ರನನ್ನು ಅನುಗ್ರಹಿಸಿರಿ" ಎಂದು ಆಪಸ್ತಂಬಸೂತ್ರದಲ್ಲಿ ಬ್ರಾಹ್ಮಣನಿಗೆ ರುದ್ರಪಿಂಡವೇ ಹೇತುವೆಂದು ಹೇಳಲಾಗಿದೆ. ಇಲ್ಲಿ ರುದ್ರನೆಂದರೆ ವಸ್ವಾದಿಗಳೊಳಗೆ ಹೇಳಿರುವ ಏಕಾದಶರುದ್ರರೊಳಗೊಬ್ಬನಿರಬಹುದು ಎಂದರೆ ಅವರೂ ಈಶ್ವರನ ಅಂಶರೇ ಆದ್ದರಿಂದ ಅವರಿಗೂ ರುದ್ರನೆಂಬ ಹೆಸರು ಯುಕ್ತವೇ ಆಗಿದೆ. ಅಂಶಅಂಶ ಗಳಿಗೆ ಅಭೇದವೂ ಹೊಂದುತ್ತದೆ. ಪ್ರಕೃತಿಯಂತೆ ವಿಕೃತಿಯನ್ನು ಮಾಡಬೇಕೆಂಬ ನ್ಯಾಯದಿಂದ ಶ್ರಾದ್ಧದಲ್ಲೂ ಶಿವನೇ ಪೂಜ್ಯನಾಗುವನು. ಹೀಗೆ ವಿಷ್ಣುವಿಗಿಂತಲೂ ರುದ್ರನೇ ಸರ್ವೋತ್ಕೃಷ್ಟನಾದ್ದರಿಂದ ವಿಷ್ಣು ಸರ್ವೋತ್ಕೃಷ್ಟನಲ್ಲ.

**ನ ದ್ವಿತೀಯಃ, "ಏಕ ಏವ ನಾರಾಯಣ ಆಸೀತ್" ಇತ್ಯಾದೌ ಶಿವವನ್ನಾರಾಯಣಸ್ಯ ಕಾರಣಕಾರಣತ್ವಾದರ್ಶನಾತ್, "ಶಕ್ತೇರಾಸೀತ್ಪರಾಶರಃ" ಇತಿವತ್ ಆದಿವಿಷ್ಣೋಃ ಪರಮಶಿವಜನ್ಯತ್ವಮುಪದಿಶ್ಯತೇ. ತಥಾ ಋಗ್ವೇದೇ "ವಿಷ್ಣುರಿತ್ಥಾ ಪರಮಸ್ಯ ವಿದ್ವಾನ್ ಜಾತೋ ಬೃಹನ್ನಭಿಪಾತಿ ತೃತೀಯಂ" ಇತಿ. ಅಸ್ಯಾರ್ಥಃ. ಪರಮಸ್ಯ ಮಹೇಶ್ವರಸ್ಯ ಇತ್ಥಂಭಾವೇನ ವಿದ್ವಾನ್ವೇತ್ತಾ ವಿಷ್ಣುಃ. ವಿಷ್ಣೋಃ ಪರಮಶಿವವೇತ್ತೃತ್ವಂ ಪ್ರಸಿದ್ಧಂ. ಏವಂಭೂತೋ ಬೃಹದ್ವಿಷ್ಣುಃ "ಬೃಹದಿತಿವಿಶೇಷಣಂ ವಿಷ್ಣೋರ್ವ್ಯೂಹಾವತರಾತ್" ಇತಿ ರೂಪಾಂತರಾತೀತಾಽಽದಿವಿಷ್ಣುಪರಂ. ಸ ವಿಷ್ಣುರ್ಜಾತಸ್ಸನ್ ಬ್ರಹ್ಮವಿಷ್ಣುಲೋಕಾಭ್ಯಾಮೂರ್ಧ್ವಗಂ ತೃತೀಯಂ ಕೈಲಾಸಂ ಸಾಕ್ಷಾದಾದಿವಿಷ್ಣುರೇವ ಸಂರಕ್ಷತಿ. ತಸ್ಮಾದಜಾತಮಹೇಶ್ವರಾದಾದಿವಿಷ್ಣೋರ್ಜನ್ಯತ್ವಂ ಸಿದ್ಧಂ. "ಅಜಾತ ಇತ್ಯೇವಂ ಕಶ್ಚಿದ್ಭೀರುಃ**

ಪ್ರಪದ್ಯತೇ।ರುದ್ರ ಯತ್ತೇ ದಕ್ಷಿಣಂ ಮುಖಂ ತೇನ ಮಾಂ ಪಾಹಿ ನಿತ್ಯಂ"ಇತಿ ಶ್ವೇತಾಶ್ವತರಮಂತ್ರೇಣ ಶಂಭೋರೇವಾಜಾತತ್ವವ್ಯವಸ್ಥಾಪನಾತ್ ತಸ್ಯೈವ ಕಾರಣಕಾರಣತ್ವಂ ಸಿದ್ಧಂ. “ನಾರಾಯಣಾದ್ರುದ್ರೋ ಜಾಯತೇ” ಇತ್ಯಾದಿವಾಕ್ಯಾನಾಂ ಅವಾಂತರಕಾಲರುದ್ರವಿಷಯತ್ವಂ. “ತ್ರಯಸ್ತೇ ಕಾರಣಾತ್ಮಾನೋ ಜಾತಾಸ್ಸಾಕ್ಷಾನ್ಮಹೇಶ್ವರಾತ್” ಇತ್ಯಾರಭ್ಯ “ವಿಷ್ಣೋಶ್ಚ ಭಗವಾಂಸ್ತದ್ವದ್ಬ್ರಹ್ಮಾಣಮಸೃಜತ್ಪುನಃ। ನಾರಾಯಣಂ ಪುನರ್ಬ್ರಹ್ಮಾ ಬ್ರಹ್ಮಾಣಂ ಚ ಪುನರ್ಭವಃ॥” ಇತ್ಯಾದಿನಾ ಕಲ್ಪಾಂತರೇಷು ಪರಮಶಿವಾನುಗ್ರಹಾದವಾಂತರಸೃಷ್ಟಿಭೇದಾಃ ಬಹುಧಾ ಪ್ರಪಂಚಿತಾಃ ಇತಿ ವಾಯವೀಯಸಂಹಿತಾಯಾಂ ದೃಷ್ಟಂ. ಏಕ ಏವ ನಾರಾಯಣ ಆಸೀದಿತ್ಯತ್ರ ಕ್ರಿಯಯಾ ತಸ್ಯ ಪರಮೇಶ್ವರಜನ್ಯತ್ವಮುಪದಿಷ್ಟಂ. ತತ್ರ ತಸ್ಯ ಮೂರ್ತಿತ್ರಯಕಾರಣತ್ವಾದರ್ಶನಾತ್. ಶ್ರುತ್ಯಂತರೇಷು ಜಗತ್ಕಾರಣತ್ವಂ ಮೂರ್ತಿತ್ರಯಕಾರಣತ್ವಂ ಚ ಶಿವಸ್ಯೈವ ನಿರ್ದಿಷ್ಟಂ. ಶ್ವೈತಾಶ್ವತರೇ “ಬ್ರಹ್ಮವಾದಿನೋ ವದಂತಿ ಕಿಂಕಾರಣಂ ಬ್ರಹ್ಮ? ಕುತಸ್ಸ್ಮ ಜಾತಾಃ” ಇತ್ಯುಪಕ್ರಮ್ಯ ಪ್ರಶ್ನೋತ್ತರಪುರಸ್ಕಾರೇಣ ಶಿವಸ್ಯೈವ ಪರಬ್ರಹ್ಮತ್ವಂ ಪ್ರಸಾಧ್ಯ“ಯದಾ ತಮಃ—ಶಿವ ಏವ ಕೇವಲಃ। ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ” ಇತ್ಯಾದಿನಾ ಸಕಲಜಗತ್ಪೂರ್ವಭಾವಿತ್ವೇನ ಗಾಯತ್ರೀಮಂತ್ರವಾಚ್ಯತ್ವೇನ ಶಿವಸ್ಯೈವ ಪ್ರತಿಪಾದಿತತ್ವಾತ್ “ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರಃ” ಇತ್ಯಾದಿನಾ ತಸ್ಯೈವ ವಿಶ್ವಾಧಿಕತ್ವಮುಪದಿಷ್ಟಂ. “ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ” ಇತ್ಯಥರ್ವಶಿರಸಿ ತಸ್ಯೈವ ಕಾರಣಕಾರಣತ್ವನಿರ್ದೇಶಾತ್, ನಾರಾಯಣಸ್ಯ ಕಾರಣಕಾರಣತ್ವೇ ವಿಶ್ವಾಧಿಕತ್ವೇ ಚ ಶ್ರುತ್ಯದರ್ಶನಾತ್ ನ ಸರ್ವಥಾ ತಸ್ಯ ಪರಬ್ರಹ್ಮತ್ವಮುಪಪದ್ಯತೇ. “ಈಶಾನಸ್ಸರ್ವವಿದ್ಯಾನಾಂ” ಇತ್ಯಾದಿನಾ ಶಿವಸ್ಯ ಪಾಲಕತ್ವಂ “ನಿಧನಪತಯೇ ನಮಃ ಸರ್ವಭೂತದಮನಾಯ ನಮಃ ಮಹಾಗ್ರಾಸಾಯ ನಮಃ”ಇತ್ಯಾದಿಶ್ರುತಿಷು ತಸ್ಯೈವ ಸರ್ವಲಯಕಾರಣತ್ವಂ ದೃಷ್ಟಂ. ತಸ್ಮಾತ್ತಸ್ಯೈವ ಪರಬ್ರಹ್ಮತ್ವಂ ನಿಷ್ಪ್ರತ್ಯೂಹಂ. “ಜನ್ಮಾದ್ಯಸ್ಯ ಯತಃ”, “ಯತೋ ವಾ ಇಮಾನಿ ಭೂತಾನಿ ಜಾಯಂತೇ” ಇತ್ಯಾದೌ ಜಗಜ್ಜನ್ಮಾದಿಕಾರಣತ್ವಂ ಬ್ರಹ್ಮಲಕ್ಷಣಮಿತ್ಯುಕ್ತಂ. ನ ತೃತೀಯಃ, ಸಾಮವೇದಪ್ರಥಮಮಂತ್ರೇ “ತಪಶ್ಚ ತೇ” ಇತ್ಯಾರಭ್ಯ “ಕರ್ಮಾಧಿಪತಯೇ ನಮಃ” ಇತ್ಯಂತೇನ ಸಕಲಕರ್ಮಾಧಿದೈವತ್ವೇನ “ವಿರೂಪಾಕ್ಷೋಽಸಿ” ಇತಿ ತತ್ರ ನಿರ್ದೇಶಾದ್ವೈದಿಕಾನಾಂ ಸರ್ವಕರ್ಮಾರಂಭೇ ಶಿವಸ್ಮರಣಮೇವ ಯುಕ್ತಂ. ಶೈವಪುರಾಣೇ,

“ ವೈದಿಕಸ್ಸರ್ವಕರ್ಮಾಣಿ ಶಿವಮುದ್ದಿಶ್ಯ ಕಾರಯೇತ್ ”, “ ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ । ಯಃ ಸ್ಮರೇದ್ವೈ ವಿರೂಪಾಕ್ಷಂ ಸ ಬಾಹ್ಯಾಭ್ಯಂತರಶ್ಶುಚಿಃ ॥ ” ಇತಿ ಸ್ಕಾಂದೇ “ ಶುಚಿರ್ವಾಪ್ಯಶುಚಿರ್ವಾಪಿ ಸರ್ವಾವಸ್ಥಾಸು ಸರ್ವದಾ । ಯಸ್ಸ್ಮರೇದ್ವಿಸ್ಫುಲಿಂಗಾಕ್ಷಂ ಸ ವೈಶ್ವಾನರವಚ್ಛುಚಿಃ ॥ ” ಇತಿ ಶ್ರೂಯತೇ. ಮನ್ವಾದಿಸ್ಮೃತೀನಾಮಿವ ಶ್ರುತಿಮೂಲಕತ್ವೇನ ಸರ್ವಕರ್ಮಾರಂಭೇ ಶಿವಸ್ಮರಣವಿಧಾಯಕವಚನಾನಾಂ ವಿಧೇಯತ್ವಂ. ವೇದಮೂಲಕತ್ವಾಭಾವಾತ್ಕರ್ಮಾರಂಭೇ ವಿಷ್ಣೂದ್ದೇಶಪ್ರತಿಪಾದಕಸ್ಮೃತೀನಾಂ ಸಾಂಖ್ಯಾದಿಸ್ಮೃತಿವದ್ದುರ್ಬಲತ್ವಂ “ ತಿಥಿರ್ವಾರಂ ಚ ನಕ್ಷತ್ರಂ ಯೋಗಃ ಕರಣಮೇವ ಚ । ಸರ್ವಂ ಶಿವಮಯಂ ಸ್ಮೃತ್ವಾ ವೈದಿಕಃ ಕರ್ಮ ಕಾರಯೇತ್ ” ಇತಿ ಸ್ಮೃತೌ ದಿನವಾರನಕ್ಷತ್ರಾದಿಕಂ ಶಿವಮಯಮಿತಿ ಶ್ರೂಯತೇ. ತಥಾಚ ಶ್ರುತಿಃ “ ವಿಶ್ವಂ ಭೂತಂ ಭುವನಂ ಚಿತ್ರಂ ಬಹುಧಾ ಜಾತಂ ಜಾಯಮಾನಂ ಚ ಯತ್ । ಸರ್ವೋ ಹ್ಯೇಷ ರುದ್ರಸ್ತಸ್ಮೈ ರುದ್ರಾಯ ನಮೋ ಅಸ್ತು ” ಇತ್ಯಾದಿಶ್ರುತಿಶತೇಷು ಸರ್ವಂ ಶಿವಾತ್ಮಕಮಿತಿ ಶ್ರೂಯತೇ. ಕಿಂಚ ಶ್ರಾದ್ಧಾರಂಭೇ “ ಈಶಾನಃ ಪಿತೃರೂಪೇಣ ಮಹಾದೇವೋ ಮಹೇಶ್ವರಃ । ಪ್ರಿಯತಾಂ ಭಗವಾನೀಶಃ ಪರಮಾತ್ಮಾ ಸದಾಶಿವಃ ॥ ” ಇತಿ ಶಿವಪ್ರೀತಿಕರತ್ವೇನ ಶಿವಾರಾಧನತ್ವೇನ ಶ್ರಾದ್ಧಕರ್ಮಕರ್ತವ್ಯತ್ವಮುಪದಿಷ್ಟಂ. ತಥೋಪಸಂಹಾರೇ “ ವಾಮದೇವಾಯ ನಮಃ ” ಇತ್ಯಾದಿನಾ ಶಿವಸ್ಮರಣಪೂರ್ವಕಬ್ರಾಹ್ಮಣವಿಸರ್ಜನಶ್ರವಣಾದುಪಕ್ರಮೋಪಸಂಹಾರಯೋಃ ಶಿವಪರತ್ವದರ್ಶನಾತ್ತನ್ಮಧ್ಯಭಾಗಸ್ಯಾಪಿ ತತ್ಪರತ್ವಮೇವ. ತಥಾ ಶಂಕರಸಂಹಿತಾಯಾಂ “ ನೈಮಿತ್ತಿಕಾನಿ ಕರ್ಮಾಣಿ ಶಿವತುಷ್ಟ್ಯರ್ಥಮಾದರಾತ್ । ಕುರ್ಯಾತ್ಸ ವೈ ಸ್ವಗೃಹ್ಯೋಕ್ತಂ ಶಿವಾರಾಧನಬುದ್ಧಿತಃ ” ಇತಿ. ಲೈಂಗೇ “ ಗಯಾರುದ್ರಪದೇ ಪಿಂಡಂ ಯೋ ದದಾತಿ ಸುಭಕ್ತಿತಃ । ಸ ಸಪ್ತಕುಲಮುದ್ಧೃತ್ಯ ಶಿವಲೋಕೇ ಮಹೀಯತೇ ॥ ”, “ ಈಶಾನವಿಷ್ಣುಕಮಲಾಸನಕಾರ್ತಿಕೇಯವಹ್ನಿತ್ರಯಾರ್ಕರಜನೀಶ ” ಇತ್ಯಾದಿನಾ ತತ್ರ ಪ್ರಥಮಮೀಶಾನಪದಸ್ಯೈವೋಪದೇಶಾತ್, ಗಯಾಯಾಂ ಶ್ರೀರುದ್ರಪಾದಾದಿಸಮಸ್ತಪಾದೇಷು ದತ್ತಮಸ್ತು ಇತಿ ಬೋಧಾಯನಸೂತ್ರವಚನಾತ್ ಶ್ರಾದ್ಧಂ ಸರ್ವಂ ಶಿವಪ್ರೀತಿಕರಮೇವ. ನನು ಶ್ರಾದ್ಧಸಂರಕ್ಷಕಶ್ರೀಮಹಾವಿಷ್ಣೋರಿತಿ ವಚನೇ ತಸ್ಯೈವ ಶ್ರಾದ್ಧಸಂರಕ್ಷಕತ್ವೇನೋಪದೇಶಾತ್ ಶ್ರಾದ್ಧಫಲದಾತಾ ಸ ಏವೇತಿ ಚೇನ್ನ, ವಿಶ್ವೇದೇವಾದಿವತ್ತತ್ರಾಧಿಕಾರಿತ್ವೇನ ವಿಷ್ಣುನಿರ್ದೇಶಃ ಕೃತಃ. ರಾಜಭಾಂಡಾಗಾರೇ ಭೃತ್ಯನಿರ್ದೇಶವತ್ ವಿಷ್ಣೋಸ್ತತ್ಸಂರಕ್ಷಕತ್ವಂ ನಿರ್ದಿಷ್ಟಂ.

ಸ್ಕಾಂದೇ ವ್ಯಾಸಭುಜಸ್ತಂಭನಾನಂತರಂ ವ್ಯಾಸಂ ಪ್ರತಿ ವಿಷ್ಣುವಚನಂ "ಯಜ್ಞಕರ್ತಾ ಚ ದೇವೇಂದ್ರಃ ವೇದಕರ್ತಾ ಚ ವಾಕ್ಪತಿಃ। ಅಹಮೇವ ಜಗತ್ಕರ್ತಾ ಮಮ ಕರ್ತಾ ಮಹೇಶ್ವರಃ ॥" ಇತಿ ಶಿವಸ್ಯೈವ ಸರ್ವಾಧಿಕತ್ವಮುಪದಿಶ್ಯತೇ. "ಯೋ ರುದ್ರೋ ಅಗ್ನೌ ಯೋ ಅಪ್ಸು" ಇತಿ ಶ್ರುತೌ ಜಲಾಧಿಷ್ಠಾನತಯಾ ರುದ್ರಸ್ಯೈವ ಸ್ಥಿತ್ಯುಪದೇಶಾತ್ ಸ್ನಾನಕಾಲೇಽಪಿ ವಾಮದೇವಮಂತ್ರೇಣ ಜಲಾಧಿಷ್ಠಿತರುದ್ರಂ ಸ್ಮೃತ್ವಾ ಸ್ನಾನಂ ಕುರ್ಯಾತ್. ತಥಾ ವೃದ್ಧಶಾತಾತಪೇ "ವಾಮದೇವೇತಿ ಮಂತ್ರೇಣ ಜಲಾಧ್ಯಕ್ಷಂ ಸದಾಶಿವಂ। ಸ್ಮೃತ್ವಾ ಸ್ನಾನಂ ಸದಾ ಕುರ್ಯಾತ್ಸರ್ವಪಾಪನಿವೃತ್ತಯೇ ॥" ಇತ್ಯಾದಿನಾ ಸ್ನಾನಕಾಲೇ ಶಿವಪ್ರಾರ್ಥನಾದರ್ಶನಾತ್ತದೇವ ಯುಕ್ತಂ. "ಸೌರಮಂಡಲಮಧ್ಯಸ್ಥಂ ಸಾಂಬಂ ಸಂಸಾರಭೇಷಜಂ। ನೀಲಗ್ರೀವಂ ವಿರೂಪಾಕ್ಷಂ ನಮಾಮಿ ಶಿವಮವ್ಯಯಂ" ಇತಿ ಗೌತಮಸ್ಮೃತೌ ಶಿವಸ್ಯ ಪರಮಾತ್ಮನಃ ಸೂರ್ಯಮಂಡಲಾಂತರ್ವರ್ತಿತ್ವಂ ಸೂರ್ಯಸ್ಯ ಚ ತನ್ಮುಖ್ಯಶರೀರತ್ವಮುಪದಿಷ್ಟಂ. ತಸ್ಮಾಚ್ಛಿವಸ್ಯೈವ ಪರಬ್ರಹ್ಮತ್ವಂ ಸಿದ್ಧಂ. ನನು "ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ" ಇತ್ಯಾರಭ್ಯ "ಕಪ್ಯಾಸಂ ಪುಂಡರೀಕಮೇವಾಕ್ಷಿಣೀ" ಇತ್ಯಾದಿನಾ ಛಾಂದೋಗ್ಯೇ ಸೂರ್ಯಮಂಡಲಾಭಿವ್ಯಕ್ತಪುರುಷಸ್ಯಾಕ್ಷಿದ್ವಯೋಪದೇಶಾತ್ "ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ" ಇತ್ಯಾದಿನಾ ನಾರಾಯಣಸ್ಯ ಸೂರ್ಯಮಂಡಲಾಂತರ್ವರ್ತಿತ್ವನಿರ್ದೇಶಾತ್ ಭರ್ಗಶಬ್ದವಾಚ್ಯತ್ವಂ ತಸ್ಯೈವೇತಿ ಚೇನ್ನ, ಅಂತಸ್ತದ್ಧರ್ಮೋಪದೇಶಾಧಿಕರಣೇ ತನ್ನಿರಾಕೃತಂ. ನೀಲಕಂಠಭಾಷ್ಯೇ ಸೂತಸಂಹಿತಾವ್ಯಾಖ್ಯಾನಯೋಗಖಂಡೇ ಚ ಶಿವಸ್ಯ ಸೂರ್ಯಮಂಡಲಾಂತರ್ವರ್ತಿತ್ವೇನ ತನ್ಮಂತ್ರಾರ್ಥಸ್ಯೋಪದೇಶಾತ್. ಕಪ್ಯಾಸಮಿತಿ ಮಂತ್ರೇ ಕಮುದಕಂ ಕಿರಣೈಃ ಪಿಬತೀತಿ ಕಪಿಸೂರ್ಯಃ ತೇನ ಅಸಿತಂ ವಿಕಸಿತಂ ಪುಂಡರೀಕಮಿವೇತ್ಯನೇನ ತೃತೀಯಲೋಚನಸ್ಯ ಮುಕುಲೀಕೃತತ್ವಮರ್ಥಾತ್ಸಿದ್ಧಮಿತಿ ಬಹುಧಾ ನಿರೂಪಿತಂ. ಶತರುದ್ರೀಯೇ "ಅಸೌ ಯೋಽವಸರ್ಪತಿ ನೀಲಗ್ರೀವೋ ವಿಲೋಹಿತಃ" ಇತ್ಯಾದಿನಾ ಸೂರ್ಯಮಂಡಲಾಂತರ್ವರ್ತಿತ್ವಂ ಶಿವಸ್ಯೈವ ಪ್ರಸಾಧಿತಂ. "ಸ್ತೋಮಂ ವೋ ಅದ್ಯ ರುದ್ರಾಯ ಶಿಕ್ವಸೇ ಕ್ಷಯದ್ವೀರಾಯ ನಮಸಾ ವಿಧೇಮ" ಇತಿ ಶ್ರುತೌ ಸರ್ವದೇವತಾನಮಸ್ಕಾರಸ್ತೋತ್ರಾದೀನಾಂ ಶಿವಸಮರ್ಪಣವಿಧಿಶ್ರವಣಾತ್, ಸರ್ವದೇವನಮಸ್ಕಾರಃ ಕೇಶವಂ ಪ್ರತಿಗಚ್ಛತಿ" ಇತಿ ವಾಕ್ಯಾನಾಂ ವೇದವಿರುದ್ಧತ್ವಾತ್ಸಾಂಖ್ಯಸ್ಮೃತಿವಚನವನ್ನ ವಿಧೇಯಂ. ಕಿಂಚ "ಪಂಚಶೀರ್ಷೋಪಪನಯೇನ" ಇತ್ಯತ್ರ ಶಿರಃಪಂಚಕವಿಶಿಷ್ಟತ್ರಿಲೋಚನಮಹೇಶ್ವರೇ ಸಂಧ್ಯಾ

ವಂದನವಿನಿಯೋಗವ್ಯವಸ್ಥಾಪನಾತ್ ವಿನಿಯೋಗಾನುಸಾರೇಣ ಸರ್ವ ವಾಕ್ಯಾನ್ವಯೋ ಯುಕ್ತಃ. ತತ್ಪ್ರಕರಣೇ ತು "ಭರ್ಗೋ ದೇವಸ್ಯ ರುದ್ರಾತ್ಮನೇ" ಇತ್ಯತ್ರ ಭರ್ಗಪದಸ್ಯ ರುದ್ರಪರತಯೋಕ್ತತ್ವಾತ್ "ಶ್ರುತಿಸ್ಮೃತಿವಿರೋಧೇ ತು ಶ್ರುತಿರೇವ ಬಲೀಯಸೀ" ಇತಿ ನ್ಯಾಯೇನ ಶ್ರುತ್ಯರ್ಥಾನುಗುಣ್ಯೇನ ವಾಕ್ಯಾರ್ಥೋ ಯೋಜನೀಯಃ. ಅತ್ರ ಕೇಚಿತ್, "ಅಮಾತ್ಯಸಮರ್ಪಿತದ್ರವ್ಯಾಣಾಂ ಯಥಾ ರಾಜಾಧೀನತ್ವಂ ತಥಾ ವಿಷ್ಣುಸಮರ್ಪಿತನಮಸ್ಕಾರಾದೀನಾಂ ಶಿವಾಧೀನತ್ವಂ" ಇತಿ ವದಂತಿ. "ಯಥಾ ಚೋರಸಮಾನೀತಂ ಕಿರೀಟಾದಿವಿಭೂಷಣಂ | ಚೋರೈರ್ಯಥಾ ನ ಧಾರ್ಯಂ ಸ್ಯಾತ್ತಥಾ ಸರ್ವದೇವನಮಸ್ಕೃತಿಃ | ಯಥಾ ನದ್ಯಾದಯಸ್ಸರ್ವೇ ಸಮುದ್ರೇ ಪ್ರವಿಶಂತಿ ಹಿ | ಸರ್ವದೇವನಮಸ್ಕಾರಃ ಮಹಾದೇವೇ ತಥಾ ಧ್ರುವಂ | ನ ಶಕ್ಯತೇ ದ್ವಯಂ ಧರ್ತುಂ ಬ್ರಹ್ಮವಿಷ್ಣ್ವಾದಿಭಿಸ್ಸದಾ ||" ಇತಿ ಸ್ಕಾಂದೇ ಶ್ರೂಯತೇ. ಅತೋ ನ ಕಶ್ಚಿದ್ವಿರೋಧಃ.

"ಒಬ್ಬನೇ ನಾರಾಯಣನಿದ್ದನು" ಎಂಬಲ್ಲಿ ಪರಮಶಿವನಂತೆ ನಾರಾಯಣನನ್ನು ಮಹಾಕಾರಣನೆಂದು ಹೇಳಿಲ್ಲದ ಪ್ರಯುಕ್ತ ಆ ವಾಕ್ಯಕ್ಕೆ ಅವನು ಪರಾಶರನಂತೆ ಪರಾಶಕ್ತಿಯಿಂದ ಹೊರಬಂದನೆಂಬ ಅರ್ಥವೇ ಹೊಂದುತ್ತದೆಯಾದ್ದರಿಂದ ಇಲ್ಲಿ ಪರಾಶಕ್ತಿರೂಪನಾದ ಪರಶಿವನಿಂದ ವಿಷ್ಣು ಹುಟ್ಟಿದನೆಂದು ತಿಳಿದುಬರುತ್ತದೆ. "ವಿಷ್ಣುವು ಮಹೇಶ್ವರನ ಸ್ವರೂಪವನ್ನು ತಿಳಿದಿದ್ದನು" ಎಂದು ಋಗ್ವೇದದಲ್ಲಿ ಪ್ರಸಿದ್ಧವಾಗಿದೆ. ಶ್ವೇತಾಶ್ವತರದ ಅಜಾತಶ್ರುತಿಯಲ್ಲಿ ಶಿವನು ಜನನಮರಣರಹಿತನೆಂದೂ, ಕಾರಣಗಳೆಲ್ಲಕ್ಕೂ ಕಾರಣನೆಂದೂ ಪ್ರಸಿದ್ಧವಾಗಿದೆ. "ನಾರಾಯಣನಿಂದ ರುದ್ರ ಹುಟ್ಟಿದನು" ಎಂಬ ವಾಕ್ಯವು ತ್ರಿಮೂರ್ತಿಗಳೊಳಗಿನ ಕಾಲರುದ್ರನಿಗೆ ಅನ್ವಯಿಸುತ್ತದೆ. "ಮಹೇಶ್ವರನಿಂದ ಸೃಷ್ಟಿಸ್ಥಿತಿಲಯಗಳಿಗೆ ಕಾರಣರಾದ ತ್ರಿಮೂರ್ತಿಗಳು ಹುಟ್ಟಿದರು" ಎಂಬಲ್ಲಿ ಈ ಅಂಶ ಸ್ಪಷ್ಟವಾಗಿದೆ. ಬೇರೆ ಶ್ರುತಿಗಳಲ್ಲೂ ಶಿವನೇ ತ್ರಿಮೂರ್ತಿಗಳಿಗೆ ಕಾರಣನೆಂದು ಹೇಳಲಾಗಿದೆ. ಶ್ವೇತಾಶ್ವತರದಲ್ಲಿ "ಬ್ರಹ್ಮವಾದಿಗಳು ಹೇಳುತ್ತಾರೆ. "ಕಾರಣಭೂತವಾದ ಬ್ರಹ್ಮ ಯಾವುದು ? ನಾವು ಹೇಗೆ ಹುಟ್ಟಿದ್ದೇವೆ" ಎಂದು ಆರಂಭಿಸಿ ಪ್ರಶ್ನೋತ್ತರರೂಪದಿಂದ ಶಿವನನ್ನೇ ಪರಬ್ರಹ್ಮವೆಂದು ಸಾಧಿಸಿ "ಪ್ರಳಯದಲ್ಲಿ ಹಗಲು ರಾತ್ರಿಗಳ ಮತ್ತು ಸದಸದ್ವಸ್ತುಗಳ ವಿಭಾಗವಿಲ್ಲದೆ, ಪ್ರಕಾಶದಲ್ಲಿ ಸೂರ್ಯನಿಗೆ ಶ್ರೇಷ್ಠನೂ ಅಕ್ಷರನೂ ಆದ ಶಿವನೊಬ್ಬನೇ ಕೇವಲನಾಗಿದ್ದನು. ಅವನಿಂದ ಸನಾತನವಾದ ಪ್ರಜ್ಞಾಶಕ್ತಿ ಹೊರಹೊಮ್ಮಿತು" ಎಂಬಲ್ಲಿ ವಿಶ್ವವೆಲ್ಲಕ್ಕೂ ಆಧಾರನಾದ ಶಿವನನ್ನೇ ಪ್ರಜ್ಞಾರೂಪವಾದ ಗಾಯತ್ರೀಮಂತ್ರವೂ ಪ್ರತಿಪಾದಿಸುತ್ತಿರುವುದರಿಂದ ಅವನೇ ವಿಶ್ವಾಧಿಕನೆಂದು ಹೇಳಲಾಗಿದೆ. ಅಥರ್ವಶಿರಸ್ಸಿನಲ್ಲೂ "ಸರ್ವೈಶ್ವರ್ಯಸಂಪನ್ನನಾದ ಶಿವನೊಬ್ಬನನ್ನೇ ದಹರಾಕಾಶದಲ್ಲಿ ಧ್ಯಾನಿಸಬೇಕು" ಎಂಬಲ್ಲಿ ಅವನನ್ನು ವಿಶ್ವದ ಕಾರಣನೆಂದು ಹೇಳಿರುವುದರಿಂದ ನಾರಾಯಣನು ಪರಬ್ರಹ್ಮವೆನಿ

ಸಲಾರನು. ಈಶಾನಮಂತ್ರದಲ್ಲಿ ಶಿವನೇ ವಿಶ್ವದ ಪಾಲಕನೆಂದೂ ‘ ನಿಧನಪತಯೇ ನಮಃ’ ಎಂಬಲ್ಲಿ ಅವನೇ ಸರ್ವಲಯಕಾರಣನೆಂದೂ ಹೇಳಿದೆ. ಜನ್ಮಾದಿಸೂತ್ರದಲ್ಲೂ ‘ ಯತೋ ವಾ ಇಮಾನಿ’ ಎಂಬ ಶ್ರುತಿಯಲ್ಲೂ ಜಗಜ್ಜನ್ಮಾದಿಕಾರಣವನ್ನು ಬ್ರಹ್ಮದ ಲಕ್ಷಣವೆಂದು ಹೇಳಿದೆ. ಆದ್ದರಿಂದ ಶಿವನೇ ಪರಬ್ರಹ್ಮನೆಂದು ಸಿದ್ಧವಾಯಿತು. ವಿಷ್ಣುವು ಎಲ್ಲಾ ದೇವತೆಗಳಿಗೂ ಪ್ರಧಾನನೆಂದು ಹೇಳುವ ಮೂರನೆ ಪಕ್ಷವೂ ಯುಕ್ತವಲ್ಲ. ಸಾಮವೇದದ ಪ್ರಥಮಮಂತ್ರದಲ್ಲಿ ಶಿವನನ್ನೇ ಎಲ್ಲಾ ಕರ್ಮಗಳಿಗೂ ಅಧಿಪತಿ ಎಂದು ಹೇಳಿ ವೈದಿಕರಿಗೆ ಕರ್ಮಾರಂಭದಲ್ಲಿ ಶಿವನ ಸ್ಮರಣವನ್ನೇ ವಿಧಿಸಲಾಗಿದೆ. “ ವೈದಿಕನು ಎಲ್ಲ ಕರ್ಮಗಳನ್ನು ಶಿವನನ್ನುದ್ದೇಶಿಸಿಯೇ ಮಾಡಬೇಕು. ಯಾವನು ಎಲ್ಲಾ ಅವಸ್ಥೆಗಳಲ್ಲೂ ಶಿವನನ್ನೇ ಸ್ಮರಿಸುವನೋ ಅವನು ಒಳಗೂ ಹೊರಗೂ ಶುದ್ಧನಾಗಿರುವನು ” ಎಂದು, ಶೈವಪುರಾಣದಲ್ಲೂ “ ಶುಚಿಯಾಗಲೀ ಅಶುಚಿಯಾಗಲೀ ಎಲ್ಲಾ ಕಾಲದಲ್ಲೂ ಶಿವನನ್ನೇ ಸ್ಮರಿಸುವವನು ಬೆಂಕಿಯಂತೆ ಸ್ವಚ್ಛವಾಗಿರುವನು ” ಎಂದು ಸ್ಕಾಂದದಲ್ಲೂ ಹೇಳಿದೆ. ಮನ್ವಾದಿಸ್ಮೃತಿಗಳಂತೆ ಇವೆಲ್ಲವೂ ಶ್ರುತಿಮೂಲಕವಾದ್ದರಿಂದ ಗ್ರಾಹ್ಯವೆನಿಸಿವೆ. ವಿಷ್ಣುವನ್ನು ಉದ್ದೇಶಿಸಿ ಕರ್ಮವನ್ನಾರಂಭಿಸಬೇಕೆಂದು ಹೇಳುವ ಸ್ಮೃತಿಗಳು ಸಾಂಖ್ಯಸ್ಮೃತಿಯಂತೆ ವೇದಮೂಲವಲ್ಲದ್ದರಿಂದ ದುರ್ಬಲವೆನಿಸಿವೆ. “ ತಿಥಿವಾರನಕ್ಷತ್ರಯೋಗಕರಣಗಳೆಲ್ಲವನ್ನೂ ಶಿವಮಯವೆಂದು ಸ್ಮರಿಸುತ್ತ ವೈದಿಕನು ಕರ್ಮವನ್ನಾಚರಿಸಬೇಕು” ಎಂಬಲ್ಲಿ ನಕ್ಷತ್ರ ಮೊದಲಾಗಿ ಎಲ್ಲವನ್ನು ಶಿವಮಯವೆಂದೇ ಹೇಳಿದೆ. “ ವಿಶ್ವದಲ್ಲಿ ಹಿಂದಿನದು ಮುಂದಿನದು ಹೀಗೆ ಅನೇಕ ಬಗೆಯಾಗಿ ಇರುವುದೆಲ್ಲವೂ ಈ ರುದ್ರನೇ ಆಗಿದೆ. ಅವನಿಗೆ ನಮ್ಮ ಈ ನಮಸ್ಕಾರ ಸಲ್ಲಲಿ ” ಎಂದು ಅನೇಕ ಶ್ರುತಿಗಳಲ್ಲಿ ಎಲ್ಲವೂ ಶಿವನೆಂದೇ ಹೇಳಲಾಗಿದೆ. ಶ್ರಾದ್ಧದ ಆರಂಭದಲ್ಲಿ“ಮಹಾದೇವನೂ ಪರಮಾತ್ಮನೂ ಸದಾಶಿವನೂ ಪ್ರಭುವೂ ಆದ ಮಹೇಶ್ವರನು ಪಿತೃರೂಪದಿಂದ ಈ ಸೇವೆಯನ್ನು ಸ್ವೀಕರಿಸಿ ಪ್ರೀತನಾಗಲಿ ” ಎಂದು ಶ್ರಾದ್ಧವನ್ನು ಸಹ ಶಿವಪ್ರೀತ್ಯರ್ಥವಾಗಿ ಶಿವಾರಾಧನರೂಪದಿಂದಲೇ ಮಾಡಬೇಕೆಂದು ಹೇಳಿದೆ. ಕೊನೆಯಲ್ಲಿ “ ವಾಮದೇವಮಂತ್ರದಿಂದ ಶಿವಸ್ಮರಣಪೂರ್ವಕವಾಗಿಯೇ ಶಿವಯೋಗಿಗಳನ್ನು ತೃಪ್ತಿಪಡಿಸಬೇಕೆಂದು ಹೇಳಿರುವುದರಿಂದ ವೇದದಲ್ಲಿ ಬರುವ ವಾಕ್ಯಗಳೆಲ್ಲವೂ ಶಿವನಿಗೇ ಅನ್ವಯಿಸುತ್ತವೆ. ಹಾಗೆಯೇ “ನೈಮಿತ್ತಿಕ ಕರ್ಮಗಳನ್ನೂ ಶಿವಪ್ರೀತ್ಯರ್ಥವಾಗಿಯೇ ಶಿವಾರಾಧನಬುದ್ಧಿಯಿಂದಲೇ ಮಾಡಬೇಕು” ಎಂದು ಶಾಂಕರಸಂಹಿತೆಯಲ್ಲೂ “ಗಯೆಯಲ್ಲಿ ರುದ್ರನಿಗಾಗಿ ಪಿಂಡವನ್ನು ‘ ಈಶಾನ, ವಿಷ್ಣು, ಬ್ರಹ್ಮ, ಕಾರ್ತಿಕೇಯ’ ಎಂದು ಹೇಳುತ್ತಾ ಭಕ್ತಿಯಿಂದ ಅರ್ಪಿಸಿದವನು ಮುಂದಿನ ಏಳು ಜನ್ಮಗಳನ್ನು ದಾಟಿ ಶಿವಲೋಕವನ್ನು ಸೇರುತ್ತಾನೆ” ಎಂಬಲ್ಲೂ ಈಶಾನಪದವನ್ನೇ ಮೊದಲು ಹೇಳಿದೆ. ಹೀಗೆ ಶ್ರಾದ್ಧವೆಲ್ಲವೂ ಶಿವಪ್ರೀತ್ಯರ್ಥವಾಗಿ ಮಾಡುವ ಕರ್ಮವೇ ಆಗಿದೆ. ವಿಷ್ಣುವನ್ನು ಶ್ರಾದ್ಧಸಂರಕ್ಷಕನೆಂದು ಹೇಳಿರುವುದರಿಂದ ಶ್ರಾದ್ಧಫಲದಾತನೂ ಅವನೇ ಆಗಲಿ ಎಂದರೆ ರಾಜನ ಕೋಶಾಗಾರದ ರಕ್ಷಣೆಗೆ ಒಬ್ಬ ಅಧಿಕಾರಿಯನ್ನು

ನೇಮಿಸಿರುವಂತೆಯೂ, ಶ್ರಾದ್ಧರಕ್ಷಣೆಗೆ ವಿಶ್ವೇದೇವನಂತೆಯೂ ವಿಷ್ಣುವನ್ನು ಅಧಿಕಾರಿಯಾನ್ನಾಗಿ ನೇಮಿಸಿರುವುದರಿಂದ ಅವನು ರಕ್ಷಕನೆನಿಸಿದ್ದಾನೆ. ವ್ಯಾಸನ ಭುಜವು ಕಂಭದಂತೆ ನೆಟ್ಟಗೆ ನಿಂತಾಗ ವ್ಯಾಸನಿಗೆ ವಿಷ್ಣುವು "ದೇವೇಂದ್ರನು ಯಜ್ಞಕರ್ತನು, ಬ್ರಹ್ಮನು ವೇದಕರ್ತನು, ನಾನು ಜಗತ್ಕರ್ತನು, ನನಗೆ ಮಹೇಶ್ವರನು ಕರ್ತನು" ಎಂದು ಹೇಳಿರುವುದರಿಂದ ಶಿವನೇ ಸರ್ವಾಧಿಕನೆನಿಸಿದ್ದಾನೆ. "ಅಗ್ನಿ-ನೀರು-ಓಷಧಿಗಳಲ್ಲೂ ಮತ್ತು ಸಮಸ್ತ ಪ್ರಪಂಚಗಳಲ್ಲೂ ರುದ್ರನೇ ನೆಲಸಿದ್ದಾನೆ" ಎಂಬಲ್ಲಿ ಶಿವನೇ ನೀರಿನಲ್ಲಿ ಇರುವನೆಂದು ಹೇಳಿರುವುದರಿಂದ ಸ್ನಾನಮಾಡುವಾಗ ವಾಮದೇವ ಮಂತ್ರದಿಂದ ಶಿವನನ್ನು ಸ್ತುತಿಸಿಯೇ ಸ್ನಾನಮಾಡಬೇಕು. ಸೂರ್ಯನೇ ಶಿವನ ಮುಖ್ಯಶರೀರವಾದ್ದರಿಂದ ಸೂರ್ಯಮಂಡಲದಲ್ಲೂ ಶಿವನೇ ಇರುವನೆಂದು ಸಿದ್ಧವಾಗುತ್ತದೆ. ಆದ್ದರಿಂದ ಶಿವನೇ ಪರಬ್ರಹ್ಮವೆಂದು ನಿಶ್ಚಿತವಾಯಿತು. ಹಾಗಾದರೆ "ಆದಿತ್ಯನಲ್ಲಿ ಈ ಹಿರಣ್ಮಯ ಪುರುಷನು" ಎಂದು ಆರಂಭಿಸಿ ಛಾಂದೋಗ್ಯದಲ್ಲಿ "ಸೂರ್ಯನ ಪ್ರಕಾಶದಿಂದ ಅರಳಿದ ಪುಂಡರೀಕದಂತೆ ಕಣ್ಣುಗಳುಳ್ಳವನು" ಎಂಬಲ್ಲಿ ಎರಡು ಕಣ್ಣುಗಳನ್ನು ಮಾತ್ರವೇ ಹೇಳಿರುವುದರಿಂದಲೂ, ಸೂರ್ಯಮಂಡಲದೊಳಗೆ ಇರುವ ನಾರಾಯಣನನ್ನು ಧ್ಯಾನಿಸಬೇಕು" ಎಂಬಲ್ಲಿ ನಾರಾಯಣನನ್ನೇ ಹೇಳಿರುವುದರಿಂದಲೂ ಭರ್ಗಪದವು ನಾರಾಯಣನನ್ನೇ ಬೋಧಿಸುತ್ತದೆ ಎಂದು ಆಕ್ಷೇಪ ಬಂದರೆ "ಅಂತಸ್ತದ್ಧರ್ಮೋಪದೇಶಾತ್" ಎಂಬ ಸೂತ್ರದಲ್ಲಿ ಅದನ್ನು ನಿರಾಕರಿಸಲಾಗಿದೆ. ನೀಲಕಂಠಭಾಷ್ಯದಲ್ಲೂ, ಸೂತಸಂಹಿತೆಯ ಧ್ಯಾನಯೋಗಖಂಡದಲ್ಲೂ ಶಿವನೇ ಸೂರ್ಯಮಂಡಲದೊಳಗೆ ಇರುವವನೆಂದು "ಕಪ್ಯಾಸಂ ಪುಂಡರೀಕಮೇವಾಕ್ಷಿಣೀ" ಎಂಬ ಛಾಂದೋಗ್ಯದ ಮಂತ್ರಕ್ಕೆ ಅರ್ಥಮಾಡಲಾಗಿದೆ. ಶತರುದ್ರೀಯದಲ್ಲೂ ಹೀಗೆಯೇ ಹೇಳಿದೆ. ಈ ಶ್ರುತಿಯಲ್ಲಿ ಎಲ್ಲಾ ದೇವರಿಗೂ ನಾವು ಮಾಡುವ ಸ್ತೋತ್ರ ನಮಸ್ಕಾರಗಳು ಶಿವನಿಗೇ ಸೇರುತ್ತವೆ ಎಂದು ಹೇಳಿದೆ. ಆದ್ದರಿಂದ ಎಲ್ಲರ ನಮಸ್ಕಾರವೂ ಕೇಶವನಿಗೆ ಸೇರುತ್ತದೆ ಎಂಬ ಮಾತು ವೇದವಿರುದ್ಧವಾದ್ದರಿಂದ ಸಾಂಖ್ಯವಚನದಂತೆ ಅಯುಕ್ತವೆನಿಸಿದೆ. ಪಂಚಶೀರ್ಷೋಪನಯನವೆಂಬಲ್ಲಿ ಐದು ತಲೆ ಮತ್ತು ಮೂರು ಕಣ್ಣುಗಳಿರುವ ಮಹೇಶ್ವರನಲ್ಲಿಯೇ ಸಂಧ್ಯಾವಂದನವು ಅನ್ವಯಿಸುವುದೆಂದು ಹೇಳಿರುವುದರಿಂದ ಆಯಾ ವಿನಿಯೋಗಕ್ಕನುಗುಣವಾಗಿ ವಾಕ್ಯಗಳನ್ನು ಅನ್ವಯಿಸಿಕೊಳ್ಳಬೇಕು. ಆ ಪ್ರಕರಣದಲ್ಲಿರುವ "ಭರ್ಗೋ ದೇವಸ್ಯ ರುದ್ರಾತ್ಮನೇ" ಎಂಬ ಮಂತ್ರದಲ್ಲಿ ಭರ್ಗಪದವು ರುದ್ರನಿಗೇ ಅನ್ವಯಿಸುತ್ತದೆ ಎಂಬುದು ಸ್ಪಷ್ಟವಾಗಿದೆ. "ಶ್ರುತಿಸ್ಮೃತಿಗಳಿಗೆ ಪರಸ್ಪರ ವಿರೋಧವುಂಟಾದರೆ ಶ್ರುತಿಯೇ ಬಲಿಷ್ಠವೆನಿಸುವುದು" ಎಂಬ ನ್ಯಾಯದಿಂದ ಶ್ರುತ್ಯರ್ಥಕ್ಕನುಗುಣವಾಗಿ ವಾಕ್ಯದ ಅರ್ಥವನ್ನು ಹೊಂದಿಸಿಕೊಳ್ಳಬೇಕು. ಇಲ್ಲಿ ಕೆಲವರು "ಮಂತ್ರಿಗಳಿಗೆ ಪ್ರಜೆಗಳು ಒಪ್ಪಿಸುವ ದ್ರವ್ಯ ಹೇಗೆ ರಾಜನಿಗೇ ಸೇರಬೇಕೋ ಹಾಗೆ ವಿಷ್ಣುವಿಗೆ ಮಾಡುವ ನಮಸ್ಕಾರ ಶಿವನನ್ನೇ ಸೇರುವುದು" ಎಂದು ಹೇಳುತ್ತಾರೆ. "ಚೋರರು ತರುವ ಕಿರೀಟ ಮೊದಲಾದ

ಆಭರಣವನ್ನು ಅವರೇ ಧರಿಸದಿರುವಂತೆ ಬ್ರಹ್ಮವಿಷ್ಣ್ವಾದಿದೇವತೆಗಳು ತಮಗೆ ಬರುವ ನಮಸ್ಕಾರಗಳನ್ನು ತಾವೇ ಒಪ್ಪಿಸಿಕೊಳ್ಳಲಾರರು. ನದಿಗಳೆಲ್ಲವೂ ಸಮುದ್ರವನ್ನು ಸೇರುವಂತೆ ಎಲ್ಲಾ ದೇವರಿಗೂ ಮಾಡುವ ನಮಸ್ಕಾರಗಳೂ ಮಹಾದೇವನಲ್ಲಿಯೇ ಸೇರುತ್ತವೆ. ಭಕ್ತರು ಮಾಡುವ ನಮಸ್ಕಾರ ಮತ್ತು ಸ್ತೋತ್ರಗಳೆರಡನ್ನೂ ಬ್ರಹ್ಮ ವಿಷ್ಣ್ವಾದಿಗಳು ತಾವೇ ಸ್ವೀಕರಿಸಲು ಶಕ್ತರಲ್ಲ". ಹೀಗೆ ಸ್ಕಾಂದದಲ್ಲಿ ಹೇಳಿದೆ. ಆದ್ದರಿಂದ ಶಿವನು ಎಲ್ಲಾ ದೇವತೆಗಳಿಗೂ ಪ್ರಾಧಾನನೆಂಬುದರಲ್ಲಿ ವಿರೋಧವಿಲ್ಲ.

ನನು ವಿಷ್ಣುಧರ್ಮೋತ್ತರೇ ಸ್ಮಾರ್ತಾಚಮನವಿಧಾನಾನಂತರಂ, "ಅಥ ಕೇಶವಾದಿಭಿಃ" ಇತ್ಯಾದಿನಾ ಪುರಾಣಾಚಮನಂ ವೈದಿಕಾನಾಂ ವಿಧೇಯತ್ವೇನ ಪ್ರತಿಪಾದಿತಮಿತಿ ಚೇನ್ನ "ಶ್ರೌತಮಾಚಮನಂ ಪ್ರೋಕ್ತಂ ಯಜ್ಞಾದೀನಾಂ ನಿರಂತರಂ। ಸ್ಮಾರ್ತಮಾಚಮನಂ ಜ್ಞೇಯಂ ಸ್ಮಾರ್ತಕರ್ಮಾವಲಂಬಿನಾಂ॥" ಇತಿ ಗೌತಮಸ್ಮೃತೌ ಸ್ಮರಣಾತ್ ಕೇಶವಾದಿನಾಮಭಿರಾಚಮನಂ ತಾಂತ್ರಿಕಮೇವೇತಿ ವೇದ್ಯಂ. ವೈದಿಕಾನಾಂ ಸ್ಮಾರ್ತಾನಾಮಪಿ ಮೂತ್ರೋತ್ಸರ್ಜನಾದಿಕಾಲೇಷು ಕೇಶವಾದಿಭಿರಾಚಮನಂ ಕಥಂ ನ ಕರ್ತವ್ಯಮಿತಿ ಚೇನ್ನ ಬ್ರಾಹ್ಮಣಾನಾಂ ಶಿವದೇವತ್ವಾತ್ ಶಿವನಾಮಭಿರೇವಾಚಮನಂ ಕರ್ತವ್ಯಂ. "ಬ್ರಹ್ಮ ಯಜ್ಞಾದಿಕಾಲೇಷು ಶ್ರುತ್ಯಾಚಮನಮಿಷ್ಯತೇ। ಸೋಮಯಾಗಾದಿಕಾಲೇಷು ಶ್ರೌತಾಚಮನಮೀರ್ಯತೇ। ಸಂಧ್ಯಾದಿಸ್ಮಾರ್ತಕೃತ್ಯೇಷು ಸ್ಮೃತ್ಯಾಚಮನಮೀರಿತಂ। ಮೂತ್ರಾದ್ಯುತ್ಸರ್ಜನೇ ಕಾಲೇ ಪುರಾಣಾಚಮನಂ ಸ್ಮೃತಂ। ಶಿವನಾಮಾದಿಭಿಃ ಪಂಚವಿಂಶತ್ಯಾ ಕುರುತಾದ್ಬುಧಃ॥" ಇತಿ ವೃದ್ಧಶಾತಾತಪಸ್ಮೃತಿದರ್ಶನಾತ್ತದೇವ ಯುಕ್ತಂ. ಊರ್ಧ್ವಪುಂಡ್ರಾದಿಕಂ ನ ವೈದಿಕಪರಿಗ್ರಾಹ್ಯಂ ತಾಂತ್ರಿಕತ್ವಾತ್. ತದುಕ್ತಂ ಪಾರಾಶರಪುರಾಣೇ "ಶೌತಲಿಂಗಂ ತು ವಿಜ್ಞೇಯಂ ತ್ರಿಪುಂಡ್ರೋದ್ಧೂಳನಾದಿಕಂ। ಅಶ್ರೌತಂ ತೂರ್ಧ್ವಪುಂಡ್ರಾದಿ ನೈವ ತಿರ್ಯಕ್ತ್ರಿಪುಂಡ್ರಕಂ॥" ಇತಿ. ಗಾರುಡಸ್ಮೃತೌ "ತ್ರಿಪುಂಡ್ರಂ ಸುರವಿಪ್ರಾಣಾಂ ವರ್ತುಲಂ ನೃಪವೈಶ್ಯಯೋಃ। ಅರ್ಧಚಂದ್ರಂ ತು ಶೂದ್ರಾಣಾಂ ಅನ್ಯೇಷಾಮೂರ್ಧ್ವಪುಂಡ್ರಕಂ॥", "ಮುಖೇ ಮಂತ್ರಂ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ। ಶಿಖಾರುದ್ರಾಕ್ಷಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ॥" ಇತ್ಯಾದಿನಾ ಬಹುಶ್ರುತಿಸ್ಮೃತಿಭಿಸ್ತ್ರಿಪುಂಡ್ರರುದ್ರಾಕ್ಷಲಿಂಗಧಾರಣಾದಿಮಾಹಾತ್ಮ್ಯಂ ಸರ್ವಾಧಿಕರಣೇ ಬಹುಧಾ ಪ್ರಪಂಚಿತಂ. ನನು ವೇದೋಪಬೃಂಹಕಸ್ಮೃತಿಪುರಾಣಾನಾಮವೈದಿಕತಂತ್ರಮಾರ್ಗಪ್ರತಿಪಾದಕತ್ವಾಭಾವಾತ್ ಊರ್ಧ್ವಪುಂಡ್ರಂ ತಿರ್ಯಗ್ಭಸ್ಮತ್ರಿಪುಂಡ್ರವದ್ವೈದಿಕಮಿತಿ ಚೇನ್ನ, ತದುಕ್ತಂ ಪಾರಾಶರೇ "ಪುರಾಣೇ ಧರ್ಮಶಾಸ್ತ್ರೇ ವಾ

ಯೋಽರ್ಥಶ್ಶ್ರುತ್ಯಾ ವಿರುದ್ಧ್ಯತೇ । ತಂತ್ರಾರ್ಥಸ್ಸ ತು ವಿಜ್ಞೇಯೋ ಮಾನಸೇನ ಮನೀಷಿಭಿಃ ॥" ಇತಿಶ್ರವಣಾತ್ ವೇದವಿರುದ್ಧೋರ್ಧ್ವಪುಂಡ್ರಸ್ಯ ಸ್ಮೃತಿಪುರಾಣಪಠಿತತ್ವೇಽಪಿ ವೇದಮೂಲಕತ್ವಾಭಾವಾನ್ನ ವೈದಿಕಪರಿಗ್ರಾಹ್ಯಂ. "ಗೌಡೇ ವಿದ್ಯಾ ತಪಶ್ಚೋಳೇ ದಯಾ ಕಾಶ್ಮೀರಮಂಡಲೇ । ಆರ್ಯಾವರ್ತೇ ಸದಾಚಾರೋ ಮಂತ್ರಸಿದ್ಧಿಸ್ತು ಕೇರಳೇ ॥" ಇತಿ ಪಾರಾಶರಪುರಾಣವಚನೇ ಹ್ಯಾರ್ಯಾವರ್ತದೇಶಾಚಾರಸ್ಯ ಸರ್ವೋತ್ಕೃಷ್ಟತ್ವಪ್ರತಿಪಾದನಾತ್ತದ್ದೇಶೇ ಕೇಶವನಾಮೋರ್ಧ್ವಪುಂಡ್ರಸಾಲಗ್ರಾಮಪೂಜಾದಿಕಸ್ಯ ಬಹುಶೋ ದೃಷ್ಟತ್ವಾತ್ತದಾಚಾರ ಏವ ವಿದ್ವತ್ಪ್ರಮಾಣೀಯ ಇತಿ ಚೇತ್ತದಯುಕ್ತಂ. ತತ್ರೈವಂ "ಮಧ್ಯದೇಶಾದಿಸಂಸಿದ್ಧಸದಾಚಾರಂ ಸಮಾಚರೇತ್ । ಸ್ಮೃತಿಮಂತ್ರವಿರುದ್ಧಂ ತು ತತ್ರಾಪಿ ನ ಸಮಾಚರೇತ್ ॥ ಸರ್ವದೇಶೇಷು ಯತ್ಸ್ಮೃತ್ಯಾ ಶ್ರುತ್ಯಾ ವಾ ವಿಹಿತಂ ಯಥಾ । ಆಚಾರೋಽಪ್ರತಿಷಿದ್ಧಶ್ಚ ಸ ಪ್ರಮಾಣಂ ನ ಸಂಶಯಃ ॥" ಇತಿ ಶ್ರವಣಾತ್ತದೇವ ಯುಕ್ತಂ. ನನು ಕೇಶವಾದಿನಾಮ್ನಾಂ ವೇದೋಕ್ತತ್ವಾಭಾವೇಽಪಿ ಯಜ್ಞೋಪವೀತವದಾಚರಣೀಯಮಿತಿ ಚೇತ್ತದಸತ್ ಯಜ್ಞೋಪವೀತವಿಧಾನಸ್ಯ ಗೃಹ್ಯಪರಿಶೇಷೇ "ಯಜ್ಞೋಪವೀತಂ ಪರಮಂ ಪವಿತ್ರಂ" ಇತಿ ಮಂತ್ರಪ್ರತಿಪಾದನಾತ್ ಶ್ರುತಿವಿರೋಧಾಭಾವಾತ್ ಬ್ರಹ್ಮೋಪನಿಷದ್ದರ್ಶನಾಚ್ಚ ತದ್ವತ್ಕೇಶವಾದಿನಾಮ್ನಾಂ ಶ್ರುತಿಪ್ರತಿಪಾದಕತ್ವಾಭಾವಾತ್ತಾಂತ್ರಿಕತ್ವಮನಿವಾರ್ಯಂ. ಶಿವಲಿಂಗಸ್ಯ ಶ್ರುತಿಸಿದ್ಧತ್ವಾದ್ವೈದಿಕಪೂಜಾರ್ಹತ್ವಮುಪಪದ್ಯತೇ. ಯಜುರ್ವೇದೇ "ನಿಧನಪತಯೇ ನಮಃ" ಇತ್ಯಾರಭ್ಯ "ಪಾಣಿಮಂತ್ರಂ ಪವಿತ್ರಂ" ಇತ್ಯಂತೇನ ಶಿವಲಿಂಗಸ್ಯ ಪರಬ್ರಹ್ಮತ್ವೇನ ಸರ್ವೋಪಾಸ್ಯತ್ವಪ್ರಕಟನಾಯ ಪ್ರತಿಪಾದಂ ನಮಸ್ಕಾರಪೂರ್ವಕಂ ಸರ್ವಾತ್ಮಕತ್ವಂ ಶ್ರೂಯತೇ. "ಲೀಯತೇಽಸ್ಮಿನ್ನಂತ್ಯಕಾಲೇ ಜಗತ್ಸರ್ವಂ ಚರಾಚರಂ । ಸೃಷ್ಟಿಕಾಲೇ ಬಹಿರ್ಯಾತಿ ತಸ್ಮಾಲ್ಲಿಂಗಂ ಪರಾತ್ಪರಂ ॥" ಇತಿ ಲೈಂಗೇ ವ್ಯುತ್ಪತ್ತ್ಯಾ ಲಿಂಗಸ್ಯ ಪರಬ್ರಹ್ಮತ್ವಂ ಮಹಾಮಹಿಮಾತಿಶಯತ್ವಂ ಚ ನಿಶ್ಚಿತಂ. ತಸ್ಮಾತ್ ಶ್ರುತಿಪುರಾಣಸಿದ್ಧತ್ವಾಲ್ಲಿಂಗಂ ವೈದಿಕಮೇವ. ವೇದಮೂಲಕತ್ವಾಭಾವಾದ್ವಿಷ್ಣುವಿಗ್ರಹಸಾಲಗ್ರಾಮದೇವತಾಪೂಜನಸ್ಯ ತಾಂತ್ರಿಕತ್ವಮೇವ. ಕಿಂಚ ವಿಷ್ಣೋಶ್ಶಿವಲಿಂಗಾರಾಧಕತ್ವಂ ಋಗ್ವೇದೇ ಶ್ರೂಯತೇ. "ತವ ಶ್ರಿಯೇ ಮರುತೋ ಅರ್ಚಯಂತ ರುದ್ರ ಯತ್ತೇ ಜನಿಮ ಚಾರು ಚಿತ್ರಂ । ಪದಂ ಯದ್ವಿಷ್ಣೋರುಪಮಂ ನಿಧಾಯ ತೇನ ಪಾಸಿ ಗುಹ್ಯಂ ನಾಮ ಗೋನಾಂ ॥" ಇತಿ. ಬ್ರಹ್ಮಕೈವರ್ತೇ "ರೌದ್ರಂ ಸಮಭ್ಯರ್ಚ್ಯ ಹಿ ಲಿಂಗಮಾದೌ ಶಿಲಾಮಯಂ ಚಾರು ಹರಿಸ್ತು ಭಕ್ತ್ಯಾ । ಸುದು

ರ್ಲಭ್ಯಂ ವೈಷ್ಣವಮಾದ್ಯಮುಗ್ರ್ಯಮವಾಪ್ತವಾನೇಷ ಪರಾತ್ಪರಂ ತತ್॥" ಇತಿ. ತಥಾ ಪರಾಶರಪುರಾಣೇ "ರೌದ್ರಂ ಲಿಂಗಂ ಮಹಾವಿಷ್ಣು ರ್ಭಕ್ತ್ಯಾ ಶುದ್ಧಶಿಲಾಮಯಂ । ಚಾರುಚಿತ್ರಂ ಸಮಭ್ಯರ್ಚ್ಯ ಲಬ್ಧವಾ ನ್ಪರಮಂ ಪದಂ । ಸಾ ಚ ಲಕ್ಷ್ಮೀಸ್ಸಮಾಖ್ಯಾತಾ ಮಹಾವಿಷ್ಣೋಸ್ತು ದುರ್ಲಭಾ । ಯಚ್ಚ ಲಿಂಗಂ ಸಮಭ್ಯರ್ಚ್ಯ ಸಂಪೂಜ್ಯಂ ಸರ್ವ ಚೇತನೈಃ॥" ಇತ್ಯಾದಿನಾ"ಸರ್ವತ್ರಪ್ರಸಿದ್ಧಾ"ಧಿಕರಣೇ ಬಹುಧಾ ಪ್ರಪಂ ಚಿತಂ. ನನು ರುದ್ರಸ್ಯ ತತ್ಪ್ರಣೀತತತ್ಪ್ರತಿಪಾದಕಾಗಮಪುರಾಣಾನಾಂ ತಾಮಸತ್ವಮಿತಿ ಯದುಕ್ತಂ ತದಸಮಂಜಸಂ. "ರುದ್ರೋ ವಾ ಏಷ ಯದಗ್ನಿಸ್ತಸ್ಯೈತೇ ತನುವೌ ಘೋರಾಽನ್ಯಾ ಶಿವಾನ್ಯಾ" ಇತಿ ಶ್ರುತೌ ರುದ್ರಸ್ಯ ಪರಬ್ರಹ್ಮಣಃ ಘೋರಶರೀರತ್ವೇನ ಜಗತ್ಸಂಹಾರಕತ್ವಂ, ಅಘೋರಶರೀರತ್ವೇನ ಜಗತ್ಕಾರಣತ್ವಂ ಜಗತ್ಪೋಷಕತ್ವಂ ಚ ಪ್ರತಿಪಾ ದ್ಯತೇ. ಸಂಹಾರಸ್ಯ ಕ್ರೂರಧರ್ಮತ್ವಾದ್ರುದ್ರಸ್ಯ ಸಂಹಾರಕರ್ತೃತ್ವಾತ್ತಾ ಮಸತ್ವಂ. ವಿಷ್ಣೋಃ ಪ್ರಪಂಚಪೋಷಕತ್ವೇನ ಸಾತ್ತ್ವಿಕತ್ವಮಿತಿ ಚೇನ್ನ ಸಂಹಾರಕರ್ತೃತ್ವಾಭಾವೇ ಹ್ಯನೀಶ್ವರತ್ವಪ್ರಸಂಗಾತ್. "ಯತೋ ವಾ ಇಮಾನಿ ಭೂತಾನಿ ಜಾಯಂತೇ," "ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಂ" ಇತ್ಯಾದಿಶ್ರುತಿಷು ಸಂಹಾರಸ್ಯ ಬ್ರಹ್ಮಧರ್ಮತ್ವೇನ ವಿವಕ್ಷಿತತ್ವಾನ್ನ ಶಂಕನೀಯಂ. "ನೀಲಕಂಠಂ ಪ್ರಶಾಂತಂ" ಇತಿ ಕೈವಲ್ಯೇ "ಪ್ರಪಂಚೋಪಶಮಂ ಶಾಂತಂ ಶಿವಂ" ಇತಿ ಮಾಂಡೂಕ್ಯೇ ಶಿವಸ್ಯ ಪರಮಸಾತ್ತ್ವಿಕತ್ವವ್ಯಪದೇಶಾತ್ಸರ್ವಾಧಿಕಸ್ಸಂ ಶ್ರೂಯತೇ. ಅತೋ ನ ತಾಮಸತ್ವಕಳಂಕಪ್ರಸಂಗಃ. ಏತಚ್ಚಾಪ್ಯಸ್ರಯೋನಿತ್ವಾಧಿಕರಣೇ ಬಹುಧಾ ಪ್ರಪಂಚಿತತ್ವಾದತ್ರ ಸಂಕ್ಷಿಪ್ತಂ. ಯಾಗಕ್ರಿಯಾಸು ರುದ್ರಹೋಮಾನಂ ತರಮಪ ಉಪಸ್ಪೃಶ್ಯೇತ್ಯನೇನ ತಾಮಸದೇವತಾತ್ವೇ ಹ್ಯಮಂಗಲದೇವ ತಾತ್ವೇ ಚಾಯಮೇವ ಮುಖ್ಯದೃಷ್ಟಾಂತ ಇತಿ ಯದುಕ್ತಂ ತದಸಮಂ ಜಸಂ, ಶ್ರೌತಶುಂಠಪ್ರಸಂಗಾತ್, "ಅಪಃ ಪರಿಷಿಂಚತಿ ರುದ್ರಸ್ಯಾಂತ ರ್ಹಿತ್ಯೈ"ಇತಿ ಯಜುರ್ವೇದೇ ಅಪಃಪರಿಷೇಚನಸ್ಯ ರುದ್ರಾಂತರ್ಧಾನಾ ರ್ಥಕತ್ವೇನ ಕಂಠೋಕ್ತ್ಯಾ ನಿರ್ದಿಷ್ಟತ್ವಾತ್. ಸ್ಕಾಂದೇ ವ್ಯಾಸಜೈಮಿನಿ ಸಂವಾದೇ ವ್ಯಾಸವಚನಂ "ದೇವಾತಾನಾಂ ಚ ಸರ್ವೇಷಾಂ ಪ್ರಭುಸ್ಸಾಂ ಬಸ್ತ್ರಿಲೋಚನಃ । ತಸ್ಮಾನ್ಮಹಾದೇವ ಇತಿ ಪ್ರೋಚ್ಯತೇ ವೇದವಾದಿಭಿಃ। ಅತ ಏವಾದ್ವಿತೀಯತ್ವಮೇಕ ಏವೇತಿ ವೈ ಶ್ರುತೇಃ। ತದ್ಭೃತ್ಯೈರ್ಬ್ರಹ್ಮ ವಿಷ್ಣ್ವಾದ್ಯೈರ್ನಾಹುತಿಃ ಪರಿಗೃಹ್ಯತೇ । ತದ್ವೈಲಕ್ಷಣ್ಯಸಿದ್ಧ್ಯರ್ಥಂ ರುದ್ರಸ್ಯ ಪರಮಾತ್ಮನಃ। ಸರ್ವಯಾಗೇಷು ಹೋಮೇಷು ರುದ್ರಾಂತ ರ್ಧಾನಸಿದ್ಧಯೇ । ಜಲೋಪಸ್ಪರ್ಶನಂ ಪ್ರೋಕ್ತಂ ನೀಲಕಂಠಸ್ಯ ಶೂಲಿ

ನಃ ||" ಇತಿ. ತಥಾ ಕೂರ್ಮೇ "ಯಥಾಕ್ರಮಂ ಸಮಭ್ಯರ್ಚ್ಯ ಭೋಜಯಿತ್ವಾ ಪ್ರಭುಂ ಭುವಿ | ಪ್ರೇಷಯಿತ್ವಾಥ ಭೃತ್ಯಾನಾಂ ಯಥಾ ಪೂಜಾ ವಿಧೀಯತೇ | ತಥಾ ರುದ್ರಂ ಮಹಾದೇವಂ ಸರ್ವಯಜ್ಞಫಲಪ್ರದಂ| ದತ್ವಾಹುತಿಂ ತತೋ ಭಕ್ತ್ಯಾ ತದಂತರ್ಧಾನಸಿದ್ಧಯೇ | ಜಲೋಪಸ್ಪರ್ಶನಂ ಪ್ರೋಕ್ತಂ ತತೋ ದೇವಸಮರ್ಚನಂ ||" ಇತಿ. ಕಿಂಚ ಶಿವಸ್ಯೇತರದೇವತಾಸಾಮಾನಾಧಿಕರಣ್ಯರಾಹಿತ್ಯಂ ಮಂತ್ರೋಪನಿಷದಿ ಶ್ರೂಯತೇ "ನ ತತ್ಸಮಶ್ಚಾಧಿಕಶ್ಚ ದೃಶ್ಯತೇ" ಇತ್ಯಾರಭ್ಯ "ನ ದ್ವಿತೀಯಾಯ ತಸ್ಥೇ" ಇತ್ಯಾದಿನಾ ಅದ್ವಿತೀಯತ್ವಾದಿಕಂ ತಸ್ಯೈವೋಪದಿಷ್ಟಂ. ನನು ನೈಋತಿರಾಕ್ಷಸಾದಿಪ್ರಕರಣಪಾಠಾತ್ ಶಿವಸ್ಯಾಪ್ಯಪಕೃಷ್ಟತ್ವಮಿತಿ ಚೇತ್ತದಯುಕ್ತಂ. ತದಾಪಸ್ತಂಬೇ "ಅಗ್ನೇರ್ಗವಾಂ ಬ್ರಾಹ್ಮಣಸ್ಯ" ಇತ್ಯಾದಿನಾ ಅಗ್ನಿಗೋಬ್ರಾಹ್ಮಣಾದಿಸ್ಪರ್ಶಸ್ಯ ಪತಿತಾನ್ಯೋಧ್ಯರಜಸ್ವಲಾಸ್ಪರ್ಶಸ್ಯೇವ ಸ್ನಾನವಿಧಿಶ್ರವಣಾತ್. ವಾಕ್ಯೈಕಪಾಠಾಚ್ಚ ನ ಪ್ರಕರಣೈಕದೋಷಃ. "ಗಾಮಗ್ನಿಂ ಶ್ರೋತ್ರಿಯಂ ಚೈವ ಪತಿತಂ ಚ ರಜಸ್ವಲಾಂ | ಬ್ರಹ್ಮಬಂಧುಂ ತಥಾ ಸ್ಪೃಷ್ಟ್ವಾ ಸವಾಸಾ ಜಲಮಾವಿಶೇತ್ ||" ಇತಿ ಸ್ಮೃತೌ ದರ್ಶನಾತ್ ಸರ್ವೇಷಾಮಶುಚಿತ್ವಮಹೇತುಕಂ. ತಸ್ಮಾಚ್ಛಿವಸ್ಯೈವ ಸರ್ವಾಧಿಕತ್ವಂ ನಿಷ್ಪ್ರತ್ಯೂಹಂ.

ವಿಷ್ಣುಧರ್ಮೋತ್ತರದಲ್ಲಿ ಸ್ಮಾರ್ತಾಚಮನವನ್ನು ಹೇಳಿದಮೇಲೆ ಕೇಶವನನ್ನು ಉದ್ದೇಶಿಸಿ ಪುರಾಣಾಚಮನವನ್ನೂ ವೈದಿಕರಿಗೆ ವಿಧಿಸಿರುವುದರಿಂದ ವಿಷ್ಣುವೇ ಪ್ರಧಾನನೆಂದು ಹೇಳುವುದಾದರೆ, "ಶ್ರೌತಾಚಮನವನ್ನು ಶ್ರುತ್ಯುಕ್ತ ಕರ್ಮಾಚರಣೆಗೂ, ಸ್ಮಾರ್ತಾಚಮನವನ್ನು ಸ್ಮೃತ್ಯುಕ್ತ ಕರ್ಮಾಚರಣೆಗೂ ವಿಧಿಸಲಾಗಿದೆ" ಎಂದು ಗೌತಮಸ್ಮೃತಿಯಲ್ಲಿ ಹೇಳಿರುವುದರಿಂದ ಕೇಶವನನ್ನು ಉದ್ದೇಶಿಸಿ ಮಾಡುವ ಆಚಮನವು ತಾಂತ್ರಿಕವೆನಿಸುತ್ತದೆ. ಶ್ರೌತರಾಗಲೀ ಸ್ಮಾರ್ತರಾಗಲೀ ಬ್ರಾಹ್ಮಣರು ಮೂತ್ರವಿಸರ್ಜನೆಯಾದಮೇಲೆ ವಿಷ್ಣುವಿನ ಹೆಸರಿನಲ್ಲಿ ಏಕೆ ಆಚಮನಮಾಡಬಾರದು? ಎಂದರೆ ಬ್ರಾಹ್ಮಣರಿಗೆ ಶಿವನೇ ದೇವನಾದ್ದರಿಂದ ಶಿವನ ಹೆಸರಿನಿಂದಲೇ ಆಚಮನಮಾಡಬೇಕು. ವೃದ್ಧಶಾತಾತಪಸ್ಮೃತಿಯಲ್ಲಿ "ಯಜ್ಞಾಚರಣೆಯ ಕಾಲದಲ್ಲಿ ಶ್ರೌತಾಚಮನವನ್ನೂ, ತ್ರಿಸಂಧ್ಯಾಕಾಲದ ಅರ್ಚನೆಯಲ್ಲಿ ಸ್ಮಾರ್ತಾಚಮನವನ್ನೂ, ಮೂತ್ರವಿಸರ್ಜನೆಯಾದಮೇಲೆ ಪುರಾಣಾಚಮನವನ್ನೂ ಜ್ಞಾನಿಯು ಶಿವನ ಇಪ್ಪತ್ತೈದು ನಾಮಗಳನ್ನು ಹೇಳುತ್ತಲೇ ಆಚರಿಸಬೇಕು" ಎಂದು ಹೇಳಿರುವುದರಿಂದ ಮೂತ್ರವಿಸರ್ಜನೆಯಾದಮೇಲೂ ಶಿವನ ಹೆಸರಿನಿಂದಲೇ ಆಚಮನಮಾಡಬೇಕು. ಗೌತಮಸ್ಮೃತಿಯಲ್ಲಿ "ಯಾವನಿಗೆ ಬಾಯಲ್ಲಿ ಮಂತ್ರವೂ, ಹೃದಯದಲ್ಲಿ ಧ್ಯಾನವೂ, ತಲೆಯಲ್ಲಿ ಲಿಂಗಭಸ್ಮರುದ್ರಾಕ್ಷಗಳೂ ಶಿಖೆಯೂ ಇರುತ್ತವೆಯೋ ಅವನು ಬ್ರಾಹ್ಮಣ"ನೆಂದು ಹೇಳಿದೆ. ಹೇಗೆ ಬ್ರಾಹ್ಮಣನಿಗೆ ಲಿಂಗ ಭಸ್ಮ ರುದ್ರಾಕ್ಷಗಳ ಆವಶ್ಯ

ಕತೆಯನ್ನು ಸರ್ವತ್ರಪ್ರಸಿದ್ಧ್ಯಕರಣದಲ್ಲಿ ವಿಸ್ತಾರವಾಗಿ ತಿಳಿಸಲಾಗಿದೆ. ಹಿಂದೆ ಹೇಳಿದ ಸ್ಮೃತಿಪುರಾಣಗಳು ವೇದಪ್ರೋಷಕಗಳಾಗಿ ಅವೈದಿಕವಾದ ತಂತ್ರಮಾರ್ಗವನ್ನು ಬೋಧಿಸದಿರುವುದರಿಂದ ಊರ್ಧ್ವಪುಂಡ್ರವೂ ಭಸ್ಮತ್ರಿಪುಂಡ್ರದಂತೆ ವೈದಿಕವೆಂದು ಹೇಳುವುದು ಸರಿಯಲ್ಲ; ಯಾಕೆಂದರೆ ಧರ್ಮಶಾಸ್ತ್ರಪುರಾಣಗಳಲ್ಲಿ ಯಾವ ಅರ್ಥವು ಶ್ರುತಿಗೆ ವಿರುದ್ಧವಾಗಿದೆಯೋ ಅದನ್ನೇ ತಂತ್ರಮಾರ್ಗವೆಂದು ಪರಾಶರನು ಹೇಳಿರುವು ದರಿಂದ ವೇದವಿರುದ್ಧವಾದ ಊರ್ಧ್ವಪುಂಡ್ರವನ್ನು ಸ್ಮೃತಿಪುರಾಣಗಳಲ್ಲಿ ಹೇಳಿ ದ್ದರೂ ವೇದದಲ್ಲಿ ಹೇಳಿಲ್ಲವಾದ್ದರಿಂದ ವೈದಿಕವೆಂದು ತಿಳಿಯಲಾಗುವುದಿಲ್ಲ. "ಗೌಡ ದೇಶದಲ್ಲ ವಿದ್ಯೆ, ಚೋಳದೇಶದಲ್ಲಿ ತಪಸ್ಸು, ಕಾಶ್ಮೀರದಲ್ಲಿ ದಯೆ, ಆರ್ಯಾವರ್ತ ದಲ್ಲಿ ಸದಾಚಾರ, ಕೇರಳದಲ್ಲಿ ಮಂತ್ರಸಿದ್ಧಿ ಹೀಗೆ ಇವನ್ನು ಅಲ್ಲಲ್ಲಿ ಉತ್ಕೃಷ್ಟವೆಂದು ಹೇಳಿದೆಯಾದ್ದರಿಂದ ಆರ್ಯಾವರ್ತದಲ್ಲಿ ಕೇಶವನಾಮಸ್ಮರಣೆ, ಊರ್ಧ್ವಪುಂಡ್ರ, ಸಾಲಗ್ರಾಮಪೂಜೆ ಇವು ವಿಶೇಷವಾಗಿ ಕಂಡುಬಂದಿವೆಯಾದ್ದರಿಂದ ಆಯಾ ಆಚಾರ ಗಳೇ ಅಲ್ಲಲ್ಲಿಗೆ ಉತ್ತಮವೆನಿಸುತ್ತವೆ ಎಂದು ಹೇಳುವುದೂ ಯುಕ್ತವಲ್ಲ; ಯಾಕೆಂದರೆ, "ಅಲ್ಲಿಯೂ ರೂಢವಾದ ಸದಾಚಾರವನ್ನೇ ಆಚರಿಸಬೇಕು. ಸ್ಮೃತಿಗೂ ಶ್ರುತಿಗೂ ವಿರು ದ್ಧವಾದವನ್ನು ಎಂದಿಗೂ ಆಚರಿಸಬಾರದು. ಎಲ್ಲಾ ಕಡೆಯಲ್ಲೂ ಶ್ರುತಿಸ್ಮೃತಿಗಳಿಗೆ ಯಾವ ಆಚಾರವು ನಿಷಿದ್ಧವಾಗಿದೆಯೋ ಅದು ಯಾರಿಗೂ ಪ್ರಮಾಣವಾಗಲಾರದು" ಎಂದು ಹೇಳಿರುವುದರಿಂದ ಅದೇ ಯುಕ್ತವಾಗುತ್ತದೆ. ಕೇಶವ ಮೊದಲಾದ ಹೆಸರು ಗಳನ್ನು ಯಜ್ಞೋಪವೀತದಂತೆ ವೇದದಲ್ಲಿ ಹೇಳದೆ ಇದ್ದರೂ ಆಚರಿಸಬಹುದಲ್ಲವೇ ? ಎಂದು ಕೇಳುವುದೂ ಯುಕ್ತವಲ್ಲ. 'ಯಜ್ಞೋಪವೀತಂ ಪರಮಂ ಪವಿತ್ರಂ' ಎಂಬ ಸ್ಮಾರ್ತಮಂತ್ರದಲ್ಲಿ ಯಜ್ಞೋಪವೀತವು ವಿಹಿತವಾದ್ದರಿಂದಲೂ ಅದಕ್ಕೆ, ಶ್ರುತಿಯ ವಿರೋಧವಿಲ್ಲದ್ದರಿಂದಲೂ, ಅದು ಬ್ರಹ್ಮೋಪನಿಷತ್ತಿನಲ್ಲಿ ಕಂಡುಬರುವುದರಿಂದಲೂ ಅದನ್ನು ಆಚರಿಸುವಂತೆ ಕೇಶವಾದಿನಾಮಗಳ ಸ್ಮರಣವನ್ನೂ ಶ್ರುತಿಯಲ್ಲಿ ವಿಧಿಸದೆ ಇರುವುದರಿಂದ ಇದನ್ನು ತಾಂತ್ರಿಕವೆಂದೇ ಭಾವಿಸಬೇಕು. ಶಿವಲಿಂಗವು ಶ್ರುತಿಸಿದ್ಧ ವಾದ್ದರಿಂದ ವೈದಿಕರಿಗೆ ಪೂಜೆಗೆ ಅರ್ಹವೆನಿಸಿದೆ. ಯಜುಶ್ಶಾಖೆಯಲ್ಲಿ "ನಿಧನಪತಯೇ ನಮಃ"ಎಂದಾರಂಭಿಸಿ "ಪಾಣಿಮಂತ್ರಂ ಪವಿತ್ರಂ "ಎಂಬುವವರಿಗೂ ಶಿವಲಿಂಗವನ್ನು ಪರಬ್ರಹ್ಮವಾದ್ದರಿಂದ ಸರ್ವರಿಗೂ ಉಪಾಸ್ಯವೆಂದು ತಿಳಿಸಲಿಕ್ಕಾಗಿಯೇ ಪ್ರತಿಯೊಂದು ಪದದಲ್ಲೂ ನಮಃ ಪದವನ್ನು ಹೇಳಿರುವುದರಿಂದ ಲಿಂಗವು ಸರ್ವಾತ್ಮವೆಂದು ತಿಳಿದು ಬರುತ್ತದೆ. ಜಗತ್ತೆಲ್ಲಕ್ಕೂ ಆಶ್ರಯವಾದ್ದರಿಂದಲೇ ಶಿವನು ಲಿಂಗ ಮತ್ತು ಸ್ಥಲ ಎನಿಸಿರುವನು. ಇದರಿಂದ ಅವನು ಪರಬ್ರಹ್ಮವೆಂದೂ, ಅದ್ಭುತ ಮಹಿಮಾಶಾಲಿ ಎಂದೂ ನಿಶ್ಚಿತವಾಯಿತು. ಹೀಗೆ ಶ್ರುತಿ ಪುರಾಣಸಿದ್ಧವಾದ್ದರಿಂದ ಲಿಂಗವು ವೈದಿಕ ವೆನಿಸಿದೆ. ಹೀಗೆ ವೇದದ ಆಧಾರವಿಲ್ಲದ್ದರಿಂದ ವಿಷ್ಣುವಿಗ್ರಹ ಮತ್ತು ಸಾಲಗ್ರಾಮದ ಪೂಜೆ ತಾಂತ್ರಿಕವೆನಿಸಿದೆ. ಇದೂ ಅಲ್ಲದೆ, ವಿಷ್ಣು ಶಿವಲಿಂಗವನ್ನಾರಾಧಿಸಿದನೆಂದು ಋಗ್ವೇದದಲ್ಲೂ, ಬ್ರಹ್ಮಕೈವರ್ತದಲ್ಲೂ, ಪರಾಶರಪುರಾಣದಲ್ಲೂ ಹೇಳಿರುವ ಅಂಶ

ವನ್ನು "ಸರ್ವತ್ರ ಪ್ರಸಿದ್ಧೋಪದೇಶಾ"ಧಿಕರಣದಲ್ಲಿ ವಿಸ್ತಾರವಾಗಿ ತಿಳಿಸಲಾಗಿದೆ. ರುದ್ರನೂ ಮತ್ತು ಅವನು ರಚಿಸಿದ ಆಗಮಪುರಾಣಗಳೂ ತಾಮಸವೆಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ರುದ್ರನು ಘೋರಶರೀರದಿಂದ ಜಗತ್ಸಂಹಾರವನ್ನೂ, ಅಘೋರಶರೀರದಿಂದ ಸೃಷ್ಟಿರಕ್ಷಣಗಳನ್ನೂ ಮಾಡುತ್ತಿರುವನೆಂದು ಶ್ರುತಿಯು ಸ್ಪಷ್ಟವಾಗಿ ಹೇಳಿದೆ. ಆದರೆ ಸಂಹಾರವು ಕ್ರೂರಕರ್ಮವಾದ್ದರಿಂದಲೂ ರುದ್ರನು ಸಂಹಾರಕರ್ತನಾದ್ದರಿಂದಲೂ ಅವನು ತಾಮಸನೆಂದೂ, ವಿಷ್ಣುವು ಪ್ರಪಂಚದ ರಕ್ಷಕನಾದ್ದರಿಂದ ಸಾತ್ತ್ವಿಕನೆಂದೂ ಏಕೆ ಹೇಳಬಾರದು? ಅಂದರೆ ಹಾಗೆ ಹೇಳಲಿಕ್ಕಾಗುವುದಿಲ್ಲ; ಯಾಕೆಂದರೆ ರುದ್ರನು ಸಂಹಾರಕನಾಗದಿದ್ದರೆ ಜಗತ್ತಿಗೆ ನಿಯಾಮಕನಾಗಲಾರನು. "ಯಾವನಿಂದ ಇವೆಲ್ಲವೂ ಹುಟ್ಟಿವೆಯೋ" "ಯಾವನಿಗೆ ಬ್ರಾಹ್ಮಣ ಕ್ಷತ್ರಿಯ ಮುಂತಾದವರು ಆಹಾರವಾಗಿರುವರೋ" ಎಂಬ ಶ್ರುತಿಗಳಲ್ಲಿ ಸಂಹಾರವನ್ನು ಪರಬ್ರಹ್ಮನ ಧರ್ಮವೆಂದೇ ಹೇಳಿರುವುದರಿಂದ ಆಕ್ಷೇಪಕ್ಕೆ ಅವಕಾಶವೇ ಇಲ್ಲ. ಆದರೂ ಸೂತಸಂಹಿತೆಯಲ್ಲಿ ಕಾಲರುದ್ರನನ್ನು ಬ್ರಹ್ಮವಿಷ್ಣುಗಳಿಗಿಂತಲೂ ಉತ್ಕೃಷ್ಟನೆಂದು ಹೇಳಿದೆ. ಶ್ರುತಿಯೂ "ನೀಲಕಂಠಂ ಪ್ರಶಾಂತಂ, "ಶಾಂತಂ ಶಿವಮದ್ವೈತಂ" ಎಂದು ಶಿವನನ್ನು ಪರಮಶಾಂತನೆಂದು ಹೇಳಿದೆ. ಆದ್ದರಿಂದ ಅವನಿಗೆ ತಾಮಸನೆಂಬ ಕಳಂಕ ಅಂಟುವುದಿಲ್ಲ. ಶಾಸ್ತ್ರಯೋನಿತ್ವಾಧಿಕರಣದಲ್ಲಿ ಇದನ್ನು ವಿಸ್ತಾರವಾಗಿ ನಿರೂಪಿಸಲಾಗಿದೆ. ಯಾಗಕ್ರಿಯೆಯಲ್ಲಿ ರುದ್ರಹೋಮವಾದಮೇಲೆ ಆಚಮನಮಾಡಬೇಕೆಂದು ಹೇಳಿರುವುದೇ ಅವನು ಅಮಂಗಲದೇವತೆ ಎಂಬುದಕ್ಕೆ ದೃಷ್ಟಾಂತವೆಂದು ಹೇಳಿದರೆ ಅದೂ ಯುಕ್ತವಲ್ಲ, ಯಾಕೆಂದರೆ ಅಲ್ಲಿ ಪ್ರಧಾನನಾದ ರುದ್ರನ ಎದುರಿಗೆ ಇತರ ದೇವತೆಗಳು ಹವಿಸ್ಸನ್ನು ಸ್ವೀಕರಿಸಲು ಹಾಜರಾಗಲಾರರೆಂದು ರುದ್ರನ ಅಂತರ್ಧಾನಕ್ಕಾಗಿ ಆಚಮನವನ್ನು ಯಜುರ್ವೇದವು ಸ್ಪಷ್ಟವಾಗಿ ವಿಧಿಸಿದೆ. ಸ್ಕಾಂದದಲ್ಲಿ "ವ್ಯಾಸಜೈಮಿನಿ ಸಂವಾದದಲ್ಲಿ "ದೇವತೆಗಳೆಲ್ಲರಿಗೂ ಪ್ರಭುವಾದ್ದರಿಂದ ಶಿವನು ಮಹಾದೇವನೆನಿಸಿದ್ದಾನೆ. ಆದ್ದರಿಂದ ಏಕಮೇವಾದ್ವಿತೀಯನೆಂದು ಶ್ರುತಿ ಹೇಳುತ್ತಿದೆ. ಅವನ ಎದುರಿಗೆ ಬ್ರಹ್ಮವಿಷ್ಣ್ವಾದಿಗಳಿಗೆ ಆಹುತಿಯನ್ನು ಕೊಡುವುದಿಲ್ಲ. ಆದ್ದರಿಂದ ಯಜ್ಞಕಾಲದಲ್ಲಿ ಅವರನ್ನು ಬರಮಾಡಲಿಕ್ಕಾಗಿ ರುದ್ರನು ಅಂತರ್ಹಿತನಾಗಲೆಂದು ಆಚಮನಮಾಡಲಾಗುವುದು" ಎಂದೂ, ಕೂರ್ಮದಲ್ಲಿ "ಪ್ರಭುವಿಗೆ ಕ್ರಮವಾಗಿ ಊಟಮಾಡಿಸಿ ಅವನನ್ನು ಕಳುಹಿಸಿದಮೇಲೆ ಸೇವಕರನ್ನು ಸಂತೋಷಪಡಿಸುವಂತೆ ಯಜ್ಞದಲ್ಲಿ ಪ್ರಧಾನದೇವನಾದ ರುದ್ರನಿಗೆ ಆಹುತಿಯನ್ನು ಕೊಟ್ಟು ಅನಂತರ ಬೇರೆಯವರನ್ನು ಕರೆಸಿ ಅರ್ಚಿಸಲಿಕ್ಕಾಗಿ ರುದ್ರನನ್ನು ಸಂತೋಷದಿಂದ ಕಳುಹಿಸಬೇಕಾದ್ದರಿಂದ ಆಚಮನವನ್ನು ಹೇಳಿದೆ" ಎಂದೂ ತಿಳಿಸಲಾಗಿದೆ. ಇದೂ ಅಲ್ಲದೆ, ಶಿವನಿಗೆ ಇತರ ದೇವತೆಗಳು ಯಾರೂ ಸಮನಲ್ಲವೆಂಬುದನ್ನು "ಅವನು ಕಾರ್ಯಕಾರಣಗಳಿಗತೀತನಾದ್ದರಿಂದ ಅವನಿಗೆ ಸಮಾನನಾಗಲೀ ಅಧಿಕನಾಗಲೀ ಯಾರೂ ಇಲ್ಲ" ವೆಂದಾರಂಭಿಸಿ "ಶಿವನೊಬ್ಬನೇ ಅದ್ವಿತೀಯನಾಗಿರುವನು" ಎಂಬುದಾಗಿ ಮಂತ್ರೋ

ಪನಿಷತ್ತು ತಿಳಿಸಿದೆ. ನೈಋತಿ ರಾಕ್ಷಸ ಮೊದಲಾದ ಪ್ರಕರಣದಲ್ಲಿ ಶಿವನನ್ನು ಒಟ್ಟಿಗೆ ಸೇರಿಸಿ ಹೇಳಿದ್ದರಿಂದ ಶಿವನೂ ಏಕೆ ಅಪಕೃಷ್ಟನಾಗಬಾರದು? ಅಂದರೆ ಹಾಗಲ್ಲ. ಆಪಸ್ತಂಬಸೂತ್ರದಲ್ಲಿ "ಅಗ್ನೇರ್ಗವಾಂ ಬ್ರಾಹ್ಮಣಸ್ಯ" ಎಂದು ಈ ಮೂವರನ್ನು ಅವೇಧ್ಯರಜಸ್ವಲೆ ಮೊದಲಾದ ಅಸ್ಪೃಶ್ಯರೊಡನೆ ಒಂದೇ ವಾಕ್ಯದಲ್ಲಿ ಹೇಳಿದ್ದರೂ ಹೀಗೆ ಒಂದೇ ಪ್ರಕರಣದಲ್ಲಿ ಹೇಳಿರುವುದು ದೋಷವೆನಿಸುವುದಿಲ್ಲ. ಹಾಗೆಯೇ ಸ್ಮೃತಿಯಲ್ಲೂ "ಗೊ-ಅಗ್ನಿ-ಶ್ರೋತ್ರಿಯ-ಪಾಪಿ-ರಜಸ್ವಲೆ-ಬ್ರಹ್ಮಬಂಧುಗಳನ್ನು ನೋಡಿದರೆ ಸಚೇಲಸ್ನಾನಮಾಡಬೇಕು" ಎಂದು ಶುಚ್ಯಶುಚಿವಸ್ತುಗಳೆರಡನ್ನೂ ಒಟ್ಟಿಗೆ ಸೇರಿದ್ದರೂ ಶಿವನೇ ಸರ್ವಾಧಿಕನೆಂಬುದು ನಿರ್ವಿವಾದವಾಗಿದೆ.

ಕಿಂಚ "ಭೇದಾಭೇದಸ್ತಥಾಭೇದೋ ಭೇದ ಏತೇ ಮತಾಸ್ತ್ರಯಃ" ಇತಿ ಸೂತಸಂಹಿತಾಯಾಂ, "ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ" ಇತ್ಯಾರಭ್ಯ ಭಗವತಾ ವ್ಯಾಸೇನ ಮತತ್ರಯಸ್ಯೈವ ಭೇದಾಽಭೇದ ಕ್ರಮೇಣ ವ್ಯಪದೇಶಾತ್ ಜೈಮಿನ್ಯಾದಿವೈದಿಕೈರಪಿ ಪೂರ್ವಪಕ್ಷಸ್ಯಾಪ್ಯಯೋಗ್ಯತ್ವೇನ ವಿಶಿಷ್ಟಮತಸ್ಯೋಪೇಕ್ಷಣೀಯತ್ವಾತ್, ತಥಾ ಭಟ್ಟಭಾಸ್ಕರಾದಿವೈದಿಕೈರಪಿ ಭೇದಾಭೇದಮತಸ್ಯೈವ ಪಾರಮಾರ್ಥಿಕತ್ವೇನ ವ್ಯವಸ್ಥಾಪನಾತ್ ಭೇದಾದಿವೇದಸಿದ್ಧಮತತ್ರಯಾನಂತರ್ಭಾವಾತ್ ವಿಶಿಷ್ಟಮತಸ್ಯ ತಾಂತ್ರಿಕತ್ವಂ ದುರ್ವಾರಮೇವ. ಉತ "ಏತಾವಂತೋ ವೈ ಪಶವೋಃ ದ್ವಿಧಾದ್ವಿಪಾದಶ್ಚತುಷ್ಪಾದಶ್ಚತಸ್ಮಾದ್ರುದ್ರಃಪಶೂನಾಮಧಿಪತಿಃ" "ಏಷಾಮೀಶೇ ಪಶುಪತಿಃ ಪಶೂನಾಂ ಚತುಷ್ಪದಾಮುತ ದ್ವಿಪದಾಮಿತಿ ಬ್ರಹ್ಮಾದಯಃ ಪಶವಃ" ಇತ್ಯಾದೌ ಬ್ರಹ್ಮಾದೀನಾಂ ಪಶುತ್ವಂ. "ಜ್ಞಾತ್ವಾ ದೇವಂ ಸರ್ವಪಾಶಾಪಹಾನಿಃ" "ಸಜ್ಞಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ" ಇತ್ಯಾದಿನಾ ಮಾಯಾಯಾಃ ಪಾಶತ್ವಂ. "ಪಶೂನಾಂ ಪತಯೇ ನಮೋ ನಮಃ" ಇತ್ಯಾದೌ ಪರಮೇಶ್ವರಸ್ಯ ಪಶುಪತಿತ್ವೋಪದೇಶಾತ್ ಪಶುಪತಿಪಾಶಪದಾರ್ಥತ್ರಯಪ್ರತಿಪಾದಕಶೈವಶಾಸ್ತ್ರಸ್ಯ ವೇದಮೂಲಕತ್ವಾದ್ವೈದಿಕತ್ವಂ; ಚಿದಚಿದೀಶ್ವರಪರಿಭಾಷಾಪ್ರಧಾನ ರಾಮಾನುಜಶಾಸ್ತ್ರಂ ವೇದಮೂಲತ್ವಾಭಾವಾದವೈದಿಕಮಿತಿ ಘಂಟಾಘೋಷಃ. "ರುದ್ರೇಣಾನ್ನಮಮೃತಂ ದೇವಾ ವೈ ಭೋಕ್ತೃಕಾಮಾ ವೇದಾಶ್ಚ ಕಾಮಯಂತೇ" "ರುದ್ರಭುಕ್ತಂ ಭುಂಜೀಥಾಃ" ಇತ್ಯಾದಿ ಶ್ರುತಿಸಿದ್ಧತ್ವಾತ್ ಶಿವಪ್ರಸಾದಸ್ಯ ವೈದಿಕಪರಿಗ್ರಾಹ್ಯತ್ವಂ. ತಂತ್ರಪ್ರಧಾನತ್ವಾದ್ವಿಷ್ಣುಪ್ರಸಾದಸ್ಯ ತಾಂತ್ರಿಕಪರಿಗ್ರಾಹ್ಯತ್ವಂ ನಿಷ್ಪ್ರತ್ಯೂಹಂ. ದಗ್ಧದೇಹಾನಾಂ ಪುನರ್ದಹನಮಯುಕ್ತಂ. "ದಗ್ಧಸ್ಯ ದಹನಂ ನಾಸ್ತಿ ಪಕ್ವಸ್ಯ ಪಚನಂ ನ ಹಿ" ಇತ್ಯಾದೌ ದಗ್ಧಸ್ಯ ಪುನರ್ದಹನನಿಷೇಧದರ್ಶನಾತ್, ತದಂಗೀಕಾರೇ ದೀಕ್ಷಾಯಾಃ ವೈಫಲ್ಯಮೇವ. ಕಿಂಚ ದಹ

ನಾಂಗೀಕಾರೇ ಸ್ಮಾರ್ತಾಗ್ನಿರ್ವಾ ಚಕ್ರಧಾರಣದೀಕ್ಷಾನುಗತವೈಷ್ಣ
ವಾಗ್ನಿರ್ವಾ? ನಾದ್ಯಃ ಸ್ಮಾರ್ತಾಗ್ನಿನಾ ದಹನಾಂಗೀಕಾರೇ ವೈಷ್ಣವ
ದೀಕ್ಷಿತಸ್ಯ ಬದ್ಧಜೀವವತ್ಪ್ರೇತತ್ವಂ, ತದನಂತರಮಪಿ ಪಿತ್ರಾದೀನಾಂ
ವಸುರುದ್ರಾದಿತ್ಯಲೋಕಾನುಪ್ರವಿಷ್ಟತ್ವಂ, ಚತುರ್ಥಪುರುಷಸ್ಯಾಪಿ
ಸ್ವರ್ಗಲೋಕಪ್ರಾಪ್ತಿಸಂಭವಾತ್ ವೈಷ್ಣವದೀಕ್ಷಿತಾನಾಂ ವಿಷ್ಣುಸಾರೂಪ್ಯ
ವಿಧಾಯಕಶಾಸ್ತ್ರಾಣಾಂ ವೈಯರ್ಥ್ಯಾಪತ್ತಿಃ. ದೀಕ್ಷಾಯಾಃ ನಿಷ್ಫ
ಲತ್ವಂ, ಚಕ್ರಧಾರಣಸಮಾಗತವೈಷ್ಣವಾಗ್ನೇರ್ವಿನಿಯೋಗಾಭಾವಾಚ್ಚ.
ನ ದ್ವಿತೀಯಃ ವೈಷ್ಣವಾಗ್ನೇಃ ಪಾಂಚರಾತ್ರಾಗಮಪ್ರಕರಣಪಠಿತತ್ವಾ
ತ್ತದ್ದಹನಸ್ಯಾಪಿ ತಾಂತ್ರಿಕತ್ವಂ ದುರ್ವಾರಮೇವ. "ಧರ್ಮಾಧರ್ಮಾದಿ
ವಿಜ್ಞಾನೇ ಹ್ಯಾಗಮಾಃ ಪುರುಷೋದಿತಾಃ । ಪಾಂಚರಾತ್ರಾದಯ
ಸ್ಸರ್ವೇ ನ ಪ್ರಮಾಣಮಿತಿ ಸ್ಥಿತಿಃ" ಇತಿ ಪಾರಾಶರೇ ದರ್ಶನಾತ್ತನ್ಮತ
ಮುಪೇಕ್ಷ್ಯಂ. ನನು ಪದ್ಮಪುರಾಣೋತ್ತರಭಾಗೇ "ಇದಂ ಮಹೋಪ
ನಿಷದಿ ಪ್ರೋಕ್ತಂ ಚಕ್ರಾದಿಧಾರಣಂ" ಇತಿ ವಾಕ್ಯೇ ಶಂಖಚಕ್ರಾದಿ
ಧಾರಣಸ್ಯ ಬಹುಶ್ರುತಿಪ್ರತಿಪಾದಕತ್ವಶ್ರವಣಾತ್ ಪಾಂಚರಾತ್ರಮತಸ್ಯ
ವೈದಿಕತ್ವಮೇವೇತಿ ಚೇನ್ನ, ಪಾಂಚರಾತ್ರಾಗಮಾದ್ಯನುಸಾರಿಪುರಾಣ
ವಾಕ್ಯಾನಾಂ ಮಾನಾಭಾವಾತ್. ತಥಾ ಪರಾಶರಪುರಾಣೇ "ಯತ್ತು
ತಂತ್ರಾನುರೋಧೇನ ಕಥಿತಂ ತತ್ಪರಿತ್ಯಜೇತ್ । ಪುರಾಣೇ ಧರ್ಮ
ಶಾಸ್ತ್ರೇ ವಾ ಯತ್ನತೋ ವೈದಿಕೋ ದ್ವಿಜಃ ॥" ಇತ್ಯುಕ್ತ್ವಾ ತಂತ್ರಾನು
ರೋಧಿತ್ವಂ ಕಥಂ ಜ್ಞಾತವ್ಯಮಿತ್ಯಾಶಂಕ್ಯಾಹ "ಪುರಾಣೇ ಧರ್ಮಶಾಸ್ತ್ರೇ
ವಾ ಯೋಽರ್ಥಶ್ಶ್ರುತ್ಯಾ ವಿರುಧ್ಯತೇ । ತಂತ್ರಾರ್ಥಸ್ಸ ತು ವಿಜ್ಞೇಯಃ
ಸ್ಸರ್ವದಾ ವೈದಿಕೋತ್ತಮೈಃ" "ಸ್ಮೃತಯಶ್ಚ ಪುರಾಣಾನಿ ಭಾರತ
ಪ್ರಮುಖಾನಿ ಚ । ವೇದಾನುಸರಣತ್ವೇನ ಪ್ರಾಮಾಣ್ಯಮಿತಿ ನಿಶ್ಚಿತಂ"
ಇತಿ ದರ್ಶನಾಚ್ಚಕ್ರಾದಿಲಾಂಛನಸ್ಯ ಪ್ರತ್ಯಕ್ಷವಿಧಾಯಕಶ್ರುತ್ಯಭಾವಾತ್,
"ಚರಣಂ ಪವಿತ್ರಂ" ಇತಿ ಶ್ರುತೌ ಅನ್ಯಥಾ ವಿನಿಯೋಗದರ್ಶನಾತ್,
ಗಂಧದ್ವಾರಾದಿಮಂತ್ರಾಣಾಮನ್ಯಥಾ ವಿನಿಯೋಗದರ್ಶನೇಽಪಿ ಪ್ರಕರ
ಣಾನುಕೂಲಾಂಗೀಕಾರಾತ್, ಚರಣಪದಸ್ಯ ಚಕ್ರಪರತ್ವೇ ಮಾನಾ
ಭಾವಾಚ್ಚ "ಪವಿತ್ರಂ ಚರಣಂ ಚಕ್ರಂ" ಇತ್ಯಾದಿನೈಘಂಟಿಕವಾಕ್ಯಾ
ನಾಮಮೂಲತ್ವಾನ್ಮಾನಾಭಾವಃ. "ತಾಪಃ ಪುಂಡ್ರಸ್ತಥಾ ನಾಮ
ಮಂತ್ರೋ ಯೋಗಶ್ಚ ಪಂಚಮಃ" ಇತ್ಯಾದಿತಾಂತ್ರಿಕಪಂಚಸಂಸ್ಕಾರ
ವಿಧಾಯಕಪಾಂಚರಾತ್ರಾಗಮವಾಕ್ಯಾನಾಂ ವೇದಮೂಲಕತ್ವಾತ್
ಭಾವಾನ್ವೈಷ್ಣವಮತಂ ತಾಂತ್ರಿಕಮಿತಿ ನಿಷ್ಪ್ರತ್ಯೂಹಂ. ತದುಕ್ತಂ ಶೈವ
ಪುರಾಣೇ "ರುದ್ರಸ್ಸ್ವಿಷ್ಟಕೃದಗ್ನಿರಿತ್ಯನುದಿನಂ ಮುಂಚಂತಿ ಹೋಮ

**ಕ್ರಿಯಾಂ ನೇಚ್ಛಂತಿ ಪಶುಬಂಧನಸ್ಯ ಚ ವಿಧೀ ರುದ್ರಃ ಪಶೂನಾಂ ಪತಿಃ । ಶ್ರೀರುದ್ರಪ್ರತಿಪಾದಿಕಾಂ ಭಗವತೀಂ ತಾಂ ಭರ್ಗಶಬ್ದಾನ್ವಿತಾಂ ಗಾಯತ್ರೀಮಪಿ ಸಂತ್ಯಜಂತಿ ವಿಬುಧಾಃ ವಿಪ್ರಾಃ ಕಥಂ ವೈಷ್ಣವಾಃ ?" ಇತಿ ವ್ಯಪದೇಶಾತ್. ಅತೋ ಜೀವೋತ್ಪತ್ತಿವಿಧಾಯಕಪಾಂಚರಾತ್ರಾಗಮವಿಶಿಷ್ಟಾದ್ವೈತವೈಷ್ಣವಮತಂ ವೈದಿಕೈರಸಂಗೀಕರಣೀಯಂ.**

ಭೇದ-ಅಭೇದ-ಭೇದಾಭೇದವೆಂಬ ಮೂರು ಮತಗಳನ್ನು ಸೂತಸಂಹಿತೆಯಲ್ಲೂ ಮಹಿಮ್ನಸ್ತವದಲ್ಲೂ ಮತ್ತು ವ್ಯಾಸಸೂತ್ರಗಳಲ್ಲೂ ಹೇಳಿರುವುದರಿಂದಲೂ ವಿಶಿಷ್ಟಾದ್ವೈತಮತವನ್ನು ಜೈಮಿನಿಯೇ ಮೊದಲಾದ ವೈದಿಕರು ಪೂರ್ವಪಕ್ಷಕ್ಕೂ ಯೋಗ್ಯವಲ್ಲವೆಂದು ಹೇಳಿರುವುದರಿಂದಲೂ, ಭಟ್ಟಭಾಸ್ಕರ ಮೊದಲಾದ ವೈದಿಕರೂ ಭೇದಾಭೇದಮತವನ್ನು ಪಾರಮಾರ್ಥಿಕವೆಂದು ಹೇಳಿರುವುದರಿಂದಲೂ, ವೇದಸಿದ್ಧವಾದ ಈ ಮೂರು ಮತಗಳಲ್ಲಿ ಸೇರದಿರುವುದರಿಂದ ವಿಶಿಷ್ಟಾದ್ವೈತಮತವು ತಾಂತ್ರಿಕವೆನಿಸುವುದು. ಬ್ರಹ್ಮವಿಷ್ಣ್ವಾದಿಗಳೆಲ್ಲರೂ ಪಶುಗಳೆಂದೂ, ರುದ್ರನು ಅವರಿಗೆ ಪತಿಪತಿ ಎಂದೂ ಶ್ರುತಿಯು ಸ್ಪಷ್ಟವಾಗಿ ತಿಳಿಸುತ್ತದೆ. "ದೇವನನ್ನು ತಿಳಿದು ಜೀವರು ಪಾಶದಿಂದ ಮುಕ್ತರಾಗುತ್ತಾರೆ" ಎಂಬಲ್ಲಿ ಮಾಯೆಯೇ ಪಾಶವೆನಿಸಿದೆ. "ಪಶೂನಾಂ ಪತಯೇ" ಎಂಬಲ್ಲಿ ಶಿವನನ್ನು ಪಶುಪತಿ ಎಂದು ಹೇಳಿದ್ದರಿಂದ ಪಶು-ಪಾಶ-ಪತಿ ಎಂಬ ಮೂರು ಪದಾರ್ಥಗಳನ್ನು ತಿಳಿಸುವ ಶೈವಶಾಸ್ತ್ರವು ವೇದಮೂಲಕವಾದ್ದರಿಂದ ವೈದಿಕವೆನಿಸಿದೆಯಾದರೂ ಚಿದಚಿದೀಶ್ವರರನ್ನು ತಿಳಿಸುವ ರಾಮಾನುಜಶಾಸ್ತ್ರವು ವೇದಮೂಲಕವಲ್ಲದ್ದರಿಂದ ಅವೈದಿಕವೆನಿಸಿದೆ. "ರುದ್ರನು ಭೋಗಿಸಿದ ಅನ್ನವನ್ನು ದೇವತೆಗಳೂ ವೇದಗಳೂ ಭೋಗಿಸಲು ಇಚ್ಛಿಸುತ್ತಾರೆ". "ರುದ್ರನು ಭೋಗಿಸಿದ್ದನ್ನೇ ಸಾಧಕನು ಭೋಗಿಸಬೇಕು" ಇಲ್ಲಿ ಶಿವಪ್ರಸಾದವು ಶ್ರುತಿಸಿದ್ಧವಾದ್ದರಿಂದ ವೈದಿಕರಿಗೆ ಗ್ರಾಹ್ಯವೆನಿಸಿದೆ; ಆದರೆ ಆಗಮದಲ್ಲಿ ಹೇಳಿರುವ ವಿಷ್ಣುಪ್ರಸಾದವು ಗ್ರಾಹ್ಯವಲ್ಲ. "ಸುಟ್ಟಿದ್ದನ್ನು ಮತ್ತೆ ಸುಡುವುದಿಲ್ಲ. ಬೇಯಿಸಿದ್ದನ್ನು ಮತ್ತೆ ಬೇಯಿಸುವುದಿಲ್ಲ". ಇವರಂತೆ ದೀಕ್ಷಾಸಂಸ್ಕಾರದಿಂದ ಸಂಸ್ಕೃತನಾದವನ ಶರೀರವನ್ನು ಮತ್ತೆ ಸುಡಬಾರದೆಂದು ಹೇಳಿದ್ದರೂ ಅದನ್ನು ಮೀರಿ ಮತ್ತೆ ಸುಟ್ಟರೆ ದೀಕ್ಷೆಯೇ ವ್ಯರ್ಥವಾಗುತ್ತದೆ. ಹಾಗೆ ಸುಡಬೇಕೆಂದು ಒಪ್ಪಿದರೂ ಸ್ಮಾರ್ತಾಗ್ನಿಯಿಂದಲೋ ವೈಷ್ಣವಾಗ್ನಿಯಿಂದಲೋ? ಎಂಬಲ್ಲಿ ವೈಷ್ಣವದೀಕ್ಷೆಪಡೆದವನನ್ನು ಸ್ಮಾರ್ತಾಗ್ನಿಯಿಂದ ಸುಡಬೇಕೆಂದರೆ ಅವನು ಬದ್ಧಜೀವನಂತೆ ಪ್ರೇತನಾಗಬೇಕಾಗುವುದು. ಆ ಪ್ರೇತಭಾವ ಕಳೆದ ಮೇಲೆ ಅವನು ಸ್ವರ್ಗಲೋಕಕ್ಕೆ ಹೋಗಬೇಕಾಗುವುದು. ಹಾಗೆ ನಾಲ್ಕನೆಯ ತಲೆಯವರೆಗೂ ಸಹ ಕೇವಲ ಸ್ವರ್ಗಲೋಕವನ್ನೇ ಹೊಂದುವನಾದ್ದರಿಂದ, ವಿಷ್ಣುಸಾರೂಪ್ಯವನ್ನು ಹೇಳುವ ಶಾಸ್ತ್ರವೆಲ್ಲವೂ ವ್ಯರ್ಥವಾಗುವುದು. ಇದೂ ಅಲ್ಲದೆ, ಚಕ್ರಧಾರಣಕಾಲದಲ್ಲಿ ದೊರಕುವ ಅಗ್ನಿಯನ್ನು ಅವನು ಉಪಯೋಗಿಸದೆ ಇರುವುದರಿಂದ ವೈಷ್ಣವದೀಕ್ಷೆಯೂ ವ್ಯರ್ಥವಾಗುವುದು. ವೈಷ್ಣವಾಗ್ನಿಯಿಂದಲೇ ಅವನ ದೇಹವನ್ನು ಸುಟ್ಟರೆ

ವೈಷ್ಣವಾಗ್ನಿಯನ್ನು ಪಾಂಚರಾತ್ರಾಗಮಪ್ರಕರಣದಲ್ಲಿ ಹೇಳಿರುವುದರಿಂದ ಆ ದಹನ ಕೇವಲ ತಾಂತ್ರಿಕವೆನಿಸುವುದು. "ಕಾಪಾಲ-ಪಾಂಚರಾತ್ರ-ಯಾಮಿಳ-ವಾಮ-ಬೌದ್ಧ ಮತಗಳು ಮೋಹಕಾರಿಯಾದ್ದರಿಂದ ಇವನ್ನೂ ಮುಮುಕ್ಷುಗಳು ಆಶ್ರಯಿಸಬಾರದು". ಎಂದು ಕೂರ್ಮದಲ್ಲೂ, "ಧರ್ಮ ಅಧರ್ಮಗಳ ಸ್ವರೂಪವನ್ನು ತಿಳಿಯಲು ಇವು ಪ್ರಮಾಣವಲ್ಲ" ವೆಂದು ಪಾರಾಶರದಲ್ಲೂ ಹೇಳಿರುವುದರಿಂದ ಈ ಮತಗಳು ಗ್ರಾಹ್ಯವಲ್ಲ. ವೇದವನ್ನವಲಂಬಿಸಿದ ಪದ್ಮಪುರಾಣದ ಉತ್ತರಭಾಗದಲ್ಲಿ "ಶಂಖಚಕ್ರಗಳ ಧಾರಣವನ್ನು ಅನೇಕ ಶ್ರುತಿಗಳು ವಿಧಿಸಿವೆ" ಎಂದು ಹೇಳಿರುವುದರಿಂದ ಪಾಂಚರಾತ್ರ ಮತವು ವೈದಿಕವೆನಿಸಲಿ ಎಂದು ಆಕ್ಷೇಪಿಸಿದರೆ ಅದೂ ಹೊಂದುವುದಿಲ್ಲ; ಯಾಕೆಂದರೆ ಪಾಂಚರಾತ್ರ ಮೊದಲಾದ ಆಗಮಗಳನ್ನು ಅನುಸರಿಸುವ ಪುರಾಣವಾಕ್ಯಗಳು ಪ್ರಮಾಣವಾಗುವಂತಿಲ್ಲ. ಭಾರತಸ್ಮೃತಿಪುರಾಣಗಳಾದರೋ ವೇದವನ್ನು ಅನುಸರಿಸುವುದರಿಂದಲೇ ಪ್ರಮಾಣವೆನಿಸಿವೆ. ಆದರೆ ಚಕ್ರಧಾರಣವನ್ನು ವಿಧಿಸುವ ಪ್ರತ್ಯಕ್ಷ ಶ್ರುತಿಯೇ ಎಲ್ಲೂ ಕಂಡಿಲ್ಲವಾದ್ದರಿಂದಲೂ, 'ಚರಣಂ ಪವಿತ್ರಂ' ಎಂಬ ಮಂತ್ರದಲ್ಲಿ ಬೇರೆ ರೀತಿಯ ವಿನಿಯೋಗವಿರುವುದರಿಂದಲೂ, ಗಂಧದ್ವಾರಾದಿಮಂತ್ರಗಳಿಗೆ ಬೇರೆ ವಿಧದಲ್ಲಿ ವಿನಿಯೋಗವು ಕಂಡರೂ ಆ ಪ್ರಕರಣಕ್ಕೆ ಅವನ್ನು ಅನುಕೂಲವೆಂದು ಒಪ್ಪಿರುವುದರಿಂದಲೂ, ಚರಣಪದವು ಚಕ್ರ ಎಂಬ ಅರ್ಥ ಕೊಡುವುದೆಂಬುದಕ್ಕೆ ಪ್ರಮಾಣವಿಲ್ಲದ್ದರಿಂದಲೂ, "ಪವಿತ್ರಂ ಚರಣಂ ಚಕ್ರಂ" ಎಂಬ ನಿಘಂಟುವಿಗೆ ಆಧಾರವಿಲ್ಲದ್ದರಿಂದಲೂ ಇದು ಪ್ರಮಾಣವಾಗಲಾರದು. ತಾಪ, ಪುಂಡ್ರ, ನಾಮ, ಮಂತ್ರ, ಯೋಗ ಎಂಬ ಐದು ಬಗೆಯ ಸಂಸ್ಕಾರವನ್ನು ವಿಧಿಸುವ ಪಾಂಚರಾತ್ರಾಗಮದ ವಾಕ್ಯಗಳು ವೇದಮೂಲಕವಲ್ಲದ್ದರಿಂದ ವೈಷ್ಣವಮತವು ತಾಂತ್ರಿಕವೆನಿಸಿದೆ. ಶೈವಪುರಾಣದಲ್ಲಿ, "ವೈಷ್ಣವರು (ತಾಂತ್ರಿಕರು) ರುದ್ರನನ್ನು ಪೂಜಿಸದೆ, ಹೋಮಕ್ರಿಯಾದಿಗಳನ್ನು ಮಾಡದೆ, ಗಾಯತ್ರಿಯನ್ನು ತೊರೆದಿರುವುದರಿಂದ ಹೇಗೆ ಬ್ರಾಹ್ಮಣರಾಗುವರು?" ಎಂದು ಹೇಳಿದೆ. ಆದ್ದರಿಂದ ಜೀವೋತ್ಪತ್ತಿಯನ್ನು ತಿಳಿಸುವ ಪಾಂಚರಾತ್ರಾಗಮದ ವಿಶಿಷ್ಟಾದ್ವೈತವೆಂಬ ಮತವನ್ನು ವೈದಿಕರು ಅಂಗೀಕರಿಸಬಾರದು.

**ತಸ್ಯ ವೇದಬಾಹ್ಯತ್ವೇ ಹೇತ್ವಂತರಮಾಹ– ನ ಚ ಕರ್ತುಃ ಕರಣಂ ||೪೩||**

**"ಸಂಕರ್ಷಣಾತ್ಪ್ರದ್ಯುಮ್ನಸಂಜ್ಞಿ ಮನೋಽಜಾಯತ" ಇತಿ ಕರ್ತುರ್ಜೀವಾತ್ ಕರಣಸ್ಯ ಮನಸೋ ಜನ್ಯತ್ವಂ ನ ಸಂಭವತಿ, ಕುತಃ ಅಜ್ಞಸ್ಯ ಜೀವಸ್ಯಾಂತಃಕರಣನಿರ್ಮಾಣಸಾಮರ್ಥ್ಯಾಭಾವಾತ್. "ಏತಸ್ಮಾಜ್ಜಾಯತೇ ಪ್ರಾಣೋ ಮನಃ" ಇತಿ ಪರಬ್ರಹ್ಮಣ ಏವ ಮಾನಸೋತ್ಪತ್ತಿಃ ಶ್ರೂಯತೇ. ತಸ್ಮಾತ್ ಶ್ರುತಿವಿರುದ್ಧಾರ್ಥಪ್ರತಿಪಾದನಾದಸ್ಯಾಪಿ ತಂತ್ರಸ್ಯ ಪ್ರಾಮಾಣ್ಯಂ ಪ್ರತಿಷಿದ್ಧ್ಯತ ಇತಿ ವ್ಯಾಚಕ್ಷ್ಯತೇ. ಉತ ಕ್ಷೇತ್ರಜ್ಞಸ್ಯ ಮಾನಸಜನಕತ್ವಮಂತಃಕರಣವೈಶಿಷ್ಟ್ಯೇನ ಅಥವಾ ಅವೈಶಿಷ್ಟ್ಯೇನ? ನಾದ್ಯಃ, ತನ್ಮತೇ ತದಂತಃಕರಣಸ್ಯಾಪಿ ಜೀವಜನ್ಯತ್ವಾಂಗೀ**

ಕಾರಾತ್ ಅಂತಃಕರಣಸ್ಯ ಜೀವಸ್ಯ ಚ ಶರೀರೇಂದ್ರಿಯಾದ್ಯಭಾವತಯಾ ಸ್ವಸಾಮರ್ಥ್ಯಾಭಾವಾಚ್ಚ ಜೀವಾಂತಃಕರಣಪ್ರವೃತ್ತೌ ಶರೀರಾದ್ಯಂಗೀಕಾರೇ ಬಹುತ್ವಾದನವಸ್ಥಾದೋಷಪ್ರಸಂಗಃ. ಸ ದ್ವಿತೀಯಃ, ಸ್ವಸಾಮರ್ಥ್ಯೇನ ಮಾನಸಜನ್ಯತ್ವಾಂಗೀಕಾರೇ ಶರೀರೇಂದ್ರಿಯಾದಿಜಗಜ್ಜನ್ಮಾದಿಕಾರಣತ್ವಂ ಕಿಂ ನ ಸ್ಯಾತ್? ತಸ್ಯ ಜಗಜ್ಜನ್ಮಾದಿಹೇತುತ್ವೇ ಜಗದೀಶ್ವರಸ್ಯ ನ ಕಿಂಚಿತ್ಪ್ರಯೋಜನಂ. ಜೀವಸ್ಯ "ಅಹಮಜ್ಞಃ" ಇತ್ಯಾದ್ಯವಿದ್ಯಾನುಭವದರ್ಶನಾತ್, "ಜ್ಞಾಜ್ಞೌ ದ್ವಾವಜಾ" ಇತಿ ಶ್ರುತಿವಿರೋಧಪ್ರಸಂಗಾತ್, ತಸ್ಮಿನ್ ಸತ್ಯಸಂಕಲ್ಪಾದಿಧರ್ಮಾಣಾಂ ಅದೃಷ್ಟತ್ವಾಚ್ಚ. ತಸ್ಮಾನ್ಮಾನಸಸ್ಯ ಜೀವಜನ್ಯತ್ವವ್ಯವಸ್ಥಾಪಕಪಾಂಚರಾತ್ರಮತಮಯುಕ್ತಂ.

ಅದನ್ನು ಅವೈದಿಕವೆಂದು ಮತ್ತೆ ಹೇಳುತ್ತಾನೆ. **ನ ಚ ಕರ್ತುಃ ಕರಣಂ ||೪೩||**

"ಸಂಕರ್ಷಣನಿಂದ ಪ್ರದ್ಯುಮ್ನನೆಂಬ ಮನಸ್ಸು ಹುಟ್ಟಿತು" ಎಂಬಲ್ಲಿ ಕರ್ತೃವಾದ ಜೀವನಿಂದ ಕರಣವಾದ ಮನಸ್ಸು ಹುಟ್ಟಿದೆ ಎಂದು ಹೇಳುವುದು ಯುಕ್ತವಲ್ಲ; ಏಕೆಂದರೆ ಅಜ್ಞನಾದ ಜೀವನಿಗೆ ಅಂತಃಕರಣವನ್ನು ನಿರ್ಮಿಸಿಕೊಳ್ಳಲು ಸಾಮರ್ಥ್ಯವಿಲ್ಲ. "ಇವನಿಂದ ಮನಃಪ್ರಾಣೇಂದ್ರಿಯಗಳು ಹುಟ್ಟಿವೆ" ಎಂಬಲ್ಲಿ ಪರಶಿವನಿಂದಲೇ ಮನಸ್ಸು ಹುಟ್ಟಿತೆಂದು ಹೇಳಿದೆ. ಆದ್ದರಿಂದ ಶ್ರುತಿಗೆ ವಿರುದ್ಧವಾದ ಅರ್ಥವನ್ನು ತಿಳಿಸುವುದರಿಂದ ಈ ತಂತ್ರಕ್ಕೆ ಪ್ರಾಮಾಣ್ಯವನ್ನು ನಿಷೇಧಿಸಲಾಗಿದೆ. ಆದರೆ ಜೀವನು ಮನಸ್ಸಿಗೆ ಕಾರಣನಾಗುವುದು ಅಂತಃಕರಣದ ಸಂಬಂಧದಿಂದಲೋ ಅಥವಾ ಅದರ ಸಂಬಂಧವಿಲ್ಲದೆಯೋ? ಎಂಬಲ್ಲಿ ಮೊದಲನೆಯ ಪಕ್ಷದಲ್ಲಿ ಅಂತಃಕರಣವೂ ಜೀವನಿಂದಲೇ ಹುಟ್ಟಿದೆಯೆಂದು ಒಪ್ಪಿರುವುದರಿಂದಲೂ, ಅಂತಃಕರಣಕ್ಕೂ ಜೀವನಿಗೂ ಶರೀರೇಂದ್ರಿಯಗಳಿಲ್ಲದ್ದರಿಂದ ಸಾಮರ್ಥ್ಯವೂ ಇಲ್ಲದಪ್ರಯುಕ್ತ ಜೀವಾಂತಃಕರಣಗಳೆರಡರ ಪ್ರವೃತ್ತಿಗೂ ಬೇರೊಂದು ಶರೀರವನ್ನು ಒಪ್ಪಿದರೆ ಪರಂಪರೆಯಾಗಿ ಅನೇಕ ಶರೀರಗಳನ್ನು ಒಪ್ಪಬೇಕಾಗುವುದರಿಂದ ಅನವಸ್ಥೆಯುಂಟಾಗುವುದು. ಸ್ವಸಾಮರ್ಥ್ಯದಿಂದಲೇ ಜೀವನು ಮನಸ್ಸಿಗೆ ಕಾರಣನಾಗುವುದಾದರೆ, ಶರೀರ ಇಂದ್ರಿಯ ಮೊದಲಾದ ಜಗತ್ತೆಲ್ಲಕ್ಕೂ ಅವನು ಏಕೆ ಕಾರಣನಾಗಬಾರದು? ಹಾಗೆ ಅವನೇ ಇವೆಲ್ಲಕ್ಕೂ ಕಾರಣನಾದರೆ ಈಶ್ವರನೇ ಬೇಕಾಗುವುದಿಲ್ಲ. ಜೀವನಿಗೆ "ನಾನು ಅಜ್ಞ" ಎಂಬ ಅವಿದ್ಯೆಯ ಅನುಭವವಿರುವುದರಿಂದ ಅವನಂತೂ ಈಶ್ವರನಾಗಲಾರನು. ಇದೂ ಅಲ್ಲದೆ ಶ್ರುತಿವಿರೋಧವೂ ಬರುತ್ತದೆ. ಅವನಲ್ಲಿ ಸತ್ಯಸಂಕಲ್ಪಾದಿಧರ್ಮಗಳೂ ಕಂಡುಬಂದಿಲ್ಲ. ಆದ್ದರಿಂದ ಮನಸ್ಸು ಜೀವನಿಂದ ಹುಟ್ಟಿತೆಂದು ಹೇಳುವುದು ಯುಕ್ತವಲ್ಲ.

**ನನು ಸಂಕರ್ಷಣಾದಯಸ್ತ್ರಯೋ ನ ಜೀವರೂಪಾಃ ಕಿಂತು ವಾಸುದೇವವದ್ವಿಜ್ಞಾನಸ್ವರೂಪಾ ಈಶ್ವರಾ ಏವೇತ್ಯಾಶಂಕಾಯಾಮಾಹ—**

**ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ || ೪೪ ||**

**ವಾಶಬ್ದಾತ್ಪೂರ್ವಪಕ್ಷೋ ವಿಪರಿವರ್ತತೇ. ವಿಜ್ಞಾನಂ ಚ ಆದಿ ಚೇತಿ**

ವಿಜ್ಞಾನಾದಿ, ಪರಬ್ರಹ್ಮ ಸಂಕರ್ಷಣಪ್ರದ್ಯುಮ್ನಾನಿರುದ್ಧಾನಾಮಪಿ ಪರಬ್ರಹ್ಮಭಾವೇ ಸತಿ ತದಪ್ರತಿಷೇಧಃ ತಯೋಃ ಮತವಿರೋಧಶ್ರುತಿವಿರೋಧಯೋರಪ್ರತಿಷೇಧಃ, ವಿರೋಧೋ ನ ಪ್ರತಿಷಿದ್ಧ್ಯತ ಇತ್ಯರ್ಥಃ. ಯತ್ರ ಕುತ್ರಾಪಿ ಶ್ರುತಿಷು ಬ್ರಹ್ಮಣೋ ಘಟಪಟಾದಿವಜ್ಜೀವೋತ್ಪತ್ತೇಸ್ತಜ್ಜೀವೇ ಮನಃಕಾರಣತ್ವಸ್ಯ ಚಾದರ್ಶನಾದ್ವೇದಬಾಹ್ಯಪಾಂಚರಾತ್ರಾಗಮನಿಷೇಧೋಽಪ್ಯಬಾಧಿತ ಇತಿ ವೇದಿತವ್ಯಂ. ಪಾಂಚರಾತ್ರಾಗಮೇಽಪಿ ವಿಷ್ಣುಸಾರೂಪ್ಯಾಪನ್ನಾನಾಂ ಮುಕ್ತಾತ್ಮನಾಂ ಮನಃಕಾರಣತ್ವಮಭಿಧೀಯತೇ. ತಸ್ಮಾನ್ನಾರಾಯಣಭಾವಾಪನ್ನತ್ವೇಽಪಿ ಸಂಕರ್ಷಣಾದಿತ್ರಯಾಣಾಂ ಪರಮಾತ್ಮವನ್ಮನಃಕಾರಣತ್ವಂ ನ ವ್ಯಪದಿಶ್ಯತೇ. ತದಂಗೀಕಾರೇ ಹ್ಯನಂತೇಶ್ವರಪ್ರಸಂಗಾದನವಸ್ಥಾ ಚ. ವಾಸುದೇವಾಧಿಕ್ಯಬೋಧಕವಾಕ್ಯಾನಾಮಪ್ರಾಮಾಣ್ಯಂ ಪ್ರಸಜ್ಯೇತ. ಸಾಂಖ್ಯಯೋಗಪಾಶುಪತಸೌರಗಾಣಾಪತ್ಯಾದಿಮತೇಷ್ವಪಿ ತತ್ಸಾರೂಪ್ಯಸಿದ್ಧಾನಾಂ ತದ್ವತ್ಕಾರಣತ್ವಾಭಾವಾತ್ ಸಂಕರ್ಷಣಾದಿತ್ರಯಾಣಾಮೀಶ್ವರತ್ವಾಂಗೀಕಾರೇ ವಾಸುದೇವಸ್ಯ ನ ಕಿಂಚಿತ್ಪ್ರಯೋಜನಂ, ಏಕೇನೈವ ಕಾರ್ಯಸಿದ್ಧೇಃ. "ಭಗವಾನೇಕ ಏವ ವಾಸುದೇವಃ ಪರಮಾರ್ಥತತ್ತ್ವಂ" ಇತಿ ಪ್ರತಿಪಾದಕಪಾಂಚರಾತ್ರಾಗಮಸಿದ್ಧಾಂತಹಾನಿಃ, ಅನೀಶ್ವರಾಣಾಂ ಸಂಕರ್ಷಣಾದೀನಾಂ ವಾಸುದೇವತುಲ್ಯತ್ವವ್ಯಪದೇಶೇ ವಾಸುದೇವಾದುತ್ಪತ್ತಿರ್ನಾಭ್ಯುಪಗಮ್ಯತೇ. ತಸ್ಮಾತ್ಸಂಕರ್ಷಣಾದಿಜನ್ಯತ್ವವಿಧಾಯಕಪಾಂಚರಾತ್ರಾಗಮವಿರೋಧೋ ದುರ್ನಿವಾರಃ. ಆಕಾಶಪ್ರಾಣಾದಿವತ್ಸಂಕರ್ಷಣಾದೀನಾಂ ಬ್ರಹ್ಮತ್ವವಿಧಾಯಕಶ್ರುತ್ಯದರ್ಶನಾತ್ ತತ್ಪ್ರಕ್ರಿಯಾಯಾಃ ವೇದಬಾಹ್ಯತ್ವಮುಚಿತಂ. "ಮದ್ಭಕೋ ಹಿ ಮಮಾಧಿಕಃ" ಇತಿ ತಾಂತ್ರಿಕನ್ಯಾಯಾನುಸರಣೇನ ಸಂಕರ್ಷಣಾದೀನಾಂ ತದಧಿಕತ್ವವ್ಯವಸ್ಥಾಪನೇನ ತಜ್ಜನ್ಯತ್ವತದುಪಾಸಕತ್ವವಿರೋಧಃ. ತದಪಕೃಷ್ಟೇ ಮನಃಕಾರಣತ್ವಂ ನೋಪಪದ್ಯತೇ. ತಸ್ಮಾತ್ಸರ್ವಥಾ ಶ್ರುತಿಯುಕ್ತ್ಯುಭಯವಿರೋಧಾತ್ಪಾಂಚರಾತ್ರಮತಂ ವಿವೇಕಿಭಿರ್ನಾದರಣೀಯಂ. ನನು "ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ । ಜ್ಞಾನಾನ್ಯೇತಾನಿ ರಾಜರ್ಷೇ ವಿದ್ಧಿ ನಾನಾಮತಾನಿ ವೈ ॥", "ಏತಾನಿ ಮಾನಭೂತಾನಿ ನೋಪಹನ್ಯಾನಿ ಯುಕ್ತಿಭಿಃ" ಇತಿ ಭಾರತಸಿದ್ಧಾಂತಾಗಮಪಾರಾಶರಸ್ಮೃತಿಷು ಸಾಂಖ್ಯಾದಿಮತಾನಾಂ ವಿಧೇಯತ್ವಂ. ಪಾಶುಪತಸ್ಯ ತತ್ತುಲ್ಯತ್ವೋಪದೇಶತ್ವಾತ್ಕಥಂ ಶೈವಂ ತಸ್ಮಾದಧಿಕಮಿತಿ ಚೇನ್ನ ವೈಷ್ಣವಶಬ್ದಸ್ಯ ದಶವಿಧವೈಷ್ಣವಪರತ್ವೇಽಪಿ ಯಥಾ ಪ್ರಕರಣಾನುಕೂಲಾರ್ಥೋ ವಿವಕ್ಷಿತಃ ತಥಾ ಪಾಶುಪತಶಬ್ದಸ್ಯಾಪಿ ದಶವಿಧವೈದಿಕತಾಂತ್ರಿಕಶೈವಪರತ್ವೇಽಪಿ ಪ್ರಕರ

ಣಾನುಕೂಲಾರ್ಥೋ ನಿರ್ದಿಶ್ಯತೇ. ಉತ ಸಿದ್ಧಾಂತಶಿಖಾಮಣೌ ಭಾರತೇ ಚ ಶೈವಪಾಶುಪತಮತಯೋರ್ವೈಲಕ್ಷಣ್ಯಂ ಶೈವಮತಸ್ಯ ಪಾಂಚರಾತ್ರಪಾಶುಪತಾದಿಭ್ಯಸ್ಸಮುತ್ಕೃಷ್ಟತ್ವಂ ಚ ಸಮ್ಯಗುಪದಿಷ್ಟಂ. "ಆಗಮಾ ಬಹುಧಾ ಪ್ರೋಕ್ತಾಶ್ಶಿವೇನ ಪರಮಾತ್ಮನಾ । ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿ ಭೇದತಃ ॥" ಇತಿ ಘಟಪಟಯೋರಿವ ಶೈವಪಾಶುಪತಯೋಃ ಪರಸ್ಪರವೈಲಕ್ಷಣ್ಯಂ ವಿಧೀಯತೇ. ಕಿಂಚ "ವೇದೈಕದೇಶವರ್ತಿಭ್ಯಸ್ಸಾಂಖ್ಯಾದಿಭ್ಯೋ ಮಹಾಮುನೇ । ಸರ್ವವೇದಾನುಸಾರಿತ್ವಾತ್ ಶೈವತಂತ್ರಂ ವಿಶಿಷ್ಯತೇ ॥" ಇತಿ ತತ್ರೈವ ಸಾಂಖ್ಯಯೋಗಪಾಂಚರಾತ್ರಪಾಶುಪತಾದೀನಾಂ ವೇದೈಕದೇಶವರ್ತಿತ್ವೇನಾಪಕೃಷ್ಟತ್ವಂ, ಶೈವಮತಸ್ಯ ಸರ್ವವೇದಮಯತ್ವೇನ ಸಮುತ್ಕೃಷ್ಟತ್ವಂ ಚ ವ್ಯಾಚಕ್ಷ್ಯತೇ. ಮಹಿಮ್ನಸ್ತವೇಽಪಿ "ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ ಪ್ರಭಿನ್ನೇ ಪ್ರಸ್ಥಾನೇ ಪರಮಿದಮತಃ ಪಥ್ಯಮಿತಿ ಚ । ರುಚೀನಾಂ ವೈಚಿತ್ರ್ಯಾದೃಜುಕುಟಿಲನಾನಾಪಥಜುಷಾಂ ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥" ಇತಿ ಪರಿಚ್ಛಿನ್ನಸಾಂಖ್ಯಯೋಗಪಾಂಚರಾತ್ರಪಾಶುಪತಾದಿಮತಾನಾಂ ಋಜುಕುಟಿಲಮಾರ್ಗೇಣ ಸರ್ವೇಷಾಂ ಸಮುದ್ರನದೀನ್ಯಾಯವಚ್ಛಿವೇಽಪ್ಯೇಕತ್ವೋಪದೇಶಾತ್ ಶೈವಮತಸ್ಯ ಸರ್ವಮತಾಧಿಕ್ಯಮಿತಿ ಘಂಟಾಘೋಷಃ. ಕಿಂಚ ವೇದತುಲ್ಯಭಾರತೇ ಆನುಶಾಸನಿಕಪರ್ವಣಿ "ಕಿಮಾಹುರ್ಭರತಶ್ರೇಷ್ಠ ಪಾತ್ರಂ ವಿಪ್ರಾಸ್ಸನಾತನಂ । ಲಿಂಗಿನಂ ಬ್ರಾಹ್ಮಣಂ ಚಾಪಿ ಬ್ರಾಹ್ಮಣಂ ಚಾಪ್ಯಲಿಂಗಿನಂ ॥" ಇತಿ ಯುಧಿಷ್ಠಿರಪ್ರಶ್ನೇ "ಸದ್ವೃತ್ತಿಮಪಿ ವಿಜ್ಞಾಯ ಲಿಂಗಿನೇ ಚೇತರಾಯ ಚ । ದೇಯಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ ॥" ಇತಿ ಭೀಷ್ಮಪ್ರತಿವಚನೇನ ಲಿಂಗಧಾರಿಬ್ರಾಹ್ಮಣಾನಾಂ ಮುಖ್ಯದಾನಪಾತ್ರತಾಯಾಃ ವಾ ಪಕ್ಷೇ ತದ್ಭಿನ್ನಬ್ರಾಹ್ಮಣಾನಾಂ ದಾನಪಾತ್ರತ್ವಸ್ಯ ಚ ನಿರ್ದೇಶಾತ್ ಲಿಂಗಧಾರಣಾವಚ್ಛಿನ್ನಶೈವಮತಸ್ಯ ಸರ್ವಾಧಿಕತ್ವಮರ್ಥಾತ್ಸಿದ್ಧಂ. ಅತ ಏವ ಸರ್ವವೇದಮಯಶೈವಮತವಿರುದ್ಧತ್ವೇನ ಸಾಂಖ್ಯಾದಯೋಽತ್ರ ಭಗವತಾ ಪಾರಾಶರ್ಯೇಣ ನಿರಸ್ತಾಃ. ತಥಾಪಿ ಸಾಂಖ್ಯಯೋಗಪಾಂಚರಾತ್ರಾಣಾಂ ಕಪಿಲಹಿರಣ್ಯಗರ್ಭನಾರಾಯಣಕರ್ತೃಕತ್ವೇನ ಪೌರುಷೇಯತ್ವಂ, ಪರಬ್ರಹ್ಮಾಭಿಧಾನಪಶುಪತಿಪ್ರಣೀತತ್ವೇನ ಪಾಶುಪತಾಗಮಾನಾಮಪೌರುಷೇಯತ್ವಂ ವೇದವತ್ಪ್ರಾಮಾಣ್ಯಂ ಚ. ತತ್ರೈಕದೇಶಾಗಮಾನಾಂ ನಿಮಿತ್ತಮಾತ್ರದ್ಯೋತಕತ್ವೇನ ವೇದವಿರೋಧ ಇತಿ ಚೇತ್ ವೇದೈಕದೇಶೇ "ಸೋಽಕಾಮಯತ", "ಸ ಈಕ್ಷಾಂಚಕ್ರೇ" ಇತ್ಯಾದೌ ನಿಮಿತ್ತಕಾರಣತ್ವ

ಮಾತ್ರದರ್ಶನಾತ್ ತೇಷಾಮಪ್ಯಪ್ರಾಮಾಣ್ಯಂ ಪ್ರಸಜ್ಯೇತ. ಉತ "ಕಿಮೇತಾನ್ಯೇಕನಿಷ್ಠಾನಿ ಪೃಥಙ್ನಿಷ್ಠಾನಿ ವಾ ಮುನೇ" ಇತ್ಯಾದಿನಾ ಕಿಂ ಸಾಂಖ್ಯಯೋಗಪಾಶುಪತವೇದಪಾಂಚರಾತ್ರಾಣ್ಯೇಕತತ್ತ್ವಪರಾಣಿ ಪೃಥಕ್ತತ್ತ್ವಪ್ರತಿಪಾದನಪರಾಣಿ ವಾ? ಯದ್ಯೇಕತತ್ತ್ವಪ್ರತಿಪಾದಕಾನಿ ಕಿಂ ತದೇಕಂ ತತ್ತ್ವಂ? ಯದಾ ತು ಪೃಥಕ್ತತ್ತ್ವಪ್ರತಿಪಾದಕಾನಿ ತದೇಷಾಂ ಪರಸ್ಪರವಿರುದ್ಧಾರ್ಥಪ್ರತಿಪಾದನಪರತ್ವಾತ್ ವಸ್ತುನಿ ವಿಕಲ್ಪಾಸಂಭವಾಚ್ಚೈಕಮೇವ ಪ್ರಮಾಣಮಂಗೀಕರಣೀಯಂ. ಪೌರುಷೇಯಾಣಾಂ ತದ್ವರ್ಗಾಣಾಂ ಹಿ ಪರಸ್ಪರವಿರುದ್ಧವಸ್ತುವಾದಿತ್ವೇನ ಅಪೌರುಷೇಯವೇದಪ್ರಮಾಣತ್ವೇನಾನಿರಸ್ತಪ್ರಮಾದಾದಿನಿಖಿಲದೋಷಗಂಧವಿರುದ್ಧಾಭಿಧಾಯಿತ್ವಾಚ್ಚ ಯಥಾವಸ್ಥಿತವಸ್ತುನಿ ಪ್ರಾಮಾಣ್ಯಂ ದುರ್ಲಭಂ. ವೇದವೇದ್ಯಶ್ಚ ಪರಬ್ರಹ್ಮಭೂತಶ್ಶಿವ ಏವ. "ಸರ್ವಂ ಖಲ್ವಿದಂ ಬ್ರಹ್ಮ", "ಸರ್ವೋ ವೈ ರುದ್ರಃ" ಇತ್ಯಾದಿನಾ ವೇದಾಂತವೇದ್ಯಸ್ಸರ್ವಾತ್ಮಕಃ ಪರಬ್ರಹ್ಮಾಭಿಧಾನಶ್ಶಿವ ಏಕ ಏವ ವಸ್ತ್ವಿತಿ ನಿಶ್ಚೀಯತೇ. ಕಿಂಚ ಶಿವೋಕ್ತನಿಗಮಾಗಮೇಷು ಮಹಾದೇವಾಭಿಧಾನಸ್ಯ ಪರಬ್ರಹ್ಮಣಃ ಮೂರ್ತಾಮೂರ್ತಸ್ಯ ಷಡ್ಗುಣೈಶ್ವರ್ಯಪೂರ್ಣಸ್ಯ ಹಿರಣ್ಮಯಸೂಕ್ಷ್ಮವ್ಯೂಹವಿಭವಭೇದಭಿನ್ನತ್ವಮುಪದಿಷ್ಟಂ. ವೀರಾಗಮೇ "ಸಕಲಂ ನಿಷ್ಕಲಂ ಸೂಕ್ಷ್ಮಂ ಹಿರಣ್ಮಯಮನಾಮಯಂ । ವ್ಯೋಮವತ್ಸರ್ವಸಂಪೂರ್ಣಂ ಸರ್ವೈಶ್ವರ್ಯಸಮನ್ವಿತಂ । ಸ್ವತಂತ್ರಂ ಜಗದಾಧಾರಂ ಶಿವರುದ್ರಾದಿಸಂಜ್ಞಿಕಂ । ನಿತ್ಯಸಂವೇತಚಿಚ್ಛಕ್ತಿಯುಕ್ತಂ ಸಾಂಬಮಹೇಶ್ವರಂ ॥" ಇತ್ಯಾದಿನಾ, "ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ" ಇತ್ಯಾದಿಶ್ರುತಿಸಿದ್ಧಾರ್ಧನಾರೀಶ್ವರತ್ವಾದಿಲೀಲಾಮಂಗಲವಿಗ್ರಹಾ ವಿಭವಾಭಿಧಾನಾಃ ಸದ್ಯೋಜಾತಾದಿಪಂಚಬ್ರಹ್ಮಮಂತ್ರೇಷು ಸದ್ಯೋಜಾತಾದಿವ್ಯೂಹಪಂಚಕತಯೋಪದಿಷ್ಟಾಃ. "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ" ಇತಿ ಮಂತ್ರೇಣ ಷಡ್ಗುಣೈಶ್ವರ್ಯಸಂಪನ್ನಸ್ವಭಾವಜ್ಯೋತಿರ್ಮಯವಿಗ್ರಹಂ ಮಹಾದೇವಾಖ್ಯಂ ಪರಬ್ರಹ್ಮ ವ್ಯಾಚಕ್ಷ್ಯತೇ. "ಸರ್ವಾನನಶಿರೋಗ್ರೀವಃ ಸರ್ವಭೂತಗುಹಾಶಯಃ । ಸರ್ವವ್ಯಾಪೀ ಚ ಭಗವಾಂಸ್ತಸ್ಮಾತ್ಸರ್ವಗತಶ್ಶಿವಃ ॥" ಇತ್ಯತ್ರ ಪರಮಶಿವಸ್ಯೈವ ಸರ್ವಮಯತ್ವಂ ಸರ್ವಾಂತರ್ಯಾಮಿತ್ವಂ ಸರ್ವವ್ಯಾಪಕತ್ವಂ ಚಾಭ್ಯುಪಗಮ್ಯತೇ. ತಸ್ಮಾದ್ವೇದಾಗಮಯೋರ್ನ ಕಿಂಚಿದ್ಭೇದಃ, ಅತೋ ವೇದವಿರುದ್ಧಜೀವೋತ್ಪತ್ತ್ಯಾದಿವಿಧಾಯಕಪಾಂಚರಾತ್ರಮತಂ ನಿಃಶ್ರೇಯಸಕಾಂಕ್ಷಿಭಿರ್ನ ಶ್ರೋತವ್ಯಂ.

ಸಂಕರ್ಷಣ ಮೊದಲಾದವರು ಜೀವರಲ್ಲ; ಆದರೆ ವಾಸುದೇವನಂತೆ ವಿಜ್ಞಾನ

ಸ್ವರೂಪರಾದ ಈಶ್ವರರೇ ಆಗಿದ್ದಾರೆ ಎಂದಾಶಂಕಿಸಿ ನಿರಾಕರಿಸುತ್ತಾನೆ—

**ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ ||೪೪||**

ಸೂತ್ರದಲ್ಲಿ ಬಂದಿರುವ ವಾಶಬ್ದವು ಆಕ್ಷೇಪವನ್ನು ನಿರಾಕರಿಸುತ್ತದೆ. ವಿಜ್ಞಾನಾದಿ ಎಂದರೆ ಪರಬ್ರಹ್ಮವೆಂದರ್ಥ. ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಈ ಮೂವರನ್ನು ಪರಬ್ರಹ್ಮವೆಂದು ಒಪ್ಪಿದರೆ, ಆಗ ಶ್ರುತಿಗೂ ಸ್ವಮತಕ್ಕೂ ವಿರೋಧವು ಅನಿವಾರ್ಯವಾಗುವುದು. ಶ್ರುತಿಗಳಲ್ಲಿ ಎಲ್ಲಿಯೂ ಘಟಾದಿಗಳಂತೆ ಬ್ರಹ್ಮನಿಂದ ಜೀವನ ಉತ್ಪತ್ತಿಯನ್ನೂ, ಜೀವನಿಂದ ಮನಸ್ಸಿನ ಉತ್ಪತ್ತಿಯನ್ನೂ ಹೇಳಿಲ್ಲವಾದ್ದರಿಂದ ವೇದಬಾಹ್ಯವಾದ ಪಾಂಚರಾತ್ರಮತವು ನಿಷಿದ್ಧವೇ ಆಗುವುದು. ವಿಷ್ಣುಸಾರೂಪ್ಯವನ್ನು ಹೊಂದಿದ ಮುಕ್ತರನ್ನು ಮನಸ್ಸಿಗೆ ಕರ್ತರೆಂದು ಈ ಪಾಂಚಾರಾತ್ರಾಗಮದಲ್ಲಿ ಹೇಳಿದೆ ಅಂದರೆ, ನಿತ್ಯಮುಕ್ತರಾದ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧರು ನಾರಾಯಣಭಾವವನ್ನು ಹೊಂದಿದ್ದರೂ ಅವರನ್ನು ಪರಮಾತ್ಮನಂತೆ ಮನಸ್ಸಿಗೆ ಕರ್ತರೆಂದು ಒಪ್ಪಲಾಗುವುದಿಲ್ಲ. ಹಾಗೆ ಒಪ್ಪುವುದಾದರೆ, ಅನೇಕ ಈಶ್ವರರನ್ನು ಒಪ್ಪುವುದರಿಂದ ಅನವಸ್ಥೆ ಯುಂಟಾಗುವುದು. ಇದೂ ಅಲ್ಲದೆ, ವಾಸುದೇವನೇ ಅಧಿಕನೆಂದು ಹೇಳುವ ವಾಕ್ಯಗಳು ಪ್ರಮಾಣವಾಗದೇ ಹೋಗುತ್ತವೆ. ಸಾಂಖ್ಯಯೋಗ, ಪಾಶುಪತ ಸೌರ, ಗಾಣಾಪತ್ಯವೆಂಬ ಮತಗಳಲ್ಲೂ ಸಾರೂಪ್ಯಮುಕ್ತರು ಜಗತ್ಕರ್ತರಲ್ಲದ್ದರಿಂದ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧರನ್ನು ಈಶ್ವರರೆಂದು ಒಪ್ಪಿದರೆ ಆ ಒಬ್ಬನಿಂದಲೇ ಕಾರ್ಯವು ಸಿದ್ಧಿಸುವುದರಿಂದ ವಾಸುದೇವನೇ ಅಪ್ರಯೋಜಕನಾಗುವನು. ಇದು ಅಲ್ಲದೆ, ವಾಸುದೇವನೊಬ್ಬನನ್ನೇ ಪರಮಾರ್ಥತತ್ತ್ವವೆಂದು ತಿಳಿಸುವ ಪಾಂಚರಾತ್ರಾಗಮದ ಸಿದ್ಧಾಂತಕ್ಕೂ ಹಾನಿಯುಂಟಾಗುವುದು. ಈಶ್ವರರಲ್ಲದ ಸಂಕರ್ಷಣಾದಿಗಳನ್ನು ವಾಸುದೇವನಿಗೆ ಸಮಾನರೆಂದು ಹೇಳಿದರೆ ವಾಸುದೇವನಿಂದ ಉತ್ಪತ್ತಿಯನ್ನು ಒಪ್ಪಲಾಗುವುದಿಲ್ಲ. ಆದ್ದರಿಂದ ಸಂಕರ್ಷಣಾದಿಗಳನ್ನು ಹುಟ್ಟುವರೆಂದು ತಿಳಿಸುವ ಪಾಂಚರಾತ್ರಾಗಮದ ವಿರೋಧವೇ ಬಗೆಹರಿಯುವುದಿಲ್ಲ. ಆಕಾಶ ಪ್ರಾಣಗಳಂತೆ ಸಂಕರ್ಷಣಾದಿಗಳನ್ನು ಬ್ರಹ್ಮವೆಂದು ವಿಧಿಸುವ ಶ್ರುತಿಯೇ ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಆ ಮತದ ಪ್ರಕ್ರಿಯೆ ವೇದಬಾಹ್ಯವೆನಿಸಿದೆ. "ನನ್ನ ಭಕ್ತನು ನನಗಿಂತ ಅಧಿಕನು" ಎಂಬ ತಾಂತ್ರಿಕನ್ಯಾಯದಂತೆ ಸಂಕರ್ಷಣಾದಿಗಳೂ ಅಧಿಕವೆಂದರೆ ಅವುಗಳಿಂದ ಹುಟ್ಟಿದ ಜೀವನು ಆ ಸಂಕರ್ಷಣಾದಿಗಳನ್ನು ಉಪಾಸನಮಾಡುವನೆಂಬುದೇ ವಿರುದ್ಧವಾಗುವುದು. ಆದ್ದರಿಂದ ಅಪಕೃಷ್ಟರಾದ ಸಂಕರ್ಷಣಾದಿಗಳು ಮನಸ್ಸಿಗೆ ಕಾರಣವಾಗಲಾರವು. ಹೀಗೆ ಎಲ್ಲಾ ವಿಧದಲ್ಲೂ ಶ್ರುತಿಯುಕ್ತಿಅನುಭವಗಳಿಗೆ ವಿರೋಧವುಂಟಾಗುವುದರಿಂದ ಪಾಂಚರಾತ್ರಮತವು ವಿವೇಕಿಗಳಿಗೆ ಆದರಣೀಯವಲ್ಲ. ಆದರೆ ಸಾಂಖ್ಯ, ಯೋಗ, ಪಾಂಚರಾತ್ರ, ವೇದ, ಪಾಶುಪತಗಳೈದನ್ನು ಪ್ರಮಾಣವೆಂದು ಭಾರತಸಿದ್ಧಾಂತಾಗಮಪರಾಶರಸ್ಮೃತಿಗಳಲ್ಲಿ ವಿಧಿಸಲಾಗಿದೆ. ಅಲ್ಲಿ ಪಾಶುಪತಸಾಂಖ್ಯಗಳೆರಡನ್ನೂ ಸಮಾನವೆಂದು ಹೇಳಿರುವುದರಿಂದ ಶೈವಮತ ಹೇಗೆ ಅದಕ್ಕಿಂತ ಅಧಿಕವಾಗುವುದು? ಎಂದರೆ ವೈಷ್ಣವ

ಪದವು ಹತ್ತುಬಗೆಯ ವೈಷ್ಣವಮತಗಳಿಗೆ ಅನ್ವಯಿಸಿದರೂ ಪ್ರಕರಣಾನುಸಾರವಾಗಿ ಅದಕ್ಕೆ ಅರ್ಥವನ್ನು ಹೇಳುವಂತೆ ಪಾಶುಪತಶಬ್ದವು ಹತ್ತುಬಗೆಯ ವೈದಿಕ ಮತ್ತು ತಾಂತ್ರಿಕ ಶೈವಮತಗಳಿಗೂ ಅನ್ವಯಿಸಿದರೂ ಅದಕ್ಕೆಆಯಾ ಪ್ರಕರಣಕ್ಕನುಗುಣವಾದ ಅರ್ಥವನ್ನೇ ಹೇಳಬೇಕು. ಮಹಾಭಾರತ ಸಿದ್ಧಾಂತಶಿಖಾಮಣಿಗಳಲ್ಲಿ ಶೈವ ಪಾಶುಪತಮತಗಳಿಗೆ ಘಟಪಟಗಳಂತೆ ಪರಸ್ಪರ ಭೇದವನ್ನು ಹೇಳಿ, ಪಾಂಚರಾತ್ರ ಪಾಶುಪತಗಳಿಗಿಂತಲೂ ಶೈವಮತವನ್ನು ಉತ್ಕೃಷ್ಟವೆಂದೂ ಹೇಳಲಾಗಿದೆ. "ವೇದದ ಒಂದೊಂದು ಭಾಗವನ್ನು ಅನುವರ್ತಿಸುವ ಸಾಂಖ್ಯಾದಿಮತಗಳಿಗಿಂತಲೂ ವೇದಾನುಸಾರಿಯಾದ ವೀರಶೈವಮತವು ವಿಲಕ್ಷಣವೆನಿಸಿದ" ಎಂಬಲ್ಲಿ ಸಾಂಖ್ಯಯೋಗ ಪಾಂಚರಾತ್ರ ಪಾಶುಪತಗಳು ಕನಿಷ್ಠವೆಂದೂ, ಶೈವಮತವು ಉತ್ಕೃಷ್ಟವೆಂದೂ ಹೇಳಲಾಗಿದೆ. ಇಲ್ಲಿ ಪಾಶುಪತವೆಂದರೆ ತಾಂತ್ರಿಕ ಶೈವವೆನಿಸುತ್ತದೆ. ಶೈವವೆಂದರೆ ವೈದಿಕ ಶೈವ ಅಥವಾ ವೀರಶೈವವೆನಿಸುತ್ತದೆ. ಮಹಿಮ್ನಸ್ತವದಲ್ಲಿ "ಎಲ್ಲ ನದಿಗಳೂ ಕೊನೆಗೆ ಸಮುದ್ರವನ್ನುಸೇರುವಂತೆ ಸಾಂಖ್ಯಾದಿಮತಗಳೆಲ್ಲವೂ ಋಜುಕುಟಿಲ ಮಾರ್ಗಗಳಿಂದ ಶಿವನಲ್ಲೇ ಏಕೀಭವಿಸುತ್ತವೆ" ಎಂದು ಹೇಳಿರುವುದರಿಂದ ಶೈವಮತವೇ ಎಲ್ಲಾ ಮತಗಳಿಗಿಂತಲೂ ಅಧಿಕವೆನಿಸಿದೆ. ವೇದಕ್ಕೆ ಸದೃಶವಾದ ಭಾರತದ ಆನುಶಾಸನಿಕಪರ್ವದಲ್ಲಿ ದಾನಕ್ಕೆ ಯಾರು ಅರ್ಹರೆಂಬ ಯುಧಿಷ್ಠಿರನ ಪ್ರಶ್ನೆಗೆ ಲಿಂಗಧಾರಿಬ್ರಾಹ್ಮಣರು ಮುಖ್ಯವಾಗಿಯೂ ಹಾಗೆಯೇ ಇತರ ಬ್ರಾಹ್ಮಣರೂ ದಾನಕ್ಕೆ ಅರ್ಹರೆಂದು ಭೀಷ್ಮನು ಉತ್ತರಿಸಿರುವುದರಿಂದ ಲಿಂಗಧಾರಣವನ್ನು ಬೋಧಿಸುವ ವೀರಶೈವಮತವೇ ಸರ್ವಾಧಿಕವೆಂದು ಸಿದ್ಧವಾಯಿತು. ಹೀಗೆ ಎಲ್ಲಾ ವೇದಗಳಿಗೂ ಸಮ್ಮತವಾದ ವೀರಶೈವಮತಕ್ಕೆ ವಿರುದ್ಧವಾದ್ದರಿಂದಲೇ ಸಾಂಖ್ಯಾದಿ ಮತಗಳನ್ನು ಪೂಜ್ಯವ್ಯಾಸನು ನಿರಾಕರಿಸಿದ್ದಾನೆ. ಆದರೂ ಸಾಂಖ್ಯಯೋಗ ಪಾಂಚರಾತ್ರಗಳು ಕಪಿಲ, ಬ್ರಹ್ಮ, ನಾರಾಯಣರಿಂದ ರಚಿತವಾದ್ದರಿಂದ ಪೌರುಷೇಯವೆನಿಸಿ, ಪರಬ್ರಹ್ಮನೆನಿಸಿದ ಪಶುಪತಿಯಿಂದ ರಚಿತವಾದ ಪಾಶುಪತಾಗಮಗಳು ಅಪೌರುಷೇಯವಾದ್ದರಿಂದ ವೇದದಂತೆ ಪ್ರಮಾಣವಾಗಿವೆ. ಅವುಗಳಲ್ಲಿ ಕೆಲವು ಪರಮಾತ್ಮನನ್ನು ಜಗತ್ತಿಗೆ ಕೇವಲ ನಿಮಿತ್ತನೆಂದು ಹೇಳುವುದರಿಂದ ಅವನ್ನುವೇದವಿರುದ್ಧವೆಂದು ಹೇಳುವುದಾದರೆ ವೇದದಲ್ಲೂ ಸಹ ಕೆಲವು ಭಾಗಗಳು "ಅವನು ಇಚ್ಛಿಸಿದನು". "ಅವನು ನೋಡಿದನು" "ಅವನು ಪ್ರಾಣವನ್ನು ಸೃಜಿಸಿದನು" "ಆತ್ಮನಿಂದ ಆಕಾಶ ಹುಟ್ಟಿತು". ಈ ರೀತಿಯಲ್ಲಿ ಶಿವನನ್ನು ಕೇವಲ ನಿಮಿತ್ತನೆಂದೇ ಹೇಳಿರುವುದರಿಂದ ಅವೂ ಸಹ ಪ್ರಮಾಣವಾಗದೇ ಹೋಗಬೇಕಾಗುತ್ತದೆ. ಸಾಂಖ್ಯಯೋಗ ಪಾಶುಪತ ವೇದ ಪಾಂಚರಾತ್ರಗಳು ಒಂದೇ ತತ್ತ್ವವನ್ನು ಪ್ರತಿಪಾದಿಸುತ್ತವೆಯೋ ಅಥವಾ ಬೇರೆ ಬೇರೆ ತತ್ತ್ವಗಳನ್ನು ತಿಳಿಸುತ್ತವೆಯೋ? ಎಂದು ಅಗಸ್ತ್ಯನು ಕೇಳಿದಾಗ, ಅವು ಒಂದೇ ತತ್ತ್ವವನ್ನು ಬೋಧಿಸುವುದಾದರೆ, ಅದು ಯಾವುದು? ಎಂದು ಕೇಳಬೇಕಾಗುತ್ತದೆ. ಬೇರೆ ಬೇರೆ ತತ್ತ್ವಗಳನ್ನು ತಿಳಿಸುವುದಾದರೆ ಅವು ಪರಸ್ಪರ ವಿರುದ್ಧವಾಗುವುದರಿಂದಲೂ, ವಸ್ತು

ವಿನಲ್ಲಿ ವೈವಿಧ್ಯ ಬರಲಿಕ್ಕೆ ಸಾಧ್ಯವಿಲ್ಲದ್ದರಿಂದಲೂ ಒಂದನ್ನು ಮಾತ್ರವೇ ಪ್ರಮಾಣವೆಂದು ಅಂಗೀಕರಿಸಬೇಕು. ಪೌರುಷೇಯವೆನಿಸಿ ಸಾಂಖ್ಯಾದಿ ಮತಗಳು ಪರಸ್ಪರ ವಿರುದ್ಧವಾದ ಅರ್ಥವನ್ನು ಹೇಳುವುದರಿಂದ ಅಪೌರುಷೇಯವಾದ ವೇದದಂತೆ ಪ್ರಮಾಣವಾಗದೆ ಪ್ರಮಾದ ಮೊದಲಾದ ದೋಷಗಳ ಸಂಪರ್ಕದಿಂದ ಯಥಾರ್ಥವಾದ ವಸ್ತುವಿನ ಬಗ್ಗೆ ಅವು ಪ್ರಮಾಣವಾಗಲಾರವು. ವೀರಶೈವವಾದರೂ ವೇದವೇದ್ಯನಾದ ಒಬ್ಬ ಪರಶಿವನನ್ನು ಬೋಧಿಸುವುದರಿಂದ ಪ್ರಮಾಣವೆನಿಸಿ ವಿಶಿಷ್ಟವೆನಿಸಿದೆ. "ಎಲ್ಲವೂ ಬ್ರಹ್ಮನೇ" "ಎಲ್ಲವೂ ರುದ್ರನೇ" ಈ ಶ್ರುತಿಗಳಲ್ಲಿ ಸರ್ವಾತ್ಮಕನಾದ ಪರಶಿವನೇ ಏಕವಸ್ತುವೆಂದು ನಿಶ್ಚಯಿಸಲಾಗಿದೆ. ಹೀಗೆ ಶಿವನೇ ಹೇಳಿರುವ ಈ ನಿಗಮಾಗಮಗಳಲ್ಲಿ ಮಹಾದೇವನೆನಿಸಿದ ಪರಮಾತ್ಮನನ್ನು ಮೂರ್ತಾಮೂರ್ತನೆಂದೂ, ಷಡ್ಗುಣೈಶ್ವರ್ಯಸಂಪನ್ನನೆಂದೂ, ಹಿರಣ್ಮಯನೆಂದೂ, ಪಂಚಬ್ರಹ್ಮಾತ್ಮಕನೆಂದೂ ಹೇಳಲಾಗಿದೆ. "ಮಹೇಶ್ವರನು ಸಕಲನೂ ನಿಷ್ಕಲನೂ ಸೂಕ್ಷ್ಮನೂ ಹಿರಣ್ಮಯನೂ ನಿರ್ಮಲನೂ ಆಕಾಶದಂತೆ ಎಲ್ಲಾ ಕಡೆಯೂ ತುಂಬಿ, ಸರ್ವೈಶ್ವರ್ಯಸಂಪನ್ನನೂ ಜಗದಾಧಾರನೂ ಸ್ವತಂತ್ರನೂ ಆಗಿ ನಿತ್ಯವೂ ಅಗಲದಂತೆ ಸೇರಿಕೊಂಡಿರುವ ಚಿಚ್ಛಕ್ತಿಯೊಡನೆ ಶಿವ ರುದ್ರ ಎಂಬ ಸಂಜ್ಞೆಗಳಿಂದ ಶೋಭಿಸುತ್ತಿರುವನು" ಎಂದು ವೀರಾಗಮದಲ್ಲಿ ಹೇಳಲಾಗಿದೆ. "ಋತಂ ಸತ್ಯಂ ಪರಬ್ರಹ್ಮ" ಎಂಬ ಮಂತ್ರದಲ್ಲಿ ಅವನ ವೈಭವವೆನಿಸಿದ ಅರ್ಧನಾರೀಶ್ವರತ್ವ ಮೊದಲಾದ ದಿವ್ಯಮಂಗಳ ವಿಗ್ರಹಗಳನ್ನು ಸದ್ಯೋಜಾತಾದಿ ಪಂಚಬ್ರಹ್ಮ ಮಂತ್ರಗಳಲ್ಲಿ ಅವನ ಐದು ವ್ಯೂಹಗಳೆಂದು ತಿಳಿಸಲಾಗಿದೆ. "ನಮೋ ಹಿರಣ್ಯಬಾಹವೇ" ಎಂಬ ಮಂತ್ರದಲ್ಲಿ ಷಡ್ಗುಣೈಶ್ವರ್ಯಸಂಪನ್ನವೂ ಸ್ವಭಾವಿಕಜ್ಯೋತಿರ್ಮಯವೂ ಆದ ಶಿವನ ದಿವ್ಯಮೂರ್ತರೂಪವನ್ನು ಹೇಳಲಾಗಿದೆ. "ಎಲ್ಲರ ಮುಖ, ಶಿರಸ್ಸು, ಕುತ್ತಿಗೆ ಮತ್ತು ಹೃದಯಗಳಲ್ಲಿ ಶಿವನು ನೆಲಸಿದ್ದರೂ ಸರ್ವವ್ಯಾಪಿಯಾಗಿದ್ದಾನೆ" ಎಂಬಲ್ಲಿ ಶಿವನು ಸರ್ವಮಯನೂ ಸರ್ವಾಂತರ್ಯಾಮಿಯೂ, ಸರ್ವವ್ಯಾಪಕನೂ ಆಗಿರುವನೆಂದು ಒಪ್ಪಲಾಗಿದೆ. ಆದ್ದರಿಂದ ವೇದಕ್ಕೂ ಶಿವಾಗಮಕ್ಕೂ ಕೊಂಚವೂ ಭೇದವಿಲ್ಲ. ಹೀಗೆ ವೇದವಿರುದ್ಧವಾಗಿ ಜೀವರ ಉತ್ಪತ್ತಿಯನ್ನು ತಿಳಿಸುವ ಪಾಂಚರಾತ್ರಮತವು ಮುಮುಕ್ಷುಗಳಿಗೆ ಯುಕ್ತವಲ್ಲ.

**ಪುನರ್ಹೇತ್ವಂತರಮಾಹ—ವಿಪ್ರತಿಷೇಧಾಚ್ಚ ॥ ೪೫ ॥**

**ವಿಪ್ರತಿಷೇಧಾಚ್ಚ ವಿಶೇಷಣವಿರೋಧಾಚ್ಚ. ಸಾಂಖ್ಯಾದಿಮತಾನಾಂ ಪ್ರಧಾನಜಗತ್ಕಾರಣತ್ವಾದಿನಾ ಕಿಂಚಿದ್ವೇದಾಂತವಿರೋಧಾತ್ ಪಾಂಚರಾತ್ರಮತಸ್ಯ ತು "ಜ್ಞಾಜ್ಞೌ ದ್ವಾವಜಾವೀಶಾನೀಶೌ", "ಅಚೇತನಾ ಪರಾರ್ಥಾ ಚ ನಿತ್ಯಾ ಸತತವಿಕ್ರಿಯಾ । ತ್ರಿಗುಣಾ ಕರ್ಮಿಣಾಂ ಕ್ಷೇತ್ರಂ ಪ್ರಕೃತೇಃ ರೂಪಮುಚ್ಯತೇ । ವ್ಯಾಪ್ತಿರೂಪೇಣ ಸಂಬಂಧಸ್ತಸ್ಯಾಶ್ಚ ಪುರುಷಸ್ಯ ಚ । ಸ ಹ್ಯನಾದಿರನಂತಶ್ಚ ಪರಮಾರ್ಥೇನ ನಿಶ್ಚಿತಃ ॥" ಇತಿ ವೇದಾಗಮೇಷು ಚ ಸರ್ವತ್ರ ಜೀವಸ್ಯ ನಿತ್ಯತ್ವಪ್ರತಿಪಾದ**

ನಾತ್ ಜೀವೋತ್ಪತ್ತ್ಯಾದಿವಿಧಾಯಕಪಾಂಚರಾತ್ರಮತಂ ಸರ್ವವೇದಾಂತವಿರುದ್ಧತ್ವಾತ್ ಭ್ರಾಂತಿಮೂಲಮತಮಿತಿ ವೇದಿತವ್ಯಂ. ಅಜಾತಸ್ಯ ಜೀವಸ್ಯ ಘಟಾದಿವಜ್ಜನ್ಯತ್ವಂ, ಕಿಂಚಜ್ಜ್ಞಸ್ಯ ಜೀವಸ್ಯ ಮನಃಕಾರಣತ್ವಂ, ಜಡೀಭೂತಮನಸೋಽಹಂಕರ್ತೃತ್ವಮಿತಿ ಪಾಂಚರಾತ್ರಪ್ರಕ್ರಿಯಾಯಾಃ "ನ ಜಾಯತೇ ಮ್ರಿಯತೇ ವಾ" ಇತ್ಯಾದಿಶ್ರುತಿಷು ವಿರೋಧಪ್ರಸಂಗೋ ದುರ್ನಿವಾರಃ. ನನು ಪಾಂಚರಾತ್ರೇ ಪುಷ್ಕರಸಂಹಿತಾಯಾಂ ಕರ್ತವ್ಯತ್ವೇನ "ಯಸ್ಮಾತ್ಸಮ್ಯಕ್ ಪರಬ್ರಹ್ಮ ವಾಸುದೇವಾಖ್ಯಮವ್ಯಯಂ । ಅಸ್ಮಾದವಾಪ್ಯತೇ ಶಾಸ್ತ್ರಾತ್ ಜ್ಞಾನಪೂರ್ವೇಣ ಕರ್ಮಣಾ" ಇತ್ಯಾದಿನಾ ಸಂಕರ್ಷಣಾದೀನಾಮಪಿ ಪರಬ್ರಹ್ಮಸ್ವೇಚ್ಛಾವಿಗ್ರಹರೂಪತ್ವವ್ಯಪದೇಶಾತ್ ಶೈವಾಗಮವದತ್ರಾಪಿ ವಿಭವಾರ್ಚನಾ ವ್ಯೂಹಂ ಪ್ರಾಪ್ಯ ವ್ಯೂಹಾತ್ಪರಂ ವಾಸುದೇವಾಖ್ಯಂ ಪ್ರಾಪ್ಯತ ಇತಿ ವ್ಯಾಚಕ್ಷ್ಯತೇ. ವಿಭವೋ ರಾಮಕೃಷ್ಣಾದಿಪ್ರಾದುರ್ಭಾವಗಣಃ. ವಾಸುದೇವಸಂಕರ್ಷಣಪ್ರದ್ಯುಮ್ನಾನಿರುದ್ಧಸಂಜ್ಞಿಕೋ ವ್ಯೂಹಃ. ಸೂಕ್ಷ್ಮಂ ಷಡ್ಗುಣೈಶ್ವರ್ಯವಿಗ್ರಹಂ ವಾಸುದೇವಾಖ್ಯಂ ಪರಬ್ರಹ್ಮೇತಿ ನಿರೂಪಿತಂ. ತಸ್ಮಾಜ್ಜೀವಮನೋಽಹಂಕಾರತತ್ತ್ವಾನಾಮಧಿಷ್ಠಾತಾರಃ ತೇಷಾಂ ಜೀವಾದಿಶಬ್ದೈರಭಿಧಾನಮವಿರುದ್ಧಂ. ಯಥಾಕಾಶಪ್ರಾಣಾದಿಶಬ್ದೈರ್ಬ್ರಹ್ಮಣ ಅಭಿಧಾನಂ ತದ್ವದಿತಿ ಚೇನ್ನ, ಶೈವಮತವದ್ವಾಸುದೇವಾದಿವ್ಯೂಹಾನಾಂ ಪ್ರತ್ಯಕ್ಷಶ್ರುತಿಮೂಲಕತ್ವಾಭಾವಾತ್. ಸಂಕರ್ಷಣಾದೀನಾಮೀಶ್ವರತ್ವೇ ತಜ್ಜನ್ಯತ್ವವಿಧಾಯಕಸ್ವಶಾಸ್ತ್ರವಿರೋಧಪ್ರಸಂಗಃ. ಸ್ವಶಾಸ್ತ್ರಾನುಗುಣ್ಯೇನ ತೇಷಾಮೀಶ್ವರತ್ವಾಂಗೀಕಾರಪೂರ್ವಕಕಾರಣತ್ವಾಂಗೀಕಾರೇ ವೇದಬಾಹ್ಯಪ್ರಸಂಗೇನಾನವಸ್ಥಾ ಚ ದೃಶ್ಯತೇ. "ಅಜಾಯಮಾನೋ ಬಹುಧಾ ವಿಜಾಯತೇ" ಇತಿ ಶ್ರುತೌ ಪರಮೇಶ್ವರಸ್ಯ ಸ್ವಸಂಕಲ್ಪತ್ವೇನ ಸ್ವೇಚ್ಛಾಕೃತಾವಿಗ್ರಹತ್ವಸ್ಮರಣಾತ್ ವಾಸುದೇವಾತ್ಸಂಕರ್ಷಣಾದಿಜನ್ಯತ್ವೇ ನ ವಿರೋಧಃ ಇತಿ ಚೇತ್ತದಸತ್, "ಸೋಽಕಾಮಯತ ಬಹು ಸ್ಯಾಂ" ಇತ್ಯಾದಿವತ್ತಚ್ಛ್ರುತೇರಪಿ ಬ್ರಹ್ಮಣೋ ಜಗದುಭಯಕಾರಣತ್ವಪರತ್ವಾತ್, ತತ್ರ ಸಂಕರ್ಷಣಾದಿಶಬ್ದಾದರ್ಶನಾಚ್ಚ ತದಂಗೀಕಾರೇ ಪೂರ್ವಪರವಾಕ್ಯಸಮನ್ವಯಾಭಾವಾಚ್ಚ ಆಕಾಶಪ್ರಾಣಾದಿಶಬ್ದವಚ್ಛ್ರುತೌ ಸಂಕರ್ಷಣಾದಿಶಬ್ದಾನಾಂ ಬ್ರಹ್ಮಪರತ್ವಂ ನ ವ್ಯಪದಿಶ್ಯತೇ. ಏವಂ ತಚ್ಛಾಸ್ತ್ರಪ್ರಾಮಾಣ್ಯಂ ಗಗನಭಿತ್ತಿಚಿತ್ರಾಯಮಾನವದವಭಾಸತೇ. ಅತಸ್ಸರ್ವವೇದಾಂತಾಗಮಾದಿಪೂರ್ವಪರಮಧ್ಯಪರಮಾರ್ಶಜ್ಞಾನದೃಷ್ಟ್ಯಾ ದ್ವೈತಾದ್ವೈತಮತಮೇವ ಮುಖ್ಯವೇದಾಂತಸಿದ್ಧಾಂತ ಇತ್ಯವಗಮ್ಯತೇ. ಜನ್ಮಾದಿಸೂತ್ರೇ ಜಗದುಭಯಕಾರಣತ್ವ

ವ್ಯವಸ್ಥಾಪನಾತ್ ನಿಮಿತ್ತಕಾರಣತ್ವೇನ ಜಗದೀಶ್ವರಯೋರ್ದ್ವೈತತ್ವಂ, ಉಪಾದಾನತ್ವವ್ಯಪದೇಶೇನಾದ್ವೈತತ್ವಂ ಚ ದರ್ಶಿತಂ. ಕಿಂಚ "ಮುಕ್ತೋಪಸೃಪ್ಯವ್ಯಪದೇಶಾತ್" ಇತ್ಯತ್ರ ಮುಕ್ತಜೀವಪರಬ್ರಹ್ಮಣೋಃ ಪ್ರಾಪ್ಯಪ್ರಾಪಕತ್ವನಿರ್ದೇಶಾತ್ ಜೀವಬ್ರಹ್ಮಣೋರ್ಭೇದಾಭೇದತ್ವಮರ್ಥಾತ್ಸಿದ್ಧಂ. "ಬ್ರಹ್ಮವಿದಾಪ್ನೋತಿ ಪರಂ", "ತತ್ತ್ವಮಸಿ" "ಅಹಂಬ್ರಹ್ಮಾಸ್ಮಿ", "ತತ್ತ್ವಮೇವ ತ್ವಮೇವ ತತ್" ಇತ್ಯಾದಿಶ್ರುತಿಷು ಜೀವಬ್ರಹ್ಮಣೋರ್ಭೇದಾಭೇದತ್ವನಿರ್ದೇಶಾತ್ತದೇವಾಂಗೀಕರಣೀಯಂ.

ಇತಿ ಶ್ರೀಮದ್ಯತಿವ್ರಜಪರಿವೃಢಶ್ರೀಪತಿಪಂಡಿತಭಗವತ್ಪಾದಾಚಾರ್ಯಸ್ವಾಮಿಕೃತಭೇದಾಭೇದಾತ್ಮಕವಿಶೇಷಾದ್ವೈತಸಿದ್ಧಾಂತವ್ಯವಸ್ಥಾಪಕವೈಯಾಸಿಕಬ್ರಹ್ಮಮೀಮಾಂಸಸೂತ್ರಾರ್ಥಪ್ರಕಾಶಿಕೇ ಶ್ರೀಕರಭಾಷ್ಯೇ

ವಿರೋಧಪರಿಹಾರಾಭಿಧಾನಸ್ಯ ದ್ವಿತೀಯಾಧ್ಯಾಯಸ್ಯ
ದ್ವಿತೀಯಃ ಪಾದಸ್ಸಮಾಪ್ತಃ.

ಈ ಬಗ್ಗೆ ಬೇರೊಂದು ಹೇತುವನ್ನು ತಿಳಿಸುತ್ತಾನೆ—**ವಿಪ್ರತಿಷೇಧಾಚ್ಚ ॥೪೫॥**

ಸಾಂಖ್ಯಾದಿ ಮತಗಳು ಪ್ರಧಾನವನ್ನು ಜಗತ್ಕಾರಣವೆಂದು ಹೇಳುವುದರಿಂದ ವೇದಾಂತಕ್ಕೆ ಕೊಂಚ ವಿರುದ್ಧವಾಗಿವೆ. "ಜೀವೇಶ್ವರರಿಬ್ಬರೂ ಅಜರು". "ಪ್ರಕೃತಿಯು ಅಚೇತನವಾಗಿಯೂ ತ್ರಿಗುಣಾತ್ಮಕವಾಗಿಯೂ ಜೀವರ ಭೋಗಕ್ಕಾಗಿಯೂ ಇರುವುದು. ಜೀವನಿಗೂ ಅದಕ್ಕೂ ವ್ಯಾಪ್ಯವ್ಯಾಪಕಭಾವ ಸಂಬಂಧವಿದೆ. ಅವನಿಗೆ ಉತ್ಪತ್ತಿನಾಶಗಳಿಲ್ಲ". ಹೀಗೆ ವೇದಾಗಮಗಳು ಜೀವನನ್ನು ನಿತ್ಯನೆಂದು ಹೇಳಿವೆ. ಆದರೆ ಇದಕ್ಕೆ ವಿರುದ್ಧವಾಗಿ ಜೀವನ ಉತ್ಪತ್ತಿಯನ್ನು ತಿಳಿಸುವ ಪಾಂಚರಾತ್ರಾಗಮವು ವೇದಾಂತಗಳೆಲ್ಲಕ್ಕೂ ವಿರುದ್ಧವಾದ್ದರಿಂದ ಭ್ರಾಂತಿಮೂಲವೆನಿಸಿದೆ. ಅಜಾತನಾದ ಜೀವನು ಘಟದಂತೆ ಹುಟ್ಟುವನೆಂದೂ, ಅವನಿಂದ ಮನಸ್ಸು, ಅದರಿಂದ ಅಹಂಕಾರವೂ ಹುಟ್ಟುವವೆಂದೂ ತಿಳಿಸುವ ಈ ಆಗಮವು "ಅವನಿಗೆ ಹುಟ್ಟು ಸಾವುಗಳಿಲ್ಲ"ವೆಂದು ಹೇಳುವ ಶ್ರುತಿಗೆ ವಿರುದ್ಧವಾಗಿದೆ. ಈ ಆಗಮದ ಪುಷ್ಕರಸಂಹಿತೆಯಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ವಿಷ್ಣುವಿನ ನಾಲ್ಕು ವ್ಯೂಹಗಳನ್ನು ಪರಬ್ರಹ್ಮದ ಸ್ವೇಚ್ಛಾವಿಗ್ರಹಗಳೆಂದು ಹೇಳಿ ಶೈವಾಗಮದಂತೆ ಇಲ್ಲಿಯೂ "ಸಾಧಕನು ರಾಮ ಕೃಷ್ಣ ಮೊದಲಾದ ವಿಭವಗಳಲ್ಲೂ, ಅರ್ಚನೆಯಲ್ಲೂ ಮತ್ತು ವ್ಯೂಹಗಳಲ್ಲೂ ನಿಷ್ಠೆಯುಳ್ಳವನಾಗಿ ಕೊನೆಗೆ ಷಡ್ಗುಣೈಶ್ವರ್ಯಸಂಪನ್ನನಾದ ವಾಸುದೇವನೆಂಬ ಪರಬ್ರಹ್ಮವನ್ನು ಹೊಂದುತ್ತಾನೆ" ಎಂದು ತಿಳಿಸಲಾಗಿದೆ. ಹೀಗೆ ಸಂಕರ್ಷಣ ಪ್ರದ್ಯುಮ್ನ ಮತ್ತು ಅನಿರುದ್ಧರನ್ನು ಜೀವ ಮನಸ್ಸು ಅಹಂಕಾರವೆಂಬ ಪದಗಳಿಂದ ನಿರ್ದೇಶಿಸಲಾಗಿದೆ. ಆದ್ದರಿಂದ ಆಕಾಶ ಪ್ರಾಣಾದಿ ಶಬ್ದಗಳು ಬ್ರಹ್ಮವನ್ನು ತಿಳಿಸುವಂತೆ ಜೀವ ಮನಸ್ಸು ಅಹಂಕಾರವೆಂಬ ಪದಗಳು ಸಂಕರ್ಷಣಾದಿ

ಗಳನ್ನು ಬೋಧಿಸುವುದರಲ್ಲಿ ವಿರೋಧವೇನಿಲ್ಲವೆಂದರೆ ಇದು ಸರಿಯಲ್ಲ. ಏಕೆಂದರೆ ಶೈವಮತದಂತೆ ಇಲ್ಲಿ ವಾಸುದೇವಾದಿವ್ಯೂಹಗಳಿಗೆ ಪ್ರತ್ಯಕ್ಷ ಶ್ರುತಿಗಳು ಪ್ರಮಾಣ ವಾಗಿಲ್ಲ. ಸಂಕರ್ಷಣಾದಿಗಳನ್ನು ಬ್ರಹ್ಮವೆಂದೇ ಒಪ್ಪಿರುವುದರಿಂದ ಅವಕ್ಕೆ ಉತ್ಪತ್ತಿ ಯನ್ನು ಹೇಳಿದರೆ ಶಾಸ್ತ್ರದ ವಿರೋಧವುಂಟಾಗುವುದು. ಅವರನ್ನು ಈಶ್ವರರೆಂದು ಒಪ್ಪಿ ಅವರೇ ಜಗತ್ಕಾರಣರೆಂದು ಹೇಳುವುದಾದರೆ ಆ ಮತವು ವೇದಬಾಹ್ಯವೆನಿಸು ವುದಲ್ಲದೆ ಅವ್ಯವಸ್ಥೆಯೂ ಬರುವುದು. "ಪರಮಾತ್ಮನು ಉತ್ಪತ್ತಿರಹಿತವಾದರೂ ಅನೇಕ ಬಗೆಯಾಗಿ ಅವತರಿಸುತ್ತಾನೆ" ಎಂದು ಶ್ರುತಿಯಲ್ಲಿ ಅವನಿಗೆ ಸ್ವೇಚ್ಛೆಯಿಂದ ಬರುವ ದಿವ್ಯಮಂಗಳವಿಗ್ರಹವನ್ನು ಹೇಳಿರುವುದರಿಂದ ಸಂಕರ್ಷಣಾದಿಗಳಿಗೆ ಉತ್ಪ ತ್ತಿಯನ್ನು ಹೇಳಿರುವುದರಲ್ಲಿ ತಪ್ಪೇನಿಲ್ಲವೆಂದರೆ ಅದೂ ಸರಿಯಲ್ಲ; ಏಕೆಂದರೆ "ಅವನು ಹಲವು ಬಗೆಯಾಗುವೆನೆಂದು ಸಂಕಲ್ಪಿಸಿದನು". ಈ ಬಗೆಯ ಶ್ರುತಿಗಳಲ್ಲಿ ಬ್ರಹ್ಮವನ್ನು ಜಗತ್ಕಾರಣವೆಂದು ಹೇಳಿದೆಯೇ ಹೊರತು ಸಂಕರ್ಷಣಾದಿಗಳನ್ನು ಕಾರಣವೆಂದು ಹೇಳಿಲ್ಲ. ಹಾಗೆ ಹೇಳಿರುವುದಾಗಿ ಒಪ್ಪಿದರೆ ಹಿಂದಿನ ಮುಂದಿನ ಪ್ರಕರಣಗಳಿಗೆ ಸಮನ್ವಯವಾಗುವಂತಿಲ್ಲ. ಆಕಾಶಾದಿಶಬ್ದಗಳಂತೆ ಸಂಕರ್ಷಣಾದಿ ಪದಗಳು ಪರಬ್ರಹ್ಮವನ್ನು ಬೋಧಿಸುತ್ತವೆ ಎಂದು ಎಲ್ಲಿಯೂ ಹೇಳಿಲ್ಲ. ಹೀಗೆ ಪಾಂಚರಾತ್ರಾಗಮದ ಪ್ರಾಮಾಣ್ಯವು ಆಕಾಶದಲ್ಲಿ ಬರೆದ ಚಿತ್ರದಂತೆ ತೋರುವುದು. ಆದ್ದರಿಂದ ಎಲ್ಲಾ ವೇದವೇದಾಂತಾಗಮಗಳ ಆರುಬಗೆಯ ತಾತ್ಪರ್ಯಲಿಂಗಗಳಿಂದಲೂ ಪರಿಶೀಲಿಸಿದರೆ ದ್ವೈತಾದ್ವೈತಸಿದ್ಧಾಂತವೇ ಮುಖ್ಯ ಸಿದ್ಧಾಂತವೆಂದು ಸ್ಪಷ್ಟಪಡು ತ್ತದೆ. ಜನ್ಮಾದಿಸೂತ್ರದಲ್ಲಿ ಬ್ರಹ್ಮವು ಜಗತ್ತಿನ ಉಭಯಕಾರಣನೆಂದು ಹೇಳಿದೆ. ಇಲ್ಲಿ ನಿಮಿತ್ತಕಾರಣದಿಂದ ಭೇದವೂ, ಉಪಾದನಕಾರಣದಿಂದ ಅಭೇದವೂ ಸಿದ್ಧಿಸು ತ್ತವೆ. "ಮುಕ್ತೋಪಸೃಪ್ಯವ್ಯಪದೇಶಾತ್" ಎಂಬ ಸೂತ್ರದಲ್ಲಿ ಮುಕ್ತನಿಗೂ ಶಿವನಿಗೂ ಪ್ರಾಪ್ಯಪ್ರಾಪಕಭಾವವನ್ನು ಹೇಳಿರುವುದರಿಂದ ಜೀವ ಶಿವರಿಗೆ ಭೇದಾಭೇ ದವು ಅರ್ಥಸಿದ್ಧವಾಯಿತು. "ಬ್ರಹ್ಮವಿದನು ಬ್ರಹ್ಮವನ್ನು ಹೊಂದುತ್ತಾನೆ" "ನಾನು ಬ್ರಹ್ಮವಾಗಿದ್ದೇನೆ" ಇತ್ಯಾದಿ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಭೇದಾಭೇದ ವನ್ನು ಹೇಳಿರುವುದರಿಂದ ಅದನ್ನೇ ಒಪ್ಪಬೇಕು.

ಇಲ್ಲಿಗೆ ಯತಿಸಾರ್ವಭೌಮರಾದ ಶ್ರೀಪತಿಪಂಡಿತ ಭಗವತ್ಪಾದಾಚಾರ್ಯಸ್ವಾಮಿ
ವಿರಚಿತವಾಗಿ ಭೇದಾಭೇದಾತ್ಮಕವಿಶೇಷಾದ್ವೈತಸಿದ್ಧಾಂತವನ್ನು
ಪ್ರತಿಪಾದಿಸುತ್ತ ಬ್ರಹ್ಮಸೂತ್ರಗಳ ಅರ್ಥವನ್ನು ವಿಶದೀಕರಿಸುವ
ಶ್ರೀಕರಭಾಷ್ಯದಲ್ಲಿ ವಿರೋಧಪರಿಹಾರವೆಂಬ
ದ್ವಿತೀಯಾಧ್ಯಾಯದ ದ್ವಿತೀಯಪಾದ ಮುಗಿಯಿತು.

ಕೈ. ಪೂಜ್ಯಪಿತೃವರ್ಯರ ಸ್ಮಾರಕವಾಗಿ ವಿರಚಿತವಾದ ಶ್ರೀಕರಭಾಷ್ಯಾನುವಾದದ
ಪ್ರಥಮಭಾಗವು ಮುಗಿಯಿತು.

# ಸೂತ್ರಾನುಕ್ರಮಣಿಕಾ

## ಅಧಿಕರಣಾನುಕ್ರಮಣಿಕಾ

---

**ಶ್ರೀ ಜಿ. ಆರ್. ಜೋಸ್ಯರ್,** ಎಂ.ಎ., ನೂರಡಿ ರಸ್ತೆ, ಮೈಸೂರು.
ಡೈರೆಕ್ಟರು, ಅಂತರರಾಷ್ಟ್ರೀಯಸಂಸ್ಕೃತಶೋಧನಾಲಯ 12–12–62

ಅರಣ್ಯದಲ್ಲಿ ವನ್ಯಮೃಗಗಳು ಕ್ರೌರ್ಯದಿಂದ ಆಹಾರಸಾಧನೆಯಲ್ಲಿ ನಿರತವಾಗಿರುತ್ತವೆ. ಪಕ್ಷ್ಯಾದಿಗಳು ತಮ್ಮ ತಮ್ಮ ದೇಹಪೋಷಣೆಯಲ್ಲಿ ಮಗ್ನವಾಗಿರುತ್ತವೆ. ಜೇನುಭೃಂಗವು ಮಾತ್ರ ಹೂವುಗಳನ್ನು ಹುಡುಕಿ ಅವುಗಳ ಅಮೃತವನ್ನು ಹೀರಿ ರಮ್ಯವಾದ ಜೇನುಗೂಡಿನಲ್ಲಿಟ್ಟು ಲೋಕಕ್ಕೆ ಉಪಕರಿಸುತ್ತದೆ! ಹಾಗೆಯೇ ವಿಶ್ವವಿದ್ಯಾಲಯಗಳಲ್ಲಿಯೂ ಪಂಡಿತರು ಸಾಮಾನ್ಯವಾಗಿ ಸ್ವಶ್ರೇಯಸ್ಸಿನಲ್ಲಿ ಮಗ್ನರಾಗಿ ಸ್ವಲ್ಪ ಆಪದ್ಧನವನ್ನು ಗಳಿಸಿ, ತೃಪ್ತರಾಗಿ ಅಥವಾ ಅತೃಪ್ತರಾಗಿ, ನಿವೃತ್ತರಾಗುತ್ತಾರೆ. ವಿರಳವಾಗಿ ಅಲ್ಲಲ್ಲಿ ಒಬ್ಬೊಬ್ಬರು ವಿದ್ಯಾಪರವಶರಾಗಿ ಜ್ಞಾನಸಮುದ್ರದಲ್ಲಿ ಮುಳುಗಿ ಮುಳುಗಿ ಮುತ್ತು ರತ್ನಗಳನ್ನೆತ್ತಿ ನಿಸ್ವಾರ್ಥತೆಯಿಂದ ಪ್ರಪಂಚಕ್ಕೆ ದಾನಮಾಡುತ್ತಾರೆ. ಹೀಗೆ ಮೈಸೂರು ವಿಶ್ವವಿದ್ಯಾನಿಲಯದ ಸಂಶೋಧನಶಾಖೆಯಲ್ಲಿ ಸಂಸ್ಕೃತಾಧ್ಯಾಪಕರಾದ ಶ್ರೀಯುತ ಡಾ|| ಸಿದ್ಧಪ್ಪಾರಾಧ್ಯರು ಏಕಮನಸ್ಕತೆಯಿಂದ ವಿದ್ಯಾಪರವಶರಾಗಿ ಶಾಸ್ತ್ರಮಥನದಿಂದ ಅಮೃತಕಲಶಗಳನ್ನು ಸಂಗ್ರಹಿಸಿ ದೇಶದ ಜನರ ಮಾನ್ಯತೆಗೆ ಮೇಲೆ ಮೇಲೆ ಪಾತ್ರರಾಗುತ್ತಿದ್ದಾರೆ.

ಇವರು ಸ್ವಲ್ಪಕಾಲದ ಹಿಂದೆ "ಶಕ್ತಿವಿಶಿಷ್ಟಾದ್ವೈತದರ್ಶನಂ" ಎಂಬ ಗ್ರಂಥ ರತ್ನವನ್ನು ಸಂಸ್ಕೃತಭಾಷೆಯಲ್ಲಿ ರಚಿಸಿ ತಮ್ಮ ಪಾಂಡಿತ್ಯಕ್ಕೆ ಕಳೆಯನ್ನು ಕಟ್ಟಿ ವಿಶ್ವ ವಿದ್ಯಾನಿಲಯದಿಂದ ಡಾಕ್ಟರೇಟ್ ಪ್ರಶಸ್ತಿಯಿಂದ ಸನ್ಮಾನಿತರಾಗಿದ್ದಾರೆ. ಈಗ ವೀರಶೈವಮತದ ಮಹದ್ಗ್ರಂಥವಾದ ಸಂಸ್ಕೃತ "ಶ್ರೀಕರಭಾಷ್ಯ" ವೆಂಬ ದಾರ್ಶನಿಕ ಗ್ರಂಥವನ್ನು ಸುಲಭ ಕನ್ನಡದಲ್ಲಿ ರಚಿಸಿ ಕರ್ಣಾಟಕಭಾಷೆಯನ್ನರಿತ ಸಾಧಕರೆಲ್ಲರ ಮತ್ತು ವೀರಶೈವಮತೀಯರ ಕೀರ್ತಿಗಳಿಗೆ ಕಾರಣರಾಗಿದ್ದಾರೆ.

ಶ್ರೀಶೈಲಕ್ಷೇತ್ರದ ಶ್ರೀಪತಿಪಂಡಿತಾರಾಧ್ಯಸ್ವಾಮಿಗಳಿಂದ ವಿರಚಿತವಾದ "ಶ್ರೀಕರ ಭಾಷ್ಯ"ವು ಶ್ರೀ ವೇದವ್ಯಾಸರ ವೇದಾಂತಸೂತ್ರಕ್ಕೆ ವೀರಶೈವಮತದ ಶಕ್ತಿವಿಶಿಷ್ಟಾ ದ್ವೈತಸಿದ್ಧಾಂತಪ್ರತಿಪಾದಕವಾದ ಭಾಷ್ಯ. ಅದ್ವೈತದ ಶ್ರೀಮಚ್ಛಂಕರಭಾಷ್ಯದಂತೆ, ವಿಶಿಷ್ಟಾದ್ವೈತದ ಶ್ರೀರಾಮಾನುಜಭಾಷ್ಯದಂತೆ, ದ್ವೈತದ ಶ್ರೀಮನ್ಮಧ್ವಭಾಷ್ಯ ದಂತೆ ಶಕ್ತಿವಿಶಿಷ್ಟಾದ್ವೈತದ ಈ ಭಾಷ್ಯವು ವೀರಶೈವರ ಆಧ್ಯಾತ್ಮಗ್ರಂಥವೆನಿಸಿದೆ.

ಇದರಲ್ಲಿ ದ್ವೈತ ಅದ್ವೈತ ವಿಶಿಷ್ಟಾದ್ವೈತ ಪರವಾದ ಎಲ್ಲಾ ಶ್ರುತಿಗಳೂ ಸಮನ್ವಿತವಾಗಿವೆ ಎಂಬುದನ್ನು ಡಾ|| ಅವರು ಭೂಮಿಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಈ ಸಿದ್ಧಾಂತವು ಸಾವಿರಾರು ವರ್ಷಗಳಿಗಿಂತ ಹಿಂದೆಯೇ ಭರತಖಂಡದಲ್ಲಿ ಜನಿಸಿ ಇತರ ದೇಶಗಳಿಗೂ ವ್ಯಾಪಿಸುತ್ತೆಂತಲೂ ಪ್ರತೀತಿಯಾಗಿದೆ.

ಈಜಿಪ್ಟಿನ ಮಂಫಿಸ್ ಎಂಬಲ್ಲಿ ನಂದ್ಯಾರೂಢನಾಗಿ ಶೂಲಧಾರಿಯಾದ ಈಶ್ವರ ವಿಗ್ರಹವು "ಆಸಿಂಸ್" ಎಂಬ ಹೆಸರಿನಿಂದ ಪೂಜಿಸಲ್ಪಡುತ್ತಿದ್ದಿತು ಬ್ಯಾಬಿಲಾನಿನಲ್ಲಿ ೩೦೦ ಅಡಿಯ ಒಂದು ಮಹತ್ತರವಾದ ಶಿವಲಿಂಗವಿದೆ. ಮಕ್ಕಾದಲ್ಲಿ "ಮಕ್ಕೇಶ್ವರ" ಎಂಬ ಲಿಂಗವಿದೆ. ಇಟಲಿಯಲ್ಲಿಯೂ ಲಿಂಗಪೂಜೆ ಇದೆ. ಅಮೆರಿಕದ ಬ್ರೆಸಿಲಿನಲ್ಲಿ ಅನೇಕ ಶಿವಲಿಂಗಗಳೂ, ವಿಘ್ನೇಶ್ವರನ ವಿಗ್ರಹಗಳೂ ಇವೆ ಎಂದು ಗ್ರಂಥಗಳಲ್ಲಿ ನಿರೂಪಿಸಿದೆ. ಇದಕ್ಕೂ ಹಿಂದೆ ವೇದಗಳಲ್ಲೂ ಲಿಂಗಪೂಜೆ ವಿಶ್ರುತವಾಗಿದೆ.

ಹೀಗೆ ಶಾಸ್ತ್ರಸಮ್ಮತವಾಗಿಯೂ ಪುರಾತನವಾಗಿಯೂ ವಿದೇಶಗಳಲ್ಲೂ ಆದೃತವಾಗಿದ್ದ ವೀರಶೈವಮತದ ಬೃಹದ್ಗ್ರಂಥವನ್ನು ವಿದ್ವಾಂಸರಿಗೆ ಹೃದಯಂಗಮವಾಗುವಂತೆ ಅವಿದುಷರಿಗೂ ಪಾಮರರಿಗೂ ಬೋಧಕವಾಗುವಂತೆ ಕನ್ನಡದಲ್ಲಿ ಅರ್ಥಸಹಿತವಾಗಿ ಪ್ರಕಟಿಸಿ ಡಾಕ್ಟರ್ ಸಿದ್ಧಸ್ವಾರಾಧ್ಯರು ವೀರಶೈವರಿಗೆ ಸುಧಾರಕರೂ ವಿದ್ವದ್ಬೃಂದಕ್ಕೆ ಮಾನನೀಯರೂ ಆಗಿದ್ದಾರೆ. ಅವರು ಈ ಶ್ಲಾಘ್ಯಕಾರ್ಯಕ್ಕೆ ನನ್ನ ಅಭಿಪ್ರಾಯವನ್ನು ಕೋರಿರುವುದು ಅವರ ಸಹೃದಯತೆಯನ್ನು ತೋರಿಸುತ್ತದೆ.

ನಮ್ಮ ಭರತಖಂಡವು ಹಿಂದೆ ದೈವಕೃಪೆಯಿಂದ ದ್ವಾದಶಾದಿತ್ಯರಂತೆ ಪೂರ್ಣ ಚಂದ್ರರಂತೆ ಬೆಳಗಿದ ಅನೇಕ ತತ್ತ್ವಜ್ಞರ, ಸಿದ್ಧಾಂತಿಗಳ, ಶಾಸ್ತ್ರಕಾರರ, ಉದ್ದಾಮ ಪಂಡಿತರ ಜನನಿ. ಅವರು ಗಳಿಸಿದ ಸ್ಫೂರ್ತಿಯಲ್ಲಿ ಮತ್ತು ಕೀರ್ತಿಯಲ್ಲಿ ಲೇಶಮಾತ್ರ

ವನ್ನೂ ಸಾಧಿಸಲು ನಾವು ಶಕ್ತರಲ್ಲ. ಆದರೂ ಅವರ ಸ್ಥಾನದಲ್ಲಿ ಹುಟ್ಟಿರುವ ನಾವು ಸ್ವಾರ್ಥಪರರಾಗಿ, ಉದರಂಭರಿಗಳಾಗಿ, ನಿರಕ್ಷರಕುಕ್ಷಿಗಳಾಗಿ ಜೀವಿಸಿರದೆ ಯಥಾಶಕ್ತಿ ನಾಡಿನ ವೈದುಷ್ಯವನ್ನು ವಿಸ್ತಾರಪಡಿಸುವುದು ನಮ್ಮ ಕರ್ತವ್ಯ. ಆ ಕರ್ತವ್ಯನಿಷ್ಠೆಯು ಶ್ರೀಯುತ ಡಾಕ್ಟರ್ ಸಿದ್ಧಪ್ಪಾರಾಧ್ಯರಲ್ಲಿ ಅಂಕುರಿಸಿದೆ. ಅದಕ್ಕಾಗಿ ವಾಚಕರ ಪರವಾಗಿ ಅವರನ್ನು ಅಭಿನಂದಿಸುತ್ತೇನೆ.

**ಜಿ. ಆರ್. ಜೋಶ್ಯರ್.**

———

ಶ್ರೀ ಎಸ್. ರಾಮಚಂದ್ರರಾವ್ ಎಂ. ಎ.
ಸಂಶೋಧನ ವಿಭಾಗದ ಸಂಸ್ಕೃತ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ.

ಮಾನಸಗಂಗೋತ್ರಿ,
ಮೈಸೂರು.
11-12-62

ಒಂದು ಭಾಷೆಯಲ್ಲಿರುವ ಗ್ರಂಥವನ್ನು ಮತ್ತೊಂದುಭಾಷೆಗೆ ಪರಿವರ್ತನೆ ಮಾಡುವುದು ಸಾಮಾನ್ಯವಾದ ಕೆಲಸವಲ್ಲ. ಅದರಲ್ಲೂ ಸಂಸ್ಕೃತದಲ್ಲಿರುವ ಶ್ರೀಕರ ಭಾಷ್ಯವೆಂಬ ದರ್ಶನಗ್ರಂಥವನ್ನು ಕನ್ನಡಕ್ಕೆ ಪರಿವರ್ತಿಸುವುದು ತುಂಬ ಗಹನವಾದ ಕೆಲಸವೆಂಬುದನ್ನು ಬಲ್ಲವರು ಅರಿತಿರುವರು. ಇಂತಹ ಮಹಾಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸಲು ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯರು ಅರ್ಹರೆಂಬುದನ್ನು ಅವರ ಶ್ರೀಕರಭಾಷ್ಯದ ಕನ್ನಡಾನುವಾದವು ಸ್ಪಷ್ಟಪಡಿಸುತ್ತಿರುವುದು ಅಭಿನಂದನೀಯವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ 'ಮಾನಸಗಂಗೋತ್ರಿ' ಯಲ್ಲಿ ನನ್ನ ಜೊತೆಯಲ್ಲಿ ಸಂಶೋಧನಕಾರ್ಯದಲ್ಲಿ ನಿರತರಾಗಿರುವ ಇವರ ಉತ್ಸಾಹ, ದುಡಿಮೆ, ವಿದ್ವತ್ತ್ವ ಮತ್ತು ಕರ್ತವ್ಯನಿಷ್ಠೆಗಳನ್ನು ಪ್ರತ್ಯಕ್ಷವಾಗಿ ಕಂಡಿರುವ ನಾನು ಇಂತಹ ಕೆಲಸಕ್ಕೆ ಇವರು ತುಂಬ ಅರ್ಹರೆಂಬುದನ್ನು ಮನಃಪೂರ್ವಕವಾಗಿ ಹೇಳಬಲ್ಲೆನು. ಸಂಸ್ಕೃತ-ಆಂಗ್ಲ-ಕನ್ನಡ ಮೂರು ಭಾಷೆಗಳಲ್ಲೂ ಗ್ರಂಥಗಳನ್ನು ರಚಿಸುತ್ತಿರುವ ಇವರು ನಮ್ಮ ವಿಶ್ವವಿದ್ಯಾನಿಲಯದ ಕೀರ್ತಿಯನ್ನು ಎತ್ತಿಹಿಡಿಯುವವರಾಗಿದ್ದಾರೆ ಎಂಬುದು ಹೆಮ್ಮೆಪಡಬೇಕಾದ ವಿಷಯ. ಇವರು ಈಗ ರಚಿಸಿರುವ ಶ್ರೀಕರಭಾಷ್ಯ ಪ್ರಥಮಭಾಗದ ಕನ್ನಡ ಅನುವಾದವು ಮೂಲಕ್ಕೆ ಹೊಂದುವಂತೆ ಲಲಿತವಾಗಿರುವುದರಿಂದ ಕನ್ನಡಿಗರೆಲ್ಲರ ಆಶೋತ್ತರಗಳನ್ನು ಈಡೇರಿಸಿ ಅದರಲ್ಲಿ ನಿರೂಪಿತವಾಗಿರುವ ಭೇದಾಭೇದಸಿದ್ಧಾಂತವನ್ನು ಅವರಿಗೆ ಸುಗಮವಾಗಿ ಪರಿಚಯಮಾಡಿಕೊಡುವುದೆಂದು ನಾನು ನಂಬಿರುತ್ತೇನೆ.

**ಎಸ್. ರಾಮಚಂದ್ರರಾವ್.**

**ವಿದ್ಯಾನಿಧಿ, ವಿದ್ಯಾಭೂಷಣ, ಸಾಹಿತ್ಯಾಚಾರ್ಯ, ಕಾವ್ಯತೀರ್ಥ ಶ್ರೀ ಗುರುಲಿಂಗಶಿವಾಚಾರ್ಯಸ್ವಾಮಿಗಳು, ಶ್ರೀ ಶಿಖರಮಠ ರಾಯಚೂರು. ಮೈಸೂರು ಸಂಸ್ಕೃತ ವಿದ್ಯಾಭ್ಯಾಸ ಸಮಿತಿಯ ಸದಸ್ಯರು—**

ಡಾ॥ ಸಿದ್ಧಸ್ವಾರಾಧ್ಯರು ಶ್ರೀಕರಭಾಷ್ಯದ ಮೂಲವನ್ನು ಕನ್ನಡ ಅಕ್ಷರದಲ್ಲಿ ಕನ್ನಡ ಅನುವಾದದೊಡನೆ ಎಲ್ಲರಿಗೂ ಸುಲಭವಾಗಿ ತಿಳಿಯುವಂತೆ ಅಂದವಾಗಿ ಪ್ರಕಟಿಸಿರುವುದನ್ನು ನೋಡಿ ನಾವು ಸಂತೋಷಗೊಂಡಿದ್ದೇವೆ. ದಾರ್ಶನಿಕ ವಿಚಾರಗಳು ಎಷ್ಟೇ ಗಹನವಾಗಿದ್ದರೂ ಉತ್ತಮ ಸಾಧಕರ ಕೈಗೆ ಸಿಕ್ಕಿದರೆ ತಿಳಿಯಾದ ಭಾಷೆಯಲ್ಲಿ ಲಲಿತವಾಗಿ ಹೊರಬೀಳುತ್ತವೆ ಎಂಬುದಕ್ಕೆ ಈಗ ಪ್ರಕಟವಾಗಿರುವ ಶ್ರೀಕರಭಾಷ್ಯದ ಅನುವಾದವು ನಿದರ್ಶನವಾಗಿದೆ. ದರ್ಶನಶಾಸ್ತ್ರವನ್ನು ಆಳವಾಗಿ ಅಭ್ಯಾಸಮಾಡಿ ತಮ್ಮ ಅನುಭವಾತ್ಮಕವಾದ ಜ್ಞಾನವನ್ನು ಸಮನ್ವಯದೃಷ್ಟಿಯಿಂದ ಪ್ರತಿಪಾದಿಸುವುದು ಡಾ॥ ಅವರ ಸ್ವಭಾವವಾಗಿದೆ. ಇವರು ಸಂಸ್ಕೃತದಲ್ಲಿ ಬರೆದಿರುವ ಶಕ್ತಿವಿಶಿಷ್ಟಾದ್ವೈತದರ್ಶನವೆಂಬ ಸ್ವತಂತ್ರ ವಿಮರ್ಶಾತ್ಮಕ ಪ್ರಬಂಧವು ವಿದ್ವನ್ಮಾನ್ಯವೆನಿಸಿ ಮೈಸೂರು ದೇಶದ ಸಂಸ್ಕೃತ ಪಾಠಶಾಲೆಗಳಲ್ಲಿ ವಿದ್ವನ್ಮಧ್ಯಮ ಪರೀಕ್ಷೆಗೆ ಪಠ್ಯಗ್ರಂಥವಾಗಿ ನೇಮಕವಾಗಿದೆ. ಈಗ ಶ್ರೀಕರಭಾಷ್ಯವನ್ನು ಕನ್ನಡಿಸಿ ಕರ್ಣಾಟಕಕ್ಕೆ ಒಂದು ಜ್ಞಾನದ ಸವಿಯೂಟವನ್ನೇ ಅವರು ನೀಡಿದ್ದಾರೆ. ಇವರ ಅವಿಶ್ರಾಂತ ಸಾಧನೆ ಗುರುಹಿರಿಯರಲ್ಲಿ ಸಹಜವಾದ ಭಕ್ತಿ, ದೃಢನಿಷ್ಠೆ, ಚಿತ್ತಶುದ್ಧಿಗಳ ಸತ್ಪರಿಣಾಮವಾಗಿ ಶ್ರೀಕರಭಾಷ್ಯದ ಅನುವಾದ ಇಷ್ಟುಬೇಗನೆ ಹೊರಬಿದ್ದಿದೆ ಎಂದು ನಾವು ಭಾವಿಸುತ್ತೇವೆ. ರಾಮಾನುಜಾಚಾರ್ಯರ ಶ್ರೀಭಾಷ್ಯವು ಸಾಧಕರಿಗೆ ಪಾರಮೇಶ್ವರೀಶಕ್ತಿಯ ದಿವ್ಯವೈಭವದ ಪರಿಚಯವನ್ನು ಮಾಡಿಸಿಕೊಡುವುದಾದರೆ, ಶ್ರೀಕರಭಾಷ್ಯವು ಸಾಧಕರ ಜೀವನವನ್ನು ಪಾರಮೇಶ್ವರೀಶಕ್ತಿಯಿಂದ ವಿಕಾಸಗೊಳಿಸುವುದೆಂಬ ಅಂಶ ಭಾಷ್ಯದ ಹೆಸರಿನಿಂದಲೇ ತಿಳಿದುಬರುತ್ತದೆ. ಅದು ಸಂಸ್ಕೃತದಲ್ಲಿ ಇದ್ದುದರಿಂದ ಅದರ ಮಹತ್ತ್ವ ಎಲ್ಲರಿಗೂ ತಿಳಿಯುತ್ತಿರಲಿಲ್ಲ. ಅದನ್ನು ಈಗ ಡಾ॥ ಸಿದ್ಧಸ್ವಾರಾಧ್ಯರು ಕನ್ನಡಕ್ಕೆ ಅನುವಾದಿಸಿರುವುದಲ್ಲದೆ, ಭೂಮಿಕೆಯಲ್ಲಿ ಭಾಷ್ಯದ ಮಹತ್ತ್ವವನ್ನು ಸ್ಪಷ್ಟವಾಗಿ ತಿಳಿಯಪಡಿಸಿರುವುದು ತುಂಬ ಉಪಯುಕ್ತವಾಗಿದೆ. ಇವರು ಸರಳಜೀವಿಗಳೂ, ತ್ರಿಕರಣಶುದ್ಧರೂ, ಅನುಭವಿಗಳೂ ಆದ್ದರಿಂದ ಇವರ ಅನುವಾದ ಮತ್ತು ಭೂಮಿಕೆಗಳು ಕನ್ನಡನಾಡಿನ ಸಾಧಕರಿಗೆ ಭಾಷ್ಯದ ಯಥಾರ್ಥಸ್ವರೂಪವನ್ನು ಪ್ರಾಮಾಣಿಕವಾಗಿ ತಿಳಿಸುತ್ತವೆ ಎಂದು ನಾವು ನಂಬಿದ್ದೇವೆ. ಪರಮೇಶ್ವರನು ಇವರಿಂದ ಹೀಗೆಯೇ ಇನ್ನೂ ಹೆಚ್ಚಿನ ಸೇವೆಯನ್ನು ಮಾಡಿಸಲೆಂದು ಆಶಿಸುತ್ತೇವೆ.

**ಇತ್ಯಾಶಿಷಃ.**

---

Printed by D. Rajarathnam
Sree Panchacharya Electric Press, Mysore.

# ಈ ಗ್ರಂಥಕರ್ತರ ಇತರ ಗ್ರಂಥಗಳು

1. "ಶಕ್ತಿವಿಶಿಷ್ಟಾದ್ವೈತದರ್ಶನಂ" ಪಿಎಚ್.ಡಿ. ಸಂಸ್ಕೃತಪ್ರಬಂಧ.

2. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಪ್ರಕಟಣೆಗಳು.

    (i) ಶಕ್ತಿವಿಶಿಷ್ಟಾದ್ವೈ[illegible]

    (ii) ಷಟ್ಸ್ಥಲಸಿದ್ಧಾಂತ.

    (iii) ಅಣ್ಣನ ಆದರ್ಶ.

    (iv) ಅಲ್ಲಮಪ್ರಭು.

3. ಅಚ್ಚಿನಲ್ಲಿರುವ ಗ್ರಂಥಗಳು :—

    (i) ಶ್ರೀಕರಭಾಷ್ಯಾನುವಾದ (ದ್ವಿತೀಯಭಾಗ).

    (ii) ಶಕ್ತಿವಿಶಿಷ್ಟಾದ್ವೈತದರ್ಶನಾನುವಾದ.

---

ಪುಸ್ತಕಗಳು ಗ್ರಂಥಕರ್ತರಲ್ಲಿಯೇ ದೊರೆಯುತ್ತವೆ.